# ಜ್ಞಾನ ಗಂಗೋತ್ರಿ

ಕಿರಿಯರ ವಿಶ್ವಕೋಶ

೧

## ಮನುಕುಲದ ಕಥೆ

ಕರ್ನಾಟಕ ಸಹಕಾರೀ ಪ್ರಕಾಶನ ಮಂದಿರ

# ಮೊಮ್ಮಕ್ಕಳಿಗೆ ಕಾಣಿಕೆ.

ಜ್ಞಾನಗಂಗೋತ್ರಿ, ಸಂ.೧. ಮನುಕುಲದ ಕತೆ

ಚಿ. ಬಸವರಾಜೇಶ್ವರಿಯ

ಹುಟ್ಟು (31-5-68) ಹಬ್ಬ (31-5-71) ದಂದು ಆಕೆಗೆ

ಆಕೆಯ ಸಲುವಾಗಿ, ಆಕೆಯ ಅಣ್ಣಂದಿರ ಸಲುವಾಗಿ

ಅರ್ಪಿಸಿದೆ.

ವಿಜಾಪುರ
31-5-71

ಅಜ್ಜ:

ಲಕ್ಕಪ್ಪ ಅ. ಶಿರಹಟ್ಟಿ.

ಮುಂದಿನ

ಆರು ಸಂಪುಟಗಳಲ್ಲಿ . . . .

ಜೀವ ವಿಜ್ಞಾನ

ಭೌತ ವಿಜ್ಞಾನ

ತಾಂತ್ರಿಕ ಜ್ಞಾನ

ಕಲೆ, ಸಾಹಿತ್ಯ

ಕ್ರೀಡೆ, ಮನೋಲ್ಲಾಸ

ಭಾರತ

# ಜ್ಞಾನ ಗಂಗೋತ್ರಿ

## ಕಿರಿಯರ ವಿಶ್ವಕೋಶ

ಸಂಪುಟ ಒಂದು

## ಮನುಕುಲದ ಕಥೆ




ಬೆಂಗಳೂರು
೧೯೭೦

# ಸಂಪಾದಕ ಮಂಡಲಿ

# ಆಹ್ವಾನಿತ ಲೇಖನಗಳು / ಮೂಲಸಾಹಿತ್ಯ ಲೇಖಕರು

| | |
|---|---|
| ಅಡ್ವೊಕೇಟ್ | ರಂಗರಾವ್ ತಲಚೇರಿಕರ್ |
| ಅಣೆಕಟ್ಟು | ಎಚ್. ಸಿ. ಕಪಿನೀಪತಿ ಭಟ್ಟ |
| ಅಧ್ಯಾತ್ಮ | ಡಿ. ವಿ. ಜಿ. |
| ಅಪರಾಧ | ಕೋ. ಚನ್ನಬಸಪ್ಪ |
| ಅಪೊಲೊ | ಜಿ. ಟಿ. ನಾರಾಯಣರಾವ್ |
| ಇಂದ್ರಜಾಲ | ವಸಂತಕುಮಾರ್ |
| ಉಯಿಲು | ರಂಗರಾವ್ ತಲಚೇರಿಕರ್ |
| ಋತುಗಳು | ಎಂ. ವಾಸುದೇವರಾವ್ |
| ಎನ್. ಸಿ. ಸಿ. | ಜಿ. ಟಿ. ನಾರಾಯಣರಾವ್ |
| ಕ್ರಿಸ್ತ, ಯೇಸು | ಭಾಸ್ಕರ ಯೇಸುಪ್ರಿಯ |
| ಕೃತಕ ಭಾಷೆಗಳು | ಹಾ. ಮಾ. ನಾಯಕ |
| ಕ್ಷಿಪಣಿ | ಪಾ. ಸಂ. ವೆ. ಶೆಟ್ಟಿ |
| ಗಣಿತ | ಡಿ. ವಿ. ರಾಮಣ್ಣ |
| ಗ್ರಂಥಾಲಯ | ಕೆ. ಎಸ್. ದೇಶಪಾಂಡೆ |
| ಚಮೂದಳ | ಜೆ. ಬಿ. ಮಲ್ಲಾರಾಧ್ಯ |
| ಜಾಗೃತ ಆಯೋಗ | ನಿಟ್ಟೂರು ಶ್ರೀನಿವಾಸರಾವ್ |
| ಧ್ರುವ, ಧ್ರುವಪ್ರದೇಶಗಳು | ಎಂ. ವಾಸುದೇವರಾವ್ |
| ನಗದು | ಎಚ್ಚೆಸ್ಕೆ |
| ನಾಗಾರ್ಜುನ | ಎಚ್. ವಿ. ಶ್ರೀರಂಗರಾಜ್ |
| ನ್ಯಾಯಶಾಸ್ತ್ರ | ಆರ್. ರಂಗಯ್ಯ |
| ಪಳೆಯುಳಿಕೆ ಮಾನವ | ಎನ್. ಪಿ. ಶಂಕರನಾರಾಯಣರಾವ್ |
| ಪರ್ವತಾರೋಹಣ | ಜಿ. ಟಿ. ನಾರಾಯಣರಾವ್ |
| ಪೋಲೀಸ್ | ಕೆ. ಬಾಲಕೃಷ್ಣ |
| ಬಂಡವಾಳ | ಎಚ್ಚೆಸ್ಕೆ |
| ಮಹಾವೀರ | ಮಿರ್ಜಿ ಅಣ್ಣಾರಾವ್ |
| ಮಾನವ | ಎನ್. ಪಿ. ಶಂಕರನಾರಾಯಣರಾವ್ |
| ಮಾಂಟಿಸೋರಿ ಪದ್ಧತಿ | ಮ. ಗು. ಹಂದ್ರಾಳ |
| ಮೂಲಶಿಕ್ಷಣ | ಟಿ. ವಿ. ತಿಮ್ಮೇಗೌಡ |
| ಲಿಪಿ | ಎಂ. ಚಿದಾನಂದಮೂರ್ತಿ |
| ಲೆಕ್ಕ ಬರಹ | ಎಚ್ಚೆಸ್ಕೆ |
| ಲೋಕಪಾಲ, ಲೋಕಾಯುಕ್ತ, ಓಂಬುಡ್ಸ್‌ಮನ್ | ನಿಟ್ಟೂರು ಶ್ರೀನಿವಾಸರಾವ್ |
| ವ್ಯಾಪಾರ - ವಾಣಿಜ್ಯ | ಎಚ್ಚೆಸ್ಕೆ |
| ವಿದ್ಯಾಭ್ಯಾಸ | ಎಸ್. ವಿ. ಜೇವೂರ |
| ವಿಮೆ | ಕೆ. ಗೋಪಾಲ್ |
| ಶಿಷ್ಟಕಾಲ | ಜಿ. ಟಿ. ನಾರಾಯಣರಾವ್ |
| ಸಂಸತ್ತು | ಟಿ. ಹನುಮಂತಪ್ಪ |
| ಸಂಸ್ಕೃತಿ | ಎ. ಎನ್. ಮೂರ್ತಿರಾವ್ |
| ಸ್ಕಂಧ, ಅಂಶ, ಋಣಪತ್ರ | ಎಚ್ಚೆಸ್ಕೆ |
| ಹಣಕಾಸು | ಟಿ. ಕೃಷ್ಣರಾವ್ |

# ಸಮಾಲೋಚಕರು

ಆಚಾರ್ಯ ಶ್ರೀ ಬುದ್ಧರಕ್ಖಿತ ಥೇರ
ಬುದ್ಧಮಂದಿರ
ಬೆಂಗಳೂರು

ಶ್ರೀ ಶ್ರೀ ನಿರಂಜನ ಪ್ರಣವ ಸ್ವರೂಪಿ
ಶ್ರೀ ಶಿವಕುಮಾರ ಸ್ವಾಮಿಗಳವರು
ಮಠಾಧ್ಯಕ್ಷರು
ಸಿದ್ಧಗಂಗಾ ಕ್ಷೇತ್ರ

ನಿಟ್ಟೂರು ಶ್ರೀನಿವಾಸರಾವ್
[ವಿಶ್ರಾಂತ] ಕೇಂದ್ರ ಜಾಗೃತ
ಕಮಿಷನರ್ ಮತ್ತು
ಮೈಸೂರಿನ ಶ್ರೇಷ್ಠ ನ್ಯಾಯಾಧೀಶ
ಬೆಂಗಳೂರು

ಎಲ್. ಶ್ರೀಕಂಠಯ್ಯ
[ಮಾಜಿ] ರಾಜ್ಯಶಾಸ್ತ್ರ ಪ್ರಾಧ್ಯಾಪಕ
ಮತ್ತು ಅಡ್ವೊಕೇಟ್, ಎಂ.ಎಲ್.ಎ
ಮೈಸೂರು

ಹಾ.ಮಾ. ನಾಯಕ
ನಿರ್ದೇಶಕ, ಕನ್ನಡ ಅಧ್ಯಯನ
ಸಂಸ್ಥೆ, ಮಾನಸ ಗಂಗೋತ್ರಿ
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು

ಕೋ. ಚನ್ನಬಸಪ್ಪ
ಪ್ರಿನ್ಸಿಪಲ್ ಜಿಲ್ಲಾ ಮತ್ತು ಸೆಷನ್ಸ್
ನ್ಯಾಯಾಧೀಶ
ಬೆಂಗಳೂರು

ಟಿ. ರೂಬೆನ್
ಮೈಸೂರು ಪಬ್ಲಿಕ್ ಸರ್ವಿಸ್
ಕಮಿಷನಿನ ಸದಸ್ಯ
ಬೆಂಗಳೂರು

ರಂಗರಾವ್ ತಲಚೇರಿಕರ್
ಅಡ್ವೊಕೇಟ್, ಗ್ರಂಥಕರ್ತ
ಬೆಳಗಾಂವಿ

ಜಿ. ಎಸ್. ಹಾಲಪ್ಪ
ರಾಜ್ಯಶಾಸ್ತ್ರದ ಪ್ರಾಧ್ಯಾಪಕ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಕೆ. ಬಿ. ರಾಮಕೃಷ್ಣರಾವ್
ಹಿಂದೂತತ್ತ್ವಶಾಸ್ತ್ರದ ಪ್ರಾಧ್ಯಾಪಕ
ಮಾನಸ ಗಂಗೋತ್ರಿ
ಮೈಸೂರು

ಎಸ್. ಎಸ್. ರಾಘವಾಚಾರ್
ತತ್ತ್ವಶಾಸ್ತ್ರದ ಪ್ರಾಧ್ಯಾಪಕ
ಮಾನಸ ಗಂಗೋತ್ರಿ
ಮೈಸೂರು

ಬಿ. ಕೃಷ್ಣನ್
ಮನೋವಿಜ್ಞಾನದ ಪ್ರಾಧ್ಯಾಪಕ
ಮಾನಸ ಗಂಗೋತ್ರಿ
ಮೈಸೂರು

ಎಸ್. ಕೆ. ರಾಮಚಂದ್ರರಾವ್
ಪ್ರಾಧ್ಯಾಪಕ
ಕ್ಯಾಲಿಸನ್ ಕಾಲೇಜು
ಬೆಂಗಳೂರು

ಎಚ್. ನರಸಿಂಹಯ್ಯ
ಪ್ರಿನ್ಸಿಪಾಲ್, ನ್ಯಾಷನಲ್ ಕಾಲೇಜು
ಬೆಂಗಳೂರು

ಟಿ. ಕೃಷ್ಣರಾವ್
ಪ್ರಿನ್ಸಿಪಾಲ್, ಭಂಡಾರ್‌ಕರರ
ಆರ್ಟ್ಸ್ ಮತ್ತು ಸೈನ್ಸ್ ಕಾಲೇಜು
ಕುಂದಾಪುರ

ತಿರುಮಲೆ ತಾತಾಚಾರ್ಯ ಶರ್ಮ
ಗ್ರಂಥಕರ್ತ, ಪತ್ರಿಕಾಕರ್ತ
ಬೆಂಗಳೂರು

ಎಸ್. ಎಂ. ಹುಣಶ್ಯಾಳ್
ಪ್ರಿನ್ಸಿಪಾಲ್, ಹರ್ಮ್‌ವರ್ದ್
ಹೈಯರ್ ಸೆಕೆಂಡರಿ ಶಾಲೆ
ರಾಯಚೂರು

ಹಮ್‌ಜ್ಜು ಜಗಳೂರು ಇಮಾಮ್
ಆಡಳಿತಾಧಿಕಾರಿ
ಮ್ಯಾಕ್ಸ್ ಮುಲ್ಲರ್ ಭವನ
ಬೆಂಗಳೂರು

ಕೆ. ಟಿ. ಪಾಂಡುರಂಗಿ
ರೀಡರ್, ಸಂಸ್ಕೃತ ವಿಭಾಗ
ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು

ಎ. ಪಿ. ಶ್ರೀನಿವಾಸಮೂರ್ತಿ
ರೀಡರ್, ಅರ್ಥಶಾಸ್ತ್ರ
ಮಾನಸ ಗಂಗೋತ್ರಿ
ಮೈಸೂರು

ಜಿ. ಹನುಮಂತರಾವ್
[ವಿಶ್ರಾಂತ] ಗ್ರಂಥಾಧಿಕಾರಿ
ಪ್ರಾಧ್ಯಾಪಕ
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು

ಜಿ. ಟಿ. ನಾರಾಯಣರಾವ್
ವಿಜ್ಞಾನ ಸಂಪಾದಕ
ಕನ್ನಡ ವಿಶ್ವಕೋಶ
ಮಾನಸ ಗಂಗೋತ್ರಿ
ಮೈಸೂರು

ಎಚ್.ಎಸ್. ಕೃಷ್ಣಸ್ವಾಮಿ ಅಯ್ಯಂಗಾರ್
ಮಾನವಿಕ ಸಂಪಾದಕ
ಕನ್ನಡ ವಿಶ್ವಕೋಶ
ಮಾನಸ ಗಂಗೋತ್ರಿ
ಮೈಸೂರು

ಸಿಂಪಿ ಲಿಂಗಣ್ಣ
ಗ್ರಂಥಕರ್ತ
ಅರವಿಂದಾಶ್ರಮ
ಚಡಚಣ

ಜೀ. ಶಂ. ಪರಮಶಿವಯ್ಯ
ಅಧ್ಯಾಪಕ, ಮಾನಸ ಗಂಗೋತ್ರಿ
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು

ಮಿರ್ಜಿ ಅಣ್ಣಾರಾಯ
ಅಧ್ಯಾಪಕ, ಗ್ರಂಥಕರ್ತ
ಶೇಡಬಾಳ

ಎಂ. ವಾಸುದೇವರಾವ್
[ವಿಶ್ರಾಂತ] ಮುಖ್ಯೋಪಾಧ್ಯಾಯ
ಸುರತ್ಕಲ್

ಐ. ಎಸ್. ಪ್ರಸಾದ್.
ಅಧ್ಯಾಪಕ
ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು

# ನಾವು ಕೃತಜ್ಞರು


ಈ ಸಂಪುಟದ ಚಿತ್ರಕಾರರಾದ ಜಿ. ವೈ. ಹುಬ್ಳೀಕರ್, ವಿಜಯ, ಶ್ರೀನಿವಾಸ ವರ್ಮ, ವರಾಹ ಮೂರ್ತಿ, ಕೆ. ಬಿ. ಕುಲಕರ್ಣಿ, ಮಹಮ್ಮದ್ ಉಸ್ಮಾನ್ ನದಾಫ್, ಎನ್. ಕೆ. ಮೂರ್ತಿ, ಜಿ. ಕೆ. ಸತ್ಯ, ಮಂದಾಕಿನಿ, ಶ್ರೀಪ್ರಕಾಶನ ಇವರಿಗೆ—

ರಕ್ಷಾಕವಚವನ್ನು ರಚಿಸಿದ ಬರಾಸ್ಕರ್ ಅವರಿಗೆ—

ಒಳಗಿನ ಮೂರು ವರ್ಣಚಿತ್ರಗಳನ್ನು ಮುದ್ರಿಸಿಕೊಟ್ಟ ಮಣಿಪಾಲ್ ಪ್ರೆಸ್ಸಿನವರಿಗೆ—

ಛಾಯಾಚಿತ್ರಗಳನ್ನು ಒದಗಿಸಿದ ಪ್ರೆಸ್ ಇನ್‌ಫರ್ಮೇಷನ್ ಬ್ಯೂರೋ ಮುಖ್ಯಾಧಿಕಾರಿ ಸಿ.ಕೆ. ತಿರುಮಲೇಶ್, ಮೈಸೂರು ರಾಜ್ಯ ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ನಿರ್ದೇಶಕರು ಎಂ. ಡಿ. ಮರಿಪುಟ್ಟಣ್ಣ ಮತ್ತು ಸಹ ನಿರ್ದೇಶಕರು ಆನಂದರಾವ್ ರೇಣು ; ಮೈಸೂರು ನ್ಯೂಸ್ ಫೋಟೋಸ್‌ನ ಟಿ. ಎಲ್. ರಾಮಸ್ವಾಮಿ ; ಭಾರತ ಸರಕಾರದ ರಕ್ಷಣಾ ಸಚಿವಶಾಖೆಯ ಜನಸಂಪರ್ಕಾಧಿಕಾರಿ ; ಬೆಂಗಳೂರು ಆಕಾಶವಾಣಿ ಕೇಂದ್ರದ ನಿರ್ದೇಶಕರಾದ ಆರ್. ಸಿ, ರಾಜಶೇಖರ್ ; ಮುಂಬಯಿಯ ಭಾಭಾ ಪರಮಾಣು ಸಂಶೋಧನಾ ಕೇಂದ್ರದ ವಾರ್ತಾಧಿಕಾರಿ; ಬೆಂಗಳೂರಿನ ಮ್ಯಾಕ್ಸ್ ಮುಲರ್ ಭವನದ ಆಡಳಿತಾಧಿಕಾರಿ ಹವ್‌ಜು ಜಗಳೂರು ಇಮಾಮ್ ; 'ಸಹಕಾರ ಪತ್ರಿಕೆ'ಯ ಸಂಪಾದಕ ಪಿ. ಆರ್. ಕಂಠಿ ; ಬೆಂಗಳೂರು ವಸ್ತುಸಂಗ್ರಹಾಲಯದ ಮುಖ್ಯಾಧಿಕಾರಿ ಕೆ. ಮಾಣಿಕ್ಯಂ ; ಮೈಸೂರು ಸಕ್ಕರೆ ಕಾರಖಾನೆ ಕಚೇರಿ. ಬೆಂಗಳೂರು ; ಪಶ್ಚಿಮ ಬಂಗಾಳ ರಾಜ್ಯದ ವಾರ್ತಾ ಇಲಾಖೆ, ಕಲ್ಕತ್ತ ; ನವದೆಹಲಿಯ ಸೋವಿಯೆತ್ ರಷ್ಯ, ಫ್ರಾನ್ಸ್ ರಾಯಭಾರಿ ಕಚೇರಿಗಳು ; ಬ್ರಿಟಿಷ್ ಹೈಕಮಿಷನರ ಕಚೇರಿ. ಸಿಂಗಪುರ ಹೈಕಮಿಷನರ ಕಚೇರಿ ; ಐಕ್ಯ ಅರಬ್ ಗಣರಾಜ್ಯದ ವಾರ್ತಾ ಶಾಖೆ, ನವದೆಹಲಿ ; ಸಂಯುಕ್ತ ಸಂಸ್ಥಾನ ವಾರ್ತಾ ಕೇಂದ್ರ, ಮದರಾಸು ; ನವದೆಹಲಿಯಲ್ಲಿರುವ ಜಪಾನ್ ವಾರ್ತಾ ಕೇಂದ್ರ ; ಜರ್ಮನಿಯ ಡೆಮೊಕ್ರಾಟಿಕ್ ರಿಪಬ್ಲಿಕಿನ ವಾಣಿಜ್ಯ ಇಲಾಖೆ. ನವದೆಹಲಿ; ಸಿಂಹಳ ಸರಕಾರದ ವಾರ್ತಾ ಇಲಾಖೆ, ಕೊಲಂಬೊ ; ಮುಂಬಯಿಯ ಬಹಾಯ್ ಆಧ್ಯಾತ್ಮಿಕ ಸಂಘದ ಜೀನ ಸೊರಾಬ್ಜಿ. ಮುಂಬಯಿಯ ಕನ್ನಡ ಕಲಾವಿದ ನಾನಾ ದೇಸಾಯಿ ; ಬೆಂಗಳೂರಿನ ತಿರುಮಲೆ ತಾತಾಚಾರ್ಯ ಶರ್ಮ. ಜಿ. ಎ. ನರಸಿಂಹ ಮೂರ್ತಿ ಇವರೆಲ್ಲರಿಗೆ—

ಛಾಯಾ ಚಿತ್ರಗಳನ್ನು ಅಣಿಗೊಳಿಸಲು ನೆರವಾದ ಕಲಾವಿದ ರಮೇಶರಿಗೆ—

'ಸುಧಾ' ಸಹಾಯಕ ಸಂಪಾದಕ ಎಂ. ಬಿ. ಸಿಂಗ್ ಅವರಿಗೆ—

ಬಾವುಟಗಳ ಸಂಗ್ರಹದಲ್ಲಿ ಸಹಕರಿಸಿದ 'ವಿಜ್ಞಾನ ಸರ್ವಸ್ವಮು' (ತೆಲಗು ವಿಶ್ವಕೋಶ) ಸಂಯೋಜಕರು ಪಿ. ಸುಬ್ಬರಾಯನ್‌ರಿಗೆ—

ಅರಣ್ಯ ಮತ್ತು ಅಂಚೆ ಚೀಟಿ ಚಿತ್ರಗಳ ರಚನೆಯಲ್ಲಿ ನೆರವಾದ ನ್ಯಾಷನಲ್ ಅಂಡ್ ಗ್ರಿಂಡ್‌ಲೇಸ್‌ನ ಎಸ್.ಎ.ಎಸ್. ರಾವ್ ಅವರಿಗೆ—

ಅಂಚೆ ಚೀಟಿಗಳ ಸಂಯೋಜನೆಯಲ್ಲಿ ಸಹಕರಿಸಿದ ಸೆಂಟ್ರಲ್ ಕಾಲೇಜಿನ ಸದಾನಂದ ಹೊಳ್ಳ. ಹೋಂ ಸ್ಕೂಲಿನ ತೇಜಸ್ವಿನಿ ನಿರಂಜನ ಇವರಿಗೆ—

ಅಗತ್ಯವಾದ ಗ್ರಂಥಗಳನ್ನು ಒದಗಿಸಿದ ಬೆಂಗಳೂರು ವಿಶ್ವವಿದ್ಯಾನಿಲಯದ ಗ್ರಂಥಾಲಯದ ಅಧಿಕಾರಿಗಳಿಗೆ—

'ಜ್ಞಾನ ಗಂಗೋತ್ರಿ'ಯ ಸಂಪಾದಕರಾಗಲು ಎಲ್.ಎಸ್. ಶೇಷಗಿರಿ ರಾವ್ ಅವರ ಸೇವೆಯನ್ನು ಎರವಲು ನೀಡಿದ ಬೆಂಗಳೂರು ವಿಶ್ವವಿದ್ಯಾಲಯಕ್ಕೆ—

'ಜ್ಞಾನ ಗಂಗೋತ್ರಿ'ಯ ಸಹ ಸಂಪಾದಕರಾಗಲು ವರದರಾಜ ಹುಯಿಲಗೋಳರಿಗೆ ಅನುಮತಿ ನೀಡಿದ ಧಾರವಾಡದ ಬಾಸೆಲ್ ಮಿಷನ್ ವಿದ್ಯಾಸಂಸ್ಥೆಗೆ—

ಸಂಪುಟದ ರಕ್ಷಾಕವಚವನ್ನು ಅಣಿಗೊಳಿಸುವುದರಲ್ಲೂ ಮತ್ತಿತರ ವಿಷಯಗಳಲ್ಲೂ ನೆರವು ನೀಡಿದ ಸರ್ಕಾರೀ ಮುದ್ರಣಾಲಯದ ಹಿರಿಯ ಸಹಾಯಕ ನಿರ್ದೇಶಕ ಬಿ. ಎನ್. ರಾಮಮೂರ್ತಿ. ಸಹಾಯಕ ನಿರ್ದೇಶಕ ಡಿ. ನರಸಿಂಹಯ್ಯ. ಉಪನಿರ್ದೇಶಕ ಎಸ್. ರಾಮಶೇಷ ಶರ್ಮರಿಗೆ—

ಶ್ರಮ ಮತ್ತು ಬಳಲಿಕೆ ಒಂದನ್ನೂ ಲೆಕ್ಕಿಸದೆ ಅಲ್ಪಾವಧಿಯಲ್ಲಿ ಸಮರ್ಪಕವಾಗಿ ಸಂಪುಟ ಅಚ್ಚಾಗಲು ಕಾರಣರಾದ ಉಪನಿರ್ದೇಶಕ ಆರ್. ನಾರಾಯಣರಿಗೆ—

—ನಾವು ಕೃತಜ್ಞರು

# ತಿಲಕ

ಡಾ. ವಿ. ಕೆ. ಆರ್. ವಿ. ರಾವ್
ಭಾರತದ ಶಿಕ್ಷಣ ಸಚಿವರು
ನವದೆಹಲಿ

**ಜ್ಞಾ**ನ ಭಂಡಾರ ದಿನದಿಂದ ದಿನಕ್ಕೆ ವೃದ್ಧಿಯಾಗುತ್ತ ಸಾಗಿದೆ. ಬೋಧನ ಸಾಮಗ್ರಿಯನ್ನು ಆಧುನಿಕಗೊಳಿಸುವುದು ಅತ್ಯವಶ್ಯವಾಗಿದೆಯಷ್ಟೇ ಅಲ್ಲ, ಈ ಆಧುನಿಕ ಜ್ಞಾನ ಶ್ರೀಸಾಮಾನ್ಯನ ಕೈಗೆಟಕುವಂತೆ ಮಾಡುವುದೂ ಅಗತ್ಯವಾಗಿದೆ. ಇಂಥ ಪರಿಸ್ಥಿತಿಯಲ್ಲಿ, ಕನ್ನಡದಲ್ಲಿ ಸಿದ್ಧವಾಗುತ್ತಿರುವ ಈ ಕಿರಿಯರ ವಿಶ್ವಕೋಶ–'ಜ್ಞಾನ ಗಂಗೋತ್ರಿ'–ಕನ್ನಡ ಸಾಹಿತ್ಯಕ್ಕೆ ಸ್ವಾಗತಾರ್ಹವಾದ ಕೊಡುಗೆಯಾಗಿದೆ. ಕನ್ನಡ ನಾಡಿನ ಖ್ಯಾತ ವಿದ್ವಾಂಸರ ನೆರವು ಪಡೆದು ದಕ್ಷ ಸಂಪಾದಕ ವರ್ಗವು ಪ್ರಥಮ ಸಂಪುಟವಾದ ' ಮನುಕುಲದ ಕಥೆ 'ಯಲ್ಲಿ ಅಣಿಗೊಳಿಸಿರುವ ವಾಚನ ಸಾಮಗ್ರಿ, ವ್ಯಾಪಕವೂ ನಿಷ್ಕೃಷ್ಟವೂ ಆಗಿದೆ. ಶೈಲಿ ಸರಳ, ನೇರ ; ಪರಿಣಾಮಕಾರಿಯಾದ ಯಥೋಚಿತವಾದ ಚಿತ್ರಗಳು. ಈ ಗ್ರಂಥ ಕಿರಿಯರಿಗೆ–ವಯಸ್ಕರಿಗೆ ಕೂಡಾ–ತಮ್ಮ ಜ್ಞಾನವನ್ನು ವೃದ್ಧಿಪಡಿಸಿಕೊಳ್ಳುವುದಕ್ಕೂ ತಮ್ಮ ದೃಷ್ಟಿ ಕೋನವನ್ನು ರೂಪಿಸುವುದಕ್ಕೂ ಬಹಳ ಉಪಕಾರಿಯಾಗುವುದೆಂದು ನನ್ನ ನಂಬಿಕೆ.

**'ಜ್ಞಾ**ನ ಗಂಗೋತ್ರಿ'ಯ ಜ್ಞಾನಜಲಮೆ ಹರಿದು ಬಂದು, ಎಳೆಯರ ಫಲವತ್ತಾದ ಕುತೂಹಲಿಯಾದ ಮನಸ್ಸಿಗೆ ನೀರುಣಿಸಲಿ ; ಭವಿಷ್ಯತ್ತಿನಲ್ಲಿ ಈ ದೇಶವನ್ನು ಮುನ್ನಡೆಸಲು ಅವರಿಗೆ ಬೇಕಾದ ಅರಿವನ್ನು, ದೃಷ್ಟಿ ವೈಶಾಲ್ಯವನ್ನು, ವ್ಯಕ್ತಿತ್ವದ ಶಕ್ತಿಯನ್ನು ಒದಗಿಸಲಿ. ●

ಶ್ರೀ ಕೆ. ವಿ. ಶಂಕರಗೌಡ
ಮೈಸೂರು ರಾಜ್ಯದ ಶಿಕ್ಷಣ ಸಚಿವರು
ಬೆಂಗಳೂರು

**ಕಿ**ರಿಯರ ವಿಶ್ವಕೋಶವಾದ 'ಜ್ಞಾನ ಗಂಗೋತ್ರಿ'ಯ ಪ್ರಥಮ ಸಂಪುಟ 'ಮನುಕುಲದ ಕಥೆ' ನಿರೀಕ್ಷೆಗಿಂತಲೂ ಒಂದು ತಿಂಗಳು ಮುಂಚೆ ಸಿದ್ಧವಾಗಿರುವುದನ್ನು ಕಂಡು ನಾನು ಅತ್ಯಂತ ಸಂತೋಷಗೊಂಡಿದ್ದೇನೆ.

**ಕ**ನ್ನಡ ಭಾಷೆಯು ಬೋಧನ ಮಾಧ್ಯಮವಾಗುತ್ತಿರುವ ಈ ಸಂಧಿಕಾಲದಲ್ಲಿ ಈ ಬಗೆಯ ವಿಶ್ವಕೋಶದ ಪ್ರಕಟಣೆ ಸಮಯೋಚಿತವಾಗಿದೆ. ಅರಿವು ಮೂಡಿಸುವ ಕೆಲಸ ಎಳೆ ವಯಸ್ಸಿನಲ್ಲೇ ಆರಂಭವಾಗಬೇಕು. ಇದರಲ್ಲಿ ಮಾತಾಪಿತೃಗಳ ಹಾಗೂ ಅಧ್ಯಾಪಕರ ಹೊಣೆ ಹಿರಿದು. ಇವರೆಲ್ಲರಿಗೆ ' ಜ್ಞಾನ ಗಂಗೋತ್ರಿ' ಅತ್ಯುಪಯುಕ್ತವಾಗಿದೆ.

**ಮೈ**ಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ರಚಿಸುತ್ತಿರುವ ಕನ್ನಡ ವಿಶ್ವಕೋಶ, ರಚಿಸಲಿರುವ ವಿಷಯ ವಸ್ತುಕೋಶ ಹಾಗೂ ಕರ್ನಾಟಕ ಸಹಕಾರೀ ಪ್ರಕಾಶನ ಮಂದಿರದ ಕಾಣಿಕೆಯಾದ 'ಜ್ಞಾನ ಗಂಗೋತ್ರಿ', ಭಾಷೆಯ ಮತ್ತು ಜ್ಞಾನದ ಕ್ರಮಬದ್ಧ ಬೆಳವಣಿಗೆಗೆ ಭದ್ರ ಬುನಾದಿಯನ್ನು ನಿರ್ಮಿಸುತ್ತಿವೆ. ಇಂಥ ಮಹತ್ಕಾರ್ಯಕ್ಕೆ ನೆರವನ್ನು ನೀಡುವುದು ಪವಿತ್ರ ಕರ್ತವ್ಯವೆಂದು ಸರಕಾರ ಭಾವಿಸಿದೆ.

**'ಜ್ಞಾ**ನ ಗಂಗೋತ್ರಿ'ಯ ಪ್ರಥಮ ಸಂಪುಟ ಕ್ಷಿಪ್ರವಾಗಿ ಹೊರಬರಲು ಕಾರಣರಾಗಿರುವ ಪ್ರಧಾನ ಸಂಪಾದಕರಿಗೂ ಕರ್ನಾಟಕ ಸಹಕಾರೀ ಪ್ರಕಾಶನ ಮಂದಿರದ ಇನ್ನಿತರ ಪದಾಧಿಕಾರಿಗಳಿಗೂ ನನ್ನ ಹೃತ್ಪೂರ್ವಕ ಅಭಿನಂದನೆಗಳು. ●

## ಆಭಾರ ಮನ್ನಣೆ

'ಜ್ಞಾನ ಗಂಗೋತ್ರಿ'ಯ ಮೊದಲ ಸಂಪುಟ—'ಮನುಕುಲದ ಕಥೆ'—ನಿರೀಕ್ಷೆಗೆ ಮುಂಚೆ ಪ್ರಕಟವಾಗುತ್ತಿದೆ. ಶಾಲೆಗಳ ಉಪಯೋಗಕ್ಕಾಗಿ 15,000 ಪ್ರತಿಗಳನ್ನು ಕೊಳ್ಳುವುದರ ಮೂಲಕ, ಈ ಬೃಹತ್ ಯೋಜನೆ ಕಾರ್ಯಗತವಾಗಲು ಸಹಾಯ ಮಾಡಿದ ರಾಜ್ಯ ಸರಕಾರಕ್ಕೆ ಸಹಕಾರೀ ಪ್ರಕಾಶನ ಮಂದಿರ ಕೃತಜ್ಞತೆಯಿಂದ ತಲೆಬಾಗುತ್ತದೆ. ಅದರಲ್ಲೂ ವಿಶೇಷವಾಗಿ ಮುಖ್ಯಮಂತ್ರಿ ಶ್ರೀ ವೀರೇಂದ್ರ ಪಾಟೀಲರು, ಹಣಕಾಸಿನ ಶಾಖೆ ಮಂತ್ರಿ ಶ್ರೀ ರಾಮಕೃಷ್ಣ ಹೆಗಡೆಯವರು, ವಿದ್ಯಾಸಚಿವ ಶ್ರೀ ಕೆ. ವಿ. ಶಂಕರಗೌಡರು, ಸಹಕಾರ ಮಂತ್ರಿ ಶ್ರೀ ಜಿ. ಎಮ್. ನಾಡಗೌಡರು—ಇವರ ಸಹಾಯ ಸಹಕಾರ ಪ್ರೋತ್ಸಾಹಗಳೇ ನಮಗೆ ಹೆಚ್ಚಿನ ಉತ್ಸಾಹವನ್ನು ತಂದಿವೆ. ಶಿಕ್ಷಣಶಾಖೆಯ ಕಾರ್ಯದರ್ಶಿ ಶ್ರೀ ಕೆ. ಆರ್. ರಾಮಚಂದ್ರನ್ ಅವರೂ ಆ ಶಾಖೆಯ ಇತರ ಅಧಿಕಾರಿಗಳೂ ನಮಗೆ ನೆರವಾಗಿದ್ದಾರೆ. ಅವರೆಲ್ಲರಿಗೆ ಪ್ರಕಾಶನ ಮಂದಿರದ ಪರವಾಗಿ ಹೃತ್ಪೂರ್ವಕ ವಂದನೆಗಳನ್ನು ಅರ್ಪಿಸುತ್ತೇವೆ. ಈ ಪ್ರಕಟಣೆಗೆ ಅವಿಶ್ರಾಂತವಾಗಿ ದುಡಿದ ಸಂಪಾದಕ ಮಂಡಳಿಯ ಸದಸ್ಯರು. ಅಧ್ಯಕ್ಷರಾದ ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿ ಶ್ರೀ ಡಿ. ಜವರೇಗೌಡ, ಪ್ರಧಾನ ಸಂಪಾದಕರಾದ ಶ್ರೀ ನಿರಂಜನ ಹಾಗೂ ಸಂಪಾದಕವರ್ಗದ ಇತರ ಸದಸ್ಯರಿಗೆ ನಮ್ಮ ಹಾರ್ದಿಕ ವಂದನೆಗಳು. ನಮ್ಮೊಡನೆ ಸಹಕರಿಸಿ ಹೊತ್ತಗೆಯನ್ನು ಅತ್ಯಲ್ಪ ಕಾಲದಲ್ಲಿ ಅಚ್ಚು ಮಾಡಿಕೊಟ್ಟ ಸರಕಾರೀ ಮುದ್ರಣಾಲಯದ ಡೈರೆಕ್ಟರ್ ಶ್ರೀ ಶ್ರೀರಾಮ ಹಾಗೂ ಅವರ ಸಹಾಯಕರನ್ನೂ ಕಾರ್ಮಿಕಬಂಧುಗಳನ್ನೂ ನಾವು ಎಂದಿಗೂ ಮರೆಯಲಾರೆವು.

**ಪಿ. ಎಸ್. ಭಟ್**
ಮ್ಯಾನೇಜಿಂಗ್ ಡೈರೆಕ್ಟರ್

**ಜಿ. ಎಸ್. ಬೊಮ್ಮೇಗೌಡ**
ಅಧ್ಯಕ್ಷ

ಕರ್ನಾಟಕ ಸಹಕಾರೀ ಪ್ರಕಾಶನ ಮಂದಿರ


## ಓದುಗರಿಗೆ ನೆರವು

ಪ = ಪಶ್ಚಿಮ   ಪೂ = ಪೂರ್ವ

ಉ = ಉತ್ತರ   ದ = ದಕ್ಷಿಣ

ಕ್ರಿ.ಪೂ. = ಕ್ರಿಸ್ತ ಪೂರ್ವ ; ಬರಿಯ ವರ್ಷವಷ್ಟೇ ಇದ್ದಾಗ ಕ್ರಿಸ್ತಶಕ ಎಂದು ಅರ್ಥ

ರೂ. = ರೂಪಾಯಿ ಚ. = ಚದರ ಫಾ. = ಫಾರನ್‌ಹೀಟ್ ಡಿಗ್ರಿ = ° ಮಿನಿಟು = ′

ಸೆ. ಮೀ. = ಸೆಂಟಿಮೀಟರ್   ಕಿ. ಮೀ. = ಕಿಲೊಮೀಟರ್

ಅಳತೆ ತೂಕಗಳಿಗೆಲ್ಲ ದಶಮಾಂಶ ಪದ್ಧತಿಯನ್ನು ಬಳಸಲಾಗಿದೆ

ದೀರ್ಘವಿರುವ ಅಥವಾ ಒಂದಕ್ಕಿಂತ ಹೆಚ್ಚು ವಿಷಯಗಳಿರುವ ಲೇಖನಗಳಲ್ಲಿ ಉಪಶೀರ್ಷಿಕೆಗಳಿವೆ

ಈ ಸಂಪುಟದಲ್ಲಿರುವ ಒಟ್ಟು ಲೇಖನಗಳು 600 ; ಚಿತ್ರಗಳು 500 [ರೇಖಾ ಚಿತ್ರ ಛಾಯಾ ಚಿತ್ರ ವರ್ಣ ಚಿತ್ರಗಳು ಸೇರಿ]

ಸಂದರ್ಭಸೂಚಿಯಲ್ಲಿ 2,354 ಪದಗಳಿವೆ. ದಪ್ಪಕ್ಷರದಲ್ಲಿರುವುದು ಸಂಪುಟದಲ್ಲಿ ಅಡಕವಾಗಿರುವ ಶೀರ್ಷಿಕೆಗಳು ; ಮುಖ್ಯಲೇಖನವಿರುವ ಪುಟದ/ಪುಟಗಳ ಸಂಖ್ಯೆಯನ್ನು ಶೀರ್ಷಿಕೆಯ ಮಗ್ಗುಲಲ್ಲಿ ಪ್ರಥಮವಾಗಿ ಕೊಟ್ಟಿದೆ.

ಶಬ್ದಕೋಶದ ಪದಗಳ ಸಂಖ್ಯೆ 911

ಉಚ್ಚಾರ ವಿಧಾನ : ಭಾರತೀಯ ನಾಮಪದಗಳು ಆಯಾ ಪ್ರದೇಶಗಳಲ್ಲಿರುವಂತೆ ; ವಿದೇಶೀಯ ಪದಗಳಿಗೆ ಆಧಾರ ವೆಬ್‌ಸ್ಟರ್ ಅಂತರರಾಷ್ಟ್ರೀಯ ನಿಘಂಟು.

# ಮುನ್ನುಡಿ

ಒಂದು ನಾಡಿನ ಭವಿಷ್ಯ ಅದರ ಯುವಕಶಕ್ತಿಯನ್ನವಲಂಬಿಸಿದೆ; ಆ ಯುವಕ ಶಕ್ತಿಯೇ ಅದರ ಸಂಪತ್ತು. ಜ್ಞಾನ ಸಂಗ್ರಹದಿಂದ ಆ ಸಂಪತ್ತಿನ ಮಹತ್ತು ಅತ್ಯಧಿಕವಾಗುತ್ತದೆ. ಜ್ಞಾನವೇ ಪರಮಬಲ; ಅಜ್ಞಾನವೇ ದುರ್ಬಲತೆ. ಭೌತಿಕಸಂಪತ್ತು ಎಷ್ಟೇ ಪ್ರಮಾಣದಲ್ಲಿದ್ದರೂ, ಜ್ಞಾನವೊಂದಿಲ್ಲದಿದ್ದರೆ ಅದು ನಿಷ್ಪ್ರಯೋಜಕವಾಗುತ್ತದೆ. ಜ್ಞಾನ ಕಲ್ಪತರು, ಕಾಮಧೇನು. ಅದರಿಂದ ಲಭ್ಯವಾಗದ ವಸ್ತುವಿಲ್ಲ. ಅದೊಂದಿದ್ದರೆ ದಾಸನೂ ಈಶನಾಗುತ್ತಾನೆ. ನಾಡಿನ ಅಭ್ಯುದಯವಾಗಲಿ, ವ್ಯಕ್ತಿಯ ಶ್ರೇಯಸ್ಸಾಗಲಿ ಈ ಪರಮೈಶ್ವರ್ಯವನ್ನವಲಂಬಿಸಿದೆ.

ಜ್ಞಾನದ ಶಾಖೋಪಶಾಖೆಗಳು ದಿನದಿನವೂ ಅನಂತವಾಗಿ ಅಮೇಯವಾಗಿ ವೃದ್ಧಿಹೊಂದುತ್ತಿವೆ. ಒಂದೊಂದು ಶಾಖೆಯ ಹರಹು ಬಿತ್ತರ ಆಳಗಳನ್ನು ನೋಡಿದಾಗ ಎಂಥ ಮೇಧಾವಿಗಾದರೂ ದಿಗ್ಭ್ರಮೆಯಾಗುತ್ತದೆ. ವೈದ್ಯಕ್ಷೇತ್ರವನ್ನೇ ತೆಗೆದುಕೊಳ್ಳೋಣ. ಅದರಲ್ಲಿ ಶರೀರರಚನಾಶಾಸ್ತ್ರ, ರೋಗಲಕ್ಷಣಶಾಸ್ತ್ರ ಮೊದಲಾದ ಹಲವಾರು ಶಾಖೆಗಳಿವೆ. ಅವುಗಳಲ್ಲಿ ಮತ್ತೆ ಎಷ್ಟೋ ಕವಲುಗಳು ಬೆಳೆದುಕೊಂಡಿವೆ. ಹೃದಯಕ್ಕೊಬ್ಬ, ನರಗಳಿಗೊಬ್ಬ, ಕಣ್ಣಿಗೊಬ್ಬ, ಗಂಟಲು ಮೂಗುಗಳಿಗೊಬ್ಬ — ಹೀಗೆ ಒಂದೊಂದು ಅವಯವಕ್ಕೂ ಒಬ್ಬೊಬ್ಬ ಪರಿಣತರನ್ನು ಪಡೆಯುವಂತಾಗಿದೆ. ಜ್ಞಾನ ವೃದ್ಧಿಹೊಂದಿದಂತೆಲ್ಲ ಈ ವಿಶೇಷ ಪರಿಣತಿ ಅವಶ್ಯವಾಗುತ್ತದೆ. ವೈದ್ಯವಿಜ್ಞಾನಕ್ಕೆ ಸಂಬಂಧಪಟ್ಟ ಎಲ್ಲ ಕಾರ್ಯಗಳನ್ನು ಒಬ್ಬನಿಂದ ನಿರೀಕ್ಷಿಸುವುದು ಕಷ್ಟವಾಗುತ್ತದೆ; ನಿರೀಕ್ಷಿಸಲೂಬಾರದು.

ಜ್ಞಾನ ಅಭಿವೃದ್ಧಿಹೊಂದಿದಂತೆಲ್ಲ ಜೀವನವೂ ಸಂಕೀರ್ಣವಾಗುತ್ತಿದೆಯೆನ್ನುವುದನ್ನು ಮರೆಯುವಂತಿಲ್ಲ. ಯಾವೊಬ್ಬ ವ್ಯಕ್ತಿಯೇ ಆಗಲಿ, ಯಾವೊಂದು ವಿಷಯದಲ್ಲಿ ಎಷ್ಟೇ ಪರಿಣತನಾಗಿರಲಿ, ಬೇರೆ ವಿಷಯಗಳ ಬಗ್ಗೆ ಅಷ್ಟಿಷ್ಟಾದರೂ ಮಾಹಿತಿಯನ್ನು ಪಡೆದಿರಬೇಕು. ವಿಜ್ಞಾನದ ಹಾಗೂ ತಾಂತ್ರಿಕ ವಿಷಯದ ವಿದ್ಯಾರ್ಥಿ ಅಲ್ಪಸ್ವಲ್ಪ ಮಾನವಿಕಶಾಸ್ತ್ರಕ್ಕೆ ಸಂಬಂಧಿಸಿದ ವಿಷಯಗಳನ್ನು ಅರಿತಿರಬೇಕು: ಹಾಗಿಲ್ಲದಿದ್ದರೆ ಅವನ ತಿಳಿವು ಪರಿಪೂರ್ಣವಾಗದು: ಅವನ ವ್ಯಕ್ತಿತ್ವ ಪೂರ್ಣವಾಗಿ ವಿಕಾಸವಾಗದು. ಆಧುನಿಕಯುಗದ ರೈತ ಕೃಷಿವಿಜ್ಞಾನದ ಜತೆಗೆ ವಿದ್ಯುಚ್ಛಕ್ತಿ ಯಂತ್ರ ವಿಜ್ಞಾನ ಮೊದಲಾದುವುಗಳಿಗೆ ಸಂಬಂಧಿಸಿದ ಸಂಗತಿಗಳನ್ನು ತಿಳಿದಿರಬೇಕಾಗುತ್ತದೆ. ಇಲ್ಲದಿದ್ದರೆ ವಿದ್ಯುದ್ವೇಗದಲ್ಲಿ ನಡೆಯುತ್ತಿರುವ ಪರಿವರ್ತನೆಗಳೊಂದಿಗೆ ತನ್ನ ಬದುಕನ್ನು ಹೊಂದಿಸಿಕೊಳ್ಳುವುದು ಕಷ್ಟವಾಗುತ್ತದೆ.

ಈ ದೃಷ್ಟಿಯಿಂದ ಬಾಲ್ಯದಲ್ಲಿಯೆ ಸಾಮಾನ್ಯ ವಿಶ್ವ ವಿಷಯಗಳ ತಿಳಿವಿಗೆ ಅವಕಾಶವನ್ನು ಕಲ್ಪಿಸತಕ್ಕದ್ದು ರಾಷ್ಟ್ರದ ಆದ್ಯಕರ್ತವ್ಯವಾಗಬೇಕು. ಇದಕ್ಕಾಗಿಯೇ ಸಂಕ್ಷೇಪವಾಗಿ ಹೃದಯಂಗಮವಾಗಿ ವಿಷಯಜ್ಞಾನವನ್ನೊದಗಿಸುವ ಸರಳಭಾಷೆಯ ವಿಶ್ವಕೋಶಗಳು ಪ್ರತಿಯೊಂದು ದೇಶಭಾಷೆಯಲ್ಲಿಯೂ ಬರಬೇಕಾಗಿದೆ. ಶಿಕ್ಷಣದ ವೆಚ್ಚ ಹೇಗೆ ಬಂಡವಾಳವೊ, ಹಣದ ಹೂಡಿಕೆಯೊ, ವಿಶ್ವಕೋಶರಚನೆಗೆ ಹೂಡುವ ಹಣವೂ ಹಾಗೆಯೇ ಬಂಡವಾಳವಾಗುತ್ತದೆ: ಆ ಹಣ ಬಡ್ಡಿಗೆ ಬಡ್ಡಿ ತರುತ್ತದೆ, ಅಕ್ಷಯವಾಗುತ್ತದೆ. ವಿದ್ಯುದಾಗಾರ ಮನೆಯನ್ನು ಬೆಳಗಿದರೆ ವಿಶ್ವಕೋಶ ಮನವನ್ನು ಬೆಳಗುತ್ತದೆ. ಈ ಸತ್ಯವನ್ನು ಮನಗಂಡೇ ಮೈಸೂರು ಸರ್ಕಾರ ಈ ತರಹ ಯೋಜನೆಗಳಿಗೆ ಅಪಾರ ಹಣವನ್ನು ಹೂಡಿದೆ. ವಿವಿಧ ವಿಶ್ವಕೋಶಗಳ ರಚನೆಗಾಗಿ ಸುಮಾರು ಒಂದೂವರೆ ಕೋಟಿ ಹಣವನ್ನು ಸರ್ಕಾರ ಮೀಸಲಾಗಿರಿಸಿದೆಯೆಂದರೆ ಯಾರಾದರೂ ಮೆಚ್ಚಬಹುದಾದ ವಿಷಯವಾಗಿದೆ.

ಈಗಾಗಲೇ 'ಬಾಲಪ್ರಪಂಚ'ವನ್ನು ರಚಿಸಿ ಶ್ರೀ ಶಿವರಾಮ ಕಾರಂತರು ವಿಶ್ವಕೋಶ ಕ್ಷೇತ್ರದಲ್ಲಿ ನಾಂದಿ ಹಾಡಿದ್ದರು. ಆ ಪರಂಪರೆಯಲ್ಲಿ 'ಜ್ಞಾನ ಗಂಗೋತ್ರಿ' ಇನ್ನೊಂದು ಮೈಲಿಗಲ್ಲು. ಇದು ಕಿರಿಯರನ್ನು (ವಯೋಮಾನ 11–18) ದೃಷ್ಟಿಯಲ್ಲಿಟ್ಟುಕೊಂಡು ನಿರ್ಮಾಣಗೊಂಡಿದೆ. ಎಳೆಯ ವಯಸ್ಸಿನವರಿಗಾಗಿ ಲೇಖನ ಬರೆಯುವುದು ಕಷ್ಟ. ಗಹನ ವಿಷಯವನ್ನು ಸರಳಗೊಳಿಸಬೇಕು. ಭಾಷೆಯನ್ನು ಎಚ್ಚರಿಕೆಯಿಂದ ಬಳಸಬೇಕು. ಅವರಿಗೆ ಮನ ಮುಟ್ಟುವಂತೆ ನಿರೂಪಣಾ

ವಿಧಾನವನ್ನು ಅಳವಡಿಸಿಕೊಳ್ಳಬೇಕು. ವಿಷಯಗಳ ಆಯ್ಕೆಯಲ್ಲಿಯೂ ತುಸು ತಲೆ ಕೆಡಿಸಿಕೊಳ್ಳಬೇಕಾಗುತ್ತದೆ. ಈ ಅಂಶದಲ್ಲಿ ಭಿನ್ನಾಭಿಪ್ರಾಯಕ್ಕೂ ಎಡೆಯುಂಟು. ಇದು ಏಕೆ ಇರಬೇಕು, ಅದು ಏಕೆ ಬೇಡ ಎಂದು ಟೀಕೆ ಬರಬಹುದು. ಪ್ರಧಾನ ಸಂಪಾದಕರಾದ ಶ್ರೀ ನಿರಂಜನ ಅವರೂ ಸಂಪಾದಕರಾದ ಶ್ರೀ ಎಲ್. ಎಸ್. ಶೇಷಗಿರಿರಾಯರೂ ಈ ಎಲ್ಲ ಅಂಶಗಳನ್ನು ಅತ್ಯಂತ ಜಾಗರೂಕತೆಯಿಂದ ಗಮನಿಸಿದ್ದಾರೆ. ಈ ಇಬ್ಬರು ಮಹನೀಯರ ವೈದುಷ್ಯ ಹಾಗೂ ಅವರ ಸಾಹಿತ್ಯಶಕ್ತಿ ಕನ್ನಡನಾಡಿಗೇ ತಿಳಿದಿರುವ ಸಂಗತಿ. ಶ್ರೀ ನಿರಂಜನ ಅವರಂತು ತಮ್ಮ ಲೇಖನಕಾರ್ಯವನ್ನು ಒತ್ತಟ್ಟಿಗಿಟ್ಟರು. ಅವರ ಶ್ರದ್ಧಾಯುಕ್ತವಾದ ನಿಷ್ಠೆ ಹಾಗೂ ದುಡಿಮೆಗಳಿಲ್ಲದಿದ್ದರೆ ಇಷ್ಟು ಶೀಘ್ರವಾಗಿ ಈ 'ಜ್ಞಾನ ಗಂಗೋತ್ರಿ' ಬೆಳಕು ಕಾಣುತ್ತಿರಲಿಲ್ಲ. ಇದರ ನಿರ್ಮಾಣಕಾರ್ಯದಲ್ಲಿ ಅವರು ಮಾಡಿರುವ ತ್ಯಾಗ ನನಗೆ ತಿಳಿದಿದೆ; ಇದಕ್ಕಾಗಿ ತಮ್ಮ ಸ್ವಂತ ಕೆಲಸಗಳಿಗೆಲ್ಲ ತಿಲಾಂಜಲಿಯೆರೆದರು; ಇದಕ್ಕಾಗಿ ತಮ್ಮನ್ನು ಸಂಪೂರ್ಣವಾಗಿ ನಿವೇದಿಸಿಕೊಂಡರು. ಈ ಸಂಪುಟದಲ್ಲಿ ಅಲ್ಲಿ ಇಲ್ಲಿ ನ್ಯೂನತೆಗಳು ಕಾಣಬಹುದು; ಆದರೆ ಪ್ರಾಮಾಣಿಕತೆಯನ್ನು ಮಾತ್ರ ಯಾರೂ ಪ್ರಶ್ನಿಸುವಂತಿಲ್ಲ.

ಸಾಹಿತ್ಯ ಸಂಸ್ಕೃತಿಗಳ ಅಭಿವೃದ್ಧಿಗಾಗಿ ತುಂಬ ಉದಾರವಾಗಿ ಸಹಾಯ ನೀಡುತ್ತಿರುವ ಮೈಸೂರು ಸರ್ಕಾರ—ಮುಖ್ಯವಾಗಿ ಮುಖ್ಯಮಂತ್ರಿಗಳಾದ ಶ್ರೀ ವೀರೇಂದ್ರ ಪಾಟೀಲರು. ಅರ್ಥಮಂತ್ರಿಗಳಾದ ಶ್ರೀ ರಾಮಕೃಷ್ಣ ಹೆಗಡೆಯವರು. ವಿದ್ಯಾಸಚಿವರಾದ ಶ್ರೀ ಕೆ. ವಿ. ಶಂಕರಗೌಡರು—ಈ ಯೋಜನೆಯ ಯಶಸ್ಸಿಗೆ ಎಲ್ಲ ಮಟ್ಟಿಗೂ ಕಾರಣ. ಸಂಪಾದಕ ಮಂಡಲಿ ಯಾವಾಗಲೂ ರಚನಾತ್ಮಕವಾದ ಸಲಹೆಗಳ ಮೂಲಕ ಸಂಪೂರ್ಣ ಸಹಕಾರ ನೀಡಿದೆ; ಪ್ರಕಾಶನ ಮಂದಿರದ ಅಧ್ಯಕ್ಷರಾದ ಶ್ರೀ ಜಿ. ಎಸ್. ಬೊಮ್ಮೇಗೌಡರೂ ಮ್ಯಾನೇಜಿಂಗ್ ಡೈರೆಕ್ಟರ್ ಶ್ರೀ ಪಿ. ಎಸ್. ಭಟ್ ಅವರೂ ಮೊದಲಿನಿಂದ ಈತನಕ ಚಕಾರವೆತ್ತದೆ ಬೆಂಬಲ ನೀಡಿದ್ದಾರೆ: ಕಚೇರಿಯ ಇತರ ಸಿಬ್ಬಂದಿಯೂ ಈ ಪವಿತ್ರಕಾರ್ಯದ ಯಶಸ್ಸಿಗೆ ಪಾತ್ರವಾಗಿದೆ. ಇವರಿಗೆಲ್ಲ ನನ್ನ ಹೃತ್ಪೂರ್ವಕ ವಂದನೆಗಳು. ಕನ್ನಡನಾಡಿನ ಪ್ರತಿಯೊಬ್ಬ ಕಿರಿಯನೂ ಇದರ ಪ್ರಯೋಜನವನ್ನು ಪಡೆದಾಗ ಈ ಎಲ್ಲ ಮಹನೀಯರ ಶ್ರಮ ಸಾರ್ಥಕವಾಗುತ್ತದೆ.

19–9–1970

**ದೇ. ಜವರೇಗೌಡ**

# ‘ಜ್ಞಾನ ಗಂಗೋತ್ರಿ’ ಯನ್ನು ಕುರಿತು

ಕನ್ನಡ ವಿಶ್ವಕೋಶದ ರಚನೆಯ ಹೊಣೆಯನ್ನು ಮೈಸೂರು ವಿಶ್ವವಿದ್ಯಾನಿಲಯ ವಹಿಸಿಕೊಂಡಿದ್ದ ಸಮಯ. ಬೆಂಗಳೂರಿಗೆ ಬಂದಿದ್ದ ಆಚಾರ್ಯ ದೇ. ಜ. ಗೌ. ವಿಶ್ವಕೋಶದ – ಅದರೊಳಗಿನ ಬರೆವಣಿಗೆಯ – ವಿಷಯ ಮೆಲುಕುಹಾಕುತ್ತ, "ಕಿರಿಯರ ಉಪಯೋಗಕ್ಕೆ ಬೇರೆಯೇ ಒಂದು ವಿಶ್ವಕೋಶ ಬೇಕು," ಎಂದರು. "ಮಾಡೋಣ," ಎಂದೆ ; "ನೀವು ಸಂಪಾದಕ ಮಂಡಲಿಯ ಅಧ್ಯಕ್ಷರಾಗಿರಬೇಕು," ಎಂದೂ ಮಾತು ಸೇರಿಸಿದೆ. ಜ್ಞಾನ ಗಂಗೋತ್ರಿಯ ಅನ್ವೇಷಣೆ ಆರಂಭವಾದದ್ದು ಹೀಗೆ.

ಮೇಲಿನ ಮಾತುಕತೆ ನಡೆದದ್ದು ಕರ್ನಾಟಕ ಸಹಕಾರೀ ಪ್ರಕಾಶನ ಮಂದಿರದ ಕಾರ್ಯಾಲಯದಲ್ಲಿ. ರಾಜ್ಯದ ಶಿಕ್ಷಣ ಇಲಾಖೆಯ ಹಿರಿಯ ಅಧಿಕಾರಿಗಳಲ್ಲೊಬ್ಬರಾದ ಶ್ರೀ ಎಚ್. ವಿ. ಶ್ರೀರಂಗರಾಜರು, 11–1೮ರ ವಯೋಮಾನದ ಕಿರಿಯರಿಗಾಗಿ ವಿಶ್ವಕೋಶ ರಚಿಸುವ ಯೋಜನೆಯನ್ನು ರೂಪಿಸಲು ನೆರವಾದರು. ಸಹಕಾರೀ ಪ್ರಕಾಶನ ಮಂದಿರದ ಆಡಳಿತ ಮಂಡಲಿ ಆ ಯೋಜನೆಯನ್ನು ಅಂಗೀಕರಿಸಿತು.

ಕಾರ್ಯಗತಗೊಳಿಸಲು ಹಣವಿಲ್ಲದಿದ್ದರೆ, ಎಂಥ ನೀಲಿ ನಕಾಶೆಯಾದರೂ ಮೂಲೆಗುಂಪಾಗಬೇಕು. ಕಲೆ–ರಾಜಕೀಯಗಳಲ್ಲಿ ಸಾಮರಸ್ಯ ಸಾಧಿಸಿರುವ ರಾಜ್ಯದ ಶಿಕ್ಷಣ ಸಚಿವ ಶ್ರೀ ಕೆ. ವಿ. ಶಂಕರಗೌಡರ ಮುಂದೆ ನಮ್ಮ ‘ ನಕಾಶೆ ’ಯನ್ನಿಟ್ಟೆವು. ಅವರು ಆಸಕ್ತಿ ತೋರಿದರು. ಅಧಿಕಾರಿಗಳ ಕ್ಷ-ಕಿರಣ ಪರೀಕ್ಷೆಗೆ ಯೋಜನೆ ಒಳಗಾಯಿತು.

ಈ ಪರೀಕ್ಷೆ ಒಂದು ವರ್ಷ ನಡೆದು, ಕಿರಿಯರ ವಿಶ್ವಕೋಶವನ್ನು ಶಾಲೆಗಳ ಉಪಯೋಗಕ್ಕಾಗಿ ಕೊಳ್ಳಲು ತಾನು ಸಿದ್ಧ ಎಂದು ರಾಜ್ಯ ಸರಕಾರ ತಿಳಿಸಿತು. ಏಳು ಸಂಪುಟಗಳಲ್ಲಿ ಕಿರಿಯರ ವಿಶ್ವಕೋಶ ರಚಿಸುವ ಯೋಜನೆಯನ್ನು ಭಾರತ ಸರಕಾರದ ಶಿಕ್ಷಣ ಸಚಿವ ಡಾ. ವಿ. ಕೆ. ಆರ್. ವಿ. ರಾಯರು ಉದ್ಘಾಟಿಸಿದರು. 1969ರ ಆಗಸ್ಟ್ 1ರಿಂದ ‘ ಜ್ಞಾನ ಗಂಗೋತ್ರಿ ’ಯ ರಚನೆ ಆರಂಭವಾಗಿ, ಪ್ರಥಮ ಸಂಪುಟವಾದ ‘ ಮನುಕುಲದ ಕಥೆ ’ಯ ಬರೆವಣಿಗೆ ಎಂಟು ತಿಂಗಳಲ್ಲಿ ಮುಗಿಯಿತು. 750 ಪುಟಗಳ 20 ಸಾವಿರ ಪ್ರತಿಗಳ ದ್ವಿವರ್ಣ ಮುದ್ರಣ ತಡವಾಗಬಹುದೇನೋ ಎಂಬ ಚಿಂತೆ ಕಾಡಿದಾಗ ಶಿಕ್ಷಣ ಇಲಾಖೆಯ ಕಾರ್ಯದರ್ಶಿ ಶ್ರೀ ಕೆ. ಆರ್. ರಾಮಚಂದ್ರನ್‌ರವರೂ ಸರ್ಕಾರೀ ಮುದ್ರಣಾಲಯದ ನಿರ್ದೇಶಕರಾದ ಶ್ರೀ ಎಂ. ಎ. ಶ್ರೀರಾಮರೂ ನಮ್ಮ ನೆರವಿಗೆ ಬಂದರು. ಸರ್ಕಾರೀ ಮುದ್ರಣಾಲಯ ಏಳು ಮುದ್ರಣ ಯಂತ್ರಗಳನ್ನು ಬಳಸಿ ಅಗಾಧ ಪ್ರಮಾಣದ ಈ ಮುದ್ರಣವನ್ನು ಕೇವಲ ಏಳು ವಾರಗಳಲ್ಲಿ ಮುಗಿಸಿ, ಪವಾಡವನ್ನು ಸಾಧಿಸಿತು.

ಪ್ರಥಮ ಸಂಪುಟವನ್ನು ಕರ್ನಾಟಕ ರಾಜ್ಯೋದಯದ ದಿನಾಚರಣೆಯ ಸಂದರ್ಭದಲ್ಲಿ ಪ್ರಕಟಿಸಬೇಕು ಎಂದುಕೊಂಡಿದ್ದೆವು. ಅದಕ್ಕೂ ಒಂದು ತಿಂಗಳಿಗೆ ಮುಂಚೆಯೇ ‘ ಮನುಕುಲದ ಕಥೆ ’ಯನ್ನು ಓದುಗರಿಗೆ ಒಪ್ಪಿಸುತ್ತಿದ್ದೇವೆಂದು ನಮಗೆಷ್ಟೋ ಸಂತೋಷ.

‘ ಜ್ಞಾನ ಗಂಗೋತ್ರಿ ’ಯ ಕಾರ್ಯವಿಧಾನ ಈ ರೀತಿ :

ಸಹಕಾರೀ ಪ್ರಕಾಶನ ಮಂದಿರ ರಚಿಸಿದ ಸಂಪಾದಕ ಮಂಡಳಿ [ದೇ. ಜ. ಗೌ. ಅಧ್ಯಕ್ಷರು] ವರ್ಷಕ್ಕೆ ಎರಡು ಮೂರುಸಾರಿ ಸಭೆಸೇರಿ, ಯೋಜನೆಯ ಬೆಳಕಿನಲ್ಲಿ, ಆಯಾ ಸಂಪುಟದ ವಿಸ್ತಾರ ಪರಿಮಿತಿಗಳನ್ನು ಚರ್ಚಿಸಿ, ಮಾರ್ಗಸೂಚಿಗಳನ್ನು ಗೊತ್ತುಪಡಿಸುತ್ತದೆ. ಸಂಯೋಜನಾ ಸಮಿತಿ, ಸಂಪುಟಗಳ ರಚನೆಯ ಮಧ್ಯೆ ತಲೆದೋರಬಹುದಾದ ಸಮಸ್ಯೆಗಳನ್ನು ನಿವಾರಿಸುತ್ತದೆ. ತಾಂತ್ರಿಕ ಸಮಿತಿ ಮುದ್ರಣದ ಪ್ರಶ್ನೆಗಳನ್ನು ಬಗೆಹರಿಸುತ್ತದೆ. ಸಂಪಾದಕ ವರ್ಗದ್ದು ನಿತ್ಯದ ದುಡಿಮೆ. ಅಲ್ಲಿ ಬರೆಯಬೇಕಾದ ಲೇಖನಗಳನ್ನು ಕುರಿತ ಚರ್ಚೆಗೆ, ದಿನ ಬಿಟ್ಟು ದಿನ ಸಭೆ; ವಾರಕ್ಕೊಮ್ಮೆ ಕಾರ್ಯಪ್ರಗತಿಯ ಪರಿಶೀಲನೆಗೆ ಸಂಪಾದಕೀಯ ಸಮಿತಿಯ ಸಭೆ.

ಇದು ಬರಿಯ ಕಾಗದದ ಮೇಲಿನ ವ್ಯವಸ್ಥೆಯಲ್ಲ ; ಉಸಿರು ರಕ್ತಮಾಂಸ ತುಂಬಿಕೊಂಡಿರುವ ಜೀವರೂಪ. ಪರಿಣಾಮ– ಹಂತಹಂತವಾಗಿ ಸೃಷ್ಟಿಯಾಗುತ್ತಿರುವ ಕಿರಿಯರ ವಿಶ್ವಕೋಶ.

ಸಂಪುಟಗಳು ಏಳು. ಮೊದಲನೆಯದು ಗವಿಮಾನವನಿಂದ ಹಿಡಿದು ಗಗನಯಾತ್ರಿಯ ವರೆಗಿನ ಸಾಧನೆಗಳಿಗೆ ಮೀಸಲು : ಎರಡನೆಯದರ ವಿಷಯ ಜೀವವಿಜ್ಞಾನ ; ಭೌತವಿಜ್ಞಾನ ಮೂರನೆಯದರಲ್ಲಿ ; ತಾಂತ್ರಿಕಜ್ಞಾನ ನಾಲ್ಕನೆಯದರಲ್ಲಿ ; ಐದನೆಯದು ಕಲೆ, ಸಾಹಿತ್ಯ; ಕ್ರೀಡೆ, ಮನೋಲ್ಲಾಸ ಆರನೆಯದು : ಕೊನೆಯದು ಭಾರತವನ್ನು ಕುರಿತದ್ದು. ಒಟ್ಟು ಪುಟಸಂಖ್ಯೆ ಡೆಮ್ಮಿ ಚತುರ್ಥಾಕೃತಿಯ 4,500 ರಿಂದ 5,000.

ಕಿರಿಯರನ್ನು, ಅವರ ಅಧ್ಯಾಪಕರನ್ನು, ಹೆತ್ತವರನ್ನು ಗಮನದಲ್ಲಿಟ್ಟು, ಲೇಖನಗಳಲ್ಲಿ ಸರಳವೂ ಆಕರ್ಷಕವೂ ಆದ ಶೈಲಿಯನ್ನು ಬಳಸಲು ಯತ್ನಿಸಿದ್ದೇವೆ. ಬರೆವಣಿಗೆಯ ಹೂರಣ – ಜಗತ್ತಿನ ಜ್ಞಾನಸರ್ವಸ್ವ. ಆ ಕಾರಣದಿಂದ ವಸ್ತುನಿಷ್ಠೆಗೆ ಅಗ್ರಪೂಜೆ. ಸಂದೇಹ ಬಂದಾಗ ಸಮಾಲೋಚಕರ ನೆರವು. ಯಾವುದೇ ವಿಷಯದ ಬಗೆಗೆ ಆಕರ ಗ್ರಂಥಗಳಲ್ಲಿ ಒಮ್ಮತವಿಲ್ಲದಿದ್ದರೆ, ಬಹುಜನ ವಿದ್ವಾಂಸರ ಅಭಿಪ್ರಾಯ ಸ್ವೀಕೃತ. ಪ್ರತಿ ಸಂಪುಟದಲ್ಲೂ ಸಂಪಾದಕವರ್ಗದ ಬರೆಹಗಳಲ್ಲದೆ ಕೆಲ ಆಹ್ವಾನಿತ

ಲೇಖನಗಳೂ ಇರುತ್ತವೆ. ಕೆಲವೊಮ್ಮೆ ಪರಿಣತರಿಂದ ಮೂಲಸಾಮಗ್ರಿಯನ್ನು ತರಿಸಿಕೊಳ್ಳುತ್ತೇವೆ. ನಾವು ಬರೆದುದು ಸಮರ್ಪಕವಾಗಿದೆಯೆ ಇಲ್ಲವೆ ಎಂಬುದನ್ನು ಕಂಡುಹಿಡಿಯಲು, ಬೆಂಗಳೂರಿನ ವಿವಿಧ ವಿದ್ಯಾಸಂಸ್ಥೆಗಳಿಂದ ವಿದ್ಯಾರ್ಥಿಗಳನ್ನೂ ಅಧ್ಯಾಪಕರನ್ನೂ ಬರಮಾಡಿಕೊಂಡು ವಿಚಾರ ವಿನಿಮಯ ನಡೆಸುತ್ತೇವೆ.

'ಜ್ಞಾನ ಗಂಗೋತ್ರಿ'ಯ ವಿಶೇಷ ಲಕ್ಷಣ ಪ್ರತಿ ಸಂಪುಟದಲ್ಲೂ ಆರಂಭದಲ್ಲಿ ಇರುವ ಸಮೀಕ್ಷೆ. ಇದು ಆ ಸಂಪುಟದ ಲೇಖನಗಳ ಸಿಂಹಾವಲೋಕನ. ಇದನ್ನೋದಿದ ಬಳಿಕ, ಅಕ್ಷರಾನುಕ್ರಮವಾಗಿ ಇರುವ ಮುಂದಿನ ವಿಷಯರಾಶಿಯನ್ನು ಬಳಸುವುದು ಸುಲಭ ವಾಗುತ್ತದೆ.

'ಜ್ಞಾನ ಗಂಗೋತ್ರಿ'ಯ ಮುಂದೆ ನಾಲ್ಕು ಉದ್ದೇಶಗಳಿವೆ :

—ಏನು ? ಏಕೆ ? ಎಲ್ಲಿ ? ಎತ್ತ ? ಪ್ರಶ್ನೆಗಳನ್ನೆತ್ತಿ ಕಾಡುವ ಮಕ್ಕಳಿಗೆ ಉತ್ತರ ನೀಡಲು ಹೆತ್ತವರಿಗೆ 'ಜ್ಞಾನಗಂಗೋತ್ರಿ' ನೆರವಾಗಬೇಕು.

—ವಿದ್ಯಾರ್ಥಿಯ ಮನಸ್ಸನ್ನು ಸೆರೆಹಿಡಿದು, ಅವನ ಜ್ಞಾನದಾಹವನ್ನು ತಣಿಸಿ, ಹೆಚ್ಚಿನ ವಿಷಯಗಳಿಗಾಗಿ ಆಕರ ಗ್ರಂಥಗಳತ್ತ ಆತ ಸಾಗುವಂತೆ ಪ್ರಚೋದಿಸಬೇಕು.

—ಎಳೆಯರಿಗೆ ವಿದ್ಯಾದಾನ ಮಾಡುವ ಶಿಕ್ಷಕ (ಉಪಾಧ್ಯಾಯ, ಅಧ್ಯಾಪಕ) ವೃಂದಕ್ಕೆ ಉಪಯುಕ್ತವೆನಿಸಬೇಕು.

—ಓದು ಬರಹಬಲ್ಲ ಕನ್ನಡದ ಪ್ರತಿಯೊಂದು ಮನೆಯಲ್ಲೂ ಶಾಲೆ-ಕಾಲೇಜುಗಳ ಪಂಚಾಯತಿ-ನಗರಗಳ ಗ್ರಂಥಭಂಡಾರ ಗಳಲ್ಲೂ ಸ್ಥಾನ ಪಡೆಯಬೇಕು. ಈ ಉದ್ದೇಶಗಳು ಸಾಧಿತವಾದಾಗಲೇ ನಮ್ಮ ದುಡಿಮೆ ಸಾರ್ಥಕ.

'ಜ್ಞಾನ ಗಂಗೋತ್ರಿ'ಯ ಪ್ರಥಮ ಸಂಪುಟವಾದ 'ಮನುಕುಲದ ಕಥೆ' ಯಲ್ಲಿ ಸಮೀಕ್ಷೆಯ ಬಳಿಕ ಅಕಾರಾದಿಯಾಗಿ ಬರುವ ಲೇಖನಗಳು 600. ನಾಗರಿಕತೆ, ಸಂಸ್ಕೃತಿ, ಧರ್ಮ, ದರ್ಶನ, ಶಿಕ್ಷಣ, ರಾಜ್ಯಶಾಸ್ತ್ರ, ಅರ್ಥಶಾಸ್ತ್ರ ಈ ಎಲ್ಲ ಕ್ಷೇತ್ರಗಳಲ್ಲಿ ಭಾರತವನ್ನು ಒಳಗೊಂಡು ವಿಶ್ವದ ಮಾನವ ಲಕ್ಷಾಂತರ ವರ್ಷಗಳಲ್ಲಿ ಮಾಡಿದ ಮಹತ್ಸಾಧನೆಗಳನ್ನು ಈ ಲೇಖನಗಳು ಚಿತ್ರಿಸುತ್ತವೆ. ಅವನು ಕಟ್ಟಿದ-ಕೆಡವಿದ ಸಾಮ್ರಾಜ್ಯಗಳ, ರೂಪಿಸಿದ ರಾಷ್ಟ್ರಗಳ ಪರಿಚಯ ಇಲ್ಲಿದೆ. ಆಯ್ದು ಓದಲು ಸುಲಭವಾಗಲೆಂದು ಅಕ್ಷರಾನುಕ್ರಮವಾಗಿ ಜೋಡಿಸಿರುವ ಈ ಬಿಡಿ ಮುತ್ತುಗಳನ್ನು ವಿಷಯಾನುಕ್ರಮವಾಗಿ ಗಮನಿಸಿದಾಗ, ಮಾನವನ ಸುಖ ದುಃಖಗಳ, ಸಣ್ಣತನ ದೊಡ್ಡತನಗಳ, ಕ್ರೌರ್ಯ ಅನುಕಂಪಗಳ, ಸೋಲು ಗೆಲುವುಗಳ ಅದ್ಭುತ ಚಿತ್ರ ರೂಪುಗೊಳ್ಳುತ್ತದೆ. ವಿವಿಧ ಜ್ಞಾನ ಕ್ಷೇತ್ರಗಳ ಸವಿವರ ಅಧ್ಯಯನಕ್ಕೆ ನಾಂದಿ, 'ಮನುಕುಲದ ಕಥೆ'.

'ಮನುಕುಲದ ಕಥೆ'ಯಂತೆಯೇ ಮುಂದಿನ ಸಂಪುಟಗಳೂ ಸಕಾಲದಲ್ಲಿ ಸಿದ್ಧವಾಗುತ್ತವೆ, ಐದೇ ವರ್ಷಗಳ ಅವಧಿಯಲ್ಲಿ ಯೋಜನೆ ಸಂಪೂರ್ಣವಾಗಿ ಕಾರ್ಯಗತವಾಗುತ್ತದೆ -ಎಂಬ ಭರವಸೆ ನಮಗಿದೆ.

'ಜ್ಞಾನ ಗಂಗೋತ್ರಿ'ಯಲ್ಲಿ ಯಾವ ದೋಷವೂ ಇರಬಾರದೆಂದು ಪರಿಣತರ ನೆರವು ಪಡೆದಿದ್ದೇವೆ. ಅಷ್ಟರಮೇಲೂ ನ್ಯೂನತೆಗಳಿದ್ದರೆ ಸಂಪಾದಕವರ್ಗ ಹೊಣೆ. ಅಮೆರಿಕದ ಸಂಯುಕ್ತ ಸಂಸ್ಥಾನದಲ್ಲಿ ಆರು ವರ್ಷಗಳ ಅವಧಿಯಲ್ಲಿ ಇಪ್ಪತ್ತು ಸಂಪುಟಗಳ 'ನ್ಯೂ ಬುಕ್ ಆಫ್ ನಾಲೆಜ್' ಸಿದ್ಧಪಡಿಸಿದರು. ಸಂಪಾದಕ ವರ್ಗದ ಸಂಖ್ಯೆ 200. ಲೇಖಕರು–ಪರಿಣತರು 1,000. ವೆಚ್ಚ 5.25 ಕೋಟಿ ರೂಪಾಯಿ. ಅಂಥ ವಿಶ್ವಕೋಶದಲ್ಲೂ "ಏಷ್ಯ ಪೂರ್ವ ದಿಕ್ಕಿನಲ್ಲಿ ಯೂರಲ್ ಬೆಟ್ಟಗಳಿಂದ ಪಶ್ಚಿಮದಲ್ಲಿ ಶಾಂತಸಾಗರದ ವರೆಗೆ ಚಾಚಿದೆ." ಎಂಬ ವಾಕ್ಯ ಅಚ್ಚಾಯಿತು. ನಮ್ಮದಾದರೋ ಆರೆಂಟು ಮತ್ತಿಪ್ಪತ್ತು ಜನರ ದುಡಿಮೆ. ವೆಚ್ಚ 34 ಲಕ್ಷ ರೂಪಾಯಿ [ರಚನೆಗೆ ಆರು ಲಕ್ಷ, ಮುದ್ರಣಕ್ಕೆ ಇಪ್ಪತ್ತೆಂಟು ಲಕ್ಷ]. ಮೇಲಿನದಕ್ಕೆ ಹೋಲಿಸಿದಾಗ ತಪ್ಪುಗಳ ಪ್ರಮಾಣವೂ ಕಡಮೆಯೇ ಇದ್ದೀತು ಎಂಬ ಆಸೆ !

ಈ ಎರಡು ಮಾತನ್ನು ಮುಗಿಸುವುದಕ್ಕೆ ಮುನ್ನ ಉಪಕಾರ ಸ್ಮರಣೆಯ ಕರ್ತವ್ಯ ನಿರ್ವಹಣೆಯೊಂದಿದೆ. 'ಜ್ಞಾನ ಗಂಗೋತ್ರಿ'ಗೆ ಮಾರ್ಗದರ್ಶಿಯಂತಿರುವ ಪ್ರೊ. ದೇ. ಜವರೇಗೌಡರು ಮೈಸೂರು ವಿಶ್ವವಿದ್ಯಾನಿಲಯದ ಉಪಕುಲಪತಿ ಸ್ಥಾನವನ್ನು ಅಲಂಕರಿಸಿದ ಮೇಲೂ ನಮ್ಮ ಸಂಪಾದಕ ಮಂಡಲಿಯ ಅಧ್ಯಕ್ಷರಾಗಿರಲು ಒಪ್ಪಿ, ಸಂಪಾದಕವರ್ಗದ ಉತ್ಸಾಹ ಇಮ್ಮಡಿಯಾಗುವಂತೆ ಮಾಡಿದರು. ಸಂಪಾದಕ ಮಂಡಲಿಯ ಸದಸ್ಯರೆಲ್ಲ ಹತ್ತು ರೀತಿಗಳಲ್ಲಿ ನೆರವಾದರು. ಪರಿಣತರು, ವಿದ್ವನ್ಮಣಿಗಳು ನಾವು ನೀಡಿದ ತೊಂದರೆಗಳನ್ನು ಹಸನ್ಮುಖದಿಂದ ಸಹಿಸಿ, ಸಹಕರಿಸಿದರು. ಪ್ರಕಾಶನ ಮಂದಿರದ ಅಧ್ಯಕ್ಷ ಶ್ರೀ ಜಿ. ಎಸ್. ಬೊಮ್ಮೇಗೌಡರು ಮತ್ತು ಮ್ಯಾನೇಜಿಂಗ್ ಡೈರೆಕ್ಟರ್ ಶ್ರೀ ಪಿ. ಎಸ್. ಭಟ್ಟರು, 'ಜ್ಞಾನ ಗಂಗೋತ್ರಿ'ಯ ರಚನೆ ಕಾಲವಿಳಂಬವಿಲ್ಲದೆ ನಡೆಯುವಂತೆ ಎಲ್ಲ ಅನುಕೂಲಗಳನ್ನು ಮಾಡಿಕೊಟ್ಟರು. ನನ್ನ ಸಹೋದ್ಯೋಗಿಗಳು ದೈಹಿಕ ಶ್ರಮವನ್ನು ಲೆಕ್ಕಿಸದೆ ಸಮರ್ಪಣಭಾವದಿಂದ ದುಡಿದರು.

ಅವರೆಲ್ಲರನ್ನೂ ವಂದಿಸುತ್ತ, ಸಹಾಯ ಸಹಕಾರ ಇದೇ ರೀತಿ ಇನ್ನೂ ನಾಲ್ಕು ವರ್ಷ–ಉಳಿದೆಲ್ಲ ಸಂಪುಟಗಳು ಹೊರಬರುವ ತನಕ – ದೊರೆಯಲಿ ಎಂದು ಹಾರೈಸುತ್ತೇನೆ.

**ನಿರಂಜನ**
ಪ್ರಧಾನ ಸಂಪಾದಕ

21 ಸೆಪ್ಟೆಂಬರ್ 1970

# ಸಮೀಕ್ಷೆ

ಮಾನವ ಕೋಟಿಯ ಚರಿತ್ರೆಯಲ್ಲಿಯೇ ಮರೆಯಲಾಗದ ದಿನ 1969 ಜುಲೈ 21. ಅದು ಚಂದ್ರಉಪಗ್ರಹದ ಮೇಲೆ ಮಾನವ ಮೊಟ್ಟ ಮೊದಲ ಹೆಜ್ಜೆ ಇಟ್ಟ ದಿನ; ಭೂಮಿಯಾಚೆ ಆಕಾಶಕಾಯ ಒಂದನ್ನು ಪ್ರಪ್ರಥಮವಾಗಿ ಮನುಷ್ಯ ಮುಟ್ಟಿದ ದಿನ.

ಸುಮಾರು ಹತ್ತು ವರ್ಷ ಕಾಲ ಅಮೆರಿಕದ ಸಂಯುಕ್ತ ಸಂಸ್ಥಾನ ಮತ್ತು ಸೋವಿಯೆತ್ ರಷ್ಯ ನಡೆಸಿದ ಚಟುವಟಿಕೆ ಹಾಗೂ ಶ್ರಮ ಇತ್ತ ಫಲ. ಆ ಸಾಧನೆ.

## ಜ್ಞಾನದ ಬೆಳವಣಿಗೆ–ಸಾಧನೆ

ಇನ್ನೂ ಸ್ವಲ್ಪ ಯೋಚನೆ ಮಾಡಿದರೆ ತೋರೀತು—ಇದು ಶತಮಾನಗಳ ಜ್ಞಾನದ ಬೆಳವಣಿಗೆಯ ಫಲ ಎಂದು. ಈ ಸಾಹಸ ಯಾನದ ಕಡೆಯ ಸಿದ್ಧತೆಗಳನ್ನು 1960ರಿಂದೀಚೆ ಮಾಡಿ ಮುಗಿಸಿರಬಹುದು. ಆದರೆ ಅವರೆಗೆ ವಿಜ್ಞಾನ ಬೆಳೆದು ಬಂದುದರಿಂದಲ್ಲವೆ ಕೊನೆಯ ಈ ಘಟ್ಟಗಳು ಸಾಧ್ಯವಾದದ್ದು ? ಕೊಪರ್ನಿಕಸ್, ಗೆಲಿಲಿಯೊ ಮೊದಲಾದವರ ಕಾಲದಿಂದ ಖಗೋಳಶಾಸ್ತ್ರಜ್ಞರು ಸೌರವ್ಯೂಹವನ್ನು ಅಧ್ಯಯನ ಮಾಡಿ ಕೊಟ್ಟ ಜ್ಞಾನ, ನ್ಯೂಟನ್ನನ ಕಾಲದಿಂದ ಭೌತಶಾಸ್ತ್ರಜ್ಞರು ಚಲನಶಾಸ್ತ್ರವನ್ನು ಅಭ್ಯಾಸ ಮಾಡಿ ನೀಡಿದ ಜ್ಞಾನ—ಇವು 1969ರ ಸಾಧನೆಗೆ ಅಸ್ತಿಭಾರ ಹಾಕಿದುವು. ಎಷ್ಟು ಬಗೆಯ ಶಾಸ್ತ್ರಗಳು, ಎಷ್ಟು ಬಗೆಯ ಉಪಕರಣಗಳು, ಯಂತ್ರಗಳು ಈ ಮಹಾ ಸಾಧನೆಗೆ ನೆರವಾಗಬೇಕಾಯಿತು ! 3,65,196 ಕಿಲೊಮೀಟರುಗಳ ದೂರದಲ್ಲಿರುವ ಚಂದ್ರನ ಮೇಲೆ ಮನುಷ್ಯನ ವಾಹನ ಇಂಥ ದಿನ, ಇಷ್ಟು ಗಂಟೆ, ನಿಮಿಷ, ಸೆಕೆಂಡುಗಳಿಗೆ ಇಂಥ ಸ್ಥಳದಲ್ಲಿಯೇ ಇಳಿಯಬೇಕೆಂದು ನಿರ್ಧರಿಸಿ. ಆ ನಿರ್ಧಾರವನ್ನು ಕಾರ್ಯಗತ ಮಾಡಬೇಕಾದರೆ ಭೂಮಿಯ ಗುರುತ್ವಾಕರ್ಷಣ. ಭೂಮಿಯ ಆವರಣ, ಚಂದ್ರನ ಗುರುತ್ವಾಕರ್ಷಣ, ಚಂದ್ರನ ಆವರಣ ಇವುಗಳ ಜ್ಞಾನ ಎಷ್ಟಿರಬೇಕು ! ಲೆಕ್ಕಾಚಾರ ಎಷ್ಟು ಕರಾರುವಾಕ್ಕಾಗಿರಬೇಕು ! ಈ ಲೆಕ್ಕಗಳನ್ನು ಮಾಡಲು ಎಷ್ಟು ಸೂಕ್ಷ್ಮವೂ ಅದ್ಭುತವೂ ಆದ ಯಂತ್ರಗಳಾಗಬೇಕು ! ಎಂಥ ಗಣಿತಜ್ಞಾನ ಬೇಕು ! ಹದಿನೆಂಟನೆಯ ಶತಮಾನದ ಕೈಗಾರಿಕಾ ಕ್ರಾಂತಿ. ಗಣಿತಶಾಸ್ತ್ರದ ಬೆಳವಣಿಗೆ—ಇವುಗಳ ನೆರವಿಲ್ಲದೆ ಮಾನವ ಈ ಪವಾಡವನ್ನು ಸಾಧಿಸುವಂತಿರಲಿಲ್ಲ. ಲೆಕ್ಕಹಾಕುತ್ತ ಹೋದರೆ, ಆ ರೋಮಾಂಚಕ ಸಾಧನೆಯಲ್ಲಿ ಪಾಲುಗೊಂಡ ಶಾಸ್ತ್ರಗಳ ಪಟ್ಟಿ ಹನುಮಂತನ ಬಾಲವಾಗುತ್ತದೆ. ಇವೆಲ್ಲ ಜನ್ಮತಾಳಿ ಎಷ್ಟು ಸಾವಿರ ವರ್ಷಗಳಾದುವೊ ಹೇಳಬಲ್ಲವರಾರು ? ಕೈ ಬೆರಳಿನಿಂದ ಎಣಿಸಲು ಪ್ರಾರಂಭಿಸಿದ ಮಾನವ ಗಣಿತಶಾಸ್ತ್ರದ ಪಿತಾಮಹ ; ಮೊದಲು ಸನ್ನೆ, ರಾಟೆ, ಓರೆಕಟ್ಟು. ತಿರುಗು. ಬೆಣೆಗಳನ್ನು ಕಂಡುಹಿಡಿದವರು ಯಂತ್ರಗಳ ಯುಗಕ್ಕೆ ನಾಂದಿ ಹಾಡಿದವರು. ಮೊದಲು ಬೆಂಕಿಯನ್ನು ಬಳಸಿದವನು ನಾಗರಿಕತೆಯ ಶಿಲ್ಪಿಗಳಲ್ಲಿ ಒಬ್ಬ. ನಿಸರ್ಗ ಕೊಡುವ ಬೆಳೆಯನ್ನು ತೀರ ಕಿಂಚಿತ್ತಾದರೂ ಹೆಚ್ಚಿಸುವ ರೀತಿಯನ್ನು ಕಂಡುಹಿಡಿದವನೇ ನಾಗರಿಕತೆಯ ಬ್ರಹ್ಮ. ಏಕೆಂದರೆ ವ್ಯವಸಾಯವಿಲ್ಲದೆ ವಿರಾಮವಿಲ್ಲ, ವಿರಾಮವಿಲ್ಲದೆ ನಾಗರಿಕತೆ ಇಲ್ಲ.



ಮಾನವ, ಚಂದ್ರನ ಮೇಲೆ

ಮತ್ತೂ ಆಳವಾಗಿ ಈ ವಿಷಯವನ್ನು ಯೋಚಿಸಿದರೆ, ಇನ್ನೊಂದು ಅಂಶ ಸ್ಪಷ್ಟವಾಗುತ್ತದೆ. ಮನುಷ್ಯ ಇಷ್ಟೆಲ್ಲ ಸಾಧಿಸಲು ಸಾಧ್ಯವಾದದ್ದು ಅವನ ಮೆದುಳಿನಿಂದ, ಕೈಗಳಿಂದ. ಮನುಷ್ಯನ ಬುದ್ಧಿಶಕ್ತಿಯ ಮಹತ್ವ ಸ್ಪಷ್ಟವೇ. ಮನುಷ್ಯ ಪ್ರಾಣಿಗಳಂತೆ ನಾಲ್ಕು ಪಾದಗಳನ್ನು ಬಳಸಬೇಕಾಗಿದ್ದರೆ ಸಾಮಾನುಗಳನ್ನು ಎತ್ತುವುದಕ್ಕೆ, ಶತ್ರುಗಳತ್ತ ಆಯುಧಗಳನ್ನು ಎಸೆಯುವುದಕ್ಕೆ, ನೆಲವನ್ನು ಅಗೆಯುವುದಕ್ಕೆ, ಯಂತ್ರಗಳನ್ನು ಮಾಡುವುದಕ್ಕೆ-ನಡೆಸುವುದಕ್ಕೆ, ಬರೆಯುವುದಕ್ಕೆ, ಚಂದ್ರಉಪಗ್ರಹದಿಂದ ಕಲ್ಲು ಮಣ್ಣು ಆಯ್ದು ತರುವುದಕ್ಕೆ, ಅಣುಬಾಂಬು ಒಗೆಯುವುದಕ್ಕೆ, ಒಳ್ಳೆಯ ಕೆಲಸಗಳಿಗೆ, ಕೆಟ್ಟ ಕೆಲಸಗಳಿಗೆ ಕೈಗೆ ಬಿಡುವಾಗುತ್ತಲೇ ಇರಲಿಲ್ಲ.

ನಮ್ಮ ಎಲ್ಲ ಪ್ರಗತಿಗೂ ಕಾರಣವಾದ ಮೆದುಳು, ಕೈಗಳನ್ನು ಬಳಸಿ ಮೇಲ್ಪಂಕ್ತಿ ಹಾಕಿದ ಪೂರ್ವಿಕರಿಗೆ ನಾವು ಕೃತಜ್ಞರಾಗಿರಬೇಕು.

ಯಾವಾಗ ಇದ್ದರು ಈ ಪೂರ್ವಿಕರು ?

ಚರಿತ್ರೆಯ ಕಾಲಕ್ಕೆ ಹಿಂದೆ ಇದ್ದವರು ಇವರು. ಎಷ್ಟು ಲಕ್ಷ ವರ್ಷಗಳ ಹಿಂದೆ ಎಂದು ಅಲ್ಪಸ್ವಲ್ಪ ಖಚಿತವಾಗಿ ಹೇಳುವುದೂ ಕಷ್ಟ. ಹತ್ತು ಲಕ್ಷ ವರ್ಷಗಳ ಹಿಂದೆ ಮನುಷ್ಯನ ಮೆದುಳಿನ ಶಕ್ತಿ ಈಗಿರುವಷ್ಟು ಇರಲಿಲ್ಲ. ಸುಮಾರು ಐದು ಲಕ್ಷ ವರ್ಷಗಳ ಹಿಂದೆ ಆ ಬೆಳವಣಿಗೆ ನಿಂತುಹೋಯಿತು. ಎಂದರೆ, ಐದು ಲಕ್ಷ ವರ್ಷಗಳ ಹಿಂದಿನ ಮನುಷ್ಯನಿಗೆ ಈಗಿನ ಮನುಷ್ಯನಿಗೆ ಇರುವಷ್ಟು ಬುದ್ಧಿ ಶಕ್ತಿಯೇನೊ ಇತ್ತು ; ಆದರೆ ಆಗಿನ ವಾತಾವರಣದಲ್ಲಿ ಆ ಬುದ್ಧಿಶಕ್ತಿ ಈಗಿನಷ್ಟು ಕೆಲಸ ಮಾಡುವಂತಿರಲಿಲ್ಲ ಎಂದು ಕೆಲವರು ತಜ್ಞರ ಅಭಿಪ್ರಾಯ.

40,000 ವರ್ಷಗಳ ಹಿಂದಿನ ಮಾನವನಿಗೂ ಇಂದಿನ ಮಾನವನಿಗೂ ಹೊರ ಆಕಾರದಲ್ಲಿ, ದೇಹದೊಳಗಿನ ಅಂಗಾಂಗಗಳಲ್ಲಿ, ನಡಿಗೆಯಲ್ಲಿ, ಬುದ್ಧಿಶಕ್ತಿಯಲ್ಲಿ ವ್ಯತ್ಯಾಸವಿರಲಿಲ್ಲ. ಆದರೆ ಪಾಪ, ಆತ ಉಗುರು ತೆಗೆಯುವಂತಿರಲಿಲ್ಲ. ಕೂದಲನ್ನಾಗಲಿ ಗಡ್ಡ ಮೀಸೆಗಳನ್ನಾಗಲಿ ತನಗೆ ಬೇಕಾದಂತೆ ಕತ್ತರಿಸುವಂತಿರಲಿಲ್ಲ. ಬಣ್ಣಬಣ್ಣದ ಬಗೆಬಗೆಯ ಬಟ್ಟೆಗಳಿರಲಿಲ್ಲ. ಅಂದಿನ ಒಬ್ಬ ಮನುಷ್ಯನನ್ನು ಇಂದು ತಂದು ಅವನಿಗೆ ಕೂದಲು ಕತ್ತರಿಸಿ ಗಡ್ಡ ಮೀಸೆ ತೆಗೆದುಹಾಕಿ ಅಂದಗೊಳಿಸುವ ಕ್ಷೌರಿಕ, ಪಾದರಕ್ಷೆಗಳನ್ನು ಒದಗಿಸುವ ಚಮ್ಮಾರ, ಆಕರ್ಷಕ ಉಡುಗೆ ತೊಡುಗೆಗಳನ್ನು ಕೊಡುವ ದರ್ಜಿ—ಇವರ ಸಹಾಯವನ್ನು ಒದಗಿಸಿದರೆ, ನಮ್ಮ ನೆರೆಹೊರೆಯವರಂತೆಯೋ ನಮ್ಮಂತೆಯೋ ಆತ ಕಾಣುವ ; ಚಂದ್ರನತ್ತ ಮಾನವಕೋಟಿಯ ಪ್ರಯಾಣವನ್ನು ಪ್ರಾರಂಭಮಾಡಿದವನಂತೆಯೇ ಆತ ತೋರುವ.

## ೨

ಹೀಗೆ ಮನುಷ್ಯನ ಕಥೆ ಲಕ್ಷಾಂತರ ವರ್ಷಗಳ ಕಥೆ. ಸುಮಾರು ನಾಲ್ಕುನೂರ ಐವತ್ತು ಕೋಟಿ ವರ್ಷಗಳ ಹಿಂದೆ ಭೂಮಿ ಸೂರ್ಯನಿಂದ ಸಿಡಿದು ಬೇರೆಯಾಯಿತು. ಸುಮಾರು ಎಪ್ಪತ್ತು ಕೋಟಿ ವರ್ಷಗಳ ಹಿಂದೆ ನೀರಿನ ಗಿಡಗಳು ಕಾಣಿಸಿಕೊಂಡುವು.

ಇದೇ ಒಂದು ಅದ್ಭುತ ಪವಾಡ. ಬಿಡಿಸಲಾರದ ಸಮಸ್ಯೆ. ಜೀವವೇ ಇಲ್ಲದಿದ್ದ ಜಗತ್ತಿನಲ್ಲಿ ಈ ಜೀವಿಗಳು ಹೇಗೆ ಬಂದುವು ?

ಕೆಲವರು ಭಗವಂತನ ದಯೆ ಎನ್ನಬಹುದು. ಕೆಲವರು ಅದರ ವೈಜ್ಞಾನಿಕ ಕಾರಣ ನಮಗಿನ್ನೂ ತಿಳಿಯದು. ಮುಂದೆ ತಿಳಿದೀತು ಎನ್ನಬಹುದು.

'ಅಮೀಬ' ಎನ್ನುವ ಹೆಸರಿನ ತುಂಬ ಸರಳವಾದ ಜೀವಿ ಸುಮಾರು ಐವತ್ತು ಕೋಟಿ ವರ್ಷಗಳ ಹಿಂದೆ ಅವತರಿಸಿತು. ಅದೇ ಅತ್ಯಂತ ಸರಳ ರೂಪದ ಏಕಕಣ ಜೀವಿ. ಜೀವಿಗಳಂತೆ ಆಹಾರ ತೆಗೆದುಕೊಳ್ಳಬಲ್ಲ, ಸಂತಾನೋತ್ಪತ್ತಿ ಮಾಡಬಲ್ಲ ಮತ್ತಿತರ ಹಲವು ಕಾರ್ಯಗಳನ್ನು ನಡೆಸಬಲ್ಲ ಶಕ್ತಿ ಇದ್ದ ಮೊಟ್ಟ ಮೊದಲ ಜೀವಿ ಇದು. (ವಿವರ : 2ನೆಯ ಸಂಪುಟ)

ಸುಮಾರು ಹತ್ತು ಲಕ್ಷ ವರ್ಷಗಳ ಹಿಂದೆ ಮನುಷ್ಯ ಕಾಣಿಸಿಕೊಂಡ, ಭೂಮಿಯ ಮೇಲೆ.

ಎಂದರೆ, ಭೂಮಿಯ ವಯಸ್ಸಿನಲ್ಲಿ ಸುಮಾರು ಐದು ಸಾವಿರದಲ್ಲಿ ಒಂದು ಭಾಗ ಮನುಷ್ಯ ಜೀವಿಸಿರುವ ಕಾಲ.

ಅಮೀಬ

ಐದು ಲಕ್ಷ ವರ್ಷಗಳ ಹಿಂದಿನ ಈ ಮಾನವ ನೆಟ್ಟಗೆ ನಡೆಯುವುದನ್ನು ಕಲಿತಿದ್ದ. ಗೆಡ್ಡೆ ಗೆಣಸುಗಳನ್ನೂ ಗಿಡಗಳನ್ನೂ ಕೀಳುವುದಕ್ಕೆ, ಬೇಟೆಯಾಡುವುದಕ್ಕೆ, ಶತ್ರುಗಳತ್ತ ಕಲ್ಲು ಎಸೆಯುವುದಕ್ಕೆ ಕೈಗಳನ್ನು ಉಪಯೋಗಿಸುತ್ತಿದ್ದ. ಇವನಿಗೆ ಇರಲು ಒಂದು ಸ್ಥಳ ಎಂಬುದಿಲ್ಲ; ಆಹಾರಕ್ಕಾಗಿ ಸದಾ ಅಲೆಯುವುದೇ. ಬಟ್ಟೆ ಇಲ್ಲ. ಅಡುಗೆ ಮಾಡುವುದು ತಿಳಿಯದು. ಭಾಷೆಯೋ ಇಲ್ಲ—ಇತರ ಪ್ರಾಣಿಗಳಂತೆ ಕೆಲವು ಸದ್ದುಗಳನ್ನು ಮಾತ್ರ ಮಾಡಬಲ್ಲ. ಎಂದ ಮೇಲೆ ಓದು ಬರಹ ಇಲ್ಲವೇ ಇಲ್ಲವಲ್ಲ. ಇವನ ಪ್ರಾಣಕ್ಕೆ ಸದಾ ವಿಪತ್ತು. ಆಹಾರ ದೊರೆಯುವುದೇ ಕಷ್ಟ. ಜೊತೆಗೆ ಮಳೆ ಬಿಸಿಲು ಗಾಳಿಗಳ ಹೊಡೆತ. ನೆಗಡಿ ಬಂದರೂ ಭಯಂಕರ ವಿಪತ್ತು; ಸಣ್ಣ ಗಾಯವಾಗಿ ರಕ್ತಬಂದರೂ ಸಾವಿಗೆ ದಾರಿಯಾಗಬಹುದು. ಅಲ್ಲದೆ ದೈತ್ಯಾಕಾರದ ಪ್ರಾಣಿಗಳಿಂದ ಅಪಾಯ. ಸಿಡಿಲು, ಗುಡುಗು, ಮಿಂಚು, ಬಿರುಗಾಳಿ ಎಂದರೆ ಭಯದಿಂದ ತತ್ತರಿಸುವುದೇ. ಕಲ್ಲು, ಮುಳ್ಳು, ಹಾವು, ಹುಳ ಹುಪ್ಪಟೆ, ವಿಷದ ಗಿಡಗಳು, ವಿಷದ ಜಂತುಗಳು ತುಂಬಿದ ಕಾಡುಗಳಲ್ಲಿ ಇವನ ಪ್ರಯಾಣ. ಹಗಲೇ ವಿಪತ್ತಿನ ಪರಂಪರೆ, ರಾತ್ರಿಯಲ್ಲಂತೂ ಇಂದಿನ ಎಳೆಯ ಮಗುವಿನಂತೆ ನಿಸ್ಸಹಾಯಕತೆ.

## ಕತ್ತಲಿನಿಂದ ಬೆಳಕಿನೆಡೆಗೆ

ಹೀಗಿದ್ದ, ಚರಿತ್ರಪೂರ್ವ ಪ್ರಾಚೀನ ಕಾಲದ ನಮ್ಮ ಪೂರ್ವಿಕ.

ಅವನು ಆಗ ತಾನೇ ಭೂಮಿಯ ಮೇಲೆ ಸೊಟ್ಟ ಹೆಜ್ಜೆಗಳನ್ನು ಇಡುತ್ತಿದ್ದ.

ಮನುಷ್ಯನ ಪ್ರಗತಿ ಒಂದು ಸರಳರೇಖೆಯಂತೆ ಸಾಗಿದೆ ಎಂದು ಇದರ ಅರ್ಥವಲ್ಲ, ಮೆಟ್ಟಲುಗಳನ್ನು ಹತ್ತುವವನು ಒಂದು ಮೆಟ್ಟಲಿನ ಅನಂತರ ಇನ್ನೊಂದನ್ನು ಹತ್ತಿ ಮೇಲಕ್ಕೆ ಸಾಗುವಂತೆ, ಮನುಷ್ಯ ನಾಗರಿಕತೆಯ ಏಣಿಯಲ್ಲಿ ಮೇಲ್ಮೇಲಕ್ಕೆ ಸಾಗಿದ್ದಾನೆ ಎಂದೂ ಅರ್ಥವಲ್ಲ.

ಮನುಷ್ಯನ ಚರಿತ್ರೆಯನ್ನು ಅಭ್ಯಾಸ ಮಾಡುವಾಗ ನೆನಪಿನಲ್ಲಿಡಬೇಕಾದ ಅಂಶಗಳು ಮೂರು:

ಮೊದಲನೆಯದು—ನಮಗೆ ಗಣನೀಯ ಪ್ರಮಾಣದಲ್ಲಿ ಚಾರಿತ್ರಿಕ ದಾಖಲೆಗಳು ದೊರೆತಿರುವುದು ಈ ಐದು ಲಕ್ಷ ವರ್ಷಗಳಲ್ಲಿ ಐದು ಸಾವಿರ ವರ್ಷಗಳ ಕಾಲ ಪ್ರಮಾಣಕ್ಕೆ ಮಾತ್ರ. ಈ ದಾಖಲೆಯೂ ಸಂಪೂರ್ಣವಾಗಿಲ್ಲ. ಮಂಜಿನಲ್ಲಿ ಹೂತು ಹೋಗಿದ್ದು ಅಕಸ್ಮಾತ್ ಉಳಿದ ಕೊಂಡ ಅಸ್ಥಿಪಂಜರಗಳು, ಅವಶೇಷಗಳಲ್ಲಿ ದೊರೆತಿರುವ ಹಲವಾರು ವಸ್ತುಗಳು, ಊರುಗಳು, ಹಳ್ಳಿಗಳು, ಮನೆಗಳು, ಶಿಲಾಶಾಸನ ಮತ್ತಿತರ ಶಾಸನಗಳು, ನಮ್ಮ ಅದೃಷ್ಟದಿಂದ ಉಳಿದುಕೊಂಡು ಬಂದ ಗ್ರಂಥಗಳು—ಇವುಗಳ ಆಧಾರದ ಮೇಲೆ ನಾವು ಹಿಂದಿನ ಚರಿತ್ರೆಯನ್ನು ಚಿತ್ರಿಸಿಕೊಳ್ಳಬೇಕಾಗುತ್ತದೆ. ನಮಗೆ ತಿಳಿಯದೆ ಎಷ್ಟು ಊರುಗಳು, ರಾಜ್ಯಗಳು ಮಣ್ಣಿನಲ್ಲಿ ಮರೆಯಾಗಿವೆಯೊ! ಕ್ರಿ. ಪೂ. ಎಂಟನೆಯ ಅಥವಾ ಒಂಬತ್ತನೆಯ ಶತಮಾನಕ್ಕೆ ಸೇರಿದ ಗ್ರೀಸಿನ ಕವಿಯೊಬ್ಬ —ಹೋಮರ್ ಎಂಬವನು—ಗ್ರೀಸ್ ಮತ್ತು ಟ್ರಾಯ್ ದೇಶಗಳಿಗೆ ನಡೆದ ಮಹಾಯುದ್ಧವನ್ನು ವರ್ಣಿಸಿ 'ಇಲಿಯಡ್' ಎಂಬ ಕಾವ್ಯವನ್ನು ಬರೆದ. ಇದೊಂದು ಕಾಲ್ಪನಿಕ ಕಥೆ ಎಂದೇ ಎಲ್ಲರೂ ಭಾವಿಸಿದ್ದರು. ಟ್ರಾಯ್ ನಗರರಾಜ್ಯವೇ ಇರಲಿಲ್ಲ ಎಂದು ನಂಬಿದ್ದರು. ಹತ್ತೊಂಬತ್ತನೆಯ ಶತಮಾನದಲ್ಲಿ ಜರ್ಮನಿಯ ಹೈನ್‌ರೀಕ್ ಷ್ಲೀಮನ್ ಎಂಬವನು ಮಾತ್ರ, ಟ್ರಾಯ್‌ನ ಮಹಾಯುದ್ಧ ನಿಜವಾಗಿ ನಡೆಯಿತು ಎಂದು ನಂಬಿದ. ಈತ ಸ್ವಂತ ಹಣವನ್ನು ಖರ್ಚುಮಾಡಿಕೊಂಡು, ಹಲವು ವರ್ಷಗಳ ಕಾಲ ಶ್ರಮಪಟ್ಟು, ಏಷ್ಯಾ ಮೈನರ್‌ನ ವಾಯುವ್ಯ ಭಾಗದಲ್ಲಿ ಸಂಶೋಧನೆಯನ್ನು ನಡೆಸಿದ. ಒಂದರ ಮೇಲೊಂದು ಒಂಬತ್ತು ಟ್ರಾಯ್ ನಗರಗಳ ಅವಶೇಷಗಳು ಪತ್ತೆಯಾದುವು. ಹೋಮರ್ ವರ್ಣಿಸಿದ ಮಹಾಯುದ್ಧ ಕ್ರಿ. ಪೂ. 1194ರಲ್ಲಿ ಪ್ರಾರಂಭವಾಗಿರಬೇಕು ಎಂದು ಬಹು ಮಂದಿ ಈಗ ಅಭಿಪ್ರಾಯ ಪಡುತ್ತಾರೆ. ಆರ್ಯರ ಪಂಗಡ ಭಾರತಕ್ಕೆ ಬರುವವರೆಗೆ ಇಲ್ಲಿ ಅನಾಗರಿಕರೇ ಇದ್ದರು ಎಂದು ಇತ್ತೀಚಿನ ತನಕ ನಂಬಿಕೆ ಇತ್ತು. ಕಲೆ, ವಿಜ್ಞಾನ, ಯಂತ್ರಗಳ ಬಳಕೆಗಳನ್ನು ಇಲ್ಲಿನ ಅರಣ್ಯವಾಸಿಗಳಾದ ಹಿಂದುಳಿದ ಜನರು ಆರ್ಯರಿಂದ ಕಲಿತರು ಎಂಬ ಅಭಿಪ್ರಾಯ ಚರಿತ್ರಕಾರರಲ್ಲಿಯೂ ಬೆಳೆದಿತ್ತು. 1924ರಲ್ಲಿ ಸರ್ ಜಾನ್ ಮಾರ್ಷಲ್, ಆರ್.ಡಿ. ಬ್ಯಾನರ್ಜಿ ಮೊದಲಾದವರು ಸಿಂಧೂ ನದಿಯ ಪಶ್ಚಿಮ ತೀರದಲ್ಲಿ ಮೊಹೆಂಜೊದಾರೊದಲ್ಲಿ ಬಹು ಹಿಂದಿನ ಕಾಲದ ನಾಗರಿಕತೆಯ ಅವಶೇಷಗಳನ್ನು ಅಗೆದು ತೆಗೆದರು. ಅಲ್ಲಿಯೂ ಅಲ್ಲಿಂದ ಉತ್ತರಕ್ಕೆ ಕೆಲವು ನೂರು ಕಿಲೊಮೀಟರುಗಳ ದೂರದಲ್ಲಿರುವ ಹರಪ್ಪದಲ್ಲಿಯೂ ಹಲವು ನಗರಗಳ ಭಗ್ನಾವಶೇಷಗಳು ಚರಿತ್ರಕಾರರನ್ನು ಬೆರಗುಗೊಳಿಸಿದುವು. ಕ್ರಿಸ್ತನ ಜನನಕ್ಕೆ ಸುಮಾರು ಮೂರರಿಂದ ನಾಲ್ಕು ಸಾವಿರ ವರ್ಷಗಳ ಹಿಂದಿನ ಈ ನಗರಗಳಲ್ಲಿ ಅಚ್ಚುಕಟ್ಟಾದ ಮನೆಗಳು ಕಂಡು ಬಂದುವು. ಬಾವಿಗಳು, ಬಚ್ಚಲು ಮನೆಗಳು, ಕೊಳಚೆ ನೀರು ಹರಿದುಹೋಗಲು ವ್ಯವಸ್ಥೆ; ಮನೆಯ ದಿನಬಳಕೆಯ ಸಾಮಾನುಗಳು; ಕೈಯಿಂದ ಮಾಡಿದ ಮತ್ತು ಕುಂಬಾರನ ಚಕ್ರದ ಸಹಾಯದಿಂದ ಮಾಡಿದ ಮಡಕೆಗಳು, ಇವುಗಳಿಗೆ ಸೊಗಸಾದ ಬಣ್ಣಗಳು; ಸಾವಿರಕ್ಕೂ ಹೆಚ್ಚು ಮುದ್ರೆಗಳು: ಎರಡು ಚಕ್ರಗಳ ಗಾಡಿಯ ತಾಮ್ರದ ಮಾದರಿ (ಪ್ರಪಂಚದಲ್ಲಿ ದೊರೆತಿರುವ ಗಾಡಿಗಳಿರುವ ವಾಹನಗಳ ಅತಿಪ್ರಾಚೀನ ಸಾಕ್ಷ್ಯಕ್ಕೆ ಸೇರಿದೆ ಇದು): ಎತ್ತುಗಳು ಗಾಡಿಯೊಡನೆ ಗಾಡಿಯವನು ಇರುವ, ಮಣ್ಣಿನಲ್ಲಿ ಮಾಡಿದ, ಆಟದ ಗಾಡಿ; ಇದೀಗ ಲಂಡನ್ನಿನ ಪ್ರಸಿದ್ಧ ಜವಾಹಿರಿ ಅಂಗಡಿಯವನ

ಬಂದಾಗ ಹೋರಾಡುತ್ತಿರುವ ಚಿತ್ರದ ಬಿಡಿಗಳು—ಇವೆಲ್ಲ. ಆರ್ಯರು ಬರುವವರೆಗೆ ಇಲ್ಲಿನ ಜನರು ಅನಾಗರಿಕರಾಗಿದ್ದರು ಎಂಬುದು ತಪ್ಪು ನಂಬಿಕೆ ಎನ್ನುವುದನ್ನು ತೋರಿಸಿಕೊಟ್ಟವು. ಅಂತೂ ನಾವು ಎಷ್ಟು ನಗರಗಳ ಮೇಲೆ ನಡೆದಾಡುತ್ತಿದ್ದೇವೆಯೋ. ನಮ್ಮ ಕಾಲಕೆಳಗೇ ಎಷ್ಟು ಚಾರಿತ್ರಿಕ ಸಾಕ್ಷ್ಯ ಅಡಗಿದೆಯೋ. ಪ್ರಪಂಚದ ವಿವಿಧಭಾಗಗಳಲ್ಲಿ ಹಿಂದಿನ ಚರಿತ್ರೆಯ ಎಷ್ಟು ನಿಧಿಗಳು ಮನುಷ್ಯನ ಕಣ್ಣಿಗೆ ಬೀಳದೆ ಉಳಿದಿವೆಯೋ. ಹೇಳಬಲ್ಲವರು ಯಾರು?



...ಆಟದ ಗಾಡಿ

ಇತ್ತೀಚಿನವರೆಗೆ ಆಫ್ರಿಕವನ್ನು ಹಿಂದುಳಿದ ಖಂಡ ಎಂದು ಭಾವಿಸುತ್ತಿದ್ದರು. ಈಚೆಗೆ ದೊರೆತಿರುವ ಸಾಕ್ಷ್ಯದಿಂದ, ಮನುಷ್ಯ ಮೊದಲು ಆಫ್ರಿಕದಲ್ಲಿ ಜನ್ಮ ತಾಳಿರಬಹುದು. ಕ್ರಿ. ಪೂ. 5500ರಿಂದ ಕ್ರಿ. ಪೂ. 2500ರ ಅವಧಿಯಲ್ಲಿ ಈಗಿನ ಸಹಾರ ಮರುಭೂಮಿಯ ಪ್ರದೇಶದಲ್ಲಿ ನಾಗರಿಕತೆ ಅರಳಿತು, ಎಂದು ತೋರಿಬಂದಿದೆ. 1970ರಲ್ಲಿ ಭಾರತದ ರಾಜಸ್ಥಾನದಲ್ಲಿಯೂ ಮಧ್ಯ ಪ್ರದೇಶದಲ್ಲಿಯೂ ಅವಶೇಷಗಳು ದೊರೆತುವು. ಇವು ಸುಮಾರು 6,000 ವರ್ಷಗಳ ಹಿಂದಿನ ಕಾಲಕ್ಕೆ ಸೇರಿರಬಹುದೆಂದು ಹೇಳುತ್ತಾರೆ.

ಎರಡನೆಯದು—ದೊರೆತಿರುವ ಸಾಕ್ಷ್ಯವನ್ನೂ ಪೂರ್ಣವಾಗಿ ಅರ್ಥಮಾಡಿಕೊಳ್ಳುವುದು ಮಾನವರಿಗೆ ಸಾಧ್ಯವಾಗಿಲ್ಲ. ಮೊಹೆಂಜೊದಾರೊದಲ್ಲಿ ದೊರೆತ ಮುದ್ರೆಗಳಲ್ಲಿ ಮತ್ತು ಸುಮೇರಿಯದ ನಾಗರಿಕತೆಯ ಅವಶೇಷಗಳಲ್ಲಿ ದೊರೆತ ಮುದ್ರೆಗಳಲ್ಲಿ ಇರುವ ಸಾಮ್ಯದಿಂದ ಈ ಎರಡು ನಾಗರಿಕತೆಗಳಿಗೆ ಸಂಬಂಧವಿದ್ದಿತು ಎಂದೂ ಮೊಹೆಂಜೊದಾರೊದಲ್ಲಿ ಕಾಣುವ ಹೆಡೆಯ ನಾಗಗಳ ಚಿತ್ರಗಳಂಥವು ಮೆಸಪಟೇಮಿಯದಲ್ಲಿಯೂ ಕಂಡುಬಂದಿರುವುದರಿಂದ ಈ ಎರಡು ನಾಗರಿಕತೆಗಳಿಗೆ ಸಂಬಂಧವಿದ್ದಿತು ಎಂದೂ ಇತಿಹಾಸ ತಜ್ಞರು ತೀರ್ಮಾನಿಸಿದ್ದಾರೆ. ಮೊಹೆಂಜೊದಾರೊದಲ್ಲಿ ದೊರೆತ ಲಿಪಿಯನ್ನು ಇನ್ನೂ ಸಂಪೂರ್ಣವಾಗಿ ಓದಿ ಅದರ ಸಾಕ್ಷ್ಯವನ್ನು ಅಧ್ಯಯನ ಮಾಡಲು ಸಾಧ್ಯವಾಗಿಲ್ಲ. ಹೀಗೆಯೇ ಪ್ರಪಂಚದ ಬೇರೆ ಬೇರೆ ಭಾಗಗಳಲ್ಲಿ ದೊರೆತ ಅವಶೇಷಗಳ ಅಧ್ಯಯನ ಇನ್ನೂ ನಡೆಯಬೇಕಾಗಿದೆ.

ಮೂರನೆಯದು—ನಾಗರಿಕತೆಯ ಬೆಳವಣಿಗೆಗೆ ಪದೇ ಪದೇ ಅಡ್ಡಿಗಳು ಬರುತ್ತಿರುತ್ತವೆ. ಎಂದೋ ಜಗತ್ತು ಹಿಮದ ಪ್ರವಾಹಕ್ಕೆ ಪುನಃ ಸಿಕ್ಕು ನಾಗರಿಕ ಜಗತ್ತಿನ ಬಹುಭಾಗ ನಾಶವಾಗಬಹುದು. ಯುದ್ಧ, ಪ್ರವಾಹ, ಕ್ಷಾಮ, ಜ್ವಾಲಾಮುಖಿ ಇವೆಲ್ಲ ನಾಗರಿಕತೆಯ ಶತ್ರುಗಳು. ಚೀನೀ ಚಕ್ರವರ್ತಿ, ಷಿ ಹ್ವಾಂಗ್ ತಿ (ಆಳ್ವಿಕೆ ಕ್ರಿ. ಪೂ. 221–211) ವಿದ್ವಾಂಸರು ತನ್ನ ಆಡಳಿತವನ್ನು ಕುರಿತು ಮಾಡಿದ ಆಕ್ಷೇಪಣೆಗಳಿಂದ ಕುಪಿತನಾಗಿ, ಎಲ್ಲ ಚರಿತ್ರೆ ಪುಸ್ತಕಗಳನ್ನೂ ಸುಟ್ಟುಹಾಕಲು ಆಜ್ಞೆ ಮಾಡಿದ. ಕೆಲವರು ವಿದ್ವಾಂಸರು ಪುಸ್ತಕಗಳನ್ನು ಉಳಿಸಿಕೊಳ್ಳಲು ಯತ್ನಿಸಿದರು. ಅಂಥ ನಾಲ್ಕುನೂರ ಅರವತ್ತು ಮಂದಿಯನ್ನು ಚಕ್ರವರ್ತಿ ಕೊಲ್ಲಿಸಿದ. ನೂರಾರು ಮಂದಿಯನ್ನು ಚೀನದ ಮಹಾಗೋಡೆಯ ಕೆಲಸ ಮಾಡಲು ಆಳುಗಳನ್ನಾಗಿ ಕಳುಹಿಸಿದ. ಅಲೆಗ್ಸಾಂಡ್ರಿಯದ ಪುಸ್ತಕ ಭಂಡಾರದ ಬಹುಭಾಗವನ್ನು 392ರಲ್ಲಿ ದಾಳಿಕಾರರು ನಾಶಮಾಡಿದರು. 641ರಲ್ಲಿ ಅಮ್ರ್ ಎಂಬಾತ ಅಲೆಗ್ಸಾಂಡ್ರಿಯವನ್ನು ಕೈವಶ ಮಾಡಿಕೊಂಡಾಗ ಉಳಿದ ಭಾಗ ನಾಶವಾಯಿತು ಎಂದು ಹೇಳುತ್ತಾರೆ. ಯೂರೋಪಿನ ಅನಾಗರಿಕ ಪಂಗಡಗಳು ಮತ್ತೆ ಮತ್ತೆ ನಾಗರಿಕ ರಾಷ್ಟ್ರಗಳನ್ನು ಲೂಟಿ ಮಾಡಿವೆ. ಜ್ಞಾನಭಂಡಾರಗಳನ್ನೂ ಕಲಾಕೃತಿಗಳನ್ನೂ ನಾಶಮಾಡಿವೆ. 455ರಲ್ಲಿ ವ್ಯಾಂಡಾಲರು ರೋಂ ನಗರವನ್ನು ಪ್ರವೇಶಿಸಿದಾಗ, ನಾಲ್ಕು ದಿನಗಳ ಕಾಲ ಆ ಶ್ರೀಮಂತ ನಗರವನ್ನು ಲೂಟಿ ಮಾಡಿದರು. ಚೆಂಗೀಸ್‌ಖಾನ್, ಘಜ್ನಿ ಮಹಮ್ಮದ್ ಇಂಥವರು ನಾಗರಿಕತೆಯ ಶತ್ರುಗಳು. ಇಪ್ಪತ್ತನೆಯ ಶತಮಾನದಲ್ಲಿಯೂ ಹಿಟ್ಲರನಂಥ ದುರಹಂಕಾರಿಗಳು ಅಧಿಕಾರಲಾಲಸೆಯ, ರಕ್ತದಾಹದ ಜನರು ಹುಟ್ಟುತ್ತಾರೆ. ಲಕ್ಷಾಂತರ ಜನರನ್ನು ಮರುಳು ಮಾಡಿ ನಾಯಕರಾಗುತ್ತಾರೆ. ಹಿಟ್ಲರನ ಅಧಿಕಾರದ ಕಾಲದಲ್ಲಿ ಸುಮಾರು ಎರಡೂವರೆ ಕೋಟಿ ಯೆಹೂದ್ಯರನ್ನೂ ಇತರರನ್ನೂ ಕೊಲ್ಲಲಾಯಿತು. ಮನುಷ್ಯನ ನಾಗರಿಕತೆಯ ಕಥೆ ಇಪ್ಪತ್ತು–ಇಪ್ಪತ್ತೈದು ಸಾವಿರ ವರ್ಷಗಳ ಹಿಂದೆ ಪ್ರಾರಂಭವಾಗಿರಬಹುದು ; ವೇದ ಉಪನಿಷತ್ತುಗಳು ಬಂದು ಮೂರು ಸಾವಿರ ವರ್ಷಗಳಾಗಿರಬಹುದು ; ಬುದ್ಧ, ಕನ್‌ಫ್ಯೂಷಿಯಸರು ಹುಟ್ಟಿ ಎರಡೂವರೆ ಸಾವಿರ ವರ್ಷ,



ಮೊಹೆಂಜೊದಾರೊ ಮುದ್ರೆಗಳು :
[illegible]

ಕ್ರಿಸ್ತ ಹುಟ್ಟಿ ಎರಡು ಸಾವಿರ ವರ್ಷಗಳಾದುವು. ಆದರೆ ಅನಾಗರಿಕರು, ಪಶುಸ್ವಭಾವದವರು ಇಂದೂ ಇದ್ದಾರೆ. ಇಂಥ ಎಲ್ಲ ಅಪಾಯಗಳನ್ನು ಎದುರಿಸಿಯೂ ನಾಗರಿಕತೆಯ ದೀಪ ಉಳಿಯಬೇಕಾಗಿದೆ, ತನ್ನ ಬೆಳಕನ್ನು ಹೆಚ್ಚಿಸಿಕೊಳ್ಳಬೇಕಾಗಿದೆ.

## ೨

ನಾಗರಿಕತೆ ಎನ್ನುವ ಮಾತನ್ನು ಮತ್ತೆ ಮತ್ತೆ ಬಳಸುತ್ತೇವೆ. ಹಾಗೆಂದರೆ ಏನು? 'ನಾಗರಿಕತೆ' ಪದ ಬಂದಿರುವುದು 'ನಗರ', ಎನ್ನುವ ಶಬ್ದದಿಂದ. ನಗರದ ಜನರ ಜೀವನ ರೀತಿ 'ನಾಗರಿಕತೆ'. ಎಲ್ಲ ನಗರಗಳಲ್ಲಿ ಜನಜೀವನ ಹೀಗೆಯೇ ಇರುತ್ತದೆ ಎಂದೇನೂ ಇಲ್ಲ. ಆದರೆ ಸಾಮಾನ್ಯವಾಗಿ, ನಗರದ ಜೀವನ ಎಂದರೆ ಒಂದು ಕಲ್ಪನೆ ಮೂಡುತ್ತದೆ. ಅದರ ಅಂಶಗಳೇ, ಲಕ್ಷಣಗಳೇ, ನಾಗರಿಕತೆಯ ಅಂಶಗಳು, ಲಕ್ಷಣಗಳು.

**ನಾಗರಿಕತೆಯ ಸ್ವರೂಪ, ಲಕ್ಷಣ**

ನಗರದಲ್ಲಿ ವಾಸಿಸುವವರ ಸಂಖ್ಯೆ ದೊಡ್ಡದು. ಹಳ್ಳಿಯಲ್ಲಿ ನಡೆಯದ ಪ್ರಮಾಣದಲ್ಲಿ ಇಲ್ಲಿ ಉತ್ಪಾದನೆ, ವ್ಯಾಪಾರ ನಡೆಯುತ್ತವೆ. ಬಗೆ ಬಗೆಯ ಕೆಲಸ ಮಾಡುವವರಿರುತ್ತಾರೆ. ಇಲ್ಲಿ ಸಂಪತ್ತು ಹೆಚ್ಚು. ಆದ್ದರಿಂದ ವಿಪತ್ತೂ ಹೆಚ್ಚು. ಸಮಾಜದ ಜೀವನಕ್ಕೂ ಕೆಲವು ವೃತ್ತಿಗಳ ಜನರ ಅಗತ್ಯ ಉಂಟು—ವಿಜ್ಞಾನಿಗಳು, ವಾಸ್ತುಶಿಲ್ಪಿಗಳು, ವೈದ್ಯರು ಇಂಥವರು. ಈ ವೃತ್ತಿಗಳಿಗೆ ವಿಶೇಷ ಶಿಕ್ಷಣ ಅಗತ್ಯ. ಈ ಶಿಕ್ಷಣ ದೊರೆಯುವುದೂ ನಗರಗಳಲ್ಲಿ. ಹೀಗಾಗಿ ನಗರದ ಜೀವನದಲ್ಲಿ ಭಾಗವಹಿಸುವವರ ಸಂಖ್ಯೆ ಹೆಚ್ಚು, ಗುಂಪುಗಳು ಹೆಚ್ಚು. ಅವರ ಅಗತ್ಯಗಳೂ ಹೆಚ್ಚು. ಇದರಿಂದ ನಗರದಲ್ಲಿ ಜೀವನ ಸರಿಯಾಗಿ ಸಾಗಲು ವ್ಯವಸ್ಥೆ ಬೇಕು. ಶಾಂತಿಪಾಲನೆಗೆ ವ್ಯವಸ್ಥೆಯಾಗಬೇಕು, ನ್ಯಾಯಾಲಯಗಳಾಗಬೇಕು, ಆಸ್ಪತ್ರೆಗಳು ಬೇಕು, ಶಾಲೆಗಳು ಬೇಕು. ಇವೆಲ್ಲಕ್ಕೆ ಒಂದು ಆಡಳಿತ ವ್ಯವಸ್ಥೆ ಬೇಕು. ಊರಿಗೆ ಸಾಮಾನುಗಳು ಬರಬೇಕು, ಊರಿನಿಂದ ಸಾಮಾನುಗಳು ಹೋಗಬೇಕು. ಸುಂಕವನ್ನು ವಸೂಲು ಮಾಡಬೇಕು, ಕಂದಾಯವನ್ನು ವಸೂಲು ಮಾಡಬೇಕು. ಹಣವನ್ನು ಪೋಲಾಗದಂತೆ ಖರ್ಚು ಮಾಡಲು ಏರ್ಪಾಡಿರಬೇಕು. ಎಂದರೆ, ಆರ್ಥಿಕವ್ಯವಸ್ಥೆ ನಗರದ ಜೀವನದಲ್ಲಿ ಬಹು ಮುಖ್ಯ. ನಗರದ ಜನ ಕಾನೂನುಗಳನ್ನು ಪಾಲಿಸುವುದು ಮಾತ್ರವಲ್ಲದೆ ನೀತಿ ನಡತೆ, ಶಿಷ್ಟಾಚಾರ ಇವಕ್ಕೆ ವಿಶೇಷ ಗಮನಕೊಡುತ್ತಾರೆ. ಒಬ್ಬ ಇನ್ನೊಬ್ಬನನ್ನು ಕಂಡಾಗ ಹೇಗೆ ನಡೆದುಕೊಳ್ಳಬೇಕು, ಒಂದೇ ಗುಂಪಿನಲ್ಲಿ—ವ್ಯಾಪಾರಿಗಳು ತಮ್ಮತಮ್ಮಲ್ಲಿ, ವಕೀಲರು ತಮ್ಮತಮ್ಮಲ್ಲಿ, ವೈದ್ಯರು ತಮ್ಮತಮ್ಮಲ್ಲಿ—ಹೇಗೆ ನಡೆದುಕೊಳ್ಳಬೇಕು. ಈ ಸಂಪ್ರದಾಯಗಳು ನಗರ ಜೀವನದಲ್ಲಿ ವಿಸ್ತಾರವಾಗಿ, ಸೂಕ್ಷ್ಮವಾಗಿ ಬೆಳೆದಿರುತ್ತವೆ. ನಗರದ ಜನ ಹೆಚ್ಚು ಓದಿದವರು. ಹೆಚ್ಚು ಯೋಚಿಸುವವರು. ಆದ್ದರಿಂದ ಹೀಗೆ ಮಾಡಬಹುದು, ಹೀಗೆ ಮಾಡಬಾರದು, ರಾಜನಾದವನು ಹೀಗೆ ನಡೆದುಕೊಳ್ಳಬೇಕು. ಅಧಿಕಾರಿ ಹೀಗೆ ವರ್ತಿಸಬೇಕು, ಪ್ರಜೆಯ ಕರ್ತವ್ಯ ಇದು, ವ್ಯಾಪಾರಿಗೆ ಇದು ಉಚಿತವಾದ ರೀತಿ. ಮನೆಯ ಯಜಮಾನನ ಕರ್ತವ್ಯ ಇಂಥದು, ತಂದೆ ತಾಯಿ ಮಕ್ಕಳ ವಿಷಯದಲ್ಲಿ ಹೀಗೆ ನಡೆಯಬೇಕು. ಮಕ್ಕಳು ಹೀಗೆ ನಡೆದುಕೊಳ್ಳಬೇಕು. ಗಂಡನ ಕರ್ತವ್ಯ ಹೀಗೆ, ಹೆಂಡತಿಯ ಕರ್ತವ್ಯ ಇಂಥದು—ಎಂದೆಲ್ಲ ಯೋಚಿಸುವುದು ಮತ್ತು ಸಂಪ್ರದಾಯಗಳನ್ನು ಸೃಷ್ಟಿಸುವುದು ಸಾಮಾನ್ಯವಾಗಿ ನಗರಗಳಲ್ಲೇ ಪ್ರಾರಂಭ. ಎಂದರೆ, ನೀತಿ ನಡತೆ ಶಿಷ್ಟಾಚಾರಗಳ ಸಂಪ್ರದಾಯ ನಾಗರಿಕ ಜೀವನದಲ್ಲಿ ಮುಖ್ಯ. ನಗರದ ಜನ ಅಲಂಕಾರಕ್ಕೆ ಹೆಚ್ಚು ಗಮನಕೊಡುವವರು. ಸಂಗೀತಗಾರರು, ಚಿತ್ರಗಾರರು, ಕವಿಗಳು, ವರ್ತಕರು—ಎಲ್ಲರಿಗೆ ಪ್ರೋತ್ಸಾಹ ಹಿಂದಿನ ಕಾಲದಲ್ಲಿ ರಾಜರಿಂದ ಶ್ರೀಮಂತರಿಂದ ದೊರೆಯುತ್ತಿತ್ತು. ಇವರು ನಗರಗಳಲ್ಲಿ ನೆಲೆಸಿದರು; ಇವರ ಬಳಿ ವಿದ್ಯೆ ಪಡೆಯಲು ಬಯಸಿದವರು ನಗರಗಳಿಗೆ ಬಂದರು. ನಗರಗಳಲ್ಲಿ ಹಣವಂತರಿರುತ್ತಾರೆ, ಕಲಾವಿದರಿರುತ್ತಾರೆ. ಮನುಷ್ಯ ಸೌಂದರ್ಯಪ್ರಿಯ. ಒಂದು ಹೂವನ್ನೋ, ಸೂರ್ಯಾಸ್ತವನ್ನೋ, ಚಂದ್ರೋದಯವನ್ನೋ ನೋಡಿ ಹಿಗ್ಗುತ್ತಾನೆ. ತಾನೂ ಸುಂದರವಸ್ತುಗಳನ್ನು ಸೃಷ್ಟಿಸಬೇಕೆಂದು ಅವನ ಆಸೆ. ಸುಂದರ ವಸ್ತುಗಳ ಸೃಷ್ಟಿಗೆ ನಗರದಲ್ಲಿ ಹೆಚ್ಚು ಅವಕಾಶ.

ಮನುಷ್ಯನಿಗೆ ಸೌಂದರ್ಯದಲ್ಲಿ ಹೇಗೆ ಪ್ರೀತಿಯೋ ವಿದ್ಯೆಯಲ್ಲಿಯೂ ಹಾಗೆಯೇ ಪ್ರೀತಿ. ಕುತೂಹಲ ಮನುಷ್ಯನ ಸ್ವಭಾವಕ್ಕೆ ಅಂಟಿಕೊಂಡದ್ದು. ಇದು ಏಕೆ ಹೀಗೆ? ಅದರ ನಿಜವಾದ ಸ್ವರೂಪವೇನು? ಇಂಥ ಪ್ರಶ್ನೆಗಳನ್ನು ಅತ ಕೇಳಿಕೊಳ್ಳುತ್ತಲೇ ಇರುತ್ತಾನೆ. ನಗರಗಳಲ್ಲಿ ವಿದ್ವಾಂಸರ ಸಂಸ್ಥೆಗಳಿರುತ್ತವೆ. ವಿದ್ವಾಂಸರಿರುತ್ತಾರೆ. ನಗರಗಳಲ್ಲಿ ಜ್ಞಾನಾರ್ಜನೆ—ಜ್ಞಾನ ಹೆಚ್ಚಿಸಿಕೊಳ್ಳುವ ಪ್ರಯತ್ನ—ನಡೆಯುತ್ತಲೇ ಇರುತ್ತದೆ.

ಎಂದರೆ, ನಗರ ಜೀವನದ ನಾಗರಿಕತೆಯ ಅಂಶಗಳು ಎಂದು ನಾವು ಭಾವಿಸಬಹುದಾದದ್ದು ಈ ಐದು: ಆಡಳಿತ ವ್ಯವಸ್ಥೆ, ಆರ್ಥಿಕ ವ್ಯವಸ್ಥೆ, ನೀತಿ ಮತ್ತು ಶಿಷ್ಟಾಚಾರಗಳ ಸಂಪ್ರದಾಯ, ಕಲೆಗಳ ಅಭಿವೃದ್ಧಿ, ಜ್ಞಾನದ ಬೆಳವಣಿಗೆ. ನಗರ ಜೀವನದಲ್ಲಿ ಇವು ಜಟಿಲವಾಗಿರುತ್ತವೆ, ಚೇತನದಿಂದ ಕೂಡಿರುತ್ತವೆ. ಯಾವ ನಾಗರಿಕತೆಯನ್ನು ಅಭ್ಯಾಸ ಮಾಡಬೇಕಾದರೂ ಈ ಐದು ಅಂಶಗಳನ್ನು ಗಮನಕ್ಕೆ ತಂದುಕೊಳ್ಳಬೇಕು.

## ೩

ನಮಗೆ ತಿಳಿದಿರುವಂತೆ ಸುಮಾರು ಐದು ಸಾವಿರ ವರ್ಷಗಳ ಹಿಂದೆ ನಾಗರಿಕ ಸಮಾಜಗಳು ಹುಟ್ಟಿದುವು. ಪ್ರಾಯಶಃ ಆರು ಸಾವಿರ ವರ್ಷಗಳ ಹಿಂದೆಯೇ ಈಜಿಪ್ಟ್ ನಾಗರಿಕತೆ ಪ್ರಾರಂಭವಾಯಿತು. ನಾಗರಿಕತೆಯ ಆರಂಭ ಇಂಥ ವರ್ಷದಲ್ಲಿಯೇ ಆಯಿತು, ಇಂಥ ಕ್ಷಣ

ದಲ್ಲಿಯೇ ಆಯಿತು ಎಂದು ಹೇಳುವುದು ಸಾಧ್ಯವಿಲ್ಲ. ದಾಖಲೆಗಳಿಲ್ಲದಿರುವುದು ಇದಕ್ಕೆ ಒಂದು ಕಾರಣ. ಮತ್ತೊಂದು ಕಾರಣ, ನಾಗರಿಕತೆಯ ಉದಯಕ್ಕೆ ಅಗತ್ಯವಾದ ಹಲವು ಶೋಧನೆಗಳನ್ನು ಪ್ರಪಂಚದ ಬೇರೆ ಬೇರೆ ಭಾಗಗಳಲ್ಲಿ ಒಂದಕ್ಕೊಂದು ಸಂಪರ್ಕವೇ ಇಲ್ಲದ ಗುಂಪುಗಳವರು ಮಾಡಿಕೊಂಡದ್ದು. ಬೆಂಕಿಯ ಬಳಕೆ, ಪ್ರಾಣಿಗಳನ್ನು ಪಳಗಿಸಿ ಮನುಷ್ಯನ ಸೇವೆಗೆ ಬಳಸಿಕೊಳ್ಳುವುದು, ಮಾತು, ಬರಹ—ಇವು ಮೊಟ್ಟಮೊದಲು ಎಲ್ಲಿ ಪ್ರಾರಂಭವಾದುವೆಂಬುದನ್ನು ಮನುಷ್ಯ ಕಂಡುಹಿಡಿಯಲು ಸಾಧ್ಯವೇ ಇಲ್ಲ ಎಂದು ತೋರುತ್ತದೆ.

**ನಾಗರಿಕತೆಗೆ ಸಿದ್ಧತೆ**

ಕ್ರಿ. ಪೂ. ಐದು ಸಾವಿರ ವರ್ಷಗಳ ಹೊತ್ತಿಗೆ ನಾಗರಿಕ ಜೀವನಕ್ಕೆ ಅಗತ್ಯವಾದ ಸಿದ್ಧತೆ ಮುಗಿದಿತ್ತು. ಇದಕ್ಕೆ ಎಷ್ಟೋ ಸಾವಿರ ವರ್ಷಗಳ ಹಿಂದೆ ನಿಸ್ಸಹಾಯಕನಾಗಿ, ಹೆಜ್ಜೆ ಹೆಜ್ಜೆಗೆ ಅಪಾಯವನ್ನು ಎದುರಿಸುತ್ತಿದ್ದ ಮನುಷ್ಯ ಒಂದು ಕಡೆ ನೆಲೆನಿಂತು ಸಮುದಾಯ ಜೀವನ ನಡೆಸಲು ಪ್ರಾರಂಭಮಾಡಿದ್ದ. ಮನುಷ್ಯ ಪ್ರಾಣಿಗಳಂತೆ ನಡೆಯುವುದನ್ನು ಬಿಟ್ಟು ಎರಡು ಕಾಲುಗಳ ಮೇಲೆ ನಿಲ್ಲುವುದನ್ನು, ಓಡುವುದನ್ನು ಕಲಿತಾಗ, ಅವನ ಎರಡು ಕೈಗಳೂ ಬೇರೆ ಕೆಲಸಗಳಿಗೆ ಒದಗುವಂತಾಯಿತು. ಆಯುಧಗಳನ್ನು ಅವನು ಬಳಸಲು ಸಾಧ್ಯವಾಯಿತು. ಇದರಿಂದ ಪ್ರಾಣಿಗಳನ್ನು ಹೆದರಿಸುವುದು, ಕೊಲ್ಲುವುದು, ಇತರರೊಡನೆ ಹೋರಾಡುವುದು ಸ್ವಲ್ಪ ಮಟ್ಟಿಗೆ ಸುಲಭವಾಯಿತು. ಬೇಟೆಗೆ ಸ್ವಲ್ಪ ಅನುಕೂಲವಾಯಿತು. ಸುಮಾರು ಹತ್ತು ಲಕ್ಷ ವರ್ಷಗಳ ಹಿಂದಿನಿಂದ ಕ್ರಿ. ಪೂ. 8000 ದವರೆಗೆ ಪ್ರಾಚೀನ ಶಿಲಾಯುಗ. ಈ ಕಾಲದಲ್ಲಿ ಮನುಷ್ಯ ಕುಲಕ್ಕೆ ಬಹುಮುಖ್ಯವಾದ ಹೆಜ್ಜೆ—ಬೆಂಕಿಯ ಬಳಕೆ. ಮೊದ ಮೊದಲು ಮನುಷ್ಯ ಬೆಂಕಿಯನ್ನು ಕಾಡು ಕಿಚ್ಚುಗಳಲ್ಲಿ, ಅಗ್ನಿಪರ್ವತಗಳಲ್ಲಿ ಕಂಡು ನಡುಗಿರಬೇಕು. ಮೂರು ಲಕ್ಷ ವರ್ಷಗಳ ಹಿಂದೆ ಪೀಕಿಂಗ್ ಮಾನವ ಬೆಂಕಿ ಉಪಯೋಗಿಸಲು ಕಲಿತಿದ್ದನೆಂದು ತೋರುತ್ತದೆ. ಇದರಿಂದ ಅಡುಗೆ ಪ್ರಾರಂಭವಾಯಿತು. ಪ್ರಪಂಚದ ವಿವಿಧ ಭಾಗಗಳಲ್ಲಿ ಶಾಕಾಹಾರಿಗಳಿಗೆ, ಮಾಂಸಾಹಾರಿಗಳಿಗೆ ವಿವಿಧ ರುಚಿಗಳಿಗೆ ಪ್ರಿಯವಾಗುವಂಥ ಖಾದ್ಯಪದಾರ್ಥಗಳ ಸಿದ್ಧತೆಯ ಪ್ರಾರಂಭ ಸುಮಾರು ಇಪ್ಪತ್ತೆರಡು ಸಾವಿರ ವರ್ಷಗಳ ಹಿಂದೆ ಆದದ್ದು. ಬೆಂಕಿಯಿಂದ ಮನುಷ್ಯ ಚಳಿಯನ್ನು ಎದುರಿಸಬಲ್ಲವನಾದ. ನಿಸರ್ಗದೊಡನೆ ಹೋರಾಟದಲ್ಲಿ ಮನುಷ್ಯನಿಗೆ ದೊರೆತ ಮೊದಲನೆಯ ಮಹಾ ವಿಜಯ ಇದು. ಬೆಂಕಿಯಿಂದ ಮನುಷ್ಯ ಕಾಡುಪ್ರಾಣಿಗಳನ್ನು ದೂರವಿಡಲು ಸಾಧ್ಯವಾಯಿತು. ಲೋಹಗಳನ್ನು ಆತ ಬಳಸತೊಡಗಿದ. ಆಗಿನ ಸರಳ ಆಯುಧಗಳಿಂದ ಅನಂತರದ ಯುಗಗಳಲ್ಲಿ ಬಡವನ ಕೊಡಲಿ, ಕಮ್ಮಾರನ ಸುತ್ತಿಗೆ, ಯೋಧನ ಬಿಲ್ಲು, ಈಟಿ, ರಾಜನ ಕಿರೀಟ ಎಲ್ಲ ಬೆಂಕಿಯ ಪ್ರಸಾದಗಳೇ, ಬಿಲ್ಲು ಬಾಣ ಮಾಡುವುದನ್ನು ಕಲಿತ ಮನುಷ್ಯ ಪ್ರಾಣಿಗಳ ಮೇಲೆ ತನ್ನ ಪ್ರಭುತ್ವವನ್ನು ಸ್ಥಾಪಿಸಲು ಪ್ರಾರಂಭಿಸಿದ. ಇದರಿಂದ ಅವನ ದುಷ್ಟ ಪ್ರವೃತ್ತಿ ಬಲಗೊಂಡಂತಾಯಿತು ಎನ್ನುವುದು ನಿಜ. ಈ ಕಾಲದ ಆಯುಧಗಳು, ಕೆತ್ತಿ ಮಾಡಿದಂಥವು.

ಸುಮಾರು ಕ್ರಿ. ಪೂ. ಹತ್ತು ಸಾವಿರದಲ್ಲಿ ಹೊಸದೊಂದು ಯುಗ ಪ್ರಾರಂಭವಾಯಿತು. ಇದನ್ನು 'ಹೊಸ ಶಿಲಾಯುಗ' ಎಂದು ಕರೆಯುತ್ತಾರೆ. ಮನುಷ್ಯ ಕೆಲ ಪ್ರಾಣಿಗಳನ್ನು ಪಳಗಿಸಿ ತನ್ನ ಜೀವನಕ್ಕೆ ನೆರವಾಗುವಂತೆ ಬಳಸಲಾರಂಭಿಸಿದ. ನಾಯಿ, ಹಸು, ಕುರಿ, ಕುದುರೆ ಇಂಥ ಪ್ರಾಣಿಗಳು ಈಗ ಅವನ ಸಂಸಾರಕ್ಕೆ ಸೇರಿದುವು. ಬೇಟೆಯಾಡುವ ಮನುಷ್ಯನಿಗೆ ನಾಯಿ ನೆರವಾಯಿತು, ಹಸು, ಮೇಕೆಗಳ ಹಾಲು ಅವನಿಗೆ ಆಹಾರವಾಯಿತು. ಕುದುರೆಯಿಂದ ಅವನಿಗೆ ಬೇಟೆಗೆ, ಸಾಮಾನುಗಳ ಸಾಗಾಣಿಕೆಗೆ ಅನುಕೂಲವಾಯಿತು. ಈ ಎಲ್ಲ ಪ್ರಾಣಿಗಳ ಮಾಂಸವೂ ಅವನಿಗೆ ಆಹಾರ. ನಾಗರಿಕತೆಯ ಚರಿತ್ರೆಯಲ್ಲಿ ಇದೊಂದು ಮುಖ್ಯ ಘಟ್ಟ. ಆವಿಯನ್ನು ಮನುಷ್ಯ ಬಳಸಿಕೊಳ್ಳುವವರೆಗೆ ಅವನಿಗೆ ಪ್ರಯಾಣಕ್ಕೆ ಕುದುರೆಯೇ ಮುಖ್ಯ ಸಾಧನ. ಕುದುರೆಯ ಬೆನ್ನೇರಿ ಇಲ್ಲವೆ ಅದನ್ನು ಗಾಡಿಗೆ ಕಟ್ಟಿ ಹಲವಾರು ಹರದಾರಿ ಪ್ರಯಾಣ ಮಾಡುವುದು ಸಾಧ್ಯವಾಯಿತು. ರಥಗಳು ಪ್ರಾಚೀನ ಬ್ರಿಟನ್ನಿನಲ್ಲಿ ಮತ್ತು ಭಾರತದಲ್ಲಿ ಯುದ್ಧದಲ್ಲಿ ಪ್ರಮುಖ ಪಾತ್ರ ವಹಿಸಿದ್ದುವು. ಆನೆಯ ಒಂದು ದಳವೇ ಪ್ರಾಚೀನ ಭಾರತ ಸೈನ್ಯದಲ್ಲಿತ್ತು. ಎತ್ತಿನ ಗಾಡಿಗಳನ್ನೂ ಕುದುರೆಗಾಡಿಗಳನ್ನೂ ಇಂದೂ





ಭಾರತದಲ್ಲಿ ಕಾಣಬಹುದು. ಮನುಷ್ಯ ನಿಸರ್ಗವನ್ನು ಗೆಲ್ಲಲು ಪ್ರಾಣಿಗಳು ನೆರವಾದುವು. ಮರುಭೂಮಿಯಲ್ಲಿ ಒಂಟೆ. ಉತ್ತರ ಯೂರೋಪಿನ ಲ್ಯಾಪ್‌ಲೆಂಡಿನ ಹಿಮ ಪ್ರದೇಶದಲ್ಲಿ ಹಿಮಸಾರಂಗ ಇವು ಮನುಷ್ಯನ ಪ್ರಯಾಣವನ್ನು ಸಾಧ್ಯಗೊಳಿಸಿವೆ. ಹಿಮಸಾರಂಗವಿಲ್ಲದೆ ಈ ಪ್ರದೇಶದಲ್ಲಿ ಮನುಷ್ಯ ಬದುಕಲಾರ. ಹಿಮಸಾರಂಗಗಳು ಬೇಸಿಗೆಯಲ್ಲಿ ಕಣಿವೆಗಳಿಗೂ ಮಳೆಗಾಲದಲ್ಲಿ ಸಮುದ್ರ ತೀರಕ್ಕೂ ವಲಸೆ ಹೋಗುತ್ತವೆ; ಲ್ಯಾಪ್‌ಲೆಂಡಿನ ಜನ ಸಂಸಾರ ಸಮೇತ ಅವನ್ನು ಹಿಂಬಾಲಿಸುತ್ತಾರೆ. ಕತ್ತೆ, ಕುದುರೆ, ಒಂಟೆ, ಆನೆ ಎಲ್ಲ ಮನುಷ್ಯನಿಗಾಗಿ ಭಾರವನ್ನು ಹೊತ್ತಿವೆ. ನಾಯಿ ಮನುಷ್ಯನ ನೆಚ್ಚಿನ ಬಂಟ—ಆಲ್ಪ್ಸ್ ಪರ್ವತ ಶ್ರೇಣಿಯಲ್ಲಿ ದಾರಿತಪ್ಪಿದವರಿಗೆ ಸಹ ನೆರವಾಗುತ್ತದೆ ನಾಯಿ. ಪಾರಿವಾಳಗಳು ಸಂದೇಶಗಳನ್ನು ಒಯ್ದಿವೆ. ಪ್ರಾಚೀನ ಈಜಿಪ್ಟಿನಲ್ಲಿ ಕೋತಿಗಳನ್ನು ಸಾಕಿ. ಹಣ್ಣುಗಳನ್ನು ಕಿತ್ತು ಕೆಳಕ್ಕೆ ಎಸೆಯುವಂತೆ ಶಿಕ್ಷಣ ಕೊಟ್ಟಿದ್ದರು. ಕುರಿಗಳ ತುಪ್ಪಳ ಮನುಷ್ಯನನ್ನು ಬೆಚ್ಚಗಿಟ್ಟಿದೆ. ಪ್ರಾಣಿಗಳ ಹಾಲಿಲ್ಲದೆ ಮನುಷ್ಯನ ನಿತ್ಯಜೀವನ ಸಾಗುವುದೇ ಅಸಾಧ್ಯ ಎನ್ನುವಂತಾಗಿದೆ. ಹಾಲು, ಬೆಣ್ಣೆ, ತುಪ್ಪ, ಮೊಸರು—ಎಲ್ಲದಕ್ಕೂ ನಾವು ಪ್ರಾಣಿಗಳಿಗೆ ತಾನೇ ಋಣಿಗಳಾಗಿರಬೇಕು ?

ಇದೇ ಕಾಲದಲ್ಲಿ ಮಾನವ ಹೊಸ ಆಯುಧಗಳನ್ನು ಮಾಡಲು ಕಲಿತ. ಮರದಿಂದ ಬಿಲ್ಲುಗಳನ್ನು ಮಾಡಿಕೊಂಡ. ಬಾಣಗಳನ್ನೂ ಮಾಡಿದ. ಬಾಣಗಳ ತುದಿಗೆ ಚೂಪಾದ ಕಲ್ಲನ್ನು ಸಿಕ್ಕಿಸಿದ. ಮೀನುಗಾರಿಕೆ ಪ್ರಾರಂಭವಾದದ್ದೂ ಈ ಕಾಲದಲ್ಲಿ. ಬೆಂಕಿಯ ಉಪಯೋಗವನ್ನು ಕಂಡುಕೊಂಡು ಅಡುಗೆಯನ್ನು ಆಗಲೆ ಮನುಷ್ಯ ಪ್ರಾರಂಭಿಸಿದ್ದ; ಬೆಂಕಿಯ ಮೇಲೆ, ಸತ್ತ ಪ್ರಾಣಿಗಳನ್ನು ತಗಲಿಹಾಕಿ ಸುಟ್ಟು ತಿನ್ನಲು ಕಲಿತಿದ್ದ. ಹೊಸ ಶಿಲಾಯುಗದಲ್ಲಿ ಮಡಿಕೆಕುಡಿಕೆಗಳನ್ನು ಮಾಡಲು ಕಲಿತ. ಮತ್ತೊಂದು ಬಹು ಮುಖ್ಯವಾದ ಸಾಧನೆ ಎಂದರೆ, ಬಟ್ಟೆಯನ್ನು ಮಾಡುವುದನ್ನೂ ಆತ ಕಲಿತದ್ದು. ತಾನು ಕೊಂದ ಪ್ರಾಣಿಗಳ ಚರ್ಮದಿಂದ ದಾರಗಳನ್ನು ತೆಗೆದು ಇಲ್ಲವೆ ಉದ್ದವಾದ ಜೊಂಡು ಅಥವಾ ಹುಲ್ಲನ್ನು ಬಳಸಿ ಒಂದರೊಳಗೆ ಇನ್ನೊಂದನ್ನು ಸೇರಿಸಿ ಬಟ್ಟೆಯನ್ನೂ, ಚಾಪೆಗಳನ್ನೂ ಹೆಣೆಯಲು ಪ್ರಾರಂಭಿಸಿದ. ಇಂದು ಎಷ್ಟು ಬಗೆಯ ಉಡುಪುಗಳನ್ನು ಎಷ್ಟು ಬಣ್ಣಗಳ ಎಷ್ಟು ಬಗೆಯ 'ಫ್ಯಾಷನ್'ಗಳ ಬಟ್ಟೆಗಳನ್ನು ಧರಿಸುತ್ತೇವೆ ! ಮರ್ಯಾದೆಗೆಂದು, ರೂಪಕ್ಕೆ ಹೊಸ ಕಳೆ ನೀಡಲೆಂದು, ಇತರರ ಗಮನ ಸೆಳೆಯಲೆಂದು, ಛಳಿ ಮಳೆ ಗಾಳಿಗಳಿಂದ ಕಾಪಾಡಲೆಂದು, ನಮ್ಮ ಐಶ್ವರ್ಯವನ್ನು ತೋರಲೆಂದು, ಎಷ್ಟು ಕಾರಣಗಳಿಗಾಗಿ ಬಟ್ಟೆ ಧರಿಸುತ್ತೇವೆ ! ವೃತ್ತಿಗೆ ತಕ್ಕಂತೆ, ಪದವಿಗೆ ತಕ್ಕಂತೆ, ಸಂದರ್ಭಕ್ಕೆ ತಕ್ಕಂತೆ, ಎಷ್ಟು ಉಡುಪುಗಳು ! ಉಡುಪುಗಳು ಮನುಷ್ಯನ ಸಂಸ್ಕೃತಿಯನ್ನು ತೋರಿಸಬಲ್ಲವು, ಅಹಂಕಾರವನ್ನು ಘೋಷಿಸಬಲ್ಲವು. ಈ ಉಡುಪಿನ ಚರಿತ್ರೆ ಪ್ರಾರಂಭವಾದದ್ದು ಹೊಸ ಶಿಲಾಯುಗದ ಸ್ತ್ರೀಪುರುಷರ ಹುಲ್ಲಿನ ಅಥವಾ ಚರ್ಮದ ಬಟ್ಟೆಗಳಿಂದ.



ಈ ಶಿಲಾಯುಗದ ಮುಕ್ತಾಯದ ಹೊತ್ತಿಗೆ ಮನುಷ್ಯನ ನಾಗರಿಕತೆಯ ಚರಿತ್ರೆ ಪ್ರಾರಂಭವಾಗಲು ಎಲ್ಲ ಸಿದ್ಧತೆಯೂ ಆಗುತ್ತ ಬಂದಿತ್ತು. ಆದರೆ ನಾಗರಿಕತೆಯ ಉದಯ ಮತ್ತು ಬೆಳವಣಿಗೆಗಳಿಗೆ ಅತ್ಯಗತ್ಯವಾದ ಎರಡು ಅಂಶಗಳುಂಟು. ಮೊದಲನೆಯದಾಗಿ ತಕ್ಕಷ್ಟು ಸಂಖ್ಯೆಯ ಜನರು ಒಂದು ಕಡೆ ನೆಲೆಸಬೇಕು. ಜನ ಅಲೆಯುತ್ತಿರುವಾಗ ರಾಜಕೀಯ ವ್ಯವಸ್ಥೆ, ಆರ್ಥಿಕ ವ್ಯವಸ್ಥೆ, ನೀತಿ ಮತ್ತು ಶಿಷ್ಟಾಚಾರ ಸಂಪ್ರದಾಯ, ಕಲೆಯ ಬೆಳವಣಿಗೆ, ಜ್ಞಾನದ ವಿಕಾಸ ಯಾವುದೂ ಸಾಧ್ಯವಿಲ್ಲ. ಈ ಹೊಸ ಶಿಲಾಯುಗದ ಮನುಷ್ಯನಿಗೆ ಕಲೆಯ ಅಭಿರುಚಿ ಇದ್ದಿತು ಎನ್ನುವುದಕ್ಕೆ ಸಾಕ್ಷ್ಯವಿದೆ. ಈಗ ಸುಮಾರು ಮೂವತ್ತೈದು ಸಾವಿರ ವರ್ಷಗಳ ಕೆಳಗೆ ವಾಸಿಸುತ್ತಿದ್ದ ಕ್ರೊ ಮ್ಯಾಗ್‌ನಾನ್ ಮಾನವರು ತಮ್ಮ ಗುಹೆ

ಗಳಲ್ಲಿ ಚಿತ್ರಗಳನ್ನು ಬಂಡೆಗಳ ಮೇಲೆ ಬಿಡಿಸಿದ್ದಾರೆ. (ಈ ಗವಿವಾಸಿಗಳ ಅವಶೇಷಗಳು ಸಿಕ್ಕಿದ್ದು ಫ್ರಾನ್ಸಿನ ಲೆಜೀ ಎನ್ನುವಲ್ಲಿ. ಆ ಊರಿನ ಆಡು ಮಾತಿನಲ್ಲಿ ಕ್ರೊ ಮ್ಯಾಗ್ನಾನ್ ಎಂದರೆ ದೊಡ್ಡ ಬಿಲ.) ಕಲ್ಲಿನಲ್ಲಿ ರೂಪರೇಖೆಗಳನ್ನು ಕೆತ್ತಿ, ಅದಕ್ಕೆ ಬಣ್ಣ ತುಂಬುತ್ತಿದ್ದರು: ಹಳದಿ, ಕೆಂಪು ಅಥವಾ ಕಪ್ಪು ಮಣ್ಣಿಗೆ ಎಣ್ಣೆಯನ್ನು ಬೆರೆಸಿ ಈ ಬಣ್ಣವನ್ನು ಮಾಡುತ್ತಿದ್ದರು. ಚಿತ್ರಗಳಿಗೆ ತಮ್ಮದೇ ಆದ ರೀತಿಯಲ್ಲಿ ಪೂಜೆಮಾಡಿ, ಬೇಟೆಯಲ್ಲಿ ಯಶಸ್ಸು ಸಿಗಲಿ ಎಂದು ಪ್ರಾರ್ಥಿಸುತ್ತಿದ್ದರೆಂದು ತೋರುತ್ತದೆ. ಇಷ್ಟು ಕಲಾತ್ಮಕವಾದ ಚಿತ್ರಗಳನ್ನು ಮತ್ತೆ ನಾವು ಕಾಣುವುದು ಮೂವತ್ತೆರಡು ಮೂವತ್ತಮೂರು ಸಾವಿರ ವರ್ಷಗಳ ಅನಂತರವೇ. ಮನುಷ್ಯನಿಗೆ ಹೊಸ ವಿಷಯಗಳನ್ನು ತಿಳಿದುಕೊಳ್ಳಬೇಕು ಎಂಬ ಬಯಕೆ ಸಹಜವಾದದ್ದು. ಇದರಿಂದಲೇ ಅವನು ಬೆಂಕಿ ಮಾಡುವುದು ಪಾತ್ರೆಗಳನ್ನು ಮಾಡುವುದು, ಇವುಗಳನ್ನೆಲ್ಲ ತಿಳಿಯಲು ಸಾಧ್ಯವಾಯಿತು. ಆದರೆ ಒಂದು ಗುಂಪು ಒಂದೆಡೆ ನೆಲೆಸದೆ ಜ್ಞಾನದ ಬೆಳವಣಿಗೆ ವೇಗಗೊಳ್ಳಲು ಸಾಧ್ಯವಿಲ್ಲ. ನವಶಿಲಾಯುಗದ ಬಹುಭಾಗದಲ್ಲಿ ಮನುಷ್ಯ ತನಗೂ ತನ್ನ ಪ್ರಾಣಿಗೂ ಆಹಾರವನ್ನು ಹುಡುಕಿಕೊಂಡು ಅಲೆಯಲೇ ಬೇಕಾಗಿತ್ತು. ನಾಗರಿಕತೆಯ ಬೆಳವಣಿಗೆಗೆ ಅಗತ್ಯವಾಗಿದ್ದ ಇನ್ನೊಂದು ಸಾಧನ ಭಾಷೆ—ಮಾತು ಮತ್ತು ಬರಹ. ಪ್ರತಿಯೊಬ್ಬರೂ ಪ್ರತಿಯೊಂದನ್ನೂ ತಾವೇ ಕಲಿಯುವುದಾದರೆ ಜ್ಞಾನಭಂಡಾರ ಬೇಗನೆ ಬೆಳೆಯಲಾರದು. ಪೈಥಾಗೊರಸ್‌ನಿಂದ ಫ್ಲೆಮಿಂಗರವರೆಗೆ ವಿಜ್ಞಾನಿಗಳು ಸಾಧಿಸಿದ್ದನ್ನೆಲ್ಲಾ ಮತ್ತೆ ಇಂದಿನ ವಿಜ್ಞಾನಿ ಕಂಡುಹಿಡಿದು ಮುಂದಕ್ಕೆ ನಡೆಯಬೇಕೆಂದರೆ ಎಷ್ಟು ಸಾವಿರ ವರ್ಷ ಬೇಕಾದೀತು ? ಹಿಂದಿನವರ ಜ್ಞಾನ ಇಂದಿನವರಿಗೆ ಬಂಡವಾಳವಾದರೆ ಅದನ್ನು ಬೆಳೆಸಬಹುದು. ಮುಂದೆ ಬರುವವರಿಗೆ ಬಂಡವಾಳವಾಗಿ ಕೊಡಬಹುದು. ಇದಕ್ಕೆ ಭಾಷೆ ಅಗತ್ಯ. ಮಾತೇ ಇಲ್ಲದೆ ಹೇಳಿಕೊಡುವುದಕ್ಕಿಂತ ಬಾಯಿಮಾತಿನಲ್ಲಿ ಹೆಚ್ಚು ವಿಷಯಗಳನ್ನು ಹೇಳಿಕೊಡಬಹುದು. ಆದರೆ ಒಟ್ಟಿನಲ್ಲಿ ನೋಡಿದರೆ ಹೀಗೆ ಹೇಳಿಕೊಡಬಹುದಾದದ್ದು ಬಹಳ ಸ್ವಲ್ಪ. ಕಲಿಯುವವರಿಗೂ ಕಷ್ಟ, ಏಕೆಂದರೆ ಎಲ್ಲವನ್ನೂ ನೆನಪಿನಲ್ಲಿ ಉಳಿಸಿಕೊಳ್ಳಬೇಕು. ಬರಹ ಕಂಡುಹಿಡಿದ ಮೇಲೆ ಜ್ಞಾನಿಗಳಿಗೂ ಶಿಷ್ಯರಿಗೂ ಅನುಕೂಲ. ತನಗೆ ತಿಳಿದುದನ್ನು ಜ್ಞಾನಿ ಬರೆದಿಡಬಹುದು. ಜೊತೆಯಲ್ಲಿದ್ದವರಿಗೆ ಮಾತ್ರವಲ್ಲದೆ ನೂರಾರು ವರ್ಷಗಳಾಚೆ ಬರುವವರಿಗೂ ಆಸ್ತಿ—ಪೈಥಾಗೊರಸ್ ಸುಶ್ರುತ, ಯೂಕ್ಲಿಡ್, ಇವರ ಜ್ಞಾನಾರ್ಜನೆ.

ಸುಮಾರು ಏಳು ಸಾವಿರ ವರ್ಷಗಳ ಕೆಳಗೆ ಮನುಷ್ಯ ವ್ಯವಸಾಯವನ್ನು ಕಂಡುಕೊಂಡ. ಬೀಜವನ್ನು ಬಿತ್ತಿದರೆ, ತಾನಿದ್ದ ಸ್ಥಳದಲ್ಲಿಯೇ ಬೆಳೆಯನ್ನು ತೆಗೆಯಬಹುದು ಎಂದು ಮನುಷ್ಯ ಅರಿತ ದಿನ ಮಾನವಕೋಟಿಯ ಚರಿತ್ರೆಯಲ್ಲಿ ಮುಖ್ಯವಾದ ದಿನ. ಈ ತಿಳಿವಳಿಕೆಯಿಂದ, ಅಲೆದಾಡುತ್ತಿದ್ದ ಮನುಷ್ಯರ ಗುಂಪು ಒಂದು ಕಡೆ ನಿಲ್ಲುವಂತಾಯಿತು; ನಾಗರಿಕತೆ ಮೊಳೆಯುವಂತಾಯಿತು. ಮುಖ್ಯವಾಗಿ ವ್ಯವಸಾಯ, ಸಮಾಜದಲ್ಲಿ ಬೇರೆ ಬೇರೆ ವರ್ಗಗಳು ಬೆಳೆಯಲು ವಿರಾಮವನ್ನು ಒದಗಿಸಿತು. ಅಲ್ಲಿಯವರೆಗೆ ಕುಟುಂಬದವರೆಲ್ಲ ಬೆಳಗ್ಗೆಯಿಂದ ಸಂಜೆಯವರೆಗೆ ಬೇಟೆಯಾಡಿ ಹಣ್ಣು ಗೆಣಸು ಗೆಡ್ಡೆಗಳನ್ನು ಹುಡುಕಿ ಆಹಾರ ಸಂಪಾದಿಸಿದರೂ ತಕ್ಕಷ್ಟು ಆಹಾರ ಸಿಕ್ಕುವುದು ಕಷ್ಟವಾಗಿತ್ತು. ವ್ಯವಸಾಯದಿಂದ ಆಹಾರದ ಉತ್ಪಾದನೆಯ ಮೇಲೆ ಮನುಷ್ಯನಿಗೆ ಹತೋಟಿ ಬಂದಿತು. ಹತ್ತುಜನರಿಗೆ ಬೇಕಾಗುವಷ್ಟು ಆಹಾರ ಸಂಪಾದಿಸಲು ಎಲ್ಲ ಜನರೂ ದುಡಿಯಬೇಕಾದರೆ ಹತ್ತು ಸಾವಿರ ಜನ ಇರುವ ಗುಂಪಿನಲ್ಲಿ ಹತ್ತು ಸಾವಿರ ಜನರೂ ದುಡಿಯಬೇಕು. ಒಂಬತ್ತು ಜನ ಹತ್ತು ಜನರಿಗೆ ಆಹಾರ ಬೆಳೆದರೆ ಹತ್ತರಲ್ಲಿ ಒಬ್ಬನಿಗೆ ಬಿಡುವು. ಈತ ತನ್ನ ವಿರಾಮವನ್ನು ಬಳಸಿಕೊಂಡು ಯೋಧನಾಗಬಹುದು, ಉಪಾಧ್ಯಾಯನಾಗಬಹುದು, ವಿಜ್ಞಾನಿಯಾಗಬಹುದು, ತತ್ವಜ್ಞಾನಿಯಾಗಬಹುದು, ಕವಿಯಾಗಬಹುದು, ರಾಜಕಾರಣಿಯಾಗಬಹುದು. ಹತ್ತು ಸಾವಿರ ಜನರ ಗುಂಪಿನಲ್ಲಿ ಒಂದು ಸಾವಿರ ಜನರಿಗೆ ಆಹಾರದ ಉತ್ಪಾದನೆಯಿಂದ ಬಿಡುವು ದೊರೆತರೆ. ನಾಗರಿಕತೆಗೆ ಅಗತ್ಯವಾದ ವಿವಿಧ ವರ್ಗಗಳು ಹುಟ್ಟಿ ಬೆಳೆಯಲು ಸಾಧ್ಯವಾಗುತ್ತದೆ. ಅಮೆರಿಕದ ಸಂಯುಕ್ತ ಸಂಸ್ಥಾನದಲ್ಲಿ ವ್ಯವಸಾಯದಲ್ಲಿ ನಿರತರಾಗಿರುವವರು ಒಟ್ಟು ಜನಸಂಖ್ಯೆಯ ನೂರರಲ್ಲಿ ಎಂಟಕ್ಕಿಂತ ಕಡಮೆ. ಎಂದರೆ ಜನಸಂಖ್ಯೆಯ ಶೇಕಡ 92 ಭಾಗ ಇತರ ಕ್ಷೇತ್ರಗಳಲ್ಲಿ ಕೆಲಸ ಮಾಡುತ್ತಾರೆ. ದೇಶದ ರಾಜಕಾರಣಿಗಳು, ವಿಜ್ಞಾನಿಗಳು, ವಿದ್ಯಾರ್ಥಿಗಳು, ನಟ ನಟಿಯರು, ಸಂಗೀತಗಾರರು, ಪತ್ರಿಕೋದ್ಯಮಿಗಳು, ಸರಕಾರಿ ನೌಕರರು, ವ್ಯಾಪಾರಿಗಳು, ಕಾರ್ಮಿಕರು ಎಲ್ಲ ಈ ಭಾಗದಿಂದ ಬಂದವರು. ನಾಗರಿಕತೆಯ ಪ್ರಗತಿ ಸಾಧ್ಯವಾಗಿರುವುದು ವ್ಯವಸಾಯ ಕಲ್ಪಿಸಿದ ವಿರಾಮದಿಂದ. ಹಲವು ರಾಷ್ಟ್ರಗಳು ದೊಡ್ಡ ದೊಡ್ಡ ಸೈನ್ಯಗಳನ್ನು ಇಟ್ಟುಕೊಂಡು ಭಯಂಕರ ಯುದ್ಧಗಳನ್ನು ನಡೆಸುವುದು ಸಾಧ್ಯವಾದದ್ದೂ ಇದರಿಂದಲೇ.

ಮಾತು ಅವತರಿಸಿದ್ದು ಯಾವಾಗ ಎಂದು ಹೇಳುವುದು ಸಾಧ್ಯವಿಲ್ಲ. ಅದು ಪ್ರಾರಂಭವಾದದ್ದು ಹೇಗೆ ಎಂಬುದನ್ನು ಕುರಿತು ಹಲವಾರು ವಾದಗಳಿವೆ. ಮೊದಲು ಮಾತು ಬಂದಿತು. ಅನಂತರ ಲಿಪಿ ಬಂದಿತು. ಪ್ರಪಂಚದ ಬೇರೆ ಬೇರೆ ಭಾಗಗಳಲ್ಲಿ ಮನುಷ್ಯರ ಗುಂಪುಗಳು ಮಾತನ್ನೂ ಲಿಪಿಯನ್ನೂ ಕಂಡುಹಿಡಿದುವು. ಸುಮಾರು ಏಳು ಸಾವಿರ ವರ್ಷಗಳ ಹಿಂದೆ ಉದಿಸಿದ ಈಜಿಪ್ಟ್ ನಾಗರಿಕತೆಯಲ್ಲಿ ವ್ಯವಸಾಯ, ಭಾಷೆ ಎರಡೂ ತಕ್ಕಷ್ಟು ಮುಂದುವರಿದಿದ್ದುದನ್ನು ಕಾಣುತ್ತೇವೆ. ಆಗಲೇ ಮನುಷ್ಯ ಬೆಂಕಿಯನ್ನು ಅಡುಗೆಗೆ, ಪಾತ್ರೆಗಳನ್ನು ಮಾಡಲು ಬಳಸಲು ಕಲಿತಿದ್ದ, ಲೋಹಗಳನ್ನು ಬಗ್ಗಿಸಲು ಬಳಸುವುದನ್ನೂ ಆತ ಕಲಿತಿದ್ದ. ಇದರಿಂದ ಹೊಸ ಬಿಡವೆಗಳು, ಆಯುಧಗಳು, ಉಪಕರಣಗಳು ಸಾಧ್ಯವಾದುವು. ಮೊದಲು ತಾಮ್ರಯುಗ, ಬಳಿಕ ಕಂಚಿನಯುಗ, ಅನಂತರ ಕಬ್ಬಿಣದ ಯುಗ ಎಂದು ಈ ಅವಧಿಯನ್ನು ವಿಂಗಡಿಸುತ್ತಾರೆ. ನಾಗರಿಕ ಜೀವನದ ವೈವಿಧ್ಯಕ್ಕೆ ಅಗತ್ಯವಾದ ತಳಹದಿ ಸಿದ್ಧವಾದಂತಾಯಿತು. ಆಯುಧಗಳನ್ನು ಮಾಡುವುದು, ಬೆಂಕಿಯನ್ನು ತಾನೆ ಉತ್ಪತ್ತಿ ಮಾಡಿ ಬಳಸುವುದು, ಪಳಗಿಸಿದ ಪ್ರಾಣಿಗಳ ಸೇವೆಯನ್ನು ಪಡೆಯುವುದು, ಬುಟ್ಟಿಯನ್ನು

'ಕ್ಲಿಯೊಪಾತ್ರ' ಹೆಸರನ್ನು ಹಿಂದೆ ಬರೆಯುತ್ತಿದ್ದ ರೀತಿ



ನೇಯುವುದು, ವ್ಯವಸಾಯ, ಭಾಷೆ, ಲೋಹಗಳ ಬಳಕೆ ಇಷ್ಟನ್ನು ಮನುಷ್ಯ ಕಲಿತ. ನಾಗರಿಕತೆಯು ಪ್ರಪಂಚಕ್ಕೆ ಕಾಲಿಟ್ಟಂತಾಯಿತು. ಈ ನಾಗರಿಕತೆಯ ಅರುಣೋದಯ ಪ್ರಾರಂಭವಾದದ್ದು ಕ್ರಿಸ್ತ ಹುಟ್ಟುವುದಕ್ಕೆ ಸುಮಾರು ಇಪ್ಪತ್ತೈದು ಸಾವಿರ ವರ್ಷಗಳ ಹಿಂದೆ. ಕ್ರಿಸ್ತಪೂರ್ವ ಐದು ಸಾವಿರದ ಹೊತ್ತಿಗೆ ಅದು ಮುಗಿಯಿತು ಎನ್ನಬಹುದು. ಸುಮಾರು ಇಪ್ಪತ್ತು ಸಾವಿರ ವರ್ಷಗಳ ಸಿದ್ಧತೆ ಬೇಕಾಯಿತು. ನಾಗರಿಕತೆಯ ಉದಯಕ್ಕೆ. ಎಂದರೆ, ನಮಗೆ ತಿಳಿದಿರುವಂತೆ, ಭೂಮಿಯ ಮೇಲೆ ಮನುಷ್ಯನ ಚರಿತ್ರೆಯಲ್ಲಿ ಎಪ್ಪತ್ತರಲ್ಲಿ ಒಂದು ಭಾಗ ಮಾತ್ರ ನಾಗರಿಕತೆಯ ಚರಿತ್ರೆ.

ಈ ಸಿದ್ಧತೆ ನಡೆದದ್ದು ಮನುಷ್ಯನ ಒಟ್ಟು ಚರಿತ್ರೆಯ ಇಪ್ಪತ್ತೈದರ ಒಂದು ಭಾಗದಲ್ಲಿ.

# ೫

ಪ್ರಾಚೀನ ನಾಗರಿಕತೆಗಳೆಲ್ಲ ನದೀತೀರದಲ್ಲಿ ಕಾಣಿಸಿಕೊಂಡುವು. ಇದು ಸಹಜವೇ. ನದೀತೀರದಲ್ಲಿ ಭೂಮಿ ಸ್ವಾಭಾವಿಕವಾಗಿಯೇ ಫಲವತ್ತಾಗಿರುತ್ತದೆ, ಅಲ್ಲಿ ಆಹಾರ ದೊರೆಯುವುದು ಸುಲಭ.

**ಪ್ರಾಚೀನ ನಾಗರಿಕತೆಗಳು**

ಪ್ರಾಚೀನ ನಾಗರಿಕತೆಗಳಲ್ಲಿ ಅತಿ ಪ್ರಾಚೀನವಾದದ್ದು ಯಾವುದು ಎಂದು ಹೇಳುವುದು ಕಷ್ಟ. ಹರಪ್ಪ–ಮೊಹೆಂಜೊದಾರೊ ನಾಗರಿಕತೆಯೆ ಅತಿ ಪ್ರಾಚೀನವಾದದ್ದು ಎಂದು ಕೆಲವರ ಮತ. ಈ ನಾಗರಿಕತೆ ಕ್ರಿ. ಪೂ. 2500ರಿಂದ 2000ದ ಮಧ್ಯೆ ಅಳಿದಂತೆ ಕಾಣುತ್ತದೆ. ಪ್ರಾರಂಭವಾದದ್ದು ಯಾವಾಗ ಎನ್ನುವುದು ಇನ್ನೂ ನಿರ್ಧಾರವಾಗಬೇಕಾಗಿದೆ. ಈಗ ನಮಗೆ ತಿಳಿದಿರುವ ಮಟ್ಟಿಗೆ ಈಜಿಪ್ಟಿನ ನಾಗರಿಕತೆಯೇ ಬಹು ಪ್ರಾಚೀನವಾದದ್ದು. ಕ್ರಿ. ಪೂ. 5000 ದ ಹೊತ್ತಿಗೆ ಇದು ಪ್ರಾರಂಭವಾಗಿದ್ದಿರಬಹುದು.

ಪ್ರಪಂಚದ ಅತಿ ಪ್ರಾಚೀನ ರಾಜ್ಯಾಡಳಿತ ವ್ಯವಸ್ಥೆಗಳಲ್ಲಿ ರಾಜಪ್ರಭುತ್ವ ಒಂದು. ಶಕ್ತನಾದ ನಾಯಕನಲ್ಲಿ ನಂಬಿಕೆ ಇಟ್ಟು, ಶತ್ರುಗಳಿಂದ ರಕ್ಷಿಸುವ, ಪಂಗಡದೊಳಗೆ ಶಾಂತಿ ಕಾಪಾಡುವ ಹೊಣೆಯನ್ನು ಜನರು ಅವನಿಗೆ ವಹಿಸಿಕೊಟ್ಟರು; ಅವನಿಗೆ ವಿಧೇಯರಾದರು. ಅವನೇ ರಾಜನೆನಿಸಿಕೊಂಡ. ರಾಜನ ಮಗ ರಾಜನಾಗುವುದು ಸಂಪ್ರದಾಯವಾಯಿತು. (ಈ ಸಂಪ್ರದಾಯವನ್ನು ಮೀರಿದ್ದೂ ಉಂಟು). ರಾಜನನ್ನು ಕುರಿತು ಅನೇಕ ನಂಬಿಕೆಗಳು ಪ್ರಚಾರಕ್ಕೆ ಬಂದುವು. ಅವನು ಇತರ ಮನುಷ್ಯರಂತಲ್ಲ. ಅವನಿಗೆ ವಿಶೇಷ ಪಾವಿತ್ರ್ಯವಿದೆ. ಅವನು ದೇವಾಂಶಸಂಭೂತ. ಅವನೇ ಪ್ರತ್ಯಕ್ಷ ದೇವರು–ಇಂಥ ಹಲವು ನಂಬಿಕೆಗಳು ಪ್ರಪಂಚದ ವಿವಿಧ ಭಾಗಗಳಲ್ಲಿ ಬೆಳೆದುವು. ಈ ನಂಬಿಕೆಗಳನ್ನು ರಾಜರೂ, ಅವರ ಬೆಂಬಲಿಗರೂ ಎಲ್ಲ ರೀತಿಗಳಿಂದ ಬೆಳೆಸಿದರು. ಇವು ಸ್ಥಿರಗೊಳ್ಳುವಂತೆ ಹಲವಾರು ಪದ್ಧತಿಗಳನ್ನೂ ಸಂಪ್ರದಾಯಗಳನ್ನೂ ಆಚರಣೆಗೆ ತಂದರು.

ಪ್ರಾಚೀನ ಈಜಿಪ್ಟಿನಲ್ಲಿ ರಾಜಪ್ರಭುತ್ವವೇ ಇದ್ದಿತು. ಕ್ರಿ. ಪೂ. 4000 ದ ಹೊತ್ತಿಗೆ ಇವರು ಒಂದು ಬಗೆಯ ಆಡಳಿತ ವ್ಯವಸ್ಥೆಯನ್ನು ರೂಪಿಸಿಕೊಂಡಿದ್ದರು. ಒಂದು ಕುಲಕ್ಕೆ ಸೇರಿದವರು ಒಂದು ಪಂಗಡವನ್ನು ಮಾಡಿಕೊಂಡು, ಒಂದು ಚಿಹ್ನೆಯನ್ನು ಸ್ವೀಕರಿಸಿ, ಒಬ್ಬ ನಾಯಕನ ಆಳ್ವಿಕೆಯನ್ನು ಒಪ್ಪಿಕೊಂಡಿದ್ದರು. ಆದರೆ ಪಂಗಡಗಳಲ್ಲಿ ಘರ್ಷಣೆ ಹೆಚ್ಚಿದಂತೆ ಎರಡು ರಾಜ್ಯಗಳಾದುವು. ಮೆನಿಸ್ ಎಂಬ ಅರಸನ ಕಾಲದಲ್ಲಿ ಒಂದು ರಾಜ್ಯ ರೂಪತಾಳಿತು. ಅರಸನನ್ನು 'ಪೆರೋ' (ಮಹಾಸೌಧದ ಪ್ರಭು) ಎಂದು ಕರೆಯುತ್ತಿದ್ದರು. (ಯೆಹೂದ್ಯರು ಇದನ್ನು ಫೆರೋ ಎಂದು ಬರೆದರು). ಇವನ ಅಧಿಕಾರಕ್ಕೆ ಮಿತಿಯೇ ಇರಲಿಲ್ಲ. ಇವನು ದೇವಾಂಶಸಂಭೂತ ಎಂಬ ನಂಬಿಕೆ ಇದ್ದಿತು. ಇವನ ಅಲಂಕಾರವನ್ನು ಪೂರ್ಣಗೊಳಿಸಲು ಇಪ್ಪತ್ತು ಮಂದಿ ಇದ್ದರಂತೆ. ಬೆಳ್ಳಿಬಂಗಾರಗಳ ರಥಗಳು ಈತನಿಗೆ. ಇವನೇ ದೇಶದ ಅತ್ಯುಚ್ಚ ನ್ಯಾಯಾಧೀಶ. ಇವನ ಸಹಾಯಕ್ಕೆ ಒಬ್ಬ ಮಂತ್ರಿ, ಆಸ್ಥಾನದಲ್ಲಿ ಅತಿ ವೃದ್ಧರಾದವರ ಸಮಾಲೋಚನಾ ಸಮಿತಿ. ಪ್ರತಿ ಮನುಷ್ಯನಲ್ಲಿ ಅವನ ದೇಹದಂತೆಯೆ ಕಾಣುವ 'ಕಾ' ಎಂಬ ಪ್ರತಿಬಿಂಬವಿರುತ್ತದೆ, ದೇಹ ನಾಶವಾದರೂ ಇದು ನಾಶವಾಗುವುದಿಲ್ಲ ಎಂದು ಈಜಿಪ್ಟಿನವರ ನಂಬಿಕೆ. ದೇಹವನ್ನು ಹಾಗೆಯೇ ಉಳಿಸಿದರೆ 'ಕಾ' ಉಳಿಯುವುದು ಸುಲಭ ಎಂದು, ಫೆರೋಗಳ ದೇಹಗಳನ್ನು ರಕ್ಷಿಸುವುದಕ್ಕಾಗಿ ಪಿರಮಿಡ್ಡುಗಳನ್ನು ಕಟ್ಟಿದರು. ರಾಜಮನೆತನ ಅತಿ ಪವಿತ್ರವಾದದ್ದು ಎಂಬ ನಂಬಿಕೆ ಬೆಳೆದು ಬಂದಿತ್ತು. ಆದುದರಿಂದ ರಾಜಮನೆತನದವರು ಇತರ ಮನೆತನಗಳವರನ್ನು ಮದುವೆಯಾಗುತ್ತಿರಲಿಲ್ಲ. ಅಣ್ಣ–ತಂಗಿ, ಅಕ್ಕ–ತಮ್ಮ ರಾಜಮನೆತನದಲ್ಲಿ ಮದುವೆಯಾದದ್ದೂ ಉಂಟು.

ಆಶ್ಚರ್ಯದ ಸಂಗತಿ ಎಂದರೆ ಈ ದೇಶದಲ್ಲಿ ಪೋಲಿಸರಿರಲಿಲ್ಲ. ಶಾಲೆಯಲ್ಲಿನ ವಿದ್ಯಾಭ್ಯಾಸ, ಮತಬೋಧಕರ ಉಪದೇಶ ಎರಡರಿಂದಲೂ ಜನರಿಗೆ ಫೆರೋನಲ್ಲಿ ಅನನ್ಯ ಭಕ್ತಿ ಭಯ ಬೆಳೆಯುವಂತಾಗಿತ್ತು. (ವಿದ್ಯಾಭ್ಯಾಸ ಕ್ರಮವನ್ನೂ ಮತವನ್ನೂ ಅಧಿಕಾರದಲ್ಲಿರುವವರು ಹೇಗೆ ಬಳಸಿಕೊಳ್ಳಬಹುದೆಂಬುದನ್ನು ಪ್ರಾಚೀನ ಈಜಿಪ್ಟಿನಿಂದ ಹಿಟ್ಲರನ ಜರ್ಮನಿಯವರೆಗೆ ನಾವು ಕಾಣುತ್ತೇವೆ. ಆಧುನಿಕ ಚೀನದಂಥ ರಾಷ್ಟ್ರದಲ್ಲಿ ವಿದ್ಯಾಭ್ಯಾಸದ ಗುರಿ ಒಂದೇ–ಆಳುವ ಪಕ್ಷಕ್ಕೆ ಮನಸ್ಸನ್ನು ಸಮರ್ಪಿಸುವಂತೆ ಮಾಡುವುದು). ಆಡಳಿತ ಬಿಗಿಯಾಗಿದ್ದಿತು, ಸುವ್ಯವಸ್ಥಿತವಾಗಿದ್ದಿತು. ದೊಡ್ಡ ಅಧಿಕಾರವರ್ಗ ಆಡಳಿತವನ್ನು ನಡೆಸುತ್ತಿತ್ತು. ಬರಹಬಲ್ಲ ಗುಮಾಸ್ತರು ಆದಾಯತೆರಿಗೆಯ ಲೆಕ್ಕಗಳನ್ನು ಪರಿಶೀಲಿಸುತ್ತಿದ್ದರು (ಆದಾಯತೆರಿಗೆಯದು ಇಷ್ಟು ಹಳೆಯ ಚರಿತ್ರೆ), ಜನಗಣತಿ ಮಾಡುತ್ತಿದ್ದರು. ನೈಲ್ ನದಿಯ ನೀರಿನ ಮಟ್ಟವನ್ನು ಅಳತೆಮಾಡಿ ಬರುವ ಬೆಳೆಯ ಅಂದಾಜನ್ನು ಸಿದ್ಧಪಡಿಸುವ ಅಧಿಕಾರಿಗಳಿದ್ದರು. ನ್ಯಾಯಾಲಯಗಳಿಗೆ ಮಾರ್ಗದರ್ಶನ ಮಾಡಲು ನಿಯಮಗಳಿದ್ದುವು: ದಂಡ ವಿಧಿ, ವ್ಯವಹಾರ ವಿಧಿ ಎರಡೂ ಪ್ರಚಾರದಲ್ಲಿದ್ದುವು. (ಪ್ರಪಂಚದ ಚರಿತ್ರೆಯಲ್ಲೇ ಮೊಟ್ಟಮೊದಲನೆಯ ನ್ಯಾಯ

ಸಂಬಂಧವಾದ ದಾಖಲೆ ಎಂದರೆ ಪ್ರಾಚೀನ ಈಜಿಪ್ಟಿನಲ್ಲಿ ಆಸ್ತಿಯ ಹಕ್ಕನ್ನು ಕುರಿತ ಬರಹ; ಇದು ಬ್ರಿಟಿಷ್ ವಸ್ತುಪ್ರದರ್ಶನಾಲಯದಲ್ಲಿದೆ.) ಕಕ್ಷಿ–ಪ್ರತಿಕಕ್ಷಿಗಳಿಬ್ಬರೂ ತಮ್ಮ ವಾದಪ್ರತಿವಾದ, ಉತ್ತರ–ಪ್ರತ್ಯುತ್ತರಗಳನ್ನೆಲ್ಲ ಬರೆದುಕೊಡಬೇಕಾಗಿತ್ತು. ಸುಳ್ಳು ಸಾಕ್ಷಿಗೆ ಮರಣ ದಂಡನೆಯೇ ಶಿಕ್ಷೆ.

ಪ್ರಾಚೀನ ಈಜಿಪ್ಟಿನ ಆರ್ಥಿಕ ವ್ಯವಸ್ಥೆ ಕೃಷಿ, ಕೈಗಾರಿಕೆ ಎರಡನ್ನೂ ಹೊಂದಿಕೊಂಡಿದ್ದಿತು. ನದಿಯ ನೀರು ಉಕ್ಕಿ ಇಳಿದಾಗ ಆ ಪ್ರದೇಶದಲ್ಲಿ ರೈತರು ಬೀಜಗಳನ್ನು ಬಿತ್ತಿ ಹಂದಿಗಳನ್ನು ಬಿಟ್ಟು ಮಣ್ಣನ್ನು ತುಳಿಸುತ್ತಿದ್ದರಂತೆ. ಇಲ್ಲಿಯದು ಊಳಿಗಮಾನ್ಯ ಪದ್ಧತಿ. ನೆಲವೆಲ್ಲ 'ಫರೋ'ಗೆ ಸೇರಿದ್ದು, ಅವನ ಕೃಪೆಯಿಂದ ಶ್ರೀಮಂತವರ್ಗಕ್ಕೆ ಸೇರಿದ್ದು. ಬಡ ರೈತ ತನ್ನದೆಂದು ಇದನ್ನು ಕರೆದುಕೊಳ್ಳುವಂತಿರಲಿಲ್ಲ. ಹೆಸರಿಗೆ ಅವನು ಸ್ವತಂತ್ರ. ಕ್ಷಾಮವೊ ಕಳ್ಳಕಾಕರ ಕಾಟವೊ ಏನೇ ಆಗಲಿ ಅವನು ರಾಜನಿಗೆ ಕಂದಾಯ ಸಲ್ಲಿಸಬೇಕು. ಇಲ್ಲವಾದರೆ ಅವನನ್ನೂ ಅವನ ಹೆಂಡತಿಯನ್ನೂ ರಾಜದೂತರು ನೀರಿಗೆ ಎಸೆಯುತ್ತಿದ್ದರು. ರಾಜನು ಅಪ್ಪಣೆ ಮಾಡಿದಾಗ ಅವರು ಬಿಟ್ಟಿ ಕೆಲಸ ಮಾಡಲು ಸಿದ್ಧರಾಗಿರಬೇಕಾಗಿತ್ತು. (ಊಳಿಗಮಾನ್ಯಪದ್ಧತಿ ಪ್ರಪಂಚದಲ್ಲಿ ಇಪ್ಪತ್ತನೆಯ ಶತಮಾನದವರೆಗೆ ಉಳಿದುಕೊಂಡು ಬಂದಿದೆ. ಬಡ ರೈತನ ಕಷ್ಟದಾರಿದ್ರ್ಯಗಳು ನಾಗರಿಕತೆಯ ಚರಿತ್ರೆಯ ಭಾಗವಾಗಿ ಉಳಿದಿವೆ. ಇಂದಾದರೂ ಪ್ರಪಂಚದ ಎಲ್ಲ ಭಾಗಗಳಲ್ಲಿ ದೇಶಕ್ಕೆ ಆಹಾರ ನೀಡುವ ರೈತನಿಗೆ ನ್ಯಾಯ ಲಭಿಸಿದೆ ಎನ್ನುವಂತಿಲ್ಲ.) ಸ್ವಲ್ಪಮಟ್ಟಿಗೆ ತಾಮ್ರ ಇಲ್ಲಿ ದೊರೆಯುತ್ತಿತ್ತು. ಚಿನ್ನ ಹೆಚ್ಚು ಪ್ರಮಾಣದಲ್ಲಿ ಸಿಕ್ಕುತ್ತಿತ್ತು. ಕಬ್ಬಿಣವನ್ನು ಆಮದು ಮಾಡಿಕೊಳ್ಳುತ್ತಿದ್ದರು. ತಾಮ್ರವನ್ನೂ ತವರವನ್ನೂ ಸೇರಿಸಿ ಕಂಚು ಮಾಡುವುದನ್ನು ತಿಳಿದಿದ್ದರು. ನಾಲ್ಕು ಸಾವಿರ ವರ್ಷಗಳ ಹಿಂದೆ ಅವರು ಮಾಡಿದ ಬಟ್ಟೆ, ಇಂದು ಯಂತ್ರದಿಂದ ಮಾಡಿದ ಅತ್ಯುತ್ತಮ ಬಟ್ಟೆಗಿಂತ ಹೆಚ್ಚು ನಯವಾಗಿರುತ್ತಿದ್ದಿತು.

ಹಲವು ಪ್ರಾಚೀನ ರಾಜ್ಯಗಳಿಗೆ ಅಂಟಿದ್ದ ಶಾಪ, ಹತ್ತೊಂಬತ್ತನೆಯ ಶತಮಾನದವರೆಗೆ ಅಮೆರಿಕದ ಸಂಯುಕ್ತ ಸಂಸ್ಥಾನಕ್ಕೆ ಅಂಟಿದ್ದ ಶಾಪ, ಈಜಿಪ್ಟನ್ನೂ ಕಾಡುತ್ತಿತ್ತು. ಇದು ಗುಲಾಮಗಿರಿ. ಯುದ್ಧಗಳಲ್ಲಿ ಸೆರೆಸಿಕ್ಕಿದ ನಿರ್ಭಾಗ್ಯರೇ ಗುಲಾಮರಾಗಿದ್ದರು; ಇವರ ಶ್ರಮ ಎಷ್ಟೋ ಮಹಾಶಿಲ್ಪಗಳ ರಚನೆಗೆ ಮುಡಿಪಾಯಿತು. ಮೂರನೆಯ ರ್‍ಯಾಮ್‌ಸಿಸ್ ಎನ್ನುವ ರಾಜ ದೇವಸ್ಥಾನಗಳಿಗೆ ಒಂದು ಲಕ್ಷದ ಹದಿಮೂರು ಸಾವಿರ ಗುಲಾಮರನ್ನು ಕಾಣಿಕೆ ಕೊಟ್ಟನಂತೆ. ಆಗಾಗ ಗುಲಾಮರು ದಂಗೆ ಏಳುತ್ತಿದ್ದರೆಂದು ಕಾಣುತ್ತದೆ. ಚರಿತ್ರೆಯ ಮೊದಲನೆಯ ನಾಗರಿಕತೆಯಲ್ಲಿಯೇ ದಬ್ಬಾಳಿಕೆಯ ಪ್ರವೃತ್ತಿಯನ್ನೂ ಕಾಣುತ್ತೇವೆ; ಸ್ವಾತಂತ್ರ್ಯದ ಪ್ರೇಮವನ್ನೂ ಕಾಣುತ್ತೇವೆ. ಸೋಜಿಗವೆಂದರೆ ಈಗಲೂ ಎರಡನ್ನೂ ದಕ್ಷಿಣ ಆಫ್ರಿಕದಲ್ಲಿ, ಪೋರ್ಚುಗಲಿನ ಕೆಲವು ವಸಾಹತುಗಳಲ್ಲಿ ಕಾಣುತ್ತೇವೆ.

ಧಾರ್ಮಿಕ ನಂಬಿಕೆಗಳು ಈಜಿಪ್ಟಿನ ಗಾಳಿಯಲ್ಲಿಯೆ ಬೆರೆತು ಹೋಗಿದ್ದುವು. ಅವರಿಗೆ ಹಲವು ದೇವತೆಗಳಲ್ಲಿ ನಂಬಿಕೆ. ನಕ್ಷತ್ರಗಳು ದೇವತೆಗಳೆಂದು ಅವರು ಭಾವಿಸಿದ್ದರು. ದೇವತೆಗಳನ್ನು ತಿನ್ನುವ ದೇವತೆಗಳು ಬೇರೆ. ಇವರಲ್ಲಿ ಒಬ್ಬರು ಚಂದ್ರನನ್ನು ಬಾಯಿಗೆ ಹಾಕಿಕೊಂಡಾಗ ಇತರ ದೇವತೆಗಳು ಕಕ್ಕಿಸುವರು. ಅಲ್ಲಿಯವರೆಗೆ ಚಂದ್ರಗ್ರಹಣ. ಎಲ್ಲರನ್ನೂ ಮೀರಿಸಿದ ದೇವತೆ ಸೂರ್ಯ. ಅವನಿಗೆ ಹಲವು ಹೆಸರುಗಳು, ಹಲವು ರೂಪಗಳು. ಬಹು ಮಟ್ಟಿಗೆ ಇವರ ಪೌರಾಣಿಕ ಕಥೆಗಳು ಸೂರ್ಯ ಮತ್ತು ಭೂಮಿಗೆ ಜನರ ಕೃತಜ್ಞತೆಯನ್ನು ತೋರಿಸುವುವು. ಹಲವು ಪ್ರಾಚೀನ ನಾಗರಿಕತೆಗಳ ಧರ್ಮಗಳನ್ನು ಅಭ್ಯಾಸಮಾಡಿದಾಗ ನಾವು ಕಾಣುವುದು ಇದನ್ನೆ—ಆಹಾರ ನೀಡುವ ಭೂಮಿ, ಅಥವಾ ಬೆಳಕು ಶಾಖ ನೀಡುವ ಸೂರ್ಯ, ಭೂಮಿಯನ್ನು ಫಲಪ್ರದ ಮಾಡುವ ನದಿ ಇವು ಪವಿತ್ರ ದೇವತೆಗಳು. ಈಜಿಪ್ಟಿನಲ್ಲಿ ರ ಅಥವಾ ಹೋರಸ್, ಭಾರತದಲ್ಲಿ ಆದಿತ್ಯ, ಸೂರ್ಯ; ಈಜಿಪ್ಟಿನಲ್ಲಿ ಐಸಿಸ್, ಗ್ರೀಸಿನಲ್ಲಿ ಡೆಮಿಟರ್, ಭಾರತದಲ್ಲಿ ಕಾಳಿ; ಈಜಿಪ್ಟಿನಲ್ಲಿ ನೈಲ್‌ನದಿ ಆಸಿರಿಸ್ ಎಂಬ ಹೆಸರಿನಿಂದ ಪವಿತ್ರ, ಭಾರತದಲ್ಲಿ ಗಂಗಾನದಿ ಪವಿತ್ರ. ಐಸಿಸ್ ಹೋರಸ್ (ಸೂರ್ಯ)ನಿಗೆ ಜನ್ಮವಿತ್ತಳೆಂಬ ನಂಬಿಕೆಯಿಂದ, ಕುದುರೆ ಲಾಯದಲ್ಲಿ ಅವಳು ತನ್ನ ಮಗುವನ್ನು ಲಾಲಿಸುತ್ತಿರುವ ವಿಗ್ರಹಗಳನ್ನು ಪೂಜಿಸುತ್ತಿದ್ದರು. ಈ ನಂಬಿಕೆಗಳು ಕ್ರೈಸ್ತಮತದ ಮೇಲೆ ಪ್ರಭಾವ ಬೀರಿದುವೆಂದು ಕೆಲವರು ವಿದ್ವಾಂಸರ ನಂಬಿಕೆ, ಯೇಸು ಕ್ರಿಸ್ತನ ಅನುಯಾಯಿಗಳಲ್ಲಿ ಹಲವರು ಐಸಿಸ್–ಹೋರಸ್ ವಿಗ್ರಹಗಳಿಗೆ ಪ್ರಾರ್ಥನೆ ಮಾಡುತ್ತಿದ್ದರಂತೆ. ಸೆರೆಮನೆಯಲ್ಲಿ ಕೃಷ್ಣನನ್ನು ಹೆತ್ತ ದೇವಕಿಯ ನೆನಪು ಬರುತ್ತದೆ ಈ ಕಥೆಯಿಂದ. ಹಲವು ಗಿಡಗಳು ದೇವತೆಗಳಿಗೆ ಅರ್ಪಿತ ಎಂದು ಪವಿತ್ರ. ಹಲವು ಪ್ರಾಣಿಗಳನ್ನೂ ಇವರು ಪೂಜಿಸುತ್ತಿದ್ದರು. ಮೊಸಳೆ, ಮೇಕೆ, ಬೆಕ್ಕು, ನಾಯಿ, ಬಾತು, ಕೋಳಿಮರಿ, ಗಿಡುಗ, ಹಾವು ಇವುಗಳನ್ನು ಒಂದಲ್ಲ ಒಂದು ಪಂಗಡ ಭಕ್ತಿಯಿಂದ ಪೂಜಿಸುತ್ತಿತ್ತು. ಜನರಿಗೆ ಮಹಾಪುರುಷರೆಂದು ಕಂಡವರು ಕಾಲಕಳೆದಂತೆ ದೇವತೆಗಳಾದುದೂ ಉಂಟು. ಫರೋ ದೇವತೆಗಳ ಗಣಕ್ಕೆ ಸೇರಿದವನು ಎಂದು ನಂಬಿಕೆಯಿತ್ತು. ಅರ್ಚಕ ವರ್ಗವೊಂದು ಹುಟ್ಟಿಕೊಂಡು ಪ್ರಬಲವಾಯಿತು. ಇವರಲ್ಲಿ ತಂದೆಯಿಂದ ಮಗುವಿಗೆ ಈ ಉದ್ಯೋಗ ಸಾಗುತ್ತಿತ್ತು. ದೇವರ ಆರಾಧನೆಗೆಂದು ಹುಟ್ಟಿದ ವರ್ಗ ಬಲಿಷ್ಠವಾಗುವುದು ಪ್ರಪಂಚದ ಚರಿತ್ರೆಯಲ್ಲಿ ಮತ್ತೆ ಮತ್ತೆ ಕಂಡುಬರುತ್ತದೆ. ಎಲ್ಲ ಮತಗಳಲ್ಲಿಯೂ ಸಂಪ್ರದಾಯ, ಆಚಾರ, ಪದ್ಧತಿಗಳು ಮುಖ್ಯವಾಗಿ, ಅರ್ಚಕವರ್ಗ ಪ್ರಬಲವಾಗುತ್ತದೆ. ಇದಕ್ಕೆ ವಿರೋಧ ಬಂದು ಹೊಸ ಶಾಖೆಗಳು ಕಾಣಿಸಿಕೊಳ್ಳುತ್ತವೆ. ಒಮ್ಮೊಮ್ಮೆ ಈ ವಿರೋಧ ಯಶಸ್ವಿಯಾಗುತ್ತದೆ. ಒಮ್ಮೊಮ್ಮೆ ಇಲ್ಲ. ಮಾರ್ಟಿನ್ ಲೂಥರ್ (1483–1546) ಇಂಥ ವಿರೋಧವನ್ನು ಪ್ರಕಟಿಸಿದ. ಪರಿಣಾಮವಾಗಿ ಬಹು ಕಷ್ಟ ಪಡಬೇಕಾಯಿತು. ಆದರೆ ಪ್ರಾಟೆಸ್ಟೆಂಟ್ ಮತ ಉಳಿಯಿತು. ಈಜಿಪ್ಟಿನಲ್ಲಿ ಕ್ರಿ. ಪೂ. 1380ರಲ್ಲಿ ಪಟ್ಟಕ್ಕೆ ಬಂದ ನಾಲ್ಕನೆಯ ಹೊಟೆಪ್ 'ಇಖ್‌ನಟಾನ್' ಎಂದು ಪ್ರಸಿದ್ಧಿಗೆ ಬಂದ. ಅರ್ಚಕ ವರ್ಗದ ದುರಾಚಾರವನ್ನೂ ಪ್ರಾಬಲ್ಯವನ್ನೂ ಕಂಡು ಸುಧಾರಣೆಯ ತವಕದಿಂದ ಹಲವು ಕ್ರಮಗಳನ್ನು ಕೈಗೊಂಡ. ಒಂದೆ ಪೂಜೆ ಕೈಗೊಳ್ಳುತ್ತಿದ್ದ ದೇವತೆಗಳನ್ನೆಲ್ಲ ಧಿಕ್ಕರಿಸಿ, ಅಟಾನ್ (ಸೂರ್ಯದೇವ) ಒಬ್ಬನೆ ದೇವರೆಂದು ಸಾರಿದ. ('ಇಖ್‌ನಟಾನ್'

ಎಂದರೆ 'ಅಟಾನನಿಗೆ ತೃಪ್ತಿಯಾಯಿತು' ಎಂದು.) ಪ್ರಾಚೀನ ಈಜಿಪ್ಟಿನ ಚರಿತ್ರೆಯಲ್ಲಿ ಪ್ರಕೃತಿ ದೇವತೆಗಳ ಪೂಜೆಯನ್ನು ಕಾಣುತ್ತೇವೆ. ಹಲವು ದೇವತೆಗಳ ಪೂಜೆ, ವಿಗ್ರಹಾರಾಧನೆ, ಪ್ರಾಣಿ ಬಲಿ, ಮನುಷ್ಯರ ಬಲಿ ಎಲ್ಲವೂ ಅಲ್ಲಿವೆ. ದೇವರೊಬ್ಬನೇ ಎಂಬ ಕಲ್ಪನೆಯನ್ನೂ ನಾವು ಕಾಣುತ್ತೇವೆ. ಇಬ್‌ನಟಾನನ ಸುಧಾರಣೆಗಳು ಸಂಪ್ರದಾಯದಲ್ಲಿ ಮುಳುಗಿ ತೇಲುತ್ತಿದ್ದ ಅವನ ಪ್ರಜೆಗಳಿಗೆ ದಿಗ್ಭ್ರಮೆಯನ್ನು ಉಂಟುಮಾಡಿದುವು. ಅರಸರೂ ಶ್ರೀಮಂತರೂ ಹಲವರು ಪತ್ನಿಯರನ್ನು ಮದುವೆಯಾಗುತ್ತಿದ್ದ ಕಾಲದಲ್ಲಿ ಅವನಿಗೆ ಒಬ್ಬಳೇ ಹೆಂಡತಿ. ಇಬ್‌ನಟಾನನ ಒಳ್ಳೆಯತನವೆ ಅವನಿಗೆ ಮುಳಿವಾಯಿತು. ಸಾಮ್ರಾಜ್ಯದ ಹಲವು ಭಾಗಗಳು ದಂಗೆ ಎದ್ದು ಸ್ವತಂತ್ರವಾದುವು. ಖಜಾನೆ ಬರಿದಾಯಿತು. ನಿರಾಸೆಯಿಂದ ತನ್ನ ಮೂವತ್ತನೆಯ ವಯಸ್ಸಿನಲ್ಲಿ ಆತ ತೀರಿಕೊಂಡ. ಅವನ ಅನಂತರ ಅವನ ಅಳಿಯ ತತಾನ್‌ಖಮನ್ ಅರಸನಾದ. ಹಿಂದಿನ ದೇವತೆಗಳ ಪೂಜೆಯನ್ನು ಪ್ರಾರಂಭಿಸಿದ. ಅರ್ಚಕವರ್ಗ ಹಿಗ್ಗಿತು. ಮೂರನೆಯ ರ್‍ಯಾಮ್‌ಸಿಸನ ಕಾಲದಲ್ಲಿ ಈ ಅರ್ಚಕವರ್ಗಕ್ಕೆ ಒಂದು ಲಕ್ಷಕ್ಕೂ ಮೀರಿದ ಗುಲಾಮರಿದ್ದರು. ದೇಶದ ಫಲವತ್ತಾದ ಭೂಮಿಯಲ್ಲಿ ಏಳರಲ್ಲಿ ಒಂದು ಭಾಗ ಅವರದಾಗಿತ್ತು. ಅವರು ತೆರಿಗೆಯನ್ನು ನೀಡಬೇಕಾಗಿರಲಿಲ್ಲ. ಮೂರನೆಯ ರ್‍ಯಾಮ್‌ಸಿಸನು ಅವರಿಗೆ 32,000 ಕಿಲೊಗ್ರಾಂ ಬಂಗಾರವನ್ನೂ ಹತ್ತು ಲಕ್ಷ ಕಿಲೊಗ್ರಾಂ ಬೆಳ್ಳಿಯನ್ನೂ ಕೊಟ್ಟನಂತೆ. ಕ್ರಮೇಣ ಅರ್ಚಕವರ್ಗವೇ ಪ್ರಬಲವಾಗಿ, ಒಬ್ಬ ಅರ್ಚಕ ತಾನೇ ಚಕ್ರವರ್ತಿಯಾದ. ಯೂರೋಪಿನಲ್ಲಿ ಎಂಟರಿಂದ ಹದಿನಾಲ್ಕನೆಯ ಶತಮಾನಗಳವರೆಗೆ ಮತಾಧಿಕಾರಿಗಳು ರಾಜ್ಯವನ್ನು ತಮ್ಮ ಹತೋಟಿಯಲ್ಲಿಟ್ಟುಕೊಂಡಿದ್ದುದನ್ನೂ ಕ್ರಾಂತಿಗೆ ಮೊದಲಿನ ಫ್ರಾನ್ಸ್ ಮತ್ತು ರಷ್ಯಗಳಲ್ಲಿ ಮತಾಧಿಕಾರಿಗಳಿಗಿದ್ದ ಪ್ರಾಬಲ್ಯವನ್ನೂ ಇದು ನೆನಪಿಗೆ ತರುತ್ತದೆ. ಮತ ಎಷ್ಟೇ ಒಳ್ಳೆಯದಾದರೂ ಅದರ ಹೆಸರಿನಲ್ಲಿ ಪ್ರಪಂಚದಲ್ಲಿ ಎಷ್ಟು ಅನ್ಯಾಯಗಳು ನಡೆಯುತ್ತವೆ ಎನ್ನುವುದನ್ನು ಮತ್ತೆ ಮತ್ತೆ ನೋಡುತ್ತೇವೆ.



ಅರಸು ತತಾನ್‌ಖಮನ್

ಈ ನಾಗರಿಕತೆಯಲ್ಲಿ ರಾಜನೂ ಶ್ರೀಮಂತರೂ ಅನೇಕ ಮಂದಿ ಹೆಂಗಸರನ್ನು ಮದುವೆಯಾಗುತ್ತಿದ್ದರು. (ಭಾರತಕ್ಕೆ ಸ್ವಾತಂತ್ರ್ಯ ಬರುವ ಮೊದಲು ಇದ್ದ ದೇಶೀಯ ಸಂಸ್ಥಾನಗಳ ಪ್ರಭುಗಳಲ್ಲಿ ಹಲವರು ಹೀಗೆಯೇ ವರ್ತಿಸುತ್ತಿದ್ದರು.) ಆದರೆ ಸಾಮಾನ್ಯ ಜನರಲ್ಲಿ ಗಂಡಸು ಒಬ್ಬಳನ್ನೇ ಮದುವೆಯಾಗುತ್ತಿದ್ದ. ವಿಚ್ಛೇದನ ಸುಲಭವಾಗಿರಲಿಲ್ಲ. ಹೆಂಗಸರಿಗೆ ಗೌರವದ ಸ್ಥಾನವಿತ್ತು. ತಕ್ಕಷ್ಟು ಸ್ವಾತಂತ್ರ್ಯವಿತ್ತು. ಸಾರ್ವಜನಿಕ ಸ್ಥಳಗಳಲ್ಲಿ ಅವರು ಕಾಣಿಸಿಕೊಳ್ಳುತ್ತಿದ್ದರು. (ಕೆಮಾಲ್ ಅಟಾಟರ್ಕ್ ಈ ಸ್ವಾತಂತ್ರ್ಯವನ್ನು ತುರ್ಕಿಯ ಹೆಂಗಸರಿಗೆ ನೀಡಿದ.) ಹೆಂಗಸರು ಆಸ್ತಿಯನ್ನು ಹೊಂದಿರಬಹುದಾಗಿತ್ತು. (ಹತ್ತೊಂಬತ್ತನೆಯ ಶತಮಾನದವರೆಗೆ ಯೂರೋಪಿನಲ್ಲಿ ಈ ಹಕ್ಕಿರಲಿಲ್ಲ.) ಆಸ್ತಿ ತಾಯಿಯ ಕಡೆಯಿಂದ ಸಾಗುತ್ತಿತ್ತು. ಈಜಿಪ್ಟಿನ ಒಬ್ಬ ಬರಹಗಾರ ಹೇಳುವ ಮಾತುಗಳು ಯಾವ ದೇಶದ ಯಾವ ಕಾಲದ ಬರಹಗಾರನಾದರೂ ಹೇಳಬಹುದಾದಂಥವು: "ಎಂದಿಗೂ ನಿನ್ನ ತಾಯಿಯನ್ನು ಮರೆಯಬೇಡ ............ ಎಷ್ಟು ತಿಂಗಳು ನಿನ್ನನ್ನು ಹೊಟ್ಟೆಯಲ್ಲಿ ಹೊತ್ತಿದ್ದಳು ಅವಳು ! ನೀನು ಹುಟ್ಟಿದ ಮೇಲೆ ಮೂರು ವರ್ಷ ನಿನ್ನನ್ನು ಎತ್ತಿಕೊಂಡು ಓಡಾಡಿದಳು ಅವಳು. ನಿನಗೆ ಹಾಲುಣಿಸಿದವಳು ; ನಿನ್ನ ಹೊಲಸಿಗೆ ಬೇಸರಿಸದೆ ಲಾಲಿಸಿ ಪಾಲಿಸಿದಳು ಅವಳು".

ಹಲವು ರೀತಿಗಳಲ್ಲಿ ಈಜಿಪ್ಟಿನ ಅಂದಿನ ಜನರ ರೀತಿಗೂ ಇಂದಿನ ಜಗತ್ತಿನ ರೀತಿಗೂ ಹೆಚ್ಚು ವ್ಯತ್ಯಾಸವಿಲ್ಲ. ಹೆಂಗಸರು ಕೂದಲನ್ನು ಸಣ್ಣಗಿರುವಂತೆ ಕತ್ತರಿಸುತ್ತಿದ್ದರು. ಕೆನ್ನೆಗಳಿಗೆ ತುಟಿಗಳಿಗೆ ಬಣ್ಣ ಹಚ್ಚುತ್ತಿದ್ದರು : ಉಗುರುಗಳಿಗೂ ಬಣ್ಣ ಹಚ್ಚುತ್ತಿದ್ದರು. ಅಲಂಕಾರದ ಬಣ್ಣಗಳು, ಕನ್ನಡಿ, ಕೂದಲಿನ ಪಿನ್, ಹಣಿಗೆ, ರೇಜರುಗಳನ್ನು ಶವಗಳೊಡನೆಯೂ ಹೂತಿಡುತ್ತಿದ್ದರು. ಅಲ್ಲಿನ ಸಮಾಧಿಗಳಲ್ಲಿ ದೊರೆತ ಕೆಲವು 'ಟ್ಯೂಬು' ಗಳಲ್ಲಿ ಅಂದು ಕಣ್ಣಿಗೆ ಬಳಸುತ್ತಿದ್ದ ಬಣ್ಣದ ಸಾಮಗ್ರಿ ಉಳಿದಿದೆಯಂತೆ. ಸುವಾಸನಾ ದ್ರವ್ಯಗಳ ಬಳಕೆ ಸಾಮಾನ್ಯವಾಗಿತ್ತು. ಜನಸಾಮಾನ್ಯರಲ್ಲಿ ಹೆಂಗಸರೂ ಗಂಡಸರೂ ಮೊಳಕಾಲಿನಿಂದ ಸೊಂಟದವರೆಗೆ ಮಾತ್ರ ಬಟ್ಟೆ ಧರಿಸುತ್ತಿದ್ದರು. ಗಂಡಸರೂ ಹೆಂಗಸರೂ ಒಡವೆಗಳನ್ನು ಧರಿಸುತ್ತಿದ್ದರು. ಗಂಡಸರೂ ಕಿವಿಯೋಲೆಗಳನ್ನು ಧರಿಸುತ್ತಿದ್ದರು.

ಕಲೆಗಳ ಬೆಳವಣಿಗೆ ಇಲ್ಲಿ ಗಮನಾರ್ಹವಾಗಿತ್ತು. ನಮಗೆ ದೊರೆತಿರುವ ಮೊದಲನೆಯ ಕಥೆ ಈಜಿಪ್ಟಿನದು. ಕವಿಗಳು ಹಲವರು ಕವನಗಳನ್ನು ಬರೆದರು. ಅರಸ ಇಬ್‌ನಟಾನನೇ ಕವಿಯಾಗಿದ್ದ. ಪ್ರಾಚೀನ ಈಜಿಪ್ಟಿನ ಹಲವಾರು ಪ್ರೇಮಗೀತೆಗಳು ಉಳಿದಿರುವುದಿವೆ.



ಸ್ಫಿಂಕ್ಸ್ ವಿಗ್ರಹ

ಸಮಾಧಿಗಳ ನಿರ್ಮಾಣದಿಂದ ಪ್ರಾರಂಭವಾದ ಶಿಲ್ಪಕಲೆ ಈಜಿಪ್ಟಿನಲ್ಲಿ ಅದ್ಭುತ ಪಿರಮಿಡ್‌ಗಳನ್ನು ನಿರ್ಮಿಸಿತು. ಕಾರ್ನಾಕ್, ಲಕ್ಸರ್ ಮತ್ತಿತರ ಸ್ಥಳಗಳಲ್ಲಿ ಪ್ರಾಚೀನ ಈಜಿಪ್ಟಿನವರು ನಿರ್ಮಿಸಿದ ದೇವಸ್ಥಾನಗಳು ಇಂದಿಗೂ ನಮ್ಮನ್ನು ಬೆರಗುಗೊಳಿಸುತ್ತವೆ. ಅವರು ನಿರ್ಮಿಸಿದ ಸ್ಫಿಂಕ್ಸ್ ವಿಗ್ರಹಗಳು, ಫೆರೋಗಳ ವಿಗ್ರಹಗಳು ಅಷ್ಟೇ ಆಶ್ಚರ್ಯಕರವಾದುವು.

ಈಜಿಪ್ಟಿನ ಜನ ಎಲ್ಲಿಂದ ಬಂದರೋ ತಿಳಿಯದು. ಕ್ರಿ. ಪೂ. 4241ರಲ್ಲಿ ಇವರ ಪಂಚಾಂಗ (ಕ್ಯಾಲೆಂಡರ್) ಪ್ರಾರಂಭವಾಯಿತೆಂದು ತೋರುತ್ತದೆ. ಕ್ರಿ. ಪೂ. 4000ದ ಹೊತ್ತಿಗೆ ವ್ಯವಸ್ಥಿತ ಆಡಳಿತ ನೆಲೆಗೊಂಡಿತು. ಅಲ್ಲಿಂದ ಕ್ರಿ. ಪೂ. 1225ರಲ್ಲಿ ಎರಡನೆಯ ರ್ಯಾಮ್‌ಸೆಸನ ನಿಧನದವರೆಗೆ ಅಸಾಧಾರಣ ವೈಭವದಿಂದ ಮೆರೆದ ಸಾಮ್ರಾಜ್ಯ ಈಜಿಪ್ಟಿನವರದು. ಕ್ರಮೇಣ ತನ್ನ ಶಕ್ತಿಯನ್ನೂ ವೈಭವವನ್ನೂ ಈಜಿಪ್ಟ್ ಕಳೆದುಕೊಂಡಿತು. ಲಿಬಿಯನರು, ಇಥಿಯೋಪಿಯನರು, ಅಸಿರಿಯನರು, ಗ್ರೀಕರು, ಪರ್ಷಿಯನರು ಎಲ್ಲರ ದಾಳಿಗೆ ತುತ್ತಾಗಿ ಕ್ರಿ. ಪೂ. 30ರಲ್ಲಿ ರೋಮ್ ಸಾಮ್ರಾಜ್ಯದ ಒಂದು ಪ್ರಾಂತವಾಯಿತು.

ಈಜಿಪ್ಟಿನಲ್ಲಿ ದೊರಕುವಷ್ಟು ಪ್ರಾಚೀನ ಅವಶೇಷಗಳು ಇನ್ನೆಲ್ಲಿಯೂ ದೊರೆಯುವುದಿಲ್ಲ. ಅಲ್ಲಿನ ಒಣ ಹವೆಯೂ ಇವುಗಳನ್ನು ಉಳಿಸಲು ನೆರವಾಗಿದೆ. ಒಂದು ಸಮಾಧಿಯ ಬಳಿ, ಶವವನ್ನು ಮೂರು ಸಾವಿರ ವರ್ಷಗಳ ಕೆಳಗೆ ಅದನ್ನು ಇಡುವ ಸ್ಥಳಕ್ಕೆ ಕೊಂಡೊಯ್ದು ಗುಲಾಮರ ಹೆಜ್ಜೆಗಳನ್ನು ಮರಳಿನಲ್ಲಿ ಕಂಡರಂತೆ ಪುರಾತತ್ತ್ವಶಾಸ್ತ್ರಜ್ಞರು. ಈಜಿಪ್ಟಿನ ಚರಿತ್ರೆ ಏನೂ ತಿಳಿಯದವರನ್ನು ಸಹ ಬೆರಗುಪಡಿಸುವಂಥ ಅವಶೇಷಗಳಿವೆ. ಇಲ್ಲಿನ ಭವ್ಯ ಪಿರಮಿಡ್‌ಗಳು, ಸ್ಫಿಂಕ್ಸ್ ವಿಗ್ರಹಗಳು, ಲುಕ್ಸರ್‌ನಲ್ಲಿ ರಾಣಿ ಹಾಷೆಪ್‌ಸಟಳ ಅರಮನೆ, ಕಾರ್ನಾಕದ ದೇವಾಲಯಗಳು – ಒಂದೇ, ಎರಡೇ, ಪ್ರಾಚೀನ ಈಜಿಪ್ಟಿನ ವಾಸ್ತುಶಿಲ್ಪ ಪವಾಡಗಳು! ಒಂದೊಂದರ ಭವ್ಯತೆಯನ್ನು ವರ್ಣಿಸುವುದಕ್ಕೆ ಒಂದೊಂದು ಪುಸ್ತಕ ಬರೆಯಬೇಕಾದೀತು. ಕಾರ್ನಾಕಿನಲ್ಲಿಯೇ 86,000 ವಿಗ್ರಹಗಳು ಇದ್ದುವಂತೆ ಒಂದು ಕಾಲದಲ್ಲಿ. ಅಮಾನ್ ದೇವತೆಯ ದೇವಾಲಯ ಒಂದು ಸಾವಿರ ಅಡಿ ಉದ್ದ, ಮುನ್ನೂರು ಅಡಿ ಅಗಲ. ಇದೇ ಸ್ಥಳದ ಒಂದು ದಿವ್ಯ ಭವನದಲ್ಲಿ ಬಿಸಿಲಿನ ತಾಪ ಸುಳಿಯದಂತೆ ಒಂದು ನೂರ ನಲವತ್ತು ಭೂತಾಕಾರದ ಕಂಬಗಳು, ಬಳಿಯಲ್ಲಿ ಎರಡು ಓಬಿಲಿಸ್ಕ್ ಕಲ್ಲುಕಂಬಗಳು. ಗಟ್ಟಿ ಗ್ರಾನೈಟ್‌ನಿಂದ ಮಾಡಿದ ಈ ಕಂಬಗಳ ಮೇಲ್ಭಾಗ ಬಂಗಾರದಿಂದ ಮಾಡಿದ್ದು. ಇವುಗಳ ಮಧ್ಯೆ ಸೂರ್ಯ ಕಾಣಿಸಿಕೊಂಡಾಗ ಕಾಣುವ ದೃಶ್ಯ ಮೈಮರೆಸುವಂಥದು. ರಾಣಿ ಹಾಷೆಪ್‌ಸಟಳು ಇಲ್ಲಿ ಕೆತ್ತಿಸಿದ ಒಕ್ಕಣೆಯಲ್ಲಿ ಎನ್ನುತ್ತಾಳೆ: "ಎಷ್ಟೋ ವರ್ಷಗಳಾದ ಮೇಲೆ ಈ ಸ್ಮಾರಕಗಳನ್ನು ನೋಡುವ ನೀವೆನ್ನುವಿರಿ, ಬಂಗಾರದ ಬೆಟ್ಟವನ್ನು ಹೇಗೆ ಮಾಡಿದರೋ ಅರ್ಥವೇ ಆಗುವುದಿಲ್ಲ, ಅರ್ಥವೇ ಆಗುವುದಿಲ್ಲ ಎಂದು.........ಕಾರ್ನಾಕ್ ಭೂಮಿಯಲ್ಲಿ ಸ್ವರ್ಗದ ಕ್ಷಿತಿಜ ಎಂದು ಗೊತ್ತು ನನಗೆ......... ಆದುದರಿಂದಲೇ ಇವನ್ನು ಅಲಂಕರಿಸುವುದಕ್ಕಾಗಿ ಕೊಳಗಗಟ್ಟಳೆ ಬಂಗಾರವನ್ನು ಅಳೆದುಕೊಟ್ಟಿದ್ದೇನೆ."

ಕೆಲವೇ ಶತಮಾನಗಳಲ್ಲಿ ಈಜಿಪ್ಟಿನವರು ನೀರಾವರಿಯನ್ನು ಆಶ್ಚರ್ಯಕರವಾಗಿ ಬೆಳೆಸಿದರು. ವಾಸ್ತುಶಿಲ್ಪಕಲೆ ಮತ್ತು ಶಿಲ್ಪಕಲೆಯಲ್ಲಿ ಇವರದು ಅಸಾಧಾರಣ ಸಾಧನೆ. ಪ್ರಾಚೀನ ಗ್ರೀಕರು – ಪ್ರಾಯಶಃ ಕ್ರೀಟ್‌ದ್ವೀಪದ ಮೂಲಕ—ಇವರಿಂದ ಶಿಲ್ಪ ಮತ್ತು ವಾಸ್ತುಶಿಲ್ಪ ಕಲೆಗಳನ್ನು ಕಲಿತರು. 365 ದಿನಗಳ ವರ್ಷ, 30 ದಿನಗಳ ತಿಂಗಳು – ಇವುಗಳ ಪಂಚಾಂಗವನ್ನು ಈಜಿಪ್ಟಿನವರು ರೂಪಿಸಿದರು. ಈ ಪಂಚಾಂಗಪದ್ಧತಿಯನ್ನು ಮುಂದೆ ರೋಮನರು ಮತ್ತು ಯೂರೋಪಿನ ಇತರ ಜನಾಂಗಗಳು ಬಳಸಿಕೊಂಡರು. ದೋಣಿಗಳನ್ನು ಮತ್ತು ಹಡಗುಗಳನ್ನು ಬಳಸಿ ದೂರ ದೇಶಗಳೊಡನೆ ವ್ಯಾಪಾರ ಮಾಡುತ್ತಿದ್ದರು ಇವರು. ಬಟ್ಟೆ, ಗಾಜು, ಒಡವೆಗಳು, ನಿತ್ಯಜೀವನದ ಉಪಕರಣಗಳು ಇವುಗಳ ತಯಾರಿಕೆಯಲ್ಲಿ ಅಸಾಧಾರಣ ಪ್ರಾವೀಣ್ಯ. ನಾಲ್ಕು ಸಾವಿರ ವರ್ಷಗಳ ಹಿಂದೆ ತಯಾರಾಗಿದ್ದ ಬಟ್ಟೆಗಳು ಸಮಾಧಿಗಳಲ್ಲಿ ದೊರೆತಿವೆ.

ಟೈಗ್ರಿಸ್ – ಯೂಫ್ರೆಟಿಸ್‌ಗಳ ಕಣಿವೆಯಲ್ಲಿ, ಮೆಸಪಟೇಮಿಯಾ (ಈಗಿನ ಇರಾಕ್) ಪ್ರದೇಶದಲ್ಲಿ ಸುಮೇರಿಯನರೆಂಬ ಜನ ನಾಗರಿಕತೆಯನ್ನು ಬೆಳೆಸಿಕೊಂಡವರು. ಹತ್ತೊಂಬತ್ತನೆಯ ಶತಮಾನದ ಕಡೆಯ ವರ್ಷಗಳವರೆಗೆ ಇವರ ವಿಷಯ ಏನೂ ತಿಳಿದಿರಲಿಲ್ಲ.

ಇನ್ನೂ ಇಲ್ಲಿ ಅಧ್ಯಯನ ಮಾಡಬೇಕಾದ ಸಾಕ್ಷ್ಯವಿದೆ. ನೆಲವನ್ನು ಅಗೆದಂತೆ ಪ್ರಾಚೀನ ಕಾಲದ ಬಾಗಿಲುಗಳು ತೆರೆದುಕೊಳ್ಳುವುವೆ ಎನ್ನುತ್ತಾರೆ ವಿದ್ವಾಂಸರು.

### ಕಪ್ಪು ತಲೆಯವರು

'ಸುಮೇರಿಯನರು' ಎಂದರೆ ಕಪ್ಪು ತಲೆಯವರು. ಇವರು ಎಲ್ಲಿಂದ ಬಂದವರೆಂದು ತಿಳಿಯುವುದಿಲ್ಲ. ಗಿಡ್ಡರು. ಪುಷ್ಟ ಮೈಕಟ್ಟಿನ. ಕಪ್ಪು ಜನ ಇವರು. ಸಮುದ್ರದ ಮೂಲಕ ವಲಸೆ ಬಂದವರಿರಬಹುದು. ಇವರು ಭಾರತದ ಪ್ರಾಚೀನ ನಾಗರಿಕತೆಯ ಜನಾಂಗಕ್ಕೆ ಸೇರಿದವರು ಎಂದು ಕೆಲವರ ನಂಬಿಕೆ.

ಸುಮೇರಿಯನರು ಕ್ರಿ. ಪೂ. ನಾಲ್ಕು ಸಾವಿರದ ಹೊತ್ತಿಗೆ ಈ ಪ್ರದೇಶದಲ್ಲಿ ನೆಲೆಸಿದ್ದರು. ಸುಮಾರು ಕ್ರಿ. ಪೂ. 3500 ರಿಂದ 2000ದ ವರೆಗೆ ಉಚ್ಛ್ರಾಯ ಸ್ಥಿತಿಯಲ್ಲಿತ್ತು ಈ ನಾಗರಿಕತೆ. ಇವರು ಮಣ್ಣಿನ ಹಲಗೆಗಳ ಮೇಲೆ ಚಿತ್ರಲಿಪಿಯಲ್ಲಿ ಬರೆಯುತ್ತಿದ್ದರು. ಅನಂತರ ಅದನ್ನು ಬೆಂಕಿಯಲ್ಲಿ ಸುಡುತ್ತಿದ್ದರು. ಇದರಿಂದ ಆ ಹಲಗೆ ಗಟ್ಟಿಯಾಗಿ, ಬಹುಕಾಲ ಉಳಿಯುವಂತಾಯಿತು. ಇದರಿಂದಲೇ ನಮಗೆ ಈ ನಾಗರಿಕತೆಯ ವಿಷಯ ತಕ್ಕಷ್ಟು ದಾಖಲೆ ದೊರೆತಿರುವುದು. ಕ್ರಿ. ಪೂ. 2800ರಲ್ಲಿ ಸೆಮಿಟಿಕ್ ಪಂಗಡದ ಅಕ್ಕಾಡಿಯನ್ನರು ಸುಮೇರಿಯನ್ನರನ್ನು ಸೋಲಿಸಿ ಆ ಪ್ರದೇಶದ ಪ್ರಜೆಗಳಾದರು. ಕ್ರಿ. ಪೂ. ಇಪ್ಪತ್ತಾರನೆಯ ಶತಮಾನದಲ್ಲಿ ವಿವೇಕಿಯೂ ಸಜ್ಜನನೂ ಆದ ಒಬ್ಬ ಅರಸ— ಗುಡಿಅ— ಜನರ ಪ್ರೀತಿಯನ್ನು ಸಂಪಾದಿಸಿದ. ಕ್ರಿ. ಪೂ. 2357ರಲ್ಲಿ ಎಲಿಮೈಟರು ಈ ಪ್ರದೇಶದ ಮೇಲೆ ದಾಳಿ ನಡೆಸಿದರು. ಅಲ್ಲಿಂದ ಎರಡು ಶತಮಾನಗಳ ಅನಂತರ ಬ್ಯಾಬಿಲೋನಿಯನರು ಈ ಪ್ರದೇಶವನ್ನು ವಶಪಡಿಸಿಕೊಂಡರು.

ಈ ನಾಗರಿಕತೆಗೆ ಆಧಾರ ಫಲವತ್ತಾದ ಭೂಮಿ. ಹೆಚ್ಚು ಮಳೆ ಇಲ್ಲದ ಈ ಪ್ರದೇಶದಲ್ಲಿ ನೀರಾವರಿ ಅಗತ್ಯವಾಗಿತ್ತು. ಇದಕ್ಕಾಗಿ ಸುಮೇರಿಯನರು ಕಾಲುವೆಗಳನ್ನು ಮಾಡಿ ನೀರಾವರಿಯನ್ನು ವಿಸ್ತರಿಸಿದರು. ತಾಮ್ರ ಮತ್ತು ತವರಗಳನ್ನು ಬಳಸುತ್ತಿದ್ದರು; ಸ್ವಲ್ಪ ಮಟ್ಟಿಗೆ ಕಬ್ಬಿಣವನ್ನೂ ಬಳಸುತ್ತಿದ್ದರು. ಆದರೆ ಒಟ್ಟಿನಲ್ಲಿ ಲೋಹಗಳ ಬಳಕೆ ಕಡಮೆ. ಇವರ ಆಯುಧಗಳು ಬಹುಮಟ್ಟಿಗೆ ಬೆಣಚುಕಲ್ಲಿನವು. ಮನೆಗಳನ್ನು ಕಟ್ಟಲು ಹೆಚ್ಚಾಗಿ ಬಳಸುತ್ತಿದ್ದುದು ಜೊಂಡನ್ನು. ಇದರ ಮೇಲೆ ಮಣ್ಣು, ಹುಲ್ಲನ್ನು ಸೇರಿಸಿ ನೀರಿನಲ್ಲಿ ಕಲೆಸಿ ಬಳಿಯುತ್ತಿದ್ದರು. ಬಾಗಿಲುಗಳಿಗೆ ಕಲ್ಲಿನ ಕೀಲು, ನೇಗಿಲು ಮರದ ಚಕ್ರದ ಉಪಯೋಗ ಇವರಿಗೆ ತಿಳಿದಿತ್ತು. ನಾಣ್ಯಗಳ ಬಳಕೆ ಇರಲಿಲ್ಲ. ಆದರೆ ವ್ಯಾಪಾರ, ಚಿನ್ನ ಬೆಳ್ಳಿಗಳ ಆಧಾರದ ಮೇಲೆ ನಡೆಯುತ್ತಿತ್ತು. ಈವರೆಗೆ ತಿಳಿದಿರುವಂತೆ ಪ್ರಪಂಚದಲ್ಲಿ ಮೊಟ್ಟಮೊದಲು ನಗರಗಳನ್ನು ಕಟ್ಟಿದವರು ಸುಮೇರಿಯದವರೇ. ಸುಮೇರಿಯದಲ್ಲಿ ಶಾಲೆಗಳಿದ್ದುವು. ಅಕ್ಷರಗಳನ್ನೂ ಗಣಿತವನ್ನೂ ಕಲಿಸುತ್ತಿದ್ದರು. ಅವರು ಹತ್ತರ ಅನಂತರ ಬಳಸುತ್ತಿದ್ದ ಮಾನ 60, ಅನಂತರ 600, ಅನಂತರ 3,600. ಗಂಟೆಗೆ 60 ನಿಮಿಷ, ನಿಮಿಷಕ್ಕೆ 60 ಸೆಕೆಂಡು ಎಂಬ ಲೆಕ್ಕ, ವೃತ್ತದಲ್ಲಿ 360 ಡಿಗ್ರಿಗಳು ಎಂಬ ಕಲ್ಪನೆ—ಎಲ್ಲ ಬಂದುದು ಸುಮೇರಿಯನರಿಂದ.


ಸಜ್ಜನ ಅರಸ ಗುಡಿಅ

ಪ್ರಾಚೀನ ನಾಗರಿಕತೆಗಳಲ್ಲಿ ಒಂದರ ಮೇಲೆ ಇನ್ನೊಂದರ ಪ್ರಭಾವ ಇದೆ ಎಂದು ಖಚಿತವಾಗಿ ಹೇಳುವುದು ಕಷ್ಟ. ಈಜಿಪ್ಟಿಗಿಂತ ಸುಮೇರಿಯದ ನಾಗರಿಕತೆ ಪ್ರಾಚೀನ ಎಂದು ಕೆಲವರು ಹೇಳುತ್ತಾರೆ. ಅತ್ಯಂತ ಪ್ರಾಚೀನ ಬರಹದ ದಾಖಲೆ ದೊರೆತಿರುವುದು ಸುಮೇರಿಯ ನಾಗರಿಕತೆಯದು. ಹಾಮುರಾಬಿಯ (ಬ್ಯಾಬಿಲೋನಿಯದ ಅರಸು : ಕ್ರಿ. ಪೂ. 2123—2081 ಎಂದು ಕೆಲವರು ಚರಿತ್ರಕಾರರೂ ಕ್ರಿ. ಪೂ. 18ನೆಯ ಶತಮಾನ ಎಂದು ಕೆಲವರು ಚರಿತ್ರಕಾರರೂ ಹೇಳುತ್ತಾರೆ. ಈತ ನಲವತ್ತೆರಡು ವರ್ಷಗಳ ಕಾಲ ಆಳಿದ ಎನ್ನುವುದು ಖಚಿತ) ಶಾಸನಗಳು ಸುಮೇರಿಯದ ಅರಸರ ಶಾಸನಗಳಿಂದ ಪ್ರೇರಿತವಾದುವು ಎಂದೂ ಕೆಲವರ ನಂಬಿಕೆ. ಪ್ರಾಣಿಗಳನ್ನು ಪಳಗಿಸಿ ಉಪಯೋಗಿಸುವುದು ಪ್ರಾರಂಭವಾದದ್ದು ಮೊದಲು ಅರೇಬಿಯದಲ್ಲಿ. ಅನಂತರ ಸುಮೇರಿಯದಲ್ಲಿ, ಆ ಬಳಿಕ ಈಜಿಪ್ಟಿನಲ್ಲಿ ಎಂದು ಕೆಲವರು ವಿದ್ವಾಂಸರ ಅಭಿಪ್ರಾಯ. ಸುಮೇರಿಯದಲ್ಲಿ ಕುರಿ, ಮೇಕೆ, ನಾಯಿ, ದನ, ಕತ್ತೆಗಳನ್ನು ಸಾಕುತ್ತಿದ್ದರು. ಸುಮೇರಿಯಕ್ಕೂ ಈಜಿಪ್ಟಿಗೂ ವ್ಯಾಪಾರ ವಾಣಿಜ್ಯ ಸಂಬಂಧಗಳಿದ್ದುವು. ಈಜಿಪ್ಟಿನ ಚಿತ್ರಲಿಪಿ ಸುಮೇರಿಯದಿಂದ ಬಂದಂತೆ ತೋರುತ್ತದೆ. ಕುಂಬಾರನ ಚಕ್ರ ಮೊದಲು ಕಾಣಿಸಿಕೊಂಡುದು ಸುಮೇರಿಯದಲ್ಲಿ. ಅನಂತರ—ಸುಮಾರು ಕ್ರಿ. ಪೂ. 3000 ಹೊತ್ತಿಗೆ—ಈಜಿಪ್ಟಿನಲ್ಲಿ ಬಳಕೆಗೆ ಬಂದಿತು. ಕ್ರಿ. ಪೂ. 3500ರ ಹೊತ್ತಿಗೆ ಸುಮೇರಿಯನರು ಯುದ್ಧದಲ್ಲಿ ರಥಗಳನ್ನು ಬಳಸುತ್ತಿದ್ದರು. ತಾಮ್ರದ ಬಳಕೆಯೂ ಸುಮೇರಿಯದಲ್ಲಿ ಮೊದಲು ಆದಂತೆ ತೋರುತ್ತದೆ. ಈಜಿಪ್ಟಿನ ವಾಸ್ತುಶಿಲ್ಪ, ಕೆಲವು ವಿವರಗಳಲ್ಲಿ ಮೆಸಪಟೇಮಿಯದ ವಾಸ್ತುಶಿಲ್ಪವನ್ನು ಹೋಲುತ್ತದೆ. ವಿಗ್ರಹಗಳನ್ನು ಮಾಡುವುದನ್ನು ಈಜಿಪ್ಟಿನವರು ಸುಮೇರಿಯದಿಂದ ಕಲಿತಿರಬಹುದು.

ಸಿಂಧೂಕಣಿವೆಯ ನಾಗರಿಕತೆಯನ್ನು ಕುರಿತು ಇನ್ನೂ ನಮಗೆ ತಿಳಿದಿರುವುದು ಬಹು ಸ್ವಲ್ಪ. 1921ರ ವರೆಗೆ ಈ ನಾಗರಿಕತೆ ಇದ್ದಿತೆಂಬುದೇ ತಿಳಿದಿರಲಿಲ್ಲ. ಆರ್. ಡಿ. ಬ್ಯಾನರ್ಜಿ ಎಂಬವರು ಅಲೆಗ್ಸಾಂಡರನು ರಾವಿನದಿಯ ದಡದಲ್ಲಿ ಕಟ್ಟಿಸಿದ್ದ ವೇದಿಕೆಗಳನ್ನೂ ಇತರ ಬೌದ್ಧ ಸ್ತೂಪಗಳನ್ನೂ ಹುಡುಕುತ್ತಿದ್ದಾಗ ಮೊಹೆಂಜೊದಾರೊದಲ್ಲಿ ಒಂದು ಸ್ತೂಪ ಸಿಕ್ಕಿತು. (ಮೊಹೆಂಜೊದಾರೊ



ಆಟದ ಸಾಮಾನು

ಎಂದರೆ ಸತ್ತವರ ದಿಣ್ಣೆ.) ಸಂಶೋಧನೆ ಅನೇಕ ದಿಣ್ಣೆಗಳನ್ನು ತೋರಿಸಿಕೊಟ್ಟಿತು. ಇದೇ ವರ್ಷದಲ್ಲಿ ರಾವಿ ನದಿಯ ದಡದಲ್ಲಿ ಹರಪ್ಪ ಎಂಬ ಪಟ್ಟಣ ಸಿಕ್ಕಿತು. ಇಲ್ಲಿ ದೊರಕಿದ ಮುದ್ರಿಕೆಗಳ ಲಿಪಿಯನ್ನು ಕುರಿತು ಭಾರತದಲ್ಲಿ ಮಾತ್ರವಲ್ಲದೆ ರಷ್ಯ ದಲ್ಲಿಯೂ ಸಂಶೋಧನೆಗಳನ್ನು ನಡೆಸುತ್ತಿದ್ದಾರೆ. ಈ

**ಸಿಂಧೂ ಕಣಿವೆಯ ನಾಗರಿಕತೆ**

ಲಿಪಿಯನ್ನು ಪೂರ್ಣವಾಗಿ ಓದಲು ಸಾಧ್ಯವಾದಾಗ ಬಹು ಮುಖ್ಯವೂ ಆಸಕ್ತಿಕಾರಕವೂ ಆದ ವಿಷಯ ತಿಳಿದು ಬರಬಹುದು. ಇದು ಪ್ರಾಯಶಃ ದ್ರಾವಿಡ ಭಾಷೆಗಳಿಗೆ ಸೇರಿದುದಾಗಿರ ಬೇಕೆಂದು ತೋರುತ್ತದೆ. ಮೊಹೆಂಜೊದಾರೊ ಮತ್ತು ಹರಪ್ಪಗಳಲ್ಲಿ ದೊರೆತಿರುವ ಅವ ಶೇಷಗಳೆ ಈ ನಾಗರಿಕತೆಯ ಚರಿತ್ರೆಯನ್ನು ಬೆಳಕಿಗೆ ತಂದುವು. ಇದರ ಕಾಲ ಕ್ರಿ. ಪೂ. 3500 ರಿಂದ ಕ್ರಿ. ಪೂ. 2750 ಎನ್ನಬಹುದು. ಮೊಹೆಂಜೊದಾರೊದಲ್ಲಿ ಕಂಡ ಪಟ್ಟಣ ಒಂದು ಯೋಜ ನೆಗೆ ಅನುಗುಣವಾಗಿದೆ. ಚದುರಂಗದ ಹಾಸಿನಂತೆ ಕಾಣುವ ಈ ನಗರದಲ್ಲಿ, ಹನ್ನೆರಡು ದೊಡ್ಡ ಕಟ್ಟಡಗಳ ಗುಂಪುಗಳ ಮಧ್ಯೆ ಸುಮಾರು 7.6 ಮೀಟರುಗಳ ಅಗಲದ ನೇರವಾದ ರಸ್ತೆ, ಸಣ್ಣ ಅಡ್ಡರಸ್ತೆಗಳು ಇದ್ದುವು. ಸುಟ್ಟ ಇಟ್ಟಿಗೆಯ ಮನೆಗಳು ; ನಗರದ ಸುತ್ತ ರಕ್ಷಣೆಗೆ ಸುಟ್ಟ ಇಟ್ಟಿಗೆಯ ಗೋಡೆ. 55 ಮೀ. ಉದ್ದ, 33 ಮೀ. ಅಗಲದ ಸ್ನಾನ ಘಟ್ಟವೊಂದು ಕಂಡುಬಂದಿದೆ. ಇದರ ಮಧ್ಯಭಾಗದಲ್ಲಿ 12 ಮೀ. ಉದ್ದ 7 ಮೀ. ಅಗಲ ಮತ್ತು 2.4 ಮೀ. ಆಳದ ಈಜುವ ಕೊಳ. ಈ ಕೊಳಕ್ಕೆ ದೊಡ್ಡ ಕೊಳಾಯಿಗಳ ಮೂಲಕ ಹಳೆಯ ನೀರನ್ನು ಸಾಗಿಸಲು ಮತ್ತು ಹೊಸ ನೀರನ್ನು ತರಲು ವ್ಯವಸ್ಥೆ ಇತ್ತು. ಭಾರತದಲ್ಲಿ ದೇಹದ ನೈರ್ಮಲ್ಯಕ್ಕೆ ಎಷ್ಟು ಪ್ರಾಧಾನ್ಯ ವಿದ್ದಿತು ಎಂಬುದು ಇದರಿಂದ ಸ್ಪಷ್ಟ. ಇಲ್ಲಿ ಆಹಾರ ಧಾನ್ಯಗಳನ್ನು ಸಂಗ್ರಹಿಸಿಡುವ ಉಗ್ರಾಣಗಳೂ ಇದ್ದುವು. ಬೆಳ್ಳಿ, ಬಂಗಾರ, ತಾಮ್ರ ಹಿತ್ತಾಳೆಗಳಿಂದ ಮಾಡಿದ ಒಡವೆಗಳು, ಬಣ್ಣಹಾಕಿದ ಮಡಕೆಗಳು ಮತ್ತು ಆಟದ ಸಾಮಾನುಗಳು ಇಲ್ಲಿ ದೊರೆತಿವೆ. ಬಟ್ಟೆಯನ್ನು ನೇಯು ವುದು, ದಂತದ ಕೆಲಸ ಇವೂ ಈ ಜನರಿಗೆ ತಿಳಿದಿದ್ದುವು.



ಚದುರಂಗದ ಹಾಸಿನಂತೆ ಕಾಣುವ ಪ್ರಾಚೀನ ನಗರದ ಅವಶೇಷ

ಈ ನಾಗರಿಕತೆ ಪ್ರಪಂಚದ ಇತಿ ಹಾಸದ ಮೇಲೆ ಏನು ಪ್ರಭಾವ ಬೀರಿತೆಂದು ಹೇಳುವುದು ಕಷ್ಟ. ಸುಮೇರಿಯ, ಈಜಿಪ್ಟ್, ಸಿಂಧೂ ಕಣಿವೆ ನಾಗರಿಕತೆ ಇವುಗಳ ಕಾಲ ವನ್ನು ಇನ್ನೂ ನಿಖರವಾಗಿ ನಿರ್ಧ ರಿಸಬೇಕಾಗಿದೆ. ಆದರೆ ಭಾರತದ ಜನಜೀವನದಲ್ಲಿ, ಈ ನಾಗರಿಕತೆಯ ಪ್ರಭಾವ ಉಳಿದುಕೊಂಡು ಬಂದಿದೆ. ಆರ್ಯರು ಬಳಸುತ್ತಿದ್ದ ಹಲವು ಆಭರಣಗಳು ಈ ನಾಗರಿಕತೆಯ ಕೊಡುಗೆ ಇರಬಹುದು. ಈ ಜನ ವಿಗ್ರಹಗಳ ಪೂಜೆ ಮಾಡುತ್ತಿ ದ್ದರು. ಮಾತೃದೇವತೆಯನ್ನು ಆರಾ ಧಿಸುತ್ತಿದ್ದರು. ಶಿವನ ಪೂಜೆ, ಲಿಂಗ ಪೂಜೆ, ವೃಷಭ ಪೂಜೆ, ನಾಗರಪೂಜೆ ಇವರಲ್ಲಿ ಕಂಡುಬರುತ್ತವೆ. ಯೋಗಾ ಭ್ಯಾಸವೂ ಇವರಿಗೆ ತಿಳಿದಿತ್ತು ಎಂದು ತೋರುತ್ತದೆ.

ಸುಮೇರಿಯದಂತೆ ಬ್ಯಾಬಿಲೋನಿಯದವರೂ ಮೆಸಪಟೋಮಿಯದಲ್ಲಿ ಯೂಫ್ರೆಟಿಸ್, ಟೈಗ್ರಿಸ್ ನದಿಗಳ ಕಣಿವೆಯಲ್ಲಿ ಜೀವಿಸ್ಸಿದರು. ಬ್ಯಾಬಿಲ್ ಎಂದರೆ 'ದೇವರ ಬಾಗಿಲು'. ಅಕಾಡಿಯನರು ಮತ್ತು ಸುಮೇರಿಯನರ ಅಂತರ್‌ವಿವಾಹಗಳ ಸಂತತಿಯವರು

ಇವರು. ಪಾಶ್ಚಾತ್ಯ ಸಂಸ್ಕೃತಿಯ ಪ್ರಾರಂಭ ಆದದ್ದು ಇಲ್ಲೇ ಎಂದು ಹೇಳಬಹುದು. ಕ್ರಿ. ಪೂ. ಹತ್ತೊಂಬತ್ತನೆಯ ಶತಮಾನದಲ್ಲಿ ಪ್ರಾರಂಭವಾದ ಇವರ ಸಾಮ್ರಾಜ್ಯ ನಲವತ್ತೆರಡು ವರ್ಷಗಳು ಆಳಿದ ಹಾಮುರಾಬಿಯ (ಕ್ರಿ. ಪೂ. 21ನೆಯ ಶತಮಾನದಿಂದ 18ನೆಯ ಶತಮಾನದವರೆಗೆ ಮಧ್ಯೆ) ಕಾಲದಲ್ಲಿ ತನ್ನ ಶಿಖರವನ್ನು ಮುಟ್ಟಿತು. ಹಾಮುರಾಬಿಯ ಶಾಸನ ಕಡತ ಎಂದು ಪ್ರಸಿದ್ಧವಾದ ಶಾಸನಗಳನ್ನು, ಸಂಪ್ರದಾಯಗಳ ಸಂಗ್ರಹವನ್ನು ರಾಜ್ಯಕ್ಕೆ ಕೊಟ್ಟವನು ಈ ದೊರೆ. ಕ್ರಿ. ಪೂ. 1800ರಲ್ಲಿ ಹಿಟ್ಟೈಟ್ ಮತ್ತು ಕಾಸ್ಸೈಟ್ ಎಂಬ ಅನಾಗರಿಕ ಪಂಗಡಗಳು ಬ್ಯಾಬಿಲೋನಿಯ ಸಾಮ್ರಾಜ್ಯವನ್ನು ಸೋಲಿಸಿದುವು. ಕ್ರಿ. ಪೂ. 1400ರಲ್ಲಿ ಇವರು ಅಸೀರಿಯನ್ ಪಂಗಡದ ಕೈಯಲ್ಲಿ ಸೋಲನ್ನು ಅನುಭವಿಸಿದರು. ಅಸೀರಿಯನರ ಚರಿತ್ರೆಯಲ್ಲಿ ಸೆನ್ನಾಕರೀಬ್ (ಕ್ರಿ. ಪೂ. 705–681) ಮತ್ತು ಅಷೂರ್‌ಬನಿಪಾಲ್ (ಕ್ರಿ. ಪೂ. 669–626) ಮುಖ್ಯ ಅರಸರು. ಮೀಡರು ಮತ್ತು ಚಾಲ್ಡಿಯನರು ಎಂಬ ಪಂಗಡಗಳವರು ಅಸೀರಿಯ ಸಾಮ್ರಾಜ್ಯದ ರಾಜಧಾನಿ ನಿನವ ಪಟ್ಟಣವನ್ನು ವಶಪಡಿಸಿಕೊಂಡ ಮೇಲೆ (ಕ್ರಿ. ಪೂ. 612) ಮತ್ತೆ ಬ್ಯಾಬಿಲನ್ ಉಚ್ಛ್ರಾಯ ಸ್ಥಿತಿಗೆ ಬಂದಿತು. ನೆಬುಕ್ಯಾಡ್‌ರೆಜರ್ (ಕ್ರಿ. ಪೂ. 605–562) ಕಾಲದಲ್ಲಿ ಹಿಂದಿನ ವೈಭವವನ್ನು ಮೀರಿ ಮೆರೆಯಿತು. ಆದರೆ ಕ್ರಿ. ಪೂ. 539ರಲ್ಲಿ ಪರ್ಷಿಯದ ಸೈರಸ್ ಬ್ಯಾಬಿಲನನ್ನು ಸೋಲಿಸಿ ಅದರ ಶಕ್ತಿಯನ್ನು ಮುರಿದ.

### ದೇವರ ಬಾಗಿಲು

ಬ್ಯಾಬಿಲನ್ ನಾಗರಿಕತೆ ಸುಮೇರಿಯನ್ ನಾಗರಿಕತೆಯನ್ನು ಮುಂದುವರಿಸಿತು ಎನ್ನಬಹುದು. ಹಾಮುರಾಬಿಯ ಆಡಳಿತದಲ್ಲಿ ಪದ್ಧತಿಗಳು ಮತ್ತು ಕಾನೂನುಗಳು ಒಂದು ನಿಶ್ಚಿತ ಸ್ವರೂಪ ಪಡೆದುವು; ಕಿಷ್ ಮತ್ತು ಪರ್ಷಿಯ ಕೊಲ್ಲಿಗಳ ಮಧ್ಯೆ ದೊಡ್ಡ ಕಾಲುವೆ ಸಿದ್ಧವಾಗಿ, ವಿಸ್ತಾರವಾದ ಭೂಪ್ರದೇಶ ಫಲವತ್ತಾಯಿತು. ಅಲ್ಲದೆ ಟೈಗ್ರಿಸ್‌ನ ಪ್ರವಾಹದಿಂದ ಹಲವು ನಗರಗಳು ಪಾರಾದವು. ಅವನ ಒಂದು ಶಾಸನದಲ್ಲಿ ಅವನು ತಾನು ಜನಕ್ಕೆ ನೀರನ್ನೂ ರಕ್ಷಣೆಯನ್ನೂ ವ್ಯವಸ್ಥಿತ ಆಡಳಿತವನ್ನೂ ನೀಡಿದನೆಂದು ಹೇಳಿರುವ ಮಾತು ಸತ್ಯವಾದದ್ದು. ನೆಬುಕ್ಯಾಡ್‌ರೆಜರನು ಈಜಿಪ್ಟಿನವರನ್ನು ಸೋಲಿಸಿ, ಇತರ ರಾಜ್ಯಗಳತ್ತ ತಿರುಗಿದನು. ಇವನ ವಿಜಯಗಳ ಫಲವಾಗಿ ಪರ್ಷಿಯ ಕೊಲ್ಲಿಯಿಂದ ಭೂಮಧ್ಯ ಸಮುದ್ರದವರೆಗಿನ ವ್ಯಾಪಾರವೆಲ್ಲ ಬ್ಯಾಬಿಲನಿನ ಅಧೀನವಾಯಿತು. ಈ ಅರಸ ತನ್ನ ರಾಜಧಾನಿಯನ್ನು ಪ್ರಪಂಚದ ಅತ್ಯಂತ ಸುಂದರ ಮತ್ತು ಶ್ರೀಮಂತ ದೇಶವನ್ನಾಗಿ ಮಾಡಲು ಹೊರಟ. 90 ಕಿಲೊಮೀಟರುಗಳ ಉದ್ದದ ಗೋಡೆ ನಗರವನ್ನು ಸುತ್ತುಗಟ್ಟಿತ್ತು. ಅದರ ಮೇಲೆ ನಾಲ್ಕು ಕುದುರೆಗಳನ್ನು ಕಟ್ಟಿದ ಗಾಡಿಯನ್ನು ಓಡಿಸಬಹುದಾಗಿತ್ತು. ಮನೆಗಳೂ ಗೋಡೆಗಳೂ ಇಟ್ಟಿಗೆಯವು. ಇಲ್ಲಿ ಕಲ್ಲಿನ ಬಳಕೆ ಕಡಮೆ. ಈವರೆಗೆ ಈ ಪ್ರದೇಶದಲ್ಲಿ ಸಿಕ್ಕಿರುವ ಇಟ್ಟಿಗೆಗಳ ಮೇಲೆಲ್ಲಾ 'ನಾನು ನೆಬುಕ್ಯಾಡ್‌ರೆಜರ್. ಬ್ಯಾಬಿಲನಿನ ಅರಸ'. ಎಂಬ ಒಕ್ಕಣೆ ಇದೆ. ಬ್ಯಾಬಿಲನಿನ ಬಳಿ ಬರುತ್ತಲೆ ಕಾಣುತ್ತಿದ್ದುದು ಏಳು ಹಂತಗಳ 198 ಮೀಟರುಗಳ ಭವ್ಯ ಗುಡಿಗೋಪುರ. ಅದರ ಮೇಲೆ ಗಟ್ಟಿ ಬಂಗಾರದ ಹಲಗೆ. ಇದನ್ನೆ ಬ್ಯಾಬಿಲೋನಿಯದ ಗೋಪುರ ಎಂದು ಹಿಂದಿನವರು ಕರೆದಿರಬೇಕು. ನೆಬುಕ್ಯಾಡ್‌ರೆಜರ್‌ನ ಭವ್ಯ ಅರಮನೆಯ ಬಳಿಯೇ ತನ್ನ ಅರಸಿಯರಲ್ಲಿ ಒಬ್ಬಳಿಗೆ ಆತ ಕಟ್ಟಿಸಿದ ತೂಗು ಉದ್ಯಾನಗಳಿದ್ದುವು.



ನೆಬುಕ್ಯಾಡ್‌ರೆಜರನ ಅರಮನೆಯ ಒಂದು ದ್ವಾರ

ಆಧುನಿಕ ಪಾಶ್ಚಾತ್ಯ ನಾಗರಿಕತೆಗೆ ಈ ನಾಗರಿಕತೆಯ ಕೊಡುಗೆ ಬಹು ಹಿರಿದು. ಖಗೋಳಶಾಸ್ತ್ರದಲ್ಲಿ ಬ್ಯಾಬಿಲೋನಿಯ ಬಹು ಮುಂದುವರಿದಿತ್ತು. (ಜ್ಯೋತಿಷ್ಯಶಾಸ್ತ್ರವೂ ಇವರಿಗೆ ಪ್ರಿಯವಾಗಿತ್ತು.) ಸೂರ್ಯೋದಯ ಸೂರ್ಯಾಸ್ತಗಳಿಗೆ ಸಂಬಂಧಿಸಿದಂತೆ ಶುಕ್ರಗ್ರಹದ ಉದಯಾಸ್ತಗಳನ್ನು ಲೆಕ್ಕಹಾಕಿದ್ದರು. ಇವರು ಹಲವು ನಕ್ಷತ್ರಗಳ ಸ್ಥಾನಗಳನ್ನು ಗುರುತಿಸಿದ್ದರು. ನಕ್ಷತ್ರಕ್ಕೂ ಗ್ರಹಕ್ಕೂ ಇರುವ ವ್ಯತ್ಯಾಸವನ್ನು ಮೊದಲು ಖಚಿತವಾಗಿ ಹೇಳಿದವರು ಇವರು. ಸೂರ್ಯಗ್ರಹಣ ಮತ್ತು ಚಂದ್ರಗ್ರಹಣಗಳನ್ನು ಇವರು ಲೆಕ್ಕಹಾಕಬಲ್ಲವರಾಗಿದ್ದರು. ಸಂಕ್ರಾಂತಿಗಳನ್ನು ನಿರ್ಧರಿಸುತ್ತಿದ್ದರು. ಸೂರ್ಯನ ಸುತ್ತ ಭೂಮಿಯ ಪಥವನ್ನು ಹನ್ನೆರಡು ಭಾಗಗಳಾಗಿ ವಿಂಗಡಿಸಿದ್ದರು. ವೃತ್ತವನ್ನು ಮುನ್ನೂರ ಅರವತ್ತು ಡಿಗ್ರಿಗಳಾಗಿ ವಿಭಾಗಿಸಿ, ಡಿಗ್ರಿಗೆ ಅರವತ್ತು ನಿಮಿಷ, ನಿಮಿಷಕ್ಕೆ ಅರವತ್ತು ಸೆಕೆಂಡು ಎಂದು ನಿರ್ಧರಿಸಿದ್ದರು. ನೀರಿನ ಗಡಿಯಾರ, ನೆರಳು ಗಡಿಯಾರ ಇವುಗಳನ್ನು ಕಂಡುಹಿಡಿದಿದ್ದರು. ತಿಂಗಳಿಗೆ ನಾಲ್ಕು ವಾರ, ಗಡಿಯಾರದಲ್ಲಿ ಹನ್ನೆರಡು ಘಂಟೆಗಳು ಎಂಬ ವಿಭಾಗಗಳನ್ನು ಇಂದಿನ ಜಗತ್ತು ಬ್ಯಾಬಿಲೋನಿಯದಿಂದ ಪಡೆದಿದೆ. ಇವರ ಎಷ್ಟೋ ಪೌರಾಣಿಕ ಕಥೆಗಳನ್ನು ಯೆಹೂದ್ಯರು ವರ್ಗಾಯಿಸಿ ಉಳಿಸಿಕೊಂಡರು. ನಿಘಂಟುಗಳನ್ನೂ ವ್ಯಾಕರಣಗಳನ್ನೂ ಸಿದ್ಧಗೊಳಿಸಿದ್ದರು ಈ ಜನ.

ಪ್ರಾಚೀನ ಕಾಲದಲ್ಲಿ ಜಗತ್ತಿನ ಮತ್ತೊಂದು ಜನಾಂಗ ಯೆಹೂದ್ಯರದು. ಇವರ ಚರಿತ್ರೆಯ ರೂಪರೇಖೆ ಬೈಬಲಿನ 'ಹಳೆಯ ಒಡಂಬಡಿಕೆ ' ಭಾಗದಲ್ಲಿದೆ; ಆದರೆ ಚಾರಿತ್ರಿಕ ಅಂಶಗಳೊಡನೆ ಕಾಲ್ಪನಿಕ ಅಂಶಗಳೂ ಬೆರೆತಿವೆ. ಇವರ ಭಾಷೆ ಹಿಬ್ರೂ. ಇವರ ಲಿಪಿಯಲ್ಲಿ

ಸ್ವರಗಳನ್ನು ಬರೆಯುತ್ತಿರಲಿಲ್ಲ; ಅರ್ಥದ ಪ್ರಕಾರ ಸ್ವರಗಳನ್ನು ನಿರ್ಧರಿಸಬೇಕಾಗಿತ್ತು. (Y—H—V ಎಂದು ಬರೆದರೆ 'ಯಾಹುವೆ' ಎಂದು). ಬಹು ಕಾಲ ಇವರು ಹನ್ನೆರಡು ಪಂಗಡಗಳಾಗಿ ಉಳಿದಿದ್ದರು. ಪ್ರಾರಂಭದಲ್ಲಿ ಇವರಿಗೆ ಅರಸರಿರಲಿಲ್ಲ. ಕ್ರಮೇಣ ಶತ್ರುಗಳನ್ನು ಎದುರಿಸಲೆಂದು ಒಬ್ಬ ದೊರೆಯ ಆಡಳಿತಕ್ಕೆ ಬದ್ಧರಾಗಲು ಒಪ್ಪಿದರು. ಇವರ ಸಮರ್ಥ ಅರಸರಲ್ಲಿ ಡೇವಿಡ್ (ಕ್ರಿ. ಪೂ. 1010-974) ಒಬ್ಬ. ಇವನ ಅನಂತರ ಪಟ್ಟಕ್ಕೆ ಬಂದ ಸಾಲೊಮನ್ (ಕ್ರಿ. ಪೂ. 974-937) ಬಹು ಪ್ರಸಿದ್ಧನಾದವನು. 'ಸಾಲೊಮನ್‌ನಷ್ಟು ಬುದ್ಧಿವಂತ' ಎನ್ನುವುದು ಪಾಶ್ಚಾತ್ಯರಲ್ಲಿ ವಾಡಿಕೆ. ಬಹು ವೈಭವದಿಂದ ಭೋಗದ ಜೀವನ ನಡೆಸಿದವನು ಈತ. ಪ್ರಜೆಗಳ ಮನಸ್ಸನ್ನು ಯುದ್ಧಗಳಿಂದ ಶಾಂತಿಯ ಜೀವನದತ್ತ ತಿರುಗಿಸಿ, ವ್ಯವಸ್ಥಿತ ಸಾಮಾಜಿಕ ಜೀವನಕ್ಕೆ ತಳಹದಿ ಹಾಕಿದವನು. ತನ್ನ ರಾಜಧಾನಿ ಜೆರೂಸಲೆಮನ್ನು ಸುಂದರಗೊಳಿಸಿದ. ಭವ್ಯವಾದ ಒಂದು ದೇವಾಲಯವನ್ನು ಕಟ್ಟಿದ. ಇದನ್ನು ಕಂಡವರೆಲ್ಲ ಪ್ರಪಂಚದ ಅದ್ಭುತಗಳಲ್ಲಿ ಒಂದು ಎಂದು ಬೆರಗಾಗುತ್ತಿದ್ದರಂತೆ. ಇವನ ತೆರಿಗೆಗಳು ಸ್ವಲ್ಪಮಟ್ಟಿಗೆ ಜನರಲ್ಲಿ ಅಸಮಾಧಾನವನ್ನುಂಟುಮಾಡಿದುವು. ಇವನ ನಿಧನದ ಅನಂತರ ಪ್ಯಾಲೆಸ್ಟೈನ್ ಎರಡು ರಾಜ್ಯಗಳಾಗಿ ಒಡೆಯಿತು—ಎಫ್ರೈಯಿಮ್ (ರಾಜಧಾನಿ: ಸಮಾರಿಯ) ಮತ್ತು ಜೂಡ (ರಾಜಧಾನಿ: ಜೆರೂಸಲೆಂ). ಜೆರೂಸಲೆಂ ಈಜಿಪ್ಟಿನ ಫೆರೋ ವಶವಾಗಿ, ಸಾಲೊಮನ್ ಸಂಗ್ರಹಿಸಿದ್ದ ಬಂಗಾರವೆಲ್ಲ ಅವನ ಪಾಲಾಯಿತು. ಇಂಥ ಕಷ್ಟಕಾಲದಲ್ಲಿ 'ಪ್ರವಾದಿಗಳು' ಎಂದು ಪ್ರಸಿದ್ಧರಾದ ನಾಯಕರು ಬಂದರು. ಜನರ ಹಣದ ಆಸೆ, ಭೋಗಜೀವನದ ಆಸೆ ಇವನ್ನು ಅವರು ಖಂಡಿಸಿದರು. ಕ್ರಿ. ಪೂ. 586ರಲ್ಲಿ ಜೂಡ ಬ್ಯಾಬಿಲೋನಿಯದ ಒಂದು ಪ್ರಾಂತವಾಯಿತು. ನೆಬುಕ್ಯಾಡ್‌ರೆಜರ್ ಜೆರೂಸಲೆಮನ್ನು ಬೂದಿ ಮಾಡಿ ಸಾಲೊಮನ್ ಕಟ್ಟಿದ ದೇವಾಲಯವನ್ನು ನಿರ್ನಾಮ ಮಾಡಿದ. ಕ್ರಿ. ಪೂ. 539ರಲ್ಲಿ ಪರ್ಷಿಯದ ಸೈರಸ್ ಬ್ಯಾಬಿಲನನ್ನು ಗೆದ್ದ ನಂತರ, ಬ್ಯಾಬಿಲನಿನಲ್ಲಿ ದೇಶಭ್ರಷ್ಟರಾಗಿದ್ದ ಯೆಹೂದಿಗಳಿಗೆ ಜೆರೂಸಲೆಮಿಗೆ ಹಿಂದಿರುಗಲು ಅವಕಾಶ ನೀಡಿದ. ಯೆಹೂದ್ಯರು ಇಪ್ಪತ್ತೆರಡು ವರ್ಷಗಳ ಕಾಲ ಶ್ರಮಿಸಿ ದೇವಾಲಯವನ್ನು ಮತ್ತೆ ಕಟ್ಟಿದರು. ಪುನಃ ಜೆರೂಸಲೆಂ ಯೆಹೂದ್ಯರ ನಗರವಾಯಿತು. ಕ್ರಿ. ಪೂ. 334ರಲ್ಲಿ ಜೆರೂಸಲೆಂ ಅಲೆಗ್ಸಾಂಡರನ ವಶವಾಯಿತು.

## ಯೆಹೂದ್ಯರ ಕೊಡುಗೆ

ಪ್ರಪಂಚಕ್ಕೆ ಯೆಹೂದ್ಯರ ಅತಿ ಮುಖ್ಯ ಕೊಡುಗೆ—ಹಳೆಯ ಒಡಂಬಡಿಕೆ (ಬೈಬಲಿನ ಮೊದಲನೆಯ ಭಾಗ). ಇದು ಯಾವಾಗ ರಚಿತವಾಯಿತು, ಯಾರು ಬರೆದರು—ಇವೆಲ್ಲ ವಾದಕ್ಕೊಳಗಾದ ಸಮಸ್ಯೆಗಳು. ಪ್ರಪಂಚದ ಅತ್ಯುತ್ತಮ ಸಾಹಿತ್ಯದಲ್ಲಿ ಸೇರಬಹುದಾದ ಭಾಗಗಳು ಇಲ್ಲಿವೆ. ಕ್ರಿ. ಪೂ. ಐದನೆಯ ಶತಮಾನದಲ್ಲಿ ರಚಿತವಾಗಿರಬಹುದಾದ 'ಬುಕ್ ಆಫ್ ಜೋಬ್' ಇಂಥ ಒಂದು ಭಾಗ. ಇದು ಭಾರತದ ಹರಿಶ್ಚಂದ್ರನ ಕಥೆಯನ್ನು ನೆನಪಿಗೆ ತರುತ್ತದೆ. ಪ್ರವಾದಿಗಳ ಉಪದೇಶಗಳಲ್ಲಿ ಕ್ರೈಸ್ತಮತದ ತತ್ತ್ವಗಳ ಪ್ರಾರಂಭವನ್ನೂ ಸಮಾಜವಾದದ ಪ್ರಾರಂಭವನ್ನೂ ಕಾಣಬಹುದು. ಯುದ್ಧಗಳೆಲ್ಲ ಕೊನೆಗಂಡು ಚಿರಶಾಂತಿ ನೆಲಸಿ, ಎಲ್ಲ ಮನುಷ್ಯರೂ ಅಣ್ಣತಮ್ಮಂದಿರಂತೆ ಬಾಳುವ ಸುವರ್ಣಯುಗದ ಕಲ್ಪನೆ ಮೂಡಿರುವುದೂ ಇಲ್ಲಿಯೇ. ಧರ್ಮದಲ್ಲಿ ವಿಧಿ, ಆಚರಣೆಗಳಿಗಿಂತ ಶುಭ್ರ ಜೀವನಕ್ಕೆ ಹೆಚ್ಚು ಪ್ರಾಧಾನ್ಯ ನೀಡುವುದನ್ನೂ ಇಲ್ಲಿ ಕಾಣುತ್ತೇವೆ. ಯೇಸುವಿನ ಪರಿಕಾರ ಪ್ರವಾದಿ ಅಮಾಸ್ (ಸುಮಾರು ಕ್ರಿ. ಪೂ. 800). ಯುದ್ಧಗಳು ಸಾಮಾನ್ಯವಾಗಿದ್ದು ಸಮರ್ಥ ಯೋಧ—ರಾಜರು ವಿಜೃಂಭಿಸುತ್ತಿದ್ದ ಕಾಲದಲ್ಲಿ ಈ ಪ್ರವಾದಿಗಳು ಸರಳತೆ, ಮಾರ್ದವಗಳನ್ನು ಆದರ್ಶ ಗುಣಗಳೆಂದು ಸಾರಿದರು: ಸಹಕಾರ, ಸ್ನೇಹ, ಸೌಜನ್ಯ. ಪ್ರಾಮಾಣಿಕ ಆಚಾರಗಳನ್ನು ಹೊಗಳಿ ಜೀವನದಲ್ಲಿ ಹೊಸ ಮೌಲ್ಯಗಳನ್ನು ಸ್ಥಾಪಿಸಿದವರು ಇವರು. ಭಗವಂತನ ಶಕ್ತಿಗಿಂತ ಪ್ರೇಮ ಕರುಣೆಗಳಿಗೆ ಪ್ರಾಧಾನ್ಯ ನೀಡಿದವರೂ ಇವರೇ. ಭಗವಂತ ಕರುಣಾಳು. ಕರುಣೆ ತೋರುವ ಮನುಷ್ಯನೇ ಅವನನ್ನು ಮೆಚ್ಚಿಸಬಲ್ಲ ಎಂಬ ಕಲ್ಪನೆಯನ್ನೂ ಕೊಟ್ಟವರು ಇವರು. ಹಳೆಯ ಒಡಂಬಡಿಕೆ ಕ್ರೈಸ್ತರಿಗೂ ಪವಿತ್ರವಾದುದರಿಂದ ನೂರಾರು ವರ್ಷಗಳ ಕಾಲ ಪಾಶ್ಚಾತ್ಯ ದೇಶಗಳ ಜೀವನ ತತ್ತ್ವಗಳು ಮತ್ತು ಸಾಹಿತ್ಯಗಳು ಇದರ ಪ್ರಭಾವಕ್ಕೆ ಒಳಗಾಗಿವೆ. ರಾಷ್ಟ್ರದ ಇತಿಹಾಸದಲ್ಲಿ ಇರುವ ವ್ಯಕ್ತಿಯ ಜೀವನದಲ್ಲಿ ಬರಬಹುದಾದ ನೋವು ದೌರ್ಭಾಗ್ಯಗಳನ್ನು ಎದುರಿಸಿ ನಿಲ್ಲಲು ಸ್ಫೂರ್ತಿಯನ್ನು ಕೊಟ್ಟಿದೆ.

ಬುದ್ಧಿವಂತ ಸಾಲೊಮನ್



ಆರ್ಯರು ಭಾರತಕ್ಕೆ ಸುಮಾರು ಕ್ರಿ. ಪೂ. ಇಪ್ಪತ್ತನೆಯ ಶತಮಾನದಲ್ಲಿ ಬಂದಿರಬಹುದು (ಈ ಕಾಲವನ್ನು ಕುರಿತು ವಾದವಿವಾದ ಗಳಿವೆ). ಅವರು ಬಂದಾಗ ಭಾರತದ ಬೇರೆ ಬೇರೆ ಭಾಗಗಳಲ್ಲಿ ಪರಿಸ್ಥಿತಿ ಹೇಗಿದ್ದಿತು ಎಂಬುದು ನಮಗೆ ತಿಳಿಯದು. ಉತ್ತರದ

## ಆರ್ಯರ ಕಾಲದ ಭಾರತ

ಕೆಲವು ಭಾಗಗಳಲ್ಲಿ ನಾಗರು, ದಕ್ಷಿಣ ಭಾರತದಲ್ಲಿ ದ್ರಾವಿಡರು ಇದ್ದರೆಂದು ತೋರುತ್ತದೆ. ಪ್ರಾಯಶಃ ಕ್ಯಾಸ್ಪಿಯನ್ ಪ್ರದೇಶದಿಂದ ಬಂದವರು ಆರ್ಯರು. ಹಿಟ್ಟೈಟರು, ಮಿಟಿನಿಯನರು, ಕಾಸ್ಸೈಟರು, ಸಾಗೆಡಿಯನರು, ಬ್ಯಾಕ್ಟ್ರಿಯನರು, ಮೀಡರು, ಪರ್ಷಿಯನರು—ಇವರ ಬುಡಕಟ್ಟಿಗೇ ಸೇರಿದವರು ಭಾರತಕ್ಕೆ ಬಂದ ಆರ್ಯರು. ತಮಗೂ ತಮ್ಮ ದನ ಕರುಗಳಿಗೂ ಆಹಾರ ಹುಡುಕಿಕೊಂಡು ಇವರು ಭಾರತಕ್ಕೆ ಬಂದವರು. ವಿಶೇಷ ದೇಹಶಕ್ತಿಯುಳ್ಳವರು. ಯುದ್ಧಾಸಕ್ತರು ಮತ್ತು ಯುದ್ಧದಲ್ಲಿ ಸಮರ್ಥರು. ಆಗಲೇ ರಥಗಳನ್ನು ಬಳಸುತ್ತಿದ್ದರು. ಇಲ್ಲಿಗೆ ಬಂದಾಗ ಸಿಂಧೂ ಮತ್ತು ಗಂಗಾನದಿಗಳ ತೀರದಲ್ಲಿ ನೆಲೆಸಿದ ಇವರು ಕ್ರಮೇಣ ಭಾರತದ ಇತರ ಭಾಗಗಳಲ್ಲಿ ಹರಡಿಕೊಂಡರು. ಫಲವತ್ತಾದ ಪ್ರದೇಶಗಳಲ್ಲಿ ನೆಲೆಸಿನಿಂತರು. ಇವರದು ಮುಖ್ಯವಾಗಿ ರಾಜಪ್ರಭುತ್ವ. ಕಾಲಕಳೆದಂತೆ ದೊಡ್ಡ ರಾಜ್ಯಗಳು ಜನಿಸಿದುವು. ಪಾಂಚಾಲ, ಕಾಶಿ, ಕುರು, ವಿದೇಹ, ಕೋಸಲ ಇವು ಮುಖ್ಯ ರಾಜ್ಯಗಳು. ಗಣರಾಜ್ಯಗಳೂ ಕೆಲವು ತಲೆ ಎತ್ತಿದುವು. ಬುದ್ಧನು (ಕ್ರಿ. ಪೂ. 563–483) ಬೌದ್ಧಮತವನ್ನು ಸ್ಥಾಪಿಸಿದ. ಕ್ರಿ. ಪೂ. ನಾಲ್ಕನೆಯ ಶತಮಾನದಲ್ಲಿ ಅಲೆಗ್ಸಾಂಡರನು ದೊಡ್ಡ ಸೈನ್ಯದೊಡನೆ ಬಂದು ಉತ್ತರ ಭಾರತದ ಕೆಲವು ಭಾಗ ಗಳನ್ನು ಗೆದ್ದ. ಅನಂತರ ಚಂದ್ರಗುಪ್ತನು ಮೌರ್ಯ ಚಕ್ರಾಧಿ ಪತ್ಯವನ್ನು ಸ್ಥಾಪಿಸಿ, ಅತಿ ಸಮರ್ಥ ಅರಸರಲ್ಲಿ ಒಬ್ಬನು ಎನಿಸಿಕೊಂಡ. ಇವನ ಮೊಮ್ಮಗನೇ ಜಗತ್ಪ್ರಸಿದ್ಧನಾದ ಅಶೋಕ. ಅಶೋಕನ ಅನಂತರ ಸುಮಾರು ಆರು ಶತಮಾನಗಳ ಚರಿತ್ರೆ ಅಷ್ಟು ಸ್ಪಷ್ಟವಾಗಿಲ್ಲ. ಗುಪ್ತ ಸಾಮ್ರಾಜ್ಯದ ಸಮುದ್ರಗುಪ್ತ (330–380), ಅವನ ಮಗ ಎರಡನೆಯ ಚಂದ್ರಗುಪ್ತ (380–414) ಇವರ ಆಳ್ವಿಕೆಗಳ ಕಾಲವನ್ನು ಸ್ವರ್ಣಯುಗ ಎಂದು ಕರೆಯುತ್ತಾರೆ. ಯುದ್ಧರಂಗದಲ್ಲಿ ಅಸಮಾನ ವೀರರು, ಶಾಂತಿಕಾಲದಲ್ಲಿ ವಿದ್ಯಾಪಕ್ಷ ಪಾಗಳು, ಕಲೆಗಳಿಗೆ ಆಶ್ರಯದಾತರು, ಪರಮತಗಳಿಗೆ ಗೌರವ ಮತ್ತು ರಕ್ಷಣೆ ನೀಡುತ್ತಿದ್ದ ವಿಶಾಲ ಹೃದಯಿಗಳು ಇವರು. ಕಾಳಿದಾಸ ಗುಪ್ತರ ಕಾಲದವನು ಎಂದು ಹೇಳುತ್ತಾರೆ. ಮತ್ತು ದಶಮಾಂಶ ಪದ್ಧತಿಗಳ ಬಳಕೆಯನ್ನು ತೋರಿಸಿಕೊಟ್ಟ ಆರ್ಯಭಟ್ಟನೂ ಈ ಕಾಲಕ್ಕೆ ಸೇರಿದವನು. ಸುಶ್ರುತ ಈ ಕಾಲದ ಪ್ರಸಿದ್ಧ ವೈದ್ಯಶಾಸ್ತ್ರಜ್ಞ. ಭಾರತ ಸಂಸ್ಕೃತಿ ಭಾರತದಾಚೆ ಈಗಿನ ಅಫ್ಘಾನಿಸ್ತಾನ, ಬರ್ಮ, ಇಂಡೋನೇಷ್ಯಗಳವರೆಗೂ ಈ ಕಾಲದಲ್ಲಿ ಹಬ್ಬಿತು.



ಸಮ್ರಾಟ ಸಮುದ್ರಗುಪ್ತ

ಮಹಾಕವಿ ಕಾಳಿದಾಸ



ಇವರ ಕಾಲಾನಂತರ ಭಾರತ ಹೂಣರ ದಾಳಿಗೆ ಸಿಕ್ಕಿತು. ಇಲ್ಲಿಗೆ ಪ್ರಾಚೀನ ಭಾರತದ ಚರಿತ್ರೆ ಮುಗಿದು ಹೊಸ ಯುಗ ಪ್ರಾರಂಭವಾಯಿತೆನ್ನಬಹುದು.

ವ್ಯವಸಾಯ ಪ್ರಧಾನ ನಾಗರಿಕತೆ ಆರ್ಯರದು, ಪಶುಪಾಲನೆಯೂ ಇವರಲ್ಲಿ ಮುಖ್ಯವಾಗಿದ್ದಿತು. ವ್ಯಾಪಾರ ಮತ್ತು ವಾಣಿಜ್ಯಗಳು ಆಗಲೆ ಬೆಳೆದಿದ್ದುವು. ವಿನಿಮಯ, ಬಂಗಾರ ಮತ್ತು ಬೆಳ್ಳಿಯ ತುಂಡುಗಳು –ಇವು ವ್ಯಾಪಾರದ ಸಾಧನಗಳು. ಕ್ರಿ. ಪೂ. ನಾಲ್ಕನೆಯ ಶತಮಾನದಲ್ಲಿ ನಾಣ್ಯಗಳು ಬಳಕೆಗೆ ಬಂದುವು. ಇವರು ಪ್ರಕೃತಿ ದೇವತೆಗಳ ಆರಾಧಕರು. ಆದರೆ ದೇವರು ಒಬ್ಬನೇ ಎನ್ನುವ ಕಲ್ಪನೆಯೂ ಇವರಲ್ಲಿತ್ತು. ಉಪನಿಷತ್ತುಗಳು, ವೇದಗಳು ಮತ್ತು ಭಗವದ್ಗೀತೆಯಲ್ಲಿ ಜಗತ್ತಿನ ಚಿಂತನ ಸಾಹಿತ್ಯಕ್ಕೆ ಶ್ರೀಮಂತ ಕೊಡುಗೆಗಳನ್ನು ಕೊಟ್ಟಿತು ಪ್ರಾಚೀನ ಭಾರತ. ವಾಲ್ಮೀಕಿಯ 'ರಾಮಾಯಣ', ವ್ಯಾಸನ 'ಮಹಾಭಾರತ' ಜಗತ್ತಿನ ಅತಿ ಶ್ರೇಷ್ಠ ಕಾವ್ಯಗಳ ಪಂಕ್ತಿಗೆ ಸೇರುವ ಕೃತಿಗಳು. ಧರ್ಮ ಮತ್ತು ತತ್ತ್ವಶಾಸ್ತ್ರಗಳಲ್ಲಿ ಮಾತ್ರ ಭಾರತೀಯರು ಮುಂದುವರಿದಿದ್ದರೆಂಬುದು ತಪ್ಪು ಕಲ್ಪನೆ. ಬಂಗಾರವನ್ನು ಗಣಿಯಿಂದ ಮೊಟ್ಟ ಮೊದಲು ತೆಗೆದವರು ಹಿಂದೂಗಳು. ಕ್ರಿ. ಪೂ. 1500ರ ಹೊತ್ತಿಗೆ ಬೆಳ್ಳಿ, ತಾಮ್ರ, ಕಬ್ಬಿಣ ಮೊದಲಾದ ಲೋಹಗಳ ಗಣಿಗಳನ್ನೂ ತೆರೆದಿದ್ದರು ಇವರು. ದೆಹಲಿಯಲ್ಲಿರುವ 1,500 ವರ್ಷಗಳ ಹಿಂದಿನ ಕಬ್ಬಿಣದ ಕಂಬವೊಂದು ಇಂದಿಗೂ ತುಕ್ಕು ಹಿಡಿಯದೆ. ಪ್ರಾಚೀನ ಹಿಂದೂಗಳ ತಂತ್ರಜ್ಞಾನಕ್ಕೆ ಸಾಕ್ಷಿಯಾಗಿದೆ. ಕ್ರಿ. ಪೂ. 3000ದ ಹೊತ್ತಿಗೆ ಭಾರತ ಪರದೇಶಗಳೊಂದಿಗೆ ವ್ಯಾಪಾರ ಮಾಡುತ್ತಿತ್ತು. ಎಂದರೆ ಇಲ್ಲಿಯವರು ಹಡಗುಗಳನ್ನು ಕಟ್ಟುವುದರಲ್ಲಿ ನಡೆಸುವುದರಲ್ಲಿ ನಿಪುಣರಾಗಿದ್ದರು. ಕಾನ್‌ಸ್ಟಾಂಟಿನೋಪಲಿನ ಸುಲ್ತಾನನ ಹಡಗುಗಳನ್ನು ಭಾರತ ನಿರ್ಮಿಸುತ್ತಿತ್ತು. ಭಾರತ ಹಲವು ದೇಶಗಳೊಡನೆ ವಾಣಿಜ್ಯಸಂಪರ್ಕ ಹೊಂದಿದ್ದುದರಿಂದಲೆ, ಕೊಲಂಬಸ್ ಭಾರತಕ್ಕೆ ದಾರಿಯನ್ನು ಹುಡುಕಲು ಹೊರಟದ್ದು. ಜ್ಞಾನದ ಅನ್ವೇಷಣೆಯಲ್ಲಿ ಭಾರತೀಯರು ಹಿಂದುಳಿದಿರಲಿಲ್ಲ. ಆರ್ಯಭಟ್ಟ ಭೂಮಿ ಗುಂಡಗಿದೆ. ಸೂರ್ಯನ ಸುತ್ತ ಭೂಮಿ ಸುತ್ತುವುದರಿಂದ ಸೂರ್ಯೋದಯ, ಸೂರ್ಯಾಸ್ತಗಳಾಗುತ್ತವೆ ಎಂದು ಹೇಳಿದ. (ಹದಿನಾರನೆಯ ಶತಮಾನದಲ್ಲಿ ಈ ಅಭಿಪ್ರಾಯವನ್ನು ವ್ಯಕ್ತಪಡಿಸಿದುದಕ್ಕೆ ಯೂರೋಪಿನಲ್ಲಿ ಕೊಪರ್ನಿಕಸ್ ಮತ್ತು ಗೆಲಿಲಿಯೊ ಕಷ್ಟಪಡಬೇಕಾಯಿತು.) ಭಾರತದ ಖಗೋಲಶಾಸ್ತ್ರಜ್ಞರು ಗ್ರಹಣಗಳು ಯಾವಾಗ ಆಗುತ್ತವೆ ಎಂದು ಕಂಡುಹಿಡಿಯುತ್ತಿದ್ದರು. ಚಂದ್ರನ ವ್ಯಾಸ, ಧ್ರುವಗಳಿರುವ ಸ್ಥಳ ಎಲ್ಲವನ್ನು ಇವರು ತಿಳಿದಿದ್ದರು. ಇಂದು ಅರಾಬಿಕ್ ಅಂಕಿಗಳೆಂದು ಪ್ರಸಿದ್ಧವಾಗಿರುವ ಅಂಕಿಗಳು ವಾಸ್ತವವಾಗಿ ಭಾರತದಿಂದ ಅರೆಬಿಯದ ಮೂಲಕ ಜಗತ್ತಿನ ಇತರ ಭಾಗಗಳಿಗೆ ಹಬ್ಬಿದುವು. ದಶಕ, ಶತಕಗಳೆಂದು ಸ್ಥಾನದಿಂದ ಲೆಕ್ಕಮಾಡುವುದು, ಸೊನ್ನೆಯ ಬಳಕೆ, ದಶಮಾಂಶ ಪದ್ಧತಿ ಇವೆಲ್ಲ ಗಣಿತಶಾಸ್ತ್ರಕ್ಕೆ ಭಾರತ ನೀಡಿದ ಅಮೂಲ್ಯ ಕೊಡುಗೆಗಳು. ಬೀಜಗಣಿತದಲ್ಲಿ ಋಣ ಮೌಲ್ಯದ ಕಲ್ಪನೆ ಭಾರತದಲ್ಲಿ ಅವತರಿಸಿತು. ಕ್ರಿ. ಪೂ. ಎರಡನೆಯ ಶತಮಾನದಲ್ಲಿ ನಾಗಾರ್ಜುನ ಪಾದರಸವನ್ನು ಕುರಿತು ಒಂದು ಗ್ರಂಥವನ್ನು ಬರೆದ. ಪೋರಸ್ ಅಲೆಗ್ಸಾಂಡರನಿಗೆ ಕೊಟ್ಟ ಉಡುಗೊರೆ 14 ಕಿಲೋಗ್ರಾಂ ಉಕ್ಕು. ಸುಶ್ರುತ ಒಂದು ಗ್ರಂಥದಲ್ಲಿ ಸುಮಾರು 120 ಶಸ್ತ್ರಚಿಕಿತ್ಸೆಯ ಆಯುಧಗಳನ್ನೂ ಹಲವು ಶಸ್ತ್ರಚಿಕಿತ್ಸೆಗಳನ್ನೂ ವರ್ಣಿಸಿದ್ದಾನೆ. ಶಸ್ತ್ರಚಿಕಿತ್ಸೆ ಮಾಡುವಾಗ ಗಾಯದಿಂದ ವಿಷವಾಗದಂತೆ ನೋಡಿಕೊಳ್ಳುವ ಅಗತ್ಯವನ್ನು ಹೇಳಿದ್ದಾನೆ. ಶಸ್ತ್ರಚಿಕಿತ್ಸೆಯ ಕಾಲದಲ್ಲಿ ನೋವು



ಪ್ರಾಚೀನ ಭಾರತದ ವೈದ್ಯಶಾಸ್ತ್ರಜ್ಞ ಸುಶ್ರುತ

ಅರಿಯುವಂತೆ ಮಾಡಲು ಔಷಧಗಳನ್ನು ತಿಳಿಸಿದ್ದಾನೆ. ಕ್ರಿ. ಪೂ. 226ರ ಹೊತ್ತಿಗೆ ಭಾರತದಲ್ಲಿ ಆಸ್ಪತ್ರೆಗಳಿದ್ದುವು. ಕ್ರಿ. ಶ. ಎರಡರಿಂದ ಏಳನೆಯ ಶತಮಾನಗಳಿಗೆ ಸೇರಿದ ಅಜಂತ, ಎಲ್ಲೋರ ಚಿತ್ರಗಳು ಪ್ರಪಂಚದಲ್ಲಿ ಅದ್ವಿತೀಯ.

**ಪೂರ್ವ-ಪಶ್ಚಿಮಗಳ ಸೇತುವೆ**

ಭಾರತಕ್ಕೆ ಬಂದ ಆರ್ಯರ ಬುಡಕಟ್ಟಿನವರೇ ಆದ ಇನ್ನೊಂದು ಪಂಗಡದವರು ಮೀಡರು. ಪಶ್ಚಿಮಕ್ಕೆ ಹೊರಟು ಪರ್ಷಿಯವನ್ನು ಸೇರಿದರು. ಇಲ್ಲಿಗೆ ಯಾವಾಗ ತಲಪಿದರು ಎನ್ನುವುದೂ ಸ್ಪಷ್ಟವಿಲ್ಲ. ಪರ್ಷಿಯದ ಮೊದಲ ಪ್ರಸ್ತಾಪ ಇರುವುದು ಕ್ರಿ. ಪೂ. 837ರಲ್ಲಿ. ಆ ಹೊತ್ತಿಗೆ ಅಲ್ಲಿ ಇಪ್ಪತ್ತೇಳು ರಾಜ್ಯಗಳಲ್ಲಿ ರಾಜರು ಆಳುತ್ತಿದ್ದರಂತೆ. ಚರಿತ್ರೆಯಲ್ಲಿ ಕೇಳುವ ಪರ್ಷಿಯದ ಮೊದಲನೆಯ ಅರಸ ಡಿಯೊಸೀಸ್ (ಕ್ರಿ. ಪೂ. 8ನೆಯ ಶತಮಾನ). ಇವನ ಕಾಲದಲ್ಲಿ ಮೀಡರ ಶಕ್ತಿ ಬೆಳೆಯಿತು. ಸಿಯಾಕ್ಸರೀಸ್ (ಕ್ರಿ. ಪೂ. 640–584) ಅಸೀರಿಯನರನ್ನು ಸೋಲಿಸಿ, ಸಾರ್ಡಿಸ್ ನಗರದ ಬಾಗಿಲವರೆಗೆ ನುಗ್ಗಿದ. ಆ ಹೊತ್ತಿಗೆ ಸೂರ್ಯಗ್ರಹಣವಾಯಿತು. ಇದು ತನಗೊಂದು ಎಚ್ಚರಿಕೆ ಎಂದು ಭಾವಿಸಿ ಶತ್ರುಗಳೊಡನೆ ಸಂಧಿಮಾಡಿಕೊಂಡು ಹಿಂದಿರುಗಿದ. ಇವನು ಸತ್ತ ಕೆಲವೇ ವರ್ಷಗಳಲ್ಲಿ ಇವನ ರಾಜ್ಯ ಅಳಿಯಿತು. ಇದಕ್ಕೆ ಬಹುಮಟ್ಟಿಗೆ ಇವನ ಮಗ ಮತ್ತು ಅವನ ಪ್ರಜೆಗಳು ನಡೆಸಿದ ಭೋಗದ ಜೀವನ ಕಾರಣ. ಪರ್ಷಿಯದ ಚರಿತ್ರೆಯಲ್ಲಿ ಅತಿ ಸಮರ್ಥ ಅರಸರಲ್ಲಿ ಒಬ್ಬ ಸೈರಸ್ (ಕ್ರಿ. ಪೂ. 555–529). ಕರ್ತೃತ್ವಶಾಲಿ, ವಿವೇಕಿ, ಸೋತವರಿಗೆ ದಯೆ ತೋರಿಸಬಲ್ಲ ಉದಾರಿ. ಇವನು ಜಗತ್ತಿನ ಚರಿತ್ರೆಯ ಶಕ್ತ ಪ್ರಭುಗಳ ಪಂಕ್ತಿಗೆ ಸೇರುವವನು. ಮೀಡಿಯ ಪರ್ಷಿಯ ಎರಡು ರಾಜ್ಯಗಳ ಸೈನ್ಯಗಳನ್ನು ಒಂದುಗೂಡಿಸಿದನು : ಹಲವು ರಾಜ್ಯಗಳನ್ನು ಗೆದ್ದು ಪರ್ಷಿಯನ್ ಸಾಮ್ರಾಜ್ಯವನ್ನು ಸ್ಥಾಪಿಸಿದನು. ಇವನ ಪರಮತಸಹಿಷ್ಣುತೆ ಮೆಚ್ಚುವಂಥದು. ತನ್ನ ಕೈಯಲ್ಲಿ ಸೋತವರ ನಗರಗಳನ್ನು ಲೂಟಿಮಾಡಲಿಲ್ಲ ; ಅವರ ದೇವಾಲಯಗಳನ್ನು ಕೊಳ್ಳೆಹೊಡೆಯಲಿಲ್ಲ ; ಅಷ್ಟೇ ಅಲ್ಲ, ಅವರ ದೇವತೆಗಳಿಗೆ ಗೌರವವನ್ನು ತೋರಿಸಿದ. ಒಮ್ಮೊಮ್ಮೆ ಇವನು ತೋರುತ್ತಿದ್ದ ಕ್ರೌರ್ಯ ಮಾತ್ರ ಭಯಂಕರ. ಸಣ್ಣ ಪಂಗಡವೊಂದರ ಮೇಲೆ ದಾಳಿಮಾಡಿದಾಗ ಯುದ್ಧದಲ್ಲಿ ಇವನು ಸತ್ತ. ಇವನ ಬಳಿಕ ಅರಸನಾದ ಇವನ ಮಗ ಕ್ಯಾಂಬೈಸಿಸ್ ಹುಚ್ಚನಾಗಿದ್ದ. ದಕ್ಷತೆಯಿಂದ ಆಳಿದ ಮುಂದಿನ ಅರಸ ಡೇರಿಅಸ್ (ಕ್ರಿ. ಪೂ. 521–485). ಇವನು ಪರ್ಷಿಯದ ಅತಿ ಸಮರ್ಥ ದೊರೆ. ರಾಜ್ಯದ ಹಲವು ಭಾಗಗಳ ಅಧಿಕಾರಿಗಳು ತಾವೇ ಸ್ವತಂತ್ರರೆಂದು ಘೋಷಿಸಿಕೊಂಡಿದ್ದರು. ನಿರ್ದಯನಾಗಿ ಅವರನ್ನು ಸದೆಬಡಿದ. ಪರ್ಷಿಯಕ್ಕೆ ಹಿಂದೆ ಇರದಿದ್ದಂಥ ಶಾಂತಿ, ವ್ಯವಸ್ಥೆಗಳನ್ನು ತಂದಿತ್ತ. ದಕ್ಷಿಣ ರಷ್ಯ, ಅಫ್ಘಾನಿಸ್ಥಾನ ಮತ್ತು ಸಿಂಧೂನದಿಯ ವರೆಗೆ ಇವನ ಸೈನ್ಯಗಳು ದಾಳಿ ಇಟ್ಟುವು. ಗ್ರೀಕ್ ನಗರರಾಜ್ಯಗಳು ಒಂದಾಗಿ ತನಗೆ ಅಪಾಯವಾದೀತೆಂಬ ಭಯ ಇವನು ಗ್ರೀಸ್‌ಗೆ ಮುತ್ತಿಗೆ ಹಾಕಿದುದಕ್ಕೆ ಕಾರಣವಿರಬೇಕು. ಇದು ಅವಿವೇಕದ ಹೆಜ್ಜೆಯಾಯಿತು. ಮ್ಯಾರಥಾನಿನಲ್ಲಿ ಗ್ರೀಕರಿಂದ ಸೋಲನ್ನು ಅನುಭವಿಸಿ ಹಿಂದಿರುಗಿದ ಸ್ವಲ್ಪ ಕಾಲದಲ್ಲಿಯೇ ತೀರಿಕೊಂಡ. ಡೇರಿಅಸ್‌ನ ಚಕ್ರಾಧಿಪತ್ಯದಷ್ಟು ವಿಸ್ತಾರವಾದ ಚಕ್ರಾಧಿಪತ್ಯ ಅವರೆಗಿನ ಚರಿತ್ರೆಯಲ್ಲಿಯೇ ಕಾಣುವುದಿಲ್ಲ. ಇವನ ಅನಂತರ ಪ್ರಜೆಗಳು ಸುಖದ ಜೀವನದತ್ತ ಮನಸ್ಸುಕೊಟ್ಟರು. ದಿನದ ಮುಖ್ಯ ಚಟುವಟಿಕೆ ತಿನ್ನುವುದೇ ಆಯಿತು. ಡೇರಿಅಸ್‌ನ ಮಗ ಜರ್‌ಕ್ಸೀಸನದೇ ಭೋಗಜೀವನ. ಇವನು ಸಲಾಮಿಸಿನಲ್ಲಿ ಗ್ರೀಕರ ಕೈಯಲ್ಲಿ ಸೋತ. ಕ್ರಿ. ಪೂ. 338ರಲ್ಲಿ ಮೂರನೆಯ ಡೇರಿಅಸ್ ಅರಸನಾದ. ಇವನ ಕಾಲದಲ್ಲಿ ಅಲೆಗ್ಸಾಂಡರ್ ಪರ್ಷಿಯವನ್ನು ಮುತ್ತಿದ. ಗ್ರಾನಿಕಸ್ ಕದನದಲ್ಲಿ 20.000 ಪರ್ಷಿಯನ್ನರು ಸತ್ತರು. ಗ್ರೀಕರ ಕಡೆ 115 ಜನ. ಇಸಸ್‌ನಲ್ಲಿ 30.000 ಗ್ರೀಕರ ಸೈನ್ಯವನ್ನು 6.00.000 ಜನ ಪರ್ಷಿಯನರ ಸೈನ್ಯ ಎದುರಿಸಿತು. 110.000 ಜನ ಪರ್ಷಿಯನ್ನರು ಸತ್ತರು. ಈ ಎಲ್ಲ ಯುದ್ಧಗಳಲ್ಲಿ ಪರ್ಷಿಯಕ್ಕೆ ಸೋಲು. ಡೇರಿಅಸ್ ಅಲೆಗ್ಸಾಂಡರನಿಂದ ಸೋತು ಸತ್ತಾಗ ಪರ್ಷಿಯದ ಪತನವಾಯಿತು.

ಪರ್ಷಿಯದ ಜನ ನೋಡಲು ಬಹು ಲಕ್ಷಣವಾದವರು. ಶ್ರೀಮಂತಿಕೆ ಬೆಳೆದಂತೆ ಅಲಂಕಾರಪ್ರಿಯರೂ ಆದರು. ಸುಗಂಧದ್ರವ್ಯಗಳೆಂದರೆ ಇವರಿಗೆ ಬಹು ಪ್ರೀತಿ. ಅರಸ ಯುದ್ಧಭೂಮಿಗೆ ಹೋಗುವಾಗಲೂ ಸುವಾಸನಾ ದ್ರವ್ಯಗಳನ್ನು ಕೊಂಡೊಯ್ಯುತ್ತಿದ್ದ. ಇವರ ಭಾಷೆ ಸಂಸ್ಕೃತ ಭಾಷೆಗೆ ಹತ್ತಿರದ ನೆಂಟ. ಬ್ಯಾಬಿಲೋನಿಯನರು ಮುನ್ನೂರು ಚಿತ್ರಗಳ ಲಿಪಿಯಿಂದ ಮೂವತ್ತಾರು ಅಕ್ಷರಗಳನ್ನು ಮಾಡಿಕೊಂಡು ಬಳಸಿದರು. ಇವರಿಗೆ ಸಾಹಿತ್ಯದಲ್ಲಿ ಆಸಕ್ತಿ ಕಡಮೆ. ಕೈಗಾರಿಕೆಯನ್ನು ಬೆಳೆಸುವ ಶ್ರದ್ಧೆಯನ್ನು ಇವರು ತೋರಲಿಲ್ಲ. ಆದರೆ ಸಾರಿಗೆ ಸಂಪರ್ಕಗಳನ್ನು ವಿಸ್ತರಿಸುವಷ್ಟು ವಿಜ್ಞಾನ ತಿಳಿದಿತ್ತು. ಸೂಸಾ ಎಂಬ ನಗರದಿಂದ ಸಾರ್ಡಿಸ್ ನಗರದವರೆಗಿನ ರಸ್ತೆ 2.400 ಕಿಲೋಮಿಟರುಗಳ ಉದ್ದವಿತ್ತು.

**ಚೀನದ ಪ್ರಾಚೀನ ವೈಭವ**

ಅತಿ ದೀರ್ಘ ಸಾಂಸ್ಕೃತಿಕ ಚರಿತ್ರೆಯನ್ನು ಪಡೆದಿರುವ ದೇಶಗಳಲ್ಲಿ ಚೀನ ಒಂದು. ಕಲೆ, ವಿಜ್ಞಾನ, ತತ್ತ್ವಶಾಸ್ತ್ರಗಳಲ್ಲಿ ಆಶ್ಚರ್ಯಕರವಾದ ಪ್ರಗತಿಯನ್ನು ನೂರಾರು ವರ್ಷಗಳ ಹಿಂದೆಯೇ ಸಾಧಿಸಿದ್ದ ದೇಶ ಇದು. ಚೀನೀಯರು ಎಲ್ಲಿಂದ ಬಂದವರೊ ತಿಳಿಯದು. ಕ್ರಿ. ಪೂ. ಇನ್ನೂರನೆಯ ಶತಮಾನದಲ್ಲಿಯೇ ಇಲ್ಲಿ ಆಯುಧಗಳನ್ನು ಬಳಸುತ್ತಿದ್ದ ಜನರಿದ್ದರು ಎಂದು ತೋರುತ್ತದೆ. ಭಾರತದಂತೆ ಚೀನದಲ್ಲಿಯೂ ದಂತಕಥೆಗಳು ಬೇಕಾದಷ್ಟಿವೆ ; ಪ್ರಾಚೀನ ಇತಿಹಾಸದ ನಿರ್ದಿಷ್ಟ ವಿವರಗಳು ದೊರೆಯುವುದು ಕಷ್ಟ. ನಮಗೆ ಚಾರಿತ್ರಿಕವಾಗಿ ತಿಳಿದಿರುವ ಮೊದಲನೆಯ ದೊರೆಯ ಹೆಸರು ಫುಷ್ಸೀ ; ಕ್ರಿ. ಪೂ. 2852ರಲ್ಲಿ ಈತ ರಾಜನಾದ. ಚೀನೀಯರನ್ನು ನಾಗರಿಕ ಜನಾಂಗವನ್ನಾಗಿ ಮಾಡುವುದರಲ್ಲಿ ಇವನದು ಅಪಾರ ಶ್ರಮ. ಬರಹ, ಚಿತ್ರಕಲೆ, ಪ್ರಾಣಿಗಳನ್ನು ಪಳಗಿಸಿ ಉಪಯೋಗಿಸಿಕೊಳ್ಳುವುದು, [illegible] ರೇಷ್ಮೆ ಹುಳುಗಳಿಂದ ರೇಷ್ಮೆ ಮಾಡುವುದು, ಬಲೆಗಳಲ್ಲಿ ಮೀನು ಹಿಡಿಯುವುದು ಇವನ ಕಾಲದಲ್ಲಿ ಪ್ರಾರಂಭ. ಸಂಗೀತ, ಚಿತ್ರಕಲೆ

ವಸ್ತ್ರ ತಯಾರಿಕೆಯೂ ಇವನ ಆಡಳಿತದಲ್ಲಿ. ಇವನ ಅನಂತರ ಬಂದ ಷುನ್ ನಂಗ್ ಬೇಸಾಯವನ್ನು ಕಲಿಸಿದ. ವಾಣಿಜ್ಯವ್ಯಾಪಾರಗಳನ್ನು ವ್ಯವಸ್ಥೆಗೊಳಿಸಿದ. ಚೀನದ ವೈದ್ಯಶಾಸ್ತ್ರ ಇವನ ಕಾಲದಲ್ಲಿ ಪ್ರಾರಂಭವಾಯಿತು. ಪ್ರಾಚೀನ ಚೀನ ಚಕ್ರವರ್ತಿಗಳ ವಿಷಯದಲ್ಲಿ, ಭಾಗ್ಯಶಾಲಿಯಾಗಿದ್ದಂತೆ ತೋರುತ್ತದೆ. ಒಂದು ನೂರು ವರ್ಷ ಆಳಿದ ಎಂದು ಹೇಳುವ ಹ್ಯುಅಂಗ್ ಟಿ (ಕ್ರಿ. ಪೂ. 2697–2597) ಕಾಲದಲ್ಲಿ ಅಯಸ್ಕಾಂತ, ಚಕ್ರಗಳು ಬಳಕೆಗೆ ಬಂದಂತೆ ಕಾಣುತ್ತದೆ. ಇಟ್ಟಿಗೆಯ ಮನೆಗಳೂ ಈ ಕಾಲದಲ್ಲಿ ನಿರ್ಮಾಣವಾದುವು. ಆಕಾಶದ ಅಧ್ಯಯನಕ್ಕಾಗಿ ಒಂದು ವೀಕ್ಷಣಶಾಲೆ ಸಿದ್ಧವಾಯಿತು. ಚೀನೀಯರು ಕ್ರಿ. ಪೂ. ಇಪ್ಪತ್ತುಮೂರನೆಯ ಶತಮಾನದಲ್ಲಿ ಅಣೆಕಟ್ಟುಗಳನ್ನು ಕಟ್ಟಿದರು. ಕ್ರಿ. ಪೂ. ಹನ್ನೆರಡನೆಯ ಶತಮಾನದವರೆಗೆ ಅಭಿವೃದ್ಧಿಯ ದಾರಿಯಲ್ಲಿ ನಡೆದ ಚೀನ ಚೌ–ಸಿನ್ (ಕ್ರಿ. ಪೂ. 1151-1123) ಕಾಲದಲ್ಲಿ ಅವನತಿಹೊಂದಿತು. ಅರಸನೂ ಅವನ ಹೆಂಡತಿಯೂ ವಿಲಾಸದ ಜೀವನದಲ್ಲಿ ಮೆರೆದರು. ಎದುರು ಬಿದ್ದವರನ್ನು ಇದ್ದಲು ಉರಿಯುತ್ತಿರುವ ಹಳ್ಳಗಳಲ್ಲಿ ನೂಕಿಸುವುದು, ಸುಡುತ್ತಿರುವ ಲೋಹವನ್ನು ಕೈಯಲ್ಲಿ ಹಿಡಿಸುವುದು ಇಂಥ ಶಿಕ್ಷೆಗಳಿಗೆ ಗುರಿಮಾಡಿದರು. ಚಕ್ರಾಧಿಪತ್ಯ ಒಡೆದು ಸಣ್ಣ ಸಣ್ಣ ಪಾಳೆಯಗಾರಿಕೆಗಳು ತಲೆ ಎತ್ತಿದುವು. ಇವುಗಳಲ್ಲಿ ಟ್ಸಿ ಮತ್ತು ಚಿನ್ ಪ್ರಾಂತಗಳು ಪ್ರಬಲವಾದುವು. (ಚೀನದ ಹೆಸರು 'ಚಿನ್' ರಾಜ್ಯದ ಹೆಸರಿನಿಂದ ಬಂದಿದೆ.) ಚೆಂಗ್ ಮತ್ತು ಚಿನ್ ಪ್ರಾಂತಗಳು ಕ್ರಿ. ಪೂ. ಆರನೆಯ ಶತಮಾನದಲ್ಲಿ ಕಾನೂನುಗಳನ್ನು ವರ್ಗೀಕರಿಸುವ ಕಾರ್ಯವನ್ನು ಕೈಗೊಂಡುವು. ಒಟ್ಟಿನಲ್ಲಿ ಈ ಕಾಲದಲ್ಲಿ ರಾಜ್ಯರಾಜ್ಯಗಳ ಅಂತಃಕಲಹ ಹೆಚ್ಚಾಗಿದ್ದಿತು. ಮತ್ತೆ ಒಂದು ವ್ಯವಸ್ಥೆಯನ್ನು ಸ್ಥಾಪಿಸಿದವನು ಷಿ ಹ್ವಾಂಗ್ ಟಿ (ಆಳ್ವಿಕೆ ಕ್ರಿ. ಪೂ. 220–209). ಚೀನದ ರಕ್ಷಣೆಗಾಗಿ ಉತ್ತರದಲ್ಲಿ ಮಹಾ ಗೋಡೆಯನ್ನು ಕಟ್ಟಿಸಿದವನು ಇವನೆ. ಇದು 2400 ಕಿಲೊಮೀಟರು ಉದ್ದ, 16.5 ಮೀಟರು ಎತ್ತರ, 5.8 ಮೀಟರು ಅಗಲ ಇದ್ದಿತು.

ಚೀನದಲ್ಲಿ ತತ್ತ್ವಶಾಸ್ತ್ರ ಅದ್ಭುತವಾಗಿ ಬೆಳೆಯಿತು. ಕ್ರಿ. ಪೂ. 1250ರ ಹೊತ್ತಿಗೆ ಯೂ-ಡ್ಸ್ಯು ಎಂಬ ತತ್ತ್ವಶಾಸ್ತ್ರಜ್ಞ ಪ್ರಸಿದ್ಧನಾಗಿದ್ದ. ಲವೊ ತ್ಸೆ (ಕ್ರಿ. ಪೂ. 604–517) ಮತ್ತು ಕನ್‌ಫ್ಯೂಷಿಯಸ್ (ಕ್ರಿ. ಪೂ. 551–478) ಚೀನದಾಚೆಯೂ ಖ್ಯಾತಿಯನ್ನು ವಿಸ್ತರಿಸಿದ ತತ್ತ್ವಜ್ಞಾನಿಗಳು. ಕನ್‌ಫ್ಯೂಷಿಯಸ್ ತರುಣನಾಗಿದ್ದಾಗ, ಟಂಗ್ ಷೀ ಎಂಬ ತತ್ತ್ವಶಾಸ್ತ್ರಜ್ಞನನ್ನು ಗಲ್ಲಿಗೇರಿಸಿದರು (ಕ್ರಿ. ಪೂ. 530). ಇವನು ಬಹು ಬುದ್ಧಿವಂತ. ಯಾವ ಅಭಿಪ್ರಾಯವನ್ನಾದರೂ ಸರಿ ಎಂದು ಸಾಧಿಸಬಲ್ಲ. ತಾನೇ ಇಂದು ಸರಿ ಎಂದು ತೋರಿಸಿದ್ದನ್ನು ನಾಳೆ ತಪ್ಪು ಎಂದು ತೋರಿಸುತ್ತಾನೆ. ಇಂದು ತಪ್ಪು ಎಂದು ಸಿದ್ಧಮಾಡಿದ್ದನ್ನು ನಾಳೆ ಸರಿ ಎಂದು ಸಿದ್ಧಮಾಡಿತೋರಿಸುತ್ತಾನೆ ಎಂಬುದು ಇವನ ಮೇಲಿನ ಆಪಾದನೆ. ಇವನು ಶಿಕ್ಷಾಶಾಸ್ತ್ರವನ್ನು ಕುರಿತು ಬರೆದ ಲೇಖನಗಳನ್ನು ಪ್ರಕಟಿಸಬಾರದೆಂದು ಸರಕಾರ ವಿಧಿಸಿದರೂ ತಾನೇ ಅವನ್ನು ಒಯ್ದು ಓದುಗರಿಗೆ ತಲಪಿಸಿ ಮೃತ್ಯುವನ್ನು ತಂದುಕೊಂಡ. ಕ್ರಿ. ಪೂ. ಐದು ಮತ್ತು ನಾಲ್ಕನೆಯ ಶತಮಾನಗಳಲ್ಲಿ ಭಾರತದ ವಾರಣಾಸಿ, ಗ್ರೀಸಿನ ಅಥೆನ್ಸ್, ಚೀನದ ಲೊ-ಯಾಂಗ್ ನಗರಗಳಿಗೆ ನೂರಾರು ಮಂದಿ ವಿಚಾರವಂತರು ಧಾವಿಸಿದರು. ಚಕ್ರವರ್ತಿ ವೂ ಡು (ಕ್ರಿ. ಪೂ. 140-87) ವಿನ ಗ್ರಂಥಾಲಯದಲ್ಲಿ, ಹಿಂದಿನ ಮಹಾಗ್ರಂಥಗಳ ಮೇಲೆ 3.123 ಪುಸ್ತಕಗಳು, ತತ್ತ್ವಶಾಸ್ತ್ರದ ಮೇಲೆ 2.705 ಪುಸ್ತಕಗಳು, 1.318 ಕಾವ್ಯ ಗ್ರಂಥಗಳು, 2.568 ಗಣಿತಶಾಸ್ತ್ರ ಪುಸ್ತಕಗಳು, 868 ವೈದ್ಯಶಾಸ್ತ್ರ ಪುಸ್ತಕಗಳು, 790 ಯುದ್ಧ ವಿದ್ಯೆಯನ್ನು ಕುರಿತ ಪುಸ್ತಕಗಳು ಇದ್ದುವಂತೆ!

ಜ್ಞಾನದಂತೆಯೇ ಚೀನದವರ ಮನಸ್ಸನ್ನು ಸೆಳೆದದ್ದು ಸೌಂದರ್ಯ. ಶಿಲ್ಪಕಲೆ, ಚಿತ್ರಕಲೆಗಳು ಇಲ್ಲಿ ಬೆಳೆದುವು. ಕಂಚಿನ ಸಾಮಾನುಗಳು, ಅರಗಿನ ಮೆರುಗು ಕೊಟ್ಟ ವಸ್ತುಗಳು, 'ಜೇಡ್' ಎಂಬ ಪ್ರಶಸ್ತಶಿಲೆಯ ಕೃತಿಗಳು ಇವುಗಳಿಗೆ ಚೀನ ಪ್ರಸಿದ್ಧವಾಯಿತು. ಚೀನದ ಪಿಂಗಾಣಿ ಸಾಮಾನುಗಳು ಅತಿ ಆಕರ್ಷಕ, ಜಗತ್ಪ್ರಸಿದ್ಧ.

ಚೀನ ಹಲವು ರೀತಿಯಲ್ಲಿ ಪಾಶ್ಚಾತ್ಯ ಪ್ರಪಂಚಕ್ಕಿಂತ ಶತಮಾನಗಳಷ್ಟು ಮುಂದಿದ್ದಿತು. ಕಾಗದ ತಯಾರಿಸುವುದರಲ್ಲಿ, ಮುದ್ರಣ ಕಂಡುಹಿಡಿಯುವುದರಲ್ಲಿ, ಸಿಡಿಮದ್ದು ಮಾಡುವುದರಲ್ಲಿ, ರೇಷ್ಮೆ ಬಟ್ಟೆಯ ತಯಾರಿಕೆಯಲ್ಲಿ, ಪಿಂಗಾಣಿ ಸಾಮಾನುಗಳ ರಚನೆಯಲ್ಲಿ ಚೀನ ಮೊದಲನೆಯದೆನಿಸಿತು. ತಿರುಗುವ ಆರಾಮ ಕುರ್ಚಿ ಮೊದಲು ಬಳಕೆಗೆ ಬಂದದ್ದು ಇಲ್ಲಿ! ಆದರೆ ಬಹು ಮಟ್ಟಿಗೆ ಈ ದೇಶ ಇತರ ದೇಶಗಳಿಂದ ದೂರವಾಗಿದ್ದು ತನ್ನ ಬಾಳನ್ನು ಬಾಳಿತು. ಚೀನೀ ಯಾತ್ರಿಕರು ಭಾರತಕ್ಕೆ ಬಂದಿದ್ದರು. ಚೀನೀಯರು ಭಾರತದಲ್ಲಿ ಹುಟ್ಟಿದ ಬೌದ್ಧಮತವನ್ನು ಅವಲಂಬಿಸಿದರು. ಆದರೆ ಚೀನ ಬಹುಕಾಲ ಅನ್ಯ ದೇಶಗಳೊಡನೆ ಹೆಚ್ಚು ಸಂಪರ್ಕ ಇರಿಸಿಕೊಳ್ಳಲಿಲ್ಲ.

## ಗ್ರೀಸಿನ ಕೊಡುಗೆ

ಪಾಶ್ಚಾತ್ಯ ಸಂಸ್ಕೃತಿಯ ತೊಟ್ಟಿಲು ಗ್ರೀಸ್. ಇಪ್ಪತ್ತೈದು ಶತಮಾನಗಳ ಹಿಂದೆ ಪಶ್ಚಿಮದ ಸಂಸ್ಕೃತಿ ಇಲ್ಲಿ ಜನಿಸಿತು. ಸಣ್ಣಸಣ್ಣ ನಗರರಾಜ್ಯಗಳಿಂದ ಕೂಡಿದ ಈ ಪ್ರದೇಶ ಜಗತ್ತಿನ ಚರಿತ್ರೆ ಸಂಸ್ಕೃತಿಗಳಿಗೆ ಸಲ್ಲಿಸಿದ ಕೊಡುಗೆ ಅಸಾಧಾರಣ. ಕ್ರಿ. ಪೂ. 1500ರ ಸುಮಾರಿಗೆ ಇಲ್ಲಿಗೆ ಬಂದ ಅನಾಗರಿಕರು ಇಲ್ಲಿಯೇ ನೆಲಸಿದರು, ಕ್ರಮೇಣ ಒಂದು ನಾಗರಿಕತೆಯನ್ನು ಸೃಷ್ಟಿಸಿದರು. ಇಲ್ಲಿ ಸಣ್ಣಸಣ್ಣ ನಗರ ರಾಜ್ಯಗಳಾದುವು—ಸ್ಪಾರ್ಟ, ಅಥೆನ್ಸ್, ಥೀಬ್ಸ್, ಆರ್ಗಾಸ್ ಇಂಥವು. ಟ್ರಾಯ್‌ನ ಮೇಲೆ ಯುದ್ಧ ಮಾಡಿದಾಗ ಅಥವಾ ಹೊರಗಿನವರ ದಾಳಿಯ ಭಯವಿದ್ದಾಗ ಈ ರಾಜ್ಯಗಳು ಒಂದುಗೂಡುತ್ತಿದ್ದುವು. ಇಂಥ ವಿಪತ್ತು ಇಲ್ಲದಿದ್ದಾಗ ಇವುಗಳಲ್ಲಿ ಅಂತಃಕಲಹಗಳು ನಡೆಯುತ್ತಲೇ ಇದ್ದುವು. ಈಗಿನ ಮಾನಗಳಿಂದ ನೋಡಿದರೆ ಎಲ್ಲ ಸಣ್ಣ ಸಣ್ಣ ರಾಜ್ಯಗಳು. ಅಥೆನ್ಸನ್ನು ಬಿಟ್ಟರೆ ಯಾವ ರಾಜ್ಯದಲ್ಲಿಯೂ ಇಪ್ಪತ್ತು ಸಾವಿರಕ್ಕಿಂತ ಹೆಚ್ಚು ಜನಸಂಖ್ಯೆ ಇಲ್ಲ. ಗ್ರೀಸಿನ ಅತ್ಯುಚ್ಚ ಕಾಲ ಅಥೆನ್ಸಿನ ಸ್ವರ್ಣಯುಗ—ಪೆರಿಕ್ಲೀಸನ ಆಡಳಿತದಲ್ಲಿ (ಕ್ರಿ.ಪೂ. 460–430). ಸ್ಪಾರ್ಟ ಮತ್ತು ಇತರ ದೇಶಗಳ ಅಸೂಯೆ ಹಲವು ಕಲಹಗಳಿಗೆ ಕಾರಣವಾಯಿತು. ಅಥೆನ್ಸ್ ಗೆದ್ದ ಪ್ರದೇಶಗಳ ಜನರ ಅತೃಪ್ತಿಯೂ ಹೊಗೆಯಾಡತೊಡಗಿತು. ಕ್ರಿ. ಪೂ. 431ರಲ್ಲಿ ಸಮುದ್ರವ್ಯಾಪಾರಿ ಅಥೆನ್ಸ್ ಮತ್ತು ಬಲಿಷ್ಠ ಭೂಸೈನ್ಯ ಹೊಂದಿದ ಸ್ಪಾರ್ಟ ಇವುಗಳ ನಡುವೆ ಯುದ್ಧ ನಡೆಯಿತು.

ಹಲವು ರಾಜ್ಯಗಳು ಈ ಸುಳಿಯಲ್ಲಿ ಸಿಕ್ಕಿದುವು. ಅಥೆನ್ಸ್‌ನಲ್ಲಿ ಪ್ಲೇಗ್ ಹಬ್ಬಿತು. ಹಲವು ವರ್ಷಗಳ ಕಾಲ ನಡೆದ ಯುದ್ಧ ಅಥೆನ್ಸಿನ ಸೋಲಿನಲ್ಲಿ ಮುಕ್ತಾಯವಾಯಿತು. ಅಥೆನ್ಸ್ ತನ್ನ ಸ್ವಾತಂತ್ರ್ಯವನ್ನು ಕಳೆದುಕೊಂಡಿತು. ಕ್ರಿ. ಪೂ. 371ರಲ್ಲಿ ಥೀಬ್ಸ್ ಸ್ಪಾರ್ಟವನ್ನು ಸೋಲಿಸಿತು. ಕ್ರಿ. ಪೂ. 360ರಲ್ಲಿ ಮ್ಯಾಸಿಡೋನಿಯದ ಫಿಲಿಪ್ ಗ್ರೀಕ್ ನಗರರಾಜ್ಯಗಳನ್ನು ಸೋಲಿಸಿದ. ಇವನ ಮಗನೇ ಅಲೆಗ್ಸಾಂಡರ್.

ಕ್ರಿ. ಪೂ. 600 ರಿಂದ 300ರವರೆಗಿನ ಅವಧಿಯಲ್ಲಿ ಗ್ರೀಸಿನಲ್ಲಿ—ಮುಖ್ಯವಾಗಿ ಅಥೆನ್ಸಿನಲ್ಲಿ—ನಾಗರಿಕತೆ, ಸಂಸ್ಕೃತಿಗಳು ಸಾಧಿಸಿದ ಪ್ರಗತಿ ಜಗತ್ತಿಗೆ ಇನ್ನೂ ಅಚ್ಚರಿಯನ್ನುಂಟುಮಾಡುತ್ತಿದೆ. ಪಾಶ್ಚಾತ್ಯರಿಗೆ ತರ್ಕವನ್ನು ಕಲಿಸಿದ ಕೀರ್ತಿ ಗ್ರೀಕರದು. ಸಾಕ್ರಟೀಸ್, ಪ್ಲೇಟೋ, ಅರಿಸ್ಟಾಟಲ್—ಈ ಮೂವರು ಜಗತ್ತಿನ ತತ್ತ್ವಜ್ಞಾನಿಗಳಲ್ಲಿ ಮೊದಲ ಪಂಕ್ತಿಗೆ ಸೇರುವವರು; ಸಾಕ್ರಟೀಸನ ಶಿಷ್ಯ ಪ್ಲೇಟೋ, ಅವನ ಶಿಷ್ಯ ಅರಿಸ್ಟಾಟಲ್. ತರ್ಕಶಾಸ್ತ್ರ ತತ್ತ್ವಶಾಸ್ತ್ರಗಳಲ್ಲಿ ಮೂವರದೂ ಅಮರ ಕೀರ್ತಿ. ಎಂಥ ಅಸಾಧಾರಣ ಗುರು-ಶಿಷ್ಯ ಪರಂಪರೆ! ಅಲ್ಲದೆ ಈ ಮೂವರಲ್ಲಿಯೂ ಕಂಡುಬರುವ ನಿರ್ಭಯ, ಸ್ವತಂತ್ರ ವಿಚಾರ ರೀತಿ ಅಷ್ಟೇ ಆಶ್ಚರ್ಯಕರ. (ಮುಂದೆ ಹಲವು ಶತಕಗಳವರು ಅರಿಸ್ಟಾಟಲನ ಮಾತನ್ನು ದೇವವಾಕ್ಯ ಎಂದು ಭಾವಿಸಿ, ಅವನು ತೋರಿದ ಧೀರ ವಿಚಾರ ಮನೋವೃತ್ತಿಯನ್ನು ಮರೆತದ್ದು ಅವನ ತಪ್ಪಲ್ಲ.) ರಾಜ್ಯಶಾಸ್ತ್ರದಲ್ಲಿ ಪ್ಲೇಟೋ, ಅರಿಸ್ಟಾಟಲರದ ಮುಖ್ಯ ಹೆಸರುಗಳು. ಪ್ಲೇಟೋನ 'ಗಣರಾಜ್ಯ' ಇಂದಿಗೂ ರಾಜ್ಯಶಾಸ್ತ್ರದ ವಿದ್ಯಾರ್ಥಿಗಳು ಓದಬೇಕಾದ ಗ್ರಂಥ. ರಾಜ್ಯದ ಆಡಳಿತ ವ್ಯವಸ್ಥೆಯಲ್ಲಿ ಹಲವು ಪ್ರಯೋಗಗಳನ್ನು ಗ್ರೀಸ್ ನಡೆಸಿತು. ರಾಜಪ್ರಭುತ್ವ (ಕ್ರಿ. ಪೂ. ಎಂಟನೆಯ ಶತಮಾನದವರೆಗೆ), ವಿಶಿಷ್ಟ ವರ್ಗ ಪ್ರಭುತ್ವ (ಕ್ರಿ. ಪೂ. 8–7ನೆಯ ಶತಮಾನಗಳು), ಗಣರಾಜ್ಯ—ಎಲ್ಲ ಬಗೆಯ ಪದ್ಧತಿಗಳ ಪ್ರಯೋಗವನ್ನು ಗ್ರೀಸಿನಲ್ಲಿ ಕಾಣಬಹುದು. ಗಣರಾಜ್ಯ ಪದ್ಧತಿ ಪೆರಿಕ್ಲೀಸನ ಕಾಲದಲ್ಲಿ ಉತ್ತುಂಗಶಿಖರವನ್ನು ಮುಟ್ಟಿತು. ಆತ ಒಂದು ಭಾಷಣದಲ್ಲಿ ಅಥೆನ್ಸ್ ರಾಜ್ಯವನ್ನು ವರ್ಣಿಸಿದ್ದಾನೆ. ಇಂದಿಗೂ ಅದನ್ನು ಆದರ್ಶ ಗಣರಾಜ್ಯದ ಚಿತ್ರವನ್ನಾಗಿ ಅಭ್ಯಾಸ ಮಾಡಬಹುದು. ಈ ಮೂರು ಪದ್ಧತಿಗಳಲ್ಲದೆ 'ಟಿರೆನಿ' ಎಂಬ ಇನ್ನೊಂದು ಪದ್ಧತಿಯನ್ನು ಗ್ರೀಸ್‌ನಲ್ಲಿ ಕಾಣಬಹುದು. (ಇಂದು 'ಟಿರೆನಿ' ಎಂದರೆ ಕ್ರೂರ ಆಳ್ವಿಕೆ ಎಂದು; ಆದರೆ ಇಲ್ಲಿನ ಸಂದರ್ಭದಲ್ಲಿ ಆ ಅರ್ಥವಲ್ಲ. ಜನರು ಅನುಭವಿಸುವ ಕಷ್ಟ ಮತ್ತು ಅನ್ಯಾಯಗಳನ್ನು ಸರಿಪಡಿಸುವೆನೆಂದು ಭರವಸೆ ಇತ್ತು ಅವರ ಬೆಂಬಲದಿಂದ ಅಧಿಕಾರಕ್ಕೆ ಬರುವುದು 'ಟಿರೆನಿ': ಹೀಗೆ ಬಂದವನು 'ಟೈರೆಂಟ್'.) ಗ್ರೀಕರು ಸೃಷ್ಟಿಸಿದ ಕಲಾಕೃತಿಗಳು ಅದ್ಭುತವಾದಂಥವು. ಬಿಳಿಯ ಅಮೃತಶಿಲೆಯಲ್ಲಿ ಅವರು ಸೃಷ್ಟಿಸಿದ ಶಿಲ್ಪಕೃತಿಗಳು, ಪಾಲಿಗ್ನಾಟಸ್, ಜೂಕ್ಸಿಸ್, ಅಪೆಲೀಸ್ ಮೊದಲಾದ ಚಿತ್ರಕಾರರ ಚಿತ್ರಗಳು ಅಂದಿನ ಜಗತ್ತಿನಲ್ಲಿ ಪ್ರಸಿದ್ಧವಾಗಿದ್ದುವು. ಫಿಡಿಯಾಸಿನ (ಸುಮಾರು ಕ್ರಿ. ಪೂ. 500–430) ವಿಗ್ರಹಗಳು ಎಷ್ಟು ಸುಂದರವಾಗಿದ್ದುವೆಂದರೆ, ಅವನು ದೇವತೆಗಳನ್ನು ತನ್ನ ಕಣ್ಣಿನಿಂದಲೇ ಕಂಡಿದ್ದ, ಇತರರೂ ಕಾಣುವಂತೆ ಮಾಡಿದ ಎನ್ನುತ್ತಿದ್ದರು. ಅಥೀನ ದೇವತೆಯ ಭವ್ಯ ದೇವಾಲಯದ ನಿರ್ಮಾಣದಲ್ಲಿ ಇವನದು ಹಿರಿಯ ಪಾತ್ರ. ಇದೇ ಶತಮಾನದ ಕ್ರಿಯೆಯನ್ನು ತೋರಿಸುವ ಮೈರಾನನ ತಾಮ್ರದ ವಿಗ್ರಹಗಳು, ಪಾಲಿಕ್ಲಿಟಸನ ಪ್ರಮಾಣಬದ್ಧ ತಾಮ್ರದ ವಿಗ್ರಹಗಳು ಗ್ರೀಕರ ಕಲಾಪ್ರತಿಭೆಗೆ ಸಾಕ್ಷಿಗಳು. ಯೂರೋಪಿನ ಆದಿ ಕವಿ ಗ್ರೀಸಿನ ಹೋಮರ್; ಅವನ ಕಾವ್ಯಗಳು 'ಇಲಿಯಡ್', 'ಆಡಿಸಿ'. ಶತಮಾನಗಳ ಕಾಲ ಯೂರೋಪಿನ ಚಿತ್ರಕಾರರು, ಶಿಲ್ಪಿಗಳು, ನಾಟಕಕಾರರು, ಕವಿಗಳು ಈ ಕಾವ್ಯಗಳ ಗಣಿಗಳಿಂದ ರತ್ನಗಳನ್ನಾರಿಸಿಕೊಂಡಿದ್ದಾರೆ. ಜಗತ್ತಿನ ಅತಿ ಶ್ರೇಷ್ಠ ದುರಂತ ನಾಟಕಕಾರರಲ್ಲಿ ಮೂವರು, ಎಸ್ಕಿಲಸ್ (ಕ್ರಿ. ಪೂ. 525–456), ಸಫೊಕ್ಲಿಸ್ (ಕ್ರಿ. ಪೂ. 496–406), ಯೂರಿಪಿಡೀಸ್ (ಕ್ರಿ. ಪೂ. 480—406) ಸಮಕಾಲೀನರು. ಇಂಥವರು ಒಬ್ಬೊಬ್ಬರು ಹತ್ತು ಶತಮಾನಗಳಲ್ಲಿ ಒಮ್ಮೆ ಒಂದು ದೊಡ್ಡ ದೇಶದಲ್ಲಿ ಹುಟ್ಟಿದರೂ ಹೆಮ್ಮೆ ಪಡಬೇಕು. ಸುಮಾರು ನಲವತ್ತು ಸಾವಿರ ಜನಸಂಖ್ಯೆಯ ಸಣ್ಣ ಊರಿನಲ್ಲಿ ಒಂದೇ ಕಾಲದಲ್ಲಿ ಜಗತ್ತಿನ ಮೂವರು ಶ್ರೇಷ್ಠ ನಾಟಕಕಾರರು ಬರೆಯುತ್ತಿದ್ದುದು ಒಂದು ಆಶ್ಚರ್ಯದ ಸಂಗತಿ. ಪ್ರಸಿದ್ಧ ಹಾಸ್ಯ ನಾಟಕಕಾರ ಅರಿಸ್ಟೊಫೇನೀಸ್ (ಕ್ರಿ. ಪೂ. 448–385) ಅಥೆನ್ಸ್ ನವನೆ. ಸಾಹಿತ್ಯವಿಮರ್ಶೆ ಪ್ಲೇಟೋ—ಅರಿಸ್ಟಾಟಲರಿಂದ ಪ್ರಾರಂಭವಾಯಿತು ಪಾಶ್ಚಾತ್ಯ ಜಗತ್ತಿನಲ್ಲಿ. ಪಿಂಡಾರ್, ಸ್ಯಾಫೊ, ಥಿಯಾಕ್ರಿಟಸ್ ಇಂಥ ಅಮರ ಕವಿಗಳು ಗ್ರೀಸಿನವರು.

ಹೀಗೆ ಪಾಶ್ಚಾತ್ಯ ನಾಗರಿಕತೆ ಗ್ರೀಸಿನಲ್ಲಿ ಜನಿಸಿತು. ಯೂರೋಪಿನ ನಾಗರಿಕತೆ—ಸಂಸ್ಕೃತಿಗಳು ಶತಮಾನಗಳ ಕಾಲ ಆ ಮೂಲದಿಂದ ಹರಿದು ಬಂದ ಯಮುಳನದಿಗಳು. 12–13ನೆಯ ಶತಮಾನಗಳಲ್ಲಿ ಯೂರೋಪಿನಲ್ಲಿ ಪ್ರಾರಂಭವಾದ ನವೋದಯಕ್ಕೆ ಮುಖ್ಯ ಪ್ರೇರಕ ಶಕ್ತಿಗಳಲ್ಲಿ ಪ್ರಾಚೀನ ಗ್ರೀಸಿನ ಪ್ರಭಾವ ಒಂದು. ಇಂದಿಗೂ ಪಾಶ್ಚಾತ್ಯರ ತತ್ತ್ವಶಾಸ್ತ್ರ, ರಾಜ್ಯಶಾಸ್ತ್ರ, ಕಲೆ, ಸಾಹಿತ್ಯ, ಸಾಹಿತ್ಯವಿಮರ್ಶೆ ಎಲ್ಲ ಕ್ಷೇತ್ರಗಳಲ್ಲಿ ಪ್ರಾಚೀನ ಗ್ರೀಸಿನ ಪ್ರಭಾವ ಬೆರೆತುಹೋಗಿದೆ. ಗ್ರೀಸಿನ ಚರಿತ್ರೆಯಲ್ಲಿ ಕಳಂಕವೆಂದರೆ—ಗುಲಾಮಗಿರಿಯ ಅಸ್ತಿತ್ವ. ಸಾಮಾನ್ಯವಾಗಿ ಈ ಗುಲಾಮರ ಸ್ಥಿತಿ ಕಷ್ಟವಾಗಿತ್ತು. ಆದರೆ ಗುಲಾಮ ಯಜಮಾನನ ಅಪ್ಪಣೆ ಪಡೆದು ಇತರರಿಗಾಗಿ ದುಡಿದು ಹಣ ಸಂಪಾದಿಸಿ, ಯಜಮಾನನಿಗೆ ಹಣ ಕೊಟ್ಟು ಸ್ವತಂತ್ರನಾಗಬಹುದಾಗಿತ್ತು. ಐಟ್ಟಿನಲ್ಲಿ ಪಾಶ್ಚಾತ್ಯರ ನಾಗರಿಕತೆಯ ಚರಿತ್ರೆಯ ಮೊದಲ ಅಧ್ಯಾಯ—ಪ್ರಾಚೀನ ಗ್ರೀಸಿನ ಸಾಧನೆಗಳು.

ಇವು ಪ್ರಾಚೀನ ಜಗತ್ತಿನ ಪ್ರಮುಖ ನಾಗರಿಕತೆಗಳು. ಆದರೆ ಮನುಷ್ಯನ ಬುದ್ಧಿಶಕ್ತಿ ಇನ್ನೂ ಹಲವೆಡೆಗಳಲ್ಲಿ ಮೊಳಕೆ ಇಟ್ಟಿತು. ಇಷ್ಟು ಪ್ರಸಿದ್ಧವಲ್ಲದ ಹಲವು ನಾಗರಿಕತೆಗಳು ಅಲ್ಲಲ್ಲಿ ಕಾಣಿಸಿಕೊಂಡುವು. ಉದಾಹರಣೆಗೆ, ಅಮೆರಿಕನ್ ಇಂಡಿಯನರು ಹಲವು ನಾಗರಿಕತೆಗಳನ್ನು ನಿರ್ಮಿಸಿದರು. ಬಿಳಿಯರು ಅಮೆರಿಕದಲ್ಲಿ ಕಾಲಿಡುವುದಕ್ಕೆ ಸಾವಿರಾರು ವರ್ಷಗಳ ಮೊದಲೇ ಅಮೆರಿಕದಲ್ಲಿ ಜನ ವಾಸಿಸು ತ್ತಿದ್ದರು. ಅವರು ಅಮೆರಿಕಕ್ಕೆ ಸುಮಾರು 25,000 ವರ್ಷಗಳ ಹಿಂದೆ ಕಾಲಿಟ್ಟಿರಬೇಕು. ಸುಮಾರು ಕ್ರಿ. ಪೂ. 2,500ರ ಹೊತ್ತಿಗೆ ಮುಸುಕಿನ ಜೋಳ ಬೆಳೆಯುವುದನ್ನು ಕಲಿತರು. ಇಲ್ಲಿಂದ ನಾಗರಿಕ ಜೀವನ ಪ್ರಾರಂಭವಾಯಿತು. ಅಮೆರಿಕದ ಇಂಡಿಯನರ ನಾಗರಿಕತೆಗಳಲ್ಲಿ

ಪ್ರಸಿದ್ಧವಾದದ್ದು ಮಾಯ ನಾಗರಿಕತೆ. ಸುಮಾರು 320ರ ಹೊತ್ತಿಗೆ ಇವರು ಹಲವಾರು ನಗರಗಳನ್ನು ಕಟ್ಟಿಕೊಂಡಿದ್ದರು. ಇವರಿದ್ದ ಪ್ರದೇಶದಲ್ಲಿ ಎರಡೇ ಋತುಗಳು: ಮಳೆಗಾಲ. ಮಳೆ ಇಲ್ಲದ ಕಾಲ. ಭೂಮಿಗೆ ಸುಣ್ಣಕಲ್ಲಿನ ತೆಳುಪದರವಿದ್ದುದರಿಂದ ನೇಗಿಲ ಬಳಕೆ ಅಸಾಧ್ಯವಾಗಿತ್ತು. ಮರಗಳು ಹಾಗಾಗಿಯೆ ಸಮೃದ್ಧಿಯಾಗಿ ಬೆಳೆಯುತ್ತಿದ್ದುವು. ಮಾಯ ರೈತ ಮಳೆ ಇನ್ನೂ ಬರುವಾಗಿದ್ದಾಗಲೆ ಗಿಡಗಳನ್ನು ಕಡಿದು ಬೆಳೆಗೆ ಹೊಲವನ್ನು ಸಿದ್ಧಮಾಡುತ್ತಿದ್ದ. 60–70 ದಿನಗಳಲ್ಲಿ ಇಡೀ ವರ್ಷಕ್ಕೆ ಬೇಕಾಗುವ ಆಹಾರವನ್ನು ಬೆಳೆಯುತ್ತಿದ್ದ. ಇದರಿಂದ ಮಾಯ ನಾಗರಿಕತೆಯಲ್ಲಿ ಶ್ರೀಮಂತರು. ಅರ್ಚಕರು. ಆಡಳಿತಗಾರರು ನಗರಗಳ ನಿರ್ಮಾಣಕ್ಕೆ ಗಮನಕೊಟ್ಟರು. ಆಹಾರದ ಉತ್ಪನ್ನ ಸಂಪೂರ್ಣವಾಗಿ ರೈತವರ್ಗಕ್ಕೆ ಸೇರಿತು. ಇವರು ಪೂಜಿಸುತ್ತಿದ್ದುದು ಕೃಷಿಗೆ ಒಲಿಸಿಕೊಳ್ಳಬೇಕಾದ ದೇವತೆಗಳನ್ನು—ಮಳೆ. ಗಾಳಿ ಆಕಾಶದ ಪ್ರಭುಗಳನ್ನು. ರೈತ ಕೃಷಿ ಕೆಲಸದಂಥ ಮುಖ್ಯ ಕೆಲಸಗಳಿಗೆ ಪುರೋಹಿತರನ್ನು ಕೇಳಿ ಒಳ್ಳೆಯ ಮುಹೂರ್ತವನ್ನು ಗೊತ್ತುಮಾಡಿಕೊಳ್ಳುತ್ತಿದ್ದ. ಮಾಯದ ಪುರೋಹಿತವರ್ಗ ಸಿದ್ಧಗೊಳಿಸಿದ ಪಂಚಾಂಗ ಎಷ್ಟು ನಿಖರವಾಗಿದೆ ಎಂಬುದು ಆಶ್ಚರ್ಯಕರ. ಸೌರಮಾನದ, ವರ್ಷವನ್ನು ತಪ್ಪಿಲ್ಲದೆ ಲೆಕ್ಕ ಹಾಕಿದ್ದರು. ಇವರು ಬಳಸುತ್ತಿದ್ದ ಅಂಕಿಗಳಲ್ಲಿ ಸೊನ್ನೆ ಸೇರಿತ್ತು. ದಶಮಾಂಶ ಪದ್ಧತಿಯನ್ನು ಹೋಲುವ ಲೆಕ್ಕ ರೀತಿ ಇವರಲ್ಲಿತ್ತು. ಆದರೆ ಮಾನ ಹತ್ತರ ಬದಲು ಇಪ್ಪತ್ತು. ಮರದ ತೊಗಟೆಯಿಂದ ಮಾಡಿದ ಕಾಗದದ ಮೇಲೆ ಬರೆಯುತ್ತಿದ್ದರು, ಪುಸ್ತಕಗಳನ್ನು ರಚಿಸಿದ್ದರು. ಇಲ್ಲಿಗೆ ಹದಿನಾರನೆಯ ಶತಮಾನದಲ್ಲಿ ಕಾಲಿಟ್ಟ ಸ್ಪೇನಿನವರು ಈ ಪುಸ್ತಕಗಳನ್ನು ಸುಟ್ಟುಹಾಕಿದರು.

ಬಹು ಮಟ್ಟಿಗೆ ಈ ನಾಗರಿಕತೆಗಳು ಪರಸ್ಪರ ಸಂಪರ್ಕವಿಲ್ಲದೆ ಬೆಳೆದುವು. ಸಿಂಧೂತೀರದವರಿಗೂ ಸುಮೇರಿಯನರಿಗೂ ಸಂಪರ್ಕವಿದ್ದಿರಬಹುದು. ಈ ನಾಗರಿಕತೆಗಳ ಚರಿತ್ರೆ ಪೂರ್ಣವಾಗಿ ಬೆಳಕಿಗೆ ಬಾರದೆ ಯಾವ ಅಭಿಪ್ರಾಯವನ್ನೂ ಖಚಿತವಾಗಿ ಹೇಳುವಂತಿಲ್ಲ. ಆದರೆ ಪ್ರಯಾಣದ ಸೌಕರ್ಯಗಳಿಲ್ಲದಿದ್ದ ಕಾಲದಲ್ಲಿ ಹೆಚ್ಚಿಗೆ ಸಂಪರ್ಕ ಸಾಧ್ಯವಿರಲಿಲ್ಲ ಎಂಬುದು ಸ್ಪಷ್ಟ. ಅಲೆಗ್ಸಾಂಡರನ ಕಾಲದಿಂದ ಪೂರ್ವ ದೇಶಗಳಿಗೂ ಪಶ್ಚಿಮದೇಶಗಳಿಗೂ ಸ್ಪಷ್ಟವಾದ ಸಂಪರ್ಕ ಬೆಳೆಯಿತು. ಶತಮಾನಗಳ ಕಾಲ ಅರೇಬಿಯ ಪೂರ್ವ ದೇಶಗಳಿಗೂ ಪಶ್ಚಿಮ ದೇಶಗಳಿಗೂ ನಡುವಣ ಜ್ಞಾನ ಮತ್ತು ಸಂಸ್ಕೃತಿಗಳ ಸೇತುವೆಯಾಗಿತ್ತು.

## ೬

ಮನುಷ್ಯನ ನಾಗರಿಕತೆ ನಡೆದು ಬಂದ ದಾರಿಯ ಅಧ್ಯಯನ ಬಹು ಸ್ವಾರಸ್ಯಕರವಾದದ್ದು. ತನ್ನ ಜೀವನವನ್ನು ಉತ್ತಮಗೊಳಿಸುವ ಪ್ರಯತ್ನದಲ್ಲಿ ಮನುಷ್ಯ ಮತ್ತೆ ಮತ್ತೆ ಎಡವಿದ್ದಾನೆ. ಅನಾಗರಿಕತೆಯತ್ತ ಹೆಜ್ಜೆ ಇಟ್ಟಿದ್ದಾನೆ, ತಪ್ಪುದಾರಿ ಹಿಡಿದಿದ್ದಾನೆ. ಇಷ್ಟಾದರೂ ಅವನ ಧೈರ್ಯ. ಆತ್ಮವಿಶ್ವಾಸ ಕುಂದಿಲ್ಲ. ತನ್ನ ಜೀವನವನ್ನು ಸುಗಮಮಾಡಿಕೊಳ್ಳಲೆಂದು ಅವನು ಮಾಡಿದ ಸೃಷ್ಟಿಗಳೇ ಅವನಿಗೆ ಸಮಸ್ಯೆಗಳಾಗಿವೆ. ಕೊಡು-ಕೊಳ್ಳುವ ವ್ಯವಹಾರದಲ್ಲಿ ವಿನಿಮಯ ಸುಲಭವಾಗಲೆಂದು ಅವನು ಹಣವನ್ನು ಸೃಷ್ಟಿಸಿದ. ಈಗ ಹಣ ವ್ಯಕ್ತಿಗೂ. ರಾಷ್ಟ್ರಕ್ಕೂ ಸೃಷ್ಟಿಸಿರುವ ಸಮಸ್ಯೆಗಳಿಗೆ ಕೊನೆ ಇಲ್ಲ. ಹಣದ ಎಷ್ಟೋ ಸಮಸ್ಯೆಗಳು ಜನಸಾಮಾನ್ಯರಲ್ಲಿ ವಿದ್ಯಾವಂತರಾದವರಿಗೂ ಅರ್ಥವಾಗುವಂತಿಲ್ಲ. ತಜ್ಞರಿಗೆ ಮಾತ್ರ ಅವು ಅರ್ಥವಾದಾವು. ಅವನ್ನು ಬಿಡಿಸುವ ವಿಧಾನಗಳಲ್ಲಿ ತಜ್ಞರಲ್ಲಿಯೇ ಒಮ್ಮತವಿಲ್ಲ. ಹಿಟ್ಲರನ ಜರ್ಮನಿಯಲ್ಲಿ ಷಾಟ್ ಎಂಬ ಅರ್ಥಶಾಸ್ತ್ರಜ್ಞ ತನ್ನ ಕೊಠಡಿಯಲ್ಲೇ ಕುಳಿತು. ಉಳಿದ ದೇಶಗಳ ಆರ್ಥಿಕ ವ್ಯವಸ್ಥೆ ಕುಸಿದು ಬೀಳುವಂತೆ ಮಾಡಬಲ್ಲವನಾಗಿದ್ದ. ಮನುಷ್ಯ ತನ್ನ ಕೆಲಸವನ್ನು ಕಡಮೆ ಮಾಡಿಕೊಂಡು ಆರಾಮವಾಗಿ ಇರುವೆನೆಂದೂ, ಬೇಗ ಬೇಗನೆ ಅಗಾಧ ಪ್ರಮಾಣದಲ್ಲಿ ವಸ್ತುಗಳನ್ನು ಮಾಡಿಕೊಳ್ಳುವೆನೆಂದೂ ಯಂತ್ರಗಳ ಬಳಕೆಯನ್ನು ಪ್ರಾರಂಭಿಸಿದ. ಇಂದು ಯಂತ್ರ ಮನುಷ್ಯನಿಗೆ ತಲೆನೋವು ಆಗಿದೆ. ಅಂತರರಾಷ್ಟ್ರೀಯ ವ್ಯವಹಾರ ಸುಲಭವಾಗಲೆಂದು ಚಿನ್ನವನ್ನು ಆರಿಸಿದ. ಚಿನ್ನದ ಬದಲು 'ಕಾಗದದ ಚಿನ್ನ' ವನ್ನೂ ಸೃಷ್ಟಿಸುವುದೂ ಅಗತ್ಯವಾಯಿತು. ಹೀಗೆ ಎಷ್ಟೋ ಸಲ ಮನುಷ್ಯನ ಸೃಷ್ಟಿಯೇ ಮನುಷ್ಯನಿಗೆ ಸವಾಲಾಗಿದೆ. ಆದರೂ ಮನುಷ್ಯ ಹೊಸ ಹೊಸ ಪ್ರಯೋಗಗಳನ್ನು ಮಾಡುತ್ತಲೇ ಇದ್ದಾನೆ.

**ರಾಜಕೀಯ ವ್ಯವಸ್ಥೆ**

ಮೊಟ್ಟಮೊದಲು ಮನುಷ್ಯರಿಗೆ ಅಗತ್ಯವೆನಿಸಿದ್ದು ಒಂದು ರಾಜಕೀಯ ವ್ಯವಸ್ಥೆ. ರಾಜಕೀಯ ವ್ಯವಸ್ಥೆ ಎನ್ನುತ್ತಲೇ ನಮಗೆ ಇಂದಿನ ಪಕ್ಷ ಪ್ರತಿಪಕ್ಷಗಳು, ಚುನಾವಣೆಗಳು. ಶಾಸನಸಭೆಗಳು ಕಣ್ಣಿಗೆ ಕಟ್ಟಬಹುದು. ಪ್ರಾರಂಭದಲ್ಲಿ ಮನುಷ್ಯನ ಆಡಳಿತದ ಕಲ್ಪನೆಯಲ್ಲಿ ಅವುಗಳ ಸೋಂಕೇ ಇರಲಿಲ್ಲ. ಒಬ್ಬನೇ ಇದ್ದರೆ ತನಗೆ ಅಪಾಯ ಎಂದು ಅವನಿಗೆ ಗೊತ್ತು. ಇದರಿಂದ ಅವನು ಇತರ ಕೆಲವರೊಂದಿಗೆ ಬಾಳಲು ಬಯಸುತ್ತಾನೆ. ಹಲವರು ಒಟ್ಟಿಗೆ ಇರುವಾಗ. ತನಗಿಂತ ಬಲಿಷ್ಠರಾದವರಿಂದ ತನಗೆ ಕೆಡುಕಾಗದಂತೆ. ತನ್ನ ಗುಂಪಿಗೆ ಇನ್ನೊಂದು ಗುಂಪಿನಿಂದ ತೊಂದರೆಯಾಗದಂತೆ ಒಂದು ವ್ಯವಸ್ಥೆ ಬೇಕು. ಇದರಿಂದ ಅವನು ತನ್ನ ಗುಂಪಿನಲ್ಲಿ ತನಗೆ ರಕ್ಷಣೆ ಕೊಡಬಹುದಾದ ಒಬ್ಬನನ್ನು ಗೌರವಿಸಿ ಅವನು ಹೇಳಿದಂತೆ ಕೇಳಲು ಒಪ್ಪಿಕೊಳ್ಳುತ್ತಾನೆ. ನೆಂಟರಾದ ಕೆಲವು ಸಂಸಾರಗಳವರು ಸೇರಿ ಒಂದು ಪಂಗಡವನ್ನು ಮಾಡಿಕೊಂಡು ಒಬ್ಬ ಮುಖಂಡನ ನಾಯಕತ್ವವನ್ನು ಒಪ್ಪಿಕೊಂಡು ಒಟ್ಟಿಗೆ ಜೀವಿಸುವುದು ಮನುಷ್ಯನ ಚರಿತ್ರೆಯಲ್ಲಿ ರಾಜಕೀಯ ಮತ್ತು ಸಾಮಾಜಿಕ ವ್ಯವಸ್ಥೆಗಳ ಪ್ರಾರಂಭ. ಈ ವ್ಯವಸ್ಥೆ ಬಹು ಸರಳವಾದದ್ದು. ಎಷ್ಟೋ ವೇಳೆ ಒಟ್ಟಿಗೆ ಬಾಳುವ ಕುಟುಂಬಗಳ ಸಂಖ್ಯೆಯೂ ಕಡಮೆ ಇರುತ್ತಿತ್ತು. ಬ್ರೆಜಿಲಿನಲ್ಲಿ ಒಂದು ಪಂಗಡದಲ್ಲಿ ಸುಮಾರು ಹನ್ನೆರಡು ಕುಟುಂಬಗಳು. ಆಸ್ಟ್ರೇಲಿಯದಲ್ಲಿ ಒಂದು ಪಂಗಡದಲ್ಲಿ

ಸುಮಾರು ಅರವತ್ತು ಜನ. ಕೆಲವು ಪಂಗಡದವರು ಒಟ್ಟಿಗೆ ಸದಾ ಇರುತ್ತಲೂ ಇರಲಿಲ್ಲ. ಆಫ್ರಿಕದ ಪಿಗ್ಮಿಗಳು, ಆಸ್ಟ್ರೇಲಿಯಾದ ಆದಿವಾಸಿಗಳು ಅಗತ್ಯವಾದಾಗ ಸ್ವಲ್ಪಕಾಲ ಒಟ್ಟಿಗೆ ವಾಸಿಸಿ ಅನಂತರ ಚದರಿಹೋಗುತ್ತಿದ್ದರು.

ರಕ್ಷಣೆಗಾಗಿ ಜೊತೆಗೂಡಿದ ಕುಟುಂಬಗಳು ಒಬ್ಬ ಯಜಮಾನನನ್ನು ಒಪ್ಪಿಕೊಂಡು ಒಟ್ಟಾಗಿ ಬಾಳಲು ಪ್ರಾರಂಭಿಸಿದಾಗ, ಕೆಲವು ನಿಯಮಗಳೂ ಪದ್ಧತಿಗಳೂ ಆಚರಣೆಗೆ ಬಂದುವು. ಈ ಯಜಮಾನ ಸದಸ್ಯರ ಸಂಬಂಧ, ಪೂಜಿಸುವ ದೇವತೆಗಳು, ಪೂಜೆಯ ವಿಧಾನ, ಕುಟುಂಬದ ಯಜಮಾನ–ಸದಸ್ಯರ ಸಂಬಂಧ, ಮದುವೆಯ ರೀತಿ, ಶುಭ ಅಶುಭ ಶಕುನಗಳು, ಧರಿಸುವ ಬಟ್ಟೆ—ಎಲ್ಲಕ್ಕೂ ಸಂಬಂಧಿಸಿದಂತೆ ನಿಯಮಗಳೂ ಸಂಪ್ರದಾಯಗಳೂ ಬೆಳೆದುವು. ಈ ಕುಟುಂಬಗಳು ಒಂದು ತಂಡ ಆದುವು. ಹಲವು ಕುಲಗಳು ಒಂದಾದಾಗ ಒಂದು ಬಣ ಆಯಿತು. ಪ್ರತಿ ಬಣಕ್ಕೆ ಒಬ್ಬ ನಾಯಕ. ಕುತೂಹಲದ ಸಂಗತಿ ಎಂದರೆ ಎಷ್ಟೋ ಬಣಗಳಲ್ಲಿ ನಾಯಕನಿಗೆ ಸರ್ವಾಧಿಕಾರವಿರಲಿಲ್ಲ. ಅವನ ಅಧಿಕಾರಕ್ಕೆ ಮಿತಿ ಇದ್ದಿತು. ಒಮಾಹ ಇಂಡಿಯನರಲ್ಲಿ ಏಳು ಮಂದಿ ನಾಯಕರು. ಅವರೆಲ್ಲ ಒಮ್ಮತಕ್ಕೆ ಬರುವವರೆಗೆ ಚರ್ಚೆ ನಡೆಯುತ್ತಿತ್ತು. ಡೈಯಾಕ್ ಎನ್ನುವ ಬಣದಲ್ಲಿ ಸಾಮಾನ್ಯವಾಗಿ ಒಬ್ಬ ನಾಯಕನಿರುತ್ತಿರಲಿಲ್ಲ : ಯುದ್ಧ ಒದಗಿದಾಗ ಮಾತ್ರ ತಮ್ಮಲ್ಲಿ ವೀರಶ್ರೇಷ್ಠನನ್ನು ನಾಯಕನನ್ನಾಗಿ ಆರಿಸಿ ಅವನನ್ನು ಹಿಂಬಾಲಿಸುತ್ತಿದ್ದರು.

ಕಾಲ ಕಳೆದಂತೆ, ಬಣಗಳು ದೊಡ್ಡದಾದಂತೆ, ಒಬ್ಬ ನಾಯಕನನ್ನು ಆರಿಸಿದ ಮೇಲೆ ಅವನು ಹೇಳಿದಂತೆ ಕೇಳುವುದು ರೂಢಿಯಲ್ಲಿ ಅನುಕೂಲ ಎಂಬ ಭಾವನೆ ಬೆಳೆದಿರಬೇಕು. ಯುದ್ಧವಿಲ್ಲದ ಕಾಲದಲ್ಲಿಯೂ ಬಣದ ಒಳಗಿನ ವ್ಯವಹಾರಗಳಲ್ಲಿ ಮಾರ್ಗದರ್ಶನ ಮಾಡುವ ನಾಯಕ ಬೇಕು. ಇತರ ಬಣಗಳೊಂದಿಗೆ ವ್ಯವಹಾರ ನಡೆಸಲು ನಾಯಕ ಬೇಕು. ಒಮಾಹ ಇಂಡಿಯನರಂತೆ ಹಲವರು ನಾಯಕರನ್ನು ಹೊಂದಿದ್ದರೆ ಅನನುಕೂಲವೂ ಉಂಟು. ಅದರಲ್ಲಿಯೂ ಹುಟ್ಟಿನಿಂದ ನಾಯಕತ್ವದ ಗುಣಗಳನ್ನು ಪಡೆದಿದ್ದ ಒಬ್ಬ ವ್ಯಕ್ತಿ ಇದ್ದರೆ ಅವನ ಎದುರಿಗೆ ಇತರರು ಕಳೆಗುಂದುತ್ತಾರೆ. ವ್ಯವಸಾಯ ಆಚರಣೆಗೆ ಬಂದು ಜನ ಅಲೆಯುವುದು ತಪ್ಪಿ ಒಂದೆಡೆ ನೆಲೆಸುವಂತಾದ ಮೇಲಂತೂ ರಕ್ಷಕ ನಾಯಕನ ಅಗತ್ಯ ಹೆಚ್ಚುತ್ತದೆ. (ಕೃಷಿಯನ್ನು ಅವಲಂಬಿಸಿದ ಈ ಬಣಗಳೇ ಅನಂತರ ರಾಜ್ಯಗಳಾದುವು.) ಪ್ರಾಚೀನ ಜೀವನದಲ್ಲಿ ಧಾರ್ಮಿಕ ನಂಬಿಕೆಗಳೂ ಹೆಚ್ಚು. ಪ್ರಾಚೀನ ಮನುಷ್ಯ ತನ್ನ ಸುತ್ತಲಿನ ಜಗತ್ತಿನಲ್ಲಿ ಹಲವಾರು ದೇವತೆಗಳನ್ನು ಕಂಡ. ಅವರಲ್ಲಿ ಹಲವು ಕ್ರೂರ, ನಿಷ್ಠುರ ದೇವತೆಗಳೆ. ಅನೇಕ ಬಗೆಯ ವಿಧಿಗಳಿಂದ ಪೂಜೆಗಳಿಂದ ಅವರ ಕೋಪವನ್ನು ತಡೆಯಬೇಕಾಗಿತ್ತು. ದಯೆಯನ್ನು ಸಂಪಾದಿಸಬೇಕಾಗಿತ್ತು. ಬಣದ ಮುಖಂಡನೆ ಇದರಲ್ಲಿಯೂ ಮುಖಂಡನಾದ. ಹೀಗೆ ರಕ್ಷಣೆ, ನ್ಯಾಯತೀರ್ಮಾನ, ದೇವತೆಗಳ ಪೂಜೆ—ಎಲ್ಲ ಕರ್ತವ್ಯಗಳೂ ಕೂಡಿದ ನಾಯಕ ಪ್ರಭು, ನ್ಯಾಯಾಧಿಪತಿ, ಅರ್ಚಕ, ಎಲ್ಲ ಆದ. ಕ್ರಮೇಣ ಇವನೇ ರಾಜನೂ ಆದ.

ಸಾಮಾನ್ಯವಾಗಿ ಮೊದಲಿನಲ್ಲಿ ಯುದ್ಧದಲ್ಲಿ ಅಸಾಧಾರಣ ಶೌರ್ಯವನ್ನು ತೋರಿಸಿದವರೇ ರಾಜರಾದರು. ಇವರು ತಮ್ಮ ಹಿಂಬಾಲಕರನ್ನು ರಕ್ಷಿಸಬಲ್ಲರು ಎಂಬ ನಂಬಿಕೆಯೇ ಜನರು ಇವರ ನಾಯಕತ್ವವನ್ನು ಒಪ್ಪಲು ಕಾರಣ. ತೆರಿಗೆಯನ್ನು ವಸೂಲು ಮಾಡುವುದು, ಸೈನ್ಯಗಳನ್ನು ಸಿದ್ಧಗೊಳಿಸಿ ನಿರ್ವಹಿಸುವುದು ಇವೇ ಅರಸನ ಮುಖ್ಯ ಹೊಣೆ. ಜನರು ಮಾಡುತ್ತಿದ್ದ ಪೂಜೆ, ದೇವತೆಗಳಿಗೆ ಸಲ್ಲಿಸುತ್ತಿದ್ದ ಬಲಿಕಾರ್ಯ ಇಂಥ ವಿಧಿಗಳಲ್ಲಿ ರಾಜನ ಪಾತ್ರ ಪ್ರಮುಖವಾಗಿತ್ತು. ಎಲ್ಲ ಜನರ ಪರವಾಗಿ ಪೂಜೆ ಮಾಡುವುದು, ಬಲಿಯೊಪ್ಪಿಸುವುದು ಇವನ ಕರ್ತವ್ಯಗಳಲ್ಲಿ ಸೇರಿತ್ತು. ಅಲ್ಲದೆ, ಧೈರ್ಯಶೌರ್ಯಗಳಿಂದ ಈ ನಾಯಕರು ಅವರ ಹಿಂಬಾಲಕರಿಗೆ ದೇವತೆಗಳು ಅಥವಾ ದೇವತೆಗಳ ಅಂಶದವರು ಎಂದು ತೋರಿದ್ದರೆ ಆಶ್ಚರ್ಯವಲ್ಲ. ಹೀಗಾಗಿ ಪ್ರಪಂಚದ ಕೆಲವು ಭಾಗಗಳಲ್ಲಿ ರಾಜರು ದೇವರ ಪ್ರತಿನಿಧಿಗಳು, ಆಳುವುದಕ್ಕೆ ಹುಟ್ಟಿದವರು ಎಂಬ ನಂಬಿಕೆ ಬಂದಿತು. ಅವರ ಮಾತೇ ಶಾಸನವಾಯಿತು. ಈಜಿಪ್ಟ್, ಬ್ಯಾಬಿಲೋನಿಯ, ಅಸೀರಿಯ ದೇಶಗಳಲ್ಲಿ ಇದು ಎದ್ದುಕಾಣುತ್ತದೆ. ಪ್ರಾಚೀನ ಭಾರತದಲ್ಲಿ ರಾಜರು ಮಂತ್ರಾಲೋಚನೆ ಸಭೆಗಳ ಮತ್ತು ಪುರಪ್ರಮುಖರ ಸಲಹೆಯನ್ನು ಪಡೆಯುತ್ತಿದ್ದಂತೆ ತೋರುತ್ತದೆ. ಒಬ್ಬ ರಾಜ ತೀರಿಕೊಂಡು ಅಥವಾ ಸಿಂಹಾಸನ ಬಿಟ್ಟು ಮತ್ತೊಬ್ಬನು, ಅವನು ರಾಜನ ಮಗನೇ ಆದರೂ, ಸಿಂಹಾಸನಕ್ಕೆ ಬರುವಾಗ, ಪ್ರಜಾಪ್ರಮುಖರ ಒಪ್ಪಿಗೆ ಅಗತ್ಯವಾಗಿತ್ತು ಎಂದು ತೋರುತ್ತದೆ. ಹಲವು ಪೌರಾಣಿಕ ಕಥೆಗಳಲ್ಲಿ, ಉದಾಹರಣೆಗೆ ಹೋಮರನ 'ಇಲಿಯಡ್', 'ಆಡಿಸಿ' ಮಹಾಕಾವ್ಯಗಳಲ್ಲಿ ಮತ್ತು ಹಳೆಯ ಒಡಂಬಡಿಕೆಯಂಥ ಗ್ರಂಥಗಳಲ್ಲಿ, ರಾಜರ ಶೌರ್ಯವನ್ನು ಬಣ್ಣಿಸಿದ್ದು ರಾಜರಲ್ಲಿ ಮುಂದಿನ ಪೀಳಿಗೆಗಳಿಗೆ ಭಕ್ತಿ ಉಂಟಾಗಲು ಸಾಧಕವಾಯಿತು. ರಾಜರು ತೀರಿಕೊಂಡ ಅನಂತರ ಕೆಲವು ದೇಶಗಳಲ್ಲಿ ಅವರನ್ನು ದೇವತೆಗಳೆಂದು ಪೂಜಿಸಿದ್ದೂ ಉಂಟು.

ನಾಗರಿಕತೆಯ ಪ್ರಾರಂಭದಿಂದ ಹತ್ತೊಂಬತ್ತನೆಯ ಶತಮಾನದ ಅಂತ್ಯದವರೆಗೆ ಪ್ರಪಂಚದ ಬಹುಭಾಗಗಳಲ್ಲಿ ರಾಜಪ್ರಭುತ್ವವೇ ಮುಖ್ಯವಾದ ಆಡಳಿತ ವ್ಯವಸ್ಥೆಯಾಗಿದ್ದಿತು. (ಇದಕ್ಕೆ ಮುಖ್ಯವಾದ ಅಪವಾದ ಎಂದರೆ ಅಮೆರಿಕದ ಸಂಯುಕ್ತ ಸಂಸ್ಥಾನ.) ಎಲ್ಲ ರಾಜರಿಗೂ ಅನ್ವಯಿಸುವಂಥ ಮಾತುಗಳನ್ನು ಹೇಳುವುದು ಕಷ್ಟ. ಭಾರತದ ವಿಕ್ರಮಾದಿತ್ಯನ ಆಡಳಿತದ ವಿಷಯವಾಗಿ ಚರಿತ್ರಕಾರ ಹವೆಲ್ ಆಡುವ ಮಾತು ಇದು : "ನಿಷ್ಪಕ್ಷಪಾತಿಯಾದ ಚರಿತ್ರಕಾರನಿಗೆ ಹೀಗೆ ತೋರಬಹುದು—ಕ್ರಿ. ಶ. ಐದನೆಯ ಶತಮಾನದಲ್ಲಿ ಭಾರತಕ್ಕಿದ್ದ ಭಾಗ್ಯವನ್ನೆಲ್ಲ ಮರಳಿ ತಂದುಕೊಟ್ಟರೆ ಅದು ಬ್ರಿಟಿಷರ ಆಡಳಿತದ ಅತಿ ಹೆಮ್ಮೆಯ ಸಾಧನೆ ಎನಿಸುವುದು." ಯೂರೋಪಿನಲ್ಲಿ ಮೊದಲ ಆಸ್ಪತ್ರೆ ಏಳನೆಯ ಶತಮಾನದಲ್ಲಿ ಸ್ಥಾಪನೆಯಾಯಿತು—ಪ್ಯಾರಿಸಿನಲ್ಲಿ: ಅದಕ್ಕೆ ಮುನ್ನೂರು ವರ್ಷಕ್ಕೆ ಮೊದಲು ರಾಜರ ಆಡಳಿತದಲ್ಲಿ ಭಾರತದಲ್ಲಿ ಎಷ್ಟೊಂದು ಉಚಿತ ಆಸ್ಪತ್ರೆಗಳಿದ್ದುವೆಂಬುದನ್ನು ಫಾಹಿಯಾನ್ ಆಶ್ಚರ್ಯದಿಂದ ವರ್ಣಿಸಿದ್ದಾನೆ. ಚಂದ್ರಗುಪ್ತ ಮೌರ್ಯನ ಕಾಲದಲ್ಲಿ ಪ್ರಜಾಪ್ರಭುತ್ವದ ಸೋಂಕೇ ಇರಲಿಲ್ಲ, ಆದರೆ ಪ್ರಾಯಶಃ ಭಾರತದ ಚರಿತ್ರೆಯಲ್ಲಿಯೆ ಅತ್ಯಂತ ಸಮರ್ಥ ಪ್ರಭುತ್ವ ಆತನದು ಎನ್ನುತ್ತಾರೆ. ಸರಕಾರದಲ್ಲಿ ಹಲವು ಶಾಖೆಗಳಿದ್ದುವು. ಪ್ರತಿ ಶಾಖೆಗೂ ಸಮರ್ಥ ಅಧಿಕಾರಿಗಳು. ಸುಭಿಕ್ಷದ ಕಾಲದಲ್ಲಿ ದವಸಧಾನ್ಯಗಳನ್ನು ಶೇಖರಿಸಿ ಕ್ಷಾಮ ಬಂದಾಗ ಜನರಿಗೆ ಹಂಚುವ ವ್ಯವಸ್ಥೆ ಇದ್ದಿತು. ಈಜಿಪ್ಟಿನ ಹಾಪೆಪ್‌ಸಟ್ ರಾಣಿ (ಕ್ರಿ. ಪೂ. 1501–1479) ಗಂಡಸಿನ ಉಡುಗೆಯಲ್ಲಿ

ಚಿತ್ರಗಳನ್ನು ಬರೆಸಿಕೊಂಡಳು. ಎಷ್ಟೋ ಮಂದಿ ಗಂಡಸರಿಗಿಂತ ಸಮರ್ಥವಾಗಿ ರಾಜ್ಯಭಾರ ಮಾಡಿದಳು. ಚೀನದ ಟೈ ಟ್ಸೊಂಗ್ (627–50) ಅಶೋಕನಂತೆಯೇ ಯುದ್ಧಕ್ಕೆ ಬೇಸತ್ತು ಶಾಂತಿಗೆ ಮಣಿದವನು. ಅಪರಾಧಗಳನ್ನು ಅಡಗಿಸಲು ಕ್ರೂರವಾದ ಶಿಕ್ಷೆಯನ್ನು ವಿಧಿಸುವ ಕಾನೂನನ್ನು ಮಾಡಬೇಕೆಂದು ಮಂತ್ರಾಲೋಚಕರು ಹೇಳಿದಾಗ, ಕಠಿಣವಾದ ಶಿಕ್ಷೆ ವಿಧಿಸುವುದಕ್ಕಿಂತ ಖರ್ಚನ್ನು ಕಡಮೆ ಮಾಡಿ, ತೆರಿಗೆಯ ಹೊರೆ ಯನ್ನಿಳಿಸಿ, ಪ್ರಾಮಾಣಿಕರಾದ ಅಧಿಕಾರಿಗಳನ್ನು ನೇಮಿಸಿ, ಜನಕ್ಕೆ ಹೊಟ್ಟೆ ಬಟ್ಟೆಗೆ ತಕ್ಕಷ್ಟಿರುವಂತೆ ಮಾಡಿದರೆ ಅಪರಾಧಗಳು ಕಡಮೆ ಯಾಗುತ್ತವೆ ಎಂದ. ನ್ಯಾಯಾಧೀಶ ಮರಣದಂಡನೆ ವಿಧಿಸಿದಾಗ, ಚಕ್ರವರ್ತಿ ಮೂರು ದಿನ ಉಪವಾಸ ಮಾಡಿದ ಹೊರತು ಅದಕ್ಕೆ ಒಪ್ಪಿಗೆ ಕೊಡಕೂಡದೆಂದು ವಿಧಿಸಿದ್ದ ಈತ. ಸರಕಾರದ ಅನ್ಯಾಯಕ್ಕೆ ಬೇಸತ್ತಿದ್ದ ಇಂಗ್ಲೆಂಡಿನ ಜನ ಐದನೆಯ ಹೆನ್ರಿಯಂಥ ಸಮರ್ಥ ರಾಜನನ್ನು ಸ್ವಾಗತಿಸಿದರು. ಇಂಥ ಅರಸ ಅರಸಿಯರನ್ನು ಜಗತ್ತಿನ ಇತಿಹಾಸದಲ್ಲಿ ಕಾಣುತ್ತೇವೆ. ಅಸೀರಿಯದ ಅಷೂರ್‌ಬನಿಪಾಲ್ ತನ್ನ ಸೋದರನನ್ನು ಸೋಲಿಸಿ ಬ್ಯಾಬಿಲನನ್ನು ವಶಪಡಿಸಿಕೊಂಡಾಗ, ನೂರಾರು ಮಂದಿ ರೋಗಗಳಿಂದ ನರಳುತ್ತಿದ್ದವರು ರಸ್ತೆಗಳಲ್ಲಿಯೇ ಸತ್ತರು. ಅವರ ಹೆಣಗಳು ನಾಯಿ ಹಂದಿಗಳಿಗೆ ಆಹಾರ. ಈತ ತನ್ನ ವಿರುದ್ಧವಾಗಿ ಹೋರಾಡಿದ್ದ ಸೈನಿಕರ ನಾಲಿಗೆಗಳನ್ನು ಸೀಳಿಸಿದ. ಪರ್ಷಿಯದ ಕ್ಯಾಂಬೈಸಿಸ್ ಕೋಪದಲ್ಲಿ ಹನ್ನೆರಡು ಮಂದಿ ಶ್ರೀಮಂತರನ್ನು ಜೀವಸಹಿತ ಹೂಳಿಸಿದ. ಮೊನ್ನೆ ಮೊನ್ನೆ ಭಾರತಕ್ಕೆ ಸ್ವಾತಂತ್ರ್ಯ ಬಂದಾಗ, ಅರಮನೆಯ ನಾಯಿಗಳ ಮದುವೆಯನ್ನು ವೈಭವದಿಂದ ಮಾಡಬೇಕೆಂದು ಪ್ರಜೆಗಳ ಮೇಲೆ ತೆರಿಗೆಯ ಹೊರೆ ಹೇರಿದ ಜುನಾಗಡದ ನವಾಬನಂಥ ರಾಜರೂ ಇದ್ದರು.

ರಾಜಪ್ರಭುತ್ವ ಶತಮಾನಗಳ ಕಾಲ ಪ್ರಪಂಚದ ಹಲವು ಭಾಗಗಳಲ್ಲಿ ನಡೆದುಕೊಂಡು ಬರುವುದಕ್ಕೆ ಕಾರಣಗಳು ಹಲವು. ಹೊರಗಿನವರ ದಾಳಿ, ಒಳಗಿನ ಅಶಾಂತಿ ಇವುಗಳ ಭಯ ಹೆಚ್ಚಿದಾಗ ಜನ ಒಬ್ಬ ಶಕ್ತ ನಾಯಕನನ್ನು ಸ್ವಇಚ್ಛೆಯಿಂದ ಸ್ವೀಕರಿಸುತ್ತಾರೆ. ಒಳ ಜಗಳಗಳಿಂದ ಬೇಸತ್ತಿದ್ದ ರೋಮನ್ ಜನ ಜೂಲಿಯಸ್ ಸೀಸರ್ ಸರ್ವಾಧಿಕಾರಿಯಾದಾಗ ಗಣರಾಜ್ಯದ ಹೊರತೋರಿಕೆ ಉಳಿದುದಕ್ಕೆ ತೃಪ್ತಿಪಟ್ಟುಕೊಂಡರು. ಅವನ ಅನಂತರ ಬಂದ ಅಗಸ್ಟಸ್ ಸೀಸರನನ್ನು ಚಕ್ರವರ್ತಿ ಎಂದೇ ಕರೆದರು. ಪ್ರಜಾಪ್ರಭುತ್ವದ ನಾಯಕರು ಅಸಮರ್ಥರಾದಾಗ ಇಲ್ಲವೆ ಅವರಲ್ಲಿ ಒಗ್ಗಟ್ಟಿಲ್ಲದೆ ಹೋದಾಗ ಜನ ಬೇಸತ್ತು ರಾಜನನ್ನು ಸ್ವಾಗತಿಸುತ್ತಾರೆ. 1649ರಲ್ಲಿ ಮೊದಲನೆಯ ಚಾರ್ಲ್ಸ್‌ನನ್ನು ಗಲ್ಲಿಗೇರಿಸಿ ರಾಜಪ್ರಭುತ್ವವನ್ನು ಕೊನೆಗಾಣಿಸಿದರು ಇಂಗ್ಲೆಂಡಿನ ಜನ. ಗಣರಾಜ್ಯದ ರಕ್ಷಕ ಆಲಿವರ್ ಕ್ರಾಮ್ವೆಲ್ ತೀರಿಕೊಂಡನಂತರ ಅವನ ಮಗ ಅಸಮರ್ಥ ರಿಚರ್ಡ್ ಕ್ರಾಮ್ವೆಲ್ ಅಧಿಕಾರಕ್ಕೆ ಬಂದಾಗ, 1660ರಲ್ಲಿ, ಮೊದಲನೆಯ ಚಾರ್ಲ್ಸ್‌ನ ಮಗ ಎರಡನೆಯ ಚಾರ್ಲ್ಸ್‌ನನ್ನು ಫ್ರಾನ್ಸಿನಿಂದ ಕರೆತಂದು ರಾಜನನ್ನಾಗಿ ಮಾಡಿದರು. ಫ್ರಾನ್ಸಿನ ಮಹಾಕ್ರಾಂತಿಯಲ್ಲಿ ರಾಜವಂಶವನ್ನು ತೊಡೆದು ಹಾಕಿದರು. ಕೆಲವೇ ವರ್ಷಗಳ ಅನಂತರ ನೆಪೋಲಿಯನ್ ಫ್ರಾನ್ಸಿನ ಚಕ್ರವರ್ತಿಯಾದ. ಎರಡನೆಯದಾಗಿ, ಪ್ರಾಚೀನ ಮತ್ತು ಮಧ್ಯಯುಗಗಳಲ್ಲಿ ಅರ್ಚಕವರ್ಗ ರಾಜನಿಗೆ ಬೆಂಬಲವಾಗಿ ನಿಂತುದು ರಾಜಪ್ರಭುತ್ವಕ್ಕೆ ಊರುಗೋಲಾಯಿತು. ರಾಜನ ಪಟ್ಟಾಭಿಷೇಕ ಕಾಲದಲ್ಲಿ ಧಾರ್ಮಿಕ ವಿಧಿಗಳನ್ನು ಅರ್ಚಕವರ್ಗ ನೆರವೇರಿಸಿ, ಪ್ರಾರ್ಥನೆ ನಡೆಸಿ, ಪವಿತ್ರ ತೈಲವನ್ನು ತಲೆಯ ಮೇಲಿಟ್ಟು, ಸಪ್ತನದಿಗಳ ನೀರನ್ನು ಪ್ರೋಕ್ಷಿಸಿ, ರಾಜನಲ್ಲಿನ ದೈವತ್ವವನ್ನು ಜನತೆಗೆ ಕಾಣಿಸಿತು. ಮೂರನೆಯದಾಗಿ, ಕ್ರಿ. ಶ. ಮೂರನೆಯ ಶತಮಾನದಿಂದ ಪಾಶ್ಚಾತ್ಯ ಜಗತ್ತಿನಲ್ಲಿ ಮತದ ಪ್ರಭಾವ ಹೆಚ್ಚಾಗಿ, ಇಹಲೋಕಕ್ಕಿಂತ ಪರಲೋಕವೇ ಮುಖ್ಯ, ಈ ಜೀವನ ಕಷ್ಟಗಳಿಂದ ಕೂಡಿದ್ದು, ಇದು ಪರೀಕ್ಷೆಯ ಕೇಂದ್ರ, ಮನುಷ್ಯ ಪರಲೋಕದಲ್ಲಿ ಮುಕ್ತಿಗೆ ಸಿದ್ಧತೆಯನ್ನು ಮಾಡಿಕೊಳ್ಳಬೇಕು ಎಂಬ ದೃಷ್ಟಿ ಪ್ರಬಲವಾಯಿತು. ದೇಶದ ಆಗುಹೋಗುಗಳಲ್ಲಿ ಜನರ ಆಸಕ್ತಿಯೇ ಪ್ರಜಾಪ್ರಭುತ್ವದ ಅಡಿಗಲ್ಲು. ಆದ್ದರಿಂದ ಇಹಲೋಕದ ಜೀವನದಲ್ಲಿ ಆಸಕ್ತಿ ಕಡಮೆಯಾದಾಗ ಪ್ರಜಾಪ್ರಭುತ್ವ ದುರ್ಬಲವಾಗುತ್ತದೆ. ನಾಲ್ಕನೆಯದಾಗಿ, ವಿಜ್ಞಾನ ಮತ್ತು ತಾಂತ್ರಿಕ ಜ್ಞಾನಗಳನ್ನು ಬೆಳೆಸಿಕೊಂಡು ಪೂರ್ವದೇಶಗಳಿಗೆ ಕಾಲಿಟ್ಟ ಯೂರೋಪಿಯನರಿಗೆ ಇಲ್ಲಿ ಪ್ರಜಾಪ್ರಭುತ್ವ ಬೆಳೆಯುವುದು ಬೇಕಿರಲಿಲ್ಲ. ಇಲ್ಲಿನ ಪಾಳೆಯಗಾರರು ರಾಜಮಹಾರಾಜರುಗಳ ಜಗಳಗಳಲ್ಲಿ ಕೈಹಾಕಿ, ತಮ್ಮ ಸಂಪತ್ತನ್ನೂ ಪ್ರಭುತ್ವವನ್ನೂ ಹೆಚ್ಚಿಸಿಕೊಳ್ಳುವುದು ಇವರಿಗೆ ಬೇಕಿದ್ದಿತು. ಈ ಎಲ್ಲ ಕಾರಣಗಳಿಂದ ರಾಜಪ್ರಭುತ್ವ ಹಲವು ಶತಮಾನಗಳ ಕಾಲ ಮೆರೆಯಿತು.

ರಾಜಪ್ರಭುತ್ವ ಪ್ರಜೆಗಳ ಅದೃಷ್ಟಪರೀಕ್ಷೆ. ಸಿಂಹಾಸನಕ್ಕೆ ಒಬ್ಬ ಅಶೋಕ ಬರುತ್ತಾನೋ ಚೆಂಗೀಸ್‌ಖಾನ್ ಬರುತ್ತಾನೋ ಹೇಳುವಂತಿಲ್ಲ. ಕ್ರೂರಿ ಅರಸ ಬಂದರೆ ಬಹು ಮಟ್ಟಿಗೆ ಜನ ನಿಸ್ಸಹಾಯಕರು. ಒಳ್ಳೆಯ ಮನುಷ್ಯನೇ ಸಿಂಹಾಸನವನ್ನೇರಿದ ಮೇಲೆ ಅಧಿಕಾರ ಅವನಲ್ಲಿ ದುರಹಂಕಾರವನ್ನೂ ಕ್ರೌರ್ಯವನ್ನೂ ತುಂಬಬಹುದು. ರಾಜಪ್ರಭುತ್ವದಲ್ಲಿ ರಾಜನನ್ನು ಪ್ರಶ್ನಿಸಲು ಸಾಮಾನ್ಯವಾಗಿ ಅವಕಾಶವಿಲ್ಲ. ಹೀಗಾಗಿ, ನಿತ್ಯಕದನ ನಿತ್ಯಗಂಡಾಂತರ ತಪ್ಪಿ ಸ್ವಲ್ಪ ಶಾಂತಿ ನೆಲಸಿದ ಅನಂತರ, ರಾಜನ ಮೇಲೆ ಅವಲಂಬನೆ ಕಡಮೆಯಾಗಲು ಸಾಧ್ಯವಾಯಿತು. ಅಲ್ಲದೆ ಒಬ್ಬ ಚೆಂಗೀಸ್‌ಖಾನ್, ಒಬ್ಬ ಎಂಟನೆಯ ಹೆನ್ರಿ, ಒಬ್ಬ ಸಮುದ್ರಗುಪ್ತನಂಥ ರಾಜ–ಒಳ್ಳೆಯವನಾಗಿರಲಿ, ಕೆಟ್ಟವನಾಗಿರಲಿ–ತನ್ನ ಕೈಕೆಳಗಿನ ಶ್ರೀಮಂತರನ್ನೂ ಸರದಾರರನ್ನೂ ಪಾಳೆಯಗಾರರನ್ನೂ ಅಂಕೆಯಲ್ಲಿಟ್ಟು, ಸಮರ್ಥನಾಗಿ ಆಳಬಲ್ಲ ; ಆದರೆ ಇಂಥವರು ವಿರಳ. ಸಮರ್ಥನಾದ ರಾಜನ ಮಗ ಸಮರ್ಥನಾಗಿಯೇ ಇರುವನೆಂಬ ನಿಯಮವಿಲ್ಲ. ಅಥವಾ ಸಮರ್ಥನಾದ ರಾಜನಿಗೆ ದೀರ್ಘಾಯುಸ್ಸು ಬರಬಹುದೆಂದೂ ಹೇಳುವಂತಿಲ್ಲ. ಅಲೆಗ್ಸಾಂಡರನ ಸಾವಿನನಂತರ ಅವನ ಸರದಾರರು ಸ್ವತಂತ್ರರಾದರು. ಮೊಗಲ್ ಸಾಮ್ರಾಜ್ಯದ ಕಡೆಯ ದಿನಗಳಲ್ಲಿ ದೆಹಲಿಯಲ್ಲಿದ್ದ ಚಕ್ರವರ್ತಿ ಹೆಸರಿಗೆ ಮಾತ್ರ ಚಕ್ರವರ್ತಿಯಾಗಿದ್ದ. ಹೀಗೆ ಎಷ್ಟೋ ದೇಶಗಳಲ್ಲಿ ಹೆಸರಿಗೆ ರಾಜಪ್ರಭುತ್ವ ; ಆಡಳಿತ ಕೆಲವರ ಕೈಯಲ್ಲಿ. ಇದೊಂದು ಬಗೆಯ ವಿಶಿಷ್ಟ ವರ್ಗ ಪ್ರಭುತ್ವ. ಹದಿನಾಲ್ಕನೆಯ ಲೂಯಿ ಪಟ್ಟಕ್ಕೆ ಬರುವವರೆಗೆ ಫ್ರಾನ್ಸಿನಲ್ಲಿ ಆಗುತ್ತಿದ್ದುದು ಹೀಗೆಯೆ.

ವಿಶಿಷ್ಟವರ್ಗದ ಪ್ರಭುತ್ವ ರಾಜಪ್ರಭುತ್ವದ ನೆರಳಿನಲ್ಲಿಯೇ ನಡೆಯಬೇಕೆಂದೇನೂ ಇಲ್ಲ. ವೆನಿಸ್ ರಾಜ್ಯ ವ್ಯಾಪಾರ ವಾಣಿಜ್ಯಗಳಿಗೆ ಬಹು ಅನುಕೂಲವಾದ ಸನ್ನಿವೇಶದಲ್ಲಿದ್ದಿತು ; ರಾಜ್ಯದ ಸಂಪತ್ತಿಗೆ ವ್ಯಾಪಾರವೇ ಆಧಾರ ; ಯೂರೋಪ್ ಪಶ್ಚಿಮ ದೇಶಗಳೊಡನೆ ನಡೆಸು

ತ್ತಿದ್ದ ವ್ಯಾಪಾರ ಬಹುಕಾಲ ವೆನಿಸಿನ ಹತೋಟಿಯಲ್ಲಿತ್ತು. ಸಹಜವಾಗಿ ಈ ರಾಜ್ಯದಲ್ಲಿ ವರ್ತಕರ ವರ್ಗಕ್ಕೆ ಪ್ರಾಬಲ್ಯ. ರಾಜ್ಯದ ಪ್ರಭುವಿಗೆ ಡೋಜ್ ಎಂದು ಹೆಸರು. ಇವನೂ ಇವನ ಸಹಾಯಕ್ಕೆಂದು ಆಯ್ಕೆಯಾಗುತ್ತಿದ್ದ ಮಂಡಲಿಯ ಹತ್ತು ಮಂದಿ ಸದಸ್ಯರೂ ವಾಣಿಜ್ಯದಿಂದ ಶ್ರೀಮಂತವಾಗಿದ್ದ ಕುಟುಂಬಗಳಿಗೆ ಸೇರಿದವರೇ. ಲುಬೆಕ್ ರಾಜ್ಯದ ಆಡಳಿತವೂ ವರ್ತಕವರ್ಗದ ಕೈಯಲ್ಲಿದ್ದಿತು. ಹದಿನಾರು ಮತ್ತು ಹದಿನೇಳನೆಯ ಶತಮಾನಗಳಲ್ಲಿ ಸಂಯುಕ್ತ ನೆದರ್‌ಲೆಂಡ್ಸ್‌ನಲ್ಲಿ ಕೆಲವೇ ಕುಟುಂಬಗಳ ಸದಸ್ಯರು ರಾಜ್ಯವನ್ನಾಳುತ್ತಿದ್ದರು. ಹತ್ತೊಂಬತ್ತನೆಯ ಶತಮಾನದವರೆಗೆ ಈ ಬಗೆಯ ಪ್ರಭುತ್ವವನ್ನು ವಿಚಾರವಂತರೂ ಮೆಚ್ಚಿಕೊಳ್ಳುತ್ತಿದ್ದರು. ರಾಜನಿಲ್ಲದ ಆಡಳಿತ ಎಂಬುದರಿಂದಲೇ ಅವರಿಗೆ ಇದರಲ್ಲಿ ಅಭಿಮಾನ.

ಕ್ರಿ. ಪೂ. ಏಳನೆಯ ಶತಮಾನದಲ್ಲಿಯೆ ಗ್ರೀಸಿನ 'ಸೋಫಿಸ್ಟ್' ಪಂಥಕ್ಕೆ ಸೇರಿದವರು ಎಲ್ಲ ಮನುಷ್ಯರೂ ಸಮಾನರು ಎಂಬ ತತ್ತ್ವವನ್ನು ಬೋಧಿಸಲಾರಂಭಿಸಿದರು. ಪ್ರಾಚೀನ ಗ್ರೀಸಿನಲ್ಲಿಯೂ ಭಾರತದಲ್ಲಿಯೂ ಗಣರಾಜ್ಯಗಳಿದ್ದುವು. ಇವುಗಳಲ್ಲಿ ಪ್ರಜೆಗಳು ಆರಿಸಿದ ನಾಯಕರೇ ಆಡಳಿತಗಾರರು. ಒಂದು ದೃಷ್ಟಿಯಲ್ಲಿ ಇವೂ ಪರಿಪೂರ್ಣ ಪ್ರಜಾಪ್ರಭುತ್ವಗಳಾಗಿರಲಿಲ್ಲ. ಗ್ರೀಸಿನಲ್ಲಿ ಗುಲಾಮರಿಗೂ ಸ್ತ್ರೀಯರಿಗೂ ಆಡಳಿತದಲ್ಲಿ ಭಾಗವಿರಲಿಲ್ಲ. ಪ್ರಾಚೀನ ಭಾರತದಲ್ಲಿ ಹೆಂಗಸರಿಗೆ ಗಂಡಸರಷ್ಟು ಅಧಿಕಾರವಿರಲಿಲ್ಲ. ದೇಶಗಳು ದೊಡ್ಡವಾಗಿ ಜನಸಂಖ್ಯೆ ಹೆಚ್ಚಾದಂತೆ ಪ್ರಜಾಪ್ರಭುತ್ವ ನಿಜವಾಗಿ ಪ್ರಜಾಪ್ರತಿನಿಧಿ ಪ್ರಭುತ್ವವಾಯಿತು. ಒಟ್ಟಿನಲ್ಲಿ ಹದಿನೆಂಟನೆಯ ಶತಮಾನದವರೆಗೆ ಪ್ರಜಾಪ್ರಭುತ್ವ ಗರಿಗೂಡಲಿಲ್ಲ. ಹದಿನೆಂಟನೆಯ ಶತಮಾನದ ಕಡೆಯ ಭಾಗದಲ್ಲಿ ಅಮೆರಿಕದ ವಸಾಹತುಗಳು ಬ್ರಿಟನ್ನಿನ ಅರಸನ ಆಡಳಿತದಿಂದ ಸಿಡಿದು ಅಮೆರಿಕದ ಸಂಯುಕ್ತ ಸಂಸ್ಥಾನ ಜನ್ಮತಾಳಿದ್ದು. ಫ್ರಾನ್ಸಿನಲ್ಲಿ ಮಹಾಕ್ರಾಂತಿಯಾಗಿ ಸ್ವಾತಂತ್ರ್ಯ. ಸಮಾನತೆ. ಸಹೋದರತ್ವಗಳ ಧ್ಯೇಯಗಳಿಗೆ ಸ್ವಲ್ಪ ಕಾಲವಾದರೂ ಜಯ ಲಭಿಸಿದ್ದು—ಇವು ಪ್ರಜಾಪ್ರಭುತ್ವಕ್ಕೆ ನೆರವಾದ ಚಾರಿತ್ರಿಕ ಘಟನೆಗಳು.

ಇಪ್ಪತ್ತನೆಯ ಶತಮಾನ ಸಾಮ್ರಾಜ್ಯಗಳ ಮಹಾನಾಟಕಕ್ಕೆ ಮಂಗಳವನ್ನು ಹಾಡಿತು. 1912ರಲ್ಲಿ ಚೀನದ ಚಕ್ರವರ್ತಿ ಸಿಂಹಾಸನ ತ್ಯಾಗಮಾಡಬೇಕಾಯಿತು. ಎರಡು ಮಹಾಯುದ್ಧಗಳು ಹಲವು ಕಿರೀಟಗಳನ್ನು ಉರುಳಿಸಿದುವು ; ಉಳಿದ ಕಿರೀಟಗಳನ್ನು ಮಸುಕು ಮಾಡಿದುವು. ತಮ್ಮ ಮುಷ್ಟಿಯಲ್ಲಿಯೆ ಎಲ್ಲ ಅಧಿಕಾರವನ್ನೂ ಹಿಡಿದಿಟ್ಟುಕೊಂಡ ರಾಷ್ಟ್ರಗಳ ಅರಸರು ಯುದ್ಧದಲ್ಲಿ ಸೋತಾಗ. ಸೋಲಿಗೆ ಸಂಪೂರ್ಣ ಹೊಣೆಯನ್ನು ಹೊರಬೇಕಾಯಿತು. ಜರ್ಮನಿ. ಆಸ್ಟ್ರಿಯ–ಹಂಗೆರಿಗಳ ಅರಸರು ಈ ರೀತಿ ಉರುಳಿದವರು. ರಷ್ಯದ ಚಕ್ರವರ್ತಿಯ ವಿರುದ್ಧ ಪ್ರಜೆಗಳು ದಂಗೆ ಎದ್ದಾಗ ಯಾವ ಅರಸನೂ ಅವನ ನೆರವಿಗೆ ಬರುವಂತಿರಲಿಲ್ಲ. ಎರಡನೆಯ ಮಹಾಯುದ್ಧದಲ್ಲಿ ಆಳಿದುಳಿದಿದ್ದ ರಾಜರಲ್ಲಿ ಹಲವರು ಮಾಯವಾದರು. ಸಾಮ್ರಾಜ್ಯವಾದದ ಸೊಕ್ಕನ್ನು ಮುರಿಯುವುದರಲ್ಲಿ ಮಹತ್ತರ ಪಾತ್ರ. ಹಾಗೆಯೇ ಆಧುನಿಕ ಜಗತ್ತಿನಲ್ಲಿ ಪ್ರಜಾಪ್ರಭುತ್ವದ ಯಶಸ್ಸನ್ನು ನಿರ್ಧರಿಸುವುದರಲ್ಲಿ ಮಹತ್ತರ ಪಾತ್ರ. ಭಾರತ ನಿರ್ವಹಿಸಿತು. ವಿಶಾಲವಾದ. ಸಂಪದ್ಯುಕ್ತವಾದ. ಪ್ರಾಚೀನ ಚರಿತ್ರೆ ಸಂಸ್ಕೃತಿಗಳನ್ನು ಪಡೆದ ಭಾರತ ಬ್ರಿಟನ್ನಿನ ಅರಸರ ಕಿರೀಟದಲ್ಲಿ ಅದ್ವಿತೀಯ ರತ್ನ ಎಂದು ಬ್ರಿಟನ್ನಿನವರು ಭಾವಿಸಿದ್ದರು. ಇತರ ಸಾಮ್ರಾಜ್ಯಶಾಹಿ ರಾಷ್ಟ್ರಗಳು ಬ್ರಿಟನನ್ನು ಅಸೂಯೆಯಿಂದ ಕಾಣುತ್ತಿದ್ದುದು ಆಶ್ಚರ್ಯವಲ್ಲ. ಹದಿನೆಂಟನೆಯ ಶತಮಾನದ ಕಡೆಯಲ್ಲಿ ಬ್ರಿಟಿಷರಿಗೆ ಪ್ರತಿಭಟನೆ ಪ್ರಾರಂಭವಾಯಿತು. ಮೈಸೂರಿನ ಟಿಪ್ಪು ಬ್ರಿಟಿಷರೊಡನೆ ಕಾದುತ್ತಲೇ ಅಸು ನೀಗಿದ. ರಾಣಿ ಲಕ್ಷ್ಮೀಬಾಯಿ. ತಾಂತ್ಯಾಟೋಪಿ. ರಾಣಿ ಚೆನ್ನಮ್ಮ—ಇಂಥವರ ಹೋರಾಟ ಹತ್ತೊಂಬತ್ತನೆಯ ಶತಮಾನದಲ್ಲಿ ಭಾರತದ ಸ್ವಾತಂತ್ರ್ಯಬಯಕೆಯನ್ನು ಬೆಳಗಿತು. ಗಾಂಧಿಜಿಯ ನಾಯಕತ್ವದಲ್ಲಿ ಭಾರತ ನಡೆಸಿದ ಸ್ವಾತಂತ್ರ್ಯ ಹೋರಾಟ ಪ್ರಪಂಚದ ಚರಿತ್ರೆಯ ಅತಿ ರೋಮಾಂಚಕ ಅಧ್ಯಾಯಗಳಲ್ಲಿ ಒಂದು. ವೀರ ಸಾವರ್ಕರ್. ಸುಭಾಷ್‌ಚಂದ್ರ ಬೋಸ್. ಬಾಲಗಂಗಾಧರ ತಿಲಕ್. ಜವಾಹರಲಾಲ್ ನೆಹರು. ಸರದಾರ ವಲ್ಲಭಭಾಯಿ ಪಟೇಲ್. ನಾಯಕರಿಂದ ಹಿಡಿದು ಹಳ್ಳಿಯ ಮೂಲೆ ಮೂಲೆಯ ಅಜ್ಞಾತ ನಿರಕ್ಷರಕುಕ್ಷಿಗಳವರೆಗೆ ನಾಡಿನಲ್ಲಿ ಸ್ವಾತಂತ್ರ್ಯವನ್ನು ಗಳಿಸುವ ಛಲ



ಉಕ್ಕಿತು. ಪ್ರಪಂಚದ ಅತ್ಯಂತ ಬಲಿಷ್ಠ ಸಾಮ್ರಾಜ್ಯದ ಕಪಿಮುಷ್ಟಿಯಿಂದ ಭಾರತ ಪಾರಾದುದು ಆಫ್ರಿಕ ಖಂಡದಲ್ಲಿ ಬ್ರಿಟನ್, ಫ್ರಾನ್ಸ್, ಪೋರ್ಚುಗಲ್ ಮೊದಲಾದ ರಾಷ್ಟ್ರಗಳ ಅಧೀನದಲ್ಲಿದ್ದ ದೇಶಗಳ ಜನತೆಗೆ ಸ್ಫೂರ್ತಿಯನ್ನು ನೀಡಿತು. ಆತ್ಮವಿಶ್ವಾಸವನ್ನು ತಂದುಕೊಟ್ಟಿತು. ಕಳೆದ ಇಪ್ಪತ್ತೈದು ವರ್ಷಗಳಲ್ಲಿ ಆಫ್ರಿಕದಲ್ಲಿ ಹೊಸ ಚೈತನ್ಯ ಮೂಡಿದೆ. ದೇಶವಾದ ಮೇಲೆ ದೇಶ ಗುಲಾಮಗಿರಿಯ ಸರಪಳಿಯನ್ನು ಕಿತ್ತು ಬಿಸಾಡಿದೆ. ಪ್ರಪಂಚದ ಪ್ರಜಾಪ್ರಭುತ್ವ ರಾಷ್ಟ್ರಗಳ ವಿರಳ ಪಂಕ್ತಿ ಈಗ ತುಂಬುತ್ತಿದೆ. ಉಳಿದಿರುವ ರಾಜಪ್ರಭುತ್ವಗಳಲ್ಲಿಯೂ ರಾಜರ ಅಧಿಕಾರ ಕುಗ್ಗಿದೆ. 1688ರಲ್ಲಿ ಇಂಗ್ಲೆಂಡಿನ ಅರಸ ಜೇಮ್ಸ್ ನಿರಂಕುಶವಾಗಿ ಆಳಲು ಪ್ರಯತ್ನಿಸಿದ. ಪ್ರಯತ್ನ ವಿಫಲವಾದಾಗ ರಾಜ್ಯಬಿಟ್ಟು ಓಡಿದ. ಅಂದಿನಿಂದ ಬ್ರಿಟನಿನ ರಾಜ ಅಥವಾ ರಾಣಿ ಸಂವಿಧಾನಬದ್ಧರಾಗಿ, ಆಳುವ ರಾಷ್ಟ್ರದ ಐಕ್ಯ ಸಂಕೇತವಾದ ಕಿರೀಟಧಾರಿಯಾಗಿ ಉಳಿದಿದ್ದಾರೆ. ಇತ್ತೀಚಿನವರೆಗೆ ಜಪಾನಿನಲ್ಲಿ ರಾಜನನ್ನು ಪ್ರತ್ಯಕ್ಷ ದೇವರಂತೆ ಕಾಣುತ್ತಿದ್ದರು. ಇಂದು ಜಪಾನಿನ ರಾಜನೂ ರಾಷ್ಟ್ರದ ಐಕ್ಯದ ಸಂಕೇತವಾಗಿದ್ದಾನೆ, ಅಷ್ಟೆ.

ಸ್ವಾತಂತ್ರ್ಯದ ಪ್ರೇಮ ಮನುಷ್ಯನ ಇತಿಹಾಸವನ್ನು ಉದ್ದಕ್ಕೂ ಬೆಳಗಿದೆ. ಸ್ಪಾರ್ಟಕಸ್ ಗುಲಾಮರ ಸ್ವಾತಂತ್ರ್ಯಕ್ಕಾಗಿ ಹೋರಾಡಿ ಜೀವ ತೆತ್ತ. ಥರ್ಮಾಪಲಿ, ಮ್ಯಾರಥಾನ್‌ಗಳಲ್ಲಿ ಕೆಲವೇ ಮಂದಿ ಗ್ರೀಕರು ಸಹಸ್ರಾರು ಮಂದಿ ಪರ್ಷಿಯನರನ್ನು ತಡೆಗಟ್ಟಿ ಸಾವನ್ನಪ್ಪಿದರು. ಮತಸ್ವಾತಂತ್ರ್ಯಕ್ಕಾಗಿ ಪ್ಯೂರಿಟನರು ಇಂಗ್ಲೆಂಡನ್ನು ಬಿಟ್ಟು ದೂರದ ಅಮೆರಿಕಕ್ಕೆ ಹೋದರು. ಸ್ವಾತಂತ್ರ್ಯಕ್ಕಾಗಿ ಭಾರತದಲ್ಲಿ ಎಳೆಯ ಹುಡುಗರು ಹುಡುಗಿಯರು ಗುಂಡಿಗೆ ಬಲಿಯಾದರು. ಈ ಸ್ವಾತಂತ್ರ್ಯಪ್ರೇಮ ಪ್ರಜಾಪ್ರಭುತ್ವದಲ್ಲಿ ಎಲ್ಲ ಪ್ರಜೆಗಳ ಸಮಾನತ್ವವಾಗಿ ಅವತರಿಸುತ್ತದೆ. ಸಂಸದೀಯ ಪದ್ಧತಿಯ ಪ್ರಜಾಪ್ರಭುತ್ವ ರೂಪುಗೊಂಡುದೇ ಇದರಿಂದ. ಎಲ್ಲ ಪ್ರಜೆಗಳೂ ಸಮಾನರು. ಪ್ರಭುತ್ವದಲ್ಲಿ ಪ್ರತಿಯೊಬ್ಬರಿಗೂ ಪಾಲಿರಬೇಕು—ಈ ಆಸೆ ದಕ್ಷಿಣ ಆಫ್ರಿಕದ ವರ್ಣಜನಾಂಗಗಳು ನಿರ್ದಯ ಪ್ರಭುತ್ವದ ವಿರುದ್ಧ ಹೋರಾಡಲು ಚೈತನ್ಯ ನೀಡಿದೆ. ಸಂಯುಕ್ತ ಸಂಸ್ಥಾನದಲ್ಲಿ ನೀಗ್ರೊಗಳು ಇತರರೊಂದಿಗೆ ಪೂರ್ಣಸಮಾನತೆ ಪಡೆಯಲು ಇನ್ನೂ ಶ್ರಮಿಸುತ್ತಿದ್ದಾರೆ.

ಪ್ರಜಾಪ್ರಭುತ್ವಕ್ಕೆ ಅಂಟಿಕೊಂಡು ಬಂದ ಅಪಾಯವೂ ಉಂಟು. ಪ್ರಜಾಪ್ರಭುತ್ವದ ಬೆಲೆ ಶ್ರಮವರಿಯದ ಎಚ್ಚರಿಕೆ. ಪ್ರಜೆಗಳು ತಮ್ಮ ಪ್ರತಿನಿಧಿಗಳನ್ನು ಪ್ರಾಮಾಣಿಕವಾಗಿ, ದೇಶದ ಹಿತದೃಷ್ಟಿಯಿಂದ ಆರಿಸಬೇಕು. ಎರಡನೆಯದು, ಅವರು ಸದಾ ಪ್ರಭುತ್ವದ ರೀತಿನೀತಿಗಳನ್ನು ಪರೀಕ್ಷಿಸಿ ನೋಡುತ್ತಿರಬೇಕು. ತಿಳಿವಳಿಕೆ—ವಿಚಾರಶೀಲತೆಗಳಿಂದ ಕೂಡಿದ ಸಾರ್ವಜನಿಕ ಅಭಿಪ್ರಾಯ ದೇಶದಲ್ಲಿ ರೂಪುಗೊಳ್ಳಬೇಕು. ಇದಿಲ್ಲದಿದ್ದರೆ ಪ್ರಜಾಪ್ರಭುತ್ವ ಏಕಪಕ್ಷದ ಅಥವಾ ಏಕವ್ಯಕ್ತಿಯ ಆಡಳಿತಕ್ಕೆ ಎಡೆಮಾಡಿಕೊಡುತ್ತದೆ. ಪ್ರಜಾಪ್ರಭುತ್ವಕ್ಕೆ ಪ್ರಜೆಗಳ ಎಚ್ಚರವೇ ಉಸಿರು. ಕೆಲವು ಪ್ರಜಾಪ್ರಭುತ್ವ ದೇಶಗಳು ಮತ್ತೆ ಮತ್ತೆ ರಾಜರ ಇಲ್ಲವೆ ಸರ್ವಾಧಿಕಾರಿಗಳ ಆಡಳಿತಕ್ಕೆ ಒಳಗಾಗಲು ಆ ದೇಶಗಳಲ್ಲಿ ಈ ಮನೋಧರ್ಮ ಇಲ್ಲದಿರುವುದೇ ಕಾರಣ. ಈಚೆಗೆ ಏಷ್ಯ ಮತ್ತು ಆಫ್ರಿಕ ಖಂಡಗಳಲ್ಲಿ ಹಲವು ರಾಷ್ಟ್ರಗಳು ಪ್ರಜಾಪ್ರಭುತ್ವವನ್ನು ಒಪ್ಪಿಕೊಂಡು ಕೆಲವೇ ವರ್ಷಗಳಲ್ಲಿ ಕಳೆದುಕೊಂಡುದನ್ನು ಕಾಣುತ್ತೇವೆ.

ಪ್ರಜಾಪ್ರಭುತ್ವದ ವಿಧಾನ ಚರ್ಚೆ. ಆಳುವವರು ತಮ್ಮ ರೀತಿನೀತಿಗಳನ್ನು ವಿವರಿಸಿ, ಬಹುಮತವನ್ನು ಒಲಿಸಿಕೊಂಡು ಮುಂದಕ್ಕೆ ಹೆಜ್ಜೆ ಇಡಬೇಕು. ಇದರಿಂದ ಪ್ರಜಾಪ್ರಭುತ್ವಗಳಲ್ಲಿ ತೀವ್ರವಾಗಿ ಸುಧಾರಣೆ ಸಾಗುವುದಿಲ್ಲ. ಕೆಮಾಲ್ ಅಟಾಟರ್ಕನಂಥವರು ಸರ್ವಾಧಿಕಾರಿಯಂತೆ ನಡೆದುಕೊಂಡೇ ಕೆಲವೇ ವರ್ಷಗಳಲ್ಲಿ ಬೆರಗುಗೊಳಿಸುವ ಸುಧಾರಣೆಯನ್ನು ಸಾಧಿಸುತ್ತಾರೆ. ತೀವ್ರ ಪ್ರಗತಿಯನ್ನು ಅಪೇಕ್ಷಿಸುವವರಿಗೆ ಪ್ರಜಾಪ್ರಭುತ್ವದ ನಡಿಗೆ ಆಮೆಯ ಗಮನ ಎನ್ನಿಸುತ್ತದೆ. ಅಸಮಾಧಾನವಾಗುತ್ತದೆ. ಸರ್ವಾಧಿಕಾರಿಗಳು ನಿರಾಸೆ ಹೊಂದಿದ ಜನಾಂಗಕ್ಕೆ ಕ್ಷಿಪ್ರ ಯಶಸ್ಸಿನ ಆಸೆಯನ್ನು ಮುಂದಿಡುತ್ತಾರೆ. ಎರಡು ಮಹಾಯುದ್ಧಗಳಲ್ಲಿಯೂ ಪ್ರಜಾಪ್ರಭುತ್ವ ರಾಷ್ಟ್ರಗಳು ಪ್ರಾರಂಭದಲ್ಲಿ ಸೋಲನ್ನೇ ಅನುಭವಿಸಿದುವು. ಇದಕ್ಕೆ ಕಾರಣ, ಈ ದೇಶಗಳ ನಾಯಕರು ಸರ್ವಾಧಿಕಾರಿಗಳಂತೆ ತಾವೇ ಮುಖ್ಯವಾದ ನಿರ್ಧಾರಗಳನ್ನು ಕೈಗೊಂಡು ಕಾರ್ಯೋನ್ಮುಖರಾಗುವಂತಿರಲಿಲ್ಲ. ಆದರೆ ಕ್ರಮೇಣ ಪ್ರಜಾಪ್ರಭುತ್ವದ ಚೇತನ ವಿಜಯವನ್ನು ಸಾಧಿಸಿತು. ಮೊದಲನೆಯ ಮಹಾಯುದ್ಧದಲ್ಲಿ ಸೋಲನ್ನೂ ಅಪಮಾನವನ್ನೂ ಅನುಭವಿಸಿ ಕುದಿಯುತ್ತಿದ್ದ ಇಟಲಿ ಜರ್ಮನಿಗಳ ಜನ ಮುಸೋಲಿನಿ ಹಿಟ್ಲರರು ತಮಗೆ ಪ್ರತಿಷ್ಠೆ ಐಶ್ವರ್ಯಗಳನ್ನು ತಂದುಕೊಡುವರೆಂದು ಭ್ರಾಂತಿಪಟ್ಟರು. ಆ ನಾಯಕರ ಪ್ರಾರಂಭದ ವಿಜಯಗಳು ಈ ನಂಬಿಕೆಗೆ ಪುಟಕೊಟ್ಟುವು. ಆಧುನಿಕ ಪ್ರಜಾಪ್ರಭುತ್ವಗಳು ಕಲ್ಯಾಣ ರಾಜ್ಯಗಳಾಗುವ ದಾರಿಯಲ್ಲಿ ನಡೆಯುತ್ತಿವೆ. ಯುವಕರ ಆದರ್ಶಪ್ರಿಯತೆಗೆ, ಕರ್ತೃತ್ವ ಶಕ್ತಿಗೆ ಮಾರ್ಗದರ್ಶನ ಮಾಡುತ್ತಿಲ್ಲ ಎಂಬ ಆಕ್ಷೇಪಣೆಯೂ ಉಂಟು. ಮನುಷ್ಯನಿಗೆ ಸುಖಜೀವನದ ಅಭಿಲಾಷೆ ಇರುತ್ತದೆ, ನಿಜ. ಹಾಗೆಯೇ, ತಾನು ವ್ಯರ್ಥವಾಗಿ ಹುಟ್ಟಿ ಬದುಕಿ ಸಾಯಲಿಲ್ಲ. ಜೀವಮಾನದಲ್ಲಿ ಸಾರ್ಥಕವಾಗುವಂಥ ಕೆಲಸವನ್ನು ಮಾಡಿದೆ ಎಂಬ ತೃಪ್ತಿಯೂ ಹಲವರಿಗೆ ಬೇಕು. ಸರ್ವಾಧಿಕಾರಿಗಳು ಜನರ ಈ ಪ್ರವೃತ್ತಿಯನ್ನು ಯಶಸ್ವಿಯಾಗಿ ಬಳಸಿಕೊಳ್ಳುತ್ತಾರೆ. ತಾವು ಸತ್ತರೂ ಚಿಂತೆ ಇಲ್ಲ, ಹುಟ್ಟಿದ್ದು ಸಾರ್ಥಕವಾಗುವಂಥ ದಾರಿಯನ್ನು ನಾಯಕ ತೋರಿಸುತ್ತಿದ್ದಾನೆ ಎಂಬ ಉತ್ಸಾಹ ಮೂಡುವಂತೆ ಮಾಡುತ್ತಾರೆ. ಪ್ರಜಾಪ್ರಭುತ್ವಗಳೂ ಈ ಸಾರ್ಥಕಜೀವನದ, ಕ್ರಿಯಾಶೀಲ ಬಾಳಿನ ಬಯಕೆಯನ್ನು ಪೂರ್ಣಗೊಳಿಸುವ ರೀತಿಯನ್ನು ಕಂಡುಕೊಳ್ಳಬೇಕು. ಹೀಗೆ ಪ್ರಜಾಪ್ರಭುತ್ವಕ್ಕೆ ಕೆಲವು ದೌರ್ಬಲ್ಯಗಳು ಅಂಟಿಕೊಂಡೇ ಇವೆ. ಆದರೆ ಈವರೆಗೆ ಮನುಷ್ಯ ಸೃಷ್ಟಿಸಿದ ಆಡಳಿತ ಪದ್ಧತಿಗಳಲ್ಲಿ ಕನಿಷ್ಠ ದೋಷಪೂರಿತವಾದದ್ದು—ಪ್ರಜಾಪ್ರಭುತ್ವ.

ಇಪ್ಪತ್ತನೆಯ ಶತಮಾನದಲ್ಲಿ ಪಕ್ಷವ್ಯವಸ್ಥೆಯ ಸಂಸದೀಯ ಪ್ರಜಾಪ್ರಭುತ್ವದ ಬದಲು ಬೇರೆ ರೂಪದ ಪ್ರಜಾಪ್ರಭುತ್ವಗಳು ಹಲವು ದೇಶಗಳಲ್ಲಿ ಕಾಣಿಸಿಕೊಂಡಿವೆ. ಪಕ್ಷವ್ಯವಸ್ಥೆಯ ಸಂಸದೀಯ ಪ್ರಜಾಪ್ರಭುತ್ವಗಳಲ್ಲಿ ವಿವಿಧ ರಾಜಕೀಯ ಪಕ್ಷಗಳು ತಮ್ಮ ಧೋರಣೆಗಳನ್ನು ಜನರ ಮುಂದಿಟ್ಟು ಮತದಾರರ ಬೆಂಬಲ ಪಡೆಯುವ ಅವಕಾಶ ಇರುತ್ತದೆ. 21 ವರ್ಷ ವಯಸ್ಸಾದವರೆಲ್ಲರಿಗೂ ಕೆಲವು ದೇಶಗಳಲ್ಲಿ 18 ವರ್ಷವಾದವರಿಗೂ ಮತದಾನದ ಹಕ್ಕುಂಟು. ಚುನಾವಣೆಯಲ್ಲಿ ಅತ್ಯಂತ ಹೆಚ್ಚು ಸ್ಥಾನಗಳನ್ನು ಪಡೆದ ಪಕ್ಷ ಆಡಳಿತ ಪಕ್ಷವಾಗುತ್ತದೆ. ಇತರ ಪಕ್ಷ ಅಥವಾ ಪಕ್ಷಗಳು ಸಂಸತ್ತಿನಲ್ಲಿ ಅದಕ್ಕೆ ವಿರೋಧ. ವಿರೋಧಪಕ್ಷ ಆಳುವ ಪಕ್ಷವನ್ನು ಟೀಕಿಸಬಹುದು. ಅದನ್ನು ಉರುಳಿಸಲು ಸಂವಿಧಾನಬದ್ಧವಾದ ರೀತಿಯಲ್ಲಿ

ಯತ್ನಿಸಬಹುದು. ಇಂಗ್ಲೆಂಡ್, ಭಾರತ ಮತ್ತು ಹಲವು ದೇಶಗಳಲ್ಲಿ ಇರುವುದು ಈ ಪದ್ಧತಿ. ಈ ವ್ಯವಸ್ಥೆಯಲ್ಲಿ ವಿರೋಧ ಪಕ್ಷ ಎಷ್ಟು ಮುಖ್ಯ ಎಂದರೆ, ವಿರೋಧಪಕ್ಷ ಬ್ರಿಟನನ್ನು ಸರಕಾರದ ಮೂಲಕ ಆಳುತ್ತದೆ ಎಂಬ ಮಾತುಂಟು. ಆದರೆ ಹಲವು ದೇಶ ಗಳಲ್ಲಿ ಏಕಪಕ್ಷದ ಸರಕಾರ. ಈ ದೇಶಗಳೂ ತಮ್ಮದು ಪ್ರಜಾಪ್ರಭುತ್ವ ಎಂದು ಕರೆದುಕೊಳ್ಳುತ್ತವೆ. ಸೋವಿಯತ್ ರಷ್ಯ, ಕಮ್ಯೂನಿಸ್ಟ್ ಚೀನ ಇವು ಇಂಥ ಆಡಳಿತ ವ್ಯವಸ್ಥೆಯನ್ನು ಹೊಂದಿವೆ. ಇಂಥ ದೇಶದಲ್ಲಿ ಒಂದೇ ರಾಜಕೀಯ ಪಕ್ಷವಿರುತ್ತದೆ. ಬೇರೆ ರಾಜಕೀಯ ಪಕ್ಷ ಗಳು ಕೆಲಸ ಮಾಡಲು ಅವಕಾಶವೇ ಇಲ್ಲ. ಜನತೆ ತಮ್ಮ ಪಕ್ಷದ ಹಿಂದಿದೆ, ಆದುದರಿಂದ ತಮ್ಮದು ಪ್ರಜಾಪ್ರಭುತ್ವ ಎಂಬುದು ಇವರ ವಾದ. 'ಮೂಲಭೂತ ಪ್ರಜಾಪ್ರಭುತ್ವ', 'ನಿಯಂತ್ರಿತ ಪ್ರಜಾಪ್ರಭುತ್ವ' ಎಂಬ ಹೆಸರನ್ನು ತಳೆದ ವ್ಯವಸ್ಥೆಗಳೂ ಹಲವು ದೇಶಗಳಲ್ಲಿ ಕಂಡುಬಂದಿವೆ. ಸುಕರ್ನೊ ಅವರ ಕಾಲದಲ್ಲಿ ಇಂಡೊನೇಷ್ಯ, ಜನರಲ್ ಅಯೂಬ್‌ಖಾನರ ಕಾಲದಲ್ಲಿ ಪಾಕಿಸ್ತಾನ ಇಂಥ ಆಡಳಿತ ವ್ಯವಸ್ಥೆಗಳನ್ನು ಹೊಂದಿ ದ್ದುವು. ಇಲ್ಲಿ ವಯಸ್ಕರು ನೇರವಾಗಿ ಸಂಸತ್ತಿಗೆ ಪ್ರತಿನಿಧಿಗಳನ್ನು ಚುನಾಯಿಸುವಂತಿಲ್ಲ. ದೇಶದ ಸಾಮಾನ್ಯಜನರಿಗೆ ರಾಜಕೀಯ ಪರಿಜ್ಞಾನ ಸಾಲದು, ರಾಜಕಾರಣಿಗಳು ಅವರನ್ನು ಸುಲಭವಾಗಿ ಮರುಳುಗೊಳಿಸುತ್ತಾರೆ. ಆದ್ದರಿಂದ ನೇರವಾಗಿ ಸಂಸತ್ತಿನ ಸದಸ್ಯರನ್ನು ಆಯ್ಕೆ ಮಾಡುವ ಅಧಿಕಾರವನ್ನು ಅವರಿಗೆ ಕೊಡುವುದು ಅಪಾಯಕರ ಎಂಬುದು ಈ ವ್ಯವಸ್ಥೆಯನ್ನು ಸಮರ್ಥಿಸುವವರ ವಾದ.

ಪ್ರತಿ ದೇಶ ತನ್ನ ಅಗತ್ಯಗಳಿಗೆ ಅನುಗುಣವಾಗಿ ಆಡಳಿತ ವ್ಯವಸ್ಥೆಯನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯವಿರಬೇಕು. ಯಾವ ದೇಶವೂ ತನ್ನ ಆಡಳಿತ ವ್ಯವಸ್ಥೆಯನ್ನು ಇನ್ನೊಂದು ದೇಶದ ಮೇಲೆ ಹೊರಿಸಲು ಪ್ರಯತ್ನಿಸದಿರುವುದು ಅಗತ್ಯ.

# ೭

**ಆರ್ಥಿಕ ವ್ಯವಸ್ಥೆ**

ಮನುಷ್ಯ ಮುಖ್ಯವಾಗಿ ಆರ್ಥಿಕ ಪ್ರಾಣಿ. ಬಹು ಹಿಂದಿನಿಂದ ಮೊದಲ ಪ್ರಶ್ನೆ ಹೊಟ್ಟೆ, ಬಟ್ಟೆ, ವಸತಿಯದು. ಬಹು ಮಟ್ಟಿಗೆ ಮನುಷ್ಯನ ಸಮಸ್ಯೆಗಳು, ಜಗಳಗಳು, ಯುದ್ಧಗಳು ಆರ್ಥಿಕ ಕಾರಣಗಳಿಂದ ಹುಟ್ಟಿದುವು. ಅತಿ ಪ್ರಾಚೀನ ಕಾಲದ ಮನುಷ್ಯ ಇತರ ಪ್ರಾಣಿಗಳನ್ನು ಬೇಟೆ ಯಾಡಿ, ಗೆಡ್ಡೆಗೆಣಸು ಹಣ್ಣು ಕಾಯಿ ಸೊಪ್ಪುಗಳನ್ನು ಸಂಗ್ರಹಿಸಿ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದ. ಇತರ ಮನುಷ್ಯರನ್ನು ಕೊಂದು ತಿನ್ನುತ್ತಿದ್ದ. ನರಭಕ್ಷಕರೂ ಇದ್ದರು. ಚಳಿಯಿಂದ ಕಾಪಾಡಿಕೊಳ್ಳಲು ಬಟ್ಟೆ ಅಗತ್ಯವಾಯಿತು. ಹುಲ್ಲುಗಳನ್ನು ತೊಗಟೆ ಎಲೆರೆಂಬೆಗಳಿಂದ ಅವನ್ನು ಮುಚ್ಚು ತ್ತಿದ್ದ; ಇವುಗಳಲ್ಲಿ ಕರಡಿ ತೊಗಲುಗಳನ್ನು ಕೆಡವುತ್ತಿದ್ದ. ದೊಡ್ಡ ರೆಂಬೆಗಳಿಂದ ಕಲ್ಲುಗಳಿಂದ ಆ ಪ್ರಾಣಿಗಳನ್ನು ಹೊಡೆದು ಕೊಂದು ಅವುಗಳ ಚರ್ಮವನ್ನು ಅವನು ಅವನ ಹೆಂಡತಿ ಮಕ್ಕಳು ಹೊದೆಯಲು ಬಳಸಿದರು. ಬೆಚ್ಚನೆ ಗವಿಗಳಲ್ಲಿದ್ದ ಪ್ರಾಣಿ ಗಳನ್ನು ಓಡಿಸಿ ತಾನೇ ಅಲ್ಲಿ ನೆಲೆಸಿದ. ಹೀಗೆ ಅನ್ನ, ಬಟ್ಟೆ, ವಸತಿಗಳ ಸಮಸ್ಯೆಯನ್ನು ಪರಿಹರಿಸಿಕೊಂಡ. ಬೇಟೆಯಾಡಹೋಗಿ ತಾನೇ ಬೇಟೆಯಾಗುತ್ತಿದ್ದುದೂ ಉಂಟು; ತಾನು ಸೇರಿಕೊಂಡ ಗವಿಯಲ್ಲಿ ಬೇರೆ ಪ್ರಾಣಿಗೆ ಆಹಾರವಾಗುತ್ತಿದ್ದುದೂ ಉಂಟು. ಅಲ್ಲದೆ, ಮನುಷ್ಯ-ಮನುಷ್ಯರಲ್ಲಿ ಕಾದಾಟ ಪ್ರತಿನಿತ್ಯದ ಅನುಭವ. ಗಟ್ಟಿಗನಾದವನು ಉಳಿದು ಕೊಳ್ಳುತ್ತಿದ್ದ. ಒಂದು ಕಡೆ ಆಹಾರ ನೀರು ತೀರಿತೆಂದರೆ ಇನ್ನೊಂದು ಕಡೆಗೆ ಹೋಗಬೇಕು. ಆಹಾರವನ್ನು ಹುಡುಕಿ ತರುವುದರಲ್ಲಿಯೇ ದಿನವೆಲ್ಲ ಕಳೆದುಹೋಗುತ್ತಿತ್ತು. ಕ್ರಮೇಣ ಮನುಷ್ಯ ಬೇಟೆಯ ರೀತಿಯನ್ನು ಸುಲಭಗೊಳಿಸಿಕೊಂಡ. ಮೀನು ಹಿಡಿಯುವವನು ಸೀಲ್ ಪ್ರಾಣಿಯ ತಲೆಯಂಥ ಟೋಪಿಯನ್ನು ಧರಿಸಿ, ಬಂಡೆಗಳ ಮಧ್ಯೆ ಸೇರಿಕೊಂಡು ಸೀಲ್‌ನಂತೆ ಶಬ್ದಮಾಡುತ್ತಿದ್ದ. ಸೀಲ್ ಪ್ರಾಣಿಗಳು ಅದನ್ನು ಕೇಳಿ ಹತ್ತಿರ ಬಂದಾಗ ಕೊಲ್ಲುತ್ತಿದ್ದ. ಬೇರೆ ಕೆಲವರು ನದಿಯ ನೀರಿನಲ್ಲಿ ಮದವೇರಿಸುವ ಮಿಶ್ರಣಗಳನ್ನು ಕದಡುತ್ತಿದ್ದರು. ಈ ನೀರನ್ನು ಕುಡಿದ ಮೀನು ಗಳು ಜಡವಾಗಿ ನಿಧಾನವಾಗಿ ತೇಲುತ್ತಿದ್ದಾಗ ಮೀನುಗಾರರಿಗೆ ಸುಲಭವಾಗಿ ಸಿಕ್ಕುತ್ತಿದ್ದುವು. ಗೆಡ್ಡೆಗೆಣಸುಗಳನ್ನು ನೆಲದಿಂದ ಹೆಂಗಸು ಅಗೆದು ತೆಗೆಯುತ್ತಿದ್ದಳು; ಗಂಡಸು ಕೊಂದ ಪ್ರಾಣಿಯ ಚರ್ಮವನ್ನು ಸುಲಿಯುತ್ತಿದ್ದಳು.

ಇಂಥ ಕಾಲದಲ್ಲಿ ಆರ್ಥಿಕ ವ್ಯವಸ್ಥೆಯ ಅಗತ್ಯವೇ ಇರಲಿಲ್ಲ. ಸಣ್ಣ ಸಣ್ಣ ಪಂಗಡಗಳಲ್ಲಿಯೂ ಪ್ರತಿಯೊಂದು ಕುಟುಂಬ ತನ್ನ ಜೀವನ ವನ್ನು ತಾನೇ ಸಾಗಿಸಿಕೊಳ್ಳುತ್ತಿತ್ತು. ವ್ಯವಸಾಯ ಮನುಷ್ಯನ ಜೀವನವಿಧಾನವನ್ನೆ ಬದಲಿಸಿಬಿಟ್ಟಿತು. ಜನ ಆಹಾರವನ್ನು ಹುಡುಕಿಕೊಂಡು ಮತ್ತೆ ಮತ್ತೆ ಅಲೆಯುವುದರ ಬದಲು, ಒಂದೆಡೆ ನೆಲೆಸುವಂತಾಯಿತು. ಉಪವಾಸದ ಹೆದರಿಕೆ ಸ್ವಲ್ಪ ಕಡಮೆಯಾಯಿತು. ಆಹಾರದ ಉತ್ಪಾದನೆಗೆ ನಿಸರ್ಗವನ್ನೆ ನೆಚ್ಚದೆ ಸ್ವಲ್ಪಮಟ್ಟಿಗೆ ಮನುಷ್ಯ ಅದನ್ನು ಹತೋಟಿಯಲ್ಲಿಟ್ಟುಕೊಳ್ಳುವಂತಾಯಿತು. ಹೆಚ್ಚು ಪ್ರಾಣಿಗಳನ್ನೂ ಸಾಕಲು ಸಾಧ್ಯ ವಾಯಿತು. ಬೆಂಕಿಯ ಉಪಯೋಗವನ್ನು ತಿಳಿದಿದ್ದ ಮನುಷ್ಯ ಸರಳವಾದ ಆಯುಧಗಳನ್ನು ಮಾಡಲು ಕಲಿತ. ಬೊಂಬು-ಮರಗಳಿಂದ ಬಾಣ, ಕತ್ತಿ ಮೊದಲಾದುವನ್ನು ಮಾಡಿಕೊಂಡ. ಮರದ ರೆಂಬೆಯಿಂದ ದೋಣಿ ಮಾಡಿಕೊಂಡ. ಮರದ ತೊಗಟೆಗಳು ನಾರುಗಳಿಂದ ಬಟ್ಟೆ ನೆಯ್ದುಕೊಂಡ. ಇದು ಹತ್ತು ರೀತಿಗಳಲ್ಲಿ ಉಪಯೋಗಕ್ಕೆ ಬಂತು. ತಾನೇ ಸಾಮಾನು ಹೊರುತ್ತಿದ್ದವನು ಪ್ರಾಣಿಗಳ ಮೇಲೆ ಸಾಮಾನು ಹೊರಿ ಸಲು ಪ್ರಾರಂಭಿಸಿದ. ಮನುಷ್ಯ 'ಆಸ್ತಿವಂತ'ನಾಗತೊಡಗಿದ್ದು ಹೀಗೆ. ಪ್ರಾರಂಭದ ಈ ವ್ಯವಸಾಯದ ಪಂಗಡಗಳಲ್ಲಿ ಕೂಡಿಡುವ ಮನೋಭಾವ ಬೆಳೆಯಲು ಅವಕಾಶವಿರಲಿಲ್ಲ. ನಾಲ್ಕುದಿನ ಇಡುವಂಥ ಪದಾರ್ಥಗಳು ಇದ್ದುದೇ ಕಡಮೆ. ಹಣದ ಬಳಕೆ ಇಲ್ಲದಿದ್ದಾಗ ಇತರರಿಗಿಂತ ಹೆಚ್ಚು 'ಐಶ್ವರ್ಯವಂತ'ನಾಗುವುದು ಕಷ್ಟ. ಅಲ್ಲದೆ ದವಸಧಾನ್ಯಗಳನ್ನು ಹೆಚ್ಚು ದಿನ ಕಾಪಾಡುವುದೂ ಕಷ್ಟವಾಗಿದ್ದ ಕಾಲ. ಮನುಷ್ಯನಿಗಿದ್ದ ಸಂಪತ್ತೇ ಕಡಮೆ. ಗುಂಪಿನಲ್ಲಿ ಅನ್ಯೋನ್ಯಭಾವ ಒಂದು ಮುಖ್ಯ ಶಕ್ತಿಯಾಗಿತ್ತು. 'ಅನಾಗರಿಕ'ರೆನಿಸಿಕೊಂಡ ಸಕೆಲನ್ ಗುಂಪಿಗೆ, ಸ್ವಲ್ಪ ಕಾಲದ ಹಿಂದೆ

ಇಂಗ್ಲೆಂಡಿನವನೊಬ್ಬ ಅಲ್ಲಿನ ಬಡವರ ಕಷ್ಟಗಳನ್ನು ಹೇಳಿದಾಗ, ಅವನಿಗೆ ಆಶ್ಚರ್ಯವಾಯಿತಂತೆ. "ಅದು ಹೇಗೆ? ಅವರಿಗೆ ಆಹಾರವಿಲ್ಲ ಎಂದರೇನು? ಅವರಿಗೆ ಸ್ನೇಹಿತರಿಲ್ಲವೆ? ಮನೆ ಇಲ್ಲದಿದ್ದರೆ ಸ್ನೇಹಿತರು ಅವರನ್ನು ತಮ್ಮ ಮನೆಗೆ ಕರೆಯುವುದಿಲ್ಲವೆ?" ಎಂದು ಕೇಳಿದ ರೀತಿ. ಎಷ್ಟೋ 'ಅನಾಗರಿಕ' ಪಂಗಡಗಳ ಭಾಷೆಗಳಲ್ಲಿ 'ನಾನು', 'ನೀನು' ಎನ್ನುವ ಪದಗಳಿವೆ. 'ನನ್ನದು', 'ನಿನ್ನದು' ಎನ್ನುವುದಕ್ಕೆ ಪದಗಳೇ ಇಲ್ಲ. ಸಮೋಅನ್‌ರಲ್ಲಿ ಜಮೀನು ಮಾರುವುದು ಕೊಳ್ಳುವುದು ಎನ್ನುವುದೇ ತಿಳಿದಿರಲಿಲ್ಲವಂತೆ—ಬಿಳಿಯ ಮನುಷ್ಯ ಅಲ್ಲಿ ಕಾಲಿಡುವವರೆಗೆ. ಕಮ್ಯೂನಿಸಂ ಜಗತ್ತಿಗೆ ಹೊಸದಲ್ಲ. ಪ್ರಾಚೀನ ಗುಂಪುಗಳ ವ್ಯವಸ್ಥೆ ಕಮ್ಯೂನಿಸಂ ತತ್ತ್ವದ ಆಚರಣೆಯೇ. ಕ್ರಮೇಣ ಒಂದು ಸಂಸಾರ ನಮ್ಮದೆಂಬ ಅಭಿಮಾನ ಬೆಳೆದದ್ದು, ಶ್ರಮಪಟ್ಟು ಕೆಲಸ ಮಾಡುವವರನ್ನು ಸೋಮಾರಿಗಳು ಸುಲಿದು ತಿನ್ನುತ್ತಾರೆ ಎಂದು ದುಡಿಯುವವರಿಗೆ ಅನಿಸಿದ್ದು, ಸಾಹಸಿಗಳು ಮರಗಳನ್ನು ಕಡಿದು ಗುಡಿಸಲು ಕಟ್ಟಿಕೊಂಡ ಅನಂತರ ಇತರರಿಗೆ ಅಲ್ಲಿ ಸ್ಥಳಕೊಡಲು ಒಪ್ಪದಿದ್ದುದು—ಇವೆಲ್ಲ ಈ ವ್ಯವಸ್ಥೆಯನ್ನು ದುರ್ಬಲಗೊಳಿಸಿದುವು. ಶ್ರೀಮಂತರು ಹುಟ್ಟಿಕೊಂಡರು. ಗುಂಪುಗುಂಪುಗಳ ಘರ್ಷಣೆಯಲ್ಲಿ ಸೆರೆಸಿಕ್ಕಿದವರನ್ನು ಕೊಲ್ಲದೆ ಗುಲಾಮರನ್ನಾಗಿ ದುಡಿಸಿಕೊಳ್ಳುವ ಪದ್ಧತಿ ಪ್ರಾರಂಭವಾಯಿತು. ಏಕೆಂದರೆ ಮನುಷ್ಯನಿಗೆ ವ್ಯವಸಾಯ ತಿಳಿಯುವವರೆಗೆ ಬೇಟೆ, ಗೆಡ್ಡೆಗೆಣಸು ಹಣ್ಣುಗಳ ಸಂಗ್ರಹ—ಇದರಿಂದಲೇ ಆಹಾರ ದೊರೆಯಬೇಕಾಗಿತ್ತು. ಈ ಕೆಲಸದಲ್ಲಿ ಗುಲಾಮರ ಬಳಕೆ ಸಾಧ್ಯವಿರಲಿಲ್ಲ. ಅಲ್ಲದೆ ಗುಲಾಮನಿಗೆ ಆಹಾರ ಕೊಡುವ ಹೊಣೆ ಹೊರೆಯಾಯಿತು. ಕೃಷಿ ತಿಳಿದ ಅನಂತರ, ಗುಲಾಮನಿಂದ ಕಷ್ಟದ ಕೆಲಸವನ್ನೆಲ್ಲ ಮಾಡಿಸಿದರು. ಆಹಾರವನ್ನು ಅವನ ಶ್ರಮದಿಂದ ಬೆಳೆಸಿದರು. ಅದರಲ್ಲಿ ಒಂದು ಚೂರನ್ನು ಅವನಿಗೆ ಎಸೆದರು. ಪ್ರಾರಂಭದಲ್ಲಿ ಒಬ್ಬ ಮನುಷ್ಯನ ಆಸ್ತಿಯನ್ನು ಅಳೆಯುತ್ತಿದ್ದುದು ಅವನಿಗಿದ್ದ ಭೂಮಿ ಮತ್ತು ದನಕರುಗಳಿಂದ.

ಸಾಮಾಜಿಕ ವ್ಯವಸ್ಥೆ ಬೆಳೆದು ಹೆಚ್ಚು ಜನ ಒಟ್ಟಾಗಿ ಇರಲು ಪ್ರಾರಂಭವಾದಾಗ ಕೆಲಸವನ್ನು ಹಂಚಿಕೊಳ್ಳುವುದು, ಉತ್ಪಾದನೆಗಳನ್ನು ವಿನಿಮಯ ಮಾಡಿಕೊಳ್ಳುವುದು ಸಾಧ್ಯವಾಯಿತು. ಉಪ್ಪು, ಪ್ರಾಣಿಯ ಚರ್ಮ, ಒಡವೆಗಳು, ಉಪಕರಣಗಳು ಎಲ್ಲ ವಿನಿಮಯಕ್ಕೆ ಬಳಕೆಯಾದುವು. ಆಯುಧಕ್ಕೆ ಬದಲು ಕುದುರೆ, ಬಟ್ಟೆಗೆ ಬದಲು ಚಾಕು ಹೀಗೆ ವಿನಿಮಯ ನಡೆಯುವುದು ಸಾಮಾನ್ಯವಾಗಿತ್ತು. ಹೋಮರನ 'ಇಲಿಯಡ್'ನಲ್ಲಿ ನಾಲ್ಕು ದನಗಳನ್ನು ಕೊಟ್ಟು ಒಬ್ಬ ಗುಲಾಮನನ್ನು ಕೊಂಡ ಪ್ರಸ್ತಾಪವಿದೆ. ಕ್ರಮೇಣ ವಿನಿಮಯಕ್ಕೆ ಅನುಕೂಲವಾಗುವಂತೆ ಒಂದು ಸಂಕೇತವನ್ನು ಮನುಷ್ಯ ಸೃಷ್ಟಿಸಿದ. ಇದೇ ಹಣ. ಸಾಮಾನುಗಳನ್ನು ಹೊತ್ತುಕೊಂಡು ಅಲೆದು ವಿನಿಮಯ ಮಾಡಿಕೊಳ್ಳುವುದಕ್ಕಿಂತ, ಆ ಸಾಮಾನುಗಳ ಬೆಲೆಯನ್ನು ಹಣದಿಂದ ನಿರ್ಧರಿಸಿ, ಹಣಕ್ಕೆ ವಸ್ತುಗಳನ್ನು ವಿನಿಮಯ ಮಾಡಿಕೊಳ್ಳುವುದು ಸುಲಭ ಎನಿಸಿತು. ಹಣ ಪ್ರಪಂಚ ಸೃಷ್ಟಿಯಾಯಿತು.

ಹೀಗೆ ಭೂಪಾಲಿಕತ್ವ, ಗುಲಾಮಗಿರಿ, ಹಣ ಇವುಗಳ ಸೃಷ್ಟಿ, ಉಳ್ಳವರು–ಇಲ್ಲದವರು ಎಂದು ಎರಡು ವರ್ಗಗಳು ಅವತರಿಸಲು ಕಾರಣವಾಯಿತು. ಪ್ರಾಚೀನ ಪಂಗಡಗಳಲ್ಲಿ ಅಸಮಾನತೆ ಬಹು ಕಡಮೆ. ಗುಲಾಮಗಿರಿ ಎನ್ನುವುದು ಇಲ್ಲವೇ ಇಲ್ಲ. ನಾಗರಿಕತೆಗೆ ಬುನಾದಿ ಹಾಕಿದ ಬೆಂಕಿ, ಕೃಷಿ, ವಾಹನಗಳು, ಆಯುಧಗಳು ಇವೇ ಬಡವರು–ಭಾಗ್ಯವಂತರು ಎನ್ನುವ ವರ್ಗಗಳ ಸೃಷ್ಟಿಗೂ ಬುನಾದಿ ಹಾಕಿದುವು.

ಇಲ್ಲಿಂದ ಮುಂದೆ ಜಗತ್ತಿನ ಆರ್ಥಿಕ ವ್ಯವಸ್ಥೆಯನ್ನು ಸಂಗ್ರಹವಾಗಿ ಅಭ್ಯಾಸ ಮಾಡುವುದು ಕಷ್ಟ. ನಾಗರಿಕತೆ ಬೆಳೆದು ಪ್ರಪಂಚದ ಹಲವು ಭಾಗಗಳಲ್ಲಿ ನೂರಾರು ರಾಜ್ಯಗಳು ಹುಟ್ಟಿ ಬಲಿತು ಅಳಿದಂತೆ ಆರ್ಥಿಕ ವ್ಯವಸ್ಥೆಯಲ್ಲಿ ಹೊಸ ವಿಲಕ್ಷಣ ಮಾರ್ಪಾಡುಗಳು ಕಂಡುಬಂದುವು. ಹೊಸ ಹೊಸ ಲೋಹಗಳ ಬಳಕೆ ಮನುಷ್ಯನಿಗೆ ತಿಳಿದುಬಂದಂತೆ ಜನಜೀವನದಲ್ಲಿ ಬದಲಾವಣೆಗಳಾದುವು. ಮೊಟ್ಟಮೊದಲು ಮನುಷ್ಯ ಉಪಯೋಗಿಸಿದ ಲೋಹ ತಾಮ್ರ; ಸ್ವಿಟ್ಜರ್ಲೆಂಡಿನಲ್ಲಿ ಕ್ರಿ. ಪೂ. 6000ಕ್ಕೆ ಸೇರಿದ ಅವಶೇಷಗಳಲ್ಲಿ ತಾಮ್ರ ಕಂಡುಬಂದಿದೆ. ಪೂರ್ವ ಮೆಡಿಟರೇನಿಯನ್ ಪ್ರದೇಶದಲ್ಲಿ ತಾಮ್ರ ಹೇರಳವಾದದ್ದರಿಂದ ಕ್ರಿಸ್ತಶಕಕ್ಕೆ ನಲವತ್ತು ಶತಮಾನಗಳ ಹಿಂದೆ ಹೊಸ ಸಮರ್ಥ ನಾಗರಿಕತೆಗಳು ಜನ್ಮತಾಳಲು ಸಾಧ್ಯವಾಯಿತು ಎಂದು ತೋರುತ್ತದೆ.

ಚಾರಿತ್ರಿಕ ಕಾಲಕ್ಕೆ ಕಾಲಿಡುತ್ತಲೇ ಆರ್ಥಿಕ ವ್ಯವಸ್ಥೆಯನ್ನು ಕುರಿತು ಸಾಮಾನ್ಯವಾಗಿ ಮಾತನಾಡುವುದು ಕಷ್ಟವಾಗುತ್ತದೆ.

ಸುಮೇರಿಯನರದು ಸರಳಜೀವನ ವ್ಯವಸ್ಥೆ ಎನ್ನಬೇಕು. ಈ ಜನಕ್ಕೆ ಲೋಹದ ಬಳಕೆ ಹೆಚ್ಚು ತಿಳಿದಿರಲಿಲ್ಲ. ನಾಣ್ಯಗಳ ಸೃಷ್ಟಿಯೂ ಆಗಿರಲಿಲ್ಲ. ಆಗಲೆ ವರ್ಗಗಳ ಸೃಷ್ಟಿಯಾಗಿತ್ತು. ಬಡವರು, ಭಾಗ್ಯವಂತರಲ್ಲದೆ ಮಧ್ಯಮವರ್ಗವೊಂದು ಕಾಣಿಸಿಕೊಂಡಿತ್ತು. ಸುಮೇರಿಯದಲ್ಲಿ ಗುಲಾಮರಿದ್ದರು. ಜಾಳಿಗೆದಾರ ಪದ್ಧತಿ ಆಗಲೆ ಇಲ್ಲಿ ಕಾಣಿಸಿಕೊಂಡಿತ್ತು ಎನ್ನುವುದು ಕುತೂಹಲಕರ ಅಂಶ. ಯುದ್ಧದಲ್ಲಿ ಗೆದ್ದಾಗ ರಾಜ ತನ್ನ ಶ್ರೀಮಂತರಿಗೆ ಭೂಮಿಯನ್ನು ಬಹುಮಾನವಾಗಿ ಕೊಟ್ಟು ಅದಕ್ಕೆ ತೆರಿಗೆಯನ್ನೂ ಬಿಟ್ಟುಬಿಡುತ್ತಿದ್ದ. ಪ್ರಾಚೀನ ಈಜಿಪ್ಟಿನಲ್ಲಿ ರೈತರ ಮತ್ತು ಗುಲಾಮರ ಸ್ಥಿತಿ ಕರುಣಾಜನಕವಾಗಿತ್ತು. ತೆರಿಗೆಯ ವಸೂಲಿಯ ಕ್ರಮ ಕ್ರೂರವಾಗಿತ್ತು. ತೆರಿಗೆ ಕೊಡದಿದ್ದ ರೈತನನ್ನು ಕೈಕಾಲು ಕಟ್ಟಿ ನದಿಗೆ ಎಸೆಯುತ್ತಿದ್ದುದೂ ಉಂಟು. ಕಾಲುವೆಗಳನ್ನು ತೋಡಲು, ಕಟ್ಟಡಗಳನ್ನು ಕಟ್ಟಲು, ಅರಸನ ಜಮೀನನ್ನು ಉಳಲು, ಬಿಟ್ಟಿ ಚಾಕರಿ ಮಾಡಲು ರೈತ ಸದಾ ಸಿದ್ಧನಾಗಿರಬೇಕಾಗಿತ್ತು. ಯುದ್ಧದಲ್ಲಿ ಸೆರೆಸಿಕ್ಕ ಶತ್ರುಗಳು ಗುಲಾಮರಾಗಿ ದಿನ ಸವೆಸಬೇಕಾಗಿತ್ತು. ಆಗಾಗ ಕೆಲಸಗಾರರ ಮುಷ್ಕರಗಳಾಗುತ್ತಿದ್ದುದೂ ಉಂಟು. ಪ್ರಾಚೀನ ಈಜಿಪ್ಟಿನಲ್ಲಿ ಒಂದು ಬಗೆಯ ಜಾತಿಪದ್ಧತಿ ತಲೆದೋರಿತ್ತು. ಪ್ರತಿ ವೃತ್ತಿ ಕೆಲವು ಕುಟುಂಬಗಳಿಗೆ ಸೇರಿತ್ತು. ಮಗ ತಂದೆಯ ಕಸುಬನ್ನು ಅನುಸರಿಸಬೇಕಾಗಿತ್ತು. ಬ್ಯಾಬಿಲೋನಿಯದಲ್ಲಿ ಕಳ್ಳರ ಕಾಟವೇ ವ್ಯಾಪಾರಕ್ಕೆ ಕಂಟಕವಾಗಿತ್ತು. ಬೆಳ್ಳಿ ಬಂಗಾರದ ತುಂಡುಗಳ ಬಳಕೆಯನ್ನು ಇಲ್ಲಿ ಕಾಣುತ್ತೇವೆ. ಲೇವಾದೇವಿ ಇಲ್ಲಿ ಆಶ್ಚರ್ಯಕರ ಪ್ರಮಾಣದಲ್ಲಿ ಕಂಡುಬರುತ್ತದೆ. ಶೇಕಡಾ 20 ರಿಂದ 33ರ ವರೆಗೆ ಬಡ್ಡಿ ವಸೂಲು ಮಾಡುತ್ತಿದ್ದರು. ಇದು ಸರಕಾರವೇ ನಿರ್ಧರಿಸಿದ ಬಡ್ಡಿಯ ದರ. ಸಾಲ ಹಿಂದಿರುಗಿಸದಿದ್ದರೆ ಸಾಲಕೊಟ್ಟವನು ಸಾಲಗಾರನ ಮಗನನ್ನೋ ತೊತ್ತನ್ನೋ ಮೂರು ವರ್ಷಕಾಲ ಕರೆದೊಯ್ಯಬಹುದಾಗಿತ್ತು. ಶ್ರೀಮಂತ ರಾಜ್ಯ ಬ್ಯಾಬಿಲೋನಿಯ; ಈ ಶ್ರೀಮಂತಿಕೆಯ ಹೊರೆಯನ್ನು ಹೊತ್ತು ಜಜ್ಜಿಹೋಗುತ್ತಿದ್ದವರು ಗುಲಾಮರು. ಗುಲಾಮರು—ದಂಗೆಕೋರರು,

ಗಂಡಸಿರಲಿ—ಸಂಪೂರ್ಣವಾಗಿ ಯಜಮಾನನ ಸ್ವತ್ತು. ಕಾಲಕ್ರಮೇಣ ಬ್ಯಾಬಿಲೋನಿಯದಲ್ಲಿ ಸ್ವತಂತ್ರ ಪ್ರಜೆಗಳಿಗಿಂತ ಗುಲಾಮರ ಸಂಖ್ಯೆಯೇ ಹೆಚ್ಚಾಯಿತು. ಜ್ಯೂಡಾದ ವೈಭವ ಸಾಲೊಮನ್‌ನ ಕಾಲದಲ್ಲಿ ಮುಗಿಲು ಮುಟ್ಟಿತು. ಅದೇ ಕಾಲದಲ್ಲಿ ಕೊಳಚೆ ಪ್ರದೇಶಗಳು ಕಾಣಿಸಿಕೊಂಡವು ಜೆರೂಸಲೆಮಿನಲ್ಲಿ. ಶ್ರೀಮಂತವರ್ಗದ ನೆರಳಿನಲ್ಲಿ ಬಡವರು ಸೊರಗಿದರು. ಸಾಹುಕಾರರು, ಭೂಮಾಲಿಕರು, ವರ್ತಕರು ಅವರನ್ನು ಹೀರಿದರು. ಪರ್ಷಿಯ ಬಹು ಮಟ್ಟಿಗೆ ಕೃಷಿಯನ್ನೇ ಅವಲಂಬಿಸಿತ್ತು. ಭೂಮಿಯ ಒಡೆಯರಾಗಿದ್ದ ರೈತರೇ ಸಾಗುವಳಿ ಮಾಡುತ್ತಿದ್ದರು. ಹಲವು ಸಂಸಾರಗಳು ಸೇರಿ ಒಂದು ಬಗೆಯ ಕೃಷಿ ಸಹಕಾರ ವ್ಯವಸ್ಥೆಯನ್ನು ಮಾಡಿಕೊಂಡು ಸಾಗುವಳಿ ಮಾಡುತ್ತಿದ್ದುದೂ ಉಂಟು. ಸ್ವಲ್ಪ ಭಾಗ ಭೂಮಿ ತಾವೇ ಬೇಸಾಯ ಮಾಡದ ಶ್ರೀಮಂತರಿಗೆ ಸೇರಿದ್ದಿತು. ಒಂದು ಸ್ವಾರಸ್ಯದ ಅಂಶವೆಂದರೆ ಪರ್ಷಿಯನರಿಗೆ ಬೇರೆ ದೇಶಗಳೊಂದಿಗೆ ವ್ಯಾಪಾರ ಎಂದರೆ ತಿರಸ್ಕಾರ.

ಪ್ರಾಚೀನ ಆರ್ಯಭಾರತದಲ್ಲಿ ಮೊದಮೊದಲು ಜಾತಿಪದ್ಧತಿ ಇರಲಿಲ್ಲ. ಇವರದೂ ಪ್ರಾರಂಭದಲ್ಲಿ ಕೃಷಿಯ ಆಧಾರದ ಸಮಾಜ. ಇವರಿಗೆ ಗೋವು ಬಹು ಮುಖ್ಯವಾದ ಸಂಪತ್ತು. ಹಳ್ಳಿಗಳಲ್ಲಿ ಬಹು ಮಂದಿ ವಾಸಿಸುತ್ತಿದ್ದರು. ರೈತರು ತಮ್ಮ ನೆಲದ ಯಜಮಾನರು: ಪ್ರಾಚೀನ ಭಾರತದಲ್ಲಿ ಬೇಸಾಯ ಮಾಡದ ನೆಲದೊಡೆಯರು ಇರಲಿಲ್ಲ ಎಂದು ತೋರುತ್ತದೆ. ಅತಿ ಶ್ರೀಮಂತರು—ಅತಿ ಬಡವರು ಎಂಬ ವರ್ಗಗಳಿರಲಿಲ್ಲ. ಕ್ರಿಸ್ತಶಕಕ್ಕೆ ಒಂದು ಸಾವಿರ ವರ್ಷಕ್ಕೆ ಮೊದಲೇ ವೃತ್ತಿಸಂಘಗಳಿದ್ದುವು. ಬುದ್ಧನ ಕಾಲಕ್ಕೆ ಸಾಲಕೊಡುವ ಶ್ರೀಮಂತವರ್ಗ ಹುಟ್ಟಿಕೊಂಡಿತ್ತು. ಮೊಹೆಂಜೊದಾರೊ ನಾಗರಿಕತೆಯಲ್ಲಿ ಹತ್ತಿಯನ್ನು ಬೆಳೆದು ಬಟ್ಟೆ ಮಾಡುವುದನ್ನು ಕಾಣುತ್ತೇವೆ. (ಗ್ರೀಕ್ ಚರಿತ್ರಕಾರ ಹೆರಾಡೊಟಸ್ ಬರೆದ : "ಆ ದೇಶದಲ್ಲಿ ಕೆಲವು ಗಿಡಗಳಲ್ಲಿ ಹಣ್ಣಿನ ಬದಲು ಉಣ್ಣೆ ಸಿಕ್ಕುತ್ತದೆ; ಈ ಉಣ್ಣೆ ಕುರಿಗಳ ಉಣ್ಣೆಗಿಂತ ಸೊಗಸು. ………… ಈ ಗಿಡಗಳಿಂದ ಬಟ್ಟೆ ಮಾಡಿಕೊಳ್ಳುತ್ತಾರೆ," ಎಂದು.)

ಒಟ್ಟಿನಲ್ಲಿ ರಾಜಪ್ರಭುತ್ವ, ಗುಲಾಮಗಿರಿ, ಧನಿಕವರ್ಗ—ಬಡವರ್ಗಗಳು ಇವು ಹಿಂದಿನ ಕಾಲದ ಸಮಾಜಗಳ ಜೀವನದ ಸಾಮಾನ್ಯ ಲಕ್ಷಣಗಳು ಎನ್ನಬಹುದು. ಕ್ರಮೇಣ ಇದು ಊಳಿಗಮಾನ್ಯ ಪದ್ಧತಿಗೆ ದಾರಿಮಾಡಿತು. ಊಳಿಗಮಾನ್ಯ ಪದ್ಧತಿಯ ತಳಹದಿ ರಾಜ್ಯದ ನೆಲವೆಲ್ಲ ರಾಜನಿಗೆ ಸೇರಿದ್ದು ಎನ್ನುವ ತತ್ತ್ವ. ಈ ಪದ್ಧತಿಯು ಪಾಶ್ಚಾತ್ಯ ದೇಶಗಳಿಗೆ ವಿಶಿಷ್ಟವಾದದ್ದೇನೂ ಅಲ್ಲ. ಚೀನದಲ್ಲಿ ಮತ್ತು ಜಪಾನಿನಲ್ಲಿ ಇಂಥ ಪದ್ಧತಿ ಕಾಣುತ್ತೇವೆ. ಹನ್ನೊಂದನೆಯ ಶತಮಾನದ ಹೊತ್ತಿಗೆ ಈ ಪದ್ಧತಿ ಯೂರೋಪಿನಲ್ಲಿ ರೂಪುಗೊಂಡಿತು. ಆ ಹೊತ್ತಿಗೆ ಷಾರ್ಲ್‌ಮೇನನ ರೋಮನ್ ಸಾಮ್ರಾಜ್ಯ ಎರಡು ಭಾಗವಾಗಿತ್ತು. ಎರಡು ಭಾಗಗಳ ಅರಸರೂ ಹೆಸರಿಗೆ ಪ್ರಭುಗಳು : ಅವರ ಶ್ರೀಮಂತರೇ ಅವರನ್ನು ಕುಣಿಸುತ್ತಿದ್ದರು. ಮುಸಲ್ಮಾನರು, ಹೂಣರು, ಸ್ಲಾವರು, ಟಾರ್ಟರರಿಂದ ಯೂರೋಪಿನ ರಾಜ್ಯಗಳಿಗೆ ಅಪಾಯವಿತ್ತು. ಇಂಥ ಸ್ಥಿತಿ[illegible] ದೂರದ ಅರಸ ರಕ್ಷಣೆ ಕೊಡುವನೆಂಬ ಭರವಸೆ ಇರಲಿಲ್ಲ; ತಮ್ಮನ್ನು ರಕ್ಷಿಸುವ ಶಕ್ತಿ ಇದ್ದ ಯಜಮಾನನಿಗೆ ವಿಧೇ[illegible] ಮನೋ[illegible] ಸಿದ್ಧರಿದ್ದರು. ಹೀಗಾಗಿ ಸ್ಥಳೀಯ ಸರದಾರರ ಪ್ರಾಮುಖ್ಯ ಹೆಚ್ಚಿತು. ಮಧ್ಯ ಯೂರೋಪಿನ ತುಂಬ ಸಣ್ಣ ಸಣ್ಣ ಪ್ರದೇಶಗಳಿಗ ಅಧಿಪತಿಗಳಾಗಿ ಡ್ಯೂಕ್, ಕೌಂಟ್, ಬಿಷಪ್, ಸರದಾರ ಇಂಥವರಿದ್ದರು. ಇವರು ತಮ್ಮ ತಮ್ಮ ಸೈನ್ಯಗಳನ್ನು ಇಟ್ಟುಕೊಂಡಿದ್ದರು. ಇವರೆಲ್ಲ ದೂರದಲ್ಲಿದ್ದ ಅರಸನೊಬ್ಬನಿಗೆ ತಾವು ನಿಷ್ಠರೆಂದು ಪ್ರಮಾಣಮಾಡಿ ಅವನಿಂದ ಆ ನೆಲವನ್ನು ಪಡೆದುಕೊಂಡವರು. ಪ್ರಯಾಣ ಕಷ್ಟವಾಗಿದ್ದ ಆ ಕಾಲದಲ್ಲಿ ಅರಸನ ಆಸ್ಥಾನದಿಂದ ಸ್ವಲ್ಪ ದೂರ ಇದ್ದವರ ಮೇಲೆ ರಾಜನ ಹಿಡಿತ ಅಷ್ಟು ಬಿಗಿಯಾಗಿರುವಂತಿರಲಿಲ್ಲ. ಪ್ರತಿ ನಾಯಕನೂ ಒಂದು ದುರ್ಗಮವಾದ ಕೋಟೆಯನ್ನು ಕಟ್ಟಿಕೊಂಡಿದ್ದ. ಅದರ ಸುತ್ತ ಅವನ ಆಶ್ರಿತರು ನೆಲೆಸಿದರು. ಈ ಕಾರಣದಿಂದಲೆ ಮಧ್ಯಯುಗದ ಯೂರೋಪಿನಲ್ಲಿ ದೊಡ್ಡ ನಗರಗಳು ಕಡಮೆ. ತನ್ನ ಆಶ್ರಿತರ ರಕ್ಷಣೆಯನ್ನು ಹೊತ್ತ ನಾಯಕ ಅವರ ಸ್ವಾಮಿಯೂ ಆಗಿದ್ದ. ಊರಿಂದೂರಿಗೆ ಅಲೆಯುತ್ತ ಹಿಂದಿನ ಶೂರರ ಕಥೆಗಳ ಗೀತೆಗಳನ್ನು ಹಾಡುತ್ತಿದ್ದ 'ಟ್ರೊಬಡೂರ'ರೆಂಬ ಗಾಯಕರಿಗೆ ಅವನು ಆಶ್ರಯದಾತ. ಅವನಿಗೆ ಓದುಬರಹ ಬರುತ್ತಿರಲಿಲ್ಲ. ಲೆಕ್ಕದ ವ್ಯವಹಾರಗಳನ್ನು ನೋಡಿಕೊಳ್ಳಲು ಮತ್ತು ಆಶ್ರಿತರಲ್ಲಿ ಹುಟ್ಟು, ಸಾವು, ಮದುವೆಗಳ ದಾಖಲೆಯನ್ನಿಡಲು ಬರಹಬಲ್ಲವರನ್ನು ಇಟ್ಟುಕೊಂಡಿದ್ದ.

ಊಳಿಗಮಾನ್ಯ ಪದ್ಧತಿಗೆ ಯೂರೋಪಿನಲ್ಲಿ 'ಫ್ಯೂಡಲಿಸಂ' ಎಂದು ಹೆಸರು. 'ಫ್ಯೂಡಮ್' ಎಂದರೆ, ಒಬ್ಬ ಸಲ್ಲಿಸುವ ಸೇವೆಗಾಗಿ ಶ್ರೀಮಂತ ದಯಪಾಲಿಸುವ ನೆಲ. ರಾಜ್ಯದ ನೆಲವೆಲ್ಲ ಅರಸನಿಗೆ ಸೇರಿದ್ದು ಎಂಬುದು ಇದರ ಮೂಲ ಸೂತ್ರ.



ಅರಸ ರಾಜ್ಯದಲ್ಲಿ ಸ್ವಲ್ಪ ಭಾಗವನ್ನು ಉಳಿಸಿಕೊಂಡು ಉಳಿದುದನ್ನು ತನ್ನ ಶ್ರೀಮಂತ ಅನುಯಾಯಿಗಳಿಗೆ ಕೊಡುತ್ತಿದ್ದ. ಇವರಿಗೆ 'ಮುಖ್ಯ ಹಿಡುವಳಿದಾರರು' ಎಂದು ಹೆಸರು. ಇವರು ಸಲ್ಲಿಸಬೇಕಾದ ಸೇವೆಯೆಂದರೆ ನಿಗದಿಯಾದಂತೆ ಹಣವನ್ನು ಪಾವತಿ ಮಾಡುವುದು. ಅಗತ್ಯವಾದಾಗ ಮಂತ್ರಾಲೋಚನೆಗೆ ಸಿದ್ಧವಾಗಿರುವುದು ಮತ್ತು ರಾಜನಿಗಾಗಿ ಯುದ್ಧರಂಗದಲ್ಲಿ ಹೋರಾಡುವುದು. ತಾವು ರಾಜನ ಆಶ್ರಿತರೆಂದು ಅವರು ಪ್ರಮಾಣ ಮಾಡುತ್ತಿದ್ದರು. ಪ್ರತಿ ಮುಖ್ಯ ಹಿಡುವಳಿದಾರನೂ ತನ್ನ ಭೂಮಿಯನ್ನು ಇತರರಿಗೆ ಹಂಚಿಕೊಡುತ್ತಿದ್ದ. ಇವರೂ ಆತನಿಗೆ ನಿಷ್ಠರಾಗಿದ್ದು, ಗೊತ್ತಾದ ಹಣವನ್ನು ಪಾವತಿಮಾಡಿ ಅಗತ್ಯವಾದಾಗ ರಣರಂಗದಲ್ಲಿ ಕಾದಲು ಸಿದ್ಧರಾಗಿರುವುದಾಗಿ ಪ್ರಮಾಣ ಮಾಡುತ್ತಿದ್ದರು. ಈ ವ್ಯವಸ್ಥೆ ಒಂದು ಗೋಪುರದಂತೆ. ಗೋಪುರದ ತುದಿ ರಾಜ. ಅವನ ಕೆಳಗೆ ಹಂತಹಂತವಾಗಿ ಮುಖ್ಯ ಹಿಡುವಳಿದಾರರು. ಅವರ ಆಶ್ರಿತರು. ಅವರ ಆಶ್ರಿತರು ಹೀಗೆ. ಗೋಪುರದ ಬುಡದಲ್ಲಿ 'ಸರ್ಫ್'ರು ಅಥವಾ 'ವಿಲನ್'ರು ಎಂದು ಕರೆಸಿಕೊಳ್ಳುತ್ತಿದ್ದ ರೈತರು. ಇವರ ಸ್ಥಿತಿ ಜೀತದಾಳುಗಳ ಸ್ಥಿತಿಗಿಂತ ಅಷ್ಟೇನೂ ಉತ್ತಮವಾಗಿರಲಿಲ್ಲ. ಇವರು ಶ್ರೀಮಂತನ ದಾಸಾನುದಾಸರು. ಇವರಿಗೆ ಹಕ್ಕು ಎಂಬುದೇನೂ ಇರಲಿಲ್ಲ. ಈ ಊಳಿಗಮಾನ್ಯ ವ್ಯವಸ್ಥೆಯಲ್ಲಿ ಅರಸನನ್ನು ಬಿಟ್ಟು ಯಾರೂ ಭೂಮಿ ತಮ್ಮದು ಎಂದು ಹೇಳಿಕೊಳ್ಳುವಂತಿರಲಿಲ್ಲ. ನೆಲವನ್ನು ಉಳುತ್ತಿದ್ದ ರೈತನಿಗಂತೂ ನೆಲದ ಮೇಲೆ ಯಾವ ಹಕ್ಕೂ ಇರಲಿಲ್ಲ. ರಾಜನೂ ಒಮ್ಮೆ ನೆಲವನ್ನು ಒಬ್ಬ ಮುಖ್ಯ ಹಿಡುವಳಿದಾರನಿಗೆ ಕೊಟ್ಟನಂತರ ಆತ ನಿಷ್ಠೆ ತಪ್ಪದಿದ್ದರೆ. ಅದನ್ನು ಹಿಂದಕ್ಕೆ ತೆಗೆದುಕೊಳ್ಳುವುದು ಕಷ್ಟವಾಗಿತ್ತು. ಸೈನ್ಯದ ಬೆಂಬಲಕ್ಕೆ ಇವರನ್ನು ರಾಜ ನೆಚ್ಚಬೇಕಾಗಿತ್ತು. ಇದರಿಂದ ಅರಸ ಪಳನೆಯ ಹೆನ್ರಿಯಂತೆ ಬಲಿಷ್ಠನಾಗಿದ್ದರೆ ಅವನ ಅಧಿಕಾರ ನಡೆಯುತ್ತಿತ್ತು. ಇಲ್ಲದಿದ್ದರೆ ಸರದಾರರು ತಮ್ಮ ತಮ್ಮಲ್ಲಿ ಜಗಳವಾಡುತ್ತಿದ್ದರು. ಅರಸನ ಅಧಿಕಾರವನ್ನು ಕಡೆಗಾಣಿಸುತ್ತಿದ್ದರು. ಇದೆಲ್ಲ ತಿಕ್ಕಾಟದಲ್ಲಿ ಸವೆಯುತ್ತಿದ್ದರು ಜನಸಾಮಾನ್ಯರು.

ಊಳಿಗಮಾನ್ಯ ಪದ್ಧತಿಯಲ್ಲಿ ದೇಶಸೇವೆಯ ಭಾವನೆಗೆ ಅವಕಾಶವಿಲ್ಲ ಎಂಬುದು ಗಮನಾರ್ಹ. ಕಣ್ಣಿಗೆ ಕಾಣದ ರಾಷ್ಟ್ರಕ್ಕಾಗಿ ದುಡಿಯುವ ಅಥವಾ ಹೋರಾಡುವ ಭಾವನೆ ಇಲ್ಲಿಲ್ಲ: ತನಗೆ ಜಮೀನು ಕೊಟ್ಟ ಧಣಿಗಾಗಿ ಅಥವಾ ರಾಜನಿಗಾಗಿ ದುಡಿಮೆ: ಹೀಗಾಗಿ ಇಲ್ಲಿ ಅಧಿಕಾರ ಹಂಚಿಹೋಗುತ್ತದೆ. ಈ ಪದ್ಧತಿಗೆ ಸೇರಿದಂತೆ ಬೆಳೆದ ಮತ್ತೊಂದು ಸಂಪ್ರದಾಯ. ಸೈನ್ಯವಿಟ್ಟುಕೊಂಡು ಬಲಿಷ್ಠನಾದ ಶ್ರೀಮಂತ ತನ್ನ ಆಶ್ರಿತರಿಗೆ ಸಾಮಾಜಿಕವಾಗಿ, ನ್ಯಾಯ ತೀರ್ಮಾನ ಮಾಡುವುದರಲ್ಲಿ–ಎಲ್ಲ ರೀತಿಗಳಲ್ಲಿ ಒಡೆಯ ಎಂಬುದು.

ಈ ಪದ್ಧತಿ ಯೂರೋಪಿನಲ್ಲಿ ಹನ್ನೆರಡನೆಯ ಶತಮಾನದವರೆಗೆ ಸಾಮಾನ್ಯವಾಗಿತ್ತು. ಭಾರತದಲ್ಲಿ ಮೊನ್ನೆ ಮೊನ್ನೆಯವರೆಗೆ ಇದ್ದ ಹಲವು ಸಣ್ಣ ಸಂಸ್ಥಾನಗಳಲ್ಲಿ ರಾಜ ಅಥವಾ ಜಮೀನ್ದಾರ ತನ್ನ ಆಶ್ರಿತರ ಮೇಲೆ ಅಪಾರ ಅಧಿಕಾರಹೊಂದಿದ್ದ. ಅವನ ತೀರ್ಮಾನವೇ ಎಲ್ಲ ವಿಷಯಗಳಲ್ಲಿ ಕಡೆಯದು.

ಭಾರತದಲ್ಲಿ ನಿಧಾನವಾಗಿ ರೂಪುಗೊಂಡ ಜಾತಿಪದ್ಧತಿಗೆ ಆರ್ಥಿಕ ಮುಖವೊಂದು ಉಂಟು. ಜಾ[illegible]ಷ್ಟು ಜಟಿಲ ಪ್ರಶ್ನೆ. ಶತಮಾನಗಳಿಂದ ಇದರ ಚರ್ಚೆಯಾಗುತ್ತಿದೆ. ಇಲ್ಲಿ ಅದರ ಆರ್ಥಿಕ ಅಂಶವನ್ನು ಮಾತ್ರ ಗಮನಿಸಬಹುದು. ಇದು ಒಂದು ಬಗೆಯ ಕೆಲಸದ ವಿತರಣೆ. ಸಮಾಜದಲ್ಲಿ ನಡೆಯಬೇಕಾದ ಹಲವು ಕೆಲಸಗಳನ್ನು ಗುಂಪುಗಳಿಗೆ ಹಂಚಿಕೊಡುವ ವಿಧಾನ. ಇಲ್ಲಿ ವಂಶಪಾರಂಪರ್ಯವಾಗಿ ಒಂದು ವೃತ್ತಿ ಇರುತ್ತಿದ್ದುದರಿಂದ ನಿರುದ್ಯೋಗದ ಸಮಸ್ಯೆ ಬಹು ಮಟ್ಟಿಗೆ ಬಗೆಹರಿದಂತೆ. ಅಲ್ಲದೆ ವೃತ್ತಿಕೌಶಲ ಪೀಳಿಗೆಯಿಂದ ಪೀಳಿಗೆಗೆ ಬರುತ್ತಿದ್ದುದರಿಂದ ಅದು ನಷ್ಟವಾಗಿ ಹೋಗುತ್ತಿರಲಿಲ್ಲ. ಚನ್ನಪಟ್ಟಣದ ಆಟದ ಸಾಮಾನುಗಳು, ಶಿವಾರಪಟ್ಟಣದ ವಿಗ್ರಹಗಳು—ಇವು ಹೀಗೆ ಪೀಳಿಗೆಯಿಂದ ಪೀಳಿಗೆಗೆ ಬಂದ ಕೌಶಲದ ಫಲ. ಕಾಲಕ್ರಮೇಣ ಜಾತಿಪದ್ಧತಿ ಕ್ರೂರ ಪಂಜರಗಳ ವ್ಯೂಹವಾದದ್ದು ದುರದೃಷ್ಟ.

ಹನ್ನೆರಡನೆಯ ಶತಮಾನದ ಅಂತ್ಯದಲ್ಲಿ ಊಳಿಗಮಾನ್ಯ ಪದ್ಧತಿಯ ಇಳಿಮುಖ ಪ್ರಾರಂಭವಾಯಿತು. ಹದಿಮೂರನೆಯ ಶತಮಾನದಲ್ಲಿ ಇನ್ನೂ ಸಾಕಷ್ಟು ಚೈತನ್ಯಹೊಂದಿದ್ದ ಈ ಪದ್ಧತಿ ಹದಿನಾಲ್ಕನೆಯ ಶತಮಾನದ ಹೊತ್ತಿಗೆ ಕಳೆಗುಂದಿತು. ಆದರೆ ಈ ಪದ್ಧತಿಯ ಹಲವು ಅಂಶಗಳು ಪಾಶ್ಚಾತ್ಯರಾಷ್ಟ್ರಗಳಲ್ಲಿಯೂ ಇಪ್ಪತ್ತನೆಯ ಶತಮಾನದವರೆಗೆ ಉಳಿದುಬಂದುವು.

ಊಳಿಗಮಾನ್ಯ ಪದ್ಧತಿಯ ಇಳಿಮುಖಕ್ಕೆ ಹಲವು ಕಾರಣಗಳು. ಅರಸನಿಂದ ಪಡೆದ ಜಮೀನಿಗಾಗಿ ಕೆಲಸಮಾಡುವವರಲ್ಲದೆ ಸಂಬಳಕ್ಕಾಗಿ ಕೆಲಸಮಾಡುವ ಅಧಿಕಾರಿಗಳ ಸಂಖ್ಯೆ ಬೆಳೆಯಿತು. ಎರಡನೆಯದಾಗಿ. ಸರದಾರರ ಹಮ್ಮುದಬ್ಬಾಳಿಕೆಗಳಿಗೆ ಬೇಸತ್ತ ಜನ ಒಬ್ಬ ಸಮರ್ಥ ರಾಜನ ಆಡಳಿತವನ್ನು ಬಯಸತೊಡಗಿದರು. ಇನ್ನೊಂದು ಮುಖ್ಯಕಾರಣವೆಂದರೆ ವರ್ತಕವರ್ಗದ ಹೊಸ ಪ್ರಾಧಾನ್ಯ. ಧರ್ಮಯುದ್ಧ ಮತ್ತು ಅಂತಃಕಲಹಗಳಿಂದ ಸರದಾರರು ಹಣದ ತೊಂದರೆಗೆ ಸಿಲುಕಿದರು. ವರ್ಷಗಟ್ಟಳೆ ತಮ್ಮ ಅಧಿಕಾರದ ಸ್ಥಳಗಳಿಂದ ದೂರವಿರಬೇಕಾಗುತ್ತಿತ್ತು ಇವರು. ಅಲ್ಲದೆ ಅನಕ್ಷರಸ್ಥರೂ ಒಂದು ಸಂಪ್ರದಾಯದಲ್ಲಿ ಬೆಳೆದುಕೊಂಡು ಬಂದವರೂ ಆದ ಇವರು ಸಾಮಾನ್ಯವಾಗಿ ಆಸ್ತಿಯ ನಿರ್ವಹಣೆಯಲ್ಲಿ ಅಷ್ಟೇನೂ ಚತುರರಾಗಿರಲಿಲ್ಲ. ಈ ಮಧ್ಯೆ ಧರ್ಮಯುದ್ಧಗಳಿಗಾಗಿ ಲಕ್ಷಾಂತರ ಜನ ಯೂರೋಪಿನಿಂದ ಪ್ಯಾಲೆಸ್ಟೀನಿಗೆ ಹೋಗಿ ಬಂದುದರ ಫಲವಾಗಿ ವರ್ತಕರು ಹೊಸ ವಸ್ತುಗಳನ್ನು ತರಿಸುವುದರಲ್ಲಿಯೂ ತಮ್ಮ ದೇಶದಲ್ಲಿಯೇ ಮಾಡುವುದರಲ್ಲಿಯೂ ಉತ್ಸಾಹ ತಳೆದರು. ಹಣದ ತೊಂದರೆಯಲ್ಲಿದ್ದ ಸರದಾರರು ಇವರಿಂದ ಹಣವನ್ನು ಸಾಲ ಪಡೆಯುತ್ತಿದ್ದರು ಇಲ್ಲವೆ ತಮ್ಮ ಸುತ್ತಮುತ್ತ ವಾಸಿಸುತ್ತಿದ್ದ ಆಶ್ರಿತರಿಂದ ಹಣ ಪಡೆಯುತ್ತಿದ್ದರು. ಹೀಗೆ ಗ್ರಾಮದವರಿಂದ ಹಣ ಪಡೆದಾಗ ಅವರಿಗೆ ಯಾವುದಾದರೂ ಸೌಲಭ್ಯವನ್ನು ಕಲ್ಪಿಸಿಕೊಡಬೇಕಾಗುತ್ತಿತ್ತು. ಸರದಾರನ ಕೋಳದಲ್ಲಿ ಮೀನು ಹಿಡಿಯುವ ಹಕ್ಕು ಅಥವಾ ತಾವೇ ಆರಿಸಿದ ಪ್ರತಿನಿಧಿಗಳ ಮಂಡಲಿಯನ್ನು ಸ್ಥಾಪಿಸುವ ಹಕ್ಕು ಇಂಥವನ್ನು ಕೊಡಬೇಕಾಗುತ್ತಿತ್ತು. ಇದೇ ಕಾಲದಲ್ಲಿ ನಗರಗಳು ಬೆಳೆದುವು. ಹೀಗೆ ಶ್ರೀಮಂತ ಸರದಾರರ ಮತ್ತು ಜಮೀನುದಾರರ ಅಧಿಕಾರ ಕುಗ್ಗುತ್ತಬಂದಿತು. ಹಲವರು ಅರಸರೂ ಹಣದ ತೊಂದರೆಯಿಂದ ತಮ್ಮ ಶ್ರೀಮಂತರಿಗೂ ನಗರಸಭೆಗಳಿಗೂ

ಹಲವು ಹಕ್ಕುಗಳನ್ನು ಕೊಡಬೇಕಾಯಿತು. ಈ ಎಲ್ಲ ಕಾರಣಗಳಿಂದ ಹದಿನೈದನೆಯ ಶತಮಾನದ ಹೊತ್ತಿಗೆ ಊಳಿಗಮಾನ್ಯ ಪದ್ಧತಿ ದುರ್ಬಲವಾಯಿತು.

ಹದಿನೈದು–ಹದಿನಾರನೆಯ ಶತಮಾನಗಳು ಯೂರೋಪಿನ ನಾವಿಕರು ಪ್ರಪಂಚದ ಮೂಲೆಮೂಲೆಗಳಿಗೆ ಹೋದ ಕಾಲ. ಪೂರ್ವ ದೇಶಗಳೊಂದಿಗೆ ವ್ಯಾಪಾರ ನಡೆಸಲು ಹೊಸ ಮಾರ್ಗಗಳನ್ನು ಕಂಡುಹಿಡಿದ ಕಾಲ. ಪಾಶ್ಚಾತ್ಯ ದೇಶಗಳ ವ್ಯಾಪಾರ ಹತ್ತು ಮಡಿ ಬೆಳೆದ ಕಾಲ. ಸಹಜವಾಗಿ ಈ ಕಾಲದಲ್ಲಿ ವ್ಯಾಪಾರವರ್ಗ ಶ್ರೀಮಂತವಾಯಿತು. ಬಲಿಷ್ಠವಾಯಿತು : ಎಂದರೆ ನೆಲದೊಡೆಯರ ಪ್ರಾಬಲ್ಯ ಕುಗ್ಗಿ ಹಣವಂತರ ಪ್ರಾಬಲ್ಯ ಬೆಳೆಯಿತು.

ನವೋದಯದ ಕಾಲದಲ್ಲಿ ವಿಜ್ಞಾನದ ಮಹತ್ವವನ್ನು ಜನ ಕಂಡುಕೊಳ್ಳಲಾರಂಭಿಸಿದರು. ಕೊಪರ್ನಿಕಸ್, ಗೆಲಿಲಿಯೊ, ಕೆಪ್ಲರ್, ಲೀಬ್‌ನಿಟ್ಜ್, ನ್ಯೂಟನ್ ಮೊದಲಾದವರು ಮನುಷ್ಯನ ಜ್ಞಾನದ ಎಲ್ಲೆಯನ್ನು ವಿಸ್ತರಿಸಿದರು. ಹೊಸ ಯಂತ್ರಗಳ ಸೃಷ್ಟಿಗೆ ಭೂಮಿಕೆ ಸಿದ್ಧವಾಗುತ್ತಿತ್ತು. ಹದಿನೆಂಟನೆಯ ಶತಮಾನದಲ್ಲಿ ಇಂಗ್ಲೆಂಡಿನಲ್ಲಿ ಕೈಗಾರಿಕಾಕ್ರಾಂತಿ ಪ್ರಾರಂಭವಾಯಿತು. ಹೊಸ ಯಂತ್ರಗಳ ಸೃಷ್ಟಿಯಾಯಿತು. ಇದರ ಪರಿಣಾಮ ಎಂದರೆ ಉತ್ಪಾದನೆ ಹೆಚ್ಚಿದ್ದು. ಹೊಸ ಕಾರಖಾನೆಗಳು ಸಾಲುಸಾಲಾಗಿ ನಿಂತವು. ನೂರು ಮನುಷ್ಯರ ಕೆಲಸವನ್ನು ಒಂದು ಯಂತ್ರ ಮಾಡಿತು. ಕಚ್ಚಾಸಾಮಾನುಗಳನ್ನೂ ಸಿದ್ಧಗೊಳಿಸಿದ ಸಾಮಾನುಗಳನ್ನೂ ಸ್ಥಳದಿಂದ ಸ್ಥಳಕ್ಕೆ ಸಾಗಿಸುವುದು ಸಾಧ್ಯವಾಯಿತು. ಬಂಡವಾಳವರ್ಗಕ್ಕೆ ಹೊಸ ಶಕ್ತಿ ಬಂದಿತು. ಕೈಗಾರಿಕಾಕ್ರಾಂತಿಯ ಪ್ರಾರಂಭದ ದಿನಗಳಲ್ಲಿ ಕಾರಖಾನೆಗಳ ಮಾಲಿಕರಿಗೆ ಕೆಲಸಗಾರರ ಕೂಲಿಯನ್ನು ಗೊತ್ತು ಮಾಡುವುದರಲ್ಲಿ, ಅವರನ್ನು ನೇಮಕಮಾಡುವ–ತೆಗೆಯುವ ವಿಷಯದಲ್ಲಿ, ಅವರ ಕೆಲಸದ ಆವರಣವನ್ನು ನಿರ್ಧರಿಸುವುದರಲ್ಲಿ ಸಂಪೂರ್ಣ ಸ್ವಾತಂತ್ರ್ಯವಿತ್ತು. ಇದರಿಂದ ಮಾಲಿಕರು ಕೆಲಸಗಾರರ ಸಹಾಯಹೀನತೆಯನ್ನು ನಿಷ್ಕರುಣೆಯಿಂದ ಬಳಸಿಕೊಂಡರು. ಕ್ರಮೇಣ ಈ ಪದ್ಧತಿಯ ಅನ್ಯಾಯಗಳನ್ನು ಮನಗಂಡು ಸರಕಾರ ಕೂಲಿಗಾರರ ರಕ್ಷಣೆಗಾಗಿ ಶಾಸನಗಳನ್ನು ಮಾಡಬೇಕಾಯಿತು.

ಹೀಗೆ ಹದಿನೆಂಟನೆಯ ಶತಮಾನದ ಕಡೆಯ ಭಾಗದಿಂದ ಬಂಡವಾಳವರ್ಗದ ಪ್ರಾಬಲ್ಯ ಪ್ರಾರಂಭವಾಯಿತು. ಬಂಡವಾಳವಾದ ಪ್ರಪಂಚದ ಹಲವು ರಾಷ್ಟ್ರಗಳಲ್ಲಿ ಇಂದಿಗೂ ಸಮಾಜದ ಆರ್ಥಿಕವ್ಯವಸ್ಥೆಯ ಆಡಿಪಾಯವಾಗಿದೆ. ಬಂಡವಾಳವಾದ ಎಂದರೇನು ಎಂಬುದನ್ನು ಕುರಿತೇ ತಜ್ಞರಲ್ಲಿ ವಾದವಿವಾದಗಳಿವೆ. ಸ್ಥೂಲವಾಗಿ ಇದನ್ನು ಹೀಗೆ ವಿವರಿಸಬಹುದು. ಬಂಡವಾಳಗಾರನ ಉದ್ದೇಶ ಗಳಿಕೆ—ಮುಖ್ಯವಾಗಿ ಹಣದ ಗಳಿಕೆ. ಉತ್ಪಾದನೆಯನ್ನು ಹೆಚ್ಚಿಸಿ ಆ ಮೂಲಕ ಗಳಿಕೆಯನ್ನು ಹೆಚ್ಚಿಸುವುದು ಬಂಡವಾಳದ ಗುರಿ. ಈ ಗಳಿಕೆಯಲ್ಲಿ ಸ್ಪರ್ಧೆಗೆ ಅವಕಾಶ ಇರಬೇಕು. ಪ್ರತಿ ವ್ಯಕ್ತಿ ತನ್ನ ಬುದ್ಧಿಶಕ್ತಿ ಮತ್ತು ಕ್ರಿಯಾಶಕ್ತಿಗಳಿಗೆ ಅನುಗುಣವಾಗಿ ಕಾನೂನಿನ ಚೌಕಟ್ಟಿನಲ್ಲಿ ಗಳಿಸಲು ಸ್ವಾತಂತ್ರ್ಯವಿರಬೇಕು ಎಂಬುದು ಇದರ ಮನೋಧರ್ಮ. ಇಲ್ಲಿ ಉತ್ಪಾದನೆಗೂ ಸಮಾಜದ ವ್ಯಕ್ತಿಗಳ ಅಗತ್ಯಗಳಿಗೂ ಸಂಬಂಧವಿರಬೇಕಾಗಿಲ್ಲ. ಹೊಸ ಅಗತ್ಯಗಳನ್ನು ಉಂಟುಮಾಡಿ ಅವುಗಳನ್ನು ಪೂರೈಸಿ ಹಣ ಗಳಿಸುವ ಜಾಣ್ಮೆಯನ್ನು ಬಂಡವಾಳಗಾರ ತೋರಬಹುದು. (ಯೂರೋಪಿನಲ್ಲಿಯೂ ಅಮೆರಿಕದಲ್ಲಿಯೂ ಶಸ್ತ್ರಾಸ್ತ್ರಗಳನ್ನು ತಯಾರುಮಾಡುವವರು ರಾಷ್ಟ್ರ–ರಾಷ್ಟ್ರಗಳಲ್ಲಿ ಮನಸ್ತಾಪವನ್ನುಂಟುಮಾಡಿ ತಮ್ಮ ಸಾಮಗ್ರಿಯ ಮಾರಾಟಕ್ಕೆ ಸಹಕಾರಿಯಾದ ವಾತಾವರಣವನ್ನು ಸೃಷ್ಟಿಸುವುದೂ ಅಂತರ್ಯುದ್ಧಗಳಲ್ಲಿ ದೇಶ–ದೇಶಗಳ ಯುದ್ಧದಲ್ಲಿ ಎರಡು ಪಕ್ಷಗಳಿಗೂ ಶಸ್ತ್ರಾಸ್ತ್ರ ನೀಡಿ ಲಾಭ ಗಳಿಸುವುದೂ ಅಪರೂಪವಲ್ಲ. ಸಾವೇ ಇವರ ವ್ಯಾಪಾರ ಸಾಮಗ್ರಿ). ಇಂಥ ವ್ಯವಸ್ಥೆಯಲ್ಲಿ ವ್ಯಕ್ತಿ ಅಮುಖ್ಯನಾಗುತ್ತಾನೆ. ಅವನು ಕೂಲಿಗಾರನೆಂದೋ ವರ್ತಕನೆಂದೋ ಗಿರಾಕಿಯೆಂದೋ ಬಲಿಯೆಂದೋ ಅವನಲ್ಲಿ ಬಂಡವಾಳಗಾರನಿಗೆ ಆಸಕ್ತಿಯಲ್ಲದೆ ಅವನು ಮನುಷ್ಯ ಎಂದಲ್ಲ. ಬಂಡವಾಳಗಾರ ತನ್ನ ಲಾಭದ ದೃಷ್ಟಿಯಿಂದ ಅಧಿಕ ಕಾಲಾವಧಿಯ ಯೋಜನೆಗಳನ್ನು ಮಾಡುತ್ತಾನೆ. ಪ್ರತಿಸ್ಪರ್ಧಿಯನ್ನು ಹೇಗಾದರೂ ಮಾಡಿ ಕಿತ್ತೊಗೆಯಲು ಯತ್ನಿಸುತ್ತಾನೆ. ಬಂಡವಾಳಗಾರರ ಈ ಸ್ಪರ್ಧೆಯಲ್ಲಿ ಪ್ರತಿಸ್ಪರ್ಧಿಗಳು ಸೋತು ಜಜ್ಜಿ ಹೋಗುವ ಅಪಾಯ ಇಲ್ಲದಿಲ್ಲ. ಕಾಲಕಳೆದಂತೆ ಹೆಚ್ಚು ಹೆಚ್ಚು ಬಂಡವಾಳ ಹಾಕಬಲ್ಲವರು ಮಾತ್ರ ಉಳಿಯುತ್ತಾರೆ. ಸಣ್ಣಪುಟ್ಟವರು ಉರುಳುತ್ತಾರೆ. ಬಂಡವಾಳ ಮಾರ್ಗ ಸಂಯುಕ್ತ ಸಂಸ್ಥಾನಕ್ಕೆ ಅಗಾಧ ಸಂಪತ್ತನ್ನು ತಂದು ಕೊಟ್ಟಿದೆ ಎಂಬುದು ನಿರ್ವಿವಾದ. ಈ ಸಂಪತ್ತಿಲ್ಲದೆ ಸಂಯುಕ್ತ ಸಂಸ್ಥಾನ ಪ್ರಬಲವಾದ ರಕ್ಷಣಾಪಡೆಗಳನ್ನು ಇಟ್ಟುಕೊಳ್ಳುವುದಾಗಲಿ ವಿಜ್ಞಾನ ಮತ್ತು ತಾಂತ್ರಿಕಜ್ಞಾನದ ಕ್ಷೇತ್ರಗಳಲ್ಲಿ ಹೊಸ ಹೊಸ ಪ್ರಯೋಗಗಳನ್ನು ಮಾಡುವುದಾಗಲಿ ಸಾಧ್ಯವಾಗುತ್ತಿರಲಿಲ್ಲ ಎಂಬುದು ನೆನಪಿರಬೇಕಾದ ವಿಷಯ. ಅಲ್ಲದೆ ಬಂಡವಾಳಮಾರ್ಗ ಅಸಾಧಾರಣ ಶಕ್ತಿ ಇರುವವರಿಗೆ–ಫೋರ್ಡ್, ಕಾರ್ನ್‌ಗಿ ಇಂಥವರಿಗೆ–ಅವಕಾಶಗಳನ್ನು ಕಲ್ಪಿಸಿಕೊಡುತ್ತದೆ.



ಕೊಪರ್ನಿಕಸ್ ಗೆಲಿಲಿಯೊ ಫೆರಡೆ ಐನ್‌ಸ್ಟೀನ್

1750ರಿಂದ 1914ರವರೆಗಿನ ಅವಧಿಯನ್ನು ಬಂಡವಾಳ ವರ್ಗದ ಕಾಲ ಎನ್ನಬಹುದು. ವಿಜ್ಞಾನ ಮತ್ತು ತಾಂತ್ರಿಕಜ್ಞಾನಗಳನ್ನು ಬಂಡವಾಳಗಾರರು ಬಳಸಿಕೊಂಡು ಪ್ರಪಂಚದ ಉತ್ಪಾದನೆಯನ್ನು ನೂರಾರು ಮಡಿ ಹೆಚ್ಚಿಸಿದರು. ಜನಸಾಮಾನ್ಯರ ಜೀವನ ವಿಧಾನವನ್ನೇ ಮಾರ್ಪಡಿಸಿದರು. ಇದೇ ಸಾಮ್ರಾಜ್ಯವಾದದ ಸ್ವರ್ಣಯುಗ ಎನ್ನುವುದೂ ಗಮನಾರ್ಹ. ಬಂಡವಾಳಶಾಹಿ ರಾಷ್ಟ್ರಗಳ ಸಂಪತ್ತು ಹೆಚ್ಚಿತು, ಅವುಗಳಲ್ಲಿ ಹಲವು ಸಾಮ್ರಾಜ್ಯಗಳನ್ನು ಕಟ್ಟಿದವು. ಈ ಕಾಲದಲ್ಲಿ ಉಳ್ಳವರು ಇಲ್ಲದವರ ನಡುವಿನ ಅಂತರ ಹೆಚ್ಚಾಯಿತು. ಕೊಳಚೆ ಪ್ರದೇಶಗಳು ಹೆಚ್ಚಿದುವು. ವಿಜ್ಞಾನ-ತಾಂತ್ರಿಕಜ್ಞಾನಗಳಲ್ಲಿ ಹಿಂದುಳಿದ ಆಫ್ರಿಕ ಮತ್ತು ಏಷ್ಯದ ರಾಷ್ಟ್ರಗಳು ಯೂರೋಪಿನ ರಾಷ್ಟ್ರಗಳಿಗೆ ಸಂಪತ್ತನ್ನೂ ಕಚ್ಚಾ ಪದಾರ್ಥಗಳನ್ನೂ ಮಾರುಕಟ್ಟೆಗಳಲ್ಲಿ ಒದಗಿಸುವ ಸಾಧನಗಳಾದುವು. ಪಶ್ಚಿಮರಾಷ್ಟ್ರಗಳಿಗೆ ಪೂರ್ವರಾಷ್ಟ್ರಗಳು ಕಲ್ಪತರು, ಕಾಮಧೇನುಗಳಾದುವು. ಅವರು ಹಿಂಡಿ ಹಿಂಡಿ, ಇವು ಸೊರಗಿದುವು.

ತಾಂತ್ರಿಕ ಜ್ಞಾನ ಹೆಚ್ಚಿ ಯಂತ್ರಯಂತ್ರಗಳ ಬಳಕೆಯಿಂದ ಉಂಟಾದ ನೋವು ಅನ್ಯಾಯಗಳನ್ನು ತಡೆಗಟ್ಟಲು ಎರಡು ಪೀಳಿಗೆಗಳ ವಿಚಾರವಂತರು ಮಾಡಿದ ಪ್ರಯತ್ನ ಸಮಾಜವಾದದ ಪ್ರಾರಂಭ. ಕೈಗಾರಿಕಾಕ್ರಾಂತಿ ಪ್ರಾರಂಭವಾದಾಗ ಇಂಗ್ಲೆಂಡಿನಲ್ಲಿಯೇ ಕಾರ್ಮಿಕರಿಗೆ ಆಗುತ್ತಿದ್ದ ಅನ್ಯಾಯ. ಹಣದ ಗಳಿಕೆಯನ್ನೇ ಜೀವನದ ಪರಮಪುರುಷಾರ್ಥ ಎಂದು ನಂಬಿ ಮಾನವೀಯತೆಯನ್ನು ಕಳೆದುಕೊಳ್ಳುವ ಭೀತಿ. ಕೈಗಾರಿಕೆಯ ಅನಿಯಂತ್ರಿತ ಬೆಳವಣಿಗೆ ಮತ್ತು ಬಂಡವಾಳವರ್ಗದ ಅಪರಿಮಿತ ಧನಶೇಖರಣೆಯಿಂದ ಸಮಾಜಕ್ಕಾಗುವ ಅಪಾಯ—ಇವುಗಳನ್ನು ಕುರಿತು ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದಿಂದ ವಿಚಾರವಂತರು ನಾಡಿಗೆ ಎಚ್ಚರಿಕೆ ನೀಡಲು ಪ್ರಾರಂಭಿಸಿದರು. ವಿಲಿಯಂ ವರ್ಡ್ಸ್‌ವರ್ತ್ (1770–1850), ಚಾರ್ಲ್ಸ್ ಡಿಕನ್ಸ್ (1812–1870) ರಂಥ ಸಾಹಿತಿಗಳು. ವಿಲಿಯಂ ಕಾಬೆಟ್ (1762–1835) ನಂಥ ಅರ್ಥಶಾಸ್ತ್ರಜ್ಞರು ಹಣದಾಸೆ ಅನ್ಯಾಯ ಸ್ವಾರ್ಥಗಳ ವಿರುದ್ಧ ದನಿ ಎತ್ತಿದರು. ರಾಬರ್ಟ್ ಓವನ್ (1771–1858) ನ್ಯೂ ಲನಾರ್ಕ್ ಎನ್ನುವ ಕಡೆ ಹೊಸ ಪ್ರಯೋಗಗಳನ್ನು ಮಾಡಿದ; ಕಾರ್ಮಿಕರನ್ನು ಮಾನವರಂತೆ ಕಾಣುವ ಮೇಲ್ಪಂಕ್ತಿ ಹಾಕಿದ. ಕಾರ್ಖಾನೆಯಲ್ಲಿ ಶೇಕಡ ಐದರಷ್ಟೇ ಲಾಭಕ್ಕೆ ತೃಪ್ತಿಗೊಳ್ಳುವ ಪಾಲುದಾರರಿಂದ ಮಾತ್ರ ಬಂಡವಾಳ ಪಡೆದ. ಜಾನ್ ರಸ್ಕಿನ್ (1819–1900) ತನ್ನ ಉದಾರವಾದ ಆರ್ಥಿಕ ತತ್ತ್ವಗಳನ್ನು ಆಚರಣೆಗೆ ತರಲು ಸೇಂಟ್ ಜಾರ್ಜ್ ಸಂಘ ಎಂಬುದನ್ನು ಸ್ಥಾಪಿಸಿದ. ಫ್ರಾಂಕಾಯ್ ಮೇರಿ ಚಾರ್ಲ್ಸ್ ಫೌರೀಕ್ (1772–1837), ಕ್ಲಾಡ್ ಹೆನ್ರಿ ದ ರೂತ್‌ರಾಯ್ (1760–1825) ಮೊದಲಾದವರು ಹಲವು ದೇಶಗಳಲ್ಲಿ ಕಾರ್ಮಿಕರಿಗೆ ನ್ಯಾಯವನ್ನು ದೊರಕಿಸಿ ಇನ್ನೂ ಉತ್ತಮ ಸಾಮಾಜಿಕ ವ್ಯವಸ್ಥೆಯನ್ನು ಸ್ಥಾಪಿಸಬೇಕೆಂಬ ಸಮಾಜವಾದವನ್ನು ಮುಂದಿಟ್ಟರು. 1848ರಲ್ಲಿ ಕಾರ್ಲ್ ಮಾರ್ಕ್ಸ್‌ನ 'ಕಮ್ಯೂನಿಸ್ಟ್ ಘೋಷಣೆ' ಪ್ರಕಟವಾಯಿತು. ಅಗತ್ಯವಿದ್ದರೆ ಶಕ್ತಿ ಪ್ರಯೋಗಮಾಡಿ ಹಿಂಸೆಯ ಮೂಲಕ ಬಂಡವಾಳ ಪದ್ಧತಿಯನ್ನು ಪುಡಿ ಮಾಡಬೇಕೆಂದು ಕರೆ ಕೊಟ್ಟ ಮಾರ್ಕ್ಸ್. ಕಟ್ಟಕಡೆಗೆ ಎಲ್ಲ ರಾಷ್ಟ್ರಗಳೂ ಸಮಾಜವಾದವನ್ನು ಅಂಗೀಕರಿಸುವುವೆಂದೂ ವರ್ಗರಹಿತ ಸಮಾಜದ ಸ್ಥಾಪನೆಯಾಗುವುದೆಂದೂ ಘೋಷಿಸಿದ. ಆದರೆ ಹಲವರು ಸಮಾಜವಾದಿಗಳು ಮಾರ್ಕ್ಸ್‌ನ ಹಿಂಸಾಮಾರ್ಗವನ್ನು ಒಪ್ಪಲಿಲ್ಲ. ಇವರು ಸೋಷಿಯಲ್ ಡೆಮೊಕ್ರಾಟರೆನಿಸಿಕೊಂಡರು. ಹತ್ತೊಂಬತ್ತನೆಯ ಶತಮಾನದ ಕಡೆಯ ಭಾಗದಲ್ಲಿ ಯೂರೋಪಿನಲ್ಲಿ ಇವರ ಪ್ರಭಾವ ಬೆಳೆಯಿತು. ವರ್ಗ ಕಲಹ ಅನಿವಾರ್ಯ, ಕಾರ್ಮಿಕವರ್ಗವೊಂದೇ ಉಳಿದು ಬೇರೆ ವರ್ಗಗಳು ನಾಶವಾಗಬೇಕು ಎನ್ನುವ ಮಾರ್ಕ್ಸ್‌ನ ವಾದವನ್ನು ಇವರು ಒಪ್ಪಲಿಲ್ಲ. ಅಲ್ಲದೆ ಮಾರ್ಕ್ಸ್‌ವಾದ ವ್ಯಕ್ತಿಗೆ ಹೆಚ್ಚು ಮಹತ್ವ ಕೊಡುವುದಿಲ್ಲ, ವ್ಯಕ್ತಿ ಸಮಾಜಕ್ಕೆ ಅಗತ್ಯ, ಸಮಾಜ ವ್ಯಕ್ತಿಗೆ ಅಗತ್ಯ, ವ್ಯಕ್ತಿತ್ವ ಅರಳಲು ಅವಶ್ಯವಾದ ವಾತಾವರಣವನ್ನು ಸೃಷ್ಟಿಸಬೇಕು ಎಂದೂ ಸೋಷಿಯಲ್ ಡೆಮೊಕ್ರಾಟರು ಭಾವಿಸಿದರು. ವರ್ಗಸಾಮರಸ್ಯವನ್ನು ಸಾಧಿಸಬಹುದು, ಮುಖ್ಯ ಉತ್ಪಾದನೆಗಳ ಮೇಲೆ ರಾಷ್ಟ್ರಕ್ಕೆ ಹತೋಟಿ ಇರಬೇಕು, ಮುಖ್ಯ ಕೈಗಾರಿಕೆಗಳ ರಾಷ್ಟ್ರೀಕರಣ, ಕಾರ್ಮಿಕರ ಹಿತಗಳ ರಕ್ಷಣೆಗೆ ಶಾಸನ ಇವು ಅಗತ್ಯ ಎಂದು ಇವರ ನಿಲುವು. ಎರಡನೆಯ



ಹೆನ್ರಿ ಫೋರ್ಡ್ ಆಂಡ್ರೂ ಕಾರ್ನ್‌ಗಿ

ಫ್ರಾನ್ಸಿನ ಮಹಾ ಕ್ರಾಂತಿ (1789) ಒಂದು ರೀತಿಯಲ್ಲಿ ಸಮಾಜವಾದದ ಕಹಳೆಯನ್ನೇ ಊದಿತು. ಮುಂದೆ ರಷ್ಯದಲ್ಲಿ ಕ್ರಾಂತಿ (1917) ಉಗ್ರರೂಪವನ್ನು ತಳೆಯಿತು. ಉಲ್ಬಣಿಸಿದ ಕಾಯಿಲೆಗೆ ಉಗ್ರಚಿಕಿತ್ಸೆ ಅನಿವಾರ್ಯ. ರಷ್ಯದಲ್ಲಿ ಕಾರ್ಮಿಕರ ಮತ್ತು ರೈತರ ಸ್ಥಿತಿ ಕರುಣಾಜನಕವಾಗಿತ್ತು. ಮೊದಲನೆಯ ಮಹಾಯುದ್ಧದಲ್ಲಿ ರಷ್ಯ ಭಾಗವಹಿಸಿದ್ದು ಅದಕ್ಕೆ ವಿಪತ್ತುಗಳನ್ನೇ ತಂದಿತು. ಅದರ ಮಿತ್ರರಾಷ್ಟ್ರಗಳೊಡನೆ ಸಂಪರ್ಕ ತಪ್ಪಿಹೋಗಿತ್ತು. ರಾಜನ ಕಿವಿ ಸ್ವಾರ್ಥಿಗಳು ಮತ್ತು ಹೊಗಳುಭಟರ ನಾಲಗೆಗೆ ಅಂಟಿತ್ತು. ಆಹಾರದ ಅಭಾವದಿಂದ ಅಗತ್ಯವಾದ ಆಹಾರ ಪದಾರ್ಥಗಳ ಬೆಲೆಗಳು ಮೇಲಕ್ಕೆ ಹಾರಿದುವು. ಜನ ದಂಗೆ ಎದ್ದರು. ಸೈನಿಕರೂ ಜನರನ್ನು ಸೇರಿದರು. ಲೆನಿನ್ನನ ನಾಯಕತ್ವದಲ್ಲಿ ನಡೆದ ಅಕ್ಟೋಬರ್ ಕ್ರಾಂತಿಯಲ್ಲಿ ಅರಸುಪ್ರಭುತ್ವ ಉರುಳಿ. ಕಮ್ಯೂನಿಸ್ಟ್ ಪ್ರಭುತ್ವ ಸ್ಥಾಪನೆಯಾಯಿತು. ಇದು ಕಾರ್ಮಿಕರ ಸರ್ವಾಧಿಕಾರ. ಇಲ್ಲಿ ಸ್ವಂತ ಆಸ್ತಿ ಎನ್ನುವುದಿಲ್ಲ. ಎಲ್ಲ



ಚಾರ್ಲ್ಸ್ ಡಿಕನ್ಸ್



ವಿಲಿಯಂ ವರ್ಡ್ಸ್‌ವರ್ತ್

ವಿಲಿಯಂ ಕಾಬೆಟ್



ಜಾನ್ ರಸ್ಕಿನ್





ಕಾರ್ಲ್ ಮಾರ್ಕ್ಸ್

ಉತ್ಪಾದನೆಗಳೂ ಸರ್ಕಾರದ ಅಧೀನ: ಎಲ್ಲ ಎಲ್ಲರ ಸ್ವತ್ತು: ಯಾವುದೂ ಯಾರೊಬ್ಬರ ಸ್ವತ್ತಲ್ಲ: ಪ್ರತಿಯೊಬ್ಬನೂ ಸಮಾಜಕ್ಕೆ ತನ್ನಿಂದಾದಷ್ಟು ಶ್ರೇಷ್ಠ ಸೇವೆ ಸಲ್ಲಿಸುತ್ತಾನೆ: ತನ್ನ ಅಗತ್ಯಕ್ಕೆ ತಕ್ಕಂತೆ ಸಮಾಜದಿಂದ ಪೋಷಣೆ ಪಡೆಯುತ್ತಾನೆ.

ರಷ್ಯದಲ್ಲಿ ಕಮ್ಯೂನಿಸ್ಟ್ ವ್ಯವಸ್ಥೆ ಸ್ಥಾಪನೆಯಾದಾಗ ಒಂದು ರೀತಿಯಲ್ಲಿ ಜಗತ್ತಿನ ಆರ್ಥಿಕ ವ್ಯವಸ್ಥೆಯ ವೃತ್ತ ಸಂಪೂರ್ಣವಾದಂತಾಯಿತು. ಆಗಲೆ ನಾವು ನೋಡಿದಂತೆ, ಪ್ರಾಚೀನ ಪಂಗಡಗಳಲ್ಲಿ ಇದ್ದುದು ಕಮ್ಯೂನಿಸ್ಟ್ ವ್ಯವಸ್ಥೆಯೇ.

ಎರಡನೆಯ ಮಹಾಯುದ್ಧದ ಅನಂತರ ಕಮ್ಯೂನಿಸಂ ಹಬ್ಬಿದೆ. ಚೀನದಲ್ಲಿ ಅಂತರ್ಯುದ್ಧದಲ್ಲಿ ಕೂಮಿಂಟಾಂಗ್ ಪಕ್ಷ ಸೋತು ಕಮ್ಯೂನಿಸ್ಟ್ ಪಕ್ಷ ಗೆದ್ದುದರಿಂದ ಪ್ರಪಂಚದ ಅತ್ಯಂತ ಹೆಚ್ಚಿನ ಜನಸಂಖ್ಯೆಯುಳ್ಳ ದೇಶ – ಪ್ರಪಂಚದ ಜನಸಂಖ್ಯೆಯ ಸುಮಾರು ನಾಲ್ಕನೆಯ ಒಂದು ಭಾಗವನ್ನು ಒಳಗೊಂಡ ದೇಶ – ಕಮ್ಯೂನಿಸಮನ್ನು ಅಂಗೀಕರಿಸಿದಂತಾಯಿತು. ಜೆಕೊಸ್ಲೊವಾಕಿಯ, ಪೂರ್ವ ಜರ್ಮನಿ, ಉತ್ತರ ಕೊರಿಯ, ಹಂಗೆರಿ, ಪೋಲೆಂಡ್, ರುಮೇನಿಯ ಎಲ್ಲ ಕಮ್ಯೂನಿಸ್ಟ್ ಪಂಥಕ್ಕೆ ಸೇರಿವೆ.

ಈ ಶತಮಾನಗಳಲ್ಲಿ ಪೂರ್ವ ದೇಶಗಳ ಕಥೆ ಏನು? ಆಗಲೇ ನಾವು ಕಂಡಂತೆ ಬಹು ಮಟ್ಟಿಗೆ ಈ ದೇಶಗಳಲ್ಲಿ ರಾಜಪ್ರಭುತ್ವ ಇದ್ದಿತು. ಊಳಿಗಮಾನ್ಯ ಪದ್ಧತಿಯ ಹಲವು ಅಂಶಗಳು ಆರ್ಥಿಕ ವ್ಯವಸ್ಥೆಯಲ್ಲಿ ಸೇರಿದ್ದುವು. ಚಂದ್ರಗುಪ್ತನ ಕಾಲದಿಂದ ಅರಸರು ನೆಲವೆಲ್ಲ ತಮಗೆ ಸೇರಿದುದೆಂದೂ ಉಳುವವನಿಗೆ ತೆರಿಗೆ ಅಥವಾ ಬಾಡಿಗೆಗಾಗಿ ಕೊಟ್ಟುದು ಮಾತ್ರವೆಂದೂ ಸಾಧಿಸುತ್ತ ಬಂದರು. ಕೆಲವು ಅರಸರು ಭಾರತಕ್ಕೆ ಶಾಂತಿ ಸಮೃದ್ಧಿ ತಂದುಕೊಟ್ಟರು. ಹರ್ಷ, ಪುಲಿಕೇಶಿ, ಕೃಷ್ಣದೇವರಾಯ ಇಂಥ ರಾಜರು ರಣರಂಗದಲ್ಲಿ ಶೌರ್ಯವನ್ನೂ ಆಸ್ಥಾನದಲ್ಲಿ ಕರ್ತವ್ಯನಿಷ್ಠೆಯನ್ನೂ ಮೆರೆದರು. ಹರ್ಷನ ಕಾಲದಲ್ಲಿ ಭಾರತಕ್ಕೆ ಬಂದ ಹು ಯೆನ್–ತ್ಸಾಂಗ್, "ರಾಜನಿಗೆ ವಿರಾಮವೆಂಬುದೇ ತಿಳಿಯದು. ದಿನ ಸಾಲದು. ಒಳ್ಳೆಯ ಕೆಲಸಗಳನ್ನು ಮಾಡುವ ಸಂಭ್ರಮದಲ್ಲಿ ನಿದ್ರೆಯನ್ನೂ ಮರೆತುಬಿಡುತ್ತಾನೆ." ಎಂದಿದ್ದಾನೆ. ಹಂಪೆಯನ್ನು ಕುರಿತು ಚರಿತ್ರಕಾರರು, ಪ್ರಾಯಶಃ ಭಾರತದ ಚರಿತ್ರೆಯಲ್ಲಿ ಅತ್ಯಂತ ಶ್ರೀಮಂತನಗರ ಇದೇ ಎನ್ನುತ್ತಾರೆ. ಕ್ರಿ. ಪೂ. 3000ದ ಹೊತ್ತಿಗೇ ಈಜಿಪ್ಟ್ ಮತ್ತು ಸುಮೇರಿಯದೊಡನೆ ಭಾರತ ವಾಣಿಜ್ಯನಡೆಸುತ್ತಿತ್ತು. ಚಂದ್ರಗುಪ್ತನ ಕಾಲದಲ್ಲಿಯೂ ಈ ಬಗೆಯ ವಾಣಿಜ್ಯವನ್ನು ಕಾಣುತ್ತೇವೆ. ಮುಸಲ್ಮಾನರ ದಾಳಿಗಳಿಂದ ದೇಶದ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಗಳಿಗೆ ಮತ್ತೆ ಮತ್ತೆ ಆಘಾತವೊದಗಿತು. ದೇಶ ಹಲವಾರು ರಾಜಮಹಾರಾಜರುಗಳು ನವಾಬರುಗಳ ಆಡಳಿತದಲ್ಲಿ ಹಂಚಿಹೋಯಿತು. ಸಹಜವಾಗಿ ಇಂಥ ಅಶಾಂತಿ ಅಪಾಯಗಳ ಕಾಲದಲ್ಲಿ ಊಳಿಗಮಾನ್ಯ ಪದ್ಧತಿ ಬಲಗೊಂಡಿತು. ಒಟ್ಟಿನಲ್ಲಿ ವರ್ತಕವರ್ಗ ಶ್ರೀಮಂತವಾಗಿತ್ತು. ಗೃಹಕೈಗಾರಿಕೆಗಳು ದೇಶದ ಆರ್ಥಿಕ ಜೀವನದಲ್ಲಿ ಒಂದು ಮುಖ್ಯ ಭಾಗವಾಗಿದ್ದುವು. ಭಾರತದ ಶಾಲುಗಳು ರತ್ನಗಂಬಳಿಗಳು ಮತ್ತು ಮಸ್ಲಿನ್‌ಬಟ್ಟೆ ಯೂರೋಪಿನಲ್ಲಿ ಪ್ರಸಿದ್ಧವಾಗಿದ್ದುವು. ಮರ, ದಂತ, ಲೋಹಗಳಲ್ಲಿ ಕುಶಲಕಲೆಯ ಕೆಲಸ, ಬಣ್ಣ ಹಾಕುವುದು, ಗಾಜಿನ ಕೆಲಸ, ಸಿಡಿಮದ್ದು ಮತ್ತು ಸಿಮೆಂಟ್‌ಗಳನ್ನು ಮಾಡುವುದು ಇವುಗಳಲ್ಲಿ ಭಾರತ ಅಂತರರಾಷ್ಟ್ರೀಯ ಖ್ಯಾತಿಯನ್ನು ಪಡೆದಿತ್ತು. 1260ರ ಹೊತ್ತಿಗೆ ಚೀನ ಭಾರತದಿಂದ ಕನ್ನಡಕಗಳನ್ನು ಆಮದು ಮಾಡಿಕೊಳ್ಳುತ್ತಿತ್ತು. ಅಂತರರಾಷ್ಟ್ರೀಯ ವ್ಯಾಪಾರದಂತೆ ಒಳದೇಶ ವ್ಯಾಪಾರವೂ ಸಮೃದ್ಧಿಯಾಗಿತ್ತು. ಗ್ರೀಸ್ ರೋಮ್‌ಗಳಿಂದ ವರ್ತಕರು ಇಲ್ಲಿಗೆ ಬಂದು ಸಾಮಾನುಗಳನ್ನು ಕೊಳ್ಳುತ್ತಿದ್ದರು. ಹಡಗುಗಳನ್ನು ಕಟ್ಟುವುದರಲ್ಲಿ ಭಾರತ ಅಸಾಧಾರಣ ಖ್ಯಾತಿಯನ್ನು ಪಡೆದಿತ್ತು. ಅಕ್ಬರ್ ನೌಕೆಗಳ ನಿರ್ವಹಣೆಗೇ ಒಂದು ಶಾಖೆಯನ್ನು ಏರ್ಪಡಿಸಿದ್ದ. ಯೂರೋಪಿನಲ್ಲಿ ಏಷ್ಟೋ ಮುಂದೆ ನಾಣ್ಯಗಳನ್ನೆ ಕಾಣದಿದ್ದ ಕಾಲದಲ್ಲಿ ಭಾರತದಲ್ಲಿ ನಾಣ್ಯಗಳ ತಯಾರಿಕೆಯ ವ್ಯವಸ್ಥೆ ಬಹು ದೂರ ಸಾಗಿತ್ತು. ಷೇರ್ ಷಹನ ಆಳ್ವಿಕೆಯ (1542-1545)ಕಾಲದಲ್ಲಿ ರೂಪಾಯಿ ದೇಶದ ಆಧಾರನಾಣ್ಯವಾಯಿತು. ತೆರಿಗೆ ಕಾಲದಿಂದ ಕಾಲಕ್ಕೆ ಬದಲಾಗುತ್ತಿತ್ತು. ಸಾಮಾನ್ಯವಾಗಿ ರೈತರು ತಮ್ಮ ಬೆಳೆಯಲ್ಲಿ ಆರರಲ್ಲಿ ಒಂದು ಪಾಲನ್ನು ಸಲ್ಲಿಸಬೇಕಾಗುತ್ತಿತ್ತು. ಅಕ್ಬರನ ಕಾಲದಲ್ಲಿ ಭೂಕಂದಾಯ ಬೆಳೆಯ ಮೂರರಲ್ಲಿ ಒಂದು ಪಾಲು. ಸಾಮಾನುಗಳ ಸಾಗಾಣಿಕೆಯಲ್ಲಿ ಹಲವು ತೆರಿಗೆಗಳನ್ನು ಕೊಡಬೇಕಾಗುತ್ತಿತ್ತು.

ಬ್ರಿಟಿಷರು ಭಾರತವನ್ನಾಕ್ರಮಿಸುವ ಮುನ್ನ ಭಾರತ ಹಲವು ದಾಳಿಗಳಿಗೆ ಈಡಾಗಿತ್ತು: ಆದರೆ ಬ್ರಿಟಿಷರಿಗೂ ಹೊರಗಿನಿಂದ ಬಂದ ಇತರ ಆಕ್ರಮಣಕಾರರಿಗೂ ಒಂದು ಮುಖ್ಯ ವ್ಯತ್ಯಾಸವಿದ್ದಿತು. ಬ್ರಿಟಿಷರ ಮುನ್ನ ಇಲ್ಲಿಗೆ ಬಂದ ದಾಳಿಕಾರರಲ್ಲಿ ಎರಡು ಬಗೆಯವರಿದ್ದರು. ಕೆಲವರು

ಹೊಸ ಪ್ರದೇಶಗಳನ್ನು ಕೈವಶಮಾಡಿಕೊಳ್ಳುವುದು ಅಗತ್ಯವಾಯಿತು; ಮ್ಯಾಂಚೆಸ್ಟರಿನ ಗಿರಣಿಗಳಿಗೆ ಭಾರತ ಅಮುಖ್ಯವಾಗಬೇಕಾಯಿತು. ಅಗ್ಗದ ಕೆಲಸಗಾರರನ್ನು ಪಡೆಯಲೂ ಇತರ ರಾಜ್ಯಗಳನ್ನು ಗೆಲ್ಲಬೇಕಾಯಿತು. ಪೆಟ್ರೋಲಿಯಂನ ಅಗತ್ಯ ಆಫ್ರಿಕದ ಹಲವು ಪ್ರದೇಶಗಳ ಹಣೆಯಬರಹವನ್ನೇ ಬದಲಾಯಿಸಿತು. ಕೈಗಾರಿಕಾಕ್ರಾಂತಿಯು ನೆರವಿಲ್ಲದಿದ್ದರೆ ಇಂಗ್ಲೆಂಡ್, ಫ್ರಾನ್ಸ್, ಸ್ಪೇನ್, ಪೋರ್ಚುಗಲ್ ಮೊದಲಾದ ರಾಷ್ಟ್ರಗಳು ಸಾವಿರಾರು ಮೈಲಿಗಳಾಚೆ ಇದ್ದ ವಸಾಹತುಗಳೊಡನೆ ಸಂಬಂಧವಿರಿಸಿಕೊಂಡು ಹತೋಟಿಯಲ್ಲಿಟ್ಟುಕೊಳ್ಳುವುದು ಸಾಧ್ಯವಾಗುತ್ತಿರಲಿಲ್ಲ. ಕೈಗಾರಿಕಾಕ್ರಾಂತಿಯಿಂದ ಭಾಗ್ಯವಂತ ದೇಶಗಳಿಗೂ ಹಿಂದುಳಿದ ದೇಶಗಳಿಗೂ ಅಂತರ ಹೆಚ್ಚಾಯಿತು. ಹಿಂದೆಯೂ ಎಲ್ಲ ದೇಶಗಳೂ ಆರ್ಥಿಕವಾಗಿ ಒಂದೇ ಮಟ್ಟದಲ್ಲಿದ್ದುವೆಂದಲ್ಲ. ಆದರೆ ಭಾರತ, ಹಲವು ಅರಬ್ ರಾಷ್ಟ್ರಗಳು, ಆಫ್ರಿಕದ ರಾಷ್ಟ್ರಗಳು–ಇವುಗಳಿಗೂ, ತಂತ್ರಜ್ಞಾನವನ್ನು ಯಂತ್ರಗಳನ್ನು ಬಳಸಿಕೊಂಡ ಸಂಯುಕ್ತ ಸಂಸ್ಥಾನ, ಇಂಗ್ಲೆಂಡ್, ಜರ್ಮನಿ, ಇಂಥ ದೇಶಗಳಿಗೂ ಉಂಟಾದ ತಾರತಮ್ಯ ಅಕ್ಷರಶಃ ಅಜಗಜಾಂತರವಾಯಿತು.

ಮೂರನೆಯದಾಗಿ: ಪರಸ್ಪರ ವಿರುದ್ಧ ಎನಿಸಿಕೊಂಡು ಪ್ರಾರಂಭವಾದ ಆರ್ಥಿಕ ಪಂಥಗಳು ಹತ್ತಿರ ಸರಿಯುತ್ತಿರುವುದು. ಇಂದು ಅವನ್ನು ದೂರವಿಟ್ಟಿರುವುದು ಆರ್ಥಿಕ ಧೋರಣೆಗಳಲ್ಲಿನ ವ್ಯತ್ಯಾಸಗಳಿಗಿಂತ ರಾಜಕೀಯ ಕಾರಣಗಳೇ. ಬಂಡವಾಳವಾದ ವ್ಯಕ್ತಿಗೆ ಸಂಪೂರ್ಣ ಸ್ವಾತಂತ್ರ್ಯವನ್ನು ಸಮರ್ಥಿಸುತ್ತದೆ. 'ಲೇಸೇ ಫೇರ್' ಎನ್ನುವ-ಪ್ರತಿಯೊಬ್ಬರೂ ತಮಗಿಷ್ಟ ಬಂದಂತೆ ನಡೆದುಕೊಳ್ಳಲಿ ಎಂಬ-ಸೂತ್ರ ಆರ್ಥಿಕ ರಂಗದಲ್ಲಿ ವ್ಯಕ್ತಿಗಳಿಗೂ ಸಂಸ್ಥೆಗಳಿಗೂ ಸಂಪೂರ್ಣ ಸ್ವಾತಂತ್ರ್ಯವನ್ನು ನೀಡಬೇಕೆಂದು ಪ್ರತಿಪಾದಿಸುತ್ತದೆ. ಕಮ್ಯೂನಿಸಮಿನ ದೃಷ್ಟಿಯಲ್ಲಿ ಎಲ್ಲ ಆರ್ಥಿಕ ಅಧಿಕಾರ ಕೇಂದ್ರೀಕೃತವಾಗಬೇಕು, ಎಲ್ಲವನ್ನೂ ಒಂದು ಕೇಂದ್ರ ಯೋಜನೆ ನಿರ್ಧರಿಸಬೇಕು. ಆದರೆ ಬಂಡವಾಳವಾದವನ್ನು ಒಪ್ಪಿದ ಸರಕಾರಗಳೂ ಎಷ್ಟೋ ದಶಕಗಳ ಹಿಂದೆ ಕಾರ್ಮಿಕರ ಸಂಬಳ, ರಜ, ಅನಾರೋಗ್ಯಕಾಲದ ವ್ಯವಸ್ಥೆ, ಕಾರ್ಖಾನೆಗಳಲ್ಲಿ ಗಾಳಿ ಬೆಳಕುಗಳ ವ್ಯವಸ್ಥೆ–ಇಂಥ ಹತ್ತು ವಿಷಯಗಳಲ್ಲಿ ಕೈಹಾಕಬೇಕಾದ ಅಗತ್ಯವನ್ನು ಕಂಡುಕೊಂಡುವು. ಸಂಯುಕ್ತ ಸಂಸ್ಥಾನದಲ್ಲಿ ಸಹ ಸರಕಾರ ಹಲವು ಪ್ರಮುಖ ಉದ್ಯಮಗಳನ್ನು-ಉದಾಹರಣೆ ಉಕ್ಕಿನ ಉದ್ಯಮ–ರಾಷ್ಟ್ರೀಕರಣಗೊಳಿಸದಿದ್ದರೂ ಅವುಗಳ ಮೇಲೆ ನಿಯಂತ್ರಣವನ್ನು ಹೊಂದಿದೆ. ಬ್ರಿಟನಿನಲ್ಲಿ ಲೇಬರ್ ಸರಕಾರ ಹಲವು ಉದ್ಯಮಗಳನ್ನು ರಾಷ್ಟ್ರೀಕರಣಗೊಳಿಸಿತು. ವರಮಾನ ತೆರಿಗೆ, ಆಸ್ತಿಯ ತೆರಿಗೆ ಇಂಥ ಹಲವಾರು ತೆರಿಗೆಗಳ ಮೂಲಕ ಕಮ್ಯೂನಿಸ್ಟ್ ಅಲ್ಲದ ಸರಕಾರಗಳೂ ಉಳ್ಳವರ ಮತ್ತು ಇಲ್ಲದವರ ನಡುವಿನ ಅಂತರವನ್ನು ಕಡಮೆ ಮಾಡುತ್ತಿವೆ. ಮುಖ್ಯ ಉತ್ಪಾದನೆಗಳಿಗೆ ಮಿತಿಯನ್ನು ನಿರ್ಧರಿಸುತ್ತವೆ. ಕಮ್ಯೂನಿಸ್ಟ್ ದೇಶಗಳು ಅತಿಕಟ್ಟುನಿಟ್ಟಾದ ಕೇಂದ್ರ ನಿಯಂತ್ರಣವನ್ನು ಸಡಿಲಗೊಳಿಸುತ್ತಿವೆ. 1957ರಲ್ಲಿ ಸೋವಿಯೆತ್ ರಷ್ಯ ಇಪ್ಪತ್ತು ಲಕ್ಷಕ್ಕೂ ಮೀರಿದ ಕೈಗಾರಿಕಾ ಉದ್ಯಮಗಳನ್ನೂ ಹತ್ತು ಲಕ್ಷಕ್ಕೂ ಮೀರಿದ ಉತ್ಪಾದನಾ ನಿವೇಶನಗಳನ್ನೂ ಕೇಂದ್ರದಿಂದ ನಿಯಂತ್ರಣಗೊಳಿಸುವುದು ಅಸಾಧ್ಯ ಎಂದು ಘೋಷಿಸಿ ಕೇಂದ್ರದ ಹತೋಟಿಯನ್ನು ಸಡಿಲಗೊಳಿಸುವ ಶಾಸನವನ್ನು ಮಾಡಿತು. ಒಟ್ಟಿನಲ್ಲಿ ಇಂದು ಕಮ್ಯೂನಿಸ್ಟ್ ಸರಕಾರವಾಗಲಿ, ಸಮಾಜವಾದಿ ಸರಕಾರವಾಗಲಿ, ಬಂಡವಾಳಶಾಹಿ ಸರಕಾರವಾಗಲಿ, ಪ್ರಜೆಗಳ ಆರ್ಥಿಕ ಜೀವನವನ್ನು ನಿಯಂತ್ರಣಗೊಳಿಸಲೇಬೇಕು, ಅವರ ಆರ್ಥಿಕ ಕಲ್ಯಾಣದ ಜವಾಬ್ದಾರಿಯನ್ನು ವಹಿಸಿಕೊಳ್ಳಲೇಬೇಕು. ರಾಷ್ಟ್ರೀಕರಣ, ಬೆಲೆಗಳ ನಿಯಂತ್ರಣ, ಆಮದು ರಫ್ತುಗಳ ಹತೋಟಿ–ಹೀಗೆ ಹಲವು ಸಾಧನಗಳ ಮೂಲಕ ಸರಕಾರ ದೇಶದ ಆರ್ಥಿಕ ಜೀವನವನ್ನು ತನ್ನ ಹತೋಟಿಯಲ್ಲಿಟ್ಟುಕೊಳ್ಳುತ್ತದೆ. ಎಲ್ಲ ದೇಶಗಳಲ್ಲಿಯೂ ವ್ಯಕ್ತಿಯ ಜೀವನದಲ್ಲಿ ಸರಕಾರ ಪ್ರವೇಶಿಸುವುದು ಹೆಚ್ಚುವುದಲ್ಲದೆ ಕಡಮೆಯಾಗುವ ಸಾಧ್ಯತೆ ಇಲ್ಲ.

ನಾಲ್ಕನೆಯದಾಗಿ: ಹಲವು ದೇಶಗಳಲ್ಲಿ ಕೈಗಾರಿಕೆ ಬೆಳೆದುದರ ಫಲವಾಗಿ ಪರಸ್ಪರ ಅವಲಂಬನವೂ ಪರಸ್ಪರ ಸ್ಪರ್ಧೆಯೂ ಹೆಚ್ಚಿರುವುದು. ಕಚ್ಚಾಸಾಮಾನುಗಳು ಮತ್ತು ಚೈತನ್ಯದ ಸಂಪನ್ಮೂಲಗಳು ಪರಸ್ಪರ ಅವಲಂಬನವನ್ನು ಹೆಚ್ಚಿಸಿವೆ: ಅಂತರರಾಷ್ಟ್ರೀಯ ನದಿಗಳನ್ನು ಒಂದಕ್ಕಿಂತ ಹೆಚ್ಚು ದೇಶ ನೀರಾವರಿ ಮತ್ತು ವಿದ್ಯುಚ್ಛಕ್ತಿಯ ಬಳಕೆಗೆ ಉಪಯೋಗಿಸುವಾಗ ಪರಸ್ಪರ ಸಹಕಾರ ಅಗತ್ಯವಾಗುತ್ತದೆ. ಇಂದಿನ ಭಯಂಕರ ಶಸ್ತ್ರಾಸ್ತ್ರ ಸ್ಪರ್ಧೆಯಲ್ಲಿ ಪ್ರತಿ ದೇಶ ಇತರ ಹಲವು ದೇಶಗಳಿಂದ ಶಸ್ತ್ರಾಸ್ತ್ರಗಳನ್ನು ಕೊಳ್ಳುವುದು ಅಗತ್ಯವಾಗುತ್ತದೆ. ಅದಕ್ಕಾಗಿ ವಿದೇಶೀ ವಿನಿಮಯವನ್ನು ಗಳಿಸಬೇಕಾಗುತ್ತದೆ. ಇದರಿಂದಲೂ ಸರಕಾರ ಪ್ರಜೆಗಳ ಮೇಲೆ ಹಲವು ಬಗೆಯ ನಿಯಮಗಳನ್ನು ಹೇರಿಸುವುದು ಅಗತ್ಯವಾಗುತ್ತದೆ. ಚೈತನ್ಯದ ಹಲವು ಮೂಲಗಳನ್ನು–ಕಲ್ಲಿದ್ದಲಿನಂತೆ–ಜಗತ್ತು ಬಳಸಿಕೊಂಡಂತೆ, ಹಲವು ಲೋಹಗಳನ್ನು –ತವರದಂತೆ–ಬಳಸಿ ಮುಗಿಸಿಬಿಟ್ಟಂತೆ, ಹೊಸ ಚೈತನ್ಯಮೂಲಗಳನ್ನೂ ಲೋಹಗಳನ್ನೂ ಹುಡುಕಬೇಕಾಗುತ್ತದೆ. ಇದರಿಂದಲೂ ರಾಷ್ಟ್ರಗಳ ಆರ್ಥಿಕ ಸ್ಥಿತಿ ಬದಲಾಗಬಹುದು.

ಎರಡನೆಯ ಮಹಾಯುದ್ಧದ ಅನಂತರ ವಿಜ್ಞಾನ ಮತ್ತು ತಾಂತ್ರಿಕಜ್ಞಾನಗಳ ಬೆಳವಣಿಗೆ ಮನುಕುಲದ ಆರ್ಥಿಕ ಜೀವನದ ಮೇಲೆ ಬೀರಿದ ಪ್ರಭಾವವನ್ನು ಜಗತ್ತು ಗುರುತಿಸಲು ಪ್ರಾರಂಭಿಸಿದೆ. "ಯುದ್ಧಗಳು ಪ್ರಾರಂಭವಾಗುವುದು ಮನುಷ್ಯರ ಮನಸ್ಸಿನಲ್ಲಿ". "ಶಾಂತಿ ಒಂದೇ. ಅದು ಅವಿಭಾಜ್ಯ"–ಇಂಥ ಮಾತುಗಳು ಮತ್ತೆ ಮತ್ತೆ ಕೇಳಿ ಬರುತ್ತಿವೆ. ಮಾನವಕೋಟಿಯಲ್ಲಿ ಅರ್ಧ ಸುಖವಾಗಿ ಉಂಡು ಉಟ್ಟು ವಿಲಾಸ ವಸ್ತುಗಳನ್ನು ನೂರುಮಡಿ ಹೆಚ್ಚಿಸಿಕೊಳ್ಳುತ್ತಿದ್ದು, ಇನ್ನರ್ಧ ಹೊಟ್ಟೆಗಿಲ್ಲದೆ, ಬಟ್ಟೆ ಇಲ್ಲದೆ, ಇರಲು ಸ್ಥಳವಿಲ್ಲದೆ ನರಳುತ್ತಿದ್ದರೆ ಯುದ್ಧ ತಪ್ಪದು; ಸಮೃದ್ಧಿಯನ್ನು ಹಂಚಿಕೊಂಡಾಗಲೇ ಶಾಂತಿ ಸಾಧ್ಯ ಎನ್ನುವುದು ಹಲವು ಮುಂದುವರಿದ ರಾಷ್ಟ್ರಗಳಿಗೆ ಅರ್ಥವಾಗಿದೆ. ಇದರಿಂದಲೇ ವಿಶ್ವಸಂಸ್ಥೆಯ ಮೂಲಕವೂ ನೇರವಾಗಿಯೂ ಸಂಯುಕ್ತ ಸಂಸ್ಥಾನ, ರಷ್ಯ, ಕೆನಡ ಮುಂತಾದ ರಾಷ್ಟ್ರಗಳೂ ಮುಂದುವರಿಯುತ್ತಿರುವ ರಾಷ್ಟ್ರಗಳಿಗೆ ಹಲವು ರೀತಿಗಳಲ್ಲಿ ಸಹಾಯ ಮಾಡುತ್ತಿವೆ. ಭಾರತ ಹಲವು ದೇಶಗಳಿಂದ ಹಣ ಸಹಾಯವನ್ನೂ, ಯಂತ್ರ ಸಾಮಗ್ರಿಗಳನ್ನೂ ತಾಂತ್ರಿಕಜ್ಞಾನವನ್ನೂ ಪಡೆಯುತ್ತಿದೆ. ಅಮೆರಿಕ, ರಷ್ಯ, ಜೆಕೊಸ್ಲೊವಾಕಿಯ, ಪಶ್ಚಿಮ ಜರ್ಮನಿ – ಹೀಗೆ ಹಲವು ದೇಶಗಳ ಸಹಾಯ

ಸಿಖ್ಖರು ಭಾರತದಲ್ಲಿದ್ದಾರೆ. ಲೈಬೀರಿಯ. ಸಂಯುಕ್ತ ಅರಬ್ ಗಣರಾಜ್ಯ. ನೇಪಾಳ. ಭೂತಾನ್. ಇಥಿಯೋಪಿಯ—ಇಂಥ ಹಲವು ದೇಶಗಳಿಗೆ ಭಾರತ ನೆರವಾಗಿದೆ.

ಇಂದು ಜಗತ್ತಿನ ಬಹು ಮುಖ್ಯ ಸಮಸ್ಯೆಗಳಲ್ಲಿ ಒಂದು ಮಿತಿಮೀರುತ್ತಿರುವ ಜನಸಂಖ್ಯೆಯಿದು. 1850ರಲ್ಲಿ ಪ್ರಪಂಚದ ಜನಸಂಖ್ಯೆ ಸುಮಾರು ಒಂದು ನೂರು ಕೋಟಿ : 1930ರಲ್ಲಿ ಎರಡು ನೂರು ಕೋಟಿ : 1960ರಲ್ಲಿ ಮೂರು ನೂರು ಕೋಟಿ. 1980ರ ಹೊತ್ತಿಗೆ ಇದು ನಾಲ್ಕು ನೂರು ಕೋಟಿಯಾಗುತ್ತದೆ ಎಂದು ಅಂದಾಜು. ಜನಸಂಖ್ಯೆ ಏರುವ ರೀತಿಯ ಅಂದಾಜನ್ನು ಶೇಕಡಾವಾರು ಕೆಳಗೆ ತೋರಿಸಿದೆ :

| ಅವಧಿ | ಪ್ರಪಂಚದಲ್ಲಿ | ಏಷ್ಯ | ಆಫ್ರಿಕ | ಯೂರೋಪ್ | ಲ್ಯಾಟಿನ್ ಅಮೆರಿಕ | ಉತ್ತರ ಅಮೆರಿಕ | ಓಷಿಯಾನಿಯ | ಸೋವಿಯೆತ್ ರಷ್ಯ |
|---|---|---|---|---|---|---|---|---|
| 1920–40 | 22 | 42 | 32 | 16 | 41 | 24 | 28 | 24 |
| 1940–60 | 29 | 61 | 39 | 11 | 55 | 35 | 39 | 11 |
| 1960–80 | 39 | 81 | 57 | 13 | 65 | 29 | 40 | 25 |
| 1980–2000 | 37 | 66 | 62 | 10 | 59 | 33 | 38 | 26 |

1970ರ ಜನವರಿ ಒಂದರಂದು ಭಾರತದ ಜನಸಂಖ್ಯೆ 54.27.40.385. ಒಂದು ತಿಂಗಳಿನಲ್ಲಿ ಜನಸಂಖ್ಯೆ 10.99.683ರಷ್ಟು ಏರಿತ್ತು. 2000ದ ಹೊತ್ತಿಗೆ 89 ಕೋಟಿಯಾಗುವ ನಿರೀಕ್ಷೆ ಇದೆ. ಜಗತ್ತಿನ ಆಹಾರದ ಉತ್ಪಾದನೆ ಬೆಳೆದಿದೆ. ಒಂದೆ ಕ್ಷಾಮ. ಅಂಟುರೋಗಗಳು. ಯುದ್ಧಗಳು. ಆಗಾಗ ಜನಸಂಖ್ಯೆಯನ್ನು ಇಳಿಸುತ್ತಿದ್ದುವು. ವೈದ್ಯವಿಜ್ಞಾನದ ಪ್ರಗತಿ ಸಾವಿನ ಪ್ರಮಾಣವನ್ನು ಕಡಮೆಮಾಡಿದೆ. ಆದರೆ ಜಗತ್ತಿನ ಜನಸಂಖ್ಯೆ ಏರುತ್ತಿರುವ ಪ್ರಮಾಣದಲ್ಲಿ ಆಹಾರದ ಉತ್ಪಾದನೆ ಏರುವಂತಿಲ್ಲ. ಪ್ರತಿ ಮಗುವಿಗೆ ಹೊಟ್ಟೆಯ ಪ್ರಶ್ನೆಯಲ್ಲದೆ ವಸತಿ. ಶಿಕ್ಷಣ. ಉದ್ಯೋಗಗಳ ಪ್ರಶ್ನೆಯುಂಟು. ಜನಸಂಖ್ಯೆಯ ಮೇಲೆ ನಿಯಂತ್ರಣ ಸಾಧಿತವಾಗದಿದ್ದರೆ ಯಾವ ವೈಜ್ಞಾನಿಕ ಪ್ರಗತಿಯೂ ಯಾವ ಆರ್ಥಿಕ ವ್ಯವಸ್ಥೆಯೂ ಮನುಷ್ಯಕುಲವನ್ನು ಉದ್ಧರಿಸಲಾರದು.

ಸಾಮಾನ್ಯವಾಗಿ ಎಲ್ಲ ರಾಷ್ಟ್ರಗಳ ಆರ್ಥಿಕ ವ್ಯವಸ್ಥೆಯೂ ಜಟಿಲವಾಗುತ್ತಿದೆ. ಹಲವು ದೇಶಗಳಲ್ಲಿ ಕೈಗಾರಿಕೆಗಳ ಬೆಳವಣಿಗೆ ಸಮಸ್ಯೆಗಳ ಬೆಳವಣಿಗೆಯೂ ಆಗಿದೆ. ಮಾಲಿಕವರ್ಗ ಕಾರ್ಮಿಕವರ್ಗದ ಘರ್ಷಣೆಗಳು ಹೆಚ್ಚುತ್ತಿವೆ. ಮುಷ್ಕರಗಳು ಸಮಾಜ ಜೀವನವನ್ನು ನಿಶ್ಚೇತನಗೊಳಿಸುತ್ತಿವೆ. ಅತಿ ಶ್ರೀಮಂತ ದೇಶಗಳಲ್ಲಿಯೂ ಬಡತನ ತಪ್ಪಿಲ್ಲ. ಹಿಂಸಾ ಪ್ರವೃತ್ತಿ ಹೆಚ್ಚುತ್ತಿದೆ. ಈ ಎಲ್ಲ ಸಮಸ್ಯೆಗಳಿಗೆ ಪರಿಹಾರವಾಗಿ ಗಾಂಧಿಜಿ ಸರ್ವೋದಯದ ಮಾರ್ಗವನ್ನು ತೋರಿದರು. ಎಲ್ಲರೂ ಎಲ್ಲರ ಏಳಿಗೆಗಾಗಿ ದುಡಿಯುವುದು ಇದರ ಮುಖ್ಯ ಸೂತ್ರ. ತಮ್ಮ ಅಗತ್ಯಗಳಿಗೆ ಅನುಗುಣವಾಗಿ ಗಳಿಸಿಟ್ಟುಕೊಳ್ಳಬೇಕು. ಅದಕ್ಕೆ ಮೀರಿದ್ದನ್ನು ಸಮಾಜ ತನ್ನನ್ನು ನಂಬಿ ಇಟ್ಟ ಧರ್ಮನಿಧಿ. ಸಮಾಜದ ಒಳ್ಳೆಯದಕ್ಕಾಗಿ ಬಳಸಬೇಕಾದ ಆಸ್ತಿ ಎಂದು ಭಾವಿಸಬೇಕು: ಅತಿಕೈಗಾರಿಕಾಕರಣ ಸಮಾಜಕ್ಕಾಗಲಿ ವ್ಯಕ್ತಿಗಾಗಲಿ ಒಳ್ಳೆಯದಲ್ಲ. ಜೀವನದಲ್ಲಿ ಸರಳತೆ ಇರಬೇಕು ಎಂದು ಬೋಧಿಸಿದರು ಅವರು. ಗಾಂಧಿಜಿಯ ವಾದ ಇದು : ಒಂದು ಯಂತ್ರ ಸಾವಿರ ಮನುಷ್ಯರ ಕೆಲಸ ಮಾಡುತ್ತದೆ. ನಿರುದ್ಯೋಗವನ್ನು ಬೆಳೆಸುತ್ತದೆ. ಒಬ್ಬ ಮನುಷ್ಯ ಮಾಡಬಲ್ಲ ಕೆಲಸಕ್ಕೆ ಮಿತಿ ಉಂಟು : ಒಂದು ಯಂತ್ರ ಮಾಡಬಲ್ಲ ಕೆಲಸಕ್ಕೆ ಮಿತಿ ಇಲ್ಲ. ಒಬ್ಬ ಮನುಷ್ಯ ಹಲವರು ಸಮಮಾನವರನ್ನು ಸ್ವಾರ್ಥಕ್ಕೆ ದುಡಿಸಲು ಮತ್ತು ಅವರನ್ನು ನಿಸ್ಸಹಾಯಕರನ್ನಾಗಿ ಮಾಡಲು ಯಂತ್ರ ಸಾಧನವಾಗಿದೆ. ಎಲ್ಲ ಯಂತ್ರಗಳನ್ನೂ ವಿರೋಧಿಸಬೇಕಾಗಿಲ್ಲ. ನೂಲುವ ಚರಕವೂ ಯಂತ್ರವೇ ತಾನೆ? ಹೊಲಿಗೆ ಯಂತ್ರದಂಥ ಸಾಧನಗಳು ಅಗತ್ಯ. ಆದರೆ ಯಂತ್ರದ ಹುಚ್ಚು ಆತ್ಮಹತ್ಯೆಯ ದಾರಿ.

ಗಾಂಧೀಜಿಯ ಆರ್ಥಿಕತತ್ವಗಳನ್ನು ಯಾವ ದೇಶವೂ ಸಂಪೂರ್ಣವಾಗಿ ಆಚರಣೆಗೆ ತಂದಿಲ್ಲ.: ಇದರಿಂದ ಇದನ್ನು ಇತರ ಆರ್ಥಿಕ ವ್ಯವಸ್ಥೆಗಳೊಂದಿಗೆ ಹೋಲಿಸುವುದು ಕಷ್ಟ.

## ೮

**ಸಾಮಾಜಿಕ ವ್ಯವಸ್ಥೆ**

ಸಮಾಜ ಎಂದರೇನು ? ಈ ಪ್ರಶ್ನೆಗೆ ತಜ್ಞರು ಬೇರೆ ಬೇರೆ ಉತ್ತರಗಳನ್ನು ಕೊಟ್ಟಿದ್ದಾರೆ. ಅಲ್ಲದೆ ಮನುಷ್ಯನ ಚರಿತ್ರೆಯಲ್ಲಿ. ಸಾಮಾಜಿಕ ವ್ಯವಸ್ಥೆಯ ವೈವಿಧ್ಯ ಅನಂತ. ಯಾವ ಸಾಮಾಜಿಕ ಗುಂಪಿನಲ್ಲಿಯೇ ಆಗಲಿ ಸಾಮಾಜಿಕ ವ್ಯವಸ್ಥೆ. ರಾಜಕೀಯ ವ್ಯವಸ್ಥೆ. ಆರ್ಥಿಕ ವ್ಯವಸ್ಥೆಗಳು ಎಷ್ಟರಮಟ್ಟಿಗೆ ಒಂದರಮೇಲೊಂದು ಪ್ರಭಾವ ಬೀರುತ್ತವೆ ಎಂದರೆ. ಒಂದು ಜೀವನ ರೀತಿಯನ್ನು ನೇಯುವ ಮೂರು ಎಳೆಗಳು ಇವು ಎನ್ನಬಹುದು. ಒಂದು ನಿದರ್ಶನ ಸಂಯುಕ್ತ ಸಂಸ್ಥಾನದಲ್ಲಿ ಅಂತರ್ಯುದ್ಧಕ್ಕೆ ದಾರಿಮಾಡಿದ ಗುಲಾಮರ ಪ್ರಶ್ನೆ. ದಕ್ಷಿಣದ ಸಂಸ್ಥಾನಗಳು ಗುಲಾಮಗಿರಿ ಇರಬೇಕೆಂದು ಬಯಸಿದುವು. ಉತ್ತರದ ಸಂಸ್ಥಾನಗಳು ಅದನ್ನು ವಿರೋಧಿಸಿದುವು. ಎಂದರೆ ದಕ್ಷಿಣ

ದವರೆಲ್ಲ ಮಾನವೀಯತೆ ಇಲ್ಲದವ್ರವರೆ ? ದಕ್ಷಿಣ ಸಂಸ್ಥಾನಗಳಲ್ಲಿ ವಿಶಾಲವಾದ ಹತ್ತಿಯ ತೋಟಗಳು ಹೆಚ್ಚು. ಈ ತೋಟಗಳಿಗೆ ಅಗ್ಗದ ಕಾರ್ಮಿಕರು ಬೇಕಿದ್ದರು. ಉತ್ತರದಲ್ಲಿ ಇಂಥ ತೋಟಗಳು ಹೆಚ್ಚಾಗಿರಲಿಲ್ಲ. ಈ ಆರ್ಥಿಕ ಅಗತ್ಯ ದಕ್ಷಿಣದವರ ಮತ್ತು ಉತ್ತರದವರ ಅಭಿಪ್ರಾಯಗಳನ್ನು ಬಹುಮಟ್ಟಿಗೆ ರೂಪಿಸಿತು. ಅಲ್ಲದೆ ಒಂದೇ ಬಗೆಯ ಸಾಮಾಜಿಕ ವ್ಯವಸ್ಥೆಯನ್ನು ಎರಡು ಗುಂಪುಗಳು ಆರಿಸಿಕೊಂಡವು ಎಂದು ಮೊರ ನೋಟಕ್ಕೆ ತೋರಬಹುದಾದರೂ ಅವನ್ನು ಎಚ್ಚರದಿಂದ ಹೋಲಿಸಿ ನೋಡಿದಾಗ ಹಲವು ಸೂಕ್ಷ್ಮ, ಆದರೆ ಮುಖ್ಯ ವ್ಯತ್ಯಾಸಗಳು ಕಂಡುಬರುತ್ತವೆ. ಉದಾಹರಣೆಗೆ, ಪ್ರಾಚೀನ ಗ್ರೀಸಿನಲ್ಲಿಯೂ ಪ್ರಾಚೀನ ರೋಮಿನಲ್ಲಿಯೂ ಗುಲಾಮಗಿರಿ ಆಚರಣೆಯಲ್ಲಿದ್ದಿತು. ಆದರೆ ಎರಡು ದೇಶಗಳಲ್ಲಿಯೂ ಗುಲಾಮರ ಸ್ಥಿತಿ ಒಂದೇ ರೀತಿಯಾಗಿತ್ತು ಎಂದು ಭಾವಿಸಿದರೆ ತಪ್ಪಾಗುತ್ತದೆ. ಪ್ರಾಚೀನ ಗ್ರೀಸಿನಲ್ಲಿ ಗುಲಾಮರು ನಿಷ್ಠೆಯ ಸೇವೆ ಸಲ್ಲಿಸಿದರೆ ಕೆಲವು ವರ್ಷಗಳನಂತರ ಸ್ವಾತಂತ್ರ್ಯ ಪಡೆಯಬಹುದಾಗಿತ್ತು. ಗುಲಾಮರಾಗಿದ್ದಾಗಲೂ ಅವರು ಸ್ವತಂತ್ರ ಸಾಮಾಜಿಕ ಜೀವನ ನಡೆಸಬಹುದಾಗಿತ್ತು. ಅನೇಕ ಮಂದಿ ಗುಲಾಮರು ಒಡೆಯರೊಂದಿಗೆ ವಾಸಿಸದೆ ಪ್ರತ್ಯೇಕವಾಗಿ ವಾಸಿಸುತ್ತಿದ್ದರು. ಸ್ವತಂತ್ರ ಪ್ರಜೆಗಳಿದ್ದ ಹಲವು ಸಾಮಾಜಿಕ ಸಂಘಗಳಲ್ಲಿ ಗುಲಾಮರು ಸದಸ್ಯರಾಗಬಹುದಾಗಿತ್ತು. ರೋಮಿನಲ್ಲಿ ಕ್ರಿ. ಶ. ಒಂದನೆಯ ಶತಮಾನದವರೆಗೆ ಗುಲಾಮರನ್ನು ನಡೆಸಿಕೊಳ್ಳುತ್ತಿದ್ದ ರೀತಿ ಅತಿ ಕ್ರೂರ. ಈ ಕಾಲದಲ್ಲಿಯೆ ಸ್ಪಾರ್ಟಕಸನ ದಂಗೆ ನಡೆದದ್ದು. ಈ ಎರಡು ಸಮಾಜಗಳೊಂದಿಗೆ ಹದಿನೆಂಟು ಹತ್ತೊಂಬತ್ತನೆಯ ಶತಮಾನಗಳ ಸಂಯುಕ್ತ ಸಂಸ್ಥಾನದ ಸಮಾಜವನ್ನು ಹೋಲಿಸಿದರೆ, ಸಂಯುಕ್ತ ಸಂಸ್ಥಾನದಲ್ಲಿನ ಗುಲಾಮರಿಗೆ ಸಂಬಂಧಿಸಿದ ಹಲವು ವಿಶಿಷ್ಟ ಅಂಶಗಳನ್ನು ಕಾಣಬಹುದು.

ಅನೇಕ ಸಂಸಾರಗಳು ಒಂದೆಡೆ ಸೇರಿ ಜೀವನ ಮಾಡಬೇಕಾದಾಗ, ರಾಜಕೀಯ ವ್ಯವಸ್ಥೆಯಲ್ಲದೆ ಸಾಮಾಜಿಕ ವ್ಯವಸ್ಥೆಯೂ ಅಗತ್ಯವಾಗುತ್ತದೆ. ಯಾರು ಯಾರಿಗೆ ಮರ್ಯಾದೆ ಕೊಡಬೇಕು, ಒಬ್ಬರೊಡನೊಬ್ಬರು ಹೇಗೆ ನಡೆದುಕೊಳ್ಳಬೇಕು, ಯಾವ ಸಂದರ್ಭದಲ್ಲಿ ಎಂಥ ಉಡುಪು ಧರಿಸಬೇಕು. ಯಾರು ಯಾರನ್ನು ಮದುವೆಯಾಗಬಹುದು–ಯಾರನ್ನು ಮದುವೆಯಾಗಬಾರದು, ಯಾವುದು ಶಿಷ್ಟಾಚಾರ–ಯಾವುದು ಶಿಷ್ಟಾಚಾರವಲ್ಲ ಇಂಥ ಸಾವಿರ ವಿಷಯಗಳು ನಿತ್ಯಜೀವನದಲ್ಲಿ ಹಾಸು ಹೊಕ್ಕಾಗಿರುವ ಅಂಶಗಳು ; ಇವು ಸ್ಪಷ್ಟವಾಗದೆ ಸಾಮಾಜಿಕ ಜೀವನ ಸುಗಮವಾಗಿ ನಡೆಯಲಾರದು. ಇವುಗಳಲ್ಲಿ ಹಲವು ನಿಯಮಗಳಿಂದ, ಹಲವು ಧಾರ್ಮಿಕತತ್ವಗಳಿಂದ, ಹಲವು ನಂಬಿಕೆಗಳಿಂದ. ಹಲವು ಸಂಪ್ರದಾಯದಿಂದ ನಿರ್ಧರಿಸಲ್ಪಡುತ್ತವೆ.

ಚರಿತ್ರಪೂರ್ವ ಪಂಗಡಗಳಲ್ಲಿ ಕುಟುಂಬ ಮುಖ್ಯ; ರಕ್ತಸಂಬಂಧಕ್ಕೆ ತುಂಬ ಮಹತ್ವ. ಸಾಮಾನ್ಯವಾಗಿ ರಕ್ತಸಂಬಂಧ ಗುಂಪಿನವರನ್ನೆಲ್ಲ ಒಟ್ಟುಗೂಡಿಸುತ್ತಿತ್ತು. ಆದರೆ ತಾವೆಲ್ಲ ನೆಂಟರು ಎಂಬ ಭಾವನೆ ಮಾತ್ರ ಇವರಲ್ಲಿತ್ತು, ಒಂದೇ ಪ್ರದೇಶದಲ್ಲಿದ್ದೇವೆ ಎನ್ನುವ ಭಾವನೆಯ ಬಾಂಧವ್ಯ ಇವರಲ್ಲಿ ಇರಲೇ ಇಲ್ಲ ಎಂದರೆ ತಪ್ಪಾದೀತು. ಯುಗಾಂಡದಲ್ಲಿ ಬಹು ಹಿಂದೆಯೇ ಹಲವು ಪಂಗಡಗಳು ಒಬ್ಬ ರಾಜನ ಅಧೀನವಾಗಿದ್ದುವು; ಪಂಗಡದ ಸಂಬಂಧ ಸಡಿಲವಾಗಿದ್ದರೂ ಒಬ್ಬ ರಾಜನಲ್ಲಿ ನಿಷ್ಠೆ ಇದ್ದಿತು.

ಚರಿತ್ರಪೂರ್ವ ಪಂಗಡಗಳ ಸಾಮಾಜಿಕ ವ್ಯವಸ್ಥೆಗಳಲ್ಲಿ ವೈವಿಧ್ಯ ಹೆಚ್ಚು. ಇವೆಲ್ಲವನ್ನೂ ಒಳಗೊಳ್ಳುವಂತೆ ವರ್ಗೀಕರಣ ಮಾಡುವುದು ಕಷ್ಟ. ದಕ್ಷಿಣ ಆಫ್ರಿಕದ ಬುಷ್‌ಮೆನ್. ಕ್ಯಾಲಿಫೋರ್ನಿಯದ ವಾಷೊ—ಇಂಥ ಪಂಗಡಗಳಲ್ಲಿ ಎಲ್ಲರನ್ನೂ ಆಳುವ ಅಧಿಕಾರ ಪಡೆದವರಿರಲಿಲ್ಲ. ಆದರೆ ಬೇಟೆಯಂಥ ವಿಶಿಷ್ಟ ಸನ್ನಿವೇಶಗಳಲ್ಲಿ ಆ ಮಟ್ಟಿಗೆ ನಿಪುಣ ಎನಿಸಿಕೊಂಡವನು ನಾಯಕನಾಗುತ್ತಿದ್ದ. ಆಸ್ಟ್ರೇಲಿಯದ ಕೆಲವು ಪಂಗಡಗಳಲ್ಲಿ ವಯಸ್ಸಿನಿಂದ ಹಿರಿಯರಾದವರು ನಾಯಕರು ; ಅತ್ಯುತ್ತಮ ಆಹಾರವೂ ಇವರಿಗೆ ಮೀಸಲು : ಹೀಗೆ ಇಲ್ಲಿ ವಯಸ್ಸು ಗೌರವ ಮತ್ತು ಸ್ಥಾನಗಳನ್ನು ತರುತ್ತಿತ್ತು. ಕ್ಯಾಲಿಫೋರ್ನಿಯದ ಇನ್ನು ಕೆಲವು ಅಲೆಮಾರಿ ಪಂಗಡಗಳಲ್ಲಿ, ಒಬ್ಬ ವ್ಯಕ್ತಿಯ ಪ್ರತಿಷ್ಠೆ ಅವನು ಪಡೆದಿದ್ದ ದನಕರುಗಳ ಸಂಖ್ಯೆಯನ್ನು ಅವಲಂಬಿಸಿರುತ್ತಿತ್ತು. ರುಆಂಡದಲ್ಲಿ ದನಕರುಗಳನ್ನು ಸಾಕುವವರು ರೈತವರ್ಗಕ್ಕಿಂತ ಮೇಲಿನವರು. ಇವರೇ ಈ ಸಮಾಜದಲ್ಲಿ ಒಂದು ಬಗೆಯ ಶ್ರೀಮಂತವರ್ಗ.

ಸಾಮಾನ್ಯವಾಗಿ ಒಂದು ಚರಿತ್ರಪೂರ್ವ ಪಂಗಡ ಒಬ್ಬ ಪೂರ್ವಿಕನಿಂದ ಬೆಳೆದು ಬಂದ ಕುಟುಂಬಗಳ ಗುಂಪು ಎನ್ನಬಹುದು ; ಇನ್ನೊಂದು ರೀತಿಯಲ್ಲಿ ಈ ಮಾತನ್ನು ಹೇಳುವುದಾದರೆ. ತಾವೆಲ್ಲ ಒಬ್ಬ ಪೂರ್ವ ಪುರುಷನಿಂದ ಬಂದವರು ಎಂಬ ಭಾವನೆ ಈ ಕುಟುಂಬಗಳನ್ನು ಒಂದು ಕುಲವನ್ನಾಗಿ ಮಾಡಿದ್ದಿತು. (ಎಷ್ಟೋ ಬಾರಿ ಈ ಭಾವನೆ ಬರಿಯ ಭ್ರಾಂತಿಯೂ ಆಗಿರುತ್ತಿತ್ತು. ಆದರೆ ಈ ಭಾವನೆಯಂತೂ ಅವರಿಗಿತ್ತು.) ಎಷ್ಟೋ ಪಂಗಡಗಳಲ್ಲಿ. ಒಂದೇ ಪಂಗಡದ ಇಬ್ಬರು ಮದುವೆಯಾಗಬಾರದು. ಗಂಡು ಹೆಣ್ಣು ಬೇರೆ ಬೇರೆ ಪಂಗಡಗಳಿಗೆ ಸೇರಿರಬೇಕು ಎಂಬ ನಿಯಮ ಬರಲು ಈ ಭಾವನೆ ಕಾರಣ.

ಆದರೆ ಈ ರೀತಿ ಒಂದು ಕುಲದ ಭಾವನೆಯೇ ಇಲ್ಲದ ಪಂಗಡಗಳೂ ಉಂಟು. ದಕ್ಷಿಣ ಅಮೆರಿಕ ಮತ್ತು ಉತ್ತರ ಅಮೆರಿಕಗಳ ಸೈಬೀರಿಯದಲ್ಲಿ ವಾಸವಾಗಿದ್ದ ಹಲವು ಪಂಗಡಗಳಲ್ಲಿ ಈ ಕುಲದ ಭಾವನೆ ಇಲ್ಲ. ಕುಟುಂಬವೇ ಇಲ್ಲಿ ಮುಖ್ಯ.

ಕೆಲವೆಡೆಗಳಲ್ಲಿ ಕುಟುಂಬ–ಕುಲ ಎರಡರ ಭಾವನೆಗಳೂ ಒಟ್ಟಿಗೆ ಪರಸ್ಪರ ಮೇಲೆ ಪ್ರಭಾವ ಬೀರುತ್ತವೆ. ಆಸ್ಟ್ರೇಲಿಯದ ಕೆಲವು ಪಂಗಡಗಳಲ್ಲಿ ಇದನ್ನು ಕಾಣುತ್ತೇವೆ. ಇಲ್ಲಿ ಪರಸ್ಪರ ಇನ್ನೊಬ್ಬ ಪರಸ್ಪರ ಬಗೆಗೆ ಹೇಗೆ ನಡೆದುಕೊಳ್ಳಬೇಕು ಎಂಬುದು ಕುಲ [illegible] ನಿರ್ಧಾರವಾಗುತ್ತದೆ. ತನ್ನ ಕುಲದಲ್ಲಿ ಹಲವರು ಸ್ತ್ರೀಯರು ಒಬ್ಬ ಗಂಡಸಿಗೆ ತಾಯಿಯಂತೆಯೇ : ಇವರೆಲ್ಲರ ಮಕ್ಕಳು ಸಹೋದರರೂ [illegible] ಸಹೋದರ ಸಮಾನರಾದವರೂ ಅವನಿಗೆ ದಾಯಾದ ಸಮಾನ : ಅವರೆಲ್ಲರಿಗೂ ತನ್ನ ಮಕ್ಕಳಿಗೆ ಕೊಡುವ ಗೌರವವನ್ನೇ ಸಲ್ಲಿಸಬೇಕು.

ಮುಖ್ಯವಾಗಿ ಈ ಗುಂಪುಗಳ ಸಾಮಾಜಿಕ ವ್ಯವಸ್ಥೆಯನ್ನು ಎರಡು ವರ್ಗಗಳಾಗಿ ವಿಂಗಡಿಸಬಹುದು: ಮಾತೃಪ್ರಧಾನ, ಪಿತೃಪ್ರಧಾನ.

ಚರಿತ್ರಪೂರ್ವ ಪಂಗಡಗಳಲ್ಲಿ ಪ್ರತಿಯೊಂದು ಕೆಲಸವನ್ನೂ ದೈಹಿಕ ಶ್ರಮಪಟ್ಟು ಮನುಷ್ಯರೇ ಮಾಡಬೇಕಾಗಿತ್ತು: ಅತಿ ಸರಳವಾದ ಯಂತ್ರಗಳಲ್ಲದೆ ಬೇರೆ ನೆರವು ಅವನಿಗೆ ಇರಲಿಲ್ಲ. ಆ ದಿನಗಳಲ್ಲಿ ಅಪಾಯವೂ ಹೆಚ್ಚು: ಮಕ್ಕಳ ಸಾವಿನ ಸಂಖ್ಯೆಯೂ ಹೆಚ್ಚು: ಬೇಟೆ, ಕಾದಾಟಗಳು, ಕ್ಷಾಮ, ಕಾಯಿಲೆ, ಕದನಗಳು ಬೇಕಾದಷ್ಟು ಬಲಿ ತೆಗೆದುಕೊಳ್ಳುತ್ತಿದ್ದುವು. ಆದ್ದರಿಂದ ಪ್ರತಿ ಪಂಗಡಕ್ಕೆ ಆದಷ್ಟು ಸಂಖ್ಯೆಯಲ್ಲಿ ಮಕ್ಕಳು ಬೇಕಾಗಿದ್ದು. ಮಕ್ಕಳನ್ನು ಹೆರುವ ಹೆಂಗಸಿಗೆ ಈ ಪಂಗಡಗಳಲ್ಲಿ ಮಹತ್ವ ಇದ್ದಿತು. ಪ್ರಾಚೀನ ಕಾಲದ ಹಲವು ಪಂಗಡಗಳಲ್ಲಿ ಹೆಂಡತಿ ತನ್ನ ಗಂಡನ ಜೊತೆಯಲ್ಲಿ ವಾಸಮಾಡುತ್ತಿರಲಿಲ್ಲ. ತನ್ನ ಅಣ್ಣತಮ್ಮಂದಿರ ಜತೆಗೆ ವಾಸಿಸುತ್ತಿದ್ದಳು. ಗಂಡ ತನ್ನ ತಾಯಿಯೊಡನೆ ವಾಸಿಸುತ್ತಿದ್ದ. ಉತ್ತರ ಪಾಪುಅದಲ್ಲಿ ಒಬ್ಬ ಗಂಡಸು ಹೆಂಗಸು ಗಂಡಹೆಂಡತಿಯಾದರೂ ಒಟ್ಟಿಗೆ ಕಾಣಿಸಿಕೊಳ್ಳುವುದು ಯೋಗ್ಯವಲ್ಲ ಎಂಬ ಭಾವನೆ ಇತ್ತು. ಅಲ್ಲದೆ ಹಲವು ಪ್ರಾಚೀನ ಪಂಗಡಗಳಿಗೆ ಮಗುವಿನ ಜನನದ ರೀತಿ ತಿಳಿದಿರಲಿಲ್ಲ: ಮಗುವಿಗೆ ಒಬ್ಬ ತಂದೆ ಇರಬೇಕು ಎನ್ನುವುದೂ ತಿಳಿದಿರಲಿಲ್ಲ. ಯಾವುದಾದರೂ ಬಗೆಯ ಮದುವೆಯ ವ್ಯವಸ್ಥೆ ಇಲ್ಲದ ಕಾಲದಲ್ಲಿ ಒಂದು ಮಗುವಿನ ತಂದೆತಾಯಿ ಒಟ್ಟಿಗೆ ವಾಸಿಸುತ್ತಿರಲಿಲ್ಲ. ಎಷ್ಟೋ ಬಾರಿ ಮಗುವಿನ ತಂದೆ ಯಾರು ಎಂದು ತಿಳಿದಿರುತ್ತಿರಲಿಲ್ಲ: ತಾಯಿ ಯಾರು ಎಂದು ಮಾತ್ರ ತಿಳಿದಿರುತ್ತಿತ್ತು. ಕುಟುಂಬದ ಆಸ್ತಿ ಒಬ್ಬರಿಂದೊಬ್ಬರಿಗೆ ಹೋಗುವಾಗ, ಮಗುವಿನ ತಾಯಿ ಯಾರು ಎಂದು ಗೊತ್ತಿರುತ್ತಿದ್ದುದರಿಂದ, ತಾಯಿಯ ಮೂಲಕ ಆಸ್ತಿ ಪೀಳಿಗೆಯಿಂದ ಪೀಳಿಗೆಗೆ ಹೋಗುವುದು ಸುಲಭವಾಯಿತು. ಆದರೆ ಹೆಂಗಸಿನ ಸ್ಥಾನಮಾನಗಳೇನೂ ಹಿರಿದಾಗಿರಲಿಲ್ಲ. ಪ್ರಾಚೀನ ಗುಂಪುಗಳಲ್ಲಿ ದೈಹಿಕ ಶ್ರಮದ ಕೆಲಸಗಳಲ್ಲಿ ಬಹು ಭಾಗ ಆಕೆಯದು. ಮಕ್ಕಳನ್ನು ಸಾಕುವುದು, ಗುಡಿಸಲನ್ನು ನೋಡಿಕೊಳ್ಳುವುದು, ಗೆಡ್ಡೆ–ಹಣ್ಣುಗಳನ್ನು ಆರಿಸಿ ತರುವುದು, ಅಡುಗೆ ಮಾಡುವುದು, ಪಾದರಕ್ಷೆಗಳು ಮತ್ತು ಬಟ್ಟೆಗಳನ್ನು ಮಾಡುವುದು–ಇವೆಲ್ಲ ಅವಳ ಕೆಲಸ. ಬೇಟೆಯಲ್ಲಿಯೂ ಗಂಡಸಿಗೆ ಅವಳು ಸಹಾಯ ಮಾಡಬೇಕಾಗಿತ್ತು. ಪಂಗಡ ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೊರಟಾಗ ಗಂಡಸು ಶಸ್ತ್ರಾಸ್ತ್ರಗಳನ್ನು ಹೊತ್ತು ಸದಾ ಯುದ್ಧಕ್ಕೆ ಸಿದ್ಧವಾಗಿ ಹೊರಡುತ್ತಿದ್ದ ; ಹೆಂಗಸು ಎಳೆಯ ಮಕ್ಕಳನ್ನೂ ಸಾಮಾನುಗಳನ್ನೂ ಹೊತ್ತು ನಡೆಯುತ್ತಿದ್ದಳು. (ಆಸ್ಟ್ರೇಲಿಯದ ಮರೆ ನದೀತೀರದಲ್ಲಿ ಆದಿವಾಸಿಗಳು ಬಿಳಿಯರ ಹಿಂದೆ ಸಾಮಾನುಗಳನ್ನು ಹೊತ್ತು ತಂದ ಕತ್ತೆಗಳನ್ನು ಕಂಡಾಗ, ಅವು ಬಿಳಿಯರ ಹೆಂಡತಿಯರಿರಬೇಕೆಂದು ಭಾವಿಸಿದರಂತೆ!) ನಾಗರಿಕತೆಯ ಪ್ರಾರಂಭದ ದಿನಗಳಲ್ಲಿ ಪ್ರಗತಿ ಬಹುಮಟ್ಟಿಗೆ ಹೆಂಗಸಿನಿಂದ ಸಾಧ್ಯವಾಯಿತು. ನೆಯ್ಗೆ, ಹೊಲಿಗೆ, ಕುಡಿಕೆಮಡಿಕೆಗಳನ್ನು ಮಾಡುವುದು, ಬುಟ್ಟಿಗಳನ್ನು ಹೆಣೆಯುವುದು ಇವೆಲ್ಲ ಇದ್ದುದು ಆಕೆಯ ಕೈಯಲ್ಲಿ.

ಪಿತೃಪ್ರಧಾನ ವ್ಯವಸ್ಥೆ ಕೃಷಿಯ ಫಲ ಎಂದು ಕಾಣುತ್ತದೆ. ಅಲೆಮಾರಿ ಪಂಗಡಗಳು ಒಂದೆಡೆ ನಿಲ್ಲುವುದನ್ನು ಕೃಷಿ ಸಾಧ್ಯಮಾಡಿತು ; ದನಕರುಗಳನ್ನೂ ಇತರ ಪ್ರಾಣಿಗಳನ್ನೂ ಸಾಕುವುದನ್ನು ಸುಲಭಗೊಳಿಸಿತು. ಬೇಟೆಯ ಮೇಲೆ ಅವಲಂಬನ ಕಡಮೆಯಾಗಿ ಗಂಡಸು ವ್ಯವಸಾಯಕ್ಕೆ ಗಮನಕೊಡಲು ಪ್ರಾರಂಭಿಸಿದ. ಆಸ್ತಿಯನ್ನು ಗಳಿಸಲು ಪ್ರಾರಂಭಿಸಿದ. ಇದರಿಂದ ಗಂಡಸಿನ ಪ್ರಾಮುಖ್ಯ ಹೆಚ್ಚಿತು. ತಾನು ಗಳಿಸಿದ ಆಸ್ತಿ ತನ್ನ ಮಕ್ಕಳಿಗೆ ಉಳಿಯಬೇಕೆಂಬ ಹಂಬಲ ಗಂಡಸಿಗಾಯಿತು. ಹೆಂಗಸಿನ ಸ್ಥಿತಿ ಒಟ್ಟಿನಲ್ಲಿ ಕರುಣಾಜನಕವೇ ಆಗಿದೆ. ಎಷ್ಟೋ ಕಡೆ ಹೆಣ್ಣನ್ನು ದನದಂತೆ ಕೊಳ್ಳಬಹುದು. ಗಂಡ ಸತ್ತರೆ ಅವನೊಂದಿಗೆ ಹೆಂಡತಿ ಸಾಯುವುದು ಹಿರಿಯ ಆದರ್ಶವಾಯಿತು ಫಿಜಿ, ನ್ಯೂಗಿನಿ, ಭಾರತ ಇಂಥ ದೇಶಗಳಲ್ಲಿ. (ಹೆಂಡತಿ ಸತ್ತರೆ ಅವಳೊಂದಿಗೆ ಗಂಡ ಸಾಯುವುದು ಎಲ್ಲಿಯೂ ಹಿರಿಯ ಆದರ್ಶ ಆದುದು ಕಂಡು ಬರುವುದಿಲ್ಲ!) ಒಬ್ಬ ಗಂಡಸು ತನ್ನ ಆರ್ಥಿಕ ಸ್ಥಿತಿಗನುಗುಣವಾಗಿ ಎಷ್ಟು ಮಂದಿ ಹೆಂಗಸರನ್ನಾದರೂ ಮದುವೆಯಾಗುವುದು ಅಥವ ಅಂತಃಪುರದಲ್ಲಿರಿಸಿಕೊಳ್ಳುವುದು ಸಾಮಾನ್ಯವಾಯಿತು. (ಈಜಿಪ್ಟಿನ ಮೂರನೆಯ ಅಮೆನ್‌ಹುಟೆಪ್ ಮದುವೆಯಾದಾಗ ಹೆಂಡತಿಯೊಡನೆ ಮುನ್ನೂರು ಜನ ಹುಡುಗಿಯರು ಬಳುವಳಿಯಾಗಿ ಬಂದರು.) ಇತರ ಪ್ರಾಚೀನ ದೇಶಗಳೊಂದಿಗೆ ಹೋಲಿಸಿದರೆ, ಪ್ರಾಚೀನ ಈಜಿಪ್ಟ್ ಪ್ರಾಚೀನ ಭಾರತಗಳಲ್ಲಿ ಸ್ತ್ರೀಯ ಸ್ಥಾನ ಸ್ವಲ್ಪ ಉತ್ತಮವಾಗಿದ್ದಂತೆ ಕಂಡುಬರುತ್ತದೆ. ಗ್ರೀಸಿನಲ್ಲಿ ಹೆಂಗಸರು ಸಾರ್ವಜನಿಕ ಜೀವನದಲ್ಲಿ ಭಾಗವಹಿಸುವಂತಿರಲಿಲ್ಲ. ಪ್ರಾಚೀನ ಚೀನದಲ್ಲಿ ಹುಡುಗಿ ಎಂದರೆ ಹೊರೆ: ಕಷ್ಟದ ಕಾಲದಲ್ಲಿ ಎಳೆಯ ಹೆಣ್ಣುಮಗುವನ್ನು ಜನರೇ ಇಲ್ಲದ ಪ್ರದೇಶದಲ್ಲಿ, ಬಿಟ್ಟುಬಿಡುವುದೂ ಅಪರೂಪವಾಗಿರಲಿಲ್ಲ.

ಚರಿತ್ರಪೂರ್ವ ಪಂಗಡಗಳಲ್ಲಿ ಕುಟುಂಬಗಳ ಪರಸ್ಪರ ಸಂಬಂಧವನ್ನು ನಿರ್ಧರಿಸುವ ಹಲವು ಕಟ್ಟುನಿಟ್ಟಾದ ನಿಯಮಗಳಿದ್ದುವು. ವಿವಾಹದಲ್ಲಿ ಪ್ರತಿಬಂಧವನ್ನು ನಿರ್ಧರಿಸುವ ನಿಯಮಗಳಿದ್ದುವು. ಯಾರು ಯಾರನ್ನು ಮದುವೆಯಾಗಬಹುದು, ಯಾರು ಯಾರನ್ನು ಮದುವೆಯಾಗಬಾರದು ಎನ್ನುವುದಕ್ಕೆ ಹಲವು ನಿಬಂಧನೆಗಳು. ಉದಾಹರಣೆಗೆ ಆಸ್ಟ್ರೇಲಿಯದ ಆದಿವಾಸಿಗಳಲ್ಲಿ ಕೆಲವು ಪಂಗಡಗಳಲ್ಲಿ ವಿಚಿತ್ರ ನಿಯಮವುಂಟು. ಪ್ರತಿ ಪಂಗಡ ಎರಡು ಗುಂಪಾಗಿರುತ್ತದೆ. ಒಬ್ಬ ಮನುಷ್ಯ ತನ್ನ ತಾಯಿಯ ಸೋದರನ ಹೆಣ್ಣುಮಕ್ಕಳ ಹೆಣ್ಣುಮಕ್ಕಳಲ್ಲಿ ಒಬ್ಬಳಾಗಿದ್ದು ಇನ್ನೊಂದು ಗುಂಪಿಗೆ ಸೇರಿದವಳನ್ನು ಮಾತ್ರ ಮದುವೆಯಾಗಬಹುದು.

ಆರ್ಥಿಕ ವ್ಯವಸ್ಥೆ ಬದಲಾಗಿ, ಒಂದೆಡೆ ವಾಸಿಸುವ ಜನರ ಸಂಖ್ಯೆ ಹೆಚ್ಚಾದಂತೆ, ಕುಲ–ಪಂಗಡಗಳು ಕ್ರಮೇಣ ದೊಡ್ಡವಾಗಿ ರಾಜ್ಯಗಳು ಉದಿಸಿದವು. ಸಾಮಾಜಿಕ ಜೀವನದ ಅಡಿಪಾಯವಾಗಿ ಕುಟುಂಬ ಉಳಿಯಿತು.

ರಾಜ್ಯಗಳ ಸ್ಥಾಪನೆಯಾದನಂತರ ಸಾಮಾಜಿಕ ವ್ಯವಸ್ಥೆ ಆಯಾ ರಾಜ್ಯದ ರಾಜಕೀಯ ಮತ್ತು ಆರ್ಥಿಕ ವ್ಯವಸ್ಥೆಗಳಿಂದ ಪ್ರಭಾವಿತವಾಯಿತು. ಮಾರ್ಪಾಡಾಯಿತು. ಇದಕ್ಕೆ ಎರಡು ಉದಾಹರಣೆಗಳನ್ನು ನೋಡೋಣ.

ಮಧ್ಯಯುಗದಲ್ಲಿ ಯೂರೋಪಿನಲ್ಲಿ ಬೇರುಬಿಟ್ಟ ಊಳಿಗಮಾನ್ಯ ಪದ್ಧತಿಯನ್ನು ಆಗಲೆ ಪರಿಚಯಮಾಡಿಕೊಂಡಿದ್ದೇವೆ. ಈ ವ್ಯವಸ್ಥೆಗೆ ಆಧಾರವಾಗಿದ್ದುದು ರೈತವರ್ಗ—'ಸರ್ಫ್'ಗಳ ವರ್ಗ. ರಾಜನಿಂದ ಭೂಮಿ ಪಡೆದ ಶ್ರೀಮಂತ ತನ್ನ ಆಶ್ರಿತರಿಗೆ ಹಂಚಿಕೊಟ್ಟ. ಹೀಗೆ ಕ್ರಮೇಣ ಭೂಮಿ ರೈತನಿಗೆ ಬಂದಿತು. ಇದಕ್ಕಾಗಿ ಅವನು ತನ್ನ ಒಡೆಯನಿಗೆ ಸೇವೆಸಲ್ಲಿಸಬೇಕು, ಅವನಿಗೆ ಭೂಮಿಯ ಮೇಲೆ ಹಕ್ಕು ಇರುವುದು ಈ ಸೇವೆಯಿಂದ ಮಾತ್ರ ಎನ್ನುವುದು ಈ ಪದ್ಧತಿಯ ಮೂಲ ತತ್ತ್ವ. ಇದರಿಂದ ಒಡೆಯ–ರೈತರ ಸಾಮಾಜಿಕ ಜೀವನದ ಹಲವು ಮುಖ್ಯ ಅಂಶಗಳು ನಿರ್ಧರಿಸಲ್ಪಟ್ಟವು. ರೈತ ತನ್ನ ಮಗನಿಗೆ ಹೆಚ್ಚು ವಿದ್ಯಾಭ್ಯಾಸವನ್ನು ಕೊಡಿಸುವುದು ಕಠಿಣವಾಯಿತು: ರೈತನ ಮಗ ವಿದ್ಯಾಭ್ಯಾಸಕ್ಕೆ ಹೋದರೆ ಯಜಮಾನನಿಗೆ ಒಬ್ಬ ಆಳು ಕಡಮೆಯಾದಂತೆ; ಇದರಿಂದ ಮಗನನ್ನು ಹೆಚ್ಚಿನ ವಿದ್ಯಾಭ್ಯಾಸಕ್ಕೆ ಕಳುಹಿಸುವಾಗ ರೈತ ಯಜಮಾನನಿಗೆ ಜುಲ್ಮಾನೆ ಎಂದು ಹಣ ಸಲ್ಲಿಸಬೇಕಾಗಿತ್ತು. ಆ ಶ್ರೀಮಂತನ ಕ್ಷೇತ್ರಕ್ಕೆ ಸೇರದ ವ್ಯಕ್ತಿಯನ್ನು ರೈತನ ಮಗನಾಗಲಿ ಮಗಳಾಗಲಿ ಮದುವೆಯಾದರೆ. ಶ್ರೀಮಂತನಿಗೆ ಅವರ ಮಕ್ಕಳ ಸೇವೆ ತಪ್ಪಿ ಹೋಗುವುದರಿಂದ ಇಂಥ ಮದುವೆಗೆ ಶ್ರೀಮಂತನ ಒಪ್ಪಿಗೆಯು ಅಗತ್ಯವಿತ್ತು. ರೈತ ಸತ್ತು ಅವನ ವಾರಸುದಾರಳು ಮದುವೆಯಾಗದಿದ್ದ ಹುಡುಗಿಯಾದರೆ, ಅವಳು ಅದೇ ಶ್ರೀಮಂತನ ಕ್ಷೇತ್ರದ ಒಬ್ಬಾತನನ್ನು ಮದುವೆ ಮಾಡಿಕೊಳ್ಳದಿದ್ದರೆ ಭೂಮಿಯನ್ನು ಕಳೆದುಕೊಳ್ಳುತ್ತಿದ್ದಳು. ಹೀಗೆ ಆರ್ಥಿಕ ವ್ಯವಸ್ಥೆ ಮದುವೆಯಂಥ ಜೀವನದ ವೈಯಕ್ತಿಕ ಮತ್ತು ಮುಖ್ಯ ಘಟನೆಯ ಮೇಲೆ ಪ್ರಭಾವ ಬೀರಿತ್ತು. ಇದು ಬಡವರ್ಗಗಳಲ್ಲಿ ಮಾತ್ರವಲ್ಲ. ಶ್ರೀಮಂತ ವರ್ಗದಲ್ಲಿ ಮಕ್ಕಳಿಲ್ಲದೆ ಶ್ರೀಮಂತ ತೀರಿಕೊಂಡರೆ ಅವನ ಹೆಂಡತಿ ಮತ್ತೆ ಮದುವೆಯಾಗುವುದು ಅನಿವಾರ್ಯವಾಗುತ್ತಿತ್ತು. ಏಕೆಂದರೆ ಊಳಿಗಮಾನ್ಯ ಪದ್ಧತಿಯಲ್ಲಿ ಶ್ರೀಮಂತ ಆಶ್ರಿತರಿಗೆ ಹೋರಾಟದಲ್ಲಿ ರಕ್ಷಕ. ನ್ಯಾಯ ದೊರಕಿಸಿಕೊಡುವ ಪ್ರಭು. ಸಾಮಾಜಿಕ ಜೀವನದ ಕೇಂದ್ರ. ಚಳಿಗಾಲದಲ್ಲಿ. ಹಬ್ಬದ ದಿನಗಳಲ್ಲಿ, ಕಾಯಿಲೆ ಅಥವಾ ಕಷ್ಟದ ದಿನಗಳಲ್ಲಿ ಅವರ ಜೀವನದ ಬೇಸರವನ್ನು ಕಳೆಯುತ್ತಿದ್ದವನು. ಸಹಾಯ ಮಾಡುತ್ತಿದ್ದವನು ಶ್ರೀಮಂತ. ಆದ್ದರಿಂದ ಶ್ರೀಮಂತನ ಸೌಧ ಒಡೆಯನಿಲ್ಲದೆ ಇರುವಂತಿರಲಿಲ್ಲ.

ಇನ್ನೊಂದು ಉದಾಹರಣೆ ಚೀನ ದೇಶದಲ್ಲಿ 1912ರ ಕ್ರಾಂತಿಯ ಅನಂತರದ ಸಮಾಜ. ರಾಜಪ್ರಭುತ್ವದ ವಿರುದ್ಧ ಜನರು ಎಲ್ಲ ಕಡೆ ದಂಗೆ ಎದ್ದರು. ಗಣರಾಜ್ಯ ಪ್ರಭುತ್ವ ಅಸ್ತಿತ್ವಕ್ಕೆ ಬಂದಿತು. ಸೂನ್ ಯಾತ್ ಸೆನ್ ಅಧ್ಯಕ್ಷನಾದ. ಹೊನಲೂಲುವಿನಲ್ಲಿ ಮೊದಲು ವಿದ್ಯಾಭ್ಯಾಸ ಪಡೆದು. ಅನಂತರ ಚೀನದಲ್ಲಿ ಬ್ರಿಟಿಷ್ ಮೆಡಿಕಲ್ ಕಾಲೇಜಿನಲ್ಲಿ ಶಿಕ್ಷಣ ಮುಗಿಸಿದ ಈತ ಕ್ರಾಂತಿಯ ನಾಯಕನಾಗಿದ್ದ. ರಾಜಕೀಯ ಮತ್ತು ಆರ್ಥಿಕ ವ್ಯವಸ್ಥೆ ಬದಲಾದಂತೆ ಸಾಮಾಜಿಕ ವ್ಯವಸ್ಥೆ ಬದಲಾಯಿತು. ಹಿಂದಿನ ಕುಟುಂಬ ಪದ್ಧತಿ ಸಡಿಲಗೊಂಡಿತು. ಹಿಂದೆ ಮದುವೆಗಳನ್ನು ತಂದೆತಾಯಿ ನಿಷ್ಕರ್ಷಿಸುತ್ತಿದ್ದರು: ಕ್ರಾಂತಿಯ ಅನಂತರ ಇದು ಬಹುಮಟ್ಟಿಗೆ ಮಾಯವಾಯಿತು. ವಿವಾಹವಿಚ್ಛೇದವೆಂಬುದನ್ನೆ ಕೇಳರಿಯದ ಚೀನದಲ್ಲಿ ವಿವಾಹವಿಚ್ಛೇದನಕ್ಕೆ ಅವಕಾಶ ದೊರೆಯಿತು. ವಿದ್ಯಾಸಂಸ್ಥೆಗಳಲ್ಲಿ ಹುಡುಗರು ಹುಡುಗಿಯರ ಸಹಶಿಕ್ಷಣ ಪ್ರಾರಂಭವಾಯಿತು. ಹೆಂಗಸರಿಗೆಂದೇ ನ್ಯಾಯಶಾಸ್ತ್ರ ಕಾಲೇಜುಗಳನ್ನು ತೆರೆದರು. ಸ್ತ್ರೀಯರು ಕಮ್ಯೂನಿಸ್ಟ್ ಪಕ್ಷದ ಸಮಿತಿಗಳ ಸದಸ್ಯೆಯರಾದರು. ಹಿಂದಿನ ಕಾಲದ ಚೀನದಲ್ಲಿ ತಂದೆ ತಾಯಿ–ಮಕ್ಕಳು. ಹಿರಿಯರು–ಕಿರಿಯರು. ಒಡೆಯ–ಸೇವಕ ಇವರ ನಡುವಿನ ಸಂಬಂಧಗಳ ಬಗ್ಗೆ ಸ್ಪಷ್ಟವಾದ ನಿಖರವಾದ ನಿಯಮಗಳಿದ್ದುವು. ಮಾತನಾಡುವ ರೀತಿ. ನಿಲ್ಲುವ ರೀತಿ. ಪತ್ರ ಬರೆಯುವ ರೀತಿ–ಪ್ರತಿಯೊಂದೂ ವಿಶೇಷ ಸೌಜನ್ಯದ ಚೌಕಟ್ಟಿನಲ್ಲಿ ನಡೆಯಬೇಕಾಗಿತ್ತು. ಆ ನಿಯಮಗಳೆಲ್ಲ ಮುರಿದುಬಿದ್ದುವು.



ಸೂನ್ ಯಾತ್ ಸೆನ್

ಮಂಡಲಿಯನ್ನು ನೇಮಿಸಿ, ಆವರೆಗಿನ ಕಾನೂನಗಳನ್ನು ಕ್ರೋಢೀಕರಿಸಿ, ಪರಿಷ್ಕರಿಸಿ, ಸ್ಪಷ್ಟಗೊಳಿಸುವ ಕಾರ್ಯವನ್ನು ಅವರಿಗೆ ಒಪ್ಪಿಸಿದನು. ಈ ಮಂಡಲಿ ಪ್ರಕಟಿಸಿದ ಗ್ರಂಥಗಳನ್ನು ಸಾಮಾನ್ಯವಾಗಿ ಜಸ್ಟಿನಿಯನ ನ್ಯಾಯಸೂತ್ರಸಂಗ್ರಹ ಎಂದು ಕರೆಯುತ್ತಾರೆ. ಇದರಲ್ಲಿ ಹಲವು ದೋಷಗಳಿವೆ. ಇದು ಕೆಲವು ಭಾಗಗಳಲ್ಲಿ ಅತಿ ಆಚಾರಶೀಲ ಮತ್ತು ಸಂಪ್ರದಾಯಬದ್ಧ. ಆದರೂ ವಿಶಾಲ ಬೈಜಾಂಟಿಯಂ ಸಾಮ್ರಾಜ್ಯದಲ್ಲಿ ಹಲವು ತಲೆಮಾರುಗಳಿಗೆ ವ್ಯವಸ್ಥೆ, ಶಾಂತಿಗಳನ್ನು ನೀಡಲು ಇದು ಶಕ್ತವಾಯಿತು.

ಇಲ್ಲಿಂದಾಚೆ ಪಾಶ್ಚಾತ್ಯ ಜಗತ್ತಿನಲ್ಲಿ ನ್ಯಾಯಸೂತ್ರಗಳ ಕ್ರೋಢೀಕರಣಕ್ಕೆ ಹಲವು ಪ್ರಯತ್ನಗಳು ನಡೆದುವು. ಲೊಂಬಾರ್ಡಿನ ಅರಸ ರಥರಿ 643ರಲ್ಲಿ ಒಂದು ಕಾನೂನು ಸಂಗ್ರಹವನ್ನು ಪ್ರಕಟಿಸಿದ. ಬಡವರನ್ನು ಶ್ರೀಮಂತರ ದಬ್ಬಾಳಿಕೆಯಿಂದ ತಪ್ಪಿಸಲು ಇದು ಪ್ರಯತ್ನಿಸಿತು; ಆ ಕಾಲದಲ್ಲಿಯ ಮಂತ್ರಮಾಟಗಳನ್ನು ಪರಿಹಾಸ್ಯಮಾಡಿರುವುದಕ್ಕೆ (ಇಂಗ್ಲೆಂಡಿನಲ್ಲಿ 17ನೆಯ ಶತಮಾನದವರೆಗೆ ಮಂತ್ರಗಾರ ಮಾಟಗಾತಿಯರಿಗೆ ನ್ಯಾಯಾಲಯದಲ್ಲಿ ಶಿಕ್ಷೆಯಾಗುತ್ತಿತ್ತು.) ಮತ್ತು ಎಲ್ಲರಿಗೆ ಧರ್ಮ ಸ್ವಾತಂತ್ರ್ಯ ನೀಡಿರುವುದಕ್ಕೆ ಇದು ಗಮನಾರ್ಹ. 1807ರಲ್ಲಿ ಫ್ರಾನ್ಸಿನಲ್ಲಿ ಸಿದ್ಧವಾದ 'ಕೋಡ್ ನೆಪೋಲಿಯನ್' ಕ್ರೋಢೀಕರಣದ ಇನ್ನೊಂದು ಪ್ರಯತ್ನ. ಸೋವಿಯೆತ್ ರಷ್ಯ 1922ರಲ್ಲಿ ಸಿದ್ಧಗೊಳಿಸಿದ ವ್ಯವಹಾರ ವಿಧಿಗಳ ಸಂಗ್ರಹ ಕುತೂಹಲಕಾರಿಯಾಗಿದೆ: ಇದು ತುಂಬಾ ಹ್ರಸ್ವವಾದುದು (ಕೋಡ್ ನೆಪೋಲಿಯನ್‌ನಲ್ಲಿ 2281 ವಿಧಿಗಳಿದ್ದರೆ ಇದರಲ್ಲಿ 435 ಮಾತ್ರ): ಇದರ ಶೀರ್ಷಿಕೆಗಳು—ವ್ಯಕ್ತಿಗಳು, ಆಸ್ತಿ, ಬಾಧ್ಯತೆ, ವಂಶಪಾರಂಪರ್ಯ ಆಸ್ತಿ ಇಂಥವು—ಕಮ್ಯೂನಿಸ್ಟ್ ಪ್ರಭುತ್ವಕ್ಕೆ ಹಿಂದಿನ ಕಾಲದ ಶಾಸನ ಕಡತಗಳ ಶೀರ್ಷಿಕೆಗಳಂತೆಯೇ ಇವೆ. ಆದರೆ ವಿಧಿಗಳು ಹೊಸ ಪ್ರಭುತ್ವದ ನೀತಿಗೆ ಅನುಗುಣವಾಗಿವೆ. 1917ರಲ್ಲಿ 'ಕೋಡೆಕ್ಸ್ ಜ್ಯೂರಿಸ್ ಕ್ಯಾನನಿಸಿ' ಎಂಬ ಕಾನೂನುಸಂಗ್ರಹ ಎಲ್ಲ ಕ್ಯಾಥಲಿಕ್ ದೇಶಗಳಲ್ಲಿ ಜಾರಿಗೆ ಬಂದಿತು. ಭಾರತದಲ್ಲಿನ ದಂಡ ವಿಧಿ, ವ್ಯವಹಾರ ವಿಧಿಗಳು ಬಹುಮಟ್ಟಿಗೆ ಇಂಗ್ಲೆಂಡಿನ ವಿಧಿಗಳನ್ನು ಅನುಸರಿಸುತ್ತವೆ.

ಇತರ ದೇಶಗಳಲ್ಲಿಯೂ ಕಾನೂನುಗಳ ಕ್ರೋಢೀಕರಣ ಕಾರ್ಯ ನಡೆದಿದೆ. ಭಾರತದ ಮನುಧರ್ಮಶಾಸ್ತ್ರ (ಕ್ರಿ. ಶ 400 ಇರಬಹುದು) ನೀತಿಶಾಸ್ತ್ರವೂ ಹೌದು, ಕಾನೂನುಗಳ ಸಂಗ್ರಹವೂ ಹೌದು. ಇದನ್ನು ಬರೆದಿಟ್ಟ ಕಾಲಕ್ಕಿಂತ ಬಹು ಹಿಂದಿನ ಕಾಲದ ಸಾಮಗ್ರಿ ಇದರಲ್ಲಿದೆ. ಇದರ ನಿಯಮಗಳು ಭಾರತದಲ್ಲಿ ಮಾತ್ರವಲ್ಲದೆ ಸಯಾಂ ಬರ್ಮ ದೇಶಗಳಿಗೂ ವ್ಯಾಪಿಸಿದ್ದುವು. ಕೌಟಿಲ್ಯನ ಗ್ರಂಥದ ಹೆಸರು 'ಅರ್ಥಶಾಸ್ತ್ರ' ವಾದರೂ ಇದರಲ್ಲಿ ನ್ಯಾಯಸೂತ್ರಗಳ ಕ್ರೋಢೀಕರಣ ಅಡಗಿದೆ. ಅಂತರ ರಾಜ್ಯ ಸಂಬಂಧವನ್ನೂ ಕೌಟಿಲ್ಯ ವಿಮರ್ಶಿಸುತ್ತಾನೆ. ಸುಮೇರಿಯದ ಹಮುರಾಬಿಯ ಕಾಲಕ್ಕೆ ಹಿಂದೆಯೇ ಚೀನದಲ್ಲಿ ನ್ಯಾಯಸೂತ್ರಗಳ ಸಂಗ್ರಹಕಾರ್ಯ ನಡೆದಿದ್ದಂತೆ ತೋರುತ್ತದೆ. 'ಚೋ ಶಾಸನ' ಎಂದು ಪ್ರಸಿದ್ಧವಾದ ಕಾನೂನು ಸಂಗ್ರಹ ಕ್ರಿ. ಪೂ. 1115 ರಿಂದ 1079ರ ವರೆಗಿದ್ದ ಪ್ರಸಿದ್ಧ ರಾಜಕಾರಣಿ ಚೋ-ಗೊಂಗ್ ಸಿದ್ಧಗೊಳಿಸಿದ್ದು ಎಂದು ಹೇಳುತ್ತಾರೆ. ಕ್ರಿ. ಪೂ. 535ರಲ್ಲಿ ಚೆಂಗ್ ಪ್ರಾಂತದಲ್ಲಿ ಮತ್ತು ಕ್ರಿ. ಪೂ. 512ರಲ್ಲಿ ಚಿನ್ ಪ್ರಾಂತದಲ್ಲಿ ಕ್ರೋಢೀಕೃತ ನ್ಯಾಯಸೂತ್ರಗಳು ಸಿದ್ಧವಾದುವು. ಇದು ದೈವವಿರೋಧಕಾರ್ಯ ಎಂದು ಜನಸಾಮಾನ್ಯರು ರೊಚ್ಚಿಗೆದ್ದರಂತೆ. ಈ ವಿಧಿಗಳು ಶ್ರೀಮಂತರ ವರ್ಗಕ್ಕೆ ಅನುಕೂಲವಾಗಿದ್ದುವು. ಆದರೆ ನಿರ್ದಿಷ್ಟವಾಗಿ ನಮಗೆ ಹೆಚ್ಚು ವಿಷಯ ತಿಳಿಯದು. ಈವರೆಗೆ ಸಿಕ್ಕಿರುವುದರಲ್ಲಿ ಅತ್ಯಂತ ವ್ಯಾಪಕವಾದದ್ದು ಟ ಅಂಗ್ ಮನೆತನದ ಕಾಲಕ್ಕೆ ಸೇರಿದ್ದು (630). ಹದಿನೇಳನೆಯ ಶತಮಾನದ 'ಮಂಚು ನ್ಯಾಯಸೂತ್ರ ಸಂಗ್ರಹ'ಕ್ಕೆ ಇದೇ ತಳಹದಿ: ಇತ್ತೀಚಿನ ವರೆಗೆ ಇದು ಚೀನದಲ್ಲಿ ಬಳಕೆಯಲ್ಲಿತ್ತು.

ಕಾನೂನುಗಳನ್ನು ಶತಮಾನಗಳಿಂದ ಹಲವು ಪ್ರಭುತ್ವಗಳು ಮಾಡಿವೆ. ನ್ಯಾಯ ಪದ್ಧತಿಯಲ್ಲಿ ವ್ಯಕ್ತಿಗೆ ಪ್ರಾಮುಖ್ಯ ನೀಡಿರುವುದು ಈಚೆಗೆ ಎಂಬುದು ಗಮನಾರ್ಹ. ಹಿಂದಿನ ಎಲ್ಲ ನ್ಯಾಯಸೂತ್ರಗಳೂ ಸಮಾಜದ ದೃಷ್ಟಿಯಿಂದ ಸೃಷ್ಟಿಯಾದುವು. ಎಲ್ಲ ಮನುಷ್ಯರೂ ಸಮಾನ, ವ್ಯಕ್ತಿಸ್ವಾತಂತ್ರ್ಯ ಬಹು ಮುಖ್ಯವಾದದ್ದು—ಈ ತತ್ತ್ವಗಳು ನ್ಯಾಯಾಂಗದ ಮೇಲೆ ವ್ಯಾಪಕವಾಗಿ ಪ್ರಭಾವ ಬೀರಿರುವುದು ಈಚೆಗೆ. ಇಂಗ್ಲೆಂಡಿನ 'ಮ್ಯಾಗ್ನ ಕಾರ್ಟ' ಸಹ ಎಲ್ಲರಿಗೂ ಸಮಾನ ಹಕ್ಕುಗಳನ್ನು ಗಳಿಸಿಕೊಡಲಿಲ್ಲ. ಬಹುಮಟ್ಟಿಗೆ ಅದು ಶ್ರೀಮಂತರಿಗೆ ನೆರವಾಯಿತು. ಅಮೆರಿಕದ ಸ್ವಾತಂತ್ರ್ಯ ಯುದ್ಧ, ಫ್ರಾನ್ಸಿನ ಮಹಾಕ್ರಾಂತಿ ಇವು ಸರ್ವಸಮಾನತ್ವದ ತತ್ತ್ವ, ಪದವಿ, ಸಿರಿವಂತಿಕೆಗಳನ್ನು ಗಮನಿಸದೆ ಮನುಷ್ಯನಿಗೆ ಮನುಷ್ಯನೆಂದೇ ಬೆಲೆ ಕೊಡುವ ತತ್ತ್ವ ಇವನ್ನು ಬೆಳೆಸಿದುವು. ಇಂದು ಎಲ್ಲ ಸ್ವತಂತ್ರ ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿ ಪ್ರಜೆಗಳಿಗೆ ದೊರೆತಿರುವ 'ಹೇಬಿಯಸ್ ಕಾರ್ಪಸ್' ಹಕ್ಕು ವ್ಯಕ್ತಿಸ್ವಾತಂತ್ರ್ಯದ ಅಭಿವ್ಯಕ್ತಿ. ಪ್ರತಿ ಸ್ವತಂತ್ರ ದೇಶ ತನ್ನದೇ ಆದ ನ್ಯಾಯಾಂಗ ಪದ್ಧತಿಯನ್ನೂ ಕಾನೂನು ಸೂತ್ರಗಳನ್ನೂ ಪಡೆದಿರುತ್ತದೆ. ದೇಶದಿಂದ ದೇಶಕ್ಕೆ ಕೆಲವು ವ್ಯತ್ಯಾಸಗಳಿರಬಹುದು. (ಉದಾಹರಣೆಗೆ: ಬಹು ದೇಶಗಳಲ್ಲಿ, ಒಬ್ಬನ ಮೇಲೆ ನ್ಯಾಯಾಲಯದಲ್ಲಿ ದಂಡ ವಿಧಿಗೆ ಅನುಗುಣವಾಗಿ ಅಪರಾಧ ಹೊರಿಸಿದಾಗ, ಸರಕಾರ ಅವನ ಅಪರಾಧವನ್ನು ಯಾವ ಸಂದೇಹಕ್ಕೂ ಎಡೆಯಿಲ್ಲದಂತೆ ಸಿದ್ಧಮಾಡಿತೋರಿಸಬೇಕು: ಸಂದೇಹ ಬಂದರೆ ಅದರ ಲಾಭ ಅಪರಾಧಿಗೆ. ನೂರು ಮಂದಿ ಅಪರಾಧಿಗಳು ತಪ್ಪಿಸಿಕೊಂಡರೂ ಚಿಂತೆಯಿಲ್ಲ, ಒಬ್ಬ ನಿರಪರಾಧಿಗೆ ಶಿಕ್ಷೆಯಾಗಬಾರದು ಎಂಬುದು ಇದರ ಸೂತ್ರ. ಫ್ರಾನ್ಸಿನಲ್ಲಿ ಆರೋಪಕ್ಕೆ ಸಿಕ್ಕವನು ಸಂದೇಹಕ್ಕೆ ಎಡೆ ಇಲ್ಲದಂತೆ ತನ್ನ ನಿರ್ದೋಷಿತ್ವವನ್ನು ಸಿದ್ಧಮಾಡಿಕೊಡಬೇಕು. ಕೆಲವು ದೇಶಗಳಲ್ಲಿ ಜ್ಯೂರಿಪದ್ಧತಿ ಎಂಬುದೇ ಇಲ್ಲ.)

ಒಂದು ದೇಶದ ನ್ಯಾಯಸೂತ್ರಗಳೂ ನ್ಯಾಯಾಂಗ ಪದ್ಧತಿಯೂ ಸಮರ್ಪಕವಾಗಿರಬೇಕಾದರೆ ಈ ತತ್ತ್ವಗಳಿಗೆ ಅನುಗುಣವಾಗಿರಬೇಕು:

1. ದೇಶದಲ್ಲೆಲ್ಲ ಒಂದೇ ಬಗೆಯ ನ್ಯಾಯಾಂಗಪದ್ಧತಿ ಇರಬೇಕು. (ಹಿಂದಿನ ಬ್ರಿಟಿಷ್ ನ್ಯಾಯಾಲಯಕ್ಕೆ [illegible] ಮುನ್ನ ದೇಶದ ಒಂದು ಪ್ರಾಂತದಲ್ಲಿ ಮೂರು ನ್ಯಾಯಾಲಯಗಳಲ್ಲಿ, ಇನ್ನೊಂದು ಪ್ರಾಂತದಲ್ಲಿ ಎರಡು ನ್ಯಾಯಾಲಯಗಳಲ್ಲಿ, [illegible] ನ್ಯಾಯಾಂಗ ಪದ್ಧತಿಯಲ್ಲಿ ದೋಷವಿದೆ. ಸ್ವಾತಂತ್ರ್ಯಪೂರ್ವ ಭಾರತದಲ್ಲಿ, ಒಬ್ಬರು ಅಪರಾಧ ಮಾಡಿದರೆ [illegible]

ಮಾತ್ರ ಅವರನ್ನು ವಿಚಾರಣೆ ಮಾಡಬಹುದಾಗಿತ್ತು. ಎಂದರೆ ನ್ಯಾಯವ್ಯಾಪ್ತಿ ಪರಿಪೂರ್ಣವಾಗಿರಲಿಲ್ಲ.) 2. ದೇಶಕ್ಕೆಲ್ಲ ಅನ್ವಯವಾಗುವ ಒಂದೇ ನ್ಯಾಯಸೂತ್ರ ಸಂಗ್ರಹ ಇರಬೇಕು. (ಕ್ರಿ. ಪೂ. ಆರನೆಯ ಶತಮಾನದಲ್ಲಿ ಚೀನದಲ್ಲಿ ಶ್ರೀಮಂತರಿಗೆ ರಿಯಾಯಿತಿಗಳಿದ್ದುವು. ಉದಾಹರಣೆಗೆ ಕೊಲೆಗಾರ ಶ್ರೀಮಂತನಾದರೆ ಅವನು ಆತ್ಮಹತ್ಯೆ ಮಾಡಿಕೊಳ್ಳಬಹುದಾಗಿತ್ತು : ಸಾಮಾನ್ಯ ಮನುಷ್ಯನಾದರೆ ಸಾರ್ವಜನಿಕವಾಗಿ ಗಲ್ಲಿಗೇರಿಸಲಾಗುತ್ತಿತ್ತು. ಇದು ಅನ್ಯಾಯ.) 3. ನ್ಯಾಯಾಲಯದ ವ್ಯಾಪ್ತಿಗಿಂತ ಮೇಲಿನ ವ್ಯಕ್ತಿಗಳೂ ಸಂಸ್ಥೆಗಳೂ ಇರಬಾರದು (ಸ್ವಾತಂತ್ರ್ಯಪೂರ್ವ ಭಾರತದಲ್ಲಿ ದೇಶೀಯ ಸಂಸ್ಥಾನಗಳ ಅರಸರನ್ನು ನ್ಯಾಯಾಲಯದಲ್ಲಿ ವಿಚಾರಣೆಗೆ ಗುರಿ ಮಾಡುವಂತಿರಲಿಲ್ಲ. ಇವರಲ್ಲಿ ಹಲವರು ಪುಂಡರೂ ದುರಾಚಾರಿಗಳೂ ಆಗಿದ್ದರು. ಸರ್ವಾಧಿಕಾರಿ ರಾಷ್ಟ್ರಗಳಲ್ಲಿ ಸರಕಾರದ ವಿರುದ್ಧ ನ್ಯಾಯಾಲಯಕ್ಕೆ ಹೋಗುವಂತಿರಲಿಲ್ಲ. ಇದು ನ್ಯಾಯವಲ್ಲ.) 1. ನ್ಯಾಯಾಲಯದ ವ್ಯಾಪ್ತಿಗೆ ಎಲ್ಲರೂ ಒಳಪಡಬೇಕು (ಪ್ರಾಚೀನ ರೋಂನಲ್ಲಿ ಮತ್ತು ಹತ್ತೊಂಬತ್ತನೆಯ ಶತಮಾನದ ಅಂತರ್ಯುದ್ಧ ಮುಗಿಯುವವರೆಗೆ ಸಂಯುಕ್ತ ಸಂಸ್ಥಾನಗಳಲ್ಲಿ ಗುಲಾಮರು ಎಷ್ಟೇ ಅನ್ಯಾಯ ದಬ್ಬಾಳಿಕೆಗೆ ತುತ್ತಾದರೂ ನ್ಯಾಯಾಲಯದಲ್ಲಿ ನ್ಯಾಯ ಬೇಡುವಂತಿರಲಿಲ್ಲ. ಇದು ಅನ್ಯಾಯವೆ.)

ಈ ಎಲ್ಲ ಷರತ್ತುಗಳು ಪೂರ್ಣಗೊಂಡರೂ ರೂಢಿಯಲ್ಲಿ ಒಂದು ದೇಶದಲ್ಲಿ ಎಲ್ಲರಿಗೂ ಸಮನಾಗಿ ನ್ಯಾಯ ದೊರೆಯುತ್ತದೆ ಎಂದು ಹೇಳುವಂತಿಲ್ಲ. ಇಂದು ನ್ಯಾಯಾಲಯದಲ್ಲಿ ವ್ಯವಹಾರಗಳು ತೀರ್ಮಾನವಾಗಲು ಹಲವು ವರ್ಷಗಳು ಹಿಡಿಯುತ್ತವೆ : ಒಂದು ನ್ಯಾಯಾಲಯದಿಂದ ಮತ್ತೊಂದಕ್ಕೆ, ಅಲ್ಲಿಂದ ಇನ್ನೊಂದಕ್ಕೆ ಅಪೀಲು ಹೋದರೆ ಒಂದು ವ್ಯವಹಾರ ತೀರ್ಮಾನವಾಗಲು ಹತ್ತು ಇಪ್ಪತ್ತು ವರ್ಷಗಳೇ ಹಿಡಿಯಬಹುದು. ಇಷ್ಟು ಕಾಲ ಕಾಯಲು ಸಾಧ್ಯವಾಗದವರು ಅಥವಾ ವ್ಯವಹಾರ ನಡೆಸಲಾರದವರು ತಮ್ಮ ನ್ಯಾಯವಾದ ಹಕ್ಕುಗಳನ್ನು ಕಳೆದುಕೊಳ್ಳಬೇಕಾಗಬಹುದು. ಅಲ್ಲದೆ ಶ್ರೀಮಂತನಾದವನು ಹಣವನ್ನು ಖರ್ಚುಮಾಡಿ ಚತುರರಾದ ಅಡ್ವೊಕೇಟರನ್ನು ನೇಮಿಸಿಕೊಂಡು ತನ್ನ ಪಕ್ಷವನ್ನು ಬಹು ಸಮರ್ಥವಾಗಿ ಪ್ರತಿಪಾದಿಸಬಲ್ಲ. ಬಡವನಿಗೆ ಮಧ್ಯಮವರ್ಗದವನಿಗೆ ಇದು ಸಾಧ್ಯವಿಲ್ಲ. ನ್ಯಾಯಶಾಸ್ತ್ರ ನೈಪುಣ್ಯವನ್ನು ಹಣ ಕೊಳ್ಳಬಹುದಾದಾಗ ರೂಢಿಯಲ್ಲಿ ಎಲ್ಲರಿಗೂ ಒಂದೇ ಸಮನಾದ ನ್ಯಾಯ ದೊರೆಯುತ್ತದೆಯೆ ಎಂಬುದು ಯೋಚಿಸಬೇಕಾದ ಅಂಶ.

# ೬

## ಅಧಿಕಾರ ಪ್ರೇರಕ ಶಕ್ತಿ

ರಾಜ್ಯಗಳ ಉದಯವಾಗುವ ಮುನ್ನ ಮನುಷ್ಯ ಸಣ್ಣ ಸಣ್ಣ ಕುಲಗಳಲ್ಲಿಯೋ ಗುಂಪುಗಳಲ್ಲಿಯೋ ವಾಸಿಸುತ್ತಿದ್ದಾಗಲೂ ಗುಂಪು—ಗುಂಪಿನ ಸಂಬಂಧದ ಪ್ರಶ್ನೆ ಅವನ ಮುಂದೆ ಇದ್ದಿತು. ಪಂಗಡ—ಪಂಗಡಗಳ ಘರ್ಷಣೆ ತಪ್ಪಿಸಲು ಮತ್ತು ಘರ್ಷಣೆಯಾದರೆ ಮತ್ತೆ ಶಾಂತಿಯನ್ನು ಸ್ಥಾಪಿಸಲು ಕ್ರಮಗಳನ್ನೂ ಸಂಪ್ರದಾಯಗಳನ್ನೂ ಅವನು ರೂಪಿಸಿದ್ದ. ರಾಜ್ಯಗಳ ಸ್ಥಾಪನೆಯಾದನಂತರ ರಾಜ್ಯ–ರಾಜ್ಯಗಳ ಸಂಬಂಧ ಮುಖ್ಯವಾದ ಪ್ರಶ್ನೆಯಾಯಿತು. ಒಂದು ರಾಜ್ಯದವರು ಇನ್ನೊಂದು ರಾಜ್ಯದವರ ನೆರವನ್ನು ಬಯಸುವುದು ಅಥವಾ ಒಂದು ರಾಜ್ಯದವರು ಇನ್ನೊಂದು ರಾಜ್ಯದೊಡನೆ ಯುದ್ಧ ಮಾಡುವುದು ಅಪರೂಪದ ಸಂಗತಿಯಾಗಿರಲಿಲ್ಲ. ಮನುಷ್ಯನ ನಾಗರಿಕತೆ ಬೆಳೆದಂತೆ, ಅವನ ಅವಶ್ಯತೆಗಳು ಹೆಚ್ಚಿದಂತೆ, ಅಂತರರಾಜ್ಯ ಸಂಬಂಧ ಬಲಗೊಂಡಿತು. ದೋಣಿ ಮನುಷ್ಯನ ಒಂದು ಮಹಾವಿಜಯದ ಸಂಕೇತ. ಅಲ್ಲಿಯವರೆಗೆ ಆಳವಾಗಿದ್ದ ಕಿರುತೊರೆಯೂ ಅವನನ್ನು ಮೂದಲಿಸಬಹುದಾಗಿತ್ತು. ಈಗ ಅವನು ಸಾಗರವನ್ನೂ ಲಕ್ಷ್ಯಮಾಡಬೇಕಾಗಿರಲಿಲ್ಲ—ಏಕೆಂದರೆ ದೋಣಿ ಸೃಷ್ಟಿಸಿದವನಿಗೆ ಹಡಗನ್ನು ಸೃಷ್ಟಿಸಲು ಹೆಚ್ಚುಕಾಲ ಬೇಕಾಗಲಿಲ್ಲ. ಸುಮಾರು ಮೂರು ಸಾವಿರ ವರ್ಷಗಳ ಹಿಂದೆಯೇ ಅಂತರರಾಜ್ಯ ವ್ಯಾಪಾರ ರಾಜ್ಯಗಳಿಗೆ ಚೇತನದಾಯಕವಾಗಿತ್ತು. ಸುಮಾರು ಮೂರೂವರೆ ಸಾವಿರ ವರ್ಷಗಳ ಹಿಂದೆ ಗ್ರೀಕ ರಾಜ್ಯಗಳವರಿಗೂ ಟ್ರಾಯ್ ನಗರರಾಜ್ಯದವರಿಗೂ ಹತ್ತು ವರ್ಷಗಳ ಕಾಲ ಘೋರ ಯುದ್ಧ ನಡೆಯಿತು. ಆ ಕಥೆಯನ್ನು ಪಾಶ್ಚಾತ್ಯ ಜಗತ್ತಿನ ಆದಿಕವಿ ಹೋಮರ್ ತನ್ನ ಮಹಾಕಾವ್ಯ 'ಇಲಿಯಡ್' ನಲ್ಲಿ ಹೇಳಿದ್ದಾನೆ. ಈ ಸಮರ ಹೆಲೆನ್ ಎಂಬ ಸುಂದರಿಯ ಕಾರಣದಿಂದ ನಡೆಯಿತೆಂದು ಕವಿ ಹೇಳಿದ್ದಾನೆ. ಆದರೆ ಗ್ರೀಸಿನ ರಾಜ್ಯಗಳಿಗೂ ಟ್ರಾಯ್ ನಗರರಾಜ್ಯಕ್ಕೂ ಮತ್ತೆ ಮತ್ತೆ ಯುದ್ಧಗಳು ನಡೆದುವು. ಕಡೆಗೆ ಗ್ರೀಕರು ಟ್ರಾಯನ್ನು ಭಸ್ಮಮಾಡಿದ್ದು ಹಗೆತನಕ್ಕೆ ಬೇರೊಂದು ಕಾರಣವನ್ನು ಸೂಚಿಸುತ್ತದೆ ಎಂದು ಚರಿತ್ರಕಾರರು ಅಭಿಪ್ರಾಯ ಪಡುತ್ತಾರೆ. ಗ್ರೀಕ್ ರಾಜ್ಯಗಳು ಇತರ ರಾಜ್ಯಗಳೊಂದಿಗೆ ಜಲಸಂಪರ್ಕ ಪಡೆಯುವ ಆಯಕಟ್ಟಿನ ಸ್ಥಾನದಲ್ಲಿ ಟ್ರಾಯ್ ಇತ್ತು. ಇದರ ರಾಜರು ದುಬಾರಿಯ ಸುಂಕವನ್ನು ವಸೂಲುಮಾಡಿ ಗ್ರೀಕ್ ರಾಜ್ಯಗಳ ವ್ಯಾಪಾರಕ್ಕೆ ಧಕ್ಕೆ ತಂದದ್ದು ಯುದ್ಧಕ್ಕೆ ಕಾರಣ ಎನ್ನುತ್ತಾರೆ. ಪ್ರಾಚೀನ ಗ್ರೀಸ್, ಪ್ರಾಚೀನ ಭಾರತ ಇವುಗಳ ಚರಿತ್ರೆಯುದ್ದಕ್ಕೂ ಸಣ್ಣ ಸಣ್ಣ ರಾಜ್ಯಗಳ ಸ್ಪರ್ಧೆ, ಸ್ನೇಹ, ಹಗೆತನ, ಸಂಧಿ, ಯುದ್ಧಗಳು—ಇವನ್ನೆ ಕಾಣುತ್ತೇವೆ. ಅಲೆಗ್ಸಾಂಡರನು ಉತ್ತರ ಭಾರತದವರೆಗೆ ಬಂದು ಹೋದನಂತರ ಪೂರ್ವದೇಶಗಳಿಗೂ ಪಶ್ಚಿಮದೇಶಗಳಿಗೂ ಹೆಚ್ಚಿನ ಸಂಪರ್ಕ ಉಂಟಾಯಿತು. ಚಂದ್ರಗುಪ್ತ, ಬಿಂದುಸಾರ, ಇಮ್ಮಡಿ ಪುಲಿಕೇಶಿಯಂಥ ರಾಜರ ಆಸ್ಥಾನಗಳಲ್ಲಿ ಹಲವು ರಾಜ್ಯಗಳ ರಾಯಭಾರಿಗಳಿದ್ದರು. ಹದಿನೈದನೆಯ ಶತಮಾನದಿಂದ ಪಶ್ಚಿಮ ರಾಷ್ಟ್ರಗಳು ಪೂರ್ವರಾಷ್ಟ್ರಗಳೊಂದಿಗೆ—ಮುಖ್ಯವಾಗಿ ಭಾರತದೊಂದಿಗೆ—ನೇರವಾಗಿ ವಾಣಿಜ್ಯ ಮಾರ್ಗಗಳನ್ನು ಕಲ್ಪಿಸಿಕೊಳ್ಳಲು ಮತ್ತು ಅತ್ಯಂತ ಹತ್ತಿರವಾದ ಮಾರ್ಗವನ್ನು ಕಂಡುಹಿಡಿಯಲು ಪ್ರಯತ್ನಿಸಿದರು. ಸಂಪದ್ಭರಿತವಾದ ಈ ದೇಶಗಳೊಡನೆ ವಾಣಿಜ್ಯ ಸಂಬಂಧಗಳನ್ನು ಬೆಳೆಸಬಯಸಿದರು. ಇಲ್ಲಿನ ಚಿನ್ನ, ಬೆಳ್ಳಿ, ವಜ್ರಗಳು, ಮುತ್ತು, ರೇಷ್ಮೆಯ ವಸ್ತುಗಳು ಮತ್ತು ಸಾಂಬಾರ ಪದಾರ್ಥಗಳು

ವ್ಯಾಪಾರದ ಮೇಲೆ ಪತೋಟಿ ಪಡೆಯಲು ಹಲವು ರಾಜ್ಯಗಳು ಸ್ಪರ್ಧಿಸಿದುವು. ಯುದ್ಧ ಮಾಡಿದುವು. ಕ್ರಿಸ್ಟಫರ್ ಕೊಲಂಬಸ್ ಅಮೆರಿಕವನ್ನು ತಲುಪಿದುದೂ ಆಕಸ್ಮಿಕವಲ್ಲವೆ? ಭಾರತಕ್ಕೆ ಹತ್ತಿರದ ಮಾರ್ಗವನ್ನು ಕಂಡುಹಿಡಿಯುವೆನೆಂದು ಹೊರಟ ಕೊಲಂಬಸ್ ಅಮೆರಿಕ ತಲುಪಿದ. ತಾನು ಭಾರತಕ್ಕೇ ಬಂದೆನೆಂಬ ಭ್ರಾಂತಿಯಿಂದ ಅಲ್ಲಿನ ಮೂಲನಿವಾಸಿಗಳನ್ನು 'ಇಂಡಿಯನರು' ಎಂದು ಕರೆದ.

ಅಂತರರಾಷ್ಟ್ರೀಯ ಸಂಬಂಧಗಳಲ್ಲಿ ಅಧಿಕಾರದ ದಾಹವೇ ಮೂಲ ಪ್ರೇರಕಶಕ್ತಿ. ಇಲ್ಲಿ ಮೂರು ಗುರಿಗಳನ್ನು ಕಾಣಬಹುದು: ಇರುವ ಅಧಿಕಾರವನ್ನು ಉಳಿಸಿಕೊಳ್ಳುವುದು. ಬೆಳೆಸಿಕೊಳ್ಳುವುದು. ಪ್ರದರ್ಶಿಸುವುದು. ಚರಿತ್ರೆಯ ಪ್ರಾರಂಭದ ದಿನಗಳ ಸಣ್ಣ ರಾಜ್ಯಗಳಿಂದ ಹಿಡಿದು ರೋಮನ್ ಸಾಮ್ರಾಜ್ಯ. ಫ್ರೆಂಚ್ ಸಾಮ್ರಾಜ್ಯ. ಮೊಗಲ್ ಸಾಮ್ರಾಜ್ಯ. ಬ್ರಿಟಿಷ್ ಸಾಮ್ರಾಜ್ಯಗಳನ್ನು ಒಳಗೊಂಡು ಇಂದಿನ ಅಮೆರಿಕದ ಸಂಯುಕ್ತ ಸಂಸ್ಥಾನ. ಸೋವಿಯೆಟ್ ರಷ್ಯ. ಚೀನ. ಫ್ರಾನ್ಸ್ ದೇಶಗಳವರೆಗೆ ಎಲ್ಲ ಸ್ವತಂತ್ರ ರಾಜಕೀಯ ಗುಂಪುಗಳೂ ಇತರ ಅಂಥ ಗುಂಪುಗಳೊಡನೆ ಸಂಬಂಧ ರೂಪಿಸುವಾಗ ಮೂರು ಗುರಿಗಳಲ್ಲಿ ಒಂದರಿಂದ ಅಥವಾ ಎಲ್ಲದರಿಂದ ಪ್ರೇರಿತ. ಪ್ರತಿ ರಾಜ್ಯ ಅಥವಾ ರಾಷ್ಟ್ರ ತನಗಿರುವ ಅಧಿಕಾರವನ್ನು ಉಳಿಸಿಕೊಳ್ಳಲು ಯತ್ನಿಸುತ್ತದೆ. ಅದರಿಂದ ಹೆಚ್ಚು ಅಧಿಕಾರವನ್ನು ಪಡೆದಿರುವ ರಾಜ್ಯ ಅಥವಾ ರಾಷ್ಟ್ರ ಆ ಸ್ಥಿತಿಯನ್ನೆ ಮುಂದುವರಿಸಿಕೊಂಡು ಹೋಗುವ ರೀತಿಯನ್ನು ಅನುಸರಿಸುತ್ತದೆ. ಎರಡನೆಯ ಮಹಾಯುದ್ಧಕ್ಕೆ ಮುನ್ನ ಬ್ರಿಟಿಷ್ ಚಕ್ರಾಧಿಪತ್ಯ ಪ್ರಪಂಚದ ಬಹು ಭಾಗಗಳಲ್ಲಿ ಹರಡಿತ್ತು. ಬ್ರಿಟನಿಗೆ ಹಲವು ಅನುಕೂಲಕರ ಮಾರುಕಟ್ಟೆಗಳಿದ್ದುವು. ಬ್ರಿಟನ್ ಈ ಸ್ಥಿತಿಯನ್ನೆ ಮುಂದುವರಿಸಲು ಬಯಸಿತು. ಜರ್ಮನಿ ಇಟಲಿ ಜಪಾನುಗಳು ಇದನ್ನು ಬದಲಿಸಲು ಹಾತೊರೆಯುತ್ತಿದ್ದುವು. ತನಗಿರುವ ಅಧಿಕಾರವನ್ನು ಹೆಚ್ಚಿಸಿಕೊಳ್ಳುವುದೂ ಪ್ರತಿ ರಾಜ್ಯ ಅಥವ ರಾಷ್ಟ್ರದ ಬಯಕೆ. ಇದು ಸಾಮ್ರಾಜ್ಯಗಳ ಸೃಷ್ಟಿಯ ಹಾದಿ. ಚೀನ ದುರ್ಬಲವಾದಾಗ ರಷ್ಯ. ಜಪಾನುಗಳು ಅದರ ಭಾಗಗಳನ್ನು ಕಬಳಿಸಿದುವು. ಈ ಅಧಿಕಾರದಾಹದ ಮೂರ್ತಿ ಜರ್ಮನಿಯ ಅಡಾಲ್ಫ್ ಹಿಟ್ಲರ್ ಜಗತ್ತನ್ನು ಒಂದು ಮಹಾಯುದ್ಧದ ಪ್ರಪಾತಕ್ಕೆ ನೂಕಿದ ಮನುಷ್ಯ. ಇಟಲಿ ಅಬಿಸೀನಿಯವನ್ನು (ಇಂದಿನ ಇಥಿಯೋಪಿಯ) ಸುಮಾರು ಮೂವತ್ತೈದು ವರ್ಷಗಳ ಹಿಂದೆ ಆಕ್ರಮಿಸಿದ್ದು ಈ ಅಧಿಕಾರದ ಹುಚ್ಚಿನ ಇನ್ನೊಂದು ನಿದರ್ಶನ. ಮೂರನೆಯದಾಗಿ ಅಧಿಕಾರ ಪ್ರದರ್ಶನ. ಹಿಂದಿನ ರೋಮಿನ ವಿಜೇತರು ತಾವು ಗೆದ್ದ ಪ್ರದೇಶಗಳ ಅರಸ ಅರಸಿಯರನ್ನು ಸರಪಣಿ ಹಾಕಿ ಮೆರವಣಿಗೆಗಳಲ್ಲಿ ಕೊಂಡೊಯ್ಯುತ್ತಿದ್ದುದೂ. ಬ್ರಿಟನಿನ ಐದನೆಯ ಜಾರ್ಜ್ ಭಾರತಕ್ಕೆ ಬಂದು ಕಿರೀಟಧಾರಣೆ ನಡೆಸಿಕೊಂಡು ದೆಹಲಿಯಲ್ಲಿ ದರ್ಬಾರ್ ನಡೆಸಿದುದೂ ಈ ಪ್ರತಿಷ್ಠೆಯ ಹಂಬಲದ ನಿದರ್ಶನಗಳು.

ಅಂತರರಾಷ್ಟ್ರೀಯ ಸಂಬಂಧಗಳಲ್ಲಿ ಪಕ್ಷಗಳು ಎರಡು ಮಾರ್ಗಗಳನ್ನು ಅನುಸರಿಸಬಹುದು: ರಾಯಭಾರಿಗಳ ಮೂಲಕ ತೀರ್ಮಾನ ಅಥವಾ ಯುದ್ಧ. ಇವೆರಡಕ್ಕೆ ತಳಹದಿಯಾಗಿ ಬಲಸಮತೋಲನದ ತತ್ತ್ವ. ಬಲಸಮತೋಲನ ತತ್ತ್ವ ಕಳೆದ ಮೂರು-ನಾಲ್ಕು ಶತಮಾನಗಳಲ್ಲಿ ಯೂರೋಪಿನ ರಾಷ್ಟ್ರಗಳು ಅನುಸರಿಸಿದ ನೀತಿಗೆ ಕೊಡುವ ಹೆಸರಾದರೂ ಚರಿತ್ರೆಯಲ್ಲಿ ಎಲ್ಲ ಪಕ್ಷಗಳೂ ಸಾಮಾನ್ಯವಾಗಿ ಈ ನೀತಿಯನ್ನೆ ಅನುಸರಿಸಿವೆ. ಹಲವು ರಾಜ್ಯಗಳ ಮಧ್ಯೆ ಇರುವ ರಾಜ್ಯ. ಇತರರು ಒಂದಾಗಿ ತನ್ನ ಭದ್ರತೆಗೆ ಸಂಚಕಾರ ತಾರದಂತೆ ನೋಡಿಕೊಳ್ಳುವುದು ಈ ತತ್ತ್ವ. ಎಷ್ಟೇ ಬಲಿಷ್ಠ ರಾಜ್ಯವಾದರೂ ಹಲವು ರಾಜ್ಯಗಳವರು ಅದರ ವಿರುದ್ಧ ಸೇರಿದರೆ ತನ್ನನ್ನು ರಕ್ಷಿಸಿಕೊಳ್ಳುವುದು ಕಷ್ಟವಾಗುತ್ತದೆ—ಅರ್ಧ ಯೂರೋಪನ್ನು ಗೆದ್ದು ಭಾರತದತ್ತ ಕಣ್ಣು ಹರಿಸಿದ ನೆಪೋಲಿಯನ್ನನೂ ಇಂಗ್ಲೆಂಡ್. ಪ್ರಷ್ಯ. ಆಸ್ಟ್ರಿಯ. ಸ್ವೀಡನ್. ರಷ್ಯಗಳು ಒಂದಾದಾಗ ಸೋಲನ್ನು ಅನುಭವಿಸಬೇಕಾಯಿತು. ವಾಸ್ತವವಾಗಿ. ಪ್ರತಿಪಕ್ಷವೂ ಬಲವನ್ನು ನಿರ್ಧರಿಸುವ ತಕ್ಕಡಿ ತನ್ನತ್ತ ವಾಲಿರಬೇಕು, ಬಲಸಮತೋಲನ ವಾಸ್ತವಿಕವಾಗಿ ತನಗೆ ಅನುಕೂಲವಾಗಿರಬೇಕು ಎಂದು ಬಯಸುತ್ತದೆ. ಇದಕ್ಕಾಗಿ ತನ್ನ ಶತ್ರುಗಳ ಶತ್ರುಗಳೊಡನೆ ಮಾತುಕತೆ ನಡೆಸಿ. ಸಂಧಾನ ನಡೆಸಿ ಒಂದು ಬಣವನ್ನು ಕಟ್ಟುತ್ತದೆ. ತಾನು ಅನುಕೂಲಕರ ಪರಿಸ್ಥಿತಿಯಲ್ಲಿರುವೆನೆಂದೋ ಅಥವಾ ಇನ್ನೂ ತಡೆದರೆ ಪರಿಸ್ಥಿತಿ ತನಗೆ ಪ್ರತಿಕೂಲವಾಗುವುದೆಂದೋ ಕಂಡಾಗ ಒಂದು ಪಕ್ಷ ಯುದ್ಧವನ್ನು ಪ್ರಾರಂಭಿಸುತ್ತದೆ. ಪ್ರಾಚೀನ ಗ್ರೀಸಿನಲ್ಲಿ ಸ್ಪಾರ್ಟ. ಅಥೆನ್ಸ್‌ಗಳಿಗೆ ವೈರವಿತ್ತು. ಕಾರ್‌ಸಿರ ಎಂಬ ಪ್ರದೇಶ ಕೊರಿಂಥ್ ರಾಜ್ಯದ ವಸಾಹತು: ಅದು 435ರಲ್ಲಿ ಸ್ವಾತಂತ್ರ್ಯವನ್ನು ಸಾರಿತು. ಅಥೆನ್ಸ್ ಕಾರ್‌ಸಿರಗೆ ನೆರವಾಯಿತು. ಮೆಗಾರ ರಾಜ್ಯ ಕೊರಿಂಥ್‌ನ ನೆರವಿಗೆ ಬಂದಿತು. ಸ್ಪಾರ್ಟ ಮೆಗಾರ. ಕೊರಿಂಥ್‌ಗಳ ಪಕ್ಷ ವಹಿಸಿತು. ಹೀಗೆ ಅಥೆನ್ಸ್ ಸ್ಪಾರ್ಟಗಳು ಕ್ರಮೇಣ ಹಲವು ರಾಜ್ಯಗಳ ಬೆಂಬಲ ಪಡೆದು ಎರಡು ಬಣಗಳನ್ನು ಕಟ್ಟಿದುವು. ಸ್ಪಾರ್ಟ ಯುದ್ಧವನ್ನು ಘೋಷಿಸಿತು. ಇದರ ಪರಿಣಾಮ, ಗ್ರೀಸನ್ನೆ ಬಲಿ ತೆಗೆದುಕೊಂಡ ಕ್ರೂರ ಯುದ್ಧಗಳು. 1962ರಲ್ಲಿ ಭಾರತಕ್ಕೂ ಚೀನಕ್ಕೂ ಘರ್ಷಣೆಯಾದನಂತರ ಅದುವರೆಗೆ ದೂರವಾಗಿದ್ದ ಪಾಕಿಸ್ತಾನ – ಚೀನಗಳು ಸ್ನೇಹಿತರಾದುವು. 1965ರಲ್ಲಿ ಪರಿಸ್ಥಿತಿ ತನಗೆ ಅನುಕೂಲವಿದ್ದಂತೆ ಕಂಡಾಗ ಪಾಕಿಸ್ತಾನ ಭಾರತದ ಮೇಲೆ ದಾಳಿ ಮಾಡಿತು.

ಅಂತರರಾಷ್ಟ್ರೀಯ ಸಂಬಂಧಗಳಲ್ಲಿ ಮೂರು ಬಗೆ: ಮೊದಲನೆಯದು ಸಾಮ್ರಾಜ್ಯ ವಿಧಾನ. ಇಲ್ಲಿ ಹಲವು ರಾಜ್ಯಗಳನ್ನು ಪತೋಟಿಯಲ್ಲಿಟ್ಟ ಸಾಮ್ರಾಜ್ಯ ಕೈಗೊಳ್ಳುವ ನಿರ್ಧಾರ ಎಲ್ಲ ರಾಜ್ಯಗಳ ನೀತಿಯನ್ನು ನಿರ್ಧರಿಸುತ್ತದೆ. ರೋಮನ್ ಸಾಮ್ರಾಜ್ಯದ ಉಚ್ಛ್ರಾಯ ಕಾಲದಲ್ಲಿ ರೋಮಿನ ಶತ್ರುಗಳು ಅದರ ಅಧೀನ ರಾಜ್ಯದ ಶತ್ರುಗಳು. ರೋಮಿನ ಮಿತ್ರರು ಅದರ ಅಧೀನ ರಾಜ್ಯಗಳ ಮಿತ್ರರು ಎಂದಾಗಿತ್ತು. ಬ್ರಿಟಿಷ್ ಸಾಮ್ರಾಜ್ಯದ ಯುಗದಲ್ಲಿಯೂ ಹೀಗೆಯೆ. 1914ರಲ್ಲಿ ಮತ್ತೆ 1939ರಲ್ಲಿ ಬ್ರಿಟನ್ ಜರ್ಮನಿಯ ಮೇಲೆ ಯುದ್ಧ ಘೋಷಿಸಿದಾಗ. ಅದಕ್ಕೆ ಸೇರಿದ್ದ ಎಲ್ಲ ರಾಜ್ಯಗಳೂ ಜರ್ಮನಿಯ ಮೇಲೆ ಯುದ್ಧ ಘೋಷಿಸಿದುವು.

ಎರಡನೆಯದು. ಬಹುಸಂಖ್ಯಾ ವಿಧಾನ. ಇಲ್ಲಿ ಹಲವು ರಾಜ್ಯಗಳು ಅಥವಾ ರಾಷ್ಟ್ರಗಳು ಸ್ವತಂತ್ರವಾಗಿ ಪರಸ್ಪರ ಸಂಬಂಧಗಳನ್ನು ನಿರ್ಧರಿಸಿಕೊಳ್ಳುವುದು. 1648ರಿಂದ 1914ರ ವರೆಗೆ ಯೂರೋಪಿನಲ್ಲಿ ಅನುಸರಿಸಿದ್ದು ಈ ವಿಧಾನ. ಇವರ ಸಂಬಂಧಗಳಲ್ಲಿ ಸ್ಥಿರ

ಪರಕೀಯರಿಗೆ ಸಹಾಯದ ಹಸ್ತ ನೀಡಿದರು. ಘಜ್ನಿ ಮಹಮ್ಮದನಿಗೆ ಜಯಚಂದ್ರ ನೆರವಾದಂದಿನಿಂದ ಹೈದರಾಬಾದಿನ ನಿಜಾಮ ಬ್ರಿಟಿಷರ ಪರಮಾಪ್ತನೆನ್ನಿಸಿಕೊಂಡವರೆಗೆ ಈ ದುರಂತ ನಡೆದುಕೊಂಡು ಬಂದಿತು. ಪಾಶ್ಚಾತ್ಯರಲ್ಲಿ ಹದಿನಾರನೆಯ ಶತಮಾನದ ತನಕ 'ನನ್ನ ದೇಶ' ಎನ್ನುವ ಭಾವನೆ ಬಲವಾಗಿರಲಿಲ್ಲ. ಹದಿನೈದನೆಯ ಶತಮಾನದವರೆಗೆ ಈ ಭಾವನೆ ಪಾಶ್ಚಾತ್ಯ ಪ್ರಪಂಚದಲ್ಲಿ ಕಾಣಿಸಲೇ ಇಲ್ಲ. ಈಗ ಒಂದು ರಾಷ್ಟ್ರ ಎನ್ನಿಸಿಕೊಂಡಿರುವ ಭೂಭಾಗಗಳಲ್ಲಿ ಸ್ವತಂತ್ರ ರಾಜ್ಯಗಳಿದ್ದುವು. ಅವರಲ್ಲಿ ಒಬ್ಬರೊಡನೆ ಒಬ್ಬರು ಕಾದಾಡುವುದು ಸಾಮಾನ್ಯ ಸಂಗತಿಯಾಗಿತ್ತು. ಇಂಗ್ಲೆಂಡ್ ಮತ್ತು ಫ್ರಾನ್ಸಿನ ಯುದ್ಧಗಳಲ್ಲಿ ಬರ್ಗಂಡಿಯ ಡ್ಯೂಕ್ ಇಂಗ್ಲೆಂಡಿಗೆ ಸಹಾಯ ಮಾಡುತ್ತಿದ್ದ. ರಾಷ್ಟ್ರದ ಸರಳ ಕಲ್ಪನೆ ಕಾಣುವುದು ಫ್ರಾನ್ಸಿನ ಜೋನ್ ಆಫ್ ಆರ್ಕಳ ಮಾತುಗಳಲ್ಲಿ. ಈ ಮುಗ್ಧ ರೈತ ಹುಡುಗಿ, ತನ್ನ ದೇಶದಿಂದ ಇಂಗ್ಲಿಷರನ್ನು ಓಡಿಸಬೇಕೆಂದು ನಾಯಕತ್ವವನ್ನು ವಹಿಸಿಕೊಂಡಾಗ ಒಂದು ಸರಳ ವಾದವನ್ನು ಹೂಡಿದಳು: "ಫ್ರಾನ್ಸಿನಲ್ಲಿ ಇಂಗ್ಲಿಷರು ಇರಬೇಕೆಂದು ಭಗವಂತನ ಇಚ್ಛೆಯಾಗಿದ್ದರೆ ಅವರು ಫ್ರಾನ್ಸಿನಲ್ಲೆ ಹುಟ್ಟುವಂತೆ ಮಾಡುತ್ತಿದ್ದ. ಆದುದರಿಂದ ಇಂಗ್ಲಿಷರು ಫ್ರಾನ್ಸಿಗೆ ಬಂದುದು ಪಾಪಕರ" ಹೀಗೆ ಇಂಗ್ಲೆಂಡ್ ಒಂದು ರಾಷ್ಟ್ರ, ಫ್ರಾನ್ಸ್ ಒಂದು ರಾಷ್ಟ್ರ ಎಂಬ ಕಲ್ಪನೆ ಅಸ್ಪಷ್ಟವಾಗಿ ಮೂಡಿತು. ಆದರೂ ಜನರು ಯೋಚಿಸುತ್ತಿದ್ದುದು ಎರಡು ರೀತಿಗಳಲ್ಲಿ—ಒಂದು, ತಮ್ಮ ರಾಜ್ಯದ ದೃಷ್ಟಿಯಿಂದ, ಮತ್ತೊಂದು, ಕ್ರೈಸ್ತ ಪ್ರಪಂಚ ಎನ್ನುವ ದೃಷ್ಟಿಯಿಂದ. ಕ್ರೈಸ್ತಮತದ ಅನುಯಾಯಿಗಳೆಲ್ಲ ಕ್ರೈಸ್ತರಲ್ಲದವರ ವಿರುದ್ಧ ಹೋರಾಡಲು ಒಂದಾಗಬೇಕು ಎನ್ನುವ ಭಾವನೆ ಸಾಮಾನ್ಯವಾಗಿದ್ದಿತು. ಮುಸಲ್ಮಾನರನ್ನು 'ಸ್ಯಾರಸನ್ಸ್' (ಸೈರೋ ಮರುಭೂಮಿಯವರು) ಎಂದು ಕರೆಯುತ್ತಿದ್ದರು. ಈ ಸ್ಯಾರಸನರ ವಿರುದ್ಧವಾಗಿ ಹೋರಾಡುವುದು, ಜೆರೂಸಲಂ ಕ್ರೈಸ್ತರ ಅಧೀನವಾಗುವಂತೆ ಮಾಡುವುದು ಎಲ್ಲ ಕ್ರೈಸ್ತರ ಪವಿತ್ರ ಕರ್ತವ್ಯ ಎಂಬ ನಂಬಿಕೆ ಇದ್ದಿತು. ಕ್ರೈಸ್ತರೆಲ್ಲರಿಗೂ ಪರಮಗುರು ಪೋಪ್. ಅವನಿಗೆ ಎಲ್ಲರ ಗೌರವ ವಿಧೇಯತೆ ಸಲ್ಲಬೇಕು ಎಂಬ ಭಾವನೆಯೂ ಬೆಳೆದಿತ್ತು. (ಅದರೆ ಅನೇಕ ಬಾರಿ ರಾಜರು ಪೋಪನ ಮಾತನ್ನು ತಳ್ಳಿಹಾಕಿದ್ದು, ಪೋಪನನ್ನು ಬೆದರಿಸಿದ್ದು, ಅವನೊಡನೆ ಯುದ್ಧ ಮಾಡಿದ್ದು ಅಪರೂಪವಲ್ಲ.) ಮತಶ್ರದ್ಧೆ ಯೂರೋಪಿನ ಜನರನ್ನು ಸ್ವಲ್ಪಮಟ್ಟಿಗಾದರೂ ಒಂದುಗೂಡಿಸಿತ್ತು. 1095ರಲ್ಲಿ ಪೋಪ್ ಎರಡನೆಯ ಅರ್ಬನ್ ಪವಿತ್ರ ಭೂಮಿಯಲ್ಲಿ ಸ್ಯಾರಸನರು ಮೈನಡುಗಿಸುವಂಥ ಅಕೃತ್ಯಗಳನ್ನು ನಡೆಸಿದರೆಂದು ಸಾರಿ, ತುರ್ಕಿಯವರಿಂದ ಪ್ಯಾಲೆಸ್ಟೈನನ್ನು ವಶಪಡಿಸಿಕೊಳ್ಳಲು ಯೂರೋಪಿನ ಕ್ರೈಸ್ತರು ಯುದ್ಧಮಾಡುವುದು ಅವರ ಪರಮಪವಿತ್ರ ಕರ್ತವ್ಯ ಎಂದು ಘೋಷಿಸಿದ. 1095ರಲ್ಲಿ ಹೊರಟ ಧರ್ಮಯುದ್ಧದ ಸೈನ್ಯ ಹಂಗೆರಿಯನ್ನೆ ದಾಟಲಿಲ್ಲ. 1096ರಲ್ಲಿ ಹೊರಟ ಸೈನ್ಯ ಜೆರೂಸಲೆಮನ್ನು ವಶಮಾಡಿಕೊಂಡು ಕೃತಜ್ಞತೆ ಧನ್ಯತೆಗಳ ಕಂಬನಿ ತುಂಬಿದಂತೆ ಅಲ್ಲಿ ಭಗವಂತನಿಗೆ ಪ್ರಾರ್ಥನೆ ಸಲ್ಲಿಸಿ ಹಿಂದಿರುಗಿತು. ಸ್ವಲ್ಪ ಕಾಲದಲ್ಲಿಯೆ ತುರ್ಕಿಯವರು ಮತ್ತೆ ಜೆರೂಸಲೆಮನ್ನು ವಶಮಾಡಿಕೊಂಡು, ಅಲ್ಲಿದ್ದ ಕ್ರೈಸ್ತರನ್ನೆಲ್ಲ ಕೊಂದರು. ಅಲ್ಲಿಂದ ಮುಂದೆ ಎರಡು ಶತಮಾನಗಳಲ್ಲಿ ಏಳು ಧರ್ಮಯುದ್ಧ ಯಾತ್ರೆಗಳು ನಡೆದುವು. ಒಟ್ಟಿನಲ್ಲಿ ಈ ಧರ್ಮಯುದ್ಧಗಳು ಕ್ರೈಸ್ತರ ದೃಷ್ಟಿಯಿಂದ ವಿಫಲವಾದುವು. ಆದರೆ ಅವು ಆಗಿನ ಕಾಲದಲ್ಲಿ ಕ್ರೈಸ್ತಮತ ಯೂರೋಪಿನ ದೇಶಗಳನ್ನು ಸ್ವಲ್ಪಮಟ್ಟಿಗಾದರೂ ಒಂದುಗೂಡಿಸುವ ಶಕ್ತಿಯಾಗಿದ್ದಿತು ಎನ್ನುವುದನ್ನು ತೋರಿಸುತ್ತವೆ.

(ಈ ಧರ್ಮಯುದ್ಧಗಳ ಒಂದು ಅನಿರೀಕ್ಷಿತ ಪರಿಣಾಮವನ್ನು ಇಲ್ಲಿ ಪ್ರಸ್ತಾಪಿಸಬಹುದು. ಯೂರೋಪಿನಿಂದ ಹೊರಟ ಕ್ರೈಸ್ತ ತರುಣರು ಕ್ರೈಸ್ತರೆಲ್ಲರಲ್ಲಿ ಸಹೋದರತ್ವ, ಪ್ರೇಮ, ಮುಸಲ್ಮಾನರ ಬಗೆಗೆ ದ್ವೇಷ ಮತ್ತು ತಿರಸ್ಕಾರಗಳನ್ನು ಹೃದಯದಲ್ಲಿ ತುಂಬಿಕೊಂಡು ಹೊರಟರು. ಆದರೆ ಅವರು ಬೈಜಾಂಟಿಯಮಿನ ಗ್ರೀಕರು, ಅರ್ಮೀನಿಯನರು ಮುಂತಾದ ಕ್ರೈಸ್ತ ಮತಾನುಯಾಯಿಗಳು ತಮಗೆ ಮಾಡುತ್ತಿದ್ದ ಮೋಸವನ್ನು ಕಂಡು ಹೇಸಿದರು. ಪ್ಯಾಲೆಸ್ಟೈನಿನಲ್ಲಿ ಮುಸಲ್ಮಾನರ ಶೌರ್ಯ ಔದಾರ್ಯಗಳನ್ನು ಮೆಚ್ಚಿಕೊಂಡರು. ಅವರ ಉಡುಗೆತೊಡುಗೆಗಳೊಂದಿಗೆ ಹೋಲಿಸಿದರೆ ಕ್ರೈಸ್ತಯೋಧರ ಉಡುಗೆತೊಡುಗೆಗಳು ಒರಟಾಗಿ ಕಾಣುತ್ತಿದ್ದುವು. ತಮ್ಮ ಶತ್ರುಗಳಿಂದ ಉಡುಗೆ ತೊಡುಗೆಗಳಲ್ಲಿ ನಯನಾಜೂಕುಗಳನ್ನು ಕಲಿತರು. ಹಿಂದಿರುಗಿದಾಗ ಇವರ ದೇಶಗಳ ವ್ಯಾಪಾರದ ಮೇಲೆ, ಸಮಕಾಲೀನ 'ಫ್ಯಾಷನ್'ಗಳ ಮೇಲೆ ಇವರು ಪ್ರಭಾವ ಬೀರಿದರು.)

ಹದಿನಾರನೆಯ ಶತಮಾನದಲ್ಲಿ ಯೂರೋಪಿನಲ್ಲಿ ಪೋಪನ ವಿರುದ್ಧ ಪ್ರತಿಭಟನೆ ಪ್ರಾರಂಭವಾಯಿತು. ಮುದ್ರಣ ಬೈಬಲನ್ನು ಮನೆಮನೆಗೂ ತಂದುಕೊಟ್ಟಿತು. ಆವರೆಗೆ ಮಠಗಳ ಅರ್ಚಕವರ್ಗ ಮಾತ್ರ ಓದುತ್ತಿದ್ದ ಪವಿತ್ರಗ್ರಂಥ ಈಗ ಸಾಮಾನ್ಯ ಮನುಷ್ಯನ ಕೈಯಲ್ಲಿ ಸೇರಿತು. ಆ ಅರ್ಚಕವರ್ಗ ಹೇಳುತ್ತಿದ್ದುದರಲ್ಲಿ ಎಷ್ಟು ಸುಳ್ಳು, ಎಷ್ಟನ್ನು ಅವರು ಜನಸಾಮಾನ್ಯರಿಂದ ಬಚ್ಚಿಟ್ಟಿದ್ದರು ಎಂಬುದು ಪ್ರತಿಯೊಬ್ಬರಿಗೂ ತಿಳಿಯುವಂತಾಯಿತು. ಅಲ್ಲದೆ ಮಠಗಳ ಅಧಿಕಾರಿಗಳು ಐಶ್ವರ್ಯ ಸುಖಗಳ ಮಡಿಲಲ್ಲಿ ವಾಸಿಸುತ್ತಿದ್ದರು. ಯೇಸು ಉಪದೇಶಿಸಿದ ಬಡತನದ ತ್ಯಾಗದ ಜೀವನಕ್ಕೂ ಮಠಾಧಿಕಾರಿಗಳು ನಡೆಸುತ್ತಿದ್ದ ಭೋಗಪ್ರತಿಷ್ಠೆಗಳ ಜೀವನಕ್ಕೂ ಇದ್ದ ವ್ಯತ್ಯಾಸ ಸಾಮಾನ್ಯ ಕ್ರೈಸ್ತನಿಗೂ ಕಣ್ಣನ್ನು ಕುಕ್ಕುವಂತಿತ್ತು. ಮಾರ್ಟಿನ್ ಲೂಥರನ ಪ್ರತಿಭಟನೆಯಿಂದ ಪ್ರಾರಂಭವಾದ ಚಳುವಳಿ, 'ಧರ್ಮಸುಧಾರಣೆ' ಎನ್ನಿಸಿಕೊಂಡು ಯೂರೋಪನ್ನೆ ಎರಡು ಭಾಗಮಾಡಿತು. ಹಲವು ರಾಜ್ಯಗಳು 'ಪ್ರಾಟೆಸ್ಟೆಂಟ್' ಆದುವು. ಇಂಗ್ಲೆಂಡಿನ ಎಂಟನೆಯ ಹೆನ್ರಿ ಪೋಪನ ಅಧಿಕಾರವನ್ನು ತಿರಸ್ಕರಿಸಿ ತಾನೆ ಇಂಗ್ಲೆಂಡಿನ ಧರ್ಮಪೀಠಕ್ಕೆ ಅಧಿಪತಿ ಎಂದು ಘೋಷಿಸಿಕೊಂಡ. ಇದರಿಂದ 'ಕ್ರೈಸ್ತಪ್ರಪಂಚ' ಕಲ್ಪನೆ ನಾಶವಾಗಿ ರಾಷ್ಟ್ರದ ಕಲ್ಪನೆ ಬೆಳೆಯಿತು. ಹದಿನಾರು ಹದಿನೇಳನೆಯ ಶತಮಾನಗಳ ಯೂರೋಪಿನ ಕಲಾವಿದರ ಕೃತಿಗಳಲ್ಲಿ ರಾಷ್ಟ್ರಾಭಿಮಾನ ಎದ್ದುಕಾಣುತ್ತದೆ. ಇಲ್ಲಿಂದ ಮುಂದೆ ಯೂರೋಪಿನ ನಾವಿಕರು ಜಗತ್ತಿನ ಹೊಸ ಭಾಗಗಳನ್ನು ಕಂಡುಹಿಡಿದು ಸಾಮ್ರಾಜ್ಯದಾಸೆಗೆ ಹೊಸ ಬಲಿಯನ್ನು ಸಿದ್ಧಗೊಳಿಸಿದರು. ಈ ಹೊಸ ಭಾಗಗಳಲ್ಲಿ ಇಂಗ್ಲೆಂಡ್, ಫ್ರಾನ್ಸ್, ಸ್ಪೇನ್, ಪೋರ್ಚುಗಲ್, ಹಾಲೆಂಡ್ ಮೊದಲಾದ ರಾಷ್ಟ್ರಗಳ ನಡುವೆ ಸ್ಪರ್ಧೆ ಪ್ರಾರಂಭವಾಯಿತು. ಸೋಲು, ಗೆಲುವು—ಎರಡೂ ರಾಷ್ಟ್ರಾಭಿಮಾನವನ್ನು ಬೆಳೆಸಿದುವು. ಫ್ರಾನ್ಸಿನ ಮಹಾಕ್ರಾಂತಿ,

ಅಮೆರಿಕದ ಸಂಯುಕ್ತ ಸಂಸ್ಥಾನದ ಸ್ವಾತಂತ್ರ್ಯಗಳಿಕೆ—ಇವು ಸರಕಾರ ಆ ದೇಶದ ಜನತೆಗೆ ಸೇರಿದ್ದು ಎಂಬ ಭಾವನೆಯನ್ನು ಬೆಳೆಸಿ ರಾಷ್ಟ್ರೀಯತೆಗೆ ಹೊಸ ಶಕ್ತಿಯನ್ನೆರೆದುವು.

ಹತ್ತೊಂಬತ್ತನೆಯ ಶತಮಾನದಲ್ಲಿ ಶಕ್ತಿಗೂಡಿಕೊಂಡ ರಾಷ್ಟ್ರೀಯತೆಯ ಕಹಿ ಫಲವನ್ನು ಜಗತ್ತು ಉಂಡುದು ಇಪ್ಪತ್ತನೆಯ ಶತಮಾನದಲ್ಲಿ. ಮೊದಲನೆಯ ಜಗತ್ತಿನ ಮಹಾಯುದ್ಧಕ್ಕೆ ತಕ್ಷಣದ ಕಾರಣಗಳು ಹಲವಾರು : ಈ ಸಿಡಿಮದ್ದಿನ ಪರ್ವತವನ್ನು ಹೊತ್ತಿಸಿದ್ದು ಆಸ್ಟ್ರಿಯದ ಆರ್ಚ್ ಡ್ಯೂಕನನ್ನು ಕೊಂದ ಗುಂಡು. ಆದರೆ ಇದರ ಮೂಲ ಕಾರಣ ರಾಷ್ಟ್ರೀಯತೆ. ರಾಷ್ಟ್ರಪ್ರೇಮ ಅಂಧ ಅಭಿಮಾನವಾಗಿ, ಪ್ರತಿ ರಾಷ್ಟ್ರದವರು ತಮ್ಮ ರಾಷ್ಟ್ರದ ಬಲ ಮತ್ತು ಸಂಪತ್ತುಗಳನ್ನು ಹೆಚ್ಚಿಸಲು ಏನು ಮಾಡಿದರೂ ನ್ಯಾಯ. ತಮ್ಮ ರಾಷ್ಟ್ರದ ಅನುಕೂಲಕ್ಕಾಗಿ ಯುದ್ಧ ಮಾಡುವುದೂ ಸರಿ ಎಂಬ ಮನೋಭಾವ ಬೆಳೆಸಿಕೊಂಡುದು ಅರ್ಧ ಪ್ರಪಂಚಕ್ಕೆ ರಕ್ತಸ್ನಾನ ಮಾಡಿಸಿತು. ರಾಷ್ಟ್ರಸಂಸ್ಥೆ ಶಾಂತಿಯ ಸಾಧನೆಗಾಗಿ ಸ್ಥಾಪನೆಯಾದರೂ ಪ್ರತಿ ಮುಖ್ಯ ರಾಷ್ಟ್ರವೂ ಆ ಸಂಸ್ಥೆಯನ್ನು ತನ್ನ ಹಿತಗಳ ಪೋಷಣೆಗಾಗಿಯೇ ಬಳಸಿಕೊಳ್ಳಲು ಯತ್ನಿಸಿತು. ಭಯಂಕರ ರಕ್ತಸ್ನಾನವೂ ರಾಷ್ಟ್ರದುರಭಿಮಾನವನ್ನು ಗುಣಪಡಿಸಲಿಲ್ಲ. ಇದು ಮತ್ತೊಂದು ನರಯಜ್ಞಕ್ಕೆ ದಾರಿಮಾಡಿತು. ಜರ್ಮನಿ, ಇಟಲಿಗಳ ಅಂಧ ಸ್ವಾರ್ಥ, ಮಹಾ ರಾಷ್ಟ್ರಗಳ ಸ್ವಾರ್ಥದಿಂದ ರಾಷ್ಟ್ರಸಂಘ ನಿಸ್ಸಹಾಯಕವಾದದ್ದು—ಎರಡನೆಯ ಜಾಗತಿಕ ಯುದ್ಧಕ್ಕೆ ಕಾರಣವಾದುವು. ಮೊದಲನೆಯ ಮಹಾಯುದ್ಧವನ್ನು 'ಯುದ್ಧಗಳನ್ನು ಕೊನೆಗಾಣಿಸುವ ಯುದ್ಧ' ಎಂದು ಮಿತ್ರರಾಷ್ಟ್ರಗಳು ಕರೆದುವು. ಅದರಲ್ಲಿ ವಿಜಯಗಳಿಸಿದ ಈ ರಾಷ್ಟ್ರಗಳು ವಿಶಾಲ ಮನೋಭಾವನೆಯನ್ನು ತೋರದೆ ಸಂಕುಚಿತ ರಾಷ್ಟ್ರಾಭಿಮಾನದಿಂದ ನಡೆದುಕೊಂಡು ಜರ್ಮನಿ ಇಟಲಿಗಳಿಗೆ ಅವುಗಳ ಬೆನ್ನು ಮುರಿಯುವಂಥ ಹಣದ ನಷ್ಟದ ಹೊರೆಯನ್ನು ಹೊರಿಸಿದುದಲ್ಲದೆ ಅವುಗಳ ಆತ್ಮಗೌರವವನ್ನು ಭಂಗಿಸಿದವು. ಇದು ಎರಡನೆಯ ಯುದ್ಧಕ್ಕೆ ಸಿದ್ಧತೆಯಾಯಿತು. ಈ ನರಮೇಧದ ಬಳಿಕ ವಿಶ್ವಸಂಸ್ಥೆ ಉದಿಸಿತು. ಇಲ್ಲಾದರೂ ಸದಸ್ಯ ರಾಷ್ಟ್ರಗಳಿಲ್ಲಿ ಅಂಧ ರಾಷ್ಟ್ರಾಭಿಮಾನದ ಅಪಾಯವನ್ನು ಅರಿತು ನಡೆದುಕೊಳ್ಳುತ್ತಿವೆ ಎಂದು ಹೇಳುವಂತಿಲ್ಲ. ಬಣಗಳ ಸ್ಥಾಪನೆಯಾಗಿ, ಪ್ರತಿಬಣದ ರಾಷ್ಟ್ರಗಳೂ ಪ್ರತಿಸಮಸ್ಯೆಯನ್ನೂ ಎದುರುಬಣದ ತೇಜೋವಧೆಗಾಗಿ ಬಳಸಿಕೊಳ್ಳುವುದು ಸಾಮಾನ್ಯವಾಗುತ್ತಿದೆ. ಸಂಸ್ಥೆಯ ಮುಂದಿರುವ ವಿಷಯದ ನ್ಯಾಯಾನ್ಯಾಯಗಳು ಮಸಕಾಗುತ್ತಿವೆ. ಕಾಶ್ಮೀರದ ಪ್ರಶ್ನೆ, ಕೊರಿಯದ ಪ್ರಶ್ನೆ ಎಲ್ಲ ಇಂಥ ವಿಷಸುಳಿಯಲ್ಲಿ ಸಿಕ್ಕಿಕೊಂಡುವು. ರಾಷ್ಟ್ರಪ್ರೇಮ ಅತ್ಯಗತ್ಯ. ಭಾರತದಲ್ಲಿಯೂ ಏಷ್ಯ ಆಫ್ರಿಕ ಖಂಡಗಳ ಹಲವು ಭಾಗಗಳಲ್ಲಿಯೂ ಸಾಮಾನ್ಯ ಜನ ಉಕ್ಕಿನ ಸಿಪಾಯಿಗಳಾಗಿ ಸ್ವಾತಂತ್ರ್ಯಕ್ಕಾಗಿ ಹೋರಾಡಲು ಮನಸ್ಥೈರ್ಯವನ್ನು ನೀಡಿದುದು ರಾಷ್ಟ್ರಪ್ರೇಮ. ಆದರೆ ಈ ರಾಷ್ಟ್ರಪ್ರೇಮ ರಾಷ್ಟ್ರ ದುರಭಿಮಾನವಾಗಬಾರದು. ವಿಶ್ವಸಂಸ್ಥೆಯಲ್ಲಿ ಹಲವಾರು ದೋಷಗಳೂ ದೌರ್ಬಲ್ಯಗಳೂ ಇರಬಹುದು. ಆದರೆ ರಾಷ್ಟ್ರಭಕ್ತಿಯೊಂದಿಗೆ ಮಾನವಕೋಟಿಗೂ ನಮ್ಮ ಭಕ್ತಿ ಸಲ್ಲಬೇಕೆಂಬುದನ್ನು ಎಲ್ಲ] ದೇಶಗಳವರಿಗೆ ನೆನಪು ಕೊಡುವ, ಏಕಜಗತ್ತಿನ ಆದರ್ಶದ ಸಂಕೇತವಾದ ಸಂಸ್ಥೆ ಅಗತ್ಯವಾದದ್ದು, ಪ್ರಾಧಾನ್ಯ ಉಳ್ಳದ್ದು.

ಕಳೆದ ನಲವತ್ತು ವರ್ಷಗಳಲ್ಲಿ ಅಂತರರಾಷ್ಟ್ರೀಯ ವ್ಯವಹಾರಗಳ ಮೇಲೆ ಗಾಢವಾದ ಪರಿಣಾಮವನ್ನುಂಟುಮಾಡಿದ ಎರಡು ಬೆಳವಣಿಗೆಗಳನ್ನು ಗಮನಿಸಬೇಕು. ಮೊದಲನೆಯದು : ಯೂರೋಪಿನ ಹಿರಿಮೆ ಬಹುಮಟ್ಟಿಗೆ ಕುಂದಿದೆ ಎನ್ನುವುದು. ವೈಜ್ಞಾನಿಕ ಮತ್ತು ಕೈಗಾರಿಕಾ ಕ್ರಾಂತಿಗಳ ಫಲವಾಗಿ ಯೂರೋಪಿನ ರಾಷ್ಟ್ರಗಳು ತಮ್ಮ ಸೈನ್ಯಶಕ್ತಿಯನ್ನು ಬೆಳೆಸಿಕೊಂಡುವು. ಆಫ್ರಿಕ ಮತ್ತು ಏಷ್ಯದ ದೇಶಗಳು ನಿಸ್ಸಹಾಯವಾದುವು. ಒಂದಾದ ಮೇಲೊಂದು ಈ ದೇಶಗಳು ಪಾಶ್ಚಾತ್ಯರ ವಶವಾದುವು. ಬಹುಮಟ್ಟಿಗೆ ಅಮೆರಿಕದ ದೇಶಗಳು ತಮ್ಮ ವ್ಯವಹಾರಗಳಲ್ಲಿ ಮಗ್ನವಾದುವು. ಹೀಗಾಗಿ ಯೂರೋಪ್ ಜಗತ್ತಿನ ಕೇಂದ್ರ ಎನ್ನುವಂತಾಯಿತು. ದೂರಪ್ರಾಚ್ಯ, ಮಧ್ಯಪ್ರಾಚ್ಯ ಮುಂತಾದ ಪದಪ್ರಯೋಗಗಳಿಂದ ಜಗತ್ತಿನ ವಿವಿಧ ಭಾಗಗಳನ್ನು ನಿರ್ದೇಶಿಸುವಾಗಲೂ ಯೂರೋಪ್ ಕೇಂದ್ರ ಎನ್ನುವ ಭಾವನೆ ಆಧಾರವಾಗಿತ್ತು. ಜಪಾನು 1905ರಲ್ಲಿ ರಷ್ಯವನ್ನು ಸೋಲಿಸಿದಾಗ, ಪೂರ್ವ ದೇಶಗಳು ಕೆಳ ತರಗತಿಯ ರಾಷ್ಟ್ರಗಳಾಗಿಯೇ ಬದುಕಬೇಕಾಗಿಲ್ಲ ಎಂಬುದು ಸ್ಪಷ್ಟವಾಯಿತು. ಮೊದಲನೆಯ ಮಹಾಯುದ್ಧದಲ್ಲಿ ಯೂರೋಪಿನ ಮಿತ್ರರಾಷ್ಟ್ರಗಳು ತತ್ತರಿಸುತ್ತಿದ್ದಾಗ ಅಮೆರಿಕದ ಸಂಯುಕ್ತ ಸಂಸ್ಥಾನದ ನೆರವು ಅಗತ್ಯವಾಯಿತು ; ಮಹಾಯುದ್ಧವನ್ನು ಪ್ರವೇಶಿಸಿ ಸಂಯುಕ್ತ ಸಂಸ್ಥಾನ ಅದರ ಮುಕ್ತಾಯವನ್ನು ನಿರ್ಧರಿಸಿದಂತಾಯಿತು. ಜಪಾನು ಪಾಶ್ಚಾತ್ಯ ರಾಷ್ಟ್ರಗಳೊಂದಿಗೆ ಅಂತರರಾಷ್ಟ್ರೀಯ ವಾಣಿಜ್ಯ ಕ್ಷೇತ್ರದಲ್ಲಿ ತೀವ್ರವಾದ ಪೈಪೋಟಿಯನ್ನು ಪ್ರಾರಂಭಿಸಿತು. ಇದರಿಂದ ಅಮೆರಿಕದ ಸಂಯುಕ್ತ ಸಂಸ್ಥಾನ ಮತ್ತು ಜಪಾನುಗಳು ಪ್ರಭಾವೀ ರಾಷ್ಟ್ರಗಳು ಎನ್ನಿಸಿಕೊಂಡುವು. ಎರಡನೆಯ ಮಹಾಯುದ್ಧದಲ್ಲಿ ಜಪಾನು ಬರ್ಮವನ್ನು ಆಕ್ರಮಿಸಿಕೊಂಡು ಬ್ರಿಟನ್ನಿನ ಇತರ ಪ್ರದೇಶಗಳ ಮೇಲೆ ತನ್ನ ನೆರಳನ್ನು ಚಾಚಿತು. ಮತ್ತೆ ಸಂಯುಕ್ತ ಸಂಸ್ಥಾನದ ಪ್ರವೇಶ ನಿರ್ಣಾಯಕ ಅಂಶವಾಯಿತು. ಪರಮಾಣು ಬಾಂಬನ್ನು ಪ್ರಯೋಗಿಸಿದ ಮೊದಲ ರಾಷ್ಟ್ರವೂ ಇದೇ. ಈ ಯುದ್ಧದ ಅನಂತರ ಸಂಯುಕ್ತ ಸಂಸ್ಥಾನ ಮತ್ತು ರಷ್ಯ ಇವೆರಡೇ ಮಹಾ ರಾಷ್ಟ್ರಗಳಾಗಿ ಉಳಿದುವು. ಫ್ರಾನ್ಸ್ ಸ್ವಲ್ಪಮಟ್ಟಿನ ಮಹತ್ವವನ್ನು ಪಡೆಯಿತು. ಈಚೆಗೆ ಚೀನ ಪ್ರಾಧಾನ್ಯ ಪಡೆಯುತ್ತಿದೆ. ಸುಮಾರು ಇನ್ನೂರು ವರ್ಷಗಳ ನಾಗರಿಕ ಜಗತ್ತಿನ ಕೇಂದ್ರವೆಂದು ಮೆರೆದ ಯೂರೋಪ್ ಇಂದು ಕಳೆಗುಂದಿದೆ.

ಅಂತರರಾಷ್ಟ್ರೀಯ ಸಂಬಂಧಗಳಲ್ಲಿ ಕಲ್ಲೋಲವನ್ನುಂಟುಮಾಡಿರುವ ಇನ್ನೊಂದು ಅಂಶ ಪರಮಾಣು ಅಸ್ತ್ರಗಳ ಬಳಕೆಯ ಸಾಧ್ಯತೆ. ಇದರಿಂದ ಈವರೆಗೆ ರಾಷ್ಟ್ರಗಳು ನೆಚ್ಚಿಕೊಂಡಿದ್ದ ಶಸ್ತ್ರಾಸ್ತ್ರಗಳೂ ಯುದ್ಧನೀತಿಯೂ ಒಮ್ಮೆಲೆ ಹಳೆಯದಾದುವು. ಸಂಯುಕ್ತ ಸಂಸ್ಥಾನ ಒಂದೇ ಈ ಬಾಂಬುಗಳನ್ನು ಪಡೆದಿದ್ದ ಕಾಲದಲ್ಲಿ ಅದರ ಪ್ರತಿಷ್ಠೆ ಪ್ರಭಾವಗಳು ಹಿರಿದಾಗಿದ್ದುವು. ರಷ್ಯ ಅದನ್ನು ಸರಿಗಟ್ಟಿದ ಅನಂತರ ಎರಡು



ಬಾಂಬುಗಳ ಪ್ರಭಾವೀ ಕೇಂದ್ರಗಳಾದುವು ಇವು. ಈಗ ಇತರ ಕೆಲವು ರಾಷ್ಟ್ರಗಳೂ ಪರಮಾಣು ಅಸ್ತ್ರಗಳನ್ನು ತಯಾರಿಸಲು ಶಕ್ತವಾಗಿವೆ. ಭೂಮಿಯ ಸುತ್ತ ತಿರುಗುವ ಉಪಗ್ರಹಗಳನ್ನು ಕಳುಹಿಸಲು ಹಲವು ರಾಷ್ಟ್ರಗಳು ಸಮರ್ಥವಾದರೆ, ಸೈನ್ಯಬಲ ಶಸ್ತ್ರಾಸ್ತ್ರಬಲಗಳ ಒಳಗುಟ್ಟುಗಳನ್ನು ಕಾಯ್ದುಕೊಳ್ಳುವುದು ಕಠಿಣವಾಗುತ್ತದೆ. ಈ ಅಸ್ತ್ರಗಳ ಬಳಕೆ ಮನುಷ್ಯ ಕುಲಕ್ಕೆ ಭಯಂಕರ ಅಪಾಯವನ್ನು ತಂದೊಡ್ಡಿದೆ. ನಾಗಸಾಕಿ. ಹಿರೋಷಿಮಾಗಳ ಮೇಲೆ ಬಿದ್ದ ಬಾಂಬುಗಳು ಲೆಕ್ಕಕ್ಕಿಲ್ಲ ಎನ್ನುವಂಥ ಅಸ್ತ್ರಗಳು ಇಂದು ಮನುಷ್ಯನ ಕೈಯಲ್ಲಿ ಸಿಕ್ಕಿವೆ. ಹಾಗೆಯೇ ಪ್ರಪಂಚದಲ್ಲಿ ಚೈತನ್ಯದ ಮೂಲಗಳು ಬಡವಾಗುತ್ತಿವೆ. ಮರ. ಕಲ್ಲಿದ್ದಲು. ಪೆಟ್ರೋಲಿಯಂಗಳು ಮನುಷ್ಯನ ಬೇಡಿಕೆಗಳನ್ನು ಇನ್ನು ಹೆಚ್ಚು ಕಾಲ ಪೂರೈಸಲಾರವು ಎನ್ನುವ ಘಟ್ಟ ತಲಪುವ ಹೊತ್ತಿಗೆ ಬೆರಗುಗೊಳಿಸುವಂಥ ಚೇತನದ ಹೊಸ ಮೂಲ ಪರಮಾಣುವಿನಲ್ಲಿ ದೊರೆತಿದೆ. ಈ ಶಕ್ತಿಯನ್ನು ಶಾಂತಿಯ ಸಾಧನವನ್ನಾಗಿ ಬಳಸಿಕೊಂಡರೆ ಜಗತ್ತನ್ನು ವಿಸ್ಮಯಕರವಾಗಿ ಬದಲು ಮಾಡಬಹುದು.

ದಾರಿಗಳು ಕವಲೊಡೆಯುವ ಸ್ಥಳದಲ್ಲಿ ಇಂದು ಜಗತ್ತು ನಿಂತಿದೆ. ಪರಮಾಣುಶಕ್ತಿಯನ್ನು ಭಸ್ಮಾಸುರವರವನ್ನಾಗಿ ಮಾಡಿಕೊಂಡು ತಾನೇ ಬೂದಿಯಾಗಬಹುದು ಈ ಶಕ್ತಿಯನ್ನು ಗಂಗೆಯನ್ನಾಗಿ ಮಾಡಿಕೊಂಡು ಬಾಳನ್ನು ಸಂಪತ್ತುಗೊಳಿಸುವ ಭಗೀರಥನಾಗಬಹುದು. ಕಳೆದ ಐನೂರು ಆರುನೂರು ವರ್ಷಗಳು ತಮ್ಮ ತಮ್ಮ ರಾಷ್ಟ್ರಗಳ ದೃಷ್ಟಿಯಿಂದ ಎಲ್ಲವನ್ನೂ ಅಳೆಯುವುದನ್ನು ಮನುಷ್ಯರಿಗೆ ಹೇಳಿಕೊಟ್ಟಿವೆ. ರಾಷ್ಟ್ರೀಯ ಹಿತಾಸಕ್ತಿಗಳನ್ನು ಮೂಲೆಗೊತ್ತುವುದು ಅಸಾಧ್ಯ. ಆದರೆ ಒಂದು ಜಗತ್ತು ಎನ್ನುವ ಮನೋಭಾವ ಬೆಳೆಯದೆ ಮಾನವ ಕೋಟಿ ಉಳಿಯುವಂತಿಲ್ಲ. ಹಲವು ರಾಷ್ಟ್ರಗಳು ಈಚೆಗೆ ಸ್ವಲ್ಪಮಟ್ಟಿಗಾದರೂ ರಾಷ್ಟ್ರೀಯತೆಗೆ ಎರಡನೆಯ ಸ್ಥಾನ ಕೊಡುವುದನ್ನು ಕಲಿತಿವೆ. ಇತರ ರಾಷ್ಟ್ರಗಳೊಡನೆ ಕೆಲಸಮಾಡುವುದನ್ನು ಅಭ್ಯಾಸ ಮಾಡುತ್ತಿವೆ. ಎರಡು ಯುದ್ಧಗಳ ಕಾಲದಲ್ಲಿಯೂ ಹಲವು ರಾಷ್ಟ್ರಗಳು ತಮ್ಮ ಸೈನ್ಯಗಳನ್ನು ಸಂಯುಕ್ತ ಅಧಿಕಾರಕ್ಕೆ ಒಪ್ಪಿಸಿ, ಆ ಮಟ್ಟಿಗೆ ತಮ್ಮ ಸಾರ್ವಭೌಮತ್ವವನ್ನು ಬಿಟ್ಟುಕೊಟ್ಟುವು. ಇಂದಿನ ಅಣುಯುಗದಲ್ಲಿ ಎಷ್ಟೇ ಬಲಿಷ್ಠ ದೇಶವಾಗಲಿ ಒಂಟಿಯಾಗಿ ಉಳಿಯುವುದು ಅಪಾಯ ಎಂಬುದನ್ನು ಗುರುತಿಸಿ ಹಲವು ರಾಷ್ಟ್ರಗಳು ಯುದ್ಧ ಸಿದ್ಧತೆ. ಯುದ್ಧ ಕಾಲದ ರಕ್ಷಣೆಗಳಿಗೆ ನೆರವಾಗುವಂತೆ ಕೂಟಗಳನ್ನು ಏರ್ಪಡಿಸಿಕೊಂಡಿವೆ. ಆದರೆ ಯುದ್ಧದ ಭಾವನೆಯ ಸುತ್ತ ಹೆಣೆದ ಈ ಬಲೆಯೂ ಅಪಾಯಕಾರಿಯೇ. ಯೂರೋಪಿನ ಹಲವು ದೇಶಗಳು ಸಾಮಾನ್ಯ ಮಾರುಕಟ್ಟೆಯೊಂದನ್ನು ಏರ್ಪಡಿಸಿಕೊಂಡು ಆರ್ಥಿಕ ಸಹಕಾರವನ್ನು ಬೆಳೆಸಿಕೊಳ್ಳಲು ಪ್ರಯತ್ನಿಸಿವೆ. ಆದರೆ ಇಂಥ ಕೂಟ ಇತರ ದೇಶಗಳ ಆರ್ಥಿಕ ಅಭಿವೃದ್ಧಿಗೆ ಅಡ್ಡಿಯಾಗಲೂಬಹುದು.

ವಿಶ್ವ ಆರೋಗ್ಯ ಸಂಸ್ಥೆ. ಆಹಾರ ಮತ್ತು ಕೃಷಿ ಸಂಸ್ಥೆ. ವಿಶ್ವಸಂಸ್ಥೆಯ ಶೈಕ್ಷಣಿಕ. ಸಾಮಾಜಿಕ ಮತ್ತು ಸಾಂಸ್ಕೃತಿಕ ಸಂಸ್ಥೆ ಇಂಥ ಕೂಟಗಳಲ್ಲಿ (ಚೀನ. ದಕ್ಷಿಣ ಆಫ್ರಿಕ, ರೊಡೇಷಿಯದಂಥ ಕೆಲವು ರಾಷ್ಟ್ರಗಳನ್ನುಳಿದು) ಪ್ರಪಂಚದ ರಾಷ್ಟ್ರಗಳು ಕ್ರಿಯಾತ್ಮಕವಾಗಿ ಸಹಕರಿಸಲು ಕಲಿತಿವೆ. ಅಂತರರಾಷ್ಟ್ರೀಯ ಅಪರಾಧಿಗಳ ಪತ್ತೆ, ಪ್ರಪಂಚದ ಹಲವು ಭಾಗಗಳ ಸಾರಿಗೆ ಸಂಪರ್ಕಗಳು—ಇಂಥ ಕ್ಷೇತ್ರಗಳಲ್ಲಿ ಸಹಕಾರ ಬೆಳೆಯುತ್ತಿದೆ. ರಾಷ್ಟ್ರೀಯ ಸಾರ್ವಭೌಮತ್ವಕ್ಕೆ ಭಂಗಬರದಂತೆ ಪರಸ್ಪರ ಸಹಕರಿಸುವ ಮಾರ್ಗವನ್ನು ಇವು ತೋರಿಸಿವೆ. ಈ ಮಾರ್ಗದಲ್ಲಿ ಜಗತ್ತು ಮುಂದುವರಿಯಬೇಕಾಗಿದೆ. ಇಂದು ನಾವು. ಮನುಷ್ಯರು. ಗುರುತಿಸಬೇಕಾದುದು ಈ ಸಂಗತಿಯನ್ನು —ಯುದ್ಧಗಳ ನಿರ್ವಹಣೆ. ಬಾಂಬುಗಳ ದಾಳಿ. ಕೈದಿಗಳ ಯೋಗಕ್ಷೇಮ. ರೋಗಿಗಳನ್ನು ನಡೆಸಿಕೊಳ್ಳುವ ರೀತಿ ಇವನ್ನು ಕುರಿತು ಎಷ್ಟೇ ಒಪ್ಪಂದಗಳನ್ನು ಮಾಡಿಕೊಳ್ಳಲಿ. ಯಾವ ಒಪ್ಪಂದವೂ ಯುದ್ಧವನ್ನು ಮೃದುಗೊಳಿಸಲಾರದು. ದಿನಕಳೆದಂತೆ. ವಿಜ್ಞಾನ ಬೆಳೆದಂತೆ. ಯುದ್ಧ ಹೆಚ್ಚು ಹೆಚ್ಚು ಭಯಂಕರವಾಗುತ್ತದೆ. ವಿನಾಶಕಾರಿಯಾಗುತ್ತದೆ. ಆದುದರಿಂದ ಮನುಕುಲ ಉಳಿಯಬೇಕಾದರೆ ರಾಷ್ಟ್ರೀಯ ಸಾರ್ವಭೌಮತ್ವಕ್ಕೆ ಭಂಗಬರದಂತೆ. ದೇಶಾಭಿಮಾನವನ್ನು ಕಿತ್ತೊಗೆಯದೆ, ರಾಷ್ಟ್ರ-ರಾಷ್ಟ್ರಗಳ ಸಂಬಂಧವನ್ನು ಪುನರ್ವ್ಯವಸ್ಥೆಗೊಳಿಸಬೇಕು: ಮನುಷ್ಯಕುಲವೆಲ್ಲ ಬದುಕಿದರೆ ಒಟ್ಟಿಗೆ ಬದುಕುತ್ತದೆ, ನಾಶವಾದರೆ ಒಟ್ಟಿಗೆ ನಾಶವಾಗುತ್ತದೆ—ಎಂದು ವಿಚಾರಿಗಳು ಎಚ್ಚರಿಸುತ್ತಾರೆ.

# ೧೦

## ರೀತಿನೀತಿಗಳು

‘ನಮಸ್ಕಾರ’–‘ಆರೋಗ್ಯವೇ?’–‘ನೀವು ಯಾವಾಗ ಬಂದಿರಿ ?’ ‘ತಾವು ಕುಳಿತುಕೊಳ್ಳಿ’–ಇಂಥ ಪದಪುಂಜಗಳನ್ನು ಬೆಳಗಿನಿಂದ ರಾತ್ರಿಯವರೆಗೆ ಬಳಸುತ್ತಲೇ ಇರುತ್ತೇವೆ. ರಸ್ತೆಯಲ್ಲಿ ಆತುರದಲ್ಲಿ ಹೋಗುತ್ತಿರುತ್ತೇವೆ. ಗುರುತಿನವರು ಎದುರಿಗೆ ಬರುತ್ತಾರೆ. ‘ನಮಸ್ಕಾರ’ ಎಂದು ಹೇಳಿ ಮುಂದೆ ಸಾಗುತ್ತೇವೆ. ನಮಗೂ ಸಮಾಧಾನ– ಅವರನ್ನು ಮಾತನಾಡಿಸದೆ ಹೋದೆವೆಂದು ಅವರು ಕೋಪಗೊಳ್ಳುವಂತಿಲ್ಲ ಎಂದು; ಅವರಿಗೂ ಸಮಾಧಾನ, ಗುರುತಿನವರು ತಿರುಗಿನೋಡದೆ ಹೋಗಲಿಲ್ಲ ಎಂದು. ಬಸ್ಸಿನಲ್ಲಿ ಸ್ವಲ್ಪ ಪರಿಚಯವಾದವರು ಸಿಕ್ಕುತ್ತಾರೆ. ಅವರನ್ನು ಮಾತನಾಡಿಸದೆ ಹೊರಟು ಹೋದರೆ ಅಪಚಾರವಾಗುತ್ತದೆ. ಇವೆಲ್ಲ ನಿತ್ಯ ಜೀವನದ ಗಾಲಿಗಳು ಸುಲಭವಾಗಿ ತಿರುಗಲು ನಾವು ಬಳಸುವ ಎಣ್ಣೆಯ ತೊಟ್ಟುಗಳು. ಪ್ರತಿನಿತ್ಯ ಅಲ್ಪ ಪರಿಚಯವಿರುವವರು. ತುಂಬ ಪರಿಚಯವಿರುವವರು. ಸಹೋದ್ಯೋಗಿಗಳು. ಆತ್ಮೀಯರು. ನಮಗಿಂತ ಹಿರಿಯರು–ಕಿರಿಯರು ಹಲವರನ್ನು ನಿರೀಕ್ಷಿತವಾಗಿ ಅನಿರೀಕ್ಷಿತವಾಗಿ ಕಾಣುತ್ತಿರುತ್ತೇವೆ. ಈ ಭೇಟಿಗಳು ತೊಡಕಿಲ್ಲದೆ ನಡೆಯಲು ನಾವು ಸೇರಿರುವ ಸಮಾಜ ಹಲವು ಪದಪುಂಜಗಳನ್ನು ಸಿದ್ಧಮಾಡಿರುತ್ತದೆ. ಸಂಪ್ರದಾಯಗಳನ್ನು ಆಚರಣೆಗೆ ತಂದಿರುತ್ತದೆ. ಇದು ಸಾಮಾಜಿಕ ನಡವಳಿಕೆಯ ರೀತಿ. ಇದು ಶಿಷ್ಟಾಚಾರ.

ಒಂದೊಂದು ಗುಂಪು ಈ 'ರೀತಿ'ಯನ್ನು ವಿಶಿಷ್ಟವಾಗಿ ಬೆಳೆಸಿಕೊಂಡಿರುತ್ತದೆ. ಇವುಗಳಲ್ಲಿ ಕೆಲವಕ್ಕೆ ಅರ್ಥವಿರಬಹುದು, ಕೆಲವಕ್ಕೆ ಅರ್ಥವಿಲ್ಲದಿರಬಹುದು. ಇವಕ್ಕೆ ಬೆಲೆ ಬರುವುದು ಇವು ಶಿಷ್ಟಾಚಾರದ ಚೌಕಟ್ಟಿನಲ್ಲಿರುವುದರಿಂದ. ಇತ್ತೀಚಿನವರೆಗೆ ಇಬ್ಬರು ಚೀನೀಯರು ಒಬ್ಬರನ್ನೊಬ್ಬರು ಕಂಡಾಗ, ಪ್ರತಿಯೊಬ್ಬನೂ ತನ್ನ ಕೈಗಳನ್ನು ಸೇರಿಸಿ ಕುಲುಕುತ್ತಿದ್ದನಂತೆ: ಪಾಶ್ಚಾತ್ಯರಲ್ಲಿ ಒಬ್ಬರು ಇನ್ನೊಬ್ಬರ ಕೈಕುಲುಕುತ್ತಾರೆ. ಇದೇ ಸರಿ. ಅದು ತಪ್ಪು ಎನ್ನುವ ಮಾತಿಲ್ಲ ಇಲ್ಲಿ. ಹಾಗೆ ಹುಡುಕಿಕೊಂಡು ಹೋದರೆ. ಒಂದೊಂದಕ್ಕೂ ಒಂದೊಂದು ಚರಿತ್ರೆ ಇರಬಹುದು. ಶತಮಾನಗಳ ಹಿಂದೆ ಯೋಧರು ಶಿರಸ್ತ್ರಾಣಗಳನ್ನು–ಲೋಹದ ಟೋಪಿಗಳನ್ನು–ಧರಿಸುತ್ತಿದ್ದಾಗ. ಲೋಹದ ಟೋಪಿಯನ್ನು ತೆಗೆಯುವುದು ತಾನು ಇನ್ನೊಬ್ಬನಲ್ಲಿ ನಂಬಿಕೆ ಇಟ್ಟಿದ್ದೇನೆ. ಸ್ನೇಹದಿಂದ ಬಳಿಗೆ ಬರುತ್ತಿದ್ದೇನೆ ಎಂಬುದಕ್ಕೆ ಗುರುತು. ಈಗ ಹ್ಯಾಟ್ ತೆಗೆಯುವುದರ ಮೂಲ ಇದೇ. ದೊಡ್ಡವರನ್ನು ಕಂಡಾಗ 'ಸೆಲ್ಯೂಟ್' ಮಾಡುವುದು–ಹಣೆಯ ಮೇಲೆ ಅಂಗೈ ಇರಿಸುವುದು–ಒಂದು ಶಿಷ್ಟಾಚಾರದ ಪದ್ಧತಿ. ಹಿಂದೆ ಯೋಧರೆಲ್ಲ ಸೇರಿ ಸ್ನೇಹದ ಪಂದ್ಯಗಳನ್ನು–ಟೂರ್ನಮೆಂಟುಗಳನ್ನು–ಏರ್ಪಡಿಸುತ್ತಿದ್ದರು; ಅಲ್ಲಿಗೆ ಒಬ್ಬ ಸೌಂದರ್ಯ ರಾಣಿಯನ್ನು ಆರಿಸುತ್ತಿದ್ದರು. ಯೋಧರು ಅವಳ ಬಳಿಗೆ ಹೋದಾಗ ಕಣ್ಣುಗಳನ್ನು ಅಂಗೈಯಿಂದ ಮರೆಮಾಡುತ್ತಿದ್ದರು–ಅವಳ ಉಜ್ವಲ ಲಾವಣ್ಯ ತಮ್ಮ ಕಣ್ಣನ್ನು ಕೋರೈಸುತ್ತದೆ. ತಮ್ಮ ಕಣ್ಣುಗಳು ಅವಳ ರೂಪರಾಶಿಯ ಪ್ರಭೆಯನ್ನು ತಡೆಯಲಾರವು ಎಂದು ಸೂಚಿಸಲು. ಈ ಸಂಜ್ಞೆಯೇ ಗೌರವದ ಸೂಚನೆಯಾಯಿತು. ಶಿಷ್ಟಾಚಾರದ ಪ್ರತಿ ವಿವರಕ್ಕೆ ಚರಿತ್ರೆ ಇದ್ದರೂ. ಇಂದು ಅವು ಹಿಂದಿನ ಉದ್ದೇಶವನ್ನು ಕಳೆದುಕೊಂಡಿವೆ, ಶಿಷ್ಟಾಚಾರದ ಭಾಗವಾಗಿ ಉಳಿದಿವೆ.

ಪ್ರತಿ ಸಮಾಜ ಶಿಷ್ಟಾಚಾರವನ್ನು ತನ್ನದೇ ಆದ ರೀತಿಯಲ್ಲಿ ಬೆಳೆಸಿಕೊಳ್ಳುತ್ತದೆ. ಆ ಸಮಾಜದ ಹೊರಗಿನವರಿಗೆ ಅದು ವಿಚಿತ್ರವಾಗಿ ಕಾಣಬಹುದು. ಇನ್ನೊಂದು ಸಮಾಜದವರ ರೀತಿಗಳನ್ನು ಆಕ್ಷೇಪಿಸುವಾಗ. ನಮ್ಮ ರೀತಿಗಳು ಇತರರಿಗೆ ತಪ್ಪಾಗಿ ಕಾಣಬಹುದು ಎಂಬುದನ್ನು ಗಮನಿಸಬೇಕು. ಪಾಶ್ಚಾತ್ಯರಲ್ಲಿ ಗಂಡಸರು ಕುಳಿತು ಮಾತನಾಡುತ್ತಿರುವಾಗ ಹೆಂಗಸೊಬ್ಬಳು ಬಂದರೆ ಗಂಡಸರೆಲ್ಲ ಎದ್ದು ನಿಲ್ಲುವುದು ಶಿಷ್ಟಾಚಾರ. ಒಂದು ಸಮಾಜದವರು ಇನ್ನೊಂದು ಸಮಾಜವನ್ನು ಹೊಕ್ಕಾಗ ಈ ಶಿಷ್ಟಾಚಾರದ ಸಂಪ್ರದಾಯಗಳು ಸ್ವಲ್ಪ ಗೊಂದಲ ಉಂಟುಮಾಡುವುದು ಸಹಜ. ನಮ್ಮಲ್ಲಿ 'ಹೇಗಿದ್ದೀರಿ ?' ಅಥವಾ 'ಆರೋಗ್ಯವೇ ?' ಎಂದರೆ 'ಆರೋಗ್ಯ', 'ಚೆನ್ನಾಗಿದ್ದೇನೆ' ಎನ್ನುವುದು ಶಿಷ್ಟಾಚಾರ. ಪಾಶ್ಚಾತ್ಯರಲ್ಲಿ 'ಹೌ ಡು ಯು ಡು ?' ಎಂದು ಕೇಳಿದರೆ 'ಹೌ ಡು ಯು ಡು?' ಎಂದು ಪ್ರತಿಯಾಗಿ ಕೇಳುವುದು ಶಿಷ್ಟಾಚಾರ. ಹಿಂದೂಗಳಲ್ಲಿ ಬಹು ಮಂದಿ ಸ್ತ್ರೀಯರು ತಮ್ಮ ಗಂಡಂದಿರ ಹೆಸರನ್ನು ಹೇಳುವುದಿಲ್ಲ. ಪಾಶ್ಚಾತ್ಯರಿಗೆ ಇದು ವಿಚಿತ್ರವಾಗಿ ಕಾಣಬಹುದು. ಕೆಲವು ಸೂಕ್ಷ್ಮಗಳನ್ನು ಆ ಸಮಾಜದವರು ಮಾತ್ರ ಬಲ್ಲರು. ಉದಾಹರಣೆಗೆ ನಮ್ಮಲ್ಲಿ 'ನೀನು' 'ನೀವು'. ಎಂಬ ಏಕವಚನ. ಬಹುವಚನಗಳಿವೆ. 'ನೀವು' ಎಂಬ ಬಹುವಚನದ ಪದ ಯಾವಾಗಲೂ ಒಬ್ಬರಿಗಿಂತ ಹೆಚ್ಚು ಜನರನ್ನೇ ನಿರ್ದೇಶಿಸಬೇಕಾಗಿಲ್ಲ. ಗೌರವವನ್ನು ಸೂಚಿಸಲು ಒಬ್ಬರನ್ನೇ ಮಾತನಾಡಿಸುವಾಗಲೂ 'ನೀವು' ಎನ್ನುತ್ತೇವೆ. ಇದು ವ್ಯಾಕರಣದ ಬಹುವಚನವಲ್ಲ, ಗೌರವ ಸೂಚಕ ಬಹುವಚನ. ಇನ್ನೂ ಒಂದು ಬಹುವಚನ ಶಬ್ದ ಇದೆ–'ತಾವು'. ಸಾಮಾನ್ಯವಾಗಿ 'ನೀನು' ಬಳಸಿದಾಗಲೆಲ್ಲ ಗೌರವ ಇಲ್ಲ ಎಂದಲ್ಲ: ತಾಯಿಯನ್ನು 'ನೀನು' ಎನ್ನುತ್ತೇವೆ: ದೇವರನ್ನೂ 'ನೀನು' ಎಂದೇ ಸಂಬೋಧಿಸುತ್ತೇವೆ. ಈ ಸಮಾಜಕ್ಕೆ ಸೇರಿದವರಿಗೆಲ್ಲ 'ನೀನು' 'ನೀವು' 'ತಾವು'ಗಳ ಬಳಕೆಯ ಸೂಕ್ಷ್ಮ ನಿಯಮಗಳು. ಧ್ವನಿ ತಿಳಿದಿರುತ್ತವೆ. ಹೆಚ್ಚು ಪರಿಚಯವಿಲ್ಲದಿರುವವರನ್ನು 'ನೀನು' ಎಂದರೆ ಅಸಮಾಧಾನ ಪಟ್ಟುಕೊಳ್ಳುತ್ತಾರೆ–ಜಗಳವೂ ಆದೀತು: ತಂದೆ ಅಥವಾ ತಾಯಿ ಮಗನನ್ನು 'ನೀವು' ಎಂದೋ 'ತಾವು' ಎಂದೋ ಸಂಬೋಧಿಸಿದರೆ ಮಗನಿಗೆ ಗೊತ್ತು ತಾನು ಅವರಿಗೆ ಅಸಮಾಧಾನ ಬರಿಸಿದ್ದೇನೆ ಎಂದು. (ಹದಿನೇಳನೆಯ ಶತಮಾನದವರೆಗೆ ಇಂಗ್ಲೆಂಡಿನಲ್ಲಿ 'ದೌ'-'ಯು' ಎರಡರ ಪ್ರಯೋಗ ಇದೇ ರೀತಿ ಧ್ವನಿಯನ್ನು ಸೂಚಿಸುತ್ತಿತ್ತು.) ಈ ಧ್ವನಿ ಸೂಕ್ಷ್ಮಗಳು. ಶಿಷ್ಟಾಚಾರದ ರೀತಿಗಳ ಸೂಕ್ಷ್ಮಗಳು ಇವನ್ನು ಆಯಾ ಸಮಾಜದವರು ಮಾತ್ರ ಗುರುತಿಸಬಲ್ಲರು. ಆದ್ದರಿಂದ ಕೆಲವರು ಇವನ್ನು ಗುಂಪಿನ ಸದಸ್ಯತ್ವದ ಚಿಹ್ನೆಗಳು ಎಂದು ಕರೆಯುತ್ತಾರೆ. ಎರಡು ಪ್ರಾಣಿಗಳು ಸಂಧಿಸಿದಾಗ. ಪರಸ್ಪರ ಶತ್ರುಗಳೇ, ಒಂದೇ ಹಿಂಡಿನ ಸದಸ್ಯರೇ ಎನ್ನುವುದನ್ನು ವಾಸನೆಯಿಂದ. ಕೆಲವು ಶಬ್ದಗಳಿಂದ ಕಂಡುಕೊಳ್ಳುತ್ತವೆ. ಹಿಂದಿನ ಕಾಲದ ಮಾನವ ಮತ್ತೊಬ್ಬನನ್ನು ಸಂಧಿಸಿದಾಗ ಆತ ಬೇರೆ ಪಂಗಡದವನೇ. ತನ್ನ ಪಂಗಡದವನೇ ಎಂಬುದನ್ನು ಗುರುತಿಸಲು ಶಿಷ್ಟಾಚಾರದ ರೀತಿಗಳು ಸಾಧನೆಗಳಾಗಿದ್ದುವು ಎನ್ನುತ್ತಾರೆ.

ಶಿಷ್ಟಾಚಾರಕ್ಕೆ ಸಂಬಂಧಿಸಿದಂತೆ ಇರುವ ಇನ್ನೊಂದು ವಿಷಯ ಉಡುಗೆ ತೊಡುಗೆ. ಮನುಷ್ಯ ಹಿಂದೆ ನಗ್ನನಾಗಿಯೇ ಓಡಾಡುತ್ತಿದ್ದ. ಯಾವುದೋ ಒಂದು ಘಟ್ಟದಲ್ಲಿ ನಾಚಿಕೆಯ ಭಾವನೆಯನ್ನು ಬೆಳೆಸಿಕೊಂಡು ಮತ್ತು ಚಳಿಬಿಸಿಲು ಗಾಳಿಗಳಿಂದ ರಕ್ಷಣೆ ಪಡೆಯಲು ತನ್ನ ನಗ್ನ ಶರೀರವನ್ನು ಮರೆಮಾಡಲು ಪ್ರಾರಂಭಿಸಿದ. ಎಲೆಗಳು, ಮರಗಳ ತೊಗಟೆಗಳಿಂದ ಪ್ರಾರಂಭಮಾಡಿ ಬಟ್ಟೆಗಳ ಬಳಕೆಯನ್ನು ಕಲಿತ. ಶೃಂಗಾರಪ್ರಿಯತೆ ಮನುಷ್ಯನಿಗೆ ರಕ್ತಗತವಾಗಿ ಬಂದಿದೆ. ಹೂಗಳು. ಗರಿಗಳು. ಎಲೆಗಳು ಎಲ್ಲವನ್ನೂ ಅಲಂಕಾರ ಸಾಧನಗಳನ್ನಾಗಿ ಬಳಸಿಕೊಂಡ. ಇಂದು ಎಲ್ಲ ದೇಶಗಳಲ್ಲಿ ಉಡುಗೆ ತೊಡುಗೆಗಳನ್ನು ಸಿದ್ಧಮಾಡುವ ಉದ್ಯಮವೇ ಅದ್ಭುತವಾಗಿ ಬೆಳೆದಿದೆ. ಲಕ್ಷಾಂತರ ಮಂದಿಗೆ ಜೀವನೋಪಾಯವನ್ನು ಒದಗಿಸಿದೆ. ಅಲಂಕಾರ ಸಾಮಗ್ರಿಗಳನ್ನು ತಯಾರಿಸುವ ಉದ್ಯಮ ಇನ್ನು ಕೆಲವು ಲಕ್ಷ ಮಂದಿಗೆ ಕೆಲಸ ನೀಡಿದೆ. ಉಡುಗೆತೊಡುಗೆಗಳು. ಅಲಂಕಾರ ಸಾಧನಗಳು ಇವುಗಳಲ್ಲಿ ಸಂಶೋಧನೆ ಮತ್ತು ಪ್ರಯೋಗಗಳಿಗಾಗಿ ಎಷ್ಟು ಕೋಟಿ ರೂಪಾಯಿಗಳು ವೆಚ್ಚವಾಗುವವೋ ಹೇಳಲಾರೆ. ಇವುಗಳಲ್ಲಿ ನೈಪುಣ್ಯವನ್ನು ಪಡೆದವರಿಗೆ ಹಣದ ಸುರಿಮಳೆ: ನಾಗರಿಕ ಜಗತ್ತಿನಲ್ಲಿ ಬಹುಭಾಗ ಅವರ ಕಾಲಬಳಿ. ಬಹುಮಂದಿ ಉಡುಗೆತೊಡುಗೆಗಳನ್ನು ಬಳಸುವುದು ಮರ್ಯಾದೆಗಿಂತ ಹೆಚ್ಚಾಗಿ ಆಕರ್ಷಣೆಗಾಗಿ ಎಂದು ಸಮಾಜಶಾಸ್ತ್ರಜ್ಞರು ಹೇಳುತ್ತಾರೆ.

ಉಡುಗೆತೊಡುಗೆಗಳ ರೀತಿಯ ನಿರ್ಧಾರಕ್ಕೂ ತರ್ಕ ಅವಶ್ಯಕತೆಗಳಿಗಿಂತ ಸಂಪ್ರದಾಯ ಆಧಾರ. ಹಿಂದಿನ ಕಾಲದಲ್ಲಿ ಪ್ರತಿ ಪಂಗಡವೂ ತನ್ನದೇ ವಿಶಿಷ್ಟ ಉಡುಗೆ ತೊಡುಗೆ ಅಲಂಕಾರಗಳನ್ನು ವಿಧಿಸುತ್ತಿತ್ತು. ಅಲ್ಲದೆ ಒಂದೊಂದು ಸಂದರ್ಭಕ್ಕೆ ಒಂದೊಂದು ಬಗೆಯ ಉಡುಪು.

ಬೇಟೆಗೆ ಒಂದು ಬಗೆಯದು, ಕುಲದ ದೇವತೆಗಳ ಪ್ರಾರ್ಥನೆಯ ಸಮಯದಲ್ಲಿ ಮತ್ತೊಂದು, ಹಿರಿಯರ ಮುಂದಲಿ ಸೇರುವಾಗ ಬೇರೊಂದು, ಶವಸಂಸ್ಕಾರದ ಹೊತ್ತಿಗೆ ಇನ್ನೊಂದು, ಹೀಗೆ ಸಂದರ್ಭವನ್ನನುಸರಿಸಿ ಉಡುಗೆತೊಡುಗೆಗಳನ್ನು ಸಂಪ್ರದಾಯ ನಿರ್ಧರಿಸಿರುತ್ತಿತ್ತು. ಸಂಪ್ರದಾಯದ ಶಕ್ತಿಯನ್ನು ಇಂದಿಗೂ ಪ್ರಪಂಚದ ಎಲ್ಲ ಭಾಗಗಳಲ್ಲಿ ಕಾಣುತ್ತೇವೆ. ಪಾಶ್ಚಾತ್ಯರಲ್ಲಿ ಬೆಳಗಿನ ಉಡುಪೊಂದು, ಅನೌಪಚಾರಿಕ ಊಟಕ್ಕೆ ಒಂದು ಉಡುಪು. ಔಪಚಾರಿಕ ಊಟದ ಔತಣ ಏರ್ಪಡಿಸಿಕೊಂಡಾಗ ಬೇರೊಂದು. ಯಾವ ಯಾವ ಸಂದರ್ಭಕ್ಕೆ ಯಾವ ಬಗೆಯ ಟೋಪಿಯನ್ನು ಧರಿಸಬೇಕು, ಯಾವ ಬಣ್ಣದ ಯಾವ ಬಗೆಯ 'ನೆಕ್‌ಟೈ'ಯನ್ನು ಧರಿಸಬೇಕು ಎಂಬುದನ್ನು ಸಂಪ್ರದಾಯ ಕಟ್ಟುನಿಟ್ಟಾಗಿ ನಿರ್ಧರಿಸುತ್ತದೆ. ಇತ್ತೀಚಿನವರೆಗೆ ಈ ಕಟ್ಟಳೆಗಳನ್ನು ಮುರಿದವನನ್ನು ಅನಾಗರಿಕ ಎಂದು ಭಾವಿಸುತ್ತಿದ್ದರು. ಪಾಶ್ಚಾತ್ಯರಲ್ಲಿ ವಿವಾಹದ ಸಮಯದಲ್ಲಿ ವಧು ಬಿಳಿಯ ಬಟ್ಟೆಯನ್ನುಡುತ್ತಾಳೆ –ಅದು ಶುದ್ಧ ಜೀವನದ ಸಂಕೇತ ಎಂದು. ಹಿಂದೂಗಳಲ್ಲಿ ವಿವಾಹದ ಸಮಯದಲ್ಲಿ ಅರಿಶಿನ ಬಣ್ಣದ ಬಟ್ಟೆಯನ್ನುಡುತ್ತಾಳೆ ವಧು—ಅದು ಶುಭದ ಸಂಕೇತ ಎಂದು. ಹಿಂದೂಗಳ ಕೆಲವು ಪಂಗಡಗಳಲ್ಲಿ ವಿಧವೆಯರು ಬಿಳಿ ಬಟ್ಟೆಯನ್ನು ಮಾತ್ರ ಉಡುತ್ತಾರೆ. ಕ್ರೈಸ್ತರಲ್ಲಿ ಬಹುಮಂದಿಗೆ ಬಿಳಿ ಒಳ್ಳೆಯತನದ ಸಂಕೇತ. ಕಪ್ಪು ದುಃಖದ ಅಥವಾ ದುಷ್ಟತನದ ಸಂಕೇತ. ಹಾಯಿತಿ ದ್ವೀಪಗಳಲ್ಲಿ ಬಿಳಿ ಕೆಟ್ಟತನದ ಸಂಕೇತ. ಕಪ್ಪು ಒಳ್ಳೆಯತನದ ಸಂಕೇತ. ಅಲ್ಲಿನ ಚಿತ್ರಗಳಲ್ಲಿ ಯೇಸುಕ್ರಿಸ್ತನಿಗೆ ಕಪ್ಪು ಬಟ್ಟೆಯನ್ನು ಉಡಿಸುತ್ತಾರೆ: ಸೈತಾನನಿಗೆ ಬಿಳಿಯ ಬಣ್ಣ. ಪೂರ್ವ ಆಫ್ರಿಕದ ಮಸಾಯಿ ಪಂಗಡದ ತರುಣ ಯೋಧರು ಹಣೆಯಿಂದ ಭುಜದ ಮೇಲೆ ಬರುವಂತೆ ಜಡೆ ಹಾಕಿಕೊಳ್ಳುತ್ತಾರೆ : ಹೆಂಗಸರು ತಲೆಯನ್ನು ಬೋಳುಮಾಡಿಕೊಳ್ಳುತ್ತಾರೆ.

ಉಡುಗೆ ತೊಡುಗೆಗಳ ವಿಷಯದಲ್ಲಿ ಸಂಪ್ರದಾಯ -ಫ್ಯಾಷನ್- ಸರ್ವಾಧಿಕಾರಿ. ಇಂದಿನ ಅರ್ಥದಲ್ಲಿ 'ಫ್ಯಾಷನ್' ಈಚಿನದು. ಸಂಚಾರ ಕಷ್ಟವಾಗಿದ್ದ ಕಾಲದಲ್ಲಿ ಫ್ಯಾಷನಿನ ಬದಲಾವಣೆಗಳ ಸುದ್ದಿ ಹರಡುವುದು ನಿಧಾನವಾಗುತ್ತಿತ್ತು: ಹೆಂಗಸರು ಮನೆಯಲ್ಲಿಯೇ ಇರಬೇಕೆಂದು, ಹೊರಕ್ಕೆ ಕಾಣಿಸಿಕೊಳ್ಳಬಾರದೆಂದು ವಿಧಿಸಿದ ಸಮಾಜದಲ್ಲಿ ಹೆಂಗಸಿನ ಉಡುಗೆ ತೊಡುಗೆಗಳ ಅಂದಚಂದದ ಉಪಯೋಗ ಮಿತವಾಗಿರುತ್ತಿತ್ತು. ಫ್ಯಾಷನ್ ಬೆಳೆಯಲು ಅವಕಾಶವಿರಲಿಲ್ಲ. ಯಂತ್ರಗಳು ಹೆಚ್ಚಾಗಿಲ್ಲದೆ ಬಹು ಮಂದಿ ತಮ್ಮ ಕೆಲಸದ ಬಹು ಭಾಗವನ್ನು ತಾವೇ ಮಾಡಿಕೊಳ್ಳಬೇಕಾಗಿದ್ದಾಗ 'ಫ್ಯಾಷನ್' ಗಿಂತ ಉಪಯುಕ್ತತೆಗೆ ಹೆಚ್ಚು ಬೆಲೆ ಇತ್ತು. ಭಾರತೀಯರ ವಿಶಿಷ್ಟ ಉಡುಪುಗಳು –ಗಂಡಸರ ಧೋತಿ, ಹೆಂಗಸರ ಸೀರೆ– ಕ್ರಿ. ಪೂ. ಎರಡನೆಯ ಶತಮಾನದಲ್ಲಿಯೇ ಬಳಕೆಯಲ್ಲಿದ್ದುವೆಂಬುದನ್ನು ಶಿಲ್ಪಕೃತಿಗಳು ತೋರಿಸಿವೆ. ಹನ್ನೆರಡನೆಯ ಶತಮಾನದವರೆಗೆ ಇವರಲ್ಲಿ ಈ ಉಡುಪುಗಳಲ್ಲಿ ವ್ಯತ್ಯಾಸವಾಗಲಿಲ್ಲ. ಮುಸಲ್ಮಾನರು ಈ ದೇಶದಲ್ಲಿ ನೆಲೆಸಲು ಪ್ರಾರಂಭಿಸಿದ ಮೇಲೆ ಉಡುಪಿನಲ್ಲಿ ಕೆಲವು ಮಾರ್ಪಾಡುಗಳು ಕಾಣಿಸಿಕೊಂಡುವು. ಪಾಶ್ಚಾತ್ಯರು ಇಲ್ಲಿ ನೆಲೆಸಿದುದು, ಹಲವರು ಭಾರತೀಯರು ಪಾಶ್ಚಾತ್ಯ ದೇಶಗಳಿಗೆ ಹೋಗಿ ಬಂದುದು ಇನ್ನೂ ಕೆಲವು ಮಾರ್ಪಾಡುಗಳಿಗೆ ಕಾರಣಗಳಾದುವು. ಪಾಶ್ಚಾತ್ಯ ದೇಶಗಳಲ್ಲಿ 'ಫ್ಯಾಷನ್' ಪ್ರಾರಂಭವಾದುದು ಹದಿನಾಲ್ಕನೆಯ ಶತಮಾನದಿಂದ.

'ಫ್ಯಾಷನ್'ಗಳು ಬಹುಬೇಗ ಬದಲಾವಣೆಯಾಗುತ್ತವೆ. ಈ ಫ್ಯಾಷನ್‌ಗಳ ಹುಟ್ಟು, ವೈಭವ, ಸಾವುಗಳಿಗೆ ಕಾರಣಗಳನ್ನು ಹುಡುಕುವುದು ಕಷ್ಟ. ಕಾರಣ ತಿಳಿದಾಗ ಒಮ್ಮೊಮ್ಮೆ ಸ್ವಾರಸ್ಯಕರವಾಗಿ ಕಾಣುತ್ತದೆ. ಹದಿನಾಲ್ಕನೆಯ ಲೂಯಿಯ ತಂದೆ ಬಕ್ಕತಲೆಯವನು. ಆದರಿಂದ ಅವನು ಕೃತಕಕೂದಲಿನ ಕುಲಾವಿಯನ್ನು ಬಳಸುತ್ತಿದ್ದ. ಗಣ್ಯರೆನಿಸಿಕೊಂಡ ಗಂಡಸರೆಲ್ಲ–ಸೊಗಸಾಗಿ ಕೂದಲಿದ್ದವರೂ–ಇಂಥ ಕುಲಾವಿಯನ್ನು ಬಳಸಲು ಪ್ರಾರಂಭಿಸಿದರು. ಹದಿನಾಲ್ಕನೆಯ ಲೂಯಿಗೆ ಸೊಗಸಾದ ಗುಂಗುರು ಕೂದಲಿತ್ತು. ಆತ ಈ ಕುಲಾವಿಯನ್ನು ಬಿಟ್ಟ : ಫ್ಯಾಷನ್ ಬದಲಿಸಿತು. ಸ್ವಲ್ಪ ವಯಸ್ಸಾಗುತ್ತಲೇ ಲೂಯಿಯೂ ಬೋಳಾಗುತ್ತಿದ್ದ ತಲೆಗೆ ಕುಲಾವಿ ಹೊದ್ದಿಸಿದ : ಕುಲಾವಿ ಮತ್ತೆ ಫ್ಯಾಷನ್ ಆಯಿತು. ಹದಿನೇಳನೆಯ ಶತಮಾನದಲ್ಲಿ ಫ್ರಾನ್ಸಿನ ಆಸ್ಥಾನದ ಶ್ರೀಮಂತಳೊಬ್ಬಳಿಗೆ ಸಿಡುಬೆದ್ದು ಮುಖವೆಲ್ಲ ಕಲೆಯಾಯಿತು. ಅದನ್ನು ಮುಚ್ಚಲು ಆಕೆ ಸಣ್ಣ ಸಣ್ಣ ಬಟ್ಟೆಯ ತೇಪೆಗಳನ್ನು ಬಳಸಿದಳು. ಮುಖಕ್ಕೆ ತೇಪೆಗಳನ್ನು ಅಂಟಿಸಿಕೊಳ್ಳುವುದು ಹೆಂಗಸರಿಗೆ ಫ್ಯಾಷನ್ ಆಯಿತು. ಇದೇ ಶತಮಾನದಲ್ಲಿ ಹೆಂಗಸರ ಉಡುಪು ಹಿಮ್ಮಡಿಯವರೆಗೆ ಬರುತ್ತಿತ್ತು. ತನ್ನ ಕಾಲಹರಡು ಸುಂದರವಾಗಿದೆ ಎಂದುಕೊಂಡ ರಾಜಕುಮಾರಿಯೊಬ್ಬಳು ಉಡುಪಿನ ಅಂಚನ್ನು ಸ್ವಲ್ಪ ಮೇಲಕ್ಕೇರಿಸಿದಳು. ಕಾಲಹರಡು ಕಾಣುವಂತೆ ಉಡುಪು ಧರಿಸುವುದೇ 'ಫ್ಯಾಷನ್' ಆಯಿತು. ಹದಿನಾಲ್ಕನೆಯ ಲೂಯಿಯ ಕಾಲದಲ್ಲಿ ಉಡುಪಿನ 'ಫ್ಯಾಷನ್'ಗೆ ಪ್ಯಾರಿಸ್ ಕೇಂದ್ರ. 1672ರಲ್ಲಿ ಪ್ಯಾರಿಸಿನಲ್ಲಿ ಮೊಟ್ಟಮೊದಲನೆಯ ಫ್ಯಾಷನ್ ಪತ್ರಿಕೆ ಪ್ರಕಟವಾಯಿತು. ಇಂದೂ ಹೆಂಗಸರ ಉಡುಪಿಗೆ ಯೂರೋಪಿನಲ್ಲಿ ಫ್ರಾನ್ಸ್ ಮೇಲ್ಪಂಕ್ತಿ: ಗಂಡಸರ ಉಡುಪಿಗೆ ಇಂಗ್ಲೆಂಡಿನ ಮಾರ್ಗದರ್ಶನ.

ಇದೆಲ್ಲವನ್ನೂ ನೆನೆದಾಗ ಕೆಲವು ವಿಷಯಗಳು ಸ್ಪಷ್ಟವಾಗುತ್ತವೆ. ಶಿಷ್ಟಾಚಾರ, ಉಡುಪು ಇವುಗಳಲ್ಲಿ ಸರಿ–ತಪ್ಪು ಎಂದು ಕಟ್ಟುನಿಟ್ಟಾದ ನಿಯಮಗಳಿಲ್ಲ. ಸಮಷ್ಟಿ ಅಭಿಪ್ರಾಯವೇ ಇಲ್ಲಿ ನಿರ್ಣಾಯಕ. ಆಯಾ ದೇಶದ ಹವೆ, ಆಹಾರ ಇಂಥ ಅಂಶಗಳೂ ಶಿಷ್ಟಾಚಾರ ಮತ್ತು ಉಡುಪುಗಳ ಮೇಲೆ ಪ್ರಭಾವ ಬೀರುತ್ತವೆ. ಚಳಿ ದೇಶಗಳಲ್ಲಿ ಕೈಗೆ ಚೀಲ ಹಾಕುವುದು ಉತ್ತಮ: ಉಷ್ಣದೇಶದಲ್ಲಿ ತಾನಾಗಿ ಕೈ ಬೆವರುವಾಗ ಇದು ಅನಗತ್ಯ. ಅಷ್ಟೆ. ಹನ್ನೆರಡು ತಿಂಗಳೂ ನೀರು ದೊರಕ ಚಳಿ ಹೆಚ್ಚಿಲ್ಲದ ದೇಶದಲ್ಲಿ ಮತ್ತೆ ಮತ್ತೆ ಕೈಕಾಲುಗಳನ್ನು ತೊಳೆಯಬಹುದು: ಚಳಿಗಾಲದಲ್ಲಿ ನೀರು ಹೆಪ್ಪುಗಟ್ಟುವ ಕಡೆ ಇದು ಸಾಧ್ಯವಿಲ್ಲ. ಅತಿ ಉಷ್ಣಪ್ರದೇಶದಲ್ಲಿ ಗಂಡಸರು ಎದೆಯನ್ನು ಮುಚ್ಚದಿರಬಹುದು. ಅಥವಾ ತೆಳ್ಳಗಿನ ವಸ್ತ್ರವನ್ನು ಹೊದೆಯಬಹುದು. ಇತರರಿಗೆ ಇದು ಅಸಭ್ಯವಾಗಿ ಕಾಣಬಹುದು. ಶಿಷ್ಟಾಚಾರ, ಉಡುಪುಗಳ ಬಗೆಗೆ ಹೀಗೆಯೇ ನಿಯಮಗಳನ್ನು ಮಾಡುವಂತಿಲ್ಲ. ಎರಡು ಸೂತ್ರಗಳನ್ನು ಮಾತ್ರ ಸೂಚಿಸಬಹುದು. ತಾನಿರುವ ಗುಂಪಿಗೆ ವಿಚಿತ್ರ ಎನ್ನಿಸುವಂತೆ ಅಥವಾ ಅವರಲ್ಲಿ ಯಾರಿಗಾದರೂ ಬೇಸರವಾಗುವಂತೆ ನಡೆದುಕೊಳ್ಳದೆ ಇರುವುದು ಲೇಸು: ಇತರರ ಗಮನವನ್ನು ತನ್ನೆಡೆಗೆ ಸೆಳೆದುಕೊಳ್ಳುವ ಪ್ರಯತ್ನ ಎಂದು ಎದ್ದುಕಾಣುವಂತೆ ನಡೆದುಕೊಳ್ಳದೆ ಇರುವುದು ಲೇಸು. ಅಹಮಿಕೆ (ಅಹಂಭಾವ) ನಾಗರಿಕ ಸಮಾಜಕ್ಕೆ ಸಲ್ಲದು. [illegible]

ಪ್ರವೃತ್ತಿಗೂ ನಾಗರಿಕ ವರ್ತನೆಗೂ ಕಡು ವಿರೋಧ. ಒಂದು ಸಮಾಜದವರು ಇನ್ನೊಂದು ಸಮಾಜದ ಪದ್ಧತಿಗಳನ್ನು ದತ್ತುಮಾಡಿಕೊಳ್ಳುವಾಗ ಅದನ್ನು ಪೂರ್ಣವಾಗಿ ಅರ್ಥಮಾಡಿಕೊಳ್ಳಬೇಕು. ರಾತ್ರಿ ಮಲಗುವ ಮುನ್ನ ಹಲ್ಲನ್ನು ಸ್ವಚ್ಛಗೊಳಿಸುವ ಅಭ್ಯಾಸವಿರುವ ಜನ ಬೆಳಗ್ಗೆ ಏಳುತ್ತಲೇ ಹಾಸಿಗೆಯಲ್ಲಿ ಕಾಫಿ–ಟೀಗಳನ್ನು ಸೇವಿಸಬಹುದು; ಆದರೆ ಆ ಪದ್ಧತಿ ಇಲ್ಲದ ಜನ ಹಾಸಿಗೆಯಲ್ಲಿ ಕಾಫಿ–ಟೀಗಳನ್ನು ಸೇವಿಸುವ ಅಭ್ಯಾಸ ಮಾಡಿದರೆ ಆರೋಗ್ಯಕ್ಕೆ ತೊಂದರೆ. ಧೂಮಪಾನ ಮಾಡುವುದಕ್ಕೆ ಸಂಬಂಧಿಸಿದಂತೆ ಪಾಶ್ಚಾತ್ಯರಲ್ಲಿ ನಡವಳಿಕೆಯ ಸೂತ್ರಗಳಿವೆ. ರೈಲಿನಲ್ಲಿ ಧೂಮಪಾನ ಮಾಡುವವರಿಗಾಗಿಯೇ ಪ್ರತ್ಯೇಕ ಡಬ್ಬಿ ಇರುತ್ತದೆ. ಎಲ್ಲ ಡಬ್ಬಿಗಳಲ್ಲಿ ಧೂಮಪಾನಮಾಡಿ ಇತರರಿಗೆ ಯಾರೂ ತೊಂದರೆ ಕೊಡುವುದಿಲ್ಲ. ಗಾಳಿ ಓಡಾಡದಿರುವಾಗ, ಉದಾ: ಮಳೆ ಎಂದೊ ಗಾಳಿ ಎಂದೊ ಕಿಟಕಿಗಳನ್ನೆಲ್ಲ ಮುಚ್ಚಿರುವ ವಾಹನದಲ್ಲಿ, ಧೂಮಪಾನ ಮಾಡುವುದಿಲ್ಲ. ಇಂಥ ಸೂತ್ರಗಳನ್ನು ಅರಿಯದೆ ಸಿಗರೇಟು ಬೀಡಿಗಳನ್ನು ಸೇದುವ ಅಭ್ಯಾಸವನ್ನು ಮಾತ್ರ ಮಾಡಿದವರಿಂದ ಕಾಯಿಲೆ ಇರುವ ವೃದ್ಧರು, ಹೆಂಗಸರು, ಎಳೆಯ ಮಕ್ಕಳು ಇವರಿಗೆಲ್ಲ ಎಷ್ಟು ಹಿಂಸೆ! ಶಿಷ್ಟಾಚಾರದ ಸಂಪ್ರದಾಯಗಳು ನಾವು ನಡೆದುಕೊಳ್ಳಬೇಕಾದ ರೀತಿಯನ್ನು ನಿತ್ಯಜೀವನದ ವ್ಯವಹಾರಗಳನ್ನು ಸುಗಮಗೊಳಿಸುತ್ತವೆ. ಹತ್ತು ಜನರಿಗೆ ಕಾಗದ ಬರೆಯುತ್ತೇವೆ; ಪ್ರತಿ ಬಗೆಯ ಕಾಗದವನ್ನು ಹೇಗೆ ಪ್ರಾರಂಭಿಸಬೇಕು, ಹೇಗೆ ಮುಗಿಸಬೇಕು ಎಂದು ಸಂಪ್ರದಾಯ ನಿರ್ಧರಿಸಿರುತ್ತದೆ. ಹೀಗಾಗಿ ಕಾಗದವನ್ನು ಹೇಗೆ ಪ್ರಾರಂಭಿಸಬೇಕು, ಹೇಗೆ ಮುಕ್ತಾಯಗೊಳಿಸಬೇಕು ಎಂದು ಗೊಂದಲಪಡುವ ಅಗತ್ಯವಿಲ್ಲ, ಇತರರು ನಮ್ಮನ್ನು ತಪ್ಪರ್ಥಮಾಡಿಕೊಳ್ಳುವ ಸಂಭವವೂ ಇಲ್ಲ.

ನೀತಿಯ ಪ್ರಶ್ನೆ ರೀತಿಯ ಪ್ರಶ್ನೆಗಳಿಗೆ ಒಂದು ಸಾಮಾನ್ಯ ಅಂಶ ಉಂಟು. ಎಲ್ಲ ಕಾಲಕ್ಕೂ ಎಲ್ಲ ದೇಶಗಳಿಗೂ ಅನ್ವಯವಾಗುವಂಥ ಸೂತ್ರಗಳಿಲ್ಲ. ದೇಶದಿಂದ ದೇಶಕ್ಕೆ, ಕಾಲದಿಂದ ಕಾಲಕ್ಕೆ, ಒಂದೇ ದೇಶದಲ್ಲಿ ಒಂದು ಕಾಲದಿಂದ ಇನ್ನೊಂದು ಕಾಲಕ್ಕೆ ಅನೀತಿ–ನೀತಿಗಳ ಪಾಪ–ಪುಣ್ಯಗಳ ನಿಯಮಗಳು ಬದಲಾಗುತ್ತವೆ. ಕ್ಯಾಥಲಿಕರಲ್ಲಿ ಅಣ್ಣ ಸತ್ತರೆ ತಮ್ಮ ಅಣ್ಣನ ಹೆಂಡತಿಯನ್ನು ಮದುವೆಯಾಗುವುದು ಪಾಪಕರ. ದಕ್ಷಿಣ ಭಾರತದ ಕೆಲವು ಪಂಗಡಗಳಲ್ಲಿ ಯಾರೂ ತನ್ನ ಅಕ್ಕನ ಮಗಳನ್ನು ಮದುವೆಯಾಗುವಂತಿಲ್ಲ. ಹಿಂದೂಗಳ ಅನೇಕ ಪಂಗಡಗಳಲ್ಲಿ ಅಣ್ಣ ತಮ್ಮಂದಿರ ಮಕ್ಕಳು ಮದುವೆಯಾಗುವುದು ಪಾಪ ಎಂದು ಭಾವಿಸುತ್ತಾರೆ. ಪ್ರಾಚೀನ ಈಜಿಪ್ಟಿನ ರಾಜಮನೆತನದಲ್ಲಿ ಅಣ್ಣ–ತಂಗಿ, ಅಕ್ಕ–ತಮ್ಮ ಮದುವೆಯಾಗುತ್ತಿದ್ದುದುಂಟು. ಪ್ರಾಚೀನ ಭಾರತದಲ್ಲಿ ಯಜ್ಞಯಾಗಾದಿಗಳಲ್ಲಿ ಪ್ರಾಣಿಗಳನ್ನು ಬಲಿಕೊಡುತ್ತಿದ್ದರು. ಬೌದ್ಧ ಮತದ ಪ್ರಭಾವದಿಂದ ಅಹಿಂಸೆಗೆ ಮಹತ್ವ ಬಂದಿತು. ಆದರೆ ಇಂದೂ ಭಾರತದ ಹಲವು ಹಳ್ಳಿಗಳಲ್ಲಿ ಜನ ಪ್ರಾಣಿಬಲಿಯಲ್ಲಿ ನಂಬಿಕೆ ಇಟ್ಟಿದ್ದಾರೆ. ಹಿಂದೂಗಳಲ್ಲದ ಕೆಲವರಲ್ಲಿ ದಯೆಗೆ ಹಿರಿಯ ಸ್ಥಾನ, ಆದರೆ ಅವರು ಪ್ರಾಣಿಹಿಂಸೆ ತಪ್ಪು ಎನ್ನುವುದಿಲ್ಲ. ಅವರ ವಾದ : ಮನುಷ್ಯನಿಗೆ ಆತ್ಮವಿದೆ, ಆದ್ದರಿಂದ ಅವನ ವಿಷಯದಲ್ಲಿ ದಯೆ ಅಗತ್ಯ. ಪ್ರಾಣಿಗಳಿಗೆ ಆತ್ಮವಿಲ್ಲ, ಆದ್ದರಿಂದ ಅದಕ್ಕೆ ದಯೆ ತೋರಿಸಬೇಕೆಂದಿಲ್ಲ. ಕೊಲೆ ಮಹಾಪರಾಧ ಎಂದು ನಮಗೆ ತೋರುತ್ತದೆ. ಫಿಲಿಪೀನ್ಸ್‌ನ ಹಲವು ಪಂಗಡಗಳಲ್ಲಿ ಅತಿ ಹೆಚ್ಚಿನ ತಲೆಗಳನ್ನು ತಂದ ಶೂರನನ್ನು ಮದುವೆಯಾಗಲು ಹುಡುಗಿಯರು ತವಕಪಡುತ್ತಿದ್ದರು. ಎಸ್ಕಿಮೊಗಳಲ್ಲಿ ತಂದೆ ತಾಯಿ ತೀರ ವೃದ್ಧರಾಗಿ ಹಾಸಿಗೆ ಹಿಡಿದು, ಅವರಿಗೇ ಜೀವನ ಹೊಣೆಯಾದಾಗ, ಅವರನ್ನು ಕೊಲ್ಲುವುದು ಮಗನ ಕರ್ತವ್ಯ.

ಹೀಗೆ ಪಾಪ–ಪುಣ್ಯಗಳ ಕಲ್ಪನೆ ಜಗತ್ತಿನಲ್ಲಿ ಶತಮಾನಗಳಿಂದ ಹರಡಿದ್ದರೂ ಅವುಗಳನ್ನು ನಿರ್ದಿಷ್ಟವಾಗಿ ಮತ್ತು ತರ್ಕಬದ್ಧವಾಗಿ ಎಲ್ಲ ಕಾಲದೇಶಗಳಿಗೆ ಅನ್ವಯಿಸುವಂತೆ ನಿರ್ಧರಿಸುವ ಸೂತ್ರಗಳಿಲ್ಲ. ಯಾವುದು ಪಾಪ, ಯಾವುದು ಪುಣ್ಯ ಎನ್ನುವುದು, ವ್ಯಕ್ತಿ ಸೇರಿದ ಗುಂಪಿನ ಸಂಪ್ರದಾಯ ಮತ್ತು ಬಹುಮತಾಭಿಪ್ರಾಯಗಳಿಂದ ನಿರ್ಣಯವಾಗುತ್ತದೆ.

ಹೀಗೆಂದಮಾತ್ರಕ್ಕೆ ನೀತಿಯನ್ನು ಕುರಿತು ಕಡೆಯ ಮಾತನ್ನು ಆಡಿದಂತಾಗಲಿಲ್ಲ. ಕೆಲವು ಅಂಶಗಳನ್ನು ಗಮನಿಸುವುದು ಅಗತ್ಯ.

ಎಲ್ಲ ಸಮಾಜಗಳಲ್ಲೂ ಪಾಪಪುಣ್ಯಗಳ ಕಲ್ಪನೆ ಒಂದೇ ಇಲ್ಲದಿರಬಹುದು; ಆದರೆ ಪ್ರತಿ ಸಮಾಜದಲ್ಲಿಯೂ ಪಾಪಪುಣ್ಯಗಳ ಕಲ್ಪನೆ ಇದ್ದೇ ಇದೆ. ಈ ನೀತಿ, ಪಂಗಡದ ಒಳಗೆ ಸಹಕಾರಕ್ಕೆ ದಾರಿ ಮಾಡುತ್ತದೆ. ನೀತಿಯ ಕಟ್ಟಳೆ ಇಲ್ಲದಿದ್ದರೆ ಸಮಷ್ಟಿ ಜೀವನದಲ್ಲಿ ಅವ್ಯವಸ್ಥೆ ತಲೆಹಾಕುತ್ತದೆ. ಯಾರೂ ಯಾವ ವಿಷಯದಲ್ಲಿಯೂ ನೆಚ್ಚಿಕೆ ಇಟ್ಟುಕೊಳ್ಳುವಂತಿಲ್ಲ. ಪ್ರತಿಯೊಂದು ವಿಷಯದಲ್ಲಿಯೂ ಕಾನೂನನ್ನು ಮಾಡಿ ಪ್ರತಿಬಾರಿಯೂ ತಪ್ಪುಮಾಡಿದವನನ್ನು ಹಿಡಿದು ಶಿಕ್ಷಿಸಿ, ವ್ಯಕ್ತಿಗಳ ಮತ್ತು ಸಮಾಜದ ಜೀವನವನ್ನು ನಡೆಸಿಕೊಂಡು ಹೋಗಬೇಕಾದರೆ ಎಷ್ಟು ಕಷ್ಟ! ಒಂದು ಉದಾಹರಣೆಯನ್ನು ತೆಗೆದುಕೊಳ್ಳೋಣ. ಇಂದು ಪ್ರತಿ ಸಮಾಜವೂ ಕಳ್ಳತನವನ್ನು ಅಪರಾಧ ಎಂದು ಹೆಸರಿಸಿ ಅದಕ್ಕೆ ಶಿಕ್ಷೆಯನ್ನು ನಿರ್ಧರಿಸಿದೆ. ಎಷ್ಟೋ ಮಂದಿ ಕಳ್ಳತನ ಮಾಡದಿರುವುದು ಶಿಕ್ಷೆಯ ಹೆದರಿಕೆಯಿಂದ. ಆದರೆ ಇನ್ನೆಷ್ಟೋ ಮಂದಿ ಕಳ್ಳತನ ಪಾಪಕರ ಎಂಬ ಭಾವನೆಯಿಂದ ಅದಕ್ಕೆ ಹೇಸಿ, ಸತ್ಯವಂತರಾಗಿರುತ್ತಾರೆ. ಸುಲಭವಾಗಿ, ಸಿಕ್ಕಿಕೊಳ್ಳದಂತೆ ಕಳ್ಳತನ ಮಾಡುವ ಅವಕಾಶ ದೊರೆತರೂ ಇವರು ಕಳ್ಳತನ ಮಾಡುವುದಿಲ್ಲ. ಇವರನ್ನು ಸರಿಯಾದ ಮಾರ್ಗದಲ್ಲಿ ನಡೆಸುವುದು ಕಾನೂನಲ್ಲ, ನೀತಿ. ಒಂದು ಸಮಾಜ ಉಳಿದುಬರಲು ಅಗತ್ಯವಾದ ಸೂತ್ರಗಳನ್ನು ಅದು 'ನೀತಿ' ಎಂದು ಸಾರುತ್ತದೆ. ಆದುದರಿಂದ ನೀತಿಗೆ ಸಾಮಾಜಿಕ ಉಪಯುಕ್ತತೆ ಉಂಟು.

ಎರಡನೆಯದಾಗಿ, ಸರ್ವಮಾನ್ಯ ಸೂತ್ರಗಳಿಂದ ನೀತಿಯನ್ನು ವಿವರಿಸಲು ಸಾಧ್ಯವಾಗದಿದ್ದರೂ, ಶುದ್ಧನೀತಿಯನ್ನು ಕಂಡಾಗ ಜಗತ್ತು ಅದನ್ನು ಗುರುತಿಸುತ್ತದೆ, ಅದಕ್ಕೆ ಮಣಿಯುತ್ತದೆ. ಜಗತ್ತಿನಲ್ಲಿ ಹೃತ್ಪೂರ್ವಕವಾದ ಗೌರವಭಕ್ತಿಗಳನ್ನು–ಎಷ್ಟೋ ಬಾರಿ ಆರಾಧನೆಯನ್ನು– ಪಡೆದವರು ಸಮ್ರಾಟರಲ್ಲ, ಸಮರಶೂರರಲ್ಲ, ಕುಬೇರರಲ್ಲ, ಅತಿಜ್ಞಾನಿಗಳಲ್ಲ; ಶುದ್ಧಜೀವನವನ್ನು ನಡೆಸಿದ ಬುದ್ಧ, ಯೇಸು, ಗಾಂಧಿಜಿ ಇಂಥವರು. ಸ್ವಾರ್ಥವನ್ನು ಮರೆತು, 'ನನಗೆ ಇದು ಬೇಕು' ಎನ್ನುವುದನ್ನು ಬಿಟ್ಟು 'ಜಗತ್ತಿಗಾಗಿ ನಾನು' ಎಂದು ಜಗತ್ತಿನ ಕಲ್ಯಾಣದ ಸಾಧನವಾದವರನ್ನು ಜಗತ್ತು ಕೊಂಡಾಡಿ ಪೂಜಿಸಿದೆ. ಅವರು ದೇವರೆಂದರೂ ಅವರಿಗೆ ಗೌರವವನ್ನು ಸಲ್ಲಿಸಿದೆ. ಇಂಥವರಿಗಾಗಿ ಎಷ್ಟೋ ಮಂದಿ ತಮ್ಮ ಪ್ರಾಣವನ್ನೇ ನೀಡಿದ್ದಾರೆ.



ನೀತಿಯ ವಿಷಯವನ್ನು ವಿಮರ್ಶಿಸುವಾಗ ಗಮನಿಸಬೇಕಾದ ಮತ್ತೊಂದು ಅಂಶವಿದೆ. ನಿರ್ದಿಷ್ಟ ಕಾರ್ಯಗಳು ಅಥವಾ ಪರಂಪರೆಗಳು ನೀತಿಯುತವೆ ಎನ್ನುವ ವಿಷಯದಲ್ಲಿ ಬಹು ಮಟ್ಟಿಗೆ ಭಿನ್ನಾಭಿಪ್ರಾಯವಿರಬಹುದು. ಆದರೆ ಸಾಮಾನ್ಯವಾಗಿ ಜಗತ್ತಿನ ಎಲ್ಲ ಮಾರ್ಗದರ್ಶಕರೂ ಒಂದು ಮೂಲಸೂತ್ರವನ್ನು ಹೇಳಿದ್ದಾರೆ. ನೀತಿಯ ಆಧಾರ ನಿಸ್ವಾರ್ಥತೆ. ತನ್ನ ಬಯಕೆ ಪ್ರತಿಷ್ಠೆಗಳನ್ನು ಮರೆತು ಎಲ್ಲರನ್ನೂ ಒಂದೇ ದೃಷ್ಟಿಯಿಂದ ಕಾಣಬೇಕು. ಹಲವು ದಾರಿಗಳು ಕಂಡಾಗ ತನ್ನ ಜಯ ಕೀರ್ತಿ ಬಯಕೆ ಲಾಭಗಳನ್ನು ಪ್ರಾಮಾಣಿಕವಾಗಿ ಬದಿಗೊತ್ತಿ ನ್ಯಾಯ ಎಂದು ತೋರಿದ ಹಾದಿಯಲ್ಲಿ ಹೆಜ್ಜೆ ಇಡುವುದೇ ನೀತಿ. ತಾನೇ ವಿಶ್ವದ ಕೇಂದ್ರ ಎಂದುಕೊಳ್ಳದೆ, ತನ್ನ ಬಯಕೆ ಅಗತ್ಯಗಳನ್ನು ಮೀರಿದ ಮೌಲ್ಯಗಳಿವೆ ಎಂದು ಗುರುತಿಸಿ, ಅವನ್ನು ಅನುಷ್ಠಾನಕ್ಕೆ ತರಲು ಯತ್ನಿಸುವುದು ನೀತಿಯ ಮಾರ್ಗ. "ತನ್ನಲ್ಲಿ ಎಲ್ಲರನ್ನೂ ಎಲ್ಲರಲ್ಲಿ ತನ್ನನ್ನೂ ಕಾಣುವವನು, ಎಲ್ಲರನ್ನೂ ಎಲ್ಲವನ್ನೂ ಸಮದೃಷ್ಟಿಯಿಂದ ಕಾಣುವವನು ಯೋಗಿ," ಎಂದಿದೆ ಭಗವದ್ಗೀತೆ. "ಇತರರು ನಿನ್ನನ್ನು ಹೇಗೆ ಕಾಣಬೇಕೆಂದು ಬಯಸುವೆಯೋ ಹಾಗೆಯೆ ಅವರನ್ನು ಕಾಣು," ಎಂದ ಯೇಸು ಕ್ರಿಸ್ತ. "ನೀನು ಸತ್ಯದ ಸಮುದ್ರದಲ್ಲಿ ಈಸಾಡಬೇಕಾದರೆ ನಿನ್ನ ವ್ಯಕ್ತಿತ್ವವನ್ನು ಸೊನ್ನೆಗಿಳಿಸಿಕೊಳ್ಳಬೇಕು. ಅಪಾರ ವಿನಯವಿಲ್ಲದವನು ಸತ್ಯವನ್ನು ಮುಟ್ಟಲಾರ," ಎಂದರು ಗಾಂಧಿಜಿ. "ಯಾವ ಮನುಷ್ಯ ತನಗೆ ಒಳ್ಳೆಯದಲ್ಲ ಎನ್ನಿಸಿದುದನ್ನು ಇತರರಿಗೆ ಮಾಡುವುದಿಲ್ಲವೋ ಆತನೇ ಒಳ್ಳೆಯವನು," ಎಂದ ಜರತುಷ್ಟ್ರ.

ಯಾವ ಸಮಾಜದಲ್ಲಿಯೂ ಎಲ್ಲರೂ ಸಂತರಾಗಿರುವುದಿಲ್ಲ. ಆದರೆ ಒಂದು ಸಮಾಜದಲ್ಲಿ ಕನಿಷ್ಠ ಮಟ್ಟದ ನೀತಿಯ ನೆಲೆ ಇಲ್ಲದಿದ್ದರೆ ಆ ಸಮಾಜ ಉದ್ಧಾರವಾಗಲಾರದು.

## ೧೧

ಕುತೂಹಲಕಾರಿಯಾದ ಒಂದು ಅಂಶ ಎಂದರೆ. ಮಾನವನ ಚರಿತ್ರೆಯಲ್ಲಿ ಖಚಿತವಾಗಿ ವಿವರಗಳು ನಮಗೆ ತಿಳಿದಿರುವ ಮೊದಲನೆಯ ಮನುಷ್ಯ ಒಬ್ಬ ಕಲೆಗಾರ–ವಿಜ್ಞಾನಿಯದು. ಇವನು ಈಜಿಪ್ಟಿನ ಇಮ್‌ಹೊಟೆಪ್ ಎಂಬವನು (ಸುಮಾರು ಕ್ರಿ. ಪೂ. 3150). ಇವನು ವೈದ್ಯ, ವಾಸ್ತುಶಿಲ್ಪಿ, ಅರಸ ಜೋಸರನ ಮುಖ್ಯ ಸಲಹೆಗಾರ.

### ಸೌಂದರ್ಯಪ್ರಿಯತೆ ಅಭಿವ್ಯಕ್ತಿ

ಗಿಡದಲ್ಲಿ ಒಂದು ಸುಂದರವಾದ ಗುಲಾಬಿ ಅರಳಿರುತ್ತದೆ, ನೋಡುತ್ತಲೆ ಮನಸ್ಸು ಹಿಗ್ಗುತ್ತದೆ. ಎಲ್ಲಿಯೋ ಹೋಗುತ್ತಿರುತ್ತೇವೆ, ಮಲ್ಲಿಗೆಯ ಕಂಪು ಗಾಳಿಯಲ್ಲಿ ತೇಲಿಕೊಂಡು ಬರುತ್ತದೆ, ಒಂದು ಕ್ಷಣ ಮನಸ್ಸು ತನ್ನ ಇತರ ಯೋಚನೆಗಳನ್ನು ಮರೆಯುತ್ತದೆ. ರಾತ್ರಿ ಏನೋ ಯೋಚಿಸುತ್ತ ಸಾಗುತ್ತಿದ್ದಂತೆ ಯಾರ ಮನೆಯಿಂದಲೋ ಮಧುರವಾದ ಸಂಗೀತ ಕೇಳುತ್ತದೆ. ಒಂದು ನಿಮಿಷ ನಿಂತು ಕೇಳಿ ಮುಂದೆ ಹೆಜ್ಜೆ ಇಡುತ್ತೇವೆ. ರಂಗುರಂಗಾಗಿ ಸಮುದ್ರ ಆಕಾಶಗಳಿಗೆ ಬಣ್ಣ ಎರಚಿ ಇಳಿಯುವ ಸೂರ್ಯನನ್ನು ಆಗುಂಬೆಯಿಂದಲೊ ಕನ್ಯಾಕುಮಾರಿಯಲ್ಲೊ ನಿಂತು ನೋಡಿದಾಗ, ಕಾಶ್ಮೀರದಲ್ಲಿ ಹೂಗಳ ಹಬ್ಬವನ್ನು ನೆಲದ ಸಿರಿಯನ್ನು ಕಂಡಾಗ, ಅಮೆರಿಕದ ಗ್ರ್ಯಾಂಡ್ ಕ್ಯಾನಿಯನಿನಲ್ಲಿ ಕೊಲರಾಡೊ ನದಿ ಸೃಷ್ಟಿಸಿರುವ 347 ಕಿ. ಮೀ.ಗಳ ಕಮರಿಯನ್ನು ದಿಟ್ಟಿಸಿದಾಗ, ಸ್ವಿಟ್ಜರ್ಲೆಂಡಿನ ಬೆಟ್ಟ ಶ್ರೇಣಿಗಳಲ್ಲಿ ಒಂದು ಶಿಖರದ ಮೇಲೆ ನಿಂತಾಗ ಮೂಕರಾಗುತ್ತೇವೆ; ಮೈಯಲ್ಲಿ ರೋಮಾಂಚನವಾಗುತ್ತದೆ.

ಸೌಂದರ್ಯಪ್ರೇಮ ಮನುಷ್ಯನಿಗೆ ಸಹಜ. ಆದರೆ ಅದು ಯಾವಾಗಲೂ ವ್ಯಕ್ತವಾಗುವುದಿಲ್ಲ. ಹಸಿವು ನೀರಡಿಕೆ ಭಯ ರೋಗಗಳಿದ್ದಾಗ ನಕ್ಷತ್ರಗಳ ಚಿತ್ರವಾಗಲಿ ಸ್ವರ್ಗಲೋಕದ ಗಾಯನವಾಗಲಿ ನಂದನವನದ ವೃಕ್ಷಗಳಾಗಲಿ ಅವನಿಗೆ ಬೇಕೆನಿಸುವುದಿಲ್ಲ. ಎಲ್ಲರನ್ನೂ ಸೌಂದರ್ಯದ ಎಲ್ಲ ರೂಪಗಳೂ ಸಂತೋಷಗೊಳಿಸುತ್ತವೆ ಎಂದೂ ಹೇಳುವಂತಿಲ್ಲ. ಇಂಗ್ಲೆಂಡಿನ ಹದಿನೆಂಟನೆಯ ಶತಮಾನದ ಸುಪ್ರಸಿದ್ಧ ಬರಹಗಾರ ಡಾಕ್ಟರ್ ಜಾನ್‌ಸನ್ನನಿಗೆ ಸಂಗೀತ ಮೆಚ್ಚಿಕೆಯಾಗುತ್ತಿರಲಿಲ್ಲ. "ಸಂಗೀತದಿಂದ ಸಂತೋಷಪಡುವುದನ್ನು ಯಾರಾದರೂ ಕಲಿಸಿದರೆ ನನಗೆ ಆರನೆಯ ಇಂದ್ರಿಯವೊಂದನ್ನು ಕೊಟ್ಟಂತೆ," ಎನ್ನುತ್ತಿದ್ದ.

ಸೌಂದರ್ಯಪ್ರೇಮ ಲಲಿತಕಲೆಗಳ ಸೃಷ್ಟಿಯ ಮೂಲ. ಸೌಂದರ್ಯದಲ್ಲಿ ಪ್ರೀತಿ ಇರುವವರೆಲ್ಲ ಆ ಮಟ್ಟಿಗೆ ಕಲೆಗಾರರೇ. ಆದರೆ ಯಾರನ್ನು ನಾವು ಕಲೆಗಾರ ಎಂದು ಕರೆಯುತ್ತೇವೆಯೊ ಆತ ಸೌಂದರ್ಯವನ್ನು ನೋಡಿ ಸವಿಯುವುದು ಮಾತ್ರವಲ್ಲ. ಸೌಂದರ್ಯವನ್ನು ಸೃಷ್ಟಿಸುತ್ತಾನೆ–ಚಿತ್ರಗಳನ್ನು ಬರೆಯುತ್ತಾನೆ. ವಿಗ್ರಹಗಳನ್ನು ಕೆತ್ತುತ್ತಾನೆ. ಕವನಗಳನ್ನು ರಚಿಸುತ್ತಾನೆ. ಹಾಡುತ್ತಾನೆ.

ಲಲಿತ ಕಲೆಗಳು ಪ್ರಾರಂಭವಾದದ್ದು ಅದೃಶ್ಯ ಶಕ್ತಿಗಳಲ್ಲಿ ಮನುಷ್ಯನಿಗಿರುವ ನಂಬಿಕೆಗಳಿಂದ. ಗವಿಮಾನವನಿಗೆ ಜಗತ್ತು ಆಶ್ಚರ್ಯಕರವಾಗಿ ಕಾಣುತ್ತಿತ್ತು. ಗುಡುಗು, ಮಿಂಚು, ಸಿಡಿಲು, ಮಳೆಗಾಳಿ, ಸೂರ್ಯಚಂದ್ರರ ಉದಯ-ಅಸ್ತಮಯ ಇವೆಲ್ಲ ಅವನಿಗೆ ಅದೃಶ್ಯ ಶಕ್ತಿಗಳಲ್ಲಿ ನಂಬಿಕೆಯನ್ನು ತಂದುಕೊಟ್ಟಿತು. ಈ ಅದೃಶ್ಯ ಶಕ್ತಿಗಳನ್ನು ಸಂತೋಷಗೊಳಿಸಿದರೆ ತನಗೆ ಕ್ಷೇಮ ಎಂಬ ನಂಬಿಕೆ ಮೂಡಿತು. ಸೂರ್ಯ ಮೋಡದ ಹಿಂದೆ ಮರೆಯಾಗಿದ್ದಾಗ, ಆಕಾಶದತ್ತ ನೋಡಿ ಹಾಡಿದರೆ, ಕುಣಿದರೆ ಸೂರ್ಯದೇವನಿಗೆ ಸಂತೋಷವಾಗುತ್ತದೆ ಎಂದು ಭಾವಿಸಿ ಹಾಡಿದ, ಚಪ್ಪಾಳೆ ತಟ್ಟಿದ, ಕುಣಿದ. ಹೀಗೆ ಹಾಡು, ಕುಣಿತ ಪ್ರಾರಂಭವಾಯಿತು. ಅನಂತರ ಕುಲದಲ್ಲಿ ಪುರೋಹಿತನೊಬ್ಬ ಹುಟ್ಟಿಕೊಂಡ. ಈತ ದೇವತೆಗಳ ಮನಸ್ಸನ್ನು ಬಲ್ಲವನು, ದೇವತೆಗಳೊಡನೆ ಸಂಪರ್ಕ ಉಳ್ಳವನು ಎಂದು ಇತರರಿಗೆ ನಂಬಿಕೆ. ಅವನ ಮಾತಿನಲ್ಲಿ ಭಕ್ತಿ. ಈ ದೇವತೆಯನ್ನು ಸಂತೋಷಗೊಳಿಸಲು ಇಷ್ಟು ಜನ ಹೀಗೆ ನಿಂತುಕೊಳ್ಳಬೇಕು, ಆ ದೇವತೆಯನ್ನು ಒಲಿಸಲು ಇಷ್ಟು ಜನ ಹಾಗೆ ನಿಂತುಕೊಳ್ಳಬೇಕು. ಈ ರೀತಿ ಹಾಡಬೇಕು, ಹೀಗೆ ಕುಣಿಯಬೇಕು ಎಂದು ಆತ ಹೇಳಿಕೊಟ್ಟ. ಸಂಗೀತ, ನೃತ್ಯ ಹುಟ್ಟಿಕೊಂಡುವು. ತಾನು ಬೇಟೆಗೆ ಹೋಗುವ ಮೊದಲು ತನ್ನ ಗವಿಯಲ್ಲಿ ಪ್ರಾಣಿಯ ಚಿತ್ರವನ್ನು ಬರೆದರೆ ಬೇಟೆಯಲ್ಲಿ ಯಶಸ್ಸು ಎನ್ನಿಸಿತು ಗವಿಮಾನವನಿಗೆ. ಮನುಷ್ಯನಲ್ಲಿ ಅಡಗಿರುವ ಅನುಕರಣಶಕ್ತಿ ಅವನ ನೆರವಿಗೆ ಬಂದಿತು. ಗವಿಯ ಗೋಡೆಗಳ ಮೇಲೆ ಚಿತ್ರಗಳನ್ನು ರಚಿಸಿದ. ಚಿತ್ರಕಲೆಯ ಜನನವಾಯಿತು. ತನ್ನ ಸುತ್ತ ಪ್ರಕೃತಿಯ ರೀತಿಯನ್ನು ಮಾನವ ಆಸಕ್ತಿಯಿಂದ ವೀಕ್ಷಿಸಿದ. ವಸಂತಋತುವಿನಲ್ಲಿ ಪ್ರಕೃತಿ ಹಸಿರುಟ್ಟು ಬಣ್ಣಬಣ್ಣದ ಹೂ ತೊಡುವುದನ್ನು ಕಂಡ. ಹಕ್ಕಿಗಳ ಸುಮಧುರ ಗಾನ ಗಾಳಿಯನ್ನು ತುಂಬಿತು. ದಿನಗಳು ಉರುಳಿದಂತೆ ಕಾಯಿ ಹಣ್ಣಾಯಿತು. ಹಣ್ಣು ನೆಲಕ್ಕುರುಳಿತು. ಎಲೆಗಳ ಬಣ್ಣ ಕುಂದಿತು. ಕ್ರಮೇಣ ಗಿಡಗಳು ಬರಡಾದವು. ನೆಲ ಹಿಮವನ್ನು ಹೊದ್ದಿತು. ಪಕ್ಷಿಗಳ ಧ್ವನಿ ಕೇಳದಾಯಿತು. ನಿಸರ್ಗದ ಯಾವುದೊ ದೇವತೆ ಮಡಿದಿರಬೇಕು ಎನ್ನಿಸಿತು ಮನುಷ್ಯನಿಗೆ. ಮತ್ತೆ ಕಾಲಚಕ್ರ ಉರುಳಿತು. ಹಗಲು ಉದ್ದವಾಯಿತು. ಹಿಮ ಕರಗಿತು. ಅಲ್ಲಲ್ಲಿ ಗಿಡಮರಗಳಲ್ಲಿ ಚಿಗುರೊಡೆಯಿತು. ಹಸಿರು ಕಾಣಿಸಿತು, ಬಣ್ಣ ತಲೆಯೆತ್ತಿತು. ಇಲ್ಲೊಂದು ಅಲ್ಲೊಂದು ಪಕ್ಷಿಯ ಗಾನ ಕೇಳಿತು. ಕೆಲವೇ ದಿನಗಳಲ್ಲಿ ತಿರುಗಿ ಕಣ್ಣಿಗೆ, ಕಿವಿಗೆ, ಹಬ್ಬವಾಯಿತು, ನಿಸರ್ಗ ಪುನಃ ನಕ್ಕಿತು, ಮೆರೆಯಿತು. ಮತ್ತೆ ಮತ್ತೆ ಇವನ್ನು ಕಂಡ ಮನುಷ್ಯ ಸತ್ತು ಮತ್ತೆ ಹುಟ್ಟುವ, ಸಾವನ್ನು ಗೆಲ್ಲುವ ದೇವತೆಯ ಕಥೆಯನ್ನು ಹೇಳಿಕೊಂಡ, ಹಾಡಿನಲ್ಲಿ ಕುಣಿತದಲ್ಲಿ ಅದನ್ನು ಅಭಿನಯಿಸಿ ತೋರಿಸಿದ. ನಾಟಕದ ಜನನವಾಯಿತು.

ಹೀಗೆ ಧರ್ಮದಲ್ಲಿ ಕಲೆಗಳ ಉಗಮ. ಕಲೆ-ಧರ್ಮಗಳ ಸಂಬಂಧ ಇಂದಿಗೂ ಹಲವು ರೀತಿಯಲ್ಲಿ ಉಳಿದುಕೊಂಡು ಬಂದಿದೆ. ಭಾರತದ ಕರ್ನಾಟಕ ಸಂಗೀತ ಪಿತಾಮಹ ಪುರಂದರದಾಸರು. ಅವರ ಅನಂತರ ಬಂದ ತ್ಯಾಗರಾಜರು ಅವರಿಂದ ಪ್ರಾರಂಭವಾಗಿ ಇತ್ತೀಚಿನ ಮೈಸೂರು ವಾಸುದೇವಾಚಾರ್ಯರವರೆಗೆ ಪ್ರಸಿದ್ಧ ವಾಗ್ಗೇಯಕಾರರು ಭಕ್ತಿರಸದ ಹೊನಲನ್ನು ಹರಿಸಿದ್ದಾರೆ ತಮ್ಮ ಹಾಡುಗಳಲ್ಲಿ. ಉತ್ತರ ಭಾರತದ ಮೀರಾ, ಕಬೀರ್, ಸೂರದಾಸ್ ಎಲ್ಲರ ರಚನೆಗಳೂ ಭಗವಂತನ ಕೀರ್ತನೆಗೇ ಅರ್ಪಿತ. ಪಾಶ್ಚಾತ್ಯ ಜಗತ್ತಿನಲ್ಲಿ ದೊರೆತಿರುವ ಪ್ರಾರಂಭದ ಹಾಡುಗಳು ಧರ್ಮಕ್ಕೆ ಸಂಬಂಧಿಸಿದುವು. ಆದರೆ ಪಾಶ್ಚಾತ್ಯರಲ್ಲಿ ಧರ್ಮಕ್ಕೆ ಸಂಬಂಧಿಸದ ಸಂಗೀತ ಬೇಗನೆ ಪ್ರಾರಂಭವಾಯಿತೆಂದು ಹೇಳಬೇಕು. ಚೀನದಲ್ಲಿ ಪ್ರಾಚೀನಕಾಲದಲ್ಲಿ ದೇವಾಲಯಗಳೂ ನಾಟಕ ಮಂದಿರಗಳೂ ಸಮೀಪದಲ್ಲಿಯೆ ಇರುತ್ತಿದ್ದುವು. ಇದಕ್ಕೆ ಕಾರಣ, ಧಾರ್ಮಿಕವಿಧಿಗಳಲ್ಲಿ ಕೋಲಾಟ ಒಂದು ಭಾಗವಾಗಿ, ಇದರಿಂದ ನಾಟಕ ಹುಟ್ಟಿದ್ದು. ಕ್ರಮೇಣ ಪ್ರೇಕ್ಷಕರಿಗೆ ಸ್ಥಳ ಸಾಲದೆ ಹೋದಾಗ ನಾಟಕ ಪ್ರತ್ಯೇಕ ಮಂದಿರಕ್ಕೆ ನಡೆಯಿತು. ಎಲ್ಲ ದೇಶಗಳಲ್ಲಿ ಶಿಲ್ಪಕಲೆ, ಚಿತ್ರಕಲೆಗಳಿಗೂ ಮತಗಳಿಗೂ ನಿಕಟ ಸಂಬಂಧ. ಪ್ರಾಚೀನ ಸುಮೇರಿಯದ ನನ್ನಾರ್ ದೇವಾಲಯ, ಈಜಿಪ್ಟಿನಲ್ಲಿ ಅಮನ್, ಸೆಟಿ ಮತ್ತು ಐಸಿಸರ ದೇವಾಲಯಗಳು. ಇಸ್ರೇಲಿನ ಸಾಲೊಮನ್ ಕಟ್ಟಿಸಿದ ಭವ್ಯ ದೇವಾಲಯ. ಸುಂದರ ಅವಶೇಷಗಳನ್ನುಳಿಸಿದ ಚೀನೀ ದೇವಾಲಯಗಳು. ಅಥೆನ್ಸ್ ನಗರದಲ್ಲಿದ್ದ ಅಥೀನದೇವತೆಯ ಸೊಬಗಿನ ದೇವಾಲಯ. ಸಾರನಾಥದ ಬೌದ್ಧ ಸ್ತೂಪ. ಬೇಲೂರು ಹಳೇಬೀಡುಗಳ ದೇವಾಲಯಗಳು. ಲಕ್ಕುಂಡಿಯ ದೇವಸ್ಥಾನಗಳು. ಇಟಲಿಯ ಮಿಲಾನ ನಗರದ ಮಹಾಮಂದಿರ, ರೋಮಿನ ಸಂತ ಪೀಟರನ ಚರ್ಚ್–ಪ್ರಾಚೀನ ಜಗತ್ತಿನ ಇಂಥ ಸಾವಿರಾರು ಸೃಷ್ಟಿಗಳು ಕಲೆಗೂ ಧರ್ಮಕ್ಕೂ ಇದ್ದ ಸಾಮೀಪ್ಯವನ್ನು ಸಾರಿ ಹೇಳುತ್ತವೆ. ಮೈಕೆಲೆಂಜೆಲೊ, ಆಂದ್ರಿಯದೆಲ್ ಸಾರ್ತೊ, ರ್ಯಾಫೇಲ್, ಲಿಯನಾರ್ದೊ ದ ವಿಂಚಿ ಮೊದಲಾದವರ ಹಲವು ಅಮರ ಚಿತ್ರಗಳ ವಸ್ತುಗಳು ಧಾರ್ಮಿಕವೇ, ಭಾರತದ ಭವ್ಯ ದೇವಾಲಯಗಳು, ಶ್ರವಣಬೆಳಗೊಳದ ಗೋಮಟೇಶ್ವರನಂಥ ಸುಂದರ ವಿಗ್ರಹಗಳು ದೈವ ಭಕ್ತಿ ಪ್ರೇರಿಸಿದ ಕಲೆಗೆ ಸಾಕ್ಷಿಗಳಾಗಿವೆ.

ಕ್ರಮೇಣ ಧರ್ಮದ ಸಂಬಂಧವಿಲ್ಲದ ಕಲೆಯ ಜನನವಾಯಿತು. ಇದಕ್ಕೆ ಹಲವು ಕಾರಣಗಳು. ಅರಸ ಅರಸಿಯರು ಭವ್ಯವಾದ ಅರಮನೆಗಳಲ್ಲಿ ವಾಸಿಸಲು, ತಮ್ಮ ಮೂರ್ತಿಗಳನ್ನು ಮಾಡಿಸಲು, ತಮ್ಮ ಚಿತ್ರಗಳನ್ನು ಬರೆಸಲು ಬಯಸಿದ್ದು ಒಂದು. ಕೆಲವು ದೇಶಗಳಲ್ಲಂತೆ ಕೆಲವೆಡೆ ನೃತ್ಯ ನಾಟಕಗಳಲ್ಲಿ ಜನರ ಅಭಿರುಚಿಗನುಗುಣವಾಗಿ ಹಾಸ್ಯವನ್ನೋ ಶೃಂಗಾರವನ್ನೋ ಬೆರೆಸುವುದರಿಂದ ಮತಾಧಿಕಾರಿಗಳು ಅಸಮಾಧಾನಗೊಂಡು ಆ ಕಲೆಗಳನ್ನು ದೂರ ನೂಕಿದ್ದು ಮತ್ತೊಂದು ; ಅಂತೂ ಕ್ರಮೇಣ ಧರ್ಮದ ಸಂಬಂಧವಿಲ್ಲದ ಕಲೆ ಹುಟ್ಟಿತು.

ಕಂಡುದನ್ನು ಅನುಕರಿಸಿ ಪ್ರಾರಂಭಿಸಿದ ಕಲೆಗಾರ ತನ್ನ ಕಲ್ಪನೆಯನ್ನು ಬಳಸಲೂ ಬೇಗ ಕಲಿತ. ಅವನು ದೇವತೆಗಳ ವಿಗ್ರಹಗಳನ್ನು ಮಾಡುವಾಗ, ಚಿತ್ರಗಳನ್ನು ಬರೆಯುವಾಗ, ಕಾಣದ ಆಕಾರವನ್ನು ಕಲ್ಪಿಸಿಕೊಳ್ಳಬೇಕಾಯಿತು. ಇಲ್ಲಿಯೂ ವಾಸ್ತವಿಕತೆಯ ಅನುಭವವೇ ಆಧಾರ. ತಾನು ಮರ್ತ್ಯರ ಮುಖಗಳಲ್ಲಿ ಕಂಡಿದ್ದ ತೇಜಸ್ಸು, ಸೌಂದರ್ಯ, ದರ್ಪ, ಕಾರುಣ್ಯ ಇವುಗಳನ್ನೆ ಸ್ಮರಿಸಿಕೊಂಡು ಅಮರ್ತ್ಯರನ್ನು ಸೃಷ್ಟಿಸಲು ಯತ್ನಿಸಿದ. ತಾನು ಪಕ್ಷಿಗಳಲ್ಲಿ ಕಂಡಿದ್ದ ರೆಕ್ಕೆಗಳನ್ನು ಅವರಿಗೆ ಜೋಡಿಸಿದ. ಅಂತೂ ತನ್ನ ಮುಖದ ಕಣ್ಣುಗಳು ಕಂಡಿದ್ದ ಅಪೂರ್ಣತೆಯ ಆಧಾರದ ಮೇಲೆ ಮನಸ್ಸಿನ ಕಣ್ಣುಗಳಿಂದ ಪರಿಪೂರ್ಣತೆಯನ್ನು ಕಂಡ, ತನ್ನ ಮುಖದ ಕಣ್ಣುಗಳು ಕಂಡಿದ್ದ ಮಾನವರಾಜರನ್ನು ನೆನೆಸಿಕೊಂಡು ಮನಸ್ಸಿನ ಕಣ್ಣುಗಳಿಂದ ದೇವರಾಜನನ್ನು ಕಂಡ. ತನ್ನ ಮನಸ್ಸಿನ ಕಣ್ಣುಗಳು ಕಂಡುದನ್ನು ಇತರರ ಕಣ್ಣುಗಳು ಕಾಣುವಂತೆ ಅವನ್ನು ಬಣ್ಣಗಳಲ್ಲಿ, ಕಲ್ಲಿನಲ್ಲಿ, ಮಣ್ಣಿನಲ್ಲಿ ಸೃಷ್ಟಿಸಿದ ; ಮಾತಿನಲ್ಲಿ ಬಣ್ಣಿಸಿದ.

ಕಳೆದ ಐದು ಸಾವಿರ ವರ್ಷಗಳಲ್ಲಿ ಕಲೆ ಜಗತ್ತಿನಲ್ಲಿ ವಿಶ್ವರೂಪವನ್ನು ತಾಳಿದೆ. ಕಲಾವಿದ ತನ್ನ ಕಲೆಯನ್ನು ಸೌಂದರ್ಯದ ಸೃಷ್ಟಿಯನ್ನಾಗಿ ಮಾತ್ರ ಕಾಣದೆ, ತನ್ನ ಜೀವನದರ್ಶನಕ್ಕೆ ಅಭಿವ್ಯಕ್ತಿ ನೀಡುವ ಮಾರ್ಗವನ್ನಾಗಿ ಮಾಡಿಕೊಂಡಿದ್ದಾನೆ. ಹಲವು ಬಣ್ಣಗಳ ದಾರಗಳನ್ನು ಸೇರಿಸಿ ನೆಯ್ದ ಜಮಖಾನೆಯಲ್ಲಿ ಯಾವ ಕ್ರಮವೂ ಇಲ್ಲ ಎನ್ನಿಸಬಹುದು. ನೂಲು ನೂಲನ್ನು ಕಣ್ಣು ಹಿಂಬಾಲಿಸಿಕೊಂಡು ಹೋದಾಗ ಹಲವು ವಿನ್ಯಾಸಗಳು ಕಾಣಬಹುದು. ಹಾಗೆಯೆ ಕ್ಷಣಕ್ಷಣಕ್ಕೆ ಹೊಸ ಹೊಸ ಘಟನೆಗಳು ನಡೆಯುತ್ತಿರುವ ಮನುಷ್ಯನ ಬಾಳಿನಲ್ಲಿ ಯಾವ ಕ್ರಮವೂ ಇಲ್ಲ ಅರ್ಥವೂ ಇಲ್ಲ ಎನ್ನಿಸಬಹುದು. ಕಲಾವಿದ ತನ್ನ ಒಳಗಣ್ಣಿನಿಂದ ಯಾವುದೋ ಕ್ರಮವನ್ನು ಕಾಣುತ್ತಾನೆ. ಅವನು ಹೊರಜಗತ್ತನ್ನು ಪ್ರತಿಬಿಂಬಿಸುವ ನಿರ್ಜೀವ ಕನ್ನಡಿಯಲ್ಲ. ಅವನದು ಪ್ರತಿಸೃಷ್ಟಿ. ತನ್ನ ಹೊರಗಣ್ಣು ಕಂಡುದನ್ನು ಮಾತ್ರ ಪ್ರತಿಮಾಡದೆ, ಒಳಗಣ್ಣು ಕಂಡ ಅರ್ಥವನ್ನೂ ವಿನ್ಯಾಸವನ್ನೂ ರೂಪವನ್ನೂ ಇತರರಿಗೆ ಕಾಣಿಸಲು ಪ್ರಯತ್ನಿಸುತ್ತಾನೆ. ಒಬ್ಬೊಬ್ಬ ಕಲಾವಿದನ ಮಾಧ್ಯಮ ಒಂದೊಂದು. ಶಿಲ್ಪಿಯದು ಕಲ್ಲು ಅಥವಾ ಮಣ್ಣು, ಚಿತ್ರಗಾರನದು ಬಣ್ಣ, ಸಂಗೀತಗಾರನದು ನಾದ, ಕವಿಯದು ಮಾತು. ಕೆಲವು ಕಲೆಗಳು ಹಲವು ಮಾಧ್ಯಮಗಳನ್ನು ಬಳಸಿಕೊಳ್ಳುತ್ತವೆ. ನೃತ್ಯ ಸಂಗೀತವನ್ನೂ ಅಭಿನಯವನ್ನೂ ಬಳಸುತ್ತದೆ. ನಾಟಕ ಮಾತನ್ನೂ ಅಭಿನಯವನ್ನೂ ಒಮ್ಮೊಮ್ಮೆ ಸಂಗೀತವನ್ನೂ ಬಳಸುತ್ತದೆ. ಕೆಲವು ರೇಖಾಕಲೆಗಳು. ಇವುಗಳಲ್ಲಿ ರೇಖೆಗಳನ್ನು ಬಳಸುತ್ತಾರೆ. ಇವು ಉದ್ದ ಅಗಲಗಳನ್ನು ಬಳಸಿಕೊಳ್ಳುತ್ತವೆ. ಉಬ್ಬುತಗ್ಗುಗಳನ್ನು ಬಳಸಿಕೊಳ್ಳಲಾರವು. ಚಿತ್ರಕಲೆ, ಅಚ್ಚಾದ ಚಿತ್ರಗಳು ಇವು ಈ ಗುಂಪಿನವು. ಕೆಲವು ಆಕೃತಿಶಿಲ್ಪಕಲೆಗಳು. ಇವು ಉಬ್ಬುತಗ್ಗುಗಳನ್ನು ಬಳಸಿಕೊಳ್ಳಬಲ್ಲವು. ವಾಸ್ತುಶಿಲ್ಪ, ಶಿಲ್ಪ ಇವು ಈ ಕಲೆಗಳಿಗೆ ಉದಾಹರಣೆಗಳು. ಕೆಲವು ಕಲೆಗಳು ಕಣ್ಣಿನ ಮೂಲಕ ಮಾತ್ರ ಪರಿಣಾಮ ಮಾಡಬಲ್ಲವು. ಚಿತ್ರ, ಶಿಲ್ಪ, ವಾಸ್ತುಶಿಲ್ಪ ಇಂಥ ಕಲೆಗಳು. ಕೆಲವು ಕಿವಿಯ ಮೂಲಕ ಅಂತರಂಗವನ್ನು ಮುಟ್ಟುತ್ತವೆ. ಗಮಕ, ಸಂಗೀತ ಇಂಥ ಕಲೆಗಳು. ಇತ್ತೀಚೆಗೆ ಜನ್ಮತಾಳಿ ತ್ರಿವಿಕ್ರಮಾವತಾರ ತಳೆದಿರುವ ಕಲೆ ಚಲನಚಿತ್ರಕಲೆ. ಕಣ್ಣುಕಿವಿಗಳೆರಡನ್ನೂ ತಣಿಸಬಲ್ಲ, ಈಚೆಗೆ ಸುಗಂಧಗಳ ಪರಿಣಾಮವನ್ನು ಉಂಟುಮಾಡಲು ಯತ್ನಿಸುತ್ತಿರುವ, ರೇಖೆಗಳ ಕಲೆಯಂತೆ ಪ್ರಾರಂಭಿಸಿ ಆಕೃತಿಶಿಲ್ಪಕಲೆಯಾಗಿ ಮಾರ್ಪಾಟಾಗಿರುವ ಅದ್ಭುತ ಕಲೆ ಚಲನಚಿತ್ರ. (ವಿವರ : ಐದನೆಯ ಸಂಪುಟ)

ಜಗತ್ತಿನ ಚರಿತ್ರೆಯಲ್ಲಿ ಅವತರಿಸಿದ ಎಲ್ಲ ಕಲೆಗಳ ಪಂಥಗಳನ್ನು ಪಟ್ಟಿಮಾಡುವುದು ಸಹ ಅಸಾಧ್ಯ. ಒಂದೇ ಪಂಥಕ್ಕೆ ಸೇರಿದ ಕಲಾವಿದರೂ ಪ್ರತಿಭಾವಂತರಾದರೆ ವಿಶಿಷ್ಟವಾದ ತಂತ್ರವನ್ನು ಸೃಷ್ಟಿಸಿಕೊಳ್ಳುತ್ತಾರೆ. ಕಲೆಗಾರರು ಕಲೆಯನ್ನು ಬಳಸಿಕೊಂಡಿರುವ ರೀತಿಗಳೂ ಹಲವು. ಸಾಮಾನ್ಯವಾಗಿ ಎಲ್ಲ ಕಲಾಸೃಷ್ಟಿಯಲ್ಲಿಯೂ ಆರ್ಥಿಕ ಅಂಶ ಉಂಟು. ಕಲಾವಿದನೂ ಬದುಕಬೇಕು. ಅವನಿಗೂ ಆಹಾರಕ್ಕೆ, ವಸತಿಗೆ, ಬಟ್ಟೆಗೆ, ಸಂಸಾರಕ್ಕೆ ಹಣಬೇಕು. ಕಾಳಿದಾಸ, ಷೇಕ್ಸ್‌ಪಿಯರ್ ಇವರಿಂದ ಹಿಡಿದು ಚಾರ್ಲಿ ಚಾಪ್ಲಿನ್, ಲಾರೆನ್ಸ್ ಒಲಿವಿಯರ್ ಅವರವರೆಗೆ ಪ್ರತಿಭಾವಂತ ಕಲಾವಿದರು ಕಲೆಯಿಂದ ಹಣವನ್ನೂ ಕೀರ್ತಿಯನ್ನೂ ಸಂಪಾದಿಸಿರುವುದುಂಟು. ಆದರೆ ಅವರು ಹಣ ಅಥವಾ ಕೀರ್ತಿಯ ಸಂಪಾದನೆಗಾಗಿಯೆ ಕಲೆಯನ್ನು ಬಳಸಲಿಲ್ಲ. ತ್ಯಾಗರಾಜರಂಥವರಿಗೆ ಕಲೆ ಮೋಕ್ಷದ ಸಾಧನವಾಯಿತು. ಷೇಕ್ಸ್‌ಪಿಯರನಂಥವರು ಕಲೆಯಲ್ಲಿ ಜೀವನದಲ್ಲಿ ತಾವು ಕಂಡ ಸೌಂದರ್ಯ ಸಂತೋಷ ಸಂಭ್ರಮ ನೋವು ಅನ್ಯಾಯ ಭೀಕರತೆಗಳನ್ನು ನಿರೂಪಿಸಿ ಮನುಷ್ಯನ ಜೀವನವನ್ನು ಚಿತ್ರಿಸಲು ಹೊರಟರು. ಡಚ್ ಚಿತ್ರಗಾರ ವಿನ್‌ಸೆಂಟ್ ವಾನ್ ಗಾಗ್‌ನಂಥವರು ಮನುಷ್ಯರಿಗೆ ಮಾನಸಿಕ ಶಾಂತಿಯನ್ನು ತಂದುಕೊಡಲು ಕಲೆಯನ್ನು ಬಳಸಿದರು. ಚಾರ್ಲಿ ಚಾಪ್ಲಿನ್‌ನಂಥವರು ಸಮಕಾಲೀನ ಜೀವನದ ಹಲವು ಮುಖಗಳನ್ನು ಚಿತ್ರಿಸಿ ಅದರ ಮೌಲ್ಯಗಳನ್ನು ಪರೀಕ್ಷಿಸಲು ಕಲೆಯನ್ನು ಬಳಸಿದರು. ಪಿರಾಂಡೆಲೊ ಅಂಥವರು ಜೀವನದ ಅರ್ಥವನ್ನು, ಮನುಷ್ಯನ ಸ್ವಭಾವವನ್ನು, ವಾಸ್ತವತೆ-ಅವಾಸ್ತವತೆಗಳನ್ನು ವಿಶ್ಲೇಷಿಸಲು ಬಳಸಿದರು. ಕಲ್ಪನಾಚಿತ್ರ ಪಂಥ, ಘನಾಕೃತಿ ಪಂಥ, ಅಭಿವ್ಯಕ್ತಿ ಪಂಥ–ಹೀಗೆ ಹಲವು ಪಂಥಗಳು ಹೊಸ ಪ್ರಯೋಗಗಳನ್ನು ಮಾಡಿವೆ. ಜೀವನ ಬರಿಯ ಅಸಂಬದ್ಧತೆ ಎನ್ನುವ ಭಾವವನ್ನು ಮೂಡಿಸಲು ಅಸಂಬದ್ಧ ನಾಟಕಗಳು ಪ್ರಯತ್ನಿಸಿವೆ.

ವಿಜ್ಞಾನ ಮತ್ತು ತಾಂತ್ರಿಕಜ್ಞಾನ ಬೆಳೆದದ್ದು ಮತ್ತು ಪ್ರಜಾಪ್ರಭುತ್ವ ವಿಸ್ತರಿಸಿದ್ದು ಕಲೆಗಳ ಮೇಲೆ ಹಲವು ರೀತಿಗಳಲ್ಲಿ ಪ್ರಭಾವವನ್ನು ಬೀರಿವೆ. ವಿಜ್ಞಾನ ಕಲೆಯನ್ನು ಮನೆಮನೆಗೆ ಕೊಂಡೊಯ್ದಿದೆ. ಬಡವ ಶ್ರೀಮಂತರೆಲ್ಲರಲ್ಲಿಗೆ ಒಯ್ದಿದೆ. ಒಂದೆ ಒಂದು ಸುಂದರ

ಕಲಾಕೃತಿಯನ್ನು ಚಿತ್ರಗಾರ ಸೃಷ್ಟಿಸಿದ. ಅದನ್ನು ಅವನ ಸುತ್ತಮುತ್ತ ಇದ್ದವರು, ಪ್ರವಾಸಿಗರು ಮಾತ್ರ ನೋಡಬಹುದಾಗಿತ್ತು. ಇಂದು ದೂರದಲ್ಲಿರುವವರೂ ಚಿತ್ರದ ಪ್ರತಿಕೃತಿಯನ್ನು ಅಚ್ಚಿನಲ್ಲಿ ನೋಡಬಹುದು, ಕೊಂಡು ಮನೆಯಲ್ಲಿಟ್ಟುಕೊಳ್ಳಬಹುದು. ಕಲಾವಿದನ ಖ್ಯಾತಿ ದೇಶದೇಶಗಳಲ್ಲಿ ಹಬ್ಬಲು ಸಾಧ್ಯವಾಗಿದೆ. ಇಂದು ರೇಡಿಯೋ ಅನೇಕ ಮನೆಗಳಲ್ಲಿದೆ. ಹಿಂದಿನ ಚಕ್ರವರ್ತಿಗಳಿಗಿಲ್ಲದ ಸೌಲಭ್ಯ ಇಂದು ಸಾಮಾನ್ಯ ಮನುಷ್ಯನಿಗೆ ಇದೆ. ಮನೆಯಲ್ಲಿ ಕುಳಿತು ನಾಡಿನ ಸುಪ್ರಸಿದ್ಧ ಗಾಯಕರ ಸಂಗೀತವನ್ನು ಕೇಳಬಹುದು. ಇತರ ದೇಶಗಳ ಸಂಗೀತವನ್ನು ಸವಿಯಬಹುದು. ಗ್ರಾಮಾಫೋನ್, ಟೇಪ್ ರೆಕಾರ್ಡರ್‌ಗಳ ನೆರವಿನಿಂದ ಸುಮಧುರ ಸಂಗೀತವನ್ನು ಸಂಗೀತಪ್ರಿಯ ಸೆರೆಹಿಡಿದಿಟ್ಟುಕೊಳ್ಳುವುದು ಸಾಧ್ಯವಾಗಿದೆ. ಸಾವು ಇಂದು ಸಂಗೀತಗಾರನ ಕಲೆಯನ್ನು ಗೆಲ್ಲಲಾರದು : ರೆಕಾರ್ಡುಗಳಲ್ಲಿ ಸಂಗೀತಗಾರ ತನ್ನ ಕಲೆಯನ್ನು ಉಳಿಸಿಹೋಗಿರುತ್ತಾನೆ. ಶಿಲ್ಪಕಲೆ, ವಾಸ್ತುಶಿಲ್ಪಕಲೆಗಳು ವಿಜ್ಞಾನವನ್ನು ಹತ್ತುರೀತಿಗಳಲ್ಲಿ ಬಳಸಿಕೊಳ್ಳುತ್ತವೆ. ಅಲ್ಲದೆ ಪ್ರವಾಸ ಸುಲಭವಾದದ್ದರಿಂದ ಅಮರ ಕಲಾಕೃತಿಗಳನ್ನು ನೋಡಲು ಜಗತ್ತಿನ ಮೂಲೆ ಮೂಲೆಯಿಂದ ಪ್ರವಾಸಿಗರು ಬರುವುದು ಸಾಧ್ಯವಾಗಿದೆ. ಛಾಯಾಚಿತ್ರ, ಚಲನಚಿತ್ರಗಳಂತೂ ವಿಜ್ಞಾನದ ಸೃಷ್ಟಿ : ವಿಜ್ಞಾನ ಬೆಳೆದಂತೆ ಅವೂ ಬೆರಗುಪಡಿಸುವಂತೆ ಬೆಳೆಯುತ್ತಿವೆ. ವರ್ಣಛಾಯಾಚಿತ್ರಗಳು ಸಾಧ್ಯವಾಗಿವೆ. ವರ್ಣ ಚಲನಚಿತ್ರಗಳಂತೂ ಸಾಮಾನ್ಯ. ಸಿನೆರಮ ಸಿನಿರಮಗಳು ಭಾರತಕ್ಕೂ ಬಂದಿವೆ. ಹಲವು ಬಗೆಯ ನಿಯತಕಾಲಿಕಗಳೂ ಪುಸ್ತಕಗಳೂ ಜನಪ್ರಿಯವಾದಂತೆ ನೂರಾರು ಮಂದಿ ಚಿತ್ರಕಾರರು ಬೆಳಕಿಗೆ ಬರಲು ಸಾಧ್ಯವಾಗುತ್ತಿದೆ.

ಆದರೆ ವಿಜ್ಞಾನದ ಬೆಳವಣಿಗೆ ಕಲೆಗಳಿಗೆ ಸಂಪೂರ್ಣವಾಗಿ ವರವೇ ಆಗಿದೆ ಎಂದು ಹೇಳುವಂತಿಲ್ಲ. ವಿಜ್ಞಾನದಿಂದ ಆದ ಅತ್ಯಂತ ಹೆಚ್ಚಿನ ಕೇಡೆಂದರೆ ಕಲೆಗಳ ವಾಣಿಜ್ಯೀಕರಣ. ಕಲೆಗಳೂ ಹಣಮಾಡಲು ಮಾರ್ಗಗಳಾದುವು. ಹಣಕ್ಕಾಗಿ ಕಲೆಗಳನ್ನು ಬಳಸಿಕೊಳ್ಳುವವರಿಗೆ ಕಲೆಯ ಉದ್ದೇಶ, ಕಲಾಕೃತಿಯ ಯೋಗ್ಯತೆ ಇವು ಮುಖ್ಯವಲ್ಲ. ಬಹುಜನಕ್ಕೆ ಪ್ರಿಯವಾಗಿ, ಬೇಗನೆ ಮಾರಾಟವಾಗುವಂಥ 'ವಸ್ತು'ಗಳನ್ನೆ ತಯಾರಿಸುತ್ತಾರೆ ಅವರು. ಅವರಿಗೆ ಕಲಾಕೃತಿಗಳು ಸೌತೆಕಾಯಿ, ಕುರ್ಚಿ, ಪಾದರಕ್ಷೆಗಳಂತೆ ಮಾರಾಟದ ವಸ್ತುಗಳು. ವರ್ಷಗಟ್ಟಲೆ ತಪಸ್ಸು ಮಾಡಿ ಒಂದು ಕಲಾಕೃತಿಯನ್ನು ನಿರ್ಮಿಸುವ ಕಲಾವಿದ ಅವರಿಗೆ ಬೇಕಿಲ್ಲ. ಹದಿನೇಳು ವರ್ಷ ಶ್ರಮಪಟ್ಟು 'ಇನಿಯಡ್' ನಂಥ ಮಹಾಕಾವ್ಯವನ್ನು ವರ್ಜಿಲ್ ಬರೆದ ; ಆದರೆ ಹಣದ ಮೇಲೆ ದೃಷ್ಟಿ ಇರುವ ವ್ಯಾಪಾರಸ್ಥ ಇಂಥ ಕವಿಯನ್ನು ಕಟ್ಟಿಕೊಂಡು ಏನು ಮಾಡಬಲ್ಲ ? ಅಧಿಕ ಸಂಖ್ಯೆಯಲ್ಲಿ ಪುಸ್ತಕಗಳನ್ನು, ಚಿತ್ರಗಳನ್ನು, ಹಾಡುಗಳನ್ನು ಸಿದ್ಧಗೊಳಿಸುವ ಕಲಾವಿದರು ಆತನಿಗೆ ಬೇಕು. ಇಂದಿನ ವಾಣಿಜ್ಯ ಜಗತ್ತಿನ ಪ್ರಚಾರದ ತಂತ್ರಗಳನ್ನೆಲ್ಲ ಬಳಸಿ ತಮ್ಮ 'ಸರಕು' ಮಾರಾಟವಾಗಲು ವ್ಯವಸ್ಥೆ ಮಾಡುತ್ತಾರೆ, ಕೊಳ್ಳುವವರನ್ನು ಆಕರ್ಷಿಸುತ್ತಾರೆ. ಇತ್ತೀಚಿನವರೆಗೆ ಕಲಾವಿದರಿಗೆ ರಾಜರ, ಶ್ರೀಮಂತರ ಆಶ್ರಯ ಮುಖ್ಯವಾಗಿದ್ದಿತು. ರಾಜರೂ ಶ್ರೀಮಂತರೂ ಸ್ವತಃ ತಾವೇ ನಿಪುಣರಲ್ಲದಿದ್ದರೂ, ತಮ್ಮ ಪ್ರತಿಷ್ಠೆಯ ದೃಷ್ಟಿಯಿಂದಲಾದರೂ ಪ್ರೋತ್ಸಾಹಕ್ಕೆ ಅರಿಸುವ ಕಲಾವಿದರು ಅತಿ ಶ್ರೇಷ್ಠರಾಗಿರುವಂತೆ ಎಚ್ಚರಿಕೆ ವಹಿಸಬೇಕಾಗಿತ್ತು. ಇಂದು ಕಲೆಯನ್ನು ವ್ಯಾಪಾರಕ್ಕಿಳಿಸಿರುವವರು ಜನರ ಅಭಿರುಚಿಯನ್ನು ತಿದ್ದುವ ಪ್ರಯತ್ನವನ್ನು ಮಾಡದೆ ಸುಲಭವಾಗಿ ಮಾರಾಟವಾಗುವ ಅಗತ್ಯವೊಂದನ್ನೆ ಮುಂದಿರಿಸಿಕೊಂಡಿರುತ್ತಾರೆ. ಚಲನಚಿತ್ರಗಳು, ಪುಸ್ತಕಗಳು, ನಿಯತಕಾಲಿಕಗಳ ಆಶ್ರಯದಾತರಲ್ಲಿ ತಾರುಣ್ಯಪೂರ್ವ ಸ್ಥಿತಿಯಲ್ಲಿರುವವರು ಗಣನೀಯ ಸಂಖ್ಯೆಯಲ್ಲಿರುತ್ತಾರೆ. ಇಂದು ಕಿರಿಯರು ಹಣವನ್ನು ಸ್ವತಂತ್ರವಾಗಿ ಖರ್ಚುಮಾಡುವಂತೆ ಜಗತ್ತಿನ ಚರಿತ್ರೆಯಲ್ಲಿ ಹಿಂದೆಂದೂ ಖರ್ಚುಮಾಡುವ ಸಾಧ್ಯತೆ ಇರಲಿಲ್ಲ. ಇನ್ನೂ ಅಭಿರುಚಿ ಬೆಳೆಸಿಕೊಳ್ಳಬೇಕಾದ ಈ ವರ್ಗದ ಅಪ್ರಬುದ್ಧ ಪ್ರವೃತ್ತಿಗಳನ್ನು ಮಾರಾಟಗಾರರು ಬಳಸಿಕೊಳ್ಳುತ್ತಾರೆ. ಪ್ರಜಾಪ್ರಭುತ್ವ ನೀಡುವ ಸ್ವಾತಂತ್ರ್ಯದಲ್ಲಿ ಕಲಾಕೃತಿಗಳ ವಿಮರ್ಶೆಗೆ ಅಗತ್ಯವಾದ ತತ್ತ್ವಗಳನ್ನು ರೂಪಿಸುವುದೆ ಕಷ್ಟವಾಗುತ್ತದೆ. ಶಿಸ್ತು, ಸಂಯಮ, ನಿಷ್ಠೆಯ ಕಲಾಸೃಷ್ಟಿ ಇವಕ್ಕೆ ಸ್ಥಾನವಿಲ್ಲದೆ ಹೋಗುತ್ತದೆ. ಆದರೆ ಪ್ರಜಾಪ್ರಭುತ್ವವೇ ಶ್ರೇಷ್ಠ ಕಲೆಗೆ ಶತ್ರುವೆನ್ನುವಂತಿಲ್ಲ. ಅಥೆನ್ಸಿನ ಪ್ರಜಾಪ್ರಭುತ್ವ ಕಾಲದಲ್ಲಿಯೆ ಪೆರಿಕ್ಲೀಸನ ನಾಯಕತ್ವದಲ್ಲಿ ಕಲೆಯೂ ಸ್ವರ್ಣಯುಗವನ್ನು ಕಂಡಿತು.

ಇಂದಿನ ಜೀವನ ವಿಧಾನದಲ್ಲಿ ನಿಜವಾದ ಕಲೆಯನ್ನು ಉಳಿಸಿಕೊಳ್ಳುವುದು ಎಂದಿಗಿಂತ ಅಗತ್ಯವಾಗಿದೆ. ಇಂದಿನ ಜೀವನ ರೀತಿಯೋ ಉಸಿರಾಟಕ್ಕೆ ಅವಕಾಶವಿಲ್ಲದ ವೇಗ. ಎಲ್ಲ ರಂಗಗಳಲ್ಲಿಯೂ ಕಠಿಣ ಸ್ಪರ್ಧೆ, ಕಟುಕ ಸ್ಪರ್ಧೆ. ಇಂಥ ಜೀವನ ವಿಧಾನದಲ್ಲಿ ಎರಡು ಬಗೆಯ ಅಪಾಯಗಳಿವೆ : ಒಂದು ಸ್ವಾರ್ಥವನ್ನು ಬೆಳೆಸುವುದು, ಎರಡು ಮನಸ್ಸು ಕಲಕಿ ಮನಸ್ಸಿನ ರೋಗಗಳನ್ನು ಹೆಚ್ಚಿಸುವುದು. (ತಾಂತ್ರಿಕಜ್ಞಾನದ ಮೂಲಕ ಕೈಗಾರಿಕೆಗಳನ್ನು ಬೆಳೆಸಿಕೊಂಡು ಶ್ರೀಮಂತವಾಗಿರುವ ರಾಷ್ಟ್ರಗಳಲ್ಲಿ ಮಾನಸಿಕ ರೋಗಗಳಿಂದ ನರಳುವವರ ಸಂಖ್ಯೆ ಬೆಳೆಯುತ್ತಿರುವುದು ಗಮನಾರ್ಹ.) ಕಲೆ ಎರಡು ಅಪಾಯಗಳಿಂದಲೂ ನಮ್ಮನ್ನು ಪಾರು ಮಾಡಬಲ್ಲದು. ಕಲೆ ನೀಡುವುದು ಆನಂದವನ್ನು, ಉದಾತ್ತ ರೀತಿಯ ಆನಂದವನ್ನು. ಲಿಯನಾರ್ಡೊ ದ ವಿಂಚಿಯ ಒಂದು ಚಿತ್ರದ ಮುಂದೆ ಅಥವಾ ತಾಜಮಹಲಿನ ಮುಂದೆ ನಿಂತಾಗ, 'ಶಾಕುಂತಲ'ದಂಥ ನಾಟಕವನ್ನು ನೋಡಿದಾಗ, ಕುಮಾರವ್ಯಾಸ ಭಾರತವನ್ನು ಓದಿದಾಗ, ಸೊಗಸಾದ ಸಂಗೀತವನ್ನು ಕೇಳಿದಾಗ ನಮಗಾಗುವ ಅನುಭವ ಏನು ? ನಮ್ಮನ್ನೆ ನಾವು ಮರೆಯುತ್ತೇವೆ. 'ನಾನು' ಎಂಬ ಅಹಮಿಕೆಯ ಸರಪಣಿ ಮುರಿದು ಬೀಳುತ್ತದೆ : ನಾನು ಎಂಬ ಸ್ವಾರ್ಥದ ಪಂಜರದಿಂದ ತಪ್ಪಿಸಿಕೊಂಡು ಯಾವುದೋ ಭವ್ಯತೆಯಲ್ಲಿ ಒಂದಾಗುತ್ತೇವೆ. ನಮ್ಮನ್ನು ಮೀರಿದ ದೊಡ್ಡತನವೊಂದರ ಬೆಳಕುಗಾಳಿಗಳಲ್ಲಿ ಉಸಿರಾಡುತ್ತೇವೆ. ನಮ್ಮದಲ್ಲದ ಅನುಭವ ನಮ್ಮದಾಗುತ್ತದೆ. ಕಲೆಗಾರನೊಂದಿಗೆ ನಾವೂ ಯಾವುದೋ ದಿವ್ಯ ಅನುಭವದಲ್ಲಿ ಪಾಲುಗೊಳ್ಳುತ್ತೇವೆ. ಆದ್ದರಿಂದ ಎಂದಿಗಿಂತ ಇಂದು, ಧೂಳು ವೇಗ ಶಬ್ದ ನಿಷ್ಕರುಣಸ್ಪರ್ಧೆಗಳು ತುಂಬಿದ ಜೀವನ ರೀತಿಯಲ್ಲಿ, ಕಲೆ ನಮ್ಮ ಬಾಳಿನ ಭಾಗವಾಗಬೇಕಾಗಿದೆ. ಬೇಕಾದಾಗ ಹೊದ್ದು ಬೇಡವಾದಾಗ ತೆಗೆದಿಡುವ ಉತ್ತರೀಯದಂತಾಗದೆ, ದೇಹಕ್ಕೆ ಅಂಟಿಕೊಂಡು ಹೊರಗಿನ ಧೂಳು ಕ್ರಿಮಿಕೀಟಗಳಿಂದ ರಕ್ಷಿಸುವ ಚರ್ಮದಂತಾಗಬೇಕಾಗಿದೆ. ಮನುಷ್ಯನ ನಾಗರಿಕತೆಯ ಬೆಳವಣಿಗೆಗೆ ವಿಜ್ಞಾನ ಅಗತ್ಯ, ಸಂಸ್ಕೃತಿಯ ಬೆಳವಣಿಗೆಗೆ ಕಲೆಗಳು ಅಗತ್ಯ. ಗ್ರೀಸ್ ಸಾಮ್ರಾಜ್ಯ, ರೋಮನ್ ಸಾಮ್ರಾಜ್ಯ, ಈಜಿಪ್ಟ್ ಸಾಮ್ರಾಜ್ಯ, ವಿಜಯನಗರ, ಮೊಗಲ್ ಸಾಮ್ರಾಜ್ಯ ಎಲ್ಲ

ಮಾಯವಾದುವು. ಆದರೂ ಆ ಸಾಮ್ರಾಜ್ಯಗಳ ಕಲಾಕೃತಿಗಳು ಇಂದಿನ ಜನರನ್ನು ಬೆರಗುಗೊಳಿಸುತ್ತವೆ, ಶತಮಾನಗಳ ಆಚೆಯಿಂದ ಇಂದಿನ ಜನರ ಅಂತಃಕರಣವನ್ನು ಮುಟ್ಟುತ್ತವೆ.

# ೧೨

## ಮತ ತತ್ತ್ವಶಾಸ್ತ್ರ

ಮನುಷ್ಯನಿಗೆ 'ಹೇಗೆ' ಎನ್ನುವ ಪ್ರಶ್ನೆಗಿಂತ ಮೊದಲು ಹೊಳೆಯುವುದು 'ಏಕೆ' ಎಂಬ ಪ್ರಶ್ನೆ. ಆದಿಮಾನವ ಗುಡುಗನ್ನು ಕೇಳಿದಾಗ, ಸಿಡಿಲಿನಿಂದ ಅವನ ಕಣ್ಣು ಕೋರೈಸಿದಾಗ, ಎಳೆಬಿಸಿಲು ಅವನನ್ನು ತಬ್ಬಿ ಸಂತೈಸಿದಾಗ, ಬೆಳದಿಂಗಳು ಪುಳಕಿತಗೊಳಿಸಿದಾಗ, ಮಳೆಯ ನೀರು ಥಡಿ ಏಟಿನಂತೆ ಬಿದ್ದಾಗ ಅವನಿಗೆ 'ಏಕೆ' ಎನ್ನಿಸಿರಬೇಕು. ಸಾಮಾನ್ಯವಾಗಿ ಈ 'ಏಕೆ' ಪ್ರಶ್ನೆಗೆ ಅವನೇ ಕೊಟ್ಟುಕೊಂಡ ಉತ್ತರ: ನನ್ನ ಕಣ್ಣಿಗೆ ಕಾಣದ ಶಕ್ತಿಗಳ ಕೋಪ, ಸಮಾಧಾನಗಳಿಂದ ಹೀಗೆ ಇರಬೇಕು. ಆ ಸೂರ್ಯ, ಚಂದ್ರ, ನೀರು, ಗಾಳಿ, ಬೆಂಕಿ ಎಲ್ಲ ಅವನಿಗೆ ದೇವತೆಗಳಾದುವು. ಸೂರ್ಯಗ್ರಹಣವನ್ನು ಕಂಡಾಗ ಅವನಿಗೆ ದಿಗ್ಭ್ರಮೆಯಾಗಿರಬೇಕು. ನಡುಹಗಲಿನ ಕತ್ತಲೆಯಲ್ಲಿ ಅವನು ನಡುಗಿರಬೇಕು. ಸೂರ್ಯನ ಶತ್ರುಗಳನ್ನು ಅಥವಾ ಸೂರ್ಯನಿಗಿಂತ ಶಕ್ತಿವಂತರಾದ ದೇವತೆಗಳನ್ನು ಅವನು ಚಿತ್ರಿಸಿಕೊಂಡಿರಬೇಕು. ಸಾವೂ ಅವನಿಗೆ ದಿಗ್ಭ್ರಾಂತಿಯನ್ನುಂಟುಮಾಡುವ ಘಟನೆ. ಗಟ್ಟಿಮುಟ್ಟಾಗಿದ್ದವನು, ಓಡಾಡಿಕೊಂಡಿದ್ದವನು ಏಳಲಾರದೆ ಸದ್ದು ಮಾಡಲಾರದೆ ಕಲ್ಲಿನಂತೆ ಬಿದ್ದುಕೊಳ್ಳುವುದು, ಸ್ವಲ್ಪ ಕಾಲವಾಗುತ್ತಲೇ ಆ ದೇಹ ಕೊಳೆಯಲು ಪ್ರಾರಂಭಿಸುವುದು--ಇವೆಲ್ಲ ಅವನಿಗೆ ವಿಸ್ಮಯವನ್ನೂ ಭಯವನ್ನೂ ತಂದಿರಬೇಕು. ಸತ್ತವರನ್ನು ಕನಸಿನಲ್ಲಿ ಕಂಡಾಗಲಂತೂ ಅವನಿಗೆ ಜಂಘಾಬಲ ಉಡುಗಿಹೋಗಿರಬೇಕು. ಸುತ್ತಲಿನ ಪ್ರಕೃತಿಯ ವ್ಯಾಪಾರಗಳು, ಹುಟ್ಟು, ಸಾವು ಈ ಅನುಭವಗಳು ಮತದ ಅವತಾರಕ್ಕೆ ಕಾರಣ.

ಅದೃಶ್ಯ ಶಕ್ತಿಗಳ ಕಲ್ಪನೆ. ಅವರನ್ನು ಒಲಿಸಿಕೊಳ್ಳುವ ಅಥವಾ ಅವರ ಕೋಪದಿಂದ ತಪ್ಪಿಸಿಕೊಳ್ಳುವ ಯತ್ನ ಇವು ಕೆಲವು ಅನಾಗರಿಕ ಪಂಗಡಗಳಲ್ಲಿ ಕಾಣುವುದಿಲ್ಲ. ಆಫ್ರಿಕದ ಪಿಗ್ಮಿಗಳಲ್ಲಿ ಕೆಲವು ಗುಂಪಿನವರು ಯಾವ ದೇವತೆಗಳನ್ನೂ ಪೂಜಿಸುತ್ತಿರಲಿಲ್ಲ. ಸತ್ತವರನ್ನು ಹೂಳಿಬಿಡುತ್ತಿದ್ದರು, ಬೇರಾವ ಸಂಸ್ಕಾರಗಳನ್ನೂ ಮಾಡುತ್ತಿರಲಿಲ್ಲ. ಉತ್ತರ ಅಮೆರಿಕದ ಇಂಡಿಯನರು ದೇವತೆಯೊಬ್ಬನಿದ್ದಾನೆ ಎಂದು ನಂಬಿದ್ದರು. ಆದರೆ ಮನುಷ್ಯನ ಪ್ರಾರ್ಥನೆಯನ್ನು ಅವನು ಕೇಳುವುದಿಲ್ಲ ಎಂದೂ ಭಾವಿಸಿದ್ದರು.

ಒಟ್ಟಿನಲ್ಲಿ ಪ್ರಪಂಚದ ಎಲ್ಲ ಪಂಗಡಗಳಲ್ಲಿ, ಗುಂಪುಗಳಲ್ಲಿ ಮತ ಕಂಡುಬರುತ್ತದೆ. ಪ್ರಾಚೀನ ಕಾಲದಲ್ಲಿ ಮತದ ಬೇರು ಭಯದಲ್ಲಿ; ಅದರ ಉದ್ದೇಶ ಭಯನಿವಾರಣೆ. ಸಿಡಿಲು, ಗುಡುಗು, ಮಿಂಚು, ಮಳೆ, ಬಿರುಗಾಳಿ, ಕಾಡುಕಿಚ್ಚು, ಪ್ರವಾಹ–ಇವುಗಳನ್ನು ಕಂಡ ಮನುಷ್ಯ ನಿಸರ್ಗದ ತುಂಬ ದೇವತೆಗಳನ್ನು ಕಂಡ. ನೆಲ, ನೀರು, ಬೆಂಕಿ, ಗಾಳಿ–ಎಲ್ಲದರಲ್ಲಿ ದೇವತೆಗಳಿದ್ದಾರೆ, ಇವರೂ ಮನುಷ್ಯರಂತೆ ಕೋಪಮಾಡಿಕೊಳ್ಳುತ್ತಾರೆ, ಸುಪ್ರಸನ್ನರಾಗುತ್ತಾರೆ. ಒಮ್ಮೆ ಒಳ್ಳೆಯದನ್ನು ಮಾಡುತ್ತಾರೆ, ಒಮ್ಮೆ ಕೆಟ್ಟದ್ದನ್ನು ಮಾಡುತ್ತಾರೆ ಎನ್ನಿಸಿತು ಅವನಿಗೆ. ಅವರಿಗೆ ನಮಸ್ಕರಿಸಿ, ಪೂಜಿಸಿ, ಬಲಿನೀಡಿ ಅವರನ್ನು ಒಲಿಸಿಕೊಳ್ಳಲು ಪ್ರಯತ್ನಿಸಿದ. ಬೆಳಕು ಶಾಖ ನೀಡುವ ಸೂರ್ಯ, ಬೆಳಕಿನ ಸಮುದ್ರದಲ್ಲಿ ಜಗತ್ತನ್ನು ತೇಲಾಡಿಸುವ ಚಂದ್ರ, ಆಹಾರ ನೀಡುವ ಭೂಮಿ, ಬಾಯಾರಿಕೆ ಹರಿಸುವ ನೀರು, ಸುಡುವ ಬೆಂಕಿ–ಇವೆಲ್ಲ ದೇವತೆಗಳಾಗಿ ಪೂಜೆಯನ್ನು ಕೈಗೊಂಡುವು. ಹಲವು ಪಂಗಡಗಳಿಗೆ, ಚಂದ್ರ ಗಂಡುದೇವತೆ. ವ್ಯವಸಾಯ ಬೆಳೆದಂತೆ ಸೂರ್ಯನ ಪ್ರಭಾವ ಹೆಚ್ಚಿತು. ಸೂರ್ಯಾರಾಧನೆಯನ್ನು ಪ್ರಪಂಚದ ಹಲವು ಭಾಗಗಳಲ್ಲಿ ಕಾಣುತ್ತೇವೆ. ಇದಕ್ಕೆ ಕಾರಣ ಸೂರ್ಯ ಬೆಳೆಯನ್ನು ಕೊಡುತ್ತಾನೆ ಎನ್ನುವುದು. ಸೂರ್ಯ ಗಂಡ, ಭೂಮಿ ಹೆಂಡತಿ ಎಂಬ ಭಾವನೆ ಹಲವು ಪಂಗಡಗಳಲ್ಲಿ. ಪ್ರಾಚೀನ ಈಜಿಪ್ಟ್, ಭಾರತ, ಬ್ಯಾಬಿಲೋನಿಯ ಎಲ್ಲ ದೇಶಗಳಲ್ಲಿ ಸೂರ್ಯನ ಆರಾಧನೆ ಇತ್ತು. ಜರತುಷ್ಟ್ರನ ಮತದಲ್ಲಿ ಸೂರ್ಯನ ಪೂಜೆಗೆ ವಿಶೇಷ ಮಹತ್ವ. ಭಾರತದಲ್ಲಿ ದೇವತೆಗಳ ವಿಗ್ರಹಗಳು ಮತ್ತು ಚಿತ್ರಗಳಲ್ಲಿ ಕಾಣುವ ವರ್ತುಲ ಪ್ರಭಾವಳಿ, ಮಧ್ಯಯುಗದ ಯೂರೋಪಿನಲ್ಲಿ ಸಂತರ ಚಿತ್ರಗಳಲ್ಲಿ ತಲೆಯ ಸುತ್ತ ಕಾಣುತ್ತಿದ್ದ ಪ್ರಭಾಚಕ್ರ–ಇವು ಸೂರ್ಯಪೂಜೆಯ ಗುರುತುಗಳು ಎಂದು ಹೇಳುತ್ತಾರೆ. ಭೂಮಿ ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ಹೆಸರಿನಿಂದ –ಪೃಥ್ವಿ, ಇಷ್ಟರ್, ಸಿರಿಸ್, ಫ್ರೀಯ ಹೀಗೆ– ಪೂಜೆಯನ್ನು ಕೈಗೊಂಡಿದೆ. ಸಾಮಾನ್ಯವಾಗಿ ಭೂಮಿ ಹೆಣ್ಣುದೇವತೆ. ಸೂರ್ಯ ಚಂದ್ರರ ಪ್ರಯಾಣದ ಪಥವೆಂದು, ಮಳೆಯನ್ನು ಸುರಿಸುವುದೆಂದು, ದೇವತೆಗಳ ವಾಸಸ್ಥಾನವೆಂದು ಪೂಜೆಗೆ ಆಕಾಶ ಅರ್ಹವಾಯಿತು. ಹೀಗೆಯೇ ಹಲವು ನಿಸರ್ಗಶಕ್ತಿಗಳು ಮತ್ತು ವಸ್ತುಗಳು ದೇವತೆಗಳ ಪಟ್ಟವನ್ನು ಪಡೆದು ಪೂಜೆಗೊಂಡುವು.

ಸತ್ತವರು ಕನಸಿನಲ್ಲಿ ಕಾಣಿಸಿಕೊಂಡುದು ಮಾನವನಿಗೆ ಒಂದು ವಿಶೇಷ ಅನುಭವ ಎನ್ನಿಸಿತು. ಅವನ ಕಣ್ಣೆದುರಿಗೇ ಭೂಮಿಯಲ್ಲಿ ಮಾಯವಾದವರು ಮತ್ತೆ ಕಾಣಿಸಿಕೊಂಡರೆ? ಇದರಿಂದ ಅವನಿಗೆ, ಮಣ್ಣಿನಲ್ಲಿ ಇಳಿದದ್ದು ದೇಹ ಮಾತ್ರ, ದೇಹವಲ್ಲದ ಅಳಿಯದ ಆತ್ಮ ಒಂದು ಉಂಟು ಎಂದು ಖಚಿತವಾಯಿತು. ಸತ್ತವರ ತೃಪ್ತಿಗೆಂದು ದೇಹದೊಂದಿಗೆ ಆಹಾರ ಪದಾರ್ಥಗಳು, ಬಟ್ಟೆ, ಒಡವೆ, ಒಮ್ಮೊಮ್ಮೆ ನಾಯಿ ಕುದುರೆಗಳಂಥ ಪ್ರಾಣಿಗಳು–ಎಲ್ಲವನ್ನೂ ಹೂಳುವುದು ಪ್ರಾರಂಭವಾಯಿತು. ಸತ್ತ ಹಿರಿಯರನ್ನು ಪೂಜಿಸುವುದಕ್ಕೂ ಮೊದಲಾಯಿತು. ದೇವತೆಗಳ ಮತ್ತು ಪೂರ್ವಜರ ಪೂಜೆಯ ವಿಧಾನಗಳು ನಿರ್ಧರಿಸಲ್ಪಟ್ಟುವು. ಇದು ಮೈಲಿಗೆ–ಅದು ಮೈಲಿಗೆ ಎನ್ನುವ ಕಲ್ಪನೆ

ಬಂದಿತು. ಪೂಜೆ ಮಾಡಿಸುವ ಪುರೋಹಿತವರ್ಗವೂ ಹುಟ್ಟಿಕೊಂಡಿತು. ಈಜಿಪ್ಟ್, ಗ್ರೀಸ್, ರೋಮ್, ಚೀನ, ಭಾರತ– ಎಲ್ಲ ದೇಶಗಳಲ್ಲಿಯೂ ಪೂರ್ವಜರ ಪೂಜೆ ಆಚರಣೆಯಲ್ಲಿದ್ದಿತು.

ಪ್ರಾರಂಭದಲ್ಲಿ ಮತ–ಪೂಜೆ–ಮಂತ್ರಮಾಟ ಎಲ್ಲ ಬೆರೆತುಹೋಗಿದ್ದುವು. ದೇವತೆಗಳು ಬಹುಮಟ್ಟಿಗೆ ಕ್ರೂರದೇವತೆಗಳು, ಬಹುಬೇಗ ಕೋಪ ಮಾಡಿಕೊಳ್ಳುವ ದೇವತೆಗಳು. ಇವರನ್ನು ಸಮಾಧಾನಗೊಳಿಸುವ ರೀತಿ ಪುರೋಹಿತನಿಗೆ ಮಾತ್ರ ಗೊತ್ತು. ಅವನು ರಹಸ್ಯದ ಮಂತ್ರಗಳಿಂದ ಅವರನ್ನು ಒಲಿಸಬಲ್ಲ. ಗಾಳಿ ಬೀಸುವ ರೀತಿ–ಪಕ್ಷಿ ಹಾರುವ ದಿಕ್ಕು–ಗುಡುಗು ಎಲ್ಲವರ ಅರ್ಥವನ್ನು ಬಿಡಿಸಿಹೇಳಬಲ್ಲ. ಕನಸುಗಳನ್ನೂ ಶಕುನಗಳನ್ನೂ ವಿವರಿಸಬಲ್ಲ. ಪ್ರಾಚೀನ ಪ್ರಪಂಚದ ಕೆಲವು ಭಾಗಗಳಲ್ಲಿ ಪುರೋಹಿತವರ್ಗ ಬೇರೆಯಾಗಿತ್ತು, ಕೆಲವೆಡೆಗಳಲ್ಲಿ ಗುಂಪಿನ ನಾಯಕ ಅಥವಾ ರಾಜನೇ ಮುಖ್ಯ ಪುರೋಹಿತ. (ಮಾಟಮಂತ್ರಗಳಲ್ಲಿ ಆಧುನಿಕ ಮಾನವನಿಗೂ ನಂಬಿಕೆ ಪೂರ್ಣವಾಗಿ ಹೋಗಿದೆ ಎನ್ನುವಂತಿಲ್ಲ. ಆಧುನಿಕರೆನ್ನಿಸಿಕೊಂಡ ಎಷ್ಟೋ ಮಂದಿ ಪಾಶ್ಚಾತ್ಯರು ತಾಯಿತಿಗಳನ್ನು ಕಟ್ಟಿಕೊಳ್ಳುತ್ತಾರೆ. ಅದೃಷ್ಟದ ಸಂಖ್ಯೆ–ಅದೃಷ್ಟದ ಬಣ್ಣ–ಅದೃಷ್ಟದ ರತ್ನಗಳನ್ನು ನಂಬುತ್ತಾರೆ.) ಕೆಲವು ಪಂಗಡಗಳಲ್ಲಿ ದೇವತೆಗಳ ವಿಗ್ರಹಗಳನ್ನು ಮಾಡಿ ತಿಂದರೆ ಆ ದೇವತೆಯ ಶಕ್ತಿ ಬರುತ್ತದೆ ಎಂಬ ನಂಬಿಕೆ ಇತ್ತು. ಪ್ರಾಚೀನ ಮೆಕ್ಸಿಕೋದಲ್ಲಿ ಧಾನ್ಯ, ಬೀಜ, ತರಕಾರಿಗಳನ್ನು ಸೇರಿಸಿ ದೇವತೆಯ ವಿಗ್ರಹಮಾಡಿ, ದೇವತೆಗೆ ಬಲಿಕೊಟ್ಟ ಹುಡುಗರ ರಕ್ತದೊಡನೆ ಕಲೆಸಿ, ಪಂಗಡದವರೆಲ್ಲ ತಿನ್ನುತ್ತಿದ್ದರು.

"ಮನುಷ್ಯನನ್ನು ಭಗವಂತ ತನ್ನ ಪ್ರತಿಬಿಂಬವಾಗಿ ಸೃಷ್ಟಿಸಿದ" ಎಂದಿತು ಬೈಬಲ್. "ಮನುಷ್ಯ ಭಗವಂತನನ್ನು ತನ್ನ ಪ್ರತಿಬಿಂಬವಾಗಿ ಸೃಷ್ಟಿಸಿದ" ಎಂದ ಒಬ್ಬ ಇಂಗ್ಲಿಷ್ ವಿಡಂಬನಕಾರ. ಈ ಮಾತಿನ ಅರ್ಥ ಇಷ್ಟೆ: ಮನುಷ್ಯ ದೇವರ ವಿಷಯದಲ್ಲಿ ಇಟ್ಟುಕೊಳ್ಳುವ ಕಲ್ಪನೆ ಆ ಮನುಷ್ಯನ ಚಿಂತನೆಯ ಮಟ್ಟವನ್ನು ಹೊಂದಿರುತ್ತದೆ. ಇನ್ನೂ ತನ್ನ ಕೋಪ–ಕ್ರೌರ್ಯಗಳನ್ನು ಜಯಿಸದಿದ್ದ ಮನುಷ್ಯ, ದೇವತೆಗಳೂ ಕೋಪ ಮಾಡಿಕೊಳ್ಳುತ್ತಾರೆ, ಕ್ರೂರರು, ತನಗಿಂತ ಅವರು ಎಷ್ಟೋ ಪಾಲು ಶಕ್ತರಾದುದರಿಂದ ಅವರ ಕೋಪ, ಕ್ರೌರ್ಯಗಳೂ ತನ್ನ ಕೋಪ, ಕ್ರೌರ್ಯಗಳಿಗಿಂತ ಭಯಂಕರ ಎಂದು ಭಾವಿಸಿದ. ಮಾಂಸ ತಿನ್ನುವ ಮನುಷ್ಯ ಮಾಂಸವನ್ನೆ ದೇವತೆಗಳಿಗೆ ಪ್ರೀತಿಯ ಆಹಾರ ಎಂದು ನೈವೇದ್ಯ ಮಾಡಿದ. ಶುನಶ್ಶೇಪನ ಕಥೆ ಭಾರತದಲ್ಲಿಯೂ ನರಬಲಿಯ ಪದ್ಧತಿ ಇದ್ದಿತು ಎಂಬುದನ್ನು ಸೂಚಿಸುತ್ತದೆ. ಫಿನೀಷಿಯನರೂ ಕಾರ್ಥೇಜಿಯನರೂ ಮಾಲಾಕ್ ಎಂಬ ದೇವತೆಯ ಲೋಹದ ಟೊಳ್ಳು ವಿಗ್ರಹವನ್ನು ಮಾಡಿ ಅದನ್ನು ಕಾಯಿಸಿ ಸುಡುತ್ತಿದ್ದ ಆ ವಿಗ್ರಹದೊಳಕ್ಕೆ ಮನುಷ್ಯರನ್ನು ತಳ್ಳಿ ಬಲಿ ಕೊಡುತ್ತಿದ್ದರು. ಗ್ರೀಕರಲ್ಲಿ ನರಬಲಿ ಇದ್ದುದು ಅವರ ಪೌರಾಣಿಕ ಕಥೆಗಳಿಂದ ಸ್ಪಷ್ಟ. ತನ್ನಂತೆಯೆ ದೇವತೆಗಳಿಗೆ ಮದುವೆಯುಂಟು, ಸಂಸಾರವುಂಟು, ಅವರಲ್ಲಿ ಜಗಳಗಳುಂಟು–ತನಗೂ ಅವರಿಗೂ ವ್ಯತ್ಯಾಸ ಎಂದರೆ ತನಗೆ, ರೋಗ, ಮುಪ್ಪು, ಸಾವುಗಳುಂಟು, ಅವರಿಗೆ ಇವಾವುದೂ ಇಲ್ಲ ಎಂದು ಬಹು ಕಾಲ ಮನುಷ್ಯ ನಂಬಿದ್ದ.

ಮನುಷ್ಯನ ಸ್ವಭಾವ ಮೃದುವಾದಂತೆ, ಅವನ ಆದರ್ಶಗಳು ಮತ್ತು ಮೌಲ್ಯಗಳು ಬದಲಾದಂತೆ, ದೇವತೆಗಳ ಕಲ್ಪನೆಯೂ ಬದಲಾಯಿತು. ನ್ಯಾಯದ ಕಲ್ಪನೆ ಅವನಲ್ಲಿ ಉದಯಿಸಿದ ಮೇಲೆ, ದೇವತೆಗಳು ನ್ಯಾಯವಂತರು, ತಪ್ಪು ಮಾಡಿದವನಿಗೆ ಶಿಕ್ಷೆ ಕೊಡುತ್ತಾರೆ, ಒಳ್ಳೆಯ ಜೀವನ ನಡೆಸಿದವನಿಗೆ ಬಹುಮಾನ ಮಾಡುತ್ತಾರೆ ಎಂಬ ಭಾವನೆ ಬೆಳೆಯಿತು. ಸ್ವರ್ಗ–ನರಕಗಳ ಚಿತ್ರ ಮೂಡಿತು.

ಇಲ್ಲಿಂದ ಮುಂದೆ ಮುಖ್ಯವಾಗಿ ಮೂರು ಬೆಳವಣಿಗೆಗಳನ್ನು ಕಾಣುತ್ತೇವೆ. ಹಲವು ದೇವತೆಗಳಲ್ಲಿನ ನಂಬಿಕೆ ಒಬ್ಬ ದೇವರ ಕಲ್ಪನೆಗೆ ದಾರಿ ಮಾಡಿಕೊಟ್ಟಿತು. ವಿಶ್ವವ್ಯಾಪಿಯೂ ಎಲ್ಲ ಜೀವಿಗಳಲ್ಲಿ ಅಡಗಿರುವವನೂ ಆದ ಪರಮಶಕ್ತಿಯ ಕಲ್ಪನೆ ಭಾರತದಲ್ಲಿ ಬೃಹದಾರಣ್ಯಕ ಉಪನಿಷತ್ತಿನಲ್ಲಿಯೇ ಕಾಣುತ್ತದೆ. ನಾಗರಿಕತೆಯ ಪ್ರಾರಂಭದಲ್ಲಿಯೆ ಇಂಥ ಉನ್ನತ ಕಲ್ಪನೆ ಕಾಣುವುದು ಆಶ್ಚರ್ಯಕರ. ಭಗವದ್ಗೀತೆಯಲ್ಲಿ ವಿಶ್ವವನ್ನೆಲ್ಲ ಒಳಗೊಂಡ ಭಗವಂತನ ವರ್ಣನೆ ಇದೆ. ಸತ್ಯ ಒಂದು, ತಿಳಿದವರು ಅದನ್ನು ಹಲವು ಹೆಸರುಗಳಿಂದ ಕರೆಯುತ್ತಾರೆ, 'ಆಕಾಶದಿಂದ ಬಿದ್ದ ಮಳೆ ಎಲ್ಲ ಸಾಗರವನ್ನು ತಲಪುವಂತೆ ಯಾವ ಹೆಸರಿನಿಂದ ಭಗವಂತನಿಗೆ ನಮಸ್ಕಾರ ಮಾಡಿದರೂ ಕೇಶವನನ್ನು ತಲಪುತ್ತದೆ'—ಈ ಅರ್ಥ ಉಳ್ಳ ಮಂತ್ರಗಳು ಹಿಂದೂಗಳಿಗೆ ಸುಪರಿಚಿತ. ಜ್ಯೂಡಿಆದಲ್ಲಿ ಯೆಹೂದ್ಯರು ಹಲವು ದೇವತೆಗಳನ್ನು ಪೂಜಿಸುತ್ತಿದ್ದರು. ಮೋಸೆಸ್ ಮತ್ತು ಅವನ ಸಂಗಾತಿಗಳು ಈ ಪೂಜೆಯನ್ನು ಬಿಡಿಸಿ, ಒಬ್ಬ ದೇವರಲ್ಲಿ ನಂಬಿಕೆಯನ್ನು ಮೂಡಿಸಲು ತುಂಬ ಕಷ್ಟಪಡಬೇಕಾಯಿತು. ಕ್ರಮೇಣ ಯಾಹುವ ಪೂಜೆ ಸ್ಥಿರವಾಯಿತು. ಜರತುಷ್ಟ್ರನೂ ಹಲವು ದೇವತೆಗಳ ಪೂಜೆಯನ್ನು ಖಂಡಿಸಿ, ಒಬ್ಬ ದೇವರ—ಅಹುರ ಮಜ್ದನ–ಪೂಜೆಯತ್ತ ಪರ್ಷಿಯನರ ಮನಸ್ಸನ್ನು ತಿರುಗಿಸಿದ. ಪ್ರಾಚೀನ ಗ್ರೀಕರು ಹಲವು ದೇವತೆಗಳನ್ನು ಪೂಜಿಸುತ್ತಿದ್ದರು : ಆದರೆ ಏಕದೇವರ ಕಲ್ಪನೆ ಅಥೆನ್ಸಿನ ಮಹಾನಾಟಕಕಾರರಲ್ಲಿ ಒಬ್ಬ ಎಸ್ಕಿಲಸ್‌ನಲ್ಲಿ ಕಾಣುತ್ತೇವೆ. ಅವನ ಒಂದು ನಾಟಕದಲ್ಲಿ ಮೇಳದವರು ಪ್ರಾರ್ಥನೆ ಮಾಡುತ್ತ, "ಓ ಜ್ಯೂಸ್ ಪ್ರಭುವೇ.........ಅಥವಾ ಬೇರಾವ ಹೆಸರಿನಿಂದ ಕರೆಸಿಕೊಂಡರೆ ನಿನಗೆ ಹರ್ಷವೋ......"ಎನ್ನುತ್ತಾರೆ. ಏಳನೆಯ ಶತಮಾನದಲ್ಲಿ ಇಸ್ಲಾಂ ಮತ ಹಲವು ದೇವತೆಗಳ ಪೂಜೆಯನ್ನು ಬಿಡಿಸಿ ಅರಬರಿಗೆ ಒಬ್ಬ ದೇವತೆಯ ಪೂಜೆಯನ್ನು ಬೋಧಿಸಿತು.

ಎರಡನೆಯದಾಗಿ, ಪ್ರಪಂಚದ ಹಲವು ಭಾಗಗಳಲ್ಲಿ ವಿಗ್ರಹಪೂಜೆ ಮಾಯವಾಯಿತು. ಯೆಹೂದ್ಯ ಮತ, ಕ್ರೈಸ್ತ ಮತ, ಇಸ್ಲಾಂ, ಜರತುಷ್ಟ್ರನ ಮತ ಎಲ್ಲ ಮೂರ್ತಿಪೂಜೆಯನ್ನು ಖಂಡಿಸಿವೆ. ವಿಗ್ರಹಾರಾಧನೆಯ ವಿರುದ್ಧವಾಗಿಯೂ ಅದನ್ನು ಸಮರ್ಥಿಸಿಯೂ ಹಲವು ವಾದಗಳನ್ನು ಮುಂದಿಡಬಹುದು. ಇದರಲ್ಲಿ ಯಾವುದು ಶ್ರೇಷ್ಠ ಎಂಬ ವಾದ ಇಲ್ಲಿ ಅಪ್ರಕೃತ.

ಮೂರನೆಯದಾಗಿ, ಭಗವಂತ ಅತಿ ಕಟ್ಟುನಿಟ್ಟಿನ ನ್ಯಾಯಾಧೀಶ ಎಂಬ ಕಲ್ಪನೆ ಭಗವಂತ ಕರುಣಾಮಯ ಎಂಬ ಕಲ್ಪನೆಗೆ ದಾರಿಮಾಡಿಕೊಟ್ಟಿತು. ದೇವರ ಶಕ್ತಿಯ ಪೂಜೆ ದೇವರ ಕರುಣೆಯ ಸ್ತೋತ್ರವಾಯಿತು. ಎಲ್ಲರ ಪ್ರಭು, ಎಲ್ಲರ ನ್ಯಾಯಾಧೀಶನಾಗಿದ್ದ ಭಗವಂತ ಎಲ್ಲರ ತಂದೆಯಾದ. ಸರ್ವಶಕ್ತನನ್ನು ಆಪದ್ಬಾಂಧವ, ಅನಾಥರಕ್ಷಕ, ದೀನದಯಾಪರ ಎಂದು ಪೂಜಿಸುವುದು ಪ್ರಾರಂಭವಾಯಿತು.

ಒಂದು ಕುತೂಹಲದ ಸಂಗತಿ ಎಂದರೆ ಇಂದಿನ ಜಗತ್ತಿನ ಮುಖ್ಯ ಮತಗಳೆಲ್ಲ ಪೂರ್ವ ದೇಶಗಳಲ್ಲಿ ಹುಟ್ಟಿದುವು. ಹಿಂದೂ ಧರ್ಮ. ಬೌದ್ಧ ಧರ್ಮ. ಜೈನಧರ್ಮ. ಸಿಕ್ಖ್ ಧರ್ಮ ಭಾರತದಲ್ಲಿ ಹುಟ್ಟಿ ಬೆಳೆದುವು. ಕ್ರೈಸ್ತ ಮತದ ಸ್ಥಾಪಕ ಯೇಸು ಜೆರೂಸಲೆಮಿನವನು. ಇಸ್ಲಾಂ ಧರ್ಮ ಅರೇಬಿಯದಲ್ಲಿ ಹುಟ್ಟಿತು. ಯೆಹೂದ್ಯ ಧರ್ಮ ಇಸ್ರೇಲಿನದು. ಈ ಹಲವು ಧರ್ಮಗಳು ಒಂದರಮೇಲೊಂದು ಆಗಾಗ ಪ್ರಭಾವ ಬೀರಿವೆ. ಬೌದ್ಧ ಧರ್ಮ, ಜೈನ ಧರ್ಮ, ಹಿಂದೂ ಧರ್ಮಗಳು ಪರಸ್ಪರ ಪ್ರಭಾವಕ್ಕೆ ಒಳಗಾಗಿರುವುದು ಸಹಜವೆ. ಬೌದ್ಧ ಮತ್ತು ಜೈನ ಧರ್ಮಗಳಿಂದ ಹಿಂದೂ ಧರ್ಮ ಅಹಿಂಸೆಯ ಮಹತ್ವದ ಬೋಧನೆಯನ್ನು ಸ್ವೀಕರಿಸಿತು. ಬುದ್ಧನನ್ನು ಅವತಾರ ಪುರುಷನನ್ನಾಗಿ ಪರಿಗಣಿಸಿತು. ಪ್ರಾಣಿಬಲಿ ಕಡಮೆಯಾದದ್ದು ಬಹುಮಟ್ಟಿಗೆ ಈ ಮತಗಳ ಪ್ರಭಾವದಿಂದ. ಅಲೆಗ್ಸಾಂಡರನ ಕಾಲದಿಂದ ಭಾರತಕ್ಕೂ ಪಾಶ್ಚಾತ್ಯ ರಾಷ್ಟ್ರಗಳಿಗೂ ವಾಣಿಜ್ಯ ಮತ್ತು ಸಾಂಸ್ಕೃತಿಕ ಸಂಬಂಧಗಳು ಬೆಳೆದುವು. ಅಲ್ಲದೆ ಭಾರತದ ಮತ್ತು ಭಾರತ–ಇರೇನಿಯನ್ ಗುಂಪಿನ ಜನರು ವೇದದ ಮಿತ್ರ. ವರುಣ. ಇಂದ್ರ ಇಂಥ ದೇವತೆಗಳನ್ನು ಪೂಜಿಸುತ್ತಿದ್ದವರು. ಕ್ರಿಸ್ತ ಶಕ ಪ್ರಾರಂಭವಾಗುವ ಮುನ್ನವೇ ಸಿರಿಯ ಮತ್ತು ಅದರ ಸುತ್ತಮುತ್ತಲಿನ ಪ್ರದೇಶಗಳಿಗೆ ಆಗಾಗ ಭೇಟಿ ನೀಡುತ್ತಿದ್ದರು. ಕ್ರಿಸ್ತ ಹುಟ್ಟುವುದಕ್ಕೆ ಎರಡು ಶತಮಾನಗಳ ಮೊದಲೇ ಬೌದ್ಧಮತ ಪ್ಯಾಲೆಸ್ಟೈನಿನವರಿಗೆ ಪರಿಚಿತವಾಗಿತ್ತು. ಪ್ರಾಯಶಃ ಕ್ರಿಸ್ತಪೂರ್ವ ೮೦ರಲ್ಲಿ ರಚಿತವಾದ ಹೀಬ್ರೂ ಕೃತಿ 'ಇನಾಕ್‌ನ ಗ್ರಂಥ' ದಲ್ಲಿ ಹಿಂದೂ ಧರ್ಮದ ಪ್ರಭಾವ ಎಷ್ಟರ ಮಟ್ಟಿಗಿದೆ ಎನ್ನುವುದನ್ನು ಡಾ. ರಾಧಾಕೃಷ್ಣನ್ ವಿವರಿಸಿದ್ದಾರೆ. ಧರ್ಮಿಷ್ಠರಾಗಿ ಬದುಕಿದವರು ಭೂಮಿಯನ್ನು ಬಿಟ್ಟನಂತರ ಇಷ್ಟ ದೇವತೆಯಲ್ಲಿ ಲೀನವಾಗುವರೆಂಬ ಕಲ್ಪನೆ ಈ ಗ್ರಂಥದಲ್ಲಿ ಕಾಣುತ್ತದೆ. ಇಲ್ಲಿನ ಸ್ವರ್ಗದ ವರ್ಣನೆಯ ಹಲವು ವಿವರಗಳು ಹಿಂದೂಗಳ ಪಿತೃಲೋಕ, ದೇವಲೋಕಗಳ ಕಲ್ಪನೆಗಳನ್ನು ಮತ್ತೆ ಮತ್ತೆ ನೆನಪಿಗೆ ತರುತ್ತವೆ. ಕೆಲವು ವಿವರಗಳಂತೂ ಯೆಹೂದ್ಯರ ಪವಿತ್ರಗ್ರಂಥ ಹಳೆಯ ಒಡಂಬಡಿಕೆಯಲ್ಲಿ ಎಲ್ಲಿಯೂ ಕಾಣದವು. ಆದರೆ ಕಾಶೀತಕೀ ಉಪನಿಷತ್ತಿನಲ್ಲಿ ಕಂಡುಬರುವುವು. ಇಲ್ಲಿ ಹೇಳುವ ಭಗವಂತನ ಲಕ್ಷಣಗಳು ಹೀಬ್ರೂಗಳ ಗ್ರಂಥಗಳಿಗೆ ವಿನೂತನವಾದುವು, ಆದರೆ ಭಾರತದ ಉಪನಿಷತ್ತುಗಳಲ್ಲಿ ಪರಿಚಿತವಾದುವು. ಡಾ. ರಾಧಾಕೃಷ್ಣನ್ನರು ಹೇಳುತ್ತಾರೆ: "ಸಾವಿನ ವರೆಗೆ ಯಾತನೆಯನ್ನು ಅನುಭವಿಸಿ ಯೇಸು ತನ್ನ ಆಧ್ಯಾತ್ಮಿಕ ಅಂತರ್‌ದೃಷ್ಟಿಯನ್ನು ಪಡೆದಾಗ (ಸ್ವರ್ಗದ) ರಾಜ್ಯ ಅವನದಾಗುತ್ತದೆ. ಅವನು ಮಾನವಪುತ್ರ. ಮತ್ತು ದೇವಪುತ್ರ. ಇನಾಕ್ ತೋರಿಸಿಕೊಡುವುದು. ಯೇಸು ಮುಂದುವರಿಸುವುದು ಹಿಂದೂ ಸಂಪ್ರದಾಯವನ್ನು". ಯೇಸುವಿನ ಉಪದೇಶಗಳಿಗೂ ಬುದ್ಧನ ಉಪದೇಶಗಳಿಗೂ ಇರುವ ಸಾಮ್ಯವನ್ನು ಅನೇಕರು ವಿವರಿಸಿದ್ದಾರೆ. ಆಕ್ಸ್‌ಫರ್ಡ್‌ನ ಬಿಷಪ್ ಡಾ. ಡರ್ಕ್ ಯೇಸುವಿನ ಉಪದೇಶಗಳು—ಒಂದು ಕೆನ್ನೆಗೆ ಹೊಡೆದರೆ ಮತ್ತೊಂದು ಕೆನ್ನೆ ತೋರಿಸು. ತಂದೆತಾಯಿಯನ್ನೂ ಆಸ್ತಿಯನ್ನೂ ಬಿಟ್ಟುಬಿಡು ಇಂಥವು—ಅವನ ಕುಲಕ್ಕೆ ಹೊಸದು ಎಂದಿದ್ದಾರೆ. ಪ್ರಸಿದ್ಧವಾದ 'ಸರ್ಮನ್ ಆನ್ ದಿ ಮೌಂಟ್' ನಲ್ಲಿ ಯೇಸು ಬೋಧಿಸಿರುವುದು ಪಿಟಕಗಳಲ್ಲಿ ಮತ್ತೆ ಮತ್ತೆ ಹೇಳಿರುವ ಬುದ್ಧವಾದವನ್ನೇ. ಬುದ್ಧನ ಹಲವು ಮಾತುಗಳಿಗೂ ಯೇಸುವಿನ ಮಾತುಗಳಿಗೂ ಇರುವ ಸಾಮ್ಯ ಆಶ್ಚರ್ಯಕರ. ಯೇಸು ಬೆಳೆದ ಕಾಲದಲ್ಲಿ ಅವನ ಸುತ್ತಲಿನ ವಾತಾವರಣದಲ್ಲಿ ಹಿಂದೂ ಮತ್ತು ಬೌದ್ಧಧರ್ಮಗಳ ಉಪದೇಶಗಳು ಬೆರೆತುಹೋಗಿದ್ದುವು. (ಡಾ॥ ರಾಧಾಕೃಷ್ಣನ್ ಅವರು ತಮ್ಮ 'ಪೌರಸ್ತ್ಯ ಧರ್ಮಗಳು ಮತ್ತು ಪಾಶ್ಚಾತ್ಯ ಚಿಂತನೆ' ಎಂಬ ಗ್ರಂಥದಲ್ಲಿ (ಪುಟ 177–187) ಬುದ್ಧ ಮತ್ತು ಯೇಸು ಇವರ ಜೀವನ ಮತ್ತು ಉಪದೇಶಗಳಲ್ಲಿನ ಸಾಮ್ಯವನ್ನು ವಿವೇಚಿಸಿದ್ದಾರೆ.) ಜರತುಷ್ಟ್ರನ ಮತದ ಮಿತ್ರ. ವೇದಗಳ ಮಿತ್ರ ಒಬ್ಬನೇ ದೇವತೆ. ಎರಡು ಮತಗಳಲ್ಲಿಯೂ ಆತ ಬೆಳಕಿನ ದೇವತೆ. ಸತ್ಯದ ರಕ್ಷಕ. ಅನೃತದ ಶತ್ರು. ಇಸ್ಲಾಂ ಮತ್ತು ಕ್ರೈಸ್ತಮತಗಳೆರಡೂ ಒಂದೇ ಪ್ರದೇಶದ ನೆಲದಲ್ಲಿ ಹುಟ್ಟಿ ಬೆಳೆದುವು. ಮುಹಮ್ಮದರು ಅನೇಕ ಮಂದಿ ಕ್ರೈಸ್ತರನ್ನು ಕಂಡಿದ್ದು ಅವರೊಡನೆ ಮಾತುಕತೆ ನಡೆಸಿದ್ದುಂಟು. ಮುಹಮ್ಮದರು ಹೀಬ್ರೂ ಮತ್ತು ಕ್ರೈಸ್ತಧರ್ಮಗ್ರಂಥಗಳನ್ನೂ ದೈವದತ್ತ ಎಂದು ಗೌರವಿಸಿದರು, ಆಡಂ. ನೋಆ, ಅಬ್ರಹ್ಯಾಂ, ಮೋಸೆಸ್, ಇನಾಕ್. ಯೇಸು ಎಲ್ಲರನ್ನೂ ದೇವರ ಪ್ರವಾದಿಗಳೆಂದು ಗಣಿಸಿದರು. ಬೈಬಲಿನ ವೃತ್ತಾಂತವನ್ನು ಒಪ್ಪಿಕೊಂಡರು. ಯೆಹೂದ್ಯರಲ್ಲಿ ಪ್ರಚಲಿತವಾಗಿದ್ದ ವೃತ್ತಾಂತಗಳನ್ನೂ ಬಳಸಿಕೊಂಡರು.

ಇದೆಲ್ಲದರ ಅರ್ಥ ರಾಜಕೀಯ ಮತ್ತು ಸಾಂಸ್ಕೃತಿಕ ವಿಚಾರಗಳಂತೆಯೇ ಧಾರ್ಮಿಕ ವಿಚಾರಗಳೂ ದೇಶದಿಂದ ದೇಶಕ್ಕೆ ಸಾಗಿವೆ. ಧರ್ಮ–ಧರ್ಮಗಳಲ್ಲಿ ಘರ್ಷಣೆಯ ಅಗತ್ಯವಿಲ್ಲ. ಹಲವು ಧರ್ಮಗಳಿಗೆ ಸಾಮಾನ್ಯವಾದ ಎಷ್ಟೋ ತತ್ತ್ವಗಳಿರುತ್ತವೆ ಎಂದು.

ಎಲ್ಲ ಮತಗಳಲ್ಲಿ ಮೂರು ಅಂಶಗಳನ್ನು ಕಾಣಬಹುದು: ತತ್ತ್ವ, ವಿಧಿ, ಆಚಾರ. ಭಗವಂತನ ಸ್ವರೂಪ, ಭಗವಂತನಿಗೂ ಸೃಷ್ಟಿಗೂ ಇರುವ ಸಂಬಂಧ, ಆತ್ಮಕ್ಕೂ ಭಗವಂತನಿಗೂ ಇರುವ ಸಂಬಂಧ—ಇಂಥ ವಿಷಯಗಳಲ್ಲಿ ಮತಸ್ಥಾಪಕ (ಅಥವಾ ಮತದ ಪ್ರಾಚೀನ ಬೋಧಕರು) ಆ ಮತದ ವಿವರಣೆ ಕೊಡಬೇಕು. (ಬುದ್ಧ ಭಗವಂತನ ಇರುವಿಕೆಯನ್ನು ಕುರಿತು ಏನನ್ನೂ ಹೇಳಲಿಲ್ಲ.) ಮನುಷ್ಯನ ದೇಹಕ್ಕೂ ಆತ್ಮಕ್ಕೂ ಇರುವ ಸಂಬಂಧ. ಹೊರಗಿನ ಪ್ರಪಂಚಕ್ಕೂ ಆತ್ಮಕ್ಕೂ ಇರುವ ಸಂಬಂಧ. ಜಗತ್ತಿನಲ್ಲಿ ಮನುಷ್ಯನ ಪಾತ್ರ, ಹುಟ್ಟು–ಸಾವು, ಸಾವಿನ ಅನಂತರದ ಬಾಳು–ಇಂಥ ಹಲವು ಸಮಸ್ಯೆಗಳಿಗೆ ಉತ್ತರ ಹೇಳಬೇಕು. ಎರಡನೆಯದಾಗಿ, ಆ ಮತದವರು ಹೀಗೆ ಮಾಡಬಹುದು. ಹೀಗೆ ಮಾಡಬಾರದು ಎಂಬುದನ್ನು ಹೇಳಿ ಮಾರ್ಗದರ್ಶನ ನೀಡಬೇಕು. ಜನಸಾಮಾನ್ಯರಿಗೆ ಬರಿಯ ತತ್ತ್ವ ಸಾಲದು. ಜೀವನವನ್ನು ಹೇಗೆ ನಡೆಸಬೇಕು. ಇತರ ಮನುಷ್ಯರೊಡನೆ ಹೇಗೆ ನಡೆದುಕೊಳ್ಳಬೇಕು. ಸಮಾಜದಲ್ಲಿ ಹೇಗೆ ಬಾಳಬೇಕು. ಯಾವುದು ಸರಿ, ಯಾವುದು ತಪ್ಪು–ಇವನ್ನು ಮತ ಹೇಳಿಕೊಡಬೇಕು. ಮೂರನೆಯದಾಗಿ ಈ ವಿಧಿಗಳನ್ನು ನಿತ್ಯಜೀವನದಲ್ಲಿ ನಡೆಸುವುದು ಹೇಗೆ. ಪೂಜೆ ಮಾಡುವ ರೀತಿ ಯಾವುದು. ಪ್ರಾರ್ಥನೆ ಹೇಗೆ ಮಾಡಬೇಕು. ಯಾವ ದಿನ ಹಬ್ಬಗಳನ್ನು ಆಚರಿಸಬೇಕು. ಹೇಗೆ ಆಚರಿಸಬೇಕು–ಇಂಥ ನೂರು ವಿವರಗಳು ಜನಸಾಮಾನ್ಯರಿಗೆ ಅಗತ್ಯವಾಗುತ್ತವೆ. ಇವೆಲ್ಲವನ್ನೂ ಮೂಲ ಮತಸ್ಥಾಪಕನೇ ಹೇಳಿರುತ್ತಾನೆ ಎಂದಿಲ್ಲ. ಆತನು ಹೇಳಿದ ವಿವರಣೆಗಳು. ಅವುಗಳಿಗೆ ಆತನ ಸಮೀಪದವರು, ಮತಾಧಿಕಾರಿಗಳು ಮಾಡಿದ ವ್ಯಾಖ್ಯಾನಗಳು—ಎಲ್ಲ ಸೇರಿ ಆ ಮತದ

ಬೋಧನೆ ಎನ್ನಿಸಿಕೊಳ್ಳುತ್ತವೆ. ಮೂಲ ಮತಸ್ಥಾಪಕನೇ ನಿರೂಪಿಸಿದ ವಿಧಿಗಳಿರಬಹುದು; ಅವನ ಉಪದೇಶಗಳ ಆಧಾರದ ಮೇಲೆ ಇತರರು ನಿರೂಪಿಸಿದ ವಿಧಿಗಳಿರಬಹುದು. (ಉದಾಹರಣೆಗೆ: ಆತ್ಮಹತ್ಯೆ ಕ್ರೈಸ್ತರಲ್ಲಿ ಪಾಪ. ಬೈಬಲಿನಲ್ಲಿ ಆತ್ಮಹತ್ಯೆ ಪಾಪ, ಆದ್ದರಿಂದ ಆತ್ಮಹತ್ಯೆ ಮಾಡಿಕೊಳ್ಳಬಾರದು ಎಂಬ ವಿಧಿ ಇಲ್ಲ. ಆದರೆ 'ಕೊಲಬೇಡ' ಎಂಬುದು ಹತ್ತು ಆಣತಿಗಳಲ್ಲಿ ಒಂದು. 'ಕೊಲಬೇಡ' ಎಂದರೆ ಇತರರನ್ನೂ ಕೊಲ್ಲಬೇಡ, ನಿನ್ನನ್ನೂ ಕೊಂದುಕೊಳ್ಳಬೇಡ ಎಂಬ ವಿಶಾಲ ಅರ್ಥ ಕೊಟ್ಟಿದ್ದಾರೆ.) ಮೂಲಪುರುಷನ ಮತ್ತು ಇತರ ಗುರುಗಳ ನಡವಳಿಕೆ, ಸಂಪ್ರದಾಯ ಎಲ್ಲ ಸೇರಿ ಆಚಾರ ನಿರ್ಮಿಸುವುವು. (ಕ್ರೈಸ್ತರಲ್ಲಿ 'ಕ್ರಿಸ್ಮಸ್' ಹಬ್ಬವನ್ನು ಹೀಗೆಯೇ ನಡೆಸಬೇಕೆಂದು ಎಲ್ಲಿ ಆಣತಿ ಇದೆ ? ಈ ಬಹು ಮುಖ್ಯ ಹಬ್ಬದ ಆಚರಣೆ ಸಂಪ್ರದಾಯಕ್ಕನುಗುಣವಾಗಿಯೆ ಬಹು ಮಟ್ಟಿಗೆ ನಡೆಯುತ್ತದೆ). ಎಲ್ಲ ಮತಗಳಲ್ಲಿಯೂ ಹಬ್ಬಗಳ ಆಚರಣೆಯಲ್ಲಿ ಸಂಪ್ರದಾಯ ಮುಖ್ಯವಾದ ಪಾತ್ರ ವಹಿಸುತ್ತದೆ. ಒಂದು ಮತದವರ ಐಕಮತ್ಯವನ್ನು ಉಳಿಸಿಕೊಳ್ಳುವುದಕ್ಕೆ ಆಚಾರ ಬಹು ಮುಖ್ಯ. ಒಂದೇ ದಿನ ಹಬ್ಬವನ್ನಾಚರಿಸುವವರಿಗೆ, ತಾವೆಲ್ಲ ಒಂದೇ ಮತದವರು ಎಂಬ ಪ್ರಜ್ಞೆ ಬೆಳೆಯುತ್ತದೆ. ಹುಟ್ಟಿದಾಗಿನ ಸಂಸ್ಕಾರಗಳು, ಅಂತ್ಯಸಂಸ್ಕಾರಗಳು, ವಿವಾಹ ಪದ್ಧತಿಗಳು, ಪ್ರಾರ್ಥನೆ ಅಥವಾ ಪೂಜೆಗೆ ಒಂದೆಡೆ ಸೇರಿದಾಗ ನಡೆದುಕೊಳ್ಳುವ ರೀತಿ–ಇವೆಲ್ಲ ಒಂದೇ ಮತದವರಲ್ಲಿ ಐಕ್ಯಭಾವವನ್ನು ಬೆಳೆಸುತ್ತವೆ. ಅಲ್ಲದೆ ಈ ವಿಧಿ–ಆಚಾರಗಳು ಜನಸಾಮಾನ್ಯಕ್ಕೆ ಬಹುಮಟ್ಟಿನ ಗೊಂದಲವನ್ನು ತಪ್ಪಿಸುತ್ತವೆ. ದೇವರಿಗೆ ಪೂಜೆ ಸಲ್ಲಿಸಬೇಕು ಎನ್ನಿಸಿದಾಗ ಪ್ರತಿಯೊಬ್ಬನೂ ತಾನೇ ಪೂಜೆಯ ವಿಧಾನವನ್ನು ತೀರ್ಮಾನಮಾಡಬೇಕಾಗಿದ್ದರೆ, ಪ್ರತಿ ಬಾರಿ ಸಾವು ಸಂಭವಿಸಿದಾಗಲೂ ಸತ್ತವನ ಆಪ್ತೇಷ್ಟರು ಹೆಣವನ್ನು ಏನು ಮಾಡಬೇಕು ಎಂಬ ಪ್ರಶ್ನೆಯನ್ನು ಎದುರಿಸಬೇಕಾಗಿದ್ದರೆ, ಇಬ್ಬರು ಮದುವೆ ಮಾಡಿಕೊಳ್ಳಬೇಕೆಂದು ಬಯಸಿದಾಗ 'ಹೇಗೆ ಮದುವೆ ನಡೆಯಬೇಕು ?' ಎಂದು ತೀರ್ಮಾನಿಸಬೇಕಾದರೆ ಎಷ್ಟು ಕಷ್ಟ ಎನ್ನುವುದನ್ನು ಸುಲಭವಾಗಿ ಊಹಿಸಬಹುದು.

ಪ್ರಾಚೀನ ಪಂಗಡಗಳಲ್ಲಿ ಸಹ ಹಲವರಿಗೆ ದೇವರಲ್ಲಿ ನಂಬಿಕೆ ಇರಲಿಲ್ಲ ಎನ್ನುವ ಮಾತನ್ನು ಆಗಲೆ ಹೇಳಿದೆ. ಎಲ್ಲ ದೇಶಗಳಲ್ಲಿಯೂ ಮತಕ್ಕೆ ವಿರೋಧಿಗಳಾದವರನ್ನು ಕಾಣಬಹುದು. ದೇವತೆಗಳಿದ್ದಾರೆ ಎಂದು ಅನಾಗರಿಕ ಪಂಗಡಗಳಲ್ಲಿಯೇ ಹಲವರು ನಂಬುವುದಿಲ್ಲ, ನಂಬಿದರೂ ಪ್ರಾರ್ಥನೆ ಮಾಡುವುದಿಲ್ಲ ಎಂಬುದನ್ನು ಕಂಡಿದ್ದೇವೆ. ಪ್ರಾಚೀನ ಭಾರತದಲ್ಲಿ ಚಾರ್ವಾಕ ಪಂಥದವರು ದೇವರಲ್ಲಿ ನಂಬಿಕೆ ಇಡಲಿಲ್ಲ. ಇಪ್ಪತ್ತನೆಯ ಶತಮಾನದ ಪ್ರಥಮ ಶ್ರೇಣಿಯ ವೈಚಾರಿಕರಲ್ಲಿ ಒಬ್ಬನಾದ ಬರ್ಟ್ರಂಡ್ ರಸಲ್ ಕ್ರೈಸ್ತಮತದಲ್ಲಿ ಹುಟ್ಟಿದರೂ ಯಾವ ಮತವನ್ನೂ ಒಪ್ಪಲಿಲ್ಲ. ಹೀಗೆ ಎಲ್ಲ ಕಾಲ ಎಲ್ಲ ದೇಶಗಳಲ್ಲಿ ಮತಗಳನ್ನು ಒಪ್ಪದಿದ್ದವರು, ಮತವನ್ನು ವಿರೋಧಿಸಿದವರು, ನಾಸ್ತಿಕರು ಇದ್ದರು. ಇವರೆಲ್ಲ ನೀತಿಗೆಟ್ಟವರು, ದುಷ್ಟರು ಎಂದು ಹೇಳುವಂತಿಲ್ಲ. ಮತಗಳು ಧರ್ಮಗಳ ಹೆಸರಿನಲ್ಲಿ ಮೇಲಿಂದ ಮೇಲೆ ಯುದ್ಧಗಳಾಗಿವೆ, ರಕ್ತದ ಕೋಡಿ ಹರಿದಿದೆ. ಕ್ಯಾಥಲಿಕರು ಪ್ರಾಟೆಸ್ಟಂಟರನ್ನು ಸುಟ್ಟಿದ್ದಾರೆ; ಪ್ರಾಟೆಸ್ಟೆಂಟರನ್ನು ಕ್ಯಾಥಲಿಕರು ಸುಟ್ಟಿದ್ದಾರೆ. ಮಹಮದ್-ಬಿನ್ ತೊಗಲಖನ ಕಾಲದಲ್ಲಿ ಸದಾ ಅರಮನೆಯ ಮುಂದೆ ಹಿಂದೂಗಳ ಶವಗಳ ಗುಡ್ಡವೇ ಇರುತ್ತಿತ್ತಂತೆ. ಫಿರೋಜ್ ಷಾ ಹಿಂದೂವಿನ ತಲೆಯನ್ನು ತಂದ ಮುಸಲ್ಮಾನರಿಗೆ ಬಹುಮಾನ ನೀಡುವುದಾಗಿ ಪ್ರಕಟಿಸಿದಾಗ 1,80,000 ತಲೆಗಳನ್ನು ತಂದರಂತೆ. ಭಾರತದ ವಿಭಜನೆಯ ಕಾಲದಲ್ಲಿ ಧರ್ಮದ ಹೆಸರಿನಲ್ಲಿ ಕೊಲೆ, ದರೋಡೆ, ಮನೆಮಠಗಳಿಗೆ ಬೆಂಕಿ, ನಡೆಯಬಾರದ ಘೋರ ಕೃತ್ಯಗಳು ನಡೆದುವು. ಡಾ. ರಾಧಾಕೃಷ್ಣನ್ ಅವರು ಒಮ್ಮೆ ಹೇಳಿದಂತೆ: "ಜನ ತಮ್ಮ ಮತಕ್ಕಾಗಿ ಹೋರಾಡುತ್ತಾರೆ, ಮತಕ್ಕಾಗಿ ಪ್ರಾಣಕೊಡುತ್ತಾರೆ. ತಮ್ಮ ಮತಕ್ಕಾಗಿ ಏನನ್ನು ಬೇಕಾದರೂ ಮಾಡಲು ಸಿದ್ಧರಿರುತ್ತಾರೆ. ಆದರೆ ತಮ್ಮ ಮತ ಹೇಳಿದಂತೆ ಬಾಳುವುದಿಲ್ಲ, ಅಷ್ಟೆ." ಎರಡನೆಯದು : ಪ್ರತಿ ಮತದಲ್ಲಿಯೂ ಕಾಲ ಕಳೆದಂತೆ ಬರಿಯ ಹೊರ ಆಚಾರ ಮುಖ್ಯವಾಗಿ, ಧರ್ಮನೀತಿಗಳು ಹಿಂದುಳಿಯುತ್ತವೆ. ಮತಾಧಿಕಾರಿಗಳು ಹಣ, ಅಧಿಕಾರ, ಭೋಗಗಳಿಗೆ ಆಸೆ ಪಡುತ್ತಾರೆ. ಈ ತೋರಿಕೆ ಹೆಚ್ಚಿದಾಗ ಹಲವರು ಮತಗಳ ವಿಷಯದಲ್ಲಿ ಬೇಸರಪಡುತ್ತಾರೆ. ಮಾರ್ಟಿನ್ ಲೂಥರ್, ಬುದ್ಧ, ಮಹಾವೀರ, ಬಸವೇಶ್ವರ ಇವರೆಲ್ಲ ಡಂಭಾಚಾರ ಮೋಸಗಳನ್ನು ಖಂಡಿಸಿದರು. ಧರ್ಮದ ಆಚರಣೆ ಮುಖ್ಯ ಎಂದು ಸಾರಿದರು. ಈ ಮಹಾಪುರುಷರು ಮತದಿಂದ ದೂರ ಸಿಡಿಯಲಿಲ್ಲ; ಮತ ಸುಧಾರಕರಾದರು. ಆದರೆ ಇವರ ಕೆಚ್ಚು ಇಲ್ಲದವರು ಒಂದು ಮತದ ಇಳಿಮುಖದ ಕಾಲದಲ್ಲಿ ಅದರ ಅನುಯಾಯಿಗಳ ಟೊಳ್ಳು ಆಚಾರ, ಅನ್ಯಾಯಗಳನ್ನು ಕಂಡು ರೋಸಿ ದೂರ ನಿಲ್ಲಬಹುದು. ಮೂರನೆಯದಾಗಿ, ವಿಜ್ಞಾನ ಬೆಳೆದಂತೆ ಮತಗಳಿಗೆ ಜನರ ಮನಸ್ಸಿನ ಮೇಲಿನ ಹಿಡಿತ ಸಡಿಲವಾಗುತ್ತದೆ. ಮತದ ಹಲವು ನಂಬಿಕೆಗಳೂ ಸಂಪ್ರದಾಯಗಳೂ ಅರ್ಥರಹಿತ ಎಂಬುದನ್ನು ವಿಜ್ಞಾನ ತೋರಿಸಿಕೊಡುತ್ತದೆ. ಅಲ್ಲದೆ ಜ್ಞಾನ, ಸಂಪತ್ತು, ನಿಸರ್ಗದ ಮೇಲೆ ಪ್ರಭುತ್ವ–ಇವನ್ನು ನೀಡುವ ವಿಜ್ಞಾನದ ಆಕರ್ಷಣೆಯನ್ನು ಬಹುಮಂದಿ ತಡೆಯಲಾರರು.

ರಾಬರ್ಟ್ ಬ್ರೌನಿಂಗ್ ಎಂಬ ಇಂಗ್ಲಿಷ್ ಕವಿಯ ಒಂದು ಪದ್ಯದಲ್ಲಿ ಶಿಷ್ಯನೊಬ್ಬ ಗುರುವನ್ನು "ನಮಗೆ ಆತ್ಮಗಳಿವೆಯೆ?" ಎಂದು ಪ್ರಶ್ನಿಸುತ್ತಾನೆ. ಗುರುವಿನ ಉತ್ತರ : "ನನಗೆ ಆತ್ಮವಿದೆ. ನಿಮಗೆ ಇಲ್ಲದಿರಬಹುದು". ಎಂದರೆ ಪ್ರತಿ ಒಬ್ಬನೂ ತನ್ನ ಆತ್ಮವನ್ನು ತಾನು ಗುರುತಿಸಿಕೊಳ್ಳಬೇಕು. ಮತ್ತೊಬ್ಬರು ತೋರಿಸಿಕೊಡಲು ಸಾಧ್ಯವಿಲ್ಲ. ಇದೇ ಉತ್ತರವನ್ನು ಪರಮಾತ್ಮನ ವಿಷಯಕ್ಕೂ ಅನ್ವಯಿಸಬಹುದು. ದೇವರಿದ್ದಾನೆಯೆ, ಅವನ ಸ್ವರೂಪ ಎಂಥದು ಈ ಪ್ರಶ್ನೆಗಳಿಗೆ ವಿವಿಧ ಮತಗಳ ಹಿರಿಯರು ತಾವು ಕಂಡುಕೊಂಡ ಉತ್ತರಗಳನ್ನು ಹೇಳಿದ್ದಾರೆ. ಪ್ರತಿಯೊಬ್ಬನೂ ಈ ಪ್ರಶ್ನೆಗಳಿಗೆ ತಾನೇ ಉತ್ತರಗಳನ್ನು ಕಂಡುಕೊಳ್ಳಬೇಕು. ಮತವನ್ನು ಸ್ವೀಕರಿಸುವುದು, ಬಿಡುವುದು ಸಂಪೂರ್ಣವಾಗಿ ವೈಯಕ್ತಿಕ ವಿಷಯ. ಆಲ್ಡಸ್ ಹಕ್ಸ್ಲಿ, ಪ್ರಸಿದ್ಧ ಜೀವಶಾಸ್ತ್ರಜ್ಞ ಥಾಮಸ್ ಹಕ್ಸ್ಲಿ, ಬರ್ಟ್ರಾಂಡ್ ರಸಲ್ ಮೊದಲಾದವರು ದೇವರಲ್ಲಿ ನಂಬಿಕೆ ಇಡಲಿಲ್ಲ. ಟಾಲ್ಸ್ಟಾಯ್, ಗಾಂಧಿಜಿಯವರಂಥವರು ದೇವರಲ್ಲಿ ನಿಶ್ಚಲ ನಂಬಿಕೆ ಇಟ್ಟು ಅದರಿಂದಲೆ ಅಸಾಧಾರಣ ಇಚ್ಛಾಶಕ್ತಿ

ಯನ್ನು ಪಡೆದರು. ರಾಮಕೃಷ್ಣ ಪರಮಹಂಸರು ಎಲ್ಲ ಮತಗಳ ಮೂಲಕವೂ ದೇವರ ಸಾಕ್ಷಾತ್ಕಾರ ಮಾಡಿಕೊಂಡುದಾಗಿ ಹೇಳಿದರು. ಐನ್‌ಸ್ಟೀನನಂಥ ಪ್ರಸಿದ್ಧ ವಿಜ್ಞಾನಿ, "ಧರ್ಮವಿಲ್ಲದ ವಿಜ್ಞಾನ ಕುರುಡು, ವಿಜ್ಞಾನವಿಲ್ಲದ ಧರ್ಮ ಕುಂಟು" ಎಂದ.

ಪ್ರಪಂಚದಲ್ಲಿ ಬಹಳ ಜನ ಒಂದಲ್ಲ ಒಂದು ಮತವನ್ನು ಒಪ್ಪುತ್ತಾರೆ. ಅದರ ಬೋಧನೆಯ ಆಚರಣೆಯಲ್ಲಿ ಎಷ್ಟೇ ಹಿಂದುಳಿದಿದ್ದರೂ ಅದರಲ್ಲಿ ಭಕ್ತಿಯನ್ನು ಇಟ್ಟಿರುತ್ತಾರೆ. ಇದಕ್ಕೆ ಮುಖ್ಯವಾಗಿ ಮೂರು ಕಾರಣಗಳು. ಬದುಕು ಬಹು ಜನಕ್ಕೆ ಒಗಟು. ಹುಟ್ಟು ಎಂದರೇನು, ಸಾವು ಎಂದರೇನು, ಒಳ್ಳೆಯವರಿಗೆ ಕೆಡುಕಾಗುವುದೇಕೆ, ಕೆಟ್ಟವರಿಗೆ ಒಳ್ಳೆಯದಾಗುವುದೇಕೆ, ಪ್ರಪಂಚದಲ್ಲಿ ಒಳ್ಳೆಯತನ–ಕೆಟ್ಟತನ ಎರಡೂ ಇರುವುದೇಕೆ ಇಂಥ ಹಲವು ಪ್ರಶ್ನೆಗಳು ಮನುಷ್ಯನನ್ನು ಕಾಡುತ್ತವೆ. ಪ್ರತಿ ಮತವೂ ಇದಕ್ಕೆ ತನ್ನದೇ ಆದ ಉತ್ತರಗಳನ್ನು ನೀಡಿ ಮನುಷ್ಯನ ದಿಗ್ಭ್ರಮೆಯನ್ನು ಕಡಮೆ ಮಾಡುತ್ತದೆ. ಎರಡನೆಯದು : ಎಷ್ಟೋ ಬಾರಿ ಮನುಷ್ಯನಿಗೆ ಒಂದು ಸನ್ನಿವೇಶದಲ್ಲಿ ಹೇಗೆ ವರ್ತಿಸಬೇಕು ಎಂದು ತಿಳಿಯುವುದಿಲ್ಲ. ತನಗೆ ಅನ್ಯಾಯವಾದಾಗ ಏನು ಮಾಡಬೇಕು ? ಜೀವನ ಬೇಸರವಾದಾಗ ಏನು ಮಾಡಬೇಕು ? ಅಧಿಕಾರ ಬಂದಾಗ ಹೇಗೆ ನಡೆದುಕೊಳ್ಳಬೇಕು ? ತಪ್ಪು ಮಾಡಿದವರನ್ನು ಹೇಗೆ ಕಾಣಬೇಕು ? ಗೊಂದಲಕ್ಕೀಡುಮಾಡುವ ಇಂಥ ಸನ್ನಿವೇಶದಲ್ಲಿ ಮತ ಮಾರ್ಗ ದರ್ಶನ ಮಾಡುತ್ತದೆ. ಕುರುಕ್ಷೇತ್ರದಲ್ಲಿ ದಿಕ್ಕುಗೆಟ್ಟ ಅರ್ಜುನನಿಗೆ ಕೃಷ್ಣ ದಾರಿ ತೋರಿದಂತೆ ಜೀವನ ಕ್ಷೇತ್ರದಲ್ಲಿ ಮತ ಸಾಮಾನ್ಯ ಮನುಷ್ಯನಿಗೆ ದಾರಿ ತೋರುತ್ತದೆ. ತಾನು ಕೈಗೊಳ್ಳುವ ನಿರ್ಧಾರಗಳಿಗೆ ಒಂದು ಆಧಾರವಿದೆ ಎಂದು ಅವನಿಗೆ ಧೈರ್ಯ ಬರುತ್ತದೆ. ಮೂರನೆಯದಾಗಿ, ಯಾರ ಬಾಳೂ ಗುಲಾಬಿಯ ಸುಪ್ಪತ್ತಿಗೆಯಾಗಿರಲು ಸಾಧ್ಯವಿಲ್ಲ. ಬಂಧುಗಳ ಮತ್ತು ಸ್ನೇಹಿತರ ಮರಣ, ಆಸ್ತಿಯ ನಷ್ಟ, ಸೋಲು, ಕಾಯಿಲೆ—ಬಾಳಿನಲ್ಲಿ ಒಂದೆ, ಎರಡೆ ದುಃಖದ ಮೂಲ ! ಕಡೆಯಲ್ಲಿ ಸಾವು ಅನಿವಾರ್ಯ. ಸಾವನ್ನು ನೆನೆದರೇ ಬಹು ಮಂದಿಗೆ ಭಯ. ದುಃಖ, ಸಾವುಗಳನ್ನು ಎದುರಿಸುವ ಚಿತ್ತಸ್ಥೈರ್ಯವನ್ನು ಮತ ನೀಡಬಲ್ಲುದು. ಭಾರತದಲ್ಲಿ ತಮ್ಮ ಮತಕ್ಕಾಗಿ ಪ್ರಾಣಕೊಟ್ಟವರು, ಪವಿತ್ರ ದೇವಾಲಯಗಳನ್ನುಳಿಸಿಕೊಳ್ಳಲು ಹೋರಾಡಿ ಬಲಿದಾನ ಮಾಡಿದವರು ಸಾವಿರಾರು ಮಂದಿ. ರೋಮ್ ಚಕ್ರವರ್ತಿಯೊಬ್ಬ 65 ವರ್ಷ ವಯಸ್ಸಿನ ವೃದ್ಧ ಕ್ರಿಶ್ಚಿಯನ್ ಆರಿಜಿನ್‌ನನ್ನು (ಸುಮಾರು 185–254) ಒಂದು ಯಂತ್ರಕ್ಕೆ ಬಿಗಿಸಿ, ಕೈಕಾಲುಗಳನ್ನು ಎಳೆಸಿದ ; ಮುದುಕ ತನ್ನ ಮತ ವನ್ನು ಬದಲಾಯಿಸಲಿಲ್ಲ. ಎಂಟನೆಯ ಹೆನ್ರಿ, ಶುದ್ಧ ಜೀವನದ ಉದಾತ್ತ ಸ್ವಭಾವದ ಥಾಮಸ್‌ಮೋರ್‌ನನ್ನು ಗಲ್ಲಿಗೇರಿಸಲು ಆಜ್ಞೆ ಮಾಡಿದಾಗ, ಮುದುಕ, "ನನ್ನ ಗಡ್ಡ ಕತ್ತರಿಸಿ ಹೋದರೆ ಅನ್ಯಾಯ: ಅದೇನೂ ರಾಜದ್ರೋಹ ಮಾಡಿಲ್ಲವಲ್ಲ". ಎನ್ನುತ್ತ ಅದನ್ನು ಸರಿಸಿ ತಲೆಯನ್ನು ಬಾಗಿಸಿದ. ಮತ ತನ್ನನ್ನು ನಂಬಿದವರಿಗೆ ಇಂಥ ಧೈರ್ಯವನ್ನು ನೀಡಬಲ್ಲದು. ತಾನು ಗೆದ್ದು ಕಟ್ಟಿದ ರಾಜ್ಯವನ್ನೆ ಗುರು ರಾಮದಾಸರಿಗೆ ಅರ್ಪಿಸಿದ ಶಿವಾಜಿ. ಮತದಲ್ಲಿ ನಂಬಿಕೆ ಇರುವವರಿಗೆ ಇಂಥ ತ್ಯಾಗ ಸಾಧ್ಯವಾಗುತ್ತದೆ.

ಎಲ್ಲ ದೇಶಗಳಲ್ಲಿಯೂ ಮತ, ತತ್ತ್ವಶಾಸ್ತ್ರಗಳು ಪ್ರಾರಂಭದಲ್ಲಿ ಒಂದಾಗಿರುತ್ತವೆ. ಕ್ರಮೇಣ ತತ್ತ್ವಶಾಸ್ತ್ರ ಪ್ರತ್ಯೇಕವಾಗಿ ಬೆಳೆಯುತ್ತದೆ. ಸೃಷ್ಟಿಯಲ್ಲಿ ಮನುಷ್ಯನ ಸ್ಥಾನ, ಅವನಿಗೂ ಹೊರ ಜಗತ್ತಿಗೂ ಇರುವ ಸಂಬಂಧ, ಆತ್ಮ ಎಂದರೇನು, ಸತ್ಯ ಎಂದರೇನು, ಮಿಥ್ಯ ಎಂದರೇನು, ಜಗತ್ತು ಸತ್ಯವೇ–ಮಿಥ್ಯವೇ ಇಂಥ ಪ್ರಶ್ನೆಗಳಿಗೆ ಬೌದ್ಧಿಕವಾಗಿ ಉತ್ತರ ನೀಡಲು ತತ್ತ್ವಶಾಸ್ತ್ರ ಪ್ರಯತ್ನಿಸುತ್ತದೆ. ಭಾರತೀಯ ತತ್ತ್ವಶಾಸ್ತ್ರ ಋಗ್ವೇದ ಕಾಲದಿಂದ ಬೆಳೆದುಬಂದಿದೆ. ಪಾಶ್ಚಾತ್ಯ ದೇಶಗಳಲ್ಲಿ ತತ್ತ್ವಶಾಸ್ತ್ರ ಮತದಿಂದ ಸಂಪೂರ್ಣವಾಗಿ ಬೇರ್ಪಟ್ಟಂತೆ ಭಾರತದಲ್ಲಿ ಎಂದೂ ಬೇರೆಯಾಗಲಿಲ್ಲ. ಇಪ್ಪತ್ತನೆಯ ಶತಮಾನದಲ್ಲಿ ರವೀಂದ್ರನಾಥರು, ಅರವಿಂದರು, ಡಾ. ರಾಧಾಕೃಷ್ಣನ್ ಇಂಥ ತತ್ತ್ವಶಾಸ್ತ್ರಜ್ಞರೂ ಹಿಂದೂ ಗ್ರಂಥಗಳಿಂದ ಪ್ರೇರಣೆ ಪಡೆದಿದ್ದಾರೆ. ಭಾರತೀಯ ತತ್ತ್ವಶಾಸ್ತ್ರವೆಲ್ಲ ಮನುಷ್ಯರನ್ನು ನಿಷ್ಕ್ರಿಯರನ್ನಾಗಿ ಮಾಡುವಂಥದು, ಜೀವನದಲ್ಲಿ ವೈರಾಗ್ಯವನ್ನು ಉಂಟು ಮಾಡುವಂಥದು ಎಂಬ ನಂಬಿಕೆ ಬೆಳೆದು ಬಂದಿದೆ. ಇದು ತೀರ ತಪ್ಪು ಭಾವನೆ. ಭಾರತದಲ್ಲಿ ಜ್ಞಾನಿಯಾದವನು ಸತ್ಯವನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿ ತೃಪ್ತನಾಗಲಿಲ್ಲ. ಆ ಸತ್ಯದಂತೆ ಜೀವನದಲ್ಲಿ ನಡೆಯಲು ಪ್ರಯತ್ನಿಸಿದ. ಮಾಡಿದ ಕೆಲಸ ಫಲವನ್ನು ಕೊಡುತ್ತದೆ. ಬೇಕು-ಬೇಡ ಎನ್ನುವ ಅಪೇಕ್ಷೆ ಇಲ್ಲದೆ ಕೆಲಸ ಮಾಡುವುದೇ ಯೋಗ್ಯಮಾರ್ಗ ಎಂದು ತಿಳಿದವನು ಫಲದ ಅಪೇಕ್ಷೆ ಇಲ್ಲದೆ ಕರ್ತವ್ಯವನ್ನು ನಿಷ್ಠೆಯಿಂದ ಮಾಡಲು ಮುಂದಾದ. ಎಲ್ಲವನ್ನೂ ಭಕ್ತಿಯಿಂದ ಭಗವಂತನಿಗೆ ಸಮರ್ಪಿಸುವುದೇ ಉತ್ತಮ ಜೀವನ ಎಂದು ತಿಳಿದವನು ಹಾಗೆಯೆ ಬದುಕಲು ತವಕಿಸಿದ. ಅಲ್ಲದೆ ಹಿಂದೂ ತತ್ತ್ವಶಾಸ್ತ್ರ ವ್ಯಕ್ತಿಯ ಬಾಧ್ಯತೆಗಳನ್ನೂ ಒತ್ತಿ ಹೇಳಿತು. ತಂದೆತಾಯಿಗಳಿಗೆ, ಗುರುಗಳಿಗೆ, ಸಮಾಜಕ್ಕೆ ಅವನು ಸಲ್ಲಿಸಬೇಕಾದ ಋಣವನ್ನು ವಿವರಿಸಿತು. ಈ ಋಣ ಮನುಷ್ಯವರ್ಗಕ್ಕೆ ಸೀಮಿತವಾದದ್ದಲ್ಲ, ಎಲ್ಲ ಜೀವಿಗಳಿಗೆ ಸಲ್ಲಬೇಕಾದದ್ದು ಎಂದು ಬೋಧಿಸಿತು. ವ್ಯಕ್ತಿಯ ಗುರಿ ಮೋಕ್ಷ. ಅದರ ಮಾರ್ಗ ಎಲ್ಲ ಬಯಕೆಗಳನ್ನು ಬಿಡುವುದು. ಎಂದರೆ ಕರ್ತವ್ಯಗಳನ್ನು ಬಿಡುವುದು ಎಂದಲ್ಲ. ಕರ್ತವ್ಯವನ್ನು ಸಲ್ಲಿಸುತ್ತ ತನಗಾಗಿ ಏನನ್ನೂ ಬಯಸದಿರುವುದು ಎಂದರ್ಥ.

ಭಾರತದಂತೆ ಚೀನ ತೀಕ್ಷ್ಣಮತಿಗಳಾದ ತತ್ತ್ವಶಾಸ್ತ್ರಜ್ಞರಿಗೆ ಜನ್ಮವಿತ್ತಿತ್ತು. ಇವರಲ್ಲಿ ಕನ್‌ಫ್ಯೂಷಿಯಸ್ ಮತ್ತು ಲಾವೊ ತ್ಸೆ ಪ್ರಸಿದ್ಧರಾದ ಇಬ್ಬರು ಮಾತ್ರ. ಪಾಶ್ಚಾತ್ಯ ಜಗತ್ತಿನಲ್ಲಿ ಚಿಂತನೆಯನ್ನು ಶಾಸ್ತ್ರೀಯಗೊಳಿಸಿ ತತ್ತ್ವಶಾಸ್ತ್ರವನ್ನು ಸೃಷ್ಟಿಸಿದವರು ಗ್ರೀಕರು. ಥೇಲ್ಸ್, ಹಿರಾಕ್ಲಿಟಸ್, ಸಾಕ್ರಟೀಸ್, ಪ್ಲೇಟೋ, ಅರಿಸ್ಟಾಟಲ್, ಪೈಥಾಗೊರಸ್, ಎಪಿಕ್ಯುರಸ್, ಜೀನೋ, ಡಯಾಜೀನೀಸ್–ಇಂಥ ಪ್ರಥಮ ಪಂಕ್ತಿಯ ತತ್ತ್ವಶಾಸ್ತ್ರಜ್ಞರು ಗ್ರೀಸಿನವರು.

ತತ್ತ್ವಶಾಸ್ತ್ರ ಕ್ರಿಯಾಶೀಲ ಜೀವನಕ್ಕೆ ಸಂಬಂಧಿಸಿಲ್ಲ ಎಂಬ ನಂಬಿಕೆ ಬಹು ಮಂದಿಗೆ ಉಂಟು. ಈ ಶಾಸ್ತ್ರ ಸ್ಪಷ್ಟವಾದ ತರ್ಕವನ್ನು ಕಲಿಸುತ್ತದೆ. 'ಸತ್ಯ', 'ಅಸತ್ಯ', 'ಕಾಲ', 'ಸುಖ', 'ದುಃಖ'–ಇಂಥ ಮಾತುಗಳನ್ನು ಹಗುರವಾಗಿ ಬಳಸದೆ ಪ್ರತಿ ಮಾತನ್ನು ಅರ್ಥಮಾಡಿಕೊಳ್ಳು

ವುದನ್ನು ಕಲಿಸುತ್ತದೆ. ಆಳವಾದ ವಿಚಾರ, ಸಮಂಜಸವಾದ ವಿವೇಚನೆ–ಇವು ತತ್ತ್ವಶಾಸ್ತ್ರದ ಲಕ್ಷಣಗಳು. ಇದರ ಅಭ್ಯಾಸ ಸಮಚಿತ್ತವನ್ನು ನೀಡುತ್ತದೆ. ಜೀವನದಲ್ಲಿ ಯಾವುದು ತೋರಿಕೆ–ಯಾವುದು ನಿಜವಾದ ಮೌಲ್ಯ, ಸುಖ ಎಂದರೇನು, ನಿಜವಾದ ಸುಖಕ್ಕೆ ಏನನ್ನು ಬಯಸಬೇಕು ಎಂಬುದನ್ನು ತಿಳಿದು ಮಾರ್ಗದರ್ಶನ ಮಾಡುತ್ತದೆ. ಮನಶ್ಶಾಂತಿಯನ್ನು ನೀಡುತ್ತದೆ. ಶಂಕರಾಚಾರ್ಯರಂಥ ತತ್ತ್ವಜ್ಞಾನಿಗಳು ಸಾವಿರಾರು ಜನರಿಗೆ ಮನಶ್ಶಾಂತಿಯನ್ನು ನೀಡಬಲ್ಲರು. ವಾಲ್ಟೇರ್, ನೀಷೆ ಇಂಥ ತತ್ತ್ವಶಾಸ್ತ್ರಜ್ಞರು ದೇಶಗಳ ರಾಜಕೀಯದ ಮೇಲೆ ಪ್ರಭಾವ ಬೀರಬಲ್ಲರು,

# ೧೨

ಕುತೂಹಲ ಮನುಷ್ಯನ ಸ್ವಭಾವದಲ್ಲಿ ಆಳವಾಗಿ ಬೇರುಬಿಟ್ಟಿದೆ. ಹೇಗೆ, ಏಕೆ ಎನ್ನುವ ಪ್ರಶ್ನೆಗಳು ಸದಾ ಮಗುವಿನ ತುಟಿಯ ಮೇಲೆ ಇರುತ್ತವೆ. ಈ ಪ್ರಶ್ನೆಗಳೆ ಮನುಷ್ಯನ ಜ್ಞಾನಕ್ಕೆ ದಾರಿ ತೋರಿದುವು. ಇವುಗಳಿಂದಲೆ ಧರ್ಮ, ವಿಜ್ಞಾನ, ತತ್ತ್ವಶಾಸ್ತ್ರಗಳು ಬೆಳೆದುವು.

**ವಿಜ್ಞಾನ**

ಪ್ರಾರಂಭದಲ್ಲಿ ಇವೆಲ್ಲ ಒಂದಾಗಿದ್ದುವು. ತಾನು ಕಂಡುದಕ್ಕೆಲ್ಲ ಕಾಣದ ಶಕ್ತಿಗಳ ಇಚ್ಛೆಯನ್ನು ಕಾರಣವಾಗಿ ಕಂಡ ಮನುಷ್ಯ. ಹೇಗೆ ಎಂಬ ಪ್ರಶ್ನೆಗೆ ಉತ್ತರ ವಿಜ್ಞಾನಕ್ಕೆ ಸೇರಿದ್ದು. ಹಗಲು–ರಾತ್ರಿಗಳಾಗುತ್ತವೆ; ಹೇಗೆ ? ಋತುಗಳು ಬದಲಾಗುತ್ತವೆ : ಹೇಗೆ ? ಮೇಲೆಸೆದ ಕಲ್ಲು ಭೂಮಿಗೇ ಹಿಂದಿರುಗುತ್ತದೆ : ಹೇಗೆ ? ಆರೋಗ್ಯವಾಗಿದ್ದ ಮನುಷ್ಯನಿಗೆ ಕಾಯಿಲೆ ಬರುತ್ತದೆ : ಹೇಗೆ ? ಮನುಷ್ಯ ಹೇಗೆ ಉಸಿರಾಡುತ್ತಾನೆ ? ಈ ಹೇಗೆ ಪ್ರಶ್ನೆಯನ್ನು ಕೇಳಿಕೊಂಡು ಕೇಳಿಕೊಂಡು ಮನುಷ್ಯ ತನ್ನ ಜ್ಞಾನವನ್ನು ಬೆಳೆಸಿದ. ಇದು ವಿಜ್ಞಾನ. ವಿಜ್ಞಾನಿ ಏಕೆ ಎಂಬ ಪ್ರಶ್ನೆಯನ್ನು ಕೇಳುವುದಿಲ್ಲ. ಎಂದರೆ, ಒಬ್ಬ ಮನುಷ್ಯನಿಗೆ ಕಾಯಿಲೆ ಬಂದಿದೆ; ಹೇಗೆ ಕಾಯಿಲೆ ಬಂದಿತು, ಆಹಾರದಿಂದಲೆ, ನೀರಿನಿಂದಲೆ, ಗಾಳಿಯಿಂದಲೆ, ಸೋಂಕಿನಿಂದಲೆ ಎಂದು ವಿಜ್ಞಾನಿ ಕೇಳಿಕೊಳ್ಳುತ್ತಾನೆ. ಈತನಿಗೆ ಕಾಯಿಲೆ ಏಕೆ ಬಂದಿತು ? ಇವನು ಮಾಡಿದ ಪಾಪಕಾರ್ಯದಿಂದ ಬಂದಿತೆ ? ಇವನ ದೈವಭಕ್ತಿಯನ್ನು ಪರೀಕ್ಷಿಸಲು ಬಂದಿತೆ ? ಕಣ್ಣಿಗೆ ಕಾಣದ ಶಕ್ತಿಯೊಂದು ಇದಕ್ಕೆ ಕಾರಣವೆ ಎಂದು ಅವನು ಕೇಳಿಕೊಳ್ಳುವುದಿಲ್ಲ. ಇವನ ದೇಹಕ್ಕೂ ಆತ್ಮಕ್ಕೂ ಸಂಬಂಧವೇನು, ದೇಹದ ನೋವು ಆತ್ಮಕ್ಕೂ ಉಂಟೆ ಎಂದೂ ಕೇಳಿಕೊಳ್ಳುವುದಿಲ್ಲ. ಈ ಪ್ರಶ್ನೆಗಳನ್ನು ಕೇಳಿಕೊಳ್ಳುವವನು ಧರ್ಮದಲ್ಲಿ ಆಸಕ್ತಿ ಇರುವವನು. ಕನಸಿನಲ್ಲಿ ಅನಿಷ್ಟ ಸಂಭವಿಸಿದಾಗ ದುಃಖಪಡುತ್ತೇವೆ. ಆದರೆ ಎಚ್ಚೆತ್ತಾಗ ಅರಿವಾಗುತ್ತದೆ ಅದು ನಿಜವಾಗಿ ಸಂಭವಿಸಿದ ಅನಿಷ್ಟವಲ್ಲ, ಭ್ರಾಂತಿ-ಮಾಯೆ ಎಂದು. ಕನಸು ಕಾಣುತ್ತಿರುವಾಗ ಅದರ ಅನುಭವಗಳೇ ವಾಸ್ತವಿಕ ಎಂದುಕೊಳ್ಳುತ್ತೇವೆ. ಎಚ್ಚರಿಕೆಯಾದಾಗ ಅವು ಅವಾಸ್ತವಿಕ ಎಂದು ಅರಿವಾಗುತ್ತದೆ. ನಾವು ನಿಜವಾದ ಜಗತ್ತು, ವಾಸ್ತವಿಕ ಅನುಭವಗಳು ಎಂದುಕೊಂಡಿರುವುವೂ ಇದೇ ರೀತಿ ಭ್ರಾಂತಿಯಾಗಿರಬಹುದೆ, ಮಾಯೆಯಾಗಿರಬಹುದೆ ? ಯಾವುದು ವಾಸ್ತವಿಕ, ಯಾವುದು ಅವಾಸ್ತವಿಕ ? ನಿದ್ರಿಸುವಾಗ ದೇಹ ಕಲ್ಲಿನಂತೆ ಬಿದ್ದಿರುತ್ತದೆ. ಪ್ರಾಣವಿಲ್ಲದ ದೇಹ ಚಲಿಸಲಾರದು. ಎಲ್ಲ ಅಂಗಾಂಗಗಳಿದ್ದರೂ ತಾನಾಗಿ ಚಟುವಟಿಕೆಯಾಗಿರಲಾರದ ಈ 'ಜಡ'ವನ್ನು ಚಟುವಟಿಕೆಗೊಳಿಸುವ 'ಚೇತನ' ಯಾವುದು ? ಜಡಕ್ಕೂ ಚೇತನಕ್ಕೂ, ಚೇತನಕ್ಕೂ ಪ್ರಜ್ಞೆಗೂ ಏನು ಸಂಬಂಧ ? ಇಂಥ ಪ್ರಶ್ನೆಗಳನ್ನು ಕೇಳಿಕೊಂಡಾಗ ತತ್ತ್ವಶಾಸ್ತ್ರಕ್ಕೆ ಹಾದಿಯಾಗುತ್ತದೆ.

ನಾಗರಿಕ ಜಗತ್ತಿನ ಇತಿಹಾಸದ ಬಗ್ಗೆ ನಮ್ಮ ತಿಳಿವಳಿಕೆ ಬಹು ಮಿತಿಯಾದದ್ದು. ಆದ್ದರಿಂದ ಪ್ರಾಚೀನ ಜಗತ್ತಿನಲ್ಲಿ ವಿಜ್ಞಾನದ ಮತ್ತು ತಂತ್ರಜ್ಞಾನದ ಬೆಳವಣಿಗೆಗೆ ಯಾವ ಪ್ರದೇಶ, ಯಾವ ಜನಾಂಗ, ಯಾವ ಕೊಡುಗೆಯನ್ನು ನೀಡಿತು ಎಂದು ಹೇಳುವುದು ಕಷ್ಟ. ಆದರೆ ಪ್ರಾಚೀನ ಕಾಲದಲ್ಲಿಯೆ ವಿಜ್ಞಾನ ಮತ್ತು ತಂತ್ರಜ್ಞಾನದ ಬೆಳವಣಿಗೆ ಗಣನೀಯವಾಗಿತ್ತು ಎನ್ನುವುದರಲ್ಲಿ ಸಂದೇಹವಿಲ್ಲ. ಕ್ರಿಸ್ತ ಶಕ ಪ್ರಾರಂಭವಾಗುವ ಮುನ್ನವೆ ಪ್ರಪಂಚದ ಎಷ್ಟು ಭಾಗಗಳಲ್ಲಿ ಪಂಚಾಂಗಗಳು ಬಳಕೆಯಲ್ಲಿದ್ದುವು. ನಿರ್ದಿಷ್ಟವಾಗಿ ಗ್ರಹಣಗಳ ಲೆಕ್ಕವನ್ನು ಮಾಡುವುದನ್ನು ಕಲಿತಿದ್ದರು ಎಂಬುದನ್ನು ಈಗಿರುವ ಸಾಕ್ಷ್ಯ ಸಾಹಿತ್ಯದಿಂದಲೆ ಕಂಡರೆ ಆಶ್ಚರ್ಯವಾಗುತ್ತದೆ. ಪ್ರಾಚೀನ ಜಗತ್ತಿನ ಜ್ಞಾನ ಭಂಡಾರಕ್ಕೆ ಈಜಿಪ್ಟ್, ಚೀನ ಮತ್ತು ಭಾರತಗಳ ಕೊಡುಗೆ ಅಪಾರ. ಕ್ರಿ. ಪೂ. 1700ರ ಹೊತ್ತಿಗೆ ಕುಂಬಾರನ ಕಲೆ ಮುನ್ನಡೆಯನ್ನು ಸಾಧಿಸಿಕೊಂಡಿತ್ತು. ಕ್ರಿ. ಪೂ. ಹತ್ತನೆಯ ಶತಮಾನದ ಹೊತ್ತಿಗೆ ಮುದ್ರಣವನ್ನೂ ಚಲಿಸುವ ಅಕ್ಷರಗಳ ಮೊಳೆಗಳ ಬಳಕೆಯನ್ನೂ ಚೀನದವರು ಕಲಿತಿದ್ದರು. ಕ್ರಿ. ಪೂ. ಹನ್ನೆರಡನೆಯ ಶತಮಾನಗಲ್ಲಿ ಇವರು ದಿಕ್ಸೂಚಿಯನ್ನು ಬಳಸುತ್ತಿದ್ದರು : ನಾವಿಕರ ದಿಕ್ಸೂಚಿಯ ಪ್ರಸ್ತಾಪವೂ ಈ ಶತಮಾನದಲ್ಲಿ ಕಂಡುಬರುತ್ತದೆ. ಉರಿಸಿ ಚೇತನವನ್ನು ಬಳಸಲು ಕಲ್ಲಿದ್ದಲನ್ನು ಉಪಯೋಗಿಸಿದ ಮೊದಲ ಜನಾಂಗಕ್ಕೆ ಸೇರಿದವರು ಚೀನೀಯರು. ಕಾಗದ, ರೇಷ್ಮೆ, ಗಾಜು ಎಲ್ಲದರ ಉತ್ಪಾದನೆಯನ್ನೂ ತಿಳಿದಿದ್ದರು. ಆದರೆ ಪ್ರಾಚೀನ ಚೀನಿಯರು ತಮ್ಮ ಸಂಶೋಧನೆಗಳನ್ನು ನಿತ್ಯಜೀವನಕ್ಕೆ ಕ್ರಿಯಾಶೀಲವಾಗಿ ಬಳಸಲಿಲ್ಲ.

ಯೂರೋಪಿನಲ್ಲಿ ನವೋದಯದ ಕಾಲದಿಂದ ವಿಜ್ಞಾನದ ಅಧ್ಯಯನಕ್ಕೆ ಹೊಸ ಚೇತನ ಬಂದಿತು. ಮಧ್ಯಯುಗದಲ್ಲಿ ವಿಜ್ಞಾನದಲ್ಲಿ ಆಸಕ್ತಿ ಇರುವವರೇ ಇರಲಿಲ್ಲ, ವೈಜ್ಞಾನಿಕ ದೃಷ್ಟಿ ಯಾರಿಗೂ ಇರಲಿಲ್ಲ ಎಂದು ಭಾವಿಸಿದರೆ ತಪ್ಪಾದೀತು. ರೋಜರ್ ಬೇಕನ್ (1214–1294) ಇಂದಿಗೂ ಅಚ್ಚರಿಯನ್ನುಂಟುಮಾಡುವ ವ್ಯಕ್ತಿ. ಭೂತಗನ್ನಡಿಯ ಉಪಯೋಗವನ್ನು ಕಂಡುಹಿಡಿದವನು ಇವನು. ತನ್ನ ಕಾಲದ ವೈಜ್ಞಾನಿಕ ಜ್ಞಾನ ಸಂಪತ್ತನ್ನೆಲ್ಲ 'ಓಪಸ್ ಮೈಅಸ್' (ಬೃಹದ್ಗ್ರಂಥ) ಎನ್ನುವ ಪುಸ್ತಕದಲ್ಲಿ ಅಡಗಿಸಿಟ್ಟನು. ಭೂತಗನ್ನಡಿಯ ಸಹಾಯದಿಂದ

ಪ್ರಾಣಿಗಳ ಅಂಗಾಂಗಗಳನ್ನು ಪರೀಕ್ಷಿಸಿ, ಬೈಬಲಿನ ಹಳೆಯ ಒಡಂಬಡಿಕೆ ಮತ್ತು ಅರಿಸ್ಟಾಟಲನ ಕೃತಿಗಳಲ್ಲಿ ವರ್ಣಿಸಿದ ಪ್ರಾಣಿಗಳು ಅವಲ್ಲ ಎಂದು ವಾದಿಸಿದ. ದೂರದರ್ಶಕ, ಆವಿಯಿಂದ ನಡೆಯುವ ಹಡಗು ಇಂಥ ಹೊಸ ಯಂತ್ರಗಳ ಸಾಧ್ಯತೆಯನ್ನು ಗುರುತಿಸಿದ. ಆದರೆ ಬಹುಕಾಲ ಮಧ್ಯಯುಗದಲ್ಲಿ, ಬೈಬಲ್ ಮತ್ತು ಅರಿಸ್ಟಾಟಲ್ ಎಲ್ಲ ಜ್ಞಾನದ ಗಣಿಗಳು ಎಂಬ ಭಾವನೆ ಇದ್ದಿತು. ಗಂಡಸಿಗಿಂತ ಹೆಂಗಸಿಗೆ ಹಲ್ಲುಗಳು ಕಡಿಮೆ ಎಂದ ಅರಿಸ್ಟಾಟಲ್. ಅದೇ ಸರಿ ಎಂದರು ಇತರರು. ಒಬ್ಬ ಗಂಡಸು, ಒಬ್ಬ ಹೆಂಗಸು ಇಬ್ಬರ ಹಲ್ಲು ಎಣಿಸಿನೋಡುವ ಗೋಜಿಗೆ ಯಾರೂ ಹೋಗಲಿಲ್ಲ. ರೋಜರ್ ಬೇಕನನಂಥವರು ಬೈಬಲ್ ಮತ್ತು ಅರಿಸ್ಟಾಟಲನ ಕೃತಿಗಳನ್ನು ಬಿಟ್ಟು ನೇರವಾದ ಅಧ್ಯಯನಕ್ಕೆ ಕೈಹಾಕಿದರೆ, ಅವರು ಧರ್ಮವಿರೋಧಕರು, ಮನುಷ್ಯರನ್ನು ತಪ್ಪುದಾರಿಗೆ ಎಳೆಯುವವರು ಎನ್ನುತ್ತಿದ್ದರು ವಿದ್ವಾಂಸರೆನಿಸಿಕೊಂಡವರು. ಬೇಕನ್ ಮಾಟಗಾರ ಎಂಬ ಆರೋಪಣೆಗೆ ಗುರಿಯಾದ ಅನಂತರ, ತಾನು ಕಂಡುಹಿಡಿದುದೆಲ್ಲವನ್ನೂ ತನಗೊಬ್ಬನಿಗೇ ತಿಳಿದ ಗುಪ್ತ ಬರಹದಲ್ಲಿ ಬರೆಯಬೇಕಾಯಿತು. ಅಲ್ಲದೆ ಮಧ್ಯಯುಗದಲ್ಲಿ, ಈ ಜಗತ್ತಿಗಿಂತ ಸಾವಿನಾಚೆಯ ಜಗತ್ತೇ ಮುಖ್ಯ, ಆತ್ಮದ ಉದ್ಧಾರ ಮತ್ತು ಸ್ವರ್ಗವನ್ನು ತಲಪುವುದು ಇವೇ ಮನುಷ್ಯನ ಬಾಳಿನ ಗುರಿಗಳು ಎಂದು ಬೋಧಿಸುತ್ತಿದ್ದರು. ಇಂಥ ವಾತಾವರಣದಲ್ಲಿ ವಿಜ್ಞಾನ ಬೆಳೆಯುವುದು ಸಾಧ್ಯವಿರಲಿಲ್ಲ.

ನವೋದಯ ಕಾಲದಲ್ಲಿ ಜನರ ದೃಷ್ಟಿಯೇ ಬದಲಾಯಿಸಿತು. ಈ ಲೋಕದ ಜೀವನ ನಿಸ್ಸಾರ ಎಂಬ ಭಾವನೆ ಮಾಯವಾಗಿ, ಉತ್ಸಾಹ ಲವಲವಿಕೆ ಕಂಡುಬಂದುವು. ವಾಣಿಜ್ಯ ಕ್ಷೇತ್ರದಲ್ಲಿ ಹೇಗೊ ಹಾಗೆಯೇ ಬೌದ್ಧಿಕ ಕ್ಷೇತ್ರದಲ್ಲಿಯೂ ಧೈರ್ಯ ಲವಲವಿಕೆಗಳು ಪ್ರಕಟವಾದುವು.

ನವೋದಯಕ್ಕೆ ಸಿದ್ಧತೆ ಹನ್ನೆರಡು ಮತ್ತು ಹದಿಮೂರನೆಯ ಶತಮಾನಗಳಲ್ಲಿಯೆ ಆಯಿತು. ರೋಜರ್ ಬೇಕನನಂಥವರು ಹಲವರ ಕುತೂಹಲವನ್ನು ಎಚ್ಚರಗೊಳಿಸಿದ್ದರು. ಅಬಿಲಾರ್ಡ್ ಎಂಬ ತರುಣ ಮತಾಧಿಕಾರಿ ಪ್ಯಾರಿಸಿನಲ್ಲಿ ಮತಶಾಸ್ತ್ರ ಮತ್ತು ತರ್ಕಶಾಸ್ತ್ರಗಳ ಮೇಲೆ ಉಪನ್ಯಾಸಗಳನ್ನು ಪ್ರಾರಂಭಿಸಿದ. ಅವನ ವಾಗ್ವೈಖರಿ ಸಾವಿರಾರು ಮಂದಿ ತರುಣರನ್ನು ಆಕರ್ಷಿಸಿತು. ಅವನ ಅಭಿಪ್ರಾಯಗಳನ್ನು ಖಂಡಿಸಲು ಇತರ ವಿದ್ವಾಂಸರು ಸೇರಿದರು. ಇಂಗ್ಲೆಂಡ್, ಜರ್ಮನಿ, ಹಂಗೆರಿ, ಇಟಲಿ—ಹೀಗೆ ಹಲವಾರು ದೇಶಗಳಿಂದ ಬಂದ ವಿದ್ವಾಂಸರೂ ವಿದ್ಯಾರ್ಥಿಗಳೂ ಇಲ್ಲಿ ಸೇರಿದರು. ಪ್ಯಾರಿಸ್ ವಿಶ್ವವಿದ್ಯಾನಿಲಯದ ಸ್ಥಾಪನೆಯಾಯಿತು. ಹದಿಮೂರನೆಯ ಶತಮಾನದಲ್ಲಿ ಈ ವಿಶ್ವವಿದ್ಯಾನಿಲಯದಲ್ಲಿ ಜಗಳವಾದ ಪರಿಣಾಮವಾಗಿ ಹಲವರು ವಿದ್ವಾಂಸರು ಇಂಗ್ಲೆಂಡಿಗೆ ಬಂದು, ಥೇಮ್ಸ್ ನದಿಯ ದಡದ ಮೇಲೆ ಆಕ್ಸ್‌ಫರ್ಡ್ ಎಂಬ ಹಳ್ಳಿಯಲ್ಲಿ ನೆಲೆಸಿದರು. 1222ರಲ್ಲಿ ವಿಶ್ವಪ್ರಸಿದ್ಧ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯ ಹೀಗೆ ಹುಟ್ಟಿತು. ಹೊಸ ವಿಶ್ವವಿದ್ಯಾನಿಲಯಗಳು ಸ್ಥಾಪನೆಯಾಗಿ, ವಿದ್ಯೆಯಲ್ಲಿ ನಿಜವಾದ ಆಸಕ್ತಿಯುಳ್ಳ ಸಾವಿರಾರು ಜನ ವಿದ್ಯಾರ್ಥಿಗಳು ವಿದ್ವಾಂಸರ ಬಳಿ ನೆರೆದರು. ಅರಿಸ್ಟಾಟಲನ ಕೃತಿಗಳನ್ನು ಭಾಷಾಂತರದಲ್ಲಿ ಓದಿ ತೃಪ್ತರಾಗದೆ ಗ್ರೀಕ್ ಮತ್ತು ಲ್ಯಾಟಿನ್ ಭಾಷೆಗಳನ್ನು ತಾವೇ ಕಲಿತರು. ಅರಿಸ್ಟಾಟಲನ ಕೃತಿಗಳನ್ನು ಮಾತ್ರವಲ್ಲದೆ ಆ ಭಾಷೆಗಳ ಇತರ ಕೃತಿಗಳನ್ನೂ ಓದಬೇಕೆಂಬ ಆಸೆ ಮೂಡಿತು. ನವೋದಯವಾಯಿತು.

ಈ ಕಾಲದಲ್ಲಿ ಪ್ರಾಚೀನ ಗ್ರೀಸಿನ ಮತ್ತು ರೋಮಿನ ಗ್ರಂಥಗಳಲ್ಲಿ ಜನರಿಗಿದ್ದ ಉತ್ಸಾಹವನ್ನು ಇಂದು ನಾವು ಊಹಿಸಿಕೊಳ್ಳುವುದೂ ಕಷ್ಟ. ಪುರಾತನ ಗ್ರಂಥವೊಂದರ ಹಸ್ತಪ್ರತಿ ಹೊಸದಾಗಿ ದೊರೆತರೆ ಊರಿಗೇ ರಜ ಕೊಡುತ್ತಿದ್ದ ಕಾಲ. ಕ್ರಿಸೊಲೊರಸ್ ಎಂಬ ವಿದ್ವಾಂಸನನ್ನು ಫ್ಲಾರೆನ್ಸ್‌ಗೆ ಗ್ರೀಕ್ ಭಾಷೆ ಹೇಳಿಕೊಡಲು ಕರೆಸಿದಾಗ ನೂರಾರು ಜನ ಯುವಕರು ಭಿಕ್ಷಾಟನೆ ಮಾಡಿಕೊಂಡು ಫ್ಲಾರೆನ್ಸ್ ತಲಪಿದರಂತೆ, ಸ್ಥಳವಿಲ್ಲದೆ ಕುದುರೆಲಾಯಗಳಲ್ಲಿ ವಾಸಮಾಡಿದರಂತೆ ಗ್ರೀಕ್ ಭಾಷೆ ಕಲಿಯಲು. ಗ್ರೀಕ್ ಲ್ಯಾಟಿನ್ ಭಾಷೆಗಳನ್ನು ಕಲಿತು ಮಹಾಕಾವ್ಯಗಳನ್ನು, ತರ್ಕ ರಾಜನೀತಿ ತತ್ತ್ವಶಾಸ್ತ್ರಗಳ ಗ್ರಂಥಗಳನ್ನು, ರುದ್ರನಾಟಕ ಹಾಸ್ಯನಾಟಕಗಳನ್ನು ಓದಿ ಬೆಕ್ಕಸ ಬೆರಗಾದರು ಅವರು. ಈ ಲೋಕದ ಜೀವನ ನಿಸ್ಸಾರ ಎಂದು ಭಾವಿಸುತ್ತಿದ್ದ ಜನರಿಗೆ ಗ್ರೀಕರು ರೋಮನರು ಜೀವನದಲ್ಲಿ ವ್ಯಕ್ತಪಡಿಸಿದ ಉತ್ಸಾಹ, ಕಂಡ ಸಂತೋಷ, ಮೆರೆದ ವಿಚಾರ ಸ್ವಾತಂತ್ರ್ಯ ರೋಮಾಂಚಕರವಾದುವು. ಜೀವನದಲ್ಲಿ, ಚಟುವಟಿಕೆಯ ಭಾವನೆಗಳಲ್ಲಿ ಮತ್ತು ವಿಚಾರರೀತಿಗಳ ನಿರೂಪಣೆಯಲ್ಲಿ ಉತ್ಸಾಹ ತುಂಬಿದುವು. ಈ ಯುಗದ ಜೀವನದ ಉತ್ಸಾಹ, ಜ್ಞಾನದಾಹ, ಕ್ರಿಯಾಶೀಲತ್ವಗಳ ಪ್ರತಿನಿಧಿ ಲಿಯನಾರ್ಡೊ ದ ವಿಂಚಿ. ಕೊಲಂಬಸ್, ಮ್ಯಾಗಿಲಾನ್, ವಾಸ್ಕೊ ದ ಗಾಮ ಈ ಯುಗದವರು. ಪೋರ್ಚುಗಲ್‌ನ ರಾಜಕುಮಾರ ಹೆನ್ರಿ, ಬಾರ್ಥಲೋಮ್ಯು ಡಿ ಆಜ್, ಪೆಡ್ರೊ ದ ಕೊವಿಲ್‌ಹ್ಯಾಂ, ಇಂಥ ಸಾಹಸ ಪುರುಷರ ಕಾಲ ಇದು. ಇಂಗ್ಲೆಂಡ್, ಫ್ರಾನ್ಸ್, ಸ್ಪೇನ್, ಹಾಲೆಂಡ್, ಪೋರ್ಚುಗಲ್ ದೇಶಗಳ ನಾವಿಕರು ಒಬ್ಬರೊಡನೊಬ್ಬರು ಉತ್ಸಾಹದಿಂದ ಸಾಹಸಯಾನಗಳಲ್ಲಿ ಸ್ಪರ್ಧೆ ಹೂಡಿದರು. ಕೊಪರ್ನಿಕಸ್ (1473–1543) ಭೂಮಿ ಸೂರ್ಯನ ಸುತ್ತ ಸುತ್ತುವ ಗ್ರಹಗಳಲ್ಲಿ ಒಂದು, ಗುಂಡಾಗಿದೆ ಎಂದು ಕಂಡುಹಿಡಿದ. ಗೆಲಿಲಿಯೊ (1564–1642) ದೂರದರ್ಶಕದಿಂದ ಆಕಾಶವನ್ನು ಅಧ್ಯಯನ ಮಾಡಿದ. ಸೂರ್ಯನ ಸುತ್ತ ಭೂಮಿಯೂ ಇತರ ಹಲವು ಗ್ರಹಗಳೂ ಸುತ್ತುತ್ತವೆ ಎಂಬ ಕೊಪರ್ನಿಕಸನ ಸಿದ್ಧಾಂತವನ್ನು ಸ್ಥಿರಪಡಿಸಿದ. ಇವರೆಲ್ಲ ತಮ್ಮ ಸಂಶೋಧನೆಗಳ ಫಲವನ್ನು ಜಗತ್ತಿಗೆ ನೀಡಲು ತುಂಬ ಕಷ್ಟವನ್ನು ಸಹಿಸಬೇಕಾಯಿತು. ಆಗಿನ ಮತಾಧಿಕಾರಿಗಳ ಸಂಪ್ರದಾಯ ಸಂಕೋಲೆ ಇವರನ್ನು ಬಿಗಿಯಿತು. ಕೊಪರ್ನಿಕಸ್ ತನ್ನ ಸಂಶೋಧನೆಯನ್ನು ಮೂವತ್ತಾರು ವರ್ಷಗಳ ಕಾಲ ಪ್ರಕಟಿಸುವ ಧೈರ್ಯ ಮಾಡಲಿಲ್ಲ. ಗೆಲಿಲಿಯೊ ಸೆರೆಮನೆಯನ್ನು ಕಾಣಬೇಕಾಯಿತು, ತಾನು ಪ್ರತಿಪಾದಿಸಿದ ವಿಚಾರರೀತಿ ತಪ್ಪು ಎಂದು ಒಪ್ಪಿಕೊಳ್ಳಬೇಕಾಯಿತು. ಅರಿಸ್ಟಾಟಲನ ಅಭಿಪ್ರಾಯಗಳನ್ನು ಖಂಡಿಸಿ ಸ್ವತಂತ್ರವಿಚಾರ ರೀತಿಯನ್ನು ಪ್ರಕಟಿಸಿದ ಜಿಯೊರ್ಡಾನೊ ಬ್ರೂನೊ(1545–1600)ವನ್ನು ಮತಾಧಿಕಾರಿಗಳು ಮೊದಲು ಜಾತಿಯಿಂದ ಹೊರಕ್ಕೆ ಹಾಕಿ ಅನಂತರ ಜೀವಸಹಿತ ಸುಟ್ಟರು. ಮತ, ವಿಜ್ಞಾನ ಇವುಗಳ ಕ್ಷೇತ್ರಗಳು ಬೇರೆ ಬೇರೆ ಎಂದು ನುಡಿದು ಸ್ವಂತ ವೀಕ್ಷಣೆ ಮತ್ತು ಸ್ವಂತ ವಿಚಾರ ವೃತ್ತಿಗಳ ಮಹತ್ವವನ್ನು ಸಾರಿದ ಫ್ರಾನ್ಸಿಸ್ ಬೇಕನ್ (1561–1626) ಈ ಕಾಲದವನು. ನವೋದಯದ ಕಾಲದಿಂದ ವಿಜ್ಞಾನ ಅದ್ಭುತವಾಗಿ ಬೆಳೆದಿದೆ. ಮನುಷ್ಯನ ಜೀವನವನ್ನು ಮಾರ್ಪಡಿಸಿದೆ. ಅನ್ವಯವಿಜ್ಞಾನಕ್ಕೆ ಸೇರದೆ ಇರು

ಷ್ಟ ಪ್ರಾಬಲ್ಯಕ್ಕೆ ಸೇರಿದ. ವ್ಯವಹಾರ ಜೀವನದದೃಷ್ಟಿಯಿಂದ ನಿರುಪಯುಕ್ತ ಎಂದು ತೋರುತ್ತಿದ್ದ ಜ್ಞಾನವೂ ಕ್ರಮೇಣ ಅನ್ವಯ ವಿಜ್ಞಾನಕ್ಕೆ ಸೇರಿದೆ. ಕೊಪರ್ನಿಕಸ್. ಗೆಲಿಲಿಯೊ ಅವರ ಖಗೋಳಶಾಸ್ತ್ರ ಸಂಶೋಧನೆ. ಫೆರಡೆಯ ವಿದ್ಯುಚ್ಛಕ್ತಿಯ ಸಂಶೋಧನೆ. ಐನ್ ಸ್ಟೈನ್ ಸಾಪೇಕ್ಷ ಸಿದ್ಧಾಂತ—ಇವೆಲ್ಲ ಮನುಷ್ಯನ ಜೀವನರೀತಿಯನ್ನು ಮಾರ್ಪಡಿಸಬಲ್ಲುವು ಎಂದು ಪ್ರಾರಂಭದಲ್ಲಿ ಯಾರು ಕಂಡಿದ್ದರು ?

ಕಾಂತ. ಚಕ್ರ. ಕೃಷಿ. ಚಕ್ರ. ಭಾಷೆ. ಬರಹ ಇವು ಪ್ರಾಚೀನ ಕಾಲದಲ್ಲಿ ನಾಗರಿಕತೆಗೆ ಅಸ್ತಿಭಾರ ಹಾಕಿದುವು. ಇವುಗಳ ಅನಂತರ ಮನುಷ್ಯನ ಚರಿತ್ರೆಯಲ್ಲಿ ಮುಖ್ಯವಾದ ಘಟನೆ ಎಂದರೆ ಸಿಡಿಮದ್ದಿನ ಬಳಕೆಯನ್ನು ಕಂಡುಕೊಂಡುದು. ಇದನ್ನು ಮೊದಲು ಯಾರು ಯಾವಾಗ ಕಂಡುಹಿಡಿದರು ಎಂದು ಹೇಳುವುದು ಕಷ್ಟ. ಪೊಟಾಸಿಯಂ ನೈಟ್ರೇಟ್. ಗಂಧಕ ಮತ್ತು ಇಂಗಾಲಗಳನ್ನು ಸೇರಿಸಿದರೆ ಸಿಡಿಮದ್ದಾಗುವುದೆಂಬ ಅಂಶವನ್ನು ಚೀನದ ಪುಸ್ತಕ ಒಂದರಲ್ಲಿ 1044ರಲ್ಲಿಯೇ ಹೇಳಿದೆ. ಹದಿನಾಲ್ಕನೆಯ ಶತಮಾನದಲ್ಲಿ ಜರ್ಮನಿಯ ಬರ್ಥಲ್ಡ್ ಶ್ವಾರ್ಜ್ ಎಂಬ ಸನ್ಯಾಸಿ ಕೆಲವು ರಾಸಾಯನಿಕ ವಸ್ತುಗಳ ಮಿಶ್ರಣವನ್ನು ಮಾಡುತ್ತಿದ್ದಾಗ ಅದು ಸಿಡಿದು ಅವನು ಸತ್ತ ; ಸನ್ಯಾಸಿಮಂದಿರದ ಒಂದು ಭಾಗ ನಾಶವಾಯಿತು.

ಸಿಡಿಮದ್ದಿನ ಬಳಕೆಯನ್ನು ಕಂಡುಹಿಡಿದವರು ಯಾರೇ ಇರಲಿ ಮನುಷ್ಯನ ಚರಿತ್ರೆಯಲ್ಲಿ ಅದು ಬಲು ಪರಿಣಾಮಕಾರಿಯಾಯಿತು. ಇದನ್ನು ಯುದ್ಧದಲ್ಲಿ ಬಳಸಲು ಮೊದಲು ಪ್ರಾರಂಭಿಸಿದವರಿಗೆ ವಿಜಯ ಕಟ್ಟಿಟ್ಟಿತ್ತು. ವೀರಯೋಧರ ದೈಹಿಕಶಕ್ತಿ. ಧೈರ್ಯಗಳು ನಿಷ್ಪ್ರಯೋಜಕವಾದುವು. ಇದರಿಂದ ಸೈನ್ಯಗಳ ಸಿದ್ಧತೆಯ ರೀತಿಯೇ ಮಾರ್ಪಟ್ಟಿತು. ಸೈನ್ಯಕ್ಕೆ ಮದ್ದುಗುಂಡುಗಳನ್ನು ತಯಾರು ಮಾಡಿಕೊಡಲು ಕೈಗಾರಿಕೆಯ ಅಭಿವೃದ್ಧಿ ಅಗತ್ಯವಾಯಿತು. ಕಳೆದ ಐದು ನೂರು ವರ್ಷಗಳಿಂದ ದೇಶರಕ್ಷಣೆಗೂ ಕೈಗಾರಿಕೀಕರಣಕ್ಕೂ ಸಂಬಂಧ ಬೆಳೆಯುತ್ತಲೇ ಇದೆ. ಅಮೆರಿಕದಲ್ಲಿ ಯೂರೋಪಿಯನರು ಹರಡಲು ಸಾಧ್ಯವಾದದ್ದು ಸಿಡಿಮದ್ದಿನಿಂದ. ಸಿಡಿಮದ್ದು ಬಂಡೆಗಳನ್ನು ಒಡೆಯುವುದರಲ್ಲಿಯೂ ಉಪಯೋಗವಾಗಿ ಮನೆಗಳ ನಿರ್ಮಾಣಕ್ಕೆ ಅನುಕೂಲವಾಯಿತು.


ದಿಕ್ಸೂಚಿ

ನಾವಿಕರ ದಿಕ್ಸೂಚಿ ಇನ್ನೊಂದು ಮುಖ್ಯವಾದ ಸಾಧನ. ಸೂರ್ಯ ಚಂದ್ರ ನಕ್ಷತ್ರಗಳನ್ನು ಗುರುತಿಸಿಕೊಂಡು ನಾವಿಕರು ಪ್ರಯಾಣ ಮಾಡಬೇಕಾಗಿತ್ತು. ಸುತ್ತ ನೀರು ಹಬ್ಬಿರುವಾಗ ಮಳೆ ಗಾಳಿಗಳಿಂದ ಆಕಾಶ ಮರೆಯಾದರೆ ನಾವಿಕ ತಾನು ಯಾವ ದಿಕ್ಕಿನಲ್ಲಿ ಪ್ರಯಾಣ ಬೆಳೆಸುತ್ತಿದ್ದೇನೆ ಎಂಬುದನ್ನು ತಿಳಿಯುವುದು ಕಷ್ಟವಾಗಿತ್ತು. ನಾವಿಕರ ದಿಕ್ಸೂಚಿ ಸಮುದ್ರ ಪ್ರಯಾಣವನ್ನು ಇನ್ನೂ ಸುಲಭಗೊಳಿಸಿತು, ಅಪಾಯವನ್ನು ಕಡಮೆ ಮಾಡಿತು.

ಒಂಬತ್ತನೆಯ ಶತಮಾನದಲ್ಲಿಯೆ ಚೀನದಲ್ಲಿ ಅಚ್ಚಿನ ಕೆಲಸ ಪ್ರಾರಂಭವಾಗಿತ್ತು ಎಂದು ಕಾಣುತ್ತದೆ. ಹನ್ನೊಂದನೆಯ ಶತಮಾನದಲ್ಲಿ ಪೀ ಷೆಂಗ್ ಎಂಬಾತ ಸುಟ್ಟ ಮಣ್ಣಿನಿಂದ ಅಕ್ಷರಗಳನ್ನು ಮಾಡಿ ಮೇಣಕ್ಕೆ ಅಮುಕಿ ಅವುಗಳಿಗೆ ಶಾಯಿಯನ್ನು ತುಂಬಿ ಕಾಗದದ ಮೇಲೆ ಒತ್ತುವುದನ್ನು ಪ್ರಾರಂಭಿಸಿದ. ಯೂರೋಪಿನಲ್ಲಿ ಇದನ್ನು ಬಳಕೆಗೆ ತಂದವನು ಯೊಹಾನೆಸ್ ಗುಟೆನ್ ಬರ್ಗ್ (1400–1468). ಲೋಹದಲ್ಲಿ ಅಕ್ಷರಗಳನ್ನು ಮಾಡುವ ಯೋಜನೆಯನ್ನು ಮಾಡಿದವನು ಇವನೇ. ಹದಿನಾರನೆಯ ಶತಮಾನದಲ್ಲಿ, ಕಾಗದವನ್ನು ಎಡದಿಂದ ಬಲಕ್ಕೂ ಯಂತ್ರವನ್ನು ಮೇಲಿನಿಂದ ಕೆಳಕ್ಕೂ ಚಲಿಸುವಂತೆ ಲಿಯೊನಾರ್ಡೊ ದ ವಿಂಚಿ ಮಾಡಿದ. ಅಲ್ಲಿಗೆ ಆಧುನಿಕ ಅಚ್ಚಿನ ಯಂತ್ರ ಜನ್ಮತಾಳಿದಂತಾಯಿತು. ಇದರಿಂದ ನಾಗರಿಕತೆಯ ಇತಿಹಾಸದಲ್ಲಿ ಆದ ಪರಿಣಾಮವನ್ನು ಸಂಪೂರ್ಣವಾಗಿ ಊಹಿಸುವುದೂ ಅಸಾಧ್ಯ. ಇದಕ್ಕೆ ಮೊದಲು ವಿದ್ಯಾಭ್ಯಾಸ– ಅಕ್ಷರತೆ ಸಹ–ಕೆಲವರಿಗೆ ಮಾತ್ರ ಮಿತಗೊಂಡಿತ್ತು ; ಮಧ್ಯಯುಗದಲ್ಲಿ ಶ್ರೀಮಂತ ಪ್ರಭುಗಳೂ ಅಕ್ಷರಜ್ಞಾನ ಪಡೆಯುವ ಗೋಜಿಗೆ ಹೋಗುತ್ತಿರಲಿಲ್ಲ. ಈಗ ವಿದ್ಯಾಭ್ಯಾಸ ಹರಡಿತು. ಅರ್ಚಕವರ್ಗದ ಕೈಗಳಲ್ಲಿ ಮಾತ್ರ ಇದ್ದ ಪವಿತ್ರ ಗ್ರಂಥಗಳು ಜನಸಾಮಾನ್ಯರ ಕೈಗಳಿಗೂ ದಾಟಿ. ಧಾರ್ಮಿಕ ಕ್ರಾಂತಿಗಳಿಗೆ ನಾಂದಿಯಾಯಿತು. ಗ್ರಂಥಗಳ ಪ್ರತಿಗಳನ್ನು ಮಾಡುವುದು ಸುಲಭವಾಗಿ. ಜ್ಞಾನ ಹರಡುವುದು ಸಾಧ್ಯವಾಯಿತು. ಜ್ಞಾನವನ್ನು ಮುಂದಿನ ಪೀಳಿಗೆಗಳಿಗೆ ಉಳಿಸಿಡುವುದು ಸುಲಭವಾಯಿತು. ಪ್ರಪಂಚದ ಒಂದು ಭಾಗದ ಜ್ಞಾನ ಇನ್ನೊಂದು ಭಾಗದವರಿಗೆ ಲಭ್ಯವಾಯಿತು. ಪುಸ್ತಕಗಳ ಮತ್ತು ವೃತ್ತಪತ್ರಿಕೆಗಳ ಮೂಲಕ ಬೇರೆ ಬೇರೆ ಅಭಿಪ್ರಾಯಗಳವರು ತಮ್ಮ ವಾದಗಳನ್ನು ಜನರ ಮುಂದಿಡುವುದು ಸಾಧ್ಯವಾಯಿತು.

ಮತ್ತೊಂದು ಕ್ರಾಂತಿಕಾರಕ ಸಾಧನೆ ಮಸೂರಗಳ ಬಳಕೆ. ಚರಿತ್ರೆಯಲ್ಲಿ ನಮಗೆ ತಿಳಿದಂತೆ ಗಾಜಿನ ಸಾಮಾನುಗಳನ್ನು ಮೊದಲು ಮಾಡಿದ್ದು ಸುಮಾರು ಕ್ರಿ. ಪೂ. 2500ರಲ್ಲಿ—ಈಜಿಪ್ಟ್ ಮತ್ತು ಮೆಸಪಟೇಮಿಯದಲ್ಲಿ. ಆದರೆ ಬಾಗಿದ ಗಾಜಿನ ಪ್ರಯೋಗದ ಯೋಚನೆ ಮನುಷ್ಯನಿಗೆ ಬರಲು ಬಹು ಕಾಲ ಹಿಡಿಯಿತು. ಗ್ರೀಸಿನ ಟಾಲೆಮಿ ಕ್ರಿ. ಪೂ. ಎರಡನೆಯ ಶತಮಾನದಲ್ಲಿ ನೀರು ತುಂಬಿದ ಗಾಜಿನ ಗೋಳಗಳ ಮೂಲಕ ಬೆಳಕಿನ ಕಿರಣ ಹಾದುಹೋಗುವಾಗ ಬಾಗುತ್ತದೆ ಎಂದು ವಿವರಿಸಿದ್ದಾನೆ. ಹನ್ನೊಂದನೆಯ ಶತಮಾನದಲ್ಲಿ ಈಜಿಪ್ಟಿನ ವಿಜ್ಞಾನಿ ಇಬ್ನ್ ಅಲ್ ಹೈಥಾಂ ಕನ್ನಡಿಗಳನ್ನು ಕುರಿತು ವಿವರವಾದ ಪುಸ್ತಕವೊಂದನ್ನು ಬರೆದ. ಹದಿಮೂರನೆಯ ಶತಮಾನದಲ್ಲಿ ರಾಬರ್ಟ್ ಗ್ರಾಸ್ ಟೆಸ್ಟ್ ಮತ್ತು ರೋಜರ್ ಬೇಕನ್ ಇವರು ಗಾಜನ್ನು ಕಣ್ಣಿನ ದೋಷಗಳ ಪರಿಹಾರಕ್ಕಾಗಿ ಬಳಸಲು ಪ್ರಯೋಗಗಳನ್ನು ನಡೆಸಿದರು.

ಕಣ್ಣಿನಲ್ಲಿ ಸ್ವಲ್ಪ ದೋಷವಿದ್ದವರಿಗೆ ಕನ್ನಡಕ ಬಂದು ಉಪಕಾರವಾಯಿತು, ವೃದ್ಧಾಪ್ಯದ ಉಗ್ರತೆ ಕಡಮೆಯಾಯಿತು. ಹಾಲೆಂಡಿನ ಜಕಾರಿಯಾಸ್ ಜಾನ್‌ಸನ್ ಎಂಬಾತ 1590ರಲ್ಲಿ ನಿಮ್ನ ಮಸೂರ ಮತ್ತು ಉನ್ನತ ಮಸೂರಗಳನ್ನು ಸೇರಿಸಿ ಬಳಸಿದರೆ ದೂರದ ವಸ್ತುಗಳು ಸ್ಪಷ್ಟವಾಗಿ ಕಾಣುತ್ತವೆ. ದೊಡ್ಡದಾಗಿ ಕಾಣುತ್ತವೆ ಎಂಬುದನ್ನು ಕಂಡು ಹಿಡಿದ. 1608ರಲ್ಲಿ ಇದೇ ದೇಶದ ಹ್ಯಾನ್ಸ್ ಲಿಪರ್ ಷೆ ಎಂಬಾತ ಮಾಡಿದ ಯಂತ್ರ ಸೂಕ್ಷ್ಮದರ್ಶಕ ದೂರದರ್ಶಕಗಳಿಗೆ ಹಾದಿ ತೋರಿತು. ಇದನ್ನು ಖಗೋಳಶಾಸ್ತ್ರದ ಅಭ್ಯಾಸದಲ್ಲಿ ಪರಿಣಾಮಕಾರಿಯಾಗಿ ಬಳಸಿದವನು ಗೆಲಿಲಿಯೊ. ಇದನ್ನು ನ್ಯೂಟನ್ ಉತ್ತಮಗೊಳಿಸಿದ. ಕ್ಯಾಲಿಫೋರ್ನಿಯದ ಮೌಂಟ್ ಪಲೋಮಾರ್ ಮೇಲಿರುವ 508 ಸೆ. ಮೀ. ವ್ಯಾಸ. 61 ಸೆ. ಮೀ. ದಪ್ಪವಿರುವ ದೂರದರ್ಶಕವೇ ಇಂದಿನ ಜಗತ್ತಿನ ಅತ್ಯಂತ ದೊಡ್ಡ ದೂರದರ್ಶಕ. ಹದಿನೇಳನೆಯ ಶತಮಾನದಲ್ಲಿ ಹಾಲೆಂಡಿನ ಅಂಟಾನ್ ವಾನ್ ಲೀವೆನ್ ಹೂಕ್ ಎಂಬಾತ ಪರಿಣಾಮಕಾರಿಯಾದ ಸೂಕ್ಷ್ಮದರ್ಶಕಗಳನ್ನು ಮಾಡಿದ: ನಿಂತ ನೀರಿನಲ್ಲಿ ಸೂಕ್ಷ್ಮಜೀವಿಗಳು ಹೇಗೆ ತುಂಬಿಕೊಳ್ಳುತ್ತವೆ ಎಂಬುದನ್ನು ಕಂಡ.

ಮಸೂರಗಳು ಮನುಷ್ಯನ ಜೀವನದಲ್ಲಿ ಕ್ರಾಂತಿಯನ್ನೆ ಉಂಟು ಮಾಡಿದುವು. ದೂರದರ್ಶಕದಿಂದ ನೆಲದ ಮೇಲೆ ಕಾಲಿಟ್ಟುಕೊಂಡ ಮನುಷ್ಯ ಆಕಾಶದಲ್ಲಿ ದೂರದ ನಕ್ಷತ್ರಗಳನ್ನೂ ನೋಡಲು ಸಾಧ್ಯವಾಯಿತು. ಮನುಷ್ಯ ವ್ಯೋಮಯಾತ್ರಿಯಾಗಿ ಚಂದ್ರ ಉಪಗ್ರಹವನ್ನು ಮುಟ್ಟಿ ಮಂಗಳಗ್ರಹದತ್ತ ತನ್ನ ವಾಹನವನ್ನು ತಿರುಗಿಸುವುದನ್ನು ಶಕ್ಯಗೊಳಿಸಿದ್ದು ದೂರದರ್ಶಕ. ಸೂಕ್ಷ್ಮದರ್ಶಕ ಅದರೆಗೆ ಮನುಷ್ಯ ಊಹಿಸಿಯೆ ಇರದಿದ್ದ ಪ್ರಪಂಚವೊಂದನ್ನು ಅವನ ಮುಂದೆ ತೆರೆದಿಟ್ಟಿತು. ಅದರೆಗೆ ಅರ್ಥವಾಗದಿದ್ದ ಹಲವು ರಾಸಾಯನಿಕ ಕ್ರಿಯೆಗಳನ್ನು ಮನುಷ್ಯ ಅರ್ಥಮಾಡಿಕೊಳ್ಳುವಂತಾಯಿತು. ಸೂಕ್ಷ್ಮದರ್ಶಕವಿಲ್ಲದೆ ಹೋಗಿದ್ದರೆ ವೈದ್ಯಶಾಸ್ತ್ರ ಬಲು ಬಡವಾಗುತ್ತಿತ್ತು. ಮಸೂರಗಳಿಲ್ಲದೆ ಕ್ಯಾಮರಗಳು. ಚಲನಚಿತ್ರಗಳು ಯಾವುದೂ ಸಾಧ್ಯವಾಗುತ್ತಿರಲಿಲ್ಲ.

1765ರಲ್ಲಿ ಜೇಮ್ಸ್ ವಾಟ್ ಆವಿಯ ಯಂತ್ರವನ್ನು ಮಾಡಿದ. ಆವಿಯನ್ನು ಯಂತ್ರಗಳಲ್ಲಿ ಬಳಸುವುದು ಕೈಗಾರಿಕಾ ಯುಗಕ್ಕೆ ಬುನಾದಿಯಾಯಿತು. ಕೈಗಾರಿಕಾ ಕ್ರಾಂತಿ ಮನುಷ್ಯನಿಗೆ ಅದ್ಭುತ ಯಂತ್ರಗಳನ್ನು ತಂದುಕೊಟ್ಟಿತು. ಉತ್ಪಾದನೆಯನ್ನು ಹೆಚ್ಚಿಸಿತು. ಬಂಡವಾಳವರ್ಗವನ್ನು ಸೃಷ್ಟಿಸಿತು. ಆವಿಯನ್ನು ತನ್ನ ದಾಸನನ್ನಾಗಿ ಮಾಡಿಕೊಂಡ ಮಾನವ ವಿದ್ಯುಚ್ಛಕ್ತಿಯನ್ನೂ ವಶಮಾಡಿಕೊಂಡ. 1746ರಲ್ಲಿ ಹಾಲೆಂಡಿನ ಕ್ಯುನೆ ಅಸ್ 'ಲೀಡನ್ ಜಾರ್' ಮಾಡಿದ (ಲೀಡನ್ ನಗರದಲ್ಲಿ ಸಿದ್ಧವಾದದ್ದರಿಂದ ಭರಣಿಗೆ ಈ ಹೆಸರು): ವಿದ್ಯುಚ್ಛಕ್ತಿಯನ್ನು ಕೂಡಿಡುವ ದಾರಿಯನ್ನು ತೋರಿಸಿದ. ಇಂದು ವಿದ್ಯುಚ್ಛಕ್ತಿ ಮನುಷ್ಯನಿಗೆ ದೈತ್ಯ ಸೇವಕನಾಗಿದೆ. ಕೈಗಾರಿಕೆಯಲ್ಲಿ ಅದರ ಉಪಯೋಗವನ್ನು ವಿಮರ್ಶಿಸಲು ಪುಸ್ತಕಗಳ ರಾಶಿಯೇ ಬೇಕಾದೀತು. 1885ರಲ್ಲಿ ಗಾಟ್ಲಿಎಬ್ ಡೈಮ್ಲರ್ ಮತ್ತು ಕಾರ್ಲ್ ಬೆನ್ಜ್ ಎಂಬ ಜರ್ಮನರು ಪೆಟ್ರೋಲಿಯಮನ್ನು ಬಳಸಿ ಚಲಿಸುವ ಯಂತ್ರವನ್ನು ಮಾಡಿದರು. ಸ್ವಯಂಚಾಲಿತ ವಾಹನದ ಅವತಾರವಾಯಿತು. ಮನುಷ್ಯ ಕಾಲದೇಶಗಳ ಮೇಲೆ ಮತ್ತೊಂದು ಅದ್ಭುತ ವಿಜಯವನ್ನು ಸಾಧಿಸಿದ. 1903ರಲ್ಲಿ ಆರ್ವಿಲ್ ರೈಟ್ ವಿಮಾನ ಹಾರಾಟವನ್ನು ಯಶಸ್ವಿಯಾಗಿ ಮಾಡಿದಾಗ ನಾಗರಿಕ ಮನುಷ್ಯನ ಚರಿತ್ರೆಯಲ್ಲಿ ಮತ್ತೊಂದು ಅಧ್ಯಾಯ ಪ್ರಾರಂಭವಾಯಿತು.

ಆಧುನಿಕ ವಿಜ್ಞಾನಿಯ ಸಾಧನೆಗಳ ಪರಂಪರೆಯನ್ನು ಗುರುತಿಸುವುದು ಕಷ್ಟಸಾಧ್ಯವಾದ ಕೆಲಸ. ತಂತಿ. ದೂರವಾಣಿ. ರೇಡಿಯೊ. ಟೆಲಿವಿಷನ್ ಮುಂತಾದ ಸಾಧನಗಳು. ಕ್ಷ-ಕಿರಣದ ಬಳಕೆ—ಒಂದೇ ಎರಡೇ ಕಳೆದ ಶತಮಾನದಲ್ಲಿ ಮನುಷ್ಯ ಪಡೆದ ಹೊಸ ವಿಜಯಗಳು! ಐನ್‌ಸ್ಟೀನ್ $E=mc^2$ ಎಂಬ ಸಮೀಕರಣವನ್ನಿತ್ತು ಪರಮಾಣುವಿನ ಬೀಗವನ್ನು ತೆಗೆದ. ಅಗಾಧ ಚೈತನ್ಯವನ್ನು ಮನುಷ್ಯನ ವಶಮಾಡಿದ. ಈಗಲಂತೂ ಉಪಗ್ರಹಗಳ ಯುಗದಲ್ಲಿದ್ದೇವೆ.

ಮನುಷ್ಯನ ಜೀವನವನ್ನು ಕ್ರಿಯಾಶೀಲವಾಗಿ ಮಾರ್ಪಡಿಸಿದ ವಿಜ್ಞಾನಿಗಳಲ್ಲದೆ ಅವನ ವಿಚಾರ ರೀತಿಯಲ್ಲೇ ಕ್ರಾಂತಿಯುಂಟುಮಾಡಿದ ವಿಜ್ಞಾನಿಗಳನ್ನೂ ನಾವು ಗುರುತಿಸಬೇಕು. ಇವರಲ್ಲಿ ಕೊಪರ್ನಿಕಸ್ ಮತ್ತು ಗೆಲಿಲಿಯೊ ಇಬ್ಬರು. ಸೂರ್ಯನ ಸುತ್ತ ಭೂಮಿ ಸುತ್ತುತ್ತದೆ ಎಂದು ಸಾರಿದ ಇವರು ಪಾಶ್ಚಾತ್ಯ ಮನುಷ್ಯನ ಅಹಂಕಾರಕ್ಕೆ ಪೆಟ್ಟುಕೊಟ್ಟರು. ಭೂಮಿಯೆ ವಿಶ್ವದ ಕೇಂದ್ರ ಎಂದು ಭಾವಿಸಿದ್ದ ಮನುಷ್ಯನಿಗೆ ತನ್ನ ಗ್ರಹ ಸೌರವ್ಯೂಹದ ಒಂದು ಭಾಗ ಎಂಬುದು ಅರಿವಾಯಿತು. ಖಗೋಳಶಾಸ್ತ್ರದ ಅಭ್ಯಾಸ ಮುಂದುವರಿದಂತೆ. ಭೂಮಿಗಿಂತ ದೈತ್ಯಾಕಾರದ ಗ್ರಹಗಳಿವೆ. ಸೂರ್ಯನೊಡನೆ ಹೋಲಿಸಿದರೆ ಭೂಮಿ ಪುಟ್ಟದು. ಸೌರವ್ಯೂಹದಲ್ಲಿಯೆ ಇದಕ್ಕಿಂತ ದೊಡ್ಡ ಗ್ರಹಗಳಿವೆ ಎಂದು ಮನುಷ್ಯ ತಿಳಿದ. ಹತ್ತೊಂಬತ್ತನೆಯ ಶತಮಾನದಲ್ಲಿ ಡಾರ್ವಿನ್ ಮುಂದಿಟ್ಟ ವಿಕಾಸವಾದ ಪಾಶ್ಚಾತ್ಯ ಮಾನವನನ್ನು ದಿಗ್ಭ್ರಮೆಗೊಳಿಸಿತು. ದೇವರ ಅಕ್ಕರೆಯ ಕಂದ. ಜಗತ್ತಿನ ಮುಕುಟ ಮನುಷ್ಯ. ಭಗವಂತ ಐದು ದಿನಗಳು ಉಳಿದ ಜಗತ್ತನ್ನು ಮಾಡಿ ಆರನೆಯ ದಿನ ಮಾನವನನ್ನು ತನ್ನ ಪ್ರತಿಬಿಂಬವನ್ನಾಗಿ ಸೃಷ್ಟಿಸಿದ ಎಂದು ನಂಬಿದ್ದ ಮಾನವ, ತತ್ತರಿಸುವಂತೆ ವಿಕಾಸವಾದ ಮಾಡಿತು. ಸೃಷ್ಟಿ ಆರು ದಿನಗಳಲ್ಲಿ ಮುಗಿಯಲಿಲ್ಲ, ಕೋಟ್ಯಂತರ ವರ್ಷಗಳಿಂದ ನಡೆದುಕೊಂಡು ಬಂದಿದೆ, ಇನ್ನೂ ಸಾಗುತ್ತಿದೆ. ಮನುಷ್ಯ ಸೃಷ್ಟಿಕರ್ತನ ಪ್ರತಿಬಿಂಬವಲ್ಲ, ಕಪಿಗಳ ವಂಶಜ, ಸೃಷ್ಟಿಯ ದೀರ್ಘ ಸರಪಣಿಯಲ್ಲಿ ಒಂದು ಕೊಂಡಿ ಎಂದು ಪ್ರತಿಪಾದಿಸಿದ ಈ ವಾದ. ಜನರ ಧಾರ್ಮಿಕ ನಂಬಿಕೆಗಳನ್ನು ನಡುಗಿಸಿತು. ಬೈಬಲಿನ ಹಿಡಿತವನ್ನು ಸಡಿಲಗೊಳಿಸಿತು. ಇದೇ ಕಾಲದಲ್ಲಿ ಭೂಶಾಸ್ತ್ರ ಖಗೋಳಶಾಸ್ತ್ರಗಳ ಅಭಿವೃದ್ಧಿ ಮನುಷ್ಯನಿಗೆ ತನ್ನ ಮತ್ತು ತನ್ನ ಗ್ರಹದ ಸ್ಥಾನವನ್ನು ಇನ್ನೂ ಮನದಟ್ಟು ಮಾಡಿಕೊಟ್ಟಿತು. ಅನಂತ ವಿಶ್ವದಲ್ಲಿ ತೂಗಾಡುತ್ತಿರುವ ಅಸಂಖ್ಯಾತ ಗ್ರಹ ಮಂಡಲ

ನಮ್ಮ ಸೂರ್ಯಮಂಡಲ ಒಂದು, ಸೂರ್ಯನೇ ಕುಬ್ಜನೆಂದು ತೋರುವಂತೆ ಮಾಡಬಲ್ಲ ನಕ್ಷತ್ರಗಳುಂಟು ಈ ವಿಶ್ವದಲ್ಲಿ. ಇಂಥ ಗ್ರಹಮಂಡಲಗಳಲ್ಲಿ ಒಂದಾದ ಸೌರವ್ಯೂಹದ ಒಂದು ಗ್ರಹದಲ್ಲಿ ಹೇಗೋ ಮಾನವ ಹುಟ್ಟಿದ್ದಾನೆ. ಜೀವ ಇಲ್ಲಿ ಹೊತ್ತಿಕೊಂಡುದು ಒಂದು ಆಕಸ್ಮಿಕ ಎಂದು ಅವನಿಗೆ ಅರ್ಥವಾಯಿತು. ವಿಜ್ಞಾನ ತಂದುಕೊಟ್ಟ ಸೌಲಭ್ಯ ಶ್ರೀಮಂತಿಕೆ ವೈಭವಗಳು ಜನಸಾಮಾನ್ಯರಿಗೆ ಮತದಲ್ಲಿದ್ದ ಶ್ರದ್ಧೆಯನ್ನು ಅಲುಗಾಡಿಸಿದವು; ವಿಜ್ಞಾನ ತಂದುಕೊಟ್ಟ ಜ್ಞಾನ ವಿಚಾರವಂತರಿಗೆ ಮತದಲ್ಲಿದ್ದ ಶ್ರದ್ಧೆಯನ್ನು ದುರ್ಬಲಗೊಳಿಸಿತು.

ವಿಜ್ಞಾನ ಹೊರಜಗತ್ತಿನ ಬಗೆಗೆ ತಂದಿತ್ತ ಜ್ಞಾನದಿಂದಲೇ ದಿಗ್ಭ್ರಾಂತನಾಗಿದ್ದ ಹತ್ತೊಂಬತ್ತನೆಯ ಶತಮಾನದ ಮಾನವನಿಗೆ ಇನ್ನೊಂದು ದಿಕ್ಕಿನಿಂದ ಸವಾಲು ಬಂದಿತು. ತತ್ತ್ವಶಾಸ್ತ್ರದ ಶಾಖೆಯಾಗಿದ್ದ ಮನಶ್ಶಾಸ್ತ್ರ ಪ್ರತ್ಯೇಕ ಮರವಾಯಿತು. ವಿಶಾಲ ವೃಕ್ಷವಾಯಿತು. ಚೈತ್ಯವೃಕ್ಷವಾಯಿತು. ಒಳಜಗತ್ತಿನ ಬಾಗಿಲುಗಳನ್ನು ಫ್ರಾಯ್ಡ್ ಮತ್ತು ಅವನ ಸಂಗಾತಿಗಳು ತೆರೆಯುತ್ತಿದ್ದಂತೆ, ಮನುಷ್ಯ ತನ್ನನ್ನು ತಾನೇ ತಿಳಿದುಕೊಂಡಿಲ್ಲ ಎಂಬುದೊಂದೇ ಅರ್ಥವಾದದ್ದು. ಮನಸ್ಸಿನ ಪದರಗಳು, ಜಟಿಲ ಸೂಕ್ಷ್ಮ ವ್ಯಾಪಾರಗಳು, ಅದುಮಿಕೆಯ ಪ್ರಭುತ್ವ, ಕಾಮ ಮನುಷ್ಯನ ಜೀವನವನ್ನು ಬಾಲ್ಯದಿಂದ ವೃದ್ಧಾಪ್ಯದವರೆಗೆ ಮತ್ತೆ ಮತ್ತೆ, ಮತ್ತೆ ಮತ್ತೆ ಸುತ್ತಿರುವ ಬಗೆ, ಕನಸಿನ ಪ್ರಪಂಚ-ಒಂದೊಂದರ ಅಭ್ಯಾಸವೂ ಶತಮಾನಗಳಿಂದ ಮನುಷ್ಯನ ನಂಬಿಕೆಗಳ ಮತ್ತು ನಡವಳಿಕೆಯ ಆಧಾರವಾಗಿದ್ದ ಭಾವನೆಗಳನ್ನು ಕತ್ತರಿಸಿಹಾಕಿತು.

ವಿಜ್ಞಾನ ಮತ್ತು ತಾಂತ್ರಿಕಜ್ಞಾನದ ಬೆಳವಣಿಗೆ ಮನುಷ್ಯನ ಜೀವನದಲ್ಲಿ ಎಷ್ಟರಮಟ್ಟಿನ ಕ್ರಾಂತಿ ಎಸಗಿದೆ ಎಂಬುದನ್ನು ವಿಮರ್ಶಿಸುವುದೆ ಅಸಾಧ್ಯ. ಬೆಳಗ್ಗೆ ಏಳುತ್ತಲೆ ಮನೆಗೇ ನೀರನ್ನು ತರುವ ಕೊಳಾಯಿ ವಿಜ್ಞಾನದ ಪ್ರಸಾದ. ಕಣ್ಣುಮುಚ್ಚಿ ಕಣ್ಣು ತೆರೆಯುವುದರಲ್ಲಿ ನಗರವನ್ನೆ ನಾಶಗೊಳಿಸುವ ಬಾಂಬು ವಿಜ್ಞಾನದ ಸೃಷ್ಟಿ. ಚಂದ್ರಉಪಗ್ರಹಕ್ಕೆ ಭೇಟಿ ವಿಜ್ಞಾನದ ವರ.

ವಿಜ್ಞಾನ ಮನುಷ್ಯನಿಗೆ ನಿಸರ್ಗದ ಮೇಲೆ ಅಸಾಧಾರಣ ಪ್ರಭುತ್ವವನ್ನು ನೀಡಿದೆ. ನೀರು, ತೈಲ, ವಿದ್ಯುಚ್ಛಕ್ತಿ, ಪರಮಾಣು--ಎಲ್ಲ ಅವನ ದೈತ್ಯದಾಸರಾಗಿ ದುಡಿಯುತ್ತಿವೆ. ಮಧ್ಯಯುಗದಲ್ಲಿ ಒಂದು ಹಳ್ಳಿಯಿಂದ ನೆರೆ ಹಳ್ಳಿಗೆ ಹೋಗಿ ಬರುವುದೆಂದರೆ ಕಷ್ಟ, ಅಪಾಯ : ಇಂದು ಮನುಷ್ಯ ಭೂಮಿಯಿಂದ ಚಂದ್ರಉಪಗ್ರಹಕ್ಕೆ ಹೋಗಿಬರುತ್ತಾನೆ; ಸಾವಿರಾರು ಕಿಲೊಮೀಟರು ಆಚೆ ಇರುವವರನ್ನು ಕಾಣುತ್ತಾನೆ, ಅವರ ಧ್ವನಿಯನ್ನು ಕೇಳುತ್ತಾನೆ. ವಾಸಿಸಲು ಗವಿಯನ್ನೆ ನೆಚ್ಚಿದ್ದ ಮಾನವ ಇಂದು ಮುಗಿಲುಮುಟ್ಟುವ ದಿವ್ಯಸೌಧಗಳನ್ನು ಲೀಲಾಜಾಲವಾಗಿ ನಿರ್ಮಿಸುತ್ತಾನೆ. ಆಹಾರದ ಉತ್ಪಾದನೆ ಇಂದು ನಿಸರ್ಗ ಮಾತ್ರ ನಿರ್ಧರಿಸುವುದಿಲ್ಲ. ತನ್ನ ಜೀವನದ ಆವಶ್ಯಕತೆಗಳನ್ನು, ವೈಭವವಸ್ತುಗಳನ್ನು ಉತ್ಪನ್ನ ಮಾಡುತ್ತ ಸಂಪತ್ತನ್ನು ಹೆಚ್ಚಿಸಿಕೊಂಡಿದ್ದಾನೆ, ಶ್ರಮವನ್ನು ಕಡಮೆಮಾಡಿಕೊಂಡಿದ್ದಾನೆ. ಅಲ್ಲಾವುದ್ದೀನ್ ಹಳೆಯ ದೀಪ ಉಜ್ಜಿದರೆ ಅವನ ಆಜ್ಞೆಯನ್ನು ನೆರವೇರಿಸಲು ಒಂದು ಭೂತ ಪ್ರತ್ಯಕ್ಷವಾಗುತ್ತಿದ್ದಂತೆ, ಇಂದು ಸಾವಿರ ಭೂತಗಳಂಥ ಯಂತ್ರಗಳು ಸಿದ್ಧವಾಗಿವೆ ಮನುಷ್ಯನ ಅಪ್ಪಣೆಗಳನ್ನು ನೆರವೇರಿಸಲು.

ಇಷ್ಟೆಲ್ಲ ಶಕ್ತಿಯನ್ನು ಮನುಷ್ಯ ಪಡೆದು ಉತ್ಪಾದನೆ ಬೆಳೆದು ವಿರಾಮ ಹೆಚ್ಚಿದಂತೆ ಸ್ವರ್ಣಯುಗದ ಉದಯವಾಗಬೇಕಾಗಿತ್ತು. ಆದರೆ ವಿಜ್ಞಾನ ಸಮಸ್ಯೆಗಳ ಸೈನ್ಯವನ್ನೂ ಕಟ್ಟಿಕೊಂಡು ಬಂದಿದೆ. ಹಿಂದಿನ ಕಾಲದಿಂದಲೂ ಶ್ರೀಮಂತರಿಗೂ ಬಡವರಿಗೂ ವ್ಯತ್ಯಾಸ ಬೇಕಾದಷ್ಟಿತ್ತು. ತಾಂತ್ರಿಕಜ್ಞಾನ ಕೈಗಾರಿಕೆಯಲ್ಲಿ ಹಣ ಕೆಲವರ ಕೈಯಲ್ಲಿ ಸೇರುವಂತೆ ಮಾಡಿದೆ; ಶ್ರೀಮಂತರ–ಬಡವರ ನಡುವಣ ಅಂತರವನ್ನು ಹೆಚ್ಚಿಸಿದೆ: ಆಂಡ್ರೂ ಕಾರ್ನೆಗಿ–ಹೆನ್ರಿ ಫೋರ್ಡ್–ರಾತ್ಸ್‌ಚೈಲ್ಡ್ ಕುಟುಂಬ ಇಂಥವರ ಕುಬೇರ ಶ್ರೀಮಂತಿಕೆಯನ್ನು ಸಾಧ್ಯಗೊಳಿಸಿದೆ. ಅಂತರ ರಾಷ್ಟ್ರೀಯ ವಾಣಿಜ್ಯದಲ್ಲಿ ಹೊಸ ಸಮಸ್ಯೆಗಳು ತಲೆದೋರಿವೆ; ಘರ್ಷಣೆಗೆ ಹೊಸ ಕಾರಣಗಳು ಸೃಷ್ಟಿಯಾಗಿವೆ. ತೈಲ ಮತ್ತು ಲೋಹಗಳಿಗಾಗಿ ನಿಷ್ಕರುಣ ಸ್ಪರ್ಧೆ ಹಲವು ರಾಜ್ಯಗಳ ಸ್ವಾತಂತ್ರ್ಯಕ್ಕೆ ಮುಳುವಾಗಿದೆ. ವಿಜ್ಞಾನ ಹೊಸ ಅಸ್ತ್ರಗಳನ್ನು ಕಂಡುಹಿಡಿದಂತೆ ಇವುಗಳ ತಯಾರಿಕೆಗೆ ಅಗತ್ಯವಾದ ವಸ್ತುಗಳಿಗಾಗಿ ಸ್ಪರ್ಧೆ ಪ್ರಾರಂಭವಾಗುತ್ತದೆ. ಸಂಪನ್ಮೂಲಗಳ ವಿನಾಶವಾಗತೊಡಗಿದೆ ; ನಿಸರ್ಗ ಕೋಟ್ಯಂತರ ವರ್ಷಗಳಿಂದ ತನ್ನ ಗರ್ಭದಲ್ಲಿ ಅಡಗಿಸಿದ್ದ ಲೋಹಗಳು ತೈಲಗಳು ಕಲ್ಲಿದ್ದಲನ್ನು ಕೆಲವೇ ದಶಕಗಳಲ್ಲಿ ಮಾನವ ಮುಗಿಸಿಬಿಡುತ್ತಾನೆ. ಭೂಮಿಯ ದಾಹ, ಪ್ರಭುತ್ವದ ಬಯಕೆ ಇವುಗಳಿಂದ. ವಿಜ್ಞಾನ ಹೊಸ ಸಂಪನ್ಮೂಲಗಳನ್ನು ಕಂಡುಹಿಡಿದಂತೆ, ರೇಡಿಯಮಿಗಾಗಿ, ಯುರೇನಿಯಮಿಗಾಗಿ, ಥೋರಿಯಮಿಗಾಗಿ, ಇನ್ನೊಂದು ವಸ್ತುವಿಗಾಗಿ, ಮತ್ತೊಂದು ವಸ್ತುವಿಗಾಗಿ ಸ್ಪರ್ಧೆ ಹುಟ್ಟುತ್ತದೆ. ಆರ್ಥಿಕ ಶೋಷಣೆಗೆ ಹೊಸ ಹೊಸ ಮಾರ್ಗಗಳು ತೆರೆಯುತ್ತವೆ. ರಾಜಕೀಯ ಸಾಮ್ರಾಜ್ಯದಾಹಕ್ಕಿಂತ ನಿರ್ದಯವಾದ ಆರ್ಥಿಕ ಸಾಮ್ರಾಜ್ಯದಾಹ ಬೆಳೆಯುತ್ತದೆ. ವಿಜ್ಞಾನ ಜೀವನದ ಅಗತ್ಯ ವಸ್ತುಗಳನ್ನೂ ಭೋಗವಸ್ತುಗಳನ್ನೂ ಸುಲಭವಾಗಿ ತಯಾರಿಸಬಲ್ಲ ಕಾರ್ಖಾನೆಗಳನ್ನು ಸಾಧ್ಯವಾಗಿಸಿದೆ. ಇದರಿಂದ ಒಂದೆಡೆಯಲ್ಲಿ ಹೆಚ್ಚು ಜನ ವಾಸಿಸುವಂತೆ ಮಾಡಿ, ಹೊಸ ಸಮಸ್ಯೆಗಳನ್ನೂ ಸೃಷ್ಟಿಸಿದೆ. ಕಾರಖಾನೆಗಳು, ಯಂತ್ರಗಳು, ವಾಹನಗಳು, ವಿಮಾನಗಳು–ಇವುಗಳ ಹೊಗೆಯಿಂದ ನಾಗರಿಕ ಮನುಷ್ಯ ತಕ್ಕಷ್ಟು ಶುದ್ಧಗಾಳಿ ಇಲ್ಲದೆ ಸಾಯುವ ಸ್ಥಿತಿ ಬರುತ್ತಿದೆ. ನಗರದ ಮೇಲೆ ಸದಾ ಇಂಗಾಲ ತುಂಬಿದ ಮೋಡ ಹಬ್ಬಿರುತ್ತದೆ. ಹಲವು ಪಾಶ್ಚಾತ್ಯ ನಗರಗಳ ವಿಮಾನನಿಲ್ದಾಣದಲ್ಲಿ ಉಸಿರಾಡುವುದೇ ಕಷ್ಟ--'ಏರ್‌ಕಂಡಿಷನ್' ಮಾಡಿರುವ ಕೊಠಡಿಗೆ ಹೋಗಬೇಕು ಧಾರಾಳವಾಗಿ ಉಸಿರಾಡಲು. ಶುದ್ಧ ಗಾಳಿ ಎಂದೂ ಈ ಜಗತ್ತಿನಲ್ಲಿ ಸಮಸ್ಯೆಯಾಗಿರಲಿಲ್ಲ, ಈ ಸಮಸ್ಯೆಯನ್ನು ಸೃಷ್ಟಿಸಿದವನು ಆಧುನಿಕ ಮಾನವ. ಈ ನಗರಗಳಿಗೆ ನೀರನ್ನೊದಗಿಸುವುದು, ಜನರ ವಾಸಕ್ಕೆ ಸ್ಥಳವನ್ನೊದಗಿಸುವುದು ಎಲ್ಲ ಸಮಸ್ಯೆಗಳಾಗುತ್ತವೆ. ಇಂಥ ನಗರಗಳಲ್ಲಿ ವಾಹನಗಳನ್ನು ನಿಲ್ಲಿಸಲು ಸ್ಥಳ ಮಾಡಿಕೊಡುವುದು, ರಸ್ತೆಗಳಲ್ಲಿ ಜನರ ಮತ್ತು ವಾಹನಗಳ ಸಂಚಾರ ವ್ಯವಸ್ಥೆ ಇನ್ನು ಸದಾ ತಲೆ

ನಿಧಾನವಾಗುವುದುಂಟು. ಟೋಕಿಯೊ ಅಂಥ ಕೆಲವು ನಗರಗಳ ಕೆಲವು ರಸ್ತೆಗಳಲ್ಲಿ ಒಂದು ವಾಹನ ಒಂದು ಕಿಲೊಮೀಟರು ಹೋಗಲು ಕಾಲು ಗಂಟೆ ಹಿಡಿಯುವುದುಂಟು.

ಜೀವನದ ಇತರ ಕ್ಷೇತ್ರಗಳ ಮೇಲೂ ವಿಜ್ಞಾನ ಪರಿಣಾಮವನ್ನುಂಟುಮಾಡಿದೆ. ಇಂದು ಆಳುವವರು ಎನಿಸಿಕೊಂಡವರ ಕೈಯಲ್ಲಿ ಎಷ್ಟೋ ಬಾರಿ ನಿಜವಾದ ಅಧಿಕಾರ ಇರುವುದಿಲ್ಲ. ಕೈಗಾರಿಕಾಕರಣ ಬೆಳೆದ ರಾಷ್ಟ್ರಗಳಲ್ಲಿ ಬಂಡವಾಳಗಾರರು ಅಂತರರಾಷ್ಟ್ರೀಯ ವ್ಯವಹಾರಗಳ ಮೇಲೆ ಪ್ರಭಾವ ಬೀರಬಲ್ಲರು; ಬೇರೆ ದೇಶಗಳಿಗೆ ಶಸ್ತ್ರಾಸ್ತ್ರಗಳ ಸರಬರಾಜು, ಮುಖ್ಯವಾದ ವಸ್ತುಗಳ ರವಾನೆ ಇವುಗಳಿಂದ ಯುದ್ಧದ ಗತಿಯನ್ನು ನಿರ್ಧರಿಸಬಲ್ಲರು. ಕಾರ್ಮಿಕ ಸಂಘಗಳು ಬಲಗೊಂಡಿವೆ. ಹಿಂದಿನ ಕಾಲದ ಚಕ್ರವರ್ತಿಗಳ ಅಧಿಕಾರವನ್ನು ಮೀರಿಸುತ್ತದೆ ಕೆಲವು ದೇಶಗಳಲ್ಲಿ ಕಾರ್ಮಿಕ ಸಂಘಗಳ ನಾಯಕರ ಅಧಿಕಾರ. ಕೈಗಾರಿಕೆಗಳನ್ನೂ ವಿಶಾಲವಾದ ವ್ಯವಸ್ಥೆಗಳನ್ನೂ ನೆಚ್ಚಿಕೊಂಡಿರುವ ಆಧುನಿಕ ಸಮಾಜದಲ್ಲಿ ಕಾರ್ಮಿಕರ ಮುಷ್ಕರ ಎಂದರೆ ಆತಂಕ. ಯಾವುದಾದರೊಂದು ಪ್ರಮುಖ ಕ್ಷೇತ್ರದ ಕೆಲಸಗಾರರ ಮುಷ್ಕರದಿಂದ ದೇಶದ ಜನಜೀವನವೇ ಸ್ಥಗಿತವಾಗಬಹುದು. ಇವರ ನಾಯಕರದು ಅಪಾರ ಪ್ರಭಾವ. ವಿಜ್ಞಾನ–ತಾಂತ್ರಿಕಜ್ಞಾನಗಳಲ್ಲಿ ಮುಂದುವರಿದ ರಾಷ್ಟ್ರಗಳ ನಾಯಕರ ಕೈಯಲ್ಲಿ ಅಪಾರ ಶಕ್ತಿ ಇದೆ. ಹಿರೋಷಿಮಾ ನಾಗಸಾಕಿಗಳ ಮೇಲೆ ಪರಮಾಣು ಬಾಂಬು ಹಾಕಬೇಕೆಂಬ ತೀರ್ಮಾನ ಮಾಡಿದವರು ಅಮೆರಿಕದ ಸಂಯುಕ್ತ ಸಂಸ್ಥಾನದ ಅಧ್ಯಕ್ಷರು. ಪರಮಾಣು ಅಸ್ತ್ರಗಳನ್ನು ಪಡೆದ ರಾಷ್ಟ್ರಗಳು ಪಡೆಯದ ರಾಷ್ಟ್ರಗಳ ಮೇಲೆ ಸಹಜವಾಗಿ ಪ್ರಭಾವ ಬೀರುತ್ತವೆ. ಆಧುನಿಕ ಶಸ್ತ್ರಾಸ್ತ್ರಗಳನ್ನು ಪಡೆಯಲು ಕೆಲವು ರಾಷ್ಟ್ರಗಳು ಇನ್ನು ಕೆಲವು ರಾಷ್ಟ್ರಗಳನ್ನು ನೆಚ್ಚಿಕೊಳ್ಳಬೇಕು. ಹೀಗಾಗಿ ವಿಜ್ಞಾನ ಅಂತರರಾಷ್ಟ್ರೀಯ ಸಂಬಂಧಗಳನ್ನು ರೂಪಿಸುವುದರಲ್ಲಿ ಹೊಸದೊಂದು ಪ್ರಭಾವಯುತ ಶಕ್ತಿಯಾಗಿದೆ.

ವಿಜ್ಞಾನ ಮನುಷ್ಯರ ಆರೋಗ್ಯವನ್ನು ಕಾಪಾಡಲು ನೆರವಾಗಿದೆ, ಸಾವಿರಾರು ಮಂದಿಯನ್ನು ಸಾವಿನ ಹಾದಿಯಿಂದ ಪಾರುಮಾಡಿದೆ. ಮಲೇರಿಯ, ಕ್ಷಯ, ವಿಷಮ ಶೀತಜ್ವರ, ಸಿಡುಬು, ಕಾಲರ, ಪ್ಲೇಗ್—ಇವುಗಳಲ್ಲಿ ಒಂದೊಂದೂ ಹಿಂದೆ ಸಾವಿರಾರು ಬಲಿಗಳನ್ನು ತೆಗೆದುಕೊಳ್ಳುವ ಹೆಮ್ಮಾರಿಯಾಗಿತ್ತು. ಇಂದು ಬಹುಮಟ್ಟಿಗೆ ಇವನ್ನು ಮನುಷ್ಯ ತನ್ನ ನಿಯಂತ್ರಣಕ್ಕೆ ಒಳಗುಮಾಡಿದ್ದಾನೆ. ಇದರ ಪರಿಣಾಮ—ಜನಸಂಖ್ಯೆ ಮಿತಿಮೀರಿ ಬೆಳೆದು ಮತ್ತೊಂದು ಬೃಹತ್ ಸಮಸ್ಯೆ ಸೃಷ್ಟಿಯಾದದ್ದು. ವಿಜ್ಞಾನ ಮುದ್ರಣದ ಸೌಕರ್ಯವನ್ನು ಕೊಟ್ಟು ಜನಸಾಮಾನ್ಯರಿಗೂ ವಿದ್ಯೆ ಕೈಗೆ ಎಟಕುವಂತೆ ಮಾಡಿದೆ. ಅಲ್ಲದೆ, ವಿದ್ಯೆ ಗಳಿಕೆಯ ಹಾದಿ ಎಂದೂ ತೋರಿಸಿದೆ. ಎಲ್ಲ ದೇಶಗಳಲ್ಲಿ ಅಕ್ಷರಸ್ಥರ ಸಂಖ್ಯೆ ಹೆಚ್ಚಿದೆ. ಶಾಲಾ ಕಾಲೇಜುಗಳು, ತಾಂತ್ರಿಕವಿದ್ಯೆಯ ಸಂಸ್ಥೆಗಳು, ವೃತ್ತಿಶಿಕ್ಷಣ ಸಂಸ್ಥೆಗಳು ವಿಸ್ತಾರವಾಗಿ ಬೆಳೆದಿವೆ. ವಯಸ್ಕರ ವಿದ್ಯಾಭ್ಯಾಸ ಅನಕ್ಷರತೆಯನ್ನು ಬೇರುಸಹಿತ ಕಿತ್ತುಹಾಕುತ್ತಿದೆ.

ಪಾಶ್ಚಾತ್ಯ ರಾಷ್ಟ್ರಗಳಲ್ಲಾಗಲಿ ಭಾರತದ ಗುರುಕುಲದಲ್ಲಾಗಲಿ ಗುರುವಿನ ವ್ಯಕ್ತಿತ್ವ ವಿದ್ಯಾರ್ಥಿಗಳ ಮೇಲೆ ತನ್ನ ಮುದ್ರೆಯನ್ನು ಒತ್ತುತ್ತಿದ್ದಿತು ; ನಿಜವಾಗಿ ವಿದ್ಯೆಯನ್ನು ಅರಸುತ್ತಿದ್ದವರು ಗುರುವನ್ನು ಹುಡುಕಿಕೊಂಡು ಹೋಗಿ ನಿಷ್ಠೆಯಿಂದ ವಿದ್ಯೆಯನ್ನು ಕಲಿಯುತ್ತಿದ್ದರು. ಜೀವನೋಪಾಯವನ್ನು ಕಲಿಸದಿದ್ದರೂ ಗುರು ಮನುಷ್ಯರಾಗಿ ಬದುಕುವ ರೀತಿಯನ್ನು ತೋರಿಸುವ ದಿವ್ಯಜ್ಯೋತಿಯಾಗಿದ್ದ. ಇಂದು ವಿದ್ಯಾಭ್ಯಾಸ ಬಹುಮಟ್ಟಿಗೆ ವಿಷಯಗಳ ಗ್ರಹಿಕೆಯಾಗಿದೆ, ಗುರುವಿನ ವ್ಯಕ್ತಿತ್ವ ವಿದ್ಯಾರ್ಥಿಗಳ ಮೇಲೆ ಪ್ರಭಾವ ಬೀರುವುದು ಸಾಮಾನ್ಯವಾಗಿ ಇಂದಿನ ವಾತಾವರಣದಲ್ಲಿ ಕಷ್ಟಸಾಧ್ಯವಾಗಿದೆ. ವಿದ್ಯಾಭ್ಯಾಸ ನಿಜವಾದ ಮೌಲ್ಯಗಳನ್ನು ತೋರಿಸಿಕೊಟ್ಟು ಜೀವನವನ್ನು ರೂಪಿಸುವ ಸಾಮರ್ಥ್ಯ ಪಡೆಯಬೇಕಾಗಿದೆ.

ಮನುಷ್ಯ ಭೂಮಿಯ ಮೇಲೆ ಕಾಣಿಸಿಕೊಳ್ಳುವ ಮುನ್ನ ಇಲ್ಲಿ ಭೂತಾಕಾರದ ಪ್ರಾಣಿಗಳಿದ್ದುವು. ಕ್ರಮೇಣ ಆ ಪ್ರಾಣಿಗಳು ನಿರ್ನಾಮವಾದುವು. ಕಾರಣ: ಬದಲಾದ ವಾತಾವರಣಕ್ಕೆ ಅವು ಹೊಂದಿಕೊಳ್ಳಲಾರದೆ ಹೋದದ್ದು. ತನ್ನ ಆವರಣವನ್ನೇ ಬದಲಿಸುವ ಪ್ರಾಣಿ ಒಂದೇ – ಮನುಷ್ಯ. ನಿಸರ್ಗದ ಮೇಲೆ ಅಸಾಧಾರಣ ಪ್ರಭುತ್ವವನ್ನು ಅವನು ಪಡೆದಿದ್ದಾನೆ. ಭೂಮಿಯಿಂದ ಬೆಳೆ ತೆಗೆಯಬಲ್ಲ. ಗೊಬ್ಬರಗಳಿಂದ ಭೂಮಿಯ ಸತ್ವದ ಮೇಲೆ ಪ್ರಭಾವ ಬೀರಬಲ್ಲ. ಚಳಿ ಬಿಸಿಲುಗಳಿಂದ ರಕ್ಷಿಸಿಕೊಳ್ಳಬಲ್ಲ. ನದಿಗಳ ದಿಕ್ಕನ್ನು ತಿರುಗಿಸಬಲ್ಲ. ಕಣ್ಣಿಗೆ ಕಾಣದ ರೋಗಕ್ರಿಮಿಗಳಿಂದ ಕಾಪಾಡಿಕೊಳ್ಳಬಲ್ಲ. ಅಂಗಾಂಗಗಳನ್ನು ಬದಲಿಸಬಲ್ಲ. ನಿಸರ್ಗದ ಶಕ್ತಿಗಳನ್ನು ತನ್ನ ದಾಸರಂತೆ ದುಡಿಸಿಕೊಳ್ಳಬಲ್ಲ. ಭೂಮಿಗೆ ಉಪಗ್ರಹಗಳನ್ನು ನೀಡಬಲ್ಲ. ಚಂದ್ರಉಪಗ್ರಹವನ್ನು ಮುಟ್ಟಬಲ್ಲ. ಇಂದು ಒಬ್ಬ ಸಾಮಾನ್ಯ ಮನುಷ್ಯನಿಗೆ ಇರುವ ಸೌಲಭ್ಯಗಳು ಕೆಲವೇ ಶತಮಾನಗಳ ಹಿಂದೆ ಯಾವ ಚಕ್ರವರ್ತಿಗೂ ಲಭ್ಯವಿರಲಿಲ್ಲ. ನಮ್ಮ ನಗರದ ರಸ್ತೆಗಳಿಗೆ ರಾತ್ರಿ ದೀಪ ಹಾಕಿ ಬೆಳಗುವಂತೆ ಮೊಗಲ್ ಸಾಮ್ರಾಜ್ಯದಲ್ಲಾಗಲಿ, ರೋಮನ್ ಸಾಮ್ರಾಜ್ಯದಲ್ಲಾಗಲಿ, ಪರ್ಷಿಯದ ಸಾಮ್ರಾಜ್ಯದಲ್ಲಾಗಲಿ ಬೆಳಗಲು ಸಾಧ್ಯವಿರಲಿಲ್ಲ. ಇಂದಿನ ತಂತಿಯ ಸಮಾಚಾರ, ದೂರವಾಣಿ ಸಂಪರ್ಕ, ಸಿಡುಬಿಗೆ ಲಸಿ ಹಾಕುವುದು, ವಿಷಮ ಶೀತಜ್ವರ – ನಾಯಿ ಕಚ್ಚುವುದಕ್ಕೆ ಔಷಧಗಳು, ಪೆನ್‌ಸಿಲಿನ್ ಇವುಗಳನ್ನು ಅಲೆಗ್ಸಾಂಡರ್, ಷಹಜಹಾನ್, ನಾದಿರ್‌ಷಹ ಕೊಳ್ಳುವಂತಿರಲಿಲ್ಲ. ಜೂಲಿಯಸ್ ಸೀಸರ್, ಘಜ್ನಿ ಮಹಮದ್, ನೆಪೋಲಿಯನ್ ಹಿಟ್ಲರರಿಗೆ ಕ್ಷ–ಕಿರಣದ ಚಿಕಿತ್ಸೆ ಲಭ್ಯವಾಗುವಂತಿರಲಿಲ್ಲ. ವಿಜ್ಞಾನ ಜೀವನವನ್ನು ಎಷ್ಟು ಮಾರ್ಪಾಡುಮಾಡಿದೆ. ಮುಂದೆ ಇನ್ನೆಂಥ ಬದಲಾವಣೆ ಎಂಥದು ಬರುವುದನ್ನು ಅರಿಯಲು ಇವನ್ನು ಕಲ್ಪಿಸಿಕೊಳ್ಳಬೇಕು. ಆದರೆ ತಾನು ಮಾರ್ಪಡಿಸಿದ ವಾತಾವರಣಕ್ಕೆ ಹೊಂದಿಕೊಳ್ಳಲು ಮನುಷ್ಯನಿಂದ ಸಾಧ್ಯವಾಗದೆ ಹೋದರೆ, ವಿಜ್ಞಾನ ಅವನಿಗೆ ಮೃತ್ಯುವಾದೀತು.

# ೧೪

ಮನುಕುಲದ ಕಥೆ

ಮನುಕುಲದ ಕಥೆ ಬೆರಗುಗೊಳಿಸುವ ಕಥೆ; ರೋಮಾಂಚನವನ್ನುಂಟುಮಾಡುವ ಕಥೆ. ಒಂದು ಕಾಲದಲ್ಲಿ, ಪ್ರಾಣಿಗಳಲ್ಲಿ ದುರ್ಬಲವಾದ ಪ್ರಾಣಿಯಾಗಿ, ತನಗಿಂತ ಬಲಿಷ್ಠ ಪ್ರಾಣಿಗಳಿಗೆ ಬೇಟೆಯಾಗಿ, ಮನುಷ್ಯ ಬತ್ತಲೆ ಓಡಾಡುತ್ತಿದ್ದ. ಇಂದು ಆತ ನೀರಿನಲ್ಲಿ ಚಲಿಸಬಲ್ಲ, ಗಾಳಿಯಲ್ಲಿ ಹಾರಬಲ್ಲ, ಹಣ್ಣನ್ನು ಕೊಯ್ದು ತೆರೆಯುವಂತೆ ತನ್ನ ಸಹಮಾನವರ ದೇಹವನ್ನು ಕೊಯ್ದು ತೆರೆದು ಚಿಕಿತ್ಸೆ ಮಾಡಿ ಅಥವಾ ಭಾಗಗಳನ್ನು ಬದಲಿಸಿ ಮತ್ತೆ ಹೊಲಿದಿಡಬಲ್ಲ. ಕಣ್ಣಿಗೆ ಕಾಣದಷ್ಟು ಸೂಕ್ಷ್ಮವಾದ ಪರಮಾಣುವಿನ ಬಾಗಿಲನ್ನು ತೆರೆದು ಅದರಲ್ಲಿ ಸೆರೆಯಾದ ಅಗಾಧ ಚೈತನ್ಯವನ್ನು ಬಳಸಬಲ್ಲ, ಚಂದ್ರ ಉಪಗ್ರಹಕ್ಕೆ ಹೋಗಿಬರಬಲ್ಲ. ಧ್ರುವಗಳ ಹಿಮವನ್ನು ಕರಗಿಸುವುದು, ಗಾಜಿನ ಕೊಳವೆಯಲ್ಲಿ ಜೀವವನ್ನು ಉತ್ಪತ್ತಿಮಾಡುವುದು, ಮಂಗಳಗ್ರಹದಲ್ಲಿ ಕಾಲೂರುವುದು–ಇಂಥ ಸಾಹಸಗಳ ಯೋಜನೆಯೇ ಆತನ ಮುಂದಿದೆ.

ಉಳಿದ ಪ್ರಾಣಿಗಳು ಬದುಕಿರುವುದು ನಿಸರ್ಗದ ಕೃಪೆಯಿಂದ. ಮಾನವ ನಿಸರ್ಗವನ್ನು ಗೆಲ್ಲಲು ಹೊರಟ. ಅವನ ಪೂರ್ವಿಕರಲ್ಲಿ ಇಪ್ಪತ್ತೊಂದು ಮೀಟರು ಉದ್ದದ ಬ್ರಾಂಟೊಸಾರಸ್, ಹಿಂದಿನ ಕಾಲಿನ ಮೇಲೆ ಎದ್ದುನಿಂತಾಗ ಆರು ಮೀಟರುಗಳ ಎತ್ತರವಿದ್ದ ಟೈರಾನೊಸಾರಸ್, ಬಾಲದ ಮೇಲೆ 1.2 ಮೀಟರುಗಳ ಹರಿತ ಛತ್ರಿಗಳಿದ್ದ ಸ್ಟೆಗೊಸಾರಸ್–ಎಲ್ಲ ಇದ್ದುವು. ಇಂಥ ದೈತ್ಯಕಾಯ, ದೈತ್ಯ ಶಕ್ತಿ ಎರಡೂ ಇಲ್ಲದ ಮಾನವ ಇಂದು ಇತರ ಗ್ರಹಗಳಲ್ಲಿ ವಸಾಹತುಗಳನ್ನೇ ಸ್ಥಾಪಿಸುವ ಪ್ರಯತ್ನದಲ್ಲಿದ್ದಾನೆ.

ಇಂಥ ಸಾಧನೆಗೆ ಆತ ಎಷ್ಟು ಕಡಮೆ ಕಾಲ ತೆಗೆದುಕೊಂಡಿದ್ದಾನೆ ಎಂಬುದನ್ನು ಗಮನಿಸಿದರೆ ಆಶ್ಚರ್ಯವಾಗುತ್ತದೆ. ನಾವು ಭೂಪಟ ಬರೆಯುವಾಗ ಪ್ರಮಾಣ–ಸ್ಕೇಲ್–ಅನುಸರಿಸುತ್ತೇವೆ ಅಲ್ಲವೆ? 1 ಸೆಂಟಿಮೀಟರ್–1,000 ಕಿಲೊಮೀಟರ್, 1 ಸೆಂಟಿಮೀಟರ್–5000 ಕಿಲೊಮೀಟರ್, ಹೀಗೆ ಭೂಪಟದ ಒಂದು ಭಾಗದಲ್ಲಿ ಸೂಚಿಸುವುದಿಲ್ಲವೆ? ಹಾಗೆಯೆ ಒಂದು ಮಿನಿಟಿಗೆ ಹತ್ತು ಲಕ್ಷ ವರ್ಷಗಳು ಎಂದು ಕೊಳ್ಳೋಣ. ಈ ಪ್ರಮಾಣದಲ್ಲಿ ಭೂಮಿ ಸೃಷ್ಟಿಯಾಗಿ ಮೂರು ದಿನಗಳು ಕಳೆದಿವೆ. ಜೀವವಿರುವ ಪ್ರಾಣಿ ಕಾಣಿಸಿಕೊಂಡದ್ದು ನಿನ್ನೆ ಬೆಳಗ್ಗೆ. ಆರು ಗಂಟೆಗಳ ಹಿಂದೆ ಮೀನುಗಳು ವಾಸವಾಗಿದ್ದುವು. ಎರಡು ಗಂಟೆಗಳ ಹಿಂದೆ ದೈತ್ಯ ಸರೀಸೃಪಗಳು. ಎರಡು ಕಾಲಿನಿಂದ ನಡೆದು ಆಯುಧ ರೂಪಿಸಬಲ್ಲ ಪ್ರಾಣಿ ಕಾಣಿಸಿ ಒಂದು ಮಿನಿಟಿಗಿಂತ ಕಡಮೆ. ಪ್ರಾರಂಭದ ನಾಗರಿಕತೆಗಳು ಹುಟ್ಟಿ ಒಂದು ಸೆಕೆಂಡೂ ಕಳೆದಿಲ್ಲ.

ಇದನ್ನೆ ಇನ್ನೊಂದು ರೀತಿಯಲ್ಲಿ ಹೇಳಬಹುದು. ನಾವು, ನಮ್ಮ ಹಿಂದಿನ ಪೀಳಿಗೆಯಲ್ಲಿ ನಮ್ಮ ತಂದೆ ತಾಯಿ, ಅವರ ಹಿಂದಿನ ಪೀಳಿಗೆಯಲ್ಲಿ ನಮ್ಮ ಅಜ್ಜ, ಅಜ್ಜಿ, ಅವರ ಹಿಂದಿನ ಪೀಳಿಗೆಯಲ್ಲಿ ನಮ್ಮ ಮುತ್ತಜ್ಜ, ಮುತ್ತಜ್ಜಿ, ಎಂದರೆ ನಾವೂ ಸೇರಿ ನಾಲ್ಕು ಪೀಳಿಗೆ ಹಿಂದಕ್ಕೆ ಹೋದಂತಾಯಿತು. ಹೀಗೆಯೆ ಇನ್ನೂರು ಪೀಳಿಗೆ ಹೋದರೆ, ಆ ಅಜ್ಜ–ಅಜ್ಜಿಯರ ಕಾಲದಲ್ಲಿ ಬರಹವೇ ಇರಲಿಲ್ಲ. ಈಜಿಪ್ಟಿನ ಪಿರಮಿಡ್‌ಗಳಿರಲಿಲ್ಲ, ರಾಜ್ಯಗಳಿರಲಿಲ್ಲ, ನಗರಗಳಿರಲಿಲ್ಲ.

ಮನುಷ್ಯನ ಅದ್ಭುತ, ರೋಮಾಂಚಕಾರಕ ಸಾಧನೆಗೆ ಅವನಿಗಿದ್ದ ಆಯುಧ—ಮಿದುಳು. ಅವನ ಬುದ್ಧಿಶಕ್ತಿಯೇ ಅವನನ್ನು ಇಷ್ಟು ದೂರ ನಡೆಸಿಕೊಂಡು ಬಂದಿದೆ. ಅದರ ಬಲದಿಂದ ನಿರಂತರವಾಗಿ ನಿಸರ್ಗದೊಡನೆ ಹೋರಾಟ ನಡೆಸಿದ್ದಾನೆ. ನೆಲದಿಂದ ಹೆಚ್ಚು ಆಹಾರವನ್ನು ತೆಗೆದಿದ್ದಾನೆ. ಬೆಂಕಿಯನ್ನು ವಶಮಾಡಿಕೊಂಡಿದ್ದಾನೆ. ವಿದ್ಯುಚ್ಛಕ್ತಿಯ ಪ್ರಭುವಾಗಿದ್ದಾನೆ, ಭೂಮಿಯ ಗುರುತ್ವಾಕರ್ಷಣ ಶಕ್ತಿಯನ್ನು ಗೆದ್ದಿದ್ದಾನೆ; ಪರಮಾಣುಶಕ್ತಿಯೊಡನೆ ಸೆಣಸುತ್ತಿದ್ದಾನೆ. ನಿಸರ್ಗದ ರಹಸ್ಯಗಳನ್ನು ಒಂದಾದ ಮೇಲೊಂದರಂತೆ ಸ್ವಾಧೀನ ಮಾಡಿಕೊಂಡು ತನ್ನ ಹಣೆಯ ಬರಹವನ್ನು ತಾನೆ ಬರೆಯತೊಡಗಿದ್ದಾನೆ. ಈ ಹೋರಾಟದಲ್ಲಿ ಅವನು ಮತ್ತೆ ಮತ್ತೆ ಮೃತ್ಯುವಿನೊಡನೆ ಹೋರಾಡಿದ್ದಾನೆ. ಮೃತ್ಯುವಿನ ಬಾಯನ್ನು ಹೊಕ್ಕಿದ್ದಾನೆ. ಕ್ಷಾಮ, ಪ್ರವಾಹ, ಕಾಯಿಲೆ ಎಷ್ಟು ಲಕ್ಷ ಮಂದಿಯನ್ನು ಬಲಿತೆಗೆದುಕೊಂಡಿವೆಯೊ! ಭೂಮಿಯ ಮೂಲೆ ಮೂಲೆಗಳನ್ನು ಪರೀಕ್ಷಿಸಹೊರಟವರಲ್ಲಿ, ಧ್ರುವವನ್ನು ಮುಟ್ಟಲು ನಡೆದವರಲ್ಲಿ, ಪರ್ವತಗಳನ್ನು ಏರಬಯಸಿದ ಸಾಹಸಿಗಳಲ್ಲಿ ಹಿಂದಿರುಗದೆ ಇದ್ದವರೆಷ್ಟೊ! 1970ರ ಏಪ್ರಿಲ್‌ನಲ್ಲಿ ಚಂದ್ರನತ್ತ ಹೊರಟ ಅಪೊಲೊ 13ರ ನೌಕೆ ಇದ್ದಕ್ಕಿದ್ದಂತೆ ಅಪಾಯದ ದವಡೆಯನ್ನು ಹೊಕ್ಕಿತಲ್ಲವೆ?

ಸಾವಿಗೆ ಅಳುಕದೆ, ನಿಸರ್ಗದ ದೈತ್ಯಶಕ್ತಿಗಳಿಗೆ ಬೆದರದೆ, ಮುಂದೆ ನಡೆದಿದ್ದಾನೆ ಮಾನವ.

ಮನುಕುಲದ ಕಥೆ ಬರಿ ಉತ್ಕರ್ಷ, ಪ್ರಗತಿಯ ಕಥೆಯೆ ಏನು ಅಲ್ಲ. ಕರಗಿದ ಹಿಮ, ಕ್ಷಾಮ, ಪ್ರವಾಹ, ಕಾಯಿಲೆಗಳು ಅಡಿದ ಭೀಕರ ನೃತ್ಯದೊಂದಿಗೆ ಮಾನವನ ದುರಾಸೆ, ದುರ್ವರ್ತನ, ಸ್ವಾರ್ಥಗಳೂ ಕಳೆತಿವೆ. ಆಗಾಗ ಮನುಕುಲಕ್ಕೆ ರಕ್ತಸ್ನಾನವಾಗಬೇಕೆಂದು ತೋರುತ್ತದೆ. ಬದುಕಿನ ಮಾರ್ಗವನ್ನು ನಿರಾತಂಕಗೊಳಿಸಿಕೊಳ್ಳುತ್ತಿರುವಾಗಲೆ ಭಯಂಕರ ಸಾವಿನ ಯಂತ್ರಗಳನ್ನೂ ಮನುಷ್ಯ ಸೃಷ್ಟಿಸಿದ್ದಾನೆ. ಬುದ್ಧ, ಕ್ರಿಸ್ತ, ಗಾಂಧೀಜಿಯವರಂಥ ಮಹಾ ರಕರನ್ನು ಪೂಜಿಸುತ್ತಲೇ ತನ್ನ ಸಹಮಾನವರನ್ನು ನಿರ್ದಯವಾಗಿ ಕತ್ತರಿಸಿಹಾಕಿದ್ದಾನೆ. ಅಶೋಕ, ಕ್ರಿಸ್ತನನ್ನು ಶಿಲುಬೆಗೇರಿಸಿದ್ದಾನೆ; ಗಾಂಧೀಯನ್ನು ಕೊಂದಿದ್ದಾನೆ. ಚರಿತ್ರೆಯಿಂದ ಪಾಠ ಕಲಿತಿಲ್ಲ ಅವನು. "ಚರಿತ್ರೆಯಿಂದ ಮಾನವ ಏನನ್ನೂ ಕಲಿಯುವುದಿಲ್ಲ ಎಂಬುದೊಂದೇ ಚರಿತ್ರೆಯಿಂದ ಮಾನವ ಕಲಿಯಬಹುದಾದ ಪಾಠ," ಎನ್ನುತ್ತಾರೆ ಕೆಲವರು. ಅಷ್ಟು ಮೌಢ್ಯ, ಕ್ರೂರತೆ, ದುರ್ವರ್ತನೆಗಳನ್ನು

ತೋರಿದ್ದಾನೆ ಮಾನವ. ತನ್ನ ಅಭಿಪ್ರಾಯವನ್ನು ಒಪ್ಪದಿದ್ದವರನ್ನು ಸರಪಣಿ ಹಾಕಿ ಕತ್ತಲೆಯಲ್ಲಿ ಕೂಡಿದ್ದಾನೆ. ಅವರಿಗೆ ವಿಷ ಕುಡಿಸಿದ್ದಾನೆ, ಬೆಂಕಿಯಲ್ಲಿ ಸುಟ್ಟಿದ್ದಾನೆ. ಸಹಮಾನವರನ್ನು ಗುಲಾಮರನ್ನಾಗಿ ಮಾಡಿ ಮಾರುವ-ಕೊಳ್ಳುವ ಮಾರುಕಟ್ಟೆಗಳನ್ನು ವ್ಯವಸ್ಥೆ ಮಾಡಿದ್ದಾನೆ. ಆನೆಯ ಕಾಲಿನಲ್ಲಿ ತುಳಿಸಿದ್ದಾನೆ. ಗಣಿಗಳಲ್ಲಿ ಇಳಿಸಿ ದುಡಿಸಿದ್ದಾನೆ. ಊರುಗಳನ್ನು ಸುಟ್ಟಿದ್ದಾನೆ. ಹೆಂಗಸರು ಮಕ್ಕಳನ್ನು ಭೀಕರ ಚಿತ್ರಹಿಂಸೆಗೆ ಗುರಿಮಾಡಿದ್ದಾನೆ. ಮಾರಕ ಅಸ್ತ್ರಗಳಿಂದ ಕೋಟಿಗಟ್ಟಲೆಯಲ್ಲಿ ಜನರನ್ನು ಸಂಹಾರ ಮಾಡಿದ್ದಾನೆ. ರಾಷ್ಟ್ರಗಳನ್ನು ಹಾಳು ಮಾಡಿದ್ದಾನೆ. ನಗರಗಳನ್ನು ಇಬ್ಭಾಗ ಮಾಡಿದ್ದಾನೆ.

ಮನುಷ್ಯನ ಜ್ಞಾನ ಬೆಳೆದಿದೆ. ವಿವೇಕ ಅದಕ್ಕೆ ತಕ್ಕಂತೆ ಬೆಳೆದಿಲ್ಲ. ತನ್ನ ಶಕ್ತಿಯನ್ನು ಬೆಳೆಸಿಕೊಂಡ ಮನುಷ್ಯ ಆ ಶಕ್ತಿಯನ್ನು ಮನುಕುಲದ ಕಲ್ಯಾಣದತ್ತ ನಡೆಸಲು ಬಳಸಬಲ್ಲ ವಿವೇಕವನ್ನು ಬೆಳೆಸಿಕೊಂಡಿಲ್ಲ. ಪ್ರವಾಹವನ್ನು, ಕ್ಷಾಮವನ್ನು, ಪ್ಲೇಗನ್ನು, ಕಾಲರಾವನ್ನು ಗೆದ್ದ ಮನುಷ್ಯನ ಮುಂದೆ ಇನ್ನೂ ಸವಾಲುಗಳಿವೆ. ಅನಾವೃಷ್ಟಿಯನ್ನು ಇನ್ನೂ ಹತೋಟಿಗೆ ತರಲಾಗಿಲ್ಲ ಅವನಿಗೆ. ಭೂಕಂಪ ಇನ್ನೂ ಅವನನ್ನು ನಡುಗಿಸುತ್ತದೆ, ಒಮ್ಮೆ ಭುಜವನ್ನು ಕೊಡವಿ ಭೂಮಿ ಅವನ ನಗರಗಳನ್ನು ಕಡ್ಡಿಯ ಮನೆಯಂತೆ ಉರುಳಿಸಿಬಿಡಬಲ್ಲದು. ಮುಪ್ಪು-ಸಾವು ಇವನ್ನು ಪಳಗಿಸಲು ಇನ್ನೂ ಅವನಿಂದ ಆಗಿಲ್ಲ. ಇಂಗ್ಲೆಂಡಿನ ವಿಜ್ಞಾನಿ ಸರ್ ಬರ್ನಾರ್ಡ್ ಲವೆಲ್. ನಮ್ಮ ತಾರಾಗಣದಲ್ಲಿ ನೂರರಲ್ಲಿ ಐದು ಜೀವಕ್ಕೆ ಆಶ್ರಯ ಕೊಟ್ಟ ನೆಲೆಗಳಾಗಿರಬಹುದು ಎನ್ನುತ್ತಾನೆ. ಸಾವಿರದಲ್ಲಿ ಒಂದು ಮಾತ್ರ ಜೀವಕ್ಕೆ ಆಶ್ರಯ ನೀಡಿರಬಹುದು ಎಂದುಕೊಂಡರೂ ನಮ್ಮ ತಾರಾಗಣದ ಹತ್ತು ಸಾವಿರ ಕೋಟಿ ನಕ್ಷತ್ರಗಳಲ್ಲಿ ಹತ್ತು ಕೋಟಿ ಪ್ರದೇಶಗಳಲ್ಲಿ ಜೀವವಿರಬಹುದು. ನಮ್ಮ ತಾರಾ ಸಮೂಹದಂಥ ಕೋಟ್ಯಂತರ ತಾರಾಸಮೂಹಗಳಿವೆ ವಿಶ್ವದಲ್ಲಿ. ಎಲ್ಲೆಲ್ಲಿ ಜೀವ ಯಾವ ಯಾವ ರೂಪ ತಾಳಿದೆಯೊ, ಅಲ್ಲಿ ಜೀವದ ವಿಕಾಸ ಯಾವ ಘಟ್ಟ ತಲಪಿದೆಯೊ ಮಾನವ ಇನ್ನೂ ಕಂಡುಹಿಡಿಯಬೇಕಾಗಿದೆ. ಎಲ್ಲಕ್ಕಿಂತ ಮುಖ್ಯವಾಗಿ, ತನ್ನೊಳಗಿರುವ ದುಷ್ಟತನಕ್ಕೆ ಅವನಿನ್ನೂ ಸಂಕೋಲೆ ತೊಡಿಸಬೇಕಾಗಿದೆ.

ಇಷ್ಟಾದರೂ ಅಚ್ಚರಿಗಳಲ್ಲಿ ಅಚ್ಚರಿ–ಈ ಮಾನವ. ತಪ್ಪುಹೆಜ್ಜೆ ಇಡುತ್ತ, ಎಡವುತ್ತ, ಹಿಂದಕ್ಕೆ ಹೋಗುತ್ತ, ಮುಗ್ಗರಿಸುತ್ತ–ಧೈರ್ಯಗೆಡದೆ, ಮುಂದಕ್ಕೆ ಸಾಗಿದ್ದಾನೆ ಈತ. ಸಾವೆಂದರೆ ಹೆದರುವ ಸಾವಿರ ಮಂದಿಯ ಮಧ್ಯೆ ಸಾವಿನೊಡನೆ ಸರಸವಾಡುವ ಸಾಹಸಿಯೊಬ್ಬ ಬರುತ್ತಾನೆ–ಇವನೇ ಉತ್ತರಧ್ರುವ ಮುಟ್ಟುತ್ತಾನೆ. ಎವರೆಸ್ಟ್ ಮೆಟ್ಟುತ್ತಾನೆ, ಸಾಗರದ ತಳ ಶೋಧಿಸುತ್ತಾನೆ. ಚಂದ್ರಉಪಗ್ರಹ ತಲಪುತ್ತಾನೆ. ಆದದ್ದಾಗಲಿ ಎಂದು ನಿಷ್ಕ್ರಿಯರಾಗಿ ಉಸಿರೆಳೆಯುವ ಸಾವಿರ ಮಂದಿಯ ಮಧ್ಯೆ ಭವಿಷ್ಯವನ್ನು ರೂಪಿಸುವ ಶಿಲ್ಪಿ ಹುಟ್ಟುತ್ತಾನೆ-ಇವನೊಬ್ಬ ಲೂಯಿ ಪ್ಯಾಶ್ಚರ್ ಆಗುತ್ತಾನೆ. ಥಾಮಸ್ ಆಲ್ವ ಎಡಿಸನ್ ಆಗುತ್ತಾನೆ. ಆರ್ವಿಲ್ ರೈಟ್ ಆಗುತ್ತಾನೆ. ಹೇಗೂ ಜಗತ್ತು ನಡೆದುಕೊಂಡು ಹೋಗುತ್ತದೆ ಎಂಬ ಸಾವಿರ ಮಂದಿ ಕುತೂಹಲರಹಿತರ ಮಧ್ಯೆ. ಒಬ್ಬ ಅದು ಹೇಗೆ ಇದು ಹೇಗೆ ಎಂದು ಪ್ರಶ್ನೆ ಕೇಳಿಕೊಳ್ಳುವವ ಹುಟ್ಟುತ್ತಾನೆ – ಇವನು ಆರ್ಕಿಮಿಡೀಸ್ ಆಗುತ್ತಾನೆ. ನ್ಯೂಟನ್ ಆಗುತ್ತಾನೆ. ಐನ್‌ಸ್ಟೀನ್ ಆಗುತ್ತಾನೆ. ರಾಮನ್ ಆಗುತ್ತಾನೆ. ಲಕ್ಷಮಂದಿ ಸ್ವಾರ್ಥಿಗಳು. ಕ್ರೂರಿಗಳ ಮಧ್ಯೆ ಒಬ್ಬ ಕರುಣಾಸಾಗರ ಹುಟ್ಟುತ್ತಾನೆ- ಇವನು ಬುದ್ಧನಾಗುತ್ತಾನೆ. ಕ್ರಿಸ್ತನಾಗುತ್ತಾನೆ. ಗಾಂಧಿಯಾಗುತ್ತಾನೆ. ಜಗಳ ಹಿಂಸೆಗಳಲ್ಲಿ ಪ್ರವೃತ್ತರಾಗಿರುವ ಲಕ್ಷ ಮಂದಿಯ ಮಧ್ಯೆ ಉದ್ಧಾರದ ದಾರಿ ತೋರಬಲ್ಲ ಮಹಾವೀರ. ಜರತುಷ್ಟ್ರ. ಮಹಮ್ಮದ್ ಪೈಗಂಬರ್. ಬಸವೇಶ್ವರ. ಗುರು ನಾನಕ್ ಮೈದೋರುತ್ತಾರೆ. ವಿಜ್ಞಾನ. ಕಲೆ. ಧರ್ಮ ಎಲ್ಲ ಮನುಷ್ಯನ ಸೃಷ್ಟಿಗಳು. ಒಬ್ಬ ಮೀರಾ. ಕಬೀರ. ಅಸಿಸಿಯ ಫ್ರಾನ್ಸಿಸ್ ಮಾನವಕೋಟಿಗೆ ಹೆಮ್ಮೆ. ಎಪ್ಪತ್ತನೆಯ ವಯಸ್ಸಿನಲ್ಲಿ-ಸುತ್ತ ಅಳುವವರನ್ನು ಸಮಾಧಾನಗೊಳಿಸುತ್ತ ವಿಷ ಕುಡಿಯುವ ಸಾಕ್ರಟೀಸ್. ಹಾಸ್ಯ ಮಾಡುತ್ತ ಗಡ್ಡ ಸರಿಸಿ ಕೊಡಲಿಗೆ ತಲೆ ಇಡುವ ಥಾಮಸ್ ಮೋರ್. 'ಯೇಸು' ಎನ್ನುತ್ತ ಬೆಂಕಿಯಲ್ಲಿ ಪ್ರಾಣಬಿಡುವ ಹದಿನೆಂಟು ವರ್ಷದ ಹುಡುಗಿ ಜೋನ್ ಆಫ್ ಆರ್ಕ್. ಬ್ರಿಟಿಷರ ಗುಂಡುಗಳಿಗೆ ಎದೆಯೊಡ್ಡಿದ ಭಾರತದ ಬಾಲಕ ಬಾಲಕಿಯರು ಮನುಷ್ಯರು ತಾನೇ? ವ್ಯಾಸ. ವಾಲ್ಮೀಕಿ. ಕಾಳಿದಾಸ. ಕುಮಾರವ್ಯಾಸ. ಹೋಮರ್. ಡಾಂಟೆ. ಷೇಕ್ಸ್‌ಪಿಯರ್. ವಿಕ್ಟರ್ ಹ್ಯೂಗೋ. ಟಾಲ್‌ಸ್ಟಾಯ್. ತಾನಸೇನ್. ತ್ಯಾಗರಾಜ. ವೀಣೆ ಶೇಷಣ್ಣ. ಬ್ಯಾಕ್. ಬಿಥೋವನ್. ಮೈಕೆಲಾಂಜೆಲೊ.

ಮಾನವ ಇಬ್ಭಾಗಿಸಿದ ನಗರ - ಬರ್ಲಿನ್; ಅಡ್ಡಗೋಡೆ ಮುಳ್ಳು ಬೇಲಿಗಳನ್ನು ಲೆಕ್ಕಿಸದೆ ಬೃಹತ್ ಮೋಂಬತ್ತಿಗಳು ಶಾಂತಿಯ ಸಂದೇಶ ಸಾರುತ್ತವೆ



ಲಿಯೊನಾರ್ಡೊ ದ ವಿಂಚಿ—ಶತಮಾನಗಳ ಚರಿತ್ರೆಯಲ್ಲಿ ಹೊಳೆಯುವ ತಾರೆಗಳು : ಒಟ್ಟು ಮನುಷ್ಯ ಕುಲದ ಹೆಮ್ಮೆ. ಭೂಮಿಯನ್ನು ರಕ್ತದಿಂದ ತೋಯಿಸಲು ಸಿದ್ಧವಾಗಿ ನಿಂತ ಸೈನ್ಯಗಳ ಮಧ್ಯೆ ತಾತ್ತ್ವಿಕ ಪ್ರವಚನ ನಡೆಸಿದ ಶ್ರೀ ಕೃಷ್ಣ. ಅಪೊಲೊ 13ರ ಯಾತ್ರಿಗಳು ಸಾವಿನ ಬಾಯಿಯನ್ನು ಹೊಕ್ಕು ಹಿಂದಿರುಗುವಾಗಲೆ ಮುಂದಿನ ಚಂದ್ರಉಪಗ್ರಹ ಯಾತ್ರೆಗೆ ಸಿದ್ಧತೆಮಾಡಿಕೊಳ್ಳುವ ವ್ಯೋಮಯಾತ್ರಿಗಳು ಮಾನವನ ಚರಿತ್ರೆಯ ಸಾರವೇ ಜೀವಂತವಾದ ಮೂರ್ತಿಗಳು.

ಒಂದು ಗ್ರಹದಿಂದ ಇನ್ನೊಂದು ಗ್ರಹಕ್ಕೆ ಯಾತ್ರೆ ಮಾಡುವುದರ ಪ್ರಾರಂಭ, ಜೀವಿಗಳು ನೀರಿನಿಂದ ನೆಲಕ್ಕೆ ಬಂದಷ್ಟೆ ಕ್ರಾಂತಿಕಾರಿ. ಜೀವಿಗಳು ನೀರಿನಿಂದ ನೆಲಕ್ಕೆ ಬಾರದಿದ್ದರೆ. ಅಗ್ನಿಯ ಬಳಕೆ ಇಲ್ಲ. ಲೋಹಗಳನ್ನೂ ನೆಲದಿಂದ ತೆಗೆಯುವಂತಿಲ್ಲ, ಮನೆಗಳನ್ನು ಕಟ್ಟುವಂತಿಲ್ಲ. ಗಾಳಿಯಲ್ಲಿ ಹಾರುವಂತಿಲ್ಲ ; ಮನುಷ್ಯನ ನಾಗರಿಕತೆಯ ಸಾಧನೆಯೇ ಸಾಧ್ಯವಾಗುತ್ತಿರಲಿಲ್ಲ. ಗ್ರಹದಿಂದ ಗ್ರಹಕ್ಕೆ ಸಾಗುವ ಸಾಧ್ಯತೆ ಹೀಗೆಯೇ ಮನುಷ್ಯನ ನಾಗರಿಕತೆಯನ್ನೇ. ಜೀವನ ವಿಧಾನವನ್ನೇ ಬದಲಿಸಬಹುದು. ಅಲ್ಲಿ ವಾಸಿಸುವ ಮನುಷ್ಯರು ಅಲ್ಲಿನ ಆವರಣಕ್ಕೆ ಹೊಂದಿಕೊಳ್ಳಬೇಕು. ಇದರಿಂದ ಎಂಥೆಂಥ ಬದಲಾವಣೆಗಳಾಗುವುವೊ, ಮನುಷ್ಯನಲ್ಲಿ ಹುದುಗಿರುವ ಯಾವ ಶಕ್ತಿಗಳು ಪ್ರಕಾಶಕ್ಕೆ ಬರುವುವೊ ! ಅಲ್ಲಿ ಯಾವ ಲೋಹಗಳು ದೊರೆಯುತ್ತವೆಯೊ. ಯಾವ ಚೈತನ್ಯಮೂಲಗಳನ್ನು ಮನುಷ್ಯನಿಗಾಗಿ ಆ ಗ್ರಹಗಳು ಕೋಟ್ಯಂತರ ವರ್ಷಗಳಿಂದ ಕಾದಿಟ್ಟುಕೊಂಡಿವೆಯೊ ಬಲ್ಲವರಾರು ? ಪರಮಾಣುವನ್ನೊಡೆದು ಅದರ ಭಯಂಕರ ಚೈತನ್ಯವನ್ನು ಪಳಗಿಸಿದ ಮಾನವ ಜಗತ್ತನ್ನು ಹೇಗೆ ಬದಲಿಸುವನೊ ಹೇಳುವಂತಿಲ್ಲ. ಗಾಜಿನ ಕೊಳವೆಗಳಲ್ಲಿ ಜೀವಿಗಳನ್ನು ಸೃಷ್ಟಿಸುವುದು, ಹೃದಯ–ಯಕೃತ್ತು–ಮೂತ್ರಪಿಂಡ ಹೀಗೆ ಮುಖ್ಯವಾದ ಅಂಗಗಳನ್ನು ಬದಲಿ ಜೋಡಿಸುವುದು. ಅನುವಂಶಿಕವಾಗಿ ಗುಣಗಳನ್ನು ಒಯ್ಯುವ ಜೀನಿಗಳನ್ನು ಹತೋಟಿಗೆ ಒಳಪಡಿಸುವುದು ಇವೆಲ್ಲ ಇನ್ನೂ ಯಶಸ್ವಿಯಾದರೆ ಮನುಷ್ಯನ ಶಕ್ತಿ ಎಷ್ಟರಮಟ್ಟಿಗೆ ಬೆಳೆದೀತು! ನೆನೆದರೆ ಪುಳಕಿತಗೊಳಿಸುವ ಅದ್ಭುತ ಕ್ರಾಂತಿಯ ಅರುಣೋದಯ ಕಾಣುತ್ತಿದೆ. ಹೊಸ ಹೊಸ ದಿಗಂತಗಳಲ್ಲಿ ಮಾನವನ ದೃಷ್ಟಿ ನೆಟ್ಟಿದೆ. ಮನುಕುಲದ ಕಥೆಯಲ್ಲಿ ಒಂದು ಅಧ್ಯಾಯ ಮುಗಿದು, ಇನ್ನೊಂದು ರೋಮಾಂಚಕಾರಕ ಭವ್ಯ ಅಧ್ಯಾಯ ಪ್ರಾರಂಭವಾಗಲಿದೆ.

"ಮನುಷ್ಯನೂ ಒಂದು ಪ್ರಾಣಿಯಷ್ಟೆ" ಎಂದು ಒಮ್ಮೊಮ್ಮೆ ಹೇಳುವುದುಂಟು. ಈತನೂ ಪ್ರಾಣಿಯೆ ; ಪ್ರಾಣಿಗಳ ದೇಹಕ್ಕೂ ಇವನ ದೇಹಕ್ಕೂ ಹಲವು ಸಾಮ್ಯಗಳುಂಟು. ವಿಜ್ಞಾನಿಗಳು ಮಾನವನನ್ನು 'ಸಸ್ತನಿ'ಗಳ ವರ್ಗಕ್ಕೆ ಸೇರಿಸುತ್ತಾರೆ. ಅವುಗಳ ಸ್ವಭಾವದ ಹಲವು ಅಂಶಗಳು ಇವನ ಸ್ವಭಾವದಲ್ಲಿ ಸೇರಿಕೊಂಡಿವೆ. ರವೀಂದ್ರರೊಮ್ಮೆ ಹೇಳಿದರು, "ಮನುಷ್ಯ ಪ್ರಾಣಿಯಾದಾಗ ಅವನೇ ಅತ್ಯಂತ ಕೀಳು ಪ್ರಾಣಿ", ಎಂದು. ಕ್ರೌರ್ಯದಲ್ಲಿ ಹುಲಿಯನ್ನು ಮೀರಿಸಬಲ್ಲ, ಯುಕ್ತಿಯಲ್ಲಿ ನರಿಯನ್ನು ಮೀರಿಸಬಲ್ಲ, ಇತರರ ರಕ್ತಹೀರುವುದರಲ್ಲಿ ತಿಗಣೆ ಸೊಳ್ಳೆಗಳನ್ನು ಮೀರಿಸಬಲ್ಲ. ಆದರೆ ಇವನೇ ತನ್ನನ್ನು ತಿದ್ದಿಕೊಳ್ಳಲು ಶಿಕ್ಷಣ ಕ್ರಮವನ್ನು ಯೋಚಿಸುತ್ತಾನೆ. ಈ ಪ್ರಾಣಿಯೇ ತತ್ತ್ವಶಾಸ್ತ್ರ. ಕಾನೂನು. ನೀತಿ. ಧರ್ಮ ಎಲ್ಲವನ್ನು ಸೃಷ್ಟಿಸಿದ್ದಾನೆ. ಈ ಪ್ರಾಣಿಯಲ್ಲಿಯೇ ನ್ಯಾಯಕ್ಕಾಗಿ ಹೋರಾಡುವ ನಿಷ್ಠೆ ಇದೆ. ನ್ಯಾಯದ ಕಲ್ಪನೆ ಇರುವುದು ಮನುಷ್ಯನಿಗೆ ಮಾತ್ರ ತಾನೆ ? ಸಾಮ್ರಾಜ್ಯವನ್ನೇ ಮುಷ್ಟಿಯಲ್ಲಿಟ್ಟುಕೊಂಡ ಕ್ರೂರಿಯನ್ನು ಪ್ರತಿಭಟಿಸುತ್ತಾನೆ, ತನ್ನಮತವೆ ದೊಡ್ಡದು ಎಂದು ಬೀಗುವ ಅಹಂಕಾರಿಯನ್ನು ಪ್ರತಿಭಟಿಸುತ್ತಾನೆ. ತನ್ನ ಲಾಭಕ್ಕಾಗಿ ಕಾರ್ಮಿಕರನ್ನು ದುಡಿಸಿ ಅವರ ನೋವಿನ ಕಾರಖಾನೆಯನ್ನೇ ಟಂಕಸಾಲೆ ಮಾಡಿಕೊಂಡ ಶ್ರೀಮಂತನನ್ನು ಆತ ಪ್ರತಿಭಟಿಸುತ್ತಾನೆ. ಆನೆಯಿಂದ ತುಳಿಸಲಿ, ವಿಷ ಕುಡಿಸಲಿ, ಗುಂಡಿಡಲಿ, ಶಿಲುಬೆಗೆ ಹೊಡೆಯಲಿ, ಬೆಂಕಿಗೆ ತಳ್ಳಲಿ–ನ್ಯಾಯಕ್ಕಾಗಿ ತನ್ನ ಸ್ವರ ಎತ್ತುತ್ತಾನೆ. ಕೈ ಎತ್ತುತ್ತಾನೆ; ಯುದ್ಧದಲ್ಲಿ ತೊಡಗಿದರೂ ಅಂತರರಾಷ್ಟ್ರೀಯ ನ್ಯಾಯ–ಶಾಂತಿಗಳಿಗೆ ದಾರಿ ಹುಡುಕುತ್ತಾನೆ; ಅಂತರರಾಷ್ಟ್ರೀಯ ವ್ಯಾಪಾರವನ್ನು ಬಲಗೊಳಿಸುತ್ತಾನೆ. ನಿಸರ್ಗದ ರಹಸ್ಯಗಳನ್ನು ಒಡೆಯಲು ಯತ್ನಿಸುತ್ತಾನೆ. ನಿಸರ್ಗದ ಪ್ರಭುವಾಗಲೆಳಸುತ್ತಾನೆ, ಜಗತ್ತಿನ ಮೂಲೆ ಮೂಲೆಗಳಲ್ಲಿ ಕಾಲಿಡುತ್ತಾನೆ, ಸಾಮ್ರಾಜ್ಯಗಳನ್ನು ಕಟ್ಟುತ್ತಾನೆ. ಉರುಳಿಸುತ್ತಾನೆ. ಉರುಳಿದ ಸಾಮ್ರಾಜ್ಯಗಳನ್ನು ಅಧ್ಯಯನ ಮಾಡುತ್ತಾನೆ. ಜೀವನದ ರಹಸ್ಯದ ಮುಂದೆ ಮೂಕನಾಗಿ ಆತ್ಮವನ್ನರಸುತ್ತಾನೆ. ಪರಮಾತ್ಮನನ್ನು ಅರಸುತ್ತಾನೆ. ಪ್ರಾಚೀನ ಪ್ರಪಂಚದ ಏಳು ಅದ್ಭುತಗಳನ್ನು ಸೃಷ್ಟಿಸಿದವನೂ ಇವನೆ. ಇಂದಿನ ಪ್ರಪಂಚದ ಲೆಕ್ಕವಿಲ್ಲದ ಅದ್ಭುತಗಳ ಸೃಷ್ಟಿಕರ್ತನೂ ಇವನೆ. ಎಲ್ಲ ಅದ್ಭುತಗಳನ್ನು ಮೀರಿದ ಅದ್ಭುತ, ಅಚ್ಚರಿಗಳಲ್ಲಿ ಅಚ್ಚರಿ–ಈ ಮಾನವ.

ಒಬ್ಬ ಖಗೋಳಶಾಸ್ತ್ರಜ್ಞ ಇನ್ನೊಬ್ಬನಿಗೆಂದನಂತೆ : "ದೂರದರ್ಶಕದಿಂದ ಗ್ರಹಗಳಾಚೆ ಗ್ರಹಗಳು. ಸೂರ್ಯನಾಚೆ ಸೂರ್ಯರನ್ನು ಕಾಣುವಾಗ ಎನ್ನಿಸುತ್ತದೆ. ಮನುಷ್ಯ ಎಷ್ಟು ಸಣ್ಣ ಅಮುಖ್ಯ ಪ್ರಾಣಿ ಎಂದು". ಎರಡನೆಯವನು ಉತ್ತರಿಸಿದನಂತೆ: "ಹೌದು. ಆದರೆ ಆ ದೂರದರ್ಶಕದ ಮೂಲಕ ನೋಡುವವನು ಮನುಷ್ಯ."

**ಎಲ್. ಎಸ್. ಶೇಷಗಿರಿ ರಾವ್**



ಕನ್ನಡ ವರ್ಣಮಾಲೆಯ ಮೊದಲ ಅಕ್ಷರ ಅ. ಇದರ ಅತ್ಯಂತ ಹಳೆಯ ರೂಪ ಕ್ರಿ. ಪೂ. ಮೂರನೆಯ ಶತಮಾನದ ಅಶೋಕನ ಬ್ರಾಹ್ಮೀ ಲಿಪಿಯ ಶಾಸನಗಳಲ್ಲಿದೆ. ಆ ಶಾಸನಗಳಲ್ಲಿರುವ 'ಅ' ಅಕ್ಷರದ ರೂಪಕ್ಕೂ ಈಗ ನಾವು ಬಳಸುವ 'ಅ' ಅಕ್ಷರದ ರೂಪಕ್ಕೂ ಬಹಳ ವ್ಯತ್ಯಾಸ. ಐದನೆಯ ಶತಮಾನದ ಹೊತ್ತಿಗೆ ಕದಂಬರ ಕಾಲದಲ್ಲಿ 'ಅ' ಅಕ್ಷರಕ್ಕೆ ಚೌಕಾಕಾರದ ತಲೆಕಟ್ಟು ಬಂದಿತು. ಒಂಬತ್ತನೆಯ ಶತಮಾನದಲ್ಲಿ ರಾಷ್ಟ್ರಕೂಟರ ಕಾಲದಲ್ಲಿ ವೃತ್ತಾಕಾರದ ರೇಖೆ ಕಾಣಿಸಿತು.

ಈಗ ನಾವು ಬರೆಯುವ ರೂಪವನ್ನು 'ಅ' ಅಕ್ಷರ ತಾಳಿದ್ದು ಹದಿನೆಂಟನೆಯ ಶತಮಾನದಲ್ಲಿ. ಕನ್ನಡದಲ್ಲಿ 'ಅ' ಹ್ರಸ್ವ ಸ್ವರ.

**ನೋಡಿ :** ವರ್ಣಮಾಲೆ

## ಅಂಕಿ

ಬೆಳಗಿನಿಂದ ಸಂಜೆಯವರೆಗೆ ಅಂಕಿಗಳನ್ನು ಬಳಸುತ್ತಲೇ ಇರುತ್ತೇವೆ. ಅಂಕಿಗಳಿಲ್ಲದೆ ಬದುಕುವುದು ಹೇಗೆ ಎನ್ನಿಸುತ್ತದೆ. "ಒಂದು ಕಪ್ಪು ಕಾಫಿ ಕೊಡಿ," "ಎಂಟು ದಿನಗಳಲ್ಲಿ ಬರುತ್ತೇನೆ," "ಸೂರ್ಯನಿಂದ ಭೂಮಿಗೆ ಸುಮಾರು ಹದಿನೈದು ಕೋಟಿ ಕಿ.ಮೀ. ದೂರ." ಸಣ್ಣ ವಿಷಯ, ಗಹನ ವಿಷಯ, ಎಲ್ಲದರೊಡನೆ ನಂಟು ಸಂಖ್ಯೆಗಳಿಗೆ.

ಇಷ್ಟು ಅಗತ್ಯವಾದ ಸಂಖ್ಯೆಗಳನ್ನು ಪ್ರಪಂಚದ ವಿವಿಧ ಭಾಗಗಳಲ್ಲಿ ಬೇರೆ ಬೇರೆ ಗುಂಪುಗಳು ಸ್ವತಂತ್ರವಾಗಿ ಕಂಡುಹಿಡಿದುದರಲ್ಲಿ ಆಶ್ಚರ್ಯವಿಲ್ಲ. ಆದರೆ ಸಂಖ್ಯೆಗಳನ್ನು ಸೂಚಿಸುವ ರೀತಿ ವಿಧ ವಿಧ. ಜೂಲುಗಳಲ್ಲಿ 'ಆರು' ಎನ್ನುವುದಕ್ಕೆ, ಹೆಬ್ಬೆಟ್ಟು ಸೇರಿಸಿ ಎನ್ನುತ್ತಾರೆ; ಹೇಗೆಂದರೆ, ಒಂದು ಕೈಯಿನ ಬೆರಳುಗಳನ್ನೆಣಿಸಿ ಇನ್ನೊಂದು ಕೈಯ ಹೆಬ್ಬೆಟ್ಟಿನಿಂದ ಪ್ರಾರಂಭಮಾಡಿದೆ ಎಂದು. ಒಂದೆ ಲೆಕ್ಕಕ್ಕೆ ಬೆರಳುಗಳೆ ಸಾಧನ. ಆ ವಿಧಾನ ಮಾಯವಾದರೂ 45, 93 ಹೀಗೆ ಸಂಖ್ಯೆಗಳನ್ನು ಬರೆಯುವಾಗ ಅದರ ಪ್ರಭಾವ ಕಾಣುತ್ತೇವೆ. 45 ಎಂದಾಗ $4 \times 10$ಕ್ಕೆ 5 ಸೇರಿಸಿ, ಎಂದು ತಾನೆ ?

ಒಂದರಿಂದ ಒಂಬತ್ತರವರೆಗಿನ ಅಂಕಿಗಳು ಬೇರೆ ಬೇರೆ ಪ್ರಮಾಣಗಳನ್ನು ಸೂಚಿಸುತ್ತವೆ. ಸೊನ್ನೆ ಯಾವ ಪ್ರಮಾಣವೂ ಇಲ್ಲದಿರುವುದನ್ನು ನಿರೂಪಿಸುತ್ತದೆ. ಯಾವುದೇ ಸಂಖ್ಯೆಯನ್ನಾದರೂ ಅಂಕಿಗಳನ್ನು ಬಳಸಿ ಅನುಮಾನ ಬಾರದಂತೆ ಸ್ಪಷ್ಟವಾದ ರೀತಿಯಲ್ಲಿ ಬರೆಯಬಹುದು.

ಅಂಕಿಗಳನ್ನು ಬರೆಯುವುದು ಪ್ರಾರಂಭವಾದಾಗ, ಸಂಖ್ಯೆಗೊಂದು ಗೆರೆ ಎಳೆಯುತ್ತಿದ್ದರು. ಆದರೆ ದೊಡ್ಡ ಸಂಖ್ಯೆ ಬರೆಯುವುದು ಇದರಲ್ಲಿ ತೊಂದರೆ. ಇದರಿಂದ ಬೇರೆ ಬೇರೆ ದೇಶಗಳಲ್ಲಿ ಹತ್ತು, ನೂರು, ಸಾವಿರ ಇವುಗಳನ್ನು ಸೂಚಿಸಲು ಬೇರೆ ಬೇರೆ ಸಂಕೇತಗಳು ಬಂದುವು.

ಪ್ರಪಂಚದ ಅತ್ಯಂತ ಪ್ರಾಚೀನ ಅಂಕಿಗಳು ಕ್ರಿ. ಪೂ. 3500ರ ಸುಮಾರಿನ ಈಜಿಪ್ಟಿನ ಬರವಣಿಗೆಯಲ್ಲಿ ಕಾಣಸುತ್ತವೆ. ಅದೇ ಸಮಯದ ಸಿಂಧೂ ನಾಗರಿಕತೆ ಲಿಪಿಯ ಬಗೆಗೆ ಇನ್ನೂ ಸಂಶೋಧನೆ ನಡೆಯುತ್ತಿರುವುದರಿಂದ ಅಂಕಿಗಳನ್ನು ಕುರಿತು ಹೆಚ್ಚಿಗೆ ತಿಳಿದುಬಂದಿಲ್ಲ. ಗ್ರೀಕ್ ವರ್ಣಮಾಲೆಯ ಪ್ರತಿಯೊಂದು ಅಕ್ಷರಕ್ಕೂ ಒಂದೊಂದು ಬೆಲೆ ಕೊಡಲಾಗಿತ್ತು. ಮೊದಲನೆಯ ಒಂಬತ್ತು ಅಕ್ಷರಗಳು ಒಂದು ಎರಡು ಮುಂತಾದ ಸಂಕೇತಗಳು. ಇನ್ನು ಒಂಬತ್ತು ಅಕ್ಷರಗಳು ಹತ್ತು ಇಪ್ಪತ್ತು ಮುಂತಾದ ಪ್ರಮಾಣಗಳನ್ನೂ ಕಡೆಯ ಒಂಬತ್ತು ಅಕ್ಷರಗಳು ನೂರು ಇನ್ನೂರು ಮುನ್ನೂರು ಮುಂತಾದ ಪ್ರಮಾಣಗಳನ್ನೂ ಸೂಚಿಸುತ್ತಿದ್ದುವು. ರೋಮನ್ ಅಂಕಿಗಳು ಬಹಳ ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿದ್ದು

ಕಿವುಡರಿಗೆ ಓದು ಕಲಿಸುವ ಮೊದಲ ಯತ್ನ ಹದಿನಾರನೆಯ ಶತಮಾನ ದಲ್ಲಿ ಸ್ಪೇನಿನ ಪೀದ್ರೊ ದ ಪಾನ್ ಎಂಬವನಿಂದ ನಡೆಯಿತು.

ಚಿಕ್ಕವಯಸ್ಸಿನಲ್ಲಿ ಪೋಲಿಯೊ ಬಂದರೆ ನಡೆಯುವ ಶಕ್ತಿಯನ್ನು ಕಾಲು ಕಳೆದುಕೊಳ್ಳುತ್ತದೆ. ಅಂಥ ಮಕ್ಕಳು ದಿನ ಕಳೆಯುವುದು ಹೇಗೆ ?

ಪೋಲಿಯೊ ಚಿಕಿತ್ಸಾ ಕೇಂದ್ರಗಳು ಪ್ರಪಂಚದಲ್ಲಿ ಅನೇಕ ಕಡೆ ಇವೆ. ಕಾಲಿಗೆ ಅಂಗಮರ್ದನ ಚಿಕಿತ್ಸೆ ಮಾಡುತ್ತಾರೆ. ಗುಣ ಕಾಣದಿದ್ದರೆ ಬಿಗಿಪಟ್ಟಿ ಹಾಕಿ ನೋಡುತ್ತಾರೆ. ಕೆಲವು ವೇಳೆ ಶಸ್ತ್ರ ಚಿಕಿತ್ಸೆಯನ್ನೂ ಮಾಡುತ್ತಾರೆ. ಆಗಲೂ ಊನವಾದದ್ದು ಸರಿಹೋಗದಿದ್ದರೆ ಊರುಗೋಲು ಹಿಡಿದು ನಡೆಯುವುದನ್ನು ಅಭ್ಯಾಸ ಮಾಡಿಸುತ್ತಾರೆ.

ಅಂಗವಿಕಲರಿಗೆ ಕೃತಕ ಅಂಗಾಂಗಗಳನ್ನು ಒದಗಿಸುವುದನ್ನು ವಿಜ್ಞಾನಿಗಳು ಸಾಧಿಸಿದ್ದಾರೆ. ವೈದ್ಯರು ಈ ಅಂಗಾಂಗಗಳನ್ನು ಸರಿಯಾಗಿ ಕೂಡಿಸಿ, ಅಂಗವಿಕಲರಿಗೆ ನೆರವಾಗುತ್ತಾರೆ.

ಈಗ ಅಂಗವಿಕಲರಾಗಲಿ ಅವರ ಪೋಷಕರಾಗಲಿ ಚಿಂತಿಸಬೇಕಾಗಿಲ್ಲ. ಅಂಗವಿಕಲರ ಸಾಮರ್ಥ್ಯ ಮತ್ತು ಮನೋಧರ್ಮಗಳಿಗೆ ಅನುಗುಣವಾಗಿ ವೃತ್ತಿ ಶಿಕ್ಷಣ ಕೊಡಲಾಗುತ್ತದೆ.

ಪಾಶ್ಚಾತ್ಯ ದೇಶಗಳಲ್ಲಿ ಅಂಗವಿಕಲರಿಗೆ ವಿಶೇಷ ಸೌಲಭ್ಯಗಳಿವೆ. ಅವರಿಗಾಗಿ ಕೇಂದ್ರಗಳು ಹತ್ತೊಂಬತ್ತನೆಯ ಶತಮಾನದ ಕೊನೆ ಕೊನೆಗೆ ಕೆಲಸ ಮಾಡಲಾರಂಭಿಸಿದುವು. 1889ರಲ್ಲಿ ಅಮೆರಿಕ ಸಂಯುಕ್ತ ಸಂಸ್ಥಾನದ ಕ್ಲೀವ್‌ಲೆಂಡಿನಲ್ಲಿ ಇಂಥ ಕೇಂದ್ರ ಪ್ರಥಮವಾಗಿ ಆರಂಭವಾಯಿತು. ಅಮೆರಿಕ ಸಂಯುಕ್ತ ಸಂಸ್ಥಾನ, ಬ್ರಿಟನ್‌ಗಳಲ್ಲಿ ಆರಂಭವಾದ ಕಾರ್ಯ ಯೂರೋಪಿನ ಇತರ ದೇಶಗಳಿಗೂ ಹರಡಿತು. ಎರಡು ಮಹಾಯುದ್ಧಗಳು ನಡೆದು ಲಕ್ಷಾಂತರ ಮಂದಿ ಅಂಗಗಳನ್ನು ಕಳೆದುಕೊಂಡರು. ಅಂಗವಿಕಲರು ಪುನಃ ನೆಲೆಸುವಂತೆ ಮಾಡುವ ವ್ಯವಸ್ಥೆಗೆ ಗಮನ ಕೊಡಬೇಕಾಯಿತು.

ವಿಶ್ವಸಂಸ್ಥೆ, ವಿಶ್ವ ಆರೋಗ್ಯ ಸಂಸ್ಥೆ ಮತ್ತು ಅಂತರರಾಷ್ಟ್ರೀಯ ಕಾರ್ಮಿಕ ಸಂಘಗಳು ಅಂಗವಿಕಲರಿಗಾಗಿ ಯೋಜನೆಗಳನ್ನು ರೂಪಿಸಿವೆ. ಅಂಗವಿಕಲರ ಏಳಿಗೆಗಾಗಿ ದುಡಿಯಬಯಸುವ ವೈದ್ಯರು, ಮನಶ್ಶಾಸ್ತ್ರಜ್ಞರು ಮತ್ತು ದಾದಿಯರಿಗೆ ತರಬೇತಿ ಕೊಡಲು ಸಂಸ್ಥೆಗಳನ್ನು ತೆರೆಯಲಾಗಿದೆ. ಅಂತರರಾಷ್ಟ್ರೀಯ ಅಂಗವಿಕಲ ಕ್ಷೇಮಾಭ್ಯುದಯ ಸಮ್ಮೇಳನ ಮೂವತ್ತು ಸದಸ್ಯ ಸಂಸ್ಥೆಗಳನ್ನು ಹೊಂದಿದೆ.

ಬೆಂಗಳೂರಿನ ಸೇಂಟ್ ಮಾರ್ಥಾ ಆಸ್ಪತ್ರೆಯಲ್ಲಿ ಅಂಗವಿಕಲರಿಗೆ ಕೃತಕ ಅಂಗಾಂಗಗಳನ್ನು ಜೋಡಿಸುವ ಕೇಂದ್ರ ಸ್ಥಾಪಿಸಿದ್ದಾರೆ. ಬಡವರಿಗೆ ಉಚಿತವಾಗಿಯೂ ಜೋಡಿಸುತ್ತಾರೆ. ಮಂಗಳೂರಿನಲ್ಲೂ ಇಂಥ ಕೇಂದ್ರವಿದೆ. ಮುಂಬಯಿ, ಪುಣೆ ಮತ್ತು ಮದರಾಸುಗಳಲ್ಲಿಯೂ ಕೃತಕ ಅಂಗಾಂಗಗಳನ್ನು ಜೋಡಿಸುವ ಕೇಂದ್ರಗಳಿವೆ.

ಅಂಗವಿಕಲರಿಗೆ ತಾವು ಇತರರಿಗಿಂತ ಕೀಳು, ಇತರರಿಗೆ ಹೊರೆ ಎಂಬ ಭಾವನೆ ಬಾರದಂತೆ ನೋಡಿಕೊಳ್ಳುವುದು ಅತಿ ಮುಖ್ಯ. ಒಂದು ಅಥವಾ ಎರಡು ಅಂಗಗಳಿಲ್ಲದ ಮಾತ್ರಕ್ಕೆ ನಿಷ್ಪ್ರಯೋಜಕರು ಎಂಬ ಭಾವನೆ ಉಂಟಾಗಬಾರದು. ಸರಿಯಾದ ಮಾರ್ಗದರ್ಶನ, ನೆರವು ದೊರೆತರೆ ಅಂಗವಿಕಲರೂ ಇತರರಂತೆ ಬಾಳಬಲ್ಲರು.

## ಅಂಗೋಲ

ಪಶ್ಚಿಮ ಆಫ್ರಿಕದಲ್ಲಿನ ಅಂಗೋಲ ಪೋರ್ಚುಗೀಸರ ಅಧೀನದಲ್ಲಿರುವ ಪ್ರದೇಶ. ಇದರ ವಿಸ್ತೀರ್ಣ 7,74,494 ಚದರ ಕಿಲೊಮೀಟರುಗಳು. ಹದಿನೈದನೆಯ ಶತಮಾನದ ಕೊನೆಗೆ ಪೋರ್ಚುಗೀಸರು ಇಲ್ಲಿಗೆ ಬಂದು ನೆಲೆಸಿದರು. ಅಂದಿನಿಂದಲೂ ಅಂಗೋಲದಲ್ಲಿ ಅವರದೇ ಅಧಿಕಾರ. ಸಮುದ್ರ ತೀರದಲ್ಲಿ ಪೋರ್ಚುಗೀಸರ ವಸತಿ ಹೆಚ್ಚು. ಒಳನಾಡು ದಟ್ಟವಾದ [illegible] ಜನವಸತಿ [illegible].

ತೀರಪ್ರದೇಶದಲ್ಲಿ ಮಳೆ ಕಡಮೆ. ಉಷ್ಣಾಂಶ ಹೆಚ್ಚು. ಒಳಗಿನ ಕಡೆ ಮಳೆ ಹೆಚ್ಚು. ಉಷ್ಣಾಂಶ ಕಡಮೆ.

ಖನಿಜ ಸಂಪತ್ತು ಅಪಾರ. ವಜ್ರ, ಕಲ್ಲಿದ್ದಲು, ತಾಮ್ರ, ಪೆಟ್ರೋಲಿಯಂ ಎಲ್ಲವೂ ಹೇರಳವಾಗಿದೆ.

ಹತ್ತಿ, ಜೋಳ, ಕಾಫಿ, ಕತ್ತಾಳೆ, ಕಬ್ಬು, ಕೋಕೋ, ಭತ್ತ, ರಬ್ಬರ್, ಹೊಗೆಸೊಪ್ಪು, ಕಿತ್ತಳೆಜಾತಿಯ ಜಂಬೀರ ಫಲ ಇವನ್ನು ಬೆಳೆಯುತ್ತಾರೆ. ಮೀನು ಅಲ್ಲಿನ ಜನರ ಮುಖ್ಯ ಆಹಾರ. ದನ, ಕುರಿ, ಆಡುಗಳನ್ನು ಸಾಕುತ್ತಾರೆ.

ಅಂಗೋಲದಲ್ಲಿ ಸುಮಾರು ಐವತ್ತು ಲಕ್ಷ ಬಂಟೂ ಮತ್ತು ನೀಗ್ರೊ ಮೂಲನಿವಾಸಿಗಳಿದ್ದಾರೆ. ಎರಡು ಲಕ್ಷ ಜನ ಪೋರ್ಚುಗೀಸರಿದ್ದಾರೆ. ಹತ್ತೊಂಬತ್ತನೆಯ ಶತಮಾನದವರೆಗೆ ಅಂಗೋಲದಿಂದ ಅಲ್ಲಿನ ಜನರನ್ನು ಪೋರ್ಚುಗೀಸರು ಬ್ರೆಜಿಲ್‌ನಲ್ಲಿರುವ ತೋಟಗಳಿಗೆ ಗುಲಾಮರಾಗಿ ದುಡಿಯಲು ಕಳುಹಿಸುತ್ತಿದ್ದರು.

ರಾಜಧಾನಿ ಲೊಆಂಡ 1575ರಲ್ಲಿ ಪೋರ್ಚುಗೀಸರಿಂದ ಸ್ಥಾಪಿಸಲ್ಪಟ್ಟಿತು. ಲೊಬೀಟು, ಬೆನ್‌ಗೆಲ, ಮೊಕಾಮೆಡಿಸ್ ಅಂಗೋಲದ ಮುಖ್ಯ ಬಂದರುಗಳು.

ಅಂಗೋಲದ ಜನ ಸ್ವಾತಂತ್ರ್ಯಕ್ಕಾಗಿ ತವಕಪಡುತ್ತಿದ್ದಾರೆ. ಹೋರಾಡುತ್ತಿದ್ದಾರೆ. ಪೋರ್ಚುಗೀಸರು ಮಾತ್ರ, ಗೋವಾ ಕೈಬಿಟ್ಟ ಮೇಲೆ ಅಂಗೋಲಕ್ಕೆ ಮತ್ತಷ್ಟು ಅತುಕೊಂಡಿದ್ದಾರೆ. 1961ರಲ್ಲಿ ಬಂಡಾಯ ಆರಂಭವಾಯಿತು. ವಿಶ್ವಸಂಸ್ಥೆಯ ಸರ್ವಸದಸ್ಯರ ಮಹಾಸಭೆಯಲ್ಲಿ ಈ ವಿಷಯ ಚರ್ಚೆಗೆ ಬಂತು. ಪರಿಣಾಮವಾಗಿ ಅಂಗೋಲದ ಜನರಿಗೆ ಪೂರ್ಣ ಪೋರ್ಚುಗೀಸ್ ಪೌರತ್ವ ದೊರೆಯಿತು. ಆದರೆ ಪೂರ್ಣ ಸ್ವಾತಂತ್ರ್ಯ ಇನ್ನೂ ಲಭಿಸಿಲ್ಲ.

| | |
|---|---|
| ಖಂಡ | : ಆಫ್ರಿಕ (ಪಶ್ಚಿಮ) |
| ಅಕ್ಷಾಂಶ | : 12° ದ ರಿಂದ 18° ದ |
| ರೇಖಾಂಶ | : 12°30' ಪೂ ರಿಂದ 24° ಪೂ |
| ವಿಸ್ತೀರ್ಣ | : 7,74,494 ಚ. ಕಿ.ಮೀ. |
| ಜನಸಂಖ್ಯೆ | : ಸುಮಾರು 52,00,000 |
| ರಾಜಧಾನಿ | : ಲೊಆಂಡ |
| ಭಾಷೆ | : ಪೋರ್ಚುಗೀಸ್ |

## ಅಂಚೆ

'ಪೋಸ್ಟ್!'

ಎಂಥ ಮಾಂತ್ರಿಕ ಶಕ್ತಿ ಇದೆ ಆ ಕೂಗಿನಲ್ಲಿ! ದೊಡ್ಡವರು, ಚಿಕ್ಕವರು, ಕಾತರದಿಂದ ಕಾಯುತ್ತಾರೆ ಅಂಚೆಯವನು ತರುವ ಕಾಗದಕ್ಕಾಗಿ.

ಅಂಚೆ, ಹಂಸ ಎಂಬುದರ ತದ್ಭವ. ಹಂಸವನ್ನು ಸಂದೇಶ ಒಯ್ಯುವ ಪಕ್ಷಿಯೆಂದು ನಮ್ಮ ಪುರಾಣ ಕಥೆಗಳಲ್ಲಿ ವರ್ಣಿಸಲಾಗಿದೆ. ಹಂಸ ಪಕ್ಷಿ ಪ್ರೇಮಸಂದೇಶಗಳನ್ನು ಕೊಂಡೊಯ್ಯುವ ಸನ್ನಿವೇಶ ನಳ ದಮಯಂತಿ ಕಥೆಯಲ್ಲಿದೆ.

ಪ್ರಪಂಚದ ಮೊದಲ ಓಲೆಕಾರರು ಬ್ಯಾಬಿಲೋನಿಯ ಸಾಮ್ರಾಜ್ಯದಲ್ಲಿ 4,000 ವರ್ಷಗಳ ಹಿಂದೆ ಮಣ್ಣಿನ ಫಲಕಗಳನ್ನು ಕೊಂಡೊಯ್ಯುತ್ತಿದ್ದರು. ಸುಮಾರು ಇದೇ ಕಾಲದಲ್ಲಿ ಈಜಿಪ್ಟಿನಲ್ಲಿಯೂ ದೂತರ ಮೂಲಕ ಓಲೆಗಳನ್ನು ಕಳುಹಿಸುವ ವ್ಯವಸ್ಥೆ ಇದ್ದಿತು. ಕ್ಷಿಪ್ರಗಾಮಿಗಳೂ ಧೈರ್ಯಶಾಲಿಗಳೂ ಆದ ಈ ಓಲೆಕಾರರ ಹೊರೆಯ ತೂಕ ಹೆಚ್ಚು. ಮುಂದೆ ಕಂಚಿನ ಫಲಕಗಳನ್ನು ಕೊಂಡೊಯ್ಯಬೇಕಾಯಿತು. ಕುದುರೆಯ ಮೇಲೆ ಒಯ್ಯುವ ಅಂಚೆಯ ಇತಿಹಾಸ ದೀರ್ಘವಾದದ್ದು. ಕ್ರಿ.ಪೂ. ಆರನೆಯ ಶತಮಾನದಲ್ಲಿ ಪರ್ಷಿಯದ ಸೈರಸ್‌ದೊರೆ ಕುದುರೆಗಳ ಮೇಲೆ ಸಂಚರಿಸುವ ಓಲೆಕಾರರನ್ನು ನೇಮಿಸಿದ. ನೂರಾರು ಹರದಾರಿ, ಕಾಡು, ಮೇಡು, ಚಳಿ, ಗಾಳಿಯೆನ್ನದೆ, ಪ್ರಾಣದ ಹಂಗುದೊರೆದು ಈ ಓಲೆಕಾರರು ತಮ್ಮ ಕರ್ತವ್ಯ ಪಾಲಿಸುತ್ತಿದ್ದ ನಿದರ್ಶನಗಳಿವೆ. ಮೊದಲಿಗೆ ಇವರು ರಾಜ ಸಂದೇಶಗಳಿಗೆ ಮಾತ್ರ ದೂತರಾಗಿದ್ದರು.

ಕೊಲಂಬಸ್ ಅಮೆರಿಕವನ್ನು ಮುಟ್ಟುವ (ಹದಿನೈದನೆಯ ಶತಮಾನ) ಮೊದಲೆ, ಅಲ್ಲಿನ ನಿವಾಸಿಗಳು ಒಂದು ರೀತಿಯ ಅಂಚೆ ವ್ಯವಸ್ಥೆಯನ್ನು ಏರ್ಪಡಿಸಿಕೊಂಡಿದ್ದರು. ಒಂದು ಬಗೆಯ ಬೀಜದ ಮೇಲೆ ಗುರುತುಗಳನ್ನು ಮಾಡಿ ಸಂದೇಶಗಳನ್ನು ದೂತರ ಚೀಲಗಳಲ್ಲಿ ಕಳುಹಿಸುತ್ತಿದ್ದರು.

ಹಿಂದಿನಿಂದಲೂ ಬಳಕೆಯಲ್ಲಿರುವ ಇನ್ನೊಂದು ವ್ಯವಸ್ಥೆ—ತರಬೇತುಗೊಳಿಸಿದ ಪಾರಿವಾಳದ ಕೊರಳಿಗೆ ಸಂದೇಶ ಬರೆದ ಚೀಟಿಯನ್ನು ಕಟ್ಟಿ, ಪರಿಚಿತವಾದ ನಿರ್ದಿಷ್ಟ ಸ್ಥಳಕ್ಕೆ ಕಳುಹಿಸುವುದು.

ನಿಗದಿಯಾದ ದಿನಗಳಲ್ಲಿ ಅಂಚೆಯ ವಾಹಕರನ್ನು ಕಳುಹಿಸುವ ಏರ್ಪಾಡು ಮೊಟ್ಟ ಮೊದಲನೆಯ ಬಾರಿಗೆ ಆದದ್ದು ಪ್ರಾಯಶಃ ಫ್ರಾನ್ಸಿನಲ್ಲಿ. ಹನ್ನೊಂದನೆಯ ಲೂಯಿ 1461ರಲ್ಲಿ ಈ ವ್ಯವಸ್ಥೆ ಏರ್ಪಡಿಸಿದನಂತೆ.

ಇಂಗ್ಲೆಂಡ್ ಫ್ರಾನ್ಸ್‌ಗಳಲ್ಲಿ ಸಾರ್ವಜನಿಕರ ಕಾಗದಗಳನ್ನು ಒಯ್ಯುವ ಪದ್ಧತಿ ಜಾರಿಗೆ ಬಂದ ಅನಂತರ ಬಹು ವರ್ಷಗಳ ಕಾಲ, ಅಧಿಕಾರಿಗಳು ಎಲ್ಲ ಪತ್ರಗಳನ್ನೂ ಓದಿ ಕಳುಹಿಸುತ್ತಿದ್ದರು. 1830ರಲ್ಲಿ ಅಂಚೆ ಸಾಗಿಸುವ ಕೆಲಸ ರೈಲುಖಾತೆಗೆ ಬಂದಿತು. ಆ ವರ್ಷ ಇಂಗ್ಲೆಂಡಿನಲ್ಲಿ ಮ್ಯಾಂಚೆಸ್ಟರ್ ಲಿವರ್‌ಪೂಲ್‌ಗಳ ನಡುವೆ ಈ ವ್ಯವಸ್ಥೆಯಾಯಿತು. ಹೀಗೆ ಅಂಚೆಯ ಸಾಗಾಣಿಕೆ ಸ್ವಲ್ಪ ಮಟ್ಟಿಗೆ ಉತ್ತಮಗೊಂಡಿತು.

1837ರಲ್ಲಿ ಇಂಗ್ಲೆಂಡಿನ ರೋಲೆಂಡ್ ಹಿಲ್ ಎಂಬವನು ಅಂಚೆಯ ಸೌಕರ್ಯಕ್ಕೆ ಒಂದೇ ಸಮನಾದ ಶುಲ್ಕ ವಿಧಿಸುವ ಯೋಜನೆ ಮುಂದಿಟ್ಟಾಗ ಸಾರ್ವಜನಿಕರು ಅದಕ್ಕೆ ಬೆಂಬಲಕೊಟ್ಟರು. ಅದೇ ಇಂದಿನ ಅಂಚೆ ವ್ಯವಸ್ಥೆಗಳಿಗೆಲ್ಲ ಮೂಲವಾಗಿದೆ. ಇದರ ಒಂದು ಮುಖ್ಯ ಸುಧಾರಣೆಯೆಂದರೆ ಕಾಗದಗಳನ್ನು ಕಳುಹಿಸುವ ಮೊದಲೇ ಅವುಗಳಿಗೆ ತೆರಬೇಕಾದ ಶುಲ್ಕವನ್ನು ಕೊಡುವುದು; ಮತ್ತು ಅದಕ್ಕೆ ತಕ್ಕ ಇಂದಿನ ಅಂಚೆ ಚೀಟಿಗಳಂಥ ಕಾಗದದ ಚೀಟಿಗಳನ್ನೂ ವಿಶೇಷ ರೀತಿಯ ಲಕೋಟೆಗಳನ್ನೂ ಪಡೆದು, ಕಾಗದ ಪ್ಯಾಕೆಟ್ಟು ಕಳುಹಿಸುವುದು. 1840 ಮೇ 6ರಂದು ಗ್ರೇಟ್ ಬ್ರಿಟನ್ನಿನಲ್ಲಿ ಈ ವಿಧಾನ ಆರಂಭವಾಯಿತು.

ಭಾರತದಲ್ಲಿ 1766ರಲ್ಲಿ ಅಂಚೆ ಸೌಲಭ್ಯ ಮೊದಲಾಯಿತಾದರೂ ಜನಸಾಮಾನ್ಯನಿಗೆ ಈ ಅನುಕೂಲ ಒದಗಿದ್ದು 1837ರ ಅನಂತರವೇ. ಭಾರತದಲ್ಲಿ ಅಂಚೆ ಚೀಟಿಗಳ ವಿತರಣೆ 1825ರಲ್ಲಿ ಕರಾಚಿಯಲ್ಲಿ ಪ್ರಪ್ರಥಮವಾಗಿ ಆಯಿತು. 1830ರಲ್ಲಿ ಇಂಗ್ಲೆಂಡಿಗೂ ಭಾರತಕ್ಕೂ ನಡುವೆ ಅಂಚೆಯ ಸಾಗಾಟ ಆರಂಭವಾಯಿತು. 1869 ಅಕ್ಟೋಬರ್ 1ರಂದು ಪ್ರಪಂಚದಲ್ಲಿ ಮೊಟ್ಟಮೊದಲ ಬಾರಿಗೆ ಆಸ್ಟ್ರಿಯ ದೇಶದಲ್ಲಿ ಪೋಸ್ಟ್ ಕಾರ್ಡನ್ನು ಬಳಕೆಗೆ ತರಲಾಯಿತು.

ಚಿಕದೇವರಾಜ ಒಡೆಯರು ಮೈಸೂರು ರಾಜ್ಯದ ಆಡಳಿತ ಕ್ರಮವನ್ನು ರೂಪಿಸಿ ಹದಿನೆಂಟು ವಿಭಾಗಗಳನ್ನಾಗಿ ವಿಂಗಡಿಸಿದರು. 1701ರಲ್ಲಿ ಜಾರಿಗೆ ಬಂದ ಈ ವ್ಯವಸ್ಥೆಯಲ್ಲಿ 'ಬೇಹಿನ ಚಾವಡಿ' ಎಂಬುದು ಒಂದು. ಈ ಇಲಾಖೆಯ ಮೇಲಧಿಕಾರಿ ಅಂಚೆಬಕ್ಷಿ. ಈ ಪದ್ಧತಿ ರಾಜ್ಯದ ಆಡಳಿತಕ್ಕೆ ಸಂಬಂಧಪಟ್ಟ ವ್ಯವಹಾರಗಳಿಗೆ ಮಾತ್ರ ಸೀಮಿತವಾಗಿತ್ತು. ಈ ಅನುಕೂಲ ಸಾಮಾನ್ಯ ಜನರಿಗೆ ಲಭ್ಯವಾದದ್ದು ಕಮಿಷನರುಗಳ ಆಡಳಿತದಲ್ಲಿ. 1879ರಲ್ಲಿ ಈ ವ್ಯವಸ್ಥೆಯ ಪ್ರಯೋಜನಗಳು ಹಳ್ಳಿಹಳ್ಳಿಗೂ ಮುಟ್ಟಲೆಂದು, ಹೋಬಳಿ ಕೇಂದ್ರಗಳಲ್ಲಿ ಒಬ್ಬ ಉಪಾಧ್ಯಾಯ ಅಂಚೆಯ ಕೆಲಸವನ್ನು ವಹಿಸುವ ಕ್ರಮ ಆಚರಣೆಗೆ ಬಂದಿತು. ಮೈಸೂರಿನ ಅಂಚೆಪದ್ಧತಿ 1889ರಲ್ಲಿ, ಭಾರತ ಸರ್ಕಾರದ ಆಗಿನ ಇಂಪೀರಿಯಲ್ ಪೋಸ್ಟಲ್ ವ್ಯವಸ್ಥೆಯಲ್ಲಿ ವಿಲೀನಗೊಂಡಿತು. ಆಗಿನಿಂದ ಹಿಂದಿನ ಮೈಸೂರಿನ ರಾಜ್ಯದ ಅಂಚೆ ವ್ಯವಸ್ಥೆ ಮದರಾಸು ಪ್ರಾಂತದ ಅಂಚೆ–ತಂತಿ ವಿಭಾಗದ ವ್ಯಾಪ್ತಿಗೆ ಒಳಪಟ್ಟಿತು. ನವಮೈಸೂರಿನ ರಚನೆಯಾಗಿ ನಾಲ್ಕು ವರ್ಷಗಳಾದ ಬಳಿಕ – 1960 ಅಕ್ಟೋಬರ್ 1ರಂದು – ಮೈಸೂರು ರಾಜ್ಯದ ಅಂಚೆ ತಂತಿ ವ್ಯವಸ್ಥೆಯ ಪ್ರತ್ಯೇಕ ವಲಯ ರೂಪಿತವಾಯಿತು.

ಇಂದಿನ ಜಗತ್ತಿನಲ್ಲಿ ಅಂಚೆಯು ರೈಲುಗಾಡಿ, ಬಸ್ಸು, ಕಾರು, ವಿಮಾನ, ಹಡಗು, ಕಡೆಗೆ ಓಲೆಕಾರರ ಮೂಲಕವೂ ಸಾಗುತ್ತದೆ. ರೈಲುಗಾಡಿಯಲ್ಲಿ ಅಂಚೆ ಒಯ್ಯುವ ಪ್ರತ್ಯೇಕ ಡಬ್ಬಿಯಿದೆ. ಮರಳುಗಾಡಿನಲ್ಲಿ ಅಂಚೆಯನ್ನು ಒಂಟೆಯ ಮೇಲೆ ಹೊರಿಸಿ ಕಳುಹಿಸುತ್ತಾರೆ.

ಭಾರತದಲ್ಲಿ 1851 ಅಕ್ಟೋಬರ್‌ನಲ್ಲಿ ಕಲ್ಕತ್ತ ಮತ್ತು ಡೈಮಂಡ್ ಹಾರ್ಬರ್ ನಡುವೆ ಮೊದಲನೆಯ ಅಂಚೆ ತಂತಿ ಸುದ್ದಿ ಕಳುಹಿಸುವ ಏರ್ಪಾಟಾಯಿತು.

1911 ಫೆಬ್ರುವರಿ 18ರಂದು ವಿಮಾನ ಮೂಲಕ ಅಂಚೆಯನ್ನು ಉತ್ತರ ಭಾರತದಲ್ಲಿ ಸಾಗಿಸಲಾಯಿತು. ಸುಮಾರು ಹತ್ತು ಕಿಲೊಗ್ರಾಂಗಳಷ್ಟು ಭಾರವನ್ನು ನೈನಿಯಿಂದ ಅಲಹಾಬಾದಿಗೆ, ಮೂವತ್ತೆರಡು ಕಿಲೊಮೀಟರು ದೂರ, ವಿಮಾನದಲ್ಲಿ ಒಯ್ಯಲಾಯಿತು. ಪ್ರಾಯಶಃ ವಿಮಾನ ಮೂಲಕ ಅಂಚೆ ಸಾಗಿಸಿದ್ದು ಪ್ರಪಂಚದಲ್ಲಿ ಇದೇ ಪ್ರಥಮ ಸಲ. ಇಂಗ್ಲೆಂಡ್ ಅಮೆರಿಕಗಳಲ್ಲಿ ಅಂಚೆ ಸಾಗಿಸಲು 1918ರಲ್ಲಿ ವಿಮಾನಗಳನ್ನು ಬಳಸಿದರು.

ವಿದೇಶಗಳಿಗೆ ಅತಿ ತೂಕದ ಸಾಮಾನುಗಳನ್ನು ರವಾನಿಸಬೇಕಾದರೆ ಹಡಗಿನಲ್ಲೇ ಕಳುಹಿಸಬೇಕು. ವಿಮಾನ ಸಾಗಾಣಿಕೆಯಲ್ಲಿ ಮೊದಲಿಗೆ ಹೊರದೇಶಗಳಿಗೆ ಮಾತ್ರ ಅಂಚೆ ಸಾಗುತ್ತಿದ್ದಿತು. ಈಗ ಒಳನಾಡಿನಲ್ಲೂ ವಿಮಾನ ಅಂಚೆ ರೂಢಿಯಲ್ಲಿದೆ.

# ವಿವಿಧ ರಾಷ್ಟ್ರಗಳ ಅಂಚೆಚೀಟಿಗಳು



ಅಂತರರಾಷ್ಟ್ರೀಯ ಅಂಚೆ ವ್ಯವಸ್ಥೆಯಲ್ಲಿ ಹಡಗು, ರೈಲು, ವಿಮಾನ ಅಂಚೆಗಳಿಗೆ ಧಾರಣೆ ಬೇರೆ ಬೇರೆ. ವಿಮಾನದ ಮೂಲಕ ನಮ್ಮಿಂದ ಅತ್ಯಂತ ದೂರವಿರುವ ಸಂಯುಕ್ತ ಸಂಸ್ಥಾನಕ್ಕೆ ಕೂಡ ಕೇವಲ ಐದು ದಿನಗಳಲ್ಲಿ ಅಂಚೆ ಕಳುಹಿಸುವ ಏರ್ಪಾಟಿದೆ. ಪ್ರಮುಖ ಪಟ್ಟಣಗಳಲ್ಲಿ ಸಂಚಾರಿ ಅಂಚೆ ಕಚೇರಿಗಳು ಕೆಲಸ ಮಾಡುತ್ತವೆ. ಇವು ನಗರದ ಮುಖ್ಯ ಸ್ಥಳಗಳಲ್ಲಿ ನಿಂತು ಅಂಚೆ ಸೌಲಭ್ಯ ಒದಗಿಸುತ್ತವೆ. ಇದಲ್ಲದೆ ರಾತ್ರಿ ಅಂಚೆ ಕಚೇರಿಗಳೂ ಇರುತ್ತವೆ.

ಕಾಗದಗಳನ್ನು ಒಟ್ಟುಗೂಡಿಸಲು ಊರಿನ ಮುಖ್ಯ ಸ್ಥಳಗಳಲ್ಲಿ ಕೆಂಪು ಡಬ್ಬಿಗಳನ್ನಿಟ್ಟಿರುತ್ತಾರೆ. ಇದರಲ್ಲಿ ಕಾಗದಗಳನ್ನು ಮಾತ್ರ ಹಾಕಬಹುದು. ಇವನ್ನು ಡಬ್ಬಿಗಳಿಂದ ನಿಯಮಿತ ವೇಳೆಗಳಲ್ಲಿ ಇಲಾಖೆಯವರು ತೆಗೆದು ಕೊಂಡು ಹೋಗುತ್ತಾರೆ. ಪಾರ್ಸೆಲ್ ಅಥವಾ ಭಾಂಗಿಗಳನ್ನು ಅಂಚೆ ಕಚೇರಿಯಲ್ಲಿ ತೂಗಿಸಿ, ಅವುಗಳ ತೂಕದ ಮೇಲೆ ಅಂಚೆ ಚೀಟಿ ಅಂಟಿಸಿಕೊಡಬೇಕು. ಈ ಪಾರ್ಸೆಲುಗಳಲ್ಲಿ ಎರಡು ವಿಧ : ಕಳುಹಿಸುವಾಗಲೇ ಶುಲ್ಕವನ್ನು ಪೂರ್ಣವಾಗಿ ಪಾವತಿ ಮಾಡುವುದು : ಅಂಚೆಯಲ್ಲಿ ಮಾಲು ಕಳುಹಿಸಿ ವಿಳಾಸದಾರರಿಂದ ಅದರ ಪೂರ್ಣ ಹಣ (ಅಂಚೆ ಹಾಗೂ ಸಾಮಾನಿನ ಬೆಲೆ) ಪಡೆಯುವುದು (ವಿ.ಪಿ.ಪಿ.). ಎರಡನೆಯದು ಮುಖ್ಯವಾಗಿ ವ್ಯಾಪಾರಸ್ಥರ ವ್ಯವಸ್ಥೆ.

ಅಂಚೆ ಇಲಾಖೆಯ ಒಂದು ಸೌಲಭ್ಯ ಮನಿಯಾರ್ಡರ್. ಇದರ ಮೂಲಕ ಊರಿಂದೂರಿಗೆ ಹಣ ರವಾನಿಸಬಹುದು.

ಭಾರತದಲ್ಲಿ ಅಂಚೆ ಇಲಾಖೆಯ ಇನ್ನಿತರ ಸೌಕರ್ಯಗಳು ಸೇವಿಂಗ್ಸ್ ಬ್ಯಾಂಕ್, ನ್ಯಾಷನಲ್ ಸೇವಿಂಗ್ಸ್ ಸರ್ಟಿಫಿಕೇಟ್, ಸೈನಿಕ ನಿವೃತ್ತಿ ವೇತನ ಇತ್ಯಾದಿ. ಜೀವವಿಮೆ ಈ ಇಲಾಖೆಯಿಂದಲೇ ಆರಂಭವಾಯಿತೆಂದರೆ ಸೋಜಿಗವೆನಿಸಬಹುದು. 1884 ಫೆಬ್ರವರಿಯಲ್ಲಿ ಅಂಚೆ ಇಲಾಖೆಯ ನೌಕರರಿಗೆಂದು ಮಾತ್ರ ಭಾರತದಲ್ಲಿ ಜೀವವಿಮೆ ಆರಂಭವಾಯಿತು. ಇಂದು ಅದು ಪ್ರತ್ಯೇಕ ಸಂಸ್ಥೆಯಾಗಿದೆ. ಇವಲ್ಲದೆ ರೇಡಿಯೋ ಲೈಸೆನ್ಸ್ ಮತ್ತು ಕ್ಷಯ ರೋಗ ನಿವಾರಣೆ ಸಹಾಯಾರ್ಥ ಮುದ್ರೆಯ ಚೀಟಿಗಳನ್ನು ಕೂಡ ಅಂಚೆ ಖಾತೆ ಕೊಡುತ್ತದೆ. ಪಾಶ್ಚಾತ್ಯ ದೇಶಗಳಲ್ಲಿ ಬಂದೂಕು, ಮೋಟಾರು ವಾಹನ, ನಾಯಿ ಇವುಗಳ ಲೈಸೆನ್ಸ್ ಕೊಡುವುದು ಅಂಚೆ ಇಲಾಖೆಯೇ. ಅಂಚೆ ಚೀಟಿ ಹವ್ಯಾಸಿಗಳಿಗೆ ಜಗತ್ತಿನ ಎಲ್ಲ ವಿಧದ ಚೀಟಿಗಳನ್ನು ಇಲಾಖೆ ಒದಗಿಸುತ್ತದೆ.

ಒಂದು ದೇಶದ ವೈಶಿಷ್ಟ್ಯ ಇಲ್ಲವೆ ದೇಶದ ಚಾರಿತ್ರಿಕ ಘಟನೆಗಳು, ಧಾರ್ಮಿಕ ಹಾಗೂ ಐತಿಹಾಸಿಕ ಮಹಾಪುರುಷರು, ಪ್ರಾಚೀನ ಸಾಧನೆಗಳ ಪ್ರತೀಕಗಳು, ಯಾಂತ್ರಿಕ ಕೌಶಲ, ಇಲ್ಲವೆ ಜಾಗತಿಕವಾಗಿ ಮುಖ್ಯವಾದ ಘಟನೆಗಳು (ಉದಾಹರಣೆಗೆ, ಚಂದ್ರಯಾತ್ರೆ, ಚಂದ್ರನಲ್ಲಿ ಮಾನವನ ಪದಾರ್ಪಣ) ಹೀಗೆ ಅನೇಕ ವಿಷಯಗಳಿಗೆ ಸಂಬಂಧಿಸಿದಂತೆ ವಿಶೇಷ ರೀತಿಯ ಅಂಚೆ ಚೀಟಿಗಳನ್ನು ಮುದ್ರಿಸುತ್ತಾರೆ. 1969 ಗಾಂಧಿ ಶತಾಬ್ದಿಯ ವರ್ಷವೆಂದು ಮಹಾತ್ಮರ ಚಿತ್ರವನ್ನು ಅಂಚೆ ಚೀಟಿ ಹಾಗೂ ಲಕೋಟೆ ಮೇಲೆ ಮುದ್ರಿಸಲಾಯಿತು.

ದೂರದ ಸ್ಥಳಕ್ಕೆ ತಂತಿ ಸಮಾಚಾರ ಕಳುಹಿಸಬಹುದು. ಮೊದಲು ಎತ್ತರದ ಗೋಪುರಗಳಿಂದ ತಂತಿ ಸಮಾಚಾರ ಸಂಜ್ಞೆಗಳ ಮೂಲಕ ಸಾಗುತ್ತಿದ್ದಿತು. 1905ರಲ್ಲಿ ತಂತಿಯಿಲ್ಲದೆ ಸಮಾಚಾರ ಸಾಗುವ ಏರ್ಪಾಟು ಪ್ರಾರಂಭವಾಯಿತು. 1908ರಲ್ಲಿ ಸಂಕೇತಗಳ ಭಾಷೆ ಬಳಸುವ ಮಾರ್ಸ್ ಟೆಲಿಗ್ರಾಫ್ ವ್ಯವಸ್ಥೆ ಜಾರಿಗೆ ಬಂದಿತು. ಈಚಿನ ಟೆಲಿಪ್ರಿಂಟರಿನಂಥ



ದೂರದ ಊರಿನಿಂದ ಅಪ್ಪ ಮನಿಯಾರ್ಡರ್ ಕಳುಹಿಸಿದಾಗ

ನವೀನ ಯಂತ್ರಗಳ ಉಪಯೋಗದಿಂದ ಸಂದೇಶ ತಲುಪಿದ ಕಡೆಯಲ್ಲಿ ಅದು ತಾನಾಗಿಯೇ ಟೈಪಾಗುತ್ತದೆ. ವಿವಾಹ ಸಮಾರಂಭ, ಪರೀಕ್ಷೆಯಲ್ಲಿ ಜಯ, ಚುನಾವಣೆಯಲ್ಲಿ ಗೆಲುವು ಇತ್ಯಾದಿ ಸಂದರ್ಭಗಳಲ್ಲಿ ಶುಭಾಶಯ ಸಂದೇಶಗಳನ್ನು ಕಳುಹಿಸಬಹುದು.

ನಮ್ಮ ದೇಶಕ್ಕೂ ಇಂಗ್ಲೆಂಡಿಗೂ ಸಮುದ್ರದೊಳಗಿನಿಂದ ತಂತಿ ಸಂಬಂಧ ಏರ್ಪಟ್ಟು 1970ರ ಜೂನ್‌ಗೆ ಒಂದು ಶತಮಾನವಾಯಿತು. ಇದರ ನಿರ್ವಹಣೆ ಕಷ್ಟದಾಯಕವಾದ್ದರಿಂದ ತಂತಿ ಸಹಾಯವಿಲ್ಲದೆ ಸಮಾಚಾರ ಕಳುಹಿಸುವ ಏರ್ಪಾಡು ಬಂದಿದೆ. ದೂರವಾಣಿ ಇಂದಿನ ವ್ಯಾಪಕ ಸಂಪರ್ಕ ವ್ಯವಸ್ಥೆ. ಇದೂ ಅಂಚೆ ಇಲಾಖೆಯ ಜವಾಬ್ದಾರಿಯೇ.

1968ರ ಅಂಕಿಸಂಖ್ಯೆಗಳ ಪ್ರಕಾರ ಭಾರತದಲ್ಲಿ ಒಟ್ಟು ಒಂದು ಲಕ್ಷ ಅಂಚೆ ಕಚೇರಿಗಳಿವೆ.

ಇಷ್ಟಲ್ಲದೆ ಉಪಗ್ರಹ ಸಂಪರ್ಕದಲ್ಲಿಯೂ ಭಾರತ ಭಾಗವಹಿಸಿದೆ. ಗಗನದಲ್ಲಿ ಸುತ್ತುತ್ತಿರುವ ಈ ಕೃತಕ ಉಪಗ್ರಹಗಳು ಸಮಾಚಾರಗಳನ್ನು ಕಳುಹಿಸುತ್ತವೆ. ಇಂಥ ಸಮಾಚಾರವನ್ನು ಸ್ವೀಕರಿಸುವ ನಿಲ್ದಾಣವನ್ನು ಪುಣೆಯಿಂದ ಇಪ್ಪತ್ತೊಂಬತ್ತು ಕಿಲೊಮೀಟರುಗಳ ದೂರದಲ್ಲಿರುವ ಅರ್ವಿಯಲ್ಲಿ ಆರು ಕೋಟಿ ರೂಪಾಯಿಗಳ ವೆಚ್ಚದಲ್ಲಿ ಕಟ್ಟಲಾಗಿದೆ.

1875ರಲ್ಲಿ ಪ್ರಪಂಚದ ಅಂಚೆ ಒಕ್ಕೂಟ ರೂಪುಗೊಂಡಿತು. ಈ ಅಂತರರಾಷ್ಟ್ರೀಯ ಒಡಂಬಡಿಕೆಯ ಮೇರೆಗೆ ಅಂಚೆ ದರ ಹಾಗೂ ತೂಕಗಳಲ್ಲಿ ಸಮಾನತೆ ಏರ್ಪಟ್ಟಿತು. ಪತ್ರ, ಅಂಚೆಯ ಕಾರ್ಡು ಮತ್ತು ಅಚ್ಚಾದ ಪತ್ರಿಕೆಗಳು ಎಂಬ ಮೂರು ವಿಭಾಗಗಳಾದುವು. ಒಂದು ದೇಶದ ಹಡಗು ಹಾಗೂ ರೈಲುಗಳನ್ನು ಅಂಚೆ ಸಾಗಾಣಿಕೆಗೆ ಇನ್ನೊಂದು ದೇಶ ಉಪಯೋಗಿಸಿದಾಗ ಕೊಡಬೇಕಾದ ಹಣದ ನಿಗದಿಯಾಯಿತು. ಮುಂದೆ ಅಂತರರಾಷ್ಟ್ರೀಯ ಮನಿಯಾರ್ಡರ್ ಹಾಗೂ ಭಾಂಗಿ ಅಂಚೆಗಳು ಒಡಂಬಡಿಕೆಗೆ ಸೇರಿಸಲ್ಪಟ್ಟುವು. ಹೀಗೆ ಆಗಿಂದಾಗ್ಗೆ ಅಂತರರಾಷ್ಟ್ರೀಯ ಮಟ್ಟದಲ್ಲಿ ಒಪ್ಪಂದಗಳು ಏರ್ಪಡುತ್ತಿರುತ್ತವೆ.

## ಅಂಡಮಾನ್ ನಿಕೋಬಾರ್ ದ್ವೀಪಗಳು

ಕೆಲವು ದಶಕಗಳ ಹಿಂದೆ ಅಂಡಮಾನ್ ಎಂದರೆ ಭಾರತೀಯರ ಮೈ ಜುಮ್ಮೆನ್ನುತ್ತಿತ್ತು ; ಆ ದ್ವೀಪದ ಸೆರೆಮನೆಯ ಕೊಠಡಿಗಳಲ್ಲಿ ಒಂಟಿಯಾಗಿ ಬಂದಿಗಳಾಗಿರುತ್ತಿದ್ದ ಸ್ವಾತಂತ್ರ್ಯ ವೀರರ ಕಥೆಗಳನ್ನು ಕೇಳಿದಾಗಲೆಲ್ಲ ಮೈ ನವಿರೇಳುತ್ತಿತ್ತು. 950 ಜನ ಸ್ವಾತಂತ್ರ್ಯಯೋಧರು ಅಂಥ ಶಿಕ್ಷೆಗೆ ಗುರಿಯಾಗಿದ್ದರು. ಕೊಲೆಗಡಕರನ್ನೂ ಅಲ್ಲಿಗೆ ಕಳುಹಿಸುತ್ತಿದ್ದರು. ಅದು ಕರಿನೀರಿನ ಶಿಕ್ಷೆ. ಕಾಳಾಪಾನಿ ಎಂದು ಕರೆದರೂ, ಅಂಡಮಾನ್ ಸುತ್ತಲೂ ಇರುವುದು ಕಡು ನೀಲಿ ನೀರು.

ಮುನ್ನೂರನಲವತ್ತೆಂಟು ನಡುಗಡ್ಡೆಗಳಿರುವ ದ್ವೀಪಸಮುಚ್ಚಯಕ್ಕೆ ಅಂಡಮಾನ್ ನಿಕೋಬಾರ್ ದ್ವೀಪಗಳು ಎಂದು ಹೆಸರು. ಅಂಡಮಾನಿನಲ್ಲಿ ಮೂರು ಮುಖ್ಯ ದ್ವೀಪಗಳಿವೆ. ನಿಕೋಬಾರಿನಲ್ಲೂ ಮೂರು ದೊಡ್ಡ ದ್ವೀಪಗಳಿವೆ. ಉಳಿದುವೆಲ್ಲ ಚಿಕ್ಕಚಿಕ್ಕವು.

ಬ್ಲೇರ್ ಬಂದರು ಆ ಪ್ರದೇಶದ ಮುಖ್ಯ ಪಟ್ಟಣ. ಇದರ ಜನಸಂಖ್ಯೆ 40,000. ಎಲ್ಲ ದ್ವೀಪಗಳ ಒಟ್ಟು ಜನಸಂಖ್ಯೆ 65–70,000. ವಿಸ್ತೀರ್ಣ 5,173 ಚದರ ಕಿಲೊಮೀಟರು. ವರ್ಷಕ್ಕೆ ಉತ್ತರದಲ್ಲಿ 191 ಮತ್ತು ದಕ್ಷಿಣದಲ್ಲಿ 305 ಸೆಂಟಿಮೀಟರು ಮಳೆ. ಉಷ್ಣ ಹವೆ (60°–90° ಫಾ. ತನಕ); ಆದರೆ ಅದನ್ನು ಮರೆಸುವಂಥ ತಂಗಾಳಿ.

ಈ ದ್ವೀಪಗಳ ಅರಣ್ಯಸಂಪತ್ತು 400 ಕೋಟಿ ರೂಪಾಯಿ ಬೆಲೆ ಬಾಳುತ್ತದೆ. ಈಗ ಇರುವ ಉದ್ಯಮ ಬೆಂಕಿಪೆಟ್ಟಿಗೆ ಕಾರಖಾನೆ, ಪ್ಲೈವುಡ್ ಕಾರಖಾನೆ. ಟೊಳ್ಳುಮರಗಳಿಂದ ದೋಣಿಮಾಡುವ ಕೈಕಸಬಿದೆ. ಮೀನು ಹಿಡಿಯಲೆಂದು ಜಪಾನಿಯರು ಇಲ್ಲಿ ತನಕ ಬರುತ್ತಾರೆ. ಮಲೇಷ್ಯದವರು, ಚೀನೀಯರು—ಎಲ್ಲರಿಗೂ ಇಲ್ಲಿನ ಮೀನು ಇಷ್ಟ.

ಎಲ್ಲ ದ್ವೀಪಗಳ ಅಂಚಿನಲ್ಲೂ ಹವಳದ ದಿಬ್ಬಗಳಿವೆ. ಜ್ವಾಲಾಮುಖಿಗಳೂ ಕೆಲ ದ್ವೀಪಗಳಲ್ಲಿವೆ.

ಅಂಡಮಾನ್ ನಿಕೋಬಾರ್ ದ್ವೀಪಸಮುಚ್ಚಯದ ಜನಜೀವನ ವೈವಿಧ್ಯಪೂರ್ಣ. ಒಂದೆರಡು ದ್ವೀಪಗಳಲ್ಲಿ ಈಗಲೂ ಬೆಂಕಿಯನ್ನು ಬಳಸದ, ಬಾಣಪ್ರಯೋಗಿಸುವ ಮೂಲನಿವಾಸಿಗಳಿದ್ದಾರೆ. ಒಮ್ಮೆ ಒಂದು ದ್ವೀಪದಲ್ಲಿಳಿದ ಮೂವರು ನಾವಿಕರು ಮರಳಿಬರಲಿಲ್ಲ. ರಷ್ಯನ್ ವಿಜ್ಞಾನಿಯೊಬ್ಬ ಮೂಲನಿವಾಸಿ ನೆಟ್ಟ ಬಾಣದಿಂದ ಹತನಾದ. ಗಂಡಸರ ಉಡುಪು ಮರದ ತೆಳುತೊಗಟೆಯ ನೀಳ ಲಂಗೋಟಿ. ಹೆಂಗಸರ ನಡುವಿನ ಸುತ್ತಲೂ ಹುಲ್ಲಿನ ಕವಚ. ಜನ ಕಾಲವನ್ನು ಗುರುತಿಸುವುದು ಮೂರು ಭಾಗಗಳಾಗಿ : ನಿನ್ನೆ, ಇವತ್ತು ಮತ್ತು ನಾಳೆ. ಈ ಸಮುಚ್ಚಯಕ್ಕೆ ಸೇರಿದ ಕಾರ್‌ನಿಕೋಬಾರ್ ದ್ವೀಪದ [illegible] ದ್ವೀಪದಲ್ಲಿ ವೃತ್ತಾಕಾರದ ಅರವತ್ತನಾಲ್ಕು ಕಿಲೊಮೀಟರುಗಳ ಟಾರು ರಸ್ತೆ. ಪರಕೀಯ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗದೆ ತಮ್ಮದೇ ವಿಶಿಷ್ಟ ರೀತಿಯಲ್ಲಿ ಬಾಳುತ್ತಿರುವ ಜನ. ಸಮಾನತೆ, ಸೌಹಾರ್ದ ಅವರ ಬದುಕಿನ ಮೂಲಮಂತ್ರ. ಬಾಹ್ಯ ಜಗತ್ತಿನೊಡನೆ ಅವರಿಗೆ ನಿತ್ಯ ಸಂಪರ್ಕವಿಲ್ಲ. ಬೆಳೆದುದನ್ನು ಅವರದೇ ಸಹಕಾರ ಸಂಘ ಹೊರಲೋಕಕ್ಕೆ ರಫ್ತು ಮಾಡುತ್ತದೆ; ಅವರಿಗೆ ಬೇಕಾದ ಸಾಮಗ್ರಿಗಳನ್ನು ತರಿಸಿಕೊಡುತ್ತದೆ. ವರ್ಣರಂಜಿತ ಬಟ್ಟೆಯುಡುವ ಹುಡುಗಿಯರು ಅಲ್ಲಿ ಸ್ಕೂಟರ್ – ಸೈಕಲ್ ಸವಾರಿ ಮಾಡುತ್ತಾರೆ. ತಗ್ಗು ಛಾವಣಿಯ ಗುಡಿಸಲುಗಳಲ್ಲಿ ವಾಸ. ನೈರ್ಮಲ್ಯಕ್ಕೆ ಅಗ್ರಪೂಜೆ.

ದ್ವೀಪಗಳ ಅರಣ್ಯದಲ್ಲಿ ಹೆಚ್ಚು ಪ್ರಾಣಿಗಳಿಲ್ಲ. ಇಲ್ಲಿ ಕೋತಿಗಳು ಇಲ್ಲದಿರುವುದು ಒಂದು ವಿಶೇಷ.

1870ರಲ್ಲಿ ಅರಬ್ ಪ್ರವಾಸಿಗಳು ಅಂಡಮಾನ್ ದ್ವೀಪಗಳಲ್ಲಿ ಜನವಾಸವಾಗಿದ್ದುದನ್ನು ಕಂಡರು. ಪಾಶ್ಚಾತ್ಯರು ಬಂದು, ಅರಣ್ಯಸಂಪತ್ತನ್ನು ನೋಡಿ, "ಇದು ಬಂಗಾರದ ನೆಲ" ಎಂದರು ; "ನರಭಕ್ಷಕರ ಸ್ಥಳ" ಎಂದೂ ಕರೆದರು. ಆಗ್ನೇಯ ಏಷ್ಯದ ಆಯಕಟ್ಟಿನಲ್ಲಿರುವ ಈ ಪ್ರದೇಶ, ಸುತ್ತಲಿನ ರಾಷ್ಟ್ರಗಳ ಜೊತೆಯಲ್ಲಿ ಬ್ರಿಟಿಷರ ಅಧೀನವಾಯಿತು. 1942–45ರ ಅವಧಿಯಲ್ಲಿ ಇವು ಜಪಾನರ ವಶವಾದುವು. ಸಿಂಗಪುರದಲ್ಲಿ ಆಜಾದ್ ಹಿಂದ್ ಸೈನ್ಯವನ್ನು ಕಟ್ಟಿದ ನೇತಾಜಿ ಸುಭಾಷರು ಅಂಡಮಾನ್ ದ್ವೀಪಗಳನ್ನು "ಸ್ವರಾಜ್ಯ ದ್ವೀಪಗಳು" ಎಂದು ಕರೆದರು.

ಭಾರತ ಸ್ವತಂತ್ರವಾದಾಗ ಈ ದ್ವೀಪಸಮುಚ್ಚಯವೂ ಪರಕೀಯರ ಆಳ್ವಿಕೆಯಿಂದ ವಿಮೋಚನೆ ಪಡೆಯಿತು. ಈಗ ಮುಖ್ಯ ದ್ವೀಪಗಳಲ್ಲಿ ಪುಟ್ಟ ಭಾರತವನ್ನೇ ಕಾಣಬಹುದು. ಅನೇಕರು ಹಿಂದೆ ಸೆರೆಮನೆವಾಸ

ಖಂಡ :
ಏಷ್ಯ
ಭಾರತದ ಭಾಗ
ವಿಸ್ತೀರ್ಣ :
5,173 ಚ.ಕಿ.ಮಿ.
ಜನಸಂಖ್ಯೆ :
65-70,000
ಮುಖ್ಯ ಪಟ್ಟಣ :
ಪೋರ್ಟ್ ಬ್ಲೇರ್

ಅನುಭವಿಸಿ ಬಿಡುಗಡೆಹೊಂದಿದವರ ಸಂತತಿಯವರು. ಭಾಷೆ ಸಂಸ್ಕೃತಿ ಹಲವಿದ್ದರೂ ವಿವಿಧತೆಯಲ್ಲಿ ಏಕತೆಯಿದೆ. ಭಾರತದ ಲೋಕಸಭೆಗೆ ಒಬ್ಬ ಪ್ರತಿನಿಧಿಯನ್ನು ಈ ದ್ವೀಪಗಳ ಜನರು ಆರಿಸುತ್ತಾರೆ. ಛೀಫ್ ಕಮಿಷನರ್ ಇಲ್ಲಿನ ಆಡಳಿತಾಧಿಕಾರಿ.

ಸ್ವತಂತ್ರ ಭಾರತದಲ್ಲಿ ಆಗುತ್ತಿರುವ ಕ್ರಾಂತಿಕಾರಕ ಬದಲಾವಣೆಗಳ ತೆರೆಗಳು ಅಂಡಮಾನ್ ನಿಕೋಬಾರ್ ದ್ವೀಪಗಳ ದಂಡೆಗಳನ್ನೂ ಮುಟ್ಟುತ್ತಿವೆ.

ವಿವರ : ಏಳನೆಯ ಸಂಪುಟ

## ಅಂತರ್ಯುದ್ಧ

ಒಂದು ಕಡೆ ಹನ್ನೊಂದು ಅಕ್ಷೋಹಿಣಿ ಸೈನ್ಯ. ಇನ್ನೊಂದು ಕಡೆ ಏಳು ಅಕ್ಷೋಹಿಣಿ ಸೈನ್ಯ (ಒಂದು ಅಕ್ಷೋಹಿಣಿ ಎಂದರೆ 21,870 ಆನೆಗಳು, 21,870 ರಥಗಳು, 65,610 ಕುದುರೆಗಳು, 1,09,350 ಪದಾತಿಗಳು). ಎರಡು ಕಡೆಗಳಲ್ಲೂ ಹಲವರು ಪ್ರಖ್ಯಾತ ರಾಜರು. ಯುದ್ಧ ಮುಗಿಯುವ ಹೊತ್ತಿಗೆ ಎಷ್ಟೋ ಕಿರೀಟಗಳು ರಕ್ತದ ಕೆಸರಿನಲ್ಲಿ. ಸ್ವಲ್ಪ ಹೆಚ್ಚು ಕಡಮೆ ಹದಿನೆಂಟು ಅಕ್ಷೋಹಿಣಿ ಸೈನ್ಯ ಸಾವಿನ ಮನೆಯಲ್ಲಿ.

ಇದು ಮಹಾಭಾರತ ಯುದ್ಧ. ಎರಡು ಸೈನ್ಯಗಳ ನಾಯಕರು—ಕೌರವರು ಪಾಂಡವರು—ದಾಯಾದಿಗಳು. ಹೋರಾಟ ಒಂದೇ ದೇಶದ ಪ್ರಜೆಗಳಲ್ಲಿ.

ಇದೊಂದು ಭಯಂಕರ ಅಂತರ್ಯುದ್ಧ.

ಯದುವಂಶದವರು ಪರಸ್ಪರ ಕಾದಾಡಿದುದರಿಂದ ಅದು ಯಾದವೀ ಕಲಹವಾಯಿತು. ಒಂದೇ ರಾಷ್ಟ್ರದ ಪ್ರಜೆಗಳ ನಡುವಣ ಕದನಕ್ಕೆ ಈಗಲೂ ಭಾರತೀಯರು ಯಾದವೀ ಕಲಹ ಎನ್ನುತ್ತಾರೆ.

ಇತಿಹಾಸದುದ್ದಕ್ಕೂ ಅಂತರ್ಯುದ್ಧಗಳು ನಡೆದಿವೆ. ಆಳರಸರ ದಬ್ಬಾಳಿಕೆಗೆ ವಿರುದ್ಧವಾಗಿ, ಇಲ್ಲವೆ ಎರಡು ಗುಂಪುಗಳ ನಡುವೆ ಪ್ರಾಬಲ್ಯದ ಬಯಕೆಯಿಂದ, ಅಥವಾ ವಿವಿಧ ರಾಜಕೀಯ ಆದರ್ಶಗಳನ್ನು ಆಚರಣೆಗೆ ತರುವುದಕ್ಕಾಗಿ ಅಂತರ್ಯುದ್ಧಗಳು ಸ್ಫೋಟಗೊಂಡಿವೆ.

ಬಾದಾಮಿಯ ಚಾಲುಕ್ಯ ರಾಜವಂಶದ ಸತ್ಯಾಶ್ರಯ ಪುಲಿಕೇಶಿ (609–642) ಉತ್ತರ ಭಾರತದಲ್ಲಿ ಕರ್ನಾಟಕದ ಕೀರ್ತಿಯನ್ನು ಬೆಳಗಿಸಿದ. ಇವನು ಬಾದಾಮಿಯ ಪಟ್ಟಕ್ಕೆ ಬರುವ ಮೊದಲು ಚಿಕ್ಕಪ್ಪ ಮಂಗಳೇಶ ರಾಜ್ಯ ಸೂತ್ರಗಳನ್ನು ಪುಲಿಕೇಶಿಗೆ ಒಪ್ಪಿಸಲಿಲ್ಲ. ಕೊನೆಗೆ ಅಂತರ್ಯುದ್ಧವಾಗಿ. ಪುಲಿಕೇಶಿ ಮಂಗಳೇಶನನ್ನು ಸೋಲಿಸಿ ಪಟ್ಟಕ್ಕೆ ಬಂದ.

ಇಂಗ್ಲೆಂಡಿನಲ್ಲಿ 1642ರಿಂದ ಆಗಿನ ದೊರೆಯಾಗಿದ್ದ ಒಂದನೆಯ ಚಾರ್ಲ್ಸ್ ಹಾಗೂ ಸಂಸತ್ತಿನ ನಡುವೆ ಉಂಟಾದ ಭಿನ್ನಾಭಿಪ್ರಾಯದ ಕಾರಣ ಅಂತರ್ಯುದ್ಧ ನಡೆಯಿತು. ಒಂಬತ್ತು ವರ್ಷಗಳ ಕಾಲ ನಡೆದ ಈ ಕಲಹದಲ್ಲಿ ಆಲಿವರ್ ಕ್ರಾಮ್‌ವೆಲ್‌ನ ನಾಯಕತ್ವ ಹೊಂದಿದ ಸಂಸದೀಯ ಗುಂಪಿಗೆ ಜಯವಾಯಿತು.

ಮತ್ತೊಂದು ಪ್ರಸಿದ್ಧ ಅಂತರ್ಯುದ್ಧ (1861–65) ನಡೆದದ್ದು ಅಮೆರಿಕದಲ್ಲಿ. ಸಾವಿರಾರು ಮಂದಿ ನೀಗ್ರೊಗಳು ಗುಲಾಮರಾಗಿದ್ದರು. ಉತ್ತರ ರಾಜ್ಯಗಳವರು ಇವರಿಗೆ ಸ್ವಾತಂತ್ರ್ಯ ನೀಡಲು ಬಯಸಿದರು. ಆದರೆ ತೋಟಗಳು ಹೆಚ್ಚಾಗಿದ್ದ ದಕ್ಷಿಣದಲ್ಲಿ ಅಗ್ಗದ ಕೆಲಸಗಾರರ ಅಗತ್ಯವಿತ್ತು. ದಕ್ಷಿಣ ರಾಜ್ಯಗಳವರು ಗುಲಾಮಗಿರಿ ಮುಂದುವರಿಯಬೇಕೆಂದು ಇಚ್ಛಿಸಿದರು. 1860ರಲ್ಲಿ ಅಬ್ರಹಾಂ ಲಿಂಕನ್ ಅಧ್ಯಕ್ಷನಾಗಿ ಆಯ್ಕೆಯಾದ. ಲಿಂಕನ್ ಗುಲಾಮಗಿರಿಗೆ ವಿರೋಧಿಯಾಗಿದ್ದ. ದಕ್ಷಿಣ ರಾಜ್ಯಗಳು ಅಮೆರಿಕ ಸಂಯುಕ್ತ ಸಂಸ್ಥಾನದಿಂದ ಬೇರೆಯಾಗಲು ಅಪೇಕ್ಷಿಸಿದುವು. ಲಿಂಕನ್ನನ ಕೇಂದ್ರ ಪ್ರಭುತ್ವ ಇದಕ್ಕೆ ಒಪ್ಪಲಿಲ್ಲ. ಈ ಎಲ್ಲ ಕಾರಣಗಳಿಂದ ದಕ್ಷಿಣದ ಹನ್ನೊಂದು ರಾಜ್ಯಗಳ ಹಾಗೂ ಉತ್ತರದವರ ನಡುವೆ ನಾಲ್ಕು ವರ್ಷ ಕದನ ನಡೆಯಿತು. ಯುದ್ಧದಲ್ಲಿ ಉತ್ತರದವರಿಗೆ ಜಯವಾಯಿತು. ಅಮೆರಿಕದ ಒಕ್ಕೂಟವನ್ನು ವಿಭಜಿಸುವ ಯತ್ನ ವಿಫಲವಾಯಿತು. ಅಂತರ್ಯುದ್ಧ ಮುಗಿದ ಬಳಿಕ ಗುಲಾಮಗಿರಿ ಸಂಪೂರ್ಣ ರದ್ದಾಯಿತು.

1917ರ ಕ್ರಾಂತಿಯ ತರುವಾಯ ರಷ್ಯದಲ್ಲಿ ಬೋಲ್ಷೆವಿಕ್ (ಬಹು ಸಂಖ್ಯಾತ) ಪಕ್ಷದವರಿಗೂ ಕ್ರಾಂತಿಯ ವಿರೋಧಿಗಳಿಗೂ ಅಂತರ್ಯುದ್ಧ ನಡೆಯಿತು.

1927ರಲ್ಲಿ ಚೀನದಲ್ಲಿ ಅಧಿಕಾರಾರೂಢ ಕೌಮಿನ್‌ಟಾಂಗ್ (ರಾಷ್ಟ್ರೀಯ) ಪಕ್ಷದ ನಾಯಕನಾಗಿದ್ದ ಚಿಯಾಂಗ್ ಕೈ-ಷೇಕ್‌ನ ಆಡಳಿತದ ವಿರುದ್ಧವಾಗಿ ಚೀನೀ ಕಮ್ಯೂನಿಸ್ಟ್ ಪಕ್ಷ ದಂಗೆ ಎದ್ದು, ಅಂತರ್ಯುದ್ಧ ಆರಂಭವಾಯಿತು. ಇಪ್ಪತ್ತೊಂದು ವರ್ಷಗಳ ಕಾಲ ಸಮರ ನಡೆದು, 1948ರಲ್ಲಿ ಚಿಯಾಂಗ್ ಕೈ-ಷೆಕ್ ದೇಶತ್ಯಾಗ ಮಾಡಬೇಕಾಯಿತು.

ಸ್ಪೇನಿನಲ್ಲಿ ರಾಜಪ್ರಭುತ್ವವಾದಿಗಳಿಗೂ ಗಣರಾಜ್ಯವಾದಿಗಳಿಗೂ 1936ರಲ್ಲಿ ಪ್ರಾರಂಭವಾದ ಅಂತರ್ಯುದ್ಧ 1939ರವರೆಗೆ ನಡೆದು. ರಾಜಪ್ರಭುತ್ವವಾದಿಗಳು ಜನರಲ್ ಫ್ರಾಂಕೋನ ನಾಯಕತ್ವದಲ್ಲಿ ವಿಜಯ ಸಾಧಿಸಿದರು. ದಕ್ಷಿಣ ವಿಯೆಟ್‌ನಾಮಿನಲ್ಲಿ ವಿಯೆಟ್‌ಕಾಂಗ್ ಪಕ್ಷಕ್ಕೂ ಸರ್ಕಾರದ ಪಕ್ಷಕ್ಕೂ 1959–60ರಿಂದ ಅಂತರ್ಯುದ್ಧ ನಡೆಯುತ್ತಲೇ ಇದೆ. ಕೊರಿಯದಲ್ಲಿ ದಕ್ಷಿಣ ಕೊರಿಯ ಉತ್ತರ ಕೊರಿಯಗಳಿಗೆ 1950ರಿಂದ 1953ರವರೆಗೆ ಅಂತರ್ಯುದ್ಧ ನಡೆಯಿತು.

ಸಾಧಾರಣವಾಗಿ ಅಂತರ್ಯುದ್ಧದಿಂದ ಸಂಪನ್ಮೂಲಗಳು ಬತ್ತುತ್ತವೆ. ಅಲ್ಲದೆ ಬಹು ಕಾಲ ಜನರ ಮನಸ್ಸಿನಲ್ಲಿ ಕಹಿ ಉಳಿಯುತ್ತದೆ. ಅಮೆರಿಕದ ಅಂತರ್ಯುದ್ಧದಲ್ಲಿ ತಂದೆ–ಮಗ, ಅಣ್ಣ–ತಮ್ಮ ಬೇರೆ ಬೇರೆ ಪಕ್ಷಗಳಲ್ಲಿದ್ದು ಒಬ್ಬರನ್ನೊಬ್ಬರು ಕೊಂದದ್ದುಂಟು.

1969ರಲ್ಲಿ ನೈಜೀರಿಯದಲ್ಲಿ ಕೇಂದ್ರ ಸರಕಾರ ಮತ್ತು ಬಯಾಫ್ರಾ ಪ್ರಾಂತದ ಜನರ ನಡುವೆ ಅಂತರ್ಯುದ್ಧ ನಡೆಯಿತು. 1.500 ಕೋಟಿ ರೂ. ವ್ಯಯವಾಯಿತು. 50 ಲಕ್ಷಕ್ಕೂ ಹೆಚ್ಚು ಜನ ಸತ್ತರು. ಸಹಸ್ರಗಟ್ಟಲೆ

ಅಮೆರಿಕದಲ್ಲಿ ಅಂತರ್ಯುದ್ಧ ನಾಲ್ಕು ವರ್ಷ ನಡೆಯಿತು





ಅಂತರ್ಯುದ್ಧದ ಪರಿಣಾಮವಾಗಿ ಆಹಾರವಿಲ್ಲದೆ ನರಳಿದ
ಸಹಸ್ರಗಟ್ಟಲೆ ಎಳೆಯ ಮಕ್ಕಳು

ಎಳೆಯ ಮಕ್ಕಳು ಆಹಾರವಿಲ್ಲದೆ ನರಳಿದುವು. ಅಂತ್ಯದಲ್ಲಿ ಬಯೂಫ್ರಾ ಜನರು ಶರಣಾಗತರಾದರು.

ಹಿಂದೆ ಅಂತರ್ಯುದ್ಧಗಳು ಆಯಾ ದೇಶಗಳ ಮೇಲೆ ಪರಿಣಾಮ ಉಂಟುಮಾಡುತ್ತಿದ್ದವು. ಇಂದಿನ ಜಗತ್ತಿನಲ್ಲಿ ಅಂತರ್ಯುದ್ಧ ಹಲವು ರಾಷ್ಟ್ರಗಳ ಪ್ರಭಾವಕ್ಕೆ ಸಿಲುಕುತ್ತದೆ ; ಅಂತರರಾಷ್ಟ್ರೀಯ ಸಮಸ್ಯೆಯಾಗುತ್ತದೆ.

ನೋಡಿ : ಚಾರ್ಲ್ಸ್, ಮೊದಲನೆಯ ; ಪುಲಿಕೇಶಿ, ಎರಡನೆಯ ; ಲಿಂಕನ್, ಅಬ್ರಹಾಂ.

## ಅಂತರರಾಷ್ಟ್ರೀಯ ಕಾನೂನು

ನಿತ್ಯಜೀವನದಲ್ಲಿ ಆಸ್ತಿ, ಹಣ, ಮಾನನಷ್ಟ, ಹುದ್ದೆ, ಉದ್ಯಮಗಳಿಗೆ ಸಂಬಂಧಿಸಿದ ವಿವಾದಗಳನ್ನು ವ್ಯಕ್ತಿಗಳು ದೇಶದ ಕಾನೂನಿನಂತೆ ಪರಿಪರಿಸಿಕೊಳ್ಳುತ್ತಾರೆ. ದೇಶ ದೇಶಗಳ ನಡುವೆ ಏರ್ಪಡುವ ಅಂತರರಾಷ್ಟ್ರೀಯ ಜಲಮಾರ್ಗ, ಸರಕುಗಳ ಸಾಗಾಣಿಕೆ, ಸಂಪರ್ಕ ಸಾಧನಗಳು, ರಾಯಭಾರಿಗಳ ವಿನಿಮಯ ಮತ್ತು ಅವರಿಗೆ ಸಿಗಬೇಕಾದ ಗೌರವ, ರಕ್ಷಣೆಗಳಿಗೆ ಸಂಬಂಧಿಸಿದ ವಿವಾದಗಳಿಗೆ ಪರಿಹಾರ ಒದಗಿಸಲು ಅಂತರರಾಷ್ಟ್ರೀಯ ಕಾನೂನು ನೆರವಾಗುತ್ತದೆ.

ಯುದ್ಧ ಘೋಷಣೆ, ಒಪ್ಪಂದ, ರಾಯಭಾರಿಗಳನ್ನು ಕಳುಹಿಸುವುದು. ಮತ್ತಿತರ ವಿಷಯಗಳಿಗೆ ಸಂಬಂಧಿಸಿದ ನಿಯಮಗಳು ಪ್ರಾಚೀನ ಭಾರತದಲ್ಲಿ ಜಾರಿಯಲ್ಲಿದ್ದುವು. ರಾಯಭಾರಿಗಳನ್ನೂ ದೂತರನ್ನೂ ಹಿಂಸಿಸಬಾರದೆಂಬ ತತ್ತ್ವವನ್ನು ರಾಮಾಯಣದಲ್ಲಿಯೇ ಕೇಳುತ್ತೇವೆ. ಸಮುದ್ರಯಾನವನ್ನು ಕುರಿತ ನಿಯಮಗಳು ಪ್ರಾಚೀನ ಗ್ರೀಕರಲ್ಲಿ ಆಚರಣೆಯಲ್ಲಿದ್ದುವು. ರೋಮನ್ ಚಕ್ರಾಧಿಪತ್ಯ ಹಲವು ಜನಾಂಗಗಳ ಬುಡಕಟ್ಟುಗಳ ಸಮುದಾಯವಾಗಿತ್ತು, ಇವೆಲ್ಲಕ್ಕೂ ಸಾಮಾನ್ಯವಾಗಿ ಅನ್ವಯಿಸುವ ಕಾನೂನು ಆಗ ರೂಪಿತವಾಗಿತ್ತು. ಅನಂತರ ಸಿದ್ಧವಾದ ಅಂತರರಾಷ್ಟ್ರೀಯ ಕಾನೂನು ಪ್ರಾಚೀನ ರೋಮನ್ ಕಾನೂನಿನ ಮೂಲ ರೂಪವನ್ನು ಹೋಲುತ್ತದೆ. ಮಧ್ಯಯುಗದಲ್ಲಿ ಕ್ರೈಸ್ತ ಧರ್ಮಗುರು ಪೋಪರ ಪ್ರಭಾವ ಯೂರೋಪಿನಲ್ಲಿ ಕಡಮೆಯಾಗತೊಡಗಿತು. ಊಳಿಗಮಾನ್ಯ ಪದ್ಧತಿ ಅಳಿದಂತೆ ಸ್ವತಂತ್ರ ರಾಷ್ಟ್ರಗಳು ಹುಟ್ಟಿಕೊಂಡುವು. ಇವು ಪ್ರಬಲವಾಗಿ ಅಮೆರಿಕ, ಆಫ್ರಿಕ ಮತ್ತು ದೂರಪ್ರಾಚ್ಯಗಳಲ್ಲಿ ವಸಾಹತುಗಳನ್ನು ಸ್ಥಾಪಿಸತೊಡಗಿದಾಗ, ಅಂತರರಾಷ್ಟ್ರೀಯ ಕಾನೂನಿಗೆ ಪ್ರಾಶಸ್ತ್ಯ ಹೆಚ್ಚಿತು.

ಅಂತರರಾಷ್ಟ್ರೀಯ ಕಾನೂನಿನ ಪಿತಾಮಹ ಎನಿಸಿಕೊಂಡ ಹಾಲೆಂಡಿನ ನ್ಯಾಯಶಾಸ್ತ್ರಜ್ಞ ಕ್ರೈಸ್ತ ಧರ್ಮಪಂಡಿತ ಹ್ಯೂಗೋ ಗ್ರೋಷಿಯಸ್ ಖ್ಯಾತ 1625ರಲ್ಲಿ 'ಯುದ್ಧ ಮತ್ತು ಶಾಂತಿಯ ಕಾನೂನು' ಎಂಬ ಪುಸ್ತಕವನ್ನು ಪ್ರಕಟಿಸಿದ. ಅಂತರರಾಷ್ಟ್ರೀಯ ಕಾನೂನಿಗೆ ಸಂಬಂಧಿಸಿ ಇಂದಿಗೂ ಇದು ಅಮೂಲ್ಯ ಗ್ರಂಥ.

ಕಾನೂನುಗಳ ಅರ್ಥವಿವರಣೆ, ಸ್ಪಷ್ಟೀಕರಣ, ಪರಿಷ್ಕರಣ ಮತ್ತಿತರ ವಿಷಯಗಳ ಬಗೆಗೆ ನ್ಯಾಯಶಾಸ್ತ್ರಜ್ಞರು ನೀಡುವ ಅಭಿಪ್ರಾಯಗಳು ಅಂತರರಾಷ್ಟ್ರೀಯ ನಿಯಮಗಳ ತಿದ್ದುಪಾಟಿಗೆ ನೆರವಾಗುತ್ತವೆ. ರಾಷ್ಟ್ರಗಳು ಪರಸ್ಪರ ಹಿತಾಸಕ್ತಿಗಳ ಸಂಬಂಧವಾಗಿ ಮಾಡಿಕೊಂಡ ಕೌಲು–ಒಪ್ಪಂದಗಳು ಅಂತರರಾಷ್ಟ್ರೀಯ ಕಾನೂನಿನ ಬೆಳವಣಿಗೆಗೆ ಕಾರಣವಾಗುತ್ತವೆ. ಹೊಸ ನಿಯಮಗಳನ್ನು ಅನೇಕ ರಾಷ್ಟ್ರಗಳು ಅಂಗೀಕರಿಸಿದರೆ ಅದು ಅಂತರರಾಷ್ಟ್ರೀಯ ಕಾನೂನಾಗುತ್ತದೆ. ಪೌರತ್ವ, ರಾಯಭಾರಿಗಳ ವಿನಿಮಯ, ಹಕ್ಕು ಬಾಧ್ಯತೆಗಳು, ಆಮದು ರಫ್ತು ತೆರಿಗೆ, ವಿದೇಶೀ ಸುಂಕ, ರಕ್ಷಣಾ ವ್ಯವಸ್ಥೆ ಮುಂತಾದ ವಿಷಯಗಳಲ್ಲಿ ರಾಷ್ಟ್ರಗಳು ತಳೆಯುವ ಧೋರಣೆಗಳು ಅಂತರ ರಾಷ್ಟ್ರೀಯ ಕಾನೂನಿನ ಒಟ್ಟು ರೂಪವನ್ನು ನಿರ್ಧರಿಸುತ್ತವೆ. ಅಂತರ ರಾಷ್ಟ್ರೀಯ ಪದ್ಧತಿ, ಸಂಪ್ರದಾಯಗಳು, ನಾಗರಿಕ ರಾಷ್ಟ್ರಗಳೆಲ್ಲ ಒಪಿಕೊಳ್ಳುವ ಶಾಸನದ ತತ್ತ್ವಗಳು ಇವೂ ಅಂತರರಾಷ್ಟ್ರೀಯ ಕಾನೂನುಗಳಿಗೆ ಆಧಾರ. ವಿಶ್ವಸಂಸ್ಥೆಯ ಅಂತರರಾಷ್ಟ್ರೀಯ ನ್ಯಾಯಾಲಯ ತನ್ನ ಮುಂದೆ ಬಂದ ವಿವಾದಗಳ ಬಗೆಗೆ ತೀರ್ಪು ನೀಡುವುದಲ್ಲದೆ ಅಗತ್ಯದ ವಿಷಯಗಳಲ್ಲಿ ಸಲಹೆಯನ್ನೂ ಕೊಡುತ್ತದೆ. ಕಾನೂನಿನ ಬೆಳವಣಿಗೆ ನ್ಯಾಯಾಲಯದ ತೀರ್ಪುಗಳನ್ನು ಅವಲಂಬಿಸಿರುತ್ತದೆ.

ಅಂತರರಾಷ್ಟ್ರೀಯ ಕಾನೂನು ಸಾಮಾನ್ಯವಾಗಿ ರಾಷ್ಟ್ರಗಳಿಗೆ ಮಾತ್ರ ಅನ್ವಯವಾಗುವುದಾದರೂ ವಿಶೇಷ ಸಂದರ್ಭಗಳಲ್ಲಿ ರಾಷ್ಟ್ರಗಳ ವ್ಯಕ್ತಿಗಳಿಗೂ ಅನ್ವಯವಾಗುತ್ತದೆ. ಭಾರಿ ಕಳ್ಳತನಗಳು, ಕಳ್ಳಸಾಗಾಣಿಕೆ ಯಂಥ ಉದ್ದೇಶ ಹೊಂದಿರುವವರು ಬೇರೆ ಬೇರೆ ರಾಷ್ಟ್ರಗಳಿಗೆ ಸೇರಿದವರಿರಬಹುದು ; ತಮ್ಮದಲ್ಲದ ರಾಷ್ಟ್ರಗಳಲ್ಲಿ ಚಟುವಟಿಕೆಗಳನ್ನು ನಡೆಸಬಹುದು ; ತನ್ನ ದೇಶದಲ್ಲಿ ಕೊಲೆಯನ್ನೋ ಮೋಸವನ್ನೋ ಮಾಡಿದವನು ಬೇರೊಂದು ದೇಶಕ್ಕೆ ಹೋಗಿ ಸೇರಿಕೊಂಡುಬಿಡಬಹುದು. ಇಂಥವರನ್ನು ಹಿಡಿದು ಶಿಕ್ಷಿಸಲು ಅಂತರರಾಷ್ಟ್ರೀಯ ಕಾನೂನು ನೆರವಾಗುತ್ತದೆ.

ಅಂತರರಾಷ್ಟ್ರೀಯ ಕಾನೂನಿನಲ್ಲಿ ಶಾಂತಿಕಾಲದ ವಿಧಿಗಳು, ಯುದ್ಧ ಕಾಲದ ವಿಧಿಗಳು ಮತ್ತು ತಟಸ್ಥ ರಾಷ್ಟ್ರಗಳಿಗೆ ಅನ್ವಯಿಸುವ ವಿಧಿಗಳು ಎಂಬ ವಿಭಾಗಗಳಿವೆ.

ರಾಷ್ಟ್ರದ ಸ್ವಾತಂತ್ರ್ಯ, ಸಾರ್ವಭೌಮತ್ವಗಳಿಗೆ ಸಂಬಂಧಪಟ್ಟ ಹಕ್ಕು ಬಾಧ್ಯತೆ, ರಾಷ್ಟ್ರಗಳ ಆಸ್ತಿಪಾಸ್ತಿ, ತೀರ ಪ್ರದೇಶದ ನೀರಿನ ಹಕ್ಕು, ಪರದೇಶೀಯರ ನಡವಳಿಕೆ ನಿಯಮ, ರಾಯಭಾರ ವ್ಯವಸ್ಥೆ ಇವು ಶಾಂತಿಕಾಲದ

ವಿಧಿಗಳ ವ್ಯಾಪ್ತಿಗೊಳಪಡುತ್ತವೆ. ಅಮೆರಿಕ ಭೂಖಂಡದ ರಾಷ್ಟ್ರಗಳ ಸಂಘ (1948) ಅಂತರರಾಷ್ಟ್ರೀಯ ಕಾನೂನನ್ನು ಶಾಂತಿಕಾಲದಲ್ಲಿ ಆಚರಣೆಗೆ ತರುವ ಒಂದು ಪ್ರಯತ್ನ. ಅಮೆರಿಕದ ಸಂಯುಕ್ತ ಸಂಸ್ಥಾನವೂ ಲ್ಯಾಟಿನ್ ಅಮೆರಿಕನ್ ದೇಶಗಳೂ ಈ ಸಂಘಕ್ಕೆ ಸೇರಿವೆ. ಇದರ ಪ್ರಕಾರ ಒಂದು ರಾಷ್ಟ್ರ ಇನ್ನೊಂದು ರಾಷ್ಟ್ರದ ಒಳ ಆಡಳಿತದಲ್ಲಿ ಕೈಹಾಕುವುದಿಲ್ಲ. ಭಿನ್ನಾಭಿಪ್ರಾಯಗಳನ್ನು ಯುದ್ಧವಿಲ್ಲದೆ ಪರಿಹರಿಸಿಕೊಳ್ಳಲು ಒಪ್ಪಿವೆ.

ಯುದ್ಧದ ಘೋಷಣೆ ಮತ್ತು ವಿಧಾನ, ಶಸ್ತ್ರಾಸ್ತ್ರಗಳು, ವಶಪಡಿಸಿಕೊಂಡ ಶತ್ರುವಿನ ಆಸ್ತಿಪಾಸ್ತಿಗಳು, ಸೆರೆಹಿಡಿದ ಸೈನಿಕರ ಮೇಲ್ವಿಚಾರಣೆ ಮುಂತಾದುವು ಯುದ್ಧಕಾಲದ ವಿಧಿಗಳ ವ್ಯಾಪ್ತಿಗೆ ಒಳಪಡುತ್ತವೆ. ಉದಾಹರಣೆಗೆ ಸೆರೆಸಿಕ್ಕವರನ್ನು ಕೊಲ್ಲಬಾರದು, ಗುಲಾಮರನ್ನಾಗಿ ಮಾಡಬಾರದು. ಅವರನ್ನು ನಾಗರಿಕ ರೀತಿಯಲ್ಲಿ ಕಾಣಬೇಕು. ಆಸ್ಪತ್ರೆಗಳ ಮೇಲೆ ಬಾಂಬು ಹಾಕಬಾರದು. 1907ರಲ್ಲಿ ರೂಪುಗೊಂಡ ಹೇಗ್ ಒಪ್ಪಂದ, ಭೂಮಿ ಮತ್ತು ಸಮುದ್ರಗಳ ಮೇಲಿನ ಕದನಗಳಿಗೆ ಸಂಬಂಧಿಸಿದಂತೆ ನಿಯಮಗಳನ್ನು ಸಿದ್ಧಗೊಳಿಸಿತು. ಆದರೆ ವಾಯುಕದನಗಳಿಗೆ ಸಂಬಂಧಿಸಿದಂತೆ ನಿಯಮಗಳಿಲ್ಲ.

ಯುದ್ಧ ಸಂಭವಿಸಿದಾಗ ಅದರಲ್ಲಿ ಭಾಗವಹಿಸಿದ ತಟಸ್ಥ ರಾಷ್ಟ್ರಗಳು ವರ್ತಿಸಬೇಕಾದ ರೀತಿ, ಯುದ್ಧದಲ್ಲಿ ತೊಡಗಿರುವ ರಾಷ್ಟ್ರಗಳು ಅವನ್ನು ನಡೆಸಿಕೊಳ್ಳಬೇಕಾದ ಬಗೆ ಇತ್ಯಾದಿ ವಿಷಯಗಳಲ್ಲಿ ತಟಸ್ಥ ರಾಷ್ಟ್ರಗಳಿಗೆ ಅನ್ವಯವಾಗುವ ವಿಧಿಗಳು ಇನ್ನೊಂದು ವಿಭಾಗ.

ರಾಷ್ಟ್ರಗಳು ಸ್ವತಂತ್ರವಾಗಿದ್ದರೂ, ಯಾವುದೂ ತಾನೊಂದೇ ಬದುಕಿ ಬಾಳಲು ಸಾಧ್ಯವಿಲ್ಲ. ಹಲವು ರೀತಿಗಳಲ್ಲಿ ಅವು ಒಂದರೊಡನೊಂದು ಸಹಕರಿಸಿಯೇ ಬದುಕಬೇಕು. ಈ ತಿಳಿವಳಿಕೆಯೇ ಅಂತರರಾಷ್ಟ್ರೀಯ ಕಾನೂನಿನ ಅಡಿಗಲ್ಲು. ಅಂತರರಾಷ್ಟ್ರೀಯ ಕಾನೂನು ಎಲ್ಲ ರಾಷ್ಟ್ರಗಳ ಹಿತದ ಸಲುವಾಗಿ ಎಲ್ಲ ರಾಷ್ಟ್ರಗಳ ಸಹಭಾಗಿತ್ವದಿಂದ ಕೂಡಿದ ಕಟ್ಟುಪಾಡು.

ನೋಡಿ : ಅಂತರರಾಷ್ಟ್ರೀಯ ಸಂಬಂಧ

## ಅಂತರರಾಷ್ಟ್ರೀಯ ಸಂಬಂಧ

ಯಾವ ಮನುಷ್ಯನೂ ತನ್ನ ಮನೆಯಲ್ಲಿ ತನ್ನ ಪಾಡಿಗೆ ಇದ್ದುಬಿಡಲು ಸಾಧ್ಯವಿಲ್ಲ. ಅವನಿಗೆ ನೆರೆಹೊರೆಯ ಜನರ ಸಂಬಂಧ ಬಂದೇ ಬರುತ್ತದೆ. ನೆರೆಹೊರೆಯವರು ಒಳ್ಳೆಯವರಾಗಿರಲಿ ಬಿಡಲಿ, ಅವರ ಜೊತೆಗೆ ಸಮಾಧಾನದಿಂದ ಬಾಳಲು ಆತ ಪ್ರಯತ್ನಿಸಬೇಕು.

ಒಬ್ಬ ವ್ಯಕ್ತಿಯ ಬಾಳಿನಂತೆ ಒಂದು ರಾಷ್ಟ್ರದ ಜೀವನ. ಅದು ನೆರೆಹೊರೆಯ ರಾಷ್ಟ್ರಗಳೊಂದಿಗೆ ಮಿತ್ರನಂತೆ ಇರಬೇಕು. ತನ್ನ ಸುತ್ತಮುತ್ತಲಿನ ದೇಶಗಳಲ್ಲದೆ, ಪ್ರಪಂಚದ ಎಲ್ಲ ರಾಷ್ಟ್ರಗಳ ಸಂಗಡವೂ ಸ್ನೇಹದಿಂದ ಬಾಳಬೇಕು. ರಾಷ್ಟ್ರ ರಾಷ್ಟ್ರಗಳಲ್ಲಿಯ ಸಂಬಂಧ ಸ್ನೇಹಮಯವಾಗಿರಬೇಕಾಗುತ್ತದೆ. ವೈಬಣ್ಣ, ಮತ, ಆಡಳಿತ ರೀತಿ—ಇವುಗಳಲ್ಲಿ ವ್ಯತ್ಯಾಸ ಏನೇ ಇರಲಿ, ಸಹಬಾಳ್ವೆ ಸಾಧಿಸಿದರೆ ಮಾನವಕುಲಕ್ಕೆ ಶಾಂತಿ. ಇದು ಅಂತರರಾಷ್ಟ್ರೀಯ ಸಂಬಂಧಗಳನ್ನು ಹೊಂದಿಕೊಂಡಿದೆ.

ರಾಷ್ಟ್ರದ ಕಲ್ಪನೆ ಬರುವುದಕ್ಕೆ ಮೊದಲು ರಾಜ್ಯಗಳಿದ್ದುವು. ಭಾರತದಲ್ಲಿಯೇ ಹಲವಾರು ರಾಜ್ಯಗಳಿದ್ದುವು. ಇಂಗ್ಲೆಂಡ್, ಸ್ಕಾಟ್ಲೆಂಡ್‌ಗಳು ಬೇರೆ ಬೇರೆ ರಾಜ್ಯಗಳಾಗಿ ಹೋರಾಡುತ್ತಿದ್ದ ಕಾಲವಿತ್ತು. ಹಿಂದೆ ಗ್ರೀಸಿನಲ್ಲಿ ಒಂದೊಂದು ನಗರವೂ ಒಂದೊಂದು ರಾಜ್ಯ. ಬೇರೆ ಬೇರೆ ಆಡಳಿತಗಳ ಅಧೀನದಲ್ಲಿರುವ ಜನರ ಪರಸ್ಪರ ಸಂಬಂಧ ಎಲ್ಲ ಕಾಲಗಳಲ್ಲೂ ಮುಖ್ಯವಾಗಿದೆ. ಭಾರತದಲ್ಲಿ ರಾಜ್ಯಗಳ ಪರಸ್ಪರ ಸಂಬಂಧ ಸ್ನೇಹಮಯವಾಗಿ ಇರದಿದ್ದುದರಿಂದ ಇಲ್ಲಿನ ಜನರಿಗೆ ನೆಮ್ಮದಿ ಇರಲಿಲ್ಲ. ಹೊರಗಿನವರು ಇಲ್ಲಿ ಸಾಮ್ರಾಜ್ಯಗಳನ್ನು ಕಟ್ಟುವುದು ಸುಲಭವಾಯಿತು.

ವಿಜ್ಞಾನ ಬೆಳೆದಂತೆ ನಿಸರ್ಗದ ಮೇಲೆ ಮನುಷ್ಯನ ಪ್ರಭುತ್ವ ಹೆಚ್ಚಿತು. ಇದರಿಂದ ಪ್ರಪಂಚ ಚಿಕ್ಕದಾಯಿತು. ಎಂದರೆ ರಾಷ್ಟ್ರಗಳು ಹತ್ತಿರ ಹತ್ತಿರ ಬಂದುವು. ಒಂದರ ಸಹಾಯ ಇನ್ನೊಂದು ಪಡೆಯುವುದರ ಅಗತ್ಯ ಹೆಚ್ಚಿತು. ದೇಶದಿಂದ ದೇಶಕ್ಕೆ ಓಡಾಟ ಸುಲಭವಾಯಿತು, ಹೆಚ್ಚಾಯಿತು. ಒಂದು ದೇಶದ ಎಣ್ಣೆ, ಕಲ್ಲಿದ್ದಲು, ಪೆಟ್ರೋಲಿಯಂ ಇನ್ನೊಂದು ದೇಶದ ಕಾರಖಾನೆಗಳಿಗೆ ಮತ್ತು ವಾಹನಗಳಿಗೆ ಬೇಕು. ಒಂದು ದೇಶದ ಸಾಮಾನುಗಳು ಮತ್ತೊಂದು ದೇಶದಲ್ಲಿ ಮಾರಾಟವಾಗಬೇಕು. ಒಂದು ದೇಶದ ತಾಂತ್ರಿಕ ಜ್ಞಾನ ಬೇರೊಂದು ದೇಶಕ್ಕೆ ಬೇಕು. ಒಂದು ದೇಶದ ಬಂದರುಗಳನ್ನೂ ವಿಮಾನ ನಿಲ್ದಾಣಗಳನ್ನೂ ಇನ್ನು ಹತ್ತು ದೇಶಗಳು ಬಳಸಬೇಕು. ಎರಡು ರಾಷ್ಟ್ರಗಳ ನಡುವೆ ಯುದ್ಧ ಪ್ರಾರಂಭವಾದರೆ ಜಗತ್ತೇ ಅದರ ಸುಳಿಯಲ್ಲಿ ಸಿಕ್ಕುವ ಸಂಭವ ಉಂಟು. ಹೀಗಾಗಿ, ಅಂತರ ರಾಷ್ಟ್ರೀಯ ಸಂಬಂಧಗಳು ಯಾವಾಗಲೂ ಮುಖ್ಯ.

ರೂಢಿಯಲ್ಲಿ ರಾಷ್ಟ್ರರಾಷ್ಟ್ರಗಳ ಈ ಸಂಬಂಧಗಳನ್ನು ರೂಪಿಸುವಾಗ ಪ್ರತಿ ರಾಷ್ಟ್ರವೂ ತನ್ನ ಹಿತಾಸಕ್ತಿಗಳನ್ನು ಗಮನಿಸುತ್ತದೆ. "ಯಾವ ರಾಷ್ಟ್ರಕ್ಕೂ ನಿರಂತರ ಶತ್ರುಗಳಿಲ್ಲ, ನಿರಂತರ ಮಿತ್ರರಿಲ್ಲ, ನಿರಂತರ ಹಿತಾಸಕ್ತಿಗಳಿರುತ್ತವೆ, ಅಷ್ಟೆ," ಎಂದು ಹೇಳುವುದುಂಟು. ತನ್ನ ಅನುಕೂಲ ಕಂಡಂತೆ ಒಂದು ರಾಷ್ಟ್ರ ತನ್ನ ಹಿಂದಿನ ಶತ್ರುಗಳೊಡನೆ ಸ್ನೇಹವನ್ನು ಬೆಳಸಬಹುದು. ನೂರಾರು ವರ್ಷಗಳ ಕಾಲ ಇಂಗ್ಲೆಂಡ್, ಫ್ರಾನ್ಸ್‌ಗಳು ಯುದ್ಧ ಮಾಡುತ್ತಿದ್ದುವು ; ಕಳೆದ ಎರಡು ಮಹಾಯುದ್ಧಗಳಲ್ಲಿ ಅವು ಮಿತ್ರ ರಾಷ್ಟ್ರಗಳಾಗಿದ್ದುವು. ಇಟಲಿ ಮೊದಲನೆಯ ಮಹಾಯುದ್ಧದಲ್ಲಿ ಜರ್ಮನಿಯ ವಿರುದ್ಧವಾಗಿತ್ತು. ಎರಡನೆಯ ಮಹಾಯುದ್ಧದಲ್ಲಿ ಜರ್ಮನಿಗೆ ನೆರವಾಯಿತು. ಪೆಟ್ರೋಲಿಯಮಿಗಾಗಿ ಹಲವು ಪಾಶ್ಚಾತ್ಯ ರಾಷ್ಟ್ರಗಳು ಅರಬಿ ರಾಷ್ಟ್ರಗಳೊಂದಿಗೆ ಸ್ನೇಹ ಬೆಳೆಸಿವೆ. ಬಹು ಕಾಲ ಯೂರೋಪಿನ ರಾಷ್ಟ್ರಗಳು ಅಂತರರಾಷ್ಟ್ರೀಯ ಸಂಬಂಧಗಳಲ್ಲಿ ಬಲಸಮತೋಲನ ನೀತಿಯನ್ನು ಅನುಸರಿಸುತ್ತಿದ್ದುವು. ಪ್ರತಿ ರಾಷ್ಟ್ರ ತನ್ನ ಹಿತವನ್ನು ಗಮನಿಸುವಾಗ ಘರ್ಷಣೆಯಾಗದಂತೆ ನೋಡಿಕೊಳ್ಳಲು, ಮೊದಲು ರಾಷ್ಟ್ರಸಂಘ, ಬಳಿಕ ವಿಶ್ವಸಂಸ್ಥೆ, ಜನ್ಮ ತಾಳಿದುವು.

ಅಂತರರಾಷ್ಟ್ರೀಯ ಸಂಬಂಧಗಳು ಕಾರ್ಯರೂಪಕ್ಕೆ ಬರುವ ವಿಧಾನಗಳು ಹಲವು. ಸಾಮಾನ್ಯವಾಗಿ ಪ್ರತಿ ದೇಶ ತನ್ನ ರಾಯಭಾರಿಯನ್ನು ಇನ್ನೊಂದು ದೇಶದಲ್ಲಿ ಇರಿಸುತ್ತದೆ. ಎರಡು ಸರಕಾರಗಳೂ ರಾಯಭಾರಿಗಳ ಮೂಲಕ ಸಂಪರ್ಕ ಇಟ್ಟುಕೊಂಡಿರುತ್ತವೆ, ವಿಷಯವನ್ನು ಸಂಗ್ರಹಿಸುತ್ತವೆ, ವಿವರಣೆಗಳನ್ನು ಪಡೆಯುತ್ತವೆ. ರಾಯಭಾರಿ, ತಾನಿರುವ ರಾಷ್ಟ್ರದಲ್ಲಿ, ತನ್ನ ರಾಷ್ಟ್ರದ ಮತ್ತು ರಾಷ್ಟ್ರೀಯರ ಹಿತರಕ್ಷಣೆ ಮಾಡುತ್ತಾನೆ. ಎರಡು ರಾಷ್ಟ್ರಗಳಿಗೆ ಮನಸ್ತಾಪ ಬಂದಾಗ ಒಂದು ರಾಷ್ಟ್ರ ಇನ್ನೊಂದರಿಂದ ತನ್ನ ರಾಯಭಾರಿಯನ್ನು ಹಿಂದಕ್ಕೆ ಕರೆಸುವುದು ಅಸಮಾಧಾನವನ್ನು ತೋರಿಸುವ ಒಂದು ರೀತಿ. ಅಂಥ ಸಂದರ್ಭದಲ್ಲಿ, ಹಿಂದಕ್ಕೆ ರಾಯಭಾರಿಯನ್ನು ಕರೆಸುವ ರಾಷ್ಟ್ರ, ತನ್ನ ಹಿತವನ್ನು ನೋಡಿಕೊಳ್ಳುವಂತೆ ಆ ದೇಶದೊಡನೆ ರಾಯಭಾರ ಸಂಬಂಧವಿರುವ ಇನ್ನೊಂದು ರಾಷ್ಟ್ರವನ್ನು ಕೇಳಿಕೊಳ್ಳುತ್ತದೆ.

ವಿಶಿಷ್ಟ ಗುರಿಗಳಿಗಾಗಿ ಕೆಲವು ರಾಷ್ಟ್ರಗಳು ಒಂದುಗೂಡಬಹುದು. ಎರಡನೆಯ ಮಹಾಯುದ್ಧದ ಕಾಲದಲ್ಲಿ ಹಲವು ರಾಷ್ಟ್ರಗಳು ತಮ್ಮ ಸೈನ್ಯ

ಗಳನ್ನು ಒಂದು ಉಚ್ಚ ದಂಡನಾಯಕತ್ವದ ಅಧೀನಕ್ಕೆ ಒಪ್ಪಿಸಿವೆ. ಸೆಂಟೊ, ನೇಟೊ ಇವು ಈ ಬಗೆಯ ಅಂತರರಾಷ್ಟ್ರೀಯ ವ್ಯವಸ್ಥೆಗಳು.

ರಾಷ್ಟ್ರಗಳು ವಿಶ್ವಸಂಸ್ಥೆಯ ಮೂಲಕ ಪರಸ್ಪರ ಸಂಬಂಧವನ್ನು ಬೆಳೆಸುತ್ತವೆ. ಯುದ್ಧವಾಗುವ ಸೂಚನೆ ಕಂಡ ಕೂಡಲೆ ಅದನ್ನು ತಡೆಗಟ್ಟಲು ವಿಶ್ವಸಂಸ್ಥೆ ಪ್ರಯತ್ನಿಸುತ್ತದೆ. ಅಲ್ಲದೆ ವಿಶ್ವ ಆರೋಗ್ಯ ಸಂಸ್ಥೆ, ಅಂತರ ರಾಷ್ಟ್ರೀಯ ಆರ್ಥಿಕ ಸಂಸ್ಥೆ ಮೊದಲಾದ ಅಂಗಗಳ ಮೂಲಕ ಹಲವು ರಾಷ್ಟ್ರಗಳು ಒಟ್ಟಿಗೆ ಕೆಲಸ ಮಾಡುತ್ತವೆ. ತಮ್ಮ ಸಂಪತ್ತಿನ ಹಾಗೂ ಜ್ಞಾನದ ಹಂಚಿಕೆಯನ್ನು ಸಾಧ್ಯಗೊಳಿಸುತ್ತವೆ.

ಸಾಂಸ್ಕೃತಿಕ ನಿಯೋಗಗಳು, ತಜ್ಞರ ನಿಯೋಗಗಳು, ವಿದ್ಯಾರ್ಥಿಗಳ ಮತ್ತು ಶಿಕ್ಷಕರ ವಿನಿಮಯ ಇಂಥ ಯೋಜನೆಗಳಿಂದ ಕೆಲವು ರಾಷ್ಟ್ರಗಳು ತಮ್ಮ ತಮ್ಮಲ್ಲಿನ ಸಂಬಂಧವನ್ನು ಉತ್ತಮಗೊಳಿಸಿಕೊಳ್ಳಲು ಪ್ರಯತ್ನಿಸುತ್ತವೆ. ಈಚೆಗಿನ ಒಂದು ಯೋಜನೆ ಎಂದರೆ, ಎರಡು ರಾಷ್ಟ್ರಗಳ ಎರಡು ಊರುಗಳ ಪೌರರು ಪತ್ರಗಳ ಮೂಲಕ, ಭೇಟಿಯ ಮೂಲಕ, ಉಡುಗೊರೆಗಳ ಮೂಲಕ ತಮ್ಮ ರಾಷ್ಟ್ರಗಳ ಸಂಬಂಧವನ್ನು ಮಧುರಗೊಳಿಸುವುದು. ಅಮೆರಿಕ ಸಂಯುಕ್ತ ಸಂಸ್ಥಾನದ ಡೇರಿಯೆನ್ ಮತ್ತು ಭಾರತದಲ್ಲಿನ ಮೈಸೂರು ರಾಜ್ಯದ ಮಡಿಕೇರಿ ಇಂಥ ವಿಶಿಷ್ಟ ಸಂಬಂಧವನ್ನು ರೂಪಿಸಿಕೊಂಡಿವೆ. ಸೋವಿಯೆತ್ ಒಕ್ಕೂಟದ ಬೈಲೊರಷ್ಯದ ರಾಜಧಾನಿ ಮಿನ್ಸ್ಕ್‌ಗೆ ಬೆಂಗಳೂರು ಸೋದರಿ ನಗರವಾಗಿದೆ.

ನೋಡಿ : ಅಂತರರಾಷ್ಟ್ರೀಯ ಕಾನೂನು ; ಐರೋಪ್ಯ ಸಾಮಾನ್ಯ ಮಾರುಕಟ್ಟೆ ; ಬಲಸಮತೋಲನ; ನೇಟೊ; ರಾಯಭಾರಿ ; ಸೆಂಟೊ; ಸಿಯಾಟೊ.

## ಅಕ್ಬರ್



"ದೊಡ್ಡ ಸಾಮ್ರಾಜ್ಯದ ಪ್ರಭು ನಾನು. ಸರಕಾರದ ಸಾಧನಗಳೆಲ್ಲ ನನ್ನ ಕೈಯಲ್ಲಿ, ಆದರೆ ನಿಜವಾದ ಹಿರಿಮೆ ದೇವರ ಚಿತ್ತದಂತೆ ನಡೆಯುವುದರಲ್ಲಿ. ಆದುದರಿಂದ ಈ ಮತಗಳ ಮತ್ತು ಪಂಥಗಳ ವೈವಿಧ್ಯದಿಂದ ನನಗೆ ನೆಮ್ಮದಿಯಿಲ್ಲ. ನನ್ನ ಸ್ಥಾನದ ವೈಭವವೆಲ್ಲ ಹಾಗಿರಲಿ, ಈ ಬೇಸರದಲ್ಲಿ ನಾನು ಸಾಮ್ರಾಜ್ಯದ ಆಡಳಿತಕ್ಕೆ ಹೇಗೆ ತಾನೇ ಮನಸ್ಸು ಕೊಡಲಿ? ನನ್ನ ಅಂತರಾತ್ಮದ ಸಂಶಯಗಳನ್ನು ಪರಿಹರಿಸುವ ಮಹಾನುಭಾವನನ್ನು ಇದಿರು ನೋಡುತ್ತಿದ್ದೇನೆ."

ಈ ಮಾತುಗಳನ್ನಾಡಿದವನು ನಾಲ್ಕುನೂರು ವರ್ಷಗಳ ಹಿಂದೆ ಭಾರತವನ್ನು ಆಳುತ್ತಿದ್ದ ಮೊಗಲ್ ಸಮ್ರಾಟ ಅಕ್ಬರ್.

ಅವನ ಪೂರ್ಣ ಹೆಸರು ಜಲಾಲುದ್ದೀನ್ ಮಹಮ್ಮದ್ ಅಕ್ಬರ್. ಹುಮಾಯೂನ್ ಆತನ ತಂದೆ. ಹದಿಮೂರು ವರ್ಷದವನಾಗಿದ್ದಾಗಲೇ ಪಂಜಾಬಿನ ಸುಬೇದಾರನಾಗಿ ನೇಮಕಗೊಂಡ. ಕೆಲವು ತಿಂಗಳ ಅನಂತರ ಹುಮಾಯೂನ್ ಮರಣಹೊಂದಲು, ಚಿಕ್ಕ ವಯಸ್ಸಿನಲ್ಲಿಯೇ ಅಕ್ಬರ್ ಸಿಂಹಾಸನವನ್ನು ಏರಬೇಕಾಯಿತು. ಆಗ ಮೊಗಲ್ ಸಾಮ್ರಾಜ್ಯದ ವಿಸ್ತಾರ ಭಾರತದ ಎಂಟರಲ್ಲಿ ಒಂದು ಭಾಗ. ಸಚಿವ ಬೈರಾಂಖಾನ್ ಕಿರಿಯ ಅಕ್ಬರನ ರಕ್ಷಣೆಯ ಭಾರವನ್ನು ಹೊತ್ತುಕೊಂಡ.

ಆಳ್ವಿಕೆಯ ಮೊದಲ ವರ್ಷಗಳಲ್ಲಿ ಅಕ್ಬರ್ ಅನೇಕ ಕಷ್ಟಗಳನ್ನು ಎದುರಿಸಬೇಕಾಯಿತು. ಆದರೆ ಗುರುವಿನಂತಿದ್ದ ಸಚಿವ ಬೈರಾಂಖಾನನ ಮಾರ್ಗದರ್ಶನ ಮತ್ತು ಆಡಳಿತ ಕೌಶಲ ಅವನ ನೆರವಿಗೆ ಬಂದುವು. ಅಕ್ಬರ್ ಕ್ರಮೇಣ ತನ್ನ ರಾಜ್ಯವನ್ನು ವಿಸ್ತರಿಸಿ 1576 ರ ಹೊತ್ತಿಗೆ ಮೇವಾಡವಿನಾ ಭಾರತಕ್ಕೆಲ್ಲ ಪ್ರಭುವಾದ. ಅನಂತರ ಒಂದು ಸುಸಂಬದ್ಧ ಶಾಸನ ವ್ಯವಸ್ಥೆಯನ್ನು ಅಕ್ಬರ್ ತನ್ನ ರಾಜ್ಯದಲ್ಲಿ ರೂಢಿಗೆ ತಂದ.

ಮೊದಲಿನಿಂದಲೂ ಅಕ್ಬರನಲ್ಲಿ ವಿಶೇಷವಾಗಿದ್ದುದು ಅಸಾಧಾರಣ ತಾಳ್ಮೆ. ಜಾತಿ ಮತ ಭೇದಗಳನ್ನು ಅಳಿಸಲು ಮತ್ತು ಮುಸಲ್ಮಾನರಲ್ಲದವರ ಪ್ರೀತಿವಿಶ್ವಾಸಗಳನ್ನೂ ಪಡೆಯಲು ಆತ ಬಹುವಾಗಿ ಶ್ರಮಿಸಿದ. ಹಿಂದೂಗಳ ಪ್ರೇಮವನ್ನು ಸಂಪಾದಿಸಿದ ಹೊರತು ಆಡಳಿತ ಸುಗಮವಾಗುವುದಿಲ್ಲ ಎಂದು ಮನಗಂಡು, ಅವರನ್ನು ಒಲಿಸಲು ಮುಂದಾದ. ಜೆಜಿಯ ಎನ್ನುವ ತಲೆಗಂದಾಯವನ್ನು ತೆಗೆದುಹಾಕಿದ; ಸೈನ್ಯದಲ್ಲಿ ಮತ್ತು ಆಸ್ಥಾನದಲ್ಲಿ ರಜಪೂತರಿಗೆ ಹಿರಿಯ ಸ್ಥಾನಗಳನ್ನು ನೀಡಿದ.

ಅಕ್ಬರ್ ಬಹು ವಿಚಾರಶೀಲ, ಜಿಜ್ಞಾಸು. ಫತೇಪುರ್ ಸಿಕ್ರಿಯಲ್ಲಿ ಒಂದು ಪ್ರಾರ್ಥನಾಗೃಹ ಕಟ್ಟಿಸಿ, ತಮ್ಮ ತಮ್ಮ ಮತದ ಬಗೆಗೆ ವಾದಿಸಲು ಎಲ್ಲ ಮತಗಳ ಅನುಯಾಯಿಗಳನ್ನು ಆಹ್ವಾನಿಸಿದ. ಎಲ್ಲ ಧರ್ಮಗಳ ಒಳ್ಳೆಯ ಗುಣಗಳನ್ನು ಒಳಗೊಂಡ ಒಂದು ಹೊಸ ಮತವನ್ನು (ದೀನ್ ಇಲಾಹಿ—ವಿಶ್ವಶಾಂತಿ) ಸ್ಥಾಪಿಸಲು ಪ್ರಯತ್ನಿಸಿದ. ಆದರೆ ಈ ಮತಕ್ಕೆ ಹೆಚ್ಚು ಬೆಂಬಲ ದೊರೆಯಲಿಲ್ಲ.

ಸ್ವತಃ ಓದಲು ಬರದಿದ್ದರೂ ಎಂಥ ಗಹನ ವಿಚಾರವನ್ನಾದರೂ ಕೂಲಂಕಷವಾಗಿ ತಿಳಿದುಕೊಳ್ಳುತ್ತಿದ್ದ. ಅವನ ಆಸ್ಥಾನದಲ್ಲಿ ಹಲವಾರು ವಿದ್ವಾಂಸರೂ ಕಲಾವಿದರೂ ಇದ್ದರು. ಕವಿ ಅಬ್ದುಲ್ ಫಜಲ್ ಫೈಜಿ, ಸಂಗೀತಗಾರ ತಾನ್‌ಸೇನ್, ಸೇನಾನಿಗಳು ಮಾನಸಿಂಹ—ತೋಡರಮಲ್, ನಗೆಗಾರ ಬೀರಬಲ್ ಮುಂತಾದವರೆಲ್ಲ ಅಲ್ಲಿದ್ದರು.

ಅಕ್ಬರ್ ಹಲವು ಸಮಾಜ ಸುಧಾರಣೆಗಳನ್ನು ಮಾಡಿದ. ಸಹಗಮನ ಪದ್ಧತಿಯನ್ನು ವಿರೋಧಿಸಿದ. ವಿಧವೆಯರ ವಿವಾಹಕ್ಕೆ ಅನುಮತಿ ದೊರೆಯಿತು. ಗುಲಾಮಗಿರಿಯನ್ನೂ ಪ್ರಾಣಿ ಬಲಿಯನ್ನೂ ಕೊನೆಗಾಣಿಸಿದ ಅನೇಕ ಶಾಲೆಗಳನ್ನು ಕಟ್ಟಿಸಿದ. ದೇಶದ ಆರ್ಥಿಕ ಪರಿಸ್ಥಿತಿ ಉತ್ತಮವಾಯಿತು. ಅಪ್ರಾಮಾಣಿಕ ಅಧಿಕಾರಿಗಳಿಂದ ಜನರಿಗೆ ರಕ್ಷಣೆ ದೊರೆಯಿತು. ಕಾವಲುಪಡೆ ವ್ಯವಸ್ಥಿತಗೊಂಡಿತು. ಹೊಸ ರಸ್ತೆಗಳು ನಿರ್ಮಾಣವಾದುವು.

ಬಾಲ್ಯದಲ್ಲಿ ಅಕ್ಬರನಿಗೆ ಓದಿನಲ್ಲಿ ಆಸಕ್ತಿಯಿರಲಿಲ್ಲ. ಬೇಟೆ, ಕುದುರೆ ಸವಾರಿ, ಪೋಲೋಗಳು ಇವನನ್ನು ಆಕರ್ಷಿಸಿದುವು. ರಾತ್ರಿಯ ಹೊತ್ತು ಪೋಲೋ ಆಡಲು ಸಾಧ್ಯವಾಗುವಂತೆ ಕತ್ತಲಲ್ಲಿ ಹೊಳೆಯುವ ಚೆಂಡನ್ನು ಮಾಡಿಸಿದ್ದ. ಮದ್ದಾನೆಗಳನ್ನು ಪಳಗಿಸುವುದೆಂದರೆ ಅವನಿಗೆ ಬಹಳ ಆಸೆ. ಕ್ರೌರ್ಯವೂ ಅವನಲ್ಲಿದ್ದಿತು. ಆದರೆ ಅವನಲ್ಲಿ ಆದ ಮಾರ್ಪಾಡು ಆಶ್ಚರ್ಯಕರವಾದದ್ದು. ಪ್ರೌಢ ವಯಸ್ಸಿನಲ್ಲಿ ಬಹಳ ಕುತೂಹಲ ಸ್ವಭಾವದವನಾಗಿದ್ದ. ವಿಜ್ಞಾನದಲ್ಲಿ ಸಹ ಅವನಿಗೆ ಆಸಕ್ತಿಯಿದ್ದಿತು. ಯುದ್ಧ ವಿದ್ಯೆಯಲ್ಲಿ ನಿಸ್ಸೀಮ. ಅವನು ಶಕ್ತ ಸೇನಾಧಿಕಾರಿ. ಅಕ್ಬರ್ ಬಹಳ ಮಟ್ಟಿಗೆ ಆ ಕಾಲದ ರಜಪೂತ ಅರಸರನ್ನು ಒಲಿಸಿಕೊಂಡರೂ ಮೇವಾಡದ ಸ್ವಾಭಿಮಾನಿ ಅರಸು ರಾಣಾ ಪ್ರತಾಪಸಿಂಹ ಆತನಿಗೆ ತಲೆಬಾಗಲಿಲ್ಲ. ಅವನನ್ನು ಒಲಿಸಿಕೊಳ್ಳದೆ ಹೋದೆ ಎಂಬ ಕೊರಗು ಅಕ್ಬರನನ್ನು ಬಹಳ ಕಾಲ ಕಾಡಿತು. ಅವನ ಆಡಳಿತ ಬಲು ಬಿಗಿಯಾಗಿದ್ದಿತು. ದೂರ ಪ್ರದೇಶಗಳ ಮುಖ್ಯ ಅಧಿಕಾರಸ್ಥಾನಗಳಿಗೆ ತಾನೇ ಜನರನ್ನು ಆರಿಸುತ್ತಿದ್ದ.

ಭಾರತದ ಹಿರಿಯ ಸಮ್ರಾಟರಲ್ಲಿ ಒಬ್ಬನೆನಿಸಿಕೊಂಡು 1605ರಲ್ಲಿ ತನ್ನ ಅರವತ್ತಮೂರನೆಯ ವಯಸ್ಸಿನಲ್ಲಿ ಅಕ್ಬರ್ ನಿಧನನಾದ.

ವಿವರ : ಏಳನೆಯ ಸಂಪುಟ



## ಅಕ್ಷಾಂಶ, ರೇಖಾಂಶ

ಭೂ ಗೋಳದ ಮಾದರಿಯನ್ನು ನೀವು ನೋಡಿದ್ದೀರಿ. ಸ್ಥಿರವಾದ ಪೀಠದ ಮೇಲೆ ಅರ್ಧವೃತ್ತಾಕಾರದ ಚೌಕಟ್ಟು. ಅದರ ಎರಡು ಕೊನೆಗಳೂ ಗೋಳವನ್ನು ಹಿಡಿದಿವೆ. ಇವನ್ನು ಕುರಿತು ಗೋಳವನ್ನು ತಿರುಗಿಸಬಹುದು. ಗೋಳದ ಮೈಮೇಲೆ ವಿವಿಧ ಭೂಖಂಡಗಳು ಸಮುದ್ರಗಳು ಇವನ್ನೆಲ್ಲ ಗುರುತಿಸಿರುವುದರ ಜೊತೆಗೆ ಹಲವಾರು ಅಡ್ಡ ಮತ್ತು ನೀಟ ವೃತ್ತಗಳನ್ನೂ ಎಳೆದಿದ್ದಾರೆ. ಒಂದು ಕೊನೆಯಲ್ಲಿ ಕೇವಲ ಬಿಂದುವಾಗಿ ತೊಡಗಿದ ಅಡ್ಡವೃತ್ತ ಮುಂದುವರಿದಂತೆ ಉಬ್ಬುತ್ತ ಉಬ್ಬುತ್ತ ಗೋಳದ ಮಧ್ಯಭಾಗದಲ್ಲಿ ದೊಡ್ಡದಾಗುತ್ತದೆ ; ಮುಂದಕ್ಕೆ ಅದು ಕುಗ್ಗುತ್ತ ಕುಗ್ಗುತ್ತ ಇನ್ನೊಂದು ಕೊನೆಯಲ್ಲಿ ಪುನಃ ಬಿಂದುವೇ ಆಗುತ್ತದೆ. ನೀಟ ವೃತ್ತಗಳೆಲ್ಲವೂ ಒಂದೇ ಗಾತ್ರದವು. ಅವು ಒಂದು ಕೊನೆಯಲ್ಲಿ ತೊಡಗಿ ಇನ್ನೊಂದು ಕೊನೆಯವರೆಗೆ ಹಬ್ಬಿವೆ. ಪ್ರತಿಯೊಂದು ಅಡ್ಡವೃತ್ತವೂ ಪ್ರತಿಯೊಂದು ನೀಟವೃತ್ತವನ್ನು ಛೇದಿಸುತ್ತದೆ. ಇವೆರಡು ಬಗೆಯ ವೃತ್ತಗಳು ಒಟ್ಟಾಗಿ ಗೋಳದ ಮೇಲೆ ಒಂದು ಬಲೆಯನ್ನು ನೇಯ್ದಂಥ ಚಿತ್ರ ಮೂಡಿಸುತ್ತವೆ.

ಅಡ್ಡವೃತ್ತಗಳಲ್ಲಿ ಅತಿ ದೊಡ್ಡದು ಗೋಳವನ್ನು ಸಮಾನವಾಗಿರುವ ಎರಡು ಹೋಳುಗಳಾಗಿ ವಿಭಾಗಿಸುವಂತಿದೆ. ಇದರ ಮೇಲೆ ಭೂಮಧ್ಯರೇಖೆ 0°. ಇಲ್ಲಿಂದ ಮೇಲಕ್ಕೆ ಮತ್ತು ಕೆಳಕ್ಕೆ ಸಾಗಿದಂತೆ ಕ್ರಮವಾಗಿ 10° ಉ 20° ಉ,.......90°ಉ ಮತ್ತು 10°ದ 20°ದ...90°ದ ಎಂಬ ಗುರುತು



ಗಳು ಆಯಾ ಚಿಕ್ಕ ವೃತ್ತಗಳ ಮೇಲಿವೆ. 90°ಉ ಮತ್ತು 90°ದ ವೃತ್ತಗಳು ಕೇವಲ ಕೊನೆ ಬಿಂದುಗಳು. ನೀಟವೃತ್ತಗಳಲ್ಲಿ ಇಂಗ್ಲೆಂಡಿನ ಮೂಲಕ ಸಾಗುವ ಒಂದನ್ನು ಮೊದಲು ಆರಿಸಬೇಕು. ಅದರ ಮೇಲೆ 0° ಎಂದು ಬರೆದಿದೆ. ಇದ ರಿಂದ ಯೂರೊಪ್ ಕಡೆಗಿನ ನೀಟವೃತ್ತಗಳ ಮೇಲೆ 10°ಪೂ 20°ಪೂ.... 180°ಪೂ ಎಂದೂ ಅಮೆರಿಕ ಕಡೆಗಿನ ನೀಟವೃತ್ತಗಳ ಮೇಲೆ 10° ಪ 20°ಪ...180° ಪ ಎಂದೂ ಗುರುತುಗಳಿವೆ. 180° ಪೂ ಮತ್ತು 180° ಪ ನೀಟ ವೃತ್ತಗಳೆರಡೂ ಒಂದೇ; ಅಲ್ಲದೆ ಇದು 0° ನೀಟ ವೃತ್ತದ ಮುಂದುವರಿಕೆಯೇ ಆಗಿದೆ.

ಅಡ್ಡವೃತ್ತಗಳ ಹೆಸರು ಅಕ್ಷಾಂಶ ವೃತ್ತಗಳು, ನೀಟವೃತ್ತಗಳ ಹೆಸರು ರೇಖಾಂಶ ವೃತ್ತಗಳು. ಸರಳವಾಗಿ ಇವನ್ನು ಅಕ್ಷಾಂಶ, ರೇಖಾಂಶಗಳೆಂದು ಕರೆಯುತ್ತೇವೆ.

ಗೋಳವನ್ನು ತಿರುಗಿಸಿ ಅದರ ಮೇಲೆ ಭಾರತ ದೇಶವನ್ನು ನೋಡಿ ದರೆ ಅದರ ವ್ಯಾಪ್ತಿ 5°–40°ಉ ಅಕ್ಷಾಂಶ ವೃತ್ತಗಳೂ 65°–100° ಪೂ ರೇಖಾಂಶವೃತ್ತಗಳೂ ಮೇರೆಗಳಾಗಿರುವ ಪ್ರದೇಶದಲ್ಲಿದೆಯೆಂದು ತಿಳಿ ಯುತ್ತದೆ. ಭಾರತದೇಶದ ಭೂಪಟದಮೇಲೆ ಮೈಸೂರು ರಾಜ್ಯದ ವ್ಯಾಪ್ತಿ ಹುಡುಕಿದರೆ ಅದರ ಮೇರೆಗಳು 11°–19° ಉ ಅಕ್ಷಾಂಶ ಮತ್ತು 74°–78° ಪೂ ರೇಖಾಂಶಗಳಾಗಿವೆ. ಇನ್ನು ಮೈಸೂರು ರಾಜ್ಯದ ಭೂಪಟ ದಿಂದ ಬೆಂಗಳೂರು ನಗರದ ಮೇರೆಗಳು 12°–13° ಉ ಅಕ್ಷಾಂಶ ಮತ್ತು 77°–78° ಪೂ ರೇಖಾಂಶವೆಂದು ನೋಡಬಹುದು. ಇನ್ನೂ ಖಚಿತ ವಾಗಿ ಹೇಳುವುದಾದರೆ 12°58′ ಉ ಅಕ್ಷಾಂಶ ಮತ್ತು 77°38′ ಪೂ ರೇಖಾಂಶ ವೃತ್ತಗಳ ಛೇದನಬಿಂದು ಬೆಂಗಳೂರು. ಈಗ ಮತ್ತೊಮ್ಮೆ ಭೂಗೋಳ ಮಾದರಿಯನ್ನು ನೋಡಿದರೆ ಇವೆರಡು ವೃತ್ತಗಳ ಛೇದನ ಬಿಂದು ಬೆಂಗಳೂರು ಮಾತ್ರ, ಅಂಥ ಬಿಂದು ಭೂಮಿಯ ಮೇಲೆ ಇನ್ನೊಂದಿಲ್ಲ ಎಂದು ಸ್ಪಷ್ಟವಾಗುತ್ತದೆ.




ಅಕ್ಷಾಂಶ ; ರೇಖಾಂಶ ಗಳೆಂಬ ಕಾಲ್ಪನಿಕ ವೃತ್ತಗಳ ಸಹಾಯದಿಂದ ಭೂಮಿಯ ಮೇಲಣ ಯಾವುದೇ ಸ್ಥಳ ವನ್ನು ಖಚಿತವಾಗಿಯೂ ವೈಜ್ಞಾನಿಕವಾಗಿಯೂ ಗುರುತಿಸುವುದು ಸಾಧ್ಯ; ಭೂಪಟವನ್ನು ನೋಡಿ ಒಂದು ಸ್ಥಳವನ್ನು ಗುರುತಿಸಿ ದಾಗ ಅದರ ಅಕ್ಷಾಂಶ ರೇಖಾಂಶಗಳನ್ನು ಹೇಳ ಬಹುದು. ಸಾರಿಗೆ ಸಂಪರ್ಕ ಗಳಲ್ಲಿ, ವಿಮಾನ ಹಡಗು ಯಾನಗಳಲ್ಲಿ, ವೈಜ್ಞಾನಿಕ ಅನ್ವೇಷಣೆಗಳಲ್ಲಿ, ಯುದ್ಧ ಸಂದರ್ಭಗಳಲ್ಲಿ, ಕಾಲ ನಿರ್ಣಯದಲ್ಲಿ ಇಂಥ ಒಂದು ಶಾಸ್ತ್ರೀಯ ಕ್ರಮದ ಉಪ ಯೋಗ ಅಷ್ಟಿಷ್ಟೆನ್ನುವಂತಿಲ್ಲ. ಒಂದು ಸ್ಥಳದ ಅಕ್ಷಾಂಶ ರೇಖಾಂಶಗಳು ಒಟ್ಟಿಗೆ ಆ ಸ್ಥಳದ ನಿರ್ದೇಶಕಗಳು. ಇವನ್ನು ಬರೆಯುವಾಗ ಮೊದಲು ಅಕ್ಷಾಂಶವನ್ನೂ ಮತ್ತೆ ರೇಖಾಂಶವನ್ನೂ ನಿರೂಪಿಸುವುದು ವಾಡಿಕೆ.




12°-58° ಉ ಅಕ್ಷಾಂಶ 77°-38° ಪೂ ರೇಖಾಂಶ ಛೇದನ ಬಿಂದು....




ಅಕ್ಷಾಂಶ, ರೇಖಾಂಶ ಸ್ಥಳಗಳ ನಡುವಿನ ದೂರವನ್ನು ಸೂಚಿಸುವ ಮಾನ ಗಳಲ್ಲವೇ ? ಹಾಗಿರುವಾಗ ಅವನ್ನು ದೂರ ಮಾನಗಳಾದ ಅಡಿ, ಮೀಟರ್ ಮುಂತಾದುವಲ್ಲಿ ಹೇಳಬೇಡವೇ ? ಕೋನಮಾನಗಳಾದ ಡಿಗ್ರಿ ಮಿನಿಟು ಗಳಲ್ಲಿ ಬರೆದಿರುವುದೇಕೆ ? ಎಂಬ ಸಂದೇಹಗಳು ಸಹಜವಾಗಿಯೇ ಮೂಡ ಬಹುದು.

ಅಕ್ಷಾಂಶ ರೇಖಾಂಶಗಳ ಕಲ್ಪನೆಯ ನೆರವಿಗೋಸ್ಕರ ಸರಿ ಸುಮಾರು ಗೋಳಾಕೃತಿಯಲ್ಲಿರುವ ಭೂಮಿಯನ್ನು ಪೂರ್ಣಗೋಳವೆಂದೇ ಭಾವಿಸು ತ್ತೇವೆ. ಭೂಮಿ ತನ್ನ ಸುತ್ತಲೂ ನಿರಂತರವಾಗಿ ಸುತ್ತುತ್ತಿದೆಯಷ್ಟೆ. ಈ ಆವರ್ತನೆಯ ಅಕ್ಷದ ಒಂದು ಕೊನೆ ಉತ್ತರಮೇರು P ; ಇನ್ನೊಂದು ಕೊನೆ ದಕ್ಷಿಣ ಮೇರು P′ (ಭೂ ಗೋಳ ಮಾದರಿಯಲ್ಲಿ ಇವು ಗೋಳವನ್ನು ಹಿಡಿದಿರುವ ಕೊನೆಬಿಂದುಗಳು.) A ಭೂಮಿ ಮೇಲಣ ಒಂದು ಸ್ಥಳ. ಅದರ ನಿರ್ದೇಶಕಗಳು $x^{\circ}$ ಉ. $y^{\circ}$ ಪೂ. ಆಗಿರಲಿ. A ಯ ಅಕ್ಷಾಂಶ




ಭೂಪಟವನ್ನು ನೋಡಿ ಒಂದು ಸ್ಥಳದ ರಾಷ್ಟ್ರದ ಇಲ್ಲವೆ ಖಂಡದ ಅಕ್ಷಾಂಶ ರೇಖಾಂಶಗಳನ್ನು ಹೇಳಬಹುದು

ರೇಖಾಂಶ ವೃತ್ತಗಳನ್ನು ಎಳೆಯಬೇಕು. ರೇಖಾಂಶವೃತ್ತ ಭೂಮಧ್ಯ ರೇಖೆಯನ್ನು (SGBN ವೃತ್ತ) B ಬಿಂದುವಿನಲ್ಲಿ ಸಂಧಿಸಲಿ. ಆಗ BOA $=x°$. ಇದು A ಯ ಉತ್ತರ ಅಕ್ಷಾಂಶ (A ಉತ್ತರ ಮೇರುವಿನೆಡೆಗೆ ಇರುವುದರಿಂದ). ಗ್ರೀನಿಚ್ ಮೂಲಕ ಸಾಗುವ 0° ರೇಖಾಂಶವೃತ್ತ ಭೂಮಧ್ಯರೇಖೆಯನ್ನು G ಯಲ್ಲಿ ಸಂಧಿಸಲಿ. ಆಗ GOB $=y°$. ಇದು A ಯ ಪೂರ್ವ ರೇಖಾಂಶ (A ಪೂರ್ವ ದಿಕ್ಕಿನಲ್ಲಿರುವುದರಿಂದ). ಹೀಗೆ ಒಂದು ಸ್ಥಳದಲ್ಲಿ ಸಂಧಿಸುವ ರೇಖಾಂಶ ಮತ್ತು ಅಕ್ಷಾಂಶಗಳಿಗೆ ಸಂಬಂಧಿಸಿದಂಥ ನಿರ್ದಿಷ್ಟ ವೃತ್ತ ಖಂಡಗಳು (ಚಿತ್ರದಲ್ಲಿ BA ಮತ್ತು GB) ಭೂಮಿಯ ಕೇಂದ್ರದಲ್ಲಿ ರಚಿಸುವ ಕೋನಗಳೇ ವಾಸ್ತವಿಕವಾಗಿ ಆ ಸ್ಥಳದ ನಿರ್ದೇಶಕಗಳು. ಈ ಮೂಲಭಾವನೆ ಎಲ್ಲರಿಗೂ ತಿಳಿದಿದೆಯೆಂದು ಭಾವಿಸಿ ಕೋನಮಾನದಲ್ಲಿ ಸ್ಥಳಗಳ ನಿರ್ದೇಶಕಗಳನ್ನು ಬರೆಯುತ್ತೇವೆ.

## ಅಕ್ಟೋಬರ್ ಕ್ರಾಂತಿ

ಮಾನವನ ಚರಿತ್ರೆಯಲ್ಲಿ ಎಷ್ಟೋ ಕ್ರಾಂತಿಗಳು ನಡೆದಿವೆ. ಲೋಕದ ಮೇಲೆ ಬೀರಿದ ಪರಿಣಾಮದ ದೃಷ್ಟಿಯಿಂದ, ರಷ್ಯದಲ್ಲಿ 1917ರ ಅಕ್ಟೋಬರ್ ತಿಂಗಳಲ್ಲಿ ಆದ ಕ್ರಾಂತಿ ಸಾಟಿಯಿಲ್ಲದ್ದು.

ಅನಕ್ಷರತೆ, ಅಜ್ಞಾನ, ಅತೀವ ಬಡತನ, ಕಡು ಸುಲಿಗೆ ಎಲ್ಲ ಒಂದಾಗಿ ರಷ್ಯ ರೋಗಗ್ರಸ್ತ ರಾಷ್ಟ್ರವಾಗಿತ್ತು. ಅದು ಉಳಿದು ಬದುಕಲು ಕ್ರಾಂತಿಯ ಶಸ್ತ್ರಚಿಕಿತ್ಸೆ ಅಗತ್ಯವಾಯಿತು.

ಆ ಶಸ್ತ್ರಗಳನ್ನು ರಷ್ಯದ ಜನತೆ ಮಸೆದದ್ದು 1905ರಲ್ಲಿ, ಒಂದು ಭಾನುವಾರ. ಆಹಾರ ಬೇಡಲೆಂದು ಹಸಿದ ಬಡ ಜನರು ಜಾರ್ ಚಕ್ರವರ್ತಿಯ ಅರಮನೆಗೆ ಸಾಗಿದರು ಅವರಿಗೆ ಗುಂಡಿನ ಉಡುಗೊರೆ ದೊರೆಯಿತು. ಕೆರಳಿದ ಜನ ಆ ದಿನವನ್ನು 'ರಕ್ತ ರವಿವಾರ' ಎಂದು ಕರೆದರು. ದೇಶದಾದ್ಯಂತ ಅಸಮಾಧಾನ ಹೊಗೆಯಾಡಿತು. ಕಾರ್ಮಿಕರು ಮುಷ್ಕರ ಹೂಡಿದರು. ಜಾರ್ ಬೆದರಿ, ಪ್ರತಿನಿಧಿಗಳ ಸಭೆ ಕರೆಯುವ ಮಾತುಕೊಟ್ಟ. ಆದರೆ ಚಳುವಳಿ ಕಡಮೆಯಾಗುತ್ತಲೆ, ಮತ್ತೆ ಕ್ರೂರತನದಿಂದ ವರ್ತಿಸಿದ, ರಹಸ್ಯವಾಗಿ ಪ್ರಚಾರ ಮಾಡಿದರು. ಅವರಿಗೆ ಲೆನಿನ್ ನಾಯಕ. ವಿದೇಶಗಳಲ್ಲಿ ತಲೆಮರೆಸಿಕೊಂಡು, ತನ್ನ ದೇಶದ ಜನರನ್ನು ಆತ ಸಂಘಟಿಸಿದ.

ಮೊದಲನೆಯ ಮಹಾಯುದ್ಧ ಆರಂಭವಾದಾಗ (1914) ರಷ್ಯದಲ್ಲಿ ಪರಿಸ್ಥಿತಿ ಆಳುವವರ ದೃಷ್ಟಿಯಿಂದ ಮತ್ತಷ್ಟು ಹದಗೆಟ್ಟಿತು. ಜರ್ಮನಿಗೆ ಇದಿರಾಗಿ ಯುದ್ಧದಲ್ಲಿ ರಷ್ಯ ಭಾಗವಹಿಸಿದ್ದು ಹೆಸರಿಗೆ ಮಾತ್ರ. ಜನತೆಗೆ ಲಭಿಸಿದ್ದು ಸಂಕಟ ಪರಂಪರೆ. ಅತೃಪ್ತಿ ಅಂಟುಜಾಡ್ಯವಾಯಿತು. ಸೈನ್ಯದಲ್ಲೂ ಬಂಡಾಯ ಮನೋಭಾವ ಮೊಳೆತು ಬಲಗೊಂಡಿತು.

1917 ಮಾರ್ಚ್ ತಿಂಗಳಲ್ಲಿ ಜನರ ಸಹನೆಯ ಕಟ್ಟೆ ಒಡೆಯಿತು. ಆಗ ನಡೆದದ್ದು, ಮಹಾಪೂರವನ್ನು ತಡೆಯುವ ಪ್ರಯತ್ನ. ಜಾರ್ ಎರಡನೆಯ ನಿಕೊಲಸನ ಬಲವಂತ ಪದಚ್ಯುತಿಯಾಗಿ, ಹಂಗಾಮಿ ಸರಕಾರ ರಚಿಸಲ್ಪಟ್ಟಿತು. ಅದರ ನಾಯಕ ಅಲೆಗ್ಸಾಂಡರ್ ಕೆರೆನ್‌ಸ್ಕಿ (1881–1970). ದೇಶದಾದ್ಯಂತ ಅಧಿಕಾರ ನಡೆಸಲು ಆ ಸರಕಾರಕ್ಕೆ ಆಗಲಿಲ್ಲ. ಅನೇಕ ಪಟ್ಟಣಗಳಲ್ಲಿ ಕಾರ್ಮಿಕರು ಸೋವಿಯೆತ್‌ಗಳನ್ನು ಸಂಘಟಿಸಿದ್ದರು. ಸೋವಿಯೆತ್ ಎಂದರೆ ಆರಿಸಿದ ಪ್ರತಿನಿಧಿಗಳ ಸಮಿತಿ. ಈ ಸೋವಿಯೆತ್‌ಗಳಲ್ಲಿ ಲೆನಿನ್ ನಾಯಕನಾಗಿದ್ದ ಬೋಲ್ಶೆವಿಕ್ ಪಕ್ಷಕ್ಕೆ ಬಹುಮತವಿತ್ತು. (ಆಗ ರಷ್ಯದ ಕಮ್ಯೂನಿಸ್ಟ್ ಪಕ್ಷದಲ್ಲಿ ಎರಡು ತಂಡಗಳಿದ್ದುವು: ಬಹುಮತದವರು ಬೋಲ್ಶೆವಿಕರು; ಅಲ್ಪಮತೀಯರು ಮೆನ್ಶೆವಿಕರು.)

ಜರ್ಮನಿಯಲ್ಲಿದ್ದುಕೊಂಡು ಲೆನಿನ್, ತನ್ನ ದೇಶದಲ್ಲಿ ರೂಪಗೊಳ್ಳುತ್ತಿದ್ದ ಪರಿಸ್ಥಿತಿಯನ್ನು ಅಭ್ಯಸಿಸಿದ. ಅಧಿಕಾರ ಕಸಿದುಕೊಳ್ಳುವುದು ಸಾಧ್ಯ ಎನಿಸಿದೊಡನೆ, ಜರ್ಮನರ ಸಹಾಯದಿಂದ, ಆಗ ರಷ್ಯದ ರಾಜಧಾನಿಯಾಗಿದ್ದ ಪೆತ್ರೊಗ್ರಾಡನ್ನು (ಈಗಿನ ಲೆನಿನ್‌ಗ್ರಾಡ್) ತಲಪಿದ. "ಲೆನಿನ್ ಚಿರಕಾಲ ಬಾಳಲಿ! ನಮಗೆ ದಿನಕ್ಕೆ ಎಂಟು ಗಂಟೆಗಳ ಕೆಲಸಬೇಕು! ರೈತರಿಗೆ ಭೂಮಿ! ಯುದ್ಧಕ್ಕೆ ಧಿಕ್ಕಾರ! ಕ್ರಾಂತಿ ಚಿರಾಯುವಾಗಲಿ!" ಎಂಬ ಘೋಷಣೆಗಳೊಡನೆ ಶ್ರಮಜೀವಿ ಸಮುದಾಯ ಲೆನಿನ್‌ನನ್ನು ಸ್ವಾಗತಿಸಿತು.

ಬೋಲ್ಶೆವಿಕ್ ಪಕ್ಷ [illegible] ಸಶಸ್ತ್ರ ಬಂಡಾಯಕ್ಕೆ ಸಿದ್ಧತೆ ನಡೆಸಿತು. ಎಲ್ಲ ಕಾರಖಾನೆಗಳಲ್ಲೂ ಸ್ವಯಂಸೇವಕರ ಕೆಂಪು ದಳಗಳು ಹುಟ್ಟಿದುವು. ಇವು ಸೈನಿಕರೊಡನೆ ಸ್ನೇಹ ಬೆಳೆಸಿದುವು.

ಮನುಕುಲದ ಕಥೆ

ವಿಚಾರಣೆ ಇಲ್ಲದೆ ಸಾವಿರ ಜನರಿಗೆ ಸರಕಾರ ಮರಣ ದಂಡನೆ ವಿಧಿಸಿತು. ಎಪ್ಪತ್ತು ಸಾವಿರ ಜನರನ್ನು ಸೆರೆಮನೆಗೆ ತಳ್ಳಿತು.

ಜಾರ್ ಚಕ್ರವರ್ತಿಯ ದಬ್ಬಾಳಿಕೆಯ ವಿರುದ್ಧ ಜನರನ್ನು ಸಂಘಟಿಸುವ ಕೆಲಸ ನಡೆದದ್ದು ಗುಪ್ತವಾಗಿ. ಕಾರ್ಲ್ ಮಾರ್ಕ್ಸ್‌ನ ಸಿದ್ಧಾಂತವನ್ನು ಒಪ್ಪಿಕೊಂಡವರು, ವರ್ಗಸಮರವೂ ಶ್ರಮಜೀವಿಗಳ ಸರ್ವಾಧಿಕಾರತ್ವವೂ ಅಗತ್ಯವೆಂದು



ಕ್ರಾಂತಿಕಾರರನ್ನು ಉದ್ದೇಶಿಸಿ ಮಾತನಾಡುತ್ತಿರುವ ಲೆನಿನ್

ಅಕ್ಟೋಬರ್ ದಿನಾಂಕ 25ರಂದು ಬಂಡಾಯ ಭುಗಿಲೆಂದಿತು. ಕ್ರಾಂತಿಕಾರರು ಪೆತ್ರೊಗ್ರಾದನ್ನು ವಶಪಡಿಸಿಕೊಂಡರು. ರೈಲುನಿಲ್ದಾಣಗಳು, ಸೇತುವೆಗಳು, ವಿದ್ಯುತ್ ಕೇಂದ್ರ, ಕೇಂದ್ರೀಯ ತಂತಿ-ಟೆಲಿಫೋನ್ ಕಚೇರಿ ಎಲ್ಲವೂ ಕ್ರಾಂತಿಕಾರರ ಕೈವಶವಾದುವು. ಕೆರೆನ್ಸ್ಕಿ ಓಡಿಹೋದ.

"ಈಗಿನಿಂದ ರಷ್ಯದ ಇತಿಹಾಸದಲ್ಲಿ ಹೊಸ ಘಟ್ಟ ಆರಂಭವಾಗುತ್ತದೆ," ಎಂದು ಲೆನಿನ್ ಘೋಷಿಸಿದ.

ಅಕ್ಟೋಬರ್ 26 ಬೆಳಗ್ಗೆ ಸಚಿವಾಲಯವಿದ್ದ ವಸಂತ ಪ್ರಾಸಾದವನ್ನು ಕ್ರಾಂತಿಕಾರರು ಮುತ್ತಿದರು. ಅಲ್ಲಿದ್ದ ಸಚಿವರ ಬಂಧನವಾಯಿತು.

ಮುಂದೆ ಮಾಸ್ಕೋ ನಗರವೂ ಕ್ರಾಂತಿಕಾರರ ಅಧೀನಕ್ಕೆ ಬಂತು.

ಕೇಂದ್ರದಲ್ಲಿ ಅಧಿಕಾರ ಸೂತ್ರ ಕಮ್ಯೂನಿಸ್ಟ್ (ಬೋಲ್ಷೆವಿಕ್) ಪಕ್ಷದ ವಶವಾದರೂ ಇಡೀ ದೇಶ ಅದರ ಆಡಳಿತಕ್ಕೆ ಒಳಗಾಗಲು ಮೂರು-ನಾಲ್ಕು ವರ್ಷ ಬೇಕಾಯಿತು. ಆ ಅವಧಿಯಲ್ಲಿ ಉಗ್ರ ಅಂತರ್ಯುದ್ಧ ನಡೆಯಿತು. ವಿದೇಶೀ ಸರಕಾರಗಳು ಹಸ್ತಕ್ಷೇಪ ಮಾಡಲು ಯತ್ನಿಸಿ ವಿಫಲವಾದುವು.

ಹೀಗೆ, ಜನತೆಗೆ ಶಾಂತಿಯನ್ನೂ ಭೂಮಿಯನ್ನೂ ಆಹಾರವನ್ನೂ ಕೊಡಲಾಗದ ಸರಕಾರ ರಷ್ಯದಲ್ಲಿ ಅಳಿಯಿತು. ಊಳಿಗಮಾನ್ಯ ಪದ್ಧತಿಯನ್ನೂ ಬಂಡವಾಳ ವ್ಯವಸ್ಥೆಯನ್ನೂ ಕೊನೆಗಾಣಿಸಿ, ಸಮಾಜವಾದಿ ತಳಹದಿಯ ಮೇಲೆ ರಾಷ್ಟ್ರ ಕಟ್ಟುವ ಘೋಷಣೆಯೊಡನೆ ಕಮ್ಯೂನಿಸ್ಟ್ ಪಕ್ಷ ಅಧಿಕಾರಕ್ಕೆ ಬಂತು.

ಜಗತ್ತಿನ ಇತಿಹಾಸದಲ್ಲಿ ಅಸಾಧಾರಣ ಅಧ್ಯಾಯವನ್ನು ಅಕ್ಟೋಬರ್ ಕ್ರಾಂತಿ ಬರೆಯಿತು.

ನೋಡಿ : ಲೆನಿನ್ ; ಸೋವಿಯೆತ್ ಒಕ್ಕೂಟ

## ಅಗ್ನಿ

**ಅಗ್ನಿದೇವ :**

"ಅಗ್ನಿಂ ಮನ್ಯೇ ಪಿತರಮಗ್ನಿಮಾಪಿಂ ಅಗ್ನಿಂ ಭ್ರಾತರಂ ಸದಮಿತ್ ಸಖಾಯಂ."

—ಅಗ್ನಿಯೇ ತಂದೆ, ಅವನೇ ಬಂಧು, ಅವನೇ ತಾಯಿ. ಅವನೇ ಸೋದರ. ಅವನೇ ಸಖ.

"ಸಾ ತೇ ಸುಮತಿರ್ಭೂತ್ವಸ್ಮೇ."

—ನಿನ್ನನ್ನು ಪ್ರಾರ್ಥಿಸುವಂಥ ಒಳ್ಳೆಯ ಬುದ್ಧಿಯನ್ನು ಕೊಡು.

ಇದು ಪ್ರಾಚೀನ ಭಾರತೀಯರು ಅಗ್ನಿಗೆ ಮಾಡಿದ ಪ್ರಾರ್ಥನೆ. ಹಿಂದೂಗಳಿಗೆ ಅಗ್ನಿ ಪರಮ ಪೂಜ್ಯ. ದೇವತೆಗಳಿಗೆ ಹವಿಸ್ಸನ್ನು ಕೊಂಡೊಯ್ಯುವವನು ಅವನು. ವಿವಾಹವಾದಾಗ ದಂಪತಿಗಳು ಅಗ್ನಿ ಸಾಕ್ಷಿಯಾಗಿ ಕೈಹಿಡಿಯುತ್ತಾರೆ. ಪ್ರತಿನಿತ್ಯ ಅಗ್ನಿಯನ್ನು ಪೂಜಿಸಬೇಕು. ಹಿಂದೂಗಳ ಕೆಲವು ಒಳಪಂಗಡಗಳಲ್ಲಿ ಮನುಷ್ಯ ತೀರಿಕೊಂಡರೆ ಅವನ ದೇಹ ಅಗ್ನಿಗೆ ಅರ್ಪಿತ. ಅಗ್ನಿಯನ್ನು ದೇವರೆಂದು ಪೂಜಿಸಲಾರಂಭಿಸಿದ ಪ್ರಾಚೀನ ಭಾರತೀಯರು ಅದು ಹೇಗೆ ಹುಟ್ಟುತ್ತದೆ ಎನ್ನುವುದನ್ನೂ ತೋರಿಸಿಕೊಟ್ಟರು. ಮರದ ಎರಡು ಕೊಂಬೆಗಳನ್ನು ಉಜ್ಜಿ ಅದರ ಶಾಖದಿಂದ ಬೆಂಕಿ ಹುಟ್ಟುತ್ತದೆ ಎಂದು ಹೇಳಿದರು. ಅರಣಿಗಳನ್ನು ಬಲವಾಗಿ ಉಜ್ಜಿ ಅಗ್ನಿಯನ್ನು ಹೊತ್ತಿಸಬೇಕಾದ್ದರಿಂದ ಅಗ್ನಿಗೆ 'ಸಹಸಃ ಸುತಃ' ಎಂದರೆ ಶಕ್ತಿಯಿಂದ ಹುಟ್ಟಿದವನು ಎಂಬ ಹೆಸರಿಟ್ಟರು.

ಭಾರತದಲ್ಲಿ ಮಾನವ ಅಗ್ನಿಯನ್ನು 'ಗೃಹಪತಿ' ಎಂದ. ದಿನದಿನವೂ ಬರುವ ಅತಿಥಿ ಎಂದ. ಮನುಷ್ಯನಿಗೆ ಅತಿ ಸಮೀಪದ ಬಂಧು ಎಂದ. ತಂದೆ, ಸಹೋದರ, ಮಗ ಎಂದು ಕರೆದ. ಎಲ್ಲ ಯಜ್ಞಯಾಗಾದಿಗಳೂ ಅಗ್ನಿಯಿಂದಲೇ ನಡೆಯಬೇಕಾದ್ದರಿಂದ ಅವೆಲ್ಲದರ ಬಗೆಗೆ ಅಗ್ನಿಗೆ ತಿಳಿದಿದೆ ಎಂದು ಅಗ್ನಿಯನ್ನು 'ಜಾತವೇದ' ಎಂದ.

ಪ್ರಾಚೀನ ಗ್ರೀಕರಲ್ಲಿ ಒಂದು ಕಥೆಯಿತ್ತು.

ಜ್ಯೂಸ್ ದೇವತೆಗಳ ಪ್ರಭು. ಪ್ರಮಿಥ್ಯೂಸ್ ದೇವತೆಗಳಲ್ಲಿ ಒಬ್ಬ. ಮನುಷ್ಯನನ್ನು ಸೃಷ್ಟಿಸಿದವನು ಇವನೇ. ಇವನು ಮನುಷ್ಯನಿಗೆ ಸ್ವರ್ಗದಿಂದ ಅಗ್ನಿಯನ್ನು ತಂದುಕೊಟ್ಟ. (ಪ್ರಮಿಥ್ಯೂಸ್ ಎಂದರೆ ಅಗ್ನಿಯನ್ನು ತರುವವನು ಎಂದರ್ಥ.) ಇದರಿಂದ ಜ್ಯೂಸ್‌ಗೆ ಸಿಟ್ಟುಬಂದಿತು. ಪ್ರಮಿಥ್ಯೂಸನಿಗೆ ಭಯಂಕರ ಶಿಕ್ಷೆಯನ್ನು ಕೊಟ್ಟ. ಅವನನ್ನು ಒಂದು ಬಂಡೆಗೆ ಬಿಗಿದ. ಪ್ರತಿನಿತ್ಯ ಹದ್ದೊಂದು ಬಂದು ಅವನ ಕರುಳನ್ನು ತಿನ್ನಬೇಕು. ಮರುದಿನದ ಹೊತ್ತಿಗೆ ಅದು ಮೊದಲಿನಂತೆ ಬೆಳೆದಿರಬೇಕು.

ಈ ಕಥೆ ಗ್ರೀಕರು ಅಗ್ನಿಗೆ ಎಂಥ ಪ್ರಾಮುಖ್ಯ ಕೊಟ್ಟಿದ್ದರು ಎನ್ನುವುದನ್ನು ತೋರಿಸುತ್ತದೆ. ಅಗ್ನಿ ದೇವತೆಗಳ ಲೋಕಕ್ಕೆ ಮೀಸಲಾಗಿರಬೇಕು ಎಂದು ಸ್ವರ್ಗದ ಪ್ರಭು ಜ್ಯೂಸ್‌ನ ಅಭಿಪ್ರಾಯ.

ಪ್ರಾಚೀನ ಗ್ರೀಕ್ ಮತ್ತು ರೋಮನರಲ್ಲಿಯೂ ಅಗ್ನಿಗೆ ಬಹಳ ಪವಿತ್ರವಾದ ಸ್ಥಾನ ಕೊಡಲ್ಪಟ್ಟಿತ್ತು. ಭಾರತೀಯರಂತೆ ರೋಮನರೂ ಪವಿತ್ರ ಅಗ್ನಿಯನ್ನು ಸದಾಕಾಲವೂ ಇಟ್ಟಿರುತ್ತಿದ್ದರು. ಗ್ರೀಕರು ವಲಸೆಹೋಗುವಾಗ ಅಗ್ನಿಯನ್ನು ತಮ್ಮೊಡನೆ ತೆಗೆದುಕೊಂಡು ಹೋಗುತ್ತಿದ್ದರು.

ಜರತುಷ್ಟ್ರನು ಬೋಧಿಸಿದ ಧರ್ಮದಲ್ಲಿ ಅಗ್ನಿಗೆ ಅಗ್ರಸ್ಥಾನ. ಅವನ ಕಾಲದಲ್ಲಿ ಅಗ್ನಿಗಾಗಿಯೆ ದೇವಾಲಯಗಳಿದ್ದುವು.

ಪ್ರಾಚೀನ ಸೈಬೀರಿಯದಲ್ಲಿ ಅಗ್ನಿಯು ಪವಿತ್ರವೆಂದು ಅದಕ್ಕೆ ಯಾವ ಕಸವನ್ನೂ ಸೋಂಕಿಸುತ್ತಿರಲಿಲ್ಲ. ಮೆಕ್ಸಿಕೊ ಹಾಗೂ ಪೆರು ದೇಶದ ಜನ ಸೂರ್ಯನ ಕಿರಣಗಳನ್ನು ಲೋಹದಿಂದ ಮಾಡಿದ ನಿಮ್ನ ಕನ್ನಡಿಯ ಮೇಲೆ ಕೇಂದ್ರೀಕರಿಸಿ ಅದರಿಂದ ಹೊತ್ತಿಸಿದ ಬೆಂಕಿಯಿಂದ ಪವಿತ್ರವಾದ ಅಗ್ನಿಯನ್ನು ಪೂಜಿಸುತ್ತಿದ್ದರು.

**ಬೆಂಕಿ :**

ಪ್ರಪಂಚದ ಎಲ್ಲ ಪ್ರಾಚೀನ ದೇಶಗಳಲ್ಲಿ ಅಗ್ನಿಗೆ–ಬೆಂಕಿಗೆ– ಪೂಜ್ಯ ಸ್ಥಾನ ದೊರೆತುದು ಆಶ್ಚರ್ಯವಲ್ಲ. ಮೊಟ್ಟಮೊದಲು ಬೆಂಕಿಯನ್ನು ಕಂಡಾಗ ಕಾಡುಮಾನವನಿಗೆ ನಡುಕ ಬಂದಿರಬೇಕು. ಅವನು ಅದನ್ನು ಕಂಡುದು ಅಗ್ನಿಪರ್ವತ ಬೆಂಕಿಯನ್ನು ಉಗುಳಿದಾಗ, ಕಾಡಿನಲ್ಲಿ ಬೆಂಕಿಹೊತ್ತಿ ಮರಗಳು ಉರಿದಾಗ. ಕಾಡಿನ ಬೆಂಕಿಯ ಯೋಚನೆಯೇ ಮನುಷ್ಯನ ಜಂಘಾಬಲವನ್ನು ಉಡುಗಿಸಿರಬೇಕು. ಎರಡು ಬಿದಿರಮೆಳೆಗಳು ಉಜ್ಜಿದಾಗ, ಒಂದು ಕಲ್ಲು ಇನ್ನೊಂದರ ಮೇಲೆ ಬಿದ್ದಾಗ, ಕಿಡಿಹಾರಿದುದನ್ನು ಆದಿಮಾನವ ಕಂಡ. ಆ ಕಿಡಿಯನ್ನು ರಕ್ಷಿಸಿ ಉಳಿಸಿಕೊಳ್ಳಲು ಅವನು ಕಲಿತಾಗ ಮನುಷ್ಯನ ಚರಿತ್ರೆಯಲ್ಲಿಯೇ ಕ್ರಾಂತಿಯಾಯಿತು. ಎರಡು ಕಲ್ಲುಗಳನ್ನು ಉಜ್ಜಿ ಬೆಂಕಿಯನ್ನು ಸ್ವತಃ ಮಾಡಲು ಮನುಷ್ಯ ಕಲಿತಾಗ ಅವನ ಶಕ್ತಿ ಅಸಾಧಾರಣವಾಗಿ ಬೆಳೆಯಿತು.

ಬೆಂಕಿ ದೊರೆತಮೇಲೆ ಮಾನವ ಚಳಿಯಲ್ಲಿ ನಡುಗಲಿಲ್ಲ. ಕತ್ತಲಲ್ಲಿ ಕಷ್ಟಪಡಲಿಲ್ಲ. ಚಳಿಗೆ ಹೆದರದೆ ಹೊಸ ಹೊಸ ಸ್ಥಳಗಳಲ್ಲಿ ವಾಸಮಾಡಿದ. ಇದರಿಂದ ಮಾನವಕುಲ ಹರಡಿಕೊಳ್ಳಲು ಸಾಧ್ಯವಾಯಿತು. ಅಲ್ಲದೆ ಬೆಂಕಿ ಎಂದರೆ ಕಾಡುಪ್ರಾಣಿಗಳಿಗೆ ಭಯ ಎಂಬುದನ್ನೂ ಮನುಷ್ಯ ಕಂಡುಕೊಂಡ. ಬೆಂಕಿ ಅವನಿಗೆ ರಕ್ಷಣೆಯೂ ಆಯಿತು. ಆಹಾರವನ್ನು ಬೇಯಿಸಿ ತಿನ್ನುವುದೂ ಸಾಧ್ಯವಾಯಿತು. ಬೆಂಕಿ ಮನುಷ್ಯನಿಗೆ ಅನೇಕ ಸೌಕರ್ಯಗಳನ್ನು ಒದಗಿಸಿಕೊಟ್ಟಿತು. ಮಾನವ ಕಂಡು, ಕಾಪಾಡಿ, ತಾನೇ ಮಾಡಲು ಕಲಿತು ಉಪಯೋಗಿಸಿದ ಪ್ರಥಮ ಶಕ್ತಿ ಬೆಂಕಿ.

ಈಗ ವಿಜ್ಞಾನ ಬಹಳವಾಗಿ ಅಭಿವೃದ್ಧಿಯಾಗಿರುವುದರಿಂದ ನಾವು ನೈಸರ್ಗಿಕ ಬೆಂಕಿಗೆ ಹೆಚ್ಚು ಪ್ರಾಮುಖ್ಯ ಕೊಡುವುದಿಲ್ಲ. ನಮಗೆ ಬೇಕಾದ ಶಾಖ, ಬೆಳಕು ಮೊದಲಾದುವೆಲ್ಲಕ್ಕೂ ವಿದ್ಯುಚ್ಛಕ್ತಿಯಿದೆ. ಆದರೆ ವಿದ್ಯುಚ್ಛಕ್ತಿ ಉಪಯೋಗಕ್ಕೆ ಬರುವುದಕ್ಕೆ ಮೊದಲು ಮಾನವನ ಜೀವನದಲ್ಲಿ ಬೆಂಕಿ ಮಹತ್ತರ ಪಾತ್ರವನ್ನು ವಹಿಸುತ್ತಿತ್ತು. ಈಗಲೂ ವಿದ್ಯುಚ್ಛಕ್ತಿ ಇಲ್ಲದ ಕಡೆ ಬೆಂಕಿಯದೇ ಪ್ರಮುಖ ಪಾತ್ರ. ಸುಮಾರು ಐದು ಲಕ್ಷ ವರ್ಷಗಳ ಕೆಳಗೆ ಮಾನವನಿಗೆ ಬೆಂಕಿಯ ಬಳಕೆ ಗೊತ್ತಿದ್ದಿತು; ಹತ್ತು ಲಕ್ಷ ವರ್ಷಗಳ ಹಿಂದಿದ್ದ ಆದಿಮಾನವನಿಗೂ ಬೆಂಕಿಯ ಉಪಯೋಗ ತಿಳಿದಿತ್ತು ಎಂದೂ ಕೆಲವರು ತಜ್ಞರು ಹೇಳುತ್ತಾರೆ.

ಕಲ್ಲುಗಳನ್ನು ಉಜ್ಜಿ ಬೆಂಕಿ ಮಾಡುವುದನ್ನು ಕಲಿತ ಮನುಷ್ಯ ಕ್ರಮೇಣ ಇತರ ವಿಧಾನಗಳನ್ನು ಕಂಡುಹಿಡಿದ. ಚೂಪಾದ, ಗಟ್ಟಿಯಾದ ಮರದ ತುಂಡನ್ನು ಇನ್ನೊಂದು ಮರದ ತುಂಡಿನ ಮೇಲೆ ಇಟ್ಟು ಕಡೆದು ಅಥವಾ ಉಕ್ಕಿನ ತುಂಡಿನ ಮೇಲೆ ಚಕಮಕಿ ಕಲ್ಲನ್ನು ಕುಟ್ಟಿ ಬೆಂಕಿಮಾಡಿದ. ನಿಮ್ನ ದರ್ಪಣವನ್ನು ಉಪಯೋಗಿಸಿ ಸೂರ್ಯನ ಕಿರಣವನ್ನು ಮರ, ಹತ್ತಿ ಮುಂತಾದ ಪದಾರ್ಥಗಳ ಮೇಲೆ ಕೇಂದ್ರೀಕರಿಸಿದಾಗ ಅವು ಹೊತ್ತಿಕೊಂಡು ಉರಿಯುವುದೆಂದು ಪ್ರಾಚೀನ ಗ್ರೀಕರಿಗೆ ತಿಳಿದಿತ್ತು. ಬೆಂಕಿಯ ಕಡ್ಡಿಯನ್ನು ಮಾಡುವುದನ್ನು ಕಂಡುಹಿಡಿದ ಅನಂತರ ಬೆಂಕಿ ಬಹುಮಟ್ಟಿಗೆ ಮನುಷ್ಯನ ಅಧೀನವಾಯಿತು. ರಂಜಕ, ಗಂಧಕ, ಪೆಟ್ಲುಪ್ಪು ಮತ್ತು ಜಿಂಕ್ ಆಕ್ಸೈಡ್‌ಗಳ ಮಿಶ್ರಣವನ್ನು ಸಣ್ಣ ಮರದಕಡ್ಡಿಯ ತುದಿಗೆ ಅಂಟಿಸುತ್ತಾರೆ. ಇದನ್ನು ಗೀರಿದಾಗ ಬೆಂಕಿ ಹತ್ತುತ್ತದೆ. ಇದನ್ನು ಹಲವು ರೀತಿಗಳಲ್ಲಿ ಮಾರ್ಪಡಿಸಿ ಅಪಾಯವನ್ನು ಕಡಮೆಮಾಡಿದ್ದಾರೆ.

ಬೆಂಕಿಯನ್ನು ಮನುಷ್ಯ ಪಳಗಿಸಿಕೊಂಡಂತೆ ಅದು ಅವನ ಜೀವನ ವಿಧಾನವನ್ನು ಬದಲಾಯಿಸುತ್ತ ಹೋಯಿತು. ಬೆಂಕಿಯ ಸಹಾಯದಿಂದ ಅವನು ಕುಂಬಾರನಾದ. ಮಣ್ಣಿನಿಂದ ಕುಡಿಕೆ ಮಡಿಕೆಗಳನ್ನು ಮಾಡಿಕೊಂಡು, ಅಡುಗೆ ಮಾಡಲು ಮತ್ತು ಪದಾರ್ಥಗಳನ್ನು ಶೇಖರಿಸಲು ಕಲಿತ. ಮಣ್ಣನ್ನು ಸುಟ್ಟು ಇಟ್ಟಿಗೆಮಾಡಿ ಮನೆಯನ್ನು ಕಟ್ಟಿಕೊಂಡ. ಲೋಹವನ್ನು ತನಗಿಷ್ಟ ಬಂದಂತೆ ಬಾಗಿಸಿ ಅದಕ್ಕೆ ರೂಪಕೊಟ್ಟು ಬಳಸಲು ಕಲಿತ. ಎಂದರೆ, ರಾಜನ ಕಿರೀಟ–ಸಿಂಹಾಸನಗಳಿಂದ, ಅಂತಃಪುರದ ಮಹಿಳೆಯರ ರತ್ನಾಭರಣಗಳಿಂದ, ಸಾಮಾನ್ಯ ಮನುಷ್ಯನ ಹಾರೆ ಗುದ್ದಲಿಗಳವರೆಗೆ ಎಲ್ಲ ಬೆಂಕಿಯ ಪ್ರಸಾದ. ಭೂಮಿಯನ್ನು ಉಳುವ ನೇಗಿಲನ್ನೂ ಬೆಂಕಿ ನೀಡಿತು ; ಯುದ್ಧದಲ್ಲಿ ಬಳಸುವ ಬಿಲ್ಲು, ಬಾಣ, ಗುರಾಣಿ, ರಥಗಳನ್ನೂ ಬೆಂಕಿ ನೀಡಿತು. ಪ್ರಾಚೀನ ಗ್ರೀಸಿನಲ್ಲಿ ಪ್ರಪಂಚದ ಹಲವು ಪಂಗಡಗಳಲ್ಲಿ ಸುದ್ದಿ ಕಳುಹಿಸಲು ಬೆಂಕಿಯನ್ನು ಬಳಸಿಕೊಂಡರು. ಬೆಂಕಿ ಒಂದು ಸಂಕೇತವಾಯಿತು. ಯುದ್ಧದಲ್ಲಿ ವಿಜಯವಾದರೆ, ಅಥವಾ ದೂರದಲ್ಲಿ ಶತ್ರುಗಳು ಬರುತ್ತಿರುವುದು ಕಣ್ಣಿಗೆ ಬಿದ್ದರೆ, ಗುಡ್ಡಗಳ ಮೇಲೆ ಉರಿಯನ್ನು ಹೊತ್ತಿಸಿ ಸುದ್ದಿಯನ್ನು ಕಳುಹಿಸುತ್ತಿದ್ದರು. ಆವಿ, ವಿದ್ಯುಚ್ಛಕ್ತಿಗಳನ್ನು ಬಳಸುವುದನ್ನು ಮನುಷ್ಯ ಕಲಿಯುವವರೆಗೆ ಅವನ ನಾಗರಿಕತೆ ಬೆಂಕಿಯನ್ನೆ ಅವಲಂಬಿಸಿತ್ತು.

ಬೆಂಕಿಯಿಂದಾಗುತ್ತಿದ್ದ ಕೆಲಸಗಳಲ್ಲಿ ಹಲವನ್ನು ಇಂದು ವಿದ್ಯುಚ್ಛಕ್ತಿ ಮಾಡಿದರೂ ಅನೇಕ ಯಂತ್ರಗಳನ್ನು ನಡೆಸಲು ಈಗಲೂ ಬೆಂಕಿ ಬೇಕು. ಕೈಗಾರಿಕೆಗಳಲ್ಲಿ ಬೆಂಕಿಯ ಉಪಯೋಗ ಇದ್ದೇ ಇದೆ. ಕೆಲವೆಡೆಯಿರುವ

ಪ್ರಾಚೀನ ಮಾನವ ನಿರ್ಮಿಸಿದ ಅಗ್ನಿ



ವಿದ್ಯುತ್ ರೈಲುಗಳನ್ನು ಬಿಟ್ಟರೆ ಉಳಿದೆಲ್ಲ ರೈಲುಗಳು ಓಡಲು ಬೇಕಾದ ಶಕ್ತಿಗೆ ಬೆಂಕಿಯೇ ಆಧಾರ. ರೈಲು ಮಾರ್ಗಗಳ ಮೇಲೆ ರೈಲುಗಳನ್ನೋಡಿಸುವಂತೆ, ಸಾಗರ ಸಮುದ್ರಗಳ ಮೇಲೆ ಹಡಗುಗಳನ್ನು ನಡೆಸುವುದೂ ಬೆಂಕಿಯೇ. ವಿಮಾನಗಳು ಹಾರುವುದಕ್ಕೂ ಅಗ್ನಿಯಿಂದುಂಟಾದ ಶಕ್ತಿಯೇ ಮೂಲ. ಚಂದ್ರಉಪಗ್ರಹಯಾತ್ರೆಗೆ ಬೇಕಾಗುವ ವಿದ್ಯುಚ್ಛಕ್ತಿಯ ಉತ್ಪನ್ನಕ್ಕೂ ಮೂಲ, ಬೆಂಕಿಯ ಶಕ್ತಿ.

ಬೆಂಕಿ ಎಷ್ಟು ಉಪಯೋಗಕರವೋ ಅಷ್ಟೇ ವಿನಾಶಕಾರಿಯೂ ಹೌದು. ಯುದ್ಧ ಕಾಲದಲ್ಲಂತೂ ಬಾಂಬಿನ ದಾಳಿಯಿಂದ ಇಡೀ ನಗರಗಳು ಹೊತ್ತಿಕೊಂಡು ಉರಿದುಹೋಗಿವೆ. ಬೆಂಕಿ ಬಿದ್ದಾಗ ಬೆಂಕಿಯನ್ನು ಆರಿಸಲು ಅಗ್ನಿಶಾಮಕ ದಳವಿದೆ.

**ನೋಡಿ :** ಮಾನವ ; ವಿದ್ಯುಚ್ಛಕ್ತಿ

## ಅಜಂತ–ಎಲ್ಲೋರ

ಬೆಟ್ಟಗಳನ್ನು ಹಾವಿನಂತೆ ಬಳಸಿ ಹೊಳೆ ಹರಿಯಿತು. ಬೆಟ್ಟದಿಂದ ಧುಮುಕಿ ದಟ್ಟಡವಿಯ ಮಧ್ಯೆ ದಾರಿಮಾಡಿಕೊಂಡು ಮುಂದುವರಿಯಿತು. ಎತ್ತ ನೋಡಿದರೂ ಅರಣ್ಯ, ಕಡಿದಾದ ಬೆಟ್ಟಗಳು. ಇಲ್ಲಿ ಬ್ರಿಟಿಷ್ ಸವಾರನೊಬ್ಬ ದಾರಿತಪ್ಪಿ ಅಲೆಯುತ್ತಿದ್ದ. ಅಲೆದು ಅಲೆದು ಸಾಕಾಗಿದೆ. ಕುದುರೆಗೂ ಬಾಯಾರಿಕೆ. ಅರಣ್ಯದ ನಡುವೆ ನೀರಿನ ಜುಳುಜುಳು ಕೇಳಿಸಿತು. ನೀರನ್ನು ಹುಡುಕಿ ಹೊರಟ ಅವನನ್ನು ಸ್ವಾಗತಿಸಿ ಆದರಿಸಿತು ಒಂದು ನದಿ. ವಿಶ್ರಮಿಸಿಕೊಳ್ಳುತ್ತಿದ್ದ ಅವನಿಗೆ ಎದುರಿನ ಬೆಟ್ಟಗಳಲ್ಲಿ ಗುಹೆಗಳಿರುವಂತೆ ಕಂಡಿತು. ಒಂದಲ್ಲ ಎರಡಲ್ಲ, ಸಾಲು ಸಾಲು ಗುಹೆ. ಅನೇಕ ಗವಿಗಳನ್ನು ಬಂಡೆಗಳು ಮುಚ್ಚಿಬಿಟ್ಟಿದ್ದುವು. ಬ್ರಿಟಿಷ್ ಸವಾರ ಅಲ್ಲಿಂದ ವಾಪಸಾದ. ಆದರೂ ಆ ಗುಹೆಗಳಲ್ಲೇನಿದೆಯೆಂಬುದನ್ನು ನೋಡಬೇಕೆಂಬ ಕುತೂಹಲ. ಜೊತೆಯಲ್ಲಿ ಅನೇಕ ಕೆಲಸಗಾರರನ್ನು ಕರೆದುಕೊಂಡು ಮತ್ತೆ ಅಲ್ಲಿಗೆ ಹೋದ, ಗುಹೆಗಳಿಂದ ತಡೆಬಂಡೆಗಳನ್ನು ಹೊರತೆಗೆದರು. ಕತ್ತಲಿನಲ್ಲಿ ಬೆಳಕಿಟ್ಟು ನೋಡಿದರು. ಅವರ ಕಣ್ಣೆದುರಿಗೆ ಪ್ರಾಚೀನ ಭಾರತದ ಚಿತ್ರಕಲೆ ತಾನೇ ತಾನಾಗಿ ಮೆರೆಯಿತು. ಕತ್ತಲು ಗುಹೆ ಕಲೆಯ ಬೀಡಾಗಿತ್ತು. ಇದು ನಡೆದದ್ದು 1818ರಲ್ಲಿ.

ಮಹಾರಾಷ್ಟ್ರ ರಾಜ್ಯದ ಔರಂಗಾಬಾದ್ ಜಿಲ್ಲೆಯಲ್ಲಿ ಅಜಂತ ಒಂದು ಸಣ್ಣ ಹಳ್ಳಿ. ಹಳ್ಳಿಯಿಂದ ಸುಮಾರು ಆರು ಕಿಲೊಮೀಟರು ದೂರದಲ್ಲಿ ವಾಘುರ ನದಿ. ಬೆಟ್ಟಗಳ ನಡುವೆ ಚಂದ್ರಾಕಾರದಲ್ಲಿ ನದಿ ಕೊರೆದಿರುವ ಕಮರಿಯಲ್ಲಿ ಅಡಗಿವೆ ಇಂದು ಜಗತ್ಪ್ರಸಿದ್ಧವಾಗಿರುವ ಅಜಂತದ ಗುಹೆಗಳು.

ಸುಮಾರು ಒಂದೂವರೆ ಸಾವಿರ ವರ್ಷಗಳ ಕೆಳಗೆ ಬೌದ್ಧಸನ್ಯಾಸಿಗಳು ಈ ಗುಹೆಗಳಿಗೆ ಹೋದರು. ಸ್ವಾಭಾವಿಕವಾಗಿದ್ದ ಗವಿಗಳನ್ನು ಆಳವಾಗಿ ಮಾಡಿ, ಜೊತೆಗೆ ಹೊಸ ಗವಿಗಳನ್ನೂ ಅವರು ಕೊರೆದರು.

ಅಜಂತದಲ್ಲಿ ಒಟ್ಟು 29 ಗವಿಗಳಿವೆ. ಇವುಗಳಲ್ಲಿ ಮಧ್ಯದಲ್ಲಿರುವ ಗವಿಗಳು (9–13) ಅತ್ಯಂತ ಪ್ರಾಚೀನವಾದುವು. ಇವುಗಳ ಎಡಕ್ಕೂ ಬಲಕ್ಕೂ ಇರುವ ಗವಿಗಳು ಅನಂತರ ಕೆತ್ತಲ್ಪಟ್ಟುವು.

ಅಜಂತದಲ್ಲಿರುವ ಎಲ್ಲ ಗವಿಗಳ ಒಳಗೂ ಚಿತ್ರಗಳನ್ನು ಬರೆದಿದ್ದರೂ, ಆರು ಗವಿಗಳಲ್ಲಿ ಮಾತ್ರ ಅವು ಇಂದು ಕಾಣುತ್ತವೆ. ಬಲದಿಂದ ಎಡಕ್ಕೆ 1, 2, 9, 10, 16, 17 ಗುಹೆಗಳಲ್ಲಿ ಕೆಲವು 24.4 ಮೀಟರ್ ಚೌಕ ಇವೆ. ಇವುಗಳ ಗೋಡೆಗಳ ಮೇಲೂ ಛಾವಣಿಗಳ ಮೇಲೂ ಅನೇಕ ಚಿತ್ರಗಳಿವೆ. ಇವುಗಳಲ್ಲಿ ಬಹು ಭಾಗ ಬುದ್ಧನ ಜೀವನಕ್ಕೆ ಸಂಬಂಧಿಸಿದ್ದು, ಹಾಗೂ ಬುದ್ಧನ ಜಾತಕ ಕಥೆಗಳು.

ಎಲ್ಲೋರ : ಒಂದು ಗುಹೆಯ ಬಾಗಿಲಲ್ಲಿ ಆಲಂಕಾರಿಕ ಸಕ್ಕೆ

ಇಲ್ಲಿನ ಚಿತ್ರಗಳಲ್ಲಿ ನಾವು ಗಿಡಮರಗಳನ್ನೂ ಪಶುಪಕ್ಷಿಗಳನ್ನೂ ಸುಂದರ ಅರಮನೆಯ ದೃಶ್ಯಗಳನ್ನೂ ಮನೆ ಪಟ್ಟಣಗಳನ್ನೂ ನೋಡಬಹುದು. ಇವುಗಳ ಮಧ್ಯೆ ತಮ್ಮ ಭಾವರಾಗಗಳನ್ನು ಒಡಮೂಡಿಸಿರುವ ಗಂಡಸರು ಹೆಂಗಸರು ಮಕ್ಕಳ ಚಿತ್ರಗಳು. ಇವೆಲ್ಲದರ ಮಧ್ಯದಲ್ಲಿ ದಯಾನಿಧಿ ಬುದ್ಧನ, ಧ್ಯಾನಾಸಕ್ತ ಬುದ್ಧನ ಚಿತ್ರಗಳು.

ಎಲ್ಲೋರ : ಕಂಬದ ಮೇಲಣ ಸೂಕ್ಷ್ಮ ಕೆತ್ತನೆ



## ಅಜಂತ, ಎಲ್ಲೋರ

ಅಜಂತ ಚಿತ್ರಕಲೆಯಲ್ಲಿ ಪ್ರಧಾನವಾಗಿ ಚಿತ್ರಿತವಾಗಿರುವುದು ವೈರಾಗ್ಯ ಭಾವ. ಆದರೂ ಇಲ್ಲಿನ ಚಿತ್ರಕಾರರಿಗೆ ಜೀವನದ ಎಲ್ಲ ಭಾವ ರಾಗಗಳ, ರಸಗಳ ಪರಿಚಯವಿತ್ತೆಂಬುದು ಸ್ಪಷ್ಟ.

ಅಜಂತದ ಗವಿಗಳಲ್ಲಿ ಎರಡು ವಿಧ: ಒಂದು ಚೈತ್ಯ ಅಥವಾ ಆರಾಧನಾ ಮಂದಿರ; ಇನ್ನೊಂದು ವಿಹಾರ ಅಥವಾ ಮಠ. ಚೈತ್ಯಗಳಲ್ಲಿ ಬುದ್ಧನ ಆರಾಧನೆಗೆ ಪ್ರಾಮುಖ್ಯ ಹೆಚ್ಚು. ಇವುಗಳಲ್ಲಿ ಸ್ತೂಪಗಳಿವೆ. ಇವನ್ನು ಕಟ್ಟಿರುವ ರೀತಿ ಹೇಗಿದೆ ಎಂದರೆ, ದಿನದಲ್ಲಿ ಯಾವಾಗಲಾದರೊಮ್ಮೆ ಸೂರ್ಯನ ಬೆಳಕು ಇಡೀ ಗುಹೆಯನ್ನು ಬೆಳಗುತ್ತದೆ.

ಅತ್ಯಂತ ಪ್ರಸಿದ್ಧವಾಗಿರುವ ಪದ್ಮಪಾಣಿ ಬುದ್ಧನ ಚಿತ್ರವಿರುವುದು ಮೊದಲನೆಯ ಗುಹೆಯೊಳಗೆ, ಎರಡನೆಯ ಗವಿಯಲ್ಲಿರುವ ಬುದ್ಧಜನನ ಇನ್ನೊಂದು ರಮ್ಯ ಚಿತ್ರ.



ಅಜಂತ : ಒಂದು ಭಿತ್ತಿಚಿತ್ರ

ಹದಿನೇಳನೆಯ ಗವಿಯಲ್ಲಿರುವ ಒಂದು ಚಿತ್ರ ಅನೇಕರ ಗಮನ ಸೆಳೆದಿದೆ. ಭಿಕ್ಷುವಾಗಿ ಬುದ್ಧ ತನ್ನ ಮನೆಯ ಬಾಗಿಲಿಗೆ ಬಂದಾಗ ಅವನಿಗೆ ಭಿಕ್ಷೆ ನೀಡಲು ಮಗ ರಾಹುಲನೊಂದಿಗೆ ಯಶೋಧರೆ ನಿಂತಿರುವ ಚಿತ್ರ. ಇಲ್ಲಿ ಬುದ್ಧನ ಶಾಂತಿ, ಕರುಣೆ, ವೈರಾಗ್ಯ, ಯಶೋಧರೆಯ ಮುಖದಲ್ಲಿನ ಭಯ, ಭಕ್ತಿ, ರಾಹುಲನ ಕುತೂಹಲ ಮನಮೋಹಕವಾಗಿವೆ.

ಇಪ್ಪತ್ತೊಂದನೆಯ ಗವಿಯಿಂದ ಇಪ್ಪತ್ತೊಂಬತ್ತರವರೆಗಿನ ಗವಿಗಳು ಬುದ್ಧನ ಅನಂತರ ಪೂಜೆಗೆ, ಆರಾಧನೆಗೆ ಪ್ರಾಮುಖ್ಯ ನೀಡಿದ ಮಹಾಯಾನ ಪಂಥಕ್ಕೆ ಸೇರಿದಂಥವು. ಇವುಗಳಲ್ಲಿ ಇಪ್ಪತ್ತಾರನೆಯದು 21 ಮೀಟರ್ ಉದ್ದದ ಆರಾಧನಾಮಂದಿರ. ಇಲ್ಲಿ ದೇಹತ್ಯಾಗ ಮಾಡುತ್ತ ಮಲಗಿರುವ ಬುದ್ಧನ ಬಹಳ ದೊಡ್ಡ ಶಿಲ್ಪವಿದೆ.

ಅಜಂತದಲ್ಲಿನ ಚಿತ್ರಕಲೆಯ ರಚನೆ ಹೀಗೆ ; ಮೊದಲು ಕಲ್ಲಿನ ಗೋಡೆಗಳನ್ನು ಸಮಪಡಿಸಿದ್ದಾರೆ. ಮರಳು, ಧಾತುಮಿಶ್ರಿತ ಮಣ್ಣು, ಭತ್ತದ ಹುಲ್ಲು ಅಥವಾ ಹೊಟ್ಟು, ಪಾಚಿ, ಕಪ್ಪೆಚಿಪ್ಪು ಮುಂತಾದುವನ್ನು ಬೆಲ್ಲದ ನೀರಿನಲ್ಲಿ ಆರು ತಿಂಗಳು ನೆನೆಸಿ ಗಾರೆಯನ್ನು ಸಿದ್ಧಮಾಡಿಕೊಂಡಿದ್ದಾರೆ. ಇದನ್ನು ಗೋಡೆಗೆ ಹಚ್ಚಿ ಅದು ಆರುವುದಕ್ಕೆ ಮೊದಲು ಧಾತುರಾಗದ ಕಡ್ಡಿಗಳಿಂದ ಚಿತ್ರಗಳ ರೇಖೆ ಗುರುತು ಮಾಡಿಕೊಂಡು ಅನಂತರ ಅವುಗಳಿಗೆ ಬಣ್ಣ ಹಾಕಿದ್ದಾರೆ. ಹಿನ್ನೆಲೆ ಒಣಗುವುದಕ್ಕೆ ಮೊದಲೇ ಬಣ್ಣ ಹಚ್ಚಿದ ಇವು ಎರಡು ಸಾವಿರ ವರ್ಷಗಳಾದ ಮೇಲೂ ಉಳಿದಿವೆ.

ಅಜಂತ ಚಿತ್ರಕಲೆಗೆ ಹೆಸರಾದಂತೆ ವಾಸ್ತುಶಿಲ್ಪಕ್ಕೆ ಹೆಸರಾದದ್ದು ಎಲ್ಲೋರ. ಇದು ದೇವಗಿರಿ ಕೋಟೆಯಿಂದ ಹತ್ತು ಕಿಲೊಮೀಟರು, ಅಜಂತದಿಂದ ಸುಮಾರು ನೂರಅರವತ್ತೊಂದು ಕಿಲೊಮೀಟರು ದೂರದಲ್ಲಿದೆ.

ಅಜಂತವಿರುವುದು ಬೆಟ್ಟಗಳ ನೈಋತ್ಯ ಕೊನೆಯಲ್ಲಿ. ಎಲ್ಲೋರವಿರುವುದು ವಾಯವ್ಯ ಕೊನೆಯಲ್ಲಿ. ಎಲ್ಲೋರವೆಂಬ ಸಣ್ಣ ಹಳ್ಳಿಯ ಹತ್ತಿರ ಸುಮಾರು 91½ ಮೀಟರುಗಳ ಎತ್ತರವಿರುವ ಘಟ್ಟಗಳಲ್ಲಿವೆ ಎಲ್ಲೋರದ ಗುಹೆಗಳು. ಇಲ್ಲಿ 33 ಗವಿಗಳನ್ನು ಸುಮಾರು ಎರಡೂವರೆ ಕಿಲೊಮೀಟರು ಉದ್ದ ಕೊರೆಯಲಾಗಿದೆ.

ಅಜಂತ ಗುಹೆಗಳು ಸಂಪೂರ್ಣವಾಗಿ ಬೌದ್ಧಧರ್ಮಕ್ಕೆ ಮೀಸಲಾದ ಗವಿಗಳು. ಆದರೆ ಎಲ್ಲೋರದಲ್ಲಿ ಬೌದ್ಧ ಗುಹೆಗಳೂ ಹಿಂದೂ ಗುಹೆಗಳೂ ಜೈನಗುಹೆಗಳೂ ಇವೆ. ಬೌದ್ಧ ಗವಿಗಳನ್ನು 400 ರಿಂದ 600ರ ವರೆಗೂ ಹಿಂದೂ ಗುಹೆಗಳನ್ನು ಸುಮಾರು 600 ರಿಂದ 800ರ ವರೆಗೂ ಜೈನ ಗುಹೆಗಳನ್ನು 800 ರಿಂದಲೂ ಕೊರೆದಿರಬೇಕು. ಎಲ್ಲೋರದ ಬೌದ್ಧ ಗವಿಗಳಲ್ಲಿ ವಿಹಾರಗಳೇ ಹೆಚ್ಚು.

ಬೌದ್ಧಧರ್ಮದ ಅನಂತರ ಪ್ರಾಶಸ್ತ್ಯಕ್ಕೆ ಬಂದ ಶೈವಧರ್ಮದ ಪ್ರತೀಕವಾಗಿದೆ ಎಲ್ಲೋರದ ಪ್ರಸಿದ್ಧ ಕೈಲಾಸ ದೇವಾಲಯ. ಇದನ್ನು ಒಂದೇ ಬಂಡೆಯಲ್ಲಿ ಕೆತ್ತಿದ್ದಾರೆ. ಕೆತ್ತಿಸಿದವನು ರಾಷ್ಟ್ರಕೂಟ ವಂಶದ ಮೊದಲನೆಯ ಕೃಷ್ಣರಾಜ. ಇದಾದ ಮೇಲೆ ಜೈನಮತ ಪ್ರಾಶಸ್ತ್ಯಕ್ಕೆ ಬಂದಾಗ ಎಲ್ಲೋರದ ಜೈನ ಗುಡಿಗಳು ಕೊರೆಯಲ್ಪಟ್ಟುವು. ಈ ಜೈನ ಗವಿಗಳಲ್ಲಿ ಅತ್ಯಂತ ರಮಣೀಯವಾದದ್ದು ಇಂದ್ರಸಭೆ ಎಂಬ ಗವಿ.

ಅಜಂತ ಎಲ್ಲೋರ ಗವಿಗಳು ಭಾರತೀಯ ಶಿಲ್ಪಕಲೆಗೂ ವಾಸ್ತುಶಿಲ್ಪಕ್ಕೂ ಚಿತ್ರಕಲೆಗೂ ಅತಿಶ್ರೇಷ್ಠ ನಿದರ್ಶನಗಳಾಗಿವೆ.

ಪಾಳುಬೀಳುತ್ತಿದ್ದ ಈ ಗವಿಗಳನ್ನು ಈಗ ರಾಷ್ಟ್ರೀಯ ಸ್ಮಾರಕಗಳಾಗಿ ಉಳಿಸಿಕೊಂಡು ಬರುತ್ತಿದ್ದಾರೆ.

ಅಜಂತದ ಕಲಾವೈಭವ ಬಂಗಾಳದ ಅವನೀಂದ್ರನಾಥ್ ಠಾಕೂರ್, ನಂದಲಾಲ್ ಬೋಸ್, ಅಸಿತ್‌ಕುಮಾರ್ ಹಾಲ್ದಾರ್, ಕ್ಷಿತಿ ಮುಜುಮ್‌ದಾರ್, ಕರ್ನಾಟಕದ ಕೆ. ವೆಂಕಟಪ್ಪ ಇವರ ಚಿತ್ರಕಲೆಗೆ ಸ್ಫೂರ್ತಿ ನೀಡಿದೆ.

ನೋಡಿ : ಏಳನೆಯ ಸಂಪುಟ

## ಅಟಾಟರ್ಕ್, ಕೆಮಾಲ್

ಹಳೆಯ ಸಂಪ್ರದಾಯಗಳ ಬಂದಿಯಾಗಿ ಹಿಂದುಳಿದಿದ್ದ ದೇಶವನ್ನು ಹದಿನೈದು ವರ್ಷಗಳಲ್ಲಿ ಆಧುನಿಕ ರಾಷ್ಟ್ರಗಳ ಪಂಕ್ತಿಗೆ ತಂದು ಸೇರಿಸಿದ ಅಸಾಧಾರಣ ಪುರುಷ ಕೆಮಾಲ್ ಅಟಾಟರ್ಕ್.

ಕೆಮಾಲ್ 1881ರಲ್ಲಿ ಸಲೊನೀಕ ಎಂಬ ಪಟ್ಟಣದಲ್ಲಿ ಹುಟ್ಟಿದ. ಇವನ ಮೊದಲ ಹೆಸರು ಮುಸ್ತಾಫಾ ಕೆಮಾಲ್ ಎಂದು. ಹನ್ನೊಂದು ವರ್ಷವಾಗಿದ್ದಾಗ ಅವನನ್ನು ಒಂದು ಶಾಲೆಗೆ ಸೇರಿಸಿದರು. ಆಟ ಪಾಠ ಯಾವುದರಲ್ಲೂ ಅವನು ಅಷ್ಟಾಗಿ ಆಸಕ್ತಿ ತೋರುತ್ತಿರಲಿಲ್ಲ. ಶಾಲೆಯಲ್ಲಿ ಯಾರಾದರೂ ಅವನನ್ನು ಪಾಠ ಓದಲು ಅಥವಾ ಆಟವಾಡಲು ಬಲಾತ್ಕರಿಸಿದರೆ ಅವರನ್ನು ಮುಷ್ಟಿಯಿಂದ ಗುದ್ದಿ, ಚಪ್ಪಲಿಗಳನ್ನು ಅವರತ್ತ ತೂರುತ್ತಿದ್ದ. ಅವನನ್ನು ಸುಧಾರಿಸಲಾಗದೆ ಆ ಶಾಲೆಯಿಂದ ಹೊರ ಹಾಕಿದರು. ಹದಿನೇಳು ವರ್ಷ ವಯಸ್ಸಾಗಿದ್ದಾಗ ಹೆತ್ತವರು ಅವನನ್ನು ಸೈನಿಕಶಿಕ್ಷಣ ಶಾಲೆಗೆ ಸೇರಿಸಿದರು. ಸ್ವಭಾವತಃ ಮಿತಭಾಷಿಯಾದ ಅವನು ಯಾರೊಡನೆಯೂ ಅಷ್ಟಾಗಿ ಬೆರೆಯುತ್ತಿರಲಿಲ್ಲ. ಆತ್ಮೀಯ ಗೆಳೆಯರಾರೂ ಅವನಿಗೆ ಶಾಲೆಯಲ್ಲಿ ದೊರೆಯಲಿಲ್ಲ. ಅಲ್ಲಿ ಎರಡು ವರ್ಷಗಳನ್ನು ಕಳೆದ ಅನಂತರ ಕಾನ್‌ಸ್ಟಾಂಟಿನೋಪಲ್ (ಈಗಿನ ಇಸ್ತಾಂಬೂಲ್)ಗೆ ಸಬ್ ಲೆಫ್ಟಿನೆಂಟ್ ಆಗಿ ಹೋದ. ಆಗ ತುರ್ಕಿ ದೇಶದಲ್ಲಿ ಯುವಕ ತುರ್ಕರ ಸಂಘವೊಂದು ಅಸ್ತಿತ್ವದಲ್ಲಿತ್ತು. ಸುಲ್ತಾನರ ನೀತಿಭ್ರಷ್ಟ ಆಳ್ವಿಕೆಯ ವಿರುದ್ಧ ತುರ್ಕಿದೇಶದ ಯುವಜನರು ಸ್ಥಾಪಿಸಿದ ಸಂಘ ಇದು. ಮುಸ್ತಾಫಾ ಕೆಮಾಲ್ ಈ ಸಂಘದವರ ಎಲ್ಲ ಅಭಿಪ್ರಾಯಗಳನ್ನೂ ಒಪ್ಪದೇ ಇದ್ದರೂ, ಮೂಲ ಉದ್ದೇಶದಿಂದ ಆಕರ್ಷಿತನಾಗಿ ಅವರ ಸಂಬಂಧ ಬೆಳೆಸಿದ.

ತುರ್ಕಿದೇಶ ಮೊದಲನೆಯ ಮಹಾಯುದ್ಧ (1914–1918) ದಲ್ಲಿ ಜರ್ಮನಿಯ ಪಕ್ಷ ವಹಿಸಿ ಹೋರಾಡಿತು. ಈ ಯುದ್ಧದಲ್ಲಿ ಡಾರ್ಡ್‌ನೆಲ್ಸ್‌ನಲ್ಲಿ ಕೆಮಾಲ್ ಗಳಿಸಿದ ಅದ್ಭುತ ವಿಜಯ ಅವನನ್ನು ದೇಶದ ಕಣ್ಮಣಿಯನ್ನಾಗಿ ಮಾಡಿತು. ಯುದ್ಧ ನಿಂತ ಅನಂತರ ತುರ್ಕಿದೇಶದ ರಾಷ್ಟ್ರೀಯ ಪಕ್ಷವೊಂದನ್ನು ಅವನು ಸ್ಥಾಪಿಸಿದ. ಅನಟೋಲಿಯ ಎಂಬಲ್ಲಿದ್ದ ಸೈನಿಕರನ್ನು ನಿವೃತ್ತಿಗೊಳಿಸಿ ಹಿಂದಕ್ಕೆ ಕಳುಹಿಸುವ ಕಾರ್ಯವನ್ನು ಸುಲ್ತಾನನು ಮುಸ್ತಾಫಾ ಕೆಮಾಲನಿಗೆ ಒಪ್ಪಿಸಿದ. ತನ್ನ ಬೆಂಬಲಕ್ಕಾಗಿ ಒಂದು ಸೈನ್ಯವನ್ನು ಸಿದ್ಧಗೊಳಿಸಲು ಕೆಮಾಲ್ ರಹಸ್ಯವಾಗಿ ಈ ಅವಕಾಶವನ್ನು ಉಪಯೋಗಿಸಿಕೊಂಡ. 1923ರಲ್ಲಿ ತುರ್ಕಿದೇಶದ ಸುಲ್ತಾನನನ್ನು ಪದಚ್ಯುತಗೊಳಿಸಿ, ತುರ್ಕಿ ಒಂದು ಗಣರಾಜ್ಯ ಎಂದು ಸಾರಿದ. ಕೆಮಾಲ್ ಅದರ ಪ್ರಥಮ ರಾಷ್ಟ್ರಾಧ್ಯಕ್ಷನಾದ.

ಇಲ್ಲಿಂದಾಚೆ ತುರ್ಕಿಯ ಚರಿತ್ರೆಯಲ್ಲಿ ಹೊಸ ಅಧ್ಯಾಯ ಪ್ರಾರಂಭವಾಯಿತು. ಮುಸ್ತಾಫಾ ಕೆಮಾಲ್ ಅನೇಕ ಮಹತ್ವಪೂರ್ಣ ಸುಧಾರಣೆಗಳನ್ನು ಆಚರಣೆಗೆ ತಂದ. ದೇಶದಲ್ಲಿ ಬಹುಸಂಖ್ಯಾತರಿಗೆ ಓದು ಬರೆಹ ಬರುತ್ತಿರಲಿಲ್ಲ. ವಿದ್ಯಾಭ್ಯಾಸದ ಅವಕಾಶವನ್ನು ಎಲ್ಲರಿಗೂ ಕೆಮಾಲ್ ಕಲ್ಪಿಸಿಕೊಟ್ಟ. ಹಿಂದೆ ತುರ್ಕಿಯ ಸುಲ್ತಾನ 'ಖಲೀಫ್' ಎಂಬ ಹೆಸರಿನಿಂದ ವಿಶ್ವದ ಮುಸಲ್ಮಾನರಿಗೆಲ್ಲ ಧರ್ಮಗುರು ಎನಿಸಿದ್ದ. ಕೆಮಾಲ್ ರಾಜಕೀಯಕ್ಕೂ ಮತಕ್ಕೂ ಯಾವ ಸಂಬಂಧವೂ ಇಲ್ಲವೆಂದು ಸಾರಿ, ಕೇವಲ ಮತದ ಕೆಲಸಕ್ಕಾಗಿಯೇ ಒಬ್ಬ ಖಲೀಫನನ್ನು ನಿಯಮಿಸಿದ. ಆ ಖಲೀಫನೂ ಒಳಸಂಚುಗಳನ್ನು ನಡೆಸಲು, ಖಲೀಫನ ಸ್ಥಾನವನ್ನೇ ತೆಗೆದುಹಾಕಿ, ಮತೀಯ ವ್ಯವಹಾರಗಳನ್ನು ರಾಜಕೀಯ ಶಾಖೆಯೊಂದಕ್ಕೆ ವಹಿಸಿದ.

1926ರಲ್ಲಿ ತುರ್ಕಿಯ ಜನ ನೀಳ ಟೋಪಿಯನ್ನು ಧರಿಸಬಾರದೆಂದು ಆಜ್ಞೆಯಾಯಿತು. ಸ್ತ್ರೀಯರಿಗೆ 'ಬುರಖಾ'ದಿಂದ ಬಿಡುಗಡೆ ದೊರೆಯಿತು. ಒಬ್ಬ ಮುಸಲ್ಮಾನ ಅನೇಕ ಹೆಂಗಸರನ್ನು ಮದುವೆಯಾಗುವ ಅವಕಾಶವನ್ನು ಕೆಮಾಲ್ ಕಿತ್ತುಹಾಕಿದ. ಕಡ್ಡಾಯ ಶಿಕ್ಷಣ ಕ್ರಮ ಜಾರಿಗೆ ಬಂತು. ತುರ್ಕಿಯ ಜನ ಉಪಯೋಗಿಸುತ್ತಿದ್ದ ಅರಬಿ ಲಿಪಿ, ಬರೆವಣಿಗೆ, ಮುದ್ರಣ ಮತ್ತಿತರ ಕೆಲಸಗಳಿಗೆ ಕಷ್ಟಕರವಾಗಿತ್ತು. ಅದನ್ನು ಬಿಟ್ಟು ರೋಮನ್ ಲಿಪಿಯನ್ನು ಉಪಯೋಗಿಸಬೇಕೆಂದು ಕೆಮಾಲ್ ಆಜ್ಞೆ ಮಾಡಿದ. ಇದರಿಂದ ತುರ್ಕಿಭಾಷೆಯನ್ನು ಎಲ್ಲರೂ ಕಲಿಯಲು ಅನುಕೂಲವಾಯಿತು. ಮತ್ತು ರೋಮನ್ ಲಿಪಿ ಪ್ರಚುರವಾಗಿದ್ದ ಎಲ್ಲ ದೇಶಗಳಲ್ಲಿಯೂ ತುರ್ಕಿ ಭಾಷೆಯನ್ನು ಓದುವ ಸೌಲಭ್ಯ ಒದಗಿತು.

ತುರ್ಕಿಯಲ್ಲಿ ಅಧ್ಯಕ್ಷನ ಚುನಾವಣೆ ನಾಲ್ಕು ವರ್ಷಗಳಿಗೊಮ್ಮೆ ನಡೆಯುತ್ತಿತ್ತು. 1927ರಿಂದ ಕೆಮಾಲ್ ಮೂರು ಬಾರಿ ಆಯ್ಕೆಯಾದ. 1934ರಲ್ಲಿ

ವಲ್ಲ ಗಂಡಸರೂ ಉಪನಾಮಗಳನ್ನು ಇಟ್ಟುಕೊಳ್ಳಬೇಕೆಂದು ವಿಧಿಸಿ ತಾನು 'ಅಟಾಟರ್ಕ್' (ತುರ್ಕಿಯ ತಂದೆ) ಎಂದು ಹೆಸರಿಟ್ಟುಕೊಂಡ. ತುಂಬ ಹಿಂದುಳಿದಿದ್ದ ದೇಶವನ್ನು ತನ್ನ ಆಡಳಿತ ಕಾಲದಲ್ಲಿ ಆಧುನಿಕ ಮತ್ತು ಬಲಿಷ್ಠ ರಾಷ್ಟ್ರವಾಗಿ ಮಾಡಿದ ಅಸಾಧಾರಣ ನಾಯಕ ಈತ. ಒಮ್ಮೊಮ್ಮೆ ಕ್ರೂರಿ ಎಂದು ತೋರುವಂತೆ ಇವನು ವರ್ತಿಸುತ್ತಿದ್ದ. ಇತರರ ಮೇಲೆ ಆಕ್ರಮಣ ನಡೆಸುವುದಕ್ಕಾಗಲಿ, ತುರ್ಕಿ ಸಾಮ್ರಾಜ್ಯವನ್ನು ನಿರ್ಮಿಸುವುದಕ್ಕಾಗಲಿ ದೇಶದ ಜನತೆಯ ಶಕ್ತಿ ಸಾಮರ್ಥ್ಯಗಳನ್ನು ದುರುಪಯೋಗಪಡಿಸುವುದು ಅವನಿಗೆ ಸರ್ವಥಾ ಇಷ್ಟವಿರಲಿಲ್ಲ. ದೇಶದ ಸಂಪತ್ತನ್ನು ವೃದ್ಧಿಪಡಿಸಲು ಅವನ್ನು ಉಪಯೋಗಿಸಬೇಕೆಂಬುದು ಅವನ ಆಶಯವಾಗಿದ್ದಿತು.

ತನ್ನ ಧ್ಯೇಯ ಸಾಧನೆಯಲ್ಲಿ ಅಪೂರ್ವ ಯಶಸ್ಸು ಪಡೆದ ಕೆಮಾಲ್ ಅಟಾಟರ್ಕ್ ಐವತ್ತೇಳನೆಯ ವಯಸ್ಸಿನಲ್ಲಿ (1938) ನಿಧನ ಹೊಂದಿದ: ಜಗತ್ತಿನ ಇತಿಹಾಸದಲ್ಲಿ ಅಮರನಾದ.

## ಅಟ್ಲಾಂಟಿಕ್ ಸಾಗರ

ಅಟ್ಲಾಂಟಿಕ್ ಸಾಗರ ಪ್ರಪಂಚದ ದೊಡ್ಡ ಸಾಗರಗಳಲ್ಲಿ ಎರಡನೆಯದು. ಸಾಗರಕ್ಕೆ ಈ ಹೆಸರು ಬಂದ ಬಗೆಗೆ ಎರಡು ಕಥೆಗಳಿವೆ. ಅಟ್ಲಾಂಟಿಕ್ ಎಂಬ ಪುರಾಣ ಪ್ರಸಿದ್ಧ ಪ್ರದೇಶವನ್ನು ಸಮುದ್ರ ಇದ್ದಕ್ಕಿದ್ದಂತೆ ನುಂಗಿಬಿಟ್ಟಿತು ; ಆದ್ದರಿಂದ ಈ ಸಮುದ್ರವನ್ನು ಅಟ್ಲಾಂಟಿಕ್ ಸಾಗರವೆಂದು ಕರೆದರು ಎಂದು ಒಂದು ಕಥೆ. ಭೂಮಿಯನ್ನೇ ಬೆನ್ನಿನ ಮೇಲೆ ಹೊತ್ತುಕೊಂಡಿದ್ದ ಅಟ್ಲಾಸನ ಹೆಣ್ಣುಮಕ್ಕಳು ಅಟ್ಲಾಂಟೈಡಿಸ್‌ರಿಂದ ಈ ಹೆಸರು ಬಂತೆಂದು ಇನ್ನೊಂದು ಕಥೆ.

ಅಟ್ಲಾಂಟಿಕ್ ಸಮುದ್ರವೇ ಮಾನವ ಮೊದಲು ದಾಟಿದ ಸಾಗರ. ಅಟ್ಲಾಂಟಿಕ್ ಸಾಗರ ಆರ್ಕ್‌ಟಿಕ್‌ನಿಂದ ಅಂಟಾರ್ಟಿಕ್‌ವರೆಗೂ ವ್ಯಾಪಿಸಿದೆ. ಯೂರೋಪ್, ಆಫ್ರಿಕ ಮತ್ತು ಅಮೆರಿಕ ಖಂಡಗಳ ನಡುವೆ ಈ ಮಹಾಸಾಗರವಿದೆ. ವಿಸ್ತೀರ್ಣ 8,24,39,700 ಚದರ ಕಿಲೊಮೀಟರುಗಳು. ಅದರ ಅತಿ ಹೆಚ್ಚು ಅಗಲವಾದ ಭಾಗದಲ್ಲಿ 6,436 ಕಿಲೊಮೀಟರುಗಳಿಗಿಂತಲೂ ಜಾಸ್ತಿ. ಅತ್ಯಂತ ಹೆಚ್ಚಾದ ಆಳ 9,225 ಮೀಟರು.

ಭೂಮಧ್ಯ ರೇಖೆಯ ಹತ್ತಿರದ ನೀರಿನ ಮೇಲ್ಪದರ ಬೆಚ್ಚಗಿದೆ. ಉತ್ತರ ಧ್ರುವ ಮತ್ತು ದಕ್ಷಿಣ ಧ್ರುವಗಳ ಕಡೆಗೆ ನೀರು ಹರಿಯುತ್ತದೆ. ಮುಂದೆ ಆಳವಾದ ಜಾಗದಲ್ಲಿ ನೀರು ತಣ್ಣಗಿದ್ದು, ಬೆಚ್ಚಗಿನ ನೀರಿನ ವಿರುದ್ಧ ದಿಕ್ಕಿನಲ್ಲಿ ಹರಿಯುತ್ತದೆ. ಉತ್ತರದ ಕಡೆ ಹರಿಯುವ ಬೆಚ್ಚಗಿನ ನೀರನ್ನು ಗಲ್ಫ್ ಸ್ಟ್ರೀಮ್ (ಕೊಲ್ಲಿ ಪ್ರವಾಹ) ಎನ್ನುತ್ತಾರೆ. ಗಲ್ಫ್ ಸ್ಟ್ರೀಮ್ ಗ್ರೀನ್‌ಲೆಂಡ್, ಐಸ್‌ಲೆಂಡ್‌ಗಳ ಕಡೆಗೂ ಬ್ರಿಟಿಷ್ ದ್ವೀಪ ನಾರ್ವೆಗಳ ಕಡೆಗೂ ಪ್ರವಹಿಸುತ್ತದೆ. ಗಲ್ಫ್ ಸ್ಟ್ರೀಮ್ ಹರಿಯುವ ಸ್ಥಳಗಳಲ್ಲಿ, ಚಳಿ ಕಡಮೆ. ಲ್ಯಾಬ್ರಡಾರ್ ಪ್ರವಾಹ ಗ್ರೀನ್‌ಲೆಂಡ್ ಕಡೆಯಿಂದ ಅಪಾಯಕಾರಿ ಹಿಮುಗಡ್ಡೆಗಳನ್ನು ಹೊತ್ತು ತರುತ್ತದೆ. ಶೀತಲವಾದ ಲ್ಯಾಬ್ರಡಾರ್ ಪ್ರವಾಹ ಗಲ್ಫ್ ಸ್ಟ್ರೀಮನ್ನು ಸೇರಿದಾಗ ನ್ಯೂಫೌಂಡ್‌ಲೆಂಡಿನಲ್ಲಿ ಮಂಜು ಮುಸುಕುತ್ತದೆ.

ಉತ್ತರ ಅಟ್ಲಾಂಟಿಕ್‌ನ ನೀರಿನ ಸೆಳೆತ ನಿಧಾನವಾಗಿ ದೊಡ್ಡ ಚಕ್ರದ ಆಕಾರವಾಗಿ ಸುತ್ತುತ್ತಿರುತ್ತದೆ.

ಅಟ್ಲಾಂಟಿಕ್ ಸಾಗರದ ತಳ, ಮಧ್ಯ ಅಟ್ಲಾಂಟಿಕ್ ಬೆಟ್ಟ ಸಾಲಿನಿಂದ ಎರಡು ಭಾಗಗಳಾಗಿದೆ. ಉತ್ತರದಿಂದ ದಕ್ಷಿಣಕ್ಕೆ ಹಬ್ಬಿರುವ ಈ ಪರ್ವತ ಪಂಕ್ತಿ S ಆಕಾರದಲ್ಲಿದ್ದು ಸಮುದ್ರ ತಳದಿಂದ 1.830 ಮೀಟರು ಎತ್ತರವಿದೆ. ಸಮುದ್ರಮಟ್ಟಕ್ಕಿಂತ ಎತ್ತರಕ್ಕೆ ಎದ್ದಿರುವ ಸ್ಥಳಗಳು ಅಜೋರ್ಸ್, ಸೆಂಟ್ ಹೆಲಿನಾ ಮೊದಲಾದ ದ್ವೀಪಗಳಾಗಿವೆ.

ದಕ್ಷಿಣ ಅಟ್ಲಾಂಟಿಕ್ ತೀರ ತಕ್ಕಮಟ್ಟಿಗೆ ನೇರವಾಗಿದೆ. ಉತ್ತರ ಅಟ್ಲಾಂಟಿಕ್ ತೀರ ಅಂಕುಡೊಂಕಾಗಿದೆ. ಯೂರೊಪಿನ ತೀರ ಭಾಗದಲ್ಲೇ ಇದು ಹೆಚ್ಚು ವಕ್ರವಾಗಿರುವುದು. ಬಾಲ್ಟಿಕ್, ಉತ್ತರ, ಭೂಮಧ್ಯ, ಕಪ್ಪು ಸಮುದ್ರಗಳು ಇಲ್ಲಿರುವುದೂ ಈ ತೀರದ ವಕ್ರತೆಗೆ ಕಾರಣ. ಅಮೆರಿಕದ ತೀರ ವಿಭಾಗದಲ್ಲಿ ಹಡ್ಸನ್ ಕೊಲ್ಲಿ, ಸೆಂಟ್ ಲಾರೆನ್ಸ್ ಕೊಲ್ಲಿ, ಮೆಕ್ಸಿಕೊ ಕೊಲ್ಲಿ ಮತ್ತು ಕ್ಯಾರಿಬಿಯನ್ ಸಮುದ್ರಗಳಿವೆ.

## ಅಡುಗೆ

ಮನುಷ್ಯನ ಹೊರತಾಗಿ ಯಾವ ಪ್ರಾಣಿಯೂ ಅಡುಗೆಮಾಡಿ ಆಹಾರವನ್ನು ಸೇವಿಸುವುದಿಲ್ಲ.

ಮನುಷ್ಯನ ಬೆರಗುಗೊಳಿಸುವ ವಿಚಿತ್ರ ಸಾಧನೆಗಳಲ್ಲಿ ಅಡುಗೆಯೂ ಒಂದು. ಪ್ರಪಂಚದ ವಿವಿಧ ಭಾಗಗಳಲ್ಲಿ ಅದೆಷ್ಟು ಬಗೆಯ ಅಡುಗೆಗಳು ರೂಢಿಯಲ್ಲಿವೆ! ಒಂದು ಸಣ್ಣ ಪ್ರದೇಶದಲ್ಲಿಯೇ ಅಡುಗೆಯಲ್ಲಿ ಎಷ್ಟು ಬಗೆಯ ವೈವಿಧ್ಯ! ಮನುಷ್ಯನ ನಾಲಿಗೆ ಶಬ್ದ ಪ್ರಪಂಚವನ್ನು, ನಾದ ಪ್ರಪಂಚವನ್ನು ಸೃಷ್ಟಿಸಿದಂತೆ, ಅಡುಗೆಯ ಪ್ರಪಂಚವನ್ನೂ ಸೃಷ್ಟಿಸಿದೆ.

ಅಡುಗೆ ಎನ್ನುವುದು 'ಅಟ್ಟು' ಎನ್ನುವ ಪದದಿಂದ ಬಂದಿದೆ. ಅಟ್ಟು ಎಂದರೆ ಬೇಯಿಸು. ಬೇಯಿಸುವುದಕ್ಕೆ ಬೆಂಕಿ ಅತ್ಯವಶ್ಯ. ಬೆಂಕಿ ನಮಗೆ ಸಾಧಾರಣ ವಿಷಯವೆನಿಸಿದರೂ ಲಕ್ಷಾಂತರ ವರ್ಷಗಳ ಹಿಂದಿನ ಮಾನವನಿಗೆ ಬೆಂಕಿ ಹೇಗೆ ಉಂಟಾಗುತ್ತದೆ ಎಂಬುದೇ ತಿಳಿದಿರಲಿಲ್ಲ. ಆಕಸ್ಮಿಕವಾಗಿ ಬೆಂಕಿಯಲ್ಲಿ ಬೆಂದ ಆಹಾರಪದಾರ್ಥದ ಸೇವನೆಯಿಂದ ಆತ ಬೇಯಿಸುವುದರ ಉಪಯೋಗ ಅರಿತ. ಬೆಂದ ಪದಾರ್ಥ ಮಿದುವಾಗಿಯೂ ಪರಿಮಳದಿಂದಲೂ ಕೂಡಿರುವುದು ಅವನಿಗೆ ಬಹಳ ಆಕರ್ಷಕವಾಗಿ ಕಂಡಿರಬೇಕು. ಅಂದಿನಿಂದ ಪ್ರಾರಂಭವಾಯಿತು ಮಾನವನ ಪಾಕಶಾಸ್ತ್ರ. ಇದಕ್ಕೆ ಕ್ರಮೇಣ ಉಪ್ಪು, ಹುಳಿ, ಖಾರಗಳು, ಮಸಾಲೆ ಪದಾರ್ಥಗಳು ಸೇರಿ ಅಡುಗೆ

ಆರಂಭದ ಅಡುಗೆ



ವಿಶೇಷ ಜನಪ್ರಿಯವಾಗಿ ಪರಿಣಮಿಸಿತು. ವ್ಯಂಜನಗಳ ಎಂಬ ಹೆಸರಿನಲ್ಲಿ, ಪ್ರಧಾನ ಆಹಾರ ಜೊತೆಗೆ ರುಚಿ ಹೆಚ್ಚಿಸಲು ಇತರ ಉಪತಿನಿಸುಗಳು ಬಳಕೆಗೆ ಬಾದುವು.

ಅಡುಗೆಯಿಂದ ಆಹಾರಪದಾರ್ಥಗಳ ಸತ್ವ ಹೆಚ್ಚಬಹುದು ಅಥವಾ ಕಡಮೆಯಾಗಬಹುದು. ವಿಟಮಿನ್ 'ಸಿ' ಅಂಶ ಶಾಖದಿಂದ ಬಹು ಬೇಗ ನಾಶವಾಗುತ್ತದೆ. ಇದರಿಂದ ಪ್ರತಿದಿನವೂ 'ಸಿ' ಅಂಶವಿರುವ ಕಾಯಿಪಲ್ಲೆಗಳನ್ನು ಹಸಿಯಾಗಿಯೇ ತಿಂದು ಈ ಕೊರತೆಯನ್ನು ಸರಿಪಡಿಸಿಕೊಳ್ಳಬೇಕು. ಪದಾರ್ಥ ಸಹಜ ಸ್ಥಿತಿಯಲ್ಲಿರುವಾಗಲೇ ಬೇಯಿಸಿ ಅಡುಗೆ ಮಾಡುವುದು ಆರೋಗ್ಯದ ದೃಷ್ಟಿಯಿಂದ ಸಮರ್ಪಕ. ಅಡುಗೆ ಮಾಡಿದ ಪದಾರ್ಥ ಬೇಗ ಕೆಡುವುದಿಲ್ಲ. ಹಾನಿಕಾರಕ ಅಣುಜೀವಿಗಳು ನಾಶಗೊಳ್ಳುತ್ತವೆ. ಬೇಯಿಸಿದಾಗ ಹಸಿ ಪದಾರ್ಥದಲ್ಲಿ ಅಡಗಿದ್ದ ಪರಿಮಳ ಹೊರ ಸೂಸಿ. ತಿನಿಸು ಹಸಿ ರೂಪಕ್ಕಿಂತ ಹೆಚ್ಚು ಆಕರ್ಷಕವಾಗುತ್ತದೆ. ಹಸಿ ಪದಾರ್ಥಕ್ಕಿಂತ ಬೇಯಿಸಿದ ಪದಾರ್ಥ ಬೇಗ ಅರಗುತ್ತದೆ. ಅಡುಗೆ ಮಾಡಿದ ಮಾಂಸ ಪದಾರ್ಥಗಳು ಹೆಚ್ಚು ರುಚಿಕರವಾಗಿಯೂ ಜೀರ್ಣಕಾರಿಯಾಗಿಯೂ ಇರುತ್ತವೆ. ಎಲ್ಲ ಪಿಷ್ಟ ಪದಾರ್ಥಗಳೂ ಬೇಯಿಸಿದ ಬಳಿಕ ಬೇಗ ಜೀರ್ಣವಾಗುವ ರಾಸಾಯನಿಕ ಪದಾರ್ಥಗಳಾಗಿ ಮಾರ್ಪಡುತ್ತವೆ.

ಅಡುಗೆಯಲ್ಲಿ ಅನೇಕ ವಿಧಾನಗಳಿವೆ. ಬೇಯಿಸುವ ರೀತಿಯಲ್ಲಷ್ಟೇ ಅಲ್ಲದೆ, ಬೇರೆ ಪದಾರ್ಥಗಳ ಮಿಶ್ರಣ, ಬೇರೆ ಬೇರೆ ಹದ ಇದರಲ್ಲೆಲ್ಲ ವೈವಿಧ್ಯವಿದೆ. ಕೆಂಡದಮೇಲೆ ನೇರವಾಗಿ ಸುಡುವುದು ಇಲ್ಲವೆ ಕಾದ ಕಾವಲಿಯ ಮೇಲೆ ಸುಡುವುದು, ಕರಿಯುವುದು—ವಿವಿಧ ರೀತಿಗಳು. ಎಣ್ಣೆ ತುಪ್ಪಗಳಲ್ಲಿ ಸಿಹಿ, ಉಪ್ಪು ತಿಂಡಿಗಳನ್ನು ಮಾಡುವುದನ್ನು ಎಲ್ಲರೂ ಬಲ್ಲರು. ಹುರಿಯುವುದು ಇನ್ನೊಂದು ಬಗೆಯ ಅಡುಗೆ. ಕಡಲೆಕಾಯಿ ಹುರಿಯುತ್ತಾರೆ. ರಾಗಿ, ಜೋಳ, ಭತ್ತ, ಹುರಿದು ಅರಳು ಮಾಡುತ್ತಾರೆ. ಸ್ವಲ್ಪ ಹುರಿದ ಅನಂತರ ಎರಡು ಕಡೆಯೂ ಕೆಂಡ ಅಥವಾ ಶಾಖವಿರುವಂತೆ ಬೇಯಿಸುವ ವಿಧಾನಗಳಿವೆ. ಇದಲ್ಲದೆ ವಿದ್ಯುತ್ತಿನಿಂದ ಅಡುಗೆ ಮಾಡುವ ರೀತಿಯೂ ಪ್ರಚಾರದಲ್ಲಿ . ಸೂರ್ಯಕಿರಣದ ಶಾಖವನ್ನು ಸೆರೆಹಿಡಿದು ಅದರಿಂದ ಅಡುಗೆ ಮಾಡುವ ವಿಧಾನವನ್ನು ಈಚೆಗೆ ವಿಜ್ಞಾನಿಗಳು ಕ್ರಮಗೊಳಿಸಲು ಯತ್ನಿಸುತ್ತಿದ್ದಾರೆ.

ಅಡುಗೆಯ ಇತಿಹಾಸದಲ್ಲಿ ಮೂರು ಮುಖ್ಯ ವಿಭಾಗಗಳನ್ನು ಗುರುತಿಸಬಹುದು. ಮೊದಲನೆಯದು, ಪ್ರಾಚೀನ ಮಾನವನ ಆಹಾರ ಮೂಲಗಳಾದ ಧಾನ್ಯ ಹಾಗೂ ಮಾಂಸ ಪದಾರ್ಥಗಳಿಂದ ಹಿಡಿದು ಇಂದಿನ ಅಸಂಖ್ಯಾತ ಆಹಾರ ಪದಾರ್ಥಗಳವರೆಗಿನ ಇತಿಹಾಸ. ಎರಡನೆಯದು ಆದಿಮಾನವನ ಕೆಂಪಾದ ಬೆಂಕಿಯ ಕುಂಡಗಳಿಂದ ಹಿಡಿದು ವೈಜ್ಞಾನಿಕ ರೀತಿಯ ವಿದ್ಯುತ್ ಒಲೆಗಳವರೆಗಿನ ಚರಿತ್ರೆ. ಮೂರನೆಯದು ಆಯಾ ಜಾಗ, ಪ್ರದೇಶಗಳಿಗೆ ವಿಶಿಷ್ಟವಾದ ಅಡುಗೆಯ ರೀತಿಗಳು.

ಆಧುನಿಕ ಅಡುಗೆ ಪದ್ಧತಿ



ದಕ್ಷಿಣ ಭಾರತದ 'ಇಡ್ಲಿ' ಭಾರತದಾದ್ಯಂತ ಪ್ರಸಿದ್ಧ. ಬಂಗಾಳದ ರಸಗುಲ್ಲ ಹಾಗೆಯೇ. ಬೇರೆ ಬೇರೆ ದೇಶಗಳು ಅವುಗಳ ಕೆಲ ಅತ್ಯಂತ ರುಚಿಕರ ಅಡುಗೆಗಳಿಗೆ ಹೆಸರಾಗಿರುತ್ತವೆ. ಸಾಧಾರಣವಾಗಿ ಅಲ್ಲಿಯವರು ಅವುಗಳ ತಯಾರಿಕೆಯಲ್ಲಿ ಸಿದ್ಧಹಸ್ತರು.

ಸುಧಾರಿಸಿದ ಉಪಕರಣಗಳ ದೆಸೆಯಿಂದ ಅಡುಗೆಯ ರೀತಿಯಲ್ಲೂ ಬದಲಾವಣೆಗಳಾಗಿವೆ. ಆಧುನಿಕ ರೀತಿಯ ಅಡುಗೆ ಹಿಂದಿನ ವಿಧಾನದ ಮೇಲೆಯೇ ಆಧಾರಿತವಾಗಿದ್ದರೂ ಇಂದಿನ ಪಾತ್ರೆ, ಒಲೆಗಳು ಭಿನ್ನ ರೀತಿಯವು. ಯಾಂತ್ರಿಕವಾಗಿ ಉರಿಸಲಾಗುವ ಸ್ಟೋವ್, ಅನಿಲ, ಸೀಮೆ ಎಣ್ಣೆ, ಇದ್ದಲು, ವಿದ್ಯುಚ್ಛಕ್ತಿ ಹಾಗೂ ಸೌದೆ ಒಲೆ – ಈ ಎಲ್ಲ ರೀತಿಯ ಒಲೆಗಳು ಇರುತ್ತವೆ. ಪ್ರೆಷರ್ ಕುಕರ್‌ನಂಥ ಅತ್ಯಾಧುನಿಕ ಉಪಕರಣದಿಂದ ಅತ್ಯಲ್ಪ ಕಾಲದಲ್ಲೇ ಅಡುಗೆ ತಯಾರಾಗುತ್ತದೆ. ಆಹಾರ ಪದಾರ್ಥಗಳ ಸತ್ವವೂ ಶಿಥಿಲವಾಗದೆ ಉಳಿಯುತ್ತದೆ. ವಿಧವಿಧದ ಅಡುಗೆಗಳಿಗೆ ತಕ್ಕಂತೆ ಬಾಣಲೆ, ಕಾವಲಿ, ಬೋಗುಣಿ, ಡಬರಿ, ಹಿಡಿಕೆಯುಳ್ಳ ಪಾತ್ರೆಗಳು ಹೀಗೆ ಅನೇಕ ಹೆಸರಿನ ಪಾತ್ರೆಗಳಿವೆ. ಹಿತ್ತಾಳೆ, ತಾಮ್ರ, ಅಲ್ಯೂಮಿನಿಯಂ, ಸ್ಟೇನ್‌ಲೆಸ್ ಸ್ಟೀಲ್ ಹಾಗೂ ಮಣ್ಣಿನ ಪಾತ್ರೆಗಳನ್ನು ಬಳಸುತ್ತಾರೆ. 'ಒಂದು ಮುಷ್ಟಿ, ಚಿಟಿಕೆ, ಇಷ್ಟು ಗಾತ್ರದ ಬೆಣ್ಣೆ' ಇಂಥ ಅಸ್ಪಷ್ಟ ಸೂಚನೆಗಳಿಗೆ ಬದಲಾಗಿ ಈಗ ಸ್ಪಷ್ಟ ಪಾಕ ವಿವರಣೆಯ ಹೊತ್ತಗೆಗಳಿವೆ.

ಮುಂದುವರಿದ ಜಗತ್ತಿನ ಇನ್ನೊಂದು ಸೌಲಭ್ಯ, ಒಂದು ಸ್ಥಳದಲ್ಲಿ ಹೆಸರಾದ ಅಡುಗೆಯ ಪದಾರ್ಥ ಎಲ್ಲ ಸ್ಥಳಗಳಲ್ಲಿ ಒದಗುವಂತೆ ಮಾಡುವ ಸಾಗಾಣಿಕೆ ವಿಧಾನ. ಶೀತಾಗಾರ, ಸಂಗ್ರಹಿಸಿ ಡಬ್ಬಿಗಳಲ್ಲಿ ತುಂಬುವುದು, ತೇವಾಂಶ ತೆಗೆದು ಶುಷ್ಕವಾಗುವಂತೆ ಮಾಡುವುದು ಈ ವಿಧಾನಗಳಿಂದ ಎಲ್ಲ ದೇಶಗಳಲ್ಲೂ ಸರ್ವವಿಧದ ಪರಿಷ್ಕೃತ ಆಹಾರ ಪದಾರ್ಥಗಳು ದೊರೆಯುವಂತೆ ಮಾಡಬಹುದು. ಮೊದಲೇ ಸಂಸ್ಕರಿಸಿದ ಇಂಥ ಪದಾರ್ಥಗಳನ್ನು ಅಡುಗೆ ಮಾಡಲು ತಗಲುವ ಕಾಲ ಬಹಳ ಕಡಮೆ. ವಿದೇಶಗಳಲ್ಲಿ ಇಂಥ ಪದಾರ್ಥಗಳ ಉಪಯೋಗ ಹೆಚ್ಚು.

ಭಾರತದಲ್ಲಿ ಹಿಂದೆ ಅಡುಗೆಯ ಕಲೆಗೆ ಸೂಪಶಾಸ್ತ್ರ ಎನ್ನುತ್ತಿದ್ದರು. ಆಶ್ಚರ್ಯವೆಂದರೆ, ಇಂದಿನ ಭಾರತೀಯ ಅಡುಗೆಗೂ ಹಿಂದಿನ ಅಡುಗೆಗೂ ಅಷ್ಟಾಗಿ ವ್ಯತ್ಯಾಸವಿಲ್ಲ. ಕನ್ನಡ ಸಾಹಿತ್ಯದಲ್ಲಿ ಸುಮಾರು 800ರಲ್ಲಿ ಪ್ರಕಟವಾಗಿದೆಯೆಂದು ಹೇಳಲಾದ 'ಸೂಪಶಾಸ್ತ್ರ'ದ ಕರ್ತೃ ಜಯಬಂಧು ನಂದನ. ಇದು ಚಂಪೂರೂಪದಲ್ಲಿದೆ. ಇವನ ಅನಂತರ ಪಾಕಶಾಸ್ತ್ರದ ಬಗೆಗೆ ಬರೆದವನು ಮಂಗರಸ ಕವಿ. ಇವನ ಕಾಲ ಹದಿನಾರನೆಯ ಶತಮಾನ. ಇವನ ಸೂಪಶಾಸ್ತ್ರದಲ್ಲಿ ಏಳು ಅಧ್ಯಾಯಗಳಿವೆ. ಪಿಷ್ಟಪಾಕ, ಪಾನಕ, ಕಳಮಾನ ಪಾಕ, ಶಾಕಪಾಕ ಇತ್ಯಾದಿಗಳ ವರ್ಣನೆ ಇದೆ. ಭಾರತದಲ್ಲಿ ಮಾಂಸ ಮತ್ತು ತರಕಾರಿಗಳಿಗೆ ವ್ಯಂಜನ ಸೇರಿಸಿ ಬೇಯಿಸಿದ ಅನ್ನ ಅಥವಾ ತುಪ್ಪದಲ್ಲಿ ಹುರಿದ ಅನ್ನದೊಂದಿಗೆ ತಿನ್ನುತ್ತಿದ್ದರು ; ಅಕ್ಕಿಯಿಂದ ರೊಟ್ಟಿ ಹಾಗೂ ಗೋಧಿಯಿಂದ ಚಪಾತಿಗಳನ್ನು ಮಾಡುತ್ತಿದ್ದರು ; ನೀರು, ಹಾಲು, ಮೊಸರುಗಳನ್ನು ಸೇವಿಸುತ್ತಿದ್ದರು—ಎಂದು ಮಂಗರಸನ ಸೂಪಶಾಸ್ತ್ರದಲ್ಲಿ ಉಲ್ಲೇಖವಿದೆ. ಹಣ್ಣು ಮತ್ತು ಸಿಹಿ ಪದಾರ್ಥಗಳು ಇಂದಿನಂತೆಯೇ ಹಿಂದಿನ ಕಾಲದಲ್ಲೂ ಜನಪ್ರಿಯವಾಗಿದ್ದುವು. ಜಿಲೇಬಿಯಂಥ ಸಿಹಿ ತಿಂಡಿಗಳು ಮಾತ್ರ ಮುಸಲ್ಮಾನರ ಆಳ್ವಿಕೆಯ ಕಾಲದಲ್ಲಿ ಬಳಕೆಗೆ ಬಂದುವು.

ಅಡುಗೆ ಮನೆ ಚೊಕ್ಕಟವಾಗಿರಬೇಕು. ಅನೇಕ ರೀತಿಯ ಸಾಂಕ್ರಾಮಿಕ ರೋಗಗಳನ್ನು ಇದರಿಂದ ನಿವಾರಿಸಬಹುದು.

ಅಡುಗೆ ಮಾಡುವಾಗ ನೀರನ್ನೂ ಹಾಲನ್ನೂ ಇತರ ಪದಾರ್ಥಗಳನ್ನೂ ಮುಚ್ಚಿಡುವುದು, ಕಿಲುಬುವ ಪಾತ್ರೆಗಳನ್ನು ಬಳಸದಿರುವುದು, ತರಕಾರಿಗಳನ್ನು ತೊಳೆದು ಉಪಯೋಗಿಸುವುದು. ಅಡುಗೆಯ ಸ್ಥಳದ ಬಳಿ ಹಲ್ಲಿ, ಜಿರಳೆ ಮೊದಲಾದುವು ಬಾರದಂತೆ ನೋಡಿಕೊಳ್ಳುವುದು–ಇಂಥ ಎಚ್ಚರಿಕೆ ಅಗತ್ಯ. ತಕ್ಕಷ್ಟು ಎಚ್ಚರಿಕೆ ಇಲ್ಲದಿದ್ದರೆ ರೋಗಗಳು ಹಬ್ಬಬಹುದು, ತಿಳಿಯದೆ ಆಹಾರದಲ್ಲಿ ವಿಷ ಸೇರಬಹುದು.

ಹದವಾಗಿ, ರುಚಿಯಾದ ಅಡುಗೆಯನ್ನು ತಯಾರಿಸುವುದು ಒಂದು ಕಲೆ. ಇದು ಹಸಿವನ್ನು ಹಿಂಗಿಸುವುದಷ್ಟೇ ಅಲ್ಲ. ಮನಸ್ಸನ್ನೂ ತಣಿಸುತ್ತದೆ.

## ಅಡ್ವೊಕೇಟ್

"ಲೆಕ್ಕಪರಿಶೋಧಕರು ತಮ್ಮ ವರದಿಯಲ್ಲಿ ಒಂದು ತಪ್ಪು ಮಾಡಿದ್ದಾರೆ. ಅದು ಈಗ ತಾನೆ ನನ್ನ ಗಮನಕ್ಕೆ ಬಂದಿದೆ. ನ್ಯಾಯಾಲಯಕ್ಕೆ ತಿಳಿಸುತ್ತಿದ್ದೇನೆ".

ಅಡ್ವೊಕೇಟ(ವಕೀಲ)ನೊಬ್ಬ ನ್ಯಾಯಾಧೀಶನಿಗೆ ವಿನಂತಿ ಮಾಡಿಕೊಂಡ.

ಲಕ್ಷಾಂತರ ರೂಪಾಯಿಯ ವ್ಯವಹಾರ. ಲೆಕ್ಕಗಳನ್ನು ಪರೀಕ್ಷಿಸಿ ವರದಿಯನ್ನು ಎರಡು ಪಕ್ಷಗಳವರೂ ನ್ಯಾಯಾಲಯವೂ ಒಪ್ಪಿಯಾಗಿತ್ತು.

" ಏನು ತಪ್ಪು? " ಎಂದು ನ್ಯಾಯಾಧೀಶ ಕೇಳಿದ.

ವಕೀಲ ವಿವರಿಸಿದ. ನ್ಯಾಯಾಧೀಶನಿಗೆ ಆಶ್ಚರ್ಯವಾಯಿತು.

"ಈ ತಪ್ಪಿನಿಂದ ನಿಮ್ಮ ಕಕ್ಷಿಗಾರನಿಗೇ ಅನುಕೂಲವಲ್ಲವೇ ?"

"ಹೌದು. ಆದರೆ ಆ ತಪ್ಪಿನ ಸಹಾಯದಿಂದ ಈ ಕೇಸನ್ನು ಗೆಲ್ಲುವ ಇಷ್ಟ ನನಗಿಲ್ಲ. ನನ್ನ ಕಕ್ಷಿಗಾರನೂ ಈ ಅಭಿಪ್ರಾಯವನ್ನು ಒಪ್ಪಿದ್ದಾನೆ."

ಆ ವಕೀಲ—ಗಾಂಧಿಜಿ. ಅವರು ದಕ್ಷಿಣ ಆಫ್ರಿಕದಲ್ಲಿ ಭಾರಿ ಕಂಪೆನಿಯೊಂದರ ವಕಾಲತ್ತು ವಹಿಸಿದ್ದಾಗ ನಡೆದ ಘಟನೆ ಇದು.

ಈ ರೀತಿಯಲ್ಲಿ ವಕೀಲನ ಹಾಗೂ ಸಾಮಾನ್ಯ ನಾಗರಿಕನ ಕರ್ತವ್ಯವನ್ನು ನಿಷ್ಠೆಯಿಂದ ಪಾಲಿಸಿದ ದೃಷ್ಟಾಂತಗಳು ವಿರಳ.

ಅಡ್ವೊಕೇಟ್–ವಕೀಲ–ಎಂದರೆ ನ್ಯಾಯಾಲಯಗಳಲ್ಲಿ ಕಕ್ಷಿಗಾರರ ಪರವಾಗಿ ವಾದಿಸುವವನು. ಪ್ರಾಚೀನ ಕಾಲದಲ್ಲಿಯೂ ಭಾರತದಲ್ಲಿ ವಕೀಲರಿದ್ದರು. ಆದರೆ ಬ್ರಿಟಿಷರ ಆಳ್ವಿಕೆ ಬರುವ ಮೊದಲು ಭಾರತದಲ್ಲಿ ಕಾನೂನುಗಳು ಸರಳವಾಗಿದ್ದುವು. ನ್ಯಾಯಾಲಯಗಳಲ್ಲಿನ ವಿಚಾರಣೆ ಅನೌಪಚಾರಿಕವಾಗಿತ್ತು. ಹೀಗಾಗಿ ವಕೀಲರು ಹೆಚ್ಚಾಗಿ ಬೇಕಾಗುತ್ತಿರಲಿಲ್ಲ.

ಪಾಶ್ಚಾತ್ಯ ರಾಷ್ಟ್ರಗಳಲ್ಲಿ ವಕೀಲರ ಸಂಸ್ಥೆ ಪ್ರಾಚೀನ ಕಾಲದಿಂದಲೂ ವ್ಯವಸ್ಥಿತವಾಗಿತ್ತು. ಭಾರತದಲ್ಲಿ ಬ್ರಿಟಿಷರ ಕಾಲದಿಂದ ಕಾನೂನುಗಳು ಜಟಿಲವಾಗತೊಡಗಿದುವು. ಇಲ್ಲಿನ ನ್ಯಾಯಾಂಗ ಪದ್ಧತಿಗೆ ಇಂಗ್ಲೆಂಡಿನ ನ್ಯಾಯಾಂಗ ಪದ್ಧತಿ ಮಾದರಿ. ಕಾಲ ಕಾಲಕ್ಕೆ ಕಾನೂನುಗಳು ಇಲ್ಲವೆ ಅಂಶಗಳು ಬದಲಾಗುತ್ತವೆ. ಇವೆಲ್ಲ ಸಾಮಾನ್ಯ ಮನುಷ್ಯನಿಗೆ ತಿಳಿದಿರುವುದು ಕಷ್ಟಸಾಧ್ಯ. ನ್ಯಾಯಾಲಯಗಳ ವಿಚಾರಣೆ ಬ್ರಿಟಿಷರ ಕಾಲದಿಂದೀಚೆಗೆ ಅತ್ಯಂತ ನಿಯಮಬದ್ಧವಾಗಿದೆ. ಕಕ್ಷಿಗಾರರು ನ್ಯಾಯಾಲಯಗಳ ನಿಯಮಗಳ ಚೌಕಟ್ಟಿನಲ್ಲಿ ಒಳಪಡುವ ರೀತಿಯಲ್ಲಿ ತಮ್ಮ ವಾದವನ್ನು ಮಂಡಿಸದಿದ್ದರೆ, ನ್ಯಾಯಾಲಯಗಳು ಅವನ್ನು ಸ್ವೀಕರಿಸುವುದಿಲ್ಲ. ಈ ಎಲ್ಲ ಕಾರಣಗಳಿಂದ ನ್ಯಾಯಾಲಯಗಳಲ್ಲಿ ಮೊಕದ್ದಮೆಗಳ ಕಕ್ಷಿಗಾರರಿಗೆ ವಕೀಲರ ಸಹಾಯ ಬೇಕಾಗುತ್ತದೆ.

ವಕೀಲನಾಗುವವನು ತಕ್ಕ ಅರ್ಹತೆ ಪಡೆದಿರಬೇಕು. ವಿಶ್ವವಿದ್ಯಾನಿಲಯದಿಂದ ನ್ಯಾಯಶಾಸ್ತ್ರದಲ್ಲಿ ಪದವಿ (ಬಿ. ಎಲ್. ಅಥವಾ ಎಲ್.ಎಲ್.ಬಿ.) ದೊರಕಿಸಬೇಕು ; ಅನಂತರ ಉಚ್ಚ ನ್ಯಾಯಾಲಯದಿಂದ ಸನದು ಪಡೆಯಬೇಕು.

ಕಕ್ಷಿಗಾರ ವಕೀಲನಿಗೆ, ಅವನು ತನಗಾಗಿ ಮಾಡುವ ಕೆಲಸಕ್ಕಾಗಿ ಶುಲ್ಕ ಕೊಡಬೇಕು. ಮೊಕದ್ದಮೆಯ ರೀತಿ, ವಕೀಲನ ಚಾತುರ್ಯ, ಪ್ರಸಿದ್ಧಿ ಇವುಗಳನ್ನು ಇದು ಹೊಂದಿಕೊಂಡಿರುತ್ತದೆ.

ವಕೀಲ ತನ್ನ ಕಕ್ಷಿಗಾರನಿಂದ ಮೊಕದ್ದಮೆಯ ಎಲ್ಲ ವಿವರಗಳನ್ನು ತಿಳಿದುಕೊಳ್ಳುತ್ತಾನೆ. ಅಗತ್ಯವಾದ ಕಾಗದಗಳನ್ನು ಸಂಗ್ರಹಿಸುತ್ತಾನೆ. ಅನಂತರ ನ್ಯಾಯಾಲಯದಲ್ಲಿ ಕಕ್ಷಿಗಾರನ ಪರವಾಗಿ ಮೊಕದ್ದಮೆ ಹೂಡುತ್ತಾನೆ; ಇಲ್ಲವೆ ಕಕ್ಷಿಗಾರನ ಮೇಲೆ ಇನ್ನೊಬ್ಬರು ಹೂಡಿದ ಮೊಕದ್ದಮೆಯಲ್ಲಿ ಅವನ ಪರವಾಗಿ ವಾದ ಮಂಡಿಸುತ್ತಾನೆ. ತನ್ನ ಕಕ್ಷಿಗಾರ ಗೆಲ್ಲಲು ಸಹಾಯಕವಾಗುವಂತೆ ಸಾಕ್ಷಿಗಾರರ ಸಾಕ್ಷ್ಯವನ್ನು ಮುಂದಿಡುತ್ತಾನೆ ; ಕಾಗದಪತ್ರಗಳನ್ನು ನ್ಯಾಯಾಲಯದಲ್ಲಿ ಹಾಜರು ಮಾಡುತ್ತಾನೆ. ತನ್ನ ಕಕ್ಷಿಗಾರನ ವಾದವನ್ನು ಸಮರ್ಥಿಸುವ ಕಾನೂನಿನ ಅಂಶಗಳನ್ನು ನ್ಯಾಯಾಧೀಶರಿಗೆ ಎತ್ತಿತೋರಿಸುತ್ತಾನೆ. ಎದುರು ಪಕ್ಷದ ಸಾಕ್ಷಿಗಳಿಗೆ ಪ್ರಶ್ನೆಗಳನ್ನು ಹಾಕಿ ಅವರಿಂದ ತನ್ನ ಪಕ್ಷಕ್ಕೆ ಅನುಕೂಲವಾಗುವ ಅಂಶಗಳನ್ನು ಹೇಳಿಸಲು ಪ್ರಯತ್ನಿಸುತ್ತಾನೆ. ಇಲ್ಲವೆ ಅವರ ಸಾಕ್ಷ್ಯ ನಂಬಲರ್ಹವಲ್ಲ ಎಂದು ತೋರಿಸಿಕೊಡಲು ಯತ್ನಿಸುತ್ತಾನೆ. ಎದುರು ಪಕ್ಷದ ವಕೀಲ ತೋರಿಸಿದ ಕಾನೂನಿನ ಅಂಶಗಳು ಆ ಮೊಕದ್ದಮೆಗೆ ಅನ್ವಯಿಸುವುದಿಲ್ಲ ಎಂದು, ಅಥವಾ ಅವು ತಪ್ಪು ಎಂದು ನ್ಯಾಯಾಧೀಶರಿಗೆ ಮನದಟ್ಟು ಮಾಡಿಕೊಡಲು ಪ್ರಯತ್ನ ಮಾಡುತ್ತಾನೆ.



ನ್ಯಾಯಸ್ಥಾನದಲ್ಲಿ

ನ್ಯಾಯಾಧೀಶರು ಕೊಟ್ಟ ತೀರ್ಪು ಸರಿಯಾದ್ದಲ್ಲ ಎಂದು ಮೇಲಿನ ನ್ಯಾಯಾಲಯಕ್ಕೆ ಮನವಿ ಮಾಡಲು ಕಾನೂನಿನಲ್ಲಿ ವ್ಯವಸ್ಥೆ ಇದೆ. ಅಗತ್ಯ

ವಾದಾಗ ಅವರ ಉಪಯೋಗವನ್ನು ವಕೀಲ ತನ್ನ ಕಕ್ಷಿಗಾರನ ಪರವಾಗಿ ಮಾಡಿಕೊಳ್ಳುತ್ತಾನೆ. ಸಮರ್ಥ ವಕೀಲ, ಕಾನೂನಿನ ಹಾಗೂ ವಿಷಯಗಳ ಪರಿಣಾಮಕಾರಿ ವ್ಯಾಖ್ಯೆಯಿಂದ ಕೆಳಗಿನ ನ್ಯಾಯಾಧೀಶರು ಕೊಟ್ಟ ತೀರ್ಪನ್ನು ಮೇಲಿನ ನ್ಯಾಯಸ್ಥಾನದಲ್ಲಿ ಬದಲಾಯಿಸಬಲ್ಲ.

ನ್ಯಾಯಾಲಯಗಳಲ್ಲಿನ ನಿರ್ಣಯಗಳು ಬಹಳ ಮಟ್ಟಿಗೆ ವಕೀಲ ಮೊಕದ್ದಮೆಯನ್ನು ನಡೆಸುವುದರಲ್ಲಿ ತೋರುವ ಸಾಮರ್ಥ್ಯ ಮತ್ತು ಆತನ ವಿದ್ವತ್ತನ್ನು ಅವಲಂಬಿಸಿರುತ್ತವೆ. ಯಶಸ್ವೀ ವಕೀಲನಾಗಬಯಸುವವನು ಕಾನೂನುಗಳ ಅಧ್ಯಯನವನ್ನು ಸರಿಯಾಗಿ ಮಾಡಬೇಕು. ಉಚ್ಚನ್ಯಾಯಾಲಯಗಳು ಮತ್ತು ಸರ್ವೋಚ್ಚ ನ್ಯಾಯಾಲಯ ಕೊಡುವ ತೀರ್ಪುಗಳನ್ನು ಪರಿಶೀಲಿಸಬೇಕು. ತನ್ನ ಮೊಕದ್ದಮೆಗಳ ವಿಷಯವನ್ನು ಶ್ರದ್ಧೆಯಿಂದ ಅಭ್ಯಾಸ ಮಾಡಬೇಕು. ಪ್ರಶ್ನೆಗಳನ್ನು ಹಾಕುವುದರಲ್ಲಿ, ವಾದ ಪ್ರತಿವಾದಗಳಲ್ಲಿ ಬುದ್ಧಿ ಹರಿತವಿರಬೇಕು. ಮಾನವ ಸ್ವಭಾವದ ಒಳ್ಳೆಯ ಅರಿವು ಆತನಿಗೆ ಅಗತ್ಯ. ಕಕ್ಷಿಗಾರರೊಡನೆ ಆತ್ಮೀಯತೆ, ಸಹಾನುಭೂತಿಗಳಿಂದ ಆತ ವರ್ತಿಸಬೇಕು.

ಒಂದು ಮೊಕದ್ದಮೆಯಲ್ಲಿ ಸತ್ಯವನ್ನು ತಾನೇ ಕಂಡುಹಿಡಿಯುವುದು ವಕೀಲನ ಕೆಲಸವಲ್ಲ. ತನ್ನ ಕಕ್ಷಿಗಾರನ ಪಕ್ಷವನ್ನು ಸಮರ್ಥ ರೀತಿಯಿಂದ, ಕಾನೂನಿಗೆ ಅನುಸಾರವಾಗಿ ನ್ಯಾಯಾಲಯದ ಮುಂದೆ ಇಡುವುದು ಅವನ ಕರ್ತವ್ಯ. ಎರಡು ಪಕ್ಷಗಳ ವಾದವನ್ನು ಕೇಳಿ ಕಾನೂನಿಗೆ ಅನುಗುಣವಾಗಿ ನ್ಯಾಯತೀರ್ಪು ನೀಡುವುದು ನ್ಯಾಯಾಧೀಶನ ಕರ್ತವ್ಯ. ಕಕ್ಷಿಗಾರ ವಕೀಲನಿಗೆ ಕೊಡುವ ಮಾಹಿತಿ, ಅವನಿಗೆ ಹೇಳುವ ಸಂಗತಿಗಳು ಇವೆಲ್ಲವೂ ಗುಟ್ಟಾಗಿಯೇ ಉಳಿಯಬೇಕು ; ಇವನ್ನು ಬಹಿರಂಗಪಡಿಸಬಾರದು ಎಂದು ಕಾನೂನಿನ ನಿರ್ಬಂಧವಿದೆ. ಕಕ್ಷಿಗಾರ ನಿರಾತಂಕವಾಗಿ ತನಗೆ ಹೇಳಬೇಕೆನಿಸಿದ್ದನ್ನು ತನ್ನ ವಕೀಲನಿಗೆ ಹೇಳಬಹುದು. ವಕೀಲ ಅವನ ಹಿತರಕ್ಷಣೆ ಮಾಡುತ್ತಾನೆ.

ವಕೀಲನಿಗೆ ಜನರ ಹಕ್ಕಿನ ಅರಿವು ಇರುತ್ತದೆ. ಯಾವುದು ಮುಖ್ಯ ಯಾವುದು ಮುಖ್ಯವಲ್ಲ ಎಂದು ನಿರ್ಧರಿಸುವ ಶಕ್ತಿ ಇರುತ್ತದೆ. ನ್ಯಾಯನಿಷ್ಠೆ ಇರುತ್ತದೆ. ಆದುದರಿಂದ ಎಲ್ಲ ದೇಶಗಳಲ್ಲಿ ರಾಜಕೀಯ ಮತ್ತು ಸಾಮಾಜಿಕ ಜೀವನದಲ್ಲಿ ವಕೀಲರು ಸಹಜವಾಗಿಯೇ ಪ್ರಮುಖ ಪಾತ್ರ ವಹಿಸುತ್ತಾರೆ. ಭಾರತದ ಸ್ವಾತಂತ್ರ್ಯ ಸಂಗ್ರಾಮದ ಮುಂದಾಳುಗಳಲ್ಲಿ ಹಲವರು ವಕೀಲರೇ. ಮಹಾತ್ಮಾ ಗಾಂಧಿ, ಬಾಲಗಂಗಾಧರ ತಿಲಕ್, ಮೋತಿಲಾಲ ನೆಹರು, ಜವಾಹರಲಾಲ ನೆಹರು, ಚಿತ್ತರಂಜನ ದಾಸ್, ರಾಜೇಂದ್ರಪ್ರಸಾದ್, ರಾಜಗೋಪಾಲಾಚಾರಿ ಎಲ್ಲರೂ ವಕೀಲರಾಗಿಯೆ ಜೀವನವನ್ನು ಪ್ರಾರಂಭಿಸಿದರು. ಅಮೆರಿಕದ ಅಧ್ಯಕ್ಷ ಲಿಂಕನ್ ಸಹ ವೃತ್ತಿಯಿಂದ ವಕೀಲನಾಗಿದ್ದ.

## ಅಣೆಕಟ್ಟು

ಮನೆಯಲ್ಲಿ ನೀರಿನ ತೊಟ್ಟಿ, ಅದರ ಮೇಲೆ ಒಂದು ನಲ್ಲಿ. ಇದು ಚಿರಪರಿಚಿತ ದೃಶ್ಯ. ಈ ಏರ್ಪಾಟಿನಿಂದ ನೀರನ್ನು ಸಂಗ್ರಹಿಸಬಹುದು. ನಲ್ಲಿಯಲ್ಲಿ ನೀರು ಬರದಿದ್ದಾಗ ತೊಟ್ಟಿಯ ನೀರನ್ನು ಬಳಸಬಹುದು. ಹರಿಯುವ ನೀರನ್ನು ಕೃತಕ ರೀತಿಯಲ್ಲಿ ತಡೆಯಬಹುದು. ತನಗೆ ಬೇಕಾದ ನೀರಿನ ಉಪಯೋಗ ಪಡೆಯಲು ಮನುಷ್ಯ ಮಾಡುವ ವ್ಯವಸ್ಥೆ ಅಣೆಕಟ್ಟು.

ಅಣೆಕಟ್ಟು ಒಂದು ಹೊಳೆಗೆ ಅಡ್ಡವಾಗಿ ಕಲ್ಲುಗಾರೆಯಿಂದ ಇಲ್ಲವೆ ಇಟ್ಟಿಗೆ ಗಾರೆಯಿಂದ ಕಟ್ಟಿದ ನೀರಾವರಿಯ ಕಟ್ಟಡ. ಕಟ್ಟೆಯೂ ಹೀಗೆ ಹೊಳೆಗೆ ಅಡ್ಡವಾಗಿ ಕಟ್ಟಿದ ಕಲ್ಲುಗಾರೆಯ ಕಟ್ಟಡ. ಆದರೆ ಇವೆರಡಕ್ಕೂ ಒಂದು ಮುಖ್ಯವಾದ ವ್ಯತ್ಯಾಸವಿದೆ. ಮಳೆಗಾಲದಲ್ಲಿ ಹೊಳೆಯಲ್ಲಿ ಪ್ರವಾಹ ಬಂದಾಗ ಅದು ಅಣೆಕಟ್ಟಿನ ಮೇಲೆ ಉರುಳಿ ಮುಂದೆ ಹೋಗುತ್ತದೆ. ಕಟ್ಟೆಯಾದರೋ ಎತ್ತರವಾಗಿದ್ದು ಎಂಥ ಪ್ರವಾಹ ಬಂದರೂ ತಡೆದು ನಿಂತು, ಮೇಲುಗಡೆಯಿಂದ ನೀರು ಉರುಳಲು ಬಿಡುವುದಿಲ್ಲ.

ಅಣೆಕಟ್ಟಿನ ಮುಖ್ಯವಾದ ಭಾಗಗಳು :

1. ಅಣೆಕಟ್ಟು : ಇದು ಕೆಳಗಿನ ನಾಲೆಗಳಿಂದ ನೀರಾವರಿಯಾಗುವ ಗದ್ದೆಗಳಿಗೆಲ್ಲಾ ಸಾಕಷ್ಟು ನೀರನ್ನು ಒದಗಿಸುವಷ್ಟು ಎತ್ತರವಾಗಿರಬೇಕು.

2. ಅಣೆಕಟ್ಟಿನ ಎರಡು ದಡಗಳಿಂದ ಹೊರಡುವ ನಾಲೆಗಳು : ಸಾಗುವಳಿಯಾಗುವ ಗದ್ದೆಗಳಿಗೆ ನೀರಾವರಿಯನ್ನು ಒದಗಿಸುವಷ್ಟು ದೊಡ್ಡದಾಗಿರಬೇಕು. ನಾಲೆಗಳ ನೀರಿನ ತಲೆಮಟ್ಟವು ಕೆಳಗಿನ ಗದ್ದೆಗಳಿಗಿಂತ ಸಾಕಷ್ಟು ಎತ್ತರವಾಗಿರಬೇಕು.

3. ಅಣೆಕಟ್ಟಿನ ಎರಡು ಕಡೆಗಳಲ್ಲಿಯೂ ಇರುವ ತೂಬುಗಳು ಅಥವಾ ನಿಯಂತ್ರಕಗಳು : ಸಾಕಷ್ಟು ನೀರನ್ನು ಸಾಗಿಸಿ, ಅವುಗಳಲ್ಲಿ ಹರಿಯುವ ನೀರನ್ನು ನಿಯಂತ್ರಿಸುವ ಹಾಗಿರಬೇಕು.

4. ಹೊಳೆಯ ಪ್ರವಾಹದಲ್ಲಿ ಬರುವ ಮೆಕ್ಕಲು ಮಣ್ಣನ್ನು ಆಚೆಗೆ ಸಾಗಿಸಲು ತಗ್ಗಿನ ಮಟ್ಟದಲ್ಲಿ ಬಾಗಿಲುಗಳು.

5. ಮಹಾಪ್ರವಾಹ ನದಿಯ ದಡಗಳ ಮೇಲೆ ಉರುಳುವುದನ್ನು ತಡೆಯಲು ಏರಿಗಳು.

ಅಣೆಕಟ್ಟುಗಳ ನಿರ್ಮಾಣ ಏಕೆ ? ಒಂದೊಂದು ವರ್ಷ ಮಳೆ ಬಾರದೆ ಹೋಗಬಹುದು. ನೀರನ್ನು ಶೇಖರಿಸಿ ಇಟ್ಟಿದ್ದರೆ, ಬೇಕೆನಿಸಿದಾಗ ಹೊಲಗದ್ದೆಗಳಿಗೆ ನೀರು ಹಾಯಿಸಬಹುದು. ಕುಡಿಯುವ ನೀರಾಗಿ ಉಪಯೋಗಿಸಬಹುದು. ಅಣೆಕಟ್ಟಿನ ಇನ್ನೊಂದು ಅತಿ ಮಹತ್ವದ ಪ್ರಯೋಜನ ಪ್ರವಾಹ ನಿಯಂತ್ರಣ. ಪ್ರವಾಹಗಳಿಂದ ಮನುಷ್ಯನು ಅಸಹಾಯನಾಗುತ್ತಾನೆ. ಎಷ್ಟೋ ಜನರ ಹೊಲ, ಮನೆ, ಗೋಸಂಪತ್ತುಗಳೆಲ್ಲ ಕೊಚ್ಚಿಕೊಂಡು ಹೋಗುತ್ತವೆ. ಮುನ್ಸೂಚನೆಯಿಲ್ಲದೆ ಒದಗುವ ಈ ಹಾವಳಿಯನ್ನು ತಡೆಯಲು, ಹೆಚ್ಚಿಗೆ ನೀರು ಅಣೆಕಟ್ಟಿನ ಮೇಲೆ ಹಾಯುವಂತೆ ಮಾಡುತ್ತಾರೆ. ಸಾಧಾರಣ ಕೆರೆಗಳಿಂದ ತೂಬುಗಳ ಮೂಲಕ ಹೆಚ್ಚಿಗೆ ನೀರು ಹೊರಕ್ಕೆ ಹರಿಯುವಂತೆ ಏರ್ಪಡಿಸುತ್ತಾರೆ.

ನೀರನ್ನು ಈ ರೀತಿ ತಡೆ ಹಿಡಿದರೆ, ಅಣೆಕಟ್ಟಿನ ಹಿಂಬದಿಯ ಪ್ರದೇಶವೆಲ್ಲ—ಎಂದರೆ ಜಲಾಶಯ ಆಕ್ರಮಿಸುವಷ್ಟು ಜಾಗ—ನೀರಿನಿಂದ ಮುಚ್ಚಿಹೋಗುತ್ತದೆ. ನದೀದಡ ಫಲವತ್ತಾಗಿರುವುದರಿಂದ ಅಷ್ಟು ಉಳುಮೆಯ ಜಾಗ, ದನಕರುಗಳ ಮೇವಿನ ಹುಲ್ಲುಗಾವಲು ತಪ್ಪಿಹೋದಂತಾಗುತ್ತದೆ. ಶರಾವತಿ, ತುಂಗಭದ್ರಾ ಅಣೆಕಟ್ಟುಗಳಲ್ಲಿ ಇದನ್ನು ಕಾಣಬಹುದು. ಇದಲ್ಲದೆ ಈ ಜಲಾಶಯಗಳಿಂದ ಕೆಲವೊಮ್ಮೆ ಪ್ರಾಚೀನ ಅವಶೇಷಗಳಿಗೂ ಧಕ್ಕೆ ಬಂದಿದೆ. ಅಂಥ ಸಂದರ್ಭಗಳಲ್ಲಿ ಜಲಾಶಯದ ನೀರು ಬರದ ಪ್ರದೇಶಕ್ಕೆ ಅವುಗಳನ್ನು ಸ್ಥಳಾಂತರಿಸುವ ಮಹತ್ಕಾರ್ಯವೂ

ಆಗಿದೆ. ಈಜಿಪ್ಟಿನ ಅಸ್ವಾನ್ ಎಂಬ ಅಣೆಕಟ್ಟು ಯೋಜನೆಯಲ್ಲಿ ಈ ರೀತಿ ಜಲಸಮಾಧಿಯಾಗಲಿದ್ದ ಅಲ್ಲಿನ ಪ್ರಾಚೀನ ಅಬು ಸಿಂಬಲ್ ದೇವಾಲಯದ ಭಾಗಗಳನ್ನೂ 21 ಮೀಟರು ಎತ್ತರದ ಮೂರ್ತಿಗಳನ್ನೂ ಹಂತಹಂತವಾಗಿ ಬಿಡಿಸಿ, ಮೇಲೇರಿಸಿ, ಪುನಃ ಮೊದಲಿನ ಕ್ರಮದಲ್ಲಿ ಜೋಡಿಸಲಾಗಿದೆ. ಆಂಧ್ರ ಪ್ರದೇಶದಲ್ಲಿರುವ ನಾಗಾರ್ಜುನ ಅಣೆಕಟ್ಟಿನಲ್ಲಿಯೂ ಬುದ್ಧನ ಕಾಲದ ಅವಶೇಷಗಳನ್ನು ಹೊರತೆಗೆದು ಸಂರಕ್ಷಿಸಿದ್ದಾರೆ.

ಅಣೆಕಟ್ಟುಗಳ ನಿರ್ಮಾಣಕ್ಕೆ ತಗಲುವ ಖರ್ಚು ಅಪಾರ. ನೀರಾವರಿ, ಪ್ರವಾಹ ನಿಯಂತ್ರಣ ಮುಂತಾದ ಉಪಯೋಗಗಳನ್ನು ಪ್ರತ್ಯೇಕ ಪಡೆಯಲೆಂದು ಬೇರೆ ಬೇರೆ ಅಣೆಕಟ್ಟುಗಳನ್ನು ಕಟ್ಟಿದರೆ ತುಂಬ ಹಣ ಬೇಕು. ಇದಕ್ಕೆ ಬದಲು ಈಚೆಗೆ ವಿವಿಧೋದ್ದೇಶಗಳ ಅಣೆಕಟ್ಟುಗಳ ನಿರ್ಮಾಣ ನಡೆಯುತ್ತಿದೆ. ನೀರಾವರಿ, ಕುಡಿಯುವ ನೀರಿನ ಸರಬರಾಜು, ವಿದ್ಯುಚ್ಛಕ್ತಿ ಉತ್ಪಾದನೆ, ಒಳನಾಡಿನಲ್ಲಿ ಸಾಮಾನುಗಳನ್ನು ಸಾಗಿಸುವುದಕ್ಕೆ ಜಲಸಂಚಾರ ಮತ್ತು ಮನೋಲ್ಲಾಸಕ್ಕಾಗಿ ಜಲವಿಹಾರ—ಇವಿಷ್ಟು ಅನುಕೂಲಗಳನ್ನು ಒಂದೇ ಅಣೆಕಟ್ಟಿನಲ್ಲಿ ಕಾರ್ಯಗತ ಮಾಡಬಹುದು. ಮೈಸೂರು ಕೃಷ್ಣರಾಜಸಾಗರದ ಅಣೆಕಟ್ಟನ್ನು (ಕನ್ನಂಬಾಡಿಕಟ್ಟೆ,ಬೃಂದಾವನ) ಸಂದರ್ಶಿಸಿದವರಿಗೆ ಅಲ್ಲಿನ ಪುಟ್ಟ ಪುಟ್ಟ ನೀರಿನ ಚಿಲುಮೆಗಳು, ದೊಡ್ಡ ಬುಗ್ಗೆಗಳು, ಬಣ್ಣಬಣ್ಣದ ದೀಪಗಳು, ಅಂದವಾದ ಹೂತೋಟ, ತಂಪು ಮರಗಳು ಹಾಗೂ ದೋಣಿಯಲ್ಲಿ ವಿಹಾರ—ಇವು ಕಿನ್ನರ ಲೋಕದ ಭಾವನೆಯನ್ನು ಉಂಟುಮಾಡುತ್ತವೆ. ಆದರೆ ವಾಸ್ತವವಾಗಿ 54,635 ಹೆಕ್ಟೇರು ಜಮೀನಿಗೆ ನೀರು ಒದಗಿಸುವುದೇ ಈ ಜಲಾಶಯದ ಉದ್ದೇಶ.

ಪ್ರಾಚೀನ ಕಾಲದಲ್ಲಿ ಮಣ್ಣಿನಿಂದಲೇ ತಡೆಹಾಕಿ ಭಾರತ ಹಾಗೂ ಸಿಂಹಳಗಳಲ್ಲಿ ಅಣೆಕಟ್ಟುಗಳನ್ನು ಕಟ್ಟುತ್ತಿದ್ದರು. ಮತ್ತೊಂದು ಹಳೆಯ ಅವಶೇಷ ಈಜಿಪ್ಟಿನ ನೈಲ್ ನದಿಗೆ ಅಡ್ಡ ಹಾಕಿರುವ ಕಟ್ಟೆ. ಅದನ್ನು ಸುಮಾರು ಕ್ರಿ. ಪೂ. 2500 ರಲ್ಲಿ ಕಟ್ಟಿದರೆಂದು ಅಂದಾಜು. ಆಗಲೂ ಅಣೆಕಟ್ಟಿನಿಂದ ಕಾಲುವೆಗಳಲ್ಲಿ ನೀರು ಹರಿಸಿ ವ್ಯವಸಾಯ ಮಾಡುತ್ತಿದ್ದರು.

ಅಣೆಕಟ್ಟಿನ ನೀರಾವರಿಯಿಂದ ಪರಮೋಪಕಾರವಾಗುವುದು ನದಿಯ ಕೊನೆಯ ಮುಜಲಾದ 'ಡೆಲ್ಟ' ಪ್ರದೇಶದಲ್ಲಿ. ನೀರಿನಲ್ಲಿ ಬರುವ ಗೋಡು ಪ್ರತಿವರ್ಷವೂ ಗದ್ದೆಯ ಮೇಲೆ ಹರಿದು ಭೂಮಿಯನ್ನು ಫಲವತ್ತಾಗಿ ಮಾಡುತ್ತದೆ. ಇಲ್ಲಿ ನದಿಯೇ ದಿಬ್ಬದ ಮೇಲೆ ಹರಿದು, ಗದ್ದೆಗಳು ಅದಕ್ಕಿಂತ ಕೆಳಮಟ್ಟದಲ್ಲಿರುವುದರಿಂದ ಕಾಲುವೆಗಳನ್ನು ತೆಗೆಯುವುದು ಸುಲಭ. ಕಾವೇರಿ ಮುಖಜಭೂಮಿಯ ಜನರ ಅಭಿವೃದ್ಧಿಗೆ ಆರ್ಥರ್ ಕಾಟನ್ ಎಂಬಾತ ನಿರ್ಮಿಸಿದ ನೀರಾವರಿಯ ಕಾಮಗಾರಿಗಳು ಬಹುಮಟ್ಟಿಗೆ ಕಾರಣ.

ಭಾರತದ ಪಂಚವಾರ್ಷಿಕ ಯೋಜನೆಗಳಲ್ಲಿ ಅಣೆಕಟ್ಟುಗಳ ಪಾತ್ರ ಹಿರಿದು. ನಮ್ಮ ದೇಶದ ಭಾಕ್ರಾ ಅಣೆಕಟ್ಟು ಪ್ರಪಂಚದ ಉನ್ನತ ಕಟ್ಟೆಗಳಲ್ಲಿ ಒಂದು. ಇದರ ಎತ್ತರ ಸುಮಾರು 226 ಮೀಟರುಗಳು. ಇದಕ್ಕೆ ನಲವತ್ತೂವರೆ ಲಕ್ಷ ಹೆಕ್ಟೇರುಗಳಿಗೂ ಮೀರಿದ ಜಾಗಕ್ಕೆ ನೀರು ಒದಗಿಸುವ ಸಾಮರ್ಥ್ಯವಿದೆ. 733 ಮೆಗವಾಟ್‌ಗಳಷ್ಟು ವಿದ್ಯುಚ್ಛಕ್ತಿ ಇಲ್ಲಿ ಉತ್ಪಾದನೆಯಾಗುತ್ತದೆ.

ಪ್ರಪಂಚದಲ್ಲೇ ಅತಿ ಉದ್ದವಾದ ಅಣೆಕಟ್ಟು ನಮ್ಮ ದೇಶದಲ್ಲಿದೆ: ಮಹಾನದಿಗೆ ಅಡ್ಡವಾಗಿ ಹಾಕಿರುವ ಹಿರಾಕುಡ್ ಅಣೆಕಟ್ಟಿನ ಉದ್ದ 25,475 ಮೀಟರುಗಳು. (ಪ್ರಪಂಚದ ಅತಿ ಎತ್ತರದ ಅಣೆಕಟ್ಟು ಸೋವಿಯೆತ್ ರಷ್ಯದಲ್ಲಿದೆ, ಇದರ ಎತ್ತರ 302 ಮೀಟರುಗಳು). ಭಾರತದ



ತುಂಗಭದ್ರಾ ಜಲಾಶಯ

ಇನ್ನಿತರ ಮುಖ್ಯ ಅಣೆಕಟ್ಟುಗಳಲ್ಲಿ ಕೆಲವು ಕೋಶಿ, ತುಂಗಭದ್ರಾ, ದಾಮೋದರ, ಚಂಬಲ್, ನಾಗಾರ್ಜುನ. ಮೊದಲು ಕೇವಲ ಪ್ರವಾಹ ನಿಯಂತ್ರಣಕ್ಕಾಗಿ ಇವನ್ನು ಯೋಜಿಸಿದರೂ ಕ್ರಮೇಣ ಇವು ವಿವಿಧೋದ್ದೇಶ ಅಣೆಕಟ್ಟುಗಳಾಗಿ ಮಾರ್ಪಾಡಾಗಿವೆ.

ಸಾವಿರಾರು ವರ್ಷಗಳಿಂದ ಮನುಷ್ಯ ನಿಸರ್ಗದ ಶಕ್ತಿಗಳನ್ನು ತನ್ನ ಅನುಕೂಲಕ್ಕೆ ಬಳಸಿಕೊಳ್ಳಲು ಯತ್ನಿಸುತ್ತಿದ್ದಾನೆ. ಅವನ ಸಮೃದ್ಧಿ, ಐಶ್ವರ್ಯ, ನಾಗರಿಕತೆ ಎಲ್ಲ ಅವನ ಈ ಪ್ರಯತ್ನವನ್ನೇ ಅವಲಂಬಿಸಿವೆ. ಭೂಮಿಯ ಮೇಲೆ ಮೂಡಿ ಬಂದ ಪ್ರಾರಂಭದಲ್ಲಿ ಮನುಷ್ಯ ಮಳೆಯನ್ನೆ ನಂಬಿದ್ದ–ನೀರಿಗೆ, ಬೆಳೆಗೆ, ಬದುಕಿಗೆ. ಆದ್ದರಿಂದಲೇ ಪ್ರಾರಂಭದಲ್ಲಿ ಮನುಷ್ಯರು ನದೀ ತೀರದಲ್ಲಿ ವಾಸಿಸುತ್ತಿದ್ದುದು. ಅಣೆಕಟ್ಟು ಕಟ್ಟುವುದನ್ನು ಕಲಿತ ಮನುಷ್ಯ ಅನಾವೃಷ್ಟಿಗಾಗಲಿ, ಪ್ರವಾಹಕ್ಕಾಗಲಿ ಮೊದಲಿನಷ್ಟು ಹೆದರಲಿಲ್ಲ. ಅಲ್ಲದೆ ನದಿಯಿಂದ ಸ್ವಲ್ಪ ದೂರವಿದ್ದ ಪ್ರದೇಶಗಳಲ್ಲಿಯೂ ವಾಸಮಾಡುವುದು ಆತನಿಗೆ ಸಾಧ್ಯವಾಯಿತು. ಅಣೆಕಟ್ಟು ಮನುಷ್ಯನ ಬುದ್ಧಿಶಕ್ತಿಯ ಸಂಕೇತ, ನಿಸರ್ಗದ ಮೇಲಣ ಅವನ ಹೋರಾಟದಲ್ಲಿ ಒಂದು ಹೆಗ್ಗುರುತು.

ನೋಡಿ : ಅನಾವೃಷ್ಟಿ

## ಅತಿಕ್ರಮ

ಅತ್ಯಂತ ಆತುರದಲ್ಲಿ ಎಲ್ಲಿಗೋ ಹೊರಟಿರುವ ನಾವು, ಯಾವುದಾದರೂ ಕಟ್ಟಡದ ಹಿತ್ತಿಲಿನ ಮೂಲಕ ಹಾದು ಬೇಗ ಗುರಿಯನ್ನು ಸೇರುವಂತಿದ್ದರೆ ಅತ್ತ ಕಡೆ ನುಗ್ಗುತ್ತೇವೆ. 'ಅತಿಕ್ರಮ ಪ್ರವೇಶವಿಲ್ಲ'—ಇಲ್ಲವೆ 'ಅತಿಕ್ರಮ ಮಾಡಿದವರ ಮೇಲೆ ವ್ಯವಹರಣೆ ಹೂಡಲಾಗುವುದು'. [illegible] ಹೀಗೆಂದು ಎಚ್ಚರಿಸುವ ಫಲಕ ನಮ್ಮನ್ನು ಹಿಂದಕ್ಕೆ ದಬ್ಬುತ್ತದೆ. ನಮ್ಮ ಪಾಡಿಗೆ ನಾವು ಆ ಕಟ್ಟಡದ ಮೂಲಕ ಹಾದುಹೋದರೆ [illegible] ಅತಿಕ್ರಮವೇ ? ಅತಿಕ್ರಮ ಎಂದರೆ ಏನು ?

ಇನ್ನೊಬ್ಬರಿಗೆ ಸೇರಿದ ಪ್ರದೇಶದಲ್ಲಿ ಅವರ ಒಪ್ಪಿಗೆ ಇಲ್ಲದೆ ಕಾಲಿಡುವುದು ಅತಿಕ್ರಮ.

ಶತ್ರು ಸೈನಿಕರು, ವಿಮಾನ, ಹಡಗುಗಳು ಎಲ್ಲೆಯೊಳಕ್ಕೆ ಅತಿಕ್ರಮಿಸಿ ಬರದಂತೆ ದೇಶದ ಸೀಮೆಯುದ್ದಕ್ಕೂ ಕಾವಲುಪಡೆಗಳಿರುತ್ತವೆ. ಬೇಹುಗಾರಿಕೆ ವಿಮಾನ ನೌಕೆಗಳು ಶತ್ರು ಪ್ರದೇಶವನ್ನು ಅತಿಕ್ರಮಿಸಿ ಬಂದು ಶೀಘ್ರವಾಗಿ ವಾಪಸಾಗಲು ಹವಣಿಸುತ್ತವೆ. ತನ್ನ ಬೇಹುಗಾರರು ನುಸುಳುವಂತೆ ಮಾಡುವುದು, ಆಯಕಟ್ಟಿನ ನೆಲೆಗಳ ಚಿತ್ರೀಕರಣ ಅಥವಾ ವೀಕ್ಷಣೆ ನಡೆಸುವುದು ಇಂಥ ಅತಿಕ್ರಮದ ಉದ್ದೇಶ.

ಎಲ್ಲಾ ಅತಿಕ್ರಮಗಳು ಅಪರಾಧವಾಗುವುದಿಲ್ಲ. ಯಾವುದಾದರೂ ಅಪರಾಧ ಮಾಡುವ ಉದ್ದೇಶದಿಂದ, ಅಥವಾ ಆಸ್ತಿಯ ಸ್ವಾಧೀನತೆ ಇರುವ ಮನುಷ್ಯನಿಗೆ ಬೆದರಿಕೆ ಹುಟ್ಟಿಸುವ, ಅಪಮಾನ ಮಾಡುವ ಇಲ್ಲವೆ ತೊಂದರೆ ಕೊಡುವ ಉದ್ದೇಶದಿಂದ ಅಂಥ ಆಸ್ತಿಯಲ್ಲಿ ಪ್ರವೇಶಿಸುವುದು ಮಾತ್ರ ಅಪರಾಧವಾಗುತ್ತದೆ.

ಅಂಥ ಉದ್ದೇಶದಿಂದ ಅತಿಕ್ರಮ ಪ್ರವೇಶ ಮಾಡಿದವರನ್ನು ಅವಶ್ಯತೆಗೆ ಮೀರದ ಬಲಾತ್ಕಾರವನ್ನು ಪ್ರಯೋಗಿಸಿ ಹೊರಗೆ ಹಾಕುವ ಹಕ್ಕು ಆಸ್ತಿಯ ಮಾಲಿಕರಿಗೆ ಹಾಗೂ ಸ್ವಾಧೀನಗಾರರಿಗೆ ಇದೆ. ಅಲ್ಲದೆ ಹೊರಗೆ ಹೋಗಬೇಕೆಂಬ ಆಜ್ಞೆಯನ್ನು ಅವರು ನ್ಯಾಯಾಲಯಗಳಿಂದ ಪಡೆಯಬಹುದು. ಆ ಆಜ್ಞೆಯಂತೆ ನಡೆಯದವರನ್ನು ನ್ಯಾಯಾಲಯಗಳ ಸಿಬ್ಬಂದಿಯ ಸಹಾಯದಿಂದ ಹೊರಗೆ ಹಾಕಬಹುದು. ಅತಿಕ್ರಮ ಮಾಡುವುದಕ್ಕೆ ಉದ್ಯುಕ್ತರಾದವರ ಮೇಲೆ ಹಾಗೆ ಮಾಡದಂತೆ ನ್ಯಾಯಾಲಯಗಳಿಂದ ತಡೆಯಾಜ್ಞೆ ಪಡೆಯಬಹುದು.

ನಮ್ಮ ದನ, ಕರು ಮುಂತಾದ ಪ್ರಾಣಿಗಳು ಪಕ್ಕದ ಮನೆಯ ಆವರಣದಲ್ಲಿ ನುಗ್ಗಿದರೆ ಅದೂ ಅತಿಕ್ರಮವೇ. ಶಿಕ್ಷೆ ಆಕಳಿಗಲ್ಲ, ನಮಗೆ. ಅದರ ಬಗೆಗೆ ಬೇರೆಯೇ ಕಾನೂನಿದೆ.

ನಾಟಕ, ಸಿನಿಮಾ, ಉಪಾಹಾರ ಮಂದಿರಗಳಲ್ಲಿ ಗಲಭೆಯೆಬ್ಬಿಸಿ, ಅವುಗಳ ನಿರ್ವಾಹಕರು ಹೊರಹೋಗಬೇಕೆಂದು ಹೇಳಿದರೂ ಅಲ್ಲಿಯೇ ಇರುವ ವ್ಯಕ್ತಿಯನ್ನೂ ಅತಿಕ್ರಮಣಕಾರ ಎಂದು ಪರಿಗಣಿಸುತ್ತಾರೆ.

ಅತಿಕ್ರಮದ ಅಪರಾಧಕ್ಕೆ, ಅದರ ಮಹತ್ವಕ್ಕೆ ತಕ್ಕಂತೆ ಶಿಕ್ಷೆಯನ್ನು ವಿಧಿಸಲಾಗುತ್ತದೆ. ಘೋರ ಅಪರಾಧಗಳಲ್ಲವಾದ್ದರಿಂದ ಅತಿಕ್ರಮಗಳ ವಿಚಾರಣೆಯನ್ನು ಸಾಮಾನ್ಯ ನ್ಯಾಯಾಲಯದಲ್ಲಿಯೇ ಮಾಡುತ್ತಾರೆ.

## ಅರ್ಥಶಾಸ್ತ್ರ

[illegible]ಗೆ ಹೊಸದೊಂದು ಕಥೆ ಪುಸ್ತಕ ಕೊಳ್ಳುವ ಆಸೆ. ಮನೆಯಲ್ಲಿ ಮತ್ತೆ ಅದಕ್ಕೋಸ್ಕರ ಹಣ ಸಿಗಲಾರದು.

ಕೆಲವು ದಿನ ತನ್ನ ಸಣ್ಣಪುಟ್ಟ ಖರ್ಚುಗಳನ್ನು ಆತ ಮಾಡದೆ, ಹಣ ಉಳಿಸುತ್ತಾನೆ. ತಿಂಡಿ, ಕಾಫಿಗೆ ಹಣ ಕಡಮೆ ಮಾಡುತ್ತಾನೆ. ಬಸ್ಸಿನಲ್ಲಿ ಹೋಗುವುದರ ಬದಲು ನಡೆದು ಹೋಗುತ್ತಾನೆ. ಹಣ ಉಳಿಸಿ ಪುಸ್ತಕ ಕೊಳ್ಳುತ್ತಾನೆ.

ಪುಸ್ತಕ ಕೊಳ್ಳುವ ಆಸೆಯಾಯಿತು; ಅದಕ್ಕೆ ಪ್ರಯತ್ನ ಮಾಡಿದ; ಪುಸ್ತಕ ಕೊಂಡು ತೃಪ್ತಿಹೊಂದಿದ.

ಮನೆಗೆ ತಿಂಗಳಿಗೆ ಕೊಳ್ಳುವ ಹಾಲು ಹೆಚ್ಚು ಮಾಡಬೇಕು. 'ಮನೆಯಾಕೆ ಬಟ್ಟೆ ಹೊಲಿಯುವುದನ್ನು ಕಲಿಯುತ್ತಾಳೆ. ಅಕ್ಕಪಕ್ಕದವರ ಮನೆಗೆ ಬಟ್ಟೆ ಹೊಲಿದು ಕೊಡುತ್ತಾಳೆ. ಆ ಹಣದಿಂದ ಮಗುವಿಗೆ ಹಾಲು ಕೊಳ್ಳುತ್ತಾಳೆ.

ಹಾಲು ಕೊಳ್ಳುವ ಆಸೆಯಾಯಿತು; ಅದಕ್ಕೆ ಪ್ರಯತ್ನ ನಡೆಯಿತು; ಹಾಲು ಕೊಂಡು ತೃಪ್ತಿಯಾಯಿತು.

ಒಂದು ದೇಶ ಇನ್ನೊಂದು ದೇಶದಿಂದ ಯಂತ್ರಗಳನ್ನು ಕೊಳ್ಳಬೇಕು. ವಿದೇಶೀ ವಿನಿಮಯ ಬೇಕು. ಹೊಸ ಕಟ್ಟಳೆಗಳನ್ನು ಮಾಡಿ, ದೇಶ ರಫ್ತನ್ನು ಹೆಚ್ಚಿಸುತ್ತದೆ; ಆಮದನ್ನು ಕಡಮೆ ಮಾಡುತ್ತದೆ; ಯಂತ್ರಗಳನ್ನು ಕೊಳ್ಳುತ್ತದೆ.

ಯಂತ್ರಗಳನ್ನು ಕೊಳ್ಳುವ ಆಸೆಯಾಯಿತು, ಅದಕ್ಕೆ ಪ್ರಯತ್ನ ನಡೆಯಿತು ; ಯಂತ್ರಗಳನ್ನು ಕೊಂಡ ತೃಪ್ತಿ ಬಂದಿತು.

ಆಸೆ, ಪ್ರಯತ್ನ, ತೃಪ್ತಿ ಇವು ವ್ಯಕ್ತಿಯ ಜೀವನದಲ್ಲಿ ಆಗಬಹುದು, ಕುಟುಂಬದಲ್ಲಿ ಆಗಬಹುದು, ಸಂಸ್ಥೆಯಲ್ಲಿ ಆಗಬಹುದು, ರಾಷ್ಟ್ರದಲ್ಲಿ ಆಗಬಹುದು.

ಇವುಗಳ ವಿಷಯವನ್ನು ಪರಿಶೀಲಿಸುವ ಶಾಸ್ತ್ರ ಅರ್ಥಶಾಸ್ತ್ರ—ಹಣ ಅಥವಾ ಸಂಪತ್ತನ್ನು ಕುರಿತ ಶಾಸ್ತ್ರ.

ಮನುಷ್ಯನ ಚಟುವಟಿಕೆಗಳ ಕೇಂದ್ರ ಸಂಪತ್ತು. ಅದನ್ನು ಹೇಗೆ ಸಂಗ್ರಹಿಸಬೇಕು, ಹೇಗೆ ವಿತರಣೆ ಮಾಡಬೇಕು ಎಂಬುದನ್ನು ಅವನ ವರ್ತನೆ ಮತ್ತು ಧೋರಣೆಗಳು ಅವಲಂಬಿಸುತ್ತವೆ. ಈ ವಿದ್ಯಮಾನವನ್ನು ವಿವರಿಸುವುದು ಅರ್ಥಶಾಸ್ತ್ರ.

ಆಹಾರ, ಅರಿವೆ, ಆಶ್ರಯ ಇವು ಮನುಷ್ಯನ ಮೂಲಭೂತ ಅವಶ್ಯತೆಗಳು. ಜೀವನ ನಿರ್ವಹಣೆಗೆ ಇವು ಮೂರೂ ಅನಿವಾರ್ಯ. ಅವುಗಳನ್ನು ಪೂರೈಸಿಕೊಳ್ಳಲು ಹಿಡಿಯುವ ಹಾದಿಗಳು ಬೇರೆ ಬೇರೆ. ವ್ಯಾಪಾರ, ಉದ್ಯೋಗ, ದುಡಿಮೆ ಮುಂತಾದ ಚಟುವಟಿಕೆಗಳು ಜೀವನೋಪಾಯ ಎನಿಸಿಕೊಳ್ಳುತ್ತವೆ. ಪ್ರತಿಯೊಬ್ಬನೂ ತನಗೆ ಸೂಕ್ತವಾದ ಜೀವನೋಪಾಯವನ್ನು ಹುಡುಕಿಕೊಳ್ಳುತ್ತಾನೆ. ಸಮಾಜಜೀವಿಯಾದ ಮನುಷ್ಯ ಮತ್ತೊಬ್ಬರ ಶಾಂತಿ ಮತ್ತು ಜೀವನೋಪಾಯಕ್ಕೆ ಧಕ್ಕೆ ಬರದ ಹಾಗೆ ಜೀವನ ನಡೆಸಲು ಹಲವಾರು ನಿಯಮಗಳು ನೆರವಾಗಿವೆ. ಜೀವನ ನಡೆಸಲು ಪ್ರತಿ ವ್ಯಕ್ತಿಯೂ ಸ್ವತಂತ್ರನಾದರೂ ಇತರರ ನಡುವೆ ಜೀವಿಸುವ ಆತನ ಸುತ್ತ ಕಾನೂನು, ರಾಜ್ಯಾಡಳಿತ, ಹಣಕಾಸು ಮುಂತಾದ ಸುಬದ್ಧ ವ್ಯವಸ್ಥೆಗಳಿರುತ್ತವೆ ; ವ್ಯಕ್ತಿಗಳನ್ನೂ ಇಂಥ ವ್ಯವಸ್ಥೆಗಳನ್ನೂ ಒಳಗೊಂಡುದು ಸಮಾಜ. ಹಲವಾರು ಜನ ತಮ್ಮ ಜೀವನೋಪಾಯದ ಬಗೆಗೆ ಮಾತ್ರವಲ್ಲದೆ ಸಮಾಜದ ಹಿತ–ಅಹಿತಗಳ ಬಗೆಗೂ ಚಿಂತನೆ ನಡೆಸುತ್ತಾರೆ ; ಮನುಷ್ಯನಿಗೂ ಸಮಾಜಕ್ಕೂ ಇರುವ ಸಂಬಂಧವನ್ನು ಕುರಿತು ಅವರ ಅಧ್ಯಯನ ಸಾಗುತ್ತದೆ. ಹಲವಾರು ವಿಚಾರವಾದಿಗಳು ಸಂಪತ್ತಿನ ವಿಷಯಕ್ಕೆ ಸಂಬಂಧಿಸಿದಂತೆ ಮಾಡಿದ ಅಧ್ಯಯನ ಆಲೋಚನೆಗಳ ಫಲ ಅರ್ಥಶಾಸ್ತ್ರ.

'ರಾಷ್ಟ್ರಗಳ ಸಂಪತ್ತು' ಎಂಬ ಹೆಸರಿನ ಪುಸ್ತಕವನ್ನು 1776ರಲ್ಲಿ ಆಡಮ್ ಸ್ಮಿತ್ ಎಂಬ ಬ್ರಿಟಿಷ್ ಅರ್ಥ ಶಾಸ್ತ್ರಜ್ಞ ಬರೆದ. ಆತ ನಿರೂಪಿಸಿದ ಪ್ರಕಾರ ಸಂಪತ್ತಿನ ಉತ್ಪಾದನೆ, ವಿನಿಮಯ, ವಿತರಣೆ ಇವುಗಳ ಅಭ್ಯಾಸವೇ ಅರ್ಥಶಾಸ್ತ್ರ. ಮಾರ್ಷಲ್ ಎಂಬ ಅರ್ಥಶಾಸ್ತ್ರಜ್ಞನ ವಿವರಣೆ ಈ ಬಗೆಯದು–ಮನುಷ್ಯನ ಅಪೇಕ್ಷೆಗಳು ಅನೇಕ ; ಸಾಧನಗಳು ಪರಿಮಿತ; ಪರಿಮಿತ ಸಾಧನಗಳಿಂದ ತನ್ನ ಅನಂತ ಅಪೇಕ್ಷೆಗಳನ್ನು ಪೂರೈಸಿಕೊಳ್ಳಲು ಪ್ರಯತ್ನ

ಮಾಡುವ ಮನುಷ್ಯನ ವರ್ತನೆಯನ್ನು ಅಭ್ಯಸಿಸಬಹುದು: ಅದು ಅರ್ಥಶಾಸ್ತ್ರ. ಮನುಷ್ಯ ಶ್ರಮದಿಂದ ಹಣವನ್ನು ಸಂಪಾದಿಸಿ ತನ್ನ ಅಗತ್ಯಗಳನ್ನು ಈಡೇರಿಸಿಕೊಳ್ಳುತ್ತಾನೆ. ಹಣದ ಆಧಾರದ ಮೇಲೆ ಅಳೆಯಲು ಸಾಧ್ಯವಾಗುವ ಚಟುವಟಿಕೆಗಳನ್ನು ಅರ್ಥಶಾಸ್ತ್ರದ ಮೂಲಕ ಅಭ್ಯಾಸಮಾಡಬಹುದು. ಹಣ ಎಂದರೆ ಅರ್ಥ; ಮನುಷ್ಯನ ಆರ್ಥಿಕ ಚಟುವಟಿಕೆಯೇ ಅರ್ಥಶಾಸ್ತ್ರ—ಈ ರೀತಿ ನಿರೂಪಿಸಿದವನು ಆರ್ಥರ್ ಸಿಸಿಲ್ ಪಿಗೂ.

ಆಡಮ್ ಸ್ಮಿತ್, ಮಾರ್ಷಲ್, ಪಿಗೂ ಇವರು ವಿವರಿಸಿದ ಅರ್ಥಶಾಸ್ತ್ರ ಕ್ಷೇಮಾಭ್ಯುದಯ ವ್ಯಾಖ್ಯೆ ಎನಿಸಿಕೊಂಡಿತು. ಹಣವನ್ನು ಗಳಿಸುವುದು ಹೇಗೆ ಎಂದು ಮಾತ್ರ ಅರ್ಥಶಾಸ್ತ್ರ ವಿಮರ್ಶಿಸಿದರೆ ಸಾಲದು. ಹಣವನ್ನು ಗಳಿಸುವ ಮತ್ತು ವೆಚ್ಚಮಾಡುವ ರೀತಿಯಿಂದ ಒಟ್ಟು ಸಮಾಜಕ್ಕೆ ಕಲ್ಯಾಣವಾಗಬೇಕು. ಉದಾಹರಣೆಗೆ, ಅಗ್ಗದ ಮಾರುಕಟ್ಟೆಯಲ್ಲಿ ಕೊಂಡು ತುಟ್ಟಿಯ ಮಾರುಕಟ್ಟೆಯಲ್ಲಿ ಮಾರಿ ಲಾಭಗಳಿಸುವುದು ಅರ್ಥಶಾಸ್ತ್ರ ಹೇಳುವ ಒಂದು ಮಾರ್ಗ. ಆದರೆ, ಕೆಲವರು ಅಗ್ಗವಾಗಿ ಆಹಾರ ಪದಾರ್ಥಗಳನ್ನು ಕೊಂಡು ಅವನ್ನು ಬಚ್ಚಿಟ್ಟು ಬೆಲೆ ಏರಿಸಿ ಮಾರಿದರೆ, ಅನೇಕ ಜನ ಹೊಟ್ಟೆಗಿಲ್ಲದೆ ಸತ್ತರೆ, ಆ ವ್ಯಾಪಾರಿಗಳಿಗೆ ಲಾಭ ಬರಬಹುದು. ಸಮಾಜದ ಕಲ್ಯಾಣವಾಗಲಿಲ್ಲ. ಸಂಪತ್ತಿನಿಂದ ಒಟ್ಟು ಸಮಾಜಕ್ಕೆ ಹಿತವಾಗಬೇಕು.

ಅರ್ಥಶಾಸ್ತ್ರದ ಈ ವ್ಯಾಖ್ಯೆಗಳು 18-19ನೆಯ ಶತಮಾನದವು.

1930ರ ದಶಕದಲ್ಲಿ ಲಯೊನೆಲ್ ರಾಬಿನ್ಸ್ ಎಂಬ ವಿದ್ವಾಂಸ ಅರ್ಥಶಾಸ್ತ್ರಕ್ಕೆ ಮತ್ತೊಂದು ಬಗೆಯ ವ್ಯಾಖ್ಯೆಯನ್ನು ನೀಡಿದ: ಮನುಷ್ಯನ ಅಪೇಕ್ಷೆಗಳಿಗೆ ಕೊನೆಯೇ ಇಲ್ಲ. ಜೀವನಕ್ಕೆ ಅತ್ಯಗತ್ಯವಾದ ಆಹಾರ, ಬಟ್ಟೆ, ವಸತಿ ಇವನ್ನು ಬಯಸುವುದು ಸಹಜ. ಆದರೆ ಅವನಿಗೆ ಇನ್ನೂ ಹೆಚ್ಚಿನ ಬಯಕೆಗಳಿರುತ್ತವೆ. ಮನೋರಂಜನೆ, ಜ್ಞಾನಾರ್ಜನೆ, ಪುಣ್ಯಕ್ಷೇತ್ರಗಳ ಪ್ರವಾಸ, ವಿಚಾರವಿನಿಮಯ ಮುಂತಾದ ಅಸಂಖ್ಯಾತ ಅಗತ್ಯಗಳು ಆಹಾರ ಅರಿವೆ ಆಶ್ರಯಗಳ ಜೊತೆ ಕೂಡಿಕೊಳ್ಳುತ್ತವೆ. ಮನುಷ್ಯನ ಎಲ್ಲ ಅಪೇಕ್ಷೆಗಳನ್ನೂ ಪೂರೈಸುವುದು ಸಾಧ್ಯವಿಲ್ಲ. ಪರಿಮಿತವಾದ ಸಾಧನಗಳ ಮೂಲಕ ತನ್ನ ಅಪೇಕ್ಷೆಗಳನ್ನು ಈಡೇರಿಸಿಕೊಳ್ಳಲು ಮನುಷ್ಯ ಬಯಸುತ್ತಾನೆ. ಇದರಿಂದ ಅವನು ಹೇಗೆ ನಡೆದುಕೊಳ್ಳುತ್ತಾನೆ? ರಾಬಿನ್ಸನ ಪ್ರಕಾರ ಇದರ ಅಭ್ಯಾಸವೇ ಅರ್ಥಶಾಸ್ತ್ರ.

ಸುಮಾರು ಮುನ್ನೂರು ವರ್ಷಗಳ ಹಿಂದೆ ಹಣ ಮತ್ತು ಉತ್ಪಾದನೆಗೆ ಸಂಬಂಧಪಟ್ಟ ಸಲಹೆಗಳನ್ನು ಆ ಕಾಲದ ಆಡಳಿತಗಾರರಿಗೆ ಅರ್ಥಶಾಸ್ತ್ರಜ್ಞರು ನೀಡುತ್ತಿದ್ದರು. ರಾಜ್ಯಾಡಳಿತದಲ್ಲಿ ಉಪಯುಕ್ತ ಪಾತ್ರ ವಹಿಸುತ್ತಿದ್ದ ಅರ್ಥಶಾಸ್ತ್ರ, ರಾಜಕೀಯ ಅರ್ಥಶಾಸ್ತ್ರ ಎನಿಸಿಕೊಂಡಿತ್ತು. ಅರ್ಥಶಾಸ್ತ್ರವು ರಾಜ್ಯಾಡಳಿತ ಮಾತ್ರವಲ್ಲದೆ ಎಲ್ಲ ಕ್ಷೇತ್ರಗಳನ್ನೂ ವ್ಯಾಪಿಸುತ್ತದೆ ಎಂಬುದು ಮನದಟ್ಟಾದಂತೆ, ಅರ್ಥಶಾಸ್ತ್ರ ಎನ್ನುವುದೇ ಪ್ರಸಿದ್ಧಿಗೆ ಬಂತು.

ಸುಮಾರು ಕ್ರಿ. ಪೂ. 3-4ನೆಯ ಶತಮಾನದಲ್ಲಿ ಬರೆಯಲಾದ ಕೌಟಿಲ್ಯನ 'ಅರ್ಥಶಾಸ್ತ್ರ' ಒಂದು ರಾಜಕೀಯ ಅರ್ಥಶಾಸ್ತ್ರ. ಅದರಲ್ಲಿ ಸಂಪತ್ತಿಗೆ ಸಂಬಂಧಿಸಿದ ವಿಷಯಗಳನ್ನು ಮಾತ್ರವೇ ಬರೆದಿಲ್ಲ. ರಾಜ್ಯಾಡಳಿತ ಮತ್ತು ಜನಜೀವನದ ಎಲ್ಲ ಸಂಗತಿಗಳ ಬಗೆಗೂ ಅಲ್ಲಿ ವಿವರಗಳಿವೆ. ರಾಜ, ಮಂತ್ರಿ, ಪ್ರಜಾಸಮಿತಿಗಳು, ಸರಕಾರದ ಬೇರೆ ಬೇರೆ ಇಲಾಖೆಗಳು, ವ್ಯಾಪಾರ, ವಿವಾಹ ಮತ್ತು ವಿವಾಹ ವಿಚ್ಛೇದನ, ಸೈನ್ಯ, ರಹದಾರಿ, ಯುದ್ಧ ಮತ್ತು ಶಾಂತಿ, ರಸ್ತೆಗಳು, ಜೈಲು, ವಸತಿ—ಈ ಬಗೆಯ ಎಲ್ಲ ವಿಷಯಗಳ ವಿವರ ಅಲ್ಲಿದೆ. ಪ್ರಜೆಗಳೂ ಪಾಲಕರೂ ಪಾಲಿಸಬೇಕಾದ ನಿಯಮಗಳನ್ನೂ ನಡವಳಿಕೆಯ ನೀತಿಗಳನ್ನೂ 'ಅರ್ಥಶಾಸ್ತ್ರ' ವಿವರಿಸುತ್ತದೆ. ಶತ್ರುಗಳು, ಮಿತ್ರರು ಇವರ ಜೊತೆ ನಡೆದುಕೊಳ್ಳಬೇಕಾದ ರೀತಿ; ಕುಟಿಲೋಪಾಯಗಳನ್ನೂ ತಾಟಸ್ಥ್ಯವನ್ನೂ ಅನುಸರಿಸಬೇಕಾದ ಸಂದರ್ಭಗಳು; ಈ ಬಗೆಯ ರಾಜತಂತ್ರ ಕೌಟಿಲ್ಯನ 'ಅರ್ಥಶಾಸ್ತ್ರ'ದಲ್ಲಿ ದೀರ್ಘವಾಗಿ ವಿವರಿಸಲ್ಪಟ್ಟಿದೆ. ಕೌಟಿಲ್ಯನ ಈ ಗ್ರಂಥ ರಾಜಕೀಯ ಅರ್ಥಶಾಸ್ತ್ರಕ್ಕೆ ಒಂದು ಅತ್ಯುತ್ತಮ ಉದಾಹರಣೆ.

ರಾಜ್ಯಾಡಳಿತ ವ್ಯವಸ್ಥೆ ಇಪ್ಪತ್ತನೆಯ ಶತಮಾನದಲ್ಲಿ ತೀವ್ರವಾಗಿ ಬದಲಾದಂತೆ ಅರ್ಥಶಾಸ್ತ್ರಕ್ಕೆ ಇನ್ನೂ ಪ್ರಾಮುಖ್ಯ ದಕ್ಕಿತು.

ಸರಕಾರ ಮಾಡುವ ತೀರ್ಮಾನಗಳಿಂದ ಒಟ್ಟು ಸಮಾಜದ ಆರ್ಥಿಕ ಜೀವನವೂ ಹಲವು ವರ್ಗಗಳ ಜನರ ಜೀವನವೂ ಬದಲಾಗುತ್ತವೆ. ಆದ್ದರಿಂದ ಆಡಳಿತಗಾರರೂ ಅರ್ಥಶಾಸ್ತ್ರವನ್ನು ಬಿಟ್ಟಿರುವಂತಿಲ್ಲ.

ಹಣಕಾಸು, ಉತ್ಪಾದನಾ ಸಾಮರ್ಥ್ಯ, ಸರಕಾರದ ನೀತಿ ಧೋರಣೆಗಳು ಇವು ಒಟ್ಟುಗೂಡಿ ಆರ್ಥಿಕತೆ ಎನಿಸಿಕೊಂಡಿತು. ಅರ್ಥಶಾಸ್ತ್ರ ರಾಜ್ಯಶಾಸ್ತ್ರ ಇವುಗಳ ಸಂಬಂಧ ನಿಕಟವಾಯಿತು.

ಹಣಕಾಸಿನ ವ್ಯವಹಾರಕ್ಕೂ ಜನರ ನೀತಿನಡತೆಗೂ ಸಂಬಂಧವಿದೆ. ಪದಾರ್ಥಗಳ ಬೆಲೆಗಳು ವಿಪರೀತ ಏರಿದರೆ, ಸ್ವಭಾವತಃ ಒಳ್ಳೆಯವನಾದವನೂ ಕಳ್ಳತನಕ್ಕೆ ಇಳಿಯಬಹುದು. ಯಾವುದಾದರೂ ತೆರಿಗೆ ತೀರ ಅನ್ಯಾಯ ಎನ್ನಿಸುವಷ್ಟು ಏರಿದರೆ, ವಸ್ತುಗಳ ಕಳ್ಳ ಸಾಗಾಣಿಕೆ, ತೆರಿಗೆ ತಪ್ಪಿಸುವುದು ಪ್ರಾರಂಭವಾಗುತ್ತವೆ.

ವಸ್ತುಗಳನ್ನು ತಯಾರುಮಾಡುವ ಮತ್ತು ಮಾರುವ ಪ್ರತಿಯೊಬ್ಬನೂ ತನ್ನ ಸ್ಥಿತಿ ಭದ್ರವಾಗಬೇಕು, ತಾನು ಲಾಭ ಪಡೆಯಬೇಕು ಎಂದು ಆಸೆ ಪಡುತ್ತಾನೆ. ಪರಸ್ಪರ ಸ್ಪರ್ಧೆ ಆಗ ಅನಿವಾರ್ಯ. ಯಾವುದೋ ಒಂದು ನಿರ್ದಿಷ್ಟ ವಸ್ತುವನ್ನು ತಾನೊಬ್ಬನೇ ತಯಾರಿಸಬೇಕು ಅಥವಾ ಒಂದು ಬಗೆಯ ವ್ಯಾಪಾರವನ್ನು ತಾನೊಬ್ಬನೇ ಮಾಡಬೇಕು, ಇತರರಿಗೆ ಅವಕಾಶವೇ ಇರಬಾರದು ಎಂಬ ಏಕಸ್ವಾಮ್ಯದ ಆಸೆ ಬೆಳೆಯುವುದು ಸ್ವಾಭಾವಿಕ. ಇದು ಏನೇ ಆದರೂ, ಪ್ರತಿಯೊಬ್ಬ ವ್ಯಾಪಾರಸ್ಥನೂ ಸರಕುಗಳನ್ನೊಯ್ಯುವಾಗ ಅದನ್ನು ಕೊಂಡುಕೊಳ್ಳುವವನ ವಿಷಯ ಯೋಚಿಸುತ್ತಾನೆ. ಅವನು ತನ್ನ ವಸ್ತುವನ್ನೇ ಕೊಂಡುಕೊಳ್ಳುವಂತೆ ಮಾಡಲು ಏನು ಉಪಾಯ ಎಂದು ಚಿಂತಿಸುತ್ತಾನೆ. ಏಕಸ್ವಾಮ್ಯ ಸ್ಪರ್ಧೆಯ ಈ ತತ್ತ್ವ ಅರ್ಥಶಾಸ್ತ್ರದ ಮತ್ತೊಂದು ಬೆಳವಣಿಗೆ.

ಹಣದುಬ್ಬರ, ಆರ್ಥಿಕ ಕುಸಿತ ಮುಂತಾದ ಆರ್ಥಿಕ ವಿದ್ಯಮಾನಗಳ ಮೇಲೆ ಬೆಳಕು ಚೆಲ್ಲಿದ ಜಾನ್ ಮೇನಾರ್ಡ್ ಕೇನ್ಸ್ ಎಂಬ ಅರ್ಥಶಾಸ್ತ್ರಜ್ಞನ ವಿಶ್ಲೇಷಣೆ, ಅರ್ಥಶಾಸ್ತ್ರದ ಇನ್ನೊಂದು ಬೆಳವಣಿಗೆ. ಬೇಡಿಕೆಗಳಲ್ಲಿ ಏರುಪೇರು ಆಗುತ್ತವೆ. ಇದರ ಪರಿಣಾಮಗಳೇನು? ಹಾನಿಕರ ಪರಿಣಾಮಗಳನ್ನು ತಡೆಯುವುದು ಹೇಗೆ? ಯಾವ ಕ್ರಮ ಕೈಗೊಳ್ಳಬೇಕು? ಎನ್ನುವುದು ಕೇನ್ಸ್‌ನ ವಿಚಾರ. ಅವನ ಅಭಿಪ್ರಾಯದಂತೆ ಹಣದುಬ್ಬರದ ಸಂದರ್ಭದಲ್ಲಿ ಬೇಡಿಕೆ ತಗ್ಗಿಸುವುದು, ಬೆಲೆಗಳನ್ನು ಇಳಿಸುವುದು, ಉದ್ಯಮಗಳಿಗೆ ಹಣ ಒದಗುವಂತೆ ನೋಡಿಕೊಳ್ಳುವುದು ಮುಂತಾದ ಕ್ರಮಗಳು ಅತ್ಯಂತ ಸೂಕ್ತ.

ಕಲನಶಾಸ್ತ್ರ ಮತ್ತು ಗಣಿತಗಳನ್ನು ಅರ್ಥಶಾಸ್ತ್ರದ ಅಧ್ಯಯನಗಳಿಗೆ ಬಳಸಿಕೊಂಡಾಗ ಅರ್ಥಶಾಸ್ತ್ರ ಮತ್ತಷ್ಟು ವಿಸ್ತಾರಗೊಂಡಿತು.

ಅರ್ಥಶಾಸ್ತ್ರದ ವ್ಯಾಪ್ತಿ ದಿನ ದಿನಕ್ಕೆ ವಿಸ್ತಾರವಾಗುತ್ತಿದೆ. ಕೃಷಿ ಅರ್ಥಶಾಸ್ತ್ರ, ಕೈಗಾರಿಕಾ ಅರ್ಥಶಾಸ್ತ್ರ – ಇಂಥ ಹೊಸ ವಿಭಾಗಗಳಾಗುತ್ತಿವೆ.

ಆರ್ಥಿಕತೆ ಎಂದು ಸಾಮಾನ್ಯವಾಗಿ ಬಳಸುವಾಗ ದೇಶದ ಸರಕಾರದ ಸಂಪತ್ತನ್ನು ಮಾತ್ರ ಯೋಚಿಸುತ್ತೇವೆ. ನಿತ್ಯ ಬಳಕೆಯಲ್ಲಿ ಆ ಪದಕ್ಕೆ ಹಣಕಾಸಿನ ಪರಿಸ್ಥಿತಿ ಎಂಬುದೇ ಅರ್ಥ. ನಿಜ. ಆದರೆ ಅರ್ಥಶಾಸ್ತ್ರದಲ್ಲಿ ಆರ್ಥಿಕತೆಗೆ ವಿಸ್ತಾರವಾದ ವ್ಯಾಖ್ಯೆಯಿದೆ. ಇದರ ಪ್ರಕಾರ ಪ್ರಪಂಚವೇ ಒಂದು ವಿಶಾಲವಾದ ಆರ್ಥಿಕತೆ. ಒಟ್ಟು ಜಗತ್ತಿನ ಸಂಪತ್ತನ್ನು, ಅದರ ಮೂಲಗಳನ್ನು ಬಳಕೆಯನ್ನು ನಾವು ವಿಮರ್ಶಿಸಬೇಕು. ವಿವಿಧ ರಾಷ್ಟ್ರಗಳ ಆರ್ಥಿಕತೆಗಳು ಇದರ ವಿಭಾಗಗಳು. ಈ ವಿಭಾಗಗಳಲ್ಲಿ ಸರಿಯಾದ ಪರಸ್ಪರ ಆರ್ಥಿಕ ಸಂಬಂಧ ಏರ್ಪಡಬೇಕು. ಆಗ ಪ್ರಪಂಚದ ಎಲ್ಲ ಕಡೆಯ ಜನರ ಆರ್ಥಿಕ ಜೀವನವೂ ಸುಧಾರಿಸಬಲ್ಲುದು. ಈ ಪರಸ್ಪರ ಸಂಬಂಧಗಳನ್ನು ಕುರಿತ ಪ್ರಶ್ನೆಗಳನ್ನು ಅರ್ಥಶಾಸ್ತ್ರ ಪರಿಶೀಲಿಸುತ್ತದೆ.

## ಅಧ್ಯಾತ್ಮ

'ಅಧ್ಯಾತ್ಮ' (ಅಧಿ+ಆತ್ಮ) ಎಂದರೆ 'ಆತ್ಮವನ್ನು ಕುರಿತದ್ದು', 'ಆತ್ಮಕ್ಕೆ ಸಂಬಂಧಪಟ್ಟದ್ದು', 'ಆತ್ಮದ ವಿಚಾರ' ಎಂದರ್ಥ. ಆ ಪದಕ್ಕೆ 'ಕೇವಲ ಆತ್ಮ', 'ಮೇಲ್ಪಟ್ಟ ಆತ್ಮ', 'ಪರಮಾತ್ಮ' ಎಂದೂ ಅರ್ಥವುಂಟು. 'ಆತ್ಮ' ಎಂಬುದು ಮುಖ್ಯ ಪದ.

'ಆತ್ಮ' ಎಂದರೆ ಏನು ? ಆತ್ಮವೆಂಬುದು 'ಜೀವ' ಎಂಬ ವಸ್ತುವಿನ ಒಳಗಡೆ ಇರುವ ಮೂಲ ಚೈತನ್ಯ. ಚೈತನ್ಯವೆಂದರೆ ಜ್ಞಾನಸಮೇತವಾದ ಶಕ್ತಿ. ಚೈತನ್ಯವು ಸ್ವತಸ್ಸಿದ್ಧವಾದದ್ದು, ಯಾರಿಂದಲಾದರೂ ತಯಾರಾದದ್ದಲ್ಲ. ಅದು ತಾನೇ ತಾನಾಗಿರುತ್ತದೆ. ಜೀವದಲ್ಲಿ ಅಂತರ್ಗತವಾದದ್ದು ಆತ್ಮ. ಆತ್ಮವು ಕೇವಲ ತಾನೇ ತಾನಾಗಿ ಯಾವ ಕಾರ್ಯವನ್ನೂ ಮಾಡುವುದಿಲ್ಲ. ಅದು ದೇಹಾದಿ ಸಾಧನಗಳನ್ನು ಧರಿಸಿ ಜೀವವಾದಾಗಲೇ ಅದರ ಕೆಲಸ. ಆತ್ಮವು ದೇಹ, ಇಂದ್ರಿಯ, ಮನಸ್ಸು ಮೊದಲಾದ ಉಪಕರಣಗಳನ್ನು ಧರಿಸಿ ಕಾರ್ಯನಿರತವಾದಾಗ – ಮತ್ತು ಆ ಕಾರ್ಯದ ಫಲ ಭೋಗದ ಕಾಲದಲ್ಲಿ – ಅದು ಜೀವವೆಂಬ ಹೆಸರಿನಿಂದ ಗುರುತಿಗೆ ಸಿಕ್ಕುತ್ತದೆ. ಕಾರ್ಯ-ಕಾರಣಗಳ ಪರಿಮಿತಿ–ನಿರ್ಬಂಧಗಳಿಲ್ಲದಾಗ ಅದು ಕೇವಲ ಆತ್ಮವಾಗಿ ಉಳಿಯುತ್ತದೆ. ಯಾವ ಸತ್ತ್ವವು ದೇಹೇಂದ್ರಿಯಸಹಿತವಾದಾಗ (ದೇಹ, ಇಂದ್ರಿಯಗಳು ಇದ್ದಾಗ) ಜೀವವೋ, ಆ ಸತ್ತ್ವವು ದೇಹೇಂದ್ರಿಯ ರಹಿತವಾದಾಗ (ದೇಹ, ಇಂದ್ರಿಯಗಳು ಇಲ್ಲದಿದ್ದಾಗ) ಆತ್ಮ. ಜೀವದತೆರೆಯಲ್ಲಿ ಇರುವ ಆತ್ಮವು ಜೀವಾತ್ಮ. ಜೀವದತೆರೆ ಬಿದ್ದಾಗ ಅದೇ ಪರಮಾತ್ಮ.

ಆತ್ಮ, ಅಂತರಾತ್ಮ, ಪರಮಾತ್ಮ, ಬ್ರಹ್ಮ, ಪರಬ್ರಹ್ಮ, ಈಶ್ವರ, ಜಗದೀಶ್ವರ, ಭಗವಂತ, ದೇವರು — ಇವೆಲ್ಲ ಒಂದೇ ಮಹಾವಸ್ತುವಿನ ಹೆಸರುಗಳು. ಲೋಕದಲ್ಲಿ ಒಬ್ಬನೇ ಮನುಷ್ಯನನ್ನು ಕೆಲವರು ಅಣ್ಣ ಎಂದೂ, ಕೆಲವರು ತಮ್ಮ ಎಂದೂ, ಕೆಲವರು ಭಾವ ಎಂದೂ, ಕೆಲವರು ಮಾವ ಎಂದೂ ಕರೆಯುವುದುಂಟಷ್ಟೆ ? ಅದರಂತೆಯೇ ಒಂದೇ ಮಹಾವಸ್ತುವನ್ನು ಜನರು ಆ ವಸ್ತುವಿನೊಡನೆ ತಾವು ಇಟ್ಟುಕೊಂಡಿರುವ ಸಂಬಂಧದ ಆಧಾರದ ಮೇಲೆ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ.

ಆತ್ಮ, ಜೀವ, ಜಗತ್ತು, ಬ್ರಹ್ಮ—ಈ ನಾಲ್ಕು ತತ್ತ್ವಗಳನ್ನು ಕುರಿತದ್ದು ಅಧ್ಯಾತ್ಮವಿದ್ಯೆ. ಅದೇ ಅಧ್ಯಾತ್ಮಯೋಗ. ಅದೇ ಬ್ರಹ್ಮವಿದ್ಯೆ. ಅದೇ ವೇದಾಂತಶಾಸ್ತ್ರ.

ಈ ಶಾಸ್ತ್ರದಲ್ಲಿ ಅನೇಕ ಮತಭೇದಗಳುಂಟು. ಇಲ್ಲಿ ಅವುಗಳ ನಾನಾ ವಿವರಗಳಿಗೆ ಹೋಗದೆ, ಮುಖ್ಯ ಮುಖ್ಯ ಭಾವನೆಗಳನ್ನು ಸಂಗ್ರಹವಾಗಿ ಬಳಕೆಯ ಮಾತಿನಲ್ಲಿ ತಿಳಿಸಲು ಯತ್ನಿಸಿದೆ.

ಬಳಕೆಯ ಮಾತಿನಲ್ಲಿ, ಆತ್ಮಚೈತನ್ಯವು ಪ್ರಪಂಚದ ಎಲ್ಲ ಪ್ರಾಣಿಗಳಲ್ಲಿಯೂ ಗೂಢವಾಗಿದ್ದುಕೊಂಡು ಜೀವವಾಗಿ ಆಯಾ ದೇಹದ ಕೈ ಕಾಲು ಮನಸ್ಸು ಬುದ್ಧಿಗಳ ಮೂಲಕ ಕೆಲಸ ಮಾಡುತ್ತದೆ.

ನಾವೆಲ್ಲರೂ ಸಾಮಾನ್ಯವಾಗಿ ನಾನು, ನೀನು, ಅದು, ಇದು—ಎಂದು ಮಾತನಾಡುತ್ತೇವಷ್ಟೆ ? ಹಾಗೆ 'ನಾನು ಬಡವ' ಎಂದಾಗ ಗುರಿಯಲ್ಲಿ ಇರುವವರು ಯಾರು ? 'ನೀನು ಗಟ್ಟಿಗ' ಎಂದಾಗ ಗುರಿಯಲ್ಲಿ ಇರುವವರು ಯಾರು?

'ನಾನು ಕುಂಟ' ಎಂದಾಗ 'ನಾನು' ಎಂದರೆ ನನ್ನ ಕಾಲು. 'ನನಗೆ ಊಟ ರುಚಿಯಾಗಿದೆ' ಎಂದಾಗ 'ನಾನು' ಎಂದರೆ ನನ್ನ ನಾಲಗೆ. 'ನಾನು ಹಾಯಾಗಿದ್ದೇನೆ' ಎಂದಾಗ 'ನಾನು' ಎಂದರೆ ನನ್ನ ಮನಸ್ಸು. ಹೀಗೆ ನನಗೆ ಸಂಬಂಧಪಟ್ಟ ದೇಹದ ಅಂಗ, ಇಂದ್ರಿಯ, ಮನಸ್ಸು, ಈ ಮೂರು ಕಾರ್ಯ–ಅನುಭವ ಸ್ಥಾನಗಳೂ 'ನಾನು' ಎಂಬುದರ ಅರ್ಥದಲ್ಲಿ ಅಡಗಿರುತ್ತವೆ. 'ನಾನು' 'ನಾನು' ಎಂದು ತನ್ನನ್ನು ತಾನು ಒಂದೇ ದೇಹದಲ್ಲಿ ಗುರುತಿಸಿಕೊಳ್ಳುವ ಚೈತನ್ಯವೇ ಜೀವಾತ್ಮ.

ಆತ್ಮವು ಒಂದು ಸುಗಂಧದ್ರವ್ಯವೆಂದು ಇಟ್ಟುಕೊಳ್ಳೋಣ. ಜೀವವೆಂಬುದು ಆ ದ್ರವ್ಯವಿರುವ ಭರಣಿ. ಆ ಭರಣಿಯ ರಂಧ್ರಗಳ ಮೂಲಕ ಪರಿಮಳ ಹೊರಹೊಮ್ಮಿ ಲೋಕವನ್ನು ಮುಟ್ಟುತ್ತದೆ. ಆಗ ಲೋಕಕ್ಕೆ ಸುಖ. ವಿದ್ಯುಚ್ಛಕ್ತಿಯ ಉಪಮಾನವನ್ನು ನೋಡೋಣ. ವಿದ್ಯುತ್ತೇ ಆತ್ಮಚೈತನ್ಯ. ದೇಹಧಾರಿಯಾದ ಜೀವವೇ ಅದು ಹರಿಯುವ ತಂತಿ. ಆ ತಂತಿಯು ತನ್ನ ಬಳಿಯಿರುವ ಪದಾರ್ಥಗಳಿಗೆಲ್ಲ ತನ್ನ ಕಾವಿನ ಅಲೆಗಳನ್ನು ಸೋಕಿಸಿ ಅದಿರಿಸಿ ಆ ಪದಾರ್ಥಗಳ ರೂಪವನ್ನು ಮಾರ್ಪಡಿಸುತ್ತದೆ. ಇಂಥಾದ್ದು ಜೀವಾತ್ಮಪ್ರಭಾವ.

ಪ್ರಪಂಚದಲ್ಲಿ ಪ್ರಾಣಿಗಳು ಲೆಕ್ಕಮಾಡಲಾಗದಷ್ಟು ಹೇರಳವಾಗಿರುತ್ತವೆ. ಆ ಕೋಟ್ಯನುಕೋಟಿ ಪ್ರಾಣಿಗಳಲ್ಲಿ ಪ್ರತಿಯೊಂದೂ ಒಂದು ಜೀವ. ಆ ಒಂದೊಂದು ಜೀವದೊಳಗೂ ಆತ್ಮವಸ್ತುವಿರುತ್ತದೆ. ಹೀಗೆ ಬೇರೆ ಬೇರೆ ಜೀವಗಳೊಳಗೆ ಬೇರೆ ಬೇರೆಯಾಗಿರುವ ಆತ್ಮವು ಜೀವಾತ್ಮ. ಅಂಥ ಆತ್ಮಾಂಶಗಳ ಒಟ್ಟು (ಸಮಷ್ಟಿ) ಪರಮಾತ್ಮ; ಮತ್ತು ಯಾವ ವಸ್ತುವು ಲೋಕದ ಒಳಗಡೆ ಇರುವಾಗ ಆತ್ಮವೋ ಅದು ನಮ್ಮ ಪ್ರಪಂಚದಿಂದ ಹೊರಗಡೆ ಮಿತಿಮೇರೆಗಳಿಲ್ಲದೆ ಹರಡಿರುವ ಸ್ಥಿತಿಯಲ್ಲಿ ಬ್ರಹ್ಮ ಅಥವಾ ಪರಬ್ರಹ್ಮ.

ಬ್ರಹ್ಮವಸ್ತುವು ಅನಂತವಾದದ್ದು, ಸ್ವತಂತ್ರವಾದದ್ದು, ಅಪಾರ ಶಕ್ತಿನಿಧಿಯಾದದ್ದು. ಅದು ಸರ್ವವ್ಯಾಪಿಯಾದದ್ದು. ಅದು ಕಲ್ಲು ಮಣ್ಣು ಮೊದಲಾದ ಜಡ ಪದಾರ್ಥಗಳಲ್ಲಿ ನಿದ್ರಿಸುವಂತೆ ಇರುತ್ತದೆ. ಗಿಡಮರಗಳಲ್ಲಿ ಅದು ಕೊಂಚ ಎಚ್ಚತ್ತಿರುವಂತೆ ಕಾಣುತ್ತದೆ. ಕ್ರಿಮಿಕೀಟಗಳಲ್ಲಿ ಅದು ಹೆಚ್ಚು ಎಚ್ಚರಿರುತ್ತದೆ. ಮೃಗಪಕ್ಷಿಗಳಲ್ಲಿ ಅದಕ್ಕಿಂತ ಹೆಚ್ಚು

ಬೆಳಗುತ್ತದೆ. ಮನುಷ್ಯಪ್ರಾಣಿಯಲ್ಲಿ ಮತ್ತೂ ಹೆಚ್ಚು ಪ್ರಕಾಶವಾಗಿರುತ್ತದೆ. ಮನುಷ್ಯರಲ್ಲಿ ಸಹ ಅದು ಕೆಲಮಂದಿಯಲ್ಲಿ ಪ್ರಕಾಶಿಸುವುದಕ್ಕಿಂತ ಹೆಚ್ಚಾಗಿ ಬೇರೆ ಕೆಲಮಂದಿಯಲ್ಲಿ ಪ್ರಕಾಶಿಸುತ್ತದೆ. ಹೀಗೆ ಆ ವಿಶ್ವಚೈತನ್ಯವು ಕೆಲವೆಡೆ ಗೂಢವಾಗಿ, ಕೆಲವೆಡೆ ಪ್ರಕಾಶವಾಗಿ, ಕೆಲವೆಡೆ ಸುಪ್ತವಾಗಿ, ಕೆಲವೆಡೆ ಜಾಗೃತವಾಗಿ—ಪ್ರಪಂಚ ಎಲ್ಲ ಕಡೆಯೂ ತುಂಬಿಕೊಂಡಿರುತ್ತದೆ. ಹಾಗಿದ್ದರೂ ಚೈತನ್ಯದ ನಡುನಡುವೆ ದೇಹಾದಿ ಜಡ ಪದಾರ್ಥ ಸೇರಿರುವುದರಿಂದ ಅಖಂಡೈಕವಾದದ್ದು ನಾಲ್ಕೆಂಟಾಗಿ ಒಡೆದಿರುವಂತೆ ನಮಗೆ ಕಾಣುತ್ತದೆ. ಇದೇ ಚರಾಚರ. ಜಡದೇಹವೆಂಬ ಗಿಂಡಿಯಲ್ಲಿರುತ್ತದೆ ಆತ್ಮಚೈತನ್ಯ ಎಂಬ ತೀರ್ಥ. ದೇಹವೂ ಆತ್ಮವೂ ಸೇರಿ ಜೀವಾತ್ಮ.

ಜೀವವು ಒಂದು ದೃಷ್ಟಿಯಿಂದ ಆತ್ಮ, ಇನ್ನೊಂದು ದೃಷ್ಟಿಯಿಂದ ದೇಹ. ಜಗತ್ತಿನ ಮೇಲೆ ವಿಶ್ವಚೈತನ್ಯವು ಬೀರುವ ಪ್ರಭಾವದ ಝಳದಿಂದ ಜೀವಾತ್ಮವು ತಾನು ವಿಶ್ವಾತ್ಮದ ಕಣವೆಂಬುದನ್ನು ಮರೆಯುತ್ತದೆ. ತಾನು ಬ್ರಹ್ಮಪ್ರತಿಬಿಂಬವೆಂಬುದನ್ನು ಮರೆಯುತ್ತದೆ, ತನ್ನನ್ನು ದೇಹದೊಡನೆ ಏಕಮಾಡಿಕೊಳ್ಳುತ್ತದೆ. ಹೀಗೆ ಆತ್ಮವು ತಾನು ದೇಹವೆಂದುಕೊಂಡಾಗ ಎಲ್ಲ ದೇಹಕ್ರಿಯೆಗಳ ಅನುಭವಗಳೂ ಅದಕ್ಕೆ ತಪ್ಪದೆ ಉಂಟಾಗುತ್ತವೆ. ಹೀಗೆ ಕಷ್ಟ, ಸುಖ, ನಷ್ಟ, ಲಾಭ ಮೊದಲಾದ ಲೋಕವ್ಯಾಪಾರಗಳು ಜೀವಾತ್ಮಕ್ಕೆ ತಗಲುತ್ತವೆ. ಅದರಿಂದ ಜೀವ ಕೆರಳಿ ಪ್ರತಿಕ್ರಿಯೆ ನಡಸುತ್ತದೆ. ಹೀಗೆ ಜೀವವು ತನ್ನ ಪ್ರಪಂಚಾನುಭವಗಳಿಗೆ ಕೊಡುವ ಪ್ರತ್ಯುತ್ತರಗಳೇ ರಾಗದ್ವೇಷಗಳು. ರಾಗವೆಂದರೆ ಯಾವುದಾದರೊಂದು ವಸ್ತುವಿನಲ್ಲಿ ಹೆಚ್ಚಿನ ಪ್ರೀತಿ, ದ್ವೇಷವೆಂದರೆ ಯಾವುದಾದರೊಂದು ವಸ್ತುವಿನ ವಿಷಯದಲ್ಲಿ ಹೆಚ್ಚಿನ ಅಸಹನೆ. ಈ ರಾಗದ್ವೇಷಗಳು ಜೀವವನ್ನು ಹಿಡಿದಾಗ ಜೀವವು ತನ್ನ ಒಳಗಿನ ಆತ್ಮವನ್ನು ಮರೆಯುತ್ತದೆ. ಜಗತ್ತಿನ ಹೋರಾಟಕ್ಕೆ ಸಿಕ್ಕಿ ಶಾಂತಿಯನ್ನು ಕಳೆದುಕೊಳ್ಳುತ್ತದೆ. ತಾನು ಇತರ ಜೀವಿಗಳಿಂದ ಬೇರೆಯೆಂದೆಣಿಸಿಕೊಳ್ಳದೆ, ಅದಕ್ಕೆ ಬದಲಾಗಿ ತಾನೂ ವಿಶ್ವದ ಒಂದಂಶ ಎಂಬುದನ್ನು ಅನುಭವಕ್ಕೆ ತಂದುಕೊಂಡಾಗ—ಇತರರಂತೆಯೇ ತಾನು, ತನ್ನಂತೆಯೇ ಇತರರು, ಯಾರೂ ಬೇರೆಯವರಿಲ್ಲ ಎಂದು ನಂಬಿ ನಡೆದುಕೊಂಡಾಗ—ಅದಕ್ಕೆ ಯಾರೊಡನೆಯೂ ಎಲ್ಲಿಯೂ ಹಗೆಯೂ ಹೋರಾಟವೂ ಇರದು. ಅದೇ ಶಾಂತಿ. ಆಗ ಪರಮಾತ್ಮನ ಅಥವಾ ಭಗವಂತನ ಸನ್ನಿಧಿಯ ಅನುಭವ.

ಮನುಷ್ಯನು ಪರಮಾತ್ಮಸನ್ನಿಧಿಯನ್ನು ಸೇರಲು ಅರ್ಹನಾಗುವುದಕ್ಕೆ ಬಹು ಕಾಲದ ಮತ್ತು ಬಹು ವಿಧದ ಸಂಸ್ಕಾರವಾಗಬೇಕು. ಈ ಸಂಸ್ಕಾರವೇ ಧರ್ಮ. ಈ ಸಂಸ್ಕಾರವು ಎರಡು ವಿಧವಾದದ್ದು. ಒಂದು ಪ್ರವೃತ್ತಿ. ಎಂದರೆ ಲೋಕ ಜೀವನದಲ್ಲಿ ಭಾಗವಹಿಸುವುದರ ಮೂಲಕ ಆಗುವ ಮನಶ್ಶೋಧನೆ. ಮನೆ, ಮಠ, ಸ್ವಜನ, ಸ್ವರಾಷ್ಟ್ರ ಮುಂತಾದ ಮಮತಾ ಕ್ಷೇತ್ರಗಳಲ್ಲಿ ಮನುಷ್ಯನು ಲೋಕಹಿತಕ್ಕಾಗಿ ಸ್ವಕರ್ತವ್ಯವನ್ನು ನಡೆಸುತ್ತ ಆ ಕ್ರಮದಲ್ಲಿ ಅವನು ಬಗೆಬಗೆಯ ಸಂಕಟಗಳಿಗೂ ಪರೀಕ್ಷೆಗಳಿಗೂ ಸಿಕ್ಕುತ್ತಾನೆ. ಅದರಿಂದ ಅವನ ಮನಸ್ಸಿನ ಕಶ್ಮಲಗಳು ಕರಗಿ, ಅವನ ಮಮತೆಯ ಕ್ಷೇತ್ರವು ವಿಸ್ತಾರಪಡುತ್ತದೆ, ಹಾಗೆ ಸ್ವಾರ್ಥವು ಸವೆಯುತ್ತದೆ. ಇದು ಪ್ರವೃತ್ತಿಧರ್ಮ.

ಇನ್ನೊಂದು ನಿವೃತ್ತಿಧರ್ಮ. ಅದು ವಿರಕ್ತಿಯ ರೂಪದ್ದು. ಭಗವಂತನ ಧ್ಯಾನ, ಪೂಜೆ, ತಪಸ್ಸು, ತತ್ತ್ವಚಿಂತನೆ ಮೊದಲಾದ ಆತ್ಮಾರ್ಪಣೆಯ ರೂಪವಾದದ್ದು. ಲೋಕಹಿತಕಾರ್ಯವೂ ಇದರಲ್ಲಿ ಸೇರಿರುತ್ತದೆ. ಇದು ಜೀವಕ್ಕೆ ನಿರಪೇಕ್ಷೆಯ ಭಾವವನ್ನೂ ಭಗವದೇಕನಿಷ್ಠೆಯನ್ನೂ ತರುತ್ತದೆ.

ಹೀಗೆ ನಿವೃತ್ತಿ ಪ್ರವೃತ್ತಿ ರೂಪವಾದ ಧರ್ಮದ ಅಭ್ಯಾಸದಿಂದ ಜೀವಿಯ ದೇಹಾಭಿಮಾನ ಕಡಮೆಯಾಗಿ ಪರಮಾತ್ಮದೃಷ್ಟಿ ಬಲಪಡುತ್ತದೆ. ಹಾಗೆ ಭಗವತ್ಸ್ವರೂಪದ ಸ್ವಾನುಭವವಾಗುತ್ತದೆ. ಇದೇ ಅಧ್ಯಾತ್ಮವಿದ್ಯೆಯ ಶಿಖರ. ಶಿಖರ ಸೇರಿದಾತನಿಗೆ ಜಗಜ್ಜೀವನಪ್ರದೇಶವೆಲ್ಲ ವಿಶದವಾಗಿ ಕಾಣಬರುತ್ತದೆ. ಅವನು ಜೀವನದ ಅರ್ಥವನ್ನು ಪೂರ್ತಿಯಾಗಿ ಕಂಡುಕೊಳ್ಳುತ್ತಾನೆ. ಅವನು ಎಲ್ಲ ತೊಡಕುಗಳನ್ನೂ ಬಿಡಿಸಿಕೊಳ್ಳಲು ಸಮರ್ಥನಾಗುತ್ತಾನೆ. ಆಗ ಅವನು ಎಲ್ಲರಿಗೂ ಸ್ನೇಹಿತನು, ಎಲ್ಲೆಲ್ಲಿಯೂ ನಿಶ್ಚಿಂತನು. ಇದು ಅಧ್ಯಾತ್ಮವಿದ್ಯೆಯ ಪರಮ ಪ್ರಯೋಜನ.

## ಅನಾವೃಷ್ಟಿ

ವಿಶಾಲವಾದ ಭೂಮಿ. ನೆಲವೆಲ್ಲವೂ ಒಣ. ಮರಗಳಲ್ಲಿ ಹೂಗಳಿಲ್ಲ. ಎಲೆಗಳು ಬಾಡಿಹೋಗಿವೆ. ದನಕರುಗಳು ನೀರಿಗಾಗಿ ಅಲೆದಾಡುತ್ತಿವೆ. ಜನರು ಬಾಯಾರಿ ಬಳಲುತ್ತಿದ್ದಾರೆ. ಎಂಥ ಕರುಳು ಕತ್ತರಿಸುವ ದೃಶ್ಯ ! ಇದೆಲ್ಲವೂ ಅನಾವೃಷ್ಟಿಯಿಂದ. ಬಹು ದಿನಗಳಿಂದ ಬರಬೇಕಾದ ಮಳೆ (ವೃಷ್ಟಿ) ಬಾರದಿರುವುದೇ ಅನಾವೃಷ್ಟಿ.

ಭೂಮಿಯ ಮೇಲೆ ಬಿದ್ದ ಮಳೆ ನೀರು ವಾತಾವರಣಕ್ಕೆ ಮತ್ತೆ ಹಿಂದಿರುಗುವುದು ಎರಡು ರೀತಿಯಾಗಿ : ಸಾಗರ, ನದಿ, ಕೆರೆತೊರೆಗಳ ನೀರು ಆವಿಯ ರೂಪದಲ್ಲಿ ಮೇಲಕ್ಕೇರುತ್ತದೆ ಮತ್ತು ಸಸ್ಯಗಳು ಹಾಗೂ ಪ್ರಾಣಿಗಳಿಂದ ಹೊರದೂಡಲ್ಪಟ್ಟ ನೀರು ಆವಿಯಾಗಿ ಮೇಲೇರುತ್ತದೆ. ಈ ರೀತಿಯಲ್ಲಿ ವಾತಾವರಣವನ್ನು ಸೇರುವ ನೀರೇ ಭೂಮಿಗೆ ಮತ್ತೆ ಬರುತ್ತದೆ. ಭೂಮಿಯ ನೀರಿನ ಸೆಲೆಗೆ ಅದೇ ಆಧಾರ. ಅನಾವೃಷ್ಟಿ ಉಂಟಾದಾಗ ನೀರಿನ ಸೆಲೆ ಬತ್ತುತ್ತದೆ.



ಬಿರುಕು ಬಿಟ್ಟ ನೆಲ : ಎಲ್ಲಿಯೂ ನೀರಿಲ್ಲ

ಅನಾವೃಷ್ಟಿ ಮೂರು ವಿಧ :

ಕೆಲವೆಡೆಗಳಲ್ಲಿ ಶಾಶ್ವತ ಅನಾವೃಷ್ಟಿ. ಮರುಭೂಮಿ ಪ್ರದೇಶದಲ್ಲಿ ವರ್ಷಕ್ಕೆ 25 ಸೆ. ಮೀ. ಗಳಿಗೂ ಕಡಮೆ ಮಳೆ ಬೀಳುತ್ತದೆ. ಈಗೀಗ ಮರುಭೂಮಿ ಪ್ರದೇಶಗಳನ್ನು ಕೃಷಿಯೋಗ್ಯವಾಗಿ ರೂಪಿಸಿಕೊಳ್ಳುವ ಪ್ರಯೋಗಗಳು ನಡೆದಿವೆ. ಮರಳುಗಾಡಿನಲ್ಲಿ ಕೆಲವು ಸಸ್ಯಗಳನ್ನು ಸುತ್ತಲೂ ಬೆಳೆಸಿ ಅದರ ಮಧ್ಯೆ ನೀರು ನಿಲ್ಲುವಂತೆ ಮಾಡಿ, ಗಾಳಿ ಮರಗಳು ಇದನ್ನು ಹೊಡೆದುಕೊಂಡು ಹೋಗದಂತೆ ರಕ್ಷಿಸಲಾಗುತ್ತಿದೆ. ದೀರ್ಘ ಕಾಲ ಮತ್ತೆ ಮತ್ತೆ ಹೀಗೆ ಮಾಡಿದರೆ ಮರಳು ಸ್ವಲ್ಪಮಟ್ಟಿಗೆ ಮಣ್ಣಿನ ಹದಕ್ಕೆ ಬರುತ್ತದೆ; ಉಳುಮೆಗೆ ಯೋಗ್ಯವಾಗುತ್ತದೆ.

ನಿಯಮಿತ ಕಾಲದಲ್ಲಿ ಮಳೆ, ಬಿಸಿಲುಗಳನ್ನೊಳಗೊಂಡ ಹವೆಯಿರುವ ಜಾಗದಲ್ಲಿ ಉಂಟಾಗುವ ಅನಾವೃಷ್ಟಿ ಎರಡನೆಯದು. ಇಂಥ ಪ್ರದೇಶದಲ್ಲಿ ಮಳೆಗೆ ಸ್ವಲ್ಪ ಹೊಂದಿಕೊಂಡು, ಹಾಗೂ ನೀರಾವರಿಯ ನೆರವಿನಿಂದ ಬೆಳೆ ತೆಗೆಯಬೇಕು.

ಮೂರನೆಯದು, ಅನಿರ್ದಿಷ್ಟ ಮಳೆಬರುವ ಜಾಗಗಳಲ್ಲಿ ಉಂಟಾಗುವ ಅನಾವೃಷ್ಟಿ. ಒಂದು ಬಾರಿ ಮಳೆ ಬಂದರೆ ಇನ್ನೊಂದು ಬಾರಿ ಮಳೆ ಬರದೇ ಇರಬಹುದು. ಹೀಗೆ ಯಾವ ಪ್ರದೇಶದಲ್ಲಿ ಈ ಹಾನಿ ಒದಗಬಹುದೆಂದು ಗೊತ್ತುಹಚ್ಚುವುದು ಕಷ್ಟ. ಅನಾವೃಷ್ಟಿಯಿಂದ ಫಲವತ್ತಾದ ಭೂಮಿ ಬರಡಾಗುತ್ತದೆ. ಇದು ತೀವ್ರವಾಯಿತೆಂದರೆ ಆ ಭೂಮಿ ಮರಳುಗಾಡಾಗಬಹುದು.

ಅನಾವೃಷ್ಟಿಯ ಪ್ರತಿರೂಪ ಅತಿವೃಷ್ಟಿ. ನದಿಗಳಲ್ಲಿ ಪ್ರವಾಹಗಳು ಬಂದು ಸುತ್ತಮುತ್ತಲ ಮನೆ, ಭೂಮಿಗಳನ್ನೆಲ್ಲ ಕೊಚ್ಚಿಕೊಂಡು ಹೋಗುತ್ತವೆ. ಅನಾವೃಷ್ಟಿಯಾಗಲಿ, ಅತಿವೃಷ್ಟಿಯಾಗಲಿ ಮನುಷ್ಯನಿಗೆ ಹಾನಿ.

ಅನಾದಿಕಾಲದಲ್ಲಿ ಆದಿಮಾನವ ಅನಾವೃಷ್ಟಿಯನ್ನು ಹೇಗೆ ಎದುರಿಸುತ್ತಿದ್ದ ಎಂದು ಅನೇಕ ಊಹೆಗಳಿವೆ. ನೀರಿಗಾಗಿ ಮನುಷ್ಯ ಮನುಷ್ಯರಲ್ಲಿ ಹೊಡೆದಾಟ, ಸಸ್ಯಗಳು ಒಣಗಿಹೋದ ಅನಂತರ ಪ್ರಾಣಿಗಳನ್ನು ಕೊಂದು ಅವುಗಳ ರಕ್ತಪಾನ, ಇಲ್ಲವೆ ನೀರಿರುವ ಜಾಗವನ್ನು ಅರಸಿಕೊಂಡು ಹೋಗುವುದು, ಸ್ವಲ್ಪವೇ ಆಹಾರ ಕಂಡರೂ ಇನ್ನೊಬ್ಬನ ತಲೆಯೊಡೆಯುವುದು—ಇವು ಆವನು ಅನುಸರಿಸುತ್ತಿದ್ದ ಮಾರ್ಗಗಳು. ಇಂಥ ಪರಿಸ್ಥಿತಿಗೆ ಕ್ಷಾಮವೆನ್ನುತ್ತಾರೆ. ಭಾರತದ ಚರಿತ್ರೆಯಲ್ಲಿ ಒಂದೇ ಶತಮಾನದಲ್ಲಿ ಭೀಕರ ಕ್ಷಾಮಗಳಾಗಿವೆ. ಅತಿ ದೊಡ್ಡ ಕ್ಷಾಮ (ಬರಗಾಲ) ಗಳಲ್ಲಿ ಲಕ್ಷೋಪಲಕ್ಷ ಜನ ಸಾಯುತ್ತಾರೆ. ಹದಿನೆಂಟನೆಯ ಶತಮಾನದಲ್ಲಿ ಭಾರತ ಕ್ಷಾಮಕ್ಕೆ ಈಡಾದಾಗ, ಅಂತ್ಯ ಸಂಸ್ಕಾರವೇ ಸಾಧ್ಯವಿಲ್ಲದಷ್ಟು ಜನ ಸತ್ತರು.

1943—44ರಲ್ಲಿ ಬಂಗಾಳದಲ್ಲಿ ಬಂದ ಕ್ಷಾಮ ಭಾರತದ ಇತಿಹಾಸದಲ್ಲಿನ ಅತಿ ಭೀಕರ ಕ್ಷಾಮಗಳಲ್ಲಿ ಒಂದು. ಕಲ್ಕತ್ತ ವಿಶ್ವವಿದ್ಯಾನಿಲಯದವರು ನಡೆಸಿದ ಸಮೀಕ್ಷೆಯ ಪ್ರಕಾರ ಇದರಲ್ಲಿ ಮೂವತ್ತನಾಲ್ಕು ಲಕ್ಷ ಜನ ಸತ್ತರು. ಇದೇ ಕಾಲದಲ್ಲಿ ಕರ್ನಾಟಕದ ಬಿಜಾಪುರ ಜಿಲ್ಲೆಯಲ್ಲಿ ಉಗ್ರ ಕ್ಷಾಮ ತಲೆದೋರಿತು.

ಜಗತ್ತಿನ ಎಲ್ಲ ಭಾಗಗಳಲ್ಲಿಯೂ ಒಂದೊಂದು ಬಾರಿ ಮಳೆಬಾರದೆ ಹೋಗುವ ಸಂಭವವಿದೆ. ಭೂಮಿಯ ಸುತ್ತಲೂ ತಿರುಗುತ್ತಿರುವ ಮಾನವ ನಿರ್ಮಿತ ಉಪಗ್ರಹಗಳ ಸಹಾಯದಿಂದ ಅತಿವೃಷ್ಟಿ, ಅನಾವೃಷ್ಟಿಗಳ ಮುನ್ಸೂಚನೆಯನ್ನು ಪಡೆಯುವ ಯತ್ನಗಳು ನಡೆದಿವೆ.

ಪ್ರಾಚೀನ ಕಾಲದಲ್ಲಿ ಎಲ್ಲ ಜನಾಂಗಗಳಲ್ಲೂ ಮಳೆಗೋಸ್ಕರ ಬಲಿ ಅಥವಾ ಆಹುತಿಗಳನ್ನು ಕೊಡುವ ಪದ್ಧತಿಯಿತ್ತು.

ಅನಾವೃಷ್ಟಿಯ ನಿಮಿತ್ತ ಮಹಾಯಜ್ಞಗಳನ್ನು ಆಚರಿಸಿದ ಉದಾಹರಣೆಗಳು ಭಾರತದ ಇತಿಹಾಸ, ಪುರಾಣಗಳಲ್ಲಿ ಹೇರಳವಾಗಿವೆ. ಈಗಲೂ ಮಳೆ ಬರಲೆಂದು ಭಾರತದಲ್ಲಿ ಪರ್ಜನ್ಯ ಜಪ ಮಾಡುತ್ತಾರೆ.

ಎಲ್ಲ ಮಳೆಯೂ ಮೋಡದಿಂದಲೇ ಆರಂಭವಾಗಬೇಕು. ಆದರೆ ಎಲ್ಲ ಮೋಡಗಳೂ ಮಳೆಯನ್ನು ಸುರಿಸಲಾರವು. ಮೋಡದಲ್ಲಿರುವ ತೇವಾಂಶ ಹೆಚ್ಚಿದರೆ ಮಾತ್ರ ಅದು ಸಾಕಷ್ಟು ಭಾರವಾಗಿ ಕೆಳಗಿಳಿದು, ಮಳೆ ಬೀಳುತ್ತದೆ. ರಾಸಾಯನಿಕ ಪದಾರ್ಥವನ್ನು ಮೋಡಗಳಲ್ಲಿ ಬಿತ್ತರಿಸುವುದರ ಮೂಲಕ ಮಳೆ ಬರಿಸುವ ಪ್ರಯೋಗ ಯಶಸ್ವಿಯಾಗಿದೆ. ಆದರೆ ಇಂಥ ಪ್ರಯತ್ನದಿಂದಲೇ ಅನಾವೃಷ್ಟಿಯನ್ನು ತೊಡೆದು ಹಾಕಬಹುದೆಂದು ಹೇಳುವಂತಿಲ್ಲ. ತುಸು ಮಳೆಯನ್ನೇನೋ ಉಂಟುಮಾಡಬಹುದು ಅಷ್ಟೆ.

ನೋಡಿ : ಅಣೆಕಟ್ಟು; ಇಸ್ರೇಲ್; ನೀರಾವರಿ ; ಮರುಭೂಮಿ; ಮಳೆ

## ಅನ್ವೇಷಣೆ

ಕುತೂಹಲ ಮಾನವನ ಹುಟ್ಟು ಗುಣ. ಈ ಸ್ವಭಾವ ಅನೇಕ ಸಾಹಸ ಕಾರ್ಯಗಳಲ್ಲಿ ಕೈ ಹಾಕುವಂತೆ ಅವನನ್ನು ಪ್ರೇರೇಪಿಸಿದೆ. ಜಗತ್ತಿನಲ್ಲಿ ಮಾನವ ಕಾಣಿಸಿಕೊಂಡ ಕಾಲದಲ್ಲಿ ತಾನು, ತನ್ನ ನೆಲ, ತನ್ನ ಸುತ್ತಿನ ಪರಿಸರ ಇವಿಷ್ಟೇ ಅವನಿಗೆ ಸಂಬಂಧಿಸಿದ ವಿಷಯಗಳಾಗಿದ್ದುವು. ಕಾಲ ಉರುಳಿದಂತೆ ತನ್ನೆದುರಿಗಿರುವ ಅಪಾರ ಜಲರಾಶಿಯ ಮತ್ತೊಂದು ದಂಡೆಯಲ್ಲಿ ಏನಿರಬಹುದು ಎಂಬ ಕುತೂಹಲ ಅವನನ್ನು ಕಾಡತೊಡಗಿತು. ಕುತೂಹಲ ಸಾಹಸದ ನಾಂದಿಯಾಯಿತು : ಹೊಸ ಜಗತ್ತಿಗೆ ದಾರಿಯಾಯಿತು. ಅಂದಿನಿಂದ ಇಂದಿನವರೆಗೆ ಮಾನವ ಅನೇಕ ಸಾಹಸಗಳನ್ನು ಕೈಗೊಂಡು ಅತ್ಯುತ್ತಮ ಅನ್ವೇಷಣೆಗಳನ್ನು ನಡೆಸಿದ್ದಾನೆ.

ಪ್ರಾಚೀನ ಕಾಲದಿಂದಲೂ ಮಾನವ ಆಹಾರದ ಬೇಟೆಯಲ್ಲಿ ತೊಡಗಿದ್ದಾಗ, ಪಲವು ಹೊಸ ಜಾಗಗಳನ್ನು ಕಂಡುಹಿಡಿದದ್ದುಂಟು. ಆದರೆ ಅವು ಉದ್ದೇಶಪೂರ್ವಕ ನಡೆಸಿದ ಅನ್ವೇಷಣೆಗಳಲ್ಲ, ಆಕಸ್ಮಾತ್ ಕಣ್ಣಿಗೆ ಬಿದ್ದ ಸ್ಥಳಗಳು. ಅನ್ವೇಷಣೆಗೆ ಗುರಿಯುಂಟು : ಕ್ರಮವುಂಟು.

ಪ್ರಪಂಚದಲ್ಲಿ ಅನ್ವೇಷಣೆಯ ಅಧ್ಯಾಯ ಆರಂಭವಾದದ್ದು ಸಮುದ್ರ ಮಾರ್ಗಗಳನ್ನು ಕಂಡುಹಿಡಿದು ಭೂಮಿಯ ವಿವಿಧ ಭಾಗಗಳ ನಡುವೆ ಸಂಪರ್ಕವೇರ್ಪಡಿಸಿದ ನಾವಿಕರಿಂದ. ನಾವಿಕರೇ ವಿಶ್ವದ ಪ್ರಪ್ರಥಮ ಅನ್ವೇಷಕರು. ಕ್ರಿ. ಪೂ. 1.000ದ ವೇಳೆಗೆ ತನ್ನ ದೇಶದ ಇತರ ಭಾಗಗಳನ್ನು ಅರಿತ ಮೇಲೆ ಮನುಷ್ಯನ ದೃಷ್ಟಿ ಅನ್ಯ ದೇಶಗಳೆಡೆ ಹೊರಳಿತು. ಪ್ರಪಂಚ ಇಷ್ಟೇ ಆಗಿರಲಾರದು, ಇನ್ನೂ ದೊಡ್ಡದಿರಬೇಕು. ತಮ್ಮ ದೇಶದಂತೆಯೇ ಇತರ ದೇಶಗಳೂ ಇರಬೇಕು. ತಮ್ಮಂಥ ಜನ ಅಲ್ಲಿಯೂ ವಾಸಿಸುತ್ತಿರಬೇಕು. ಈ ಬಗೆಯ ಯೋಚನೆಗಳು ಮಾನವರಲ್ಲಿ ಮೊಳೆತವು. ಕೆಲವರು ಧೈರ್ಯ ತಾಳಿ ಸಾಹಸಯಾತ್ರೆ ಕೈಗೊಂಡರು.

ಅವರಲ್ಲಿ ಪ್ರಮುಖರಾದವರು ಮೂವರು, ಈಜಿಪ್ಟಿನ ಸಮುದ್ರ ನಾವಿಕ ನೆಖೋ, ಕಾರ್ಥೇಜಿನ ಹನ್ನೋ ಮತ್ತು ಗ್ರೀಕ್ ದೇಶದ ಪಿಥಿಯಾಸ್.

ಕ್ರಿ. ಪೂ. 600ರ ಸುಮಾರಿನಲ್ಲಿಯೇ 14,500 ಕಿಲೊಮೀಟರುಗಳಿಗಿಂತಲೂ ಹೆಚ್ಚಾಗಿ ಯಾನ ಮಾಡಿ ಆಫ್ರಿಕಕ್ಕೆ ಪ್ರದಕ್ಷಿಣೆ ಬಂದ ಈಜಿಪ್ಟಿನ ನಾವಿಕನೊಬ್ಬನ ಸಾಹಸ ಅಪೂರ್ವವಾದದ್ದು. ಆದರೆ ಆ ನಾವಿಕನ ಹೆಸರು ತಿಳಿಯದು. ಆ ಯಾನದ ಸಂಪೂರ್ಣ ವಿವರ ಪ್ರಪಂಚದ ಪ್ರಥಮ ಇತಿಹಾಸಜ್ಞ ಗ್ರೀಕಿನ ಹೆರೊಡೊಟಸನ ಬರೆಹಗಳಿಂದ ದೊರೆತಿದೆ.

ಕ್ರಿ. ಪೂ. 500ರಲ್ಲಿ ಹನ್ನೋ ಆಫ್ರಿಕ ಖಂಡದ ವಾಯುವ್ಯ ತೀರಗಳ ಉದ್ದಕ್ಕೂ ವಸಾಹತುಗಳನ್ನು ನಿರ್ಮಿಸಿದ. ಆಫ್ರಿಕದ ಗೊರಿಲ್ಲಗಳನ್ನು ಪ್ರಪ್ರಥಮವಾಗಿ ಹಿಡಿದು ತಂದ. ಕಾರ್ಥೇಜಿನವರ ವಸಾಹತು ನಿರ್ಮಾಣ, ಅನ್ವೇಷಣೆಯ ಇತಿಹಾಸದಲ್ಲಿ ಒಂದು ಪ್ರಮುಖ ಘಟ್ಟ.

ಕ್ರಿ.ಪೂ. 325ರಲ್ಲಿ ಗ್ರೀಕಿನ ಜನ ವಿಜ್ಞಾನಿ ಪಿಥಿಯಾಸನನ್ನು ಉತ್ತರದಲ್ಲಿ ಅನ್ವೇಷಣೆ ನಡೆಸಲು ಆರಿಸಿದರು. ಅವನು ಇಂಗ್ಲೆಂಡನ್ನು ಬಳಸಿಬಂದು ಉತ್ತರದಲ್ಲಿ ಹಾಲೆಂಡ್ ಮತ್ತು ಜರ್ಮನಿಯ ತೀರಗಳಲ್ಲಿ ಸಂಚರಿಸಿದ. ನಕ್ಷತ್ರಗಳ ಬಲದಿಂದ ತನ್ನ ಪ್ರಯಾಣದ ನಿಖರವಾದ ಮಾರ್ಗವನ್ನು ಗೊತ್ತುಪಡಿಸಿಕೊಂಡಿದ್ದ. ಅಲೆಗಳ ಏರಿಳಿತಗಳನ್ನು ಅಭ್ಯಾಸ ಮಾಡಿ ಚಂದ್ರ ಯಾವ ರೀತಿ ಅಲೆಗಳ ಏರಿಳಿತಗಳಿಗೆ ಕಾರಣ ಎಂದು ತಿಳಿದಿದ್ದ. ಗ್ರೇಟ್ ಬ್ರಿಟನ್ನಿಗೆ ಹೋಗಿ ಐರ್ಲೆಂಡನ್ನು ಪ್ರವೇಶಿಸಿದ. ಉತ್ತರ ಸಮುದ್ರದಲ್ಲಿ ಆರು ದಿನಗಳ ಕಾಲ ಸತತ ಪ್ರಯಾಣಮಾಡಿ ಉತ್ತರ ನಾರ್ವೆಯನ್ನು ಮುಟ್ಟಿದ. ಮಂಜು ಗಡ್ಡೆಗಳಿಂದ ತುಂಬಿದ ಆರ್ಕ್ಟಿಕ್ ಸಮುದ್ರವನ್ನು ಕಂಡ ಪ್ರಪ್ರಥಮ ಮಾನವ ಪಿಥಿಯಾಸ್. ತನ್ನ ವೈಜ್ಞಾನಿಕ ರೀತಿಯ ಅನ್ವೇಷಣೆಯಿಂದ ಮುಂದಿನ ಅನ್ವೇಷಕರಿಗೆ ಒಂದು ಗೊತ್ತಾದ ಹಾದಿಯನ್ನು ತೋರಿಸಿಕೊಟ್ಟವನು ಅವನೇ.

ರೋಮನ್ ಚಕ್ರಾಧಿಪತ್ಯದ ಹಿರಿಮೆಯ ದಿನಗಳಲ್ಲಿ ಅನ್ವೇಷಣೆಯತ್ತ ರೋಮನರ ಗಮನ ಹರಿಯಲಿಲ್ಲ. ಅದರ ಪತನದ ಅನಂತರ ಉತ್ತರ ಯೂರೋಪಿನ ವೈಕಿಂಗ್ ಜನರ ಬಣವೊಂದು ಸಮುದ್ರಯಾನ ಆರಂಭಿಸಿತು. ಆ ಕಾಲದಲ್ಲಿ ಜನರಿಗೆ ತಿಳಿದಿದ್ದ ಪ್ರತಿಯೊಂದು ಸಮುದ್ರದಲ್ಲಿಯೂ ಅವರು ಯಾನ ಮಾಡಿದರು. ಈ ಯಶಸ್ಸಿಗೆ ಅವರ ಹಡಗುಗಳ ಆಕಾರವೂ ಕಾರಣವಾಗಿದ್ದಿತು. ಉತ್ತರ ಸಮುದ್ರದ ಅಲೆಗಳ ಹೊಡೆತಗಳನ್ನು ತಪ್ಪಿಸಿ ಈ ಹಡಗುಗಳು ಬಹಳ ರಭಸವಾಗಿ ಓಡುತ್ತಿದ್ದುವು. ಅವುಗಳ ಪೈ ಬಹಳ ನುಣುಪಾಗಿದ್ದಿತು. 24.4 ಮೀಟರು ಉದ್ದ 4.9 ಮೀಟರು ಅಗಲ ಒಂದೊಂದು ಕಡೆ ಹದಿನಾರು ಜನ ಅಂಬಿಗರು ಕುಳಿತು ಹುಟ್ಟು ಹಾಕುತ್ತಿದ್ದರು. ಈ ಹಡಗುಗಳು ಕೊಲಂಬಸ್ ಹುಟ್ಟುವ ನೂರಾರು ವರ್ಷಗಳ ಮೊದಲೇ ವೈಕಿಂಗ್ ಜನರನ್ನು ಉತ್ತರ ಅಮೆರಿಕದ ದಾರಿ ಹಿಡಿಸಿದ್ದುವು.

ಐಸ್‌ಲೆಂಡಿನಲ್ಲಿ ನೆಲೆಸಿದ ನಾರ್ವೆಯ ಜನರಲ್ಲಿ ಎರಿಕ್ ಎಂಬುವನು ಬಹಳ ತಂಟೆಕೋರ. ವಯಸ್ಸು ಹೆಚ್ಚಿದಂತೆ ಅವನ ತಂಟೆತಕರಾರು ಜಾಸ್ತಿಯಾದುವು. ಯಾವುದೋ ಜಗಳದಲ್ಲಿ ತನ್ನ ನಾಡಿನವರಿಬ್ಬರನ್ನು ಕೊಂದು ಹಾಕಿದ. ಸರಕಾರ ಅವನನ್ನು ಮೂರು ವರ್ಷಗಳ ಕಾಲ ಗಡಿಪಾರು ಮಾಡಿತು. ಎರಿಕ್ ತನ್ನ ಸಂಸಾರದೊಡನೆ ಒಂದು ಹಡಗಿನಲ್ಲಿ 982ರಲ್ಲಿ ಪಶ್ಚಿಮದತ್ತ ಪಯಣ ಹೊರಟ. ಮಾರ್ಗದಲ್ಲಿ ಗ್ರೀನ್‌ಲೆಂಡನ್ನು ಕಂಡು ಹಿಡಿದ. ಅಪರಾಧಕ್ಕೆ ಸಿಕ್ಕಿದ ಶಿಕ್ಷೆ ಅವನಿಗೆ ಭಾಗ್ಯನಿಧಿಯನ್ನೇ ತೋರಿಸಿತು. ಸ್ವತಃ ರಾಜನೆಂದು ಎರಿಕ್ ಘೋಷಿಸಿಕೊಂಡು ಗ್ರೀನ್‌ಲೆಂಡನ್ನು ತಾನು ಆಳಿದ.

1000ನೆಯ ವರ್ಷದಲ್ಲಿ ಇವನ ಮಗ ಲೀಫ್ ಎರಿಕ್‌ಸನ್ ತಂದೆಯ ಜಾಡನ್ನೇ ಹಿಡಿದು ಮುಂದುವರಿದ. ಉತ್ತರ ಅಮೆರಿಕವನ್ನು ಪ್ರವೇಶಿಸಿದ. ತಾನುಕಂಡ ನೆಲಕ್ಕೆ 'ಸುಂದರವಾದ ವೈನ್‌ಲೆಂಡ್' ಎಂದು ಹೆಸರಿಟ್ಟ. ಅಲ್ಲಿನ ದ್ರಾಕ್ಷಿಬಳ್ಳಿಗಳ ಸಮೃದ್ಧಿಯನ್ನು ನೋಡಿ ಈ ಹೆಸರನ್ನು ಕೊಟ್ಟಿರಬೇಕು. ಒಂದು ವರ್ಷದ ಅನಂತರ ಗ್ರೀನ್‌ಲೆಂಡಿಗೆ ಲೀಫ್ ಎರಿಕ್‌ಸನ್ ಹಿಂದಿರುಗಿದ. ಅವನ ಪ್ರಯಾಣ ಮಾನವ ಚರಿತ್ರೆಯಲ್ಲಿ ಮುಖ್ಯವಾದದ್ದು.

1003ರಲ್ಲಿ ನಾರ್ವೆಯ ಜನರ ಒಂದು ಸಣ್ಣ ತಂಡ ಉತ್ತರ ಅಮೆರಿಕದಲ್ಲಿ ಬಂದು ನೆಲೆಸಿತು. ಆದರೆ ಅಮೆರಿಕದ ಇಂಡಿಯನ್ನರಿಗೂ ಅವರಿಗೂ ಕದನಗಳಾಗಿ ನಾರ್ವೆಯ ಜನರಿಗೆ ಅಪಾರ ನಷ್ಟವಾಯಿತು. ಅಳಿದುಳಿದ ಜನ ಗ್ರೀನ್‌ಲೆಂಡಿಗೆ ಹಿಂದಿರುಗಿದರು. ನಾರ್ವೆ ದೇಶ ಅಮೆರಿಕವನ್ನು ಬಹಿಷ್ಕರಿಸಿತು. ಕೊಲಂಬಸ್ ಮತ್ತೆ ಕಂಡುಹಿಡಿಯುವವರೆಗೂ ಅಮೆರಿಕ ಅಜ್ಞಾತವಾಗಿರಬೇಕಾಯಿತು.

1929ರಲ್ಲಿ ಅಡ್ಮಿರಲ್ ಬರ್ಡ್ ಧ್ರುವ ಪ್ರದೇಶಗಳಲ್ಲಿ ಪ್ರಯಾಣ ಮಾಡಿ ವೈಜ್ಞಾನಿಕ ಅವಲೋಕನಕ್ಕಾಗಿ ಕೆಲ ನೆಲೆಗಳನ್ನು ಸ್ಥಾಪಿಸಿದ.

ದಕ್ಷಿಣ ಧ್ರುವ ಪ್ರದೇಶದಲ್ಲಿ ಭೂಭಾಗವಿದೆ. ಅದು ಯಾವಾಗಲೂ ಹಿಮಾಚ್ಛಾದಿತ. ಜನವಸತಿಗೆ ನಿರುಪಯೋಗಿ. ನಾರ್ವೆಯ ಅಮುಂಡ್‌ಸನ್ 1911ರಲ್ಲಿ ದಕ್ಷಿಣ ಧ್ರುವವನ್ನು ಅನ್ವೇಷಿಸಿದ. (1912ರಲ್ಲಿ ಕ್ಯಾಪ್ಟನ್ ರಾಬರ್ಟ್ ಫಾಲ್ಕನ್ ಸ್ಕಾಟ್ ಎಂಬ ಬ್ರಿಟಿಷ್ ಅಧಿಕಾರಿಯೂ ದಕ್ಷಿಣ ಧ್ರುವವನ್ನು ತಲುಪಿದ.)

1958ರಲ್ಲಿ ಸರ್ ವಿವಿಯನ್ ಫ್ಯೂಕ್ಸ್, ಎವರೆಸ್ಟ್ ವೀರ ಎಡ್ಮಂಡ್ ಹಿಲರಿ ಮತ್ತು ತಂಡದವರು ದಕ್ಷಿಣ ಧ್ರುವ ಪ್ರದೇಶವನ್ನು ಟ್ರಾಕ್ಟರುಗಳ ಸಹಾಯದಿಂದ ದಾಟಿದರು. ಅವರ ಉದ್ದೇಶ : ನಕ್ಷಾರಚನೆ ಮತ್ತು ಭೂವೈಜ್ಞಾನಿಕ ಸಂಶೋಧನೆ.

ಸಮುದ್ರದ ಅಂತರಾಳ ಶೋಧನೆಯ ಪ್ರಮುಖ ಸಾಹಸ 1960ರ ಜನವರಿ 23ರಂದು ನಡೆಯಿತು. ಅಮೆರಿಕ ನೌಕಾದಳದ ಸಾಹಸಿಗಳಿಬ್ಬರು ಶಾಂತಸಾಗರದ ಅಂತರಾಳಕ್ಕೆ 11.26 ಕಿಲೊಮೀಟರುಗಳವರೆಗೆ ಇಳಿದು ಸಮುದ್ರ ತಳ ಕಂಡುಬಂದರು. ಅತ್ಯಂತ ಆಳವಾದ ಶೋಧದಲ್ಲಿ ಇದು ಪರಮಾವಧಿಯದು.

ನೆಲ ನೀರುಗಳ ಶೋಧವನ್ನು ಮುಗಿಸಿದ ಮಾನವ ಈಗ ನಭದತ್ತ ಚಿಮ್ಮಿದ್ದಾನೆ. ಚಂದ್ರನ ಮೇಲೆ ಪದಾರ್ಪಣ ಮಾಡಿದ್ದಾನೆ. ಈ ಮಹತ್ಸಾಧನೆಯಿಂದ ಸಂತೃಪ್ತನಾಗಿ ಮಾನವ ಸುಮ್ಮನಿರುವಂತಿಲ್ಲ. ಈಗಾಗಲೇ ಅವನ ದೃಷ್ಟಿ ಇತರ ಗ್ರಹಗಳತ್ತ ಹರಿದಿದೆ. ಪ್ರಪಂಚದಲ್ಲಿ ಮಾನವನಿರುವವರೆಗೂ ಒಂದಲ್ಲ ಒಂದು ಅನ್ವೇಷಣೆ ಆಗುತ್ತಿರುತ್ತದೆ.

ಜಗತ್ತಿನ ವಿವಿಧ ಭಾಗಗಳು ಹತ್ತಿರ ಬರಲು ಮಾನವನ ಅನ್ವೇಷಣೆಯ ಪ್ರೇಮ ಬಹುಮಟ್ಟಿಗೆ ಕಾರಣ. ಇದರಿಂದ ಒಂದು ನಾಗರಿಕತೆಗೆ ಇನ್ನೊಂದು ನಾಗರಿಕತೆಯ ಸಂಪರ್ಕವಾಗಿ, ಒಂದು ನಾಡಿನ ಜ್ಞಾನಭಂಡಾರ ಇನ್ನೊಂದು ನಾಡಿಗೆ ದೊರೆಯಲು ಸಾಧ್ಯವಾಗಿದೆ. ಮನುಕುಲವೇ ಒಂದು ಎನ್ನುವ ದೃಷ್ಟಿ ಬೆಳೆಯಲು ಅನ್ವೇಷಣೆಗಳು ಸಹಾಯ ಮಾಡಿವೆ.

ಕೆಟ್ಟ ನಡತೆಯನ್ನು ಮನುಷ್ಯ ತಾನು ಅನುಕರಿಸ ಹೋಗಿ ಅಪರಾಧ ಮಾಡುತ್ತಾನೆ ಎಂಬುದು ಟಾರ್ಡನ ಅಭಿಪ್ರಾಯ.

3,000 ಅಪರಾಧಿಗಳನ್ನು ಪರೀಕ್ಷಿಸಿ, ಅಪರಾಧಿ ಹುಟ್ಟಿನಿಂದಲೇ ಕೇಡಿಗ ಎಂಬ ಲೋಂಬ್ರೋಸೊನ ವಾದವನ್ನು ವೈಜ್ಞಾನಿಕವಾಗಿ ತಪ್ಪೆಂದು ತೋರಿಸಿದವನು ಚಾರ್ಲ್ಸ್ ಗೋರಿಂಗ್ ಎಂಬ ಆಂಗ್ಲ ವೈದ್ಯ. ಒಬ್ಬ ಮನುಷ್ಯನನ್ನು ಅಪರಾಧವೆಸಗುವಂತೆ ಮಾಡುವುದು ಅವನ ಮಂದಬುದ್ಧಿ ಎಂಬುದು `ಈತನ ವಾದ. ಆದರೆ ಮುಂದೆ ಈ ವಾದ ಆಧಾರರಹಿತ ಎಂದು ಇತರರು ತೋರಿಸಿಕೊಟ್ಟರು.

ತೀವ್ರ ಮನೋರೋಗ, ಸಾಮರ್ಥ್ಯ ಮುಂತಾದುವೂ ಅಪರಾಧಕ್ಕೆ ಕಾರಣಗಳು ಎಂಬ ವಾದ ಹುಟ್ಟಿಕೊಂಡಿತು. ಆದರೆ ಅಪಾರ ಸಂಖ್ಯೆಯಲ್ಲಿ ಮನೋರೋಗಕ್ಕೊಳಗಾಗಿ ಅಪರಾಧ ಮಾಡುವವರ ಪ್ರಮಾಣ ಚಿಕ್ಕದು, ಆದ್ದರಿಂದ ಈ ಸಿದ್ಧಾಂತ ಭಾಗಶಃ ಮಾತ್ರ ನಿಜ ಎಂದಾಯಿತು.

ಅಪರಾಧಿಯ ದುರ್ವರ್ತನೆಗೆ ಸಕಾರಣ ಸಿದ್ಧಾಂತಗಳನ್ನು ಒದಗಿಸಲೆತ್ನಿಸಿದ ಮಾರ್ಕ್ಸ್‌ತತ್ತ್ವದ ಅನುಯಾಯಿಗಳೂ ಇದ್ದಾರೆ. ಜನರ ಬಡತನವೇ ಅಪರಾಧವನ್ನು ಮಾಡುವಂತೆ ಅವರನ್ನು ಪ್ರಚೋದಿಸುತ್ತದೆ. ಇದಕ್ಕೆ ಬಂಡವಾಳ ವರ್ಗ ಕಾರಣ ಎಂಬುದು ಇವರ ವಾದ.

ಈಚಿನ ವರ್ಷಗಳಲ್ಲಿ ಬಹು ಮಂದಿಗೆ ಒಪ್ಪಿಗೆಯಾದ ಸಿದ್ಧಾಂತ ಆಂಶಿಕ ಸಾಂಗತ್ಯ ಸಿದ್ಧಾಂತ ಎನ್ನುವುದು. ಇದರ ಪ್ರಕಾರ, ಒಬ್ಬ ಮನುಷ್ಯ ಅಪರಾಧಿಯಾಗಲು ಅವನ ಹುಟ್ಟು ಸ್ವಭಾವ ಕಾರಣವಲ್ಲ. ಅವನು ಬೆಳೆಯುವಾಗ ಎಂಥ ವಾತಾವರಣದಲ್ಲಿ ಬೆಳೆಯುತ್ತಾನೆ, ಅವನ ಸುತ್ತಮುತ್ತ ಇರುವವರು–ಅವನ ಮೆಚ್ಚುಗೆಗೆ ಪಾತ್ರರಾದವರು–ಎಷ್ಟರ ಮಟ್ಟಿಗೆ ಕಾನೂನಿಗೆ ಗೌರವ ಕೊಡುತ್ತಾರೆ, ಇವು ಪ್ರತಿಯೊಬ್ಬನ ಮೇಲೂ ಪ್ರಭಾವ ಬೀರುವ ಅಂಶಗಳು.

ಮೇಲಿನ ಸಿದ್ಧಾಂತಗಳನ್ನು ಪ್ರತಿಪಾದಿಸುವಾಗ ಒಬ್ಬೊಬ್ಬರೂ ಒಂದೊಂದು ಕಾರಣವನ್ನು ಆಧಾರವಾಗಿ ತೋರಿದ್ದಾರೆ. ಆದರೆ ಇಂಥ ಪರಿಸ್ಥಿತಿ ಅಪರಾಧಮಾಡಲು ಪ್ರಚೋದಿಸಬಹುದೇ ಹೊರತು ಮೂಲ ಆಧಾರವಾಗುವುದು ಸಾಧ್ಯವಿಲ್ಲ.

ಕಳೆದ ಐವತ್ತು ವರ್ಷಗಳಿಂದ ಅಪರಾಧಶಾಸ್ತ್ರದ ಕ್ಷೇತ್ರದಲ್ಲಿ ಬಹಳ ಕೆಲಸ ನಡೆದಿದೆ. ಅಪರಾಧಿಗಳನ್ನು ಮಾನಸಿಕ ಪರೀಕ್ಷೆಗಳಿಗೆ ಒಳಪಡಿಸಿ, ಯಾವ ಕಾರಣಕ್ಕಾಗಿ ಅಪರಾಧವೆಸಗಿದರು ಎಂಬುದನ್ನು ಕಂಡುಹಿಡಿಯುವುದು ಸಾಮಾನ್ಯವಾಗಿದೆ. ಬಾಲಾಪರಾಧಿಗಳ ಬಗ್ಗೆ ವಿಶ್ವಸಂಸ್ಥೆ ವಿಶೇಷ ಅಧ್ಯಯನ ನಡೆಸಿದೆ, ವ್ಯಾಸಂಗಗೋಷ್ಠಿಗಳನ್ನು ಏರ್ಪಡಿಸುತ್ತಿದೆ. ಅಪರಾಧಿಗಳು ಎಳೆಯ ವಯಸ್ಸಿನಲ್ಲಿ ಹೇಗೆ ಬೆಳೆದರು, ಅವರ ತಂದೆ ತಾಯಿಯರ ಮನೋಧರ್ಮಗಳು ಎಂಥವು, ಮನೆಯಲ್ಲಿ ಎಷ್ಟರಮಟ್ಟಿಗೆ ಶಾಂತಿ ನೆಮ್ಮದಿಗಳಿದ್ದುವು ಇವೆಲ್ಲವನ್ನೂ ಅಧ್ಯಯನ ಮಾಡುತ್ತಾರೆ. ವಿಶ್ವಸಂಸ್ಥೆಯ ಸಾಮಾಜಿಕ ವ್ಯವಹಾರ ಶಾಖೆ ಅಪರಾಧಿತನದ ವಿಷಯದಲ್ಲಿ ವಿವಿಧ ರಾಷ್ಟ್ರಗಳ ನೀತಿಯನ್ನು ತನ್ನ ಅಂತರರಾಷ್ಟ್ರೀಯ ಸಮೀಕ್ಷೆಯಲ್ಲಿ ಪ್ರಕಟಿಸುತ್ತದೆ. ಇದರಿಂದ ಇತರ ರಾಷ್ಟ್ರಗಳ ಅಭಿಪ್ರಾಯ ತಿಳಿಯಲು ಸಹಾಯಕವಾಗಿದೆ. ಅಪರಾಧಶಾಸ್ತ್ರ ಕ್ಷೇತ್ರದಲ್ಲಿ ಆಗುವ ಹೊಸ ಹೊಸ ಸಂಶೋಧನೆಗಳನ್ನು ವಿಶ್ವಸಂಸ್ಥೆ ಓದುಗರ ಅವಗಾಹನೆಗೆ ತರುತ್ತದೆ.

ಅಪರಾಧಿಗಳನ್ನು ತಿದ್ದುವ ರೀತಿಯನ್ನು ಅಪರಾಧಶಾಸ್ತ್ರ ನಿರೂಪಿಸುತ್ತದೆ. ಹಿಂದೆ ಅಪರಾಧಿಗಳಿಗೆ ಅತಿ ಕ್ರೂರ ಶಿಕ್ಷೆಗಳನ್ನು ವಿಧಿಸುತ್ತಿದ್ದರು. ಈಗ ಅಪರಾಧಿ ಸಮಾಜಕ್ಕೆ ತೊಂದರೆ ಮಾಡದಂತೆ ಮತ್ತು ಅವನನ್ನು ತಿದ್ದುವಂತೆ ಶಿಕ್ಷೆ ವಿಧಿಸಬೇಕು ಎಂದು ಬಹು ಮಂದಿಯ ಅಭಿಪ್ರಾಯ. ಕೈಗಾರಿಕೆ ಅಥವಾ ವ್ಯಾಪಾರ ಕ್ಷೇತ್ರದ ಬಳಿ ಇರುವ ಕೊಳಚೆ ಪ್ರದೇಶದ ಮಕ್ಕಳು, ಹಳ್ಳಿಯಿಂದ ಪಟ್ಟಣಕ್ಕೆ ವಲಸೆ ಬಂದ ಬಡವರ ಮಕ್ಕಳು, ಅಪರಾಧದ ದಾರಿಗೆ ಬೇಗ ಇಳಿಯುತ್ತಾರೆ. ಸಾಮಾನ್ಯವಾಗಿ ಹುಡುಗರು ಒಟ್ಟೊಟ್ಟಿಗೆ ಅಪರಾಧ ಮಾಡುತ್ತಾರೆ. ಇಂಥ ವಿಷಯಗಳು ಅಧ್ಯಯನದಿಂದ ಬೆಳಕಿಗೆ ಬಂದಿವೆ. ಈ ಜ್ಞಾನವನ್ನು ಉಪಯೋಗಿಸಿಕೊಂಡು ಮಕ್ಕಳ ವಿಷಯದಲ್ಲಿ ಎಚ್ಚರಿಕೆ ವಹಿಸಿ ಅಪರಾಧಗಳನ್ನು ತಡೆಗಟ್ಟುವ ಪ್ರಯತ್ನಗಳೂ ನಡೆಯುತ್ತಿವೆ. ಅಪರಾಧಶಾಸ್ತ್ರ ಬೆಳೆದಷ್ಟೂ ಸಮಾಜದ ಪ್ರಗತಿಗೆ ಅನುಕೂಲ. ಸಮಾಜಕಂಟಕರಾಗಿರುವ ಅಪರಾಧಿಗಳನ್ನು ಸುಧಾರಿಸುವ ಪ್ರಯತ್ನದ ಕೈದೀವಿಗೆ ಅಪರಾಧ ಶಾಸ್ತ್ರ.

ನೋಡಿ : ಅಪರಾಧ, ನ್ಯಾಯಾಲಯ, ಶಿಕ್ಷೆ-ದಂಡನೆ

## ಅಪಹರಣ

ಅಟ್ಲಾಂಟಿಕ್ ಸಾಗರವನ್ನು ಒಂಟಿಯಾಗಿ ವಿಮಾನದಲ್ಲಿ ದಾಟಿ ಪ್ರಪಂಚದಲ್ಲಿಯೇ ಹೊಸ ವಿಕ್ರಮವನ್ನು ಸ್ಥಾಪಿಸಿದ ಅಮೆರಿಕದ ಧೀರ ಚಾರ್ಲ್ಸ್ ಅಗಸ್ಟಸ್ ಲಿಂಡ್‌ಬರ್ಗನ ಮೊದಲನೆಯ ಮಗ ಕಿರಿಯ ಚಾರ್ಲ್ಸ್ ಅಗಸ್ಟಸ್ 1932ರ ಮಾರ್ಚ್ ತಿಂಗಳಲ್ಲಿ ಒಂದು ದಿನ ಇದ್ದಕ್ಕಿದ್ದಂತೆ ನಾಪತ್ತೆಯಾದ. ಪೊಲೀಸರು ಊರೆಲ್ಲೆಲ್ಲ ಹುಡುಕಿದರು. ಗೋಳಾಡುತ್ತಿದ್ದ ತಂದೆ ತಾಯಿಯರಿಗೆ, ಹಣ ಕೊಟ್ಟರೆ ಮಗುವನ್ನು ಬಿಡಲಾಗುವುದೆಂದು ಕಾಗದ ಬಂತು. ಕಡೆಗೆ ನತದೃಷ್ಟರಾದ ಅವರಿಗೆ ದೊರೆತುದು ಮಗುವಿನ ಎಲುಬು ಮೂಳೆ ಮಾತ್ರ. ಈ ಕೊಲೆಯನ್ನು ಮಾಡಿದವನು ರಿಚರ್ಡ್ ಹೌಪ್ಟ್‌ಮನ್ ಎಂದು ಪತ್ತೆ ಹಚ್ಚಿದರು; 1936ರಲ್ಲಿ ಅವನನ್ನು ಗಲ್ಲಿಗೇರಿಸಿದರು. ಈ ಅಪಹರಣದ ಘಟನೆಯ ಪರಿಣಾಮವಾಗಿ ಅಮೆರಿಕದಲ್ಲಿ, ಅಪಹರಣಕ್ಕೆ ಸಂಬಂಧಿಸಿದಂತೆ ಲಿಂಡ್‌ಬರ್ಗ್ ಶಾಸನ ಎಂಬ ಹೊಸದೊಂದು ಶಾಸನವೇ ಜಾರಿಗೆ ಬಂತು.

ವ್ಯಕ್ತಿಯನ್ನು ಅಪಹರಿಸುವುದು ಎಂದರೆ, ಇಚ್ಛೆಗೆ ವಿರೋಧವಾಗಿ, ಬಲವಂತವಾಗಿ ಕದ್ದು, ಕರೆದೊಯ್ದು, ಬಂಧಿಸಿಡುವುದು. ಹದಿನೆಂಟು ವರ್ಷಕ್ಕೂ ಕಡಮೆ ವಯಸ್ಸಿನವರನ್ನು ಅವರ ಪೋಷಕರ ಒಪ್ಪಿಗೆ ಇಲ್ಲದೆ ಕರೆದೊಯ್ಯುವುದೂ ಅಪಹರಣವೇ. ಇಂಥ ಅಪಹರಣದ ಉದ್ದೇಶವೇನು ?

ಅಪಹೃತ ವ್ಯಕ್ತಿಗಳ ಸಂಬಂಧಿಕರಿಂದ, ಸ್ನೇಹಿತರಿಂದ ಹಣ ಸುಲಿಗೆ ಮಾಡುವುದು. "ಇಷ್ಟು ಹಣ ಕೊಟ್ಟರೆ ಅವರನ್ನು ಬಿಡುತ್ತೇವೆ, ಇಲ್ಲದಿದ್ದರೆ ಕೊಲ್ಲುತ್ತೇವೆ" ಎಂದು ಹೆದರಿಸಿ ಹಣವನ್ನು ವಸೂಲು ಮಾಡುವುದು. ಮಕ್ಕಳನ್ನು ಕೆಲವರು ಅಪಹರಿಸಿ, ಅವರನ್ನು ಅಂಗವಿಕಲರನ್ನಾಗಿ ಮಾಡಿ ತಮ್ಮ ಭಿಕ್ಷಾವೃತ್ತಿಗೆ ಅನುಕೂಲಮಾಡಿಕೊಂಡ ಭೀಕರ ಉದಾಹರಣೆಗಳೂ ಇವೆ. ದೇವರಿಗೆ ಬಲಿಕೊಡಲೆಂದು ಕೆಲವರು ಮಕ್ಕಳನ್ನು ಅಪಹರಿಸುವ ಸಂಭವ ಹಿಂದೆ ಇತ್ತು.

ಹಿಂದಿನ ಕಾಲದಿಂದ ರಾಜಕೀಯ ರಂಗದಲ್ಲಿಯೂ ಈ ಅಪಹರಣ ಕ್ರಿಯೆ ಪ್ರಚುರವಾಗಿದೆ. ಮಹಾಭಾರತ ಯುದ್ಧದಲ್ಲಿ ವಿರಾಟರಾಯನನ್ನು



ಎಳೆಯರ ಅಪಹರಣ

ಪ್ರಯೋಗಿಸಲು ಕೇರ ವರು ಅವನ ಗೊಂಬೆಗಳನ್ನು ಅಪಹರಿಸುವ ಪ್ರಸಂಗ ವರ್ಣಿತವಾಗಿದೆ. ಬ್ರೆಜಿಲ್‌ನಲ್ಲಿ 1969ರ ಅಂತ್ಯದಲ್ಲಿ ಅಮೆರಿಕದ ರಾಯಭಾರಿಯನ್ನೂ 1970ರಲ್ಲಿ ಪಶ್ಚಿಮ ಜರ್ಮನಿಯ ರಾಯಭಾರಿಯನ್ನೂ ಅಪಹರಿಸಿದ್ದರು.

ರಾಷ್ಟ್ರ ಎಷ್ಟೇ ಮುಂದುವರಿದಿರಲಿ. ಈ ಬಗೆಯ ಅಪಹರಣದಿಂದ ಅದು ಮುಕ್ತವಾಗಿಲ್ಲ. ಇಂಥ ದುಷ್ಕೃತ್ಯ ಇಂದಿಗೂ ಒಂದು ಪ್ರಮುಖ ಸಾಮಾಜಿಕ ಸಮಸ್ಯೆಯಾಗಿ ಉಳಿದಿದೆ. ಕಾನೂನುಗಳ ಬಲದಿಂದ ಇಂಥ ಅಪಹರಣವನ್ನು ತಡೆಗಟ್ಟಲು ಎಲ್ಲ ನಾಗರಿಕ ರಾಷ್ಟ್ರಗಳೂ ಯತ್ನಿಸುತ್ತವೆ. ಭಾರತದಲ್ಲಿ ಅಪಹರಣಕ್ಕೆ ಹತ್ತು ವರ್ಷಗಳವರೆಗಿನ ಸಜೆ ಇದೆ. ಪಾಕಿಸ್ತಾನದಲ್ಲಿ ಎಳೆಯರ ಅಪಹರಣಕ್ಕೆ ಮರಣ ದಂಡನೆ ಸಹ ವಿಧಿಸಬಹುದೆಂಬ ಕಾನೂನು ಇದೆ.

ನೋಡಿ : ಅಪರಾಧ; ದಂಡವಿಧಿ; ನ್ಯಾಯಾಲಯ; ವ್ಯವಹಾರವಿಧಿ; ಶಿಕ್ಷೆ-ದಂಡನೆ

## ಅಪೊಲೊ

ದೀರ್ಘ ಕಾಲದಿಂದ ಕಾದಿದ್ದ ಆ ದಿನದ ಹಿಂದಿನ ಇರುಳು ನಿದ್ದೆಗೆಟ್ಟವರು ಎಷ್ಟು ಜನ!...ಉಷಃಕಾಲ ಕಳೆಯುತ್ತಲೇ. ಅಸಂಖ್ಯರು ಬಯಲನ್ನು ಆವರಿಸಿದರು...ಆಹಾರ ಪಾನೀಯಗಳ ಗೊಡವೆ ಯಾರಿಗೂ ಇಲ್ಲ. ಅಪ್ರಿಯ ಅಸಮಾಧಾನ ಎಲ್ಲರ ಮನಸ್ಸನ್ನೂ ಮುಸುಕಿತು. ಇಂಥದೇ ಎನ್ನಲಾಗದ ಭಾವನೆ ಹೃದಯವನ್ನು ಹಿಂಡಿತು. ಒಮ್ಮೆ ಮುಗಿದರೆ ಸಾಕು, ಎನಿಸಿತು ಪ್ರತಿಯೊಬ್ಬರಿಗೂ.

......ಚಂದ್ರ ದಿಗಂತದಲ್ಲಿ ಕಾಣಿಸಿಕೊಂಡ. ಆ ಲಕ್ಷಾಂತರ ಜನ "ಹುರ್ರಾ !" ಎಂದರು.

......ಆ ಕ್ಷಣ ಆ ಮೂರು ಧೀರಯಾತ್ರಿಗಳು ಮುಖ ತೋರಿದರು. ಗಾಢ ಮೌನ. ಭೂಮಿಯ ಮೇಲೆ ಗಾಳಿಯೂ ಸ್ತಬ್ಧ! ಪ್ರೇಕ್ಷಕರು ಉಸಿರಾಡುವ ಸದ್ದು ಇಲ್ಲ. ಬಹುಮಂದಿಗಳಲ್ಲಿ ಭಯ ಹೊಮ್ಮುತ್ತಿತ್ತು ಅವರ ಎದೆಗೂಡಿಗೆ.

"ಫೈರ್ !"

ಅಗ್ನಿಯು ಉರಿಯಿತು ಆಕಾಶಕ್ಕೆ ಏರಿದಂತೆ. ಇಡೀ ಫ್ಲಾರಿಡಾ ಪ್ರದೇಶ ಬೆಳಗಿತು...ಭಾರೀ ಗಾತ್ರದ ಜ್ವಾಲೆಯು ನಾಲಿಗೆ ಉಗುಳುತ್ತ. ಭೂಮಿ ಬಿಗ್ಗಿದಂತೆ ಕಂಡಿತು. ಅಗ್ನಿಯ ಅಲೆಗಳ ಮಧ್ಯೆ, ವಾಹನ ಮೆಲ್ಲಮೆಲ್ಲಗೆ ಗಾಳಿಯನ್ನು ಸೀಳುತ್ತ ಮೇಲೇರುವುದನ್ನು. ಕೆಲ ಪ್ರೇಕ್ಷಕರು ಪ್ರಯಾಸದಿಂದ ಕ್ಷಣಕಾಲ ಕಂಡರು.

—ಚಂದ್ರಉಪಗ್ರಹಕ್ಕೆ ಯಾತ್ರೆ ಬೆಳೆಸಿದ ಅಪೊಲೊ ವಾಹನದ ಉತ್ಥಾನದ ವರದಿಯೆ ಇದು ?

ಅಲ್ಲ. ಫ್ರೆಂಚ್ ಕಾದಂಬರಿಕಾರ ಜೂಲ್ಸ್ ವರ್ನ್ ನೂರು ವರ್ಷಗಳಿಗೆ ಹಿಂದೆ ಕಲ್ಪಿಸಿದ ಚಂದ್ರಉಪಗ್ರಹ ಪ್ರವಾಸದ ಬಣ್ಣನೆ.

ಎಷ್ಟು ವಿಚಿತ್ರ! ಎಷ್ಟು ಸಹಜ!

"ಇದು ಒಬ್ಬ ಮನುಷ್ಯನಿಗೆ ಬಲು ಪುಟ್ಟ ಹೆಜ್ಜೆ. ಮಾನವ ಜನಾಂಗಕ್ಕೆ ಭಾರೀ ನೆಗೆತ." ಆಕಾಶದಲ್ಲಿ 3,83,000 ಕಿ. ಮೀ. ದೂರದ ಚಂದ್ರನಿಂದ ಕೇಳಿ ಬಂದ ಮಾನವ ಧ್ವನಿ ಇದು (ಜುಲೈ 21, 1969—ಭಾರತೀಯ ಕಾಲಮಾನ 8ಗಂಟೆ 27ಮಿನಿಟು ಪೂರ್ವಾಹ್ನ). ನೀಲ್ ಎ. ಆರ್ಮ್‌ಸ್ಟ್ರಾಂಗ್ ಈ ಅರ್ಥದ ಮಾತನ್ನಾಡಿದಾಗ ಆದಿಮಾನವನ ಕಾಲದಿಂದಲೂ ಮನುಷ್ಯನಲ್ಲಿ ಬೆಳೆದು ಬಂದಿದ್ದ ಆಸೆ ಆಕಾಂಕ್ಷೆಗಳು—ಚಂದಮಾಮಾ ಬೇಕು, ಚಂದ್ರನ ರಹಸ್ಯವೇನು. ಚಂದ್ರನಲ್ಲಿಗೆ ಹೋಗಬಹುದೇ. ಇತ್ಯಾದಿ—ರೂಪ ತಳೆದಂತಾಯಿತು. ಮನುಷ್ಯನ ಈ ಪ್ರಥಮ ಮಹಾಸಾಹಸದಲ್ಲಿ ಭಾಗಿಗಳಾದ ಇನ್ನಿಬ್ಬರು—ಮೈಕೆಲ್ ಕಾಲಿನ್ಸ್ ಮತ್ತು ಎಡ್ವಿನ್ ಆಲ್ಡ್ರಿನ್.

ಜುಲೈ 16ರಂದು ಅವರು ಅಮೆರಿಕದ ಕೇಪ್ ಕೆನಡಿ ನೆಲೆಯಿಂದ ಆಕಾಶಯಾನ ಆರಂಭಿಸಿದರು. ವಾಹನದ ಹೆಸರು ಅಪೊಲೊ 11—ಸ್ಯಾಟರ್ನ್ 5 (ಅಪೊಲೊ—ಗ್ರೀಕರ ಸೂರ್ಯದೇವತೆ). ಕೆಳಗಿನ ಭಾಗ ಸ್ಯಾಟರ್ನ್ 5 ಚಾಲಕ ವ್ಯವಸ್ಥೆ. ಇದರಲ್ಲಿ ಮೂರು ರಾಕೆಟ್‌ಗಳ ಮಜಲು ಜೋಡಣೆ ಇದೆ. ಎತ್ತರ 75 ಮೀಟರ್. ಭಾರ 2954.64 ಮೆಟ್ರಿಕ್ ಟನ್‌ಗಳು. ರಾಕೆಟ್‌ಗಳು ಒಂದಾದ ಮೇಲೆ ಇನ್ನೊಂದರಂತೆ ಉರಿದು ಸಾಕಷ್ಟು ನೂಕುಬಲ ಉತ್ಪಾದಿಸಿ ನೌಕೆಯನ್ನು ಆಕಾಶಯಾನದ ಗತಿಗೆ ತಳ್ಳುತ್ತವೆ. ಚೀಣಿ ಬಾಣದ ಸೂತ್ರವೇ ಇಲ್ಲಿಯೂ—ಉರಿ ಹಿಂದೆ, ನಡೆ ಮುಂದೆ! ಮೇಲಿನ ಭಾಗ ಅಪೊಲೊ 11. ಇದರಲ್ಲಿ ಕ್ರಮವಾಗಿ (ಕೆಳಗಿನಿಂದ) ಯಾತ್ರಿ ವಿಭಾಗ ಲ್ಯೂನಾರ್ ಮಾಡ್ಯೂಲ್ (ಎಲ್.ಎಂ.). ಸರ್ವಿಸ್ ಮಾಡ್ಯೂಲ್ (ಎಸ್.ಎಂ.). ಕಮಾಂಡ್ ಮಾಡ್ಯೂಲ್ (ಸಿ. ಎಂ.) ಮತ್ತು ಉಡಾವಣೆ ನಿರೋಧಕ ವ್ಯವಸ್ಥೆಗಳಿವೆ. ಕೊನೆಯದರ ಉಪಯೋಗವಿಷ್ಟು—ಉಡಾವಣೆಯಾದೊಡನೆ ನೌಕೆಯಲ್ಲಿ ಏನಾದರೂ ದೋಷ ಕಂಡುಬಂದರೆ ಈ ವ್ಯವಸ್ಥೆಯ ನೆರವಿನಿಂದ ಯಾತ್ರಿಕರನ್ನು ನೌಕೆಯಿಂದ ಬೇರ್ಪಡಿಸಿ ಸುರಕ್ಷಿತ ಪ್ರದೇಶದಲ್ಲಿ ಇಳಿಸಬಹುದು. ಎಲ್.ಎಂ.ನ ಪಾತ್ರ ಚಂದ್ರನನ್ನು ತಲಪುವುದು. ಸಿ. ಎಂ. ಯಾತ್ರಿಕರ ನಿವಾಸ. ಅಪೊಲೊ ಎತ್ತರ 33 ಮೀ. ಭಾರ 45.36 ಮೆ. ಟನ್.



ಎಡ್ವಿನ್ ಆಲ್ಡ್ರಿನ್ ನೀಲ್ ಆರ್ಮ್‌ಸ್ಟ್ರಾಂಗ್ ಮೈಕೆಲ್ ಕಾಲಿನ್ಸ್

ಲಕ್ಷಾಂತರ ಕಿ. ಮೀ. ಗಳ ದೀರ್ಘ ಯಾನ ; ಗಂಟೆಗೆ 24,000 ಕಿ. ಮೀ. ಮೀರುವ ಮಹಾ ವೇಗ. ಈ ಪರಿಸ್ಥಿತಿಯಲ್ಲಿ ಮನುಷ್ಯೇಂದ್ರಿಯಗಳು ಕರ್ತವ್ಯ ನಿರ್ವಹಿಸುವುದು ಅಪ್ರಾಯೋಗಿಕ, ಗಣಕಯಂತ್ರ ನಿರ್ದೇಶಿತ ಸ್ವಯಂ ಚಾಲಿತ ವ್ಯವಸ್ಥೆಗಳು ಎಲ್ಲ ಸೂಕ್ಷ್ಮ ಕ್ರಿಯೆಗಳನ್ನೂ ಸಮರ್ಥವಾಗಿ ನಿರ್ವಹಿಸುತ್ತವೆ. ನೆಲದ ಮೇಲಿನ ನಿಯಂತ್ರಣ ಕೇಂದ್ರದ ವಿಜ್ಞಾನಿಗಳಿಗೂ ಯಾತ್ರಿಕರಿಗೂ ನಿರಂತರ ಸಂಪರ್ಕವಿರುತ್ತದೆ. ಸೆಕೆಂಡಿಗೆ 2,97,600 ಕಿ. ಮೀ. ವೇಗದಲ್ಲಿ ಧಾವಿಸುವ ರೇಡಿಯೊ ಸಂಜ್ಞೆಗಳು ಇದರ ಮಾಧ್ಯಮ.

ನೆಲದಿಂದ ಉಡಾವಣೆಗೊಂಡ ನೌಕೆ ಮೊದಲು ಭೂಮಿಗೆ 185 ಕಿ. ಮೀ. ದೂರದಲ್ಲಿ ಗಂಟೆಗೆ 24,000 ಕಿ. ಮೀ. ವೇಗದಲ್ಲಿ ಸುತ್ತತೊಡಗಿತು. ಈ ಪಥದ ಹೆಸರು ಕಕ್ಷಾ ನಿಲ್ದಾಣ. ಈಗಾಗಲೇ ಎರಡು ರಾಕೆಟ್ ಉರಿದು ಮುಗಿದಿದ್ದುವು ; ಮೂರನೆಯದು ಭಾಗಶಃ ಉರಿದಿತ್ತು. ಇನ್ನು ಅನವಶ್ಯವಾದ ಉಡಾವಣೆ ವಿಮೋಚನವ್ಯವಸ್ಥೆಯನ್ನು ಅಪೊಲೊದಿಂದ ಬೇರ್ಪಡಿಸಿ ಎಸೆದುಬಿಟ್ಟರು. ನೌಕೆ ಕಕ್ಷಾ ನಿಲ್ದಾಣದಲ್ಲಿ ಯುಕ್ತ ಬಿಂದುವಿಗೆ ಬಂದಾಗ ಮೂರನೆಯ ರಾಕೆಟಿನ ಉಳಿದ ಅಂಶವನ್ನು ಉರಿಸಲಾಯಿತು. ನೌಕೆಯ ಗತಿ ವೇಗ ಬದಲಾದುವು. ಈಗ ಅದರ ಗುರಿ ಅತಿ ದೂರದ ಚಂದ್ರ. ವೇಗ ಗಂಟೆಗೆ 39,260 ಕಿ. ಮೀ. ಕೇಪ್ ಕೆನಡಿಯಿಂದ ಹೊರಟು 2 ಗಂಟೆ 44 ಮಿನಿಟು ಸಂದಿದ್ದುವು. ಸಿ.ಎಂ.—ಎಸ್.ಎಂ.—ಎಲ್.ಎಂ. ಜೋಡಣೆ ಅದೇ ಕ್ರಮದಲ್ಲಿ ಸಾಗುತ್ತಿದೆ. ಚಂದ್ರನ ಮೇಲೆ ಇಳಿಯುವ ಮೊದಲು ಇಬ್ಬರು ಯಾತ್ರಿಕರು ಎಲ್.ಎಂ. ನೊಳಗೆ ನುಸುಳಬೇಕು ; ಈಗ ಇರುವಂತೆ ಅದು ಎಸ್.ಎಂ. ಮೂಲಕವೇ ಆಗಬೇಕು. ಪ್ರಯಾಣದ ತಾಂತ್ರಿಕ ಕಾರಣಗಳಿಂದ ಇದು ಸಾಧ್ಯವಿಲ್ಲ. ಈ ಸಮಸ್ಯೆಗೆ ಪರಿಹಾರ ಒಂದು ವಿನ್ಯಾಸದಿಂದ. ಇದರ ಮೊದಲನೆಯ ಹಂತವಾಗಿ ಎಲ್.ಎಂ.ನ್ನು ಉಳಿದೆರಡರ ಜೋಡಣೆಯಿಂದ ಬೇರ್ಪಡಿಸಿದರು. ಎಂದರೆ, ಸಿ.ಎಂ.—ಎಸ್.ಎಂ. ಮುಂದೆ, ಎಲ್.ಎಂ. ಪ್ರತ್ಯೇಕವಾಗಿ ಹಿಂದೆ ಇವೆ. ಎರಡನೆಯ ಹಂತವಾಗಿ ಸಿ.ಎಂ. ಎಸ್.ಎಂ.ನ್ನು U—ಆಕಾರದಲ್ಲಿ ತಿರುಗಿಸಿದರು—ಎಂದರೆ, ಎಸ್.ಎಂ.—ಸಿ.ಎಂ.—ಮುಂದೆ, ಎಲ್. ಎಂ. ಹಿಂದೆ ಇವೆ. ಕೊನೆಯ ಹಂತವಾಗಿ ಸಿ.ಎಂ.—ಎಸ್.ಎಂ. ನ್ನು ಜಗ್ಗಿ ಎಲ್.ಎಂ.ಗೆ ಜಂಟಿಸಿದರು—ಎಂದರೆ, ಎಸ್.ಎಂ.—ಸಿ.ಎಂ.—ಎಲ್.ಎಂ. ಜೋಡಣೆ ಅದೇ ಕ್ರಮದಲ್ಲಿ ಮುಂದೆ ಸಾಗುತ್ತಿದೆ : ಎಸ್.ಎಂ.ನ 'ಬುದ್ಧಿವಂತ' ಅಂಶ ಮುಂದೆ ಇದೆ. ಸಿ.ಎಂ.ನ ಚೂಪು ಮೂತಿ ಎಲ್. ಎಂ. ಗೆ ಜಂಟಿಗೊಂಡಿರುವಲ್ಲಿ ತೆರೆಯಬಹುದಾದ ದ್ವಾರವಿದೆ (ಸುರಂಗವೆಂದು ಹೆಸರು). ಇದರ ಮೂಲಕ ಯಾತ್ರಿಗಳು ಸಿ. ಎಂ. ನಿಂದ ಎಲ್. ಎಂ. ಗೆ ಮತ್ತು ಹಿಂದಕ್ಕೆ ನುಸುಳಬಹುದು.

ನೌಕೆ ಭೂಮಿಯಿಂದ ದೂರ ದೂರ ಸಾಗಿದಂತೆ ಅದರ ವೇಗ ತಗ್ಗಿತು. 1,28,000 ಕಿ. ಮೀ. ದೂರದಲ್ಲಿ ವೇಗ ಗಂಟೆಗೆ 7,600 ಕಿ. ಮೀ ; 3,20,000 ಕಿ. ಮೀ. ದೂರದಲ್ಲಿ ವೇಗ ಗಂಟೆಗೆ 3,400 ಕಿ. ಮೀ. ಈ ಗಡಿದಾಟಿದ ನೌಕೆ ಚಂದ್ರನ ಗುರುತ್ವಾಕರ್ಷಣ ಬಲ ಅಧಿಕವಿರುವ ಪ್ರದೇಶವನ್ನು ಪ್ರವೇಶಿಸಿತು. ಇನ್ನು ನೌಕೆಯ ವೇಗ ಕ್ಷಣ ಕ್ಷಣ ಏರಲಾರಂಭಿಸುವುದು : ಹಾಗೆಯೇ ಮುಂದುವರಿದರೆ ನೌಕೆ ಚಂದ್ರತಲಕ್ಕೆ ಬಡಿದು ನುಚ್ಚುನೂರಾಗಬಹುದು. ಯುಕ್ತ ವೇಳೆಯಲ್ಲಿ ಇನ್ನೊಂದು ವಿನ್ಯಾಸವನ್ನು ನೆರವೇರಿಸಿ ನೌಕೆಯನ್ನು ಚಂದ್ರನ ಸುತ್ತಲೂ ಕಕ್ಷಾ ನಿಲ್ದಾಣದಲ್ಲಿ ಸುತ್ತುವಂತೆ ವಿಧಿಸಿದರು. ಚಂದ್ರನಿಂದ 112 ಕಿ. ಮೀ. ಎತ್ತರದಲ್ಲಿ ಗಂಟೆಗೆ 5,800 ಕಿ. ಮೀ. ವೇಗದಲ್ಲಿ ಎಸ್. ಎಂ.–ಸಿ. ಎಂ.–ಎಲ್.ಎಂ. ಜೋಡಣೆ ಸುತ್ತುತ್ತಿದೆ (ಜುಲೈ 20). ಆಲ್ಡ್ರಿನ್ ಮತ್ತು ಆರ್ಮ್‌ಸ್ಟ್ರಾಂಗ್ ಎಲ್. ಎಂ. ನ್ನು ಪ್ರವೇಶಿಸಿದರು (ಇನ್ನು ಮುಂದೆ ಎಲ್. ಎಂ. ಗೆ ಈಗಲ್ ಎಂಬ ಆತ್ಮೀಯತೆಯ ಉಪನಾಮ : ಎಸ್. ಎಂ.—ಸಿ.ಎಂ. ಜೋಡಣೆ ಮಾತ್ರನೌಕೆ. ಅದರ ಉಪನಾಮ ಕೊಲಂಬಿಯಾ. ಒಂದು ಶತಮಾನದ ಹಿಂದೆ ಜೂಲ್ಸ್‌ವರ್ನ್ ತನ್ನ ಕಾದಂಬರಿಯ ಚಂದ್ರಗ್ರಹಯಾತ್ರೆಗೆ ಬಳಸಿದ್ದ ಕೊಲಂಬಿಯಾಡ್). ಕಾಲಿನ್ಸ್ ಮಾತ್ರ ನೌಕೆಯಲ್ಲಿ ಉಳಿದ. 11 ಗಂಟೆ 17 ಮಿನಿಟು ರಾತ್ರಿ. ಕೊಲಂಬಿಯಾದಿಂದ ಈಗಲ್ ಬೇರ್ಪಟ್ಟಿತು. ಕಾಲಿನ್ಸ್ ಸಾರಥ್ಯದಲ್ಲಿ ಕೊಲಂಬಿಯಾ ಕಕ್ಷಾ



ನೆಲದಿಂದ ಉಡಾವಣೆಗೊಂಡ ನೌಕೆ



ಚಂದ್ರನ ಮೇಲೆ ಆರ್ಮ್‌ಸ್ಟ್ರಾಂಗ್ ಮತ್ತು ಆಲ್ಡ್ರಿನ್

ನಿಲ್ದಾಣದಲ್ಲಿ ಸಾಗುತ್ತಿದ್ದಂತೆ ಉಳಿದಿಬ್ಬರನ್ನು ಹೊತ್ತಿದ್ದ ಈಗಲ್ ಚಂದ್ರತಲಕ್ಕೆ ಇಳಿಯಲಾರಂಭಿಸಿತು. ಜುಲೈ 21 ನೆಲ ಹತ್ತಿರವಾಗುತ್ತಲೇ ಕಲ್ಲು ಬಂಡೆಗಳಿಂದ ಕೂಡಿದ ಮಹಾ ಕೂಪದೆಡೆಗೆ ಈಗಲ್ ಸಾಗುತ್ತಿದೆ ಎಂದು ಆರ್ಮ್‌ಸ್ಟ್ರಾಂಗ್‌ಗೆ ಕಂಡಿತು. ಸ್ವಯಂಚಾಲಿತ ವ್ಯವಸ್ಥೆ ಎಲ್ಲೋ ದಾರಿ ತಪ್ಪಿತ್ತು. ಉಳಿದ ಕೆಲವೇ ಸೆಕೆಂಡುಗಳಲ್ಲಿ ಸ್ವತಃ ಆರ್ಮ್‌ಸ್ಟ್ರಾಂಗ್ ಈಗಲ್‌ನ ಚಲನೆಯನ್ನು ನಿಯಂತ್ರಿಸಿ ಅಪಾಯ ರಹಿತ ಅಜ್ಞಾತ ಪ್ರದೇಶದ ಮೇಲೆ ಮೆತ್ತಗೆ ಮೆತ್ತಗೆ ಇಳಿಸಿದ (1 ಗಂಟೆ 47 ಮಿನಿಟು ಪೂರ್ವಾಹ್ನ). ಮಾನವ ಸಹಿತ ಆಕಾಶನೌಕೆ ಚಂದ್ರನ ಮೇಲೆ ಯಶಸ್ವಿಯಾಗಿ ಇಳಿಯಿತು.

ವಾಯುಮಂಡಲವಿಲ್ಲ. ಗುರುತ್ವಾಕರ್ಷಣ ಬಲ ಭೂಮಿಯ ಆರರಲ್ಲಿ ಒಂದರಷ್ಟು. ಇತರ ಅಪಾಯಗಳು ಅಸಂಖ್ಯ. ಆದ್ದರಿಂದ ಯಾತ್ರಿಕರು ದುಡುಕಲಿಲ್ಲ. ಬೆಳಗಿನವರೆಗೂ ಈಗಲ್ ಒಳಗೇ ವಿಶ್ರಾಂತಿ ಪಡೆದರು. ಮುಂದೆ ಆಕಾಶ ಉಡುಪುಧಾರಿಗಳಾದ ಇವರು ಈಗಲ್ ಬಾಗಿಲು ತೆರೆದು ಏಣಿಯ ಮೂಲಕ ಒಂದೊಂದೇ ಮೆಟ್ಟಿಲನ್ನು ಲಯಬದ್ಧವಾಗಿ ಇಳಿದು ಚಂದ್ರನ ನೆಲವನ್ನು ಸ್ಪರ್ಶಿಸಿದರು–ಮೊದಲು ಆರ್ಮ್‌ಸ್ಟ್ರಾಂಗ್, 19 ಮಿನಿಟುಗಳ ಅನಂತರ ಆಲ್ಡ್ರಿನ್. ಇಬ್ಬರೂ ಕೂಡಿ ನಿಯೋಜಿತ ಕರ್ತವ್ಯಗಳನ್ನೂ ಪ್ರಯೋಗಗಳನ್ನೂ ನಿರ್ವಹಿಸಿದರು. ಸ್ಮಾರಕ ವಸ್ತುಗಳನ್ನು ಸಂಗ್ರಹಿಸಿದರು. ಹೊರಡುವ ಮುನ್ನ ಈಗಲ್‌ನ ಕಾಲಿಗೆ ಅಮೆರಿಕದ ಅಧ್ಯಕ್ಷ ರಿಚರ್ಡ್ ನಿಕ್ಸನ್ ಮತ್ತು ಮೂರು ಯಾತ್ರಿಕರ ಸಹಿಯಿದ್ದ ಫಲಕವನ್ನು ಕಟ್ಟಿದರು. 'ಭೂ ಗ್ರಹದಿಂದ ಬಂದ ಮನುಷ್ಯರು ಇಲ್ಲಿ ಮೊದಲು ಕಾಲಿಟ್ಟರು. ಕ್ರಿ.ಶ. ಜುಲೈ 1969. ನಾವು ಮಾನವ ಜನಾಂಗದ ಕಲ್ಯಾಣಕ್ಕಾಗಿ ಬಂದೆವು.' ಇದು ಫಲಕದಲ್ಲಿನ ಒಕ್ಕಣೆ.

ಈಗಲ್ ಗರ್ಭವನ್ನು ಸೇರಿದರು. ಅದರ ಕೆಳ ಭಾಗ (ಅಂದರೆ ಕಾಲುಗಳ ಭಾಗ) ವನ್ನು ಉಡಾವಣಾಪೀಠವನ್ನಾಗಿ ಬಳಸಿಕೊಂಡು ಮೇಲು ಭಾಗವನ್ನು ಮಾತೃನೌಕೆ (ಕೊಲಂಬಿಯಾ) ಕಡೆಗೆ ಜಿಗಿಸಿದರು. ಇನ್ನೊಂದು ಮಹಾ ವಿನ್ಯಾಸ (ಮೂರೂವರೆ ಗಂಟೆ ಕಾಲವೇ ತೆಗೆದುಕೊಂಡಿತು)–ಮಾತೃನೌಕೆಯನ್ನು ಕೂಡಿಕೊಂಡರು. ತಮ್ಮ ಅಮೂಲ್ಯ ಸಂಗ್ರಹಗಳ ಸಮೇತ ಸಿ.ಎಂ.ನ್ನು ಪ್ರವೇಶಿಸಿದರು. ಇನ್ನು ಅನವಶ್ಯವಾದ ಎಲ್.ಎಂ.ನ ಮೇಲುಭಾಗವನ್ನು ತ್ಯಜಿಸಲಾಯಿತು. ಮುಂದೆ ಇನ್ನೊಂದು ವಿನ್ಯಾಸ—ಎಸ್.ಎಂ.__ಸಿ.ಎಂ. ಜೋಡಣೆ. ಮಾತೃ ನೌಕೆ ಚಂದ್ರ ಕಕ್ಷಾ ವಲಯವನ್ನು ತೊರೆದು ಭೂಮಿಯ ಕಡೆಗೆ ಪ್ರಯಾಣ ಆರಂಭಿಸಿತು (ಜುಲೈ 22. 10 ಗಂಟೆ 27 ಮಿನಿಟು ಪೂರ್ವಾಹ್ನ). ಭೂಮಿಯ ಗುರುತ್ವಾಕರ್ಷಣ ಬಲದ ಕ್ಷೇತ್ರವನ್ನು ಪ್ರವೇಶಿಸಿದ ಎಸ್.ಎಂ. - ಸಿ.ಎಂ. ವೇಗ ಕ್ಷಣ ಕ್ಷಣ ಏರುತ್ತಿತ್ತು. ಜುಲೈ 21. ರಾತ್ರಿ 9 ಗಂಟೆಗೆ 50 ಮಿನಿಟು ಭೂಮಿಯಿಂದ 122 ಕಿ.ಮೀ. ಎತ್ತರದಲ್ಲಿ ವಾಯುಮಂಡಲದ ಹೊರ ತೆಳು ಪದರವನ್ನು ಪ್ರವೇಶಿಸಿತು. ಇಲ್ಲಿ ಪ್ರವೇಶ ಕೋನ (ವಾಯುಮಂಡಲದ ಹೊರ ಮೈಗೂ ನೌಕೆಯ ಪಥಕ್ಕೂ ಸಂಧಿ ಬಿಂದುವಿನಲ್ಲಿ ಎಳೆದ ಸ್ಪರ್ಶ ರೇಖೆಗಳ ನಡುವಿನ ಕೋನ) 5–7 ವರೆಗಿದ್ದರೆ ಮಾತ್ರ ನೌಕೆ ಅಪಾಯ ರಹಿತವಾಗಿ ಇಳಿಯುತ್ತದೆ. ಸ್ವಯಂ ಚಾಲಿತ ವ್ಯವಸ್ಥೆಯೊಂದೇ ಈ ನಿಷ್ಕೃಷ್ಟ ಫಲಿತಾಂಶ ಸಾಧಿಸಬಲ್ಲುದು. ನೌಕೆ ಬಾಹ್ಯ ವಾತಾವರಣವನ್ನು ಪ್ರವೇಶಿಸುತ್ತಿದ್ದಂತೆಯೇ ಇದುವರೆಗೆ ಬಲು ಉಪಯುಕ್ತವಾಗಿದ್ದ, ಆದರೆ ಇನ್ನು ಅನವಶ್ಯವಾದ, ಎಸ್.ಎಂ.ನ್ನು ಬೇರ್ಪಡಿಸಿ ತ್ಯಜಿಸಿದರು. ಸಿ.ಎಂ.ನ ಚಪ್ಪಟೆ ಭಾಗ ಮುಂದಾಗಿ ವಾಯುಮಂಡಲವನ್ನು ಘರ್ಷಿಸಿಕೊಂಡು ಧಾವಿಸಿತು. ಇದರಿಂದ ಉಂಟಾದ ಉಷ್ಣತೆ 2,760 ಸೆಂಟಿಗ್ರೇಡ್.













1. ಲಾಂಚ್ ಎಸ್ಕೇಪ್ ವ್ಯವಸ್ಥೆ
2. ಕಮಾಂಡ್ ಮಾಡ್ಯೂಲ್
3. ಸರ್ವಿಸ್ ಮಾಡ್ಯೂಲ್
4. ಲ್ಯೂನಾರ್ ಮಾಡ್ಯೂಲ್



ಚಾರ್ಲ್ಸ್ ಕೊನ್ರಾಡ್ ರಿಚರ್ಡ್ ಗೋರ್ಡನ್ ಆಲನ್ ಬೀನ್

ಕೆಂಡದ ಉಂಡೆ ಚಿಮ್ಮಿದಂತೆ ಜನ ಕಂಡರು. ಸಿ.ಎಂ. ಒಳಗಿದ್ದ ಯಾತ್ರಿಕರಿಗೆ ಮಾತ್ರ ಈ ಉಷ್ಣ ತಟ್ಟಲಿಲ್ಲ. ನೆಲದಿಂದ ಸುಮಾರು 7,300 ಮೀ. ಎತ್ತರಕ್ಕೆ ಬಂದಾಗ ಸಿ.ಎಂ.ನ ಚೂಪು (ಮೂ) ಭಾಗದಿಂದ ಪ್ಯಾರಾಚೂಟ್‌ಗಳು ಬಿಡಿಸಿಕೊಂಡು ಬೀಳುವ ವೇಗವನ್ನು ಕುಂಠಿತಗೊಳಿಸಿದುವು. ಜುಲೈ 24ರ ರಾತ್ರಿ 10ಗಂಟೆ 20 ಮಿನಿಟಿಗೆ ಶಾಂತಸಾಗರದ ನಿಶ್ಚಿತ ವಲಯದಲ್ಲಿ ಸಿ.ಎಂ. ಬಡಿದಪ್ಪಳಿಸಿತು. ಅಲ್ಲಿ ಅವರ ಬರವನ್ನು ಕಾಯುತ್ತಿದ್ದ ಹೆಲಿಕಾಪ್ಟರ್‌ಗಳು ಈ ಮಹಾ ನಿಧಿಯನ್ನು ಸಾಗರದಿಂದ ರಕ್ಷಿಸಿ ಎತ್ತಿಕೊಂಡು ಅಮೆರಿಕ ರಾಷ್ಟ್ರದೆಡೆಗೆ ಸಾಗಿದುವು.

ಈ ಮಹಾಯಾತ್ರೆಯ ಒಟ್ಟು ಅವಧಿ 195 ಗಂಟೆ 18 ಮಿನಿಟು. ಹೋಗುವಾಗ ಇದ್ದ ಭಾರ 3.000 ಮೆಟ್ರಿಕ್ ಟನ್ : ಮರಳಿದಾಗ ಇದ್ದ ಭಾರ ಸುಮಾರು 6 ಮೆಟ್ರಿಕ್ ಟನ್. ಆದರೆ ಮಾನವ ಜನಾಂಗ ಸಾಧಿಸಿದ ಜ್ಞಾನ, ಯಶಸ್ಸುಗಳಿಗೆ ತೂಕ ಉಂಟೇ, ಬೆಲೆ ಉಂಟೇ ? ಆಕಾಶಯಾನದಲ್ಲಿ ಅಪೊಲೊ11ರ ಯಶಸ್ಸು. ಮಾನವನ ಸಾಧನೆಗಳ ರೋಮಾಂಚಕಾರಿ ಕಥೆಯಲ್ಲಿ ಒಂದು ಪ್ರಮುಖ ಅಧ್ಯಾಯ.

ಕೊನ್ರಾಡ್, ಗೋರ್ಡನ್, ಬೀನ್‌ರನ್ನೊಳಗೊಂಡ ಅಪೊಲೊ–12 ಚಂದ್ರನ ಬಿರುಗಾಳಿ ಸಾಗರದಲ್ಲಿ ನವೆಂಬರ್ 19ರಂದು ಇಳಿಯಿತು. ಕೊನ್ರಾಡ್ ಮತ್ತು ಬೀನ್ ಚಂದ್ರನ ಮೇಲೆ ಕಾಲಿರಿಸಿದ ಮೂರನೆಯ–ನಾಲ್ಕನೆಯ ಮಾನವರಾದರು.

ಲೊವೆಲ್, ಹೈಸ್, ಸ್ವಿಗರ್ಟ್‌ರಿದ್ದ ಅಪೊಲೊ–13 1970ರ ಏಪ್ರಿಲ್ 12ರಂದು ಚಂದ್ರನೆಡೆ ಹೊರಟಿತು. ಆದರೆ, ಆಮ್ಲಜನಕ ಕೋಶ ಒಡೆದುದರಿಂದ ಚಂದ್ರಸ್ಪರ್ಶದ ಯೋಜನೆಯನ್ನು ಕೈಬಿಟ್ಟರು. ಅಪಘಾತ ಒದಗಿದರೂ ಸುರಕ್ಷಿತವಾಗಿ ಆರನೆಯ ದಿನ ಶಾಂತಸಾಗರದಲ್ಲಿಳಿದರು.

## ಅಬಿಸೀನಿಯ

ನೋಡಿ : ಇಥಿಯೋಪಿಯ

## ಅಮುಂಡ್‌ಸನ್, ರೊಆಲ್ಡ್

ಹದಿನೈದು ವರ್ಷದ ಹುಡುಗನೊಬ್ಬ. ಇಂಗ್ಲೆಂಡಿನ ಜಾನ್ ಫ್ರಾಂಕ್ಲಿನ್ (1786 1847) ಎಂಬವನ ಧ್ರುವ ಶೋಧನೆಯ ಸ್ವಾರಸ್ಯಕಥನವನ್ನೋದುತ್ತಿದ್ದ. ಕಿವಿ ಕೆಂಪಾಯಿತು, ಮೈ ಬಿಸಿಯೇರಿತು. ಮೈಯ ಕೂದಲೆಲ್ಲ ನೆಟ್ಟಗೆ ನಿಮಿರಿ ನಿಂತುವು. ಅಬ್ಬ ! ಎಂಥ ಅದ್ಭುತ ಸಾಹಸ ! ತಾನೂ ಧ್ರುವಶೋಧನೆಯಲ್ಲಿ ತೊಡಗಬೇಕು ಎಂದು ಆ ಕ್ಷಣ ಆ ಹುಡುಗ ನಿರ್ಧರಿಸಿದ.

ಅಂದಿನ ಅವನ ಕನಸು ಒಂಬತ್ತು ವರ್ಷಗಳ ಅನಂತರ ನನಸಾಯಿತು. 1897ರಲ್ಲಿ ಈ ಶೋಧನೆಯನ್ನು ಕೈಗೊಳ್ಳಲು ಅವನಿಗೆ ಸಾಧ್ಯವಾಯಿತು. ಭೂಕಾಂತದ ಉತ್ತರ ಧ್ರುವವನ್ನು ಕಂಡುಹಿಡಿದು, ಅದು ನಿಧಾನವಾಗಿ ಚಲಿಸುತ್ತಿದೆ ಎಂಬುದನ್ನು ಆತ ಸಮರ್ಥಿಸಿದ. ಬಳಿಕ ದಕ್ಷಿಣ ಧ್ರುವವನ್ನೂ ಕಂಡುಹಿಡಿದ.

ಅನ್ವೇಷಕ ಅಮುಂಡ್‌ಸನ್



ಅಮುಂಡ್‌ಸನ್ ಜನಿಸಿದ್ದು 1872 ಜುಲೈ 17ರಂದು, ನಾರ್ವೆ ದೇಶದಲ್ಲಿ. ಬಾಲ್ಯದಿಂದಲೂ ಸಮುದ್ರವೆಂದರೆ ಅವನಿಗೆ ಇಷ್ಟ. ತಾಯಿಯ ಆಸೆಯಂತೆ ವೈದ್ಯಕೀಯ ವ್ಯಾಸಂಗಕ್ಕಾಗಿ ಆಸ್ಲೋ ನಗರದ ಕ್ರಿಶ್ಚಿಯಾನ ವಿಶ್ವವಿದ್ಯಾನಿಲಯವನ್ನು ಸೇರಿದ. ಆ ವ್ಯಾಸಂಗ ರುಚಿಸದೆ 1893ರಲ್ಲಿ ಅದನ್ನು ಬಿಟ್ಟು ನಾರ್ವೆಯ ನೌಕಾದಳದಲ್ಲಿ ಉದ್ಯೋಗಿಯಾದ. ದಕ್ಷಿಣ ಧ್ರುವ ಶೋಧನೆಗಾಗಿ ಬೆಲ್ಜಿಯಂನಲ್ಲಿ ಒಂದು ತಂಡ ನಿಯೋಜಿತವಾಗಿದ್ದಿತು. 1897ರಲ್ಲಿ ಅಮುಂಡ್‌ಸನ್ ಆ ತಂಡದಲ್ಲಿ ಅಧಿಕಾರಿಯಾದ. 1901ರಲ್ಲಿ ಗ್ರೀನ್‌ಲೆಂಡಿನ ಈಶಾನ್ಯ ದಂಡೆಯಲ್ಲಿ ಸಮುದ್ರಶಾಸ್ತ್ರ ಸಂಶೋಧನೆಗಳನ್ನು ನಡೆಸಿದ.

1903ರಲ್ಲಿ ತನ್ನೊಡನೆ ಐದು ಜನರನ್ನು ಕರೆದುಕೊಂಡು ಭೂಕಾಂತದ ಉತ್ತರ ಧ್ರುವದ ಸ್ಥಾನವನ್ನು ಖಚಿತಪಡಿಸುವುದಕ್ಕಾಗಿ ಪ್ರಯಾಣ ಹೊರಟ. ಈ ಯಾನದಲ್ಲಿ ಅನ್ವೇಷಕರಿಗೆ ಬಹು ದಿನದ ಕನಸಿನ ಗಂಟಾಗಿದ್ದ ಅಟ್ಲಾಂಟಿಕ್ ಮತ್ತು ಶಾಂತಸಾಗರಗಳ ನಡುವಣ ವಾಯುವ್ಯ ಮಾರ್ಗವನ್ನು ಅಮುಂಡ್‌ಸನ್ ಕಂಡು ಹಿಡಿದ.

ರಾಬರ್ಟ್ ಪಿಯರಿಯ ಉತ್ತರ ಧ್ರುವ ಶೋಧನೆಯ ಅಪೂರ್ವ ಸಾಹಸವನ್ನು ಕೇಳಿದ ಅಮುಂಡ್‌ಸನ್ 1910ರ ಆಗಸ್ಟ್ 9ರಂದು ದಕ್ಷಿಣ ಧ್ರುವ ಶೋಧನೆಯ ತನ್ನ ಯೋಜನೆಯನ್ನು ರೂಪಿಸಿದ. ಅಕ್ಟೋಬರ್ ತಿಂಗಳಲ್ಲಿ ಪ್ರಯಾಣ ಆರಂಭವಾಯಿತು. ಪ್ರಯಾಣಕ್ಕೆ ಬೇಕಾದ ಎಲ್ಲ ಸಲಕರಣೆಗಳನ್ನು ಅಮುಂಡ್‌ಸನ್ ಬಹಳ ಜಾಗರೂಕತೆಯಿಂದ ಅಣಿಮಾಡಿಕೊಂಡ. ಜಾರುಬಂಡಿಗಳು ಸಿದ್ಧವಾದುವು. ಎಸ್ಕಿಮೊಗಳ ಐವತ್ತೆರಡು ನಾಯಿಗಳನ್ನು ಅಣಿಗೊಳಿಸಿದ. ಈ ನಾಯಿಗಳ ಸಹಾಯದಿಂದಾಗಿ ಪ್ರಯಾಣ ಹೆಚ್ಚು ಶ್ರಮದಾಯಕವಾಗಲಿಲ್ಲ. 1911ರ ಡಿಸೆಂಬರ್ 14 ಅಮುಂಡ್‌ಸನ್ ಮತ್ತು ಅವನ ನಾಲ್ವರು ಸಂಗಡಿಗರು ಭೂಮಿಯ ಒಂದು ತುದಿಯಲ್ಲಿ ದಕ್ಷಿಣ ಧ್ರುವದಲ್ಲಿ, ನಿಂತರು. ಇಂಗ್ಲೆಂಡಿನ ಕ್ಯಾಪ್ಟನ್ ರಾಬರ್ಟ್ ಸ್ಕಾಟ್ ಆ ಪ್ರದೇಶವನ್ನು ತಲಪುವ ಒಂದು ತಿಂಗಳ ಮೊದಲೇ ಅಮುಂಡ್‌ಸನ್ ಅಲ್ಲಿದ್ದ. ದಕ್ಷಿಣ ಧ್ರುವವನ್ನು ಮುಟ್ಟಿದ ಸಾಹಸಿಗರಲ್ಲಿ ಅಮುಂಡ್‌ಸನ್ನನೇ ಮೊದಲಿಗ. ಅಮುಂಡ್‌ಸನ್ನನ ಈ ಅದ್ಭುತ ವಿಜಯಕ್ಕೆ ಕಾರಣ—ಅವನ ಧೈರ್ಯ ಮತ್ತು ಸಾಹಸ ಪ್ರವೃತ್ತಿ, ಪ್ರತಿಯೊಂದು ಸಣ್ಣಪುಟ್ಟ ವಿಷಯದಲ್ಲಿಯೂ ಅವನು ವಹಿಸಿದ ಮುನ್ನೆಚ್ಚರಿಕೆ.

ಪಿಯರಿ ಆಗಲೇ ಉತ್ತರ ಧ್ರುವವನ್ನು ಕಂಡು ಹಿಡಿದಿದ್ದ. ಆದರೆ ಉತ್ತರ ಧ್ರುವದರ್ಶನ ಅಮುಂಡಸನ್ನನ ಆಸೆಯೂ ಆಗಿತ್ತು. 1925ರಲ್ಲಿ ಉತ್ತರ ಧ್ರುವ ಪ್ರದೇಶದ ಮೇಲೆ ವಿಮಾನದಲ್ಲಿ ಹಾರಾಡಲು ಅವನು ಯತ್ನಿಸಿದ. ಆದರೆ ಪ್ರಯಾಣ ಯಶಸ್ವಿಯಾಗಲಿಲ್ಲ. 4.344 ಕಿ. ಮೀ. ಗಳಷ್ಟು ಎಪ್ಪತ್ತೊಂದು ಘಂಟೆಗಳ ಕಾಲದಲ್ಲಿ ಅವನು ಹಾರಿದ್ದ. ಮತ್ತೆ ಪ್ರಯತ್ನಿಸಿ ಉತ್ತರ ಧ್ರುವದ ಮೇಲೆ ಹಾರುವುದರಲ್ಲಿ ಅವನು ಯಶಸ್ವಿಯಾದ. ಆದರೆ ಕೆಲವೇ ದಿನಗಳ ಮುಂಚೆ ರಿಚರ್ಡ್ ಈವ್‌ಲಿನ್ ಬರ್ಡ್ ಎನ್ನುವಾತ ಧ್ರುವವನ್ನು ವಿಮಾನದಲ್ಲಿ ಮುಟ್ಟಿದ್ದ. ಉತ್ತರ ಧ್ರುವ ಶೋಧನೆಯಲ್ಲಿ ತೊಡಗಿದ್ದ ನೊಬೈಲ್ ಎಂಬವನು ಕಾಣೆಯಾಗಿದ್ದಾನೆ ಎಂಬ ಸುದ್ದಿ ಬಂದಿತು. ನೊಬೈಲ್ ಅಮುಂಡ್‌ಸನ್ನನ ಗೆಳೆಯ. ಐದು ಜನ ಮಿತ್ರರೊಡನೆ ಅಮುಂಡ್‌ಸನ್ ಗೆಳೆಯನ ರಕ್ಷಣೆಗೆ ಧಾವಿಸಿದ. ಕಣ್ಮರೆಯಾಗಿದ್ದ ನೊಬೈಲನನ್ನು ಯಾವುದೋ ವಿಮಾನ ರಕ್ಷಿಸಿ ಕರೆತಂದಿತು. ಆದರೆ ಅಮುಂಡ್‌ಸನ್ ಮತ್ತು ಅವನ ಗೆಳೆಯರು ಮಾತ್ರ ಮತ್ತೆ ಈ ಜಗತ್ತಿಗೆ ಹಿಂದಿರುಗಲಿಲ್ಲ. ಹೀಗೆ ಬಾಲ್ಯದಿಂದಲೂ ಅನ್ವೇಷಿಸಬಯಸಿದ್ದ ಉತ್ತರ ಧ್ರುವ ಪ್ರದೇಶದಲ್ಲಿ ಅಮುಂಡ್‌ಸನ್ ಸೇರಿಹೋದ.

ನೋಡಿ : ಧ್ರುವ ; ಪಿಯರಿ, ರಾಬರ್ಟ್ ; ಸ್ಕಾಟ್, ಕ್ಯಾಪ್ಟನ್

## ಅಮೆರಿಕ

ಮುನ್ನೂರು ವರ್ಷಗಳಿಗೆ ಹಿಂದೆ ಅಮೆರಿಕ ಎನ್ನುವ ಹೆಸರು ಪ್ರಖ್ಯಾತವಾಗಿರಲಿಲ್ಲ. ಅಮೆರಿಕಕ್ಕೆ ಮೊದಲು ಬಂದ ಯೂರೊಪಿನ ಪ್ರಜೆ ಲೀಫ್ ಎರಿಕ್‌ಸನ್ (1000). ಅವನಿಗಾಗಲಿ ಅವನ ಅನಂತರ ಬಂದ ಅವನ ಜನರಿಗಾಗಲಿ ತಾವು ಹೊಸ ಭೂಭಾಗವನ್ನು ಕಂಡು ಹಿಡಿದೆವೆಂದು ತಿಳಿದಿರಲಿಲ್ಲ. ಕೊಲಂಬಸ್ ಮತ್ತೆ ಈ ಭೂಭಾಗವನ್ನು ಕಂಡುಹಿಡಿದ (1492). ಸ್ವಲ್ಪ ಕಾಲದ ಅನಂತರ ಇಟಲಿ ದೇಶದವನಾದ ಅಮೆರಿಗೊ ವೆಸ್ಪುಸಿ ತಾನು ದಕ್ಷಿಣ ಅಮೆರಿಕದ ಕೆಲ ಭಾಗಗಳನ್ನು ಶೋಧಿಸಿದೆನೆಂದು ಪ್ರಕಟಿಸಿದ (1501). ಭೂಪಟ ತಯಾರಿಸಿದವರು, ಅಮೆರಿಗೊ ವೆಸ್ಪುಸಿಗೆ ಗೌರವ ತೋರಿಸಲು ಅವನು ಕಂಡುಹಿಡಿದ ಭಾಗಕ್ಕೆ 1507ರಲ್ಲಿ ಅಮೆರಿಕ ಎಂದು ಹೆಸರಿಟ್ಟರು. ಮುಂದೆ 1538ರಲ್ಲಿ ಪ್ರಪಂಚದ ಪಶ್ಚಿಮ ಗೋಳಾರ್ಧದಲ್ಲಿ ಇದ್ದ ಎರಡು ಖಂಡಗಳನ್ನೂ ಪೂರ್ತಿಯಾಗಿ ಅಮೆರಿಕ ಎಂದೇ ಕರೆಯಲು ಆರಂಭಿಸಿದರು.

ಅಮೆರಿಕದ ಹೆಸರನ್ನು ಕುರಿತು ಈಚೆಗೆ ಇನ್ನೊಂದು ವಿವರಣೆಯನ್ನು ಸರ್ ವಿಲ್‌ಫ್ರೆಡ್ ಮಾರ್ಟಿನ್ ಎಂಬವನು ಮುಂದಿಟ್ಟಿದ್ದಾನೆ. ಬ್ರಿಸ್ಟಲಿನ

ಮೋರ್ ರಾಷ್ಟ್ರೀಯ ಸ್ಮಾರಕ, ಒಂದು ಬೃಹತ್ ಶಿಲ್ಪಸ್ತೋಮ. ಜಾರ್ಜ್ ವಾಷಿಂಗ್‌ಟನ್, ಥಾಮಸ್ ಜೆಫರ್‌ಸನ್, ಅಬ್ರಹಾಂ ಲಿಂಕನ್ ಮತ್ತು ಥಿಯೊಡೊರ್ ರೂಸ್‌ವೆಲ್ಟ್. ಇವರ ಬೃಹತ್ ಶಿಲ್ಪಗಳನ್ನು ರಷ್‌ಮೋರ್ ಪರ್ವತದ ಈಶಾನ್ಯ ಭಾಗದಲ್ಲಿ ರಚಿಸಲಾಗಿದೆ. ಪ್ರತಿಯೊಂದು ಶಿಲ್ಪ ಕೃತಿಯೂ ಸುಮಾರು ಹದಿನೆಂಟು ಮೀಟರು ಎತ್ತರ. ವಿಶ್ವಸಂಸ್ಥೆಯ ಕಚೇರಿ ಇರುವುದು ನ್ಯೂಯಾರ್ಕಿನಲ್ಲಿ. ಡೆಟ್ರಾಯಿಟ್ ಕಾರ್ ತಯಾರಿಕೆಯ ಕೇಂದ್ರ. ಬಾಸ್ಟನ್, ಫಿಲಡೆಲ್ಫಿಯಗಳಲ್ಲಿ ಐತಿಹಾಸಿಕ ಅವಶೇಷಗಳಿವೆ. ಷಿಕಾಗೊ ವ್ಯಾಪಾರ ಕೇಂದ್ರ. ವಿವೇಕಾನಂದರು ವಿಶ್ವಧರ್ಮ ಸಮ್ಮೇಳನದಲ್ಲಿ ಭಾಷಣಮಾಡಿದ್ದು ಈ ನಗರದಲ್ಲಿಯೇ. ಸಾನ್‌ಫ್ರಾನ್ಸಿಸ್ಕೊ ಸಾಂಸ್ಕೃತಿಕ ಕೇಂದ್ರ. ಲಾಸ್ ಏಂಜಿಲಿಸ್ ತೈಲ ಉದ್ಯಮದ ಬೀಡು. ಬಾಲ್ಟಿಮೋರ್, ಹೌಸ್ಟನ್, ಕ್ಲೀವ್‌ಲೆಂಡ್ ಸಹ ದೊಡ್ಡ ನಗರಗಳು.

ವೈದ್ಯಕೀಯ ಕ್ಷೇತ್ರದಲ್ಲಿ ಸಂಯುಕ್ತ ಸಂಸ್ಥಾನ ತುಂಬಾ ಮುಂದುವರಿದಿದೆ. ಕ್ಯಾನ್ಸರ್‌ವಿರುದ್ಧ ಹೋರಾಟ, ಮನೋರೋಗ ಚಿಕಿತ್ಸೆ, ಬದಲಿ ಹೃದಯ ಜೋಡಣೆ ಇವುಗಳಲ್ಲಿ ಪ್ರಗತಿಯಾಗಿದೆ.

ರಾಷ್ಟ್ರದ ಅಧ್ಯಕ್ಷರನ್ನು ನಾಲ್ಕು ವರ್ಷಗಳಿಗೊಮ್ಮೆ ಆರಿಸುತ್ತಾರೆ.

ಪ್ರಪಂಚದ ದೊಡ್ಡ ದೇಶಗಳಲ್ಲಿ ಒಂದು ಅಮೇರಿಕದ ಸಂಯುಕ್ತ ಸಂಸ್ಥಾನ. ಇದು ರಾಷ್ಟ್ರವಾಗಿ ರೂಪುಗೊಂಡದ್ದು ಮೂರೇ ಶತಮಾನ ಹಿಂದೆ. ರೈತರ ದೇಶವಾಗಿ ಆರಂಭವಾದ ನಾಡು ಸಂಪನ್ಮೂಲಗಳನ್ನು ಜಾಣತನದಿಂದ ಬಳಸಿಕೊಂಡು ಪ್ರಪಂಚದಲ್ಲೆ ಶ್ರೀಮಂತ ಕೈಗಾರಿಕಾ ದೇಶವಾಗಿದೆ. ಆರಂಭದಲ್ಲಿ ಬ್ರಿಟಿಷರ ವಸಾಹತು ಆಗಿದ್ದಾಗ ಶೇಕಡ 90 ಜನ ವ್ಯವಸಾಯಗಾರರಾಗಿದ್ದರು. ಜನ ತಮಗೆ ಅಗತ್ಯವಿದ್ದಷ್ಟು ಮಾತ್ರ ಬೆಳೆಯುತ್ತಿದ್ದರು. ಇಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸುವುದಕ್ಕೆ ಬ್ರಿಟಿಷರು ಉತ್ತೇಜನ ಕೊಡುತ್ತಿರಲಿಲ್ಲ. ಹಣವಾಗಲೀ ಕುಶಲ ಕೆಲಸಗಾರರಾಗಲೀ ಸಾಗಾಣಿಕೆ ಸೌಲಭ್ಯಗಳಾಗಲೀ ಮಾರುಕಟ್ಟೆಯಾಗಲೀ ಅಲ್ಲಿ ಇರಲಿಲ್ಲ. 1775ರಲ್ಲಿ ಬ್ರಿಟಿಷರ ವಿರುದ್ಧ ಯುದ್ಧವಾಯಿತು. ತಮಗೆ ಸಂಸತ್ತಿನಲ್ಲಿ ಪ್ರಾತಿನಿಧ್ಯ ನೀಡದೆ ತೆರಿಗೆ ಹೊರಿಸುವ ಅಧಿಕಾರ ಬ್ರಿಟನಿಗಿಲ್ಲ ಎಂದು ಅಮೇರಿಕದ ಜನ ಪ್ರತಿಭಟಿಸಿದರು. 1776ರ ಜುಲೈ 4ರಂದು ಸ್ವಾತಂತ್ರ್ಯ ಘೋಷಣೆಯಾಯಿತು, ಹೀಗೆ ಹದಿಮೂರು ವಸಾಹತುಗಳು ಹೊಸದೊಂದು ರಾಷ್ಟ್ರವನ್ನು ಸ್ಥಾಪಿಸಿದುವು. 1787ರಲ್ಲಿ ಸಂವಿಧಾನ ರಚನೆಯಾಗಿ ಜಾರ್ಜ್ ವಾಷಿಂಗ್ಟನ್ ಪ್ರಥಮ ಅಧ್ಯಕ್ಷನಾದ. 1812ರಲ್ಲಿ ಇಂಗ್ಲೆಂಡಿನೊಡನೆ ಎರಡನೆಯ ಬಾರಿ ಯುದ್ಧವಾಗಿ 1815ರಲ್ಲಿ ಒಪ್ಪಂದವಾಯಿತು. ಸ್ಪೇನಿನವರು 1819ರಲ್ಲಿ ಫ್ಲಾರಿಡಾವನ್ನೂ 1845ರಲ್ಲಿ ಟೆಕ್ಸಾಸನ್ನೂ ಬಿಟ್ಟುಕೊಟ್ಟರು. ಕೈಗಾರಿಕೆಗಳು ವೃದ್ಧಿಯಾಗುತ್ತಾ ಬಂದುವು. ಆದರೆ ಗುಲಾಮಗಿರಿ ಬಗೆಗೆ ಒಮ್ಮತವಿರಲಿಲ್ಲ. 1860ರಲ್ಲಿ ಅಧ್ಯಕ್ಷನಾದ ಅಬ್ರಹಾಂ ಲಿಂಕನ್ ಗುಲಾಮಗಿರಿಗೆ ವಿರೋಧವಾಗಿದ್ದ. ಈ ಪದ್ಧತಿ ಮುಂದುವರಿಯಬೇಕೆಂದು ವಾದಿಸಿದ ದಕ್ಷಿಣ ರಾಜ್ಯಗಳವರು ಪ್ರತ್ಯೇಕ ರಾಷ್ಟ್ರವಾಗ ಬಯಸಿದರು. ಹೀಗೆ ಬೇರೆಯಾಗಲು ಅವರಿಗೆ ಹಕ್ಕಿಲ್ಲ ಎಂದು ಕೇಂದ್ರ ಸರಕಾರ ಘೋಷಿಸಿತು. 1861 ರಿಂದ 65ರವರೆಗೆ ಭೀಕರ ಅಂತರ್ಯುದ್ಧವಾಗಿ ಕೇಂದ್ರ ಗೆದ್ದಿತು. 1863 ಜನವರಿ 1 ರಂದು ಲಿಂಕನ್ ಎಲ್ಲ ಗುಲಾಮರೂ ಸ್ವತಂತ್ರರೆಂದು ಸಾರಿದ. ಗುಲಾಮಗಿರಿ ಕೊನೆಗೊಂಡಿತು. 1870ರಲ್ಲಿ ನೀಗ್ರೋಗಳಿಗೆ ಮತದಾನದ ಹಕ್ಕು ದೊರೆಯಿತು.

ಕೆಲಸ ಮಾಡಲು ಜನ, ಬಂಡವಾಳ ಮತ್ತು ನೈಸರ್ಗಿಕ ಸಂಪತ್ತು ದೊರೆಯುವಂತಾಗಿ, ಇದರಿಂದ ತಂತ್ರಜ್ಞಾನ ಬೆಳೆಯಿತು. ಇದರಿಂದ ಹೊಸ ಹೊಸ ಕ್ಷೇತ್ರಗಳಲ್ಲಿ ವ್ಯವಸಾಯ ಮತ್ತು ಕೈಗಾರಿಕೆ ಕ್ಷೇತ್ರಗಳಲ್ಲಿ ಈ ರಾಷ್ಟ್ರ ಗಣನೀಯ ಪ್ರಗತಿಯನ್ನು ಸಾಧಿಸಿತು. ದೊಡ್ಡ ಉದ್ಯಮಗಳೆಲ್ಲ ಕೋಟ್ಯಧೀಶ್ವರರಾದ ಕೆಲವರ ಸ್ವತ್ತಾದುವು.

ಮೊದಲನೆಯ ಮಹಾಯುದ್ಧದಲ್ಲಿ ಸಂಯುಕ್ತ ಸಂಸ್ಥಾನ ತಾಟಸ್ಥ್ಯ ನೀತಿ ವಹಿಸಿತ್ತು. ಇವರ ಹಡಗನ್ನು ನಾಶಮಾಡಿದ್ದರಿಂದ 1917ರಲ್ಲಿ ಜರ್ಮನಿಯೊಡನೆ ಯುದ್ಧಕ್ಕೆ ತೊಡಗಬೇಕಾಯಿತು. ಆಗ ಅಧ್ಯಕ್ಷರಾಗಿದ್ದ ವುಡ್ರೊ ವಿಲ್ಸನ್, ಯುದ್ಧಾನಂತರ ಪ್ಯಾರಿಸಿನಲ್ಲಿ ನಡೆದ ಶಾಂತಿ ಸಮ್ಮೇಳನದಲ್ಲಿ ಭಾಗವಹಿಸಿದರು, ಅವರ ಯತ್ನದಿಂದ 1919 ಜೂನ್ 28 ರಂದು ರಾಷ್ಟ್ರಸಂಘ ಸ್ಥಾಪನೆಯಾಯಿತು. ಆದರೆ ಅಮೆರಿಕದ ಕಾಂಗ್ರೆಸ್ ಒಪ್ಪಿಗೆ ನೀಡದ್ದರಿಂದ, ಅಮೆರಿಕದ ಸಂಯುಕ್ತ ಸಂಸ್ಥಾನ ರಾಷ್ಟ್ರಸಂಘದಿಂದ ಹೊರಗುಳಿಯಬೇಕಾಯಿತು.

ಎರಡನೆಯ ಮಹಾಯುದ್ಧದಲ್ಲೂ ತಟಸ್ಥವಾಗಿರಲು ಸಂಯುಕ್ತ ಸಂಸ್ಥಾನ ಯತ್ನಿಸಿತು. ಆದರೆ 1941ರಲ್ಲಿ ಈ ಧೋರಣೆಯನ್ನು ತ್ಯಜಿಸಿ ಬ್ರಿಟನ್ನಿಗೆ ಶಸ್ತ್ರಾಸ್ತ್ರ ಮಾರಿತು. ಮುಂದೆ ರಷ್ಯಕ್ಕೂ ನೆರವು ನೀಡಿತು. 1941ರ ಡಿಸೆಂಬರ್‌ನಲ್ಲಿ ಪರ್ಲ್ ಹಾರ್ಬರ್ ಮೇಲೆ ಜಪಾನರ ದಾಳಿ ನಡೆದುದರಿಂದ ಸಂಯುಕ್ತ ಸಂಸ್ಥಾನ ಯುದ್ಧದಲ್ಲಿ ಪಾಲ್ಗೊಳ್ಳುವಂತಾಯಿತು. 1940ರಲ್ಲಿ ರೂಸ್‌ವೆಲ್ಟ್ ಮೂರನೆಯ ಬಾರಿ ಅಧ್ಯಕ್ಷರಾಗಿ ಆಯ್ಕೆಯಾದರು. 1944ರಲ್ಲಿ ನಾಲ್ಕನೆಯ ಬಾರಿಯೂ ಆಯ್ಕೆಗೊಂಡರು. ಇವರು ಮುಂದೆ ಸ್ವಲ್ಪ ಕಾಲದಲ್ಲೆ ನಿಧನರಾದದ್ದರಿಂದ ಆಗ ಉಪಾಧ್ಯಕ್ಷರಾಗಿದ್ದ ಹ್ಯಾರಿ ಟ್ರೂಮನರಿಗೆ ಅಧ್ಯಕ್ಷಪೀಠ ದೊರೆಯಿತು.

1958 ಜನವರಿ 31 ರಂದು ಸಂಯುಕ್ತ ಸಂಸ್ಥಾನ ಪ್ರಥಮ ಕೃತಕ ಉಪಗ್ರಹವನ್ನು ಬಾಹ್ಯಾಂತರಿಕ್ಷಕ್ಕೆ ಕಳುಹಿಸಿತು. 1961ರ ಜನವರಿ 20 ರಂದು ಜಾನ್ ಎಫ್. ಕೆನಡಿ ಅಧ್ಯಕ್ಷರಾದರು. ಕ್ಯೂಬಾ ಮೇಲೆ ದಾಳಿ ಮಾಡಲಾಯಿತು. 1963ರ ನವೆಂಬರ್ 22ರಂದು ಕೆನಡಿ ಹಂತಕನ ಗುಂಡಿಗೆ ಬಲಿಯಾಗಿ ಉಪಾಧ್ಯಕ್ಷ ಲಿಂಡನ್ ಜಾನ್ಸನ್ ಅಧ್ಯಕ್ಷರಾದರು. ಈಗ ರಿಚರ್ಡ್ ನಿಕ್ಸನ್ ಈ ರಾಷ್ಟ್ರದ 37ನೆಯ ಅಧ್ಯಕ್ಷರು.

ಪ್ರಪಂಚದ ಅತಿ ಬಲಿಷ್ಠ ರಾಷ್ಟ್ರಗಳಲ್ಲಿ ಒಂದು ಅಮೆರಿಕದ ಸಂಯುಕ್ತ ಸಂಸ್ಥಾನ. ವಿಜ್ಞಾನದ ಬಲದಿಂದ ಹಲವು ಹಮಾಡಗಳನ್ನು ಈ ದೇಶದ ಜನ ಸಾಧಿಸಿದ್ದಾರೆ. 1933ರಲ್ಲಿ ಟೆನಿಸಿ ನದಿಯ ಪ್ರವಾಹವನ್ನು ಹತೋಟಿಯಲ್ಲಿಡಲು ರೂಪಿಸಿದ ಟೆನಿಸಿ ವ್ಯಾಲಿ ಯೋಜನೆ ಪ್ರವಾಹವನ್ನು ತಡೆಗಟ್ಟಿತು. ನದಿಯಲ್ಲಿ ಸಂಚಾರವನ್ನು ಅಭಿವೃದ್ಧಿಗೊಳಿಸಿ, ವಿದ್ಯುಚ್ಛಕ್ತಿಯ ಉತ್ಪಾದನೆಯನ್ನು ಹೆಚ್ಚಿಸಿ, ಅಸಾಧಾರಣ ಪ್ರಗತಿಗೆ ಕಾರಣವಾಯಿತು (ಭಾರತದ ದಾಮೋದರ್ ಕಣಿವೆ ಪ್ರದೇಶದ ಯೋಜನೆಗೆ ಇದೇ ಪ್ರೇರಣೆ). ಇಪ್ಪತ್ತನೆಯ ಶತಮಾನದ ಮಧ್ಯಭಾಗದಲ್ಲಿ ಅಮೆರಿಕದ ಕೈಗಾರಿಕೆಯ ಉತ್ಪನ್ನಗಳು ಯೂರೋಪಿನ ರಾಷ್ಟ್ರಗಳ ಉತ್ಪನ್ನಕ್ಕಿಂತ ಎರಡರಷ್ಟಾಯಿತು. ಸೋವಿಯೆಟ್ ಒಕ್ಕೂಟದ ನಾಲ್ಕರಷ್ಟು ಇದ್ದುವು. 1940 ರಿಂದ 1960ರ ವರೆಗಿನ ಅವಧಿಯಲ್ಲಿ ಬೇಸಾಯ ಮಾಡುತ್ತಿದ್ದ ಭೂಮಿಯ ವಿಸ್ತೀರ್ಣ, ಕೆಲಸದ ಅವಧಿ, ಕೆಲಸಗಾರರ ಸಂಖ್ಯೆ ಕಡಮೆಯಾಗಿದ್ದರೂ ಉತ್ಪನ್ನ ಶೇ. 60 ರಷ್ಟು ಹೆಚ್ಚಿತು. ಪ್ರಪಂಚದ ಜನಸಂಖ್ಯೆಯಲ್ಲಿ ಶೇಕಡ 6ರಷ್ಟಿರುವ ಈ ದೇಶ, ಪ್ರಪಂಚದ ಸಾಮಗ್ರಿಗಳು ಮತ್ತು ಸೌಲಭ್ಯಗಳ ಉತ್ಪಾದನೆಯಲ್ಲಿ ಮೂರರಲ್ಲೊಂದು ಭಾಗವನ್ನು ಉತ್ಪಾದಿಸುತ್ತದೆ. 1960ರ ಹೊತ್ತಿಗೆ ಪ್ರಪಂಚದ ಒಟ್ಟು 94,00 ಲೇ. 13. ಆದಾಯದಲ್ಲಿ ಶೇಕಡಾ 10ರಷ್ಟು ಈ ದೇಶಕ್ಕೆ ಸೇರಿದ್ದುವು.

ಪ್ರಸ್ತುತದ ಕಳೆದ ಒಂದು ಶತಮಾನದ ಚರಿತ್ರೆಯಲ್ಲಿ ಈ ರಾಷ್ಟ್ರದ ಪ್ರಾಧಾನ್ಯವನ್ನು ನಿರ್ಧರಿಸುವುದು ಕಷ್ಟ. ಎರಡು ಮಹಾಯುದ್ಧಗಳಲ್ಲಿಯೂ ಮಿತ್ರರಾಷ್ಟ್ರಗಳಿಗೆ ಜಯವನ್ನು ದೊರಕಿಸಿಕೊಟ್ಟಿತು. ಈ ಯುದ್ಧಗಳ ನಂತರ ಕೊರಿಯ, ವಿಯಟ್ನಾಂ ಪ್ರದೇಶಗಳಲ್ಲಿ ಇದರ ಸೈನ್ಯ ಹೋರಾಡಿದೆ. 1940ರಿಂದ 1960ರ ವರೆಗೆ ಬೇರೆ ದೇಶಗಳಿಗೆ 11,400 ಕೋಟಿ ಡಾಲರು (ಸುಮಾರು ಎಂಬತ್ತೈದು ಸಾವಿರದಐನೂರು ಕೋಟಿ ರೂಪಾಯಿ) ನೆರವನ್ನು ನೀಡಿದೆ. ಇಂಥ ಪ್ರಬಲ ಸಂಪದ್ಯುಕ್ತ ರಾಷ್ಟ್ರಕ್ಕೂ ಸಮಸ್ಯೆಗಳಿವೆ. ನೀಗ್ರೋಗಳ ಸಮಸ್ಯೆ ಇನ್ನೂ ಪೂರ್ಣವಾಗಿ ಪರಿಹಾರವಾಗಿಲ್ಲ. ಯಂತ್ರಗಳು ಮತ್ತು ವಿಮಾನಗಳ ಅತಿ ಬಳಕೆಯಿಂದ ಗಾಳಿಯಲ್ಲಿನ ಆಮ್ಲಜನಕ ಕಡಮೆಯಾಗುತ್ತಿದೆ. ಜನರ ಆರೋಗ್ಯಕ್ಕೆ ಅಪಾಯವಿದೆ. ಆಧುನಿಕ ನಾಗರಿಕತೆಯ ಜೀವನದ ವೇಗ–ಕಷ್ಟಗಳಿಂದ ಮಾನಸಿಕ ರೋಗಗಳಿಗೆ ತುತ್ತಾಗಿ ನರಳುವವರ ಸಂಖ್ಯೆ ಹೆಚ್ಚುತ್ತಿದೆ.

| | | |
|---|---|---|
| ಖಂಡ | : | ಅಮೆರಿಕ |
| ಅಕ್ಷಾಂಶ | : | 24°93′ ಉ ದಿಂದ 49°ಉ |
| ರೇಖಾಂಶ | : | 66° 57′ ಪ ದಿಂದ 124°45′ ಪ |
| ವಿಸ್ತೀರ್ಣ | : | 93, 63,000 ಚದರ ಕಿಲೊಮಿಟರುಗಳು |
| ಜನಸಂಖ್ಯೆ | : | 19,59,00,000 (1966) |
| ರಾಜಧಾನಿ | : | ವಾಷಿಂಗ್ಟನ್ ಡಿ.ಸಿ. (ಡಿಸ್ಟ್ರಿಕ್ಟ್ ಕೊಲಂಬಿಯ) |
| ಭಾಷೆ | : | ಇಂಗ್ಲಿಷ್ |
| ಸರಕಾರ | : | 50 ರಾಜ್ಯಗಳ ಒಕ್ಕೂಟ ಸರಕಾರ |
| ಬಾವುಟ | : | ನೀಲಿ ಅದರ ಮೇಲೆ 50 ಬಿಳಿ ನಕ್ಷತ್ರಗಳು. 13 ಕೆಂಪು. ಬಿಳಿ ಅಡ್ಡಪಟ್ಟಿಗಳು |

## ಅರಣ್ಯ

'ವನ ಮಹೋತ್ಸವ' ದಿನವನ್ನು ನಮ್ಮ ದೇಶದಲ್ಲಿ ಪ್ರತಿ ವರ್ಷ ಆಚರಿಸುತ್ತೇವೆ. ಸಾಗುವಳಿ ಮಾಡದ ಭೂಮಿಯಲ್ಲಿ ದಟ್ಟವಾದ ಮರಗಿಡಗಳು ಬೆಳೆದು ನಿಂತಾಗ ಆ ಪ್ರದೇಶ ಅರಣ್ಯವೆನಿಸಿಕೊಳ್ಳುತ್ತದೆ. ಮರಮುಟ್ಟುಗಳಿಗಾಗಿ, ಇಂಧನಕ್ಕಾಗಿ ದೊಡ್ಡ ದೊಡ್ಡ ಮರಗಳನ್ನು ಜನ ಕಡಿಯುತ್ತಾರೆ. ವರ್ಷವರ್ಷವೂ ಮರಗಳನ್ನು ಕಡಿದ ಹಾಗೆ ಅರಣ್ಯ ಬರಿದಾಗುತ್ತದೆ, ನೂರಾರು ವರ್ಷ ಸೊಂಪಾಗಿ ಬೆಳೆದ ಮರಗಳು ಇಂದು ಜನರ ಬಳಕೆಗೆ ಬಂದಂತೆ ಮುಂದಿನ ಜನರಿಗೂ ದೊರೆಯಬೇಕು: ಕಾಡು ಕಣ್ಮರೆಯಾದರೆ ಮಳೆಯೂ ಕಡಮೆಯಾಗುತ್ತದೆ. ಹೀಗಿರುವುದರಿಂದ ಅರಣ್ಯ ಬರಿದಾಗಬಾರದು. ಅದಕ್ಕೋಸ್ಕರ ಹೊಸ ಹೊಸ ಗಿಡಗಳನ್ನು ನೆಡುತ್ತಿರಬೇಕು ಎಂಬುದನ್ನು ವನಮಹೋತ್ಸವ ನೆನಪು ಮಾಡಿಕೊಡುತ್ತದೆ.

ಅರಣ್ಯವೆಂದರೆ ಗಿಡಮರಗಳ ಸಸ್ಯಸಮುದಾಯವಲ್ಲದೆ. ಆ ಪ್ರದೇಶದಲ್ಲಿರುವ ಕ್ರಿಮಿಕೀಟ, ಪ್ರಾಣಿ, ಅರಣ್ಯೋತ್ಪತ್ತಿ ಎಲ್ಲವೂ ಎಂದರ್ಥ.

ಪ್ರಸ್ತುತ ಭೂಪ್ರದೇಶದ ಮೂರನೆಯ ಒಂದು ಭಾಗ ಇಂದಿಗೂ ಅರಣ್ಯದಿಂದ ಕೂಡಿದೆ. ಇಂದಿನ ನಗರಗಳು ಮತ್ತು ಬಯಲು ಭೂಮಿಯ ಬಹುತೇಕ ಪ್ರದೇಶ ಬಹಳ ಹಿಂದೆ ಅರಣ್ಯಗಳಾಗಿಯೇ ಇದ್ದುವು. ದೊಡ್ಡ ದೊಡ್ಡ ಮರಗಳು ಉರುಳಿ ಅಥವಾ ಒಣಗಿ ನಶಿಸಿದ ಹಾಗೆಲ್ಲ ಆ ಸ್ಥಳದಲ್ಲಿ ಗಿಡಬಳ್ಳಿಗಳು ಮತ್ತೆ ಚಿಗುರುತ್ತಿದ್ದುವು. ಮರಗಿಡಗಳು ದಟ್ಟವಾಗಿ ಬೆಳೆಯುತ್ತಿದ್ದುವು. ಆದರೆ ಮನುಷ್ಯ ಅರಣ್ಯಗಳ ನಿರಾತಂಕವಾದ ಬೆಳವಣಿಗೆಗೆ ಅಡ್ಡಿಯಾದ; ಸಾಗುವಳಿಗೋಸ್ಕರ ಅರಣ್ಯವನ್ನು ಕಡಿದ. ಅರಣ್ಯಗಳಲ್ಲಿ ಬೆಳೆದಿದ್ದ ಮೃಗಗಳಲ್ಲಿ ಕೆಲವನ್ನು ಮಾನವ ಪಳಗಿಸಿದ. ಆತನ ಜೀವನಕ್ಕೆ ಅವು ನೆರವಾದುವು.

ಮನುಷ್ಯನ ಸೌಲಭ್ಯ ಸಾಧನಗಳು ಬೆಳೆದ ಹಾಗೆ ಮರಮುಟ್ಟುಗಳ ಸಲುವಾಗಿ ಹೆಮ್ಮರಗಳು ಒಂದಾದ ಮೇಲೆ ಒಂದು ಉರುಳಿದುವು. ಅರಣ್ಯ ಪ್ರದೇಶ ದಿನೇ ದಿನೇ ಕಡಮೆಯಾಗತೊಡಗಿತು. ಅರಣ್ಯವನ್ನೆಲ್ಲ ಆವರಿಸುವ ಬೆಂಕಿಯ ಉರಿಯನ್ನು ಕಾಡು ಕಿಚ್ಚು ಎನ್ನುತ್ತೇವೆ. ಜನ ನಿರ್ಲಕ್ಷ್ಯದಿಂದ ಹೊತ್ತಿಸಿಬಿಟ್ಟ ಬೆಂಕಿಯಿಂದ, ಅಥವಾ ಸಿಡಿಲಿನ ಹೊಡೆತಕ್ಕೆ ಎತ್ತರದ ಮರಗಳು ಸಿಲುಕಿ ಹತ್ತಿದ ಬೆಂಕಿಯಿಂದ ಕಾಡು ಕಿಚ್ಚು ಹಬ್ಬಬಹುದು. ಕೆಲವೇ ಗಂಟೆಗಳೊಳಗೆ ಕಾಡು ಕಿಚ್ಚು ಅರಣ್ಯದ ಸಹಸ್ರಾರು ಮರಗಳನ್ನೂ ಅವುಗಳಡಿ ಆಶ್ರಯ ಪಡೆದ ಮೃಗಪಕ್ಷಿಗಳನ್ನೂ ಸುಟ್ಟು ಬೂದಿಮಾಡುತ್ತದೆ. ಕ್ರಿಮಿಕೀಟಗಳು ಮತ್ತು ಸಸ್ಯಜಾಡ್ಯಗಳು. ಕಾಂಡವನ್ನು ಕೊರೆಯುವ, ಎಲೆಗಳನ್ನು ತಿಂದುಹಾಕುವ ಕೀಟಗಳು, ಅಣಬೆ ಮತ್ತು ಕ್ರಿಮಿಗಳು, ಸಸ್ಯದಿಂದ ಸಸ್ಯಕ್ಕೆ ಹರಡುವ ಸಾಂಕ್ರಾಮಿಕ ಜಾಡ್ಯ ಎಲ್ಲ ಮರಗಿಡಗಳನ್ನು ಆಹುತಿ ತೆಗೆದುಕೊಳ್ಳಬಹುದು.

ಮನುಷ್ಯನ ಪಾಲಿಗೆ ಅರಣ್ಯಗಳು ಬೆಲೆಬಾಳುವ ಆಸ್ತಿ. ಅರಣ್ಯದಿಂದ ದೊರಕುವ ಮರಮುಟ್ಟುಗಳು ಕಣ್ಣಿಗೆ ಕಾಣುವ ಸಂಪನ್ಮೂಲ. ಅಲ್ಲಿಯ ಸೌದೆ, ದಿಮ್ಮಿ, ಮರಮುಟ್ಟುಗಳ ಪೂರೈಕೆ ಮನುಷ್ಯ ಜೀವನಕ್ಕೆ ಅತ್ಯವಶ್ಯ. ಪರೋಕ್ಷವಾಗಿ ಕೂಡ ಅರಣ್ಯಗಳು ಮನುಷ್ಯನ ಪಾಲಿಗೆ ವರಪ್ರದಾನ. ಅರಣ್ಯಪ್ರದೇಶದ ನೆಲವೂ ಹವೆಯೂ ತಂಪು. ಉದುರಿದ ಎಲೆಟೊಂಗೆಗಳೂ ನೆಲದಲ್ಲಿ ಹರಡಿ ಬೆಳೆದ ಗಿಡಬಳ್ಳಿಗಳೂ ನೆಲದ ಮೇಲೊಂದು ಪದರವನ್ನು ನಿರ್ಮಿಸುತ್ತವೆ. ಹೀಗೆ ಗಾಳಿಯ ಮತ್ತು ಮಳೆನೀರಿನ ಹೊಡೆತದಿಂದ ಭೂಮಿಯ ಮಣ್ಣನ್ನೂ ಅರಣ್ಯ ಉಳಿಸುತ್ತದೆ. ಮಳೆ ಧಾರಾಕಾರವಾಗಿ ಸುರಿದಾಗ ನೀರು ಅರಣ್ಯಪ್ರದೇಶದಲ್ಲೆಲ್ಲ ಶೇಖರಗೊಂಡು ನಿಧಾನವಾಗಿ ಝರಿಗಳ ರೂಪದಲ್ಲಿ ನದಿಗೆ ಹರಿಯುತ್ತದೆ. ಅರಣ್ಯ ಪ್ರದೇಶಗಳ ಸಮೀಪದ ಚಿಲುಮೆಗಳು ಎಂದೂ ಬತ್ತುವುದಿಲ್ಲ. ಏಕೆಂದರೆ ಅರಣ್ಯದ ಮರಗಿಡಗಳ ನೆರಳಿನಡಿ, ಭೂಪದರಗಳಲ್ಲಿ ಶೇಖರಗೊಂಡ ನೀರು ಸುಲಭವಾಗಿ ಆವಿಯಾಗುವಂಥವಲ್ಲ. ಭೂಪಾತಗಳನ್ನೂ ಭೂಸವಕಳಿಯನ್ನೂ ಅರಣ್ಯಗಳು ತಡೆಗಟ್ಟುತ್ತವೆ. ಹವಾಮಾನವನ್ನು ನಿಯಂತ್ರಿಸುತ್ತವೆ ಸಹ.

ಅರಣ್ಯದ ವಿವಿಧ ಮರಗಳು ಮನುಷ್ಯನಿಗೆ ಮನೆ ಕಟ್ಟುವಾಗ. ಮೇಜು ಕುರ್ಚಿ ಇಂಥ ಸಾಮಾನುಗಳನ್ನು ಮಾಡುವಾಗ ಪ್ರಯೋಜನಕ್ಕೆ ಬರುತ್ತವೆ. ಭಾರತದ ಅರಣ್ಯಗಳಲ್ಲಿ ಸಾಮಾನುಗಳ ತಯಾರಿಕೆಯಲ್ಲಿ ಬಳಕೆಗೆ ಬರುವ 3.000 ಜಾತಿಗಳ ಮರಗಳಿವೆ. ಅರಣ್ಯಗಳಲ್ಲಿನ ಗಿಡಮೂಲಿಕೆಗಳು ಔಷಧಗಳಿಗೆ ಉಪಯೋಗವಾಗುತ್ತವೆ. ಮಹಾಪೂರ. ಭೂಕಂಪ. ವಿಪರೀತ ಮಳೆ ಮತ್ತು ಬಿರುಗಾಳಿ ಮುಂತಾದ ಕಾರಣಗಳಿಂದ ನೆಲದಡಿಯಲ್ಲಿ ಹುದುಗಿಹೋದ ಅರಣ್ಯಗಳು ಕಾಲಾಂತರದಲ್ಲಿ [illegible] ಕಲ್ಲಿದ್ದಲು. ಕಲ್ಲೆಣ್ಣೆ ಮುಂತಾದವುಗಳನ್ನು ಪೂರೈಸಿವೆ.

ಭಾರತದಲ್ಲಿ 6.95 ಲಕ್ಷ ಚದರ ಕಿಲೊಮೀಟರುಗಳು. ಎಂದರೆ ನೆಲದ ವಿಸ್ತೀರ್ಣದ ಸುಮಾರು ಶೇಕಡ 22 ಭಾಗ, ಅರಣ್ಯಗಳಿಂದ ತುಂಬಿವೆ.

ಇದು ಕಾರಣ. ಮೂರರಲ್ಲಿ ಒಂದು ಭಾಗ ಅರಣ್ಯದಿಂದ ಆವೃತವಾಗಿರುವುದು ದೇಶದ ಹಿತದೃಷ್ಟಿಯಿಂದ ಅಗತ್ಯ ಎಂದು ತಜ್ಞರು ಹೇಳುತ್ತಾರೆ.

ಸೋವಿಯೆತ್ ರಷ್ಯ ಮತ್ತು ಬ್ರೆಜಿಲ್‌ಗಳು ಪ್ರಪಂಚದ ಅತ್ಯಂತ ವಿಸ್ತಾರ ಅರಣ್ಯಗಳನ್ನು ಹೊಂದಿವೆ. ಉತ್ತರ ಮತ್ತು ದಕ್ಷಿಣ ಅಮೆರಿಕೆಗಳೂ ಅರಣ್ಯ ಸಂಪನ್ನ ದೇಶಗಳು. ಫಿನ್‌ಲೆಂಡ್ ಮತ್ತು ಸ್ವೀಡನ್‌ಗಳು ಸಂಪದ್ಭರಿತ ಅರಣ್ಯಗಳನ್ನು ಹೊಂದಿವೆ. ಪಶ್ಚಿಮ ದೇಶಗಳಲ್ಲಿ ವಿರಳವಾದ ಅರಣ್ಯಗಳು ಮಾತ್ರ ಇವೆ. ಚೀನ. ಆಸ್ಟ್ರೇಲಿಯ ಮತ್ತು ಆಫ್ರಿಕದ ಅನೇಕ ದೇಶಗಳು ಅತ್ಯಲ್ಪ ಸಂಖ್ಯೆಯ ಅರಣ್ಯಗಳನ್ನು ಹೊಂದಿವೆ.

ದೇಶದ ಅರಣ್ಯಗಳು ಒಂದು ಅಮೂಲ್ಯ ಸಂಪತ್ತು. ಅವನ್ನು ಎಚ್ಚರಿಕೆಯಿಂದ ರಕ್ಷಿಸಬೇಕು. ಬೆಳೆಸಬೇಕು.

## ಅರಬಿ ಸಮುದ್ರ

ಕೇರಳ. ಮೈಸೂರು. ಗೋವ. ಮಹಾರಾಷ್ಟ್ರ ರಾಜ್ಯಗಳು ಭಾರತ ದೇಶದ ಪಶ್ಚಿಮ ತೀರದಲ್ಲಿವೆ. ಅವುಗಳಿಗೆ ತಾಕಿಕೊಂಡಿರುವುದೇ ಅರಬಿ ಸಮುದ್ರ.

ಅರಬಿ ಸಮುದ್ರದ ದಕ್ಷಿಣ ಕೊನೆ 2.896 ಕಿಲೊಮೀಟರು ಅಗಲವಿದೆ. ಈ ಸಮುದ್ರದ ಉತ್ತರಕ್ಕೆ ಪಶ್ಚಿಮ ಪಾಕಿಸ್ತಾನ ಮತ್ತು ದಕ್ಷಿಣ ಇರಾನ್, ಪಶ್ಚಿಮಕ್ಕೆ ಅರೇಬಿಯ ರಾಷ್ಟ್ರಗಳಿವೆ.

ಅರಬಿ ಸಮುದ್ರದ ಎರಡು ಮುಖ್ಯ ಶಾಖೆಗಳೆಂದರೆ ಏಡನ್ ಕೊಲ್ಲಿ ಮತ್ತು ಒಮಾನ್ ಕೊಲ್ಲಿ. ಸಮುದ್ರದ ಪಶ್ಚಿಮ ಭಾಗದಲ್ಲಿ ತೀರದಿಂದ ಸುಮಾರು 322 ಕಿಲೊಮೀಟರು ದೂರದಲ್ಲಿ ದ್ವೀಪಸಮುಚ್ಚಯವಿದೆ. ಇದಕ್ಕೆ ಲಕ್ಷದ್ವೀಪಗಳು ಎನ್ನುತ್ತಾರೆ.

ಅರಬಿ ಸಮುದ್ರದ ಬಹುಭಾಗ ಸುಮಾರು 3.050 ಮೀಟರುಗಳಷ್ಟು ಆಳವಾಗಿದೆ. ಆಗ್ನೇಯದಲ್ಲಿ ಮಾಲ್ಡೀವ್ ಬೆಟ್ಟಸಾಲು ಸಮುದ್ರದ ಅಡಿಯಲ್ಲಿ 305 ಮೀಟರುಗಳಷ್ಟು ದೂರ ಉತ್ತರ ದಕ್ಷಿಣವಾಗಿ ಹರಡಿಕೊಂಡಿದೆ. ಹಾಗೆಯೇ ಸೊಕೋಟ್ರ ದ್ವೀಪದಿಂದ ಆಗ್ನೇಯಕ್ಕೆ ಕಾರ್ಲ್ಸ್‌ಬರ್ಗ್ ಬೆಟ್ಟಸಾಲು ಇದೆ. ಅರಬಿ ಸಮುದ್ರವನ್ನು ಹಿಂದೂಮಹಾಸಾಗರದಿಂದ ಬೇರ್ಪಡಿಸಿ ತೋರಿಸಲು ಏನೂ ಇಲ್ಲವಾದರೂ. ಈ ಬೆಟ್ಟಸಾಲನ್ನು ಗಡಿ ಎಂದು ಹೇಳುವುದುಂಟು.

ಅರಬಿ ಸಮುದ್ರ ಈಶಾನ್ಯ ಕ್ಲಪ್ತ ಮಾರುತ ಹಾಯುವ ಆಕ್ರಾಂತದಲ್ಲಿದೆ. ಈ ಮಾರುತದಿಂದ ನೌಕೆಗಳ ಯಾನಕ್ಕೆ ಅನುಕೂಲ. ಈ ಕಾರಣಕ್ಕಾಗಿ ವಾಣಿಜ್ಯಪವನ ಎಂದು ಈ ಮಾರುತವನ್ನು ಕರೆಯುತ್ತಾರೆ. ಇದು ಅಕ್ಟೋಬರ್‌ನಿಂದ ಮೇ ವರೆಗೆ ಬೀಸುತ್ತಿರುತ್ತದೆ. ಜೂನ್‌ನಿಂದ ಸೆಪ್ಟೆಂಬರ್‌ವರೆಗೆ ನೈಋತ್ಯ ಕ್ಲಪ್ತ ಮಾರುತ ಬೀಸುತ್ತದೆ. ಇದರ ಪರಿಣಾಮವಾಗಿ ಸಮುದ್ರ ಕ್ಷುಬ್ಧಗೊಂಡು ಘೋರ್ಗರೆಯುತ್ತದೆ. ಈ ಅವಧಿಯಲ್ಲಿ ನೌಕಾಯಾನ ಕಷ್ಟಕರ.

ಅರಬಿ ಸಮುದ್ರದ ದಂಡೆಯಲ್ಲಿರುವ ಪ್ರಮುಖ ಬಂದರುಗಳೆಂದರೆ ಮುಂಬಯಿ. ಕರಾಚಿ ಮತ್ತು ಏಡನ್. ಆಫ್ರಿಕ ಮತ್ತು ಯೂರೋಪ್ ಖಂಡಗಳ ದೇಶಗಳು ಭಾರತದೊಂದಿಗೆ ವ್ಯಾಪಾರವನ್ನು ಅರಬಿ ಸಮುದ್ರದ ಮೂಲಕವಾಗಿ ಮಾಡುತ್ತವೆ.



## ಅರವಿಂದ ಘೋಷ್

"ಈ ಬ್ರಿಟಿಷ್ ಸೆರೆಮನೆ ಎಂಬ ಆಶ್ರಮ ನನಗೆ ಪುರುಷೋತ್ತಮನ ದರ್ಶನ ಮಾಡಿಸಿತು...ನನಗೆ ಕೆಟ್ಟುದನ್ನು ಮಾಡಬಯಸಿದ ಶತ್ರುಗಳಿಂದಲೇ ನನಗೆ ಅತ್ಯಂತ ಉಪಕಾರವಾಯಿತು."

ಈ ಮಾತುಗಳನ್ನು ಬರೆದವರು ಅರವಿಂದ ಘೋಷರು.

ಎಂಥ ಜೀವನ ಸೆರೆಮನೆಯಲ್ಲಿ ? ಅವರೇ ಹೇಳಿದ್ದಾರೆ :

"ಒಂದು ವರ್ಷ ಮಾನವರ ಸಂಸರ್ಕವಿಲ್ಲದೆ. ಪಂಜರದಲ್ಲಿ ಹಾಕಿದ ಮೃಗದಂತೆ ಕಳೆದ ಅವಧಿ ಅದು."

ಭಾರತ ಇನ್ನೂ ಗುಲಾಮಗಿರಿಯಲ್ಲಿ ಇದ್ದ ಕಾಲ. 1908ರಲ್ಲಿ ಇಬ್ಬರು ಯುವಕರು ಒಬ್ಬ ಆಂಗ್ಲ ಅಧಿಕಾರಿಯನ್ನು ಕೊಲ್ಲಲು ಪ್ರಯತ್ನಿಸಿದರು. ಇದಕ್ಕೆ ಅರವಿಂದರ ಪ್ರೋತ್ಸಾಹವಿತ್ತೆಂದು ಸರಕಾರ ಅವರನ್ನೂ ಸೆರೆಯಲ್ಲಿಟ್ಟಿತು.

1872 ಆಗಸ್ಟ್ 15ರಂದು ಅರವಿಂದರು ಕಲ್ಕತ್ತ ನಗರದಲ್ಲಿ ಹುಟ್ಟಿದರು.

ಅರವಿಂದರಿಗೆ ಆರಂಭದ ವಿದ್ಯಾಭ್ಯಾಸ [illegible] ಶಾಲೆಯಲ್ಲಿ ದೊರೆಯಿತು. ಏಳು ವರ್ಷ ವಯಸ್ಸಾಗಿದ್ದಾಗ [illegible]

ಪ್ರಭುತ್ವ ಉದುರಿಹೋಗುತ್ತದೆ–ಎಂದು ಲೆನಿನ್ ಹೇಳಿದ. ಅವನ ದೃಷ್ಟಿಯಲ್ಲಿ ಆ ಸ್ಥಿತಿ ಕಮ್ಯೂನಿಸಮಿನ ಅಂತಿಮ ಗುರಿ : ಅದು ಅರಾಜಕತೆಯಲ್ಲ. ವರ್ಗರಹಿತ ಪ್ರಭುತ್ವರಹಿತ ಸಮಾಜ.

ರಷ್ಯದಲ್ಲಿ ಅರಾಜಕತೆ ಹತ್ತೊಂಬತ್ತನೆಯ ಶತಮಾನದ ಅಂತ್ಯದಲ್ಲಿ ಎಳೆಯ ಜನಾಂಗದ ಪಾಲಿಗೆ ದೊಡ್ಡ ಆಕರ್ಷಣೆಯಾಗಿತ್ತು. ಲೆನಿನನ ಅಣ್ಣ ಬಾಲ್ಯದಲ್ಲಿ ಅರಾಜಕರ ಪಂಗಡವನ್ನು ಸೇರಿದ. ಜಾರ್ ಚಕ್ರವರ್ತಿಯ ಕೊಲೆಯ ಸಂಚಿನಲ್ಲಿ ಭಾಗಿಯಾದವನೆಂದು ಅವನನ್ನು ಗಲ್ಲಿಗೇರಿಸಿದರು. ಯೂರೋಪಿನ ಇತರ ರಾಷ್ಟ್ರಗಳಲ್ಲೂ ಅರಾಜಕ ಮನೋಭಾವದ ಕ್ರಾಂತಿಕಾರರು ಹಲವರಿದ್ದರು.

ಸರಕಾರ, ಶಾಸನ ಯಾವುದೇ ಬಗೆಯ ನಿರ್ಬಂಧ–ಕಟ್ಟುಪಾಡು ಇಲ್ಲದ ಸಮಾಜರಚನೆಯ ಕಲ್ಪನೆ ಇಂಗ್ಲೆಂಡಿನಲ್ಲಿತ್ತು. ಅದು ಆದರ್ಶರಾಜ್ಯದ ಕನಸು, ಯುಟೋಪಿಯ. ಈ ಕನಸು ಕೈಗೂಡಿದಾಗ ಘರ್ಷಣೆ-ಜಂಜಡ ಮಾಯವಾಗಿ ವಿಶ್ವದಲ್ಲೆಲ್ಲ ಜನ ಸುಖಿಗಳಾಗಿ ಇರಬಹುದು ಎಂಬುದು ಯುಟೋಪಿಯ ಪ್ರತಿಪಾದಕರ ಅಭಿಪ್ರಾಯ. ಈ ವಿಚಾರ ಅನೇಕ ಬುದ್ಧಿಜೀವಿಗಳಿಗೆ ಮೋಹಕವಾಗಿತ್ತು.

ಆದರೆ ಯುಟೋಪಿಯ ಕಲ್ಪನೆಯಾಗಲೀ. ಅರಾಜಕತೆಯ ರಾಜಕೀಯ ಸಿದ್ಧಾಂತವಾಗಲೀ ಕನಸಿನ ಲೋಕದಿಂದ ಕಾರ್ಯರಂಗಕ್ಕೆ ಇಳಿದಾಗ, ಜನರ ಸಂಕಟ ತೀವ್ರಗೊಳ್ಳುತ್ತದೆ; ಅಶಾಂತಿ ಹೆಚ್ಚು ಹೆಚ್ಚು ಹೊಗೆಯಾಡುತ್ತದೆ: ಹಾಲಾಹಲ ಹರಡುತ್ತದೆ.


ಗ್ರೀಕ್ ತಾತ್ತ್ವಿಕ ಅರಿಸ್ಟಾಟಲ್

## ಅರಿಸ್ಟಾಟಲ್

ಸಾಕ್ರಟೀಸ್—ಪ್ಲೇಟೋ—ಅರಿಸ್ಟಾಟಲ್.

ಪ್ರಪಂಚದ ಚರಿತ್ರೆಯಲ್ಲಿಯೆ ಆಶ್ಚರ್ಯವನ್ನುಂಟುಮಾಡುವ ಗುರು–ಶಿಷ್ಯ ಪರಂಪರೆ ಇದು. ಮೂವರೂ ಅತ್ಯಂತ ಪ್ರತಿಭಾಶಾಲಿಗಳು. ಸಾಕ್ರಟೀಸ್ ಲೋಕಪ್ರಖ್ಯಾತ ತಾತ್ತ್ವಿಕ. ಪ್ಲೇಟೋ ಅವನಿಗಿಂತ ಪ್ರಸಿದ್ಧನಾದವನು. ಅರಿಸ್ಟಾಟಲ್ ಲೋಕಪ್ರಸಿದ್ಧ ತಾತ್ತ್ವಿಕ. ಅಲ್ಲದೆ ವಿಜ್ಞಾನದ ಇತಿಹಾಸದಲ್ಲೂ ಇವನಿಗೆ ಹಿರಿಯ ಸ್ಥಾನ.

ಚರಿತ್ರೆಯಲ್ಲಿ ಅಲೆಗ್ಸಾಂಡರನ ಹೆಸರನ್ನು ಕೇಳುತ್ತೇವೆ. ಅಲೆಗ್ಸಾಂಡರ್ ಭಾರತದ ಮೇಲೂ ದಂಡೆತ್ತಿ ಬಂದವನು. ಈ ಗ್ರೀಕ್ ವೀರನ ಗುರು ಅರಿಸ್ಟಾಟಲ್. ಅರಿಸ್ಟಾಟಲನ ಶಿಷ್ಯನೆಂದು ಅಲೆಗ್ಸಾಂಡರನಿಗೆ ಅಭಿಮಾನ. ಅರಿಸ್ಟಾಟಲನಿಗೂ ರಾಜಕೀಯದಲ್ಲಿ ಅಪಾರ ಆಸಕ್ತಿ. "ಮಾನವ ರಾಜಕೀಯ ಪ್ರಾಣಿ." ಎಂಬುದು ಅವನ ನುಡಿ.

ಅರಿಸ್ಟಾಟಲ್ ಕ್ರಿ. ಪೂ. 384ರಲ್ಲಿ ಗ್ರೀಸಿನ ಸ್ಟಜಿರ ಎಂಬಲ್ಲಿ ಹುಟ್ಟಿದ. ತಂದೆ ಮ್ಯಾಸಿಡೋನಿಯದ ದೊರೆಯ ಆಸ್ಥಾನದಲ್ಲಿ ವೈದ್ಯ. ಅರಿಸ್ಟಾಟಲನ ತಂದೆ. ಆ ಕಾಲದ ವಿಜ್ಞಾನ ಮತ್ತು ತತ್ತ್ವಶಾಸ್ತ್ರಗಳಲ್ಲಿ ಮಗನಿಗೆ ಆಸಕ್ತಿ ಬೆಳೆಯಲು ಕಾರಣನಾದ.

ಹದಿನೇಳು ವರ್ಷದ ಅರಿಸ್ಟಾಟಲ್ ಅಥೆನ್ಸಿಗೆ ಹೋಗಿ ಪ್ರಸಿದ್ಧ ತತ್ತ್ವಶಾಸ್ತ್ರಜ್ಞ ಪ್ಲೇಟೋನ ಶಿಷ್ಯನಾದ. ಸುಮಾರು ಇಪ್ಪತ್ತು ವರ್ಷಗಳ ಕಾಲವನ್ನು ಅಲ್ಲಿ ಕಳೆದ. ಅರಿಸ್ಟಾಟಲ್ ಪ್ಲೇಟೋನಿಗೆ ಪ್ರಿಯನಾದ ಶಿಷ್ಯ. ನಿಜ. ಆದರೆ ಗುರು ಕಲಿಸಿದ್ದೆಲ್ಲವನ್ನೂ ಉರುಹೊಡೆಯುವ ಶಿಷ್ಯನಾಗಿ ಇಲ್ಲ. ಅರಿಸ್ಟಾಟಲ್ ಗುರುವಿನ ಮುಂದೆ ಚುರುಕಾದ ಪ್ರಶ್ನೆಗಳನ್ನು ಇಡುತ್ತಿದ್ದ. ಇದರಿಂದ ಪ್ಲೇಟೋಗೆ ಬಹಳ ಸಂತೋಷ. ಕರು ತಾಯಿಯ ಮೊಲೆಯುಣ್ಣುವಾಗ ಗುದ್ದುವಂತೆ ತನ್ನನ್ನು ಅರಿಸ್ಟಾಟಲ್ ಗುದ್ದುತ್ತಾನೆ ಎಂದು ಹಿಗ್ಗಿನಿಂದ ಹೇಳುತ್ತಿದ್ದ. "ನಾನು ಪ್ಲೇಟೋನನ್ನು ಪ್ರೀತಿಸುತ್ತೇನೆ. ಅದಕ್ಕಿಂತ ಹೆಚ್ಚಾಗಿ ತತ್ತ್ವವಿಚಾರವನ್ನು ಪ್ರೀತಿಸುತ್ತೇನೆ" ಎಂದಿದ್ದಾನೆ ಅರಿಸ್ಟಾಟಲ್.

ಅರಿಸ್ಟಾಟಲನಿಗೆ ಮೂವತ್ತೇಳು ವರ್ಷಗಳಾಗಿದ್ದಾಗ ಪ್ಲೇಟೋ ಕಾಲವಾದ. ಗ್ರೀಕ್‌ಭಾಷೆಯಲ್ಲಿ 'ಅಕಾಡೆಮಿ' ಎಂದು ಕರೆಯುತ್ತಿದ್ದ ಅವನ ವಿದ್ಯಾಕೇಂದ್ರವನ್ನು ನಡೆಸಿಕೊಂಡು ಹೋಗಲು ಅರಿಸ್ಟಾಟಲನಿಗಿಂತ ಅರ್ಹರಾದವರು ಬೇರೆ ಇರಲಿಲ್ಲ. ಆದರೆ ಅರಿಸ್ಟಾಟಲ್ ಸ್ವತಂತ್ರವಾಗಿ ತನ್ನ ವಿಚಾರಗಳನ್ನು ಬೆಳೆಸಿಕೊಳ್ಳಲು ಬಯಸಿದ. ಅಕಾಡೆಮಿಯನ್ನು ಬಿಟ್ಟು ಸ್ವಲ್ಪಕಾಲ ಅಲ್ಲಿ ಇಲ್ಲಿ ಅಲೆದಾಡಿದ. ಮ್ಯಾಸಿಡೋನಿಯದ ದೊರೆ ಫಿಲಿಪನ ಆಹ್ವಾನವನ್ನು ಒಪ್ಪಿ, ಅವನ ಮಗ ಅಲೆಗ್ಸಾಂಡರನಿಗೆ ಗುರುವಾದ. ಅಲೆಗ್ಸಾಂಡರನ ಮೇಲೆ ಅರಿಸ್ಟಾಟಲ್ ಎಷ್ಟರ ಮಟ್ಟಿಗೆ ಪ್ರಭಾವ ಬೀರಿದನೋ ಗೊತ್ತಿಲ್ಲ. ಆದರೆ [illegible]

ಕ್ಷಿಪಿತರಾಗಿದ್ದರು. ಅಲೆಗ್ಸಾಂಡರ್ ಮ್ಯಾಸಿಡೋನಿಯದ ದೊರೆಯಾದ ಮೇಲೆ ಅರಿಸ್ಟಾಟಲ್, ಅಲೆಗ್ಸಾಂಡರ್ ಕೊಟ್ಟಿದ್ದ ಹಣದ ಸಹಾಯದಿಂದ ಒಂದು ವಿದ್ಯಾಕೇಂದ್ರವನ್ನು ಅಥೆನ್ಸ್‌ನಲ್ಲಿ ತೆರೆದ. ಗ್ರೀಕ್ ಭಾಷೆಯಲ್ಲಿ ಅದಕ್ಕೆ 'ಲೈಸಿಯಂ' ಎನ್ನುತ್ತಿದ್ದರು. ಲೈಸಿಯಂನಲ್ಲಿ ಆಗಿನ ಕಾಲಕ್ಕೆ ಅತಿ ದೊಡ್ಡದೆನಿಸಿದ ಒಂದು ಪುಸ್ತಕ ಭಂಡಾರ, ಪ್ರಕೃತಿ ವಿಜ್ಞಾನಕ್ಕೆ ಸಂಬಂಧಿಸಿದ ಸಂಗ್ರಹಾಲಯ, ಒಂದು ತೋಟ, ಒಂದು ಪ್ರಾಣಿ ಸಂಗ್ರಹಾಲಯ ಇದ್ದುವು. ಅವನು ಬೋಧಿಸುತ್ತಿದ್ದ ರೀತಿ ವಿಶಿಷ್ಟವಾಗಿತ್ತು. ಅರಿಸ್ಟಾಟಲ್ ತಂಪಾಗಿದ್ದ ಕಾಲುದಾರಿಯಲ್ಲಿ ಓಡಾಡುತ್ತ ತನ್ನ ವಿದ್ಯಾರ್ಥಿಗಳ ಜೊತೆಯಲ್ಲಿ ಚರ್ಚೆ ಮಾಡುತ್ತಿದ್ದ. ತಂಪಾದ ಕಾಲು ಮಾರ್ಗಕ್ಕೆ ಗ್ರೀಕ್ ಭಾಷೆಯಲ್ಲಿ ಪೆರಿಪ್ಯಾಟಸ್ ಎನ್ನುತ್ತಾರೆ. ಆದ್ದರಿಂದಲೇ ಅರಿಸ್ಟಾಟಲನ ತತ್ತ್ವಗಳನ್ನು ಒಪ್ಪಿಕೊಂಡವರಿಗೆ ಪೆರಿಪ್ಯಾಟಿಟಿಕ್ಸ್—ಕಾಲುಮಾರ್ಗದವರು— ಎಂದು ಹೆಸರು ಬಂದಿತು.

ಅರಿಸ್ಟಾಟಲನ ಶಾಲೆಗೆ ಸೇರಲು ವಿದ್ಯಾರ್ಥಿಗಳ ನೂಕುನುಗ್ಗಲು ಜಾಸ್ತಿಯಾಗಿ, ವಿದ್ಯಾರ್ಥಿಗಳಲ್ಲಿ ಶಿಸ್ತು ಉಂಟುಮಾಡಲು ಅನೇಕ ನಿಯಮಗಳನ್ನು ಜಾರಿಗೆ ತರಬೇಕಾಯಿತು. ವಿದ್ಯಾರ್ಥಿಗಳೇ ನಿಯಮಗಳನ್ನು ರೂಪಿಸುತ್ತಿದ್ದರು.

ಅರಿಸ್ಟಾಟಲನ ಲೈಸಿಯಂ ಪ್ಲೇಟೋನ ಅಕಾಡೆಮಿಯ ಪ್ರತಿರೂಪವಾಗಿರಲಿಲ್ಲ. ಪ್ಲೇಟೋನ ಅಕಾಡೆಮಿಯಲ್ಲಿ ಗಣಿತಶಾಸ್ತ್ರಕ್ಕೂ ತತ್ತ್ವಶಾಸ್ತ್ರಕ್ಕೂ ಹೆಚ್ಚಿನ ಪ್ರಾಮುಖ್ಯ. ಅರಿಸ್ಟಾಟಲನ ಲೈಸಿಯಂನಲ್ಲಿ ಜೀವಶಾಸ್ತ್ರಕ್ಕೂ ಪ್ರಕೃತಿವಿಜ್ಞಾನಕ್ಕೂ ಹೆಚ್ಚಿನ ಪ್ರಾಶಸ್ತ್ಯ. ಅರಿಸ್ಟಾಟಲನಿಗೆ ಬೇಕಾದ ವೈಜ್ಞಾನಿಕ ಮಾದರಿಗಳನ್ನು ಸಂಗ್ರಹಿಸುವಂತೆ ಅಲೆಗ್ಸಾಂಡರ್ ಬೇಟೆಗಾರರಿಗೆ, ತೋಟಗಾರರಿಗೆ, ಬೆಸ್ತರಿಗೆ ಹೇಳಿದ್ದ. ಪ್ರತಿಯೊಂದು ದೇಶದ ಸಸ್ಯ ಮತ್ತು ಪ್ರಾಣಿ ಸಂಪತ್ತಿನ ಮಾದರಿಗಳನ್ನು ಸಂಗ್ರಹಿಸಲು ಸಾವಿರಕ್ಕೂ ಹೆಚ್ಚು ಜನ ಗ್ರೀಸ್ ಮತ್ತು ಏಷ್ಯದಲ್ಲಿ ನಿಯೋಜಿತರಾಗಿದ್ದರು ಎನ್ನುತ್ತಾರೆ. ಜೀವಶಾಸ್ತ್ರದ ಪಿತಾಮಹನೆಂದೂ ಅರಿಸ್ಟಾಟಲ್ ಮುಂದೆ ಪ್ರಖ್ಯಾತನಾದ.

ಅರಿಸ್ಟಾಟಲ್ ತನ್ನ ಶಿಷ್ಯರಿಗೆ ಪಾಠ ಹೇಳುತ್ತಿದ್ದುದಲ್ಲದೆ, ಸಾಮಾನ್ಯ ಜನರಿಗೂ ಅರ್ಥವಾಗುವಂತೆ ಉಪನ್ಯಾಸಗಳನ್ನು ಮಾಡುತ್ತಿದ್ದ.

ಕ್ರಿ. ಪೂ. 323ರಲ್ಲಿ ಬ್ಯಾಬಿಲನಿನಲ್ಲಿ ಅಲೆಗ್ಸಾಂಡರ್ ಕಾಲವಾದನೆಂಬ ಸುದ್ದಿ ಬಂದಕೂಡಲೇ ಅಥೆನ್ಸಿನಲ್ಲಿ ಅರಿಸ್ಟಾಟಲನ ಜೀವಕ್ಕೆ ಅಪಾಯ ಒದಗಿತು. ಅರಿಸ್ಟಾಟಲ್ ಕಾಲ್ಸಿಸ್ ಎಂಬಲ್ಲಿಗೆ ಓಡಿಹೋಗಿ, ಮರು ವರ್ಷ ತನ್ನ ಅರವತ್ತಮೂರನೆಯ ವಯಸ್ಸಿನಲ್ಲಿ ಕಾಲವಾದ.

ಅರಿಸ್ಟಾಟಲ್ ನಾಲ್ಕು ನೂರು ಪುಸ್ತಕಗಳನ್ನು ಬರೆದನೆಂದು ಹೇಳುತ್ತಾರೆ. ಅವನ ಹೆಸರಿಗೆ ಉಳಿದಿರುವ ಐವತ್ತು ಗ್ರಂಥಗಳಲ್ಲಿ ಅರ್ಧ ಭಾಗ ನಿಜವಾಗಿ ಅವನೇ ಬರೆದ ಎಂದು ತೋರುತ್ತದೆ. ಅರಿಸ್ಟಾಟಲನ ಪುಸ್ತಕಗಳು ಕ್ರಿ. ಪೂ. ನಾಲ್ಕನೆಯ ಶತಮಾನದ ಗ್ರೀಕ್ ವಿದ್ವತ್ತಿನ ವಿಶ್ವಕೋಶ ಎನ್ನಬಹುದು. ಅವನು ಖಗೋಳಶಾಸ್ತ್ರ, ಭೌತಶಾಸ್ತ್ರ, ಕಾವ್ಯ, ಜೀವಶಾಸ್ತ್ರ, ಪ್ರಾಣಿಶಾಸ್ತ್ರ, ರಾಜ್ಯಶಾಸ್ತ್ರ, ತರ್ಕಶಾಸ್ತ್ರ, ನೀತಿಶಾಸ್ತ್ರ, ವಾಕ್ಚಾತುರ್ಯ ಇವೆಲ್ಲದರ ಮೇಲೆ ಗ್ರಂಥರಚನೆ ಮಾಡಿದ. ಅವನ ಅಭಿಪ್ರಾಯಗಳೆಲ್ಲವೂ ಎಲ್ಲ ಕಾಲಕ್ಕೂ ಸತ್ಯವಾಗಿ ತೋರದಿರಬಹುದು. ಆದರೂ ಎರಡು ಸಾವಿರ ವರ್ಷಕ್ಕೂ ಹಿಂದೆ ಅವನು ಮಾಡಿದ ಎಷ್ಟೋ ಅವಲೋಕನಗಳು ಸರಿಯಾಗಿಯೇ ಇವೆಯೆಂದು ಈಗಿನ ವಿಜ್ಞಾನಿಗಳೂ ಒಪ್ಪುತ್ತಾರೆ. ಹನ್ನೆರಡನೆಯ ಶತಮಾನದವರೆಗೆ ಕ್ರೈಸ್ತರು ಗ್ರೀಕ ತತ್ತ್ವಜ್ಞಾನಿಗಳ ಕೃತಿಗಳನ್ನು ಓದುವುದು ಅಪರಾಧವಾಗಿತ್ತು. ಆದರೆ ಇದು ಅರಿಸ್ಟಾಟಲನ ಕೃತಿಗಳಿಗೆ ಮಾತ್ರ ಅನ್ವಯಿಸಲಿಲ್ಲ. ಅವನ್ನು ಓದಲು ಅನುಮತಿ ಇತ್ತು.

ಜಗತ್ತಿನ ಜ್ಞಾನ ಭಂಡಾರದೊಳಗೆ ಪ್ರವೇಶ ಪಡೆಯಲು, ಅದರ ಬಾಗಿಲು ತೆರೆಯಲು, ಅರಿಸ್ಟಾಟಲ್ ಉಪಯೋಗಿಸುತ್ತಿದ್ದ ಬೀಗದ ಕೈ, ತರ್ಕ. ಅವನು ಗಳಿಸಿದ ಜ್ಞಾನಕ್ಕೆ ಆಧಾರ, ವಸ್ತುಸ್ಥಿತಿ, ಅವಲೋಕನ, ಸುತ್ತಲಿನ ಜಗತ್ತನ್ನು ಎಚ್ಚರಿಕೆಯಿಂದ ಗಮನಿಸಿ ವಾಸ್ತವಿಕ ಅಂಶಗಳಿಂದ ಸಿದ್ಧಾಂತವನ್ನು ರೂಪಿಸುವ ವಿಜ್ಞಾನಿಯ ಮನೋಧರ್ಮ. ಪ್ಲೇಟೋಗಿಂತ ಅರಿಸ್ಟಾಟಲ್ ತರ್ಕಕ್ಕೆ ಹೆಚ್ಚಿನ ಮಹತ್ವವನ್ನು ನೀಡಿದ. ಜಗತ್ತು ಪ್ಲೇಟೋಗೆ ಅಪಾರ ಗೌರವ ತೋರಿದೆ. ಆದರೆ ವಾಸ್ತವವಾದಿಗಳಿಗೆ, ವಿಚಾರವಂತರಿಗೆ ಅರಿಸ್ಟಾಟಲನೇ ಹೆಚ್ಚು ಅಚ್ಚುಮೆಚ್ಚು.

ನೋಡಿ : ಅಲೆಗ್ಸಾಂಡರ್ : ಪ್ಲೇಟೋ: ಸಾಕ್ರಟೀಸ್

## ಅರೇಬಿಯ

ಮುಸಲ್ಮಾನರು ಯಾವಾಗಲೂ ಮೆಕ್ಕಾ ಪಟ್ಟಣ ಇರುವ ದಿಕ್ಕಿಗೆ ತಿರುಗಿ ನಮಾಜು ಮಾಡುತ್ತಾರೆ. ಅವರ ಧರ್ಮಸ್ಥಾಪಕ ಮಹಮ್ಮದ್ ಪೈಗಂಬರ್ ಇದ್ದದ್ದು ಮೆಕ್ಕಾದಲ್ಲಿ. ಮುಸಲ್ಮಾನರ ಪುಣ್ಯಕ್ಷೇತ್ರ ಮೆಕ್ಕಾ ಇರುವುದು ಅರೇಬಿಯದಲ್ಲಿ.

ಕೆಂಪು ಸಮುದ್ರ ಹಾಗೂ ಪರ್ಷಿಯನ್ ಕೊಲ್ಲಿಗಳ ನಡುವೆ ಅರೇಬಿಯ ಇದೆ. ಇದೊಂದು ಪರ್ಯಾಯದ್ವೀಪ. ಇದರಲ್ಲಿ ಜೋರ್ಡಾನ್, ಇರಾಕ್, ಸೌದಿ ಅರೇಬಿಯ, ಸಿರಿಯ, ಯೆಮೆನ್, ಬಹರಿನ್ ಮುಂತಾದ ರಾಜ್ಯಗಳು ಸೇರಿವೆ.

ಅರೇಬಿಯದ ಒಳನಾಡು ಬಂಜರು ಮರುಭೂಮಿ. ನೀಫದ್ ಮರುಭೂಮಿ ಮತ್ತು ರುಬ್–ಅಲ್–ಖಲಿ ಮರುಭೂಮಿಗಳ ನಡುವೆ ಷಮ್ಮಾರ್ ಚಿಲುಮೆ ಇದೆ. ಇದು ಫಲವತ್ತಾದ ಜಾಗ. ಅರೇಬಿಯದ ತೀರ ಪ್ರದೇಶಗಳಿಗೆ ಪರ್ವತದಿಂದ ಬರುವ ನೀರಿನ ಆಸರೆ ಇದೆ.

ಅರೇಬಿಯದ ಫಲವತ್ತಾದ ಭಾಗವೆಂದರೆ ಯೆಮೆನ್. ರೋಮನ್ನರು ಇದನ್ನು 'ಅದೃಷ್ಟವಂತ ಅರೇಬಿಯ' ಎಂದು ಕರೆಯುತ್ತಿದ್ದರು. ಆಫ್ರಿಕದಿಂದ ಬೀಸಿ ಬರುವ ಬಿರುಗಾಳಿಯಿಂದಾಗಿ ಯೆಮೆನ್‌ನ ಹೆಚ್ಚು ಭಾಗ ಒಣಗಿದಂತಿದೆ.

ಹಿಲ್ಲಿಯ ಜಾತಿಗೆ ಸೇರಿದ ಗಾಜೆಲ್ ಎನ್ನುವ ಪ್ರಾಣಿ ಮರುಭೂಮಿಯಲ್ಲಿ ವಾಸಿಸುತ್ತದೆ. ಅದರ ಮಾಂಸವೆಂದರೆ ಅರಬರಿಗೆ ಬಹಳ ಮೆಚ್ಚು. ಒಂಟೆ ಅರಬರು ಸಾಕುವ ಮುಖ್ಯ ಪ್ರಾಣಿ. ಅವರ ವ್ಯಾಪಾರ, ಪ್ರವಾಸ ಎಲ್ಲವೂ ಒಂಟೆಯ ನೆರವಿನಿಂದಲೇ. ನೀರಿರದ ಮರಳುಗಾಡಿನಲ್ಲಿ ಸುಖವಾಗಿ ಬದುಕುವ ಪ್ರಾಣಿ ಈ ಒಂಟೆ. ಅರೇಬಿಯದ ಕುದುರೆಗಳು ಆಕಾರದ ಸೊಬಗಿಗೂ ವೇಗಕ್ಕೂ ಪ್ರಸಿದ್ಧ.

ಬಹರಿನ್ ದ್ವೀಪಗಳಲ್ಲಿ ಮುತ್ತುಗಳು ದೊರಕುತ್ತವೆ. ಬಹರಿನ್ ರಾಜನ ಆಡಳಿತದಲ್ಲಿದೆ. ತೈಲ ನಿಕ್ಷೇಪವನ್ನು ಪತ್ತೆಹಚ್ಚಿದ ಮೇಲೆ ನಾಡಿನ ಆರ್ಥಿಕ ವ್ಯವಹಾರ, ಜೀವನದ ರೀತಿ ಬದಲಾಗುತ್ತಿದೆ. ಹಾಲು, ಬೆಣ್ಣೆ, ಗಿಣ್ಣು, ಪಶು ಗಳಗಳು ಪರದೇಶೀಯರ ಅಧೀನದಲ್ಲಿ ಇವೆ. ಮೆಕ್ಕಾದ ಸಮೀಪದಲ್ಲಿ ಪ್ರಾಚೀನ ಇಸ್ರೇಲಿನ ಅರಸ ಸಾಲೊಮನ್ ದೊರೆಯ (ಸುಮಾರು ಕ್ರಿ. ಪೂ. 974–937) ಕಾಲದಲ್ಲಿದ್ದ ಚಿನ್ನದ ಗಣಿಯಲ್ಲಿ ಈಗ ಪುನಃ ಚಿನ್ನ ದೊರೆಯುತ್ತಿದೆ. ಹ್ಯಾಧ್ರಮೌಟ್ ಪ್ರದೇಶದಲ್ಲಿ ಸಾಂಬ್ರಾಣಿ, ಮಿರ್ ಎನ್ನುವ ಸುವಾಸನಾ ಸಸ್ಯ ದೊರಕುತ್ತದೆ.

ಯೆಮೆನ್‌ನಲ್ಲಿ ರಾಗಿ, ಖರ್ಜೂರ, ಕಾಫಿ ಬೆಳೆಯುತ್ತಾರೆ. ಹೊಡೆಯ್ದ ಬಂದರಿನಿಂದ ಖರ್ಜೂರವನ್ನೂ ಕಾಫಿಯನ್ನೂ ರಫ್ತು ಮಾಡುತ್ತಾರೆ. ನೀರಿನ ಸೌಕರ್ಯವಿರುವ ಕಡೆಗಳಲ್ಲಿ ಖರ್ಜೂರ, ನೀಲಿ, ಹೊಗೆಸೊಪ್ಪು, ಧಾನ್ಯಗಳು ಬೆಳೆಯುತ್ತವೆ.

ಸಾಂಬ್ರಾಣಿ, ಮಿರ್ ಸುವಾಸನಾ ಸಸ್ಯಗಳನ್ನು ರಫ್ತು ಮಾಡುವ ಉದ್ಯೋಗ ಬಹು ಹಿಂದಿನಿಂದಲೂ ನಡೆದುಕೊಂಡು ಬಂದಿದೆ. ತೈಲ ಕ್ಷೇತ್ರದಲ್ಲಿ ಬಹಳ ಜನ ಕೆಲಸ ಮಾಡುತ್ತಿದ್ದಾರೆ. ಉಣ್ಣೆ ಬಟ್ಟೆ ಮತ್ತು ಚರ್ಮದ ಕೈಗಾರಿಕೆಗಳಿವೆ.

ಅರೇಬಿಯದಲ್ಲಿ ಹೆಚ್ಚಿನ ಜನ ಜಲಮೂಲಗಳ ಬಳಿ ಕೃಷಿಕರಾಗಿ ಬಾಳುತ್ತಿದ್ದಾರೆ. ಉಳಿದವರು ಅಲೆಮಾರಿಗಳು. ಇವರ ವಾಸ ಕಪ್ಪು ಡೇರೆಗಳಲ್ಲಿ.

ಅರೇಬಿಯದವರಲ್ಲಿ ಬಹು ಪಾಲು ಮುಸಲ್ಮಾನ ಧರ್ಮಾನುಯಾಯಿಗಳು. ಇತರ ಧರ್ಮಗಳನ್ನು ಅನುಸರಿಸುವವರೂ ಇದ್ದಾರೆ. ಇವರಲ್ಲಿ ಯಹೂದ್ಯರ ಭಾಷೆ, ಉಡುಗೆ–ತೊಡುಗೆ, ಆಚಾರ-ವ್ಯವಹಾರಗಳು ಅರಬರಂತೆಯೇ ಇವೆ. ಯೂರೋಪಿನಲ್ಲಿ ಕಲೆ ಮತ್ತು ಶಿಕ್ಷಣ ಬಹು ಕೆಳಮಟ್ಟದಲ್ಲಿದ್ದಾಗ ಅರಬರು ವಿಜ್ಞಾನ, ಸಾಹಿತ್ಯ, ಕಲೆ ಮತ್ತು ಯುದ್ಧವಿದ್ಯೆಯಲ್ಲಿ ಅನುಭವ ಹೊಂದಿದ್ದರು. ಗ್ರೀಕರು ಮತ್ತು ಪರ್ಷಿಯನ್ನರ ಸಂಸ್ಕೃತಿಯನ್ನು ಮೆಚ್ಚಿ ತಮ್ಮದನ್ನಾಗಿ ಮಾಡಿಕೊಂಡರು. ಯೂರೋಪು ಅನಾಗರಿಕತೆಯ ಅಂಧಕಾರದಲ್ಲಿ ಮುಳುಗಿದ್ದಾಗಲೇ ಅರಬಿ ನಗರಗಳಾದ ಬಾಗ್ದಾದ್, ಕೈರೋ ನಾಗರಿಕತೆಯ ಶಿಖರವನ್ನು ಮುಟ್ಟಿದ್ದುವು. ಭಾರತದ ಜ್ಞಾನಸಂಪತ್ತು ಪಾಶ್ಚಾತ್ಯ ಪ್ರಪಂಚವನ್ನು ಪ್ರಾಚೀನ ಕಾಲದಲ್ಲಿ ಸೇರಿದ್ದು ಅರೇಬಿಯದ ಮೂಲಕವೇ.

ಮಲಯ ಮತ್ತು ಈಸ್ಟ್ ಇಂಡೀಸ್‌ಗಳ ಜೊತೆ ವ್ಯಾಪಾರ ಸಂಬಂಧವನ್ನು ಒಂದು ಸಾವಿರಕ್ಕೂ ಹೆಚ್ಚು ವರ್ಷಗಳಿಂದ ಉಳಿಸಿ, ಬೆಳೆಸಿಕೊಂಡು ಬಂದಿದ್ದಾರೆ. ಇವರ ನಾವೆಗಳು ಯಾನ ಮಾಡುತ್ತಿದ್ದುದರಿಂದಲೇ ಭಾರತದ ಪಶ್ಚಿಮ ಕಡಲು ಅರಬಿ ಸಮುದ್ರವಾಯಿತು.

ಅರಬರಲ್ಲಿ ರೈತಾಪಿ ಜನ ಹೆಚ್ಚು. ಬಹು ಪಾಲು ಅನಕ್ಷರಸ್ಥರು.

ಹಿಂದೆ ಅರಬರು ಭೂಪ್ರಯಾಣಕ್ಕೆ ಒಂಟೆಯನ್ನು ಬಳಸುತ್ತಿದ್ದರು. ಈಚೆಗೆ ಕೆಲವೆಡೆ ಕಾರು ಮತ್ತು ರೈಲು ಮಾರ್ಗಗಳು, ವಿಮಾನ ಸಂಚಾರ ವ್ಯವಸ್ಥೆಗಳು ಬಂದಿವೆ. ಈಜಿಪ್ಟ್, ಜೋರ್ಡಾನ್, ಸೂಡಾನ್‌ಗಳಿಗೆ ವಿಮಾನ ಸಂಚಾರವಿದೆ.

ಏಡನ್, ಮುಕಲ್ಲಾ, ಮಸ್ಕಾಟ್, ಧಹರಾನ್, ಕುವೈತ್, ಹಾಸ ಇವು ಕೆಲವು ಮುಖ್ಯ ನಗರಗಳು. ಮೆಕ್ಕಾ, ಮದೀನ ಮುಸಲ್ಮಾನರ ಪವಿತ್ರ ಯಾತ್ರಾಸ್ಥಳಗಳು.

ನೋಡಿ : ಏಷ್ಯ ; ಅರಬ್ ಗಣರಾಜ್ಯ ; ಮಹಮ್ಮದ್ ಪೈಗಂಬರ್; ಮೆಕ್ಕಾ-ಮದೀನ.

| | | |
|---|---|---|
| ಇರುವ ಸ್ಥಳ | : | ಏಷ್ಯದ (ನೈಋತ್ಯಭಾಗ) |
| ಅಕ್ಷಾಂಶ | : | 12° 45′ ಉ ದಿಂದ 31° 50′ ಉ |
| ರೇಖಾಂಶ | : | 30° 30′ ಪೂ ದಿಂದ 60° ಪೂ |
| ವಿಸ್ತೀರ್ಣ | : | 25,60,000 ಚ. ಕಿ. ಮೀ. |
| ಜನಸಂಖ್ಯೆ | : | 1,35,00,000 (ಸುಮಾರು) |
| ಭಾಷೆ | : | ಅರಬಿ |

## ಅಲ್ಪಸಂಖ್ಯಾತರು

ಪ್ರಪಂಚದಲ್ಲಿ ಅನೇಕ ರಾಷ್ಟ್ರಗಳಿವೆ. ಪ್ರತಿಯೊಂದು ರಾಷ್ಟ್ರದ ಎಲ್ಲ ಜನ ಒಂದೇ ಬುಡಕಟ್ಟಿಗೆ ಸೇರಿದವರಲ್ಲ. ಜಾತಿ, ಧರ್ಮ, ಭಾಷೆ, ಬಣ್ಣ ಈ ವಿಷಯಗಳಲ್ಲಿ ಅವರು ಬೇರೆ ಬೇರೆಯವರು. ಒಂದು ದೇಶದಲ್ಲಿ ಕಡಮೆ ಅನುಯಾಯಿಗಳನ್ನು ಹೊಂದಿರುವವರು ಮತದ ದೃಷ್ಟಿಯಿಂದ ಅಲ್ಪಸಂಖ್ಯಾತರು. ಯಾವ ಭಾಷೆಯನ್ನಾಡುವವರು ಅಧಿಕಸಂಖ್ಯೆಯಲ್ಲಿರುವರೋ ಅವರು ಭಾಷೆಯ ದೃಷ್ಟಿಯಿಂದ ಬಹುಸಂಖ್ಯಾತರು: ಉಳಿದ ಭಾಷೆಗಳನ್ನಾಡುವವರು ಅಲ್ಪಸಂಖ್ಯಾತರು. ಹೀಗೆ ಒಂದು ದೇಶದಲ್ಲಿ ಹಲವು ಬಗೆಯ ಅಲ್ಪಸಂಖ್ಯಾತರು ಇರಬಹುದು.

ಅಮೆರಿಕದ ಜನಸಂಖ್ಯೆಯಲ್ಲಿ ಸುಮಾರು ಶೇಕಡಾ 11ರಷ್ಟು ಇರುವ ನೀಗ್ರೋಗಳು, ಕುಲಕ್ಕೆ ಸಂಬಂಧಿಸಿ ಅಲ್ಪಸಂಖ್ಯಾತರು. ಧರ್ಮದ ಕಾರಣಕ್ಕಾಗಿ ಭಾರತದಲ್ಲಿ ಮುಸಲ್ಮಾನರೂ ಕ್ರಿಶ್ಚಿಯನ್ನರೂ ಅಲ್ಪಸಂಖ್ಯಾತರು. ಭಾಷೆಯ ಕಾರಣದಿಂದ ಭಾರತದ ನಾನಾ ರಾಜ್ಯಗಳಲ್ಲಿ, ರಾಜ್ಯದ ಭಾಷೆಯನ್ನಲ್ಲದೆ ಬೇರೆ ಭಾಷೆ ಮಾತನಾಡುವವರು ಅಲ್ಪಸಂಖ್ಯಾತರು.

ಅನೇಕ ರಾಷ್ಟ್ರಗಳಲ್ಲಿ ಈ ಅಲ್ಪಸಂಖ್ಯಾತರ ಸಮಸ್ಯೆಗಳನ್ನು ಸಹಕಾರ ಮತ್ತು ಸಹನೆಯಿಂದ ನಿವಾರಿಸಲಾಗುತ್ತಿದೆ. ಅನೇಕ ಭಾಷಾಗುಂಪುಗಳು ಒಂದು ಕಡೆ ನೆಲೆಸಿ, ಶಾಂತಿಯಿಂದ ಒಂದೇ ಸರಕಾರದ ನೆರಳಿನಲ್ಲಿ ಅಭಿವೃದ್ಧಿ ಹೊಂದುತ್ತಿರುವ ಸ್ವಿಟ್ಸರ್‌ಲೆಂಡ್ ಇದಕ್ಕೊಂದು ಶ್ರೇಷ್ಠ ಉದಾಹರಣೆ. ಭಾರತ ಸಹ ಈ ಹಾದಿಯಲ್ಲಿ ಮುನ್ನಡೆಯುತ್ತಿದೆ.

ಅನೇಕ ವೇಳೆ ಈ ಅಲ್ಪಸಂಖ್ಯಾತರು ಬಹು ಸುಲಭವಾಗಿ ಬಹುಸಂಖ್ಯಾತರಲ್ಲಿ ಒಂದಾಗುತ್ತಾರೆ. ಇದರಿಂದ ಅಲ್ಲಿ ಯಾವ ಭೇದಭಾವಕ್ಕೂ ಆಸ್ಪದವಿರುವುದಿಲ್ಲ. ದೃಷ್ಟಾಂತಕ್ಕೆ ಕೆಲ್ಟರು, ಸ್ಯಾಕ್ಸನರು, ಡೇನರು, ನಾರ್ಮನರು ಮೊದಲಾದವರ ಸಂತತಿಯವರಾದ ಆಧುನಿಕ ಇಂಗ್ಲಿಷರು.

ಕೆಲವೊಮ್ಮೆ ಈ ಅಲ್ಪಸಂಖ್ಯಾತರು ರಾಷ್ಟ್ರಗಳ ವಿಭಜನೆಗೂ ಕಾರಣರಾಗಿದ್ದಾರೆ. ಉದಾಹರಣೆಗೆ ಭಾರತದ ಮುಸಲ್ಮಾನ ಅಲ್ಪಸಂಖ್ಯಾತರ ಒಂದು ಭಾಗದವರು ಬಹುಸಂಖ್ಯಾತರಾದ ಹಿಂದೂಗಳನ್ನು ಅನುಮಾನ ದೃಷ್ಟಿಯಿಂದ ನೋಡಿ, ಭಾರತದ ವಿಭಜನೆಗೆ, ಪಾಕಿಸ್ತಾನದ ಸ್ಥಾಪನೆಗೆ ಕಾರಣರಾದರು.

ಕೆಲವು ಸಲ ಈ ಅಲ್ಪಸಂಖ್ಯಾತರಿಂದ ರಾಷ್ಟ್ರದ ಶಾಂತಿಗೆ ಕುಂದು ಉಂಟಾಗಬಹುದು. ಇದರ ನಿವಾರಣೆಗಾಗಿ ನೆರೆರಾಷ್ಟ್ರಗಳು ತಮ್ಮ ತಮ್ಮ ಅಲ್ಪಸಂಖ್ಯಾತರನ್ನು ವಿನಿಮಯ ಮಾಡಿಕೊಂಡಿವೆ. ಈ ರೀತಿಯ ವಿನಿಮಯಗಳು ಗ್ರೀಸ್ ಮತ್ತು ತುರ್ಕಿಯ ನಡುವೆ ನಡೆದುವು.

ಗೆದ್ದು ಬಿಡುತ್ತಾನೆ. ನನಗೇನನ್ನೂ ಉಳಿಸುವುದೇ ಇಲ್ಲ", ಎಂದು ಆಕ್ಷೇಪಿಸುತ್ತಿದ್ದ. ಅಲೆಗ್ಸಾಂಡರನ ಸಾಹಸಯಾತ್ರೆಗೆ ದಾರಿ ಸುಗಮವಾಯಿತು. ಅಧಿಕಾರಕ್ಕೆ ಬಂದೊಡನೆ ಸಮಯೋಚಿತ ನಿರ್ಧಾರಗಳನ್ನು ಕೈಗೊಂಡು ರಾಜ್ಯಸೂತ್ರವನ್ನು ಬಿಗಿಹಿಡಿದ. ದಕ್ಷಿಣದತ್ತ ನಡೆದು ಅಲ್ಲಿ ದಂಗೆ ಎದ್ದಿದ್ದ ಗ್ರೀಕರ ಗಲಭೆಯನ್ನು ಅಡಗಿಸಿ, ಅಲ್ಲಿಂದ ಉತ್ತರಕ್ಕೆ ಸಾಗಿ, ಆ ಪ್ರದೇಶದ ಜನಾಂಗಗಳನ್ನು ಸೋಲಿಸಿದ.

ಕ್ರಿ. ಪೂ. 331ನೆಯ ವಸಂತದಲ್ಲಿ ಅಲೆಗ್ಸಾಂಡರ್ ತನ್ನ ಮಹಾ ದಂಡಯಾತ್ರೆ ಆರಂಭಿಸಿದ. ಮೊದಲ ಗುರಿ ಪರ್ಷಿಯ. ಅವನ ಸೈನ್ಯದಲ್ಲಿ 30,000 ಕಾಲಾಳುಗಳೂ 5,000 ಅಶ್ವಾರೋಹಿಗಳೂ ಇದ್ದರು. ಅವನ ಈ ಮುತ್ತಿಗೆ ದೀರ್ಘ ಕಾಲ ನಡೆಯಿತು. ತಾನೇ ಸ್ವತಃ ನಾಯಕತ್ವವನ್ನು ವಹಿಸಿ ಎಲ್ಲ ವಿಪತ್ತಿಗೂ ತಲೆಯೊಡ್ಡಿ ನಿಂತು ಗ್ರೇನಿಸ್ ನದಿಯ ದಂಡೆಯಲ್ಲಿದ್ದ ಪರ್ಷಿಯನ್ನರನ್ನು ಸಂಪೂರ್ಣವಾಗಿ ಪರಾಭವಗೊಳಿಸಿದ. ಈ ದಂಡಯಾತ್ರೆ ಪರ್ಷಿಯದ ರಾಜ ಡೇರಿಅಸನ ಸಾವಿನೊಡನೆ ಮುಗಿಯಿತು.

ಕ್ರಿ.ಪೂ. 332ನೆಯ ಚಳಿಗಾಲದಲ್ಲಿ ಈಜಿಪ್ಟ್ ದೇಶದತ್ತ ಸಾಗಿದ. ಈ ಹೊತ್ತಿಗೆ ಅಲೆಗ್ಸಾಂಡರನಿಗೆ ತಾನೊಬ್ಬ ಪವಾಡಪುರುಷ ಎಂಬ ಭಾವನೆ ಬಂದು ಬಿಟ್ಟಿದ್ದಿತು. ಅವನು ಈಜಿಪ್ಟಿನಲ್ಲಿ ಅಲೆಗ್ಸಾಂಡ್ರಿಯ ನಗರವನ್ನು ಸ್ಥಾಪಿಸಿದ. ಇದು ವಾಣಿಜ್ಯ ಮತ್ತು ಸಂಸ್ಕೃತಿಗಳ ಕೇಂದ್ರವಾಯಿತು.

ಇಷ್ಟೆಲ್ಲವನ್ನು ಜಯಿಸಿದರೂ ಅಲೆಗ್ಸಾಂಡರನಿಗೆ ತೃಪ್ತಿ ದೊರೆಯಲಿಲ್ಲ. ಪರ್ಷಿಯದ ಆಕ್ರಮಣ ಭಾರತದ ಸಮೀಪಕ್ಕೆ ಅವನನ್ನು ತಂದಿತ್ತು. ಭಾರತವನ್ನು ಜಯಿಸಬೇಕೆಂಬ ಬಯಕೆ ಹುಟ್ಟಿತು. ಕ್ರಿ.ಪೂ. 326ರ ವಸಂತದಲ್ಲಿ ಖೈಬರ್ ಕಣಿವೆಯ ಮೂಲಕ ಸಿಂಧೂ ನದಿಯ ಬಯಲಿನ ಕಡೆಗೆ ಅತ ಹೊರಟ.

ಸ್ವಾರ್ಥಪರನಾದ ತಕ್ಷಶಿಲೆಯ ರಾಜನಿಗೆ ತನ್ನ ನೆರೆರಾಜ್ಯದ ರಾಜನಾಗಿದ್ದ ಪುರೂರವನ ಮೇಲೆ ದ್ವೇಷವಿದ್ದಿತು. ಅಲೆಗ್ಸಾಂಡರ್ ಭಾರತದೊಳಕ್ಕೆ ಸರಾಗವಾಗಿ ಬರಲು ತಕ್ಷಶಿಲೆಯ ರಾಜ ನೆರವಾದ. ಜೀಲಂ ನದಿಯ ದಂಡೆಯಲ್ಲಿದ್ದ ಮಹಾಶೂರ ಪುರೂರವನ ಸೇನೆ ಅಲೆಗ್ಸಾಂಡರನಿಗೆ ಇದಿರಾಯಿತು. ಪುರೂರವನ ದಂಡಿನ ಆನೆಗಳ ದೈತ್ಯಾಕಾರವನ್ನು ಕಂಡು ಗ್ರೀಕ್ ಸೈನಿಕರು ನಡುಗಿದರು. ಭಾರತೀಯ ಯೋಧರು ಜೀವದ ಹಂಗು ತೊರೆದು ಹೋರಾಡಿದರು. ಉಭಯ ಸೈನ್ಯಗಳಿಗೂ ಅಪಾರ ನಷ್ಟವಾಯಿತು. ಅಂತ್ಯದಲ್ಲಿ ಭಾರತೀಯ ಪಡೆ ಸೋತುಹೋಯಿತು. ಪುರೂರವ ಸೆರೆಸಿಕ್ಕಿದ. ಈ ವೇಳೆಗಾಗಲೇ ಪುರೂರವನ ಬಗೆಗೆ ಅಲೆಗ್ಸಾಂಡರನಿಗೆ ವಿಶೇಷ ಗೌರವ ಮೂಡಿತ್ತು. ಎದುರಿಗೆ ಕರೆತಂದ ಅವನನ್ನು ಕಂಡು, "ನೋಡು, ನೀನು ಎಷ್ಟು ಹೋರಾಡಿದರೆ ತಾನೆ ಏನು ಪ್ರಯೋಜನ ? ನಿನ್ನ ರಾಜ್ಯವನ್ನು ನಾನು ಗೆದ್ದೆ", ಎಂದು ಹೆಮ್ಮೆಯಿಂದ ಹೇಳಿಕೊಂಡ. "ನನ್ನ ರಾಜ್ಯದ ಭೂಮಿಯನ್ನು ಗೆದ್ದೆ. ನಿಜ. ಆದರೆ ನನ್ನ ಪ್ರಜೆಗಳ ಹೃದಯವನ್ನು ಗೆಲ್ಲಲಿಲ್ಲ. ನನ್ನನ್ನು ಗೆಲ್ಲಲಿಲ್ಲ", ಎಂದು ಪುರೂರವ ಧೀರನಂತೆ ನುಡಿದ. ಅವನ ಸತ್ಯನಿಷ್ಠೆ ಮತ್ತು ನಿರ್ಭಯ ನಡವಳಿಕೆಗಳನ್ನು ಮೆಚ್ಚಿದ ಅಲೆಗ್ಸಾಂಡರ್ ಅವನನ್ನು ಬಂಧನದಿಂದ ಮುಕ್ತಗೊಳಿಸಿ, ತನ್ನ ಆಡಳಿತದಲ್ಲಿ ಉನ್ನತಾಧಿಕಾರಿಯ ಸ್ಥಾನವನ್ನು ನೀಡಿದ.

ಇನ್ನೂ ಯುದ್ಧಗಳನ್ನು ಮುಂದುವರಿಸಬೇಕೆಂಬ ಅಲೆಗ್ಸಾಂಡರನ ಆಸೆಗೆ ಅವನ ಹಿಂಬಾಲಕರ ಅಸಮ್ಮತಿಯಿಂದ ಭಾರಿ ಪೆಟ್ಟು ಬಿದ್ದಿತು. ಅನೇಕ ವರ್ಷಗಳಿಂದ ಮನೆ, ಮಠ, ಮಡದಿ ಮಕ್ಕಳನ್ನು ಬಿಟ್ಟು ಬಂದು ಯುದ್ಧಗಳಲ್ಲಿ ಹೋರಾಡಿ ಬೇಸತ್ತು ಹೋಗಿದ್ದ ಅಲೆಗ್ಸಾಂಡರನ ಸೈನಿಕರು ಸ್ವದೇಶಕ್ಕೆ ಹಿಂದಿರುಗಲು ಚಡಪಡಿಸಲಾರಂಭಿಸಿದರು. ಪ್ರಪಂಚದ ಎಲ್ಲೆಗಳನ್ನೆಲ್ಲ ಮುಟ್ಟಿಯೇ ಮುಟ್ಟುವೆನೆಂಬ ಅಲೆಗ್ಸಾಂಡರನ ಭರವಸೆ ಕುಸಿಯಿತು. ಸೈನ್ಯದ ಇಚ್ಛೆಯಂತೆ ಅಲೆಗ್ಸಾಂಡರ್ ಕ್ರಿ. ಪೂ. 325ರಲ್ಲಿ ಸ್ವದೇಶದತ್ತ ಪ್ರಯಾಣ ಆರಂಭಿಸಿದ. ಅದೇ ವರ್ಷ ಅವನ ನೆಚ್ಚಿನ ಕುದುರೆ ಬ್ಯೂಸೆಫಲಸ್ ಸತ್ತುಹೋಯಿತು. ತನ್ನ ಬಾಲ್ಯದ ಗೆಳೆಯನಾಗಿದ್ದ ಆ ಕುದುರೆಯ ಸ್ಮಾರಕಾರ್ಥ ಅಲೆಗ್ಸಾಂಡರ್ ಭಾರತದಲ್ಲಿ ಒಂದು ಪಟ್ಟಣವನ್ನು ಕಟ್ಟಿಸಿ, ಬ್ಯೂಸೆಫಲ ಎಂದು ಹೆಸರಿಟ್ಟು, ಪಯಣ ಮುಂದುವರೆಸಿದ. ಇಷ್ಟು ದಿನಗಳ ಸತತ ದುಡಿಮೆ ಯುವಕ ಅಲೆಗ್ಸಾಂಡರನನ್ನು ಸಹ ಹಣ್ಣು ಮಾಡಿಬಿಟ್ಟಿದ್ದಿತು. ಕೊನೆಗೆ ಬ್ಯಾಬಿಲನ್ ನಗರದಲ್ಲಿ ಕ್ರಿ. ಪೂ. 323ರ ಅಕ್ಟೋಬರ್ ತಿಂಗಳಲ್ಲಿ ಈ ವೀರ ತನ್ನ ಜೀವನದ ಕೊನೆಯುಸಿರನ್ನು ಎಳೆದ. ಆಗ ಅವನಿಗೆ ಕೇವಲ ಮೂವತ್ತೆರಡರ ಹರೆಯ.

ಅಲೆಗ್ಸಾಂಡರ್ ಅತ್ಯುತ್ತಮ ವೀರನಾಗಿದ್ದುದು ಮಾತ್ರವಲ್ಲದೆ ಒಳ್ಳೆಯ ರಾಜಕಾರಣಿಯೂ ಆಗಿದ್ದ. ಪ್ರತಿಭಟಿಸುವವರೊಡನೆ ಎಷ್ಟು ಕ್ರೂರನಾಗಿರುತ್ತಿದ್ದನೋ, ಸೋತವರ, ಸೆರೆಯಾಳುಗಳ ಬಗೆಗೆ ಅಷ್ಟೇ ದಯಾಶೀಲನಾಗಿರುತ್ತಿದ್ದ. ಇಡೀ ವಿಶ್ವವೇ ಒಂದು ಆಳ್ವಿಕೆಯ ಅಧೀನದಲ್ಲಿರಬೇಕೆಂಬುದು ಅವನ ಆಸೆಯಾಗಿದ್ದಿತು.

ಅವನಲ್ಲಿದ್ದ ದೌರ್ಬಲ್ಯಗಳು ಮದ್ಯಪಾನ ಮತ್ತು ಹೊಗಳಿಕೆಯ ಆಸೆ. ಒಮ್ಮೆ ಕುಡಿದು ಮತ್ತನಾಗಿದ್ದಾಗ ಜಗಳವಾಡಿ ಕ್ಲೈಟಸ್ ಎಂಬ ತನ್ನ ಆಪ್ತಸ್ನೇಹಿತನನ್ನೇ ಕೊಂದ. ಅನಂತರ ಬಹು ದುಃಖಪಟ್ಟ.

ಅನುಯಾಯಿಗಳ ಬಗೆಗೆ ತೋರುತ್ತಿದ್ದ ಅನುಕಂಪದಿಂದ ಅವನು ಜನಪ್ರಿಯನಾಗಿದ್ದ. ಅವನ ಶೌರ್ಯ ಮತ್ತು ಸಾಹಸಪ್ರಿಯತೆ ಇತಿಹಾಸದಲ್ಲಿ ಅವನ ಹೆಸರನ್ನು ಚಿರಸ್ಥಾಯಿಗೊಳಿಸಿದುವು. ಎಲ್ಲ ದೇಶಗಳೂ ಶಾಂತಿ ಸೌಹಾರ್ದಗಳಿಂದ ಬಾಳಿ ಮಾನವಕೋಟಿಯ ಪ್ರಗತಿಯಾಗಬೇಕೆಂದು ಅವನು ಬಯಸಿದ್ದ. 'ಪೂರ್ವ ಮತ್ತು ಪಶ್ಚಿಮ ದೇಶಗಳ ನಡುವಣ ಸಂಪರ್ಕವನ್ನು ಸಾಧಿಸಿದ ಅಪೂರ್ವ ಸೇತುವೆ,' ಎಂದು ಜನತೆ ಅವನನ್ನು ಕೊಂಡಾಡಿತು.

ನೋಡಿ : ಅರಿಸ್ಟಾಟಲ್

## ಅವತಾರ

'ಅವತಾರ' ಎಂದರೆ ಮನುಷ್ಯರ ಲೋಕಕ್ಕೆ ಇಳಿದು ಬರುವುದು ಎಂದರ್ಥ. ಹಲವು ಧರ್ಮಗಳವರು ತಮ್ಮ ಮಾರ್ಗದರ್ಶಕರನ್ನು, ದೇವರ ಲೋಕದಿಂದ ಮನುಷ್ಯರನ್ನು ಉದ್ಧಾರ ಮಾಡಲು ಬಂದ ಅವತಾರ ಪುರುಷರೆಂದು ಗೌರವಿಸುತ್ತಾರೆ.

ಅವತಾರ ಎನ್ನುವ ಪದಕ್ಕೆ ಇನ್ನೊಂದು ವಿಶಾಲ ಅರ್ಥವಿದೆ. ದೇವರು ಈ ಭೂಮಿಯಲ್ಲಿ ಆಗುವ ಎಲ್ಲ ವಿಷಯಗಳನ್ನೂ ನೋಡುತ್ತಿರುತ್ತಾನೆ; ಭೂಮಿಯ ಮೇಲೆ ದುಷ್ಟತನ ಹೆಚ್ಚಿ ಮನುಷ್ಯರಿಂದ ದುಷ್ಟರನ್ನು ತಡೆಗಟ್ಟಲು ಸಾಧ್ಯವಾಗದೆ ಹೋದಾಗ ದೇವರು ಮನುಷ್ಯರೂಪದಲ್ಲೊ, ಪ್ರಾಣಿರೂಪದಲ್ಲೊ ಹುಟ್ಟುತ್ತಾನೆ—ಎನ್ನುವ ನಂಬಿಕೆ ಹಿಂದೂಗಳಲ್ಲಿದೆ. ಭಗವದ್ಗೀತೆಯಲ್ಲಿ ಶ್ರೀ ಕೃಷ್ಣ ಅರ್ಜುನನಿಗೆ ಹೇಳುತ್ತಾನೆ:

"ಯಾವಾಗ ಧರ್ಮ ಕ್ಷಯಿಸಿ, ಅಧರ್ಮ ವೃದ್ಧಿಯಾಗುವುದೊ ಆಗ ಒಳ್ಳೆಯವರನ್ನು ರಕ್ಷಿಸುವುದಕ್ಕಾಗಿ ಕೆಟ್ಟವರನ್ನು ಶಿಕ್ಷಿಸುವುದಕ್ಕಾಗಿ ನಾನು ಯುಗಯುಗಗಳಲ್ಲೂ ಅವತರಿಸುತ್ತೇನೆ."

ಮತ್ಸ್ಯ ಕೂರ್ಮ ವರಾಹ ನರಸಿಂಹ ವಾಮನ

ಪರಶುರಾಮ ರಾಮ ಕೃಷ್ಣ ಬುದ್ಧ ಕಲ್ಕಿ

ಪುರಾಣಗಳಲ್ಲಿ ವಿಷ್ಣುವಿನ ದಶಾವತಾರಗಳ ವರ್ಣನೆ ಇದೆ. ಅದರ ಪ್ರಕಾರ ಇದುವರೆಗೂ ಆಗಿರುವ ಅವತಾರಗಳು ಒಂಬತ್ತು : 1 ಮತ್ಸ್ಯ. 2 ಕೂರ್ಮ, 3 ವರಾಹ, 4 ನರಸಿಂಹ. 5 ವಾಮನ, 6 ಪರಶುರಾಮ, 7 ರಾಮ, 8 ಕೃಷ್ಣ, 9 ಬುದ್ಧ. ಆಗಬೇಕಾಗಿರುವ 10ನೆಯದು ಕಲ್ಕ್ಯವತಾರ.

ಅವತಾರಗಳ ವಿವರ ಹೀಗೆ :

ಒಂದು ಸಲ ಪ್ರಪಂಚವನ್ನೆಲ್ಲ ನೀರು ತುಂಬಿಬಿಟ್ಟಿತು. (ಇದಕ್ಕೆ ಜಲಪ್ರಳಯವೆಂದು ಹೆಸರು). ಆಗ ವಿಷ್ಣು ಒಂದು ದೊಡ್ಡ ಮತ್ಸ್ಯದ (ಮೀನು) ರೂಪ ತಳೆದು. ಭೂಮಿಯ ಮೇಲೆ ಹುಟ್ಟಿದ ಮೊದಲ ಮಾನವನನ್ನೂ ಅವನ ಕುಟುಂಬವನ್ನೂ ಸಪ್ತಋಷಿಗಳನ್ನೂ ಒಂದು ಹಡಗಿನಲ್ಲಿ ಹತ್ತಿಸಿ ತನ್ನ ತಲೆಯ ಮೇಲಿದ್ದ ಕೊಂಬಿಗೆ ಕಟ್ಟಿಕೊಂಡು ನೀರಿನಲ್ಲಿ ಈಜಿ ಉಳಿಸಿದ. ವೇದಗಳನ್ನೂ ಪ್ರಳಯದಿಂದ ರಕ್ಷಿಸಿದ.

ಜಲಪ್ರಳಯದ ಕಾಲದಲ್ಲಿ ಕಳೆದುಹೋದ ಅಮೂಲ್ಯ ವಸ್ತುಗಳಲ್ಲಿ ಅಮೃತವೂ ಒಂದು. ವಿಷ್ಣು ದೊಡ್ಡ ಕೂರ್ಮವಾಗಿ (ಆಮೆ) ಸಮುದ್ರದೊಳಗೆ ಹೋದ. ದೇವತೆಗಳೂ ರಾಕ್ಷಸರೂ ಸೇರಿ ಅವನ ಬೆನ್ನಿನ ಮೇಲೆ ಮಂದರ ಪರ್ವತವನ್ನಿಟ್ಟು ಪರ್ವತಕ್ಕೆ ವಾಸುಕಿ ಎಂಬ ದೊಡ್ಡ ಹಾವನ್ನು ಹಗ್ಗವಾಗಿ ಹಾಕಿ ಸಮುದ್ರವನ್ನು ಮಜ್ಜಿಗೆ ಕಡೆಯುವ ಹಾಗೆ ಕಡೆದರು. ಆಗ ಸಮುದ್ರದಿಂದ ಅಮೃತವೂ ಅಮೂಲ್ಯ ವಸ್ತುಗಳೂ ಬಂದುವು. ಲಕ್ಷ್ಮಿ ದೇವಿಯೂ ಆಗ ಬಂದಳೆಂದು ಕಥೆಯಿದೆ.

ಹಿರಣ್ಯಾಕ್ಷನೆಂಬ ರಾಕ್ಷಸ ಭೂಮಿಯನ್ನು ಸಮುದ್ರದೊಳಕ್ಕೆ ಎಸೆದುಬಿಟ್ಟ. ಆಗ ವಿಷ್ಣು ದೊಡ್ಡ ಹಂದಿಯಾಗಿ ಅವತಾರಮಾಡಿ ಸಮುದ್ರದ ಒಳಗೆ ನುಗ್ಗಿ ಭೂಮಿಯನ್ನು ತೆಗೆದುಕೊಂಡು ಬಂದ. ಹಿರಣ್ಯಾಕ್ಷನನ್ನು ಸಂಹಾರಮಾಡಿದ. ಮನುಷ್ಯರಿಂದಾಗಲಿ, ಪ್ರಾಣಿಗಳಿಂದಾಗಲಿ, ದೇವತೆಗಳಿಂದಾಗಲಿ, ರಾಕ್ಷಸರಿಂದಾಗಲಿ ತಾನು ಸಾಯಬಾರದೆಂದು ವರವನ್ನು ಪಡೆದುಕೊಂಡಿದ್ದ ಹಿರಣ್ಯಕಶಿಪುವೆಂಬ ರಾಕ್ಷಸನನ್ನು ಸಂಹಾರ ಮಾಡಲು ಮತ್ತು ಅವನ ಮಗ ಪ್ರಹ್ಲಾದನನ್ನು ರಕ್ಷಿಸಲು ವಿಷ್ಣು ನರಸಿಂಹನಾಗಿ (ಅರ್ಧ ಸಿಂಹ ಅರ್ಧ ಮನುಷ್ಯ) ಮುಚ್ಚುಂಜೆಯಲ್ಲಿ ಕಂಬದಿಂದ ಹೊರಬಂದ.

ಬಲಿ ಎಂಬ ರಾಕ್ಷಸ ತನ್ನ ತಪಸ್ಸಿನಿಂದ ಬಹಳ ಬಲಶಾಲಿಯಾದಾಗ ವಿಷ್ಣು ವಾಮನನಾಗಿ ಅವತರಿಸಿದ. ಅವನಿಂದ ಮೂರು ಹೆಜ್ಜೆ ನೆಲವನ್ನು ಬೇಡಿ ಅವನನ್ನು ಪಾತಾಳಕ್ಕೆ ತುಳಿದ.

ಕ್ಷತ್ರಿಯರಾಗಿ ಹಿಂಸೆ ಕೊಡುತ್ತಿದ್ದವರನ್ನು ಸಂಹರಿಸಲು ಜಮದಗ್ನಿ ಋಷಿಯ ಮಗ ಪರಶುರಾಮನಾಗಿ ಅವತರಿಸಿದ. ಪರಶು ಎಂದರೆ ಕೊಡಲಿ.

ರಾವಣನ ಸಂಹಾರಕ್ಕಾಗಿ ರಾಮಾವತಾರವಾಯಿತು.

[illegible] ದುಷ್ಟರನ್ನೂ ಅಧರ್ಮಿಗಳಾದ ಕೌರವರನ್ನೂ ಶಿಕ್ಷಿಸಲು ಕೃಷ್ಣಾವತಾರವಾಯಿತು.

ಪ್ರಾಣಿವಧೆಯನ್ನೂ ಯಜ್ಞಯಾಗಾದಿಗಳಲ್ಲಿ ಆಗುತ್ತಿದ್ದ ಪ್ರಾಣಿಬಲಿಯನ್ನೂ ತಪ್ಪಿಸಿ ಅಹಿಂಸೆ ಮತ್ತು ದಯೆಗಳನ್ನು ಬೋಧಿಸಲು ಮತ್ತು ಆಸೆ ದುಃಖಗಳ ಬಂಧನದಿಂದ ಮನುಷ್ಯರನ್ನು ಬಿಡಿಸಲು ಬುದ್ಧ ಹುಟ್ಟಿದ

ಕಲಿಯುಗದಲ್ಲಿ ದುಷ್ಟತನ ಮಿತಿಮೀರಿದಾಗ. ಬಿಳಿಯ ಕುದುರೆಯ ಮೇಲೆ ಕುಳಿತು ಕತ್ತಿಯನ್ನು ಝಳಪಿಸುವ ಮಾನವನಾಗಿ ಕೆಟ್ಟವರನ್ನು ಶಿಕ್ಷಿಸಲು ಬರುವುದು ಕಲ್ಕ್ಯವತಾರ.

ವಿಷ್ಣುವಿನ ಈ ಹತ್ತು ಅವತಾರಗಳಲ್ಲಿ. ರಾಮಾವತಾರ ಹಾಗೂ ಕೃಷ್ಣಾವತಾರಗಳು 'ರಾಮಾಯಣ' ಮತ್ತು 'ಮಹಾಭಾರತ' ಗಳಿಗೆ ವಸ್ತು ಒದಗಿಸಿವೆ.

ಬುದ್ಧನನ್ನು ಅವತಾರ ಎಂದಿದ್ದರೂ ಅವನ ವಿಷಯವನ್ನು ನಾವು ಚರಿತ್ರೆಯ ಒಂದು ಭಾಗವಾಗಿ ಓದುತ್ತೇವೆ.

ಮನುಷ್ಯರು ಮಾತ್ರವಲ್ಲ. ಎಲ್ಲ ಜೀವಿಗಳೂ ಗೌರವಕ್ಕೆ ಅರ್ಹರು— ಎಂಬುದು ಹಿಂದೂಗಳ ಭಾವನೆ. ಮನುಷ್ಯರೂಪದಲ್ಲಲ್ಲದೆ ಮತ್ಸ್ಯ, ಕೂರ್ಮ, ವರಾಹಗಳ ರೂಪದಲ್ಲಿಯೂ ದೇವರು ಬಂದನೆಂಬುದು ಅವರ ನಂಬಿಕೆ.

'ಅವತಾರ'ದ ಕಲ್ಪನೆ ಈಗ ಹೊರದೇಶಗಳಲ್ಲಿಯೂ ಪರಿಚಿತ. 'ಅವತಾರ' ಪದ ಇಂಗ್ಲಿಷ್ ಭಾಷೆಯಲ್ಲಿ ಸೇರಿಹೋಗಿದೆ. ಇಂಗ್ಲಿಷ್ ನಿಘಂಟುಗಳಲ್ಲಿ ಸ್ಥಳ ಗಳಿಸಿದೆ.

## ಅವಶೇಷ

ಹಾಳು ಹಂಪೆ !

ಪೂಜೆಯಿಲ್ಲದ ಪಾಳುಗುಡಿಗಳು. ಕುಸಿದ ಗೋಪುರಗಳ ದೇವಾಲಯಗಳು. ಅವಯವ ಮುರಿದುಕೊಂಡ ವಿಗ್ರಹಗಳು. ಬಾವಲಿಗಳು ನೇತಾಡುತ್ತಿರುವ ಅರಮನೆಯ ಪ್ರಾಂಗಣಗಳು. ಮುರಿದು ಬಿದ್ದ ಕಟ್ಟಡಗಳು, ಮುಳ್ಳು ಬೆಳೆದುಕೊಂಡು ಕಾಡುಕಾಡಾಗಿರುವ ಹೆದ್ದಾರಿಗಳು—

ನೂರಾರು ವರ್ಷಗಳ ಹಿಂದೆ ಇದೇ ಸ್ಥಳದಲ್ಲಿ ಕಣ್ಣುಕೋರೈಸುವ ರಾಜವೈಭವವಿತ್ತು.

ಒಂದು ಕಾಲಕ್ಕೆ ಸಮಗ್ರವಾಗಿದ್ದು. ಭವ್ಯವಾಗಿದ್ದು ಅನಂತರ ಹಾಳುಬಿದ್ದ ಕಟ್ಟಡಗಳಿಗೆ. ಸ್ಥಳಗಳಿಗೆ ಅವಶೇಷಗಳೆಂದು ಹೆಸರು. 'ಶೇಷ' ಎಂದರೆ ಉಳಿದಿರುವುದು. ಹಿಂದಿದ್ದು . ಅಳಿದು ಉಳಿದಿರುವುದೇ ಅವಶೇಷ.

ಈ ಅವಶೇಷಗಳು ಕೆಲವೆಡೆ ಹೊರಗೆ ಕಾಣಿಸುತ್ತವೆ. ಕೆಲವೆಡೆ ನೆಲವನ್ನು ಅಗೆಯುವಾಗ ಆಕಸ್ಮಾತ್ ಸಿಗಬಹುದು. ಇನ್ನು ಕೆಲವೆಡೆಗಳಲ್ಲಿ ಪುರಾತತ್ತ್ವಶೋಧಕರು ಕ್ರಮಬದ್ಧವಾಗಿ ಅಗೆದ ಅವಶೇಷಗಳನ್ನು ಕಾಣಬಹುದು.

ಪುರಾತನ ಗ್ರೀಸಿನ ಸುಪ್ರಸಿದ್ಧ ನಗರ ಟ್ರಾಯ್‌ನ ಅವಶೇಷಗಳನ್ನು ಕಂಡದ್ದು ಹೀಗೆ: ಟ್ರಾಯ್ ಹೇಳಹೆಸರಿಲ್ಲದಂತೆ ನಾಶವಾದ ಕಥೆ ಕೇಳಿ ಎಂಟು ವರ್ಷದ ಒಬ್ಬ ಹುಡುಗ ನೊಂದುಕೊಂಡ. ಈತನ ತಂದೆಗಂತೂ ಗ್ರೀಕ್ ಚರಿತ್ರೆಯೆಂದರೆ ಅನ್ನ ನೀರೂ ಬೇಡ. ಬಾಲಕ ಶಪಥಮಾಡಿದ— ಗತಿಸಿದ ವೈಭವವನ್ನು ಮತ್ತೆ ನೋಡುವೆ ಎಂದು. ಅವನೇ ಜರ್ಮನಿಯ ಹೈನ್‌ರಿಕ್ ಶ್ಲೀಮನ್.

ಗ್ರೀಕ್ ಮಹಾಕವಿ ಹೋಮರ್ ತನ್ನ ಇಲಿಯಡ್ ಕಾವ್ಯದಲ್ಲಿ ಬಣ್ಣಿಸಿರುವ ಇಲಿಯಂ (ಟ್ರಾಯ್) ಅವಶೇಷಗಳು ಹಿಸಾರ್‌ಲಿಕ್ ಎಂಬ ಬೆಟ್ಟದ ಅಡಿಯಲ್ಲಿ ಹುದುಗಿದೆ ಎಂಬುದು ಶ್ಲೀಮನನ ಭಾವನೆ.

ದೊಡ್ಡವನಾದಾಗ ಟರ್ಕಿ ಸರಕಾರದೊಂದಿಗೆ ವ್ಯವಹರಿಸಿ ಆ ಜಾಗದಲ್ಲಿ ಅಗೆಯಲು ಅಪ್ಪಣೆ ಪಡೆದ. ಅಗೆಯಲು ಎಂಬತ್ತು ಜನರನ್ನು ಗೊತ್ತುಮಾಡಿದ. ಚಳಿಗಾಲದಲ್ಲಂತೂ ಕೊರೆಯುವ ಗಾಳಿ ಕಣ್ಣಿಗೆ



ಹಾಳು ಹಂಪೆ

ಧೂಳು ತುಂಬುತ್ತಿತ್ತು. ಆ ಪ್ರದೇಶದಲ್ಲಿ ಅವನು ಹಾಕಿಕೊಂಡಿದ್ದ ಗುಡಿಸಿಲಿನೊಳಗೆ ನುಗ್ಗುತ್ತಿದ್ದ ಗಾಳಿಯ ಬಡಿತಕ್ಕೆ ದೀಪ ಹಚ್ಚಿಡುವುದೂ ಸಾಧ್ಯವಾಗುತ್ತಿರಲಿಲ್ಲ. ರಾತ್ರಿಯಾಯಿತೆಂದರೆ ನೀರು ಗಡ್ಡೆಕಟ್ಟುತ್ತಿತ್ತು. ಟ್ರಾಯ್ ನಗರವನ್ನು ಕಾಣಬೇಕೆಂಬ ಹಂಬಲ ಬಿಟ್ಟರೆ ಉತ್ತೇಜನಕಾರಿಯಾದ ಬೇರೆ ಯಾವ ಅಂಶವೂ ಅಲ್ಲಿ ಇರಲಿಲ್ಲ. ಆದರೂ ಅವನು ಬಿಡಲಿಲ್ಲ. ಒಂದು ವರ್ಷ ಕಳೆಯಿತು. ಒಂದು ದಿನ ಇದ್ದಕ್ಕಿದ್ದಂತೆಯೇ ಪಾತ್ರೆ ಕಂಡಿತು. ಅವನ್ನು ತೆಗೆದು ನೋಡಿದಾಗ ಒಳಗೆ ಚಿನ್ನ. ಬೆಳ್ಳಿಯ ಸುಮಾರು ಒಂಬತ್ತು ಸಾವಿರ ವಸ್ತುಗಳಿದ್ದವು. ಅಲ್ಲಿಂದ ಮುಂದೆ ಅಗೆಯುತ್ತ ಹೋದಾಗ ಶ್ಲೀಮನ್ ಕಂಡದ್ದು ಒಂದು ಟ್ರಾಯ್ ಮಾತ್ರವಲ್ಲ. ಒಂದರ ಕೆಳಗೊಂದರಂತೆ ಒಟ್ಟು ಒಂಬತ್ತು ಟ್ರಾಯ್‌ಗಳನ್ನು (1871).

ಚಿತೋಡ್‌ಘಡ ಅರಮನೆಯ ಅವಶೇಷ



ಚಾರವು: ಅಹಿಂಸೆಯೇ ಪರಮ ಧರ್ಮ–ಮುಂತಾದ ಉಪದೇಶಗಳು ಆತನ ಶಾಸನಗಳಲ್ಲಿವೆ. ಮೈಸೂರು ರಾಜ್ಯದ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನಲ್ಲಿ ಅಶೋಕನ ಶಾಸನ ದೊರೆತಿದೆ. ಅಶೋಕನ ಶಾಸನಗಳು ಬ್ರಾಹ್ಮಿ ಮತ್ತು ಖರೋಷ್ಠಿ ಲಿಪಿಗಳಲ್ಲಿವೆ.

ಅಶೋಕ ಅನುಸರಿಸಿದ್ದು ಬೌದ್ಧಮತ. ಮೇಲೆ ಹೇಳಿದ ಉಪದೇಶಗಳೂ ಆ ಮತದ ನಿಯಮಗಳೇ. ನಿಷ್ಠಾವಂತ ಬೌದ್ಧಮತೀಯನಾದ ಅವನು ಆ ಮತದ ಪ್ರಚಾರಕ್ಕಾಗಿ ಬಹಳ ಶ್ರಮಿಸಿದ. ಆದರೆ ಯಾರನ್ನೂ ಒತ್ತಾಯಪಡಿಸದೆ, ತನ್ನ ಪ್ರೀತಿಯಿಂದಲೇ ಅವರ ಮನಸ್ಸನ್ನು ಗೆದ್ದು ಅವರನ್ನು ಬೌದ್ಧಮತೀಯರನ್ನಾಗಿ ಮಾಡಿದ; ತನ್ನ ಅನುಚರರನ್ನು ದೇಶದ ನಾನಾ ಭಾಗಗಳಿಗೆ ಬೌದ್ಧಮತ ಪ್ರಚಾರಕ್ಕಾಗಿ ಕಳುಹಿಸಿದ. ಪರದೇಶಗಳಲ್ಲೂ ಪ್ರಚಾರ ಕಾರ್ಯ ನಡೆಸಿದ. ಆ ಉದ್ದೇಶಕ್ಕಾಗಿ ಸಿಂಹಳದೇಶಕ್ಕೆ ತನ್ನ ಸ್ವಂತ ಸಹೋದರ ಮಹೇಂದ್ರನನ್ನೂ ಸಹೋದರಿ ಸಂಘಮಿತ್ರಳನ್ನೂ ಕಳುಹಿಸಿಕೊಟ್ಟ. ಈ ರೀತಿ ಬೌದ್ಧಮತ ಭಾರತ ಮತ್ತು ಇತರ ದೇಶಗಳಲ್ಲಿ ಬೇಗನೆ ಪ್ರಸಾರವಾಯಿತು.

ಅಶೋಕನಿಗೆ ಧರ್ಮದ ಆಚರಣೆ ಮುಖ್ಯವಾಗಿತ್ತು. ಬರಿಯ ಪ್ರಾರ್ಥನೆ, ಪಠಣ, ಪೂಜೆ ಪುರಸ್ಕಾರಗಳ ಆಡಂಬರವಲ್ಲ. ಸಾರ್ವಜನಿಕ ಸೇವೆ, ಜನೋಪಕಾರ, ಸಮಾಜಸುಧಾರಣೆ ಮುಂತಾದುವು ಧರ್ಮಾಚರಣೆಯ ಮಾರ್ಗಗಳಾಗಿದ್ದುವು.

ಜನಹಿತಕ್ಕಾಗಿ ಸತತ ದುಡಿಯುತ್ತ ಮೂವತ್ತೆಂಟು ವರ್ಷ ಕಾಲ ಅಶೋಕ ರಾಜ್ಯವಾಳಿದ. ದೇವಾನಾಂಪ್ರಿಯ – ದೇವತೆಗಳಿಗೆ ಪ್ರಿಯನಾದವನು – ಎಂದು ಆತ ಪ್ರಖ್ಯಾತನಾದ.

ಕ್ರಿ.ಪೂ. 232ರಲ್ಲಿ ಅಶೋಕ ಕಣ್ಮುಚ್ಚಿದ. ಅದಕ್ಕೆ ಸ್ವಲ್ಪ ಕಾಲ ಮೊದಲು ಸನ್ಯಾಸಿಯಾದ. ಅವನು ತೀರಿಕೊಂಡ ಕೆಲವೇ ವರ್ಷಗಳಲ್ಲಿ ಅವನ ಸಾಮ್ರಾಜ್ಯ ಒಡೆದುಹೋಯಿತು.

ಅಶೋಕಚಕ್ರ, ಈಗಿನ ಬನಾರಸಿನ ಸಾರನಾಥದಲ್ಲಿ ಅಶೋಕ ಸ್ಥಾಪಿಸಿದ ಸ್ಮಾರಕಸ್ತಂಭದ ಶಿರಸ್ಸಿನಲ್ಲಿದೆ. ಸ್ತಂಭದ ತುದಿಯಲ್ಲಿ ಧರ್ಮಚಕ್ರವನ್ನು ಒಳಗೊಂಡ ಸಿಂಹಶೀರ್ಷ ಇತ್ತು. ಈ ಸ್ತಂಭ ಬಹು ಸುಂದರವಾಗಿತ್ತು. ಸಿಂಹಗಳ ಮೇಲೆ ಮೂವತ್ತೆರಡು ಅರಗಳಿದ್ದುವೆಂದು ಹೇಳುತ್ತಾರೆ. ಸಿಂಹಗಳ ಪಾದದಡಿಯಲ್ಲಿ ಇಪ್ಪತ್ತನಾಲ್ಕು ಅರಗಳ ಅಶೋಕ ಚಕ್ರ. ಇದೇ ಭಾರತದ ಧ್ವಜದಲ್ಲಿ ಬೆಳಗುತ್ತಿರುವ ಚಕ್ರ. ಸಾರನಾಥ ಹಾಳಾದಾಗ ಸ್ತಂಭ ಮುರಿದು ಬಿತ್ತು. 18–19ನೆಯ ಶತಮಾನಗಳಲ್ಲಿ ಸಾರನಾಥದ ಅವಶೇಷಗಳು ದೊರೆತುವು.

ಅಶೋಕನ ತರುವಾಯ ಎಷ್ಟೋ ಸಾಮ್ರಾಜ್ಯಗಳು ಬಂದುವು, ಹೋದುವು. ಆದರೂ ಅಶೋಕನ ಹೆಸರು ಚಿರಸ್ಥಾಯಿಯಾಗಿದೆ. ಜಗತ್ತು ಯಾವ ಚಕ್ರವರ್ತಿ ಚಕ್ರವರ್ತಿನಿಯರನ್ನು ಮರೆತರೂ ಅಶೋಕನನ್ನು ಮರೆಯದು.

ನೋಡಿ : ಬುದ್ಧ, ಶಾಸನ.

## ಆಕಾಶಬುಟ್ಟಿ

1782 ನವೆಂಬರಿನ ಒಂದು ಸಂಜೆ. ಫ್ರಾನ್ಸಿನ ಅನೊನೇ ಪಟ್ಟಣದ ಮನೆಯೊಂದರಲ್ಲಿ ಅಣ್ಣತಮ್ಮಂದಿಬ್ಬರು ಕಾಗದದ ಚೀಲದೊಳಕ್ಕೆ ಹೊಗೆ ತುಂಬುವ ಕೆಲಸದಲ್ಲಿ ತೊಡಗಿದ್ದರು. ಹೊಗೆ ತುಂಬಿದ ಚೀಲಗಳು ಛಾವಣಿಯತ್ತ ಏರುತ್ತಿರುವುದನ್ನು ಬೆರಗುಗಣ್ಣಿನಿಂದ ನೋಡುತ್ತಿದ್ದರು. ಮನೆಯ ಸುತ್ತಲೂ ಹೀಗೆ ಬಿಟ್ಟು ಹಾರಿಸುತ್ತಿದ್ದರು. ಇವರಿಗೆ ಹುಚ್ಚು ಹಿಡಿದಿದೆಯೆಂದು ನೆರೆಹೊರೆಯವರೆಲ್ಲ ಭಾವಿಸಿ ಬಿಟ್ಟರು.

ಪ್ರಪ್ರಥಮವಾಗಿ ಬಾನಿನಲ್ಲಿ ಆಕಾಶಬುಟ್ಟಿಯನ್ನು ಹಾರಿಸಿ ಮಾನವನ ಇತಿಹಾಸದಲ್ಲಿ ಹೊಸ ಗುರುತನ್ನು ನಿರ್ಮಿಸಿದ ಫ್ರಾನ್ಸಿನ ಎಟಿನೆ ಮತ್ತು ಜೋಸೆಫ್ ಮಾನ್‌ಗಾಲ್ಫಿಯರ್ ಆ ಅಣ್ಣತಮ್ಮಂದಿರು. ಅವರ ಪ್ರಯತ್ನ ಸಫಲವಾದದ್ದು 1783ರ ಜೂನ್ 5ರಂದು. ಆ ದಿನ ವೀಕ್ಷಿಸಲು ನೆರೆದಿದ್ದ ಸಹಸ್ರಾರು ಜನರ ಮುಂದೆ ಈ ಸಹೋದರರು 16.8 ಘನ ಮೀಟರು ಗಾತ್ರವುಳ್ಳ ಹೊಗೆ ತುಂಬಿದ ಕಾಗದದ ಚೀಲವೊಂದನ್ನು ಮೇಲಕ್ಕೆ ಹಾರಿಸಿದರು.

ಈ ಪ್ರಯೋಗ ನಡೆಯುವ ಅನೇಕ ಶತಮಾನಗಳ ಮೊದಲೇ ಬಾನಿನಲ್ಲಿ ತೇಲುವ ಕನಸನ್ನು ನನಸಾಗಿಸುವ ಹಂಬಲವನ್ನು ಅನೇಕರು ತೋರಿದ್ದರು. ಹದಿಮೂರನೆಯ ಶತಮಾನದಲ್ಲಿದ್ದ ವಿಜ್ಞಾನಿ ರೋಜರ್ ಬೇಕನ್, ಲೋಹಗೋಳದಲ್ಲಿ ದ್ರವಾಗ್ನಿಯನ್ನು ತುಂಬುವುದರ ಮೂಲಕ ಈ ಕೆಲಸವನ್ನು ಸಾಧಿಸಬಹುದೆಂದು ತಿಳಿದಿದ್ದ. ಆದರೆ ದ್ರವಾಗ್ನಿ ಏನು ಎಂಬುದು ಯಾರಿಗೂ ಗೊತ್ತಿರಲಿಲ್ಲ.

1670ರಲ್ಲಿ ಇಟಲಿಯ ವಿಜ್ಞಾನಿ ಫ್ರಾನ್ಸೆಸ್ಕೊ ಡಿ ಲಾನಾ ಎಂಬುವನು ವಾಯುಯಾನಕ್ಕಾಗಿ 'ತೇಲುಬಂಡಿ'ಯನ್ನು ಸೂಚಿಸಿದ. ಇದು ಗಾಳಿಯನ್ನು ಹೊರತೆಗೆದಿರುವ ನಾಲ್ಕು ಬೆಳ್ಳಿಯ ಗುಂಡುಗಳ ಸಹಾಯದಿಂದ ತೇಲುವ ದಪ್ಪ ಬಟ್ಟೆಯ ಪೆಟ್ಟಿಗೆ. 1781ರಲ್ಲಿ ಟೈಬೇರಿಯಸ್ ಕಾವಲೊ ಎಂಬುವನು ಜಲಜನಕದಿಂದ ತುಂಬಿರುವ ಸಾಬೂನಿನ ಗುಳ್ಳೆಗಳು ಸಡಿಲವಾಗಿ ಬಿಟ್ಟಾಗ ಮೇಲಕ್ಕೇರುತ್ತವೆ ಎಂದು ತೋರಿಸಿಕೊಟ್ಟ.



ತಪ್ಪಿಸುತ್ತದೆ. ಕಾತರವನ್ನು ತೃಪ್ತಿಪಡಿಸುತ್ತದೆ ಆಕಾಶವಾಣಿ. ಎಷ್ಟೋ ಬಾರಿ ಪಂದ್ಯ ನಡೆಯುತ್ತಿರುವಾಗಲೇ ವೀಕ್ಷಕ ವರದಿ ಕೇಳಬಹುದು.

'ಆಕಾಶವಾಣಿ' ಎಂಬುದು ಭಾರತೀಯ ರೇಡಿಯೋ ವ್ಯವಸ್ಥೆಗಾಗಿ ಅಳವಡಿಸಿಕೊಂಡಿರುವ ಪ್ರಸಾರನಾಮ. ಆಕಾಶವಾಣಿಯಿಂದ ಸುದ್ದಿಯ ಪ್ರಸಾರ ವೇಗವಾಗಿಯೂ ವ್ಯಾಪಕವಾಗಿಯೂ ಆಗುತ್ತದೆ. ವಾರ್ತಾ ಪ್ರಕಟಣೆಗಳಲ್ಲದೆ. ಪ್ರಾದೇಶಿಕ ಭಾಷೆಗಳಲ್ಲಿ ಆ ಪ್ರದೇಶಗಳ ವಾರ್ತಾಪ್ರಸಾರ ನಡೆಯುತ್ತದೆ.

ಆರ್ಥಿಕ ಪ್ರಪಂಚದಲ್ಲಿ ಆಕಾಶವಾಣಿಯ ಉಪಯುಕ್ತತೆ ಬಹಳ. ಪೇಟೆ ಧಾರಣೆ. ಬೆಲೆಯ ಏರಿಳಿತಗಳನ್ನು ವರ್ತಕನಿಗೆ ತಿಳಿಸುವುದರಿಂದ ಅತನು ತನ್ನ ವ್ಯಾಪಾರವನ್ನು ಕುದುರಿಸಿಕೊಳ್ಳುತ್ತಾನೆ. ಷೇರು ಬೆಲೆಗಳ ವಿದ್ಯಮಾನಗಳ ಅರಿವಿನಿಂದ ವರ್ತಕರಿಗೆ ಲಾಭವಾಗುತ್ತದೆ. ಜಗತ್ಪ್ರಸಿದ್ಧ ವ್ಯಕ್ತಿಗಳ. ವಿಜ್ಞಾನಿಗಳ. ಕಲಾವಿದರ ಮಾತುಗಳನ್ನು ಅವರ ಧ್ವನಿಯಲ್ಲೇ ನೇರವಾಗಿ ಕೇಳುವ ಸುಯೋಗ ನಮ್ಮದಾಗುತ್ತದೆ. ಹಿಂದೆ ಆಗಿಹೋದ ಮಹಾಪುರುಷರ ವಾಣಿಯನ್ನೂ ಸಂಗೀತಗಾರರ ಗಾನವನ್ನೂ ಕೇಳುವ ಅವಕಾಶ ಲಭ್ಯವಾಗುವುದು ಆಕಾಶವಾಣಿಯಿಂದ. ಬಾಪೂಜಿಯ ಧ್ವನಿ ಆಕಾಶವಾಣಿಯ ಮೂಲಕ ಕಾಲದ ಅಂತರವನ್ನು ದಾಟಿ ಈಗಲೂ ನಮ್ಮನ್ನು ಎಚ್ಚರಿಸುತ್ತದೆ. ಸಮ್ಮೇಳನ ಪರಿಷತ್ತುಗಳ ವರದಿಯನ್ನೂ ಕಾರ್ಯಕ್ರಮದ ತುಣುಕುಗಳನ್ನೂ ರೇಡಿಯೋದಲ್ಲಿ ಕೇಳಬಹುದು.

ಇಂಥ ಜನೋಪಕಾರಿ ಸಾಧನ ಆರಂಭವಾದದ್ದು ಹೇಗೆ? ಮಾರ್ಕೋನಿ ಎಂಬವನು ರೇಡಿಯೊ ತತ್ತ್ವವನ್ನು ಕಂಡುಹಿಡಿದದ್ದರ ಪರಿಣಾಮವಾಗಿ. ಮೊದಲನೆಯ ಮಹಾಯುದ್ಧದಲ್ಲಿ ನಿಸ್ತಂತು ಸಲಕರಣೆಗಳನ್ನು ಯೋಧರಿಗೆ ಒದಗಿಸಲಾಗಿದ್ದಿತು. ತಂತಿ ಇಲ್ಲದೆಯೇ ಪರಸ್ಪರರೊಡನೆ ಮಾತನಾಡಲು ಅವರು ಅವನ್ನು ಉಪಯೋಗಿಸುತ್ತಿದ್ದರು. ಯುದ್ಧ ಮುಗಿದು ಹಿಂತಿರುಗಿದ ಮೇಲೆ ಅವರು ಮೋಜಿಗೆಂದು ಸ್ವಂತವಾಗಿ ಸಾಮಗ್ರಿಗಳನ್ನು ಶೇಖರಿಸಿ ರೇಡಿಯೊಗಳನ್ನು ಜೋಡಿಸಿದರು. ಇದರಿಂದ ಅತಿ ಸಣ್ಣದಾದ. ಈಗಿನ ಆಕಾಶವಾಣಿಗಳ ಸ್ವರೂಪಕ್ಕೆ ಹೋಲಿಕೆಯೇ ಇಲ್ಲದ ಅನೌಪಚಾರಿಕ ಪ್ರಸಾರಗಳು ಮತ್ತು ಗ್ರಾಹಕಗಳು ಬಳಕೆಗೆ ಬಂದುವು. 1920ರಲ್ಲಿ ಗ್ರೇಟ್ ಬ್ರಿಟನ್ನಿನ ಎಸೆಕ್ಸ್ ಎಂಬ ಜಾಗದಲ್ಲಿ ಮೊಟ್ಟ ಮೊದಲ ರೇಡಿಯೊ ನಿಲ್ದಾಣ ಆರಂಭವಾಯಿತು. ಆದರೆ ಸೈನಿಕ ಅಧಿಕಾರಿಗಳು ಮತ್ತು ನೌಕಾಧಿಕಾರಿಗಳು ಇಂಥ ಪ್ರಸಾರದಿಂದ ತಮ್ಮ ಅಧಿಕೃತ ಸಂದೇಶಗಳಿಗೆ ಅಡ್ಡಿಬರುವದೆಂದೂ ಇಂಥ ರೇಡಿಯೊ ತರಂಗಗಳು ವಿಶ್ವದಾದ್ಯಂತ ಹರಡುವುದರಿಂದ ಬೇರೆ ಬೇರೆ ಕಾರ್ಯಗಳಿಗೆ ಬೇರೆ ಬೇರೆ ತರಂಗಾಂತರಗಳನ್ನು ಅನ್ವಯಿಸಬೇಕೆಂದೂ ಮನವಿ ಮಾಡಿಕೊಂಡರು. ಈ ವೇಳೆಗೆ ಅಮೆರಿಕದ ಸಂಯುಕ್ತ ಸಂಸ್ಥಾನದಲ್ಲಿ ಸುಮಾರು 500 ಪ್ರಸಾರ ನಿಲಯಗಳು ತಲೆಯೆತ್ತಿದ್ದುವು. ಇದರಿಂದ ಅಂತರರಾಷ್ಟ್ರೀಯ ಒಪ್ಪಂದ ತೀರ ಅವಶ್ಯವಾಯಿತು. ಅಂತರರಾಷ್ಟ್ರೀಯ ದೂರಸಂಪರ್ಕ ಒಪ್ಪಂದದ ಪ್ರಕಾರ ಪ್ರತಿ ರಾಷ್ಟ್ರ ತನ್ನ ಕಾರ್ಯಕ್ರಮಗಳನ್ನು ದೀರ್ಘ ತರಂಗ 150ರಿಂದ 550 ಕಿಲೊಸೈಕಲ್ಲುಗಳು (ತರಂಗಗಳ ಮಾಪನ). ಮಧ್ಯಮ ತರಂಗ 550 ರಿಂದ 1,660 ಕಿಲೊಸೈಕಲ್ಲುಗಳು ಈ ತರಂಗಾಂತರಗಳ ಮೇಲೆ ಪ್ರಸಾರ ಮಾಡಬೇಕೆಂದು ಗೊತ್ತುಮಾಡಿದರು. ಸಂಕ್ಷಿಪ್ತ 2.200 ರಿಂದ 30.000 ಕಿಲೊಸೈಕಲ್ಲುಗಳ ತರಂಗಾಂತರದ ಮೇಲೆ ವಿದೇಶಗಳಿಗಾಗಿ ಕಾರ್ಯಕ್ರಮವನ್ನು ಬಿತ್ತರಿಸಬಹುದೆಂದು ಒಪ್ಪಲಾಯಿತು.



ಧ್ವನಿಮುದ್ರಿಕೆಗಳ ಪ್ರಸಾರ

ದೂರದ ಕಾರ್ಯಕ್ರಮವನ್ನು ಮನೆಯಲ್ಲೇ ಕೇಳುವುದು ಹೇಗೆ? ಆಕಾಶವಾಣಿಯ ತತ್ತ್ವ ತಿಳಿಯಲು ನೀರಿನ ಅಲೆಗಳ ಉದಾಹರಣೆ ತೆಗೆದುಕೊಳ್ಳೋಣ. ಒಂದು ಕೊಳದಲ್ಲಿ ಪುಟ್ಟ ಕಲ್ಲನ್ನೆಸೆದಾಗ ತೆರೆತೆರೆಯಾಗಿ ತರಂಗಗಳು ಹರಡಿಕೊಂಡು ದಡದ ವರೆಗೆ ತಲಪುತ್ತವೆ. ನಾವು ಮಾತನಾಡಿದಾಗಲೂ ನಾವಾಡಿದ ಶಬ್ದದ ತರಂಗಗಳು ಗಾಳಿಯಲ್ಲಿ ಹೀಗೆಯೇ ಅಲೆಅಲೆಯಾಗಿ ಹರಡಿಕೊಳ್ಳುತ್ತವೆ. ಒಬ್ಬರು ಆಡಿದ ಮಾತು ಮತ್ತೊಬ್ಬರ ಕಿವಿಗೆ ಕೇಳುವುದೂ ಇದೇ ರೀತಿಯಲ್ಲಿ. ಅಂದರೆ ಗಾಳಿಯಲ್ಲಿ ಹರಡಿದ ತರಂಗಗಳು ಎರಡನೆಯವರ ಶ್ರವಣೇಂದ್ರಿಯವನ್ನು ತಾಗಿ. ಅಲ್ಲಿಂದ ಮಿದುಳನ್ನು ಸೇರಿ ಮೊದಲನೆಯವರು ಆಡಿದ ಮಾತುಗಳೇನು ಎಂದು ತಿಳಿಸಿಕೊಡುತ್ತವೆ. ಆದರೆ ಈ ಶಬ್ದತರಂಗಗಳಿಗೆ ಬಹಳ ದೂರದವರೆಗೆ ಹರಡುವ ಸಾಮರ್ಥ್ಯ ಇರುವುದಿಲ್ಲ. ಶಬ್ದತರಂಗಗಳನ್ನು ವಿದ್ಯುತ್ತರಂಗಗಳನ್ನಾಗಿ

ಹೊಸಕೋಟೆಯಲ್ಲಿ ಬೆಂಗಳೂರು ಆಕಾಶವಾಣಿಯ ಟ್ರಾನ್ಸ್‌ಮಿಟರ್



[illegible] ಆದರೆ ಸ್ಪೇನ್ ಅರ್ಜೆಂಟೀನಾದಲ್ಲಿ ಬಹು ಜಾನಪದ ಗೀತೆಗಳಲ್ಲಿ ಸ್ಪ್ಯಾನಿಷ್ ಮತ್ತು ರೆಡ್ ಇಂಡಿಯನ್ ಸಂಗೀತದ ಸಮ್ಮಿಶ್ರಣವನ್ನು ಗುರುತಿಸಬಹುದು. ಗಿಟಾರ್ ಮಟ್ಟಿನ ವಾದ್ಯ ಅಪೂರ್ವವಾದುದು. ಈ ಜನ ಕಷ್ಟಪಟ್ಟು ಕೆಲಸಮಾಡಲೂ ಬಲ್ಲರು.

1516ರಲ್ಲಿ ಸ್ಪೇನಿನ ನಾವಿಕ ಹ್ವಾನ್ ಡಿಯಾಸ್ ಡೇ ಸೋಲಿಸ್ ಎಂಬಾತ ಅರ್ಜೆಂಟೀನ ತಲುಪಿದ. ಆದರೆ ಇಂಡಿಯನ್ನರು ಅವನನ್ನು ಕೊಂದು ಹಾಕಿದರು. ಹದಿನಾರು ಮತ್ತು ಹದಿನೇಳನೆಯ ಶತಮಾನಗಳಲ್ಲಿ ಈ ದೇಶ ಸ್ಪೇನಿನ ಸಾಮ್ರಾಜ್ಯದ ಪೆರುವಿನ ಭಾಗವಾಗಿದ್ದಿತು. 1816ರ ಜುಲೈ 9ರಂದು ಸ್ವಾತಂತ್ರ್ಯ ಘೋಷಣೆಯಾಗಿ ಪಶ್ಚಿಮ ಭಾಗ ಬ್ಯೂನಸ್ ಏರಿಸ್ ನೊಡನೆ ಸೇರಿತು. 1853ರಲ್ಲಿ ಅಮೆರಿಕದ ಸಂಯುಕ್ತ ಸಂಸ್ಥಾನದ ಮಾದರಿಯಲ್ಲಿ ಸಂವಿಧಾನ ರಚಿಸಿಕೊಳ್ಳಲಾಯಿತು.

ಇಪ್ಪತ್ತನೆಯ ಶತಮಾನದಲ್ಲಿ ಅರ್ಜೆಂಟೀನ ಬಹುಮುಖವಾಗಿ ಅಭಿವೃದ್ಧಿ ಹೊಂದಿತು. ಕೈಗಾರಿಕೆಗಳು ಸ್ಥಾಪಿತವಾದುವು. ಉಕ್ಕಿನ ನೇಗಿಲು ಬಳಕೆಗೆ ಬಂದು ವ್ಯವಸಾಯ ಪ್ರಗತಿ ಹೊಂದಿತು. 1916ರಲ್ಲಿ ಅಧಿಕಾರಕ್ಕೆ ಬಂದ ಜುಆನ್ ಪೆರಾನ್, ಕೆಲಸಗಾರರ ಸಂಬಳ ಜಾಸ್ತಿ ಮಾಡಿದ. ಆರ್ಥಿಕ ಭಾರವನ್ನು ಹೊರಬೇಕಾಗಿ ಬಂದ ರೈತರು ದಿವಾಳಿ ಎದ್ದು ದೇಶದ ಆರ್ಥಿಕ ಪರಿಸ್ಥಿತಿ ಹದಗೆಟ್ಟಿತು. 1955ರಲ್ಲಿ ಇವನು ಅಧಿಕಾರ ಕಳೆದುಕೊಂಡ. ಅರ್ಜೆಂಟೀನದ ರಾಜಕೀಯ ಪರಿಸ್ಥಿತಿ ಅಂದಿನಿಂದ ಮತ್ತೆ ಮತ್ತೆ ಕದಡುತ್ತಿದೆ.

## ಆಡಳಿತ ವ್ಯವಸ್ಥೆ

ಇತ್ತೀಚಿನ ವರೆಗೆ ಪ್ರಪಂಚದ ಅನೇಕ ದೇಶಗಳಲ್ಲಿ ರಾಜರೇ ಆಳುತ್ತಿದ್ದರು. ಈಗ ಬಹುಮಟ್ಟಿಗೆ ಕಿರೀಟಗಳು ಮಾಯವಾಗಿವೆ. ಇಂಗ್ಲೆಂಡ್, ಇಥಿಯೋಪಿಯ, ನೇಪಾಳ ಇಂಥ ಕೆಲವು ದೇಶಗಳಲ್ಲಿ ಮಾತ್ರ ರಾಜಪ್ರಭುತ್ವ ಉಳಿದಿದೆ. ಆದರೆ ಸಾಮಾನ್ಯವಾಗಿ ಈ ಅರಸರು ಪ್ರಜೆಗಳ ಪ್ರತಿನಿಧಿಗಳ ಇಷ್ಟದಂತೆ ಆಳುತ್ತಾರೆ.

ಭಾರತ, ಇಟಲಿ, ಗ್ರೀಸ್, ರಷ್ಯ, ಚೀನ, ಇಂಗ್ಲೆಂಡ್ ಈ ಪ್ರದೇಶಗಳಲ್ಲಿ ರಾಜರ ಆಳ್ವಿಕೆ ಬಹಳ ಕಾಲ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ನಾಯಕನನ್ನು ಆಯ್ಕೆಮಾಡಿ ಸಮುದಾಯದ ಯೋಗಕ್ಷೇಮದ ಜವಾಬ್ದಾರಿಯನ್ನು ಆತನಿಗೆ ವಹಿಸುವುದು ವಿವಿಧ ಬುಡಕಟ್ಟುಗಳಲ್ಲಿ ಹಿಂದೆ ರೂಪುಗೊಂಡ ಪದ್ಧತಿ. ಅದು ರಾಜತ್ವಕ್ಕೆ ನಾಂದಿ. ಹಲವಾರು ಬುಡಕಟ್ಟುಗಳ ನಡುವೆ ಸಂಪರ್ಕ ಬೆಳೆದು ಎಲ್ಲ ಬುಡಕಟ್ಟುಗಳ ನಾಯಕರ ನಾಯಕ ಪ್ರಬಲ ವ್ಯಕ್ತಿಯಾಗಿ ಮಾರ್ಪಟ್ಟ. ಆ ಪ್ರದೇಶದ ಎಲ್ಲ ಜನರ ಮುಖಂಡ ಆತ. ಇತರ ಪ್ರದೇಶಗಳ ಅದೇ ಬಗೆಯ ನಾಯಕರು ಆತನೊಡನೆ ಸೆಣಸಿದಾಗ ತನ್ನ ಜನರನ್ನು ಸಂರಕ್ಷಿಸುವ ಹೊಣೆ ಆತನ ಮೇಲೆ ಬಿತ್ತು. ಆತ ರಾಜ ಎನಿಸಿಕೊಂಡು ಪ್ರಜೆಗಳ ರಕ್ಷಣೆಗೆ ಹೊಣೆಗಾರನಾಗುತ್ತಿದ್ದ. ಅನೇಕ ಸಂದರ್ಭಗಳಲ್ಲಿ ಆತ ಉತ್ತಮ ಸೈನಿಕನಾಗಿರುತ್ತಿದ್ದ. ರಾಜನಿಗೆ ಎಲ್ಲ ವಿಷಯಗಳಲ್ಲೂ ಪರಮಾಧಿಕಾರವಿತ್ತು. ಮಂತ್ರಿ, ಸಾಮಂತರು, ಅಧಿಕಾರಿಗಳನ್ನು ಆತನೇ ನೇಮಿಸುತ್ತಿದ್ದ. ಪರಮೋಚ್ಚ ನ್ಯಾಯಾಧಿಪತಿಯೂ ಅವನೇ. ಇಡೀ ಪ್ರದೇಶದ ಒಡೆತನ ಆತನದು. ಕಂದಾಯ, ತೆರಿಗೆ, ಸುಂಕ, ಕಪ್ಪ ಮುಂತಾದುವು ಆತನ ಬೊಕ್ಕಸ ತುಂಬಿಸುವ ಆದಾಯಗಳು. ಪ್ರಾಚೀನ ಭಾರತದಲ್ಲಿ ರಾಜರು ಮಂತ್ರಾಲೋಚಕರ ಸಲಹೆ ಪಡೆಯುತ್ತಿದ್ದರು. ಪ್ರಜೆಗಳ ಪ್ರತಿನಿಧಿಗಳ ಸಲಹೆಗಳ ಕೇಳುತ್ತಿದ್ದರು. ರಾಜನ ಕೈಯಲ್ಲಿ ಅಧಿಕಾರ ರಾಜನದು. ಶಾಸನ ಮಾಡುವವನು ಆತನೇ; ಕಾರ್ಯಾಂಗ ಆತನ ಕೈಯಲ್ಲಿ; ನ್ಯಾಯಾಂಗಕ್ಕೆ ಆತನೇ ಒಡೆಯ. ಹಲವಾರು ದೇಶಗಳಲ್ಲಿ ರಾಜರ ದಬ್ಬಾಳಿಕೆ ರಾಜತ್ವ ಪದ್ಧತಿ ಅಳಿಯಲು ಕಾರಣವಾಯಿತು.

ಗ್ರೀಕರು ಕ್ರಿ. ಪೂ. ಆರನೆಯ ಶತಮಾನದಲ್ಲಿ ರಾಜಪ್ರಭುತ್ವವನ್ನು ಕೊನೆಗಾಣಿಸಿ ಕಾನೂನುಬದ್ಧ ಪ್ರಜಾರಾಜ್ಯ ನಿರ್ಮಿಸಿಕೊಂಡರು. ರೋಮನರು ಇದೇ ಶತಮಾನದಲ್ಲಿ ರಾಜಪ್ರಭುತ್ವವನ್ನು ಬಿಟ್ಟು ಗಣರಾಜ್ಯಗಳನ್ನು ರಚಿಸಿಕೊಂಡು ಶತಮಾನಗಳ ಪರ್ಯಂತ ಅವನ್ನು ಉಳಿಸಿಕೊಂಡರು. ರಾಜಪ್ರಭುತ್ವ ಕೊನೆಗಂಡರೂ ರಾಜಮನೆತನದವರು ರೋಮನ್ ಗಣರಾಜ್ಯಗಳಲ್ಲಿ ಪ್ರಬಲರಾಗಿದ್ದರು. ಪ್ರಜೆಗಳ ಪ್ರತಿನಿಧಿಗಳು ಆಡಳಿತದಲ್ಲಿ ಭಾಗವಹಿಸಲು ಅವಕಾಶ. ಪ್ರಜೆಗಳ ಹಕ್ಕುಬಾಧ್ಯತೆಗಳು, ಕಾನೂನು ಮತ್ತು ಅಭಿಪ್ರಾಯ ಸ್ವಾತಂತ್ರ್ಯ ಇವುಗಳನ್ನೊಪ್ಪಿಕೊಂಡ ಸರಕಾರಗಳು ರೋಮನ್ ಗಣರಾಜ್ಯಗಳನ್ನು ಆಳಿದುವು. ಆದರೆ ತುರ್ತು ಪರಿಸ್ಥಿತಿಗಳಲ್ಲಿ ಸರ್ವಾಧಿಕಾರಿಯೊಬ್ಬ ಆರು ತಿಂಗಳ ಮಟ್ಟಿಗೆ ತಾನೊಬ್ಬನೇ ಅಧಿಕಾರ ನಡೆಸಲು ಅವಕಾಶವಿತ್ತು.

ಅನೇಕ ದೇಶಗಳಲ್ಲಿ ರಾಜಪ್ರಭುತ್ವದ ಬದಲು ಪ್ರಜಾಪ್ರಭುತ್ವ ನೇರವಾಗಿ ಬರಲಿಲ್ಲ. ಪ್ರಬಲರಾದ ಕೆಲವು ಜನ ಸೇರಿ ಸರಕಾರ ನಡೆಸಲು ಉಪಕ್ರಮಿಸಿದಾಗ, ಅದು ಮಿತಜನಾಧಿಪತ್ಯಗಳೆನಿಸಿಕೊಂಡುವು. ಸರಕಾರವನ್ನು ನಡೆಸುವ ಈ ಜನ ರಾಜಮನೆತನದ ಶ್ರೀಮಂತರು ಅಥವಾ ವ್ಯಾಪಾರಸ್ಥರಾಗಿರುತ್ತಿದ್ದರು. ಧರ್ಮಬೋಧಕರು ಪ್ರಬಲರಾಗಿದ್ದ ಟಿಬೆಟ್ಟಿನ ಮಿತಜನಾಧಿಪತ್ಯ ರಾಜ್ಯಾಡಳಿತ ಇತ್ತೀಚೆಗೆ ಚೀನೀಯರ ಆಕ್ರಮಣದಿಂದ ಕೊನೆಗಂಡಿತು. ಪ್ರಾಚೀನ ಗ್ರೀಕ್ ಮತ್ತು ರೋಮನ್ ನಗರಗಳ ರಾಜ್ಯಭಾರವು ರಾಜಪ್ರಭುತ್ವಾನಂತರ ಕೆಲವರು ಪ್ರಭಾವಶಾಲಿಗಳ ವಶವಾಯಿತು.

ಇಂಗ್ಲೆಂಡಿನ ರಾಜಪ್ರಭುತ್ವ ಪದ್ಧತಿ ಕ್ರಮೇಣ ಪ್ರಜಾಪ್ರಭುತ್ವಕ್ಕೆ ದಾರಿ ಮಾಡಿಕೊಟ್ಟಿತು. ಇಂದಿಗೂ ಇಂಗ್ಲೆಂಡಿನಲ್ಲಿ ರಾಜ ಅಥವಾ ರಾಣಿಯದು ವಂಶಪಾರಂಪರ್ಯ ಹಕ್ಕು. ಅಲ್ಲಿ ದೊರೆ ನಾಮಮಾತ್ರ ಅಧಿಕಾರಿ.

ಇಡೀ ರಾಜ್ಯ ವ್ಯವಸ್ಥೆಯಲ್ಲಿ ಒಂದೇ ಧೋರಣೆಯುಳ್ಳ ಪಂಗಡವೊಂದರ ಅಧೀನಕ್ಕೆ ಬರುವ ವ್ಯವಸ್ಥೆ, ನಿರಂಕುಶಪ್ರಭುತ್ವ ಎನಿಸಿಕೊಳ್ಳುತ್ತದೆ. ರಾಜ್ಯಭಾರ ನಡೆಸುವ ಪಂಗಡಕ್ಕೆ ಇದಿರಾದ ಪಂಗಡವೊಂದು ನಿರಂಕುಶಪ್ರಭುತ್ವದಲ್ಲಿ ಇರಲು ಅವಕಾಶವಿಲ್ಲ. ರಾಜಪ್ರಭುತ್ವ ಕ್ಷೀಣಗೊಂಡಂತೆ ಇಟಲಿಯಲ್ಲಿ 1919ರಲ್ಲಿ ರಾಷ್ಟ್ರೀಯವಾದಿಗಳ ತಂಡವೊಂದು ಹುಟ್ಟಿಕೊಂಡಿತು. ಇದರ ಪ್ರಥಮ ಉದ್ದೇಶ ಕಮ್ಯೂನಿಸಮನ್ನು ವಿರೋಧಿಸುವುದು. 1922ರಲ್ಲಿ ಸರಕಾರವೇ ಅದರ ಅಧೀನಕ್ಕೆ ಬಂದಿತು. ಫ್ಯಾಸಿಸ್ಟ್ ಎನಿಸಿಕೊಂಡ ಈ ಪಂಗಡದ ನಾಯಕ, ಬೆನಿಟೊ ಮುಸೋಲಿನಿ. ಕೋಲುಗಳ ಹೊರೆ, ಮಧ್ಯೆ ಕೊಡಲಿ–ಇದಕ್ಕೆ ಪ್ರಾಚೀನ ರೋಮ್‌ನಲ್ಲಿ 'ಫಾಸೀಸ್' ಎನ್ನುತ್ತಿದ್ದರು. ರೋಮ್‌ನ ನ್ಯಾಯಾಧೀಶರ ಮುಂದೆ ಇದನ್ನು ಅಧಿಕಾರದ ಸಂಕೇತವಾಗಿ ಒಯ್ಯುತ್ತಿದ್ದರು. ಇದರಿಂದ 'ಫ್ಯಾಸಿಸಂ' ಪದ ಬಂದಿದೆ. ಇದು ನಾಯಕನ ಪರಮಾಧಿಕಾರವನ್ನು ಸೂಚಿಸುತ್ತದೆ. ಮುಸೋಲಿನಿಯ ಪ್ರಾಬಲ್ಯ ಬೆಳೆದಂತೆ ಇಟಲಿಯ ಸರ್ವಾಧಿಕಾರಿಯಾಗಿ, ಆತ ನಿರಂಕುಶಪ್ರಭುತ್ವ ನಡೆಸಿದ. ಕಮ್ಯೂನಿಸ್ಟ್ ಆಡಳಿತ ವ್ಯವಸ್ಥೆ ನಿರಂಕುಶ ರಾಜ್ಯಭಾರಕ್ಕೆ ಮತ್ತೊಂದು ನಿದರ್ಶನ. ಕಮ್ಯೂನಿಸ್ಟ್ ಪಕ್ಷದ ಹೊರತಾಗಿ ಬೇರಾವ ಪಂಗಡವೂ ಅಸ್ತಿತ್ವಕ್ಕೆ ಬರಲು ಕಮ್ಯೂನಿಸ್ಟ್ ದೇಶಗಳಲ್ಲಿ ಸಾಧ್ಯವಿಲ್ಲ. ನಿರಂಕುಶಪ್ರಭುತ್ವದ ಪ್ರಜೆಗಳು ಸರಕಾರದ ತತ್ತ್ವಗಳಿಂದ ಬೇರೆಯಾದ ಯಾವ ತತ್ತ್ವಗಳನ್ನೂ ಪ್ರತಿಪಾದಿಸುವಂತಿಲ್ಲ.

ಪ್ರಜೆಗಳು ತಮ್ಮನ್ನು ತಾವೇ ಆಳಿಕೊಳ್ಳುವ ರಾಜ್ಯವ್ಯವಸ್ಥೆ ಪ್ರಜಾಪ್ರಭುತ್ವ. ಗ್ರೀಕ್ ನಗರಗಳಲ್ಲಿ ಮತ್ತು ರೋಮಿನಲ್ಲಿ ಪ್ರಜಾಪ್ರಭುತ್ವ ಪದ್ಧತಿ ಜಾರಿಯಲ್ಲಿತ್ತು. ನಗರದ ಪೌರರೆಲ್ಲರೂ ಒಂದೆಡೆ ಕಲೆತು ಚರ್ಚಿಸಿ ನಿಯಮಗಳನ್ನೂ ಕಾಯಿದೆಗಳನ್ನೂ ರೂಪಿಸಿಕೊಳ್ಳುತ್ತಿದ್ದ ಈ ಬಗೆಯ ರಾಜ್ಯವ್ಯವಸ್ಥೆಯಲ್ಲಿ ಪ್ರಜೆಗಳದೇ ಪರಮಾಧಿಕಾರ. ಸ್ವಿಟ್ಜರ್‌ಲೆಂಡಿನ ಹಲವು ಬುಡಕಟ್ಟುಗಳಲ್ಲೂ ಉತ್ತರ ಯೂರೊಪಿನ ಟ್ಯುಟಾನಿಕ್ ಬುಡಕಟ್ಟಿನಲ್ಲೂ ಪ್ರಜಾಪ್ರಭುತ್ವದ ರೂಪರೇಷೆಗಳಿದ್ದುದನ್ನು ಕಾಣಬಹುದು. ಪ್ರದೇಶದ ಬುಡಕಟ್ಟಿನ ಅಥವಾ ನಗರದ ಎಲ್ಲ ಪೌರರು ಇದರಲ್ಲಿ ಭಾಗವಹಿಸುತ್ತಿದ್ದುದರಿಂದ ಇದು ಪ್ರಾಥಮಿಕ ಪ್ರಜಾಪ್ರಭುತ್ವ. ರಾಜ್ಯಾಡಳಿತದ ಸಲುವಾಗಿ ಪ್ರಜಾಪ್ರತಿನಿಧಿಗಳು ಆಯ್ಕೆಯಾಗುವ ಪದ್ಧತಿ ಪ್ರಾತಿನಿಧಿಕ ಪ್ರಜಾಪ್ರಭುತ್ವ ಎನಿಸಿಕೊಳ್ಳುತ್ತದೆ.

ಒಂಬತ್ತರಿಂದ ಹದಿಮೂರನೆಯ ಶತಮಾನದ ಅವಧಿಯಲ್ಲಿ ಭೂಮಾಲೀಕರು ಪ್ರಬಲರಾಗಿದ್ದರು. ಅರಸನ ಊಳಿಗಕ್ಕೆ ಪ್ರತಿಫಲವಾಗಿ ಬಂದ ಭೂಮಿಯ ಫಲವನ್ನನುಭವಿಸುತ್ತಿದ್ದ ರಾಜನಿಷ್ಠರನ್ನು ಊಳಿಗಮಾನ್ಯರು ಎನ್ನುತ್ತಿದ್ದರು. ಹದಿಮೂರನೆಯ ಶತಮಾನದಲ್ಲಿ ಆಡಳಿತ ಪ್ರದೇಶಗಳಿಂದಲೂ ನಗರಗಳಿಂದಲೂ ಊಳಿಗಮಾನ್ಯರಲ್ಲದ ಪ್ರತಿನಿಧಿಗಳನ್ನು ಊಳಿಗ ಮಾನ್ಯರ ಮಂಡಳಿಗೆ ಸೇರಿಸಿಕೊಳ್ಳಲು ಪ್ರಾರಂಭವಾದದ್ದು ಇಂದಿನ ಪ್ರಜಾಪ್ರಭುತ್ವಕ್ಕೆ ನಾಂದಿ. ಆದರೆ ಆಗ 'ಕೌಂಟಿ', 'ಬರೊ' ಮುಂತಾದ ಪ್ರದೇಶಗಳೂ ವಿಶ್ವವಿದ್ಯಾನಿಲಯ, ಪೌರಸಭೆ ಮೊದಲಾದ ಸಂಸ್ಥೆಗಳೂ ಪ್ರಭಾವಶಾಲಿಗಳಾಗಿದ್ದುವು. ಇವುಗಳಿಂದಲೇ ಪ್ರತಿನಿಧಿಗಳು ಆಯ್ಕೆಗೊಳ್ಳುತ್ತಿದ್ದರು. ಕಾನೂನು ಮಾಡಲು, ತೆರಿಗೆಗಳನ್ನು ವಸೂಲು ಮಾಡಲು, ಯಾರ ಪ್ರಭಾವವನ್ನು ಬಳಸಿಕೊಳ್ಳಬಹುದೋ ಅವರನ್ನೆಲ್ಲ ಪ್ರಜಾಪ್ರತಿನಿಧಿಗಳನ್ನಾಗಿ ಅಂಗೀಕರಿಸುತ್ತಿದ್ದರು. ಈ ಬಗೆಯ ಸದಸ್ಯರನ್ನೆಲ್ಲ ಕೆಳಮನೆಯ ಸದಸ್ಯರೆಂದೂ ಊಳಿಗ ಮಾನ್ಯರು, ರಾಜಮನೆತನದವರು, ಧರ್ಮಪೀಠದ ಪ್ರತಿನಿಧಿಗಳು ಮೇಲ್ಮನೆಯ ಸದಸ್ಯರೆಂದೂ ಕರೆಯಲಾಯಿತು. ಈ ವ್ಯವಸ್ಥೆ ಸಂಸತ್ತು ಎಂದಾಯಿತು. ಆಡಳಿತಕ್ಕೆ ನೆರವಾಗಲು ಮಂತ್ರಿಮಂಡಲವೊಂದನ್ನು ರಾಜ ರಚಿಸಿಕೊಳ್ಳುತ್ತಿದ್ದ. ಹದಿನಾಲ್ಕನೆಯ ಶತಮಾನದಲ್ಲಿ ಈ ಬೆಳವಣಿಗೆಯಾದರೂ ಕಾನೂನನ್ನು ನಿರ್ಮಿಸುವುದರಲ್ಲಿ ಸಂಸತ್ತಿಗೆ ಪೂರ್ಣ ಅಧಿಕಾರ ಸಿಗಲು ಸುಮಾರು ಮುನ್ನೂರು ವರ್ಷ ಹಿಡಿಯಿತು. ಕ್ರಮೇಣ ಕೆಳಮನೆಯ ಸದಸ್ಯರು ಪ್ರಬಲರಾಗಿ ದೇಶದ ಬಹುತೇಕ ಸದಸ್ಯರ ಪ್ರತಿನಿಧಿಗಳು ಅವರು ಎಂಬ ಪ್ರಾಧಾನ್ಯ ಅವರಿಗೆ ಸಲ್ಲತೊಡಗಿತು. ಆಗ ರಾಜ ಮತ್ತು ಮೇಲ್ಮನೆಯ ಸದಸ್ಯರು ತಮಗೆ ಬೇಕಾದ ಮಸೂದೆಗಳನ್ನು ಅಂಗೀಕೃತಗೊಳಿಸಲು ಕೆಳಮನೆಯ ಸದಸ್ಯರ ಮೊರೆಹೊಗಬೇಕಾಯಿತು. ಕೆಳಮನೆ ಅಂಗೀಕರಿಸಿದ ಶಾಸನಗಳಿಗೆ ಒಪ್ಪಿಗೆ ನೀಡುವ ಹಕ್ಕು ಮಾತ್ರ ರಾಜನಿಗೂ ಮೇಲ್ಮನೆಯ ಸದಸ್ಯರ ಪಾಲಿಗೂ ಉಳಿಯಿತು. ಇಂದಿಗೂ ಶಾಸನಗಳನ್ನು ಮಾಡುವುದರಲ್ಲಿ ಸಂಸತ್ತಿನದೇ ಮುಖ್ಯ ಪಾತ್ರವಾದರೂ ರಾಜನ ಅಥವಾ ರಾಣಿಯ ಅಂಗೀಕಾರ ಮುದ್ರೆ ಬೀಳದೆ ಅದು ಜಾರಿಗೆ ಬರುವುದಿಲ್ಲ.

ಅಮೆರಿಕದಲ್ಲಿ ಆಚರಣೆಯಲ್ಲಿರುವ ಪ್ರಜಾಪ್ರಭುತ್ವ ಪದ್ಧತಿಯಲ್ಲಿ ಮತದಾರರು ಪ್ರತಿನಿಧಿಗಳನ್ನು ಮಾತ್ರವಲ್ಲದೆ ಅಧ್ಯಕ್ಷನನ್ನೂ ಚುನಾಯಿಸುತ್ತಾರೆ. ಅಧ್ಯಕ್ಷ ಆಡಳಿತ ನಿರ್ವಹಣೆಯ ಮುಖ್ಯಸ್ಥ ; ಪ್ರತಿನಿಧಿಗಳು ಶಾಸನಗಳನ್ನು ರೂಪಿಸುತ್ತಾರೆ. ಇಂಗ್ಲೆಂಡಿನ ಪದ್ಧತಿಯ ಪ್ರಜಾಪ್ರಭುತ್ವದಲ್ಲಿ ಬಹುಮತ ಪಡೆದ ಪಕ್ಷಕ್ಕೆ ಸೇರಿದ ಸದಸ್ಯರು ತಮ್ಮ ನಾಯಕನನ್ನು ಆಯ್ಕೆ ಮಾಡುತ್ತಾರೆ. ಹಾಗೆ ಆಯ್ಕೆಯಾದ ನಾಯಕ, ಪ್ರಧಾನಿ ; ಆಡಳಿತ ನಿರ್ವಹಣೆಯ ಮುಖ್ಯಸ್ಥ. (ಇಂಗ್ಲೆಂಡಿನಲ್ಲಿ) ಪ್ರಧಾನಿ, (ಅಮೆರಿಕದಲ್ಲಿ) ಅಧ್ಯಕ್ಷ ಸಚಿವ ಸಂಪುಟವನ್ನು ರಚಿಸಿಕೊಳ್ಳುತ್ತಾರೆ.

ಇಂದಿನ ಯಾವುದೇ ಪ್ರಜಾಪ್ರಭುತ್ವದಲ್ಲಿ ಆಡಳಿತ ಪಕ್ಷ ಮತ್ತು ವಿರೋಧ ಪಕ್ಷಗಳಿರುತ್ತವೆ.

ನಿರ್ದಿಷ್ಟ ಸೀಮೆಗಳನ್ನುಳ್ಳ ಪ್ರದೇಶದಲ್ಲಿ ವಾಸಿಸುವ ಜನರ ಸಮುದಾಯ ಒಂದು ರಾಷ್ಟ್ರವೆಂದು ಪರಿಗಣಿಸಲ್ಪಡುತ್ತದೆ. ವಿವಿಧ ಬುಡಕಟ್ಟುಗಳಿಗೆ ಸೇರಿದವರೂ ಭಾಷೆ ಆಚಾರಗಳಲ್ಲಿ ಭಿನ್ನತೆಯುಳ್ಳವರೂ ಒಂದು ರಾಷ್ಟ್ರದಲ್ಲಿ ಇರಬಹುದು. ಇವರೆಲ್ಲರೂ ಸಮಾನ ಹಕ್ಕುಬಾಧ್ಯತೆಗಳನ್ನು ಹೊಂದಲು ವಿಪುಲ ಅವಕಾಶಗಳು ಇಪ್ಪತ್ತನೆಯ ಶತಮಾನದಲ್ಲಿ ಲಭ್ಯವಾಗಿವೆ. ವ್ಯಕ್ತಿವ್ಯಕ್ತಿಗಳು ಹೇಗೋ ಹಾಗೆಯೇ ರಾಷ್ಟ್ರಗಳು ಕೂಡ ಪರಸ್ಪರ ಅವಲಂಬಿಸಿರಬೇಕಾದ ಅಗತ್ಯ ಕಂಡುಬಂದಿದೆ. ಒಪ್ಪಂದ, ಕೌಲು, ವಾಣಿಜ್ಯ, ಸಹಯೋಗ ಇವು ಮಾತ್ರವಲ್ಲದೆ ಶೀತಲ ಸಮರ, ಗಡಿ ವೈಮನಸ್ಸು ಇವು ಕೂಡ ರಾಷ್ಟ್ರಗಳ ನಡುವೆ ಕಾಣಿಸಿಕೊಳ್ಳುತ್ತವೆ. ವಿಶ್ವಭ್ರಾತೃತ್ವ, ಅಂತರರಾಷ್ಟ್ರೀಯ ಸೌಹಾರ್ದ, ಪರಸ್ಪರ ಅವಲಂಬನ, ಅಭಿವೃದ್ಧಿ ಹೊಂದದವರ ಬಗೆಗೆ ಅನುಕಂಪ ಮತ್ತು ನೆರವು ಇವುಗಳ ಪ್ರತೀಕ ವಿಶ್ವಸಂಸ್ಥೆ.

ನೋಡಿ : ಕಮ್ಯೂನಿಸಂ ; ಗಣರಾಜ್ಯ ; ಪ್ರಜಾಪ್ರಭುತ್ವ ; ರಾಜಕೀಯ ಸಿದ್ಧಾಂತ ; ವಿಶ್ವಸಂಸ್ಥೆ ; ಸಾಮ್ರಾಜ್ಯ.

## ಆದ್ಯಪ್ರವರ್ತಕರು

ಯಾವ ವಿಷಯವನ್ನೇ ಆಗಲಿ ಅದು ಏನು, ಇದು ಹೇಗೆ ಎಂದು ಪ್ರಶ್ನೆಗಳ ಸುರಿಮಳೆಯನ್ನೇ ಸುರಿಸಿ, ಬಂದ ಉತ್ತರಕ್ಕೆ ಮತ್ತೊಂದು ಪ್ರಶ್ನೆ ತಗಲಿಸಿ, ತರ್ಕಬದ್ಧವಾದ ಉತ್ತರ ಹುಡುಕುತ್ತಿದ್ದ ತತ್ತ್ವಜ್ಞಾನಿ ಸಾಕ್ರಟೀಸ್. ಕ್ರಿ. ಪೂ. ಐದನೆಯ ಶತಮಾನದಲ್ಲಿ ಅತಿ ವಿಚಿತ್ರ ವ್ಯಕ್ತಿಯಾಗಿ ಕಂಡ. ವಿಷ ಕುಡಿಸಿ ಅವನನ್ನು ಕೊಂದರು.

ಹದಿನಾಲ್ಕನೆಯ ಶತಮಾನದಲ್ಲಿ ಅಪೂರ್ವ ಸಾಹಸಯಾನ ಮಾಡಿ ಬಂದ ಮಾರ್ಕೊ ಪೋಲೋನ ಅನುಭವಗಳನ್ನು ಜನತೆ ನಂಬಲೇ ಇಲ್ಲ. ಅದು ಶುದ್ಧ ಕಟ್ಟುಕಥೆ ಎಂದರು.

ಹದಿನಾರನೆಯ ಶತಮಾನದಲ್ಲಿ, ಸೂರ್ಯ ಚಲಿಸುವುದಿಲ್ಲ. ಭೂಮಿಯೇ ಸೂರ್ಯನ ಸುತ್ತ ಸುತ್ತುತ್ತದೆ ಎಂದು ಹೇಳಿದ ವಿಜ್ಞಾನಿ ಗೆಲಿಲಿಯೊನನ್ನು ಚಿತ್ರಹಿಂಸೆಗೆ ಗುರಿ ಮಾಡಿದರು.

ಇಪ್ಪತ್ತನೆಯ ಶತಮಾನದಲ್ಲಿ ಆಕಾಶದಲ್ಲಿ ಹಕ್ಕಿಯಂತೆ ಹಾರಾಡುವ ವಿಮಾನವೊಂದನ್ನು ಅಮೆರಿಕದ ರೈಟ್ ಸಹೋದರರು ತಯಾರಿಸುವ ಹಂಚಿಕೆಯಲ್ಲಿದ್ದಾಗ ಜಗತ್ತು ಅವರನ್ನು ಅಪಹಾಸ್ಯ ಮಾಡಿ ನಕ್ಕಿತು. ಒಮ್ಮೆ, ಹಾರುವ ಪ್ರಯತ್ನ ನೋಡಲು ಹಲವರನ್ನು ಅವರು ಆಹ್ವಾನಿಸಿದರು. ಪತ್ರಿಕಾ ಪ್ರತಿನಿಧಿಯೊಬ್ಬನಿಗೂ ಆಹ್ವಾನವಿತ್ತರು. ಅಂದೇ ಅವನಿಗೆ ಶ್ರೀಮಂತ ಕುಟುಂಬ ಒಂದರ ವಿವಾಹಕ್ಕೂ ಆಹ್ವಾನ ಬಂದಿತ್ತು. ಹಾರುವ ಪ್ರಯತ್ನ ಬರೀ ಹುಚ್ಚು ಎಂದುಕೊಂಡ ಆತ ಶ್ರೀಮಂತರ ವಿವಾಹಕ್ಕೆ ಹೋಗಿ, ತನ್ನ ಪತ್ರಿಕೆಗೆ ಅದರ ದೀರ್ಘ ವರದಿಯನ್ನು ಕಳುಹಿಸಿದ.

ಆದರೆ ಕಾಲ ಉರುಳಿದಂತೆ, ಈ ಆದ್ಯಪ್ರವರ್ತಕರ ಸಾಧನೆಗಳ ಸತ್ಯ ಗೋಚರವಾಗುತ್ತದೆ. ಅವರ ಹೆಸರು ಇತಿಹಾಸದಲ್ಲಿ ಅಮರವಾಗುತ್ತದೆ, ಮಾನವಕೋಟಿಯ ಪ್ರಗತಿ ಬಹು ಮಟ್ಟಿಗೆ ಸಾಧ್ಯವಾಗಿರುವುದು ಇಂಥ ಮಹಾನುಭಾವರಿಂದಲೇ.

ನೋಡಿ : ಕ್ರಿಸ್ತ ; ಯೇಸು ; ಗಾಂಧಿಜಿ ; ಗೆಲಿಲಿಯೊ ; ಮಾರ್ಕೊ ಪೋಲೋ ; ಸಾಕ್ರಟೀಸ್ ; ವಿಮಾನ.

ಸಾಕ್ರಟೀಸ್ ಮಾರ್ಕೊ ಪೋಲೋ ಗೆಲಿಲಿಯೊ

ಭಾರತದ ಸ್ವಾತಂತ್ರ್ಯಗಳಿಕೆಗಾಗಿ ಮಹಾತ್ಮ ಗಾಂಧಿಯವರು ಅಹಿಂಸಾ ಯುತ ಸತ್ಯಾಗ್ರಹದ ಆಯುಧವನ್ನು ಬಳಸಿದಾಗ "ಭಾರತಕ್ಕೆ ಸ್ವಾತಂತ್ರ್ಯ ಇನ್ನು ಬಂದಂತೆಯೇ." ಎಂದು ಕುಚೇಷ್ಟೆಯಿಂದ ಉದ್ಗರಿಸಿದವರು ಸಾವಿರಾರು ಮಂದಿ.

ಹೀಗೇಕೆ ?

ಇಂದು ನಮಗೆ ಅಂದಿನ ಜನರ ನಡತೆ ಅಚ್ಚರಿ ಉಂಟುಮಾಡಿದರೂ ಅವರ ಭಾವನೆ ಆ ಕಾಲಕ್ಕೆ ತಕ್ಕುದಾಗಿತ್ತು. ಮೇಲೆ ಹೇಳಿದ ಮಹಾಪುರುಷರ ವರ್ತನೆ ಅವರ ಸಮಕಾಲೀನರ ಬುದ್ಧಿಗೆ ನಿಲುಕುವಂಥದಾಗಿರಲಿಲ್ಲ. ಅವರ ವಿಚಾರ ರೀತಿ ಅಂದಿನ ಜನರಿಗೆ ಹೊಚ್ಚ ಹೊಸದು.

ಒಂದು ನೂತನ ವಿಚಾರವನ್ನು ಪ್ರಪ್ರಥಮ ಬಾರಿಗೆ ಸಾಧಿಸ ಹೊರಟವರನ್ನು ಆದ್ಯಪ್ರವರ್ತಕರು ಎನ್ನುತ್ತಾರೆ. ಮೇಲೆ ಹೇಳಿದ ಮಹನೀಯರು ಆಯಾ ಕ್ಷೇತ್ರದ ಆದ್ಯಪ್ರವರ್ತಕರು.

ತನ್ನ ಕಾಲದಲ್ಲಿ ಅಪಹಾಸ್ಯಕ್ಕೆ ಗುರಿಯಾದ ಗೆಲಿಲಿಯೊ ಇಂದು ಆಧುನಿಕ ವಿಜ್ಞಾನದ ಪಿತಾಮಹ ಎನಿಸಿಕೊಂಡಿದ್ದಾನೆ.

ನಮ್ಮ ತಲೆಯ ಮೇಲೆ ಹಾರಾಡುವ ವಿಮಾನಗಳನ್ನು ನೋಡಿದಾಗಲೆಲ್ಲ ನಮಗೆ ರೈಟ್ ಸಹೋದರರ ನೆನಪು ಬಾರದಿರದು. ಅಂದು ಅವರು ಮಾನವನಿಗೆ ಗಗನದಲ್ಲಿ ಹಾರಾಡುವುದನ್ನು ತೋರಿಸಿಕೊಟ್ಟರು. ಇಂದು ಮಾನವ ಚಂದ್ರನ ಮೇಲೆಯೇ ಕಾಲೂರಿದ್ದಾನೆ.

ಸ್ವಾತಂತ್ರ್ಯಕ್ಕಾಗಿ ಎಷ್ಟು ರಕ್ತ ಹರಿದಿದೆ ಎನ್ನುವುದನ್ನು ಚರಿತ್ರೆ ಸಾರುತ್ತಿರುವಾಗ, ಸೋಲನ್ನೇ ಕಂಡರಿಯದ ಒಂದು ಪ್ರಬಲ ಚಕ್ರಾಧಿಪತ್ಯದಿಂದ ಭಾರತದ ಸ್ವಾತಂತ್ರ್ಯವನ್ನು ಅಹಿಂಸಾತ್ಮಕ ಸತ್ಯಾಗ್ರಹದ ಮೂಲಕ ಪಡೆಯಬಹುದೆಂದು ಗಾಂಧಿಜಿ ಹೇಳಿದಾಗ, ಕೆಲವು ಜನರು ಅಪನಂಬಿಕೆ ತೋರಿದ್ದು ಅಸಹಜವಲ್ಲ. ಆ ಜನರ ವಿಚಾರಸರಣಿ ತಪ್ಪೆಂದು ಸಿದ್ಧವಾಗಲು ಬಹಳ ಕಾಲ ಬೇಕಾಗಲಿಲ್ಲ.

ಆದ್ಯಪ್ರವರ್ತಕರು, ಪ್ರತಿಭಾನ್ವಿತರಷ್ಟೇ ಅಲ್ಲ. ಸಾಹಸಿಗಳೂ ಹೌದು. ಅದುವರೆಗೆ ಯಾರೂ ಮಾಡದ ಒಂದು ವಿಷಯದ ಬಗೆಗೆ ಚಿಂತನೆ ನಡೆಸಿ ಅದಕ್ಕೊಂದು ರೂಪುಕೊಡುವ ಅವರ ಬುದ್ಧಿಶಕ್ತಿ ಮೆಚ್ಚತಕ್ಕದ್ದೇ. ಆಲೋಚನೆಯಲ್ಲಿ ತಮ್ಮ ಕಾಲಕ್ಕಿಂತ ಬಹಳ ಮುಂದಿರುವುದರಿಂದಲೇ ಎಷ್ಟೋ ಬಾರಿ ಸಮಕಾಲೀನ ಜನತೆಯ ಗೌರವಕ್ಕೆ ಅವರು ಪಾತ್ರರಾಗುವುದಿಲ್ಲ. ಜನರ ಕೂಪಮಂಡೂಕ ಪ್ರಪಂಚದಲ್ಲಿ ಅವರಿಗೆ ಸ್ಥಾನವಿಲ್ಲ. ಅವರು ಹುಚ್ಚರು ಎನ್ನಿಸಿಕೊಳ್ಳುತ್ತಾರೆ.

## ಆದಾಯ

ಜನರು ಹೊಲ, ಕಾರಖಾನೆ, ಕಚೇರಿ. ಅಂಗಡಿ ಮುಂತಾದ ಕಡೆ ಕೆಲಸ ಮಾಡುತ್ತಾರೆ. ಅದರಿಂದ ಬರುವ ವರಮಾನದಿಂದ ಜೀವನ ನಡೆಸುತ್ತಾರೆ. ಜಮೀನು, ಶ್ರಮ ಮತ್ತು ಬಂಡವಾಳ ಇವುಗಳಿಂದ ವರಮಾನ ಬರುತ್ತದೆ. ಜಮೀನಿನಲ್ಲಿ ಬರುವ ಬೆಳೆ ವರಮಾನವನ್ನು ತರುತ್ತದೆ. ಷೇರುಗಳಲ್ಲಾಗಲೀ ಠೇವಣಿಗಳಲ್ಲಾಗಲೀ ಹಣ ಇಟ್ಟ ಜನರಿಗೆ ಅದರ ಉತ್ಪತ್ತಿ ವರಮಾನ. ಕಟ್ಟಡದ ಬಾಡಿಗೆ, ಬಡ್ಡಿ ಮುಂತಾದುವೆಲ್ಲವೂ ಬಂಡವಾಳದಿಂದ ಬರುವ ವರಮಾನ. ಶ್ರಮದಲ್ಲಿ ಎರಡು ವಿಧ : ತನಗಾಗಿ ಶ್ರಮಪಡುವುದು ಮತ್ತು ಇತರರಿಗಾಗಿ ಶ್ರಮಪಡುವುದು. ತನ್ನ ಜಮೀನಿನಲ್ಲಿ ದುಡಿಯುವ ರೈತ. ಸ್ವಂತ ಅಂಗಡಿಯಲ್ಲಿ ವ್ಯಾಪಾರ ಮಾಡುವ ವರ್ತಕ. ಇವರು ತಮಗೋಸ್ಕರವೇ ಶ್ರಮಪಟ್ಟಂತೆ ಆಗುತ್ತದೆ. ಕಾರಖಾನೆ ಮತ್ತು ಕಚೇರಿಗಳಲ್ಲಿ ತಮ್ಮದಲ್ಲದ ಅಂಗಡಿಗಳಲ್ಲಿ ಜನ ಅನ್ಯರಿಗೋಸ್ಕರ ಕೆಲಸಮಾಡಿ, ತಮ್ಮ ವರಮಾನ ಪಡೆಯುತ್ತಾರೆ.

ಒಂದು ನಿರ್ದಿಷ್ಟ ಅವಧಿಯಲ್ಲಿ ಹೀಗೆ ಆಗುವ ಉತ್ಪತ್ತಿ ಆದಾಯ ಅಥವಾ ವರಮಾನ. ತಿಂಗಳ ವರಮಾನ ಎಂದರೆ ಒಂದು ತಿಂಗಳಿನ ಉತ್ಪತ್ತಿ. ವಾರ್ಷಿಕ ವರಮಾನ ಎಂದರೆ ವರ್ಷದ ಉತ್ಪತ್ತಿ. ವರಮಾನವನ್ನು ಹೇಳುವುದು ಹಣದ ರೂಪದಲ್ಲಿ. ಒಬ್ಬ ರೈತನ ಜಮೀನಿನಲ್ಲಿ 100 ಕ್ವಿಂಟಾಲ್ ಭತ್ತ ಬೆಳೆಯುತ್ತದೆ ಎಂದಿಟ್ಟುಕೊಳ್ಳೋಣ. ಅದನ್ನು ಮಾರಿ ಬರುವ ಹಣದಿಂದ, ಬೆಳೆಗಾಗಿ ಮಾಡಿರುವ ಖರ್ಚನ್ನು ಕಳೆದಾಗ ಉಳಿಯುವುದೇ ರೈತನ ವರಮಾನ. ಇತರ ಕ್ಷೇತ್ರಗಳಲ್ಲೂ ಹೀಗೆಯೇ. ದೊರೆತ ಹಣದಿಂದ ಆದ ವೆಚ್ಚವನ್ನು ಕಳೆದಾಗಲೇ ವರಮಾನ ಖಚಿತವಾಗುತ್ತದೆ.

ನಮ್ಮ ವರಮಾನ ನಮಗೆ ಎಷ್ಟು ಪದಾರ್ಥಗಳನ್ನು ಮತ್ತು ಸೌಲಭ್ಯಗಳನ್ನು ತರುತ್ತದೆ ಎಂಬುದನ್ನು ನಾವು ಪರಿಗಣಿಸಬೇಕು. ಆ ಅಂಶ ಪದಾರ್ಥಗಳ ಮತ್ತು ಸೌಲಭ್ಯಗಳ ಧಾರಣೆಗಳನ್ನು ಅವಲಂಬಿಸುತ್ತದೆ. ಧಾರಣೆಗಳು ಏರಿದಾಗ ವರಮಾನ ವ್ಯತ್ಯಾಸವಾಗದೇ ಇದ್ದರೆ. ಸಿಗುವ ಪದಾರ್ಥಗಳು ಮತ್ತು ಸೌಲಭ್ಯಗಳು ಕಡಮೆಯಾಗುತ್ತವೆ. ಆದ್ದರಿಂದಲೇ ಧಾರಣೆಗಳು ಏರುತ್ತಿದ್ದಂತೆ ವರಮಾನ ಹೆಚ್ಚಾಗಬೇಕೆಂದು ಜನ ಬಯಸುತ್ತಾರೆ. ಒಬ್ಬ ವ್ಯಕ್ತಿಯ ವರಮಾನದಂತೆಯೇ ರಾಷ್ಟ್ರದ ವರಮಾನವನ್ನೂ ಲೆಕ್ಕ ಹಾಕಬಹುದು. ರಾಷ್ಟ್ರೀಯ ವರಮಾನವನ್ನು ವಸ್ತುಗಣತಿ ಪದ್ಧತಿ, ವೆಚ್ಚದ ಲೆಕ್ಕದ ಪದ್ಧತಿ, ವರಮಾನ ಲೆಕ್ಕದ ಪದ್ಧತಿ ಎಂದು ಮೂರು ವಿಧಗಳಲ್ಲಿ ನಾವು ಕಂಡುಹಿಡಿಯುತ್ತೇವೆ.

ಪ್ರತಿಯೊಂದು ಉದ್ಯಮವೂ ಮೂರ್ತ (ಕಣ್ಣಿಗೆ ಕಾಣುವ) ವಸ್ತುಗಳನ್ನೂ ಅಮೂರ್ತ (ಕಣ್ಣಿಗೆ ಕಾಣದ) ವಸ್ತುಗಳನ್ನೂ ಇನ್ನೊಂದು ಉದ್ಯಮದಿಂದ ಕೊಳ್ಳುತ್ತದೆ. ಉದಾಹರಣೆಗೆ, ಬಟ್ಟೆ ನೇಯುವ ಕಾರಖಾನೆ ನೂಲನ್ನು ಕೊಳ್ಳುತ್ತದೆ. ಆಗ ಹತ್ತಿಯನ್ನೂ, ಹತ್ತಿಯನ್ನು ನೂಲು ಮಾಡಲು ಪಟ್ಟ ಶ್ರಮವನ್ನೂ ಕೊಂಡಂತೆ ಆಯಿತು. ನೆಯ್ದ ಬಟ್ಟೆಯನ್ನು ಇನ್ನೊಂದು ಉದ್ಯಮ ಕೊಂಡರೆ ಹತ್ತಿಯನ್ನೂ ನೂಲುಮಾಡಲು ಮತ್ತು ನೇಯಲು ಆದ ದುಡಿಮೆಯನ್ನೂ ಕೊಂಡಂತೆ ಆಗುತ್ತದೆ. ನೆಯ್ದ ಬಟ್ಟೆಯನ್ನು ಕೊಂಡ ಉದ್ಯಮ ಉಡುಪನ್ನು ಸಿದ್ಧಪಡಿಸಲು ಮತ್ತೆ ದುಡಿಮೆ ಅಗತ್ಯ. ಪ್ರತಿಯೊಂದು ಉದ್ಯಮವೂ ದುಡಿಮೆಗಷ್ಟೇ ಅಲ್ಲದೆ ವಸ್ತುಗಳಿಗಾಗಿಯೂ ವೆಚ್ಚಮಾಡುತ್ತದೆ. ಬಟ್ಟೆ ನೇಯುವ ಉದ್ಯಮ ಕೆಲವು ಬಣ್ಣಗಳನ್ನು ಉಪಯೋಗಿಸುತ್ತದೆ. ಉಡುಪು ತಯಾರಿಸುವ ಉದ್ಯಮಕ್ಕೆ ಗುಂಡಿಗಳು ಮುಂತಾದ ವಸ್ತುಗಳು ಬೇಕು. ಹೀಗೆ ಪ್ರತಿ ಉದ್ಯಮವೂ ಮೂರ್ತ ಮತ್ತು ಅಮೂರ್ತ ವಸ್ತುಗಳನ್ನು ಉತ್ಪಾದಿಸುತ್ತದೆ. ಉತ್ಪಾದಿಸಿದ ವಸ್ತುಗಳನ್ನು ಮುಂದಿನ ಉದ್ಯಮಕ್ಕೆ ಮಾರುತ್ತದೆ. ಕಟ್ಟಕಡೆಗೆ ಬಳಕೆದಾರ ಪದಾರ್ಥವನ್ನು ಕೊಳ್ಳುತ್ತಾನೆ. ಆತ ಅದನ್ನು ಇನ್ನೊಬ್ಬರಿಗೆ ಮಾರುವುದಿಲ್ಲ ; ತಾನೇ ಉಪಯೋಗಿಸುತ್ತಾನೆ. ಹೀಗೆ ಬಳಕೆದಾರ ಕೊಳ್ಳುವಾಗ ಎಲ್ಲ ಉದ್ಯಮಗಳ ಖರ್ಚನ್ನೂ ಹೊರುತ್ತಾನೆ. ನೂಲು ಕೊಂಡದ್ದಕ್ಕೆ, ನೆಯ್ದದ್ದಕ್ಕೆ, ಹೊಲಿದದ್ದಕ್ಕೆ ಆದ ಎಲ್ಲ ವೆಚ್ಚವನ್ನೂ ಕೊಡುತ್ತಾನೆ.

ಬಳಕೆದಾರರ ಕೈಗೆ ಒಂದು ಅವಧಿಯಲ್ಲಿ ಏನೇನು ಪದಾರ್ಥಗಳು ಎಷ್ಟೆಷ್ಟು ತಲುಪುತ್ತವೆ ಎಂಬುದನ್ನು ಕಂಡುಹಿಡಿದು, ಅವುಗಳ ಒಟ್ಟು ಮೌಲ್ಯವನ್ನು ಲೆಕ್ಕಹಾಕಿದರೆ, ಅದು ರಾಷ್ಟ್ರೀಯ ವರಮಾನ. ರಾಷ್ಟ್ರೀಯ ವರಮಾನವನ್ನು ಲೆಕ್ಕಹಾಕುವ ಈ ಪದ್ಧತಿಗೆ 'ವಸ್ತುಗಣತಿ ಪದ್ಧತಿ' ಎಂದು ಹೆಸರು.

ಪದಾರ್ಥವನ್ನು ಸಿದ್ಧಪಡಿಸುವಾಗ ಉದ್ಯಮಗಳು ಬಗೆಬಗೆಯ ವೆಚ್ಚಗಳನ್ನು ಮಾಡುತ್ತವೆ. ಕೆಲಸಗಾರರ ದುಡಿಮೆಗೆ ಪ್ರತಿಫಲ ನೀಡುತ್ತವೆ : ಬಂಡವಾಳಕ್ಕೆ ಬಡ್ಡಿ ನೀಡುತ್ತವೆ ; ಕಟ್ಟಡಕ್ಕೆ ಬಡ್ಡಿಕೊಡುತ್ತವೆ ; ಇತರ ಉದ್ಯಮಗಳಿಗೆ ಲಾಭ ಕೊಟ್ಟಿರುತ್ತವೆ. ಹೀಗೆ ದೇಶದ ಪ್ರತಿಯೊಂದು ಉದ್ಯಮ ಮಾಡಿದ ವೆಚ್ಚಗಳನ್ನೆಲ್ಲಾ ಒಟ್ಟು ಕೂಡಿಸಿದರೆ ಅದು ರಾಷ್ಟ್ರೀಯ ವರಮಾನ ಆಗುತ್ತದೆ. ಈ ಪದ್ಧತಿ 'ವೆಚ್ಚದ ಪದ್ಧತಿ'.

ವ್ಯಕ್ತಿಗಳಲ್ಲದೆ ಸಂಸ್ಥೆಗಳು, ಉದ್ಯಮಗಳು ತಮ್ಮ ವರಮಾನವನ್ನು ಹೊಂದಿರುತ್ತವೆ. ಪ್ರತಿಯೊಂದು ಸಂಸ್ಥೆ, ಉದ್ಯಮ ಅಥವಾ ವ್ಯಕ್ತಿ ಹೊಂದಿರುವ ವರಮಾನವನ್ನು ಒಟ್ಟಿಗೆ ಕೂಡಿಸಿದರೆ, ಆಗಲೂ ರಾಷ್ಟ್ರೀಯ ವರಮಾನದ ಲೆಕ್ಕ ನಮಗೆ ಸಿಗುತ್ತದೆ. ಈ ಬಗೆಯ ಎಣಿಕೆ 'ವರಮಾನ ಲೆಕ್ಕದ ಪದ್ಧತಿ'.

ಹೀಗೆ ರಾಷ್ಟ್ರೀಯ ಉತ್ಪಾದನೆಯನ್ನು ಕಂಡುಹಿಡಿದು ಅದನ್ನು ರಾಷ್ಟ್ರೀಯ ವರಮಾನ ಎಂದು ಪರಿಗಣಿಸುತ್ತೇವೆ. ನಮ್ಮ ದೇಶದಲ್ಲಿ ವಿದೇಶಗಳ ಬಂಡವಾಳ ಇದೆ. ವಿದೇಶೀಯರೂ ಇಲ್ಲಿ ಕೆಲಸ ಮಾಡುತ್ತಾರೆ. ನಾವು ಮೇಲಿನಂತೆ ಲೆಕ್ಕಹಾಕಿದ ರಾಷ್ಟ್ರೀಯ ವರಮಾನದಲ್ಲಿ ವಿದೇಶಗಳಿಗೆ ಸೇರಬೇಕಾದ ವರಮಾನವೂ ಸೇರಿರುತ್ತದೆ. ಹೀಗೆ ವಿದೇಶಗಳ ಬಂಡವಾಳ ಮತ್ತು ಸೇವೆಗಳಿಗೆ ಕೊಡಬೇಕಾದದ್ದನ್ನು ಕಳೆದು ಉಳಿದ ವರಮಾನವನ್ನು, ರಾಷ್ಟ್ರದ ಸ್ಥಳೀಯ ವರಮಾನ ಎನ್ನುತ್ತೇವೆ. ಸಾಲಗಾರ ರಾಷ್ಟ್ರದ ಸ್ಥಳೀಯ ವರಮಾನ, ಅದರ ರಾಷ್ಟ್ರೀಯ ವರಮಾನಕ್ಕಿಂತ ಕಡಮೆ. ಸಾಲಿಗ ರಾಷ್ಟ್ರದ ಸ್ಥಳೀಯ ವರಮಾನ ಅದರ ರಾಷ್ಟ್ರೀಯ ವರಮಾನಕ್ಕಿಂತ ಹೆಚ್ಚು. ಏಕೆಂದರೆ ಸಾಲಿಗ ರಾಷ್ಟ್ರ ತನ್ನ ಬಂಡವಾಳವನ್ನು ಬೇರೆ ದೇಶದಲ್ಲಿ ಬಳಸಿ ಲಾಭವನ್ನು ಸಂಪಾದಿಸುತ್ತದೆ ; ಅದರ ಜನರು ಬೇರೆ ದೇಶದಲ್ಲಿ ಕೆಲಸಮಾಡಿ ಇಲ್ಲವೆ ವ್ಯಾಪಾರ ಮಾಡಿ ಹಣ ಸಂಪಾದಿಸುತ್ತಾರೆ.

ರಾಷ್ಟ್ರೀಯ ವರಮಾನವನ್ನು ರಾಷ್ಟ್ರದ ಜನಸಂಖ್ಯೆಯಿಂದ ಭಾಗಿಸಿದರೆ ಬರುವ ಅಂಕಿಯನ್ನು 'ವೈಯಕ್ತಿಕ ವರಮಾನ' ಎನ್ನುತ್ತೇವೆ. ವೈಯಕ್ತಿಕ ವರಮಾನ ಎಂದರೆ, ರಾಷ್ಟ್ರದ ಪ್ರಜೆಯ ಸರಾಸರಿ ವರಮಾನ,

ನೋಡಿ : ಅರ್ಥಶಾಸ್ತ್ರ ; ಜೀವನ ಮಟ್ಟ ; ಜೀವನವೆಚ್ಚ ; ಹಣದುಬ್ಬರ

## ಆದಿವಾಸಿ

ಬೆಳೆ ಬೆಳೆಯುವುದಿಲ್ಲ, ಪ್ರಾಣಿಗಳನ್ನು ಸಾಕುವುದಿಲ್ಲ, ಬಟ್ಟೆಗಳನ್ನು ಹಾಕಿಕೊಳ್ಳುವುದಿಲ್ಲ, ಮನೆ ಕಟ್ಟುವುದಿಲ್ಲ, ಮಡಿಕೆ ಮಾಡುವುದಿಲ್ಲ. ಬೇಟೆಗೆ ಅವರಿಗೆ ತುಪಾಕಿ ಗುಂಡುಗಳು ಬೇಡ ; ಗಟ್ಟಿ ಮರದಿಂದ ಬಿಲ್ಲಿನ ಹಾಗೆ ಬಾಗಿರುವ ಒಂದು ಆಯುಧ ಸಾಕು. ಹಕ್ಕಿ, ಮೀನು, ಹಲ್ಲಿ, ಕಪ್ಪೆ, ಚಿಟ್ಟೆ, ಗೆಡ್ಡೆ ಇವು ದೊರೆತರಾಯಿತು ದಿನದ ಆಹಾರಕ್ಕೆ.

ಆಸ್ಟ್ರೇಲಿಯದ ಆದಿವಾಸಿಗಳಿವರು. ಯೂರೋಪಿನಲ್ಲಿ ಆರು ಸಾವಿರ ವರ್ಷಗಳ ಹಿಂದೆ ಮುಗಿದುಹೋದ ಶಿಲಾಯುಗದ ಜೀವನ ರೀತಿ ಇದು.

ಬಹುಮಟ್ಟಿಗೆ ಹೀಗೆಯೇ ಇರುತ್ತಾರೆ ಇತರ ದೇಶಗಳ ಆದಿವಾಸಿಗಳು.

ಒಂದು ದೇಶದಲ್ಲಿ ಹೊರಗಿನಿಂದ ಜನ ಬಂದು ನೆಲೆಸುವ ಮೊದಲು ಅಲ್ಲಿದ್ದವರನ್ನು ಆದಿವಾಸಿಗಳು ಅಥವಾ ಮೂಲನಿವಾಸಿಗಳು ಎಂದು ಕರೆಯುತ್ತಾರೆ.

ನಾಗರಿಕ ಜೀವನದ ಪ್ರಭಾವಕ್ಕೆ ಒಳಗಾಗದ ಆದಿವಾಸಿಗಳು ಹೇಗಿರುತ್ತಾರೆ ಎಂಬುದಕ್ಕೆ ಆಸ್ಟ್ರೇಲಿಯದ ಆದಿವಾಸಿಗಳು ಉದಾಹರಣೆ. ಸುಮಾರು 1.68 ಮೀಟರು ಎತ್ತರ ಉದ್ದನೆಯ ತಲೆ, ಅಗಲವಾದ ಮೂಗು, ಆಳವಾದ ಕಣ್ಣು, ಕಂದು ಬಣ್ಣ, ಅಲೆ ಅಲೆಯಾದ ಕೂದಲು, ಬಟ್ಟೆ ಉಪಯೋಗವನ್ನು ಅವರು ಅರಿಯರು. ಚಳಿಯಾದಾಗ ಚರ್ಮಗಳ ಹೊದಿಕೆ. ಗಂಡಸರು ಉದ್ದವಾಗಿ ತಲೆ ಕೂದಲು, ಗಡ್ಡ ಬೆಳೆಸುತ್ತಾರೆ. ಹೆಂಗಸರು ತಲೊಗದಲನ್ನು ಬೆಳೆಯಗೊಡುವುದಿಲ್ಲ. ಗಂಡಸರು ಮೂಗಿಗೆ ಮೊಳೆಯ ಪಿನ್ನುಗಳನ್ನು ಸಿಕ್ಕಿಸಿಕೊಳ್ಳುತ್ತಾರೆ. ಮೈಮುಖಗಳಿಗೆ ಬಣ್ಣ ಬಳಿದುಕೊಳ್ಳುವುದರ ಜೊತೆಗೆ ಅಲಂಕಾರಕ್ಕಾಗಿ ಮೈಮೇಲೆ



ಆಸ್ಟ್ರೇಲಿಯದ ಆದಿವಾಸಿ



ನೀಲಗಿರಿಯ ತೋಡ

ಆಯುಧಗಳಿಂದ ಕೈತ್ತಿಕೊಳ್ಳುತ್ತಾರೆ. ಶಂಖ, ಪ್ರಾಣಿಗಳ ಹಲ್ಲು ಇವುಗಳಿಂದ ಮಾಡಿದ ಸರಗಳನ್ನು ಧರಿಸುತ್ತಾರೆ. ತಲೆಬಾಚುವುದನ್ನು ಅವರು ಕಾಣರು.

ಇವರಿಗೆ ಮನೆಕಟ್ಟುವ ಕಲೆ ಗೊತ್ತಿಲ್ಲ. ಇವರ ಗುಡಿಸಲಾದರೋ ಗಾಳಿಯಿಂದ ರಕ್ಷಿಸಿಕೊಳ್ಳಲು ರೆಂಬೆಗಳನ್ನು ನೆಟ್ಟು ಮಾಡಿದ ಗೂಡು. ತೊಗಟೆ, ಚರ್ಮಗಳ ಹೊದಿಕೆ ಅವುಗಳಿಗೆ. ಗೃಹಕೃತ್ಯದ ಸಾಮಾನು ಗಳೆಂದರೆ ತೊಗಟೆಯಿಂದ ಮಾಡಿದ ಒಂದೆರಡು ತಟ್ಟೆಗಳು, ಬುಟ್ಟಿಗಳು. ಕಲ್ಲಿನ ಚಾಕು, ಗೆಡ್ಡೆ, ಬೀಜ ತೇಯಲು ತೇಯುವಕಲ್ಲುಗಳು. ಎರಡು ಮರದ ತುಂಡುಗಳನ್ನುಜ್ಜಿ ಬೆಂಕಿಮಾಡಿ ಬಿಸಿ ಬೂದಿಯ ಮೇಲೆ ಆಹಾರವನ್ನು ಬೇಯಿಸಿಕೊಳ್ಳುತ್ತಾರೆ. ಕಲ್ಲಿನ ಕೊಡಲಿ ಗಳು, ಭಲ್ಲೆಗಳು, ಹೋಗಿ ಹಿಂದಕ್ಕೆ ಬರುವ ಬೂಮ್‌ರ್ಯಾಂಗ್ ಇವರ ಆಯುಧಗಳು.

ಹಿರಿಯರಿಗೆ ಕಿರಿಯರ ಹಾಗೂ ಹೆಂಗಸರ ಮೇಲೆ ಅಧಿಕಾರ ಹೆಚ್ಚು. ನೃತ್ಯ ಗಾನಗಳೆಂದರೆ ಇವರಿಗೆ ಇಷ್ಟ. ಮಾಟಮಂತ ಗಳಿಗೆ ಹೆಚ್ಚಿನ ಪ್ರಾಮುಖ್ಯ ; ಮದ್ದು ಬಲ್ಲವರಿಗೆ ಇವರಲ್ಲಿ ಮರ್ಯಾದೆ ಬಹಳ. ಇವರಲ್ಲಿ ಅನೇಕ ಪಂಗಡಗಳು; ಒಂದೊಂದು ಪಂಗಡಕ್ಕೆ ಒಂದೊಂದು ಭಾಷೆ.

ಆಸ್ಟ್ರೇಲಿಯದ ಮಾವೊರಿಗಳು, ಅಮೆರಿಕದ ರೆಡ್ ಇಂಡಿ ಯನ್ನರು, ಆಫ್ರಿಕದ ಬುಷ್‌ಮೆನ್, ಭಾರತದಲ್ಲಿ ಕೋಲರು, ತೋಡರು—ಇವರು ಆಯಾದೇಶಗಳ ಆದಿವಾಸಿಗಳು.

ಭಾರತದಲ್ಲಿ 1961ರ ಜನಗಣತಿಯ ಪ್ರಕಾರ ಸುಮಾರು ಮೂರು ಕೋಟಿ ಆದಿವಾಸಿಗಳಿದ್ದಾರೆ. ಇವರನ್ನು ಆದಿವಾ ಸಿಗಳು, ಗಿರಿಜನ, ವನಜನ ಎನ್ನುತ್ತಾರೆ.

ಕೋಲರದು ಕೆಂಪು ಬಣ್ಣ, ಕುಳ್ಳನೆಯ ಆಕಾರ, ದಪ್ಪ ತುಟಿ, ಅಗಲ ಮೂಗು, ಕುರುಚಲು ಗಡ್ಡ. ಭಾರತದಲ್ಲಿನ ಬಹು ಪ್ರಾಚೀನ ಬುಡಕಟ್ಟುಗಳಲ್ಲಿ ಇವರದೂ ಒಂದು. ಇವರಿಗೆ ಮಡಿಕೆಗಳನ್ನು ಮಾಡುವುದು ತಿಳಿದಿತ್ತು. ಭಾರತ ಟಿಬೆಟ್ ಚೀನಗಳು ಸೇರುವ ಮುಕ್ಕೂಟ ಪ್ರದೇಶಕ್ಕೆ ಹತ್ತಿರ ಸುಬಾನ್ಸಿರ ವಿಭಾಗದಲ್ಲಿ ಕಣಿವೆಗಳಲ್ಲಿ ವಾಸಿಸುವ ಅಪತನಿಗಳು, ಅಪತನಿ ಕಣಿವೆಗೆ ದಕ್ಷಿಣ ಮತ್ತು ಪಶ್ಚಿಮದ ಪರ್ವತಗಳಲ್ಲಿ ವಾಸಿಸುವ ದಾಫ್ಲ ಜನರು, ನೀಲಗಿರಿ ಬೆಟ್ಟಗಳಲ್ಲಿರುವ ಕಪ್ಪು ಬಣ್ಣದ ಚಪ್ಪಟೆ ಮೂಗಿನ ಕುಬ್ಜ ಇರುಳರು, ನೀಳಶರೀರದ ತೋಡರು, ಕೊಡಗು ಮತ್ತು ಮೈಸೂರಿನ ಬೆಟ್ಟ ಗಾಡು ಪ್ರದೇಶದಲ್ಲಿ ವಾಸಿಸುವ, ಮಂತ್ರವಾದಿಗಳೆಂದು ಪ್ರಸಿದ್ಧರಾದ, ಬೇಟೆಯಲ್ಲಿ ಸಿದ್ಧಹಸ್ತರಾದ ಕಾಡು ಕುರುಬರು, ಮಧ್ಯಪ್ರದೇಶದ ಸುಮಾರು ಮೂವತ್ತು ಲಕ್ಷ ಜನ ಸಂಖ್ಯೆಯ ಗೊಂಡರು, ಅಸ್ಸಾಮಿನ ಗಹನ ಪರ್ವತಗಳ ನಡುವೆ ಇದ್ದು ಪ್ರತ್ಯೇಕ ರಾಜ್ಯದ ಸ್ಥಾನಮಾನಗಳನ್ನು ಪಡೆದಿರುವ ನಾಗಾ ಬುಡಕಟ್ಟುಗಳು, ಇವು ಭಾರತದಲ್ಲಿರುವ ಆದಿವಾಸಿ ಪಂಗಡಗಳಲ್ಲಿ ಮುಖ್ಯವಾದ ಕೆಲವು.

ಭಾರತದಲ್ಲಿನ ಅನೇಕ ಆದಿವಾಸಿಗಳು ನಾಗರಿಕತೆಯ ಪ್ರಭಾವಕ್ಕೆ ಒಳ ಗಾಗಿದ್ದಾರೆ. ಅವರಲ್ಲಿ ಹೆಚ್ಚಿನವರು ಅಲೆಮಾರಿ ಜೀವನವನ್ನು ಬಿಟ್ಟು ಒಂದೆಡೆ ನೆಲೆಸಿ ವ್ಯವಸಾಯ ನಿರತರಾಗಿದ್ದಾರೆ. ಆದಿವಾಸಿಗಳ ಅಭಿವೃದ್ಧಿ ಗಾಗಿ ಭಾರತ ಸರಕಾರ ಶ್ರಮಿಸುತ್ತಿದೆ.

ನಾಗಾ ಬುಡಕಟ್ಟಿನವರು



ಆದಿವಾಸಿಗಳಿಗೆ ತಮ್ಮದೇ ಆದ ಸಾಮಾಜಿಕ ಪದ್ಧತಿಗಳೂ ಧಾರ್ಮಿಕ ಪದ್ಧತಿಗಳೂ ಇವೆ. ಇವು ಗುಂಪಿನಿಂದ ಗುಂಪಿಗೆ, ದೇಶದಿಂದ ದೇಶಕ್ಕೆ ಬೇರೆಯಾಗುತ್ತವೆ. ಬಹುಪತ್ನಿತ್ವ ಆದಿವಾಸಿಗಳಲ್ಲಿ ಸಾಧಾರಣವಾಗಿ ಕಾಣುವ ಪದ್ಧತಿ.

ಒರಿಸ್ಸಾದಲ್ಲೂ ಆಂಧ್ರದಲ್ಲೂ ಹರಡಿ ಸುಮಾರು ನಾಲ್ಕು ಲಕ್ಷ ಜನರಿರುವ ಸವ್ರೋರರ ವಿವಾಹ ಪದ್ಧತಿ ಸ್ವಾರಸ್ಯಕರವಾಗಿದೆ. ಗಂಡಿನ ಕಡೆಯವರು ಕೊಡುವ ಒಂದು ಮಡಕೆ ಈಚಲ ಹೆಂಡವನ್ನು ಸ್ವೀಕರಿಸುವುದರಿಂದ ಗಂಡಿನ ಒಪ್ಪಿಗೆ ಪಡೆದಂತಾಗುತ್ತದೆ. ಬಾಣವನ್ನು ಸ್ವೀಕರಿಸಿದರೆ ಅದು ನಿಶ್ಚಿತಾರ್ಥವಾದಂತೆ. ಕನ್ಯಾಶುಲ್ಕ ಕೊಡಲೇಬೇಕು. ಅದು ಪ್ರಾಣಿಗಳ ರೂಪದಲ್ಲಿರಬಹುದು. ಬಹುಪತ್ನಿತ್ವ ಸಾಮಾನ್ಯ. ವ್ಯಕ್ತಿ ಪ್ರಮುಖನಾದಷ್ಟೂ ಅವನ ಪತ್ನಿಯರ ಸಂಖ್ಯೆ ಹೆಚ್ಚು. ಹೆಣ್ಣು ಒಪ್ಪದಿದ್ದರೆ ಬಲಾತ್ಕಾರದಿಂದ ಮದುವೆ ಮಾಡುವುದಿಲ್ಲ. ಇವರಲ್ಲಿ ಸ್ತ್ರೀಪುರೋಹಿತರೂ ಇದ್ದಾರೆ.

ಆಫ್ರಿಕದ ಆದಿವಾಸಿಗಳು ನೀಗ್ರೋಗಳು. ಆಫ್ರಿಕದ ಚರಿತ್ರೆಯಲ್ಲಿ ಇವರದು ಪ್ರಮುಖ ಪಾತ್ರ. ಸುಮಾರು ಕ್ರಿ. ಪೂ. 1580ರಲ್ಲಿದ್ದ ರಾಣಿ ನೆಫರ್‌ತರಿ ಸೌಂದರ್ಯಕ್ಕೂ ಸಾಮರ್ಥ್ಯಕ್ಕೂ ಹೆಸರಾಗಿದ್ದವಳು. ಕ್ರಿ. ಪೂ. ಎಂಟನೆಯ ಶತಮಾನದಲ್ಲಿ ಇಥಿಯೋಪಿಯ ಈಜಿಪ್ಟನ್ನು ಸೋಲಿಸಿತು. ಹದಿನಾರನೆಯ ಶತಮಾನದಿಂದ ಸ್ಪೇನಿನ ಅನ್ವೇಷಕರೊಡನೆ ಹಲವರು ನೀಗ್ರೋಗಳು ಮೆಕ್ಸಿಕೊಗೆ ಕಾಲಿಟ್ಟರು. ಸ್ಪೇನ್, ಹಾಲೆಂಡ್, ಪೋರ್ಚುಗಲ್, ಇಂಗ್ಲೆಂಡ್ ದೇಶಗಳವರು ನೀಗ್ರೋಗಳನ್ನು ಅಮೆರಿಕಕ್ಕೆ ಕೊಂಡೊಯ್ದು ಗುಲಾಮರನ್ನಾಗಿ ಮಾಡಿದರು.

ಸಾಮಾನ್ಯವಾಗಿ ಇವರು ಕಪ್ಪು ಬಣ್ಣದವರು. ತುಟಿ ದಪ್ಪ. ತುಪ್ಪಟದಂಥ ಕೂದಲು. ಸಣ್ಣದೂ ಅಗಲವೂ ಆದ ಮೂಗು. ಮುಂದೆ ಚಾಚಿರುವ ದವಡೆ. ಇವರಲ್ಲಿ ಒಳಪಂಗಡಗಳುಂಟು.

ನಿಸರ್ಗದ ವೈವಿಧ್ಯ, ಸುತ್ತ ಗುಡುಗು, ಸಿಡಿಲು, ಬಿರುಗಾಳಿ, ಬೆಂಕಿ, ಮೊದಲಾದ ಶಕ್ತಿಗಳನ್ನು ಕಂಡು ಆದ ಭಯ ಆಶ್ಚರ್ಯಗಳೇ ಆದಿವಾಸಿಗಳ ಧರ್ಮಕ್ಕೆ ಬುನಾದಿ. ಪೂರ್ವಜರ ಪೂಜೆ, ಮಾಟಮಂತ್ರಗಳಲ್ಲಿ ನಂಬಿಕೆ– ಇವು ಅವರ ಧರ್ಮದ ಮೂಲ. ವೃಕ್ಷಪೂಜೆ, ಪ್ರಾಣಿಪೂಜೆ, ನರಬಲಿ, ಕುಲಸಂಕೇತಗಳ ಆರಾಧನೆ, ಪ್ರಕೃತಿಯ ಶಕ್ತಿಗಳ ಆರಾಧನೆ, ಭೂತ ಪ್ರೇತಗಳಲ್ಲಿ ನಂಬಿಕೆ ಇವೆಲ್ಲವೂ ಆದಿವಾಸಿಗಳಲ್ಲಿ ಕಂಡು ಬರುತ್ತವೆ. ಆಸ್ಟ್ರೇಲಿಯದ ಆದಿವಾಸಿಗಳ ಒಂದು ಕಥೆಯ ಪ್ರಕಾರ ಮೊದಲನೆಯ ಮನುಷ್ಯ ಸತ್ತಾಗ ಅವನ ಆತ್ಮ ಆಕಾಶದ ದಕ್ಷಿಣ ಭಾಗದ ನಕ್ಷತ್ರಪುಂಜವಾಯಿತು. ಇನ್ನೊಂದು ಕಥೆಯ ಪ್ರಕಾರ, ಆಕಾಶದ ದೇವತೆ ಹಿಂದೆ ಭೂಲೋಕದಲ್ಲಿದ್ದನಂತೆ; ಎಲ್ಲ ಜೀವಿಗಳನ್ನೂ ಸೃಷ್ಟಿಸಿ ಆಕಾಶಕ್ಕೆ ಹೊರಟು ಹೋದನಂತೆ.

ಅತ್ಯಂತ ಹಿಂದುಳಿದ ಜನಾಂಗಗಳೆಂದು ಪರಿಗಣಿತರಾದ ಆದಿವಾಸಿಗಳು, ತಮ್ಮ ಪ್ರದೇಶದಲ್ಲಿ ನೆಲೆಸಲು ಬಂದ ಜನರಿಂದ ಅನೇಕ ರೀತಿಯ ತೊಂದರೆಗೆ ಒಳಗಾಗಿದ್ದಾರೆ. ಕ್ರಮೇಣ ಅವರ ಸಂಖ್ಯೆ ಕಡಿಮೆಯಾಗುತ್ತಿದೆ. ತಮ್ಮ ಪ್ರಾಚೀನ ಜೀವನ ರೀತಿಗೆ ಹೊಂದಿಕೊಂಡ ಇವರಿಗೆ ಹೊರಗಿನಿಂದ ಬಂದವರನ್ನು ಎದುರಿಸಲು ಸಾಧ್ಯವಾಗಲಿಲ್ಲ. ಹೊಸಬರ ನಾಗರಿಕತೆ ಮೊದಲು ಆದಿವಾಸಿಗಳಿಗೆ ದಿಗ್ಭ್ರಮೆಯನ್ನು ಉಂಟುಮಾಡಿತು. ಅವರಲ್ಲಿ ವಿವಿಧ ಜನಾಂಗಗಳು ಇಂದು ಪ್ರಪಂಚದ ಬೇರೆ ಬೇರೆ ಕಡೆಗಳಲ್ಲಿ ಉಳಿದಿವೆ.

ಇಂದು ಅತ್ಯಂತ ಪ್ರಾಚೀನ ಜೀವನ ರೀತಿಯನ್ನು ಅನುಸರಿಸುತ್ತಿರುವ ಆಸ್ಟ್ರೇಲಿಯದ ಆದಿವಾಸಿಗಳಲ್ಲಿ ಹಲವರು ಪಾಶ್ಚಾತ್ಯ ವಿದ್ಯಾಭ್ಯಾಸವನ್ನು ಪಡೆದು ವಕೀಲರಾಗಿ, ಉಪಾಧ್ಯಾಯರಾಗಿ, ಇತರ ವೃತ್ತಿಗಳಲ್ಲಿ ಯಶಸ್ವಿಯಾಗಿದ್ದಾರೆ. ಆದರೆ ಹೀಗೆ ಯಶಸ್ವಿಯಾದವರೂ ಆಗಾಗ ವಾರಗಟ್ಟಲೆ ಮಾಯವಾಗಿ, ತಮ್ಮ ಪ್ರಾಚೀನ ಪೂರ್ವಿಕರಂತೆ ಗಿಡಮರಗಳ ಮಧ್ಯೆ ಇದ್ದು ಬಿಡುತ್ತಾರೆ.

## ಅಫ್ಘಾನಿಸ್ತಾನ

ನಮ್ಮ ಊರುಗಳ ಬೀದಿಗಳಲ್ಲಿ ಒಮ್ಮೊಮ್ಮೆ ವಿಚಿತ್ರ ವೇಷಭೂಷಣಗಳ ಅಪರಿಚಿತರು ಕಾಣಿಸಿಕೊಳ್ಳುತ್ತಾರೆ. ತಕ್ಷಣ ಕಣ್ಣನ್ನು ಸೆಳೆಯುವ ಆಕೃತಿ, ದೊಗಳೆ ಪಾಯಿಜಾಮ, ಶರಟು ಹಾಕಿಕೊಂಡು ತಲೆಗೆ ಬಿಳಿ ಅಥವಾ ನಸುಗೆಂಪು ಬಣ್ಣದ ಪೇಟಾ ಸುತ್ತಿ ಸ್ವಲ್ಪ ಭಾಗವನ್ನು ಹಿಂದಕ್ಕೆ ಇಳಿಬಿಟ್ಟಿರುತ್ತಾರೆ. ಸಾಧಾರಣವಾಗಿ ಕೆಂಪು ಬಣ್ಣ, ಬಲಿಷ್ಠ ದೇಹ; ಚಿಕ್ಕ ಚುರುಕು ಕಣ್ಣುಗಳಲ್ಲಿ ಧೈರ್ಯ, ಸ್ಥೈರ್ಯ ಎದ್ದು ಕಾಣುತ್ತವೆ. ಈ ಬಗೆಯ ಅಪರಿಚಿತರು ಪಠಾಣರು.

ಪಠಾಣರು ಬಹು ಸಂಖ್ಯೆಯಲ್ಲಿರುವ ದೇಶ ಅಫ್ಘಾನಿಸ್ತಾನ. ಇದು ಮಧ್ಯ ಏಷ್ಯದಲ್ಲಿದೆ.

ಆರನೆಯ ಶತಮಾನದಲ್ಲಿ ಭಾರತೀಯ ಖಗೋಳ ಶಾಸ್ತ್ರಜ್ಞ ವರಾಹಮಿಹಿರ ಮೊದಲನೆಯ ಸಲ 'ಅವಘನ್' ಎಂಬ ಪದ ಬಳಸಿದ. ಅಲೆಗ್ಸಾಂಡರ್, ಚೆಂಗೀಸ್ ಖಾನ್, ತೈಮೂರರು ಆಕ್ರಮಣ ಮಾಡಿ ಈ ದೇಶವನ್ನು ಆಳಿದ್ದರು. ಸುಮಾರು ಇನ್ನೂರು ವರ್ಷಗಳ ಕಾಲ ಪರಕೀಯರ ಆಡಳಿತದಲ್ಲಿ ಇದ್ದಿತು. ಹದಿನೆಂಟನೆಯ ಶತಮಾನದ ಮಧ್ಯ ಭಾಗದಲ್ಲಿ ಅಫ್ಘಾನನೊಬ್ಬ ಆಡಳಿತವನ್ನು ವಹಿಸಿಕೊಂಡ.

ಅಮೆರಿಕ, ರಷ್ಯದವರ ಸಹಾಯದಿಂದ ದೇಶದ ಆರ್ಥಿಕ ಜೀವನ, ವಿದ್ಯೆ ಮತ್ತು ನೀರಾವರಿಯನ್ನು ಅಫ್ಘಾನರು ಅಭಿವೃದ್ಧಿಪಡಿಸಿಕೊಂಡಿದ್ದಾರೆ.

ಅಫ್ಘಾನಿಸ್ತಾನ ಮರುಭೂಮಿ. ಹಿಂದೂಖುಷ್ ಪರ್ವತ ಆಗ್ನೇಯದಿಂದ ಮಧ್ಯಭಾಗದ ವರೆಗೆ ಹರಡಿಕೊಂಡಿದೆ. ಅಫ್ಘಾನಿಸ್ತಾನ ಬಟ್ಟೆನೆಲ್ಲ ಬಿಗಿ ಪ್ರದೇಶ. ಪೂರ್ವ

ಅಫ್ಘಾನಿಸ್ತಾನದ ಜಾಮ್‌ಹಳ್ಳಿಯಲ್ಲಿ 69 ಮಿ
ಎತ್ತರದ ಸ್ತಂಭ : ಭಾರತದ ಕುತುಬ್‌ಮಿನಾರ್‌ನ
ವಾಸ್ತುಶಿಲ್ಪ



ಭಾಗದಲ್ಲಿ ನದಿಗಳಿವೆ. ದೇಶದ ಬೇಸಾಯಕ್ಕೆ ಚಳಿಗಾಲದಲ್ಲಿ ಬೀಳುವ ಹಿಮ ಆಧಾರ. ಇದನ್ನು ಪರ್ವತದ ಇಳಿಜಾರು ಪ್ರದೇಶಗಳಲ್ಲಿ ಮುಂದಿನ ವರ್ಷದ ವರೆಗೆ ಶೇಖರಿಸುತ್ತಾರೆ. ಕಾಲುವೆಗಳು ಭೂಮಿಯೊಳಗೆ ಹರಿಯುವ ಹೊಳೆಗಳು, ಇವನ್ನು ಬಳಸಿ ದೇಶಕ್ಕೆಲ್ಲ ನೀರಾವರಿ ವ್ಯವಸ್ಥೆಯನ್ನು ಒದಗಿಸಿದ್ದಾರೆ. ಆಮೂದಾರ್ಯ, ಹೆಲ್ಮಾಂಡ್ ದೊಡ್ಡ ನದಿಗಳು.

ಬೇಸಿಗೆಕಾಲದಲ್ಲಿ ಅತಿ ಸೆಕೆ ; ಮರಳುಗಾಳಿಯ ಹೊಡೆತ ಬೇರೆ. ಚಳಿಗಾಲದಲ್ಲಿ ಹಿಮ ಬೀಳುತ್ತದೆ. ಆದರೂ ಹವೆ ಹಿತಕರವಾಗಿ, ಆರೋಗ್ಯವಾಗಿದೆ. ಐದು ಸೆಂಟಿಮಿಟರ್‌ಗಳಿಂದ 38 ಸೆಂಟಿಮಿಟರ್‌ಗಳವರೆಗೆ ವಿವಿಧ ಮಟ್ಟಗಳಲ್ಲಿ ಮಳೆ ಆಗುತ್ತದೆ.

ಕಾರಕುಲಿ ಜಾತಿಯ ಕುರಿ, ದನ, ಆಡು, ಒಂಟೆ, ಕುದುರೆ, ಕತ್ತೆಗಳನ್ನು ಹೆಚ್ಚಾಗಿ ಸಾಕುತ್ತಾರೆ. ಕಾರಕುಲಿ ಕುರಿಯ ಚರ್ಮವನ್ನು ಅಧಿಕವಾಗಿ ರಫ್ತು ಮಾಡುತ್ತಾರೆ.

ತಾಮ್ರ, ಕಲ್ಲಿದ್ದಲು, ತೈಲ, ಕಬ್ಬಿಣದ ಅದಿರು ಮುಂತಾದ ಸಂಪನ್ಮೂಲಗಳಿವೆ. ಚಿನ್ನ, ಬೆಳ್ಳಿ, ಕೆಂಪು, ಸೀಸ, ಸತು, ಕ್ರೋಮಿಯಂ ಗಣಿಗಳೂ ಇವೆ. ಈ ಖನಿಜ ಸಂಪತ್ತಿನ ಕಾರಣದಿಂದ ಅಫ್ಘಾನಿಸ್ತಾನ ಪ್ರಪಂಚದ ಅತಿ ಶ್ರೀಮಂತ ರಾಷ್ಟ್ರಗಳಲ್ಲಿ ಒಂದಾಗಿದೆ.

ಧಾನ್ಯಗಳು, ಹತ್ತಿ, ಗೋಧಿ, ಭತ್ತ, ಬಾರ್ಲಿ, ಹೊಗೆಸೊಪ್ಪು, ಕಾಡು ಆಲಿವ್ ಮರ, ಸಕ್ಕರೆ, ಪಿಸ್ತಾ ಗಿಡಗಳು, ಉಪ್ಪುನೇರಳೆ, ಸೇಬು, ದ್ರಾಕ್ಷಿ, ಬಾದಾಮಿ ಮುಂತಾದುವನ್ನು ನೀರಿನ ಸೌಕರ್ಯ ದೊರಕುವ ಭಾಗಗಳಲ್ಲಿ ಬೆಳೆಯುತ್ತಾರೆ.

ತುಪ್ಪಟ, ಬಟ್ಟೆ, ಸಕ್ಕರೆ, ಶೋಧನಾಗಾರ, ರತ್ನಗಂಬಳಿ ಇವುಗಳ ಕೈಗಾರಿಕೆಗಳಿವೆ. ಹಣ್ಣುಗಳ ಸಂಸ್ಕರಣ ಮಾಡುತ್ತಾರೆ.

ಅಫ್ಘನರು ಅಲೆಮಾರಿ ಪ್ರವೃತ್ತಿಯವರು. ಈಗ ಕೆಲವರು ಒಂದು ಕಡೆ ನೆಲೆಯಾಗಿ ನಿಂತು ರೈತರಾಗಿ ಬಾಳುತ್ತಿದ್ದಾರೆ. ಆದರೂ ಜನಸಾಂದ್ರತೆ ಕಡಮೆ. ಐದು ಕುಟುಂಬಗಳಿದ್ದರೆ ಹಳ್ಳಿ, ಮುನ್ನೂರು ಸಂಸಾರಗಳಿದ್ದರೆ ಊರು. ಅಫ್ಘಾನಿಸ್ತಾನದಲ್ಲಿ ಐದು ಪಂಗಡಗಳಿವೆ: ಪುಷ್ತುನ್, ತಾಜಿರ್, ಉಜ್‌ಬೆಕ್, ಟರ್ಕೊಮನ್ಸ್ ಮತ್ತು ಹಜಾರಾಗಳು. ಅಫ್ಘಾನಿಸ್ತಾನ ಈಗ ಮುಸಲ್ಮಾನ ದೇಶ. ಬೌದ್ಧಮತ ಇಲ್ಲಿ ಆಚರಣೆಯಲ್ಲಿತ್ತು. ಪಾರಸೀಕರ ಮತಸ್ಥಾಪಕ ಜರತುಷ್ಟ್ರನು ಇಲ್ಲಿಯೇ ಹುಟ್ಟಿದ. ಪ್ರಾಚೀನ ಭಾರತದಲ್ಲಿ ಪ್ರಖ್ಯಾತವಾಗಿದ್ದ ತಕ್ಷಶಿಲೆ ವಿಶ್ವವಿದ್ಯಾಲಯವೂ ಅಫ್ಘಾನಿಸ್ತಾನ ಪ್ರದೇಶದಲ್ಲಿತ್ತು. ಬಾಮಿಯನ್ ಎನ್ನುವ ಸ್ಥಳದಲ್ಲಿ 53 ಮೀಟರು ಮತ್ತು 35 ಮೀಟರುಗಳು ಎತ್ತರದ ಎರಡು ಭವ್ಯ ಬುದ್ಧವಿಗ್ರಹಗಳಿವೆ. ಹೆಚ್ಚು ಜನ ಪಷ್ತು (ಪಷ್ಟೊ) ಭಾಷೆ ಮಾತಾಡುತ್ತಾರೆ. ಪರ್ಷಿಯನ್ ಭಾಷೆಯೂ ಬಳಕೆಯಲ್ಲಿದೆ. ಇವರಲ್ಲಿ ಓದು ಬರಹ ಬಲ್ಲವರು ಕಡಮೆ. ಅಫ್ಘನರು ಬಹಳ ಸ್ವಾಭಿಮಾನಿಗಳು, ಸ್ವತಂತ್ರ ಮನೋಭಾವ ಉಳ್ಳವರು. ಏಳರಿಂದ ಹದಿಮೂರು ವರ್ಷದೊಳಗಿನ ಮಕ್ಕಳೆಲ್ಲ ಶಾಲೆಗೆ ಹೋಗುತ್ತಾರೆ. ಪಶ್ಚಿಮದಲ್ಲಿ ಶಿಕ್ಷಣ ಪಡೆದ ಜಾಹಿರ್ ಷಹ ಎಂಬವರ ಆಳ್ವಿಕೆಯಲ್ಲಿ ಪಾಶ್ಚಿಮಾತ್ಯ ವಿದ್ಯಾಭ್ಯಾಸ ಪದ್ಧತಿ, ಉಡುಪು, ಬದಲಾವಣೆ ಜಾರಿಗೆ ಬಂದುವು. ಹೊಸ ಮತ್ತು ಹಳೆಯ ಸಂಪ್ರದಾಯದವರ ಮಧ್ಯೆ ವಿರಸವಾಗದಂತೆ ಸ್ನೇಹ ಏರ್ಪಡಿಸಿ, ಹೊಸ ಅಧ್ಯಾಯವನ್ನೇ ಆರಂಭಿಸಿದ್ದಾರೆ.

ಕಾಬೂಲ್ ಇದರ ರಾಜಧಾನಿ, ಹೀರತ್, ಕಾಂದಾಹಾರ್, ಮಜರ್–ಇ–ಶರೀಫ್, ಜಲಾಲಾಬಾದ್ ಇವು ಹಿರಿಯ ನಗರಗಳು. ಒಣಗಿಸಿದ ಹಣ್ಣುಗಳು, ಕುರಿಯ ಚರ್ಮ, ತುಪ್ಪಟ ಇವನ್ನು ರಫ್ತುಮಾಡುವುದೂ ತಯಾರಾದ ವಸ್ತುಗಳನ್ನು ಪರದೇಶಗಳಿಂದ ಆಮದು ಮಾಡಿಕೊಳ್ಳುವುದೂ ಈ ಮುಖ್ಯ ಪಟ್ಟಣಗಳಿಂದಲೇ. ಖೈಬರ್ ಕಣಿವೆ ಭಾರತ–ಪಾಕಿಸ್ತಾನದ ಹೆದ್ದಾರಿಯಲ್ಲಿದೆ. ಭಾರತದಲ್ಲಿ ವಾಯುವ್ಯದಲ್ಲಿರುವ ಈ ಕಣಿವೆಯೊಂದೇ ನೆಲ ಮಾರ್ಗದಲ್ಲಿ ಭಾರತವನ್ನು ಹೊರಗಿನಿಂದ ಶತ್ರುಗಳು ಪ್ರವೇಶಿಸುವುದಕ್ಕೆ ಅನುವು ಮಾಡಿಕೊಟ್ಟ ದಾರಿ. ಮತ್ತೆ ಮತ್ತೆ ಭಾರತಕ್ಕೆ ಮುತ್ತಿಗೆ ಹಾಕಿದ ಘಜ್ನಿ ಮಹಮದ್ ಈ ದಾರಿಯಾಗಿ ಬಂದ (1001–1027). 1970ರಲ್ಲಿ ಅಫ್ಘಾನಿಸ್ತಾನದ ಮೊದಲನೆಯ ರೈಲುಮಾರ್ಗ ಸಿದ್ಧವಾಯಿತು.

ಅಫ್ಘಾನಿಸ್ತಾನದಲ್ಲಿರುವುದು ರಾಜಪ್ರಭುತ್ವ. ಅರಸನು ಮುಖ್ಯ ಮಂತ್ರಿಯನ್ನು ನೇಮಿಸುತ್ತಾನೆ. ಮುಖ್ಯಮಂತ್ರಿ ಉಳಿದ ಮಂತ್ರಿಗಳನ್ನು ನೇಮಿಸುತ್ತಾನೆ. ಸಂಸತ್ತಿನ ಎಲ್ಲ ಸದಸ್ಯರಲ್ಲದೆ, ವ್ಯಾಪಾರಿ ಸಂಸ್ಥೆಗಳ ಪ್ರತಿನಿಧಿಗಳೂ ಸೇರಿ ದೇಶದ ಜಟಿಲ ಪ್ರಶ್ನೆಗಳನ್ನು ಪರಿಶೀಲಿಸುತ್ತಾರೆ.

| | | |
|---|---|---|
| ಖಂಡ | : | ಏಷ್ಯ (ಮಧ್ಯ) |
| ಅಕ್ಷಾಂಶ | : | 29° 22′ ಉ ದಿಂದ 38° ಉ |
| ರೇಖಾಂಶ | : | 60° 28′ ಪೂ ದಿಂದ 74°52′ಪೂ |
| ವಿಸ್ತೀರ್ಣ | : | 6,47,500 ಚ.ಕಿ.ಮಿ. |
| ಜನಸಂಖ್ಯೆ | : | ಸುಮಾರು 1,38,00,000 |
| ರಾಜಧಾನಿ | : | ಕಾಬೂಲ್ |
| ಭಾಷೆ | : | ಪರ್ಷಿಯನ್, ಪುಷ್ತು |
| ಸರಕಾರ | : | ಸಂವಿಧಾನಬದ್ಧ ರಾಜಪದ್ಧತಿ |
| ಬಾವುಟ | : | ಕಪ್ಪು, ಕೆಂಪು, ಹಸಿರು, ಬಣ್ಣದ ಉದ್ದನೆಯ ಪಟ್ಟೆಗಳು, ಮಧ್ಯದಲ್ಲಿ ಬಿಳಿಯ ಲಾಂಛನ |

## ಆಫ್ರಿಕ

ಪ್ರಾಯಶಃ ಮನುಷ್ಯ ಮೊದಲು ಜಗತ್ತಿನಲ್ಲಿ ಕಾಣಿಸಿಕೊಂಡ ಭಾಗ ಆಫ್ರಿಕ. ಪ್ರಪಂಚದ ಖಂಡಗಳಲ್ಲೆಲ್ಲ ವಿಸ್ತೀರ್ಣದಲ್ಲಿ ಇದು ಎರಡನೆಯದು. ಪ್ರಾಚೀನ ನೈಲ್ ನಾಗರಿಕತೆಯ ತವರು ಈ ಭೂಖಂಡ. ಆದರೂ ಇದರ ವಿಷಯ ಇತ್ತೀಚೆಗಿನ ವರೆಗೆ ತಿಳಿದಿದ್ದುದು ತೀರ ಸ್ವಲ್ಪ. ಕತ್ತಲೆಯ ಖಂಡ ಎನಿಸಿಕೊಂಡಿತ್ತು. ಈಗಲೂ ಅದರ ಇತಿಹಾಸವನ್ನೂ ಅಲ್ಲಿನ ಪಂಗಡಗಳ ಜೀವನವಿಧಾನವನ್ನೂ ಪೂರ್ಣವಾಗಿ ತಿಳಿದಿದ್ದೇವೆ ಎನ್ನುವಂತಿಲ್ಲ.

ಇಲ್ಲಿಗೆ ಬಂದ ಸಾಹಸಿ ಅನ್ವೇಷಕರಲ್ಲಿ ಮುಖ್ಯನಾದವನು ಡೇವಿಡ್ ಲಿವಿಂಗ್‌ಸ್ಟನ್.

ಹದಿನೇಳನೆಯ ಶತಮಾನದಲ್ಲಿ ಡಚ್ಚರು ದಕ್ಷಿಣ ಆಫ್ರಿಕದಲ್ಲಿ ಕಾಲಿಟ್ಟರು. ಯೂರೋಪಿನಲ್ಲಿ ಕೈಗಾರಿಕೆಗಳು ಬೆಳೆಯತೊಡಗಿದಾಗ ಕಚ್ಚಾ ಮಾಲಿನ ಅವಶ್ಯಕತೆ ಕಂಡುಬಂದಿತು. ಕೊಬ್ಬು, ರಬ್ಬರುಗಳಿಗಾಗಿ ಯೂರೋಪಿನ ಎಲ್ಲ ರಾಷ್ಟ್ರಗಳೂ ಆಫ್ರಿಕದ ಶೋಧನೆಯಲ್ಲಿ ಪಾಲ್ಗೊಂಡುವು. ಮುಂಗೊ ಪಾರ್ಕ್, ಲಿವಿಂಗ್‌ಸ್ಟನ್, ಸ್ಟ್ಯಾನ್ಲೆ, ಬೇಕರ್ ಮುಂತಾದವರು

ಆಫ್ರಿಕದ ಭೂಶೋಧನೆಯನ್ನು ಮಾಡಿದರು. 1900ನೆಯ ಇಸವಿಯಲ್ಲಿ ಆಫ್ರಿಕ ದೇಶದ ಸಮಗ್ರ ಭೂಪಟ ಪ್ರಪ್ರಥಮವಾಗಿ ಸಿದ್ಧವಾಯಿತು.

ಆಫ್ರಿಕದ ವಿಸ್ತೀರ್ಣ 294.4 ಲಕ್ಷ ಚದರ ಕಿಲೊಮೀಟರುಗಳು. ಅಂದರೆ ಭಾರತಕ್ಕಿಂತಲೂ ಹತ್ತು ಪಾಲು ದೊಡ್ಡದು ಈ ಭೂಖಂಡ. ಆಫ್ರಿಕವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಬಹುದು. ಉತ್ತರ ಆಫ್ರಿಕ, ಪಶ್ಚಿಮ ಮತ್ತು ಮಧ್ಯ ಆಫ್ರಿಕ, ಪೂರ್ವ ಆಫ್ರಿಕ ಮತ್ತು ದಕ್ಷಿಣ ಆಫ್ರಿಕ. ನೀಗ್ರೊಗಳು ಆಫ್ರಿಕದ ಮೂಲನಿವಾಸಿಗಳು. ಇವರಲ್ಲಿ ಅನೇಕ ಒಳಪಂಗಡಗಳಿವೆ.

ವಜ್ರ, ತಾಮ್ರ, ಕ್ರೊಮೈಟ್, ಮ್ಯಾಂಗನೀಸ್, ಯುರೇನಿಯಂ, ಕಬ್ಬಿಣದ ಅದಿರು, ತವರ, ಸೀಸ, ಸತು, ಬಾಕ್ಸೈಟ್, ಫಾಸ್ಫೇಟ್, ಕಲ್ಲಿದ್ದಲು, ಪೆಟ್ರೋಲಿಯಂ ಹೇರಳವಾಗಿ ದೊರೆಯುತ್ತವೆ.

ಭೂಮಧ್ಯ ರೇಖೆ, ಮಕರ ಸಂಕ್ರಾಂತಿ ವೃತ್ತ, ಕಟಕ ಸಂಕ್ರಾಂತಿ ವೃತ್ತಗಳು ಆಫ್ರಿಕದಲ್ಲಿ ಹಾದುಹೋಗುತ್ತವೆ. ನಾನಾ ಬಗೆಯ ಹವಾಗುಣ, ವೈವಿಧ್ಯಮಯ ಸಸ್ಯ ವರ್ಗ, ಅನೇಕ ಬಗೆಯ ಪಕ್ಷಿಗಳನ್ನು ಕಾಣುವುದು ಇದರಿಂದಲೇ,

ಕಾಫಿ, ಟೀ, ಕೋಕೋ, ಹೊಗೆಸೊಪ್ಪು, ನಾರು, ಜೋಳ, ಗೋಧಿ. ಹಣ್ಣು, ತರಕಾರಿಗಳು, ಭತ್ತ, ಹತ್ತಿ, ರಬ್ಬರ್ ಮರ, ಕಡಲೆಕಾಯಿ ಮುಂತಾದುವನ್ನು ಬೆಳೆಯುತ್ತಾರೆ.

ಕಾಡುಗಳಲ್ಲಿ ವೃಕ್ಷಸಂಪತ್ತಿದೆ; ವನ್ಯಮೃಗಗಳೂ ಹೇರಳವಾಗಿವೆ.

ದಕ್ಷಿಣ ಆಫ್ರಿಕದಲ್ಲಿ ಕೈಗಾರಿಕೆ, ಕೃಷಿ, ಗಣಿ ಉದ್ಯಮಗಳು ಲಾಭದಾಯಕವಾಗಿ ಬೆಳೆದಿವೆ. ದಕ್ಷಿಣ ಆಫ್ರಿಕ, ಪೂರ್ವ ಆಫ್ರಿಕ, ಮಧ್ಯ ಆಫ್ರಿಕ, ಪಶ್ಚಿಮ ಆಫ್ರಿಕ ಪ್ರದೇಶಗಳಲ್ಲಿ ವಜ್ರದ ಗಣಿಗಳಿವೆ. ಜಗತ್ಪ್ರಸಿದ್ಧವಾದ 'ದಕ್ಷಿಣ ಆಫ್ರಿಕದ ನಕ್ಷತ್ರ' ಎನ್ನುವ ವಜ್ರ ಪ್ರಿಟೋರಿಯ ರೈತನೊಬ್ಬನಿಗೆ ದೊರೆಯಿತು.

ಇತ್ತೀಚೆಗಿನ ವರ್ಷಗಳಲ್ಲಿ ಆಫ್ರಿಕದಲ್ಲಿ ಹೊಸ ಚೈತನ್ಯ ಹರಿದಿದೆ. ಶತಮಾನಗಳ ಕಾಲ ಇತರರ ಶೋಷಣೆಗೆ ಒಳಗಾದ ಆಫ್ರಿಕದ ಜನರು ಕಳೆದ ಕೆಲವು ವರ್ಷಗಳಲ್ಲಿ ದಾಸ್ಯದ ಸಂಕೋಲೆಯನ್ನು ಅನೇಕ ಕಡೆ ಕಡಿದುಹಾಕಿದ್ದಾರೆ. ಹಲವು ದೇಶಗಳು ಸ್ವತಂತ್ರವಾಗಿವೆ. ವಿಶ್ವಸಂಸ್ಥೆಯಲ್ಲಿ ಆಫ್ರಿಕದ ರಾಷ್ಟ್ರಗಳ ಧ್ವನಿ ಕೇಳುವಂತಾಗಿದೆ.

ಆಫ್ರಿಕ ಖಂಡದಲ್ಲಿ ಈಜಿಪ್ಟ್, ಟ್ಯುನೀಷಿಯ, ಲಿಬಿಯ, ಮೊರಾಕೊ, ಆಲ್ಜೀರಿಯ, ಗ್ಯಾಂಬಿಯ, ಐವರಿ ಕೋಸ್ಟ್, ಸಿಯೆರಾ ಲಿಯೋನ್, ಲೈಬೀರಿಯ, ಮಾರಿಷಸ್, ನೈಜೀರಿಯ, ಗೋಲ್ಡ್‌ಕೋಸ್ಟ್, ಕಾಂಗೋ, ಪಶ್ಚಿಮ ಆಫ್ರಿಕ, ದಕ್ಷಿಣ ಆಫ್ರಿಕದ ಗಣರಾಜ್ಯಗಳು, ಇಥಿಯೋಪಿಯ ಮೊದಲಾದ ಅನೇಕ ರಾಷ್ಟ್ರಗಳಿವೆ.

ನೋಡಿ : ಲಿವಿಂಗ್‌ಸ್ಟನ್, ಡೇವಿಡ್

## ಆಭರಣ

ಹಿಂದಿನ ಕಾಲದಲ್ಲಿ ವಾಬೂನಿಯ ಎನ್ನುವ ಕಾಡು ಜನಾಂಗ ಆಫ್ರಿಕ ಖಂಡದಲ್ಲಿ ಈಗಿನ ಕಾಂಗೋ ಪ್ರದೇಶದಲ್ಲಿ ಇತ್ತು. ಅವರಿಗೆ ಒಬ್ಬ ರಾಣಿ. ಅವಳ ಕೊರಳಿಗೆ ಹಿತ್ತಾಳೆಯ ಉಂಗುರ. ಅದರ ತೂಕ ಒಂಬತ್ತು ಕಿಲೊಗ್ರಾಂ! ಅದರ ಭಾರ ತಡೆಯಲಾರದೆ ಅವಳು ಆಗಾಗ ಮಲಗಿಕೊಂಡು ವಿಶ್ರಾಂತಿ ಪಡೆಯುತ್ತಿದ್ದಳು.

ಇದೇನು ಗ್ರಹಚಾರ ಎನ್ನಿಸಬಹುದು. ಏಕೆ ಅವಳಿಗೆ ಈ ಶಿಕ್ಷೆ?

ಅದು ಶಿಕ್ಷೆಯಲ್ಲ. ಆ ಹಿತ್ತಾಳೆಯ ಉಂಗುರ ಅವಳ ಒಡವೆ. ಅದನ್ನು ಹಾಕಿಕೊಂಡರೆ ಅವಳಿಗೆ ಹೆಮ್ಮೆ.

ಡಿಂಕ ಎಂಬ ಪಂಗಡದ ಹೆಂಗಸರು ಸುಮಾರು 22.5 ಕಿಲೊ ಗ್ರಾಂಗಳ ತೂಕದ ಆಭರಣ ಧರಿಸುತ್ತಿದ್ದರು.

ಆಫ್ರಿಕದ ಒಬ್ಬ ತರುಣಿ ಕುತ್ತಿಗೆಯ ಸುತ್ತ ತಾಮ್ರದ ಉಂಗುರ ಧರಿಸಿದ್ದಳಂತೆ. ಬಿಸಿಲಿನಲ್ಲಿ ಅದು ಬಿಸಿಯಾಗದಂತೆ, ಗಾಳಿ ಹಾಕಲು ಒಬ್ಬ ಸೇವಕನಿದ್ದನಂತೆ!

ಒಡವೆಯ ಆಸೆ ಮನುಷ್ಯನ ಸ್ವಭಾವದಲ್ಲಿ ಎಂದೂ ಇದ್ದದ್ದೇ. ಇಪ್ಪತ್ತು ಸಾವಿರ ವರ್ಷಗಳ ಹಿಂದಿನ ಸಮಾಧಿಗಳಲ್ಲಿ ಚಿಪ್ಪು ಮತ್ತು ಹಲ್ಲುಗಳ ಸರಗಳು ದೊರೆತಿವೆ.

ಆಭರಣಗಳನ್ನು ತೊಡುವುದರಿಂದ ತಾವು ಹೆಚ್ಚು ಅಂದವಾಗಿ ಕಾಣುತ್ತೇವೆಂದು ಎಲ್ಲ ಕಾಲಗಳಲ್ಲಿ ಬಹುಜನ ಸ್ತ್ರೀ–ಪುರುಷರು ಭಾವಿಸಿದ್ದಾರೆ. ಹೆಚ್ಚು ಹೆಚ್ಚು ಆಭರಣ ಧರಿಸುವುದರಿಂದ ಪ್ರತಿಷ್ಠೆ ಹೆಚ್ಚುತ್ತದೆ; ಅದು ಸಂಪನ್ನತೆಯ ಲಕ್ಷಣ ಎಂಬ ಭಾವನೆಯೂ ಆಭರಣಗಳನ್ನು ಶೇಖರಿಸಲು ಒತ್ತಾಸೆ ನೀಡುತ್ತದೆ. ಬ್ಯಾಂಕುಗಳು ಇಲ್ಲದ ಹಿಂದಿನ ಕಾಲದಲ್ಲಿ ಉಳಿತಾಯವೆಲ್ಲ ಆಭರಣಗಳ ರೂಪದಲ್ಲಿಯೇ ಇರುತ್ತಿತ್ತು. ಕಷ್ಟಕಾಲದಲ್ಲಿ ಒಡವೆಗಳು ಆಪದ್ಧನವಾಗಿ ಒದಗಿಬರುತ್ತಿದ್ದುವು. ಮಡದಿ ಮಕ್ಕಳಿಗೆ ಆಭರಣ ಮಾಡಿಸಿಕೊಡುವಾಗ, ಪ್ರಸಂಗಬಂದರೆ ಹಣಕಾಸನ್ನು ಒದಗಿಸಲು ಅವನ್ನು ಬಳಸಬಹುದು ಎಂದು ಸಂಸಾರದ ಯಜಮಾನ ಭಾವಿಸುತ್ತಿದ್ದ.

ಪ್ರಾಚೀನ ಶಿಲ್ಪ ಹಾಗೂ ಚಿತ್ರಕಲಾಕೃತಿಗಳಲ್ಲಿ ಅನೇಕ ವೇಳೆ ಉಡುಪಿಗಿಂತಲೂ ಹೆಚ್ಚಾಗಿ ಆಭರಣಗಳನ್ನು ಕಾಣುತ್ತೇವೆ. ಬೇಲೂರು ಹಳೇಬೀಡುಗಳಲ್ಲಿಯ ಶಿಲಾಬಾಲಿಕೆಯರ ಆಭರಣಗಳು ಮೆಚ್ಚತಕ್ಕಂಥವು. ಕಳೆದುಹೋದ ನಾಗರಿಕತೆಯನ್ನು ಗುರುತಿಸಲು ಆಭರಣ ವಿನ್ಯಾಸಗಳು ಸಹಕಾರಿ. ದೊರೆಗಳು ಮೃತಪಟ್ಟಾಗ ಕಳೇಬರದೊಂದಿಗೆ ಆಭರಣಗಳನ್ನೂ ಸಮಾಧಿ ಮಾಡುತ್ತಿದ್ದರು. ಪ್ರಾಚೀನ ಆಭರಣಗಳು ಸಾವಿರಾರು ವರ್ಷಗಳ ಅನಂತರ ದೊರೆಯುವುದಕ್ಕೆ ಅದು ಒಂದು ಕಾರಣ. ಸುಮೇರಿಯ, ಗ್ರೀಸ್, ಇಟಲಿ ಮತ್ತು ಈಜಿಪ್ಟ್‌ಗಳಲ್ಲಿ ದೊರಕಿರುವ ಆಭರಣಗಳು ಸಾವಿರಾರು ವರ್ಷಗಳ ಹಿಂದೆ ನಿರ್ಮಾಣವಾದುವು. ಹರಪ್ಪ-ಮೊಹೆಂಜೊ











ದಾರೊ ಭೂಗತವಾದಾಗ ಅಲ್ಲಿ ಬಳಕೆಯಲ್ಲಿದ್ದ ಆಭರಣಗಳು ಹುದುಗಿ ಹೋದುವು. ಸಿಂಧೂ ನದಿ ನಾಗರಿಕತೆಯ ಜನರ ಕುಶಲತೆಯನ್ನು ಅಲ್ಲಿನ ಆಭರಣಗಳು ಸಾರುತ್ತವೆ.

ಕ್ರಿಸ್ತ ಪೂರ್ವ 3000ದಿಂದ 1500ರ ವರೆಗಿನ ಕಿರೀಟ, ಶಿರಸ್ತ್ರಾಣ ಮುಂತಾದ ಆಭರಣಗಳು ಈಜಿಪ್ಟಿನಲ್ಲಿ ಸಿಕ್ಕಿವೆ. ಅದೇ ಸಮಯದ ಕೈಬಳೆ, ಕಡಗ ಮುಂತಾದ ಹಸ್ತಾಭರಣಗಳು ಸಹ ದೊರಕಿವೆ. ಬೇರೆ ಬೇರೆ ವಿನ್ಯಾಸಗಳಲ್ಲಿ ರಚಿಸಲಾದ ಕೊರಳ ಹಾರ ಈಜಿಪ್ಟಿನಲ್ಲಿ ಅಪೂರ್ವವಲ್ಲ. ನಾಲ್ಕು ಸಾವಿರ ವರ್ಷ ಹಿಂದೆಯೇ ಇರಾಕ್ ಮತ್ತು ಉತ್ತರ ಸಿರಿಯಗಳಲ್ಲಿ ಉತ್ತಮ ಆಭರಣಗಳನ್ನು ತಯಾರಿಸುತ್ತಿದ್ದರು. ಕ್ರಿ. ಪೂ. 3000ದ ಸುಮಾರಿನಲ್ಲಿ ಟೈಗ್ರಿಸ್, ಯೂಫ್ರೇಟಿಸ್ ಕಣಿವೆಗಳ ಜೊತೆ ಈ ದೇಶಗಳ ಸಂಪರ್ಕ ಏರ್ಪಟ್ಟಿತು. ಆ ಕಾಲದ ಸುಮೇರಿಯನ್ನರ ಆಭರಣ ರಚನಾ ವಿಧಾನ ಅತ್ಯಂತ ಪ್ರಸಿದ್ಧವಾಗಿತ್ತು. ಈ ವಿಧಾನ ಸಿರಿಯ ಅನಟೋಲಿಯ ದೇಶಗಳ ಆಭರಣಗಳಲ್ಲಿ ಕಂಡುಬಂದಿದೆ. ರೋಮ್ ನಗರದ ಕ್ರಿ. ಪೂ. 2200ರ ಆಭರಣಗಳಲ್ಲಿ ಮೆಸಪಟೇಮಿಯ ಮತ್ತು ಅನಟೋಲಿಯ ವಿಧಾನಗಳ ಪ್ರಭಾವ ಗೋಚರಿಸುತ್ತದೆ. ಈಜಿಪ್ಟ್ ಮತ್ತು ಸಿರಿಯಗಳ ವಿಧಾನಗಳು ಕೆಲವು ಶತಮಾನಗಳ ಅನಂತರ ರೋಮ್ ದೇಶದ ಆಭರಣಗಳಲ್ಲಿ ಕಂಡುಬಂದುವು. ಗ್ರೀಸಿನ ಆಭರಣಗಳು ಅಸಿರಿಯದ ಮಾದರಿಗಳನ್ನು ಸ್ವಲ್ಪಮಟ್ಟಿಗೆ ಅನುಸರಿಸಿದುವು. ಐರೋಪ್ಯ ಆಭರಣ ಕಲೆಗೆ ರೋಮಿನ ವಿನ್ಯಾಸಗಳೇ ಮೂಲ.

ಕ್ರಿ. ಪೂ. 2500ರ ಸಮಯದ ಸಿಂಧೂ ಕಣಿವೆ ನಾಗರಿಕರು ಬೆಳ್ಳಿ, ಬಂಗಾರ ಮತ್ತು ತಾಮ್ರದ ಆಭರಣಗಳನ್ನು ಧರಿಸುತ್ತಿದ್ದರು. ಮೊಹೆಂಜೊದಾರೊದಲ್ಲಿ ದೊರೆತ ಒಡವೆಗಳಲ್ಲಿ ಬಂಗಾರದ ಮತ್ತು ಬೆಳ್ಳಿಯ ಬಳೆಗಳು, ಕಿವಿಯ ಆಭರಣಗಳು, ಸರಗಳು ಇವೆ ; ಇವು ಇಂದಿಗೂ ಹೊಚ್ಚ ಹೊಸದಾಗಿ ಕಾಣುತ್ತವೆ. ಕ್ರಿ. ಪೂ. 1500ರ ಹೊತ್ತಿಗೆ ಆರ್ಯರು ಬಂದಾಗ ಅವರು ಆಭರಣಗಳನ್ನು ನಿರ್ಮಿಸುವುದರಲ್ಲಿ ನಿಷ್ಣಾತರಾಗಿದ್ದರು. ಅಲ್ಲಿಂದ ಕ್ರಿ. ಪೂ. 300ರ ವರೆಗೆ ಆಭರಣಗಳ ಬಗೆಗೆ ಹೆಚ್ಚು ತಿಳಿದುಬರುವುದಿಲ್ಲ 'ಸುವರ್ಣ ಯುಗ' ಎಂದು ಪ್ರಸಿದ್ಧವಾದ ಗುಪ್ತರ ಆಳ್ವಿಕೆಯಲ್ಲಿ ಆಭರಣ ನಿರ್ಮಾಣ ಕಲೆಯಲ್ಲಿ ಬಹಳ ಪ್ರಗತಿಯಾಯಿತು. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಆಭರಣಗಳಿಗೆ ಸಂಬಂಧಿಸಿದಂತೆ ಮಾಹಿತಿಗಳು ಸಿಗುತ್ತವೆ. ಆದರೆ ಆ ಕಾಲದ ಆಭರಣಗಳು ಈವರೆಗೆ ಕಂಡುಬಂದಿಲ್ಲ. ತಕ್ಷಶಿಲೆಯಲ್ಲಿ ಒಮ್ಮೆ ಒಟ್ಟಾಗಿ ದೊರೆತ 180 ಆಭರಣಗಳು ಒಂದನೆಯ ಶತಮಾನದವೆಂದು ಹೇಳಲಾಗಿದೆ. ಸುಮಾರು ಎರಡನೆಯ ಶತಮಾನದ ವರೆಗಿನ ಆಭರಣಗಳನ್ನು ಅಜಂತ ಗುಹೆಗಳು ಮುಂತಾದ ಕಡೆ ಗುರುತಿಸಬಹುದು. ಆಗಿನ ಆಕೃತಿ, ರಚನೆ ಮತ್ತು ನಿರ್ಮಾಣದ ವಿಧಾನಗಳು ಹದಿನಾರನೆಯ ಶತಮಾನದ ಸುಮಾರಿನ ಐರೋಪ್ಯ ವಿಧಾನಗಳನ್ನು ಮೀರಿಸಿವೆ.

ವಜ್ರ, ನೀಲಮಣಿ, ಪಚ್ಚೆ, ಕ್ಷೀರಸ್ಫಟಿಕ, ಮುತ್ತು, ರತ್ನ, ಪದ್ಮರಾಗ, ವೈಢೂರ್ಯ ಮುಂತಾದುವನ್ನು ಬೆಳ್ಳಿ ಬಂಗಾರಗಳ ಜೊತೆ ಬಳಸಿ ಆಭರಣಗಳನ್ನು ತಯಾರಿಸುತ್ತಾರೆ.

ಲೋಹದಿಂದ ಆಭರಣದ ಚೌಕಟ್ಟು ತಯಾರಿಸಿಕೊಂಡು ಅದರ ಮೈ ಮೇಲೆ ಹರಳುಗಳನ್ನು ಹುದುಗುವುದು ಸಾಮಾನ್ಯ ಪದ್ಧತಿ. ಲೋಹವನ್ನು ಸೂಕ್ಷ್ಮವಾದ ತಂತುಗಳನ್ನಾಗಿ ಎಳೆದು ಜಾಲಂದ್ರ ವಿನ್ಯಾಸಗಳನ್ನು ರಚಿಸುವುದು ಇನ್ನೊಂದು ಬಗೆಯ ಕುಶಲ ಕಲೆ. ಪೊಳ್ಳು ಮೈಯುಳ್ಳ

1. ಶಿರಾಭರಣ – ಕ್ರಿ.ಪೂ. 1450ರಲ್ಲಿ, ಈಜಿಪ್ಟಿನಲ್ಲಿ
2. ಪದಕ
3. ಕಂಠಹಾರ
4. ಅಡ್ಡಿಕೆ
5. ಜಡೆಬಿಲ್ಲೆ ; ಕಿವಿಯಲ್ಲಿ ಲೋಲಕ

ಲೋಹದ ಗುಂಡುಗಳನ್ನು ತಯಾರಿಸಿ ಬೆಸೆಯುವುದು ಮತ್ತೊಂದು ವಿಧಾನ. ಲೋಹದ ಭಾಗಗಳ ಮೇಲೆ ಕುಸುರಿನ ಕೆಲಸ ಮಾಡುವುದನ್ನೂ ಅವುಗಳಿಗೆ ಹೊಳಪು ನೀಡುವುದನ್ನೂ ಎಲ್ಲ ದೇಶಗಳ ಎಲ್ಲ ಬಗೆಯ ಆಭರಣಗಳಲ್ಲೂ ಸಾಮಾನ್ಯವಾಗಿ ಕಾಣಬಹುದು. ಗಾಜಿನ ಪದರವನ್ನು ಲೋಹದ ಮೇಲೆ ಸೃಜಿಸುವುದು ಮಿನಾಯಿ ಕಲೆ. ಗಾಜಿನ ಪದರದಲ್ಲಿಯೇ ಚಿತ್ರಗಳನ್ನು ಮೂಡಿಸುವುದು ಒಂದು ವಿಶೇಷ.

ಒಡವೆಗಳನ್ನು ಮಾಡಲು ಬಂಗಾರ, ಪ್ಲ್ಯಾಟಿನಂ, ಪಲೇಡಿಯಂ (ಪ್ಲ್ಯಾಟಿನಂನಂಥ ಒಂದು ಅಪೂರ್ವ ಲೋಹ), ಬೆಳ್ಳಿ, ಕ್ಯಾಮಿಯೊ (ಚಪ್ಪಟೆ ಹಿನ್ನೆಲೆಯಲ್ಲಿ ಚಿತ್ರ ಎದ್ದು ಕಾಣುವಂತೆ ಕತ್ತರಿಸಿದ ಒಂದು ಬಗೆಯ ಪ್ರಶಸ್ತ ಶಿಲೆ), ಮುತ್ತು, ಹರಳು, ಕೆಂಪು, ಪುಷ್ಯರಾಗ, ನೀಲಿ, ಪಚ್ಚೆ ಮೊದಲಾದ ನವರತ್ನಗಳನ್ನೂ ಕೃತಕ ರತ್ನಗಳನ್ನೂ ಬಳಸುತ್ತಾರೆ. ಬಹು ಶ್ರೇಷ್ಠವಾದದ್ದು, ಬೆಲೆಬಾಳುವಂಥದು ವಜ್ರ. (ವಜ್ರದ ಬೆಲೆ ಕಟ್ಟುವುದು ತೂಕದಿಂದ, ಅದನ್ನು ತೂಗುವ ಮಾನ 'ಕ್ಯಾರೆಟ್'—200 ಮಿಲಿಗ್ರಾಂಗಳು ಅಥವಾ 1/142 ಔನ್ಸ್.) ವಜ್ರದ ಬೆಲೆ ಅದರ ಹೊಳಪನ್ನೂ ದೋಷವಿಲ್ಲದಿರುವಿಕೆಯನ್ನೂ ಅವಲಂಬಿಸಿದೆ. ಕೆಲವು ವಜ್ರಗಳು ಒಳ್ಳೆಯ ಅದೃಷ್ಟವನ್ನು ತರುತ್ತವೆ, ಕೆಲವು ಕೆಟ್ಟ ಅದೃಷ್ಟವನ್ನು ತರುತ್ತವೆ ಎಂಬ ನಂಬಿಕೆಯುಂಟು.

ಗೋಲ್ಕೊಂಡ ಗಣಿಯಲ್ಲಿ ಹಿಂದೆ ದೊರೆತ ಒಂದು ವಜ್ರದ ತೂಕ 787 ಕ್ಯಾರೆಟ್ ಇದ್ದಿತಂತೆ. ('ದಿ ಗ್ರೇಟ್ ಮೊಗಲ್' ಎಂದು ಅದಕ್ಕೆ ಹೆಸರಿಟ್ಟಿದ್ದಾರೆ.) ಅದನ್ನು ಕತ್ತರಿಸಿ ಉಪಯೋಗಿಸಿದಾಗ 280 ಕ್ಯಾರೆಟ್ ಇದ್ದಿತಂತೆ. ಪ್ರಪಂಚದ ಅತಿ ದೊಡ್ಡ ವಜ್ರ 1905ರಲ್ಲಿ ದಕ್ಷಿಣ ಆಫ್ರಿಕದ ಟ್ರಾನ್ಸ್‌ವಾಲಿನ ಪ್ರೀಮಿಯರ್ ಗಣಿಯಲ್ಲಿ ಸಿಕ್ಕಿತು. ಇದರ ತೂಕ 3,106 ಕ್ಯಾರೆಟ್ (ಸುಮಾರು ½ ಕಿಲೊಗ್ರಾಂ). ಇದನ್ನು ಇಂಗ್ಲೆಂಡಿನ ಅರಸ ಏಳನೆಯ ಎಡ್ವರ್ಡನಿಗೆ ಕಾಣಿಕೆಯಾಗಿ ಕೊಟ್ಟರು. ಭಾರತದ ಪ್ರಸಿದ್ಧ ಕೊಹಿನೂರ್ ವಜ್ರ ನಾದಿರ್ ಷಹ 1739ರಲ್ಲಿ ದೆಹಲಿಯನ್ನು ಲೂಟಿ ಮಾಡಿದಾಗ ಅವನಿಗೆ ದೊರೆತು, ಅಲ್ಲಿಂದ ಕಡೆಗೆ ಇಂಗ್ಲೆಂಡಿನ ಅರಮನೆ ಸೇರಿತು. ಆರನೆಯ ಜಾರ್ಜರ ಪಟ್ಟಾಭಿಷೇಕವಾದಾಗ ಅವನ ಪತ್ನಿ ಎಲಿಜಬೆತಳ ಕಿರೀಟಕ್ಕೆ ಇದನ್ನು ಸೇರಿಸಿದರು.

ಒಡವೆಗಳನ್ನೂ ಪ್ರಶಸ್ತವಾದ ಹರಳುಗಳನ್ನೂ ಮಣಿಗಳನ್ನೂ ಧರಿಸುವುದು ಶುಭ ಎಂಬ ನಂಬಿಕೆ ಬಹಳ ಹಿಂದಿನದು.

## ಆಮದು ಮತ್ತು ರಫ್ತು

ಆಮದು ಮತ್ತು ರಫ್ತು ಎರಡು ದೇಶಗಳ ನಡುವೆ ನಡೆಯುವ ವ್ಯಾಪಾರ. ನಮ್ಮ ದೇಶದಿಂದ ಹೊರಕ್ಕೆ ವಸ್ತುಗಳನ್ನು ಮಾರುವುದು ರಫ್ತು (ನಿರ್ಯಾತ). ನಾವು ಹೊರದೇಶದಿಂದ ವಸ್ತುಗಳನ್ನು ಕೊಳ್ಳುವುದು ಆಮದು (ಆಯಾತ). ರಫ್ತು ಆಮದಿಗಿಂತ ಹೆಚ್ಚಾಗಿದ್ದರೆ ಆಗ ಹೊರ ದೇಶದ ಹಣ ನಮ್ಮಲ್ಲಿ ಶೇಖರವಾಗುತ್ತದೆ. ಆದ್ದರಿಂದ ಪ್ರತಿಯೊಂದು ದೇಶವೂ ಹೆಚ್ಚು ಹೆಚ್ಚು ರಫ್ತು ಮಾಡಲು, ಆಮದನ್ನು ಕಡಮೆ ಮಾಡಲು ಬಯಸುತ್ತದೆ. ಆದರೆ ಪ್ರತಿಯೊಂದು ದೇಶವೂ ತನಗೆ ಬೇಕಾದ ಎಲ್ಲ ವಸ್ತುಸಾಮಗ್ರಿಗಳನ್ನು ತಾನೇ ತಯಾರಿಸಿಕೊಳ್ಳಲು ಸಾಧ್ಯವಿಲ್ಲ. ಆಮದು ಮಾಡಿಕೊಳ್ಳಲೇ ಬೇಕು. ಹೀಗಾಗಿ, ಆಮದು - ರಫ್ತು ಎರಡೂ ಇರುತ್ತವೆ.



ಆಧುನಿಕ ಸೌಕರ್ಯಗಳಿರುವ ಹ್ಯಾಂಬರ್ಗ್ ಬಂದರು

ಪಾಕಿಸ್ತಾನದಲ್ಲಿ ಸಣಬಿನ ಹೊಲಗಳು ಬೇಕಾದಷ್ಟಿವೆ. ಭಾರತದಲ್ಲಿ ಸಣಬಿನಿಂದ ದಾರ ತೆಗೆದು ಗೋಣಿತಟ್ಟು ನೇಯುವ ಕಾರಖಾನೆಗಳು ಬಹಳ ಇವೆ. ಹೀಗಾಗಿ ಪಾಕಿಸ್ತಾನ ಸಣಬನ್ನು ರಫ್ತು ಮಾಡಲೇಬೇಕು. ಭಾರತ ಸಣಬನ್ನು ಆಮದು ಮಾಡಿಕೊಳ್ಳಲೇ ಬೇಕು. ಪ್ರಪಂಚಕ್ಕೆ ಬೇಕಾಗುವ ಸಣಬಿನ ಚೀಲ ಇತ್ಯಾದಿಗಳಲ್ಲಿ ಹೆಚ್ಚಿನ ಭಾಗ ಭಾರತ ಪಾಕಿಸ್ತಾನಗಳಲ್ಲಿ ತಯಾರಾಗುತ್ತದೆ. ಜಪಾನ್, ಅಮೆರಿಕ ಮುಂತಾದ ದೇಶಗಳಲ್ಲಿ ಕಬ್ಬಿಣದ ಅದಿರಿನ ಅಭಾವ. ಭಾರತದಲ್ಲಿ ಕಬ್ಬಿಣದ ಅದಿರಿನ ಭಾರೀ ಸಂಗ್ರಹ. ಕಬ್ಬಿಣ—ಉಕ್ಕು ನಾವೇ ತಯಾರಿಸುವಾಗಲೂ ಸಾಕಷ್ಟು ಕಬ್ಬಿಣದ ಅದಿರನ್ನು ರಫ್ತು ಮಾಡಲು ಸಾಧ್ಯವಿದೆ. ಅಮೆರಿಕ ಮತ್ತು ಜಪಾನುಗಳಲ್ಲಿ ತಯಾರಾಗುವ ಕೆಲವು ವಿಶಿಷ್ಟ ಯಂತ್ರ ಸಾಮಗ್ರಿ ನಮಗೆ ಬಹಳ ಅಗತ್ಯ. ಹೀಗೆ ಅಮೆರಿಕ ಮತ್ತು ಜಪಾನುಗಳ ಜೊತೆ ಆಮದು ಮತ್ತು ರಫ್ತು ವ್ಯಾಪಾರವನ್ನು ಭಾರತ ನಡೆಸುತ್ತದೆ.

ಪ್ರತಿಯೊಂದು ದೇಶವೂ ತನ್ನ ರಫ್ತು ಮತ್ತು ಆಮದುಗಳನ್ನು ನಿಯಂತ್ರಣದಲ್ಲಿ ಇಟ್ಟುಕೊಂಡಿರುತ್ತದೆ. ಹೆಚ್ಚು ಹೆಚ್ಚು ರಫ್ತಾಗಲೆಂಬ ಉದ್ದೇಶದಿಂದ ರಫ್ತಾಗುವ ಕೆಲವು ವಸ್ತುಗಳ ಮೇಲೆ ಸಹಾಯ ಧನ ಕೊಡುತ್ತಾರೆ. ರಫ್ತಾದ ಪದಾರ್ಥಗಳನ್ನು ಅಗ್ಗದಲ್ಲಿ ಮಾರಿದರೆ, ಆಗ ಅದಕ್ಕೆ ಗಿರಾಕಿ ಹೆಚ್ಚು. ಆಮದು ಆದಷ್ಟು ಕಡಮೆ ಮಾಡಲು ಪ್ರಯತ್ನಿಸಲಾಗುತ್ತದೆ. ಆಮದು ವಸ್ತುಗಳ ಮೇಲೆ ದುಬಾರಿಯಾದ ಆಮದು ಸುಂಕ ಹೇರುತ್ತಾರೆ. ಏಕೆಂದರೆ ದೇಶ ಹೆಚ್ಚು ಆಮದು ಮಾಡಿಕೊಂಡಷ್ಟೂ ಹಣ ಹೊರಕ್ಕೆ ಹೋಗುತ್ತದೆ. ಆ ಹಣವನ್ನು ರಫ್ತು ಮಾಡಿಯೇ ಸಂಪಾದಿಸಬೇಕು. ಆಮದಾಗುವ ಯಾವ ಪದಾರ್ಥಕ್ಕೆ ಬಹಳ ಬೇಡಿಕೆ ಇದೆಯೋ ಅಂಥದ್ದೇ ಒಂದು ಸ್ವದೇಶೀ ವಸ್ತುವನ್ನು ತಯಾರಿಸಲು ಸವಕ ಪ್ರಯತ್ನಗಳು ನಡೆಯುತ್ತಿರುತ್ತವೆ.

ಆಮದು ಮತ್ತು ರಫ್ತು ವ್ಯಾಪಾರ ಮಾಡುವಾಗ ವಿದೇಶೀ ವಿನಿಮಯ ಹಣದ ರೂಪದಲ್ಲಿ ವಹಿವಾಟು ನಡೆಸಬೇಕು. ವಿದೇಶೀ ವಿನಿಮಯ ಹಣ ಬಹಳ ಅಗತ್ಯವಿದ್ದರೆ, ಅತ್ಯಂತ ಕಡಮೆ ಬೆಲೆಗೂ ಸರಕನ್ನು ರಫ್ತು ಮಾಡಬೇಕಾಗುತ್ತದೆ. ಉದಾಹರಣೆಗೆ, ಭಾರತ ಹೊರ ದೇಶಗಳಿಗೆ ಕಾಫಿಬೀಜ ಮತ್ತು ಸಕ್ಕರೆಯನ್ನು ರಫ್ತು ಮಾಡುತ್ತದೆ. ಇವಕ್ಕೆ ಹೊರ ದೇಶಗಳಲ್ಲಿ ಬೆಲೆ ಕಡಮೆ ; ಭಾರತದಲ್ಲಿ ಜಾಸ್ತಿ. ಹೊರ ದೇಶಗಳೊಂದಿಗೆ ಭಾರತ

ನಡೆಸುವ ಆಮದು-ರಫ್ತು ವ್ಯಾಪಾರವನ್ನು ಸ್ಟೇಟ್ ಟ್ರೇಡಿಂಗ್ ಕಾರ್ಪೊರೇಷನ್ (ಪ್ರಭುತ್ವ ವಾಣಿಜ್ಯ ಮಂಡಳಿ) ಹೆಚ್ಚಾಗಿ ನಡೆಸುತ್ತದೆ.

ವಸ್ತುಗಳನ್ನು ರಫ್ತು ಮಾಡದೆಯೇ ವಿದೇಶೀ ವಿನಿಮಯದ ಗಳಿಕೆಯಾದರೆ ಅದು 'ಅಗೋಚರ' ಎನಿಸುತ್ತದೆ. ನಮ್ಮ ಹಡಗುಗಳಲ್ಲಿ ಬೇರೆ ದೇಶಗಳವರು ಸರಕನ್ನು ಸಾಗಿಸುವಾಗ ನಮ್ಮ ದೇಶದ ಕಂಪನಿಯೊಂದರಲ್ಲಿ ವಿದೇಶೀ ಸರಕು ವಿಮೆಯಾಗಿದ್ದರೆ ಅದರ ಪ್ರೀಮಿಯಂ, ವಿದೇಶೀಯರು ನಮ್ಮ ದೇಶದ ಪ್ರವಾಸ ಕ್ಷೇತ್ರಗಳನ್ನು ನೋಡಲು ಬಂದಾಗ ಇಲ್ಲಿ ವೆಚ್ಚ ಮಾಡಿದ ಹಣ ಇವೆಲ್ಲ ನಮ್ಮ ಪಾಲಿಗೆ ಅಗೋಚರ ರಫ್ತಿನಿಂದ ಬಂದ ಹಣ. ಆ ಹೊರ ದೇಶದ ಪಾಲಿಗೆ ಅದು ಅಗೋಚರ ಆಮದಿಗಾಗಿ ಮಾಡಿದ ವೆಚ್ಚ.

ತಮ್ಮ ತಮ್ಮಲ್ಲೇ ಸರಕುಗಳನ್ನು ಸುಲಭ ಬೆಲೆಗಳಲ್ಲಿ ಮಾರಾಟ ಮಾಡಿಕೊಳ್ಳಲು ಸಾಮಾನ್ಯ ಮಾರುಕಟ್ಟೆಗಳನ್ನು ಸೃಜಿಸಿಕೊಂಡಿರುತ್ತಾರೆ. ಈ ಸಾಮಾನ್ಯ ಮಾರುಕಟ್ಟೆಗೆ ಸೇರಿದ ರಾಷ್ಟ್ರಗಳು ತಮ್ಮತಮ್ಮಲ್ಲಿ ಆಮದು ಮಾಡಿಕೊಳ್ಳುವ ಅಥವಾ ರಫ್ತು ಮಾಡುವ ಸರಕುಗಳ ಮೇಲೆ ಯಾವುದೇ ಬಗೆಯ ಸುಂಕ, ತೆರಿಗೆಗಳನ್ನು ಹೇರುವುದಿಲ್ಲ. ವಿಶೇಷ ವ್ಯಾಪಾರ ಒಪ್ಪಂದಗಳನ್ನು ಮಾಡಿಕೊಂಡಿರುವ ದೇಶಗಳಿಂದ ಆದ ಆಮದಿನ ಮೇಲೆ ಕೆಲವು ವೇಳೆ ಕಡಮೆ ಸುಂಕವನ್ನು ಹೇರಲಾಗುತ್ತದೆ. ತನ್ನ ರಫ್ತಿಗೂ ಆ ದೇಶ ಕಡಮೆ ಸುಂಕವನ್ನು ಹೊರಿಸುತ್ತದೆ. ಆಗ ಆ ಸಾಮಾನ್ಯ ಮಾರುಕಟ್ಟೆಯಲ್ಲಿ ಮಾರಾಟವಾದ ಸರಕುಗಳ ಬೆಲೆ ಹೊರಗೆ ಆದ ಮಾರಾಟದ ಬೆಲೆಗಿಂತ ಕಡಮೆ ಇರುತ್ತದೆ. ಐರೋಪ್ಯ ಸಾಮಾನ್ಯ ಮಾರುಕಟ್ಟೆ ಇಂಥ ವ್ಯವಸ್ಥೆ.

ನೋಡಿ : ಐರೋಪ್ಯ ಸಾಮಾನ್ಯ ಮಾರುಕಟ್ಟೆ; ವಿದೇಶಿ ವಿನಿಮಯ; ಸುಂಕ; ವ್ಯಾಪಾರ-ವಾಣಿಜ್ಯ.

## ಆಯೋಗ

ರಾಜ್ಯಪುನರ್ವಿಂಗಡಣಾ ಆಯೋಗ ಭಾರತದ ಭೂಪಟವನ್ನೇ ಬದಲಾಯಿಸಿತು. ಆ ಆಯೋಗದ ಅಭಿಪ್ರಾಯವನ್ನನುಸರಿಸಿ 1956ರಲ್ಲಿ ಹೊಸ ಮೈಸೂರು ರಾಜ್ಯ ಜನ್ಮತಾಳಿತು.

ಒಂದು ವಿಶೇಷ ಕಾರ್ಯವನ್ನು ನಿರ್ವಹಿಸಲು ಸರಕಾರದಿಂದ ನೇಮಿಸಲ್ಪಡುವ ಸಮಿತಿಗೆ ಆಯೋಗ ಎನ್ನುತ್ತಾರೆ. ಎರಡು ರಾಜ್ಯಗಳ ನಡುವಣ ಗಡಿವಿವಾದ, ಸರಕಾರಿ ನೌಕರರ ವೇತನ ಪುನರ್ವಿಮರ್ಶೆ, ಕೇಂದ್ರ ಸರಕಾರ ರಾಜ್ಯ ಸರಕಾರಗಳಲ್ಲಿ ಕೆಲವು ಬಗೆಯ ಆದಾಯಗಳ ಹಂಚಿಕೆ ಇಂಥ ಸಮಸ್ಯೆಗಳ ಪರಿಶೀಲನೆಗೆ ಸರಕಾರ ಸಮರ್ಥನಾದ ಒಬ್ಬ ವ್ಯಕ್ತಿಯನ್ನು ನೇಮಿಸಬಹುದು, ಅಥವಾ ಹಲವು ಜನರಿರುವ ಸಮಿತಿಯೊಂದನ್ನು ರಚಿಸಬಹುದು. ಇವೆಲ್ಲ ಆಯೋಗಗಳು.

ಬ್ರಿಟನ್ನಿನಲ್ಲಿ ಯಾವುದಾದರೊಂದು ಪ್ರತ್ಯೇಕ ವಿಷಯದ ಬಗೆಗೆ ತನಿಖೆ ಮಾಡಲು ನೇಮಕವಾಗಿರುವ ಮಂಡಲಿಗೆ ಆಯೋಗ ಎನ್ನುತ್ತಾರೆ.

ಅಮೆರಿಕದ ಸಂಯುಕ್ತ ಸಂಸ್ಥಾನದಲ್ಲಿ ಕೆನಡಿಯ ಕೊಲೆಯಾದಾಗ ನ್ಯಾಯಮೂರ್ತಿ ವಾರನ್ ಅಧ್ಯಕ್ಷತೆಯಲ್ಲಿ ಆಯೋಗ ನೇಮಿಸಿದರು.

ಯುನೆಸ್ಕೊದೊಡನೆ ಸಹಕಾರಕ್ಕಾಗಿ ಭಾರತದ ರಾಷ್ಟ್ರೀಯ ಆಯೋಗವನ್ನು 1949ರಲ್ಲಿ ನೇಮಿಸಲಾಗಿತ್ತು. ಯುನೆಸ್ಕೊದ ಗುರಿ ಮತ್ತು ಉದ್ದೇಶಗಳನ್ನು ಅರ್ಥ ಮಾಡಿಕೊಳ್ಳುವುದು; ಯುನೆಸ್ಕೊದೊಡನೆ ಸಂಬಂಧಪಟ್ಟ ವಿಚಾರಗಳಲ್ಲಿ ಸರಕಾರಕ್ಕೆ ಸಲಹೆ ಕೊಡುವುದು; ಯುನೆಸ್ಕೊ ಮತ್ತು ವಿದ್ಯೆ, ವಿಜ್ಞಾನ, ಸಂಸ್ಕೃತಿಗಳ ಬೆಳವಣಿಗೆಗಾಗಿ ಸ್ಥಾಪಿಸಲ್ಪಟ್ಟಿರುವ ಸಂಸ್ಥೆಗಳ ನಡುವೆ ಸಂಪರ್ಕ ಉಂಟುಮಾಡುವುದು—ಈ ಹೊಣೆಯನ್ನು ಆ ಆಯೋಗ ಹೊತ್ತಿತ್ತು.

ಆಯೋಗವನ್ನು ಕೇಂದ್ರ ಸರಕಾರದವರಾಗಲಿ ರಾಜ್ಯ ಸರಕಾರದವರಾಗಲಿ ನೇಮಕ ಮಾಡಬಹುದು. ನೇಮಕ ಮಾಡುವಾಗ ಆಯೋಗ ಪರಿಶೀಲಿಸಬೇಕಾದ ವಿಷಯಗಳನ್ನು ಸ್ಪಷ್ಟವಾಗಿ ನಿರೂಪಿಸಬೇಕು. ಆಯೋಗದ ಕೆಲಸ ಮುಗಿಯುವ ಅವಧಿಯನ್ನು ನಿರ್ದಿಷ್ಟಗೊಳಿಸುವುದೂ ಉಂಟು.

ಸರಕಾರದ ಅಥವಾ ಪ್ರಜೆಗಳ ನಿರ್ಬಂಧವಿಲ್ಲದೆ, ಸ್ವತಂತ್ರವಾಗಿ ಕೂಲಂಕಷವಾಗಿ ಸಮಸ್ಯೆಯ ಪರಿಹಾರವನ್ನು ಹುಡುಕಲು ಆಯೋಗ ಪ್ರಯತ್ನಿಸುತ್ತದೆ. ತಮ್ಮ ನಿಷ್ಪಕ್ಷಪಾತ ಧೋರಣೆಗೆ ಹೆಸರಾದವರೇ ಸಾಮಾನ್ಯವಾಗಿ ಆಯೋಗದ ಸದಸ್ಯರಾಗುವುದರಿಂದ, ಅದರ ಅಭಿಪ್ರಾಯಕ್ಕೆ ಸಾರ್ವಜನಿಕರೂ ಮನ್ನಣೆ ನೀಡುತ್ತಾರೆ. ಸರಕಾರ ಆಯೋಗದ ಕಾರ್ಯ ಸುಗಮವಾಗಿ ಸಾಗುವಂತೆ ಎಲ್ಲ ರೀತಿಯ ಅನುಕೂಲತೆ ಮಾಡಿಕೊಡುತ್ತದೆ. ಆಯೋಗ ಸೂಚಿಸಿದ ವಿಚಾರಗಳನ್ನು ಸರಕಾರ ಸಾಧಾರಣವಾಗಿ ಮಾನ್ಯ ಮಾಡುತ್ತದೆ.

## ಆರ್ಯರು

ಆರ್ಯರು ಭಾರತಕ್ಕೆ ಹೊರಗಿನಿಂದ ಆಗಮಿಸಿದವರಲ್ಲಿ ಮೊಟ್ಟಮೊದಲಿಗರು. ಮಧ್ಯ ಏಷ್ಯದ ಎತ್ತರದ ಬಯಲು ಪ್ರದೇಶದಿಂದ ಬಂದವರು ಇವರು. ಆರ್ಯ ಎಂದರೆ 'ಉಳುವವನು' ಎಂದರ್ಥ. ಭೂವ್ಯವಸಾಯ ಮತ್ತು ಪಶುಪಾಲನೆ ಅವರ ಮುಖ್ಯ ವೃತ್ತಿಗಳು. ಅವರು ತಮ್ಮ ಕುರಿಗಳನ್ನು, ದನಗಳನ್ನು ಸಾಗಿಸಿಕೊಂಡು ಸಂಸಾರದೊಡನೆ ಸ್ಥಳದಿಂದ ಸ್ಥಳಕ್ಕೆ ಹೋಗುತ್ತಿದ್ದರು. ಸ್ವಲ್ಪ ಕಾಲವಾದ ಮೇಲೆ ಅವರು ಗುಂಪು ಗುಂಪುಗಳಾಗಿ ವಿಭಾಗವಾಗಿ, ಒಂದೊಂದು ಗುಂಪಿನವರು ಒಂದೊಂದು ಸ್ಥಳವನ್ನು ವಶಮಾಡಿಕೊಂಡು ಅಲ್ಲಿ ನೆಲೆಸಿದರು. ಭಾರತದ ಹಿಂದೂಗಳೂ ಪಾರಸೀ ಜನರೂ ಯೂರೋಪ್ ಖಂಡದ ಕೆಲವು ಜನಾಂಗಗಳೂ ಆರ್ಯರ ಸಂತತಿಗೆ ಸೇರಿದವರು.

ಏಷ್ಯ ಖಂಡದ ಮಧ್ಯಭಾಗದಲ್ಲಿದ್ದ ಆರ್ಯರಲ್ಲಿ ಒಂದು ಗುಂಪಿನವರು ಭಾರತ ದೇಶದ ವಾಯುವ್ಯಭಾಗದ ಕಣಿವೆಯ ಮೂಲಕ ಒಳಗೆ ನುಗ್ಗಿ ಸಿಂಧೂನದಿಯ ಪೂರ್ವ ಮತ್ತು ಪಶ್ಚಿಮ ಭಾಗಗಳಲ್ಲಿ ನೆಲೆಸಿದರು. ಬರಬರುತ್ತ ದಕ್ಷಿಣ ಮತ್ತು ಪೂರ್ವ ಭಾಗಗಳಲ್ಲೆಲ್ಲ ಹರಡಿಕೊಂಡ ಆರ್ಯರು ಕೊನೆಗೆ ಹಿಮಾಲಯ ಪರ್ವತದಿಂದ ವಿಂಧ್ಯ ಪರ್ವತದ ವರೆಗಿನ ಪ್ರದೇಶವನ್ನೆಲ್ಲ ಆಕ್ರಮಿಸಿಕೊಂಡರು. ಅಲ್ಲಿದ್ದ ಮೂಲ ನಿವಾಸಿಗಳನ್ನು ತಮ್ಮ ಗುಲಾಮರನ್ನಾಗಿ ಮಾಡಿಕೊಂಡರು. ಮತ್ತು ಆ ಪ್ರದೇಶಕ್ಕೆ 'ಆರ್ಯಾವರ್ತ' ಎಂದು ಹೆಸರುಕೊಟ್ಟರು.

ಆರ್ಯರು ಸುಂದರರೂ ಬಲಿಷ್ಠರೂ ಧೈರ್ಯಶಾಲಿಗಳೂ ಆಗಿದ್ದರು. ನಾಗರಿಕತೆಯಲ್ಲಿ ಹಿಂದುಳಿದಿದ್ದ ಜನರಿಗೂ ಅವರಿಗೂ ಪದೇ ಪದೇ ಯುದ್ಧಗಳು ನಡೆಯುತ್ತಲಿದ್ದುವು. ಬಾಣ, ಈಟಿ, ಕತ್ತಿ ಮುಂತಾದುವು ಅವರ ಮುಖ್ಯ ಆಯುಧಗಳು. ಸಂಚಾರಕ್ಕಾಗಿ ದೋಣಿಗಳನ್ನೂ ಉಪಯೋಗಿಸುತ್ತಿದ್ದರು.


ಆರ್ಯ

ಆರ್ಯರು ಧಾನ್ಯಗಳನ್ನು ಬೀಸಿ, ಅದರ ಹಿಟ್ಟಿನಿಂದ ರೊಟ್ಟಿಯನ್ನು ಮಾಡುತ್ತಿದ್ದರು. ಹಣ್ಣುಗಳನ್ನೂ ಗೆಡ್ಡೆಗೆಣಸುಗಳನ್ನೂ ತಿನ್ನುತ್ತಿದ್ದರು. ಮೇಕೆ, ಕುರಿ ಮತ್ತು ಇತರ ಸಾಕುಪ್ರಾಣಿಗಳ ಮಾಂಸವನ್ನು ಆಹಾರಕ್ಕಾಗಿ ಅವರು ಉಪಯೋಗಿಸುತ್ತಿದ್ದರು. ಸೋಮ ಬಳ್ಳಿಯ ರಸ ಅವರ ಪ್ರೀತಿಯ ಪಾನೀಯವಾಗಿದ್ದಿತು. ದುಡಿತ, ಕುಣಿತ, ಪಂದ್ಯ, ಜೂಜು ಎಲ್ಲದರಲ್ಲಿಯೂ ಅವರು ಆಸಕ್ತರು.

ಆರ್ಯರು ಸೂರ್ಯನ ಆರಾಧಕರು. ವಿವಾಹ ಕಾಲದಲ್ಲಿ ದಂಪತಿ ಜೊತೆಯಾಗಿ ದೇವತೆಗಳನ್ನು ಪೂಜಿಸುತ್ತಿದ್ದರು. ತಂದೆಯ ಸ್ವತ್ತಿಗೆ ಗಂಡು ಮಕ್ಕಳು ಉತ್ತರಾಧಿಕಾರಿಗಳಾಗುತ್ತಿದ್ದರು. ಹೆಣ್ಣು ಮಕ್ಕಳು ಗಂಡನ ಮನೆಯಲ್ಲಿ ವಾಸಿಸುತ್ತಿದ್ದರು.

ಆರ್ಯರ ನಡೆನುಡಿ ಮತ್ತು ಜೀವನ ಕ್ರಮಗಳು ಬಹಳ ಸರಳವಾಗಿದ್ದುವು. ತಂದೆಯೇ ಮನೆಯ ಯಜಮಾನನಾಗಿದ್ದರೂ ಸ್ತ್ರೀಯರಿಗೆ ವಿಶೇಷ ಗೌರವವಿದ್ದಿತು. ಅವರು ವಿಗ್ರಹಗಳನ್ನು ಪೂಜಿಸುತ್ತಿರಲಿಲ್ಲ. ಪ್ರಕೃತಿ ಪೂಜೆ ಮತ್ತು ದೇವತೆಗಳ ಪೂಜೆ ಮಾಡುತ್ತಿದ್ದರು.

ಆರ್ಯರು ರೈತರಾಗಿ ಜೀವನ ನಡೆಸುತ್ತಿದ್ದರು. ತಮ್ಮ ನೆಲವನ್ನು ಕಿತ್ತುಕೊಂಡರೆಂದು ಮೂಲನಿವಾಸಿಗಳು ಆರ್ಯರೊಡನೆ ಕಾದಲಾರಂಭಿಸಿದರು. ಇದರಿಂದ ಅನೇಕ ಶಸ್ತ್ರಾಸ್ತ್ರಗಳ ತಯಾರಿಕೆಗೆ ಅನುವಾಯಿತು.

ಕಾಲ ಉರುಳಿದಂತೆಲ್ಲ ಸಮಾಜವೂ ವಿಸ್ತಾರಗೊಂಡು ಜೀವನ ವೈಖರಿ ಜಟಿಲಗೊಂಡಿತು. ಧಾರ್ಮಿಕ ಕಾರಣಗಳಿಂದ ಆರ್ಯರಲ್ಲಿ ಜಗಳ ಪ್ರಾರಂಭವಾಯಿತು. ಒಗ್ಗಟ್ಟಿಲ್ಲದೆ ಹೋದದ್ದರಿಂದ ಜನಾಂಗ ಶಿಥಿಲಗೊಂಡಿತು. ಹಿಂದಿನ ತೇಜಸ್ಸು, ಭಾವೈಕ್ಯ ಮಾಯವಾದುವು. ಇದಲ್ಲದೆ ಆರ್ಯರಲ್ಲಿ ಕೆಲವರು ತಾವು ಸೂರ್ಯನ ವಂಶಸ್ಥರೆಂದೂ ಮತ್ತೆ ಕೆಲವರು ತಾವು ಚಂದ್ರನ ವಂಶಸ್ಥರೆಂದೂ ಹೇಳಿಕೊಳ್ಳಲಾರಂಭಿಸಿದರು. ಆರ್ಯೇತರ ಜನರೊಡನೆ ಕೆಲವರು ಬೆರೆತುಹೋದರು. ಇವೆಲ್ಲದರ ಪರಿಣಾಮವಾಗಿ ಕ್ರಿ. ಪೂ. 500ರ ವೇಳೆಗೆ ಆರ್ಯರು ಒಂದು ಬೇರೆಯ ಜನಾಂಗವಾಗಿ ಉಳಿಯಲಿಲ್ಲ.

ಆರ್ಯರಲ್ಲಿ ಕ್ರಮೇಣ ವರ್ಣ ಪದ್ಧತಿ ಪ್ರಚುರವಾಯಿತು.

ವೇದ–ಉಪನಿಷತ್ತುಗಳು, ರಾಮಾಯಣ, ಮಹಾಭಾರತ ಆ ಕಾಲದ ಕೃತಿಗಳು. ಆರ್ಯರನ್ನು ಕುರಿತ ನಿಜ ಚಿತ್ರ ಮೂಡಿಬರುವುದು ಆ ಕೃತಿಗಳಿಂದಲೇ.

ಭಾರತದ ಸಂಸ್ಕೃತಿಗೆ ಆರ್ಯರ ಕೊಡುಗೆ ಅಪಾರವಾಗಿದೆ. ಪ್ರಾಚೀನ ಜನಾಂಗಗಳಲ್ಲಿ ಅತ್ಯಂತ ಸುಸಂಸ್ಕೃತರಾಗಿದ್ದವರು ಆರ್ಯರು. ಅವರ ಕಾರ್ಯನಿಷ್ಠೆ ಮತ್ತು ಶೋಧಕ ಪ್ರವೃತ್ತಿ ಅನುಕರಣೀಯವಾಗಿದ್ದುವು.

## ಆರ್ಮ್‌ಸ್ಟ್ರಾಂಗ್—ಆಲ್ಡ್ರಿನ್—ಕಾಲಿನ್ಸ್

1969 ಜುಲೈ 21 !

ಮನುಷ್ಯನ ಚರಿತ್ರೆಯಲ್ಲಿ—ಏಕೆ, ವಿಶ್ವದ ಇತಿಹಾಸದಲ್ಲಿ—ಮರೆಯಲಾಗದ್ದು. ಅದು, ಒಂದು ಗ್ರಹದ ಮೇಲಿನ ಜೀವಿಗಳು ಇನ್ನೊಂದು ಉಪಗ್ರಹದ ಮೇಲೆ ಕಾಲಿಟ್ಟ ದಿನ. ಮನುಷ್ಯ ಚಂದ್ರನ ನೆಲದ ಮೇಲೆ ನಿಂತ ದಿನ.

### ಆರ್ಮ್‌ಸ್ಟ್ರಾಂಗ್, ನೀಲ್

ಚಂದ್ರಉಪಗ್ರಹದಲ್ಲಿ ಪ್ರಪ್ರಥಮ ಹೆಜ್ಜೆಯೂರಿದ ಮಾನವ ಅಮೆರಿಕದ ಆರ್ಮ್‌ಸ್ಟ್ರಾಂಗ್.

ಅಮೆರಿಕದ ಗಗನನೌಕೆ ಅಪೊಲೊ 11ರ ನಾಯಕನಾದ ಆರ್ಮ್‌ಸ್ಟ್ರಾಂಗ್ ಚಂದ್ರನ ಮೇಲಿಳಿದು ಮಾನವನ ಸಾಹಸಕಥೆಯ ಉಜ್ವಲ ಪುಟವನ್ನು ಬರೆದ.

1930ರಲ್ಲಿ ಅಮೆರಿಕದ ಒಹೈಓನಲ್ಲಿನ ವಪಕೋನೇಟಾ ಎಂಬ ಚಿಕ್ಕ ಪಟ್ಟಣದಲ್ಲಿ ಆರ್ಮ್‌ಸ್ಟ್ರಾಂಗನ ಜನನ. ಒಂಬತ್ತನೆಯ ವಯಸ್ಸಿನಲ್ಲೇ ವಿಮಾನದ ಗೀಳು ಆರಂಭವಾಯಿತು. ವಿಮಾನ ನಡೆಸುವುದರಲ್ಲಿ ತರಬೇತಿ ಹೊಂದಿ ಹದಿನಾರನೆಯ ವಯಸ್ಸಿಗೇ ವಿಮಾನ ಚಾಲನೆಗೆ ಅನುಮತಿ ಪತ್ರ ಪಡೆದ. ಅಮೆರಿಕದ ಪರ್ಡ್ಯೂ ವಿಶ್ವವಿದ್ಯಾನಿಲಯದಲ್ಲಿ ವಾಯುಯಾನ ವಿಜ್ಞಾನದ ಬಗೆಗೆ ಎರಡು ವರ್ಷ ಅಧ್ಯಯನ ನಡೆಸಿ ಪದವೀಧರನಾದ. ಅನಂತರ ವಾಯುಯಾನ ಶಿಕ್ಷಣಕ್ಕಾಗಿ ಪೆನ್ಸ್‌ಕೋಲ ಎಂಬಲ್ಲಿಗೆ ಹೋದ. ಇಪ್ಪತ್ತೊಂದನೆಯ ವಯಸ್ಸಿನಲ್ಲಿ ಕೊರಿಯ ಯುದ್ಧದಲ್ಲಿ (1948—51) ಭಾಗವಹಿಸಿದ. ವಿಮಾನ ಹಾರಾಟ ಸಮಯದಲ್ಲಿ ಆತ ಎದುರಿಸಿದ ಆತಂಕ, ಆಕಸ್ಮಿಕಗಳು ನೂರಾರು. ಅಂಥ ಸಂದರ್ಭಗಳಲ್ಲಿ ತೋರಿಸಿದ ಧೈರ್ಯಕ್ಕಾಗಿ ಮೂರು ವಾಯು ಪದಕಗಳು ಲಭಿಸಿದುವು. ಅಮೆರಿಕದ ನಾಸಾ ಸಂಸ್ಥೆಯಲ್ಲಿ ವಾಯುಯಾನ ಸಂಶೋಧನಾ ಚಾಲಕನ ಹುದ್ದೆ ದೊರೆಯಿತು.

ಆರ್ಮ್‌ಸ್ಟ್ರಾಂಗ್ ಪ್ರಪಂಚದಲ್ಲೇ ಅತ್ಯಧಿಕ ವೇಗದಿಂದ ಹಾರಾಟ ನಡೆಸುವ ಎಕ್ಸ್–15 ರಾಕೆಟ್ ವಿಮಾನವನ್ನು ಅನೇಕ ಬಾರಿ ನಡೆಸಿದ್ದಾನೆ. ಅವನ ಜೀವ ಸಾವಿನ ಬಾಗಿಲನ್ನು ತಟ್ಟಿ ಹಿಂದಿರುಗಿ ಬಂದಿರುವುದು ಎಷ್ಟು ಸಲವೊ. 1966 ಮಾರ್ಚ್ ತಿಂಗಳಲ್ಲಿ ಅಮೆರಿಕದ ಜೆಮಿನಿ–8 ರಾಕೆಟ್ಟಿನ ಪ್ರಧಾನ ಚಾಲಕನಾಗಿದ್ದ ಸಮಯ. ಭೂಕಕ್ಷೆಯಲ್ಲಿ ಸುತ್ತುತ್ತಿದ್ದ ಅಜೀನಾ ರಾಕೆಟ್ ಗುರಿವಾಹನವನ್ನು ಗುರುತಿಸಿ, ಮೊದಲ ಬಾರಿಗೆ ಕೂಡಿಕೆಯನ್ನು ಆರ್ಮ್‌ಸ್ಟ್ರಾಂಗ್ ಸಾಧಿಸಿದ. ಆದರೆ ಜೆಟ್ ನೂಕುಯಂತ್ರದಲ್ಲಿ ವಿದ್ಯುತ್ ದೋಷ ಉಂಟಾಗಿ ನಡೆಸುತ್ತಿದ್ದ ವಾಹನದ ಮೇಲಿನ ಹತೋಟಿ ತಪ್ಪಿತು.

ವಾಹನ ಬೆಂಕಿಯನ್ನುಗುಳುತ್ತಾ ಗಿರಗಿರನೆ ಸುತ್ತತೊಡಗಿತು. 160 ಕಿಲೊ ಮೀಟರು ಎತ್ತರದಲ್ಲಿ. ಆರ್ಮ್‌ಸ್ಟ್ರಾಂಗ್ ಧೃತಿಗೆಡಲಿಲ್ಲ. ಯಾನವನ್ನು ಮೊಟಕುಗೊಳಿಸಿ ವಾಹನವನ್ನು ಹತೋಟಿಗೆ ತಂದುಕೊಂಡು ಭೂಮಿಗೆ ಮರಳಿದ. ಈ ಘಟನೆ ಆರ್ಮ್‌ಸ್ಟ್ರಾಂಗ್‌ನಲ್ಲಿ ಹುದುಗಿದ್ದ ಧೈರ್ಯ, ಸಮಯ ಸ್ಫೂರ್ತಿ, ಅದ್ಭುತ ಕೌಶಲಗಳನ್ನು ಬೆಳಕಿಗೆ ತಂದಿತು. ಅಮೆರಿಕದ ಅಂತರಿಕ್ಷ ವಿಜ್ಞಾನ ಸಂಸ್ಥೆಯ ಆಕ್ಟಿವ್ ಛಾನ್ಯೂಟ್ ಬಹುಮಾನವನ್ನು ಆರ್ಮ್‌ಸ್ಟ್ರಾಂಗ್ ಆ ವರ್ಷ ಗಳಿಸಿದ.

1969 ಜುಲೈ 18. ಚಂದ್ರನ ಮೇಲೆ ಪ್ರಥಮ ಮಾನವರನ್ನು ಇಳಿಸುವ ಸಲುವಾಗಿ ಅಪೋಲೊ 11ರ ಯಾತ್ರೆ ಆರಂಭವಾಯಿತು. ಕನಸಾಗಿದ್ದ ಚಂದ್ರನನ್ನು ನನಸಾಗಿ ಮಾಡಿದ ಕೀರ್ತಿ ಆರ್ಮ್‌ಸ್ಟ್ರಾಂಗ್ ಮತ್ತು ಸಂಗಡಿಗರದು. ಈ ಸಾಹಸಕ್ಕಾಗಿ ಗಾಲ್‌ಬರ್ಟ್ ಅಂತರ ರಾಷ್ಟ್ರೀಯ ವೈಮಾನಿಕ ಬಹುಮಾನ ಆರ್ಮ್‌ಸ್ಟ್ರಾಂಗ್‌ಗೆ ದೊರೆಯಿತು.

### ಆಲ್ಡ್ರಿನ್ ಎಡ್ವಿನ್

ಚಂದ್ರನ ಮೇಲೆ ಕಾಲೂರಿದ ದ್ವಿತೀಯ ಮಾನವ ಅಮೆರಿಕದ ಆಲ್ಡ್ರಿನ್ ಎಡ್ವಿನ್. ಅಪೊಲೊ 11ರ ಚಂದ್ರಕೋಶದ ಚಾಲಕನಾಗಿದ್ದ ಆಲ್ಡ್ರಿನ್ ವಿಮಾನಯಾನ ಮತ್ತು ವ್ಯೋಮ ಹಾರಾಟದಲ್ಲಿ ವಿಶೇಷ ಅನುಭವಿ.

1930 ಜನವರಿ 20ರಂದು ನ್ಯೂಜರ್ಸಿಯ ಮಾಂಟ್‌ಕ್ಲೈರ್ ಪಟ್ಟಣದಲ್ಲಿ ಹುಟ್ಟಿದ ಆಲ್ಡ್ರಿನ್ನನಿಗೆ ಬಾಲ್ಯದಿಂದಲೂ ವಿಮಾನಗಳನ್ನು ಕಂಡರೆ ಬಹಳ ಆಸೆ ಹಾಗೂ ಆಸಕ್ತಿ. ಬಲು ಕಟ್ಟುನಿಟ್ಟಿನ ವಿದ್ಯಾರ್ಥಿ, ಒಳ್ಳೆಯ ಕ್ರೀಡಾಪಟುವೂ ಹೌದು. ಪ್ರೌಢಶಾಲೆಗೆ ಕಾಲಿಡುವ ಮೊದಲೇ ವಿಮಾನ ಚಾಲಕನಾಗಬೇಕೆಂದು ಈತ ನಿರ್ಧರಿಸಿದ್ದ. ಕೊರಿಯಾ ಯುದ್ಧದಲ್ಲಿ (1948–51) ಅತ್ಯಂತ ಶಕ್ತಿಯುತವಾದ ಮಿಗ್ ವಿಮಾನಗಳನ್ನು ಹೊಡೆದುರುಳಿಸಿದ್ದ. ಅಮೆರಿಕದ ವಿಮಾನ ಶಿಕ್ಷಣ ಶಾಲೆಯಿಂದ 1951ರಲ್ಲಿ ಪದವೀಧರನಾದ.

ತೀವ್ರವಾದ ಕುತೂಹಲ, ಸಾಹಸ ಪ್ರವೃತ್ತಿ ಆಲ್ಡ್ರಿನ್‌ನನ್ನು ವ್ಯೋಮಯಾತ್ರಿಯನ್ನಾಗಿ ಮಾಡಿದುವು. 1966ರ ನವೆಂಬರ್‌ನಲ್ಲಿ ಅಮೆರಿಕ ನಡೆಸಿದ ಜೆಮಿನಿ 12 ಅಂತರಿಕ್ಷ ನೌಕೆಯಲ್ಲಿ ಸಹಚಾಲಕನಾಗಿ ನಾಲ್ಕು ದಿನಗಳಲ್ಲಿ 59 ಸಲ ಭೂಮಿಯನ್ನು ಸುತ್ತಿದ. ಗಗನನೌಕೆಯ ತೆರೆದ ಕಿಂಡಿಯಲ್ಲಿ ನಿಂತು 200 ಮಿನಿಟುಗಳವರೆಗೆ ಭೂಮಿಯ ಛಾಯ ಚಿತ್ರಗಳನ್ನು ತೆಗೆದ. ಅನಂತರ ನೌಕೆಯಿಂದ ಹೊರಬಂದು ಐದೂವರೆ ಗಂಟೆಗಳಷ್ಟು ಕಾಲ ವ್ಯೋಮದಲ್ಲಿ ಸಂಚರಿಸಿ ಹೊಸ ದಾಖಲೆಯನ್ನು ಸ್ಥಾಪಿಸಿದ. ಅವನು ವ್ಯೋಮದಿಂದ ತೆಗೆದ ಛಾಯಚಿತ್ರಗಳಲ್ಲಿ ಸೂರ್ಯಗ್ರಹಣದ ಚಿತ್ರಗಳು ಅಪೂರ್ವವಾದುವು. ಏಕೆಂದರೆ ಯಾವಾಗಲೂ ನಮಗೆ ಲಭ್ಯವಾಗುವುದು ಭೂಮಿಯಿಂದ ತೆಗೆದ ಚಿತ್ರಗಳೇ.

ಅಪೊಲೊ 11ರ ಅಪೂರ್ವ ಸಾಧನೆಗಾಗಿ ಗಾಲ್‌ಬರ್ಟ್ ಅಂತರ ರಾಷ್ಟ್ರೀಯ ವೈಮಾನಿಕ ಬಹುಮಾನವನ್ನು ಆರ್ಮ್‌ಸ್ಟ್ರಾಂಗ್‌ನೊಡನೆ ಈತನೂ ಪಡೆದ.

ವ್ಯೋಮ ವಿಜ್ಞಾನವನ್ನು ಕುರಿತು ಬರೆಯಬಲ್ಲ ಕೆಲವೇ ಆಕಾಶ ಯಾತ್ರಿಗಳಲ್ಲಿ ಇವನು ಒಬ್ಬ. 'ಆರ್ಬಿಟಲ್ ಮೆಕಾನಿಕ್ಸ್' ವಿಷಯ ಪ್ರೌಢ ಪ್ರಬಂಧವನ್ನು ಬರೆದ ಡಾಕ್ಟರೇಟ್ ಪಡೆದಿದ್ದಾನೆ (1963).

### ಕಾಲಿನ್ಸ್, ಮೈಕೆಲ್

ಮಾತಿಗೆ ಮೊದಲು ನಗೆಮಿಂಚು. ಯಾವಾಗಲೂ ಹಸನ್ಮುಖಿ. ಇ
ಅಮೆರಿಕದ ವ್ಯೋಮಯಾತ್ರಿ ಮೈಕೆಲ್ ಕಾಲಿನ್ಸನ ವ್ಯಕ್ತಿತ್ವದಲ್ಲಿ ಎದ
ಕಾಣುವ ಗುಣ.

1931ರ ಅಕ್ಟೋಬರ್ 31ರಂದು ಇಟಲಿಯ ರೋಮ್ ನಗರದ
ಅಮೆರಿಕನ್ ದಂಪತಿಗೆ ಮೈಕೆಲ್ ಕಾಲಿನ್ಸ್ ಜನಿಸಿದ. ಈತನ ಹಿರಿಯರ
ಅನೇಕರು ಸೈನ್ಯದಲ್ಲಿದ್ದರು. ಇವನ ತಂದೆ ಸಹ ಸೈನ್ಯದಲ್ಲಿ ಮೇಜ
ಜನರಲ್ ಆಗಿದ್ದ.

ಅಮೆರಿಕದ ವೆಸ್ಟ್ ಪಾಯಿಂಟ್ ವಿಮಾನ ಶಿಕ್ಷಣ ಶಾಲೆಯಲ್ಲಿ ಅಭ್ಯ
1952ರಲ್ಲಿ ಪದವಿಗಳಿಸಿದ. ವಾಯುಪಡೆಗೆ ಸೇರಿ ಅನೇಕ ಯು
ವಿಮಾನಗಳನ್ನು ನಡೆಸಿದ್ದಾನೆ, 1966ರ ಜೆಮಿನಿ 10 ಅಂತರಿಕ್ಷ ನೌಕ
ಸಹಚಾಲಕನಾಗಿದ್ದ. ಕಾಲಿನ್ಸ್ ತನ್ನ ನೌಕೆಯಿಂದ ಹೊರಬಾದು ಅಜೀ
ದಲ್ಲಿದ್ದ ಉಲ್ಕೆ ಸಂಗ್ರಹಣೆಯ ಪೆಟ್ಟಿಗೆಯನ್ನು ತೆಗೆದುಕೊಂಡು ತ
ನೌಕೆಗೆ ಹಿಂದಿರುಗಿದ. ಕಕ್ಷೆಯನ್ನು ಬದಲಿಸಲು ನೌಕೆಯನ್ನು 286 ಕಿಲ
ಮೀಟರುಗಳೆತ್ತರಕ್ಕೆ ಒಯ್ದು ದಾಖಲೆಯನ್ನು ಸ್ಥಾಪಿಸಿದ ಧೀರನೀ
ಅಂತರಿಕ್ಷ ನಡಿಗೆಯನ್ನು ಸಹ ಇವನು ಎರಡು ಬಾರಿ ಕೈಗೊಂಡಿದ್ದ.

ಅಪೊಲೊ 11ರ ಅಂತರಿಕ್ಷ ನೌಕಾ ಯಾತ್ರೆಯಲ್ಲಿ ಕಾಲಿನ್ಸ್ ಪಾಲ್ಗೊಂ
ಚಂದ್ರನ ಮೇಲೆ ಇವನು ಕಾಲಿಡಲಿಲ್ಲ, ನಿಜ; ಆದರೆ ಇವನ ಕೊಡುಗೆಯ
ಅಮೂಲ್ಯ. ಚಂದ್ರನ ಮೇಲೆ ಇಳಿದು ಮತ್ತೆ ಏರಿಬಂದ ಚಂದ್ರಕೋ
ಸುರಕ್ಷಿತವಾಗಿ ಮಾತೃನೌಕೆಯನ್ನು ಕೂಡಿಕೊಂಡು, ತನ್ನ ಸಂಗಾತಿಗಳ
ಮಾತೃ ನೌಕೆಯನ್ನು ಪ್ರವೇಶಿಸುವುದಕ್ಕೆ ಅನುವು ಮಾಡಿಕೊಟ್ಟ.

## ಆರಾಧನೆ

ದಹೋಮಿ ಆಫ್ರಿಕದ ಒಂದು ರಾಜ್ಯ. ಅಲ್ಲಿ ಜನರಿಗೆ ಊಟ ವಸ
ಸೌಕರ್ಯ ಇಲ್ಲದಿದ್ದರೂ ಪ್ರತಿಯೊಂದು ಹೆಬ್ಬಾವಿಗೂ ಇರಲು ಸುಂದರ
ವಾದ ಮನೆ, ತಿನ್ನುವುದಕ್ಕೆ ಪುಷ್ಟಿಕರ ಆಹಾರ ಒದಗಿಸಲೇ ಬೇಕು
ಸರ್ಪರಾಜನ ವಾಸಸ್ಥಾನದ ಸುತ್ತಲೂ ಹೂಗಿಡಗಳ ತೋಟ. ದಹೋ
ವಿಷಯ ಪ್ರಜೆಗೆ ಎಲ್ಲಾದರೂ ಒಂದು ಹೆಬ್ಬಾವಿನ ದರ್ಶನವಾದರೆ ಸಾಕು
ಆತ ತಕ್ಷಣವೇ ಅದಕ್ಕೆ ಸಾಷ್ಟಾಂಗ ನಮಸ್ಕಾರ ಮಾಡುತ್ತಾನೆ; ತಂದೆ, ರಕ್ಷ
ಎಂದು ಸಂಬೋಧಿಸುತ್ತಾನೆ.

ಉಗಾಂಡದ ಸರ್ಪಗೃಹದಲ್ಲಿ ಬಹಳ ದೊಡ್ಡ ಹೆಬ್ಬಾವು ಇದೆ. ಅದ
ಜೊತೆ ಇರುವ ಉಳಿದ ಹಾವುಗಳಿಗೆ ಅದೇ ರಾಜ. ಅಷ್ಟೇಕೆ, ಊರಿಗೆಲ್ಲ
ಅದೇ ನಿಜವಾದ ರಾಜ. ಊರಿನ ಜನರೂ ನಾಯಕರೂ ಸರ್ಪಗೃಹಕ್ಕೆ
ಹೋಗಿ ಭಯಭಕ್ತಿಗಳಿಂದ ಹಾಲು, ಮದ್ಯ ಮಾಂಸಗಳ ನೈವೇದ್ಯ
ಅರ್ಪಿಸುತ್ತಾರೆ. ಅಲ್ಲದೆ ಹಸು, ಎಮ್ಮೆ, ಕುರಿ ಮೇಕೆಗಳನ್ನು ಸರ್ಪ
ಗೃಹದೊಳಕ್ಕೆ ತಳ್ಳುತ್ತಾರೆ—ಸರ್ಪ ದೇವತೆಗಳಿಗೆ ಬಲಿಯಾಗಿ. ದೇ
ರಾಜ ಅಥವಾ ನಾಯಕ ಸರ್ಪಾರಾಧನೆಯನ್ನು ಸರಿಯಾಗಿ ನಡೆಸದಿದ್ದ
ದೇಶ ಕ್ಷಾಮಕ್ಕೆ ಈಡಾಗುವುದೆಂಬುದು ಅಲ್ಲಿಯ ಜನರ ನಂಬಿಕೆ.

ಮನುಷ್ಯ ತನಗಿಂತ ಪ್ರಬಲವಾದ ಶಕ್ತಿಯಿದೆ ಎಂದು ಭಾವಿಸಿ ಅದ
ತನ್ನ ಭಯವನ್ನೋ, ಭಕ್ತಿಯನ್ನೋ ತೋರಿಸುವ ರೀತಿಯೇ ಆರಾ

ರಾಧನೆ

ಸೃಷ್ಟಿಯ ವೈಚಿತ್ರ್ಯಗಳನ್ನು ಕಂಡು ಬೆರಗಾದ ಮಾನವ, ತನ್ನ ಗ್ರಹಿಕೆಗೆ ಾರಿದ ಶಕ್ತಿಗಳನ್ನು ಭಯ ಭಕ್ತಿಯಿಂದ ಆರಾಧಿಸಲಾರಂಭಿಸಿದ.

ಭೂಮಿ, ಆಕಾಶ, ಗಾಳಿ, ನೀರು, ಬೆಂಕಿ, ಗುಡುಗು, ಸಿಡಿಲು, ಂಚು, ಸಮುದ್ರ, ಕಾನನ, ಬೆಟ್ಟ, ಎಲ್ಲವೂ ಆರಾಧನೆಗೆ ಅರ್ಹ, ಇವು ಂದೊಂದರಲ್ಲಿಯೂ ಒಬ್ಬ ದೇವತೆ ಇದ್ದಾನೆ ಎಂಬ ನಂಬಿಕೆ ಪ್ರಾಚೀನ ಾನವನಿಗೆ. ಅಲ್ಲದೆ ತನ್ನ ಜೀವನಕ್ಕೆ ಸಹಾಯ ಮಾಡುವ ಎಲ್ಲವನ್ನೂ ತ ಆರಾಧಿಸಲಾರಂಭಿಸಿದ.

ಈಜಿಪ್ಟಿನವರು ನೀಲಾಕಾಶಕ್ಕೂ ನೈಲ್ ನದಿಗೂ ಪೂಜೆ ಸಲ್ಲಿಸಿದರು. ಜಿಪ್ಟಿನಲ್ಲಿ ಆರಾಧನೆಗೆ ಅರ್ಹವಾದ ಅತ್ಯಂತ ಪುರಾತನ ವಸ್ತು ಬಹುಶಃ ಂದ್ರ. ಅತ್ಯಂತ ಪ್ರಮುಖನಾದವನು ಸೂರ್ಯ. ಸೂರ್ಯನನ್ನು ಷ್ಟಿಗೆ ಕಾರಣನೆಂದು 'ರಾ' ಎಂಬ ಹೆಸರಿನಿಂದ ಆರಾಧಿಸುತ್ತಿದ್ದರು. ೂರ್ಯಾರಾಧನೆ ಪ್ರಪಂಚದ ಹಲವು ಭಾಗಗಳಲ್ಲಿ ಪ್ರಾಚೀನ ಕಾಲದಿಂದ ಾಢಿಯಲ್ಲಿತ್ತು. ಮನುಷ್ಯನಿಗೆ ಬೆಳಕು, ಶಾಖ ನೀಡುವ ಸೂರ್ಯ, ದಯಿಸುವಾಗ ಮುಳುಗುವಾಗ ಅಸಾಧಾರಣ ವೈಭವವನ್ನು ಮೆರೆದು ಕಾಶವನ್ನೆಲ್ಲ ರಂಗುಗೊಳಿಸುವ ಸೂರ್ಯ ಮನುಷ್ಯನಿಗೆ ಶಕ್ತಿಯ ಮೂಲ ಗಿ ತೋರಿದ್ದು ಆಶ್ಚರ್ಯವಲ್ಲ. ಋತುಗಳ ಬದಲಾವಣೆಗೆ ಸೂರ್ಯ. ರಣ. ಬೆಳೆ ಅವನ ವರ ಎಂಬುದು ಅರಿವಾದಂತೆ ಅವನಲ್ಲಿ ಭಯಭಕ್ತಿ ಚ್ಚಿದ್ದು ಸಹಜ. ಸೂರ್ಯ ಲೋಕದ ತಂದೆ, ಭೂಮಿ ಅವನ ಹೆಂಡತಿ-ೋಕದ ತಾಯಿ ಎನ್ನುವ ಭಾವನೆ ಪ್ರಪಂಚದ ಹಲವು ಗುಂಪುಗಳಲ್ಲಿ ಡು ಬರುತ್ತದೆ.

ಸೂರ್ಯಚಂದ್ರರು ಸಾಗುವುದು ಆಕಾಶದಲ್ಲಿ, ಮೋಡಗಳ ಮೆರ ೆಗೆಯೂ ಅಲ್ಲಿಯೇ. ಅಲ್ಲೇ ಮಿಂಚು ಗುಡುಗು ಸಿಡಿಲುಗಳ ರುದ್ರ ನೋಹರ ಆಟ, ಮಳೆ ಬೀಳುವುದು ಆಕಾಶದಿಂದ. ಇದರಿಂದ ಆಕಾಶದ ಾಧನೆಯೂ ಸಾಮಾನ್ಯ. ಮಂಗೋಲರ ಪರಮ ದೇವತೆ 'ತೆಂಗ್ರಿ', ಚೀನ ಲ್ಲಿ 'ತ್ರೀ', ಪರ್ಷಿಯನ್ನರಲ್ಲಿ 'ಅಹುರ' , ಇವೆಲ್ಲ ನೀಲಿ ಆಕಾಶ. ವೇದ ಲದ ಭಾರತ 'ದ್ಯಾಉಸ್' ಪಿತೃವನ್ನು (ತಂದೆ ಆಕಾಶ) ಪೂಜಿಸುತ್ತಿತ್ತು.

ಭೂಮಿಯ ಆರಾಧನೆಯೂ ಸಾಮಾನ್ಯ. ಈಗಲೂ ಭೂಮಿ ಯಿ' ಎಂಬ ಮಾತು ಬಳಕೆಯಲ್ಲಿದೆ. 'ಮ್ಯಾಟರ್' ಎನ್ನುವ ಪದಕ್ಕೂ ಟರ್' (ತಾಯಿ) ಎನ್ನುವ ಪದಕ್ಕೂ ಸಂಬಂಧವುಂಟು.

ವೇದಗಳಲ್ಲಿ ಅಗ್ನಿ, ವರುಣ, ಪೃಥ್ವಿ, ವಾಯು, ಪರ್ಜನ್ಯ, ಅಪ, ರುತು ಮೊದಲಾದ ಪ್ರಕೃತಿರೂಪಗಳ ಆರಾಧನೆಯನ್ನು ಕಾಣುತ್ತೇವೆ.

ಈಜಿಪ್ಟಿನವರು ಎತ್ತು, ಹಸು, ಬಾತು, ಮೇಕೆ, ನಾಯಿ, ಬೆಕ್ಕು, ೀಳ, ಕೋಳಿ, ಹಾವು, ಮೊಸಳೆ ಇವನ್ನು ಆರಾಧಿಸುತ್ತಿದ್ದರು. ಭಾರತ ಲ್ಲಿ ಹಸುಗಳು ಎಷ್ಟು ಸ್ವೇಚ್ಛೆಯಾಗಿ ಓಡಾಡಬಲ್ಲುವೋ ಅಷ್ಟೇ ಸ್ವೇಚ್ಛೆ ಗಿ ಈ ಪ್ರಾಣಿಗಳು ಈಜಿಪ್ಟಿನ ದೇವಾಲಯಗಳಲ್ಲಿ ಓಡಾಡುತ್ತಿದ್ದುವು. ದು ಕಾಲದಲ್ಲಿ ಯೆಹೂದ್ಯರು ಹಂದಿಯನ್ನು ಪೂಜಿಸುತ್ತಿದ್ದರು.

ನಾಗಗಳ ಆರಾಧನೆ ಆರ್ಯರಿಗಿಂತಲೂ ಹಿಂದಿನಿಂದ ಇತ್ತೆಂದು ರುತ್ತದೆ. ಪ್ರಾಚೀನರು ಪ್ರಕೃತಿಯ ಜೊತೆಗೆ ಪ್ರಾಣಿಗಳನ್ನೂ ಾಧಿಸುತ್ತಿದ್ದರು. ಪ್ರಾಣಿಗಳ ಆರಾಧನೆಯಲ್ಲಿ ಸರ್ಪಾರಾಧನೆಗೆ ಅಗ್ರ ನ. ನಾಗಪೂಜೆ ಭಾರತದಲ್ಲಿ ಈಗಲೂ ಬಹಳ ಬಳಕೆಯಲ್ಲಿದೆ. ತ್ತಗೆ ಪೂಜೆ, ಕಲ್ಲಿನ ನಾಗರಗಳ ಪ್ರತಿಷ್ಠೆ ಮಾಡುತ್ತಾರೆ. ನಾಗರಪೂಜೆ ಪಂಚದ ಹಲವು ಭಾಗಗಳಲ್ಲಿ ಕಂಡುಬರುತ್ತದೆ.



ಅಶ್ವತ್ಥ ಮರಕ್ಕೆ ಪ್ರದಕ್ಷಿಣೆ

ಭಾರತದಲ್ಲಿ ಆರಾಧನೆಗೆ ಅರ್ಹವಾದ ಇನ್ನೊಂದು ಪ್ರಾಣಿ ಗೋವು. ಹಿಂದೂ ಸಂಸ್ಕೃತಿಯಲ್ಲಿ ಎತ್ತು ಈಶ್ವರನ ವಾಹನವಾದ ನಂದಿಯಾಗಿ. ಗರುಡ ವಿಷ್ಣುವಾಹನವಾಗಿ. ಆನೆ ಗಣಪತಿಯಾಗಿ. ಕಪಿ ಆಂಜನೇಯ ನಾಗಿ. ಹಾವು ಆದಿಶೇಷನಾಗಿ ಆರಾಧನೆಗೆ ಅರ್ಹವಾಗಿವೆ.

ಭಾರತೀಯರಲ್ಲನೇಕರು ಅಶ್ವತ್ಥ. ಶಮಿ. ತುಳಸಿ ಮೊದಲಾದ ಮರ ಗಿಡಗಳನ್ನು ಪೂಜಿಸುತ್ತಾರೆ. ಈಜಿಪ್ಟಿನವರಿಗೂ ಮರಗಿಡಗಳು ಆರಾಧನೆಗೆ ಯೋಗ್ಯವಾದ ವಸ್ತುಗಳಾಗಿದ್ದುವು. ಮರುಭೂಮಿಯ ಮಧ್ಯೆ ತಂಪನ್ನೀ ಯುತ್ತಿದ್ದ ತಾಳೆಮರಕ್ಕೂ ಪೂಜೆಸಲ್ಲಿಸುತ್ತಿದ್ದರು. ನೈಲ್ ನದಿಯ ದಡದ ಮೇಲೆ ಈರುಳ್ಳಿಯೂ ಪೂಜೆಗೆ ಅರ್ಹವಾದ ತರಕಾರಿ.

ಗಿಡಗಳು ಭೂಮಿಯಿಂದ ತಾವಾಗಿ ಮೊಳೆತು ಬರುವುದನ್ನೂ ಆಕಾಶ ದಿಂದ ಬೀಳುವ ಮಳೆ ಮತ್ತು ಗಿಡಗಳಿಗೆ ಇರುವ ಸಂಬಂಧವನ್ನೂ ಮಾನವ ನೋಡಿದಾಗಲೇ ಆಕಾಶವನ್ನೂ ಭೂಮಿಯನ್ನೂ ದೇವತೆಗಳೆಂದು ಆತ ಪೂಜಿಸತೊಡಗಿದ. ಗಿಡಮರಗಳೂ ಪೂಜೆಗೆ ಯೋಗ್ಯವೆಂದು ಅವನಿಗೆ ಕಂಡು ಬಂದುದು ಸಹಜ. ರೆಡ್ ಇಂಡಿಯನ್ನರು, ಮರಗಳ ಪೂಜೆಯನ್ನು ತಾವು ಬಿಟ್ಟುದೇ ಬಿಳಿಯ ಮನುಷ್ಯನ ಕೈಯಲ್ಲಿ ತಮಗೆ ಸೋಲಾಗಲು ಕಾರಣ ಎಂದು ಭಾವಿಸಿದರಂತೆ. ಮೊಲುಕ್ಕ ಎನ್ನುವ ದ್ವೀಪಗಳಲ್ಲಿ ಚಿಗುರುತ್ತಿದ್ದ ಗಿಡಗಳು ಗರ್ಭಿಣಿಯರೆಂದು ನಂಬಿಕೆ ಇತ್ತು; ಅವುಗಳ ಬಳಿ ಸದ್ದುಮಾಡು ವುದು, ಬೆಂಕಿ ಹೊತ್ತಿಸುವುದು ಪಾಪಕರ ಎಂಬ ಭಾವನೆ ಇತ್ತು.

ಕುಟುಂಬದ ಅಥವಾ ಪಂಗಡದ ತೀರಿಕೊಂಡ ಹಿರಿಯರಿಗೆ ಸಲ್ಲಿಸುವ ಪೂಜೆಗೆ ಗೌರವಕ್ಕೆ ಪೂರ್ವಜರ ಪೂಜೆ ಎನ್ನುತ್ತಾರೆ. ಕನಸುಗಳಲ್ಲಿ ಸತ್ತವರನ್ನು ಕಂಡಾಗ ಅವರಿನ್ನೂ ಬದುಕಿದ್ದಾರೆ ಎಂಬ ನಂಬಿಕೆ ಬಂದಿತು. ಅವರ ಪೂಜೆ ಪ್ರಾರಂಭವಾಯಿತು. ಒಂದು ಪಂಗಡದವರು ತೀರಿಕೊಂಡವರಿಗೆ ಪ್ರಾರ್ಥನೆಗಳನ್ನು ಸಲ್ಲಿಸಲು ಒಂದು ಪದ್ಧತಿಯನ್ನು ಇಟ್ಟುಕೊಂಡಿದ್ದರು. ಒಬ್ಬ ಗುಲಾಮನಿಗೆ ಆ ಪ್ರಾರ್ಥನೆಯನ್ನು ತಿಳಿಸಿ, ಅವನ ತಲೆಯನ್ನು ಕತ್ತರಿಸುತ್ತಿದ್ದರು –ಅವನು ಸತ್ತವರ ಲೋಕಕ್ಕೆ ಹೋಗಿ ಆ ಪ್ರಾರ್ಥನೆಯನ್ನು ತಿಳಿಸಲಿ ಎಂದು !

ಕ್ರಮೇಣ ದೇವತೆಗಳಿಗೆ, ತನ್ನ ಗುಣಗಳನ್ನೂ ಮನುಷ್ಯ ಆರೋಪಿಸಿದ. ಹಲವು ಪ್ರಾಚೀನ ನಾಗರಿಕತೆಗಳ ಪೌರಾಣಿಕ ಕಥೆಗಳಲ್ಲಿ ಮನುಷ್ಯರು ಮತ್ತು ದೇವತೆಗಳ ಒಡನಾಟವಿದೆ ; ಕಾದಾಟವಿದೆ. ಮನುಷ್ಯನ ಕೈಯಲ್ಲಿ ದೇವತೆಗಳು ಸೋಲನ್ನನುಭವಿಸುತ್ತಾರೆ. ಮಹಾಭಾರತ ಕಥೆಯಲ್ಲಿ, ಸ್ಕ್ಯಾಂಡಿನೇವಿಯದ ಪೌರಾಣಿಕ ಕಥೆಗಳಲ್ಲಿ, ಗ್ರೀಕರ ಕಥೆಗಳಲ್ಲಿ ಇದನ್ನು ಕಾಣುತ್ತೇವೆ. ದೇವತೆಗಳಿಗೆ ಸಂತೋಷ, ಕೋಪ, ದುಃಖ, ಮದುವೆ, ಮಕ್ಕಳು ಎಲ್ಲವನ್ನೂ ಆರೋಪಿಸುತ್ತಾನೆ ಮನುಷ್ಯ. ಪೂಜೆಯಿಂದ ಮಾತ್ರವಲ್ಲದೆ ಬಲಿಯಿಂದಲೂ ದೇವತೆಗಳನ್ನು ತೃಪ್ತಿಪಡಿಸಬಹುದು, ತಮಗೆ ಬೇಕಾದ್ದನ್ನು ಪಡೆಯಬಹುದು ಎನ್ನುವ ನಂಬಿಕೆಯೂ ಮನುಷ್ಯನಿಗುಂಟು. ನರಬಲಿ ಸಾಮಾನ್ಯ. ಪಾಶ್ಚಾತ್ಯರ ಆದಿಕಾವ್ಯ 'ಇಲಿಯಡ್' ನಲ್ಲಿ ವೀರರು ಬಲಿಕೊಡುವುದಾಗಿ ಹರಕೆ ಹೊರುತ್ತಾರೆ. ಹಳೆಯ ಒಡಂಬಡಿಕೆಯಲ್ಲಿ ದೇವರು ನರಬಲಿಯನ್ನು ಬಯಸಿದ ಕಥೆ ಇದೆ. ಪ್ರಾಚೀನ ಭಾರತದಲ್ಲಿ ಯಜ್ಞಯಾಗಾದಿಗಳಲ್ಲಿ ಬಲಿಕೊಡುವ ಪದ್ಧತಿ ಇದ್ದಿತು. ನರಬಲಿಯೂ ಇದ್ದಿತು ಎನ್ನುವುದನ್ನು ಶುನಶ್ಶೇಫನ ಕಥೆ ತೋರಿಸುತ್ತದೆ.

ಪ್ರಕೃತಿಯನ್ನೂ ಪಶು, ಪಕ್ಷಿ, ಪ್ರಾಣಿಗಳನ್ನೂ ಆರಾಧಿಸುತ್ತಿದ್ದ ಮಾನವ ತನ್ನಲ್ಲಿ ಮೂಡಿದ ಧಾರ್ಮಿಕ, ಆಧ್ಯಾತ್ಮಿಕ ಭಾವನೆಗಳಿಗೆ ಅನುಗುಣವಾಗಿ ಕಲ್ಲಿನಲ್ಲಿ, ಲೋಹಗಳಲ್ಲಿ ಪ್ರತಿಮೆಗಳನ್ನು ಮಾಡಲು ಆರಂಭಿಸಿದ. ಜಗತ್ತಿನ ಅನೇಕ ಧರ್ಮಗಳಲ್ಲಿ ಕಲ್ಲು ಲೋಹಗಳಿಂದ ಮಾಡಿದ ವಿಗ್ರಹಗಳ, ಪ್ರತಿಮೆಗಳ ಆರಾಧನೆಯನ್ನು ಕಾಣುತ್ತೇವೆ. ಮಾನವನ ನಾಗರಿಕತೆ, ಸಂಸ್ಕೃತಿ ಬೆಳೆದ ಹಾಗೆ ಅವನ ಭಾವನೆಗಳೂ ಬೆಳೆದುವು. ಸೃಷ್ಟಿಯ ಬಗೆಗೆ ಮಾನವ ತನ್ನ ಅಭಿಪ್ರಾಯಗಳನ್ನು ರೂಪಿಸಿದ. ಆ ಸೃಷ್ಟಿಕರ್ತನನ್ನು ಸೇರುವುದೇ ಜೀವನದ ಗುರಿ ಎಂದು ಅನೇಕ ಧರ್ಮಗಳು ಹೇಳಿದುವು. ಸೃಷ್ಟಿಕರ್ತನನ್ನು ಭಗವಂತ, ಪರಮಾತ್ಮ ಎಂದೆಲ್ಲ ವರ್ಣಿಸಿದುವು. ಕಲ್ಪನೆಗೆ ಮೀರಿದ ಈ ಶಕ್ತಿಗೆ ವಿಗ್ರಹಗಳಲ್ಲಿ, ಪ್ರತಿಮೆಗಳಲ್ಲಿ ಒಂದು ರೂಪು ಕೊಡುವ ಪ್ರಯತ್ನದಿಂದ ವಿಗ್ರಹಾರಾಧನೆ ಆರಂಭವಾಯಿತು. ವಿಗ್ರಹವಿದ್ದರೆ ಸಾಮಾನ್ಯರಿಗೆ ಅಸಾಮಾನ್ಯವಾದ ಆ ಶಕ್ತಿಯ ಬಗೆಗೆ ಚಿಂತಿಸಲು ಹೆಚ್ಚು ಅನುಕೂಲವಾಗುವುದೆಂದು ತಿಳಿದು ಜಗತ್ತಿನ ಅನೇಕ ಧರ್ಮಗಳು ಇದಕ್ಕೆ ಅನುಮತಿ ನೀಡಿದವು. ಹಿಂದೂ ಧರ್ಮದಲ್ಲೂ ಇತರ ಕೆಲವು ಧರ್ಮಗಳಲ್ಲೂ ವಿಗ್ರಹಾರಾಧನೆಯನ್ನು ಕಾಣಬಹುದು. ಮೊದಮೊದಲಿಗೆ ಬೌದ್ಧ ಧರ್ಮದಲ್ಲಿ ಆರಾಧನೆಯಾಗಲಿ ವಿಗ್ರಹಾರಾಧನೆಯಾಗಲಿ ಇರಲಿಲ್ಲ. ಮನುಷ್ಯನಿಗೇ ಹೆಚ್ಚು ಪ್ರಾಮುಖ್ಯ ಕೊಟ್ಟ ಧರ್ಮ ಬೌದ್ಧ ಧರ್ಮ. ಆದರೆ ಕ್ರಮೇಣ ಅಲ್ಲೂ ಆರಾಧನೆ, ವಿಗ್ರಹಾರಾಧನೆ ಆರಂಭವಾದುವು.

ಮಹಮದ್ ಪೈಗಂಬರರಿಗೆ ಮುಂಚೆ ಮೆಕ್ಕದ ಜನ ವಿಗ್ರಹಾರಾಧಕರಾಗಿದ್ದರು. ಇಸ್ಲಾಂ ಧರ್ಮ ಸ್ಥಾಪನೆಯಾದ ಮೇಲೆ ಅಲ್ಲಿ ವಿಗ್ರಹಾರಾಧನೆ ನಿಂತಿತು.

ಸೂರ್ಯ ಮತ್ತು ಭೂಮಿಗಳ ಪೂಜೆಯಲ್ಲಿ ಭಯದೊಡನೆ ಪ್ರೀತಿ ಬೆರೆತುದನ್ನು ಕಾಣುತ್ತೇವೆ. ಆದರೆ ಬಹು ಕಾಲ ಪೂಜೆಯ ಉದ್ದೇಶ ಭಕ್ತ ಇಷ್ಟವಾದ್ದನ್ನು ಪಡೆಯುವುದು, ಅನಿಷ್ಟದಿಂದ ತಪ್ಪಿಸಿಕೊಳ್ಳುವುದು. ದೇವತೆಗಳ ವಿಷಯದಲ್ಲಿ ಭಾರತದಲ್ಲಿ ಪ್ರಾಚೀನ ಕಾಲದಲ್ಲಿಯೇ ಸುಸಂಸ್ಕೃತ ಮನಸ್ಸಿಗೆ ಒಪ್ಪುವ ಭಾವನೆಗಳು ಬೆಳೆದಿದ್ದುವು, ಸಂಸ್ಕೃತಿ ಬೆಳೆದಂತೆ 'ನನಗೆ ಇದನ್ನು ಕೊಡು', 'ನನ್ನನ್ನು ಅದರಿಂದ ಕಾಪಾಡು' ಎಂದು ಬೇಡುವುದು ಹೋಗಿ, 'ನಿನ್ನ ಇಷ್ಟದಂತೆ ನನ್ನನ್ನು ನಡೆಸಿಕೊ' ಎಂದು ಪ್ರಾರ್ಥಿಸಲು ಪ್ರಾರಂಭಿಸುತ್ತಾನೆ ಮನುಷ್ಯ. ಮನಸ್ಸು ಇನ್ನೂ ಪರಿಪಕ್ವವಾದಂತೆ, 'ನಿನ್ನ ಬಳಿ ನಾನು ಇದ್ದರೆ ಸಾಕು, ಅದನ್ನು ಅನುಗ್ರಹಿಸು' ಎಂದು ಬೇಡುತ್ತಾನೆ. ಭಯ, ಸ್ವಾರ್ಥಗಳಿಂದ ಪ್ರಾರಂಭವಾದ ಆರಾಧನೆ ಮಾತಿಗೆ ನಿಲುಕದ ಪ್ರೇಮ, ಭಕ್ತಿ, ಸಮರ್ಪಣಭಾವಗಳವರೆಗೆ ಏರುತ್ತದೆ.

ಮಾನವ ತಾನು ಆರಾಧಿಸಲಾರಂಭಿಸಿದ ವಿಗ್ರಹಗಳಿಗಾಗಿ ಆರಾಧನಾ ಮಂದಿರಗಳನ್ನು ಕಟ್ಟಿದ. ವಿಗ್ರಹಗಳ ಆರಾಧನೆಯಿಲ್ಲದ ಧರ್ಮಗಳಲ್ಲಿ ಸರ್ವಶಕ್ತನಾದ ಭಗವಂತನ ಪ್ರಾರ್ಥನೆಗಾಗಿ ಮಂದಿರವನ್ನು ಕಟ್ಟುತ್ತಾರೆ. ವಿಗ್ರಹಾರಾಧನೆ ಇಲ್ಲದಿದ್ದರೂ ಈ ಪ್ರಾರ್ಥನಾ ಮಂದಿರವೂ ಆರಾಧನಾ ಮಂದಿರವೇ.

ದೇವಸ್ಥಾನಗಳು, ಇಗರ್ಜಿಗಳು, ಮಸೀದಿಗಳು ಎಲ್ಲವೂ ಆರಾಧನಾ ಮಂದಿರಗಳು.

ಆರಾಧನಾ ಮಂದಿರಗಳಲ್ಲಿ ಕಂಡುಬರುವ ವಾಸ್ತುಶಿಲ್ಪದ, ಶಿಲ್ಪದ ವೈಭವ ಕಲಾಕ್ಷೇತ್ರಕ್ಕೆ ಅಸಾಧಾರಣ ಕೊಡುಗೆಯಾಗಿ ಪರಿಣಮಿಸಿದೆ. ಶಿಲ್ಪಿಯೂ ಅನನ್ಯ ಭಕ್ತಿ ಭಾವದಿಂದ ತನ್ನ ಕಾರ್ಯ ಪೂರೈಸಿದನೆಂದು ಕೆಲವು ವಾಸ್ತುಶಿಲ್ಪಗಳು ಸಾರುತ್ತವೆ.

ನೋಡಿ : ಪೂರ್ವಜರ ಪೂಜೆ

## ಅಲ್ಜೀರಿಯ

ಅಲ್ಜೀರಿಯ ಆಫ್ರಿಕದ ಉತ್ತರದಲ್ಲಿ ಭೂಮಧ್ಯ ಸಮುದ್ರದ ಬಳಿ ಇರುವ ದೇಶ.

ಅಟ್ಲಾಸ್ ಪರ್ವತದ ಎರಡು ಶ್ರೇಣಿಗಳು ಅಲ್ಜೀರಿಯದಲ್ಲಿವೆ—ಟೆಲ್ ಅಟ್ಲಾಸ್ ಮತ್ತು ಸಹಾರಾ ಅಟ್ಲಾಸ್. ಟೆಲ್ ಪ್ರದೇಶ, ಎತ್ತರದ ಪ್ರಸ್ಥ ಭೂಮಿ ಮತ್ತು ಸಹಾರಾ ಪ್ರದೇಶ ಎಂದು ಪ್ರಾಕೃತಿಕ ವಿಭಾಗಗಳಿವೆ.

ಬೇಸಿಗೆ ಕಾಲದಲ್ಲಿ ಉಷ್ಣಾಂಶ ಹೆಚ್ಚು. ಚಳಿಗಾಲದಲ್ಲಿ ತಣ್ಣಗಿದ್ದು ಮಳೆ ಬೀಳುತ್ತದೆ. ಮಳೆ ಸಹಾರಾ ಪ್ರದೇಶದಲ್ಲಿ ಬಹಳ ಕಡಮೆ.

ಚಲಿಫ್ ಪ್ರಮುಖ ನದಿ. ಕೆಲವು ನದಿಗಳಲ್ಲಿ ಮಳೆ ಬಂದಾಗ ಮಾತ್ರ ನೀರಿದ್ದು, ಬೇಸಿಗೆಯಲ್ಲಿ ಅವು ಒಣಗಿ ಹೋಗುತ್ತವೆ.

ಪರ್ವತಗಳ ಮೇಲೆ ಬೆಲೆಬಾಳುವ ಮರಗಳಿರುವ ಕಾಡುಗಳಿವೆ. ಸೀಡರ್, ಕಾರ್ಕ್, ಓಕ್, ಪೈನ್ ಮರಗಳು ಹೇರಳವಾಗಿವೆ.

ಫಾಸ್ಫೇಟ್, ಕಬ್ಬಿಣ, ಸತು, ಸೀಸ, ಪಾದರಸ, ತಾಮ್ರ, ಆ್ಯಂಟಿಮನಿ, ಪೆಟ್ರೋಲಿಯಂ ಸಂಪತ್ತಿನ ಸಾಧನಗಳಾಗಿವೆ.

ವ್ಯವಸಾಯಕ್ಕೆ ಯೋಗ್ಯವಾದ ಪ್ರದೇಶ ಸ್ವಲ್ಪವಿದ್ದರೂ, ವ್ಯವಸಾಯವೇ ಪ್ರಧಾನ ವೃತ್ತಿ. ಗೋಧಿ, ಬಾರ್ಲಿ, ದ್ರಾಕ್ಷಿ, ತರಕಾರಿಗಳು, ಹತ್ತಿ, ಜಂಬೀರ ಫಲಗಳು ಅಲ್ಲಿವೆ ; ಅಂಜೂರ, ಹೊಗೆಸೊಪ್ಪು ಬೆಳೆಯುತ್ತಾರೆ.

ಬರ್ಬರರು ಅಲ್ಜೀರಿಯದ ಮೂಲನಿವಾಸಿಗಳು. ಅಲ್ಜೀರಿಯದಲ್ಲಿ ಅರಬರದೇ ಬಹುಸಂಖ್ಯೆ. ಯೂರೋಪಿನ ಜನ ತೀರ ಪ್ರದೇಶದ ಪಟ್ಟಣಗಳಲ್ಲಿ

ದ್ದಾರೆ. ಬರ್ಬರರು, ಅರಬರು ಎಲ್ಲರೂ ಮುಸಲ್ಮಾನರು. ಅರಾಬಿಕ್ ಆಡಳಿತ ಭಾಷೆ. ಫ್ರೆಂಚ್ ಸಹ ಬಳಕೆಯಲ್ಲಿದೆ.

ನೈಸರ್ಗಿಕ ಬಂದರುಗಳು ಕಡಮೆ. ರಾಜಧಾನಿ ಆಲ್ಜಿಯರ್ಸ್ ಪ್ರಮುಖ ಬಂದರು. ಇದು ಸಂಸ್ಕೃತಿ, ಕೈಗಾರಿಕೆ, ಸಾಗಾಣಿಕೆಗಳ ಕೇಂದ್ರ. ಓರಾನ್ ಮುಖ್ಯ ಬಂದರು. ಸ್ಪೇನಿನವರು ಬಹಳ ಕಾಲ ಇದ್ದುದರಿಂದ ಈಗಲೂ ಅವರ ಪ್ರಭಾವ ಇಲ್ಲಿ ಎದ್ದುಕಾಣುತ್ತದೆ. ಕಾನ್‌ಸ್ಟಂಟೈನ್ ಒಳನಾಡಿನ ನಗರ. ಈ ನಗರ ರೋಮಿನ ಕಾನ್‌ಸ್ಟಂಟೈನ್ ಚಕ್ರವರ್ತಿಯ (ಕ್ರಿ. ಪೂ. ನಾಲ್ಕನೆಯ ಶತಮಾನ) ಹೆಸರನ್ನು ಹೊತ್ತಿದೆ.

ಕ್ರಿ. ಪೂ. 1100ರಲ್ಲಿ ಫಿನೀಷಿಯನರು ಆಲ್ಜೀರಿಯ ಮತ್ತು ಕಾರ್ಥೇಜ್‌ಗಳಲ್ಲಿ ವಸಾಹತುಗಳನ್ನು ಮಾಡಿಕೊಂಡರು. ಕ್ರಿ. ಪೂ. 146ರಲ್ಲಿ ರೋಮನರು ಕಾರ್ಥೇಜನ್ನು ನಾಶಪಡಿಸಿ ಆಲ್ಜೀರಿಯವನ್ನು ವಶಪಡಿಸಿಕೊಂಡರು. ಅನಾಗರಿಕ ವ್ಯಾಂಡಾಲರು ರೋಮನ್ನರನ್ನು ಓಡಿಸಿ 429ರಲ್ಲಿ ತಮ್ಮ ಅಧಿಕಾರ ಸ್ಥಾಪಿಸಿದರು. ಆದರೆ ಬಹಳ ಕಾಲ ಆಳಲಿಲ್ಲ. 100 ವರ್ಷಗಳ ತರುವಾಯ ಬೈಜಾಂಟಿಯಂ ಸಾಮ್ರಾಜ್ಯ ವ್ಯಾಂಡಾಲರನ್ನು ಸೋಲಿಸಿತು. 600ರಲ್ಲಿ ಆಲ್ಜೀರಿಯವನ್ನು ಗೆದ್ದ ಅರಬರು ಸುಮಾರು 1000 ವರ್ಷಗಳ ಕಾಲ ಆಳಿದರು. 1830ರಲ್ಲಿ ಫ್ರೆಂಚರು ದಾಳಿ ಮಾಡಿ ಆಲ್ಜೀರಿಯವನ್ನು ಆಕ್ರಮಿಸಿಕೊಂಡರು. ಜನ ಹೋರಾಡಿದರೂ ಫಲವಾಗಲಿಲ್ಲ. ಎರಡನೆಯ ಮಹಾಯುದ್ಧದಲ್ಲಿ ಜರ್ಮನರ ವಶದಲ್ಲಿ ಸ್ವಲ್ಪ ಕಾಲವಿದ್ದು ಮತ್ತೆ ಆಲ್ಜೀರಿಯ ಮಿತ್ರ ಸೇನೆಗಳ ಕೈವಶವಾಯಿತು. ಫ್ರೆಂಚ್‌ನಾಯಕ ಜನರಲ್ ದ ಗಾಲ್ ಜರ್ಮನಿಯ ವಿರುದ್ಧ ಹೋರಾಟಕ್ಕೆ ಅದನ್ನು ತನ್ನ ಮುಖ್ಯ ಕೇಂದ್ರವನ್ನಾಗಿ ಮಾಡಿಕೊಂಡರು. 1945 ಮೇ 8ರಂದು ವಿಜಯೋತ್ಸವದ ದಿನ ಸ್ವಾತಂತ್ರ್ಯಕ್ಕಾಗಿ ಶಾಂತಿಯುತ ಪ್ರದರ್ಶನ ನಡೆದಾಗ 45,000 ಆಲ್ಜೀರಿಯನ್ನರು ಮಡಿದರು. 1954 ನವೆಂಬರ್ 1 ರಂದು ಸ್ವಾತಂತ್ರ್ಯಕ್ಕಾಗಿ ಹೋರಾಟ ಆರಂಭವಾಯಿತು. ಏಳು ವರ್ಷಗಳ ಹೋರಾಟದ ಬಳಿಕ ಆಲ್ಜೀರಿಯ ಜನತೆ ಜಯಶೀಲರಾದರು. 1962 ಜುಲೈ 3 ರಂದು ಅಹಮದ್ ಬೆನ್‌ಬೆಲ್ಲ ಪ್ರಥಮ ಅಧ್ಯಕ್ಷರಾದರು. 1965ರಲ್ಲಿ ಸೇನೆ ಬೆನ್‌ಬೆಲ್ಲರನ್ನು ಓಡಿಸಿ, ದಂಡಿನ ಅಧಿಕಾರ ಸ್ಥಾಪಿಸಿತು. ದಂಡನಾಯಕ ಬಮ್‌ದಿಯಾನಿ ಅಧ್ಯಕ್ಷರಾದರು.

| | | |
|---|---|---|
| ಖಂಡ | : | ಆಫ್ರಿಕ (ವಾಯುವ್ಯ) |
| ಅಕ್ಷಾಂಶ | : | 19°ಉ ದಿಂದ 37°05′ಉ |
| ರೇಖಾಂಶ | : | 8°40′ಪೂ ದಿಂದ 12°ಪೂ |
| ವಿಸ್ತೀರ್ಣ | : | 22,01,500 ಚ. ಕಿ. ಮೀ. |
| ಜನಸಂಖ್ಯೆ | : | 1,10,00,000 |
| ರಾಜಧಾನಿ | : | ಆಲ್ಜಿಯರ್ಸ್ |
| ಭಾಷೆ | : | ಅರಬಿ |
| ಸರಕಾರ | : | ಗಣರಾಜ್ಯ |
| ಬಾವುಟ | : | ಹಸಿರು, ಬಿಳಿ ಬಣ್ಣದ ಉದ್ದ ಪಟ್ಟೆ. ಮಧ್ಯದಲ್ಲಿ ಅರ್ಧ ಚಂದ್ರ ಮತ್ತು ನಕ್ಷತ್ರ ಕೆಂಪು ಬಣ್ಣದಲ್ಲಿ |

## ಅಲ್ಬೇನಿಯ

ಅಲ್ಬೇನಿಯ ಆಗ್ನೇಯ ಯೂರೋಪಿನಲ್ಲಿರುವ ಒಂದು ಚಿಕ್ಕ ರಾಜ್ಯ. ಏಡ್ರಿಯಾಟಿಕ್ ಸಮುದ್ರದ ದಂಡೆಯಲ್ಲಿದೆ.

ಅಲ್ಬೇನಿಯವನ್ನು ಮೂರು ಪ್ರಾಕೃತಿಕ ಭಾಗಗಳಾಗಿ ವಿಂಗಡಿಸಬಹುದು. ತೀರ ಪ್ರದೇಶ, ಬೆಟ್ಟಗಳ ನಾಡು, ಪರ್ವತಗಳು.

ತೀರ ಪ್ರದೇಶ ಮತ್ತು ಬೆಟ್ಟಗಳ ನಾಡಿನಲ್ಲಿ ಭೂಮಧ್ಯ ಹವಾಗುಣವಿದೆ. ಒಣ ಹವೆ ಬೇಸಿಗೆಯಲ್ಲಿ; ಚಳಿಗಾಲದಲ್ಲಿ ಮಳೆ. ಬೇಸಿಗೆಯಲ್ಲಿ ಮರಳನ್ನು ತೂರುವ ಮಾರುತ ಬೆಳೆಗೆ ಹಾನಿಯುಂಟು ಮಾಡುತ್ತದೆ. ಚಳಿಗಾಲದಲ್ಲಿ ಉತ್ತರ ಮಾರುತ ಕೊರೆತದ ಗಾಳಿಯನ್ನೆರಚಿ ತೊಂದರೆಯುಂಟು ಮಾಡುತ್ತದೆ. ಪರ್ವತ ಪ್ರದೇಶಗಳಲ್ಲಿ ಬೇಸಿಗೆಕಾಲದಲ್ಲಿ ತಣ್ಣಗಿರುತ್ತದೆ. ಚಳಿಗಾಲದಲ್ಲಿ ಹಿಮ ಬೀಳುತ್ತಿದ್ದು ತುಂಬಾ ಚಳಿ. ಇಲ್ಲಿ ವರ್ಷಕ್ಕೆ ಸರಾಸರಿ 406 ಸೆ.ಮೀ. ಮಳೆ ಆಗುತ್ತದೆ. ತೀರ ಪ್ರದೇಶ ಮತ್ತು ಕಣಿವೆಗಳಲ್ಲಿ ಮಾತ್ರ ವ್ಯವಸಾಯ ಸಾಧ್ಯ.

ಅಲ್ಬೇನಿಯ ಹಿಂದುಳಿದ ದೇಶ. 1938ರಲ್ಲಿ ಅಕ್ಷರಸ್ಥರ ಸಂಖ್ಯೆ ಶೇಕಡಾ 12 ಇತ್ತು. ಈಚೆಗೆ ವಿದ್ಯಾಭ್ಯಾಸ ಬೆಳೆದಿದೆ. ಭೂಮಿಯ ಒಡೆತನವನ್ನು ಕುರಿತು ಹೊಸ ಶಾಸನಗಳು ಆಗಿವೆ. ಸಕ್ಕರೆಯ ಶುದ್ಧೀಕರಣ, ಬಟ್ಟೆಗಳು, ತೈಲಗಳ ಕೈಗಾರಿಕೆಗಳಿವೆ.

ಸಮುದ್ರ ತೀರವನ್ನು ಬಿಟ್ಟರೆ ಉಳಿದ ಭಾಗ ಪರ್ವತಮಯ. ವ್ಯವಸಾಯವೇ ಇಲ್ಲಿಯ ಮುಖ್ಯ ಉದ್ಯೋಗ. ವ್ಯವಸಾಯಕ್ಕೆ ನೇಗಿಲು, ಎತ್ತಿನ ಬಂಡಿ ಮುಂತಾದ ಹಳೆಯ ಸಾಧನಗಳನ್ನೇ ಇನ್ನೂ ಬಳಸುತ್ತಾರೆ.

| | | |
|---|---|---|
| ಖಂಡ | : | ಯೂರೋಪ್ (ಆಗ್ನೇಯ) |
| ಅಕ್ಷಾಂಶ | : | 39° 38′ ಉ ದಿಂದ 42° 41′ ಉ |
| ರೇಖಾಂಶ | : | 19° 16′ ಪೂ ದಿಂದ 21° 03′ ಪೂ |
| ವಿಸ್ತೀರ್ಣ | : | 28,741 ಚ. ಕಿ.ಮೀ. |
| ಜನಸಂಖ್ಯೆ | : | ಸುಮಾರು 18,00,000 |
| ರಾಜಧಾನಿ | : | ಟಿರಾನಾ |
| ಸರಕಾರ | : | ಜನತಾ ಗಣರಾಜ್ಯ |
| ಬಾವುಟ | : | ಕೆಂಪು ಹಿನ್ನೆಲೆ; ಎರಡು ತಲೆಯುಳ್ಳ ಹದ್ದು, ಕಪ್ಪುಬಣ್ಣದಲ್ಲಿ, ಅದರ ಮೇಲೆ ಚಿನ್ನದ ಬಣ್ಣದ ಅಂಚುಳ್ಳ ಕಪ್ಪು ನಕ್ಷತ್ರ |

ಅಲ್ಬೇನಿಯ ಹಿಂದೆ ರೋಮನ್ ಸಾಮ್ರಾಜ್ಯದ ಭಾಗವಾಗಿತ್ತು. ಅನಂತರ ಹಲವು ದಾಳಿಗಳಿಗೆ ತುತ್ತಾಯಿತು. ಹದಿನೈದರಿಂದ ಇಪ್ಪತ್ತನೆಯ ಶತಮಾನದವರೆಗೆ ಟರ್ಕಿಯ ವಶವಾಯಿತು. 1912ನೆಯ ನವೆಂಬರ್ 28ರಂದು ಅಲ್ಬೇನಿಯ ಸ್ವತಂತ್ರವಾಯಿತು. 1925ರಲ್ಲಿ ಅಹಮದ್ ಜೋಗ್ ಎನ್ನುವ ನಾಯಕ ಗಣರಾಜ್ಯವನ್ನು ಘೋಷಿಸಿ, 1928ರಲ್ಲಿ ರಾಜನಾದ. ಇವನನ್ನು ಇಟಲಿಯ ಸರ್ವಾಧಿಕಾರಿ ಮುಸೋಲಿನಿ ಓಡಿಸಿದ. 1943 ರಲ್ಲಿ ಜರ್ಮನಿಯವರು ಅಲ್ಬೇನಿಯವನ್ನು ವಶಪಡಿಸಿಕೊಂಡರು. ಎರಡನೆಯ ಮಹಾಯುದ್ಧದ ಕೊನೆಯಲ್ಲಿ ಕಮ್ಯೂನಿಸ್ಟ್ ಸರಕಾರ ರಷ್ಯದ ನೆರವಿನಿಂದ ಆಡಳಿತ ವಹಿಸಿಕೊಂಡಿತು.

ಇದು ಜನತಾ ಗಣರಾಜ್ಯ. ಕಮ್ಯೂನಿಸ್ಟ್ ಪಕ್ಷದ ಪ್ರಥಮ ಕಾರ್ಯದರ್ಶಿಯ ಕೈಯಲ್ಲಿ ನಿಜವಾದ ಅಧಿಕಾರ. ರಷ್ಯದಿಂದ ನೆರವು ಪಡೆದಿದ್ದರೂ ಸ್ಟಾಲಿನ್ನನ ಅನಂತರ ರಷ್ಯದ ನಾಯಕ ರೊಡನೆ ಅಲ್ಬೇನಿಯ ಜಗಳವಾಡಿದೆ. ರಷ್ಯದಲ್ಲಿ ಈಗ ಸ್ಟಾಲಿನ್ನನ ಆರಾಧನೆ ಇಲ್ಲ; ಆದರೆ ಅಲ್ಬೇನಿಯದ ರಾಜಧಾನಿ ಟಿರಾನಾದಲ್ಲಿ ಸ್ಟಾಲಿನ್ನನ ದೊಡ್ಡ ಪ್ರತಿಮೆ ಇದೆ. ಸಹಸ್ರಾರು ಕಿಲೊಮಿಟರ್ ದೂರವಿರುವ ಕಮ್ಯೂನಿಸ್ಟ್ ಚೀನದ ಮಿತ್ರ ತಾನು ಎಂದು ಅಲ್ಬೇನಿಯ ಸಾರಿದೆ.

## ಆಸ್ತಿ

ತಿನಿಸಿಗೆ ಮುತ್ತಿಕೊಂಡ ಇರುವೆಗಳು ತುಣುಕು ತಿಂಡಿಯನ್ನು ಬಾಯಲ್ಲಿ ಕಚ್ಚಿಕೊಂಡು, ಸಿಪಾಯಿಗಳಂತೆ ಸಾಲುಗಟ್ಟಿ ಗೂಡಿಗೆ ನಡೆಯುತ್ತವೆ. ದುಂಬಿ ಹೂವಿನಿಂದ ಹೂವಿಗೆ ಹಾರಿ ಮಕರಂದವನ್ನು ಹೀರಿ ಜೇನುಗೂಡಿನಲ್ಲಿ ಶೇಖರಿಸುತ್ತದೆ. ಮುಂದೆ ಬೇಕಾಗಬಹುದಾದ ಆಹಾರವನ್ನು ಈಗಲೇ ಶೇಖರಿಸಿಡುವ ಪ್ರವೃತ್ತಿ ಇರುವೆಗಳಲ್ಲಿ, ಜೇನುನೊಣಗಳಲ್ಲಿ ಹೆಚ್ಚು. ಅದೇ ರೀತಿ ಮನುಷ್ಯರೂ ಮುಂದಿನ ಅಗತ್ಯಗಳನ್ನು ಕುರಿತು ಚಿಂತಿಸುವುದು ಸಹಜ. ಶೇಖರಿಸಿಟ್ಟ ಸಂಪತ್ತು ಆಸ್ತಿ.

ಆಹಾರ, ಬಟ್ಟೆ, ವಾಸಕ್ಕೆ ಜಾಗ, ಇವು ಜೀವನದ ಮೂಲಭೂತ ಅಗತ್ಯಗಳು. ಒಬ್ಬನಿಗೆ ಒಂದು ದಿನಕ್ಕೆ ಸಾರಜನಕಾಂಶವುಳ್ಳ ಆಹಾರ ಎಷ್ಟು ಬೇಕು ಎಂದು ಲೆಕ್ಕಹಾಕಿ, ಅದನ್ನು ಪುಟ್ಟ ಮಾತ್ರೆಯಾಗಿ ಮಾರ್ಪಡಿಸಿ ನೀಡಿದರೆ, ಅದರಿಂದ ತೃಪ್ತಿ ಸಿಗುವುದಿಲ್ಲ. ಚಳಿಯನ್ನು ತಡೆಯುವಷ್ಟು, ಮೈಮುಚ್ಚುವಷ್ಟು ಮಾತ್ರ ನಿಗದಿಯಾಗಿ ಬಟ್ಟೆಯುಡುವಂತೆ ನಿರ್ಬಂಧ ಮಾಡಿಯೂ ಫಲವಿಲ್ಲ. ತಲೆಯ ಮೇಲಿನ ಒಂದು ಸೂರಿನಡಿ ನಾಲ್ಕು ಗೋಡೆಗಳ ಮಧ್ಯೆ ಸದಾ ಕಾಲ ಜೀವಿಸಲು ಎಲ್ಲರೂ ಒಪ್ಪುವುದಿಲ್ಲ. ನಾಲಿಗೆ ಮೆಚ್ಚುವ, ಮೈಗೆ ಒಗ್ಗುವ ಆಹಾರ ಬೇಕು. ಮನಸ್ಸಿಗೊಪ್ಪುವ, ಅಂದವಾದ ಉಡುಪು ಅಗತ್ಯ. ತಮತಮಗೆ ಬೇಕಾದ ಹಾಗೆ ಗುಡಿಸಲು–ಮನೆ–ಮಹಡಿಗಳಲ್ಲಿ ವಾಸಿಸಲು ಅವಕಾಶ ಇರಬೇಕು. ಮುಂದೆ ಒದಗಬಹುದಾದ ಅಗತ್ಯಗಳನ್ನು ಪೂರೈಸುವುದಕ್ಕೋಸ್ಕರ ಆಸ್ತಿ ಅವಶ್ಯ. ವರಮಾನವನ್ನು ಶೇಖರಿಸಿ ಇಟ್ಟಾಗ ಆಸ್ತಿಯಾಗುತ್ತದೆ. ಆಸ್ತಿಯಿಂದ ಹುಟ್ಟುವಳಿ ಇದೆ. ಮನೆಯ ಬಾಡಿಗೆ, ಜಮೀನಿನ ಫಸಲು, ಠೇವಣಿಯ ಬಡ್ಡಿ–ಇವು ಆಸ್ತಿಯಿಂದ ಸಾಮಾನ್ಯವಾಗಿ ಬರುವ ಉತ್ಪತ್ತಿ.

ಜನರು ಹೊಂದಿರುವ ಆಸ್ತಿಗಳಲ್ಲಿ ಎರಡು ವಿಧ: ಸ್ಥಿರ ಆಸ್ತಿ ಮತ್ತು ಚರ ಆಸ್ತಿ. ಕಟ್ಟಡ, ಜಮೀನು, ತೋಟ ಮುಂತಾದುವು ಮಾತ್ರವೇ ಸ್ಥಿರ ಆಸ್ತಿಯಲ್ಲ. ಒಬ್ಬ ಮನುಷ್ಯ ಒಂದು ಪುಸ್ತಕವನ್ನು ಬರೆಯುತ್ತಾನೆ. ಅದನ್ನು ಅಚ್ಚುಮಾಡಿ ಹೊರಕ್ಕೆ ತರಬೇಕೆಂದು ಬಯಸುವವರು–ಪ್ರಕಾಶಕರು–ಆತನಿಗೆ ಹಣ ಕೊಡಬೇಕು. ಮೊದಲನೆಯ ಪ್ರಕಟಣೆಗೆ ಹಣ ಕೊಟ್ಟಿದ್ದರೆ, ಎರಡನೆಯ ಪ್ರಕಟಣೆಗೂ ಕೊಡಬೇಕು. ಪುಸ್ತಕದ ಒಡೆತನ ಬರೆದವನದು. ಈ ಹಕ್ಕು ಹಣ ತರುತ್ತದೆ. ಇದೊಂದು ಆಸ್ತಿ. ವಿನ್ಯಾಸ ಅಥವಾ ಮಾದರಿಯ ಏಕಸ್ವ, ಸಿದ್ಧವಸ್ತುಗಳ ಟ್ರೇಡ್ ಮಾರ್ಕ್ ಇವು ಕೂಡಾ ಆಸ್ತಿಗಳು. ಒಬ್ಬ ಮನುಷ್ಯನೊ ಒಂದು ಸಂಸ್ಥೆಯೊ ಒಂದು ಸ್ಥಳದಲ್ಲಿ ಅನೇಕ ವರ್ಷ ವ್ಯಾಪಾರ ಮಾಡಿ ಒಳ್ಳೆಯ ಹೆಸರನ್ನು ಗಳಿಸಿರಬಹುದು, ಹೆಸರಿನ ಬಲದಿಂದ ವ್ಯಾಪಾರ ಚೆನ್ನಾಗಿರುತ್ತದೆ; ಈ ಒಳ್ಳೆಯ ಹೆಸರೂ ಆಸ್ತಿಯೆ; ಇದನ್ನೂ ಮಾರಬಹುದು. ಇವನ್ನು ಪ್ರತಿಫಲ ಪಡೆದು ಇನ್ನೊಬ್ಬರಿಗೆ ವಹಿಸಬಹುದು. ವಾಹನ, ಒಡವೆ, ನಗದು ಹಣ ಇವು ಚರ ಆಸ್ತಿಗಳು. ಚರ ಆಸ್ತಿಗಳನ್ನು ಸ್ಥಿರ ಆಸ್ತಿಗಳಿಗಿಂತಲೂ ಸುಲಭವಾಗಿ ವಿಕ್ರಯಿಸಬಹುದು; ವಿನಿಮಯಗೊಳಿಸಬಹುದು. ಸ್ಥಿರ ಆಸ್ತಿ ವಂಶಪಾರಂಪರ್ಯವಾಗಿ ಒದಗಿಬರುವುದು ಸಾಮಾನ್ಯ. ಆಗಿಂದಾಗ ಅದನ್ನು ಸುವ್ಯವಸ್ಥಿತವಾಗಿ ಇಡುವುದಕ್ಕೋಸ್ಕರ ಹಣ ವೆಚ್ಚ ಮಾಡುತ್ತಿದ್ದರೆ ಸ್ಥಿರ ಆಸ್ತಿ ಶಾಶ್ವತವಾಗಿ ಹುಟ್ಟುವಳಿ ನೀಡುತ್ತಿರುತ್ತದೆ. ಚರ ಆಸ್ತಿ ಬಳಸುತ್ತಿದ್ದಂತೆ ಶೀಘ್ರವಾಗಿ ಸವೆಯುವುದಲ್ಲದೆ ಬೇಗ ಬೆಲೆ ಕಳೆದುಕೊಳ್ಳುತ್ತದೆ.

ನದಿ, ಕಾಡು, ಸಮುದ್ರ ತೀರ, ಗಣಿ, ತೈಲದ ಬಾವಿ ಇವು ದೇಶದ ಆಸ್ತಿ. ರಸ್ತೆ, ಬಂದರು, ರೈಲುಮಾರ್ಗಗಳು, ಕಾರಖಾನೆ ಮುಂತಾದುವು ದೇಶದ ನೈಸರ್ಗಿಕ ಸಂಪತ್ತನ್ನು ಬಳಸಿ ನಿರ್ಮಿಸಿಕೊಂಡ ಆಸ್ತಿ. ಸ್ವಂತ ಪರಿಶ್ರಮ ದುಡಿಮೆಗಳಿಂದ ತನ್ನದಾಗಿ ಮಾಡಿಕೊಂಡದ್ದು ವ್ಯಕ್ತಿಯ ಆಸ್ತಿ.

ಕೆಲವೇ ಮಂದಿ ಲಾಭ ಶೇಖರಿಸಲು ಅನುಕೂಲವಾಗುವಂಥ ಉದ್ಯಮಗಳಿರುತ್ತವೆ. ಹಾಗೆ ಶೇಖರವಾಗಬಾರದೆಂದು ಆ ಉದ್ಯಮಗಳನ್ನು ಸರಕಾರ ವಹಿಸಿಕೊಳ್ಳಬಹುದು. ಅದು ರಾಷ್ಟ್ರೀಕರಣ. ಹೀಗೆ ವಶಪಡಿಸಿಕೊಂಡಾಗ ಪರಿಹಾರ ನೀಡುತ್ತಾರೆ. ಪರಿಹಾರವೀಯದೆ ಆಸ್ತಿ ವಶಪಡಿಸಿಕೊಂಡರೆ ಅದು ಮುಟ್ಟುಗೋಲು.

ಕಮ್ಯೂನಿಸ್ಟ್ ರಾಷ್ಟ್ರಗಳಲ್ಲಿ ವ್ಯಕ್ತಿಗಳಿಗೆ ಆಸ್ತಿಯ ಹಕ್ಕಿಲ್ಲ. ಎಲ್ಲ ಆಸ್ತಿ ಸರಕಾರಕ್ಕೆ ಸೇರಿದ್ದು. ವ್ಯಕ್ತಿಯ ಯೋಗಕ್ಷೇಮವನ್ನು ನೋಡಿಕೊಳ್ಳುವ ಹೊಣೆ ಸರಕಾರದ್ದೇ.

ಒಂದು ದೇಶ ತಾನು ಆಳುವ ಇನ್ನೊಂದು ದೇಶ ತನ್ನ ಆಸ್ತಿ ಎಂದು ಭಾವಿಸುತ್ತಿದ್ದುದೂ ಉಂಟು. ಸ್ಪೇನಿನವರು ಅಮೆರಿಕಕ್ಕೆ ಫಿಲಿಪೀನ್ಸನ್ನು ಎರಡು ಕೋಟಿ ಡಾಲರುಗಳಿಗೆ 1898ರಲ್ಲಿ ಮಾರಿದರು.

ಆಸ್ತಿ ಕೆಲವೇ ವ್ಯಕ್ತಿಗಳ ಕೈಯಲ್ಲಿ ಉಳಿಯುವ ಬಗೆಗೆ ಎಲ್ಲ ದೇಶಗಳಲ್ಲಿ ಈಗ ಅಸಮಾಧಾನ ವ್ಯಕ್ತವಾಗುತ್ತಿದೆ. ದೇಶದಲ್ಲಿ ಶ್ರೀಮಂತರಿಗೂ ಬಡವರಿಗೂ ಬಹು ಮಟ್ಟಿಗೆ ವ್ಯತ್ಯಾಸವಿದ್ದರೆ, ಪ್ರಜಾಪ್ರಭುತ್ವ–ಸ್ವಾತಂತ್ರ್ಯ ಎಲ್ಲವೂ ಬಾಯಿ ಮಾತಾಗಿ ಉಳಿಯುತ್ತವೆ. ಶ್ರೀಮಂತರು ತಾವು ಧರ್ಮದರ್ಶಿಗಳೆಂದು ಭಾವಿಸಿಕೊಳ್ಳಬೇಕು ಎಂದು ಗಾಂಧಿಜಿ ಉಪದೇಶಿಸಿದರು. ತಮ್ಮ ಹಣವಿರುವುದು ತಮಗಾಗಿ ಮಾತ್ರವಲ್ಲ, ಇತರರ ನೆರವಿಗಾಗಿ ಎಂದು ಭಾವಿಸಿ ನಡೆದುಕೊಳ್ಳಬೇಕು ಎಂದರು. ವೈಯಕ್ತಿಕ ಆಸ್ತಿಯ ಮೇಲೆ ತೆರಿಗೆ ವಿಧಿಸುವುದು, ಮತ್ತು ಜಮೀನಿನ ರೂಪದಲ್ಲಿಯಾಗಲಿ, ನಗರಗಳಲ್ಲಿ ಮನೆ ಅಂಗಡಿಗಳ ರೂಪದಲ್ಲಿಯಾಗಲಿ ಒಬ್ಬ ಮನುಷ್ಯ ಹೊಂದಿರುವ ಆಸ್ತಿಗೆ ಮಿತಿ ನಿರ್ಧರಿಸುವುದು—ಇಂಥ ಕ್ರಮಗಳಿಂದ ಶ್ರೀಮಂತರ ಮತ್ತು ಬಡವರ ಮಧ್ಯದ ಅಂತರವನ್ನು ಕಡಮೆ ಮಾಡಲು ಹಲವು ದೇಶಗಳು

ಶ್ರಮಿಸುತ್ತಿವೆ. ಶ್ರೀಮಂತ ವ್ಯಕ್ತಿ ತೀರಿಕೊಂಡು, ವಾರಸುದಾರರು ಅವನ ಆಸ್ತಿಯನ್ನು ಪಡೆಯುವಾಗ ಸರಕಾರಕ್ಕೆ, ಆಸ್ತಿಯ ಪ್ರಮಾಣವನ್ನು ಅನುಸರಿಸಿ, ತೆರಿಗೆ ನೀಡಬೇಕು. ಇದರಿಂದಲೂ ಆಸ್ತಿ ಪೀಳಿಗೆಯಿಂದ ಪೀಳಿಗೆಗೆ ಕರಗುತ್ತ ಬರುತ್ತದೆ.

ನೋಡಿ : ನೈಸರ್ಗಿಕ ಸಂಪತ್ತು; ರಾಷ್ಟ್ರೀಕರಣ; ಕಾನೂನು; ಬಂಡವಾಳ

## ಆಸ್ಟ್ರಿಯ

1914ರ ಜೂನ್ 28.

ಆಸ್ಟ್ರಿಯ ರಾಜಕುಮಾರ ಆರ್ಚ್‌ಡ್ಯೂಕ್ ಫ್ರಾನ್ಸಿಸ್ ಫರ್ಡಿನೆಂಡನ್ನು ಸರ್ಬಿಯದ ರಾಷ್ಟ್ರೀಯ ಹೋರಾಟಗಾರರು ಕೊಂದುಹಾಕಿದರು.

ಯೂರೋಪಿನ ಪರಿಸ್ಥಿತಿ ಆಗ ಸಿಡಿಮದ್ದಿನಂತಿತ್ತು ; ಅದಕ್ಕೆ ಬೆಂಕಿ ಇಟ್ಟಂತಾಯಿತು.

ಮೊದಲನೆಯ ಮಹಾಯುದ್ಧ ಸ್ಫೋಟಿಸಿತು.

ಆಸ್ಟ್ರಿಯ ಮಧ್ಯ ಯೂರೊಪಿನಲ್ಲಿ ಆಲ್ಪ್ಸ್ ಪರ್ವತದ ಮಡಿಲಲ್ಲಿರುವ ಸಣ್ಣ ಸಂಯುಕ್ತ ಗಣರಾಜ್ಯ. ಇದನ್ನು ಐದು ಭಾಗಗಳಾಗಿ ವಿಂಗಡಿಸಬಹುದು. ಆಲ್ಪ್ಸ್ ಪರ್ವತಾವಳಿ, ಆಲ್ಪೈನ್ ಮುನ್ನೆಲ, ಗ್ರ್ಯಾನೈಟ್ ಎತ್ತರಭೂಮಿ, ವಿಯೆನ್ನಾ ಜಲಾನಯನ ಭೂಮಿ ಮತ್ತು ಸ್ಟಿರಿಯನ್ ಜಲಾನಯನ ಭೂಮಿ.

ಆಸ್ಟ್ರಿಯದಲ್ಲಿ ಮೂರು ಬಗೆ ಹವಾಗುಣಗಳಿವೆ. ಚಳಿಗಾಲದಲ್ಲಿ ತಣ್ಣಗಿದ್ದು ಮಳೆ ಬೀಳುತ್ತದೆ. ಬೇಸಿಗೆ ತಂಪಾಗಿದ್ದು ಶೈತ್ಯವಿರುತ್ತದ. ದಕ್ಷಿಣದಲ್ಲಿ ಬೇಸಿಗೆಯಲ್ಲಿ ಸೆಕೆ, ಚಳಿಗಾಲದಲ್ಲಿ ಮಳೆ. ಪೂರ್ವದಲ್ಲಿ ಬೇಸಿಗೆಯಲ್ಲಿ ಬಹಳ ಸೆಕೆ, ಚಳಿಗಾಲದಲ್ಲಿ ಬಹಳ ಚಳಿ.

ಡನ್ಯೂಬ್, ಇನ್, ಸಾಲ್‌ಜಾಕ್ ನದಿಗಳಿಗೆ ನೀರ್ಗಲ್ಲ ನದಿಗಳಿಂದ ನೀರು ಸೇರುವುದರಿಂದ ಅವು ಬಹಳ ರಭಸದಿಂದ ಹರಿಯುತ್ತವೆ. ನೊಸೇಡ್ಲರ್, ಕಾನ್‌ಸ್ಟೆನ್ಸ್ ಮೊದಲಾದ ಸರೋವರಗಳಿವೆ.

ಆಸ್ಟ್ರಿಯದ ಹೆಚ್ಚು ಭಾಗ ಪರ್ವತ ಮತ್ತು ಕಾಡುಗಳಿಂದ ಕೂಡಿದು ಐದನೆಯ ಒಂದು ಭಾಗ ಮಾತ್ರ ಕೃಷಿಯೋಗ್ಯವಾಗಿದೆ. ಆದರೆ ಇದು ಫಲವತ್ತಾದ ಭೂಮಿ. ಕಾಡಿನಲ್ಲಿ ಸಿಗುವ ಉತ್ತಮ ಮರಗಳು ಕಾಗದ ಮಾಡಲು ಕಚ್ಚಾ ಸಾಮಗ್ರಿ ಒದಗಿಸುತ್ತವೆ. ಮ್ಯಾಗ್ನಸೈಟ್, ಗ್ರಾಫೈಟ್, ತೈಲ, ಕಬ್ಬಿಣದ ಅದಿರು, ಬಾಕ್ಸೈಟ್, ತಾಮ್ರದ ಅದಿರು, ಸೀಸ, ಸತು, ಲಿಗ್ನೈಟ್ ಆಸ್ಟ್ರಿಯದಲ್ಲಿ ದೊರೆಯುತ್ತವೆ.

ಕಬ್ಬಿಣ ಮತ್ತು ಉಕ್ಕು, ತೈಲ ಶೋಧನಾಗಾರ, ಕಾಗದ, ಮನೆಕಟ್ಟುವ ಸಾಮಾನುಗಳು, ಚರ್ಮದ ಪದಾರ್ಥಗಳು, ರಾಸಾಯನಿಕಗಳು, ಅಲ್ಯೂಮಿನಿಯಂ ಮೊದಲಾದುವು ಈ ದೇಶದ ಸಂಪತ್ತು. ಕೈಗಾರಿಕೆಗಳು ಎರಡನೆಯ ಮಹಾಯದ್ಧದ ಅನಂತರ ಬೆಳೆದುವು.

ಹಿಮದಲ್ಲಿ ಜಾರುವ ಆಟವಾಡಲು ನೂರಾರು ಸ್ಥಳಗಳು ಆಲ್ಪ್ಸ್ ಪರ್ವತಗಳಲ್ಲಿವೆ. ಆಸ್ಟ್ರಿಯದ ಆಲ್ಪ್ಸ್‌ಪರ್ವತಗಳಲ್ಲಿರುವ ಶಾಲೆಗಳಿಗೆ ವಿದ್ಯಾರ್ಥಿಗಳು ಹಿಮದಲ್ಲಿ ಜಾರುತ್ತ ಹೋಗುತ್ತಾರೆ.

'ಸಂಗೀತದ ನೆಲ' ಎಂದು ಆಸ್ಟ್ರಿಯಕ್ಕೆ ಹೆಸರಿದೆ. ವಿಯೆನ್ನದ ಬಾಲಕರ ಆರಾಧನಾ ಗಾಯಕವೃಂದ ಪಾಶ್ಚಾತ್ಯ ರಾಷ್ಟ್ರಗಳಲ್ಲೆಲ್ಲ ಪ್ರಸಿದ್ಧ. ಪಾಶ್ಚಾತ್ಯ ಸಂಗೀತಗಾರರಲ್ಲಿ ಅತಿ ಶ್ರೇಷ್ಠ ಪಂಕ್ತಿಗೆ ಸೇರುವ ಮೊಜಾರ್ಟ್, ಹೇಡನ್, ಬಿಥೋವನ್, ಷೂಬರ್ಟ್, ಬ್ರಾಹ್ಮ್ಸ್, ಹ್ಯೂಗೊ ವುಲ್ಫ್, ಜಾನ್ ಸ್ಟ್ರಾಸ್—ಇವರೆಲ್ಲ ವಿಯೆನ್ನದಲ್ಲಿದ್ದವರು. ವಸಂತಮಾಸದಲ್ಲಿ ವಿಶೇಷ ಸಂಭ್ರಮ. ಜನ ವೈಶಿಷ್ಟ್ಯಪೂರ್ಣ ವೇಷತೊಟ್ಟುಕೊಂಡು, ತಲೆಗೆ ಗರಿ ಸಿಕ್ಕಿಸಿಕೊಂಡು ಬಯಲುಗಳಲ್ಲಿ ನರ್ತಿಸುತ್ತಾರೆ. ಸಾಂಪ್ರದಾಯಿಕ ನೃತ್ಯ–ಸಂಗೀತಗಳನ್ನು ಆಸ್ಟ್ರಿಯ ಉಳಿಸಿಕೊಂಡು ಬಂದಿದೆ.

1850 ರಿಂದಲೇ ಆಸ್ಟ್ರಿಯದಲ್ಲಿ ಪ್ರಾಥಮಿಕ ಶಿಕ್ಷಣ ಕಡ್ಡಾಯವಾಯಿತು. ಶೇಕಡ 90ರಷ್ಟು ರೋಮನ್ ಕ್ಯಾಥಲಿಕರು. ಉಳಿದವರು ಪ್ರಾಟೆಸ್ಟೆಂಟರು; ಯೆಹೂದ್ಯರು.

ರಾಜಧಾನಿ ವಿಯೆನ್ನ. ಆಸ್ಟ್ರಿಯ ದೇಶದ ಜನಸಂಖ್ಯೆಯ ನಾಲ್ಕರಲ್ಲಿ ಒಂದು ಭಾಗ ಈ ನಗರದಲ್ಲೇ ಇದೆ.

ಆಸ್ಟ್ರಿಯದ ಚರಿತ್ರೆ ಪುರಾತನವಾದದ್ದು. ಅತಿ ಪ್ರಾಚೀನ ಕಾಲದ ಶಿಬಿರಗಳ ಅವಶೇಷಗಳು ದೊರೆತಿವೆ. ಒಂದು ಕಡೆ ಸಿಕ್ಕಿರುವ ಸುಣ್ಣಕಲ್ಲಿನ ವಿಗ್ರಹ 60,000 ವರ್ಷಗಳಷ್ಟು ಹಿಂದಿನದು. ಆಸ್ಟ್ರಿಯ, ಷಾರ್ಲೆಮೇನನ ಸಾಮ್ರಾಜ್ಯಕ್ಕೆ ಸೇರಿದ್ದಿತು. ಅನಂತರ 1278ರಿಂದ 1918ರ ವರೆಗೆ ಆಸ್ಟ್ರಿಯವನ್ನು ಹ್ಯಾಪ್ಸ್‌ಬರ್ಗ್ ಮನೆತನದವರು ಆಳಿದರು. ಆಸ್ಟ್ರಿಯ ಚಕ್ರಾಧಿಪತ್ಯಕ್ಕೆ ಸೇರಿದ್ದ ಮೆಗ್ಯಾರರು, ಸ್ಲಾವರು ಮತ್ತು ಸರ್ಬರು ತಮ್ಮ ತಮ್ಮ ದೇಶಗಳಲ್ಲಿ ಸ್ವಂತ ಸರಕಾರಗಳನ್ನು ರಚಿಸಿಕೊಳ್ಳಬೇಕೆಂದು ಒತ್ತಾಯಪಡಿಸಲಾರಂಭಿಸಿದರು. 1867ರಲ್ಲಿ ಆಸ್ಟ್ರಿಯ–ಹಂಗೆರಿ ರಚನೆಯಾಗಿ ಹಂಗೆರಿ ಸಮಾನ ರಾಷ್ಟ್ರವಾಯಿತು. ಮೊದಲನೆಯ ಮಹಾಯುದ್ಧದಲ್ಲಿ ಜರ್ಮನಿಯ ಕಡೆ ಸೇರಿ ಯುದ್ಧದಲ್ಲಿ ಅಪಜಯವುಂಟಾಯಿತು. ಹ್ಯಾಪ್ಸ್‌ಬರ್ಗ್ ಮನೆತನದ ಕೊನೆಯ ಅರಸ ಚಾರ್ಲ್ಸ್ 1918ನೆಯ ನವೆಂಬರ್ 11 ರಂದು ಸಿಂಹಾಸನತ್ಯಾಗ ಮಾಡಿದ. ಆಸ್ಟ್ರಿಯ ಗಣರಾಜ್ಯವಾಯಿತು. 1938ರಲ್ಲಿ ಜರ್ಮನಿಯ ಅಡಾಲ್ಫ್ ಹಿಟ್ಲರನಿಗೆ ಆಸ್ಟ್ರಿಯ ಶರಣಾಗತವಾಯಿತು. ಮರುವರ್ಷ ಎರಡನೆಯ ಮಹಾಯುದ್ಧ ಆರಂಭವಾದಾಗ ಆಸ್ಟ್ರಿಯ ಜರ್ಮನಿಯ ಕಡೆ ಸೇರಲೇಬೇಕಾಯಿತು. 1945ರಲ್ಲಿ ಜರ್ಮನಿ ಸೋತಾಗ ಸಂಯುಕ್ತ ಸಂಸ್ಥಾನ, ಬ್ರಿಟನ್, ಫ್ರಾನ್ಸ್ ಮತ್ತು ರಷ್ಯನರು ಜರ್ಮನಿ ಮತ್ತು ಆಸ್ಟ್ರಿಯಗಳಿಗೆ ನುಗ್ಗಿದರು. 1955ರಲ್ಲಿ ಪುನಃ ಆಸ್ಟ್ರಿಯ ಸ್ವತಂತ್ರವಾಯಿತು. ಅದೇ ವರ್ಷ ವಿಶ್ವಸಂಸ್ಥೆಯ ಸದಸ್ಯ ರಾಷ್ಟ್ರವಾಯಿತು. ಆಸ್ಟ್ರಿಯ ತಾನು ತಟಸ್ಥ ರಾಷ್ಟ್ರವಾಗಿ ಉಳಿಯಲು ನಿರ್ಧರಿಸಿತು.

ಖಂಡ : ಯೂರೋಪ್ (ಮಧ್ಯ ಭಾಗ)
ಅಕ್ಷಾಂಶ : 46° 22′ ಉ ದಿಂದ 49°01′ ಉ
ರೇಖಾಂಶ : 9° 22′ ಪೂ ದಿಂದ 17° 10′ ಪೂ
ವಿಸ್ತೀರ್ಣ : 83,854 ಚ. ಕಿ.ಮಿ.
ಜನಸಂಖ್ಯೆ : 71,50,000
ರಾಜಧಾನಿ : ವಿಯೆನ್ನ
ಭಾಷೆ : ಜರ್ಮನ್
ಸರಕಾರ : ಸಂಯುಕ್ತ ಗಣರಾಜ್ಯ
ಬಾವುಟ : ಕೆಂಪು, ಬಿಳಿ ಮತ್ತು ಕೆಂಪು ಬಣ್ಣದ ಅಡ್ಡಪಟ್ಟಿಗಳು.

## ಆಸ್ಟ್ರೇಲಿಯ

ಮೃಗಾಲಯದಲ್ಲಿ ಕಾಂಗರೂ ನೋಡಿದ್ದೀರ ? ಎಂಥ ವಿಚಿತ್ರ ಪ್ರಾಣಿ! ಹಿಂದಿನ ಕಾಲುಗಳು ಉದ್ದ, ಮುಂದಿನ ಕಾಲುಗಳು ಸಣ್ಣ, ಬಲವಾದ ದಪ್ಪನೆಯ ಬಾಲ. ಹೆಣ್ಣು ಕಾಂಗರೂ ಹೊಟ್ಟೆಯಲ್ಲಿ ಒಂದು ಚೀಲ, ಮರಿ ಬೆಚ್ಚಗೆ ಕುಳಿತುಕೊಳ್ಳಲು. ಆಸ್ಟ್ರೇಲಿಯದಲ್ಲಿ ಮಾತ್ರ ಕಾಣುವ ಪ್ರಾಣಿ ಕಾಂಗರೂ.

ಅತಿ ಚಿಕ್ಕ ಖಂಡವಾದ ಆಸ್ಟ್ರೇಲಿಯವೆಲ್ಲ ಒಂದೇ ರಾಷ್ಟ್ರ. ಆಸ್ಟ್ರೇಲಿಯದ ಚರಿತ್ರೆ ಸ್ವಾರಸ್ಯವಾಗಿದೆ. ಈ ದೇಶ ಐದು ಸಂಸ್ಥಾನಗಳನ್ನು, ಟಾಸ್ಮೇನಿಯ ದ್ವೀಪ ಮತ್ತು ಇತರ ಸಣ್ಣ ಪುಟ್ಟ ದ್ವೀಪಗಳನ್ನು ಒಳಗೊಂಡಿದೆ. ಮೂಲನಿವಾಸಿಗಳನ್ನು ಬಿಟ್ಟರೆ, ಇಲ್ಲಿರುವವರು ಬ್ರಿಟಿಷರೇ. 1606ರ ಹೊತ್ತಿಗೆ ಡಚ್ಚರು ಆಸ್ಟ್ರೇಲಿಯ ತಲಪಿದ್ದರು. ಅಬೆಲ್ ಜಾಸ್ಮನ್, ಜೇಮ್ಸ್ ಕುಕ್, ಫ್ಲಿಂಡರ್ಸ್ ಮುಂತಾದವರು ಆಸ್ಟ್ರೇಲಿಯದ ವಿವಿಧ ಪ್ರದೇಶಗಳನ್ನು ಕಂಡು ಹಿಡಿದರು. ಇನ್ನೂರು ವರ್ಷಗಳ ಹಿಂದೆ 1770ರ ಏಪ್ರಿಲ್ ತಿಂಗಳಿನಲ್ಲಿ ಇಂಗ್ಲೆಂಡಿನ ಜೇಮ್ಸ್ ಕುಕ್ ಪೂರ್ವ ತೀರವನ್ನು ಪರಿಶೀಲಿಸಿದ. ಆಸ್ಟ್ರೇಲಿಯವನ್ನು ನೋಡಿದ ಬ್ರಿಟಿಷರು, ಅದು ಕೈದಿಗಳನ್ನಿಡಲು ಒಳ್ಳೆಯ ಜಾಗವೆಂದು ಭಾವಿಸಿದರು. 717 ಕೈದಿಗಳನ್ನೂ ಅವರ ಮೇಲ್ವಿಚಾರಕರನ್ನೂ ಹೊತ್ತ ಹಡಗು 1788ರಲ್ಲಿ ಇಂಗ್ಲೆಂಡಿನಿಂದ ಅಲ್ಲಿಗೆ ಬಂದಿತು. ಕ್ಯಾಪ್ಟನ್ ಆರ್ಥರ್ ಫಿಲಿಪ್ ಎಂಬಾತ ಸಿಡ್ನಿ ನಗರವನ್ನು ನಿರ್ಮಿಸಿದ. ಅದರೊಂದಿಗೆ ಬ್ರಿಟಿಷರ ವಸಾಹತಿನ ಸ್ಥಾಪನೆಯೇ ಆಯಿತು. ಅಮೆರಿಕದ ವಸಾಹತುಗಳನ್ನು ಕಳೆದುಕೊಂಡಮೇಲೆ ಬ್ರಿಟನ್ ಇಲ್ಲಿಗೆ ಅಪರಾಧಿಗಳನ್ನು ಹೆಚ್ಚಾಗಿ ಕಳುಹಿಸತೊಡಗಿತು. ಆದರೆ ಇತರ ನಿವಾಸಿಗಳ ಪ್ರತಿಭಟನೆಯಿಂದ ಅದು ಕಡಮೆಯಾಗಿ, 1868ರ ಹೊತ್ತಿಗೆ ಅಂಥ ವಲಸೆ ನಿಂತುಹೋಯಿತು.

ಆಸ್ಟ್ರೇಲಿಯ ಎಂದು ಹೆಸರಿಟ್ಟವನು, ಹತ್ತೊಂಬತ್ತನೆಯ ಶತಮಾನದ ಆರಂಭದಲ್ಲಿ ಈ ಖಂಡದ ಬಗ್ಗೆ ವಿವರಗಳನ್ನು ಕೊಟ್ಟ ಫ್ಲಿಂಡರ್ಸ್ ಎಂಬ ಆಂಗ್ಲ ಶೋಧಕ. ಆಸ್ಟ್ರೇಲಿಯ ಎಂದರೆ 'ದಕ್ಷಿಣ ದೇಶ' ಎಂದರ್ಥ.

ಆಸ್ಟ್ರೇಲಿಯದ ಮೂರನೆಯ ಒಂದು ಭಾಗ ಮರುಭೂಮಿ, ಇನ್ನೊಂದು ಭಾಗ ಮೇವಿಗೆ ಮಾತ್ರ ಅನುಕೂಲ. ಬಾಲಚಂದ್ರಾಕಾರದ ಸುಮಾರು 320 ಕಿಲೊಮಿಾಟರುಗಳಷ್ಟು ಅಗಲವಾಗಿರುವ, ಫಲವತ್ತಾಗಿರುವ ತೀರ ಪ್ರದೇಶದಲ್ಲಿ ಆಸ್ಟ್ರೇಲಿಯದ ಮುಕ್ಕಾಲು ಪಾಲು ಜನ ವಾಸಿಸುತ್ತಾರೆ.

ಮಳೆ ಕಡಮೆ ಬೀಳುವುದರಿಂದ ಮುರ್ರೆ ನದಿ ಮತ್ತು ಅದರ ಉಪನದಿಗಳು ನೀರಾವರಿ ಯೋಜನೆಗೆ ಒಳಗಾಗಿ ದೇಶದ ಬಹು ಭಾಗಕ್ಕೆ ನೀರು ಒದಗಿಸಿವೆ. ಈ ಖಂಡದ ಅತಿ ದೊಡ್ಡ ನದಿ ಡಾರ್ಲಿಂಗ್ 2839 ಕಿ. ಮಿಾ. ಉದ್ದವಿದೆ. ಆಸ್ಟ್ರೇಲಿಯದಲ್ಲಿ ಆಳವಾಗಿ ತೋಡಿದ ಚಿಲುಮೆ ಬಾವಿಗಳಿವೆ. 2231 ಮಿಾಟರುಗಳ ಕಸಿಯುಸ್ಕೊ ಅತ್ಯಂತ ಎತ್ತರದ ಪರ್ವತ.

ಆಸ್ಟ್ರೇಲಿಯ ದಕ್ಷಿಣಾರ್ಧ ಗೋಳದಲ್ಲಿರುವುದರಿಂದ ಜುಲೈಯಲ್ಲಿ ಚಳಿಗಾಲವೂ ಡಿಸೆಂಬರಿನಲ್ಲಿ ಬೇಸಿಗೆಯೂ ಇರುತ್ತವೆ. ಮಕರ ಸಂಕ್ರಾಂತಿ ವೃತ್ತದ ಉತ್ತರಕ್ಕಿರುವ ಪ್ರದೇಶದಲ್ಲಿ ಉಷ್ಣವಲಯದ ಹವಾಮಾನವಿದೆ. ಉಷ್ಣಾಂಶ 80° ಫಾ.ವರೆಗೂ ಏರುವುದುಂಟು. ಖಂಡದ ಉಳಿದ ಭಾಗದಲ್ಲಿ ಸೌಮ್ಯ ಹವೆ. ಬೇಸಿಗೆಯಲ್ಲಿ ಸೆಕೆ ಇದ್ದು, ಚಳಿಗಾಲವೂ ಬೆಚ್ಚಗಿರುತ್ತದೆ.

ಹತ್ತಿ, ಗೋಧಿ, ಓಟ್, ಕಬ್ಬು, ಹಣ್ಣು, ಭತ್ತ, ಹೊಗೆಸೊಪ್ಪು, ಮೇವಿಗಾಗಿ ಹುಲ್ಲು ಬೆಳೆಯುತ್ತಾರೆ. ಕುರಿ, ದನ, ಹಂದಿಗಳನ್ನು ಸಾಕುವುದು ಪ್ರಮುಖ ಉದ್ಯೋಗ. 1792ರಲ್ಲಿ ಆಸ್ಟ್ರೇಲಿಯದಲ್ಲಿ 105 ಕುರಿಗಳಿದ್ದುವು. ಅಲ್ಲಿಗೆ ವಲಸೆ ಬಂದ ಸಾಹಸಿಗರು ಸ್ಪೇನಿನ ಕುರಿಗಳನ್ನೂ ಇತರ ಬಗೆಯ ಕುರಿಗಳನ್ನೂ ತಂದರು. ಇಂದು ಹದಿನೈದು ಕೋಟಿ ಕುರಿಗಳಿವೆ ; ಉಣ್ಣೆಯ ಬಟ್ಟೆಯ ತಯಾರಿಕೆ ಪ್ರಮುಖ ಉದ್ಯಮವಾಗಿದೆ.

ಚಿನ್ನ, ಕಲ್ಲಿದ್ದಲು, ಕಬ್ಬಿಣದ ಅದಿರು, ಬೆಳ್ಳಿ, ಸೀಸ, ತವರ, ತಾಮ್ರ, ಪೆಟ್ರೋಲಿಯಂ, ಯುರೇನಿಯಂ, ಮಾಲಿಬ್ಡಿನೆಮ್, ಅಲ್ಯೂಮಿನಿಯಂ ನಿಕ್ಷೇಪಗಳು ಸಮೃದ್ಧವಾಗಿವೆ.

ಆಸ್ಟ್ರೇಲಿಯ ಪ್ರಪಂಚದ ಇತರ ಭಾಗಗಳಿಂದ ಪ್ರತ್ಯೇಕವಾಗಿಯೇ ಬಹಳ ಕಾಲ ಇದ್ದುದರಿಂದ ಅಲ್ಲಿನ ಸಸ್ಯಗಳು, ಪ್ರಾಣಿಗಳು ತಮ್ಮದೇ ಆದ ವೈಚಿತ್ರ್ಯದಿಂದ ಕೂಡಿವೆ. ಯೂಕಲಿಪ್ಟಸ್ (ನಮ್ಮಲ್ಲಿ ಇದನ್ನು ನೀಲಗಿರಿ ಮರ ಎನ್ನುತ್ತೇವೆ) ಜಾತಿಯೊಂದರಲ್ಲೇ 250 ಬಗೆಗಳಿವೆ. ಕಾಂಗರೂ. ಕೋಆಲಾ, ವೊಂಬಾಟ್, ಪೋಸುಮ್‌ಗಳು ಇಲ್ಲಿನ ಪ್ರಾಣಿಗಳು. ಎಮು. ಕಸೊವಾರಿ, ಅನುಕರಣೆಗೆ ಹೆಸರಾದ ಲೈರ್ ಅಪರೂಪದ ಹಕ್ಕಿಗಳು.

ಕಬ್ಬಿಣ ಮತ್ತು ಉಕ್ಕು, ಕಾರುಗಳು, ಭಾರಿ ಯಂತ್ರಗಳು, ಗೃಹೋಪಯುಕ್ತ ವಿದ್ಯುತ್ ಉಪಕರಣಗಳು, ಹಡಗು ನಿರ್ಮಾಣ, ಬಟ್ಟೆ, ಔಷಧ, ಆಹಾರ, ಪಾನೀಯಗಳು, ಬಣ್ಣ, ಕಾಗದ, ಮುದ್ರಣ, ಸಿಡಿಮದ್ದು ಮುಂತಾದ ಕೈಗಾರಿಕೆಗಳು ಎರಡನೆಯ ಮಹಾಯುದ್ಧವಾದ ಮೇಲೆ ಅಭಿವೃದ್ಧಿ ಹೊಂದುತ್ತಿವೆ.

ಉಣ್ಣೆ, ಮಾಂಸ, ಹಾಲು, ಹೈನ, ಹಣ್ಣು, ಕಚ್ಚಾ ಸಕ್ಕರೆ, ಚರ್ಮ, ಎಣ್ಣೆ ಮತ್ತು ಕೊಬ್ಬು, ಮೊಟ್ಟೆ, ಕಾರು, ಯಂತ್ರಗಳನ್ನು ರಫ್ತು ಮಾಡುತ್ತಾರೆ.

ಲೋಹ ಪದಾರ್ಥಗಳು, ಬಟ್ಟೆ, ಯಂತ್ರಗಳು, ಕಾಗದ, ಮರದ ದಿಮ್ಮಿ, ಔಷಧ, ವಿಮಾನ. ಟ್ರ್ಯಾಕ್ಟರ್, ಪೆಟ್ರೋಲಿಯಂ, ಚರ್ಮದ ತಯಾರಿಕೆಗಳು, ರಬ್ಬರಿನ ವಸ್ತುಗಳು, ಟೀ, ಕಾಫಿ, ಕೋಕೋ ಇವು ಆಮದಾಗುತ್ತವೆ.

ಈ ದೇಶ ನ್ಯೂ ಸೌತ್‌ವೇಲ್ಸ್, ವಿಕ್ಟೋರಿಯ, ಕ್ವೀನ್ಸ್‌ಲೆಂಡ್, ದಕ್ಷಿಣ ಆಸ್ಟ್ರೇಲಿಯ, ಪಶ್ಚಿಮ ಆಸ್ಟ್ರೇಲಿಯ ಮತ್ತು ಟಾಸ್ಮೇನಿಯ ಸಂಸ್ಥಾನಗಳ ಒಕ್ಕೂಟ.

| | | |
|---|---|---|
| ಅಕ್ಷಾಂಶ | : | 10°41′ ದ ದಿಂದ 39°08′ ದ (ಟಾಸ್ಮೇನಿಯ ಬಿಟ್ಟು) |
| ರೇಖಾಂಶ | : | 113°09′ ಪೂ ದಿಂದ 153°39′ ಪೂ |
| ವಿಸ್ತೀರ್ಣ | : | 77,04,165 ಚ. ಕಿ. ಮೀ. |
| ಜನಸಂಖ್ಯೆ | : | 1,18,00,000 (1966 ಅಂದಾಜು) |
| ರಾಜಧಾನಿ | : | ಕ್ಯಾನ್‌ಬೆರಾ |
| ಭಾಷೆ | : | ಇಂಗ್ಲಿಷ್ |
| ಸರಕಾರ | : | ಸ್ವಯಂ ಆಡಳಿತ ಒಕ್ಕೂಟ |
| ಬಾವುಟ | : | ಅಚ್ಚನೀಲಿ. ಕೋಲಿನ ಕಡೆ ದೊಡ್ಡ ನಕ್ಷತ್ರದ ಮೇಲ್ಭಾಗದಲ್ಲಿ ಬ್ರಿಟನಿನ ಯೂನಿಯನ್ ಜ್ಯಾಕ್ : ಇನ್ನೊಂದು ಭಾಗದಲ್ಲಿ ಐದು ಬಿಳಿ ನಕ್ಷತ್ರಗಳು. |

ಆಸ್ಟ್ರೇಲಿಯ ಶ್ರೀಮಂತರ ದೇಶವಲ್ಲ. ಆದರೆ ಜೀವನಮಟ್ಟ ತೀರ ಅತೃಪ್ತಿಕರವೂ ಅಲ್ಲ. ಶೇಕಡಾ 70 ಮಂದಿಗೆ ಸ್ವಂತ ಮನೆಗಳಿವೆ ; ಮೂರರಲ್ಲಿ ಒಬ್ಬರಿಗೆ ಕಾರು ಇದೆ. ಆಸ್ಟ್ರೇಲಿಯದ ಮೂಲನಿವಾಸಿಗಳು ಒಳನಾಡಿನಲ್ಲಿ ಉತ್ತರದ ತೀರ ಪ್ರದೇಶಗಳಲ್ಲಿ ವಾಸಿಸುತ್ತಾರೆ, ಅವರಲ್ಲಿ ಕೆಲವರು ಈಗಲೂ ಅಲೆಮಾರಿಗಳೇ. ಈ ಜನ, ಹೋಗಿ ಹಿಂದಕ್ಕೆ ಬರುವ ಬೂಮ್‌ರ್‍ಯಾಂಗ್ ಎಂಬ ಆಯುಧವನ್ನು ಬೇಟೆಗೆ ಬಳಸುತ್ತಿದ್ದರು. ಆ ಆಯುಧ ಮಿಕವನ್ನು ಹೊಡೆದು ಬೇಟೆಗಾರನತ್ತ ಮರಳಿ ಬರುತ್ತಿತ್ತು.

ಮತದಾನ ಮಾಡುವ ಹಕ್ಕಿರುವವರೆಲ್ಲ ಮತ ಚಲಾಯಿಸಲೇಬೇಕು ಎಂಬ ಶಾಸನವನ್ನು ಮಾಡಿದ, ಸ್ತ್ರೀಯರಿಗೆ ಮತದಾನ ಹಕ್ಕನ್ನು ನೀಡಿದ, ಮೊದಲ ದೇಶ ಆಸ್ಟ್ರೇಲಿಯ.

ಬ್ರಿಟನ್ನಿನ ರಾಣಿಯ ಪ್ರತಿನಿಧಿಯಾಗಿ ಗವರ್ನರ್ ಜನರಲ್ ಇದ್ದರೂ ಮುಖ್ಯ ಮಂತ್ರಿ ಸರಕಾರದ ಪ್ರಮುಖ. ಕ್ಯಾಪ್ಟನ್ ಕುಕ್ ಆಸ್ಟ್ರೇಲಿಯ ತಲಪಿದುದರ ಇನ್ನೂರನೆಯ ವಾರ್ಷಿಕೋತ್ಸವವನ್ನು 1970 ರಲ್ಲಿ ಸಂಭ್ರಮ ದಿಂದ ಆಸ್ಟ್ರೇಲಿಯದಲ್ಲಿ ಆಚರಿಸಲಾಯಿತು.

ಸ್ಥಳ : ದಕ್ಷಿಣಾರ್ಧ ಗೋಳದಲ್ಲಿ, ಶಾಂತಸಾಗರ ಹಿಂದೂ ಮಹಾ ಸಾಗರಗಳ ಮಧ್ಯೆ.

## ಆಹಾರ

ಮನುಷ್ಯನಿಗೂ ಆಹಾರ ಬೇಕು, ಇತರ ಪ್ರಾಣಿಗಳಿಗೂ ಆಹಾರ ಬೇಕು. ಆದರೆ ಮನುಷ್ಯನಿಗೂ ಇತರ ಪ್ರಾಣಿಗಳಿಗೂ ಆಹಾರದ ವಿಷಯದಲ್ಲಿ ಎರಡು ವ್ಯತ್ಯಾಸಗಳಿವೆ : ಮನುಷ್ಯ ಬೇಯಿಸಿ, ಹುರಿದು, ಅಡುಗೆ ಮಾಡಿ ತಿನ್ನುತ್ತಾನೆ. ಇತರ ಪ್ರಾಣಿಗಳು ನಿಸರ್ಗದಲ್ಲಿ ದೊರೆತ ಸ್ಥಿತಿಯಲ್ಲಿಯೇ ತಮ್ಮ ಆಹಾರವನ್ನು ತಿನ್ನುತ್ತವೆ. ಅವುಗಳಿಗೆ ನಿಸರ್ಗದಲ್ಲಿ ದೊರೆಯುವ ಆಹಾರದ ಪ್ರಮಾಣದ ಮೇಲೆ ಹತೋಟಿ ಇಲ್ಲ ; ಮನುಷ್ಯ ವ್ಯವಸಾಯ ದಿಂದ ಆಹಾರದ ಪ್ರಮಾಣವನ್ನು ಹೆಚ್ಚಿಸಬಲ್ಲ.

ಆಹಾರ ನಮ್ಮ ದಿನ ನಿತ್ಯದ ಚಟುವಟಿಕೆಗಳಿಗೆ ಶಕ್ತಿನೀಡುತ್ತದೆ. ಬೆಳೆಯುವ ವಯಸ್ಸಿನ ದೇಹಕ್ಕೆ ಇದು ಪೋಷಕ. ದೇಹದ ಅಂಗಸತ್ವ ನಶಿಸಿ ದಂತೆಲ್ಲ ಅದನ್ನು ತುಂಬುವಂಥದು. ಮೈಯಲ್ಲಿ ಉಷ್ಣಾಂಶವನ್ನು ಕಾಪಾಡಿ ರೋಗರುಜಿನಗಳಿಂದ ರಕ್ಷಣೆ ನೀಡುವಂಥದು. ಈ ಎಲ್ಲ ಗುಣಗಳುಳ್ಳ ಪದಾರ್ಥವೇ ಆಹಾರ. ಆಶ್ಚರ್ಯದ ಸಂಗತಿಯೆಂದರೆ ಇತರ ಪ್ರಾಣಿ ವರ್ಗದಲ್ಲಿ ಪ್ರತಿ ಪ್ರಾಣಿಗೂ ಸಹಜವಾಗಿಯೇ ತನಗೆ ಸರಿಯಾದ ಆಹಾರ ಯಾವುದು ಎಂದು ತಿಳಿದಿರುತ್ತದೆ ; ಮನುಷ್ಯನಿಗೆ ಮಾತ್ರ ತಿಳಿಯದು.

ಹಸಿವೆಯೇ ಮನುಷ್ಯನ ಪ್ರಥಮ ಪ್ರವೃತ್ತಿ. ಇತಿಹಾಸದ ಉದ್ದಕ್ಕೂ ಇದರ ನಿವಾರಣೆಗೆ ಅವನು ತೊಳಲಿದ್ದಾನೆ. ಇಂದಿನ ಆಹಾರ ದೊರೆತ ಮೇಲೆ ನಾಳಿನದು ; ಅನಂತರ ಮಾರನೆಯ ದಿನದ್ದು. ಈ ರೀತಿ ಅವನ ಗಮನವೆಲ್ಲ ಮುಂದಿನ ಆಹಾರ ಹೇಗೆ ಎಂಬುದರ ಮೇಲೆಯೇ ಕೇಂದ್ರೀ ಕೃತವಾಗಿದೆ.

ಹತ್ತು ಸಾವಿರ ವರ್ಷಗಳಿಗೆ ಮೊದಲೇ ಮನುಷ್ಯ ತನ್ನ ಆಹಾರವನ್ನು ಬೆಳೆಯಲು ಕಲಿತನೆಂದು ಹೇಳಲಾಗಿದೆ. ಅಲೆಮಾರಿಯಾಗಿದ್ದ ಅವನ ಜೀವನ, ವ್ಯವಸಾಯದಿಂದ ಒಂದು ನೆಲೆಗೆ ನಿಂತಿತು. ಹೀಗೆ ವ್ಯವಸಾಯದ ಸಾಧ್ಯತೆಯನ್ನೂ ಪ್ರಾಣಿಗಳನ್ನು ಪಳಗಿಸಿ ಸಾಕುವುದನ್ನೂ ಮನುಷ್ಯ ರೂಢಿಸಿಕೊಂಡು ಹಳ್ಳಿಗಳಲ್ಲಿ ಜೀವನ ಮಾಡಲಾರಂಭಿಸಿದ. ಒಬ್ಬನ ಹೊಟ್ಟೆ ಹೊರೆಯುವುದಕ್ಕಾಗಿ ಸುಮಾರು ಐದು ಚದರ ಕಿಲೊಮೀಟರ್ ವಿಸ್ತಾರದಲ್ಲಿ ಬೇಟೆಯಾಡಬೇಕಾಗಿದ್ದವನಿಗೆ, ಈಗ ತಾನು ನಿಂತ ಸ್ಥಳದ ಸುತ್ತಮುತ್ತಲ ಜಾಗವೇ ಸಾಕೆನಿಸಿತು. ಬೇಟೆಯಲ್ಲಿ ಆಹಾರ ದೊರೆತರೆ ದೊರೆಯಿತು, ಇಲ್ಲದಿದ್ದರೆ ಇಲ್ಲ. ಈ ಅನಿಶ್ಚಯತೆ ವ್ಯವಸಾಯದಲ್ಲಿ ಇರಲಿಲ್ಲ.

ಆಹಾರಶಾಸ್ತ್ರದ ಪ್ರಕಾರ ನಮ್ಮ ಆಹಾರದಲ್ಲಿ ಮುಖ್ಯವಾಗಿ ಐದು ವಿಭಾಗಗಳಿವೆ : ಸಸಾರಜನಕ, ಶರ್ಕರಪಿಷ್ಟಾದಿಗಳು, ಮೇದಸ್ಸು, ಖನಿಜ ವಸ್ತುಗಳು ಮತ್ತು ಜೀವಸತ್ವಾಂಶಗಳು. ಸಾಧಾರಣವಾಗಿ, ನಮ್ಮ ದೇಹ ವನ್ನು ಒಂದು ಯಂತ್ರಕ್ಕೆ ಹೋಲಿಸಿ ಈ ಆಹಾರಾಂಶಗಳ ಅವಶ್ಯಕತೆಯನ್ನು ವಿವರಿಸುವುದುಂಟು. ಒಂದು ಯಂತ್ರಕ್ಕೆ ಚಲನ ಶಕ್ತಿಯೇ ಮುಖ್ಯ. ಈ ಶಕ್ತಿಯನ್ನು ಕಲ್ಲಿದ್ದಲು, ಪೆಟ್ರೋಲ್ ಇತ್ಯಾದಿಗಳಿಂದ ಒದಗಿಸುತ್ತಾರೆ. ದೇಹವೂ ಒಂದು ಕುಲುಮೆಯಂತೆ ; ಸಕ್ಕರೆಪಿಷ್ಟಗಳನ್ನೂ ಮೇದಸ್ಸನ್ನೂ ದಹಿಸಿ ತನಗೆ ಬೇಕಾದ ಶಕ್ತಿಯನ್ನು ಒದಗಿಸಿಕೊಳ್ಳುತ್ತದೆ. ದೇಹದ ಭಾಗಗಳು ಸವೆದಂತೆಲ್ಲ ಪುನಃ ಕಟ್ಟುವ ಸಾಧನ ಸಸಾರಜನಕ. ದೇಹವನ್ನು ಆಕ್ರಮಣಮಾಡುವ ರೋಗ ಇತ್ಯಾದಿಗಳನ್ನು ಪ್ರತಿರೋಧಿಸಲು ಜೀವ ಸತ್ವಾಂಶಗಳು ಪ್ರಚೋದಿಸುತ್ತವೆ. ಖನಿಜವಸ್ತುಗಳು ದೇಹದಲ್ಲೆಲ್ಲ ವ್ಯಾಪಿಸಿ ಶರೀರ ವ್ಯಾಪಾರಕ್ಕೆ ತಕ್ಕ ವಾತಾವರಣ ಕಲ್ಪಿಸಿಕೊಡುತ್ತವೆ.

ಆಹಾರದಲ್ಲಿ ಸಸ್ಯಾಹಾರ, ಮಾಂಸಾಹಾರ ಎಂದು ಎರಡು ಬಗೆ. ಸಸ್ಯಾಹಾರದಲ್ಲಿ ಕೇವಲ ಸಸ್ಯಮೂಲ ಪದಾರ್ಥಗಳೇ ಇರುತ್ತವೆ. ಮಾಂಸಾ ಹಾರಿಗಳು ಸಸ್ಯಮೂಲ ಮತ್ತು ಪ್ರಾಣಿಮೂಲ ಆಹಾರ ಎರಡನ್ನೂ ಸೇವಿಸುತ್ತಾರೆ.

ಆಹಾರ ಸೇವನೆಯ ಬಗೆಗೆ ಇನ್ನೂ ಕೆಲವು ಅಂಶಗಳು ಗಮನಾರ್ಹ ವಾಗಿವೆ. ಆಹಾರವನ್ನು ಬೇಯಿಸುವುದು ಒಂದು ಮುಖ್ಯ ಹಂತ. ಯಾವ ಯಾವ ಆಹಾರವನ್ನು ಬೇಯಿಸಬೇಕು, ಎಷ್ಟು ಬೇಯಿಸಬೇಕು ಎಂದು ತಿಳಿದುಕೊಳ್ಳುವುದು ಅಗತ್ಯ.

ಒಬ್ಬ ಗಂಡಸಿಗೆ, ಶಿಶುವಿಗೆ, ಬೆಳೆಯುವ ಮಕ್ಕಳಿಗೆ, ಗರ್ಭಿಣಿ ಮತ್ತು ಬಾಣಂತಿಗೆ—ಹೀಗೆ ವಿವಿಧ ವಯೋಮಾನಗಳ ವ್ಯಕ್ತಿಗಳಿಗೆ ಎಷ್ಟು ಆಹಾರ ಅವಶ್ಯ ? ಅದು ಪೂರೈಸಲ್ಪಡುತ್ತಿದೆಯೇ ಹೇಗೆ ? ಎಂದು ಅಂತರ ರಾಷ್ಟ್ರೀಯ ಮಟ್ಟದಲ್ಲಿ ಲೆಕ್ಕಹಾಕಿ ವೈಯಕ್ತಿಕ ಪ್ರಮಾಣಗಳನ್ನು ನಿಷ್ಕರ್ಷೆ ಮಾಡಿದ್ದಾರೆ. ಮುಂದುವರಿದ ರಾಷ್ಟ್ರಗಳು, ಹಿಂದುಳಿದ ರಾಷ್ಟ್ರಗಳು ಮತ್ತು ಮುಂದುವರಿಯುತ್ತಿರುವ ರಾಷ್ಟ್ರಗಳು ಈ ಒಂದೊಂದು ಗುಂಪಿಗೂ ಆಹಾರ ಸಮಸ್ಯೆ ಬೇರೆ ಬೇರೆ ವಿಧ. ಭಾರತದಂಥ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳ ಆಹಾರದಲ್ಲಿ ಪೌಷ್ಟಿಕಾಂಶಗಳ ಕೊರತೆಯಿದೆ ಎಂದು ಗೊತ್ತು ಹಚ್ಚಿದ್ದಾರೆ. ಈ ವಿಧವಾದ ಕೊರತೆಯ ಪರಿಣಾಮ ಗಳು ಹಲವು. ಮೊದಲನೆಯದಾಗಿ ಪೌಷ್ಟಿಕಾಂಶಗಳ ಕೊರತೆಯಿಂದ ದೇಹದಲ್ಲಿ ರೋಗಗಳು ಉದ್ಭವಿಸುತ್ತವೆ. ಹೊರಗಿನಿಂದ ಬಂದ ರೋಗ ಗಳನ್ನು ತಡೆಯುವ ಶಕ್ತಿಯೂ ಕಡಮೆಯಾಗುತ್ತದೆ. ಮುಂದೆ ಬರುವ ತಲೆಮಾರಿನ ಮಕ್ಕಳ ಅಂಗಗಳಲ್ಲಿ ನ್ಯೂನತೆ ಉಂಟಾಗುವ ಸಂಭವವಿರುತ್ತದೆ. ಸಾವು ನೋವಿನ ಪ್ರಮಾಣ ಅಧಿಕವಾಗುತ್ತದೆ. ಇದರಿಂದ ದೇಶದ ಅಡಿ ಪಾಯವೇ ಕುಸಿಯಬಹುದು. ಇವುಗಳ ಪರಿಹಾರಕ್ಕೆ ವ್ಯವಸಾಯ ಕ್ಷೇತ್ರದ ಮತ್ತು ಆರ್ಥಿಕ ಜೀವನಮಟ್ಟದ ಪರಿಶೀಲನೆ ಅಗತ್ಯ. ಒಂದು ದೇಶದ ಆಹಾರ ಸಮಸ್ಯೆಯನ್ನು ಆದಷ್ಟು ಮಟ್ಟಿಗೆ ಪರಿಹರಿಸಲು, ಹೆಚ್ಚು ಆಹಾರ [illegible]

ವ್ಯವಸಾಯ ಸಂಸ್ಥೆ, ವಿಶ್ವ ಆರೋಗ್ಯ ಸಂಸ್ಥೆ ಮುಂತಾದ ಅಂತರ ರಾಷ್ಟ್ರೀಯ ಸಂಸ್ಥೆಗಳು ನೆರವಾಗುತ್ತವೆ.

ಆಹಾರದ ಬಿಕ್ಕಟ್ಟಿಗೆ ಹೆಚ್ಚು ಜನಸಂಖ್ಯೆಯೂ ಒಂದು ಮುಖ್ಯ ಕಾರಣ.

1914–1918 ಮತ್ತು 1939–45ರಲ್ಲಿ ನಡೆದ ಪ್ರಪಂಚದ ಮಹಾ ಯುದ್ಧಗಳ ಕಾಲದಲ್ಲಿ, ಯುದ್ಧನಿರತ ರಾಷ್ಟ್ರಗಳಲ್ಲಿ ಆಹಾರ ಅಭಾವ ಅತ್ಯುಗ್ರವಾಯಿತು. ಹೊರಗಿನಿಂದ ಬರುವ ಆಹಾರ ಪದಾರ್ಥಗಳ ಪೂರೈಕೆ ನಿಂತಿತು. ಶತ್ರುಗಳ ದಾಳಿಯಿಂದ ವ್ಯವಸಾಯ ಕ್ಷೇತ್ರಗಳು ಹಾಳಾದುವು. ಉಳುಮೆಯ ಬಗೆಗೆ ಗಮನ ಕಡಮೆಯಾಯಿತು. ಇದರಿಂದ ವೈಯಕ್ತಿಕ ಪ್ರಮಾಣವನ್ನು ನಿಗದಿಮಾಡಿ ಸರಕಾರಗಳೇ ಆಹಾರ ಪೂರೈಕೆಯ ಕಾರ್ಯ ಕೈಗೊಳ್ಳಬೇಕಾಯಿತು. ಇದಕ್ಕೆ ಪಡಿತರ ವ್ಯವಸ್ಥೆ ಎನ್ನುತ್ತಾರೆ. ಅನಾವೃಷ್ಟಿಯಿಂದಲೂ ಅದನ್ನು ಹಿಂಬಾಲಿಸಿ ಬರುವ ಕ್ಷಾಮದಿಂದಲೂ ಆಹಾರದ ಅಭಾವ ಉಂಟಾಗುತ್ತದೆ. ಸಂಪರ್ಕ ಸಾರಿಗೆಗಳು ಬಹುವಾಗಿ ಮುಂದುವರಿದಿರುವ ಈ ಕಾಲದಲ್ಲಿ ಇಂಥ ವಿಪರೀತ ಪರಿಸ್ಥಿತಿಗಳು ಒದಗದಂತೆ ಇತರ ರಾಷ್ಟ್ರಗಳು ನೆರವಿಗೆ ಬರುತ್ತವೆ.

ಆಹಾರ ಪದಾರ್ಥಗಳನ್ನು—ಮುಖ್ಯವಾಗಿ ಕಾಳು, ಧಾನ್ಯ ಇಂಥವನ್ನು—ಸಂಗ್ರಹಿಸಿಡುವುದು ಎಲ್ಲರ ಅಭ್ಯಾಸ. ಇದಕ್ಕೆ ಸ್ವಚ್ಛವಾದ, ಗಾಳಿ ಓಡಾಡುವ ಸ್ಥಳ ಬೇಕು. ಕ್ರಿಮಿಕೀಟಗಳು, ಹುಳ ಹುಪ್ಪಟೆಗಳು ಬೀಳದಂತೆ ನೋಡಿಕೊಳ್ಳಬೇಕು. ಪಾಕಶಾಲೆ ಶುಚಿಯಾಗಿಯೂ ಪಾತ್ರೆ ಪದಾರ್ಥಗಳು ಶುಭ್ರವಾಗಿಯೂ ಇದ್ದರೆ ಮನೆಮಂದಿಗೆಲ್ಲ ಆರೋಗ್ಯ.

ಆಹಾರಗಳ ಕಲಬೆರಕೆಯಾಗದಂತೆ ನೋಡಿಕೊಳ್ಳುವುದು ಅಗತ್ಯ. ವೈಜ್ಞಾನಿಕವಾಗಿ ಹದಗೊಳಿಸಿ, ಡಬ್ಬಗಳಲ್ಲೋ ಸೀಸೆಗಳಲ್ಲೋ ಭದ್ರಪಡಿಸಲಾದ ಅನೇಕ ಆಹಾರ ಪದಾರ್ಥಗಳು ಈಗ ಮಾರುಕಟ್ಟೆಗೆ ಬರುತ್ತವೆ. ಮಕ್ಕಳಿಗೆಂದು ಎಲ್ಲೆಲ್ಲೂ ದೊರೆಯುವ ಹಾಲಿನಪುಡಿ ಈ ಬಗೆಯದು. ಇದಲ್ಲದೆ ತರಕಾರಿಗಳನ್ನೂ ಸಿಗಡಿ ಮುಂತಾದುವನ್ನೂ ಶುದ್ಧ ವಾತಾವರಣದಲ್ಲಿ ಒಣಗಿಸಿ ಇಡುತ್ತಾರೆ. ಅಡಿಗೆ ಮಾಡಿದಾಗ ಇವು ಮೊದಲಿನ ಸ್ಥಿತಿಗೆ ಬರುತ್ತವೆ.

ನೋಡಿ : ಉಗ್ರಾಣ ; ವ್ಯವಸಾಯ

## ಇಂಗ್ಲೆಂಡ್

ನೋಡಿ : ಬ್ರಿಟನ್

## ಇಂಡಿಯಾ

ನೋಡಿ : ಭಾರತ

## ಇಂಡೊನೇಷ್ಯ

ಸುತ್ತಲೂ ಹಬ್ಬಿರುವ ಸಾಗರ, ಅಲ್ಲಲ್ಲಿ ಹಸಿರು ಚುಕ್ಕೆ ಇಟ್ಟಂತೆ ಸಣ್ಣ ದೊಡ್ಡ ದ್ವೀಪಗಳು. ಏಷ್ಯದ ಆಗ್ನೇಯ ಭಾಗದಲ್ಲಿರುವ ಸುಮಾರು ಮೂರು ಸಾವಿರ ದ್ವೀಪಗಳ ಸಮೂಹ, ಇಂಡೊನೇಷ್ಯ. ಜಾವಾ, ಸುಮಾತ್ರ, ಬೋರ್ನಿಯೊ, ಸೆಲಬಸ್ ದೊಡ್ಡ ದ್ವೀಪಗಳು. ಈ ದ್ವೀಪಗಳಿಗೆ ಈಸ್ಟ್ ಇಂಡೀಸ್ ಎನ್ನುತ್ತಿದ್ದರು. ಇವುಗಳಲ್ಲಿ ಬೋರ್ನಿಯೊ ಒಂದನ್ನು ಬಿಟ್ಟರೆ ಉಳಿದ ದ್ವೀಪಗಳು ಡಚ್ಚರ ಅಧೀನದಲ್ಲಿದ್ದುವು. ಎರಡನೆಯ ಮಹಾಯುದ್ಧದಲ್ಲಿ ಇವು ಜಪಾನರ ವಶವಾದುವು. ಆದರೆ ಜಪಾನ್ ಯುದ್ಧದಲ್ಲಿ ಸೋತದ್ದರಿಂದ ಈ ದ್ವೀಪಗಳು ಮತ್ತೆ ಡಚ್ಚರ ಕೈಸೇರಿದುವು. 1949ರ ಡಿಸೆಂಬರ್ 27ರಂದು ಡಚ್ಚರು ಎಲ್ಲ ದ್ವೀಪಗಳಿಗೂ ಸ್ವಾತಂತ್ರ್ಯವನ್ನು ಕೊಟ್ಟರು. ಆಗ ಇಂಡೊನೇಷ್ಯ ಎಂಬ ಹೆಸರು ಬಂತು. ಬೋರ್ನಿಯೊ ಸಹ ಬ್ರಿಟಿಷರಿಂದ ಬಿಡುಗಡೆ ಪಡೆಯಿತು. 1963ರಲ್ಲಿ ಪಶ್ಚಿಮ ನ್ಯೂಗಿನಿ ಇಂಡೊನೇಷ್ಯಕ್ಕೆ ಸೇರಿತು.

ಮಕರ ಸಂಕ್ರಾಂತಿ ಮತ್ತು ಕಟಕ ಸಂಕ್ರಾಂತಿ ವೃತ್ತಗಳ ನಡುವೆ ಈ ದ್ವೀಪಗಳಿವೆ. ಉಷ್ಣವಲಯದ ಹವಾಮಾನ.

ಸೊಲೋ, ಬ್ರಾಂಟಾಸ್, ಮುಸಿ, ಕಾಪ್ಯುಯಸ್ ಮುಖ್ಯ ನದಿಗಳು.

ಪೆಟ್ರೋಲಿಯಂ, ತವರ, ಕಲ್ಲಿದ್ದಲು, ಬಾಕ್ಸೈಟ್, ಚಿನ್ನ, ಬೆಳ್ಳಿ ಮೊದಲಾದ ಖನಿಜಗಳು ದೊರಕುತ್ತವೆ. ಕಾಡಿನಲ್ಲಿ ಘಟ್ಟಿ ಮರಗಳಿವೆ.

ಜಾಯಿಕಾಯಿ, ದಾಲ್ಚೀನಿ, ಲವಂಗದಂಥ ಹೆಚ್ಚು ಬೆಲೆಯ ಮಸಾಲೆ ಪದಾರ್ಥಗಳು, ಜೋಳ, ಭತ್ತ, ಯಾಮ್, ಕಡಲೆಕಾಯಿ, ರಬ್ಬರ್, ಹೊಗೆಸೊಪ್ಪು ಮುಂತಾದುವನ್ನು ಬೆಳೆಯುತ್ತಾರೆ.

ಒಂದನೆಯ ಶತಮಾನದಲ್ಲಿಯೇ ಇಂಡೊನೇಷ್ಯ ಸುಸಂಸ್ಕೃತ ರಾಷ್ಟ್ರವಾಗಿತ್ತೆಂದು ವಿದ್ವಾಂಸರ ಅಭಿಪ್ರಾಯ. ಎರಡನೆಯ ಶತಮಾನದಲ್ಲಿ ಭಾರತದ ವ್ಯಾಪಾರಿಗಳು ಇಂಡೊನೇಷ್ಯಕ್ಕೆ ಬಂದು ಹಿಂದೂಮತ ಬೌದ್ಧ ಮತಗಳನ್ನು ಹರಡಿದರು. ಭಾರತದ ಸಂಸ್ಕೃತಿ, ಶಿಲ್ಪಕಲೆ, ನೃತ್ಯ, ಸಾಹಿತ್ಯಗಳು ಇಂಡೊನೇಷ್ಯದಲ್ಲಿ ಪರಿಚಿತವಾದುವು, ಸಂಸ್ಕೃತ ಮತ್ತಿತರ ಪ್ರಾಚೀನ ಭಾರತೀಯ ಭಾಷೆಗಳ ಪದಗಳು ಇಂಡೊನೇಷ್ಯದ ಭಾಷೆಯಲ್ಲಿ ಬಳಕೆಗೆ ಬಂದುವು. ಹೀಗೆ ಭಾರತೀಯ ಸಂಸ್ಕೃತಿ ಇಂಡೊನೇಷ್ಯದಲ್ಲಿ ಅದರಲ್ಲೂ ವಿಶೇಷವಾಗಿ ಜಾವಾದಲ್ಲಿ ನೆಲೆಯೂರಿತು. ಈ ಕಾಲದಲ್ಲೇ ಬೋರೊ ಬುದೂರ್ ಎಂಬ ಭವ್ಯ ಬೌದ್ಧ ದೇವಾಲಯವನ್ನು ನಿರ್ಮಿಸಿದರು. ಲಾರಾ ಜಾಂಗ್ರ್ಯಾಂಗ್ ಎನ್ನುವ ಹಿಂದೂ ದೇವಾಲಯಗಳ ಗುಂಪನ್ನೂ ಕಟ್ಟಿದರು. ಶಿವ ದೇವಾಲಯಗಳಂತೂ ಹಲವಾರು ಇವೆ.

ಕುಶಲ ಕೈಗಾರಿಕೆ, ಪಾದರಕ್ಷೆ, ಸಿಗರೇಟು, ಬಟ್ಟೆ, ಕಾಗದ, ಬೊಂಬು, ಗಂಧದ ಮರ, ತೇಗ ಮುಂತಾದ ಕಾಡಿನ ವಸ್ತುಗಳು, ಹದಗೊಳಿಸಿದ ಚರ್ಮ, ಹಡಗು ನಿರ್ಮಾಣ, ಆಹಾರ ಸಂಸ್ಕರಣ ಇವೇ ಮೊದಲಾದ ಕೈಗಾರಿಕೆಗಳಿವೆ.

ಇಂಡೊನೇಷ್ಯದಲ್ಲಿ ಮುಸಲ್ಮಾನರೇ ಹೆಚ್ಚು. ವಿದೇಶೀಯರಲ್ಲಿ 25,00,000 ಮಂದಿ ಚೀನೀಯರು; ಬಾಲಿ ದ್ವೀಪದಲ್ಲಿ ಸುಮಾರು ಹತ್ತು ಲಕ್ಷ ಹಿಂದೂಗಳಿದ್ದಾರೆ.

1945ರ ಸಂವಿಧಾನದ ಪ್ರಕಾರ ಅಧ್ಯಕ್ಷರೇ ರಾಷ್ಟ್ರದ ಪ್ರಮುಖ ಅಧಿಕಾರಿ. ಇವರ ಕಾರ್ಯದಲ್ಲಿ ನೆರವಾಗಲು ಸರ್ವೋಚ್ಚ ಸಲಹಾ ಮಂಡಲಿಯೊಂದು ಇದೆ. 1963ರಲ್ಲಿ ಸುಕಾರ್ನೊ (ನಿಧನ : 1970) ಇಂಡೊನೇಷ್ಯದ ಅಧ್ಯಕ್ಷರಾಗಿ ಆರಿಸಲ್ಪಟ್ಟರು. 1968ರಲ್ಲಿ ಅವರನ್ನು ಪದಚ್ಯುತಿಗೊಳಿಸಿ ದಂಡನಾಯಕ ಸುಹಾರ್ತೊ ಅಧ್ಯಕ್ಷರಾದರು.

1619ರಲ್ಲಿ ಸ್ಥಾಪಿಸಲ್ಪಟ್ಟ ರಾಜಧಾನಿ ಜಕಾರ್ತದಲ್ಲಿ ಡಚ್ ಶಿಲ್ಪಕಲೆಯನ್ನು ನೋಡಬಹುದು. ಬಾಂಡುಂಗ್, ಸುರಬಾಯಾ ಪ್ರಮುಖ ನಗರಗಳು.

ಜಾವಾ ಇಂಡೊನೇಷ್ಯಕ್ಕೆ ಸೇರಿದ ಒಂದು ದ್ವೀಪ. ಅತಿ ಪ್ರಾಚೀನ ಕಾಲದಿಂದಲೂ ಇಲ್ಲಿ ಜನರಿದ್ದರು. ಇಲ್ಲಿ ಪೂರ್ವದಿಂದ ಪಶ್ಚಿಮಕ್ಕೆ

ಪರ್ವತಗಳು ಹರಡಿಕೊಂಡಿವೆ. ಅವುಗಳಲ್ಲಿ ಕೆಲವು ಅಗ್ನಿಪರ್ವತಗಳೂ ಇವೆ. ಕಾಡುಗಳಲ್ಲಿ ತೇಗ, ಸರ್ವೆ ಮುಂತಾದ ಮರಗಳಿವೆ.

ಬಹಳ ರಭಸವಾಗಿ ಹರಿಯುವ ಸೋಲೊ, ಬ್ರಾಂಟಾಸ್ ನದಿಗಳ ನೀರನ್ನು ಕಾಲುವೆಗಳ ಮೂಲಕ ಹರಿಸಿ ಕೃಷಿಗೆ ಉಪಯೋಗಿಸುತ್ತಾರೆ.

ಜಾವಾದಲ್ಲಿ ಪೆಟ್ರೋಲಿಯಂ ದೊರೆಯುತ್ತದೆ. ಗಂಧಕ, ಚಿನ್ನ, ರಂಜಕ ಸಹ ಇವೆ. ಭೂಮಿ ಫಲವತ್ತಾಗಿರುವುದರಿಂದ ಬಹಳ ಜನ ಕೃಷಿಕರು. ಭತ್ತ, ಜೋಳ, ಟಪಿಯೋಕ, ಸೋಯಾ ಬೀನ್ಸ್, ಕಡಲೆಕಾಯಿ, ಹಣ್ಣುಗಳು, ತರಕಾರಿಗಳು, ರಬ್ಬರ್, ಸಕ್ಕರೆ, ಟೀ, ಕಾಫಿ, ತೆಂಗಿನ ಕಾಯಿ, ಸಿಂಕೋನ ಬೆಳೆಯುತ್ತವೆ.

| | |
|---|---|
| ಖಂಡ : | ಏಷ್ಯ (ಆಗ್ನೇಯ) |
| ಅಕ್ಷಾಂಶ : | 5°54′ ಉ ದಿಂದ 11°ದ |
| ರೇಖಾಂಶ : | 95°01′ ಪೂ ದಿಂದ 141° 02′ ಪೂ |
| ವಿಸ್ತೀರ್ಣ : | 19,04,344 ಚ. ಕಿ. ಮೀ. (ಕಲಿಮಾಂಟನ್, ಸುಮಾತ್ರ, ಪಶ್ಚಿಮ ಇರಾನ್, ಸುಲವೇಸೀ, ಜಾವಾ, ಮದುರಾ, ಮಲುಕ ಮತ್ತಿತರ 3,000 ದ್ವೀಪಗಳು ಸೇರಿ) |
| ಜನಸಂಖ್ಯೆ : | 10,30,00,000 |
| ರಾಜಧಾನಿ ; | ಜಕಾರ್ತ |
| ಭಾಷೆ : | ಬಹಾಸಾ ; ಉಪಭಾಷೆಗಳು, ಪ್ರಾಂತ ಭಾಷೆಗಳು |
| ಸರಕಾರ : | ಗಣರಾಜ್ಯ |
| ಬಾವುಟ : | ಮೇಲರ್ಧ ಭಾಗ ಕೆಂಪುಬಣ್ಣ, ಕೆಳ ಅರ್ಧ ಬಿಳಿ |

ಹತ್ತಿ ಪದಾರ್ಥಗಳು, ಸಿಮೆಂಟು, ಪದರಹಲಗೆ, ಕಾಗದ ಮತ್ತು ಸಾಬೂನು ಕೈಗಾರಿಕೆಗಳಿವೆ. ಚರ್ಮ ಹದಮಾಡುವುದು, ಲೋಹ ಕೆಲಸ ಈ ಉದ್ಯೋಗಗಳೂ ಉಂಟು.

ಜಾವಾ ಇಂಡೊನೇಷ್ಯದ ಆರ್ಥಿಕ ವ್ಯವಸ್ಥೆಯ ಮುಖ್ಯ ಪ್ರಾಂತ. ಇಲ್ಲಿ ಭಾರತದ ಸಂಸ್ಕೃತಿಯ ಕುರುಹನ್ನು ಕಾಣಬಹುದು. ಇಲ್ಲಿನ ವೇಯಾಂಗ್ ಕುಲಿತ್ ಎನ್ನುವ ಸೂತ್ರದ ಬೊಂಬೆ ಆಟ ಪ್ರಸಿದ್ಧವಾದದ್ದು. ಚರ್ಮದಲ್ಲಿ ಚಿಕ್ಕ ಚಿಕ್ಕ ಬೊಂಬೆಗಳನ್ನು ಮಾಡಿ ಅವಕ್ಕೆ ಅಲಂಕಾರ ಮಾಡಿ ಬಿಳಿ ಬಟ್ಟೆಯ ಮೇಲೆ ಅದರ ನೆರಳು ಬೀಳುವಂತೆ ವ್ಯವಸ್ಥೆ ಮಾಡುತ್ತಾರೆ. ಭಾರತದಲ್ಲೂ ಸೂತ್ರದ ಬೊಂಬೆ ಆಟ ತೋರಿಸುತ್ತಾರೆಂಬುದನ್ನು ನೆನೆಯಬಹುದು.

ಜಾವಾದ ದೇವಾಲಯದಲ್ಲಿರುವ ಬುದ್ಧನ ಮೂರ್ತಿ ದಕ್ಷಿಣ ಭಾರತದ ಶಿಲ್ಪವನ್ನು ಹೋಲುತ್ತದೆ.

ಬಾಲಿ 1955ರಲ್ಲಿ ಇಂಡೊನೇಷ್ಯದ ಒಂದು ಪ್ರಾಂತವಾಯಿತು. ಬಾಲಿ ಜನರ ನೃತ್ಯ ವಿಶ್ವ ಪ್ರಖ್ಯಾತಿಯನ್ನು ಪಡೆದಿದೆ. ಬಣ್ಣಬಣ್ಣದ ಬಟ್ಟೆಗಳನ್ನು ತೊಟ್ಟು, ವಿಧವಿಧವಾಗಿ ಅಲಂಕರಿಸಿಕೊಂಡು ಬಾಲಿ ಬಾಲೆಯರು ರಾಮಾಯಣ, ಮಹಾಭಾರತ ಕಥೆಗಳಲ್ಲಿನ ದೃಶ್ಯಗಳನ್ನು ನೃತ್ಯರೂಪಕವಾಗಿ ಅಭಿನಯಿಸುತ್ತಾರೆ.

ಬಾಲಿ ಜನರ ಸೌಂದರ್ಯೋಪಾಸನೆಗೆ ನಿಸರ್ಗ ಪ್ರೇರಣೆ ನೀಡಿದೆ. ಬಾಲಿ ದ್ವೀಪಗಳು ಸೃಷ್ಟಿಯ ಚೆಲುವಿನ ಮಡಿಲಲ್ಲಿದ್ದು, ಎಲ್ಲಿನೋಡಿದರೂ ಸೊಬಗಿನ ದೃಶ್ಯವೇ ಕಣ್ಣಿಗೆ ಬೀಳುತ್ತದೆ.

ಜಾವಾ ದ್ವೀಪಕ್ಕೆ ಪೂರ್ವದಲ್ಲಿದೆ, ಬಾಲಿ ದ್ವೀಪ. ಇವೆರಡರ ಮಧ್ಯೆ ಜಲಸಂಧಿಯಿದೆ. 144 ಕಿ. ಮೀ. ಉದ್ದ, ಪರಮಾವಧಿ 80 ಕಿ. ಮೀ. ಅಗಲವಿರುವ ಬಾಲಿ ದ್ವೀಪ ತನ್ನ ಅತ್ಯಂತ ಕಿರಿಯಳತೆಯಲ್ಲಿ ಕೇವಲ ಎರಡೂವರೆ ಕಿ. ಮೀ.ಗಳಷ್ಟಿರುವುದೂ ಉಂಟು. ಬಾಲಿಯ ಮುಖ್ಯ ಪಟ್ಟಣ ಸಿಂಗರಾದೇಜ.

ಬಾಲಿ ವ್ಯವಸಾಯ ಪ್ರಧಾನವಾದ ದ್ವೀಪ. ಇಲ್ಲಿ ಅನೇಕ ನಿರ್ಜೀವ ಜ್ವಾಲಾಮುಖಿಗಳೂ ಕೆಲ ಜೀವಂತ ಜ್ವಾಲಾಮುಖಿಗಳೂ ಇವೆ.

4,000 ವರ್ಷಗಳಿಗೆ ಮುಂಚೆ ಏಷ್ಯದಿಂದ ದಕ್ಷಿಣಕ್ಕೆ ಬಂದ ವಲಸೆಗಾರರು ಬಾಲಿಯಲ್ಲಿ ನೆಲೆಸಿದರು. ಹತ್ತನೆಯ ಶತಮಾನದ ಹೊತ್ತಿಗೆ ಇಲ್ಲಿ ಹಿಂದೂ ಸಂಸ್ಕೃತಿ ಬಹುಮಟ್ಟಿಗೆ ಬೆಳೆಯಿತು. ಹದಿನೈದನೆಯ ಶತಮಾನದ ಅಂತ್ಯದ ವೇಳೆಗೆ ಬಾಲಿ ಜಾವಾದ ರಾಜನ ವಶವಾಯಿತು.

ನಾಟಕ, ಸಂಗೀತ, ನೃತ್ಯ, ನೆಯ್ಗೆ, ಚಿತ್ರಕಲೆಗಳು ಹಿಂದೆ ರಾಜಾಶ್ರಯದಲ್ಲಿ ಪೋಷಣೆ ಪಡೆಯುತ್ತಿದ್ದುವು. ಅಂಥ ಪೋಷಣೆ ಈಗ ಇರದಿದ್ದರೂ ಬಾಲಿಯ ಪ್ರತಿ ಹಳ್ಳಿಯೂ ಸಾಂಸ್ಕೃತಿಕ ಚಟುವಟಿಕೆಗಳಿಂದ ತುಂಬಿದೆ.

ಬಾಲಿ ಜನರ ಜೀವನದ ಮೇಲೆ ಧರ್ಮದ ಪ್ರಭಾವ ಹೆಚ್ಚು. ಹಿಂದೂ ಮತ ಅದರಲ್ಲೂ ಶೈವಮತ ಇವರ ಮುಖ್ಯ ಧರ್ಮ. ಶಿಲ್ಪ, ಚಿತ್ರಕಲೆ, ಬೆಳ್ಳಿ, ಮರ ಹಾಗೂ ಎಲುಬಿನಲ್ಲಿ ಕೊರೆಯುವುದು–ಈ ಎಲ್ಲ ಕುಶಲ ಕೆಲಸಗಳೂ ಪುಷ್ಪಾಲಂಕಾರ ಮತ್ತು ತಾಳೆ ಎಲೆಗಳಲ್ಲಿ ಹರಕೆಗೆಂದು ಸಲ್ಲಿಸುವ ಕೆಲ ಕುಶಲ ಕೃತಿಗಳೂ ಈ ಜನರ ಕಲಾ ಪ್ರವೃತ್ತಿಯ ಪ್ರತೀಕಗಳು.

## ಇಂದ್ರಜಾಲ

ಖಾಲಿ ಟೋಪಿ, ಸಭಿಕರೆಲ್ಲ ನೋಡಿದ್ದಾರೆ. ಅದರಿಂದಲೇ ಕಾಗದದ ಹೂವಿನ ಹಾರವನ್ನು ತೆಗೆದಿಡುತ್ತಾನೆ ಯಕ್ಷಿಣಿಗಾರ ಮೇಜಿನ ಮೇಲೆ !

ಮಕ್ಕಳು ಬೆರಗಾಗುತ್ತಾರೆ.

ಸಭಿಕರ ಕಣ್ಣೆದುರಿಗೆ ಪೆಟ್ಟಿಗೆಯಲ್ಲಿ ಮನುಷ್ಯನನ್ನು ಕೂಡಿಸಿ ಬಾಗಿಲು ಹಾಕುವುದು, ಪೆಟ್ಟಿಗೆಯ ಹಲಗೆಗಳಲ್ಲಿ ಮಾಡಿರುವ ತೂತುಗಳಿಂದ ಕತ್ತಿಗಳನ್ನು ಚುಚ್ಚುವುದು, ಅನಂತರ ಬಾಗಿಲು ತೆಗೆದರೆ—ಒಳಗಿದ್ದ ಮನುಷ್ಯ ನಗುನಗುತ್ತ ಬರುತ್ತಾನೆ ಮೈಮೇಲೆ ಒಂದು ಗಾಯವೂ ಇಲ್ಲದೆ.

ಯಕ್ಷಿಣಿಗಾರನ ಪಕ್ಕದಲ್ಲಿ ಈ ಕ್ಷಣ ನಿಂತಿದ್ದ ಹುಡುಗಿ, ಮುಂದಿನ ಕ್ಷಣ ಇಲ್ಲ; ಎಲ್ಲರೆದುರಿಗೇ ಮಾಯ !

ಪ್ರೇಕ್ಷಕವರ್ಗದಲ್ಲಿ ಮಕ್ಕಳು ಮಾತ್ರವಲ್ಲದೆ, ದೊಡ್ಡವರೂ ಅಚ್ಚರಿಗೊಳ್ಳುತ್ತಾರೆ.

ಯಕ್ಷಿಣಿಗಾರ 'ಯಕ್ಷಿಣಿ' ಮಾಡುವವನು. ಹಿಂದೆ ಭಾರತದಲ್ಲಿ 'ಯಕ್ಷ' ಎಂದರೆ ಮನುಷ್ಯರನ್ನು ಮೀರಿದವನು, ಅಸಾಧಾರಣ ಶಕ್ತಿ ಇರುವವನು, ಮನುಷ್ಯನಿಗೆ ಸಾಧ್ಯವಾಗದಿದ್ದುದನ್ನು ಮಾಡುವವನು ಎಂದು ನಂಬಿಕೆ ಇದ್ದಿತು. ಇದರಿಂದ 'ಯಕ್ಷಿಣಿ' ಪದ ಬಂದಿದೆ. ಇದಕ್ಕೆ ಇನ್ನೊಂದು ಹೆಸರು 'ಇಂದ್ರಜಾಲ', ದೇವತೆಗಳ ರಾಜ ಇಂದ್ರನಿಗೆ ಇರುವ ವಿಶೇಷ ಶಕ್ತಿಯನ್ನು ನೆನಪು ಕೊಡುವ ಹೆಸರು. ಇದನ್ನೇ 'ಜಂತರ್ ಮಂತರ್' ಎನ್ನುತ್ತಾರೆ, 'ಜಾದೂ' ಎನ್ನುತ್ತಾರೆ.

ಇಂದ್ರಜಾಲ ಯಾವಾಗ ಎಲ್ಲಿ ಪ್ರಾರಂಭವಾಯಿತೋ ಹೇಳಲು ಸಾಧ್ಯವಿಲ್ಲ. ಅನಾಗರಿಕ ಮಾನವನಿಗೆ ಮಂತ್ರಮಾಟಗಳಲ್ಲಿ ನಂಬಿಕೆ ಇತ್ತು. ಎಷ್ಟೋ ಪಂಗಡಗಳಲ್ಲಿ ವೈದ್ಯ ಕಣ್ಣಿಗೆ ಕಾಣದ ಶಕ್ತಿಗಳನ್ನು ವಶಮಾಡಿ



ನೋಟಕರನ್ನು ಮೋಡಿಗೆ ಈಡುಮಾಡುವ ಯಕ್ಷಿಣಿಗಾರ

ಕೊಂಡಿರುತ್ತಾನೆ, ಮಂತ್ರಮಾಟದಿಂದ ಕಾಯಿಲೆಯನ್ನು ವಾಸಿಮಾಡುತ್ತಾನೆ ಎನ್ನುವ ನಂಬಿಕೆ ಇದ್ದಿತು. ಇಂದ್ರಜಾಲ, ವಿಶೇಷ ಶಕ್ತಿಗಳ ಮೇಲೆ ಪ್ರಭುತ್ವ—ಇವುಗಳ ಪ್ರಸ್ತಾಪ ಭಾರತದ ಅಥರ್ವ ವೇದದಲ್ಲಿದೆ. ಮನುಷ್ಯರು ಸಾಮಾನ್ಯವಾಗಿ ಸಾಧಿಸಲಾಗದ ಅದ್ಭುತಗಳನ್ನು ಮಂತ್ರ ಶಕ್ತಿಯಿಂದ ಸಾಧಿಸಬಹುದು ಎಂಬ ನಂಬಿಕೆ ಇದರ ಆಧಾರ; ಅಥರ್ವ ವೇದ ಈ ಮಂತ್ರ ತಂತ್ರಗಳನ್ನು ವಿವರಿಸುತ್ತದೆ. ಇದನ್ನು ತಂತ್ರಶಾಸ್ತ್ರ ಎಂದೂ ಕರೆಯುತ್ತಾರೆ. ಜಹಾಂಗೀರನ ಕಾಲದಲ್ಲಿ ಏಳು ಮಂದಿ ಮಾಂತ್ರಿಕರು ಮಾಡಿದ 'ಯಕ್ಷಿಣಿ'ಗಳ ಉಲ್ಲೇಖ ಜಹಾಂಗೀರನ ಸ್ಮೃತಿಗಳಲ್ಲಿದೆ. ಹಗ್ಗವನ್ನು ನೇರವಾಗಿ ನಿಲ್ಲಿಸಿ ಅದನ್ನು ಹತ್ತಿ ಮರೆಯಾಗುವ ಪವಾಡವನ್ನು ಇವರು ಮಾಡಿದರು ಎಂದು ಹೇಳಲಾಗಿದೆ. (1934ರಲ್ಲಿ ಲಂಡನ್ನಿನ ಇಂದ್ರಜಾಲ ಸಮಿತಿಯರು, ಈ ಪವಾಡವನ್ನು ಬಯಲಲ್ಲಿ ಮಾಡಿತೋರಿಸಿದವರಿಗೆ ದೊಡ್ಡ ಬಹುಮಾನವನ್ನು ಕೊಡುವುದಾಗಿ ಪ್ರಕಟಿಸಿದರು. ಇದುವರೆಗೆ ಯಾರೂ ಮುಂದೆ ಬಂದಿಲ್ಲ.) ಬರ್ಲಿನ್ ವಸ್ತು ಸಂಗ್ರಹಾಲಯದಲ್ಲಿ ಇರುವ ಪ್ರಾಚೀನ ದಾಖಲೆಯೊಂದರಲ್ಲಿ ಬಹು ಪ್ರಾಚೀನ ಕಾಲದ ಯಕ್ಷಿಣಿಗಾರನ ಪ್ರಸ್ತಾಪವಿದೆ. ಈಜಿಪ್ಟಿನ ಅರಸನ ಆಸ್ಥಾನದ ಮಾಂತ್ರಿಕನೊಡನೆ ಡೆಡ್ಸ್‌ನೆಫರ್ ಎಂಬವನು ಸ್ಪರ್ಧಿಸಿದನಂತೆ: ಒಬ್ಬ ಮನುಷ್ಯನ ತಲೆ ಕತ್ತರಿಸಿ ಮತ್ತೆ ದೇಹಕ್ಕೆ ಸೇರಿಸಿದನಂತೆ.

ಮನುಷ್ಯನ ಜ್ಞಾನ ಬೆಳೆದಂತೆ. ಮಾಟಮಂತ್ರಗಳಲ್ಲಿ ನಂಬಿಕೆ ಕಡಮೆ ಯಾಗುತ್ತಾ ಬಂದಿತು. ವಿದ್ಯಾವಂತರೂ ತಿಳಿವಳಿಕೆಯುಳ್ಳವರೂ ಇಂದ್ರಜಾಲವನ್ನು ನೋಡಲು ಬಯಸುತ್ತಾರೆ, ಆದರೆ ಯಕ್ಷಿಣಿಗಾರನಲ್ಲಿ ಅತಿಮಾನುಷಶಕ್ತಿ ಇದೆಯೆಂದು ಅವರು ನಂಬುವುದಿಲ್ಲ. ಕೈಚಳಕ ಮತ್ತು ಬುದ್ಧಿವಂತಿಕೆಗಳನ್ನು ನೋಡಲು ಹೋಗುತ್ತಾರೆ ಅಷ್ಟೆ. ಇಂದ್ರಜಾಲದಲ್ಲಿ ಮುಖ್ಯವಾದದ್ದು, ಬುದ್ಧಿವಂತಿಕೆ —ಯಾವ ಕಾರಣದಿಂದ ಯಾವ ಪರಿಣಾಮವಾಯಿತು. ಯಕ್ಷಿಣಿಗಾರ ಮಾಡಿದ 'ಅದ್ಭುತ'ಕ್ಕೆ ನಿಜವಾದ ಕಾರಣ ಏನು. ಎಂಬುದು ಅರ್ಥವಾಗದಂತೆ ಮಾಡಿ ಪ್ರೇಕ್ಷಕರಿಗೆ ಭ್ರಮೆ ಉಂಟು ಮಾಡುವ ಬುದ್ಧಿ ವಂತಿಕೆ. ಕೈಚಳಕ ಯಕ್ಷಿಣಿಗಾರನಿಗೆ ಅತ್ಯಗತ್ಯ. ನೋಡುವವರ ಗಮನವನ್ನು ಎಲ್ಲಿಯೋ ಸೆಳೆದು, ನಡೆದದ್ದು ನಡೆಯಲಿಲ್ಲ ಎನ್ನುವಂತೆ, ನಡೆಯದಿದ್ದುದು ಆಯಿತು ಎನ್ನುವಂತೆ ಮಾಡುವಷ್ಟು ಚುರುಕಾಗಿರಬೇಕು ಅವನ ಬುದ್ಧಿ ಮತ್ತು ಕೈಗಳು.

ಇಂದಿನ ಯಕ್ಷಿಣಿಗಾರರನ್ನು ಐದು ಪಂಥಗಳಾಗಿ ವಿಂಗಡಿಸಬಹುದು. ಪ್ರತಿ ಗುಂಪಿಗೆ ಅದರ ವಿಧಾನವನ್ನು ಮೊದಲು ಬಳಸಿದವನ ಹೆಸರನ್ನಿಟ್ಟಿದೆ. 1 ಓನೆಟಿ ಪಂಥದವರು ಕಣ್ಸೆಳೆಯುವ ಉಪಕರಣಗಳನ್ನು ಬಳಸುತ್ತಾರೆ. 2. ರಾಬರ್ಟ್ ಹೌಡಿನಿ ಪಂಥದವರು ವೈಜ್ಞಾನಿಕ ಸಲಕರಣೆಗಳನ್ನು ಬಳಸುತ್ತಾರೆ. ರಾಬರ್ಟ್ ಹೌಡಿನಿ (1874–1926)ಯನ್ನು 'ಆಧುನಿಕ ಇಂದ್ರಜಾಲದ ತಂದೆ' ಎಂದು ಕರೆಯುತ್ತಾರೆ. (ಇವನ ಮೂಲ ಹೆಸರು ವಿರಿಕ್ ವೀಸ್. ವೃತ್ತಿಯಿಂದ ಗಡಿಯಾರಗಳನ್ನು ಮಾಡುವ ಕಸಬು. ಗಡಿಯಾರಗಳನ್ನು ಕುರಿತು ಎರಡು ಪುಸ್ತಕ ಇವನಿಗೆ ಬರಬೇಕಾಗಿತ್ತು ; ತಪ್ಪಿನಿಂದ ಎರಡು ಇಂದ್ರಜಾಲದ ಪುಸ್ತಕಗಳು ಬಂದುವು. ಇಂದ್ರಜಾಲದಲ್ಲಿ ಇವನಿಗೆ ಕುತೂಹಲ ಹುಟ್ಟಿತು). ವಿದ್ಯುಚ್ಛಕ್ತಿಯನ್ನು ಮನೆಯ ಕೆಲಸಕ್ಕೂ ಇಂದ್ರಜಾಲಕ್ಕೂ ಈತ ಚಾತುರ್ಯದಿಂದ ಬಳಸಿಕೊಂಡ. 3. ಫ್ರಿಕೆನ್ ಪಂಥ ಕೈಚಳಕವನ್ನೆ ಅವಲಂಬಿಸುತ್ತದೆ. 4. ಮಾಸ್ಕೆಲೈನ್ ಎನ್ನುವ ಇಟಲಿಯ ಐಂದ್ರಜಾಲಿಕನ ಪಂಥದವರು ಪ್ರದರ್ಶನ ನಾಟಕೀಯವಾಗುವಂತೆ ಮಾಡುತ್ತಾರೆ. 5. ಥರ್ಸ್ಟನ್ ಪಂಥದವರು ಸಂಗೀತವನ್ನೂ ಬೆರಗುಗೊಳಿಸುವ ರಂಗುರಂಗಿನ ಹಿನ್ನೆಲೆಯನ್ನೂ ಬಳಸುತ್ತಾರೆ. ಕೈಚಳಕದ ಆಟಗಳು ಕಣ್ಣು ಮುಚ್ಚಿ ತೆಗೆಯುವುದರಲ್ಲಿ ಒಂದನ್ನೊಂದು ಹಿಂಬಾಲಿಸುವುದರಿಂದ ಪ್ರೇಕ್ಷಕರಿಗೆ ದಿಗ್ಭ್ರಮೆಯಾಗುತ್ತದೆ.

ಜಗತ್ತಿನ ಅತಿ ಶ್ರೇಷ್ಠ ಯಕ್ಷಿಣಿಗಾರ ಎನ್ನಿಸಿಕೊಂಡವನು ಹೌಡಿನಿ. ಪ್ರೇಕ್ಷಕರ ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡುವ ಕೌಶಲದಲ್ಲಿ, ಪ್ರದರ್ಶನಗಳನ್ನು ಏರ್ಪಡಿಸುವ ಕಲೆಯಲ್ಲಿ ಇವನನ್ನು ಸರಿಗಟ್ಟುವವರು ಇರಲಿಲ್ಲ. ಹಾರುತ್ತಿರುವ ಎರಡು ವಿಮಾನಗಳಲ್ಲಿ ಒಂದರಿಂದ ಇನ್ನೊಂದಕ್ಕೆ ನೆಗೆಯುವುದು ಇವನ ಸಾಧನೆ.

ಇಂದು ಇಂದ್ರಜಾಲ ಎಲ್ಲ ದೇಶಗಳಲ್ಲಿ ಮನೋರಂಜನೆಯ ಸಾಧನವಾಗಿದೆ. ನೃತ್ಯದಲ್ಲಿ ಪಾದಗಳ ಬಳಕೆಯಂತೆ ಇಂದ್ರಜಾಲದಲ್ಲಿ ಕೈಗಳ ಬಳಕೆ. ಸೆಕೆಂಡು ಸೆಕೆಂಡೂ ಮುಖ್ಯ ಇಲ್ಲಿ. ಸೆಕೆಂಡಿನ ಒಂದು ಅಂಶದಷ್ಟೂ ಹೆಚ್ಚು ಕಡಮೆಯಾಗದಂತೆ ಬೆರಳುಗಳಾಡಬೇಕು. ಇಂದಿನ ಯಕ್ಷಿಣಿಗಾರ ನಟನೂ ಆಗಿರಬೇಕು, ಪ್ರದರ್ಶನ ಚತುರನೂ ಆಗಿರಬೇಕು, ಪ್ರೇಕ್ಷಕರ ಮನಸ್ಸು ಹೇಗೆ ಕೆಲಸ ಮಾಡುತ್ತದೆ ಎನ್ನುವುದನ್ನು ತಿಳಿದಿರಬೇಕು. ಬಡಗಿ. ದರ್ಜಿ, ಕಮ್ಮಾರ, ಚಿತ್ರಗಾರ, ವಿದ್ಯುಚ್ಛಕ್ತಿಯ ನಿಪುಣ—ಎಲ್ಲರ ಸಹಾಯವನ್ನೂ ಪಡೆದು ತನ್ನ ಬುದ್ಧಿಶಕ್ತಿ–ಕೈಚಳಕಗಳಿಂದ ಹೊಸದೊಂದು ವಾತಾವರಣವನ್ನೇ ಸೃಷ್ಟಿಸಿ, ಪ್ರೇಕ್ಷಕರು ಉಸಿರು ಹಿಡಿದು ರೆಪ್ಪೆ ಹಾಕದೆ

ಬೆರಗಾಗಿ ನಿಟ್ಟಿಸುವಂತೆ ಮಾಡಬೇಕು. ತನಗೆ ಬೇಕಾದಂತೆ ಅವರ ಕಣ್ಣುಗಳನ್ನೂ ಮನಸ್ಸನ್ನೂ ಸೆಳೆದು ಹಿಡಿದು ನಿಲ್ಲಿಸಿ ಭ್ರಾಂತಿಯನ್ನುಂಟು ಮಾಡಬೇಕು. ಪ್ರದರ್ಶನದಲ್ಲಿ ರಂಗಭೂಮಿಯ ಸಜ್ಜಿಕೆ ಬಹು ಮುಖ್ಯ. ಹಿನ್ನೆಲೆಯ ಪರದೆಗಳ ಬಣ್ಣ, ವಿನ್ಯಾಸ, ರಂಗಭೂಮಿಯಲ್ಲಿ ಎಲ್ಲೆಲ್ಲಿ ಎಂಥೆಂಥ ಬಣ್ಣದ ಬೆಳಕಿರಬೇಕು, ಎಷ್ಟು ಬೆಳಕಿರಬೇಕು, ಧ್ವನಿವರ್ಧಕ, ಮೇಜು, ಕುರ್ಚಿ ಎಲ್ಲೆಲ್ಲಿರಬೇಕು, ಎಲ್ಲ ವಿವರಗಳಿಗೂ ಗಮನ ಕೊಡಬೇಕು ಯಕ್ಷಿಣಿಗಾರ.

ಇಂದ್ರಜಾಲಿಕ ಅಂತರರಾಷ್ಟ್ರೀಯ ಸಂಘಗಳಿವೆ. ಅಮೆರಿಕದ 'ಯಕ್ಷಿಣಿಗಾರರ ಅಂತರರಾಷ್ಟ್ರೀಯ ಭ್ರಾತೃತ್ವ' ಇವುಗಳಲ್ಲಿ ಅತಿ ದೊಡ್ಡದು; ಯಕ್ಷಿಣಿಗಾರರಿಗೆ ಹಲವು ಸೌಕರ್ಯಗಳನ್ನು ಕಲ್ಪಿಸಿರುವ 'ಲಂಡನ್ನಿನ ಇಂದ್ರಜಾಲ ಒಳವೃತ್ತ' ಮತ್ತೊಂದು ಪ್ರಸಿದ್ಧ ಸಂಸ್ಥೆ. ಇಂದ್ರಜಾಲಕ್ಕೆ ಅಗತ್ಯವಾದ ಉಪಕರಣಗಳನ್ನು ಮಾಡುವ ವ್ಯಾಪಾರಿ ಸಂಸ್ಥೆಗಳು ಬೇಕಾದಷ್ಟಿವೆ. ಅಮೆರಿಕದ ಸಂಯುಕ್ತ ಸಂಸ್ಥಾನದಲ್ಲಿ ಇವು ಹೆಚ್ಚು.

## ಇಟಲಿ

ಜೂಲಿಯಸ್ ಸೀಸರ್ ಬದುಕಿ ಬಾಳಿದ್ದು, ಒಂದು ಸಾಮ್ರಾಜ್ಯವನ್ನು ಆಳಿದ್ದು, ಕಡೆಗೆ ಕೊಲೆಯಾದದ್ದು ಇಟಲಿಯ ರೋಮ್‌ನಲ್ಲಿ. ಕ್ರಿಸ್ಟಫರ್ ಕೊಲಂಬಸ್ ಹುಟ್ಟಿದ್ದು ಇಟಲಿಯಲ್ಲಿ. ಪ್ರಪಂಚದ ಮಹಾಕವಿಗಳಲ್ಲೊಬ್ಬನಾದ ದಾಂತೇ, ವಿಜ್ಞಾನಿಗಳಾದ ಗೆಲಿಲಿಯೊ, ಮಾರ್ಕೋನಿ, ಅತಿಶ್ರೇಷ್ಠ ಚಿತ್ರಕಾರರಾದ ಲಿಯೊನಾರ್ದೊ ದ ವಿಂಚಿ, ರಾಫೇಲ್, ಮೈಕೆಲಂಜೆಲೊ, ಸಂತ ಫ್ರಾನ್ಸಿಸ್ ಎಲ್ಲರ ನಾಡು ಇಟಲಿ. ಹಲವು ರೀತಿಗಳಲ್ಲಿ ಪ್ರಪಂಚದ ಚರಿತ್ರೆಯಲ್ಲಿ ಈ ದೇಶ ಪ್ರಮುಖ ಸ್ಥಾನ ಪಡೆದಿದೆ. ಅಲ್ಲಿಗೆ ಪ್ರವಾಸ ಹೋದವರು ಸ್ಮಾರಕಗಳನ್ನು ನೋಡುತ್ತ ಸಾವಿರಾರು ವರ್ಷಗಳ ಮತ್ತು ಹಲವು ಸಾಮ್ರಾಜ್ಯಗಳ ಇತಿಹಾಸದ ಪುಟಗಳನ್ನು ಮನಸ್ಸಿನಲ್ಲಿ ತಿರುವಿಹಾಕುತ್ತಾರೆ.

ಇಟಲಿ ಪ್ರಾಚೀನ ಸಂಸ್ಕೃತಿಯ ಬೀಡು. 2,000 ವರ್ಷಗಳ ಹಿಂದೆ ರೋಮನರ ಆಡಳಿತದಲ್ಲಿ ಈ ರಾಷ್ಟ್ರ ಒಂದಾಗಿತ್ತು. ಇಲ್ಲಿನ ನಾಗರಿಕತೆ ಯೂರೋಪಿನಲ್ಲೂ ಹರಡಿತ್ತು. ಶತಮಾನಗಳ ಕಾಲ ನಡೆದ ಅನಾಗರಿಕ ಜನರ ದಾಳಿಗೆ ಇಟಲಿ ತುತ್ತಾಗಿ ಆ ಮಹಾ ಸಂಸ್ಕೃತಿ ಅಳಿಯಬೇಕಾಯಿತು. ಮಧ್ಯಯುಗದಲ್ಲಿ ಮಿಲಾನ್, ಪೀಸಾದಂಥ ಚಿಕ್ಕ ನಗರಗಳು ಪ್ರಬಲ ಸಂಸ್ಥಾನಗಳಾಗಿದ್ದು ಆಫ್ರಿಕ ಮತ್ತು ಯೂರೊಪಿನ ಇತರ ರಾಷ್ಟ್ರಗಳೊಡನೆ ವ್ಯಾಪಾರ ನಡೆಸುತ್ತಿದ್ದುವು. ಹದಿನೈದನೆಯ ಶತಮಾನದಲ್ಲಿ ಫ್ರಾನ್ಸ್ ಇಟಲಿಯನ್ನು ಆಕ್ರಮಿಸಿತು. ನೆಪೋಲಿಯನ್ 1796ರಲ್ಲಿ ಇಟಲಿಯ ರಾಜನೆಂದು ಮಿಲಾನ್‌ನಲ್ಲಿ ಕಿರೀಟಧಾರಣೆ ಮಾಡಿಕೊಂಡ. ಅವನು ಸೋತಾಗ ಮತ್ತೆ ಕೆಲವು ಸಂಸ್ಥಾನಗಳಾದವು. ಆದರೆ ಇಟಲಿ ಒಂದೇ ದೇಶವಾಗಿರಬೇಕೆಂಬ ಬಯಕೆ ಜನರಲ್ಲಿ ಉಳಿಯಿತು. 1831ರಲ್ಲಿ ಐಕ್ಯ ಇಟಲಿ ಗಣರಾಜ್ಯವಾಗಬೇಕೆಂದು ಗೆಸೆಪೆ ಮಾಜಿನಿ ಚಳುವಳಿ ಆರಂಭಿಸಿದ. ಇವನು ವಿಫಲನಾದರೂ ಇತರರು ಚಳುವಳಿಯನ್ನು ಮುಂದುವರಿಸಿಕೊಂಡು ಹೋದರು. ಇವರಲ್ಲಿ ಪ್ರಮುಖ ಗ್ಯಾರಿಬಾಲ್ಡಿ (1807–1872). 1870ರಲ್ಲಿ ಐಕ್ಯ ಇಟಲಿ ಉದಯಿಸಿತು. ದೇಶ ಸ್ವಲ್ಪ ಕಾಲ ಬವಣೆಯಲ್ಲಿ ತೊಳಲಬೇಕಾಯಿತು. ಆಫ್ರಿಕದಲ್ಲಿ ವಸಾಹತುಗಳನ್ನು ಸ್ಥಾಪಿಸಿದ ಮೇಲೆ ಪರಿಸ್ಥಿತಿ ಉತ್ತಮಗೊಂಡಿತು.

ಮೊದಲನೆಯ ಮಹಾಯುದ್ಧದಲ್ಲಿ ಇಟಲಿ ಫ್ರಾನ್ಸಿನ ಪಕ್ಷ ವಹಿಸಿ ಹೋರಾಡಿತು. ವಿಜಯಿ ಪಕ್ಷದಲ್ಲಿದ್ದರೂ ಲಾಭವೇನೂ ನಿರೀಕ್ಷಿಸಿದಷ್ಟು ಆಗಲಿಲ್ಲ. ಯುದ್ಧಾನಂತರ ಚೇತರಿಸಿಕೊಳ್ಳುವುದರಲ್ಲಿದ್ದಾಗ ಮುಸೋಲಿನಿ ಅಧಿಕಾರಕ್ಕೆ ಬಂದ. ಇಪ್ಪತ್ತು ವರ್ಷಗಳ ಕಾಲ ಸರ್ವಾಧಿಕಾರಿಯಾಗಿ ಆಳಿದ ಮುಸೋಲಿನಿ ಇಟಲಿಯನ್ನು ಎರಡನೆಯ ಮಹಾಯುದ್ಧದ ಬೆಂಕಿಗೆ ಒಡ್ಡಿದ. ಈ ಯುದ್ಧದಲ್ಲಿ ಇಟಲಿಗೆ ಅಪಾರ ನಷ್ಟ ಸಂಭವಿಸಿತು. 1947ರಲ್ಲಿ ಯೂರೊಪಿನ ಹದಿನೇಳು ರಾಷ್ಟ್ರಗಳು, ಯುದ್ಧದ ಹಾನಿಯಿಂದ ಚೇತರಿಸಿಕೊಳ್ಳಲು ಐರೋಪ್ಯ ಪುನಶ್ಚೇತನ ಕಾರ್ಯಕ್ರಮ ಎಂಬ ವ್ಯವಸ್ಥೆಯನ್ನು ಮಾಡಿಕೊಂಡುವು. ಹಾಳಾದ ನಾಡನ್ನು ಪುನಃ ಕಟ್ಟುವ ಕೆಲಸಕ್ಕೆ ಇಟಲಿಗೆ ಇದರಿಂದ ನೆರವು ದೊರಕಿತು,

ಇಟಲಿ ಭೂಮಧ್ಯ ಸಮುದ್ರಕ್ಕೆ ಕಾಲಿನಾಕಾರದಲ್ಲಿ ಚಾಚಿಕೊಂಡಿರುವ ಪರ್ಯಾಯ ದ್ವೀಪ. ಸಿಸಿಲಿ, ಸಾರ್ಡಿನಿಯ ದ್ವೀಪಗಳು ಈ ದೇಶಕ್ಕೆ ಸೇರಿವೆ. ಇಟಲಿ ಪರ್ವತಮಯ ದೇಶ. ಉತ್ತರದಲ್ಲಿ ಆಲ್ಪ್ಸ್ ಕೋಟೆಯಂತೆ ತಲೆಯೆತ್ತಿ ನಿಂತಿದೆ. ಪಶ್ಚಿಮ ರಾಷ್ಟ್ರಗಳಲ್ಲೆಲ್ಲ ಆಲ್ಪ್ಸ್ ಪ್ರಮುಖ ಪರ್ವತ. ಹಿಮದ ಕಿರೀಟ ಹೊತ್ತಂತೆ ಕಾಣುವ ಪರ್ವತದ ಸಾಲುಗಳು ನೋಟಕರನ್ನು ಸೆರೆಹಿಡಿಯುತ್ತವೆ. ಎತ್ತರಕ್ಕೆ ಹೋದಂತೆ ಹಿಮ ಹೆಚ್ಚು. ಕೆಲವು ಕಡೆಗಳಲ್ಲಿ ಹಿಮ ಕತ್ತರಿಸಿ ಬಂಡೆಯಾಕಾರದ ಹಿಮದ ನದಿಗಳು ಹರಿಯುತ್ತವೆ, ಉತ್ತುಂಗ ಶಿಖರಗಳ ನಡುವೆ ಕಣಿವೆಗಳಿವೆ. ಇಟಲಿ ಮತ್ತು ಆಸ್ಟ್ರಿಯಗಳ ನಡುವೆ ಬೆನ್ನರ್ ಕಣಿವೆ ಇದೆ. ಇಟಲಿಯ ಸಿಂಪ್ಲಾನ್ ಕಣಿವೆಯ ಕೆಳಗೆ ವಿಶ್ವದಲ್ಲೇ ದೊಡ್ಡದಾದ ಸುಮಾರು ಇಪ್ಪತ್ತು ಕಿಲೊಮೀಟರ್ ಉದ್ದದ ಸುರಂಗ ರೈಲುಮಾರ್ಗವಿದೆ,

ಪೋ ಕಣಿವೆ ಪ್ರದೇಶ ಅಪನೈನ್ಸ್ ಶ್ರೇಣಿ, ಅಪೂಲೀಯ ಪ್ರಸ್ಥಭೂಮಿ, ಸಿಸಿಲಿ, ಸಾರ್ಡೀನಿಯ ಇವು ಇಟಲಿಯ ಪ್ರಾಕೃತಿಕ ವಿಭಾಗಗಳು. ಉತ್ತರಕ್ಕೆ ಆಲ್ಪ್ಸ್ ಪರ್ವತ. ದಕ್ಷಿಣಕ್ಕೆ ಭೂಮಧ್ಯ ಸಮುದ್ರ, ಪೂರ್ವಕ್ಕೆ ಆಡ್ರಿಯಾಟಿಕ್ ಸಮುದ್ರ ಮತ್ತು ಪಶ್ಚಿಮಕ್ಕೆ ಟಿರ್‌ಹೀನಿಯನ್ ಸಮುದ್ರಗಳು ಮೇರೆಗಳಾಗಿವೆ. ಸಿಸಿಲಿಯಲ್ಲಿರುವ ಎಟ್ನ ಪರ್ವತ ವಿಶ್ವದ ಅತಿ ಎತ್ತರದ ಜೀವಂತ ಜ್ವಾಲಾಮುಖಿ. ನೇಪಲ್ಸಿನ ದಕ್ಷಿಣಕ್ಕಿರುವ ವೆಸುವಿಯಸ್ ಜ್ವಾಲಾಮುಖಿ 130 ಮೀಟರ್ ಎತ್ತರವಿದೆ. ಇದು 79ರಲ್ಲಿ ಪಾಂಪೆ ಮತ್ತು ಹರ್‌ಕ್ಯುಲ್ಯಾನಿಯಮ್ ನಗರಗಳನ್ನು ಬಲಿತೆಗೆದುಕೊಂಡಿತು. 1906ರಲ್ಲಿ ಉಗುಳಿದ ಕೆಂಡದ ಬಂಡೆಗಳು ಒಂದೂಮುಕ್ಕಾಲು ಕಿಲೊಮೀಟರ್ ಎತ್ತರ ಹಾರಿದುವು. 1944ರಲ್ಲಿ ಸಹ ಇದು ಬೆಂಕಿಯುಗುಳಿತು.

ಪೋ, ಆರ್ನೋ, ಟೈಬರ್ ಇವು ಮುಖ್ಯ ನದಿಗಳು. ಉತ್ತರ ಇಟಲಿ ಸರೋವರಗಳ ರಮಣೀಯ ದೃಶ್ಯಕ್ಕೆ ಹೆಸರುವಾಸಿಯಾಗಿದೆ.

ಇಟಲಿಯ ಹವಾಗುಣ ಒಂದು ಕಡೆಯಿಂದ ಇನ್ನೊಂದು ಕಡೆಗೆ ವ್ಯತ್ಯಾಸವಾಗುತ್ತದೆ, ಪೋ ಕಣಿವೆಯಲ್ಲಿ ಚಳಿಗಾಲದಲ್ಲಿ ಬಹಳ ಚಳಿ, ಬೆಚ್ಚಗಿನ ಬೇಸಿಗೆ. ತಕ್ಕಮಟ್ಟಿಗೆ ಮಳೆಯೂ ಆಗುತ್ತದೆ. ಇತರ ಭಾಗಗಳಲ್ಲಿ ಚಳಿಗಾಲ ತಣ್ಣಗಿದ್ದು, ಮಳೆ ಬೀಳುತ್ತದೆ; ಬೇಸಿಗೆ ಕಾಲದಲ್ಲಿ ಸೆಕೆ ಹೆಚ್ಚಾಗಿದ್ದು ಒಣ ಹವೆ ಇರುತ್ತದೆ.

ಇಟಲಿಯ ಜನರಿಗೆ ಜೀವನದಲ್ಲಿ ಬಹಳ ಆಸಕ್ತಿ. ಒಂದು ದೃಷ್ಟಿಯಲ್ಲಿ ಇದು ಬಂಜರು ನಾಡು. ಖನಿಜ ನಿಕ್ಷೇಪಗಳು ಕಡಮೆ. ಆದರೂ ಇರುವ ಸಂಪನ್ಮೂಲಗಳನ್ನು ಬಳಸಿಕೊಂಡು ಸಂತೋಷವಾಗಿ ಬದುಕುತ್ತಾರೆ. ದಕ್ಷಿಣ ಮತ್ತು ಉತ್ತರ ಇಟಲಿಯಲ್ಲಿ ದ್ರಾಕ್ಷಿ. ಉತ್ತರದ ಬಯಲು ಸೀಮೆಯಲ್ಲಿ ಗೋಧಿ. ಮುಸುಕಿನ ಜೋಳ. ಭತ್ತ ಬೆಳೆಯುತ್ತಾರೆ.

ಎಟ್ನಾ ಪರ್ವತದ ಬಳಿ ಗಂಧಕ ದೊರೆಯುತ್ತದೆ. ಕಬ್ಬಿಣ, ಸೀಸ, ಪೆಟ್ರೋಲಿಯಂ, ಬಾಕ್ಸೈಟ್ ಸಿಗುತ್ತವೆ. ಬಿಳಿ ಅಮೃತಶಿಲೆ ದೊರೆಯು

ತ್ತದೆ. ಪೋ ಕಣಿವೆಯಲ್ಲಿ ಮೆಥೇನ್ ಎಂಬ ಅನಿಲ ಭೂಮಿಯಿಂದ ಬರುತ್ತದೆ. ಇದನ್ನು ಬೆಂಕಿಯಂತೆ ಉರಿಸಬಹುದು. ಫೆರಾಂಡಿನ ಬಳಿ ಹೇರಳವಾದ ನೈಸರ್ಗಿಕ ಅನಿಲವನ್ನು ಕಂಡುಹಿಡಿದಿದ್ದಾರೆ.

ಉತ್ತರ ಯೂರೋಪಿನ ಎಲ್ಲ ದೇಶಗಳಿಗಿಂತ ಇಟಲಿ ನಿಧಾನವಾಗಿ ಕೈಗಾರಿಕೆಗಳ ನಾಶವಾಯಿತು. 1950ರಿಂದ ಕೈಗಾರಿಕೆಗಳು ಬೃಹತ್ಪ್ರಮಾಣ ತಳೆದುವು. ಹೊಸ ಉದ್ಯಮಗಳು ಆರಂಭವಾದುವು. ವಿದ್ಯುತ್ ಸ್ಥಾವರಗಳು, ವಿದ್ಯಾಭ್ಯಾಸ ಕ್ಷೇತ್ರಗಳು ಹೊಸ ಹುಟ್ಟು ಪಡೆದುವು. ವೆನಿಸ್ ನಗರದ ಆಕರ್ಷಕ ಗಾಜಿನ ಸಾಮಾನು ಪ್ರಖ್ಯಾತವಾದದ್ದು. ಬಟ್ಟೆ ಗಿರಣಿ, ಮದ್ಯ, ಕಾರು, ಮೋಟರ್ ಸೈಕಲ್, ಸ್ಕೂಟರ್, ಟೈಪ್‌ರೈಟರ್, ಹಡಗು, ಬೈಸಿಕಲ್ ಇವುಗಳ ತಯಾರಿಕೆ ಇತರ ಕೈಗಾರಿಕೆಗಳು.

ಇಟಲಿಯಲ್ಲಿ ರೋಮನ್ ಕ್ಯಾಥಲಿಕರು ಬಹಳ. ಯೆಹೂದ್ಯರು, ಪ್ರಾಟೆಸ್ಟೆಂಟರು ಅಲ್ಪಸಂಖ್ಯೆಯಲ್ಲಿದ್ದಾರೆ.

ಇಟಲಿಯಲ್ಲಿ ಇಟಾಲಿಯನ್ ಆಡಳಿತ ಭಾಷೆ. ರೋಮನ್ ಕ್ಯಾಥಲಿಕರ ಮುಖ್ಯ ಪೀಠ ವ್ಯಾಟಿಕನ್ ನಗರದಲ್ಲಿ. ಇಲ್ಲಿ ಕ್ಯಾಥಲಿಕರ ಜಗದ್ಗುರು ಪೋಪ್ ವಾಸಿಸುತ್ತಾರೆ. ಇದೇ ಒಂದು ಸಂಸ್ಥಾನ.

ಇಟಲಿಯ ರಾಜಧಾನಿ ರೋಮ್. ಕುಜನ (ಮಾರ್ಸ್) ಅವಳಿಮಕ್ಕಳು ರೋಮುಲಸ್ ಮತ್ತು ರೀಮಸ್ ರೋಮ್‌ನಗರವನ್ನು ಸ್ಥಾಪಿಸಿದರು ಎಂದು ಕಥೆ. ಪುರಾತನ ವಾಸ್ತುಶಿಲ್ಪದ ಅವಶೇಷಗಳು ಇಲ್ಲಿ ಅಸಂಖ್ಯವಾಗಿವೆ. ನೇಪಲ್ಸ್ ಇಟಲಿಯ ಹೆಬ್ಬಾಗಿಲು ; ಇದು ಕೈಗಾರಿಕಾ ನಗರ ಹಾಗೂ ಬಂದರು. 'ಸಾಯುವ ಮೊದಲು ನೇಪಲ್ಸನ್ನು ನೋಡು' ಎಂದು ಗಾದೆಯುಂಟು; ಅಷ್ಟು ಸುಂದರ ಈ ನಗರ. ನೇಪಲ್ಸ್ ಕೊಲ್ಲಿಯ ಉತ್ತರಕ್ಕಿರುವ ಈ ನಗರ ಕಲಾವಿದರಿಗೆ ಸ್ಫೂರ್ತಿ ನೀಡುತ್ತದೆ. ರಾಷ್ಟ್ರೀಯ ವಸ್ತುಸಂಗ್ರಹಾಲಯದಲ್ಲಿ ಪಾಂಪೆನಗರದ ಅವಶೇಷಗಳು, ಕಲಾವಸ್ತುಗಳು ಇವೆ. ಮಧ್ಯಯುಗದ ಅರಮನೆಗಳು ಅನೇಕವಿವೆ. ರಾಷ್ಟ್ರೀಯ ಗ್ರಂಥಾಲಯ, ವಿಶೇಷ ಸಸ್ಯೋದ್ಯಾನ, ರಾಷ್ಟ್ರೀಯ ಉದ್ಯಾನಗಳಿವೆ. ವೆನಿಸ್ ನೂರಾರು ದ್ವೀಪಗಳ ಮೇಲೆ ಕಟ್ಟಿರುವ ನಗರ. ನೀರಿನ ಕಾಲುವೆಗಳೇ ದಾರಿಗಳು. ನವೋದಯ ಕಾಲದಲ್ಲಿ ಅತಿ ವೈಭವದಿಂದ ವೆನಿಸ್ ಬಾಳಿತು. ಇಂದಿಗೂ ಇಲ್ಲಿ ಅಪೂರ್ವ ಕಲಾಸಂಪತ್ತು ಉಂಟು. ಟೂರಿನ್‌ನಲ್ಲಿ ಫಿಯೆಟ್ ಕಾರಿನ ಕಾರಖಾನೆ ಇದೆ. ಜಿನೋವ ಮುಖ್ಯ ಬಂದರು.

ಇಟಲಿಗೆ 1955ರಲ್ಲಿ ವಿಶ್ವಸಂಸ್ಥೆಯ ಸದಸ್ಯತ್ವ ದೊರೆಯಿತು.

| | | |
|---|---|---|
| ಖಂಡ | : | ಯೂರೋಪ್ (ದಕ್ಷಿಣ) |
| ಅಕ್ಷಾಂಶ | : | 36°39′ ಉ ದಿಂದ 47°06′ ಉ |
| ರೇಖಾಂಶ | : | 6°37′ ಪೂ ದಿಂದ 18°31′ ಪೂ |
| ವಿಸ್ತೀರ್ಣ | : | 3,01,020 ಚ. ಕಿ. ಮೀ. |
| ಜನಸಂಖ್ಯೆ | : | 5,04,70,000 |
| ರಾಜಧಾನಿ | : | ರೋಮ್ |
| ಭಾಷೆ | : | ಇಟಾಲಿಯನ್ |
| ಸರಕಾರ | : | ಗಣರಾಜ್ಯ |
| ಬಾವುಟ | : | ಹಸಿರು, ಬಿಳಿ, ಕೆಂಪುಬಣ್ಣದ ಉದ್ದನೆಯ ಪಟ್ಟೆಗಳು |

ನೋಡಿ : ಪೋಪ್; ಮುಸೋಲಿನಿ, ಬಾನಿಟೋ; ರೋಮ್

## ಇಟ್ಟಿಗೆ

ಮಣ್ಣಿನಿಂದ ಕಟ್ಟಿದ ಮನೆಗಳೂ ಇವೆ. ಕಲ್ಲಿನಿಂದ ನಿರ್ಮಿತವಾದ ಕಟ್ಟಡಗಳೂ ಇವೆ. ಕಾಡು ಪ್ರದೇಶಗಳಲ್ಲಿ ಮರದ ದಿಮ್ಮಿಗಳನ್ನು ಸೇರಿಸಿ ಮಾಡಿದ ಕುಟೀರಗಳಿರುತ್ತವೆ. ಪಟ್ಟಣಗಳಲ್ಲಿ ಅದೇ ಮರವನ್ನು ಸೀಳಿ ಮಾಡಿದ ಹಲಗೆಯನ್ನು ಜೋಡಿಸಿ ನಿರ್ಮಿತವಾದ ಮನೆಗಳನ್ನು ಕಾಣುತ್ತೇವೆ. ಆದರೆ ನವನಾಗರಿಕತೆಯ ಈ ಕಾನ್‌ಕ್ರೀಟ್ ಯುಗದಲ್ಲಿಯೂ ಇಟ್ಟಿಗೆಯೇ ಹೆಚ್ಚು ಜನಪ್ರಿಯವಾಗಿದೆ. ಜೇಡಿಮಣ್ಣನ್ನು ಒಳಗೊಂಡ ಮಣ್ಣಿನಲ್ಲಿ ಒಳ್ಳೆಯ ಗೋಡೆಯನ್ನು ಕಟ್ಟಬಹುದು. ಹೊಸ ಶಿಲಾಯುಗದಿಂದಲೂ ಈ ನಿರ್ಮಾಣ ಬಳಕೆಯಲ್ಲಿದೆ. ಆದರೆ ಅದು ಅಷ್ಟೇನೂ ಭದ್ರವಲ್ಲ. ದೊಡ್ಡ ಮತ್ತು ಸಣ್ಣ ಕಲ್ಲುಗಳನ್ನು ಸೇರಿಸಿ ಗೋಡೆಗಳನ್ನು ಕಟ್ಟುವುದೂ ಹೊಸ ವಿಚಾರವಲ್ಲ. ಕೇವಲ ಸೇರಿಸುವುದಕ್ಕಿಂತ ಅವುಗಳನ್ನು ಒಂದಕ್ಕೊಂದು ಹೊಂದಿಕೊಂಡಂತೆ ಜೋಡಿಸುವುದರಿಂದ ಅಥವಾ ಅವುಗಳ ಸಂದುಗಳಲ್ಲಿ ಮಣ್ಣು, ಗಾರೆ, ಇಲ್ಲವೆ ಸಿಮೆಂಟ್ ಹಾಕಿ ಭದ್ರ ಪಡಿಸುವುದರಿಂದ ಗಟ್ಟಿಯಾದ ಮತ್ತು ಬಹು ಕಾಲ ಉಳಿಯುವ ಗೋಡೆಗಳನ್ನು ಕಟ್ಟಬಹುದು. ಇವು ಚೆನ್ನಾಗಿ ಹೊಂದಿಕೊಳ್ಳಲಿ ಎಂದೂ ಅಂದವಾಗಿ ಕಾಣಲೆಂದೂ ಕಲ್ಲುಗಳ ಮೇಲ್ಮೈಯನ್ನು ಸಮನಾಗಿ ನಯಗೊಳಿಸುವುದುಂಟು. ಗೋಡೆ ಮಾಡಲು ಕಲ್ಲಿಗೆ ಈ ರೀತಿ ಆಕಾರ ಕೊಡುವುದು ಸುಲಭದ ಕೆಲಸವಲ್ಲ. ಆದರೆ ಮಣ್ಣಿಗೆ ಹೀಗೆ ಸುಲಭವಾಗಿ ಆಕಾರ ಕೊಡಬಹುದು. ಈ ಕಲೆ ಸಾವಿರಾರು ವರ್ಷಗಳ ಹಿಂದೆಯೇ ಮನುಷ್ಯನಿಗೆ ತಿಳಿದಿತ್ತು. ಹೀಗೆ ಇಟ್ಟಿಗೆಯ ಜನನ ಅತ್ಯಂತ ಹಿಂದಿನ ನಾಗರಿಕತೆಗಳ ಕಾಲದಲ್ಲಿ ಆದುದೆಂದು ಉಲ್ಲೇಖವಿದೆ. ಸಿಂಧೂ ಕಣಿವೆ, ಈಜಿಪ್ಟ್ ಮತ್ತು ಮೆಸಪಟೇಮಿಯ ನಾಗರಿಕತೆಗಳ ಕಾಲದಲ್ಲಿ ಸುಟ್ಟ ಇಟ್ಟಿಗೆಗಳ ಬಳಕೆ ಇದ್ದಿತು. ಸಿಂಧೂ ಕಣಿವೆ ನಾಗರಿಕತೆಯ ಕಾಲದಲ್ಲಿ ಎಲ್ಲ ರೀತಿಯ ನಿರ್ಮಾಣಗಳಿಗೂ ಚರಂಡಿಗಳಿಗೂ ಇಟ್ಟಿಗೆಯನ್ನು ಜೋಡಿಸುತ್ತಿದ್ದರು.

ಇಟ್ಟಿಗೆಯಿಂದ ವಿಶೇಷ ಅನುಕೂಲವೇನು? ಇದರಿಂದ ನಮಗೆ ಬೇಕಾದ ಗಾತ್ರದ ಮತ್ತು ಆಕಾರದ ಗೋಡೆಯನ್ನು ಕಟ್ಟಬಹುದು. ಉದಾಹರಣೆಗೆ: ಸ್ತಂಭ, ಕಮಾನು. ಇಟ್ಟಿಗೆಗಳನ್ನು ಸಾಗಿಸುವುದೂ ಹೊರುವುದೂ ಸುಲಭ. ಒಂದು ಬಾರಿ ಕಟ್ಟಿದ ಇಟ್ಟಿಗೆ ಗೋಡೆಯನ್ನು ಅನೇಕ ವರ್ಷಗಳ ಕಾಲ ದುರಸ್ತಿ ಮಾಡಬೇಕಾಗಿಲ್ಲ. ಕಾಲಕ್ರಮೇಣ ಅವುಗಳ ಹೊರ ನೋಟ ಉತ್ತಮಗೊಳ್ಳುವುದೆಂದೂ ಕೆಲವು ತಜ್ಞರ ಅಭಿಪ್ರಾಯ.

ಒಂದು ಸಾಧಾರಣ ಇಟ್ಟಿಗೆಯ ಅಳತೆ ಉದ್ದ 22.5 ಸೆ. ಮೀ. ಅಗಲ 11 ಸೆ. ಮೀ. ಗಿಂತ ಸ್ವಲ್ಪ ಹೆಚ್ಚು ಮತ್ತು ಎತ್ತರ 7.5 ಸೆ.ಮೀ. ಸುಭದ್ರವಾದ ಗೋಡೆಯಾಗಬೇಕಾದರೆ ಇಟ್ಟಿಗೆಗಳನ್ನು ಜೋಡಿಸಲು ಒಂದು ವಿಶೇಷ ಕ್ರಮವಿದೆ, ಅಳತೆಯಿದೆ ; ಗೋಡೆಯು ಎಷ್ಟು ದಪ್ಪವಾಗಿರಬೇಕು, ತಳದಲ್ಲಿ ಆಧಾರ ಹೇಗಿರಬೇಕು, ಹೀಗೆ ಹಲವಾರು ವಿಷಯಗಳನ್ನು ಇದು ಅವಲಂಬಿಸಿರುತ್ತದೆ. ಪ್ರಾಚೀನ ಪ್ರಪಂಚದ ಏಳು ಅದ್ಭುತಗಳಲ್ಲಿ ಒಂದಾದ ಚೀನದ ಮಹಾಗೋಡೆಯಲ್ಲಿ ಇಟ್ಟಿಗೆಯನ್ನೂ ಉಪಯೋಗಿಸಲಾಗಿದೆ. 12.100 ಕಿ.ಮೀ. ಉದ್ದವಿರುವ ಈ ಗೋಡೆಯನ್ನು ಕ್ರಿಸ್ತ ಪೂರ್ವದಲ್ಲೇ ಕಟ್ಟಿದ್ದರೂ ಇಂದಿಗೂ ದೃಢವಾಗಿ ನಿಂತಿದೆ.

ಪ್ರಾಚೀನಕಾಲದಲ್ಲಿ ಮಣ್ಣು ಮತ್ತು ಹುಲ್ಲುಗಳನ್ನು ಕಾಲಿನಲ್ಲಿ ಚೆನ್ನಾಗಿ ತುಳಿದು ಹದಮಾಡಿ ಅವುಗಳನ್ನು ಆಯಾಕಾರದ ಅಚ್ಚಿನಲ್ಲಿ ಹಾಕಿ, ಬಿಸಿಲಿನಲ್ಲಿ ಒಣಗಿಸುತ್ತಿದ್ದ ಚಿತ್ರ ಈಜಿಪ್ಟಿನ ಸಮಾಧಿಯೊಂದರಲ್ಲಿ ದೊರೆತಿದೆ. ಒಣಗಿದ ಮಣ್ಣಿನ ಅಚ್ಚುಗಳನ್ನು ಬೆಂಕಿಯಲ್ಲಿ ಸುಟ್ಟಾಗ ಅದು ಗಟ್ಟಿಯಾಯಿತು. ಅಷ್ಟೇ ಅಲ್ಲ, ತೇವಗೊಂಡರೂ ಕೆಡಲಿಲ್ಲ.

ಇಟ್ಟಿಗೆಯ ಬಣ್ಣ ಬಹು ಪಾಲು ಕೆಂಪೇ ಆಗಿದ್ದರೂ ಅಪರೂಪವಾಗಿ ಹಳದಿ ಹಾಗೂ ಕಂದು ಬಣ್ಣದ ಇಟ್ಟಿಗೆಗಳನ್ನು ತಯಾರಿಸುತ್ತಾರೆ. ಇಟ್ಟಿಗೆಗಳನ್ನು ಸುಡುವ ಮೊದಲೇ ಬೇಕಾದ ಬಣ್ಣವನ್ನು ಲೇಪಿಸುತ್ತಾರೆ. ಈಗಿನ ಇಟ್ಟಿಗೆಗಳಲ್ಲಿ ಮರಳು, ಅಲ್ಯೂಮಿನಿಯಂ, ಕಬ್ಬಿಣ, ಕ್ಯಾಲ್ಸಿಯಂ, ಮ್ಯಾಂಗನೀಸ್, ಸೋಡಿಯಂ, ಪೊಟಾಸಿಯಂ ಇವುಗಳ ಸಂಯುಕ್ತ ಪದಾರ್ಥಗಳು ಸೇರಿರುತ್ತವೆ ಎಂದರೆ ಅಚ್ಚರಿಯೆನಿಸಬಹುದು. ಈ ರೀತಿಯ ಮಣ್ಣಿನಿಂದ ಉತ್ತಮ ಇಟ್ಟಿಗೆಯನ್ನು ತಯಾರಿಸಬಹುದು.

ನಿಸರ್ಗವನ್ನು ಗೆಲ್ಲುವುದರಲ್ಲಿ ಮನುಷ್ಯನ ಇನ್ನೊಂದು ಸಾಧನೆ ಇಟ್ಟಿಗೆ. ಹುಲ್ಲಿನ ಗುಡಿಸಲು, ಮಣ್ಣಿನ ಮನೆಗಳಿಗಿಂತ ನಿಸರ್ಗದ ಶಕ್ತಿಗಳನ್ನು ತಡೆಯಬಲ್ಲ ನಿವಾಸ ಇಟ್ಟಿಗೆಯಿಂದ ಮನುಷ್ಯನಿಗೆ ಲಭ್ಯವಾಯಿತು.

ನೋಡಿ : ಪ್ರಾಚೀನ ಜಗತ್ತಿನ ಏಳು ಅದ್ಭುತಗಳು

## ಇಥಿಯೋಪಿಯ

ಆಫ್ರಿಕದಲ್ಲಿ ಉಳಿದೆಲ್ಲ ರಾಷ್ಟ್ರಗಳಿಗಿಂತ ಹೆಚ್ಚು ಕಾಲ ಸ್ವಾತಂತ್ರ್ಯವನ್ನು ಅನುಭವಿಸಿರುವ ಎರಡು ರಾಷ್ಟ್ರಗಳಿವೆ. ಒಂದು ಇಥಿಯೋಪಿಯ, ಇನ್ನೊಂದು ಲೈಬೀರಿಯ.

ಇಥಿಯೋಪಿಯವನ್ನು ಹಿಂದೆ ಅಬಿಸೀನಿಯ ಎಂದು ಕರೆಯುತ್ತಿದ್ದರು. ಆಫ್ರಿಕದ ಈಶಾನ್ಯ ಭಾಗದಲ್ಲಿರುವ ಸ್ವತಂತ್ರ ರಾಜ್ಯ ಇದು. ಕ್ರಿ. ಪೂ. ಒಂದನೆಯ ಶತಮಾನದಲ್ಲಿ ಸೆಮೆಟಿಕರು ಅರೇಬಿಯದಿಂದ ಬಂದು ಇಲ್ಲಿ ನೆಲೆಸಿದರು. ಆಮೇಲೆ ಅಬಿಸೀನಿಯ ಬೆಳೆಯತೊಡಗಿತು. ಕ್ರೈಸ್ತರು, ಮುಸಲ್ಮಾನರು ಅಬಿಸೀನಿಯದ ಮೇಲೆ ದಾಳಿಮಾಡಿದರು. ತಮ್ಮ ತಮ್ಮ ಮತಗಳನ್ನು ಹರಡಿದರು. ನೂತನ ಇಥಿಯೋಪಿಯದ ನಿರ್ಮಾಪಕ ಎರಡನೆಯ ಮೆನಲಿಕ್ (1844–1913). ಆತ ದೇಶದಲ್ಲಿ ಸುಧಾರಣೆಗಳನ್ನು ಜಾರಿಗೆ ತಂದು ಅಡಿಸ್ ಅಬಬ ರಾಜಧಾನಿಯನ್ನು ಕಟ್ಟಿದ; ಅಡಿಸ್ ಅಬಬ ಅಂದರೆ 'ಹೊಸ ಹೂ'.

ದೇಶದ ಅರ್ಧದಷ್ಟು ಭೂಮಿ ಹುಲ್ಲುಗಾವಲು. ಉಳಿದ ಭಾಗ ಮರಳು ಗಾಡು ಮತ್ತು ಕಾಡು. ಅಕ್ಟೋಬರದಿಂದ ಫೆಬ್ರುವರಿ ವರೆಗೆ ಚಳಿಗಾಲ; ಅಲ್ಲಿಂದ ಜೂನ್ ವರೆಗೆ ಬೇಸಿಗೆ: ಮುಂದೆ ಮಳೆಗಾಲ. ದೇಶವೆಲ್ಲ ಸುಮಾರು ಒಂದೇ ಮಟ್ಟದಲ್ಲಿರುವುದರಿಂದ ಹವಾಗುಣ ಎಲ್ಲಾ ಕಡೆ ಏಕ ರೀತಿ.

ಹಾಷಾ, ಅಬಾಯ್, ಟಕಜೇ, ಬ್ಲೂ ನೈಲ್, ಪೋರೆಬಿ ನದಿಗಳು ಅಬಿಸೀನಿಯವನ್ನು ಫಲವತ್ತಾಗಿ ಮಾಡಿವೆ. ಆಸ್ನಾ, ಟಾನಾ, ನುಬಿಯ ಮುಖ್ಯ ಸರೋವರಗಳು. ಫಲವತ್ತಾದ ಭೂಮಿಯೇ ಇಥಿಯೋಪಿಯದ ನೈಸರ್ಗಿಕ ಸಂಪತ್ತು.

ಚಿನ್ನ ಬಹಳವಾಗಿ ದೊರಕುತ್ತದೆ. ಪ್ರಾಚೀನ ಜೆರೂಸಲೆಮಿನ ಪ್ರಖ್ಯಾತ ದೊರೆ ಸಾಲೊಮನ್ ತಾನು ಕಟ್ಟಿಸಿದ ಚಿನ್ನದ ದೇವಾಲಯಕ್ಕೆ ಈ ನಾಡಿನ ಗಣಿಯಿಂದಲೇ ಚಿನ್ನ ಒದಗಿಸಿಕೊಂಡನೆಂಬ ಪ್ರತೀತಿ ಇದೆ. ಕಬ್ಬಿಣ, ಪೆಟ್ಲುಪ್ಪು, ಗಂಧಕ, ತಾಮ್ರ, ಪ್ಲಾಟಿನಂ, ಪೆಟ್ರೋಲಿಯಂಗಳು ಸಿಗುತ್ತವೆ.

ಒಳನಾಡಿನಲ್ಲಿರುವ ಜನರಲ್ಲಿ ಇನ್ನೂ ಹಳೆಯ ಪದ್ಧತಿಗಳಿವೆ. ಒಂದೇ ಕೋಣೆಯ ಮಣ್ಣಿನ ಮನೆಗಳಿವೆ. ಆಳುವ ಪಂಗಡದವರು ಕ್ರೈಸ್ತ ಮತೀಯರು. ಅವರ ಭಾಷೆ ಅಮ್‌ಹರಿಕ್. ಇಥಿಯೋಪಿಯದಲ್ಲಿ ಅನೇಕ ಜನಾಂಗಗಳು, ಭಾಷೆಗಳು, ಧರ್ಮಗಳು, ಪಂಗಡಗಳು ಇವೆ. ಕ್ರೈಸ್ತರು, ಮುಸಲ್ಮಾನರು ಹೆಚ್ಚು.

ಬಟ್ಟೆ, ಪಾದರಕ್ಷೆ, ಸಿಮೆಂಟುಗಳನ್ನು ತಯಾರಿಸುತ್ತಾರೆ. ಆಹಾರ ಸಂಸ್ಕರಣದ ಕೈಗಾರಿಕೆಯೂ ಉಂಟು. ಕಾಫಿ ಪ್ರಮುಖ ರಫ್ತು ಸಾಮಗ್ರಿ. ಎಣ್ಣೆ ಬೀಜಗಳು ಮತ್ತು ದ್ವಿದಳ ಧಾನ್ಯಗಳನ್ನು ರಫ್ತು ಮಾಡುತ್ತಾರೆ. ಹತ್ತಿ, ರೇಷ್ಮೆ, ವಾಹನಗಳು, ಯಂತ್ರಗಳು, ವಿದ್ಯುತ್ ಉಪಕರಣಗಳು, ಕಬ್ಬಿಣ ಮತ್ತು ಉಕ್ಕಿನ ತಯಾರಿಕೆಗಳು, ಪೆಟ್ರೋಲಿಯಂ ಪದಾರ್ಥಗಳು, ಆಹಾರ, ರಬ್ಬರು, ಔಷಧಿ ಸಾಮಗ್ರಿಗಳು ಮತ್ತು ಗೃಹೋಪಯೋಗಿ ವಸ್ತುಗಳನ್ನು ಆಮದು ಮಾಡಿಕೊಳ್ಳುತ್ತಾರೆ.

ಅಸಾಧಾರಣ ಬುದ್ಧಿವಂತಿಕೆಗೆ ಹೆಸರಾದ ಷೀಬಾ ರಾಣಿ ಇಥಿಯೋಪಿಯದ ರಾಜಕುಮಾರಿ. ಆಕೆ ಸಾಲೊಮನ್ ದೊರೆಯನ್ನು ಭೇಟಿಮಾಡಲು ಜೆರೂಸಲೆಮಿಗೆ ಹೋದಳು (ಕ್ರಿ. ಪೂ. 10ನೆಯ ಶತಮಾನ). ಇವರ ಮಗ ಮೆನಲಿಕ್ ಇಥಿಯೋಪಿಯ ಅರಸರ ಮೂಲಪುರುಷನೆಂದು ಇಲ್ಲಿನ ಜನರ ನಂಬಿಕೆ. ಕ್ರಿಸ್ತ ಪೂರ್ವ 1000ದಲ್ಲಿಯೇ ಅರೇಬಿಯ ಮತ್ತು ಈಗ ಇಥಿಯೋಪಿಯ ಆಗಿರುವ ದೇಶಗಳ ನಡುವೆ ಸಂಬಂಧವಿತ್ತು. ಹದಿನಾರನೆಯ ಶತಮಾನದಲ್ಲಿ ಒಟಮನ್ ತುರ್ಕರು ಇಥಿಯೋಪಿಯವನ್ನು ವಶಪಡಿಸಿಕೊಂಡರು. ಆದರೆ 1543ರಲ್ಲಿ ಇಥಿಯೋಪಿಯದವರು ಅವರನ್ನು ಹೊರಗಟ್ಟಿದರು.

ಎರಡನೆಯ ಮೆನಲಿಕನ ಬಳಿಕ ಪಟ್ಟಕ್ಕೆ ಬಂದ ಒಂದನೆಯ ಹೈಲಿ ಸೆಲಾಸಿ ಗುಲಾಮಗಿರಿಯನ್ನು ತೊಡೆದುಹಾಕಿದರು. ಯೂರೋಪಿನ ರಾಷ್ಟ್ರಗಳೊಡನೆ ಸ್ನೇಹ ಬೆಳೆಸಿಕೊಂಡರು. 1935ರಲ್ಲಿ ಇಟಲಿ ಕಾಲು ಕೆದರಿ ಯುದ್ಧ ಮಾಡಿ ಇಥಿಯೋಪಿಯವನ್ನು ಸ್ವಾಧೀನಪಡಿಸಿಕೊಂಡಿತು. ಹೈಲಿ ಸೆಲಾಸಿ ರಾಷ್ಟ್ರಸಂಘದವರ ಸಹಾಯ ಕೋರಿದರೂ ಫಲವಾಗದೆ, ಐದು ವರ್ಷ ದೇಶಾಂತರವಾಸ ಮಾಡಬೇಕಾಯಿತು. ಎರಡನೆಯ ಮಹಾಯುದ್ಧ ಕಾಲದಲ್ಲಿ ಮಿತ್ರರಾಷ್ಟ್ರಗಳ ನೆರವಿನಿಂದ ಇಥಿಯೋಪಿಯಕ್ಕೆ ಮರಳಿದರು.



ಅವರಿಗೆ ದೇಶದಲ್ಲಿ ಹೊಸ ನಾಗರಿಕತೆಯನ್ನು ಹರಡಬೇಕೆಂದು ಆಸೆ. ನಿಧಾನವಾಗಿ ಒಂದೊಂದೇ ಸುಧಾರಣೆಗಳನ್ನು ಆಚರಣೆಗೆ ತರಬೇಕೆನ್ನುತ್ತಾರೆ. ಇಪ್ಪತ್ತು ವರ್ಷಗಳ ಯೋಜನೆಯೊಂದನ್ನು ತಯಾರಿಸಿ ಅದಕ್ಕೆ ವಿದೇಶೀ ನೆರವನ್ನು ಪಡೆದಿದ್ದಾರೆ. ಇಥಿಯೋಪಿಯ ವಿಶ್ವಸಂಸ್ಥೆಗೆ ಸೇರಿದೆ.

## ಇರಾಕ್

ಆಡಂ ಮತ್ತು ಈವ್ ಕಥೆ ಕೇಳಿದ್ದೀರ ? ಬೈಬಲ್‌ನಲ್ಲಿ ಆ ಕಥೆ ಇದೆ. ಆ ಕಥೆಯ ಪ್ರಕಾರ, ಅವರು ಪ್ರಪಂಚದಲ್ಲಿ ಸೃಷ್ಟಿಯಾದ ಮೊದಲನೆಯ ಪುರುಷ ಮತ್ತು ಸ್ತ್ರೀ. ತುಂಬ ಸುಂದರವಾದ ಒಂದು ವನದಲ್ಲಿ—ಗಾರ್ಡನ್ ಆಫ್ ಈಡನ್‌ನಲ್ಲಿ—ಅವರಿದ್ದರಂತೆ. ದೇವರು ಬಹು ಪ್ರೀತಿಯಿಂದ ಅವರಿಗಾಗಿ ಆ ಸುಂದರ ವನವನ್ನು ಸೃಷ್ಟಿಸಿದ್ದನಂತೆ.

ಈಡನ್ ವನ ಇರಾಕ್‌ನಲ್ಲಿ ಇದ್ದಿತೆಂದು ಅಲ್ಲಿಯವರು ಹೇಳುತ್ತಾರೆ!

ಇರಾಕ್ ಪುರಾತನ ದೇಶ. ಚಿಕ್ಕದು. ಯೂಫ್ರೇಟಿಸ್—ಟೈಗ್ರಿಸ್ ನದಿಗಳ ಮಧ್ಯದಲ್ಲಿರುವುದರಿಂದ ಇದನ್ನು ಮೆಸಪಟೇಮಿಯ, ಎಂದರೆ ಎರಡು ನದಿಗಳ ನಡುವೆ ಇರುವ ಪ್ರದೇಶ, ಎಂದು ಕರೆಯುತ್ತಿದ್ದರು.

ಇರಾಕನ್ನು ನಾಗರಿಕತೆಯ ತೊಟ್ಟಿಲು ಎನ್ನುತ್ತಾರೆ.

ಇರಾಕಿನ ನಾಗರಿಕತೆ ಕ್ರಿ. ಪೂ. 3500ರಷ್ಟು ಹಳೆಯದು. ಈ ರಾಷ್ಟ್ರದ ನಾನಾ ಕಡೆಗಳಲ್ಲಿ ಸುಮೇರಿಯ ಬ್ಯಾಬಿಲೋನಿಯ ಅಸೀರಿಯ ನಾಗರಿಕತೆಗಳ ಅವಶೇಷಗಳು ದೊರೆತಿವೆ.

ಭೌಗೋಳಿಕವಾಗಿ ಇರಾಕನ್ನು ನಾಲ್ಕು ಭಾಗಗಳನ್ನಾಗಿ ಮಾಡಲಾಗಿದೆ, ಟೈಗ್ರಿಸ್ ಯೂಫ್ರೇಟಿಸ್‌ಗಳ ಕೆಳಕಣಿವೆ, ಮೇಲುಭಾಗದ ಯೂಫ್ರೇಟಿಸ್ ಟೈಗ್ರಿಸ್ ಕಣಿವೆ, ಈಶಾನ್ಯದ ಪರ್ವತ ಬೆಟ್ಟಗಳು, ನೈಋತ್ಯ ಮತ್ತು ಪಶ್ಚಿಮದ ಮರಳುಗಾಡು.

ಬೇಸಿಗೆ ಕಾಲದಲ್ಲಿ ಉಷ್ಣಾಂಶ ಹೆಚ್ಚು. ಚಳಿಗಾಲದಲ್ಲಿ ಹಗಲು ಸ್ವಲ್ಪ ಬೆಚ್ಚಗೆ ಅನಿಸಿದರೂ, ರಾತ್ರಿ ವಿಪರೀತ ಚಳಿ.

ಟೈಗ್ರಿಸ್, ಅದರ ಉಪನದಿಗಳು, ಯೂಫ್ರೇಟಿಸ್, ಹಿರಿಯ ಜ್ಯಾಬ್. ಕಿರಿಯ ಜ್ಯಾಬ್, ದಿಯಾಲಾ—ಇವು ಮುಖ್ಯ ನದಿಗಳು.

ಇರಾಕಿನ ಮುಖ್ಯ ನೈಸರ್ಗಿಕ ಸಂಪತ್ತು ತೈಲ. ಕೊಳವೆಗಳ ಮೂಲಕ ತೈಲವನ್ನು ಸಾಗಿಸುತ್ತಾರೆ.

ಬಾರ್ಲಿ, ಗೋಧಿ, ಖರ್ಜೂರ, ಬತ್ತ ಮೊದಲಾದುವನ್ನು ಬೆಳೆಯುತ್ತಾರೆ.

ಇರಾಕ್‌ನಲ್ಲಿ ತೈಲಶೋಧನೆ, ಖರ್ಜೂರ ತುಂಬಿಡುವುದು, ಚರ್ಮ ಹದಗೊಳಿಸುವುದು, ಕುಶಲ ಕೈಗಾರಿಕೆಗಳು, ಇಟ್ಟಿಗೆ, ಉಣ್ಣೆ ಮತ್ತು ಹತ್ತಿಬಟ್ಟೆ ಗಿರಣಿಗಳು, ಸಿಗರೇಟು ಉತ್ಪನ್ನ ಮೊದಲಾದ ಕೈಗಾರಿಕೆಗಳು ಬೆಳೆದಿವೆ. ಔದ್ಯೋಗಿಕ ಯಂತ್ರಗಳು, ವಾಹನಗಳು ಮತ್ತು ಬಿಡಿ ಭಾಗಗಳು, ಕಬ್ಬಿಣ ಮತ್ತು ಉಕ್ಕು, ಚಹ, ಸಕ್ಕರೆ, ರಾಸಾಯನಿಕ ವಸ್ತುಗಳು, ಔಷಧಿಗಳು, ಕಾಗದ, ಗೃಹೋಪಯೋಗಿ ಸುಖವಸ್ತುಗಳು—ಇವನ್ನು ಆಮದು ಮಾಡಿಕೊಳ್ಳುತ್ತಾರೆ.

ಇರಾಕಿನಲ್ಲಿ ಅರಬರೇ ಹೆಚ್ಚು. ಇಲ್ಲಿನ ಮೂಲನಿವಾಸಿಗಳು ತುರ್ಕಿಗಳು. ಮುಸಲ್ಮಾನ ಮತವನ್ನು ಅವಲಂಬಿಸಿರುವ ಈ ಜನ ಅರಬಿ ಭಾಷೆ ಮಾತನಾಡುತ್ತಾರೆ. ಯಹೂದ್ಯರೂ ಕ್ರೈಸ್ತರೂ ಈ ದೇಶದಲ್ಲಿದ್ದಾರೆ. ಇತ್ತೀಚೆಗೆ ಸಾಮಾಜಿಕ ಬದಲಾವಣೆಗಳು ತೀವ್ರ ಗತಿಯಿಂದ ಸಾಗುತ್ತಿವೆ. ಹೆಂಗಸರ ವಿದ್ಯಾಭ್ಯಾಸದ ಅವಕಾಶ ಹೆಚ್ಚುತ್ತಿದೆ. ಮತದಾನದ ಹಕ್ಕು ಅವರಿಗೆ ದೊರೆತಿದೆ.

ಇರಾಕಿನ ಆಧುನಿಕ ಇತಿಹಾಸ ಮೊದಲನೆಯ ಜಾಗತಿಕ ಯುದ್ಧದಿಂದ (1914–18) ಆರಂಭ. ತುರ್ಕಿಗಳಿಂದ ಬ್ರಿಟಿಷರು ಇರಾಕನ್ನು ಗೆದ್ದರು. ಬ್ರಿಟಿಷರ ಒಪ್ಪಿಗೆಯಿಂದ ಅರಸೊತ್ತಿಗೆ ಉಳಿಯಿತು. ಸರಕಾರವನ್ನು ರಚಿಸುವಲ್ಲಿ ಬ್ರಿಟಿಷರ ಅರಸೊತ್ತಿಗೆಯ ಮಾದರಿಯನ್ನೇ 1958ರ ವರೆಗೆ ಅನುಸರಿಸಿದರು. 1958ರ ಜುಲೈಯಲ್ಲಿ ಸೈನ್ಯ ಕ್ರಾಂತಿಯಾಯಿತು, ಅರಸ ಎರಡನೆಯ ಫೈಸಲ್ ಮರಣಹೊಂದಿದ. ಅನಂತರ ಮೂವರು ಮಂತ್ರಿಗಳ ಸಹಾಯದಿಂದ ರಾಜ್ಯಭಾರ ನಡೆಯಿತು. ಇರಾಕಿನ ಮೇಲೆ ಬ್ರಿಟಿಷರ ಹತೋಟಿ ತಪ್ಪಿತು. ಅರಬ್ ಐಕ್ಯ ಗಣರಾಜ್ಯವನ್ನು ಇರಾಕ್ ಕೂಡಿಕೊಂಡಿತು. ಆದರೆ ಇದು ಅಲ್ಪಾಯುವಾದ ಐಕ್ಯ.

1967 ಮೇ 10ರಂದು ಆರಿಫ್ ಹೊಸ ಸರಕಾರ ರಚಿಸಿದ. ಇಸ್ರೇಲಿನ ವಿರುದ್ಧವಾದ ಯುದ್ಧದಲ್ಲಿ 1967ರಲ್ಲಿ ಇರಾಕ್ ಅರಬರಿಗೆ ನೆರವಾಯಿತು. ಇತ್ತೀಚೆಗಿನ ವರ್ಷಗಳಲ್ಲಿ ಇರಾಕ್ ಹಲವು ಅಪಾಯ ಪರಿಸ್ಥಿತಿಗಳನ್ನೂ ದಂಗೆಗಳನ್ನೂ ಎದುರಿಸಬೇಕಾಯಿತು. ಸೈನ್ಯದ ಬೇರೆ ಬೇರೆ ಗುಂಪುಗಳ ಅಧಿಕಾರಿಗಳು ಅಧಿಕಾರವನ್ನು ಕಿತ್ತುಕೊಂಡ ಪ್ರಸಂಗಗಳು ನಡೆದುವು.

1964ರಲ್ಲಿ ವಿಮೆಯ ಸಂಸ್ಥೆಗಳನ್ನೂ ಬ್ಯಾಂಕ್‌ಗಳನ್ನೂ ರಾಷ್ಟ್ರೀಕರಣ ಮಾಡಲಾಯಿತು. ವ್ಯಾಪಾರಿ ಸಂಸ್ಥೆಗಳ ಲಾಭದಲ್ಲಿ ಶೇಕಡಾ 25ರಷ್ಟು ಅವುಗಳಲ್ಲಿ ಕೆಲಸ ಮಾಡುವವರಿಗೆ ಕೊಡಬೇಕೆಂದು ಕಾನೂನಿದೆ. ಎಣ್ಣೆಯ ಕಂಪೆನಿಗಳು ವಿದೇಶೀ ಬಂಡವಾಳಗಾರರ ಕೈಯಲ್ಲಿವೆ; ಇರಾಕ್ ಸರಕಾರಕ್ಕೆ ಲಾಭದಲ್ಲಿ ಅರ್ಧ ಪಾಲನ್ನು ಕೊಡುತ್ತವೆ. ಎಣ್ಣೆಯ ಸಂಪತ್ತಿನಿಂದ ಈ ದೇಶಕ್ಕೆ ಪ್ರಾಮುಖ್ಯ ದೊರೆತಿದೆ. ಎಣ್ಣೆಯ ಉತ್ಪಾದನೆಯಲ್ಲಿ ಪ್ರಪಂಚದಲ್ಲಿ ಏಳನೆಯದು ಇರಾಕ್.

ಇರಾಕ್ ವಿಶ್ವಸಂಸ್ಥೆಯ ಸದಸ್ಯರಾಷ್ಟ್ರ, ಅರಬ್ ಲೀಗಿನ ಸದಸ್ಯರಾಷ್ಟ್ರ.




## ಇರಾನ್

ಒಂದು ಕಾಲದಲ್ಲಿ ಪರ್ಷಿಯ ಪ್ರಖ್ಯಾತ ಸಾಮ್ರಾಜ್ಯ. ಪರ್ಷಿಯದ ಇಂದಿನ ಹೆಸರು ಇರಾನ್.

ಪರ್ಷಿಯನ್ ರತ್ನಗಂಬಳಿ ವಿಶ್ವವಿಖ್ಯಾತವಾದದ್ದು. ಪುಷ್ಯರಾಗ ಗೋಮೇಧಕ ಮುಂತಾದುವನ್ನು ರತ್ನಗಂಬಳಿಯಲ್ಲಿ ಸೇರಿಸುತ್ತಿದ್ದರು. ಹಿಂದೆ ಮಹಾ ಚಕ್ರಾಧಿಪತ್ಯವಾಗಿ ಮೆರೆದ ಈ ದೇಶ ಭಾರತದಿಂದ ಭೂಮಧ್ಯ ಸಮುದ್ರದವರೆಗೂ ಹರಡಿತ್ತು. ಶತಮಾನಗಳ ಕಾಲ ಏಷ್ಯ ಮತ್ತು ಯೂರೋಪಿನ ನಾಗರಿಕತೆಯ ಮೇಲೆ ಪರ್ಷಿಯದ ಪ್ರಭಾವ ವಿಶೇಷ ವಾಗಿತ್ತು. ಈಗ ಇರಾನ್ ಭೌಗೋಳಿಕ ವಿಸ್ತಾರದಲ್ಲಿ ಚಿಕ್ಕದಾಗಿದ್ದರೂ ಏಷ್ಯ ಯೂರೋಪುಗಳ ಮಧ್ಯೆ ಮುಖ್ಯ ಸ್ಥಾನದಲ್ಲಿರುವುದರಿಂದ ಮಹತ್ವ ಪಡೆದಿದೆ.

ಇರಾನ್ ನೈಋತ್ಯ ಏಷ್ಯದಲ್ಲಿದೆ. ಇದರ ಪ್ರಸ್ಥಭೂಮಿ ಎಲ್ಲ ಕಡೆಗಳಲ್ಲೂ ಪರ್ವತಗಳಿಂದ ಸುತ್ತುವರಿಯಲ್ಪಟ್ಟಿದೆ. ಉತ್ತರಕ್ಕೆ ಎಲ್ ಬೋರ್ಜ್ ಪರ್ವತ, ಪಶ್ಚಿಮದಲ್ಲಿ ಜ್ಯಾಗ್ರೋಸ್ ಪರ್ವತ, ದಕ್ಷಿಣಕ್ಕೆ ಮೆಕ್ರಾನ್ ಶ್ರೇಣಿ ಮತ್ತು ಪೂರ್ವದಲ್ಲಿ ಎತ್ತರ ಪ್ರದೇಶಗಳಿವೆ.

ಇರಾನಿನಲ್ಲಿ ಒಣ ಹವೆ ; ಬೇಸಿಗೆಯ ಕಾಲದಲ್ಲಿ ಸೆಕೆ ಬಹಳ. ಕೆಲವು ಕಡೆಯಂತೂ ಉಷ್ಣಾಂಶ 95° ಫಾ. ಇರುತ್ತದೆ. ಚಳಿಗಾಲದಲ್ಲಿ ಕ್ಯಾಸ್ಪಿಯನ್ ಸಮುದ್ರದ ಸಮೀಪವಿರುವ ಪ್ರದೇಶ ಬಿಟ್ಟು ಉಳಿದೆಡೆ ಅತಿ ಚಳಿ. ಕ್ಯಾಸ್ಪಿಯನ್ ತೀರದ ಬಯಲುಭೂಮಿಯಲ್ಲಿ ಸುಮಾರಾಗಿ ಮಳೆ ಆಗುತ್ತದೆ. ಉಳಿದ ಕಡೆ ಮಳೆ ಬಲು ಕಡಮೆ.

ಕರಾನ್, ಆರಾಸ್, ಸಫಿದ್‌ರುದ್, ಗುರ್‌ಗಾನ್, ಅಟ್ರೆಕ್, ಅಬ್–ಇ–ದೀಜ ನದಿಗಳು ಮಳೆ ಕಡಮೆ ಆಗುವ ಇರಾನಿಗೆ ಜೀವನಾಡಿಯಂತಿವೆ. ಕೆಲವು ನದಿಗಳು ಬೇಸಿಗೆಯಲ್ಲಿ ಒಣಗಿಹೋಗುತ್ತವೆ. ಇರಾನಿನಲ್ಲಿ ವಿಶಾಲ ವಾದ, ಆಳವಿಲ್ಲದ ಉಪ್ಪು ನೀರಿನ ಸರೋವರಗಳಿವೆ.

ಪೆಟ್ರೋಲಿಯಂ ಇರಾನಿನ ಮುಖ್ಯ ಖನಿಜ ಸಂಪತ್ತು. ಪೆಟ್ರೋಲಿಯಂ ಉತ್ಪಾದನೆಯಲ್ಲಿ ಪ್ರಪಂಚದ ಪ್ರಮುಖ ರಾಷ್ಟ್ರಗಳಲ್ಲಿ ಇದು ಒಂದು.

ತೈಲ, ಸೀಸ, ಕ್ರೋಮೈಟ್, ಮ್ಯಾಂಗನೀಸ್, ಕಲ್ಲಿದ್ದಲು, ಕಬ್ಬಿಣದ ಅದಿರು, ರಂಜಕ, ತಾಮ್ರ, ಜಿಪ್ಸಮ್, ಆ್ಯಂಟಿಮನಿ ಮುಂತಾದುವು ದೊರಕುತ್ತವೆ. ಪಚ್ಚೆ, ಪುಷ್ಯರಾಗ, ಗೋಮೇಧಕ, ನೀಲಗಳೂ ಸಿಗುತ್ತವೆ.

ಖರ್ಜೂರ, ದ್ರಾಕ್ಷಿ, ಜಂಬೀರ ವಿಶೇಷವಾಗಿ ದೊರೆಯುವ ಹಣ್ಣುಗಳು. ಹಿಪ್ಪೆನೇರಳೆ ಗಿಡ ತುಂಬಾ ಇರುವುದರಿಂದ ರೇಷ್ಮೆ ವ್ಯವಸಾಯವಿದೆ. ಕುರಿ, ಮೇಕೆ, ದನ, ಕತ್ತೆ, ಕುದುರೆ, ಒಂಟೆಗಳನ್ನು ಸಾಕುತ್ತಾರೆ.

ರತ್ನಗಂಬಳಿ ತಯಾರಿಕೆ ಪ್ರಮುಖ ಉದ್ಯೋಗ. ಈ ಕೈಗಾರಿಕೆಯಲ್ಲಿ ಇರಾನಿನ ಜನರ ಶ್ರೇಷ್ಠ ಕಲಾಭಿರುಚಿಯನ್ನು ಮನಗಾಣಬಹುದು, ಇಲ್ಲಿನ ಸುಗಂಧದ್ರವ್ಯ ಪ್ರಖ್ಯಾತವಾದದ್ದು.

ಇರಾನಿನಲ್ಲಿ ಇರುವ ಜನರಲ್ಲಿ ಹೆಚ್ಚಿನವರು ಹಿಂದೆ ಮಧ್ಯ ಏಷ್ಯದಿಂದ ಬಂದು ನೆಲೆಸಿದವರ ವಂಶಜರು. ಪರ್ಷಿಯನ್ ಪ್ರಮುಖ ಭಾಷೆ. ಇದನ್ನೂ ಅರಬಿ ಭಾಷೆಯಂತೆ ಬಲದಿಂದ ಎಡಕ್ಕೆ ಬರೆಯುತ್ತಾರೆ. ಇರಾನಿನಲ್ಲಿ ಇಸ್ಲಾಂ ಮತಾನುಯಾಯಿಗಳೇ ಹೆಚ್ಚು.

ರಾಜಧಾನಿ ಟೆಹರಾನ್ ವಾಣಿಜ್ಯ ಹಾಗೂ ಸಾಂಸ್ಕೃತಿಕ ಶೈಕ್ಷಣಿಕ ಕೇಂದ್ರ. ತಾಬ್ರಿಜ್ ರಾಜಕೀಯ ಮತ್ತು ವ್ಯಾಪಾರ ಸ್ಥಳ. ಇಸ್ಫಹಾನ್ ಓಯಸಿಸ್ ನಡುವೆ ಇರುವ ಸುಂದರ ನಗರ. ಇಸ್ಫಹಾನ್ ಚೌಕ ಪ್ರಪಂಚದ ದೊಡ್ಡ ಚೌಕಗಳಲ್ಲೊಂದೆನಿಸಿದೆ. ಇಲ್ಲಿ ಅದ್ಭುತ ಗುಮ್ಮಟವಿರುವ ಮಸೀದಿ ಮತ್ತು ಶಾಲೆಗಳಿವೆ. ಅಬಾದನ್, ಅಬ್ಬಾಸ್, ಬುಷಾಯರ್ ಇವು ಪ್ರಮುಖ ಬಂದರುಗಳು.

ಸಾದಿ, ಉಮರ್ ಖಯಾಮ್, ಫಿರ್ದೂಸಿಗಳಂಥ ಮಹಾಕವಿಗಳು ವಿಶ್ವಸಾಹಿತ್ಯ ಕ್ಷೇತ್ರದಲ್ಲಿ ಇರಾನಿಗೆ ಸ್ಥಾನ ದೊರಕಿಸಿಕೊಟ್ಟಿದ್ದಾರೆ.

ಪರ್ಷಿಯದ ಚರಿತ್ರೆ ಸುಮಾರು 2,500 ವರ್ಷಗಳ ಹಿಂದಿನ ವರೆಗೆ ಹೋಗುತ್ತದೆ. ಕ್ರಿಸ್ತಪೂರ್ವ 550 ರಿಂದ 331ರ ಅವಧಿಯಲ್ಲಿ ಪರ್ಷಿಯ ಚಕ್ರಾಧಿಪತ್ಯ ಬಹಳ ಉಚ್ಛ್ರಾಯ ಸ್ಥಿತಿಯಲ್ಲಿದ್ದಿತು. ಸೈರೆಸನ ಆಡಳಿತ ಕಾಲದಲ್ಲಿ ನಾಣ್ಯ ಚಲಾವಣೆ, ದೇಶಕ್ಕೆಲ್ಲ ಒಂದೇ ಭಾಷೆ, ಅಂಚೆ ವ್ಯವಸ್ಥೆ ಇದ್ದುವು. ಸೈರೆಸನ ಕಾಲದಿಂದ ಮೂರನೆಯ ಡೇರಿಅಸನ ಕಾಲದ ವರೆಗೆ ಬಹು ವೈಭವವನ್ನು ಕಂಡಿತು ಪರ್ಷಿಯ. ಮೂರನೆಯ ಡೇರಿಅಸ್ ಅಲೆಗ್ಸಾಂಡರನನ್ನು ಎದುರಿಸಲು ಹೊರಟಾಗ, ಅವನ ಸೈನ್ಯದಲ್ಲಿ ಆರು ಲಕ್ಷ ಮಂದಿ ಇದ್ದರು. ಈ ಸೈನ್ಯ ಯೂಫ್ರೇಟಿಸ್ ನದಿಯನ್ನು ದೋಣಿಗಳಲ್ಲಿ ದಾಟಲು ಐದು ದಿನ ಹಿಡಿಯಿತು. ಅರಸನ ಹಣ ಮತ್ತು ಆಭರಣಗಳ ಭಂಡಾರವನ್ನು ಸಾಗಿಸಲು ಆರು ನೂರು ಕತ್ತೆಗಳೂ ಮುನ್ನೂರು ಒಂಟೆಗಳೂ ಬೇಕಾದುವಂತೆ. ಐಸಸ್‌ನಲ್ಲಿ ಎರಡು ಸೈನ್ಯಗಳೂ ಸಂಧಿಸಿದುವು. ಯುದ್ಧ ದಲ್ಲಿ 450 ಮಂದಿ ಗ್ರೀಕರು ಸತ್ತರು, 1,10,000 ಮಂದಿ ಪರ್ಷಿಯನರು ಸತ್ತರು. ತಾಯಿ, ಹೆಂಡತಿ ಮತ್ತು ಮಕ್ಕಳನ್ನು ಬಿಟ್ಟೋಡಿದ ಡೇರಿಅಸ್, ಅಲ್ಲಿಂದ ಪರ್ಷಿಯದ ಅವನತಿ ಪ್ರಾರಂಭವಾಯಿತು. ಕ್ರಿ. ಪೂ. 331 ರಿಂದ 129ರ ವರೆಗೆ ಅಲೆಗ್ಸಾಂಡರನ ಉತ್ತರಾಧಿಕಾರಿಗಳು ಸಮರ್ಥವಾಗಿ ಆಳಿದರು. ಮೂರನೆಯ ಶತಮಾನದಿಂದ ಸಸ್ಸಾನಿಯರು ಸುಮಾರು 400 ವರ್ಷಗಳ ಕಾಲ ಆಳಿದರು. ಚೆಂಗೀಸ್‌ಖಾನನ ಆಕ್ರಮಣ ದೇಶವನ್ನು ಅವ್ಯವಸ್ಥೆಗೆ ಈಡುಮಾಡಿತು.

ಹದಿನಾರನೆಯ ಶತಮಾನದಲ್ಲಿ ಆಳಿದ ಷಾ ಇಸ್ಮೇಲ್ ನವ ಪರ್ಷಿಯದ ತಂದೆ ಎನ್ನಬಹುದು, ನಾದಿರ್ ಷಹನ ಕಾಲದಲ್ಲಿ ಪರ್ಷಿಯ ಆಫ್ಘಾನಿಸ್ತಾನ ವನ್ನು ಗೆದ್ದಿತು. ಭಾರತದ ಕೋಹಿನೂರು ವಜ್ರವನ್ನು ಕೊಳ್ಳೆಹೊಡೆದವನು ಈತ. ನಾದಿರ್ ಷಹನ ಮರಣಾನಂತರ ದೇಶದಲ್ಲಿ ಅಂತರ್ಯುದ್ಧಗಳು ಮೊದಲಾದ ವು. ಆರ್ಥಿಕ ನೀತಿ ಚೆನ್ನಾಗಿರಲಿಲ್ಲ. 1907ರಲ್ಲಿ ಉತ್ತರ ಭಾಗ ವನ್ನು ರಷ್ಯವೂ ಮಧ್ಯೆ ಸ್ವಲ್ಪ ಅಲಿಪ್ತ ಪ್ರದೇಶ ಬಿಟ್ಟು ದಕ್ಷಿಣ ಭಾಗವನ್ನು ಬ್ರಿಟನ್ನೂ ತಮ್ಮ ವಲಯಗಳನ್ನಾಗಿ ಮಾಡಿಕೊಂಡುವು. ಮೊದಲನೆಯ ಮಹಾಯುದ್ಧದಲ್ಲಿ ಈ ಎರಡು ರಾಷ್ಟ್ರಗಳಿಗೂ ಪರ್ಷಿಯ ಯುದ್ಧ ಭೂಮಿಯಾಗಿತ್ತು.

| | | |
|---|---|---|
| ಖಂಡ | : | ಏಷ್ಯ (ನೈಋತ್ಯ) |
| ಅಕ್ಷಾಂಶ | : | 25° ಉ ದಿಂದ 40° ಉ |
| ರೇಖಾಂಶ | : | 44° ಪೂ ದಿಂದ 63° ಪೂ |
| ವಿಸ್ತೀರ್ಣ | : | 16,31,700 ಚದರ ಕಿ. ಮೀ. |
| ಜನಸಂಖ್ಯೆ | : | ಸುಮಾರು 2,20,00,000 |
| ರಾಜಧಾನಿ | : | ಟೆಹರಾನ್ |
| ಭಾಷೆ | : | ಪರ್ಷಿಯನ್ |
| ಸರಕಾರ | : | ಸಂವಿಧಾನಬದ್ಧ ರಾಜಪ್ರಭುತ್ವ |
| ಬಾವುಟ | : | ಹಸಿರು. ಬಿಳಿ. ಕೆಂಪು ಬಣ್ಣದ ಅಡ್ಡ ಪಟ್ಟಿಗಳು. ಚಿನ್ನದ ಬಣ್ಣದ ಸಿಂಹ ಮತ್ತು ಸೂರ್ಯ ಮಧ್ಯದಲ್ಲಿ |

1925ರಲ್ಲಿ ಅರಸನಾದ ರಿಜಾ ಖಾನ್ ದೇಶವನ್ನು ಬಹಳ ಅಭಿವೃದ್ಧಿಗೆ ತಂದ. ಇವನಿಂದ [illegible] ಆರಂಭವಾಯಿತು. 1935ನೆಯ

ಪರ್ಷಿಯಾದ ಹಿಂದಿನ ಹೆಸರು 'ಇರಾನ್' ಎಂದು ಬದಲಾಯಿಸಲ್ಪಟ್ಟಿತು. ಆತನ ಮಗ ಮಹಮದ್ ರಿಜಾ 1941ರಲ್ಲಿ ಪೂರ್ಣಾಧಿಕಾರ ಪಡೆದ. ಈತನೂ ದೇಶವನ್ನು ಆಧುನಿಕ ಸ್ಥಿತಿಗೆ ತರಲು ಶ್ರಮಿಸಿದ. 1962ರಲ್ಲಿ ಪ್ರಬಲ ವಿರೋಧವಿದ್ದರೂ ಭೂಸುಧಾರಣೆಯ ಕ್ರಮಗಳನ್ನು ಕೈಗೊಂಡ.

ಪಾರಸಿಗಳ ಮತದ ಸ್ಥಾಪಕ ಜರತುಷ್ಟ್ರನ ಕಾರ್ಯಕ್ಷೇತ್ರ ಪ್ರಾಚೀನ ಇರಾನ್. 'ಪಾರಸಿ' ಎಂದರೆ 'ಪರ್ಷಿಯದವನು' ಎಂದು ಅರ್ಥ. ಭಾರತದಲ್ಲಿರುವ ಪಾರಸಿಕರು ಜರತುಷ್ಟ್ರನ ಅನುಯಾಯಿಗಳ ಸಂತತಿಯವರು.

ಮೊದಲನೆಯ ಡೇರಿಯಸ್ (ಕ್ರಿ. ಪೂ. 521–481)ನ ಕಾಲದ ಪ್ರಾಚೀನ ಪರ್ಷಿಯನ್ ಭಾಷೆಗೂ ಸಂಸ್ಕೃತಕ್ಕೂ ಬಾಂಧವ್ಯವಿದೆ. ಎರಡು ಭಾಷೆಗಳೂ ಒಂದೇ ಮೂಲದಿಂದ ಬಂದುವು. ಇವನ್ನು ಆಡುತ್ತಿದ್ದವರ ಪೂರ್ವಿಕರು ಒಟ್ಟಿಗೆ ವಾಸಿಸುತ್ತಿದ್ದಿರಬೇಕು ಎಂಬುದನ್ನು ಇದು ತೋರಿಸುತ್ತದೆ.

ಉದಾಹರಣೆಗೆ

| | | |
|---|---|---|
| ಪರ್ಷಿಯನ್ | ... | ಸಂಸ್ಕೃತ |
| ಪಿತರ್ | ... | ಪಿತೃ |
| ಮಾತರ್ | ... | ಮಾತೃ |
| ಬ್ರತರ್ | ... | ಭ್ರಾತೃ |
| ನಾವ್ | ... | ನಾಮ |

## ಇಸ್ಲಾಮಾಬಾದ್

ಪಾಕಿಸ್ತಾನದ ನೂತನ ರಾಜಧಾನಿ ಇಸ್ಲಾಮಾಬಾದ್. ರಾವಲ್ಪಿಂಡಿ ಮತ್ತು ತಕ್ಷಶಿಲೆಗಳ ಮಧ್ಯೆ ಇರುವ ಚರಿತ್ರಾರ್ಹವಾದ ಈ ನಿವೇಶನವನ್ನು ಹೊಸ ರಾಜಧಾನಿಗಾಗಿ 1959ರಲ್ಲಿ ಆಯ್ಕೆ ಮಾಡಿದರು. ಈ ನಿವೇಶನ ಸುಮಾರು 907 ಚ. ಕಿ. ಮೀ. ವಿಸ್ತಾರವಾಗಿದೆ. ಈ ಸ್ಥಳ ರಕ್ಷಣೆ, ಸಂಪರ್ಕ, ಆಹಾರ ಮತ್ತು ನೀರಿನ ಸರಬರಾಜು ಈ ಎಲ್ಲ ದೃಷ್ಟಿಯಿಂದ ಅನುಕೂಲವಾದ ಜಾಗದಲ್ಲಿದೆ ಎನ್ನುತ್ತಾರೆ. ತಾತ್ಕಾಲಿಕ ರಾಜಧಾನಿ ರಾವಲ್ಪಿಂಡಿಗೆ ಸುಮಾರು ಹದಿನೈದು ಕಿಲೊಮೀಟರ್ ದೂರದಲ್ಲಿನ ಇಸ್ಲಾಮಾಬಾದಿನ ನಿರ್ಮಾಣಕಾರ್ಯ 1961ರಲ್ಲಿ ಆರಂಭವಾಯಿತು. 1968ರ ಹೊತ್ತಿಗೆ ಎಂಟು ಕಾರ್ಯದರ್ಶಿ ಇಲಾಖೆ ಭಾಗಗಳು, ಅಧ್ಯಕ್ಷರ ಭವನ, ರಾಷ್ಟ್ರೀಯ ಸಭಾ ಭವನ ಮತ್ತು ರಾಷ್ಟ್ರೀಯ ವಿಶ್ವವಿದ್ಯಾನಿಲಯ–ಇವು ಕಟ್ಟಲ್ಪಟ್ಟುವು.

ರಾಜಧಾನಿಯನ್ನು ಎಂಟು ವಿಭಾಗಗಳಾಗಿ ವಿಂಗಡಿಸಲಾಗಿದೆ: ಆಡಳಿತ ವಿಭಾಗ, ರಾಯಭಾರವರ್ಗ ವಿಭಾಗ, ವಾಸ ಪ್ರದೇಶ, ವಿಶೇಷ ಸಂಸ್ಥೆಗಳಿರುವ ಭಾಗ, ಎರಡು ಕೈಗಾರಿಕಾ ವಲಯಗಳು, ವಾಣಿಜ್ಯ ವಲಯಗಳು, ಪಟ್ಟಣೆಯ ಪ್ರದೇಶ ಮತ್ತು ಒಂದು ರಾಷ್ಟ್ರೀಯ ಉದ್ಯಾನ. ಈ ಉದ್ಯಾನದಲ್ಲಿ ವಿಶಾಲವಾದ ಬಯಲುಗಳಿರುವ ಒಲಿಂಪಿಕ್ ಹಳ್ಳಿ, ಪ್ರಾಣಿ ಸಂಗ್ರಹಾಲಯ, ಗಿಡಮರಗಳ ಉದ್ಯಾನ, ಹಾಲು ಹೈನ ಕೇಂದ್ರ, ಕೋಳಿ ಸಾಕಣೆ, ತರಕಾರಿ ತೋಟ ಇರುತ್ತವೆ.

ರಾಜಧಾನಿಯ ಸುತ್ತ 909 ಚದರ ಕಿ. ಮೀ. ಎಲ್ಲೆ ಭಾಗವೂ ಅದರಿಂದಾಚೆಗೆ 2,717 ಚದರ ಕಿ. ಮೀ. ನಿರ್ದಿಷ್ಟವಾದ ಒನ್ನಾಡು ಪ್ರದೇಶವೂ ಇವೆ. ಎಲ್ಲೆ ಭಾಗದಲ್ಲಿ ಕುರಾಂಗ್ ನದಿಗೆ ರಾವಲಿ ಅಣೆಕಟ್ಟು ಕಟ್ಟಿದ್ದಾರೆ. ಇದರಿಂದಾದ ಸರೋವರದಲ್ಲಿ 1.420 ಘನ ಮೀಟರ್ ನೀರಿರುತ್ತದೆ.

ನೋಡಿ: ಪಾಕಿಸ್ತಾನ

## ಇಸ್ರೇಲ್

ಪ್ರಪಂಚದ ಅತಿ ಆಧುನಿಕ ರಾಷ್ಟ್ರಗಳಲ್ಲಿ ಒಂದಾದ ಈ ರಾಷ್ಟ್ರಕ್ಕೆ ಪ್ರಾಚೀನ ಚರಿತ್ರೆ ಇದೆ. 1,878 ವರ್ಷಗಳ ಅಂತರದ ಬಳಿಕ ಹಳೆಯ ರಾಜಪ್ರಭುತ್ವವಿದ್ದೆಡೆ ಹೊಸ ಗಣರಾಜ್ಯದ ಉದಯವಾಯಿತು.

ಸಾವಿರಾರು ವರ್ಷಗಳ ಹಿಂದೆ ಭೂಮಧ್ಯ ಸಮುದ್ರ ಮತ್ತು ಜೋರ್ಡಾನ್ ನದಿಗಳ ಮಧ್ಯದಲ್ಲಿ ಕುರುಬರು ಮತ್ತು ರೈತರು ವಾಸಿಸುತ್ತಿದ್ದರು. ಅಬ್ರಹಾಂ, ಐಸಾಕ್ ಮತ್ತು ಜೇಕಬರ ವಂಶಸ್ಥರು ಈ ಜನ. ಜೇಕಬ್ ದೇವರ ದರ್ಶನ ಪಡೆದನೆಂದೂ ಅವನನ್ನು ದೇವರು ಇಸ್ರೇಲ್ ಎಂದು ಕರೆದನೆಂದೂ, ಆತನ ವಂಶಸ್ಥರೇ ಇಸ್ರೇಲಿಗಳೆಂದೂ (ಯೆಹೂದ್ಯರೆಂದೂ) ಹೇಳುತ್ತಾರೆ.

ಇಸ್ರೇಲ್ ಬಹಳ ಕಾಲ ವಿಜೇತರ ಕೈಕೆಳಗೆ ಜೀವಿಸಬೇಕಾಯಿತು. ಮೂಲತಃ ಇಸ್ರೇಲಿನವರಾದ ಯೆಹೂದ್ಯರು ಪರರಾಷ್ಟ್ರಗಳಲ್ಲಿ ಆಶ್ರಯ ಪಡೆದು ಕಷ್ಟದಿಂದ ಬಾಳುತ್ತಿದ್ದರು. ಎರಡನೆಯ ಮಹಾಯುದ್ಧದ ಕಾಲದಲ್ಲಿ (1939–45) ಜರ್ಮನಿಯ ನಾಜಿಗಳು, ಅರವತ್ತು ಲಕ್ಷ ಯೆಹೂದ್ಯರನ್ನು ಕೊಲೆಮಾಡಿದರು. ಅವರಲ್ಲಿ ಮಕ್ಕಳು ಹತ್ತು ಲಕ್ಷ. ಐನ್‌ಸ್ಟೀನ್‌ನಂಥ ಪ್ರತಿಭಾವಂತರೂ ಜರ್ಮನಿಯನ್ನು ಬಿಟ್ಟು ಓಡಿಹೋಗಬೇಕಾಯಿತು. 1948ರ ಮೇ 14 ರಂದು ಟೆಲ್ ಅವೀವ್‌ನಲ್ಲಿ ನಡೆದ ಸಮಾರಂಭದಲ್ಲಿ ಬೆನ್–ಗರಿಅನ್ ಇಸ್ರೇಲ್ ರಾಜ್ಯವನ್ನು ಅಧಿಕೃತವಾಗಿ ಘೋಷಿಸಿದ. ಇದಕ್ಕೆ ವಿಶ್ವಸಂಸ್ಥೆಯ ಬೆಂಬಲವಿತ್ತು. 1948 ರಿಂದ 1960ರ ಅವಧಿಯಲ್ಲಿ ಸುಮಾರು ಹತ್ತು ಲಕ್ಷ ಯೆಹೂದ್ಯರು ಬೇರೆ ಬೇರೆ ಕಡೆಗಳಿಂದ ತಮ್ಮ ತಾಯ್ನಾಡಿಗೆ ಹಿಂದಿರುಗಿದರು. ಹೀಗೆ ವಿವಿಧ ದೇಶ, ಭಾಷೆ, ವಿದ್ಯಾಮಟ್ಟ ಹೊಂದಿದ್ದ ಜನರನ್ನು ಒಂದೇ ಕಟ್ಟಿನಲ್ಲಿ ಬೆಸೆಯಲು ಹೊಸ ರಾಷ್ಟ್ರಕ್ಕೆ ಬಹಳ ಕಷ್ಟವಾಯಿತು. ಏಕ ಮನಸ್ಸಿನಿಂದ ರಾಷ್ಟ್ರ ನಿರ್ಮಾಣಕ್ಕಾಗಿ ದುಡಿದಂತೆ ಇಂಥ ವ್ಯತ್ಯಾಸಗಳು ಮರೆಯಾಗುತ್ತ ಬಂದುವು.

ನೂತನ ರಾಷ್ಟ್ರ ನೆರೆಹೊರೆಯ ದೇಶಗಳ ಅಸಹಕಾರದಿಂದ ಹೊಸ ತೊಂದರೆಯನ್ನು ಎದುರಿಸಬೇಕಾಯಿತು. ಒಂದು ವರ್ಷ ಕಾಲ ನೆರೆ ರಾಜ್ಯಗಳೊಡನೆ ಯುದ್ಧದಲ್ಲೇ ಕಳೆಯಬೇಕಾಯಿತು. ವಿಶ್ವಸಂಸ್ಥೆಯ ನೆರವಿನಿಂದ 1960ರಲ್ಲಿ ಶಸ್ತ್ರವಿರಾಮ ಒಪ್ಪಂದವಾಯಿತು. ಈಗಲೂ ವೈರಿಗಳ ನಡುವೆಯೇ ಇಸ್ರೇಲಿನ ಬದುಕು ಸಾಗಿದೆ. 1967ರಲ್ಲಿ ಅರಬ್ ರಾಷ್ಟ್ರಗಳಿಗೂ ಇಸ್ರೇಲಿಗೂ ಘರ್ಷಣೆಯಾಗಿ, ಸೂಯೆಜ್ ಕಾಲುವೆ ನೌಕಾಯಾನಕ್ಕೆ ಉಪಯೋಗವಿಲ್ಲದಾಯಿತು. ಆ ಯುದ್ಧದಲ್ಲಿ ಪುಟ್ಟ ಇಸ್ರೇಲ್, ಅರಬ್ ರಾಷ್ಟ್ರಗಳನ್ನು ಹಣ್ಣುಮಾಡಿದ ರೀತಿ ಕಂಡು, ಲೋಕದಾದ್ಯಂತ ಬೆರಗಾದವರೇ ಹೆಚ್ಚು.

ಇಸ್ರೇಲಿನ ಅರ್ಧ ಭಾಗ ಮರುಭೂಮಿ. ಇಸ್ರೇಲಿನದು ಭೂಮಧ್ಯ ಹವಾಗುಣ. ಬೆಚ್ಚಗಿನ ಬೇಸಿಗೆಕಾಲ; ಮಳೆಬೀಳುವ, ತಂಪಾದ ಚಳಿಗಾಲ. ಪರ್ವತ ದೇಶಗಳಲ್ಲಿ ಹಿಮಬೀಳುತ್ತದೆ. ನವೆಂಬರ್‌ನಿಂದ ಮಾರ್ಚ್ ವರೆಗೆ ಮಳೆಗಾಲ.

ಜೋರ್ಡಾನ್, ಕಿಶೋನ್, ಯಾರ್‌ಕೇನ್ ದೇಶದ ಮುಖ್ಯ ನದಿಗಳು.

ಇಸ್ರೇಲಿನ ಅಧಿಕ ಖನಿಜ ಸಂಪತ್ತೆಲ್ಲ ನೆಗೇವದಲ್ಲಿದೆ. ತಾಮ್ರ, ಪೊಟಾಷ್, ಬ್ರೊಮೀನ್, ಮೆಗ್ನೀಸಿಯಂ, ಫಾಸ್ಫೇಟ್, ಮ್ಯಾಂಗನೀಸ್, ಉಪ್ಪು, ಫೆಲ್ಸ್‌ಸ್ಪಾರ್, ಗಾಜುಮರಳು, ಕೆಯೊಲಿನ್, ಬಿಟುಮೆನ್.

ಗ್ರಾನೈಟ್, ಅಮೃತಶಿಲೆ, ಜಿಪ್ಸಂ, ಪೆಟ್ರೋಲಿಯಂ, ನೈಸರ್ಗಿಕ ಅನಿಲ, ಕಬ್ಬಿಣದ ಅದಿರು ದೊರಕುತ್ತವೆ.

ಇಸ್ರೇಲಿನಲ್ಲಿ ಕೈಗಾರಿಕೆಗಳ ಬೆಳವಣಿಗೆ ಕ್ರಮಬದ್ಧವಾಗಿ ಸಾಗಿದೆ. ಆಹಾರ ಸಂಸ್ಕರಣ, ಲೋಹ ಪದಾರ್ಥಗಳು, ಬಟ್ಟೆ ಗಿರಣಿ, ರಾಸಾಯನಿಕ ವಸ್ತುಗಳು, ಪೆಟ್ರೋಲಿಯಂ ಪದಾರ್ಥಗಳು, ಮರದ ಸಾಮಾನುಗಳು, ಕಾಗದ ಮತ್ತು ಮುದ್ರಣ, ವಾಹನಗಳು, ವಜ್ರ, ಚರ್ಮ, ರಬ್ಬರ್, ಪ್ಲಾಸ್ಟಿಕ್, ವಿದ್ಯುತ್ ಉಪಕರಣಗಳು ಇವು ಪ್ರಮುಖ ಕೈಗಾರಿಕೆಗಳು.

ಇಸ್ರೇಲಿನ ರಾಜಧಾನಿ ಜೆರೂಸಲೆಂ. ಹಿಬ್ರೂ ವಿಶ್ವವಿದ್ಯಾನಿಲಯ, ಸರಕಾರಿ ಕಟ್ಟಡಗಳು, ಪವಿತ್ರಸ್ಥಳಗಳು ಈ ರಾಜಧಾನಿಯಲ್ಲಿವೆ. 1967ರ ವರೆಗೆ ಈ ನಗರ ಇಬ್ಭಾಗವಾಗಿ, ಒಂದು ಭಾಗ ಇಸ್ರೇಲಿನಲ್ಲಿಯೂ ಇನ್ನೊಂದು ಭಾಗ ಜೋರ್ಡಾನಿನಲ್ಲಿಯೂ ಇದ್ದುವು. ಆ ವರ್ಷ ಜೂನ್‌ನಲ್ಲಿ ಆ ನಗರವನ್ನು ಇಸ್ರೇಲ್ ಸಂಪೂರ್ಣವಾಗಿ ವಶಮಾಡಿಕೊಂಡಿತು. ಟೆಲ್ ಅವೀವ್, ಹೈಫ ಮುಖ್ಯ ನಗರಗಳು.

ತಮ್ಮ ಬಂಜರು ನಾಡನ್ನು ಫಲಪತ್ತಾಗಿಸಿ, ಅಭಿವೃದ್ಧಿಪಡಿಸುವುದರಲ್ಲಿ ಇಸ್ರೇಲಿಗಳಿಗೆ ಬಲು ಉತ್ಸಾಹ. ಮೇ ತಿಂಗಳಿಂದ ಅಕ್ಟೋಬರ್ ತಿಂಗಳ ವರೆಗೆ ಮಳೆ ಆಗುವುದಿಲ್ಲ. ನದಿಯಿಂದ ನೀರನ್ನು ಕೊಳವೆಗಳ ಮೂಲಕ ಹರಿಸುವುದು, ಬಾವಿಗಳಿಂದ ನೀರನ್ನು ಹಾಯಿಸುವುದು—ಈ ರೀತಿ ನೀರಿನ ಕೊರತೆಯನ್ನು ನಿವಾರಿಸಿಕೊಂಡಿದ್ದಾರೆ. ನೀರಿನ ತೊಂದರೆ ಕಡಮೆಯಾದಂತೆ ಸಾಂದ್ರಬೇಸಾಯ ಮಾಡುತ್ತಿದ್ದಾರೆ.

ಖಂಡ : ಏಷ್ಯ (ನೈಋತ್ಯ)
ಅಕ್ಷಾಂಶ : 29° 29′ ಉ ದಿಂದ 33°17′ ಉ
ರೇಖಾಂಶ: 34° 11′ ಪೂ ದಿಂದ 35° 26′ ಪೂ
ವಿಸ್ತೀರ್ಣ: 20,850 ಚ. ಕಿ. ಮೀ.
ಜನಸಂಖ್ಯೆ: ಸುಮಾರು 25,00,000
ರಾಜಧಾನಿ: ಜೆರೂಸಲೆಂ
ಭಾಷೆ : ಹಿಬ್ರೂ, ಅರಬಿ
ಸರಕಾರ ; ಗಣರಾಜ್ಯ
ಬಾವುಟ : ಬಿಳಿ, ನೀಲಿಯ ಎರಡು ಅಡ್ಡಪಟ್ಟಿಗಳು, ಮಧ್ಯದಲ್ಲಿ ನೀಲಿಯ ಡೇವಿಡ್‌ನ ನಕ್ಷತ್ರ
ನೋಡಿ : ಜೆರೂಸಲೆಂ ; ಬೆನ್–ಗುರಿಅನ್; ಡೇವಿಡ್

## ಈಜಿಪ್ಟ್

ಕಥೆ ಎಂದರೆ ಎಲ್ಲರಿಗೂ ಆಸೆ. ಕಥೆ ಹುಟ್ಟಿದ್ದು ಯಾವಾಗ?

ಇದಕ್ಕೆ ಉತ್ತರ ಹೇಳಲು ಸಾಧ್ಯವಿಲ್ಲ. ಆದರೆ ಅದು ಹುಟ್ಟಿ 3,200 ವರ್ಷಗಳಂತೂ ಆಗಿವೆ ಎನ್ನಬಹುದು. ಪ್ರಪಂಚದಲ್ಲಿ ಬರೆದಿಟ್ಟಿರುವ ಅತಿ ಪ್ರಾಚೀನ ಕಥೆ ಈ ವರೆಗೆ ನಮಗೆ ತಿಳಿದಿರುವಂತೆ 'ಅನ್‌ಪು ಮತ್ತು ಬಟ': ಇದನ್ನು ಬರೆದವನು ಆನೆನ ಎಂಬಾತ. ಇಬ್ಬರು ಅಣ್ಣತಮ್ಮಂದಿರು ಮತ್ತು ಅಣ್ಣನ ಹೆಂಡತಿ—ಇವರ ಕಥೆ ಇದು. ಈ ಕಥೆ ಸಿಕ್ಕಿರುವುದು ಈಜಿಪ್ಟಿನಲ್ಲಿ.



ಈಜಿಪ್ಟಿನ ಪ್ರಾಚೀನ ಶಿಲ್ಪವೈಭವ

ಪ್ರಪಂಚದ ಅತಿ ಪ್ರಾಚೀನ ನಾಗರಿಕತೆಗಳಲ್ಲಿ ಒಂದು ಈಜಿಪ್ಟಿನದು. ಅಲ್ಲಿ ಇಂದಿಗೂ ಕಾಣುವ ಪ್ರಾಚೀನ ಅವಶೇಷಗಳು ಪ್ರವಾಸಿಗರನ್ನೂ ಚರಿತ್ರೆಯ ಅಭ್ಯಾಸಿಗಳನ್ನೂ ಆಶ್ಚರ್ಯದಿಂದ ಮೂಕರನ್ನಾಗಿ ಮಾಡುತ್ತವೆ. ಮಣ್ಣನ್ನು ಅಗೆದು ಮಹಾನಗರಗಳನ್ನೇ ಹೊರಕ್ಕೆ ತೆಗೆದಿದ್ದಾರೆ. ಇನ್ನೂ ಅವಶೇಷಗಳು ಸಿಕ್ಕುತ್ತಲೇ ಇವೆ. ನಮಗೆ ತಿಳಿದಿರುವ ಈಜಿಪ್ಟಿನ ಅತಿ ಪ್ರಾಚೀನ ರಾಜ ಮೆನಿಸ್. ಇವನು ಸುಮಾರು ಕ್ರಿ. ಪೂ. 3400 ರವನು. ಹಾಗೆಯೇ ಪ್ರಪಂಚದ ಚರಿತ್ರೆಯಲ್ಲಿ ಪ್ರಭುತ್ವ ನಡೆಸಿದ ಮೊದಲನೆಯ ಹೆಂಗಸು ಆದದ್ದು ಈಜಿಪ್ಟಿನಲ್ಲಿ: ಇವಳ ಹೆಸರು ಹಾಷೆಪ್‌ಸಟ್ (ಕ್ರಿ. ಪೂ. 1501–1479). ಈಜಿಪ್ಟಿನ ಅತ್ಯಂತ ಸಮರ್ಥ ಪ್ರಭುಗಳಲ್ಲಿ ಒಬ್ಬಳಾದ ಈಕೆ, ರಾಜ್ಯವನ್ನು ಶತ್ರುಗಳಿಂದ ರಕ್ಷಿಸಿದಳು; ಒಳಗೆ ಶಾಂತಿಯನ್ನು ಕಾಪಾಡಿದಳು. ಗಂಡಸರಂತೆ ವೇಷ ಧರಿಸಿ, ತನ್ನನ್ನು 'ಸೂರ್ಯನ ಮಗ' ಎಂದು ಕರೆದುಕೊಂಡಳು. ಪ್ರಪಂಚದ ಚರಿತ್ರೆಯಲ್ಲಿ ಪ್ರಸಿದ್ಧಳಾದ



ನೈಲ್ ನದಿ

ಕ್ಲಿಯೊಪಾತ್ರ (ಕ್ರಿ. ಪೂ. 69–30) ಈ ನಾಡಿನವಳು. ಇಲ್ಲಿನ ಪುರಾತನ ಕಾಲದ ದೇವತೆಗಳ ವಿಗ್ರಹಗಳು, ಸ್ಫಿಂಕ್ಸ್ ಎನ್ನುವ ಅರ್ಧ ಮಾನವ ಅರ್ಧ ಮೃಗಾಕೃತಿಯ ವಿಗ್ರಹಗಳು, ರಾಜರಾಣಿಯರ ಮೂರ್ತಿಗಳು, ಪಿರಮಿಡ್ಡುಗಳು ಈಜಿಪ್ಟಿನ ಚರಿತ್ರೆಯನ್ನು ಕಣ್ಣಿಗೆ ಕಟ್ಟಿಸುತ್ತವೆ. ಹಿಂದಿನ ಅವಶೇಷಗಳಿಂದ ಈ ರಾಷ್ಟ್ರದ ಪೂರ್ವ ಚರಿತ್ರೆಯನ್ನು ಅರಿತುಕೊಳ್ಳಬಹುದು. ಪಿರಮಿಡ್, ಸ್ಫಿಂಕ್ಸ್, ದೇವಾಲಯ ಮತ್ತು ಗೋರಿಗಳ ಮೇಲೆ ಕೆತ್ತಿರುವ ಚಿತ್ರಲಿಪಿ ಚರಿತ್ರಕಾರರಿಗೆ ಸಹಾಯಕವಾಗಿವೆ.

ಆಫ್ರಿಕದ ಈಶಾನ್ಯ ಮೂಲೆಯಲ್ಲಿರುವ ಈ ನಾಡಿನ ಈಗಿನ ಪ್ರಾಮುಖ್ಯಕ್ಕೆ ಮೊದಲ ಕಾರಣ ಸೂಯೆಜ್ ಕಾಲುವೆ. ಇದು 105 ಕಿ. ಮೀ. ಉದ್ದವಿದೆ. ವಿಶ್ವ ವ್ಯಾಪಾರದ ಒಂದು ಹೆದ್ದಾರಿ. ಪ್ರಾಚೀನ ಗ್ರೀಕ್ ಚರಿತ್ರಕಾರ ಹೆರಾಡಟಸ್ ಈಜಿಪ್ಟನ್ನು 'ನೈಲ್‌ನದಿಯ ಕಾಣಿಕೆ' ಎಂದು ಕರೆದಿದ್ದಾನೆ.

ಸುಮಾರು ಕ್ರಿ. ಪೂ. 3000ದಲ್ಲೇ ಕೆಳ ಈಜಿಪ್ಟಿನವರು ವರ್ಷಕ್ಕೆ 365 ದಿನಗಳೆಂದು ಪಂಚಾಂಗವನ್ನು ಗೊತ್ತುಮಾಡಿದರು.

ಈಜಿಪ್ಟ್ ಮಟ್ಟಸ ನಾಡು. ನೈಲ್ ನದಿ ಮತ್ತು ಅದರ ಮುಖಜ ಭೂಮಿಯನ್ನುಳಿದು ಮಿಕ್ಕ ನಾಡೆಲ್ಲಾ ಮರಳುಗಾಡು. ಪಶ್ಚಿಮಕ್ಕೆ ಲಿಬಿಯ ಮರುಭೂಮಿ.

ನೈಲ್ ನದಿ ಕಣಿವೆಯಲ್ಲಿ ಎರಡು ಭಾಗಗಳು: ಮೇಲು ಈಜಿಪ್ಟ್ ಮತ್ತು ಕೆಳ ಈಜಿಪ್ಟ್. ಮೇಲು ಈಜಿಪ್ಟ್ ಕೈರೊದಿಂದ ಸೂಡಾನ್ ಗಡಿ ವರೆಗಿದೆ. ಕೆಳ ಈಜಿಪ್ಟ್ ನೈಲ್ ನದಿಯ ಮುಖಜಭೂಮಿ. ಇದು ಕೈರೋ ಮತ್ತು ಭೂಮಧ್ಯ ಸಮುದ್ರಗಳ ಮಧ್ಯೆ ತ್ರಿಕೋಣಾಕೃತಿಯಲ್ಲಿದೆ.

ಬೇಸಿಗೆ ಕಾಲದಲ್ಲಿ ಉಷ್ಣಾಂಶ 100° ರಿಂದ 110° ಫಾ. ವರೆಗೆ ಏರುತ್ತದೆ, ಸೆಕೆ ವಿಪರೀತ. ಮಳೆ ಬೀಳುವುದು ಎಂದಾದರೊಮ್ಮೆ. ಚಳಿಗಾಲ ಬೆಚ್ಚಗಿದ್ದು, ಆಹ್ಲಾದಕರ. ಹತ್ತಿ, ಗೋಧಿ, ಬಾರ್ಲಿ, ಭತ್ತ, ಹಣ್ಣುಗಳು, ತರಕಾರಿಗಳು, ಕಬ್ಬು, ನೀಲಿ, ಹೊಗೆಸೊಪ್ಪು ಬೆಳೆಯುತ್ತವೆ,

ಮ್ಯಾಂಗನೀಸ್, ಫಾಸ್ಫೇಟ್, ಕಬ್ಬಿಣ, ಕಲ್ಲಿದ್ದಲು, ತೈಲ ಮುಂತಾದುವು ದೊರೆಯುತ್ತವೆ,

ಈಜಿಪ್ಟಿನ ಸಂಪದಭಿವೃದ್ಧಿ ಸಾಧ್ಯವಾಗಿರುವುದು ನೈಲ್ ನದಿಯಿಂದಲೇ. ನದಿಗೆ ಅಣೆಕಟ್ಟುಗಳನ್ನು ಹಾಕಿ, ನೀರು ಶೇಖರಿಸುತ್ತಾರೆ. ಇವುಗಳಲ್ಲಿ ಆಸ್ವಾನ್ ಅಣೆಕಟ್ಟು ಪ್ರಸಿದ್ಧವಾದದ್ದು. ಎರಡನೆಯ ರ್‍ಯಾಮ್‌ಸೆಸ್ ಕಟ್ಟಿಸಿದ ಅಬು ಸಿಂಬೆಲ್ ದೇವಾಲಯುಗಳು ಈ ಅಣೆಕಟ್ಟಿನಿಂದ ಮುಳುಗಿಹೋಗಬೇಕಿತ್ತು. ಇವು 3,000 ವರ್ಷ ಹಿಂದಿನವು. ಇವನ್ನು ಉಳಿಸಲು ವಿಗ್ರಹಗಳನ್ನೂ ಕಂಬಗಳನ್ನೂ ಭಾಗ ಮಾಡಿ, ಗುಡ್ಡವೊಂದರ ಮೇಲಿನ ನಿವೇಶನದಲ್ಲಿ ಮತ್ತೆ ಸೇರಿಸುವ ಅದ್ಭುತ ಶಿಲ್ಪಯೋಜನೆಯನ್ನು ವಿಶ್ವಸಂಸ್ಥೆ ರೂಪಿಸಿತು. ಇದಕ್ಕೆ ವೆಚ್ಚ ಸುಮಾರು ಇಪ್ಪತ್ತೈದು ಕೋಟಿ ರೂಪಾಯಿ. ಹಣವನ್ನು 56 ರಾಷ್ಟ್ರಗಳಿಂದ ವಂತಿಗೆ ಪಡೆದು ಕೂಡಿಸಿದ್ದಾರೆ.

ಬಿಡಾಯಿನ್ ಅಲೆಮಾರಿ ಜನರು ಮರುಭೂಮಿಯಲ್ಲಿ ಚಿಲುಮೆಗಳ ಬಳಿ ವಾಸಿಸುತ್ತಾರೆ. ಉಳಿದ ವಾಸ ಹಳ್ಳಿಗಳಲ್ಲಿ ಮತ್ತು ಪಟ್ಟಣಗಳಲ್ಲಿ. ಮುಸಲ್ಮಾನರೇ ಬಹಳ. ದೇಶದ ಆಡಳಿತ ಭಾಷೆ ಅರಬಿ ; ಫ್ರೆಂಚ್, ಇಂಗ್ಲಿಷ್ ಭಾಷೆಗಳೂ ಪ್ರಚಾರದಲ್ಲಿವೆ.

ಬ್ರಿಟಿಷರು ಈಜಿಪ್ಟನ್ನು 1882ರಲ್ಲಿ ತಮ್ಮ ವಶಕ್ಕೆ ತೆಗೆದುಕೊಂಡರು.

1952ರಲ್ಲಿ ರಾಜಪ್ರಭುತ್ವ ಕೊನೆಗಂಡಿತು. ಅರಸು ಫರೂಕ್ ಕೊನೆಯ ದೊರೆ.

ರಾಜಧಾನಿ ಕೈರೊ ವಿವಿಧ ದೇಶಗಳ ಜನರಿರುವ ವಾಣಿಜ್ಯ ನಗರ. ಮುಖ್ಯ ಬಂದರು ಅಲೆಗ್ಸಾಂಡ್ರಿಯ. ನೈಲ್ ದಂಡೆಯ ಮೇಲೆ ಎಂಟುನೂರು ಕಿ. ಮೀ. ದೂರದಲ್ಲಿ ಸುಂದರವಾದ ನಗರ ಲಕ್ಸರ್ ಇದೆ. ಇಲ್ಲಿ ಪುರಾತನ ಕಾರ್ನಾಕ್ ದೇವಸ್ಥಾನದ ಅವಶೇಷಗಳಿವೆ. ಸೂಯೆಜ್ ಕಾಲುವೆಯ ಬಂದರು ಸಯ್ಯದ್. ಆಸ್ವಾನ್ ಬೆಳೆಯುತ್ತಿರುವ ನಗರ.

ಕೈರೊದಲ್ಲಿ ಭಾರಿ ವಸ್ತುಸಂಗ್ರಹಾಲಯವಿದೆ. ಈಜಿಪ್ಟಿನ ಪುರಾತನ ವಸ್ತುಗಳನ್ನು ಇಲ್ಲಿ ಇಟ್ಟಿದ್ದಾರೆ.

ನೋಡಿ : ಐಕ್ಯ ಅರಬ್ ಗಣರಾಜ್ಯ; ಕ್ಲಿಯೊಪಾತ್ರ; ಪಿರಮಿಡ್; ಸೂಯೆಜ್ ಕಾಲುವೆ.

## ಈಸ್ಟ್ ಇಂಡಿಯಾ ಕಂಪೆನಿಗಳು

150 ವರ್ಷಗಳ ಕಾಲ ಭಾರತಕ್ಕೆ ಸ್ವಾತಂತ್ರ್ಯ ಇರಲಿಲ್ಲ ; 1947ರಲ್ಲಿ ಬ್ರಿಟಿಷರ ಆಡಳಿತ ಇಲ್ಲಿ ಕೊನೆಗಂಡಿತು. ಈ ದಾಸ್ಯದ ವ್ಯಥೆಯ ಕಥೆ ಎಂದು–ಹೇಗೆ–ಆರಂಭವಾಯಿತು ?

ಹದಿನೈದನೆಯ ಶತಮಾನದಲ್ಲಿ ಯೂರೋಪಿನ ಅನ್ವೇಷಕರು ಭಾರತ ದೇಶಕ್ಕೆ ಜಲಮಾರ್ಗವನ್ನು ಕಂಡುಹಿಡಿದ ಅನಂತರ ಪೂರ್ವ ಮತ್ತು ಪಶ್ಚಿಮ ದೇಶಗಳ ನಡುವೆ ಹೆಚ್ಚಿನ ಸಂಪರ್ಕವೇರ್ಪಟ್ಟಿತು. ಯೂರೋಪಿನ ಜನ ಪೂರ್ವದೇಶಗಳೊಡನೆ ವ್ಯಾಪಾರ ಮಾಡಲಾರಂಭಿಸಿದರು. ಎರಡು ದೇಶಗಳ ನಡುವೆ ಹಾಯಿದೋಣಿಗಳಲ್ಲಿ ಸುದೀರ್ಘ ಸಮುದ್ರಯಾನ! ಒಬ್ಬೊಬ್ಬ ವರ್ತಕರೇ ವ್ಯಾಪಾರ ನಡೆಸುವುದು ದುಸ್ಸಾಧ್ಯವಾಗಿತ್ತು. ಆದ್ದರಿಂದ ಆಯಾ ದೇಶಗಳ ಕೆಲವು ವರ್ತಕರು ಒಟ್ಟಾಗಿ ಸೇರಿ ವ್ಯಾಪಾರ ಸಂಸ್ಥೆಗಳನ್ನು ಸ್ಥಾಪಿಸಿಕೊಂಡು ವ್ಯಾಪಾರ ನಡೆಸುವ ನಿರ್ಧಾರಕ್ಕೆ ಬಂದರು. ಇದಕ್ಕೆ ಅವರ ಸರಕಾರಗಳ ಒಪ್ಪಿಗೆಯೂ ದೊರಕಿತು. ಈ ವ್ಯಾಪಾರ ಸಂಸ್ಥೆಗಳಿಗೆ ಈಸ್ಟ್ ಇಂಡಿಯಾ ಕಂಪೆನಿಗಳು ಎಂದು ಹೆಸರು. ಫ್ರೆಂಚರು, ಡಚ್ಚರು, ಇಂಗ್ಲಿಷರು ಇವರೆಲ್ಲರೂ ವ್ಯಾಪಾರ ಸಂಸ್ಥೆಗಳನ್ನು ಸ್ಥಾಪಿಸಿಕೊಂಡರು. ಹದಿನಾರನೆಯ

ಶತಮಾನದಿಂದ ಹತ್ತೊಂಬತ್ತನೆಯ ಶತಮಾನದವರೆಗೆ ಪಶ್ಚಿಮ ದೇಶಗಳ ವ್ಯಾಪಾರವೆಲ್ಲ ಈ ಸಂಸ್ಥೆಗಳ ಕೈಯಲ್ಲಿದ್ದಿತು.

1587ರಲ್ಲಿ ದೂರ ಪ್ರದೇಶಗಳ ವ್ಯಾಪಾರಕ್ಕಾಗಿ ಪ್ರಾರಂಭವಾದ ಡಚ್ ವ್ಯಾಪಾರ ಸಂಸ್ಥೆ 1602ರಲ್ಲಿ ನೆದರ್‌ಲೆಂಡ್ಸ್ ಸರಕಾರದಿಂದ ಒಂದು ಸನ್ನದನ್ನು ಪಡೆದು ಇಂಡಿಯ ಮತ್ತು ಈಸ್ಟ್ ಇಂಡೀಸ್ ದ್ವೀಪಗಳೊಡನೆ ವ್ಯಾಪಾರ ಆರಂಭಿಸಿತು. ಇಪ್ಪತ್ತೊಂದು ವರ್ಷಗಳ ಕಾಲ ಪ್ರತಿಸ್ಪರ್ಧಿಯೇ ಇಲ್ಲದೆ ಸಂಸ್ಥೆ ಬಹಳ ಅಭಿವೃದ್ಧಿಗೆ ಬಂದಿತು. ಭದ್ರತೆಗಾಗಿ ತಕ್ಕಷ್ಟು ಸೇನಾಬಲ ವನ್ನು ಪಡೆದಿದ್ದ ಈ ಕಂಪೆನಿ ಹಲವು ದೇಶಗಳಲ್ಲಿ ಕಾಲೂರಿ 1663ರಲ್ಲಿ ಮಲಬಾರ್ ಪ್ರದೇಶದ ಮುಖ್ಯ ಪೋರ್ಚುಗೀಸ್ ವಸಾಹತುಗಳನ್ನು ಅಧೀನಪಡಿಸಿಕೊಂಡಿತು. ಕಂಪೆನಿ ಹೊಂದಿದ್ದ ಅಧಿಕಾರವನ್ನೆಲ್ಲ 1781ರಲ್ಲಿ ಡಚ್ ಸರಕಾರ ವಹಿಸಿಕೊಂಡಿತು.

ಡಚ್ ಈಸ್ಟ್ ಇಂಡಿಯಾ ಕಂಪೆನಿಯಿಂದ ಸ್ಫೂರ್ತಿಗೊಂಡ ಇಂಗ್ಲಿಷರು 1600ರಲ್ಲಿ ಒಂದು ವ್ಯಾಪಾರ ಸಂಸ್ಥೆಯನ್ನು ಆರಂಭಿಸಿದರು. ಅದು ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿ. ಇಂಗ್ಲೆಂಡಿನ ರಾಣಿಯಾಗಿದ್ದ ಮೊದಲನೆಯ ಎಲಿಜಬೆತಳಿಂದ ವ್ಯಾಪಾರಕ್ಕಾಗಿ ಈ ಕಂಪೆನಿ ಒಂದು ಸನ್ನದನ್ನು ಪಡೆದು ಕೊಂಡಿತು. 1608ರಲ್ಲಿ ಆಗ ಭಾರತದ ಚಕ್ರವರ್ತಿಯಾಗಿದ್ದ ಜಹಾಂಗೀರನ ಸಮ್ಮತಿಯನ್ನು ಪಡೆದು ಸುರತ್ ಪಟ್ಟಣದಲ್ಲಿ ಕಂಪನಿಯ ಪ್ರಥಮ ಮಳಿಗೆ ಪ್ರಾರಂಭವಾಯಿತು ; ವ್ಯಾಪಾರ ಹೆಚ್ಚಿದಂತೆ ತೀರ ಪ್ರದೇಶ ಮತ್ತು ಒಳ ಪ್ರದೇಶಗಳಲ್ಲಿ ಅವರ ಮಳಿಗೆಗಳು ಹೆಚ್ಚಿದುವು.

ಈ ಸಮಯದಲ್ಲಿ ಪೋರ್ಚುಗೀಸರೂ ಡಚ್ಚರೂ ಅನೇಕ ವಿಧದಲ್ಲಿ ಇಂಗ್ಲಿಷರ ವ್ಯಾಪಾರಕ್ಕೆ ತಡೆಯೊಡ್ಡಿದರು. ಫ್ರೆಂಚ್ ಮತ್ತು ಇಂಗ್ಲಿಷರ ನಡುವೆಯಂತೂ ಈ ವಿಷಯವಾಗಿ ಕಲಹ ನಡೆಯುತ್ತಲೇ ಇತ್ತು. ರಾಬರ್ಟ್ ಕ್ಲೈವ್ ಎಂಬವನ ನೇತೃತ್ವದಲ್ಲಿ ಇಂಗ್ಲಿಷ್ ಈಸ್ಟ್ ಇಂಡಿಯಾ ಕಂಪೆನಿ ಈ ಎಲ್ಲ ಅಡೆತಡೆಗಳನ್ನು ನಿವಾರಿಸಿಕೊಂಡಿತು.

ಈ ಮಧ್ಯೆ ವ್ಯಾಪಾರಕ್ಕೆಂದು ಆರಂಭವಾದ ಈ ಸಂಸ್ಥೆ ವಿವಿಧ ಭಾಗಗಳ ಆಡಳಿತವನ್ನೇ ಕೈಗೆ ತೆಗೆದುಕೊಂಡಿತು. ಪ್ರತಿಭಟಿಸಿದ ಟಿಪ್ಪುಸುಲ್ತಾನ್, ಮರಾಠರು, ಸಿಕ್ಖರು ಮುಂತಾದವರನ್ನು ಕಂಪೆನಿ ಹತ್ತಿಕ್ಕಿತು. ಕೊನೆಗೆ 1857ರಲ್ಲಿ ತಮ್ಮ ಆಂಗ್ಲ ಅಧಿಕಾರಿಗಳ ವಿರುದ್ಧ ಭಾರತೀಯ ಸಿಪಾಯಿಗಳು ಬಂಡಾಯವೆದ್ದರು. ದೇಶದಲ್ಲಿ ರಕ್ತದ ಕೋಡಿಯೇ ಹರಿಯಿತು. ಆಗ ಬ್ರಿಟಿಷರಿಗೆ ಭಾರತದಂಥ ದೇಶದ ಆಡಳಿತವನ್ನು ಬರಿಯ ಒಂದು ವ್ಯಾಪಾರ ಸಂಸ್ಥೆ ನಿರ್ವಹಿಸುವುದು ಕಷ್ಟ ಎಂಬುದು ಮನದಟ್ಟಾಯಿತು. 1868ರಲ್ಲಿ ಕಂಪೆನಿಯ ಆಡಳಿತವನ್ನು ವಿಕ್ಟೋರಿಯ ರಾಣಿಯೆ ವಹಿಸಿ ಕೊಂಡಳು. ಅಲ್ಲಿಗೆ ಇಂಗ್ಲಿಷ್ ಈಸ್ಟ್ ಇಂಡಿಯಾ ಕಂಪೆನಿ ಮುಕ್ತಾಯ ಗೊಂಡಿತು. ಪಾಶ್ಚಾತ್ಯ ದೇಶಗಳಿಂದ ಸ್ಥಾಪಿತವಾದ ವ್ಯಾಪಾರ ಸಂಸ್ಥೆಗಳಲ್ಲೆಲ್ಲ ಅತ್ಯಂತ ದಕ್ಷ ಮತ್ತು ಅತ್ಯಂತ ಪ್ರಸಿದ್ಧ ಸಂಸ್ಥೆ ಬ್ರಿಟಿಷರದು.

ಪೂರ್ವ ದೇಶಗಳೊಡನೆ ವ್ಯಾಪಾರವನ್ನು ಕುದುರಿಸುವುದಕ್ಕಾಗಿ ಮತ್ತು ವಸಾಹತುಗಳ ನಿರ್ಮಾಣಕ್ಕಾಗಿ 1664ರಲ್ಲಿ ಫ್ರೆಂಚ್ ವರ್ತಕರು ಒಂದು ವ್ಯಾಪಾರ ಸಂಸ್ಥೆಯನ್ನು ಸ್ಥಾಪಿಸಿದರು. ಭಾರತದೊಡನೆ ಮಾತ್ರ ವ್ಯಾಪಾರ ಮಾಡುವ ಉದ್ದೇಶದಿಂದ ಪ್ರಾರಂಭವಾದರೂ ಸುತ್ತಮುತ್ತಣ ದ್ವೀಪ ಗಳೆಡೆಯೂ ಕಂಪೆನಿಯ ದೃಷ್ಟಿ ಹರಿದಿತ್ತು. 1719ರಲ್ಲಿ ಫ್ರಾನ್ಸಿನ ಇನ್ನೂ ಕೆಲವು ವ್ಯಾಪಾರ ಸಂಘಗಳ ಜೊತೆಗೂಡಿದ ಫ್ರೆಂಚ್ ಈಸ್ಟ್ ಇಂಡಿಯಾ ಕಂಪೆನಿ ಸರಕಾರದ ಮನ್ನಣೆಯನ್ನು ಪಡೆಯಿತು.

ಹದಿನೆಂಟನೆಯ ಶತಮಾನದ ಮಧ್ಯ ಭಾಗದ ವೇಳೆಗೆ ಫ್ರೆಂಚ್ ಮತ್ತು ಬ್ರಿಟಿಷ್ ವ್ಯಾಪಾರ ಸಂಸ್ಥೆಗಳು ಭಾರತದಲ್ಲಿ ಅತ್ಯಂತ ಪ್ರಬಲವಾಗಿದ್ದುವು ಪಾಂಡಿಚೆರಿ ಫ್ರೆಂಚ್ ಕಂಪೆನಿಯ ಪ್ರಮುಖ ಕೇಂದ್ರವಾಗಿದ್ದಿತು. ಫ್ರೆಂಚ್ ಮತ್ತು ಬ್ರಿಟಿಷರ ನಡುವೆ ಕಲಹಗಳು ನಡೆಯುತ್ತಲೇ ಇದ್ದುವು. 1750ರ ಹೊತ್ತಿಗೆ ಭಾರತದಲ್ಲಿ ಫ್ರೆಂಚರ ಪ್ರಾಬಲ್ಯ ಶಿಖರಕ್ಕೇರಿತು. 1751ರ ಆರ್ಕಾಟ್ ಯುದ್ಧದಲ್ಲಿ ಇಂಗ್ಲಿಷರ ಗೆಲುವು ಫ್ರೆಂಚ್ ಕಂಪೆನಿಯ ಪ್ರಾಬಲ್ಯ ವನ್ನು ಕುಗ್ಗಿಸಿತು. ಅವರ ನಾಯಕನಾಗಿದ್ದ ಡೂಪ್ಲೆ ಫ್ರಾನ್ಸಿಗೆ ಹಿಂದಿರುಗಬೇ ಕಾಯಿತು. ಆಗಲೇ ಪತನದ ಹಾದಿಯನ್ನು ಹಿಡಿದಿದ್ದ ಕಂಪೆನಿ ಬ್ರಿಟಿಷರ ಈಸ್ಟ್ ಇಂಡಿಯಾ ಕಂಪೆನಿಯ ವಿರುದ್ಧ ಬಂಗಾಳದ ನವಾಬನಿಗೆ ಸಹಾಯ ಮಾಡಲು ಯತ್ನಿಸಿ, 1757ರಲ್ಲಿ ಪ್ಲಾಸಿ ಕದನದಲ್ಲಿ ಸಂಪೂರ್ಣವಾಗಿ ಸೋತಿತು. 1763ರ ಪ್ಯಾರಿಸ್ ಒಪ್ಪಂದದ ಪ್ರಕಾರ ಫ್ರೆಂಚರ ಅಧೀನದಲ್ಲಿದ್ದ ಭಾರತದ ಭಾಗಗಳಲ್ಲಿ ಹೆಚ್ಚಿನವು ಕೈಬಿಟ್ಟುಹೋದುವು. 1769ರಲ್ಲಿ ಫ್ರೆಂಚ್ ಈಸ್ಟ್ ಇಂಡಿಯಾ ಕಂಪೆನಿ ಮುಳುಗಿತು, ಅದರ ಅಳಿದುಳಿದ ಆಸ್ತಿಗಳಿಗೆ ಫ್ರೆಂಚ್ ಸರಕಾರ ಅಧಿಕಾರಿಯಾಯಿತು.

ಡೇನಿಷ್ ಈಸ್ಟ್ ಇಂಡಿಯಾ ಕಂಪೆನಿ (1618–34, 1670–1729) ಮತ್ತು ಸ್ವೀಡಿಷ್ ಈಸ್ಟ್ ಇಂಡಿಯಾ ಕಂಪೆನಿ (1741–1806) ಯಾವ ಮುಖ್ಯವಾದ ಸಾಧನೆಯನ್ನೂ ಮಾಡಲಿಲ್ಲ.

ನೋಡಿ : ಕ್ಲೈವ್, ರಾಬರ್ಟ್; ಭಾರತ

## ಉಗ್ರಾಣ

ಹಡಗು, ರೈಲು ಇಂಥ ಸಾಗಾಣಿಕೆಯ ಮಾರ್ಗಗಳಲ್ಲಿ ಕಾಳುಕಡ್ಡಿ, ಔಷಧ ಮುಂತಾದ ಸಾಮಾನುಗಳು ಸಾಗಿಬರುತ್ತವೆ. ಅಧಿಕೃತ ಕ್ರಮ ಗಳೆಲ್ಲ ಮುಗಿಯುವ ತನಕ ಮತ್ತು ಅವುಗಳಿಗೆ ತಕ್ಕ ತೆರಿಗೆ ಅಥವಾ ಸುಂಕ ಗಳನ್ನು ಆಮದುಮಾಡಿಕೊಂಡವರು ಕೊಡುವ ತನಕ ಇವನ್ನು ಕಾಪಾಡು ವುದು ಹೇಗೆ ? ಒಂದು ರೈಲು ಅಥವಾ ಹಡಗಿನ ಸಮಯಕ್ಕೆ ಸರಿಯಾಗಿ ಅದರಲ್ಲಿ ಸಾಗಬೇಕಾದ ಸಾಮಾನುಗಳನ್ನು ನಿಲ್ದಾಣ ಅಥವಾ ಬಂದರಿಗೆ ತಲಪಿಸುವುದು ಹೇಗೆ ? ಸರಿಯಾದ ನೌಕೆ ಅಥವಾ ಗಾಡಿಯಲ್ಲಿ ಕಳುಹಿಸು ವುದಕ್ಕಾಗಿ ಸಾಮಾನುಗಳನ್ನು ಆ ಜಾಗದಲ್ಲಿ ಕಾಯ್ದಿಡುವುದು ಹೇಗೆ ? ಈ ಎಲ್ಲ ಸಮಸ್ಯೆಗಳನ್ನು ಪರಿಹರಿಸಲು ಉಗ್ರಾಣ ಅಥವಾ ಮಳಿಗೆಗಳನ್ನು ಬಂದರುಗಳಲ್ಲೂ ಮುಖ್ಯ ರೈಲು ನಿಲ್ದಾಣಗಳಲ್ಲೂ ಕಟ್ಟುತ್ತಾರೆ. ಹೀಗೆ ಸಾಗಾಣಿಕೆ-ದಾಸ್ತಾನುಗಳು ಒಂದೇ ನಾಣ್ಯದ ಎರಡು ಮುಖಗಳು.

ವಾಣಿಜ್ಯ ಪ್ರಪಂಚದಲ್ಲಿ ಕೊಳ್ಳುವವನಿಗೂ ಉತ್ಪಾದಿಸುವವನಿಗೂ ನಡುವಣ ಕೊಂಡಿ ಉಗ್ರಾಣ. ಸರಳ ದಾಸ್ತಾನಿಗೂ ಉಗ್ರಾಣ ದಾಸ್ತಾನಿಗೂ ಇರುವ ವ್ಯತ್ಯಾಸ ಒಂದೇ. ಮನುಷ್ಯ ತಾನು ಬೇಟೆಯಾಡುವ ಅಥವಾ ಬೆಳೆಯುವ ಶಕ್ತಿಯನ್ನು ಅರಿತುಕೊಂಡ ಕಾಲದಿಂದ ತನ್ನ ಅಥವಾ ತನ್ನ ಗುಂಪಿನವರ ಬಳಕೆಗೆಂದು ಹೆಚ್ಚಿನ ಆಹಾರ ಗಳಿಕೆಯನ್ನು ಕೂಡಿಡುತ್ತಿದ್ದುದು ಸರಳ ದಾಸ್ತಾನು. ಇದರಲ್ಲಿ ವ್ಯಾಪಾರ ಮಾಡಬೇಕು ಎನ್ನುವ ಅಥವಾ ಲಾಭದ ಯೋಚನೆಯಿಲ್ಲ. ಉಗ್ರಾಣ ದಾಸ್ತಾನಿನಲ್ಲಿ ಲಾಭವೇ ಮೂಲೋ ದ್ದೇಶ. ತಾನು ಉತ್ಪಾದಿಸಿದ ಸಾಮಾನನ್ನು ಒಂದೇ ಬಾರಿಗೆ ಮಾರಲು ಹೊರಟರೆ ತಕ್ಕ ಬೆಲೆ ಸಿಕ್ಕದೆ ಹೋಗಬಹುದು. ಸರಿಯಾದ ಕಾಲಾವಕಾಶ ಗಳನ್ನು ಉಪಯೋಗಿಸಿ ಸಮರ್ಪಕ ಅಥವಾ ಪರಮಾವಧಿ [illegible] ಮಾಡುವುದು ಯಾವ ವರ್ತಕನಿಗಾದರೂ ಹರ್ಷದ ವಿಷಯ.

ಉಗ್ರಾಣ ದಾಸ್ತಾನು ಬಹಳ ಹಿಂದಿನ ಪದ್ಧತಿ. ಜಮೀನಿನ ಒಡೆಯರ ಸಣ್ಣಪುಟ್ಟ ಉಗ್ರಾಣಗಳಲ್ಲದೆ, ಯುದ್ಧ ಹಾಗೂ ಕ್ಷಾಮಕಾಲದ ತೊಂದರೆ ಗಳಿಗೆಂದು ತಮ್ಮದೇ ಹಿರಿಯ ಮಳಿಗೆಗಳಲ್ಲಿ ಹೆಚ್ಚಿನ ಆಹಾರ ಹಾಗೂ ಇನ್ನಿತರ ಪದಾರ್ಥಗಳನ್ನು ಪ್ರಭುತ್ವಗಳೂ ಶೇಖರಿಸಿಡುತ್ತಿದ್ದುವು. ಐದು ಸಾವಿರ ವರ್ಷಗಳ ಹಿಂದಿನವೆಂದು ಹೇಳಲಾದ ಮೊಹೆಂಜೊದಾರೊ ಮತ್ತು ಹರಪ್ಪ ಅವಶೇಷಗಳಲ್ಲಿ ಇವು ಕಂಡುಬಂದಿವೆ. ಹರಪ್ಪದಲ್ಲಿ ಪ್ರವಾಹಗಳ ಹಾವಳಿಯನ್ನು ತಡೆಯಲೆಂದು ಸ್ವಲ್ಪ ಏರಿಸಿದ ವೇದಿಕೆಯ ಮೇಲೆ 279 ಚ. ಮೀ. ಗಳ ಕೋಠಿಯನ್ನು ಕಟ್ಟಲಾಗಿದ್ದಿತು. ಈ ಕೋಠಿಯನ್ನು 93 ಚದರ ಮೀಟರುಗಳ ದಾಸ್ತಾನು ವಿಭಾಗಗಳಾಗಿ ಮಾಡಿ ಅವುಗಳನ್ನು ಧಾನ್ಯ ಸಂಗ್ರಹಣೆಗಾಗಿ ಉಪಯೋಗಿಸುತ್ತಿದ್ದರು.

ಮಧ್ಯಯುಗದ ಅಂತ್ಯದಲ್ಲಿ ವಾಣಿಜ್ಯ ವ್ಯಾಪಾರಗಳು ಮತ್ತೆ ಅಭಿವೃದ್ಧಿಗೆ ಬಂದಾಗಿನಿಂದ ಉಗ್ರಾಣಗಳ ಅವಶ್ಯಕತೆ ಪುನಃ ಉಂಟಾಯಿತು. ಐರೋಪ್ಯ ದೇಶಗಳಲ್ಲಿ, ಮುಖ್ಯವಾಗಿ ವೆನಿಸ್ ನಗರದಲ್ಲಿ, ವಾಣಿಜ್ಯ ಶಕ್ತಿ ಈ ಕಾಲ ದಲ್ಲಿ ಬಹು ಮಟ್ಟಿಗೆ ಬೆಳೆದು ಉಗ್ರಾಣಗಳಲ್ಲಿ ರಸೀತಿ ಕೊಡುವ ಕ್ರಮವೂ ಜಾರಿಗೆ ಬಂದಿತ್ತು. ಇಂಥ ರಸೀತಿಗಳನ್ನು ಪಡೆಯುವುದೆಂದರೆ ಪದಾರ್ಥದ ಮೇಲಿನ ಹಕ್ಕು ಪಡೆದಂತೆಯೇ. ಅಷ್ಟೇ ಅಲ್ಲ, ಕೇವಲ ರಸೀತಿಯ ಆಧಾರದ ಮೇಲೆ ಸಾಲ ಪಡೆಯುವ ಸಾಧ್ಯತೆಯೂ ಇದ್ದಿತು. ಇದೇ ರೀತಿನೀತಿಗಳು ಮುಂದುವರಿದು ಉಗ್ರಾಣ ರಸೀತಿ ಎಂಬ ಈಗಿನ ರಸೀತಿಗಳ ಮೇಲೂ ದಾಸ್ತಾನು ಪದಾರ್ಥದ ಆಧಾರವೆಂದು ಬ್ಯಾಂಕುಗಳು ವರ್ತಕರಿಗೆ, ರೈತರಿಗೆ ಸಾಲ ನೀಡುತ್ತವೆ.

ಉಗ್ರಾಣ ದಾಸ್ತಾನು ಈಗ ಬಹಳ ಸುಧಾರಿಸಿದೆ. ವ್ಯಾಪಾರಸ್ಥರ ಬೇಡಿಕೆ ಮತ್ತು ಗಿರಾಕಿಗಳ ಪೂರೈಕೆಗೆ ತಕ್ಕಂತೆ ಇವುಗಳಲ್ಲಿ ಆಗಿರುವ ಮಾರ್ಪಾಡುಗಳು ಅನೇಕ. ಹೀಗಾಗಿ ಇದೇ ಒಂದು ಕೈಗಾರಿಕೆಯಾಗಿದೆ. ಈ ಕೈಗಾರಿಕೆಯಲ್ಲಿ ಮುಖ್ಯವಾಗಿ ಪೀಠೋಪಕರಣಗಳು ಮತ್ತು ಇನ್ನಿತರ ಮನೆಯ ಸಾಮಾನುಗಳು, ವ್ಯಾವಸಾಯಿಕ ಪದಾರ್ಥಗಳು, ಶೀತಾಗಾರ, ವ್ಯಾಪಾರೀ ಸರಕು ಮತ್ತು ಇವಲ್ಲದೆ ಬಯಲು ಉಗ್ರಾಣಗಳು ಎಂಬ ವರ್ಗೀ ಕರಣ ಮಾಡಲಾಗಿದೆ. ಸಾಧಾರಣವಾಗಿ ಉಗ್ರಾಣ ದಾಸ್ತಾನುಗಳುಳ್ಳವರು ತಮ್ಮದೇ ಉಗ್ರಾಣಗಳನ್ನು ಹೊಂದಿರುತ್ತಾರೆ.

ಕಾಯಿದೆಯ ಪ್ರಕಾರ ಉಗ್ರಾಣದಲ್ಲಿ ಪದಾರ್ಥವಿರುವ ತನಕ ಅದರ ಸಂಪೂರ್ಣ ಜವಾಬ್ದಾರಿ ಮಳಿಗೆಯ ಮಾಲಿಕನಿಗೆ ಸೇರಿರುತ್ತದೆ. ಪದಾ ರ್ಥದ ಮಾಲಿಕನಿಗೆ ಈ ಮಳಿಗೆದಾರನ ಪ್ರಾಮಾಣಿಕತೆ ಬಹು ಮುಖ್ಯ ಆಸರೆ. ಮಳಿಗೆದಾರ ಉಗ್ರಾಣದ ಯಾವುದೇ ಸಾಮಾನನ್ನು ಮುಟ್ಟು ವಂತಿಲ್ಲ. ಆತ ತಾನು ಪಡೆದ ಸಾಮಾನುಗಳನ್ನು ಅದೇ ರೂಪದಲ್ಲಿ, ಅಷ್ಟೇ ಪ್ರಮಾಣದಲ್ಲಿ ಹಿಂದಿರುಗಿಸಬೇಕು. ಒಂದೇ ಉಗ್ರಾಣದಲ್ಲಿ ಹಲ ವಾರು ಮಂದಿಯ ಪದಾರ್ಥಗಳಿದ್ದರೆ ಅವುಗಳನ್ನು ಪ್ರತ್ಯೇಕಿಸಿ ದಾಸ್ತಾನು ಮಾಡಬೇಕು. ಇದಕ್ಕಾಗಿ ಕಟ್ಟುನಿಟ್ಟಾದ ಮೇಲ್ವಿಚಾರಣೆ ಮತ್ತು ನಿರ್ಬಂಧ ಗಳನ್ನು ಸರಕಾರ ರೂಪಿಸಿರುತ್ತದೆ. ಮಳಿಗೆಯಲ್ಲಿ ಇಟ್ಟ ಪದಾರ್ಥವನ್ನು ಮಳಿಗೆಯ ಮಾಲಿಕ ಎಚ್ಚರಿಕೆಯಿಂದ ನೋಡಿಕೊಳ್ಳದೆ ಅದು ಕೆಟ್ಟರೆ ಅವನು ಪದಾರ್ಥದ ಮಾಲಿಕನಿಗೆ ಪರಿಹಾರ ಕೊಡಬೇಕು. ಹೀಗೆ ಮಳಿಗೆ ದಾರ ಕೊಳ್ಳುವವನ ಮತ್ತು ಮಾರುವವನ ಜೊತೆಗೆ ಸಾಲ ಕೊಡುವವನ ಮತ್ತು ಪಡೆಯುವವನ ಮಧ್ಯದ ವ್ಯಕ್ತಿ: ಉಗ್ರಾಣದ ಪದಾರ್ಥಗಳಿಂದ ಅವನಿಗೆ ಸ್ವಂತ ಲಾಭದ ಯೋಜನೆ ಇಲ್ಲ.

ಉಗ್ರಾಣದ ಪದಾರ್ಥಗಳನ್ನು ಒಂದು ಕೈಯಿಂದ ಇನ್ನೊಂದು ಕೈಯಿಗೆ ವರ್ಗಾಯಿಸುವಾಗ ಕೇವಲ ರಸೀತಿಯನ್ನು ವರ್ಗಾಯಿಸುವರೆ ಸಾಕು. [illegible] ವೇಳೆ ಪದಾರ್ಥದ ಮಾಲಿಕ ಸಾಲ ಪಡೆಯಲಿಚ್ಛಿಸಿ ಬ್ಯಾಂಕಿನಲ್ಲಿ ಈ ರಸೀತಿ ಯನ್ನು ಒತ್ತೆಯಿಟ್ಟಿರಬಹುದು. ಸಾಲಗಾರನು (ಮಾಲಿಕ) ಬರಹದಲ್ಲಿ ಮುಂಚಿತವಾಗಿ ಸಾಲಿಗನ (ಬ್ಯಾಂಕಿನ) ಒಪ್ಪಿಗೆಯಿಲ್ಲದೆ ಪದಾರ್ಥವನ್ನು ಉಪಯೋಗಿಸಲಾಗದು. ಉಗ್ರಾಣದ ಈ ಪದಾರ್ಥಗಳ ಮೇಲೆ ವಿಮೆ ಮಾಡುವುದೂ ಉಂಟು.

ಉಗ್ರಾಣಗಳಿಂದ ಪಡೆಯಬಹುದಾದ ಉಪಯೋಗಗಳು ಅನೇಕ. ಸರಕುಗಳು ಭದ್ರವಾಗಿರುತ್ತವೆ. ತಕ್ಷಣ ಬೇಡಿಕೆಯಿಲ್ಲದ ಪದಾರ್ಥವನ್ನು ಶೇಖರಿಸಿ ತಕ್ಕ ಸಮಯದಲ್ಲಿ ಮಾರಬಹುದು. ಉಗ್ರಾಣಗಳಲ್ಲಿರುವ ಸರಕಿನ ಆಧಾರದಮೇಲೆ ಸಾಲ ಪಡೆಯಬಹುದು. ಸರಕುಗಳ ವಿಂಗಡಣೆ, ವರ್ಗೀಕರಣ ಹಾಗೂ ಪ್ಯಾಕ್ ಮಾಡುವುದು ಇವೆಲ್ಲಕ್ಕೂ ಉಗ್ರಾಣದ ವೈಶಾಲ್ಯ ಬಹುಮಟ್ಟಿಗೆ ನೆರವಾಗುತ್ತದೆ. ಅಲ್ಲದೆ ಆಹಾರ ಪದಾರ್ಥಗಳ ಸಂರಕ್ಷಣೆಗೆಂದು ಅವುಗಳಿಗೆ ಕೀಟನಾಶಕ ಔಷಧಿಗಳನ್ನು ಸಿಂಪಡಿಸುವ ಕಾರ್ಯವೂ ಮಳಿಗೆದಾರನಿಗೆ ಸೇರಿದ್ದು. ಬೇಗ ಕೆಡುವ ಪದಾರ್ಥಗಳನ್ನಿಡುವ ಉಗ್ರಾಣಗಳಿಗೆ ಶೀತಾಗಾರವೆಂದು ಹೆಸರು.

ಭಾರತದಲ್ಲಿ ಇಂಥ ಉಗ್ರಾಣಗಳು, ಆಹಾರ ಪದಾರ್ಥಗಳನ್ನು ಮುಖ್ಯ ವಾಗಿ ಸಂಗ್ರಹಿಸುವಂಥವು. ಇವು ಸಾಮಾನ್ಯವಾಗಿ ಸರಕಾರೀ ವ್ಯವಸ್ಥೆಗೆ ಒಳಪಟ್ಟಿರುತ್ತವೆ.

## ಉಡುಪು

ವಿಶ್ವಸಂಸ್ಥೆಯ ಯಾವುದಾದರೂ ಸಭೆಯ ವಾರ್ತಾ ಚಿತ್ರ ನೋಡಿದರೆ, ಪ್ರತಿನಿಧಿಗಳ ಉಡುಪಿನ ವೈವಿಧ್ಯ ಕಂಡು ವಿಸ್ಮಯವಾಗುವುದಿಲ್ಲವೆ ? ಬೇರೆ ಬೇರೆ ಖಂಡಗಳ ಬೇರೆ ಬೇರೆ ದೇಶಗಳ ಹೆಂಗಸರು ಮತ್ತು ಗಂಡಸರು, ತಮ್ಮ ತಮ್ಮ ರಾಷ್ಟ್ರೀಯ ಉಡುಗೆ ತೊಡುಗೆಗಳಲ್ಲಿ ಸಭೆಗೆ ಬರುವುದನ್ನು ವೀಕ್ಷಿಸಿದಾಗ ಒಮ್ಮೆ ಆಶ್ಚರ್ಯವಾಗುತ್ತದೆ, ಒಮ್ಮೆ ನಗೆ ಬರುತ್ತದೆ, ಒಮ್ಮೆ ಮೆಚ್ಚುಗೆಯಾಗುತ್ತದೆ.

ಭಾರತದಂಥ ದೊಡ್ಡ ರಾಷ್ಟ್ರದಲ್ಲಿ ಎಲ್ಲ ಪ್ರದೇಶಗಳ ಜನರ ಉಡುಪು ಒಂದೇ ರೀತಿ ಇರುವುದಿಲ್ಲ. ಉದ್ಯೋಗಿಗಳದಂತೂ ಬೇರೆ ಬೇರೆ ರೀತಿಯ ಉಡುಪು. ಕಚೇರಿಯಲ್ಲಿ ಕೆಲಸ ಮಾಡುವವರು, ಆಸ್ಪತ್ರೆಯಲ್ಲಿ ವೈದ್ಯರು, ದಾದಿಯರು, ಹಡಗಿನ ಕೆಲಸಗಾರರು, ಅಣೆಕಟ್ಟಿನ ಬಳಿ ಬಿಸಿಲಿನಲ್ಲಿ ಶ್ರಮಿ ಸುವ ಕಾರ್ಮಿಕರು, ವಿಮಾನ ಚಾಲಕ, ಅಂಚೆಯನ್ನು ತರುವವ, ವಿದ್ಯು ಚ್ಛಕ್ತಿಯ ಕೆಲಸಗಾರ, ರೈಲ್ವೆ ಗಾರ್ಡ್—ಒಬ್ಬೊಬ್ಬರದು ಒಂದೊಂದು ಬಗೆ. ರಾಷ್ಟ್ರೀಯ ಮಟ್ಟದಲ್ಲಿ ಉಡುಪು ದೇಶದ ಸಂಸ್ಕೃತಿ ಮತ್ತು ನಾಗರಿಕತೆಗಳ ಪ್ರತಿಬಿಂಬ, ಎಸ್ಕಿಮೊ ಜನರದು ಮೈತುಂಬ ಉಡುಪು. ಅದೂ ತುಪ್ಪಟ ಅಥವಾ ಚರ್ಮದಿಂದ ಮಾಡಿದ್ದು. ಅವರು ವಾಸಿಸುವ ಧ್ರುವ ಪ್ರದೇಶದಲ್ಲಿ ವಿಪರೀತ ಚಳಿ. ನೀಗ್ರೊ ಜನರ ಉಡುಪು ತೀರ ಕಡಮೆ, ಏಕೆಂದರೆ ಅವರಿರುವ ಪ್ರದೇಶದಲ್ಲಿ ವಿಪರೀತ ಸೆಕೆ. ಅರಬರು ಬಹಳ ನಿರಿಗೆಗಳುಳ್ಳ ಉಡುಪು ತೊಡುತ್ತಾರೆ. ಇದರಿಂದ ಹಗಲಿನ ಉಷ್ಣತೆಯಲ್ಲಿ ಅನುಕೂಲ ವಾಗುತ್ತದೆ. ರಾತ್ರಿಯಲ್ಲಿ ವಿಪರೀತ ಚಳಿ ಸಹಿಸಲು ಸಹಕಾರಿಯಾಗುತ್ತವೆ. ಆದರೆ ವಾಯುಗುಣಕ್ಕೂ ಉಡುಪಿಗೂ ಸಂಬಂಧವೆ ಇಲ್ಲದಿರುವುದುಂಟು. ಹಿಂದೆ ದಕ್ಷಿಣ ಅಮೆರಿಕದ ಅತಿ ಚಳಿಯ ಭಾಗದ ಜನರು, ಪಶ್ಚಿಮ





ಅಮೆರಿಕದ ರೆಡ್ ಇಂಡಿಯನರು ಚಳಿ ಹೆಚ್ಚಾಗಿದ್ದರೂ ಬಟ್ಟೆಯನ್ನೇ ಧರಿಸುತ್ತಿರಲಿಲ್ಲವಂತೆ.

ನಮಗೇನೋ ಉಡುಪು ಅನ್ನನೀರುಗಳಂತೆ ಒಂದು ಅಗತ್ಯ ಸಾಮಗ್ರಿ. ನಾಗರಿಕ ಜನಾಂಗಗಳಲ್ಲಿ ಬಟ್ಟೆಗಳನ್ನು ಧರಿಸುವುದಕ್ಕೆ ಮಹತ್ವವಿದೆ. ಸಮರ್ಪಕವಾಗಿ ಧರಿಸದೆ ಹೋದರಂತೂ ಆ ವ್ಯಕ್ತಿ ನಗೆಗೀಡಾಗುತ್ತಾನೆ. ಉಡುಗೆಗಳ ರೀತಿ ಅಥವಾ ಶೈಲಿಯಲ್ಲಿ ಒಂದೊಂದು ತಲೆಮಾರಿಗೂ ವ್ಯತ್ಯಾಸಗಳು ಕಾಣಿಸುತ್ತವೆ. ಒಂದೊಂದು ದಶಕ ಇಲ್ಲವೆ ಇನ್ನೂ ಕಡಮೆ ವರ್ಷಗಳಲ್ಲಿ ಉಡುಗೆವಿನ್ಯಾಸದಲ್ಲಿ ಒಳಭೇದಗಳು ರೂಪುಗೊಳ್ಳುತ್ತವೆ.

ಮೊದಲನೆಯ ಎಲಿಜಬೆತ್ ರಾಣಿಯ ಬಳಿ 3,000 ಉಡುಪು ಗಳಿದ್ದುವಂತೆ! ಜಪಾನಿನ ಚಕ್ರವರ್ತಿ ಒಂದು ದಿನ ತೊಟ್ಟ ಉಡುಪನ್ನು ಮತ್ತೆ ತೊಡುವುದಿಲ್ಲ ಎಂದು ಪ್ರತೀತಿ.

ಸುಮಾರು ಎಂಟು ಸಾವಿರ ವರ್ಷಗಳ ಹಿಂದೆ, ಅಂದರೆ ಹೊಸ ಶಿಲಾಯುಗ ಕಾಲದಲ್ಲಿಯೇ, ಉಡುಪಿನ ಪ್ರಥಮ ರೂಪ ಕಾಣಿಸಿಕೊಂಡಿ ತೆಂದು ಊಹಿಸಲಾಗಿದೆ. ಇದಕ್ಕೂ ಹಿಂದೆ ಮಾನವ, ಚರ್ಮವನ್ನು ಕಾಯ್ದಿರಿಸಿ ಚಳಿಗಾಲದಲ್ಲಿ ಹೊದೆಯಲು ಉಪಯೋಗಿಸುವುದನ್ನು ಕಲಿತ.

ಮನುಷ್ಯ ಮರ್ಯಾದೆಗಾಗಿ ಉಡುಪನ್ನು ಧರಿಸುತ್ತಾನೆ, ಜೊತೆಗೆ ಚಳಿಯಿಂದ ರಕ್ಷಣೆಗಾಗಿಯೂ ಧರಿಸುತ್ತಾನೆ, ಆದರೆ ಆದಿಮಾನವ ಬಟ್ಟೆ ಧರಿಸುತ್ತಿದ್ದುದಕ್ಕೆ ಇನ್ನೂ ಒಂದು ಕಾರಣವಿತ್ತು ಎಂದು ಹೇಳುತ್ತಾರೆ. ಪ್ರಾಚೀನ ಮಾನವ ಬಹುವಾಗಿ ಹೆದರುತ್ತಿದ್ದ ಕೆಟ್ಟ ದೃಷ್ಟಿ ಅಥವಾ ಮಾಟ ಗಳಿಂದ ತನ್ನನ್ನು ಕಾಯ್ದುಕೊಳ್ಳಲು ಉಡುಪು ಧರಿಸುತ್ತಿದ್ದ ಎಂದು ಒಂದು ವಾದವಿದೆ. ಕೇವಲ ಕವಡೆ ಇತ್ಯಾದಿಗಳಿಂದಲೇ ಮೈಯನ್ನು ಮರೆಸಿಕೊಳ್ಳುತ್ತಿದ್ದ ಜನಾಂಗಗಳೂ ಇದ್ದುವು. ಬಯಲು ಗುಡ್ಡಗಳಲ್ಲಿ ವಾಸಿಸುತ್ತಿದ್ದ ಮನುಷ್ಯನಿಗೆ ಕ್ರಿಮಿಕೀಟಗಳ ಹಾವಳಿಯಿಂದ ಮುಕ್ತನಾಗುವ ಅವಶ್ಯತೆ ಇತ್ತು, ಅಲ್ಲದೆ ಅನಾದಿ ಕಾಲದಿಂದಲೂ ಮನುಷ್ಯ ಅಲಂಕಾರಪ್ರಿಯ, ತನ್ನ ಸೌಂದರ್ಯವನ್ನು ಹೆಚ್ಚಿಸಿಕೊಳ್ಳಲು ಬಹು ಆಸೆ, ಇದರಿಂದಲೂ ಉಡುಪಿನ ಬಳಕೆ ಜನಪ್ರಿಯವಾಯಿತು.



ಉಡುಪಿನಲ್ಲಿ ಮುಖ್ಯವಾಗಿ ಗಂಡಸರ ಮತ್ತು ಹೆಂಗಸರ ಉಡುಪು ಗಳೆಂದು ಎರಡು ವಿಭಾಗ ಮಾಡಬಹುದು. ಗಂಡಸಿನ ಉಡುಪು ಬದ ಲಾಗುವ ರೀತಿಯೇ ಬೇರೆ. ಹೆಂಗಸರ ಉಡುಪುಗಳು ಕಾಲಾನು ಗುಣವಾಗಿ ಬದಲಾಗುವ ರೀತಿಯೇ ಬೇರೆ. ಉಡುಪಿನಲ್ಲಿ ನಿರಂತರ ಬದಲಾವಣೆಗಳು ಆಗುತ್ತಲೇ ಇರುತ್ತವೆ. ಇಂಥ ಬದಲಾವಣೆಗಳು (ಜನಪ್ರಿಯ ಪ್ರಯೋಗ—'ಫ್ಯಾಷನ್') ಸುಮಾರು ಹದಿನಾಲ್ಕನೆಯ ಶತ ಮಾನದಿಂದ ಐರೋಪ್ಯ ನಾಗರಿಕತೆಯಲ್ಲಿ ಆರಂಭವಾಗಿ ಕ್ರಮೇಣ ಹರಡಿ ಕೊಂಡು ಈಗ ಯುವಜನಾಂಗದಲ್ಲಿ ವಿಶ್ವವ್ಯಾಪಿಯಾಗಿವೆ.





ವೈವಿಧ್ಯಪೂರ್ಣ ಉಡುಪುಗಳನ್ನು ತಯಾರಿಸುವುದೇ ಒಂದು ಕಲೆ. ಉಡುಪು ಧರಿಸುವವರಿಗೆ ಒಳ್ಳೆಯ ಅಭಿರುಚಿಯಿರಬೇಕು. ಅವರಿಗೆ ತಕ್ಕಂತೆ ಹೊಲಿಯುವ ಸಿಂಪಿಗ (ದರ್ಜಿ) ಇರಬೇಕು. ಬಣ್ಣಗಳ ಹೊಂದಾ ಣಿಕೆ, ರಚನೆಯಲ್ಲಿ ಕೌಶಲ, ಉತ್ತಮ ದರ್ಜಿಗೆ ಇರಬೇಕಾದ ಅರ್ಹತೆಗಳು.

ಇಂದಿನ ಮಾರುಕಟ್ಟೆಯಲ್ಲಿ ವಯೋಮಾನಕ್ಕೆ ತಕ್ಕಂತೆ ಗೊತ್ತುಪಡಿಸಲಾದ ನಿರ್ದಿಷ್ಟ ಅಳತೆಗಳಿಗೆ ಅನುಸಾರವಾದ ಸಿದ್ಧ ಉಡುಗೆಗಳು ಎಲ್ಲೆಡೆಯಲ್ಲೂ ಕಂಡುಬರುತ್ತವೆ.

ಆರ್ಥಿಕ ಅನುಕೂಲವನ್ನು ಅವಲಂಬಿಸಿ ಉಡುಪಿನಲ್ಲಿ ಬೆಳಗಿನ ಉಡುಪು, ಸಂಜೆ ವಿಹಾರಕ್ಕೆಂದು ಬಳಸಲಾಗುವ ಉಡುಪು ಮತ್ತು ರಾತ್ರಿ ನಿದ್ರಾ

1. ಉತ್ತರ ಭಾರತದ ಗ್ರಾಮವಾಸಿ
2. ಭಾರತೀಯ ಮಹಿಳೆ
3. ಭಾರತದ ಯುವಕ
4. ನೀಗ್ರೊ ಉಡ
5. ಬರ್ಮಾ
6. ಪಾಶ್ಚಾತ್ಯ ಉಡು

ಸಮಯದ ಉಡುಪು ಎಂದು ಬೇರೆ ಬೇರೆ ರೂಪಗಳಿವೆ. ಕೆಲವು ಶಾಲೆಗಳಲ್ಲಿ ಒಂದೇ ವಿಧವಾದ ಉಡುಪುಗಳನ್ನು (ಸಮವಸ್ತ್ರ) ಧರಿಸುವಂತೆ ನಿಯಮವಿರುತ್ತದೆ. ಇದರಿಂದ ಅವರನ್ನು ನೋಡುತ್ತಲೇ ಇಂಥ ಶಾಲೆಯ ವಿದ್ಯಾರ್ಥಿಗಳೆಂದು ಗುರುತಿಸಬಹುದು. ವಿದ್ಯಾರ್ಥಿಗಳಲ್ಲಿ ಶ್ರೀಮಂತರು ಬಡವರು ಎಂಬ ವ್ಯತ್ಯಾಸಗಳನ್ನು ಮರೆಸುವುದೂ ಇದರಿಂದ ಸಾಧ್ಯವಾಗುತ್ತದೆ.

ಉಡುಪುಗಳನ್ನು ತಯಾರಿಸಲು ಬಟ್ಟೆ ಬೇಕು. ಹತ್ತಿ, ಉಣ್ಣೆ ಹಾಗೂ ರೇಷ್ಮೆ ಬಟ್ಟೆಗಳಲ್ಲದೆ ಕೃತಕ ಬಟ್ಟೆಗಳನ್ನೂ ಉಡುಪು ತಯಾರಿಕೆಗೆ ಈಗ ಬಳಸುತ್ತಾರೆ. ಕೃತಕ ಎಳೆ ಬೆಳಕಿಗೆ ಬಂದು ಎರಡು ದಶಕಗಳ ಮೇಲಾಯಿತು. ಅವುಗಳಿಗೆ ಬೇಡಿಕೆ ಏರಿದೆ. ಮನುಷ್ಯ ಸೃಷ್ಟಿಸಿರುವ ಈ ನೂಲಿನಿಂದ ಮಡಿಕೆ ಬೀಳದ, ಮುದುರದ, ಬೇಗ ಒದ್ದೆಯಾಗದ ಉಡುಪುಗಳನ್ನು ತಯಾರಿಸಬಹುದು.

ಸಿಂಧೂ ಕಣಿವೆ, ಗ್ರೀಸ್, ರೋಮ್ ಇತ್ಯಾದಿ ಪ್ರಾಚೀನ ನಾಗರಿಕತೆಗಳಲ್ಲಿ ಮೀಟರು ಮೀಟರುಗಳ ಬಟ್ಟೆ ಸುತ್ತಿ ಉಡುವ ಪದ್ಧತಿ ಇದ್ದಿತು. ಈಗಿನಂತೆ ಷರಾಯಿ, ಕೋಟು ಇತ್ಯಾದಿ ಉಡುಪುಗಳ ಹೋಲಿಕೆಯನ್ನು ಅರಬ್, ಪರ್ಷಿಯ ದೇಶಗಳ ಹಿಂದಿನ ಉಡುಪುಗಳಲ್ಲಿ ಮಾತ್ರ ಕಾಣಬಹುದು. ಷರಾಯಿಗಳನ್ನು ಮೊದಲು ಧರಿಸಿದ ಮೀಡರನ್ನೂ ಪರ್ಷಿಯನರನ್ನೂ ಗ್ರೀಕರೂ ರೋಮನರೂ ಅನಾಗರಿಕರೆಂದು ಭಾವಿಸಿದ್ದರು.

ಭಾರತದಲ್ಲಿ ಧೋತರ ಮತ್ತು ಸೀರೆ ಸಾವಿರಾರು ವರ್ಷಗಳಿಂದ ಬಂದಿರುವ ಉಡುಪು. ಇದರಲ್ಲಿ ಆಗಿರುವ ಬದಲಾವಣೆಗಳು ಅತ್ಯಲ್ಪ. ಮುಂದೆ ನೀಳವಾದ ನಿರಿಗೆಗಳು ಇಳಿಬೀಳುವಂತೆ ಪುರುಷರೂ ಸ್ತ್ರೀಯರೂ ಈ ಉಡುಪುಗಳನ್ನು ಧರಿಸುವರು. ಈ ಶತಮಾನದಲ್ಲಿ ಭಾರತದಲ್ಲಿ ಪುರುಷರು ಧೋತರದ ಉಪಯೋಗ ಕಡಮೆಮಾಡಿ ಪಾಶ್ಚಾತ್ಯ ಮಾದರಿಯ ಉಡುಪನ್ನು ಧರಿಸುತ್ತಿದ್ದಾರೆ. ಭಾರತದಲ್ಲಿ ಸುಮಾರು 2,000 ಬುಡಕಟ್ಟುಗಳಿವೆ. ಇಷ್ಟೇ ಸಂಖ್ಯೆಯಲ್ಲಿ ಅಲ್ಲದಿದ್ದರೂ ಚಿಕ್ಕ ಚಿಕ್ಕ ಮಾರ್ಪಾಡುಗಳನ್ನು ಹೊಂದಿ ದೇಶದ ನಾನಾ ಮೂಲೆಗಳಲ್ಲಿ ಸೀರೆ ವಿಧವಿಧವಾಗಿ ಸ್ತ್ರೀಯರನ್ನು ಅಲಂಕರಿಸಿದೆ. ಪಾಶ್ಚಾತ್ಯ ಮಹಿಳೆಯರಲ್ಲೂ ಕೆಲವರು ಸೀರೆ ಉಡುತ್ತಾರೆ. ಸಂಚಾರ ಸೌಲಭ್ಯಗಳ ಕಾರಣದಿಂದ ಪ್ರಪಂಚದ ಬೇರೆ ಬೇರೆ ಭಾಗಗಳು ಹತ್ತಿರ ಬಂದಂತೆ, ಒಂದು ದೇಶದವರ ಉಡುಪನ್ನು ಇನ್ನೊಂದು ದೇಶದವರು ತೊಡುವುದು ಹೆಚ್ಚುತ್ತಿದೆ. ವಿಶೇಷ ಸಂದರ್ಭಗಳಲ್ಲಿ ಪ್ರತಿ ರಾಷ್ಟ್ರದವರೂ ತಮ್ಮ ರಾಷ್ಟ್ರೀಯ ಉಡುಪನ್ನು ಧರಿಸುತ್ತಾರೆ. ಒಂದೇ ರಾಷ್ಟ್ರದಲ್ಲಿ ಬೇರೆ ಬೇರೆ ಗುಂಪುಗಳಲ್ಲಿ ಬೇರೆ ಬೇರೆ ಬಗೆಯ ವಿಶಿಷ್ಟ ಉಡುಪುಗಳಿರುತ್ತವೆ— ವೇಲ್ಸ್ ಮತ್ತು ಸ್ಕಾಟ್ಲೆಂಡಿನವರು, ರಾಜಸ್ಥಾನದವರು, ಸಿಕ್ಖರು, ಕೊಡವರು ಇವರಲ್ಲಿ ಇರುವಂತೆ.

ಉಡುಪು ಶರೀರಕ್ಕೆ ರಕ್ಷಣೆ ನೀಡುತ್ತದೆ ; ಅದು ಅಲಂಕಾರದ ಸಾಧನವೂ ಆಗಿದೆ.

## ಉತ್ತರ ಅಮೆರಿಕ

ಉತ್ತರ ಅಮೆರಿಕ ಆರ್ಕ್ಟಿಕ್ ಮಹಾಸಾಗರದಿಂದ ಮೆಕ್ಸಿಕೊ ಕೊಲ್ಲಿಯವರೆಗೂ ಹಬ್ಬಿದೆ. ಪೂರ್ವದಲ್ಲಿ ಉತ್ತರ ಅಟ್ಲಾಂಟಿಕ್ ಸಾಗರ ಮತ್ತು ಮೆಕ್ಸಿಕೋ ಕೊಲ್ಲಿ, ಪಶ್ಚಿಮದಲ್ಲಿ ಶಾಂತಸಾಗರ ಮತ್ತು ಅಲಾಸ್ಕ ಕೊಲ್ಲಿ, ಉತ್ತರದಲ್ಲಿ ಆರ್ಕ್ಟಿಕ್ ಕೊಲ್ಲಿ ಇದರ ಮೇರೆಗಳು. ಪಶ್ಚಿಮ ತೀರದಲ್ಲಿ ರಾಕಿ ಪರ್ವತಗಳು ಉದ್ದಕ್ಕೂ ಹರಡಿವೆ. ಮಧ್ಯದಲ್ಲಿ ಚಪ್ಪಟೆಯಾದ ಭೂಮಿ, ಪೂರ್ವಕ್ಕೆ ತಗ್ಗು ಪ್ರದೇಶ. ಪೂರ್ವದಲ್ಲಿ ಹರಿಯುವ ನದಿಗಳಲ್ಲಿ ಮಿಸಿಸಿಪಿ ಅನೇಕ ಉಪನದಿಗಳಿಂದ ಕೂಡಿದ ಮಹಾ ನದಿ. ಅಸಂಖ್ಯ ಸರೋವರಗಳು ಉತ್ತರದಲ್ಲಿಯೂ ಪೂರ್ವ ಭಾಗದಲ್ಲಿಯೂ ಇವೆ. ಕೆನಡದ ಉತ್ತರ ಭಾಗದಲ್ಲಿ ಗ್ರೇಟ್ ಬೇರ್, ಗ್ರೇಟ್ ಸ್ಲೇವ್ ಸರೋವರಗಳಿವೆ. ಕೆನಡ ಮತ್ತು ಸಂಯುಕ್ತ ಸಂಸ್ಥಾನದ ಮಧ್ಯೆ ಸುಪೀರಿಯರ್, ಮಿಚಿಗನ್, ಹ್ಯೂರಾನ್, ಈರಿ ಮೊದಲಾದ ವಿಸ್ತಾರ ಸರೋವರಗಳಿವೆ. ಇವೆಲ್ಲ ಸೇರಿ ಈ ಭೂಭಾಗ ದೊಡ್ಡ ಜಲಾಶಯ ಪ್ರದೇಶವೇ ಆಗಿದೆ.

ಕೆನಡ, ಸಂಯುಕ್ತ ಸಂಸ್ಥಾನ ಮತ್ತು ಮೆಕ್ಸಿಕೊ ಈ ಮೂರು ರಾಜಕೀಯ ವಿಭಾಗಗಳು ಉತ್ತರ ಅಮೆರಿಕದಲ್ಲಿವೆ. ಇವುಗಳಲ್ಲಿ ಸಂಯುಕ್ತ ಸಂಸ್ಥಾನ ವಿಜ್ಞಾನ ಕ್ಷೇತ್ರದಲ್ಲಿ ಜಗತ್ತಿನಲ್ಲಿಯೇ ಅಗ್ರ ಸ್ಥಾನ ಪಡೆದಿದೆ. ಬಹು ಸಂಪದ್ಯುಕ್ತ ದೇಶವೂ ಆಗಿದೆ. ಮೊದಲು ಮಾನವನನ್ನು ಚಂದ್ರನ ಮೇಲೆ ನಿಲ್ಲಿಸಿದ ದೇಶ ಇದು. ನ್ಯೂಯಾರ್ಕ್, ವಾಷಿಂಗ್‌ಟನ್, ಷಿಕಾಗೊ ಇವು ಸಂಯುಕ್ತ ಸಂಸ್ಥಾನದ ಮುಖ್ಯ ನಗರಗಳು. ಕೆನಡದಲ್ಲಿ ಅಟವ. ಮೆಕ್ಸಿಕೊದಲ್ಲಿ ಮೆಕ್ಸಿಕೊ ಇವು ದೊಡ್ಡ ನಗರಗಳು,

ಉತ್ತರ ಅಮೆರಿಕದಲ್ಲಿ ಎಲ್ಲ ಬಗೆಯ ಹವಾಮಾನವಿದೆ, ತೀರ ಉತ್ತರ ಭಾಗ ಶೀತ ವಲಯದಲ್ಲಿ ಇರುವುದರಿಂದ ಅಲ್ಲಿಯ ಹವೆ ಬಹಳ ತಂಪು, ಅಲ್ಲಿ ಎಸ್ಕಿಮೊ ಜನ ವಾಸವಾಗಿದ್ದಾರೆ. ಫ್ಲಾರಿಡದಲ್ಲಿ ಉಷ್ಣವಲಯದ ಹವಾಗುಣವಿದೆ. ಎಷ್ಟೋ ಕಡೆ ಸಮಶೀತೋಷ್ಣ ಹವಾಮಾನವಿದೆ.

ಉತ್ತರ ಅಮೆರಿಕ ಸಂಪತ್ ಸಮೃದ್ಧ ಪ್ರದೇಶವಾಗಿದೆ. ಖನಿಜ ಸಂಪತ್ತೂ ಇದೆ; ಧಾನ್ಯಸಂಪತ್ತೂ ಇದೆ. ಯೂರೊಪಿನಿಂದ ಬಂದ ವಸಾಹತುಗಾರರು ಅಮೆರಿಕದ ನಿವಾಸಿಗಳಾಗಿದ್ದಾರೆ. ಗುಲಾಮರಾಗಿ ಬಂದ ನೀಗ್ರೊ ಜನರೂ ಈ ದೇಶದ ನಿವಾಸಿಗಳಾದರು. ಆದಿವಾಸಿಗಳಾದ ರೆಡ್ ಇಂಡಿಯನರ ಸಂಖ್ಯೆ ಕಡಮೆಯಾಗುತ್ತಿದೆ.




## ಉತ್ತರ ಸಮುದ್ರ

ಬ್ರಿಟನಿನ ಪೂರ್ವ ತೀರಕ್ಕೂ ಯೂರೊಪಿಗೂ ಮಧ್ಯೆ ಉತ್ತರ ಸಮುದ್ರವಿದೆ. ಲಕ್ಷಾಂತರ ವರ್ಷಗಳ ಹಿಂದೆ ಉತ್ತರ ಯೂರೊಪಿನ ಭಾಗವಾಗಿ

ನೆಲ ಕುಸಿದಾಗ ಅಟ್ಲಾಂಟಿಕ್ ಸಾಗರ ನುಗ್ಗಿ ಉತ್ತರ ಸಮುದ್ರದ ಬಹು ಭಾಗವಾಯಿತು. ಹಿಂದೆ ಇದನ್ನು 'ಜರ್ಮನಿಯ ಸಾಗರ' ಎಂದೂ ಕರೆಯುತ್ತಿದ್ದರು. ಉತ್ತರ ಅಟ್ಲಾಂಟಿಕ್ ಸಾಗರದ ಒಂದು ಭಾಗವಾಗಿ ಡೋವರ್ ಜಲಸಂಧಿಯಿಂದ ಷೆಟ್‌ಲೆಂಡ್ ದ್ವೀಪಗಳವರೆಗೂ ಉತ್ತರ ಸಮುದ್ರ ಹರಡಿಕೊಂಡಿದೆ. ಇದು ಸುಮಾರು 960 ಕಿ. ಮೀ. ಉದ್ದ, 640 ಕಿ. ಮೀ. ಅಗಲ. ವಿಸ್ತೀರ್ಣ ಸುಮಾರು 4.92.100 ಚದರ ಕಿ. ಮೀ. ದಕ್ಷಿಣ ಭಾಗದಲ್ಲಿ ಅಷ್ಟು ಆಳವಿಲ್ಲ. ಆದರೆ ಸರಾಸರಿ 71 ಮೀಟರ್ ಆಳವಿದೆ. ಉತ್ತರ ಸಮುದ್ರ ಬಹಳ ಹಿಂದಿನ ಕಾಲದಿಂದಲೂ ಮುಖ್ಯ ಸಾಗರ ಮಾರ್ಗವಾಗಿದೆ. ಇದರ ತೀರದಲ್ಲಿರುವ ಡೋವರ್ ದಂಡೆ ಮೀನುಗಾರಿಕೆಗೆ ವಿಶ್ವದಲ್ಲೇ ಹೆಸರುವಾಸಿ.

ಉತ್ತರ ಸಮುದ್ರ ಮೀನುಗಳ ಗಣಿಯಾಗಿದೆ. ಆಳ ಕಡಮೆ ಇರುವುದರಿಂದ ಮೀನು ಹಿಡಿಯುವವರಿಗೂ ಅನುಕೂಲ. ಒಟ್ಟಿಗೇ ಈಜಿಕೊಂಡು ಹೋಗುತ್ತಿರುವ ಹೆರಿಂಗ್ ಮೀನುಗಳನ್ನು ಬೇಸಿಗೆ ಮತ್ತು ಮಳೆಗಾಲದಲ್ಲಿ ಹಿಡಿಯುತ್ತಾರೆ.

ಉತ್ತರ ಸಮುದ್ರ ಪ್ರಮುಖ ವಾಣಿಜ್ಯ ಮಾರ್ಗವಾಗಿದೆ. ಈ ಸಮುದ್ರದ ದಂಡೆಗಳಲ್ಲಿ ಸಾಗರ ವ್ಯಾಪಾರೋದ್ಯಮವನ್ನು ಬೆಳೆಸಿಕೊಂಡಿರುವ ಬಂದರುಗಳಿವೆ. ಇದರ ತೀರದಲ್ಲಿರುವ ಮುಖ್ಯ ಬಂದರುಗಳೆಂದರೆ ಲಂಡನ್, ಹಲ್, ಆ್ಯಂಟ್‌ವರ್ಪ್. ರಾಟರ್‌ಡಾಮ್. ಹ್ಯಾಂಬರ್ಗ್ ಮತ್ತು ಬ್ರೆಮೆನ್.

ಉತ್ತರ ಸಮುದ್ರಕ್ಕೆ ರೈನ್, ಸ್ಕೆಲ್ಟ್. ಎಲ್ಬ್, ಹಂಬರ್ ಮತ್ತು ಥೇಮ್ಸ್ ನದಿಗಳ ನೀರು ಬಂದು ಸೇರುತ್ತದೆ. ಈ ನದಿಗಳ ಜಲಾನಯನ ಭೂಮಿ ಬಹು ಜನಸಾಂದ್ರತೆಯಿಂದ ಕೂಡಿದ್ದು, ಉತ್ತಮ ಕಲ್ಲಿದ್ದಲು ಭೂಮಿ ಮತ್ತು ಪ್ರಮುಖ ಕೈಗಾರಿಕಾ ಕ್ಷೇತ್ರಗಳನ್ನೊಳಗೊಂಡಿದೆ.

## ಉದ್ಯಮ

ನೋಡಿ : ಕೈಗಾರಿಕೆ

## ಉದ್ಯಾನ

ದೊಡ್ಡ ನಗರದಲ್ಲಿ ಬೆಳಗ್ಗೆಯಿಂದ ರಾತ್ರಿಯವರೆಗೆ ಜನ, ಜನ. ಜನ; ವಾಹನಗಳ ಓಟದ ಶಬ್ದ : ಅವುಗಳ ಗಂಟೆಗಳ ಮತ್ತು ಹಾರ್ನ್‌ಗಳ ಸದ್ದು ; ಸಾವಿರ ಯಂತ್ರಗಳು ಕೆಲಸ ಮಾಡುವ ಸಪ್ಪಳ ; ಧೂಳು ; ರಸ್ತೆಯಲ್ಲಿ ಶೀಘ್ರಚಲನೆಯ ವಾಹನಗಳಿಂದ ತಪ್ಪಿಸಿಕೊಳ್ಳಲು ಪಾದಚಾರಿಗಳ ಸಾಹಸ.

ಒಂದು ಬಾಗಿಲು ದಾಟಿ ನಾಲ್ಕು ಹೆಜ್ಜೆ ಇಟ್ಟರೆ ಸಾಕು, ಈ ಶಬ್ದ, ವೇಗ, ಧೂಳುಗಳ ಜಗತ್ತು ದೂರವಾಗುತ್ತದೆ. ಸುತ್ತ ಹಸಿರು ಜಮಖಾನೆ ಹಾಸಿದಂತೆ ಹುಲ್ಲು. ಹಸಿರು ತೊಟ್ಟ ಗಿಡಮರಗಳು. ಹಸಿರಿನ ಹಿನ್ನೆಲೆಯಲ್ಲಿ ಬಣ್ಣ ಬಣ್ಣದ ಹೂವುಗಳು. ನೂರು ಕೊರಲುಗಳಿಂದ ಹಾಡುವ ನೂರು ಬಣ್ಣಗಳ ನೂರು ವಿಧಗಳ ಹಕ್ಕಿಗಳು.

ಉದ್ಯಾನ—ಚೆಲುವು ಶಾಂತಿಗಳ ಜಗತ್ತು.

ಸಾವಿರಾರು ವರ್ಷಗಳಿಂದ ಮನುಷ್ಯ ಸೌಂದರ್ಯವನ್ನೂ ಶಾಂತಿಯನ್ನೂ ಉದ್ಯಾನಗಳಲ್ಲಿ ಕಂಡಿದ್ದಾನೆ; ಜೊತೆಗೆ ವಿಶಿಷ್ಟ ಗಿಡಮರಗಳನ್ನು ಬೆಳೆಸಿ ಪ್ರಯೋಜನ ಪಡೆದುಕೊಂಡಿದ್ದಾನೆ. ಚೀನದಲ್ಲಿ ಕ್ರಿ. ಪೂ. 2800ರಲ್ಲಿ ಒಂದು ಔಷಧ ಸಸ್ಯಗಳ ಉದ್ಯಾನವಿದ್ದಿತಂತೆ. ಕ್ರಿ. ಪೂ. ಆರನೆಯ ಶತಮಾನದ ಬ್ಯಾಬಿಲನಿನ ತೂಗು ಉದ್ಯಾನ ಪ್ರಾಚೀನ ಪ್ರಪಂಚದ ಏಳು ಅದ್ಭುತಗಳಲ್ಲಿ ಒಂದು. ಹ್ಯುಯೆನ್ ತ್ಸಾಂಗ್ (ಏಳನೆಯ ಶತಮಾನ) ಭಾರತದ ನಗರಗಳಲ್ಲಿನ ಉದ್ಯಾನಗಳ ಸೊಬಗನ್ನು ವರ್ಣಿಸಿದ್ದಾನೆ. ಹದಿನಾರನೆಯ ಶತಮಾನದಲ್ಲಿ ಜಪಾನಿನ ರಿಕೆಉನ್ ಉದ್ಯಾನ ಪ್ರಸಿದ್ಧವಾಗಿತ್ತು. ಹದಿನಾರು—ಹದಿನೇಳನೆಯ ಶತಮಾನಗಳಲ್ಲಿ ಜಪಾನಿನಲ್ಲಿ ಹೂವಿನ ಗಿಡಗಳನ್ನು ಬೆಳೆಸುವ ಮತ್ತು ಮನೆಯಲ್ಲಿ ಹೂಗಳನ್ನು ಜೋಡಿಸುವ ವಿಧಾನವನ್ನು ಹೇಳಿಕೊಡುವ 'ಪುಷ್ಪಶಿಕ್ಷಕ'ರ ವರ್ಗವೇ ಏರ್ಪಟ್ಟಿತು. ಬೆಂಗಳೂರಿನಲ್ಲಿರುವ ಲಾಲ್‌ಬಾಗ್, ಮೈಸೂರಿನ ಬಳಿ ಇರುವ ಬೃಂದಾವನ ಇವು ಕಣ್ಣು, ಮನಸ್ಸುಗಳಿಗೆ ಹಬ್ಬ. ಲಾಲ್‌ಬಾಗ್ ಹೈದರಾಲಿ–ಟಿಪ್ಪು ಸುಲ್ತಾನರ ಕಾಲದ ತೋಟ ; ಸುಮಾರು ಇನ್ನೂರು ವರ್ಷಗಳಿಂದ ಬೆಂಗಳೂರಿನ ಒಂದು ಆಭರಣವಾಗಿದೆ. ಬೃಂದಾವನ ಕನ್ನಡನಾಡಿಗೆ ಸರ್ ಮಿರ್ಜಾ ಇಸ್ಮಾಯಿಲ್ ಅವರ ಕಾಣಿಕೆ. ಪ್ರಪಂಚದ ತೋಟಗಳಲ್ಲಿ ಅತಿ ದೊಡ್ಡ ಗಾಜಿನ ಮನೆ ಇಂಗ್ಲೆಂಡಿನ ಕ್ಯೂ ಉದ್ಯಾನದಲ್ಲಿದೆ. ಇಲ್ಲಿ ಉಷ್ಣವಲಯಕ್ಕೆ ಸೇರಿದ ಎರಡು ಸಾವಿರ ಗಿಡಗಳನ್ನು ಬೆಳೆಸಲು ಎಂಟು ಕಿಲೋಮೀಟರು ಉದ್ದದ ಬಿಸಿನೀರು ಕೊಳವೆಗಳನ್ನು ಉಪಯೋಗಿಸುತ್ತಾರೆ.



ದೆಹಲಿಯ ಮೊಗಲ್ ಉದ್ಯಾನ

ಬಹುಶಃ ತನ್ನ ವಾಸಸ್ಥಾನಕ್ಕೂ ಬರಬೇಕು ಎಂದು ಹಂಬಲಿಸುತ್ತಾನೆ ಆಧುನಿಕ ಮಾನವ. ಇಂದು ಪ್ರಕೃತಿ ಮಾತೆ ಕೈತೋಟ. ಉದ್ಯಾನಗಳಲ್ಲಿ ಬಂದು ನೆಲೆಸಿದ್ದಾಳೆ. ಮಕ್ಕಳ ಆಟದ ತಾಣವಾಗಿಯೂ ತರುಣ ತರುಣಿಯರ ಮನಸ್ಸಿನ ಉಲ್ಲಾಸದ ಬೀಡಾಗಿಯೂ ವೃದ್ಧರ ಶಾಂತಿಧಾಮ



ಕಲ್ಕತ್ತದ ಸಸ್ಯೋದ್ಯಾನ

ವಾಗಿಯೂ ಹುಟ್ಟಿಕೊಂಡಿದೆ ನವಯುಗದ ಉದ್ಯಾನ. ಈ ಸನ್ನಿವೇಶಕ್ಕೆ ಲಘು ಸಂಗೀತದ ಆಕರ್ಷಣೆ ಬೇರೆ. ಆಗಾಗ್ಗೆ ವಿಶೇಷ ಸಮಾರಂಭಗಳು, ರಾಷ್ಟ್ರೀಯ ಹಬ್ಬ ದಿನಾಚರಣೆಗಳು, ತೋಟಗಾರಿಕೆಯಲ್ಲಿ ಸಾರ್ವಜನಿಕ ಸ್ಪರ್ಧೆಯ ಪ್ರದರ್ಶನ ಇವು ಸೇರಿ ಉದ್ಯಾನ ಪಟ್ಟಣಿಗರ ಜೀವನದಲ್ಲಿ ಭದ್ರ ಸ್ಥಾನ ಪಡೆದಿದೆ.

1898ರಲ್ಲಿ ಇಂಗ್ಲೆಂಡಿನ ಎಬ್‌ನೆಜರ್ ಹೊವರ್ಡ್ ಎಂಬಾತ ಹಳ್ಳಿಗಳು ಕಡಮೆಯಾಗಿ ಪಟ್ಟಣದ ಕ್ಷೇತ್ರ ವಿಸ್ತಾರ ಹೊಂದುತ್ತಿರುವುದನ್ನು ಕಂಡು, ಪಟ್ಟಣಿಗ ಹಿತಕ್ಕಾಗಿ ಊರನ್ನು ಕಟ್ಟುವ ಕಾರ್ಯದಲ್ಲಿ ಒಂದು ನಿಯೋಜಿತ ವಿಧಾನವನ್ನು ಅನುಸರಿಸಬೇಕೆಂದು ತೋರಿಸಿಕೊಟ್ಟ. ಇದರಲ್ಲಿ ಉದ್ಯಾನ ಒಂದು ಮುಖ್ಯ ಅಂಗವಾಗಿದ್ದಿತು. ಈ ಕ್ರಮ ಇಂದು ಎಲ್ಲ ಕಡೆ ಹಬ್ಬಿದೆ. ಹಿಂದಿನಷ್ಟು ಪ್ರದೇಶ ವೈಶಾಲ್ಯವಿಲ್ಲದ ಈ ಉದ್ಯಾನಗಳಿಗೆ ನವೀನ ಕ್ರಮಗಳನ್ನು ಅನುಸರಿಸಿ ಹೊಸ ರೂಪವನ್ನು ಕೊಡುತ್ತಾರೆ. ಅಲ್ಲಿನ ನೆಲದಲ್ಲಿ ಸ್ವಾಭಾವಿಕವಾಗಿ ಎಂದೂ ಬೆಳೆಯದ ಅಪೂರ್ವ ಸಸ್ಯಗಳನ್ನು ನೆಡುತ್ತಾರೆ. ಗಿಡಗಳನ್ನು ಕಸಿ ಮಾಡಿ, ಹೂವಿನ ಬಣ್ಣಗಳಲ್ಲಿ ವಿಶೇಷ ಬಗೆಯನ್ನು ಉಂಟುಮಾಡುತ್ತಾರೆ. ಮೆಚ್ಚುಗೆಯಾಗಲೆಂದು ಉದ್ಯಾನದಲ್ಲಿ ದಟ್ಟವಾದ ಗಿಡಗಳನ್ನು ಕತ್ತರಿಸಿ ಪ್ರಾಣಿಗಳ ಆಕಾರದಲ್ಲಿ ಬೆಳೆಸುತ್ತಾರೆ. ಮಕ್ಕಳಿಗೆ ಜಾರುಗುಪ್ಪೆ, ಉಯ್ಯಾಲೆಗಳನ್ನು ಹಾಕುತ್ತಾರೆ.

ಮನೆಯ ಮುಂದಿನ ಜಾಗದಲ್ಲಿ ಪುಟ್ಟ ಉದ್ಯಾನವನ್ನು ಅಭಿರುಚಿಯುಳ್ಳ ಅನೇಕರು ಮಾಡಿಕೊಳ್ಳುವುದುಂಟು. ಮಹಡಿಯ ಮೇಲಿನ ನಿವಾಸಿಗಳು ಕೂಡ ಕುಂಡಗಳಲ್ಲಿ ಸಸ್ಯಗಳನ್ನು ಬೆಳೆಸಿ ತಮ್ಮದೇ ತೋಟವನ್ನು ನಿರ್ಮಿಸಿಕೊಳ್ಳಬಹುದು. ಮನೆಯ ತೋಟಗಳಲ್ಲಿ ತರಕಾರಿಗಳನ್ನು ಬೆಳೆಯಬಹುದು. ಗಿಡಗಳು ಕಾರ್ಬನ್ ಡೈಆಕ್ಸೈಡನ್ನು ಬಳಸಿಕೊಂಡು ಆಮ್ಲಜನಕವನ್ನು ಬಿಡುವುದರಿಂದ, ತೋಟಗಳ ಗಾಳಿ ಶುದ್ಧವಾಗಿರುತ್ತದೆ.

## ಉದ್ಯೋಗ

ನೆಯ್ಗೆ ಯುವನ ಮಗ. ಹದಿಮೂರನೆಯ ವಯಸ್ಸಿನಲ್ಲಿ ವಾರಕ್ಕೆ ಒಂದು ಡಾಲರ್ ಇಪ್ಪತ್ತು ಸೆಂಟ್ (ಸುಮಾರು ಹತ್ತು ರೂಪಾಯಿ) ಸಂಬಳದ ಮೇಲೆ ಹತ್ತಿಯ ಗಿರಣಿಯಲ್ಲಿ ಕೆಲಸ. ಮೂವತ್ತಮೂರನೆಯ ವಯಸ್ಸಿಗೆ ವರ್ಷಕ್ಕೆ ಐವತ್ತು ಸಾವಿರ ಡಾಲರ್ ವರಮಾನ. 1900ರಲ್ಲಿ, ಅವನ 65ನೆಯ ವಯಸ್ಸಿನಲ್ಲಿ, ಅವನ ಕಂಪೆನಿಯಿಂದ ಬಂದ ಲಾಭ, ಎರಡೂವರೆ ಕೋಟಿ ಡಾಲರು, ಮರುವರ್ಷ ಇಪ್ಪತ್ತೈದು ಕೋಟಿ ಡಾಲರು !

ಇದು ಅಮೆರಿಕದ ಆಂಡ್ರೂ ಕಾರ್ನ್‌ಗಿಯ (1835–1919) ಜೀವನದ ಕಥೆ. ಅವನ ಯಶಸ್ಸಿನ ಗುಟ್ಟು—ಕೆಲಸದಲ್ಲಿ ಶ್ರದ್ಧೆ ಮತ್ತು ಹೊಸ ಪ್ರಯತ್ನಗಳಿಗೆ ಅವಕಾಶವನ್ನು ಎಚ್ಚರದಿಂದ ಇದಿರು ನೋಡುವ ಗುಣ. ಹದಿನೈದನೆಯ ವಯಸ್ಸಿನಲ್ಲಿ ತಂತಿ ಕಚೇರಿಯಲ್ಲಿ ತಂತಿಗಳನ್ನೊಯ್ಯುವ ಕೆಲಸಕ್ಕೆ ಸೇರಿದವನು. ಸುತ್ತಮುತ್ತಲಿನ ಎಲ್ಲ ಮುಖ್ಯ ವ್ಯವಹಾರಸಂಸ್ಥೆಗಳ ಪತ್ತೆ, ಅಲ್ಲಿ ಕೆಲಸ ಮಾಡುವವರ ಹೆಸರುಗಳು ಎಲ್ಲವನ್ನೂ ಕಷ್ಟಪಟ್ಟು ನೆನಪಿನಲ್ಲಿಡಲು ಕಲಿತ. ಕೈಗಾರಿಕೆಯಲ್ಲಿ ಕಬ್ಬಿಣ ಎಷ್ಟು ಮುಖ್ಯವಾದದ್ದೆಂಬುದನ್ನು ಬಹು ಮುಂದಿಗಿಂತ ಮೊದಲೇ ಗುರುತಿಸಿ, ಮೂವತ್ತನೆಯ ವಯಸ್ಸಿನಲ್ಲಿ ತನಗಿದ್ದ ನೌಕರಿಯನ್ನು ಬಿಟ್ಟು, ಕಬ್ಬಿಣದ ಉದ್ಯಮದಲ್ಲಿ ಆಸಕ್ತಿ ವಹಿಸಿದ, ಉಕ್ಕಿನ ಕಾರಖಾನೆಯನ್ನು ತೆರೆದ.

ವ್ಯಕ್ತಿ ತನ್ನ ಶಕ್ತಿಯನ್ನು ಅರಿತುಕೊಂಡು ಸರಿಯಾದ ಉದ್ಯೋಗವನ್ನು ಆರಿಸಿಕೊಂಡು ಶ್ರದ್ಧೆಯಿಂದ ಕೆಲಸಮಾಡಿದರೆ ಗೌರವದಿಂದ ಜೀವಿಸಬಲ್ಲ. ಆಂಡ್ರೂ ಕಾರ್ನ್‌ಗಿಗೆ ಬಂದ ಶ್ರೀಮಂತಿಕೆ ಎಲ್ಲರಿಗೂ ದೊರೆಯಲಾರದು. ಆದರೆ ಬಡತನದಲ್ಲಿ ಪ್ರಾರಂಭಿಸಿದರೂ ತನ್ನ ಸ್ವಭಾವಕ್ಕೆ ಹೊಂದಿಕೊಂಡ ವೃತ್ತಿಯನ್ನು ಆರಿಸುವುದರಿಂದ ದೊರೆಯಬಹುದಾದ ಯಶಸ್ಸಿಗೆ ಅದ್ಭುತ ನಿದರ್ಶನ ಅವನು.

ಯಾವುದೋ ಒಂದು ಬಗೆಯ ಕೆಲಸವನ್ನು ತಾನು ಮಾಡಿ ಅದರ ಪ್ರತಿಫಲವಾಗಿ ವಸ್ತುಗಳನ್ನೋ ಹಣವನ್ನೋ ಪಡೆಯುವ ರೂಢಿ ಬೆಳೆದಂತೆ ಉದ್ಯೋಗದ ಕಲ್ಪನೆ ಮಾನವನಿಗೆ ಬಂದಿರಬೇಕು. ರೈತ ತನ್ನ ಕಾಲ ಮತ್ತು ಶಕ್ತಿಯನ್ನೆಲ್ಲ ಆಹಾರ ಧಾನ್ಯಗಳನ್ನು ಬೆಳೆಯಲೆಂದೇ ಮೀಸಲಿಡುತ್ತಿದ್ದ ; ಬೇಟೆಗಾರನಿಗೆ ಪ್ರಾಣಿಗಳ ಮಾಂಸವನ್ನು ಇತರರಿಗೆ ಒದಗಿಸುವುದಷ್ಟೇ ಕೆಲಸ. ಮಾರಾಟಗಾರನ ಉದ್ಯಮ, ಜನರಿಗೆ ಅವಶ್ಯವಿರುವ ಪದಾರ್ಥಗಳನ್ನು ಒದಗಿಸುವುದು.

ಉದ್ಯೋಗದಲ್ಲಿ ಸ್ಥೂಲವಾಗಿ ಎರಡು ವಿಧ : ಬೌದ್ಧಿಕ ಮತ್ತು ದೈಹಿಕ. ಶಾಲೆ ಕಾಲೇಜುಗಳ ಶಿಕ್ಷಕರು, ಕಚೇರಿಯ ಕರ್ಮಚಾರಿಗಳು, ಅಧಿಕಾರಿಗಳು, ಲೇಖಕರು, ಪತ್ರಿಕೋದ್ಯಮಿಗಳು ಮುಂತಾದವರು ಬೌದ್ಧಿಕ ದುಡಿಮೆಯನ್ನು ಒದಗಿಸುತ್ತಾರೆ. ಕಾರ್ಮಿಕರು, ರೈತರು ಮುತ್ತಿತರರು ದೈಹಿಕ ಕಾರ್ಯಗಳನ್ನು ನಡೆಸುತ್ತಾರೆ. ಸಣ್ಣ ವ್ಯಾಪಾರಸ್ಥರು, ಯಂತ್ರ ಶಿಲ್ಪಿಗಳು, ವೈದ್ಯರು ಮುಂತಾದವರ ದುಡಿಮೆಯಲ್ಲಿ ಹೆಚ್ಚು ಬೌದ್ಧಿಕ ಅಂಶವೂ ಸ್ವಲ್ಪ ದೈಹಿಕ ಅಂಶವೂ ಇರುತ್ತವೆ.

ಕೆಲವು ಉದ್ಯೋಗಿಗಳಿಗೆ ವಿಶೇಷ ಕೌಶಲ ಅಗತ್ಯ. ಉದಾಹರಣೆಗೆ ಗಂಧದ ದಂತದ ಕೆತ್ತನೆಗಳನ್ನು ಮಾಡುವ ಕುಶಲಕರ್ಮಿಗಳು. ಶಿಕ್ಷಕನಿಗೆ ತನ್ನ ಆಲೋಚನೆಗಳನ್ನು ಅರ್ಥವಾಗುವಂತೆ ವ್ಯಕ್ತಪಡಿಸುವ ಕೌಶಲ ಇರಬೇಕು.

ಆಧುನಿಕ ಜಗತ್ತಿನಲ್ಲಿ ಬಹು ದೇಶಗಳಲ್ಲಿ ನಿರುದ್ಯೋಗದ ಸಮಸ್ಯೆ ಪ್ರಬಲವಾಗಿದೆ. ಇಂಥ ಸನ್ನಿವೇಶದಲ್ಲಿ ಎಚ್ಚರಿಕೆಯಿಂದ ಉದ್ಯೋಗವನ್ನು ಆರಿಸುವುದು ಅಗತ್ಯ. ಉಚ್ಚ ಶಿಕ್ಷಣಕ್ಕೆ ಕಾಲಿಡುವಾಗಲೆ ತರುಣ ಮುಂದೆ ತಾನು ಕೈಗೊಳ್ಳುವ ಉದ್ಯೋಗವನ್ನು ಆರಿಸಿಕೊಂಡರೆ, ಅದಕ್ಕೆ ಅವಶ್ಯವಿರುವ ಶಿಕ್ಷಣವನ್ನು ಪಡೆಯಬಹುದು.

ಪಾಶ್ಚಾತ್ಯ ವಿಶ್ವವಿದ್ಯಾನಿಲಯಗಳಲ್ಲಿ ವಿದ್ಯಾರ್ಥಿಗಳಿಗೆ ಅವರ ಉದ್ಯೋಗದ ಆಯ್ಕೆಯಲ್ಲಿ ನೆರವು ನೀಡಲು ಪ್ರತ್ಯೇಕ ವಿಭಾಗಗಳೇ ಇರುತ್ತವೆ. ಇಲ್ಲಿ ಉದ್ಯೋಗದ ಅವಕಾಶಗಳನ್ನು ಕುರಿತು ಮಾಹಿತಿ ಸಂಗ್ರಹಿಸಿರುತ್ತಾರೆ. ತಜ್ಞರು ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡಲು ಸಿದ್ಧವಿರುತ್ತಾರೆ. ಅಲ್ಲದೆ ವಿದ್ಯಾರ್ಥಿಗಳಿಗೆ ವಿವಿಧ ಹಂತಗಳಲ್ಲಿ ಪರೀಕ್ಷೆಗಳನ್ನು ನಡೆಸಿ, ಅವರ ವಿಶೇಷ ಸಾಮರ್ಥ್ಯವನ್ನು ನಿರ್ಧರಿಸುವ ವ್ಯವಸ್ಥೆಯೂ ಇರುತ್ತದೆ.

ವೈದ್ಯ, ಇಂಜಿನಿಯರಿಂಗ್, ತಾಂತ್ರಿಕತೆ ಮುಂತಾದ ಶಿಕ್ಷಣಗಳು ಇತರ ಶಿಕ್ಷಣಗಳಿಗಿಂತ ದುಬಾರಿ. ಇವನ್ನು ಪಡೆದವರು ನಿರುದ್ಯೋಗಿಗಳಾದರೆ ಆ ಶಿಕ್ಷಣದ ಮೇಲೆ ಅವರೂ ಸಮಾಜವೂ ತೊಡಗಿಸಿದ ಹಣ ನಿರುಪಯುಕ್ತವಾಗುತ್ತದೆ. ಚಿತ್ರಕಲೆ, ವ್ಯಾಯಾಮ, ಕೈಗಾರಿಕೋದ್ಯಮ ಮುಂತಾದ ನಿರ್ದಿಷ್ಟ ಕ್ಷೇತ್ರಗಳಲ್ಲಿ ತರಬೇತಿ ಪಡೆದ ವಿದ್ಯಾರ್ಥಿಗಳು ನಿರುದ್ಯೋಗಿಗಳಾದರೂ ಅವರ ಶಕ್ತಿ, ಚೈತನ್ಯ ವ್ಯರ್ಥವಾಗುತ್ತವೆ. ಎಲ್ಲ ದೇಶಗಳಲ್ಲೂ ಉದ್ಯೋಗ ವಿನಿಮಯ ಕಚೇರಿಗಳು ಕೈಗಾರಿಕೆಗಳಿಗೆ ಬೇಕಾಗುವ ಉದ್ಯೋಗಿಗಳನ್ನು ಆರಿಸಿ ಕೊಡುವುದರಲ್ಲಿ ಮುಖ್ಯ ಪಾತ್ರ ವಹಿಸುತ್ತವೆ.

ನೋಡಿ : ಕೈಗಾರಿಕೆ ; ವರಮಾನ

## ಉಪಭಾಷೆ

"ಆಮೇಲೆ ಬನ್ನಿ."

"ಕೊನೆಗೆ ಬನ್ನಿ."

"ಹಿಂದಾಗಡೆಯಿಂದ ಬರ್ರಿ."

"ಕಡೀಗೆ ಬನ್ನಿ."

ಇವು ನಾಲ್ಕೂ ಕನ್ನಡ ವಾಕ್ಯಗಳು ; ಇವು ನಾಲ್ಕರ ಅರ್ಥವೂ ಒಂದೇ. ಕನ್ನಡ ನಾಡಿನ ವಿವಿಧ ಭಾಗಗಳಲ್ಲಿ ಇವುಗಳನ್ನು ಬಳಸುತ್ತಾರೆ. ಇದು ಭಾಷೆಯಲ್ಲಿ ತೋರುವ ಪ್ರಾದೇಶಿಕ ವ್ಯತ್ಯಾಸದ ಫಲ.

ವಿಶಾಲವಾದ ಭೌಗೋಲಿಕ ಪ್ರದೇಶದಲ್ಲಿ ಬಳಕೆಯಲ್ಲಿರುವ ಒಂದು ಭಾಷೆ ಆ ಪ್ರದೇಶದ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ರೂಪಗಳನ್ನು ತಾಳುತ್ತದೆ. ಒಂದು ಭಾಗದ ಜನರ ನಡುವೆ ನಿಕಟ ಸಂಪರ್ಕ ಏರ್ಪಡುವ ಹಾಗೆ ಆ ಪ್ರದೇಶದ ಎಲ್ಲ ಭಾಗಗಳ ಜನರಲ್ಲೂ ಸಂಪರ್ಕ ಏರ್ಪಡುವುದು ಸಾಧ್ಯವಿಲ್ಲದಿರುವುದೇ ಈ ವ್ಯತ್ಯಾಸಗಳಿಗೆ ಮುಖ್ಯ ಕಾರಣ. ನೈಸರ್ಗಿಕವಾದ ನದಿ ಬೆಟ್ಟಗಳೂ ರಾಜಕೀಯ ಗಡಿ ವ್ಯವಸ್ಥೆಯೂ ಬೇರೆ ಇತರ ಕಾರಣಗಳೂ ಜನರ ಸಂಪರ್ಕಕ್ಕೆ ತಡೆಯಾಗಿರಬಹುದು. ಒಂದು ಭಾಷೆ ಇನ್ನೊಂದು ಭಾಷೆಯೊಡನೆ ಸಂಪರ್ಕ ಬೆಳೆಸಿದ ಫಲವಾಗಿಯೊ. ಪ್ರಭಾವಕ್ಕೊಳಗಾದ ಫಲವಾಗಿಯೊ ತನ್ನಲ್ಲಿ ವ್ಯತ್ಯಾಸಗಳನ್ನು ಉಳಿಸಿಕೊಂಡಿರಬಹುದು. ಒಂದೇ ಭಾಷಾಪ್ರದೇಶದಲ್ಲಿ ಹೀಗೆ ವ್ಯತ್ಯಾಸಹೊಂದಿರುವ ಒಂದೊಂದು ಭಾಗದ ಭಾಷೆಯನ್ನು ಉಪಭಾಷೆ ಎಂದು ಕರೆಯುತ್ತೇವೆ. ಒಂದು ಭಾಷೆ ಎನ್ನುವುದು ಇಂಥ ಉಪಭಾಷೆಗಳ ಮೊತ್ತ.

ಒಬ್ಬರು ಮಾತನಾಡಿದ ಹಾಗೆ ಇನ್ನೊಬ್ಬರು ಮಾತನಾಡುವುದಿಲ್ಲ. ಪ್ರತಿಯೊಬ್ಬರಿಗೂ ಒಂದು ವ್ಯಕ್ತಿಭಾಷೆ ಇರುತ್ತದೆ. ಕುಟುಂಬ ಕುಟುಂಬಗಳಲ್ಲಿ ವ್ಯತ್ಯಾಸವಿರುತ್ತದೆ ; ಬೇರೆ ಬೇರೆ ಸಾಮಾಜಿಕ ಸ್ತರಗಳಲ್ಲಿ ವ್ಯತ್ಯಾಸವಿರುತ್ತದೆ ; ವಿವಿಧ ವೃತ್ತಿಗಳನ್ನು ಅವಲಂಬಿಸಿದವರ ನಡುವೆ ವ್ಯತ್ಯಾಸವಿರುತ್ತದೆ. ಆದುದರಿಂದ ಉಪಭಾಷೆ ಭೌಗೋಲಿಕ ಹಂಚಿಕೆಯನ್ನು ಮಾತ್ರ ಅವಲಂಬಿಸಿರುವುದಿಲ್ಲ. ಒಂದು ಉಪಭಾಷೆಯಲ್ಲಿ ಅದನ್ನು ಆಡುವವರು ತಮಗೇ ವಿಶಿಷ್ಟವಾದ ಕೆಲವು ಲಕ್ಷಣಗಳನ್ನು ಉಳಿಸಿಕೊಂಡಿರುತ್ತಾರೆ. ಆದುದರಿಂದ ಉಪಭಾಷೆ ಎನ್ನುವುದೂ ವ್ಯಕ್ತಿಭಾಷೆಗಳ ಮೊತ್ತವೆ. ಒಂದು ಭಾಷೆಯನ್ನು ಬಳಸುವ ಎಲ್ಲ ವ್ಯಕ್ತಿಗಳಲ್ಲಿಯೂ ಆ ಭಾಷೆಯ ಸಾಮಾನ್ಯ ಲಕ್ಷಣಗಳು ಕಂಡುಬರುವುದು ನಿಜ. ಆದರೆ ಈ ಸಾಮಾನ್ಯ ಲಕ್ಷಣಗಳು ಕಾಲ ದೇಶ ಸಮಾಜಗಳ ಕಟ್ಟಿಗೆ ಸಿಕ್ಕಿ, ಒಂದೊಂದು ಗುಂಪಿನಲ್ಲಿಯೂ ದಟ್ಟೈಸಿಕೊಂಡಿರುತ್ತವೆ. ಈ ಗುಂಪಿನ ಭಾಷೆಯನ್ನೇ ನಾವು ಉಪಭಾಷೆ ಎನ್ನುವುದು.

ಕನ್ನಡವನ್ನೇ ಇದಕ್ಕೆ ಉದಾಹರಣೆಯಾಗಿ ನೋಡೋಣ :

ಕನ್ನಡ ಭಾಷೆಯನ್ನು ಎರಡು ಕೋಟಿಗೂ ಸ್ವಲ್ಪ ಹೆಚ್ಚು ಜನ ಆಡುತ್ತಾರೆ. ಎಂದರೆ ಕನ್ನಡದಲ್ಲಿ ಅಷ್ಟೇ ಸಂಖ್ಯೆಯ ವ್ಯಕ್ತಿ ಭಾಷೆಗಳಿವೆ ಎಂದ ಹಾಗಾಯಿತು. ಧಾರವಾಡ, ಮೈಸೂರುಗಳಿಂದ ಒಬ್ಬೊಬ್ಬರನ್ನು ಆರಿಸಿಕೊಂಡರೆ ಅವರಿಬ್ಬರ ಮಾತಿನಲ್ಲೂ ನಾವು ಹೆಚ್ಚಿನ ವ್ಯತ್ಯಾಸ ಕಾಣುತ್ತೇವೆ. ಈ ವ್ಯತ್ಯಾಸಗಳು ಧ್ವನಿಗಳಲ್ಲಿರಬಹುದು (ಉದಾ : ಮೈಸೂರಿನವರು 'ಅಜ್ಜ' ಎಂದರೆ ಧಾರವಾಡದವರು 'ಅಜ್ಜ' ಎನ್ನುತ್ತಾರೆ.) ; ಪದರೂಪಗಳಲ್ಲಿರಬಹುದು (ಮೈಸೂರು 'ಆನೆ' ; ಧಾರವಾಡ 'ಆನಿ') ; ವ್ಯಾಕರಣ ರೂಪಗಳಲ್ಲಿರಬಹುದು (ಮೈಸೂರು 'ಮನೆಯಲ್ಲಿ' ; ಧಾರವಾಡ 'ಮನಿಯಾಗ') ; ಪದಗಳ ಆಯ್ಕೆಯಲ್ಲಿರಬಹುದು (ಮೈಸೂರು 'ಬೇಗ' ; ಧಾರವಾಡ–'ಲಗೂ') ; ಪದಗಳ ಅರ್ಥದಲ್ಲಿರಬಹುದು (ಮೈಸೂರಿನಲ್ಲಿ 'ನೆಟ್ಟಗೆ' ಎಂದರೆ 'ನೇರ' ; ಧಾರವಾಡದಲ್ಲಿ 'ನೆಟ್ಟಗೆ' ಎಂದರೆ 'ಸರಿ'). ಧಾರವಾಡ ಜಿಲ್ಲೆಯವರನ್ನೆಲ್ಲ ಆರಿಸಿಕೊಂಡರೆ, ಆ ವ್ಯಕ್ತಿ ಭಾಷೆಗಳಲ್ಲಿ ಹೆಚ್ಚಿನ ಸಾಮ್ಯ ಕಂಡುಬರುತ್ತದೆ; ಹಾಗೆಯೆ ಮೈಸೂರು ಜಿಲ್ಲೆಯಲ್ಲಿಯೂ. ಆದ್ದರಿಂದ ಒಂದನ್ನು ಧಾರವಾಡದ ಉಪಭಾಷೆ ಎನ್ನುತ್ತೇವೆ ; ಇನ್ನೊಂದು ಮೈಸೂರಿನ ಉಪಭಾಷೆ ಎನ್ನುತ್ತೇವೆ. ಧಾರವಾಡದ ಪಕ್ಕದಲ್ಲೆ ಬಿಜಾಪುರ ಜಿಲ್ಲೆಯ ಕನ್ನಡ ಬೇರೆ ಉಪಭಾಷೆಯಾಗುತ್ತದೆ. ಬೀದರ್ ಗುಲ್ಬರ್ಗ ಬೆಳಗಾವಿಗಳ ಕನ್ನಡ ಇವೆರಡರಿಂದಲೂ ಭಿನ್ನ. ಆದರೆ ಈ ಐದೂ ಜಿಲ್ಲೆಗಳ ಕನ್ನಡಕ್ಕೆ ಸಮಾನವಾದ ಅಂಶಗಳು ಅನೇಕವಿವೆ. ಒಟ್ಟಿನಲ್ಲಿ ಅವು ಮಧ್ಯ ಮೈಸೂರಿನ ಕೆಲವು ಜಿಲ್ಲೆಗಳ ಕನ್ನಡಕ್ಕಿಂತ ಬೇರೆ. ಆದ್ದರಿಂದಲೇ ಪ್ರಾದೇಶಿಕವಾಗಿ ಒಂದನ್ನು ಧಾರವಾಡ ಕನ್ನಡ ಎಂದು ಕರೆಯುತ್ತೇವೆ. ಇನ್ನೊಂದನ್ನು ಮೈಸೂರು ಕನ್ನಡ ಎಂದು ಕರೆಯುತ್ತೇವೆ. ಇವೆರಡೂ ಕನ್ನಡದ ಉಪಭಾಷೆಗಳು. ಮಧ್ಯ ಮೈಸೂರಿನಲ್ಲಿ ಮಲೆನಾಡಿನ ಕನ್ನಡ ಬಯಲು ನಾಡಿನ ಕನ್ನಡದಿಂದ ಬೇರೆ. ಮಲೆನಾಡಿನಲ್ಲಿ ಶಿವಮೊಗ್ಗ ಜಿಲ್ಲೆಗೂ ಚಿಕ್ಕಮಗಳೂರು ಜಿಲ್ಲೆಗೂ ವ್ಯತ್ಯಾಸಗಳಿವೆ. ಬಯಲುನಾಡಿನಲ್ಲಿ ಮಂಡ್ಯದ ಕನ್ನಡಕ್ಕೂ ಕೋಲಾರದ ಕನ್ನಡಕ್ಕೂ ವ್ಯತ್ಯಾಸಗಳಿವೆ. ಮಂಗಳೂರು ಜಿಲ್ಲೆಯ ಕನ್ನಡ ಇವೆಲ್ಲಕ್ಕಿಂತ ಭಿನ್ನ. ಅಲ್ಲಿಯೂ ಪುತ್ತೂರಿನವರು ಮಾತನಾಡಿದ ಹಾಗೆ ಕುಂದಾಪುರದವರು ಮಾತನಾಡುವುದಿಲ್ಲ. ಇವೆಲ್ಲ ಭೌಗೋಲಿಕವಾದ ಕನ್ನಡದ ಉಪಭಾಷೆಗಳು.

ಇಷ್ಟಕ್ಕೇ ಮುಗಿಯುವುದಿಲ್ಲ. ವ್ಯತ್ಯಾಸಗಳಲ್ಲಿ ಮತ್ತೆ ವ್ಯತ್ಯಾಸಗಳು ಕಾಣಿಸುತ್ತವೆ. ಹಳ್ಳಿಯವರು ಪಟ್ಟಣದವರ ನಡುವೆ ; ಅಕ್ಷರಸ್ಥರು ಅನಕ್ಷರಸ್ಥರ ನಡುವೆ ; ಭಿನ್ನ ಜಾತಿಯವರ ನಡುವೆ ; ವಿವಿಧ ಉದ್ಯೋಗಗಳವರ ನಡುವೆ ವ್ಯತ್ಯಾಸಗಳು ಮುಂದುವರಿಯುತ್ತವೆ. ಸಂಕೀರ್ಣಸ್ವರೂಪದ ಉಪಭಾಷೆಗಳಿಗೆ ಅವಕಾಶಗಳಾಗುತ್ತವೆ. ಇವೆಲ್ಲ ಕನ್ನಡದ ಸಾಮಾಜಿಕ ಉಪಭಾಷೆಗಳು.

ಉಪಭಾಷೆಗಳು ಇಂದಿನ ಕಾಲದಲ್ಲಷ್ಟೆ ಉಂಟಾದುವಲ್ಲ. ಹಳಗನ್ನಡ ಕಾಲದಲ್ಲಿಯೂ ಈ ಭೇದಗಳು ಇದ್ದುವು. 'ಕವಿರಾಜ ಮಾರ್ಗ' ಎಂಬ ಪ್ರಾಚೀನ ಕನ್ನಡ ಕೃತಿಯಲ್ಲಿ ಉಲ್ಲೇಖಿತವಾದ ಉತ್ತರ ಮಾರ್ಗ. ದಕ್ಷಿಣ ಮಾರ್ಗಗಳು ಆ ಕಾಲಕ್ಕೆ ಬಳಕೆಯಲ್ಲಿದ್ದ ಪ್ರಾಂತಭೇದಗಳನ್ನು ಸೂಚಿಸುತ್ತವೆಂದು ಹಲವರ ಅಭಿಪ್ರಾಯ. ಇದು ನಿಜವಿರಬಹುದು. ಇಲ್ಲದಿರಬಹುದು. ಪ್ರಾಚೀನ ಸಾಹಿತ್ಯ. ಶಾಸನಗಳ ಅಧ್ಯಯನ ಅಂದೂ ಪ್ರಾಂತಭೇದಗಳಿದ್ದುವೆಂಬುದನ್ನು ದೃಢಪಡಿಸುತ್ತದೆ.

ಉಪಭಾಷೆಗಳು ಎಲ್ಲ ಕಾಲದ ಎಲ್ಲ ಭಾಷೆಗಳಲ್ಲೂ ಇವೆ. ಪ್ರಾಚೀನ ದಾಖಲೆಗಳಾದ ಅಶೋಕನ ಶಾಸನಗಳಲ್ಲಿ ನಿರ್ದಿಷ್ಟವಾದ ಪ್ರಾದೇಶಿಕ ಭಿನ್ನತೆಗಳು ಕಂಡುಬರುತ್ತವೆ. ವೇದಗಳ ಭಾಷೆಯಲ್ಲಿಯೇ ಇಂಥ ವ್ಯತ್ಯಾಸಗಳಿವೆಯೆಂದು ಪಂಡಿತರು ಗುರುತಿಸಿದ್ದಾರೆ. ಅರಿಸ್ಟೊಫೆನೀಸ್ ಎಂಬ ಪ್ರಾಚೀನ ಗ್ರೀಕ್ ನಾಟಕಕಾರ ತನ್ನ ಪಾತ್ರಗಳಲ್ಲಿ ಬೇರೆ ಬೇರೆ ಉಪಭಾಷೆಗಳನ್ನು ಆಡಿಸಿದ್ದಾನೆ. ನಮ್ಮ ಸಂಸ್ಕೃತ ನಾಟಕಗಳಲ್ಲಿಯೂ ಮಹಿಳೆಯರು, ಸೇವಕರು, ಕೀಳುವರ್ಗದವರು ವಿವಿಧ ಉಪಭಾಷೆಗಳನ್ನು ಬಳಸುತ್ತಾರೆ.

ನಾನಾ ಭಾಷೆಗಳಿಗೆ ಸಂಬಂಧಿಸಿದಂತೆ ಈಗ ಭಾಷಾ ವಿಜ್ಞಾನಿಗಳು ಉಪಭಾಷೆಗಳ ಬಗೆಗೆ ಅಧ್ಯಯನವನ್ನೂ ಸಂಶೋಧನೆಯನ್ನೂ ನಡೆಸಿದ್ದಾರೆ. ಇದರಿಂದ ಸಾಮಾನ್ಯ ಭಾಷಾ ವಿಜ್ಞಾನಕ್ಕೆ ಹೊಸಮುಖವೊಂದು ಕೂಡಿಕೊಂಡಿದೆ ; ಭಾಷೆಗಳ ಇತಿಹಾಸ ರಚನೆಗೆ. ಪರಸ್ಪರ ಸಂಬಂಧ ಸ್ಥಾಪನೆಗೆ ಹೊಸ ಹೊಸ ಆಧಾರಗಳು ದೊರೆತಿವೆ. ಭಾಷಾ ವಿಜ್ಞಾನದಲ್ಲಿ ಈ ಕುರಿತ ಒಂದು ಪ್ರತ್ಯೇಕ ಭಾಗವೇ 'ಉಪಭಾಷಾ ಶಾಸ್ತ್ರ' ಎಂಬ ಹೆಸರಿನಲ್ಲಿ ಬೆಳೆಯುತ್ತಿದೆ. ಸಾಮಾಜಿಕ ಉಪಭಾಷೆಗಳ ಅಧ್ಯಯನ ಈಗ ಸಾಮಾಜಿಕ ಭಾಷಾ ವಿಜ್ಞಾನ ಎಂಬ ಹೊಸ ಹೆಸರನ್ನೇ ತಳೆದಿದೆ.

ಉಪಭಾಷೆಗಳ ಸಮೀಕ್ಷಾ ಕಾರ್ಯ ಜಗತ್ತಿನ ಎಷ್ಟೋ ಭಾಷೆಗಳಲ್ಲಿ ನಡೆದಿದೆ : ಉಪಭಾಷೆಗೆ ಆಧಾರವಾಗುವ ಭಾಷಿಕ ಭಿನ್ನತೆಗಳ ಹಂಚಿಕೆಯನ್ನು ಗುರುತಿಸುವ 'ನುಡಿನಕ್ಷೆ'ಗಳೂ ಸಿದ್ಧವಾಗಿವೆ. ಈ ನಕ್ಷೆಗಳಲ್ಲಿ ಒಂದೊಂದು ಭಾಷಿಕ ಅಂಶದ ಹಂಚಿಕೆಯ ವ್ಯಾಪ್ತಿಯನ್ನು ರೇಖೆಗಳ ಮೂಲಕ ಗುರುತಿಸಲಾಗುತ್ತದೆ. ಈ ರೇಖೆಗಳಿಗೆ 'ಸೀಮಾ ರೇಖೆ'ಗಳೆಂದು ಹೆಸರು. ಹಲವು ಭಾಷಿಕ ಅಂಶಗಳಿಗೆ ಸಂಬಂಧಿಸಿದಂತೆ ಒಂದರ ಮೇಲೆ ಇನ್ನೊಂದು ರೇಖೆಯನ್ನು ಎಳೆಯಬೇಕಾಗಿ ಬಂದಾಗ ಒಂದು ಸೀಮಾರೇಖೆಗಳ ತಂಡವೇರ್ಪಡುತ್ತದೆ. ಈ ತಂಡವೇ ಒಂದು ಉಪಭಾಷೆಯ ಸೀಮೆಯನ್ನೂ ನಿರ್ಧರಿಸುತ್ತದೆಂದು ಹೇಳಬಹುದು.

## ಉಪನಿಷತ್ತುಗಳು

" ಅಸತೋ ಮಾ ಸದ್ಗಮಯ
ತಮಸೋ ಮಾ ಜ್ಯೋತಿರ್ಗಮಯ
ಮೃತ್ಯೋರ್ಮಾ ಅಮೃತಂ ಗಮಯ"

(ಅಸತ್ಯದಿಂದ ಸತ್ಯದೆಡೆಗೆ, ಕತ್ತಲೆಯಿಂದ ಬೆಳಕಿನ ಕಡೆಗೆ, ಮೃತ್ಯುವಿನಿಂದ ಅಮೃತದೆಡೆಗೆ–ನಮ್ಮನ್ನು ನಡೆಸು.)

ಎಂಥ ಸುಂದರ ಪ್ರಾರ್ಥನೆ! ಇದು ಇರುವುದು ಬೃಹದಾರಣ್ಯಕ ಉಪನಿಷತ್ತಿನಲ್ಲಿ.

ಉಪನಿಷತ್ತು ಎಂದು ನಾವು ಯಾವುದನ್ನು ಕರೆಯುತ್ತೇವೆ ?

ವೇದಗಳನ್ನು ಮೂರು ಭಾಗಗಳಾಗಿ ವಿಂಗಡಿಸಲಾಗಿದೆ. ಮೊದಲನೆಯದು ಮಂತ್ರ. ಇದರಲ್ಲಿ ಇಂದ್ರ. ಅಗ್ನಿ. ವರುಣ ಮೊದಲಾದ ದೇವತೆಗಳನ್ನು ಹೊಗಳುವ ಮಂತ್ರಗಳಿವೆ. ಎರಡನೆಯದು ಬ್ರಾಹ್ಮಣ. ಇದರಲ್ಲಿ ಯಜ್ಞಯಾಗಾದಿಗಳನ್ನು ಮಾಡುವ ವಿಧಾನವನ್ನು ಹೇಳಲಾಗಿದೆ. ಮೂರನೆಯದು ಉಪನಿಷತ್ತು. ಇಲ್ಲಿ ತತ್ತ್ವವಿಚಾರವಿದೆ. ಎಂದರೆ ಈ ಜಗತ್ತನ್ನು ಸೃಷ್ಟಿಸಿದನೆಂದು ಹೇಳಲಾದ ಬ್ರಹ್ಮನ ಸ್ವರೂಪ, ಜಗತ್ತಿನ ಸೃಷ್ಟಿ. ಬ್ರಹ್ಮನಿಗೂ ಜೀವಕ್ಕೂ ಇರುವ ಸಂಬಂಧ. ಜಗತ್ತಿಗೂ ಜೀವಕ್ಕೂ ಇರುವ ಸಂಬಂಧ. ಪುನರ್ಜನ್ಮ ಮೊದಲಾದ ವಿಷಯಗಳನ್ನು ವಿವೇಚಿಸಲಾಗಿದೆ. ವೇದಗಳ ಕೊನೆಯ ಭಾಗವಾದ ಉಪನಿಷತ್ತನ್ನು 'ವೇದಾಂತ' ಎಂದೂ ಕರೆಯುತ್ತಾರೆ. ಪಾಶ್ಚಾತ್ಯ ದೇಶಗಳಲ್ಲಿ ಸೃಷ್ಟಿಯನ್ನು ಕುರಿತು. ಪ್ರಪಂಚದ ಜೀವಿಗಳನ್ನು ಕುರಿತು. ಸತ್ಯ ಧರ್ಮಗಳನ್ನು ಕುರಿತು ವಿಚಾರ ಮಾಡುವವರನ್ನು ತತ್ತ್ವಜ್ಞಾನಿಗಳು ಎನ್ನುತ್ತಾರೆ. ಹಿಂದೂಗಳು, ಉಪನಿಷತ್ತು ಅಥವಾ ವೇದಾಂತದ ಆಧಾರದ ಮೇಲೆ, ಅದರ ಹಿನ್ನೆಲೆಯಲ್ಲಿ ವಿಚಾರ ಮಾಡುವವರನ್ನು ವೇದಾಂತಿಗಳು ಎನ್ನುತ್ತಾರೆ. ವೇದಾಂತಿಗಳು ತತ್ತ್ವಜ್ಞಾನಿಗಳೂ ಹೌದು.

ಉಪನಿಷತ್ತುಗಳು ಸುಮಾರು 250 ಇವೆ; ಮುಖ್ಯವಾದುವು ಹತ್ತು, ಅವು ಈಶಾವಾಸ್ಯೋಪನಿಷತ್, ಕೇನೋಪನಿಷತ್, ಕಠೋಪನಿಷತ್. ಮುಂಡಕೋಪನಿಷತ್, ಮಾಂಡುಕ್ಯೋಪನಿಷತ್. ಪ್ರಶ್ನೋಪನಿಷತ್, ತೈತ್ತರೀಯೋಪನಿಷತ್, ಐತರೇಯೋಪನಿಷತ್. ಛಾಂದೋಗ್ಯೋಪನಿಷತ್ ಮತ್ತು ಬೃಹದಾರಣ್ಯಕೋಪನಿಷತ್. ಜೀವವಿರುವ, ಜೀವವಿಲ್ಲದ, ಓಡಾಡುವ, ಓಡಾಡಲಾಗದೆ ಒಂದೇ ಕಡೆ ಇರುವ ಪ್ರಾಣಿಗಳೂ ವಸ್ತುಗಳೂ ಉಂಟು ಜಗತ್ತಿನಲ್ಲಿ. ಇವೆಲ್ಲವರ ಹಿಂದೆ ಇರುವ ಪರಮ ಸತ್ಯವನ್ನು ಕಾಣುವುದೇ ಉಪನಿಷತ್ತಿನ ಗುರಿ.

ಹಿಂದೂಗಳ ತತ್ತ್ವಸಿದ್ಧಾಂತಕ್ಕೆಲ್ಲ ತಳಹದಿ ಉಪನಿಷತ್ತು. ಭಗವದ್ಗೀತೆಗೆ ಮೂಲ ಉಪನಿಷತ್ತು. ಉಪನಿಷತ್ತಿನಲ್ಲಿರುವ ವಿಷಯಗಳನ್ನು ಸುಲಭವಾಗಿ ಜನರಿಗೆ ಅರ್ಥವಾಗುವಂತೆ ಭಗವದ್ಗೀತೆಯಲ್ಲಿ ಹೇಳಲಾಗಿದೆ.

ಉಪನಿಷತ್ತುಗಳನ್ನು ಯಾರು ಬರೆದರು ಎಂಬುದು ಗೊತ್ತಿಲ್ಲ. ಅವನ್ನು ಬರೆದ ಋಷಿಗಳು ತಮ್ಮ ಹೆಸರನ್ನು ಹೇಳಿಕೊಂಡಿಲ್ಲ. 'ಸತ್ಯ'ವನ್ನು ತಿಳಿದುಕೊಳ್ಳಬೇಕು ; ಅದನ್ನು ಇತರರಿಗೆ ತಿಳಿಸಬೇಕು ಎಂಬ ಆಸೆ ಅವರಿಗೆ ಇವನ್ನು ರಚಿಸಿದ ಕಾಲವೂ ತಿಳಿದಿಲ್ಲ. ಈಗ್ಗೆ ಸುಮಾರು ಮೂರು ಮೂರೂವರೆ ಸಾವಿರ ವರ್ಷಗಳ ಹಿಂದೆ ಇವು ರಚಿತವಾಗಿರಬಹುದೆಂದು ಊಹೆ.

ಉಪನಿಷತ್ ಎನ್ನುವ ಹೆಸರು ಬಹಳ ಅರ್ಥಪೂರ್ಣವಾಗಿದೆ. ಉಪನಿಷತ್ ಶಬ್ದ ರಹಸ್ಯ ಅಥವಾ ರಹಸ್ಯವಿದ್ಯೆ ಎಂಬ ಅರ್ಥವನ್ನು ಕೊಡುತ್ತದೆ. ವೇದಗಳ ರಹಸ್ಯ. ಪರಮಾತ್ಮನ ರಹಸ್ಯ ಇವನ್ನು ತಿಳಿಸುವ ಬ್ರಹ್ಮವಿದ್ಯೆ ಉಪನಿಷತ್ತುಗಳು. ಉಪನಿಷತ್ ಅಥವಾ ಉಪಾನಿಷತ್ ಎಂದರೆ ಹತ್ತಿರ ಕುಳಿತುಕೊ ಎಂದೂ ಅರ್ಥ. ಉಪನಿಷತ್ತಿನಲ್ಲಿ ಅನುಸರಿಸಿರುವುದು ಪ್ರಶ್ನೋತ್ತರ ವಿಧಾನವನ್ನು. ಶಿಷ್ಯ ಪ್ರಶ್ನೆ ಕೇಳುವುದು, ಗುರು ಉತ್ತರ ಹೇಳುವುದು. ಗುರುಶಿಷ್ಯರ ಮಧ್ಯೆ ಎಂಥ ನಿರ್ಮಲವಾದ, ಮಧುರವಾದ, ಬಿಚ್ಚುಮನಸ್ಸಿನ, ಬಿಚ್ಚುಮಾತಿನ ಸಂಬಂಧ ಇರಬೇಕು ಎನ್ನುವುದನ್ನು ನಾವು ಉಪನಿಷತ್ತುಗಳಲ್ಲಿ ಕಾಣುತ್ತೇವೆ. ಪ್ರಶಾಂತ ಸ್ಥಳದಲ್ಲಿ ಕುಳಿತು ಗುರುಶಿಷ್ಯರು ಚರ್ಚಿಸಿ ತಿಳಿದುಕೊಂಡ ಗಹನ ತತ್ತ್ವಗಳೇ ಉಪನಿಷತ್ತುಗಳು. ಯಜ್ಞಯಾಗಾದಿ ಕಾಲದಲ್ಲಿ ಯೋಗ್ಯರಾದ ಶಿಷ್ಯರು ತನ್ನ ಕಡೆ ಬರಲಿ ಎಂದು ಗುರು ಪ್ರಾರ್ಥಿಸುತ್ತಿದ್ದ. ಉತ್ತಮವಾದ ಗುರು ಸಿಕ್ಕಲಿ ಎಂದು ಶಿಷ್ಯ ಪ್ರಾರ್ಥಿಸುತ್ತಿದ್ದ. ಶಿಷ್ಯನ ಸತ್ಯಸಂಧತೆಯನ್ನೂ ಆಸಕ್ತಿಯನ್ನೂ ತಿಳಿಯಲು ಗುರು ಅನೇಕ ರೀತಿಯಲ್ಲಿ ಪರೀಕ್ಷಿಸುತ್ತಿದ್ದ.

ಅಧ್ಯಯನವನ್ನು ಪ್ರಾರಂಭಿಸುವುದಕ್ಕೆ ಮೊದಲು ಗುರು ಶಿಷ್ಯರಿಬ್ಬರೂ ಸೇರಿ ಹೀಗೆ ಪ್ರಾರ್ಥಿಸುತ್ತಿದ್ದರು :

"ನಮ್ಮಿಬ್ಬರನ್ನೂ ಜೊತೆಯಲ್ಲಿ ಕಾಪಾಡಲಿ. ನಮ್ಮಿಬ್ಬರನ್ನೂ ಜೊತೆಯಲ್ಲಿ ಪೋಷಿಸಲಿ. ಇಬ್ಬರಿಗೂ ಜೊತೆಯಲ್ಲಿ ಸಾಮರ್ಥ್ಯವನ್ನುಂಟುಮಾಡಲಿ. ನಮ್ಮಿಬ್ಬರ ಅಧ್ಯಯನವು ತೇಜಸ್ವಿಯಾಗಲಿ. ನಾವು ಪರಸ್ಪರ ದ್ವೇಷ ಮಾಡದೆ ಇರುವಂತೆ ಆಗಲಿ."

ಅಧ್ಯಯನ ಮುಗಿದು ಹಿಂದಿರುಗುತ್ತಿದ್ದ ಶಿಷ್ಯನಿಗೆ ಗುರುಹೇಳುತ್ತಿದ್ದ ಮಾತುಗಳು ಇವು: "ಸತ್ಯವನ್ನು ಹೇಳು. ಧರ್ಮವನ್ನು ಆಚರಿಸು. ಸತ್ಯದಿಂದ ಕದಲಬೇಡ. ಧರ್ಮದಿಂದ ಕದಲಬೇಡ. ದೇವಪಿತೃ ಕಾರ್ಯದಿಂದ ಕದಲಕೂಡದು. ತಾಯಿಯೇ ನಿನಗೆ ದೇವರಾಗಲಿ. ತಂದೆಯೇ ನಿನಗೆ ದೇವರಾಗಲಿ. ನಮ್ಮಲ್ಲಿ ಯಾವ ಒಳ್ಳೆಯ ನಡತೆಗಳಿವೆಯೋ ಅವನ್ನು ಕಲಿಯಬೇಕು. ಶ್ರದ್ಧೆಯಿಂದ ಕೊಡಬೇಕು. ಅಶ್ರದ್ಧೆಯಿಂದ ಕೊಡಬಾರದು. ತನ್ನ ಐಶ್ವರ್ಯಕ್ಕೆ ತಕ್ಕಂತೆ ಕೊಡಬೇಕು. ವಿನಯದಿಂದ ಕೊಡಬೇಕು" (ತೈತ್ತರೀಯ ಉಪನಿಷತ್ತು).

ಚೆನ್ನಾಗಿ ಬದುಕಬೇಕು, ಬಾಳಬೇಕು ಎಂಬ ಉತ್ಸಾಹ ಉಪನಿಷತ್ತಿನಲ್ಲಿ ತುಂಬಿ ತುಳುಕಾಡುತ್ತದೆ. ಉಪನಿಷತ್ತು ಆತ್ಮಕ್ಕೆ ಸಾವಿಲ್ಲ ಎಂದು ಸಾರುತ್ತದೆ. ಎಷ್ಟೋ ಬಾರಿ ಮನುಷ್ಯನು ಪಾಪಿ, ಪಾಪಗಳನ್ನೇ ಮಾಡುತ್ತಿರುತ್ತಾನೆ ಎಂಬ ಮಾತನ್ನು ಕೇಳುತ್ತೇವೆ. ಆದರೆ ಉಪನಿಷತ್ತು, ಮನುಷ್ಯ ಪಾಪಿಯಲ್ಲ ಅಮೃತ ಪುತ್ರ ಎಂದು ಹೇಳುತ್ತದೆ. ಮನುಷ್ಯರು ಬ್ರಹ್ಮನಿಂದ ಬಂದು ಬ್ರಹ್ಮನ ಕಡೆಗೆ ಹೊರಟವರು, ಪ್ರಪಂಚದಲ್ಲೆಲ್ಲ ಬ್ರಹ್ಮನನ್ನು ಅರಿತು ಜೀವನವನ್ನು ಸಂತೋಷದಿಂದ ನಡೆಸಬೇಕು ಎಂದು ಉಪನಿಷತ್ತು ಬೋಧಿಸುತ್ತದೆ.

ಉಪನಿಷತ್ತಿನಲ್ಲಿ ಕುತೂಹಲ ಉಂಟುಮಾಡುವ ಕಥೆಗಳಿವೆ. ಬ್ರಹ್ಮನು ಇಂದ್ರ, ಅಗ್ನಿ, ವಾಯುಗಳಿಗೆ ವಿನಯವನ್ನು ಕಲಿಸಿದ ಕಥೆಯಿದೆ. ಯಮನನ್ನು ಕಂಡ ನಚಿಕೇತನ ಕಥೆ ಕಠೋಪನಿಷತ್ತಿನಲ್ಲಿದೆ. ದೇವತೆಗಳೂ ಮನುಷ್ಯರೂ ರಾಕ್ಷಸರೂ ಬ್ರಹ್ಮನ ಬಳಿ ಉಪದೇಶಕ್ಕೆ ಹೋದಾಗ ಆತನು ಮೂವರಿಗೂ 'ದ' ಎಂಬ ಒಂದೇ ಅಕ್ಷರವನ್ನು ಉಪದೇಶಿಸಿದ ಕಥೆಯಿದೆ. ಬೃಹದಾರಣ್ಯಕದಲ್ಲಿ ಮಹರ್ಷಿ ಯಾಜ್ಞವಲ್ಕ್ಯನ ಉಪದೇಶವಿದೆ.

ಉಪನಿಷತ್ತು ಮಹಿಳೆಯರಿಗೆ ಉತ್ತಮವಾದ ಗೌರವಯುತವಾದ ಸ್ಥಾನವನ್ನು ಕೊಟ್ಟಿದೆ. ವಿದ್ವಾಂಸರೂ ಜ್ಞಾನಿಗಳೂ ಆದ ಅನೇಕ ಮಹಿಳೆಯರ ಹೆಸರುಗಳನ್ನು ಉಪನಿಷತ್ತುಗಳಲ್ಲಿ ಓದುತ್ತೇವೆ. ಉಪನಿಷತ್ತಿನಲ್ಲಿ ಬರುವ ಮಹಿಳೆಯರಲ್ಲಿ ಗಾರ್ಗಿ, ಮೈತ್ರೇಯಿ ಪ್ರಸಿದ್ಧರು. . ಬೃಹದಾರಣ್ಯಕದಲ್ಲಿ ಚಿತ್ರಿತವಾಗಿರುವ ಒಂದು ಸನ್ನಿವೇಶ ಹೀಗಿದೆ: ಜನಕನೆಂಬ ಮಹಾರಾಜ ಒಂದು ಯಜ್ಞವನ್ನು ಮಾಡುತ್ತಾನೆ. ಒಂದು ಸಾವಿರ ಗೋವುಗಳಲ್ಲಿ ಪ್ರತಿ ಗೋವಿನ ಕೊಂಬುಗಳಿಗೆ ಹತ್ತು ಚಿನ್ನದ ಪಾದಗಳನ್ನು ಕಟ್ಟಿಸುತ್ತಾನೆ. ಬ್ರಹ್ಮನನ್ನು ಅರಿತವನು ಗೋವುಗಳನ್ನು ಹೊಡೆದುಕೊಂಡು ಹೋಗಲಿ ಎನ್ನುತ್ತಾನೆ. ಯಾಜ್ಞವಲ್ಕ್ಯನು ತನ್ನ ಶಿಷ್ಯನಿಗೆ ಗೋವುಗಳನ್ನು ಹೊಡೆದುಕೊಂಡು ಹೋಗಲು ಸೂಚಿಸುತ್ತಾನೆ. ಕೋಪಗೊಂಡ ಹಲವರು ವಿದ್ವಾಂಸರು ಅವನೊಡನೆ ವಾದಮಾಡಿ ಸೋತಾಗ, ಗಾರ್ಗಿ ವಾಚಕ್ನವಿ ಎನ್ನುವ ಬ್ರಹ್ಮವಾದಿನಿ ಅವನೊಂದಿಗೆ ಅದ್ಭುತವಾಗಿ ವಾದ ಹೂಡುತ್ತಾಳೆ.

ಉಪನಿಷತ್ತಿನಲ್ಲಿ ಗಹನವಾದ ತತ್ತ್ವಗಳನ್ನೂ ಸತ್ಯಗಳನ್ನೂ ಕೆಲವು ದೃಷ್ಟಾಂತಗಳ ಮೂಲಕ ಸ್ಪಷ್ಟಪಡಿಸಿದ್ದಾರೆ. ವಿರೋಚನ, ಇಂದ್ರ ಇಬ್ಬರೂ ಆತ್ಮನನ್ನು ಬಯಸುತ್ತ ಪ್ರಜಾಪತಿಯ ಬಳಿಗೆ ಹೋದಾಗ, ಅವನು ನೀರಿನ ಪಾತ್ರೆಯಲ್ಲಿ ಅವರ ಪ್ರತಿಬಿಂಬಗಳನ್ನು ತೋರಿಸುತ್ತಾನೆ.

ಉಪನಿಷತ್ತುಗಳನ್ನು ಓದಿದಾಗ ಪ್ರಾಚೀನ ಭಾರತದಲ್ಲಿ ವಿದ್ಯೆ, ಸಂಸ್ಕೃತಿ ಎಂಥ ಉನ್ನತ ಮಟ್ಟವನ್ನು ಮುಟ್ಟಿದ್ದುವು ಎಂಬುದನ್ನು ಕಾಣುತ್ತೇವೆ.

ಜೀವನದಲ್ಲಿ ಧೀರರಾಗಿ, ಸ್ವತಂತ್ರ ವಿಚಾರಿಗಳಾಗಿ ಬದುಕುವುದನ್ನು ಉಪನಿಷತ್ತುಗಳು ಕಲಿಸುತ್ತವೆ.

ಹತ್ತೊಂಬತ್ತನೆಯ ಶತಮಾನದಲ್ಲಿ ಉಪನಿಷತ್ತುಗಳು ಯೂರೋಪಿನ ಭಾಷೆಗಳಿಗೆ ಭಾಷಾಂತರವಾದುವು. ಯೂರೋಪಿನ ಹಲವು ವಿಚಾರವಂತರ ಮೇಲೆ ಗಾಢವಾದ ಪ್ರಭಾವ ಬೀರಿದುವು.

ನೋಡಿ : ಬ್ರಹ್ಮ ; ಭಗವದ್ಗೀತೆ ; ವೇದಗಳು

## ಉಪಾಹಾರಗೃಹ, ವಸತಿಗೃಹ

ತಿಂಡಿ-ಪಾನೀಯಗಳನ್ನು ಒದಗಿಸುವ ಸಾರ್ವಜನಿಕ ಸ್ಥಳಗಳನ್ನು 'ಉಪಾಹಾರಗೃಹ' ಎನ್ನುತ್ತೇವೆ. ಇವುಗಳಿಗೆ ಹೋಟೆಲ್, ರೆಸ್ಟರ ಎಂಬ ಹೆಸರುಗಳೂ ಬಳಕೆಯಲ್ಲಿವೆ.

ಕೆಲವು ಉಪಾಹಾರಗೃಹಗಳಲ್ಲಿ ಸಸ್ಯಾಹಾರವನ್ನು ಮಾತ್ರ ಕೊಡುತ್ತಾರೆ. ಕೆಲವು ಉಪಾಹಾರಗೃಹಗಳಲ್ಲಿ ಸಸ್ಯಾಹಾರ, ಮಾಂಸಾಹಾರ ಎರಡೂ ದೊರೆಯುತ್ತವೆ.

ಸ್ವಯಂಸೇವಾ ಪದ್ಧತಿ ಕೆಲವು ಉಪಾಹಾರಗೃಹಗಳಲ್ಲಿ ಬಳಕೆಯಲ್ಲಿದೆ. ಇಂಥ ಸ್ಥಳಗಳಲ್ಲಿ ಗಿರಾಕಿ ಮೊದಲೇ ಹಣಕೊಟ್ಟು, ತಾನೇ ತಿಂಡಿ ತೆಗೆದುಕೊಳ್ಳಬೇಕು ; ಹೆಚ್ಚಿನ ಸ್ಥಳಗಳಲ್ಲಿ ಸರಬರಾಜು ಹುಡುಗರಿರುತ್ತಾರೆ.

ಸಾಮಾನ್ಯವಾಗಿ ಉಪಾಹಾರಗೃಹಗಳನ್ನು ಕಟ್ಟುವುದು ಇತರ ಗೃಹಗಳಂತೆ ನೆಲದ ಮೇಲೆಯೇ. ಆದರೆ ಆಫ್ರಿಕದ ನೈರೋಬಿಯಿಂದ 161 ಕಿಲೊ ಮೀಟರು ಉತ್ತರಕ್ಕಿರುವ ಅಬರ್ಡೇಯರ್ ಪರ್ವತದ ಕಾಡಿನಲ್ಲಿ ಒಂದು ವಿಚಿತ್ರ ಉಪಾಹಾರಗೃಹವಿದೆ. ಒಂದು ವಿಶಾಲವಾದ ಮರದ ಕೊಂಬೆಗಳ ಮೇಲೆ ನೆಲದಿಂದ 3.7 ಮೀಟರುಗಳ ಎತ್ತರದಲ್ಲಿ ಇದನ್ನು ಕಟ್ಟಲಾಗಿದೆ. ಇದರ ಹೆಸರು 'ಟ್ರೀ ಟಾಪ್ಸ್'. ಹನ್ನೆರಡು ಸುಸಜ್ಜಿತ ಕೋಣೆಗಳನ್ನುಳ್ಳ ಈ ಉಪಾಹಾರಗೃಹ ಎಲ್ಲ ಆಧುನಿಕ ಸೌಲಭ್ಯಗಳನ್ನೂ ಒಳಗೊಂಡಿದೆ. ಜೋರಾಗಿ ಗಾಳಿ ಬೀಸಿದಾಗ ತೂಗುಯ್ಯಾಲೆಯಾಡುತ್ತದೆ.

ತಿಂಡಿ ಪಾನೀಯಗಳನ್ನು ಒದಗಿಸುವ ಸ್ಥಳ-ಉಪಾಹಾರಗೃಹ



ಇಡೀ ಉಪಾಹಾರಗೃಹ ಬಿರುಗಾಳಿ ಬೀಸಿದರೆ ಉರುಳದಿರಲೆಂದು ಅಡಿಯಿಂದ ಕೆಲವು ದೇವದಾರು ವೃಕ್ಷದ ತೊಲೆಗಳನ್ನು ಒತ್ತುಕೊಟ್ಟಿದ್ದಾರೆ. ಮರದ ಬಳಿ ದೊಡ್ಡದಾದ ಕೊಳವೊಂದಿದೆ. ಹದಿನೈದು ಮೀಟರು ದೂರದಲ್ಲಿರುವ ಮನುಷ್ಯರ ವಾಸನೆ ಪ್ರಾಣಿಗಳ ಮೂಗನ್ನು ತಲಪುವುದಿಲ್ಲವಾದ್ದರಿಂದ ಆ ಕೊಳದಲ್ಲಿ ನೀರುಕುಡಿಯಲು ಅಡವಿಯ ಮೃಗಗಳೆಲ್ಲ ಬರುತ್ತವೆ. ಹೋಟೆಲಿನ ಜನರು ಮಾಳಿಗೆ ತೋಟದಲ್ಲಿ ಕಂಬಳಿ ಹೊದೆದು ಕೂತು ಈ ದೃಶ್ಯವನ್ನು ವೀಕ್ಷಿಸುತ್ತಾರೆ. 'ಟ್ರೀ ಟಾಪ್ಸ್' ವಿಶ್ವದ ಅದ್ಭುತ ಉಪಾಹಾರ ಗೃಹ. ಇಂಥ ಉಪಹಾರಗೃಹವೊಂದನ್ನು ರಚಿಸಬೇಕೆಂಬ ವಿಚಾರ ಮೊಟ್ಟ ಮೊದಲು ಹೊಳೆದದ್ದು ಒಬ್ಬ ಮಹಿಳೆಗೆ.

ಇತ್ತೀಚೆಗೆ ಕೆಲವು ನಗರಗಳಲ್ಲಿ ಸಂಚಾರಿ ಉಪಾಹಾರಗೃಹಗಳೂ ಆರಂಭವಾಗಿವೆ.

ಉಪಾಹಾರಗೃಹಗಳಿಗೆ ಅನೇಕ ರೀತಿಯ ಜನರು ಬಂದು ಹೋಗುವುದರಿಂದ ಸಾಂಕ್ರಾಮಿಕ ರೋಗಗಳು ಹರಡುವ ಸಂಭವವಿರುತ್ತದೆ. ಆದ್ದರಿಂದ ಉಪಾಹಾರಗೃಹಗಳಲ್ಲಿ ಶುಚಿತ್ವಕ್ಕೆ ಹೆಚ್ಚಿನ ಮಹತ್ವ.

ಭಾರತದಲ್ಲಿ ಇತ್ತೀಚೆಗೆ ಉಪಾಹಾರ ಗೃಹಗಳಲ್ಲಿ ತಿಂಡಿತಿನಿಸುಗಳ ತಯಾರಿಕೆಗೆ ಯಂತ್ರಗಳನ್ನು ಬಳಸುತ್ತಾರೆ. ಈ ಯಾಂತ್ರೀಕರಣದಿಂದ ಪದಾರ್ಥಗಳು ಹೆಚ್ಚು ಶುಚಿಯಾಗಿರುತ್ತವೆ.

ಇಂದು ಉಪಾಹಾರಗೃಹಗಳನ್ನು ನಡೆಸುವುದು ದೊಡ್ಡದೊಂದು ಉದ್ಯಮವಾಗಿ ಬೆಳೆಯುತ್ತಿದೆ. ಸಾವಿರಾರು ಜನರಿಗೆ ಜೀವನೋಪಾಯ ಒದಗಿಸಿದೆ.

ಹಲವು ಉಪಾಹಾರಗೃಹಗಳು ತಮ್ಮಲ್ಲಿಗೆ ಬಂದ ಗಿರಾಕಿಗಳಿಗೆ ಉಪಾಹಾರ ಒದಗಿಸುವುದಲ್ಲದೆ, ಹೊರಗೆ ನಡೆಯುವ ಸಂತೋಷಕೂಟಗಳಿಗೆ ಉಪಾಹಾರ ವ್ಯವಸ್ಥೆ ಮಾಡುತ್ತವೆ. ತಮ್ಮಲ್ಲಿಯೇ ಸಂತೋಷಕೂಟಗಳಿಗೆ ಏರ್ಪಾಟು ಮಾಡಿಕೊಡುತ್ತವೆ. ಉಪಾಹಾರಗೃಹದಲ್ಲಿನ ಸೇವೆ ಒಂದು ಕಲೆ. ಕೇಟರಿಂಗ್ ಟೆಕ್ನಾಲಜಿ ಇನ್‌ಸ್ಟಿಟ್ಯೂಟ್ ಎಂಬ ಸಂಸ್ಥೆ ಇದರಲ್ಲಿ ಶಿಕ್ಷಣ ನೀಡುತ್ತದೆ. ಬೆಂಗಳೂರಿನ ಜಯಚಾಮರಾಜೇಂದ್ರ ವೃತ್ತಿ ಶಿಕ್ಷಣ ಶಾಲೆಯಲ್ಲಿ ಇದಕ್ಕಾಗಿ ವಿಶೇಷ ಕ್ರಮವಿದೆ. ಉಪಾಹಾರ ಗೃಹಗಳ ಅಂತರರಾಷ್ಟ್ರೀಯ ಸಂಸ್ಥೆಗಳಿವೆ. 1869ರಲ್ಲಿ ಇಂಟರ್‌ನ್ಯಾಷನಲ್ ಹೋಟೆಲ್ ಮೆನ್ಸ್ ಅಸೋಸಿಯೇಷನ್, 1921ನಲ್ಲಿ ಇಂಟರ್‌ನ್ಯಾಷನಲ್ ಹೋಟೆಲ್ ಅಲಯೆನ್ಸ್ ಸ್ಥಾಪಿತವಾದುವು. ಎರಡೂ ಸೇರಿ 1946ರಲ್ಲಿ ಅಂತರರಾಷ್ಟ್ರೀಯ ಉಪಾಹಾರ ಸಂಸ್ಥೆ ಪ್ರಾರಂಭವಾಯಿತು. ದೆಹಲಿಯಲ್ಲಿ ಇದರ ಸಮ್ಮೇಳನ ನಡೆದಾಗ, ಭಾರತದ ಆಗಿನ ರಾಷ್ಟ್ರಪತಿ ರಾಧಾಕೃಷ್ಣನ್ ಮುಖ್ಯ ಅತಿಥಿಯಾಗಿದ್ದರು.

ಉಪಾಹಾರಗೃಹಗಳು ಒಂದು ಊರಿನಲ್ಲಿ ವಾಸಿಸುವವರ ಮತ್ತು ಬೇರೆ ಊರಿನಿಂದ ಕೆಲ ಗಂಟೆಗಳ ಮಟ್ಟಿಗೆ ಬರುವವರ ಆಹಾರ–ಉಪಾಹಾರಗಳ ಅಗತ್ಯಗಳನ್ನು ಪೂರೈಸುತ್ತವೆ. ವಸತಿಯ ಅಗತ್ಯವಾದವರ ಸಮಸ್ಯೆ ಅಷ್ಟಕ್ಕೇ ಬಗೆಹರಿದಂತಾಗಲಿಲ್ಲ. ಇದಕ್ಕಾಗಿ ವಸತಿಗೃಹ ಬೇಕು.

ಶಿಕ್ಷಣ ಪಡೆಯುತ್ತಿರುವ ಸಾವಿರಾರು ವಿದ್ಯಾರ್ಥಿಗಳಲ್ಲಿ ಎಷ್ಟೋ ಮಂದಿ ಉಚ್ಚ ಶಿಕ್ಷಣ ಪಡೆಯಲು ಬಯಸುತ್ತಾರೆ. ಹೆಚ್ಚು ಶಿಕ್ಷಣಕ್ಕಾಗಿ ಪರಸ್ಥಳಕ್ಕೆ ಹೋಗಬೇಕಾಗುತ್ತದೆ. ಹೀಗೆ ಪರಸ್ಥಳದಿಂದ ಬಂದಿರುವ ವಿದ್ಯಾರ್ಥಿಗಳಿಗಾಗಿ ಊಟ ಮತ್ತು ವಸತಿಯ ಅನುಕೂಲವನ್ನು ಅನೇಕ ವಿದ್ಯಾಸಂಸ್ಥೆಗಳು, ಸಂಘಗಳು ಮಾಡಿಕೊಡುತ್ತವೆ. ಇಂಥ ವಸತಿಗೃಹಗಳಿಗೆ ವಿದ್ಯಾರ್ಥಿನಿಲಯ ಎನ್ನುತ್ತೇವೆ. ಇವುಗಳಲ್ಲಿ ಕೆಲವು ಹಣವನ್ನು ತೆಗೆದುಕೊಳ್ಳದೆಯೇ ವಿದ್ಯಾರ್ಥಿಗಳಿಗೆ ಆಶ್ರಯ ನೀಡುತ್ತವೆ.

ಎಷ್ಟೋ ಸ್ಥಳಗಳಲ್ಲಿ ಧರ್ಮಶಾಲೆಗಳುಂಟು. ಇವುಗಳನ್ನು ಸರಕಾರವಾಗಲೀ ಪುರಸಭೆಗಳಾಗಲೀ ಕಟ್ಟಿಸುತ್ತವೆ. ಇವು ಬಡ ಪ್ರಯಾಣಿಕರಿಗೆ ನೆರಳು ನೀಡುವ ಸ್ಥಳಗಳು. ಧರ್ಮಶಾಲೆಗಳಲ್ಲಿ ಉಳಿದುಕೊಂಡುದಕ್ಕಾಗಿ ಯಾವ ಹಣವನ್ನೂ ಕೊಡಬೇಕಾಗಿಲ್ಲ.

ಧರ್ಮಶಾಲೆಗಳಂತೆ ಛತ್ರಗಳೂ ಇವೆ. ಜನತೆಗೆ ನೆರವಾಗಬೇಕೆಂಬ ಸದ್ಬುದ್ಧಿಯಿಂದ ಇಂಥ ಛತ್ರಗಳನ್ನು ಶ್ರೀಮಂತರು ಕಟ್ಟಿಸುತ್ತಾರೆ. ಕ್ಷೇತ್ರ ಸ್ಥಳಗಳಲ್ಲಿಯೂ, ಕೆಲ ದೊಡ್ಡ ನಗರಗಳಲ್ಲಿಯೂ ಛತ್ರಗಳಿವೆ.

ಮಾನವ ಮೊದಲಿನಿಂದಲೂ ಸ್ಥಳದಿಂದ ಸ್ಥಳಕ್ಕೆ ಸಂಚರಿಸುತ್ತಲೇ ಇದ್ದಾನೆ. ಹೀಗೆ ಅವನು ಸಂಚಾರ ಕೈಗೊಂಡಾಗ ದಾರಿಯಲ್ಲಿ ಅವನಿಗೆ ಆಹಾರದ ಅವಶ್ಯತೆ ಉಂಟಾಗುತ್ತದೆ ಮತ್ತು ವಿಶ್ರಮಿಸಲು ಸ್ಥಳ ಬೇಕಾಗುತ್ತದೆ. ಈ ಕೊರತೆಗಳನ್ನು ನೀಗುವುದಕ್ಕಾಗಿ ಅನೇಕ ಹೆದ್ದಾರಿಗಳಲ್ಲಿ ಆಹಾರ ಮತ್ತು ಆಶ್ರಯ ಒದಗಿಸುವ ಗೃಹಗಳಿರುತ್ತವೆ. ಇವು ಊಟ ಮತ್ತು ವಸತಿಗೃಹಗಳೆಂದು ಹೆಸರಾಗಿವೆ.

ಇಂದು ಹಲವು ನಗರಗಳಲ್ಲಿ ಅನೇಕ ಕಾರಖಾನೆಗಳು ಸ್ಥಾಪಿಸಲ್ಪಟ್ಟಿವೆ. ಈ ಕಾರಖಾನೆಗಳಲ್ಲಿ ಪರಸ್ಥಳದಿಂದ ಬಂದ ಎಷ್ಟೋ ಮಂದಿ ಕೆಲಸಗಾರರಿರುತ್ತಾರೆ. ಕೆಲವು ಸಂಘ ಸಂಸ್ಥೆಗಳು ನಡೆಸುವ ಪುರುಷರ ಅಥವಾ ಸ್ತ್ರೀಯರ ನಿಲಯಗಳನ್ನು ಬಿಟ್ಟರೆ ವಸತಿಗೃಹಗಳೇ ಅವರಲ್ಲನೇಕರಿಗೆ ತವರುಮನೆ. ಇಲ್ಲಿ ಹಣ ಕೊಡಬೇಕು. ಇವು ನಾನಾ ಮಟ್ಟಗಳಲ್ಲಿರುತ್ತವೆ. ಜನರು ತಮ್ಮ ತಮ್ಮ ಆರ್ಥಿಕಶಕ್ತಿಗನುಸಾರವಾಗಿ ವಸತಿಗೃಹಗಳನ್ನು ಆರಿಸಿಕೊಳ್ಳಬಹುದು.

ಆಧುನಿಕ ನಗರಗಳಲ್ಲಿ ಇಂಥ ಕೆಲವು ಗೃಹಗಳಲ್ಲಿ ಮನೋರಂಜನೆಗಾಗಿ ನೃತ್ಯ ಇತ್ಯಾದಿ ಕಾರ್ಯಕ್ರಮಗಳಿರುತ್ತವೆ.

ವಸತಿಗೃಹಗಳಲ್ಲಿ ಪ್ರಯಾಣಿಕರಿಗೆ ಅನುಕೂಲ ಒದಗಿಸಿ ಅದರಿಂದ ಲಾಭ ಮಾಡಿಕೊಳ್ಳುವುದು ದೊಡ್ಡ ಉದ್ಯಮವೇ ಆಗಿದೆ. ಎಲ್ಲ ರಾಷ್ಟ್ರಗಳಲ್ಲೂ ಗಿರಿಧಾಮಗಳಲ್ಲಿ ಹಾಗೂ ಪರ್ವತಶ್ರೇಣಿಗಳಲ್ಲಿ ಊಟ–ವಸತಿಗೃಹಗಳನ್ನು ಕಾಣಬಹುದು.

ಅಮೆರಿಕದಲ್ಲಿ ಈಚೆಗೆ ಮೋಟೆಲ್‌ಗಳು ಬೆಳೆಯುತ್ತಿವೆ. ಸಂಸಾರದೊಂದಿಗೆ ವಾಹನಗಳಲ್ಲಿ ಪ್ರಯಾಣ ಮಾಡುವವರು ತಮ್ಮ ವಾಹನಗಳನ್ನು ಹೆದ್ದಾರಿಗಳಲ್ಲಿ ನಿಲ್ಲಿಸಿ ವಿಶ್ರಾಂತಿ ಪಡೆಯುವ ಸೌಕರ್ಯವಿರುತ್ತದೆ. ಇವು ಸಾಮಾನ್ಯವಾಗಿ ದಿನದ ಇಪ್ಪತ್ತನಾಲ್ಕು ಗಂಟೆಗಳೂ ಕೆಲಸ ಮಾಡುತ್ತವೆ.

ಬರಬರುತ್ತ ವಸತಿಗೃಹಗಳ ಮಹತ್ವ ಹೆಚ್ಚುತ್ತಿದೆ. ಊರಿಂದ ಊರಿಗೆ ಕೆಲಸಕ್ಕಾಗಿಯೂ ವಿಹಾರಾರ್ಥವಾಗಿಯೂ ಪ್ರಯಾಣ ಮಾಡುವವರ ಸಂಖ್ಯೆ ಏರುತ್ತಿದೆ. ಬೇರೆ ದೇಶದವರನ್ನು ಆಕರ್ಷಿಸುವುದು ವಿದೇಶೀ ವಿನಿಮಯ ಗಳಿಸಲು ದಾರಿ. ಭಾರತದಲ್ಲಿ ವಿದೇಶೀ ವಿನಿಮಯ ಗಳಿಸುವ ಮೂಲಗಳಲ್ಲಿ ಹೋಟೆಲ್ ಉದ್ಯಮ ಐದನೆಯದು. ಆದರೆ ಪ್ರವಾಸಿಗರಿಗೆ ಒಳ್ಳೆಯ ವಸತಿಗೃಹಗಳು ಬೇಕು. ಹಲವು ದೇಶಗಳಲ್ಲಿ ವಸತಿಗೃಹ ಮತ್ತು ಉಪಾಹಾರಗೃಹಗಳ ಆಡಳಿತವರ್ಗಕ್ಕೆ ಮತ್ತು ಸಿಬ್ಬಂದಿಗೆ ಶಿಕ್ಷಣಕೊಡಲು ಏರ್ಪಾಟುಮಾಡಿದ್ದಾರೆ. ಅಮೆರಿಕ ಸಂಯುಕ್ತ ಸಂಸ್ಥಾನದ ಕಾರ್ನೆಲ್ ವಿಶ್ವವಿದ್ಯಾನಿಲಯದಲ್ಲಿ ಅಮೆರಿಕನ್ ಹೋಟೆಲ್ ಸಂಘದವರ ಹಣ ಸಹಾಯದಿಂದ ಹೋಟೆಲ್ ಆಡಳಿತವನ್ನು ಕಲಿಸುವ ವಿದ್ಯಾಸಂಸ್ಥೆ ಇದೆ. ಇಲ್ಲಿ ಪ್ರಪಂಚದ ಬೇರೆಬೇರೆ ಭಾಷೆಗಳಲ್ಲಿ ಕಳೆದ ನಾಲ್ಕು ನೂರು ವರ್ಷಗಳಲ್ಲಿ ಬರೆದ ಪಾಕಶಾಸ್ತ್ರದ 1,600 ಪುಸ್ತಕಗಳ ಭಂಡಾರವುಂಟು.

ನವದೆಹಲಿಯ ಚಾಣಕ್ಯಪುರಿಯಲ್ಲಿ ಭಾರತ ಸರಕಾರ ಅಶೋಕ ಹೋಟೆಲ್ ಎಂಬ ವಸತಿಗೃಹವನ್ನು ನಡೆಸುತ್ತಿದೆ. ಪ್ರತಿ ಕೊಠಡಿಗೆ ಸೇರಿದಂತೆ ರೆಫ್ರಿಜರೇಟರ್, ಟೆಲಿಫೋನ್‌ಗಳ ಸೌಕರ್ಯ ಉಂಟು. ಈ ವಸತಿಗೃಹದಲ್ಲಿ 491 ಕೊಠಡಿಗಳಿವೆ.

ಅಮೆರಿಕ ಸಂಯುಕ್ತ ಸಂಸ್ಥಾನದಲ್ಲಿ ವಸತಿಗೃಹಗಳು ಮತ್ತು ಉಪಾಹಾರ ಗೃಹಗಳು ವರ್ಷಕ್ಕೆ ಎರಡೂವರೆ ಲಕ್ಷ ಕೋಟಿ ಡಾಲರುಗಳಷ್ಟು (ಸುಮಾರು ಹದಿನೆಂಟು ಲಕ್ಷ ಕೋಟಿ ರೂಪಾಯಿಗಳು) ವ್ಯವಹಾರ ನಡೆಸುತ್ತವೆ ಎಂದು ಅಂದಾಜು ಮಾಡಿದ್ದಾರೆ.

ಕ್ರಿ. ಶ. ಒಂದನೆಯ ಶತಮಾನದಲ್ಲಿಯೇ ಪಾಂಪೆಯಲ್ಲಿ (ಇಟಲಿಯ ಪ್ರಾಚೀನ ನಗರ) ವಸತಿಗೃಹ (ಹೋಟೆಲ್)ಗಳಿದ್ದುವೆಂದು ಅಲ್ಲಿನ ಅವಶೇಷಗಳಿಂದ ತೋರುತ್ತದೆ. ನಮಗೆ ಹೆಸರು ತಿಳಿದಿರುವ ಮೊದಲನೆಯ ವಸತಿಗೃಹ ಆಲ್ಪ್ಸ್ ಬೆಟ್ಟಗಳಲ್ಲಿ 962ರಲ್ಲಿ ಸ್ಥಾಪಿತವಾದ ಸೇಂಟ್ ಬರ್ನಾರ್ಡ್ಸ್ ಇನ್. ಈಚೆಗೆ ಎಲ್ಲ ದೇಶಗಳಲ್ಲೂ ವಸತಿಗೃಹಗಳು ಬೆಳೆಯುತ್ತಿವೆ. ಪ್ರಪಂಚದಲ್ಲೆಲ್ಲ ಅತಿ ದೊಡ್ಡ ವಸತಿಗೃಹ ಷಿಕಾಗೊ ನಗರದ ಕಾನ್ರಾಡ್ ಹಿಲ್ಟನ್ ಎನ್ನುವ ಹೋಟೆಲ್. ಇದರಲ್ಲಿ ಮೂರು ಸಾವಿರ ಕೊಠಡಿಗಳಿವೆ.

## ಉಪ್ಪು

ಉಪ್ಪಿನ ಸತ್ಯಾಗ್ರಹ.

1931ರಲ್ಲಿ ಗಾಂಧೀಜಿ 124 ಕಿಲೊಮೀಟರು ನಡೆದು ದಂಡಿ ಎನ್ನುವ ಸ್ಥಳವನ್ನು ತಲಪಿ, ಅಲ್ಲಿ ಸಮುದ್ರದ ನೀರಿನಿಂದ ಉಪ್ಪನ್ನು ತಯಾರು ಮಾಡಿದರು. ಅಪ್ಪಣೆ ಇಲ್ಲದೆ ಉಪ್ಪನ್ನು ತಯಾರು ಮಾಡಲಾಗದೆಂಬ ಕಾನೂನನ್ನು ಮುರಿದರು.

ಬಡವನಿಗೂ ಅಗತ್ಯವಾದ ಉಪ್ಪಿನ ಮೇಲೆ ತೆರಿಗೆ ಹೇರಿ ಬ್ರಿಟಿಷ್ ಸರಕಾರ ಹಣ ಮಾಡುವುದನ್ನು ಹೀಗೆ ಅವರು ವಿರೋಧಿಸಿದರು.

ಜಗತ್ತಿನ ಕೆಲ ಪ್ರದೇಶಗಳಲ್ಲಿ ಉಪ್ಪನ್ನು ಕಾಣದ ಜನರಿದ್ದರು ಎಂದರೆ ನಮಗೆ ಆಶ್ಚರ್ಯವಾಗಬಹುದು. ಅಮೆರಿಕದ ಕೆಲ ಭಾಗಗಳಿಗೆ ಯೂರೋಪಿನವರು ಮೊದಲ ಬಾರಿಗೆ ಉಪ್ಪು ಕೊಂಡೊಯ್ದರು. ಭಾರತದ ನೀಲಗಿರಿಯ ತೋಡ ಆದಿವಾಸಿಗಳು, ವಿದೇಶೀಯರು ಉಪ್ಪನ್ನು ತಂದುಕೊಟ್ಟುದಕ್ಕೆ ಮುಂಚೆ ಅದನ್ನು ಬಳಸುತ್ತಲೇ ಇರಲಿಲ್ಲ. ಇಂದಿಗೂ ಮಧ್ಯ ಆಫ್ರಿಕದ ಕೆಲ ಪ್ರದೇಶಗಳಲ್ಲಿ ಉಪ್ಪು ಶ್ರೀಮಂತರು ಬಳಸುವ ಭೋಗವಸ್ತು. ಹಸಿಯ ಮಾಂಸವನ್ನು ಹಿಂದಿನ ಕಾಲದವರು ಬಳಸುತ್ತಿದ್ದಾಗ, ಉಪ್ಪಿನ ಕೊರತೆ ಕಾಣುತ್ತಿರಲಿಲ್ಲ. ಹಾಲು ಮತ್ತು ಮಾಂಸವನ್ನು ಬಳಸುವಾಗಲೂ ಕಾಣುವುದಿಲ್ಲ. ಬೇಯಿಸುವುದರಿಂದ ಉಪ್ಪಿನ ಅಂಶ ನಷ್ಟವಾಗತೊಡಗಿದಾಗ ಉಪ್ಪು ವಿಶೇಷವಾಗಿ ಬಳಕೆಗೆ ಬಂತು.

ಹಲವು ನದಿಗಳು ಬಂದು ಸಾಗರವನ್ನು ಸೇರುತ್ತವೆ. ಇವು ಅನೇಕ ರೀತಿಯ ಕರಗಿದ ಲವಣಗಳನ್ನು ಸಾಗರಕ್ಕೆ ತರುತ್ತವೆ. ಸಾಗರದ ಈ ನೀರು ಸಾವಿರಾರು ವರ್ಷಗಳಿಂದ ಆವಿಯಾಗಿ, ಉಪ್ಪಿನ ಅಂಶ ಅಧಿಕವಾಗಿ, ಸಮುದ್ರದ ನೀರಿನಲ್ಲಿ ಉಪ್ಪು ಕರಗಿರುತ್ತದೆ. ಬಂಡೆಗಳ ನಡುವೆ ಉಪ್ಪಿನ ಸಂಗ್ರಹಗಳು ಕಂಡುಬಂದಿರುವುದೂ ಉಂಟು. ಇದೇ ಕಲ್ಲುಪ್ಪು. ಭಾರತದ ಪಂಜಾಬ್ ಪ್ರಾಂತ್ಯದಲ್ಲೂ, ಇಂಗ್ಲೆಂಡಿನ ಚೆಷೈರ್ ಪ್ರದೇಶ ಮುಂತಾದ ಕಡೆಗಳಲ್ಲೂ ಕಲ್ಲುಪ್ಪಿನ ಸಂಗ್ರಹಗಳಿವೆ.

ಉಪ್ಪನ್ನು ಹಣವಾಗಿ ಹಿಂದೆ ಅನೇಕ ದೇಶಗಳಲ್ಲಿ ಬಳಸಲಾಗುತ್ತಿತ್ತು. ಬೇರೆ ಬೇರೆ ಬೆಲೆ ಬಾಳುವ ಉಪ್ಪಿನ ಗಟ್ಟಿಗಳನ್ನು ಕೊಟ್ಟು ಇಂದಿಗೂ ಬೋರ್ನಿಯೋದಲ್ಲಿ ವಸ್ತುಗಳನ್ನು ಕೊಳ್ಳಬಹುದು. ಸಮುದ್ರ ತೀರಕ್ಕೆ ದೂರವಾದ ಆಫ್ರಿಕದ ಒಳಪ್ರದೇಶಗಳ ಕೂಲಿಗಾರರಿಗೆ ಉಪ್ಪಿನ ರೂಪದಲ್ಲಿ ವೇತನ ಕೊಡುತ್ತಾರೆ. ಉಪ್ಪಿನ ಗಟ್ಟಿಗಳು ಹಿಂದೆ ಟಿಬೆಟ್ಟಿನಲ್ಲಿ ಚಲಾವಣೆಯಲ್ಲಿದ್ದುವು. ಅದರ ಮೌಲ್ಯವನ್ನು ನಮೂದಿಸಿ ಮುದ್ರೆ ಒತ್ತಿದ ಉದ್ದನೆಯ ಗಟ್ಟಿಗಳನ್ನು ವಿನಿಮಯ ಸಾಧನವಾಗಿ ಇಥಿಯೋಪಿಯದಲ್ಲಿ ಇತ್ತೀಚಿನವರೆಗೂ ಬಳಸಲಾಗುತ್ತಿತ್ತು. ಪ್ರಾಚೀನ ರೋಮಿನಲ್ಲಿ ಸೈನಿಕರಿಗೂ ಅಧಿಕಾರಿಗಳಿಗೂ ಉಪ್ಪಿನ ರೂಪದಲ್ಲಿ ಭತ್ಯೆ ನೀಡಲಾಗುತ್ತಿತ್ತು.

ಮೃತ ಸಮುದ್ರದ ನೀರಿನಲ್ಲಿ ಪ್ರಪಂಚದಲ್ಲೇ ಅತ್ಯಂತ ಹೆಚ್ಚಿಗೆ ಉಪ್ಪು ಶೇಖರವಾಗಿದೆ. ಈ ಸಮುದ್ರದ 634 ಚ. ಕಿ. ಮೀ. ವಿಸ್ತೀರ್ಣದಲ್ಲಿ ನೀರಿನಲ್ಲಿ 118 ಕೋಟಿ ಮೆಟ್ರಿಕ್ ಟನ್ ಉಪ್ಪು ಸಂಗ್ರಹವಾಗಿದೆ. ಶಾಖಕ್ಕೆ ನೀರು ಆವಿಯಾಗಿ ಅದರಲ್ಲಿ ಕರಗಿರುವ ಲವಣ ಉಳಿಯುವುದರಿಂದ ಪ್ರತಿ ವರ್ಷ 864 ಸಾವಿರ ಮೆಟ್ರಿಕ್ ಟನ್ ಉಪ್ಪು ಶೇಖರವಾಗುತ್ತಿದೆ.

ಅಮೆರಿಕದ ಸಂಯುಕ್ತ ಸಂಸ್ಥಾನದ ಉಪ್ಪಿನ ಸರೋವರದಲ್ಲಿ ಮೃತ ಸಮುದ್ರದಲ್ಲಿ ಶೇಖರವಾಗುತ್ತಿರುವ ಪ್ರಮಾಣದಲ್ಲಿ ಉಪ್ಪು ಶೇಖರವಾಗುತ್ತಿಲ್ಲವಾದರೂ ಈ ಸರೋವರಕ್ಕೆ ಹರಿಯುವ ಮೂರು ದೊಡ್ಡ ನದಿಗಳೂ ಲವಣಾಂಶವನ್ನು ಸದಾ ತರುತ್ತವೆ. ಮೃತಸಮುದ್ರ ಮತ್ತು ಉಪ್ಪಿನ ಸರೋವರಗಳ ನೀರಿಗೆ ನಾಲ್ಕೂ ಕಡೆ ಭೂಮಿ ಇರುವುದರಿಂದ ನೀರು ಹರಡಿಕೊಳ್ಳುವುದಿಲ್ಲ ; ಹೀಗಾಗಿ ಸತತವಾಗಿ ಉಪ್ಪು ಶೇಖರವಾಗುತ್ತಿರುತ್ತದೆ.

ವೈಜ್ಞಾನಿಕವಾಗಿ ಉಪ್ಪು ಸೋಡಿಯಂ ಕ್ಲೋರೈಡ್ ಎಂಬ ಲವಣ. ಸೋಡಿಯಂ ಕ್ಲೋರೈಡನ್ನು ಸಾಮಾನ್ಯವಾಗಿ ಅಡುಗೆಯ ಉಪ್ಪು ಎಂದು ಕರೆಯುತ್ತಾರೆ.

## ಉಯಿಲು

ಪಂಡಿತ ಜವಾಹರಲಾಲರು 1964ರಲ್ಲಿ ಕಾಲವಾದರು. ಮರಣಕ್ಕೆ ಮುನ್ನ ಅಲಹಾಬಾದಿನಲ್ಲಿರುವ ತಮ್ಮ ಪೂರ್ವಿಕರ ಮನೆ ಆನಂದಭವನ ಸಾರ್ವಜನಿಕರ ಸ್ವತ್ತಾಗಬೇಕು ಎಂದು ತಮ್ಮ ಇಚ್ಛೆಯನ್ನು ಬರೆದಿಟ್ಟಿದ್ದರು. ಹಾಗೆಯೇ ತಮ್ಮ ಮರಣದ ಅನಂತರ ತಮ್ಮ ಚಿತಾಭಸ್ಮವನ್ನು ನಮ್ಮ ದೇಶದ ಗುಡ್ಡ, ಬೆಟ್ಟ, ನದಿ, ಕಾಡುಗಳಲ್ಲೆಲ್ಲ ಮಣ್ಣಿನಲ್ಲಿ ಸೇರಿ ಹೋಗುವಂತೆ ವಿಮಾನದಿಂದ ಚೆಲ್ಲಬೇಕು ಎಂದೂ ತಮ್ಮ ಇಚ್ಛೆಯನ್ನು ವ್ಯಕ್ತಪಡಿಸಿದರು. ಅದು ಅವರ ಉಯಿಲು.

ತಮ್ಮ ಮರಣಾನಂತರ ತಮ್ಮ ಆಸ್ತಿ ಯಾವ ರೀತಿ ವಿಲೇವಾರಿ ಆಗಬೇಕೆಂಬ ತಮ್ಮ ಇಚ್ಛೆಯನ್ನು ಬರವಣಿಗೆಯ ಮೂಲಕ ವ್ಯಕ್ತಪಡಿಸುವ ದಸ್ತಾವೇಜಿಗೆ ಉಯಿಲು ಎನ್ನುತ್ತಾರೆ.

ಇದರಲ್ಲಿ ಗಮನಿಸಬೇಕಾದ ಅಂಶಗಳು ಯಾವುವೆಂದರೆ : (1) ಉಯಿಲು ಬರೆಯುವಾತನಿಗೆ ಬರೆದಿಡುವ ಅರ್ಹತೆ ಇರಬೇಕು: (2) ಆ ಇಚ್ಛೆ ಅವನ ಮರಣಾನಂತರ ಈಡೇರಬೇಕು: (3) ಆ ಇಚ್ಛೆ ಆಸ್ತಿಯ ವಿಲೇವಾರಿಗೆ ಸಂಬಂಧಿಸಬೇಕು: (4) ಉಯಿಲು ಬರವಣಿಗೆಯಲ್ಲೇ ಇರಬೇಕು.

ಬರೆಯುವಾತನಿಗೆ ಇರಬೇಕಾದ ಅರ್ಹತೆ ಎಂದರೇನು ? ಅವನು ಪ್ರಾಪ್ತವಯಸ್ಕನಾಗಿರಬೇಕು, ಬುದ್ಧಿ ಕೆಟ್ಟಿರಬಾರದು, ಮುಕ್ತಮನಸ್ಸಿನಿಂದ

ಬಾರದ ಹಾಗೂ, ಹೆದರಿಕೆ, ಒತ್ತಾಯ, ಮೋಸಕ್ಕೆ ಒಳಗಾಗದ ಸ್ವಬುದ್ಧಿಯಿಂದ ಸ್ವಸ್ಥಚಿತ್ತದಿಂದ ಸಂಪೂರ್ಣ ತಿಳಿವಳಿಕೆಯಿಂದ ತನ್ನ ಇಚ್ಛೆಯನ್ನು ವ್ಯಕ್ತಪಡಿಸುವ ಅರ್ಹತೆ ಇರಬೇಕು. ಮುಖ್ಯ, ಪ್ರಾಪ್ತ ವಯಸ್ಕನಲ್ಲದವನು ಉಯಿಲು ಮಾಡಬಾರದು.

ಉಯಿಲು ಆಸ್ತಿಯ ವಿಲೇವಾರಿಗೆ ಸಂಬಂಧಿಸಿರಬೇಕು. ಆಸ್ತಿಯ ವಿಲೇವಾರಿಗೆ ಸಂಬಂಧಿಸಿಲ್ಲದಿದ್ದರೆ ಅದು ಕಾನೂನಿನ ರೀತ್ಯಾ ಉಯಿಲು ಅಲ್ಲ. ಜವಾಹರಲಾಲರ ಚಿತಾಭಸ್ಮ ಹೀಗೆಯೇ ಚೆಲ್ಲಲ್ಪಡಬೇಕು ಎಂಬುದು ಅವರ ಇಚ್ಛೆಯಾದರೂ ಅದು ಆಸ್ತಿ ವಿಲೇವಾರಿಗೆ ಸಂಬಂಧಿಸಿದ್ದಲ್ಲ. ಆದಕಾರಣ ಜವಾಹರಲಾಲರ ಉಯಿಲಿನ ಆ ಭಾಗ ನ್ಯಾಯಶಾಸ್ತ್ರದ ದೃಷ್ಟಿಯಲ್ಲಿ ಉಯಿಲು ಅಲ್ಲ.

ಉಯಿಲು ಯಾವಾಗಲೂ ಮರಣಾನಂತರವೇ ಜಾರಿಯಲ್ಲಿ ಬರುತ್ತದೆ. ಬದುಕಿರುವಾಗಲೇ ತಮ್ಮ ಆಸ್ತಿಯನ್ನು ವಿಲೇವಾರಿ ಮಾಡಿಬಿಟ್ಟರೆ ಅದು ಉಯಿಲು ಎನಿಸಿಕೊಳ್ಳುವುದಿಲ್ಲ. ತನ್ನ ಜೀವಿತ ಕಾಲದಲ್ಲಿ ತನ್ನ ಆಸ್ತಿಯ ಮೇಲೆ ಒಡೆತನವಿರಲೇಬೇಕು. ಜೊತೆಗೆ ಆ ಆಸ್ತಿ ಉಯಿಲು ಮೂಲಕ ವಿಲೇವಾರಿಯಾಗುವಂಥದಿರಬೇಕು. ತನಗೆ ಸೇರಿಲ್ಲದ, ಮಿತ ಹಕ್ಕು ಇರುವ, ಇತರರಿಗೆ ಸೇರಿದ ಅಥವಾ ಕಾನೂನು ರೀತ್ಯಾ ತನಗೆ ಸೇರದಿರುವ ಆಸ್ತಿಯನ್ನು ಉಯಿಲು ಮೂಲಕ ವಿತರಣೆ ಮಾಡಲು ಬಾರದು.

ಉಯಿಲು ಸಾಮಾನ್ಯವಾಗಿ ಬರವಣಿಗೆಯಲ್ಲೇ ಇರಬೇಕು. ಇಬ್ಬರ ಸಾಕ್ಷಿಯಾಗಿ ಉಯಿಲು ಬರೆದಾತ ಸಹಿಹಾಕಬೇಕು, ಆ ಇಬ್ಬರೂ ಒಂದೇ ಬಾರಿ ಅಥವಾ ಬೇರೆ ಬೇರೆಯಾಗಿ ಆ ಪತ್ರಕ್ಕೆ ಸಾಕ್ಷಿ ಹಾಕಬಹುದು. ಸಾಕ್ಷಿ ಹಾಕಿಲ್ಲದ ಉಯಿಲು ಪತ್ರ ಬರೆದರೂ ಒಂದೇ, ಬರೆಯದಿದ್ದರೂ ಒಂದೇ; ಅದು ನಿಷ್ಪ್ರಯೋಜಕ ಕಾಗದ.

ಆದರೆ ಕೆಲವು ಅಸಾಮಾನ್ಯ ವಿಶೇಷ ಸೌಲಭ್ಯದ ಉಯಿಲುಗಳಿವೆ. ಅವುಗಳು ಬರೆದಿಲ್ಲದಿದ್ದರೂ ಅವಕ್ಕೆ ಕಾನೂನಿನ ಮನ್ನಣೆಯಿದೆ. ಅಂಥ ಉಯಿಲು ಮಾಡುವ ಹಕ್ಕು ವಾಸ್ತವವಾಗಿ ರಣರಂಗದಲ್ಲಿ, ಆಕಾಶಯುದ್ಧದಲ್ಲಿ, ನೌಕಾಯುದ್ಧದಲ್ಲಿ ತೊಡಗಿದ ಯೋಧರಿಗಿದೆ. ಅವರು ಯುದ್ಧದಲ್ಲಿ ತೊಡಗಿದ್ದಾಗ, ಸಾವಿನ ದವಡೆಯಲ್ಲಿರುವಾಗ ಕಾಗದ ಲೇಖನಿ ಹುಡುಕಿಕೊಂಡು ಹೋಗಿ, ಸಾವಧಾನವಾಗಿ ಕೂತು ಬರೆಯುವ ಅವಕಾಶವೆಲ್ಲಿದೆ? ಅವರು ಬಾಯಿಮಾತಿನಲ್ಲಿಯೇ ಇಬ್ಬರ ಸಮಕ್ಷಮದಲ್ಲಿ ಉಯಿಲು ಮಾಡಬಹುದು.

ಮರಣಾನಂತರವೇ ಜಾರಿಯಲ್ಲಿ ಬರಬೇಕಾದ ಬರವಣಿಗೆ ಎಂದಮೇಲೆ ಬದುಕಿದ್ದಾಗ ಅದನ್ನು ರದ್ದುಪಡಿಸಲು, ಪುನರ್ವಿಮರ್ಶಿಸಲು, ಪೂರ್ಣ ಬದಲಾಯಿಸಿ ಇನ್ನೊಂದು ಬರೆಯಲು ಬರೆದಾತನಿಗೆ ಅಧಿಕಾರ ಇದ್ದೇ ಇದೆ. ಪೂರ್ತಿ ಬದಲಾಯಿಸದೆ ಮೊದಲಿದ್ದ ಉಯಿಲಿಗೆ ಇನ್ನೂ ಏನಾದರೂ ಸೇರಿಸುವ ಇಲ್ಲವೆ ಇದ್ದದ್ದನ್ನು ಬಿಟ್ಟುಬಿಡುವ ಅಧಿಕಾರವಿದೆ. ಹಾಗೆ ಬರವಣಿಗೆಯಲ್ಲೇ ಮಾಡಬೇಕು. ಅದನ್ನು ಉಪಉಯಿಲು ಎನ್ನುತ್ತಾರೆ.

ಉಯಿಲು ಮೂಲಕ ತನಗೆ ಸಂಪೂರ್ಣ ಹಕ್ಕಿರುವ ಆಸ್ತಿಯನ್ನು ವಿಲೇವಾರಿ ಮಾಡುವಲ್ಲಿ ಅಧಿಕಾರವಿದ್ದರೂ, ಹೆಂಡತಿ ಮಕ್ಕಳ ಹೊಟ್ಟೆಬಟ್ಟೆಗೆ ಇಲ್ಲದಂತೆ, ಇದ್ದುದನ್ನೆಲ್ಲ ಬೇರೆಯವರಿಗೆ ಧಾರೆ ಎರೆಯುವುದನ್ನು ಕಾನೂನು ಒಪ್ಪುವುದಿಲ್ಲ. ಅವರನ್ನು ಬೀದಿಪಾಲುಮಾಡಿ, ಲೋಕೋದ್ಧಾರ ಮಾಡುವ ಆತ್ಮೋದ್ಧಾರ ಮಾಡಿಕೊಳ್ಳುವ ಇಚ್ಛೆ ಅಸಾಧು, ಅನ್ಯಾಯ ಎನ್ನುತ್ತದೆ ಕಾನೂನು. ಆದಕಾರಣ ಯಾರ ಜೀವನ ರಕ್ಷಣೆಯ ಹೊಣೆ ತಮ್ಮ ಮೇಲಿದೆಯೋ ಅವರ ಬದುಕಿಗೆ ಸಾಕಾಗುವಷ್ಟು ಆಸ್ತಿಯನ್ನು ಬಿಟ್ಟು ಉಯಿಲು ಮಾಡಬೇಕು.

ಉಯಿಲನ್ನು ಜಾರಿಗೆ ತರಲು ಉಯಿಲು ಮಾಡುವಾತನೇ ಯಾರನ್ನಾದರೂ ನೇಮಿಸಬಹುದು. ಅಂಥವನು 'ಕಾರ್ಯನಿರ್ವಾಹಕ' ಎನ್ನಿಸಿಕೊಳ್ಳುತ್ತಾನೆ. ಯಾರೂ ಇಲ್ಲದಿದ್ದರೆ ನ್ಯಾಯಾಲಯಗಳು ಅಂಥವನನ್ನು ನೇಮಿಸುತ್ತವೆ. ಗತಿಸಿದವನ ಕೊನೆಯ ಇಚ್ಛೆಯಾದ್ದರಿಂದ ಉಯಿಲನ್ನು ಅವನ ಇಚ್ಛೆಗೆ ಅನುಗುಣವಾಗಿಯೇ ಜಾರಿಯಲ್ಲಿ ತರಬೇಕು. ತಪ್ಪಿದರೆ ಮೃತನಿಗೆ ದ್ರೋಹ ಬಗೆದಂತೆ ಆಗುತ್ತದೆ. ಅದನ್ನು ಕಾನೂನು ಒಪ್ಪುವುದಿಲ್ಲ.

ನೋಡಿ : ಧರ್ಮದರ್ಶಿತ್ವ

## ಉಳಿತಾಯ

'ಉಳಿತಾಯವೇ ಆಪದ್ಧನ', 'ಉಳಿಸಿದ ರೂಪಾಯಿ ಗಳಿಸಿದ ರೂಪಾಯಿ'- ಜನ ತಮ್ಮ ವರಮಾನದಲ್ಲಿ ಸ್ವಲ್ಪ ಉಳಿಸಿ, ಆಪತ್ಕಾಲಕ್ಕೆ ಒಂದಷ್ಟು ಹಣ ಕೂಡಿಡುವಂತೆ ಆಗಬೇಕು ಎನ್ನುವ ಈ ಮಾತುಗಳು ಎಷ್ಟು ಚೆನ್ನ!

ಒಬ್ಬ ವ್ಯಕ್ತಿಯ ವರಮಾನ ತಿಂಗಳಿಗೆ ರೂಪಾಯಿ 500 ಆಗಿದ್ದು, ಆತ ಅದರಲ್ಲಿ ಕೇವಲ ರೂ. 100 ವೆಚ್ಚಮಾಡಿದರೆ ನೂರು ರೂಪಾಯಿ ಆತನ ಉಳಿತಾಯ.

ನಮಗೆ ಅನಿರೀಕ್ಷಿತವಾಗಿ ವಿಪತ್ತು ಬಂದಾಗ ಹಣ ಬೇಕಾಗುತ್ತದೆ, ಅದಕ್ಕಾಗಿ ಉಳಿತಾಯ ಅಗತ್ಯ.

ಪ್ರಜೆಗಳ ಉಳಿತಾಯದ ಹಣ ದೇಶದ ಬಂಡವಾಳದಲ್ಲಿ ಒಂದು ಅಂಶ ಎನಿಸಿಕೊಳ್ಳುತ್ತದೆ. ಉಳಿತಾಯ ಮಾಡಿದ ಹಣದಿಂದ ಮತ್ತೆ ಉತ್ಪತ್ತಿ ಬರುವಂತೆ ಇದ್ದರೆ ಮಾತ್ರ ಉಳಿತಾಯ ಸಾರ್ಥಕ. ಹಣವನ್ನು ಮನೆಯಲ್ಲಿ ಕೂಡಿಟ್ಟರೆ ಅಥವಾ ಒಡವೆ ಮಾಡಿಸಿದರೆ ಅದಕ್ಕೆ ಉತ್ಪಾದಕ ಸಾಮರ್ಥ್ಯ ಇರುವುದಿಲ್ಲ. ವ್ಯಾಪಾರ, ಮನೆ, ಹೊಲ ಮುಂತಾದ ಉತ್ಪತ್ತಿ ತರುವ ಸಾಧನಗಳಲ್ಲಿ ತೊಡಗಿಸಿದರೆ ಮಾತ್ರ ಉಳಿತಾಯ ಬಂಡವಾಳವಾಗುತ್ತದೆ.

ಜೀವನದಲ್ಲಿ ಆಹಾರ, ವಸತಿ, ಉಡುಪು ಮತ್ತು ಶಿಕ್ಷಣಗಳ ಪೂರೈಕೆ ಮುಖ್ಯ. ಆಮೇಲೆಯೇ ಜನ ಉಳಿತಾಯದ ಯೋಜನೆ ಮಾಡುತ್ತಾರೆ. ಒಂದು ಕುಟುಂಬ ಎಷ್ಟು ಉಳಿತಾಯ ಮಾಡುತ್ತದೆಂಬುದು ಅದರ ಗಾತ್ರವನ್ನು ಅವಲಂಬಿಸಿದೆ. ಕುಟುಂಬದ ಎಷ್ಟು ಮಂದಿ ಗಳಿಸುತ್ತಾರೆ, ಒಟ್ಟು ವರಮಾನವೇನು ಎಂಬ ಅಂಶಗಳು ಉಳಿತಾಯವನ್ನು ನಿರ್ಧರಿಸುತ್ತವೆ.

ಉಳಿತಾಯ ಮಾಡುವಂತೆ ಪ್ರೇರಿಸುವ ಕೆಲವು ಅಂಶಗಳ ಪೈಕಿ ಬಡ್ಡಿಯ ದರ ಒಂದು. ಬಡ್ಡಿಯ ದರ ಆಕರ್ಷಕವಾಗಿದ್ದರೆ, ಉಳಿತಾಯ ಮಾಡಿದ ಹಣವನ್ನು ಅಂಥ ಬಡ್ಡಿ ನೀಡುವ ಉದ್ಯಮಗಳಲ್ಲಿ ತೊಡಗಿಸಲು ಜನ ಇಷ್ಟಪಡುತ್ತಾರೆ. ಬಡ್ಡಿಯ ದರ ಹೆಚ್ಚಾಗಿಯೂ ಇರಬಾರದು. ಹೆಚ್ಚಾಗಿದ್ದರೆ ಕಡಮೆ ಹಣ ಠೇವಣಿ ಇಟ್ಟರೂ ಸಾಕಷ್ಟು ಬಡ್ಡಿ ಸಿಕ್ಕುತ್ತದೆ. ಇದರಿಂದ ಉಳಿತಾಯದ ಮೊಬಲಗು ಕಡಮೆಯಾಗುತ್ತದೆ.

ಉಳಿತಾಯದ ಮೊತ್ತವನ್ನು ಧಾರಣೆಗಳು ಕೂಡ ನಿರ್ಧರಿಸುತ್ತವೆ. ಧಾರಣೆಗಳು ತೀವ್ರವಾಗಿ ಏರುತ್ತಿದ್ದರೆ ಜನ ತಮ್ಮ ಮುಖ್ಯ ಅಗತ್ಯಗಳನ್ನು ಪೂರೈಸಿಕೊಳ್ಳಲು ಆಗುವ ವೆಚ್ಚವೂ ಹೆಚ್ಚು. ವೆಚ್ಚಗಳು ಏರುವ ಪ್ರಮಾಣದಲ್ಲಿ ವರಮಾನ ಹೆಚ್ಚದಿದ್ದರೆ ಉಳಿತಾಯ ಮಾಡುವುದು ಅಸಾಧ್ಯ. ಬಯಸಿದ ವಸ್ತುಗಳೆಲ್ಲ ಮಾರುಕಟ್ಟೆಯಲ್ಲಿ ಸುಲಭವಾಗಿ ಸಿಗುವಂತಿದ್ದರೆ ಆಗ ಜನರಲ್ಲಿ ಉಳಿತಾಯ ಮಾಡುವ ಪ್ರವೃತ್ತಿ ಇರುವುದಿಲ್ಲ.

ತಾವು ತೊಡಗಿಸಿದ ಹಣ ಭದ್ರವಾಗಿರುವುದೆಂಬ ಭರವಸೆ ಜನರಲ್ಲಿ ಮೂಡಬೇಕು. ಉಳಿತಾಯ ಮಾಡಿದ ಹಣವನ್ನು ಜನ ಆಗ [illegible]

ಗಳಲ್ಲಿ ತೊಡಗಿಸುತ್ತಾರೆ. ಕ್ಷಾಮ, ಪ್ರವಾಹ, ಯುದ್ಧ ಮುಂತಾದುವು ಗಳಿಂದ ಕಟ್ಟಡ, ರಸ್ತೆ, ಜಮೀನು ಮೊದಲಾದುವುಗಳಿಗೆ ಹಾನಿಯಾಗಿ ದೇಶದ ಬಂಡವಾಳ ನಷ್ಟವಾಗುತ್ತದೆ. ಆಗ ಜನ ತೊಡಗಿಸಿದ ಹಣಕ್ಕೆ ಬಡ್ಡಿಯನ್ನು ನೀಡುವುದು ಕಷ್ಟ. ವ್ಯಾಪಾರದಲ್ಲಿ ನಷ್ಟ ಸಂಭವಿಸುವ ಹಾಗಿದ್ದರೆ, ಮತ್ತೊಬ್ಬರು ಉಳಿತಾಯ ಮಾಡಿದ ಹಣವನ್ನು ಸಾಲವಾಗಿ ಪಡೆದು ವ್ಯಾಪಾರವನ್ನು ನಡೆಸಲು ವ್ಯಾಪಾರಸ್ಥರು ಮುಂದೆ ಬರುವುದಿಲ್ಲ. ಇಂಥ ಬಿಕ್ಕಟ್ಟಿನ ಸಮಯಗಳಲ್ಲಿ ಉಳಿತಾಯಕ್ಕೆ ಧಕ್ಕೆ ತಟ್ಟುತ್ತದೆ. ಆ ಸಂದರ್ಭಗಳಲ್ಲಿ ದೇಶದಲ್ಲಿ ಬಂಡವಾಳ ಸಾಕಷ್ಟು ಇರಬೇಕು. ಅದಕ್ಕಾಗಿ ಜನ ಸದಾ ಉಳಿತಾಯ ಮಾಡುತ್ತಿರಬೇಕು ಎಂಬುದು ಸರಕಾರದ ಬಯಕೆ.

ಭಾರತದಲ್ಲಿ ವಾಣಿಜ್ಯ ಬ್ಯಾಂಕು, ಸಹಕಾರೀ ಬ್ಯಾಂಕುಗಳಲ್ಲಿ, ಅಂಚೆಕಚೇರಿ ಗಳಲ್ಲಿ ಉಳಿತಾಯ ವಿಭಾಗ ಇದೆ. 'ಉಳಿತಾಯ ಬ್ಯಾಂಕ್ ಖಾತೆ'ಯಲ್ಲಿ ಎಷ್ಟೇ ಸಣ್ಣ ಪ್ರಮಾಣದ ಹಣವನ್ನಾದರೂ ಠೇವಣಿ ಮಾಡಬಹುದು. ಸಹ ಕಾರೀ ಬ್ಯಾಂಕುಗಳಲ್ಲಿ ಅಂಶ (ಪಾಲು)ಗಳನ್ನು ಕೊಂಡು ಉಳಿತಾಯ ಹಣ ತೊಡಗಿಸುವುದೇ ಅಲ್ಲದೆ, ಸಹಕಾರೀ ಚಟುವಟಿಕೆಯಲ್ಲೂ ಭಾಗವಹಿಸ ಬಹುದು. ಭಾರತದಲ್ಲಿ ಹದಿನಾಲ್ಕು ಪ್ರಮುಖ ವಾಣಿಜ್ಯ ಬ್ಯಾಂಕುಗಳು ರಾಷ್ಟ್ರೀಕರಣವಾಗಿವೆ (1969–70). ಸಣ್ಣ ಕೈಗಾರಿಕೆಗಾರರು, ವ್ಯವಸಾಯ ಗಾರರು ಮತ್ತು ಸಣ್ಣ ವ್ಯಾಪಾರಸ್ಥರಿಗೆ ಹಣದ ಸೌಲಭ್ಯ ನೀಡುವುದೂ ಅವರ ಉಳಿತಾಯವನ್ನು ಸಂಗ್ರಹಿಸುವುದೂ ರಾಷ್ಟ್ರೀಕರಣದ ಒಂದು ಉದ್ದೇಶ. ನಮ್ಮ ದೇಶದಲ್ಲಿ ಜೀವ ವಿಮೆಯನ್ನು ಸರಕಾರದ ಅಧೀನದಲ್ಲಿರುವ ಭಾರತ ಜೀವವಿಮಾ ಕಾರ್ಪೊರೇಷನ್ ನಡೆಸುತ್ತಿದೆ. (1956ನೆಯ ವರ್ಷಕ್ಕೆ ಮುಂಚೆ ಇದು ಖಾಸಗೀ ಚಟುವಟಿಕೆಯಾಗಿತ್ತು.) ಜನ ಹೆಚ್ಚು ಹೆಚ್ಚು ಜೀವವಿಮೆ ಮಾಡುವಂತೆ ಒಲಿಸಲು ತೀವ್ರವಾದ ಪ್ರಚಾರವನ್ನು ಕೈಗೊಳ್ಳ ಲಾಗಿದೆ. ವಿಮೆ ಮಾಡುವುದು ಉಳಿತಾಯದ ಒಂದು ರೀತಿ. ಬಂಡ ವಾಳದ ಸಣ್ಣ ಪ್ರಮಾಣಗಳನ್ನು ಮಾರಿ ಜನರ ಉಳಿತಾಯವನ್ನು ಯೂನಿಟ್ ಟ್ರಸ್ಟ್ ಆಫ್ ಇಂಡಿಯಾ ಸಂಸ್ಥೆ ಆಕರ್ಷಿಸುತ್ತದೆ.

ಜಪಾನಿನಲ್ಲಿ ಕೂಡ ಅಂಚೆ ಕಚೇರಿಗಳಲ್ಲಿ ಉಳಿತಾಯ ಬ್ಯಾಂಕುಗಳನ್ನು ಬಹಳ ಹಿಂದಿನಿಂದಲೇ ತೆರೆದಿದ್ದಾರೆ. ಉಳಿತಾಯ ಬ್ಯಾಂಕಿನಲ್ಲಿ ಒಬ್ಬರ ಖಾತೆಯಿಂದ ಇನ್ನೊಬ್ಬರ ಖಾತೆಗೆ ಹಣವನ್ನು ವರ್ಗಾಯಿಸಬಹುದು. ಹಣ ಇಟ್ಟವರಿಗೆ ಹಣ ಬೇಕೆಂದಾಗ ಮನಿಯಾರ್ಡರ್ ಮೂಲಕವೂ ಸೇವಿಂಗ್ಸ್ ಬ್ಯಾಂಕ್ ಖಾತೆಯ ಹಣವನ್ನು ಬ್ಯಾಂಕ್ ಕಳುಹಿಸುತ್ತದೆ.

ಆಸ್ಟ್ರೇಲಿಯ, ಬೆಲ್ಜಿಯಂ, ಜರ್ಮನಿ, ಇಟಲಿ, ಸ್ಪೇನ್ ಮುಂತಾದ ದೇಶಗಳಲ್ಲಿ ಉಳಿತಾಯದ ಠೇವಣಿಗಳನ್ನು ಮಾತ್ರ ಸ್ವೀಕರಿಸಿ, ಉಳಿತಾಯ ಗಾರರಿಗೆ ಸಾಲ ನೀಡುವ ಪ್ರತ್ಯೇಕ ಬ್ಯಾಂಕುಗಳನ್ನು ಕಾಣಬಹುದು. ಈ ಉಳಿತಾಯ ಬ್ಯಾಂಕುಗಳಲ್ಲಿ ಉಳಿತಾಯ ಮಾಡಲಾದ ಹಣದ ಪ್ರಮಾಣದ ಮೇಲೆ ಮತ್ತಷ್ಟು ಸಾಲ ಒದಗಿಸಿ ಮನೆಯನ್ನು ಕೊಳ್ಳಲು ಅಥವಾ ಕಟ್ಟಲು ಹಣ ಕೊಡುತ್ತಾರೆ. ಜರ್ಮನಿಯ ಒಬ್ಬ ಕುಶಲಕರ್ಮಿ ಮೂರು ವರ್ಷ ಹಣ ಉಳಿತಾಯ ಮಾಡಿ ತೋರಿಸಿದರೆ, ಅನಂತರ ಆತ ಸ್ವಂತವಾಗಿ ತನ್ನ ವೃತ್ತಿ ಸಂಬಂಧದ ವ್ಯಾಪಾರ ನಡೆಸಲು 50,000 ಜರ್ಮನ್ ಮಾರ್ಕ್‌ಗಳ ವರೆಗೆ ಸಾಲ ಪಡೆಯಬಹುದು. ಜರ್ಮನಿಯಲ್ಲಿ ಒಬ್ಬ ವ್ಯಕ್ತಿ ಸಂಪಾದನೆ ಯಲ್ಲಿ ಹೆಚ್ಚು ಕಳೆದು ಮಿಕ್ಕಿದ್ದನ್ನೆಲ್ಲ ಉಳಿತಾಯವೆಂದು ತಗಾದೆ ಇಡುವಂತಿಲ್ಲ. ಸಂಪಾದನೆಯ ಒಂದು ಪಾಲನ್ನು ಅದು ಏತಕ್ಕೋಸ್ಕರ ಎಂದು–ಮನೆ ಕಟ್ಟಿಸುವುದಕ್ಕೋ, ಭೂಮಿ ಕೊಳ್ಳುವುದಕ್ಕೋ ಹೀಗೆ–ನಿರ್ದಿಷ್ಟವಾಗಿ ತಿಳಿಸಿ, ಪ್ರತ್ಯೇಕ ಲೆಕ್ಕದಲ್ಲಿಡಬೇಕು. ಮಕ್ಕಳಿಗೆ ಉಡುಗೊರೆ



ವಸಂತಕಾಲದಲ್ಲಿ ಚಿಗುರೊಡೆದ ಹೂ ಬಿಡುವ ಸಸ್ಯ

ನೀಡಲು 250 ಮಾರ್ಕ್ ಮೌಲ್ಯದ್ದುವರೆಗಿನ ಉಳಿತಾಯ ಕೂಪನ್‌ಗಳನ್ನು ಬೆಲ್ಜಿಯಮಿನ ಉಳಿತಾಯ ಬ್ಯಾಂಕುಗಳಲ್ಲಿ ಮಾರುತ್ತಾರೆ. ಈ ಕೂಪನ್ ಗಳನ್ನು ಯಾರು ಯಾವ ಬ್ಯಾಂಕಿನಲ್ಲಾದರೂ ಜಮೆ ಮಾಡಿಕೊಳ್ಳಬಹುದು.

ಒಂದು ದೇಶದ ಉಳಿವು ಏಳಿಗೆ ಎರಡಕ್ಕೂ ಸಾಧಕ, ಉಳಿತಾಯ.

ನೋಡಿ : ಜೀವನ ಮಟ್ಟ ; ಬಂಡವಾಳ ; ಬ್ಯಾಂಕ್ ; ರಾಷ್ಟ್ರೀಕರಣ ; ವಿದೇಶೀ ವಿನಿಮಯ ; ಸಹಕಾರ ; ಹಣದುಬ್ಬರ.

## ಋತುಗಳು

ಡಿಸೆಂಬರ್ ಜನವರಿ ಮಾಸಗಳನ್ನು ನೆನೆದೊಡನೆಯೇ ಚಳಿಯಿಂದ ಮೈ ನಡುಗುತ್ತದೆ.

ಮಾರ್ಚ್–ಏಪ್ರಿಲ್‌ಗಳಲ್ಲಿ ಪರೀಕ್ಷೆಯ ಬೇಗೆಯ ಜೊತೆಗೆ ಬೇಸಿಗೆಯ ಝಳ ಬೇರೆ.

ಜುಲೈ, ಆಗಸ್ಟ್ ತಿಂಗಳುಗಳಲ್ಲಿ ಹೊರಗೆ ಹೋಗೋಣವೆಂದರೆ ಜಡಿಮಳೆ.

ಏನಿದು ವಿಪರೀತ ? ಏಕೆ ಈ ವ್ಯತ್ಯಾಸ ?

ಸೂರ್ಯನಿಂದ ಭೂಮಿಗೆ ಕಾವು ಬರುತ್ತದೆ. ಆದರೆ ಈ ಕಾವು ಎಲ್ಲ ಕಡೆಗೂ ಒಂದೇ ಸಮನಾಗಿ ಇರುವುದಿಲ್ಲ. ಏಕೆಂದರೆ ಭೂಮಿ ಗೋಲಾ ಕಾರದಲ್ಲಿದೆ : ಮತ್ತು ತನ್ನ ಅಕ್ಷದ ಸುತ್ತ ತಿರುಗುತ್ತ ಸೂರ್ಯನ ಸುತ್ತಲೂ ಒಂದು ನಿಯತ ಪಥದಲ್ಲಿ ಪ್ರದಕ್ಷಿಣೆ ಹಾಕುತ್ತದೆ. ಹೀಗೆ ಮಾಡುವಾಗ ಭೂಮಿಯ ಅಕ್ಷವು ಯಾವಾಗಲೂ ಒಂದೇ ದಿಕ್ಕಿಗೆ ಮುಖ ಮಾಡಿಕೊಂಡಿರುತ್ತದೆ. ಅದು ತನ್ನ ಪ್ರದಕ್ಷಿಣೆ ಪಥಕ್ಕೆ 66½° ವಾಲಿ ಕೊಂಡು ಇರುವುದರಿಂದ, ಸೂರ್ಯನ ಕಾವು ಭೂಮಿಯ ಒಂದೊಂದು ಭಾಗದ ಮೇಲೆ ಒಂದೊಂದು ಪ್ರಮಾಣದಲ್ಲಿ ಬೀಳುತ್ತದೆ. ಕಾವಿನ ಪ್ರಮಾಣ ಭೂಮಿಯ ವಿವಿಧ ಭಾಗಗಳಿಗೂ ಸೂರ್ಯನಿಗೂ ನಡುವೆ ಇರುವ ದೂರ ವನ್ನು ಅವಲಂಬಿಸಿರುತ್ತದೆ. ಭೂಮಿಯನ್ನು ಆವರಿಸಿರುವ ವಾಯು ಮಂಡಲವೂ ಈ ವ್ಯತ್ಯಾಸಕ್ಕೆ ಇನ್ನೊಂದು ಕಾರಣ.

ಭೂಮಿಯನ್ನು ತಲಪುವ ಸೂರ್ಯನ ಕಿರಣಗಳು ಪರಸ್ಪರ ಸಮಾನಾಂತರ ವಾಗಿರುತ್ತವೆ. ಭೂಮಿಯು ವಾಲಿಕೊಂಡಿರದಿದ್ದರೆ ಆ ಕಿರಣಗಳು ಭೂಮಧ್ಯರೇಖೆಗೆ ಸಮಾನಾಂತರವಾಗಿರುತ್ತಿದ್ದುವು. ಭೂಮಿಯು ವಾಲಿ ಕೊಂಡಿರುವುದರಿಂದ ಸೂರ್ಯನ ಕಿರಣಗಳು ಕೆಲವೆಡೆಗಳಲ್ಲಿ ಲಂಬವಾಗಿ

ನೇರವಾಗಿ, ಬೇರೆಡೆಗಳಲ್ಲಿ ಓರೆಯಾಗಿ ಬೀಳುತ್ತವೆ. ಶಾಖ ಪ್ರಸರಣ ಒಂದೇ ಸಮನಾಗಿರುವುದಿಲ್ಲ. ಉತ್ತರಾರ್ಧಗೋಲ ಸೂರ್ಯನೆಡೆಗೆ ಮುಖಮಾಡಿದ್ದರೆ ಆಗ ಆ ಪ್ರದೇಶದಲ್ಲಿ ಬೇಸಿಗೆ. ದಕ್ಷಿಣಾರ್ಧಗೋಲದಲ್ಲಿ ಚಳಿಗಾಲ.

ಸೂರ್ಯನ ಶಾಖ ಭೂಮಿಯ ಮೇಲ್ಮೈಯ ಮೇಲೆ ಪ್ರಸರಣವಾಗುವುದಕ್ಕೆ ಅನುಗುಣವಾಗಿ ಭಾರತೀಯರು ವರ್ಷದ ದಿನಗಳನ್ನು ಆರು ಋತುಗಳಾಗಿ ಹೀಗೆ ವಿಂಗಡಿಸಿದ್ದಾರೆ :

1. ವಸಂತ ಋತು ... ಮಧ್ಯ ಮಾರ್ಚ್‌ನಿಂದ ಮೇ ಮಧ್ಯ
2. ಗ್ರೀಷ್ಮ ಋತು ... ಮಧ್ಯ ಮೇಯಿಂದ ಜುಲೈ ಮಧ್ಯ
3. ವರ್ಷ ಋತು ... ಮಧ್ಯ ಜುಲೈಯಿಂದ ಸೆಪ್ಟೆಂಬರ್ ಮಧ್ಯ
4. ಶರತ್ ಋತು ... ಮಧ್ಯ ಸೆಪ್ಟೆಂಬರಿನಿಂದ ನವೆಂಬರ್ ಮಧ್ಯ
5. ಹೇಮಂತ ಋತು ... ಮಧ್ಯ ನವಂಬರಿನಿಂದ ಜನವರಿ ಮಧ್ಯ
6. ಶಿಶಿರ ಋತು ... ಮಧ್ಯ ಜನವರಿಯಿಂದ ಮಾರ್ಚ್ ಮಧ್ಯ

ಪ್ರತಿಯೊಂದು ಋತುವಿನ ಹೆಸರೇ ಆಯಾ ಸಮಯ ಪ್ರಕೃತಿಯಲ್ಲಾಗುವ ವ್ಯತ್ಯಾಸವನ್ನು ವಿವರಿಸುತ್ತದೆ.

ಪ್ರತಿ ವರ್ಷ ಪ್ರತಿ ಋತು ಖಚಿತವಾಗಿ ಒಂದು ದಿನ ಮುಗಿದು, ಮುಂದಿನ ಋತು ಮರುದಿನ ಪ್ರಾರಂಭವಾಗುತ್ತದೆ ಎಂದೇನೂ ಇಲ್ಲ.

ಈ ಋತುಗಳಿಗನುಗುಣವಾಗಿ ಮೂರು ಸಾಮಾನ್ಯ ಕಾಲಗಳನ್ನು ಗುರುತಿಸುತ್ತಾರೆ: 1. ಚಳಿಗಾಲ (ನವೆಂಬರ್, ಡಿಸೆಂಬರ್, ಜನವರಿ, ಫೆಬ್ರುವರಿ). 2. ಬೇಸಿಗೆಕಾಲ (ಮಾರ್ಚ್. ಏಪ್ರಿಲ್, ಮೇ, ಜೂನ್). 3. ಮಳೆಗಾಲ (ಜುಲೈ. ಆಗಸ್ಟ್. ಸೆಪ್ಟೆಂಬರ್. ಅಕ್ಟೋಬರ್).

ಪಾಶ್ಚಾತ್ಯರು ವರ್ಷವನ್ನು ನಾಲ್ಕು ಋತುಗಳಾಗಿ ವಿಂಗಡಿಸುತ್ತಾರೆ.

ಮಾರ್ಚ್ 21ರಿಂದ ಸೆಪ್ಟೆಂಬರ್ 21ರವರೆಗೆ ಭೂಮಿಯ ಉತ್ತರ ಗೋಲಾರ್ಧವು ಸೂರ್ಯನ ಕಡೆಗೆ ಹೆಚ್ಚು ವಾಲಿಕೊಂಡಿರುತ್ತದೆ. ಆಗ ಸೂರ್ಯನ ಕಿರಣಗಳು ಆ ಭಾಗದ ಮೇಲೆ ನೇರವಾಗಿ ಬೀಳುತ್ತವೆ. ಆದುದರಿಂದ ಶಾಖ ಮತ್ತು ಬೆಳಕು ಅಧಿಕವಾಗಿರುತ್ತವೆ. ಈ ಕಾಲಾವಧಿಯಲ್ಲಿ ರಾತ್ರಿಗಿಂತ ಹಗಲು ದೊಡ್ಡದಾಗಿದ್ದು ಭೂಮಿಯು ಸೂರ್ಯನ ಶಾಖವನ್ನು ಹೆಚ್ಚು ಕಾಲ ಪಡೆಯುತ್ತಿರುತ್ತದೆ. ಉತ್ತರ ಗೋಲಾರ್ಧದಲ್ಲಿ ಉಷ್ಣತೆಯೂ ಸೆಕೆಯೂ ಹೆಚ್ಚು ಇರುವ ಈ ಕಾಲಾವಧಿಯೇ ಉತ್ತರ ಗೋಲಾರ್ಧದ ಬೇಸಿಗೆ. ಇದೇ ಸಮಯದಲ್ಲಿ ದಕ್ಷಿಣ ಗೋಲಾರ್ಧ ಸೂರ್ಯನಿಂದ ಸ್ವಲ್ಪ ಹೆಚ್ಚು ದೂರವಾಗಿದೆ. ಸೂರ್ಯ ಕಿರಣಗಳು ಆ ಗೋಲಾರ್ಧದಲ್ಲಿ ಹೆಚ್ಚು ಓರೆಯಾಗಿ ಭೂಮಿಯ ಮೇಲೆ ಬೀಳುತ್ತವೆ. ಅವುಗಳ ಶಾಖ ಭೂಮಿಯನ್ನು ತಾಗುವುದಕ್ಕಿಂತ ಮೊದಲು ಹೆಚ್ಚು ಭಾಗ, ವಾತಾವರಣ ಪ್ರದೇಶವನ್ನು ಹಾದುಬರಬೇಕಾಗುತ್ತದೆ. ಆದರಿಂದ ಶಾಖದ ತೀವ್ರತೆ ತಗ್ಗುತ್ತದೆ. ಆಗ ಆ ಗೋಲಾರ್ಧದಲ್ಲಿ ಹಗಲು ಸಮ ಕಡಮೆ : ಶೀತ ಹೆಚ್ಚು. ಅದು ಅಲ್ಲಿಯ ಚಳಿಗಾಲ. ಸೆಪ್ಟೆಂಬರ್ 21ರಿಂದ ಮಾರ್ಚ್ 21ರ ವರೆಗೆ ದಕ್ಷಿಣ ಗೋಲಾರ್ಧ ಸೂರ್ಯನ ಕಡೆಗೆ ಹೆಚ್ಚು ವಾಲಿರುವುದರಿಂದ ಅಲ್ಲಿ ಬೇಸಿಗೆಯಾಗಿ ಉತ್ತರ ಗೋಲಾರ್ಧದಲ್ಲಿ ಚಳಿಗಾಲವಿರುತ್ತದೆ. ಈ ಎರಡು ಕಾಲಗಳ ಬದಲಾವಣೆಯ ಮಧ್ಯಕಾಲವೂ ಸಮಶೀತೋಷ್ಣ ಪ್ರದೇಶಗಳಲ್ಲಿ ಎರಡು ಪ್ರತ್ಯೇಕ ಕಾಲಗಳೆನಿಸಿವೆ : ಉತ್ತರ ಗೋಲಾರ್ಧದಲ್ಲಿ ಮಾರ್ಚ್ 21ರಿಂದ ಜೂನ್ 21ರ ವರೆಗಿನ ಅವಧಿಯು ವಸಂತಕಾಲ (ದಕ್ಷಿಣ ಗೋಲಾರ್ಧದಲ್ಲಿ ಆಗ ಶರತ್ಕಾಲ) : ಸೆಪ್ಟೆಂಬರ್ 21ರಿಂದ ಡಿಸೆಂಬರ್ 21ರ ವರೆಗಿನ ಅವಧಿಯು ಶರತ್ಕಾಲ (ದಕ್ಷಿಣ ಗೋಲಾರ್ಧದಲ್ಲಿ ಆಗ ವಸಂತಕಾಲ). ಹೀಗೆ ವರ್ಷದಲ್ಲಿ ವಸಂತ, ಬೇಸಿಗೆ. ಶರತ್ ಮತ್ತು ಚಳಿಗಾಲಗಳೆಂಬ ನಾಲ್ಕು ಋತುಗಳು ಇವೆ.

ಭೂಮಧ್ಯರೇಖೆಯ ಪ್ರದೇಶದಲ್ಲಿ ಋತುಮಾನ ವ್ಯತ್ಯಾಸವು ಅಷ್ಟೇನೂ ತೋರಿಬರುವುದಿಲ್ಲ. ಉಷ್ಣವಲಯದಲ್ಲಿ ಹೆಚ್ಚಾಗಿ ಬೇಸಿಗೆ ಮತ್ತು ಚಳಿಗಾಲಗಳೆಂಬ ಎರಡೇ ಋತುಗಳಿವೆ. ಧ್ರುವಪ್ರದೇಶದಲ್ಲಿ ಪರಿಸ್ಥಿತಿ ಸ್ವಲ್ಪ ವಿಚಿತ್ರವಾಗಿದೆ. ಉತ್ತರಗೋಲಾರ್ಧದ ಬೇಸಿಗೆಯಲ್ಲಿ ಉತ್ತರ ಧ್ರುವದಲ್ಲಿ ಆರು ತಿಂಗಳು ಸೂರ್ಯನು ದಿಗಂತದ ಮೇಲೆ ಕಾಣಿಸುತ್ತಿರುತ್ತಾನೆ. ಚಳಿಗಾಲದ ಆರು ತಿಂಗಳು ಸೂರ್ಯನು ಗೋಚರಿಸುವುದೇ ಇಲ್ಲ. ಆರು ತಿಂಗಳು ಹಗಲು ಆರು ತಿಂಗಳು ರಾತ್ರಿ ಇದ್ದಂತೆ. ದಕ್ಷಿಣ ಧ್ರುವದಲ್ಲಿಯೂ ಹಾಗೆಯೇ ; ಕಾಲಾವಧಿಯಲ್ಲಿ ಮಾತ್ರ ವ್ಯತ್ಯಾಸ.

ಭೂಮಿಯ ಕೆಲವು ಪ್ರದೇಶಗಳಲ್ಲಿ ಈ ಋತುಮಾನ ವ್ಯತ್ಯಾಸಗಳು ಅಷ್ಟೊಂದು ನಿಖರವಾಗಿಲ್ಲ. ಸಮುದ್ರ ಪ್ರವಾಹಗಳು, ಬೀಸುವ ಗಾಳಿಗಳು ನೆಲದ ಎತ್ತರ ಮೊದಲಾದುವು ಕೆಲವು ಬದಲಾವಣೆಗಳನ್ನು ಉಂಟುಮಾಡುತ್ತವೆ.

ಪ್ರಾಣಿ, ಪಕ್ಷಿ ಮತ್ತು ಸಸ್ಯಗಳ ನಡವಳಿಕೆಗಳಿಂದಲೂ ಋತುಭೇದಗಳನ್ನು ಗುರುತಿಸಬಹುದು. ಇದಕ್ಕೆ ಉತ್ತಮ ಉದಾಹರಣೆ ಪಕ್ಷಿಗಳ ವಲಸೆ. ಮೊಟ್ಟೆಯಿಡುವುದಕ್ಕಾಗಿ ಪಕ್ಷಿಗಳು ಹೊರನಾಡಿನಿಂದ ಕರಾರುವಾಕ್ಕಾಗಿ ಒಂದು ನಿರ್ದಿಷ್ಟ ಕಾಲದಲ್ಲಿ ಬಂದು, ಒಂದು ನಿರ್ದಿಷ್ಟ ಕಾಲದಲ್ಲಿ ಹಿಂದಿರುಗುತ್ತವೆ. ಬೇಸಿಗೆ ಮುಗಿಯಿತೆಂದರೆ ಶೀತಪ್ರದೇಶಗಳಿಂದ ಇನ್ನೂ ಬೆಚ್ಚಗಿನ ಪ್ರದೇಶಗಳಿಗೆ ವಲಸೆಹೋಗುತ್ತವೆ, ಮೊದಲಿನ ಸ್ಥಳದಲ್ಲಿ ಬೇಸಿಗೆ ಪ್ರಾರಂಭವಾದೊಡನೆ ಮರಳುತ್ತವೆ. ಸಸ್ಯಗಳ ಚಟುವಟಿಕೆಗಳಲ್ಲಂತೂ ಋತುಭೇದಕ್ಕನುಗುಣವಾದ ವ್ಯತ್ಯಾಸಗಳನ್ನು ಸದಾ ಕಾಣಬಹುದು. ಚಳಿಗಾಲದಲ್ಲಿ ಎಲೆ ಉದುರುತ್ತದೆ. ವಸಂತಕಾಲದಲ್ಲಿ ಸಸ್ಯಗಳು ಚಿಗುರೊಡೆದು ಮೈತುಂಬಿ ನಿಂತಿರುತ್ತವೆ.

ಮನುಷ್ಯಜೀವನದ ಮೇಲೂ ಋತುಭೇದದ ಪ್ರಭಾವ ಅಪಾರ. ಬೇಸಿಗೆಯ ಸೆಕೆಯನ್ನಾಗಲೀ ಚಳಿಯ ತೊಂದರೆಯನ್ನಾಗಲೀ ಅವನು ತಕ್ಕ ಬಟ್ಟೆ ಬರೆಗಳಿಂದ ಅಥವಾ ಇತರ ಉಪಾಯಗಳಿಂದ ನಿವಾರಿಸುತ್ತಾನೆ. ರೈತರ ದಿನಚರಿಯಂತೂ ಋತುಭೇದಗಳ ಕೈಗನ್ನಡಿ. ನೆಲ ಉಳುವುದು, ಬೀಜ ಬಿತ್ತುವುದು, ಕಳೆ ಕೀಳುವುದು, ಪೈರು ಕೊಯ್ಯುವುದು—ಇವೆಲ್ಲವೂ ಋತುಭೇದವನ್ನನುಸರಿಸಿವೆ. ಹಾಗೆಯೇ ಜನರ ಹಬ್ಬ ಹುಣ್ಣಿಮೆ, ಜಾತ್ರೆ, ದುಡಿಮೆ ಮತ್ತು ಬಿಡುವಿನ ಕಾಲಾವಧಿ ಮೊದಲಾದುವು ಸಹ.

ಒಂದಾದ ಮೇಲೊಂದರಂತೆ ಬರುವ ಋತುಭೇದದಿಂದಲೇ ಭೂಮಿಯ ಮೇಲೆ ಜೀವನ ಸಾಧ್ಯ ; ಪ್ರಕೃತಿ ಮತ್ತು ಜನಜೀವನದ ವೈವಿಧ್ಯಕ್ಕೂ ಅದೇ ಕಾರಣ.

ನೋಡಿ : ಮಳೆ ; ಹವಾಗುಣ

## ಎನ್. ಸಿ. ಸಿ.

"ನಿಮಗೆ ಶಾಂತಿ ಬೇಕಿದ್ದರೆ ಸದಾ ಯುದ್ಧಕ್ಕೆ ಸಿದ್ಧವಾಗಿರಿ."
—ಒಂದು ಹಳೆಯ ಮಾತು.

1947ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬಂದೊಡನೆ ಆ ವರೆಗೆ ಬ್ರಿಟಿಷ್ ಪ್ರಭುತ್ವದ ಬೆಂಬಲಕ್ಕಿದ್ದ ಸೈನ್ಯಬಲಗಳು ಸ್ವತಂತ್ರ ಭಾರತದ ರಕ್ಷಣಾ ಪಡೆಗಳಾದುವು. ಆದರೆ ರಾಷ್ಟ್ರ ವಿಭಜನೆಯಿಂದ ಸೈನ್ಯ ಎರಡು ಹೋಳಾ



ಚೇತನದ ಚಿಲುಮೆ ಎನ್. ಸಿ. ಸಿ.

ಯಿತು. ಎದುರಿಸಬೇಕಾಗಿದ್ದ ಸಮಸ್ಯೆಗಳು ಅತಿಶಯವಾಗಿದ್ದುವು. ಸೈನ್ಯವನ್ನು ರಾತ್ರಿ ಬೆಳಗಾಗುವಾಗ ವಿಸ್ತರಿಸುವುದು ಸಾಧ್ಯವೆ ? ಸೈನಿಕ. ಪೂರೈಸಿದ ಪಾಲಿದ್ದಂತೆ. ದೀರ್ಘ ನಿರಂತರ ಕ್ರಮಬದ್ಧ ಶಿಕ್ಷಣವೊಂದೇ ಒಬ್ಬ ದಕ್ಷ ಸೈನಿಕನನ್ನು ನಿರ್ಮಿಸಬಲ್ಲುದು. ಕೇವಲ ಜನಬಲ ಸೈನ್ಯವಲ್ಲ. ರಾಷ್ಟ್ರೀಯ ನಾಯಕರು ಅಂದು ಎದುರಿಸಬೇಕಾಗಿದ್ದ ಸಮಸ್ಯೆ - ರಾಷ್ಟ್ರೀಯ ಭಾವನೆಯಿಂದ ಉದ್ದೀಪಿತವಾದ ದೊಡ್ಡ ಸೇನಾಬಲದ ರಚನೆ. ತರುಣ ಚೈತನ್ಯವನ್ನು ಆಕರ್ಷಿಸುವುದು ಅತ್ಯಂತ ಸಮರ್ಪಕ ದೀರ್ಘಕಾಲಿಕ ಕ್ರಮವೆಂದು ಮನಗಂಡ ಸರಕಾರ ನ್ಯಾಷನಲ್ ಕೆಡೆಟ್ ಕೋರ್ (ಸಂಕ್ಷಿಪ್ತವಾಗಿ ಎನ್.ಸಿ.ಸಿ.- ರಾಷ್ಟ್ರೀಯ ಯುವ ಸೈನ್ಯದಳ) ಮಸೂದೆಯನ್ನು ಸಂಸತ್ತಿನಲ್ಲಿ ಮಂಡಿಸಿ 1948ರ ಮೂವತ್ತೊಂದನೆಯ ಕಾಯಿದೆಯಾಗಿ ಮಂಜೂರು ಮಾಡಿಸಿತು.

ಸೇನಾಪಡೆಗಳಲ್ಲಿರುವಂತೆ ಎನ್. ಸಿ. ಸಿ. ಯಲ್ಲಿಯೂ ಮೂರು ಪ್ರಮುಖ ವಿಭಾಗಗಳಿವೆ : ನೆಲ, ಜಲ. ಮತ್ತು ವಾಯು. ದೇಶದ ಎಲ್ಲ ಪ್ರೌಢಶಾಲೆಗಳು, ಕಾಲೇಜುಗಳು ಮತ್ತು ಪಾಲಿಟೆಕ್ನಿಕ್‌ಗಳು ಇವುಗಳಿಗೆ ಇದರ ವ್ಯಾಪ್ತಿ. ಹೆಣ್ಣು ಮಕ್ಕಳಿಗೆ ಶಿಕ್ಷಣ ಕೊಡಲು ಪ್ರತ್ಯೇಕ ವ್ಯವಸ್ಥೆಯೂ ಉಂಟು. ಎನ್. ಸಿ. ಸಿ. ಯ ಧ್ಯೇಯಗಳು ಮೂರು : 1. ಶೀಲ, ಸ್ನೇಹ ಪ್ರಜ್ಞೆ, ಧುರೀಣತ್ವ ಮತ್ತು ಸೇವಾದರ್ಶ ಈ ಗುಣಗಳನ್ನು ಯುವಕ ಯುವತಿಯರಲ್ಲಿ ಬೆಳೆಸುವುದು. 2. ಸೈನಿಕ ಶಿಕ್ಷಣವನ್ನು ಯುವಕ ಯುವತಿಯರಿಗೆ ನೀಡುವುದರ ಮೂಲಕ ಅವರಲ್ಲಿ ರಾಷ್ಟ್ರ ರಕ್ಷಣೆಯ ಬಗೆಗೆ ಆಸಕ್ತಿಯನ್ನು ಹೆಚ್ಚಿಸುವುದು. 3. ರಾಷ್ಟ್ರೀಯ ಗಂಡಾಂತರ ಪರಿಸ್ಥಿತಿಯಲ್ಲಿ ರಕ್ಷಣಾ ಪಡೆಗಳನ್ನು ಕ್ಷಿಪ್ರವಾಗಿ ವಿಸ್ತರಿಸಲು ಅನುಕೂಲವಾಗುವಂತೆ ನುರಿತ ಜನಬಲವನ್ನು ಸಿದ್ಧಪಡಿಸುವುದು.

ಎನ್. ಸಿ. ಸಿ. ಶಿಕ್ಷಣವನ್ನು ಕಾರ್ಯಗತಗೊಳಿಸಲು ಕೇಂದ್ರ ಸರಕಾರದ ವತಿಯಿಂದ ಅಖಿಲ ಭಾರತ ವ್ಯಾಪ್ತಿಯಲ್ಲಿರುವ ಎನ್. ಸಿ. ಸಿ. ಡೈರೆಕ್ಟರೇಟ್ ಜನರಲ್ ಎಂಬ ಸಂಸ್ಥೆಯಿದೆ : ಇದರ ಕೈಕೆಳಗೆ ಪ್ರತಿ ರಾಜ್ಯದ ರಾಜಧಾನಿಯಲ್ಲಿಯೂ ಒಂದೊಂದು ಎನ್. ಸಿ. ಸಿ. ಡೈರೆಕ್ಟರೇಟ್ ಇದೆ ; ಇದರ ಕೆಳಗೆ ಎನ್. ಸಿ. ಸಿ. ಗ್ರೂಪ್ ಹೆಡ್‌ಕ್ವಾರ್ಟರ್‌ಗಳೂ ರಾಜ್ಯದ ಜಿಲ್ಲೆಗಳಲ್ಲಿ ಹಬ್ಬಿರುವ ವಿವಿಧ ಬೆಟಾಲಿಯನ್ನುಗಳೂ ಇವೆ. ಈ ಬೆಟಾಲಿಯನ್ನುಗಳು ವಿದ್ಯಾಸಂಸ್ಥೆಗಳೊಡನೆ ನೇರವಾಗಿ ಸಂಪರ್ಕ. ಸಂಬಂಧ ಹೊಂದಿದ್ದು, ಎನ್. ಸಿ. ಸಿ. ಶಿಕ್ಷಣದ ಸಕಲ ಹೊಣೆಯನ್ನೂ ಹೊತ್ತಿರುತ್ತವೆ. ವಿದ್ಯಾಸಂಸ್ಥೆಯ ಉತ್ಸಾಹೀ ತರುಣ ಅಧ್ಯಾಪಕರು ವಿಶೇಷ ಎನ್. ಸಿ. ಸಿ. ಶಿಕ್ಷಣ ಪಡೆದು ಎನ್. ಸಿ. ಸಿ. ಅಧಿಕಾರಿಗಳಾಗಿ ಕಮಿಷನ್ ಪಡೆಯುತ್ತಾರೆ. ಇವರೇ ಎನ್. ಸಿ. ಸಿ. ಶಿಕ್ಷಣದ ಜೀವಾಳ. ಇವರ ಕೈಕೆಳಗೆ ಬರುವ ಚೇತನದ ಚಿಲುಮೆಗಳಾದ ವಿದ್ಯಾರ್ಥಿಗಳನ್ನು ಬೆಟಾಲಿಯನ್ನಿನ ಸಹಾಯ ಸಹಕಾರಗಳಿಂದ ಇವರು ಚೆನ್ನಾಗಿ ರೂಪಿಸುತ್ತಾರೆ. ಕವಾಯತು, ಅಂಗಸಾಧನೆ. ಆಯುಧಗಳ ಅಭ್ಯಾಸ, ಭೂಚಿತ್ರ ಪಠನ. ವಾರ್ಷಿಕ ಶಿಬಿರಗಳು ಮುಂತಾದ ವಿವಿಧ ಚಟುವಟಿಕೆಗಳಿಂದ ಎನ್. ಸಿ. ಸಿ. ಕೆಡೆಟುಗಳು ತಾವು ಒಂದು ಬಳಗದವರು, ಒಂದು ದೇಶದವರು ಎನ್ನುವ ವಿಶಾಲ ಮನೋಭಾವನೆ ಬೆಳೆಸಿಕೊಳ್ಳುತ್ತಾರೆ. ಜೊತೆಯಲ್ಲಿಯೇ ಸಾಮೂಹಿಕವಾಗಿ ಒಂದು ಕಾರ್ಯವನ್ನು ಶಿಸ್ತಿನಿಂದ ಚುರುಕಾಗಿ ನೆರವೇರಿಸಲು ಸಮರ್ಥರಾಗುತ್ತಾರೆ. ಅವರಲ್ಲಿರುವ ಸುಪ್ತಶಕ್ತಿಗಳು ಪ್ರಕಟಗೊಂಡು ಅವರು ದಕ್ಷ ಯೋಗ್ಯ ನಾಯಕರಾಗುತ್ತಾರೆ. ಇವೆಲ್ಲ. ವಿದ್ಯಾಭ್ಯಾಸದ ಜೊತೆಯಲ್ಲಿಯೇ ನಡೆಯುತ್ತವೆ. ಹೀಗೆ ವಿಶ್ವವಿದ್ಯಾನಿಲಯ ಮತ್ತು ಎನ್. ಸಿ. ಸಿ. ಮೂಸೆಯಲ್ಲಿ ಕರಗಿ ಹೊರಗೆ ಬಂದ ಚಿನ್ನ ದೇಶದಲ್ಲಿ ಮೂರನೆಯ ರಕ್ಷಣಾ ಪಡೆ ಎಂಬ ಸಾರ್ಥಕನಾಮ ಗಳಿಸಿದೆ. (ಒಂದನೆಯದು ರಕ್ಷಣಾ ಪಡೆಗಳು. ಎರಡನೆಯದು ಗೃಹರಕ್ಷಕ ದಳ.) ಇವರಲ್ಲಿ ಇಷ್ಟವಿರುವವರು ಸೈನ್ಯವನ್ನು ಸೇರಬಹುದು ; ಹಾಗೆ ಸೇರದೇ ಇರುವವರಿಗೂ ಅವರು ಯಾವ ವೃತ್ತಿಯನ್ನು ಅವಲಂಬಿಸಿದರೂ ಎನ್. ಸಿ. ಸಿ. ಯಲ್ಲಿ ಗಳಿಸಿದ ಅನುಭವ ಬಲು ಪ್ರಯೋಜನಕಾರಿಯಾಗುತ್ತದೆ.

ಸಮವಸ್ತ್ರಧಾರಿಗಳಾದ ಈ ತರುಣ ತರುಣಿಯರು ಶಿಕ್ಷಣ ರಂಗದಲ್ಲಿ ಕಾರ್ಯೋನ್ಮುಖರಾಗಿರುವಾಗ. ಸಾವಧಾನ ಸಮಸ್ಥಿತಿಯಲ್ಲಿ ಒಂದು ಪ್ರತಿಮೆಯಂತೆ ನಿಂತಿರುವಾಗ. ಗೌರವರಕ್ಷೆಯನ್ನು ಆತ್ಮಾಭಿಮಾನ ವಿಶ್ವಾಸಗಳಿಂದ ಹಿರಿಯರಿಗೆ ನೀಡುವಾಗ. ಸಾಮೂಹಿಕವಾಗಿ ಸ್ನೇಹಪ್ರಜ್ಞೆಯಿಂದ ಕರ್ತವ್ಯ ನಿರ್ವಹಿಸುವಾಗ ರಾಷ್ಟ್ರದ ಭವಿಷ್ಯ ಸಾಮರ್ಥ್ಯಗಳನ್ನು ಕುರಿತು ಭರವಸೆ ಮೂಡುತ್ತದೆ.

## ಎಲಿಜಬೆತ್, ಮೊದಲನೆಯ

ಹನ್ನೊಂದು ವರ್ಷ ರಾಜ್ಯದಲ್ಲಿ ಅರಾಜಕತೆ. [illegible] ರಾಜನ ಅನಂತರ, ಒಂಬತ್ತು ವರ್ಷದ ದುರ್ಬಲ ರೋಗಿ ಬಾಲಕನ ಸಿಂಹಾಸನಾ

ದ್ರೋಹವು. ಆರು ವರ್ಷ ಪ್ರಬಲ ಭ್ರಮಾಂಧರ ಆಳ್ವಿಕೆಯಲ್ಲಿ ಕ್ರೌರ್ಯ. ಜನಗಳ ದಂಗೆ. ಹುಡುಗನ ಸಾವಿನ ಬಳಿಕ ಸಿಂಹಾಸನಕ್ಕಾಗಿ ಜಗಳ. ಐದು ವರ್ಷ ವಿವೇಕವಿಲ್ಲದ ಹೆಂಗಸಿನ ಪ್ರಭುತ್ವ. ಹೀಗೆ ಹನ್ನೊಂದು ವರ್ಷ ರಾಜ್ಯಕ್ಕೆ ಸಮರ್ಥ ಆಡಳಿತವಿಲ್ಲ. ಸುತ್ತಲೂ ರಾಜ್ಯವನ್ನು ಕಬಳಿಸಲು ಕಾದಿರುವ ಶತ್ರು ರಾಜರು. ಅವರಲ್ಲಿ ಕೆಲವರಿಗೆ ಸಹಾಯ ಮಾಡಲು ದೇಶದೊಳಗೆ ಸಿದ್ಧವಾದ ಜನ. ಕ್ಯಾಥಲಿಕರಿಗೂ ಪ್ರಾಟೆಸ್ಟೆಂಟರಿಗೂ ಜಗಳ.

ಇಂಥ ಸ್ಥಿತಿಯಲ್ಲಿ ಇಪ್ಪತ್ತೈದು ವರ್ಷ ವಯಸ್ಸಿನ. ಇನ್ನೂ ಮದುವೆ ಇಲ್ಲದ. ಯುವತಿ ಸಿಂಹಾಸನವನ್ನೇರಿದಳು. ನಲವತ್ತೈದು ವರ್ಷಗಳ ರಾಜ್ಯಭಾರದಲ್ಲಿ ದೇಶದಲ್ಲಿ ಶಾಂತಿ ಸ್ಥಾಪಿಸಿದಳು. 'ಸೋಲರಿಯದ ನೌಕಾದಳ' ಎಂದುಕೊಂಡ ಶತ್ರುಸೈನ್ಯವನ್ನು ಸೋಲಿಸಿದಳು. ಇಂದಿಗೂ ಆ ರಾಜ್ಯದ ಇತಿಹಾಸದ ಸಮರ್ಥ ಪ್ರಭುಗಳಲ್ಲಿ ಒಬ್ಬಳೆಂದು ಪ್ರಸಿದ್ಧಳಾಗಿದ್ದಾಳೆ ಆಕೆ.

ಇವಳು ಇಂಗ್ಲೆಂಡಿನ ಮೊದಲನೆಯ ಎಲಿಜಬೆತ್ ರಾಣಿ. ಇವಳ ಕಾಲದಲ್ಲಿಯೇ ಈಸ್ಟ್ ಇಂಡಿಯಾ ಕಂಪೆನಿ ಭಾರತಕ್ಕೆ ಬಂದದ್ದು. 1600ರ ಡಿಸೆಂಬರ್ 31ರಂದು ಅವಳು ಈ ಕಂಪೆನಿಗೆ ಹದಿನೈದು ವರ್ಷಗಳ ಕಾಲ ಭಾರತದೊಡನೆ ವ್ಯಾಪಾರ ನಡೆಸುವ ಸನ್ನದನ್ನು ಕೊಟ್ಟು ಇಂಗ್ಲಿಷ್ ವರ್ತಕರನ್ನು ಕಳುಹಿಸಿದಳು. "ನಿಮ್ಮೆಲ್ಲರ ಒಲವಿನಿಂದ ನಾನು ಆಳಿದ್ದೇನೆ. ಈ ಒಲವೇ ನನ್ನ ರಾಜ್ಯಾಧಿಕಾರದ ಪರಮಭೂಷಣ ಎಂದು ನಾನು ಗಣಿಸಿದ್ದೇನೆ" –1601ರಲ್ಲಿ ನಡೆದ ಸಂಸತ್ ಅಧಿವೇಶನದಲ್ಲಿ ಇಂಗ್ಲೆಂಡಿನ ಮೊದಲನೆಯ ಎಲಿಜಬೆತ್ ರಾಣಿ ನುಡಿದ ಮಾತುಗಳಿವು. ನಿರಂಕುಶ ಪ್ರಭುತ್ವದ ಕಾಲದಲ್ಲಿ ಹೊಮ್ಮಿದ ಈ ನುಡಿಗಳು ಆಕೆಯ ವ್ಯಕ್ತಿತ್ವವನ್ನೂ ದೇಶಪ್ರೇಮವನ್ನೂ ನಿಚ್ಚಳವಾಗಿ ಚಿತ್ರಿಸುತ್ತವೆ. ಸುವರ್ಣ ಕಾಲವೆಂದು ಹೆಸರಾದ ಆಕೆಯ ಆಳ್ವಿಕೆಯಲ್ಲಿ ಇಂಗ್ಲೆಂಡ್ ತನ್ನ ಪರ್ವಕಾಲವನ್ನು ಕಂಡಿತು. ಯೂರೋಪಿನ ಮಧ್ಯಯುಗದ ಹೀನ ಸ್ಥಿತಿಯಿಂದ ಇಂಗ್ಲೆಂಡಿನ ಜನತೆಯನ್ನು ಉದ್ಧರಿಸಿದವಳು ಮೊದಲನೆಯ ಎಲಿಜಬೆತ್ ರಾಣಿ. ಅವಳು ಇಂಗ್ಲೆಂಡಿನ ಏಳಿಗೆ, ಔನ್ನತ್ಯಗಳಿಗಾಗಿ ಜೀವನವನ್ನೇ ಮುಡಿಪಾಗಿಟ್ಟಳು.

'ಸದ್ಗುಣಗಳ ರಾಣಿ', 'ದಿವ್ಯಪ್ರಭೆಯುಳ್ಳವಳು' ಎಂಬ ಪ್ರಶಂಸೆಗಳಿಂದ ಪ್ರಜಾನುರಾಗಿಯಾದ ಮೊದಲನೆಯ ಎಲಿಜಬೆತ್ ಇಂಗ್ಲೆಂಡಿನ ಅರಸ ಟ್ಯೂಡರ್ ಮನೆತನದ ಎಂಟನೆಯ ಹೆನ್ರಿಯ ಮಗಳು. ಇವಳ ತಂದೆಯ ಆರು ಹೆಂಡತಿಯರಲ್ಲಿ ಈಕೆಯ ತಾಯಿ ಆನ್‌ಬೊಲೀನ್ ಎರಡನೆಯವಳು. ಅವಳ ಮೇಲೆ ಸಂಶಯ ಪಟ್ಟು ಎಂಟನೆಯ ಹೆನ್ರಿ ಅವಳ ಶಿರಚ್ಛೇದನ ಮಾಡಿಸಿದ. ಇದರಿಂದಾಗಿ ಎಲಿಜಬೆತಳ ಬಾಲ್ಯ ಆನಂದದಾಯಕವಾಗಿರಲಿಲ್ಲ. ತಜ್ಞರಿಂದ ಶಿಕ್ಷಣ ಪಡೆದ ಈ ಹುಡುಗಿ ತನ್ನ ಶಿಕ್ಷಣವೇತ್ತರಿಂದ ಚಾಣಾಕ್ಷಮತಿ ಎಂಬ ಪ್ರಶಂಸೆಗೆ ಪಾತ್ರಳಾದಳು. ತನ್ನ ಹದಿನೈದನೆಯ ವಯಸ್ಸಿನ ಹೊತ್ತಿಗೆ ಈಕೆ ಹಲವು ಭಾಷೆಗಳನ್ನು ಕಲಿತಳು. ಒಳಸಂಚು ಹಾಗೂ ಅಪಾಯಗಳಿಂದ ತುಂಬಿ ತುಳುಕುತ್ತಿದ್ದ ರಾಜಮನೆತನ ಮೊದಲ ಇಪ್ಪತ್ತೈದು ವರ್ಷಗಳಲ್ಲಿ ಅವಳಿಗೆ ಒಳ್ಳೆಯ ಪಾಠವನ್ನು ಕಲಿಸಿತು. ಅವಶ್ಯಬಿದ್ದಾಗ ದೃಢತೆ ಕಾಠಿಣ್ಯ ಹಾಗೂ ಚಾಕಚಕ್ಯ ಪ್ರದರ್ಶಿಸಲು ಅವಳು ಹಿಂದೆಗೆಯಲಿಲ್ಲ.

ಎಲಿಜಬೆತ್ ಆಳ್ವಿಕೆಗೆ ಬಂದ ಕಾಲ ಬಹಳ ಅಸ್ಥಿರವಾಗಿದ್ದಿತು. ಇಟಲಿ ಫ್ರಾನ್ಸ್‌ಗಳಿಂದ ಅಪಾಯ ಸಂಭವಿಸಬಹುದಾಗಿತ್ತು. ಆದರೆ ಇಂಗ್ಲೆಂಡಿನ ಕೀರ್ತಿ ಮತ್ತು ಸಿಂಹಾಸನದ ರಕ್ಷಣೆಯನ್ನು ಹೊತ್ತು ಎಲಿಜಬೆತ್ ಈ ಎಲ್ಲ ವಿಷಮ ಪರಿಸ್ಥಿತಿಗಳಿಂದಲೂ ದೇಶವನ್ನು ಪಾರುಮಾಡಿದಳು.

ಎಲಿಜಬೆತ್ ಕೊನೆಯ ವರೆಗೂ ಮದುವೆಯಾಗಲಿಲ್ಲ. ಇವಳ ಕಾಲದಲ್ಲಿ ಇಂಗ್ಲಿಷ್ ಅನ್ವೇಷಕರು ಅಮೆರಿಕದಲ್ಲಿ ಕಂಡುಹಿಡಿದ ಒಂದು ಪ್ರದೇಶಕ್ಕೆ, ಕನ್ಯೆಯಾಗಿಯೆ ಉಳಿದ ತಮ್ಮ ರಾಣಿಯ ನೆನಪಿಗೆ 'ವರ್ಜೀನಿಯ' ಎಂದು ಹೆಸರನ್ನು ಕೊಟ್ಟರು. ಅಮೆರಿಕದಲ್ಲಿ ವರ್ಜೀನಿಯ ಇಂಗ್ಲೆಂಡಿನವರ ಮೊದಲ ವಸಾಹತಾಯಿತು. ಯೂರೋಪಿನ ಇತಿಹಾಸದಲ್ಲಿ ಸ್ಪ್ಯಾನಿಷ್ ಆರ್ಮಡಾ ಎಂಬ ನೌಕಾಪಡೆ ಬಹು ಪ್ರಸಿದ್ಧ. ಸ್ಪೇನ್ ಮತ್ತು ಇಂಗ್ಲೆಂಡ್ ಮೂವತ್ತು ವರ್ಷ ಯುದ್ಧದಲ್ಲಿ ತೊಡಗಿದ್ದುವು. ಕೊನೆಗೆ ಇಂಗ್ಲೆಂಡ್ ಸ್ಪೇನ್ ದೇಶವನ್ನು ಸೋಲಿಸಿ ವಿಜಯ ಸಂಪಾದಿಸಿದ್ದು ಈ ರಾಣಿಯ ಆಳ್ವಿಕೆಯಲ್ಲಿಯೇ. ಎಲಿಜಬೆತ್ ಸೈನಿಕರನ್ನು ಹುರಿದುಂಬಿಸಿ ವಿಜಯ ದೊರೆಯುವಂತೆ ಮಾಡಿದಳು. "ನಾನು ಅಬಲೆಯಾದರೂ ಅವಶ್ಯವಿದ್ದರೆ ಯುದ್ಧ ರಂಗಕ್ಕೆ ಬರುತ್ತೇನೆ," ಎಂದು ಘೋಷಿಸಿದಳು.

ಮೊದಲನೆಯ ಎಲಿಜಬೆತ್ ಪ್ರಚಂಡ ಕೋಪ ಉಳ್ಳವಳೂ ಅಭಿಮಾನಶಾಲಿಯೂ ಆಗಿದ್ದಳು. ಆದರೆ ಕನಸು ನನಸುಗಳಲ್ಲೂ ಇಂಗ್ಲೆಂಡಿನ ಹಿತವೇ ಅವಳಿಗೆ ಮುಖ್ಯವಾಗಿದ್ದುದರಿಂದಲೂ ಪ್ರಾಟೆಸ್ಟೆಂಟ್ ಮತ ಸ್ಥಾಪನೆಯಲ್ಲಿ ಈಕೆಗಿದ್ದ ಅತೀವ್ರ ಶ್ರದ್ಧೆಯಿಂದಲೂ ಎಲಿಜಬೆತಳ ದೋಷಗಳು ಎದ್ದು ಕಾಣಲಿಲ್ಲ. ಈ ರಾಜನೀತಿ ವಿಶಾರದೆ ತನ್ನ ಮನಸ್ಸಿನಲ್ಲಿದ್ದುದನ್ನು ತೋರಗೊಡುತ್ತಿರಲಿಲ್ಲ. ತನ್ನ ಪರಿವಾರದವರಲ್ಲಿ ಪ್ರತಿಯೊಬ್ಬರ ಯೋಗ್ಯತೆಯನ್ನು ಅಳೆಯಬಲ್ಲವಳಾಗಿದ್ದಳು. ಅತ್ಯಂತ ಬುದ್ಧಿಶಾಲಿಗಳು ಮತ್ತು ಬಲಿಷ್ಠರು ಅವಳ ಸೇವೆಗೆ ಉತ್ಸಾಹದಿಂದ ಮುಡಿಪಾಗುತ್ತಿದ್ದರು.



'ಸದ್ಗುಣಗಳ ರಾಣಿ' ಮೊದಲನೆಯ ಎಲಿಜಬೆತ್

ಎಲಿಜಬೆತ್ 1603ರ ಮಾರ್ಚ್ ತಿಂಗಳಲ್ಲಿ ಗತಿಸಿದಳು. ಇಂಗ್ಲೆಂಡನ್ನು ಸುಗಮ ದಾರಿಗೆ ಕರೆತಂದ ಎಲಿಜಬೆತ್ ಕಾವ್ಯಸ್ಫೂರ್ತಿಗೂ ಚೇತನವಾಗಿದ್ದಳು. ಮಹಾನಾಟಕಕಾರ ಷೇಕ್ಸ್‌ಪಿಯರ್ ಇವಳ ಕಾಲದಲ್ಲಿದ್ದು ಇವಳಿಂದ ಪ್ರೋತ್ಸಾಹ ಪಡೆದ.

## ಎವರೆಸ್ಟ್ ಶಿಖರ

ಮನುಷ್ಯನ ಸಾಹಸ ಪ್ರವೃತ್ತಿಗೆ, ಸೋಲನೊಪ್ಪದ ಧೃತಿಗೆ ಆಹ್ವಾನ ಎವರೆಸ್ಟ್. ಪ್ರಪಂಚದಲ್ಲಿಯೇ ಅತ್ಯಂತ ಎತ್ತರವಾದದ್ದು ಈ ಶಿಖರ. ನೇಪಾಳ ಮತ್ತು ಟಿಬೆಟ್ ಗಡಿಯಲ್ಲಿರುವ ಹಿಮಾಲಯ ಪರ್ವತಗಳಲ್ಲಿ ಈ ಶಿಖರವಿದೆ. ಸರ್ ಜಾರ್ಜ್ ಎವರೆಸ್ಟ್ ಎಂಬ ಆಂಗ್ಲ ಸರ್ವೆಯರ್-ಇಂಜಿನಿಯರ್ ಈ ಶಿಖರದ ಸಮೀಕ್ಷೆ ನಡೆಸಿ ಇದು 8851 ಮೀಟರ್ ಎತ್ತರವಿದೆಯೆಂದು ಅಂದಾಜು ಮಾಡಿದರು. ಅಲ್ಲಿಯ ವರೆಗೆ ಜಗತ್ತಿನ ಅತ್ಯುನ್ನತ ಶಿಖರದ ವಿಷಯ ಜನರಿಗೆ ಗೊತ್ತಿರಲಿಲ್ಲ. ಅದ್ದರಿಂದ ಎವರೆಸ್ಟ್ ಮಹಾಶಯನ ಹೆಸರೇ ಈ ಶಿಖರಕ್ಕೆ ದೊರೆಯಿತು. 1933ರಲ್ಲಿ ಆಕಾಶದಿಂದ ಈ ಶಿಖರದ ಛಾಯಾಚಿತ್ರ ತೆಗೆದುಕೊಂಡರು.

ಎವರೆಸ್ಟ್ ಶಿಖರ ಯಾವಾಗಲೂ ಹಿಮದಿಂದ ಮುಚ್ಚಿರುತ್ತದೆ. ಅತಿ ಇಳಿಜಾರಾದ ಪರ್ವತ ಪ್ರದೇಶವಿದು. ಎವರೆಸ್ಟ್ ಶಿಖರವನ್ನು ಮುಟ್ಟುವ ಸಾಹಸಮಾಡುವುದು ಮರಣಕ್ಕೆ ಸವಾಲು ಹಾಕಿದಂತೆ. 1920ರಲ್ಲಿ ಮೊದಲ ಬಾರಿಗೆ ಬ್ರಿಟಿಷ್ ಪರ್ವತಾರೋಹಿಗಳಿಗೆ ಎವರೆಸ್ಟ್ ಶಿಖರಾರೋಹಣಕ್ಕೆ ನೇಪಾಳ ಹಾಗೂ ಟಿಬೆಟ್‌ಗಳಿಂದ ಅನುಮತಿ ದೊರೆಯಿತು. ಎವರೆಸ್ಟ್ ಆರೋಹಣಕ್ಕಾಗಿ ಪ್ರಯತ್ನಗಳು ನಡೆದುವು. ಕೆಲವರು ಜೀವ ಬಿಟ್ಟರು. 1924ರಲ್ಲಿ ಮ್ಯಾಲರಿ ಮತ್ತು ಇರ್ವಿನ್ ಶಿಖರಕ್ಕೆ ಸುಮಾರು ಮೂವತ್ತು ಮೀಟರುಗಳ ಕೆಳಗೆ ಹತ್ತುತ್ತಿದ್ದುದನ್ನು ಅವರ ಜೊತೆಗಾರರು ಕಂಡರು. ಆದರೆ ಅವರು ಹಿಂದಿರುಗಲಿಲ್ಲ.

1953ರಲ್ಲಿ ಸರ್ ಜಾನ್ ಹಂಟನ ನಾಯಕತ್ವದಲ್ಲಿ ಹನ್ನೊಂದನೆಯ ಪ್ರಯತ್ನ ನಡೆಯಿತು. ಆ ವರ್ಷದ ಮೇ 29 ಸ್ಮರಣೀಯ ದಿನ. ಅಜೇಯವೆನಿಸಿದ ಎವರೆಸ್ಟ್ ಶಿಖರವನ್ನು ಪ್ರಥಮ ಬಾರಿ ತೇನ್‌ಸಿಂಗ್ ಮತ್ತು ಹಿಲೆರಿ ಅಂದು ಮುಟ್ಟಿದರು. ತೇನ್‌ಸಿಂಗ್ ನಾರ್ಕೆ ಒಬ್ಬ ಷೆರ್ಪಾ, ಭಾರತೀಯ; ಎಡ್ಮಂಡ್ ಹಿಲರಿ ನ್ಯೂಜಿಲೆಂಡಿನ ಪ್ರಜೆ.

1956ರಲ್ಲಿ ಸ್ವಿಟ್ಜರ್‌ಲೆಂಡಿನ ಪರ್ವತಾರೋಹಿಗಳು ಎವರೆಸ್ಟ್ ಶಿಖರವನ್ನು ಮುಟ್ಟಿದರು. 1969 ಮೇ 20ರಂದು ಭಾರತೀಯ ಪರ್ವತಾರೋಹಿಗಳು ಲೆಫ್ಟಿನೆಂಟ್ ಕಮಾಂಡರ್ ಎಂ. ಎಸ್. ಕೊಹ್ಲಿ ಅವರ ನೇತೃತ್ವದಲ್ಲಿ ಎವರೆಸ್ಟ್ ಶಿಖರ ತಲಪಿದರು.

ನೋಡಿ : ತೇನ್‌ಸಿಂಗ್, ನಾರ್ಕೆ ; ಹಿಲರಿ, ಎಡ್ಮಂಡ್ ; ಹಿಮಾಲಯ

ಸಾಹಸಿಗೆ ಆಹ್ವಾನವೀಯುವ ಎವರೆಸ್ಟ್ ಶಿಖರ



## ಎಸ್ಕಿಮೊ

ತಮ್ಮ ಇಡೀ ಜೀವಮಾನದಲ್ಲಿ ಗಿಡಮರಗಳನ್ನೇ ನೋಡದಿರುವ ಜನರೂ ಇದ್ದಾರೆ ಎಂದರೆ ನೀವು ನಂಬುತ್ತೀರಾ? ಎಸ್ಕಿಮೊಗಳಲ್ಲಿ ಹೆಚ್ಚಿನವರು ಅಂಥವರು.

ಎಸ್ಕಿಮೊ ಜನರು ಗ್ರೀನ್‌ಲೆಂಡ್, ಉತ್ತರ ಕೆನಡ, ಅಲಾಸ್ಕಗಳ ನಿವಾಸಿಗಳು. ತಾಮ್ರ ಬಣ್ಣದವರು. ಅಷ್ಟು ಎತ್ತರವೂ ಅಲ್ಲ ಕುಳ್ಳೂ ಅಲ್ಲದ ದೇಹಪ್ರಕೃತಿ. ಚಪ್ಪಟೆ ಮುಖ. ನೇರವಾದ ಒರಟು ಕಪ್ಪು ಕೂದಲು. ಈ ಜನರು ಬಹುಶಃ ಸೈಬೀರಿಯದಿಂದ ಬಂದಿರಬಹುದು ಎಂದು ಕೆಲವರು ಹೇಳುತ್ತಾರೆ. ಇವರು ಅಮೆರಿಕದ ರೆಡ್ ಇಂಡಿಯನ್ನರ ಬುಡಕಟ್ಟಿನವರೆಂದು ಬೇರೆ ಕೆಲವರ ಅಭಿಪ್ರಾಯ.

ಇವರ ಮನೆ ನಮಗೆ ವಿಚಿತ್ರವಾಗಿ ಕಾಣುತ್ತದೆ. ಇದಕ್ಕೆ ಬಾಗಿಲೇ ಇಲ್ಲ. ಇಟ್ಟಿಗೆ, ಗಾರೆಯಿಂದ ಕಟ್ಟಿದ ಮನೆಯಲ್ಲ ಇವರದು. ಹಿಮದ ದೊಡ್ಡ ತುಂಡುಗಳನ್ನು ಒಂದರ ಮೇಲೊಂದು ಜೋಡಿಸಿ ಮನೆ ಕಟ್ಟುತ್ತಾರೆ. ಒಳಗೋಡೆಗೆ ಸೀಲ್ (ದೊಡ್ಡ ಮೀನು) ಚರ್ಮಗಳನ್ನು ನೇತು ಹಾಕಿರುತ್ತಾರೆ. ಮನೆಗೆ ಹೋಗುವ ದಾರಿ ಭೂಮಿಯ ಒಳಗಿರುತ್ತದೆ. ಹೀಗಾಗಿ ಶಾಖ ಒಳಗೇ ಉಳಿಯುತ್ತದೆ. ಶೀತ ಒಳಗೆ ಬರುವುದಿಲ್ಲ. ಈ ಮನೆಗೆ 'ಇಗ್ಲೂ' ಎಂದು ಹೆಸರು. ಎಸ್ಕಿಮೊಗಳು ಬೆಂಕಿಯ ನೆರವಿನಿಂದ ಮನೆಯನ್ನು ಬೆಚ್ಚಗಿಟ್ಟುಕೊಳ್ಳುತ್ತಾರೆ. ಮನೆಯಲ್ಲಿ ಬ್ಲಬ್ಬರ್ ದೀಪವನ್ನು ಹಚ್ಚುತ್ತಾರೆ. ಬ್ಲಬ್ಬರ್ ದೀಪವೆಂದರೆ ಸೋಪುಕಲ್ಲು ಅಥವಾ ಜೇಡಿಮಣ್ಣಿನಿಂದ ಮಾಡಿದ ಕಂಬದಲ್ಲಿ ತಿಮಿಂಗಿಲದ ಕೊಬ್ಬನ್ನು ಹಾಕಿ ಉರಿಸುವುದು. ಈ ದೀಪವನ್ನು ಅವರೇ ರೂಪಿಸಿದ್ದಾರೆ. ಹಾಗೆಯೇ ಆಯುಧಗಳು. ಮೀನು ಹಿಡಿಯುವ ಸಲಕರಣೆಗಳನ್ನೂ ತಾವೇ ಆಲೋಚಿಸಿ ಸಿದ್ಧಪಡಿಸಿದ್ದಾರೆ. ಎಸ್ಕಿಮೊಗಳು ಹಿಮದ ಮನೆಯಲ್ಲದೆ ವಾಲ್‌ರಸ್ ಎಂಬ ಪ್ರಾಣಿಯ ಚರ್ಮವನ್ನು ಉಪಯೋಗಿಸಿಯೂ ಮನೆ ಕಟ್ಟುತ್ತಾರೆ ; ಕಲ್ಲುಕಟ್ಟಡಗಳಲ್ಲೂ ವಾಸಿಸುತ್ತಾರೆ. ಎಸ್ಕಿಮೊಗಳು ಹೆಚ್ಚಾಗಿ ಇರುವುದು ಆರ್ಕ್‌ಟಿಕ್ ವಿಭಾಗದಲ್ಲಿ. ಇದು ಪ್ರಪಂಚದ ಒಂದು ತುದಿ. ಚಳಿಗಾಲ ದೀರ್ಘವಾಗಿ, ಕತ್ತಲೆಯಿಂದ ತುಂಬಿರುತ್ತದೆ. ಕ್ಯಾರಿಬೂ ಪ್ರಾಣಿಯ ತುಪ್ಪಟದಿಂದ ಬಟ್ಟೆ ತಯಾರಿಸಿಕೊಳ್ಳುತ್ತಾರೆ. ಇತರ ಪ್ರಾಣಿಗಳ ಚರ್ಮಗಳನ್ನೂ ಬಟ್ಟೆಯಂತೆ ಉಪಯೋಗಿಸಿದರೂ ಕ್ಯಾರಿಬೂ ತುಪ್ಪಟವನ್ನು ಬಳಸುವುದೇ ಹೆಚ್ಚು. ಎಸ್ಕಿಮೊ ಹೆಂಗಸರು ತುಪ್ಪಟವನ್ನೂ ಪ್ರಾಣಿಗಳ ಚರ್ಮವನ್ನೂ ಎಷ್ಟು ಜಾಣ್ಮೆಯಿಂದ ಹೊಲಿಯುತ್ತಾರೆ ಎಂದರೆ ಹೊಲಿಗೆ ಕಾಣುವುದೇ ಇಲ್ಲ. ನೀರೂ ಹೊಲಿಗೆಯಿಂದ ಒಳಕ್ಕೆ ಇಳಿಯದು.

ಎಸ್ಕಿಮೊಗಳು ಸಣ್ಣ ಗುಂಪುಗಳಲ್ಲಿ ವಾಸಿಸುತ್ತಾರೆ. ಇವರು ಬಹಳ ಸ್ವತಂತ್ರ ಮನೋಭಾವದವರು. ಅವರ ಜೀವನ ಕಷ್ಟಕರ. ಬೇಟೆ ದೊರೆಯಲೆಂದು, ಹವಾ ಚೆನ್ನಾಗಿರಲೆಂದು, ಕಾಯಿಲೆ ಆದವರಿಗೆ ಗುಣವಾಗಲೆಂದು ದೇವರನ್ನು ಪ್ರಾರ್ಥಿಸುತ್ತಾರೆ. ಧಾರ್ಮಿಕ ಮುಖಂಡರು ಕಟ್ಟುನಿಟ್ಟಿನ ವಿಧಿ



ಎಸ್ಕಿಮೊ, ತನ್ನ ಮನೆಯ ಮುಂದುಗಡೆ

ಯುತ್ತ ಹಾಡಿ. ಕುಣಿದು ದೇವರ ಗಮನ ಸೆಳೆಯಲು ಯತ್ನಿಸುತ್ತಾರೆ. ನೆಲದ ಮೇಲೆ ಉರುಳುತ್ತಾರೆ. ಮೂರ್ಛೆ ಹೋಗುವುದೂ ಉಂಟು. ನೋಡುತ್ತ ನಿಂತ ಜನ ದೇವರು ಆವಾಹನೆಯಾಗಿದ್ದಾನೆಂದು ತಿಳಿದುಕೊಳ್ಳುತ್ತಾರೆ. ಅನೇಕ ಮಂದಿ ಎಸ್ಕಿಮೊಗಳು ಈಚೆಗೆ ಕ್ರೈಸ್ತ ಮತ ಸೇರಿದ್ದಾರೆ.

ಎಸ್ಕಿಮೊಗಳು ಕುಶಲ ಬೇಟೆಗಾರರು. 5500 ವರ್ಷಗಳ ಹಿಂದೆಯೇ ಬೇಟೆಯಲ್ಲಿ ಚತುರರಾಗಿದ್ದರು. ಬೇಟೆ ಮತ್ತು ಮೀನು ಹಿಡಿಯುವ ಇವರ ಉಪಕರಣಗಳು ಬಹು ಜಾಣ್ಮೆಯಿಂದ ತಯಾರಾಗಿರುತ್ತವೆ. ಎರಡು ತುದಿಯೂ ಚೂಪಾಗಿರುವ 'ಕಯಾಕ್' ದೋಣಿ ಉಪಯೋಗಿಸುವರು. ಅದಕ್ಕೆ ಚರ್ಮದ ಹೊದಿಕೆ ಇರುತ್ತದೆ. ನಮ್ಮಲ್ಲಿ ಕುದುರೆಗಳೂ, ಹೋರಿಗಳೂ ಬಂಡಿಯನ್ನು ಎಳೆಯುತ್ತವೆ. ಎಸ್ಕಿಮೊಗಳ ಗಾಡಿಗಳನ್ನು ಎಳೆಯುವುದು ನಾಯಿಗಳು. ಆಯತಾಕಾರದಲ್ಲಿ ನಾಲ್ಕು ಮರದ ತುಂಡುಗಳನ್ನು ಜೋಡಿಸಿ ಮಧ್ಯೆ ಮತ್ತು ಪಕ್ಕಕ್ಕೆ ಪ್ರಾಣಿಗಳ ಚರ್ಮವನ್ನು ಹೊದಿಸಿ ಈ ವಾಹನವನ್ನು ನಿರ್ಮಿಸುತ್ತಾರೆ. ಒಂದು ಕಡೆ ಎತ್ತರದ ಚೌಕಟ್ಟನ್ನು ಹಾಕಿರುತ್ತಾರೆ. ಈ ಗಾಡಿಗೆ ಸ್ಲೆಜ್ ಎಂದು ಹೆಸರು. ಒಂದು ದಿನಕ್ಕೆ 61 ಕಿ.ಮೀ.ಗಳವರೆಗೆ ನಾಯಿಗಳು ಈ ವಾಹನವನ್ನು ಎಳೆಯಬಲ್ಲವು.

ಎಸ್ಕಿಮೊಗಳ ನಾಡು ಶೈತ್ಯವಲಯವೂ ಬಂಜರು ಭೂಮಿಯೂ ಆಗಿರುವುದರಿಂದ ಅಲ್ಲಿ ಏನನ್ನೂ ಬೆಳೆಯಲು ಸಾಧ್ಯವಿಲ್ಲ. ಮೀನು, ಸೀಲ್, ತಿಮಿಂಗಿಲ, ಹಿಮಕರಡಿ, ಕ್ಯಾರಿಬೂಗಳನ್ನು ಬೇಟೆಯಾಡಿ ಅವನ್ನೇ ಆಹಾರವಾಗಿ ಬಳಸುತ್ತಾರೆ. ಬೇಸಿಗೆಯಲ್ಲಿ ಹಕ್ಕಿಗಳು, ಅವುಗಳ ಮೊಟ್ಟೆಗಳು ದೊರಕುತ್ತವೆ.

ಎಸ್ಕಿಮೊ ನಾಡಿನಲ್ಲಿ ಮರ ಬಹಳ ಕಡಮೆ. ಇದರಿಂದಲೇ ಅವರಲ್ಲಿ ಎಷ್ಟೋ ಮಂದಿ ಗಿಡಗಳನ್ನು ಕಂಡಿರುವುದಿಲ್ಲ. ಅವರು ಮರವನ್ನು ವ್ಯಾಪಾರ ಕೇಂದ್ರಗಳಲ್ಲಿ ಕೊಳ್ಳುತ್ತಾರೆ. ಮರವನ್ನು ಉಪಕರಣಗಳ ಹಿಡಿಗೆ, ದೋಣಿಯ ಚೌಕಟ್ಟಿಗೆ ಮಾತ್ರ ಬಳಸುತ್ತಾರೆ.

ಕಳೆದ ಕೆಲ ವರ್ಷಗಳಲ್ಲಿ ಬೇರೆ ಜನರೂ ಎಸ್ಕಿಮೊ ನಾಡಿಗೆ ಬಂದಿದ್ದಾರೆ. ಸಂಯುಕ್ತ ಸಂಸ್ಥಾನ, ಕೆನಡ ಸರಕಾರಗಳು ತೀರ ಉತ್ತರದಲ್ಲಿ ಸೈನಿಕ ಠಾಣ್ಯಗಳನ್ನು ನಿರ್ಮಿಸಿಕೊಂಡಿದ್ದಾರೆ. ಗಣಿಗಳು, ತೈಲಬಾವಿಗಳು, ಮೀನುಗಾರಿಕೆ ಇವುಗಳಿಗಾಗಿಯೂ ತುಂಬಾ ಜನ ಬಂದು ಎಸ್ಕಿಮೊ ನಾಡಿನಲ್ಲಿ ಸೇರಿರುವರು. ಆಗಾಗ್ಗೆ ಪ್ರವಾಸಿಗಳು ವಿಮಾನದಲ್ಲಿ ಬರುತ್ತಿರುತ್ತಾರೆ. ಹೊರ ಪ್ರಪಂಚದ ಸಂಪರ್ಕದಿಂದ ಎಸ್ಕಿಮೊಗಳ ಜೀವನ ರೀತಿ ಸ್ವಲ್ಪ ಮಟ್ಟಿಗೆ ಬದಲಾಗುತ್ತಿದೆ.

ನಲವತ್ತು ಶತಮಾನಗಳ ಕಾಲದಿಂದ ದುಸ್ಸಾಧ್ಯವಾದ ವಾತಾವರಣದಲ್ಲಿ ಜೀವಿಸಿರುವ ಎಸ್ಕಿಮೊಗಳು ಇದೀಗ ಪ್ರಪಂಚದ ಇತರ ಮಾನವರ ಸಂಪರ್ಕವನ್ನು ಪಡೆದುಕೊಳ್ಳುತ್ತಿದ್ದಾರೆ. ಕೆಲವರು ವಿದ್ಯುಚ್ಛಕ್ತಿಯ ಬಳಕೆಯನ್ನು ಕಲಿತಿದ್ದಾರೆ. ರೇಡಿಯೊಗಳನ್ನು ಬಳಸುತ್ತಿದ್ದಾರೆ.

ನುನಿವಾಕ್ ದ್ವೀಪಗಳಲ್ಲಿ ಎಸ್ಕಿಮೊಗಳು ಜಿಂಕೆ ಸಾಕುವುದನ್ನು ಕಲಿತಿದ್ದಾರೆ. ಅಲ್ಯೂಷಿಯನ್ ದ್ವೀಪ, ಗ್ರೀನ್‌ಲೆಂಡ್ ಇಲ್ಲಿನ ಎಸ್ಕಿಮೊಗಳು ಕುರಿ, ಆಡು, ದನಗಳನ್ನು ಸಾಕುತ್ತಾರೆ.

ಇತ್ತೀಚೆಗೆ ಎಸ್ಕಿಮೊ ಜನರಿಗೆ ವಿದ್ಯಾಭ್ಯಾಸದಲ್ಲಿ ಆಸಕ್ತಿಯುಂಟಾಗುತ್ತಿದೆ. ಇವರು ಬಹಳ ಬುದ್ಧಿವಂತರೂ ಹೌದು. ಗಣಿಗಳಿರುವ ಊರುಗಳಲ್ಲಿ ಎಸ್ಕಿಮೊ ಹುಡುಗರು ಇಂಗ್ಲಿಷ್ ಭಾಷೆಯನ್ನು ಬಿಳಿ ಜನರ ಹುಡುಗರಷ್ಟೇ ವೇಗವಾಗಿ ಕಲಿಯುತ್ತಾರೆ.

ದೊಡ್ಡ ಎಸ್ಕಿಮೊ ಪಟ್ಟಣಗಳಲ್ಲಿ ಆಧುನಿಕ ಶಾಲೆಗಳು ಸ್ಥಾಪಿತವಾಗಿವೆ. ಎಸ್ಕಿಮೊ ಬಾಲಕರು ಹೆಚ್ಚಾಗಿ ಅಲಾಸ್ಕ ವಿಶ್ವವಿದ್ಯಾನಿಲಯದ ಕಾಲೇಜುಗಳಲ್ಲಿ ಅಭ್ಯಾಸ ಮಾಡುತ್ತಿದ್ದಾರೆ.

ಇವರ ಭಾಷೆ ಬಹು ಜಟಿಲವಾದದ್ದು. ಒಂದೇ ನಾಮಪದಕ್ಕೆ ಸಾವಿರಾರು ರೂಪಗಳಿರುತ್ತವೆ ; ಒಂದೊಂದು ರೂಪಕ್ಕೂ ಒಂದು ನಿರ್ದಿಷ್ಟ ಅರ್ಥ. ಎಸ್ಕಿಮೊದಲ್ಲಿ ಒಂದು ಪುಟದಲ್ಲಿ ಬರೆದದ್ದನ್ನು ಇಂಗ್ಲಿಷಿನಲ್ಲಿ ಬರೆದರೆ ಎರಡೂವರೆ ಪುಟಗಳಾಗುತ್ತದೆ. ಎಸ್ಕಿಮೊದಲ್ಲಿ ಒಂದು ಗಂಟೆಯಲ್ಲಿ ಹೇಳಿದ್ದನ್ನು ಇಂಗ್ಲಿಷಿನಲ್ಲಿ ಹೇಳಬೇಕಾದರೆ ಎರಡೂವರೆ ಗಂಟೆ ಹಿಡಿಯುತ್ತದೆ.

ಈಗ ಜಗತ್ತಿನಲ್ಲಿ 85,000 ಜನ ಎಸ್ಕಿಮೊಗಳಿದ್ದಾರೆ. ವಾತಾವರಣ ಬದಲಾಯಿಸಿದಂತೆ ಇವರು ಪ್ರತ್ಯೇಕ ಪಂಗಡವಾಗಿ ಮುಂದೆಯೂ ಉಳಿಯುವುದು ಕಷ್ಟಕರ.

## ಏಕಸ್ವ

ಇಪ್ಪತ್ತು ವರ್ಷ ಸತತವಾಗಿ ಬರೆದರೂ ಸವೆಯದಂತೆ ಪೆನ್ಸಿಲನ್ನು ಒಬ್ಬ ಸಂಶೋಧಕ ತಯಾರಿಸಬಹುದು. ಹಳೆಯದಾದರೂ ಹರಿಯದ, ಬೆಂಕಿ ತಗಲಿದರೂ ಸುಡದ ಉಡುಪನ್ನು ಯಾರಾದರೊಬ್ಬ ಸಿದ್ಧಗೊಳಿಸಬಹುದು. ವರ್ಷಗಳ ಪರ್ಯಂತ ಕಾಡಿಸಿದ ಉಬ್ಬಸ ಕಾಯಿಲೆ ಒಮ್ಮೆಲೇ ಗುಣವಾಗುವಂಥ ಔಷಧವನ್ನೂ ಒಬ್ಬ ಕಂಡುಹಿಡಿಯಬಹುದು.

ಇವು ಸಾಧ್ಯವಾದೊಡನೆಯೇ ಅವುಗಳ ತಯಾರಿಕೆಯನ್ನು ಎಲ್ಲರೂ ನಡೆಸಿದರೆ ಅವುಗಳಿಂದ ಆತನಿಗೆ ಪ್ರಯೋಜನವಿಲ್ಲ. ಸಂಶೋಧನೆಯ

ಹಕ್ಕು ಸಂಪೂರ್ಣವಾಗಿ ಅವನದು ಎಂದಾದರೆ ಮಾತ್ರ, ಆತನ ಪ್ರತಿಭೆ ಮತ್ತು ಶ್ರಮಗಳಿಗೆ ಯೋಗ್ಯ ಪ್ರತಿಫಲ ದೊರೆಯುತ್ತದೆ.

ಸಂಶೋಧನೆಯಿಂದ ಬರುವ ಪ್ರತಿಫಲವನ್ನು ತಾನು ಮಾತ್ರ ಅನುಭವಿಸಲು ಇರುವ ಸಂಶೋಧಕನ ಹಕ್ಕು, ಏಕಸ್ವ ಅಥವಾ ಗುತ್ತೆ ಎನಿಸಿಕೊಳ್ಳುತ್ತದೆ. 'ಡೈನಮೈಟ್' ಸಿಡಿಮದ್ದನ್ನು ಕಂಡುಹಿಡಿದ ಆಲ್‌ಫ್ರೆಡ್ ನೊಬೆಲ್ ಅದರ ಗುತ್ತೆಯಿಂದ ಅಪಾರ ಹಣ ಗಳಿಸಿದ. ಥಾಮಸ್ ಎಡಿಸನ್ನನ ವಿದ್ಯುದ್ದೀಪ ಮತ್ತು ಗ್ರಾಮಫೋನ್ ಧ್ವನಿಮುದ್ರಿಕೆಗಳ ಗುತ್ತೆಗಳು ಆತನಿಗೆ ಅಪಾರ ಹಣ ತಂದುಕೊಟ್ಟುವು.

ಸಂಶೋಧಕ ತನ್ನ ಹಕ್ಕನ್ನು ಇತರರಿಗೆ ಮಾರಬಹುದು; ಇಲ್ಲವೆ ಬಳಸಿಕೊಳ್ಳಲು ಇತರರಿಗೆ ಅನುಮತಿ ನೀಡಬಹುದು ; ಅಥವಾ ತಾನೇ ತಯಾರಿಕೆಯಲ್ಲಿ ತೊಡಗಬಹುದು. ಅದೇ ಬಗೆಯ ವಸ್ತುವನ್ನು ಬೇರೊಬ್ಬರು ಮಾಡುವಂತಿಲ್ಲ. ಸಂಶೋಧಕ ತನ್ನ ದೇಶದಲ್ಲಿ ಗುತ್ತೆಗಳನ್ನು ಮಂಜೂರು ಮಾಡುವ ಇಲಾಖೆಗೆ ತನ್ನ ಸಂಶೋಧನೆಯನ್ನು ತಿಳಿಸಬೇಕಾಗುತ್ತದೆ, ಹಿಂದೆಂದೂ ಇಂಥ ಅನ್ವೇಷಣೆಯನ್ನು ಯಾರೂ ನಡೆಸಿಲ್ಲವೆಂದು ಇಲಾಖೆಯವರು ಖಚಿತಮಾಡಿಕೊಂಡು, ಆತನಿಗೆ ಗುತ್ತೆಯನ್ನು ಕೊಡುತ್ತಾರೆ. ಆಜೀವ ಪರ್ಯಂತ ಹಕ್ಕು ಸಂಶೋಧಕನ ಪಾಲಿಗೆ ಉಳಿಯುವುದಿಲ್ಲ. ಭಾರತದ ಕಾನೂನಿನಂತೆ ಹದಿನೈದು ವರ್ಷಗಳ ಅವಧಿಯವರೆಗೆ ಏಕಬಾಧ್ಯತೆಯ ಹಕ್ಕು ಜೀವಂತವಿರುತ್ತದೆ. ಅನಂತರ ಐದು ವರ್ಷಗಳವರೆಗೆ ಹಾಗೂ ವಿಶೇಷ ಸಂದರ್ಭದಲ್ಲಿ ಹತ್ತು ವರ್ಷಗಳವರೆಗೆ ಅದನ್ನು ವಿಸ್ತರಿಸಬಹುದು. ಗುತ್ತೆಯ ಅವಧಿ ಮುಗಿಯುವುದರೊಳಗೆ ಮತ್ತೊಬ್ಬರು ಸಂಶೋಧನೆಯನ್ನು ಬಳಸಿಕೊಂಡರೆ ಇಲ್ಲವೆ ಸಂಶೋಧಕ ರೂಪಿಸಿದ ಮಾದರಿಯ ವಸ್ತುಗಳನ್ನೇ ತಯಾರಿಸಿದರೆ ಅದು ಅಪರಾಧ. ಹಾಗೆ ಮಾಡಿದವರು ಶಿಕ್ಷೆಗೆ ಗುರಿಯಾಗುತ್ತಾರೆ.

ಗುತ್ತೆಯನ್ನು ನೀಡುವ ಕ್ರಮ ಪ್ರತಿಯೊಂದು ದೇಶದಲ್ಲೂ ಇದೆ. ಒಂದು ದೇಶದಲ್ಲಿ ಗುತ್ತೆ ಆ ದೇಶದ ವ್ಯಾಪ್ತಿಗೆ ಮಾತ್ರ ಸೀಮಿತ. ಒಂದು ಸಂಶೋಧನೆಯ ಹಕ್ಕನ್ನು ಬೇರೆ ದೇಶಗಳಲ್ಲೂ ಕಾಯ್ದುಕೊಳ್ಳಬೇಕಾದರೆ ಆ ದೇಶಗಳ ಗುತ್ತೆಗಳನ್ನೂ ಪಡೆಯಬೇಕು. ಗುತ್ತೆಗಳ ಬಗೆಗೆ ಪರಸ್ಪರ ಒಡಂಬಡಿಕೆ ಮಾಡಿಕೊಂಡ ಅನೇಕ ದೇಶಗಳಿವೆ. 1965ರ ಹೊತ್ತಿಗೆ ಸುಮಾರು 60 ರಾಷ್ಟ್ರಗಳು ಇಂಥ ಒಪ್ಪಂದ ಮಾಡಿಕೊಂಡಿದ್ದುವು. ಈ ರಾಷ್ಟ್ರಗಳ ಪ್ರಜೆಗಳಿಗೆ ತಮ್ಮ ದೇಶದಲ್ಲಿ ಇರುವ ಹಕ್ಕು, ಎಲ್ಲ ಸದಸ್ಯ ರಾಷ್ಟ್ರಗಳಲ್ಲೂ ದೊರೆಯುತ್ತದೆ. ಎಂದರೆ, ಈ ಅರವತ್ತು ರಾಷ್ಟ್ರಗಳಲ್ಲಿ ಪ್ರತಿ ದೇಶದ ಸಂಶೋಧಕನಿಗೆ ತನ್ನ ರಾಷ್ಟ್ರದಲ್ಲಿ ಮಾತ್ರವಲ್ಲದೆ ಉಳಿದ ಐವತ್ತೊಂಬತ್ತು ರಾಷ್ಟ್ರಗಳಲ್ಲಿಯೂ ರಕ್ಷಣೆ ದೊರೆತಂತಾಯಿತು.

ಅಮೆರಿಕ ಸಂಯುಕ್ತ ಸಂಸ್ಥಾನ, ಫ್ರಾನ್ಸ್, ಗ್ರೇಟ್ ಬ್ರಿಟನ್, ಜರ್ಮನಿ, ಕೆನಡ, ಜಪಾನ್, ಬೆಲ್ಜಿಯಂ—ಇವು ಅನುಕ್ರಮವಾಗಿ ಹೆಚ್ಚಿನ ಸಂಖ್ಯೆಯ ಗುತ್ತೆಗಳನ್ನು ಕೊಡುವ ರಾಷ್ಟ್ರಗಳು. ಸೋವಿಯೆತ್ ರಷ್ಯದಲ್ಲೂ ಅದೇ ಬಗೆಯ ರಾಜ್ಯವ್ಯವಸ್ಥೆ ಇರುವ ಇತರ ರಾಷ್ಟ್ರಗಳಲ್ಲೂ ಸಂಶೋಧಕರಿಗೆ ಗುತ್ತೆ ನೀಡುವುದಿಲ್ಲ. ಬದಲು ಸಂಶೋಧನೆಯ ಪ್ರಶಸ್ತಿ ಪತ್ರ ಕೊಡುತ್ತಾರೆ. ಈಗ ವರ್ಷಕ್ಕೆ ಸುಮಾರು 2,50,000 ಗುತ್ತೆಗಳನ್ನು ಪ್ರಪಂಚದ ವಿವಿಧ ರಾಷ್ಟ್ರಗಳಲ್ಲಿ ಸಂಶೋಧಕರು ಪಡೆಯುತ್ತಾರೆ. ಚಾರ್ಲ್ಸ್ ಗುಡ್ ಇಯರ್ ಪಡೆದ ರಬ್ಬರ್ ಬಳಕೆಯ ವಸ್ತುಗಳ ಗುತ್ತೆ, ರೈಟ್ ಸಹೋದರರ ಹಾರಾಟ ಯಂತ್ರದ ಗುತ್ತೆ, ಮಾರ್ಕೊನಿ, ಫಾರೆಸ್ಟ್ ಮತ್ತು ಜ್ವಾರಿಕ್ಕಿನ್‌ರ ರೇಡಿಯೊ ಮತ್ತು ಟೆಲಿವಿಷನ್ ಗುತ್ತೆಗಳು—ಇವು ಇತಿಹಾಸ ಪ್ರಸಿದ್ಧವಾದ ಕೆಲವು ಗುತ್ತೆಗಳು.

ಸಂಶೋಧನೆಗಳಂತೆ ಸಾಹಿತ್ಯ ಕೃತಿಗಳಿಗೂ ಇದೇ ರೀತಿಯ ಏಕಬಾಧ್ಯತೆಯ ಹಕ್ಕನ್ನು ಕೊಡುವ ಕಾನೂನು ಇದೆ. ಒಬ್ಬ ಕಾದಂಬರಿ ಕವಿತೆ ಇಂಥ ಯಾವುದೇ ಸಾಹಿತ್ಯಕೃತಿಯನ್ನು ರಚಿಸಿದರೆ, ಅವನ ಜೀವಮಾನದಲ್ಲಿ ಹೇಗೋ ಹಾಗೆ ಅವನ ಮರಣಾನಂತರ ಐವತ್ತು ವರ್ಷಗಳವರೆಗೆ ಅದನ್ನು ಅವನ, ಇಲ್ಲವೆ ಅವನ ಉತ್ತರಾಧಿಕಾರಿಗಳ, ಅನುಮತಿ ಇಲ್ಲದೆ ಯಾರೂ ಮುದ್ರಿಸುವಂತಿಲ್ಲ; ಇಲ್ಲವೆ ಪ್ರಕಟಿಸುವಂತಿಲ್ಲ. ಲೇಖಕರ ಅನುಮತಿ ಇಲ್ಲದೆ ಮೂಲ ಕೃತಿಯ ಭಾಷಾಂತರ ಮಾಡುವುದನ್ನೂ ಕಾನೂನು ಪ್ರತಿಬಂಧಿಸುತ್ತದೆ. ಸಂಶೋಧನೆಯ ಸಂಬಂಧದಲ್ಲಿ ಇರುವ ಗುತ್ತೆಯಂತೆ ಸಾಹಿತ್ಯ ಕೃತಿಗಳ ಸ್ವಾಮ್ಯವನ್ನೂ ಲೇಖಕರು ಇತರರಿಗೆ ಕೊಡಬಹುದು.

ಲೇಖಕರ ಈ ಏಕಬಾಧ್ಯತೆಯ ಹಕ್ಕಿಗೆ ಸುಧಾರಿತ ರಾಷ್ಟ್ರಗಳೆಲ್ಲವೂ ಸಾಧಾರಣವಾಗಿ ಮಾನ್ಯತೆ ಕೊಟ್ಟಿವೆ. ರಷ್ಯ ಹಾಗೂ ಇತರ ಕಮ್ಯೂನಿಸ್ಟ್ ರಾಷ್ಟ್ರಗಳು ಮಾತ್ರ ಈ ಹಕ್ಕನ್ನು ಒಪ್ಪುವುದಿಲ್ಲ.

## ಏಷ್ಯ

ಯೂರೋಪ್ ಮತ್ತು ಆಫ್ರಿಕ ಖಂಡಗಳನ್ನು ಏಷ್ಯದಲ್ಲಿಟ್ಟರೆ ಇನ್ನೂ 15 ಲಕ್ಷ ಚದರ ಕಿ.ಮೀ.ಗಳಷ್ಟು ಸ್ಥಳ ಉಳಿಯುತ್ತದೆ. ಅಷ್ಟು ದೊಡ್ಡದು ಏಷ್ಯ ಖಂಡ !

ಏಷ್ಯದ ವಿಸ್ತಾರ 1,70,00,000 ಚ. ಕಿ.ಮೀ. ಅಂದರೆ ಏಷ್ಯ ಖಂಡ ಪ್ರಪಂಚದ ಮೂರನೆಯ ಒಂದು ಭಾಗ ಭೂಮಿಯನ್ನು ಆಕ್ರಮಿಸಿಕೊಂಡಿದೆ. ಪ್ರಪಂಚದ ಅರ್ಧಕ್ಕೂ ಹೆಚ್ಚು ಜನ ಇರುವುದು ಏಷ್ಯದಲ್ಲಿ. 1967ರಲ್ಲಿ ಪ್ರಪಂಚದ ಜನಸಂಖ್ಯೆ 335.6 ಕೋಟಿ. ಇದರಲ್ಲಿ ಏಷ್ಯದ ಜನಸಂಖ್ಯೆ ಸುಮಾರು 187 ಕೋಟಿ. ಏಷ್ಯದ ಉತ್ತರ, ದಕ್ಷಿಣ, ಪೂರ್ವಗಳಲ್ಲಿ ಸಮುದ್ರಗಳಿದ್ದು ಪಶ್ಚಿಮದಲ್ಲಿ ಯೂರೋಪ್ ಖಂಡವನ್ನು ಬೇರ್ಪಡಿಸುವ ಯೂರಲ್ ಪರ್ವತ ಮತ್ತು ಕ್ಯಾಸ್ಪಿಯನ್ ಸಮುದ್ರಗಳಿವೆ.

ಭಾರತ ಮತ್ತು ಚೀನಗಳಲ್ಲಿ ನಾಗರಿಕತೆ ಯೂರೋಪಿನಷ್ಟೇ ಹಿಂದಿನಿಂದ ಬೆಳೆದು ಬಂದಿದ್ದರೂ ಹದಿನೈದನೆಯ ಶತಮಾನದವರೆಗೆ ಐರೋಪ್ಯರಿಗೆ ಈ ಭಾಗಗಳ ಬಗೆಗೆ ಹೆಚ್ಚು ತಿಳಿದೇ ಇರಲಿಲ್ಲ. ಪಶ್ಚಿಮದಿಂದ ಬಂದು ಏಷ್ಯವನ್ನು ಮೊದಲು ಕಂಡವನು ಅಲೆಗ್ಸಾಂಡರ್. ಈತ ಭಾರತದ ಸಿಂಧೂ ನದಿಯವರೆಗೆ ಬಂದು ನಾಡು—ಜನರ ಬಗೆಗೆ ಹೊಸ ತಿಳಿವಳಿಕೆ ಪಡೆದ. 1275ರಲ್ಲಿ ಜಗತ್ತಿನ ಪ್ರವಾಸಿಯಾಗಿ ಮಾರ್ಕೊ ಪೋಲೋ ಚೀನದ ಪೀಕಿಂಗಿಗೆ ಬಂದಿದ್ದ. ಆತನ ಪ್ರವಾಸಕಥನದಿಂದ ಉತ್ತೇಜಿತರಾದ ಜನರು ಪೂರ್ವ ಭಾಗಗಳನ್ನು ಶೋಧಿಸಲು ಸಿದ್ಧರಾದರು.

ಹಿಮಾಲಯ ಪರ್ವತದ ಎವರೆಸ್ಟ್ ಶಿಖರ ವಿಶ್ವದಲ್ಲೇ ಎತ್ತರವಾದದ್ದು. ಟಿಬೆಟ್ ಪ್ರಪಂಚದಲ್ಲೇ ಎತ್ತರವಾದ ಪ್ರಸ್ಥಭೂಮಿ. ಮಂಗೋಲಿಯ ದೇಶದ ಗೋಬಿ ಮರುಭೂಮಿ, ಅತಿ ಬಂಜರು ಭೂಮಿ ಎನಿಸಿಕೊಂಡಿದೆ.

ಭಾರತ, ಆಫ್ಘಾನಿಸ್ತಾನ, ಇಂಡೊನೇಷ್ಯ, ಇರಾಕ್, ಇರಾನ್, ಇಸ್ರೇಲ್, ಕಾಂಬೋಡಿಯ, ಕುವೈತ್, ಕೊರಿಯ, ಚೀನ, ಜಪಾನ್, ಜೋರ್ಡಾನ್, ತುರ್ಕಿ, ಥೈಲೆಂಡ್, ನೇಪಾಳ, ಪಾಕಿಸ್ತಾನ, ಫಿಲಿಪೀನ್ಸ್, ಬರ್ಮ, ಭೂತಾನ್, ಮಂಗೋಲಿಯ, ಮಲೇಷ್ಯ, [illegible]

ಲಾವೋಸ್, ಲೆಬನಾನ್, ವಿಯೆಟ್‌ನಾಮ್, ಸಿಂಹಳ, ಸಿಕ್ಕಿಂ, ಸಿರಿಯ, ಸೌದಿ ಅರೇಬಿಯ, ಈ ದೇಶಗಳು ಏಷ್ಯ ಖಂಡದಲ್ಲಿವೆ. ರಷ್ಯದ ಬಹು ಭಾಗವೂ ಈ ಖಂಡದಲ್ಲಿದೆ.



ಪ್ರಪಂಚದ ಮುಖ್ಯ ಮತಗಳಾದ ಹಿಂದೂ ಮತ, ಬೌದ್ಧ–ಜೈನ ಮತ ಗಳು, ಕ್ರೈಸ್ತ ಮತ, ಯೆಹೂದ್ಯ ಮತ, ಇಸ್ಲಾಂ, ಜೊರಾಷ್ಟ್ರಿಯ ಮತ, ಎಲ್ಲ ಏಷ್ಯದಲ್ಲಿ ಜನಿಸಿದುವು.

ವಿವಿಧ ಭಾಷೆ, ಮತ, ಆಚಾರ, ಸಂಸ್ಕೃತಿ ಏಷ್ಯದಲ್ಲಿ ಮೇಳೈಸಿವೆ.

ವಿಶಾಲವಾದ ಏಷ್ಯ ಖಂಡದಲ್ಲಿ ಅನೇಕ ರೀತಿಯ ಹವಾಗುಣವಿದೆ. ಪ್ರಾಣಿ ಪಕ್ಷಿಗಳು, ಖನಿಜ ಸಂಪತ್ತು, ಬೆಳೆ ಎಲ್ಲವೂ ವೈವಿಧ್ಯಮಯ. ಪ್ರಪಂಚದಲ್ಲಿ ಅತಿ ವಿರಳವಾದ ಪಾಂಡ, ಚೀನ ದೇಶದ ಪ್ರಾಣಿ.

ನೋಡಿ : ಮಾರ್ಕೊ ಪೋಲೋ

## ಐಕ್ಯ ಅರಬ್ ಗಣರಾಜ್ಯ

1958 ಫೆಬ್ರುವರಿ 1ರಂದು ಈಜಿಪ್ಟ್ ಮತ್ತು ಸಿರಿಯಗಳ ಅಧ್ಯಕ್ಷರು ತಮ್ಮೆರಡು ದೇಶಗಳನ್ನೂ ಸೇರಿಸಿ ಐಕ್ಯ ಅರಬ್ ಗಣರಾಜ್ಯವೆಂದು ಘೋಷಿಸಿಕೊಂಡರು. ಈ ಬಗೆಯ ಒಕ್ಕೂಟಕ್ಕೆ 1956ರಿಂದ ಪ್ರಯತ್ನ ಗಳು ನಡೆದಿದ್ದುವು. 1958 ಫೆಬ್ರುವರಿ 21ರಂದು ಗಮಾಲ್ ಅಬ್ದಲ್ ನಾಸೆರರನ್ನು ಅಧ್ಯಕ್ಷರನ್ನಾಗಿ ಆರಿಸಲಾಯಿತು. ಮಾರ್ಚ್ 5ರಂದು ತಾತ್ಕಾಲಿಕ ಸಂವಿಧಾನವನ್ನು ರಚಿಸಿ, ಸರಕಾರವನ್ನು ಸ್ಥಾಪಿಸಿದರು.

ಈಜಿಪ್ಟಿನವರ ಕೈ ಮೇಲಾಯಿತೆಂದು ಆಕ್ಷೇಪಿಸಿ 1961ರಲ್ಲಿ ಸಿರಿಯ ಬೇರೆಯಾಯಿತು.

ಪುನಃ ಏಪ್ರಿಲ್ 1963ರಲ್ಲಿ ಇರಾಕ್, ಈಜಿಪ್ಟ್, ಸಿರಿಯಗಳು ಒಟ್ಟು ಗೂಡಿ, ತಾವು ಐಕ್ಯ ಅರಬ್ ಗಣರಾಜ್ಯವೆಂದು ಸಾರಿ, ಕೈರೊದಲ್ಲಿ ಒಂದು ಒಪ್ಪಂದಕ್ಕೆ ಸಹಿ ಹಾಕಿದುವು. ಈ ಬಾರಿಯೂ ನಾಸೆರರೇ ಅಧ್ಯಕ್ಷ ರಾದರು. ಆದರೆ ಇತರ ಅರಬ್ ದೇಶಗಳಾದ ಜೋರ್ಡಾನ್, ಸೌದಿ ಅರೇಬಿಯಗಳು ಇದನ್ನು ಒಪ್ಪಲಿಲ್ಲ. ಈ ಒಪ್ಪಂದವೂ ಕಾರ್ಯರೂಪದಲ್ಲಿ ಬರಲಿಲ್ಲ.

ಗಮಾಲ್ ಅಬ್ದಲ್ ನಾಸೆರರು ಆಫ್ರಿಕ ರಾಜ್ಯಗಳೊಡನೆ ಒಳ್ಳೆಯ ಸಂಬಂಧ ಬೆಳೆಸಿಕೊಂಡರು. ಅವರ ಪ್ರಭಾವ ಹೆಚ್ಚಿತು.

| | | |
|---|---|---|
| ಖಂಡ | : | ಆಫ್ರಿಕ |
| ಅಕ್ಷಾಂಶ | : | 21° 35′ ಉ ದಿಂದ 31° 35′ ಉ |
| ರೇಖಾಂಶ | : | 25° ಪೂ ದಿಂದ 36° ಪೂ |
| ವಿಸ್ತೀರ್ಣ | : | 10,00,253 ಚ. ಕಿ. ಮಿ. |
| ಜನಸಂಖ್ಯೆ | : | ಸುಮಾರು 2,80,00,000 |
| ಭಾಷೆ | : | ಅರಬಿ (ಆಡಳಿತ ಭಾಷೆ) |
| ಸರಕಾರ | : | ಗಣರಾಜ್ಯ |
| ಬಾವುಟ | : | ಕೆಂಪು, ಬಿಳಿ, ಕಪ್ಪು (ಮೇಲಿನಿಂದ ಕೆಳಕ್ಕೆ) ಬಿಳಿಯ ಭಾಗದಲ್ಲಿ ಎರಡು ಹಸಿರು ನಕ್ಷತ್ರ ಗಳು (ಐಕ್ಯ ಅರಬ್ ಗಣರಾಜ್ಯದ ಬಾವುಟ) |

ನೋಡಿ : ಈಜಿಪ್ಟ್ ; ಜೋರ್ಡಾನ್ ; ಸಿರಿಯ

## ಐನ್‌ಸ್ಟೀನ್, ಆಲ್ಬರ್ಟ್

ಏಕಸ್ವದ ಕಚೇರಿಯಲ್ಲಿ ಕೆಲಸ ಇಪ್ಪತ್ತಾರು ವರ್ಷದ ಯುವಕನಿಗೆ. ಏಕಸ್ವಗಳ ಅರ್ಜಿಗಳ ಪರೀಕ್ಷೆ ಬೆಳಗಿನಿಂದ ಸಂಜೆಯ ವರೆಗೆ. ಈ ಯುವಕ ಬೆಳಕಿನ ವೇಗವನ್ನು ಕುರಿತು ಮಂಡಿಸಿದ ಸಿದ್ಧಾಂತ, ವಿಜ್ಞಾನಿ ಗಳನ್ನು ಬೆರಗುಗೊಳಿಸಿತು ; ಅವರ ಯೋಚನೆಯ ರೀತಿಯಲ್ಲೇ ಕ್ರಾಂತಿ ಯುಂಟುಮಾಡಿತು. ಮೂಲದ ವೇಗ ಎಷ್ಟೇ ಇರಲಿ, ನೋಡುವ ಬೇರೆ ಬೇರೆ ವ್ಯಕ್ತಿಗಳು ಎಷ್ಟೇ ವೇಗದಲ್ಲಿ ಚಲಿಸುತ್ತಿರಲಿ, ಬೆಳಕು ಪ್ರತಿಯೊಬ್ಬರಿಗೆ ಸಂಬಂಧಿಸಿದಂತೆ ಒಂದೇ ವೇಗದಲ್ಲಿ ಹೊರಸೂಸುತ್ತದೆ ಎಂಬುದು ಈ ಯುವಕನ ಸಿದ್ಧಾಂತ.

ಇದಾದ ಸುಮಾರು ನಲವತ್ತೈದು ವರ್ಷಗಳ ಅನಂತರ ಇದೇ ಮನುಷ್ಯ ನನ್ನು ಹೊಸದೊಂದು ರಾಷ್ಟ್ರಕ್ಕೆ—ಇಸ್ರೇಲಿಗೆ—ಅಧ್ಯಕ್ಷನಾಗುವಂತೆ ಆಹ್ವಾನಿ ಸಿದರು. ಈ ರಾಷ್ಟ್ರದ ಸ್ಥಾಪನೆಗೆ ಅವನೂ ಹಂಬಲಿಸಿದ್ದ, ಶ್ರಮಿಸಿದ್ದ. “ವೈಜ್ಞಾನಿಕ ಸಮಸ್ಯೆಗಳು ಗೊತ್ತು ನನಗೆ, ಆದರೆ ಮನುಷ್ಯರನ್ನು ನಿರ್ವಹಿಸುವ ಶಕ್ತಿಯೂ ನನಗಿಲ್ಲ, ಅನುಭವವೂ ಇಲ್ಲ.” ಎಂದು ಹೇಳಿ, ಆಮಂತ್ರಣವನ್ನು ಆತ ಸ್ವೀಕರಿಸಲಿಲ್ಲ.

ಅತಿ ಸರಳ, ನಿರಾಡಂಬರ ವ್ಯಕ್ತಿ ಆಲ್ಬರ್ಟ್ ಐನ್‌ಸ್ಟೀನ್. ಅಸಾಧಾರಣ ಪ್ರತಿಭಾವಂತ. ಈತನಿಗೆ ಪ್ರಯೋಗಶಾಲೆಗಳು, ಜಟಿಲ ಉಪಕರಣಗಳು ಇರಲಿಲ್ಲ ; ಕೊಪರ್ನಿಕಸ್, ನ್ಯೂಟನ್ ಮುಂತಾದ ಮೇಧಾವಿಗಳು ಮಂಡಿಸಿದ್ದ, ನೂರಾರು ವರ್ಷಗಳಿಂದ ವಿಜ್ಞಾನಿಗಳು ಒಪ್ಪಿದ ಸಿದ್ಧಾಂತ ಗಳನ್ನು ತಪ್ಪು ಎಂದು ತನ್ನ ಯೋಚನಾಶಕ್ತಿಯಿಂದಲೇ ತೋರಿಸಿದ. ಅತಿ ಸರಳ, ಅತಿ ಸೌಜನ್ಯವಂತನಾದ ಈತನ ಸಾಧನೆ ಮನುಷ್ಯ ಜಗತ್ತನ್ನು ಕುರಿತು ಯೋಚನೆ ಮಾಡುವ ರೀತಿಯನ್ನೇ ಬದಲಾಯಿಸಿತು ; ಭೂಮಿ, ಬೆಳಕು, ಕಾಲ, ವೇಗ, ಶಕ್ತಿ ಇವುಗಳನ್ನು ಅರ್ಥಮಾಡಿಕೊಳ್ಳುವ ದಾರಿ

ನಿರ್ವಿಸಿತು ; ಪರಮಾಣುವಿನ ಬೀಗವನ್ನು ತೆಗೆದು, ಅದರಲ್ಲಿ ಸೆರೆಯಾಗಿರುವ ಚೈತನ್ಯವನ್ನು ಬಳಸುವ ರೀತಿಯನ್ನು ಮನುಷ್ಯನಿಗೆ ಹೇಳಿಕೊಟ್ಟಿತು ; ಪರಮಾಣು ಬಾಂಬನ್ನು ಸಾಧ್ಯಮಾಡಿತು.

ಜರ್ಮನಿಯ ವರ್ಟೆಂಬರ್ಗ್‌ನಲ್ಲಿ ಯೆಹೂದ್ಯ ಸಂಸಾರ ಒಂದರಲ್ಲಿ 1879ರ ಮಾರ್ಚ್ 14ರಂದು ಐನ್‌ಸ್ಟೀನ್ ಹುಟ್ಟಿದ. ತಂದೆ ಒಂದು ವಿದ್ಯುತ್ ರಾಸಾಯನಿಕ ಕಾರ್ಖಾನೆಯನ್ನು ನಡೆಸುತ್ತಿದ್ದ. ತಾಯಿಗೆ ಸಂಗೀತ ವೆಂದರೆ ಆಸಕ್ತಿ. (ದೊಡ್ಡವನಾದ ಮೇಲೂ ಐನ್‌ಸ್ಟೀನ್‌ಗೆ ಪಿಟೀಲು ನುಡಿ ಸುವುದೆಂದರೆ ಪ್ರಾಣ.) ಹುಡುಗ ಗದ್ದೆ ಬಯಲುಗಳಲ್ಲಿ ಸಂತೋಷದಿಂದ ಅಲೆಯುತ್ತಿದ್ದ, ಗಣಿತವನ್ನು ಕಲಿಯುತ್ತ ಮೈಮರೆಯುತ್ತಿದ್ದ.

ಸಂಸಾರ ಜರ್ಮನಿಯಿಂದ ಇಟಲಿ, ಸ್ವಿಟ್ಜರ್‌ಲೆಂಡ್‌ಗಳಿಗೆ ಹೋಯಿತು. ಹುಡುಗ ಐನ್‌ಸ್ಟೀನನ ಸಂಗಾತಿಗಳೆಂದರೆ ಬಡತನ ಮತ್ತು ಹಸಿವು. ವಿದ್ಯೆಯ ಬಯಕೆಯಲ್ಲಿ ಎಲ್ಲವನ್ನೂ ಮರೆತ. ಜ್ಯೂರಿಚ್ ವಿಶ್ವವಿದ್ಯಾ ನಿಲಯದಲ್ಲಿ ವಿದ್ಯಾಭ್ಯಾಸ ಮುಂದುವರಿಸಿದ. 1901ರಲ್ಲಿ ವರ್ಷಕ್ಕೆ ಮೂರು ಸಾವಿರ ಫ್ರಾಂಕ್‌ಗಳ ಸಂಬಳದ ಮೇಲೆ ಏಕಸ್ವದ ಕಚೇರಿ ಯೊಂದರಲ್ಲಿ ಕೆಲಸಕ್ಕೆ ಸೇರಿದ ; ಜೊತೆಗೇ ಭೌತಶಾಸ್ತ್ರದ ಅಧ್ಯಯನ ನಡೆಸಿದ.

ಬೆಳಕು ಅಲೆಗಳ ರೂಪದಲ್ಲಿ ಸಾಗುತ್ತದೆ, ಜಗತ್ತಿನ ತುಂಬ ಕಣ್ಣಿಗೆ ಕಾಣಿ ಸದ ಈಥರ್ ಎಂಬ ಮಾಧ್ಯಮ ತುಂಬಿದೆ, ಅದರ ಮೂಲಕ ಬೆಳಕು ಬರು ತ್ತದೆ ಎಂದು ಆವರೆಗೆ ವಿಜ್ಞಾನಿಗಳು ಒಪ್ಪಿದ್ದ ದೃಷ್ಟಿ. ಈಥರ್ ಎನ್ನುವುದು ಇಲ್ಲ ; ಬೆಳಕಿನ ವೇಗ ಯಾವಾಗಲೂ ಒಂದೇ ; ಭೂಮಿ , ನಕ್ಷತ್ರ ಯಾತರ ಚಲನೆಯಿಂದಲೂ ಇದರಲ್ಲಿ ವ್ಯತ್ಯಾಸವಾಗುವುದಿಲ್ಲ ; ಯಾವುದರ ಚಲನೆಯೂ ಸ್ವಯಂಪೂರ್ಣವಲ್ಲ ; ಪ್ರತಿಯೊಂದು ಚಲನೆಯೂ ಇನ್ನೊಂದರ ಜೊತೆ ಹೋಲಿಸಿದ್ದು, ಎಂದರೆ ಪ್ರತಿ ಚಲನೆಯೂ ಸಾಪೇಕ್ಷವಾದದ್ದು ; ಪಥದಲ್ಲಿ ಸುತ್ತುವ ಎಲ್ಲ ವಸ್ತುಗಳೂ ಒಂದೇ ನಿಯಮಕ್ಕೆ ಒಳಗಾಗಿವೆ. ಇದು ಅವನ ವಿಶೇಷ ಸಾಪೇಕ್ಷ ಸಿದ್ಧಾಂತ. 1905ರಲ್ಲಿ ಇದನ್ನು ಪ್ರಕಟಿಸಿದ ಬಳಿಕ ಅವನ ಕೀರ್ತಿ ಹರಡಿತು. 1913ರಲ್ಲಿ ಜರ್ಮನಿಯ ಆಹ್ವಾನದ ಬಳಿಕ ಬರ್ಲಿನಿ ನಲ್ಲಿ ನೆಲೆಸಿದ. 1915ರಲ್ಲಿ ಐನ್‌ಸ್ಟೀನ್ ಸಾಮಾನ್ಯ ಸಾಪೇಕ್ಷ ಸಿದ್ಧಾಂತ ವನ್ನು ಪ್ರಕಟಿಸಿದ. ಇವನ ಸಿದ್ಧಾಂತಗಳು ಎಷ್ಟು ಪ್ರೌಢವಾಗಿದ್ದುವೆಂದರೆ ತಜ್ಞ ಭೌತಶಾಸ್ತ್ರಜ್ಞರಿಗೂ ಇವನ್ನು ಅರ್ಥಮಾಡಿಕೊಳ್ಳುವುದು ಕಷ್ಟ ವಾಯಿತು. ಇವನ್ನು ಪ್ರಯೋಗಗಳಿಂದ ಪರೀಕ್ಷಿಸಲು ಅಗತ್ಯವಾದ ಸಲ ಕರಣೆಗಳು ಶ್ರೀಮಂತ ಪ್ರಯೋಗಶಾಲೆಗಳಲ್ಲಿಯೂ ಇರಲಿಲ್ಲ. 1920ರಲ್ಲಿ ಇವನು ಮಂಡಿಸಿದ್ದ ಕ್ವಾಂಟಮ್ ಸಿದ್ಧಾಂತಕ್ಕೆ ನೊಬೆಲ್ ಬಹುಮಾನ ಲಭಿ ಸಿತು. ಬೆಳಕು ಭೌತಿಕ ಕಣಗಳೂ ಅಲ್ಲ, ಅಲೆಗಳೂ ಅಲ್ಲ ; ಬಹು ಸಣ್ಣ ಪ್ರಮಾಣದ ಚೈತನ್ಯದ ತುಣುಕುಗಳು ; ಒಂದರ ಹಿಂದೆ ಒಂದು ಚಲಿಸುತ್ತವೆ ; ಒಂದೊಂದು ತುಣುಕು ಒಂದು ಫೋಟಾನು. ಅದರಲ್ಲಿ ಅಡಗಿರುವ ನಿರ್ದಿಷ್ಟ ಪ್ರಮಾಣದ ಚೈತನ್ಯ ಒಂದು ಕ್ವಾಂಟಮು. ಹೀಗೆ ಬೆಳಕಿನ ಸ್ವರೂಪವನ್ನು ಆತ ವಿವರಿಸಿದ.

ನಾಜಿ ಪಕ್ಷದ ಮುಷ್ಟಿಗೆ ಸಿಕ್ಕ ಜರ್ಮನಿಯಲ್ಲಿ ಯೆಹೂದ್ಯರ ಜೀವನ ದುಸ್ಸಹವಾಯಿತು. ಯೆಹೂದ್ಯರನ್ನು ನಿರ್ನಾಮ ಮಾಡಲು ಹೊರಟಿದ್ದ ಹಿಟ್ಲರ್. 1932ರಲ್ಲಿ ಜಗತ್ಪ್ರಸಿದ್ಧ ವಿಜ್ಞಾನಿ ಸಂಸಾರ ಸಮೇತ ಅಮೆರಿಕಕ್ಕೆ ಹೋಗಿ ಅಲ್ಲಿಯೆ ನೆಲೆಸಿದ.

1939ರಲ್ಲಿ ಐನ್‌ಸ್ಟೀನ್ ಸಂಯುಕ್ತ ಸಂಸ್ಥಾನದ ಅಧ್ಯಕ್ಷ ರೂಸ್‌ವೆಲ್ಟ್‌ಗೆ ಪತ್ರ ಬರೆದು, ಯುರೇನಿಯಂನ್ನು ಬಳಸಿ ಅಪಾರ ಚೈತನ್ಯವನ್ನು ಉತ್ಪನ್ನ



ಮಾಡಬಹುದೆಂದು ತಿಳಿಸಿದ. ಇದೇ ಪರಮಾಣು ಶಕ್ತಿಯ ಬಳಕೆಗೆ— ಪರಮಾಣು ಬಾಂಬಿನ ತಯಾರಿಕೆಗೆ ದಾರಿ ಮಾಡಿತು.

ಐನ್‌ಸ್ಟೀನ್ ಉಡುಗೆ ತೊಡುಗೆಗಳಲ್ಲಿ ಬಹು ಸರಳ. ತನ್ನ ಕ್ಷೌರಿಕ, ಸೇವಕರು ಇಂಥವರೊಂದಿಗೆ ಸುಲಭವಾಗಿ ಆತ್ಮೀಯತೆಯಿಂದ ಬೆರೆಯುತ್ತಿದ್ದ.

ತನ್ನ ಕಡೆಯ ದಿನಗಳಲ್ಲಿ ವಿಶ್ವದ ರಚನೆಯಲ್ಲಿರುವ ಸಾಮರಸ್ಯವನ್ನು ಮನುಷ್ಯಲೋಕದ ಅಪಸ್ವರಗಳ ಜೊತೆ ಹೋಲಿಸಿ ಐನ್‌ಸ್ಟೀನ್ ದುಃಖಿಸು ತ್ತಿದ್ದ. ಯುದ್ಧವೆಂಬುದು ಅವನಿಗೆ ಅಪ್ರಿಯವಾದ ವಿಷಯ. ಪರಮಾಣು ಶಕ್ತಿಯನ್ನು ಮಾರಕಾಸ್ತ್ರದಂತೆ ಬಳಸುವುದನ್ನು ಅರಿತು ಮಮ್ಮಲ ಮರುಗಿದ.

ಐನ್‌ಸ್ಟೀನ್ 1955ರಲ್ಲಿ ತನ್ನ ಎಪ್ಪತ್ತಾರನೆಯ ವರ್ಷದಲ್ಲಿ ಮೃತನಾದ.

ಕೊಲಂಬಿಯ ವಿಶ್ವವಿದ್ಯಾನಿಲಯದ ಹತ್ತಿರ ರಿವರ್‌ಸೈಡ್ ಚರ್ಚಿನಲ್ಲಿ ಕ್ರೈಸ್ತ ಸನ್ಯಾಸಿಗಳ ಮತ್ತು ಮಾರ್ಗದರ್ಶಕರ ವಿಗ್ರಹಗಳನ್ನು ಕೆತ್ತಿದ್ದಾರೆ. ಅವುಗಳ ಮಧ್ಯದಲ್ಲಿ ಯೆಹೂದ್ಯ ಆಲ್ಬರ್ಟ್ ಐನ್‌ಸ್ಟೀನನ ವಿಗ್ರಹವೂ ಇದೆ.

ಧರ್ಮ ಮತ್ತು ಸತ್ಯಗಳನ್ನು ರಾಜಕಾರಣಕ್ಕೆ ತಂದಾತನೆಂದು ತಮ್ಮ ಸಮ ಕಾಲೀನ ಗಾಂಧಿಜಿ ಬಗೆಗೆ ಆಲ್ಬರ್ಟ್ ಐನ್‌ಸ್ಟೀನನಿಗೆ ಅಪಾರ ಗೌರವ. "ಗಾಂಧಿಯಂಥ ಮನುಷ್ಯನೊಬ್ಬ ಹೀಗೆ ಬಾಳಿ ಬದುಕಿದ್ದ ಎಂದರೆ, ಮುಂದಿನ

ಪೀಳಿಗೆಯ ಜನ ನಂಬಲಾರರು," ಎಂದು ಗಾಂಧಿಜಿಯ ಹತ್ಯೆಯಾದಾಗ ಉದ್ಗರಿಸಿದ.

ಐನ್‌ಸ್ಟೀನನ ಸಿದ್ಧಾಂತಗಳು ಮನುಷ್ಯ ತನ್ನ ಸುತ್ತಲಿನ ಜಗತ್ತಿನ ವಿಷಯವಾಗಿ ಇಟ್ಟುಕೊಂಡಿದ್ದ ಅಭಿಪ್ರಾಯಗಳನ್ನು ಬುಡಮೇಲು ಮಾಡಿದುವು. ಅವನ್ನು ಸಂಪೂರ್ಣವಾಗಿ ಅರ್ಥಮಾಡಿಕೊಳ್ಳಲು ಅಗತ್ಯ ವಾದ ಬುದ್ಧಿಶಕ್ತಿಯನ್ನು ಪಡೆದಿದ್ದವರು ಕೆಲವರೇ. ಪ್ರಪಂಚದ ಅತಿ ಮುಖ್ಯ ವ್ಯಕ್ತಿಗಳಲ್ಲೊಬ್ಬ ಅವನು. ಆದರೂ ಮಗುವಿನ ಮುಗ್ಧತೆ ಅವನದು. ನಿರಾಡಂಬರ, ಸ್ನೇಹಪರ ಸ್ವಭಾವ. ಇದರಿಂದಲೇ ಅವನ ಸಿದ್ಧಾಂತಗಳನ್ನು ಅರ್ಥಮಾಡಿಕೊಳ್ಳಲಾರದ ಸಾಮಾನ್ಯ ಜನರೂ ಅವನ ವ್ಯಕ್ತಿತ್ವಕ್ಕೆ ಮಾರು ಹೋದರು.

## ಐರ್‌ಲೆಂಡ್

ಭಾರತದ ಸ್ವಾತಂತ್ರ್ಯ ಸಮರವನ್ನು ನೆನಪಿಗೆ ತರುವಂಥ ಹೋರಾಟ ನಡೆಸಿದ ಪುಟ್ಟ ದೇಶ ಐರ್‌ಲೆಂಡ್. ಇಂಗ್ಲೆಂಡಿನ ಹಿಡಿತದಿಂದ ತಪ್ಪಿಸಿ ಕೊಳ್ಳುವುದಕ್ಕೆಂದು ತನ್ನ ರಕ್ತ ಸುರಿಸಿತು. ಭಾರತದ ರಾಷ್ಟ್ರಪತಿ ವರಾಹಗಿರಿ ವೆಂಕಟಗಿರಿ ಅವರು ಡಬ್ಲಿನ್‌ನಲ್ಲಿ ವಿದ್ಯಾರ್ಥಿಯಾಗಿದ್ದಾಗ, ಈ ರಾಷ್ಟ್ರದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದ್ದರು.

ಪಚ್ಚೆದ್ವೀಪ ಎಂದು ಐರ್‌ಲೆಂಡನ್ನು ಕರೆಯುವುದರಲ್ಲಿ ಅತಿಶಯೋಕ್ತಿ ಇಲ್ಲ. ದ್ವೀಪದಲ್ಲಿ ಕಾಲಿಟ್ಟ ಕೂಡಲೇ ಎಲ್ಲೆಲ್ಲೂ ಕಾಣಬರುವುದು ಸೊಂಪಾಗಿ ಬೆಳೆದಿರುವ ಹಸಿರು. ಬ್ರಿಟಿಷ್ ದ್ವೀಪಗಳ ಪಶ್ಚಿಮಕ್ಕೆ ಅಟ್ಲಾಂಟಿಕ್ ಸಾಗರದಲ್ಲಿ ಈ ದ್ವೀಪವಿದೆ.

ಐರ್‌ಲೆಂಡನ್ನು ನಾಲ್ಕು ಪ್ರಾಂತಗಳನ್ನಾಗಿ ವಿಂಗಡಿಸಿದ್ದಾರೆ: ಅಲ್‌ಸ್ಟರ್, ಮನ್‌ಸ್ಟರ್, ಲಿನ್‌ಸ್ಟರ್ ಮತ್ತು ಕನ್ನಾಟ್. ಇವುಗಳಲ್ಲಿ 32 ಕೌಂಟಿ ಅಥವಾ ವಿಭಾಗಗಳಿವೆ. ಇದರಲ್ಲಿ ಉತ್ತರ ಭಾಗದ ಆರು ಕೌಂಟಿಗಳು ಉತ್ತರ ಐರ್‌ಲೆಂಡ್ ಎಂದು ಕರೆದುಕೊಂಡು ಬ್ರಿಟಿಷರ ಆಡಳಿತದಲ್ಲಿಯೇ ಉಳಿದು ಬೇರೆ ಭಾಗವಾದುವು. ಇಪ್ಪತ್ತಾರು ಕೌಂಟಿಗಳು ಕೂಡಿ ಸ್ವತಂತ್ರ ಗಣರಾಜ್ಯ ಎನಿಸಿದುವು.

ಐರ್‌ಲೆಂಡಿನ ವಾಯುಗುಣ ಹಿತಕರವಾದದ್ದು. ವರ್ಷದಲ್ಲಿ ಇನ್ನೂರಕ್ಕೂ ಹೆಚ್ಚು ದಿನ ಮಳೆ ಬರುತ್ತದೆ. ಬೇಸಿಗೆ ಕಾಲದಲ್ಲಿ ಕೂಡ 50° ಫಾ. ಗಿಂತ ಹೆಚ್ಚು ಉಷ್ಣಾಂಶ ಏರುವುದಿಲ್ಲ. ಚಳಿಗಾಲದಲ್ಲಿ 40° ಫಾ.ಗಿಂತ ಕೆಳಕ್ಕೆ ಉಷ್ಣಾಂಶ ಇಳಿಯುವುದಿಲ್ಲ.

ಐರ್‌ಲೆಂಡ್ ಸರೋವರಗಳ ನಾಡು. ಕಿಲಾರ್ನಿ, ಕಾರಿಟ್ ಸರೋವರಗಳು ಮೀನು ಹಿಡಿಯುವವರಿಗೆ ಆಕರ್ಷಣೀಯವಾಗಿವೆ, ಷ್ಯಾನನ್, ನೋರ್ ಬ್ಲ್ಯಾಕ್ ವಾಟರ್, ಬಾಯ್ನ್ ನದಿಗಳಲ್ಲೂ ಮೀನು ಸಿಗುತ್ತದೆ.

ಹಳೆಯ ಸರೋವರಗಳ ಜಲಾನಯನ ಭೂಮಿಯಲ್ಲಿ ಸಸ್ಯಾಂಗಾರ ಹೇರಳ ವಾಗಿ ದೊರಕುತ್ತದೆ. ಇದನ್ನು ಉರವಲಾಗಿ ಬಳಸುತ್ತಾರೆ.

ಐರ್‌ಲೆಂಡಿನಲ್ಲಿ ಖನಿಜ ಬಹಳ ಕಡಮೆ. ಕಬ್ಬಿಣ, ತಾಮ್ರ ಸೀಸ, [illegible]ಂ, ಸುಣ್ಣದ ಕಲ್ಲು ಅಲ್ಪಪ್ರಮಾಣದಲ್ಲಿ ಸಿಗುತ್ತವೆ.

ಗೋಧಿ, ಬಾರ್ಲಿ, ಆಲೂಗಡ್ಡೆ, ಟರ್ನಿಪ್, ಓಟ್ಸ್, ಸಕ್ಕರೆ ಬೀಟ್, ಸೆಣಬು ಬೆಳೆಯುತ್ತಾರೆ.

ರೊಟ್ಟಿ ಬಿಸ್ಕತ್ತು ಮತ್ತು ಕಾಗದದ ತಯಾರಿಕೆಗಳು, ಸಕ್ಕರೆ ತಯಾರಿಕೆ, ಹೊಗೆಸೊಪ್ಪು ಸಂಸ್ಕರಣ, ವಿದ್ಯುತ್ ಉಪಕರಣಗಳ ತಯಾರಿಕೆ, ಕಾರಿನ ಭಾಗಗಳನ್ನು ಜೋಡಿಸುವುದು, ಹಡಗು ನಿರ್ಮಾಣ ಮುಂತಾದುವು ಇಲ್ಲಿನ ಉದ್ಯಮಗಳು.

ಐರ್‌ಲೆಂಡಿನಲ್ಲಿರುವವರಲ್ಲಿ ಗೇಲ್ ಬುಡಕಟ್ಟಿನವರು ಬಹಳ. ಫ್ರೆಂಚರೂ ಇಂಗ್ಲಿಷರೂ ಐರ್‌ಲೆಂಡಿನಲ್ಲಿ ಬಂದು ನೆಲೆಸಿದ್ದಾರೆ. ಇವರಲ್ಲಿ ಪರಸ್ಪರ ವಿವಾಹ ಗಳು ನಡೆದುವು. ಈಗ ಐರ್‌ಲೆಂಡಿನಲ್ಲಿರುವವರು ಇವರ ಸಂತತಿಯವರು. ಐರಿಷ್, ಇಂಗ್ಲಿಷ್ ಭಾಷೆಗಳು ಬಳಕೆಯಲ್ಲಿವೆ. ರೋಮನ್ ಕ್ಯಾಥಲಿಕರೇ ಹೆಚ್ಚು ಜನರಿದ್ದರೂ ಮತದ ವಿಷಯದಲ್ಲಿ ಜನರಿಗೆ ಸ್ವಾತಂತ್ರ್ಯವಿದೆ. ಪ್ರಾಟೆಸ್ಟೆಂಟರೂ ಯೆಹೂದ್ಯರೂ ಇದ್ದಾರೆ.

ಐರ್‌ಲೆಂಡಿನ ರಾಜಧಾನಿ ಡಬ್ಲಿನ್. ಕಲೆ, ವಿದ್ಯೆ, ವ್ಯಾಪಾರಗಳ ಕೇಂದ್ರ ವಾಗಿದೆ. ಕಾರ್ಕ್, ಲಿಮರಿಕ್, ವಾಟರ್‌ಫರ್ಡ್ ಉದ್ಯಮ ಕೇಂದ್ರಗಳು. ಉತ್ತರ ಐರ್‌ಲೆಂಡಿನ ರಾಜಧಾನಿ ಬೆಲ್‌ಫಾಸ್ಟ್. ಲಂಡನ್‌ಡೆರಿ, ಬ್ಯಾಂಗರ್ ಮುಖ್ಯ ನಗರಗಳು.

ಪ್ರಥಮ ಮಹಾಯುದ್ಧಕ್ಕೆ ಮೊದಲು ಹಿಂದುಳಿದ ದೇಶವಾಗಿದ್ದ ಐರ್‌ಲೆಂಡ್, ಇತ್ತೀಚಿನ ವರ್ಷಗಳಲ್ಲಿ ಕ್ರಮಕ್ರಮವಾಗಿ ಅಭಿವೃದ್ಧಿಗೊಂಡು ಸಂಪದ್ಭರಿತ ದೇಶವೆನಿಸಿದೆ.

ಸ್ವತಂತ್ರರಾಗಿದ್ದ ಐರ್‌ಲೆಂಡಿನ ಕೆಲ್ಟರು ಎಂಟನೆಯ ಶತಮಾನದಲ್ಲಿ ಸ್ಕ್ಯಾಂಡಿನೇವಿಯದಿಂದ ಬಂದ ಪಂಗಡಗಳ ದಾಳಿಗೆ ಸಿಕ್ಕಿದರು. ಅಲ್ಲಿಂದ ಹಲವು ಆಕ್ರಮಣಗಳನ್ನು ಅವರು ಎದುರಿಸಿದರು. ಎಂಟನೆಯ ಹೆನ್ರಿ 'ಐರ್‌ಲೆಂಡಿನ ರಾಜ' ಎಂಬ ಬಿರುದನ್ನು ಮೊದಲು ಬಳಸಿದ ಇಂಗ್ಲೆಂಡಿನ ದೊರೆ. ಇಂಗ್ಲೆಂಡಿನ ಆಳ್ವಿಕೆಯಲ್ಲಿ ಐರ್‌ಲೆಂಡ್ ಭಾರತದಂತೆಯೇ ಬಡತನದಲ್ಲಿ

| | | |
|---|---|---|
| ಖಂಡ | : | ಯೂರೋಪ್ (ಉತ್ತರ ಅಟ್ಲಾಂಟಿಕ್‌ನ ಪೂರ್ವ) |
| ಅಕ್ಷಾಂಶ | : | 51° 27′ ಉ ದಿಂದ 55° 23′ ಉ |
| ರೇಖಾಂಶ | : | 5° 27′ ಪ ದಿಂದ 10° 29′ ಪ |
| ವಿಸ್ತೀರ್ಣ | : | 82,463 ಚ. ಕಿ. ಮೀ. |
| ಜನಸಂಖ್ಯೆ | : | ಸುಮಾರು 42,00,000 |
| ರಾಜಧಾನಿ | : | ಡಬ್ಲಿನ್ |
| ಭಾಷೆ | : | ಐರಿಷ್ |
| ಸರಕಾರ | : | ಗಣರಾಜ್ಯ |
| ಬಾವುಟ | : | ಹಸಿರು, ಬಿಳಿ, ಕಿತ್ತಳೆ ಬಣ್ಣದ ಉದ್ದ ಪಟ್ಟೆಗಳು |

ನರಳಿತು. ಇಪ್ಪತ್ತನೆಯ ಶತಮಾನದಲ್ಲಿ 'ಸಿನ್ ಫೇನ್' ('ನಾವು ಮಾತ್ರ') ಚಳುವಳಿ ಪ್ರಾರಂಭವಾಯಿತು. ಐರಿಷರಿಗಾಗಿ ಐರ್ಲೆಂಡ್, ಜನಸಾಮಾನ್ಯರಿಗೆ ಭೂಮಿ ಎನ್ನುವುದು ಇದರ ಘೋಷಣೆ. 1916ರಲ್ಲಿ ಈಸ್ಟರ್ ಹಬ್ಬದ ಸಮಯದಲ್ಲಿ ನಡೆದ ದಂಗೆ ಪ್ರಪಂಚದ ಗಮನವನ್ನೆ ಸೆಳೆಯಿತು. ಈ ದಂಗೆಯಲ್ಲಿ ನೂರಾರು ಮಂದಿ ದೇಶಭಕ್ತರು ಸತ್ತರು. ದಂಗೆಯ ಮುಖಂಡ, ಶಾಲಾ ಅಧ್ಯಾಪಕ, ವಕೀಲ, ಮೂವತ್ತಾರು ವಯಸ್ಸಿನ ಪ್ಯಾಟ್ರಿಕ್ ಪಿಯರ್ಸ್‌ನನ್ನು ಗಲ್ಲಿಗೇರಿಸಲಾಯಿತು. 1921ರಲ್ಲಿ 'ಐರಿಷ್ ಫ್ರೀ ಸ್ಟೇಟ್'ನ ಜನನವಾಯಿತು. 1948ರಲ್ಲಿ ಇದಕ್ಕೆ 'ಐರ್‌ಲೆಂಡಿನ ಗಣರಾಜ್ಯ' ಎಂದು ಹೆಸರಾಯಿತು. ಡಿ ವೆಲೆರಾ ಅಧ್ಯಕ್ಷರಾದರು.

ಎರಡು ಮಹಾ ಯುದ್ಧಗಳಲ್ಲೂ ಐರ್‌ಲೆಂಡ್ ತಟಸ್ಥವಾಗಿ ಉಳಿದದ್ದು ವಿಶೇಷ ಸಂಗತಿ.

## ಐರೋಪ್ಯ ಸಾಮಾನ್ಯ ಮಾರುಕಟ್ಟೆ

ಒಬ್ಬರು ಇನ್ನೊಬ್ಬರಿಗೆ ಸಹಾಯಮಾಡಿ, ಅವರೂ ಇವರಿಗೆ ನೆರವಾಗಿ, ಇಬ್ಬರಿಗೂ ಅನುಕೂಲವಾಗುತ್ತದೆ ಎಂದು ತೋರಿದರೆ, ಅವರು ಒಂದಾಗಿ ಕೆಲಸ ಮಾಡುವುದು ಸಹಜ.

ಅಂಥ ಒಂದು ವ್ಯವಸ್ಥೆ–ಐರೋಪ್ಯ ಸಾಮಾನ್ಯ ಮಾರುಕಟ್ಟೆ.

ಎರಡನೆಯ ಮಹಾಯುದ್ಧ ಯೂರೋಪಿನ ಎಷ್ಟೋ ರಾಷ್ಟ್ರಗಳ ಸಂಪತ್ತನ್ನು ಹೀರಿಬಿಟ್ಟಿತು. ತಮ್ಮ ಆರ್ಥಿಕ ಸ್ಥಿತಿಯನ್ನು ಸುಧಾರಿಸಿಕೊಳ್ಳುವ ಸಲುವಾಗಿ ಯೂರೋಪಿನ ಆರು ರಾಷ್ಟ್ರಗಳು ಒಂದುಗೂಡಿದುವು. ಬೆಲ್ಜಿಯಂ, ಫ್ರಾನ್ಸ್, ಪಶ್ಚಿಮ ಜರ್ಮನಿ, ಇಟಲಿ, ಲಕ್ಸೆಂಬರ್ಗ್ ಮತ್ತು ನೆದರ್‌ಲೆಂಡ್ಸ್ ಈ ದೇಶಗಳ ವಿದೇಶ ಸಚಿವರು 1955 ಜೂನ್ ತಿಂಗಳಿನಲ್ಲಿ ಸಿಸಿಲಿ ದೇಶದ ಮೆಸ್ಸಿನಾ ನಗರದಲ್ಲಿ ಸಭೆ ಸೇರಿದರು. ಅದರ ಫಲವಾಗಿ 1957ರ ಮಾರ್ಚ್ 25ರಂದು ಐರೋಪ್ಯ ಆರ್ಥಿಕ ಸಮುದಾಯ ಅಸ್ತಿತ್ವಕ್ಕೆ ಬಂದಿತು. ಈ ಸಮುದಾಯದ ರಾಷ್ಟ್ರಗಳು ತಮ್ಮ ತಮ್ಮ ನಡುವೆ ಯಾವ ಅಡೆತಡೆಗಳೂ ಇಲ್ಲದೆ ಅನಿರ್ಬಂಧಿತ ವ್ಯಾಪಾರವನ್ನು ನಡೆಸಲು ತಮ್ಮದೇ ಆದ ಒಂದು ಮಾರುಕಟ್ಟೆಯನ್ನು ನಿರ್ಮಿಸಿಕೊಂಡುವು. ಇದೇ ಐರೋಪ್ಯ ಸಾಮಾನ್ಯ ಮಾರುಕಟ್ಟೆ.

ಈ ಮಾರುಕಟ್ಟೆಯ ಸದಸ್ಯ ರಾಷ್ಟ್ರಗಳ ನಡುವೆ ನಡೆಯುವ ಯಾವ ವ್ಯಾಪಾರದ ಮೇಲೂ ಆಮದು ರಫ್ತು ಸುಂಕ ಬೀಳುವುದಿಲ್ಲ. ವಾಣಿಜ್ಯಕ್ಕೆ ಸಂಬಂಧಿಸಿದ ಸಾರಿಗೆ ವಾಹನಗಳು ಹಾಗೂ ಜನರು ನಿರ್ಬಂಧವಿಲ್ಲದೆ ಸಂಚರಿಸಬಹುದು. ಸದಸ್ಯ ರಾಷ್ಟ್ರಗಳಲ್ಲಿ ಯಾವುದೇ ದೇಶದ ಉದ್ಯಮ ಸಂಸ್ಥೆ ಯಾವ ದೇಶದಲ್ಲಾದರೂ ಸ್ಥಾಪನೆಯಾಗಲು ಅವಕಾಶವಿರುತ್ತದೆ. ಮಾರುಕಟ್ಟೆಗೆ ಸೇರದ ಮಿಕ್ಕೆಲ್ಲ ರಾಷ್ಟ್ರಗಳ ಜೊತೆ ವ್ಯಾಪಾರ ನಡೆಸುವಾಗ ಸದಸ್ಯ ರಾಷ್ಟ್ರಗಳು ಒಂದೇ ಬಗೆಯ ಸುಂಕವನ್ನು ಹೇರುತ್ತವೆ. ಮಾರುಕಟ್ಟೆಗೆ ಯಾವ ರೀತಿಯಿಂದಲೂ ತೊಂದರೆಯಾಗದಂತೆ ಈ ದೇಶಗಳು ಎಚ್ಚರಿಕೆಯಿಂದ ನಡೆದುಕೊಳ್ಳುತ್ತವೆ. ಐರೋಪ್ಯ ಸಾಮಾನ್ಯ ಮಾರುಕಟ್ಟೆಯ ಒಳಗೆ ಯಾವ ಸದಸ್ಯ ರಾಷ್ಟ್ರದ ಉತ್ಪಾದನೆಯಾಗಿದ್ದರೂ ಸರಿ; ಎಲ್ಲ ಬಗೆಯ ಆಹಾರ ಧಾನ್ಯಗಳ ಬೆಲೆಯೂ ನಿಗದಿಯಾಗಿರುತ್ತದೆ. ಸಾಮಾನ್ಯ ಮಾರುಕಟ್ಟೆಯ ವ್ಯಾಪಾರ ಸಂಬಂಧ ಹದಗೆಡದಂತೆ ಸದಸ್ಯ ರಾಷ್ಟ್ರಗಳ ಹಣಕಾಸಿನ ಮತ್ತು ತೆರಿಗೆಯ ನೀತಿಗಳು ರೂಪುಗೊಳ್ಳುತ್ತವೆ. ಹೀಗೆ ಸಾಮಾನ್ಯ ಮಾರುಕಟ್ಟೆ ಸದಸ್ಯ ರಾಷ್ಟ್ರಗಳ ನಡುವೆ ತಡೆಯಿಲ್ಲದೆ ವ್ಯಾಪಾರವನ್ನು ಬೆಳೆಸುವುದೇ ಅಲ್ಲದೆ ಅವುಗಳ ಆರ್ಥಿಕ ಸ್ಥಿತಿ ಸುಧಾರಿಸಲೂ ನೆರವಾಗುತ್ತದೆ. ಸಾಮಾನ್ಯ ಮಾರುಕಟ್ಟೆಯ ಆಡಳಿತವನ್ನು ಹದಿನಾಲ್ಕು ಮಂದಿ ಸದಸ್ಯರ ಒಂದು ಆಯೋಗ ಮತ್ತು ಸದಸ್ಯರಾಷ್ಟ್ರಗಳ ಸಚಿವರ ಒಂದು ಸಮಿತಿ ನೋಡಿಕೊಳ್ಳುತ್ತವೆ.

ಇತರ ಐರೋಪ್ಯ ರಾಷ್ಟ್ರಗಳ ಪೈಕಿ ಇಂಗ್ಲೆಂಡ್, ಆಸ್ಟ್ರಿಯ, ಡೆನ್ಮಾರ್ಕ್, ನಾರ್ವೆ, ಸ್ವೀಡನ್, ಸ್ವಿಟ್ಜರ್‌ಲೆಂಡ್ ಮತ್ತು ಪೋರ್ಚುಗಲ್ ಈ ಏಳು ರಾಷ್ಟ್ರಗಳು ಐರೋಪ್ಯ ಸಾಮಾನ್ಯ ಮಾರುಕಟ್ಟೆಯನ್ನೆ ಹೋಲುವ 'ಐರೋಪ್ಯ ಮುಕ್ತ ವ್ಯಾಪಾರ ಸಂಸ್ಥೆ'ಯನ್ನು 1960ರಲ್ಲಿ ಸ್ಥಾಪಿಸಿಕೊಂಡುವು. ಈ ಸಮುದಾಯದ ದೇಶಗಳು ತಮ್ಮ ತಮ್ಮ ನಡುವೆ ಸುಂಕಗಳನ್ನು ತೆಗೆದುಹಾಕಿರುವುವಾದರೂ ಅವುಗಳ ನಡುವಿನ ವ್ಯಾಪಾರ ಕೈಗಾರಿಕೆಯ ವಸ್ತುಗಳಿಗೆ ಮಾತ್ರ ಸೀಮಿತ. ಐರೋಪ್ಯ ಮುಕ್ತ ವ್ಯಾಪಾರ ಸಂಸ್ಥೆಗೆ ಸೇರದ ದೇಶಗಳ ಜೊತೆ ನಡೆಸುವ ವ್ಯಾಪಾರದ ಬಗೆಗೆ ಸಂಸ್ಥೆಯ ಸದಸ್ಯರಾಷ್ಟ್ರಗಳು ಒಂದೇ ನೀತಿಯನ್ನು ಅನುಸರಿಸುವುದಿಲ್ಲ.

ಪಶ್ಚಿಮ ಯೂರೋಪಿನ ಮತ್ತೊಂದು ಪ್ರಮುಖ ರಾಷ್ಟ್ರವಾದ ಫಿನ್‌ಲೆಂಡ್ ಐರೋಪ್ಯ ಮುಕ್ತ ವ್ಯಾಪಾರ ಸಂಸ್ಥೆಯ ಜೊತೆಗಿದೆ. ಗ್ರೀಸ್, ತುರ್ಕಿ ಮತ್ತು ಆಸ್ಟ್ರಿಯಗಳು ಐರೋಪ್ಯ ಸಾಮಾನ್ಯ ಮಾರುಕಟ್ಟೆಯಲ್ಲಿವೆ.

1949ರಿಂದಲೂ ಅಸ್ತಿತ್ವದಲ್ಲಿರುವ ಪರಸ್ಪರ ಆರ್ಥಿಕ ನೆರವು ಸಮಿತಿಯು ಪೂರ್ವ ಯೂರೋಪಿನ ರಾಷ್ಟ್ರಗಳಿಂದ ಕೂಡಿದೆ. ಇದು ಪ್ರಾರಂಭವಾಗಿರುವುದು ಸೋವಿಯೆತ್ ರಷ್ಯದ ಪ್ರೋತ್ಸಾಹದಿಂದ. ಐರೋಪ್ಯ ಸಾಮಾನ್ಯ ಮಾರುಕಟ್ಟೆಯ ದೇಶಗಳು ಕೊಟ್ಟಷ್ಟು ಪ್ರಾಧಾನ್ಯವನ್ನು ವ್ಯಾಪಾರದ ಅಭಿವೃದ್ಧಿಗೆ ಈ ಸಮುದಾಯದ ದೇಶಗಳು ನೀಡಿಲ್ಲ. ಪರಸ್ಪರ ಹಣ ಸಹಾಯ ಮತ್ತು ಧೋರಣೆಗಳನ್ನು ರೂಪಿಸುವುದರಲ್ಲಿ ಈ ದೇಶಗಳ ಸರಕಾರಗಳು ಒಂದುಗೂಡಿವೆ.

ಮುಕ್ತ ವ್ಯಾಪಾರ ಸಂಸ್ಥೆಯ ಎಲ್ಲ ಸದಸ್ಯ ರಾಷ್ಟ್ರಗಳೂ ಐರೋಪ್ಯ ಸಾಮಾನ್ಯ ಮಾರುಕಟ್ಟೆಯ ಜೊತೆಗೂಡಲು ಆಸಕ್ತವಾಗಿವೆ. ಇಂಗ್ಲೆಂಡ್ 1961ರಿಂದ ಐರೋಪ್ಯ ಸಾಮಾನ್ಯ ಮಾರುಕಟ್ಟೆಗೆ ಸೇರಲು ನಡೆಸಿದ ಪ್ರಯತ್ನಗಳು ಫಲಿಸಿಲ್ಲ. ಫ್ರಾನ್ಸಿನ ಹಿಂದಿನ ಅಧ್ಯಕ್ಷ ದ ಗಾಲ್ ವಿರೋಧಿಸಿದ್ದು ಇದಕ್ಕೆ ಮುಖ್ಯ ಕಾರಣ. ಗ್ರೀಸ್, ತುರ್ಕಿ ಮತ್ತು ಆಸ್ಟ್ರಿಯಗಳು ಸಾಮಾನ್ಯ ಮಾರುಕಟ್ಟೆಯ ಸಂಪರ್ಕ ಹೊಂದಿವೆ. ಹಲವಾರು ಸುಂಕಗಳನ್ನು ಬೇರೆ ಬೇರೆ ಹಂತಗಳಲ್ಲಿ ಕತ್ತರಿಸಲಾಗುತ್ತಿದ್ದು ಸಾಮಾನ್ಯ ಮಾರುಕಟ್ಟೆಯ ಸದಸ್ಯತ್ವವನ್ನು ಹಲವು ವರ್ಷಗಳ ಅನಂತರ ಆ ಮೂರು ರಾಷ್ಟ್ರಗಳು ಗಳಿಸಿಕೊಂಡಿವೆ. ಇಂಗ್ಲೆಂಡಿನಲ್ಲಿ ವ್ಯವಸಾಯೋದ್ಯಮ ಇತರ ಉದ್ಯಮಗಳಿಗಿಂತ ಕಡಮೆ. ಕಾಮನ್‌ವೆಲ್ತ್ ರಾಷ್ಟ್ರಗಳ ಜೊತೆಗೆ ಇಂಗ್ಲೆಂಡ್ ವ್ಯಾಪಾರದ ಬಗೆಗೆ ಕೆಲವು ವಿಶೇಷ ನಿಯಮಗಳನ್ನು ಅನುಸರಿಸುತ್ತದೆ; ಕೆಲವು ಸುಂಕಗಳಲ್ಲಿ ರಿಯಾಯಿತಿಯನ್ನು ತೋರಿಸಲಾಗುತ್ತದೆ. ಈ ವಿಷಯಗಳ ಬಗೆಗೆ ಸಾಮಾನ್ಯ ಮಾರುಕಟ್ಟೆಯ ಜೊತೆ ಒಡಂಬಡಿಕೆಗೆ ಬರಲು ಇಂಗ್ಲೆಂಡಿಗೆ ಸಾಧ್ಯವಾಗಿಲ್ಲ.

ಇಂಗ್ಲೆಂಡ್ ಐರೋಪ್ಯ ಸಾಮಾನ್ಯ ಮಾರುಕಟ್ಟೆಯನ್ನು ಪ್ರವೇಶಿಸಿದರೆ ಕಾಮನ್‌ವೆಲ್ತ್ ರಾಷ್ಟ್ರಗಳ ವ್ಯಾಪಾರಕ್ಕೆ ಉಂಟಾಗುವ ಧಕ್ಕೆ ಎರಡು ರೀತಿ. ಆ ರಾಷ್ಟ್ರಗಳಿಂದ ಆಮದುಮಾಡಿಕೊಳ್ಳುತ್ತಿದ್ದ ಅನೇಕ ಪದಾರ್ಥಗಳನ್ನು ಇಂಗ್ಲೆಂಡ್ ಮುಂದೆ ಸಾಮಾನ್ಯ ಮಾರುಕಟ್ಟೆಯ ಐರೋಪ್ಯ ರಾಷ್ಟ್ರಗಳಿಂದಲೇ ತರಿಸಿಕೊಳ್ಳಬಹುದು. ಆಗ ಕಾಮನ್‌ವೆಲ್ತ್ ರಾಷ್ಟ್ರಗಳ ರಫ್ತುಗಳು ಕುಸಿಯುತ್ತವೆ. ಅಲ್ಲದೆ, ಇಂಗ್ಲೆಂಡಿನಿಂದ ಈಗ ದೊರೆಯುತ್ತಿರುವ ಸುಂಕದ ರಿಯಾಯಿತಿಗಳು ಇಲ್ಲವಾಗುತ್ತವೆ.

ಐರೋಪ್ಯ ಸಾಮಾನ್ಯ ಮಾರುಕಟ್ಟೆ ತನ್ನ ಸದಸ್ಯ ರಾಷ್ಟ್ರಗಳ ಆರ್ಥಿಕತೆಯನ್ನು ಸುಧಾರಿಸಿದೆ. ಇತರ ಐರೋಪ್ಯ ರಾಷ್ಟ್ರಗಳು ಆ ಸಮುದಾಯವನ್ನು ಸೇರಲು ಆತುರ ಪಡುವುದೇ ಇದಕ್ಕೆ ಸಾಕ್ಷಿ.

ನೋಡಿ : ಆಮದು ಮತ್ತು ರಫ್ತು

## ಐಸ್‌ಲೆಂಡ್

ಅಗ್ನಿಪರ್ವತಗಳು, ಬಿಸಿ ನೀರಿನ ಊಟೆಗಳು, ಹಿಮ ತುಂಬಿದ ಮೈದಾನಗಳು ಎಲ್ಲ ಒಂದೇ ನಾಡಿನಲ್ಲಿ, ಅದು ಐಸ್‌ಲೆಂಡ್.

| | | |
|---|---|---|
| ಖಂಡ | : | ಉತ್ತರ ಅಮೆರಿಕ |
| ರೇಖಾಂಶ | : | 13° 25′ ಪ ದಿಂದ 24° 32′ ಪ |
| ಅಕ್ಷಾಂಶ | : | 63° 24′ ಉ ದಿಂದ 66° 32′ ಉ |
| ವಿಸ್ತೀರ್ಣ | : | 1.02.823 ಚ. ಕಿ. ಮಿ. |
| ಜನಸಂಖ್ಯೆ | : | ಸುಮಾರು 1.83.000 |
| ರಾಜಧಾನಿ | : | ರೇಕ್‌ಜಾವಿಕ್ |
| ಭಾಷೆ | : | ಐಸ್‌ಲಾಂಡಿಕ್ |
| ಸರ್ಕಾರ | : | ಗಣರಾಜ್ಯ |
| ಬಾವುಟ | : | ನೀಲಿಬಣ್ಣ. ಬಿಳಿ ಅಂಚಿರುವ ಕೆಂಪು ಶಿಲುಬೆ |

ಐಸ್‌ಲೆಂಡ್, ಅಟ್ಲಾಂಟಿಕ್ ಸಾಗರದಲ್ಲಿ ಶೀತವಲಯದ ದಕ್ಷಿಣಕ್ಕೆ ಇರುವ ದ್ವೀಪ. ಅಗ್ನಿಪರ್ವತದಿಂದ ಹೊರಟ ಲಾವಾ, ಊಟೆಗಳು ಎಲ್ಲೆಲ್ಲೂ ಇವೆ. ತೀರ ಪ್ರದೇಶ ಮಾತ್ರ ವಾಸಯೋಗ್ಯವಾಗಿದೆ. ಐಸ್‌ಲೆಂಡ್ ತುಂಬ ಕುತೂಹಲಕಾರಿಯಾದ ನಾಡು. ಯೂರೋಪಿನ ಅತಿ ದೊಡ್ಡ ಹಿಮ ಸರೋವರ– 8806 ಚ. ಕಿ. ಮಿಾಟರು ವಿಸ್ತೀರ್ಣ ಇದರದು– ಇಲ್ಲಿದೆ. ಇಲ್ಲಿನ ಬಂಡೆಗಳಲ್ಲಿ ಸಣ್ಣ ಸಣ್ಣ ರಂಧ್ರಗಳಿರುವುದರಿಂದ ನೀರನ್ನು ಅವು ಉಳಿಸಿಕೊಳ್ಳಲಾರವು. ಹೀಗಾಗಿ ಬಂಡೆಗಳ ವಿಸ್ತಾರ ಪ್ರದೇಶದಲ್ಲಿ ಏನೂ ಬೆಳೆಯದು. ಇಪ್ಪತ್ತೈದಕ್ಕೂ ಹೆಚ್ಚು ಅಗ್ನಿಪರ್ವತಗಳಿವೆ. ಈ ಕಾರಣದಿಂದ ಬೇಕಾದಷ್ಟು ಬಿಸಿ ನೀರಿನ ಊಟೆಗಳು. ಐಸ್‌ಲೆಂಡ್‌ನಲ್ಲಿ ಬಗೆಬಗೆಯ ಪಕ್ಷಿಗಳಿವೆ. ಹತ್ತೊಂಬತ್ತನೆಯ ಶತಮಾನದವರೆಗೆ ಇಲ್ಲಿ ರಸ್ತೆಗಳಿರಲಿಲ್ಲ, ಚಕ್ರದ ಬಂಡಿಗಳಿರಲಿಲ್ಲ.

ಗಲ್ಫ್ ಸ್ಟ್ರೀಮ್–ಇದೊಂದು ಬಿಸಿ ನೀರಿನ ಪ್ರವಾಹ – ಹರಿಯುವುದರಿಂದ ಹವಾಗುಣ ಹಿತಕರವಾಗಿರುತ್ತದೆ. ಸುಮಾರಾಗಿ ಮಳೆಯೂ ಆಗುತ್ತದೆ.

ಮುಖ್ಯ ನದಿ ಜೋಕುಲ್ಸಾ. ಖನಿಜವೇನೂ ಇಲ್ಲ.

ಆಲೂಗಡ್ಡೆ, ಟರ್ನಿಪ್, ಹುಲ್ಲು ಮಾತ್ರ ಬೆಳೆಯುತ್ತಾರೆ. ಕುರಿ-ದನ ಸಾಕುವುದು, ಮೀನು ಹಿಡಿಯುವುದು ಮುಖ್ಯ ಕಸುಬು.

ಮಿಾನು ಸಂಸ್ಕರಣ, ಆಹಾರ ಸಂಸ್ಕರಣ, ವಿದ್ಯುತ್ ಸಾಮಾನುಗಳು, ಸಿಮೆಂಟ್, ಬಟ್ಟೆ, ಗೊಬ್ಬರ ಮೊದಲಾದ ಕೈಗಾರಿಕೆಗಳಿವೆ.

ಐಸ್‌ಲೆಂಡಿನ ಜನ ವಿದ್ಯಾವಂತರು. ಹತ್ತೊಂಬತ್ತನೆಯ ಶತಮಾನದ ವರೆಗೂ ಅಲ್ಲಿನ ಜನ ಪ್ರಪಂಚದ ಸಂಪರ್ಕದಿಂದ ದೂರವಾಗಿದ್ದರು. ಈಗ ಐಸ್‌ಲೆಂಡ್ ಆಧುನಿಕ ದೇಶವಾಗಿ ಮಾರ್ಪಟ್ಟಿದೆ. ಐಸ್‌ಲಾಂಡಿಕ್ ಭಾಷೆ ಆಡುತ್ತಾರೆ. ಜನ ಪ್ರಾಟೆಸ್ಟೆಂಟ್ ಮತಾವಲಂಬಿಗಳು.

ರೇಕ್‌ಜಾವಿಕ್ ಒಂದೇ ದೊಡ್ಡ ನಗರ. ಇದು ಐಸ್‌ಲೆಂಡಿನ ರಾಜಧಾನಿಯಾಗಿದೆ. ಇಲ್ಲಿ ಊಟೆಗಳ ಬಿಸಿ ನೀರನ್ನು ಎಲ್ಲ ಮನೆಗಳಲ್ಲಿ ಬಳಸುತ್ತಾರೆ.

ಒಂಬತ್ತನೆಯ ಶತಮಾನದಲ್ಲಿ ನಾರ್ವೆ, ಬ್ರಿಟನ್‌ಗಳಿಂದ ಬಂದವರು ಇಲ್ಲಿ ನೆಲೆಸಿದರು. 1242ರಲ್ಲಿ ನಾರ್ವೆಯ ಅರಸರ ಅಧೀನವಾಯಿತು ಈ ಪ್ರದೇಶ. ಅನಂತರ ಡೆನ್ಮಾರ್ಕಿನ ವಶವಾಯಿತು.

1944ರಲ್ಲಿ ಐಸ್‌ಲೆಂಡ್ ಸ್ವತಂತ್ರವಾಯಿತು. 1014 ವರ್ಷಗಳ ಹಿಂದೆ ಐಸ್‌ಲೆಂಡ್‌ನ ಮೊದಲನೆಯ ಪ್ರಜಾಪ್ರತಿನಿಧಿ ಸಭೆ ಸೇರಿದ್ದ ಸ್ಥಳ ವೆಂಗ್ ವೆಲ್ಲಿಡ್, ಇಲ್ಲಿಯೇ 1944ರಲ್ಲಿ ಸ್ವಾತಂತ್ರ್ಯ ಘೋಷಣೆಯ ಸಮಾರಂಭ ನಡೆಯಿತು.

## ಒಲಿಂಪಿಕ್ ಕ್ರೀಡೆಗಳು

1928ರಿಂದ 1960ರ ವರೆಗೆ ಹಾಕಿ ಆಟದಲ್ಲಿ ಭಾರತವನ್ನು ಮಿಾರಿಸುವ ದೇಶವೇ ಪ್ರಪಂಚದಲ್ಲಿರಲಿಲ್ಲ.

ಇದು ನಿರ್ಧಾರವಾದದ್ದು ಹೇಗೆ?

ಈ ಅವಧಿಯಲ್ಲಿ ಪ್ರತಿ ಒಲಿಂಪಿಕ್ ಕೂಟದಲ್ಲಿಯೂ ಭಾರತ ಹಾಕಿ ಪಂದ್ಯಗಳಲ್ಲಿ ಗೆಲ್ಲುತ್ತಿತ್ತು. 1960ರಲ್ಲಿ ಪಾಕಿಸ್ತಾನಕ್ಕೆ ಮೊದಲನೆಯ ಸ್ಥಾನವನ್ನು ಬಿಟ್ಟು ಕೊಟ್ಟ ಭಾರತ 1964ರಲ್ಲಿ ಇದನ್ನು ಮತ್ತೆ ಪಡೆಯಿತು. ಆದರೆ 1968ರಲ್ಲಿ ಮತ್ತೆ ಇದನ್ನು ಕಳೆದುಕೊಂಡಿತು.

ಪ್ರತಿ ನಾಲ್ಕು ವರ್ಷಗಳಿಗೊಮ್ಮೆ, ಒಲಿಂಪಿಕ್ ಕ್ರೀಡೆಗಳು ನಡೆಯುವ ಸಮಯ ಬಂತೆಂದರೆ, ಪ್ರಪಂಚದ ಎಲ್ಲ ಕ್ರೀಡಾಪಟುಗಳಿಗೂ ಎಲ್ಲಿಲ್ಲದ ಉತ್ಸಾಹ. ಓಡುವುದು, ಈಜುವುದು, ವ್ಯಾಯಾಮ ಮಾಡುವುದು ಮುಂತಾದುವುಗಳಲ್ಲಿ ತರಬೇತಿ ಹೊಂದಿ, ಪ್ರಪಂಚದ ಪ್ರಥಮ ಸ್ಥಾನ ಪಡೆಯಲು ಎಲ್ಲರಿಗೂ ಕಾತರ. ಕ್ರೀಡೆಯಲ್ಲಿ ಭಾಗವಹಿಸದವರಿಗೆ ಫಲಿತಾಂಶದ ಕುತೂಹಲ.

ಹೀಗೆ ಪ್ರಪಂಚದ ಪ್ರತಿಯೊಬ್ಬ ವ್ಯಕ್ತಿಯಲ್ಲೂ ಆಸಕ್ತಿ ಮೂಡಿಸುವ ಒಲಿಂಪಿಕ್ ಕ್ರೀಡೆಗಳ ಇತಿಹಾಸ ಬಹಳ ಹಿಂದಿನದು. ಜ್ಯೂಸ್ ದೇವತೆಯ ಗೌರವಕ್ಕಾಗಿ ಗ್ರೀಕರು ಏರ್ಪಡಿಸುತ್ತಿದ್ದ ಉತ್ಸವದ ಅಂಗವಾಗಿ ಇದು ಕ್ರಿ. ಪೂ. 776ರಲ್ಲಿ ಜನ್ಮತಾಳಿತು. ಗ್ರೀಸಿನ ಒಲಿಂಪಿಯಾ ನಗರ ಈ ಕ್ರೀಡೆಗಳಿಗಾಗಿ ಮೀಸಲಾಗಿರಿಸಿದ್ದ ಸ್ಥಳ. ಕವಿಗಳು, ಶಿಲ್ಪಿಗಳು, ಕಲಾವಿದರು, ಕ್ರೀಡಾಪಟುಗಳು ಈ ಮೇಳದಲ್ಲಿ ಭಾಗವಹಿಸುತ್ತಿದ್ದರು. ಇಲ್ಲಿ ನಡೆಯುತ್ತಿದ್ದ ಸ್ಪರ್ಧೆಗಳಲ್ಲಿ ಭಾಗವಹಿಸಿ ವಿಜಯಿಯಾದವನು ಶ್ರೇಷ್ಠ ದೇವತೆಯಂತೆ ಪೂಜೆಗೆ ಯೋಗ್ಯ ಎಂದು ಭಾವಿಸಲಾಗುತ್ತಿತ್ತು.

ಪಂದ್ಯಾಟಗಳಲ್ಲಿ ಪುರುಷರು ಮಾತ್ರ ಭಾಗವಹಿಸಬಹುದಾಗಿತ್ತು, ಸ್ಪರ್ಧಿ ಗುಲಾಮನಾಗಿರಬಾರದು ಎಂಬ ನಿಯಮವಿದ್ದಿತು.

ಈ ರೀತಿ ಪ್ರಾರಂಭವಾದ ಸ್ಪರ್ಧೆ ಪ್ರತಿ ನಾಲ್ಕು ವರ್ಷಗಳಿಗೊಮ್ಮೆ ಸತತವಾಗಿ ನಡೆಯುತ್ತಾ ಬಂದಿತು. ಇದರ ಪ್ರಸಿದ್ಧಿ ಎಷ್ಟಾಯಿತೆಂದರೆ,



ಗ್ರೀಕರು ಎರಡು ಸ್ಪರ್ಧೆಗಳ ನಡುವಿನ ಅಂತರವನ್ನೇ ಕಾಲವನ್ನಳೆಯಲು ಉಪಯೋಗಿಸಿದರು, ನಾಲ್ಕು ವರ್ಷಗಳಿಂದ ಕೂಡಿದ್ದ ಈ ಕಾಲವನ್ನು ಒಲಿಂಪಿಯಾಡ್ ಎಂದು ಕರೆದರು.

ಮಾನವನ ದೇಹವೂ ಅವನ ಮನಸ್ಸಿನಷ್ಟೇ ಆರೋಗ್ಯವಾಗಿರಬೇಕೆಂಬ ಅಭಿಪ್ರಾಯದಿಂದ ಹುಟ್ಟಿಕೊಂಡ ಈ ಉತ್ಸವ ಐದು ದಿನ ಜರಗುತ್ತಿತ್ತು. ಮೊದಲ ದಿನ ಸ್ಪರ್ಧಿಗಳು ಒಲಿಂಪಿಕ್ ಪ್ರಮಾಣವಚನ ಸ್ವೀಕರಿಸಿದ ಅನಂತರ ಮೆರವಣಿಗೆ, ಜ್ಯೂಸ್ ದೇವತೆಗೆ ಬಲಿ ಮೊದಲಾದುವು ನಡೆಯುತ್ತಿದ್ದುವು. ಎರಡನೆಯ ದಿನ ಒಲಿಂಪಿಕ್ ಕ್ರೀಡೆಗಳು ಪ್ರಾರಂಭವಾಗುತ್ತಿದ್ದುವು. ಓಡುವುದು, ಹಾರುವುದು, ಡಿಸ್ಕಸ್ ಹಾಗೂ ಜಾವೆಲಿನ್ ಎಸೆತ, ಕುಸ್ತಿ, ಕುದುರೆ ಪಂದ್ಯ, ರಥ ಸ್ಪರ್ಧೆ ಇತ್ಯಾದಿ ಮುಖ್ಯ ಕ್ರೀಡೆಗಳು. ಐದನೆಯ ದಿನ ಮೆರವಣಿಗೆ, ಬಹುಮಾನ ವಿತರಣೆ ಮತ್ತು ಹಬ್ಬ ಬಹಳ ವಿಜೃಂಭಣೆಯಿಂದ ನಡೆಯುತ್ತಿದ್ದುವು. ವಿಜಯಿಗಳಿಗೆ ಹಾಕುತ್ತಿದ್ದ ಆಲಿವ್ ಎಲೆಯ ಹಾರವೇ ಬಹುಮಾನವಾಗಿತ್ತು.

ಆದರೆ 393ರಲ್ಲಿ ರೋಮಿನ ಚಕ್ರಾಧಿಪತಿಯಾಗಿದ್ದ ಥಿಯೋಡೋಸಿಯಸ್ ಈ ಉತ್ಸವಗಳನ್ನು ಬಹಿಷ್ಕರಿಸಿದ. ಅಂದಿನಿಂದ 1,500 ವರ್ಷಗಳವರೆಗೆ ಈ ಕ್ರೀಡೆಗಳು ಏರ್ಪಡಲಿಲ್ಲ.

ಇಷ್ಟು ವರ್ಷ ಕಳೆದ ಬಳಿಕ ಫ್ರೆಂಚ್ ಜನಾಂಗದ ಪೀರ್ ದ ಕೂಬರ್ತಿನ್ ಎಂಬಾತ ಒಲಿಂಪಿಕ್ ಕ್ರೀಡೆಗಳನ್ನು ಮತ್ತೆ ಆರಂಭಿಸಲು ಸೂಚಿಸಿದ. ಗ್ರೀಸಿನ ಮೇಲ್ಮೆಗೆ ಅವರ ಕ್ರೀಡೆಗಳೇ ಬಹು ಮಟ್ಟಿಗೆ ಕಾರಣ ಎಂದು ಕಂಡುಕೊಂಡ ಆತ ಫ್ರೆಂಚ್ ಶಾಲೆಗಳಲ್ಲಿ ಕ್ರೀಡಾಪಟುಗಳ ಅಭಿವೃದ್ಧಿಗಾಗಿ ಪಣತೊಟ್ಟ. 1894ರಲ್ಲಿ ಕ್ರೀಡೆಗಳನ್ನು ಪುನಃ ಆರಂಭಿಸುವ ಉದ್ದೇಶಕ್ಕಾಗಿ ಒಂಬತ್ತು ರಾಷ್ಟ್ರಗಳ ಕ್ರೀಡಾಸಂಸ್ಥೆಗಳ ಸಮ್ಮೇಳನವನ್ನು ಪ್ಯಾರಿಸಿನಲ್ಲಿ ಕರೆದ.

ಇದರ ಫಲವಾಗಿ 1896ರಲ್ಲಿ ಒಲಿಂಪಿಕ್ ಕ್ರೀಡೆಗಳು ಆಧುನಿಕ ರೀತಿಯಲ್ಲಿ ಅಂತರರಾಷ್ಟ್ರೀಯ ಮಟ್ಟದಲ್ಲಿ ಪ್ರಾರಂಭವಾದುವು. ಗ್ರೀಸಿನ ಅಥೆನ್ಸ್ ನಗರವನ್ನು ಮೊದಲ ಬಾರಿಯ ಕ್ರೀಡೆಗಳಿಗಾಗಿ ಆರಿಸಲಾಯಿತು. ಅಲ್ಲಿ ಕ್ರೀಡೆಗಳಿಗಾಗಿಯೇ ಭವ್ಯವಾದ ಸ್ಟೇಡಿಯಂ ಒಂದರ ರಚನೆಯಾಯಿತು.

ಒಲಿಂಪಿಕ್ ಜ್ಯೋತಿ ತರುವುದು ಈ ಕ್ರೀಡೆಗಳ ಪ್ರಾರಂಭದಲ್ಲಿ ವಿಶಿಷ್ಟವಾದ ಕಾರ್ಯಕ್ರಮ. ಗ್ರೀಸಿನ ಒಲಿಂಪಿಯಾದಲ್ಲಿನ ಜ್ಯೂಸ್ ದೇವನ ದೇವಾಲಯದಿಂದ ತಂದ ಜ್ಯೋತಿಯನ್ನು ಹೊತ್ತು ಓಡಿಬರುತ್ತಾನೆ ತರುಣನೊಬ್ಬ. ನೀರಿನ ಮೇಲಿನ ಅನಿವಾರ್ಯ ಪ್ರಯಾಣವನ್ನು ಬಿಟ್ಟು ಉದ್ದಕ್ಕೂ ಜ್ಯೋತಿಯನ್ನು ನೆಲದ ಮೇಲೆಯೇ ಒಬ್ಬರಾದಮೇಲೊಬ್ಬರು ತರುಣ ಓಟಗಾರರು ಕೊಂಡೊಯ್ಯುತ್ತಾರೆ. ಕಡೆಯ ಸ್ಪರ್ಧಿ ಒಲಿಂಪಿಕ್ ಕ್ರೀಡಾಂಗಣವನ್ನು ತಲಪುತ್ತಲೇ ಜ್ಯೋತಿ ಅದರ ಪೀಠದಿಂದ ಬೆಳಗುತ್ತದೆ, ಕ್ರೀಡೆಗಳು ಆರಂಭವಾಗುತ್ತವೆ. ಅವು ಮುಗಿದನಂತರ ಜ್ಯೋತಿಯನ್ನು ನಂದಿಸುತ್ತಾರೆ.

1896ರಿಂದ ಒಲಿಂಪಿಕ್ ಕ್ರೀಡೆಗಳು ಪ್ರತಿ ನಾಲ್ಕು ವರ್ಷಗಳಿಗೊಮ್ಮೆ ಪ್ರಪಂಚದ ಒಂದೊಂದು ನಗರದಲ್ಲಿ ನಡೆಯುತ್ತ ಬಂದಿವೆ. ಆದರೆ ಮೊದಲನೆಯ ಜಾಗತಿಕ ಯುದ್ಧದ ದೆಸೆಯಿಂದ 1916ರಲ್ಲಿ, ಎರಡನೆಯ ಜಾಗತಿಕ ಯುದ್ಧದ ದೆಸೆಯಿಂದ 1940 ಮತ್ತು 1944ರಲ್ಲಿ ನಡೆಯಲಿಲ್ಲ. 1968ರಲ್ಲಿ ಮೆಕ್ಸಿಕೊ ನಗರದಲ್ಲಿ ಹತ್ತೊಂಬತ್ತನೆಯ ಒಲಿಂಪಿಕ್ ಕ್ರೀಡಾ ಕೂಟ ನಡೆಯಿತು. 1972ರಲ್ಲಿ ಒಲಿಂಪಿಕ್ ಕ್ರೀಡಾಕೂಟ ಮ್ಯೂನಿಕ್ ನಗರದಲ್ಲಿ, 1976ರಲ್ಲಿ ಕೆನಡದ ಮಾಂಟ್ರಿಯಲ್‌ನಲ್ಲಿ.



ಮರುಭೂಮಿಯ ಪ್ರಯಾಣಿಕರಿಗೆ ನಡುದಾರಿಯಲ್ಲಿ ನೀರು

## ಓಯಸಿಸ್

ಮೇಲೆ ಪ್ರಖರವಾಗಿ ಉರಿಯುತ್ತಿರುವ ಸೂರ್ಯ. ಕೆಳಗೆ ಆದಿ ಅಂತ್ಯಗಳಿಲ್ಲದಂತೆ ತೋರುವ ಮರಳುಗಾಡು ; ಇಂಥ ದಾರಿಯಲ್ಲಿ ಸಾಗಿರುವ ಪಥಿಕನಿಗೆ ಎಲ್ಲಾದರೂ ಹಸಿರು ಗಿಡಗಳು ತುಂಬಿರುವ ತಂಪಾದ ಆಸರೆ ದೊರೆತರೆ ! ಆಹಾ—ಎಷ್ಟು ಹಾಯೆನಿಸುತ್ತದೆ !

ಓಯಸಿಸ್, ಮರುಭೂಮಿಯಲ್ಲಿ ಇಂಥ ಸುಖವನ್ನು ಕೊಡುವ ತಾಣ. ಮರಳುಗಾಡಿನಲ್ಲಿ ಸಸ್ಯಗಳನ್ನು ಬೆಳೆಸುವಷ್ಟು ನೀರು ಒದಗುವ ಪ್ರದೇಶಗಳಿಗೆ ಓಯಸಿಸ್ ಎನ್ನುತ್ತಾರೆ. ಪ್ರಪಂಚದ ಎಲ್ಲ ಪ್ರಮುಖ ಮರುಭೂಮಿಗಳಲ್ಲೂ ಓಯಸಿಸ್‌ಗಳಿವೆ.

ಓಯಸಿಸ್‌ಗಳ ಪ್ರಮಾಣ ಒಂದೇ ರೀತಿಯದಲ್ಲ. ಕೆಲವು ಕೇವಲ ಹಲವಾರು ಜನರಿಗೆ ನೆರಳನ್ನು ಕೊಡಬಹುದು. ಮತ್ತೆ ಕೆಲವು ಎರಡು ಲಕ್ಷ ಜನರ ಆಹಾರ ಪೂರೈಕೆಯಾಗುವಷ್ಟು ಬೆಳೆಯನ್ನು ಬೆಳೆಯುವಂತಿರಬಹುದು. ಬೇರೆ ಕೆಲವು ಒಂದು ಪಟ್ಟಣದಷ್ಟು ಸಹ ದೊಡ್ಡದಾಗಿರಬಹುದು. ಚಿಕ್ಕ ಓಯಸಿಸ್‌ಗಳು ಮರುಭೂಮಿಯ ಪ್ರಯಾಣಿಕರು ಸ್ವಲ್ಪ ಕಾಲ ತಂಗುವ ತಾಣಗಳಾದರೆ ದೊಡ್ಡ ಓಯಸಿಸ್‌ಗಳು ಸುಪ್ರಸಿದ್ಧ ವ್ಯಾಪಾರ ಕೇಂದ್ರಗಳಾಗಬಹುದು. ಲಿಬಿಯ ದೇಶದ ಮರ್‌ಜುಕ್ ವ... ಸೌದಿ ಅರೇಬಿಯದ ಬುರೈಡ ಇಂಥ ಓಯಸಿಸ್ ವ್ಯಾಪಾರ ಕೇಂದ್ರ...

ಓಯಸಿಸ್‌ಗಳು ನಿಸರ್ಗಸೃಷ್ಟಿ ಆಗಿರಬಹುದು ; ಮಾನವ ನಿರ್ಮಿತವೂ ಇರಬಹುದು. ನೈಸರ್ಗಿಕ ಓಯಸಿಸ್‌ಗಳು ಮರುಭೂಮಿಯಲ್ಲಿ ಒಳಗಡೆ ಹರಿಯುವ ನದಿಗಳು ಅಥವಾ ಹೊಳೆಗಳ ದಂಡೆಯಲ್ಲಿಯೂ ಚಿಲುಮೆಗಳು ಉಕ್ಕುವ ಎಡೆಗಳಲ್ಲಿಯೂ ಕಾಣಬರುತ್ತವೆ. ಆಗಾಗ ಬೀಳುವ ಮಳೆ ನೈಸರ್ಗಿಕ ಓಯಸಿಸ್‌ಗಳ ಸಸ್ಯಗಳ ಬೆಳವಣಿಗೆಗೆ ಸಹಾಯಕವಾಗುತ್ತದೆ.

ಮಾನವ ಓಯಸಿಸ್‌ಗಳನ್ನು ನಿರ್ಮಿಸುವುದು ಬಾವಿಗಳನ್ನು ತೋಡುವುದರ ಮೂಲಕ. ಮುನ್ನೂರು–ನಾಲ್ಕು ನೂರು ಮೀಟರುಗಳ ಕೆಳಗೆ ಹರಿಯುತ್ತಿರುವ ನೀರನ್ನು ಗುರುತಿಸಿ ಅಂಥ ಕಡೆಗಳಲ್ಲಿ ಬಾವಿ ತೋಡುತ್ತಾರೆ. ಪರ್ವತಗಳಲ್ಲಿ ಹರಿಯುವ ಝರಿಗಳ ಸಹಾಯದಿಂದಲೂ ಓಯಸಿಸ್‌ಗಳನ್ನು ನಿರ್ಮಿಸುವುದುಂಟು. 1957ರಿಂದ ಸಹಾರ ಮರುಭೂಮಿಯ ಕೆಲವು ಪ್ರದೇಶಗಳನ್ನಾದರೂ ವಾಸಯೋಗ್ಯವಾಗುವಂತೆ ಮಾಡಲು ಯತ್ನಿಸುತ್ತಿದ್ದಾರೆ.

ನೀರಾವರಿ ಯೋಜನೆಗಳ ಮೂಲಕ ಇತರ ಮರುಭೂಮಿಗಳನ್ನೂ ವ್ಯವಸಾಯಯೋಗ್ಯ ಮಾಡುವ ಪ್ರಯತ್ನ ನಡೆಯುತ್ತಿದೆ. ಉತ್ತರ ಅಮೆರಿಕದ ಕೊಲರಾಡೋ ಮರುಭೂಮಿಗೆ ಕೊಲರಾಡೋ ನದಿಯಿಂದ ಕಾಲುವೆಗಳನ್ನು ಹಾಯಿಸಿ ಅತ್ಯುತ್ತಮ ಓಯಸಿಸ್ ನಿರ್ಮಿಸಲಾಗಿದೆ. ಅದು ಈಗ ಆಶ್ಚರ್ಯಕರವಾದ ವ್ಯವಸಾಯ ಉತ್ಪಾದನಾ ಕೇಂದ್ರವಾಗಿದೆ.

ಖರ್ಜೂರ ಮರುಭೂಮಿಗಳ ಪ್ರಮುಖ ಬೆಳೆ. ಅದಲ್ಲದೆ ಹೆಚ್ಚು ನೀರಿನ ಸೌಕರ್ಯವಿರುವ ಓಯಸಿಸ್‌ಗಳಲ್ಲಿ ಹಣ್ಣು, ತರಕಾರಿ, ಧಾನ್ಯಗಳು ಮತ್ತು ಹತ್ತಿ ಬೆಳೆಯುತ್ತಾರೆ. ಸಹಾರದಲ್ಲಿ ಖರ್ಜೂರ, ಹತ್ತಿ, ಆಲಿವ್, ಅಂಜೂರ, ಟೊಮಾಟೋ, ಈರುಳ್ಳಿ ಮತ್ತು ಔಷಧದ ಮೂಲಿಕೆಗಳನ್ನು ಬೆಳೆಯುತ್ತಾರೆ.

ಒಂಟೆ ಮರುಭೂಮಿಯ ಹಡಗು ; ಇದರ ಸಹಾಯದಿಂದ ಸಾಮಾನು ಸಾಗಾಣಿಕೆ ನಡೆಯುತ್ತದೆ.

ಓಯಸಿಸ್ ಜನರಿಗೆ ವಸತಿಯನ್ನೊದಗಿಸುತ್ತದೆ. ಓಯಸಿಸ್ ಪ್ರದೇಶಗಳಲ್ಲಿ ಯಾವಾಗಲೂ ಜನಸಾಂದ್ರತೆ ಹೆಚ್ಚು. ಸೋವಿಯೆತ್ ರಷ್ಯದ ತಾಷ್ಕೆಂಟ್, ಬುಖಾರ ಮುಂತಾದ ಓಯಸಿಸ್ ಪ್ರದೇಶಗಳು ಈಗ ಪಟ್ಟಣಗಳಾಗಿ ನಿಂತಿವೆ. ಆಫ್ರಿಕ ದೇಶದ ಅತ್ಯಂತ ದೊಡ್ಡ ಪಟ್ಟಣವಾದ ಕೈರೊ ಆರಂಭವಾದದ್ದು ಓಯಸಿಸ್‌ನಿಂದಲೇ. ಅಮೆರಿಕದ ಅರಿಜೋನಾ, ಸಾಲ್ಟ್ ಲೇಕ್ ಸಿಟಿ, ಯೂಟಾ ಇವೂ ಅಂಥ ಪಟ್ಟಣಗಳೇ.

ನೋಡಿ : ಮರುಭೂಮಿ

## ಓವನ್, ರಾಬರ್ಟ್

ಹದಿನೆಂಟನೆಯ ಶತಮಾನದ ಕಡೆಯ ವರ್ಷಗಳು, ಕೈಗಾರಿಕಾ ಕ್ರಾಂತಿಯಿಂದ ಕಾರಖಾನೆಗಳ ಮಾಲಿಕರು ಪ್ರಬಲರಾಗಿದ್ದ ಕಾಲ. ಕಾರ್ಮಿಕರಿಗೆ ಹಕ್ಕುಗಳಾಗಲೀ ಕಾನೂನಿನ ರಕ್ಷಣೆಯಾಗಲೀ ಇರಲಿಲ್ಲ. ಅಮೆರಿಕದಿಂದ ಇಂಗ್ಲೆಂಡಿಗೆ ಹತ್ತಿಯನ್ನು ಕಳುಹಿಸುವುದನ್ನು ನಿಲ್ಲಿಸಿಬಿಟ್ಟರು. ಇಂಗ್ಲೆಂಡಿನಲ್ಲಿ ಕಾರಖಾನೆಗಳು ಮುಚ್ಚಿಹೋದುವು. ಕಾರ್ಮಿಕರಿಗೆ ಹೊಟ್ಟೆಗಿಲ್ಲ. ಇಪ್ಪತ್ತೆಂಟು ವರ್ಷಗಳ ತರುಣ ಮಾಲಿಕನೊಬ್ಬ ಕಾರಖಾನೆಗಳು ಮತ್ತೆ ತೆರೆಯುವವರೆಗೂ ಕೆಲಸಗಾರರಿಗೆ ಕೂಲಿಯನ್ನು ಕೊಡುತ್ತಲೇ ಇದ್ದ. ಅವನ ಪಾಲುದಾರರು ವಿರೋಧಿಸಿದರು. ಆದರೂ ಆತ ಬಡಕಾರ್ಮಿಕರಿಗೆ ಕೂಲಿಯನ್ನು ಕೊಡುತ್ತಲೇ ಹೋದ. ಅವನಿಗೆ ಆದ ನಷ್ಟ ಏಳು ಸಾವಿರ ಪೌಂಡುಗಳು. ಆ ದಿಟ್ಟ ಕರುಣಾಳು ರಾಬರ್ಟ್ ಓವನ್.

ಪ್ರಮುಖ ಸುಧಾರಕನಾದ ರಾಬರ್ಟ್ ಓವನ್ ಬಡತನ, ಕುಡಿತ ಮುಂತಾದ ಸಮಾಜದ ದೋಷಗಳನ್ನು ನಿರ್ಮೂಲ ಮಾಡಲು ಹೋರಾಡಿದ. ಶಾಲೆಗಳಿಲ್ಲದೆ ಮಕ್ಕಳು ಬೀದಿಪಾಲಾಗುತ್ತಿದ್ದ ಸಮಯದಲ್ಲಿ ಶಾಲೆಗಳನ್ನು ಸ್ಥಾಪಿಸಿ ಮಕ್ಕಳ ಬಾಳಿಗೆ ಬೆಳಕು ಕೊಟ್ಟ. ಸ್ವಸಾಮರ್ಥ್ಯ ಮತ್ತು ದುಡಿಮೆಗಳಿಂದ ಒಂದು ದೊಡ್ಡ ಕಾರಖಾನೆಯ ಮಾಲಿಕನಾದ.

1771 ಮೇ 14ರಂದು ಮಾಂಟಿಗೊಮ್ಶೈರಿನ ನ್ಯೂಟೌನ್ ಎಂಬಲ್ಲಿ ಒಬ್ಬ ವ್ಯಾಪಾರಿಯ ಮಗನಾಗಿ ಓವನ್ ಹುಟ್ಟಿದ. ಒಂಬತ್ತು ವರ್ಷಗಳವರೆಗೂ ಸ್ವಲ್ಪ ವಿದ್ಯಾಭ್ಯಾಸ ಮಾಡಿ ಅನಂತರ ದುಡಿಮೆಯ ಜೀವನಕ್ಕೆ ಕಾಲಿಟ್ಟ. ಮ್ಯಾಂಚೆಸ್ಟರ್‌ನಲ್ಲಿ ಅಭಿವೃದ್ಧಿ ಹೊಂದುತ್ತಿದ್ದ ಹತ್ತಿ ಗಿರಣಿಯಲ್ಲಿ ಕೆಲಸಮಾಡಲು ಹೋದ. ಹತ್ತೊಂಬತ್ತನೆಯ ವಯಸ್ಸಿನಲ್ಲಿ 500 ಜನ ಕೆಲಸಗಾರರಿದ್ದ ಒಂದು ನೂಲಿನ ಗಿರಣಿಯ ನಿರ್ದೇಶಕನಾದ. ಅನಂತರ ಮ್ಯಾಂಚೆಸ್ಟರಿನ ಗಿರಣಿಗಳ ಒಂದು ಗುಂಪಿನ ಪಾಲುದಾರನೂ ನಿರ್ದೇಶಕನೂ ಆದ. ಮ್ಯಾಂಚೆಸ್ಟರಿನ ಒಬ್ಬ ಕೋಟ್ಯಧೀಶ್ವರನ ಮಗಳನ್ನು ಓವನ್ ಮದುವೆಯಾದ. ತನ್ನ ಸಹ ಪಾಲುದಾರನನ್ನು ಸ್ಕಾಟ್ಲೆಂಡಿನ ನ್ಯೂ ಲನಾರ್ಕ್ ಎಂಬಲ್ಲಿದ್ದ ಗಿರಣಿಯನ್ನು ಕೊಂಡುಕೊಳ್ಳುವಂತೆ ಪ್ರೇರೇಪಿಸಿ, ತಾನು ಅಲ್ಲಿಯೇ ನಿರ್ದೇಶಕನಾಗಿ ಸಂಸಾರ ಸಮೇತ ನೆಲೆಸಿದ. ಗಿರಣಿಯು ಅವನ ಹೆಸರಿನಲ್ಲಿರದಿದ್ದರೂ ಆಡಳಿತವೆಲ್ಲ ಅವನ ಕೈಯಲ್ಲಿಯೇ ಇತ್ತು. ಇದರಿಂದ ಅವನ ಇಷ್ಟದಂತೆ ಗಿರಣಿಯ ಆಡಳಿತವನ್ನು ರೂಪಿಸಲು ಅನುಕೂಲವಾಯಿತು. ಗಿರಣಿಯ



ಸುಧಾರಕ ರಾಬರ್ಟ್ ಓವನ್

2,000 ಕಾರ್ಮಿಕರಲ್ಲಿ 500 ಮಕ್ಕಳು. ಅವರ ವಯಸ್ಸು 5–6 ವರ್ಷಗಳು ಮಾತ್ರ. ಮಕ್ಕಳ ದುಡಿಮೆಯಿಂದ ನೊಂದ ಓವನ್ ಹತ್ತು ವರ್ಷಕ್ಕಿಂತ ಕಡಮೆ ವಯಸ್ಸಿನ ಯಾವ ಮಕ್ಕಳೂ ಕೆಲಸ ಮಾಡಬಾರದೆಂದು ವಿಧಿಸಿದ. ಕೆಲಸಗಾರರ ದುಡಿಮೆಯ ಅವಧಿಯನ್ನು ಹತ್ತೂವರೆ ಘಂಟೆಗಳಿಗೆ ಇಳಿಸಿದ. ಕಾರ್ಮಿಕರ ಕಲ್ಯಾಣಕ್ಕಾಗಿ, ಅವರು ಆರೋಗ್ಯಕರ ಮತ್ತು ಸುಖಕರ ಜೀವನವನ್ನು ನಡೆಸುವುದಕ್ಕಾಗಿ ತಕ್ಕ ಏರ್ಪಾಟುಗಳನ್ನು ಮಾಡಿದ. ಪ್ರಪ್ರಥಮವಾಗಿ ಶಿಶುವಿಹಾರಗಳನ್ನು ಸ್ಥಾಪಿಸಿದ. ಆ ಶಾಲೆಗಳಲ್ಲಿ ಮಕ್ಕಳನ್ನು ಹೊಡೆಯಬಾರದೆಂಬ ಕಟ್ಟಾಜ್ಞೆಯನ್ನು ಜಾರಿಗೆ ತಂದ. ತನ್ನ ಕೆಲಸಗಾರರ ಪ್ರೀತಿಯನ್ನು ಸಂಪೂರ್ಣವಾಗಿ ಸಂಪಾದಿಸಿದ. ಕಾರಖಾನೆಗಳನ್ನು ಮುಚ್ಚಿದಾಗಲೂ ಓವನ್ ತನ್ನ ಕಾರ್ಮಿಕರೆಲ್ಲರಿಗೂ ಸಂಬಳವನ್ನು ಪೂರ್ಣವಾಗಿ ಪಾವತಿ ಮಾಡಿದನೆಂದು ಇತರ ಪಾಲುದಾರರು ಕೋಪಗೊಂಡಾಗ, 'ಸಮಾಜದ ಹೊಸ ದೃಷ್ಟಿ' ಎಂಬ ಹಸ್ತಪತ್ರಿಕೆಯನ್ನು ಹೊರಡಿಸಿದ (1813). ಸಮಾಜ ಸುಧಾರಣೆಯಲ್ಲಿ ಆಸಕ್ತಿ ಇದ್ದವರ ಸಹಾಯದಿಂದ ಓವನ್ ಆ ಗಿರಣಿಯನ್ನು ತಾನೇ ಕೊಂಡುಕೊಂಡ. ಗಿರಣಿಗೆ ಬರುವ ಲಾಭವನ್ನು ಸಾರ್ವಜನಿಕ ಶಿಕ್ಷಣ ಮತ್ತು ಕಾರ್ಮಿಕ ಜೀವನದ ಸುಧಾರಣೆಗಾಗಿ ಖರ್ಚು ಮಾಡಬೇಕೆಂದು ನಿರ್ಧರಿಸಿದ.

ಬಹು ಬೇಗ ನ್ಯೂ ಲನಾರ್ಕ್ ಪಟ್ಟಣ ಜಗತ್ತಿನ ಗಮನವನ್ನು ಸೆಳೆಯಿತು. ಜನರಿಗೆ ಓವನನ ಅಭಿಪ್ರಾಯಗಳು ರುಚಿಸಲಾರಂಭಿಸಿದುವು.

ಆ ವಿಚಾರಗಳ ಬಗೆಗೆ ವಿವರಿಸಿ ತಿಳಿಸುವಂತೆ ನೆಪೋಲಿಯನ್ ಈತನಿಗೆ ಪತ್ರ ಬರೆದ. ವಿಕ್ಟೋರಿಯ ರಾಣಿಯ ತಂದೆ ಕೆಂಟಿನ ಡ್ಯೂಕ್ ಈತನ ಬೆಂಬಲಿಗನಾದ. ದೇಶ ವಿದೇಶಗಳ ಪ್ರಮುಖರೆಲ್ಲ ಅವನ ಪ್ರಯೋಗಗಳಲ್ಲಿ ಆಸಕ್ತಿ ವಹಿಸಿದರು. ಕಾರ್ಮಿಕರ ಕಲ್ಯಾಣ ಯೋಜನೆ ಫಲಪ್ರದವಾಗಲೇಬೇಕೆಂದು ಇಂಗ್ಲೆಂಡಿನ ನಾನಾ ಭಾಗಗಳ ಉತ್ಪಾದಕರ ಸಭೆಯನ್ನು ಓವನ್ ಕರೆದ. ಇದರ ಪರಿಣಾಮವಾಗಿ 1819ರಲ್ಲಿ ಕಾರಖಾನೆಗಳ ಮಸೂದೆ ಪಾರ್ಲಿಮೆಂಟಿನಲ್ಲಿ ಅಂಗೀಕೃತವಾಯಿತು.

1819ರ ಅನಂತರ ಓವನನ ಯೋಜನೆಗಳಲ್ಲಿ ಆದರ್ಶದ ಅಂಶ ಹೆಚ್ಚಿತು. ಸಾಮೂಹಿಕ ಕೈಗಾರಿಕೆಯ ಬಗೆಗೆ ಆಸಕ್ತಿಮೂಡಿ ಓವನ್ ಅಂಥ ಒಂದು ಪ್ರಯೋಗವನ್ನು ಗ್ಲಾಸ್‌ಗೋನ ಬಳಿ ಆರಂಭಿಸಿದ. ಸಾಮುದಾಯಿಕ ಅಭಿವೃದ್ಧಿಗೆ ಜನರ ವೈಯಕ್ತಿಕ ಸಹಕಾರ ಅತ್ಯಗತ್ಯ ಎನ್ನುವುದು ಅವನ ದೃಢ ಅಭಿಪ್ರಾಯವಾಗಿದ್ದಿತು. ಅಮೆರಿಕದಲ್ಲಿ 1200 ಜನರ ಒಂದು ಸಮುದಾಯದೊಡನೆ ಪ್ರಯೋಗ ನಡೆಸಲಾರಂಭಿಸಿದ. ಆದರೆ ಪ್ರಯೋಗ ಸಫಲವಾಗಲಿಲ್ಲ. 'ನ್ಯೂ ಹಾರ್ಮನಿ' ಸಾಮುದಾಯಿಕ ಜೀವನ ಕೇಂದ್ರದ ಸ್ಥಾಪನೆಯಿಂದ ಇವನಿಗೆ ಒಂದು ಕೋಟಿ ರೂಪಾಯಿಗಳಿಗಿಂತ ಹೆಚ್ಚು ನಷ್ಟವಾಯಿತು.

1829ರಲ್ಲಿ ಸ್ಕಾಟ್ಲೆಂಡಿನಿಂದ ಬ್ರಿಟನ್ನಿಗೆ ಹಿಂದಿರುಗಿದ ಓವನ್ ಶ್ರಮಜೀವಿಗಳ ಚಳುವಳಿಯೊಂದರಲ್ಲಿ ಭಾಗವಹಿಸಿದ. ಈ ಚಳುವಳಿಯಿಂದ ದೊಡ್ಡ ಪ್ರಮಾಣದ ಕಾರ್ಮಿಕ ಸಂಘಗಳು ಸ್ಥಾಪಿತವಾದುವು. ವಿಶ್ವದಾದ್ಯಂತ ಶ್ರಮಜೀವಿಗಳು ಓವನ್ನನ ಯೋಜನೆಗಳನ್ನು ಕಾರ್ಯಗತ ಮಾಡಲು ಆರಂಭಿಸಿದರು.

1858 ನವೆಂಬರ್ 7ರಂದು ಓವನ್ ತೀರಿಕೊಂಡ.

ಓವನ್ ತನ್ನ ಪ್ರಯೋಗಗಳನ್ನು ನಡೆಸಿದ್ದು, ಕೈಗಾರಿಕಾ ಕ್ರಾಂತಿ ಹಲವು ಸಮಸ್ಯೆಗಳನ್ನು ಸೃಷ್ಟಿಸಿದ ಕಾಲದಲ್ಲಿ. ಅವನ ಕಾರಖಾನೆಗಳಲ್ಲಿದ್ದ ಕೆಲಸಗಾರರ ದುರವಸ್ಥೆ ಕಂಡ ಓವನ್, ಅಂಥ ನಿಷ್ಕರುಣ ಸ್ಥಿತಿಯಿಂದ ಅವರ ಸ್ವಭಾವದ ಮೇಲೆ ಎಂಥ ಕೆಟ್ಟ ಪರಿಣಾಮವಾಗುತ್ತದೆ, ಒಳ್ಳೆಯವರೂ ಕಹಿಯಿಂದ, ಕೋಪದಿಂದ ಹೇಗೆ ಕೆಟ್ಟವರಾಗುತ್ತಾರೆ ಎಂಬುದನ್ನು ಕಂಡು ನೊಂದುಕೊಂಡ. ಅವನ ಸುಧಾರಣೆಯ ಕಾರ್ಯಗಳ ಹಿಂದೆ ಒಂದು ದೃಢವಾದ ನಂಬಿಕೆ ಇದ್ದಿತು. ಯಾರೂ ಹುಟ್ಟುವಾಗಲೇ ಕೆಟ್ಟವರಾಗಿರುವುದಿಲ್ಲ; ಅವರ ಬಾಲ್ಯದಲ್ಲಿ ಮನೆಯ ವಾತಾವರಣ, ಅನಂತರದ ಸ್ಥಿತಿಗತಿಗಳು–ಇದರಿಂದ ಕೆಟ್ಟವರಾಗುತ್ತಾರೆ; ಒಬ್ಬ ಮನುಷ್ಯನ ಸ್ಥಿತಿಗತಿಗಳನ್ನು ಉತ್ತಮಪಡಿಸಿ ಅವನನ್ನು ಸಹಾನುಭೂತಿಯಿಂದ ಕಂಡರೆ ಕೆಟ್ಟವನ ಸ್ವಭಾವವನ್ನೂ ತಿದ್ದಬಹುದು ಎಂದು ಭಾವಿಸಿದ್ದ.

ಕೆಲಸಗಾರರಿಗೆ ಸೌಕರ್ಯಗಳನ್ನು ಮಾಡಿಕೊಟ್ಟು ವಿಶ್ವಾಸ ಮತ್ತು ಸಹಾನುಭೂತಿಗಳಿಂದ ಅವರನ್ನು ಕಾಣುವುದರ ಅಗತ್ಯವನ್ನು ಇತರರು ಮನಗಾಣುವಂತಾಯಿತು. ಕಾರ್ಮಿಕರಿಂದ ಓವನ್ ಸಂಪಾದಿಸಿದ ವಿಶ್ವಾಸ ಗೌರವಗಳಿಂದ ಅವನ ತತ್ತ್ವಗಳು ಆಚರಣೆಯಲ್ಲಿಯೂ ಫಲಕೊಡಬಲ್ಲವೆಂಬುದು ಸ್ಪಷ್ಟವಾಯಿತು. ಅವನ ಕಾಲದಲ್ಲಿ ಬಹು ಮಂದಿಗೆ ಅವನ ಅಭಿಪ್ರಾಯಗಳು ಅರ್ಥವಾಗಲಿಲ್ಲವಾದರೂ ತನ್ನ ಮುಂದಿನ ಯುಗದ ಪ್ರಗತಿಗೆ ಓವನ್ ತಳಹದಿ ಹಾಕಿದ. ಕೆಲಸಗಾರರಿಗೆ ಒಳ್ಳೆಯ ಕೂಲಿಯನ್ನು ಕೊಟ್ಟು ಅವರ ಆರೋಗ್ಯ ಮತ್ತು ಸಂತೋಷಗಳಿಗೂ ಗಮನ ಕೊಟ್ಟರೆ ಎಂಥ ಸತ್ಪರಿಣಾಮವಾಗುವುದು ಎನ್ನುವುದನ್ನು ತೋರಿಸಿದ ಮೊದಲ ಕಾರಖಾನೆ ಮಾಲಿಕ, ಸಹಕಾರ ಚಳುವಳಿಯ ಆದ್ಯಪ್ರವರ್ತಕ, ರಾಬರ್ಟ್ ಓವನ್.

ನೋಡಿ : ಕೈಗಾರಿಕಾ ಕ್ರಾಂತಿ; ಬಾಲಕಾರ್ಮಿಕರು

## ಕಂಡುಹಿಡಿಯುವಿಕೆ

ಕ್ರಿ. ಪೂ. ಮೂರನೆಯ ಶತಮಾನದ ಮಧ್ಯಕಾಲವಿರಬಹುದು. "ಯುರೇಕಾ! ಯುರೇಕಾ!" ಎಂದು ಕೂಗುತ್ತ ಮೈಮರೆತು ಸ್ನಾನದ ಮನೆಯಿಂದ ಒಬ್ಬ ವ್ಯಕ್ತಿ ಓಡಿಬಂದ. 'ಯುರೇಕಾ' ಎಂದರೆ 'ನಾನು ಕಂಡು ಹಿಡಿದೆ' ಎಂದು ಅರ್ಥ, ಗ್ರೀಕ್ ಭಾಷೆಯಲ್ಲಿ.

ಹೀಗೆ ಕೂಗಿದವನು ಆರ್ಕಿಮಿಡೀಸ್. ಅವನ ಈ ಆನಂದಕ್ಕೆ ಕಾರಣ ಬಹಳ ದಿನಗಳಿಂದ ಕಾಡುತ್ತಿದ್ದ ಸಮಸ್ಯೆಗೆ ಪರಿಹಾರ ದೊರೆತದ್ದು. ಸಿರಾಕ್ಯೂಸ್‌ನ ದೊರೆ ಈತನನ್ನು ಕರೆದು ಅಕ್ಕಸಾಲಿಗ ತನಗೆ ಮಾಡಿಕೊಟ್ಟ ಕಿರೀಟ ಅಪ್ಪಟ ಚಿನ್ನದ್ದೇ ಅಲ್ಲವೇ ಎಂಬುದನ್ನು ಕಂಡುಹಿಡಿಯಲು ಆಜ್ಞಾಪಿಸಿದ್ದ. ಸ್ನಾನದ ತೊಟ್ಟಿಯಲ್ಲಿ ಅವನು ಇಳಿದಾಗ ಸ್ವಲ್ಪ ನೀರು ಹೊರಕ್ಕೆ ಹರಿಯುವುದನ್ನು ಗಮನಿಸಿದ ಆರ್ಕಿಮಿಡೀಸನಿಗೆ ಥಟ್ಟನೆ ಸ್ಫೂರ್ತಿ ಬಂದಿತು. ಮನೆಯೊಳಕ್ಕೆ ಓಡಿ ದೊರೆಯ ಕಿರೀಟದ ಸಮತೂಕದ ಅಪ್ಪಟ ಚಿನ್ನವನ್ನೂ ಮತ್ತು ಆ ಕಿರೀಟವನ್ನೂ ಬೇರೆ ಬೇರೆಯಾಗಿ ಒಂದು ಪಾತ್ರೆಯ ನೀರಿನಲ್ಲಿ ಮುಳುಗಿಸಿದ. ಹೊರಗೆ ಹರಿದ ನೀರಿನ ಪ್ರಮಾಣದಲ್ಲಿ ವ್ಯತ್ಯಾಸವಿತ್ತು. ಕಿರೀಟ ಅಪ್ಪಟ ಚಿನ್ನದಿಂದ ತಯಾರಾದದ್ದಲ್ಲ ಎಂದು ಅರಿತ.

ವಸ್ತುವನ್ನು ಗಾಳಿಯಲ್ಲಿ ಮೊದಲು ತೂಗಿ, ಅನಂತರ ನೀರು ತುಂಬಿದ ಪಾತ್ರೆಯಲ್ಲಿ ತೂಗಿದರೆ ಅದರ ತೂಕದಲ್ಲಿ ವ್ಯತ್ಯಾಸ ಕಂಡುಬರುತ್ತದೆ. ಈ ವ್ಯತ್ಯಾಸ ಪಾತ್ರೆಯಿಂದ ಹೊರಗೆ ಹರಿದ ನೀರಿನ ತೂಕಕ್ಕೆ ಸಮನಾಗಿರುತ್ತದೆ—ಎಂಬ ನಿಯಮವನ್ನು ಪ್ರತಿಪಾದಿಸಿದ. ಇದಕ್ಕೆ ಆರ್ಕಿಮಿಡೀಸನ ತತ್ತ್ವ ಎಂದೇ ಹೆಸರು.

ಯಾವುದಾದರೂ ವಿಷಯವನ್ನು, ವಸ್ತುವನ್ನು ಹೊಸದಾಗಿ ಮೊದಲ ಬಾರಿಗೆ ಕಂಡುಕೊಳ್ಳುವುದು ಅಥವಾ ನಿರ್ಮಿಸುವುದೇ ಕಂಡುಹಿಡಿಯುವಿಕೆ.



ಪ್ರಯೋಗಶಾಲೆಯಲ್ಲಿ

ಕಂಡುಹಿಡಿಯುವಿಕೆಯಲ್ಲಿ ಎರಡು ವಿಧ: ಒಂದು. ಈಗಾಗಲೇ ಪ್ರಕೃತಿಯಲ್ಲಿ ನಮ್ಮ ಸುತ್ತಮುತ್ತಲ ಪ್ರಪಂಚದಲ್ಲಿ ಹುದುಗಿರುವ ತತ್ತ್ವ ಅಥವಾ ವಿಷಯಗಳನ್ನು ಶೋಧಮಾಡುವುದು ಮತ್ತು ಅದನ್ನು ಬೆಳಕಿಗೆ ತರುವುದು. ಎರಡನೆಯದು, ಪ್ರಪಂಚದಲ್ಲಿ ಇಲ್ಲದ ಪದಾರ್ಥವನ್ನು ಹೊಸದಾಗಿ ಸೃಷ್ಟಿಸುವುದು.

ಗುರುತ್ವಾಕರ್ಷಣೆಯ ನಿಯಮವನ್ನು ಅರಿತು ವಿವರಿಸಿದ್ದು ಒಂದು ಬಗೆಯ ಕಂಡುಹಿಡಿಯುವಿಕೆ. ಆದರೆ ಈ ನಿಯಮವನ್ನು ಬಳಸಿ, ಭೂಮಿಯ ಗುರುತ್ವಾಕರ್ಷಣ ಶಕ್ತಿಯ ಸೆಳೆತವನ್ನು ಎದುರಿಸಿ ಮೇಲೇರುವ ಕ್ಷಿಪಣಿಗಳನ್ನು ರಚಿಸಿದ್ದು ಮತ್ತೊಂದು ಬಗೆಯ ಕಂಡುಹಿಡಿಯುವಿಕೆ. ಒಂದು ಕೇವಲ ಆಲೋಚನೆಯ ರೂಪದಲ್ಲಿರುತ್ತದೆ. ಇನ್ನೊಂದು ಕಾರ್ಯಗತವಾಗಿ ನಮ್ಮ ಸ್ಪರ್ಶ, ದೃಷ್ಟಿ ಇತ್ಯಾದಿಗಳಿಗೆ ಅನುಭವವಾಗುತ್ತದೆ.

ಪ್ರಪಂಚದಲ್ಲಿ ಇಷ್ಟು ಬಗೆಯ ಸಸ್ಯಗಳೂ ಇಷ್ಟು ಬಗೆಯ ಪ್ರಾಣಿಗಳೂ ಇರುವುದಕ್ಕೆ ಕಾರಣವೇನು ? ಇಷ್ಟೆಲ್ಲ ವೈವಿಧ್ಯದ ಮೂಲವೇನು ? ಇದಕ್ಕೆ ಚಾರ್ಲ್ಸ್ ಡಾರ್ವಿನ್ ಉತ್ತರ ಹುಡುಕಿದ, ಮತ್ತು ಜೀವನದ ಉತ್ಪತ್ತಿ ಹಾಗೂ ಪರಿವರ್ತನೆಗಳ ಬಗೆಗೆ ತನ್ನ ವಿಚಾರಗಳನ್ನು ಮಂಡಿಸಿದ. ಇದರಿಂದ ದೊಡ್ಡ ಕ್ರಾಂತಿಯುಂಟಾಯಿತು. ಸಿಡುಬು ಒಂದು ಭಯಂಕರ ಅಂಟು ಜಾಡ್ಯ: ಕಳೆದ ಶತಮಾನದ ಆದಿ ಭಾಗದಲ್ಲಿ ಎಡ್ವರ್ಡ್ ಜೆನ್ನರ್ ಎಂಬವನು, ಒಬ್ಬನಿಗೆ ದನದ ಸಿಡುಬು ಬಂದರೆ ಮತ್ತೆ ದೊಡ್ಡ ಸಿಡುಬು ಏಕೆ ಏಳುವುದಿಲ್ಲ ಎಂಬ ಪ್ರಶ್ನೆಗೆ ಉತ್ತರ ಹುಡುಕಲು ಹೊರಟ. ಇದಕ್ಕಾಗಿ ಭಯಪ್ರದ ಪ್ರಯೋಗವೊಂದನ್ನು ನಡೆಸಿದ. ಹುಡುಗನೊಬ್ಬನಿಗೆ ದನದ ಸಿಡುಬಿನ ರಸಿಕೆಯನ್ನು ಚುಚ್ಚಿದ. ಅವನಿಗೆ ಸಿಡುಬೆದ್ದು ಬೇಗನೆ ಗುಣವಾಯಿತು. ಮತ್ತೆ ಹುಡುಗನಿಗೆ ಸಿಡುಬಿನ ರಸಿಕೆ ಚುಚ್ಚಿದ. ಆದರೆ ನಿರೋಧಕ ಶಕ್ತಿ ಅವನಲ್ಲಿ ಬೆಳೆದಿದ್ದುದರಿಂದ ಸಿಡುಬು ಏಳಲೇ ಇಲ್ಲ. ಹೀಗೆ ಪ್ರಪಂಚದ ಮೂಲೆ ಮೂಲೆಗಳಲ್ಲಿ ದೇವಿಹಾಕುವುದು ಆಚರಣೆಗೆ ಬಂದಿತು.

ಇಂಥ ವಿಜ್ಞಾನಿಗಳ ಜೀವನವೇ ಇದಕ್ಕೆ ಮುಡಿಪು. ಥಾಮಸ್ ಆಲ್ವ ಎಡಿಸನ್ ಜನತೆಗೆ ಅತ್ಯಂತ ಉಪಯುಕ್ತ ಸಂಶೋಧನೆಗಳನ್ನು ಮಾಡಿದ್ದಾನೆ. ಸುಮಾರು 1865ರಿಂದ 1931ರ ಒಳಗೆ 1300 ಸಂಶೋಧನೆಗಳನ್ನು ಮಾಡಿದ್ದ. ಇಂದಿನ ವಿದ್ಯುತ್ ದೀಪಗಳ (ಗಾಜಿನ ಬುರುಡೆಗಳ) ರೂಢಿಗೆ ಅವನೇ ಕಾರಣ. ಚಲನಚಿತ್ರಗಳಿಗೆ ನಾಂದಿ ಹಾಡಿದ ಗ್ರಾಮಫೋನ್, ಕೈನೆಟೋಸ್ಕೋಪ್ ಎಂಬ ಯಂತ್ರಗಳು —ಹೀಗೆ ಬಿಡುವಿಲ್ಲದೆ ಹಲವಾರು ಸಂಶೋಧನೆಗಳನ್ನು ಮಾಡಿ ವಿಕ್ರಮ ಸಾಧಿಸಿದ.

ಕಂಡುಹಿಡಿಯುವವರ ಜೀವನ ಈ ರೀತಿ ಜನಸೇವೆಗೆ ಮೀಸಲು. ಆದರೆ ಅಪಾಯಕಾರಿ ಸಂಶೋಧನೆಗಳು ನಡೆಸುವವರ ಜೀವನಕ್ಕೆ ಎರವಾಗುವುದೂ ಉಂಟು. ಅಂಥವರಲ್ಲಿ ಮದಾಮ್ ಕ್ಯೂರಿ ಸ್ಮರಣಾರ್ಹಳು. ಇಂದು ಕ್ಯಾನ್ಸರ್ (ಅರ್ಬುದ) ರೋಗದ ಚಿಕಿತ್ಸೆಗೆ ಎಲ್ಲೆಡೆಯೂ ಉಪಯೋಗಿಸುವ ರೇಡಿಯಂ ಈಕೆಯ ಅವ್ಯಾಹತ ಸಂಶೋಧನೆಯ ಫಲ. ಆದರೆ ರೇಡಿಯಂ ಅವಳ ರಕ್ತದ ಮೇಲೆ ಕೆಟ್ಟ ಪರಿಣಾಮ ಮಾಡಿ, ಆಕೆ ಪ್ರಾಣ ಬಿಟ್ಟಳು.

ಅಂತರ್ದಹನ ಕ್ರಿಯೆಯಿಂದ ಚಲಿಸುವ ಗಾಡಿಗಳು, ಪೆಟ್ರೋಲ್ ತೈಲದಿಂದ ಸಾಗುವ ವಿಮಾನ, ಹಡಗು, ಸ್ವಯಂಚಾಲಿತ ವಾಹನಗಳು—ಇಂಥ ಸೃಷ್ಟಿಗಳು ನಮ್ಮ ನಾಗರಿಕತೆಯನ್ನು ಬಹುದೂರ ಕರೆದೊಯ್ದಿವೆ. ಕಂಡುಹಿಡಿಯುವಿಕೆಗೆ ಅಗತ್ಯವಾದದ್ದು ಪ್ರತಿಭೆ ಮತ್ತು ಕೆಲವು ಗುಣಗಳು. ಈ ಬಗೆಯ ಕಾರ್ಯವನ್ನು ಕೈಗೊಂಡ ವಿಜ್ಞಾನಿಗೆ ಸಹನೆ ಬೇಕು. ಸಣ್ಣ ಸಣ್ಣ ವಿವರಗಳನ್ನೂ ಕಾಣುವ ಎಚ್ಚರಿಕೆಯ ಕಣ್ಣು ಬೇಕು. ನಿಧಾನವಾಗಿ ಸಾಕ್ಷ್ಯವನ್ನು ಸಂಗ್ರಹಿಸುವ ತಾಳ್ಮೆ ಬೇಕು. ಮತ್ತೆ ಮತ್ತೆ ಪ್ರಯೋಗಗಳನ್ನು ಮಾಡುವ ಮನೋಧರ್ಮ ಬೇಕು.

ಕಂಡುಹಿಡಿಯುವಿಕೆ ಕೆಲವು ಬಾರಿ ಆಕಸ್ಮಿಕ ರೀತಿಯಲ್ಲಿ ಫಲಿಸುವುದುಂಟು. ರೋಗನಿರೋಧಕ ಪೆನ್ಸಿಲಿನ್ ಬೆಳಕಿಗೆ ಬಂದದ್ದು ಹೀಗೆ. ಕೃತಕ ಮಳೆ ಬರಿಸುವ ಪ್ರಯೋಗವೂ ಹೀಗೆಯೇ. ವಿನ್ಸೆಂಟ್ ಷೀಫರ್ ಎಂಬವನು ಎರಡನೆಯ ಮಹಾಯುದ್ಧದ ಬಳಿಕ ಹಿಮದ ಚಿಕ್ಕ ಕಣಗಳನ್ನು ವೃದ್ಧಿಗೊಳಿಸುವ ಬಗೆಗೆ ಪ್ರಯೋಗ ಮಾಡುತ್ತಿದ್ದ. ಒಂದು ನವೆಂಬರ್ ತಿಂಗಳಲ್ಲಿ ಸ್ವಲ್ಪ ಹಿಮುಗಡ್ಡೆಯನ್ನು ತೆಗೆದುಕೊಂಡು ವಿಮಾನದಲ್ಲಿ ಮೇಲೇರಿ ಸಾಕಷ್ಟು ದಟ್ಟ ಮೋಡದ ಮೇಲೆ ಉದುರಿಸಲಾರಂಭಿಸಿದ. ಪ್ರಯೋಗದ ಮಧ್ಯೆ ಚಳಿ ವಿಪರೀತವಾಗಿ ಉಳಿದ ಮಂಜಿನಗಡ್ಡೆಯನ್ನೆಲ್ಲ ಒಮ್ಮೆಗೇ ಹೊರಗೆ ಚೆಲ್ಲಿದ. ಆದರೆ ಅದೇ ಕಾರಣವಾಗಿ ಮಳೆ ಸುರಿಯಿತು.

ಹಲವು ಬಾರಿ ವಿಜ್ಞಾನಿ ಕೇವಲ ವೈಚಾರಿಕ ಅಥವಾ ಉಪಯೋಗದ ದೃಷ್ಟಿಯಿಂದ ಮಾತ್ರ ಒಂದು ವಿಷಯ ಅಥವಾ ಪದಾರ್ಥ ಕಂಡುಹಿಡಿದಿರುತ್ತಾನೆ. ಅದನ್ನು ಹಾನಿಕರ ಪರಿಣಾಮಗಳಿಗೆ ಬಳಸುವುದೂ ಅಪೂರ್ವವಲ್ಲ. ಈ ಶತಮಾನದಲ್ಲಿ ಪರಮಾಣುಶಕ್ತಿಯ ಮಹತ್ ಪ್ರಮಾಣವನ್ನು ಐನ್‌ಸ್ಟೀನ್ ತೋರಿಸಿಕೊಟ್ಟ. ಆದರೆ ಜಪಾನಿನ ಹಿರೋಷಿಮಾ, ನಾಗಸಾಕಿಗಳ ಮೇಲೆ ಈ ಶಕ್ತಿಯನ್ನೊಳಗೊಂಡ ಬಾಂಬು ಸಿಡಿದು, ಆ ಪರಿಸರದ ಸಮಸ್ತ ಜೀವರಾಶಿಯನ್ನು ನಾಶಗೊಳಿಸಿತು. ಹೀಗೆ ರಾಷ್ಟ್ರಗಳ ಬಲಸಮತೋಲನದ ಅಂಶಗಳಲ್ಲಿ ಪರಮಾಣುಶಕ್ತಿಗೆ ಅಗ್ರಸ್ಥಾನ ಒದಗಿತು.

ರಾಬರ್ಟ್ ಗೊಡ್ಡಾರ್ಡ್ ಎಂಬವನು 1926ರಲ್ಲಿ ಭೂಮಿಯ ಗುರುತ್ವ ಸೆಳೆತಕ್ಕೆ ವಿರುದ್ಧವಾಗಿ ಹಾರಬಲ್ಲ ರಾಕೆಟ್ ತಯಾರಿಸಿದ. 1969ರ ಚಂದ್ರ ಉಪಗ್ರಹ ಯಾತ್ರೆ ಇದರಿಂದ ಸಾಧ್ಯವಾಯಿತು. ಹೀಗೆ ಮೊದಲು ಪ್ರಯೋಜನದ ಯೋಚನೆ ಇಲ್ಲದೆಯೇ ಕಂಡುಹಿಡಿದದ್ದು ಅನಂತರ ಉಪಯುಕ್ತವಾಗಬಹುದು. ಸಿಡಿಮದ್ದು ಯುದ್ಧದಲ್ಲಿ ಮಾರಕ ಶಕ್ತಿಯೊದಗಿಸಿದಂತೆಯೇ ಗಣಿ ತೋಡುವುದರಲ್ಲಿ. ಸುರಂಗ ಮಾರ್ಗ ತೋಡುವುದರಲ್ಲಿ, ಕಟ್ಟಡವೆಬ್ಬಿಸುವ ಕಾರ್ಯಗಳಲ್ಲಿ ರಚನಾತ್ಮಕವಾಗಿ ನೆರವಾಗಿದೆ. ಹೀಗೆ ಕಂಡುಹಿಡಿಯುವ ಈ ಚಟುವಟಿಕೆ ಕೊನೆಯಿಲ್ಲದೆ ಸಾಗುತ್ತಲೇ ಇದೆ. ಇದರಿಂದ ಜ್ಞಾನಭಂಡಾರ. ಶಕ್ತಿಭಂಡಾರ. ಸೌಲಭ್ಯಭಂಡಾರ ತುಂಬಿ ತುಳುಕುತ್ತಿವೆ. ಮಾನವನ ನಿವಾಸ. ಉಡುಗೆತೊಡುಗೆ. ಸಂಚಾರಗಳಲ್ಲಿ ಸುಧಾರಣೆಗಳು ಆಗುತ್ತಲೇ ಇವೆ. ಪ್ಲಾಸ್ಟಿಕ್ ಮನೆ. ನೈಲಾನ್ ಬಟ್ಟೆ. ಸ್ಪರ್ಶಮಸೂರ ಇವು ಇಂದಿನ ಆವಿಷ್ಕಾರದ ಬಳಕೆಯ ವಸ್ತುಗಳಲ್ಲಿ ಕೆಲವು ಮಾತ್ರ.

ಕಳೆದ 150 ವರ್ಷಗಳಲ್ಲಿ ಕಂಡುಹಿಡಿಯುವಿಕೆ ಬಹಳ ಮಟ್ಟಿಗೆ ಬೆಳೆದಿದೆ. ವಿಮಾನ ವಿದ್ಯುತ್ ಚಾಲಿತ ಯಂತ್ರ, ಚಲನಚಿತ್ರ, ರೇಡಿಯೊ. ಟೆಲಿಫೋನ್, ನಿಸ್ತಂತು ವಾರ್ತೆ ಮತ್ತು ಪರಮಾಣುಶಕ್ತಿ ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಅಲ್ಪಾವಧಿಯಲ್ಲೇ ಕಾರ್ಯಗತವಾದುವು. ಸಂಪರ್ಕ ಹಾಗೂ ಸಾರಿಗೆಗಳು ಅನೇಕ ಪಟ್ಟು ಹೆಚ್ಚಿದುವು. ಯಂತ್ರಗಳನ್ನು ಕಂಡುಹಿಡಿದು, ದೈಹಿಕ ಶ್ರಮವನ್ನು ಮಾನವ ಕಡಮೆ ಮಾಡಿಕೊಂಡ. ಇದರಿಂದ ಮನೋರಂಜನೆಯ ಕಾರ್ಯಕ್ರಮಗಳು ಹೆಚ್ಚಿದುವು. ಪ್ರವಾಸ ಸುಗಮವಾಯಿತು. ಸಾಮಾಜಿಕ ಜೀವನ ಬದಲಾಯಿತು. ವಿದ್ಯಾಭ್ಯಾಸ ಕ್ರಮದಲ್ಲಿ ವಿಜ್ಞಾನಪಾಠಗಳೂ ಸೇರಿದುವು.

ಕಂಡುಹಿಡಿಯುವಿಕೆ ಸಾಧಾರಣವಾಗಿ ಯಾವುದಾದರೂ ಒಂದು ಅವಶ್ಯತೆಯಿಂದ ರೂಪುಗೊಳ್ಳುತ್ತದೆ. ಮುಖ್ಯವಾಗಿ ಈಗಿನ ಪ್ರಪಂಚದಲ್ಲಿ ಹೆಚ್ಚಿನ ಉಪಯೋಗ ಅಥವಾ ಹೆಚ್ಚಿನ ಲಾಭದ ದೃಷ್ಟಿಯೇ ಇದಕ್ಕೆ ಮೂಲ. ಹತ್ತಿಯನ್ನು ಬಿಡಿಸಿ ನೂಲನ್ನು ತೆಗೆಯುವುದು ನಿಧಾನದ ಕೆಲಸ, ಶ್ರಮದ ಕೆಲಸ. ಇದನ್ನು ನಿವಾರಿಸಲು ಎಲಿ ವಿಟ್ನಿಯ 'ಜಿನ್' ಯಂತ್ರ ಜನ್ಮ ತಾಳಿತು. ಹದಿನೆಂಟನೆಯ ಶತಮಾನದ ಕಡೆಯ ಭಾಗದಲ್ಲಿ ಅಮೆರಿಕ, ಫ್ರಾನ್ಸಿನೊಡನೆ ಯುದ್ಧ ಮಾಡಬೇಕಾಗಬಹುದೆಂಬ ಭಯ ತಲೆದೋರಿತು; ಅಮೆರಿಕಕ್ಕೆ ತಕ್ಕಷ್ಟು ಶಸ್ತ್ರಾಸ್ತ್ರಗಳಿರಲಿಲ್ಲ. ಸುಮಾರು ಎರಡು ವರ್ಷಗಳಲ್ಲಿ ಹತ್ತು ಸಾವಿರ ಸೈನಿಕರಿಗೆ ಅಗತ್ಯವಾದ ಎಲ್ಲ ಶಸ್ತ್ರಾಸ್ತ್ರ ಸಿದ್ಧಗೊಳಿಸಬೇಕಾಯಿತು. ನಿರ್ದಿಷ್ಟ ಅಳತೆಯ ಭಾಗಗಳನ್ನು ಸಾವಿರಾರು ಸಂಖ್ಯೆಯಲ್ಲಿ ತಯಾರಿಸಿ ಜೋಡಿಸುವ ರೀತಿಯನ್ನು ಎಲಿ ವಿಟ್ನಿಯೇ ಕಂಡುಹಿಡಿದ. ಯಂತ್ರಯುಗ ಆರಂಭವಾದಂದಿನಿಂದ ಕಂಡುಹಿಡಿಯುವಿಕೆ ಬಹು ಪಾಲು ಹೆಚ್ಚಿದೆ. ಯಂತ್ರಗಳ ಸುಧಾರಣೆ, ಹೊಸ ಯಂತ್ರಗಳ ಶೋಧ, ಕಡಮೆ ಬೆಲೆಯಲ್ಲಿ ಹೆಚ್ಚು ಸೇವೆ ಸಲ್ಲಿಸುವ ಯಂತ್ರಗಳ ಸೃಷ್ಟಿ ಹೀಗೆ ಅನೇಕ ವಿಧಗಳಲ್ಲಿ ಕಂಡುಹಿಡಿಯುವಿಕೆ ವೃದ್ಧಿಯಾಯಿತು. ಮಹಾಯುದ್ಧಗಳು ಕಂಡುಹಿಡಿಯುವಿಕೆಗೆ ಬಹು ಮಟ್ಟಿಗೆ ಕಾರಣವಾದುವು. ಮಾರಕಾಸ್ತ್ರಗಳು, ಪ್ರತ್ಯಸ್ತ್ರಗಳು ಇವುಗಳ ಜೊತೆಗೆ ಯುದ್ಧಾನಂತರ ರೋಗರುಜಿನಗಳು, ಇವನ್ನೆಲ್ಲ ನಿವಾರಿಸಲು ಕಂಡುಹಿಡಿಯುವಿಕೆ ಉತ್ತರೋತ್ತರವಾಗಿ ಬೆಳೆಯಿತು.

ಮೊದಮೊದಲಿಗೆ ಕಂಡುಹಿಡಿಯುವಿಕೆ ಕೇವಲ ಒಬ್ಬ ಮನುಷ್ಯನ ಆಸಕ್ತಿಯ ಗುರಿಯಾಗಿದ್ದಿತು. ಆದರೆ ಆಧುನಿಕ ಪ್ರಪಂಚದಲ್ಲಿ ಇದು ಸಾಮೂಹಿಕ ಚಟುವಟಿಕೆ. ಕೇವಲ ಒಬ್ಬ ವಿಜ್ಞಾನಿ, ಶಿಲ್ಪಿ ಅಥವಾ ತಂತ್ರಜ್ಞ, ಏನನ್ನೂ ಸಾಧಿಸುವುದು ಕಷ್ಟ. ಇದರಿಂದ ಈ ಚಟುವಟಿಕೆ ಕ್ರಮಬದ್ಧವಾಗಿ, ಸಂಘ, ಸಂಸ್ಥೆ ಹಾಗೂ ಸರಕಾರಗಳ ವತಿಯಿಂದ ನಡೆಯುತ್ತದೆ. ಕಂಡುಹಿಡಿಯುವಿಕೆ ಅಥವಾ ಮೂಲಶೋಧನೆಗಳು ದೇಶಕ್ಕೆ ಕೀರ್ತಿ ತರುತ್ತವೆ. ಉದಾಹರಣೆಗೆ ಅಂತರ್ಗ್ರಹಯಾತ್ರೆ. ಈ ರೀತಿಯ ಶೋಧಕ ಮನೋಭಾವವನ್ನು ತನ್ನ ಜನತೆಯಲ್ಲಿ ಮೂಡಿಸಬಲ್ಲ ಪ್ರತಿಯೊಂದು ದೇಶವೂ ಹೊಸ ಶೋಧನೆಗಳಿಗೆ ಏಕಸ್ವಗಳನ್ನು ನೀಡುತ್ತವೆ. ಇದರಿಂದ ವಿದೇಶದಲ್ಲಿ ಆ ದೇಶದ ಸ್ಥಾನವೂ ಭದ್ರಗೊಳ್ಳುತ್ತದೆ. ಏಕಸ್ವದಿಂದ ಕಂಡುಹಿಡಿದವನಿಗೆ ಆ ವಿಷಯದ ಎಲ್ಲ ಹಕ್ಕುಗಳೂ ದೊರೆಯುತ್ತವೆ. ಇಂದು ಇಂಥ ಕೆಲಸಕ್ಕೆ ಬೇಕಾಗುವ ಹಣ ಅಪಾರ. ಕೋಟ್ಯಂತರ ರೂಪಾಯಿಗಳ ಸಲಕರಣೆಗಳು, ಭವನಗಳು, ಸಿಬ್ಬಂದಿ, ಗ್ರಂಥಾಲಯ ಅಗತ್ಯವಾಗುತ್ತವೆ.

ಆದಿಮಾನವ ಕಂಡುಹಿಡಿದ ಬೆಂಕಿಯಿಂದ ಆಧುನಿಕ ಮಾನವ ನಡೆಸಿದ ಚಂದ್ರಉಪಗ್ರಹ ಯಾತ್ರೆಯವರೆಗೆ ಕಂಡುಹಿಡಿಯುವಿಕೆಯ ಅನೇಕ ಅಧ್ಯಾಯಗಳನ್ನು ಮಾನವ ಬರೆದಿದ್ದಾನೆ. ಈ ಅಧ್ಯಾಯಗಳೆಲ್ಲ ಮಾನವನ ಪ್ರಗತಿಗೆ ಕಾರಣವಾಗಿವೆ.

## ಕಡಲದಂಡೆ

ಸ್ವಾಮಿ ವಿವೇಕಾನಂದರು ಕನ್ಯಾಕುಮಾರಿ ಭೂಶಿರದಲ್ಲಿ ನಿಂತುಕೊಂಡು ಭೋರ್ಗರೆಯುವ ಸಾಗರವನ್ನು ನೋಡಿದರು. ಕಡಲ ದಂಡೆಯಿಂದ ದಿಗಂತದವರೆಗೆ ನೀರು ವಿಶಾಲವಾಗಿ ಹರಡಿತ್ತು. ವಿವೇಕಾನಂದರು ಮೈಮರೆತು ಧ್ಯಾನಮಗ್ನರಾದರು.

ಆ ಕಡಲದಂಡೆ ಸ್ವಾಮಿ ವಿವೇಕಾನಂದರಿಗೆ ತತ್ತ್ವಜ್ಞಾನದ ಫಲವನ್ನು ನೀಡಿದರೆ, ಕಾರವಾರದ ಕಡಲದಂಡೆ ಕವಿ ರವೀಂದ್ರರಿಗೆ ಸ್ಫೂರ್ತಿಯನ್ನು ಕೊಟ್ಟಿದೆ ; ದಣಿದವರಿಗೆ ನೆಮ್ಮದಿ ನೀಡಿದೆ; ಮೀನುಗಾರರಿಗೆ ಉದ್ಯೋಗ ಒದಗಿಸಿದೆ.

ಕಡಲದಂಡೆಯು ತೆರೆಗಳ ಹೊಡೆತದಿಂದ ರೂಪುಗೊಳ್ಳುತ್ತದೆ. ಸಮುದ್ರದ ಕರೆಯಲ್ಲಿ ಮರಳೇ ಪ್ರಧಾನವಾದ ಅಂಶ. ಪರ್ವತ ಪ್ರದೇಶಗಳಲ್ಲಿರುವ ಕಡಲದಂಡೆಗಳಲ್ಲಿ ಹಡಗುಗಳು ತಂಗಲು ಅನುಕೂಲವಿಲ್ಲ. ಪರ್ವತವೇ ಅಲ್ಲಿನ ಪ್ರಕೃತಿದತ್ತ ಕೋಟೆ. ಇದ್ದಕ್ಕಿದ್ದಂತೆ ಕಡಲಿಗೆ ಇಳಿಯುವ ಮಡುವಿರುವಂಥ ಅಪಾಯಕಾರಿ ಕಡಲದಂಡೆಗಳೂ ಇರುತ್ತವೆ. ಇವುಗಳಲ್ಲಿ ಅನೇಕ ಬಾರಿ ಪ್ರಬಲವಾದ ಅಲೆಗಳು ಅಲ್ಲಿರುವುದನ್ನೆಲ್ಲ ಹಿಂದಕ್ಕೆ ಸೆಳೆಯುತ್ತವೆ.

ಕಡಲಿನ ನೀಲಿ ನೀರು, ಬಿಳಿಯ ಮರಳು, ಹಸಿರು ಸಾಲು ಮರ



ಕಡಲದಂಡೆ ಶಾಶ್ವತವಾಗಿ ಒಂದೇ ತೆರನಾಗಿರುವುದಿಲ್ಲ. ಒಂದು ಪ್ರಚಂಡ ಬಿರುಗಾಳಿ ಕಡಲದಂಡೆಯ ಸ್ವರೂಪವನ್ನು ಸಂಪೂರ್ಣವಾಗಿ ಬದಲಿಸ ಬಲ್ಲುದು. ಕಡಲದಂಡೆ ಅಲೆಗಳಿಂದ ನಿರ್ಮಿತವಾಗುತ್ತಲೇ ಇರುತ್ತದೆ. ಸಮುದ್ರದ ತೆರೆಗಳು ಉಸುಕನ್ನು ದಂಡೆಯ ಮೇಲೆ ತಂದುಹಾಕುವುದು, ಮತ್ತೆ ನೀರಿನಲ್ಲಿ ಎಳೆದುಕೊಂಡು ಹೋಗುವುದು–ಈ ಕಾರ್ಯವನ್ನು ಮಾಡುತ್ತಲೇ ಇರುತ್ತವೆ. ಉತ್ತರಾರ್ಧ ಗೋಳದಲ್ಲಿ ಬೇಸಗೆಯಲ್ಲೆ ಕಡಲ ದಂಡೆಯ ನಿರ್ಮಾಣ ಕಾಲ. ಚಳಿಗಾಲದಲ್ಲಿ ದೊಡ್ಡ ಅಲೆಗಳು ಮತ್ತು ಹೆಚ್ಚಿನ ಉಬ್ಬರ ಇಳಿತಗಳಿಂದ ದಂಡೆ ತೊಳೆದಂತಾಗಿ ಸ್ವಲ್ಪ ಮಟ್ಟಿಗೆ ಕರಗು ತ್ತದೆ. ಕಡಲ ದಂಡೆಯ ವಿಶಿಷ್ಟ ಪದಾರ್ಥವಾದ ಉಸುಕು ಅಥವಾ ಮರಳು ಬಹು ದೂರ ಪ್ರಯಾಣಮಾಡಿ ಈ ಜಾಗವನ್ನು ತಲಪುತ್ತದೆ. ಸಾಧಾರಣವಾಗಿ ಭರದಿಂದ ಹರಿಯುವ ನದಿಗಳು ಈ ಮರಳನ್ನು ಒದಗಿಸು ತ್ತವೆ. ಇಲ್ಲವೆ ಸಮುದ್ರದ ಮಡ್ಡಿ ಮೇಲೆದ್ದು ಉಸುಕು ಮಾತ್ರ ದಂಡೆ ಯಲ್ಲಿ ಉಳಿಯುತ್ತದೆ. ಅಥವಾ ತೀರದ ಬಂಡೆಗಲ್ಲು ಕೊರೆಯಲ್ಪಟ್ಟು ಮರಳಿನ ಕಣಗಳಾಗಿ ರೂಪಾಂತರ ಹೊಂದುತ್ತದೆ. ಮರಳು ಸಮುದ್ರದ ನೀರಿನ ಪ್ರವಾಹದಲ್ಲಿ ನೂರಾರು ಕಿಲೊಮೀಟರು ದೂರ ಸಾಗುತ್ತದೆ.

ಒಂದು ದೇಶದ ರಕ್ಷಣೆಗೆ ಕಡಲದಂಡೆ ಮಹತ್ವದ್ದು. ಬೆಟ್ಟಪರ್ವತ ಗಳಿಲ್ಲದ ಪ್ರದೇಶಗಳಲ್ಲಿ ಬಂದರುಗಳಲ್ಲಿ ವೈರಿ ನೌಕೆಗಳು ಸುಲಭವಾಗಿ ಬಂದಿಳಿದು ದೇಶವನ್ನು ಪ್ರವೇಶಿಸಬಹುದು. ಕಡಲ ದಂಡೆಯ ರಕ್ಷಣೆ ಆರಂಭವಾದದ್ದು ಇಂಗ್ಲೆಂಡ್ ದೇಶದಲ್ಲಿ. ಅದಕ್ಕೆ ಹಿಂದೆ ವೈರಿ ಪಡೆಗಳು ಯಾವ ಪ್ರತಿಭಟನೆಯೂ ಇಲ್ಲದೆ ಸಮುದ್ರ ತೀರಗಳಲ್ಲಿ ಇಳಿದು ಕಾಯುತ್ತಿ ದ್ದರಂತೆ. ಹದಿನಾರನೆಯ ಶತಮಾನದಲ್ಲಿ ಬ್ರಿಟಿಷ್ ನೌಕೆಗಳು ಸಮುದ್ರ ಸಮರವನ್ನೇ ನಡೆಸಿದುವು. ಬಲು ದೂರದವರೆಗೆ ಮದ್ದು ಒಗೆಯುವ ಫಿರಂಗಿಗಳು ಬಳಕೆಗೆ ಬಂದುವು. ಹೀಗಾಗಿ ಕರಾವಳಿ ಸಂರಕ್ಷಣೆ ಮುಖ್ಯ ವಿಷಯವಾಯಿತು.

ಹತ್ತೊಂಬತ್ತು, ಇಪ್ಪತ್ತನೆಯ ಶತಮಾನಗಳಲ್ಲಿ ಹೀಗೆ ವೈರಿ ಪ್ರವೇಶಕ್ಕೆ ಆಸ್ಪದವಿರುವ ಕರಾವಳಿಗಳನ್ನು ರಕ್ಷಿಸಲು ಹಲವು ದೇಶಗಳು ವಿಶೇಷ ಕ್ರಮಗಳನ್ನು ಕೈಗೊಂಡುವು. ಕಾಲುವೆಗಳಿಗೆ ಸರಪಳಿಗಳನ್ನು ಅಡ್ಡಕಟ್ಟಿ ಹಡಗು ಲಂಗರು ಹಾಕುವ ಸ್ಥಳಗಳಲ್ಲಿ ಬಲೆಗಳನ್ನು ಒಡ್ಡಲಾಗುತ್ತಿದ್ದಿತು. ದೇಶದ ಸಮರನೌಕೆ, ವಾಣಿಜ್ಯ ನೌಕೆಗಳನ್ನು ರಕ್ಷಿಸಲು ನೌಕಾನೆಲೆಗಳನ್ನು ಭದ್ರವಾಗಿಡಲು ಜನರನ್ನು ಹಾಗೂ ಸಂಪತ್ತನ್ನು ಉಳಿಸಲು ಕರಾವಳಿಯ ಭದ್ರತೆ ಮುಖ್ಯವಾದ ಅಂಗವಾಗಿದೆ.

ಮಹಾಯುದ್ಧಗಳ ನಡುವಣ ಅವಧಿಯಲ್ಲಿ ಎಲ್ಲ ಪ್ರಮುಖ ಯುದ್ಧ ರಾಷ್ಟ್ರಗಳು ತಮ್ಮ ಕರಾವಳಿಯ ಸುಭದ್ರತೆಯಲ್ಲಿ ಬಹುಮಟ್ಟಿನ ಸುಧಾರಣೆ ಗಳನ್ನು ಮಾಡಿದುವು. ಎರಡನೆಯ ಮಹಾಯುದ್ಧದಲ್ಲಿ ಮತ್ತು ಅನಂತರ ವಾಯುಮಂಡಲದಿಂದ ತಮ್ಮ ಕಡಲದಂಡೆಯನ್ನು ರಕ್ಷಿಸಿಕೊಳ್ಳುವುದು ಪರಿಪಾಠವಾಯಿತು. ನಿಯಂತ್ರಿತ ಕ್ಷಿಪಣಿಗಳ ಮೂಲಕ ವೈರಿಯ ಉದ್ದೇಶ ವನ್ನು ಮೊದಲೇ ಗುರುತಿಸಿ ಅವರ ಬರವಿಗೆ ತೊಂದರೆ ಒಡ್ಡುವುದು ಕರಾವಳಿ ರಕ್ಷಣಾ ತಂತ್ರಗಳಲ್ಲಿ ಒಂದು. ಹಲವು ದಶಕಗಳಲ್ಲಿ ಬಂದರುಗಳ ರಕ್ಷಣೆ ಮತ್ತು ಪಹರೆಗಳಲ್ಲಿ ನೌಕಾದಳಗಳು ಬಹು ಮುಖ್ಯ ಪಾತ್ರ ವಹಿಸಿವೆ. ಬಂದರಿನ ಬಳಿ ಸಮುದ್ರದ ಒಳಗೆ ಸ್ಫೋಟಕಗಳನ್ನು ಇಡುವುದು, ದಂಡೆಯ ಮೇಲೆಲ್ಲ ಸ್ಫೋಟಕಗಳನ್ನು ಅಲ್ಲಲ್ಲಿ ಹೂಳುವುದು–ಶತ್ರುಗಳ ಮುನ್ನಡೆ ಯನ್ನು ತಡೆಯಲು ಕೈಗೊಳ್ಳುವ ಕ್ರಮಗಳು.

ಭಾರತದಲ್ಲೂ ನೌಕಾದಳ ಕರಾವಳಿಯನ್ನು ರಕ್ಷಿಸುತ್ತದೆ.

ಸಾಮಾನ್ಯವಾಗಿ ಒಂದು ದೇಶದ ಕಡಲದಂಡೆಯಿಂದ ಸ್ವಲ್ಪ ದೂರದ ಜಲಭಾಗ ಅದರ ಅಧಿಕಾರಕ್ಕೆ ಒಳಪಟ್ಟುದು ಎಂದು ಪರಿಗಣಿಸಲಾಗುತ್ತದೆ. ಈ ಮಿತಿ 9.6ರಿಂದ 19.2 ಕಿ.ಮೀ. ಇರಬಹುದು. ಭಾರತ ಇದನ್ನು 9.6 ಕಿ.ಮೀ. ಎಂದು ಗಣಿಸಿದೆ. ಇಥಿಯೋಪಿಯ, ಐಕ್ಯ ಅರಬ್ ಗಣರಾಜ್ಯ ಇಂಥ ರಾಷ್ಟ್ರಗಳು ಕಡಲದಂಡೆಯಿಂದ 19.2 ಕಿ.ಮೀ. ಗಳಷ್ಟನ್ನು ತಮ್ಮ ಅಧಿಕಾರದ ಮಿತಿಯಲ್ಲಿ ಇರಿಸಿಕೊಂಡಿವೆ.

ಕಡಲದಂಡೆಯ ಮೇಲೆ ವಿವಿಧ ಚಿಪ್ಪುಗಳು ದೊರೆಯುತ್ತವೆ. ಅವುಗಳಿಂದ ಬಡವರು ಆಭರಣಗಳನ್ನು ಮಾಡುತ್ತಾರೆ.

ಬಿಡುವಿನ ದಿನಗಳನ್ನು ಕಳೆಯಲು, ವಾರಾಂತ್ಯ ವಿಶ್ರಾಂತಿಯನ್ನು ಪಡೆಯಲು ಈ ಕಡಲದಂಡೆಗಳ ಉಪಯೋಗವನ್ನು ವಿದೇಶೀಯರು ಸಾಕಷ್ಟು ಮಾಡಿಕೊಳ್ಳುತ್ತಾರೆ. ದಿನವಿಡೀ ಅವರು ಸಮುದ್ರ ತೀರದಲ್ಲಿದ್ದು ಮನಬಂದಂತೆ ಹೊತ್ತು ಕಳೆದು ತಮ್ಮ ದಣಿವನ್ನು ನಿವಾರಿಸಿಕೊಳ್ಳುತ್ತಾರೆ. ಪ್ರಪಂಚದಲ್ಲಿ ಅತ್ಯಂತ ಸುಂದರವಾದ ಕೆಲವು ನೈಸರ್ಗಿಕ ಕಡಲದಂಡೆ ಗಳಿವೆ. ಕರ್ನಾಟಕದಲ್ಲಿರುವ ಕಾರವಾರದ ಕಡಲ ತೀರ ಅಂಥದು.

ನೋಡಿ : ಬಂದರು

## ಕನ್ನಡನಾಡು

ಯಂ ಶೈವಾಃ ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೊ
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ
ಅರ್ಹನ್ ಇತ್ಯಥ ಜೈನ ಶಾಸನರತಾಃ ಕರ್ಮೇತಿ ಮೀಮಾಂಸಕಾಃ
ಸೋಯಂ ವೋ ವಿಧಧಾತು ವಾಂಛಿತ ಫಲಂ ತ್ರೈಲೋಕ್ಯ
ನಾಥೋ ಹರಿಃ ॥

ಕನ್ನಡನಾಡಿನ ಶಾಸನವೊಂದರಲ್ಲಿ ದೊರೆತ ಶ್ಲೋಕ ಇದು ; ಕನ್ನಡನಾಡಿನ ಧರ್ಮಸಮನ್ವಯ ಮನೋಭಾವದ ಅಭಿವ್ಯಕ್ತಿ. ಒಬ್ಬ ದೇವರಿಗೆ ಹಲವು ಹೆಸರುಗಳು ; ಒಂದೊಂದು ಧರ್ಮದವರು ಒಂದೊಂದು ಶಾಸ್ತ್ರವನ್ನು ಅಭ್ಯಾಸಮಾಡುವವರು ಒಂದೊಂದು ಹೆಸರಿನಿಂದ ಅವನನ್ನು ಕರೆಯುತ್ತಾರೆ ; ಮೂರು ಲೋಕಗಳ ಒಡೆಯನಾದ ಅವನು ಮಂಗಳವನ್ನುಂಟು ಮಾಡಲಿ ಎನ್ನುವ ಪ್ರಾರ್ಥನೆ ಇದು.

ಒಂದು ಕಾಲದಲ್ಲಿ ಕಾವೇರಿಯಿಂದ ಗೋದಾವರಿವರೆಗಿನ ಪ್ರದೇಶ ಕನ್ನಡ ನಾಡಾಗಿತ್ತು. ಬ್ರಿಟಿಷರು ಭಾರತದ ಮೇಲೆ ಪ್ರಭುತ್ವ ಸ್ಥಾಪಿಸಿದಾಗ ಕನ್ನಡನಾಡು ಐದು ಆಡಳಿತ ವಿಭಾಗಗಳಲ್ಲಿ ಹಂಚಿಹೋಯಿತು. ಏಕೀಕೃತ ಕರ್ನಾಟಕ ಬೇಕೆಂಬ ಘೋಷ ಮೊಳಗಿದ್ದು ಸ್ವಾತಂತ್ರ್ಯ ಸಂಗ್ರಾಮದ ವೇಳೆಯಲ್ಲಿ. 1956ನೇ ನವೆಂಬರ್ ಒಂದರಂದು ಕನ್ನಡಿಗರ ಕನಸು ನನಸಾಯಿತು; ನೂತನ ಮೈಸೂರು ರಾಜ್ಯದ ಉದಯವಾಯಿತು. ಇದರ ವಿಸ್ತೀರ್ಣ 1,91,757 ಚದರ ಕಿ. ಮೀ.ಗಳು. ಜನಸಂಖ್ಯೆ 2,70,76,101 (1968ರ ಮಧ್ಯ ಭಾಗದ ಅಂದಾಜು). ಕನ್ನಡ ಮಾತನಾಡುವ ಜನರಿರುವ ಕೆಲವು ಪ್ರದೇಶಗಳು ಇನ್ನೂ ಈ ರಾಜ್ಯದಲ್ಲಿ ಸೇರಿಲ್ಲ. ಅಕ್ಷಾಂಶ ಉತ್ತರ 11° ರಿಂದ 19° ಯ ವರೆಗೆ, ರೇಖಾಂಶ ಪೂರ್ವ 74° ರಿಂದ 78° ಯ ವರೆಗೆ ಹಬ್ಬಿರುವ ರಾಜ್ಯ ಇದು.

ಕನ್ನಡನಾಡಿಗೆ ಪುರಾತನವಾದ ಚರಿತ್ರೆಯುಂಟು. ಚಿತ್ರದುರ್ಗದ ಬಳಿ ಪುರಾತತ್ತ್ವ ಶೋಧಕರಿಗೆ ಉಪಕರಣಗಳೂ ಚಿತ್ರಿತವಾದ ಮಡಕೆಗಳೂ



ಕೃಷ್ಣರಾಜಸಾಗರ

ದೊರೆತಿವೆ. ಇವು ಬೇರೆ ಬೇರೆ ಆರು ಕಾಲ ಘಟ್ಟಗಳಿಗೆ ಸೇರಿದುವು. ಇವು ಕ್ರಿ. ಪೂ. 4000 ದಿಂದ ಕ್ರಿ. ಶ. 1200ರ ಕಾಲದವು ಎಂದು ಅಭಿಪ್ರಾಯ ಪಡಲಾಗಿದೆ. ರಾಮಾಯಣದ ದಂಡಕಾರಣ್ಯ ಪ್ರದೇಶ ಇದೆಂದೂ ವಾಲಿ ಸುಗ್ರೀವರಿದ್ದ ಪಂಪಾತೀರ ತುಂಗಭದ್ರ ತೀರವೆಂದೂ ಹೇಳುತ್ತಾರೆ. ಮಹಾಭಾರತ ಹೆಸರಿಸುವ ಮಹಿಷಾಕ ಮೈಸೂರು, ವನವಸಕ ಬನವಾಸಿ ಮತ್ತು ಕುಂತಳ ಉತ್ತರ ಕರ್ನಾಟಕ. ಅಶೋಕನ ಕಾಲದಲ್ಲಿ ಮೌರ್ಯ ಸಾಮ್ರಾಜ್ಯಕ್ಕೆ ಸೇರಿದ್ದ ಈ ನಾಡಿನಲ್ಲಿ ಅಶೋಕನ ಶಾಸನಗಳು ದೊರೆತಿವೆ. ಶಾತವಾಹನರು, ಕದಂಬರು, ಚೋಳರು, ರಾಷ್ಟ್ರಕೂಟರು ಆಳಿದ ನಾಡಿದು. ಹರ್ಷವರ್ಧನನನ್ನು ಸೋಲಿಸಿ 'ಪರಮೇಶ್ವರ' ಎನ್ನುವ ಹೆಸರನ್ನು ತಳೆದ ಎರಡನೆಯ ಪುಲಿಕೇಶಿ (610–642), ಶೌರ್ಯಕ್ಕೂ ಔದಾರ್ಯಕ್ಕೂ ಹೆಸರಾದ ಎರಡನೆಯ ವಿಕ್ರಮಾದಿತ್ಯ ಈ ನಾಡಿನ ಅರಸರು. ರಾಷ್ಟ್ರಕೂಟ ಮನೆತನದ ಮೂರನೆಯ ಗೋವಿಂದ, ನೃಪತುಂಗನೆಂದು ಪ್ರಸಿದ್ಧನಾದ ಅವನ ಮಗ ಅಮೋಘ ವರ್ಷ, ಅವನ ಮೊಮ್ಮಗ ಮೂರನೆಯ ಇಂದ್ರ ಇವರ ಪ್ರಭುತ್ವ ಉತ್ತರ ಭಾರತಕ್ಕೂ ಹರಡಿತ್ತು. ವಿಕ್ರಮಾದಿತ್ಯ ಶಕೆ 1077ರ ಫೆಬ್ರವರಿ 26ರಂದು ಪ್ರಾರಂಭವಾಯಿತು. ಐವತ್ತು ವರ್ಷ ಕಾಲ ವಿಸ್ತಾರವಾದ ರಾಜ್ಯವನ್ನು ದಕ್ಷತೆಯಿಂದ ಆಳಿ, ರಣಭೂಮಿಯಲ್ಲಿ ಶೌರ್ಯವನ್ನೂ ಓಲಗದಲ್ಲಿ ಕಲಾಭಿಮಾನವನ್ನೂ ಮೆರೆದು, ರಾಜ್ಯಕ್ಕೆ ಶಾಂತಿಯನ್ನು ನೀಡಿದ ವಿಕ್ರಮಾದಿತ್ಯ ಶಕಪುರುಷನಾದ. ವಿಜಯನಗರ ಸಾಮ್ರಾಜ್ಯದಲ್ಲಿ ಕನ್ನಡಿಗರ ವೈಭವ ಉನ್ನತ ಶಿಖರವನ್ನು ಮುಟ್ಟಿತು. ಕೃಷ್ಣದೇವರಾಯ ಭಾರತದ ಶ್ರೇಷ್ಠ ಅರಸರ ಪಂಕ್ತಿಗೆ ಸೇರಿದವನು. ಈ ಸಾಮ್ರಾಜ್ಯದ ಪತನದ ಅನಂತರ ಕನ್ನಡನಾಡಿನ ಬಹುಭಾಗ ಮೈಸೂರಿನ ಒಡೆಯರ ಆಡಳಿತಕ್ಕೆ ಬಂದಿತು. ನಾಲ್ವಡಿ ಕೃಷ್ಣರಾಜ ಒಡೆಯರು (1884–1940) ಶ್ರೇಷ್ಠ ಆಳರಸರೆಂಬ ಕೀರ್ತಿಯನ್ನು ಗಳಿಸಿದರು.

ಇಂಗ್ಲಿಷರನ್ನು ಎದುರಿಸುವುದರಲ್ಲಿ ಕನ್ನಡಿಗರು ತಮ್ಮ ಸ್ವಾತಂತ್ರ್ಯ ಪ್ರೇಮವನ್ನೂ ವೀರಶ್ರೀಯನ್ನೂ ಮೆರೆದಿದ್ದಾರೆ. ಮೈಸೂರಿನ ಹುಲಿ ಟಿಪ್ಪು ಇಂಗ್ಲಿಷರೊಡನೆ ಅವ್ಯಾಹತವಾಗಿ ಹೋರಾಡಿ ರಣರಂಗದಲ್ಲಿ ಮಡಿದ. ಕಿತ್ತೂರಿನ ರಾಣಿ ಚೆನ್ನಮ್ಮನಂಥ ವೀರ ವನಿತೆಯರ, ಸಂಗೊಳ್ಳಿ ರಾಯಣ್ಣನಂಥ ವೀರಪುರುಷರ ನಾಡು ಇದು. ಈ ಶತಮಾನದಲ್ಲಿ ನಡೆದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಕನ್ನಡಿಗರು ಸ್ಮರಣೀಯ ಪಾತ್ರವಹಿಸಿದರು. ಗಾಂಧಿಜಿಯ ಅಧ್ಯಕ್ಷತೆಯಲ್ಲಿ ನಡೆದ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನ (1924) ಬೆಳಗಾವಿಯಲ್ಲಿ ಸೇರಿತ್ತು. ಸ್ವಾತಂತ್ರ್ಯ ಸಮರದ ಕಾಲದಲ್ಲಿಯೂ ಅನಂತರವೂ ದೇಶಕ್ಕೆ ಹಲವರು ಮಹಾನರನ್ನು ಕನ್ನಡನಾಡು ನೀಡಿದೆ.

ನಿಸರ್ಗದ ಕೃಪೆಗೆ ಪಾತ್ರವಾಗಿರುವ ನಾಡು – ಕರ್ನಾಟಕ. ಕೃಷ್ಣಾ, ಕಾವೇರಿ, ತುಂಗಭದ್ರ, ಹೇಮಾವತಿ, ಕಪಿನಿ, ಮಲಪ್ರಭ, ಘಟಪ್ರಭ ನದಿಗಳಿಂದ ನೆಲ ಫಲವತ್ತಾಗಿದೆ. ಭತ್ತ, ಗೋಧಿ, ಜೋಳ, ದ್ವಿದಳ ಧಾನ್ಯಗಳು, ರಾಗಿ, ಹತ್ತಿ, ಕಬ್ಬು, ಕಾಫಿ, ಏಲಕ್ಕಿ, ಹೊಗೆಸೊಪ್ಪು ಬೆಳೆಯುತ್ತವೆ. ಇಲ್ಲಿ ಅರಣ್ಯ ಸಂಪತ್ತೂ ಸಮೃದ್ಧ. ಹಳೆಯ ಮೈಸೂರು ಶ್ರೀಗಂಧಕ್ಕೆ ತವರು. ನಿಸರ್ಗದ ಚೆಲುವನ್ನು ನಾಡಿನ ಹಲವು ಭಾಗಗಳಲ್ಲಿ ಅದರಲ್ಲಿಯೂ ಮಲೆನಾಡಿನಲ್ಲಿ ಮತ್ತು ಸಮುದ್ರದ ತೀರಗಳಲ್ಲಿ ಕಾಣಬಹುದು. ಭಾರತದಲ್ಲಿ ಬಂಗಾರ ದೊರೆಯುವುದು ಕನ್ನಡನಾಡಿನಲ್ಲಿ ಮಾತ್ರ. ಕಬ್ಬಿಣ, ಮ್ಯಾಂಗನೀಸ್ ದೊರೆಯುತ್ತವೆ. ಕನ್ನಡನಾಡು ಕೈಗಾರಿಕೆಗೆ ಹೆಸರಾಗಿದೆ. ಭದ್ರಾವತಿಯ

ಜೋಗ್ ಜಲಪಾತ





ಬೇಲೂರಿನ ಶಿಲ್ಪ : ಸಾಲುಕೃತಿಗಳು



ಕಿತ್ತೂರ ರಾಣಿಯ ಕೋಟೆ

ನಾಡು ಕರ್ನಾಟಕ. ಹಂಪೆ. ಉಡುಪಿ. ಶೃಂಗೇರಿ. ಮೇಲುಕೋಟೆ, ಬಸವಕಲ್ಯಾಣ ಇಂಥ ಪುಣ್ಯಕ್ಷೇತ್ರಗಳು ಇಲ್ಲಿ ಹಲವು. ಜೈನರಿಗೆ ಯಾತ್ರಾಸ್ಥಳವಾದ ಶ್ರವಣಬೆಳಗೊಳ ಇರುವುದು ಇಲ್ಲಿಯೇ.

ಕಲೆಯ ಸಿರಿಬೀಡು ಕನ್ನಡನಾಡು. ಕರ್ನಾಟಕ ಸಂಗೀತ, ಹಿಂದೂಸ್ತಾನೀ ಸಂಗೀತ ಎರಡೂ ಇಲ್ಲಿ ಬೆಳೆದು ಬಂದಿವೆ.

ಚಾಳುಕ್ಯರು. ಗುಪ್ತರು. ಪಲ್ಲವರು—ಎಲ್ಲರ ಕಾಲದ ವಾಸ್ತುಶಿಲ್ಪ ಕೃತಿಗಳು ಇಲ್ಲಿವೆ. ನಾಗರ. ವೇಸರ. ದ್ರಾವಿಡ ಶೈಲಿಯ ಕಟ್ಟಡಗಳಿವೆ. ಪಟ್ಟದಕಲ್ಲಿನಲ್ಲಿ ಉತ್ತರ ಮತ್ತು ದಕ್ಷಿಣ ಶೈಲಿಗಳ ದೇವಾಲಯಗಳಿವೆ. ಬಾದಾಮಿ. ಐಹೊಳೆ, ಪಟ್ಟದ ಕಲ್ಲುಗಳ ಗುಹಾಂತರ್ದೇವಾಲಯಗಳು. ಲಕ್ಕುಂಡಿಯ ದೇವಾಲಯಗಳು. ಬೇಲೂರು ಹಳೇಬೀಡಿನ ದೇವಾಲಯಗಳು ಕಲೆಯ ಗಣಿಗಳು. ಬಿಜಾಪುರದ ಗೋಳಗುಮ್ಮಟ. ಶ್ರವಣಬೆಳಗೊಳದ ಗೋಮಟೇಶ್ವರ ಶಿಲ್ಪದ ಪವಾಡಗಳು. ಪುಲಿಕೇಶಿಯ ಕಾಲದಿಂದ ಸಂಗೀತ ಸಾಹಿತ್ಯ ಕಲೆಗಳಿಗೆ ಆಶ್ರಯದಾತರು ಕನ್ನಡನಾಡಿನ ಪ್ರಭುಗಳು. ಹಿಂದಿನ ಮೈಸೂರಿನ ನಾಲ್ವಡಿ ಕೃಷ್ಣರಾಜ ಒಡೆಯರು ತಮ್ಮ ಕಲಾಭಿಮಾನಕ್ಕೆ ಮನೆಮಾತಾಗಿದ್ದರು. ಸಾವಿರ ವರ್ಷಕ್ಕೂ ಮೀರಿದ ಸಾಹಿತ್ಯ ಚರಿತ್ರೆ ಇಲ್ಲಿಯದು. ಪಂಪ. ರನ್ನ. ಕುಮಾರವ್ಯಾಸರು ಕಾವ್ಯ ಬರೆದ ನಾಡು ಇದು. ವಚನಕಾರರು ತಿಳಿಯಾದ ಸುಂದರ ಭಾಷೆಯಲ್ಲಿ ನಿರರ್ಗಳವಾಗಿ ಸಾಹಿತ್ಯ ರಚಿಸಿದರು. ದಾಸರು ಸರಳವಾದ ಮನಮುಟ್ಟುವ ಭಾಷೆಯಲ್ಲಿ ಹಾಡಿದರು.

ಈಗಿನ ಮೈಸೂರು ರಾಜ್ಯವನ್ನು ಬೆಂಗಳೂರು. ಬೆಂಗಳೂರು ಗ್ರಾಮಾಂತರ. ಮೈಸೂರು. ಕೋಲಾರ. ತುಮಕೂರು. ಮಂಡ್ಯ. ಹಾಸನ. ಶಿವಮೊಗ್ಗ. ಚಿಕ್ಕಮಗಳೂರು. ಚಿತ್ರದುರ್ಗ. ಬಳ್ಳಾರಿ. ಬಿದರೆ. ಗುಲ್ಬರ್ಗ. ರಾಯಚೂರು. ಧಾರವಾಡ. ಉತ್ತರ ಕನ್ನಡ. ಬಿಜಾಪುರ. ಬೆಳಗಾವಿ. ದಕ್ಷಿಣ ಕನ್ನಡ. ಕೊಡಗು ಎಂದು ಇಪ್ಪತ್ತು ಜಿಲ್ಲೆಗಳಾಗಿ ವಿಂಗಡಿಸಿದೆ. ಬೆಂಗಳೂರು ರಾಜಧಾನಿ. ವಿಧಾನಸೌಧ ಇಲ್ಲಿದೆ. ವಿಮಾನ ಕಾರಖಾನೆ, ಇಂಡಿಯನ್ ಟೆಲಿಫೋನ್ ಇಂಡಸ್ಟ್ರೀಸ್, ಹಿಂದೂಸ್ತಾನ್ ಮೆಷಿನ್ ಟೂಲ್ಸ್, ಭಾರತ್

ಕಬ್ಬಿಣ ಮತ್ತು ಉಕ್ಕಿನ ಕಾರಖಾನೆ ಪ್ರಸಿದ್ಧವಾದದ್ದು. ಸಕ್ಕರೆ, ಕಾಗದ, ಇಂಥ ಹಲವು ಉದ್ಯಮಗಳು ಇಲ್ಲಿ ಬೆಳೆದಿವೆ. ಮೈಸೂರಿನ ರೇಷ್ಮೆ ಬಟ್ಟೆಗಳು, ದಂತದ ಸಾಮಾನುಗಳು, ಗಂಧದ ಸೋಪು ಮತ್ತು ಕಲಾಕೃತಿಗಳು ಲೋಕಪ್ರಸಿದ್ಧ. ಜೋಗ್ (ಶರಾವತಿ) ಜಲಪಾತ ಸಮೃದ್ಧವಾಗಿ ವಿದ್ಯುಚ್ಛಕ್ತಿಯನ್ನು ಒದಗಿಸಿದೆ. ಅಣೆಕಟ್ಟುಗಳು ನೆಲವನ್ನು ಹಸಿರಾಗಿಸಿವೆ. ಭಟ್ಕಳ, ಮಂಗಳೂರು, ಮಲ್ಪೆ, ಕಾರವಾರ ಬಂದರುಗಳು ವಿದೇಶೀಯ ವ್ಯಾಪಾರಕ್ಕೆ ಸೌಕರ್ಯವನ್ನು ಕಲ್ಪಿಸಿವೆ.

ಕನ್ನಡನಾಡು ಧಾರ್ಮಿಕ ಕ್ಷೇತ್ರವೂ ಆಗಿದೆ. ಇದು ಅಗಸ್ತ್ಯ, ಪರಶುರಾಮರ ನಾಡೆಂದು ಪ್ರಸಿದ್ಧವಾದ ನೆಲ. ವಿದ್ಯಾರಣ್ಯರ ತಪೋಭೂಮಿ. ಮಧ್ವಾಚಾರ್ಯರು ಹುಟ್ಟಿದುದು ಇಲ್ಲಿಯೇ. ಶಂಕರಾಚಾರ್ಯರು ಮತ್ತು ರಾಮಾನುಜಾಚಾರ್ಯರು ಇಲ್ಲಿ ಧರ್ಮಪ್ರಚಾರ ಮಾಡಿದರು. ಬಸವೇಶ್ವರ ಅಕ್ಕಮಹಾದೇವಿಯರಿಗೆ, ನೂರಾರು ಶಿವಶರಣ ಶರಣೆಯರಿಗೆ ಜನ್ಮವಿತ್ತ ಪುಣ್ಯಭೂಮಿ ಇದು. ಪುರಂದರದಾಸ. ಕನಕದಾಸರಂಥ ದಾಸಶ್ರೇಷ್ಠರ





ಬಿಜಾಪುರದ ಗೋಳಗುಮ್ಮಟ



ಬಾದಾಮಿಯ ಗುಹಾಂತರ್ದೇವಾಲಯ

ಎಲೆಕ್ಟ್ರಾನಿಕ್ಸ್ ಮೊದಲಾದ ಕಾರಖಾನೆಗಳು ಈ ನಗರದಲ್ಲಿವೆ. ಪ್ರಸಿದ್ಧ ಭಾರತೀಯ ವಿಜ್ಞಾನ ಸಂಸ್ಥೆ 'ಟಾಟಾ ಇನ್ಸ್ಟಿಟ್ಯೂಟ್' ಇರುವುದು ಇಲ್ಲೇ. ರಾಜ್ಯದಲ್ಲಿ ನಾಲ್ಕು ವಿಶ್ವವಿದ್ಯಾನಿಲಯಗಳಿವೆ–ಮೈಸೂರು, ಕರ್ನಾಟಕ, ಬೆಂಗಳೂರು ವಿಶ್ವವಿದ್ಯಾನಿಲಯಗಳು ಹಾಗೂ ಕೃಷಿವಿಜ್ಞಾನ ವಿಶ್ವವಿದ್ಯಾನಿಲಯ.

ಸ್ವತಂತ್ರ ಭಾರತದ ಮೊದಲ ಇಬ್ಬರು ಸೇನಾಧಿಪತಿಗಳು–ಜನರಲ್ ಕಾರಿಯಪ್ಪ ಮತ್ತು ಜನರಲ್ ತಿಮ್ಮಯ್ಯ–ಕನ್ನಡನಾಡಿನ ಕೊಡಗಿನವರು. ವಿಶ್ವವಿಖ್ಯಾತ ವಾಸ್ತುಶಿಲ್ಪಿ ಸರ್ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ಹಳೆಯ ಮೈಸೂರಿನ ಚಿಕ್ಕಬಳ್ಳಾಪುರದವರು. ದೇಶೀಯ ಸಂಸ್ಥಾನಗಳಲ್ಲಿ



ಮೊದಲನೆಯ ವಿಶ್ವವಿದ್ಯಾನಿಲಯ ಮೈಸೂರು ವಿಶ್ವವಿದ್ಯಾನಿಲಯ. ಮೊದಲನೆಯ ಪ್ರತಿನಿಧಿಸಭೆ ಮೈಸೂರು ಪ್ರಜಾಪ್ರತಿನಿಧಿ ಸಭೆ. ಆನೆಗಳಿಗೆ ಹೆಸರಾದ ಕನ್ನಡನಾಡಿನಲ್ಲಿ ವೀರರು ಅನೇಕ ಯುದ್ಧವನ್ನೇ ಮೆರೆದಿದ್ದಾರೆ. ವಿಸ್ತೃತಕ್ಷೇತ್ರ ಫಲವತ್ತಾಗಿದೆ. ಕನ್ನಡ ನಾಡಿನ ಧರ್ಮಗುರುಗಳು, ವಿಚಾರವಂತರು ಅರಿವಿನ ದೀಪವನ್ನು ಹರಡಿದ್ದಾರೆ. ಶ್ರೀಗಂಧದ ತವರಾದ ಕನ್ನಡ ನಾಡಿನ ಕಲೆಗಾರರು ಸಂಸ್ಕೃತಿಯ ಪರಿಮಳವನ್ನು ಬೀರಿದ್ದಾರೆ.

ಕನ್ನಡ ನಾಡಿನ ಮುಖ್ಯ ಭಾಷೆ ಕನ್ನಡ. ತೆಲುಗು, ತಮಿಳು, ಉರ್ದು, ಮಲೆಯಾಳ. ಹಿಂದಿ ಆಡುವ ಜನರೂ ಇದ್ದಾರೆ. ಕೊಂಕಣಿ, ತುಳು, ಕೊಡವ ಕನ್ನಡನಾಡಿನಲ್ಲಿರುವ ಇತರ ಭಾಷೆಗಳು.

ನೋಡಿ : ಕೃಷ್ಣದೇವರಾಯ; ನೃಪತುಂಗ; ಪುಲಿಕೇಶಿ, ಎರಡನೆಯ; ಬಸವೇಶ್ವರ; ಬೆಂಗಳೂರು; ಮಧ್ವಾಚಾರ್ಯ; ವಿಶ್ವೇಶ್ವರಯ್ಯ, ಮೋಕ್ಷಗುಂಡಂ ; ಶ್ರವಣಬೆಳಗೊಳ.

ವಿವರ : ಹಳದಿಯ ಸಂಪುಟ

## ಕನ್‌ಫ್ಯೂಷಿಯಸ್

ಪ್ರಪಂಚದ ಅತಿ ಪ್ರಸಿದ್ಧ ಬೋಧಕರಲ್ಲಿ ಕುಂಗ್ ಫುಟ್ಸೆ (ಕನ್‌ಫ್ಯೂಷಿಯಸ್) ಒಬ್ಬ. ಈತನು ಚೀನ ದೇಶದ ತತ್ತ್ವಜ್ಞಾನಿ. ಇವನ ಬೋಧನೆಗಳು ಚೀನ ದೇಶದಲ್ಲಿ ಮಾತ್ರವಲ್ಲದೆ ಪೂರ್ವ ಏಷ್ಯದಲ್ಲೆಲ್ಲ ಪ್ರಭಾವವನ್ನು ಬೀರಿವೆ.

ಕನ್‌ಫ್ಯೂಷಿಯಸ್ ಕ್ರಿ. ಪೂ. 551ರಲ್ಲಿ ಚೀನ ದೇಶದ ಲು ಎನ್ನುವ ರಾಜ್ಯದಲ್ಲಿ ಹುಟ್ಟಿದ. ಶಿಷ್ಯರು ಅವನನ್ನು ಕುಂಗ್ ಫುಟ್ಸೆ (ಕುಂಗ್ ಗುರು) ಎಂದು ಕರೆಯುತ್ತಿದ್ದರು. ಕನ್‌ಫ್ಯೂಷಿಯಸ್ ಎನ್ನುವುದು ಈ ಹೆಸರಿನ ಲ್ಯಾಟಿನ್ ರೂಪ. ಚಿಕ್ಕಂದಿನಲ್ಲಿಯೇ ತಂದೆ ಕಾಲವಾದ. ಬಡತನದಲ್ಲಿದ್ದ ತಾಯಿ ಮಗನನ್ನು ಕಷ್ಟಪಟ್ಟು ಸಾಕಿದಳು. ಅವನಿಗೆ ಇಪ್ಪತ್ತು ವರ್ಷವಾಗುವ ಹೊತ್ತಿಗೆ ಕಣಜಗಳ ಮುಖ್ಯಾಧಿಕಾರಿಯಾಗಿ ಕೆಲಸ ಸಿಕ್ಕಿತು. ಹತ್ತೊಂಬತ್ತು ವರುಷದವನಾಗಿದ್ದಾಗಲೇ ವಿವಾಹವಾಗಿತ್ತು. ಅವನ ತಾಯಿ ತೀರಿಕೊಂಡಾಗ ಕನ್‌ಫ್ಯೂಷಿಯಸ್ ಹಿಂದಿನ ಪದ್ಧತಿಗನುಸಾರವಾಗಿ ಇಪ್ಪತ್ತೇಳು ತಿಂಗಳ ಕಾಲ ಏಕಾಂತದಲ್ಲಿದ್ದು ಶೋಕವನ್ನು ಆಚರಿಸಿದ.

ಇಪ್ಪತ್ತೆರಡು ವರ್ಷವಾಗಿದ್ದಾಗ ಕನ್‌ಫ್ಯೂಷಿಯಸ್ ಉಪಾಧ್ಯಾಯನಾಗಿ ವೃತ್ತಿ ಆರಂಭಿಸಿದ. ಮನೆಯೇ ಶಾಲೆ. ಶಿಷ್ಯರು ಕೊಟ್ಟಷ್ಟು ಶುಲ್ಕವನ್ನು ತೆಗೆದುಕೊಳ್ಳುತ್ತಿದ್ದ. ತಮ್ಮ ಜ್ಞಾನವನ್ನೂ ವಿವೇಕವನ್ನೂ ಹೆಚ್ಚಿಸಿಕೊಳ್ಳಲು ಇಷ್ಟಪಟ್ಟವರು ಅವನ ವಿದ್ಯಾ ಸಂಸ್ಥೆಗೆ ಸೇರುತ್ತಿದ್ದರು. ಚರಿತ್ರೆ, ಕಾವ್ಯ, ನಡವಳಿಕೆಯ ರೀತಿನೀತಿ ಇವುಗಳ ಶಿಕ್ಷಣಕ್ಕೆ ಕನ್‌ಫ್ಯೂಷಿಯಸ್ ಬೆಲೆಯನ್ನು ಕೊಟ್ಟಿದ್ದ. ಅವನು ಬೋಧನೆಗೆ ಅನುಸರಿಸಿದ್ದು, ಪ್ರಶ್ನೆ ಕೇಳಿ ಉತ್ತರ ಪಡೆಯುವ ಚರ್ಚಾವಿಧಾನ.

ಮೊದಮೊದಲು ಅವನ ಬಳಿ ಕೆಲವೇ ಶಿಷ್ಯರಿದ್ದರು. ಆದರೆ ಶಿಷ್ಯರ ಸಂಖ್ಯೆ ಕ್ರಮೇಣ ಹೆಚ್ಚಿ ಸುಮಾರು ಇಪ್ಪತ್ತಾಯಿತು. ಕನ್‌ಫ್ಯೂಷಿಯಸ್ ನೋಡಲು ಸುಂದರನಾಗಿರಲಿಲ್ಲ. ಅವನ ಸಂಗೀತದ ಗುರು ಅವನನ್ನು ಹೀಗೆ ವರ್ಣಿಸಿದ್ದಾನೆ: "ಸೀಳು ಕಣ್ಣುಗಳು, ಉರಿ ಕಾರುವ ಸರ್ಪದಂಥ ಹಣೆ, ಉದ್ದನೆಯ ತೋಳುಗಳು. ಆಮೆಯಂಥ ಬೆನ್ನು". ಹೀಗಿದ್ದು ಚಿತ್ತಿನ ಬಸವನಂಥ ತುಟಿ. ಸಮುದ್ರದಂಥ ಬಾಯಿ ಇದ್ದರೂ, ಕನ್‌ಫ್ಯೂಷಿಯಸ್ ಶಿಷ್ಯರ ಮೆಚ್ಚಿನ ಗುರುವಾಗಿದ್ದ. ಬಾಹ್ಯರೂಪ ನೋಡಲು ವಿಕಾರವಾಗಿದ್ದರೂ ಅವನ ಹೃದಯ ಮೃದುವಾಗಿತ್ತು; ಬುದ್ಧಿ ಚುರುಕಾಗಿತ್ತು. ಪ್ರತಿಭೆ, ಪಾಂಡಿತ್ಯ ಅಸಾಧಾರಣವಾಗಿದ್ದುವು.



ತತ್ತ್ವಜ್ಞಾನಿ ಕನ್‌ಫ್ಯೂಷಿಯಸ್

ಕನ್‌ಫ್ಯೂಷಿಯಸ್ ಒಳ್ಳೆಯ ಪದವಿಯನ್ನೂ ಪ್ರಸಿದ್ಧಿಯನ್ನೂ ಬಯಸಿದ. ಆದರೆ ನ್ಯಾಯವಲ್ಲದ ರೀತಿಯಲ್ಲಿ ರಾಜ್ಯವಾಳುತ್ತಿದ್ದವರ ಬಳಿಯಲ್ಲಿ ಪದವಿ ಪಡೆಯಲು ಇಷ್ಟಪಡಲಿಲ್ಲ.

ಕೊನೆಗೆ ಅವನನ್ನು ಲು ರಾಜ್ಯದಲ್ಲಿ ಚುಂಗ್ ಟು ಪಟ್ಟಣದಲ್ಲಿ ಮುಖ್ಯ ನ್ಯಾಯಾಧೀಶನನ್ನಾಗಿ ಮಾಡಿದರು. ಅವನ ಅಧಿಕಾರಾವಧಿಯಲ್ಲಿ ಆ ಪಟ್ಟಣದಲ್ಲಿ ಒಂದು ಕಳ್ಳತನವಾಗಲಿ, ದರೋಡೆಯಾಗಲಿ, ಮೋಸದ ಕೃತ್ಯವಾಗಲಿ ನಡೆಯಲಿಲ್ಲವೆನ್ನುತ್ತಾರೆ. ಆದರೆ ಪಕ್ಕದ ರಾಜ್ಯಗಳ ಕೃತ್ರಿಮದಿಂದ ಲು ರಾಜ್ಯದ ದೊರೆ ತನ್ನ ಕರ್ತವ್ಯಗಳನ್ನು ಮರೆತಾಗ, ತಾನು ಅಲ್ಲಿರುವುದು ಸರಿಯಲ್ಲವೆಂದು ಕನ್‌ಫ್ಯೂಷಿಯಸ್ ತನ್ನ ಕೆಲಸಕ್ಕೆ ರಾಜೀನಾಮೆಯಿತ್ತು ಶಿಷ್ಯರೊಡನೆ ದೇಶಸಂಚಾರ ಹೊರಟ. ಸಮಾಜವನ್ನು ಸುಧಾರಿಸಲು, ಶಾಂತಿಯನ್ನು ಸ್ಥಾಪಿಸಲು ಯಾವ ರಾಜ್ಯದಲ್ಲಾದರೂ ಅವಕಾಶ ಸಿಗಬಹುದೇನೋ ಎಂಬ ಆಸೆ ಅವನಿಗಿತ್ತು.

ಕನ್‌ಫ್ಯೂಷಿಯಸ್‌ಗೆ ಅರವತ್ತೇಳು ವರ್ಷ ವಯಸ್ಸಾಗಿದ್ದಾಗ [illegible] ಎಂಬಾತ ಲು ರಾಜ್ಯಕ್ಕೆ ಪ್ರಭುವಾದ. ಆತ ಕನ್‌ಫ್ಯೂಷಿಯಸನ ಬಳಿಗೆ ಮೂರು ಜನ ಅಧಿಕಾರಿಗಳನ್ನು ಉಡುಗೊರೆಗಳ ಸಹಿತ ಕಳುಹಿಸಿ, ಲು ರಾಜ್ಯಕ್ಕೆ ಹಿಂದಿರುಗಬೇಕೆಂದು ಕೇಳಿಕೊಂಡ. ಕನ್‌ಫ್ಯೂಷಿಯಸ್ ಹಿಂದಿರುಗಿ, ತನ್ನ ಜೀವನದ ಉಳಿದ ಐದು ವರ್ಷಗಳನ್ನು ಸರಳ ಏಕಾಂತದಲ್ಲಿ ಕಳೆದ. ತನ್ನ ಕಾಲವನ್ನೆಲ್ಲ ಬರೆವಣಿಗೆಗಾಗಿ ಮೀಸಲಿಟ್ಟ. ತತ್ತ್ವಶಾಸ್ತ್ರ, ಕಾವ್ಯ ಅವನ ಒಡನಾಡಿಗಳಾದುವು.

ಕನ್‌ಫ್ಯೂಷಿಯಸ್ ತನ್ನ ಎಪ್ಪತ್ತೆರಡನೆಯ ವಯಸ್ಸಿನಲ್ಲಿ ಕಾಲವಾದ. ಅವನ ಶಿಷ್ಯರು ಎಲ್ಲ ಮರ್ಯಾದೆಗಳೊಡನೆ ಅವನ ದೇಹವನ್ನು ಸಮಾಧಿ ಮಾಡಿದರು. ಅದರ ಬಳಿ ಅಲ್ಲಿನ ಪದ್ಧತಿಯಂತೆ ಗುಡಿಸಲುಗಳನ್ನು ಹಾಕಿಕೊಂಡು, ಮೂರು ವರ್ಷಕಾಲ ಶೋಕವನ್ನಾಚರಿಸಿದರು. ಅವನ ಪ್ರಿಯ ಶಿಷ್ಯ ಟ್ಸೆ ಕುಂಗ್, ಉಳಿದವರೆಲ್ಲರೂ ಹೊರಟು ಹೋದ ಮೇಲೆ ಮತ್ತೂ ಮೂರು ವರ್ಷ ಅಲ್ಲಿಯೇ ಇದ್ದನಂತೆ.

ಕನ್‌ಫ್ಯೂಷಿಯಸ್ ತತ್ತ್ವಜ್ಞಾನಿ, ನೀತಿಶಾಸ್ತ್ರಜ್ಞ, ಸಮಾಜ ಸುಧಾರಕ ಎಂದು ಜಗತ್ತಿನ ಚರಿತ್ರೆಯಲ್ಲಿ ಶಾಶ್ವತ ಸ್ಥಾನವನ್ನು ಪಡೆದಿದ್ದಾನೆ.

ನಮ್ಮ ಶೀಲದ ಸಂಪತ್ತನ್ನು ಹೇಗೆ ವೃದ್ಧಿಪಡಿಸಿಕೊಳ್ಳಬೇಕು ಎಂದು ತಿಳಿಸುವ ಮಾರ್ಗವನ್ನು ಕನ್‌ಫ್ಯೂಷಿಯಸ್ 'ತಾವೋ' ಎಂದು ಕರೆದ. ಹಿಂದಿನ ಸಂಪ್ರದಾಯಗಳಿಗೆ ಜೀವನದುದ್ದಕ್ಕೂ ಮನ್ನಣೆ ನೀಡಿದ ಕನ್‌ಫ್ಯೂಷಿಯಸ್ ಧರ್ಮಗುರುವಾಗಿ ಯಾವ ಹೊಸ ಧರ್ಮವನ್ನೂ ಪ್ರಚಾರ ಮಾಡಲಿಲ್ಲ. ಆದರೆ ತಾನು ತನ್ನ ಜೀವನದಲ್ಲಿ ಎಂದೂ ನೀತಿಯ ಮಾರ್ಗವನ್ನು ಬಿಟ್ಟು ಹೋಗಲಿಲ್ಲ.

ಕೋಪ ಬಂದಾಗ ಅದರಿಂದ ಇತರರಿಗೆ ಆಗಬಹುದಾದ ತೊಂದರೆಗಳನ್ನು ಮೊದಲು ಗಮನದಲ್ಲಿಡು ಎಂದು ಕನ್‌ಫ್ಯೂಷಿಯಸ್ ಹೇಳಿದ. ಅತಿಯಾದ ಆಸೆಯಾದಾಗ ಹಾಗೆ ಏಕೆ ಆಗುತ್ತದೆ ಎಂಬುದನ್ನು ಯೋಚಿಸಬೇಕು ; ಇತರರು ತಪ್ಪು ಮಾಡಿದ್ದಾರೆಯೇ ಎಂದು ವಿಚಾರಿಸುವುದಕ್ಕಿಂತ ಮೊದಲು ನಾವು ತಪ್ಪು ಮಾಡಿದ್ದೇವೆಯೇ ಎಂಬುದನ್ನು ಅರಿಯಬೇಕು ಎಂದ.

ವ್ಯಕ್ತಿಗಳ ಜೀವನದಲ್ಲಿ ಸರಕಾರದ ವ್ಯವಹಾರದಲ್ಲಿ ಸಾಮಾಜಿಕ ನಡೆನುಡಿಯಲ್ಲಿ ನೀತಿಯನ್ನು ತರುವುದು ಕನ್‌ಫ್ಯೂಷಿಯಸನ ಮುಖ್ಯ ಧ್ಯೇಯವಾಗಿತ್ತು. ಎಲ್ಲೋ ಇರುವುದೆಂದು ಹೇಳಲಾದ 'ಸ್ವರ್ಗ', ಅಲ್ಲಿಗೆ ಹೋಗಲು ಪ್ರಾರ್ಥನೆ–ಇವು ಅವನಿಗೆ ಮುಖ್ಯವಾಗಿರಲಿಲ್ಲ. ಪ್ರಪಂಚದ ವ್ಯವಹಾರದಲ್ಲಿ ಸತ್ಯಧರ್ಮಗಳನ್ನು ಪಾಲಿಸುವುದು ಅವನಿಗೆ ಮುಖ್ಯವಾಗಿದ್ದ ವಿಷಯ. "ಸಾವೆಂದರೆ ಏನು ?" ಎಂದು ಕೇಳಿದ ಒಬ್ಬ ಶಿಷ್ಯನಿಗೆ "ಮೊದಲು ಬದುಕನ್ನು ತಿಳಿದುಕೊ," ಎಂದು ಕನ್‌ಫ್ಯೂಷಿಯಸ್ ಉತ್ತರ ನೀಡಿದನಂತೆ. ಹಾಗೆಯೇ "ಪ್ರೇತಗಳು ಇವೆಯೆ ?" ಎಂದು ಕೇಳಿದಾಗ, "ಬದುಕಿರುವವರ ಬಗೆಗೆ ಮೊದಲು ತಿಳಿ," ಎಂದನಂತೆ.

ದೇಶದಾದ್ಯಂತ ಒಳ್ಳೆಯ ಧರ್ಮವನ್ನು ಪಾಲಿಸಬೇಕು ಎಂದು ನುಡಿದ ಹಿಂದಿನವರು, ಮೊದಲು ತಮ್ಮ ತಮ್ಮ ರಾಜ್ಯಗಳಲ್ಲಿ ಧರ್ಮವನ್ನೂ ಶಿಸ್ತನ್ನೂ ಆಚರಣೆಗೆ ತಂದರು. ರಾಜ್ಯಗಳನ್ನು ಉತ್ತಮ ಸ್ಥಿತಿಗೆ ತರಲು, ಮೊದಲು ಅವರು ತಮ್ಮ ಮನೆಗಳಲ್ಲಿ ವ್ಯವಸ್ಥೆ ನೆಲಸುವಂತೆ ಮಾಡಿದರು. ಅದಕ್ಕೂ ಮೊದಲು ತಮ್ಮನ್ನು ತಾವು ತಿದ್ದಿಕೊಂಡರು. ಹಾಗೆ ತಿದ್ದಿಕೊಳ್ಳುವುದಕ್ಕೂ ಮೊದಲು ಅವರು ಹೃದಯವನ್ನು ಶೋಧಿಸಿ ಒಪ್ಪಮಾಡಿಕೊಂಡರು. ಹೃದಯವನ್ನು ಒಪ್ಪಮಾಡಿಕೊಳ್ಳುವ ಮೊದಲು ಅವರು ತಮ್ಮ ಆಲೋಚನೆಗಳು ಸತ್ಯವಾಗಿರುವಂತೆ ನೋಡಿಕೊಂಡರು. ಯಾವಾಗಲೂ ಸತ್ಯವಾಗಿಯೇ ಯೋಚಿಸುವ ಮೊದಲು ತಮ್ಮ ಜ್ಞಾನವನ್ನು ಎಷ್ಟು ಸಾಧ್ಯವೋ ಅಷ್ಟು ಹೆಚ್ಚಿಸಿಕೊಂಡರು. ಹಾಗೆ ಹೆಚ್ಚಿಸಿಕೊಳ್ಳಲು ಎಲ್ಲವನ್ನೂ ಪರೀಕ್ಷಿಸಿ ತಿಳಿದುಕೊಂಡರು. ವಿಷಯಗಳನ್ನು ಪರೀಕ್ಷಿಸಿದ್ದರಿಂದ ತಿಳಿವಳಿಕೆ ಪ್ರಾಮಾಣಿಕವಾಯಿತು. ಭಾವನೆಗಳಲ್ಲಿ ಸತ್ಯಮೂಡಿತು. ಸತ್ಯವಾದ ಆಲೋಚನೆಗಳಿಂದ ಹೃದಯ ನಿರ್ಮಲವಾಗಿ ಒಪ್ಪವಾಯಿತು. ಹೃದಯ ಒಪ್ಪವಾಗಿ ಅವರು

ಉತ್ತಮ ವ್ಯಕ್ತಿಗಳಾದರು. ಉತ್ತಮ ವ್ಯಕ್ತಿಗಳಾದ್ದರಿಂದ ಅವರ ಕುಟುಂಬಗಳಲ್ಲಿ ವ್ಯವಸ್ಥೆ ನೆಲೆಸಿತು. ಕುಟುಂಬಗಳಲ್ಲಿ ವ್ಯವಸ್ಥೆ ಮೂಡಿದ್ದರಿಂದ ಅವರ ರಾಜ್ಯಗಳನ್ನು ವ್ಯವಸ್ಥೆಯಿಂದ ಆಳಲು ಸಾಧ್ಯವಾಯಿತು, ಶಾಂತಿ ಮೂಡಿತು. –ಕನ್‌ಫ್ಯೂಷಿಯಸ್ ಬೋಧಿಸಿದ ತತ್ತ್ವದ ಧರ್ಮಮಾರ್ಗದ ನೀತಿ ನಡವಳಿಕೆಯ ಸಾರ ಇದು. ಕನ್‌ಫ್ಯೂಷಿಯಸನ ಅಭಿಮತದಂತೆ ಪರಿಪೂರ್ಣ ಮಾನವನ ಗುಣಗಳು ಮೂರು—ಬುದ್ಧಿಶಕ್ತಿ, ಧೈರ್ಯ, ಇತರರಲ್ಲಿ ಅನುಕಂಪ.

ಕನ್‌ಫ್ಯೂಷಿಯಸನ ನೀತಿಮಾರ್ಗ ಚೀನ ದೇಶದಲ್ಲಿ ಎರಡು ಸಾವಿರ ವರ್ಷಗಳಿಗೂ ಹೆಚ್ಚು ಕಾಲ ಬಹಳ ಪ್ರಭಾವ ಬೀರಿತ್ತು. ಅಲ್ಲದೆ ಜಪಾನ್, ಕೊರಿಯ, ಇಂಡೊಚೀನ, ಇವುಗಳ ಸಂಸ್ಕೃತಿಯ ಮೇಲೂ ಮಹತ್ತರ ಪರಿಣಾಮವನ್ನು ಉಂಟುಮಾಡಿತು.

**ನೋಡಿ :** ಚೀನ

## ಕಪ್ಪು ಸಮುದ್ರ

ಸಮುದ್ರದ ನೀರು ಎಲ್ಲಿಯಾದರೂ ಕಪ್ಪಾಗಿರಲು ಸಾಧ್ಯವೆ ? ಸಮುದ್ರದ ಆಳದಲ್ಲಿ ನೀರು ಕೆಲವು ಕಡೆ ಇದ್ದಂತೆಯೇ ಇರುವುದರಿಂದ ಅದರ ನೀರು ಇತರ ನೀರಿನಂತಿಲ್ಲದೆ ಸ್ವಲ್ಪ ಹೆಚ್ಚು ನೀಲಿ ಬಣ್ಣವನ್ನು ಹೊಂದಿದೆ. ಸಮುದ್ರದಲ್ಲಿ ಪ್ರಕ್ಷುಬ್ಧತೆ, ಮೋಡ ಕವಿದ ವಾತಾವರಣ ಸದಾ ಇರುವುದರಿಂದ, ಕಪ್ಪು ಸಮುದ್ರ ಎನ್ನುವ ಹೆಸರು ಬಂದಿದೆ. ಈ ಸಮುದ್ರದ ಮಾರುತಗಳನ್ನು ಕಂಡು ಹೆದರಿದ ತುರ್ಕಿಯವರು ಇದನ್ನು 'ಕಪ್ಪು ಸಮುದ್ರ' ಎಂದು ಕರೆದರು ಎನ್ನುತ್ತಾರೆ.

ಕಪ್ಪುಸಮುದ್ರ ಸುತ್ತಲೂ ನೆಲದಿಂದ ಆವರಿಸಲ್ಪಟ್ಟಿದೆ, ಯೂರೋಪ್ ಏಷ್ಯಗಳ ಮಧ್ಯೆ ಇದೆ. ರಷ್ಯ, ತುರ್ಕಿ, ಬಲ್‌ಗೇರಿಯ ಮತ್ತು ರುಮೇನಿಯ ಇವು ಕಪ್ಪು ಸಮುದ್ರವನ್ನು ಬಳಸಿ ನಿಂತಿವೆ. ಇದಕ್ಕೆ ನೈಋತ್ಯದಲ್ಲಿ ಬಾಸ್ಪರಸ್ ಕೊಲ್ಲಿ ಮೂಲಕ ಮರ್ಮೋರ ಸಮುದ್ರಕ್ಕೂ ಡಾರ್ಡನಲ್ಸ್ ಮೂಲಕ ಭೂಮಧ್ಯ ಸಮುದ್ರಕ್ಕೂ ಕರ್ಚ್‌ಕೊಲ್ಲಿಯ ಮೂಲಕ ಅಜೋವ್ ಸಮುದ್ರಕ್ಕೂ ಸಂಪರ್ಕವಿದೆ.

ಕಪ್ಪು ಸಮುದ್ರ ಪೂರ್ವ–ಪಶ್ಚಿಮದಲ್ಲಿ 1142 ಕಿ. ಮೀ. ಉದ್ದವೂ ಉತ್ತರ ದಕ್ಷಿಣದಲ್ಲಿ 611 ಕಿ. ಮೀ. ಅಗಲವೂ ಇದೆ. ಒಟ್ಟು ವಿಸ್ತೀರ್ಣ 4,36,415 ಚ. ಕಿ. ಮೀ. ಉತ್ತರ ಭಾಗದಲ್ಲಿ ಆಳ ಕಡಮೆಯಾಗಿದ್ದು, ದಕ್ಷಿಣದಲ್ಲಿ 2,135 ಮೀಟರುಗಳಷ್ಟು ಆಳವಿರುವ ಭಾಗಗಳೂ ಇವೆ.

ಈ ಸಮುದ್ರದ ಮೇಲ್ಪದರದ ನೀರಿನಲ್ಲಿ ಉಪ್ಪು ಕಡಮೆ. ಯೂರೋಪಿನ ಹಲವಾರು ದೊಡ್ಡ ನದಿಗಳ ನೀರು ಬಂದು ಬೀಳುವುದೇ ಇದಕ್ಕೆ ಕಾರಣ. ಡ್ಯಾನ್ಯೂಬ್, ಬಗ್‌ಡಾನ್, ನೀಪರ್, ನೀಸ್ಟರ್, ಕಿಜಿಲ್, ಇರ್ಮಕ್, ಸಕರ್ಯ ನದಿಗಳು ಕಪ್ಪು ಸಮುದ್ರವನ್ನು ಸೇರುತ್ತವೆ. ಅಡೆಸ್ಸಿಯೊಂದೇ ಇದರ ದ್ವೀಪ. ಉಪ್ಪಿನಂಶ ಕಡಮೆ ಇರುವುದರಿಂದ ಇದರ ನೀರು ಬೇಗನೆ ಮಂಜುಗಡ್ಡೆಯಾಗುತ್ತದೆ.

ಕಪ್ಪು ಸಮುದ್ರವನ್ನು ಮೊದಲು ಕಂಡವರು ಗ್ರೀಕ್ ನಾವಿಕರು. ಅವರು ಅನುಕೂಲವೆನಿಸಿದ ಸ್ಥಳಗಳಲ್ಲಿ ವಸಾಹತುಗಳನ್ನು ಸ್ಥಾಪಿಸಿದರು. ರಷ್ಯ ಮತ್ತು ತುರ್ಕಿ ಕಪ್ಪು ಸಮುದ್ರದ ತೀರ ಪ್ರದೇಶದ ಬಹು ಭಾಗಗಳನ್ನು ಪಡೆದುಕೊಂಡಿವೆ. 1453ರಲ್ಲಿ ಕಾನ್‌ಸ್ಟಾಂಟಿನೋಪಲ್ ಪತನದ ಅನಂತರ ಇತರ ದೇಶಗಳ ಹಡಗುಗಳು ಕಪ್ಪು ಸಮುದ್ರವನ್ನು ಪ್ರವೇಶಿಸಲು ತುರ್ಕಿಯವರು ಬಿಡುತ್ತಲೇ ಇರಲಿಲ್ಲ. 1774ರಲ್ಲಿ ರಷ್ಯ ತನ್ನ ಹಡಗು ಬಿಡಲು ಅನುಮತಿ ಪಡೆಯಿತು ; 1856ರ ಅನಂತರ ಇತರ ದೇಶಗಳ ಹಡಗುಗಳೂ ಪ್ರವೇಶಿಸಲು ಆಸ್ಪದ ದೊರೆಯಿತು.

ಒಡಿಸ್ಸ, ನಿಕೊಲೇವ್. ಬಾಟುಮಿ. ಕಾನ್‌ಸ್ಟೆಂಟಾ. ವರ್ನಾ, ಬರ್ಗಾಸ್, ಟ್ರಾಬ್‌ಜಾನ್ ಇವು ಕಪ್ಪು ಸಮುದ್ರದ ದಂಡೆಯ ಮೇಲಿರುವ ಪ್ರಮುಖ ಬಂದರುಗಳು.

ಕಪ್ಪು ಸಮುದ್ರವನ್ನು ಬಳಸುವ ವ್ಯಾಪಾರೀ ಹಡಗುಗಳು ತೈಲ, ಮ್ಯಾಂಗನೀಸ್, ಕಲ್ಲಿದ್ದಲು, ಕಬ್ಬಿಣದ ಅದಿರು, ಸಿಮೆಂಟ್, ಧಾನ್ಯಗಳು ಇವುಗಳನ್ನು ಸಾಗಿಸುತ್ತವೆ.

## ಕಬ್ಬಿಣ

ಭದ್ರಾವತಿಯ ಕಬ್ಬಿಣ ಮತ್ತು ಉಕ್ಕಿನ ಕಾರಖಾನೆಯನ್ನು ನೋಡಿದ್ದೀರಾ ? ರಾತ್ರಿಯ ಹೊತ್ತಿನಲ್ಲಿ ಇದರ ನೋಟ ಇಮ್ಮಡಿ ಸೊಬಗು. ಒಂದು ಕಡೆ ದೊಡ್ಡ ಕುಲುಮೆ. ಕುಲುಮೆಯ ಬಳಿಯೇ ಎರಕಹೊಯ್ಯಲು ಸಜ್ಜಾದ ಅಚ್ಚುಗಳು. ಪ್ರಖರ ಪ್ರಭೆಯ ಕರಗಿದ ಕಬ್ಬಿಣ ನಿಮ್ಮ ಮುಂದೆಯೇ ಯಂತ್ರ ಚಾಲಿತ ಬಾನೆಯೊಂದರಲ್ಲಿ ತೇಲಿ ಬರುತ್ತದೆ. ಜಾಗರೂಕತೆಯಿಂದ ಇದನ್ನು ಅಚ್ಚಿಗೆ ಹೊಯ್ಯುತ್ತಾರೆ. ಆಗ ನಕ್ಷತ್ರಗಳಂತೆ ಕಬ್ಬಿಣದ್ರವ್ಯದ ಕಿಡಿಗಳು ತುಳುಕುವುದೂ ಉಂಟು. ಕಣ್ಣುಕೋರೈಸುವ ಕಬ್ಬಿಣದ್ರವ್ಯ ಅಚ್ಚಿನಲ್ಲಿ ಹೆಪ್ಪುಗೊಂಡು ಕಾದ ಕೆಂಡದ ಬಣ್ಣಕ್ಕೆ ತಿರುಗುತ್ತದೆ. ಕಬ್ಬಿಣವನ್ನು ಬೇಕಾದ ಆಕಾರಕ್ಕೆ ಬಡಿಯಲು ಇದೀಗ ಸರಿಯಾದ ಹದ.

ಪ್ರಪಂಚದಲ್ಲಿ ಅತ್ಯಂತ ಧಾರಾಳವಾಗಿ ದೊರೆಯುವ ಲೋಹ ಅಲ್ಯೂಮಿನಿಯಂ. ಕಬ್ಬಿಣ ಎರಡನೆಯದು. ಮರಳು ಅಥವಾ ಒಂದು ಬಗೆಯ ಜೇಡಿ ಮಣ್ಣನ್ನು ಬಿಟ್ಟರೆ ಕಬ್ಬಿಣದ ಅಂಶವಿಲ್ಲದ ಬಂಡೆಗಳೇ ಇಲ್ಲವೆನ್ನಬಹುದು. ಕಬ್ಬಿಣ ನಮಗೆ ಶುದ್ಧ ರೂಪದಲ್ಲಿ ದೊರೆಯುವುದಿಲ್ಲ. ಬಹ್ವಂಶ ಕಬ್ಬಿಣವಿರುವ ಕಬ್ಬಿಣದ ಅದಿರು ಸಿಕ್ಕುವುದು ಭಾರತ, ಸ್ವೀಡನ್, ಸ್ಪೇನ್, ಮತ್ತು ಅಮೆರಿಕದ ಸಂಯುಕ್ತ ಸಂಸ್ಥಾನದಲ್ಲಿ. ಅನೇಕ ರಾಸಾಯನಿಕ ಪದಾರ್ಥಗಳು ಮತ್ತು ಕಲ್ಮಶಗಳೊಡನೆ ಬೆರೆತ ಅದಿರಿನ ರೂಪದಲ್ಲಿ ಭೂಮಿಯಲ್ಲಿ ಬಂಡೆಗಳಲ್ಲಿ ಅಡಗಿರುತ್ತದೆ. ಹೀಗೆ ಬಂಡೆಗಳಲ್ಲಿದ್ದ ಕಬ್ಬಿಣದ ಅಂಶ ಹರಿಯುವ ನೀರಿನಲ್ಲಿ ಕಲೆತು ತಳದ ಮಣ್ಣಿನಲ್ಲಿ ಮಡ್ಡಿ ಅದಿರಾಗಿ ಸಿಗುತ್ತದೆ. ಇದಕ್ಕೆ ಅನೇಕ ಶತಮಾನಗಳ ಕಾಲ ನೀರು ಹಾಗೂ ಹವೆಗಳ ದಾಳಿಯಿಂದ



ಕಬ್ಬಿಣದ ಅದಿರು ಹೇರಳವಾಗಿರುವ
ಕುದುರೆಮುಖ ಪರ್ವತಶ್ರೇಣಿ

ಬಂಡೆಗಳು ಸ್ವಲ್ಪಸ್ವಲ್ಪವಾಗಿ ಕರಗುವುದೇ ಕಾರಣವಾಗಿದೆ. ಕರಗಿದ ಕಬ್ಬಿಣ ಬಂಡೆಗಳ ಮಧ್ಯೆ ಹೆಪ್ಪುಗಟ್ಟಿದ ಅದಿರಿನಂತೆ ದೊರೆಯುವುದೂ ಉಂಟು. ಇಂಥ ಅದಿರಿನಲ್ಲಿ ಕಬ್ಬಿಣದ ಅಂಶ ಅಧಿಕ. ಮೈಸೂರು ರಾಜ್ಯದ ಕೆಮ್ಮಣ್ಣು ಗುಂಡಿಯಲ್ಲಿ ದೊರೆಯುವ ಅದಿರು ಹೀಗೆ ಅಧಿಕಾಂಶ ಕಬ್ಬಿಣವನ್ನು ಕೊಡುತ್ತದೆ.

ಕಬ್ಬಿಣದ ಪ್ರಥಮ ಉಲ್ಲೇಖ ಅಥರ್ವ ವೇದದಲ್ಲಿದೆಯೆಂದೂ ಅದರ ಉಪಯೋಗಗಳನ್ನು ಆ ವೇದದಲ್ಲಿ ಕೊಡಲಾಗಿದೆಯೆಂದೂ ಹೇಳಿದೆ. ಹಾಗಿದ್ದರೂ ಕಂಚಿನ ಯುಗದಲ್ಲಿ ಭಾರತದಲ್ಲಿ ಕಂಚಿನ ಬಳಕೆಯೇ ಬಹು ಸಾಮಾನ್ಯವಾಗಿದ್ದಿತು. ಲೋಹ ವಿದ್ಯೆ ಅಷ್ಟಾಗಿ ಮುಂದುವರಿಯದೆ ಇದ್ದ ಕಾಲದಲ್ಲಿ. ಕಬ್ಬಿಣವನ್ನು ಕರಗಿಸಿ ಬೇರ್ಪಡಿಸಲು ವಿಶೇಷ ರೀತಿಯ ಕುಲುಮೆ ಅವಶ್ಯ ಎಂಬುದನ್ನು ಆಗಿನವರು ತಿಳಿದಿರಲಿಲ್ಲ. ತಾಮ್ರವನ್ನಾದರೋ ಬೇರ್ಪಡಿಸಿ, ಕಂಚು ತಯಾರಿಸಿ, ಸುಲಭವಾಗಿ ಎರಕ ಹೊಯ್ಯುತ್ತಿದ್ದರು. ಹೀಗೆ ಸರಳವಾಗಿ ಎರಕ ಹೊಯ್ಯುವ ಗುಣವಿಲ್ಲದೆ ಕಬ್ಬಿಣವು ಮೊದಲಿಗೆ ಅಷ್ಟಾಗಿ ಬಳಕೆಗೆ ಬರಲಿಲ್ಲ. ಅದ್ದರಿಂದ ಸಮನಾಗಿ ಹದಗೊಳ್ಳದ ಕಬ್ಬಿಣದ ಸಣ್ಣ ಆಯುಧಗಳನ್ನು ಜನ ಬಳಸಿದರೂ ಅವುಗಳಿಗೆ ಬಾಳಿಕೆ ಇರಲಿಲ್ಲ. "ಕಬ್ಬಿಣದ ಕತ್ತಿ ಮತ್ತು ಭರ್ಜಿಗಳು ಸುಲಭವಾಗಿ ಮುರುಟಿ ಸೋಲಿಗೆ ಕಾರಣವಾದುವು" ಎಂದು ರೋಮನ್ ಚರಿತ್ರೆಯಲ್ಲಿ ಬರೆದಿದೆ.

ಕಬ್ಬಿಣ ಸುಮಾರು ಆರು ಸಾವಿರ ವರ್ಷಗಳಿಗೆ ಹಿಂದೆ ಉಪಯೋಗಿಸಲ್ಪಡುತ್ತಿದ್ದಿತು. ಆಗ ಉಲ್ಕೆಗಳಿಂದ (ಆಕಾಶದಿಂದ ಉರಿಯುತ್ತ ಬೀಳುವ ಶಿಲೆಗಳು) ಮನುಷ್ಯ ಕಬ್ಬಿಣವನ್ನು ಪಡೆಯುತ್ತಿದ್ದ. ಅಂದು ಕಬ್ಬಿಣ ಅಪೂರ್ವ ಲೋಹ. ಚಿನ್ನಕ್ಕೆ ಕಟ್ಟುವಂತೆ ಬೆಲೆ ಅದಕ್ಕೆ.

ಆ ಅದಿರನ್ನು ಬಂಡೆಗಳು, ಇತರ ಮೂಲಗಳಿಂದ ಬೇರ್ಪಡಿಸಿ ಮನುಷ್ಯ ಪಡೆದದ್ದು ಹೇಗೆ? ಇದಕ್ಕೆ ಸರಿಯಾದ ಉತ್ತರ ದೊರೆಯುವುದಿಲ್ಲ.

ಕಬ್ಬಿಣ ಮತ್ತು ಉಕ್ಕು ಎಂಬ ಶಬ್ದಗಳು ಜೊತೆಯಲ್ಲೇ ಬರುತ್ತವೆ. ಶುದ್ಧಿಗೊಂಡ ಕಬ್ಬಿಣವೇ ಉಕ್ಕು. ಕಬ್ಬಿಣದ ಶುದ್ಧಿ ಎಂದರೆ ಅರ್ಥವಿಷ್ಟೆ : ಕಬ್ಬಿಣದಲ್ಲಿರುವ ಇಂಗಾಲಾಂಶವನ್ನು ಹೊರದೂಡಿದಷ್ಟೂ ಅದು ಬಲಶಾಲಿಯಾಗುತ್ತದೆ. ಕಬ್ಬಿಣದಲ್ಲಿ ಸುಮಾರು ಶೇಕಡಾ ಐದು–ಆರರಷ್ಟು ಇಂಗಾಲಾಂಶ ಇರುತ್ತದೆ. ಸಾಮಾನ್ಯವಾಗಿ ಉಕ್ಕಿನಲ್ಲಿ ಶೇಕಡಾ ಒಂದೂವರೆಗಿಂತ ಹೆಚ್ಚು ಇಂಗಾಲಾಂಶ ಇರುವುದಿಲ್ಲ.

ಉಕ್ಕಿನ ಉಪಯೋಗ ಭಾರತದಲ್ಲಿಯೇ ಮೊದಲಾಯಿತೆಂಬುದು ಗಮನಾರ್ಹ. ಕಬ್ಬಿಣ ಮತ್ತು ಉಕ್ಕಿನ ಸಾಮಾನುಗಳನ್ನು ಕಳೆದ ಮೂರು ಸಾವಿರ ವರ್ಷಗಳಿಂದ ತಯಾರಿಸುತ್ತಿದ್ದರೆಂದು ಹೇಳಲಾಗಿದೆ. ದೆಹಲಿಯಲ್ಲಿರುವ ಕುತುಬ್‌ಮಿನಾರ್‌ನ ಮುಂದುಗಡೆ ಒಂದು ಕಬ್ಬಿಣದ ಸ್ತಂಭವಿದೆ. 1500 ವರ್ಷಗಳ ಹಿಂದೆಯೇ ನಿಲ್ಲಿಸಿರುವ ಈ ಕಂಬಕ್ಕೆ ಕಿಂಚಿತ್ತಾದರೂ ತುಕ್ಕುಹಿಡಿದಿಲ್ಲ. ಕ್ರಿ. ಪೂ. ನಾಲ್ಕನೆಯ ಶತಮಾನದಲ್ಲಿ ಬರೆಯಲ್ಪಟ್ಟ ಭಾರತೀಯ ವೈದ್ಯಗ್ರಂಥಗಳಲ್ಲಿ ನೂರು ಬಗೆಯ ಉಕ್ಕಿನ ಪ್ರತ್ಯೇಕ ಶಸ್ತ್ರಗಳಿರುವುದಾಗಿ ಹೇಳಿದ್ದಾರೆ. ಕಬ್ಬಿಣದ ಯುಗವೆಂದೇ ಹೆಸರಾದ ಮಾನವ ಚರಿತ್ರೆಯ ಕಾಲದಲ್ಲಿ ಜನ ಜೀವನವು ಕಬ್ಬಿಣದ ಬಳಕೆಯಿಂದ ಬಹುಮುಖವಾಗಿ ಪ್ರಗತಿಹೊಂದಿತು. ಉಕ್ಕಿನ ಉಪಯೋಗ ಹೆಚ್ಚಿದ ಮೇಲೆ ಉಕ್ಕಿನ ಯುಗವೆಂಬ ಹೆಸರೂ ಪ್ರಚಾರದಲ್ಲಿದೆ.

ಕಬ್ಬಿಣ ಮಾನವನಿಗೆ ಸಮುದ್ರ ಮಧ್ಯದಲ್ಲಿ ಮಾರ್ಗದರ್ಶನವಾಗಿ ಕೆಲಸ ಮಾಡುವುದು ಸೋಜಿಗದ ಸಂಗತಿ. ಇದಕ್ಕೆ ಕಬ್ಬಿಣದ ಒಂದು ವಿಚಿತ್ರ ಸೆಳೆತವೇ ಕಾರಣ. ಸೂಜಿಗಲ್ಲು ಎಂಬ ಕಬ್ಬಿಣದ ಅದಿರಿಗೆ ಸಾಧಾರಣ ಕಬ್ಬಿಣ ಮತ್ತು ಉಕ್ಕಿನ ಸಾಮಾನುಗಳನ್ನು ತನ್ನ ಕಡೆಗೆ ಸೆಳೆದುಕೊಳ್ಳುವ ಶಕ್ತಿ ಇರುತ್ತದೆ. ಈ ವಿಲಕ್ಷಣ ಆಕರ್ಷಣೆಯನ್ನು ಅಯಸ್ಕಾಂತತೆ ಎನ್ನುತ್ತಾರೆ. ಕಬ್ಬಿಣದ ತುಂಡೊಂದನ್ನು ಸೂಜಿಗಲ್ಲಿನ ಮೇಲೆ ಒಂದು ವಿಶೇಷ ರೀತಿಯಲ್ಲಿ ಉಜ್ಜುವುದರಿಂದ ಅಯಸ್ಕಾಂತವನ್ನು ಪಡೆಯಬಹುದು. ಪ್ರಕೃತಿ ನಿಯಮಪೂರ್ವ ಈ ಅಯಸ್ಕಾಂತದ ಒಂದು ತುದಿಯು ಉತ್ತರಕ್ಕೂ ಮತ್ತೊಂದು ದಕ್ಷಿಣಕ್ಕೂ ತಿರುಗಿರುತ್ತದೆ. ಇಂಥ ಕಬ್ಬಿಣದ ತುಂಡಿನಿಂದ ದಿಕ್ಸೂಚಿಗಳನ್ನು ತಯಾರಿಸಿ ಸಾಗರದ ಮಧ್ಯೆ ಇರುವಾಗಲೂ ಉತ್ತರ ದಿಕ್ಕನ್ನು ಕಂಡುಕೊಳ್ಳುತ್ತಾರೆ. ಇದರ ನೆರವಿನಿಂದ ಇನ್ನುಳಿದ ದಿಕ್ಕುಗಳನ್ನೂ ಅಂದಾಜಿನಲ್ಲಿ ತಾವಿರುವ ತಾಣವನ್ನೂ ತಿಳಿದುಕೊಳ್ಳುತ್ತಾರೆ.

ವಿದ್ಯುತ್ತಿನಿಂದಲೂ ಒಂದು ಕಬ್ಬಿಣದ ಸರಳನ್ನು ಅಯಸ್ಕಾಂತವನ್ನಾಗಿ ಮಾರ್ಪಡಿಸಬಹುದು. ಇದರ ಉಪಯೋಗದಿಂದ ಟನ್‌ಗಟ್ಟಲೆ ಕಬ್ಬಿಣದ ತುಂಡುಗಳನ್ನು ಕೇವಲ ಆಕರ್ಷಣೆಯಿಂದಲೇ ಎತ್ತಬಹುದು. ದೊಡ್ಡ ಕಬ್ಬಿಣದ ತುಂಡುಗಳನ್ನು ಒಡೆಯಲೂ ಇಂಥ ವಿದ್ಯುತ್ ಅಯಸ್ಕಾಂತವನ್ನು ಉಪಯೋಗಿಸುತ್ತಾರೆ.

ಕಬ್ಬಿಣವಿಲ್ಲದಿದ್ದರೆ ನಮ್ಮ ಜೀವನದ ರೀತಿಯೇ ಬದಲಾಗಿಹೋಗುತ್ತದೆ. ಮೊಳೆ, ತಿರುಪು, ಅಗುಳಿಗಳಿಲ್ಲದೆ ಎಷ್ಟು ಸಾಮಾನುಗಳನ್ನು ಮಾಡಲು ಸಾಧ್ಯ ? ಕಬ್ಬಿಣ, ಉಕ್ಕು ಇಲ್ಲದೆ ಯಂತ್ರಗಳನ್ನು ಮಾಡುವಂತಿಲ್ಲ. ರೈಲು ಕಂಬಿಗಳಿಲ್ಲ, ರೈಲಿಲ್ಲ, ಬೈಸಿಕಲ್ಲೂ ಇಲ್ಲ, ಎತ್ತಿನಗಾಡಿಯನ್ನು ನಡೆಸುವುದೂ ಕಷ್ಟ; ನೀರ ಮೇಲೆ ಒಯ್ಯುವ ಹಡುಗುಗಳಿಲ್ಲ, ಗಾಳಿಯಲ್ಲಿ ಹೋಗುವ ವಿಮಾನವಿಲ್ಲ. ಯಂತ್ರಗಳಿಂದ ಮಾಡಿದ ಸಾಮಾನುಗಳನ್ನೂ ಲೋಹದ ಸಲಕರಣೆಗಳನ್ನೂ ಬಳಸದೆ ಎಂಥ ಮನೆಗಳನ್ನು ಕಟ್ಟಬಹುದು ? ಯಂತ್ರಗಳಿಲ್ಲದೆ ಮುದ್ರಣವಿಲ್ಲ, ವೃತ್ತಪತ್ರಿಕೆಗಳಿಲ್ಲ, ಚಲನಚಿತ್ರವಿಲ್ಲ, ರೇಡಿಯೊ ಇಲ್ಲ; ಪೆನ್ಸಿಲ್ ಇಲ್ಲ, ಪುಸ್ತಕವಿಲ್ಲ, ನಾಣ್ಯಗಳಿಲ್ಲ, ಅಡುಗೆಗೆ ಪಾತ್ರೆ ಇಲ್ಲ, ಕಾಲಿಗೆ ಪಾದರಕ್ಷೆ ಇಲ್ಲ, ಮೈಗೆ ಸರಿಯಾದ ಬಟ್ಟೆ ಇಲ್ಲ. ಲೋಹಗಳಿಂದ ಕೆಲಸದ ಸಲಕರಣೆಗಳನ್ನು ಮಾಡುವುದನ್ನು ಮಾನವ ಕಲಿತು ಸುಮಾರು ಐದಾರು ಸಾವಿರ ವರ್ಷಗಳಾದುವು ಅಷ್ಟೆ. (ಈಜಿಪ್ಟಿನ ಪಿರಮಿಡ್ ಒಂದರಲ್ಲಿ ಒಂದು ಕಬ್ಬಿಣದ ಚೂರಿ ದೊರೆತಿದೆ.) ಮೊದಲು ತಾಮ್ರ ಮತ್ತು ತವರವನ್ನು ಮಾನವ ಬಳಸಿದ. ಪ್ರಬಲವಾದ ಬೆಂಕಿಯಲ್ಲಿ ಕಬ್ಬಿಣವನ್ನು ಕಾಸಿದಾಗ ಅದನ್ನು ಯಾವ ಬಗೆಯಲ್ಲಾದರೂ ಬಗ್ಗಿಸಬಹುದು. ಅದು ತಣ್ಣಗಾದ ಮೇಲೆ ಅದೇ ರೂಪದಲ್ಲಿರುತ್ತದೆ, ಗಟ್ಟಿಯಾಗಿರುತ್ತದೆ ಎನ್ನುವುದು ಮಾನವನಿಗೆ ಅರಿವಾದ ದಿನ ಅವನ ಬಾಳಿನಲ್ಲಿ ಒಂದು ಮಹಾಕ್ರಾಂತಿಯ ದಿನ. 1940ರಲ್ಲಿ ಅಸಾಧ್ಯವೆನಿಸುತ್ತಿದ್ದುದು ಈಗ ಸಾಧ್ಯವಾಗಿದೆ. ಜೆಟ್ ಎಂಜಿನ್ನುಗಳಿಗೆ ಬಳಸುವ ಉಕ್ಕು ಮತ್ತು ಮಿಶ್ರಿತ ಲೋಹಗಳು ಪಡೆಯಬೇಕಾದ ಒತ್ತಡ ಅಸಾಧಾರಣ. ಈ ಎಂಜಿನ್ನುಗಳಿಗೆ ಬಳಸುವ ಉಕ್ಕು ಸಹಿಸಬೇಕಾದ ಸೆಳೆತವನ್ನು ಒಬ್ಬ ವಿಜ್ಞಾನಿ, "ಒಂದು ಫೌಂಟನ್‌ಪೆನ್‌ನಷ್ಟು ದಪ್ಪವಿರುವ. ಕಾದು ಉರಿಯಂತೆ ಕೆಂಪಾದ ಲೋಹದ ತುಂಡಿನಿಂದ ಎರಡು ದೊಡ್ಡ ಕಾರುಗಳನ್ನು ತೂಗುಹಾಕಿದಂತೆ" ಎಂದು ವಿವರಿಸುತ್ತಾನೆ ; ಕಬ್ಬಿಣ ಮತ್ತು ಉಕ್ಕು ಇಂದು ಜನಜೀವನ, ಕೈಗಾರಿಕೆ ಮತ್ತು ರಾಷ್ಟ್ರರಕ್ಷಣೆಗೆ ಅತಿ ಮುಖ್ಯವಾದದ್ದರಿಂದಲೇ, ಸ್ವತಂತ್ರ ಭಾರತ ರೂರ್ಕೆಲ, ದುರ್ಗಾಪುರ, ಭಿಲಾಯಿ, ಬೊಖಾರೊಗಳಲ್ಲಿ ಉಕ್ಕು ಕಾರಖಾನೆಗಳನ್ನು ಪ್ರಾರಂಭಿಸಿರುವುದು.

ಪ್ರಪಂಚದಲ್ಲಿ ಉಕ್ಕಿನ ಕೈಗಾರಿಕೆಗಳಲ್ಲಿ ಸುಮಾರು 20 ಲಕ್ಷದಿಂದ 30 ಲಕ್ಷ ಮಂದಿ ಕೆಲಸ ಮಾಡುತ್ತಾರೆ.

ಮನುಷ್ಯನಿಗೆ ಹೊರ ಜಗತ್ತಿನಲ್ಲಿ ಕಬ್ಬಿಣದ ಅಗತ್ಯವಿದ್ದಂತೆ ಅವನ ದೇಹದಲ್ಲಿಯೂ ಅಗತ್ಯವುಂಟು. ಅವನ ರಕ್ತದಲ್ಲಿ ಹೀಮೊಗ್ಲೋಬಿನ್ ಎನ್ನುವ ಅತ್ಯಮೂಲ್ಯ ಅಂಶವಿದೆ. ಇದರ ಒಂದು ಭಾಗ ಕಬ್ಬಿಣ. ಎಲ್ಲ ಸಸ್ಯ ಮತ್ತು ಪ್ರಾಣಿ ವರ್ಗಕ್ಕೂ ಕಬ್ಬಿಣ ಅಗತ್ಯ.

ಪ್ರತಿ ನಿತ್ಯ ನಾವು ಕಬ್ಬಿಣ ತಿನ್ನುತ್ತೇವೆ. ನಾವು ತೆಗೆದುಕೊಳ್ಳುವ ಆಹಾರದಲ್ಲಿ 15 ಮಿಲಿಗ್ರಾಂನಷ್ಟು ಇದು ಸೇರಿರುತ್ತದೆ.

## ಕಮ್ಯೂನಿಸಂ

ಕಮ್ಯೂನಿಸಂ 'ವರ್ಗರಹಿತ ಸಮಾಜ' ತನ್ನ ಗುರಿ ಎಂದು ಹೇಳುತ್ತದೆ. ಸಮಾಜದಲ್ಲಿ ವರ್ಗಗಳಿವೆ–ಉಳ್ಳವರದು ಒಂದು ವರ್ಗ, ಇಲ್ಲದವರದು ಇನ್ನೊಂದು ವರ್ಗ. ಒಡೆಯರು ಬಡವರಿಂದ – ಕಾರ್ಮಿಕರಿಂದ – ಕೆಲಸ ಮಾಡಿಸಿಕೊಳ್ಳುತ್ತಾರೆ. ಎಷ್ಟು ಕಡಮೆ ಸಾಧ್ಯವಾದರೆ ಅಷ್ಟು ಕಡಮೆ ಅವರಿಗೆ ಹಣ ಕೊಡುತ್ತಾರೆ, ಲಾಭವನ್ನೆಲ್ಲ ತಾವು ದಕ್ಕಿಸಿಕೊಳ್ಳುತ್ತಾರೆ. ಆದ್ದರಿಂದ ಈ ಎರಡು ವರ್ಗಗಳಿಗೆ ದ್ವೇಷ ಮತ್ತು ಜಗಳ ತಪ್ಪಿದ್ದಲ್ಲ. ಅಂಥ ವರ್ಗಗಳು ಇಲ್ಲದಂತೆ ಮಾಡುವುದು ಕಮ್ಯೂನಿಸಮಿನ ಧ್ಯೇಯ. ಸುಲಿಗೆರಹಿತ ಸಮಾಜ ಸ್ಥಾಪನೆಯೇ ಅದರ ಗುರಿ.

ಸಮಾಜದಲ್ಲಿ ಬದಲಾವಣೆಗಳನ್ನು ಅಹಿಂಸೆಯಿಂದ ಮಾಡಬಹುದು ಎಂಬ ಅಭಿಪ್ರಾಯವನ್ನು ಕಮ್ಯೂನಿಸಂ ಒಪ್ಪುವುದಿಲ್ಲ. ಬಲಾತ್ಕಾರ ಮತ್ತು ಹಿಂಸೆ ಅನಿವಾರ್ಯ, ಅಗತ್ಯ ಎಂದು ಹೇಳುತ್ತದೆ. ಆರ್ಥಿಕ ತಳಹದಿಯ ಮೇಲಣ ರಾಜಕೀಯ ಸಿದ್ಧಾಂತ ಇದು ; ಸಮಾಜವಾದದ ವಿಚಾರದಿಂದ ಬೆಳೆದು ಬಂದದ್ದು. ಸಮಾಜವಾದವೂ ಸಮಾಜದ ಮಹತ್ವವನ್ನು ಒತ್ತಿಹೇಳುತ್ತದೆ. ಸಮಾಜದ ಪ್ರತಿ ವ್ಯಕ್ತಿಯೂ ಅಭಿವೃದ್ಧಿಹೊಂದಬೇಕು, ನಿಜ; ಆದರೆ ವ್ಯಕ್ತಿ ತನ್ನ ಹಿತವಷ್ಟನ್ನೇ ನೋಡಿಕೊಂಡರೆ ಸಾಲದು, ಸಮಾಜಕ್ಕಾಗಿ ಬದುಕಬೇಕು, ಅಗತ್ಯವಾದಲ್ಲಿ ಸಮಾಜ ಹತೋಟಿಯನ್ನು ವಹಿಸಿಕೊಳ್ಳಬೇಕು–ಇದು ಸಮಾಜವಾದದ ದೃಷ್ಟಿಯಾದರೆ, ಕಮ್ಯೂನಿಸಂ ಸಮಾಜವೇ ಮುಖ್ಯ ಎನ್ನುತ್ತದೆ. ಇದರ ಪ್ರಕಾರ ದೇಶದಲ್ಲಿ ಉತ್ಪಾದನಾಸಾಧನಗಳೆಲ್ಲ ಸಮಾಜದ ಕೈಯಲ್ಲಿರಬೇಕು, ದೇಶದಲ್ಲಿರುವುದೆಲ್ಲ ಸಮಾಜಕ್ಕೆ ಸೇರಿದ್ದೇ, ವ್ಯಕ್ತಿಗೆ ಮನೆ ಜಮೀನು ತಾನು ಬರೆದ ಪುಸ್ತಕದ ಸ್ವಾಮ್ಯ–ಹೀಗೆ ಯಾವ ಆಸ್ತಿಯೂ ಇರಬಾರದು. ಕೆಲಸಗಾರರೇ ದೇಶದ ಪ್ರಭುಗಳು; ಸರಕಾರ ಅವರ ಅಧೀನ. ಪ್ರತಿಯೊಬ್ಬನೂ ತನ್ನ ಕೈಲಾದಷ್ಟು ಕೆಲಸ ಮಾಡಬೇಕು–ಸಮಾಜಕ್ಕಾಗಿ, ದೇಶಕ್ಕಾಗಿ; ಅವನಿಗೆ ಜೀವನಕ್ಕೆ ಅಗತ್ಯವಾದದ್ದನ್ನೆಲ್ಲ ಸರಕಾರ ಕೊಡುತ್ತದೆ–ಆಹಾರ, ಬಟ್ಟೆ, ಮನೆ, ವಿದ್ಯಾಭ್ಯಾಸ, ಔಷಧಿ ಎಲ್ಲವನ್ನೂ.

'ಕಮ್ಯೂನಿಸಂ'ನ ಆಲೋಚನಾರೀತಿ ಹೊಸದಲ್ಲ. 2,400 ವರ್ಷಗಳ ಹಿಂದೆ ಪ್ರಾಚೀನ ಗ್ರೀಕ್ ತತ್ತ್ವಜ್ಞಾನಿ ಪ್ಲೇಟೋ 'ಗಣರಾಜ್ಯ' ಗ್ರಂಥದಲ್ಲಿ, ತನ್ನದೆಂದು ಹೇಳಿಕೊಳ್ಳುವ ಕುಟುಂಬ ಮೊದಲ್ಗೊಂಡು ಯಾವ ಸ್ವಾಮ್ಯವೂ ಆಳುವ ವರ್ಗಕ್ಕೆ ಸೇರಿದವನಿಗೆ ಇರಕೂಡದೆಂದು ವಾದಿಸಿದ.

'ಆಧುನಿಕ ಕಮ್ಯೂನಿಸಂ'ನ ಜನಕ ಕಾರ್ಲ್ ಮಾರ್ಕ್ಸ್. ಇವನಿಗೆ ನೆರವಾದವನು ಫ್ರೆಡರಿಕ್ ಏಂಗೆಲ್ಸ್. ಬಂಡವಾಳಶಾಹಿಯನ್ನು ಜಗತ್ತಿಗೆ ನೀಡಿದ ಹತ್ತೊಂಬತ್ತನೆಯ ಶತಮಾನ ಮಾರ್ಕ್ಸ್‌ವಾದವನ್ನೂ ನೀಡಿತು.

ಕೈಗಾರಿಕಾ ಕ್ರಾಂತಿಯ ಫಲವಾಗಿ ಕಾರ್ಮಿಕವರ್ಗ ರೂಪುಗೊಂಡಿತು. ತನ್ನ ಬೇಡಿಕೆಗಳಿಗಾಗಿ ಅಲ್ಲಲ್ಲಿ ಸಂಘಟಿತ ಹೋರಾಟ ನಡೆಸಿತು. ಕಾರ್ಮಿಕರ ರಾಜಕೀಯ ಪಕ್ಷವಾಗಿ ಕಮ್ಯೂನಿಸ್ಟ್ ಪಕ್ಷ ಕೆಲಸ ಮಾಡಬೇಕು ಎಂದ ಮಾರ್ಕ್ಸ್. ಔದ್ಯೋಗಿಕವಾಗಿ ಮುಂದುವರಿದ ಇಂಗ್ಲೆಂಡ್ ಮತ್ತು ಜರ್ಮನಿಗಳಲ್ಲಿ ಕಾರ್ಮಿಕರ ನಾಯಕತ್ವದಲ್ಲಿ ಕ್ರಾಂತಿ ಸಂಭವಿಸುತ್ತದೆ ಎಂದು ಮಾರ್ಕ್ಸ್ ಮತ್ತು ಏಂಗೆಲ್ಸ್ ಭಾವಿಸಿದರು. ಏಕೆಂದರೆ ಬಂಡವಾಳ ಪದ್ಧತಿಯಲ್ಲಿ ಶೋಷಣೆ ಹೆಚ್ಚಿ ಕಾರ್ಮಿಕರು ಸಂಘಟಿತರಾದಾಗಲೇ ಇಂಥ ಹೋರಾಟ ಸಾಧ್ಯ. ಈ ಆರ್ಥಿಕ ತಳಹದಿಯ ಮೇಲೆ ರೂಪಿಸಲಾದ ಆರ್ಥಿಕ ಸಿದ್ಧಾಂತವೇ ಕಮ್ಯೂನಿಸಂ. ಆದರೆ ಕ್ರಾಂತಿಕಾರಕ ಬೆಳವಣಿಗೆ ಅವರು ಸೂಚಿಸಿದ್ದ ರಾಷ್ಟ್ರಗಳಲ್ಲಿ ಕಾಣಿಸಿಕೊಳ್ಳಲಿಲ್ಲ. ಹಿಂದುಳಿದ ರಾಷ್ಟ್ರವಾದ ರಷ್ಯದಲ್ಲಿ ಭದ್ರವಾದ ನೆಲೆಯನ್ನು ಕಮ್ಯೂನಿಸಂ ಕಂಡಿತು. ಅದಕ್ಕೆ ಕಾರಣ ರಷ್ಯದ ಅನಾದೃಶ ಕ್ರಾಂತಿಕಾರಿ ನಾಯಕ ಲೆನಿನ್, ಹಾಗೂ ಆತ ಸಂಘಟಿಸಿದ ಕಮ್ಯೂನಿಸ್ಟ್ ಪಕ್ಷ.

1917ರಲ್ಲಾದ ರಷ್ಯನ್ ಕ್ರಾಂತಿಯ ಬಳಿಕ ಕಮ್ಯೂನಿಸ್ಟ್ ಪಕ್ಷಗಳು ಪ್ರಪಂಚದಾದ್ಯಂತ ತಲೆದೋರಿದುವು. ಮೊಟ್ಟಮೊದಲ ಕಮ್ಯೂನಿಸ್ಟ್ ಪಕ್ಷ 1917ರಲ್ಲಿ ಜರ್ಮನಿಯಲ್ಲಿ ಹುಟ್ಟಿತು. ಆದರೆ 1930ರ ಅನಂತರ ನಾಜಿಗಳು (ಹಿಟ್ಲರ್ ಕಟ್ಟಿದ ನ್ಯಾಷನಲ್ ಸೋಷಿಯಲಿಸ್ಟ್–ನಾಜಿ–ಪಕ್ಷದವರು) ಕಮ್ಯೂನಿಸ್ಟ್ ಚಳುವಳಿಯನ್ನು ಬಗ್ಗುಬಡಿದರು.

ರಷ್ಯನ್ ಕ್ರಾಂತಿಯ ಬಳಿಕ ರಷ್ಯವೇ ಅಂತರರಾಷ್ಟ್ರೀಯ ಕಮ್ಯೂನಿಸ್ಟ್ ಚಳುವಳಿಗೆ ನಾಯಕನಾಯಿತು. ಏಷ್ಯದಲ್ಲಿ ಚೀನೀ ಕಮ್ಯೂನಿಸ್ಟ್ ಪಕ್ಷ ಪ್ರಬಲವಾಯಿತು. ದ್ವಿತೀಯ ಮಹಾಯುದ್ಧದ ಸಮಯದಲ್ಲಿ ರಷ್ಯದ ಕೆಂಪು ಪಡೆಯ ಕಾರ್ಯಾಚರಣೆ ಯೂರೋಪಿನ ಕೆಲವು ರಾಷ್ಟ್ರಗಳಲ್ಲಿ ಕಮ್ಯೂನಿಸ್ಟ್ ಸರಕಾರಗಳ ಸ್ಥಾಪನೆಗೆ ಕಾರಣವಾಯಿತು. ಚೀನದಲ್ಲೂ ಕಮ್ಯೂನಿಸ್ಟ್ ಪಕ್ಷ ಅಧಿಕಾರಕ್ಕೆ ಬಂತು. ಏಷ್ಯದ ಮತ್ತು ಪ್ರಪಂಚದ ಚರಿತ್ರೆಯಲ್ಲಿ ಇದೊಂದು ದೊಡ್ಡ ಘಟನೆ.

ಯುದ್ಧಾನಂತರದ ಅವಧಿಯ ಹೊಸ ಸಂಭವವೆಂದರೆ, ವಿವಿಧ ರಾಷ್ಟ್ರಗಳ ಕಮ್ಯೂನಿಸ್ಟ್ ಪಕ್ಷಗಳ ಮೇಲಿನ ರಷ್ಯದ ಹಿಡಿತ ಸಡಿಲವಾದದ್ದು. ಮೊಟ್ಟಮೊದಲಿಗೆ ರಷ್ಯದ ನಿಯಂತ್ರಣದಿಂದ ಹೊರಬಂದದ್ದು ಯುಗೊಸ್ಲಾವಿಯ. ರಷ್ಯದಿಂದ ಪ್ರತ್ಯೇಕವಾಗುವ ಪ್ರಯತ್ನ ಹಂಗೆರಿಯಲ್ಲಿ ನಡೆಯಿತಾದರೂ ಅದು ವಿಫಲವಾಯಿತು. ರಷ್ಯದ ಕಮ್ಯೂನಿಸ್ಟ್ ನಾಯಕ ಸ್ಟಾಲಿನ್ನನ ಮರಣಾನಂತರ (1954) ಚೀನೀ ಕಮ್ಯೂನಿಸ್ಟ್ ಪಕ್ಷ ಕಮ್ಯೂನಿಸ್ಟ್ ಜಗತ್ತಿಗೆ ತಾನೇ ನಾಯಕ ಎನ್ನುವಂತೆ ವರ್ತಿಸಿತು. ಮುಂದೆ ಹತ್ತು ವರ್ಷಗಳಲ್ಲಿ ರಷ್ಯ–ಚೀನ ವಿರಸ ಉಲ್ಬಣಗೊಂಡಿತು.

ಭೂಮಧ್ಯ ಸಮುದ್ರ ತೀರದ ಪುಟ್ಟ ರಾಷ್ಟ್ರವಾದ ಅಲ್ಬೇನಿಯ ಚೀನದೊಡನೆ ಸಖ್ಯ ಸಾರಿ. ರಷ್ಯನ್ ನಾಯಕತ್ವವನ್ನು ಅಲ್ಲಗಳೆಯಿತು. ರುಮೇನಿಯ ಯಾವ ಕಡೆಗೂ ವಾಲದ ನೀತಿಯನ್ನು ಅನುಸರಿಸತೊಡಗಿತು. ಕಮ್ಯೂನಿಸ್ಟ್ ವ್ಯವಸ್ಥೆಯ ನಿಷ್ಠುರ ನಿಯಮಗಳ ಬದಲು ಕೆಲವು ಕಮ್ಯೂನಿಸ್ಟ್ ರಾಷ್ಟ್ರಗಳಲ್ಲಿ ಸ್ವಲ್ಪಮಟ್ಟಿಗೆ ಉದಾರ ನೀತಿಗಳ ಪ್ರತಿಪಾದನೆ ಆರಂಭವಾಯಿತು. ಅಂಥ ಪ್ರವೃತ್ತಿಗೆ ಚೆಕೊಸ್ಲೊವಾಕಿಯ ಒಂದು ದೃಷ್ಟಾಂತ. ಆದರೆ ರಷ್ಯದ ಪಡೆಗಳು ಪ್ರಾಗನ್ನು ಪ್ರವೇಶಿಸಿ, ಚೆಕ್ ಕಮ್ಯೂನಿಸ್ಟ್ ಪಕ್ಷದ ಆಗಿನ ನಾಯಕರು ಅನುಸರಿಸತೊಡಗಿದ್ದ ಉದಾರ ನೀತಿಗೆ ಕಡಿವಾಣ ಹಾಕಿದುವು.

ಕಮ್ಯೂನಿಸ್ಟರು ಅಧಿಕಾರದಲ್ಲಿರುವ ದೇಶಗಳಲ್ಲಿ ಕಮ್ಯೂನಿಸ್ಟ್ ಪಕ್ಷಗಳಲ್ಲಿ ಒಡಕು ಹುಟ್ಟಿತು.

ಕಾರ್ಲ್ ಮಾರ್ಕ್ಸ್ 'ಕಮ್ಯೂನಿಸ್ಟ್ ಪ್ರಣಾಳಿಕೆ'ಯನ್ನು ಬರೆದ (1848) ನೂರೇ ವರ್ಷಗಳಲ್ಲಿ ಜಗತ್ತಿನಲ್ಲಿ ಕಮ್ಯೂನಿಸಂ ಪ್ರಬಲ ಶಕ್ತಿಯಾಯಿತು. ಆದರೆ ಅನಂತರದ ಕೆಲವೇ ವರ್ಷಗಳಲ್ಲಿ ಆಂತರಿಕವಾಗಿ ಭಿನ್ನ ಪ್ರವೃತ್ತಿಗಳು ತಲೆದೋರಿ ಅದು ಬಲಹೀನಗೊಂಡಿತು.

ಜಗತ್ತಿನಲ್ಲಿಂದು ಕಮ್ಯೂನಿಸ್ಟ್ ಪಕ್ಷಗಳು ಅಲ್ಲಲ್ಲಿ ಸರಕಾರ ರಚಿಸಿವೆ. ರಷ್ಯ ಮತ್ತು ಚೀನ ಅಗ್ರಗಣ್ಯ ಕಮ್ಯೂನಿಸ್ಟ್ ರಾಷ್ಟ್ರಗಳು. ಆದರೆ ಇವುಗಳಲ್ಲಿ ವಿರಸವುಂಟಾಗಿ ಕಮ್ಯೂನಿಸಂ ಪ್ರಸಾರಕ್ಕೆ ಆತಂಕವಾಗಿದೆ. ರಷ್ಯದಲ್ಲಿ ಕೂಡ ಕಮ್ಯೂನಿಸಂ ಇನ್ನೂ ಪೂರ್ಣವಾಗಿ ಸ್ಥಾಪಿಸಲ್ಪಟ್ಟಿಲ್ಲ. ಸರ್ವಾಧಿಕಾರತ್ವ ಮತ್ತು ಸರಕಾರಗಳು ಕಣ್ಮರೆಯಾಗಿ ಸುಲಿಗೆ ಇಲ್ಲದ ವರ್ಗರಹಿತ ಸಮಾಜ ತಲೆ ಎತ್ತಿದಾಗಲೇ ಕಮ್ಯೂನಿಸಂ ಸ್ಥಾಪನೆಯಾದಂತೆ. ಸದ್ಯಕ್ಕೆ ಕಮ್ಯೂನಿಸಂ ಪ್ರಯೋಗಾವಸ್ಥೆಯಲ್ಲಿಯೇ ಇದೆ.

ನೋಡಿ : ಆಡಳಿತ ವ್ಯವಸ್ಥೆ; ಚೀನ; ಮಾರ್ಕ್ಸ್, ಕಾರ್ಲ್; ಲೆನಿನ್; ಸೋವಿಯೆತ್ ಒಕ್ಕೂಟ.

## ಕರಾರು

ಜಮೀನನ್ನು ಮಾರಬೇಕು ; ಮನೆ ಬಾಡಿಗೆಗೆ ಹಿಡಿಯಬೇಕು ; ವ್ಯಾಪಾರದಲ್ಲಿ ಪಾಲುದಾರಿಕೆ ವ್ಯವಸ್ಥೆಯಾಗಿದೆ ; ಇಂಥ ಸಂದರ್ಭಗಳಲ್ಲಿ ವ್ಯಕ್ತಿ ಅಥವಾ ಸಂಸ್ಥೆಗಳ ನಡುವೆ ಆಗುವ ಲಿಖಿತ ಒಡಂಬಡಿಕೆಯೇ ಕರಾರು. ಕರಾರಿಗೆ ಬದ್ಧರಾಗುವವರು ಪಕ್ಷಗಳು. ಒಂದು ವ್ಯವಹಾರ ನಡೆಸುವಾಗ ಇಬ್ಬರು ಅಥವಾ ಅದಕ್ಕಿಂತ ಹೆಚ್ಚು ಜನ ಕೆಲವು ಷರತ್ತುಗಳನ್ನು ಮಾಡಿಕೊಳ್ಳುತ್ತಾರೆ. ಒಬ್ಬ ಮನೆಯನ್ನು ಮಾರುವಾಗ, ತನಗೇ ಮನೆ ಸೇರಿದ್ದು, ಅದರ ಮೇಲೆ ಇತರರಿಗೆ ಹಕ್ಕಿಲ್ಲ, ಮಾರುವ ಹಕ್ಕು ತನಗಿದೆ ಎಂದು ಕೊಳ್ಳುವವನಿಗೆ ಭರವಸೆ ಕೊಡುತ್ತಾನೆ. ನಿವೇಶನದ ಉದ್ದ–ಅಗಲ ಇಷ್ಟು, ಕಟ್ಟಿದ ಭಾಗ ಇಷ್ಟು ಎಂದು ತಿಳಿಸುತ್ತಾನೆ. ತನ್ನ ವಾರಸುದಾರರು ಯಾರೂ ಮುಂದೆ ತಕರಾರು ಮಾಡುವಂತಿಲ್ಲ ಎಂದು ಆಶ್ವಾಸನೆ ನೀಡುತ್ತಾನೆ. ಕೊಳ್ಳುವವನು ಇಷ್ಟು ಹಣ ಕೊಡುತ್ತೇನೆ ಎಂದು ಮಾತು ಕೊಡುತ್ತಾನೆ. ಪಾಲುದಾರಿಕೆ ವ್ಯವಸ್ಥೆ ಆದರೆ ಪಾಲುದಾರರಲ್ಲಿ ಯಾರು ಎಷ್ಟು ಹಣ ಕೊಡುತ್ತಾರೆ. ಯಾರು ಯಾವ ಯಾವ ಕೆಲಸ ಮಾಡುತ್ತಾರೆ. ಪ್ರತಿಫಲದ ವಿತರಣೆ ಹೇಗೆ ಎಂಬ ಷರತ್ತುಗಳಾಗುತ್ತವೆ. ಕಾಲ ಕಳೆದ ಮೇಲೆ ಜಗಳವಾಗದಂತೆ ಕರಾರಿನ ಷರತ್ತುಗಳು ಯಾವುವೆಂಬ ವಿಷಯದಲ್ಲಿ ಕರಾರು ಇರಬೇಕು. ಉಭಯ ಪಕ್ಷದವರೊಳಗೆ ವಿವಾದ ಹುಟ್ಟಲು ಎಡೆ ಇರಬಾರದೆಂಬ ಉದ್ದೇಶದಿಂದಲೇ ಕರಾರುಗಳು ಲಿಖಿತ ರೂಪದಲ್ಲಿರುತ್ತವೆ.

ಕರಾರಿಗೆ ಒಳಗಾಗುವ ಕಕ್ಷಿದಾರರು ವಯಸ್ಕರಾಗಿರಬೇಕು ; ಮತಿಭ್ರಮೆಗೆ ಒಳಗಾಗಿರಬಾರದು. ಮಾದಕವಸ್ತುಗಳ ಅಮಲಿಗೆ ತುತ್ತಾದವರು, ಬಲಾತ್ಕಾರಕ್ಕೆ ಒಳಗಾಗಿ ಸಹಿ ಹಾಕಿದವರು ಪಕ್ಷದಾರರಾಗಿದ್ದರೆ ಅಂಥ ಕರಾರು ಊರ್ಜಿತವಾಗುವುದಿಲ್ಲ. ಪಕ್ಷದಾರರು ಹಲವು ಬಾರಿ ನೇರವಾಗಿ ಕರಾರಿಗೆ ಒಳಗಾಗಬಹುದು ; ಅಥವಾ ತಮ್ಮ ಪ್ರತಿನಿಧಿಗಳಿಗೆ ಅಧಿಕಾರ ನೀಡಿ ಅವರ ಮೂಲಕ ಕರಾರು ಮಾಡಿಕೊಳ್ಳಬಹುದು. ಕರಾರಿನ ಮುಖ್ಯ ಗುಣವೆಂದರೆ ಎಲ್ಲ ಪಕ್ಷಗಳವರೂ ಕರಾರಿನಂತೆ ನಡೆಯಬೇಕಾದ ವ್ಯವಹಾರದಲ್ಲಿ ಪಾಲ್ಗೊಳ್ಳಬೇಕಾದದ್ದು.

ಇಬ್ಬರು ಪಕ್ಷದವರೂ ಪಾಲಿಸಬೇಕಾದ ಷರತ್ತುಗಳು ಕರಾರಿನಲ್ಲಿ ನಮೂದಿಸಲ್ಪಡುತ್ತವೆ. ಯಾವುದೇ ಷರತ್ತನ್ನು ಒಬ್ಬ ಪಾಲಿಸದೇ ಹೋಗುವುದರಿಂದ ಯಾರಿಗೆ ಹಾನಿಯಾಗಿರುವುದೋ ಅವರಿಗೆ ನ್ಯಾಯಾಲಯದವರು ಪರಿಹಾರ ಕೊಡಿಸುತ್ತಾರೆ. ಸಮಯೋಚಿತ ಇಲ್ಲವೆ ಯುಕ್ತವೆಂದು ತೋರಿದ ಸಂದರ್ಭಗಳಲ್ಲಿ ಕರಾರಿನ ಷರತ್ತುಗಳನ್ನು ಉಲ್ಲಂಘಿಸದಂತೆ ತಡೆಯಾಜ್ಞೆ ಕೊಡುವ ಅಧಿಕಾರವೂ ನ್ಯಾಯಾಲಯಗಳಿಗೆ ಇದೆ.

ಎಲ್ಲ ಕರಾರುಗಳಿಗೂ ನ್ಯಾಯಾಲಯಗಳು ಮನ್ನಣೆ ಕೊಡುವುದಿಲ್ಲ. ಯಾವುದೇ ಅಪರಾಧ ಮಾಡುವುದಕ್ಕಾಗಿ ಇಬ್ಬರು ಕರಾರು ಮಾಡಿಕೊಂಡರೆ, ಅದನ್ನು ಮುರಿದದ್ದರಿಂದ ಹಾನಿ ಹೊಂದಿದವರು ಮುರಿದವರ ಮೇಲೆ ದಾವೆ ಹೂಡಲು ಬರುವುದಿಲ್ಲ.

ಅದೇ ರೀತಿಯಲ್ಲಿ ಸಾರ್ವಜನಿಕ ಇಲ್ಲವೆ ಸರಕಾರದ ಧೋರಣೆಗೆ ವಿರುದ್ಧವಾದ ಸಂಗತಿಗಳ ವಿಷಯದಲ್ಲಿ ಮಾಡಿಕೊಂಡ ಕರಾರಿಗೆ ನ್ಯಾಯಾಲಯಗಳಲ್ಲಿ ಯಾವುದೇ ಮನ್ನಣೆ ಇಲ್ಲ. ಉದಾ : ಕಳ್ಳಸಂತೆಯ ವ್ಯಾಪಾರ ಜೊತೆಯಲ್ಲಿ ಮಾಡುವುದಕ್ಕಾಗಿ ಕರಾರು.

ಕೆಲವು ಕರಾರುಗಳನ್ನು ಛಾಪಾ (ಠಸ್ಸೆ) ಕಾಗದದಲ್ಲಿ ಬರೆಯಬೇಕೆಂದು ಕಾಯಿದೆಯ ನಿರ್ಬಂಧವಿರುತ್ತದೆ. ಅಂಥ ಕರಾರುಗಳನ್ನು ಸಾದಾ ಕಾಗದದಲ್ಲಿ ಬರೆದರೆ ಅವುಗಳು ನ್ಯಾಯಾಲಯದಲ್ಲಿ ಸ್ವೀಕೃತವಲ್ಲ.

ಉಭಯ ಪಕ್ಷದವರು ಕರಾರಿಗೆ ಸಹಿಮಾಡಿದ್ದಾರೆಂಬುದರ ರುಜುವಾತಿಗಾಗಿ ಸಾಕ್ಷಿಗಾರರೆಂದು ಇತರರ ಸಹಿ ತೆಗೆದುಕೊಳ್ಳುವ ಕ್ರಮವಿದೆ.

ಕರಾರುಗಳನ್ನು ಅವುಗಳಲ್ಲಿ ನಮೂದಿಸಿದ ಸಂದರ್ಭಗಳಲ್ಲಿ ಇಲ್ಲವೆ ಉಭಯ ಪಕ್ಷದವರು ಒಪ್ಪಿದರೆ ಮಾತ್ರ ರದ್ದುಪಡಿಸಬಹುದು. ಇಲ್ಲದಿದ್ದರೆ ಎಲ್ಲ ಪಕ್ಷದಾರರೂ ಅವನ್ನು ಪಾಲಿಸಲೇಬೇಕು.

## ಕಲ್ಕತ್ತ

ಭಾರತದ ಅತಿ ದೊಡ್ಡ ನಗರ ಕಲ್ಕತ್ತ. ಹೂಗ್ಲಿ ನದಿಯ ತೀರದಲ್ಲಿರುವ ಈ ನಗರ ಪೂರ್ವಾರ್ಧ ಪ್ರಪಂಚದ ಅತಿ ಪ್ರಮುಖ ಬಂದರುಗಳಲ್ಲಿ ಒಂದು. ಇದು ಪಶ್ಚಿಮ ಬಂಗಾಳದ ರಾಜಧಾನಿ.

ಹೂಗ್ಲಿ ನದಿಯ ಹತ್ತಿರ ಮೂರು ಹಳ್ಳಿಗಳಲ್ಲಿ ಒಂದರ ಹೆಸರು ಕಾಲಿಘಟ್ಟ. ಈಸ್ಟ್ ಇಂಡಿಯಾ ಕಂಪೆನಿ ಈ ಜಾಗದ ಮಹತ್ವವನ್ನು ಗುರುತಿಸಿ 1690ರಲ್ಲಿ ಇಲ್ಲಿ ವ್ಯಾಪಾರ ಕೇಂದ್ರವನ್ನು ಸ್ಥಾಪಿಸಿತು. ಕಾಲಿಘಟ್ಟ ಕಲ್ಕತ್ತವಾಯಿತು. ಬಂಗಾಳದ ನವಾಬನಿಂದ ಕಲ್ಕತ್ತ ನಗರದ ಪ್ರದೇಶವನ್ನು 1700ರಲ್ಲಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿ ಕೊಂಡುಕೊಂಡಿತು. 1853ರಿಂದ 1912ರವರೆಗೂ ಅದು ಭಾರತದಲ್ಲಿ ಬ್ರಿಟಿಷರ ರಾಜಧಾನಿಯಾಗಿದ್ದಿತು. ಈಗ ಕಲ್ಕತ್ತ ಬಂದರು 16 ಕಿ. ಮೀ. ಗಳಷ್ಟು ತೀರವನ್ನಾಕ್ರಮಿಸಿಕೊಂಡಿದೆ. ಭಾರತದ ಮೂರನೆಯ ಒಂದು ಭಾಗದಷ್ಟು ವಾಣಿಜ್ಯ ವ್ಯವಹಾರ ಕಲ್ಕತ್ತ ಬಂದರಿನಲ್ಲಿಯೇ ನಡೆಯುತ್ತದೆ.

ಮಾರ್ಕ್ವಿಸ್ ವೆಲ್ಲೆಸ್ಲಿ 1799ರಲ್ಲಿ ಇಲ್ಲಿ ಸರಕಾರಿ ಭವನ ಕಟ್ಟಿಸಿದ. ಟಿಪ್ಪುಸುಲ್ತಾನನ ಸಿಂಹಾಸನವೂ ಅನೇಕ ಐತಿಹಾಸಿಕ ಚಿತ್ರಗಳೂ ಈ ಭವನದಲ್ಲಿವೆ. ವಿಕ್ಟೋರಿಯಾ ಸ್ಮಾರಕವನ್ನು ಬಿಳಿ ಅಮೃತಶಿಲೆಯಲ್ಲಿ ನಿರ್ಮಿಸಲಾಗಿದೆ. 1786ರಲ್ಲಿ ಆರಂಭವಾದ ಉದ್ಯಾನದಲ್ಲಿ ಬೃಹತ್ತಾದ ಆಲದ ಮರವಿದೆ. ಈ ಮರ 27 ಮೀಟರು ಎತ್ತರವಿದ್ದು, 93 ಚ. ಮೀ. ಗಿಂತಲೂ ಹೆಚ್ಚು ಜಾಗವನ್ನು ಆಕ್ರಮಿಸಿಕೊಂಡಿದೆ. ಮರದ 600ಕ್ಕೂ ಹೆಚ್ಚು ಬಿಳಲು



ಕಲ್ಕತ್ತದ ಪಾರ್ಶ್ವನಾಥ ಮಂದಿರ

ಲುಗಳು ನೆಲವನ್ನು ಮುಟ್ಟಿವೆ. ಈ ಮರದ ನೆರಳಿನಲ್ಲಿ 200 ಜನ ಸುಖ ವಾಗಿ ವಿಶ್ರಮಿಸಿಕೊಳ್ಳಬಹುದು. ಕಲ್ಕತ್ತದ ಮೃಗಾಲಯ ಪ್ರಾಣಿಗಳ ಅಪೂರ್ವ ಸಂಗ್ರಹಾಲಯ. ಇದರ ವಿಸ್ತಾರ 18 ಹೆಕ್ಟೇರ್. ರಾಷ್ಟ್ರೀಯ ಪುಸ್ತಕ ಭಂಡಾರದಲ್ಲಿ ಹತ್ತು ಲಕ್ಷ ಪುಸ್ತಕಗಳಿವೆ. ಕಲ್ಕತ್ತದ ಮತ್ತೊಂದು ಆಕರ್ಷಣೆಯೆಂದರೆ ಗ್ರಹಾಲಯ. ಇದೊಂದು ವೃತ್ತಾಕಾರದ ಕಟ್ಟಡ. ಮೇಲ್ಛಾವಣಿಯೂ ವೃತ್ತಾಕಾರವಾಗಿದೆ. ಆಕಾಶದ ಅದ್ಭುತಗಳನ್ನು ಸಾವಿಲ್ಲಿ ಮೂರ್ತ ಸ್ವರೂಪದಲ್ಲಿ ಕಾಣಬಹುದು. ಒಂದು ಗಂಟೆ ಅವಧಿ ಯಲ್ಲಿ ನಕ್ಷತ್ರಗಳು, ಗ್ರಹಗಳು, ಅಂತರಿಕ್ಷಯಾನದ ಪ್ರಥಮ ಪ್ರಯತ್ನಗಳ ಬಗೆಗೆ ವಿವರಣೆ ಸಹಿತವಾಗಿ ಚಿತ್ರ ತೋರಿಸುತ್ತಾರೆ. ಚೌರಂಘಿ ಕಲ್ಕತ್ತದ ಮುಖ್ಯರಸ್ತೆ. ಕಲ್ಕತ್ತ ವಿಶ್ವವಿದ್ಯಾನಿಲಯ 1857ರಲ್ಲಿ ಸ್ಥಾಪಿತವಾಯಿತು. ವಿವೇಕಾನಂದರು ನಿರ್ಮಿಸಿದ ಬೇಲೂರು ಮಠ ಗಂಗಾನದಿಯ ದಡದಲ್ಲಿದೆ. ಹೌರಾ ಸೇತುವೆ 467 ಮೀ. ಉದ್ದವಿದ್ದು ಕಲ್ಕತ್ತ-ಹೌರಾಗಳ ನಡುವೆ ಸಂಪರ್ಕ ಏರ್ಪಡಿಸಿದೆ. ಇದು ವಿಸ್ಮಯಗೊಳಿಸುವ ಜಾಚುತೊಲೆ ಸೇತುವೆ. ಏಷ್ಯದಲ್ಲಿ ಇಂಥ ಸೇತುವೆ ಇದೊಂದೇ. ಕಲ್ಕತ್ತದ ಜನಸಂಖ್ಯೆ 65,00,000.

ಆಧುನಿಕ ಭಾರತದ ಹಲವರು ಖ್ಯಾತರ ಹೆಸರುಗಳು ಈ ನಗರ ದೊಂದಿಗೆ ಸೇರಿಕೊಂಡಿವೆ. ನೊಬೆಲ್ ಬಹುಮಾನ ಪಡೆದ ರವೀಂದ್ರನಾಥ ಠಾಕೂರ್, ನೇತಾಜಿ ಸುಭಾಷ್ ಚಂದ್ರ ಬೋಸ್, ವಿಜ್ಞಾನಿ ಜಗದೀಶ್ ಚಂದ್ರ ಬೋಸ್, ಪ್ರಸಿದ್ಧ ಪತ್ರಿಕೋದ್ಯಮಿ ರಮಾನಂದ ಚಟರ್ಜಿ, ಅರವಿಂದರು, ಗಾಂಧಿಜಿಯವರ ಸಮೀಪ ಅನುವರ್ತಿಗಳಲ್ಲಿ ಒಬ್ಬರಾದ ಸರೋಜಿನಿ ನಾಯ್ಡು ಇವರೆಲ್ಲ ಇಲ್ಲಿಯವರು.

## ಕಲ್ಯಾಣ ಕ್ರಾಂತಿ

ಹನ್ನೆರಡನೆಯ ಶತಮಾನದಲ್ಲಿ ಬಿಜ್ಜಳನ ರಾಜಧಾನಿಯಾಗಿದ್ದ ಕಲ್ಯಾಣ ದಲ್ಲಿ ಅಪೂರ್ವ ಸಾಮಾಜಿಕ ಹಾಗೂ ಧಾರ್ಮಿಕ ಕ್ರಾಂತಿಯಾಯಿತು. ಜನ ಆಶ್ಚರ್ಯ ಪಡುವಂಥ, ಚಕಿತರಾಗುವಂಥ ಬದಲಾವಣೆಗಳಾದುವು. ವೀರ ಶೈವ ಧರ್ಮ ಹೊಸ ರೂಪದಲ್ಲಿ ಶಿವ ಭಕ್ತರ ಮೂಲಕ ವ್ಯಾಪಕವಾಗಿ ಹಬ್ಬಿತು. ಈ ಧರ್ಮ ಬೆಳೆಯಲು ಮೂಲ ಕಾರಣರಾದ ಬಸವೇಶ್ವರರೊಂದಿಗೆ ಅನೇಕ ಶಿವಭಕ್ತರಿದ್ದರು. ಈ ಶಿವಶರಣ ಶರಣೆಯರು ಸುತ್ತಲಿನ ಸಮಾಜದಲ್ಲಿ ಕ್ರಾಂತಿಕಾರಕ ಬದಲಾವಣೆ ಗಳನ್ನು ಸಾಧಿಸಿದರು. ಸಾಮಾನ್ಯರಿಗೂ ತಿಳಿಯುವಂತೆ ವಚನಗಳಲ್ಲಿ ಧಾರ್ಮಿಕ ಸಾಹಿತ್ಯ ಸೃಷ್ಟಿಯಾಯಿತು. ಕನ್ನಡನಾಡಿನ ಹಲವಾರು ಮಹಿಳೆಯರು ಸರ್ವ ಸಂಗ ಪರಿತ್ಯಾಗಿಗಳಾಗಿ, ಶಿವಶರಣೆಯರಾಗಿ ಧಾರ್ಮಿಕ ಜೀವನ ನಡೆಸಿದರು. ಜನ ಸಾಮಾನ್ಯರಿಗೂ ಸುಲಭ ಸಾಧ್ಯವಾದಂಥ ಭಕ್ತಿಮಾರ್ಗಕ್ಕೆ ಪ್ರಾಮುಖ್ಯ ದೊರೆಯಿತು. ಧಾರ್ಮಿಕ ಚರ್ಚೆಗಳಿಗಾಗಿ, ವಿಚಾರವಿನಿಮಯಕ್ಕಾಗಿ ಕಲ್ಯಾಣದಲ್ಲಿ 'ಅನುಭವ ಮಂಟಪ' ಸ್ಥಾಪಿತವಾಯಿತು. ಕಲ್ಯಾಣದಲ್ಲಿ ಇಂಥ ಕ್ರಾಂತಿಕಾರಕ ಬದಲಾವಣೆಗಳಾಗುತ್ತಿದ್ದಾಗ ಬಸವಣ್ಣನವರ ಜೊತೆಗೆ ಅವುಗಳಿಗೆ ಮೂಲಾಧಾರವಾಗಿದ್ದವರು ಅಲ್ಲಮಪ್ರಭು, ಸಿದ್ಧರಾಮ, ಚೆನ್ನಬಸವ, ಅಕ್ಕಮಹಾದೇವಿ, ಮುಕ್ತಾಯಕ್ಕ, ಮಡಿವಾಳ ಮಾಚಯ್ಯ, ಅಂಬಿಗರ ಚೌಡಯ್ಯ ಮೊದಲಾದವರು.

ಸಮಾಜದಲ್ಲಿ ಕೀಳವರ್ಗದವರೆಂದು ಹೇಳಲಾದವರಿಗಾಗಿ ಬಸವಣ್ಣನವರು ತಮ್ಮ ಧರ್ಮದ ಬಾಗಿಲನ್ನು ತೆರೆದಿಟ್ಟದ್ದು ಕಲ್ಯಾಣದಲ್ಲಿ ನಡೆದ ಅತ್ಯಂತ ಕ್ರಾಂತಿಕಾರಕ ಸಾಮಾಜಿಕ-ಧಾರ್ಮಿಕ ಪರಿವರ್ತನೆ. ಅಲ್ಲದೆ ಬಸವಣ್ಣನವರು ಗಂಡಸಿಗಿರುವಷ್ಟೇ ಅಧಿಕಾರ ಸಾಮಾಜಿಕ, ಆರ್ಥಿಕ, ಧಾರ್ಮಿಕ ಕ್ಷೇತ್ರಗಳಲ್ಲಿ ಹೆಂಗಸಿಗೂ ಇದೆ ಎಂದು ಸಾರಿದರು.

ಕಲ್ಯಾಣದಲ್ಲಿ ಬಸವಣ್ಣನವರು ಆರಂಭಿಸಿದ ಸಾಮಾಜಿಕ ಹಾಗೂ ಧಾರ್ಮಿಕ ಕ್ರಾಂತಿ ಬಡವರಿಗಾಗಿ, ಹಿಂದುಳಿದವರಿಗಾಗಿ, ಅಶಿಕ್ಷಿತರಿಗಾಗಿ, ಒಟ್ಟಿನಲ್ಲಿ ಅದು ಜನಸಾಮಾನ್ಯರೆಲ್ಲರ ಏಳಿಗೆಗಾಗಿ ನಡೆಸಿದ ಕ್ರಾಂತಿ ; ಅವರು ಮಾಡಿದ್ದು ಅತ್ಯಂತ ಮಾನವೀಯ ಬೋಧನೆ.

ಬಸವಣ್ಣನವರು, ಸಿದ್ಧರಾಮರು ಧಾರ್ಮಿಕಜೀವನವನ್ನು ನಡೆಸುತ್ತಿದ್ದ ಸಮಾಜ ಸೇವಕರು. ಮಾದರ ಚೆನ್ನಯ್ಯ—ಚಮ್ಮಾರ, ತುರುಗಾಹಿ ರಾಮಣ್ಣ—ಗೊಲ್ಲ, ಸೂಜಿಕಾಯಕದ ರಾಮಿತಂದೆ—ದರ್ಜಿ, ಮೇದರ ಕೇತಯ್ಯ—ಬುಟ್ಟಿ ಮಾಡುವವನು, ಬಾಚಿಕಾಯಕದ ಬಸಪ್ಪ—ಬಡಗಿ. ಹೀಗೆ ಸಮಾಜದಲ್ಲಿ ಎಲ್ಲ ಉದ್ಯೋಗಗಳೂ ಸಮ : ಪ್ರತಿಯೊಬ್ಬರೂ ದೇವರ ಭಕ್ತರಾಗಬಲ್ಲರು ; ಎಲ್ಲರೂ ಸಮಾನರು ಎಂಬ ಮನೋಭಾವ ಬೇರೂರಲು ಕಲ್ಯಾಣ ಕ್ರಾಂತಿ ಅತ್ಯಂತ ಸಹಕಾರಿಯಾಯಿತು.

**ನೋಡಿ :** ಬಸವೇಶ್ವರ

## ಕಲ್ಲಿದ್ದಲು

ಭೂಮಿಯ ನೈಸರ್ಗಿಕ ಸಂಪನ್ಮೂಲಗಳ ಪೈಕಿ ಅತ್ಯಂತ ಪ್ರಮುಖ ವಾದದ್ದು ಕಲ್ಲಿದ್ದಲು. ಲೋಹಗಳ **ಅದಿರನ್ನು** ತೋಡಿ ತೆಗೆಯುವಂತೆ ಕಲ್ಲಿದ್ದ ಲನ್ನು ಗಣಿಗಳಿಂದ ಹೊರತೆಗೆಯಲಾಗುತ್ತದೆ. ಲಕ್ಷಾಂತರ ವರ್ಷಗಳ ಹಿಂದೆ ಭೂ ಪ್ರದೇಶದ ಮೇಲೆ ದಟ್ಟವಾಗಿ ಬೆಳೆದಿದ್ದ ಅರಣ್ಯದ ಮರಗಳೇ ಕಲ್ಲಿದ್ದಲು : ಮರಗಳು ಕಲ್ಲಿದ್ದಲಾಗಿ ಮಾರ್ಪಟ್ಟಿದ್ದು ಕೌತುಕದ ಕಥೆ.

ಅಸಂಖ್ಯ ವರ್ಷಗಳ ಹಿಂದೆ ಪೃಥ್ವಿ ಈಗಿನಂತೆ [illegible]ವಾಗಿದ್ದು, ನೆಲ ತಗ್ಗು ಪ್ರದೇಶವಾಗಿತ್ತು. ಸಸ್ಯಗಳು ದಟ್ಟವಾಗಿ ಬೆಳೆದು ಅರಣ್ಯ ಗಳೇರ್ಪಟ್ಟುವು. ಒಣಗಿದ, ಉರುಳಿದ, ಬಿದ್ದುಹೋದ ಮರಗಿಡಗಳು ಜೌಗಿನಲ್ಲಿ ಹೂತುಹೋದುವು : [illegible]

ಬೆಳೆದುವು : ಹೀಗೆ ಕಾಡುಗಳೇ ಭೂಮಿಯಲ್ಲಿ ಮರೆಯಾದುವು. ಆ ಗಿಡ ಮರಗಳು ಭೂಮಿಯೊಳಗಿನ ಉಷ್ಣತೆಯಿಂದ ಕಲ್ಲಿದ್ದಲಾದುವು.

ಹಗುರವಾದ, ಅತಿ ಗಡುಸಲ್ಲದ ಮರ ಗಟ್ಟಿಯಾದ ಕಪ್ಪಗಿನ ಕಲ್ಲಿದ್ದಲಾದುದು ಆಶ್ಚರ್ಯ. ಹೂತುಹೋದ ಮರದ ಪದರಗಳಲ್ಲಿ ತೇವವಿತ್ತು. ಸಸ್ಯ ಸಂಪೂರ್ಣವಾಗಿ ಒಣಗಿ ಜೀವ ಕಳೆದುಕೊಂಡಿರಲಿಲ್ಲ. ಇಂದಿಗೂ ಸಿಗುವ ಸಸ್ಯಾಂಗಾರ ಎನ್ನುವ ಕಲ್ಲಿದ್ದಲು ಇತರ ಬಗೆಯ ಕಲ್ಲಿದ್ದಲಿಗಿಂತ ಮೆದುವಾಗಿರುತ್ತದೆ. ಶತಮಾನಗಳು ಉರುಳಿದಂತೆ ಕೆಲವು ಪ್ರದೇಶಗಳು ನೀರಿನಲ್ಲಿ ಮುಳುಗಿದುವು. ಹುದುಗಿಹೋದ ಮರದ ಪದರಗಳ ಮೇಲೆ ಮರಳು, ಮಣ್ಣು, ನೀರಿನ ಒತ್ತಡ ಬಿದ್ದಿತು. ಮರದ ಕೆಲವು ಪದರಗಳ ಮೇಲೆ ಮಣ್ಣು ಶೇಖರವಾಗಿ ಅದರ ಮೇಲೆ ಅರಣ್ಯಗಳು ಬೆಳೆದುವು. ಸಸ್ಯಾಂಗಾರಗಳ ಮೇಲಿನ ಒತ್ತಡ, ಭೂಮಿಯೊಳಗಣ ಶಾಖ ತೇವವನ್ನು ಹೀರುತ್ತ ಸಸ್ಯಾಂಗಾರ ಗಡುಸಾಯಿತು. ಹೀಗೆ ಸಾಕಷ್ಟು ಗಟ್ಟಿಮುಟ್ಟಾದ ಕಲ್ಲಿದ್ದಲಿನ ನಿರ್ಮಾಣವಾಯಿತು. ಆ ಬಗೆಯ ಕಲ್ಲಿದ್ದಲು ಲಿಗ್ನೈಟ್. ಸಸ್ಯಾಂಗಾರ, ಲಿಗ್ನೈಟ್‌ಗಳಂಥ ಅನೇಕ ಪದರಗಳ ಭಾರವನ್ನು ಹೊತ್ತ, ಭೂಮಿಯ ಆಳದಲ್ಲಿ ಶಾಖಕ್ಕೆ ಸಿಲುಕಿದ ಪದರಗಳು ಇನ್ನಷ್ಟು ಗಟ್ಟಿಯಾದ ಕಲ್ಲಿದ್ದಲಿನ ಪದರಗಳಾದುವು. ಇವು ಬಿಟುಮಿನಸ್ ಕಲ್ಲಿದ್ದಲು. ಕಲ್ಲಿದ್ದಲುಗಳ ಪೈಕಿ ಅತ್ಯಂತ ಗಡುಸಾದ ಆಂಥ್ರಸೈಟ್ ಪದರಗಳ ಮೇಲೆ ಬಹಳ ಎತ್ತರದವರೆಗಿನ ಭೂಮಿ, ಬೆಟ್ಟ ಪರ್ವತಗಳು ಬೆಳೆದು, ಪದರಗಳು ಶಾಖಕ್ಕೆ ಕರಗುತ್ತವೆ. ಆಗ ತೇವ ಅನಿಲ ಯಾವುವೂ ಹೊರಕ್ಕೆ ನುಸುಳಲಾಗದೆ, ಸಸ್ಯಾಂಗಾರ, ಲಿಗ್ನೈಟ್, ಬಿಟುಮಿನಸ್ ಯಾವುದಾದರೂ ಬಗೆಯ ಕಲ್ಲಿದ್ದಲು ನಿರ್ಮಾಣವಾಗುತ್ತದೆ.

ಬೈಬಲ್ಲಿನಲ್ಲಿ ಕಲ್ಲಿದ್ದಲಿನ ಪ್ರಸ್ತಾಪ ಬರುತ್ತದೆ. ಕ್ರಿ. ಪೂ. ನಾಲ್ಕನೆಯ ಶತಮಾನದಲ್ಲಿ ಗ್ರೀಕರು ಕಲ್ಲಿದ್ದಲನ್ನು ಬಳಸುತ್ತಿದ್ದರು. ಬ್ರಿಟನಿನಲ್ಲಿ 852ರಲ್ಲಿ ಕಲ್ಲಿದ್ದಲಿನ ಗಣಿಯ ಕೆಲಸ ಪ್ರಾರಂಭವಾಯಿತು. ಅಟ್ಲಾಂಟಿಕ್ ತೀರ ಪ್ರದೇಶಗಳಲ್ಲಿ ಕಲ್ಲಿದ್ದಲಿನ ಚೂರುಗಳಿಗೆ ಮೆರಗು ಕೊಟ್ಟು ಆಭರಣಗಳಿಗಾಗಿ ಬಳಸುತ್ತಿದ್ದರು. ಪುಡಿಮಾಡಿದ ಕಲ್ಲಿದ್ದಲು ಕಪ್ಪುಬಣ್ಣದ ತಯಾರಿಕೆಗೆ ಒದಗಿ ಬರುತ್ತಿತ್ತು. 1275ರಲ್ಲಿ ಚೀನದಲ್ಲಿ ತಾನು ಕಂಡ ಕಲ್ಲಿದ್ದಲನ್ನು ವಿಶ್ವವಿಖ್ಯಾತ ಪ್ರವಾಸಿ ಮಾರ್ಕೊ ಪೋಲೋ 'ಉರಿಯುವ ಕಲ್ಲು' ಎಂದು ಪ್ರಸ್ತಾಪಿಸಿದ್ದಾನೆ.

ಮೊದಲ ದಿನಗಳಲ್ಲಿ ಗಣಿ ವಿಜ್ಞಾನ ಪ್ರಗತಿ ಹೊಂದಲು ಕಲ್ಲಿದ್ದಲು ಬಹುಮಟ್ಟಿಗೆ ಕಾರಣ. 1784ರಲ್ಲಿ ಹಬೆಯ ಯಂತ್ರವನ್ನು ಕಂಡುಹಿಡಿಯುವವರೆಗೆ, ಕಲ್ಲಿದ್ದಲನ್ನು ಭೂಮಿಯಿಂದ ಮೇಲಕ್ಕೆ ಸಾಗಿಸಲು ಮನುಷ್ಯರೇ ಶ್ರಮ ಪಡಬೇಕಾಗಿತ್ತು. ಅನಂತರ ಹಲವು ಯಂತ್ರಗಳ ಬಳಕೆ ಸಾಧ್ಯವಾಯಿತು. ಅನೇಕ ವರ್ಷಗಳ ಬಳಿಕ ಕಲ್ಲಿದ್ದಲಿನ ಪದರಗಳನ್ನು ಕತ್ತರಿಸುವ ಯಂತ್ರಗಳು ತಯಾರಾದ ಮೇಲೆ ಒಂದೇ ಸಮನೆ ಅಗೆದು ಆಯ್ದುಕೊಳ್ಳುವ ಶ್ರಮ ಕಡಿಮೆಯಾಯಿತು.

ಕಲ್ಲಿದ್ದಲು ಪ್ರಪಂಚದ ಪ್ರತಿಯೊಂದು ಪ್ರದೇಶದಲ್ಲಿಯೂ ಸಿಗುತ್ತದೆ. ಪ್ರಪಂಚದ ಕಲ್ಲಿದ್ದಲಿನ ಸಂಗ್ರಹದ ಅರ್ಧ ಭಾಗ ಏಷ್ಯದಲ್ಲಿದೆ. ಭಾರತದಲ್ಲಿ ಹಲವು ಕಡೆ ಕಲ್ಲಿದ್ದಲು ದೊರೆಯುತ್ತದೆ. ಪಶ್ಚಿಮ ಬಂಗಾಳ, ಬಿಹಾರ್, ಒರಿಸ್ಸಾ, ಮಧ್ಯಪ್ರದೇಶ, ಕೃಷ್ಣಾನದಿಯ ದಕ್ಷಿಣ ಪ್ರದೇಶಗಳಲ್ಲಿ ಕಲ್ಲಿದ್ದಲಿನ ಗಣಿಗಳಿವೆ. ಜಾರಿಯ ಮತ್ತು ರಾಣಿಗಂಜ್ ಪ್ರದೇಶಗಳಲ್ಲಿರುವ ಕಲ್ಲಿದ್ದಲಿನ ಗಣಿಗಳು ಒಳ್ಳೆಯ ದರ್ಜೆಯ ಕಲ್ಲಿದ್ದಲನ್ನು ಒದಗಿಸುತ್ತವೆ. ಭಾರತದಲ್ಲಿ ಲಿಗ್ನೈಟ್ ಮತ್ತು ಬಿಟುಮಿನಸ್ ಈ ಎರಡು ಬಗೆಯ ಕಲ್ಲಿದ್ದಲು ಮಾತ್ರ ದೊರೆಯುತ್ತವೆ. ಅಮೆರಿಕ ಸಂಯುಕ್ತ ಸಂಸ್ಥಾನದಲ್ಲಿ ಪ್ರಪಂಚದ ಕಲ್ಲಿದ್ದಲಿನ ಮೂರರಲ್ಲಿ ಒಂದು ಭಾಗಕ್ಕಿಂತ ಹೆಚ್ಚಿಗೆ ಶೇಖರವಾಗಿದೆ. ಆ ಪ್ರದೇಶದ ಕೆಲವು ಕಲ್ಲಿದ್ದಲಿನ ಪದರಗಳು ನೂರಾರು ಕಿಲೊಮೀಟರು ಹರಡಿಕೊಂಡಿವೆ. ಯೂರೋಪಿನ ಜರ್ಮನಿ ಮತ್ತು ಇಂಗ್ಲೆಂಡುಗಳಲ್ಲಿ ಒಳ್ಳೆಯ ಕಲ್ಲಿದ್ದಲಿನ ಸಂಗ್ರಹಗಳಿವೆ. ಆಸ್ಟ್ರೇಲಿಯ, ಜಪಾನುಗಳಲ್ಲಿ ವಿಪುಲವಾಗಿ ಕಲ್ಲಿದ್ದಲನ್ನು ಒದಗಿಸುವ ಗಣಿಗಳಿವೆ.

ಉಕ್ಕಿನ ಕೈಗಾರಿಕೆಯಲ್ಲಿ ಕಲ್ಲಿದ್ದಲಿನ ಬಳಕೆ ಹೆಚ್ಚು. ಕಲ್ಲಿದ್ದಲಿನಿಂದ ತಯಾರಿಸಲಾಗುವ ಕೋಕ್, ಉಕ್ಕಿನ ಕುಲುಮೆಗಳಲ್ಲಿ ಉರಿಸಲು ತಕ್ಕುದಾಗಿದೆ. ಬಿಟುಮಿನಸ್ ಕಲ್ಲಿದ್ದಲನ್ನು ಗಾಳಿಗೆ ಬಿಡದೆ ಸುಟ್ಟಾಗ ಬಹು ಪಾಲು ಇಂಗಾಲವನ್ನೊಳಗೊಂಡ ಗಡುಸಾದ ಕೋಕ್ ನಿರ್ಮಾಣವಾಗುತ್ತದೆ. ಅಮೋನಿಯ, ಟಾರೆಣ್ಣೆ, ಭಾರರಹಿತ ತೈಲಗಳು ಮುಂತಾದುವು ಉಪ ಉತ್ಪಾದನೆಗಳಾಗಿ ಹೊರಬೀಳುತ್ತವೆ. ಈ ಉಪ ಉತ್ಪಾದನೆಗಳು ಪ್ರಶಸ್ತವಾದ ರಾಸಾಯನಿಕ ವಸ್ತುಗಳನ್ನು ಒಳಗೊಂಡಿರುತ್ತವೆ. ಬಣ್ಣ, ಔಷಧಿ, ಸ್ಫೋಟಕ, ಅಂಟು, ಗೊಬ್ಬರ, ಪ್ಲಾಸ್ಟಿಕ್, ಸುಗಂಧವಸ್ತು ಮುಂತಾದುವನ್ನು ತಯಾರಿಸಲು ಈ ರಾಸಾಯನಿಕ ಉಪ ಉತ್ಪಾದನೆಗಳು ಉಪಯೋಗಕ್ಕೆ ಬರುತ್ತವೆ.

ಕಲ್ಲಿದ್ದಲಿನ ಬದಲು ಕಲ್ಲೆಣ್ಣೆ, ಗ್ಯಾಸ್ ಮುಂತಾದುವುಗಳು ಉಷ್ಣತೆಗಾಗಿ ಇದೀಗ ಉಪಯೋಗವಾಗುತ್ತಿವೆ. ಆದರೂ ಕಲ್ಲಿದ್ದಲಿನ ಉಪಯೋಗ ಇದ್ದೇ ಇದೆ. ಭಾರತದಲ್ಲಿ ರೈಲ್ವೆಗಳಿಗೆ ಬಹು ಮಟ್ಟಿಗೆ ಕಲ್ಲಿದ್ದಲೇ ಇಂಧನ. ಭೂಮಿಯೊಳಗೆ ಕಲ್ಲಿದ್ದಲಿನ ಸಂಗ್ರಹ ಸಾಕಷ್ಟಿದೆ.

## ಕವಣೆ

ಛತ್ತದ ಗದ್ದೆ. ತೆನೆಯ ಭಾರದಿಂದ ಸಸಿಗಳು ತೊಯ್ದಾಡುತ್ತಿವೆ. ಕಾಳನ್ನು ಕುಕ್ಕಿ ತಿನ್ನಲು ಗುಬ್ಬಿಗಳು ಗುಂಪು ಗುಂಪಾಗಿ ಎರಗಿವೆ. 'ಓಯ್'–ದೂರದ ದಿಬ್ಬದಿಂದ ಕೂಗು. ಹೊಲಕಾಯುತ್ತಿರುವವಳು ಗರಗರನೆ ಕೈಯಲ್ಲಿನ ದಾರವನ್ನು ತಿರುಗಿಸಿ, ಕಲ್ಲನ್ನು ಬೀರುತ್ತಾಳೆ; ಎಲ್ಲ ಗುಬ್ಬಿಗಳೂ ಭರ್ರನೆ ಹಾರಿಹೋಗುತ್ತವೆ.

ಇದು ಹಳ್ಳಿಗಳಲ್ಲಿ ಕಾಣಬಹುದಾದ ಚಿತ್ರ.

ತಮ್ಮ ಹೊಲ, ತೋಟಗಳನ್ನು ಪಕ್ಷಿಗಳಿಂದ ರಕ್ಷಿಸಲು ಹಳ್ಳಿಯ ಜನರಿಗೆ ಕವಣೆಯೇ ಮುಖ್ಯ ಅಸ್ತ್ರ.

ಕವಣೆ ಬೀಸಲು, ದಾರ ಕಲ್ಲು ಇಷ್ಟೇ ಸಾಕು. ಹಗ್ಗದ ನಡುವಿನಲ್ಲಿ ತೊಗಲಿನ ಪಟ್ಟಿ ಇದ್ದರೆ ಚೆನ್ನು. ಹಗ್ಗವನ್ನು ಮಡಚಿ, ನಡುವಿನಲ್ಲಿ ಕಲ್ಲನ್ನಿಟ್ಟು, ಅದರ ಎರಡು ಕೊನೆಗಳನ್ನು ಕೈಯಲ್ಲಿ ಹಿಡಿದು, ನಿಧಾನವಾಗಿ ತಿರುಗಿಸಲು ಆರಂಭಿಸಬೇಕು. ಅನಂತರ ವೇಗವನ್ನು ಹೆಚ್ಚಿಸಿ, ಬಹಳ ತೀವ್ರವಾದಾಗ ಹಗ್ಗವನ್ನು ಸಡಿಲಿಸಿ ಕಲ್ಲು ಕಳಚಿಕೊಳ್ಳುವಂತೆ ಮಾಡಬೇಕು. ಅದು ಎಸೆತದ ಬಲವಿರುವವರೆಗೆ ಹಾರಿಹೋಗಿ ಬೀಳುತ್ತದೆ. ಇದಕ್ಕೆ ಗುರಿ ಮುಖ್ಯ. ಆ ದೂರಕ್ಕೆ ಸರಿಯಾಗಿ ಎಷ್ಟು ಜೋರಾಗಿ ತಿರುಗಿಸಬೇಕು, ಹೇಗೆ ಎಸೆಯಬೇಕು ಎಂಬುದರ ಅರಿವು ಅಗತ್ಯ.

ಕವಲೊಡೆದ ಒಂದು ಸಣ್ಣ ಮರದ ಕೋಲಿಗೆ ರಬ್ಬರ್ ಪಟ್ಟಿಯೊಂದನ್ನು ಬಿಗಿದು ಪಟ್ಟಿಯ ಮಧ್ಯದಲ್ಲಿ ಕಲ್ಲನ್ನಿಟ್ಟು ಎಳೆದು ಗುರಿಯಿಡುವುದಕ್ಕೂ ಕವಣೆಯೆನ್ನುತ್ತಾರೆ. ಪುರಾತನ ಮಾನವರು ಎದುರುಬದುರು ನಿಂತು ಯುದ್ಧ ಮಾಡುವುದನ್ನು ತಪ್ಪಿಸಲು ಕವಣೆಕಲ್ಲನ್ನು ಮೊರೆಹೊಕ್ಕರು.



ಆದರೂ ಇವರಲ್ಲಿ ಗುರಿ ತಪ್ಪದೆ ಹೊಡೆಯುವುದು ಬಹಳ ಕಷ್ಟವಾಗಿದ್ದಿತು. ಇದಕ್ಕಾಗಿ ಸಣ್ಣ ಸಣ್ಣ ಕವಣೆಗಳನ್ನು ಮಾಡಿಕೊಂಡರು. ಇದೇ ಮುಂದು ವರಿದು ಬಿಲ್ಲು ಬಾಣ ಹುಟ್ಟಿಕೊಂಡುವೆಂದು ಹೇಳುತ್ತಾರೆ. ಹಿಂದಿನ ಕಾಲದ ಯುದ್ಧಗಳಲ್ಲಿ ಕವಣೆ ಕಲ್ಲನ್ನು ಚರ್ಮದ ಪಟ್ಟಿ ಅಥವಾ ಬಟ್ಟೆಯಲ್ಲಿಟ್ಟು ಬೀಸಿ ತಿರುಗಿಸಿ ಒಗೆಯುತ್ತಿದ್ದರು. ಯುದ್ಧ ಕಾಲದಲ್ಲಿ ಒಬ್ಬನೇ ಮನುಷ್ಯ ಉಪಯೋಗಿಸಬಹುದಾದ ಸಣ್ಣ ಕವಣೆಗಳಿಂದ ಹಿಡಿದು, ಭಾರದ ಕಲ್ಲುಗಳನ್ನು ದೂರ ಒಗೆಯುವ ಕವಣೆಗಳೂ ಇರುತ್ತಿದ್ದುವು. ಸಣ್ಣ ಸಣ್ಣ ಬಾಣಗಳನ್ನು ಎಸೆಯುವುದಕ್ಕೂ ಕವಣೆಗಳನ್ನು ಬಳಸುತ್ತಿದ್ದರಂತೆ. ಹಡಗುಗಳನ್ನು ಸಹ ಇದರಿಂದ ಮುಳುಗಿಸುತ್ತಿದ್ದರಂತೆ.

ಕವಣೆ ಬಲು ಸರಳವಾದ ಆಯುಧ. ಆದರೆ ಇದರ ಹಿಂದಿನ ಉದ್ದೇಶ ತತ್ತ್ವ ಎರಡೂ, ಇಂದಿನ ಜಗತ್ತಿನಲ್ಲಿಯೂ ಪ್ರಭಾವಯುತವಾಗಿವೆ. ತಾನು ಶತ್ರುವಿನ ಸಮೀಪಕ್ಕೆ ಹೋಗದೆ ಘಾಸಿ ಮಾಡುವುದು ಇದರ ಉದ್ದೇಶ. ಒಂದು ಅಸ್ತ್ರಕ್ಕೆ ಚಲಿಸುವ ಶಕ್ತಿಯನ್ನು ಕೊಟ್ಟು ಗುರಿಯ ಕಡೆ ಸಾಗುವಂತೆ ಮಾಡುವುದು ಇದರ ತತ್ತ್ವ. ಮೊದಲನೆಯ ಮಹಾ ಯುದ್ಧದಲ್ಲಿ ಕೂಡಾ ಬಾಂಬುಗಳನ್ನು ಎಸೆಯಲು ಸುಧಾರಿತ ಕವಣೆ ಯಂತ್ರಗಳನ್ನು ಉಪಯೋಗಿಸಲಾಯಿತು.

ರಕ್ಷಣೆಗೆ ಹಾಗೂ ದಾಳಿಗೆ ಮನುಷ್ಯ ನಿರ್ಮಿಸಿದ ಆರಂಭದ ಅಸ್ತ್ರಗಳಲ್ಲಿ ಒಂದು—ಕವಣೆ.

## ಕಾಂಗೊ

'ಕಾಂಗೊ ಗಣರಾಜ್ಯ' ಎಂದರೆ ಎರಡು ದೇಶಗಳಿಗೆ ಅನ್ವಯವಾಗುತ್ತದೆ; ಹೇಗೆ ?

1960ರಲ್ಲಿ ಆಫ್ರಿಕದ ವಸಾಹತುಗಳಿಗೆ ಸ್ವಾತಂತ್ರ್ಯ ಬಂದಾಗ ಹಿಂದಿನ ಫ್ರೆಂಚ್ ಮಧ್ಯಕಾಂಗೊ ಮತ್ತು ಬೆಲ್ಜಿಯನ್ ಕಾಂಗೊ ಎರಡೂ 'ಕಾಂಗೊ ಗಣರಾಜ್ಯ' ಎಂಬ ಹೆಸರು ತಳೆದುವು. ಆದ್ದರಿಂದ ಇವುಗಳ ಹೆಸರನ್ನು ಬರೆಯುವಾಗ, ರಾಜಧಾನಿಯ ಹೆಸರನ್ನು ಸೇರಿಸಿ ಕಾಂಗೊ ಗಣರಾಜ್ಯ (ಬ್ರಾಜಾವಿಲ್). ಕಾಂಗೊ ಗಣರಾಜ್ಯ (ಕಿನ್‌ಷಾಸಾ) ಎಂದು ಬರೆಯುವುದು ವಾಡಿಕೆ.

'ಗುಲಾಮರ ಗಣಿ' ಎಂದು ಒಂದು ಕಾಲದಲ್ಲಿ ಹೆಸರುವಾಸಿಯಾಗಿದ್ದ ಕಾಂಗೊ ಮಧ್ಯ ಆಫ್ರಿಕದಲ್ಲಿದೆ.

ಬ್ರಾಜಾವಿಲ್ ಕಾಂಗೊದಲ್ಲಿ ಭೂಮಧ್ಯರೇಖೆ ಹಾದು ಹೋಗುತ್ತದೆ. ನಾಡಿನ ಹೆಚ್ಚು ಭಾಗ ಉಷ್ಣವಲಯದ ಕಾಡಿನಿಂದ ಆವೃತವಾಗಿದೆ. ಸೆಕೆ ಮತ್ತು ಮಳೆ ಹೆಚ್ಚು. ಕಾಂಗೊ ಮತ್ತು ಉಬಾಂಗಿ ನದಿಗಳು ಕೆಲವು ಸ್ಥಳಗಳಲ್ಲಿ ರಭಸವಾಗಿ ಹರಿಯುವುದರಿಂದ ವಿದ್ಯುದುತ್ಪಾದನೆಗೆ ಅನುಕೂಲವಾಗಿದೆ. ಮುಸುಕಿನ ಜೋಳ (ಗೋವಿನ ಜೋಳ), ಕಡಲೆಕಾಯಿ (ನೆಲಗಡಲೆ ಕಾಳು), ಕಾಫಿ, ರಬ್ಬರ್, ಹೊಗೆ ಸೊಪ್ಪು, ಕಬ್ಬು ಮತ್ತು ಭತ್ತ ಬೆಳೆಯುತ್ತವೆ. ಚಿನ್ನ, ಸೀಸ, ಕಬ್ಬಿಣ, ತಾಮ್ರ, ಪೊಟಾಸಿಯಂ ದೊರಕುತ್ತವೆ. ಸಿಗರೇಟು, ಸಾಬೂನು, ಬಟ್ಟೆ, ತಾಳೆಯೆಣ್ಣೆ, ಪ್ಲೈವುಡ್, ಕುಶಲ ಕೈಗಾರಿಕೆಗಳು ಮೊದಲಾದ ಉದ್ಯಮಗಳಿವೆ. ಇಲ್ಲಿನ ನಿವಾಸಿಗಳು ನೀಗ್ರೊಗಳು. ಆಡಳಿತ ಭಾಷೆ ಫ್ರೆಂಚ್. ಈ ದೇಶದಲ್ಲಿರುವುದು ಒಂದೇ ಒಂದು ರೈಲು ಮಾರ್ಗ, ಇದರ ಉದ್ದ 515 ಕಿ.ಮೀ. ಬ್ರಾಜಾವಿಲ್‌ನಿಂದ ಪಾಯಿಂಟ್ ನಾಯರ್‌ಗೆ. ಕ್ರೈಸ್ತ ಧರ್ಮಾವಲಂಬಿಗಳು ಬಹಳ. ಆಧುನಿಕ ನಗರ ಬ್ರಾಜಾವಿಲ್ ರಾಜಧಾನಿ.

ಕಿನ್‌ಷಾಸಾ ಕಾಂಗೊದಲ್ಲಿರುವುದು ಉಷ್ಣವಲಯದ ಹವಾಗುಣ. ಬಹಳ ಭಾಗ ಕಾಡು. ಉಳಿದೆಡೆ ಹುಲ್ಲುಗಾವಲು ಪ್ರದೇಶ. ಕಟಾಂಗ ಎತ್ತರ ಪ್ರದೇಶ. ಉಷ್ಣಾಂಶ ಹೆಚ್ಚಾಗಿರುತ್ತಲ್ಲದೆ ಮಳೆ ಎರಡು ಸಲ ಬೀಳುತ್ತದೆ. ಕಾಂಗೊವನ್ನು ನದಿಯ ಮುಖಜಭೂಮಿ ಎನ್ನಬಹುದು. ತಾಮ್ರ, ವಜ್ರ, ಕಲ್ಲಿದ್ದಲು, ಮ್ಯಾಂಗನೀಸ್, ಚಿನ್ನ, ಕೋಬಾಲ್ಟ್‌ನಂಥ ಖನಿಜಗಳಿವೆ. ಸಿಗರೇಟು, ಬಟ್ಟೆ, ಪಾದರಕ್ಷೆ, ಲೋಹಗಳು, ರಾಸಾಯನಿಕಗಳು ತಯಾರಾಗುತ್ತವೆ. ಕಾಂಗೊದಲ್ಲಿ ಬಹುಸಂಖ್ಯಾತರು ಬಂಟು ಜನ. ದನ, ಕುರಿ, ಆಡು, ಹಂದಿಗಳನ್ನು ಸಾಕುತ್ತಾರೆ. ಫ್ರೆಂಚ್ ಆಡಳಿತ ಭಾಷೆ. ಇತರ ದೇಶೀ ಭಾಷೆಗಳೂ ಬಳಕೆಯಲ್ಲಿವೆ. ರಾಜಧಾನಿ ಕಿನ್‌ಷಾಸಾ (ಹಿಂದಿನ ಹೆಸರು ಲಿಯೊಪಾಲ್ಡ್‌ವಿಲ್) ನೂತನ ವಿನ್ಯಾಸದ ನಗರ. ಮಟಾಡಿ, ಬೋಮಾ ಮುಖ್ಯ ಬಂದರುಗಳು.

ಕಾಂಗೊ (ಬ್ರಾಜಾವಿಲ್)

ಖಂಡ : ಮಧ್ಯ ಆಫ್ರಿಕ
ಅಕ್ಷಾಂಶ : 5° ದ ದಿಂದ 4° ಉ
ರೇಖಾಂಶ : 5° ಪೂ ದಿಂದ 20° ಪೂ
ವಿಸ್ತೀರ್ಣ : 3,60,010 ಚ. ಕಿ. ಮೀ.
ಜನಸಂಖ್ಯೆ : ಸುಮಾರು 8,65,000
ರಾಜಧಾನಿ : ಬ್ರಾಜಾವಿಲ್
ಭಾಷೆ : ಫ್ರೆಂಚ್
ಸರಕಾರ : ಗಣರಾಜ್ಯ
ಬಾವುಟ : ಎಡ ಮೇಲ್ಭಾಗ ಹಸಿರು, ಕೆಳಭಾಗ ಕೆಂಪು, ಕರ್ಣ ರೇಖೆ ಹಳದಿ ಬಣ್ಣ

ಕಾಂಗೊ (ಕಿನ್‌ಷಾಸಾ)

| | |
|---|---|
| ಖಂಡ | : ಮಧ್ಯ ಆಫ್ರಿಕ |
| ಅಕ್ಷಾಂಶ | : 13° ದ ದಿಂದ 5° ಉ |
| ರೇಖಾಂಶ | : 12° ಪೂ ದಿಂದ 32° ಪೂ |
| ವಿಸ್ತೀರ್ಣ | : 23,44,935 ಚ. ಕಿ. ಮೀ. |
| ಜನಸಂಖ್ಯೆ | : ಸುಮಾರು 1,48,00,000 |
| ರಾಜಧಾನಿ | : ಕಿನ್‌ಷಾಸಾ |
| ಭಾಷೆ | : ಫ್ರೆಂಚ್ |
| ಸರಕಾರ | : ಗಣರಾಜ್ಯ |
| ಬಾವುಟ | : ನೀಲಿ, ಕೆಂಪು ಕರ್ಣರೇಖೆಗೆ ಹಳದಿ ಅಂಚು, ಎಡ ಮೇಲ್ಭಾಗದಲ್ಲಿ ಹಳದಿ ನಕ್ಷತ್ರ |

ಬ್ರಾಜಾವಿಲ್ ಕಾಂಗೊವನ್ನು ಫ್ರೆಂಚರು 1870ರಲ್ಲಿ ಶೋಧಿಸಿದರು. ಫ್ರೆಂಚರ ಅಧೀನದಲ್ಲಿದ್ದು ಕಾಂಗೊ ಮುಂದೆ ಸ್ವತಂತ್ರ ಗಣರಾಜ್ಯವಾಯಿತು. ಕಿನ್‌ಷಾಸಾ ಕಾಂಗೊದ ಅನ್ವೇಷಣೆಯಾದದ್ದು ಬೆಲ್ಜಿಯನರಿಂದ. 1885ರಿಂದ ಬೆಲ್ಜಿಯಮ್ ಈ ದೇಶವನ್ನು ಆಳತೊಡಗಿತು. 1884–85ರಲ್ಲಿ ಬರ್ಲಿನಿನಲ್ಲಿ ನಡೆದ ಹಲವು ರಾಷ್ಟ್ರಗಳ ಸಮ್ಮೇಳನ ಬೆಲ್ಜಿಯನರ ಅರಸ ಲಿಯೊಪಾಲ್ಡ್ ಸ್ವತಃ ಕಾಂಗೋವನ್ನು ಆಳಬೇಕೆಂದು ತೀರ್ಮಾನಿಸಿತು. ಆದರೆ ಅವನ ಆಡಳಿತ ಜನರಿಗೆ ಬೇಸರ ತಂದು 1908ರಲ್ಲಿ ಬೆಲ್ಜಿಯನ್ ಸರಕಾರ ಆಡಳಿತವನ್ನು ವಹಿಸಿಕೊಂಡಿತು. ರಾಜಧಾನಿಗೆ ಲಿಯೊಪಾಲ್ಡ್‌ವಿಲ್ ಹೆಸರೇನೋ ಉಳಿಯಿತು. 1960ರಲ್ಲಿ ಈ ಪ್ರದೇಶಕ್ಕೆ ಬೆಲ್ಜಿಯಂ ಸ್ವಾತಂತ್ರ್ಯವನ್ನು ಕೊಟ್ಟಿತು. ಪಟ್ರೀಸ್ ಲುಮುಂಬಾ ಸ್ವತಂತ್ರ ಕಿನ್‌ಷಾಸಾ ಕಾಂಗೋದ ಪ್ರಥಮ ಮುಖ್ಯಮಂತ್ರಿಯಾಗಿ ಆರಿಸಲ್ಪಟ್ಟ. ಆದರೆ ಕಟಾಂಗ ಪ್ರಾಂತದ ನಾಯಕ ಷೋಂಬೆ ಕೇಂದ್ರ ಸರಕಾರವನ್ನು ವಿರೋಧಿಸಿದ. ದೇಶದಲ್ಲಿ ದಂಗೆಗಳೆದ್ದು, ಕೊನೆಗೆ ವಿಶ್ವಸಂಸ್ಥೆ ಮಧ್ಯೆ ಪ್ರವೇಶಿಸಬೇಕಾಯಿತು. 1961ರಲ್ಲಿ ಲುಮುಂಬಾ ಕೊಲೆ ಮಾಡಲ್ಪಟ್ಟ. (ಇವನ ನೆನಪಿಗಾಗಿ ಸೋವಿಯೆತ್ ಒಕ್ಕೂಟದಲ್ಲಿ ಅಂತರ ರಾಷ್ಟ್ರೀಯ ಸ್ನೇಹ ವಿಶ್ವವಿದ್ಯಾನಿಲಯವನ್ನು ತೆರೆದಿದ್ದಾರೆ.) ಮುಂದೆ ಷೋಂಬೆಯ ಪದಚ್ಯುತಿಯೂ ಆಯಿತು.

## ಕಾಂಬೋಡಿಯ

ಅಂಗ್‌ಕಾರ್ ವಾಟ್ ಅಥವಾ ಅನಂದ ವಟಿ ದೇವಾಲಯು ಕಾಂಬೋಡಿಯದಲ್ಲಿದೆ. ಈ ವಿಷ್ಣುದೇವಾಲಯು ಹನ್ನೆರಡನೆಯ ಶತಮಾನದಲ್ಲಿ ಪೂರ್ಣವಾಯಿತು. ಮುಂದೆ ಇದು ಪಾಳುಬಿದ್ದುಹೋಯಿತು. 1908ರಲ್ಲಿ ಕಾಡನ್ನು ಕಡಿದು. ದೇವಾಲಯದ ಸುತ್ತ ಉದ್ಯಾನವನ್ನು ಬೆಳೆಸಿದರು. ಕ್ಮೇರ್ ಶೈಲಿಯ ಶಿಲ್ಪಕ್ಕೆ ಪ್ರಪಂಚದಲ್ಲಿ ಅತ್ಯುತ್ತಮ ಉದಾಹರಣೆಯನ್ನು ಇಲ್ಲಿನ ಅವಶೇಷಗಳಲ್ಲಿ ಕಾಣಬಹುದು. ಅಂಗ್‌ಕಾರ್ ವಾಟ್‌ನಲ್ಲಿ ಬುದ್ಧ ವಿಗ್ರಹಗಳೂ ಇವೆ. ಅಂಗ್‌ಕಾರ್ ಥಾಮ್‌ನಲ್ಲಿ ನಗುಮುಖದ ಬ್ರಹ್ಮನ ದೇವಾಲಯವಿದೆ. ಅಂಗ್‌ಕಾರ್ ಥಾಮ್ ಹಿಂದಿನ ರಾಜಧಾನಿ. ಇದನ್ನು 860ರಲ್ಲಿ ಮೂರನೆಯ ಜಯವರ್ಮನು ಕಟ್ಟಲು ಪ್ರಾರಂಭಿಸಿದನೆಂದು ತೋರುತ್ತದೆ.

ಚಮ್ಸ್ ಜನಾಂಗದವರು ತಮ್ಮ ಪೂರ್ವಜರು ಭಾರತೀಯರು–ಮಲಯನ್ನರು ಎಂದು ಹೇಳುವರು. ಇವರಲ್ಲಿ ಹಿಂದೂ, ಮುಸಲ್ಮಾನರಿಬ್ಬರೂ ಇದ್ದಾರೆ. ಅವರ ಕೆಲವು ನಂಬಿಕೆಗಳು, ಆಚಾರಗಳು ಭಾರತೀಯರ ಆಚಾರ ವಿಚಾರಗಳಂತೆಯೇ ಇವೆ. ಇವರಲ್ಲಿ ಹುಡುಗಿ ತಾನು ಮೆಚ್ಚಿದವನ ಕೈ ಹಿಡಿಯುತ್ತಾಳೆ. ಮಕ್ಕಳು ತಾಯಿಯ ಮನೆಯ ಹೆಸರನ್ನು ಬಳಸುತ್ತಾರೆ. ಕುಟುಂಬದ ಮೂಲ ಆಸ್ತಿಗೆ ಹೆಂಗಸರು ಹಕ್ಕುದಾರರು. 2,000 ವರ್ಷಗಳಿಗಿಂತ ಮೊದಲೇ ಕಾಂಬೋಡಿಯವನ್ನು ಹಿಂದೂಧರ್ಮ ಮತ್ತು ಸಂಸ್ಕೃತ ಪ್ರವೇಶಿಸಿದ್ದುವು. ಕಾಂಬೋಡಿಯದ ಅವಶೇಷಗಳು ಹಿಂದೆ ಇಲ್ಲಿ ಸಂಪದ್ಭರಿತವಾದ ಹಿಂದೂ ನಾಗರಿಕತೆ ಇದ್ದಿತೆಂಬುದನ್ನು ತೋರಿಸುತ್ತವೆ. ಆದರೆ ಆ ಜನಾಂಗಕ್ಕೂ ನಾಗರಿಕತೆಗೂ ಏನಾಯಿತೆಂದು ತಿಳಿಯದು.

ಕಾಂಬೋಡಿಯ ದೇಶಕ್ಕೆ ಹೆಸರು ಬಂದದ್ದೂ ಸ್ವಾರಸ್ಯವೇ. ಭಾರತ ದೇಶದ ಕಾಂಭೋಜ ವಂಶಜರು ಇಲ್ಲಿನ ಜನ. ಆ ಹೆಸರಿನ ಆಂಗ್ಲ ರೂಪಾಂತರವೇ ಕಾಂಬೋಡಿಯ.

ಕಾಂಬೋಡಿಯ ಮೂರು ದಿಕ್ಕುಗಳಲ್ಲೂ ಬೆಟ್ಟ ಪರ್ವತಗಳಿಂದ ಆವೃತವಾಗಿದೆ. ತಟ್ಟೆಯಾಕಾರದ ಜಲಾನಯನ ಭೂಮಿ ಮಧ್ಯದಲ್ಲಿದೆ.

ಕಾಂಬೋಡಿಯದ ಜೀವನಾಡಿ ಮೀಕಾಂಗ್ ನದಿ. ಮಳೆಗಾಲದಲ್ಲಿ ವಿಪರೀತ ನೀರು ಬಂದು ಒಳ್ಳೆಯ ನೈಸರ್ಗಿಕ ಸರೋವರ ಟಾನ್ಲೆ ಸಾಪ್ ಜಲಾಶಯದಂತಾಗುತ್ತದೆ. ನದಿ ಹರಿದು ಬರುವ ಪಾತ್ರದುದ್ದಕ್ಕೂ ಪ್ರವಾಹದಿಂದಾಗಿ ಫಲವತ್ತಾದ ಮೆಕ್ಕಲು ಮಣ್ಣು ಬಂದು ಬೀಳುತ್ತದೆ. ಬೇಸಿಗೆಯಲ್ಲಿ ನದಿಯ ನೀರು ಕಡಮೆ ಆದಾಗ ಸರೋವರದ ನೀರನ್ನು ಉಪಯೋಗಿಸುತ್ತಾರೆ.

ಕಾಂಬೋಡಿಯದಲ್ಲಿ ಉಷ್ಣವಲಯದ ಹವಾಗುಣವಿದೆ. ಈಶಾನ್ಯ ಮಾರುತ ಅಕ್ಟೋಬರ್ ಮಧ್ಯಭಾಗದಿಂದ ಏಪ್ರಿಲ್ ಮಧ್ಯದವರೆಗೆ ಇರುತ್ತದೆ. ಆಗ ಒಣ ಸೆಕೆ. ಉಷ್ಣಾಂಶ 77° ಫಾ. ಗಳಷ್ಟು. ಮಧ್ಯ ಏಪ್ರಿಲ್‌ನಿಂದ ಅಕ್ಟೋಬರ್‌ವರೆಗೆ ಮಳೆ ಒಂದೇ ಸಮ ಹುಯ್ಯುತ್ತಿರುತ್ತದೆ.

ಕಬ್ಬಿಣದ ಅದಿರು, ಸುಣ್ಣಕಲ್ಲು, ಉಪ್ಪು, ಸ್ವಲ್ಪ ಮಟ್ಟಿಗೆ ಬೆಲೆ ಬಾಳುವ ಹರಳು ಇತ್ಯಾದಿಗಳು ದೊರೆಯುತ್ತವೆ.

ಭತ್ತ, ರಬ್ಬರ್, ಮುಸುಕಿನ ಜೋಳ, ಕಬ್ಬು, ಮೆಣಸು, ಕಾಪೋಕ್, ಸೋಯಾಅವರೆ ಬೆಳೆಯುತ್ತಾರೆ. ಮೀನು ಹೇರಳವಾಗಿ ದೊರೆಯುತ್ತದೆ.

ಆಹಾರ ಸಂಸ್ಕರಣ, ಮೀನನ್ನು ಡಬ್ಬಕ್ಕೆ ತುಂಬಿಸುವುದು, ಕುಶಲ ಕೈಗಾರಿಕೆ, ಗಣಿಗಳು ಇವು ಕಾಂಬೋಡಿಯದ ಕೈಗಾರಿಕೆಗಳು.

ಕಾಂಬೋಡಿಯದಲ್ಲಿ ಕಾಂಭೋಜ ವಂಶಸ್ಥರಲ್ಲದೆ ವಿಯೆಟ್ನಾಮಿಗಳೂ ಚೀನೀಯರೂ ಇದ್ದಾರೆ. ಪ್ರಮುಖ ಭಾಷೆ ಕ್ಮೇರ್ ; ಫ್ರೆಂಚ್, ಚೀನೀ ಭಾಷೆಗಳನ್ನೂ ಬಳಸುತ್ತಾರೆ. ನೆರೆಹೊರೆಯುಲ್ಲಿ ಒಂದು ಕಡೆ ಫ್ರೆಂಚರು ಇನ್ನೊಂದು ಕಡೆ ಚೀನೀಯರು ಇದ್ದುದು ಈ ಎರಡು ಭಾಷೆಗಳು ಕಾಂಬೋಡಿಯದಲ್ಲಿ ಇರಲು ಕಾರಣ. ಇಲ್ಲಿ ಬೌದ್ಧ ಮತಾವಲಂಬಿಗಳೇ ಬಹಳ. ಇಸ್ಲಾಂ, ಹಿಂದೂ ಮತಗಳವರೂ ಇದ್ದಾರೆ.

ರಾಜಧಾನಿ ಪ್ನಾಮ್‌ಪೆನ್. ವಿದ್ಯಾಭ್ಯಾಸ, ಸಾರಿಗೆ, ವ್ಯಾಪಾರಗಳ ಕೇಂದ್ರವಾಗಿದೆ. ಬ್ಯಾಟಮ್‌ಬ್ಯಾಂಗ್, ಭತ್ತ ಅಧಿಕವಾಗಿ ಬೆಳೆಯುವ ಪ್ರದೇಶದಲ್ಲಿರುವ ನಗರ. ಇಲ್ಲಿ ಹತ್ತನೆಯ ಶತಮಾನದ ಕ್ಮೇರ್ ಪಟ್ಟಣದ ಅವಶೇಷಗಳಿವೆ. ರಾಷ್ಟ್ರದ ಅತ್ಯುನ್ನತ ಅಧಿಕಾರಿ ರಾಜಕುಮಾರ

ನರೊದಮ್ ಸಿಹಾನೂಕ್‌ರನ್ನು ಅಧಿಕಾರದಿಂದ ತೆಗೆಯುವ ಪ್ರಯತ್ನ 1970ರಲ್ಲಿ ನಡೆಯಿತು. ಇದರಿಂದ ದೇಶ ಅಂತರ್ಯುದ್ಧಕ್ಕೆ ಒಳಗಾಯಿತು.

| | | |
|---|---|---|
| ಖಂಡ | : | ಆಗ್ನೇಯ ಏಷ್ಯ |
| ಅಕ್ಷಾಂಶ | : | 10° ಉ ದಿಂದ 15° ಉ |
| ರೇಖಾಂಶ | : | 102° 31 ಪೂ ದಿಂದ 108° ಪೂ |
| ವಿಸ್ತೀರ್ಣ | : | 1,81,04 ಚ. ಕಿ. ಮೀ. |
| ಜನಸಂಖ್ಯೆ | : | ಸುಮಾರು 57,50,000 |
| ರಾಜಧಾನಿ | : | ಪ್ನಾಮ್‌ಪೆನ್ |
| ಭಾಷೆ | : | ಆಡಳಿತ ಭಾಷೆ—ಕ್‌ಮೇರ್ ; ಫ್ರೆಂಚ್ ಬಳಸುತ್ತಾರೆ |
| ಸರಕಾರ | : | ಗಣರಾಜ್ಯ |
| ಬಾವುಟ | : | ಮಧ್ಯೆ ದೊಡ್ಡ ಕೆಂಪು ಅಡ್ಡಪಟ್ಟೆ, ಅದರ ಮೇಲೆ ಬಿಳಿ ಕೋಟೆ, ಕೆಂಪು ಪಟ್ಟಿಯಮೇಲೆ, ಕೆಳಗೆ ನೀಲಿ ಅಡ್ಡಪಟ್ಟೆ |

## ಕ್ರಾಂತಿ

'ಕ್ರಾಂತಿ' ಎಂದ ಕೂಡಲೇ ಹಲವರಲ್ಲಿ ಭಯಭೀತಿ ಸಹಜವಾಗಿ ಮೂಡುತ್ತದೆ. ಏಕೆಂದರೆ ಅದು ಸೂಚಿಸುವುದು ಭೀಕರ ಹೋರಾಟದ ಚಿತ್ರವನ್ನು ; ಕೊಲೆ, ರಕ್ತಪಾತ ಕಣ್ಣೆದುರು ನಿಂತಂತಾಗುತ್ತದೆ. ಆದರೆ ಎಲ್ಲಾ ಕ್ರಾಂತಿಗಳೂ ಭೀಕರವಾಗಿರುತ್ತವೆ ಎಂದು ಭಾವಿಸುವುದು ತಪ್ಪು.

'ಕ್ರಾಂತಿ' ಪದದ ಸಾಮಾನ್ಯ ಅರ್ಥ 'ಬದಲಾವಣೆ' ಎಂದು. ಕ್ರಮ ಕ್ರಮೇಣ, ಬದಲಾವಣೆಗಳಾಗದೆ ವೇಗವಾಗಿ ಮೂಲಭೂತ ಬದಲಾವಣೆ, ಗಳು ನಡೆದಾಗ ಅವನ್ನು 'ಕ್ರಾಂತಿ' ಎಂದು ಕರೆಯುತ್ತೇವೆ. ಸಾಮಾನ್ಯವಾಗಿ ತಮ್ಮ ಕಾರ್ಯಗಳನ್ನು ಸಾಧಿಸಲು ಒಂದು ಗುಂಪಿನವರು ಒತ್ತಾಯವನ್ನು ತರುವರು ; ಆಗ ಅಸ್ತಿತ್ವದಲ್ಲಿದ್ದುದನ್ನು ಬದಲಿಸುವರು. ಈ ಒತ್ತಾಯದ ಬದಲಾವಣೆಯೇ ಕ್ರಾಂತಿ.

ಒಬ್ಬ ಅರಸನನ್ನು ಪಟ್ಟದಿಂದ ಕೆಳಕ್ಕೆ ತಳ್ಳಲು ಕ್ರಾಂತಿಗಳಾಗಿವೆ. ಸಮಾಜ ದಲ್ಲಿಯ ಕೆಲವು ಪದ್ಧತಿಗಳನ್ನು ಬದಲಿಸಲು ಕ್ರಾಂತಿಗಳಾಗಿವೆ. ಕ್ರಾಂತಿ ಗಳಲ್ಲಿ ಅನೇಕ ರೀತಿಗಳಿವೆ.

ಫ್ರಾನ್ಸಿನ ಅರಸ ಹದಿನಾರನೆಯ ಲೂಯಿಯನ್ನು ಪಟ್ಟದಿಂದ ಹೊರದೂಡಿ ಸಲು ಮಹಾ ಕ್ರಾಂತಿಯಾಯಿತು. ಕೊಲೆ ಸುಲಿಗೆಗಳು ನಡೆದುವು. ರಕ್ತ ಪಾತವಾಯಿತು. ರಾಜಕೀಯ ಕಾರಣಗಳಿಂದ ಆದ ಕ್ರಾಂತಿ ಇದು. ಇಂಥ ರಾಜಕೀಯ ಕ್ರಾಂತಿಗಳು ಬೇರೆ ದೇಶಗಳಲ್ಲಿಯೂ ನಡೆದಿವೆ. 1917ರಲ್ಲಿ ಅಕ್ಟೋಬರ್‌ನಲ್ಲಿ ಸಂಭವಿಸಿದ ರಷ್ಯದ ಕ್ರಾಂತಿಯೂ ಇದೇ ತೆರನಾದದ್ದು. ಆಗ ಕ್ರಾಂತಿಕಾರರ ಗುಂಪು ಜಾರ್ ಅರಸುಮನೆತನವನ್ನು ಆಮೂಲಾಗ್ರ ವಾಗಿ ನಾಶಮಾಡಿತು.

ರಾಜ್ಯದ ಅಧಿಕಾರ ಸೂತ್ರಗಳನ್ನು ದೊರಕಿಸಿಕೊಳ್ಳಲು ಇದ್ದಕ್ಕಿದ್ದಂತೆ ಕೆಲವು ಕ್ರಾಂತಿಗಳೂ ಆಗಿವೆ. 1952ರಲ್ಲಿ ಈಜಿಪ್ಟಿನ ಅರಸ ಫರೂಕ ನನ್ನು ಕೆಳಗಿಳಿಸಲು ಸೈನ್ಯದ ಅಧಿಕಾರಿಗಳು ಒಂದಾದರು. 1958ರಲ್ಲಿ ಪಾಕಿಸ್ತಾನದ ಅಯೂಬ್‌ಖಾನರು ಇಸ್ಕಂದರ್ ಮಿರ್ಜಾರನ್ನು ಪದಚ್ಯುತಿ ಗೊಳಿಸಿ ಅಧ್ಯಕ್ಷರಾದರು. ಇಂಡೋನೇಷ್ಯದಲ್ಲಿ ಸೇನಾನಾಯಕ ಸುಹಾರ್ತೋ, ಅಧ್ಯಕ್ಷರಾಗಿದ್ದ ಸುಕರ್ನೊ ಅವರನ್ನು ಗೃಹಬಂಧನದಲ್ಲಿಟ್ಟರು ಮತ್ತು ರಾಜ್ಯದ ಸೂತ್ರಗಳನ್ನು ಕೂಡಲೇ ವಹಿಸಿಕೊಂಡರು. ಇಂಥ ಬದಲಾವಣೆ ಯಾದದ್ದು ಒಂದೇ ಒಂದು ರಾತ್ರಿಯಲ್ಲಿ. ಘಾನಾದಲ್ಲಿ ಸರ್ವಾಧಿಕಾರಿ ಯಾಗಿದ್ದ ಎನ್‌ಕ್ರೂಮಾರನ್ನು ಅವರು ಬೇರೆ ದೇಶದಲ್ಲಿ ಸಂಚಾರದಲ್ಲಿ ದ್ದಾಗ ಪದಚ್ಯುತಿ ಮಾಡಲಾಯಿತು. ಇದಕ್ಕೆ ಕ್ಷಿಪ್ರಕ್ರಾಂತಿ ಎನ್ನುತ್ತಾರೆ.

1688ರಲ್ಲಿ ಇಂಗ್ಲೆಂಡಿನಲ್ಲಿ ರಕ್ತರಹಿತ ಕ್ರಾಂತಿಯಾಯಿತು. ಅರಸ ಎರಡನೆಯ ಜೇಮ್ಸ್ ಇಂಗ್ಲೆಂಡನ್ನು ಬಿಟ್ಟು ಓಡಿಹೋದ. ಆಗ ಅರಸುಮನೆ ತನದ ವಿಶೇಷ ಅಧಿಕಾರ ನಾಶವಾಯಿತು. ಇಂಗ್ಲೆಂಡಿನ ಸಂಸತ್ತೇ ಸರ್ವ ಶ್ರೇಷ್ಠ ಅಧಿಕಾರ ಪದವನ್ನು ಪಡೆಯಿತು. ಇಂಥ ಅಧಿಕಾರವನ್ನು ಪಡೆಯಲು ಯಾವ ಯುದ್ಧವೂ ಆಗಲಿಲ್ಲ; ರಕ್ತದ ಕಾಲುವೆ ಹರಿಯಲಿಲ್ಲ.

ಭಾರತದ ಬಿಡುಗಡೆಗಾಗಿ ಮಹಾತ್ಮ ಗಾಂಧಿಯವರು ನಡೆಸಿದ ಚಳು ವಳಿಯೂ ಒಂದು ರೀತಿಯ ಕ್ರಾಂತಿಯೇ. ಸತ್ಯ ಮತ್ತು ಅಹಿಂಸೆ ಈ ತತ್ತ್ವ ಗಳಿಂದ ಆಳುವವರ ಹೃದಯ ಪರಿವರ್ತನೆಯನ್ನು ಮಾಡಲು ಅವರು ಯತ್ನಿಸಿದರು. ಇದು ಆಧುನಿಕ ಯುಗದಲ್ಲಿ ಶಾಂತಿಯುತ ಕ್ರಾಂತಿ.

ಹದಿನೆಂಟನೆಯ ಶತಮಾನದಲ್ಲಿ ಇಂಗ್ಲೆಂಡಿನಲ್ಲಿ ಉತ್ಪಾದನಾ ಕ್ರಮಕ್ಕೆ ಸಂಬಂಧಿಸಿದ ಕ್ರಾಂತಿಯಾಯಿತು. ಯಂತ್ರಗಳು ಬಂದುವು. ಇದರ ಫಲವಾಗಿ ವಿವಿಧ ಕಸಬುಗಳಲ್ಲಿ ನಿರತರಾಗಿದ್ದವರು ಕಾರ್ಮಿಕರಾದರು. ಕಾರ್ಮಿಕ ವರ್ಗ ಹುಟ್ಟಿಕೊಂಡಿತು. ಸಮಾಜದ ವ್ಯವಸ್ಥೆಯಲ್ಲಿ ಏರುಪೇರುಗಳಾದುವು. ಈ ಮಹಾಪಲ್ಲಟವನ್ನು ಕೈಗಾರಿಕಾ ಕ್ರಾಂತಿ ಎನ್ನುತ್ತಾರೆ.

ಕ್ರಾಂತಿ ಎಂಥದೇ ಆಗಲಿ, ಇದು ಸಮಾಜದ ರೀತಿ ನೀತಿಗಳ ಮೇಲೆ ಬಹಳ ಪ್ರಭಾವವನ್ನು ಬೀರುತ್ತದೆ. ರಷ್ಯದಲ್ಲಿ ಕ್ರಾಂತಿಗೆ ಹಾಗೂ ಅನಂತರದ ಚಟುವಟಿಕೆಗಳಿಗೆ ಮಾರ್ಕ್ಸನ ಸಿದ್ಧಾಂತಗಳು ಪ್ರೇರಣೆ ನೀಡಿದುವು.

ಭಾರತದಲ್ಲಿ ವ್ಯವಸಾಯ ಕ್ರಮದಲ್ಲಿ ವೇಗವಾದ ಮತ್ತು ವ್ಯಾಪಕವಾದ ಬದಲಾವಣೆಗಳಾಗಿ ಆಹಾರದ ಉತ್ಪತ್ತಿ ಸಮೃದ್ಧಿಯಾಗಬೇಕೆಂಬ ಅರ್ಥದಲ್ಲಿ 'ಹಸಿರು ಕ್ರಾಂತಿ' ಯಾಗಬೇಕು ಎಂದು ಹೇಳುವುದುಂಟು.

ಕ್ರಾಂತಿಗಳು ಆಗಬೇಕಾದರೆ ಸಂಘಟನೆ, ಪ್ರಚಾರ, ತಾಳ್ಮೆ, ಶಕ್ತಿ ಎಲ್ಲವೂ ಬೇಕು. ಕ್ರಾಂತಿಯ ಹಿಂದೆ ವಜ್ರಸಮ ವ್ಯಕ್ತಿತ್ವದ ನಾಯಕರಿರುತ್ತಾರೆ.

**ನೋಡಿ :** ಅಕ್ಟೋಬರ್ ಕ್ರಾಂತಿ ; ಕಲ್ಯಾಣ ಕ್ರಾಂತಿ ; ಕೈಗಾರಿಕಾ ಕ್ರಾಂತಿ ; ಫ್ರಾನ್ಸಿನ ಮಹಾಕ್ರಾಂತಿ.

## ಕಾಮನ್‌ವೆಲ್ತ್

ಮೊದಲನೆಯ ಮಹಾಯುದ್ಧಕ್ಕಿಂತ ಹಿಂದಿನ ಜಗತ್ತಿನ ರಾಜಕೀಯ ಭೂಪಟವನ್ನು ನೋಡಿದರೆ ಸಾಮಾನ್ಯವಾಗಿ ವಿಸ್ಮಯವಾಗುವಷ್ಟು ಭಾಗ ವನ್ನು ಕೆಂಪು ಬಣ್ಣ ತುಂಬಿರುವುದು ಕಾಣುತ್ತದೆ.

ಬ್ರಿಟಿಷ್ ಸಾಮ್ರಾಜ್ಯದ ಪ್ರದೇಶಗಳನ್ನು ಅಚ್ಚ ಕೆಂಪುಬಣ್ಣದಿಂದ ತೋರಿಸುವುದು ರೂಢಿಯಾಗಿತ್ತು ಆಗ.

ಈಗಿನ ರಾಜಕೀಯ ಭೂಪಟವನ್ನು ನೋಡಿದರೆ, ಬಹು ಭಾಗಗಳಿಂದ ಆ ಕೆಂಪು ಮಾಯವಾಗಿರುವುದು ಕಾಣುತ್ತದೆ. ಬ್ರಿಟನ್ ತನ್ನ ಸಾಮ್ರಾಜ್ಯದ ಬಹುಭಾಗಗಳನ್ನು ಕಳೆದುಕೊಂಡಿದೆ ; ಏಷ್ಯ ಮತ್ತು ಆಫ್ರಿಕಗಳಲ್ಲಿ ಹಲವು ರಾಷ್ಟ್ರಗಳು ಸ್ವತಂತ್ರವಾಗಿವೆ.

ಪ್ರಪಂಚದ ಚರಿತ್ರೆಯಲ್ಲಿ ಹಲವಾರು ಸಾಮ್ರಾಜ್ಯಗಳು ತಲೆಯೆತ್ತಿದುವು. ಕಾಲಕಳೆದಂತೆ ಕರಗಿಹೋದುವು. ಒಂದು ಸಾಮ್ರಾಜ್ಯ ಮಾತ್ರ ಸೌಹಾರ್ದಯುತ ದೇಶಗಳ ಕೂಟವಾಗಿ ಮಾರ್ಪಟ್ಟಿತು: ಬ್ರಿಟಿಷ್ ಸಾಮ್ರಾಜ್ಯ ಬ್ರಿಟಿಷ್ ಕಾಮನ್‌ವೆಲ್ತ್ ಆಯಿತು.

ಇಂದು ಇಂಗ್ಲೆಂಡ್, ಕೆನಡ, ಆಸ್ಟ್ರೇಲಿಯ, ನ್ಯೂಜಿಲೆಂಡ್, ಭಾರತ, ಪಾಕಿಸ್ತಾನ, ನೈಜೀರಿಯ, ಸಿಂಗಪುರ ಮುಂತಾದ ಇಪ್ಪತ್ತೇಳು ಸ್ವತಂತ್ರ ರಾಷ್ಟ್ರಗಳು ಕಾಮನ್‌ವೆಲ್ತಿನ ಪೂರ್ಣ ಸದಸ್ಯತ್ವ ಪಡೆದ ರಾಷ್ಟ್ರಗಳು. ಕಾಮನ್‌ವೆಲ್ತ್ ಎಂದರೆ ಸಮಾನ ಕಲ್ಯಾಣ: ಸದಸ್ಯರು ಒಟ್ಟಾಗಿದ್ದು ಪರಸ್ಪರ ಕಲ್ಯಾಣವನ್ನು ಬಯಸುವುದು.

ಭಾರತ ಪ್ರಪಂಚದ ಯಾವ ಶಕ್ತಿಕೂಟಕ್ಕಾಗಲೀ ರಾಷ್ಟ್ರಗಳ ಕೂಟಕ್ಕಾಗಲೀ ಸೇರಿಲ್ಲ. ಆದರೆ ಕಾಮನ್‌ವೆಲ್ತ್ ಕೂಟದ ಸದಸ್ಯ ರಾಷ್ಟ್ರವಾಗಿದೆ.

ಬ್ರಿಟನಿನದು ಸಂವಿಧಾನಬದ್ಧ ರಾಜಪ್ರಭುತ್ವ. ಬ್ರಿಟನಿಗೆ ರಾಣಿ ಇದ್ದಾಳೆ. ಆದರೆ ಕಾಮನ್‌ವೆಲ್ತಿನ ಹಲವು ರಾಷ್ಟ್ರಗಳು–ಭಾರತದಂತೆ–ಗಣರಾಜ್ಯಗಳು. ರಾಜಪ್ರಭುತ್ವವನ್ನು ಒಪ್ಪುವುದಿಲ್ಲ. ಈ ರಾಷ್ಟ್ರಗಳೆಲ್ಲ ಸಹಕಾರದಿಂದ ಒಂದು ವ್ಯವಸ್ಥೆಯನ್ನು ರೂಪಿಸಿಕೊಳ್ಳಲು ಬ್ರಿಟನಿನ ಪ್ರಭುವನ್ನು 'ಸಾಂಕೇತಿಕ ಮುಖ್ಯಸ್ಥರ'ನ್ನಾಗಿ ಸ್ವೀಕರಿಸಿವೆ.

'ಬ್ರಿಟಿಷ್ ಕಾಮನ್‌ವೆಲ್ತ್' ಎಂಬ ಹೆಸರಿದ್ದುದನ್ನು 1949ರಲ್ಲಿ 'ಕಾಮನ್‌ವೆಲ್ತ್' ಎಂದು ಬದಲಾಯಿಸಿದರು. ಬ್ರಿಟಿಷ್ ಸಾಮ್ರಾಜ್ಯದಿಂದ ಸ್ವತಂತ್ರವಾದ ಹೆಚ್ಚಿನ ರಾಷ್ಟ್ರಗಳು ಕಾಮನ್‌ವೆಲ್ತಿನಲ್ಲಿ ಉಳಿದುವು.

ಪ್ರಪಂಚದ ನೈಸರ್ಗಿಕ ಸಂಪತ್ತಿನ ಸಾಕಷ್ಟು ಅಂಶ ಕಾಮನ್‌ವೆಲ್ತ್ ರಾಷ್ಟ್ರಗಳಲ್ಲಿ ಶೇಖರವಾಗಿದೆ. ಜಗತ್ತಿನಲ್ಲಿ ತೆಗೆಯಲಾಗುವ ನಿಕ್ಕಲ್ ಲೋಹದ ಮೂರನೆಯ ಎರಡು ಪಾಲು ಕೆನಡದಲ್ಲಿ ಸಿಗುತ್ತದೆ. ಪ್ರಪಂಚದ ಸೆಣಬಿನ ಮುಕ್ಕಾಲು ಭಾಗ ಭಾರತ ಮತ್ತು ಪಾಕಿಸ್ತಾನಗಳಲ್ಲಿ ಬೆಳೆಯಲಾಗುತ್ತದೆ. ಚಹದ ಮುಕ್ಕಾಲು ಭಾಗ ಭಾರತ ಮತ್ತು ಸಿಂಹಳ ಬೆಳೆಸುತ್ತವೆ. ಆಸ್ಟ್ರೇಲಿಯ ಮತ್ತು ನ್ಯೂಜಿಲೆಂಡ್‌ಗಳು ಪ್ರಪಂಚಕ್ಕೆ ಬೇಕಾಗುವ ಉಣ್ಣೆಯ ಅರ್ಧ ಪಾಲನ್ನು ಒದಗಿಸುತ್ತವೆ. ಭಾರತ ಮತ್ತು ಪಶ್ಚಿಮ ಮಲೇಷ್ಯಗಳಲ್ಲಿಯೇ ವಿಶ್ವದ ರಬ್ಬರಿನ ಉತ್ಪಾದನೆಯ ಅರ್ಧ ಭಾಗ ದೊರೆಯುತ್ತದೆ.

ಸದಸ್ಯ ರಾಷ್ಟ್ರಗಳ ನಡುವೆ ನಡೆಯುವ ವ್ಯಾಪಾರದ ಮೇಲೆ ತೆರಿಗೆ ಸುಂಕಗಳನ್ನು ಪರಸ್ಪರ ಹೊಂದಿಸಲಾಗುತ್ತದೆ. ರಕ್ಷಣೆ, ವಿಜ್ಞಾನ, ಶಿಕ್ಷಣ, ಕೈಗಾರಿಕೆ ಮುಂತಾದ ಕ್ಷೇತ್ರಗಳಲ್ಲಿ ಸಹಕಾರವನ್ನೂ ಸಹಯೋಗವನ್ನೂ ಒದಗಿಸುವುದಕ್ಕೂ ಕೂಟದ ಮುಂದುವರಿದ ರಾಷ್ಟ್ರಗಳು ಸಹಕರಿಸುತ್ತವೆ. ಕೊಲಂಬೊ ಯೋಜನೆ ಮುಂತಾದ ವ್ಯವಸ್ಥೆಗಳಿಂದ ಇಂಗ್ಲೆಂಡ್, ಕೆನಡ, ಆಸ್ಟ್ರೇಲಿಯ ಮುಂತಾದ ಮುಂದುವರಿದ ರಾಷ್ಟ್ರಗಳು ಭಾರತ, ಪಾಕಿಸ್ತಾನ, ಮಲೇಷ್ಯ ಮೊದಲಾದ ರಾಷ್ಟ್ರಗಳ ನೆರವಿಗೆ ಬರುತ್ತವೆ.

ಕಾಮನ್‌ವೆಲ್ತ್ ಸದಸ್ಯರಾಷ್ಟ್ರಗಳ ನಡುವೆ ಇದ್ದ ಪರಸ್ಪರ ಅವಲಂಬನೆ ಕ್ರಮೇಣ ತಪ್ಪುತ್ತಿದ್ದರೂ ಸೌಹಾರ್ದಯುತ ಸಂಪರ್ಕಗಳಿಗೆ ಧಕ್ಕೆಯಾಗಿಲ್ಲ.

ನೋಡಿ : [illegible]

## ಕಾರ್ಮಿಕ ಸಂಘ

ಕಾರಖಾನೆ ಮೊದಲಾದ ದೊಡ್ಡ ದೊಡ್ಡ ಸ್ಥಳಗಳಲ್ಲಿ ಸಾವಿರಾರು ಜನ ಕೆಲಸ ಮಾಡುತ್ತಿರುತ್ತಾರೆ. ಇವರಿಗೆ ಏನಾದರೂ ತೊಂದರೆಗಳಾದರೆ ಅಥವಾ ಕೆಲಸ ಹೆಚ್ಚು ಎನಿಸಿದರೆ, ಸಂಬಳ ಸಾಲದು ಎನಿಸಿದರೆ ಅವರು ನೇರವಾಗಿ ಕಾರಖಾನೆ ಮಾಲೀಕರನ್ನು ಕಾಣಲಾಗುವುದಿಲ್ಲ. ಮಾಲೀಕರೊಡನೆ ಒಂದು ವಿಷಯದ ಬಗೆಗೆ ಸಾವಿರಾರು ಜನ ಮಾತನಾಡುವುದು ವ್ಯಾವಹಾರಿಕವಲ್ಲ. ಹಾಗಾದರೆ ತೊಂದರೆಗೆ ನಿವಾರಣೆ ದೊರಕಿಸುವುದು ಹೇಗೆ? ಆ ಹೊಣೆಯನ್ನು ಕಾರ್ಮಿಕರ ಸಂಘ ಹೊರುತ್ತದೆ. ಅದರ ಮುಖಂಡರು ಮಾಲೀಕರೊಡನೆ ವ್ಯವಹರಿಸುತ್ತಾರೆ.

ಮಾಲೀಕರೊಡನೆ ಮಾತುಕತೆ ನಡೆಸಿ ಸಂಘದ ಸದಸ್ಯರ ಹಿತಕ್ಕಾಗಿ ತಕ್ಕ ಸೌಲಭ್ಯಗಳನ್ನು ಕಲ್ಪಿಸಿಕೊಡುವುದೇ ಕಾರ್ಮಿಕ ಸಂಘದ ಆದ್ಯ ಕರ್ತವ್ಯ. ಕೆಲಸದ ವೇಳೆ, ದುಡಿಮೆಯ ಸ್ಥಿತಿಗತಿ ಇವು ಕಾರ್ಮಿಕರಿಗೆ ಅನುಕೂಲವಾಗಿದ್ದರೆ ಸಂಘ ಮಾಲೀಕರನ್ನು ಬದಲಾವಣೆಗಾಗಿ ಒತ್ತಾಯ ಮಾಡುತ್ತದೆ.

ಈ ಎಲ್ಲ ವಿಷಯಗಳ ಬಗೆಗೆ ಕಾರಖಾನೆಯ ಮಾಲೀಕರು ಕಾರ್ಮಿಕ ಸಂಘದೊಡನೆ ಮೊದಲೇ ಒಂದು ಒಪ್ಪಂದಕ್ಕೆ ಬಂದಿರುತ್ತಾರೆ. ಕಾಲ ಉರುಳಿದಂತೆ ಕಾರಖಾನೆಗೆ ಲಾಭ ಜಾಸ್ತಿ ಬರಲಾರಂಭಿಸಿದರೆ ಕಾರ್ಮಿಕರ ವೇತನವನ್ನು ಹೆಚ್ಚಿಸುವಂತೆ ಮತ್ತು ಹಿಂದಿನ ಒಪ್ಪಂದಗಳಲ್ಲಿ ಬದಲಾವಣೆಗಳನ್ನು ಮಾಡುವಂತೆ ಕಾರ್ಮಿಕ ಸಂಘ ಕೇಳಬಹುದು. ಮಾಲೀಕರ ಮತ್ತು ಸಂಘದವರ ನಡುವಣ ಮಾತುಕತೆ ಫಲಕಾರಿಯಾಗದಿದ್ದಲ್ಲಿ ಕಾರ್ಮಿಕರ ಸಂಘ ಮುಷ್ಕರಕ್ಕೆ ಕರೆ ನೀಡುತ್ತದೆ. ಇಲ್ಲದಿದ್ದರೆ ಮಾಲೀಕರಿಗಾಗಲೀ, ಕಾರ್ಮಿಕರಿಗಾಗಲೀ ಸಂಬಂಧವಿಲ್ಲದ ಮೂರನೆಯ ವ್ಯಕ್ತಿಯೊಬ್ಬನನ್ನು ತೀರ್ಮಾನ ಕೈಗೊಳ್ಳುವಂತೆ ನಿಯಮಿಸಬಹುದು. ಆ ವ್ಯಕ್ತಿಯ ತೀರ್ಮಾನಕ್ಕೆ ಉಭಯತ್ರರೂ ತಲೆಬಾಗಬೇಕು. ಇಂಥ ತೀರ್ಮಾನವನ್ನು ಒಬ್ಬ ವ್ಯಕ್ತಿ ನೀಡಬಹುದು. ಇಲ್ಲವೆ ಕೈಗಾರಿಕಾ ಏತೀರ್ಪು ಮಂಡಲ ನೀಡಬಹುದು.

ಕಾರ್ಮಿಕ ಸಂಘ ಪ್ರಜಾಪ್ರಭುತ್ವಕ್ಕೆ ಅನುಸಾರವಾಗಿ ಕೆಲಸ ಮಾಡುತ್ತದೆ. ಚುನಾಯಿತ ಅಧಿಕಾರಿಗಳು ಆಡಳಿತ ನಡೆಸುತ್ತಾರೆ.

ಕಾರ್ಮಿಕ ಸಂಘಕ್ಕೆ ಧನಸಹಾಯ ಅದರ ಸದಸ್ಯರು ಕೊಡುವ ಹಣದಿಂದ ದೊರೆಯುತ್ತದೆ. ಈ ಹಣದಿಂದ ಕಾರ್ಮಿಕ ಸಂಘದ ಕಾರ್ಯಕಲಾಪಗಳು ಜರಗಿ ಸದಸ್ಯರಿಗೆ ಅನುಕೂಲತೆಗಳು ಲಭಿಸುತ್ತವೆ. ಮುಷ್ಕರಕ್ಕೆ ಕರೆ ನೀಡಿದಾಗ ಮಾಲೀಕರು ಕಾರ್ಮಿಕರಿಗೆ ಸಂಬಳ ಕೊಡದಿದ್ದರೆ ಕೆಲವು ಸಂಘಗಳು ಅವರಿಗೆ ಧನಸಹಾಯ ಮಾಡುತ್ತವೆ. ಸಂಘದ ಸದಸ್ಯನಾಗಿದ್ದು ಕಾರಣಾಂತರದಿಂದ ನಿರುದ್ಯೋಗಿಯಾದವನಿಗೆ ಮತ್ತೆ ಕೆಲಸ ದೊರೆಯುವವರೆಗೂ ಧನಸಹಾಯ ಕೊಡುವ ಪದ್ಧತಿ ಕೆಲವು ಕಾರ್ಮಿಕ ಸಂಘಗಳಲ್ಲಿವೆ. ವೃದ್ಧಾಪ್ಯದ ಕಷ್ಟಕ್ಕೀಡಾದ ಕಾರ್ಮಿಕರಿಗೂ ಕೆಲವು ಸಂಘಗಳು ಸಹಾಯ ಮಾಡುತ್ತವೆ.

ಹದಿನೆಂಟನೆಯ ಶತಮಾನದಲ್ಲಿ ಅತ್ಯಂತ ಮುಂದುವರಿದ ದೇಶಗಳಲ್ಲಿ ಆರಂಭವಾದ ಕಾರ್ಮಿಕರ ಸಂಘಟನೆ ಈಗ ಅನೇಕ ದೇಶಗಳಿಗೆ ವ್ಯಾಪಿಸಿದೆ.

1799ರಿಂದ 1824ರವರೆಗೆ ಕಾರ್ಮಿಕ ಸಂಘಗಳು ಇಂಗ್ಲೆಂಡಿನಲ್ಲಿ ಕಾನೂನು ಬಾಹಿರವಾಗಿದ್ದುವು. 1871ರಲ್ಲಿ ಕಾರ್ಮಿಕ ಸಂಘ ಶಾಸನ ಜಾರಿಗೆ ಬಂತು.

ಕಾರ್ಮಿಕ ಸಂಘಗಳು ಕಾನೂನು ಬದ್ಧವಾಗಿರುವುದು ಅಗತ್ಯ. ಸಂಘಕ್ಕೆ ಮಾನ್ಯತೆ ದೊರೆತಿದ್ದರೆ ಮಾತ್ರ ಕಾರ್ಮಿಕರ ಬೇಕು ಬೇಡಗಳಿಗೆ ಕಾನೂನು ರಕ್ಷಣೆ ದೊರೆಯುತ್ತದೆ.

ಕಾರ್ಮಿಕರು ಸುಖವಾಗಿ ಜೀವನ ಸಾಗಿಸುವಂತೆ ನೋಡಿಕೊಳ್ಳುವುದು ಕಾರ್ಮಿಕ ಸಂಘದ ಧೋರಣೆ. ಈ ಕಾರಣಕ್ಕಾಗಿ ಕೆಲವೊಂದು ಸಾಂಸ್ಕೃತಿಕ ಚಟುವಟಿಕೆಗಳನ್ನು ಕಾರ್ಮಿಕ ಸಂಘಗಳು ನಡೆಸುತ್ತವೆ. ಕಾರ್ಮಿಕ

ಸಂಘದ ಸದಸ್ಯರಿಗೆ ನಿತ್ಯೋಪಯೋಗಿ ವಸ್ತುಗಳು ಕಡಮೆ ದರದಲ್ಲಿ ಸಿಗುವ ಏರ್ಪಾಟನ್ನು ಕಾರ್ಮಿಕ ಸಂಘಗಳು ಮಾಡುವುದುಂಟು.

ಕಾರ್ಮಿಕ ಸಂಘಗಳು ಬಲಿಷ್ಠವಾಗುತ್ತಿವೆ. ಅಮೆರಿಕದಲ್ಲಿ ಕಾರ್ಮಿಕ ಸಂಘಗಳ ಪ್ರಭಾವ ಅಸಾಧಾರಣ. ಒಂದು ಪ್ರಬಲ ಸಂಘ ಮುಷ್ಕರವನ್ನು ಹೂಡಿದರೆ ಜನಜೀವನವೇ ಅಸ್ತವ್ಯಸ್ತಗೊಳ್ಳಬಹುದು. ರಾಜಕೀಯ ಪಕ್ಷಗಳೂ ಕಾರ್ಮಿಕ ಸಂಘಗಳ ಬೆಂಬಲವನ್ನು ಬಯಸುತ್ತವೆ. ರಷ್ಯಾದಂಥ ರಾಷ್ಟ್ರಗಳಲ್ಲಿ ಕಾರ್ಮಿಕ ಸಂಘಗಳ ಪಾತ್ರ ಉತ್ಪಾದನೆಯ ಹೆಚ್ಚಳಕ್ಕೆ ಮೀಸಲು. ಶ್ರಮಜೀವಿಗಳ ಸರಕಾರ ಅಲ್ಲಿದೆಯೆಂಬ ಕಾರಣದಿಂದ ಅಂಥ ರಾಷ್ಟ್ರಗಳಲ್ಲಿ ಕಾರ್ಮಿಕರ ಮುಷ್ಕರಕ್ಕೆ ಅವಕಾಶವಿಲ್ಲ.

ವಿವಿಧ ರಾಷ್ಟ್ರಗಳ ಕಾರ್ಮಿಕ ಸಂಘಗಳನ್ನೊಳಗೊಂಡ ಮೂರು ಅಂತರ ರಾಷ್ಟ್ರೀಯ ಕಾರ್ಮಿಕ ಸಂಘಗಳಿವೆ :

1. ಜಾಗತಿಕ ಕಾರ್ಮಿಕ ಸಂಘಗಳ ಮಂಡಲಿ.

2. ಅಂತರರಾಷ್ಟ್ರೀಯ ಸ್ವತಂತ್ರ ಕಾರ್ಮಿಕ ಸಂಘಗಳ ಸಂಯುಕ್ತ ಮಂಡಲಿ.

3. ಜಾಗತಿಕ ಕ್ರೈಸ್ತ ಕಾರ್ಮಿಕ ಸಂಘಗಳ ಸಮುದಾಯ.

## ಕಾಶಿ

'ಕಾಶಿಯಾತ್ರೆ'

ಹಿಂದೂಗಳಿಗೆ ಅತ್ಯಂತ ಪವಿತ್ರ ಎನ್ನಿಸಿರುವ ಸ್ಥಳ ಕಾಶಿ. ಕಾಶಿಗೆ ಹೋಗಿ ಗಂಗಾಸ್ನಾನ, ವಿಶ್ವೇಶ್ವರನ ಭವ್ಯಮೂರ್ತಿಯ ದರ್ಶನ ಇವುಗಳನ್ನು ಮಾಡಿದರೆ ಜನ್ಮ ಪಾವನವಾಗುತ್ತದೆ, ಆತ್ಮಕ್ಕೆ ಶಾಂತಿ ದೊರೆಯುತ್ತದೆ—ಎಂಬುದು ಹಿಂದೂಗಳ ನಂಬಿಕೆ.

ವಾರಣಾಸಿ ಎಂಬ ಮತ್ತೊಂದು ಹೆಸರು ಕಾಶಿಗೆ. ಇದೇ ಹೆಸರಿನ ಇಂಗ್ಲಿಷ್ ರೂಪಾಂತರ ಬನಾರಸ್. ಈ ಕ್ಷೇತ್ರ ಭಾರತದ ಉತ್ತರದಲ್ಲಿ ಗಂಗಾನದಿಯ ದಂಡೆಯ ಮೇಲಿದೆ. ದಂಡೆಯಲ್ಲಿ ಅನೇಕ ಘಟ್ಟಗಳನ್ನು ನಿರ್ಮಿಸಿ ಯಾತ್ರಾರ್ಥಿಗಳು ಸ್ನಾನ ಮಾಡಲು ಅನುಕೂಲ ಮಾಡಿದ್ದಾರೆ. ದೇವಾಲಯಗಳಿಗಂತೂ ಲೆಕ್ಕವೇ ಇಲ್ಲ. ಎತ್ತ ನೋಡಿದರೂ ಗುಡಿ ಗೋಪುರಗಳೇ ಕಣ್ಣಿಗೆ ಬೀಳುತ್ತವೆ. ಒಟ್ಟು 1,500 ಗುಡಿಗಳಿವೆ. ಪಟ್ಟಣದ ಮನೆ ಮನೆಯ ಮೇಲೂ ದೇವರ, ದೇವಭಕ್ತರ ಚಿತ್ರಗಳನ್ನು ಚಿತ್ರಿಸಿರುತ್ತಾರೆ.

ಕಾಶಿ ವಿಶ್ವೇಶ್ವರ ದೇವಾಲಯ ಚಿನ್ನದ ಕಲಶದಿಂದ ಥಳ ಥಳ ಹೊಳೆಯುತ್ತದೆ. ವಿಶ್ವೇಶ್ವರನನ್ನು ಭಕ್ತರು ತಾವೇ ಪೂಜಿಸಿ ಸಂತೋಷಪಡಬಹುದು. ಜನಾಬಿಡವಾದ ಸ್ಥಳದಲ್ಲಿ ಈ ದೇವಾಲಯವಿದೆ. ಇನ್ನೊಂದು ಪ್ರಸಿದ್ಧ ದೇವಾಲಯ ದುರ್ಗಾದೇವಿಯದು.

ಕಾಶಿಯದು ಬಹು ಪುರಾತನ ಚರಿತ್ರೆ. ಕ್ರಿ.ಪೂ. ಎರಡು ಸಾವಿರ ವರ್ಷಗಳ ಹಿಂದೆಯೇ ಇದು ತತ್ತ್ವಜ್ಞಾನಿಗಳ ಮತ್ತು ಧರ್ಮ ಗುರುಗಳ ತಾಣವೆಂದು ಪ್ರಸಿದ್ಧವಾಗಿತ್ತು.

ಬುದ್ಧನ ಕಾಲಕ್ಕೂ ಹಿಂದೆಯೇ ಕಾಶಿ ಮಸ್ಲಿನ್ ಬಟ್ಟೆ, ರೇಷ್ಮೆ, ದಂತದ ಸಾಮಾನುಗಳು, ವಿಗ್ರಹಗಳು—ಇವುಗಳಿಗೆ ಹೆಸರಾಗಿತ್ತು. ಕಾಶಿಗೆ ಉತ್ತರಕ್ಕೆ ಎಂಟು ಕಿ. ಮೀ. ದೂರದಲ್ಲಿರುವ ಸಾರನಾಥ ಅಶೋಕನ ಕಾಲದಲ್ಲಿ ಅಭಿವೃದ್ಧಿ ಹೊಂದಿತು. ಕಾಶಿ ವಿದ್ಯಾನಿಕೇತನವೂ ಹೌದು. ಬನಾರಸ್ ಹಿಂದೂ ವಿಶ್ವವಿದ್ಯಾನಿಲಯ (1916) ಅತ್ಯಂತ ಪ್ರಸಿದ್ಧವಾದದ್ದು. ಮೈಸೂರಿನ ಪ್ರಭುವಾಗಿದ್ದ ನಾಲ್ಮಡಿ ಕೃಷ್ಣರಾಜ ಒಡೆಯರು ಈ ವಿಶ್ವವಿದ್ಯಾನಿಲಯದ ಕುಲಪತಿಗಳಾಗಿದ್ದರು. ಅಲ್ಲಿ ಕಾಶಿ ಹಿಂದೂ ಸಂಸ್ಕೃತ ವಿದ್ಯಾಪೀಠವೂ ಇದೆ.

ಆರ್ಯರು ಮೊದಲು ನೆಲೆಸಿದ್ದು ಇಲ್ಲಿಯೇ ಎಂದು ಹೇಳುತ್ತಾರೆ. ಅಕ್ಬರನ ಕಾಲದಲ್ಲಿ ಅವನ ಹಣಕಾಸಿನ ಮಂತ್ರಿ ರಾಜಾ ತೋದರಮಲ್ ಸುಪ್ರಸಿದ್ಧ ವಿಶ್ವೇಶ್ವರ ದೇವಾಲಯವನ್ನು ಪುನರ್ನಿರ್ಮಾಣ ಮಾಡಿದ. ಚೈತನ್ಯ, ಕಬೀರ, ನಾನಕ್ ಮುಂತಾದವರು ಇಲ್ಲಿಯೇ ಇದ್ದು ಜ್ಞಾನದೀಪವನ್ನು ಬೆಳಗಿದರು.

ಕಂಚಿನ ಕೆಲಸದಲ್ಲಿ ಈ ಪಟ್ಟಣ ಬಹಳ ಕೌಶಲವನ್ನು ತೋರಿದೆ. ಅಲ್ಲದೆ ಮುಖ್ಯವಾಗಿ ರೇಷ್ಮೆ ಸೀರೆ, ಬಟ್ಟೆಗಳು ಜನಪ್ರಿಯವಾಗಿವೆ.

ದೇಶದ ಮೂಲೆ ಮೂಲೆಗಳಿಂದಲೂ ಜನ ಬಂದು ಈ ಕ್ಷೇತ್ರದಲ್ಲಿ ನೆಲೆಸಿದ್ದಾರೆ. ಜನಸಂಖ್ಯೆ ಸುಮಾರು ಐದು ಲಕ್ಷ.

ವಿವರ : ಏಳನೆಯ ಸಂಪುಟ

## ಕಿಂಗ್, ಮಾರ್ಟಿನ್ ಲೂಥರ್

ಅಮೆರಿಕದ ಒಂದು ಬೀದಿಯಲ್ಲಿ ಒಬ್ಬ ಪುಟ್ಟ ಹುಡುಗ ಹೋಗುತ್ತಿದ್ದ. ಎದುರಿನಿಂದ ಬಂದ ಬಿಳಿಯ ಜನಾಂಗದ ಮಹಿಳೆಯೊಬ್ಬಳು ಇದ್ದಕ್ಕಿದ್ದಂತೆ ಆ ಹುಡುಗನ ಕೆನ್ನೆಗೆ ಹೊಡೆದು "ನಿಗ್ಗರ್ ! ನನ್ನ ಕಾಲು ತುಳಿಯುತ್ತೀಯಾ !" ಎಂದು ರೇಗಿದಳು. ಹುಡುಗ ಬೇಕೆಂದು ಕಾಲು ತುಳಿದಿರಲಿಲ್ಲ. ಆದರೂ ಮೌನದಿಂದ ಮುನ್ನಡೆದ.

ಮತ್ತೊಂದು ದಿನ ಅದೇ ಹುಡುಗ ತನ್ನ ತಮ್ಮನೊಡನೆ ಶಾಲೆಗೆ ಹೋಗುತ್ತಿದ್ದ. ಕಾರಣವಿಲ್ಲದೆ ಬಿಳಿಯನೊಬ್ಬ ಅವನನ್ನು, ಅವನ ತಮ್ಮನನ್ನೂ ಹೊಡೆದ. ಕೋಪಗೊಂಡ ತಮ್ಮ ತಿರುಗಿ [illegible]



[illegible]



ಗಾಂಧಿತತ್ತ್ವಾನುಯಾಯಿ ಕಿಂಗ್

ಶಾಂತ ಸ್ವಭಾವದ ಆ ಹುಡುಗನೇ ಅಮೆರಿಕದ ಗಾಂಧಿಯೆಂದು ಮುಂದೆ ಪ್ರಖ್ಯಾತನಾದ ಡಾ. ಮಾರ್ಟಿನ್ ಲೂಥರ್ ಕಿಂಗ್.

ಕಿಂಗ್ 1929ರ ಜನವರಿ 19ರಂದು ಅಮೆರಿಕದ ದಕ್ಷಿಣ ರಾಜ್ಯವೊಂದರಲ್ಲಿ ಧರ್ಮಾಧಿಕಾರಿಯ ಮಗನಾಗಿ ಹುಟ್ಟಿದ. ಅವನ ತಂದೆ, ತಾತಂದಿರು ಧರ್ಮ ಪ್ರಚಾರಕರು. ತಾಯಿ ಉಪಾಧ್ಯಾಯಿನಿ. ಹುಟ್ಟು ಹೆಸರು ಮೈಕೆಲ್. ಕಿಂಗ್‌ಗೆ ಆರು ವರ್ಷ ವಯಸ್ಸಾಗಿದ್ದಾಗ ಕ್ರೈಸ್ತರ ಪ್ರಾಟೆಸ್ಟೆಂಟ್ ಪಂಥ ಸ್ಥಾಪಕ ಮಾರ್ಟಿನ್ ಲೂಥರನ ಹೆಸರನ್ನು ಅವನಿಗೆ ಇಟ್ಟರು.

ಬಾಲ್ಯದಲ್ಲಿ ಕಿಂಗರ ವಿದ್ಯಾಭ್ಯಾಸ ಅಟ್ಲಾಂಟದ ನೀಗ್ರೊಶಾಲೆಯಲ್ಲಿ ಆಯಿತು. ಪ್ರೌಢಶಾಲೆಯ ಪಾಠವನ್ನೆಲ್ಲಾ ಎರಡೇ ವರ್ಷಗಳಲ್ಲಿ ಸಂಪೂರ್ಣವಾಗಿ ಕಲಿತ ಪ್ರತಿಭಾವಂತ ಮಾರ್ಟಿನ್ ಕಿಂಗ್. ಹದಿನೈದನೆಯ ವಯಸ್ಸಿನಲ್ಲಿಯೇ ಕಾಲೇಜು ಸೇರಿದರು. ಮೊದಮೊದಲು ಅಗ್ನಿಶಾಮಕ ದಳದಲ್ಲಿ ಕೆಲಸಮಾಡುವ ಆಸೆ; ಮೇಲೆ ವೈದ್ಯನಾಗೋಣ ಎಂಬ ಬಯಕೆ; ಅಥವಾ ವಕೀಲನಾದರೆ ನೀಗ್ರೊಗಳ ಪರ ವಾದಿಸಲು ಅನುಕೂಲ ಎಂಬ ಆಲೋಚನೆ. ಕೊನೆಗೆ ಎಲ್ಲವನ್ನೂ ಬಿಟ್ಟು ಧರ್ಮಗುರುವಾದರು. ತತ್ತ್ವಜ್ಞಾನದಲ್ಲಿ ಡಾಕ್ಟರೇಟ್ ಪದವಿಯನ್ನು ಬಾಸ್ಟನ್ ವಿಶ್ವವಿದ್ಯಾನಿಲಯ ಕಿಂಗ್ ಅವರಿಗೆ ನೀಡಿತು. ಓದಿನಲ್ಲಿ ಮಾರ್ಟಿನ್ ಬಿಳಿಯರಿಗಿಂತ ಮುಂದಿದ್ದರು, ಎಲ್ಲ ತರಗತಿಗಳಲ್ಲಿಯೂ ಪ್ರಥಮವಾಗಿದ್ದರು. ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೇ ಯೇಸು ಕ್ರಿಸ್ತನ ಉಪದೇಶ ಅವರ ಮನಸ್ಸಿಗೆ ಹಿಡಿಸಿತು. ಗಾಂಧಿಜಿಯವರ ತತ್ತ್ವಗಳೂ ಅವರ ಮನಸ್ಸನ್ನು ಸೂರೆಗೊಂಡವು.

ಇಪ್ಪತ್ತೈದರ ಹರೆಯದಲ್ಲಿ [illegible] ಕಿಂಗ್ ಮಾಂಟ್‌ಗಾಮರಿಯ ಬಂದು ಕ್ರೈಸ್ತ ಮತದ ಧರ್ಮಗುರುವಾದರು. "ನಾನು ಬೆಳೆದಂತೆಲ್ಲ ಇಡೀ ಬಿಳಿಯ ಜನಾಂಗವನ್ನೇ ದ್ವೇಷಿಸುವ ಸ್ಥಿತಿಯಲ್ಲಿದ್ದೆ. ಆದರೆ ಬಿಳಿಯರನ್ನು ಹೆಚ್ಚು ಹೆಚ್ಚಾಗಿ ನೋಡಿದಂತೆಲ್ಲ ದ್ವೇಷ ಕರಗಿತು". ಎಂದೊಮ್ಮೆ ಹೇಳಿದರು. ನೀಗ್ರೊಗಳಿಗೆ ಸಮಾನ ಹಕ್ಕುಗಳು ದೊರೆಯಬೇಕು ಎಂದು ಅವರು ಹೋರಾಡತೊಡಗಿದರು. ಅದು ಶಾಂತಿಯುತ ಹೋರಾಟ. "ಯೇಸು ಕ್ರಿಸ್ತ ಒಂದು ಮಾರ್ಗವನ್ನು ಹಾಕಿಕೊಟ್ಟ. ಅದು ಫಲಪ್ರದವಾದ ಮಾರ್ಗ ಎಂದು ಗಾಂಧಿಜಿ ತೋರಿಸಿ ಕೊಟ್ಟಿದ್ದಾರೆ." ಎಂದು ಅವರು ಆಗಾಗ್ಗೆ ಹೇಳುತ್ತಿದ್ದರು.

1956ರಲ್ಲಿ ಮಾಂಟ್‌ಗಾಮರಿಯಲ್ಲಿದ್ದಾಗ, ಕಿಂಗರ ಜೀವನದ ಮಹತ್ತರ ಘಟನೆಯೊಂದು ನಡೆಯಿತು. ಕರಿಯ ಮಹಿಳೆಯೊಬ್ಬಳಿಗೆ ಬಿಳಿಯರ ಬಸ್ಸಿನಲ್ಲಿ ಸ್ಥಳ ಕೊಡಲಿಲ್ಲ. ಅಂಥ ದಬ್ಬಾಳಿಕೆಯ ವಿರುದ್ಧ 50,000 ನೀಗ್ರೊ ಜನರ ಚಳುವಳಿಯನ್ನು ಒಂದು ವರ್ಷ ಕಾಲ ಕಿಂಗ್ ನಡೆಸಿದರು.

1957ರಲ್ಲಿ ವರ್ಷದ ಅಪ್ರತಿಮ ಶಾಂತಿವಾದಿ ನೀಗ್ರೊನಾಯಕ ಎಂದು ಅವರಿಗೆ ಪಾರಿತೋಷಕ ದೊರೆಯಿತು.

1959ರಲ್ಲಿ ಅವರಿಗೆ ನೊಬೆಲ್ ಶಾಂತಿ ಬಹುಮಾನ ದೊರೆಯಿತು. ಇದುವರೆಗೆ ಆ ಪುರಸ್ಕಾರ ಪಡೆದಿರುವವರಲ್ಲೆಲ್ಲ ಕಿಂಗ್ ಅತ್ಯಂತ ಕಿರಿಯರು.

1963ರಲ್ಲಿ ಕಿಂಗ್ ವರ್ಣಭೇದದ ವಿರುದ್ಧ ಬರ್ಮಿಂಗಂನಲ್ಲಿ ಶಾಂತ ರೀತಿಯ ಮೆರವಣಿಗೆ ನಡೆಸಿದರು. ಆದರೆ ಪೋಲೀಸರು ದೌರ್ಜನ್ಯದಿಂದ ವರ್ತಿಸಿ ಗುಂಪು ಗುಂಪಾಗಿ ಜನರನ್ನು ಬಂಧಿಸಿ ಎಳೆದೊಯ್ದರು. ಕೈಗೆ ಸಿಕ್ಕಿದವರನ್ನು ಬಡಿದು ಹಾಕಿದರು. ಇದರಿಂದ ಜನರ ಒಲವು ಕಿಂಗ್‌ರವರ ಧ್ಯೇಯದತ್ತ ಹರಿಯಿತು. ಸಮಾನ ಹಕ್ಕುಗಳ ಪರವಾಗಿ ಕಿಂಗ್ ವಾಷಿಂಗ್‌ಟನ್‌ನಲ್ಲಿ 1963ರ ಆಗಸ್ಟ್ 25ರಂದು ಒಂದು ಮೆರವಣಿಗೆಯನ್ನು ಏರ್ಪಡಿಸಿದರು. ಅದರಲ್ಲಿ ಎರಡು ಲಕ್ಷ ಜನ ಭಾಗವಹಿಸಿದರು.

1964ರಲ್ಲಿ ಕಿಂಗ್ ತಮ್ಮ ಪತ್ನಿಯೊಂದಿಗೆ ಭಾರತದಲ್ಲಿ ಪ್ರವಾಸ ಕೈಗೊಂಡರು. ಆ ಸಂದರ್ಭದಲ್ಲಿ ಕಿಂಗ್ ದಂಪತಿಗಳು ಬೆಂಗಳೂರಿಗೂ ಬಂದಿದ್ದರು.

ಎಲ್ಲ ಮನುಷ್ಯರ ಸರಿಸಮಾನತೆಗಾಗಿ ಶಾಂತಿಯುತ ಚಳುವಳಿ ನಡೆಸಿದ ಧೀರ ಮಾರ್ಟಿನ್ ಲೂಥರ್ ಕಿಂಗ್. ಅಮೆರಿಕದ ದುರದೃಷ್ಟ. 1968ರ ಏಪ್ರಿಲ್ 4ರಂದು ಈ ಶಾಂತಿದೂತನನ್ನು ಬಿಳಿಯನೊಬ್ಬ ಕೊಲೆ ಮಾಡಿದ.

1968ರಲ್ಲಿ ಭಾರತ ದಿವಂಗತ ಕಿಂಗರಿಗೆ ನೆಹರು ಅಂತರರಾಷ್ಟ್ರೀಯ ಶಾಂತಿ ಪುರಸ್ಕಾರವನ್ನು ನೀಡಿ ತನ್ನ ಗೌರವ ಸೂಚಿಸಿತು. ಇದನ್ನು ಕಿಂಗರ ಪತ್ನಿ ಶ್ರೀಮತಿ ಕೊರೆಟ್ಟ ಕಿಂಗ್ ಭಾರತಕ್ಕೆ ಬಂದು ಸ್ವೀಕರಿಸಿದರು.

## ಕಿಂಡರ್‌ಗಾರ್ಟನ್

'ಚಿಕ್ಕ ಮಕ್ಕಳ ತೋಟ'

ಎಳೆಯರ ಶಿಕ್ಷಣಕ್ಕೆ ಇದು ಸುಂದರ ಹೆಸರು. ಪ್ರಾಥಮಿಕ ಶಾಲೆಗಳಿಗೆ ಮಕ್ಕಳನ್ನು ಸೇರಿಸುವ ಮುನ್ನ, ತಂದೆ ತಾಯಿಗಳು ಕಿಂಡರ್‌ಗಾರ್ಟನ್ ಶಾಲೆಗೆ ಅವರನ್ನು ಕಳುಹಿಸಿಕೊಡುತ್ತಾರೆ. ಕಲಿಯಲು ಹೋಗುತ್ತಿದ್ದೇವೆ ಎಂಬ ಭೀತಿ-ಆತಂಕ ಮಕ್ಕಳಲ್ಲಿ ಉಂಟಾಗಬಾರದು ಎಂದು. 1837ರಲ್ಲಿ ಕಿಂಡರ್‌ಗಾರ್ಟನ್ ಪದ್ಧತಿಯನ್ನು ಜರ್ಮನಿಯ ಫ್ರೆಡರಿಕ್ ಫ್ರುಬೆಲ್ (1782–1852) ಆರಂಭಿಸಿದ.

ಪ್ರಾಥಮಿಕ ಶಿಕ್ಷಣ ಬಹು ಮಟ್ಟಿಗೆ ಎಲ್ಲ ರಾಷ್ಟ್ರಗಳಲ್ಲಿ ಕಡ್ಡಾಯ. ಪ್ರಾಥಮಿಕ ಶಾಲೆಗಳಿಗೆ ಸೇರುವ ವಿದ್ಯಾರ್ಥಿಗಳ ವಯಸ್ಸು ಒಂದೊಂದು ರಾಷ್ಟ್ರದಲ್ಲಿ ಒಂದೊಂದು ಬಗೆ. ಇಂಗ್ಲೆಂಡ್, ಭಾರತಗಳಲ್ಲಿ ಐದು ವರ್ಷ, ರಷ್ಯದಲ್ಲಿ ಏಳು. ಮೂರು ವರ್ಷದ ಮಕ್ಕಳನ್ನು ಕಿಂಡರ್‌ಗಾರ್ಟನ್ ಶಾಲೆಗೆ ಕಳುಹಿಸಿಕೊಡಬಹುದು. ಪ್ರಾಥಮಿಕ ಶಾಲೆ ಸೇರುವವರೆಗೂ ಕಿಂಡರ್ ಗಾರ್ಟನ್‌ನಲ್ಲಿ ಅವರಿಗೆ ಶಿಕ್ಷಣ.

ಮಕ್ಕಳಿಗೆ ಆಟವೇ ಮುಖ್ಯ. ಆದ್ದರಿಂದ ಆಟವಾಡುತ್ತಲೇ ಮಕ್ಕಳು ಕಲಿಯಬೇಕು ಎಂದ ಫ್ರುಬೆಲ್. ಕೆಲವು ಆಟದ ವಸ್ತುಗಳನ್ನು ಗುಂಪು ಗೂಡಿಸಿ ಕಿಂಡರ್‌ಗಾರ್ಟನಿನಲ್ಲಿಟ್ಟ. ಮರದಿಂದ ತಯಾರಿಸಿದ ಗೋಲಾಕೃತಿ, ಘನಾಕೃತಿ ಮುಂತಾದುವು ಮತ್ತು ಬಣ್ಣ ಬಣ್ಣದ ಚೆಂಡುಗಳು ಆ ವಸ್ತುಗಳಲ್ಲಿದ್ದುವು. ಮಕ್ಕಳು ಈ ಆಟಿಗೆಗಳನ್ನು ತೆಗೆದುಕೊಂಡು ಆಟವಾಡುತ್ತ ಕೆಲವು ಸಂಗತಿ ತಿಳಿದುಕೊಳ್ಳಬೇಕೆಂಬುದೇ ಫ್ರುಬೆಲನ ಉದ್ದೇಶ. ಕಿಂಡರ್‌ಗಾರ್ಟನಿನ ಕೊಠಡಿಗಳಲ್ಲಿ ಗಾಳಿ ಬೆಳಕು ಯಥೇಚ್ಛ. ಮಕ್ಕಳು ಅಭಿನಯಿಸುತ್ತ, ನೃತ್ಯಮಾಡುತ್ತ ಹಾಡು ಹೇಳುವಾಗ, ಸಂಗೀತದ ಹಿನ್ನೆಲೆ ಇರುತ್ತದೆ. ಮಕ್ಕಳನ್ನು ಆಕರ್ಷಿಸುವ ಚಿತ್ರದ ಪುಸ್ತಕಗಳಿರುತ್ತವೆ. ಮಕ್ಕಳನ್ನು ಹಲವು ಸ್ಥಳಗಳಿಗೆ ಕರೆದುಕೊಂಡು ಹೋಗುತ್ತಾರೆ. ಅವರಿಗೆ ಕಥೆ ಕೇಳುವುದರಲ್ಲಿ ಆಸಕ್ತಿ ಬಹಳ. ಅವರ ವಯಸ್ಸಿಗೆ ರುಚಿಸುವ ಕಥೆಗಳನ್ನು ಶಿಕ್ಷಕರು ಹೇಳುತ್ತಾರೆ, ಅವರಿಂದ ಹೇಳಿಸುತ್ತಾರೆ.

ಆಧುನಿಕ ಕಿಂಡರ್‌ಗಾರ್ಟನುಗಳಲ್ಲಿ ಮೇರಿ ಮಾಂಟೆಸೋರಿ ಮತ್ತು ಜಾನ್ ಡ್ಯೂಯಿ ಮುಂತಾದವರ ಶಿಕ್ಷಣದ ಪದ್ಧತಿಗಳೂ ಕೂಡಿಕೊಂಡಿವೆ. ಮಕ್ಕಳು ಕಲಿಯುವಾಗ ಸಂಪೂರ್ಣ ಸ್ವತಂತ್ರವಾಗಿರಬೇಕೆಂದೂ ಅವರ ಭಾವನೆಗಳು ವಿಕಾಸಗೊಳ್ಳುವಂತೆ ನೋಡಿಕೊಳ್ಳಬೇಕೆಂದೂ ಮಾಂಟೆಸೋರಿ ತನ್ನದೇ ಶಾಲೆಗಳನ್ನು ಇಟಲಿ ದೇಶದ ರೋಮ್ ನಗರದಲ್ಲಿ ಸ್ಥಾಪಿಸಿದಳು. ಮಕ್ಕಳ ಮನಸ್ಸನ್ನು ಅರಿತುಕೊಂಡ ಜಾನ್ ಡ್ಯೂಯಿ ಮಕ್ಕಳ ಶಾಲೆಯಲ್ಲಿ ಶಿಕ್ಷಕ ಮುಖ್ಯವಲ್ಲ, ಮಕ್ಕಳೇ ಕೇಂದ್ರಸ್ಥಾನ—ಎಂದ.

ಕಿಂಡರ್‌ಗಾರ್ಟನ್ ಶಾಲೆಗಳು ಯೂರೋಪಿನಲ್ಲಿಯೂ ಅನಂತರ ಅಮೆರಿಕದಲ್ಲಿಯೂ ಪ್ರಾರಂಭವಾದುವು. ಅಮೆರಿಕದ ವಾಟರ್‌ಟೌನ್ ಎಂಬಲ್ಲಿ 1855ರಲ್ಲಿ ಮೊದಲನೆಯ ಕಿಂಡರ್‌ಗಾರ್ಟನ್ ಶಾಲೆ ತೆರೆಯಲ್ಪಟ್ಟಿತು. ಈಗ ಪ್ರಪಂಚದ ಬಹುಶಃ ಎಲ್ಲ ರಾಷ್ಟ್ರಗಳಲ್ಲಿಯೂ ಕಿಂಡರ್‌ಗಾರ್ಟನ್ ಶಾಲೆಗಳಿವೆ. ಇಪ್ಪತ್ತನೆಯ ಶತಮಾನದ ಆದಿಭಾಗದಲ್ಲಿ ಮಿಷನರಿಗಳು ಪ್ರಥಮವಾಗಿ ಕಿಂಡರ್‌ಗಾರ್ಟನ್ ಶಾಲೆಗಳನ್ನು ಭಾರತದಲ್ಲಿ ಪ್ರಾರಂಭಿಸಿದರು. ಭಾರತ ಸ್ವಾತಂತ್ರ್ಯ ಪಡೆದ ಅನಂತರ ಎಲ್ಲ ರಾಜ್ಯಗಳಲ್ಲಿಯೂ ಖಾಸಗಿಯಾಗಿಯೇ ಈ ಶಾಲೆಗಳನ್ನು ನಡೆಸುತ್ತಾರೆ. ರಾಜ್ಯ ಸರಕಾರಗಳು ಈ ಶಾಲೆಗಳ ಮಹತ್ವವನ್ನು ಗುರುತಿಸಿ ಇವುಗಳಿಗೆ ಧನಸಹಾಯ ನೀಡುತ್ತವೆ. ಮೈಸೂರು ರಾಜ್ಯದಲ್ಲಿ 1970ರಲ್ಲಿ 704 ಕಿಂಡರ್‌ಗಾರ್ಟನ್ ಶಾಲೆಗಳಿವೆ; ಇವುಗಳಲ್ಲಿ ಕೆಲಸಮಾಡುವ ಶಿಕ್ಷಕ, ಶಿಕ್ಷಕಿಯರ ಸಂಖ್ಯೆ 1231. ಇವರಲ್ಲಿ 1202 ಶಿಕ್ಷಕಿಯರೇ ಇರುವರು. ಕಿಂಡರ್‌ಗಾರ್ಟನುಗಳಲ್ಲಿ ಕೆಲಸ ಮಾಡುವವರಿಗೆ ಯೋಗ್ಯ ಶಿಕ್ಷಣಕೊಡಲು ಒಟ್ಟು ಹತ್ತು ತರಬೇತಿ ಸಂಸ್ಥೆಗಳಿವೆ. ರಷ್ಯದಲ್ಲಿ ಕಾರಖಾನೆಗಳಲ್ಲಿಯೇ ಈ ಶಾಲೆಗಳಿವೆ.

ಕಿಂಡರ್‌ಗಾರ್ಟನಿನಲ್ಲಿರುವ ಶಿಕ್ಷಕಿಗೆ ತಾಳ್ಮೆ ಎಷ್ಟಿದ್ದರೂ ಸಾಲದು. ಮಕ್ಕಳು ಚಟುವಟಿಕೆಯಿಂದಿರುವಂತೆ ಮಾಡಿ ತಾಯಿಯಂತೆ ಅವರನ್ನು ಪ್ರೋತ್ಸಾಹಿಸಬೇಕಾಗುತ್ತದೆ.

ಕಿಂಡರ್‌ಗಾರ್ಟನ್ ಶಿಕ್ಷಣ ಕಡ್ಡಾಯವಿರದಿದ್ದರೂ, ಪಟ್ಟಣದ ತಂದೆ ತಾಯಂದಿರು ತಮ್ಮ ಮಕ್ಕಳನ್ನು ಇಂಥ ಶಾಲೆಗಳಿಗೆ ಕಳುಹಿಸುತ್ತಾರೆ. ಶಿಕ್ಷಣದಲ್ಲಿ ಇದು ಮೊದಲನೆಯ ಮೆಟ್ಟಲು; ಮನೆಯೆಂದರೆ ಶಾಲೆ. ಶಾಲೆ ಎಂದರೆ ಮನೆ ಎನ್ನುವಂತೆ ಇಲ್ಲಿನ ವಾತಾವರಣ.

ಮಕ್ಕಳ ವಿದ್ಯಾರ್ಥಿಜೀವನಕ್ಕೆ ತಳಹದಿ—ಕಿಂಡರ್‌ಗಾರ್ಟನ್.

ನೋಡಿ: ಮಾಂಟೆಸೋರಿ ಪದ್ಧತಿ: ಮೂಲ ಶಿಕ್ಷಣ

## ಕ್ರಿಸ್ತ, ಯೇಸು

ಕ್ರಿಸ್‌ಮಸ್ ಹಬ್ಬವನ್ನು ಜಗತ್ತಿನ ಅನೇಕ ದೇಶಗಳಲ್ಲಿ ಡಿಸೆಂಬರ್ 25 ರಂದು ಬಹು ಸಂಭ್ರಮದಿಂದ ಆಚರಿಸುತ್ತಾರೆ. ದೇವರು ಮನುಷ್ಯನ ಅವತಾರವಾಗಿ ಹುಟ್ಟಿಬಂದ ಹಬ್ಬ ಎಂದು ಇದಕ್ಕೆ ಮಹತ್ವ.

ಕ್ರೈಸ್ತ ಧರ್ಮದ ಸಂಸ್ಥಾಪಕನಾಗಿ, ಮಹಾತ್ಮನಾಗಿ, ಸತ್ಯಾಗ್ರಹಿಯಾಗಿ ಪ್ರಾಣಾರ್ಪಣೆಮಾಡಿ ಶಕಪುರುಷನಾದವನು ಯೇಸು ಕ್ರಿಸ್ತ. ಆಧುನಿಕ ಕಾಲಗಣತಿ ಕ್ರಿಸ್ತಶಕ ಎಂದು ಕರೆಯಲ್ಪಟ್ಟಿದೆ. ಕ್ರಿಸ್ತ ಪೂರ್ವ ಎಂದರೆ ಕ್ರಿಸ್ತನ ಜನನದ ಪೂರ್ವಕಾಲ.

ಯೇಸು ಕ್ರಿಸ್ತನ ತಾಯಿಯ ಹೆಸರು ಮೇರಿ. ಪ್ಯಾಲೆಸ್ಟೈನ್ (ಈಗಿನ ಇಸ್ರೇಲ್) ದೇಶದ ನಜರೇತ್ ಎಂಬ ಹಳ್ಳಿಯ ಈ ಕನ್ಯೆಗೆ ಯೋಸೇಫನೆಂಬ ಯುವಕನೊಂದಿಗೆ ಮದುವೆ ಗೊತ್ತಾಗಿತ್ತು. ಆದರೆ ಮದುವೆಯ ಮುನ್ನವೇ, "ನೀನು ಗರ್ಭಿಣಿಯಾಗಿ ಮಹಾಮಹಿಮನಾದ ಮಗನನ್ನು ಹಡೆಯುವಿ, ಅವನಿಗೆ ಯೇಸು ಎಂದು ಹೆಸರಿಡಬೇಕು. ಈತನು ದೇವರ ಮಗನಾಗಿರುವನು ಮತ್ತು ತನ್ನ ಜನರನ್ನು ಬಿಡುಗಡೆ ಮಾಡುವ ರಕ್ಷಕನಾಗಿರುವನು." ಎಂದು ದಿವ್ಯವಾಣಿಯಾದಂತೆ ಮೇರಿಗೆ ಅನುಭವವಾಯಿತು. (ಹಿಬ್ರೂ ಜನಾಂಗದ ಪ್ರವಾದಿಗ್ರಂಥಗಳು ಬಹು ಪುರಾತನ ಕಾಲದಿಂದಲೂ 'ಮೆಸ್ಸಾಯ' ಅಥವಾ ಒಬ್ಬ ರಕ್ಷಕನ ಆಗಮನವನ್ನು ಬೋಧಿಸಿದ್ದುವು. ಈಗ ರೋಮ್ ಚಕ್ರಾಧಿಪತ್ಯದ ಅಧೀನ ಪ್ರಜೆಗಳಾಗಿದ್ದ ಈ ಜನರು ಅವರನ್ನು ಗುಲಾಮಗಿರಿಯಿಂದ ಸ್ವಾತಂತ್ರ್ಯಕ್ಕೆ ನಡೆಸುವ ರಾಜಕೀಯ ನಾಯಕನು 'ಮೆಸ್ಸಾಯ'ನಾಗಿ ಬರುವನೆಂದು ನಿರೀಕ್ಷಿಸಿದ್ದರು. ಯೇಸುವು ಪ್ರವಾದನೆಗಳ 'ಮೆಸ್ಸಾಯ' ನಾಗಿದ್ದರೂ, ಅವರ ರಾಜಕೀಯ ಆಶಯಗಳು ಅವನಿಂದ ಫಲಪ್ರದವಾಗುವಂತಿರಲಿಲ್ಲ. ಆದರೂ ಯೇಸುವಿಗೆ 'ಮೆಸ್ಸಾಯ'ನೆಂಬ ಹೆಸರು ವಾಸ್ತವವಾಗಿ ಅನ್ವಯಿಸುತ್ತದೆ.)

ಮೇರಿಯು ಗರ್ಭಿಣಿಯಾಗಿ ದಿನ ತುಂಬಿಬಂದ ಸಮಯದಲ್ಲಿ ರೋಮನ್ ಸಾಮ್ರಾಜ್ಯದಲ್ಲಿ ಜನಗಣತಿ ನಡೆಯಿತು. ಆಗ ಮೇರಿ ಹಾಗೂ ಯೋಸೇಫರು ತಮ್ಮ ಹುಟ್ಟೂರಾದ ಬೆತ್ಲೆಹೇಮ್ ಎಂಬ ಹಳ್ಳಿಗೆ ಹೋಗಿ ತಮ್ಮ ಹೆಸರುಗಳನ್ನು ಬರೆಸಬೇಕಾಗಿತ್ತು. ಅವರು ಬೆತ್ಲೆಹೇಮಿಗೆ ಬಂದಾಗ ಉಳಿದುಕೊಳ್ಳಲು ಸರಿಯಾದ ಸ್ಥಳ ಸಿಗಲಿಲ್ಲ. ಜನಗಣತಿಯು ಜಾತ್ರೆಯ ರೂಪ ತಳೆದಿತ್ತು. ಅವರಿಗೆ ಒಂದು ಛತ್ರದ ಕೊಟ್ಟಿಗೆಯಲ್ಲಿ ಸ್ವಲ್ಪ ಸ್ಥಳ ದೊರಕಿತು. ಅಂದೇ ರಾತ್ರಿ ಯೇಸುವಿನ ಜನನವಾಯಿತು. ಕೊಟ್ಟಿಗೆಯಲ್ಲಿ ಬೇರೆ ದನಕರುಗಳೂ ಕುರಿಮೇಕೆಗಳೂ ಇದ್ದುವು.

ಊರಿನ ಪಕ್ಕದ ಬಯಲಿನಲ್ಲಿ ಕುರಿಕಾಯುತ್ತಿದ್ದ ಕುರುಬರಿಗೆ ಆ ರಾತ್ರಿ ದೇವ ದೂತರಿಂದ ವರ್ತಮಾನ ಬಂತು. "ಭೂಲೋಕದಲ್ಲಿ ಶಾಂತಿ. ಮಾನವ ಕುಲಕ್ಕೆ ಶುಭ. ದೇವರು ಮಾನುಕುಲಕ್ಕೆ ಒಲಿದಿದ್ದಾನೆ!" ಎಂದು ದೇವದೂತ

ಹಾಡಿದಂತೆ ಭಾಸವಾಯಿತು. ಕುರುಬರು ಕೂಡಲೇ ಊರಿನೊಳಗೆ ಹೋಗಿ. ಜನಿಸಿದ್ದ ಯೇಸು ಮಗುವನ್ನೂ ಮೇರಿ ಯೋಸೆಫರನ್ನೂ ಕಂಡು ತಮ್ಮ ಪ್ರಣಾಮಗಳನ್ನು ಅರ್ಪಿಸಿದರು.

ಯೇಸುವಿನ ಜನನ ಕಾಲದಲ್ಲಿ ಅತ್ಯಧಿಕ ಪ್ರಕಾಶಮಾನವಾದ ಹೊಸ ನಕ್ಷತ್ರವೊಂದು ಆಕಾಶದಲ್ಲಿ ಕಾಣಿಸಿಕೊಂಡಿತೆಂದು ಹೇಳುತ್ತಾರೆ. ಇದನ್ನೇ ಕ್ರಿಸ್‌ಮಸ್ ಚುಕ್ಕಿ (ಸ್ಟಾರ್ ಆಫ್ ದಿ ಈಸ್ಟ್) ಎಂದು ಕರೆದಿರುವರು. ಪೂರ್ವ ದಿಗಂತದಲ್ಲಿ ಪ್ರಕಾಶಿಸುತ್ತಿದ್ದ ಈ ನಕ್ಷತ್ರವನ್ನು ನೋಡಿ ಪೌರಸ್ತ್ಯ ಪಂಡಿತರು ಪ್ಯಾಲೆಸ್ಟೈನ್ ದೇಶಕ್ಕೆ ಬಂದರು. ಇವರೂ ಯೇಸುವನ್ನು ನೋಡಿ ತಮ್ಮ ಪ್ರಣಾಮಗಳನ್ನು ಅರ್ಪಿಸಿದರು.

ಯೇಸುವು ಹನ್ನೆರಡು ವರ್ಷದ ಬಾಲಕನಾಗಿದ್ದಾಗಲೇ ಸ್ವತಂತ್ರ ವಿಚಾರ ಶಕ್ತಿಯನ್ನೂ ಸತ್ಯಾನ್ವೇಷಣೆಯಲ್ಲಿ ಆಸಕ್ತಿಯನ್ನೂ ತೋರ್ಪಡಿಸಿದ. ಅವನ ತಂದೆತಾಯಿಗಳು ಅವನನ್ನು ಜೆರೂಸಲೆಮಿನ ಹಿಬ್ರೂ ದೇವಾಲಯದ ವಾರ್ಷಿಕ ಜಾತ್ರೆಗೆ ಕರೆತಂದಿದ್ದರು. ಅವರು ಅಲ್ಲಿಂದ ಹಿಂದಿರುಗುವಾಗ ಯೇಸುವು ಅವರೊಂದಿಗೆ ಇರಲಿಲ್ಲ. ಅವರು ಅವನನ್ನು ಹುಡುಕಿ ಬೇಸತ್ತು ದೇವಾಲಯದ ಅಂಗಳಕ್ಕೆ ಬಂದರು. ಅಲ್ಲಿ ಕೇವಲ ಬಾಲಕನಾದ ಯೇಸುವು ಹಿಬ್ರೂ ರಬ್ಬಿಗಳನ್ನು ಅವರ ಧರ್ಮಶಾಸ್ತ್ರ. ತತ್ತ್ವ ಹಾಗೂ ಪದ್ಧತಿಗಳ ವಿಚಾರವಾಗಿ ಪ್ರಶ್ನಿಸುತ್ತಿದ್ದನು.

ಯೇಸುವು ಮೂವತ್ತು ವರ್ಷ ವಯಸ್ಸಿನ ಯುವಕನಾಗಿದ್ದಾಗ ಅವನಿದ್ದ ಗೆಲಿಲೀಯೊ ಪ್ರದೇಶದ ಯೋರ್ಡನ್ ನದಿಯ ತೀರದಲ್ಲಿ ಯೋಗಿಯೊಬ್ಬನಿದ್ದಾನೆಂದು ತಿಳಿಯಿತು. ಈತನ ಹೆಸರು ಜಾನ್ ಎಂದು. ಈತನೇ ಸ್ನಾನ ದೀಕ್ಷಕನಾದ 'ಜಾನ್ ಅಥವಾ ಜಾನ್ ದಿ ಬ್ಯಾಪ್ಟಿಸ್ಟ್'. ಯೇಸುವೂ ಜಾನನ ಹತ್ತಿರ ಹೋಗಿ ಆತನ ಹಸ್ತಗಳಿಂದ ದೀಕ್ಷಾಸ್ನಾನ ಮಾಡಿಸಿಕೊಂಡು, ಈ ಯೋಗಿಯ ಆಶೀರ್ವಾದ ಪಡೆದನು. ಯೇಸುವಿಗೆ ಈ ದೀಕ್ಷೆ ನಡೆದಾಗ ಸ್ವರ್ಗದರ್ಶನವಾದಂತೆ ಭಾಸವಾಯಿತು.

ಇದಾದ ಮೇಲೆ ಯೇಸುವು ನಲವತ್ತು ದಿನಗಳನ್ನು ಏಕಾಕಿಯಾಗಿ ಪ್ರಾರ್ಥನೆ ಉಪವಾಸಗಳಲ್ಲಿ ಕಳೆದನು. ತನ್ನ ಶಿಷ್ಯರನ್ನು ಆರಿಸಿಕೊಂಡು ಜನರಿಗೆ ಉಪದೇಶ ಮಾಡುತ್ತಾ ರೋಗಿಗಳನ್ನು ಗುಣಪಡಿಸುತ್ತ. ದೀನದಲಿತರ ಸೇವೆ ಮಾಡುತ್ತಾ ಊರಿಂದ ಊರಿಗೆ ನಡೆದು ಹೋಗುತ್ತಿದ್ದನು. ಯೇಸುವಿನ ಉಪದೇಶದ ಶೈಲಿ ಹಾಗೂ ಕಾರ್ಯವಿಧಾನ ಕಂಡು ಜನಸಾಮಾನ್ಯರು ಬೆರಗಾದರು : ಪಂಡಿತ ಜನರು ಅಸೂಯೆಪಟ್ಟರು. ಯೇಸುವು ಉಪದೇಶದ ಜೊತೆಗೆ ಅದರಂತೆ ನಡೆದುಕೊಳ್ಳುವುದನ್ನು ತನ್ನ ಶಿಷ್ಯರಿಗೆ ಕಾರ್ಯತಃ ತೋರಿಸಿಕೊಡುತ್ತಿದ್ದನು. ಈ ಉಪದೇಶದ ಬಹುಭಾಗ ದೃಷ್ಟಾಂತ ಕಥೆಗಳು. ಸಾಮ್ಯ ಉಪಮೆ ಹಾಗೂ ಉಪಕಥೆಗಳು.

"ನನ್ನ ನೆರೆಯವನು ಯಾರು ?" ಎಂದು ಒಬ್ಬನು ಕೇಳಿದ ಪ್ರಶ್ನೆಗೆ ಯೇಸು ಈ ದೃಷ್ಟಾಂತ ಕಥೆಯನ್ನು ಹೇಳಿದನು. "ಪ್ರಯಾಣಿಕನೊಬ್ಬನು ಜೆರೊಸಲೆಮಿನಿಂದ ಜೆರಿಕೋ ಎಂಬ ಊರಿಗೆ ಹೋಗುತ್ತಿದ್ದನು. ಕಳ್ಳರು ಅವನನ್ನು ಹೊಡೆದು ಅವನ ಬಟ್ಟೆಗಳನ್ನು ಹರಿದು ಅವನಲ್ಲಿದ್ದುದನ್ನೆಲ್ಲ ಕಿತ್ತುಕೊಂಡು ಅರೆ ಜೀವವಾಗಿ ರಸ್ತೆಯಲ್ಲಿ ಸಾಯಲು ಬಿಟ್ಟರು. ಪೂಜಾರಿಯೊಬ್ಬನು ಆ ದಾರಿಯಲ್ಲಿ ಬಂದನು. ಅರೆಜೀವವಾಗಿ ಬಿದ್ದಿದ್ದ ಪ್ರಯಾಣಿಕನನ್ನು ನೋಡಿ ಪೂಜಾರಿಯು ದೂರದಿಂದಲೇ ಸರಿದುಹೋದನು. ಕೆಲ ಹೊತ್ತಿನ ನಂತರ ಸರಕಾರದ ಕೆಳಗೆ ಅಧಿಕಾರಿಯೊಬ್ಬನು ಅದೇ ದಾರಿಯಲ್ಲಿ ಬಂದು ಗಾಯಗೊಂಡು ಬಿದ್ದಿದ್ದ ಪ್ರಯಾಣಿಕನನ್ನು ನೋಡಿದನು. ಅವನೂ ಆ ಪೂಜಾರಿಯಂತೆಯೇ ದೂರಸರಿದು ತನ್ನ ಪ್ರಯಾಣ ಬೆಳೆಸಿದನು. ಇನ್ನು ಸ್ವಲ್ಪ ಹೊತ್ತಿನ ಅನಂತರ ಸಮೇರಿಯದವನೊಬ್ಬನು (ಹಿಬ್ರೂ ಸಮಾಜದಲ್ಲಿ ಕೀಳುಜಾತಿಯವನು) ಆ ದಾರಿಯಲ್ಲಿ ಬಂದನು. ಈತನು ಗಾಯಗೊಂಡಿದ್ದ ಆ ಪ್ರಯಾಣಿಕನನ್ನು ನೋಡಿ ಮರುಕಗೊಂಡನು. ಅವನ ಹತ್ತಿರ ಹೋಗಿ ಅವನ ಗಾಯಗಳ ಮೇಲೆ ಎಣ್ಣೆ ಮತ್ತು ದ್ರಾಕ್ಷಾರಸ ಹಚ್ಚಿ. ಬಟ್ಟೆಯಿಂದ ಸುತ್ತಿದನು. ಅವನನ್ನು ಎತ್ತಿ ತನ್ನ ಕತ್ತೆಯ ಮೇಲೆ ಕೂರಿಸಿಕೊಂಡು ಊರಿಗೆ ಕರೆತಂದನು. ಪ್ರವಾಸಿ ಮಂದಿರದಲ್ಲಿ ಅವನಿಗೆ ಆರೈಕೆ ಮಾಡಿದನು. ಮರುದಿನ ಆ ಮಂದಿರದ ಮೇಲ್ವಿಚಾರಕನನ್ನು ಕಂಡು ಅವನಿಗೆ ಎರಡು ವರಹಗಳನ್ನು ಕೊಟ್ಟು 'ಈತನನ್ನು ಜಾಗರೂಕತೆಯಿಂದ ನೋಡಿಕೋ. ಇವನಿಗಾಗಿ ನೀನು ಇನ್ನೂ ಹೆಚ್ಚು ಖರ್ಚುಮಾಡಬೇಕಾಗಿ ಬಂದರೆ ನಾನು ತಿರುಗಿ ಬರುವಾಗ ನಿನಗೆ ಕೊಡುತ್ತೇನೆ' ಎಂದು ಹೇಳಿ ಹೊರಟುಹೋದನು."



"ಈ ಮೂವರಲ್ಲಿ ಕಳ್ಳರ ಕೈಗೆ ಸಿಕ್ಕಿಬಿದ್ದಿದ್ದ ಆ ಮನುಷ್ಯನ ನೆರೆಯವನು ಯಾರು ?" ಎಂದು ಯೇಸು ಮರು ಪ್ರಶ್ನೆ ಹಾಕಿದನು. ಮೊದಲು ಪ್ರಶ್ನೆ ಕೇಳಿದ್ದ ವ್ಯಕ್ತಿಯು "ಅವನಿಗೆ ದಯೆತೋರಿಸಿದವನು." ಎಂದನು. "ಹಾಗಾದರೆ ನೀನೂ ಹಾಗೆ ಮಾಡು." ಎಂದು ಯೇಸು ಹೇಳಿದನು. ಈ ಕಥೆಯಲ್ಲಿ ಯೇಸುವು ಕರುಣೆಯೇ ಧರ್ಮದ ಮೂಲವೆಂದು ತೋರಿಸಿ ಕೊಟ್ಟನು. "ನಿಮ್ಮ ನೆರೆಯವರನ್ನು ನಿಮ್ಮಂತೆಯೇ ಪ್ರೀತಿಸಿರಿ" ಎಂದು ಹೇಳಿದನು.

ಯೇಸುವಿನ ಉಪದೇಶದ ಸಾರಾಂಶವು 'ಪರ್ವತ ಪ್ರಸಂಗ' ಅಥವಾ 'ದ ಸರ್ಮನ್ ಆನ್ ದ ಮೌಂಟ್' ಎಂದು ಖ್ಯಾತಿಪಡೆದಿದೆ. ಇದು ಮಾನವ ಜೀವನದ ಅತ್ಯುನ್ನತ ಆದರ್ಶಗಳನ್ನೂ ಮಾನವನ ದಯಾಪೂರ್ಣತೆಯನ್ನೂ ಪ್ರತಿಬಿಂಬಿಸುತ್ತದೆ. ನೀತಿಗೆ ಹಸಿದು ಬಾಯಾರಿದವರು ಧನ್ಯರು. ಅವರಿಗೆ ತೃಪ್ತಿಯಾಗುವುದು : ನೈತಿಕ ಶಕ್ತಿ ಮಾತ್ರ ಸಾಲದು: ನೀತಿಯೂ ಕರುಣೆಯೂ ಕಾರ್ಯರೂಪ ತಾಳಿ ಬರಬೇಕು ಎಂದು ಯೇಸು ಸಾರಿದನು.

ಯೇಸು ಹಿಬ್ರೂ ಜನರ ಸಂಪ್ರದಾಯಪ್ರಿಯತೆಗೆ ವಿರೋಧಿಯಾಗಿದ್ದನು. "ನಿಮ್ಮ ದೇವಾಲಯಗಳನ್ನೂ ನಿಮ್ಮ ಆತ್ಮಗಳನ್ನೂ ಶುದ್ಧ ಮಾಡಿರಿ. ಹಳೆಯ ಡಂಭಾಚಾರಗಳನ್ನು ಬಿಟ್ಟು ಹೊಸ ರೀತಿಯಿಂದ ಬಾಳಲು ಕಲಿಯಿರಿ. ನಾವು ಉತ್ತಮರು ಎಂಬ ಜಾತಿ. ಜನಾಂಗ ಹಾಗೂ ರಾಷ್ಟ್ರ ಮದಗಳನ್ನು ತುಳಿಯಿರಿ. ನಾವೆಲ್ಲರೂ ಈ ಲೋಕದಲ್ಲಿ ಸಮಾನರು. ನಾವೆಲ್ಲರೂ ಪರಲೋಕದಲ್ಲಿರುವ ದೇವರ ಮಕ್ಕಳು. ನೀವು ಒಬ್ಬರನ್ನೊಬ್ಬರು ಪ್ರೀತಿಸಿರಿ. ಭೂಲೋಕದಲ್ಲಿಯೂ ಸ್ವರ್ಗದಲ್ಲಿಯೂ

ಒಳ್ಳೆಯದು ಒಂದೇ ಆಗಿದೆ: ಅದೇನೆಂದರೆ ದಯೆಯಿಂದ ಕೂಡಿದ ಹೃದಯ. ನಿಮ್ಮ ಮಿತ್ರರಿಗೆ ಮಾತ್ರವಲ್ಲದೆ ಶತ್ರುಗಳಿಗೂ ದಯೆತೋರಿಸಿರಿ. ನಿಮ್ಮನ್ನು ಹಿಂಸಿಸುವವರಿಗಾಗಿ ಪ್ರಾರ್ಥಿಸಿರಿ," ಎಂದು ಯೇಸು ಉಪದೇಶಿಸಿದನು.

ಯೇಸುವಿನ ಉಪದೇಶ ದೀನದಲಿತರಿಗೆ ಉತ್ತೇಜಕವಾಗಿದ್ದು ಅಂದಿನ ಸಮಾಜದ ಉನ್ನತ ಸ್ಥಾನಗಳಲ್ಲಿದ್ದವರಿಗೆ ಕ್ರಾಂತಿಕಾರಕವಾಗಿ ಕಂಡಿತು. ಅವರು ಆತನ ಮೇಲೆ ದೇವದೂಷಕನೆಂಬ, ರಾಜದ್ರೋಹಿಯೆಂಬ ಅಪವಾದ ಹೊರಿಸಿ, ರೋಮಿನ ರಾಜ್ಯಪಾಲನಾದ ಪಿಲಾತನ ಮುಂದೆ ನ್ಯಾಯ ವಿಚಾರಣೆಗೆ ಕರೆತಂದರು. ಅವನಿಗೆ ಮರಣದಂಡನೆ ಆಗಬೇಕೆಂದು ಪಿಲಾತನನ್ನು ಒತ್ತಾಯಪಡಿಸಿದರು. ಪಿಲಾತನು ಜನರ ಗೊಂದಲ ಹಾಗೂ ಒತ್ತಾಯಕ್ಕೆ ಒಳಗಾಗಿ ಯೇಸುವಿನ ಮರಣದಂಡನೆಗೆ ಒಪ್ಪಿಗೆ ನೀಡಿದನು. ಯೇಸು ತನ್ನನ್ನು ಚಿತ್ರಹಿಂಸೆಗೆ ಗುರಿಮಾಡಿದ ಜನರನ್ನು ದೇವರು ಕ್ಷಮಿಸಲಿ ಎಂದು ಹೇಳುತ್ತಾ, ನಿಜ ಸತ್ಯಾಗ್ರಹಿಯಾಗಿ ಪ್ರಾಣಾರ್ಪಣೆ ಮಾಡಿದನು. ತಾನು ನುಡಿದಂತೆ ನಡೆದು ಮಡಿದ ಮಾನವ ಜನಾಂಗದ ಮಹಾತ್ಮರ ಪಟ್ಟಿಯಲ್ಲಿ ಯೇಸುವಿನ ಹೆಸರು ಚಿರಸ್ಥಾಯಿ.

ಮೂವತ್ತ ಮೂರುವರ್ಷ ವಯಸ್ಸಿನಲ್ಲಿ ಹುತಾತ್ಮನಾದ ಯೇಸುವಿನ ದೇಹವನ್ನು ಆತನ ಶಿಷ್ಯರಲ್ಲಿ ಕೆಲವರು ಸಮಾಧಿಯಲ್ಲಿಟ್ಟರು. ಮೂರು ದಿನಗಳನಂತರ ಆತನ ಸಮಾಧಿಯನ್ನು ನೋಡಲು ಹೋದ ಶಿಷ್ಯರಿಗೆ ಯೇಸುವಿನ ದೇಹ ಕಾಣಿಸಲಿಲ್ಲ. ಯೇಸು ಗೋರಿಯಿಂದ ಎದ್ದು ಬಂದನೆಂದು ಆತನ ಶಿಷ್ಯರು ನಂಬಿದರು.

ಅಂದಿನ ಭರತಖಂಡಕ್ಕೂ ಯೇಸುವಿನ ಮೂಲ (ಮೊದಲ) ಶಿಷ್ಯರಲ್ಲಿ ಒಬ್ಬನಾದ ಥಾಮಸನು ಕ್ರಿಸ್ತನ ಸುವಾರ್ತೆಯನ್ನು 60ರಲ್ಲಿ ತಂದನು. ಈತನು ಕೇರಳ ಪ್ರದೇಶದಲ್ಲಿ ಸುವಾರ್ತೆಯನ್ನು ಸಾರಿ ಭಾರತದ ಕ್ರೈಸ್ತ ಸಂಪ್ರದಾಯದ ಸ್ಥಾಪಕನಾದನು.

## ಕ್ಲಿಯೊಪಾತ್ರ

ಅಲೆಗ್ಸಾಂಡ್ರಿಯದ ಅರಮನೆ. ಅಂಬಿಗನೊಬ್ಬ ಹೆಗಲ ಮೇಲೆ ಸುತ್ತಿದ ಕಂಬಳಿಯೊಂದನ್ನು ಹೊತ್ತು ತಂದ. ಕಂಬಳಿಯನ್ನು ಕೆಳಗಿಳಿಸಿದ. ಸುತ್ತಿದ ಸುರುಳಿ ಬಿಚ್ಚಿತು. ಅರಮನೆಯಲ್ಲಿ ಕುಳಿತಿದ್ದ ರೋಮನ್ ಚಕ್ರಾಧಿಪತ್ಯದ ನಾಯಕ ಜೂಲಿಯಸ್ ಸೀಸರ್ ಅವಾಕ್ಕಾದ. ಸುರುಳಿಯೊಳಗಿಂದ ಎದ್ದು ನಿಂತಳು, ಹೆಣ್ಣು.

ಕ್ಲಿಯೊಪಾತ್ರ ಸೀಸರನ್ನು ಮೊದಲಬಾರಿಗೆ ಸಂಧಿಸಿದ್ದು ಹೀಗೆ.

ಈಜಿಪ್ಟಿನ ರಾಣಿ ಆಕೆ. ಅಂಥ ಚೆಲುವೆಯೇನಲ್ಲ. ಆದರೆ ಅತ್ಯಂತ ಆಕರ್ಷಕ ವ್ಯಕ್ತಿತ್ವ ಅವಳದು. ಎಂಥ ವೀರ ಪುರುಷನ ಹೃದಯವನ್ನೂ ಸೆಳೆಯಬಲ್ಲ ಶಕ್ತಿ ಅವಳಿಗಿತ್ತು. ಸುಮಧುರ ಕಂಠ. ಅತಿಶಯ [illegible]. ಅಸಾಧಾರಣ ಸ್ಥೈರ್ಯ. ಧೈರ್ಯ.

ಕ್ಲಿಯೊಪಾತ್ರ ವಿದ್ಯಾವಂತೆ. ಸಾಹಿತ್ಯಾಭ್ಯಾಸದಲ್ಲಿ ಅತೀವ ಆಸಕ್ತಿ. ಅನೇಕ ಭಾಷೆಗಳನ್ನು ಕಲಿತಿದ್ದಳು.

ಆಕೆ ಹುಟ್ಟಿನಿಂದ ಈಜಿಪ್ಟಿನವಳಲ್ಲ: ಅರ್ಧ ಮ್ಯಾಸಿಡೋನಿಯದವಳು. ಅರ್ಧ ಗ್ರೀಕ್. ಅವಳ ತಂದೆ–ಹನ್ನೊಂದನೆಯ ಟಾಲೆಮಿ–ಕಾಲವಾದ ಮೇಲೆ ತನ್ನ ಹದಿನೇಳನೆಯ ವಯಸ್ಸಿನಲ್ಲಿಯೇ ಹತ್ತು ವರ್ಷದ ತಮ್ಮನೊಡನೆ ರಾಜ್ಯಭಾರ ವಹಿಸಿಕೊಂಡಳು. ಮೂರು ವರ್ಷದ ಅನಂತರ ಪ್ರಮುಖರು ಅವಳ ತಮ್ಮನ ಪಕ್ಷ ವಹಿಸಿ ಆಕೆಯನ್ನು ರಾಜ್ಯದಿಂದ ಹೊರಕ್ಕೆ ಹಾಕಿದರು.

ಸ್ವತಂತ್ರ ಈಜಿಪ್ಟ್ ಆ ವೇಳೆಯಲ್ಲಿ ರೋಮಿನ ಮಿತ್ರರಾಷ್ಟ್ರವಾಗಿತ್ತು. ಕ್ಲಿಯೊಪಾತ್ರ ರಾಜ್ಯದಿಂದ ಹೊರಟುಹೋದ ಸ್ವಲ್ಪ ಕಾಲದಲ್ಲಿ ಜೂಲಿಯಸ್ ಸೀಸರ್ ಈಜಿಪ್ಟಿಗೆ ಹೋದ.

ಆಗಲೇ ಕ್ಲಿಯೋಪಾತ್ರ ಅಂಬಿಗನಿಗೆ ದುಡ್ಡುಕೊಟ್ಟು ಅಲೆಗ್ಸಾಂಡ್ರಿಯದ ಅರಮನೆಯನ್ನು ಕಂಬಳಿಯ ಸುರುಳಿಯಲ್ಲಿ ಅವಿತು ಪ್ರವೇಶಿಸಿದ್ದು.

ಎದುರಿಗೆ ನಿಂತ ದಿಟ್ಟತನದ ಆಕರ್ಷಕ ಸ್ತ್ರೀಯನ್ನು ನೋಡಿ ಸೀಸರ್ ಅವಳಿಗೆ ಮನಸೋತ. ರಾಜ್ಯವನ್ನು ಮತ್ತೆ ಪಡೆಯಲು ಸೀಸರನ ಸಹಾಯವನ್ನು ಕ್ಲಿಯೊಪಾತ್ರ ಅಪೇಕ್ಷಿಸಿದಳು. ಸಣ್ಣ ಯುದ್ಧವಾಗಿ, ಕ್ಲಿಯೊಪಾತ್ರಳ ತಮ್ಮ ಹನ್ನೆರಡನೆಯ ಟಾಲೆಮಿ ಹತನಾದ. ಸೀಸರ್ ಕ್ಲಿಯೊಪಾತ್ರಳಿಗೆ ರಾಜ್ಯ ಕೊಡಿಸಿ, ಆಕೆ ತನ್ನ ಕೊನೆಯ ತಮ್ಮ ಹದಿಮೂರನೆಯ ಟಾಲೆಮಿಯ ಜೊತೆಯಲ್ಲಿ ರಾಜ್ಯವಾಳುವಂತೆ ಮಾಡಿದ.

ಕ್ಲಿಯೊಪಾತ್ರಳಿಗೆ ಸೀಸರನಿಂದ ಒಂದು ಗಂಡು ಮಗುವಾಯಿತು. ಅದನ್ನು ಅಲೆಗ್ಸಾಂಡ್ರಿಯದವರು ಸಿಸೇರಿಯನ್ (ಪುಟ್ಟ ಸೀಸರ್) ಎಂದು ಕರೆದರು. ಕ್ಲಿಯೋಪಾತ್ರ ಸೀಸರನ ಜೊತೆಯಲ್ಲಿ ರೋಮಿಗೆ ಹೋದಳು. ರೋಮಿನಲ್ಲಿ ಸೀಸರನ ಹತ್ಯೆಯಾಯಿತು.

ಸೀಸರನ ಮರಣಾನಂತರ ಕ್ರಿಯೊಪಾತ್ರಳ ತಮ್ಮ ಹದಿಮೂರನೆಯ ಟಾಲೆಮಿಯ ಕೊಲೆಯಾಯಿತು. ಕ್ಲಿಯೊಪಾತ್ರ ತನ್ನ ಮಗನನ್ನು ಟಾಲೆಮಿ ಸೀಸರ್ ಎಂದು ಕರೆದು ತನ್ನ ಜೊತೆ ಈಜಿಪ್ಟಿನ ಪಟ್ಟಕ್ಕೆ ತಂದಳು.

ಸೀಸರನ ಅಂತ್ಯವಾದ ಮೇಲೆ ಸೀಸರನ ಗೆಳೆಯ ಮಾರ್ಕ್ ಆಂಟನಿ ಹಾಗೂ ಸೀಸರನ ಬಂಧು ಆಕ್ಟೇವಿಯಸ್ ರೋಮನ್ ಚಕ್ರಾಧಿಪತ್ಯದ ಜಂಟಿ ನಾಯಕರಾದರು. ಶತ್ರುಗಳಿಗೆ ಸಹಾಯಮಾಡಿದಳೆಂಬ ಆಪಾದನೆಗೆ ಉತ್ತರವೀಯಬೇಕೆಂದೂ ಅದಕ್ಕಾಗಿ ಟಾರ್ಸಸ್ ಎಂಬಲ್ಲಿಗೆ ಬರಬೇಕೆಂದೂ ಆಂಟನಿ ಕ್ಲಿಯೊಪಾತ್ರಳಿಗೆ ಹೇಳಿಕಳುಹಿಸಿದ. ಕ್ಲಿಯೊಪಾತ್ರ ತಪ್ಪಿತಸ್ಥಳಂತೆ ಹೋಗಲಿಲ್ಲ: ಕೆಚ್ಚಿನ ರಾಣಿಯಂತೆ ಹೋದಳು.

ಕ್ಲಿಯೊಪಾತ್ರಳ ವೈಭವವನ್ನು ನೋಡಿದ ಆಂಟನಿ ಅವಳ ಮೇಲಿನ ಆಪಾದನೆಯನ್ನು ಮರೆತು ಅವಳೊಡನೆ ಅಲೆಗ್ಸಾಂಡ್ರಿಯಕ್ಕೆ ಹೋದ.

ಚಳಿಗಾಲದುದ್ದಕ್ಕೂ ಸಂತೋಷ ಸಮಾರಂಭಗಳು ನಡೆದುವು. ಚಳಿಗಾಲದ ಕೊನೆಯಲ್ಲಿ ಆಂಟನಿ ರೋಮಿಗೆ ಹಿಂದಿರುಗಿದ. ಆಕ್ಟೇವಿಯಸ್‌ನೊಂದಿಗೆ ತನ್ನ ಸಂಬಂಧವನ್ನು ಬಲಪಡಿಸಲು ಆತನ ತಂಗಿ ಆಕ್ಟೇವಿಯಳನ್ನು ಮದುವೆಯಾದ. ಅಷ್ಟು ಹೊತ್ತಿಗೆ ಕ್ಲಿಯೊಪಾತ್ರಳಿಗೆ ಆಂಟನಿಯಿಂದ ಅವಳಿ ಮಕ್ಕಳಾಗಿದ್ದುವು. ಆಂಟನಿಗೆ ಆಕ್ಟೇವಿಯಳ ಸಹವಾಸ ಬೇಸರವಾಗಿ ಅವನು ಅಲೆಗ್ಸಾಂಡ್ರಿಯಕ್ಕೆ ಹಿಂತಿರುಗಿದ. ಈಜಿಪ್ಟಿನ ಕಾನೂನಿಗನುಸಾರ ಕ್ಲಿಯೊಪಾತ್ರಳನ್ನು ವಿವಾಹವಾದ.

ಇತ್ತ ರೋಮಿನಲ್ಲಿ ಆಕ್ಟೇವಿಯಸ್, ಕ್ಲಿಯೊಪಾತ್ರಳ ಮಗ ಸಿಸೇರಿಯನ್ ತನ್ನ ಪ್ರಾಬಲ್ಯಕ್ಕೊಂದು ಕುತ್ತಾಗಬಹುದೆಂದು ಹೆದರಿ, ಆಂಟನಿಯ ಮೇಲೆ ಯುದ್ಧಕ್ಕೆ ಅಣಿಯಾದ. ಕ್ರಿ. ಪೂ. 31ರಲ್ಲಿ ಆಕ್ಟೇವಿಯಸ್ ನಡೆಸಿದ ಯುದ್ಧದಲ್ಲಿ ಆಂಟನಿಗೂ ಕ್ಲಿಯೊಪಾತ್ರಳಿಗೂ ಸೋಲಾಯಿತು.



'ಸುರುಳಿಯೊಳಗಿಂದ ಎದ್ದು ನಿಂತಳು ಹೆಣ್ಣು'

ಕ್ಲಿಯೊಪಾತ್ರ ತನ್ನ ನಾವೆಗಳ ಸಮೇತ ಅಲೆಗ್ಸಾಂಡ್ರಿಯಕ್ಕೆ ಹಿಂದಿರುಗಿದಳು. ಆಂಟನಿ ಹಿಂಬಾಲಿಸಿದ. ಆದರೆ ಆತ ಪಟ್ಟಣವನ್ನು ಸೇರುವ ಹೊತ್ತಿಗೆ ಕ್ಲಿಯೊಪಾತ್ರ ಸತ್ತಳೆಂಬ ಸುದ್ದಿ ಬಂತು. ಅದು ಸುಳ್ಳು ಸುದ್ದಿ ಎಂದು ತಿಳಿಯುವುದಕ್ಕೆ ಮೊದಲೆ ಆಂಟನಿ ತನ್ನನ್ನು ತಾನೇ ಇರಿದುಕೊಂಡು ಸತ್ತ.

ಆಕ್ಟೇವಿಯಸನನ್ನು ಒಲಿಸಲು ಕ್ಲಿಯೊಪಾತ್ರ ಪ್ರಯತ್ನಿಸಿದಳು. ಆದರೆ ಯಶಸ್ವಿಯಾಗಲಿಲ್ಲ. ರೋಮಿನಲ್ಲಿ ತನ್ನ ವಿಜಯ ಯಾತ್ರೆಯ ಮೆರವಣಿಗೆಯ ಸಂದರ್ಭದಲ್ಲಿ ಕ್ಲಿಯೊಪಾತ್ರಳನ್ನು ಬಂಧಿಸಿ ರೋಮಿನ ರಸ್ತೆಗಳಲ್ಲಿ ಕರೆತರಲಾಗುವುದೆಂದು ಆಕ್ಟೇವಿಯಸ್ ಸಾರಿದ. ಅದನ್ನು ಕೇಳಿದ ಕ್ಲಿಯೊಪಾತ್ರ ಆತ್ಮಹತ್ಯೆ ಮಾಡಿಕೊಂಡಳು, ಅಂಜೂರದ ಬುಟ್ಟಿಯಲ್ಲಿ ವಿಷದ ಹಾವೊಂದನ್ನು ತರಿಸಿಕೊಂಡಳೆಂದೂ ಅದರಿಂದ ಕಡಿಯಲ್ಪಟ್ಟು ಸತ್ತಳೆಂದೂ ಕಥೆ.

ಕ್ಲಿಯೊಪಾತ್ರಳ ಮರಣಾನಂತರ ಸಿಸೇರಿಯನನ ಕೊಲೆಯಾಯಿತು.

ಇಂಗ್ಲೆಂಡಿನ ನಾಟಕಕಾರ ಷೇಕ್ಸ್‌ಪಿಯರ್, 'ವಯಸ್ಸು ಅವಳನ್ನು ಬಾಡಿಸಲಿಲ್ಲ; ರೂಢಿ ಅವಳ ಅನಂತ ವೈವಿಧ್ಯವನ್ನು ಕುಂದಿಸಲಿಲ್ಲ' ಎಂದು ಕ್ಲಿಯೊಪಾತ್ರಳನ್ನು ಹೊಗಳಿದ್ದಾನೆ. ಗಂಡಸಿನ ಮನಸ್ಸನ್ನು ಸೆಳೆದು ರಾಜ್ಯಗಳ ಹಣೆಯ ಬರಹವನ್ನು ಬದಲಿಸಿ, ಚರಿತ್ರೆಯನ್ನು ಸೃಷ್ಟಿಸುವಂಥ ಹೆಣ್ಣಿನ ಆಕರ್ಷಣೆಗೆ ಕ್ಲಿಯೊಪಾತ್ರ ಪ್ರತೀಕವಾಗಿದ್ದಾಳೆ.

## ಕೀನ್ಯ

"ಹೊಳೆಯುವ ಪರ್ವತದ ನಾಡು"—ಯಾವುದು ಗೊತ್ತೆ? ಕೀನ್ಯ. ಈ ಪದದ ಅರ್ಥವೇ ಅದು.

ಕೀನ್ಯ ಆಫ್ರಿಕದ ಪೂರ್ವ ತೀರದಲ್ಲಿದೆ. ನೈಋತ್ಯ ಭಾಗದಲ್ಲಿ ವಿಶಾಲವಾದ ಎತ್ತರಭೂಮಿ ಇದೆ. ಇಲ್ಲಿ ಉಷ್ಣಾಂಶ ಕಡಮೆ ಇರುವುದರಿಂದ ಐರೋಪ್ಯರೂ ವಾಸವಾಗಿದ್ದಾರೆ. ಕಿಕುಯು ಪಂಗಡದವರು ತಮ್ಮ ದೇವರು ನೆಲೆಸಿರುವನೆಂದು ನಂಬಿರುವ ಕೀನ್ಯ ಪರ್ವತ 5,197 ಮೀಟರು ಎತ್ತರವಿದೆ. ಭೂಮಧ್ಯರೇಖೆ ಹಾಯುವ ಕಡೆ ಇದ್ದರೂ ಪರ್ವತ ಶಿಖರಗಳು ಹಿಮಾವೃತವಾಗಿವೆ. ಉತ್ತರದಿಂದ ದಕ್ಷಿಣಕ್ಕೆ ಬೃಹತ್ ರಿಫ್ಟ್ ಕಣಿವೆ ಹರಡಿಕೊಂಡಿದೆ. ಪಶ್ಚಿಮದ ಬೆಟ್ಟ ಪ್ರದೇಶ ವಿಕ್ಟೋರಿಯ ಸರೋವರದ ಕಡೆ ಇಳಿಜಾರಾಗಿದೆ. ಪೂರ್ವಕ್ಕೆ ಕಾಡು ಪ್ರದೇಶವಿದೆ. ಟಾನಾ ಮತ್ತು ಅಥಿ ಮುಖ್ಯ ನದಿಗಳು.

ಕೀನ್ಯದಲ್ಲಿ ಒಂದೊಂದು ಕಡೆಯೂ ಒಂದೊಂದು ರೀತಿಯ ಹವಾಗುಣ. ತಗ್ಗು ಪ್ರದೇಶದಲ್ಲಿ ಉಷ್ಣಾಂಶ ಬಹಳ, ಎತ್ತರ ಪ್ರದೇಶ ತಂಪು. ಉತ್ತರ ಭಾಗದಲ್ಲಿ ಮಳೆ ಕಡಮೆ, ದಕ್ಷಿಣದಲ್ಲಿ ಹೆಚ್ಚು.

ಧಾನ್ಯಗಳು, ಹತ್ತಿ, ಕಾಫಿ, ಚಹ, ಕತ್ತಾಳೆ, ಸೋಯಾ ಅವರೆ ಹಣ್ಣುಗಳನ್ನು ಬೆಳೆಯುತ್ತಾರೆ; ದನಗಳನ್ನು ಸಾಕುತ್ತಾರೆ.

ಸುಣ್ಣಕಲ್ಲು, ತಾಮ್ರ, ಉಪ್ಪು, ಸೋಡಾ, ಡಯಟೋಮೈಟ್ ಮೊದಲಾದ ಖನಿಜಗಳು ದೊರಕುತ್ತವೆ.

ಆಹಾರ ಸಂಸ್ಕರಣ, ಪಶುಪಾಲನೆಯಿಂದಾಗುವ ಉತ್ಪನ್ನಗಳು, ಸಿಮೆಂಟ್ ಮುಂತಾದ ಕೈಗಾರಿಕೆಗಳಿವೆ.

ಇಲ್ಲಿಯ ಜನ ಹಲವು ಪಂಗಡಗಳಿಗೆ ಸೇರಿದವರು. ಕಿಕುಯು ಜನ ಇನ್ನೂ ತಮ್ಮ ಹಳೆಯ ಪದ್ಧತಿಗಳನ್ನೆ ಅನುಸರಿಸುತ್ತಿದ್ದರೂ ಕಾಲ ಬದಲಾದಂತೆ ಅವರ ಜೀವನದ ರೀತಿಯೂ ಬದಲಾಗುತ್ತಿದೆ. ಅವರಲ್ಲಿ ಬಹಳ ಮಂದಿ ಗುಂಡನೆಯ ಗುಡಿಸಲುಗಳಲ್ಲಿ ಈಗಲೂ ವಾಸವಾಗಿದ್ದಾರೆ. ಮಸಾಯ್ ಬುಡಕಟ್ಟಿನ ಜನ ಅಲೆಮಾರಿಗಳು. ಅವರು ಈಗಲೂ ಮೈಗೆ ಕೊಬ್ಬು ಮತ್ತು ಕೆಂಪು ಮಣ್ಣನ್ನು ಹಚ್ಚಿಕೊಳ್ಳುತ್ತಾರೆ. ಇವರು ದಕ್ಷಿಣ ಕೀನ್ಯದಲ್ಲಿ ತಮ್ಮ ದನ, ಕುರಿ, ಮೇಕೆಗಳೊಂದಿಗೆ ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಂಚರಿಸುತ್ತಿರುತ್ತಾರೆ. ಇದರಿಂದಾಗಿ ಬೇಸಾಯ ಅವರಿಗೆ ಸಾಧ್ಯವಾಗುವುದಿಲ್ಲ. ಹಾಲು ಅವರ ಜೀವನಾಧಾರ. ಇತರ ಜನರಿಂದ ಕಾಳು ಕದ್ದು ಕೊಂಡುಕೊಳ್ಳುತ್ತಾರೆ. ಲುಯಿ, ಬಲುಹ್ಯ, ಕಂಬ, ಕಿಸಿ, ನಂದಿ ಇವು ಇತರ ಮುಖ್ಯ ಪಂಗಡಗಳು. ಆಂಗ್ಲರು ಬಂದು ನೆಲೆಸಿದ ಮೇಲೆ ವಿದ್ಯಾಭ್ಯಾಸದ ಕಡೆ ಈ ಬುಡಕಟ್ಟಿನ ಜನರ ಗಮನವು ಹರಿದಿದೆ. ಇಲ್ಲಿ ಮುಸಲ್ಮಾನರೂ ಇದ್ದಾರೆ. ಕ್ರೈಸ್ತಧರ್ಮವೂ ಬೆಳೆಯುತ್ತಿದೆ. ಕೀನ್ಯದಲ್ಲಿ ಏಷ್ಯದವರು, ಇಂಗ್ಲಿಷರು, ಅರಬರು ಇದ್ದಾರೆ.

ಕೀನ್ಯದ ಜನ ಸಸ್ಯಪ್ರಿಯರು, ತೋಟವೆಂದರೆ ಪ್ರಾಣ. ಇವರು ಮಗುವಿಗೆ ನೆಲ ಅಗೆಯುವ ಶಕ್ತಿ ಬರುತ್ತಲೇ ಅವನಿಗೆ ಬೀಜಗಳನ್ನು ಕೊಟ್ಟು, ಗಿಡಹಾಕಿ ಬೆಳೆಸುವುದನ್ನು ಕಲಿಸುತ್ತಾರೆ. ಅವನೇ ಗಿಡಗಳನ್ನು ಬೆಳೆಸಲು, ಅವನು ಬೆಳೆದಂತೆ ದೊಡ್ಡ ಜಾಗಗಳನ್ನು ಕೊಡುತ್ತಾರೆ. ಮದುವೆಯ ಅನಂತರವೂ ಎಷ್ಟೋ ಮಂದಿ ತಮ್ಮ ಬಾಲ್ಯದ ಗಿಡಗಳನ್ನು ಪೋಷಿಸುತ್ತಿರುವುದುಂಟು.

ರಾಜಧಾನಿ ನೈರೋಬಿ, ಆಧುನಿಕ ನಗರ. ಇದು ಕೈಗಾರಿಕೆ, ವಾಣಿಜ್ಯಗಳ ಕೇಂದ್ರವೂ ಆಗಿದೆ. ಕೀನ್ಯ ಹಾಗೂ ಉಗಾಂಡಗಳೆರಡಕ್ಕೂ ಮೊಂಬಾಸಾ ಬಂದರು. ಕೀಸುಮೂ ವಿಕ್ಟೋರಿಯ ಸರೋವರದ ಬಂದರು.

ಚಿನ್ನ, ಮತ್ತಿತರ ವಸ್ತುಗಳಿಗಾಗಿ ಹುಡುಕುತ್ತ ಹೊರಟ ಅರಬ್ ವರ್ತಕರು 2,000 ವರ್ಷಗಳ ಹಿಂದೆ ಕೀನ್ಯವನ್ನು ಪತ್ತೆಮಾಡಿದರು. ಏಳನೆಯ ಶತಮಾನದಿಂದ ಅರಬರು ಇದನ್ನು ಮುಂದೆ ತಂದರು. 1498ರಲ್ಲಿ ವಾಸ್ಕೋ ದ ಗಾಮ ಇಲ್ಲಿಗೆ ಬಂದಿದ್ದ. ಪೋರ್ಚುಗೀಸರು 1740ರ ವರೆಗೂ ತೀರ ಪ್ರದೇಶಗಳಲ್ಲಿ ವ್ಯಾಪಾರ ಕೇಂದ್ರಗಳನ್ನು ಮಾಡಿಕೊಂಡಿದ್ದರು. ಆದರೆ ಅರಬರು ಅವರನ್ನು ಓಡಿಸಿಬಿಟ್ಟರು. ಕೀನ್ಯಕ್ಕೆ ಬಂದ ಬ್ರಿಟಿಷರು, ಕೀನ್ಯ ಉಗಾಂಡಗಳನ್ನು ಕೂಡಿಸಿ ರಾಜ್ಯಪಾಲನ ಅಧೀನದಲ್ಲಿ ಪೂರ್ವ ಆಫ್ರಿಕ ರಾಜ್ಯವನ್ನು 1895ರಲ್ಲಿ ಸ್ಥಾಪಿಸಿದರು. ಹಲವು ವರ್ಷಗಳ ಬಳಿಕ ಕೀನ್ಯ ಉಗಾಂಡ ಬೇರೆ ಬೇರೆ ಆದುವು. ಐರೋಪ್ಯರು ಬಹು ಸಂಖ್ಯೆಯಲ್ಲಿ ಇಲ್ಲಿಗೆ ಬಂದು ನೆಲೆಸುತ್ತಿದ್ದರು. ಆಫ್ರಿಕನ್ನರಿಗೆ ಇವರಲ್ಲಿ ದ್ವೇಷ ಉಂಟಾಗಿ 1950ರಲ್ಲಿ ಈ ವಿರೋಧ ವಿಶೇಷ ಉಗ್ರ ರೂಪ ತಾಳಿತು. ಮೌ ಮೌ ಎಂಬ ಸಂಸ್ಥೆ ಸ್ಥಾಪಿತವಾದದ್ದು ಈ ಸಮಯದಲ್ಲಿ. ಇದರ ಸದಸ್ಯರಿಗೆ ಹಿಂಸೆ, ಗುಟ್ಟಾಗಿ ಚಳುವಳಿ ಮಾಡುವುದು ಇವುಗಳಲ್ಲಿ ನಂಬಿಕೆ. ರಾಷ್ಟ್ರೀಯ ಚಳುವಳಿಯ ಮುಂದಾಳು ಜೋಮೋ ಕೆನ್ಯಾಟರನ್ನು ಬ್ರಿಟಿಷರು ಸೆರೆಮನೆಗೆ ಹಾಕಿದರು. 1963ರ ಡಿಸೆಂಬರ್ 12ರಂದು ಕೀನ್ಯ ಸ್ವತಂತ್ರವಾಯಿತು, ಒಂದು ವರ್ಷದ ಅನಂತರ ಗಣರಾಜ್ಯವಾಯಿತು. ಬ್ರಿಟಿಷ್ ಕಾಮನ್‌ವೆಲ್ತ್‌ನ ಸದಸ್ಯ ರಾಷ್ಟ್ರವೂ ಆಯಿತು. ಜೋಮೋ ಕೆನ್ಯಾಟ ಪ್ರಥಮ ಅಧ್ಯಕ್ಷರು.

| | | |
|---|---|---|
| ಖಂಡ | : | ಆಫ್ರಿಕ (ಪೂರ್ವತೀರ) |
| ಅಕ್ಷಾಂಶ | ; | 4° 37′ ಉ ದಿಂದ 4° 41′ ದ |
| ರೇಖಾಂಶ | : | 33° 55′ ಪೂ ದಿಂದ 41° 55′ ಪೂ |
| ವಿಸ್ತೀರ್ಣ | : | 5,82,646 ಚ. ಕಿ. ಮೀ. |
| ಜನಸಂಖ್ಯೆ | : | ಸುಮಾರು 87,00,000 |
| ರಾಜಧಾನಿ | : | ನೈರೋಬಿ |
| ಸರಕಾರ | : | ಗಣರಾಜ್ಯ |
| ಭಾಷೆ | : | ಸ್ವಾಹಿಲಿ, ಇಂಗ್ಲಿಷ್ |
| ಬಾವುಟ | : | ನೀಲಿ, ಕೆಂಪು, ಹಸಿರು ಅಡ್ಡಪಟ್ಟಿಗಳು, ರಡುವ ಅಡ್ಡಪಟ್ಟಿಗಳ ನಡುವೆ ಸಣ್ಣ ಬಿಳಿಯ ಅಡ್ಡ ಪಟ್ಟಿ, ಮಧ್ಯದಲ್ಲಿ ಗುರಾಣಿ, ಹಿಂದೆ ಎರಡು ಭರ್ಜಿಗಳು |

## ಕ್ಷಿಪಣಿ

ಶೂನ್ಯದಲ್ಲೂ ಸಂಚಾರ—ಅದೂ ಅತಿ ವೇಗದ ಚಲನೆ—ಮಾನವನ ಮಹತ್ಸಾಧನೆ.

ನೆಲದ ಮೇಲೆ ನಡೆಯಬೇಕಾದರೆ ನೆಲದ ಆಸರೆ ಬೇಕು. ನೀರಿನಲ್ಲಿ ಚಲಿಸಬೇಕಾದರೆ ನೀರಿನ ಆಸರೆ ಬೇಕು. ಹಾಗೆಯೇ ವಿಮಾನದಲ್ಲಿ ಕುಳಿತು ಗಾಳಿಯಲ್ಲಿ ಪ್ರಯಾಣ ಮಾಡಬೇಕಾದರೂ ಗಾಳಿಯ ಆಸರೆ ಇರಬೇಕು. ಗಾಳಿಯಿಲ್ಲದಿದ್ದರೆ ವಿಮಾನ ಹಾರಲು ಆಗುವುದೇ ಇಲ್ಲ. ಹೀಗೆ ಚಲನೆಗೆ ಯಾವುದಾದರೂ ಒಂದು ಮಾಧ್ಯಮ ಇರಬೇಕು. ಭೂಮಿಯ ಮೇಲ್ಮೈಯಿಂದ 241 ಕಿ. ಮೀ. ಎತ್ತರಕ್ಕೆ ಹೋದರೆ ಅಲ್ಲಿ ಗಾಳಿ ಇರುವುದಿಲ್ಲ. ಹಾಗಾದರೆ ಏನಿರುತ್ತದೆ ? ಏನೂ ಇರುವುದಿಲ್ಲ. ಹೀಗೆ ಏನೂ ಇಲ್ಲದಿರುವ ಸ್ಥಳವನ್ನು ನಿರ್ವಾತ ಅಥವಾ ಶೂನ್ಯ ಎಂದು ಕರೆಯುತ್ತಾರೆ. ಇಂಥ ನಿರ್ವಾತದಲ್ಲಿ ಪ್ರಯಾಣ ಮಾಡುವುದು ಹೇಗೆ ? ಇದಕ್ಕೋಸ್ಕರವೇ ಕ್ಷಿಪಣಿ ಎಂಬ ಯಂತ್ರವನ್ನು ವಿಜ್ಞಾನಿಗಳು ಕಂಡುಹಿಡಿದಿದ್ದಾರೆ.

ಕ್ಷಿಪಣಿಯ ಯಂತ್ರವೂ ನ್ಯೂಟನ್ನನ ಮೂರನೆಯ ಚಲನ ನಿಯಮವನ್ನು ಅನುಸರಿಸಿ ಕೆಲಸಮಾಡುತ್ತದೆ. "ಪ್ರತಿಯೊಂದು ಕ್ರಿಯೆಗೂ ಸಮನಾದ ಮತ್ತು ವ್ಯತಿರಿಕ್ತವಾದ ಪ್ರತಿಕ್ರಿಯೆ ಇರುತ್ತದೆ." ಇದೇ ನ್ಯೂಟನ್ನನ ಮೂರನೆಯ ಚಲನ ನಿಯಮ. ದೀಪಾವಳಿಯಲ್ಲಿ ವಿಷ್ಣುಚಕ್ರವನ್ನು ನೋಡಿದ್ದೇವೆ. ಸುರುಳಿಯಾಗಿ ಸುತ್ತಿರುವ ವಿಷ್ಣುಚಕ್ರದ ಕೊನೆಗೆ ಬೆಂಕಿಕೊಟ್ಟರೆ ಅಲ್ಲಿಂದ ಕಿಡಿಗಳು ರಭಸವಾಗಿ ಹೊರಬರುತ್ತವೆ. ಇದು ಕ್ರಿಯೆಯಾಯಿತು. ಇದಕ್ಕೆ ಪ್ರತಿಕ್ರಿಯೆಯಾಗಿ ಚಕ್ರವು ಕಿಡಿಗಳ ದಿಕ್ಕಿಗೆ ವಿರುದ್ಧವಾದ ದಿಕ್ಕಿನಲ್ಲಿ ತಳ್ಳಲ್ಪಡುತ್ತದೆ. ಕಿಡಿಗಳು ಸತತವಾಗಿ ಹೊರಬರುತ್ತಿರುವುದರಿಂದ ವಿಷ್ಣುಚಕ್ರವು ಸತತವಾಗಿ ತಳ್ಳಲ್ಪಡುತ್ತದೆ. ಅಲ್ಲದೆ ಅದು ಹಿಂದಕ್ಕೆ ತಳ್ಳಲ್ಪಡುವ ಶಕ್ತಿಯೂ ವೃದ್ಧಿಯಾಗುತ್ತ ಹೋಗುತ್ತದೆ. ಆದುದರಿಂದ ಅದು ತಿರುಗುವ ವೇಗವೂ ಹೆಚ್ಚಾಗುತ್ತದೆ. ವಿಷ್ಣುಚಕ್ರ ಗುಂಡಗಿರುವುದರಿಂದ ಇದು ವೃತ್ತಾಕಾರದಲ್ಲಿ ತಿರುಗುತ್ತದೆ. ಅದು ನೇರವಾಗಿದ್ದಿದ್ದರೆ ಕಿಡಿಗಳ ವಿರುದ್ಧ ದಿಕ್ಕಿನಲ್ಲಿ ನೇರವಾಗಿ ಮೇಲಕ್ಕೆ ಹೋಗುತ್ತಿತ್ತು. ವಿಷ್ಣುಚಕ್ರದ ತತ್ತ್ವವನ್ನೇ ಕ್ಷಿಪಣಿಗೂ ಅಳವಡಿಸಿಕೊಂಡಿದ್ದಾರೆ. ಈ ತತ್ತ್ವದಿಂದ ಭೂಮಿ ನೀರು ಗಾಳಿ ಇವು ಯಾವುವೂ ಇಲ್ಲದೆ ಇದ್ದರೂ ಅಂದರೆ ನಿರ್ವಾತವಾದರೂ ಚಲನೆಯನ್ನು ಸಾಧಿಸಬಹುದು.

ಸಾಮಾನ್ಯವಾಗಿ ಕ್ಷಿಪಣಿಯಲ್ಲಿ ಎರಡು ಇಂಧನಗಳನ್ನು ಉಪಯೋಗಿಸುತ್ತಾರೆ. ಒಂದು ಉರಿಯಲಿಕ್ಕೆ. ಇನ್ನೊಂದು ಉರಿಯಲು ಸಹಾಯ ಮಾಡಲಿಕ್ಕೆ. ಈ ಇಂಧನಗಳನ್ನು ದ್ರವರೂಪದಲ್ಲಿ ಪಾತ್ರೆಗಳಲ್ಲಿ ಶೇಖರಿಸಿಡುತ್ತಾರೆ. ಪಾತ್ರೆಗಳಿಂದ ಸಣ್ಣ ಕೊಳವೆಗಳ ಮೂಲಕ ಅವು ಹೊರಗೆ ಬಂದು ಒಂದೇ ಕಡೆ ಸೇರುತ್ತವೆ. ಮೊದಲಿಗೆ ಅವು ದ್ರವರೂಪದಿಂದ ಅನಿಲ ರೂಪಕ್ಕೆ ಬರುತ್ತವೆ. ಹೀಗಾಗುವಾಗ ಅವುಗಳ ಗಾತ್ರ ಒಂದರಿಂದ 800ರಷ್ಟು ಹೆಚ್ಚಾಗುತ್ತದೆ. ಈ ಸಂದರ್ಭದಲ್ಲಿ ಅವಕ್ಕೆ ಬೆಂಕಿ ಕೊಟ್ಟರೆ ಅವು ರಭಸವಾಗಿ ಉರಿದು ಜ್ವಾಲೆಗಳನ್ನು ಹೊರಗೆಡವುತ್ತವೆ. ಜ್ವಾಲೆಗಳು ನೆಲದ ಕಡೆಗೆ ರಭಸದಿಂದ ಹೊರಬರುವುದೆ ಕ್ರಿಯೆ. ಇದಕ್ಕೆ ಪ್ರತಿಕ್ರಿಯೆಯಾಗಿ ಕ್ಷಿಪಣಿಯು ಜ್ವಾಲೆಗಳ ವಿರುದ್ಧ ದಿಕ್ಕಿನಲ್ಲಿ ಹಾರುತ್ತದೆ. ಇದೇ ಕ್ಷಿಪಣಿಯ ತಂತ್ರ, ಕ್ಷಿಪಣಿಯಿಂದಾಗಿ ನಿರ್ವಾತದಲ್ಲಿ ಚಲನೆ ಸಾಧ್ಯವಾಗಿದೆ ಅಷ್ಟೇ ಅಲ್ಲ. ಘಂಟೆಗೆ ಸಹಸ್ರಾರು ಕಿ. ಮೀ. ವೇಗ ಸಾಧ್ಯವಿದೆ.

ಕ್ಷಿಪಣಿಗಳ ಬಳಕೆ ಭಾರತಕ್ಕೆ ಹೊಸದಲ್ಲ. ಮೂರನೆಯ ಮೈಸೂರು ಯುದ್ಧದಲ್ಲಿ ಟಿಪ್ಪು ಕ್ಷಿಪಣಿಗಳನ್ನು ಬಳಸಿದ. ಒಂದು ಕ್ಷಿಪಣಿಗೆ ಮೂರು ಸಿಪಾಯಿಗಳನ್ನು ಕೊಲ್ಲುವ ಶಕ್ತಿ ಇದ್ದಿತು. ದ್ವಿತೀಯ ಮಹಾಯುದ್ಧದಲ್ಲಿ ಜರ್ಮನರು ಕ್ಷಿಪಣಿಗಳನ್ನು ತಯಾರುಮಾಡಿ ಯುದ್ಧದಲ್ಲಿ ಗೆಲ್ಲಲು ಪ್ರಯತ್ನಿಸಿದ್ದರು. ಈ ಕ್ಷಿಪಣಿಯನ್ನು ಆಕಾಶಯಾನಕ್ಕೆ ಅಳವಡಿಸಿಕೊಂಡಿರುವುದು ಒಂದು ಶುಭಸೂಚನೆಯೇ ಸರಿ.

## ಕುಕ್, ಕ್ಯಾಪ್ಟನ್ ಜೇಮ್ಸ್

"ಇದುವರೆಗೆ ಮನುಷ್ಯ ಎಷ್ಟು ದೂರ ಪ್ರಯಾಣ ಮಾಡಿರುವನೋ ಅಷ್ಟನ್ನು ಪೂರೈಸಿ, ಮನುಷ್ಯ ಎಷ್ಟು ದೂರ ಸಮುದ್ರ ಪ್ರಯಾಣ ಮಾಡಲು ಸಾಧ್ಯವೋ ಅಷ್ಟು ದೂರ ಹೋಗಬೇಕೆಂದು ನನ್ನ ಆಕಾಂಕ್ಷೆ."
—ಹೀಗೆಂದ ಧೀರ, ಇಂಗ್ಲೆಂಡಿನ ಅಪ್ರತಿಮ ನಾವಿಕ ಕ್ಯಾಪ್ಟನ್ ಜೇಮ್ಸ್ ಕುಕ್. ಬ್ರಿಟಿಷ್ ಚಕ್ರಾಧಿಪತ್ಯಕ್ಕೆ ನ್ಯೂಜಿಲೆಂಡ್ ಮತ್ತು ಆಸ್ಟ್ರೇಲಿಯಗಳನ್ನು ಸೇರಿಸಿದ ಅವನು ಧ್ರುವಶೋಧನೆಯ ಪಿತಾಮಹನೆನಿಸಿಕೊಂಡ.

ಕುಕ್ 1728ನೆಯ ಅಕ್ಟೋಬರ್ 28ರಂದು ಇಂಗ್ಲೆಂಡಿನ ಯಾರ್ಕ್‌ಷೈರಿನ ಬಡ ಕುಟುಂಬ ಒಂದರಲ್ಲಿ ಜನಿಸಿದ. ಚಿಕ್ಕವನಾಗಿದ್ದಾಗ ಹಳ್ಳಿಯ ಅಂಗಡಿಯೊಂದರಲ್ಲಿ ಕೆಲಸಕ್ಕಿದ್ದ. ಚುರುಕು ಬುದ್ಧಿಯ ಈ ಹುಡುಗ ಬಿಡುವು ದೊರತಾಗಲೆಲ್ಲ ನಾವಿಕರು ಹೇಳುತ್ತಿದ್ದ ಸಾಹಸಮಯ ಕಥೆಗಳನ್ನು ಕೇಳಿ ಬೇಸರವನ್ನು ನೀಗುತ್ತಿದ್ದ. ತಾನೂ ದೇಶ ದೇಶಗಳನ್ನು ಸುತ್ತಿ ಬರಬೇಕೆಂದು ಇವನಿಗೆ ಆಸೆ. ಕಡೆಗೆ ತನ್ನ ಚಿಕ್ಕಪುಟ್ಟ ಸಾಮಾನುಗಳನ್ನು ಕಟ್ಟಿಕೊಂಡು ಓಡಿಹೋಗಿ, ಒಂದು ಕಲ್ಲಿದ್ದಲಿನ ಹಡಗಿನಲ್ಲಿ ಕೆಲಸಕ್ಕೆ ಸೇರಿಯೇ ಬಿಟ್ಟ. ಹದಿನೈದು ವರ್ಷಗಳ ಕಾಲ ಹಡಗುಗಳಲ್ಲಿ ಕೆಲಸಮಾಡಿದ ಅನಂತರ ತಾನಾಗಿಯೇ ಬ್ರಿಟಿಷ್ ನೌಕಾದಳವನ್ನು ಹೋಗಿ ಸೇರಿದ. ಅಧಿಕಾರಿಗಳ ಮೆಚ್ಚುಗೆ ಪಡೆದು, ಕೆಲವೇ ವರ್ಷಗಳ ಅವಧಿಯಲ್ಲಿ ಕ್ಯಾಪ್ಟನ್ ಪದವಿಗೇರಿದ. ಫ್ರಾನ್ಸಿಗಿದಿರಾದ ಏಳು ವರ್ಷಗಳ ಯುದ್ಧದಲ್ಲಿ ಭಾಗವಹಿಸಿದ.



ಕಷ್ಟಸಹಿಷ್ಣು ಕುಕ್

ಸಾಗರಗಳ ನಕ್ಷೆಯನ್ನು ತಯಾರಿಸಿ ಕುಕ್ ಹೆಸರುವಾಸಿಯಾಗಿದ್ದುದರಿಂದ ಬ್ರಿಟಿಷ್ ಅಧಿಕಾರಿಗಳು 1768ರಲ್ಲಿ ದಕ್ಷಿಣ ಸಾಗರಯಾನದ ಅಧಿಕಾರವನ್ನು ಆತನಿಗೆ ಕೊಟ್ಟರು. ವೈಜ್ಞಾನಿಕ ಸಂಶೋಧನೆ ಈ ಯಾನದ ಒಂದು ಉದ್ದೇಶ. ದಕ್ಷಿಣ ಶಾಂತಸಾಗರದಲ್ಲಿ ಒಂದು ಭೂಖಂಡವಿದೆ ಎಂಬ ನಂಬಿಕೆ ಇದ್ದಿತು. ಇದು ಸರಿಯೇ ಎಂಬುದನ್ನು ಫ್ರೆಂಚರಿಗಿಂತಲೂ ಮುಂಚೆ ಕಂಡುಹಿಡಿಯುವುದು ಇನ್ನೊಂದು ಉದ್ದೇಶ. ಎಂಡೆವರ್ (ಪ್ರಯತ್ನ) ಎಂಬ ಹಡಗಿನಲ್ಲಿ ಎಂಬತ್ತು ಜನ ನಾವಿಕರು ಮತ್ತು ಮೂವರು ವಿಜ್ಞಾನಿಗಳೊಡನೆ ಕುಕ್ ತನ್ನ ಪ್ರಯಾಣವನ್ನು ಆರಂಭಿಸಿದ. ಆಸ್ಟ್ರೇಲಿಯ ಪೂರ್ವ ತೀರವನ್ನೂ ನ್ಯೂಜಿಲೆಂಡ್ ದ್ವೀಪವನ್ನೂ ಕುಕ್ ತಲಪಿದ. ಆಸ್ಟ್ರೇಲಿಯ ತೀರದ ವಿಶೇಷ ಸಸ್ಯಗಳನ್ನು ನೋಡಿ ಅದನ್ನು ಬಾಟನಿ ಬೇ (ಸಸ್ಯಕೊಲ್ಲಿ) ಎಂದು ಕರೆದ. ಹಿಂದಿರುಗುವಾಗ ನ್ಯೂಜಿಲೆಂಡಿನ ಉತ್ತರ ಮತ್ತು ದಕ್ಷಿಣ ದ್ವೀಪಗಳ ನಡುವೆ ಹಾದು ಬಂದ. ಆ ಜಲಮಾರ್ಗ ಕುಕ್ ಜಲಸಂಧಿ ಎಂದು ಕರೆಯಲ್ಪಟ್ಟಿದೆ. ಈಸ್ಟ್ ಇಂಡೀಸ್ ದ್ವೀಪಗಳು ಮತ್ತು ದಕ್ಷಿಣ ಆಫ್ರಿಕದ ಸುತ್ತಲಿನ ಮಾರ್ಗವಾಗಿ ಮೂರು ವರ್ಷಗಳ ಯಾನದ ಬಳಿಕ ಕುಕ್ ಮತ್ತು ಅವನ ಜನರು ಇಂಗ್ಲೆಂಡನ್ನು ಸೇರಿದರು.

1772ರಲ್ಲಿ ಡಿಸ್ಕವರರ್ (ಶೋಧಕ) ಮತ್ತು ಅಡ್ವೆಂಚರ್ (ಸಾಹಸ) ಎಂಬ ಎರಡು ಹಡಗುಗಳನ್ನು ತೆಗೆದುಕೊಂಡು ಆಸ್ಟ್ರೇಲಿಯದ ದಕ್ಷಿಣ ಭಾಗದ ಶೋಧಕ್ಕಾಗಿ ಕುಕ್ ಹೊರಟ. ಈ ಯಾನದಲ್ಲಿ ಕುಕ್ ಅನೇಕ ಹೊಸ ದ್ವೀಪಗಳ ಸಮುಚ್ಚಯವನ್ನು ಕಂಡುಹಿಡಿದ. ನಿಖರವಾದ ನಕ್ಷೆ ಮತ್ತು ಅಂಕಿ ಅಂಶಗಳೊಡನೆ ಸ್ವದೇಶಕ್ಕೆ ಹಿಂದಿರುಗಿದ.

ಕ್ಯಾಪ್ಟನ್ ಕುಕ್‌ನ ಕೊನೆಯ ಪ್ರಯಾಣ 1776ರಲ್ಲಿ ಆರಂಭವಾಯಿತು. ಅಟ್ಲಾಂಟಿಕ್ ಸಾಗರದಿಂದ ಶಾಂತ ಸಾಗರಕ್ಕೆ ಮಾರ್ಗವನ್ನು ಕಂಡುಹಿಡಿಯಲು ಅನೇಕ ನಾವಿಕರು ಪ್ರಯತ್ನಿಸಿ ವಿಫಲರಾಗಿದ್ದರು. ಅಂಥದೊಂದು ಮಾರ್ಗ ಇದೆಯೋ ಇಲ್ಲವೋ ತಿಳಿಯಬೇಕೆಂಬುದು ಬ್ರಿಟಿಷ್ ಸರಕಾರದ ಬಯಕೆ. ಕ್ಯಾಪ್ಟನ್ ಕುಕ್, ಅಟ್ಲಾಂಟಿಕ್ ಮತ್ತು ಶಾಂತಸಾಗರಗಳು ಆರ್ಕ್‌ಟಿಕ್ ಪ್ರದೇಶದಲ್ಲಿ ಸಂಧಿಸುತ್ತವೆಯೇ, ಅಟ್ಲಾಂಟಿಕ್‌ನಿಂದ ಶಾಂತಸಾಗರಕ್ಕೆ ಮಾರ್ಗವಿದೆಯೇ ಎಂಬುದನ್ನು ಕಂಡುಹಿಡಿಯುವ ಕಾರ್ಯವನ್ನು ಕೈಗೊಂಡ. ಡಿಸ್ಕವರರ್ (ಶೋಧಕ) ಮತ್ತು 'ರೆಸಲ್ಯೂಷನ್' (ನಿರ್ಧಾರ) ಎಂಬೆರಡು ಹಡಗುಗಳನ್ನು ತೆಗೆದುಕೊಂಡು ಹೊರಟ. ಗುಡ್ ಹೋಪ್ ಭೂಶಿರದ ಮಾರ್ಗವಾಗಿ ಹಿಂದೂ ಮಹಾಸಾಗರದ ಮೂಲಕ ಶಾಂತ ಸಾಗರವನ್ನು ಪ್ರವೇಶಿಸಿದ. ಅಲ್ಲಿಂದ ಉತ್ತರಕ್ಕೆ ತಿರುಗಿ ತಾನು ಹಿಂದೆ ಗುರುತಿಸಿದ್ದ ದ್ವೀಪಗಳನ್ನು ಮತ್ತೆ ಹೊಕ್ಕು, ಹೊಸದಾಗಿ ಹವಾಯ್ ಮತ್ತು ಸಾಂಡ್ವಿಚ್ ದ್ವೀಪಗಳನ್ನು ಕಂಡುಹಿಡಿದ. ಮುಂದೆ ಬೇರಿಂಗ್ ಜಲಸಂಧಿಯ ಮೂಲಕ ಆರ್ಕ್‌ಟಿಕ್ ಸಮುದ್ರವನ್ನು ಹೊಕ್ಕ. ಅದೇ ಇದುವರೆಗೆ ಯಾರಿಗೂ ಕಾಣದೇ ಉಳಿದಿದ್ದ ಶಾಂತ ಮತ್ತು ಅಟ್ಲಾಂಟಿಕ್ ಸಾಗರಗಳ ನಡುವಣ ಕಾಲುವೆ ಎಂಬ ನಿರ್ಧಾರಕ್ಕೆ ಬಂದ. ಮತ್ತೂ ಮುಂದೆ ಸಾಲು ಮಂಜುಗಡ್ಡೆಗಳ ಪರ್ವತಗಳು ಅಡ್ಡ ಬಂದುದರಿಂದ ಕುಕ್ ಹಿಂದಿರುಗಬೇಕಾಯಿತು.

ದಾರಿಯಲ್ಲಿ ಹವಾಯ್ ದ್ವೀಪದಲ್ಲಿ ತಂಗಲು ಯತ್ನಿಸಿದಾಗ, ಅಲ್ಲಿನ ಮೂಲ ನಿವಾಸಿಗಳಿಗೂ ಅವನಿಗೂ ಕದನವಾಯಿತು. ಪ್ರಪಂಚದ ಮಹಾ

ಅನ್ವೇಷಕನೊಬ್ಬನನ್ನು ಆತ ಯಾರೆಂಬುದು ತಿಳಿಯದೆಯೇ ಮೂಲ ನಿವಾಸಿಗಳು ಕೊಂದುಹಾಕಿದರು.

ಕುಕ್‌ನ ಯಶಸ್ಸಿಗೆ ಅವನ ಕಷ್ಟಸಹಿಷ್ಣುತೆಯೂ ಧೀರಪ್ರವೃತ್ತಿಯೂ ಕಾರಣ. ಪ್ರಥಮ ಯಾನದಲ್ಲಿ ತಜ್ಞರು ನೀಡಿದ ಸಲಹೆಯನ್ನು ಅಕ್ಷರಶಃ ಪಾಲಿಸಿದ. ಎರಡನೆಯ ಮತ್ತು ಮೂರನೆಯ ಪ್ರಯಾಣಗಳಲ್ಲಿ ಸ್ವಂತ ಬುದ್ಧಿ ಶಕ್ತಿ ಹಾಗೂ ಸಮಯೋಚಿತ ನಿರ್ಧಾರಗಳ ಸಹಾಯದಿಂದ ಯಶಸ್ವಿಯಾದ. ಇವು ಅವನ ಸಾಮರ್ಥ್ಯದ ಒರೆಗಲ್ಲುಗಳಾಗಿವೆ. ತನ್ನ ನಾವಿಕರ ಆರೋಗ್ಯದ ವಿಚಾರದಲ್ಲಿ ಆತನು ಅಪಾರವಾದ ಶ್ರದ್ಧೆ ವಹಿಸುತ್ತಿದ್ದ. ಆರೋಗ್ಯ, ಸ್ವಚ್ಛತೆಗೂ ಹಡಗುಗಳಲ್ಲಿ ಹೆಚ್ಚು ಗಮನಕೊಡುವಂತೆ ಆಜ್ಞೆ ಮಾಡಿದ. ಅವನ ನಾವಿಕರು ಹಿತಮಿತವಾದ ಆಹಾರಗಳನ್ನು ಸೇವಿಸಬೇಕಾಗಿತ್ತು. ಪ್ರತಿಯೊಬ್ಬ ನಾವಿಕನ ಆರೋಗ್ಯನಕಾಶೆಯನ್ನು ತಯಾರಿಸಿದ್ದ. ಸಮುದ್ರ ಯಾನದಲ್ಲಿ ಅನಾರೋಗ್ಯದಿಂದ ನಾವಿಕರು ಸಾಯುವುದು ಸಾಮಾನ್ಯ ಸಂಗತಿಯಾಗಿದ್ದಾಗ, ಮೊದಲ ಬಾರಿ ಒಬ್ಬ ನಾವಿಕನೂ ಸಾಯದಂತೆ ಅನ್ವೇಷಣೆಯ ಸುದೀರ್ಘ ನೌಕಾ ಪ್ರಯಾಣವನ್ನು ಮುಗಿಸಿಕೊಂಡು ಮರಳಿದ ಕುಕ್‌ನನ್ನು ಜನ ಬಹು ಮೆಚ್ಚಿಕೊಂಡರು. ಅವನು ಸತ್ತಾಗ ನಾವಿಕನೊಬ್ಬ, "ನಾವು ನಮ್ಮ ತಂದೆಯನ್ನು ಕಳೆದುಕೊಂಡಂತಾಯಿತು," ಎಂದು ರೋದಿಸಿದ.

ಪ್ರಪಂಚದಲ್ಲಿ ಶಾಸ್ತ್ರೀಯ ರೀತಿಯಲ್ಲಿ ಅನ್ವೇಷಣೆ ನಡೆಸಿದವರಲ್ಲಿ ಕುಕ್ ಮೊಟ್ಟಮೊದಲನೆಯವನು.

ನೋಡಿ : ಧ್ರುವ

## ಕುಟುಂಬ

ನಮ್ಮ ಮನೆ ಎಂದರೆ ನಮಗೆ ಎಷ್ಟು ಹೆಮ್ಮೆ, ಸಂತೋಷ ! 'ನಮ್ಮ ಮನೆಗೆ ಒಳ್ಳೆಯ ಹೆಸರು ಬರಬೇಕು' 'ನಮ್ಮ ಮನೆಯಲ್ಲಿ ಎಲ್ಲರೂ ಸದಾ ನಗುನಗುತ್ತಿರಬೇಕು, ಆರೋಗ್ಯವಾಗಿರಬೇಕು' — ಹೀಗೆ ನಾವು ಬಯಸುತ್ತೇವೆ.

ನಮ್ಮ ಮನೆ ಎಂದುಕೊಂಡಾಗ ನಾವು ಯೋಚಿಸುವುದು ನಮ್ಮ ಮನೆಯಲ್ಲಿರುವವರ ವಿಷಯ—ತಂದೆ, ತಾಯಿ, ಅಜ್ಜಿ, ಅಜ್ಜ, ಅಣ್ಣ, ತಮ್ಮ, ಅಕ್ಕ, ತಂಗಿ ಇವರ ವಿಷಯ—ನಮ್ಮ ಕುಟುಂಬದ ವಿಷಯ. ರಕ್ತ ಸಂಬಂಧಿಗಳಾದವರು–ಒಬ್ಬ ತಂದೆ ತಾಯಿಯ ಮಕ್ಕಳು, ಅವರ ಮಕ್ಕಳು ಮೊಮ್ಮಕ್ಕಳು ಮತ್ತು ಅವರನ್ನು ಮದುವೆಯಾದವರು–ಒಂದು 'ಕುಟುಂಬ'. ಸಾಮಾನ್ಯವಾಗಿ ಇವರು ಒಂದೇ ಮನೆಯಲ್ಲಿ ವಾಸಮಾಡುವವರು.

ಪ್ರಪಂಚದ ಎಲ್ಲ ದೇಶಗಳಲ್ಲಿಯೂ ಚರಿತ್ರೆಯ ಎಲ್ಲ ಕಾಲಗಳಲ್ಲಿಯೂ ಕಾಣುವ ಸಂಸ್ಥೆ ಕುಟುಂಬ. ಇತರ ಪ್ರಾಣಿಗಳ ಮರಿಗಳಿಗೆ ಹೆಚ್ಚು ಕಾಲ ಪೋಷಣೆ ಬೇಕಿಲ್ಲ. ಜಿರಾಫೆಯ ಮರಿ ಹುಟ್ಟಿದ ಕೆಲವೇ ಗಂಟೆಗಳಲ್ಲಿ ತಾಯಿಯೊಡನೆ ಓಡಾಡುತ್ತದೆ. ಮನುಷ್ಯ ಶಿಶುವಿಗೆ ಇತರ ಪ್ರಾಣಿಗಳಿಗಿಂತ ಹೆಚ್ಚು ಕಾಲ ಪೋಷಣೆ ಮತ್ತು ರಕ್ಷಣೆ ಬೇಕು. ಆದುದರಿಂದ ಹಿಂದಿನ ಕಾಲದಿಂದಲೂ ತಂದೆ, ತಾಯಿ, ಮಕ್ಕಳು ಒಟ್ಟಿಗಿರುವುದು ಪ್ರಾರಂಭ ವಾಯಿತು. ಇದರಿಂದ ಮತ್ತೊಂದು ಅನುಕೂಲ ಎಂದರೆ, ಕುಟುಂಬದ ಕೆಲಸವನ್ನು ಹಂಚಿಕೊಳ್ಳಬಹುದು. ಸಾವಿರಾರು ವರ್ಷಗಳ ಕೆಳಗೆ, ಇಂದಿನ ಯಂತ್ರಗಳು ಮತ್ತು ವ್ಯವಸ್ಥೆ ಇಲ್ಲದಿದ್ದಾಗ, ಪ್ರಾಣಿಗಳನ್ನು ಬೇಟೆಯಾಡುವುದು, ನೀರನ್ನು ತರುವುದು, ಶತ್ರುಗಳಿಂದ ರಕ್ಷಿಸಿಕೊಳ್ಳುವುದು, ಬೆಂಕಿಯನ್ನು ಹೊತ್ತಿಸುವುದು, ಅದು ಆರದಂತೆ ನೋಡಿಕೊಳ್ಳುವುದು, ಅಡುಗೆ ಮಾಡುವುದು—ಪ್ರತಿಯೊಂದೂ ಕಷ್ಟದ ಕೆಲಸವೇ. ಕುಟುಂಬದ ಸದಸ್ಯರು ಈ ಕೆಲಸಗಳನ್ನು ಹಂಚಿಕೊಳ್ಳುತ್ತಿದ್ದರು. ಈಗಲೂ ಒಂದು ಸಂಸಾರದ ಸದಸ್ಯರು ಒಬ್ಬರಿಗೊಬ್ಬರು ನೆರವಾದರೆ, ಎಲ್ಲರ ಬಾಳೂ ಚೆನ್ನ.

ಈಗ ಸಾಮಾನ್ಯವಾಗಿ ಒಂದು ಕುಟುಂಬ ಎಂದರೆ ಗಂಡ, ಹೆಂಡತಿ, ಮಕ್ಕಳು. ಇತರ ನೆಂಟರೂ—ಅಜ್ಜ, ಅಜ್ಜಿ, ಚಿಕ್ಕಪ್ಪ, ಸೋದರತ್ತೆ—ಇರಬಹುದು. ಕೆಲವು ದೇಶಗಳಲ್ಲಿ ಅಥವಾ ಗುಂಪುಗಳಲ್ಲಿ ಒಬ್ಬ ಮನುಷ್ಯನಿಗೆ ಇಬ್ಬರು ಅಥವಾ ಹೆಚ್ಚು ಮಂದಿ ಹೆಂಡತಿಯರಿರಬಹುದು. ಅವರೆಲ್ಲ ಒಟ್ಟಿಗೆ ವಾಸಿಸುತ್ತಾರೆ. ಕೆಲವು ಗುಂಪುಗಳಲ್ಲಿ (ಉದಾ : ಟಿಬೆಟಿನ ಕೆಲವು ಭಾಗಗಳ ಜನರಲ್ಲಿ) ಒಬ್ಬ ಹೆಂಗಸಿಗೆ ಇಬ್ಬರು ಅಥವಾ ಹೆಚ್ಚು ಮಂದಿ ಗಂಡಂದಿರಿರುತ್ತಿದ್ದರು. ಅವರೆಲ್ಲ ಒಟ್ಟಿಗೆ ವಾಸಿಸುತ್ತಿದ್ದರು.

ಕುಟುಂಬದ ವ್ಯವಸ್ಥೆ ಏಕೆ ಬೇಕು? ನಮಗೆ ಮನೆಗಳೆಂದೇ ಇಲ್ಲದಿದ್ದರೆ, ತಂದೆ–ತಾಯಿ–ಅಣ್ಣ–ತಮ್ಮ–ಅಜ್ಜ–ಅಜ್ಜಿಯರಾರೂ ಜೊತೆಗೂ ಇಲ್ಲದಿದ್ದರೆ ಎಷ್ಟು ಬೇಸರವಾಗಲಾರದು ! ಅಲ್ಲದೆ ನಮ್ಮನ್ನು ಚಿಕ್ಕ ವಯಸ್ಸಿನಲ್ಲಿ ನೋಡಿಕೊಳ್ಳುವವರು ಯಾರು, ವಿದ್ಯಾಭ್ಯಾಸ ಕೊಡಿಸುವವರು ಯಾರು, ಕಾಯಿಲೆ ಬಂದರೆ ಮದ್ದು ಕುಡಿಸಿ ಉಪಚರಿಸುವವರು ಯಾರು? ಹಾಗೆಯೇ ಮುಪ್ಪಿನ ಅಜ್ಜ–ಅಜ್ಜಿಯರನ್ನು ನೋಡಿಕೊಳ್ಳದಿದ್ದರೆ ಅವರ ಗತಿ ಏನು? ಹೀಗೆ ಕುಟುಂಬದ ವ್ಯವಸ್ಥೆ ಸಂತೋಷ ಉಂಟುಮಾಡುತ್ತದೆ, ಭದ್ರತೆಯನ್ನು ನೀಡುತ್ತದೆ, ನೆರವಿನ ಭರವಸೆಯನ್ನು ಕೊಡುತ್ತದೆ. ಒಬ್ಬ ಮನುಷ್ಯನ ಆಸ್ತಿ ಹೇಗೋ ಹರಿದು ಹಂಚಿಹೋಗದೆ ವ್ಯವಸ್ಥಿತವಾಗಿ ಇತರರ ಕೈಸೇರಲು ಅವಕಾಶ ಮಾಡಿಕೊಡುತ್ತದೆ. ಇಷ್ಟೇ ಅಲ್ಲ, ನಾವು ಚಿಕ್ಕವರಾಗಿದ್ದಾಗ ಹೇಗೆ ನಡೆದುಕೊಳ್ಳಬೇಕು, ಹೇಗೆ ಊಟ ಮಾಡಬೇಕು, ಎಲ್ಲಿ ಹೇಗೆ ವರ್ತಿಸಬೇಕು ಇಂಥ ಎಷ್ಟು ವಿಷಯಗಳನ್ನು ಮನೆಯ ಹಿರಿಯರಿಂದ ಕಲಿತುಕೊಳ್ಳುತ್ತೇವೆ ! ಆಚಾರ, ಸಂಪ್ರದಾಯಗಳನ್ನು ಕುಟುಂಬ ಕಲಿಸುತ್ತದೆ. ಸಂತೋಷ ಸಹಕಾರಗಳು ಇರುವ ಮನೆಯಲ್ಲಿ ಬೆಳೆದ ಹುಡುಗರು ನಾಲ್ಕು ಜನರ ಜೊತೆಗೆ ಕೆಲಸಮಾಡುವುದನ್ನೂ ಸಂತೋಷ ವಾಗಿರುವುದನ್ನೂ ಸುಲಭವಾಗಿ ಕಲಿಯುತ್ತಾರೆ. ಮಕ್ಕಳ ಮುಂದಿನ ಜೀವನಕ್ಕೆ ಮನೆಯ ವಾತಾವರಣ ಬಹು ಮುಖ್ಯ.

ಕುಟುಂಬವೆನ್ನುವ ಸಂಸ್ಥೆಯನ್ನು ಎಲ್ಲ ಕಾಲ ಎಲ್ಲ ದೇಶಗಳಲ್ಲಿಯೂ ಕಂಡರೂ ದೇಶದಿಂದ ದೇಶಕ್ಕೆ ಕಾಲದಿಂದ ಕಾಲಕ್ಕೆ ಬದಲಾವಣೆಗಳನ್ನು ಕಾಣುತ್ತೇವೆ. ಪ್ರಾಚೀನ ದೇಶಗಳಲ್ಲಿ ಕುಟುಂಬ ಬಲು ಮುಖ್ಯ. ಕೆಲವು ದೇಶಗಳಲ್ಲಿಯೂ ಪಂಗಡಗಳಲ್ಲಿಯೂ ಗಂಡ ಸತ್ತರೆ ಹೆಂಡತಿ ಅವನ ತಮ್ಮನನ್ನು ಮದುವೆಯಾಗುತ್ತಿದ್ದಳು. ಹೆಂಗಸಿಗೆ ಮಕ್ಕಳಾಗದಿದ್ದರೆ ಗಂಡ ಬೇರೆ ಮದುವೆಯಾಗುತ್ತಿದ್ದ. ಈಜಿಪ್ಟ್ ರಾಜಮನೆತನದಲ್ಲಿ ಅಣ್ಣ–ತಂಗಿ ಮದುವೆಯಾಗುತ್ತಿದ್ದರು. ಕುಟುಂಬ ನಿಲ್ಲದೆ ಒಡೆಯದೆ ನಡೆದುಕೊಂಡು ಹೋಗಲು ಈ ಪದ್ಧತಿಗಳು ಹುಟ್ಟಿದುವು. ಬಹು ದೇಶಗಳಲ್ಲಿ ಮನೆಯ ಯಜಮಾನ ಗಂಡಸು. ಪ್ರಾಚೀನ ಇಸ್ರೇಲ್, ಚೀನ, ಗ್ರೀಸ್, ಭಾರತದ ಬಹು ಭಾಗಗಳು, ಅರೇಬಿಯ ಇವುಗಳಲ್ಲೆಲ್ಲ ಗಂಡಸು ಮನೆಯ ಯಜಮಾನ. ಅವನು ಹೇಳಿದಂತೆ ಮನೆಯವರೆಲ್ಲ ನಡೆಯಬೇಕು. ಪ್ರಾಚೀನ ಹಿಬ್ರೂ, ಗ್ರೀಕ್, ರೋಮನ್ ಸಂಸಾರಗಳಲ್ಲಿ ಮನೆಯ ಹಿರಿಯನಿಗೆ ಕುಟುಂಬದ ಎಲ್ಲರ ಮೇಲೆ ಅಧಿಕಾರ. ಅವರ ಮತ್ತು ಅವರ ಗುಲಾಮರ ಮದುವೆಗಳನ್ನು ಅವನು ತೀರ್ಮಾನಿಸುತ್ತಿದ್ದ. ಅವರನ್ನು ದತ್ತುಕೊಡುವ ಇಲ್ಲವೆ ಮಾರುವ ಅಧಿಕಾರ ಕೂಡ ಅವನದು. ಆಸ್ತಿಯ ಹಕ್ಕು ಅವನಿಗೆ ಮಾತ್ರ.

ಭಾರತದ ಕೆಲವು ಭಾಗಗಳಲ್ಲಿ ಹೆಂಗಸು ಯಜಮಾನಿಯಾಗಿರುತ್ತಿದ್ದುದುಂಟು. ತನ್ನ ಹೆಂಗಸಿನ ಮೂಲಕ ಸಾಗುತ್ತಿತ್ತು. ಕೆಲಸದ ವಿಭಾಗದಲ್ಲಿಯೂ ವ್ಯತ್ಯಾಸಗಳನ್ನು ಕಾಣುತ್ತೇವೆ. ಹಿಂದೆ ಪ್ರತಿ ಮನೆಗೂ ರಕ್ಷಣೆ ಬೇಕಾಗಿದ್ದಾಗ. ಗಂಡಸರು ಕದನಕ್ಕೆ ಮತ್ತು ಬೇಟೆಗೆ ಸದಾ ಸಿದ್ಧರಾಗಿರಬೇಕಾಗಿದ್ದಾಗ. ಉಳಿದ ಕೆಲಸವನ್ನು ಹೆಂಗಸು ಮಾಡುತ್ತಿದ್ದಳು. ಗ್ರಾಮಜೀವನದಲ್ಲಿ ಗಂಡಸರು, ಹೆಂಗಸರು ಅಗತ್ಯಬಿದ್ದಾಗ ಒಟ್ಟಿಗೆ ಹೊಲಗಳಲ್ಲಿ ಕೆಲಸಮಾಡುವುದು ಹಿಂದಿನಿಂದ ನಡೆದುಬಂದಿದೆ. ನಾಗರಿಕತೆ ಬೆಳೆದಂತೆ ಹೊರಗಿನ ಕೆಲಸ ಗಂಡಸಿನದು, ಮನೆಯ ನಿರ್ವಹಣೆ ಹೆಂಗಸಿನದು ಎಂಬ ಕಲ್ಪನೆ ಬೆಳೆಯಿತು. ಕೈಗಾರಿಕಾ ಕ್ರಾಂತಿಯ ಅನಂತರ ಈಗ ಮತ್ತೆ ಸ್ತ್ರೀಯರು ಹಲವು ಕ್ಷೇತ್ರಗಳಿಗೆ ಪ್ರವೇಶಿಸಿ ದುಡಿಯುತ್ತಿದ್ದಾರೆ.

ರಷ್ಯ ದೇಶದಲ್ಲಿ ಅಕ್ಟೋಬರ್ ಕ್ರಾಂತಿಯ ಅನಂತರ ಕುಟುಂಬ ಜೀವನದ ಮಹತ್ವ ಕಡಮೆಯಾಯಿತು. ಬಹು ಹಿಂದುಳಿದಿದ್ದ ರಷ್ಯ ಕೈಗಾರಿಕೆಗಳನ್ನು ವೇಗವಾಗಿ ಬೆಳೆಸಿಕೊಳ್ಳಬೇಕಾದುದರಿಂದ ಮತ್ತು ದೇಶದ ಅಭಿವೃದ್ಧಿಗೆ ಎಲ್ಲರ ದುಡಿತವೂ ಅವಶ್ಯವಾದುದರಿಂದ ಹೆಂಗಸರೂ ಕೆಲಸ ಮಾಡುವುದು ಅಗತ್ಯವಾಯಿತು. ಸಾಂಘಿಕ ಅಡುಗೆಮನೆಗಳಲ್ಲಿ ಒಟ್ಟಿಗೆ ಆಹಾರವನ್ನು ಸಿದ್ಧಗೊಳಿಸಿ ಹಲವು ಸಂಸಾರಗಳವರು ಊಟ ಮಾಡುವುದು, ಮಕ್ಕಳು ಬಹುಮಟ್ಟಿಗೆ ಶಿಶುವಿಹಾರಗಳಲ್ಲಿ ಕಾಲಕಳೆಯುವುದು ಆಚರಣೆಗೆ ಬಂದಿತು. ಈಚೆಗೆ ಮತ್ತೆ ರಷ್ಯದಲ್ಲಿ ಕುಟುಂಬ ಜೀವನ ಜನರನ್ನು ಆಕರ್ಷಿಸುತ್ತಿದೆ. ಚೀನದಲ್ಲಿ ಕಮ್ಯೂನಿಸ್ಟ್ ಪ್ರಭುತ್ವ ಬಂದನಂತರ ಸಾಂಘಿಕ ಜೀವನ ಪ್ರಾರಂಭವಾಗಿದೆ, ಕುಟುಂಬ ಜೀವನ ದುರ್ಬಲವಾಗುತ್ತಿದೆ.

ಪೂರ್ವ ದೇಶಗಳಲ್ಲಿ –ಈಜಿಪ್ಟ್, ಚೀನ, ಜಪಾನ್, ಭಾರತ ಮೊದಲಾದ ದೇಶಗಳಲ್ಲಿ – ಪ್ರಾಚೀನಕಾಲದಿಂದ ಕುಟುಂಬಕ್ಕೆ ಬಹು ಪ್ರಾಶಸ್ತ್ಯ. ಹಲವು ಪೀಳಿಗೆಗಳವರು ಒಟ್ಟಿಗೆ ವಾಸಿಸುತ್ತಿದ್ದುದುಂಟು. ಕೆಲವು ದೇಶಗಳಲ್ಲಿ ತೀರಿಕೊಂಡ ಹಿರಿಯರ ಪೂಜೆಯುಂಟು. ಪಶ್ಚಿಮ ದೇಶಗಳಲ್ಲಿ ಕುಟುಂಬಕ್ಕೆ ಇಷ್ಟು ಪ್ರಾಶಸ್ತ್ಯವಿರಲಿಲ್ಲ. ಮನೆಯ ಮಗ ವಯಸ್ಸಾಗುತ್ತಲೆ ತನ್ನ ಕಾಲುಗಳ ಮೇಲೆ ತಾನು ನಿಲ್ಲಬೇಕೆಂಬ ಕಲ್ಪನೆಗೆ ಅಲ್ಲಿ ಪುರಸ್ಕಾರ; ಈಗ ಪೂರ್ವ ದೇಶಗಳಲ್ಲಿಯೂ ಕುಟುಂಬ ಸಣ್ಣದಾಗುತ್ತಿದೆ. ಓದಿಗಾಗಿ, ಕೆಲಸಕ್ಕಾಗಿ ದೂರದ ಊರುಗಳಿಗೆ ಹೋಗುವ ಅಗತ್ಯ ಹೆಚ್ಚಾಗಿರುವುದು ಇದಕ್ಕೆ ಒಂದು ಕಾರಣ. ಅವಿಭಕ್ತ ಕುಟುಂಬದಲ್ಲಿ ಕೆಲವು ಅನುಕೂಲಗಳಿದ್ದುವು. ಕಷ್ಟದಲ್ಲಿ ಸುಖದಲ್ಲಿ ಒಬ್ಬರಿಗೊಬ್ಬರ ನೆರವಿನ ಧೈರ್ಯವಿರುತ್ತಿತ್ತು. ಒಬ್ಬ ಹೆಂಗಸು ಅಥವಾ ಗಂಡಸು ತೀರಿಕೊಂಡರೆ ಉಳಿದ ಗಂಡ ಅಥವಾ ಹೆಂಡತಿ ಮತ್ತು ಮಕ್ಕಳಿಗೆ ಆಸರೆ ಇರುತ್ತಿತ್ತು. ಎಲ್ಲರ ವರಮಾನ ಸೇರಿ, ಕುಟುಂಬದ ಬಡ ಸದಸ್ಯರಿಗೆ ಸಹಾಯವಾಗುತ್ತಿತ್ತು. ಆದರೆ ಸದಸ್ಯರಿಗೆ ತಕ್ಕಷ್ಟು ಸ್ವಾತಂತ್ರ್ಯವಿರುತ್ತಿರಲಿಲ್ಲ ಎನ್ನುವುದು ಇದರ ದೋಷ.

ಪ್ರಪಂಚದ ಜನಸಂಖ್ಯೆ, ಅದರಲ್ಲಿಯೂ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳ ಜನಸಂಖ್ಯೆ ವೇಗವಾಗಿ ಬೆಳೆಯುತ್ತಿದೆ. ಈ ಜನಸಂಖ್ಯೆಗೆ ಆಹಾರ, ನೀರು, ಮನೆ, ವಿದ್ಯಾಭ್ಯಾಸ, ಕೆಲಸ–ಇವನ್ನು ಒದಗಿಸುವುದು ಕಷ್ಟ. ಜನಸಂಖ್ಯೆಯ ಮೇಲೆ ಹತೋಟಿ ಇಲ್ಲದಿದ್ದರೆ ಬಡತನ ಬೆಳೆಯುತ್ತದೆ. ಜೀವನಮಟ್ಟ ಇಳಿಯುತ್ತದೆ. ಆದ್ದರಿಂದ ಬಹು ದೇಶಗಳು ಕುಟುಂಬ ಯೋಜನೆಯನ್ನು ಜನಪ್ರಿಯ ಮಾಡಲು ಪ್ರಯತ್ನಿಸುತ್ತಿವೆ. ನೂರೈವತ್ತು ವರ್ಷಗಳ ದಾಸ್ಯದ ಅನಂತರ ಸ್ವಾತಂತ್ರ್ಯ ಪಡೆದು ಜನರ ಜೀವನಮಟ್ಟವನ್ನು ಉತ್ತಮಗೊಳಿಸಲು ಹೋರಾಡುತ್ತಿರುವ ಭಾರತದಲ್ಲಿ ಇದು ಅತ್ಯಗತ್ಯ ; ಗಂಡ, ಹೆಂಡತಿ, ಇಬ್ಬರು ಮಕ್ಕಳು–ಇದು ಒಂದು ಕುಟುಂಬದ ಆದರ್ಶ ಸಂಖ್ಯೆ.

ಕುಟುಂಬದಲ್ಲಿ ಸುಖದುಃಖಗಳನ್ನೂ ಕೆಲಸವನ್ನೂ ಹಂಚಿಕೊಂಡು ನೆರವಾಗಿ ಬಾಳಿದರೆ ಮನೆ ಎಲ್ಲರಿಗೂ ಸಂತೋಷದ ಬೀಡಾದೀತು. ಬುದ್ಧನಂಥವರು, ಗಾಂಧಿಜಿಯಂಥವರು, 'ವಸುದೈವ ಕುಟುಂಬಿಕ'ರಾದರು, ಮಾನವಕೋಟಿಯೇ ಒಂದು ಕುಟುಂಬವೆಂದು ಎಲ್ಲರನ್ನೂ ಅಪಾರ ಕರುಣೆ. ಪ್ರೇಮಗಳಿಂದ ಕಂಡರು. ನಮ್ಮ ಕುಟುಂಬ ಈ ಮನೋಧರ್ಮವನ್ನು ನಮಗೆ ಕಲಿಸಬೇಕು.

ನೋಡಿ : ಪೂರ್ವಜರ ಪೂಜೆ

## ಕುಲಪತಿ

ಭಾರತೀಯ ಮಹಾಕಾವ್ಯವಾದ ಮಹಾಭಾರತದಲ್ಲಿ ಶೌನಕಮುನಿಯ ವೃತ್ತಾಂತವಿದೆ. ಆತ ಪ್ರಾಚೀನ ಭಾರತದ ಗುರುಶ್ರೇಷ್ಠರಲ್ಲೊಬ್ಬ. ಶೌನಕಮುನಿಯನ್ನು 'ಕುಲಪತಿ' ಎಂಬ ಗೌರವ ಪದವಿಯಿತ್ತು ಸಂಬೋಧಿಸುತ್ತಿದ್ದರು. 'ಕುಲಪತಿ' ಎಂಬ ಹೆಸರು ಮೊದಲು ಬಳಕೆಗೆ ಬಂದದ್ದು ಪ್ರಾಚೀನ ಭಾರತದ ವಿದ್ಯಾಕೇಂದ್ರಗಳಾಗಿದ್ದ ಗುರುಕುಲಗಳಲ್ಲಿ.

'ಕುಲಪತಿ' ಎನ್ನುವ ಪದವನ್ನು ಕೆಲವೊಮ್ಮೆ ಹತ್ತು ಸಾವಿರ ಶಿಷ್ಯರ ಗುರುವನ್ನು ಕುರಿತು ಬಳಸುತ್ತಿದ್ದರು. 'ಕುಲಪತಿ' ಎಂದರೆ ವಿದ್ಯಾರ್ಥಿಗಳ ಕುಲದ ಅಧಿಪತಿ. ಆಚಾರ್ಯ ಎನ್ನುವ ಪದ ವಿದ್ಯಾಗುರುವಿನ ಗೌರವದ ಸಂಕೇತವಾಗಿತ್ತು.

ಇಂದು 'ಕುಲಪತಿ' ಎನ್ನುವ ಪದ ವಿಶ್ವವಿದ್ಯಾನಿಲಯದ ಅತ್ಯಂತ ಹಿರಿಯ ಸ್ಥಾನದ ಸಂಕೇತವಾಗಿದೆ. 'ಕುಲಪತಿ' ಎನ್ನುವುದನ್ನು ಆಂಗ್ಲಪದ 'ಛಾನ್ಸಲರ್' ಗೆ ಸಮಾನವಾಗಿ ಬಳಸುತ್ತಾರೆ.

ಹನ್ನೆರಡು ಮತ್ತು ಹದಿಮೂರನೆಯ ಶತಮಾನಗಳಲ್ಲಿ ಯೂರೋಪಿನ ಪ್ರಮುಖ ವಿಶ್ವವಿದ್ಯಾನಿಲಯಗಳ ಸ್ಥಾಪನೆಯಾದಾಗ ಆ ವಿಶ್ವವಿದ್ಯಾನಿಲಯಗಳ ಮುಖ್ಯಾಧಿಕಾರಿಗಳನ್ನು 'ಛಾನ್ಸಲರ್' ಎಂದು ಕರೆದರು. ಬೋಧನೆ, ಪದವಿಪ್ರದಾನ ಇವುಗಳಿಗೆ ಸಂಬಂಧಿಸಿದ ಎಲ್ಲ ವಿಷಯಗಳ ಪರಿಶೀಲನೆ, ವಿಶ್ವವಿದ್ಯಾನಿಲಯದ ಎಲ್ಲ ವರ್ಗಗಳ ಮೇಲಿನ ಮೇಲ್ವಿಚಾರಣೆ 'ಛಾನ್ಸಲರ್' ಗೆ ಸಂಬಂಧಿಸಿದ ವಿಷಯಗಳಾಗಿದ್ದುವು. ಆದರೆ ಹದಿಮೂರನೆಯ ಶತಮಾನದ ಅಂತ್ಯದಿಂದ 'ಛಾನ್ಸಲರ್'ನ ಅಧಿಕಾರ ವ್ಯಾಪ್ತಿ ಬಹಳ ಕಡಮೆಯಾಯಿತು.

ಇಂಗ್ಲೆಂಡಿನಲ್ಲಿ 'ಛಾನ್ಸಲರ್' ಪದವಿಗೆ ಸಾಮಾನ್ಯವಾಗಿ ವಿಖ್ಯಾತ ರಾಜಕಾರಣಿಯನ್ನೊ ಇಲ್ಲವೆ ಶ್ರೇಷ್ಠ ವಿದ್ವಾಂಸನನ್ನೊ ಆರಿಸುತ್ತಾರೆ. ಛಾನ್ಸಲರ್‌ನ ಮುಖ್ಯ ಕೆಲಸವೆಂದರೆ ವಿಶ್ವವಿದ್ಯಾನಿಲಯಕ್ಕೆ ಸಂಬಂಧಿಸಿದ ವ್ಯವಹಾರಗಳೆಲ್ಲವನ್ನೂ ಗಮನಿಸುವುದು. ಅಲ್ಲದೆ, ವಿಶ್ವವಿದ್ಯಾನಿಲಯಕ್ಕೂ ಸರಕಾರಕ್ಕೂ ಇರುವ ವ್ಯವಹಾರ ನಿರ್ವಹಣೆ. ಛಾನ್ಸಲರ್‌ನನ್ನು ವಿಶ್ವವಿದ್ಯಾನಿಲಯದಲ್ಲಿ ಪ್ರತಿನಿಧಿಸುವಾತ ವೈಸ್–ಛಾನ್ಸಲರ್. ವೈಸ್–ಛಾನ್ಸಲರ್ ವಿಶ್ವವಿದ್ಯಾನಿಲಯದ ಪ್ರಮುಖ ಆಡಳಿತಾಧಿಕಾರಿ.

ಭಾರತದಲ್ಲಿಯೂ ನಾವು ಇದೇ ಪದ್ಧತಿಯನ್ನು ಅನುಸರಿಸಿದ್ದೇವೆ. ಈಗ ಭಾರತದಲ್ಲಿ ರಾಜ್ಯಗಳ ರಾಜ್ಯಪಾಲರು ಅಲ್ಲಿನ ವಿಶ್ವವಿದ್ಯಾನಿಲಯಗಳ ಛಾನ್ಸಲರುಗಳು. ಛಾನ್ಸಲರ್ ಎಂಬ ಪದಕ್ಕೆ 'ಕುಲಪತಿ' ಎಂದೂ ವೈಸ್–ಛಾನ್ಸಲರ್ ಎಂಬ ಪದಕ್ಕೆ 'ಉಪಕುಲಪತಿ' ಎಂದೂ ಹೇಳುತ್ತೇವೆ. 'ಕುಲಪತಿ'

ವಿಶ್ವವಿದ್ಯಾನಿಲಯದ ದಿನನಿತ್ಯದ ವ್ಯವಹಾರದಲ್ಲಿ ಪ್ರವೇಶಿಸುವುದಿಲ್ಲ. ಆದರೆ ಪದವಿಪ್ರದಾನದ ಅಧಿಕಾರವಿರುವುದು ಕುಲಪತಿಗೆ. ಈಗ ವೈಸ್ ಛಾನ್ಸಲರನ್ನು ಕುಲಪತಿಯೆಂದೂ ಛಾನ್ಸಲರನ್ನು ಕುಲಾಧಿಪತಿ ಎಂದೂ ಸಂಬೋಧಿಸಲು ಸಲಹೆ ಮಾಡಲಾಗಿದೆ.

ಸಾಮಾನ್ಯವಾಗಿ ಒಂದು ವಿಶ್ವವಿದ್ಯಾನಿಲಯ ಯಾವ ರಾಜ್ಯದಲ್ಲಿರುತ್ತದೋ ಆ ರಾಜ್ಯದ ರಾಜ್ಯಪಾಲರು ಅದರ 'ಕುಲಪತಿ'. ಮೈಸೂರು ವಿಶ್ವ ವಿದ್ಯಾನಿಲಯ, ಕರ್ನಾಟಕ ವಿಶ್ವವಿದ್ಯಾಲಯ, ಬೆಂಗಳೂರು ಕೃಷಿ ವಿಶ್ವ ವಿದ್ಯಾನಿಲಯ ಮತ್ತು ಬೆಂಗಳೂರು ವಿಶ್ವವಿದ್ಯಾಲಯಗಳಿಗೆ ಮೈಸೂರು ರಾಜ್ಯಪಾಲರು ಕುಲಪತಿಯಾಗಿದ್ದಾರೆ.

ಕೇಂದ್ರ ಸರಕಾರದ ಅಧೀನದಲ್ಲಿರುವ ಕೆಲವು ವಿಶ್ವವಿದ್ಯಾನಿಲಯಗಳಿವೆ. ಅಂಥವುಗಳಲ್ಲಿ ಒಂದು ದಿಲ್ಲಿ ವಿಶ್ವವಿದ್ಯಾನಿಲಯ. ಇದಕ್ಕೆ ರಾಷ್ಟ್ರದ ಉಪಾಧ್ಯಕ್ಷರು ಕುಲಪತಿ. ವಿಶ್ವಕವಿ ರವೀಂದ್ರನಾಥ ಠಾಕೂರರು ಸ್ಥಾಪಿಸಿದ ವಿಶ್ವವಿದ್ಯಾನಿಲಯ ವಿಶ್ವಭಾರತಿಗೆ, ರಾಷ್ಟ್ರಕ್ಕೆ ಸ್ವಾತಂತ್ರ್ಯ ಬಂದಮೇಲೆ ರಾಷ್ಟ್ರದ ಪ್ರಧಾನಿಯೇ ಕುಲಪತಿ.

ಕುಲಪತಿ ಎನ್ನುವ ಪದ ಇಂದಿನ ಭಾರತೀಯ ಶಿಕ್ಷಣ ಕ್ಷೇತ್ರದಲ್ಲಿ ಸ್ಥಾನದ ಸಂಕೇತವಾಗಿದೆ.

## ಕುವೈತ್

ಎತ್ತ ದೃಷ್ಟಿ ಚಾಚಿದರೂ ಬರಿ ಮರಳು. ಆ ಮರುಭೂಮಿಯಲ್ಲಿ ರಸ್ತೆಗಳು. ರಸ್ತೆಗಳಲ್ಲಿ ವೇಗವಾಗಿ ಓಡಾಡುವ ದೊಡ್ಡ ಕಾರುಗಳು. ಅದು ಕುವೈತ್‌ನ ದೃಶ್ಯ. ನಾಲ್ಕೇ ಲಕ್ಷ ಜನಸಂಖ್ಯೆಯ ಪುಟ್ಟ ರಾಷ್ಟ್ರ. ಜನಸಂಖ್ಯೆಯೊಡನೆ ಕಾರುಗಳ ಸಂಖ್ಯೆಯನ್ನು ಹೋಲಿಸಿದರೆ, ಅಮೆರಿಕದ ಸಂಯುಕ್ತ ಸಂಸ್ಥಾನಕ್ಕೆ ಮೊದಲನೆಯ ಸ್ಥಾನ, ಕುವೈತ್‌ಗೆ ಎರಡನೆಯ ಸ್ಥಾನ.

ಮರಳು ಹಿಂಡಿದರೆ ಎಣ್ಣೆ ಬರುವುದೇ ಎನ್ನುತ್ತಾರೆ. ಆದರೆ ಕುವೈತ್‌ಗೆ ಆ ಮಾತು ಅನ್ವಯವಾಗುವುದಿಲ್ಲ. ಇಲ್ಲಿ ಮರಳಿನ ಅಡಿಯಲ್ಲಿ ಎಣ್ಣೆಯ ಹೊಳೆ ಹರಿದೇ ರಾಷ್ಟ್ರದ ಸಂಪತ್ತು ಬೆಟ್ಟದಂತೆ ಬೆಳೆದಿದೆ. 1938ರವರೆಗೆ ದರಿದ್ರ ದೇಶವೆನಿಸಿದ್ದ ಕುವೈತ್ ಮೂರು ದಶಕಗಳಿಂದ ಧನಾಢ್ಯವೆನಿಸಿದೆ.

ಕುವೈತ್ ಪರ್ಷಿಯನ್ ಕೊಲ್ಲಿಯ ವಾಯುವ್ಯ ದಿಕ್ಕಿನಲ್ಲಿದೆ. ಕುವೈತ್ ನಗರ ಒಂದನ್ನು ಬಿಟ್ಟರೆ, ಉಳಿದ ನಾಡೆಲ್ಲಾ ಮರುಭೂಮಿ ಎಂದೇ ಹೇಳಬಹುದು. ದೇಶದ ಜನಸಂಖ್ಯೆಯಲ್ಲಿ ಅರ್ಧ ಭಾಗ ಈ ನಗರದಲ್ಲಿದೆ. ನದಿ, ಹೊಳೆ ಯಾವುದೂ ಇಲ್ಲದ ಈ ನಾಡಿನಲ್ಲಿ ಚಿಲುಮೆಗಳು ಇರುವ ಕಡೆ ಮಾತ್ರ ಜನರಿಗೆ ವಾಸಮಾಡಲು ಸ್ವಲ್ಪ ಅನುಕೂಲ ದೊರಕುತ್ತದೆ. ವರ್ಷಕ್ಕೆ 2 ರಿಂದ 19 ಸೆಂ. ಮೀ. ವರೆಗೆ ಮಳೆ ಆಗುತ್ತದೆ. ವಿಶ್ವದ ಅತಿ ಹೆಚ್ಚು ಉಷ್ಣಾಂಶವಿರುವ ನಾಡುಗಳಲ್ಲಿ ಕುವೈತ್ ಒಂದು. ಬೇಸಿಗೆ ಕಾಲದಲ್ಲಿ 125°ಫಾ. ವರೆಗೂ ಉಷ್ಣಾಂಶವಿರುತ್ತದೆ. ಹಿಂದೆ ಕುಡಿಯುವ ನೀರನ್ನು ಬಸ್ರಾದಿಂದ ತರುತ್ತಿದ್ದರು. ಈಗ ಸಮುದ್ರದ ನೀರನ್ನು ಸೋಸಿ, ಕುಡಿಯಲು ಯೋಗ್ಯವಾದ ನೀರು ದೊರಕಿಸುವ ಕಾರಖಾನೆ ಇದೆ.

ಗೋಧಿ. ಖರ್ಜೂರ. ತರಕಾರಿ ಬೆಳೆಯುತ್ತಾರೆ. ಮೇಕೆ. ಕುರಿ. ಒಂಟೆ ಸಾಕುವುದರಿಂದ ಹಾಲು, ಮಾಂಸ ಸಿಗುತ್ತವೆ. ಆಹಾರಪದಾರ್ಥಗಳನ್ನು ಆಮದು ಮಾಡಿಕೊಳ್ಳುತ್ತಾರೆ.

ಇಟ್ಟಿಗೆ, ಪೆಟ್ರೋಲಿಯಂ, ಪೆಟ್ರೋಲಿಯಂನ ರಾಸಾಯನಿಕ ವಸ್ತುಗಳು, ಸಿಮೆಂಟು, ಮೀನುಗಾರಿಕೆ, ಮುತ್ತು ತೆಗೆಯುವುದು, ಹಡಗು ನಿರ್ಮಾಣ, ಅಮೃತಶಿಲೆಯ ಕೆಲಸಗಳು ಪ್ರಮುಖ ಕೈಗಾರಿಕೆಗಳು.

ಕುವೈತ್‌ನ ಜನಸಂಖ್ಯೆಯಲ್ಲಿ ಶೇಕಡಾ 99 ಭಾಗ ಮುಸಲ್ಮಾನರು. ಇದೊಂದು ಅರಬ್ ರಾಜ್ಯ. ಅರಬಿ ಇಲ್ಲಿನ ಭಾಷೆ. ಪೆಟ್ರೋಲಿಯಂ ಪತ್ತೆಯಾದ ಮೇಲೆ ಹೊರಗಿನ ಅರಬ್ ದೇಶಗಳಿಂದ ಬಹಳ ಜನ ಬಂದು ನೆಲೆಸಿದರು. ಹಳೆಯ ಪಟ್ಟಣ ನೆಲಸಮವಾಗಿ ಹೊಸ ನಗರವನ್ನು ಕಟ್ಟಿದರು. ಇಂದು ವಿವಿಧ ದೇಶಗಳ ಜನರಿಗೆ ಕುವೈತ್‌ನಲ್ಲಿ ಉದ್ಯೋಗಾವಕಾಶ ದೊರೆತಿದೆ. ಎಷ್ಟೋ ಭಾರತೀಯರು ಅಲ್ಲಿ ಉನ್ನತಾಧಿಕಾರಿಗಳಾಗಿದ್ದಾರೆ.

ಕುವೈತ್ ರಾಜಧಾನಿ ಮತ್ತು ಮುಖ್ಯ ಬಂದರು. ಮೆನಾ ಅಲ್‌ಅಮ್ಮದಿ, ಷುವೇಖ್ ದೊಡ್ಡ ಬಂದರುಗಳು. ಅಹ್ಮದಿ ಹೊಸದಾಗಿ ತೈಲ ಸಂಸ್ಥೆಯವರು ನಿರ್ಮಿಸಿದ ನಗರ.

ಹದಿನೆಂಟನೆಯ ಶತಮಾನದ ಮಧ್ಯಭಾಗದಲ್ಲಿ ಕೆಲವು ಅರಬ್ ಬುಡಕಟ್ಟಿನ ಜನರು ಪರ್ಷಿಯನ್ ಕೊಲ್ಲಿಯ ಹತ್ತಿರದ ನಾಡಿನಲ್ಲಿ ಬಂದು ನೆಲೆಸಿದರು. ತುರ್ಕಿಯ ಆಟಮನ್ ಚಕ್ರಾಧಿಪತ್ಯಕ್ಕೆ ಸೇರಿದ್ದರೂ. ಕುವೈತ್‌ನ ಜನರಿಗೆ ಸ್ವಂತ ಆಡಳಿತ ಅಧಿಕಾರ ದೊರಕಿತ್ತು. 18–19ನೆಯ ಶತಮಾನಗಳಲ್ಲಿ ಕುವೈತ್ ಮಧ್ಯ ಅರೇಬಿಯದ ಪ್ರಮುಖ ಬಂದರಾಗಿ ರೂಪುಗೊಂಡಿತು. ಕಡಲ್ಗಳ್ಳರ ಹಾವಳಿ ಮತ್ತು ಅರಬರ ದಾಳಿಗೆ ತುತ್ತಾದ ಕುವೈತ್ ತನ್ನ ಪ್ರಾಮುಖ್ಯವನ್ನು ಹದಿನೆಂಟನೆಯ ಶತಮಾನದಲ್ಲಿ ಕಳೆದುಕೊಂಡಿತ್ತು. ಬ್ರಿಟಿಷ್ ಸಾಮ್ರಾಜ್ಯ ಪರ್ಷಿಯನ್ ಕೊಲ್ಲಿಯ ಮಹತ್ವವನ್ನು ಅರಿತು ಹತ್ತೊಂಬತ್ತನೆಯ ಶತಮಾನದಲ್ಲಿ ಅರಸನಾಗಿದ್ದ ಶೇಖ್ ಮುಬಾರಕ್ ಅಲ್ ಸಹಾಬನಿಗೆ ರಕ್ಷಣೆ ಕೊಡಲು ಒಪ್ಪಿ. ಕೊಲ್ಲಿಯನ್ನು ಉಪಯೋಗಿಸುವ ಹಕ್ಕನ್ನು ಪಡೆದುಕೊಂಡಿತು. 1914ರಲ್ಲಿ ತುರ್ಕಿಯವರ ಅಧೀನದಲ್ಲಿದ್ದ ಕುವೈತ್ ಬ್ರಿಟಿಷರ ಸಹಕಾರದಿಂದ ಸ್ವತಂತ್ರವಾಯಿತು. ಆದರೂ ಬ್ರಿಟಿಷರ ರಕ್ಷಣೆ ಇನ್ನೂ ಇತ್ತು. 1961ರಲ್ಲಿ ಕುವೈತ್ ಪೂರ್ಣವಾಗಿ ಸ್ವತಂತ್ರವಾಗಿ ಅರಬ್ ಲೀಗಿಗೆ ಸೇರಿಕೊಂಡಿತು. 1963ರಲ್ಲಿ ವಿಶ್ವಸಂಸ್ಥೆಯ ಸದಸ್ಯತ್ವ ದೊರಕಿತು.

ಕುವೈತಿನದು ಸಂವಿಧಾನಬದ್ಧ ರಾಜಪ್ರಭುತ್ವ. ಈ ರಾಜ್ಯದಲ್ಲಿ ವಾಸಿಸುವವರಲ್ಲಿ ಸುಮಾರು ಅರ್ಧ ಸಂಖ್ಯೆಯಷ್ಟು ಮಾತ್ರ ಇಲ್ಲಿನ ರಾಷ್ಟ್ರೀಯರು. ಇವರಿಗಷ್ಟೇ ಮತದಾನದ ಹಕ್ಕಿದೆ. ಸರಕಾರದ

| | | |
|---|---|---|
| ಖಂಡ | : | ಏಷ್ಯ (ಅರೇಬಿಯದ ಈಶಾನ್ಯ) |
| ಅಕ್ಷಾಂಶ | : | 28° 47′ ಉ ದಿಂದ 30° 04′ ಉ |
| ರೇಖಾಂಶ | : | 46° 34′ ಪೂ ದಿಂದ 48° 18′ ಪೂ |
| ವಿಸ್ತೀರ್ಣ | : | 15,540 ಚ. ಕಿ.ಮೀ. |
| ಜನಸಂಖ್ಯೆ | : | ಸುಮಾರು 4,00,000 |
| ರಾಜಧಾನಿ | : | ಕುವೈತ್ |
| ಭಾಷೆ | : | ಅರಬಿ |
| ಸರಕಾರ | : | ಸಂವಿಧಾನಬದ್ಧ ರಾಜಪ್ರಭುತ್ವ |
| ಬಾವುಟ | : | ಎಡ ಪಾರ್ಶ್ವದಲ್ಲಿ ಒಂದು ಭಾಗ ಕಪ್ಪು, ಮೇಲಿನಿಂದ ಕೆಳಕ್ಕೆ ಹಸಿರು, ಬಿಳಿ, ಕೆಂಪು ಪಟ್ಟಿಗಳು |

ಪ್ರಮುಖನನ್ನು ಸಹಾಬ್ ಮನೆತನದಿಂದ ಚುನಾಯಿಸುತ್ತಾರೆ. ಇವರಿಗೆ ಆಜೀವಪರ್ಯಂತ ಅಧಿಕಾರ.

ಈಚೆಗೆ ಕುವೈತ್‌ನಲ್ಲಿ ವೇಗವಾಗಿ ಬದಲಾವಣೆಗಳಾಗುತ್ತಿವೆ. ಅರಬಿ ಭಾಷೆ ಲೆಕ್ಕ, ಮತಗ್ರಂಥಗಳನ್ನು ಮಾತ್ರ ಕಲಿಸುತ್ತಿದ್ದ ಶಾಲೆಗಳು ಮಾಯವಾಗಿ ಆಧುನಿಕ ವಿದ್ಯಾಭ್ಯಾಸ ನೀಡುವ ಶಾಲೆಗಳು ಬಂದಿವೆ. ವಿದ್ಯಾಭ್ಯಾಸ ಉಚಿತ. ಇವೆಲ್ಲ ಸಾಧ್ಯವಾಗಿರುವುದು ಪೆಟ್ರೋಲಿಯಂನಿಂದ. 1963 ಒಂದೇ ವರ್ಷದಲ್ಲಿ 9,03,11,658 ಮೆ. ಟನ್ ಪೆಟ್ರೋಲಿಯಂ ಉತ್ಪಾದನೆಯಾಯಿತು.

## ಕೂ ಕ್ಲಕ್ಸ್ ಕ್ಲಾನ್

"ಹಣ ಗಳಿಸುವುದನ್ನು ಬಿಡದಿದ್ದರೆ ಕ್ಲಾನಿನವರು ನಿನ್ನ ಮನೆಗೆ ಭೇಟಿ ಕೊಡಬೇಕಾಗುತ್ತದೆ !"

ಪೆರಿ ಜೆಫರ್ಸ್ ಎಂಬ ನೀಗ್ರೊ ಶ್ರೀಮಂತನಿಗೆ 1868ರಲ್ಲಿ ಈ ಎಚ್ಚರಿಕೆ ತಲಪಿತು.

ಜೆಫರ್ಸ್ ದಕ್ಷಿಣ ಅಮೆರಿಕದ ಜಾರ್ಜಿಯದಲ್ಲಿರುವ ಕುಮಾಕ್ ಎನ್ನುವ ಸ್ಥಳದ ನಿವಾಸಿ. ಒಂದು ರಾತ್ರಿ, ನೀಳವಾದ ಬಿಳಿಯಂಗಿಗಳನ್ನೂ ಉದ್ದನೆಯ ಕೋಡಂಗಿ ಟೋಪಿಗಳನ್ನೂ ಧರಿಸಿದ ಆಕೃತಿಗಳು ಅವನ ಮನೆಯ ಬಳಿ ಸುಳಿದಾಡಿದುವು. ಜೆಫರ್ಸನ ಮಗ ಗುಂಡು ಹಾರಿಸಿದಾಗ ಆ ಆಕೃತಿಗಳಲ್ಲಿ ಒಂದು ಸತ್ತಿತು. ಅಲ್ಲಿಗೆ ಜೆಫರ್ಸನ ಕಥೆ ಮುಕ್ತಾಯವಾಯಿತೆಂದೇ ಅರ್ಥ. ಅವನ ಮತ್ತೊಬ್ಬ ಮಗನನ್ನು ಆ ವ್ಯಕ್ತಿಗಳು ಕೊಂದು ಕಳೇಬರಕ್ಕೆ ಬೆಂಕಿ ಹಚ್ಚಿದರು. ಅವನ ಹೆಂಡತಿಯ ಕೊರಳಿಗೆ ಉರುಳು ಹಾಕಿದರು. ಜೆಫರ್ಸ್ ತಪ್ಪಿಸಿಕೊಂಡು ಹೋಗುತ್ತಿದ್ದಾಗ, ಅವನನ್ನೂ ಅವನ ಮೂರು ಮಕ್ಕಳನ್ನೂ ಗುಂಡಿಕ್ಕಿ ಕೊಂದರು. ಒಬ್ಬ ಮಗ ಮಾತ್ರ ಬದುಕಿ ಉಳಿದ.

ಕ್ಲಾನ್ ಕಣ್ಣಿಟ್ಟಿದೆ ಎಂದರೆ ಸಾಕು, ನೀಗ್ರೊಗಳೂ ಅವರಿಗೆ ನೆರವಾಗುವ ಬಿಳಿಯರೂ ಪ್ರಾಣ ಭಯದಿಂದ ನಡುಗುತ್ತಿದ್ದರು.

ಈ ಕ್ಲಾನೇ ಕೂ ಕ್ಲಕ್ಸ್ ಕ್ಲಾನ್. ಇದರ ಸದಸ್ಯರ ವೇಷ ಉದ್ದನೆಯ ಬಿಳಿಯಂಗಿ, ತಲೆಯ ಮೇಲೆ ಕೋಡಂಗಿ ಟೋಪಿ ; ಅದರಲ್ಲಿ ಮೂಗು, ಬಾಯಿ, ಕಣ್ಣುಗಳಿಗೆ ಸುತ್ತಲೂ ಬಣ್ಣ ಬಳಿದ ರಂಧ್ರಗಳು, ಮೇಲುಗಡೆ ಮೂರು ಕೋಡುಗಳು. ಮುಕ್ಕಾಲು ಜನರಿಗೆ ಬಿಳಿಯ ವೇಷ. ಕೆಲವರಿಗೆ ಕೆಂಪು, ಒಬ್ಬರಿಗೆ ಮಾತ್ರ ಹಸಿರು ಪೋಷಾಕು. ಈ ತಂಡದ ಸದಸ್ಯರು ನೀಗ್ರೊಗಳನ್ನು ವಿವಿಧ ರೀತಿಗಳಲ್ಲಿ ಹಿಂಸಿಸುತ್ತಿದ್ದರು. ನೀಗ್ರೊಗಳಲ್ಲಿ ಸಹಾನುಭೂತಿ ಇದ್ದ ಬಿಳಿಯರಿಗೆ ಇನ್ನೂ ಹೆಚ್ಚಿನ ಶಿಕ್ಷೆ ವಿಧಿಸುತ್ತಿದ್ದರು.

ಕೂ ಕ್ಲಕ್ಸ್ ಕ್ಲಾನ್ ಗುಂಪು ಅಮೆರಿಕ ಸಂಯುಕ್ತ ಸಂಸ್ಥಾನದ ದಕ್ಷಿಣ ರಾಜ್ಯಗಳಲ್ಲಿ ಹೆಚ್ಚಿಗೆ ಇದ್ದಿತು. 1866ರಲ್ಲಿ ಯಾವ ಅಕೃತ್ಯದ ಯೋಚನೆಯೂ ಇಲ್ಲದೆ, ಕೇವಲ ಮೋಜಿಗೆಂದು, ರಾತ್ರಿಯ ವೇಳೆ ತಿರುಗಾಡುವ ಒಂದೇ ವೇಷದ ಗುಂಪಾಗಿ ಹುಟ್ಟಿಕೊಂಡಿತು. ಗ್ರೀಕ್ ಭಾಷೆಯ 'ಕೈ ಕ್ಲೋಸ್' ಎಂದರೆ ವೃತ್ತ ಎನ್ನುವ ಪದದ ಜೊತೆಗೆ 'ಕ್ಲಾನ್' ಎಂದರೆ ಗುಂಪು ಎಂಬರ್ಥವನ್ನು ಸೇರಿಸಿ 'ಕೂ ಕ್ಲಕ್ಸ್ ಕ್ಲಾನ್' ಎನ್ನುವ ವಿಚಿತ್ರ ಹೆಸರು ಹುಟ್ಟಿತು. ಹತ್ತೊಂಬತ್ತನೆಯ ಶತಮಾನದಲ್ಲಿ ನಡೆದ ಅಂತರ್ಯುದ್ಧದ ಪರಿಣಾಮವಾಗಿ ನೀಗ್ರೊ ಜನಾಂಗದ ಹಕ್ಕುಗಳಿಗೆ ಪುರಸ್ಕಾರ ದೊರೆಯಿತು. ಗುಲಾಮಗಿರಿಯನ್ನು ಸಮರ್ಥಿಸುತ್ತಿದ್ದ ದಕ್ಷಿಣದವರು ತಮ್ಮದೇ ಕೈವಾಡವನ್ನು ಈ ಅಕೃತ್ಯದಲ್ಲಿ ತೋರಿಸಲು ಆರಂಭಿಸಿದರು.

ಕ್ಲಾನ್‌ಗೆ ಹೊಸ ಸದಸ್ಯರನ್ನು ಸೇರಿಸಿಕೊಳ್ಳಬೇಕಾದರೆ ಊರ ಹೊರಗಿನ ಜಾಗದಲ್ಲಿ ಈ ಗುಂಪಿನವರು ಕಲೆಯುತ್ತಾರೆ. ನಿರ್ಜನ ನೀರವ ರಾತ್ರಿ. ಮಧ್ಯೆ ಶಿಲುಬೆಯಾಕಾರದ ಒಂದು ಸ್ತಂಭ. ಒಮ್ಮೆಲೆ ಈ ಸ್ತಂಭ ಹೊತ್ತಿ ಉರಿಯತೊಡಗುತ್ತದೆ. ಅದಕ್ಕೆ ಪ್ರದಕ್ಷಿಣೆ ಹಾಕುತ್ತ ಹಾಡುತ್ತಾರೆ. ಅನಂತರ ಗುಂಪಿನ ಘೋಷಣೆಗಳನ್ನು ಉಚ್ಚರಿಸುತ್ತಾರೆ. ಕ್ಲಾನಿನ ಚಟುವಟಿಕೆಗಳ ಬಗೆಗೆ ಹೊರಗೆ ಚಕಾರವೆತ್ತಕೂಡದು ಎಂದು ಪ್ರತಿಯೊಬ್ಬ ಸದಸ್ಯನೂ ಪ್ರತಿಜ್ಞಾಬದ್ಧನಾಗಿರುತ್ತಾನೆ.

1866ರಿಂದ ಎರಡೇ ವರ್ಷಗಳಲ್ಲಿ ಐದುಲಕ್ಷ ಜನರು ಬೇರೆ ಬೇರೆ ನಗರ, ಪಟ್ಟಣಗಳಲ್ಲಿ ಈ ಗುಂಪನ್ನು ಸೇರಿದರು. ಕ್ಲಾನ್ 1871ರ ವೇಳೆಗೆ ನೂರಾರು ಜನರನ್ನು ಬಲಿ ತೆಗೆದುಕೊಂಡಿತು. ಸರಕಾರ ಕೂ ಕ್ಲಕ್ಸ್ ಕ್ಲಾನ್ ಶಾಸನವನ್ನು ಮಾಡಬೇಕಾಯಿತು. ಬರಬರುತ್ತ ನೀಗ್ರೊ ವಿರೋಧದೊಂದಿಗೆ ಯೆಹೂದಿ, ರೋಮನ್ ಕ್ಯಾಥಲಿಕ್ ಮತ್ತು ಕಮ್ಯೂನಿಸ್ಟರ ಮೇಲಿನ ಹಗೆತನವೂ ಮೊದಲಾಯಿತು. ಕ್ಲಾನ್ ಅತ್ಯಂತ ಪ್ರಬಲವಾಗಿದ್ದ ಕಾಲದಲ್ಲಿ ಸುಮಾರು 50 ಲಕ್ಷ ಸದಸ್ಯರಿದ್ದರು. ಆದರೆ 1925ರಲ್ಲಿ ಕ್ಲಾನ್‌ನ ಸದಸ್ಯ ಕೋಟ್ಯಧೀಶ ಸ್ಟೀವ್ ಒಂದು ಖಟ್ಲೆಯಲ್ಲಿ ಸಿಕ್ಕಿಬಿದ್ದಾಗ, ವಿಚಾರಣೆಯಲ್ಲಿ ಕ್ಲಾನಿನ ಭೀಕರ ಕೃತ್ಯಗಳು ಬಯಲಾದುವು. ಕ್ಲಾನ್ ಇದರಿಂದ ದುರ್ಬಲವಾಯಿತು.

ತಂಡವನ್ನು ಪುನರುಜ್ಜೀವಿಸುವ ಮತ್ತೆರಡು ಪ್ರಯತ್ನಗಳು ನಡೆದುವು. ಆದರೆ ಸಫಲವಾಗಲಿಲ್ಲ. 1965ರಲ್ಲಿ ಮತ್ತೆ ನಟ್ಟಿರುಳಿನಲ್ಲಿ ಉರಿಯುವ ಶಿಲುಬೆಗಳು ಕಂಡುಬಂದುವು.

ಕ್ಲಾನಿನ ಉದ್ದೇಶಗಳ ಮೂಲವೇನು ? 1954 ಮತ್ತು 1964ರಲ್ಲಿ ನೀಗ್ರೊ ಮಕ್ಕಳನ್ನು ಸಮಾನ ಹಕ್ಕುಗಳೊಡನೆ ಶಾಲೆಗೆ ಸೇರಿಸಿದಾಗ ಮತ್ತು ಪೌರಹಕ್ಕು ಕಾಯಿದೆಯನ್ನು ಘೋಷಿಸಿದಾಗ ಕ್ಲಾನಿನ ಚಟುವಟಿಕೆಗಳು ಶಿಖರವೇರಿದುವು. ಹಣ, ವಿದ್ಯೆ ನೀಗ್ರೊಗಳ ಬಳಿ ಸುಳಿದರೆ ಅವರು ತಮ್ಮ ಗುಲಾಮಗಿರಿಯನ್ನು ತೊರೆಯುತ್ತಾರೆ ; ಸಮಾನ ಹಕ್ಕುಬಾಧ್ಯತೆಗಳ ನೆರವಿನಿಂದ ಔನ್ನತ್ಯಕ್ಕೇರಿ ತಮ್ಮನ್ನೇ ಆಳುತ್ತಾರೆ ; ನೀಗ್ರೊ ಜನಸಂಖ್ಯೆ ಹೆಚ್ಚಾಗಿರುವ ದೇಶಗಳಲ್ಲಿ ಅವರ ಪ್ರಭುತ್ವ ಅನಿವಾರ್ಯವಾಗಬಹುದು ಎಂಬಿವೇ ಮೊದಲಾದ ಭೀತಿಗಳ ಹಿನ್ನೆಲೆಯಲ್ಲಿ ಕ್ಲಾನ್ ಬಲಗೊಂಡಿತು. ಬದುಕುವ ಹಕ್ಕಿಗೇ ಈ ತಂಡ ಸಂಚಕಾರ ಒಡ್ಡಿತು. ಇದು ಅಮೆರಿಕನರಿಗೆ ಸಲ್ಲದ ಚಟುವಟಿಕೆ ಎಂದು ಅಮೆರಿಕದ ಸರಕಾರ ಸಹಜವಾಗಿಯೇ ಸಾರಿತು.

ಇತ್ತೀಚಿನ ವರ್ಷಗಳಲ್ಲಿ ಕೂ ಕ್ಲಕ್ಸ್ ಕ್ಲಾನ್ ತಂಡದ ಪ್ರಾಬಲ್ಯ ಕಡಮೆಯಾಗುತ್ತ ಬಂದಿದೆ.

## ಕ್ಯೂಬ

ಸುಮಾರು 1,14,525 ಚದರ ಕಿ. ಮೀ. ಗಳ ಈ ದ್ವೀಪಕ್ಕೆ, ಈಚೆಗೆ ಪ್ರಪಂಚದ ಚರಿತ್ರೆಯಲ್ಲಿ ಮುಖ್ಯ ಪಾತ್ರ. ರಷ್ಯ–ಅಮೆರಿಕ ಎರಡು ರಾಷ್ಟ್ರಗಳಿಗೂ ಇದರಲ್ಲಿ ವಿಶೇಷ ಆಸಕ್ತಿ. 1962ರಲ್ಲಿ ಈ ದ್ವೀಪ ಅಮೆರಿಕದ ಕೈಗಾರಿಕಾ ಸಂಸ್ಥೆಗಳು ಕಳುಹಿಸಿದ ಐದು ಕೋಟಿ ಡಾಲರ್ ಬೆಲೆಯ ಆಹಾರ ಮತ್ತು ಔಷಧ ಸಾಮಗ್ರಿಗಳನ್ನು ಪಡೆದು 1,179 ಮಂದಿ ಯುದ್ಧ ಕೈದಿಗಳನ್ನು ಬಿಡುಗಡೆ ಮಾಡಿತು. ಈ ದ್ವೀಪ ಕ್ಯೂಬ. ಕ್ಯೂಬ ದ್ವೀಪವನ್ನು ವೆಸ್ಟ್ ಇಂಡೀಸ್ ದ್ವೀಪ ಸಮುಚ್ಚಯದ ಹವಳ ಎಂದು ಕರೆಯುತ್ತಾರೆ. ಏಕೆಂದರೆ ಅದು ಅಷ್ಟು ಸುಂದರವಾಗಿದೆ. ಈ ದೊಡ್ಡ ದ್ವೀಪ ಮೀನಿನಾಕಾರವಾಗಿದೆ. ಕ್ಯೂಬದ ತೀರ 3,200 ಕಿ. ಮೀ. ಉದ್ದ.

ಕ್ಯೂಬದಲ್ಲಿ ಎರಡು ಋತುಗಳಿವೆ. ನವೆಂಬರ್‌ನಿಂದ ಏಪ್ರಿಲ್‌ವರೆಗೆ ಒಣ ಹವೆ. ಮೇಯಿಂದ ಅಕ್ಟೋಬರ್‌ವರೆಗೆ ಮಳೆಗಾಲ. ಉಷ್ಣಾಂಶ ಹೆಚ್ಚಾಗಿರುವ ಕ್ಯೂಬವನ್ನು ವಾಣಿಜ್ಯ ಮಾರುತ ಎಷ್ಟೋ ಮಟ್ಟಿಗೆ ತಂಪು ಮಾಡುತ್ತದೆ.

ಕಬ್ಬು ಕ್ಯೂಬದ ಪ್ರಮುಖ ವಾಣಿಜ್ಯ ಬೆಳೆ. ಸಕ್ಕರೆಯು ತಯಾರಿಕೆ ದೇಶಕ್ಕೆ ದುಡ್ಡಿನ ಹೊಳೆಯನ್ನೇ ಹರಿಸಿದೆ. ಕಬ್ಬನ್ನಲ್ಲದೆ ಹೊಗೆಸೊಪ್ಪು, ಕಾಫಿ, ಜಂಬೀರ ಫಲಗಳು, ಬತ್ತ, ಕೋಕೋ, ತರಕಾರಿಗಳನ್ನು ಬೆಳೆಯುತ್ತಾರೆ. ದನ, ಕುರಿ ಸಾಕುತ್ತಾರೆ. ಮೀನು ಹಿಡಿಯುವುದರಲ್ಲಿ ನಿಷ್ಣಾತರು. ಕಬ್ಬಿಣ, ನಿಕ್ಕಲ್, ಕ್ರೋಮ್, ತಾಮ್ರ, ಮ್ಯಾಂಗನೀಸ್, ಅಸ್ಫಾಲ್ಟ್, ಕಲ್ಲೆಣ್ಣೆಗಳು ಹೇರಳವಾಗಿ ದೊರೆಯುತ್ತವೆ.

ಸಕ್ಕರೆ ಶೋಧನಾಗಾರ, ಸಕ್ಕರೆಯು ಉಪ ಉತ್ಪನ್ನಗಳು, ಪೆಟ್ರೋಲಿಯಂ ಶೋಧನಾಗಾರ, ಮದ್ಯ, ಚರ್ಮದ ವಸ್ತುಗಳು, ಬಟ್ಟೆ, ಸಾಬೂನು ಮತ್ತು ಔಷಧಗಳು, ಉಕ್ಕು ಮತ್ತು ಸಿಮೆಂಟ್ ಉತ್ಪನ್ನದ ಕಾರ್ಖಾನೆಗಳು ಮತ್ತು ಗೊಬ್ಬರಗಳು ಇವಕ್ಕೆ ಕ್ಯೂಬ ಪ್ರಸಿದ್ಧ. ಕ್ಯೂಬದ ಸಿಗಾರು ವಿಶ್ವದಲ್ಲೇ ಖ್ಯಾತಿ ಪಡೆದಿದೆ.

ಕ್ಯೂಬದ ಮೂಲನಿವಾಸಿಗಳು ಅಮೆರಿಕದ ಇಂಡಿಯನರು. ಸ್ಪೇನಿನವರು ಬಂದಮೇಲೆ ಇಂಡಿಯನರನ್ನು ಕ್ರೂರವಾಗಿ ನಡೆಸಿಕೊಳ್ಳುತ್ತಿದ್ದರು. ಇಂಡಿಯನರು ಸಂಪೂರ್ಣವಾಗಿ ಅಳಿದುಹೋದರು. ಹಿಂದೆ ಗುಲಾಮರಾಗಿ ಬಂದ ನೀಗ್ರೊಗಳು, ಮೆಸ್ಟಿಜೋಗಳು, ಸ್ಪೇನಿನವರು ಈಗ ಈ ದೇಶದಲ್ಲಿ ಇದ್ದಾರೆ. ಇಲ್ಲಿ ರೋಮನ್ ಕ್ಯಾಥಲಿಕರೇ ಬಹಳ.

ಕೋಳಿ ಜೂಜು ಬಲು ಮೆಚ್ಚುಗೆಯ ಕ್ರೀಡೆ. ಬೇಸ್‌ಬಾಲ್ ಆಡುತ್ತಾರೆ, ವಿದ್ಯಾಭ್ಯಾಸಕ್ಕೆಂದು ಬಹಳ ಹಣ ವೆಚ್ಚಮಾಡುತ್ತಾರೆ. ಸಾಹಿತ್ಯ, ಕಲೆ, ಸಂಗೀತದಲ್ಲೂ ಕ್ಯೂಬನ್ನರು ಹೆಸರು ಗಳಿಸಿದ್ದಾರೆ.

ರಾಜಧಾನಿ ಹವಾನ ಬಲು ಮನೋಹರ ನಗರ. ಮೋರೋ ಕ್ಯಾಸಲ್ ಎನ್ನುವ ಕೋಟೆ ಪ್ರವಾಸಿಗಳನ್ನಾಕರ್ಷಿಸಿದೆ. ಸ್ಯಾಂಟಿಯಾಗೊ ಡಿ ಕ್ಯೂಬ, ಪಿನಾರ್ ಡೆಲ್‌ರಿಯೊ ಕೈಗಾರಿಕಾ ನಗರಗಳು. ಟ್ರಿನಿಡಾಡ್, ಸ್ಯಾಂಕ್ಟಿ ಸ್ಪಿರಿಟಸ್‌ಗಳಲ್ಲಿ ಐತಿಹಾಸಿಕ ಕಟ್ಟಡಗಳು ಮತ್ತಿತರ ನೋಟಗಳು ಹೇರಳವಾಗಿವೆ.

1492ರಲ್ಲಿ ಕೊಲಂಬಸ್ ಕ್ಯೂಬವನ್ನು ಕಂಡುಹಿಡಿದಾಗ "ಮನುಷ್ಯನ ಕಣ್ಣು ಇದಕ್ಕಿಂತ ಸುಂದರವಾದ ನಾಡನ್ನು ಕಂಡಿಲ್ಲ", ಎಂದು ಉದ್ಗಾರ ತೆಗೆದ. 1511ರಲ್ಲಿ ಸ್ಪೇನಿನವರು ಕ್ಯೂಬವನ್ನು ಗೆದ್ದು ಅಲ್ಲಿ ಬಂದು ನೆಲೆಸಿದರು. ಇದನ್ನು ನೆಲೆಯಾಗಿ ಮಾಡಿಕೊಂಡು ಸ್ಪೇನಿನವರು ಅಮೆರಿಕದ ಇತರ ಭಾಗಗಳ ಶೋಧನೆಯಲ್ಲಿ ತೊಡಗಿದರು. 1762ರಲ್ಲಿ ಇಂಗ್ಲಿಷರು ಹವಾನ ವನ್ನು ವಶಪಡಿಸಿಕೊಂಡರೂ 1763ರಲ್ಲಿ ಪುನಃ ಸ್ಪೇನಿನವರು ವಿಜಯಿಗಳಾದರು. ಕ್ಯೂಬನ್ನರು ಪಶ್ಚಿಮಾರ್ಧಗೋಳದಲ್ಲಿ ಸ್ವಾತಂತ್ರ್ಯಕ್ಕಾಗಿ ಹೊಡೆದಾಡಿದವರಲ್ಲಿ ಮೊದಲಿಗರು. 1898ರಲ್ಲಿ ಸ್ಪೇನ್ ಈ ಪ್ರದೇಶವನ್ನು ಅಮೆರಿಕದ ಸಂಯುಕ್ತ ಸಂಸ್ಥಾನಕ್ಕೆ ವಹಿಸಿಕೊಡಲು ಒಪ್ಪಿತು. 1902ರಿಂದ ಸ್ವತಂತ್ರ ಆಡಳಿತ ಆರಂಭವಾಯಿತಾದರೂ ಅಮೆರಿಕ ಸಂಯುಕ್ತ ಸಂಸ್ಥಾನ ತನ್ನ ದೇಶೀಯರ ಮತ್ತು ಅವರ ಆಸ್ತಿಪಾಸ್ತಿಯ ರಕ್ಷಣೆಗಾಗಿ ತಾನು ಪ್ರವೇಶ ಮಾಡುವ ಹಕ್ಕನ್ನು ಉಳಿಸಿಕೊಂಡಿತು. ದೇಶದಲ್ಲಿ ಗೊಂದಲ ಮತ್ತು ಅಭದ್ರತೆ ಆಗಾಗ ತಲೆದೋರುತ್ತಿದ್ದುವು. 1940ರಲ್ಲಿ ಹೊಸ ಸಂವಿಧಾನ ರಚಿತವಾಯಿತು. ಎರಡನೆಯ ಮಹಾಯುದ್ಧದಲ್ಲಿ ಕ್ಯೂಬ ಮಿತ್ರರಾಷ್ಟ್ರಗಳಿಗೆ ಸಹಾಯಮಾಡಿತು. ಫಿಡೆಲ್ ಕಾಸ್ಟ್ರೊರ ನಾಯಕತ್ವದಲ್ಲಿ ಕ್ರಾಂತಿ ನಡೆದು 1959 ಜನವರಿ 1ರಂದು ಕಾಸ್ಟ್ರೊ ಅಧಿಕಾರ ವಹಿಸಿಕೊಂಡರು. ಆ ತನಕ ಸರ್ವಾಧಿಕಾರಿಯಾಗಿದ್ದ ಅಧ್ಯಕ್ಷ ಬ್ಯಾಟಿಸ್ಟಾ ಮತ್ತು ಅವರ ಸಚಿವರು ದೇಶಬಿಟ್ಟು ಓಡಿಹೋದರು.

ನೋಡಿ : ವೆಸ್ಟ್ ಇಂಡೀಸ್

| | | |
|---|---|---|
| ಖಂಡ | : | ಉತ್ತರ ಅಮೆರಿಕ (ಕ್ಯಾರಿಬಿಯನ್ ಸಮುದ್ರದಲ್ಲಿ) |
| ಅಕ್ಷಾಂಶ | : | 19° 49′ ಉ ದಿಂದ 23° 17′ ಉ |
| ರೇಖಾಂಶ | : | 74° 08′ ಪ ದಿಂದ 84° 57′ ಪ |
| ವಿಸ್ತೀರ್ಣ | : | 1,14,525 ಚ. ಕಿ. ಮೀ. |
| ಜನಸಂಖ್ಯೆ | : | 73,00,000 (ಸುಮಾರು) |
| ರಾಜಧಾನಿ | : | ಹವಾನಾ |
| ಭಾಷೆ | : | ಸ್ಪ್ಯಾನಿಷ್ |
| ಸರಕಾರ | : | ಕಮ್ಯೂನಿಸ್ಟ್ ಗಣರಾಜ್ಯ |
| ಬಾವುಟ | : | ಮೂರು ನೀಲಿ, ಮಧ್ಯ ಮಧ್ಯ ಎರಡು ಬಿಳಿ ಅಡ್ಡ ಪಟ್ಟೆಗಳು, ದೊಡ್ಡ ನಕ್ಷತ್ರ ಧ್ವಜಸ್ತಂಭದ ಕಡೆಗೆ |

## ಕೃತಕ ಭಾಷೆಗಳು

ಪ್ರಪಂಚದ ಯಾವುದೇ ಭಾಗದಲ್ಲಿ, ಚಲಿಸುತ್ತಿರುವ ರೈಲಿಗೆ ಎದುರಾಗಿ ಕೆಂಪು ಬಾವುಟವನ್ನು ಆಡಿಸಿದರೆ ರೈಲು ನಿಲ್ಲುತ್ತದೆ, ಮುಂದೇನೊ ವಿಪತ್ತು ಕಾದಿದೆ ಎಂದು ಚಾಲಕನಿಗೆ ಕೂಡಲೆ ಗೊತ್ತಾಗುತ್ತದೆ. ಕೆಂಪು ಬಾವುಟವನ್ನು ನೋಡಿಯೂ ಅವನು ಮುಂದೆ ಹೋಗುವ ಸಾಹಸ ಮಾಡಲಾರ. ಕೆಂಪು ಬಾವುಟ ಅಪಾಯವನ್ನು ಸೂಚಿಸುತ್ತದೆ, ಎಚ್ಚರಿಕೆಯನ್ನು ನಿರೀಕ್ಷಿಸುತ್ತದೆ ಎನ್ನುವುದು ಪ್ರಪಂಚದ ಎಲ್ಲ ಭಾಗಗಳ ಜನರಿಗೂ ಗೊತ್ತು. ಆದರೆ ಮಾತಿನಲ್ಲಾಗಲಿ ಬರವಣಿಗೆಯಲ್ಲಾಗಲಿ ಎಲ್ಲ ಜನರಿಗೂ ತಿಳಿಯುವಂತೆ 'ಅಪಾಯ' ಎಂದು ತಿಳಿಸುವುದು ಸಾಧ್ಯವಿಲ್ಲ. ಏಕೆಂದರೆ ಪ್ರಪಂಚದಲ್ಲಿ ಸಾವಿರಾರು ಭಾಷೆಗಳು ಬಳಕೆಯಲ್ಲಿವೆ. ಒಂದೊಂದರಲ್ಲೂ 'ಅಪಾಯ' ಎಂಬುದನ್ನು ಹೇಳಲು ಬೇರೆ ಬೇರೆ ಮಾತುಗಳಿವೆ. ಪ್ರತಿಯೊಬ್ಬರಿಗೂ ಅವರ ಭಾಷೆ ತಿಳಿದಿರುತ್ತದೆ; ಜೊತೆಗೆ ಇನ್ನೂ ಕೆಲವು ಭಾಷೆಗಳನ್ನು ಅವರು ಕಲಿತಿರಬಹುದು. ಆದರೆ ಒಬ್ಬರೇ ಎಲ್ಲ ಭಾಷೆಗಳನ್ನೂ ತಿಳಿದಿರುವುದು ಸಾಧ್ಯವಿಲ್ಲ.

ಬಂಗಾಳಿ ಭಾಷೆ ತಿಳಿಯದವರು ಕಲ್ಕತ್ತಕ್ಕೆ ಹೋದರೆ, ಫ್ರೆಂಚ್ ತಿಳಿಯದವರು ಪ್ಯಾರಿಸಿಗೆ ಹೋದರೆ ಅವರಿಗೆ ಮೊದಲು ಏನನ್ನಿಸುತ್ತದೆ? "ನನಗೆ ಈ ಭಾಷೆ ತಿಳಿದಿದ್ದರೆ!" ಅವರಿಗೆ ಆ ಭಾಷೆಗಳು ತಿಳಿದಿದ್ದರೆ ಆ ನಗರದಲ್ಲಿ ಯಾವ ತೊಂದರೆಯೂ ಆಗುತ್ತಿರಲಿಲ್ಲ; ವ್ಯವಹಾರಗಳನ್ನು ಸುಲಭವಾಗಿ ಮುಗಿಸಬಹುದಾಗಿತ್ತು. ಈ ಬಗೆಯ ಪ್ರತಿಯೊಂದು ಸಂದರ್ಭದಲ್ಲಿಯೂ ಅನ್ನಿಸುತ್ತದೆ: ಪ್ರಪಂಚದಲ್ಲಿ ಈಗಿರುವ ಹಾಗೆ ಸಾವಿರಾರು ಭಾಷೆಗಳಿಲ್ಲದೆ ಒಂದೇ ಭಾಷೆ ಇದ್ದಿದ್ದರೆ ಎಷ್ಟು ಚೆನ್ನಾಗಿತ್ತು!

ಒಂದು ಜಗತ್ತು–ಒಂದು ಭಾಷೆ.

ಹೌದು. ತುಂಬ ಸೊಗಸಾದ ಅನ್ನಿಸಿಕೆ. ಭಾಷೆಯ ಬೇಲಿಯಿಲ್ಲದೆ ಯಾರು ಎಲ್ಲಿ ಬೇಕಾದರೂ ಹೋಗಬಹುದು. ದುಭಾಷಿಗಳ ನೆರವಿಲ್ಲದೆ ಅಂತರ

ರಾಷ್ಟ್ರೀಯ ಸಭೆ ಸಮ್ಮೇಳನಗಳಲ್ಲಿ ಭಾಗವಹಿಸಬಹುದು. ಈಗಾಗಲೇ ಚಿಕ್ಕದಾಗಿರುವ ಜಗತ್ತು, ಒಂದು ಭಾಷೆಯಿಂದ, ಇನ್ನೂ ಚಿಕ್ಕದಾಗುವುದರಲ್ಲಿ ಸಂದೇಹವಿಲ್ಲ. ಮನುಷ್ಯ ಮನುಷ್ಯರಲ್ಲಿ, ರಾಷ್ಟ್ರ ರಾಷ್ಟ್ರಗಳಲ್ಲಿ ನಿಕಟವಾದ ಸಂಪರ್ಕವೇರ್ಪಡುತ್ತದೆ. ಆದರೆ ಬೇಕಾಗಿರುವುದು ಒಂದು ಭಾಷೆ, ಪ್ರಪಂಚಕ್ಕೆಲ್ಲ ಅನ್ವಯವಾಗುವ ಒಂದು ಭಾಷೆ. ಇಂಥದೊಂದು ಭಾಷೆಯ ಅಗತ್ಯವಿದೆಯೆಂಬುದನ್ನು ಅನೇಕರು ಬಹಳ ಹಿಂದೆಯೇ ಕಂಡುಕೊಂಡಿದ್ದಾರೆ. ಅದನ್ನು ಈಡೇರಿಸುವಲ್ಲಿ ತಮ್ಮ ಕೈಲಾದ ಪ್ರಯತ್ನಗಳನ್ನು ನಡೆಸುತ್ತಾ ಬಂದಿದ್ದಾರೆ.

ಮುಖ್ಯವಾದ ಪ್ರಶ್ನೆ ಎಂದರೆ, ಈ ಒಂದು ಭಾಷೆ ಯಾವುದಾಗಿರಬೇಕು? ಇಂದು ಬಳಕೆಯಲ್ಲಿರುವ ಯಾವ ಭಾಷೆಯನ್ನು ವಿಶ್ವಭಾಷೆಯೆಂದು ಸ್ವೀಕರಿಸಬೇಕು? ಈ ಭಾಷೆಯ ಆಯ್ಕೆಗೆ ಆಧಾರಗಳೇನು? ಪ್ರತಿಯೊಬ್ಬರಿಗೂ ಅವರ ಭಾಷೆ ಪ್ರಿಯ; ಸುಲಭ. ಅದರ ಬಗೆಗೆ ಪರಮ ಅಭಿಮಾನ. ಯಾರೊಬ್ಬರೂ ತಮ್ಮ ಭಾಷೆಯನ್ನು ಬಿಟ್ಟುಕೊಡಲು ಸಿದ್ಧರಿಲ್ಲ. ಈ ವಿಷಯ ಚರ್ಚೆಗೆ ಬಂದಾಗ ಒಂದು ರಾಷ್ಟ್ರ ಇನ್ನೊಂದರ ಮೇಲೆ ಕತ್ತಿಮಸೆಯಬಹುದು. ಒಂದು ಭಾಷೆ ಪ್ರಾಚೀನವಾದದ್ದು; ಇನ್ನೊಂದು ಭಾಷೆ ಸಂಪದ್ಭರಿತವಾದದ್ದು; ಮತ್ತೊಂದು ಭಾಷೆಯನ್ನು ಹೆಚ್ಚು ಜನ ಬಳಸುತ್ತಾರೆ, ಮಗದೊಂದು ಭಾಷೆಯನ್ನಾಡುವ ಜನ ರಾಜಕೀಯವಾಗಿ ಪ್ರಬಲರು–ಹೀಗೆ ಒಂದೊಂದು ಭಾಷೆಯ ವಿಷಯದಲ್ಲೂ ಪರವಾಗಿ ವಿರೋಧವಾಗಿ ವಾದಿಸಬಹುದು. ಪ್ರತಿಯೊಂದನ್ನೂ ವಿಶ್ವಭಾಷೆಗೆ ಅಭ್ಯರ್ಥಿಯನ್ನಾಗಿ ನಿಲ್ಲಿಸಬಹುದು. ಆದರೆ ಇದು ಚುನಾವಣೆಯಿಂದ ಇತ್ಯರ್ಥವಾಗುವ ವಿಷಯವಲ್ಲ; ಬಲ ಪ್ರಯೋಗದಿಂದ ತೀರ್ಮಾನವಾಗುವಂಥದಲ್ಲ.

ಆದ್ದರಿಂದ ಈ ಉದ್ದೇಶಕ್ಕಾಗಿ, ಒಂದು ಕೃತಕ ಭಾಷೆಯನ್ನು ನಿರ್ಮಿಸುವುದು ಒಳ್ಳೆಯದೆಂದು ಅನೇಕರು ಭಾವಿಸಿದರು. ಕೃತಕ ಭಾಷೆಯ ಬಗೆಗೆ ಯಾರದೂ ಆಕ್ಷೇಪಣೆ ಇಲ್ಲ. ಏಕೆಂದರೆ ಅದು ಯಾರೊಬ್ಬರ ಭಾಷೆಯೂ ಅಲ್ಲ ಎನ್ನುವುದು ಒಂದು ಭಾಷೆಯ ಬಗೆಗೆ ಯೋಚನೆ ಮಾಡುವವರಿಗೆ ಧೈರ್ಯ ನೀಡಿತು. ರಾಷ್ಟ್ರಗಳ ನಡುವೆ ಅಭಿಪ್ರಾಯ ಭೇದವಿಲ್ಲದೆ ತಮ್ಮ ಗುರಿಯನ್ನು ಮುಟ್ಟಬಹುದೆಂದು ಅವರು ಉತ್ಸುಕರಾದರು. ಕಳೆದ ಒಂದು ಶತಮಾನದಲ್ಲಿ ಈ ವಿಚಾರವಾಗಿ ಬಹು ಜನರು ಆಸಕ್ತಿ ತಾಳಿದ್ದಾರೆ. ಈ ಒಂದು ಅವಧಿಯಲ್ಲಿಯೇ ಸುಮಾರು ಒಂದು ನೂರು ಕೃತಕ ಭಾಷೆಗಳ ಸೃಷ್ಟಿಗೆ ಪ್ರಯತ್ನಗಳಾಗಿವೆಯೆಂದೂ ಅಂದಾಜು ಮಾಡಲಾಗಿದೆ. ಕೃತಕ ಭಾಷೆಯೆಂದರೆ, ಜನದ ಬಳಕೆಯಲ್ಲಿಲ್ಲದ ಒಂದು ನಿರ್ಮಿತ ಭಾಷೆ.

ತನ್ನ ಕೃತಕ ಭಾಷೆಯಿಂದ ಜಗತ್ತಿನಾದ್ಯಂತವೂ ಒಂದೇ ಸಂಪರ್ಕ ಮಾಧ್ಯಮವನ್ನೇರ್ಪಡಿಸಿ, ಈಗ ಬಳಕೆಯಲ್ಲಿರುವ ಬಹು ಭಾಷೆಗಳ ಸ್ಥಾನವನ್ನು ಒಂದೇ ಒಂದು ಭಾಷೆ ಆಕ್ರಮಿಸಿಕೊಳ್ಳುವಂತೆ ಮಾಡಬೇಕೆಂಬುದು ಪ್ರತಿಯೊಬ್ಬ ಕೃತಕ ಭಾಷಾ ನಿರ್ಮಾಪಕನ ಉದ್ದೇಶ, ಕನಸು, ತವಕ. ಒಂದು ದೃಷ್ಟಿಯಿಂದ ಇಂಥವರಲ್ಲಿ ಸರ್ ಫ್ರಾನ್ಸಿಸ್ ಬೇಕನ್ (1561–1626) ಮೊದಲಿಗನೆಂದು ಹೇಳಬಹುದು. ಅವನು ತನ್ನ ಕಾಲದಲ್ಲಿ ಆಗಷ್ಟೆ ಯೂರೊಪಿನಲ್ಲಿ ಪರಿಚಯವಾಗುತ್ತಿದ್ದ ಚೀನೀ ಭಾವಲಿಪಿಯನ್ನನುಸರಿಸಿದ ಒಂದು ಕೃತಕ ಬರವಣಿಗೆಯ ವಿಧಾನವನ್ನು ಸೂಚಿಸಿದ್ದನಂತೆ. ಆದರೆ ಇದು ಬರವಣಿಗೆಯೆ ವಿನಾ ಭಾಷೆಯಾಗಿರಲಿಲ್ಲ. 1629ರಲ್ಲಿ ತತ್ತ್ವಶಾಸ್ತ್ರಜ್ಞ ದೆಕಾರ್ತ್ ಸಂಖ್ಯೆಗಳ ಆಧಾರದ ಮೇಲೆ ಕೃತಕ ಭಾಷೆಯೊಂದನ್ನು ರೂಪಿಸಿದ, ಇದರಿಂದ ವಿಶ್ವಭಾಷೆಯ ಚಳುವಳಿಗೆ ತೀವ್ರ ಚಾಲನೆ ದೊರಕಿದಂತಾಯಿತು.

ಅಲ್ಲಿಂದ ಮುಂದೆ ಕೆಲವೇ ವರ್ಷಗಳಲ್ಲಿ ಅನೇಕ ಭಾಷೆಗಳು ಹುಟ್ಟಿಕೊಂಡುವು. ಅವುಗಳಲ್ಲಿ ಕೆಲವು ಬರವಣಿಗೆಯನ್ನೂ ಸೇರಿಸಿಕೊಂಡುವು. ಈ ಭಾಷೆಗಳ ಬಗೆಗೆ ಬೇಕಾದಷ್ಟು ಚರ್ಚೆಯಾಯಿತಾದರೂ, ಯಾವುದೂ ಯಶಸ್ಸು ಗಳಿಸಲಿಲ್ಲ, ಇವು ವಿದ್ವಾಂಸರ, ತತ್ತ್ವಶಾಸ್ತ್ರಜ್ಞರ ಬುದ್ಧಿವಂತಿಕೆಯ ಸೃಷ್ಟಿಯಾಗಿ ನಿಂತವೆ ಹೊರತು ನಿಜವಾದ ಭಾಷೆಯ ಕೆಲಸವನ್ನು ನಿರ್ವಹಿಸುವಲ್ಲಿ ವಿಫಲಗೊಂಡವು. ಬೇಕನ್ನಿನಿಂದ ಇಂದಿನವರೆಗೆ ಹೆಚ್ಚು ಕಡಮೆ ಏಳುನೂರು ಕೃತಕ ಭಾಷೆಗಳ ಸೃಷ್ಟಿಯಾಗಿವೆಯೆಂದು ಲೆಕ್ಕಾಚಾರ ಮಾಡಿದ್ದಾರೆ. ಇವುಗಳಲ್ಲಿ ಅನೇಕ ಬಳಕೆಯಲ್ಲಿರುವ ವಿವಿಧ ಭಾಷೆಗಳ ಬೇರೆ ಬೇರೆ ಅಂಶಗಳನ್ನು ಸೇರಿಸಿ ತಯಾರಿಸಿದ ಮಿಶ್ರಭಾಷೆಗಳಾಗಿವೆ. ಬೋಪಲ್, ಡಿಲ್, ಬಾಲ್ತಾ, ಲ್ಯಾಟಿನೀಸ್, ವೆಲ್ಟ್ ಪಾರ್ಲ್ ಮೊದಲಾದುವು ಹತ್ತೊಂಬತ್ತನೆಯ ಶತಮಾನದ ಕೆಲವು ಭಾಷೆಗಳು; ನೋವಿಯಲ್, ಇಂಟರ್ ಲಿಂಗ್ವ, ಇಂಟರ್‌ಗ್ಲಾಸ, ರೋ, ಆಕ್ಸಿಡೆಂಟಲ್ ಮುಂತಾದುವು ಇಪ್ಪತ್ತನೆಯ ಶತಮಾನದ ಕೆಲವು ಭಾಷೆಗಳು.

ಬಹು ಸಂಖ್ಯೆಯ ಈ ಭಾಷೆಗಳಲ್ಲಿ ಎರಡು ಭಾಷೆಗಳು ವಿಶೇಷ ಉಲ್ಲೇಖಕ್ಕೆ ಅರ್ಹವಾಗಿವೆ. ಒಂದು ವೊಲಾಪುಕ್, ಇನ್ನೊಂದು ಎಸ್ಪರ್‍ಯಾಂಟೊ. ಉಳಿದೆಲ್ಲ ಭಾಷೆಗಳಿಗಿಂತಲೂ ಇವೆರಡು ಹೆಚ್ಚಿನ ಯಶಸ್ಸು ಗಳಿಸಿವೆಯೆಂದು ಹೇಳಬಹುದು. 1880ರ ಸುಮಾರಿಗೆ ಶ್ಲೇಯರ್ ಎಂಬಾತನು ವೊಲಾಪುಕ್ ಭಾಷೆಯನ್ನು ನಿರ್ಮಿಸಿದ. ಇಂಗ್ಲಿಷ್ ಹಾಗೂ ಲ್ಯಾಟಿನ್ ಮೂಲಗಳಿಂದ ಶ್ಲೇಯರ್ ಧಾತುಗಳನ್ನು ತೆಗೆದುಕೊಂಡ; ವ್ಯಾಕರಣ ಅವನ ಮಾತೃಭಾಷೆಯಾದ ಜರ್ಮನ್ನನ್ನು ಆಧರಿಸಿತು. ಈ ಭಾಷೆಯನ್ನು ಮೂಲೆಗೊತ್ತುವಷ್ಟರ ಮಟ್ಟಿಗೆ ಪ್ರಸಿದ್ಧವಾದದ್ದು ಎಸ್ಪರ್‍ಯಾಂಟೊ. ಇದನ್ನು ನಿರ್ಮಿಸಿದವನು ರಷ್ಯ ದೇಶದ ಒಬ್ಬ ವೈದ್ಯ ಡಾ. ಜಮೆನ್‌ಹಾಫ್. ಇವನು ಯೂರೊಪಿನ ಅನೇಕ ಭಾಷೆಗಳಲ್ಲಿ ಪರಿಣತನಾಗಿದ್ದ. 1887ರಲ್ಲಿ ಅವನು ಎಸ್ಪರ್‍ಯಾಂಟೊ ಎಂಬ ಗುಪ್ತನಾಮದಲ್ಲಿ 'ಅಂತರರಾಷ್ಟ್ರೀಯ ಭಾಷೆ' ಎಂಬ ಕಿರುಹೊತ್ತಗೆಯೊಂದನ್ನು ಪ್ರಕಟಿಸಿದ. ಅದರೊಂದಿಗೆ ಅವನ ಭಾಷೆಯೂ ಅಸ್ತಿತ್ವಕ್ಕೆ ಬಂತು. ಎಸ್ಪರ್‍ಯಾಂಟೊ ಎಂದರೆ 'ಆಶಾವಾದಿ' ಎಂದು ಅರ್ಥ. ಜಮೆನ್‌ಹಾಫ್‌ನ ಗುಪ್ತನಾಮವೆ ಕೊನೆಗೆ ಅವನ ಭಾಷೆಯ ಹೆಸರಾಯಿತು. ಅವನು ಜಗತ್ತಿಗೆಲ್ಲ ಒಂದು ಭಾಷೆಯನ್ನು ಕೊಡಬೇಕೆಂಬ ತನ್ನ ಆಸೆಯನ್ನು, ಅಂಥ ಆಸೆಯನ್ನು ಪಡೆದಿದ್ದ ಇತರ ಎಲ್ಲರಿಗಿಂತಲೂ ಹೆಚ್ಚು ಸಮರ್ಥವಾಗಿ ಈಡೇರಿಸಿಕೊಂಡ.

ಎಸ್ಪರ್‍ಯಾಂಟೊ ಅರ್ಧಕ್ಕೂ ಹೆಚ್ಚಾಗಿ ಲ್ಯಾಟಿನ್ ಭಾಷೆಯನ್ನು ಅವಲಂಬಿಸಿದೆ. ಉಳಿದಿದ್ದಕ್ಕೆ ಮಿಕ್ಕ ಇಂಡೊ ಯೂರೊಪಿಯನ್ ಭಾಷೆಗಳು ಆಧಾರ. ಪ್ರತ್ಯಯಗಳ ಬಳಕೆ ಈ ಭಾಷೆಯ ವಿಶಿಷ್ಟ ಲಕ್ಷಣ. ಪ್ರತ್ಯಯಗಳಿಂದ ತುಂಬ ಸುಲಭವಾಗಿ ಹೊಸ ಹೊಸ ಪದಗಳನ್ನು ಸೃಷ್ಟಿಸಿಕೊಳ್ಳಬಹುದು. ವ್ಯಾಕರಣವೂ ಯೂರೊಪಿನ ಭಾಷೆಗಳನ್ನು ಅನುಸರಿಸಿದ್ದು. ಇದರಲ್ಲಿ ಹದಿನಾರು ಪ್ರಧಾನ ಸೂತ್ರಗಳಿವೆ; ಅವಕ್ಕೆ ಅಪವಾದವಿಲ್ಲ. ಸರಳತೆ, ಹೊಂದಾಣಿಕೆ ಹಾಗೂ ಕ್ರಮಬದ್ಧತೆಗಳು ಎಸ್ಪರ್‍ಯಾಂಟೊವಿನ ಯಶಸ್ಸಿಗೆ ಕಾರಣವಾಗಿವೆ. ನಾಮಪದಗಳೆಲ್ಲ –o ಯಿಂದ ಕೊನೆಗೊಂಡರೆ, ಗುಣವಾಚಕಗಳೆಲ್ಲ –a ಯಿಂದ ಕೊನೆಯಾಗುತ್ತವೆ. ಮೊದಲನೆಯದರ ಬಹುವಚನ –oj ಆದರೆ, ಎರಡನೆಯದಕ್ಕೆ –aj.

ಎಸ್ಪರ್‍ಯಾಂಟೊ ಭಾಷೆಯಲ್ಲಿ ಸಾವಿರಾರು ಪುಸ್ತಕಗಳು ಪ್ರಕಟವಾಗಿವೆ : ನೂರಾರು ನಿಯತಕಾಲಿಕಗಳು ಪ್ರಕಟವಾಗುತ್ತಿವೆ. ಹಲವು ಬಾನುಲಿ ಕೇಂದ್ರಗಳಲ್ಲಿ ಈ ಭಾಷೆಯ ಕಾರ್ಯಕ್ರಮಗಳು ಪ್ರಸಾರವಾಗುತ್ತಿವೆ. ಅನೇಕ

ಕಾಲೇಜು, ವಿಶ್ವವಿದ್ಯಾನಿಲಯಗಳಲ್ಲಿ ಈ ಭಾಷೆಯ ತರಗತಿಗಳು ನಡೆಯುತ್ತಿವೆ. ಬಗೆಬಗೆಯ ಪ್ರಚಾರಗಳಲ್ಲಿ ಎಸ್ಪರ್ಯಾಂಟೊ ಧಾರಾಳವಾಗಿ ಬಳಕೆಯಾಗುತ್ತಿದೆ. ಇಷ್ಟು ಯಶಸ್ವಿಯಾಗಿ ನಿರ್ಮಿತ ಭಾಷೆಯೊಂದು ಉಪಯೋಗವಾಗಿರುವ ಇನ್ನೊಂದು ಉದಾಹರಣೆ ಇಲ್ಲ.

ಇಷ್ಟಾದರೂ ಜಗತ್ತಿನಲ್ಲಿ ಒಂದು ಭಾಷೆ ಬಳಕೆಗೆ ಬಂದಿಲ್ಲ. ಏಕೆ?

ಭಾಷೆ ಒಂದು ಸಾಮಾಜಿಕ ಕ್ರಿಯೆ; ಅದು ಸಂಪ್ರದಾಯದ ಸಹಜ ಕೊಡುಗೆ. ಅದು ಸಾಮೂಹಿಕ ಸೃಷ್ಟಿಯೆ ಹೊರತು ಕೃತಕ ನಿರ್ಮಾಣವಲ್ಲ. ಆದುದರಿಂದಲೇ ಯಾವ ಒಂದು ಕೃತಕ ಭಾಷೆಯೂ ಸಂಪೂರ್ಣವಾಗಿ ಯಶಸ್ವಿಯಾಗುವುದು ಸಾಧ್ಯವಾಗಲಿಲ್ಲ. ಯಾವುದೆ ಒಂದು ಭಾಷೆಯನ್ನು ಜಗತ್ತಿನಾದ್ಯಂತ ಬಳಕೆಗೆ ತಂದರೂ, ಅದನ್ನು ಬಳಸುವ ಜನ ಮೊದಲೇ ಬೇರೆ ಬೇರೆ ಭಾಷೆಗಳನ್ನಾಡುತ್ತಿರುವುದರಿಂದ ಭಾಷಾವ್ಯತ್ಯಾಸಗಳುಂಟಾಗುವ ಅಪಾಯ ಇದ್ದೇ ಇರುತ್ತದೆ. ಇದರಿಂದ ಒಂದು ಭಾಷೆ ಸಹಜವಾಗಿ ಬೇರೆ ಬೇರೆ ಭಾಷೆಗಳಾಗುವುದು ಅನಿವಾರ್ಯವಾಗುತ್ತದೆ. ಯಾವ ನಿಯಮಗಳನ್ನೂ ಸಡಲಿಸಲು ಅವಕಾಶವಿಲ್ಲದಿದ್ದರೂ, ಎಸ್ಪರ್ಯಾಂಟೊವಿನಿಂದ ಬೇರೆಯಾಗಿ ಇಡೊ ಎಂಬ ಮತ್ತೊಂದು ಭಾಷೆ ಈಚೆಗೆ ಸೃಷ್ಟಿಯಾಯಿತು. ಭಾಷೆ ಸತತವಾಗಿ ಬೆಳೆಯುತ್ತಿರುತ್ತದೆ; ಬದಲಾಗುತ್ತಿರುತ್ತದೆ. ಆದುದರಿಂದ ಒಂದೇ ಭಾಷೆಯನ್ನು ಒಂದೇ ಸ್ಥಿತಿಯಲ್ಲಿ ಬಳಕೆಯಲ್ಲಿ ಉಳಿಸಿಕೊಳ್ಳುವುದು ಸಾಧ್ಯವಾಗುವುದಿಲ್ಲ. ಬಳಕೆಯಲ್ಲಿರುವ ಭಾಷೆಯ ವಿಷಯದಲ್ಲಿಯೇ ಈ ಮಾತು ನಿಜ. ಹಾಗಿರುವಾಗ ಕೃತಕ ಭಾಷೆಯೊಂದು ಅಸ್ತಿತ್ವಕ್ಕೆ ಬಂದು ಈಗಿರುವ ಭಾಷೆಗಳ ಸ್ಥಾನವನ್ನು ಆಕ್ರಮಿಸಿಕೊಳ್ಳುವುದು ಸಾಧ್ಯವಾಗದ ಮಾತು.

ಕೃತಕ ಭಾಷೆ ಕೆಲವು ಸೀಮಿತ ಉದ್ದೇಶಗಳನ್ನಂತೂ ಈಡೇರಿಸುತ್ತದೆ. ರಹಸ್ಯವನ್ನು ಕಾಪಾಡುವುದು ಇವುಗಳಲ್ಲಿ ಒಂದು. ಈ ಉದ್ದೇಶದ ಭಾಷೆಯನ್ನು 'ಗುಪ್ತ ಭಾಷೆ' ಎಂದೂ ಕರೆಯುತ್ತಾರೆ. ವ್ಯಾಪಾರಿಗಳಲ್ಲಿ, ಮಕ್ಕಳಲ್ಲಿ, ಕಳ್ಳರಗುಂಪುಗಳಲ್ಲಿ ಇಂಥ ಭಾಷೆ ಬಳಕೆಯಲ್ಲಿರುವುದನ್ನು ಗಮನಿಸಬಹುದು. ತಾವು ಚಿಕ್ಕವರಾಗಿದ್ದಾಗ ಭಾಷೆಯನ್ನು ಹೀಗೆ ಬಳಸುತ್ತಿದ್ದುದು ನಮ್ಮಲ್ಲಿ ಎಲ್ಲರಿಗೂ ನೆನಪಿದೆ. ಮೂರನೆಯವರಿಗೆ ಅರ್ಥವಾಗದಿರಲಿ ಎಂದು ವರ್ಣಗಳನ್ನು ಹಿಂದು ಮುಂದು ಮಾಡಿ ಬಳಸುವುದೊ (ಮನೆ =ನೆಮ), ಪ್ರತಿವರ್ಣದ ಹಿಂದೆ ಇನ್ನೊಂದು ವರ್ಣವನ್ನು ಸೇರಿಸುವುದೊ (ಮನೆ =ಕಮಕನೆ) ಮಕ್ಕಳಲ್ಲಿ ಸಾಮಾನ್ಯವಾಗಿರುವ ರೀತಿ.

ಹೀಗೆ ಕೃತಕ ಭಾಷೆಯೊಂದು ಉಪಯೋಗಕ್ಕೆ ಬರುವುದು ವಿರಳವಲ್ಲ. ಆದರೆ ಅದು ಲೋಕಭಾಷೆಯಾಗಿ ರೂಢಿಯಲ್ಲಿ ನಿಲ್ಲುವುದಂತೂ ಕೇವಲ ಕನಸು.

## ಕೃಷ್ಣದೇವರಾಯ

ವಿಜಯನಗರದ ಕೃಷ್ಣದೇವರಾಯನ ಆಳ್ವಿಕೆಯ ಅವಧಿ ದಕ್ಷಿಣ ಭಾರತ ಘನತೆಯನ್ನು ಹೊಂದಿದ್ದ ಕಾಲ : ಹಿಂದೂ ಸಂಸ್ಕೃತಿಯ ರಕ್ಷಣೆಗಾಗಿ ಜನ್ಮತಾಳಿದ ವಿಜಯನಗರ, ವೈಭವದ ಶಿಖರವನ್ನು ತಲಪಿದ ಕಾಲಾವಧಿ.

ಕೃಷ್ಣದೇವರಾಯ ತುಳು ಸಂತತಿಯವನು. ಇವನ ಮಲ ಅಣ್ಣ ವೀರ ನರಸಿಂಹ 1509ರಲ್ಲಿ ಹಠಾತ್ತಾಗಿ ನಿಧನಹೊಂದಿದ. ಅದೇ ವರ್ಷ ಕೃಷ್ಣದೇವರಾಯನ ಪಟ್ಟಾಭಿಷೇಕವಾಯಿತು. ಆಗ ಅವನಿಗೆ ಇಪ್ಪತ್ತೈದು ವರ್ಷ. ಕೃಷ್ಣದೇವರಾಯ ಪಟ್ಟಕ್ಕೆ ಬಂದಾಗ ವಿಜಯನಗರ ಸಾಮ್ರಾಜ್ಯದ ಸ್ಥಿತಿ ಒಳಿತಾಗಿರಲಿಲ್ಲ. ರಾಜ್ಯದ ಉತ್ತರ-ದಕ್ಷಿಣ ಭಾಗಗಳಲ್ಲಿ ಮುಸಲ್ಮಾನರು ಕಿರುಕುಳ ಕೊಡುತ್ತಿದ್ದರು. ಇಲ್ಲಿನ ರಾಜ್ಯದ ಒಳಗಡೆಯೇ ಅನೇಕ ಪ್ರಬಲ ಶತ್ರುಗಳಿದ್ದರು. ಆದರೆ ಈತನ ಸಾಮರ್ಥ್ಯದ ಮುಂದೆ ಶತ್ರುಗಳ ಆಟ ಸಾಗಲಿಲ್ಲ. ಇವನ ಅಮಾತ್ಯ, ಸಮರ್ಥನಾದ ತಿಮ್ಮರಸ. ಸೇನೆ ಸುವ್ಯವಸ್ಥಿತವಾಗಿತ್ತು. ಶತ್ರುಗಳನ್ನು ಸದೆಬಡಿಯುವುದು ಕೃಷ್ಣದೇವರಾಯನಿಗೆ ಕಷ್ಟವಾಗಲಿಲ್ಲ. ವಿಜಯನಗರಕ್ಕೆ ಮೊದಲಿಂದಲೂ ಶತ್ರುಗಳಾಗಿದ್ದ ಬಹಮನಿ ಸುಲ್ತಾನರನ್ನು ಯಶಸ್ವಿಯಾಗಿ ಸೋಲಿಸಿ ರಾಯಚೂರು ಪ್ರಾಂತವನ್ನು ಗೆದ್ದ. ಇದರಿಂದ ಮುಸಲ್ಮಾನರು ಮುಂದೆ ಎರಡು ದಶಕಗಳ ಕಾಲ ವಿಜಯನಗರದ ವಿರುದ್ಧ ಸೆಣಸಾಡಲು ಹಿಂದೆಗೆಯುವಂತಾಯಿತು. ಈ ವಿಜಯದಿಂದ ಕನ್ನಡರಾಜ್ಯ ಉತ್ತರದಲ್ಲಿ ಗೋದಾವರಿಯವರೆಗೂ ಹಬ್ಬಿತು. ಕೃಷ್ಣದೇವರಾಯನ ಸಾಧನೆಗಳಲ್ಲಿ ಇದೂ ಒಂದು. ಇಲ್ಲಿಂದ ಆರಂಭವಾದ ಅವನ ದಂಡಯಾತ್ರೆ ಸೋಲಿನ ಹೆಸರನ್ನೇ ಕಾಣದ ಜೈತ್ರಯಾತ್ರೆಯಾಗಿ ಪರಿಣಮಿಸಿತು. ಕಳಿಂಗ(ಒರಿಸ್ಸಾ)ದ ರಾಜಧಾನಿ ಕಬಕಪುರಿಯನ್ನು ಮುತ್ತಲು ಕೃಷ್ಣದೇವರಾಯನ ಸೈನ್ಯ 2,400 ಕಿ. ಮೀ. ಪ್ರಯಾಣ ಮಾಡಿತು. ದಕ್ಷಿಣದ ರಾಜರನ್ನೆಲ್ಲ ತನ್ನ ಅಧೀನಕ್ಕೆ ತಂದುಕೊಂಡ. ಉತ್ತರದಲ್ಲಿ ಒರಿಸ್ಸಾದಿಂದ ಹಿಡಿದು ದಕ್ಷಿಣದಲ್ಲಿ ರಾಮೇಶ್ವರದವರೆಗೆ ವಿಜಯನಗರ ಸಾಮ್ರಾಜ್ಯ ಹಬ್ಬಿತು.


ಕರ್ನಾಟಕರಾಜ್ಯ ಕುಲತಿಲಕ

ದಿಗ್ವಿಜಯಗಳಿಗೆ ನೀಡಿದಷ್ಟೇ ಮಹತ್ವವನ್ನು ಕೃಷ್ಣದೇವರಾಯ ಸುಯೋಜಿತ ಆಡಳಿತ ವ್ಯವಸ್ಥೆಗೂ ಶಾಂತಿ ಸ್ಥಾಪನೆಗೂ ಕೊಟ್ಟ. ಪ್ರಜೆಗಳಿಗೆ ಭಾರವಾಗಿದ್ದ ಹಲವು ತೆರಿಗೆಗಳನ್ನು ತೆಗೆದುಹಾಕಿದ. ದೇಶದಲ್ಲಿ ಸಾಹಿತ್ಯ, ಕಲೆ ಮತ್ತು ಸಂಸ್ಕೃತಿ ಊರ್ಜಿತಗೊಂಡವು. ಸಂಗೀತ, ನೃತ್ಯ, ಚಿತ್ರಕಲೆಗಳಿಗೆ ಪ್ರೋತ್ಸಾಹ ದೊರೆಯಿತು. ಕರ್ನಾಟಕರಾಜ್ಯ ಕುಲತಿಲಕನಾಗಿದ್ದ ಕೃಷ್ಣದೇವರಾಯ ಸ್ವತಃ ಹೆಸರಾಂತ ಉತ್ತಮ ಕವಿಯೂ ಆಗಿದ್ದ. ತೆಲುಗಿನ 'ಆಮುಕ್ತಮಾಲ್ಯದ' ಎಂಬ ಸುಪ್ರಸಿದ್ಧ ಕಾವ್ಯದ ಕರ್ತೃ ಕೃಷ್ಣದೇವರಾಯನೇ ಎನ್ನುತ್ತಾರೆ. ಅಲ್ಲದೆ ಜಾಂಬವತೀ ಕಲ್ಯಾಣ, ಉಷಾ ಪರಿಣಯ ಮುಂತಾದ ಸಂಸ್ಕೃತ ಗ್ರಂಥಗಳನ್ನೂ ಬರೆದಿದ್ದಾನೆ. ಕನ್ನಡದ ತಿಮ್ಮಣ್ಣ ಕವಿಯು ಇವನ ಕಾಲದಲ್ಲಿಯೇ ಗದುಗಿನ ಭಾರತವನ್ನು ಪೂರ್ಣಗೊಳಿಸಿದ. ತೆಲುಗಿನ 'ಅಷ್ಟದಿಗ್ಗಜ' ಗಳೆಂದು ಪ್ರಸಿದ್ಧರಾದ ಎಂಟು ಜನ ಕವಿಗಳು ಇವನ ಆಸ್ಥಾನದಲ್ಲಿದ್ದರು. ತೆಲುಗು ಕವಿ ಅಲಸಾನಿ ಪೆದ್ದನನ ಕವಿತಾ ಮಾಧುರ್ಯವನ್ನು ಮೆಚ್ಚಿ ನವರತ್ನ ಖಚಿತವಾದ ತೋಳಿನ ಆಭರಣಗಳನ್ನು ಸ್ವಹಸ್ತದಿಂದ ಅವನಿಗೆ ತೊಡಿಸಿದ ಕೃಷ್ಣದೇವರಾಯ ಅಷ್ಟೇ ಅಲ್ಲ, ಆ ಮಹಾಕವಿಯನ್ನು ಪಲ್ಲಕ್ಕಿಯಲ್ಲಿ ಕೂಡಿಸಿ ರಾಜಧಾನಿಯ

ಮೆರವಣಿಗೆ ಮಾಡಿಸಿದ. ಗೌರವ ಸೂಚಿಸಲು ತಾನೂ ಪಲ್ಲಕ್ಕಿಗೆ ಹೆಗಲು ಕೊಟ್ಟ. ಸುಪ್ರಸಿದ್ಧ ಹಾಸ್ಯಗಾರ ತೆನಾಲಿ ರಾಮಕೃಷ್ಣ ಇದ್ದುದು ಇವನ ಆಸ್ಥಾನದಲ್ಲಿಯೇ.

ಕನ್ನಡ, ತೆಲುಗು ಕವಿಗಳಲ್ಲದೆ ತಮಿಳು ಕವಿಗಳೂ ಅವನ ಆಸ್ಥಾನದಲ್ಲಿ ಇದ್ದರು. ಈ ಸರ್ವಭಾಷಾ ಕವಿಗಳ ಸಮ್ಮಿಲನ ಕೃಷ್ಣದೇವರಾಯನ ಮನೋವೈಶಾಲ್ಯಕ್ಕೆ ಸಾಕ್ಷಿಯಾಗಿದೆ.

ಸಾಹಿತ್ಯದಂತೆಯೇ ಕಲೆಯೂ ಇವನ ಕಾಲದಲ್ಲಿ ಅಭಿವೃದ್ಧಿಗೊಂಡಿತು. ಹಳೆಯ ಶಿಥಿಲ ದೇವಾಲಯಗಳು ಜೀರ್ಣೋದ್ಧಾರವಾದುವು. ಬೆರಗುಗೊಳಿಸುವ ವಿಜಯ ವಿಠಲಸ್ವಾಮಿ ಮತ್ತು ಹಜಾರ ರಾಮಸ್ವಾಮಿ ದೇವಾಲಯಗಳು ಇವನ ಕಾಲದಲ್ಲಿ ನಿರ್ಮಾಣಗೊಂಡುವು.

ತಾನು ವೈಷ್ಣವ ಮತಸ್ಥನಾಗಿದ್ದರೂ ಅರಸನು ಇತರ ಮತಗಳಿಗೂ ಸಮಾನ ಗೌರವವನ್ನು ತೋರಿಸುತ್ತಿದ್ದ.

ಇವನ ಕಾಲದಲ್ಲಿ ವಿಜಯನಗರಕ್ಕೆ ಬಂದಿದ್ದ ಪೋರ್ಚುಗೀಸ್ ಪ್ರವಾಸಿ ಪಾಯಿಸ್ ವಿಜಯನಗರ ಸಾಮ್ರಾಜ್ಯದ ಮಹಾ ವೈಭವವನ್ನು ವರ್ಣಿಸಿ. "ಇವನಷ್ಟು ಪರಿಪೂರ್ಣನಾದ ದೊರೆ ಬೇರೊಬ್ಬನಿಲ್ಲ," ಎಂದಿದ್ದಾನೆ. ಭಾರತದ ಚರಿತ್ರೆಯಲ್ಲಿಯೇ ಶ್ರೇಷ್ಠ ಅರಸರ ಪಂಕ್ತಿಗೆ ಸೇರಿದವನು ಇವನು.

ಕೃಷ್ಣದೇವರಾಯನ ಆಳ್ವಿಕೆಯ ಕೊನೆಯ ದಿನಗಳು ಸಂತೋಷದಾಯಕವಾಗಿರಲಿಲ್ಲ. ಕಾಯಿಲೆಯಿಂದ ನರಳುತ್ತ 1529ರಲ್ಲಿ ಆತ ಕಾಲವಶನಾದ.

ಕೃಷ್ಣದೇವರಾಯನ ಆಳ್ವಿಕೆಯಲ್ಲಿ ವಿದ್ಯಾರಣ್ಯರ ಸಾಮ್ರಾಜ್ಯ ಸ್ಥಾಪನೆಯ ಉದ್ದೇಶ ಸಫಲವಾಯಿತು. ಕೃಷ್ಣದೇವರಾಯನ ಕಾಲ ವಿಜಯನಗರದ ಸುವರ್ಣಯುಗ. ಅವನು ಶ್ರಮಪಟ್ಟು ಕಟ್ಟಿದ ವಿಸ್ತಾರವೂ ಶ್ರೀಮಂತವೂ ಕಲಾವೈಭವದ ತವರೂ ಆದ ದೇಶವನ್ನು ಉಳಿಸಿಕೊಳ್ಳುವುದು ಅವನ ಅನಂತರದ ವಿಜಯನಗರದ ಅರಸರಿಗೆ ಸಾಧ್ಯವಾಗಲಿಲ್ಲ.

ನೋಡಿ : ವಿದ್ಯಾರಣ್ಯ

ವಿವರ : ಸಂಪುಟ ಏಳು

## ಕೆಂಪು ಸಮುದ್ರ

ಏನೂ ರಕ್ತಪಾತವಿಲ್ಲ, ಆದರೂ ಇದು ಯಾವಾಗಲೂ 'ಕೆಂಪು ಸಮುದ್ರ'. ಹೀಗೆ ಹೆಸರು ಬರಲು ಬೇರೆ ಬೇರೆ ಕಾರಣ ಕೊಡುತ್ತಾರೆ. ಸಮುದ್ರದ ತಳದಲ್ಲಿ ಕೆಂಪು ಹವಳ ಹೇರಳವಾಗಿ ಬೆಳೆದಿದೆ ; ಸಮುದ್ರದ ತೀರದಲ್ಲಿರುವ ಹವಳದ ದಿಣ್ಣೆಗಳು ಕೆಂಪಾಗಿವೆ ; ಸಮುದ್ರದಲ್ಲಿನ ಸಹಸ್ರಾರು ಪುಟ್ಟ ಪ್ರಾಣಿಗಳ ಬಣ್ಣವೂ ಕೆಂಪು. ಇವುಗಳಲ್ಲಿ ಯಾವುದು ಬೇಕಾದರೂ ಸಮುದ್ರದ ಹೆಸರಿಗೆ ಕಾರಣವಾಗಿರಬಹುದು.

ಆಫ್ರಿಕ ಮತ್ತು ಆರೇಬಿಯಗಳ ಮಧ್ಯೆ ಇದೆ ಕೆಂಪು ಸಮುದ್ರ. ಇದು ಅರಬೀ ಸಮುದ್ರದ ಒಂದು ಅಂಗ. ನೀರು ಬಹಳ ಉಪ್ಪು. 2,253 ಕಿ. ಮೀ. ಉದ್ದವಿರುವ ಈ ಸಮುದ್ರದ ಅತಿ ಹೆಚ್ಚಿನ ಆಳವೆಂದರೆ 2,135 ಮೀಟರು.

ಉತ್ತರ ಭಾಗದ ಕೊನೆಯಲ್ಲಿ ಸಮುದ್ರ Y ಆಕಾರದಲ್ಲಿ ಎರಡು ವಿಭಾಗವಾಗಿ ಚಾಚಿಕೊಂಡಿದೆ. ಒಂದು ಅಕಾಬ ಕಾರಿ, ಇನ್ನೊಂದು ಸುಯೆಜ್ ಕಾರಿ.

ಬೇಸಿಗೆ ಕಾಲದಲ್ಲಿ ಉಷ್ಣಾಂಶ 81° ಫಾ. ವರೆಗೂ ಏರಿ ರಾತ್ರಿಯಲ್ಲೂ ಸೆಕೆ ಕಡಮೆಯಾಗುವುದಿಲ್ಲ.

1869ರಲ್ಲಿ ಸುಯೆಜ್ ಕಾಲುವೆ ನಿರ್ಮಾಣವಾದ ಮೇಲೆ ಕೆಂಪು ಸಮುದ್ರಕ್ಕೆ ಪ್ರಾಮುಖ್ಯ ಬಂತು. ಯೂರೋಪ್, ಭಾರತ, ದೂರ ಪ್ರಾಚ್ಯಗಳ ನಡುವೆ ಸಾಗರಯಾನದ ಕೊಂಡಿಯಂತಿದೆ ಕೆಂಪು ಸಮುದ್ರ.

ಬೈಬಲ್ಲಿನಲ್ಲಿ ಕೆಂಪು ಸಮುದ್ರದ ಬಗ್ಗೆ ಒಂದು ಸುಪ್ರಸಿದ್ಧ ಕಥೆಯಿದೆ. ಈಜಿಪ್ಟಿನಲ್ಲಿ ಗುಲಾಮರಾಗಿದ್ದ ಇಸ್ರೇಲರು ಪಾರಾಗಲು, ಈ ಸಮುದ್ರ ಸೀಳಿಕೊಂಡು ದಾರಿಮಾಡಿಕೊಟ್ಟಿತಂತೆ ; ಈಜಿಪ್ಟ್ ಸೈನ್ಯ ಬೆನ್ನಟ್ಟಿದಾಗ ಮತ್ತೆ ಸಮುದ್ರದ ನೀರು ಒಂದಾಯಿತಂತೆ.

ಎರಡು ಮಹಾಯುದ್ಧಗಳ ಕಾಲದಲ್ಲೂ ಕೆಂಪು ಸಮುದ್ರ ನಾವಿಕ ನೆಲೆಯಾಗಿತ್ತು. ಹೊಡೈಡ್, ಸುಯೆಜ್, ಮಸೋವ ಇವು ಕೆಂಪು ಸಮುದ್ರದ ತೀರದಲ್ಲಿರುವ ಮುಖ್ಯ ಬಂದರುಗಳು.

## ಕೆನಡ

ಅಮೆರಿಕದ ಉತ್ತರ ಭಾಗದಲ್ಲಿ ಕೆನಡ ಬಹು ವಿಸ್ತಾರವಾದ ದೇಶ. ಸೋವಿಯೆತ್ ರಾಷ್ಟ್ರ ಒಕ್ಕೂಟವನ್ನು ಬಿಟ್ಟರೆ ಪ್ರಪಂಚದಲ್ಲಿ ಇದೇ ಅತಿ ವಿಸ್ತಾರವಾದ ದೇಶ. ಇದರ ಉತ್ತರಕ್ಕೆ ಆರ್ಕ್‌ಟಿಕ್, ಪಶ್ಚಿಮಕ್ಕೆ ಶಾಂತ ಮತ್ತು ಪೂರ್ವಕ್ಕೆ ಅಟ್ಲಾಂಟಿಕ್ ಸಾಗರಗಳಿವೆ. ದಕ್ಷಿಣಕ್ಕೆ ಅಮೆರಿಕದ ಸಂಯುಕ್ತ ಸಂಸ್ಥಾನವಿದೆ.

ಕೆನಡದ ಉತ್ತರ ಭಾಗದಲ್ಲಿರುವುದು ಶೀತ ಹವಾಮಾನ. ಯಾವಾಗಲೂ ಅಲ್ಲಿಯ ಭೂಮಿ ಹಿಮದಿಂದ ಆಚ್ಛಾದಿತವಾಗಿರುತ್ತದೆ. ಈ ಪ್ರದೇಶದಲ್ಲಿ ಗಟ್ಟಿಗರಾದ ಎಸ್ಕಿಮೊ ಜನರು ವಾಸಿಸುತ್ತಾರೆ. ಕೆನಡದ ಪೂರ್ವಪ್ರದೇಶಗಳು ಬೆಟ್ಟಗಳ ಸಮುದಾಯದಿಂದ ಕೂಡಿವೆ. ಕರಾವಳಿಯಲ್ಲಿ ಅನೇಕ ಕೊಲ್ಲಿಗಳು ಇದ್ದು, ನೌಕೆಗಳ ಓಡಾಟಕ್ಕೆ ಅನುಕೂಲವಾಗಿದೆ. ಪರ್ವತಗಳಲ್ಲಿ ಅಸಂಖ್ಯ ಜಲಪಾತಗಳೂ ಇವೆ. ಕಬ್ಬಿಣ, ನಿಕ್ಕಲ್, ತಾಮ್ರ, ಬೆಳ್ಳಿ, ಚಿನ್ನ ಮುಂತಾದ ಖನಿಜ ಸಂಪತ್ತು ಹೇರಳವಾಗಿದೆ. ಈ ಪರ್ವತಗಳ ಪಶ್ಚಿಮಕ್ಕೆ ನೂರಿನ್ನೂರು ಚದರ ಕಿಲೊಮೀಟರು ವಿಶಾಲವಾದ ಹುಲ್ಲುಗಾವಲಿದೆ. ಈ ಭೂಮಿಯ ಉತ್ತರಕ್ಕೆ ಸಮಶೀತೋಷ್ಣವಲಯದ ಕಾಡುಗಳಿವೆ. ಮರಗಳನ್ನು ಕಡಿಯುವ ಉದ್ಯೋಗ ದೊಡ್ಡ ಪ್ರಮಾಣದ್ದು.

ಕೆನಡದಲ್ಲಿರುವ ಅನೇಕ ನದಿಗಳಲ್ಲಿ ಮೆಕೆಂಜಿ ಬಹು ಉದ್ದವಾಗಿದೆ. ಸೆಂಟ್ ಲಾರೆನ್ಸ್ ನದಿಯೂ ಮುಖ್ಯವಾದದ್ದು. ಸುಪೀರಿಯರ್, ಈರಿ, ಅಂಟೇರಿಯೋ, ಹ್ಯೂರಾನ್ ಮುಂತಾದ ದೊಡ್ಡ ಸರೋವರಗಳು.

ಕೆನಡದಲ್ಲಿ ಹುಲ್ಲುಗಾವಲು ಪ್ರದೇಶ ಅತ್ಯಂತ ಮಹತ್ವದ್ದು. ಗೋಧಿಯ ಬೆಳೆಗೆ ಈ ಭೂಮಿ ಮೀಸಲು. ಯಂತ್ರಗಳಿಂದಲೇ ಇಲ್ಲಿ ಬೇಸಾಯ ಮಾಡುತ್ತಾರೆ. ಸಮುದ್ರದ ದಂಡೆಗೆ ಎತ್ತರವಾದ ಗೋಧಿಯ ಕಣಜಗಳನ್ನು ಕಟ್ಟಿಟ್ಟು, ಅಲ್ಲಿಂದಲೇ ಪರದೇಶಕ್ಕೆ ಗೋಧಿಯನ್ನು ರಫ್ತು ಮಾಡುತ್ತಾರೆ. ಹುಲ್ಲುಗಾವಲು ಪ್ರದೇಶದಲ್ಲಿ ಜಿಂಕೆ, ಕ್ಯಾರಿಬೂ ಮೂಸ್ ಪ್ರಾಣಿಗಳು ವಿಹಾರಕ್ಕಾಗಿ ಓಡಾಡುತ್ತವೆ. ಜಿಂಕೆಯ ಜಾತಿಗಳಲ್ಲಿಯೇ ಅತಿ ದೊಡ್ಡ ಪ್ರಾಣಿ ಮೂಸ್. ಇದರ ಎತ್ತರ ಸುಮಾರು ಎರಡೂವರೆ ಮೀಟರು. ಹುಲ್ಲುಗಾವಲುಗಳಲ್ಲಿ ಜಾನುವಾರುಗಳಿಗೆ ಮೇವು

ಸಾಕಷ್ಟು ಸಿಗುವುದರಿಂದ, ಜಾನುವಾರು ಸಾಕುವ ಉದ್ಯೋಗವೂ ಬಹಳ. ಜಗತ್ತಿನಲ್ಲಿಯೇ ಅತಿ ಹೆಚ್ಚು ಗಿಣ್ಣು ಸಂಗ್ರಹವಾಗುವ ದೇಶ ಕೆನಡ.

ಶಾಂತಸಾಗರ ಮತ್ತು ಅಟ್ಲಾಂಟಿಕ್ ಸಾಗರಗಳ ತೀರದಲ್ಲಿ ಮೀನು ತುಂಬಾ ಸಿಗುತ್ತದೆ. ಪಶ್ಚಿಮ ಕರಾವಳಿಯಲ್ಲಿ ಕಾಡ್ ಮೀನು ಸಾಕಷ್ಟು ದೊರೆಯುತ್ತದೆ. ಆದ್ದರಿಂದ ಕಾಡ್ ಪ್ರವಾಹ ಎಂಬ ಹೆಸರೂ ಬಂದಿದೆ. ಶಾಂತ ಸಾಗರದ ತೀರದಲ್ಲಿ ಸಿಗುವ ಸಾಲ್ಮನ್ ಎಂಬ ಜಾತಿಯ ಮೀನನ್ನು ವಿದೇಶಗಳಿಗೆ ಕಳುಹಿಸಿಕೊಡುತ್ತಾರೆ.

ಈ ದೇಶ ತನ್ನ ಜಲಶಕ್ತಿಯ ಕಾಲು ಭಾಗವನ್ನು ಮಾತ್ರ ಬಳಸಿಕೊಂಡಿದ್ದರೂ ಜಲವಿದ್ಯುಚ್ಛಕ್ತಿಯ ಉತ್ಪಾದನೆಯಲ್ಲಿ ಪ್ರಪಂಚದ ಪ್ರಮುಖ ರಾಷ್ಟ್ರಗಳಲ್ಲಿ ಒಂದಾಗಿದೆ.

ಕೆನಡ ಹೊರದೇಶಗಳಿಂದ ಬಂದ ಜನರಿಂದಲೇ ತುಂಬಿಕೊಂಡಿದೆ. 400 ವರ್ಷಗಳ ಹಿಂದೆ ರೆಡ್ ಇಂಡಿಯನ್ನರು ಮಾತ್ರ ಇದ್ದರೆ, ಈಗ ಅವರು ಮತ್ತು ಎಸ್ಕಿಮೊ ಜನರು ಪ್ರತಿ ನೂರಕ್ಕೆ ಕೇವಲ ಒಂದರಂತೆ ಇದ್ದಾರೆ. ಮೂರರಲ್ಲಿ ಎರಡು ಪಾಲು ಬ್ರಿಟಿಷ್ ಜನರು ಮತ್ತು ಒಂದು ಪಾಲು ಫ್ರೆಂಚ್ ಜನರು ಕೆನಡದಲ್ಲಿರುವರು. ಇಂಗ್ಲಿಷ್ ಮತ್ತು ಫ್ರೆಂಚ್ ಎರಡೂ ಸರಕಾರಿ ಭಾಷೆಗಳು.

ಕೆನಡ—ಅಮೆರಿಕದ ಸಂಯುಕ್ತ ಸಂಸ್ಥಾನಗಳ ಮಧ್ಯೆ ಇರುವ ದೀರ್ಘ ಗಡಿಯನ್ನು ಸೈನ್ಯಗಳು ಕಾಯುವುದಿಲ್ಲ. ಇದು ಪ್ರಪಂಚದಲ್ಲಿ ಅಂತರ ರಾಷ್ಟ್ರೀಯ ಸಂಬಂಧಗಳಲ್ಲಿ ಅಪೂರ್ವ ಸಂಗತಿ.

ಕೆನಡ ವಿಶ್ವಸಂಸ್ಥೆಯ ಸದಸ್ಯ ರಾಷ್ಟ್ರ, ಉತ್ತರ ಅಟ್ಲಾಂಟಿಕ್ ಕೌಲುರಾಷ್ಟ್ರಗಳ ಸಂಸ್ಥೆಯ (ನೇಟೊ) ಸದಸ್ಯ. ನೇಟೊ ಯೋಜನೆಯನ್ನು ಮೊದಲು ಸೂಚಿಸಿದವರು ಕೆನಡದ ಪ್ರಧಾನಮಂತ್ರಿಯಾಗಿದ್ದ ಲೂಯಿ ಸೇಂಟ್ ಲಾರೆಂಟ್ ಅವರು.

ಕೆನಡ ಕಾಮನ್‌ವೆಲ್ತ್‌ನ ಸದಸ್ಯರಾಷ್ಟ್ರವೂ ಆಗಿದೆ. ಮೊದಲೊಂದು ಕಾಲದಲ್ಲಿ ಇದು ಫ್ರೆಂಚರಿಗೆ ಸೇರಿತ್ತು. ಅನಂತರ ಬ್ರಿಟಿಷರಿಗೆ ಬಂದಿತು. ಆ ಬಳಿಕ ಸ್ವತಂತ್ರ ರಾಜ್ಯವಾಯಿತು. ಅಟವ ಕೆನಡದ ರಾಜಧಾನಿ. ಮಾಂಟ್ರಿಯಲ್, ಟೊರಾಂಟೊ ಇವು ಪ್ರಮುಖ ನಗರಗಳು.

| | | |
|---|---|---|
| ಖಂಡ | : | ಉತ್ತರ ಅಮೆರಿಕ (ಉತ್ತರದಲ್ಲಿ) |
| ಅಕ್ಷಾಂಶ | : | 41° 43′ ಉ ದಿಂದ 83° 07′ ಉ |
| ರೇಖಾಂಶ | : | 52° 37′ ಪ ದಿಂದ 141° ಪ |
| ವಿಸ್ತೀರ್ಣ | : | 99,76,185 ಚ. ಕಿ. ಮೀ. |
| ಜನಸಂಖ್ಯೆ | : | ಸುಮಾರು 1,90,00,000 |
| ರಾಜಧಾನಿ | : | ಅಟವ |
| ಭಾಷೆ | : | ಇಂಗ್ಲಿಷ್, ಫ್ರೆಂಚ್ |
| ಸರಕಾರ | : | ಸಂವಿಧಾನಬದ್ಧ ರಾಜಪ್ರಭುತ್ವ |
| ಬಾವುಟ | : | ಬಿಳಿ ಚೌಕದೊಳಗೆ ದೊಡ್ಡ ಕೆಂಪು ಮೇಪಲ್ ಎಲೆ, ಎರಡು ಕಡೆಗೂ ಕೆಂಪು ಅಂಚು |



ನವಕ್ಷಿತಿಜದತ್ತ ಮಾನವಕೋಟಿಯನ್ನು ಮುನ್ನಡೆಸಬಯಸಿದ ಕೆನಡಿ

## ಕೆನಡಿ, ಜಾನ್ ಫಿಟ್ಜೆರಲ್ಡ್

"ನಾವು ಪ್ರೀತಿಸುವ ಈ ದೇಶ, ಶಾಂತಿ ಹಾಗೂ ಸಮೃದ್ಧಿಯ ನವಕ್ಷಿತಿಜದತ್ತ ಇಡಿಯ ಮಾನವ ಕೋಟಿಯನ್ನು ಮುನ್ನಡೆಸಿಯೇ ತೀರುವುದೆಂಬ ನಿರ್ಧಾರದಿಂದ ನಾವು ಹೆಜ್ಜೆ ಇಡೋಣ."

ಈ ಸ್ಫೂರ್ತಿದಾಯಕ ಮಾತುಗಳನ್ನಾಡಿದವರು ಅಮೆರಿಕದ ಸಂಯುಕ್ತ ಸಂಸ್ಥಾನಗಳ ಮೂವತ್ತೈದನೆಯ ಅಧ್ಯಕ್ಷ ಜಾನ್ ಕೆನಡಿ. 1961ರಲ್ಲಿ ತಮ್ಮ ದೇಶದ ಅಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡ ಸಂದರ್ಭದಲ್ಲಿ ತಮ್ಮ ನಾಡಿನ ಜನತೆಗೆ ಅವರು ಹೇಳಿದ ಮಾತುಗಳಿವು. ಅವರು ಅದುವರೆಗೆ

ಆಯ್ಕೆಯಾದ ಎಲ್ಲ ಅಧ್ಯಕ್ಷರ ಪೈಕಿ ಅತ್ಯಂತ ಕಿರಿಯ. ಕ್ಯಾಥೊಲಿಕ್ ಒಬ್ಬರು ಅಮೆರಿಕದ ಅಧ್ಯಕ್ಷರಾಗಿ ಆಯ್ಕೆಯಾದುದೂ ಅದೇ ಮೊದಲು. ಲಿಂಕನ್ ನಂತರವೇ ಕೊಲೆಗಡುಕನ ಗುಂಡಿಗೆ ಬಲಿಯಾಗಿ ಜಾನ್ ಫಿಟ್ಜೆರಲ್ಡ್ ಕೆನಡಿ ಹುತಾತ್ಮರಾದರು.

ಮೇಸುಚೂಸೆಟ್ಸ್ ಸಂಸ್ಥಾನದ ಬ್ರೂಕ್‌ಲಿನ್ ಎಂಬಲ್ಲಿ 1917ರ ಮೇ 29 ರಂದು ಕೆನಡಿ ಹುಟ್ಟಿದರು. ಇವರ ಪೂರ್ವಜರು ಐರ್‌ಲೆಂಡಿನಿಂದ ಬಂದು ಅಮೆರಿಕದಲ್ಲಿ ನೆಲೆಸಿದವರು. ತಂದೆ ಬಾಸ್ಟನ್‌ನ ರಾಜಕಾರಣಿ ಜೋಸೆಫ್ ಪ್ಯಾಟ್ರಿಕ್ ಕೆನಡಿ. ತಂದೆಗೆ ಎರಡನೆಯ ಮಗ ಜಾನ್. ಶಾಲೆಯ ದಿನಗಳಲ್ಲಿ ಮಗ ವ್ಯಾಯಾಮ, ಆಟಪಾಟಗಳಲ್ಲಿ ಪಾಲ್ಗೊಳ್ಳಲು ಪ್ರೋತ್ಸಾಹಿಸಿದ್ದು ತಂದೆಯೆ. 1936ರಲ್ಲಿ ಹಾರ್ವರ್ಡ್ ವಿಶ್ವವಿದ್ಯಾನಿಲಯ ಪ್ರವೇಶಿಸಿದ ಯುವಕ ಕೆನಡಿ ಮರುವರ್ಷ ಯೂರೊಪನ್ನು ಒಮ್ಮೆ ಸುತ್ತಿ ಬಂದರು. ವಿಶ್ವದ ರಾಜಕೀಯ ಕ್ಷೇತ್ರದ ಚಟುವಟಿಕೆಗಳನ್ನು ಅಭ್ಯಸಿಸಲು ಪ್ರವಾಸ ನೆರವಾಯಿತು. 1939ರಲ್ಲಿ ತಮ್ಮ ತಂದೆ ಇಂಗ್ಲೆಂಡಿನಲ್ಲಿ ಅಮೆರಿಕದ ರಾಯಭಾರಿಯಾಗಿದ್ದಾಗ ಮತ್ತೊಮ್ಮೆ ಇಂಗ್ಲೆಂಡನ್ನು ಸಂದರ್ಶಿಸಿದರು. ಆಗ ವಿವಿಧ ರಾಯಭಾರ ಕಛೇರಿಗಳಲ್ಲಿ ರಾಜತಂತ್ರಜ್ಞರನ್ನೂ ಪತ್ರಿಕಾಕರ್ತರನ್ನೂ ಕಾಣುವ ಅವಕಾಶ ಸಿಕ್ಕಿತು. 1940ರಲ್ಲಿ ಅವರು ನಿಬಂಧವೊಂದನ್ನು ಬರೆದು, ಬ್ರಿಟಿಷ್ ನೀತಿಗಳನ್ನು ವಿಶ್ಲೇಷಿಸಿದರು. ಇಪ್ಪತ್ತಮೂರರ ಯುವಕನ ಆ ಪುಸ್ತಕ ವಿಶೇಷವಾಗಿ ಪ್ರಶಂಸಿಸಲ್ಪಟ್ಟಿತು. ಮುಂದಿನ ಎರಡು ವರ್ಷಗಳಲ್ಲಿ ಸ್ಟಾನ್‌ಫರ್ಡ್ ವಿಶ್ವವಿದ್ಯಾನಿಲಯದಲ್ಲಿ ಕೆನಡಿಯ ವಿದ್ಯಾಭ್ಯಾಸ ಸಾಗಿತು.

1941ರಲ್ಲಿ ಕೆನಡಿ ಅಮೆರಿಕದ ನೌಕಾಪಡೆಗಳನ್ನು ಸೇರಲು ಯತ್ನಿಸಿದರು. ಆದರೆ ಆಗಾಗ್ಗೆ ಅವರಲ್ಲಿ ಕಾಣಿಸುತ್ತಿದ್ದ ಬೆನ್ನುನೋವು ಬೆನ್ನನ್ನು ಕ್ಷೀಣ ಗೊಳಿಸಿತ್ತು. ಚಿಕಿತ್ಸೆ, ವ್ಯಾಯಾಮಗಳ ಮೂಲಕ ದೇಹಸ್ಥಿತಿಯನ್ನು ಸುಧಾರಿಸಿಕೊಂಡು ಎರಡನೆಯ ಮಹಾಯುದ್ಧದ ಕಾಲದಲ್ಲಿ 1943ರಲ್ಲಿ ಪೂರ್ವರಂಗದಲ್ಲಿ ನಡೆಯುತ್ತಿದ್ದ ಯುದ್ಧದಲ್ಲಿ ಭಾಗವಹಿಸಿದರು. ಆ ವರ್ಷದ ಆಗಸ್ಟ್ ಎರಡರಂದು ನ್ಯೂ ಜಾರ್ಜಿಯ ಬಳಿ ಅವರ ನೌಕೆ ಜಪಾನಿನವರಿಂದ ಮುಳುಗಿಸಲ್ಪಟ್ಟಿತು. ಹೊರಗೆ ಎಸೆಯಲ್ಪಟ್ಟ ಕೆನಡಿ ಅಂಗಾತವಾಗಿ ನೌಕೆಯ ಪಾರ್ಶ್ವದ ಮೇಲೆ ಬಿದ್ದಾಗ ಮತ್ತೆ ಬೆನ್ನಿಗೇ ಪೆಟ್ಟು! ಸತ್ತು ಉಳಿದ ಸಂಗಾತಿಗಳನ್ನೆಲ್ಲಾ ಕಲೆಹಾಕಿ ಅವರನ್ನು ದೂರದ ದ್ವೀಪವೊಂದಕ್ಕೆ ಸಾಗಹಾಕಿದರು. ಗಾಯಾಳುವಿನ ನಡುಪಟ್ಟಿಯನ್ನು ಬಾಯಲ್ಲಿ ಕಚ್ಚಿ ಸುಮಾರು ಐದು ಕಿಲೊಮೀಟರು ಈಸಿ ಶ್ರಮಿಸಿದ ಧೀರ ಕೆನಡಿ. ಪ್ರಾಣದ ಹಂಗು ತೊರೆದು ಅಲೆದಾಡಿದರೂ ತಮ್ಮ ಪಡೆಗಳ ಸಂಪರ್ಕ ಬರಲಿಲ್ಲ. ಕಡೆಗೆ ಇಬ್ಬರು ದ್ವೀಪವಾಸಿಗಳ ಮೂಲಕ ಸಂದೇಶವನ್ನು ತೆಂಗಿನಕಾಯಿಯ ಮೇಲೆ ಕೆತ್ತಿ ಕಳುಹಿಸಿದರು. ಈ ಸಾಹಸಕ್ಕಾಗಿ ವಿಶೇಷ ಪ್ರಶಸ್ತಿ ಲಭಿಸಿತು. ಬೆನ್ನಿನ ದೌರ್ಬಲ್ಯ ಮಾತ್ರ ವೃದ್ಧಿಯಾಯಿತು. 1945ರಲ್ಲಿ ಕೆನಡಿ ನೌಕಾಪಡೆಯಿಂದ ನಿವೃತ್ತರಾದರು. ಇದರಿಂದ ಅಮೆರಿಕದ ರಾಜಕಾರಣಕ್ಕೆ ಪ್ರತಿಭಾವಂತರೊಬ್ಬರ ಪ್ರವೇಶವಾಯಿತು.

ಡೆಮೊಕ್ರಾಟಿಕ್ ಪಕ್ಷದ ಪ್ರತಿನಿಧಿಯಾಗಿ 1946ರಲ್ಲಿ ಮೊದಲ ಬಾರಿಗೆ ಅಮೆರಿಕದ ಕಾಂಗ್ರೆಸ್ಸಿಗೆ ಕೆನಡಿ ಆಯ್ಕೆಯಾದರು. 1952ರಲ್ಲಿ ಅವರು ಅಮೆರಿಕದ ಸೆನೆಟ್‌ಗೆ ಸ್ಪರ್ಧಿಸಿದರು. ಕೆನಡಿಯವರ ಜನಪ್ರಿಯತೆಗೆ ಮುಖ್ಯ ಕಾರಣ ಅವರ ಸಂಘಟನಾ ಚಾತುರ್ಯ. ಸೊಗಸಾಗಿ, ಸ್ಫೂರ್ತಿಯುತವಾದ ತಮ್ಮ ವಿಚಾರಗಳನ್ನು ಇತರರ ಮನಸ್ಸನ್ನು ಗೆಲ್ಲುವಂತೆ ಹೇಳುವ ಕಲೆ ಅವರಿಗೆ ಸಾಧಿಸಿತ್ತು.

ಅಮೆರಿಕದ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಸಮಸ್ಯೆಗಳತ್ತ ಕೆನಡಿ ಗಮನ ಹರಿಸಿದರು. ಅದರ ಫಲ ವಿದೇಶ ಸಂಬಂಧಗಳನ್ನು ಕುರಿತ ಸಮಿತಿಯ ಸದಸ್ಯತ್ವ. ಕೆನಡಿ ಅಭಿವೃದ್ಧಿಹೊಂದದ ರಾಷ್ಟ್ರಗಳಿಗೆ ಆರ್ಥಿಕ ನೆರವು ನೀಡುವುದರ ಬಗೆಗೆ ಯೋಚಿಸಲಾರಂಭಿಸಿದರು.

ಕೆನಡಿ 1961ರಲ್ಲಿ ಅಮೆರಿಕದ ಅಧ್ಯಕ್ಷರಾಗಿ ಚುನಾಯಿತರಾದರು.

ಇವರದು ಬಹು ಆಕರ್ಷಕ ವ್ಯಕ್ತಿತ್ವ, ತೀಕ್ಷ್ಣ ವಿಚಾರಶಕ್ತಿ, ಗಂಭೀರ ನಡೆ ನುಡಿ. ಅಧ್ಯಕ್ಷ ಸ್ಥಾನಕ್ಕೆ ಸ್ಪರ್ಧಿಸಿದಾಗ, ಅವರಿಗೆ ವಯಸ್ಸು ಸಾಲದು ಎನ್ನುತ್ತಿದ್ದವರು ಟೆಲಿವಿಷನ್‌ನಲ್ಲಿ ಅವರಿಗೂ ಪ್ರತಿಸ್ಪರ್ಧಿ ರಿಪಬ್ಲಿಕನ್ ಪಕ್ಷದ ರಿಚರ್ಡ್ ನಿಕ್ಸನರಿಗೂ ನಡೆದ ಚರ್ಚೆಗಳನ್ನು ಕೇಳಿ ತಮ್ಮ ಅಭಿಪ್ರಾಯವನ್ನು ಬದಲಿಸಿದರು.

ಕ್ಯೂಬವನ್ನು ಬಗ್ಗು ಬಡಿಯಲು ಅಧ್ಯಕ್ಷ ಕೆನಡಿ ಮಾಡಿದ ಆಕ್ರಮಣ ಯತ್ನ ವಿಫಲವಾಗಿ ಅವರಿಗೆ ಮುಖಭಂಗವಾಯಿತು. ಆದರೆ, 1962ರಲ್ಲಿ ಕ್ಯೂಬದಲ್ಲಿ ರಷ್ಯ ಕ್ಷಿಪಣಿಗಳನ್ನು ಕೂಡಿಸುತ್ತದೆ ಎಂಬುದು ತಿಳಿದಾಗ, ಅಮೆರಿಕದ ಹಡಗುಗಳು ಅಲ್ಲಿಗೆ ಬರುವ ಹಡಗುಗಳನ್ನೆಲ್ಲ ಶೋಧಿಸುವು ವೆಂದು ಘೋಷಿಸಿ, ಜಗತ್ತನ್ನೇ ಚಕಿತಗೊಳಿಸಿದರು. ಘೋಷಣೆಯನ್ನು ಕಾರ್ಯಗತ ಮಾಡಲು ಸಿದ್ಧರಿದ್ದ ಅವರ ದಿಟ್ಟತನ ರಷ್ಯ ಸೋಲನ್ನು ಒಪ್ಪುವಂತೆ ಮಾಡಿತು.

ವಿಶ್ವದಾದ್ಯಂತ ವಿವಿಧ ರಾಷ್ಟ್ರಗಳಲ್ಲಿ ಕೆಲಸ ಮಾಡುವ 'ಶಾಂತಿದಳ' ವೂ ಕೆನಡಿಯ ಸೃಷ್ಟಿ.

ನೀಗ್ರೊ ಜನಾಂಗಕ್ಕೆ ಸ್ವಾತಂತ್ರ್ಯ ನೀಡುವುದರ ಬಗೆಗೆ ಉತ್ತರ ಮತ್ತು ದಕ್ಷಿಣ ರಾಜ್ಯಗಳಿಗೆ ಭಿನ್ನಾಭಿಪ್ರಾಯ ಮೊದಲಿನಿಂದಲೂ ಇದ್ದಿತು. ನೀಗ್ರೊಗಳಿಗೆ ಸಮಾನ ಪೌರಹಕ್ಕುಗಳನ್ನು ಕಲ್ಪಿಸುವಲ್ಲಿ ದಕ್ಷಿಣದ ಪೌರರು ಮನಸ್ತಾಪ ತಳೆದರೂ ಕೆನಡಿ ಹಿಂಜರಿಯಲಿಲ್ಲ.

1963ರ ನವೆಂಬರ್ 23ರಂದು ಅವರು ಟೆಕ್ಸಾಸ್ ರಾಜ್ಯದ ಡಲಸ್‌ನಲ್ಲಿ ತೆರೆದ ಕಾರಿನಲ್ಲಿ ಹೋಗುತ್ತಿದ್ದಾಗ ಗುಂಡೇಟಿಗೆ ಬಲಿಯಾದರು. ನವ ದಿಗಂತದತ್ತ ಸಾಗಲು ಅಮೆರಿಕಕ್ಕೆ ಕರೆನೀಡಿದ ಅತ್ಯಂತ ಪ್ರಭಾವಶಾಲಿ ಯುವಕ ಅಧ್ಯಕ್ಷನ ಅವಸಾನವಾಯಿತು.

ಆಪಾದಿತ ಲೀ ಹಾರ್ವೇ ಓಸ್ವಾಲ್ಡನನ್ನು ಜಾಕ್ ರೂಬಿ ಎಂಬಾತ ವಿಚಾರಣೆಗೆ ಮುನ್ನವೇ ಕೊಲೆಮಾಡಿದ. ಓಸ್ವಾಲ್ಡನೇ ಹಂತಕನೆಂದು ಅನಂತರ ತೀರ್ಮಾನಿಸಲಾಯಿತಾದರೂ ಕೆನಡಿ ಕೊಲೆ ರಹಸ್ಯವಾಗಿಯೇ ಉಳಿಯಿತು.

## ಕೆಲರ್, ಹೆಲೆನ್

ಮಗುವಿಗೆ ವರ್ಷ ತುಂಬಿ ಏಳು ತಿಂಗಳು. ತೀವ್ರ ಕಾಯಿಲೆಯಿಂದ ಅದು ನರಳಿತು. ಮೆದುಳಿನ ಜ್ವರ ಎಂದರು. ಜ್ವರ ನಿಲ್ಲುವ ಹೊತ್ತಿಗೆ ಮಗು ಕುರುಡಾಯಿತು, ಕಿವುಡಾಯಿತು, ಕೆಲವು ದಿನಗಳ ಅನಂತರ ಮೂಕಿಯೂ ಆಯಿತು. ಇಂಥ ಬದುಕಿಗಿಂತಲೂ ಸಾವೇ ಲೇಸು ಎನ್ನು ವಂಥ ಪರಿಸ್ಥಿತಿ. ಕುರುಡಿಯಾಗಿ, ಕಿವುಡಿಯಾಗಿ, ಮೂಕಿಯಾಗಿ ಬೆಳೆದ ಜೀವ ಹೆದರಲಿಲ್ಲ, ಬೇಸರಪಡಲಿಲ್ಲ, ವ್ಯಥೆ ಪಡಲಿಲ್ಲ. ಸ್ವಪ್ರಯತ್ನದಿಂದ, ಇತರರ ಸಹಾಯದಿಂದ ಓದು ಬರಹವನ್ನೂ ಮಾತನಾಡುವುದನ್ನೂ ಕಲಿತು ವಿಶ್ವದಲ್ಲೆಲ್ಲಾ ಸಂಚರಿಸಿ ಅನೇಕ ಉಪನ್ಯಾಸಗಳನ್ನು ಕೊಟ್ಟು ಅನೇಕ ಗ್ರಂಥ

ಗಳನ್ನು ಬರೆದು ತನ್ನ ಜೀವನದಲ್ಲಿ ಸಫಲತೆ ಪಡೆದಳು. ಅವಳು ಹೆಲೆನ್ ಕೆಲರ್.

ಹೆಲೆನ್ ಕೆಲರ್ ಅಮೆರಿಕದ ಟಸಕಂಬಿಯಲ್ಲಿ 1880 ಜೂನ್ 27ರಂದು ಜನಿಸಿದಳು. ನೋಡುವ, ಕೇಳುವ, ಮಾತನಾಡುವ ಶಕ್ತಿಗಳನ್ನು ಕಳೆದುಕೊಂಡ ಈ ಮಗುವಿಗೆ ಆರು ವರ್ಷವಾಗಿದ್ದಾಗ ಅವಳ ತಂದೆ ತಾಯಿಗಳು ವಿಜ್ಞಾನಿ ಅಲೆಗ್ಸಾಂಡರ್ ಗ್ರಹಾಂ ಬೆಲ್‌ನ ಸಲಹೆಯಂತೆ 1887ರಲ್ಲಿ ಆ್ಯನ್ ಮ್ಯಾನ್ಸ್‌ಫೀಲ್ಡ್ ಸಲಿವನ್ ಎಂಬಾಕೆಯನ್ನು ಉಪಾಧ್ಯಾಯಿನಿಯಾಗಿ ಕರೆತಂದರು. ಆ್ಯನ್ ಸಲಿವನ್‌ಗೆ ಆಗ ಇಪ್ಪತ್ತು ವರ್ಷ ವಯಸ್ಸು. ಒಂದೊಮ್ಮೆ ಕಣ್ಣಿನ ದೃಷ್ಟಿ ಕಳೆದುಕೊಂಡಿದ್ದ ಆ್ಯನ್ ಸ್ವಲ್ಪ ಮಟ್ಟಿಗೆ ಅದನ್ನು ಪಡೆದಿದ್ದಳು. ಪರ್ಕಿನ್ಸ್ ಕುರುಡರ ಶಾಲೆಯಲ್ಲಿ ಅವಳಿಗೆ ಶಿಕ್ಷಣವಾಗಿತ್ತು. ಕಣ್ಣು ಕಾಣದು, ಕಿವಿ ಕೇಳದು—ಇಂಥ ಮಗುವಿಗೆ ಓದು ಬರಹ ಕಲಿಸುವುದು ಹೇಗೆ? ಎಲ್ಲಕ್ಕೂ ಆ್ಯನ್ ಸಲಿವನ್ ಸ್ಪರ್ಶವನ್ನೇ ಬಳಸಿದಳು. ತಾನೇ ಒಂದು ಅಕ್ಷರಮಾಲೆ ಮಾಡಿ ಪದಗಳನ್ನು ತನ್ನ ಬೆರಳಿನಿಂದ ಹುಡುಗಿಯ ಕೈಯ ಮೇಲೆ ಬರೆದಳು. ಹುಡುಗಿಗೆ ಪ್ರತಿ ವಸ್ತುವಿನ ಹೆಸರು ತಿಳಿಸಿದಳು. ಅಲ್ಲಿಂದ ಮೂರು ವರ್ಷಗಳಲ್ಲಿ ಹೆಲೆನ್‌ಗೆ ಸಾಮಾನ್ಯ ಅಕ್ಷರಮಾಲೆ ತಿಳಿಯಿತು. ಓದಲು ಕಲಿತಳು. ಆದರೆ ಅವಳು ಎಲ್ಲರೂ ಓದುವ ಪುಸ್ತಕಗಳನ್ನು ಓದಲಾಗುತ್ತಿರಲಿಲ್ಲ. ಕುರುಡರಿಗಾಗಿ ಇರುವ ಬ್ರೇಲ್ ವಿಧಾನದ ಸಹಾಯದಿಂದ ಓದಬೇಕಾಗಿತ್ತು. ಅವರಿಗಾಗಿಯೇ ಮಾಡಲ್ಪಟ್ಟ ಬೆರಳಚ್ಚನ್ನು ಉಪಯೋಗಿಸಬೇಕಾಗಿತ್ತು. ಬಾಸ್ಟನ್‌ನಲ್ಲಿ ಕಿವುಡರಿಗಾಗಿ ಇದ್ದ ಹಾರೆಸ್ ಮನ್ ಶಾಲೆಯ ಸೌರಾ ಫುಲ್ಲರ್ ಕೊಟ್ಟ ಶಿಕ್ಷಣದಿಂದ ಹೆಲೆನ್ ಮಾತಾಡುವುದನ್ನು ಕಲಿತಳು. ಕೆಲರ್ ನ್ಯೂಯಾರ್ಕಿನಲ್ಲಿ ರೈಟ್ ಹ್ಯೂಮೇಸನ್ ಕಿವುಡರ ಶಾಲೆಯಲ್ಲಿಯೂ ಅಭ್ಯಾಸ ಮಾಡಿದಳು. ಅಲ್ಲದೆ ಕೇಂಬ್ರಿಜ್ಜಿನ ಯುವತಿಯರ ಶಾಲೆಗೆ ಸೇರಿದಳು. ಅಲ್ಲಿ ನಡೆಯುತ್ತಿದ್ದ ಎಲ್ಲ ತರಗತಿಗಳಿಗೂ ಹೆಲೆನಳ ಜೊತೆಯಲ್ಲಿ ಆ್ಯನ್ ಸಲಿವನಳು ಹೋಗಿ ಪ್ರತಿಯೊಂದು ಉಪನ್ಯಾಸವನ್ನೂ ಚರ್ಚೆಯನ್ನೂ ಹೆಲೆನಳ ಕೈ ಹಿಡಿದುಕೊಂಡು ಸ್ಪರ್ಶದ ಮೂಲಕ ತಿಳಿಸುತ್ತಿದ್ದಳು. ಅವಳು ಓದಿದ ಎಲ್ಲ ಪುಸ್ತಕಗಳನ್ನೂ ಬ್ರೇಲ್‌ನಲ್ಲಿ ತಯಾರಿಸಲಾಗಿತ್ತು. ಅವಳು ಉತ್ತರಗಳನ್ನು ಬರೆಯಲು ಬೆರಳಚ್ಚನ್ನು ಉಪಯೋಗಿಸಿದಳು.

ಹೆಲೆನ್ ಕೆಲರ್ 1904ರಲ್ಲಿ ಆನರ್ಸ್ ಪದವೀಧರೆಯಾದಳು. ಆದರೆ ಅವಳ ಆರ್ಥಿಕ ಸ್ಥಿತಿ ಅಷ್ಟು ಸಮರ್ಪಕವಾಗಿರಲಿಲ್ಲ.

ಕುರುಡರ ಸ್ಥಿತಿ ಸುಧಾರಿಸಬೇಕೆಂಬುದು ಅವಳ ಹಂಬಲವಾಗಿತ್ತು. ಆದ್ದರಿಂದ ಅವಳು ಭಾಷಣ ಕೊಟ್ಟಳು, ಲೇಖನ ಬರೆದಳು. ತನ್ನ ಉದ್ದೇಶವನ್ನು ಈಡೇರಿಸುವುದಕ್ಕಾಗಿ, ತನ್ನ ಕೃತಿಗಳಿಂದ ಬಂದಿದ್ದ ಹಣದಲ್ಲಿ ಇಪ್ಪತ್ತು ಲಕ್ಷ ಡಾಲರ್‌ಗಳನ್ನು (ಸುಮಾರು ಒಂದು ಕೋಟಿ ಐವತ್ತು ಲಕ್ಷ ರೂ. ಗಳು) ದಾನಮಾಡಿ, ತನ್ನ ಹೆಸರಿನಲ್ಲಿಯೇ ಒಂದು ನಿಧಿಯನ್ನು ಆರಂಭಿಸಿದಳು. ಹೆಲೆನ್ ಕೆಲರಳ ಈ ಚಟುವಟಿಕೆಗಳಿಂದ ಅಂಗವಿಕಲರಲ್ಲಿ ಹೊಸ ಚೈತನ್ಯ ಮೂಡಿತು.

ಅವಳ ಗುರುವಾಗಿ ಜೀವನದ ಜೊತೆಗಾತಿಯಾಗಿ ಇದ್ದ ಆ್ಯನ್ ಸಲಿವನ್ 1936ರಲ್ಲಿ ಕಾಲವಾದಳು. ಅನಂತರ ಅವಳ ಸ್ಥಳವನ್ನು ತುಂಬಿದವಳು ಪಾಲಿ ಥಾಮ್ಸನ್.

ಎರಡನೆಯ ಜಾಗತಿಕ ಮಹಾಯುದ್ಧದ ಅನಂತರ ಹೆಲೆನ್ ಕೆಲರ್ ಯೂರೋಪ್, ಏಷ್ಯಾ, ಆಫ್ರಿಕ ಖಂಡಗಳಲ್ಲಿ ಪ್ರವಾಸಮಾಡಿದಳು. 1955ರಲ್ಲಿ ಭಾರತಕ್ಕೆ ಬಂದಿದ್ದಾಗ ದೆಹಲಿ ವಿಶ್ವವಿದ್ಯಾನಿಲಯ ಆಕೆಗೆ ಡಾಕ್ಟರೇಟ್ ಪದವಿಯನ್ನು ನೀಡಿ ಗೌರವಿಸಿತು.

ಹೆಲೆನ್ ಕೆಲರ್ 1968ರಲ್ಲಿ ತೀರಿಕೊಂಡಳು.

ಕೆಲರ್ ಬರೆದಿರುವ ಪುಸ್ತಕಗಳು ಹಲವು. ಅವುಗಳಲ್ಲಿ ಮುಖ್ಯವಾದದ್ದು 'ನನ್ನ ಜೀವನ ಕಥೆ', 'ಆಶಾವಾದ—ಒಂದು ಪ್ರಬಂಧ', 'ನಾನು ಜೀವಿಸಿರುವ ಪ್ರಪಂಚ', 'ಕತ್ತಲಿನಿಂದ ಹೊರಗೆ', 'ಸಂಜೆ ಶಾಂತಿ' ಮತ್ತು 'ಭರವಸೆ ಇಟ್ಟುಕೊಳ್ಳೋಣ'.



## ಕೈಗಾರಿಕಾ ಕ್ರಾಂತಿ

ಬೆಂಗಳೂರು, ಮುಂಬಯಿ, ಟೋಕಿಯೊ ಮುಂತಾದ ದೊಡ್ಡ ನಗರಗಳಲ್ಲಿ ಕಾರಖಾನೆಗಳಿವೆ. ಹಲವು ಸಹಸ್ರ ಜನರು ಕಾರಖಾನೆಗಳಲ್ಲಿ ದುಡಿಯುತ್ತಾರೆ. ಇಂಥ ದುಡಿಮೆಯೇ ಅವರ ಜೀವನಕ್ಕೆ ದಾರಿ.

ಆರ್ಥಿಕ, ಸಾಮಾಜಿಕ ಜೀವನದಲ್ಲಿ ಈ ಯಂತ್ರಗಳು ಉಂಟುಮಾಡುವ ಪಲ್ಲಟ ಅಸಾಧಾರಣವಾದದ್ದು. ಯಂತ್ರಗಳ ಆಗಮನದಿಂದಾಗಿ ಬಾಳ್ವೆ ನಾನಾ ವಿಧವಾಗಿ ಬದಲಾಯಿತು. ಇದರ ಫಲವಾಗಿ [illegible]

ಕಾರ್ಮಿಕವರ್ಗ ಸೃಷ್ಟಿಯಾಯಿತು. ಈ ಎಲ್ಲ ಕ್ಷಿಪ್ರ ಪರಿವರ್ತನೆಗೆ ಕೈಗಾರಿಕಾ ಕ್ರಾಂತಿ (ಔದ್ಯೋಗಿಕ ಕ್ರಾಂತಿ) ಎನ್ನುತ್ತಾರೆ.

ಈ ಕ್ರಾಂತಿ 1750ರಿಂದ ಇಂಗ್ಲೆಂಡಿನಲ್ಲಿ ಸ್ಪಷ್ಟವಾಗಿ ರೂಪ ತಾಳಲಾರಂಭಿಸಿತು. ಮುಂದೆ ಅದು ಫ್ರಾನ್ಸ್, ಜರ್ಮನಿ, ಎಲ್ಲ ದೇಶಗಳಿಗೆ ಹಬ್ಬಿತು. ಕೈಗಾರಿಕಾ ಕ್ರಾಂತಿ ಸಾಧ್ಯವಾದದ್ದು ವಿಜ್ಞಾನದ ಪ್ರಗತಿಯಿಂದ. ಪ್ರಕೃತಿಯಲ್ಲಿನ ವಸ್ತುಗಳನ್ನೂ ಶಕ್ತಿಗಳನ್ನೂ—ಕಲ್ಲಿದ್ದಲು, ನೀರು, ಆವಿ, ಪೆಟ್ರೋಲ್, ವಿದ್ಯುಚ್ಛಕ್ತಿ ಇಂಥವನ್ನು—ಬಳಸಿಕೊಂಡು ಕೆಲಸಮಾಡುವ ಯಂತ್ರಗಳು ಕ್ರಮೇಣ ಬಂದುವು. ಸಾಮಾನುಗಳ ಉತ್ಪಾದನೆ ಹೆಚ್ಚಿತು. ದೇಶದ ಸಂಪತ್ತು ಬೆಳೆಯಿತು.

ಕೈಗಾರಿಕಾ ಕ್ರಾಂತಿಯಾದ್ದರಿಂದಲೇ ಮಹಾನಗರಗಳು ನಿರ್ಮಾಣವಾಗಿವೆ. ಜೀವನದ ರೀತಿನೀತಿಗಳು ಬದಲಾಗಿವೆ.

ಇಂಗ್ಲೆಂಡಿನಲ್ಲಿ ಕೈಗಾರಿಕಾ ಕ್ರಾಂತಿಯಾಗುವ ಮೊದಲು ಬಟ್ಟೆಗಳ ಮತ್ತು ವಸ್ತುಗಳ ನಿರ್ಮಾಣ ಹಳ್ಳಿಗಳಲ್ಲಿ ಸಣ್ಣ ಪ್ರಮಾಣದಲ್ಲಿ ಇದ್ದಿತು. ನೇಕಾರ ಮನೆತನದ ಹೆಂಗಸರು, ಗಂಡಸರು, ಹುಡುಗರು, ಎಲ್ಲರೂ ನೆಯ್ಗೆಯ ಕಸಬುಮಾಡಿ ಜೀವಿಸುತ್ತಿದ್ದರು. ಅವರು ಬಡತನದಲ್ಲಿದ್ದರೂ ಕೌಟುಂಬಿಕ ಸೌಖ್ಯವಿತ್ತು. ಆದರೆ ಬರಬರುತ್ತ ಬಟ್ಟೆಗಳಿಗಾಗಿ ಬೇಡಿಕೆ ಹೆಚ್ಚಾಯಿತು. ಆಗ ಲ್ಯಾಂಕಷೈರಿನ ಶ್ರೀಮಂತರು ಅಮೆರಿಕದಿಂದ ಹತ್ತಿಯನ್ನು ತರಿಸಿಕೊಂಡರು, ಬಟ್ಟೆಗಳನ್ನು ಹೆಚ್ಚು ಹೆಚ್ಚು ಉತ್ಪಾದಿಸಲು ಯಂತ್ರಗಳು ಬಂದುವು, ಯಂತ್ರಗಳ ನೆರವಿನಿಂದ ನೂಲು ಉತ್ತಮವಾಯಿತು. ಬಟ್ಟೆಗಳೂ ಸಾಕಷ್ಟು ಸಿದ್ಧವಾಗತೊಡಗಿದುವು. ನೇಕಾರರು ಹಳ್ಳಿಗಳನ್ನು ಬಿಟ್ಟು ಪಟ್ಟಣಗಳಲ್ಲಿ ಸೇರಿಕೊಂಡರು. ಕಡಮೆ ಕೂಲಿಯಾದರೂ ದುಡಿಯತೊಡಗಿದರು. ಇಪ್ಪತ್ತು ಜನರ ಕೆಲಸವನ್ನು ಒಂದು ಯಂತ್ರವೇ ಮಾಡುವುದು ಸಾಧ್ಯವಾದದ್ದರಿಂದ ಎಷ್ಟೋ ನೇಕಾರರು ನಿರುದ್ಯೋಗಿಗಳೂ ಆದರು. ಜೇಮ್ಸ್ ವ್ಯಾಟ್ ಉಗಿಯಂತ್ರವನ್ನು ಕಂಡುಹಿಡಿದ. ಆಗಂತೂ ಕೈಗಾರಿಕಾ ಕ್ರಾಂತಿ ದೊಡ್ಡ ಹೆಜ್ಜೆ ಇಟ್ಟಿತು.

ಈ ಕೈಗಾರಿಕಾ ಕ್ರಾಂತಿ ಸಾವಕಾಶವಾಗಿ ಸುಮಾರು ಒಂದು ಶತಮಾನದವರೆಗೆ ಸಾಗಿತೆನ್ನಬಹುದು. ರೈತರು ಕುದುರೆಗಳು ಎಳೆಯುತ್ತಿದ್ದ ಯಂತ್ರಗಳನ್ನು ಬಿತ್ತನೆಗೆ, ಕೊಯ್ಲಿಗೆ ಬಳಸಲಾರಂಭಿಸಿದರು. ಆವಿಯನ್ನು ಬಳಸಿಕೊಂಡ ರೈಲುಗಳೂ ಹಡಗುಗಳೂ ಸರಕುಗಳನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ವೇಗವಾಗಿ ಸಾಗಿಸುವಂತಾಯಿತು. ಈ ಕ್ರಾಂತಿಯಿಂದ ತಕ್ಷಣ ಜನರಿಗೇನೂ ಸುಖ ಲಭಿಸಲಿಲ್ಲ. ಕಾರಖಾನೆಗಳ ಒಡೆಯರು ಹಣದ ಲಾಭಕ್ಕಾಗಿ ಹಂಬಲಿಸಿದರು. ಬಡವರಿಗೆ ವಿಪರೀತ ತೊಂದರೆಯಾಯಿತು. ಚಿಕ್ಕ ಬಾಲಕರೂ ಕೂಲಿ ಕೆಲಸಮಾಡಿದರು. ಕಾರಖಾನೆಗಳ ಒಡೆಯರು ಅವರನ್ನು ಕೆಟ್ಟ ರೀತಿಯಿಂದ ನಡೆಸಿಕೊಂಡರು. ಕೂಲಿಮಾಡುವ ಜನರು ಅನಾರೋಗ್ಯದ ಸ್ಥಳಗಳಲ್ಲಿ ವಾಸಿಸಿದರು. ಅವರ ಕೆಲಸದ ವೇಳೆಗೆ ಮಿತಿ ಇರಲಿಲ್ಲ. ಕಾಯಿಲೆಯಾದರೆ, ಸತ್ತರೆ ಪರಿಹಾರವಿರಲಿಲ್ಲ. ಕೂಲಿಕಾರರ ದುಸ್ಥಿತಿಯನ್ನು ಆಂಗ್ಲ ಸಾಹಿತಿ ಚಾರ್ಲ್ಸ್ ಡಿಕನ್ಸ್ ತನ್ನ ಕಾದಂಬರಿಗಳಲ್ಲಿ ಚಿತ್ರಿಸಿದ್ದಾನೆ. ಕ್ರಮೇಣ ಪಾಶ್ಚಾತ್ಯ ದೇಶಗಳಲ್ಲಿ ಸರಕಾರಗಳು, ಕಾರಖಾನೆಗಳ ಆಡಳಿತ ವರ್ಗ–ಕಾರ್ಮಿಕ ವರ್ಗಗಳ ಸಂಬಂಧವನ್ನು ನಿರ್ಧರಿಸಿ ಕಾರ್ಮಿಕರ ಹಿತಗಳನ್ನು ರಕ್ಷಿಸಲು ಕಾನೂನುಗಳನ್ನು ಮಾಡಬೇಕಾಯಿತು. ಕಾರ್ಮಿಕರು ಸಂಘಟಿತರಾಗಿ ಹೋರಾಡತೊಡಗಿದರು.

ಕೈಗಾರಿಕಾ ಕ್ರಾಂತಿಯಿಂದ ಕ್ರಮೇಣ ಆರ್ಥಿಕ ಜೀವನ ಮತ್ತು ಸಾಮಾಜಿಕ ಮಟ್ಟದಲ್ಲಿ ಗಮನಾರ್ಹವಾದ ಬದಲಾವಣೆಗಳಾಗಿವೆ. ದೇಶದ ಸಂಪತ್ತು ಹೆಚ್ಚಿದೆ. ಉದ್ಯೋಗಗಳ ಅವಕಾಶ ಹೆಚ್ಚಿದೆ. ಹಿಂದಿಲ್ಲದ ಸೌಲಭ್ಯಗಳನ್ನು ಜನರು ಇಂದು ಪಡೆಯಲು ಸಾಧ್ಯವಾಗಿದೆ. ಸೊಗಸಾದ ವಸ್ತುಗಳು ಮಾರುಕಟ್ಟೆಗೆ ಬರುತ್ತಿವೆ. ಆದರೆ ಕೈಗಾರಿಕೆಗಳಿಂದ ದೊಡ್ಡ ದೊಡ್ಡ ನಗರಗಳು ವೇಗವಾಗಿ ಬೆಳೆದು ವಸತಿ, ನೀರು, ಆಹಾರ ಇವುಗಳ ಅಭಾವವೂ ಆರೋಗ್ಯ, ಶಾಂತಿ, ಶಿಸ್ತುಪಾಲನೆ ಇವುಗಳ ಸಮಸ್ಯೆಗಳೂ ತಲೆದೋರಿವೆ. ಅಲ್ಲದೆ ಕೈಗಾರಿಕೆಗಳನ್ನು ಅಗಾಧವಾಗಿ ಬೆಳೆಸಿಕೊಂಡ ದೇಶಗಳು ತಮ್ಮ ಪದಾರ್ಥಗಳಿಗೆ ಹೊಸ ಹೊಸ ಮಾರುಕಟ್ಟೆಗಳನ್ನು ಹುಡುಕಬೇಕಾಗುತ್ತದೆ. ಇದರಿಂದ ದೇಶ ದೇಶಗಳ ನಡುವೆ ಸ್ಪರ್ಧೆ ಹೆಚ್ಚಾಗುತ್ತದೆ.

ಕೈಗಾರಿಕಾ ಕ್ರಾಂತಿ ಜಗತ್ತಿನ ಎಲ್ಲ ದೇಶಗಳಲ್ಲೂ ನಾನಾ ಘಟ್ಟಗಳಲ್ಲಿ ನಡೆಯುತ್ತಲೇ ಇದೆ. ಬ್ರಿಟಿಷರು ಭಾರತದಲ್ಲಿ ತಾವು ಇದ್ದಷ್ಟು ಕಾಲವೂ ಹೆಚ್ಚಿನ ಔದ್ಯೋಗಿಕ ಬೆಳವಣಿಗೆಗೆ ಅವಕಾಶ ನೀಡಲಿಲ್ಲ. ಕೈಗಾರಿಕೋದ್ಯಮಗಳ ಮಹತ್ವವನ್ನು ಮನಗಂಡ ಕರ್ಮಯೋಗಿ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು "ಕೈಗಾರಿಕಾಕರಣ ಇಲ್ಲದಿದ್ದರೆ ವಿನಾಶ" ಎಂಬ ಕರೆನೀಡಿದರು. ಇಂದಿಗೂ ಹಿಂದುಳಿದ ಎಲ್ಲ ರಾಷ್ಟ್ರಗಳಿಗೂ ಈ ಮಾತು ಅನ್ವಯಿಸುತ್ತದೆ.

ನೋಡಿ : ಕೈಗಾರಿಕೆ ; ಗೃಹ ಕೈಗಾರಿಕೆ

## ಕೈಗಾರಿಕೆ

ಹೊಗೆಯನ್ನು ಚೆಲ್ಲುವ ನೀಳವಾದ ಚಿಮಿಣಿಗಳು ; ಸೈರನ್ನು ಕೂಗಿದಂತೆ ಓಡೋಡಿ ಧಾವಿಸುವ ಕಾರ್ಮಿಕರು ; ರಸ್ತೆಗಳಲ್ಲಿ ಬಿಡುವಿಲ್ಲದ ವಾಹನಗಳ ಓಡಾಟ–ಈ ದೃಶ್ಯ ಕಾರಖಾನೆಯ ಪರಿಸರದಲ್ಲಿ ಅತ್ಯಂತ ಸಾಮಾನ್ಯ. ಹಲವಾರು ಕಾರಖಾನೆಗಳು ಇರುವ ಸ್ಥಳ ಕೈಗಾರಿಕಾ ಕೇಂದ್ರ.

ಮನುಷ್ಯನ ಶ್ರಮವನ್ನು ಮಿತಗೊಳಿಸಿ ಯಂತ್ರಗಳ ಬಳಕೆಯ ಮೂಲಕ ಹೆಚ್ಚು ವಸ್ತುಗಳನ್ನು ಉತ್ಪಾದಿಸುವ ವ್ಯವಸ್ಥೆ ಕೈಗಾರಿಕೆ.

ನೈಸರ್ಗಿಕ ಸಂಪನ್ಮೂಲಗಳನ್ನು ಪಡೆದು ಸಿದ್ಧವಸ್ತುಗಳನ್ನು ತಯಾರಿಸುವುದು ಕೈಗಾರಿಕೆಯ ಗುರಿ. ಯಂತ್ರಗಳು ಮನುಷ್ಯ ಶ್ರಮವನ್ನು ಕಡಮೆ ಮಾಡುತ್ತವೆ. ಹಲವಾರು ಮಂದಿಯ ದುಡಿಮೆ ಒಂದು ಯಂತ್ರದ ಕೆಲಸಕ್ಕೆ ಸಮ. ಮನುಷ್ಯ ಶ್ರಮ, ಯಂತ್ರಸಾಧನ ಇವುಗಳನ್ನು ಉತ್ಪಾದನೆಗೆ ಅಳವಡಿಸುವುದು ಆಡಳಿತ ವ್ಯವಸ್ಥೆ. ಬಂಡವಾಳ ಕೈಗಾರಿಕೆಯ ಒಂದು ಅಗತ್ಯ ಸಾಧನ. ಕನಿಷ್ಠ ವೆಚ್ಚದೊಡನೆ ಹೆಚ್ಚು ಉತ್ಪಾದನೆ ಮಾಡಲು ಪ್ರತಿಯೊಂದು ಕೈಗಾರಿಕೆಯೂ ಶ್ರಮಿಸುತ್ತದೆ.

ಮಂಡ್ಯದ ಸಕ್ಕರೆ ಕಾರಖಾನೆ





ಉಕ್ಕಿನ ಕಾರಖಾನೆ, ಭಿಲಾಯಿ

ಹೊಸ ಹೊಸ ಸಂಶೋಧನೆಗಳು, ಪ್ರಯೋಗಗಳು ಯಂತ್ರಗಳನ್ನು ಸುಧಾರಿಸಲು ನೆರವಾಗುತ್ತವೆ. ಕಾರ್ಮಿಕರು ವಿಶೇಷ ಶಿಕ್ಷಣ ತರಬೇತಿಯನ್ನು ಪಡೆಯುತ್ತಾರೆ. ದಿನೇ ದಿನೇ ಕಾಣಬರುವ ಈ ಸುಧಾರಣೆಗಳು ಕೈಗಾರಿಕೆ ಬೆಳೆಯಲು ಸಹಕಾರಿ. ಬೈಸಿಕಲ್ಲಿನ ಬೆಲೆ ಇನ್ನೂ ಹಲವು ವರ್ಷಗಳ ಅನಂತರ ಇಳಿಯಬಹುದು; ಗುಣಮಟ್ಟ ಇಂದಿಗಿಂತ ಉತ್ತಮವಾಗಿ ಇದ್ದೀತು. ಆಗ ಬೈಸಿಕಲ್ ಕೈಗಾರಿಕೆ ಸುಧಾರಿಸಿದಂತೆ.

ನೈಸರ್ಗಿಕ ಸಂಪನ್ಮೂಲ ನೇರವಾಗಿ ಕಾರಖಾನೆಗೆ ಸೇರುವುದಿಲ್ಲ. ಬೇಕಾಗುವ ಲೋಹ ತಗಡಿನ ರೂಪದಲ್ಲಿ ಬೈಸಿಕಲ್ಲಿನ ಕಾರಖಾನೆಗೆ ಬರುತ್ತದೆ. ಅದಿರನ್ನು ತೆಗೆದು ಲೋಹದ ತಗಡುಗಳು ತಯಾರಿಸುವ ಕಾರಖಾನೆ ಬೇರೆ. ಹೊಲಗಳಲ್ಲಿ ಬೆಳೆದ ಹತ್ತಿಯನ್ನು ಶೇಖರಿಸಿ ಹಿಂಜಿ ಶುದ್ಧಪಡಿಸುವ ಕಾರಖಾನೆ ಆ ಹತ್ತಿಯನ್ನು ಬಟ್ಟೆಯ ಗಿರಣಿಗೆ ಒದಗಿಸುತ್ತದೆ. ನೈಸರ್ಗಿಕ ಸಂಪನ್ಮೂಲವನ್ನು ಸಂಸ್ಕರಿಸಿ ಕಾರಖಾನೆಗೆ ಒದಗಿಸಿದಾಗ ಅದು ಆ ಕಾರಖಾನೆಯ ಕಚ್ಚಾ ಪದಾರ್ಥ ಎನಿಸಿಕೊಳ್ಳುತ್ತದೆ.

ಮೋಟಾರು ವಾಹನಗಳನ್ನು ತಯಾರಿಸುವ ಕಾರಖಾನೆ, ಎಲ್ಲ ಬಿಡಿ ಭಾಗಗಳನ್ನೂ ತಾನೇ ತಯಾರಿಸುವುದಿಲ್ಲ. ಚಕ್ರಗಳು, ಕಿಟಕಿಯ ಗಾಜು, ಮೆತ್ತನೆಯ ಆಸನಗಳು, ಇವುಗಳನ್ನೆಲ್ಲಾ ಇತರ ಕಾರಖಾನೆಗಳಿಂದ ಕೊಳ್ಳುತ್ತದೆ. ಅಂದರೆ ಮೋಟಾರು ವಾಹನಗಳ ಬಿಡಿಭಾಗಗಳ ಪೂರೈಕೆ ಇತರ ಸಣ್ಣ ಕಾರಖಾನೆಗಳಿಂದ. ಒಂದು ಕಾರಖಾನೆ ಮತ್ತೊಂದು ಕಾರಖಾನೆಯನ್ನು ಅವಲಂಬಿಸುವುದು ಅನಿವಾರ್ಯ.

ಒಂದೇ ವಸ್ತುವಿನ ಉತ್ಪಾದನೆಗೆ ಹಲವಾರು ಕಾರಖಾನೆಗಳು ಮತ್ತು ಅವುಗಳಿಗೆ ಸಂಬಂಧಿಸಿದ ಎಲ್ಲ ಚಟುವಟಿಕೆಗಳು ಸೇರಿ ಆ ವಸ್ತುವಿನ ಕೈಗಾರಿಕೆ ಎನಿಸಿಕೊಳ್ಳುತ್ತದೆ. ಕಬ್ಬಿಣ ಮತ್ತು ಉಕ್ಕಿನ ಕೈಗಾರಿಕೆ, ಯಂತ್ರೋಪಕರಣಗಳ ಕೈಗಾರಿಕೆ, ಸಾಬೂನಿನ ಕೈಗಾರಿಕೆ, ವಾಹನಗಳ ಕೈಗಾರಿಕೆ ಮುಂತಾದುವು ಕೈಗಾರಿಕೆಗಳ ಪೈಕಿ ಹಲವು.

ಒಂದೇ ಕೈಗಾರಿಕೆಯ ಕಾರಖಾನೆಗಳು ಒಂದೆಡೆ ನಿರ್ಮಾಣವಾಗುವುದು ಸಹಜ. ಕೆಲವು ಪ್ರದೇಶಗಳಲ್ಲಿ ಕೆಲವು ಕೈಗಾರಿಕೆಗಳು ಹೆಚ್ಚು ಸ್ಥಾಪನೆಯಾಗುತ್ತವೆ. ಕಚ್ಚಾಸಾಮಗ್ರಿಗಳು ಎಲ್ಲಿ ಸುಲಭವಾಗಿ ಲಭ್ಯವಾಗುವುವೋ ಯಾವ ಪ್ರದೇಶಗಳಲ್ಲಿ ಸಾಗಾಣಿಕೆ ಸೌಲಭ್ಯಗಳೂ ಮಾರುಕಟ್ಟೆ ಅನುಕೂಲಗಳೂ ಸಿಗುವುವೋ ಆ ಪರಿಸರದಲ್ಲಿ ಕೈಗಾರಿಕೆ ಬೆಳೆಯುತ್ತದೆ. ಕಬ್ಬಿಣದ ಅದಿರು ದೊರೆಯುವ ಕಡೆ ಉಕ್ಕಿನ ಕಾರಖಾನೆಯಿದ್ದಲ್ಲಿ ಸಾಗಾಣಿಕೆಯ ವೆಚ್ಚ ಕಡಮೆಯಾಗುತ್ತದೆ. ಗಾಜಿನ ಕಾರಖಾನೆಗಳಿಗೆ ಮರಳು ಒಂದು ಕಚ್ಚಾ ಪದಾರ್ಥ; ಆದ್ದರಿಂದ ತೀರಪ್ರದೇಶಗಳಲ್ಲಿ ಗಾಜಿನ ಕಾರಖಾನೆ ನೆಲೆಸುತ್ತದೆ. ಕಬ್ಬು ಬೆಳೆಯುವ ಪ್ರದೇಶದಲ್ಲಿ ಸಕ್ಕರೆ ಕಾರಖಾನೆಗಳ ಸ್ಥಾಪನೆ ಸಹಜ. ಒಂದು ಕೈಗಾರಿಕೆ ಒಂದೆಡೆ ನೆಲೆಸುವ ವಿದ್ಯಮಾನವನ್ನು ಕೈಗಾರಿಕೆಯ ಸ್ಥಾನೀಕರಣ ಎನ್ನುತ್ತಾರೆ.

ವಾತಾವರಣದ ಉಷ್ಣತೆ, ಹವೆ ಮುಂತಾದ ಪರಿಸ್ಥಿತಿಗಳು ಹಲವು ಬಗೆಯ ಕೈಗಾರಿಕೆಗಳ ನೆಲೆಯನ್ನು ನಿರ್ಧರಿಸುತ್ತವೆ. ಕಚ್ಚಾ ಫಿಲ್ಮ್, ಔಷಧ ಕೈಗಾರಿಕೆ ಅದಕ್ಕೆ ಉದಾಹರಣೆಗಳು. ಕೆಲವೊಂದು ಪ್ರದೇಶಗಳ ಜನರಿಗೆ ನಿರ್ದಿಷ್ಟವಾದ ಕೌಶಲ ಹಿಂದಿನಿಂದಲೇ ಕೈಗೂಡಿರುತ್ತದೆ. ಈ ಅಂಶ ಕೂಡ ಒಂದು ಸ್ಥಳದ ಆಯ್ಕೆಗೆ ಕಾರಣ.

ಯಾವುದೇ ಕೈಗಾರಿಕೆಯ ಸ್ಥಾಪನೆ ಆ ಸ್ಥಳದ ಜನಜೀವನದ ಮೇಲೆ ಪ್ರಭಾವ ಬೀರುತ್ತದೆ. ಒಂದು ಕಾರಖಾನೆ ಸ್ಥಾಪನೆಯಾದರೆ ನೂರಾರು ಮಂದಿಗೆ ಉದ್ಯೋಗದ ಅವಕಾಶ. ಕಾರ್ಮಿಕರು ಹಲವಾರು ಪ್ರದೇಶಗಳಿಂದ ಬಂದು ಕೈಗಾರಿಕೆ ಇರುವ ಪ್ರದೇಶದಲ್ಲಿ ಸೇರುತ್ತಾರೆ. ದೊಡ್ಡ ನಗರಗಳ ನಿರ್ಮಾಣ ಕೈಗಾರಿಕೆಗಳು ನೆಲೆಸಿದಲ್ಲಿ ಮಾತ್ರ ಸಾಧ್ಯ. ನೀರು, ವಸತಿ, ಆರೋಗ್ಯಗಳಂಥ ಸಮಸ್ಯೆಗಳು ಕೇಂದ್ರೀಕರಣದ ಫಲ. ಹಲವು ಕಾರಖಾನೆಗಳು ಸ್ಥಾಪನೆಯಾದ ಸ್ಥಳದಲ್ಲಿ, ಹೊರಗಿನಿಂದ ಬಂದು ನೆಲೆಸುವ ಕಾರ್ಮಿಕರಿಂದಾಗಿ, ಅವರ ಸಂಸಾರಗಳಿಂದಾಗಿ, ಜನಸಂಖ್ಯೆ ವೇಗವಾಗಿ ಬೆಳೆಯುತ್ತದೆ. ಇಷ್ಟು ಜನರಿಗೆ ನೀರನ್ನು ಒದಗಿಸುವುದು, ಮನೆಗಳನ್ನು ಕಟ್ಟುವುದು, ಕೊಳೆ ನೀರು ಹರಿದುಹೋಗಲು ಚರಂಡಿ ವ್ಯವಸ್ಥೆ, ಆಸ್ಪತ್ರೆಗಳು, ಮಕ್ಕಳಿಗೆ ಶಾಲೆಗಳು, ಆಟದ ಮೈದಾನಗಳು, ಇವೆಲ್ಲ ಇಷ್ಟೇ ವೇಗವಾಗಿ ಬೆಳೆಯಲಾರವು. ಇಂಥ ಸ್ಥಳಗಳಲ್ಲಿ ಮನೆ, ಅಂಗಡಿ ಕಟ್ಟಲು ನೆಲ ಸಾಲದೆ ಹೋಗುತ್ತದೆ. ಅವುಗಳ ಬೆಲೆ ಮಿತಿಮಾರಿ ಏರಿ, ಕೆಲವರು ಲಾಭಗಳಿಸುತ್ತಾರೆ; ಉಳಿದವರಿಗೆ ಕಷ್ಟವಾಗುತ್ತದೆ. ಕೈಗಾರಿಕೆಗಳು ಬೆಳೆಯುವುದರಿಂದ ಸಮಸ್ಯೆಗಳು ಹೆಚ್ಚುತ್ತವೆ. ಕಚ್ಚಾವಸ್ತುಗಳ ಸರಬರಾಜು, ಸಾರಿಗೆ ಅನುಕೂಲತೆಗೇ ಅನರಿಂದ ಸಮಸ್ಯೆ ಉಂಟಾಗುತ್ತದೆ. ದೊಡ್ಡ ಕೈಗಾರಿಕೆಯೊಂದು ಸ್ತಬ್ಧವಾದಲ್ಲಿ ಅದನ್ನು ಅವಲಂಬಿಸಿದ ಕಾರಖಾನೆಗಳಿಗೆ ಅತೀವ ಹಾನಿ. ಬಿಡಿ ಭಾಗಗಳನ್ನು ಒದಗಿಸುವ ಅಥವಾ ಭಾಗಶಃ ಉತ್ಪಾದನೆಯಲ್ಲಿ ತೊಡಗಿರುವ ಕಾರಖಾನೆಗಳು ಇದ್ದಕ್ಕಿದ್ದಂತೆ ಅವನತಿಯನ್ನು ಕಾಣಬೇಕಾಗುತ್ತದೆ. ಸಾವಿರಾರು ಮಂದಿ, ಲಕ್ಷಾಂತರ ಕಾರ್ಮಿಕರು ಒಮ್ಮೆಂದೊಮ್ಮೆಲೆ ಉದ್ಯೋಗ ಕಳೆದುಕೊಳ್ಳುವ ಪ್ರಮೇಯ ಒದಗಬಹುದು.

ಕೇಂದ್ರೀಕರಣದಿಂದ ಉದ್ಭವಿಸುವ ಸಮಸ್ಯೆಗಳಿಗೆ ಪರಿಹಾರ ವಿಕೇಂದ್ರೀಕರಣ. ಒಂದೇ ಕೈಗಾರಿಕೆಯ ಕಾರಖಾನೆಗಳು ಒಂದೇ ಕಡೆ ಕೇಂದ್ರಿಕೃತವಾಗದಂತೆ ಕೈಗೊಳ್ಳುವ ಕ್ರಮ ವಿಕೇಂದ್ರೀಕರಣ. ವಿದ್ಯುಚ್ಛಕ್ತಿಯನ್ನು ವ್ಯಾಪಕವಾದ ಜಾಲಗಳ ಮೂಲಕ ಹರಡುವುದು; ಮಾರುಕಟ್ಟೆ ಪ್ರದೇಶಗಳಿಗೆ ಸಂಪರ್ಕ ಕಲ್ಪಿಸುವ ರೈಲು, ಬಸ್ಸು ಮಾರ್ಗಗಳ ಅಭಿವೃದ್ಧಿ- ಈ ಕ್ರಮಗಳಿಂದ ಕಾರಖಾನೆಗಳು ಒಟ್ಟುಗೂಡುವುದನ್ನು ತಪ್ಪಿಸಬಹುದು. ಕಾರಖಾನೆಗಳನ್ನು ಸ್ಥಾಪಿಸಲು ಅನುಮತಿ ನೀಡುವ ಹಕ್ಕು [illegible] ವೇತನ, ಬಾಡಿಗೆ, ಸಾರಿಗೆ ದರಗಳನ್ನು ನಿಯಂತ್ರಿಸುವ ಕ್ರಮಗಳಿಂದ ಸರಕಾರ ಕೂಡ ಕೈಗಾರಿಕಾ ವಿಕೇಂದ್ರೀಕರಣವನ್ನು ಪ್ರೋತ್ಸಾಹಿಸುತ್ತದೆ.

ಗೃಹ ಕೈಗಾರಿಕೆ, ಸಣ್ಣಪ್ರಮಾಣದ ಕೈಗಾರಿಕೆ ಮತ್ತು ಬೃಹತ್ ಕೈಗಾರಿಕೆ ಹೀಗೆ ಪ್ರಮಾಣದ ಆಧಾರದ ಮೇಲೆ, ಕೈಗಾರಿಕೆಯನ್ನು ವಿಂಗಡಿಸಿ ಗುರುತಿಸ

ಬಹುದು. ಗೃಹಕೈಗಾರಿಕೆಯಲ್ಲಿ ಅತ್ಯಂತ ಸರಳವಾದ ಉಪಕರಣ ಮತ್ತು ಯಂತ್ರಗಳನ್ನು ಬಳಸಲಾಗುತ್ತದೆ. ಜನರ ಹಸ್ತಕೌಶಲಕ್ಕೆ ಗೃಹಕೈಗಾರಿಕೆಯಲ್ಲಿ ಪ್ರಾಶಸ್ತ್ಯ. ಏಳೂವರೆ ಲಕ್ಷ ರೂ. ಗಳನ್ನು ಮೀರದ ಬಂಡವಾಳ ವಿರುವ ಕೈಗಾರಿಕಾ ಸಂಸ್ಥೆ ಒಳಗೊಳ್ಳುವುದು ಸಣ್ಣ ಪ್ರಮಾಣದ ಕೈಗಾರಿಕೆ. ವಿಮಾನ ಕಾರಖಾನೆ, ಯಂತ್ರಸ್ಥಾವರಗಳನ್ನೂ ಯಂತ್ರೋಪಕರಣಗಳನ್ನೂ ತಯಾರಿಸುವ ಕಾರಖಾನೆಗಳು, ಉಕ್ಕಿನ ಕಾರಖಾನೆ ಮುಂತಾದ ಕೈಗಾರಿಕೆಗಳು ಸುಲಭವಾಗಿ ಸಾಧ್ಯವಾಗುವುದಿಲ್ಲ. ದೊಡ್ಡ ಪ್ರಮಾಣದ ಸಂಪನ್ಮೂಲ ಮತ್ತು ಸೌಲಭ್ಯಗಳು ಅಗತ್ಯ. ಇವು ಬೃಹತ್ ಕೈಗಾರಿಕೆಗಳು.

ಒಂದು ಕೈಗಾರಿಕೆಯ ಉಪಉತ್ಪನ್ನಗಳು ಇನ್ನೊಂದು ಕೈಗಾರಿಕೆಗೆ ಮಾರ್ಗವಾಗಬಹುದು. ಒಂದು ಕೈಗಾರಿಕೆಯ ಗುರಿ ಒಂದು ಮುಖ್ಯ ಉತ್ಪನ್ನ. ಆದರೆ ಅದರ ಉಪಉತ್ಪನ್ನಗಳು ಅಥವಾ ವ್ಯರ್ಥ ಪದಾರ್ಥಗಳು ಇನ್ನೊಂದು ಉದ್ಯಮದಲ್ಲಿ ಪ್ರಯೋಜನಕ್ಕೆ ಬರಬಹುದು, ಸಕ್ಕರೆ ಕಾರ ಖಾನೆಯಲ್ಲಿ ಕಬ್ಬಿನ ಹಿಪ್ಪೆ ಮತ್ತು ಕಾಕಂಬಿ ಉಪಉತ್ಪನ್ನಗಳು. ಸಾರಾಯಿ ಹುಳಿಯುವುದರಲ್ಲಿ ಕಾಕಂಬಿ ಪ್ರಯೋಜನವಾಗುತ್ತದೆ. ಕಬ್ಬಿನ ಹಿಪ್ಪೆಯನ್ನು ಕಾಗದದ ಉತ್ಪಾದನೆಯಲ್ಲಿ ಬಳಸಬಹುದು. ಆದುದರಿಂದ ಸಕ್ಕರೆಯ ಕಾರಖಾನೆಯ ಬಳಿ ಸಾರಾಯಿಭಟ್ಟಿಯ ಉದ್ಯಮವೂ (ಇತರ ಸೌಲಭ್ಯಗಳು ಇದ್ದರೆ) ಕಾಗದದ ಕಾರಖಾನೆಯೂ ಪ್ರಾರಂಭವಾಗಬಹುದು.

ಶಾಂತಿಕಾಲದಲ್ಲಾಗಲೀ, ಯುದ್ಧಕಾಲದಲ್ಲಾಗಲೀ, ಕೈಗಾರಿಕೆಗಳ ಮಹತ್ವ ಹೆಚ್ಚು. ಕಾರಖಾನೆಗಳು ದೇಶದ ನೈಸರ್ಗಿಕ ಸಂಪನ್ಮೂಲಗಳನ್ನು ಬಳಸಿಕೊಂಡು ಹಲವು ಬಗೆಯ ಸರಕುಗಳನ್ನು ಉತ್ಪಾದಿಸಿ, ಸಂಪತ್ತನ್ನು ಹೆಚ್ಚಿಸುತ್ತವೆ. ಸಾವಿರಾರು ಜನರಿಗೆ–ವಿಶೇಷ ಶಿಕ್ಷಣ ಪಡೆದವರಿಗೆ, ನಿರುದ್ಯೋಗಿಗಳಿಗೆ ಉದ್ಯೋಗವನ್ನು ಕಲ್ಪಿಸಿಕೊಡುತ್ತವೆ. ಆಹಾರ, ಬಟ್ಟೆ, ವಸತಿ ಇವು ಪ್ರತಿ ಮಾನವನ ಮುಖ್ಯ ಬೇಡಿಕೆಗಳು. ಲಕ್ಷಾಂತರ ಜನರ ಈ ಬೇಡಿಕೆಗಳನ್ನು ನೈಸರ್ಗಿಕ ಸಂಪನ್ಮೂಲಗಳನ್ನು ಬಳಸಿ ಕಾರಖಾನೆಗಳೇ ಪೂರೈಸಬಲ್ಲವು. ಈ ಕಾರಖಾನೆಗಳಿಗೆ ಕಚ್ಚಾಸಾಮಗ್ರಿಗಳನ್ನು ಒದಗಿಸಲು ಬೇಕಾದ ಸಾಧನಗಳ ತಯಾರಿಕೆಗೆ ಕಾರಖಾನೆಗಳು ಬೇಕು. ಯಂತ್ರಗಳನ್ನು ಮಾಡಲು ಕಾರಖಾನೆಗಳು ಬೇಕು. ಉದ್ಯಮ ತಕ್ಕಷ್ಟು ಪ್ರಗತಿಯಾಗದಿದ್ದ ದೇಶ ಬೇರೆ ದೇಶಗಳಿಂದ ವಸ್ತುಗಳನ್ನು ಆಮದು ಮಾಡಿಕೊಂಡು ತನ್ನ ಹಣವನ್ನು ಆ ದೇಶಗಳಿಗೆ ತೆರಬೇಕಾಗುತ್ತದೆ. ಯುದ್ಧ ಕಾಲದಲ್ಲಿ ಕೈಗಾರಿಕೆಯ ಆಧಾರವಿಲ್ಲದ ರಾಷ್ಟ್ರಕ್ಕೆ ಸೋಲು ಕಟ್ಟಿಟ್ಟ ಹಾಗೆ. ತನ್ನ ರಕ್ಷಕದಳಗಳಿಗೆ ಶಸ್ತ್ರಾಸ್ತ್ರಗಳನ್ನೂ ಆಹಾರವನ್ನೂ ಬಟ್ಟೆಯನ್ನೂ ಸಾಧನಗಳನ್ನೂ ಅಗಾಧ ಪ್ರಮಾಣದಲ್ಲಿ ದೇಶ ಒದಗಿಸದಿದ್ದರೆ ಅದು ಯುದ್ಧವನ್ನು ಮುಂದುವರಿಸಲು ಸಾಧ್ಯವಿಲ್ಲ. ಆದುದರಿಂದಲೇ ಆಧುನಿಕ ಯುದ್ಧಗಳಲ್ಲಿ ಶತ್ರುಗಳು ಕೈಗಾರಿಕಾ ಕೇಂದ್ರಗಳ ಮೇಲೆ ದಾಳಿ [illegible]. ಯುದ್ಧಕಾಲದಲ್ಲಿ ಕೈಗಾರಿಕಾ ಕ್ಷೇತ್ರ ಅಸ್ತವ್ಯಸ್ತವಾಗುತ್ತದೆ. ಅಗತ್ಯವಾದ ಕಚ್ಚಾ ವಸ್ತುಗಳ ಸರಬರಾಜು ಸುಲಭವಾಗಿ ಮತ್ತು ಕ್ಷಿಪ್ರವಾಗಿ [illegible] ಹೋಗುವುದು ಒಂದು ಕಾರಣ. [illegible] ಸೈನಿಕ [illegible]. ತುರ್ತು ಪರಿಸ್ಥಿತಿಯಲ್ಲಿ ಯುದ್ಧಕ್ಕೆ ನೆರವಾಗುವ ಕೈಗಾರಿಕೆಗಳಿಗೆ ಮಾತ್ರ ಪ್ರಾಮುಖ್ಯ ನೀಡಿ ಇತರ ಕೈಗಾರಿಕೆಗಳ ತಜ್ಞರನ್ನು ಮತ್ತು ಸಾಧನಗಳನ್ನು [illegible]. ಸರಬರಾಜು ಮತ್ತು [illegible] ಅಸ್ತವ್ಯಸ್ತವಾಗಲು [illegible] ಯಾವ ಯೋಜನೆ ಮತ್ತು ನಿಯಂತ್ರಣಗಳಿಗೂ ಕೈಗಾರಿಕೆಗಳು ಒಳಪಡದೆ ಹೋಗುವುದರಿಂದಲೂ ಆರ್ಥಿಕತೆ ಯುದ್ಧಕಾಲದಲ್ಲಿ ಕುಸಿಯುತ್ತದೆ.

ಕೈಗಾರಿಕೆ ದೇಶದ ಏಳಿಗೆಯನ್ನೂ ಅವನತಿಯನ್ನೂ ನಿರ್ಧರಿಸುತ್ತದೆ.

ನೋಡಿ : ಕೈಗಾರಿಕಾ ಕ್ರಾಂತಿ ; ಖಾಸಗಿ ವಲಯ; ಜೀವನಮಟ್ಟ ; ನೈಸರ್ಗಿಕ ಸಂಪನ್ಮೂಲ ; ಬಂಡವಾಳ : ಯಂತ್ರ ; ಯೋಜನೆ ; ರಾಷ್ಟ್ರೀಕರಣ; ಸರಕಾರಿ ವಲಯ; ಸರಬರಾಜು-ಬೇಡಿಕೆ.

## ಕೈರೊ

ಒಂದು ಕಡೆಗೆ ಪ್ರಪಂಚದ ಪ್ರಸಿದ್ಧ ನದಿಗಳಲ್ಲೊಂದಾದ ನೈಲ್, ಮತ್ತೊಂದು ಕಡೆಗೆ ಏನೂ ಬೆಳೆಯದ ಲಿಬಿಯ ಮರುಭೂಮಿ, ಮಧ್ಯೆ ಹಳತು-ಹೊಸತು ಸಂಧಿಸುವ ನಗರ. ಇಲ್ಲಿ ಪೂರ್ವ-ಪಶ್ಚಿಮಗಳೂ ಬೆರೆಯುತ್ತವೆ.

ಈಜಿಪ್ಟಿನ ರಾಜಧಾನಿ ಕೈರೊ; ಐಕ್ಯ ಅರಬ್ ಗಣರಾಜ್ಯದ ರಾಜಧಾನಿಯೂ ಇದೇ. ವಿಸ್ತೀರ್ಣ 217 ಚ.ಕಿ.ಮಿ. ಪ್ರಜಾಸಂಖ್ಯೆ ಸುಮಾರು 30 ಲಕ್ಷ.

ಕೈರೊ ಸಂಸ್ಕೃತಿ, ಕಲೆಗಳಿಗೆ ಬೀಡು. ಗ್ರಂಥಾಲಯ, ವಸ್ತುಸಂಗ್ರಹಾಲಯಗಳ ನಗರ. ಸ್ಫಿಂಕ್ಸ್ ವಿಗ್ರಹ ಕೈರೋದ ಸಮೀಪದಲ್ಲಿದೆ. ಅರ್ಧ ದೇಹ ಹೆಂಗಸಿನದು, ಅರ್ಧ ದೇಹ ಸಿಂಹದ್ದು. ವಿಚಿತ್ರ ಪ್ರಾಣಿ ಇದು. ಗ್ರೀಕ್ ಪೌರಾಣಿಕ ಕಥೆಗಳಲ್ಲಿ ಇದರ ಹೆಸರಿದೆ. ಪುರಾತನ ಪ್ರಪಂಚದ ಏಳು ಅದ್ಭುತಗಳಲ್ಲಿ ಒಂದಾದ ಪಿರಮಿಡ್ಡುಗಳೂ ಇಲ್ಲಿವೆ.

ಹಳೆಯ ನಗರದಲ್ಲಿ ಸುಮಾರು 365 ಪ್ರಾಚೀನ ಮಸೀದಿಗಳಿವೆ. ಇವುಗಳ ಸುತ್ತ ಹೊಸ ನಗರ ಬೆಳೆದಿದೆ. ಕೈರೊ ಹಿತ್ತಾಳೆಯ ಕೆತ್ತನೆ ಕೆಲಸಗಳಿಗೆ ಹೆಸರುವಾಸಿಯಾಗಿದೆ.

ಈ ನಗರದಲ್ಲಿ ಇತಿಹಾಸ ಪ್ರಸಿದ್ಧವಾದ ಹಲವು ಕಟ್ಟಡಗಳಿವೆ.

ಇಬ್ರಾಹಿಂ ಆಗಾನ ಮಸೀದಿಯ ನೀಲಿ ಹೆಂಚು, ಸುಲ್ತಾನ್ ಹಸನನ ಮಸೀದಿಯ ಅದ್ಭುತ ಬಾಗಿಲು, ಕೇಯಟ್ ಕೊಲ್ಲಿಯ ಮನೋಹರ ಸ್ತಂಭ ಗೋಪುರ, ವಸ್ತುಸಂಗ್ರಹಾಲಯಗಳಲ್ಲಿರುವ ಅಮೂಲ್ಯ ಕಲಾ ವಸ್ತುಗಳು ಪ್ರವಾಸಿಗರನ್ನು ಮರುಳುಗೊಳಿಸುತ್ತವೆ. ಮಧ್ಯ ಪ್ರಾಚ್ಯದ ಪ್ರಮುಖ ವ್ಯಾಪಾರ ಕೇಂದ್ರ ಈ ನಗರ.

ಕೈರೊ ನಗರದ ಒಂದು ಮುಖ್ಯ ಸ್ಥಳ



ಕೈರೊದಲ್ಲಿ ನಾಲ್ಕು ವಿಶ್ವವಿದ್ಯಾನಿಲಯಗಳಿದ್ದು, ಅವುಗಳಲ್ಲಿ ಅಲ್-ಅರ್ಝಾರ್ ಪ್ರಖ್ಯಾತ ವಿಶ್ವವಿದ್ಯಾನಿಲಯ. ಇದು ಹತ್ತನೆಯ ಶತಮಾನದ ದಲ್ಲಿಯೇ ಸ್ಥಾಪಿತವಾದ, ಪ್ರಪಂಚದ ಅತ್ಯಂತ ಪ್ರಾಚೀನ ವಿಶ್ವವಿದ್ಯಾನಿಲಯ ಗಳಲ್ಲೊಂದು.

ನೋಡಿ : ಈಜಿಪ್ಟ್ ; ಪಿರಮಿಡ್ಡು

## ಕ್ಲೈವ್, ರಾಬರ್ಟ್

1745ನೆಯ ಇಸವಿ. ಈಸ್ಟ್ ಇಂಡಿಯಾ ಕಂಪೆನಿಯ ಇಪ್ಪತ್ತು ವರ್ಷ ವಯಸ್ಸಿನ ಗುಮಾಸ್ತೆಯೊಬ್ಬ ಜೀವನದಲ್ಲಿ ಬೇಸತ್ತು ಆತ್ಮಹತ್ಯೆ ಮಾಡಿಕೊಳ್ಳಲು ಗುಂಡು ಹಾರಿಸಿಕೊಂಡ. ಗುಂಡು ತಗಲಲಿಲ್ಲ. ದೇವರು ಯಾವುದೋ ಮಹತ್ಕಾರ್ಯಕ್ಕಾಗಿ ತನ್ನನ್ನು ಉಳಿಸಿರಬೇಕೆಂದು ಭಾವಿಸಿದ. ಅವನೇ ಮುಂದೆ ಭಾರತದಲ್ಲಿ ಬ್ರಿಟಿಷ್ ಸಾಮ್ರಾಜ್ಯಕ್ಕೆ ಅಸ್ತಿಭಾರ ಹಾಕಿದ ರಾಬರ್ಟ್ ಕ್ಲೈವ್.

ಭಾರತದಲ್ಲಿ ಬ್ರಿಟಿಷ್ ಸಾಮ್ರಾಜ್ಯವನ್ನು ಸ್ಥಾಪಿಸಿದ ಸಾಧನೆ ರಾಬರ್ಟ್ ಕ್ಲೈವನದು. ಕಡಲೂರಿನ ದಾಳಿಯಲ್ಲಿ ಅವನು ತೋರಿದ ಸಾಹಸ, ಆರ್ಕಾಟ್ ಮುತ್ತಿಗೆಯಲ್ಲಿನ ಅವನ ಶೌರ್ಯ ಮತ್ತು ಪ್ಲಾಸಿ ಕದನದಲ್ಲಿ ಅವನ ರಾಜಕೀಯ ಚಾಣಾಕ್ಷತೆ ಅವನನ್ನು ಅಸಾಧಾರಣ ವ್ಯಕ್ತಿ ಎನ್ನಿಸಿದುವು.

1725ರಲ್ಲಿ ಹುಟ್ಟಿದ ಕ್ಲೈವ್ ಬಾಲ್ಯವನ್ನು ಇಂಗ್ಲೆಂಡಿನ ಷಾರ್ಪ್‌ಷೈರ್ ಎಂಬಲ್ಲಿ ಕಳೆದ. ಬಾಲಕನಾಗಿದ್ದಾಗ ಬಹಳ ತುಂಟ. ಸ್ವಭಾವ ದುಡುಕಿನದು. ಶಾಲೆಯ ಅಧಿಕಾರಿಗಳು ಇವನ ಕೀಟಲೆಯನ್ನು ತಡೆಯಲಾರದೆ ಓಡಿಸಿ ಬಿಡುತ್ತಿದ್ದರು. ಯಾರಿಗೂ ಬಗ್ಗದಿದ್ದ ಈ ಅಪ್ರಯೋಜಕ ಹುಡುಗ ತಂದೆತಾಯಿಗಳಿಗೆ ಬಿಡಿಸಲಾರದ ಸಮಸ್ಯೆಯಾದ. ಕಡೆಗೆ ಈಸ್ಟ್ ಇಂಡಿಯಾ ಕಂಪೆನಿಯಲ್ಲಿ ಒಂದು ಚಿಕ್ಕ ಗುಮಾಸ್ತನ ಕೆಲಸವನ್ನು ದೊರಕಿಸಿ ಕೊಟ್ಟು, ಅವನನ್ನು 1744ರಲ್ಲಿ ಭಾರತ ದೇಶಕ್ಕೆ ಕಳುಹಿಸಿ ಕ್ಲೈವನ ತಂದೆ ಸಮಾಧಾನದ ನಿಟ್ಟುಸಿರನ್ನು ಬಿಟ್ಟ.

ಭಾರತದಲ್ಲಿ ಬ್ರಿಟಿಷ್ ಸಾಮ್ರಾಜ್ಯದ ಸ್ಥಾಪಕ–ಕ್ಲೈವ್



ಭಾರತಕ್ಕೆ ಬಂದ ಬಳಿಕ ಕೆಲವು ಕಾಲ ಕ್ಲೈವನ ಜೀವನ ಬೇಸರ ತರಿಸುವಂತಿತ್ತು. ಹಣದ ಅಭಾವ, ಸಾಲದ ಹೊರೆ, ಗೆಳೆಯರಿಲ್ಲದ ಏಕಾಕಿತನ, ಕೆಲಸದ ನೀರಸತೆ ಇವುಗಳಿಂದ ಜಿಗುಪ್ಸೆ ಹೊಂದಿಯೇ ಅವನು ಆತ್ಮಹತ್ಯೆಯ ಪ್ರಯತ್ನ ಮಾಡಿದ್ದು.

ಫ್ರೆಂಚರಿಗೂ ಇಂಗ್ಲಿಷರಿಗೂ ಭಾರತದಲ್ಲಿ ಪ್ರಾಬಲ್ಯಕ್ಕಾಗಿ ಯುದ್ಧ ನಡೆಯುತ್ತಿತ್ತು. ಫ್ರೆಂಚರು ಮದರಾಸನ್ನು ಸ್ವಾಧೀನಪಡಿಸಿಕೊಂಡರು. ಆಗ ಕ್ಲೈವ್ ಭಾರತೀಯನಂತೆ ಉಡುಪನ್ನು ಧರಿಸಿ, ಫ್ರೆಂಚರ ಕಣ್ಣಿಗೆ ಮಣ್ಣೆರಚಿ, ಕಡಲೂರಿನಲ್ಲಿದ್ದ ಇಂಗ್ಲಿಷರ ಕೋಟೆಯನ್ನು ಸೇರಿಕೊಂಡ. ಆ ಕೋಟೆಯನ್ನು ಫ್ರೆಂಚರು ಮುತ್ತಿದಾಗ ಅವನು ಸೈನಿಕನಂತೆ ಯುದ್ಧಮಾಡಿ ಸ್ವಲ್ಪ ಅನುಭವವನ್ನು ಪಡೆದ. ಅನಂತರ ಅವನಿಗೆ ಸೈನ್ಯದಲ್ಲಿ ಒಂದು ಸಣ್ಣ ಹುದ್ದೆ ದೊರಕಿತು. ಇಂಗ್ಲಿಷರು ಪುದುಚೇರಿಯನ್ನು ಮುತ್ತಿದಾಗಲೂ 1751ರ ಆರ್ಕಾಟು ಮುತ್ತಿಗೆಯಲ್ಲೂ ಕ್ಲೈವನ ಧೈರ್ಯ, ಕೌಶಲ ಮತ್ತು ಜಾಣ್ಮೆ ಪ್ರಕಾಶಕ್ಕೆ ಬಂದುವು. ಕ್ಲೈವನ ಸೈನ್ಯದಲ್ಲಿದ್ದವರು 500 ಜನರು ಮಾತ್ರ. ಆದರೂ 7,000 ಸೈನಿಕರಿದ್ದ ಶತ್ರು ಸೈನ್ಯವನ್ನು ಸುಮಾರು 50 ದಿನಗಳ ಕಾಲ ತಡೆಹಿಡಿದು ವಿಜಯ ಗಳಿಸಿದ.

1753ರಲ್ಲಿ ಕ್ಲೈವ್ ಇಂಗ್ಲೆಂಡಿಗೆ ಹಿಂದಿರುಗಿದ. ಅಲ್ಲಿ ಅವನಿಗೆ ರಾಜನೂ ಈಸ್ಟ್ ಇಂಡಿಯಾ ಕಂಪೆನಿಯ ಆಡಳಿತ ಮಂಡಳಿಯ ಸದಸ್ಯರೂ ಅಭೂತಪೂರ್ವ ಸ್ವಾಗತ ನೀಡಿದರು. ಆರ್ಕಾಟಿನ ಮುತ್ತಿಗೆಯಲ್ಲಿ ಅವನು ತೋರಿದ ಶೌರ್ಯ ಸಾಹಸಗಳಿಗೆ ಬಹುಮಾನವಾಗಿ ವಜ್ರಖಚಿತ ಸೊಂಟಪಟ್ಟಿಯಿಂದ ಕೂಡಿದ ಖಡ್ಗವನ್ನು ಕೊಟ್ಟರು.

ಕ್ಲೈವ್ ಭಾರತಕ್ಕೆ 1755ರಲ್ಲಿ ಹಿಂದಿರುಗಿ ಕಡಲೂರಿನ ಕೋಟೆಯ ಗವರ್ನರ್ ಆದ. ಈ ಸಮಯದಲ್ಲಿ ಬಂಗಾಳದ ನವಾಬ ಇಂಗ್ಲಿಷರಿಗೆ ಕಿರುಕುಳವನ್ನು ಕೊಡುತ್ತಿದ್ದ. ಕ್ಲೈವ್ ತಕ್ಕ ಸಮಯದಲ್ಲಿ ಹಿಂದಿರುಗಿದಂತಾಯಿತು. ಕದನದಲ್ಲಿ 1757 ಜೂನ್ 23ರಂದು ಕ್ಲೈವ್ 38,000 ಜನರ ಸೈನ್ಯವನ್ನು ಕೇವಲ 300 ಜನರ ಸಹಾಯದಿಂದ ಸೋಲಿಸಿ ಅಪ್ರತಿಮ ಜಯ ಗಳಿಸಿದ. ಬಂಗಾಳದಲ್ಲೆಲ್ಲ ಬ್ರಿಟಿಷ್ ಅಧಿಕಾರವನ್ನು ಸ್ಥಾಪಿಸಿದ. 1760ರಲ್ಲಿ ಇಂಗ್ಲೆಂಡಿಗೆ ಹಿಂದಿರುಗಿದ. ಅವನಿಗೆ ವಿಶೇಷ ಸನ್ಮಾನವೂ ಲಾರ್ಡ್ ಪದವಿಯೂ ಅಲ್ಲಿ ದೊರಕಿದುವು.

ಐದು ವರ್ಷಗಳ ಅನಂತರ ಕ್ಲೈವ್ ಬಂಗಾಳದ ಗವರ್ನರಾಗಿ ಮತ್ತೆ ಭಾರತಕ್ಕೆ ಬಂದ. ಭಾರತದ ಮತ್ತಷ್ಟು ಭಾಗ ಬ್ರಿಟಿಷ್ ಆಡಳಿತದ ಅಧೀನವಾಗುವಂತೆ ಮಾಡಿದ.

1767ರಲ್ಲಿ ಇಂಗ್ಲೆಂಡಿಗೆ ಹಿಂದಿರುಗಿದ. ಆದರೆ ಆ ವೇಳೆಗೆ ಇಂಗ್ಲೆಂಡಿನಲ್ಲಿ ಅವನ ಶತ್ರುಗಳು ಅವನು ಸುಲಿಗೆಗಾರನೆಂದೂ ಲಂಚ

ಕೋರನೆಂದೂ ಆಪಾದಿಸಿದ್ದರು. ಪಾರ್ಲಿಮೆಂಟ್ ಅದನ್ನು ನಿರಾಕರಿಸಿ ಕ್ಲೈವ್ ತನ್ನ ದೇಶಕ್ಕೆ ಅಮೂಲ್ಯವಾದ ಸೇವೆ ಸಲ್ಲಿಸಿದವನು ಎಂದು ತೀರ್ಮಾನಿಸಿತು. ಆದರೂ ಜನರ ಟೀಕೆಗಳನ್ನು ಕೇಳಿ ನೊಂದ ಕ್ಲೈವ್ ಎರಡು ವರ್ಷಗಳ ಅನಂತರ ಆತ್ಮಹತ್ಯೆ ಮಾಡಿಕೊಂಡ.

ಭಾರತದಲ್ಲಿ ತಮ್ಮ ಸಾಮ್ರಾಜ್ಯದ ಸ್ಥಾಪಕನೆಂದು ಇಂಗ್ಲೆಂಡಿನ ಜನತೆಯೂ ತಮ್ಮ ರಾಷ್ಟ್ರದ ದಾಸ್ಯ ಜೀವನಕ್ಕೆ ಅಡಿಪಾಯ ಹಾಕಿದವನೆಂದು ಭಾರತೀಯರೂ ಕ್ಲೈವನನ್ನು ಪರಿಗಣಿಸುತ್ತಾರೆ.

ನೋಡಿ : ಈಸ್ಟ್ ಇಂಡಿಯಾ ಕಂಪೆನಿಗಳು

## ಕೊರಿಯ

'ಬೆಳಗಿನ ಶಾಂತಿ !' ಎಂಥ ಸುಂದರ ಬಣ್ಣನೆ ಒಂದು ನಾಡಿಗೆ ! ಕೊರಿಯದ ಜನ ತಮ್ಮ ನಾಡನ್ನು ಕರೆಯುವುದು 'ಚೋಸೆನ್' (ಬೆಳಗಿನ ಶಾಂತಿ) ಎಂದು.

ಆದರೆ ಯುದ್ಧಗಳಿಂದ ಮತ್ತು ಮಹಾ ರಾಷ್ಟ್ರಗಳ ಬಣಗಳ ಕಲಹಗಳಿಂದ ಬಹಳ ಬಳಲಿದ ನಾಡು ಕೊರಿಯ. ಇಂದು ದೇಶ ಇಬ್ಭಾಗವಾಗಿ ಉತ್ತರದಲ್ಲಿ ಕಮ್ಯೂನಿಸ್ಟ್ ಅಧೀನದ ಜನತೆಯ ಪ್ರಜಾಗಣರಾಜ್ಯ ಮತ್ತು ದಕ್ಷಿಣದಲ್ಲಿ ಅಮೆರಿಕದ ಆಶ್ರಯದಲ್ಲಿ ಪ್ರಜಾಸತ್ತಾತ್ಮಕ ಸರಕಾರ ಅಸ್ತಿತ್ವದಲ್ಲಿವೆ.

ಹತ್ತರಿಂದ ಹದಿನಾಲ್ಕನೆಯ ಶತಮಾನದವರೆಗೆ ಕೋರ್ಯೋ ವಂಶದವರ ಆಡಳಿತದಲ್ಲಿದ್ದ ದೇಶಕ್ಕೆ ಕೊರಿಯ ಎಂದು ಹೆಸರಾಯಿತು.

ಹಳದಿ ಸಮುದ್ರ ಮತ್ತು ಜಪಾನ್ ಸಮುದ್ರಗಳ ಮಧ್ಯೆ ಉತ್ತರ ಚೀನಕ್ಕೆ ಸೇರಿದಂತಿರುವ ಪರ್ಯಾಯದ್ವೀಪ ಕೊರಿಯ. ದೇಶದ ಬಹುಭಾಗ ಪರ್ವತಮಯ. ಐದನೆಯ ಒಂದು ಭಾಗ ಮಾತ್ರ ಕೃಷಿಯೋಗ್ಯ.

ಕೊರಿಯದ ಹವಾಗುಣ ಅತಿರೇಕದ್ದು. ಚಳಿಗಾಲದಲ್ಲಿ ಕೊರೆತ ತಡೆಯುವುದಕ್ಕೆ ಕಷ್ಟವಾಗುವಂತಿರುತ್ತದೆ. ಬೇಸಿಗೆ ಕಾಲದಲ್ಲಿ ಉಷ್ಣಾಂಶ 80° ಫಾ. ವರೆಗೂ ಏರುವುದುಂಟು. ಆಗ ಶಾಂತ ಸಾಗರದ ಮೇಲಿಂದ ಬೀಸುವ ಮಾರುತ ಮಳೆ ಉಂಟುಮಾಡುತ್ತದೆ.

ಚಿನ್ನ, ತಾಮ್ರ, ಕಲ್ಲಿದ್ದಲು, ಕಬ್ಬಿಣದ ಅದಿರು, ಸೀಸ, ಟಂಗ್‌ಸ್ಟನ್, ಗ್ರಾಫೈಟ್ ಮುಂತಾದ ಖನಿಜಗಳು ದೊರೆಯುತ್ತವೆ.

ಭತ್ತ, ಬಾರ್ಲಿ, ಗೋಧಿ, ಹತ್ತಿ, ಹೊಗೆಸೊಪ್ಪು, ಮುಸುಕಿನ ಜೋಳ. ಸೋಯಾ ಅವರೆ, ಹಣ್ಣು, ತರಕಾರಿಗಳನ್ನು ಬೆಳೆಯುತ್ತಾರೆ.

ಮೀನು ಹೇರಳವಾಗಿ ದೊರಕುತ್ತದೆ. ಅರಣ್ಯ ಸಂಪತ್ತು ಸಮೃದ್ಧ. ಕಬ್ಬಿಣ ಮತ್ತು ಉಕ್ಕು, ರಾಸಾಯನಿಕ ಪದಾರ್ಥಗಳು, ಸಿಮೆಂಟ್, ಬಟ್ಟೆ ಗಿರಣಿ, ಆಹಾರ ಸಂಸ್ಕರಣ, ಗಾಜು, ಡೀಸೆಲ್ ಯಂತ್ರಗಳು, ರಬ್ಬರ್, ಟೈರು, ಕಾಗದ ಮೊದಲಾದ ಉದ್ಯಮಗಳಿವೆ. ದಕ್ಷಿಣ ಕೊರಿಯಕ್ಕಿಂತ ಉತ್ತರ ಕೊರಿಯದಲ್ಲಿ ಕೈಗಾರಿಕೆ ಹೆಚ್ಚಾಗಿ ಬೆಳೆದಿದೆ.

ಕೊರಿಯದ ಜನಸಂಖ್ಯೆ ಸುಮಾರು 3,90,00,000. ಜಪಾನಿಗೆ ಹೋಗಿ ಬರುವ ಜನ ಕೊರಿಯ ಮೂಲಕವೇ ಹಾದುಹೋಗುವುದರಿಂದ ಎಷ್ಟೊ ನಾಗರಿಕತೆಗಳ ಪ್ರಭಾವವನ್ನು ಕಾಣಬಹುದು. ಕ್ರೈಸ್ತ, ಬೌದ್ಧ, ಕನ್‌ಫ್ಯೂಷಿಯಸ್ ಧರ್ಮಗಳು ಮತ್ತು ಕೊರಿಯದ ವಿಶಿಷ್ಟ ಧರ್ಮವಾದ ಚೋಲಡೋಕ್ಯೊ ಧರ್ಮ ಇಲ್ಲಿವೆ. ಕೊರಿಯದ ಭಾಷೆ ಚೀನದ ಭಾಷೆಯನ್ನು ಹೋಲುತ್ತದೆ. ಆದರೆ ಲಿಪಿ ಮಾತ್ರ ಬೇರೆ. ಜನ ಇನ್ನೂ ಹಿಂದುಳಿದಿದ್ದಾರೆ. ವ್ಯವಸಾಯದ ವಿಧಾನಗಳು ಮತ್ತು ಉಪಕರಣಗಳು ಇನ್ನೂ ಆಧುನಿಕವಾಗಿಲ್ಲ. ಕೊರಿಯದಲ್ಲಿ ಯಾರೇ ಆಗಲಿ, ಯಾರಿಗೂ ಸೇರದಿದ್ದ ಭೂಮಿಯನ್ನು ಸ್ವಾಧೀನ ಮಾಡಿಕೊಂಡು ಮೂರು ವರ್ಷ ಅಲ್ಲಿ ಬೇಸಾಯ ಮಾಡಬಹುದು.

**ಉತ್ತರ ಕೊರಿಯ**

ಖಂಡ : ಏಷ್ಯ (ದೂರ ಪ್ರಾಚ್ಯದ ಮಧ್ಯ)
ಅಕ್ಷಾಂಶ : 38° ಉ ದಿಂದ 43° 01′ ಉ
ರೇಖಾಂಶ : 124° 18′ ಪೂ ದಿಂದ 130° 39′ ಪೂ
ವಿಸ್ತೀರ್ಣ : 1.20,536 ಚ. ಕಿ. ಮಿ.
ಜನಸಂಖ್ಯೆ : ಸುಮಾರು 1,20.00.000
ರಾಜಧಾನಿ : ಪ್ಯೊಂಗ್‌ಯಾಂಗ್
ಭಾಷೆ : ಕೊರಿಯನ್
ಸರಕಾರ : ಕಮ್ಯೂನಿಸ್ಟ್ ಜನತಾ ಗಣರಾಜ್ಯ
ಬಾವುಟ : ಮಧ್ಯೆ ಅಗಲವಾದ ಕೆಂಪು ಅಡ್ಡ ಪಟ್ಟೆ ಮಧ್ಯದಲ್ಲಿ ಬಿಳಿ ವೃತ್ತದೊಳಗೆ ಕೆಂಪು ನಕ್ಷತ್ರ ಎರಡು ಕಡೆಗೂ ಬಿಳಿ ಅಂಚು ಮತ್ತು ಸ್ವಲ್ಪ ಅಗಲವಾದ ನೀಲಿ ಪಟ್ಟೆ

**ದಕ್ಷಿಣ ಕೊರಿಯ**

ಅಕ್ಷಾಂಶ : 34° 17′ ಉ ದಿಂದ 38° ಉ
ರೇಖಾಂಶ : 124° 58′ ಪೂ ದಿಂದ 129° 35′ ಪೂ
ವಿಸ್ತೀರ್ಣ : 98,430 ಚ. ಕಿ. ಮಿ.
ಜನಸಂಖ್ಯೆ : 2,70,00.000
ರಾಜಧಾನಿ : ಸಿಯೋಲ್
ಭಾಷೆ : ಕೊರಿಯನ್
ಸರಕಾರ : ಗಣರಾಜ್ಯ
ಬಾವುಟ : ಬಿಳಿ, ನಾಲ್ಕು ಮೂಲೆಯಲ್ಲೂ ಮೂರು ಗೆರೆಗಳು. ಮಧ್ಯದಲ್ಲಿ ನೀಲಿ ಕೆಂಪು ಇರುವ ವೃತ್ತ

ಉತ್ತರ ಕೊರಿಯದ ರಾಜಧಾನಿ ಪ್ಯೊಂಗ್‌ಯಾಂಗ್. ಕೊರಿಯ ಯುದ್ಧ ಕಾಲದಲ್ಲಿ ನಾಶವಾಗಿದ್ದು ಈಗ ಪುನರ್ನಿರ್ಮಿತವಾಗಿದೆ. ದಕ್ಷಿಣ ಕೊರಿಯದ ರಾಜಧಾನಿ ಸಿಯೋಲ್. ಪುರಾತನ ನಗರ. ಅದರ ಅಕ್ಕಪಕ್ಕದಲ್ಲೇ ಹೊಸ ಭವನಗಳು ಆಗಿವೆ. ಪೂಸಾನ್ ಕೈಗಾರಿಕಾ ನಗರ. ನೂರರಲ್ಲಿ ಅರವತ್ತು ಮಂದಿ ರೈತರು ಹೇಗೋ ಜೀವನ ಸಾಗಿಸುತ್ತಾರೆ. ಜೀವನಮಟ್ಟವನ್ನು ಉತ್ತಮಗೊಳಿಸುವುದು ದಕ್ಷಿಣ ಕೊರಿಯದ ದೊಡ್ಡ ಸಮಸ್ಯೆ. ಆದರೆ ಇಲ್ಲಿ ವಿದ್ಯಾಭ್ಯಾಸದಲ್ಲಿ ಆಸಕ್ತಿ ಸ್ವಜವಾಗಿದೆ. ನೂರಕ್ಕೆ 93 ಮಂದಿ ಅಕ್ಷರಸ್ಥರು. ಈ ಸಣ್ಣ ರಾಜ್ಯದಲ್ಲಿ 125 ವಿಶ್ವವಿದ್ಯಾನಿಲಯಗಳಿವೆ.

ಹಲವು ಶತಮಾನಗಳ ಕಾಲ ಕೊರಿಯ ಚೀನ ದೇಶದ ಆಳ್ವಿಕೆಗೆ ಸೇರಿತ್ತು. ಅನಂತರ ಜಪಾನಿನ ಅಧೀನವಾಯಿತು. ಎರಡನೆಯ ಜಾಗತಿಕ ಮಹಾಯುದ್ಧದಲ್ಲಿ ಜಪಾನ್ ಸೋತಾಗ ಸೋವಿಯೆತ್ ಸೈನ್ಯ ಉತ್ತರ

ಕೊರಿಯವನ್ನೂ ಅಮೆರಿಕದ ಸೈನ್ಯ ದಕ್ಷಿಣ ಕೊರಿಯವನ್ನೂ ಆಕ್ರಮಿಸಿದುವು. 1950ರಿಂದ 38° ಉತ್ತರ ಅಕ್ಷಾಂಶದ ರೇಖೆ ದಕ್ಷಿಣ ಮತ್ತು ಉತ್ತರ ಕೊರಿಯಗಳನ್ನು ವಿಭಜಿಸುವ ಗೆರೆಯಾಯಿತು.

ಉತ್ತರ ಕೊರಿಯದಲ್ಲಿ ಸರಕಾರದ ಮುಖ್ಯಾಧಿಕಾರಿ ಪ್ರಧಾನ ಮಂತ್ರಿ. ದಕ್ಷಿಣ ಕೊರಿಯದಲ್ಲಿ ರಾಷ್ಟ್ರಾಧ್ಯಕ್ಷ ಶ್ರೇಷ್ಠ ಅಧಿಕಾರಿ. ಸಿಂಗ್ಮನ್ ರೀ ಪ್ರಥಮ ಅಧ್ಯಕ್ಷ. 1960ರಲ್ಲಿ ವಿಶ್ವವಿದ್ಯಾನಿಲಯದ ವಿದ್ಯಾರ್ಥಿಗಳ ಚಳುವಳಿಯ ದೆಸೆಯಿಂದ ರೀ ತನ್ನ ಅಧಿಕಾರ ಸ್ಥಾನವನ್ನು ಬಿಟ್ಟುಕೊಡಬೇಕಾಯಿತು. 1961ರ ಒಂದು ಕ್ಷಿಪ್ರಕ್ರಾಂತಿಯಲ್ಲಿ ಸೈನ್ಯದ ಅಧಿಕಾರಿಗಳು ಆಡಳಿತ ವಹಿಸಿಕೊಂಡರು.

ಯುದ್ಧದ ಕಷ್ಟ ಬಂದರೂ ಕೊರಿಯನ್ನರು ಜೀವನದಲ್ಲಿ ಸಂತೋಷವನ್ನು ಹುಡುಕುತ್ತಾರೆ. ಈಗಲೂ ಮನೋರಂಜನೆಗಾಗಿ ಅನೇಕ ಜನ ಬಿಲ್ಲು ಬಾಣದ ವಿದ್ಯೆಯನ್ನು ಕಲಿಯುತ್ತಾರೆ.

ಕೊರಿಯದಲ್ಲಿ ಬುಗುರಿ ಆಡಿಸಿದರೆ ಗಂಟೆಗಟ್ಟಲೆ ಸುತ್ತುತ್ತದೆ. ಅಂಥ ಬುಗುರಿಗಳನ್ನು ಮಾಡುತ್ತಾರೆ. ಮರದ ಹಿಡಿಯಿರುವ ದಪ್ಪ ದಾರವೇ ಅದಕ್ಕೆ ಚಾಟಿ.

## ಕೊಲಂಬಸ್, ಕ್ರಿಸ್ಟಫರ್

ಐದುನೂರು ವರ್ಷಗಳಿಗೆ ಹಿಂದೆ ಅಮೆರಿಕ ಭೂಖಂಡದ ಪರಿಚಯವೇ ಹೊರಗಿನ ಜಗತ್ತಿಗೆ ಇರಲಿಲ್ಲ ! ಈ 'ಹೊಸಜಗತ್ತ'ನ್ನು ಕಂಡುಹಿಡಿದವನು ಸಾಹಸಿ ನಾವಿಕ ಕ್ರಿಸ್ಟಫರ್ ಕೊಲಂಬಸ್.

ಕೊಲಂಬಸ್ ಜನಿಸಿದ ದಿನಾಂಕ ನಿಶ್ಚಿತವಾಗಿ ತಿಳಿದಿಲ್ಲ ; 1446ರಲ್ಲಿ ಅಥವಾ 1451ರಲ್ಲಿ ಜನಿಸಿರಬೇಕೆಂಬ ಹೇಳಿಕೆಯಿದೆ. ಈತ ಹುಟ್ಟಿದ್ದು ಇಟಲಿಯ ಜಿನೋಅ ಪಟ್ಟಣದಲ್ಲಿ. ಚಿಕ್ಕಂದಿನಿಂದಲೂ ಸಮುದ್ರಯಾನವೆಂದರೆ ಇವನಿಗೆ ಒಂದು ಬಗೆಯ ಹುಚ್ಚು. ನಾವಿಕನಾಗಬೇಕು ಎನ್ನುವುದು ಅವನ ಮಹತ್ವಾಕಾಂಕ್ಷೆ.

ಜಿನೋಅ ಆ ಕಾಲದಲ್ಲಿ ಯುರೋಪಿನ ಅತಿ ಶ್ರೇಷ್ಠ ಬಂದರಾಗಿತ್ತು ; ವ್ಯಾಪಾರೋದ್ಯಮದ ಕೇಂದ್ರವಾಗಿದ್ದಿತು. ಅಲ್ಲಿಯ ಕಡಲಿನ ಮರಳ ದಂಡೆಯ ಮೇಲೆ ಕುಳಿತು, ನಾವಿಕರ ಸಾಹಸಮಯ ಕಥೆಗಳನ್ನು ಕೇಳುತ್ತ ಕೊಲಂಬಸ್ ಕಾಲ ಕಳೆಯುತ್ತಿದ್ದನಂತೆ.

ಯೌವನಕ್ಕೆ ಕಾಲಿಟ್ಟ ಕೊಲಂಬಸ್ ಭೂಮಧ್ಯ ಸಮುದ್ರದಲ್ಲಿ ಪೂರ್ವ ದಿಕ್ಕಿಗೆ ಯಾನಮಾಡಿ ವ್ಯಾಪಾರದ ಬಗೆಗೆ ಸಾಕಷ್ಟು ಅನುಭವ ಪಡೆದ. ಅವನ ಕಾಲದಲ್ಲಿ ಅನೇಕ ಜನರು ಭೂಮಿ ಚಪ್ಪಟೆಯಾಗಿದೆ ಎಂದು ನಂಬಿದ್ದರು. ಆದರೆ ಕೊಲಂಬಸ್ ಮಾತ್ರ ಭೂಮಿ ಗುಂಡಗಿದೆ ಎಂದು ಭಾವಿಸಿದ್ದ. ಹಾಗೆ ಗುಂಡಗಿರುವುದರಿಂದ ಪಶ್ಚಿಮ ದಿಕ್ಕಿನಲ್ಲಿ ಸ ಮು ದ್ರ ಯಾ ನ ಮಾಡಿ ಮುಂದುವರಿದರೆ ಪೂರ್ವ ರಾಷ್ಟ್ರಗಳನ್ನು ಸೇರಬಹುದೆಂದು ಅವನು ಊಹಿಸಿದ್ದ. ಬರಿಯ ಊಹೆಯಿಂದ ಮಾತ್ರ ತೃಪ್ತನಾಗದೆ ಕೊಲಂಬಸ್ ಕಾರ್ಯನಿರತನಾದ.

ಸ್ಪೇನ್ ದೇಶದ ರಾಣಿ ಇಸಬೆಲಳ ಸಹಾಯವನ್ನು ಪಡೆದು 1492 ಆಗಸ್ಟ್ 3 ರಂದು ಸಾಂತ ಮರೈಅ, ನೀನಾ ಮತ್ತು ಪಿಂಟ ಎಂಬ ಹಡಗುಗಳನ್ನು ತೆಗೆದುಕೊಂಡು ಪ್ರಯಾಣವನ್ನು ಆರಂಭಿಸಿದ. ಎಂಬತ್ತೆಂಟು ನಾವಿಕರಿದ್ದ ಆ ಮೂರು ಹಡಗುಗಳು ಅಟ್ಲಾಂಟಿಕ್ ಸಾಗರದಲ್ಲಿ ಪಶ್ಚಿಮಾಭಿಮುಖವಾಗಿ ಹೊರಟುವು. ಎಷ್ಟು ದಿನಗಳು ಪ್ರಯಾಣ ಮಾಡಿದರೂ ಆ



'ಹೊಸ ಜಗತ್ತ'ನ್ನು ಕಂಡುಹಿಡಿದ ಕೊಲಂಬಸ್

ಅಪಾರ ಜಲರಾಶಿಗೆ ಸೀಮೆಯೇ ಇದ್ದಂತೆ ತೋರಲಿಲ್ಲ. ಭೂಮಿಯ ಸುಳಿವೇ ಇಲ್ಲ. ಹೊರಡುವಾಗ ಅತ್ಯುತ್ಸಾಹದಿಂದ ಇದ್ದ ಸಹನಾವಿಕರು ಈಗ ಅಳುಕಲಾರಂಭಿಸಿದರು. ಕೊಲಂಬಸ್ ಬಹಳ ಧೈರ್ಯಶಾಲಿ. ಹಾಗೇ ಬಹಳ ಬುದ್ಧಿವಂತನೂ ಹೌದು. ಅವನು ತನ್ನ ಸಂಗಡಿಗರಿಗೆ ಹಡಗು ಇರುವ ಜಾಗದಿಂದ ತಾಯಿನಾಡಿಗೆ ಇರುವ ನಿಜವಾದ ದೂರವನ್ನು ತಿಳಿಸದೆ ಕಡಮೆಮಾಡಿ ಹೇಳುತ್ತಿದ್ದ. ಕಡೆಗೊಮ್ಮೆ ಬೇಸತ್ತ ನಾವಿಕರು ದಂಗೆ ಎದ್ದರು. ತನ್ನವರು ಎಂಬವರು ಯಾರೂ ಇಲ್ಲ. ಆದರೆ ಸಮಯಸ್ಫೂರ್ತಿ, ನಂಬಿಕೆ ಮತ್ತು ಆತ್ಮವಿಶ್ವಾಸಗಳು ಇಂಥ ಪರಿಸ್ಥಿತಿಯಲ್ಲೂ ಆತ ಜಯಶೀಲನಾಗುವಂತೆ ಮಾಡಿದುವು. ದಂಗೆ ಎದ್ದಿದ್ದ ನಾವಿಕರಿಗೆ ಪರಿಸ್ಥಿತಿಯನ್ನು ವಿವರಿಸಿದ ಕೊಲಂಬಸ್ ತನ್ನ ಕೊರಳಲ್ಲಿದ್ದ ಪವಿತ್ರ ಶಿಲುಬೆಯನ್ನು ಹಿಡಿದುಕೊಂಡು. "ಇಂದಿನಿಂದ ಮೂರು ದಿನಗಳ ಒಳಗೆ ನೆಲ ಸಿಗದಿದ್ದಲ್ಲಿ ನಾವು ಪ್ರಯಾಣವನ್ನು ನಿಲ್ಲಿಸಿ ಹಿಂದಿರುಗೋಣ," ಎಂದು ಪ್ರಮಾಣಮಾಡಿದ. ಅಷ್ಟೇ ಅಲ್ಲ, ಅವರನ್ನು ಹುರಿಸುಂಬಿಸಲು, "ಯಾರು ಮೊದಲು ನೆಲವನ್ನು ಕಾಣುತ್ತಾರೊ ಅವರಿಗೆ ಒಂದು ವರ್ಷದ ವೇತನದ ಜೊತೆ ವಿಶೇಷ ಬಹುಮಾನವೂ ಇದೆ." ಎಂದು ಸಾರಿದ. ನಾವಿಕರು ಸಮಾಧಾನಗೊಂಡರು. ಹಡಗುಗಳು ಮುಂದೆ ಹೊರಟುವು.

ಎರಡು ದಿನಗಳು ಕಳೆದುವು. ಮೂರನೆಯ ದಿನದ ಹಗಲೂ ಮುಂದೆ ಸರಿಯಿತು. ಎಲ್ಲರಿಗೂ ಕಾತರ. ಅರ್ಧರಾತ್ರಿಯಲ್ಲೂ ಎಚ್ಚರವಾಗಿಯೇ ಇದ್ದರು. ಸುಮಾರು ರಾತ್ರಿ ಎರಡು ಗಂಟೆಯ ಸಮಯದಲ್ಲಿ ಪಿಂಟ ಹಡಗಿನ ಅನ್ವೇಷಣಕಾರ ರಾಡ್ರಿಗೋ ಡ ಟ್ರಿಯಾನ್ ಎಂಬವನಿಗೆ ಬೆಳದಿಂಗಳ ಮಬ್ಬು ಬೆಳಕಿನಲ್ಲಿ ಯಾವುದೋ ಒಂದು ಬಿಳಿಯ ಶಿಖರ ಕಂಡಂತಾಯಿತು. ಅದು ನಿಜವೋ ಎಂದು ಅನುಮಾನಿಸಿ ಮತ್ತೆ ಮತ್ತೆ ನೋಡಿದಾಗ ನಿಜವೆಂದು ತಿಳಿದು ಹುಚ್ಚು ಹಿಡಿದವನಂತೆ "ನೆಲ!... ನೆಲ!" ಎಂದು ಕೂಗಿಕೊಳ್ಳಲಾರಂಭಿಸಿದ. ಇತರ ಹಡಗುಗಳಿಗೆ ಸಮಾಚಾರ ಮುಟ್ಟಿ ನಾಯಕ ನೌಕೆ ಸಾಂತ ಮರೈಅ ಮುಂದೆ ಬಂದಿತು. ಹೌದು... ಅದು ನೆಲವೇ. ಕೊನೆಗೂ, ಅಕ್ಟೋಬರ್ ಹನ್ನೆರಡರಂದು, ಕೊಲಂಬಸ್ ನೆಲವನ್ನು ಕಂಡ. ಹುಟ್ಟಿದಂದಿನಿಂದ ನೆಲವನ್ನೇ ಕಾಣದಿದ್ದವರಂತೆ ಅವನ ನಾವಿಕರು ಕುಣಿದು ಕುಪ್ಪಳಿಸಿದರು. ಕೈಯಲ್ಲಿ ಸ್ಪೇನ್ ರಾಷ್ಟ್ರಧ್ವಜವನ್ನು ಹಿಡಿದಿದ್ದ ಕೊಲಂಬಸ್ ಸಂತೋಷದಿಂದ ಮೂಕನಾಗಿದ್ದ.

ಇಷ್ಟಾದರೂ ಕೊಲಂಬಸನಿಗೆ ತನ್ನದು ಅಪೂರ್ವ ಸಾಧನೆ ಎಂಬುದರ ಅರಿವೇ ಇರಲಿಲ್ಲ. ಅವನು ಕಾಣಬಯಸಿದ್ದು ಇಂಡಿಯಾವನ್ನು. ತಾನು ಕಂಡ ನೆಲ ಇಂಡಿಯ ಇರಬೇಕೆಂದು ಅದಕ್ಕೆ 'ಇಂಡೀಸ್' ಎಂದು ನಾಮಕರಣ ಮಾಡಿದ. ವಾಸ್ತವವಾಗಿ ಅವನು ಸೇರಿದ ನೆಲ ಬಹಾಮಾ ದ್ವೀಪಗಳ ಹೊರಭಾಗದ ಒಂದು ಸಣ್ಣ ದ್ವೀಪ, ವಾಟ್‌ಲಿಂಗ್ ಎಂಬುದು. ಅಮೆರಿಕದ ಆ ಭೂಮಿಯಲ್ಲಿ ಆಗ ಇದ್ದವರು ಮೂಲನಿವಾಸಿಗಳು ಮಾತ್ರ. ಅವರನ್ನು ಇಂಡಿಯನರೆಂದು ಕರೆದ; ಈಗ ಅವರನ್ನು ರೆಡ್ ಇಂಡಿಯನರೆಂದು ಕರೆಯುತ್ತಾರೆ. ಅಲ್ಲಿ ಕೆಲವು ದಿನ ತಂಗಿ, ಕೊಲಂಬಸ್ ಮತ್ತು ಸಂಗಡಿಗರು ಸ್ಪೇನ್‌ಗೆ ಹಿಂದಿರುಗಿದರು. ಮರಳಿಬಂದ ಸಾಹಸಿಗಳಿಗೆ ಅದ್ಭುತ ಸ್ವಾಗತವೇ ದೊರೆಯಿತು.

ಸ್ಪೇನ್ ಪ್ರಭುತ್ವದ ನೆರವನ್ನು ಪಡೆದು ಮುಂದೆ ಮೂರು ಬಾರಿ ಕೊಲಂಬಸ್ ಯಾನವನ್ನು ಕೈಗೊಂಡ. 1498ರಲ್ಲಿ ದಕ್ಷಿಣ ಅಮೆರಿಕದ ಟ್ರಿನಿಡಾಡ್ ಪಟ್ಟಣವನ್ನು ಕಂಡುಹಿಡಿದ.

ಶತ್ರುಗಳ ಕುತಂತ್ರದಿಂದ ರಾಣಿ ಇಸಬೆಲಳ ಕೋಪಕ್ಕೆ ಪಾತ್ರನಾಗಿ ಕೊಲಂಬಸ್ ಕೆಲವು ಕಾಲ ಸೆರೆಯಲ್ಲಿರಬೇಕಾಯಿತು. ರಾಣಿಯ ಆದರಕ್ಕೆ ಮತ್ತೆ ಪಾತ್ರನಾಗಿ 1502ರಲ್ಲಿ ಮತ್ತೊಮ್ಮೆ ಪ್ರಯಾಣವನ್ನು ಪ್ರಾರಂಭಿಸಿದ. ಇಪ್ಪತ್ತೊಂದು ದಿನಗಳ ಸತತ ಪ್ರಯಾಣದ ಬಳಿಕ ಹಡಗು ಹಿಪ್ಪಾನಿಯೋಲ ಎಂಬ ಮಧ್ಯ ಅಮೆರಿಕದ ಪ್ರದೇಶವನ್ನು ತಲಪಿತು. ಈ ಸಲದ ಗುಂಪಿನಲ್ಲಿ ಕೊಲಂಬಸನ ಮಗ ಫರ್ಡಿನೆಂಡ್ ತಂದೆಯಂತೆಯೇ ಆಸಕ್ತಿಯಿಂದ ಸಮುದ್ರಯಾನದಲ್ಲಿ ಭಾಗವಹಿಸಿ, ಅದರ ವಿವರಗಳನ್ನೆಲ್ಲ ಬರೆದಿಟ್ಟ.

ಭಾರತವನ್ನು ಕಂಡುಹಿಡಿಯಬೇಕೆಂಬ ಹಂಬಲ ತೀವ್ರವಾಗಲು. ಪನಾಮದವರೆಗೂ ದಕ್ಷಿಣದಲ್ಲಿ ಪ್ರಯಾಣ ಬೆಳಸಿದ ಕೊಲಂಬಸ್, ಸಹನಾವಿಕರ ಅಸಹಕಾರ ಮತ್ತು ಅಲ್ಲಿನ ಆದಿವಾಸಿಗಳ ಕಿರುಕುಳದಿಂದ ಸ್ಪೇನಿಗೆ ಹಿಂದಿರುಗಿದ. ಸತತವಾದ ಶರೀರಶ್ರಮದಿಂದ ಕೊಲಂಬಸ್ ಹಣ್ಣಾಗಿದ್ದ. ಅವನು 1506ರ ಮೇ 20ರಂದು ತೀರಿಕೊಂಡ.

ಹೊಸ ನಾಡಿನಲ್ಲಿ ಅವನು ಕಾಲೂರಿದ ದಿನವನ್ನು ಉತ್ತರ ಮತ್ತು ದಕ್ಷಿಣ ಅಮೆರಿಕಗಳಲ್ಲಿ ಇಂದಿಗೂ ರಾಷ್ಟ್ರೀಯ ಹಬ್ಬವನ್ನಾಗಿ ಆಚರಿಸುತ್ತಾರೆ. ದಕ್ಷಿಣ ಅಮೆರಿಕದ ಕೊಲಂಬಿಯ ಗಣರಾಜ್ಯದ ಹೆಸರು ಕೊಲಂಬಸನಿಗೆ ಅಮೆರಿಕದವರ ಸನ್ಮಾನ.



ಕೊಲಂಬೊ ನಗರದ ಒಂದು ಭಾಗ

## ಕೊಲಂಬೊ

ಒಂದು ವಸ್ತು ಸಂಗ್ರಹಾಲಯದಲ್ಲಿ ಎರಡು ಅಪೂರ್ವ ವಸ್ತುಗಳಿವೆ. 200 ವರ್ಷಗಳ ಕಾಲ ಜೀವಿಸಿತ್ತೆಂದು ಹೇಳಲಾದ ಆಮೆ; ದೊರೆ ನ್ಯಾಯ ತೀರ್ಮಾನ ಮಾಡಲು ಕುಳಿತುಕೊಳ್ಳುತ್ತಿದ್ದ ಸಿಂಹದ ಬೃಹತ್ ಶಿಲಾ ಮೂರ್ತಿ. ಈ ವಸ್ತುಸಂಗ್ರಹಾಲಯ ಇರುವುದು ಸಿಂಹಳದ ರಾಜಧಾನಿ ಕೊಲಂಬೊದಲ್ಲಿ.

ಕೊಲಂಬೊ ಏಷ್ಯದಲ್ಲೇ ಉತ್ತಮವಾದ ಹಿರಿದಾದ ಬಂದರು. ಈ ಬಂದರಿನಲ್ಲಿ ಏಕಕಾಲದಲ್ಲಿ ನಲವತ್ತು ಹಡಗುಗಳು ನಿಲ್ಲಬಹುದು. ಇಲ್ಲಿಂದ ಟೀ, ರಬ್ಬರು, ಕೊಬ್ಬರಿ, ಯಾಲಕ್ಕಿ, ಎಣ್ಣೆ, ಗ್ರಾಫೈಟ್‌ಗಳು ರಫ್ತಾಗುತ್ತವೆ. 2.59 ಚದರ ಕಿ. ಮೀ. ವಿಸ್ತೀರ್ಣವಿರುವ ಬಂದರು, ಅನೇಕ ಜಲಸಂಚಾರ ಮಾರ್ಗಗಳಲ್ಲಿರುವುದರಿಂದ ಪ್ರಾಮುಖ್ಯ ಪಡೆದಿದೆ.

800ರಲ್ಲೇ ಅರಬ್ ವ್ಯಾಪಾರಿಗಳು ಕೊಲಂಬೊವನ್ನು ವಾಣಿಜ್ಯ ಬಂದರಾಗಿ ಉಪಯೋಗಿಸುತ್ತಿದ್ದರು; 1517ರಲ್ಲಿ ಕೊಲಂಬೊವನ್ನು ವಹಿಸಿಕೊಂಡ ಪೋರ್ಚುಗೀಸರು ಕ್ರಿಸ್ಟಫರ್ ಕೊಲಂಬಸನ ಹೆಸರಿನಲ್ಲಿ ಬಂದರನ್ನು ಕೊಲಂಬೊ ಎಂದು ಕರೆದರು. (ಕೊಲಂಬಸ್ ಭಾರತವನ್ನು ಮುಟ್ಟಲು ಹೊರಟು ಅಮೆರಿಕವನ್ನು ಕಂಡುಹಿಡಿದ. ಅವನ ಹೆಸರಾದರೂ ಪೂರ್ವದ ಒಂದು ಬಂದರಿಗೆ ಇರಲಿ ಎಂದು ಪೋರ್ಚುಗೀಸರು ಭಾವಿಸಿರಬೇಕು.)

ಕೊಲಂಬೊ ನಗರ ಚೊಕ್ಕಟವಾಗಿ ವಿಸ್ತಾರವಾಗಿದೆ. ಬಂದರಿನ ಸಮೀಪದಲ್ಲಿ ಪೋರ್ಚುಗೀಸರೂ ಡಚ್ಚರೂ ಕೋಟೆ ಕಟ್ಟಿದ್ದರಿಂದ ಆ ಭಾಗಕ್ಕೆ ಕೋಟೆ ಎಂದು ಹೆಸರಾಯಿತು. ಈಗ ಕೋಟೆಗಳನ್ನು ಕೆಡವಿ ಮನೆ ಅಂಗಡಿ ಕಚೇರಿಗಳನ್ನು ಕಟ್ಟಿದ್ದಾರೆ. ಇಲ್ಲಿಯೇ ಗವರ್ನರ್ ಜನರಲರ ಬಂಗಲೆ, ಸರಕಾರಿ ಕಟ್ಟಡಗಳು ಇವೆ. ಪೆಟಾಹ್ (ಪೇಟೆ) ಹಳೆಯ ನಗರ ಭಾಗ. ದೇವಸ್ಥಾನಗಳು. ಮಸೀದಿಗಳು. ಕಾಲೇಜುಗಳು ಈ ನಗರದಲ್ಲಿವೆ. ಇದರ ದಕ್ಷಿಣಕ್ಕೆ ಮೂರು ಕಿ. ಮೀ. ಗಳಾಚೆ ಗುಲಾಮರ ದ್ವೀಪವೆನ್ನುವ ಪುಟ್ಟ ದ್ವೀಪವಿದೆ. ಹಿಂದೆ ಡಚ್ ಈಸ್ಟ್ ಇಂಡಿಯಾ ಕಂಪೆನಿಯವರು ಗುಲಾಮರು ಪ್ರತಿನಿತ್ಯ ಕೆಲಸ ಮಾಡಿದ ಮೇಲೆ ಅವರನ್ನು ಈ ದ್ವೀಪಕ್ಕೆ ಕರೆದೊಯ್ಯುತ್ತಿದ್ದರು.

ಕೊಲಂಬೊದ ಜನಸಂಖ್ಯೆ 5,11,000. 1942ರ ಏಪ್ರಿಲ್ 5ರಂದು ಜಪಾನರು ಕೊಲಂಬೊ ಮೇಲೆ ಬಾಂಬ್ ದಾಳಿ ಮಾಡಿದ್ದರು. ಕೊಲಂಬೊದಲ್ಲಿ ಕೈಗಾರಿಕೆಗಳು ಹೆಚ್ಚಾಗಿಲ್ಲದಿದ್ದರೂ ಅದು ದೊಡ್ಡ ವ್ಯಾಪಾರ ಕೇಂದ್ರ.

ದಕ್ಷಿಣ ಮತ್ತು ಆಗ್ನೇಯ ಏಷ್ಯ ದೇಶಗಳಿಗೆ ಅಗತ್ಯವಾದ ತಾಂತ್ರಿಕ ನೆರವು ಮತ್ತು ಹಣದ ಸಹಾಯಗಳ ವಿಷಯವನ್ನು ಭಾರತ, ಪಾಕಿಸ್ತಾನ, ಸಿಂಹಳ, ಆಸ್ಟ್ರೇಲಿಯ, ನ್ಯೂಜಿಲೆಂಡ್ ಮತ್ತು ಬ್ರಿಟನ್ ಪ್ರತಿನಿಧಿಗಳು ಚರ್ಚಿಸಿದರು. ಅನಂತರ 1951ರಲ್ಲಿ ಇದಕ್ಕಾಗಿ ಕೊಲಂಬೊವನ್ನು ಕೇಂದ್ರವಾಡಿ, ಒಂದು ವ್ಯವಸ್ಥೆಯನ್ನು ಮಾಡಲಾಯಿತು. ಅದೇ ಕೊಲಂಬೊ ಯೋಜನೆ.

ನೋಡಿ : ಸಿಂಹಳ

## ಕೊಲ್ಲಿ

ತೀರ ಭಾಗದಲ್ಲಿ ಕೊರೆದುಕೊಂಡು ಸಮುದ್ರ ಭೂಮಿಯುದ್ದಕ್ಕೂ ಚಾಚಿಕೊಂಡಿರುವುದುಂಟು. ಇದನ್ನು ಕೊಲ್ಲಿ ಎನ್ನುತ್ತಾರೆ. ಕೊಲ್ಲಿ ಸಮುದ್ರದ ಕಡೆ ಅಗಲವಾಗಿದ್ದು. ಭೂಭಾಗಕ್ಕೆ ಬರುತ್ತಾ ಕಿರಿದಾಗಿ ಹೋಗುತ್ತದೆ. ಹೀಗೆ ಭಾರತದ ಅಂಚಿನಲ್ಲಿ ಬಂಗಾಳ ಕೊಲ್ಲಿ ಇದೆ. ಕೊಲ್ಲಿಗಿಂತಲೂ ಕಿರಿದಾದ ಸಮುದ್ರ ಭಾಗಕ್ಕೆ ಖಾರಿ ಎನ್ನುವರು.

ಹಲವು ನದಿಗಳು ಸಮುದ್ರವನ್ನು ಸೇರುತ್ತವೆ. ದೊಡ್ಡ ಕೊಲ್ಲಿಗಳಾಗಬೇಕಾದರೆ ನದಿಯ ಬಾಯಿ ಮುಳುಗಿಹೋಗಬೇಕು ಅಥವಾ ನೀರಿನ ಮಟ್ಟ ಏರಿಬಿಡಬೇಕು. ಹಿಮಬಂಡೆಗಳು, ನೀರ್ಗಲ್ಲುಗಳು ಕರಗಿ ಹರಿದುಬಂದು ಎಷ್ಟೋ ಪ್ರದೇಶಗಳು ನೀರಿನಲ್ಲಿ ಮುಳುಗಿಹೋದದ್ದರಿಂದ ಮೇರಿಲೆಂಡಿನ ಚೆಸ್‌ಪೀಕ್ ಕೊಲ್ಲಿ ನಿರ್ಮಾಣವಾಯಿತು. ಹಲವು ಸಲ ಭೂಮಿಯು ಗಟ್ಟಿಯಾಗಿ ಇಲ್ಲದೆ ಸಮುದ್ರಕ್ಕೆ ಕುಸಿದು ಬೀಳುತ್ತದೆ. ಕೆಂಪು ಸಮುದ್ರ, ಕ್ಯಾಲಿಫೋರ್ನಿಯ ಕೊಲ್ಲಿ ಹೀಗೆಯೇ ಆಗಿರಬೇಕೆಂದು ಹೇಳುತ್ತಾರೆ.

ಕೊಲ್ಲಿ ಅಥವಾ ಖಾರಿಗಳಿದ್ದರೆ ಸಮುದ್ರದ ಬಿರುಗಾಳಿಗಳಿಂದ ರಕ್ಷಣೆ ದೊರೆಯುತ್ತದೆ. ಇದರಿಂದ ಶ್ರೇಷ್ಠ ಬಂದರುಗಳ ನಿರ್ಮಾಣಕ್ಕೆ ಅನುಕೂಲ.

ನೋಡಿ : ಬಂದರು

## ಕೋರಂ

"ನಿನ್ನೆಯ ದಿನ ನಡೆಯಬೇಕಾಗಿದ್ದ ಸಭೆ ನಡೆಯಲೇ ಇಲ್ಲವಂತೆ."

"ಏಕೆ ? ಏನಾಯಿತು ?"

"ಕೋರಂ ಇರಲಿಲ್ಲ."

ಕೋರಂ ಅಂದರೆ ಏನು ?

ಒಂದು ಸಭೆಯ, ಸಂಘದ, ಸಮಿತಿಯ ಅಥವಾ ಮಂಡಲಿಯ ಕಾರ್ಯಕಲಾಪಗಳು ಕ್ರಮಬದ್ಧವೆಂದು ಅಂಗೀಕಾರ ಪಡೆಯಬೇಕಾದರೆ ಕನಿಷ್ಠ ಇಷ್ಟು ಮಂದಿ ಸದಸ್ಯರು ಹಾಜರಿರಬೇಕು ಎಂದು ನಿಯಮವಿರುತ್ತದೆ. ಈ ಸಂಖ್ಯೆಯೇ ಕೋರಂ.

ಹಿಂದೆ ಇಂಗ್ಲೆಂಡಿನಲ್ಲಿ ಪ್ರದೇಶದ ಮುಖ್ಯಸ್ಥಳ, ಕೆಲವು ನಗರಗಳು ಇಂಥ ಕಡೆ 'ಜಸ್ಟಿಸ್ ಆಫ್ ದಿ ಪೀಸ್' ಎನ್ನುವ ಅಧಿಕಾರಿಗಳನ್ನು ನೇಮಿಸುತ್ತಿದ್ದರು. ಇವರಲ್ಲಿ ಬಹು ಮಂದಿಗೆ ನ್ಯಾಯಶಾಸ್ತ್ರದ ಪರಿಚಯ ಇರುತ್ತಿರಲಿಲ್ಲ, ಹೀಗಾಗಿ ನ್ಯಾಯಾಲಯ ನಡೆಸುವಾಗ ನ್ಯಾಯಶಾಸ್ತ್ರ ತಿಳಿದವರು ಒಬ್ಬರೊ, ಇಬ್ಬರೊ, ಮೂವರೊ, ಅಂತೂ ಇಷ್ಟು ಜನ ಇರಲೇಬೇಕೆಂದು ಅವರಿಗೆ ತಿಳಿಸಲಾಗುತ್ತಿತ್ತು. ಇವರಿಲ್ಲದೆ ಸಭೆ ಸೇರುತ್ತಲೇ ಇರಲಿಲ್ಲ. ಹೀಗೆ ಸಭೆ ಸೇರಲು ಇರಲೇಬೇಕಾದ ಸದಸ್ಯರ ತಂಡಕ್ಕೆ 'ಕೋರಂ' ಎಂದು ಹೆಸರು ಬಂದಿತು.

ಸಾರ್ವಜನಿಕ ಸಂಘ ಸಂಸ್ಥೆಗಳಲ್ಲಿ ಕೋರಂ ಇಲ್ಲದೆ ಯಾವುದೇ [illegible] ಕೈಗೊಳ್ಳಲು ಸಾಧ್ಯವಿಲ್ಲ. ಸಂಸತ್ತು ವಿಧಾನಮಂಡಲಗಳಲ್ಲೂ ಕಾರ್ಯಕಲಾಪಗಳು ನಡೆಯಲು ಕೋರಂ ಅಗತ್ಯ. ಈ ಸಂಖ್ಯೆ ಎಷ್ಟು ಇರಬೇಕೆನ್ನುವುದನ್ನು ಆಯಾ ಸಮಿತಿ ಸಂಸ್ಥೆಗಳ ಅಂಗರಚನೆಗಳಲ್ಲಿ ಸ್ಪಷ್ಟಪಡಿಸಿರುತ್ತಾರೆ.

ಕೋರಂ ಇಲ್ಲದೆ ಒಂದು ಸಭೆ ಮುಂದಕ್ಕೆ ಹೋಗಬಹುದು. ಸಂಘದ ಅಥವಾ ಸಮಿತಿಯ ನಿಯಮದಲ್ಲಿ ಅದಕ್ಕೆ ಒಪ್ಪಿಗೆ ಇದ್ದರೆ, ಮುಂದುವರಿದ ಸಭೆಗೆ ಕೋರಂ ಅಗತ್ಯವಿಲ್ಲ.

## ಕೌಟಿಲ್ಯ

"ಅರಣ್ಯಗಳಿಂದಲೂ ಗ್ರಾಮಗಳಿಂದಲೂ ಸರೋವರಗಳಿಂದಲೂ ಜಲಪಾತಗಳಿಂದಲೂ ಫಲವತ್ತಾದ ಮೈದಾನಗಳಿಂದಲೂ ಭಾರತ ಧರಣಿಯ ದೇಹ ಯೌವನದಿಂದ ತುಂಬಿರಲಿ. ಹಿಮಾಲಯ ಪರ್ವತದಿಂದ ಸಮುದ್ರದವರೆಗೂ ಅಖಂಡ ಭಾರತ ಏಕೈಕ ರಾಷ್ಟ್ರವಾಗಿರಲಿ."

ಹೀಗೆಂದು ಕನಸುಕಂಡವನು ಪ್ರಾಚೀನ ಭಾರತದ ಅರ್ಥಶಾಸ್ತ್ರಜ್ಞ ಹಾಗೂ ರಾಜನೀತಿಜ್ಞ ಕೌಟಿಲ್ಯ.

ಕೌಟಿಲ್ಯ, ಮೌರ್ಯ ಚಕ್ರಾಧಿಪತ್ಯವನ್ನು ಸಂಸ್ಥಾಪಿಸಿದ ಚಂದ್ರಗುಪ್ತನ ಅಮಾತ್ಯ, ಮಾರ್ಗದರ್ಶಿ, ಆಚಾರ್ಯ ಎಲ್ಲವೂ ಆಗಿದ್ದ.

ಸುಮಾರು ಕ್ರಿ. ಪೂ. 310 ರಲ್ಲಿ ಚಂದ್ರಗುಪ್ತನೆಂಬ ಕ್ಷತ್ರಿಯ ಯುವಕ ಮಗಧ ರಾಜ್ಯದಿಂದ ಓಡಿಸಲ್ಪಟ್ಟು ಅಲ್ಲಲ್ಲಿ ಅಲೆಯುತ್ತಿದ್ದ. ಮುಂದೆ ಕೆಲವೇ ವರ್ಷಗಳಲ್ಲಿ ಈತ ಮೌರ್ಯ ಚಕ್ರಾಧಿಪತ್ಯವನ್ನು ಸ್ಥಾಪಿಸಿದ. ಚಂದ್ರಗುಪ್ತನ ಈ ವಿಜಯಕ್ಕೆ ಕಾರಣನಾದವನು ಕೌಟಿಲ್ಯ. ಚಂದ್ರಗುಪ್ತನಿಗೆ ಆತನೇ ಪಟ್ಟಗಟ್ಟಿದ. ಕೌಟಿಲ್ಯನ ಮುತ್ಸದ್ದಿತನದಿಂದಲೇ ಚಂದ್ರಗುಪ್ತನು ದಕ್ಷ ಅರಸನೆನಿಸಿದ.

ಕೌಟಿಲ್ಯ ಕಂಡ ವಿಶಾಲ ಭಾರತದ ಕನಸು ಚಂದ್ರಗುಪ್ತನ ಮೊಮ್ಮಗ ಅಶೋಕನ ಕಾಲಕ್ಕೆ ನಿಜವಾಯಿತು.

ಕೌಟಿಲ್ಯನ ಕಾಲದ ಬಗೆಗೆ ವಿವರ ತಿಳಿಯದು. ಸುಮಾರು ಕ್ರಿ.ಪೂ. 321ರಿಂದ 300 ನಡುವಿನ ಅವಧಿಯಲ್ಲಿ ಬರೆದಿರಬಹುದಾದ ಕೃತಿ 'ಅರ್ಥಶಾಸ್ತ್ರ.' ಆ ಕೃತಿಯಿಂದಲೇ ಕೌಟಿಲ್ಯನ ಹೆಸರು ಇಂದಿಗೂ ಪ್ರಖ್ಯಾತವಾಗಿದೆ. ಚಂದ್ರಗುಪ್ತನ ಕಾಲದ ಭಾರತವನ್ನು ವರ್ಣಿಸುವಾಗ ಆಗಿನ ಜನಜೀವನದ ವಿಶೇಷ ವಿವರಗಳನ್ನು ಗ್ರೀಕ್ ರಾಯಭಾರಿ ಮೆಗಾಸ್ತನೀಸ್ ಕೊಟ್ಟಿದ್ದಾನೆ. ಕೌಟಿಲ್ಯ 'ಅರ್ಥಶಾಸ್ತ್ರ'ದಲ್ಲಿ ಕೊಟ್ಟ ವಿವರಗಳನ್ನು ಅವು ಹೋಲುತ್ತವೆ.

ಒಂದು ಶತಮಾನಕ್ಕೂ ಹಿಂದೆ ಅರ್ಥಶಾಸ್ತ್ರವನ್ನು ರಾಜಕೀಯ ಅರ್ಥಶಾಸ್ತ್ರ ಎಂದು ಕರೆಯುತ್ತಿದ್ದರು. ರಾಷ್ಟ್ರದ ಸಂಘಟನೆಗೆ ಬೇಕಾಗುವ ಸಿದ್ಧಾಂತಗಳನ್ನು ಅದು ಒಳಗೊಂಡಿರುವುದರಿಂದ ರಾಜನೀತಿ ನಿಪುಣರು ಅದರ ಮಾರ್ಗದರ್ಶನ ಪಡೆಯುತ್ತಿದ್ದರು. ರಾಜ್ಯಪಾಲನೆಯನ್ನಷ್ಟೇ ಅಲ್ಲದೆ ಜನಜೀವನಕ್ಕೆ ಸಂಬಂಧಪಟ್ಟ ಹಲವು ಸಂಗತಿಗಳ ಬಗೆಗೂ ಕೌಟಿಲ್ಯನ 'ಅರ್ಥಶಾಸ್ತ್ರ' ತಿಳಿಯಹೇಳುತ್ತದೆ.

ಜನಸುಖಕ್ಕೆ ಧರ್ಮ ಮೂಲ ಕಾರಣ. ಧರ್ಮಕ್ಕೆ ಇಹಲೋಕದ ಸಿರಿಯೆನಿಸಿದ ಅರ್ಥ ಮೂಲ ಕಾರಣ. ಅರ್ಥಕ್ಕೆ ರಾಜ್ಯವ್ಯವಸ್ಥೆಯೇ ಮೂಲ ಆಧಾರ. ಇದು ಕೌಟಿಲ್ಯನ ಅಭಿಮತ.

ಕೌಟಿಲ್ಯನ ಅರ್ಥಶಾಸ್ತ್ರ ನಮಗೆ ಅಂದಿನ ಆಡಳಿತ ವ್ಯವಸ್ಥೆ, ಪದ್ಧತಿಗಳು ಮತ್ತು ಸಂಸ್ಥೆಗಳ ಪರಿಚಯ ಮಾಡಿಕೊಡುತ್ತದೆ. ಪಟ್ಟಾಭಿಷೇಕಕ್ಕೆ ಮುನ್ನ ರಾಜನು ಪ್ರಜೆಗಳ ಮುಂದೆ ಪ್ರತಿಜ್ಞೆ ಮಾಡುತ್ತ, ತಾನು ಪ್ರಜೆಗಳಿಗೆ ಮೋಸ ಮಾಡಿದರೆ ತನ್ನ ಪರಲೋಕ, ತಾನು ಮಾಡಿದ ಪುಣ್ಯ, ತನ್ನ ಆಯುಷ್ಯ ಮತ್ತು ತನ್ನ ಸಂತಾನ ನಷ್ಟವಾಗಲಿ–ಎಂದು ಘೋಷಿಸುತ್ತಿದ್ದ. ಕೌಟಿಲ್ಯ ಹೇಳುವಂತೆ ರಾಜನಿಗೆ ಸ್ವಹಿತ ಎಂಬುದಿಲ್ಲ. ಪ್ರಜಾಹಿತವೇ ಅವನ ಹಿತ. ಪ್ರಜೆಗಳ ಸುಖ ಸಂತೋಷಗಳೇ ಆತನ ಸುಖಸಂತೋಷಗಳು.

ರಾಜ್ಯದ ಆಡಳಿತವನ್ನು ಸಪ್ತಾಂಗಗಳನ್ನಾಗಿ ವಿಂಗಡಿಸಲಾಗುತ್ತಿತ್ತು. ಇವು ಸ್ವಾಮಿ. ಮಂತ್ರಿ. ಜನಪದ. ದುರ್ಗ. ಕೋಶ. ಸೈನ್ಯ ಮತ್ತು ಮಿತ್ರ. ರಾಜನು ಸಪ್ತಾಂಗಗಳ ಮೇಲ್ವಿಚಾರಣೆಯನ್ನು ಅಂದರೆ ರಾಷ್ಟ್ರದ ಐಕ್ಯವನ್ನು ಸಾಧಿಸಬೇಕು. ಮಂತ್ರಿ ಪರಿಷತ್ತು ರಾಜ್ಯಭಾರ ಕ್ರಮವನ್ನೂ ಕೋಶವು ಐಶ್ವರ್ಯವನ್ನೂ ಸೈನ್ಯವು ರಾಷ್ಟ್ರ ಬಲವನ್ನೂ ದುರ್ಗ ಮತ್ತು ಮಿತ್ರ ರಾಷ್ಟ್ರ ಸಂರಕ್ಷಣೆಯನ್ನೂ ಸಾಧಿಸಬೇಕು. ಕೌಟಿಲ್ಯ ಪ್ರತಿಪಾದಿಸಿರುವ ರಾಜ್ಯತತ್ತ್ವಗಳಿಗೆ ಅನುಸಾರವಾಗಿ ಸ್ಥಾಪಿಸಿದ ರಾಜ್ಯವನ್ನು ಅದೇ ಕಾಲದ ಗ್ರೀಕರ ರಾಷ್ಟ್ರತತ್ತ್ವಗಳೊಡನೆಯೂ, ರಾಷ್ಟ್ರಗಳೊಡನೆಯೂ ಮತ್ತು ಪರ್ಷಿಯ ದೇಶದ ಡೇರಿಅಸ್ ಏರ್ಪಡಿಸಿದ್ದ ರಾಜ್ಯಭಾರ ಕ್ರಮದೊಡನೆಯೂ ತೂಗಿ ನೋಡಿದರೆ, ಅಂದಿನ ಆಡಳಿತ ವ್ಯವಸ್ಥೆ ಭಾರತದಲ್ಲಿ ಅತ್ಯುನ್ನತ ಮಟ್ಟದಲ್ಲಿ ಇದ್ದಿತೆಂದು ಕಂಡುಬರುತ್ತದೆ.

ಉಗ್ರಾಣ, ಅರಣ್ಯ, ಆಯುಧಾಗಾರ, ವ್ಯವಸಾಯ, ಮದ್ಯಪಾನ, ವೇಶ್ಯಾಜೀವನ, ಕಸಾಯಿಖಾನೆ, ಗೋಶಾಲೆ, ಅಶ್ವಶಾಲೆ, ಗಜಶಾಲೆ, ರಥಶಾಲೆ, ರಹದಾರಿ, ಕಂದಾಯ ಮತ್ತು ತೆರಿಗೆ ವಸೂಲಿ ಮುಂತಾದ ಕ್ಷೇತ್ರಗಳನ್ನು ನೋಡಿಕೊಳ್ಳುವ ಪ್ರತ್ಯೇಕ ಅಧಿಕಾರಿಗಳು ಆಗ ಇದ್ದರು. ಮದುವೆ, ಸಾಲ, ಗುಲಾಮರೊಡನೆ ನಡವಳಿಕೆ, ಕಾನೂನಿನ ಪಾಲನೆ ಮುಂತಾದ ಅನೇಕ ವಿಷಯಗಳ ಬಗೆಗೆ ಪ್ರಜೆಗಳು ಹೇಗೆ ನಡೆದುಕೊಳ್ಳಬೇಕು ಎಂಬುದನ್ನು ಕೌಟಿಲ್ಯ ಸ್ಪಷ್ಟವಾಗಿ ಬರೆದಿದ್ದಾನೆ. ಪ್ರಜೆಗಳಾಗಲಿ ಅಧಿಕಾರಿಗಳಾಗಲಿ ತಪ್ಪುನಡೆದರೆ ಎಂಥ ಶಿಕ್ಷೆಗೆ ಅವರು ಗುರಿಯಾಗುತ್ತಿದ್ದರು, ಯಾವ ಅಪರಾಧಕ್ಕೆ ಯಾವ ಶಿಕ್ಷೆ ಎಂಬುದನ್ನೆಲ್ಲ ಕೌಟಿಲ್ಯ ವಿವರವಾಗಿ ತಿಳಿಸಿದ್ದಾನೆ.

ರಾಜ್ಯದ ಒಳಗಿನ ಆಡಳಿತದಲ್ಲಿ ರಾಜ ಬಹಳ ಎಚ್ಚರಿಕೆಯಿಂದ ಇರಬೇಕು; ಇತರ ರಾಜ್ಯಗಳೊಡನೆ ವ್ಯವಹರಿಸುವಾಗ ಅಷ್ಟೇ ಎಚ್ಚರಿಕೆ ಅಗತ್ಯ ಎಂದು ಕೌಟಿಲ್ಯ ಸ್ಪಷ್ಟಪಡಿಸಿದ್ದಾನೆ. ಸಮರ ವಿಧಾನ, ಸಂಧಿ ಮತ್ತು ತಾಟಸ್ಥ್ಯ ವಿಧಾನ ಇವುಗಳನ್ನೂ ವರ್ಣಿಸಿದ್ದಾನೆ.

ಯುದ್ಧದ ತಂತ್ರಗಳು. ಬೇಹುಗಾರಿಕೆ, ವಿಷಪ್ರಾಶನ ವಿದ್ಯೆ, ಮಿತ್ರರನ್ನು ಸಂಪಾದಿಸುವಿಕೆ, ಶತ್ರುವಿನ ಅಥವಾ ಸ್ನೇಹಿತರ ಬಗೆಗೆ ತಳೆಯಬೇಕಾದ ಧೋರಣೆಗಳು ಇವೆಲ್ಲ ಆ ಕೃತಿಯಲ್ಲಿ ವಿವರಿಸಲ್ಪಟ್ಟಿವೆ. ಕೌಟಿಲ್ಯನಿಗೆ ರಾಜ್ಯದ ಏಳಿಗೆ ಮುಖ್ಯ; ಅದಕ್ಕಾಗಿ ಯಾವ ಉಪಾಯವನ್ನು ಅನುಸರಿಸಿದರೂ ಯೋಗ್ಯವೇ ಎಂದು ಅವನ ಅಭಿಪ್ರಾಯ.

ಕೌಟಿಲ್ಯನನ್ನು ಚಾಣಕ್ಯ ಎಂದೂ ವಿಷ್ಣುಶರ್ಮ ಎಂದೂ ಕರೆಯುತ್ತಿದ್ದರು.

ವಿವರ : ಏಳನೆಯ ಸಂಪುಟ

## ಖಾಸಗಿ ವಲಯ

ಖಾಸಗಿ ವ್ಯಕ್ತಿಗಳ ಅಥವಾ ಸಂಸ್ಥೆಗಳ ಸ್ವಾಮ್ಯದಲ್ಲಿರುವ ಉದ್ಯಮಗಳು (ಅಂದರೆ ಸರಕಾರೀ ಆಡಳಿತದಲ್ಲಿ ಇಲ್ಲದಿರುವ ಉದ್ಯಮಗಳು) ಖಾಸಗಿ ವಲಯದ ಉದ್ಯಮಗಳು. ಸರಕಾರವೇ ಸ್ಥಾಪಿಸಿ ನಡೆಸುವ ಉದ್ಯಮಗಳು ಸರಕಾರೀ ವಲಯದ ಉದ್ಯಮಗಳು. ಉದ್ಯಮಗಳು ಖಾಸಗಿ ವಲಯದಲ್ಲಿ ಇರಬೇಕೇ ಸರಕಾರಿ ವಲಯದಲ್ಲಿ ಇರಬೇಕೇ ಅಥವಾ ಇವೆರಡರಲ್ಲಿಯೂ ಹಂಚಿಕೆಯಾಗಿರಬೇಕೇ ಎಂಬುದು ಮುಖ್ಯವಾಗಿ ಆರ್ಥಿಕ ವ್ಯವಸ್ಥೆಯ ಸ್ವರೂಪವನ್ನು ಅವಲಂಬಿಸಿದೆ.

ಕಮ್ಯೂನಿಸ್ಟ್ ಆರ್ಥಿಕ ವ್ಯವಸ್ಥೆಯಲ್ಲಿ ಖಾಸಗಿ ವಲಯ ಇರುವುದಿಲ್ಲ. ಎಲ್ಲ ಉದ್ಯಮಗಳನ್ನೂ ಸರಕಾರವೇ ನಡೆಸುತ್ತದೆ. ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆಯಲ್ಲಿ ಖಾಸಗಿ ವಲಯದ ಉದ್ಯಮಗಳಿಗೆ ವಿಪುಲವಾದ ಪ್ರೋತ್ಸಾಹ. ಅಮೆರಿಕದ ಸಂಯುಕ್ತ ಸಂಸ್ಥಾನ ಇದಕ್ಕೊಂದು ಉದಾಹರಣೆ. ಇಂದಿನ ಪ್ರಪಂಚದಲ್ಲಿ ಅನೇಕ ಕಮ್ಯೂನಿಸ್ಟೇತರ ರಾಷ್ಟ್ರಗಳಲ್ಲಿ ಖಾಸಗಿ ವಲಯದ ಜೊತೆಗೆ ಸರಕಾರಿ ವಲಯವೂ ಪ್ರಾಮುಖ್ಯ ಹೊಂದಿರುವುದರಿಂದ ಇವುಗಳನ್ನು ಮಿಶ್ರ ಆರ್ಥಿಕ ವ್ಯವಸ್ಥೆ ಎಂದು ಕರೆಯಲಾಗಿದೆ. ಬಡವರು–ಶ್ರೀಮಂತರ ಆರ್ಥಿಕ ಸ್ಥಿತಿಗಳ ನಡುವೆ ಅತೀವ ತಾರತಮ್ಯವಿರುವ ದೇಶಗಳಲ್ಲಿ ಖಾಸಗಿ ವಲಯಕ್ಕೆ ಇಂದು ಹೆಚ್ಚು ಪ್ರೋತ್ಸಾಹವಿಲ್ಲ. ಉದ್ಯಮಗಳನ್ನೆಲ್ಲ ಬಂಡವಾಳಗಾರರೇ ಹೆಚ್ಚು ಹೆಚ್ಚು ಆವರಿಸಿ, ತಮ್ಮ ಹಿಡಿತ ಸ್ಥಾಪಿಸುವರೆಂಬುದೇ ಅದಕ್ಕೆ ಕಾರಣ.

ಖಾಸಗಿ ಉದ್ಯಮಿಗಳು ಬಂಡವಾಳವನ್ನು ತೊಡಗಿಸುವುದಲ್ಲದೆ, ತಂತ್ರ ಜ್ಞಾನ, ವಿತರಣೆ ಇವುಗಳ ಜವಾಬ್ದಾರಿಯನ್ನೂ ತಾವೇ ವಹಿಸಿಕೊಳ್ಳುತ್ತಾರೆ. ಜೀವನದ ಮೂಲಭೂತ ಅವಶ್ಯತೆಗಳಿಗೆ ಕೊರತೆಯಿಲ್ಲದೆ ಮುಂದುವರಿದ ಬಂಡವಾಳಶಾಹಿ ದೇಶಗಳಲ್ಲಿ ಖಾಸಗಿ ಉದ್ಯಮಗಳು ಲಾಭದಾಯಕವಾಗಿ ನಡೆದು ದೇಶದ ಸಂಪತ್ತನ್ನು ಹೆಚ್ಚಿಸಿವೆ. ಅಮೆರಿಕ, ಇಂಗ್ಲೆಂಡ್ ಮುಂತಾದ ದೇಶಗಳಲ್ಲಿ ರೇಡಿಯೊ ಕೇಂದ್ರಗಳು, ಪರಮಾಣುಶಕ್ತಿ ಸ್ಥಾವರಗಳು, ಸಂಶೋಧನಾ ಕೇಂದ್ರಗಳು ಮುಂತಾದ ಉದ್ಯಮಗಳು ಕೂಡ ಖಾಸಗಿ ವಲಯದಲ್ಲಿವೆ. ಇವು ಇತರ ಅನೇಕ ರಾಷ್ಟ್ರಗಳಲ್ಲಿ ಸರಕಾರೀ ವಲಯದಲ್ಲಿವೆ. ತೆರಿಗೆಗಳು, ರಹದಾರಿ, ಸುಂಕ, ಸಾಲ ನೀಡಿಕೆ ಮುಂತಾದ ವಿಧಾನಗಳಿಂದ ಸರಕಾರ ಖಾಸಗಿ ವಲಯವನ್ನು ನಿಯಂತ್ರಿಸಬಹುದು. ಮಿಶ್ರ ಆರ್ಥಿಕ ವ್ಯವಸ್ಥೆಯ ದೇಶಗಳಲ್ಲಿ ಉದ್ಯಮಗಳನ್ನು ಹತೋಟಿಯಲ್ಲಿಡಲು ಈ ವಿಧಾನಗಳನ್ನು ಬಳಸುತ್ತಾರೆ. ಖಾಸಗಿ ವಲಯದ ಉದ್ಯಮಗಳನ್ನು ಹಿಡಿತದಲ್ಲಿಟ್ಟುಕೊಂಡು ಹಣದುಬ್ಬರ, ಜೀವನಮಟ್ಟದ ಏರಿಕೆ ಮುಂತಾದ ಅನಿಷ್ಟಗಳನ್ನು ಸರಕಾರ ತಡೆಯುತ್ತದೆ.

ಸಾಮಾನ್ಯವಾಗಿ ಖಾಸಗಿ ಸಂಸ್ಥೆಗಳು ಸಾರ್ವಜನಿಕರಿಗೆ ಅಂಶ (ಷೇರು) ಗಳನ್ನು ಮಾರಿ ಬಂಡವಾಳವನ್ನು ಕೂಡಿಸುತ್ತವೆ. ಖಾಸಗಿ ವಲಯದ ಕೆಲವು ಉದ್ಯಮಗಳಲ್ಲಿ ಪ್ರೋತ್ಸಾಹ ನೀಡಲೆಂದು ಸರಕಾರವೂ ಅಂಶಗಳನ್ನು ಕೊಳ್ಳುತ್ತದೆ. ಆ ಮೂಲಕ ಬಂಡವಾಳ ಒದಗಿಸುತ್ತದೆ.

ಅಭಿವೃದ್ಧಿಗೆ ಬರುತ್ತಿರುವ ರಾಷ್ಟ್ರಗಳಲ್ಲಿ ಖಾಸಗಿ ವಲಯದ ಉದ್ಯಮವನ್ನು ನಡೆಸುವವರ ಬಂಡವಾಳ ಪರಿಮಿತಿಯುಳ್ಳದ್ದು. ವಿವಿಧ ದೇಶಗಳಿಂದ ತಾಂತ್ರಿಕಜ್ಞಾನದ ನೆರವನ್ನು ಪಡೆಯಲು ಇವರಿಗೆ ಇರುವ ಸೌಲಭ್ಯವೂ ಮಿತವಾದುದೇ. ಅಮೆರಿಕದ ಸಂಯುಕ್ತ ಸಂಸ್ಥಾನದಂಥ ಶ್ರೀಮಂತ ದೇಶದಲ್ಲಿ ಬಂಡವಾಳಕ್ಕೆ ಕೊರತೆ ಇಲ್ಲ. ಇತರ ದೇಶಗಳಿಂದ ಹೆಚ್ಚಿಗೆ ತಾಂತ್ರಿಕಜ್ಞಾನ ಪಡೆಯುವ ಅಗತ್ಯವೂ ಇಲ್ಲ.

ಅಗತ್ಯವಾದ ಬಂಡವಾಳ ಕಡಮೆಯಿದ್ದು, ಬಹು ಮಂದಿ ಸಣ್ಣ ಪ್ರಮಾಣದಲ್ಲಿಯೋ ದೊಡ್ಡ ಪ್ರಮಾಣದಲ್ಲಿಯೋ ಒಂದು ಉದ್ಯಮವನ್ನು ನಡೆಸಿಕೊಂಡು ಹೋಗಲು ಸಾಧ್ಯವಿರುವಾಗ (ಉದಾ : ಬ್ರೆಡ್ ಮಾಡುವುದು,

ಸಣ್ಣಯಂತ್ರಗಳನ್ನು ಮಾಡುವುದು, ಅಚ್ಚಿನ ಕೆಲಸ) ದೇಶದ ಹಿತದ ದೃಷ್ಟಿಯಿಂದ ಒಂದು ಉದ್ಯಮದಲ್ಲಿ ಸ್ಪರ್ಧೆ ಅಗತ್ಯ ಎನಿಸಿದಾಗ (ಉದಾ : ಬಟ್ಟೆ ಮಾಡುವುದು, ಪಾದರಕ್ಷೆಗಳು, ವಿದ್ಯುಚ್ಛಕ್ತಿ ಉಪಕರಣಗಳು), ಬೇರಾವ ದೃಷ್ಟಿಯಿಂದಲಾದರೂ ಸಮಾಜಕ್ಕೆ ಒಳ್ಳೆಯದು ಎಂದು ಕಂಡು ಬಂದಾಗ (ಉದಾ: ವೃತ್ತ ಪತ್ರಿಕೆಗಳು, ಇವು ಬೇರೆ ಬೇರೆಯವರ ಕೈಯಲ್ಲಿದ್ದರೆ, ಪ್ರಜೆಗಳ ಅಭಿಪ್ರಾಯಗಳು ವ್ಯಕ್ತವಾಗುವುದಕ್ಕೆ. ಪ್ರಶ್ನೆಗಳ ಹಲವು ಮುಖಗಳು ತೋರಿ ಜನತೆಗೂ ಪ್ರಭುತ್ವಕ್ಕೂ ತಿಳಿವಳಿಕೆ ಬರುವುದಕ್ಕೆ ಸಾಧ್ಯವಾಗುತ್ತದೆ)—ಅಂಥ ಉದ್ಯಮಗಳನ್ನು, ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಖಾಸಗಿ ವಲಯಕ್ಕೆ ಬಿಡುತ್ತಾರೆ.

ನೋಡಿ : ಸರಕಾರೀ ವಲಯ; ರಾಷ್ಟ್ರೀಕರಣ

## ಖುರಾನ್

ಖುರಾನ್ ಮುಸಲ್ಮಾನರ ಧಾರ್ಮಿಕ ಗ್ರಂಥ.

ಏಳನೆಯ ಶತಮಾನದಲ್ಲಿ ಮಹಮ್ಮದ್ ಪೈಗಂಬರರು ಅರೇಬಿಯದಲ್ಲಿ ಇಸ್ಲಾಂ ಧರ್ಮವನ್ನು ಸ್ಥಾಪಿಸಿದರು. ಇಸ್ಲಾಂ ಧರ್ಮದ ಅನುಯಾಯಿಗಳಲ್ಲಿ ಬೇರೆ ಬೇರೆ ಪಂಗಡಗಳಿದ್ದರೂ ಅವರೆಲ್ಲರಿಗೂ ಖುರಾನ್ ಧರ್ಮ ಗ್ರಂಥವಾಗಿದೆ.

ಖುರಾನ್ ಎಂದರೆ ನಿರೂಪಣೆ, ಕಥನ ಎಂದರ್ಥ. ಅದು ತಿಳಿಸುವಂತೆ, ಮೆಕ್ಕಾ ನಗರದ ಪರ್ವತದ ಮೇಲೆ ಪೈಗಂಬರರಿಗೆ ದೇವರು ಹೊಸ ಧರ್ಮವನ್ನು ಸ್ಥಾಪಿಸುವಂತೆ ಸಂದೇಶವಿತ್ತ ; ಅಲ್ಲಿಂದ ಮುಂದೆ ಅವರಿಗೆ ದೇವವಾಣಿ ಕೇಳಿಸುತ್ತಲೇ ಇತ್ತು. ಖುರಾನ್‌ನಲ್ಲಿರುವುದು ಪೈಗಂಬರರಿಗೆ ಆದ ದಿವ್ಯ ದರ್ಶನಗಳ, ಅವರು ಕೇಳಿದ ಅಶರೀರವಾಣಿಗಳ, ಹೇಳಿದ ವೃತ್ತಾಂತಗಳ, ಮಾಡಿದ ಉಪದೇಶಗಳ ನಿರೂಪಣೆ. ಮಹಮ್ಮದರ ಮೂಲಕ ಎಲ್ಲ ಮನುಷ್ಯರಿಗೂ ಅಲ್ಲಾಹ್ ನೀಡಿದ ಮಾರ್ಗದರ್ಶನ ಖುರಾನ್ ಎಂದು ಮುಸಲ್ಮಾನರ ನಂಬಿಕೆ. ದೇವದೂತ ಗೇಬ್ರಿಯಲ್ ಮಹಮ್ಮದರಿಗೆ ಹೇಳಿದ ಮಾತುಗಳನ್ನು ಪೈಗಂಬರರು ಹಾಗೆಯೇ ಬಾಯಿಪಾಠ ಮಾಡಿ ಅನಂತರ ಅವನ್ನು ತಮ್ಮ ಅನುಯಾಯಿಗಳಿಗೆ ಹೇಳಿದರೆಂಬುದು ತಿಳಿವಳಿಕೆ.

ಬೈಬಲ್‌ನಿಂದ ಅನೇಕ ಕಥನಗಳನ್ನು ಖುರಾನಿಗೆ ಮಹಮ್ಮದರು ಸೇರಿಸಿದರು. ಮೆಕ್ಕಾದಿಂದ ಮದೀನಕ್ಕೆ ಹೋದಮೇಲೆ ದಿನೇ ದಿನೇ ಹೆಚ್ಚುತ್ತಲಿದ್ದ ತಮ್ಮ ಹಿಂಬಾಲಕರಿಗಾಗಿ ಕಾನೂನು ಕಟ್ಟಳೆಗಳನ್ನು ಮಾಡಿ ಅವನ್ನೂ ಖುರಾನಿಗೆ ಸೇರಿಸಿದರು. ಮಹಮ್ಮದರ ಉಪದೇಶದ ಸಾರವನ್ನು ಇಸ್ಲಾಂ ಧರ್ಮದ ಐದು ಸ್ತಂಭಗಳು ಎಂದು ಕರೆದಿದ್ದಾರೆ. ದೇವರು ಒಬ್ಬನೆ, ಮಹಮ್ಮದ್ ಅವನ ಪರಿಕಾರ. ಪ್ರಾರ್ಥನೆ ಪವಿತ್ರವಾದದ್ದು ಮತ್ತು ಅಗತ್ಯವಾದದ್ದು (ಮುಸಲ್ಮಾನರು ದಿನಕ್ಕೆ ಐದು ಸಲ ಮೆಕ್ಕಾದ ಕಡೆ ತಿರುಗಿ ಪ್ರಾರ್ಥನೆ ಮಾಡುತ್ತಾರೆ). ಬಡವರಿಗೆ ದಾನ ಮಾಡಬೇಕು. ಇಡೀ ಒಂದು ತಿಂಗಳ ಕಾಲ ಉಪವಾಸವಿರಬೇಕು (ಅದಕ್ಕೆ ರಮಜಾನ್ ಎಂದು ಹೆಸರು), ಮೆಕ್ಕಾ ಯಾತ್ರೆ ಕೈಗೊಳ್ಳಬೇಕು—ಎಂದು ಖುರಾನಿನಲ್ಲಿ ವಿವರಿಸಲಾಗಿದೆ.

ಖುರಾನಿನಲ್ಲಿ ಸುಮಾರು ಎಂಬತ್ತು ಸಾವಿರ ಪದಗಳಿವೆ. ನೂರ ಹದಿನಾಲ್ಕು ಅಧ್ಯಾಯಗಳಿವೆ. ಅವುಗಳಿಗೆ 'ಸೂರಾ' ಎಂದು ಹೆಸರು. ಅವನ್ನು ವೃತ್ತಗಳಾಗಿ ವಿಂಗಡಿಸಲಾಗಿದೆ. ಪ್ರತಿಯೊಂದು ವೃತ್ತಕ್ಕೂ 'ಆಯಾ' ಎಂದು ಹೆಸರು. ಒಂದು ಅಧ್ಯಾಯಕ್ಕೂ ಇನ್ನೊಂದು ಅಧ್ಯಾಯಕ್ಕೂ ಹೆಚ್ಚಿನ ಸಂಬಂಧವಿಲ್ಲ. ಒಂದೊಂದು ಅಧ್ಯಾಯವೂ ಒಂದೊಂದು ವೃತ್ತಾಂತ. ಒಂದೇ ಅಧ್ಯಾಯದಲ್ಲಿ ಹಲವು ವಿಷಯಗಳನ್ನು ಪ್ರಸ್ತಾಪಿಸಲಾಗಿದೆ. (ವಿವಾಹ ವಿಚ್ಛೇದನ, ಹಿಂದಿನ ಪ್ರವಾದಿಗಳು, ಭಗವಂತನ ಸರ್ವಜ್ಞತೆ ಇತ್ಯಾದಿ) ಅಧ್ಯಾಯಗಳಲ್ಲಿ ಕೆಲವು ಸಣ್ಣವು, ಕೆಲವು ದೊಡ್ಡವು. ಮೊದಲನೆಯ ಅಧ್ಯಾಯವನ್ನು ಬಿಟ್ಟರೆ ಉಳಿದ ಅಧ್ಯಾಯಗಳನ್ನು ದೊಡ್ಡದರಿಂದ ಆರಂಭಮಾಡಿ ಅವುಗಳ ಉದ್ದಕ್ಕೆ ತಕ್ಕಂತೆ ಸಣ್ಣದರವರೆಗೆ ಜೋಡಿಸಿದ್ದಾರೆ. ಸಣ್ಣ ವೃತ್ತಾಂತಗಳೇ ಮೊದಲು ಬಂದುವು. ದೊಡ್ಡ ವೃತ್ತಾಂತಗಳನ್ನು ಪೈಗಂಬರರು ಹೇಳಿದ್ದು ಕೊನೆ ಕೊನೆಯಲ್ಲಿ. ಸುಮಾರು ಇಪ್ಪತ್ತು ವರ್ಷಗಳ ಕಾಲದ ದರ್ಶನಗಳ, ಉಪದೇಶಗಳ ಕಥನ ಇಲ್ಲಿದೆ.

ಮೊದಲನೆಯ 'ಸೂರಾ' ಸಣ್ಣ ಪ್ರಾರ್ಥನೆ. ಅದನ್ನು ಮುಸಲ್ಮಾನರು ಮತ್ತೆ ಮತ್ತೆ ಬಳಸುವುದರಿಂದ, ಅದಕ್ಕೆ ಮುಸಲ್ಮಾನರ ಪ್ರಭುಪ್ರಾರ್ಥನೆ ಎಂದು ಹೆಸರಿದೆ. ಪ್ರತಿ ಸೂರಾದ ಪ್ರಾರಂಭದಲ್ಲಿ, ಅದು ಮಹಮ್ಮದರಿಗೆ ಮೆಕ್ಕದಲ್ಲಿ ಉಪದೇಶವಾಯಿತೆ, ಮದೀನದಲ್ಲಿ ಉಪದೇಶವಾಯಿತೆ ಎಂಬುದು ಸೂಚಿತವಾಗಿದೆ.

ಖುರಾನಿನ ಭಾಷೆ ಕಾವ್ಯಮಯ ಗದ್ಯ. ಅಲ್ಲಲ್ಲಿ ಪ್ರಾಸ ಉಂಟು. ಶೈಲಿ ಚೈತನ್ಯಪೂರ್ಣವಾದದ್ದು. ಸರ್ವಲೋಕ ಪ್ರಭುವಾದ ಭಗವಂತನ ಆಜ್ಞೆಯಂತೆ ನಡೆಯಬೇಕೆನ್ನುವುದು ಖುರಾನಿನ ತಿರುಳು.

ಖುರಾನ್ ಅರಬಿ ಭಾಷೆಯಲ್ಲಿ ಬರೆದಿಟ್ಟ ಮೊದಲ ಗ್ರಂಥ.

ನೋಡಿ : ಮಹಮ್ಮದ್ ಪೈಗಂಬರ್

## ಗಂಟೆ

ಢಣ್ ! ಢಣ್ !

ಶಾಲೆ, ಕಾಲೇಜುಗಳ ಆರಂಭ. ವಿದ್ಯಾರ್ಥಿಗಳು ಲಗುಬಗೆಯಿಂದ ತರಗತಿಗಳಿಗೆ ನಡೆಯುತ್ತಾರೆ.

ಢಣ್ ! ಢಣ್ !

ದೇವಾಲಯದಲ್ಲಿ ಯಾವುದೋ ಮಂತ್ರಪಠಣ, ಅದನ್ನು ಕೇಳಿ ಹೃದಯ ಅರಳುತ್ತದೆ.

ಢಣ್ ! ಢಣ್ !

ಕೆಂಪು ಬಣ್ಣದ ವಾಹನ ಎಲ್ಲಿಯೋ ಹೊತ್ತಿದ ಅಗ್ನಿಯನ್ನು ಆರಿಸಲು ಧಾವಿಸುತ್ತದೆ.

ಢಣ್ ! ಢಣ್ !

ಇಗರ್ಜಿಯಲ್ಲಿ ಒಂದೇ ಸಮನೆ ಗಂಟೆಯ ನಿನಾದ. ಡಿಸೆಂಬರ್ 31ರ ರಾತ್ರಿ ಹನ್ನೆರಡು ಗಂಟೆ ; ಹಳೆಯ ವರ್ಷ ಕಳೆದು ಹೊಸ ವರ್ಷ ಉದಿಸುತ್ತಿದೆ.

ಗಂಟೆ ಎಷ್ಟು ವಿವಿಧ ರೀತಿಯಿಂದ ಜನರನ್ನು ಕರೆಯುತ್ತದೆ ; ಅವರನ್ನು ಎಚ್ಚರಿಸುತ್ತದೆ !

ಗಂಟೆಯ ಚರಿತ್ರೆ ಪ್ರಾಚೀನವಾದದ್ದು. ಭಾರತದ ಸಿಂಧೂ ಸಂಸ್ಕೃತಿ ಹಾಗೂ ಪುರಾತನ ಚೀನ, ಈಜಿಪ್ಟ್ ಸಂಸ್ಕೃತಿಗಳಲ್ಲಿ ಗಂಟೆಗಳ ಬಳಕೆ ಬಹು ಮುಖ್ಯವಾಗಿ ಇದ್ದಿತೆಂದು ಹೇಳಲಾಗಿದೆ.

ಗಂಟೆಯ ಆಕೃತಿಗೂ ಇತಿಮಿತಿ ಇದ್ದಂತಿಲ್ಲ. ಅತ್ಯಂತ ಪುಟ್ಟ ಗಂಟೆಯಿಂದ ಹಿಡಿದು ದೈತ್ಯಾಕಾರದ ಬೃಹತ್ ಗಂಟೆಗಳವರೆಗೆ ಗಂಟೆಯ ರಚನಾ ಕೌಶಲ ನೋಡಬಹುದು.



ಶಾಲೆಯಲ್ಲಿ ದೇಗುಲದಲ್ಲಿ 'ಗಂಟೆಗಳ ರಾಜ' ಕರೆಗಂಟೆ

ತುದಿಯಲ್ಲಿ ಸೇರಿಕೊಳ್ಳುತ್ತದೆ. ಇದಕ್ಕೆ ಗಂಟಾಕೃತಿ ಎನ್ನುತ್ತಾರೆ. ಆ ಆಕೃತಿಯು ಗಂಟೆಯ ನಾದಕ್ಕೆ ಬಹಳ ಅಗತ್ಯ. ಆದ್ದರಿಂದಲೇ ಸಾವಿರಾರು ವರ್ಷಗಳಿಂದ ಗಂಟೆಯ ಆಕೃತಿಯಲ್ಲಿ ಮೂಲಭೂತ ಬದಲಾವಣೆಗಳು ಆಗಿಲ್ಲ.

ಗಂಟೆಯನ್ನು ಎರಕದಿಂದ ಮಾಡಲಾಗುತ್ತದೆ. ಇದಕ್ಕೆ ತಾಮ್ರ ಮತ್ತು ತವರಗಳು ಬೇರೆ ಬೇರೆ ಪ್ರಮಾಣಗಳಲ್ಲಿ ಮಿಶ್ರಗೊಂಡಿರುತ್ತವೆ.

ಒಂದೆ ಇಂಗ್ಲೆಂಡಿನಲ್ಲಿ ಚಳಿಗಾಲದ ದೀರ್ಘನಿದ್ರೆಯಿಂದ ವಸಂತನನ್ನು ಎಬ್ಬಿಸಲು ಗಂಟೆಗಳನ್ನು ಜೋಡಿಸಿದ ಉಡುಗೆಯನ್ನು ಧರಿಸಿ ಅವರ ನಾದದಿಂದ ಋತುಗಳ ರಾಜನನ್ನು ಸ್ವಾಗತಿಸುವ ನೃತ್ಯ ಮಾಡುತ್ತಿದ್ದರು. ನಮ್ಮಲ್ಲಿ ತಮಟೆಯಿರುವಂತೆ ಅಲ್ಲಿ ಮೊದಲಿಗೆ ಊರಿನಲ್ಲಿ ಸುದ್ದಿ ಸಾರಲು ಗಂಟೆಯನ್ನು ಉಪಯೋಗಿಸುತ್ತಿದ್ದರು. ಲಂಡನ್ನಿನ ಕೀರ್ತಿವೆತ್ತ ಬಿಗ್ ಬೆನ್ ಗಡಿಯಾರದ ಗಂಟಾನಾದವನ್ನು ಆ ದೇಶದ ನಾವಿಕರು, ನಾಗರಿಕರು ಪ್ರಪಂಚದ ಯಾವುದೇ ಮೂಲೆಯಲ್ಲಿ ಬೇಕಾದರೂ ತಮ್ಮ ರೇಡಿಯೊಗಳ ಮೂಲಕ ಆಲಿಸಬಹುದು. ಗಂಟೆಗಳ ಉಪಯೋಗದಿಂದ ಪಾಶ್ಚಾತ್ಯ ಸಂಗೀತ ಹೊಸರೂಪ ಪಡೆಯಿತು. ಭಾರತದಲ್ಲಿ ಹಿಂದಿನಿಂದಲೂ ಗೋವುಗಳ ಕೊರಳಿಗೆ ಗಂಟೆಯನ್ನು ಕಟ್ಟುವ ಪದ್ಧತಿಯುಂಟು. ಇದು ಗೊಲ್ಲನಿಗೆ ತನ್ನ ಗೋವಿನ ಗುರುತು. ಅದು ತಪ್ಪಿಸಿಕೊಂಡರೂ ಆ ಗಂಟೆಯ ನಿರ್ದಿಷ್ಟ ನಾದದಿಂದ ಗುರುತಿಸುವುದಕ್ಕಾಗಿ ಕಟ್ಟುವ ಗಂಟೆ ಅದು. ಬೀದಿಯಲ್ಲಿ ಮಾರಾಟಕ್ಕೆ ಬರುತ್ತಿದ್ದ ವ್ಯಾಪಾರಿಗಳು ಗಂಟೆಯನ್ನು ಉಪಯೋಗಿಸಲಾರಂಭಿಸಿದರು ; ಈಗಲೂ ಉಪಯೋಗಿಸುತ್ತಾರೆ. ದೊಡ್ಡ ದೊಡ್ಡ ಗಂಟೆಗಳು ದೇವ ಮಂದಿರಗಳಲ್ಲಿ ಮತ್ತು ಗಡಿಯಾರ ಗೋಪುರಗಳಲ್ಲಿಯೂ ಇಡಲ್ಪಟ್ಟವು. ಗಂಟೆಗಳ ನಾದದಿಂದ ದುಷ್ಟ ಶಕ್ತಿಗಳನ್ನು ಹೊಡೆದೋಡಿಸಬಹುದೆಂಬ ನಂಬಿಕೆಯಿದೆ. ಇದಲ್ಲದೆ ಅವರವರ ಕರ್ತವ್ಯಗಳಿಗೆ ಕರೆಕೊಡಲು ಚರ್ಚ್‌ಗಳಲ್ಲಿ ಗಂಟೆಗಳನ್ನು ಬಾರಿಸತೊಡಗಿದರು. ಹಡಗುಗಳಲ್ಲಿ ವೇಳೆಯನ್ನು ಸೂಚಿಸಲು ಗಂಟೆಗಳನ್ನು ಒಂದು ಗೊತ್ತಾದ ರೀತಿಯಲ್ಲಿ ಅಣಿಗೊಳಿಸುತ್ತಾರೆ. ಎರಡನೆಯ ಮಹಾಯುದ್ಧದಲ್ಲಿ ಬ್ರಿಟನ್ನಿನಲ್ಲಿ ಆಪತ್ತನ್ನು ಸೂಚಿಸಲು ಇಡೀ ದೇಶದಲ್ಲಿ ಗಂಟೆಗಳನ್ನು ಬಾರಿಸಲು ವ್ಯವಸ್ಥೆ ಮಾಡಲಾಗಿದ್ದಿತು.

ಗಂಟೆಗಳನ್ನು ಪೌರಸ್ತ್ಯ ಹಾಗೂ ಪಾಶ್ಚಾತ್ಯ ಎಂದು ಸ್ಪಷ್ಟವಾದ ಎರಡು ಗುಂಪುಗಳಾಗಿ ವಿಭಾಗಿಸಬಹುದು. ಪೌರಸ್ತ್ಯ ಗಂಟೆಗಳ ಬಳಕೆ ಬಹುಮಟ್ಟಿಗೆ ದೇವಾಲಯಗಳಲ್ಲಿ. ಪಾಶ್ಚಾತ್ಯ ಗಂಟೆಗಳು ಆರಾಧನಾ ಮಂದಿರದಲ್ಲಿ ಇಡಲ್ಪಟ್ಟರೂ ಅವುಗಳ ಬಳಕೆ ಬೇರೆ ಕ್ಷೇತ್ರಗಳಿಗೂ ಹರಡಿದೆ.

ಗಂಟೆಗಳನ್ನು ಬಾರಿಸುವುದರಲ್ಲಿಯೂ ಎರಡು ವಿಧ. ಗಂಟೆಯ ನಾಲಿಗೆಯಿಂದಲೇ ಗಂಟೆಯ ಬಾಯಿಯ ಅಂಚಿನ ಬಳಿ ತಗಲುವಂತೆ ಹೊಡೆಯುವುದು ಅಥವಾ ಗಂಟೆಯ ಮೇಲೆ ಬೇರೆ ವಸ್ತುವಿನಿಂದ ಹೊಡೆಯುವುದು.

ಗಂಟೆಯ ಆಕೃತಿ ಎಲ್ಲ ಕಡೆಗಳಲ್ಲಿಯೂ ಹೆಚ್ಚು ಕಡಮೆ ಒಂದೇ ಬಗೆ, ಗುಂಡಗಿರುವ ಮೇಲ್ಭಾಗ ಬರಬರುತ್ತ ಸ್ವಲ್ಪ ಕಿರಿದಾಗಿ ಅದೇ ಆಕೃತಿಯಲ್ಲಿ ಮುಂದುವರಿದು, ಸಮತಟ್ಟಿನಂತೆಯೋ ಇಕ್ಕೆಡೆ ಗುಮ್ಮಟದಂತೆಯೋ

ಪಾಶ್ಚಾತ್ಯ ಸಂಗೀತದಲ್ಲಿ ಗಂಟೆಗಳನ್ನು ಬಾರಿಸುವ ಕಲೆಯೇ ಒಂದು ಮಹತ್ಸಾಧನ ಎನ್ನುತ್ತಾರೆ. ಇವುಗಳ ನಾದ ವೈವಿಧ್ಯವನ್ನು ಅನುಸರಿಸಿ ರಾಗಗಳನ್ನು ಬಾರಿಸಲು ಒಬ್ಬ ಮನುಷ್ಯನಿಗೆ ಹಲವು ವರ್ಷಗಳ ಪರಿಶ್ರಮ ಬೇಕಂತೆ. ಲಂಡನ್ನಿನ ಸೆಂಟ್ ಪಾಲ್ಸ್ ಕೆಥಿಡ್ರಲ್ ಆರಾಧನಾ ಮಂದಿರದಲ್ಲಿ ಹನ್ನೆರಡು ಗಂಟೆಗಳನ್ನು ತೂಗಹಾಕಿದ್ದಾರೆ. ಪಾಶ್ಚಾತ್ಯ ಸಂಗೀತ ಸ್ವರಗಳ ವಿವಿಧ ನಾದಗಳಿಗೆ ಅಳವಡಿಸಿರುವ ಈ ಗಂಟೆಗಳನ್ನು ಅವುಗಳ ನಾದ ವೈವಿಧ್ಯದ ಬೇರೆ ಬೇರೆ ಹೊಂದಾಣಿಕೆಯನ್ನು ಮಾಡುತ್ತಾ ಗಂಟೆಗೆ 1,500 ಬದಲಾವಣೆಗಳನ್ನು ಮಾಡಿದರೂ 38 ವರ್ಷಗಳ ಕಾಲ ಬಾರಿಸಬೇಕಾಗುವುದಂತೆ! ಅಂದರೆ ಅವುಗಳ ಹೊಂದಾಣಿಕೆಯಲ್ಲಿ 48 ಕೋಟಿ ನಾದ ಸಂಯೋಜನೆಯನ್ನು ಮೂಡಿಸಬಹುದಂತೆ !

ಪ್ರಪಂಚದ ಅತಿ ದೊಡ್ಡ ಗಂಟೆ ಮಾಸ್ಕೊದಲ್ಲಿದೆ. 1733ರಲ್ಲಿ ಎರಕ ಹೊಯ್ದ ಈ ಗಂಟೆಯ ಬಾಯಿಯ ವ್ಯಾಸ 6.9 ಮೀಟರು. ಗಂಟೆಗಳ ರಾಜ ಎಂದು ಹೆಸರಿರುವ ಈ ಗಂಟೆಯ ತೂಕ 1,96,128 ಕಿ. ಗ್ರಾಂಗಳು ಎತ್ತರ 6.3 ಮೀಟರು. ಎರಕಹೊಯ್ಯುವಾಗಿನ ದೋಷದಿಂದ ಈ ಗಂಟೆ ಕೇವಲ ಒಂದು ಪ್ರದರ್ಶನ ವಸ್ತುವಾಗಿದೆ, ಒಮ್ಮೆಯೂ ಇದರಿಂದ ನಾದ ಬಂದಿಲ್ಲ. ಬರ್ಮದ ಗಂಟೆಯೊಂದು 5,72,000 ಕಿ. ಗ್ರಾಂ. ತೂಗುತ್ತದೆ. ನ್ಯೂಯಾರ್ಕಿನಲ್ಲಿ ವಿಶ್ವಸಂಸ್ಥೆಯ ಪ್ರಧಾನ ಕಾರ್ಯಾಲಯದಲ್ಲಿ ಶಾಂತಿಯ ಗಂಟೆಯೊಂದನ್ನು ಇಟ್ಟಿದ್ದಾರೆ. ಜಪಾನ್ ದೇಶದಲ್ಲಿ ತಯಾರಾದ ಈ ಗಂಟೆಗೆ 64 ರಾಷ್ಟ್ರಗಳ ನಿಧಿಸಹಾಯ ದೊರೆಯಿತು. ಅಮೆರಿಕದ 'ಸ್ವಾತಂತ್ರ್ಯ ಗಂಟೆ' ಪ್ರಸಿದ್ಧವಾದದ್ದು.

ವಿಧ ವಿಧದ ಸಂದೇಶವನ್ನು ಹೊತ್ತು ತರುವ ಗಂಟೆ ಆಧುನಿಕ ಯುಗದಲ್ಲಿ ವಿದ್ಯುತ್ತಿನ ಬಳಕೆಯಿಂದ ವಿಶಿಷ್ಟರೂಪ ತಳೆದಿದೆ. ಒಂದು ಸಣ್ಣ ಸುತ್ತಿಗೆಯಿಂದ ನಿರ್ದಿಷ್ಟ ನಾದ ಬರುವ ಲೋಹಪಟ್ಟಿಯನ್ನು ಬಡಿಯುವಂತೆ ವಿಶೇಷ ವ್ಯವಸ್ಥೆ ಮಾಡಲಾಗಿದೆ. ಕರೆಗಂಟೆಗಳನ್ನೂ ಹೀಗೆಯೇ ಬದಲಾಯಿಸಿದ್ದಾರೆ.

## ಗ್ರಂಥಾಲಯ

"ಗ್ರಂಥಗಳಿಲ್ಲದಿದ್ದಲ್ಲಿ ನ್ಯಾಯದೇವತೆ ನಿದ್ರಿಸುತ್ತಾಳೆ, ದೇವವಾಣಿ ಮೂಕವಾಗುತ್ತದೆ, ವಿಜ್ಞಾನದೇವತೆ ವಿಶ್ರಾಂತಿ ಪಡೆಯುತ್ತಾಳೆ, ತತ್ತ್ವಜ್ಞಾನ ಕುಂಠಿತವಾಗಿ ಸಾಹಿತ್ಯ ಬಾಯಿಗೆ ಬೀಗ ಹಾಕಿಕೊಂಡು ಬಿಡುತ್ತವೆ. ಉಳಿದುದೆಲ್ಲವೂ ಅಂಧಕಾರಮಯವಾಗುತ್ತವೆ."



ಮಾರ್ಗದರ್ಶನ ಮಾಡುವ ದಾರಿದೀಪ–ಗ್ರಂಥಾಲಯ

ಇದು ಡೆನ್ಮಾರ್ಕ್ ದೇಶದ ಥಾಮಸ್ ಬಾರ್ಥೊಲಿನ್ ಎಂಬ ಗ್ರಂಥ ಪಾಲನ ನುಡಿ. ಜಗತ್ತಿನ ಇತಿಹಾಸದಲ್ಲಿ ಗ್ರಂಥಾಲಯಗಳು ಮಾನವನ ವಿಕಾಸವನ್ನು ರೂಪಿಸುವ ಚೈತನ್ಯದ ಕೇಂದ್ರಗಳು. ಮಾನವನ ಬೌದ್ಧಿಕ, ಸಾಂಸ್ಕೃತಿಕ ಜೀವನದ ಏರಿಳಿತಗಳನ್ನು ಅಳೆಯುವ ಅಳತೆಗೋಲು. ಅಸ್ಪಷ್ಟ ಭವಿಷ್ಯತ್ತಿನಲ್ಲಿ ಸರಿಯಾಗಿ ಮಾರ್ಗದರ್ಶನ ಮಾಡುವ ದಾರಿದೀಪಗಳು.

ಗ್ರಂಥಾಲಯಗಳೆಂದರೆ ಓದುಗನ ಜ್ಞಾನಾರ್ಜನೆಗಾಗಿ ಸದಾ ತೆರೆದಿಟ್ಟಿರುವ ಗ್ರಂಥಗಳ ಸುವ್ಯವಸ್ಥಿತ ಸಂಗ್ರಹ. ಇದರಲ್ಲಿ ಇತರ ಲಿಖಿತ ವಸ್ತುಗಳೂ ಸೇರಿರುತ್ತವೆ. ಶಿಲೆ, ಇಟ್ಟಿಗೆ, ಹುಲ್ಲು, ಚರ್ಮ, ತೊಗಟೆ, ತಾಡವೋಲೆ, ತಾಮ್ರಪಟ, ಬಟ್ಟೆ, ಕಾಗದ, ಫಿಲ್ಮ್ ಇವೇ ಮೊದಲಾದ ವಿವಿಧ ಮಾಧ್ಯಮಗಳ ಮೂಲಕ ಮಾನವಕುಲದ ಜ್ಞಾನನಿಧಿ ಸಂಗ್ರಹಿತವಾಗಿದೆ.

ವೇದಕಾಲದಲ್ಲಿ ಜ್ಞಾನವು ಬಾಯಿಯಿಂದ ಬಾಯಿಗೆ ಸಾಗುತ್ತಿತ್ತು. ಅಂದಿನ ಜನರಿಗೆ ಗ್ರಂಥರೂಪದಲ್ಲಿ ಜ್ಞಾನ ಸಂಗ್ರಹಿಸುವ ಅವಶ್ಯತೆ ಕಂಡುಬರಲಿಲ್ಲ. ಲೇಖನಕಲೆ ಚಿತ್ರರೂಪವಾಗಿ ಜನ್ಮತಳೆದು, ಅಕ್ಷರಮಾಲೆಯಾಗಿ ಬೆಳೆದು, ಕ್ರಮೇಣ ಜಗತ್ತಿನಲ್ಲೆಲ್ಲ ವಿವಿಧ ಸಾಧನಗಳ ಮೂಲಕ ಜ್ಞಾನವನ್ನು ಬಿತ್ತರಿಸಿತು. ತಾನು ಕಷ್ಟಸಾಧನೆಯಿಂದ ಸಂಗ್ರಹಿಸಿದ ಜ್ಞಾನಭಂಡಾರವನ್ನು ಮುಂದಿನ ಪೀಳಿಗೆಗಾಗಿ ಸಂರಕ್ಷಿಸಬೇಕೆಂಬ ಮಾನವನ ಹಂಬಲ ಗ್ರಂಥ ನಿರ್ಮಾಣಕ್ಕೆ ದಾರಿ ಮಾಡಿತು.

ಪ್ರಾಚೀನ ಅಸೀರಿಯದ ನಿನಿವ, ಈಜಿಪ್ಟಿನ ಅಲೆಗ್ಸಾಂಡ್ರಿಯ ಹಾಗೂ ಪ್ರಾಚೀನ ಗ್ರೀಸಿನ ಪೆರ್ಗೆಮಮ್ ಗ್ರಂಥಾಲಯಗಳು ಜಗತ್ತಿನಲ್ಲಿಯೇ ಅತಿ ಪ್ರಾಚೀನ ಗ್ರಂಥಾಲಯಗಳೆಂದು ಪರಿಗಣಿಸಲ್ಪಟ್ಟಿವೆ. ನಿನಿವದಲ್ಲಿ ಇಟ್ಟಿಗೆಯ ಮೇಲೆ ಬರೆಯಲ್ಪಟ್ಟ 10,000 ಗ್ರಂಥಗಳು, ಅಲೆಗ್ಸಾಂಡ್ರಿಯದಲ್ಲಿ ಐದು ಲಕ್ಷಕ್ಕೂ ಮಿಕ್ಕಿ 'ಪೆಪಾಯರಸ್' ಸುರುಳಿಗಳು, ಪೆರ್ಗೆಮಮ್‌ನಲ್ಲಿ 2 ಲಕ್ಷಕ್ಕೂ ಮಿಕ್ಕಿ ಗ್ರಂಥಗಳು ಸಂಗ್ರಹಿತವಾಗಿದ್ದುವು. ರೋಮನ್ ಸಾಮ್ರಾಜ್ಯದ ಅವಧಿಯಲ್ಲಿಯೂ ಹಲವಾರು ಗ್ರಂಥಾಲಯಗಳಿದ್ದವು.

ಈ ಗ್ರಂಥಗಳನ್ನು ಸಂಗ್ರಹಿಸಿದ ರೀತಿ ಉಲ್ಲೇಖಾರ್ಹ. ಸುಮೇರಿಯ ಅಸೀರಿಯ ಬ್ಯಾಬಿಲನ್‌ಗಳಲ್ಲಿಯ ಇಟ್ಟಿಗೆಯ ಗ್ರಂಥಗಳು ವರ್ಗೀಕೃತವಾಗಿ ವಿವಿಧ ಪೀಪಾಯಿಗಳಲ್ಲಿ ಶೇಖರಿಸಲ್ಪಟ್ಟಿದ್ದುವು. ಜಗತ್ತಿನಲ್ಲಿಯೇ ಅತಿ ಪುರಾತನ ಬೈಬಲ್ ಪ್ರತಿಯೆಂದು ಪರಿಗಣಿಸಲ್ಪಟ್ಟ 'ಮೃತ ಸಮುದ್ರದ ಬರಹ' ಸುರುಳಿಯು ಮಡಕೆಯಲ್ಲಿ ಇಡಲ್ಪಟ್ಟಿತ್ತು. ಮುಂದೆ ಮಧ್ಯಯುಗದಲ್ಲಿ



ಚರ್ಚ್ ಮುಂತಾದ ಧಾರ್ಮಿಕ ಸಂಸ್ಥೆಗಳಲ್ಲಿ ಹಸ್ತಪ್ರತಿಗಳು ಸಂಗ್ರಹವಾಗಿ ಸರಪಳಿಯಿಂದ ಮೇಜುಗಳಿಗೆ ಬಿಗಿದು ರಕ್ಷಿಸಲ್ಪಟ್ಟುವು.

ಭಾರತದಲ್ಲಿಯ ಗ್ರಂಥಾಲಯ ಪರಂಪರೆ ಈ ದೇಶದ ಇತಿಹಾಸದಷ್ಟೇ ಪ್ರಾಚೀನ. ಮೊಹೆಂಜೊದಾರೊ ಸಂಸ್ಕೃತಿಯ ಐತಿಹಾಸಿಕ ಅವಶೇಷಗಳಲ್ಲಿ ಪ್ರಚಲಿತವಿದ್ದ ಲೇಖನಕಲೆ ಗ್ರಂಥಾಲಯಗಳ ಅಸ್ತಿತ್ವದ ಬಗ್ಗೆ ಊಹಾಪೋಹಗಳಿಗೆ ಆಸ್ಪದ ಕೊಟ್ಟಿದೆ. ಪ್ರಾಚೀನ ಭಾರತದಲ್ಲಿ ಶಿಲಾಶಾಸನಗಳು, ಭೂರ್ಜಪತ್ರ, ತಾಡವೋಲೆ ಮುಂತಾದ ಬರಹಗಳು ಆಯಾಕಾಲದಲ್ಲಿ ಮಠಗಳ, ವಿಹಾರ, ಗುಡಿಗುಂಡಾರಗಳ ಸೊತ್ತಾಗಿ ಹಾಗೂ ಧಾರ್ಮಿಕ ಕರ್ತವ್ಯವಾಗಿ ಸಂಗ್ರಹಿತವಾದುವು. ನಾಲ್ಕನೆಯ ಶತಮಾನದಿಂದ ಹದಿಮೂರನೆಯ ಶತಮಾನದವರೆಗೆ ವಿಶೇಷತಃ ಬೌದ್ಧ ವಿಹಾರಗಳು, ಹಿಂದೂ ದೇವಾಲಯಗಳು ಹಾಗೂ ಜೈನರ ಚೈತ್ಯಗಳು ಇಂಥ ಸಂಗ್ರಹಕಾರ್ಯವನ್ನು ಕೈಗೊಂಡುವು. ಮುಂದೆ ಕ್ರಮೇಣ ಅರಮನೆಗಳಲ್ಲಿ ವಿದ್ವಾಂಸರ ಹಾಗೂ ಸಿರಿವಂತರ ಸೌಧಗಳಲ್ಲಿ ಇಂಥ ಸಂಗ್ರಹಗಳು ಹುಟ್ಟಿಕೊಂಡುವು.

ಈ ಧರ್ಮಸಂಸ್ಥೆಗಳಲ್ಲಿಯೇ ಕೆಲವು ಬೆಳೆಯುತ್ತ ಬೆಳೆಯುತ್ತ ವಿಶ್ವವಿದ್ಯಾನಿಲಯಗಳಾಗಿ ಮಾರ್ಪಾಟು ಹೊಂದಿದುವು. ಇವು 'ವಿದ್ಯಾಮಠ'ಗಳೆಂದೂ 'ಘಟಕ'ಗಳೆಂದೂ ಕರೆಯಲ್ಪಡುತ್ತಿದ್ದುವು. ಇಂಥ ವಿಶ್ವವಿದ್ಯಾನಿಲಯಗಳು ಸಂಗ್ರಹಿಸಿ ಬೆಳೆಸಿದ ಗ್ರಂಥ ಭಂಡಾರಗಳಲ್ಲಿ ಕೆಲವೊಂದು ಗ್ರಂಥ ಭಂಡಾರಗಳು ವಿಶ್ವಮನ್ನಣೆ ಪಡೆದುವು. ಅವುಗಳಲ್ಲಿ ನಲಂದಾ ಹಾಗೂ ತಕ್ಷಶಿಲೆ ಮುಖ್ಯವಾದುವುಗಳು. ಬಿಹಾರಿನಲ್ಲಿನ ಈಗಿನ ಬಾರಾಗಾಂವ್ ಹಳ್ಳಿಯೇ ಆಗ ಬೌದ್ಧ ವಿಶ್ವವಿದ್ಯಾನಿಲಯವಿದ್ದ ನಲಂದಾ ನಗರವಾಗಿದ್ದಿತು. ಮಗಧ ದೇಶದ ಅರಸು ಬಾಲಾದಿತ್ಯ ಕ್ರಿ. ಶ. 300ರಲ್ಲಿ ಇಲ್ಲಿ ಬಹು ರಮ್ಯವಾದ ಬೌದ್ಧ ವಿಹಾರವನ್ನು ಕಟ್ಟಿಸಿದ. ಇದೇ ಬೆಳೆಯುತ್ತ ಮುಂದಿನ 150 ವರ್ಷಗಳಲ್ಲಿ ವಿಶ್ವವಿದ್ಯಾನಿಲಯವಾಗಿ ರೂಪುಗೊಂಡಿತು. ಈ ವಿಶ್ವವಿದ್ಯಾನಿಲಯದ ಗ್ರಂಥಭಂಡಾರವು 'ರತ್ನೋದಧಿ' ಎಂಬ ಭವ್ಯಮಂದಿರದಲ್ಲಿ ಸ್ಥಾಪಿಸಲ್ಪಟ್ಟಿತ್ತು. ಚೀನ ದೇಶದ ಬೌದ್ಧಭಿಕ್ಷು ಹ್ಯುಯೆನ್–ತ್ಸಾಂಗನು ಸ್ವದೇಶಕ್ಕೆ ಮರಳುವಾಗ ಈ ಗ್ರಂಥಾಲಯದಿಂದ 'ಬಂಡಿಗಟ್ಟಲೆ' ಕೈಬರಹದ ಪ್ರತಿಗಳನ್ನು ಮಾಡಿಸಿಕೊಂಡು ಒಯ್ದುನೆಂದು ಉಲ್ಲೇಖವಿದೆ. ಇದಾದ ಮೂವತ್ತು ವರ್ಷಗಳ ಅನಂತರ ಚೀನ ದೇಶದ ಇಟ್ಸಿಂಗನು ನಲಂದಾದಿಂದಲೇ ಐದು ಲಕ್ಷ ಶ್ಲೋಕಗಳುಳ್ಳ 400 ಸಂಸ್ಕೃತ ಗ್ರಂಥಗಳ ಪ್ರತಿಗಳನ್ನು ಮಾಡಿಸಿಕೊಂಡು ಹೋದ.

ತಕ್ಷಶಿಲೆಯಲ್ಲಿಯ ವಿಶ್ವವಿದ್ಯಾನಿಲಯವೂ ವಿಶ್ವಮನ್ನಣೆಗೆ ಪಾತ್ರವಾಗಿತ್ತು. ವ್ಯಾಕರಣ ಪಂಡಿತ ಪಾಣಿನಿ, ಅರ್ಥಶಾಸ್ತ್ರದ ಮೇಧಾವಿ ಕೌಟಿಲ್ಯ, ಆಯುರ್ವೇದದ ಧನ್ವಂತರಿ, ಚರಕ ಮುಂತಾದ ಇತಿಹಾಸ ಪುರುಷರು ಈ ವಿಶ್ವವಿದ್ಯಾನಿಲಯದಲ್ಲಿದ್ದರು. ಈ ಕಾಲಕ್ಕೆ ಕಾಶಿಯಲ್ಲಿಯೂ ಪ್ರಸಿದ್ಧ ವಿಶ್ವವಿದ್ಯಾನಿಲಯವೊಂದು ಅಸ್ತಿತ್ವದಲ್ಲಿತ್ತು. ಸೌರಾಷ್ಟ್ರ, ಬಿಹಾರ ಹಾಗೂ ಗುಜರಾತ್‌ಗಳಲ್ಲಿ ಪ್ರಚಲಿತವಿದ್ದ ಅನೇಕ ಮಹತ್ವಪೂರ್ಣ ಗ್ರಂಥಾಲಯಗಳ ಉಲ್ಲೇಖಗಳು ನಮಗೆ ಸಿಗುತ್ತವೆ.

ಕರ್ನಾಟಕದಲ್ಲಿಯೂ ಹಿಂದೆ ಹಲವಾರು ವಿಶ್ವವಿದ್ಯಾನಿಲಯ ಗ್ರಂಥಾಲಯಗಳು ಕೆಲಕಾಲ ಬಾಳಿ ಬದುಕಿ. ಕೀರ್ತಿಶೇಷವಾಗಿ ಹೋಗಿವೆ. ಕದಂಬ ರಾಷ್ಟ್ರಕೂಟ ಚಾಲುಕ್ಯ ಹೊಯ್ಸಳ ರಾಜರು ವಿಶ್ವವಿದ್ಯಾನಿಲಯ ಹಾಗೂ ಗ್ರಂಥಾಲಯಗಳನ್ನು ಸ್ಥಾಪಿಸುವಲ್ಲಿ ವಿಶೇಷ ಆಸ್ಥೆ ತಳೆದಿದ್ದರು. ತಾಳಗುಂದ, ಪಾವಿಟ್ಟಗೆ (ಸಾಲೋಟಗಿ), ನಾಗಾವಿ, ಬಳ್ಳಿಗಾಂವಿ. ಕುಪ್ಪಟೂರು. ಐಹೊಳೆ, ಪಟ್ಟದಕಲ್ಲು ಮುಂತಾದ ಸ್ಥಳಗಳಲ್ಲಿ ವಿಶ್ವವಿದ್ಯಾನಿಲಯಗಳಿದ್ದ



ಕಲ್ಕತ್ತದಲ್ಲಿರುವ ರಾಷ್ಟ್ರೀಯ ಗ್ರಂಥಾಲಯ

ವೆಂಬುದು ಅಂದಿನ ಶಾಸನಗಳಿಂದ ತಿಳಿದುಬರುತ್ತದೆ. ಸುಮಾರು 1058ರಲ್ಲಿ ನಾಗಾವಿಯಲ್ಲಿ ಮಧುಸೂದನನೆಂಬ ದಂಡನಾಯಕನು ಅಲ್ಲಿಯ ವಿಶ್ವವಿದ್ಯಾನಿಲಯಕ್ಕೆ 30,353 ಚ. ಕಿ. ಮಿ. ಭೂಮಿಯನ್ನು ಉದಾರವಾಗಿ ದಾನ ಕೊಟ್ಟನು. ಆ ಸಮಯದಲ್ಲಿ ಗ್ರಂಥಾಲಯ ನೋಡಿಕೊಳ್ಳಲು ಆರು ಜನ ಗ್ರಂಥಪಾಲರಿದ್ದರು. ವಿಜಯನಗರದ ಅರಸರ ಕಾಲದಲ್ಲಿಯೂ ಶೈಕ್ಷಣಿಕ ಹಾಗೂ ಸಾರ್ವಜನಿಕ ವಾಚನಾಲಯಗಳಿದ್ದುವು. ಬುಕ್ಕರಾಜನು ಶೃಂಗೇರಿ ಮಠದಲ್ಲಿಯ ಗ್ರಂಥಾಲಯದ ಸುವ್ಯವಸ್ಥೆಗಾಗಿ ಪುರಾಣಿಕ ಕವಿ ಕೃಷ್ಣಭಟ್ಟನಿಗೆ ಭೂಮಿಯನ್ನು ದಾನವಾಗಿ ಕೊಟ್ಟ ಉಲ್ಲೇಖವಿದೆ.

ತಂಜಾವೂರಿನ ಸರಸ್ವತೀ ಮಹಾ ಗ್ರಂಥಾಲಯ ಹಾಗೂ ಪಾಟ್ನಾದಲ್ಲಿಯ ಖುದಾಬಕ್ಷ ಗ್ರಂಥಾಲಯಗಳಲ್ಲಿ ಪ್ರಾಚೀನ ಹಸ್ತಪ್ರತಿಗಳ ಅಪೂರ್ವ ಸಂಗ್ರಹವನ್ನು ಈಗಲೂ ನೋಡಬಹುದು.

ಕಾಗದ ತಯಾರಿಕೆ ಹಾಗೂ ಮುದ್ರಣಕಲೆ ಕಂಡುಹಿಡಿದ ಅನಂತರ ಗ್ರಂಥಗಳ ನಿರ್ಮಾಣ ಮತ್ತು ಸಂಗ್ರಹಕಾರ್ಯಕ್ಕೆ ಹೆಚ್ಚು ಪುಟ ದೊರಕಿತು.

ವಿಜ್ಞಾನಯುಗದಲ್ಲಿ ಗ್ರಂಥಾಲಯ ಮಹತ್ವವೂ ಹೆಚ್ಚಿತು. ಅತ್ಯಾಧುನಿಕ ಸಲಕರಣೆಗಳಿಂದ ಸುಸಜ್ಜಿತವಾದ ಭವ್ಯ ಕಟ್ಟಡಗಳಲ್ಲಿ ಗ್ರಂಥಾಲಯಗಳು ರೂಪುಗೊಳ್ಳುತ್ತಿವೆ. ವೈವಿಧ್ಯಪೂರ್ಣವಾಗಿ ಭಿನ್ನ ಅಭಿರುಚಿಗಳಿಗೆ ತಕ್ಕಂತೆ ಗ್ರಂಥಾಲಯಗಳು ಸೇವೆ ಸಲ್ಲಿಸುತ್ತಿವೆ. ಇಂದಿನ ಗ್ರಂಥಾಲಯಗಳಲ್ಲಿ ವಯೋಮಾನಕ್ಕೆ ಅನುಗುಣವಾಗಿ ಎಲ್ಲ ವರ್ಗಗಳಿಗೆ ತೃಪ್ತಿ ನೀಡಬಹುದಾದ ವಿಪುಲ ಗ್ರಂಥಸಂಗ್ರಹವಿರುತ್ತದೆ. ಒಪ್ಪ ಓರಣದ ಗ್ರಂಥ ಜೋಡಣೆಯಿರುತ್ತದೆ. ಚಿತ್ತಾಕರ್ಷಕವಾದ ಶಾಂತ ವಾತಾವರಣವಿರುತ್ತದೆ. ಈ ಎಲ್ಲ ಕಾರಣಗಳಿಂದ ಗ್ರಂಥಾಲಯಗಳು ಓದುಗರನ್ನು ಹೆಚ್ಚು ಹೆಚ್ಚಾಗಿ ಆಕರ್ಷಿಸುತ್ತವೆ. ಮನೋರಂಜನೆ, ಜ್ಞಾನಾರ್ಜನೆ, ಸಂಶೋಧನೆ ಮುಂತಾದ ಯಾವುದೇ ಉದ್ದೇಶದಿಂದ ಓದುಗನು ಗ್ರಂಥಾಲಯದಲ್ಲಿ ಪ್ರವೇಶಿಸಲಿ. ಅವನ ಬಯಕೆಗಳಿಗೆ ಅನುಸಾರವಾಗಿ ತೃಪ್ತಿಕರವಾಗಿ ಗ್ರಂಥಾಲಯವು ಸೇವೆ ಸಲ್ಲಿಸುವ ಏರ್ಪಾಟಿರುತ್ತದೆ.

ಅತಿ ನೂತನವಾದ ವಿಷಯ ವಿವೇಚನೆಯ ಗ್ರಂಥ ಸಂಗ್ರಹ ಇಲ್ಲಿ ದೊರಕಬಹುದು. ಯಾವುದೇ ನಿರ್ದಿಷ್ಟ ವಿಷಯದ ಬಗೆಗೆ ಆಳವಾದ ವಿಶೇಷ ಅಭ್ಯಾಸಕ್ಕೆ ಅನುಕೂಲವಾದ ಬೆಲೆ ಬಾಳುವ ಗ್ರಂಥಗಳು ಇಲ್ಲಿ ಸುಲಭವಾಗಿ ಸಿಗಬಹುದು. ಓದುಗನು ಪುಸ್ತಕಗಳನ್ನು ಜೋಡಿಸಿಟ್ಟ ಕಪಾಟುಗಳಿಗೆ ನೇರವಾಗಿ ಹೋಗಿ ತನಗೆ ಬೇಕಾದ ಪುಸ್ತಕಗಳನ್ನು ತಾನೇ ಆಯ್ದುಕೊಳ್ಳಬಹುದು. ಓದುಗರ ಸೇವೆಗಾಗಿ ತರಬೇತಿ ಹೊಂದಿದ ಸಿಬ್ಬಂದಿ ಇರುತ್ತದೆ. ಅನೇಕಾನೇಕ ಗ್ರಂಥ ಹಾಗೂ ನಿಯತಕಾಲಿಕಗಳಲ್ಲಿಯ ಲೇಖನ ವಿಷಯಗಳನ್ನು ಬೆರಳಿಟ್ಟು ತೋರಿಸುವ ಸೂಚಿಗಳಿರುತ್ತವೆ. ವಿವಿಧ ಪ್ರಕಾರದ ಗ್ರಂಥಗಳ ಹಾಗೂ ನಿಯತಕಾಲಿಕಗಳ ವೈವಿಧ್ಯಪೂರ್ಣ ಸೂಚಿಗಳಿರುತ್ತವೆ. ಸಂದರ್ಭಗ್ರಂಥಗಳ ಸಂಗ್ರಹವಿರುತ್ತದೆ. ಈ ರೀತಿಯ ಗ್ರಂಥ ಸಂಗ್ರಹಕ್ಕೆ ಸಹಕಾರಿಯಾಗಿ ಗ್ರಾಮಾಫೋನ್ ರಿಕಾರ್ಡುಗಳು, ಫಿಲ್ಮುಗಳು, ಸ್ಲೈಡುಗಳು, ಚಿತ್ರಗಳು, ನಕ್ಷೆಗಳು ಮುಂತಾದ ಜ್ಞಾನಸಾಧನ ಸಾಮಗ್ರಿಗಳೂ ಇರುತ್ತವೆ. ಓದುಗನು ಬಯಸಿದ ಗ್ರಂಥ ಆಯಾ ಗ್ರಂಥಾಲಯದಲ್ಲಿ ದೊರೆಯದಿದ್ದರೆ ದೇಶದ ಹಾಗೂ ಜಗತ್ತಿನ ಯಾವುದೇ ಗ್ರಂಥಾಲಯದಲ್ಲಿದ್ದರೂ ಅದನ್ನು ಓದುಗರಿಗೆ ಎರವಾಗಿ ತಂದು ಒದಗಿಸುವ ವಿಶೇಷ ವ್ಯವಸ್ಥೆ ಇರುತ್ತದೆ. ಯಾವುದಾದರೂ ಮಹತ್ವಪೂರ್ಣ ಗ್ರಂಥದ ಕೆಲವು ಪುಟಗಳಾಗಲಿ ಅಥವಾ ದುರ್ಲಭ ಹಾಗೂ ಅತ್ಯಮೂಲ್ಯ ಹಸ್ತಪ್ರತಿಗಳಲ್ಲಿಯ ವಿಷಯವಾಗಲಿ ಬೇಕಾದರೆ, ಅವನ್ನು ಫೋಟೊ ಪ್ರತಿಯ ಮೂಲಕ ಒದಗಿಸುವ ವ್ಯವಸ್ಥೆಯೂ ಇರುತ್ತದೆ.

ಗ್ರಂಥಾಲಯಗಳಲ್ಲಿಯೂ ವಿವಿಧ ಪ್ರಕಾರಗಳುಂಟು. ಆಯಾಪ್ರಕಾರದ ಗ್ರಂಥಾಲಯಗಳ ಕಾರ್ಯವ್ಯಾಪ್ತಿಯು ಅವುಗಳ ಉದ್ದೇಶಕ್ಕೆ ತಕ್ಕಂತೆ ಪರಿಮಿತವಾಗಿರುತ್ತದೆ. ಕಾಲೇಜು ಗ್ರಂಥಾಲಯ, ವಿಶ್ವವಿದ್ಯಾನಿಲಯ ಗ್ರಂಥಾಲಯ, ಸಾರ್ವಜನಿಕ ಗ್ರಂಥಾಲಯ, ಸರಕಾರದ ವಿವಿಧ ಖಾತೆಗಳ ಗ್ರಂಥಾಲಯ, ಚಿಕ್ಕಮಕ್ಕಳ ಗ್ರಂಥಾಲಯ, ಕುರುಡರ ಗ್ರಂಥಾಲಯ. ಹೀಗೆ ಹಲವಾರು ಪ್ರಕಾರದ ಗ್ರಂಥಾಲಯಗಳು ವೈಶಿಷ್ಟ್ಯಪೂರ್ಣ ಸೇವೆ ಸಲ್ಲಿಸುತ್ತವೆ.

ಸಾರ್ವಜನಿಕ ಗ್ರಂಥಾಲಯಗಳು : ಸಮಾಜದ ಎಲ್ಲ ಅಂತಸ್ತಿನ ಜನತೆಗೂ ಅವರವರ ಗ್ರಹಣಶಕ್ತಿಯ ಅಂತಸ್ತುಗಳಿಗೆ ಅನುಗುಣವಾಗಿ ಸೇವೆ ಸಲ್ಲಿಸುತ್ತವೆ. ಭಾರತದಲ್ಲಿ ಇಂಥ ಒಂದೇ ಒಂದು ಮಾದರಿ ಸಾರ್ವಜನಿಕ ಗ್ರಂಥಾಲಯ ದೆಹಲಿಯಲ್ಲಿ ಸ್ಥಾಪಿಸಲ್ಪಟ್ಟಿದೆ.

ಶೈಕ್ಷಣಿಕ ಗ್ರಂಥಾಲಯಗಳು : ಶಾಲೆ, ಕಾಲೇಜು, ವಿಶ್ವವಿದ್ಯಾನಿಲಯಗಳ ಅಂಗವಾಗಿ ಈ ಗ್ರಂಥಾಲಯಗಳು ಸ್ಥಾಪಿತವಾಗಿರುತ್ತವೆ. ಅಲ್ಲಿಯ ಗ್ರಂಥಗಳ ಸಂಗ್ರಹ ಹಾಗೂ ಸೇವೆಗಳು ಅಲ್ಲಿನ ವಿದ್ಯಾರ್ಥಿಗಳ ಹಾಗೂ ಶಿಕ್ಷಕ ವೃಂದಗಳ ವಿಶಿಷ್ಟವಾದ ಬೇಡಿಕೆಗಳನ್ನು ಪೂರೈಸುತ್ತವೆ.

ವಿಶಿಷ್ಟ ಗ್ರಂಥಾಲಯಗಳು : ಉದ್ಯಮ ಕೈಗಾರಿಕೆಗಳು, ವೈಜ್ಞಾನಿಕ ಕೇಂದ್ರಗಳು, ಸಂಶೋಧನಾ ಸಂಸ್ಥೆಗಳು ತಮ್ಮ ತಮ್ಮ ಕಾರ್ಯಕ್ಕೆ ಪೋಷಕವಾಗುವಂಥ ಗ್ರಂಥಾಲಯಗಳನ್ನು ಕಟ್ಟಿಕೊಂಡಿರುತ್ತವೆ. ಈ ಗ್ರಂಥಾಲಯಗಳಲ್ಲಿ ಆಯಾ ಉದ್ಯಮ ಸಂಸ್ಥೆಗಳ ಉದ್ದೇಶ ಸಾಧನೆಗೆ ತಕ್ಕಂತೆ ಕೆಲವು ನಿರ್ದಿಷ್ಟ ವಿಷಯಗಳ ಮೇಲೆ ಮಾತ್ರ ಗ್ರಂಥ ಸಂಗ್ರಹವಿರುತ್ತದೆ. ಭಾಭಾ ಪರಮಾಣುಶಕ್ತಿ ಕೇಂದ್ರದ ಗ್ರಂಥಾಲಯವು ಈ ಮಾದರಿಗೆ ಒಂದು ಉತ್ಕೃಷ್ಟ ಉದಾಹರಣೆ. ಇದೇ ರೀತಿ ಜೈಲಿನಲ್ಲಿ ಕೈದಿಗಳಿಗೆ, ಆಸ್ಪತ್ರೆಗಳಲ್ಲಿನ ರೋಗಿಗಳಿಗೆ, ಹಡಗಿನಲ್ಲಿಯ ನಾವಿಕರಿಗೆ ಮುಂತಾಗಿ ವಿವಿಧ ಪ್ರಕಾರದ ಗ್ರಂಥಾಲಯಗಳು ಅಸ್ತಿತ್ವದಲ್ಲಿವೆ.

ಸ್ವತಂತ್ರ ಭಾರತದಲ್ಲಿ ಜನಜಾಗೃತಿಯನ್ನು ಉಳಿಸಿಕೊಂಡು ಬೆಳೆಸಿಕೊಂಡು ಬರಲು ದೇಶದಾದ್ಯಂತ ಗ್ರಂಥಾಲಯಗಳ ಜಾಲ ಹರಡಬೇಕು. ಇದಕ್ಕಾಗಿ ಯೋಜನೆಗಳು ರೂಪುಗೊಂಡು ಕಾರ್ಯಗತವಾಗಿವೆ. ಪ್ರಥಮ ಪಂಚವಾರ್ಷಿಕ ಯೋಜನೆಯ ಪೂರ್ವದಲ್ಲಿಯೇ ಭಾರತ ಸರಕಾರ ಭಾರತದ ರಾಷ್ಟ್ರೀಯ ಗ್ರಂಥಾಲಯವನ್ನು ಕಲ್ಕತ್ತದಲ್ಲಿ ಸ್ಥಾಪಿಸಿ ಗ್ರಂಥಾಲಯ ಪ್ರಸಾರಕ್ಕೆ ನಾಂದಿ ಹಾಡಿತು. ಈ ಗ್ರಂಥಾಲಯ ಭಾರತದಲ್ಲಿಯೇ ಅತಿ ದೊಡ್ಡದು. ಇಲ್ಲಿ ಹದಿನಾಲ್ಕು ಲಕ್ಷಕ್ಕೂ ಮಿಾರಿ ಗ್ರಂಥಗಳು, ಮೂರು ಸಾವಿರಕ್ಕೂ ಮಿಕ್ಕ ಹಸ್ತ ಪ್ರತಿಗಳು, ಹತ್ತು ಸಾವಿರದಷ್ಟು ನಿಯತಕಾಲಿಕಗಳು ಸಂಗ್ರಹಿತವಾಗಿವೆ. 1954ರಲ್ಲಿ ಪುಸ್ತಕ ವಿತರಣಾ ಶಾಸನ ಜಾರಿಯಲ್ಲಿ ಬಂದಂದಿನಿಂದ ದೇಶದಲ್ಲಿ ಪ್ರಕಟವಾದ ಪ್ರತಿಯೊಂದು ಗ್ರಂಥದ ಪ್ರತಿ ಇಲ್ಲಿ ಉಚಿತವಾಗಿ ಸಂಗ್ರಹಿತವಾಗುತ್ತದೆ.

ದೇಶದ ವಿವಿಧ ರಾಜ್ಯಗಳಲ್ಲಿ ಗ್ರಂಥಾಲಯ ಶಾಸನಗಳು ರೂಪುಗೊಳ್ಳುತ್ತಿವೆ. 1965ರಲ್ಲಿಯೇ ಮೈಸೂರು ರಾಜ್ಯ ಗ್ರಂಥಾಲಯ ಶಾಸನವನ್ನು ಮಾಡಿತು. ಇದರಿಂದ ರಾಜ್ಯಕೇಂದ್ರ ಗ್ರಂಥಾಲಯ, ಜಿಲ್ಲಾ ಕೇಂದ್ರ ಗ್ರಂಥಾಲಯ ಮುಂತಾಗಿ ರಾಜ್ಯದೆಲ್ಲೆಡೆಗಳಲ್ಲಿ ಗ್ರಂಥಾಲಯ ಸೇವೆ ಸಲ್ಲುತ್ತಿದೆ.

ವಿಶ್ವವಿದ್ಯಾನಿಲಯ ಅನುದಾನ ಮಂಡಲಿಯು ದೇಶದಲ್ಲಿನ ವಿಶ್ವವಿದ್ಯಾನಿಲಯ ಹಾಗೂ ಮಹಾ ವಿದ್ಯಾಲಯಗಳ ಗ್ರಂಥಾಲಯಗಳ ಉತ್ಕರ್ಷಕ್ಕೆ ವಿಶೇಷ ಲಕ್ಷ್ಯ ಕೊಟ್ಟಿದೆ. ಗ್ರಂಥಾಲಯ ವಿಜ್ಞಾನದಲ್ಲಿ ತರಬೇತಿ ವರ್ಗಗಳನ್ನು ದೇಶದ ಹಲವಾರು ವಿಶ್ವವಿದ್ಯಾನಿಲಯಗಳಲ್ಲಿ ತೆರೆಯಲಾಗಿದೆ. ಮೈಸೂರು ರಾಜ್ಯದಲ್ಲಿ ಕರ್ನಾಟಕ ವಿಶ್ವವಿದ್ಯಾಲಯ, ಮೈಸೂರು ವಿಶ್ವವಿದ್ಯಾನಿಲಯ ಇಲ್ಲಿ ಈ ತರಬೇತಿ ಶಿಕ್ಷಣವನ್ನು ಕೊಡಲಾಗುತ್ತಿದೆ.

## ಗಡಿ

ಒಂದು ದೇಶವನ್ನು ಮತ್ತೊಂದು ದೇಶದಿಂದ ಪ್ರತ್ಯೇಕಿಸುವ ಗೆರೆ ಗಡಿ ಅಥವಾ ಸೀಮಾರೇಖೆ. ಭೂಪಟದಲ್ಲಿ ಒಂದೊಂದು ದೇಶದ ಕ್ಷೇತ್ರವನ್ನು ಅಂಚಿನಲ್ಲಿ ಕಪ್ಪುಗೆರೆಯಿಂದ ಗುರುತಿಸಿರುತ್ತಾರೆ. ಅದೇ ಆ ದೇಶದ ಗಡಿ. ಆ ಗಡಿಯ ಒಳಪ್ರದೇಶವೆಲ್ಲ ದೇಶಕ್ಕೆ ಸೇರಿದ್ದು, ಉಳಿದದ್ದು ಬೇರೆ ದೇಶದ್ದು.

ಒಂದು ದೇಶಕ್ಕೂ ಮತ್ತೊಂದು ದೇಶಕ್ಕೂ ನಡುವೆ ನದಿ, ಸರೋವರ ಮುಂತಾದುವು ಬಂದುಬಿಟ್ಟರೆ ಅವು ಯಾವ ದೇಶಕ್ಕೆ ಸೇರಿದ್ದು ಎಂದು ನಿರ್ಧರಿಸುವುದು ಹೇಗೆ? ನದಿ ಅಥವಾ ಸರೋವರದ ಮಧ್ಯಭಾಗದಲ್ಲಿ ಗಡಿಯನ್ನು ಕಲ್ಪಿಸಿ ಎರಡು ದೇಶಕ್ಕೂ ಸಮನಾಗಿ ಹಂಚಿಬಿಡುತ್ತಾರೆ.

ಸಾಮಾನ್ಯವಾಗಿ ರಾಷ್ಟ್ರಗಳ ನಡುವಣ ಗಡಿ ಒಂದೇ ಸಮನಾಗಿ ಉಳಿದಿರುವುದಿಲ್ಲ. ಬದಲಾಗುತ್ತಲೇ ಇರುತ್ತದೆ. ಕೆಲವೊಮ್ಮೆ ಹೊಸ ರಾಜ್ಯಗಳು ಸೇರಬಹುದು. ಹತ್ತೊಂಬತ್ತನೆಯ ಶತಮಾನದ ಆದಿಯಲ್ಲಿ ಇಟಲಿಯಲ್ಲಿ ಒಂಬತ್ತು ರಾಜ್ಯಗಳಿದ್ದುವು. ಆದರೆ 1870ರ ವೇಳೆಗೆ ಮತ್ತೊಂದು ಹೊಸ ರಾಜ್ಯ ಸೇರಿ ಅದರ ಗಡಿಯನ್ನು ಮುಂದಕ್ಕೆ ನೂಕಬೇಕಾಯಿತು. ರಾಷ್ಟ್ರಗಳು ಹೊಸ ದೇಶಗಳನ್ನು ಗೆಲ್ಲುವುದರ ಮೂಲಕ ತಮ್ಮ ವಿಸ್ತಾರವನ್ನು ಹೆಚ್ಚಿಸಿಕೊಳ್ಳುತ್ತಿದ್ದುವು. ಇತರ ದೇಶಗಳ ನೆಲವನ್ನು ಕೊಂಡುಕೊಂಡು ಒಂದು ದೇಶ ತನ್ನ ವಿಸ್ತಾರವನ್ನು ಹೆಚ್ಚಿಸುವುದೂ ಉಂಟು. 1867ರಲ್ಲಿ ಅಮೆರಿಕ ಅಲಾಸ್ಕವನ್ನು ರಷ್ಯಕ್ಕೆ ಹಣನೀಡಿ ಪಡೆದು, ತನ್ನ ಗಡಿಯನ್ನು ವಿಸ್ತರಿಸಿತು. ಹೀಗೆ ಅನೇಕ ಕಾರಣಗಳಿಂದ ರಾಷ್ಟ್ರಗಳ ನಡುವಣ ಗಡಿ ಪ್ರದೇಶಗಳು ಬದಲಾಗುತ್ತವೆ.

ರಾಷ್ಟ್ರಗಳ ಗಡಿಯನ್ನು ವಾಸ್ತವವಾಗಿ ಎಳೆದಿರುವುದಿಲ್ಲ. ಸಹಜವಾದ ಗಡಿ ಇಲ್ಲದಿದ್ದಾಗ ಅದನ್ನು ಗುರುತಿಸಲು ಕೆಲವು ಕಲ್ಲುಗಳನ್ನು ನೆಡಬಹುದು. ಅಥವಾ ಮುಳ್ಳುಬೇಲಿಯನ್ನು ಹಾಕಬಹುದು. ಕೆಲವೆಡೆಗಳಲ್ಲಿ ಭೌಗೋಳಿಕ ಮೇರೆಗಳೇ ರಾಜಕೀಯ ಗಡಿಗಳಾಗಿರುವುದೂ ಉಂಟು. ಫ್ರಾನ್ಸ್ ಮತ್ತು ಸ್ಪೇನ್ ದೇಶಗಳ ನಡುವೆ ಪಿರನೀಸ್ ಪರ್ವತಗಳೇ ಗಡಿ.

ಕೆಲವು ರಾಷ್ಟ್ರಗಳ ಗಡಿಗಳಲ್ಲಿ ಬಲವಾದ ಕಾವಲನ್ನು ಇಟ್ಟಿರುತ್ತಾರೆ. ಗಡಿಯ ರಕ್ಷಣೆಯಲ್ಲಿ ಇಡೀ ರಾಷ್ಟ್ರದ ಭದ್ರತೆಯೇ ಅಡಗಿದೆ.

ಸಹಜವಾದ ಗಡಿ ಇದ್ದರೆ ಯಾವ ವಿವಾದಕ್ಕೂ ಅವಕಾಶವಿಲ್ಲ. ಸಿಂಹಳ, ಬ್ರಿಟನ್‌ನಂತೆ ದ್ವೀಪಗಳಾದರೆ ಪ್ರಕೃತಿ ಸೃಷ್ಟಿಸಿದ ಮೇರೆಯೇ ಸ್ಪಷ್ಟ. ಭಾರತಕ್ಕೆ ಕಡಲದಂಚೆ ಇರುವ ಭಾಗದಲ್ಲಿ ಈ ಅನುಕೂಲವಿದೆ. ಬಹು ಕಾಲ ಹಿಮಾಲಯ ಪರ್ವತ ನಿಸರ್ಗ ಸೃಷ್ಟಿಸಿದ ಒಂದು ಗಡಿಯಾಗಿತ್ತು. ರಾಷ್ಟ್ರಗಳ ನಡುವೆ ಗಡಿಯ ಬಗೆಗೆ ವಿವಾದವೆದ್ದಾಗ ಸಾಧ್ಯವಾದರೆ ತಾವೇ ಒಪ್ಪಂದದಿಂದ ಪರಿಹರಿಸಿಕೊಳ್ಳಬಹುದು. 1848ರಲ್ಲಿ ಅಮೆರಿಕದ ಸಂಯುಕ್ತ ಸಂಸ್ಥಾನ ಮತ್ತು ಮೆಕ್ಸಿಕೋ ಹೀಗೆ ಮಾಡಿದುವು. ಇದು ಸಾಧ್ಯವಾಗದಿದ್ದಾಗ ವಿಶ್ವಸಂಸ್ಥೆಯ ಸಹಾಯ ಕೋರುವುದುಂಟು. ಜೋರ್ಡಾನ್ ಮತ್ತು ಇಸ್ರೇಲ್‌ಗಳ ನಡುವಣ ಗಡಿಯನ್ನು ವಿಶ್ವಸಂಸ್ಥೆಯ ನೆರವಿನಿಂದ ನಿರ್ಧರಿಸಲಾಯಿತು. ಭಾರತ–ಪಾಕಿಸ್ತಾನಗಳ ನಡುವೆ ಕಚ್‌ನಲ್ಲಿ ಗಡಿ ವಿವಾದ ಉಂಟಾದಾಗ ಅಂತರರಾಷ್ಟ್ರೀಯ ನ್ಯಾಯಾಲಯದ ತೀರ್ಮಾನವನ್ನು ಎರಡು ದೇಶಗಳು ಒಪ್ಪಿಕೊಂಡುವು.

ಸಾಮಾನ್ಯವಾಗಿ ದೇಶಗಳ ಭದ್ರತೆ, ಜನರ ಬುಡಕಟ್ಟು, ಆರ್ಥಿಕ ಅಭಿವೃದ್ಧಿ, ಭೌಗೋಳಿಕ ಅನುಕೂಲತೆ, ಚರಿತ್ರೆ—ಈ ಅಂಶಗಳನ್ನು ಗಮನಿಸಿ ದೇಶದ ಗಡಿಗಳನ್ನು ಗುರುತಿಸುತ್ತಾರೆ.

## ಗಡಿಪಾರು

ಕೊಲೆ ಮುಂತಾದ ಕ್ರೂರಕೃತ್ಯಗಳಿಗಾಗಿ ಗಡಿಪಾರು ಮಾಡುವ ಪದ್ಧತಿ ಬಹಳ ಹಿಂದಿನದು. ಪ್ರಾಚೀನ ಗ್ರೀಕರ ಕಾಲದಲ್ಲಿಯೂ ಇದು ಜಾರಿಯಲ್ಲಿದ್ದಿತು. ರಾಜದ್ರೋಹ ಮಾಡಿದವರಿಗೂ ಗಡಿಪಾರು ಶಿಕ್ಷೆಯನ್ನು ವಿಧಿಸಲಾಗುತ್ತಿತ್ತು. ಮರಣದಂಡನೆ ಅಥವಾ ಗಡಿಪಾರು ಇವೆರಡರಲ್ಲಿ ಅಪರಾಧಿ ಯಾವುದನ್ನು ಬೇಕಾದರೂ ಆರಿಸಿಕೊಳ್ಳಬಹುದಿತ್ತು. ಕೆಲವೊಮ್ಮೆ ಗಡಿಪಾರಿನ ಜೊತೆಗೆ ಆಸ್ತಿಯನ್ನೂ ಮುಟ್ಟುಗೋಲು ಹಾಕುತ್ತಿದ್ದರು. ರೋಮಿನಲ್ಲಿ ಗಡಿಪಾರು ಎರಡು ವಿಧವಾಗಿದ್ದಿತು. ಅಪರಾಧಿಯ ಪೌರ ಹಕ್ಕುಗಳನ್ನು ಕಸಿದುಕೊಂಡು, ಆಸ್ತಿಯನ್ನು ಸ್ವಾಧೀನಪಡಿಸಿಕೊಂಡು ಯಾವುದಾದರೂ ದೂರ ದ್ವೀಪವೊಂದಕ್ಕೆ ಗಡಿಪಾರು ಮಾಡುವ ಕ್ರಮ. ಇದು ರಾಜಕೀಯ ಅಪರಾಧಿಗಳಿಗೆ ಮಾತ್ರ ಮಿಾಸಲಾದದ್ದು. ಎರಡನೆಯ ಕ್ರಮ ಅಪರಾಧಿಯ ಪೌರಹಕ್ಕುಗಳಿಗೆ ತೊಂದರೆ ಇಲ್ಲದಂತೆ ಅವನನ್ನು ಬಹಿಷ್ಕರಿಸುವುದು.

ಬ್ರಿಟನ್ ಬಹು ಕಾಲ ಭಯಂಕರ ದುಷ್ಕೃತ್ಯಗಳನ್ನು ಮಾಡಿದ ಅಪರಾಧಿಗಳನ್ನು ಇಡಲು ಆಸ್ಟ್ರೇಲಿಯವನ್ನು ಉಪಯೋಗಿಸುತ್ತಿತ್ತು. ಕೇವಲ ಘಾತಕರು ಮಾತ್ರವಲ್ಲದೆ ಹೊಸ ವಿಚಾರಗಳನ್ನು ಪ್ರತಿಪಾದಿಸಿದವರು, ನ್ಯಾಯ ಸ್ವಾತಂತ್ರ್ಯಗಳಿಗೋಸ್ಕರ ಹೋರಾಡಿದವರು ಇಂಥ ಎಷ್ಟೋ ಮಂದಿ ಗಡಿಪಾರು ಶಿಕ್ಷೆಗೆ ಒಳಗಾಗಿದ್ದಾರೆ. 1896ರಲ್ಲಿ ಲೆನಿನನನ್ನು ರಷ್ಯದ ಚಕ್ರವರ್ತಿಯ ಸರಕಾರ ಸೈಬೀರಿಯಕ್ಕೆ ಗಡಿಪಾರು ಮಾಡಿತು.

ಯಾವುದಾದರೂ ಕಾರಣದಿಂದ ಸ್ವದೇಶವನ್ನು ಸ್ವಂತ ಪ್ರೇರಣೆಯಿಂದ ಬಿಟ್ಟು ಬಂದು ಮತ್ತೊಂದು ದೇಶದಲ್ಲಿ ನೆಲೆಸುವುದಕ್ಕೆ ಸ್ವಪ್ರೇರಿತ ಗಡಿಪಾರು ಎನ್ನುತ್ತೇವೆ. ಕ್ರಿ. ಪೂ. 323ರಲ್ಲಿ ಅರಿಸ್ಟಾಟಲ್ ಅಥೆನ್ಸಿನಿಂದ ಕ್ಯಾಲ್‌ಸಿಸ್ ಎಂಬಲ್ಲಿಗೆ ಹೀಗೆ ಹೋದ. ಇತ್ತೀಚೆಗೆ ಸ್ಟಾಲಿನರ ಪುತ್ರಿ ಸ್ವೆಟ್ಲಾನಾ ಸ್ವಪ್ರೇರಣೆಯಿಂದ ರಷ್ಯವನ್ನು ತ್ಯಜಿಸಿ ಅಮೆರಿಕದಲ್ಲಿ ನೆಲೆಸಿದರು.

ಈಗ ಗಡಿಪಾರು ಅಷ್ಟಾಗಿ ಬಳಕೆಯಲ್ಲಿಲ್ಲ. 1857ರಲ್ಲಿ ಇಂಗ್ಲೆಂಡಿನಲ್ಲಿ ಈ ಪದ್ಧತಿಯನ್ನು ಬಹಿಷ್ಕರಿಸಲಾಯಿತು. ಫ್ರಾನ್ಸ್ 1938ರಲ್ಲಿ ಈ ದಂಡನೆಯನ್ನು ತೊಡೆದು ಹಾಕಿತು. ಇಟಲಿಯಲ್ಲಿ ಕೆಲವು ಕಾಲ ಮಾತ್ರ ಜಾರಿಯಲ್ಲಿದ್ದು ಈಗ ಇದು ಮರೆಯಾಗಿದೆ.

ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳು ಭಾರತದಿಂದ ಗಡಿಪಾರಾದವರ ಕೇಂದ್ರಗಳೆಂದು ಪ್ರಸಿದ್ಧವಾಗಿದ್ದುವು.

ಭಾರತೀಯ ಸ್ವಾತಂತ್ರ್ಯ ಚಳುವಳಿಯಲ್ಲಿ ಬ್ರಿಟಿಷರು ಎಷ್ಟೋ ಸಲ ರಾಜಕೀಯ ಕೈದಿಗಳನ್ನು ಗಡಿಪಾರು ಮಾಡುತ್ತಿದ್ದರು. ಬಾಲಗಂಗಾಧರ ತಿಲಕರನ್ನು ಹೀಗೆ ಬರ್ಮಾಕ್ಕೆ ಸರಕಾರ ಗಡಿಪಾರು ಮಾಡಿತು. ಗಡಿಪಾರು ಶಿಕ್ಷೆಯಲ್ಲಿದ್ದ ರಾಜಕೀಯ ಕೈದಿಗಳು ನಿರ್ದಿಷ್ಟಪಡಿಸಿದ ಪ್ರದೇಶದಲ್ಲಿ ಪ್ರವೇಶ ಮಾಡುವಂತಿರಲಿಲ್ಲ : ತಮ್ಮ ಉಪಜೀವನಕ್ಕಾಗಿ ತಾವೇ ವ್ಯವಸ್ಥೆ ಮಾಡಿಕೊಳ್ಳಬೇಕಾಗುತ್ತಿತ್ತು. ಮತ್ತು ತಾವಿದ್ದ ಸ್ಥಳದಲ್ಲಿ ಪ್ರತಿ ದಿನ ಪೋಲೀಸರಿಗೆ ಹಾಜರಿಯನ್ನು ಕೊಡಬೇಕಾಗುತ್ತಿತ್ತು.

## ಗಡಿಯಾರ

ಈ ದಶಕದಲ್ಲಿ ಮಾನವನ ಇತಿಹಾಸದಲ್ಲಿ ಒಂದು ಹೊಸ ಅಧ್ಯಾಯ ಆರಂಭವಾಗಿದೆ. ಇದೇ ಚಂದ್ರಉಪಗ್ರಹಯಾನ. ಚಂದ್ರನಲ್ಲಿಗೆ ಹೋಗುವ ರಾಕೆಟ್ ವ್ಯವಸ್ಥೆಯಲ್ಲಿ ವೇಳೆಗೆ ಪ್ರಥಮ ಸ್ಥಾನ. ಇಷ್ಟು ಗಂಟೆ. ಮಿನಿಟು. ಸೆಕೆಂಡುಗಳಿಗೆ ರಾಕೆಟ್ ಉಡಾಯಿಸಬೇಕು: ಅಲ್ಲಿಂದ ಮುಂದೆ ಎರಡನೆಯ ಹಂತ. ಮೂರನೆಯ ಹಂತಗಳು ಯಾವ ಕಾಲಕ್ಕೆ ಹೇಗೆ ಕಾರ್ಯಮಾಡಬೇಕು—ಎಂಬುದನ್ನು ಗಡಿಯಾರದ ಮುಳ್ಳಿನ ಚಲನೆಯನ್ನು ಅನುಸರಿಸಿ ನಿರ್ದೇಶಿಸುತ್ತಾರೆ. ಗಡಿಯಾರಗಳಲ್ಲಿ ಸೆಕೆಂಡುಗಳ ವ್ಯತ್ಯಾಸವಾದರೆ ಈ ಮಹತ್ಕಾರ್ಯ ಏರುಪೇರು ಆಗಬಹುದು.

ಗಡಿಯಾರದ ಮಹತ್ವ ಚಂದ್ರಉಪಗ್ರಹಯಾನದಂಥ ಮಾನವನ ಭಾರಿ ಸಾಹಸಗಳಿಗೆ ಮಾತ್ರ ಸೀಮಿತವಾಗಿಲ್ಲ. ಕಾಲದ ಗತಿಯನ್ನು ಖಚಿತವಾಗಿ ಅಳೆಯುವ ಈ ಸಾಧನ ಸಾಮಾನ್ಯ ಮನುಷ್ಯನಿಗೆ ದೈನಂದಿನ ಊಟ. ಪಾಠ. ಆಟಗಳಷ್ಟೇ ಅನಿವಾರ್ಯವೆನಿಸಿದೆ.

ಗಡಿಯಾರ ನಮ್ಮ ಜೀವನದಲ್ಲಿ ಹಾಸುಹೊಕ್ಕಾಗುವ ಮೊದಲು ನೀರು. ಮರಳು ಹಾಗೂ ನೆರಳುಗಳಿಂದ ಕಾಲವನ್ನು ಗುರುತಿಸುತ್ತಿದ್ದರು. ಪ್ರಾಚೀನ ಭಾರತದಲ್ಲಿ ಖಗೋಳಶಾಸ್ತ್ರ ಬಹಳ ಮುಂದುವರಿದಿತ್ತು. ಈ ಜ್ಞಾನ ಸಂಪತ್ತಿನಿಂದ ಭಾರತೀಯರು ಕಾಲವನ್ನು ಘಳಿಗೆ, ದಿನ. ತಿಂಗಳು, ಋತು, ಹಾಗೂ ಸಂವತ್ಸರಗಳೆಂದು ನಿರ್ದಿಷ್ಟ ವಿಭಾಗಗಳಾಗಿ ಗುರುತಿಸಿದ್ದರು.

ಪ್ರಾಚೀನ ಕಾಲದಲ್ಲಿ ನೀರು ತೊಟ್ಟಿಕ್ಕುವ ಗಡಿಯಾರವು ಮಾನವನ ಒಡನಾಡಿಯಾಯಿತು. ಇದರಲ್ಲಿ ಒಂದು ಬಾನೆ ಅಥವಾ ಪಾತ್ರೆಯಿಂದ ನೀರು ನಿಧಾನವಾಗಿ. ಒಂದೇ ವಿಧವಾಗಿ ತೊಟ್ಟಿಕ್ಕುವಂತೆ [illegible] ನೀರಿನ ಮಟ್ಟದಿಂದ ವೇಳೆಯನ್ನು ನಿರ್ಧರಿಸುತ್ತಿದ್ದರು. ಗ್ರೀಕ್ ಹಾಗೂ ರೋಮನ್ ಸಾಮ್ರಾಜ್ಯಗಳಲ್ಲಿ ಇದರಲ್ಲಿ ಬಹು ಮಟ್ಟಿನ ಮಾರ್ಪಾಡುಗಳನ್ನು ಮಾಡಿ ಉತ್ತಮಗೊಳಿಸಿದರು. ನೀರು-ಗಡಿಯಾರದ ನೆರವಿನಿಂದ ರೋಮನ್ ಸಭೆಗಳಲ್ಲಿ ಭಾಷಣಗಳ ಕಾಲ ನಿರ್ಧರಿಸುತ್ತಿದ್ದರು.

ಛಾಯಾಯಂತ್ರ ಅಥವಾ ನೆರಳು ಗಡಿಯಾರ. ಅಂದರೆ ಹಗಲಿನಲ್ಲಿ ನೆರಳು ಬೀಳುವ ಸ್ಥಾನದಿಂದ ಕಾಲವನ್ನು ಗುರುತಿಸುವ ಯಂತ್ರ. ಹಗಲು ಹೊತ್ತಿನಲ್ಲಿ ಮಾತ್ರ ಕಾಲನಿಗದಿಗೆ ಸಹಾಯಕವಾಗಿದ್ದುದರಿಂದ ನೀರು ಗಡಿಯಾರವೇ ಹೆಚ್ಚು ಜನಪ್ರಿಯವಾಗಿದ್ದಿತು. ನೀರು ನೆರಳುಗಳಲ್ಲದೆ ಮರಳು ಗಡಿಯಾರವೂ ರೂಢಿಯಲ್ಲಿದ್ದಿತು. ನಡುಜಾಗ ಕಿರಿದಾಗಿರುವ ಒಂದು ಗಾಜಿನ ಪಾತ್ರೆಯ ಮೇಲು ಭಾಗದಲ್ಲಿ ಒಂದೇ ತೆರನಾದ ಸಣ್ಣ ಮರಳನ್ನು ತುಂಬಿ ಮರಳು ಕೆಳಗಿನ ಭಾಗಕ್ಕೆ ನಿಧಾನವಾಗಿ ಇಳಿದಂತೆಲ್ಲ ಅದರ ಮಟ್ಟದಿಂದ ವೇಳೆಯನ್ನು ಗುರುತಿಸುತ್ತಿದ್ದರು.



ಲಂಡನಿನ ಬಿಗ್ ಬೆನ್ ಗಡಿಯಾರ

ಇಂಗ್ಲೆಂಡಿನ ಖ್ಯಾತ ಅರಸ ಆಲ್ಫ್ರೆಡ್ (ಒಂಬತ್ತನೆಯ ಶತಮಾನ) ಯಾವ ಗಡಿಯಾರವನ್ನೂ ನೋಡದೆ ತನ್ನ ಕಾಲವನ್ನು ಅಳೆಯುತ್ತಿದ್ದ ರೀತಿ ಬಹಳ ಸ್ವಾರಸ್ಯವಾಗಿದೆ. ದಿನದ ಎಂಟು ಗಂಟೆಗಳು ಆಡಳಿತಕಾರ್ಯ. ಎಂಟು ಗಂಟೆಗಳು ವಿಚಾರ ಸಂತೋಷಕೂಟಗಳು ಮತ್ತು ಎಂಟು ಗಂಟೆಗಳು ನಿದ್ರೆ–ಇದು ಅವನ ದಿನಚರಿ. ಈ ವಿಭಾಗಗಳನ್ನು ನಿಖರವಾಗಿ ಗುರುತಿಸಲು ಮೇಣ ಬತ್ತಿಗಳನ್ನು ಆತನು ಉರಿಸುತ್ತಿದ್ದ.

ಆಧುನಿಕ ರೀತಿಯ ಗಡಿಯಾರದ ರಚನೆಗೆ ದೀರ್ಘ ಕಾಲ ಹಿಡಿಯಿತು. ಗೆಲಿಲಿಯೋ 1582ರಲ್ಲಿ ಅತ್ತಿಂದತ್ತ ಇತ್ತಿಂದತ್ತ ಕ್ರಮಬದ್ಧವಾಗಿ

ತೂಗುವ ಲೋಲಕದ ನಿಯಮಗಳನ್ನು ಪ್ರತಿಪಾದಿಸಿದಂದಿನಿಂದ ಗಡಿಯಾರ ರಚನೆಯ ಮಾರ್ಗ ಸಸೂತ್ರವಾಯಿತು.

ಮೊಟ್ಟಮೊದಲಿನ ಗಡಿಯಾರ ಹೇಗೆ ಎಲ್ಲಿ ರೂಪುಗೊಂಡಿತು ಎಂದು ಹೇಳುವುದು ಕಷ್ಟ. ಚೀನೀಯರಲ್ಲಿ ಕ್ರಿ. ಪೂ. 2000ರಲ್ಲಿ ಗಡಿಯಾರ ಬಳಕೆಯಲ್ಲಿತ್ತೆಂಬ ಹೇಳಿಕೆಯಿದೆ. ಪ್ರಪಂಚದಲ್ಲಿ ದೊರೆತಿರುವ ಗಡಿಯಾರಗಳಲ್ಲಿ ಅತ್ಯಂತ ಹಳೆಯದು ಪಶ್ಚಿಮ ಜರ್ಮನಿಯ ವುಪರ್‌ಟಾಲ್ ಎನ್ನುವ ಸ್ಥಳದ ಅಬೆಲೆರ್ ಗಡಿಯಾರ ವಸ್ತುಪ್ರದರ್ಶನಾಲಯದಲ್ಲಿದೆ. ಇದು ಈಜಿಪ್ಟಿನ ಮೂರನೆಯ ಥಟ್‌ಮೋಸ್ (ಕ್ರಿ. ಪೂ. 1479–1447)ನ ಕಾಲಕ್ಕೆ ಸೇರಿದ್ದು. ಜರ್ಮನಿಯಲ್ಲಿ ಹನ್ನೊಂದನೆಯ ಶತಮಾನದಲ್ಲಿಯೇ ಗಡಿಯಾರದ ಪರಿಚಯವಿದ್ದಿತೆಂಬ ನಂಬಿಕೆಯಿದೆ. ಮಿನಿಟನ್ನು ಮಾತ್ರ ನಿರ್ದೇಶಿಸುವ ಒಂದೇ ಮುಳ್ಳಿನ ಗಡಿಯಾರ ಹದಿನೇಳನೆಯ ಶತಮಾನದಲ್ಲಿದ್ದಿತೆಂದು ತಿಳಿದುಬಂದಿದೆ. ಆಗಿನಿಂದ ಗಡಿಯಾರದ ರಚನೆಯಲ್ಲಿ ಸುಧಾರಣೆಗಳಾದುವು.

ಗಡಿಯಾರದಲ್ಲಿ ಅನೇಕ ಮಾದರಿಗಳಿವೆ. ಕೆಲವು ಗಡಿಯಾರಗಳು ಒಂದು ಬಾರಿ ಕೀಲಿಕೊಟ್ಟರೆ ವರ್ಷಗಟ್ಟಲೆ ನಡೆಯಬಲ್ಲವು. ಕೆಲವು ಎಂಟು ದಿನ ಮಾತ್ರ ನಡೆಯಬಲ್ಲುವು. ಕೆಲವು ಗಡಿಯಾರಗಳಿಗೆ ಪ್ರತಿ ದಿನ ಕೀಲಿ ಕೊಡಬೇಕು. ವಿದ್ಯುತ್‌ಚಾಲಿತ ಗಡಿಯಾರಕ್ಕೆ ಕೀಲಿಯೇ ಬೇಕಾಗಿಲ್ಲ. ಇದು ಹಿಂದೆ ಬೀಳದೆ ಮುಂದೂ ಇರದೆ ಕಾಲವನ್ನು ಸರಿಯಾಗಿ ತೋರಿಸುತ್ತದೆ. ಪರಮಾಣು ಶಕ್ತಿಯಿಂದ ನಡೆಯುವ ಅತಿ ನೂತನ ಗಡಿಯಾರ ಎಷ್ಟು ಕರಾರುವಾಕ್ಕಾಗಿದೆಯೆಂದರೆ ಸಾವಿರ ವರ್ಷಗಳಲ್ಲಿ ಇದು ಒಂದು ಸೆಕೆಂಡಿನಷ್ಟು ಮಾತ್ರ ವ್ಯತ್ಯಾಸಗೊಳ್ಳಬಹುದು !

ಕಳೆದ ಶತಮಾನಗಳಲ್ಲಿ ಸಾಮಾನ್ಯ ಗಡಿಯಾರದ ಜೋಡಣೆ ಒಂದು ಕುಶಲ ಕೈಗಾರಿಕೆಯಾಗಿದ್ದಿತು. ಇದರಿಂದ ಅದರ ಚೌಕಟ್ಟು ಮತ್ತು ಆಕೃತಿಗಳಲ್ಲಿ ಆಯಾ ಕೆಲಸಗಾರನ ಜಾಣ್ಮೆ ಅಚ್ಚೊತ್ತಿದಂತಿತ್ತು. ಆಗಿನ ಅತಿ ಪುಟ್ಟ ಗಡಿಯಾರಗಳು ಕೂಡ ಇಂದು ನಾವು ಮನೆಗಳಲ್ಲಿ ಮೇಜು ನಿಲುವುಗಳ ಮೇಲೆ ಉಪಯೋಗಿಸುವ ಗಡಿಯಾರದ ಗಾತ್ರಕ್ಕಿದ್ದುವು. ಆದರೆ ಅಂದಿನ ಗಡಿಯಾರಗಳ ಆಕೃತಿ ಚೌಕಟ್ಟುಗಳು ಮಾತ್ರ ಅತ್ಯಂತ ಕುಶಲ ಕಾರ್ಯದ ರಮ್ಯ ಉದಾಹರಣೆಗಳಾಗಿದ್ದವು. ಆಭರಣಗಳನ್ನು ಹೋಲುವ ಮತ್ತು ಶಿಲುಬೆ, ಪುಸ್ತಕ, ಸಮುದ್ರದ ವಿವಿಧಾಕೃತಿಯ ಚಿಪ್ಪುಗಳನ್ನು ಹೋಲುವ ಗಡಿಯಾರಗಳು ಮನಸೆಳೆಯುವಂತಿದ್ದುವು.

ಹೆಸರಾಂತ ಗಡಿಯಾರಗಳಲ್ಲಿ ಲಂಡನ್ನಿನ 'ಬಿಗ್ ಬೆನ್' ಎಂಬುದು ಜಗತ್ಪ್ರಸಿದ್ಧವಾಗಿದೆ. ಬಿಗ್ ಬೆನ್ ಒಂದು ಉನ್ನತ ಗಡಿಯಾರ ಸ್ತಂಭ. ಇದಕ್ಕೆ 13,620 ಕಿ. ಗ್ರಾಂ. ತೂಕದ ಎರಕ ಹುಯ್ಯಲಾದ ದೈತ್ಯ ಗಂಟೆಯಿದೆ. ಗಡಿಯಾರದ ಮುಖದ ವ್ಯಾಸ 7 ಮೀಟರು, ಗಡಿಯಾರದ ಸ್ತಂಭದ ನಾಲ್ಕು ಕಡೆಗೂ ಇದೇ ಅಳತೆಯ ಮುಖಗಳಿವೆ. ಚಿಕ್ಕಮುಳ್ಳಿನ ಉದ್ದ $2\frac{3}{4}$ ಮೀಟರು. ಹಾಗೂ ದೊಡ್ಡ ಮುಳ್ಳಿನ ಉದ್ದ $4\frac{1}{4}$ ಮೀಟರು. ಮಿನಿಟು ಮುಳ್ಳು ಚಲಿಸಿದಾಗಲೆಲ್ಲ 15 ಸೆ. ಮೀ. ಮುಂದಕ್ಕೆ ಹೋಗುತ್ತದೆ. ಗಡಿಯಾರದ ಒಳಗೆ ಕೆಳಗಿನಿಂದ ಹತ್ತಿಹೋಗಲು 360 ಮೆಟ್ಟಿಲುಗಳಿವೆ. 1859ರಲ್ಲಿ ಸ್ಥಾಪಿತವಾದ ಬಿಗ್ ಬೆನ್ ಇಂದಿಗೂ ಸರಿಯಾದ ವೇಳೆಯನ್ನು ಸೂಚಿಸುತ್ತದೆ.

ಈ ಶತಮಾನದಲ್ಲಿ ಮಾನವನ ಹಲ ಆವಶ್ಯತೆಗಳಿಗೆ ತಕ್ಕಂತೆ ವಿಧವಿಧದ ಗಡಿಯಾರಗಳನ್ನು ತಯಾರು ಮಾಡಿದ್ದಾರೆ. ವಿಮಾನಚಾಲಕನಿಗೆ ಗಡಿಯಾರ, ವಿಮಾನ ಯಾವ ದಿಕ್ಕಿನಲ್ಲಿದೆ, ಯಾವ ಕಡೆ ಹೋಗುತ್ತಿದೆ, ಇಂಧನ ಪ್ರಮಾಣ, ವಿಮಾನದ ವೇಗ, ಅದು ಹತ್ತುವ ಅಥವಾ ಇಳಿಯುವ ವೇಗ ಅಲ್ಲದೆ ಗಂಟೆ, ಮಿನಿಟು, ಸೆಕೆಂಡುಗಳನ್ನು ತೋರಿಸುತ್ತದೆ. ಗುಣಾಕಾರ ಹಾಗೂ ಘನ ಮೂಲದ ಲೆಕ್ಕಗಳನ್ನು ಮಾಡುತ್ತದೆ. ಅಂಧರಿಗೆ ಕೈತಡವರಿಸಿದರೆ ವೇಳೆ ತಿಳಿಯುವಂತೆ ಮೇಲೆದ್ದ ವಿಶೇಷ ಗುಬ್ಬಟಗಳಿರುವ ಗಡಿಯಾರಗಳಿರುತ್ತವೆ. ಸಮುದ್ರದ ಉಬ್ಬರವಿಳಿತದ ಕಾಲವನ್ನು ಗುರುತಿಸುವ ಗಡಿಯಾರಗಳೂ ಇರುತ್ತವೆ. ಕತ್ತಲಲ್ಲೂ ಕಾಲವನ್ನು ತೋರಿಸುವ ವಿಶಿಷ್ಟ ಹೊಳಪುಳ್ಳ ಆಧುನಿಕ ಗಡಿಯಾರಗಳಿವೆ. ನಿಶ್ಚಿತ ವೇಳೆಗೆ ಶಬ್ದಮಾಡಿ ಎಚ್ಚರಗೊಳಿಸುವ ಗಡಿಯಾರಗಳ ವಿಷಯ ವಿದ್ಯಾರ್ಥಿಗಳು ಬಲ್ಲರು.

ಹೈದರಾಬಾದಿನ ಸಾಲಾರ್‌ಜಂಗ್ ವಸ್ತುಸಂಗ್ರಹಾಲಯದಲ್ಲಿ ಬಗೆಬಗೆಯ ಗಡಿಯಾರಗಳನ್ನು ನೋಡಬಹುದು.

ಗಡಿಯಾರಗಳ ಬೃಹತ್ ಪ್ರಮಾಣ ತಯಾರಿಕೆಯಲ್ಲಿ ಸ್ವಿಟ್ಜರ್‌ಲೆಂಡ್ ಎಲ್ಲಕ್ಕಿಂತ ಮುಂದಿರುವ ದೇಶ. ಬೆಂಗಳೂರಿನಲ್ಲಿ ಹಿಂದೂಸ್ಥಾನ್ ಮೆಷಿನ್ ಟೂಲ್ಸ್‌ನ ಗಡಿಯಾರ ಕಾರಖಾನೆ 1961ರಿಂದ ಒಳ್ಳೆಯ ಕೈಗಡಿಯಾರಗಳನ್ನು ತಯಾರಿಸುತ್ತಿದೆ.

ನೋಡಿ : ಗಂಟೆ ; ಗಳಿಗೆ ಬಟ್ಟಲು; ಶಿಷ್ಟ ಕಾಲ

## ಗಣರಾಜ್ಯ

ಪ್ರತಿ ವರ್ಷ ಜನವರಿ 26ರ ದಿನವನ್ನು ಭಾರತದಲ್ಲಿ ರಾಷ್ಟ್ರೀಯ ಹಬ್ಬವಾಗಿ ಆಚರಿಸುತ್ತೇವೆ. ಏಕೆ ?

ಅದು ಗಣರಾಜ್ಯ ದಿನ. ಆಗಸ್ಟ್ 15 ಸ್ವಾತಂತ್ರ್ಯೋತ್ಸವ ದಿನ. ಭಾರತ ದಾಸ್ಯವನ್ನು ಕಿತ್ತು ಹಾಕಿ ಸ್ವತಂತ್ರವಾದದ್ದು 1947ರ ಆಗಸ್ಟ್ 15 ರಂದು. ಸ್ವತಂತ್ರ ಭಾರತ ತನ್ನ ಆಡಳಿತ ಪದ್ಧತಿ ಹೇಗಿರಬೇಕೆಂಬುದನ್ನು ನಿರ್ಧರಿಸಿ ತಾನು ಗಣರಾಜ್ಯವೆಂದು ಘೋಷಿಸಿದ್ದು 1950ರ ಜನವರಿ 26ರಂದು.

ಗಣರಾಜ್ಯವೆಂದರೇನು ?

ಹಿಂದೆ ರಾಜ್ಯಾಡಳಿತವನ್ನು ಅರಸರು ನಡೆಸುತ್ತಿದ್ದರು. ಎಲ್ಲ ದೇಶದ ಚರಿತ್ರೆಯಲ್ಲೂ ಪ್ರಜೆಗಳ ಹಿತಕ್ಕಾಗಿ ಆಳಿದ ರಾಜರನ್ನು ಕಾಣುತ್ತೇವೆ. ಪ್ರಜೆಗಳಿಗೆ ಪೀಡೆಯಾಗಿ ಅಟ್ಟಹಾಸದಿಂದ ಮೆರೆದ ರಾಜರನ್ನೂ ಕಾಣುತ್ತೇವೆ. ವಂಶಪಾರಂಪರ್ಯ ಹಕ್ಕಿನಿಂದಲಾಗಲೀ, ತನ್ನ ಶೌರ್ಯ ಸ್ಥೈರ್ಯಗಳ ಫಲವಾಗಿಯಾಗಲೀ ರಾಜ ಅಧಿಕಾರಕ್ಕೆ ಬರುತ್ತಿದ್ದ.

ರಾಜಪ್ರಭುತ್ವವಿದ್ದ ಕಡೆ, ರಾಜನ ಮಗನೇ ಮುಂದಿನ ರಾಜ ; ಅವನು ರಾಜನಾಗಲು ಕಾರಣ ಅವನು ಹಿಂದಿದ್ದ ರಾಜನ ಮಗನೆಂಬುದು. ಹುಟ್ಟಿನಿಂದಲೇ ಒಂದು ಸ್ಥಾನ ದೊರೆಯುವ ಹಾಗಿರಬಾರದು, ರಾಷ್ಟ್ರದ ಆಡಳಿತ ಪದವಿ ಸಾಮಾನ್ಯ ಪ್ರಜೆಗೂ ದೊರೆಯುವ ಸಾಧ್ಯತೆ ಇರಬೇಕು ಎನ್ನುವುದು ಗಣರಾಜ್ಯದ ತತ್ತ್ವ. ಗಣ ಎಂದರೆ ಸಮುದಾಯ. ಗಣರಾಜ್ಯ, ಪ್ರಜಾಸಮುದಾಯದವರು ಅರಸನಿಲ್ಲದೆ ನಡೆಸುವ ರಾಜ್ಯ.

ಪ್ರಪಂಚದ ಅನೇಕ ಗಣರಾಜ್ಯಗಳು ದೇಶದ ಜನರ ಕ್ರಾಂತಿ ಅಥವಾ ಚಳುವಳಿಯ ಅನಂತರ ಜನ್ಮತಳೆದುವು. 1789ರಲ್ಲಿ ಫ್ರಾನ್ಸಿನ ಜನರು ಹದಿನಾರನೆಯ ಲೂಯಿ ದೊರೆಯ ದಬ್ಬಾಳಿಕೆಯಿಂದ ಬೇಸತ್ತು ದಂಗೆ ಎದ್ದರು. ಅನಂತರ ಅದು ಗಣರಾಜ್ಯವಾಯಿತು. ಜಾರ್ ದೊರೆಗಳ ಅಧಿಕಾರ ಮುಷ್ಟಿಯಿಂದ ಅಕ್ಟೋಬರ್ ಕ್ರಾಂತಿಯ ಅನಂತರ ಪಾರಾದ ರಷ್ಯನ್ನರು ಸೋವಿಯೆತ್ ಸಮಾಜವಾದಿ ಗಣರಾಜ್ಯಗಳ ಒಕ್ಕೂಟವನ್ನು ಸ್ಥಾಪಿಸಿದರು.

ಗಣರಾಜ್ಯ ಪ್ರಜಾಪ್ರಭುತ್ವವಾಗಿಯೇ ಇರಬೇಕೆಂಬ ನಿಯಮವಿಲ್ಲ. ಕಮ್ಯೂನಿಸ್ಟ್ ದೇಶಗಳಲ್ಲಿ ಕಮ್ಯೂನಿಸ್ಟ್ ಪಕ್ಷಕ್ಕೆ ಮಾತ್ರವೇ ಮನ್ನಣೆ. ಆ ಪಕ್ಷದ ಪ್ರತಿನಿಧಿಗಳು ಮಾತ್ರ ನಾಯಕತ್ವವನ್ನು ಸೃಷ್ಟಿಸುತ್ತಾರೆ. ಅಲ್ಲಿಯೂ ಆಯ್ಕೆ ಒಂದು ನಿರ್ದಿಷ್ಟ ಅವಧಿಗೆ ಮಾತ್ರ ನಡೆಯುತ್ತದೆ.

ಹುಟ್ಟಿನ ಭಾಗ್ಯದಿಂದ ಅಧಿಕಾರಕ್ಕೆ ಬರದೆ ಆಯ್ಕೆಗೊಂಡ ನಾಯಕರು ಆಡಳಿತ ನಡೆಸಿದರೆ ಅದು ಗಣರಾಜ್ಯ ಎನಿಸಿಕೊಳ್ಳುತ್ತದೆ.

ಕೆಲವು ಗಣರಾಜ್ಯಗಳಲ್ಲಿ (ಉದಾ: ಭಾರತ) ಅಧ್ಯಕ್ಷ ರಾಷ್ಟ್ರಪತಿಯಾಗಿಯೂ ಪ್ರಧಾನ ಮಂತ್ರಿ ಆಡಳಿತದ ಮುಖ್ಯಸ್ಥನಾಗಿಯೂ ಇರುತ್ತಾರೆ. ಕೆಲವು ಗಣರಾಜ್ಯಗಳಲ್ಲಿ (ಉದಾ: ಅಮೆರಿಕದ ಸಂಯುಕ್ತ ಸಂಸ್ಥಾನ) ಅಧ್ಯಕ್ಷನೇ ರಾಷ್ಟ್ರಪತಿಯೂ ಆಡಳಿತದ ಮುಖ್ಯಸ್ಥನೂ ಆಗಿರುತ್ತಾನೆ; ಎಂದರೆ, ರಾಷ್ಟ್ರಪತಿಯಾಗಿರುವುದು ಮಾತ್ರವಲ್ಲದೆ ಅವನೇ ತನ್ನ ಮಂತ್ರಿಗಳನ್ನು ನೇಮಿಸಿಕೊಂಡು ನೇರವಾಗಿ ಆಡಳಿತವನ್ನು ನಿರ್ವಹಿಸುತ್ತಾನೆ.

ಭಾರತ ಹಲವು ಚಕ್ರವರ್ತಿಗಳ ತವರು. ಅನೇಕ ಸಮ್ರಾಟರು ಇಲ್ಲಿ ತಮ್ಮ ಶಕ್ತಿ ವೈಭವಗಳನ್ನು ಮೆರೆದರು. ಆದರೆ ಗಣರಾಜ ಕಲ್ಪನೆ ಭಾರತಕ್ಕೆ ಹೊಸದಲ್ಲ. ಕ್ರಿ. ಪೂ. ಏಳನೆಯ ಶತಮಾನದಲ್ಲಿ ಅನೇಕ ಗಣರಾಜ್ಯಗಳಿದ್ದುವು. ಇವು ಗ್ರೀಸ್‌ದೇಶದ ನಗರರಾಜ್ಯಗಳಂತಿದ್ದುವು. ಕಪಿಲವಸ್ತುವಿನ ಶಾಕ್ಯರು ಗಣರಾಜ್ಯವನ್ನು ಸ್ಥಾಪಿಸಿದರು.

## ಗಣಿತ

"ಪಾರ್ಥನು ರಣರಂಗದಲ್ಲಿ ಕೋಪಗೊಂಡು ಕರ್ಣವಧೆಗಾಗಿ ನಿಂತನು. ಬತ್ತಳಿಕೆಯಲ್ಲಿನ ಬಾಣಗಳಲ್ಲಿ ಅರ್ಧ ಸಂಖ್ಯೆಯನ್ನು ಶತ್ರುಗಳ ಬಾಣ ಮುರಿಯಲು ಉಪಯೋಗಿಸಿದನು. ಒಟ್ಟು ಸಂಖ್ಯೆಯ ವರ್ಗಮೂಲದ ನಾಲ್ಕರಷ್ಟು ಬಾಣಗಳಿಂದ ಶತ್ರು ಕುದುರೆಗಳನ್ನು ಕೊಂದನು. ಶಲ್ಯನಿಗೆ ಆರು ಬಾಣಗಳಾದುವು. ಮೂರರಿಂದ ಕರ್ಣನ ಛತ್ರಧ್ವಜ ಕಾರ್ಮುಕಗಳು ಉರುಳಿದುವು. ಉಳಿದ ಒಂದು ಬಾಣ ಕರ್ಣನನ್ನು ಘಾತಿಸಿತು. ಒಟ್ಟು ಬಾಣಗಳೆಷ್ಟಿದ್ದುವು ?"

"ಒಟ್ಟು ದುಂಬಿಗಳ ಐದನೇ ಒಂದು ಭಾಗ ಕದಂಬ ಪುಷ್ಪದ ಮೇಲೂ ಮೂರನೆಯ ಒಂದು ಭಾಗ ಸಿಲೀಂಧ್ರ ಹೂವಿನ ಮೇಲೂ ಇವೆರಡು ಸಂಖ್ಯೆಗಳ ವ್ಯತ್ಯಾಸದ ಮೂರರಷ್ಟು ಕುಟಜದಲ್ಲೂ ಕುಳಿತು ಉಳಿದ ಒಂದು ದುಂಬಿಯು ಗಾಳಿಯಲ್ಲಿ ಆಡುತ್ತಿದ್ದರೆ ದುಂಬಿಗಳ ಸಂಖ್ಯೆ ಎಷ್ಟು ?"

ಎಷ್ಟು ಕುತೂಹಲಕಾರಿ ಪ್ರಶ್ನೆಗಳು ! ಇಂಥ ಪ್ರಶ್ನೆಗಳು ತುಂಬಿದ 'ಲೀಲಾವತಿ' ಎಂಬ ಸಂಸ್ಕೃತ ಗ್ರಂಥವನ್ನು ಹನ್ನೆರಡನೆಯ ಶತಮಾನದಲ್ಲಿ ಭಾಸ್ಕರಾಚಾರ್ಯ ಎಂಬ ಕನ್ನಡನಾಡಿನ ವಿದ್ವಾಂಸರು ರಚಿಸಿದರು.

ಗಣಿತ ಮನುಷ್ಯನ ಎಲ್ಲ ಜ್ಞಾನಗಳಿಗೆ ಮೂಲ. ಗಣಿತದ ತಳಹದಿಯಿಲ್ಲದೆ ವಿಜ್ಞಾನದ ಬುಡ ಕಳಚುವುದು. ಆದರೆ ವಿಜ್ಞಾನದ ಒತ್ತಾಸೆಯಿಲ್ಲದೆ ಗಣಿತ ಸಾಗಬಲ್ಲದು. ಇದರಿಂದಲೇ ಗಣಿತವನ್ನು 'ವಿಜ್ಞಾನಿಗಳ ರಾಣಿ' ಎಂದು ಕರೆಯುತ್ತಾರೆ.

"ಗಣಿತ ಎಂದರೇನು ?"—ಈ ಪ್ರಶ್ನೆಯನ್ನು ಉತ್ತರಿಸುವುದು ಸುಲಭವೇನೂ ಅಲ್ಲ. ಗಣಿತವೆಂದರೆ ಸಂಬಂಧಗಳ ವಿಜ್ಞಾನ ಎಂದೂ ಹೇಳುವುದು ವಾಡಿಕೆ. ಕೆಲವು ಮೂಲ ಭಾವನೆಗಳನ್ನು ಆಧಾರವಾಗಿರಿಸಿಕೊಂಡು ತರ್ಕಬದ್ಧ ವಾದ ಸಾಧನಗಳಿಂದ ದೊರೆಯಬಹುದಾದ ವಿಷಯವನ್ನು ಸಂಗ್ರಹಿಸುವುದು. ಅದರ ವಿಕಾಸದೊಂದಿಗೆ ಅದರ ಪ್ರಯೋಗಗಳಿಂದ ಮತ್ತೆ ಲಭಿಸಬಹುದಾದ ಫಲಗಳನ್ನು ಸಾಧಿಸಿಕೊಳ್ಳುವುದು — ಇವೇ ಮೊದಲಾದ ಹಂತಗಳು ಗಣಿತವು ಹುಟ್ಟಿ ಬೆಳೆಯುವ ಮಾರ್ಗವೆಂದು ಸ್ಥೂಲವಾಗಿ ಹೇಳಬಹುದು. ಮಾನವನ ನಾಗರಿಕತೆ ಹುಟ್ಟಿದಾಗಲೇ ಗಣಿತದ ಬೆಳವಣಿಗೆಯೂ ಪ್ರಾರಂಭವಾಯಿತೆನ್ನಬಹುದು. ಮಾನವ ತನ್ನಲ್ಲಿದ್ದ ವಸ್ತುಗಳನ್ನು ಲೆಕ್ಕವಿಡುವುದಕ್ಕೆ ಆರಂಭಿಸಿದಾಗಲೇ ಸಂಖ್ಯೆಗಳ ಭಾವನೆ ಮೂಡಿತು. ವಸ್ತುಗಳ ಒಟ್ಟು ಸಂಖ್ಯೆಯನ್ನು ಅಥವಾ ಅವುಗಳ ಕ್ರಮ ಸಂಖ್ಯೆಯನ್ನು ನಿರೂಪಿಸುವುದಕ್ಕಾಗಿ ಒಂದು ಎರಡು ಮೂರು ಇತ್ಯಾದಿ ಸ್ವಾಭಾವಿಕ ಸಂಖ್ಯೆಗಳನ್ನು ಅವನು ಬಳಸಿರಬೇಕು. ಈ ಸಂಖ್ಯೆಗಳ ಜ್ಞಾನ ಆರಂಭದಲ್ಲಿ ಕೇವಲ ಮನಸ್ಸಿನಲ್ಲಿದ್ದು, ಭಾಷೆಗಳು ಬೆಳೆದಂತೆಲ್ಲ ಬೇರೆ ಬೇರೆ ಭಾಷೆಗಳಲ್ಲಿ ಇದಕ್ಕೆ ಬೇರೆ ಬೇರೆ ಹೆಸರುಗಳು ಬಂದಿರಬೇಕಷ್ಟೆ. ಇವುಗಳನ್ನು ಸಂಕ್ಷೇಪವಾಗಿ ನಿರೂಪಿಸುವುದಕ್ಕೆ ಚಿಹ್ನೆಗಳ (ಸಂಕೇತಗಳ) ಉಪಯೋಗ ಕ್ರಮೇಣ ವಾಡಿಕೆಗೆ ಬಂದಿತು. ಈಗ ನಾವು ಬಳಸುವ 1, 2, 3, 4, 5, 6, 7, 8 ಮತ್ತು 9 ಎಂಬ ಚಿಹ್ನೆಗಳು ಭಾರತದಲ್ಲಿಯೇ ರೂಪುಗೊಂಡುವು. ಇವುಗಳ ಜೊತೆಗೆ ಶೂನ್ಯ ಸಂಕೇತಗಳನ್ನು ಬಳಸಿ ಸ್ಥಾನಕ್ಕನುಸಾರವಾಗಿ ಬೆಲೆಯನ್ನು ಕೊಟ್ಟುಕೊಂಡು ಯಾವ ಪೂರ್ಣಾಂಕವನ್ನಾಗಲಿ ಬರೆಯಲು ಅನುಕೂಲವಾಗುವಂಥ ಈಗ ಬಳಕೆಯಲ್ಲಿರುವ ದಾಶಮಿಕ ಪದ್ಧತಿಯನ್ನು ಬಹು ಪೂರ್ವಕಾಲದಲ್ಲೇ ಕಂಡುಹಿಡಿದ ಕೀರ್ತಿ ಭಾರತಕ್ಕೆ ಸಲ್ಲುತ್ತದೆ. ಇದು ಗಣಿತಶಾಸ್ತ್ರದ ಪ್ರಗತಿಪಥದಲ್ಲಿನ ಪ್ರಥಮ ಹೆಗ್ಗುರುತು.

ಗಣಿತಶಾಸ್ತ್ರದ ಚರಿತ್ರೆ ಬಹು ಪುರಾತನವಾದದ್ದು. ಈವರೆಗೆ ದೊರೆತ ಆಧಾರಗಳಿಂದ ಗಣಿತದ ಆರಂಭ ಈಜಿಪ್ಟ್, ಬ್ಯಾಬಿಲೋನಿಯ, ಭಾರತ ಮತ್ತು ಚೀನದೇಶಗಳಲ್ಲಿ ನಡೆಯಿತೆಂದು ಹೇಳಬಹುದು. ಪ್ರಾಚೀನ ಈಜಿಪ್ಟಿನ ಪಿರಮಿಡ್ಡುಗಳು (ಕ್ರಿ. ಪೂ. ಮೂವತ್ತೇಳನೆಯ ಶತಮಾನ), ಭೂಮಿಯ ಅಳತೆ, ಕಂದಾಯ ಮತ್ತು ತೆರಿಗೆಯ ಲೆಕ್ಕಾಚಾರ—ಗಣಿತಶಾಸ್ತ್ರದ ಅಧ್ಯಯನವಿಲ್ಲದೆ ಸಾಧ್ಯವಿರಲಿಲ್ಲ. ಇವರ ಗ್ರಂಥಗಳಲ್ಲಿ ಭಿನ್ನ ರಾಶಿಗಳೂ ಸುಲಭ ಶ್ರೇಢೀ ಲೆಕ್ಕಗಳೂ ಸರಳ ಸಮೀಕರಣಗಳೂ ಕ್ಷೇತ್ರ ಗಣಿತವೂ ಅಡಕವಾಗಿವೆ. ಇದರಲ್ಲಿ ಆಯತಾಕಾರದ ಮತ್ತು ಸಿಲಿಂಡರ್ ಆಕೃತಿಗಳ ಘನಗಳ ಘನಫಲವನ್ನು ಕೊಡುವ ಸಂಕ್ಷೇಪೋಕ್ತಿಗಳು ಇವೆ, ಅಲ್ಲದೆ $\pi$ ಎಂಬ ಸಂಖ್ಯೆಗೆ $\left(\frac{16}{9}\right)^2 = 3.16$ ಎಂಬ ಬೆಲೆಯೂ ಸೂಚಿತವಾಗಿದೆ. ಪ್ರಾಚೀನ ಬ್ಯಾಬಿಲೋನಿಯನ್ನರಿಗೆ ಕ್ಷೇತ್ರಗಣಿತದ ಕೆಲವು ಸೂತ್ರಗಳು, ಭಿನ್ನರಾಶಿಯ ಬಳಕೆ, ತೂಕ ಅಳತೆ ಮತ್ತು ಕಾಲ ನಿರ್ಣಯ ತಿಳಿದಿತ್ತು. ಚೀನದವರು ಕ್ರಿ. ಪೂ. ಮೂವತ್ತನೆಯ ಶತಮಾನದಲ್ಲಿಯೇ ಖಗೋಲಶಾಸ್ತ್ರವನ್ನು ಅಭ್ಯಾಸ ಮಾಡುತ್ತಿದ್ದರು.

ಕ್ರಿ. ಪೂ. ಮೂವತ್ತನೆಯ ಶತಮಾನದಲ್ಲಿಯೇ ಸಿಂಧೂ ತೀರದ ನಿವಾಸಿಗಳು ಅಂಕಗಣಿತ, ರೇಖಾಗಣಿತ, ಖಗೋಲಶಾಸ್ತ್ರಗಳಲ್ಲಿ ತುಂಬಾ ತಿಳಿವಳಿಕೆಯನ್ನು ಹೊಂದಿದ್ದರೆಂದು ಕಂಡುಬರುತ್ತದೆ. ಅನಂತರ ಆರ್ಯರ ನಾಗರಿಕತೆಯಲ್ಲಿ ಹೋಮಾಗ್ನಿ ಕುಂಡಗಳನ್ನು ಸಮಬಾಹು ತ್ರಿಕೋನ, ಚತುಷ್ಕೋನ, ಪಂಚಕೋನ, ಷಟ್ಕೋನ, ತ್ರಿಜ್ಯಾಪಿಜ್ಯ ವೃತ್ತ, ಅರ್ಧವೃತ್ತ—ಇವೇ ಮೊದಲಾದ ಆಕೃತಿಗಳಲ್ಲಿ ರಚಿಸಬೇಕಾಗುತ್ತಿತ್ತು. ಇವುಗಳ ರಚನೆಗೆ ಬೇಕಾದ ನಿಯಮಗಳು ತೈತ್ತಿರೀಯ ಸಂಹಿತೆ ಮತ್ತು ಬ್ರಾಹ್ಮಣಗಳ ಸಹಾಯದಿಂದ ರಚಿಸಿರುವ ಶುಲ್ವಸೂತ್ರಗಳಲ್ಲಿ ವರ್ಣಿತವಾಗಿವೆ (ಸುಮಾರು ಕ್ರಿ. ಪೂ. 800) (ಶುಲ್ವ ಎಂದರೆ ಹಗ್ಗ), ಹಗ್ಗದ ಸಹಾಯದಿಂದ ಭೂಮಿ ಮುಂತಾದುವನ್ನು ಅಳೆದು ಲೆಕ್ಕಮಾಡುವ ಪದ್ಧತಿ ಇದ್ದಿತು. ರೇಖಾಗಣಿತ

ಎಂಬ ಪದ ಈಚಿನದು. ಪೈಥಾಗೊರಸ್ ಹೆಸರಿನ ಪ್ರಮೇಯು (ABC ತ್ರಿಕೋನದಲ್ಲಿ B$=90°$ ಗಳಾದರೆ $AC^2=AB^2+BC^2$) ಅವನ ಕಾಲಕ್ಕಿಂತ ಎಷ್ಟೋ ಹಿಂದೆ ಚೀನ, ಈಜಿಪ್ಟ್ ಮತ್ತು ಭಾರತ ದೇಶಗಳಲ್ಲಿ ಚೆನ್ನಾಗಿ ತಿಳಿದಿತ್ತು. ಒಂದು ವೃತ್ತದ ಪರಿಧಿಗೂ ಅದರ ವ್ಯಾಸಕ್ಕೂ ಇರುವ ಪ್ರಮಾಣವನ್ನು ($\pi$) $62832\div20000$ ಅಥವಾ $3927\div1250$ ಎಂಬುದಾಗಿ ಆರ್ಯಭಟ ಮತ್ತು ಭಾಸ್ಕರಾಚಾರ್ಯರು ಕೊಟ್ಟಿರುವರು. ಪ್ರಾಚೀನ ಗ್ರೀಸ್‌ನ ಆರ್ಕಿಮಿಡೀಸ್ $\pi$ ಸಂಖ್ಯೆಯ ಬೆಲೆ $3\frac{1}{7}$ ಮತ್ತು $3\frac{10}{71}$ ರ ನಡುವೆ ಇರುತ್ತದೆ ಎಂದು ತೀರ್ಮಾನಿಸಿದ. ಕಾಲಕ್ರಮೇಣ, ನಾಗರಿಕತೆ ಬೆಳೆದಂತೆಲ್ಲ ಗಣಿತ ಕ್ಷೇತ್ರದಲ್ಲಿ ಹೆಚ್ಚು ಹೆಚ್ಚು ಜ್ಞಾನ ಕೂಡುತ್ತಾ ಬಂದಿತು.

ರೇಖಾಗಣಿತದ ಚರಿತ್ರೆಯೂ ಪ್ರಾಚೀನವಾದದ್ದು. ಕ್ರಿ. ಪೂ. ಏಳನೆಯ ಶತಮಾನದಲ್ಲಿ ಗ್ರೀಕರು ಈಜಿಪ್ಟಿನಲ್ಲಿ, ಬ್ಯಾಬಿಲೋನಿಯದಲ್ಲಿ ಮತ್ತು ಭಾರತದಲ್ಲಿ ಅದುವರೆಗೆ ತಿಳಿದಿದ್ದ ರೇಖಾಗಣಿತದ ವಿಷಯಗಳನ್ನೆಲ್ಲ ಕ್ರೋಢೀಕರಿಸಿದರು ; ಕೆಲವು ಮೂಲಾಂಶಗಳನ್ನು ಆಧಾರವಾಗಿಟ್ಟುಕೊಂಡು ತರ್ಕಬದ್ಧವಾಗಿ ಹೊಸ ವಿಷಯಗಳನ್ನು ಕಂಡುಹಿಡಿದರು. ರೇಖಾಗಣಿತವನ್ನು ವೈಜ್ಞಾನಿಕ ಮಾರ್ಗದಲ್ಲಿ ನಡೆಸಿಕೊಂಡು ಬಂದ ಕೀರ್ತಿ ಗ್ರೀಕರಿಗೆ ಸಲ್ಲಬೇಕು. ಕ್ರಿ. ಪೂ. ಆರನೆಯ ಶತಮಾನದ ಥೇಲ್ಸ್ ಮತ್ತು ಪೈಥಾಗೊರಸ್ ಇವರದು ಈ ಕ್ಷೇತ್ರದಲ್ಲಿ ದೊಡ್ಡ ಹೆಸರುಗಳು. ಪೈಥಾಗೊರಸ್‌ನ ಶಿಷ್ಯರು ಹಲವು ಪ್ರಸಿದ್ಧ ಸಮಸ್ಯೆಗಳನ್ನು ಒಡ್ಡಿದರು. ಉದಾಹರಣೆಗೆ : ಸರಳ ಅಂಚು ಮತ್ತು ವೃತ್ತ ರೂಪಕಗಳನ್ನು ಮಾತ್ರ ಬಳಸಿ (1) ದತ್ತ ಕೋನವನ್ನು ಮೂರು ಸಮಭಾಗ ಮಾಡುವುದು, (2) ದತ್ತ ಘನದ ಎರಡರಷ್ಟು ಘನಫಲವುಳ್ಳ ಘನವನ್ನು ರಚಿಸುವುದು, (3) ದತ್ತ ವೃತ್ತದ ಸಲೆಯನ್ನುಳ್ಳ ಚೌಕವನ್ನು ನಿರ್ಮಿಸುವುದು. ತತ್ತ್ವಜ್ಞಾನಿ ಪ್ಲೇಟೋ ತನ್ನ ಪಾಠಶಾಲೆಯ ಬಾಗಿಲಿನಲ್ಲೆ 'ರೇಖಾಗಣಿತ ತಿಳಿಯದವರು ನಮ್ಮ ಬಾಗಿಲನ್ನು ದಾಟಲಾಗದು' ಎಂದು ಬರೆಸಿದ್ದನಂತೆ. ಇವನೂ ಇವನ ಸಮಕಾಲೀನ ಸ್ನೈಡೀಸ್‌ನ ಯೂಡೋಕ್ಸಸ್, ಅವನ ಶಿಷ್ಯ ಮೆನೇಕ್ಮಸ್ ರೇಖಾಗಣಿತವನ್ನು ಅನೇಕ ರೀತಿಯಲ್ಲಿ ಬೆಳೆಸಿದರು. ಈ ಕ್ಷೇತ್ರದಲ್ಲಿ ಮತ್ತೊಂದು ಚಿರಾಯು ಹೆಸರು ಯೂಕ್ಲಿಡ್‌ನದು. ಆರ್ಕಿಮಿಡೀಸ್ (ಕ್ರಿ. ಪೂ. 287-212), ಅಪೊಲೋನಿಯಸ್ (ಕ್ರಿ. ಪೂ. 260-200) ಇವರು ರೇಖಾಗಣಿತದ ಇತರ ಗ್ರೀಕ್ ಮೇಧಾವಿಗಳು. ಅಪೊಲೋನಿಯಸ್ ಆ ಕಾಲದವರೆಗೆ ತಿಳಿದಿದ್ದ ಗಣಿತವನ್ನೆಲ್ಲ ಸೇರಿಸಿ ಒಂದು ಗಣಿತ ಸಂಗ್ರಹವನ್ನು ಬರೆದ. ಗ್ರೀಕರ ಕಾಲದಿಂದ ಸುಮಾರು ಹದಿನಾರನೆಯ ಶತಮಾನದ ಮಧ್ಯಭಾಗದವರೆಗೆ ರೇಖಾಗಣಿತದಲ್ಲಿ ಯಾವ ಹೊಸ ಭಾವನೆಗಳೂ ಮೂಡಿಬರಲಿಲ್ಲ. ಹೊಸ ಚೈತನ್ಯವನ್ನು ತಂದುಕೊಟ್ಟವರು ಫ್ರಾನ್ಸಿನ ದೆಸಾರ್ಗ್ (1593-1662) ಮತ್ತು ರೀನೆ ದೆಕಾರ್ತ್ (1596-1650). ಹತ್ತೊಂಬತ್ತನೆಯ ಶತಮಾನದಲ್ಲಿ ಗಣಿತ ಹೊಸ ರೀತಿಯಲ್ಲಿ ಬೆಳೆದು, ಕೆಲವು ಫಲಗಳು ಯೂಕ್ಲಿಡೀಯ ರೇಖಾಗಣಿತಕ್ಕೆ ವಿರೋಧವಾಗಿ ಕಂಡುಬಂದವು. ಈ ರೇಖಾಗಣಿತಕ್ಕೆ ಅಯೂಕ್ಲಿಡೀಯ ರೇಖಾಗಣಿತ ಎಂದು ಹೆಸರು.

ಸಂಖ್ಯೆಗಳ ಬದಲಾಗಿ ಚಿಹ್ನೆಗಳನ್ನು ಉಪಯೋಗಿಸುವುದರಿಂದ ಬೀಜಗಣಿತ ಪ್ರಾರಂಭವಾಯಿತು. ಪ್ರಾಚೀನ ಭಾರತದಲ್ಲಿ ಅವ್ಯಕ್ತಗಳನ್ನು ($x$, $y$ ಇತ್ಯಾದಿ) ಯಾವತ್-ತಾವತ್ ಎಂದು ಕರೆಯುತ್ತಿದ್ದರು. ಕ್ರಿ. ಪೂ. 2100ರ ಸುಮಾರಿನ ಬ್ಯಾಬಿಲೋನಿಯದ ಶಾಸನಗಳಲ್ಲಿ 1ರಿಂದ 60ರವರೆಗಿನ ಸಂಖ್ಯೆಗಳ ವರ್ಗಗಳನ್ನೂ, 1ರಿಂದ 32ರವರೆಗಿನ ಸಂಖ್ಯೆಗಳ ಘನಗಳನ್ನೂ ಪಟ್ಟಿಮಾಡಿದ್ದಾರೆ. ಇವರು ವರ್ಗಸಮೀಕರಣವನ್ನು ಬಳಸುತ್ತಿದ್ದರು. ಈಜಿಪ್ಟಿನ ಪಾಪಿರಸ್ ಗ್ರಂಥಗಳಲ್ಲಿ ಕ್ರಿ. ಪೂ. 1550ರ ವೇಳೆಗೆ ಸರಳ ಸಮೀಕರಣವೂ ಶ್ರೇಢಿಗಳ ಮೇಲಿನ ಸುಲಭ ಲೆಕ್ಕಗಳೂ ಭಿನ್ನರಾಶಿಗಳೂ ವಿವರಿಸಲ್ಪಟ್ಟಿವೆ. ಚೀನದಲ್ಲಿ ಕ್ರಿ. ಪೂ. 203-17ರ ಹೊತ್ತಿಗೆ ತ್ರೈರಾಶಿ. ವರ್ಗ ಮತ್ತು ಘನಮೂಲಗಳು. ಸಮಕಾಲೀನ ಸಮೀಕರಣಗಳು ಮುಂತಾದ ವಿಷಯಗಳ ಪರಿಚಯವಿದ್ದಂತೆ ಕಾಣುತ್ತದೆ.

ಭಾರತದಲ್ಲಿ ಐದು ಮತ್ತು ಆರನೆಯ ಶತಮಾನಗಳಲ್ಲಿ ಆರ್ಯಭಟ, ವರಾಹಮಿಹಿರ ಮತ್ತು ಬ್ರಹ್ಮಗುಪ್ತರು ಗಣಿತಜ್ಞರೆಂದೂ ಖಗೋಲಶಾಸ್ತ್ರಜ್ಞರೆಂದೂ ಪ್ರಸಿದ್ಧರಾಗಿದ್ದರು. ಆರ್ಯಭಟನ ಕೃತಿಗಳಲ್ಲಿ ವರ್ಗಸಮೀಕರಣಗಳೂ ಶ್ರೇಢೀಲೆಕ್ಕಗಳೂ ಇವೆ. $ax\pm by=c$ ರೂಪದಲ್ಲಿರುವ ಮೊದಲ ಘಾತದ ಅನಿರ್ದಿಷ್ಟ ಸಮೀಕರಣವನ್ನೂ $x^2-Ny^2=1$ ಎಂಬ ವರ್ಗ ಸಮೀಕರಣವನ್ನೂ ಪೂರ್ಣಾಂಕಗಳಲ್ಲಿ ಮೊಟ್ಟ ಮೊದಲು ಬಿಡಿಸಿದವನು ಇವನೇ.

830ರ ಸುಮಾರಿನಲ್ಲಿ ಬಾಗ್ದಾದಿನ ಪ್ರಸಿದ್ಧ ಗಣಿತಜ್ಞ ಮಹಮ್ಮದ್ ಇಬನ್ ಮೂಸಾ ಆಲ್ ಖೋವಾ ರಾಸ್ಮಿ ಎಂಬಾತ ಬ್ರಹ್ಮಗುಪ್ತ ಮತ್ತು ಟಾಲೆಮಿಯ ಗ್ರಂಥಗಳ ಸಹಾಯದಿಂದ ಮತ್ತು ಸ್ವಂತ ಸಂಶೋಧನೆಯಿಂದ 'ಆಲ್‌ಜೆಬ್ರ್ ವೆಆಲ್ ಮುಖ್ವಾಬಲ್' ಎಂಬ ಪುಸ್ತಕವನ್ನು ಬರೆದನು. ಇದರಿಂದಲೇ 'ಆಲ್‌ಜಿಬ್ರಾ' ಎಂಬ ಹೆಸರು ಬಂದಿರುವುದು.

ಅಮೋಘವರ್ಷ ನೃಪತುಂಗನ ಆಸ್ಥಾನದಲ್ಲಿದ್ದ ಮಹಾವೀರಾಚಾರ್ಯರು 'ಗಣಿತ ಸಾರಸಂಗ್ರಹ' ಎಂಬ ಪುಸ್ತಕ ಬರೆದರು (ಒಂಬತ್ತನೆಯ ಶತಮಾನ). ಇದರಲ್ಲಿ ಕ್ರಮಯೋಜನೆಗಳು ಮತ್ತು ವಿಕಲ್ಪಗಳ ವಿವರಣೆ ಇದೆ. ಈ ಗ್ರಂಥದ ಕೆಲವು ವಿನೋದದ ಲೆಕ್ಕಗಳು ಭಾಸ್ಕರಾಚಾರ್ಯರಿಗೆ (1114-1185) ಮಾರ್ಗದರ್ಶಕವಾದುವು. ಇವರು ಬಿಜಾಪುರ ಜಿಲ್ಲೆಯ ಬಿಜ್ಜಡಬಿಡಕ್ಕೆ ಸೇರಿದವರು. ಇವರ 'ಸಿದ್ಧಾಂತ ಶಿರೋಮಣಿ' ಗ್ರಂಥದಲ್ಲಿ ಲೀಲಾವತಿ, ಬೀಜಗಣಿತ, ಗೋಳಾಧ್ಯಾಯ ಮತ್ತು ಗ್ರಹಗಣಿತಗಳೆಂಬ ಭಾಗಗಳಿವೆ.

ಈಚೆಗೆ ಬೀಜಗಣಿತ ಅತಿ ಪ್ರೌಢಮಾರ್ಗದಲ್ಲಿ ಬೆಳೆದುಬಂದಿದೆ. ಯಾವುದಾದರೂ ಗಣದ ಮೇಲೆ ಒಂದೋ ಎರಡೋ ಪರಿಕರ್ಮಗಳನ್ನು ವಿವರಿಸಿ, ಕೆಲವು ಸ್ವೀಕೃತಭಾವನೆಗಳ ಆಧಾರದ ಮೇಲೆ ತರ್ಕಬದ್ಧವಾಗಿ ವಾದಿಸುವುದರಿಂದ ಹೊಸ ವಿಷಯಗಳನ್ನು ಕಂಡುಹಿಡಿಯುವುದು ಆಧುನಿಕ ಬೀಜಗಣಿತದ ಮುಖ್ಯಮಾರ್ಗ. ಈ ದಿಕ್ಕಿನಲ್ಲಿ ಮೊದಲು ಹೆಜ್ಜೆ ಇಟ್ಟವರು ಐರ್‌ಲೆಂಡಿನ ಹ್ಯಾಮಿಲ್ಟನ್ (1805-1865) ಮತ್ತು ಜರ್ಮನಿಯ ಗ್ರಾಸ್‌ಮನ್ (1809-1877). ಸಂಕುಲ ಸಿದ್ಧಾಂತ, ವಲಯ ಸಿದ್ಧಾಂತ, ಕ್ಷೇತ್ರ ಸಿದ್ಧಾಂತ ಮುಂತಾದುವು ಆಧುನಿಕ ಬೀಜಗಣಿತದ ಕೆಲವು ಕ್ಷೇತ್ರಗಳು.

ಜನರ ನಿತ್ಯಜೀವನದಲ್ಲಿ ಉದ್ಭವಿಸುವ ಸಣ್ಣ, ದೊಡ್ಡ ಸಮಸ್ಯೆಗಳು ಹಲವು. ಅಳತೆ ಮಾಡಬೇಕು, ಎಣಿಸಬೇಕು, ಸಾಲ-ಬಡ್ಡಿಗಳ ಲೆಕ್ಕಾಚಾರ ಹಲವು ವರ್ಷಗಳಿಗೆ ಆಗಬೇಕು. ಇಂಥ ಸಮಸ್ಯೆಗಳನ್ನು ಪರಿಹರಿಸಲು ಗಣಿತ ಆರಂಭವಾಯಿತು. ಶಿಲ್ಪಕಲೆ, ವೈಜ್ಞಾನಿಕ ಸಂಶೋಧನೆಗಳು ಬೆಳೆಯಲು ಗಣಿತದ ಸಹಾಯವೂ ಹೆಚ್ಚಾಗಿ ಬೇಕಾಯಿತು. ಗಣಿತಶಾಸ್ತ್ರ ಅಭಿವೃದ್ಧಿಯಾಯಿತು. ಭೌತಶಾಸ್ತ್ರ, ಖಗೋಳಶಾಸ್ತ್ರ, ರಸಾಯನಶಾಸ್ತ್ರ, ಜಲಶಾಸ್ತ್ರ ಮೊದಲಾದ ವಿಜ್ಞಾನ ವಿಭಾಗಗಳು ಗಣಿತದ ಸಹಾಯದಿಂದ ಬೆಳೆಯುತ್ತಾರವು. ಅರ್ಥಶಾಸ್ತ್ರ, ಸಮಾಜಶಾಸ್ತ್ರ ಮೊದಲಾದ [illegible] ಶಾಸ್ತ್ರಗಳಿಗೂ ಗಣಿತದ ನೆರವು ಬೇಕೇ ಬೇಕು. ಸಂಗೀತ, [illegible] [illegible]

ಶಿಲ್ಪಕಲೆಗಳು ಗಣಿತದ ಸಹಾಯವಿಲ್ಲದೆ ಬೆಳಗಲಾರವು. ಕಾಲಕ್ರಮೇಣ ಗಣಿತ ತನ್ನದೇ ಆದ ಭಾಷೆಯನ್ನು ರೂಪಿಸಿಕೊಂಡಿದೆ. ಇದರ ಸಂಕೇತಗಳೂ ಭಾಷೆಯೂ ಎಲ್ಲಾ ದೇಶಗಳಿಗೂ ಸಾಮಾನ್ಯ. ಮನೋರಂಜನೆಗಾಗಿಯೇ ವಿನೋದದ ಲೆಕ್ಕಗಳೂ ಮಾಯಾ ಚೌಕ ಘನವೃತ್ತಗಳೂ ಇವೆ.

ಗಣಿತದ ಸಮಸ್ಯೆಗಳನ್ನು ಬಿಡಿಸಲು ಮನಸ್ಸನ್ನು ಒಂದೇ ಕಡೆ ಕೂಡಿಸಿ ತರ್ಕಬದ್ಧವಾಗಿ ಹೆಜ್ಜೆಯಿಂದ ಹೆಜ್ಜೆಗೆ ಸಾಗಬೇಕು. ಇದು ಮನಸ್ಸಿಗೆ ಒಳ್ಳೆಯ ವ್ಯಾಯಾಮ. ಶಿಸ್ತು.

ಪ್ರಾರಂಭದಲ್ಲಿ ಕೊಟ್ಟ ಲೆಕ್ಕಗಳನ್ನು ಮಾಡಿದಿರ ? ಉತ್ತರ ಸರಿಯೆ ನೋಡಿಕೊಳ್ಳಿ ; ಮೊದಲ ಲೆಕ್ಕದ ಉತ್ತರ 100, ಎರಡನೆಯದರ ಉತ್ತರ 15.

ನೋಡಿ : ಅಂಕಿ ; ಪೈಥಾಗೊರಸ್ ; ಯೂಕ್ಲಿಡ್ ; ಸೊನ್ನೆ

## ಗಯೆ

ವರ್ಷಕ್ಕೆ ಮೂರು ಲಕ್ಷಕ್ಕಿಂತ ಹೆಚ್ಚು ಹಿಂದೂ ಯಾತ್ರಾರ್ಥಿಗಳು ಭೇಟಿಕೊಡುವ ಈ ಪಟ್ಟಣ ಭಾರತದ ಬಿಹಾರ ರಾಜ್ಯದಲ್ಲಿದೆ. ಫಲ್ಗು ನದಿಯು ಪಶ್ಚಿಮ ದಂಡೆಯನ್ನು ಬಹು ಪಾಲು ಆಕ್ರಮಿಸಿಕೊಂಡಿದೆ.



ಗಯೆಯ ದೇವಾಲಯ

ಅನೇಕ ಪವಿತ್ರ ಸ್ಥಳಗಳನ್ನು ನಾವು ಗಯೆಯಲ್ಲಿ ಕಾಣಬಹುದು. ಗಯೆಗೆ ಹನ್ನೊಂದು ಕಿ. ಮೀ. ದೂರ ದಕ್ಷಿಣದಲ್ಲಿ ಬುದ್ಧನಿಗೆ ಜ್ಞಾನೋದಯವಾದ ಬುದ್ಧಗಯಾ ಇದೆ. ಬುದ್ಧದೇವ ಜ್ಞಾನೋದಯ ಪಡೆದ ಅರಳೀಮರ (ಬೋಧಿ ವೃಕ್ಷ) ಇಲ್ಲಿಯೇ ಇದೆ.

ಗಯೆಯಲ್ಲಿ ವಿಷ್ಣುಪಾದವಿರುವ ಒಂದು ದೊಡ್ಡ ದೇವಾಲಯವಿದೆ. ಬಲು ಸುಂದರವಾದ ಈ ದೇವಾಲಯವನ್ನು ಕಟ್ಟಿಸಿದವಳು ಮರಾಠ ರಾಣಿ ಅಹಲ್ಯಾಬಾಯಿ (1787). ಬುದ್ಧಗಯೆಯಲ್ಲಿರುವ ದೇವಾಲಯ ಅತ್ಯಂತ ಆಕರ್ಷಣೀಯವಾಗಿದೆ.

ಸುಮಾರು ಮೂವತ್ತು ಚದರ ಕಿಲೊಮೀಟರು ವಿಸ್ತಾರವಿರುವ ಈ ನಗರದ ಜನಸಂಖ್ಯೆ 1,51,105 (1961ರಲ್ಲಿ).

ವಿವರ : ಏಳನೆಯ ಸಂಪುಟ

## ಗವಿ, ಗವಿವಾಸಿ

1940ರ ಸೆಪ್ಟೆಂಬರ್, ನಾಲ್ಕು ಜನ ಫ್ರೆಂಚ್ ಹುಡುಗರು ಮೊಲಗಳ ಬೇಟೆಯಾಡಲು ಹೋದರು. ಸ್ಥಳ ನೈಋತ್ಯ ಫ್ರಾನ್ಸಿನ ಫಲವತ್ತಾದ ಪ್ರದೇಶದ ಕಣಿವೆಯ ಮೇಲ್ಭಾಗದ ಸುಣ್ಣಕಲ್ಲು ಬೆಟ್ಟಗಳು. ಅವರ ನಾಯಿ ರೋಬಾಟ್ ಬೇರುಕಿತ್ತ ವೃಕ್ಷದ ರಂಧ್ರದೊಳಕ್ಕೆ ಬಿದ್ದಿತು. ಹುಡುಗರು ಅತ್ತ ಧಾವಿಸಿದರು. ಆರು ಮೀಟರು ಕೆಳಗಿಳಿದು ನೋಡಿದರು. ರೋಬಾಟ್ ಗವಿಯೊಂದರ ನೆಲದ ಮೇಲೆ ಭದ್ರವಾಗಿ ನಿಂತಿತ್ತು. ಹುಡುಗರು ಬೆಂಕಿಕಡ್ಡಿ ಗೀರಿದರು. ಗವಿ 30 ಮೀಟರುಗಳಷ್ಟು ಉದ್ದವಿತ್ತು, ಬರೀ ಕತ್ತಲೆ. ಸುಮಾರು 20,000 ವರ್ಷಗಳ ಕಾಲ ಯಾರೂ ನೋಡದಿದ್ದ ದೃಶ್ಯ ಕಂಡರು. ಹಳದಿಯ ಕಲ್ಲು ಗೋಡೆಗಳ ಮೇಲೆ ಗವಿಯ ಮೇಲ್ಭಾಗದಲ್ಲಿ ಕಾಡೆಮ್ಮೆ, ಎತ್ತು, ಹಸು, ಕುದುರೆ, ಜಿಂಕೆ ಇವುಗಳ ಚಿತ್ರಗಳು. ಕಪ್ಪು, ಕಂದು. ಕೆಂಪಿನ ಈ ಚಿತ್ರಗಳು ಸ್ಪಷ್ಟವಾಗಿದ್ದು ಜೀವಂತ ಪ್ರಾಣಿಗಳೇ ಎದುರಿಗಿದ್ದ ಹಾಗಿದ್ದುವು.

1901ರಲ್ಲಿ ಒಂದು ದಿನ ಜಿಮ್ ವೈಟ್ ಎಂಬ ದನ ಕಾಯುವ ಹುಡುಗ ಅಮೆರಿಕ ಸಂಯುಕ್ತ ಸಂಸ್ಥಾನದ ನ್ಯೂ ಮೆಕ್ಸಿಕೋದಲ್ಲಿ ಗ್ವಾಯಾಡಲೂಪ್ ಬೆಟ್ಟಗಳ ಮೇಲೆ ಕುದುರೆ ಏರಿಹೋಗುತ್ತಿದ್ದ. ಎದುರಿಗೆ ದಟ್ಟವಾದ ಮೋಡವೊಂದು ನೆಲದಿಂದ ಮೇಲೇರುತ್ತಿದ್ದಂತೆ ಕಾಣಿಸಿತು. ಹಾಗೆಯೇ ನಿಂತು ನೋಡಿದ. ಅದು ಮೋಡವಲ್ಲ. ನೆಲದಿಂದ ಮೇಲೇಳುತ್ತಿದ್ದ ಬಾವಲಿಗಳ ಸಮೂಹ. ನೆಲದೊಳಗಿನ ಒಂದು ರಂಧ್ರದಿಂದ ಬಾವಲಿಗಳು ಹೊರಕ್ಕೆ ಬರುತ್ತಿದ್ದವು. ಮರುದಿನ ಏಣಿಯನ್ನೂ ದೀಪವನ್ನೂ ತಂದು ಆ ರಂಧ್ರದಿಂದ ಜಿಮ್ ವೈಟ್ ಒಳಗಿಳಿದ. ಒಳಗೆ ವಿಶಾಲವಾದ ಗವಿ ಪ್ರದೇಶ. ಮೇಲ್ಭಾಗದಲ್ಲಿ ತೂಗುಬಿದ್ದಿರುವ ನೀರ್ಗಲ್ಲುಗಳು. ನೆಲದ ಮೇಲೆ ಎದ್ದು ನಿಂತಿರುವ ಕಂಬಗಳು. ಜಿಮ್ ವೈಟ್‌ಗೆ ಎದುರಿಗೆ ಬೇರೊಂದು ಪ್ರಪಂಚವೇ ಕಾಣುತ್ತಿತ್ತು. ಅವನು ಉತ್ತರ ಅಮೆರಿಕದ ಅತ್ಯಂತ ಆಕರ್ಷಕ ಗವಿಗಳಾದ ಕಾರ್ಲ್ಸ್‌ಬ್ಯಾಡ್ ಗವಿಗಳನ್ನು ಕಂಡುಹಿಡಿದಿದ್ದ. ಈ ಗವಿಗಳು 228 ಮೀಟರು ಆಳದಲ್ಲಿವೆ. ಇದರಲ್ಲಿನ ಒಂದು ಗವಿ 1,525 ಮೀಟರು ಉದ್ದವೂ, 183 ಮೀಟರು ಅಗಲವೂ 60–90 ಮೀಟರು ಎತ್ತರವೂ ಇದೆ.

ಜಿಮ್ ವೈಟ್ ಹೇಳಿದ ವೃತ್ತಾಂತವನ್ನು ಮೊದಲು ಯಾರೂ ನಂಬಲಿಲ್ಲ. ಕ್ರಮೇಣ ಇದರ ವಿಷಯ ಹಬ್ಬಿ 1924ರಲ್ಲಿ ಅಮೆರಿಕದ ಅಧ್ಯಕ್ಷರು ಈ

ಗವಿಯನ್ನು ರಾಷ್ಟ್ರೀಯ ಸ್ಮಾರಕವೆಂದು ಘೋಷಿಸಿದರು. ಈಗ ಒಳಗೆ ವಿದ್ಯುತ್ ದೀಪಗಳಿವೆ. ಅವರ ಬೆಳಕಿನಲ್ಲಿ ಗುಹೆಯು ಶಿಲ್ಪ ಥಳಥಳಿಸುತ್ತದೆ.

ನ್ಯೂಮೆಕ್ಸಿಕೊದಲ್ಲಿನ ಕಾರ್ಲ್ಸ್‌ಬ್ಯಾಡ್ ಗುಹೆಗಳ ಆರಂಭ ಆರು ಕೋಟಿ ವರ್ಷಗಳ ಹಿಂದೆಯೇ ಆಗಿದೆಯೆಂದು ಹೇಳುತ್ತಾರೆ. ಆಗಿನ್ನೂ ಮಾನವ ಹುಟ್ಟಿಯೇ ಇರಲಿಲ್ಲ. ಆಗ ಮಳೆಬಿದ್ದು ನದಿ ಹರಿದು ನ್ಯೂಮೆಕ್ಸಿಕೊದಲ್ಲಿನ ಸುಣ್ಣಕಲ್ಲು ಗುಡ್ಡ ಪ್ರದೇಶ ಕರಗುತ್ತ ಬಂದಿತ್ತು. ಅದು ಕರಗಿ ಕರಗಿ ಅಲ್ಲಲ್ಲಿ ಬಿರುಕು ಬಿಟ್ಟಿತು. ಬಿರುಕುಗಳು ದೊಡ್ಡದಾಗಿ ಸುರಂಗಗಳು ಉಂಟಾದುವು. ನೀರು ಬೀಳುತ್ತ ಹೋದಹಾಗೆಲ್ಲ ಸುರಂಗಗಳು ದೊಡ್ಡ ಕೊಠಡಿಗಳಾದುವು. ಗವಿ ರೂಪುಗೊಳ್ಳುತ್ತಾ ಹೋಯಿತು. ಕಲ್ಲು ಗೋಡೆಗಳ ಕೋಣೆಗಳನ್ನು ನೀರು ತುಂಬಿತು. ಸಣ್ಣದೊಂದು ಬಿರುಕಿನಿಂದ ಆರಂಭವಾದ ಈ ಗವಿ ಪ್ರಪಂಚದಲ್ಲಿಯೇ ದೊಡ್ಡ ಗವಿಗಳಲ್ಲಿ ಒಂದೆಂದು ಎಣಿಸಲ್ಪಟ್ಟಿದೆ. ಇದರಲ್ಲಿ ಅತಿ ದೊಡ್ಡ ಕೋಣೆ ಹತ್ತು ಫುಟ್‌ಬಾಲ್ ಮೈದಾನಗಳಷ್ಟು ದೊಡ್ಡದಾಗಿದೆ. ಒಂದು ಸ್ಥಳದಲ್ಲಿ ಗುಹೆಯ ಮೇಲ್ಛಾವಣಿ ಮೂವತ್ತು ಅಂತಸ್ತಿನ ಮನೆಯಷ್ಟು ಎತ್ತರವಿದೆ.

ಹಿಮಬಂಡೆಯ ಕಂಬಗಳ ಜೊತೆಗೆ ಕಲ್ಲಿನ ಮೇಲೆ ನೀರು ಜಿನುಗುವುದರಿಂದ ಉಂಟಾದ ವಿವಿಧ ರೂಪಗಳನ್ನು ಕೆಲವು ಗವಿಗಳಲ್ಲಿ ನೋಡಬಹುದು. ಕೆಲವು ಕಡೆ ನೆಲದಿಂದ ಮೇಲೆದ್ದ ಸೂಜಿಗಳಂತಿರಬಹುದು. ಇಲ್ಲವೆ ರೆಕ್ಕೆಗಳ ಹಾಗೆ. ಹೂವಿನಂತೆ. ಪರದೆಯಂತೆ ಆಕಾರ ರೂಪುಗೊಳ್ಳಬಹುದು.

ಇಂಥ ವಿಸ್ಮಯಕರ ಗುಹೆಗಳು ಪ್ರಪಂಚದ ಹಲವು ಭಾಗಗಳಲ್ಲಿವೆ. ಇಂಗ್ಲೆಂಡಿನ ಚೆಡ್ಡರ್ ಎಂಬಲ್ಲಿನ ಗುಹೆಗಳು ಮಾಯಾನಗರದಂತೆ ಕಾಣುತ್ತವೆ. ಅಮೆರಿಕದ ಕೆಂಟಕಿಯಲ್ಲಿ ಗುಹೆಗಳ ನಗರವೇ ಇದೆ.

ಸುಣ್ಣಕಲ್ಲು ಪರ್ವತಗಳ ಮೇಲೆ ನೀರು ಬಿದ್ದು ರೂಪುಗೊಂಡಿರುವ ಗುಹೆಗಳು ಒಂದು ಬಗೆ. ಸಮುದ್ರದ ದಡದ ಮೇಲಿನ ಕಲ್ಲು ಬಂಡೆಗಳಿಗೆ, ಗುಡ್ಡಗಳಿಗೆ. ಅಲೆಗಳು ಬಡಿದು ಅದರಿಂದ ಉಂಟಾದ ಗುಹೆಗಳು ಇನ್ನೊಂದು ತೆರ. ಇವುಗಳಿಗೆ ಸಮುದ್ರದ ಗವಿಗಳು ಎನ್ನುತ್ತಾರೆ. ಅಲೆಗಳು ಕಲ್ಲುಗಳನ್ನು ಕರಗಿಸುವುದಿಲ್ಲ. ಆದರೆ ಆ ಹೊಡೆತದ ಜೋರಿಗೆ ಬಂಡೆಯ ಭಾಗ ಕಡಿದು ಹೋಗುತ್ತದೆ. ಇಟಲಿಯ ಕೆಪ್ರಿ ದ್ವೀಪದಲ್ಲಿನ ಬ್ಲೂ ಗ್ರಾಟೋ (ನೀಲಿ ಗವಿ) ಇಂಥ ಗವಿಗಳಲ್ಲಿ ಸುಪ್ರಸಿದ್ಧವಾದದ್ದು.

ನಾರ್ವೆ ದೇಶದ ಪಶ್ಚಿಮ ಕರಾವಳಿಯ ಟೊರ್ಗೆಟನ್ ಎಂಬ ದ್ವೀಪದಲ್ಲಿ ಕಡಲು 162 ಮೀಟರು ಉದ್ದದ ಸುರಂಗವೊಂದನ್ನು ಕೊರೆದಿದೆ. ಇದರ ವಿಶೇಷವೆಂದರೆ ಕಡಲು ಗುಹೆಯನ್ನು ನಿರ್ಮಿಸುವ ಕಾಲಕ್ಕೆ ಕಡಲ ದಡಕ್ಕೆ ಇದ್ದ ಕಲ್ಲಿನ ಪರ್ವತ ಇದಾದಮೇಲೆ ಈಗ 214 ಮೀಟರು ಮೇಲಕ್ಕೆ ಎತ್ತಲ್ಪಟ್ಟಿದೆ.

ಸುಣ್ಣಕಲ್ಲು ಗವಿ. ಕಡಲು ಗವಿ ಇವಲ್ಲದೆ. ಜ್ವಾಲಾಮುಖಿಯಿಂದ ಹೊರಟ ಶಿಲಾದ್ರವ. ಲಾವ ಇವುಗಳಿಂದ ನಿರ್ಮಿತ ಗವಿಗಳೂ ಇವೆ. ದ್ರವವಾದ



ಕ್ರೂರ ಮೃಗಗಳ ದಾಳಿಯ ನಿರೀಕ್ಷೆ : ಆತ್ಮರಕ್ಷಣೆಗೆ ಸಿದ್ಧತೆ

ಲಾವ ಹರಿಯುವಾಗ ಹರಡುವಾಗ ಅಲ್ಲಲ್ಲಿ ಗುಳ್ಳೆಗಳಾಗುತ್ತವೆ. ಗುಳ್ಳೆಗಳು ಬಹು ದೊಡ್ಡವು. ಇವು ಗಟ್ಟಿಯಾಗಿ ಗುಹೆಗಳಾಗುತ್ತವೆ. 1783ರಲ್ಲಿ ಐಸ್‌ಲೆಂಡ್ ದ್ವೀಪದ ಸ್ಕಫಾರ್ ಫೂಕುಲ್ ಎಂಬ ಜ್ವಾಲಾಮುಖಿ ಪ್ರದೇಶದಲ್ಲಿ ಲಾವದಿಂದ ಉಂಟಾದ ದೊಡ್ಡ ಗುಹೆಯೇ ಸುರ್ತ್ಣ. ಸುರ್ತ್ಣ ಎಂದರೆ ಕತ್ತಲೆ ದೇವತೆ. ಗುಹೆ 12 ಮೀಟರು ಎತ್ತರ. 15 ಮೀಟರು ಅಗಲ. 1.200 ಮೀಟರು ಉದ್ದವಾಗಿದೆ.

ಕೆನಡದಲ್ಲಿ ಮತ್ತು ಅಮೆರಿಕದ ವಾಯುವ್ಯದಲ್ಲಿ ಅನೇಕ ಹಿಮನಿರ್ಮಿತ ಗುಹೆಗಳಿವೆ.

ನಿಸರ್ಗನಿರ್ಮಿತ ಗುಹೆಗಳಲ್ಲದೆ ಮಾನವ ತಾನೇ ಬೆಟ್ಟಗಳನ್ನು ಕಡಿದು ಆಶ್ರಯಕ್ಕಾಗಿ ಗುಹೆಗಳನ್ನು ನಿರ್ಮಿಸಿದ್ದಾನೆ. ಭಾರತದ ಅಜಂತ ಗುಹೆಗಳು ಮಾನವನಿರ್ಮಿತ ಗುಹೆಗಳು. ಗುಹಾಂತರ್ದೇವಾಲಯಗಳು ಭಾರತದಲ್ಲಿವೆ.

ಗುಹೆಗಳಲ್ಲಿ ಹಾವುಗಳು. ಪಕ್ಷಿಗಳು ಮನೆಮಾಡಿಕೊಂಡರೂ ನಿಜವಾದ ಗವಿವಾಸಿಗಳೆಂದರೆ ಗವಿಯ ಆಳದಲ್ಲಿ ಅಗಾಧ ಕತ್ತಲಲ್ಲಿ ವಾಸಮಾಡುವ ಹುಳುಹುಪ್ಪಟೆಗಳು. ಹಲ್ಲಿಯ ಜಾತಿಗೆ ಸೇರಿದ ಸಾಲಮಾಂಡರ್. (ನೀರಿರುವ ಕಪ್ಪೆ) ಮೀನು – ಇವು. ಇವುಗಳಲ್ಲಿ ಹಲವು ತಮ್ಮ ಬಣ್ಣ ಕಳೆದುಕೊಂಡು ಬೆಳ್ಳಗಾಗಿವೆ. ಕೆಲವಂತೂ ಪಾರದರ್ಶಕ ಪ್ರಾಣಿಗಳಾಗಿವೆ. ಕಣ್ಣಂತೂ ಇಲ್ಲವೇ ಇಲ್ಲ. ಗವಿಯ ಪಾತಾಳದ ನೀರಿನಲ್ಲಿ ಈಜುವ ಕುರುಡು ಮೀನಿಗೆ ಕಣ್ಣು ಕಾಣದಿದ್ದರೂ ಶಬ್ದಕ್ಕೆ ಬಲು ಸೂಕ್ಷ್ಮ. ಈ ಪ್ರಾಣಿಗಳು ಗವಿಗಳಲ್ಲಿ ಅನಾದಿಯಿಂದ ಜೀವಿಸಿವೆ. ಆದರೆ ಸಸ್ಯಗಳು ಗವಿಯ ಅಂಧಕಾರದಲ್ಲಿ ಬೆಳೆಯುವುದಿಲ್ಲ.

ಗವಿಗಳು ಮಾನವನ ಕುತೂಹಲವನ್ನು ಕೆರಳಿಸಿದ ನಿಸರ್ಗ ಸೃಷ್ಟಿ. ಗವಿಗಳ ಅಧ್ಯಯನಶಾಸ್ತ್ರ ರೂಪುಗೊಂಡಿದೆ.

ಗವಿ ಸುಮಾರು 20.000 ವರ್ಷಗಳ ಕೆಳಗೆ ಮಾನವನ ಪೂರ್ವಜನ ವಾಸಸ್ಥಾನವೂ ಆಗಿತ್ತು.

ಆದಿ ಮಾನವನಿಗೆ ಬಂಡೆಗಳನ್ನು ಕೊರೆದು ಗುಹೆಗಳನ್ನು ಮಾಡುವುದು ತಿಳಿದಿರಲಿಲ್ಲ. ನಿಸರ್ಗ ನಿರ್ಮಿತ ಗುಹೆಗಳಲ್ಲಿ ಚಳಿ. ಗಾಳಿ. ಮಳೆಗಳಿಂದ ಆತ ಆಶ್ರಯ ಪಡೆಯುತ್ತಿದ್ದ.

ಇಂಗ್ಲೆಂಡ್. ವೇಲ್ಸ್. ಫ್ರಾನ್ಸ್. ಬೆಲ್ಜಿಯಂ. ಜರ್ಮನಿ. ಹಂಗೆರಿ. ಸ್ವಿಟ್ಜರ್‌ಲೆಂಡ್ ಇಲ್ಲೆಲ್ಲ ಆದಿಮಾನವರ ಜೀವನದ ರೀತಿ ಹೇಗಿತ್ತೆಂಬುದನ್ನು ಗವಿಗಳನ್ನು ಶೋಧಿಸಿ ಕಂಡುಹಿಡಿಯಲಾಗಿದೆ.

ಬೇಟೆಯಾಡಿ ಮೃಗಗಳನ್ನು ಕೊಂದು ತಿನ್ನುವುದು ಈ ಗವಿವಾಸಿಯ ಮುಖ್ಯ ದಿನಚರಿ. ತನ್ನ ಹೆಂಡತಿ ಮಕ್ಕಳೊಂದಿಗೆ ಆತ ಗವಿಯಲ್ಲಿ ವಾಸಿಸುತ್ತಿದ್ದರೂ ಕುಟುಂಬದ ನೀತಿ ಗೊತ್ತಿರಲಿಲ್ಲ. ಹಸಿವಾದಾಗ ತಿನ್ನಲು ಪ್ರಾಣಿ ಸಿಗದಿದ್ದರೆ. ಗವಿವಾಸಿ ತನ್ನ ಮಕ್ಕಳನ್ನೇ ಕೊಂದು ತಿನ್ನುತ್ತಿದ್ದ.

ಮೊದಮೊದಲು ಆದಿಮಾನವ ಕಲ್ಲು ಬಂಡೆಗಳನ್ನು ಎತ್ತಿಹಾಕಿ ಪ್ರಾಣಿಗಳನ್ನು ಕೊಲ್ಲುತ್ತಿದ್ದರೂ ಬರಬರುತ್ತ ಕಲ್ಲುಗಳಿಂದ ಆಯುಧಗಳನ್ನು ಮಾಡಲು ಕಲಿತ. ಅನಂತರ ಗವಿವಾಸಿ ಬೆಂಕಿ ಮಾಡುವುದನ್ನೂ ಗೋಡೆಗಳ ಮೇಲೆ ಬಣ್ಣದಿಂದ ಚಿತ್ರಗಳನ್ನು ಬರೆಯುವುದನ್ನೂ ಸತ್ತವರನ್ನು ಹೂಳುವುದನ್ನೂ ಕಲಿತ.

ಪುರಾತತ್ತ್ವಶೋಧಕರು ಪರೀಕ್ಷಿಸಿರುವ ಗುಹೆಗಳಲ್ಲಿ ಶಿಲಾಯುಗದ ಗವಿವಾಸಿ ಉಪಯೋಗಿಸುತ್ತಿದ್ದ ಕಲ್ಲಿನ ಆಯುಧಗಳ ಜೊತೆಗೆ ಅವನ ಆಹಾರವಾಗಿದ್ದ ಶಿಲಾಯುಗ ಮೃಗಗಳ ಅವಶೇಷಗಳೂ ಗವಿವಾಸಿಗಳ ಅವಶೇಷಗಳೂ ದೊರೆತಿವೆ.

ಶಿಲಾಯುಗದ ಮಾನವನಿಗೆ ಮನೆಗಳನ್ನು ಕಟ್ಟುವುದಾಗಲೀ, ವ್ಯವಸಾಯ ಮಾಡುವುದಾಗಲೀ, ಮೃಗಗಳನ್ನು ಪಳಗಿಸುವುದಾಗಲೀ ತಿಳಿದಿರಲಿಲ್ಲ.

ಆದರೆ ಗವಿವಾಸಿಗೆ ಮಂತ್ರ ತಂತ್ರದಲ್ಲಿ ನಂಬಿಕೆಯಿತ್ತೆಂಬುದಕ್ಕೆ ಗವಿಚಿತ್ರಗಳು ಆಧಾರವಾಗಿವೆ. ರೋಬಾಟ್ ನಾಯಿ ಕಂಡುಹಿಡಿದ ಗವಿಯಲ್ಲಿನ ಚಿತ್ರಗಳು ಮಂತ್ರವಾದಿಗಳಿಂದ ಬರೆಯಲ್ಪಟ್ಟ ಚಿತ್ರಗಳೆಂಬ ಅಭಿಪ್ರಾಯವಿದೆ. ಕೆಲವೊಂದು ಪ್ರಾಣಿಗಳಿಗೆ ಏಟು ಬಿದ್ದಿರುವಂತೆಯೂ ಪ್ರಾಣಿಗಳನ್ನು ಈಟಿಯಿಂದ ಇರಿಯುತ್ತಿರುವಂತೆಯೂ ಕ್ರೂರ ಕಾಡೆಮ್ಮೆಯ ಮುಂದೆ ಮನುಷ್ಯನೊಬ್ಬ ಸತ್ತು ಬಿದ್ದಿರುವಂತೆಯೂ ಇರುವ ಚಿತ್ರಗಳಿವೆ.

ಭಾರತದಲ್ಲಿ ಕಪ್ಪುಗಲ್ಲಿನ ಗುಹೆಗಳಲ್ಲಿ ಹೊಸ ಶಿಲಾಯುಗದ ಚಿತ್ರಕಲೆ ಕಂಡುಬಂದಿದೆ. ಒಂದು ಚಿತ್ರದಲ್ಲಿ ಇಬ್ಬರು ಮನುಷ್ಯರು ಒಂದು ಗೂಳಿಯನ್ನು ಹಿಡಿಯುತ್ತಿರುವ ಚಿತ್ರವಿದೆ. ಸಿಂಗನಪುರ, ಮಾಸ್ಕಿ, ಕರ್ನೂಲು ಗುಹೆಗಳ ಚಿತ್ರಗಳಿಂದ ಶಿಲಾಯುಗದ ಜನರ ಜೀವನ ರೀತಿನೀತಿ ತಿಳಿಯಬಹುದಾಗಿದೆ.

ನೋಡಿ: ಅಜಂತ, ಎಲ್ಲೋರ; ನಾಗರಿಕತೆ: ಪೂರ್ವಮಾನವ.



## ಗಳಿಗೆ ಬಟ್ಟಲು

ನ್ಯಾಯಾಲಯದಲ್ಲಿ ವಕೀಲ ವಾದಮಾಡುವಾಗ ಕಾಲಹರಣ ಮಾಡದಂತೆ, ಅವನಿಗೆ ಅಗತ್ಯವಾದಷ್ಟು ಕಾಲ ನಿಗದಿ ಮಾಡಬೇಕು, ಗಡಿಯಾರವೇ ಇಲ್ಲದಿದ್ದ ದಿನಗಳಲ್ಲಿ ಅದಕ್ಕೇನು ಮಾಡಿದರು?

ಸರಳ ಕಾಲಮಾಪಕ
ಗಳಿಗೆ ಬಟ್ಟಲು

ಒಂದು ಪಾತ್ರೆ. ಅದಕ್ಕೆ ತಳದಲ್ಲಿ ಸಣ್ಣ ರಂಧ್ರ. ಪಾತ್ರೆಯಲ್ಲಿ ನೀರು. ವಕೀಲನ ಮೊಕದ್ದಮೆಯ ಮಹತ್ವವನ್ನನುಸರಿಸಿ. 'ಇಷ್ಟು ನೀರು ಕೆಳಕ್ಕೆ ಸೋರುವವರೆಗೆ ವಾದಿಸಬಹುದು' ಎಂದು ಅಪ್ಪಣೆ.

ಪ್ರಾಚೀನ ಅಥೆನ್ಸ್‌ನಲ್ಲಿ ಈ ಪದ್ಧತಿ ಇದ್ದಿತು.

ಈ ನೀರಿರುವ ರಂಧ್ರದ ಪಾತ್ರೆ ಗಳಿಗೆ ಬಟ್ಟಲು. ಇಂಗ್ಲಿಷ್‌ನಲ್ಲಿ 'ಕ್ಲೆಪ್ಸಿಡ್ರ' ಎಂದು ಹೆಸರು.

ಗಳಿಗೆ ಬಟ್ಟಲು ಒಂದು ಸರಳವಾದ ಕಾಲಮಾಪಕ. ಪಾತ್ರೆಯಲ್ಲಿನ ನೀರು ಹನಿಹನಿಯಾಗಿ ಬೀಳುವುದರ ಮೂಲಕ ಕಾಲವನ್ನು ಗೊತ್ತುಪಡಿಸುತ್ತಿದ್ದರು. ಸಾಮಾನ್ಯವಾಗಿ ಗೆರೆಗಳ ಗುರುತು ಇರುವ ಗಾಜಿನ ಜಾಡಿಯೊಂದರಲ್ಲಿ ನೀರನ್ನು ತುಂಬಿರುತ್ತಿದ್ದರು. ಆ ಜಾಡಿಯಲ್ಲಿ ರಂಧ್ರವಿರುತ್ತಿತ್ತು. ಆ ರಂಧ್ರದ ಮೂಲಕ ನೀರು ನಿಧಾನವಾಗಿ ತೊಟ್ಟಿಕ್ಕುತ್ತಿತ್ತು. ಜಾಡಿಯಲ್ಲಿ ಎಷ್ಟು ನೀರು ಉಳಿದಿರುತ್ತಿತ್ತೋ ಅದರ ಆಧಾರದ ಮೇಲೆ ವೇಳೆಯನ್ನು ನಿರ್ಧರಿಸುತ್ತಿದ್ದರು.

ಮೊದಲು ಈ ರೀತಿಯ ವ್ಯವಸ್ಥೆಯಿದ್ದರೂ ಅನಂತರ ಅನೇಕ ಉಪಯುಕ್ತ ಬದಲಾವಣೆಗಳಾದುವು. ಜಾಡಿಯಿಂದ ನೀರು ಹೊರಬರುತ್ತಿದ್ದಂತೆ ನೀರಿನ ಮಟ್ಟವನ್ನು ತೇಲುವ ವಸ್ತುವಿನ ಮೂಲಕ ಸೂಚಿಸಲಾರಂಭಿಸಿದರು. ಅನಂತರ ಹೊರಚೆಲ್ಲುವ ನೀರು ಒಂದು ಚಕ್ರವನ್ನು ತಿರುಗಿಸುತ್ತಿತ್ತು. ಆ ಚಕ್ರಕ್ಕೂ ಅಂಕಿಗಳನ್ನು ಸೂಚಿಸುವ ಮುಖ ಫಲಕದ ಮೇಲಿದ್ದ ಎರಡು ಮುಳ್ಳುಗಳಿಗೂ ಸಂಬಂಧವಿದ್ದಿತು. ಇದರಿಂದ ವೇಳೆ ತಿಳಿಯುತ್ತಿತ್ತು.

ಗಳಿಗೆ ಬಟ್ಟಲಿನ ಉಪಯೋಗ ಅತ್ಯಂತ ಪ್ರಾಚೀನ ಕಾಲದಿಂದಲೂ ಇದ್ದಿತು. ಪ್ರಾಚೀನ ಈಜಿಪ್ಟಿನಲ್ಲೇ ಇದರ ಉಗಮ ಎಂದು ಹೇಳುತ್ತಾರೆ. ಕ್ರಿ. ಪೂ. 159 ರಲ್ಲಿ ರೋಮ್‌ನಲ್ಲಿ ಇಂಥ ಗಡಿಯಾರವನ್ನು ಸೆನೆಟ್‌ನಲ್ಲಿ ಭಾಷಣದ ಅವಧಿಯನ್ನು ಗಮನಿಸಲು ಉಪಯೋಗಿಸುತ್ತಿದ್ದರು. ಕ್ರಿ. ಪೂ. 400ರಲ್ಲಿ ಗ್ರೀಕ್ ತತ್ತ್ವಜ್ಞಾನಿ ಪ್ಲೇಟೋ ಹೊಸ ಬಗೆಯ ಗಳಿಗೆ ಬಟ್ಟಲನ್ನು ಕಂಡುಹಿಡಿದ ಎಂದು ಹೇಳುತ್ತಾರೆ.

ಗಳಿಗೆ ಬಟ್ಟಲಿನ ವಿಚಾರದಲ್ಲಿ ಭಾರತದಲ್ಲಿ ಒಂದು ಕರುಣಾಜನಕ ಕಥೆಯಿದೆ. 'ಲೀಲಾವತಿ' ಎಂಬ ಗಣಿತ ಗ್ರಂಥವನ್ನು ಹನ್ನೆರಡನೆಯ ಶತಮಾನದಲ್ಲಿ ಬರೆದ ಭಾಸ್ಕರಾಚಾರ್ಯರ ಒಬ್ಬಳೇ ಮಗಳು ಲೀಲಾವತಿ. ಅವಳಿಗೆ ಮದುವೆಯಾದೊಡನೆ ಗಂಡ ತೀರಿಕೊಳ್ಳುವನೆಂದು ಭಾಸ್ಕರಾಚಾರ್ಯರು ಜಾತಕ ನೋಡಿ ತಿಳಿದರು. ಅದನ್ನು ತಪ್ಪಿಸಲು ಅವರು ಒಂದು ಒಳ್ಳೆಯ ಮುಹೂರ್ತವನ್ನು ಕಂಡುಹಿಡಿದರು. ಒಂದು ಜಲ ಯಂತ್ರವನ್ನು ತಯಾರಿಸಿದರು. ಸೂರ್ಯೋದಯದಿಂದ ಮೊದಲುಗೊಂಡು ಒಂದು ಪ್ರಮಾಣದ ನೀರು ಲಾಳಿಕೆಯಿಂದ ಪಾತ್ರೆಯೊಳಕ್ಕೆ ಹರಿದರೆ ಮುಹೂರ್ತ ಒದಗಿತೆಂದು ಅವರ ಲೆಕ್ಕ. ವಧು ಲೀಲಾವತಿ ಯಂತ್ರವನ್ನು ಕುತೂಹಲದಿಂದ ನೋಡುತ್ತಿದ್ದಾಗ ಅವಳ ಕತ್ತಿನಿಂದ ಮುತ್ತೊಂದು ಉರುಳಿ ಲಾಳಿಕೆಯಲ್ಲಿ ಸೇರಿಕೊಂಡು ನೀರು ಹರಿಯುವ ಪ್ರಮಾಣದಲ್ಲಿ ಏರುಪೇರಾಯಿತು. ಇದನ್ನು ತಿಳಿಯದಿದ್ದ ಭಾಸ್ಕರಾಚಾರ್ಯರು ನೀರಿನ ಪ್ರಮಾಣದಂತೆ ವಿವಾಹ ಪೂರೈಸಿದರು. ಆದರೆ ಕಾಲಮಾಪನ ಏರುಪೇರಾಗಿದ್ದುದರಿಂದ ಶುಭ ಮುಹೂರ್ತ ಒದಗಲಿಲ್ಲ. ಕೆಲವೇ ಗಂಟೆಗಳಲ್ಲಿ ವಧು ವಿಧವೆಯಾದಳು.

ಈ ದಂತಕಥೆಯಿಂದ ಭಾರತೀಯರಲ್ಲಿ ಗಳಿಗೆ ಬಟ್ಟಲಿನ ಉಪಯೋಗ ವಿತ್ತು ಎಂದು ನಮಗೆ ತಿಳಿಯುತ್ತದೆ.

ಭಾರತದಲ್ಲಿ ಒಂದು ಬಗೆಯ ಗಳಿಗೆ ಬಟ್ಟಲನ್ನು ಬಳಸುತ್ತಿದ್ದರು. ಕೆಳಗೆ ರಂಧ್ರವಿದ್ದ ಒಂದು ಬಟ್ಟಲನ್ನು ನೀರಿನಲ್ಲಿ ತೇಲಿಬಿಡುವುದು. ಹನಿ ಹನಿಯಾಗಿ ನೀರು ಮೇಲೆ ಬಂದು ಬಟ್ಟಲು ನೀರಿನಿಂದ ತುಂಬಿ ಮುಳುಗಿದಾಗ ಒಂದು ಗಂಟೆ ಎನಿಸುತ್ತಿತ್ತು.

ಇಂದು ತಯಾರಾಗುತ್ತಿರುವ ಸಾವಿರಾರು ವಿಧದ ಗಡಿಯಾರಗಳಿಗೆ ಮೂಲ ಗಳಿಗೆ ಬಟ್ಟಲು.

ನೋಡಿ : ಗಡಿಯಾರ

## ಗಾಂಧಿಜಿ

1948ರ ಜನವರಿ 31ನೆಯ ದಿನಾಂಕ ನ್ಯೂಯಾರ್ಕಿನಲ್ಲಿರುವ ವಿಶ್ವ ಸಂಸ್ಥೆಯ ಐವತ್ತೈದು ಸದಸ್ಯರಾಷ್ಟ್ರಗಳ ಧ್ವಜಗಳು ಅರ್ಧ ಮಟ್ಟದಲ್ಲಿ ಹಾರಿದುವು. ಕಾರಣ—ಅಂದು ಒಬ್ಬ ವ್ಯಕ್ತಿಯ ಅಂತ್ಯ ಸಂಸ್ಕಾರ.

ಆ ವ್ಯಕ್ತಿ ಯಾವ ರಾಷ್ಟ್ರದ ಅಧ್ಯಕ್ಷನೂ ಆಗಿರಲಿಲ್ಲ. ಪ್ರಧಾನಿಯೂ ಆಗಿರಲಿಲ್ಲ. ಅಷ್ಟೇಕೆ. ಆತನಿಗೆ ತೀರ ಸಣ್ಣ ಅಧಿಕಾರದ ಸ್ಥಾನವೂ ಇರಲಿಲ್ಲ. ಆತ ಯಾವ ಸೈನ್ಯಕ್ಕೂ ಅಧಿಪತಿಯಾಗಿರಲಿಲ್ಲ : ಕೈಗಾರಿಕೆಯ ಸಾಮ್ರಾಜ್ಯವನ್ನೂ ಸ್ಥಾಪಿಸಿರಲಿಲ್ಲ. ಆತನಿಗೆ ಒಂದು ಬ್ಯಾಂಕಿನಲ್ಲೂ ಲೆಕ್ಕ ಇರಲಿಲ್ಲ. ಒಂದು ಗುಡಿಸಲಿಲ್ಲ. ಒಂದು ಸೂಜಿಯಷ್ಟು ನೆಲವಿಲ್ಲ. ಒಂದಿಷ್ಟು ಬಟ್ಟೆ. ಒಂದು ಜೊತೆ ಚಪ್ಪಲಿ. ಕನ್ನಡಕ. ಹಳೆಯ ಗಡಿಯಾರ. ಇಷ್ಟೇ ಆತನ ಆಸ್ತಿ. ನೋಡುವುದಕ್ಕೆ ಅಂಥ ಮನೋಹರ ರೂಪವಿಲ್ಲ. 'ಅರೆಬೆತ್ತಲೆ ಬೈರಾಗಿ' ಎಂದು ಕರೆಸಿಕೊಂಡ ಮುದುಕನೊಬ್ಬನ ಸಾವಿಗೆ ಐವತ್ತೈದು ರಾಷ್ಟ್ರಗಳು ದುಃಖವನ್ನು ಸೂಚಿಸುತ್ತಿದ್ದುವು.

ಆತ ಮಹಾತ್ಮ. ಬಾಪೂ. ಮೋಹನದಾಸ ಕರಮಚಂದ್ ಗಾಂಧಿ.

ಮೋಹನದಾಸ ಹುಟ್ಟಿದ್ದು 1869 ಅಕ್ಟೋಬರ್ 2ರಂದು ಕಾಥೇವಾಡ ಸಂಸ್ಥಾನಗಳಲ್ಲಿ ಒಂದಾದ ಪೋರ್‌ಬಂದರ್‌ನಲ್ಲಿ. ಅವರ ತಂದೆ ಕಾಬಾ ಗಾಂಧಿ ರಾಜಕೋಟೆಯಲ್ಲಿ ಮಂತ್ರಿಯಾಗಿದ್ದರು. ಕಾಬಾಗಾಂಧಿಯ ನಾಲ್ಕನೆಯ ಹೆಂಡತಿಯ ಕಿರಿಯ ಮಗ ಮೋಹನದಾಸ ತನ್ನ ತಾಯಿಯಿಂದ ಧಾರ್ಮಿಕ ವಿಷಯಗಳಲ್ಲಿ ಆಸಕ್ತಿ ಪಡೆದರು.

ಪ್ರಾಥಮಿಕ ಶಾಲೆ ಸೇರಿದಾಗ ಗಾಂಧಿಗೆ ಏಳು ವರ್ಷ ವಯಸ್ಸು. ತುಂಬ ನಾಚಿಕೆಯ ಸ್ವಭಾವ. ಆಟಪಾಠಗಳಲ್ಲಿ ಆಸಕ್ತಿ ಇರಲಿಲ್ಲ.

ಚಿಕ್ಕಂದಿನಲ್ಲಿ ಗಾಂಧಿಯವರ ಮೇಲೆ ಅಸಾಧಾರಣ ಪ್ರಭಾವ ಬೀರಿದ ಎರಡು ಕಥೆಗಳಲ್ಲಿ ಒಂದು. ಕಣ್ಣಿಲ್ಲದ ತಂದೆತಾಯಿಯರನ್ನು ಹೆಗಲಮೇಲೆ ಕೂಡಿಸಿಕೊಂಡು ಕಾಶಿಯಾತ್ರೆ ಹೋದ ಶ್ರವಣನ ಕಥೆ : ಇನ್ನೊಂದು. ಸತ್ಯಕ್ಕಾಗಿ ತನ್ನ ಸಂಪತ್ತು. ಹೆಂಡತಿ. ಮಗ. ಸರ್ವಸ್ವವನ್ನೂ ತ್ಯಾಗ ಮಾಡಿದ ಹರಿಶ್ಚಂದ್ರನ ಕಥೆ.

ಮೋಹನದಾಸನಿಗೆ ಕಸ್ತೂರಿಬಾ ಅವರೊಡನೆ ವಿವಾಹವಾಯಿತು. ಇಬ್ಬರಿಗೂ ಆಗ ಹದಿಮೂರು ವರ್ಷ ವಯಸ್ಸು.

1887ರಲ್ಲಿ ಮೆಟ್ರಿಕ್ ಮುಗಿಸಿದ ಮೇಲೆ ಭಾವನಗರದ ಕಾಲೇಜನ್ನು ಗಾಂಧಿ ಸೇರಿದರಾದರೂ ಅವರಿಗೆ ಆ ಓದು ಒಗ್ಗಲಿಲ್ಲ. ಗಾಂಧಿಜಿ ಇಂಗ್ಲೆಂಡಿಗೆ ಹೋಗಿ ಬ್ಯಾರಿಸ್ಟರ್ ಆಗಿ ಬರಬೇಕು ಎಂಬ ಸಲಹೆ ಬಂತು. ಬಹಳ ಯೋಚಿಸಿ ತಾಯಿ ಒಪ್ಪಿದರು. ಅವರ ತಂದೆ ಅಷ್ಟು ಹೊತ್ತಿಗಾಗಲೇ ಕಾಲವಾಗಿದ್ದರು. ಇಂಗ್ಲೆಂಡಿನಲ್ಲಿರುವಾಗ ಮದ್ಯ, ಮಾಂಸಗಳನ್ನು ಸೇವಿಸುವುದಿಲ್ಲ. ಪರ ಸ್ತ್ರೀಯರನ್ನು ತಾಯಿಯಂತೆ ಕಾಣುತ್ತೇನೆ ಎಂದು ತಾಯಿಗೆ ಮಾತು ಕೊಟ್ಟು ಗಾಂಧಿಯವರು ಇಂಗ್ಲೆಂಡಿಗೆ ಪ್ರಯಾಣ ಬೆಳೆಸಿದರು. ತಾಯಿಗೆ ಕೊಟ್ಟ ವಚನವನ್ನು ಮೀರಲಿಲ್ಲ. 1890ರಲ್ಲಿ ಬ್ಯಾರಿಸ್ಟರ್ ಪರೀಕ್ಷೆಯಲ್ಲಿ ತೇರ್ಗಡೆಯಾಗಿ. ಭಾರತಕ್ಕೆ ಮರಳಿ. ವಕೀಲ ವೃತ್ತಿ ಆರಂಭಿಸಿದರು.



ಪುಟ್ಟ ಕಂದನಿಗೆ ತಾತನ ಮುದ್ದು

1893ರಲ್ಲಿ ದಕ್ಷಿಣ ಆಫ್ರಿಕದಲ್ಲಿದ್ದ ಸಿರಿವಂತ ಭಾರತೀಯ ವರ್ತಕ ಅಬ್ದುಲ್ಲಾ ಸೇಠನ ಪರ ವಕಾಲತ್ತು ವಹಿಸಲು ತೆರಳಿದರು. ದಕ್ಷಿಣ ಆಫ್ರಿಕ ಗಾಂಧಿಯವರ ಜೀವನದ ದಿಸೆಯನ್ನೇ ಬದಲಾಯಿಸಿತು.

ಭಾರತೀಯರನ್ನೂ ಇತರ ವರ್ಣೀಯರನ್ನೂ ದಕ್ಷಿಣ ಆಫ್ರಿಕದಲ್ಲಿ ಬಿಳಿಯರು ತುಂಬ ತಿರಸ್ಕಾರದಿಂದ ಕಾಣುತ್ತಿದ್ದರು. ಅವರು ಮನುಷ್ಯರೇ ಅಲ್ಲ ಎನ್ನುವಂತೆ ನಡೆಸಿಕೊಳ್ಳುತ್ತಿದ್ದರು. ಗಾಂಧಿಜಿಗೂ ಇದರ ಅನುಭವ ಆಯಿತು. ಈ ಅನ್ಯಾಯದ ಪ್ರತಿಭಟನೆಗೆ 'ಸತ್ಯಾಗ್ರಹ' ಎನ್ನುವ ಮಾರ್ಗವನ್ನು ಯೋಚಿಸಿದರು. ದುಷ್ಟತನದೊಡನೆ ಸಹಕರಿಸದೆ. ಅಹಿಂಸಾಯುತವಾಗಿ ಅದನ್ನು ಮಾರ್ಪಡಿಸುವ ಪ್ರಯತ್ನವೇ ಸತ್ಯಾಗ್ರಹ. ಅಲ್ಲಿನ ಭಾರತೀಯರು ಗಾಂಧಿಜಿಯ ನಾಯಕತ್ವದಲ್ಲಿ ಒಂದಾದರು. ನೆಟಾಲ್ ಭಾರತೀಯ ಕಾಂಗ್ರೆಸ್ ಎಂಬ ಸಂಸ್ಥೆ ಜನ್ಮತಾಳಿತು.

ಗಾಂಧಿಜಿ ದಕ್ಷಿಣ ಆಫ್ರಿಕದಲ್ಲೇ ಸೆರೆಮನೆಯ ವಾಸವನ್ನು ಅನುಭವಿಸಬೇಕಾಯಿತು. ಸತ್ಯಾಗ್ರಹದಲ್ಲಿ ಸೇರಲು ಭಾರತೀಯ ಸ್ತ್ರೀಯರಿಗೂ ಅವರು ಕರೆಯಿತ್ತರು. ಸಣ್ಣಸಣ್ಣ ಮಕ್ಕಳನ್ನೂ ಎತ್ತಿಕೊಂಡು ಹೊರಟರು ಸ್ತ್ರೀ ಸತ್ಯಾಗ್ರಹಿಗಳು. ಕಸ್ತೂರಿಬಾ ಅವರ ನಾಯಕಿಯಾದರು.

ಗಾಂಧಿಜಿ ಆರಂಭಿಸಿದ ಸತ್ಯಾಗ್ರಹದ ಚಳವಳಿಯಿಂದಾಗಿ ಪ್ರಧಾನಿ ಸ್ಮಟ್ಸರ ಸರಕಾರ ಗಾಂಧಿಜಿಯೊಡನೆ ಒಪ್ಪಂದ ಮಾಡಿಕೊಳ್ಳಬೇಕಾಯಿತು. ಅಲ್ಲದೆ ಭಾರತೀಯರ ಕಷ್ಟನಷ್ಟಗಳನ್ನು ವಿಚಾರ ಮಾಡಲು ಒಂದು ಆಯೋಗವನ್ನು ಅದು ನೇಮಿಸಬೇಕಾಯಿತು.

ದಕ್ಷಿಣ ಆಫ್ರಿಕದಲ್ಲಿ ಗಾಂಧಿಜಿ ತಮ್ಮ ಜೀವನವನ್ನೊಂದು ಪ್ರಯೋಗಶಾಲೆಯಾಗಿ ಮಾಡಿದರು. ಅತಿ ಸರಳ ಆಹಾರ. ಸರಳ ಉಡುಪು. ಪ್ರತಿಯೊಂದರಲ್ಲೂ ಸ್ವಾವಲಂಬನ. ದಕ್ಷಿಣ ಆಫ್ರಿಕದಲ್ಲಿ ಗಾಂಧಿಜಿ ಸ್ಥಾಪಿಸಿದ

ಟಾಲ್‌ಸ್ಟಾಯ್ (ರಷ್ಯದ ಸುಪ್ರಸಿದ್ಧ ಸಾಹಿತಿ) ಆಶ್ರಮ ಆದರ್ಶ ಪ್ರಾಯವಾಗಿತ್ತು. ಇಲ್ಲಿ ಮೇಲು ಕೀಳುಗಳೆಂಬ ಭಾವನೆಯಿಲ್ಲ. ಎಲ್ಲದರಲ್ಲೂ ಸರಳತೆ. ಯಾರು ಯಾವ ಅಪರಾಧವೇ ಮಾಡಲಿ ಉಪವಾಸ ಶಿಕ್ಷೆ ಎಂದು. ಉಪವಾಸ ವ್ರತವನ್ನು ಗಾಂಧಿಜಿ ಆಚರಣೆಗೆ ತಂದರು.

ಇಪ್ಪತ್ತೊಂದು ವರ್ಷಗಳ ಕಾಲ ದಕ್ಷಿಣ ಆಫ್ರಿಕದಲ್ಲಿದ್ದು 1914ರ ಜುಲೈ ಒಂದರಂದು ಗಾಂಧಿಜಿ ಭಾರತಕ್ಕೆ ಹೊರಟರು. ಹೊರಡುವ ವೇಳೆಗೆ ಆಫ್ರಿಕದ ಭಾರತೀಯರು ನೀಡಿದ ಅಮೂಲ್ಯ ಉಡುಗೊರೆಗಳನ್ನು ಅವರು ಸ್ವೀಕರಿಸಲಿಲ್ಲ.

ಗಾಂಧಿಜಿಯ ಜೀವನದ ಒಂದು ಮಹತ್ತರ ಅಧ್ಯಾಯ ಮುಗಿದು ಇನ್ನೊಂದು ಆರಂಭವಾಯಿತು. ಭಾರತದ ಬಂಧವಿಮೋಚನೆಯ ಕಾರ್ಯಕ್ಕಾಗಿ ಅವರು ಕಂಕಣ ತೊಟ್ಟರು.

ಭಾರತದ ಹಳ್ಳಿಹಳ್ಳಿಯನ್ನೂ ಸುತ್ತಿದರು. ಪರಿಸ್ಥಿತಿಯ ಪರಿಚಯ ಪಡೆಯಲು. ಕೆಲಸವಿಲ್ಲದ ಕೋಟಿಗಟ್ಟಲೆ ಜನರಿಗೆ ಉದ್ಯೋಗ ದೊರಕಿಸಲು ಗ್ರಾಮ ಕೈಗಾರಿಕೆಗಳ, ಗ್ರಾಮಗಳ ಅಭಿವೃದ್ಧಿಯ ಕಾರ್ಯಕ್ರಮ ಸೂಚಿಸಿದರು. ಇದರ ಜೊತೆಗೇ ಸ್ವಾತಂತ್ರ್ಯ ಸಮರದಲ್ಲಿ ತಮ್ಮ ಕೆಲಸ ಕಾರ್ಯಗಳಿಗೆ ನೆರವಾಗಲು ಜನ ತಕ್ಕ ಶಿಕ್ಷಣ ಹೊಂದಿರುವಂತೆ ಮಾಡಲು, ಗಾಂಧಿಜಿ ಅಹಮದಾಬಾದಿನ ಹತ್ತಿರ ಸಬರಮತಿ ದಂಡೆಯ ಮೇಲೆ ಸತ್ಯಾಗ್ರಹ ಆಶ್ರಮವನ್ನು ತೆರೆದರು. ಕುಟುಂಬ ಸಹಿತ ಅಲ್ಲೇ ಅವರ ವಾಸ.

ಗಾಂಧಿಜಿ ಹೋದಲ್ಲೆಲ್ಲಾ ಹರಿಜನ ನಿಧಿಯನ್ನು ಕೂಡಿಸತೊಡಗಿದರು. ಇಷ್ಟೆಲ್ಲ ಸಂಗ್ರಹಿಸಿದ್ದು ಸಮಾಜದಲ್ಲಿ ಬಹಿಷ್ಕೃತರಂತಿದ್ದ ಹರಿಜನರ ಹಿತಕ್ಕಾಗಿ. ಗಾಂಧಿಜಿಯವರ ಪ್ರಯತ್ನದಿಂದಾಗಿ, ಅವರ ಉಪವಾಸ ವ್ರತದ ಫಲವಾಗಿ ಕೆಲವೊಂದು ಹಿಂದೂ ದೇವಾಲಯಗಳಲ್ಲೂ ಹರಿಜನರಿಗೆ ಪ್ರವೇಶ ದೊರಕಿತು. ಕೆರೆ, ಬಾವಿಗಳ ನೀರು ಹರಿಜನರಿಗೂ ಸಿಗುವಂತಾಯಿತು. ಸಹಪಂಕ್ತಿ ಭೋಜನ ಕೂಟಗಳು ನಡೆದುವು.

ಗಾಂಧಿಜಿ ಯಾವಾಗಲೂ ರೈಲುಗಾಡಿಯ ಮೂರನೆಯ ಡಬ್ಬಿಯಲ್ಲಿ ಪ್ರಯಾಣ ಮಾಡುತ್ತಿದ್ದರು. ಒಮ್ಮೆ ಒಬ್ಬರು, "ಮೂರನೇ ಡಬ್ಬಿಯಲ್ಲೇ ಯಾಕೆ ?" ಎಂದು ಕೇಳಿದಾಗ, "ನಾಲ್ಕನೇ ಡಬ್ಬಿಯಿಲ್ಲ, ಅದಕ್ಕೆ," ಎಂದು ಹೇಳಿ ನಕ್ಕರು.

ಕಾರ್ಮಿಕರ ಹಿತಕ್ಕಾಗಿಯೂ ದುಡಿದರು ಬಾಪೂ. ಅಂಬಾಲದ ಜವಳಿ ಗಿರಣಿಗಳ ಮಾಲಿಕರು ಹಾಗೂ ಕೂಲಿಗಾರರ ನಡುವಿನ ವಿರಸವನ್ನು ಪರಿಹರಿಸಲು ಗಾಂಧಿಜಿ ಹೋದರು. ಕೂಲಿಕಾರರಿಗೆ ನ್ಯಾಯವಾದ ಹಣಕೊಡಬೇಕು. ದುಡಿಮೆಯ ಗಂಟೆಗಳನ್ನು ನಿಗದಿ ಮಾಡಬೇಕು ಎಂದು ಎಷ್ಟೇ ಹೇಳಿದರೂ ಮಾಲಿಕರು ಕೇಳಲಿಲ್ಲ. ಮುಷ್ಕರ ಹೂಡಲು ಗಾಂಧಿಜಿ ಕೂಲಿಗಾರರಿಗೆ ಹೇಳಿದರು. ಅವರೆಲ್ಲಿ ಹಿಂದೆಗೆಯುತ್ತಾರೋ ಎಂದು ತಾವೇ ಉಪವಾಸ ಮುಷ್ಕರ ಪ್ರಾರಂಭಿಸಿದರು. ಭಾರತದಲ್ಲಿ ಗಾಂಧಿಜಿ ಕೈಗೊಂಡ ಮೊದಲ ಉಪವಾಸ ಮುಷ್ಕರ ಇದು. ಗಾಂಧಿಜಿ ವಿಜಯಗಳಿಸಿದರು. ದಬ್ಬಾಳಿಕೆಯ ವಿರುದ್ಧ ಸತ್ಯಾಗ್ರಹ ಜಯಗಳಿಸಿತು.

ಖೇಡಾ ಎಂಬ ಜಿಲ್ಲೆಯಲ್ಲಿ ಬೆಳೆಯಾಗದಿದ್ದರೂ ರೈತರಿಂದ ಬಲವಂತವಾಗಿ ಕಂದಾಯ ವಸೂಲಿ ಮಾಡಲಾರಂಭಿಸಿದ ಸರಕಾರದ ವಿರುದ್ಧ ಸತ್ಯಾಗ್ರಹ ಹೂಡಲು ಗಾಂಧಿಜಿ ರೈತರನ್ನು ಪ್ರೋತ್ಸಾಹಿಸಿದರು. ಸರಕಾರ ಎಷ್ಟೇ ಕಿರುಕುಳ ಕೊಟ್ಟರೂ ರೈತರು ಜಗ್ಗಲಿಲ್ಲ. ಕೊನೆಗೆ ಸರಕಾರ ಮಣಿಯಿತು.

ರಾಜಕೀಯ ರಂಗವನ್ನು ಗಾಂಧಿಜಿ ಪ್ರವೇಶಿಸಿದರು. ಅವರ ಗುರಿ ಭಾರತದ ಸ್ವಾತಂತ್ರ್ಯ. ಬ್ರಿಟಿಷ್ ಸರಕಾರದ ವಿರುದ್ಧ ಕಾಯಿದೆ ಭಂಗ, ಅಸಹಕಾರ, ಸತ್ಯಾಗ್ರಹ ಮೊದಲಾದ ಚಳುವಳಿಗಳನ್ನು ದೇಶದಾದ್ಯಂತ ನಡೆಸಿದರು. ದೇಶಕ್ಕೆ ದೇಶವೇ ಅವರನ್ನು ಹಿಂಬಾಲಿಸಿತು. ಅವರನ್ನು 'ಮಹಾತ್ಮ' ಎಂದು ಕರೆಯಿತು. ವಿದ್ಯಾರ್ಥಿಗಳು ಶಾಲೆ ಕಾಲೇಜುಗಳನ್ನು ಬಿಟ್ಟರು. ಕಚೇರಿಗಳನ್ನು ತೊರೆದರು ಕರ್ಮಚಾರಿಗಳು. ಪದವಿ ಪ್ರಶಸ್ತಿಗಳನ್ನು ಪಡೆದವರು ಅವನ್ನು ಸರಕಾರಕ್ಕೆ ಹಿಂದಿರುಗಿಸಿದರು. 1922ರಲ್ಲಿ ಗಾಂಧಿಜಿಗೆ ಆರು ವರ್ಷಗಳ ಕಠಿಣ ಶಿಕ್ಷೆಯಾಯಿತು.

1930ರಲ್ಲಿ ಆರಂಭವಾಯಿತು ಉಪ್ಪಿನ ಸತ್ಯಾಗ್ರಹ. ಆಂಗ್ಲ ಸರಕಾರ ಉಪ್ಪಿನಮೇಲೆ ಕರ ವಸೂಲು ಮಾಡುತ್ತಿತ್ತು. ಗಾಂಧಿಜಿ ಉಪ್ಪನ್ನು ತಾವೇ ಸ್ವತಃ ತಯಾರಿಸಲು ಹೊರಟರು. ಇದಕ್ಕಾಗಿ 21 ದಿವಸಗಳಲ್ಲಿ 388 ಕಿಲೊಮೀಟರು ನಡೆದು ದಂಡಿಯಲ್ಲಿ ಉಪ್ಪನ್ನು ಸಮುದ್ರದ ನೀರಿನಿಂದ ಮಾಡಿದರು. ಕಾನೂನನ್ನು ಮುರಿದರು.

ಭಾರತ ಸ್ವತಂತ್ರವಾಗುವವರೆಗೂ ಸಬರಮತಿಗೆ ಹಿಂದಿರುಗುವುದಿಲ್ಲ ಎಂದು ಗಾಂಧಿಜಿ ಮಧ್ಯಪ್ರಾಂತದಲ್ಲಿನ ವರ್ಧಾ ಹತ್ತಿರದ ಸೇವಾಗ್ರಾಮಕ್ಕೆ ಆಶ್ರಮವನ್ನು ಸ್ಥಳಾಂತರಿಸಿದರು.

ಭಾರತದ ಸ್ವಾತಂತ್ರ್ಯವನ್ನೇ ಗುರಿಯಾಗಿ ಇಟ್ಟುಕೊಂಡಿದ್ದ ಸಂಸ್ಥೆ ಭಾರತ ರಾಷ್ಟ್ರೀಯ ಕಾಂಗ್ರೆಸ್. ಕಾಂಗ್ರೆಸ್ಸಿಗೆ ಹೊಸದೊಂದು ಚೇತನವನ್ನು ತಂದು ಕೊಟ್ಟರು ಗಾಂಧಿಜಿ. ಅವರ ನಾಯಕತ್ವದಲ್ಲಿ ಸ್ವಾತಂತ್ರ್ಯ ಯೋಧರ ತಂಡವೇ ಸಿದ್ಧವಾಯಿತು. 1924ರಲ್ಲಿ ಬೆಳಗಾವಿಯಲ್ಲಿ ನಡೆದ ಕಾಂಗ್ರೆಸಿನ ಅಧಿವೇಶನಕ್ಕೆ ಗಾಂಧಿಜಿಯವರನ್ನೇ ಅಧ್ಯಕ್ಷರನ್ನಾಗಿ ಆರಿಸಿದರು.

ಗಾಂಧಿಜಿಯವರಿಂದ ಸ್ವದೇಶಿ ಚಳುವಳಿ ಪ್ರಾರಂಭವಾಯಿತು. ಜನ ಖಾದಿ ತೊಟ್ಟರು. ವಿದೇಶೀ ಉಡುಪುಗಳು ಅಗ್ನಿಗಾಹುತಿಯಾದುವು. 1942ರಲ್ಲಿ ಸಭೆ ಸೇರಿದ ಅಖಿಲ ಭಾರತ ಕಾಂಗ್ರೆಸ್ಸಿನಲ್ಲಿ ಗಾಂಧಿಜಿ "ನಾವು ದಾಸ್ಯದಲ್ಲಿ ಬದುಕುವುದು ಇನ್ನು ಸಾಕು. ಮಾಡಿರಿ ಇಲ್ಲವೆ ಮಡಿಯಿರಿ. ಬ್ರಿಟಿಷರು ಭಾರತದಿಂದ ಹೊರಡಲಿ", ಎಂಬ ಸಂದೇಶವಿತ್ತರು. ಗಾಂಧಿಜಿಯ ಬಂಧನವಾಯಿತು. ಪುಣೆಯ ಆಗಾಖಾನರ ಅರಮನೆಯಲ್ಲಿ ಅವರನ್ನಿಟ್ಟರು. ಕಸ್ತೂರಿಬಾರನ್ನೂ ಅವರ ಜೊತೆಗೇ ಸೆರೆಯಲ್ಲಿಡಲಾಯಿತು. 1944 ಫೆಬ್ರವರಿ 22ರಂದು ಕಸ್ತೂರಿಬಾ ಕಾಲವಾದರು.

ಕಾಂಗ್ರೆಸ್ ಸಂಸ್ಥೆ ಶಾಸನಸಮ್ಮತವಲ್ಲವೆಂದು ಸರಕಾರ ಸಾರಿತು. ಆದರೆ "ಭಾರತದಿಂದ ಹೊರಡಿ" ಚಳುವಳಿ ದೇಶದ ಮೂಲೆ ಮೂಲೆಗೂ ಹಬ್ಬಿತು. ಇಡೀ ಜನತೆ ಕಾರ್ಯೋನ್ಮುಖವಾಯಿತು. ಇನ್ನು ಭಾರತವನ್ನು ಆಳುವುದು ಅಸಾಧ್ಯವೆಂದು ಬ್ರಿಟಿಷ್ ಸರಕಾರ ಮನಗಂಡಿತು. ಭಾರತದ ನಾಯಕರೊಂದಿಗೆ ಮಾತುಕತೆ ಪ್ರಾರಂಭಿಸಿತು.

ಭಾರತದ ವಿಭಜನೆಗೆ ಗಾಂಧಿಜಿ ಮೊದಲು ಒಪ್ಪದಿದ್ದರೂ ಪರಿಸ್ಥಿತಿಯ ಕಾರಣದಿಂದ ಸಮ್ಮತಿಸಬೇಕಾಯಿತು. ಭಾರತ, ಪಾಕಿಸ್ತಾನ ಎಂದು ಎರಡು ರಾಷ್ಟ್ರಗಳಾದುವು.

ಸ್ವಾತಂತ್ರ್ಯ ಬರುವ ಸ್ವಲ್ಪ ಮೊದಲು ಹಿಂದೂ-ಮುಸಲ್ಮಾನರ ವೈಮನಸ್ಸು ದೊಡ್ಡ ಉರಿಯಾಗಿ ಎದ್ದಿತು. ಬಂಗಾಳದ ನವಖಾಲಿ ಎಂಬ ಸ್ಥಳ ಮತ್ತು ಅದರ ಸುತ್ತಮುತ್ತಲಿನಲ್ಲಂತೂ ಸರಕಾರ ನಿಸ್ಸಹಾಯಕವಾಗಿ ಕೈಕಟ್ಟಿ ಕೂಡುವಂತಾಯಿತು. ಸಾವಿರಾರು ಹಿಂದೂಗಳ ಕೊಲೆಯಾಯಿತು.



ರಾಷ್ಟ್ರಪಿತನ ಅಂತಿಮ ಯಾತ್ರೆ

ಹಿಂದೂಗಳನ್ನು ಬಲಾತ್ಕಾರವಾಗಿ ಮತಾಂತರಗೊಳಿಸಲಾಯಿತು. ದೇವಸ್ಥಾನಗಳ ಲೂಟಿಯಾಯಿತು. ಸರಕಾರ ಸೋತ ಕಡೆ ಎಪ್ಪತ್ತೆಂಟು ವರ್ಷಗಳ ಈ ಮುದುಕ ಏಕಾಕಿಯಾಗಿ ಹೊರಟ. ಹಳ್ಳಿಹಳ್ಳಿಗೆ ನಡೆದು. ಉಳಿದಿದ್ದ ಹಿಂದೂಗಳಿಗೆ ಧೈರ್ಯ ತುಂಬಿ, ಹಿಂದೂಗಳನ್ನೂ ಮುಸಲ್ಮಾನರನ್ನೂ ಜೊತೆಗೂಡಿಸಿ. ಉಕ್ಕಿದ್ದ ಹಾಲಾಹಲವನ್ನು ನುಂಗಿದ.

ಗಾಂಧಿಜಿ ಆರಂಭಿಸಿದ ಸತ್ಯಾಗ್ರಹದಿಂದ, ಸ್ವದೇಶಿ ಚಳುವಳಿಯಿಂದ, ಹೋರಾಟದಿಂದ ಭಾರತ 1947 ಆಗಸ್ಟ್ ಹದಿನೈದರಂದು ಸ್ವತಂತ್ರವಾಯಿತು.

ಆದರೆ ಸ್ವಾತಂತ್ರ್ಯೋದಯದ ದಿನ ದೆಹಲಿಯಲ್ಲಿರಲು ಮಹಾತ್ಮರು ಇಷ್ಟಪಡಲಿಲ್ಲ. ಅವರು ದೂರದ ಕಲ್ಕತ್ತೆಯಲ್ಲಿ ಹರಿಜನರ ವಸತಿಯಲ್ಲಿದ್ದರು.

ಭಾರತ ಸ್ವತಂತ್ರವಾದಮೇಲೆ ಗಾಂಧಿಜಿ ಬಹಳ ದಿನ ಬದುಕಲಿಲ್ಲ. 1948 ಜನವರಿ 30. ದಿನದ ಪ್ರಾರ್ಥನೆಗಾಗಿ ಗಾಂಧಿಜಿ ಸಂಜೆ ಹೊರಟರು. ಪ್ರಾರ್ಥನಾ ಸ್ಥಳಕ್ಕೆ ಸ್ವಲ್ಪ ದೂರದಲ್ಲಿದ್ದಂತೆ ಗೋಡ್ಸೆ ಎಂಬ ಹತ್ಯಾಕಾರನೊಬ್ಬನ ಗುಂಡು ಹಾರಿತು. "ರಾಮ್ ರಾಮ್" ಎನ್ನುತ್ತ ಗಾಂಧಿಜಿ ಅಲ್ಲಿಯೆ ಕುಸಿದರು.

ಬೋಳು ತಲೆ. ಬೊಚ್ಚು ಬಾಯಿ. ಊರುಗೋಲು. ಮೊಣಕಾಲು ಮೇಲಕ್ಕೆ ಪಂಚೆ. ಕಾಲಿಗೊಂದು ಜೊತೆ ಮೆಟ್ಟು, ಕನ್ನಡಕ. ಸೊಂಟದಿಂದ ಇಳಿಬಿದ್ದ ಗುಂಡನೆಯ ಜೇಬುಗಡಿಯಾರ. ಧೀರ ನಡಿಗೆ. ತೆಳ್ಳನೆಯ ದೇಹ—ಈ ಗಾಂಧಿಜಿ ಇಪ್ಪತ್ತನೆಯ ಶತಮಾನದಲ್ಲಿ ಚರಿತ್ರೆಯನ್ನು ರೂಪಿಸಿದ ವ್ಯಕ್ತಿಗಳಲ್ಲಿ ಅತ್ಯಂತ ಹಿರಿಯರು.

ಅವರು ತಮಗಾಗಿ ಏನನ್ನೂ ಬಯಸಲಿಲ್ಲ. ತಾವು ಸ್ವಾತಂತ್ರ್ಯ ತಂದುಕೊಟ್ಟ ದೇಶದಲ್ಲಿ ಯಾವ ಅಧಿಕಾರ ಪದವಿಗಳನ್ನೂ ಅಪೇಕ್ಷಿಸಲಿಲ್ಲ. ಸತ್ಯಕ್ಕಾಗಿ. ಅಹಿಂಸೆಗಾಗಿ. ಇತರರ ಸೇವೆಗಾಗಿ ಬದುಕಿದರು. ಪ್ರತಿಯೊಬ್ಬರ ಕಣ್ಣೀರನ್ನೂ ಒರೆಸುವುದಕ್ಕಾಗಿ ಜೀವಿಸಿದರು. ಎರಡು ಮಹಾಯುದ್ಧಗಳು, ಸಾಮ್ರಾಜ್ಯಶಾಹಿಗಳ ಸ್ವಾರ್ಥ ಇವುಗಳಿಂದ ಮನುಷ್ಯನ ಪಾಶವೀ ಸ್ವಭಾವವೇ ಮೆರೆಯುತ್ತಿದ್ದ ಕಾಲದಲ್ಲಿ, ಜಗತ್ತಿಗೆ ರಕ್ತಸ್ನಾನವಾಗುತ್ತಿದ್ದಾಗ. ಪ್ರೇಮ ತ್ಯಾಗಗಳ ಸಂದೇಶವನ್ನು ಕೊಟ್ಟು ಆ ಸಂದೇಶದ ಜೀವಂತ ಮೂರ್ತಿಯಾಗಿ ಬಾಳಿದರು.

ನೋಡಿ : ಸತ್ಯಾಗ್ರಹ : ಸ್ವದೇಶಿ-ವಿದೇಶಿ

ವಿವರ : ೬ನೆಯ ಸಂಪುಟ

## ಗ್ರಾಮ ಪಂಚಾಯತಿ

"ಭಾರತ ಜೀವಿಸಿರುವುದು ಅವರ ಹಳ್ಳಿಗಳಲ್ಲಿ". ಎಂದರು ಗಾಂಧಿಜಿ.

ಹಳ್ಳಿಗಳು ಸುಧಾರಿಸಿದರೆ, ರಾಷ್ಟ್ರದ ಪ್ರಗತಿಯಾದಂತೆ. ಇದಕ್ಕಾಗಿಯೇ ರಾಜ್ಯಾಡಳಿತದಲ್ಲಿ ಗ್ರಾಮಗಳು ಪ್ರತ್ಯೇಕ ಘಟಕಗಳಾಗಿ ಗ್ರಾಮಪಂಚಾಯತಿಗಳಾಗಿವೆ.

ಪಂಚಾಯತಿ ಬಹು ಪುರಾತನ ವಾದದ್ದು. ಪಂಚಾಯತಿ ಎಂದರೆ ಚುನಾಯಿತರಾದ ಐದು ಜನ ಹಳ್ಳಿಗರ ಸಭೆ ಎಂದರ್ಥ. ಆರ್ಯರು ತಾವು ನೆಲೆಸಿದ ಕಡೆಗಳಲ್ಲೆಲ್ಲ. ದ್ರಾವಿಡರು ಅವರಿಗಿಂತಲೂ ಮೊದಲೇ ವಾಸಿಸಿದ್ದರೆ ಅವರ ರೀತಿಗಳೊಡನೆ ತಮ್ಮ ಹೊಸ ವಿಚಾರಗಳನ್ನೂ ಸೇರಿಸಿ ಕೆಲಸ ಮಾಡುತ್ತಿದ್ದರು. ಹಳ್ಳಿಯನ್ನು ಕಟ್ಟುವಾಗಲೇ ರಕ್ಷಣೋಪಾಯವನ್ನೂ ಸೇರಿಸಿ ಕಟ್ಟುತ್ತಿದ್ದರು. ಆಯಾಕಾರದಲ್ಲಿರುತ್ತಿದ್ದ ಹಳ್ಳಿಗೆ ಸುತ್ತ ಬಲವಾದ ಕೋಟೆ, ಇದಕ್ಕೆ ನಾಲ್ಕು ದೊಡ್ಡ ಬಾಗಿಲುಗಳೂ ನಾಲ್ಕು ಸಣ್ಣ ಬಾಗಿಲುಗಳೂ ಇರುತ್ತಿದ್ದುವು. ಬೀದಿ ಮತ್ತು ಮನೆಗಳು ವ್ಯವಸ್ಥಿತವಾಗಿದ್ದು ಹಳ್ಳಿಯ ಮಧ್ಯದಲ್ಲಿ ಪಂಚಾಯತಿ ಮನೆ ಇರುತ್ತಿತ್ತು. ಚಿಕ್ಕ ಹಳ್ಳಿಯಾದರೆ ದೊಡ್ಡ ಮರವೊಂದರ ಕೆಳಗೆ ಪಂಚಾಯತಿ ಸೇರುತ್ತಿತ್ತು. ಪಂಚಾಯತಿಯ ಅವಧಿ ಒಂದು ವರ್ಷ. ಹಳ್ಳಿಯ ವಯಸ್ಕರೆಲ್ಲಾ ಮತ ನೀಡುತ್ತಿದ್ದರು. ಇಂಥ ಹಲವಾರು ಹಳ್ಳಿಗಳು ಸೇರಿ ಒಂದು ರಾಜ್ಯವಾಗಿ ಅದಕ್ಕೆ ರಾಜನೊಬ್ಬ ಇರುತ್ತಿದ್ದ. ಪಂಚಾಯತಿಗೆ ಹಳ್ಳಿಯ ಸಮಸ್ತ ಜವಾಬ್ದಾರಿಯೂ ಸೇರಿತ್ತು. ಪಂಚಾಯತಿಯ ವ್ಯವಹಾರದಲ್ಲಿ ರಾಜ ಕೈ ಹಾಕುತ್ತಿರಲಿಲ್ಲ. ಹೀಗಾಗಿ ಪಂಚಾಯತಿಗೆ ಅಪರಿಮಿತ ಅಧಿಕಾರವಿತ್ತು. ಗ್ರಾಮಪಂಚಾಯತಿಯ ಮುಖ್ಯಸ್ಥ ಸರಪಂಚ. ಸಭೆಗೆ ಅವನೇ ಅಧ್ಯಕ್ಷ. ನ್ಯಾಯನಿರ್ಣಯ ಮಾಡುವ ಅಧಿಕಾರವೂ ಗ್ರಾಮಪಂಚಾಯತಿಗೆ ಇದ್ದಿತು. ಪಾಟಲೀಪುತ್ರದಲ್ಲಿ ನ್ಯಾಯನಿರ್ಣಯ ಮಾಡುವಂತೆ ದೂರು ಸಲ್ಲಿಸಲು ಪಂಚಾಯತಿಗಳಿದ್ದುವು.

ಚೋಳರ ಕಾಲದಲ್ಲಿ ಹಳ್ಳಿಯಲ್ಲಿ ಸಂಘವಿರುತ್ತಿತ್ತು. ಒಂದೊಂದು ವಿಷಯಕ್ಕೂ ಬೇರೆ ಬೇರೆ ಸಮಿತಿಗಳಿರುತ್ತಿದ್ದುವು. ರೈತವರ್ಗದ ಅಭಿಪ್ರಾಯಗಳನ್ನು ತಳ್ಳಿಹಾಕುವುದು ಸಾಧ್ಯವಿರದಿದ್ದರೂ ಕುಶಲರಾದ ಕೆಲವರ ಕೈಯಲ್ಲಿ ಅಧಿಕಾರ ಇರುತ್ತಿತ್ತು. ಪಂಚಾಯತಿಗಳು ಭೂಮಿ ಹಂಚುವುದು. ತೆರಿಗೆ ವಸೂಲು ಮಾಡುವುದು ಮತ್ತು ಹಳ್ಳಿಯ ಪರವಾಗಿ ರಾಜನಿಗೆ ಕರ ಕೊಡುವುದು ಮೊದಲಾದ ಕೆಲಸಗಳನ್ನು ನಿರ್ವಹಿಸುತ್ತಿದ್ದುವು. ಈ ಪಂಚಾಯತಿಗೂ ಮೇಲೆ ಹಳ್ಳಿಯಲ್ಲಿಯೇ ಮಹಾಸಭೆಯೊಂದಿದ್ದು ಇವರ ಕಾರ್ಯಗಳನ್ನು ಪರಿಶೀಲಿಸಿ ಅಗತ್ಯಬಿದ್ದಾಗ ಅದು ಪಂಚಾಯತಿಗೆ ಸಲಹೆ ಕೊಡುತ್ತಲೂ ಇತ್ತು.

ದಕ್ಷಿಣ ಭಾರತದಲ್ಲಿ ದೊರೆತ ಹಳೆಯ ಶಾಸನಗಳಲ್ಲಿ ಪಂಚಾಯತಿ ಸದಸ್ಯರು ಹೇಗೆ ಚುನಾಯಿಸಲ್ಪಡುತ್ತಿದ್ದರು, ಅವರಿಗಿರಬೇಕಾದ ಗುಣಗಳೇನು ಎಂಬುದನ್ನೆಲ್ಲ ವಿವರಿಸಿದೆ. ಯಾರಾದರೊಬ್ಬ ಸದಸ್ಯ ಸಾರ್ವಜನಿಕ ನಿಧಿಯ ಲೆಕ್ಕವನ್ನು ಸರಿಯಾಗಿ ಕೊಡದಿದ್ದರೆ ಅಂಥವನನ್ನು ಶಿಕ್ಷಿಸಬಹುದು

ತ್ತಿದ್ದರು. ಸದಸ್ಯರ ಸಮಾಜದ ಬಂಧುಗಳು ಕಚೇರಿ ಕೆಲಸಕ್ಕೆ ಸೇರುವುದು ನಿಷೇಧಿಸಲ್ಪಟ್ಟಿತ್ತು. ಸದಸ್ಯರ ಪೈಕಿ ಹೆಂಗಸೊಬ್ಬಳ ಉಲ್ಲೇಖವೂ ಇದೆ. ಪ್ರಜೆಗಳು ಯಾರಾದರೂ ಸದಸ್ಯನ ಬಗ್ಗೆ ದೂರಿತ್ತರೆ, ರಾಜ ಪ್ರಜೆಯ ಪಕ್ಷ ವಹಿಸಬೇಕಲ್ಲದೆ ಸದಸ್ಯನ ಪಕ್ಷವನ್ನಲ್ಲ. ಅನೇಕ ಜನರಿಂದ ದೂರು ಬಂದಾಗ ಅಂಥ ಅಧಿಕಾರಿಯನ್ನು ವಜಾ ಮಾಡುತ್ತಿದ್ದರು.

ಬ್ರಿಟಿಷರ ಆಳ್ವಿಕೆಯಲ್ಲಿ ಪಂಚಾಯತಿಗಳು ಅಳಿದುವು. ತೆರಿಗೆ ವಸೂಲ್ಮಾಡುವ ಹಕ್ಕನ್ನು ಸರಕಾರವೇ ವಹಿಸಿಕೊಂಡಿತು.

ಗಾಂಧಿಜಿ ಸ್ವತಂತ್ರ ಭಾರತದಲ್ಲಿ ಪ್ರತಿ ಹಳ್ಳಿಗೂ ಪೂರ್ಣಾಧಿಕಾರವುಳ್ಳ ಪಂಚಾಯತಿ ಇರಬೇಕೆನ್ನುತ್ತಿದ್ದರು. ಭಾರತದ ಸಂವಿಧಾನದ ಪ್ರಕಾರ ಎಲ್ಲ ರಾಜ್ಯಗಳಲ್ಲೂ ಹಳ್ಳಿಗಳಲ್ಲಿ ಪಂಚಾಯತಿ ಇರಬೇಕು. ಸಮರ್ಪಕವಾಗಿ ಆಡಳಿತ ನಡೆಯುವಂತೆ ಅದಕ್ಕೆ ಅಧಿಕಾರ ಕೊಡಬೇಕು.

1952 ಅಕ್ಟೋಬರ್ 2 ರಂದು ಪಂಚಾಯತಿ ಪದ್ಧತಿಯನ್ನು ರಾಜಸ್ಥಾನ ಪ್ರಥಮತಃ ಆರಂಭಿಸಿತು. 1959ರಲ್ಲಿ ಮೈಸೂರು. ಆಂಧ್ರ ಪ್ರದೇಶ. ಮತ್ತು ಮದರಾಸುಗಳಲ್ಲೂ ಈ ಪದ್ಧತಿ ಆರಂಭವಾಯಿತು. ಮುಂದೆ ಇತರ ಕೆಲವು ರಾಜ್ಯಗಳಲ್ಲೂ ಜಾರಿಗೆ ಬಂತು.

ಹಳ್ಳಿಯ ಎಲ್ಲ ವಯಸ್ಕರೂ ಪಂಚಾಯತಿ ಚುನಾವಣೆಯಲ್ಲಿ ಮತ ಕೊಡಬಹುದು. ಗ್ರಾಮೀಣ ಕೈಗಾರಿಕೆಗಳು. ವ್ಯವಸಾಯ ಉತ್ಪನ್ನಗಳು, ವೈದ್ಯಕೀಯ ನೆರವು. ಹಳ್ಳಿಯ ರಸ್ತೆಗಳನ್ನು ಸಮರ್ಪಕವಾಗಿಡುವುದು, ಗ್ರಾಮನೈರ್ಮಲ್ಯ ಮತ್ತು ಗೋಪಾಲನ ನಿರ್ವಹಣೆ ಇವುಗಳಿಗೆ ಪಂಚಾಯತಿಯೇ ಹೊಣೆ.

ಈಗ ಭಾರತದಲ್ಲಿ 2.19.691 ಗ್ರಾಮಪಂಚಾಯತಿಗಳು ಕೆಲಸ ಮಾಡುತ್ತಿವೆ. ಸರಕಾರಗಳು ಪಂಚಾಯತಿ ಸದಸ್ಯರಿಗೆ ಶಿಕ್ಷಣ ಕೊಡಲು ಯೋಜನೆ ರೂಪಿಸಿವೆ. ಅಖಿಲ ಭಾರತ ಪಂಚಾಯತಿ ಪರಿಷತ್ತಿನ ಆಶ್ರಯದಲ್ಲಿ ಶಿಕ್ಷಣ ನಡೆಯುತ್ತದೆ. ಶಿಕ್ಷಣದ ಅವಧಿ ಮೂರು ತಿಂಗಳು. ಗ್ರಾಮಪಂಚಾಯತಿಗಳು ಜನತಾ ಸಂಸ್ಥೆಗಳು. ಗ್ರಾಮದ ಶಾಂತಿ. ಶಿಸ್ತು. ಸಾಮೂಹಿಕ ಅವಶ್ಯತೆಗಳ ಪೂರೈಕೆ ಅವುಗಳ ಕೆಲಸ. ಜನತೆಯ ಸಹಕಾರದಿಂದ ಗ್ರಾಮಪಂಚಾಯತಿಗಳ ಆಡಳಿತ ನಡೆಯುತ್ತದೆ.

## ಗಿಯಾನಾ

ದಕ್ಷಿಣ ಅಮೆರಿಕದ ಈಶಾನ್ಯದಲ್ಲಿರುವ ಗಿಯಾನಾದಲ್ಲಿ ಕಾಣಸುವುದು ಅಪೂರ್ವ ದೃಶ್ಯ. ಸ್ಪ್ಯಾನಿಷ್. ಬ್ರಿಟಿಷ್, ಪೋರ್ಚುಗೀಸ್, ಫ್ರೆಂಚ್ ಮತ್ತು ಡಚ್ ವಂಶಸ್ಥರು. ಮೂಲನಿವಾಸಿಗಳು. ಭಾರತೀಯರು–ಹೀಗೆ ಹಲವು ಜನಾಂಗಗಳು ಇಲ್ಲಿವೆ. ಗಿಯಾನಾ ಒರಿನೋಕೊ ಮತ್ತು ಅಮೆಜಾನ್ ನದಿಗಳ ಮಧ್ಯೆ ಇದೆ. ಗಿಯಾನಾ (ಬ್ರಿಟಿಷ್ ಗಿಯಾನಾ). ಸುರಿನಾಮ್ ಅಥವಾ ಡಚ್ ಗಿಯಾನಾ ಮತ್ತು ಫ್ರೆಂಚ್ ಗಿಯಾನಾ ಈ ಮೂರೂ ಒಂದ ಕ್ಕೊಂದು ಒತ್ತಿಕೊಂಡಿವೆ.

ಭೌಗೋಳಿಕವಾಗಿ ಮೂರು ಗಿಯಾನಾಗಳು ಏಕರೂಪವಾಗಿವೆ. ಅಟ್ಲಾಂಟಿಕ್ ತೀರಪ್ರದೇಶ ಮೆಕ್ಕಲುಮಣ್ಣು ತುಂಬಿ ಫಲವತ್ತಾಗಿದೆ. ಮಧ್ಯದ ಪ್ರಸ್ಥಭೂಮಿ ದಟ್ಟವಾದ ಕಾಡು ಪ್ರದೇಶ. ದಕ್ಷಿಣದಲ್ಲಿ ಹುಲ್ಲುಗಾವಲು ಮೇವಿಗೆ ಅನುಕೂಲವಾಗಿದೆ.

ಗಿಯಾನಾದಲ್ಲಿ ಉಷ್ಣವಲಯದ ಹವಾಗುಣ. ಎರಡು ಮಳೆಗಾಲಗಳಿವೆ. ಏಪ್ರಿಲ್‌ನಿಂದ ಆಗಸ್ಟ್ ಮತ್ತು ನವೆಂಬರಿನಿಂದ ಜನವರಿವರೆಗೆ.

**ಗಿಯಾನಾ**

| | | |
|---|---|---|
| ಖಂಡ | : | ದಕ್ಷಿಣ ಅಮೆರಿಕ (ಈಶಾನ್ಯದಲ್ಲಿ) |
| ಅಕ್ಷಾಂಶ | : | 1° 09′ ಉ ದಿಂದ 8° 32′ ಉ |
| ರೇಖಾಂಶ | : | 56° 27′ ಪ ದಿಂದ 61° 23′ ಪ |
| ವಿಸ್ತೀರ್ಣ | : | 2.14.970 ಚ. ಕಿ. ಮಿ. |
| ಜನಸಂಖ್ಯೆ | : | ಸುಮಾರು 6.10.000 |
| ಭಾಷೆ | : | ಇಂಗ್ಲಿಷ್ (ಆಡಳಿತ ಭಾಷೆ) |
| ರಾಜಧಾನಿ | : | ಜಾರ್ಜ್ ಟೌನ್ |
| ಸರಕಾರ | : | ಸ್ವತಂತ್ರ ಸರಕಾರ |

**ಸುರಿನಾಮ್**

| | | |
|---|---|---|
| ಖಂಡ | : | ದಕ್ಷಿಣ ಅಮೆರಿಕ (ಈಶಾನ್ಯದಲ್ಲಿ) |
| ಅಕ್ಷಾಂಶ | : | 2° 02′ ಉ ದಿಂದ 6° 01′ ಉ |
| ರೇಖಾಂಶ | : | 54° ಪ ದಿಂದ 58° 03′ ಪ |
| ವಿಸ್ತೀರ್ಣ | : | 1.42.820 ಚ. ಕಿ. ಮಿ. |
| ಜನಸಂಖ್ಯೆ | : | ಸುಮಾರು 3.70.000 |
| ಭಾಷೆ | : | ಇಂಗ್ಲಿಷ್ (ಆಡಳಿತ ಭಾಷೆ) |
| ರಾಜಧಾನಿ | : | ಪರಮಾರಿಬೊ |
| ಸರಕಾರ | : | ನೆದರ್‌ಲೆಂಡ್ಸ್ ರಾಜ್ಯದ ಭಾಗವಾದ ಸ್ವಯಮಾಡಳಿತ ಪ್ರದೇಶ |

**ಫ್ರೆಂಚ್ ಗಿಯಾನಾ**

| | | |
|---|---|---|
| ಖಂಡ | : | ದಕ್ಷಿಣ ಅಮೆರಿಕ (ಈಶಾನ್ಯದಲ್ಲಿ) |
| ಅಕ್ಷಾಂಶ | : | 1° 35′ ಉ ದಿಂದ 5° 46′ ಉ |
| ರೇಖಾಂಶ | : | 51° 38′ ಪ ದಿಂದ 54° 39′ ಪ |
| ವಿಸ್ತೀರ್ಣ | : | 89.977 ಚ. ಕಿ. ಮಿ. |
| ಜನಸಂಖ್ಯೆ | : | ಸುಮಾರು 35.000 |
| ಭಾಷೆ | : | ಫ್ರೆಂಚ್ (ಆಡಳಿತ ಭಾಷೆ) |
| ರಾಜಧಾನಿ | : | ಕೇಯೆನ್ |
| ಸರಕಾರ | : | ಫ್ರಾನ್ಸಿನ ಸಾಗರದಾಚೆಯ ಪ್ರದೇಶಗಳ ಇಲಾಖೆಯ ಆಡಳಿತ |

ಕೋರೆಂಟೈನ್. ಡೆಮೆರಾರಾ ಮತ್ತಿತರ ನದಿಗಳು ಒಳನಾಡಿನ ಸಂಚಾರ ಮಾರ್ಗವಾಗಿವೆ. ಶೇಕಡ 85 ಭಾಗ ಅರಣ್ಯ ಪ್ರದೇಶವೇ ಇದೆ. ಸಮುದ್ರ ತೀರ ಪ್ರದೇಶದಲ್ಲಿ ಫಲಸಾಗುವಳಿಯಿದೆ.

1700ರಿಂದ ಸುಮಾರು ಒಂದು ಶತಮಾನ ಕಾಲ ಆಫ್ರಿಕದಿಂದ ಗುಲಾಮರನ್ನು ಕೆಲಸಕ್ಕಾಗಿ ಗಿಯಾನಾಕ್ಕೆ ತಂದರು. ಗುಲಾಮಗಿರಿ ನಾಶವಾದ ಬಳಿಕ ಚೀನ, ಭಾರತ ಮತ್ತು ಜಾವಾದಿಂದ ಗುತ್ತಿಗೆ ಕೆಲಸಗಾರರನ್ನು ಕರೆ ತಂದರು. ವಿವಿಧ ಜನಾಂಗಗಳು ಗಿಯಾನಾದಲ್ಲಿರಲು ಇದೇ ಕಾರಣ.

ಗಿಯಾನಾದಲ್ಲಿ ನೀಗ್ರೋಗಳು ಬಹಳ. ಐರೋಪ್ಯರು, ದಕ್ಷಿಣ ಅಮೆರಿಕದವರು ಕೆಲವರಿದ್ದಾರೆ. ಕಬ್ಬು, ಭತ್ತ, ತೆಂಗಿನಕಾಯಿ, ಕಾಫಿ, ಕೋಕೊ, ಆಹಾರ ಧಾನ್ಯಗಳನ್ನು ಬೆಳೆಯುತ್ತಾರೆ. ಬಾಕ್ಸೈಟ್ ಹೇರಳವಾಗಿ ದೊರೆಯುತ್ತದೆ. ಕಬ್ಬು, ಬಾಕ್ಸೈಟ್ ರಫ್ತುಮಾಡುತ್ತಾರೆ. ರಾಜಧಾನಿ ಜಾರ್ಜ್‌ಟೌನ್ ಆಧುನಿಕ ನಗರ.

ಸುರಿನಾಮ್‌ನಲ್ಲಿ ನೀಗ್ರೋಗಳು ಮತ್ತು ಚೀನೀಯರು ಹೆಚ್ಚು. ಭತ್ತ ಮುಖ್ಯ ಬೆಳೆ. ಕಾಫಿ, ಧಾನ್ಯಗಳು, ಜಂಬೀರಫಲಗಳನ್ನು ಬೆಳೆಯುತ್ತಾರೆ. ಕಾಡಿನಲ್ಲಿ ಮರದ ದಿಮ್ಮಿ ದೊರಕುತ್ತದೆ. ಬಾಕ್ಸೈಟ್ ಹೇರಳವಾಗಿ ಸಿಗುತ್ತದೆ. ಸುರಿನಾಮ್ ನೆದರ್‌ಲೆಂಡ್ಸಿನ ಆಡಳಿತಕ್ಕೊಳಪಟ್ಟಿದೆ.

ಫ್ರೆಂಚ್ ಗಿಯಾನಾದಲ್ಲಿ ನೀಗ್ರೋಗಳಿರುವರು. ಕೃಷಿಯೋಗ್ಯವಾದ ಭೂಮಿ ಅತಿ ಕಡಮೆ. ಅಲ್ಪ ಪ್ರಮಾಣದಲ್ಲಿ ಚಿನ್ನ ದೊರಕುತ್ತದೆ. ಚಿನ್ನ, ಮರದ ದಿಮ್ಮಿ ಮತ್ತು ರಮ್‌ಮದ್ಯ ರಫ್ತುಮಾಡುತ್ತಾರೆ. ಕೇಯಿನ್ ರಾಜಧಾನಿ. 1944ರವರೆಗೆ ಫ್ರೆಂಚ್ ಗಿಯಾನಾದ ತೀರದಿಂದಾಚೆಗೆ 'ದೆವ್ವ ದ್ವೀಪ'ದಲ್ಲಿ ಘೋರ ಅಪರಾಧಗಳನ್ನು ಮಾಡಿದ ಕೈದಿಗಳನ್ನಿಡುತ್ತಿದ್ದರು.

ಕೃಷಿ ಭೂಮಿ ಹೆಚ್ಚಿಸುವುದು, ಕಾಡು ಅಭಿವೃದ್ಧಿ ಪಡಿಸುವುದು, ಪೆಟ್ರೋಲಿಯಂ, ಕಬ್ಬಿಣ, ಬಾಕ್ಸೈಟ್ ನಿಕ್ಷೇಪಗಳನ್ನು ಪತ್ತೆಹಚ್ಚುವುದು ಮೊದಲಾದ ಅಭಿವೃದ್ಧಿ ಕಾರ್ಯಕ್ರಮಗಳು ನಡೆಯುತ್ತಿವೆ.

1498ರಲ್ಲಿ ಕೊಲಂಬಸ್ ಗಿಯಾನಾವನ್ನು ಕಂಡ. ಆದರೆ ಅಲ್ಲಿ ಚಿನ್ನವಿಲ್ಲದಿದ್ದುದರಿಂದ ಸ್ಪೇನಿನವರಿಗೆ ನಿರಾಶೆಯಾಯಿತು. ಡಚ್ಚರು, ಫ್ರೆಂಚರು ಮತ್ತು ಇಂಗ್ಲಿಷರು ಅಲ್ಲಿ ಅನ್ವೇಷಣೆಗೆ ತೊಡಗಿದರು. ಹದಿನೇಳು ಮತ್ತು ಹದಿನೆಂಟನೆಯ ಶತಮಾನಗಳಲ್ಲಿ ಡಚ್ಚರದೇ ಪ್ರಾಬಲ್ಯ. 1621ರಲ್ಲಿ ಡಚ್ ವೆಸ್ಟ್ ಇಂಡಿಯಾ ಕಂಪೆನಿ ಆರಂಭವಾಯಿತು. 1651ರಲ್ಲಿ ಸುರಿನಾಮ್ ನದಿಯ ಬಳಿ ಬ್ರಿಟಿಷರು ವಸಾಹತು ನಿರ್ಮಿಸಿದರು. 1780ರಿಂದ 1815ರವರೆಗೆ ವಸಾಹತುಗಳು ಅನೇಕ ಬಾರಿ ಕೈಬದಲಾಯಿಸುತ್ತಿದ್ದುವು. ಸುರಿನಾಮ್ ಪ್ರದೇಶ ಡಚ್ಚರಿಗೂ ಕೇಯಿನ್ ಎಂಬ ಪ್ರದೇಶ ಫ್ರೆಂಚರಿಗೂ ಸೇರಿತು.

1953ರಲ್ಲಿ ಬ್ರಿಟಿಷ್ ಗಿಯಾನಾದಲ್ಲಿ ಹೊಸ ಸಂವಿಧಾನ ಜಾರಿಗೆ ಬಂತು. ವಯಸ್ಕರಿಗೆಲ್ಲ ಮತನೀಡುವ ಹಕ್ಕು ದೊರೆಯಿತು. 1953 ರಿಂದ 1966 ಕ್ಷೋಭೆಯ ವರ್ಷಗಳು. ಮೊದಲು ಅಧಿಕಾರಕ್ಕೆ ಬಂದುದು ಪೀಪಲ್ಸ್ ಪ್ರೋಗ್ರೆಸಿವ್ ಪಾರ್ಟಿ. ಚೆಡ್ಡಿ ಜಗನ್ ಇದರ ಮುಂದಾಳಾಗಿದ್ದರು. ಆದರೆ ಈ ಸರಕಾರ ಬೇಗ ಪತನಗೊಂಡಿತು. 1957ರವರೆಗೂ ಸಂವಿಧಾನ ರಚನೆಯಾಗಲಿಲ್ಲ. 1961ರಿಂದ 1964ರವರೆಗೆ ದಂಗೆಯಾಗಿ ಬ್ರಿಟಿಷ್ ಸೈನ್ಯದ ನೆರವು ಅಗತ್ಯವಾಯಿತು. ಹೊಸ ಸರಕಾರ 1966ರಲ್ಲಿ ಅಸ್ತಿತ್ವಕ್ಕೆ ಬಂತು.

1970ರಲ್ಲಿ ಗಿಯಾನಾ ಸ್ವತಂತ್ರವಾಯಿತು.

## ಗ್ರೀಸ್

ಪಾಶ್ಚಾತ್ಯ ಸಂಸ್ಕೃತಿಯ ತೊಟ್ಟಿಲು ಗ್ರೀಸ್.

ಪಾಶ್ಚಾತ್ಯರ ಮೊದಲ ಮಹಾಕಾವ್ಯಗಳು ಇಲಿಯಡ್, ಒಡಿಸಿ ಸೃಷ್ಟಿಯಾದದ್ದು ಗ್ರೀಸಿನಲ್ಲಿ: ಅತಿ ಶ್ರೇಷ್ಠ ರುದ್ರ ನಾಟಕಗಳನ್ನು ಬರೆದ ಏಸ್ಕಿಲಸ್, ಸಫೋಕ್ಲೀಸ್, ಯೂರಿಪಿಡೀಸ್, ಪ್ರಸಿದ್ಧ ಹಾಸ್ಯ ನಾಟಕಕಾರ ಅರಿಸ್ಟೊಫೆನೀಸ್ ಇದ್ದುದು ಗ್ರೀಸಿನಲ್ಲಿ: ಮೊದಲ ತತ್ತ್ವಜ್ಞಾನಿ ಸಾಕ್ರಟೀಸ್, ಅವನ ಶಿಷ್ಯ ಪ್ಲೇಟೋ, ಆತನ ಶಿಷ್ಯ ಅರಿಸ್ಟಾಟಲ್ ಈ ಮೂವರು ಇದ್ದುದು ಗ್ರೀಸಿನಲ್ಲಿ: ಅದ್ಭುತ ವಿಗ್ರಹಗಳನ್ನು ಕೆತ್ತಿದ ಫಿಡಿಯಾಸ್ ಕೆಲಸ ಮಾಡಿದ್ದೂ ಇಲ್ಲಿಯೆ. ವೈದ್ಯಶಾಸ್ತ್ರದ ತಂದೆ ಎನಿಸಿಕೊಂಡ ಹಿಪಾಕ್ರಟೀಸ್ (ಕ್ರಿ. ಪೂ. 460–377) ಪ್ರಾಚೀನ ಗ್ರೀಸಿಗೆ ಸೇರಿದವನು. ಪ್ರಪಂಚದ ಚರಿತ್ರೆಯಲ್ಲಿ ಅತಿ ಶ್ರೇಷ್ಠ ವಾಗ್ಮಿಗಳ ಪಂಕ್ತಿಗೆ ಸೇರಿದ ಡೆಮಾಸ್ತನೀಸ್, ಚರಿತ್ರೆಯ ತಂದೆ ಎನ್ನಿಸಿಕೊಂಡ ಹೆರಾಡೊಟಸ್, ಇವರ ತಾಯ್ನಾಡು ಗ್ರೀಸ್. 25,000 ಜನರ ಪರ್ಷಿಯದ ಸೈನ್ಯವನ್ನು ಮ್ಯಾರಥಾನ್‌ನಲ್ಲಿ ಎದುರಿಸಿ ಸೋಲಿಸಿದ 10,000 ಜನ ಗ್ರೀಕರು, ಅವರ ನಾಯಕ ಮಿಲ್ಟಿಯಾಡಿಸ್, ಐದು ಲಕ್ಷ ಬಲದ ಪರ್ಷಿಯದ ಸೈನ್ಯವನ್ನು ಎದುರಿಸಿ ನಿಂತ 300 ಜನ ಗ್ರೀಕರು, ಅವರ ನಾಯಕ ಲಿಯೊನಿಡಾಸ್—ಈ ಸ್ವಾತಂತ್ರ್ಯ ವೀರರು ಹುಟ್ಟಿದ್ದು ಗ್ರೀಸಿನಲ್ಲಿ.

ಗ್ರೀಸ್ ಬಾಲ್ಕನ್ ಪರ್ಯಾಯದ್ವೀಪದ ದಕ್ಷಿಣದಲ್ಲಿದೆ. ಯೂರೊಪಿನ ಆಗ್ನೇಯ ಮೂಲೆಯಲ್ಲಿದೆ. ಪರ್ವತಮಯವಾದ ಗ್ರೀಸ್ ದೇಶಕ್ಕೆ ಬಹು ದೊಡ್ಡ ತೀರ ಪ್ರದೇಶವಿದೆ. ಕಾರಿಂಥ್ ಕಾಲುವೆ ಗ್ರೀಸನ್ನು ಎರಡು ಭಾಗ ಮಾಡಿದೆ. ದಕ್ಷಿಣ ಭಾಗವನ್ನು ಮೋರಿಯ ಎನ್ನುತ್ತಾರೆ. ಏಜಿಯನ್ ಸಮುದ್ರದ ಬಹು ಪಾಲು ದ್ವೀಪಗಳು, ಕ್ರೀಟ್, ಅಯೋನಿಯನ್ ದ್ವೀಪಗಳು, ಗ್ರೀಸಿಗೆ ಸೇರಿವೆ.

ಗ್ರೀಸಿನಲ್ಲಿ ಮೆಡಿಟರೇನಿಯನ್ ಹವಾಗುಣವಿದೆ. ಮಳೆ ಕಡಮೆ.

ವರ್ಡಾರ್, ಅಕೆಲ ಮೊದಲಾದ ಚಿಕ್ಕ, ರಭಸವಾಗಿ ಹರಿಯುವ ನದಿಗಳಿದ್ದು, ಸರೋವರಗಳು ಬಹಳ ಇವೆ.

ಗ್ರೀಸಿನಲ್ಲಿ ವ್ಯವಸಾಯಕ್ಕೆ ಅನುಕೂಲವಾದ ಹೆಚ್ಚು ಭೂಮಿ ಇಲ್ಲ. ಹೀಗಾಗಿ ವ್ಯವಸಾಯ ಮಾಡುವವರು ಚಿಕ್ಕ ಕ್ಷೇತ್ರದಲ್ಲಿಯೇ ತಮ್ಮ ಉದ್ಯೋಗವನ್ನು ಸಾಗಿಸುತ್ತಾರೆ. ಗೋಧಿ ಮುಖ್ಯ ಬೆಳೆ. ಹೊಗೆಸೊಪ್ಪು ಸಹ. ಗ್ರೀಸಿನ ಸುತ್ತಲೂ ಸಮುದ್ರವಿರುವುದರಿಂದ ಬೆಸ್ತರು ಹೆಚ್ಚಾಗಿದ್ದಾರೆ. ಖನಿಜ ಸಂಪತ್ತು ತೀರ ಕಡಮೆ. ಕಲ್ಲಿದ್ದಲು ಮಾತ್ರ ಇಲ್ಲಿ ಸಿಗುತ್ತದೆ.

ಆಧುನಿಕ ಗ್ರೀಕರು, ಯೂರೋಪ್ ಮತ್ತು ಏಷ್ಯ ಜನಗಳ ಮಿಶ್ರ ಜನಾಂಗವಾಗಿದ್ದಾರೆ. ಆಡಳಿತ ಭಾಷೆ ಗ್ರೀಕ್. ಬಹು ಮಂದಿ, ಗ್ರೀಸಿನದೇ ಆದ ಕ್ರೈಸ್ತ ಧರ್ಮಪೀಠಕ್ಕೆ ಸೇರಿದವರು.

ಗ್ರೀಸಿನಲ್ಲಿ ಕ್ರಿ. ಪೂ. 3000ರಲ್ಲಿ ಕಂದು ಕಂಚನ್ನು ಉಪಯೋಗಿಸುತ್ತಿದ್ದರು. ಕ್ರಿ. ಪೂ. 776ರಲ್ಲಿ ಒಲಿಂಪಿಯದಲ್ಲಿ ವಿಶ್ವವಿಖ್ಯಾತ ಒಲಿಂಪಿಕ್ ಕ್ರೀಡೆಗಳು ಆರಂಭವಾದುವೆಂದು ಅಂದಾಜು. ಕ್ರಿ. ಪೂ. 500ರಿಂದ 429ನ್ನು ಗ್ರೀಸಿನ ಸ್ವರ್ಣಯುಗ ಎನ್ನಬಹುದು. ಪೆರಿಕ್ಲೀಸ್ ಮುಂದಾಳಾಗಿದ್ದ ಕಾಲ ಅದು. ಕ್ರಿ. ಪೂ. 336ರಲ್ಲಿ ಮಹಾ ವೀರ

ಅಲೆಗ್ಸಾಂಡರ್ ಮ್ಯಾಸಿಡೋನಿಯಾದ ಅರಸನಾದ. ಆ ವೇಳೆಗೆ ಗ್ರೀಸಿನ ಅನೇಕ ಭಾಗಗಳು ಮ್ಯಾಸಿಡೋನಿಯಕ್ಕೆ ಸೇರಿಹೋಗಿದ್ದುವು. ಅವನು ತನ್ನ ರಾಜ್ಯವನ್ನು ಬಹುವಾಗಿ ವಿಸ್ತರಿಸಿದ. ಅಲೆಗ್ಸಾಂಡರ್ ಭಾರತಕ್ಕೂ ಬಂದಿದ್ದ. ಅವನ ಮರಣಾನಂತರ ಯುದ್ಧಗಳಿಂದಾಗಿ ಚಕ್ರಾಧಿಪತ್ಯ ಒಡೆದು ಹೋಯಿತು. ಆರನೆಯ ಶತಮಾನದಲ್ಲಿ ಬೈಜಾಂಟಿಯಂ ಚಕ್ರವರ್ತಿಗಳ ಕಾಲದಲ್ಲಿ ಗ್ರೀಕ್ ಸಂಸ್ಕೃತಿ ವಿಕಾಸಹೊಂದಿತ್ತು. 1453ರಲ್ಲಿ ತುರ್ಕಿಯವರು ಬೈಜಾಂಟಿಯಂ ಸಾಮ್ರಾಜ್ಯವನ್ನು ತೊಡೆದು ಹಾಕಿದರು. ಆಗ ಪ್ರಾರಂಭವಾದ ತುರ್ಕಿ–ಗ್ರೀಸ್‌ಗಳ ಜಗಳ ಇತ್ತೀಚಿನ ವರ್ಷಗಳವರೆಗೆ ನಡೆದುಕೊಂಡು ಬಂದಿದೆ. ತುರ್ಕಿಯವರ ಆಡಳಿತದಲ್ಲಿ ಗ್ರೀಸಿನ ಕ್ರೈಸ್ತರು ಹಲವಾರು ತೊಂದರೆಗಳನ್ನು ಅನುಭವಿಸಿದರು. ಹದಿನೆಂಟನೆಯ ಶತಮಾನದಲ್ಲಿ ತುರ್ಕಿಯ ಆಟಮನ್ ಚಕ್ರಾಧಿಪತ್ಯದ ಪ್ರಾಬಲ್ಯ ಕುಂದುತ್ತಿರುವುದನ್ನು ಕಂಡು 1770ರಲ್ಲಿ ಗ್ರೀಕರು ದಂಗೆ ಎದ್ದರು. ಆದರೆ ಅದು ಫಲಪ್ರದವಾಗಲಿಲ್ಲ. ಆಗಾಗ್ಗೆ ದಂಗೆಗಳಾಗುತ್ತಿದ್ದುವು. 1821ರಲ್ಲಿ ರಷ್ಯ, ಫ್ರಾನ್ಸ್ ಮತ್ತು ಬ್ರಿಟನ್ನಿನ ನೆರವಿನಿಂದ ದಂಗೆ ಸಫಲವಾಗಿ, 1830ರಲ್ಲಿ ಗ್ರೀಸಿಗೆ ಸ್ವಾತಂತ್ರ್ಯ ದೊರಕಿತು. ಆಟೋ ಪ್ರಥಮ ರಾಜನಾದ. 1834ರಲ್ಲಿ ಈತನು ಅಥೆನ್ಸನ್ನು ರಾಜಧಾನಿಯನ್ನಾಗಿ ಮಾಡಿದ. ಮೊದಲನೆಯ ಮಹಾಯುದ್ಧದ ಸಮಯದಲ್ಲಿ ರಾಜಕೀಯ ಭಿನ್ನತೆಗಳಿಂದ ಗ್ರೀಸ್ ಒಡೆದು ಹೋಗಿತ್ತು. ರಾಜ ಕಾನ್‌ಸ್ಟೆಂಟೈನ್ ಅಧಿಕಾರ ತ್ಯಜಿಸಿದ. ಆಮೇಲೆ ಗ್ರೀಸ್ ಮಿತ್ರ ರಾಷ್ಟ್ರದವರ ಪಕ್ಷ ಸೇರಿತು. ಒಪ್ಪಂದವಾದಾಗ ಪಶ್ಚಿಮ ಥ್ರೇಸ್ ಮತ್ತು ಪೂರ್ವ ಥ್ರೇಸ್ ಗ್ರೀಸಿಗೆ ಸೇರಿದುವು. ಕಾನ್‌ಸ್ಟೆಂಟೈನ್ ಪುನಃ ಅಧಿಕಾರಕ್ಕೆ ಬಂದ. ತುರ್ಕಿಯ ಮೇಲೆ ಯುದ್ಧಮಾಡಿ ಅಪಜಯ ಹೊಂದಿ, 1923ರಲ್ಲಿ ಪೂರ್ವ ಥ್ರೇಸನ್ನು ತುರ್ಕಿಯವರಿಗೆ ಕೊಡಬೇಕಾಯಿತು. ತುರ್ಕಿ ಮತ್ತು ಗ್ರೀಕ್ ಅಲ್ಪಸಂಖ್ಯಾತ ಜನರ ವಿನಿಮಯ ನಡೆದಿದ್ದಾಗ ದೊರೆಯಾಗಿದ್ದ ಎರಡನೆಯ ಜಾರ್ಜ್ ಸಿಂಹಾಸನ ತ್ಯಜಿಸಿದ.

ಖಂಡ : ಯೂರೋಪ್ (ಆಗ್ನೇಯ)
ಅಕ್ಷಾಂಶ : 34°55′ ಉ ದಿಂದ 41°45′ ಉ
ರೇಖಾಂಶ : 19°23′ ಪೂ ದಿಂದ 28°15′ ಪೂ
ವಿಸ್ತೀರ್ಣ : 1,32,561 ಚ. ಕಿ. ಮಿ.
ಜನಸಂಖ್ಯೆ : ಸುಮಾರು 84,00,000
ಭಾಷೆ : ಗ್ರೀಕ್
ರಾಜಧಾನಿ : ಅಥೆನ್ಸ್
ಸರಕಾರ : ಸಂವಿಧಾನಬದ್ಧ ರಾಜಪದ್ಧತಿ
ಬಾವುಟ : ಐದು ನೀಲಿ ಮತ್ತು ನಾಲ್ಕು ಬಿಳಿ ಅಡ್ಡ ಪಟ್ಟಿಗಳು ಎಡಗಡೆ ಮೇಲುಭಾಗದಲ್ಲಿ ನೀಲಿಯ ಮೇಲೆ ಬಿಳಿ ಶಿಲುಬೆ

1924ರಲ್ಲಿ ಗಣರಾಜ್ಯವಾದರೂ ಮತ್ತೆ 1935ರಲ್ಲಿ ರಾಜಪದ್ಧತಿಯೇ ಬಂದಿತು. ಎರಡನೆಯ ಮಹಾಯುದ್ಧದಲ್ಲಿ ಇಟಲಿ ಗ್ರೀಸಿನ ಕೆಲವು ಸ್ಥಳಗಳನ್ನು ಆಕ್ರಮಿಸಲು ಗ್ರೀಸ್ ಒಪ್ಪಿಗೆ ಕೊಡಲಿಲ್ಲ. ಯುದ್ಧ ಆರಂಭವಾಗಿ ಗ್ರೀಸ್ ಬಹಳ ಕಷ್ಟನಷ್ಟಗಳನ್ನು ಅನುಭವಿಸಬೇಕಾಯಿತು. 1964ರಲ್ಲಿ ಯುವಕ ರಾಜಕುಮಾರ ಕಾನ್‌ಸ್ಟೆಂಟೈನ್ ಅರಸನಾದ. 1967ರಲ್ಲಿ ಸೈನ್ಯದ ಕ್ಷಿಪ್ರಕ್ರಾಂತಿ ನಡೆದು ಸೈನ್ಯ ಅಧಿಕಾರಿಗಳು ರಾಜ್ಯಸೂತ್ರ ವಹಿಸಿಕೊಂಡರು. ಇದು ಒಪ್ಪಿಗೆಯಾಗದೆ ಅರಸು ರಾಷ್ಟ್ರವನ್ನೇ ಬಿಟ್ಟು ಹೋದ.

ಗ್ರೀಸಿನ ರಾಜಧಾನಿ ಅಥೆನ್ಸ್ ಪ್ರಪಂಚದ ಅತಿ ಪ್ರಸಿದ್ಧ ನಗರಗಳಲ್ಲಿ ಒಂದು. ಪ್ರಾಚೀನ ಇತಿಹಾಸದ ವಿದ್ಯಾರ್ಥಿಗಳಿಗೆ ಇದೊಂದು ಯಾತ್ರಾಸ್ಥಳ. ಇಲ್ಲಿರುವ ಅವಶೇಷಗಳು ಎಷ್ಟು ಪ್ರಸಿದ್ಧ ಎಂದರೆ ಫ್ರಾನ್ಸ್, ಜರ್ಮನಿ, ಇಟಲಿ, ಇಂಗ್ಲೆಂಡ್, ಆಸ್ಟ್ರಿಯ, ಅಮೆರಿಕದ ಸಂಯುಕ್ತ ಸಂಸ್ಥಾನ ಎಲ್ಲವೂ ಪುರಾತತ್ತ್ವಶಾಸ್ತ್ರದ ಶಾಲೆಗಳನ್ನು ಇಲ್ಲಿ ಸ್ಥಾಪಿಸಿವೆ. 76 ಮೀಟರು ಎತ್ತರದ ಗುಡ್ಡದ ಮೇಲಿರುವ ದೇವಾಲಯ ಪಾರ್ಥಿನಾನ್. 'ಪಾರ್ಥಿನಾಸ್' ಎಂದರೆ ಕನ್ಯೆ. ಇದು ಕನ್ಯೆ ದೇವತೆ ಅಥೀನೆ ದೇವಾಲಯ : ಈಗ ವಿಗ್ರಹ ಅಲ್ಲಿಲ್ಲ. ಉಳಿದುಳಿದಿರುವ ಕಟ್ಟಡದಿಂದಲೇ ಅದರ ವೈಭವವನ್ನು ಅರಿಯಬಹುದು. ಜನರು ಸಭೆ ಸೇರುತ್ತಿದ್ದ ಅಗೋರ, ದಿನಗಟ್ಟಲೆ ಅಥೆನ್ಸ್‌ನಲ್ಲಿ ನಡೆಯುತ್ತಿದ್ದ ನಾಟಕೋತ್ಸವವನ್ನು ಸಾವಿರಾರು ಜನ ಕುಳಿತು ನೋಡುತ್ತಿದ್ದ ನಾಟಕಮಂದಿರಗಳ ಅವಶೇಷಗಳು, ಇವನ್ನು ನೋಡಲು ಹಲವು ದೇಶಗಳಿಂದ ಸಾವಿರಾರು ಮಂದಿ ಪ್ರವಾಸಿಗರು ಬರುತ್ತಾರೆ.

ಪುರಾತನ ಅವಶೇಷಗಳ ಮಧ್ಯೆ ಹೊಸ ಗ್ರೀಸ್ ತಲೆಯೆತ್ತುತ್ತಿದೆ.

ಸಲೋನಿಕದಲ್ಲಿ ವಿಶ್ವವಿದ್ಯಾನಿಲಯವಿದೆ. ಪೈರೀಅಸ್ ದೊಡ್ಡ ಬಂದರು. ಕಲೆ, ಸಾಹಿತ್ಯ, ವಿಜ್ಞಾನಕ್ಷೇತ್ರಕ್ಕೆ ಗ್ರೀಕರ ಕೊಡುಗೆ ಅಪಾರ.

ನೋಡಿ : ಅಲೆಗ್ಸಾಂಡರ್ ; ಒಲಂಪಿಕ್ ಕ್ರೀಡೆಗಳು ; ಪೆರಿಕ್ಲೀಸ್ ; ಪ್ಲೇಟೋ ; ಪೈಥಾಗೊರಸ್ ; ಸಾಕ್ರಟೀಸ್ ; ಹೆರಾಡೊಟಸ್.

## ಗುರುಕುಲ

ಪ್ರಾಚೀನ ಭಾರತದಲ್ಲಿ ವಿದ್ಯಾಕೇಂದ್ರ ಗುರುಕುಲ. ಗುರುಕುಲ ದೊಡ್ಡ ಮನೆ. ಗುರು ಶಿಷ್ಯರನ್ನೊಳಗೊಂಡ ವಿದ್ಯಾಕೇಂದ್ರ.

ಜೀವನದಲ್ಲಿ ಅತ್ಯಂತ ಅವಶ್ಯವಾದ ವಿದ್ಯಾಭ್ಯಾಸಕ್ಕೆ ಕೇಂದ್ರ ಸ್ಥಾನವಾಗಿದ್ದುದು ಗುರುಕುಲ.

ಗುರುಕುಲಗಳು ಆಚಾರ್ಯ ಶ್ರೇಷ್ಠರಾದ ಋಷಿಗಳ ವಾಸಸ್ಥಾನವಾಗಿರುತ್ತಿದ್ದುವು. ಇದರಿಂದಾಗಿ ಇವು ಜನನಿಬಿಡ ನಗರಗಳ ಮಧ್ಯೆ ಇರದೆ ಪ್ರಶಾಂತ ರಮಣೀಯ ಅರಣ್ಯಗಳಲ್ಲಿರುತ್ತಿದ್ದುವು. ಈ ಗುರುಕುಲಗಳ ಮುಖ್ಯಸ್ಥರು ಕುಲಪತಿಗಳು. ಪ್ರಸಿದ್ಧರಾದ ಗುರುಗಳನ್ನು ನಾನಾ ದೇಶಗಳ ಶಿಷ್ಯರು ಆಶ್ರಯಿಸುತ್ತಿದ್ದರು. ಒಂದು ರೀತಿಯಲ್ಲಿ ಈ ಗುರುಕುಲಗಳು ವಿಶ್ವವಿದ್ಯಾನಿಲಯಗಳೇ ಆಗಿದ್ದುವು.

ಪ್ರಾಚೀನ ಭಾರತದಲ್ಲಿ ಶಿಷ್ಯ ಗುರುವನ್ನು ಅರಸಿಕೊಂಡು ಹೋಗುತ್ತಿದ್ದ. ಶಿಷ್ಯ ತನಗೆ ಬೇಕಾದ ಗುರುವನ್ನೂ ಗುರು ತನಗೆ ಯೋಗ್ಯನಾದ ಶಿಷ್ಯರನ್ನೂ ಆರಿಸಿಕೊಳ್ಳುತ್ತಿದ್ದರೆಂದು ಉಪನಿಷತ್ತುಗಳಲ್ಲಿ ಹೇಳಿದೆ. ಶಿಷ್ಯನ ಆಸಕ್ತಿ, ಯೋಗ್ಯತೆ ಇವನ್ನು ತಿಳಿದುಕೊಳ್ಳಲು ಗುರು ಅವನಿಗೆ ಒಂದು ವರ್ಷ ಕಾಲ ಆಹಾರ, ನಿದ್ರೆ, ಕೆಲಸ ಮೊದಲಾದ [illegible]ಗಳಲ್ಲಿ ಕೆಲವು ನಿಯಮಗಳನ್ನು ಹಾಕುತ್ತಿದ್ದ. ಆ ನಿಯಮಪಾಲನೆಯಲ್ಲಿ ಉತ್ತೀರ್ಣನಾದ ಶಿಷ್ಯನಿಗೆ ಗುರುಕುಲದಲ್ಲಿ ಪ್ರವೇಶ ಸಿಗುತ್ತಿತ್ತು.



ಪ್ರಾಚೀನ ವಿದ್ಯಾಕೇಂದ್ರ–ಗುರುಕುಲ

ಗುರುಕುಲವಾಸದಲ್ಲಿ ಶಿಷ್ಯನಾದವನು ಬಡವನೇ ಆಗಿರಲಿ, ಶ್ರೀಮಂತನೇ ಆಗಿರಲಿ ಗುರುವಿನ ಹಾಗೂ ಗುರುಪತ್ನಿಯ ಸೇವೆ ಮಾಡಿ ಅವರ ಅನುಗ್ರಹಕ್ಕೆ ಪಾತ್ರನಾಗಬೇಕಾಗಿತ್ತು.

ವಿರಕ್ತಿ, ಇಂದ್ರಿಯನಿಗ್ರಹ, ಪರಮಾತ್ಮನಲ್ಲಿ ನಿಷ್ಠೆ ಮೊದಲಾದ ಗುಣಗಳುಳ್ಳ, ಅಂತರಂಗ ಬಹಿರಂಗ ಶುದ್ಧಿಯಿರುವ ವಿದ್ಯಾರ್ಥಿಗಳು ತನ್ನಲ್ಲಿಗೆ ಬರಬೇಕೆಂದು ಗುರು ಅಪೇಕ್ಷಿಸುತ್ತಿದ್ದ. ಶಿಷ್ಯ, "ನಾನು ನಿಮಗೆ ಶರಣು ಬಂದಿದ್ದೇನೆ. ನನಗೆ ಬೇಕಾದ ವಿದ್ಯೆಯನ್ನು ಉಪದೇಶ ಮಾಡಿ," ಎಂದು ಪ್ರಾರ್ಥಿಸುತ್ತಿದ್ದ. ಗುರು ಶಿಷ್ಯನನ್ನು ಮಗನಂತೆ ವಾತ್ಸಲ್ಯದಿಂದ ನೋಡಿಕೊಳ್ಳುತ್ತಿದ್ದ. ಹೀಗೆ ಗುರುಕುಲದಲ್ಲಿ ಸಮರ್ಥರಾದ ಗುರುಶಿಷ್ಯರಿರುತ್ತಿದ್ದರು. ಅವರ ಸಂಬಂಧ ಅತ್ಯಂತ ಆತ್ಮೀಯವಾಗಿ ಮಧುರವಾಗಿ ಇರುತ್ತಿತ್ತು. ಕೃಷ್ಣನು ಸುದಾಮನೊಡನೆ ಸಾಂದೀಪನಿ ಎಂಬ ಗುರುವಿನ ಶುಶ್ರೂಷೆಯಿಂದ ವಿದ್ಯಾರ್ಜನೆ ಮಾಡುತ್ತಿದ್ದನೆಂದು ಭಾಗವತ ವರ್ಣಿಸುತ್ತದೆ.

ಶಿಷ್ಯರು ಗುರುಕುಲದಲ್ಲಿ ಕಠೋರವಾದ ನಿಯಮಗಳನ್ನು ಪಾಲಿಸುತ್ತಿದ್ದರು. ತಮ್ಮ ಪಾಠಗಳನ್ನು ಗುರುಗಳ ಪ್ರವಚನದಿಂದ ಕಲಿಯುತ್ತಿದ್ದರು. ಗುರುಕುಲಗಳಲ್ಲಿ ವೇದಗಳು, ಧರ್ಮಶಾಸ್ತ್ರ, ಸ್ಮೃತಿ, ಇತಿಹಾಸ, ಪುರಾಣಗಳಲ್ಲದೆ, ಸಾಹಿತ್ಯ, ಅರ್ಥಶಾಸ್ತ್ರ, ದಂಡಶಾಸ್ತ್ರ, ಲಲಿತ ಕಲೆಗಳು, ಆಯುರ್ವೇದ, ತರ್ಕಶಾಸ್ತ್ರ ಮೊದಲಾದುವನ್ನೆಲ್ಲ ಶಿಷ್ಯರು ಕಲಿಯುತ್ತಿದ್ದರು. ಯುದ್ಧ ಮಾಡುವ ರೀತಿಗಳನ್ನೂ ಶಿಷ್ಯರಿಗೆ ಗುರು ಕಲಿಸುತ್ತಿದ್ದ.

ಗುರುಶುಲ್ಕವನ್ನು ಗುರುಕುಲಗಳಲ್ಲಿ ಕೇಳುತ್ತಿರಲಿಲ್ಲ. ಶಿಷ್ಯರು ಅಧ್ಯಯನ ಮುಗಿದ ಮೇಲೆ, ತಾವಾಗಿಯೇ ಗುರುದಕ್ಷಿಣೆಯನ್ನು ಭಕ್ತಿಯಿಂದ ಅರ್ಪಿಸುತ್ತಿದ್ದರು. ಶಿಷ್ಯರು ಗುರುಕುಲಗಳಲ್ಲಿ ಹನ್ನೆರಡು ವರ್ಷ ಅಭ್ಯಾಸ ಮಾಡಿ ಅನಂತರ ಗುರುಗಳ ಅಪ್ಪಣೆ ಪಡೆದು ತಮ್ಮ ಊರುಗಳಿಗೆ ಮರಳಿ ಗೃಹಸ್ಥಾಶ್ರಮ ಸ್ವೀಕರಿಸುತ್ತಿದ್ದರು.

ಗುರುಕುಲದಲ್ಲಿದ್ದಾಗ ನಾಲ್ಕು ವರ್ಣಗಳವರೂ ತಮ್ಮ ತಮ್ಮ ವರ್ಣಾಶ್ರಮ ಧರ್ಮಕ್ಕನುಗುಣವಾಗಿ ವಿದ್ಯಾರ್ಜನೆ ಮಾಡುತ್ತಿದ್ದರು. ವೈದಿಕ ವಿದ್ಯೆ, ಶಸ್ತ್ರಾಸ್ತ್ರ ವಿದ್ಯೆ, ರಾಜನೀತಿ, ವಾಣಿಜ್ಯ, ಅರ್ಥಶಾಸ್ತ್ರ, ಕೃಷಿ ಇವುಗಳಲ್ಲಿ ಆಯಾ ವರ್ಣದವರು ತಿಳಿವಳಿಕೆ ಪಡೆಯುತ್ತಿದ್ದರು.

ಪ್ರಾಚೀನ ಭಾರತದಲ್ಲಿ ಗುರುಕುಲಗಳಲ್ಲಿ ಸ್ತ್ರೀಯರೂ ಇದ್ದರೆಂದು ತಿಳಿದುಬರುತ್ತದೆ.

ಪ್ರಾಚೀನ ಭಾರತದ ಗುರುಕುಲಗಳು ಜೈನ ಬೌದ್ಧರ ಕಾಲಕ್ಕೆ ಸ್ವಲ್ಪ ಮಾರ್ಪಟ್ಟು. ಗುರುವಿನ ನಿವಾಸದಿಂದ ಹೊರಗೆ ಪ್ರತ್ಯೇಕವಾಗಿ ಸ್ಥಾಪಿಸಲ್ಪಟ್ಟು ವಿದ್ಯಾಕೇಂದ್ರಗಳಾಗಿ ವಿಶ್ವವಿದ್ಯಾನಿಲಯಗಳೆನಿಸಿದುವು.

ಗುರುಕುಲ ಪದ್ಧತಿಯ ಅನುಕೂಲಗಳು ಹಲವು. ಅಲ್ಲಿಗೆ ವಿದ್ಯೆಯನ್ನು ಅರ್ಥಿಸುವ (ಬಯಸುವ) ವಿದ್ಯಾರ್ಥಿಗಳು ತಾವಾಗಿಯೇ ಹೋಗುತ್ತಿದ್ದರು. ಇದರಲ್ಲಿ ಒತ್ತಾಯವಿರಲಿಲ್ಲ. ತಾವು ಅಥವಾ ತಮ್ಮ ಹಿರಿಯರು ಆರಿಸಿದ ಗುರುಗಳ ಬಳಿಗೆ ಹೋಗುತ್ತಿದ್ದುದರಿಂದ ವಿದ್ಯಾರ್ಥಿಗಳಿಗೆ ಗುರುಗಳಲ್ಲಿ ಗೌರವವಿರುತ್ತಿತ್ತು. ಗುರು–ಶಿಷ್ಯ ಸಂಬಂಧ ಆತ್ಮೀಯವಾಗಿರುತ್ತಿತ್ತು. ಗುರುಪತ್ನಿ ಶಿಷ್ಯರಿಗೆ ತಾಯಿಯಂತೆ ಇರುತ್ತಿದ್ದಳು. ಗುರುವಿನಲ್ಲಿ ಶಿಷ್ಯರ ತಂದೆ–ತಾಯಿಯರಿಗೆ ಗೌರವವಿದ್ದುದರಿಂದ ಅವರು ತಮ್ಮ ಮಕ್ಕಳನ್ನು ಸಂಪೂರ್ಣವಾಗಿ ಅವರ ಶಿಸ್ತಿಗೆ ಒಪ್ಪಿಸುತ್ತಿದ್ದರು. ಮುಖ್ಯವಾಗಿ ಶಿಷ್ಯರು ಗುರುಗಳಿಗೆ ಸಮೀಪವರ್ತಿಗಳಾಗಿರುತ್ತಿದ್ದುದರಿಂದ ಗುರುವಿನ ವ್ಯಕ್ತಿತ್ವದ ಪ್ರಭಾವ ಅವರ ಮೇಲಾಗುತ್ತಿತ್ತು.

## ಗುಲಾಮಗಿರಿ

"ನನಗೆ ಗುಲಾಮನಾಗಿರಲು ಹೇಗೆ ಇಷ್ಟವಿಲ್ಲವೋ ಒಡೆಯನಾಗಿರಲೂ ಹಾಗೆಯೇ ಇಷ್ಟವಿಲ್ಲ."

—ಈ ಮಾತನ್ನು ಹೇಳಿದವನು ಅಬ್ರಹಾಂ ಲಿಂಕನ್, ಅಮೆರಿಕದ ಅಧ್ಯಕ್ಷನಾಗಿದ್ದವನು. ಗುಲಾಮಗಿರಿಯನ್ನು ಅಮೆರಿಕದಲ್ಲಿ ನಿರ್ನಾಮ ಮಾಡಲು ಪಣತೊಟ್ಟವನು.

ಮನುಷ್ಯರನ್ನು ದನಕ್ಕಿಂತಲೂ ಕಡೆಯಾಗಿ ಕಾಣುತ್ತಿದ್ದ ಕಾಲವೊಂದಿತ್ತು. ಆ ಕಾಲದಲ್ಲಿ ಮಾನವರು ಎತ್ತಿನಂತೆ ಬಂಡಿ ಎಳೆಯುತ್ತಿದ್ದರು. ಸ್ವಲ್ಪ ನಿಧಾನವಾಗಿ ನಡೆದರೆ ಅವರ ಮಾಲಿಕರು ಬೆನ್ನಿನ ಮೇಲೆ ರಪ್ ರಪ್ಪೆಂದು ಚಾಟಿಯಿಂದ ಹೊಡೆಯುತ್ತಿದ್ದರು. ಇವನ್ನೆಲ್ಲ ಆಳುಗಳು ಮೌನವಾಗಿ ಸಹಿಸಿಕೊಳ್ಳಬೇಕಾಗಿತ್ತು. ಏಕೆಂದರೆ ಅವರು ಗುಲಾಮರು.

ತಮ್ಮ ಸ್ವಾತಂತ್ರ್ಯವನ್ನು ಸಂಪೂರ್ಣವಾಗಿ ಕಳೆದುಕೊಂಡು ಮತ್ತೊಬ್ಬರ ಅಡಿಯಾಳಾಗಿರುವ ವ್ಯಕ್ತಿಗಳು ಗುಲಾಮರು. ಒಂದು ಮೇಜನ್ನೋ ದನವನ್ನೋ ಕೊಂಡು ಮಾರುವಂತೆಯೇ ಗುಲಾಮರ ಮಾರಾಟ ನಡೆಯುತ್ತಿತ್ತು. ಮುದುಕರು, ಎಳೆಯರು, ತರುಣತರುಣಿಯರು–ಇವರನ್ನು ಹರಾಜು ಹಾಕುತ್ತಿದ್ದರು. ಮಾಲಿಕರ ಸಂಪೂರ್ಣ ಅಧಿಕಾರಕ್ಕೆ ಒಳಪಟ್ಟಿದ್ದುದರಿಂದ ಗುಲಾಮರು ಅವರು ಹೇಳಿದ ಕೆಲಸವನ್ನೆಲ್ಲ ಎಷ್ಟೇ ಕಠಿಣವಾಗಿರಲಿ ಮಾಡಬೇಕಾಗುತ್ತಿತ್ತು. ಮಾಲಿಕರ ಕ್ರೌರ್ಯಕ್ಕೆ ಬಲಿಯಾಗಿ ಅನೇಕ ಗುಲಾಮರು ಪ್ರಾಣಬಿಡುತ್ತಿದ್ದರು.

ಗುಲಾಮಗಿರಿಯೂ ಮಾನವನ ನಾಗರಿಕತೆಯ ದಾರಿಯಲ್ಲಿ ಒಂದು ಹೆಜ್ಜೆಯೇ: ಏಕೆಂದರೆ ಪ್ರಾಚೀನಕಾಲದಲ್ಲಿ ಆಕ್ರಮಣಕಾರರು ಸೆರೆ ಸಿಕ್ಕವರನ್ನು ಕೊಂದುಹಾಕಿಬಿಡುತ್ತಿದ್ದರು. ಕೊಲ್ಲುವುದಕ್ಕಿಂತ ಅವರನ್ನು ದುಡಿತಕ್ಕಾಗಿ ಉಪಯೋಗಿಸಿಕೊಳ್ಳುವುದು [illegible]

ಏರಬಹುದು ಗುಲಾಮರ ಮೇಲೆ ಮಾಲೀಕರ ಹಿಡಿತ. ಅಧಿಕಾರವ್ಯಾಪ್ತಿ ಹೆಚ್ಚಾಗಿ ಕಠಿಣ ಪರಿಸ್ಥಿತಿ ಉಂಟಾಯಿತು.

ಪ್ರಾಚೀನ ಕಾಲದಿಂದಲೂ ಗುಲಾಮಗಿರಿ ಬೆಳೆದುಬಂದಿತ್ತು. ಈಜಿಪ್ಟಿನ ಮತ್ತು ಮಹಾನಗರಗಳಲ್ಲಿ ಇದು ಬಹಳ ಪ್ರಚುರವಾಗಿತ್ತು. ಆದರೆ ಇವರಲ್ಲಿ ಎರಡು ನಿಯಮಗಳಿದ್ದುವು. ತಮ್ಮ ಸಂಗಡಕ್ಕೆ ಸೇರಿದ ಗುಲಾಮನಾದರೆ ಆರು ವರ್ಷದ ಅನಂತರ ಅವನನ್ನು ಮುಕ್ತಗೊಳಿಸುತ್ತಿದ್ದರು. ಪರಕೀಯ ಗುಲಾಮರನ್ನು ಐವತ್ತು ವರ್ಷಗಳಿಗೊಮ್ಮೆ ಮುಕ್ತಗೊಳಿಸುತ್ತಿದ್ದರು. ಪ್ರಾಚೀನ ಗ್ರೀಕರು ಗುಲಾಮರನ್ನು ಕಡಲುಗಳ್ಳರಿಂದ ಕೊಂಡುಕೊಳ್ಳುತ್ತಿದ್ದರು. ಸಂಸಾರ ನಿರ್ವಹಣೆ ಅಸಾಧ್ಯವಾದಾಗ ಬಡವರು ಕೆಲವರು ತಮ್ಮ ಮಕ್ಕಳನ್ನೇ ಗುಲಾಮರಾಗಿ ಮಾರುತ್ತಿದ್ದರು. ಸಾಲವನ್ನು ತೀರಿಸಲಾಗದ ಸಾಲಗಾರರು ಗುಲಾಮರಾಗಿ ದುಡಿಯುತ್ತಿದ್ದರು. ಪ್ಲೇಟೋ ತನ್ನ ಕಾಲದಲ್ಲಿ ಒಬ್ಬ ಗ್ರೀಕನು ಮತ್ತೊಬ್ಬ ಗ್ರೀಕನ ಗುಲಾಮನಾಗಿರಬಾರದು ಎಂದ. ಪ್ರಾಚೀನ ಗ್ರೀಸ್‌ನಲ್ಲಿ ಸಾವಿರಾರು ಗುಲಾಮರಿದ್ದುದರಿಂದ ಗ್ರೀಕರಿಗೆ ಬೇಕಾದಷ್ಟು ವಿರಾಮವಿತ್ತು. ಚರ್ಚೆಗಳಲ್ಲಿ. ಅಧ್ಯಯನದಲ್ಲಿ. ಕಲೆಗಳ ಅಭಿವೃದ್ಧಿಯಲ್ಲಿ ಕಾಲವನ್ನು ಕಳೆಯಲು ಸಾಧ್ಯವಾಯಿತು. ಈಜಿಪ್ಟಿನಲ್ಲಿ ಗುಲಾಮರು ಸ್ವಲ್ಪ ಜವಾಬ್ದಾರಿಯುತ ಪದವಿಗಳಲ್ಲಿರಬಹುದಿತ್ತು. ಕೆಲವು ಸಲ ಅವರು. ಒಡೆಯನಿಗೆ ತಾವು ಕೊಡಬೇಕಾದ ಹಣವನ್ನು ಕೊಟ್ಟು ತಮ್ಮ ಬಿಡುಗಡೆ ಪಡೆಯುತ್ತಿದ್ದರು.

ರೋಮಿನಲ್ಲಿ ಸಹ ಗುಲಾಮಗಿರಿ ಇತ್ತು. ಸಾಮ್ರಾಜ್ಯದ ಉಚ್ಛ್ರಾಯ ಸ್ಥಿತಿಯಲ್ಲಿ ಪ್ರತಿಯೊಬ್ಬ ಸ್ವತಂತ್ರ ಮನುಷ್ಯನಿಗೂ ಮೂರು ಜನ ಗುಲಾಮರಿದ್ದರಂತೆ. ರೋಮನ್ ಗುಲಾಮರಿಗೆ ಅನೇಕ ವೇಳೆ ಬಿಡುಗಡೆ ದೊರೆಯುತ್ತಿತ್ತು. ಕೆಲವರು ಒಳ್ಳೆಯ ಪದವಿಗಳನ್ನೂ ಗಳಿಸುತ್ತಿದ್ದರು. ಕ್ರಿ. ಪೂ. ಎರಡನೆಯ ಶತಮಾನದಿಂದ ಅವರ ಕಷ್ಟಗಳು ಹೆಚ್ಚಿದುವು.

ಭಾರತದಲ್ಲಿ ಗುಲಾಮರ ವಿಷಯ ತಿಳಿಯುವುದು ನಮಗೆ ಸತ್ಯ ಹರಿಶ್ಚಂದ್ರನ ಕಥೆಯಲ್ಲಿ. ಅಲ್ಲಿ ಹರಿಶ್ಚಂದ್ರ ಹಣಕ್ಕಾಗಿ ತನ್ನ ಪತ್ನಿಪುತ್ರರನ್ನು ಗುಲಾಮರಾಗಿ ಮಾರಿದ ಪ್ರಸಂಗ ಬರುತ್ತದೆ. ಮಹಾಭಾರತದಲ್ಲಿಯೂ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿಯೂ ಗುಲಾಮರ ಪ್ರಸ್ತಾಪವಿದೆ. ಇತರ ದೇಶಗಳಲ್ಲಿ ಇದ್ದುದಕ್ಕಿಂತ ಇಲ್ಲಿ ಗುಲಾಮರಿಗೆ ಹೆಚ್ಚು ಸ್ವಾತಂತ್ರ್ಯವಿತ್ತು. ಮಾಲಿಕ ಇವರನ್ನು ಮಾರಬಹುದಾಗಿತ್ತು. ಒತ್ತೆ ಇಡಬಹುದಾಗಿತ್ತು. ಆದರೆ ಕೊಲ್ಲುವಂತಿರಲಿಲ್ಲ. ಮಕ್ಕಳನ್ನು ಗುಲಾಮರಾಗಿ ಮಾರುವಂತಿರಲಿಲ್ಲ. ಗುಲಾಮ ಕನ್ಯೆಯರನ್ನೂ ಮುದುಕರನ್ನೂ ರಕ್ಷಿಸುವ ಹೊಣೆ ಯಜಮಾನನದು. ಮಕ್ಕಳಿಲ್ಲದ ಸತ್ತ ಗುಲಾಮನ ಅಂತ್ಯಕರ್ಮಗಳನ್ನು ಒಡೆಯ ಮಾಡಬೇಕಾಗಿದ್ದಿತು.

ಯುರೋಪಿನಲ್ಲಿ ಗುಲಾಮಗಿರಿ ಬರಬರುತ್ತ ಜೀತ ಪದ್ಧತಿಯಾಗಿ ಪರಿವರ್ತನೆ ಹೊಂದಿತು. (ದುಡಿಯುವವರ ಇಷ್ಟಕ್ಕೆ ವಿರುದ್ಧವಾಗಿ ಒತ್ತಾಯದಿಂದ ಪಡೆದ ದುಡಿಮೆಯೇ ಜೀತ.) 1300ರ ವೇಳೆಗೆ ಗುಲಾಮಗಿರಿ ಸಂಪೂರ್ಣವಾಗಿ ನಿಂತೇಹೋಗಿದ್ದಿತು. ಆದರೆ 1442ರ ವೇಳೆಗೆ ಆಫ್ರಿಕದಲ್ಲಿ ಕೆಲವು ಪೋರ್ಚುಗೀಸ್ ಅನ್ವೇಷಕರು ತಾವು ಸೆರೆಹಿಡಿದಿದ್ದ ಮೂರು ಜನರನ್ನು ಬಿಡುಗಡೆಮಾಡಿ ಬದಲಿಗೆ ಕಪ್ಪು ನೀಗ್ರೊಗಳನ್ನು ಗುಲಾಮರಾಗಿ ಪಡೆದರು. ಆಗಿನಿಂದ ಗುಲಾಮರ ಭೀಕರ ವ್ಯಾಪಾರ ನಾಲ್ಕು ಶತಮಾನಗಳ ಕಾಲ ನಡೆಯಿತು. ಪೋರ್ಚುಗೀಸ್ ಅನ್ವೇಷಕರು ಆಫ್ರಿಕದ ನೀಗ್ರೊಗಳನ್ನು ಗುಲಾಮರಾಗಿ ಯುರೋಪಿಗೆ ತರಲಾರಂಭಿಸಿದರು. ಗುಲಾಮರ ವ್ಯಾಪಾರ ಲಾಭದಾಯಕವಾಗಿ ಅನೇಕ ದೇಶಗಳು ಅದರಲ್ಲಿ ಭಾಗವಹಿಸಿದುವು. ಎಲ್ಲೆಲ್ಲೂ ಗುಲಾಮರನ್ನು ದುಡಿಸುವುದು, ಕ್ರೂರವಾಗಿ ಕಾಣುವುದು ಆರಂಭವಾಯಿತು.

ಗುಲಾಮರ ವ್ಯಾಪಾರವನ್ನು ತೊಡೆದುಹಾಕಿದ ಪ್ರಥಮ ದೇಶ ಡೆನ್ಮಾರ್ಕ್. (ಗುಲಾಮಗಿರಿಯ ವಿರುದ್ಧ ಹೋರಾಟ ಇದಕ್ಕಿಂತ ಬಹಳ ಹಿಂದೆಯೇ ಆರಂಭವಾಗಿತ್ತು.) 1671ರಲ್ಲಿ ಇಂಗ್ಲೆಂಡಿನ ಕ್ವೇಕರ್ ಸಂಗಡದವರೂ 1696ರಲ್ಲಿ ಅಮೆರಿಕದ ಕ್ವೇಕರ್ ಸಂಗಡದವರೂ ಗುಲಾಮಗಿರಿಯ ವಿರುದ್ಧ ಹೋರಾಟ ಕೈಗೊಂಡರು.

1808ರಲ್ಲಿ ಅಮೆರಿಕ ಹೊರನಾಡಿನಿಂದ ಗುಲಾಮರನ್ನು ತರುವುದನ್ನು ನಿಷೇಧಿಸಿತು. ಇದರಿಂದ ಗುಲಾಮ ವ್ಯಾಪಾರ ಸಂಪೂರ್ಣವಾಗಿ ನಿಂತಂತಾಯಿತು. ಆದರೂ ಗುಲಾಮಗಿರಿ ಒಳನಾಡಿನಲ್ಲಿ ಜಾರಿಯಲ್ಲಿದ್ದಿತು. ಗುಲಾಮಗಿರಿಯ ನಾಶಕ್ಕಾಗಿ ಹೋರಾಡಿದ ಅಬ್ರಹಾಂ ಲಿಂಕನ್ ಕೊಲೆಗೀಡಾಗಬೇಕಾಯಿತು.

ಭಾರತದಲ್ಲಿಯೂ ಇನ್ನೂ ಅನೇಕ ದೇಶಗಳಲ್ಲಿಯೂ ಇಂದು ಗುಲಾಮಗಿರಿ ಒಂದು ಅಪರಾಧ. ಮನುಷ್ಯನನ್ನು ಕೊಂಡುಕೊಳ್ಳುವುದು. ಗುಲಾಮರಂತೆ ನಡೆಸಿಕೊಳ್ಳುವುದು ಶಿಕ್ಷಾರ್ಹ.

ಇಪ್ಪತ್ತನೆಯ ಶತಮಾನದ ಪ್ರಪಂಚದಲ್ಲಿಯೂ ಕೆಲವು ಭಾಗಗಳಲ್ಲಿ ಗುಲಾಮಗಿರಿ ಹೊಗೆಯಾಡುತ್ತಿದೆ. ಅರೇಬಿಯದಲ್ಲಿ 5 ಲಕ್ಷದಿಂದ 7 ಲಕ್ಷದ ವರೆಗೆ ಗುಲಾಮರು ಇಂದಿಗೂ ದುಡಿಯುತ್ತಿದ್ದಾರೆ. ದೂರ ಪ್ರಾಚ್ಯದಲ್ಲಿ ಇಂದೂ ಹಣಕ್ಕಾಗಿ ಮಕ್ಕಳನ್ನು ಗುಲಾಮರಾಗಿ ಮಾರುವುದುಂಟು.

ಗುಲಾಮಗಿರಿ ಸಾಹಿತ್ಯಕ್ಕೂ ವಸ್ತು ಒದಗಿಸಿದೆ. ಅನೇಕ ಸಾಹಿತಿಗಳ ಸಿದ್ಧಹಸ್ತ. ಗುಲಾಮರ ಕರುಣಾಜನಕ ಸ್ಥಿತಿಗಳನ್ನು ಮನಕರಗುವಂತೆ ಕಥೆ, ಕಾದಂಬರಿಗಳಲ್ಲಿ ಚಿತ್ರಿಸಿದೆ. ಹ್ಯಾರಿಯೆಟ್ ಬೀಚರ್ ಸ್ಟೌ ಎಂಬಾಕೆಯ 'ಅಂಕಲ್ ಟಾಮ್ಸ್ ಕ್ಯಾಬಿನ್' ಎಂಬ ಪುಸ್ತಕ ಕ್ರೂರಿಯಾದ ಯಜಮಾನನ ಹೊಡೆತಗಳನ್ನು ತಾಳಲಾರದೆ ಸಾವಿಗೀಡಾದ ಗುಲಾಮನೊಬ್ಬನ ಕರುಣಾಜನಕ ಕಥೆ.

ನೋಡಿ : ಜೀತ; ಲಿಂಕನ್, ಅಬ್ರಹಾಂ; ಸ್ಪಾರ್ಟಕಸ್

## ಗೃಹಕೈಗಾರಿಕೆ

ಕೆಲಸಗಾರರು ಮನೆಯಲ್ಲೇ ಕುಳಿತು ಉತ್ಪಾದನೆಯಲ್ಲಿ ತೊಡಗುವುದು ಗೃಹಕೈಗಾರಿಕೆ. ಚಾಪೆ ಹೆಣೆಯುವುದು. ಬಟ್ಟೆ ನೇಯುವುದು. ನೂಲುವುದು. ಬೀಡಿ ಕಟ್ಟುವುದು. ಊದುಬತ್ತಿ ಹೊಸೆಯುವುದು. ಆಟದ ಗೊಂಬೆಗಳನ್ನು ತಯಾರಿಸುವುದು. ಬುಟ್ಟಿ ಹೆಣೆಯುವುದು. ಕಂಚು ಶ್ರೀಗಂಧ ಮತ್ತು ದಂತಗಳನ್ನು ಬಳಸಿ ವಿಗ್ರಹಗಳನ್ನು. ಚಿತ್ರಫಲಕಗಳನ್ನು ತಯಾರಿಸುವುದು ಮುಂತಾದುವುಗಳಲ್ಲಿ ಜನ ತಾವಾಗಿ ಮಗ್ನರಾಗಿ ಉತ್ಪಾದನೆಗೆ ಕಾರಣವಾಗುತ್ತಾರೆ. ಇವೆಲ್ಲವೂ ಗೃಹಕೈಗಾರಿಕೆಗಳು.

ಸಿದ್ಧಪಡಿಸುವ ವಸ್ತುಗಳು ಕಲಾತ್ಮಕವಾಗಿರಬೇಕು. ದುಡಿಮೆಗೆ ತಕ್ಕ ಪ್ರತಿಫಲ ಬರಬೇಕು. ಇವು ಗೃಹಕೈಗಾರಿಕೆಯ ಎರಡು ಲಕ್ಷಣಗಳು.

ಗೃಹಕೈಗಾರಿಕೆಯ ದುಡಿಮೆಗಾರರು ತಮ್ಮ ಗೃಹದಲ್ಲಿಯೇ ಕುಳಿತು ಕೆಲಸ ಮಾಡುತ್ತಾರೆ. ಮನೆಯ ವಾತಾವರಣ ಇವರ ಕೆಲಸಕ್ಕೆ ಅನುಕೂಲವಾಗಿರುತ್ತದೆ. ನೆಯ್ಗೆಯ ಮಗ್ಗದ ಮಣೆಯ ಮೇಲೆ ಕುಳಿತು ನೇಕಾರ ನೇಯಲು ತೊಡಗಿದಾಗ ಆತನ ಹೆಂಡತಿ ಅಥವಾ ಕುಟುಂಬದ ಇತರ ಮಹಿಳೆಯರು ಕೈಗೆ ದಾರವನ್ನು ಒದಗಿಸುವುದು, ದಾರಕ್ಕೆ ರಂಗನ್ನು ಹಾಕುವುದು ಮುಂತಾದ

ಬಗೆಗಳಲ್ಲಿ ಸವಕರಿಸುವುದು. ಮಕ್ಕಳು ದಾರವನ್ನು ಸುತ್ತುವುದು. ಬಟ್ಟೆಯನ್ನು ಮಡಿಸುವುದು. ಮತ್ತಿತರ ಚಿಕ್ಕಪುಟ್ಟ ಕೆಲಸಗಳಲ್ಲಿ ತೊಡಗಬಹುದು. ಇಡೀ ಮನೆಯೇ ಉತ್ಪಾದನೆಯಲ್ಲಿ ಮಗ್ನವಾಗುತ್ತದೆ. ಗೃಹಕೈಗಾರಿಕೆಗೆ ಬೇಕಾಗುವುದು ಸರಳವಾದ ಉಪಕರಣಗಳು. ದುಬಾರಿಯಾದ ಜಟಿಲವಾದ ಯಂತ್ರಸಾಮಗ್ರಿಗಳ ಅಗತ್ಯ ಇರುವುದಿಲ್ಲ. ಬೊಂಬೆಗಳ ತಯಾರಕನಿಗೆ ಕತ್ತರಿ. ಮಣಿ. ಅಷ್ಟಗೋಲು, ರಂಧ್ರಮಾಪಕ ಮುಂತಾದ ಸರಳವಾದ ಸುಲಭವಾದ ಉಪಕರಣಗಳು ಸಾಕಾಗುತ್ತವೆ. ಚಾಪೆ ಹೆಣೆಯುವ ಕುಶಲ ಕಾರ್ಮಿಕನಿಗೆ ಮಗ್ಗ. ಜೊಂಡು. ದಾರ ಇವಿಷ್ಟೇ ಸಾಕು.

ಕೆಲವು ದಶಕಗಳ ಹಿಂದೆ ಈ ಬಗೆಯ ಕುಶಲ ಕಾರ್ಮಿಕರು ತಮ್ಮ ಉತ್ಪಾದನೆಯಲ್ಲಿ ಮಗ್ನರಾಗಿ ಸ್ವಾವಲಂಬಿಗಳಾಗಿ ಜೀವಿಸುತ್ತಿದ್ದರು. ಪೇಟೆಯ ಸರಕುಗಳ ವೈವಿಧ್ಯ ಹೆಚ್ಚಿದಂತೆ ಗೃಹಕೈಗಾರಿಕೆಯ ಸ್ವರೂಪವೇ ಬದಲಾಯಿಸಿತು. ಈಗ ಒಂದೇ ಒಂದು ಮನೆಯಲ್ಲಿ ಒಂದು ವಸ್ತು ಪೂರ್ತಿಯಾಗಿ ತಯಾರಾಗುವುದಿಲ್ಲ. ನೇಕಾರ ಮೊದಲು ನೂಲನ್ನು ತಾನೇ ನೂತು ನೆಯ್ಗೆಯನ್ನು ಕೈಗೊಳ್ಳುತ್ತಿದ್ದ. ಒಂದೇ ನೆಯ್ಗೆಯಲ್ಲಿ ಹಲವಾರು ಬಗೆಯ ನೂಲುಗಳನ್ನು ಬಳಸಿ ಬೇರೆ ಬೇರೆ ಚಿತ್ರಗಳನ್ನು ಮೂಡಿಸಲೆಂದು. ನೂಲನ್ನು ಇತರರಿಂದ ಕೊಳ್ಳಲಾರಂಭಿಸಿದ. ಆತನಿಗೆ ನೂಲನ್ನು ತಯಾರಿಸಿ ಕೊಡುವ ಇನ್ನೊಬ್ಬ, ನೂಲುವುದಷ್ಟನ್ನೇ ಮಾಡುತ್ತಾನೆ. ನೂಲುವ ಮತ್ತು ನೇಯುವ ಎರಡು ಗೃಹಕೈಗಾರಿಕೆಗಳು ಈಗ ಪರಸ್ಪರ ಪೂರಕ. ಪ್ರತಿಯೊಂದು ಬಗೆಯ ಗೃಹಕೈಗಾರಿಕೆಯಲ್ಲೂ ಉಪಕರಣಗಳು ಸುಧಾರಿಸಿದಂತೆ. ಹೊಸ ಹೊಸ ಸುಲಭವಾದ ವಿಧಾನಗಳು ಗೋಚರಿಸಿದಂತೆ. ಯಾವುದೋ ಒಂದು ವಸ್ತುವಿನ ತಯಾರಿಕೆಯ ಒಂದು ತುಣುಕು ಕೆಲಸವಷ್ಟನ್ನೇ ಒಂದೊಂದು ಗುಂಪಿನ ಜನ ಮಾಡಲಾರಂಭಿಸಿದರು.

ಕಚ್ಚಾ ಪದಾರ್ಥಗಳನ್ನು ಒದಗಿಸಿಕೊಂಡು ಒಂದು ವಸ್ತುವನ್ನು ಪೂರ್ಣವಾಗಿ ತಯಾರಿಸುವ ಗೃಹಕೈಗಾರಿಕೆ. ಉತ್ಪಾದಿಸಿದ ಸರಕನ್ನು ಮಾರಾಟಗಾರನಿಗೆ ಅಥವಾ ಸಂಗ್ರಾಹಕನಿಗೆ ನೇರವಾಗಿ ಒದಗಿಸುತ್ತದೆ. ಭಾಗಶಃ ತಯಾರಿಕೆಯಲ್ಲಿ ತೊಡಗಿದ ಗೃಹಕೈಗಾರಿಕೆ ತಾನು ಕೊಂಡು ಸಂಸ್ಕರಿಸಿದ ವಸ್ತುವನ್ನು ಕೈಗಾರಿಕೆಯ ಮುಂದಿನ ಹಂತಕ್ಕೆ ಒದಗಿಸುತ್ತದೆ.

ಸಾಮಾನ್ಯವಾಗಿ ತಯಾರಕರು ಬೇರೆ ಬೇರೆ ಬಗೆಯ ಅರೆ-ಸಿದ್ಧವಸ್ತುಗಳನ್ನು ಕೊಂಡು ಸಿದ್ಧವಸ್ತುಗಳನ್ನು ತಯಾರಿಸುತ್ತಾರೆ. ಊದುಬತ್ತಿಯ ತಯಾರಕರು ಸೀಳು ಬಿದಿರುಕಡ್ಡಿಗಳನ್ನು ಕೊಳ್ಳುತ್ತಾರೆ. ಬೇರೆ ಬೇರೆ ಬಗೆಯ ಸುಗಂಧ ದ್ರವ್ಯಗಳನ್ನು ಕೊಂಡು ಹದವಾಗಿ ಬೆರೆಸಿ ಸಂಸ್ಕರಿಸುತ್ತಾರೆ. ಅನಂತರ ಅದನ್ನು ಕೆಲಸಗಾರರು ಬಿದಿರು ಸೀಳುಗಳ ಮೇಲೆ ಪೂಸುತ್ತಾರೆ. ಊದುಕಡ್ಡಿಗಳನ್ನು ತುಂಬುವುದಕ್ಕೆ ಬೇಕಾಗುವ ರಟ್ಟಿನ ಪೆಟ್ಟಿಗೆ ಅಥವಾ ಕೊಳವೆಗಳನ್ನು ಬೇಕುಬೇಕಾದ ಅಳತೆಗೆ ಸಿದ್ಧಪಡಿಸಿಕೊಡುವ ಜನರಿಂದ ತಯಾರಕರು ಕೊಂಡು ಊದುಕಡ್ಡಿಗಳನ್ನು ತುಂಬಿ ಅಂದವಾಗಿ ಕಟ್ಟುಹಾಕುತ್ತಾರೆ. ಅನಂತರ ಮಾರಾಟದ ಸರದಿ. ಬಿದಿರು ಸೀಳುವುದು. ಸುಗಂಧ ದ್ರವ್ಯ ಪೂಸುವುದು. ಪೆಟ್ಟಿಗೆ ಅಥವಾ ಕೊಳವೆ ತಯಾರಿಸುವುದು ಮತ್ತು ಊದುಕಡ್ಡಿಗಳನ್ನು ತುಂಬಿ ಕಟ್ಟುಹಾಕುವುದು—ಇವಿಷ್ಟೂ ಬೇರೆ ಬೇರೆಯಾಗಿ ನಡೆಯುತ್ತವೆ. ಇವೆಲ್ಲ ಊದುಬತ್ತಿ ಗೃಹಕೈಗಾರಿಕೆಯ ಅಂಶಗಳು.

ಗೃಹಕೈಗಾರಿಕೆ ದುಡಿಮೆಯನ್ನು ಹಂಚುತ್ತದೆ : ತಯಾರಕರು ವಸ್ತುಗಳನ್ನು ಕೊಳ್ಳುತ್ತಾರೆ. ಸಣ್ಣಪುಟ್ಟ ಬಗೆಯ ದುಡಿಮೆಗಳಿಗೂ ಬೆಲೆ ಕೊಡುತ್ತಾರೆ.



ಶಿಲ್ಪಕೃತಿಯನ್ನು ಅನುಕರಿಸಿ ಕುಶಲಕಾರ್ಮಿಕ ನಿರ್ಮಿಸಿರುವ ಮಾದರಿ

ಕೆಲವು ಗೃಹಕೈಗಾರಿಕೆಗಳ ಸ್ವರೂಪ ಮತ್ತು ವಿಸ್ತಾರ ದೊಡ್ಡದು. ಕಾರಖಾನೆಯ ತಯಾರಿಕೆಯ ಹತ್ತಿರ ಹತ್ತಿರಕ್ಕೂ ಅಂಥ ಗೃಹಕೈಗಾರಿಕೆಗಳು ಬರುತ್ತವೆ. ಸಾಬೂನನ್ನು ಅಲ್ಪ ಪ್ರಮಾಣದಲ್ಲಿ ತಯಾರಿಸಬೇಕಾದರೆ, ಸಣ್ಣ ಪ್ರಮಾಣದಲ್ಲಿ ಪಾತ್ರೆ-ಪಗಡಿಗಳನ್ನು ತಯಾರಿಸಬೇಕಾದರೆ, ಸಣ್ಣಪುಟ್ಟ ಉಪಕರಣಗಳಿಂದ ಸಾಧ್ಯವಾಗುವುದಿಲ್ಲ. ಸಾಕಷ್ಟು ಬೆಲೆ ಬಾಳುವ ಯಂತ್ರಗಳು ಬೇಕು. ದೊಡ್ಡ ಕಾರಖಾನೆಗಳಲ್ಲಿ ಕೆಲವು ಯಂತ್ರಗಳು ಮಾಡುವ ಕೆಲಸವನ್ನು ಅದೇ ತಯಾರಿಕೆಯ ಗೃಹಕೈಗಾರಿಕೆಯಲ್ಲಿ ಸ್ಥಾಪಿಸುವುದರಿಂದ ಸರಕನ್ನು ಸುಲಭವಾಗಿ ತಯಾರಿಸಬಹುದು. ಅಲ್ಲದೆ ಹೆಚ್ಚು ಜನರಿಗೆ ಉದ್ಯೋಗ ಒದಗಿಸಬಹುದು. ಬೃಹತ್ ಕೈಗಾರಿಕೆಯಲ್ಲಿ ಯಂತ್ರಗಳ ಬಳಕೆ ಹೆಚ್ಚು. ಜನರಿಗೆ ಕೆಲಸ ಕಡಮೆ. ಗೃಹಕೈಗಾರಿಕೆಗಳು ಉದ್ಯೋಗಾವಕಾಶವನ್ನು ಹೆಚ್ಚು ಮಾಡುವುದಲ್ಲದೆ ಕೈಗಾರಿಕೆಗಳ ವಿಕೇಂದ್ರೀಕರಣಕ್ಕೆ ನೆರವಾಗುತ್ತವೆ. ಬೃಹತ್ ಕಾರಖಾನೆಗಳಲ್ಲಿ ದೊಡ್ಡ ಪ್ರಮಾಣದಲ್ಲಿ ವಸ್ತುಗಳನ್ನು ತಯಾರಿಸುವುದರಿಂದ ಸಿದ್ಧವಸ್ತುಗಳು ಅಗ್ಗವಾಗಿರುತ್ತವೆ. ಗೃಹಕೈಗಾರಿಕೆಯಲ್ಲಿ ಅಗ್ಗವಾಗಿ ವಸ್ತುಗಳನ್ನು ತಯಾರಿಸುವ ಉಪಾಯಗಳನ್ನು ಕಂಡುಕೊಂಡರೆ ಉತ್ಪಾದನೆಯಲ್ಲಿ ಅದ್ಭುತಗಳನ್ನು ಕಾಣಬಹುದು.

ಗೃಹಕೈಗಾರಿಕೆಗಳು ಭಾರತದಲ್ಲಿ ಬಹಳ ಪ್ರಾಚೀನ ಕಾಲದಿಂದಲೂ ಮನೆ ಮಾಡಿಕೊಂಡಿವೆ. ಕ್ರಿ. ಪೂ. ಐದನೆಯ ಶತಮಾನದ ಹೊತ್ತಿಗೆ ಇಲ್ಲಿ ಈ ಕೆಲಸಗಾರರು ವೃತ್ತಿ ಸಂಘಗಳನ್ನು ಸ್ಥಾಪಿಸಿಕೊಂಡಿದ್ದರು. ಈ ಕೈಗಾರಿಕೆಗಳ ಕೌಶಲ ಸಾಮಾನ್ಯವಾಗಿ ವಂಶಪಾರಂಪರ್ಯವಾಗಿ ಬಂದದ್ದು.

ಪರಂಪರಾನುಗತ ಕುಸುರಿನ ಕೆಲಸವು ವಿಶ್ವದಾದ್ಯಂತ ಈಗಲೂ ಗೃಹಕೈಗಾರಿಕೆಯಾಗಿಯೇ ನಡೆಯುತ್ತಿದೆ. [illegible] ಉಗ್ರಪಂಥದ [illegible]

ಗಳು ಪ್ರತಿ ಮನೆಯ ಹಿತ್ತಲಲ್ಲೂ ಬೀಡುಕಬ್ಬಿಣ ತಯಾರಿಸಬೇಕು ಎಂದು ನಿರ್ದೇಶವಿತ್ತುದೂ ಉಂಟು. ಸ್ವಿಟ್ಜರ್‌ಲೆಂಡಿನಂಥ ಐರೋಪ್ಯ ರಾಷ್ಟ್ರದಲ್ಲಿ ಕೈಗಡಿಯಾರಗಳ ಬೇರೆ ಬೇರೆ ಭಾಗಗಳನ್ನು ಜೋಡಿಸುವ ಕೆಲಸವೂ ಗೃಹ ಕೈಗಾರಿಕೆಯ ತಳಹದಿಯ ಮೇಲೆ ನಡೆಯುತ್ತದೆ.

ದೊಡ್ಡ ಕಾರಖಾನೆಗಳ ಕೆಲಸಗಾರರು ಒಂದು ಶಿಸ್ತಿಗೊಳಪಟ್ಟು ಕೆಲಸ ಮಾಡಬೇಕು. ನಿಯಮಿತ ವೇಳೆಯಲ್ಲಿ ಅವರು ಉತ್ಪಾದನೆಯಲ್ಲಿ ತೊಡಗಿರಬೇಕೆಂಬ ಕಟ್ಟುಪಾಡು ಇರುತ್ತದೆ. ಗೃಹಕೈಗಾರಿಕೆಯಲ್ಲಿ ಆ ಬಂಧನ ಇರುವುದಿಲ್ಲ. ಮೂರು ದಿನ ಒಟ್ಟಿಗೆ ಕೆಲಸಮಾಡಿದ ಕೆಲಸಗಾರ ಸಾಕಷ್ಟು ವೇತನ ಅಥವಾ ಸಂಪಾದನೆಯನ್ನು ಕಂಡಾಗ ಮತ್ತೆ ನಾಲ್ಕು ದಿನ ಉತ್ಪಾದನೆಯ ಕಡೆ ಗಮನಹರಿಸದೆ ಕಾಲಹರಣ ಮಾಡುವ ಸಂಭವ ಉಂಟು. ಶಿಸ್ತನ್ನು ತಾನಾಗಿಯೇ ಪಾಲಿಸುವ ಮನೋಭಾವ ಬಂದಾಗ ಗೃಹಕೈಗಾರಿಕೆಗಳು ಸುಧಾರಿಸುತ್ತವೆ. ಗೃಹಕೈಗಾರಿಕೆಯಲ್ಲಿ ಹಣ ತೊಡಗಿಸುವ ತಯಾರಕರು ವಿಶೇಷ ಹೊಣೆಯನ್ನು ವಹಿಸಿಕೊಳ್ಳಬೇಕಾಗುತ್ತದೆ. ಬಗೆ ಬಗೆಯ ಕಚ್ಚಾ ಪದಾರ್ಥಗಳು ಮತ್ತು ಅರೆ-ಸಿದ್ಧ ವಸ್ತುಗಳ ಶೇಖರಣೆ, ಆಯಾ ಘಟ್ಟದ ಕೆಲಸಗಳ ಪೂರೈಕೆ ಮುಂತಾದುವು ಶ್ರಮಪೂರ್ಣ. ಈ ವ್ಯವಸ್ಥೆ ಸಮರ್ಪಕವಾದರೆ ಗೃಹಕೈಗಾರಿಕೆ ಶೀಘ್ರವಾಗಿ ಅಭಿವೃದ್ಧಿ ಹೊಂದುತ್ತದೆ.

ಗೃಹ ಕೈಗಾರಿಕೆಗಳಲ್ಲಿ ಸಿದ್ಧವಾದ ವಸ್ತುಗಳನ್ನು ವಿದೇಶೀ ಮಾರುಕಟ್ಟೆಗಳಲ್ಲಿ ಭಾರೀ ಪ್ರಮಾಣದಲ್ಲಿ ಮಾರಲು 'ರಾಷ್ಟ್ರೀಯ ವಾಣಿಜ್ಯ ಸಂಸ್ಥೆ'ಯ ಭಾಗವಾಗಿ 'ಭಾರತೀಯ ಕುಶಲ ಕೈಗಾರಿಕಾ ಮತ್ತು ಕೈಮಗ್ಗ ನಿರ್ಮಿತ ವಸ್ತು ನಿರ್ಯಾತ ಸಂಸ್ಥೆ' ಏರ್ಪಟ್ಟಿದೆ.

ನೋಡಿ : ಕೈಗಾರಿಕೆ

## ಗೃಹರಕ್ಷಕ ದಳ




ಗೃಹರಕ್ಷಕ ಲಾಂಛನ

ಸಮವಸ್ತ್ರ ಧರಿಸುತ್ತಾರೆ, ಸೈನಿಕರಲ್ಲ. ದುಷ್ಟ ಶಕ್ತಿಗಳನ್ನು ಹತ್ತಿಕ್ಕಲು ನೆರವಾಗುತ್ತಾರೆ. ಪೋಲೀಸರಲ್ಲ. ಇವರದು ಪೂರ್ಣ ಸಮಯದ ಉದ್ಯೋಗವೂ ಅಲ್ಲ. ಬಿಡುವಿನ ವೇಳೆಯಲ್ಲಿ ತರಬೇತಿ. ಸ್ವಂತ ಇಚ್ಛೆಯಿಂದಲೇ ಸೇರ್ಪಡೆ. ಸಂಬಳವಿಲ್ಲ, ಸ್ಥಾನಿಕ ಮಟ್ಟದ ಸಂಘಟನೆ.

ಇಂಥವರನ್ನು ಹೋಮ್ ಗಾರ್ಡ್ಸ್ ಎನ್ನುತ್ತಾರೆ. ಅವರ ತಂಡ ಗೃಹರಕ್ಷಕ ದಳ.

ವಾಸ್ತವವಾಗಿ ಈ ಕಲ್ಪನೆ ಹೊಸದಲ್ಲ. ಪ್ರಾಚೀನ ಕಾಲದಲ್ಲಿ ಒಂದು ಗುಂಪು ಇನ್ನೊಂದು ಗುಂಪಿನ ಮೇಲೆ ಯುದ್ಧ ಸಾರಿದಾಗ ಹೋರಾಟಕ್ಕೆ ಹೊರಡುವ ಮುನ್ನ ವೃಥ ಕಾಯರಾದ ಕೆಲವರನ್ನು ಮನೆ, ಮಡದಿ, ಮಕ್ಕಳ ರಕ್ಷಣೆಗಾಗಿ ಬಿಟ್ಟು ಹೋಗುತ್ತಿದ್ದರು. ಮುಂದೆ ಪಾಳೆಯಗಾರ ವ್ಯವಸ್ಥೆಯಲ್ಲಿ ಹಳ್ಳಿಯ ಮುಖ್ಯಸ್ಥ ಗ್ರಾಮರಕ್ಷಣೆಯ ಕಾರ್ಯಕ್ಕಾಗಿ ಕೆಲವು ಯುವಕರನ್ನು ಆರಿಸುತ್ತಿದ್ದ. ಅವರಿಗೆ ತರಬೇತಿ ದೊರೆಯುತ್ತಿತ್ತು. ಗಂಡಾಂತರದ ಸನ್ನಿವೇಶಗಳಲ್ಲಿ ಆ ಯುವಕರ ನೆರವನ್ನು ಮುಖ್ಯಸ್ಥ ಪಡೆಯುತ್ತಿದ್ದ. ಆ ಯೋಧರನ್ನು 'ವೀರರು' ಎನ್ನುತ್ತಿದ್ದರು.

ಈಗಿನ ಗೃಹರಕ್ಷಕ ದಳದ ಮೂಲವನ್ನು ಅಂಥ ವ್ಯವಸ್ಥೆಗಳಲ್ಲಿ ಕಾಣಬಹುದು.

ಆದರೆ ಆಧುನಿಕ ರೂಪದಲ್ಲಿ ಗೃಹರಕ್ಷಕ ದಳವನ್ನು ಸಂಘಟಿಸಿದ್ದು ಕಳೆದ ಮಹಾ ಯುದ್ಧದ ಕಾಲದಲ್ಲಿ, ಇಂಗ್ಲೆಂಡಿನಲ್ಲಿ. 'ಹೋಂ ಗಾರ್ಡ್ಸ್' ಎಂದು ಹೆಸರಿಟ್ಟ ವ್ಯಕ್ತಿ ಆಗ ಪ್ರಧಾನಿಯಾಗಿದ್ದ ಸರ್ ವಿನ್‌ಸ್ಟನ್ ಚರ್ಚಿಲ್.

1940ರಲ್ಲಿ ಹಿಟ್ಲರನ ವಿಮಾನ ಪಡೆ ಇಂಗ್ಲೆಂಡಿನ ಮೇಲೆ ಅವ್ಯಾಹತ ಬಾಂಬು ದಾಳಿ ನಡೆಸಿತು. ದೀರ್ಘ ಕಡಲ ತೀರವನ್ನು ರಕ್ಷಿಸುವುದು, ಪ್ಯಾರಾಚೂಟ್ ಮೂಲಕ ವೈರಿಗಳು ಇಳಿಯದಂತೆ ನೋಡುವುದು, ಗೃಹರಂಗದಲ್ಲಿ ಜನತೆಯಲ್ಲಿ ಧೈರ್ಯ ತುಂಬುವುದು. ಬೇರೆ ಹಲವು ವಿಧಗಳಲ್ಲಿ ಸೈನ್ಯಕ್ಕೆ ನೆರವಾಗುವುದು—ಈ ಎಲ್ಲ ಕಾರ್ಯಗಳಿಗಾಗಿ ಸ್ವಯಂಸೇವಕರು ಬೇಕೆಂದು ಸರಕಾರ ಕರೆ ನೀಡಿತು. ಓಗೊಟ್ಟವರು ಒಂದೇ ವಾರದಲ್ಲಿ ನಾಲ್ಕು ಲಕ್ಷ ಜನ, ತಿಂಗಳ ಕೊನೆಯಲ್ಲಿ ಹತ್ತು ಲಕ್ಷ: ಮುಂದೆ ಸ್ವಲ್ಪ ಕಾಲದಲ್ಲೇ ಇಪ್ಪತ್ತು ಲಕ್ಷ. ಈ ಬೃಹತ್ ಪ್ರಮಾಣದ ನಾಗರಿಕ ಸಂಘಟನೆ ಮಾನವ



ಸಮಾಜದ, ರಾಷ್ಟ್ರದ ಸೇವೆಗೆ ಸನ್ನದ್ಧ

ಇತಿಹಾಸದಲ್ಲಿ ಅದೇ ಮೊದಲು. ಅದು ಸಂಬಳದ ದುಡಿಮೆಯಲ್ಲ. ಅದರ ಪ್ರೇರಕ ಶಕ್ತಿ ದೇಶಾಭಿಮಾನ, ಚಾಲಕಶಕ್ತಿ ಸೇವಾ ಮನೋಭಾವ.

ಭಾರತದಲ್ಲಿ ಗೃಹರಕ್ಷಕ ದಳ ಪ್ರಥಮವಾಗಿ ರೂಪುಗೊಂಡದ್ದು ಮುಂಬಯಿಯಲ್ಲಿ. 1946ನೆಯ ಇಸವಿ. ಭಾರತ ಸ್ವಾತಂತ್ರ್ಯದ ಉಷಃಕಾಲ. ಆದರೆ ಪ್ರಶಾಂತ ವಾತಾವರಣ ಆಗ ಇರಲಿಲ್ಲ. ಎಲ್ಲಿ ನೋಡಿದರೂ ಕೋಲಾಹಲ, ಮತೀಯ ಗಲಭೆ. ಮುಂಬಯಿ ರಾಜ್ಯದ ಗೃಹಮಂತ್ರಿಯಾಗಿದ್ದ ಮೊರಾರ್ಜಿ ದೇಸಾಯರಿಗೆ ಶಾಂತಿಪಾಲನೆಗಾಗಿ ಜನತೆಯ ಸಂಘಟನೆ ಅಗತ್ಯ ಎನಿಸಿತು. ಹಾಗೆ ಹುಟ್ಟಿತು ಭಾರತದಲ್ಲಿ ಗೃಹರಕ್ಷಕ ದಳ.

1956ರಲ್ಲಿ ನೂತನ ಮೈಸೂರು ರಾಜ್ಯ ಉದಯವಾದಾಗ ಹಿಂದೆ ಮುಂಬಯಿ ರಾಜ್ಯಕ್ಕೆ ಸೇರಿದ್ದ ನಾಲ್ಕು ಕನ್ನಡ ಜಿಲ್ಲೆಗಳು ಹೊಸ ರಾಜ್ಯದಲ್ಲಿ ವಿಲೀನಗೊಂಡುವು. ಆ ಜಿಲ್ಲೆಗಳಲ್ಲಿದ್ದ ಗೃಹರಕ್ಷಕ ದಳಗಳೂ ಮೈಸೂರಿಗೆ ಸೇರಿದುವು. ಮುಂದೆ ಮೈಸೂರು ರಾಜ್ಯದಲ್ಲೇ ಗೃಹರಕ್ಷಕ ದಳದ ರಚನೆಯಾಯಿತು. 1968ರ ಲೆಕ್ಕದ ಪ್ರಕಾರ ಮೈಸೂರು ರಾಜ್ಯದ ಗೃಹರಕ್ಷಕ ದಳದ ಸದಸ್ಯರ ಸಂಖ್ಯೆ 12,401.

ದೃಢಕಾಯರಾಗಿರುವ, 18 ರಿಂದ 50 ವರ್ಷ ವಯಸ್ಸಿನೊಳಗಿನ, ನಾಗರಿಕರೆಲ್ಲ ಸ್ತ್ರೀಯರಿರಲಿ, ಪುರುಷರಿರಲಿ ಗೃಹರಕ್ಷಕ ದಳವನ್ನು ಸೇರಬಹುದು. ಅವರಿಗೆ ದೊರೆಯುವ ತರಬೇತಿ : ಡ್ರಿಲ್ ಹಾಗೂ ವ್ಯಾಯಾಮ, ವಾಹನ ನಿಯಂತ್ರಣ, ಜನಜಂಗುಳಿ ಶಿಸ್ತುಪಾಲಿಸುವಂತೆ ಮಾಡುವುದು, ಅಪಾಯಗಳಿಂದ ರಕ್ಷಿಸಿಕೊಳ್ಳುವುದು, ಪ್ರಥಮ ಚಿಕಿತ್ಸೆ, ಬೆಂಕಿ ನಂದಿಸುವುದು, ಕೋವಿ–ಬಂದೂಕುಗಳ ಪ್ರಯೋಗ, ನಕ್ಷೆ ಓದುವುದು, ಕ್ಷೇತ್ರ ಜ್ಞಾನ ಇತ್ಯಾದಿ.

ಹೋಮ್‌ಗಾರ್ಡ್ಸ್‌ನ ಒಂದು ದಳದಲ್ಲಿ ಮೂರು ಉಪದಳಗಳಿವೆ. ಪ್ರತಿಯೊಂದರಲ್ಲಿ ಮೂರು ವಿಭಾಗಗಳು. ದಳದಲ್ಲಿರುವ ಒಟ್ಟು ಜನ 110. ಉನ್ನತ ಪೋಲೀಸ್ ಅಧಿಕಾರಿಗಳು ಗೃಹರಕ್ಷಕ ದಳಕ್ಕೆ ಮಾರ್ಗದರ್ಶನ ನೀಡುತ್ತಾರೆ.

ಶಾಂತಿಕಾಲವಿರಲಿ, ಯುದ್ಧಸಮಯವಿರಲಿ, ಸಮಾಜಕ್ಕೂ ರಾಷ್ಟ್ರಕ್ಕೂ ಗೃಹರಕ್ಷಕ ದಳದಿಂದ ಸಲ್ಲುವ ಸೇವೆ ಅಪಾರ.

## ಗೆಜೆಟು

ವೆನಿಸ್ ನಗರದಲ್ಲಿ ಹಿಂದೆ ಗಜೆಟ್ ಎಂಬ ಹೆಸರಿನ ಒಂದು ಸಣ್ಣ ನಾಣ್ಯ ಚಲಾವಣೆಯಲ್ಲಿತ್ತು. 1556ರಲ್ಲಿ ಗಜೆಟ್ ಎಂಬ ಹೆಸರಿನಿಂದಲೇ ಅಲ್ಲಿನ ಸರಕಾರ ಪ್ರಕೃತ ವಿಷಯಗಳಿಗೆ ಸಂಬಂಧಿಸಿದಂತೆ ಒಂದು ರೀತಿಯ ವೃತ್ತಪತ್ರಿಕೆ ಹೊರಡಿಸುತ್ತಿತ್ತು. ಒಂದು ಗಜೆಟ್ ನಾಣ್ಯಕ್ಕೆ ಪತ್ರಿಕೆಯನ್ನು ಮಾರಿದುದೇ, ಪತ್ರಿಕೆಗೆ ಆ ಹೆಸರಿಡಲು ಕಾರಣ. ಈಗಲೂ ವೃತ್ತಪತ್ರಿಕೆಗಳಿಗೆ ಸ್ಪ್ಯಾನಿಷ್ ಭಾಷೆಯಲ್ಲಿ ಗಜೆಟ್ಟ, ಫ್ರೆಂಚ್ ಭಾಷೆಯಲ್ಲಿ ಗಜೆಟ ಈ ಪದಗಳು ಬಳಕೆಯಲ್ಲಿವೆ.

1665ರಲ್ಲಿ ಇಂಗ್ಲೆಂಡಿನಲ್ಲಿ ಮೊದಲು ಪ್ರಕಟವಾದ ವೃತ್ತಪತ್ರಿಕೆ 'ದಿ ಆಕ್ಸ್‌ಫರ್ಡ್ ಗೆಜೆಟ್'. ಮುಂದಿನ ವರ್ಷ 'ಲಂಡನ್ ಗೆಜೆಟ್' ಬ್ರಿಟಿಷ್ ಸರಕಾರದ ಅಧಿಕೃತ ಪತ್ರಿಕೆ ಎನಿಸಿಕೊಂಡಿತು. ಆಗಿನಿಂದ ಅದು ಬ್ರಿಟಿಷ್ ಸರಕಾರದ ಅಧಿಕೃತ ಸಮಾಚಾರ ಪತ್ರಿಕೆಯಾಗಿದೆ.

ಗೆಜೆಟು ಎಂದರೆ ಸುದ್ದಿಯ ಹಾಳೆ. ಇಂಗ್ಲೆಂಡಿನಲ್ಲಿ ರಾಣಿ ಎಲಿಜಬೆತಳ ಕಾಲದಲ್ಲಿ ಹೊರಡುತ್ತಿದ್ದ ಗೆಜೆಟ್‌ಗಳು ಹರಟೆ, ಪೊಳ್ಳುವದಂತಿ, ಅನಧಿಕೃತ ಸುದ್ದಿ, ಸರಕಾರಿ ವಲಯಗಳಲ್ಲದ ಕಡೆಗಳಿಂದ ಬಂದ ಸುದ್ದಿಗಳ ಸಾರಾಂಶ, ಕಂಡುಹಿಡಿಯುವಿಕೆ–ಅನ್ವೇಷಣೆಗಳ ಸುದ್ದಿ, ಕ್ರೂರ ಅಪರಾಧಗಳ, ಮಾಯೆ ಮಂತ್ರಗಳ ವಿವರ–ಮೊದಲಾದುವನ್ನೆಲ್ಲ ಹೊಂದಿ ನಿಷ್ಕೃಷ್ಟವಲ್ಲದ ಸುದ್ದಿಗಳಿಗೆ ಹೆಸರಾಗಿದ್ದುವು.



ಕೇಂದ್ರ ಸರಕಾರದ, ರಾಜ್ಯದ, ವಿಶ್ವವಿದ್ಯಾನಿಲಯದ ಗೆಜೆಟು

ಆದರೆ ಇಂದು ಗೆಜೆಟ್, ಸರಕಾರದ ಅಧಿಕೃತ ಪ್ರಕಟನೆ. ಗೆಜೆಟಿನಲ್ಲಿ ಸರಕಾರ ಮುಖ್ಯ ಆಜ್ಞೆಗಳನ್ನು ಪ್ರಕಟಿಸುತ್ತದೆ.

ಭಾರತದಲ್ಲಿ ಸಂಸತ್ತು ಅಂಗೀಕರಿಸಿ ರಾಷ್ಟ್ರಾಧ್ಯಕ್ಷರ ಒಪ್ಪಿಗೆ ಪಡೆದ ಶಾಸನಗಳನ್ನು ಭಾರತ ಸರಕಾರದ ಗೆಜೆಟಿನಲ್ಲಿಯೂ ಶಾಸನಸಭೆ ಅಂಗೀಕರಿಸಿ ರಾಜ್ಯಪಾಲರ ಒಪ್ಪಿಗೆ ಪಡೆದ ಶಾಸನಗಳನ್ನು ಆಯಾ ರಾಜ್ಯದ ಗೆಜೆಟಿನಲ್ಲಿಯೂ ಪ್ರಕಟಿಸುತ್ತಾರೆ. ಹಾಗೆ ಪ್ರಕಟವಾದೊಡನೆ ಅದು ಜಾರಿಗೆ ಬಂದಂತೆ. ಮುಖ್ಯವಾದ ಅಧಿಕಾರಿಗಳ ನೇಮಕ, ವರ್ಗ ಇವುಗಳನ್ನೂ ಗೆಜೆಟಿನಲ್ಲಿ ಪ್ರಕಟಿಸುತ್ತಾರೆ. ಗೆಜೆಟಿನಲ್ಲಿ ಹಲವು ಭಾಗಗಳಿದ್ದು, ಖಾಲಿ ಇರುವ ಕೆಲಸಗಳ ವಿವರ, ಸರಕಾರ ಕಟ್ಟುವ ಕಟ್ಟಡಗಳು ಮತ್ತು ಇತರ ಕೆಲಸಗಳಿಗೆ ಸಂಬಂಧಿಸಿದಂತೆ ಅರ್ಜಿಗಳನ್ನು ಕಳುಹಿಸಲು ವಿವರ ಇವನ್ನು ಆ ಭಾಗಗಳು ಒಳಗೊಂಡಿರುತ್ತವೆ. ಗೆಜೆಟು ನಿಯತಕಾಲದ ಪ್ರಕಟಣೆ. ಸಾಮಾನ್ಯವಾಗಿ ವಾರಕ್ಕೊಂದು ಬಾರಿ ಪ್ರಕಟಿಸುತ್ತಾರೆ. ಅಗತ್ಯವಾದಾಗ ಮುಖ್ಯ ಸಂಗತಿಗಳನ್ನು ತಿಳಿಸಿ ವಿಶೇಷ ಗೆಜೆಟನ್ನು ಪ್ರಕಟಿಸುತ್ತಾರೆ. ರಾಷ್ಟ್ರದ ಹಿರಿಯರು ತೀರಿಕೊಂಡಾಗಲೂ ವಿಶೇಷ ಗೆಜೆಟನ್ನು ಪ್ರಕಟಿಸಲಾಗುತ್ತದೆ.

ಮೈಸೂರು ವಿಶ್ವವಿದ್ಯಾನಿಲಯವೂ ಗೆಜೆಟು ಹೊರಡಿಸುತ್ತದೆ.

## ಗೆಲಿಲಿಯೊ ಗೆಲೀಲಿ

1633ನೇ ಫೆಬ್ರುವರಿ 13ನೆಯ ದಿನ. ರೋಮ್ ನಗರದ ಧಾರ್ಮಿಕ ನ್ಯಾಯ ಮಂಡಲಿಯ ಕಾರಾಗೃಹದಲ್ಲಿ 69 ವರ್ಷ ವಯಸ್ಸಿನ ವೃದ್ಧ



ಮಹಾನ್ ಸಂಶೋಧಕ ಗೆಲಿಲಿಯೊ

ವಿಚಾರಣೆಗೆ ಗುರಿಯಾಗಿದ್ದಾನೆ. ಅವನ ತಲೆ, ಗಡ್ಡ ಎಲ್ಲವೂ ಅಚ್ಚ ಬಿಳಿ. ಯಾರೊಬ್ಬರೂ ನೋಡದಿದ್ದ ಆಕಾಶದ ಚಮತ್ಕಾರಗಳನ್ನು ದೂರ ದರ್ಶಕದ ಸಹಾಯದಿಂದ ಪ್ರಪ್ರಥಮ ಬಾರಿಗೆ ನೋಡಿದ ಅವನ ಕಣ್ಣು ಗಳು ಇಂದು ಮಂಜಾಗಿವೆ. ಯೂರೋಪಿನ ನಾನಾ ಭಾಗಗಳಿಂದ ಯಾರ ಪ್ರಖ್ಯಾತಿಗೆ ಬೆರಗಾಗಿ ವಿದ್ಯಾರ್ಥಿಗಳು ಓಡಿ ಬರುತ್ತಿದ್ದರೋ, ಆ ವೃದ್ಧ ದೋಷಾರೋಪಣ ಪೀಠದ ಮುಂದೆ ಮಂಡಿಯೂರಿ ತಲೆಬಾಗಿ ಕುಳಿತಿದ್ದಾನೆ. ತಪ್ಪಲ್ಲದ ತಪ್ಪನ್ನು ಮಾಡಿದುದಕ್ಕಾಗಿ ಜನತೆಯ ಕ್ಷಮೆ ಕೋರಬೇಕು. ತಾನು ಸಾರಿದುದೆಲ್ಲ ಸುಳ್ಳು ಎಂದು ಅವನು ಒಪ್ಪಿಕೊಳ್ಳಬೇಕು ಎಂದು ಆತನಿಗೆ ಹೇಳುತ್ತಿದ್ದಾರೆ.

ನೆರೆದಿದ್ದ ಜನರು ಅವರೆಗೆ ತನಗೆ ನೀಡಿದ ಚಿತ್ರಹಿಂಸೆಗಳನ್ನು ತಾಳಲಾರದೆ ಮುದುಕ ಅವರು ಹೇಳಿದಂತೆ ಕೇಳಲು ಒಪ್ಪುತ್ತಾನೆ. "ನಾನು, ಗೆಲಿಲಿಯೊ ಗೆಲೀಲಿ..., ಸೂರ್ಯ ಅಚಲಿತ. ಭೂಮಿ ಅವನ ಸುತ್ತ ಸುತ್ತುತ್ತದೆ—ಎಂಬ ಭಾವನೆಯನ್ನು ಕೈ ಬಿಟ್ಟಿದ್ದೇನೆ." ಎಂದು ತಡೆತಡೆದು ನುಡಿಯುತ್ತಾನೆ. ಆದರೆ, ಎದ್ದು ನಿಂತಪನೇ, ಇಳಿದನಿಯಲ್ಲಿ, "ಏನೇ ಆದರೂ ಸೂರ್ಯನ ಸುತ್ತಲೂ ಭೂಮಿ ಸುತ್ತುವುದು ನಿಲ್ಲುವುದಿಲ್ಲ," ಎನ್ನುತ್ತಾನೆ.

ಆ ಮುದುಕ ಗೆಲಿಲಿಯೊ ಗೆಲೀಲಿ. ಅವನು ಹುಟ್ಟಿದ್ದು 1564ನೆಯ ಫೆಬ್ರುವರಿ 15ರಂದು, ಇಟಲಿಯ ಪೀಸಾ ನಗರದಲ್ಲಿ. ಇವನ ತಂದೆ ವಿನ್‌ಸೆನ್‌ಸಿಯೋ ಗೆಲೀಲಿ ಸಮರ್ಥ ಗಣಿತಶಾಸ್ತ್ರಜ್ಞನೂ ರಸಿಕ ಸಂಗೀತಗಾರನೂ ಆಗಿದ್ದ. ಗೆಲಿಲಿಯೊಗೆ ಬಾಲ್ಯದಲ್ಲಿ ವಿಜ್ಞಾನವೆಂದರೆ ನಿರಾಸಕ್ತಿ: ಸಂಗೀತ ಮತ್ತು ಚಿತ್ರಗಳಲ್ಲಿ ಆಸಕ್ತಿ. ತರಗತಿಯಲ್ಲಿ ಒಳ್ಳೆಯ ಮೇಧಾವಿ ಎನ್ನಿಸಿಕೊಂಡ. 1581ರಲ್ಲಿ ಪೀಸಾ ವಿಶ್ವವಿದ್ಯಾನಿಲಯಕ್ಕೆ ವೈದ್ಯಕೀಯ ವ್ಯಾಸಂಗಕ್ಕೆ ಹೋದ.

ಗೆಲಿಲಿಯೊ ಪೀಸಾ ನಗರದಲ್ಲಿದ್ದಾಗ ಒಂದು ದಿನ ಸ್ವಾರಸ್ಯದ ಒಂದು ಘಟನೆ ನಡೆಯಿತು. ಕ್ರೈಸ್ತ ದೇವಸ್ಥಾನಕ್ಕೆ ಪ್ರಾರ್ಥನೆಗಾಗಿ ಆತ ಹೋಗಿದ್ದ. ಆ ವೇಳೆಗೆ ಸರಿಯಾಗಿ ದೇವಾಲಯದ ಪರಿಚಾರಕ ಒಂದು ತೂಗುದೀಪವನ್ನು ಕೊಕ್ಕೆಗೆ ತಗಲಿಸಿದ. ದೀಪ ತೂಗಾಡುತ್ತಿತ್ತು. ಗೆಲಿಲಿಯೊನ ದೃಷ್ಟಿ ಅತ್ತ ಹರಿಯಿತು. ಅದು ಒಂದು ಕಡೆಯಿಂದ ಮತ್ತೊಂದು ಕಡೆಗೆ ಬರಲು ಎಷ್ಟು ಕಾಲಬೇಕು ಎಂದು ಕಂಡು ಹಿಡಿಯುವ ಅಪೇಕ್ಷೆಯಾಯಿತು. ಆಗಿನ ಕಾಲದಲ್ಲಿ ನಿಖರವಾದ ಕಾಲ ಸೂಚಿಸುವ ಗಡಿಯಾರಗಳು ಇರಲಿಲ್ಲ. ತನ್ನ ನಾಡಿಯ ಬಡಿತದ ಆಧಾರದ ಮೇಲೆ ಗೆಲಿಲಿಯೊ ಕಾಲವನ್ನು ನಿರ್ಣಯಿಸಿದ. ಮನೆಗೆ ಬಂದು, ಒಂದು ಸೀಸದ ಗುಂಡನ್ನು ದಾರಕ್ಕೆ ಕಟ್ಟಿ ತೂಗಿ ಅದು ತೆಗೆದುಕೊಳ್ಳುವ ಕಾಲವನ್ನು ಗುರುತಿಸಿಕೊಂಡ. ಹೀಗೆ ಬೇರೆ ಉದ್ದದ, ಬೇರೆ ಭಾರಗಳ ಗುಂಡು-ದಾರಗಳೊಡನೆ ಪ್ರಯೋಗ ಮಾಡಿದ. ಲೋಲಕದ ಆವರ್ತನ ಕಾಲ (ಲೋಲಕ ಒಂದು ಕೊನೆಯಿಂದ ಇನ್ನೊಂದು ಕೊನೆಗೆ ಹೋಗಿ, ಹಿಂದಕ್ಕೆ ಬಂದು, ಮತ್ತೆ ದಿಕ್ಕನ್ನು ಬದಲಾಯಿಸುವವರೆಗಿನ ಕಾಲ) ಲೋಲಕದ ಉದ್ದವನ್ನು ಹೊಂದಿಕೊಂಡಿದೆ: ಆವರ್ತನ ಕಾಲಕ್ಕೂ ಅದರ ತೂಗಾಟದ ಉದ್ದಕ್ಕೂ ಸಂಬಂಧವಿಲ್ಲ : ಆವರ್ತನ ಕಾಲಕ್ಕೂ ಲೋಲಕದ ಕೊನೆಯಲ್ಲಿರುವ ವಸ್ತುವಿನ ಭಾರಕ್ಕೂ ಸಂಬಂಧವಿಲ್ಲ—ಎಂಬ ನಿರ್ಧಾರಕ್ಕೆ ಬಂದ. ಇದೇ ಸಾಮಾನ್ಯ ಲೋಲಕದ ನಿಯಮ. ರೋಗಿಗಳ ನಾಡಿಯ ಬಡಿತವನ್ನು ಪರೀಕ್ಷಿಸಲು ಲೋಲಕಗಳನ್ನು ಉಪಯೋಗಿಸಬೇಕೆಂದು ಆತ ಸಲಹೆ ಮಾಡಿದ.

ಗಣಿತದತ್ತ ಗೆಲಿಲಿಯೊವಿನ ಒಲವು ಹರಿಯಿತು. ಅವನು ಪೀಸಾ ವಿಶ್ವವಿದ್ಯಾನಿಲಯದಲ್ಲಿದ್ದಾಗ (1589-91) ಚಲನಶಾಸ್ತ್ರ ನಿಯಮಗಳನ್ನು ಕಂಡುಹಿಡಿದ. ಒಂದು ವಸ್ತು ಬೀಳುವ ಕಾಲ ಅದರ ತೂಕವನ್ನು ಹೊಂದಿಕೊಂಡಿದೆ ಎಂದು ಅರಿಸ್ಟಾಟಲ್ ಹಿಂದೆ ಹೇಳಿದುದನ್ನೇ ಜನ ನಂಬಿದ್ದರು. ಅರಿಸ್ಟಾಟಲ್ ಸತ್ತು ಎರಡು ಸಾವಿರ ವರ್ಷಗಳಾಗಿದ್ದರೂ ಅವನು ಹೇಳಿದುದೆಲ್ಲ ಸತ್ಯ ಎಂದು ತಜ್ಞರೂ ನಂಬಿದ್ದ ಕಾಲ ಅದು. ಒಂದು ವಸ್ತು ಒಂದು ಎತ್ತರದಿಂದ ಕೆಳಕ್ಕೆ ಬೀಳಲು ನಾಲ್ಕು ನಿಮಿಷ ತೆಗೆದುಕೊಂಡರೆ, ಅದರ ನಾಲ್ಕರಷ್ಟು ಭಾರದ ವಸ್ತು ಅದೇ ಎತ್ತರದಿಂದ ಬೀಳಲು ಅದಕ್ಕೆ ನಾಲ್ಕರಲ್ಲಿ ಒಂದರಷ್ಟು ಕಾಲ ಎಂದರೆ ಒಂದು ನಿಮಿಷ ತೆಗೆದುಕೊಳ್ಳುತ್ತದೆ ಎಂದು ಭಾವಿಸಿದ್ದರು. ವಿವಿಧ ತೂಕದ ವಸ್ತುಗಳು ಒಂದೇ ಎತ್ತರದಿಂದ ಕೆಳಕ್ಕೆ ಬಿದ್ದರೆ, ಅವು ಭೂಮಿಯನ್ನು ತಲಪಲು ಒಂದೇ ಕಾಲವನ್ನು ತೆಗೆದುಕೊಳ್ಳುತ್ತವೆ, ಭೂಮಿಯನ್ನು ಮುಟ್ಟುವ ಸಮಯದಲ್ಲಿ ಒಂದೇ ವೇಗದಲ್ಲಿ ಇರುತ್ತವೆ ಎಂಬುದನ್ನು ಎಲ್ಲರಿಗೂ ಮನದಟ್ಟಾಗುವಂತೆ ಪ್ರಯೋಗಗಳ ಮೂಲಕ ಗೆಲಿಲಿಯೊ ತೋರಿಸಿದ. ಈ ಸಿದ್ಧಾಂತ ಅರಿಸ್ಟಾಟಲನ ಹೇಳಿಕೆಗಿಂತ ಬೇರೆಯಾಗಿದ್ದುದರಿಂದ, ಜನಾದರಣೆಯನ್ನು ಪಡೆಯಲಿಲ್ಲ. ಅದಕ್ಕೆ ಬದಲು ಆತ ನಿಂದೆಗೆ ಗುರಿಯಾಗಬೇಕಾಯಿತು. ಇದರಿಂದ ಜಿಗುಪ್ಸೆಗೊಂಡು ಪ್ರಾಧ್ಯಾಪಕ ಪದವಿಗೆ ರಾಜೀನಾಮೆಯಿತ್ತು 1591ರಲ್ಲಿ ಫ್ಲಾರೆನ್ಸಿಗೆ ಹಿಂದಿರುಗಿದ.

1610ರಲ್ಲಿ ದೂರದರ್ಶಕದ ನಿರ್ಮಾಣವನ್ನು ಕೈಗೊಂಡ. ಒಂದು ಸಾವಿರ ದೂರದರ್ಶಕಗಳನ್ನು ಸ್ವತಃ ತಯಾರಿಸಿ ಯುರೋಪಿನ

ಪ್ರತಿಯೊಂದು ಭಾಗಕ್ಕೂ ಕಳುಹಿಸಿದ. ಗೆಲಿಲಿಯೊನ ಸಂಶೋಧನೆಗಳೂ ಪುಸ್ತಕಗಳೂ ಯೂರೋಪಿನಲ್ಲಿ ಅವನಿಗೆ ಕೀರ್ತಿಯನ್ನು ತಂದುವು.

1611ರಲ್ಲಿ ರೋಮ್ ನಗರಕ್ಕೆ ಹೋಗಿ ಅಲ್ಲಿ ತಾನು ಕಂಡ ಖಗೋಳ ವಿಜ್ಞಾನದ ವೈಚಿತ್ರ್ಯಗಳನ್ನು ಕ್ರೈಸ್ತಮತಾಧಿಪತಿಗಳ ಎದುರಿನಲ್ಲಿ ಪ್ರದರ್ಶಿಸಿದ. ಸಿದ್ಧಾಂತ ಪ್ರತಿಪಾದನೆಯಲ್ಲಿ ಅಪ್ರತಿಮ ಪ್ರತಿಭೆಯನ್ನು ತೋರಿದ. ಸೂರ್ಯನ ಸುತ್ತ ಭೂಮಿ ತಿರುಗುವುದೆಂಬ ಅವನ ಸಿದ್ಧಾಂತ ಮತಾಧಿಪತಿಗಳ ಬೋಧನೆಗೆ ವಿರುದ್ಧವಾಗಿತ್ತು. ಧರ್ಮಶ್ರದ್ಧೆಯನ್ನು ನಾಶಮಾಡುತ್ತಾನೆಂದು ಅವನ ಮೇಲೆ ಆರೋಪ ಹೊರಿಸಿದರು. ಅವನ ಹೊಸ ಸಿದ್ಧಾಂತಗಳನ್ನು ಸಮರ್ಥಿಸುವುದಾಗಲಿ, ಪ್ರತಿಪಾದಿಸುವುದಾಗಲಿ ಅಪರಾಧವೆಂದು ಸಾರಿದರು.

1623ರಿಂದ 1632ರ ವರೆಗೆ ಒಂಬತ್ತು ವರ್ಷಗಳ ಕಾಲ ಗೆಲಿಲಿಯೊನಲ್ಲಿ ಹೊಸ ಚೈತನ್ಯ ಮೂಡಿ. ಅವನ ವೈಜ್ಞಾನಿಕ ಸಂಶೋಧನೆಗಳು ಭರದಿಂದ ಸಾಗಿದುವು. 1632ರಲ್ಲಿ ಆತನ ನೂತನ ಗ್ರಂಥ ಪ್ರಕಟವಾಯಿತು. ಪುಸ್ತಕದ ಅಭಿಪ್ರಾಯಗಳು ಮತಾಭಿಮಾನಿಗಳ ನಂಬಿಕೆಗಳಿಗೆ ವಿರುದ್ಧವಾಗಿದ್ದುದರಿಂದ ಮತ್ತೆ ಅವರ ಕೋಪಕ್ಕೆ ಗುರಿಯಾದ. ಧಾರ್ಮಿಕ ನ್ಯಾಯಾಲಯದಲ್ಲಿ ಮುದುಕ ಗೆಲಿಲಿಯೊನ ವಿಚಾರಣೆ ನಡೆಯಿತು. ಅವನು ತಪ್ಪೊಪ್ಪಿಕೊಂಡ ಮೇಲೂ ನ್ಯಾಯಮಂಡಲಿ ನಿರ್ಬಂಧವಾಸವನ್ನು ವಿಧಿಸಿತು. ಮುಂದೆ ಎಂಟು ವರ್ಷ ಅಜ್ಞಾತವಾಸದಲ್ಲೇ ಇದ್ದ ವಿಜ್ಞಾನಿ. ಅಜ್ಞಾತವಾಸದಿಂದ ಒಂದು ವಿಧದಲ್ಲಿ ಅನುಕೂಲವೇ ಆಯಿತು. ಗೆಲಿಲಿಯೊನ ಸಂಶೋಧನೆಗಳೂ ಜಿಜ್ಞಾಸೆಯೂ ಯಾರ ಅಡಚಣೆಯೂ ಇಲ್ಲದೆ ಸಾಗಿದುವು. ಸತತ ಪರಿಶ್ರಮ. ಜನರ ನಿಂದೆ. ಶಕ್ತಿ ಇವುಗಳಿಂದ ಬಳಲಿದ್ದ ಗೆಲಿಲಿಯೊ 1637ರಲ್ಲಿ ತನ್ನ ದೃಷ್ಟಿಯನ್ನು ಕಳೆದುಕೊಂಡ. ದೂರದರ್ಶಕವನ್ನು ಜಗತ್ತಿಗೆ ದಾನಮಾಡಿದ ವಿಜ್ಞಾನಿ ಕುರುಡನಾದ. ಆದರೂ ತನ್ನ ಜ್ಞಾನಾರ್ಜನೆಯನ್ನು ನಿಲ್ಲಿಸಲಿಲ್ಲ. ಸಾಮಾನ್ಯ ಲೋಲಕದ ನಿಯಮಗಳನ್ನು ವಿಸ್ತರಿಸಿ. ಗಡಿಯಾರಗಳ ನಿಯಂತ್ರಣದ ವಿಷಯದಲ್ಲಿ ಹೊಸ ತಂತ್ರವೊಂದನ್ನು ಬೆಳಕಿಗೆ ತಂದ.

1642ರಲ್ಲಿ ಗೆಲಿಲಿಯೊ ಕೊನೆಯ ಉಸಿರೆಳೆದ.

ಗೆಲಿಲಿಯೊ ಮೃತನಾದ 200 ವರ್ಷಗಳ ಬಳಿಕ ಕ್ರೈಸ್ತಧರ್ಮ ಪೀಠ ಆತನ ಕೃತಿಗಳ ಮೇಲಿನ ನಿಷೇಧಾಜ್ಞೆಯನ್ನು ಹಿಂತೆಗೆಯಿತು.

ವಿಜ್ಞಾನಿಗಳು ಸಂಪ್ರದಾಯ ಶರಣರಾಗಬಾರದು. ಹಿಂದಿನವರು ಹೇಳಿದ್ದು ತಪ್ಪು ಎಂದು ತೋರಿದರೆ ಅದನ್ನು ಪ್ರಮಾಣಗಳಿಂದ ಸಿದ್ಧಪಡಿಸಬೇಕು. ಮೂಢನಂಬಿಕೆಗಳು ವಿಜ್ಞಾನದ ಮುನ್ನಡೆಗೆ ಕಂಟಕಪ್ರಾಯ. ಪ್ರತ್ಯಕ್ಷ ಪ್ರಯೋಗದಿಂದ ಸಿದ್ಧಾಂತದ ಸತ್ಯತೆಯನ್ನು ಸಾಧಿಸಬೇಕು–ಈ ಭಾವನೆಗಳನ್ನು ವಿಜ್ಞಾನ ಪ್ರಪಂಚದಲ್ಲಿ ಬಿತ್ತಿದ ಗೆಲಿಲಿಯೊ ಗೆಲಿಲಿ. ನುಡಿದಂತೆ ನಡೆದ ಆದರ್ಶ ವ್ಯಕ್ತಿ. ಅಪ್ರತಿಮ ಪ್ರತಿಭೆ. ಕಷ್ಟಸಹಿಷ್ಣುತೆ. ಆತ್ಮಾಭಿಮಾನ. ಧೈರ್ಯ. ದೃಢ ನಿರ್ಧಾರ ಇವು ಗೆಲಿಲಿಯೊನ ವ್ಯಕ್ತಿತ್ವದ ಹಿರಿಯ ಗುಣಗಳು. ದೂರದರ್ಶಕದ ನಿರ್ಮಾಣ. ಖಗೋಳ ವಿಜ್ಞಾನ ಸಮೀಕ್ಷೆ— ಇವು ಗೆಲಿಲಿಯೊನ ಮಹತ್ಸಾಧನೆಗಳು. ಚಲನಶಾಸ್ತ್ರಕ್ಕೆ ಒಂದು ವೈಜ್ಞಾನಿಕ ಸ್ಥಾನವನ್ನು ಕಲ್ಪಿಸಿ. ಅದಕ್ಕೆ ಸಂಬಂಧಿಸಿದ ಹಿಂದಿನ ಸಿದ್ಧಾಂತಗಳನ್ನು ಅಶಾಸ್ತ್ರೀಯವೆಂದು ತಿರಸ್ಕರಿಸಿ. ಹಲವಾರು ನಿಯಮಗಳನ್ನು ಕಂಡುಹಿಡಿದ ಮಹಾನ್ ಸಂಶೋಧಕ ಗೆಲಿಲಿಯೊ.

## ಗೌರವ ಪೌರತ್ವ

ಒಂದು ಊರಿನಲ್ಲಿ ಹುಟ್ಟಿದಾತ ಅಲ್ಲಿಯ ಪೌರ : ಅವನಿಗೆ ಅಲ್ಲಿ ಕೆಲವು ಹಕ್ಕುಗಳುಂಟು.

ಆ ಊರಿನಲ್ಲಿ ಹುಟ್ಟದಿದ್ದವರು. ಅಲ್ಲಿ ಕೆಲವು ಗಂಟೆಗಳನ್ನು ಮಾತ್ರ ಕಳೆದವರು ಕೂಡ ಒಂದು ಊರಿನ ಪೌರರಾಗುತ್ತಾರೆ—ಒಮ್ಮೊಮ್ಮೆ.

ತುಂಬ ವಿಖ್ಯಾತ ವ್ಯಕ್ತಿಯೊಬ್ಬರು ತಮ್ಮ ದೇಶದಿಂದ ಇನ್ನೊಂದು ದೇಶಕ್ಕೆ ಹೋದಾಗ ಎರಡನೆಯ ದೇಶ ಅವರಿಗೆ ಹಲವಾರು ರೀತಿಗಳಲ್ಲಿ ತನ್ನ ಪ್ರೀತಿ ಗೌರವಗಳನ್ನು ತೋರಿಸುತ್ತದೆ. ಇವುಗಳಲ್ಲಿ ಒಂದು ಗೌರವ ಪೌರತ್ವ. ಅವರನ್ನು ಒಂದು ನಗರಕ್ಕೆ ಕರೆದು ನೀವು ಇಂದಿನಿಂದ ಇಲ್ಲಿಯ ಪೌರರು ಎಂದು ಸನ್ಮಾನಿಸುತ್ತಾರೆ. ಇದಕ್ಕೆ ಗುರುತಾಗಿ ಸಾಮಾನ್ಯವಾಗಿ ಒಂದು ಚಿನ್ನದ ಬೀಗದ ಕೈಯನ್ನು ಅರ್ಪಿಸುತ್ತಾರೆ.

ಯಾವ ಊರಿನ ಗೌರವ ಪೌರತ್ವ ದೊರೆಯುತ್ತದೆಯೋ ಆ ಊರಿನಲ್ಲಿ ಪೌರನಿಗೆ ಇರುವ ಎಲ್ಲ ಹಕ್ಕುಗಳೂ ಆ ವ್ಯಕ್ತಿಗೆ ಲಭ್ಯವಾಗುತ್ತವೆ.

ಭಾರತದ ಪ್ರಧಾನಿಯಾಗಿದ್ದ ಜವಾಹರಲಾಲ ನೆಹರು ಅವರಿಗೆ ಲಂಡನ್ ಮತ್ತು ಡಬ್ಲಿನ್ ನಗರಗಳ ಗೌರವ ಪೌರತ್ವ 1956ರಲ್ಲಿ ಲಭಿಸಿದ್ದಿತು.



ಲಂಡನಿನಲ್ಲಿ ಗೌರವ ಪೌರತ್ವ ಸ್ವೀಕರಿಸಲು ಜವಾಹರಲಾಲರು ಆಗಮಿಸುತ್ತಿರುವುದು.

## ಘಾನ

'ಕನಕಪುರದ ನಾಡು'– ಇದು ಒಂದು ಪ್ರದೇಶದ ಹೆಸರು. ಇಲ್ಲಿ ಒಂದು ಚಿನ್ನದ [illegible] (ಮರಳ [illegible] ಚಿನ್ನದ [illegible] [illegible] [illegible] ಕೆಲವರು ಹೇಳುತ್ತಾರೆ.) : ಈ [illegible] [illegible] ಗೌರವ. [illegible]? ಇದು ಅಲ್ಲಿನ [illegible] [illegible] [illegible] [illegible] [illegible] [illegible] ಇನ್ನೊಂದು ಕಾರಣ [illegible] [illegible] [illegible] [illegible] [illegible] [illegible]

ಈ ಕನಕಪೀಠದ ಆರಾಧಕರು 'ಅಶಾಂತಿ' ಎಂಬ ಪಂಗಡದವರು. ಇವರು ವಾಸಿಸುವ ಪ್ರದೇಶ ಘಾನದ ಒಂದು ಭಾಗ.

'ಬಿಳಿಯರ ಸಮಾಧಿ' ಎನ್ನಿಸಿಕೊಂಡಿದ್ದ ಪಶ್ಚಿಮ ಆಫ್ರಿಕದ ಘಾನ ಈಗ ಆಧುನಿಕ ಸೌಕರ್ಯಗಳಿಂದ ಕೂಡಿದ ಸುಂದರ ದೇಶವಾಗಿದೆ. ಗೋಲ್ಡ್ ಕೋಸ್ಟ್ ಮತ್ತು ಬ್ರಿಟಿಷ್ ಟೋಗೊಲೆಂಡ್‌ಗಳು ಸೇರಿ 1957 ಮಾರ್ಚ್ 6ರಂದು ಸ್ವತಂತ್ರ ಗಣರಾಜ್ಯದ ಸ್ಥಾಪನೆಯಾಯಿತು. ಹಿಂದಿನ ಪ್ರಸಿದ್ಧ ಚಕ್ರಾಧಿಪತ್ಯದ ಹೆಸರೇ ಹೊಸ ರಾಜ್ಯಕ್ಕೂ ಬಂದಿತು.

ಘಾನವನ್ನು ಎಂಟು ಆಡಳಿತ ಪ್ರಾಂತಗಳನ್ನಾಗಿ ವಿಂಗಡಿಸಿದ್ದಾರೆ.

| | | |
|---|---|---|
| ಖಂಡ | : | ಆಫ್ರಿಕ (ಪಶ್ಚಿಮ) |
| ಅಕ್ಷಾಂಶ | : | 4° 45′ ಉ ದಿಂದ 11° 10′ ಉ |
| ರೇಖಾಂಶ | : | 1° 13′ ಪೂ ದಿಂದ 3° 15′ ಪ |
| ವಿಸ್ತೀರ್ಣ | : | 2.38.539 ಚ. ಕಿ. ಮೀ. |
| ಜನಸಂಖ್ಯೆ | : | ಸುಮಾರು 78,41,000 |
| ರಾಜಧಾನಿ | : | ಅಕ್ರಾ |
| ಭಾಷೆ | : | ಇಂಗ್ಲಿಷ್ (ಆಡಳಿತ ಭಾಷೆ) |
| ಬಾವುಟ | : | ಕೆಂಪು, ಚಿನ್ನ, ಹಳದಿ ಬಣ್ಣದ ಅಡ್ಡಪಟ್ಟಿಗಳು. ಮಧ್ಯದಲ್ಲಿ ಕಪ್ಪು ನಕ್ಷತ್ರ |
| ಸರಕಾರ | : | ಗಣರಾಜ್ಯ |

ಘಾನದಲ್ಲಿ ಉಷ್ಣವಲಯದ ಹವಾಗುಣವಿದೆ. ಮೇ, ಜೂನ್‌ನಲ್ಲಿ ಮಳೆಯಾಗುತ್ತದೆ.

ವೋಲ್ಟಾ ಮುಖ್ಯ ನದಿ. ನದಿಗೆ ಅಣೆಕಟ್ಟು ಕಟ್ಟಿ, ವಿದ್ಯುತ್ತಿನ ಉತ್ಪಾದನೆ ಮಾಡುತ್ತಾರೆ.

ಘಾನದ ಅರಣ್ಯ ಸಂಪತ್ತು ಅಮೂಲ್ಯವಾಗಿದೆ. ಮಹಾಗನಿ, ಘಟ್ಟಿ ಮರಗಳು ದೊರೆಯುತ್ತವೆ. ಮರದ ದಿಮ್ಮಿಯದೇ ಒಂದು ಹಿರಿಯ ಉದ್ಯೋಗವಾಗಿದೆ.

ಘಾನ ಚಿನ್ನದ ನಾಡು. ಇಲ್ಲಿ ಬಂಗಾರ ಸಾಕಷ್ಟಿದೆ. ವಜ್ರ, ಮ್ಯಾಂಗನೀಸ್, ಬಾಕ್ಸೈಟ್ ಹೇರಳವಾಗಿದೆ.

ಕೋಕೊ ಮುಖ್ಯ ವಾಣಿಜ್ಯ ಬೆಳೆ. ಮುಸುಕಿನ ಜೋಳ, ಭತ್ತ, ಕಡಲೆಕಾಯಿ, ಕಾಫಿ, ಬಾಳೆಹಣ್ಣು, ಯಾಮ್, ತೆಂಗಿನಕಾಯಿ ಮುಂತಾದುವನ್ನು ಬೆಳೆಯುತ್ತಾರೆ.

ಮರದ ದಿಮ್ಮಿ, ಮತ್ತಿತರ ಕಾಡಿನ ಪದಾರ್ಥಗಳು, ಪಾನೀಯಗಳು, ಹುರಿದ ಕೋಕೊ, ಸಾಬೂನು, ಆಹಾರಯೋಗ್ಯ ಎಣ್ಣೆಗಳು — ಇವು ಇಲ್ಲಿನ ಇತರ ಕಸುಬಿನ ಬಗೆ.

ಘಾನದಲ್ಲಿ ಹನ್ನೆರಡಕ್ಕೂ ಹೆಚ್ಚು ಬುಡಕಟ್ಟಿನ ಜನರಿದ್ದಾರೆ. ಐವತ್ತು ಉಪಭಾಷೆಗಳು ಬಳಕೆಯಲ್ಲಿವೆ. ಇಂಗ್ಲಿಷ್ ಆಡಳಿತ ಭಾಷೆ. ಆನಿಮಿಸ್ಟ್ ಆ ದೇಶದವರ ಮುಖ್ಯ ಧರ್ಮ. ಆನಿಮಿಸ್ಟ್ ಎಂದರೆ ಸಜೀವ ಮತ್ತು ನಿರ್ಜೀವ ವಸ್ತುಗಳೆಲ್ಲದರಲ್ಲೂ ಆತ್ಮವೊಂದಿದೆ ಎಂಬ ನಂಬಿಕೆ. ಈ ಧರ್ಮದಲ್ಲಿ ನಿಸರ್ಗದ ದೇವತೆಗಳನ್ನು ಪೂಜಿಸುತ್ತಾರೆ. ಕ್ರೈಸ್ತ ಮತ್ತು ಮುಸಲ್ಮಾನ ಮತದವರೂ ಇಲ್ಲಿ ಇದ್ದಾರೆ.

ಅಂತರರಾಷ್ಟ್ರೀಯ ವಿಮಾನ ನಿಲ್ದಾಣವಿರುವ ಅಕ್ರಾ ರಾಜಧಾನಿ. ಕುಮಾಸಿ ದೊಡ್ಡ ನಗರ. ಟೇಮಾ, ಟಾಕೋರಾಡಿ ಮುಖ್ಯ ಬಂದರುಗಳು.

ಘಾನದಲ್ಲಿ ಪ್ರಕೃತಿದತ್ತವಾದ ಸಂಪತ್ತು ಅಲ್ಪವಿದ್ದರೂ ಅಲ್ಲಿಯ ಜನ ಮಹತ್ವಾಕಾಂಕ್ಷಿಗಳು. ವಿದೇಶಿ ನೆರವಿನಿಂದ ತಮ್ಮ ದೇಶವನ್ನು ಮುಂದಕ್ಕೆ ತರುವ ಅಭಿಲಾಷೆ ಹೊಂದಿದ್ದಾರೆ.

ಘಾನದ ಅಧ್ಯಕ್ಷ ಎನ್‌ಕ್ರುಮಾ 1968ರಲ್ಲಿ ಚೀನ ಪ್ರವಾಸ ಕೈಕೊಂಡರು. ಪೀಕಿಂಗ್‌ನಲ್ಲಿ ಅವರಿಗೆ ಭಾರೀ ಸ್ವಾಗತ ದೊರೆತ ವೇಳೆಯಲ್ಲಿ ಸೈನ್ಯಕ್ರಾಂತಿಯಾಗಿ ಎನ್‌ಕ್ರುಮಾ ಪದಚ್ಯುತಿಗೊಂಡರು.

## ಘೆರಾವೊ

ಒಬ್ಬ ವ್ಯಕ್ತಿಯ ಸುತ್ತಲೂ ಘೇರಾಯಿಸಿ, ಆತ ತಮ್ಮ ಇಚ್ಛೆಗೆ ಮಣಿಯುವಂತೆ ಒತ್ತಾಯಿಸುವುದು ಘೆರಾವೊ. ಸಾಧಾರಣವಾಗಿ ಇದು ಅಲ್ಪಾವಧಿಯದು ; ಕೆಲವು ವೇಳೆ, ಒಂದೆರಡು ದಿನ ನಡೆಯುವುದೂ ಉಂಟು. ಘೆರಾವೊ ಮಾಡಿದಾಗ ಅದಕ್ಕೆ ಗುರಿಯಾದ ವ್ಯಕ್ತಿಗೆ ಅನ್ನ, ನೀರು ಸಿಗುವುದಿಲ್ಲ ; ಹೊರಗಿನ ಯಾರೊಡನೆಯೂ ಆತ ಸಂಪರ್ಕ ಬೆಳೆಸುವಂತಿಲ್ಲ.

ಘೆರಾವೊ ಆರಂಭವಾದದ್ದು ಪಶ್ಚಿಮ ಬಂಗಾಳದ ಕಾರಖಾನೆಗಳಲ್ಲಿ, 1967ರಲ್ಲಿ. ಕಾನೂನುಬದ್ಧವಾಗಿ ನೋಟೀಸು ಕೊಟ್ಟು ಮುಷ್ಕರ ಹೂಡುವುದು ಸಾಮಾನ್ಯ ಸಂಗತಿ. ಆದರೆ ಘೆರಾವೊ ಮಾಡಿ, ತಕ್ಷಣ ಜಯಗಳಿಸಲು ಯತ್ನಿಸುವುದು ಕ್ಷಿಪ್ರ ಕ್ರಮ.

ಸ್ವಾರಸ್ಯದ ವಿಷಯವೆಂದರೆ, ಕಾರ್ಮಿಕ ಕ್ಷೇತ್ರದಲ್ಲಿ ಆರಂಭವಾದ ಘೆರಾವೊ, ಸಮಾಜದ ಇತರ ಕ್ಷೇತ್ರಗಳನ್ನೂ ಬಹು ಬೇಗನೆ ಆವರಿಸಿತು.

ಈ ಹೊಸ ಅಸ್ತ್ರ ನ್ಯಾಯಸಮ್ಮತವಲ್ಲ, ಅದನ್ನು ನಿಷೇಧಿಸಬೇಕು—ಎಂಬ ಅಭಿಪ್ರಾಯವಿದೆ. ಅದು ದುರ್ಬಲರ ಅಸ್ತ್ರ, ಒಪ್ಪಿಕೊಳ್ಳಬಹುದು—ಎನ್ನುವ ಅಭಿಪ್ರಾಯವೂ ಇದೆ.

ಆಕ್ಸ್‌ಫರ್ಡ್ ನಿಘಂಟಿಗೆ ಇಪ್ಪತ್ತನೆಯ ಶತಮಾನದಲ್ಲಿ ಅನೇಕ ಪದಗಳನ್ನು ಭಾರತ ನೀಡಿದೆ. ಉದಾಹರಣೆಗೆ : ಸತ್ಯಾಗ್ರಹ, ಜುಲುಮ್, ಬಂದೋಬಸ್ತ್, ಇತ್ತೀಚಿನ ಕಾಣಿಕೆ ಘೆರಾವೊ.

ಮೂಲ ಹಿಂದಿ. ಈಗ ದೊರೆತಿರುವ ವಿಶಿಷ್ಟ ಅರ್ಥದಿಂದಾಗಿ, ಈ ಪದ ಭಾರತದಲ್ಲಿ ರಾಷ್ಟ್ರೀಯ ಖ್ಯಾತಿ ಪಡೆದಿದೆ.

## ಚಕ್ರ

ಸಂಜೆ ಹುಡುಗರ ಆಟಕ್ಕೆ ಚಕ್ರ. ಸೈಕಲ್, ಕಾರುಗಳು ಮುಂದೆ ಹೋಗಲು ಚಕ್ರ. ನೂರಾರು ಜನರನ್ನು, ಟನ್ ಗಟ್ಟಲೆ ಭಾರವನ್ನು ಹೊತ್ತು ಸಾಗುವ ರೈಲಿಗೆ ಬೇಕು ಚಕ್ರ. ವಿಮಾನ ನೆಲಬಿಟ್ಟು ಮೇಲೇರುವುದಕ್ಕೂ ಚಕ್ರದ ಸಹಾಯ : ಕೆಳಗಿಳಿಯುವುದಕ್ಕೂ ಚಕ್ರದ ಸಹಾಯ.



ಕೃಷ್ಣ ಚಕ್ರ    ಧರ್ಮ ಚಕ್ರ    ರಥದ ಗಾಲಿ    ಕುಂಬಾರನ ಚಕ್ರ

ಕೈಗಡಿಯಾರದ ತುಂಬ ಸಣ್ಣಸಣ್ಣ ಚಕ್ರಗಳು. ಕಾರಖಾನೆಗಳ ಯಂತ್ರಗಳಿಗೆ ವೈತ್ಯಾಕಾರದ ಚಕ್ರಗಳು.

ನಮ್ಮ ಜಗತ್ತಿನಲ್ಲಿ ಚಕ್ರಗಳು ಸದಾ ತಿರುಗುತ್ತಲೇ ಇರುತ್ತವೆ.

ಚಕ್ರ ಎಂದರೆ ಉರುಳುವುದು ಎನ್ನುವ ಭಾವನೆ ಥಟ್ಟನೆ ಹೊಳೆಯುತ್ತದೆ. ಉರುಳುವಿಕೆಯೇ ಚಕ್ರದ ಗುಣ. ಈ ಗುಣದ ಮಹತ್ವವನ್ನು ಅರಿತು, ಅದರ ವಿಧವಿಧವಾದ ಉಪಯೋಗಗಳನ್ನು ಪಡೆದು, ಚಕ್ರಗಳ ಪರೀಕ್ಷೆಯೇ ನಡೆಯುತ್ತಿರುವ ಆಧುನಿಕ ಯುಗವನ್ನು ತಲಪಲು ಮಾನವನಿಗೆ ಹಲವು ಶತಮಾನಗಳು ಹಿಡಿದಿವೆ.

ಚಕ್ರದಲ್ಲಿ ಎರಡು ವಿಧಗಳನ್ನು ಕಾಣಬಹುದು. ಕುಂಬಾರನ ಚಕ್ರ—ಇದು ಮಣ್ಣಿನ ಪದಾರ್ಥಗಳ ರಚನೆಯಲ್ಲಿ ಅಗತ್ಯವಾದದ್ದು. ಇದು ಒಂದೆಡೆ ಸ್ಥಿರವಾಗಿ ತಿರುಗುವ ಚಕ್ರ. ಮತ್ತೊಂದು ಗಾಡಿ, ಕಾರು, ಬೈಸಿಕಲ್, ಯಂತ್ರೋಪಕರಣಗಳಲ್ಲಿ ಕಂಡುಬರುವ ಚಕ್ರ. ಇದು ಉರುಳುತ್ತದೆ.

ಆರ್ಯರಿಗೆ ಚಕ್ರದ ಉಪಯೋಗ ತಿಳಿದಿತ್ತು. ಋಗ್ವೇದಗಳ ಕಾಲದಲ್ಲಿ ಎರಡು ಚಕ್ರಗಳ ಗಾಡಿಗಳ ಬಳಕೆ ಇತ್ತು. ಮಣ್ಣಿನ ಪಾತ್ರೆಗಳನ್ನು ಮಾಡಲು ಕುಂಬಾರನ ಚಕ್ರಗಳನ್ನು ಬಳಸುತ್ತಿದ್ದರು. ಸುಮೇರ್ ಕಣಿವೆಯಲ್ಲಿ ಕ್ರಿ. ಪೂ. 3.500, ಅಸೀರಿಯದಲ್ಲಿ ಕ್ರಿ. ಪೂ. 3,000, ಸಿಂಧೂ ಕಣಿವೆ ಕ್ರಿ.ಪೂ. 2,500, ಮಧ್ಯ ಮತ್ತು ಉತ್ತರ ಯೂರೋಪ್ ಕ್ರಿ.ಪೂ.1,000, ಬ್ರಿಟನ್ ಕ್ರಿ. ಪೂ. 500—ಈ ರೀತಿ ಚಕ್ರದ ಪ್ರವಾಸವನ್ನು ಗುರುತಿಸುತ್ತ ಹೋಗಬಹುದು. ಇದು ಯಾವುದೋ ಒಂದು ಸ್ಥಳದಲ್ಲಿ ಕಂಡು ಹಿಡಿಯಲ್ಪಟ್ಟು ಆ ತಿಳಿವಳಿಕೆ ಕ್ರಮೇಣ ಎಲ್ಲ ಕಡೆಗೂ ವ್ಯಾಪಿಸಿರಬಹುದೆಂಬ ಅಭಿಪ್ರಾಯವಿದೆ. ಹೊಸ ಶಿಲಾಯುಗದ ಮಾನವ (12,000 ವರ್ಷಗಳ ಹಿಂದಿನವ) ಒಂದು ರೀತಿಯ ಗಾಡಿಯನ್ನು ರಚಿಸಿಕೊಂಡಿದ್ದನೆಂಬ ಊಹೆಯೂ ಇದೆ.

ಚಕ್ರದ ಶೋಧನೆ ಮಹತ್ವಪೂರ್ಣವೆನ್ನುವುದರಲ್ಲಿ ಸಂಶಯವಿಲ್ಲ. ಕೃಷಿ ಮಾನವ ತನ್ನ ಹೊರೆಯನ್ನು ಸಾಗಿಸುವುದಕ್ಕಾಗಿ ಚಕ್ರವನ್ನು ಕಂಡುಹಿಡಿದ. ಇಂದು ಭೂಮಿಯಿಂದ ಜಿಗಿದು ಬೇರೆ ಗ್ರಹಗಳಿಗೆ ಯಾನ ಮಾಡಬಹುದಾದ ಯಂತ್ರಗಳಿಗೂ ಚಕ್ರ ಉಪಯೋಗಿಸಲ್ಪಡುತ್ತಿದೆ. ಮೊಟ್ಟಮೊದಲಿಗೆ ಸಾಮಾನು ಸಾಗಾಣಿಕೆಗೆ ಚಕ್ರ ಅಮೂಲ್ಯ ಕೊಡುಗೆಯಾಯಿತು. ಚಕ್ರದ ಮೊದಲ ಉಪಯೋಗವಾದದ್ದು ತೆಪ್ಪದಂಥ ರಚನೆಯ ಮೇಲೆ. ಸಾಗಿಸಬೇಕಾದ ಪದಾರ್ಥಗಳನ್ನು ಹೇರಿ ದಾರಿಯಲ್ಲಿ ಮರದ ದಿಮ್ಮಿಗಳನ್ನು ಮಲಗಿಸಿ ಅವುಗಳ ಮೇಲೆ ತೆಪ್ಪವನ್ನು ಉರುಳಿಸುವುದು. ಉರುಳುವಿಕೆಯಿಂದ ಮುಂದೆ ಸಾಗುವ ಚಕ್ರದ ತತ್ತ್ವ ಇಲ್ಲಿ ಕಾಣುತ್ತದೆ. ಅನಂತರ ದಿಮ್ಮಿಗಳ ನಡುವನ್ನು ಕೊರೆದಿರಬಹುದು. ಇದೇ ಮುಂದೆ ಬಂಡಿ ಮೊದಲಾದುವುಗಳಲ್ಲಿ ಅಚ್ಚು (ಅಕ್ಷ) ಆಗಿ ಮಾರ್ಪಟ್ಟಿತು. ಕ್ರಮೇಣ ಈ ಅಚ್ಚಿಗೆ ಎರಡು ಕೊನೆಯಲ್ಲಿಯೂ ಎರಡು ಗಾಲಿಗಳು ಅಥವಾ ಚಕ್ರಗಳನ್ನು ಜೋಡಿಸಿದರು. ಅದು ಇಂದಿನಂತೆ ಅಚ್ಚಿನ ಸುತ್ತಲೂ ತಿರುಗುವ ಚಕ್ರವಾಗಿರಲಿಲ್ಲ. ಆದರೆ ಅಚ್ಚೂ ಗಾಲಿಗಳೂ ಕೂಡಿಯೇ ಉರುಳುತ್ತಿದ್ದುವು. ಹೆಚ್ಚಾಗಿ ಅಚ್ಚುಗಳನ್ನೂ ಗಾಲಿಗಳನ್ನೂ ಬೇರೆ ಬೇರೆ ತುಂಡುಗಳಿಂದಲೇ ಮಾಡಿ ಜೋಡಿಸುತ್ತಿದ್ದರು. ಅಚ್ಚು, ಗಾಲಿಗಳು ಸೇರಿ ಉರುಳುತ್ತಿದ್ದ ಗಾಡಿಗಳು ತಿರುವಿನಲ್ಲಿ ಚಲಿಸಬೇಕಾದರೆ ಬಹಳ ಕಷ್ಟವಾಗುತ್ತಿತ್ತು. ಮುಂದೆ, ಅಚ್ಚನ್ನು ಗಾಡಿಯ ಚೌಕಟ್ಟಿಗೆ ಬಂಧಿಸಿ ಚಕ್ರವನ್ನು ಸ್ವತಂತ್ರವಾಗಿ ತಿರುಗುವಂತೆ ಮಾಡುವುದನ್ನು ಮನುಷ್ಯ ಕಲಿತ. ಇದರಿಂದ ಗಾಡಿಯ ಚಲನೆ ಬಹಳ ಮಟ್ಟಿಗೆ ಸುಗಮವಾಯಿತು. ಗಾಡಿಯು ರಥವಾಗಿ ಪರಿಣಮಿಸಿ ರಾಜಭೋಗದ ಸಾಧನಗಳಲ್ಲಿ ಒಂದಾಯಿತು. ಅಲ್ಲಿಂದ ಚಕ್ರ ರಣರಂಗದ ದಾರಿ ಹಿಡಿಯಿತು. ಈ ಹಂತದಲ್ಲಿ ಎರಡು ಚಕ್ರಗಳುಳ್ಳ ಮತ್ತು ನಾಲ್ಕು ಚಕ್ರಗಳುಳ್ಳ ಗಾಡಿಗಳು ಬಳಕೆಯಲ್ಲಿದ್ದುವು. ಆದರೆ ಈ ಎರಡು ವಿಧದ ಗಾಡಿಗಳೂ ಗಾಲಿಗೆ ಸ್ವತಂತ್ರ

ಮೋಟಾರು ಚಕ್ರ    ಉಗಿಬಂಡಿಯ ಚಕ್ರ    ವಿಮಾನ ನೆಲಬಿಟ್ಟು ಏಳಲು, ಇಳಿಯಲು ಚಕ್ರ



ಚಾಲನೆ ಕೊಟ್ಟಾಗಲೇ ಹೆಚ್ಚು ಉಪಯೋಗಕ್ಕೆ ಬಂದುವು. ಮುಂದಿನ ಚಕ್ರವನ್ನು ಕಿರಿದಾಗಿಯೂ ಹಿಂದಿನ ಚಕ್ರವನ್ನು ಅದಕ್ಕಿಂತ ಹಿರಿದಾಗಿಯೂ ಮಾಡಿದಾಗ ಬಂಡಿಗಳು ಅತಿ ಹೆಚ್ಚಿನ ಬಳಕೆಗೆ ಬರಲಾರಂಭಿಸಿದುವು. ಅಲ್ಲಿಂದ ಮುಂದೆ ಅಂಥ ಇಕ್ಕಟ್ಟಾದ ತಿರುವುಗಳಲ್ಲಿಯೂ ತಿರುಗಲಾರಂಭಿಸಿದ ಚಕ್ರಗಳು ಚಲನೆಗೆ ಮತ್ತಷ್ಟು ವೇಗವನ್ನು ಒದಗಿಸಿಕೊಟ್ಟುವು. ಚಕ್ರದ ಬೆಳವಣಿಗೆಯಲ್ಲಿ ಇದೊಂದು ಮುಖ್ಯ ಘಟ್ಟ.

ಚಕ್ರದ ರಚನೆಯಲ್ಲಿಯೇ ಅನೇಕ ಬದಲಾವಣೆಗಳಿಂದ. ಅದು ಅತ್ಯಂತ ಜಟಿಲ ಯಾಂತ್ರಿಕ ಪ್ರಪಂಚದಲ್ಲೂ ತನ್ನ ಸ್ಥಾನವನ್ನು ಭದ್ರಗೊಳಿಸಿಕೊಂಡಿದೆ. ಮೊದಮೊದಲು ಚಕ್ರದ ಗಾಡಿಗಳು ನಿಧಾನವಾಗಿ ಚಲಿಸುತ್ತಿದ್ದುವು. ಈ ಚಕ್ರಗಳನ್ನು ಮೂರು ಮರದ ತುಂಡುಗಳನ್ನು ಸೇರಿಸಿ ಮಾಡುತ್ತಿದ್ದರು. ಮೇಲೆ ತೊಗಲಿನ ಅಥವಾ ತಾಮ್ರದ ರಕ್ಷೆ ಹಾಕಿ ಚಕ್ರದ ಸವೆತವನ್ನು ತಡೆಗಟ್ಟುತ್ತಿದ್ದರು. ಮುಂದೆ ಸುತ್ತಲೂ ವೃತ್ತಾಕಾರದ ಕಟ್ಟು; ಕೇಂದ್ರದಿಂದ ಅಂಚಿನ ತನಕ ಪಟ್ಟಿಗಳು—ಈ ಬಗೆಯ ಚಕ್ರ ಬಳಕೆಗೆ ಬಂತು. ಇಂಥ ಚಕ್ರ ಹಗುರವಾದ ಕಾರಣ ಗಾಡಿ ವೇಗವಾಗಿ ಓಡುವುದು ಸಾಧ್ಯವಾಯಿತು. ಇವುಗಳ ರಚನೆಯಲ್ಲಿ ಕುಶಲತೆಗೆ ಹೆಚ್ಚು ಪ್ರಾಧಾನ್ಯ. ಕ್ರಿ. ಪೂ. 2.000ದಲ್ಲಿ ಬಳಕೆಯಲ್ಲಿದ್ದುವೆಂದು ಹೇಳಲಾದ ಪಟ್ಟಿಗಳುಳ್ಳ ಚಕ್ರ ಈಗ ಎಲ್ಲ ವಿಧದ ವಾಹನಗಳಲ್ಲಿಯೂ ಬಳಕೆಯಲ್ಲಿದೆ. ಬೈಸಿಕಲ್ಲಿಗೆ ಬಳಸುವುದು ಇಂಥ ಚಕ್ರವನ್ನೇ. ಇದರ ಅನಂತರ ಗಾಳಿ ತುಂಬಿದ ರಬ್ಬರಿನ ಚಕ್ರ (ಟೈರ್). ಕಾರು, ಬಸ್ಸು, ವಿಮಾನ ಮುಂತಾದ ವಾಹನಗಳ ಚಲನೆಗೆ ನೆರವಾಯಿತು. ಗಾಳಿ ತುಂಬಿದ ಚಕ್ರ ದಾರಿಯಲ್ಲಿನ ಸಣ್ಣಪುಟ್ಟ ಏರುತೊಡರುಗಳ ಮೇಲೆ ಒತ್ತಿಕೊಂಡು ಧಕ್ಕೆಯಿಲ್ಲದೆ ಸಾಗುತ್ತದೆ. ಆದರೆ ಮರದ ಗಟ್ಟಿಹಲಗೆಯ ಚಕ್ರ ದಿಣ್ಣೆ ತಗ್ಗುಗಳ ದಾರಿಯನ್ನೂ ಕ್ರಮಿಸಬಲ್ಲುದು. ಕಡ್ಡಿಗಳಂತೆ ಸೂಕ್ಷ್ಮ ಪಟ್ಟಿಗಳುಳ್ಳ ಚಕ್ರ ಆಧುನಿಕ ರಸ್ತೆಗಳಲ್ಲಿ ಮಾತ್ರ ವೇಗವಾಗಿಯೂ ಧಕ್ಕೆಗಳಿಲ್ಲದಂತೆಯೂ ಧಾವಿಸಬಲ್ಲುದು. ಹೀಗೆ ಚಕ್ರಗಳ ರಚನೆ ಮಾರ್ಗದ ರಚನೆಯನ್ನು ಅವಲಂಬಿಸಿರುತ್ತದೆ.

ಕೆಲವು ವಿಶೇಷ ರೀತಿಯ ಚಕ್ರಗಳು ಯಂತ್ರಪ್ರಪಂಚದ ಬಹು ಮುಖ್ಯ ಕೆಲಸಗಳಿಗೆ ನಾಂದಿಯಾಗಿವೆ. ರೈಲುಗಾಡಿಯ ಚಕ್ರ ಒಂದು ಕಡೆಗೆ ಸವೆದಂತಿರುತ್ತದೆ. ಈ ವಿಶೇಷ ರಚನೆಯಿಂದಲೇ ರೈಲುಗಾಡಿ ಹಳಿಯ ಆಚೆ ಕಡೆಗೆ ಜಾರದೆ ಅದರ ಮೇಲೆಯೇ ಉರುಳುತ್ತದೆ. ಹಲ್ಲುಗಳಂತೆ ಅಂಚುಳ್ಳ ಗೇರ್ ಚಕ್ರಗಳ ಉಪಯೋಗ ಅಪರಿಮಿತ. ಚಲನ ಶಕ್ತಿಯನ್ನು ವರ್ಗಾಯಿಸುವುದು ಇವುಗಳ ಮುಖ್ಯ ಧ್ಯೇಯ. ಇವೂ 2.000 ವರ್ಷಗಳಿಗೆ ಮೊದಲೇ ಕಂಡುಹಿಡಿಯಲ್ಪಟ್ಟುವೆಂದು ತೋರುತ್ತದೆ. ಇಂಥ ಚಕ್ರಗಳಿಲ್ಲದೆ ಆಧುನಿಕ ಮಾನವನು ಅಸಹಾಯನಾಗುತ್ತಾನೆ. ಗಡಿಯಾರ. ಕಾರು. ಎಲ್ಲ ಬಗೆಯ ಯಂತ್ರೋಪಕರಣಗಳು ಗೇರು ಚಕ್ರಗಳಿಲ್ಲದೆ ನಡೆಯಲಾರವು. ರೈಲು ಚಾಲಕನಿರುವ ಎಂಜಿನ್ ಡಬ್ಬಿಯ ಘನತೂಕದ ಚಕ್ರ ವಿಶೇಷ ರೀತಿಯದು. ಇದು ಚಲನ ಶಕ್ತಿಯನ್ನು ಸಂಗ್ರಹಿಸಿ ರೈಲಿನ ಚಲನೆ ಒಂದೇ ಸಮನಾಗಿರುವಂತೆ ನಿಯಂತ್ರಿಸುತ್ತದೆ. ಇದನ್ನು ಫ್ಲೈ ವೀಲ್‌ಗಳು ಎಂದು ಕರೆಯುತ್ತಾರೆ. ವಿಶೇಷ ರೀತಿಯ ಚಕ್ರಗಳು ಜೆಟ್ ವಿಮಾನಗಳಲ್ಲಿಯೂ ಇರುತ್ತವೆ. ಸ್ವಯಂಚಾಲಿತ ವಿಮಾನಗಳಲ್ಲಿ ವಿಶೇಷ ಚಕ್ರಗಳ ಜೋಡಣೆಯಿರುತ್ತದೆ. ಚಕ್ರಗಳಿಲ್ಲದೆ ವಿಮಾನಗಳು ನೆಲ ಬಿಟ್ಟು ಮೇಲೆ ಏರಲಾರವು. ಕೆಳಕ್ಕೆ ಇಳಿಯಲಾರವು. ನೀರನ್ನೆತ್ತಲು ಚಕ್ರ ಬೇಕು. ಕಾರ್ಖಾನೆ ಕೆಲಸದಲ್ಲಿ, ಅರೆಯಲು, ಕಡೆಗೆ ಬಟ್ಟೆಯನ್ನು ಒಗೆಯಲು, ಐಸ್‌ಕ್ರೀಂ ತಯಾರಿಸಲು ಎಲ್ಲದಕ್ಕೂ ಬೇಕು ಚಕ್ರ. ಚಕ್ರದ ಉಪಯೋಗ ಪಾಶ್ಚಾತ್ಯ ದೇಶಗಳಲ್ಲಿ ಸರ್ವತ್ರವಾಗಿ ಕಂಡುಬರುತ್ತದೆ.

ಚಕ್ರ ಮಾನವ ಇತಿಹಾಸದಲ್ಲಿ ಅಭೂತಪೂರ್ವ ಶೋಧನೆ. ಇದರ ಕೊನೆಗಾಣದ ಉಪಯೋಗ ಮಾನವನನ್ನು ನಾಗರಿಕತೆಯ ಹಾದಿಯಲ್ಲಿ ಮುಂದೆ ಮುಂದೆ ಒಯ್ಯುತ್ತಿದೆ. ವೃತ್ತಾಕಾರದ ಈ ವಸ್ತು ತನ್ನ ಸ್ವತಂತ್ರ ಹಾಗೂ ವೇಗ ಚಲನೆಯಿಂದ ಬೃಹತ್ ಪ್ರಮಾಣದ ಶಕ್ತಿಯನ್ನು ಉತ್ಪಾದಿಸಿ ಮನುಷ್ಯನ ಮತ್ತು ಸಾಕುಪ್ರಾಣಿಗಳ ಶ್ರಮವನ್ನು ತಗ್ಗಿಸಿದೆ. ಚಕ್ರವುಳ್ಳ ವಾಹನಗಳು ಮಾನವ ಜಗತ್ತಿನ ನಿಕಟ ಸಂಬಂಧಗಳಿಗೆ ಮೂಲವಾಗಿವೆ. ಅವುಗಳಿಂದ ಅವನು ರಾಜ್ಯವಿಸ್ತರಣ ಮಾಡಿದ. ದೂರ ದೇಶಗಳಿಗೆ ಸಾಗಿ ತನ್ನ ಜ್ಞಾನಸಂಪತ್ತನ್ನು ಹೆಚ್ಚಿಸಿಕೊಂಡ. ಹದಿನೆಂಟನೆಯ ಶತಮಾನದಲ್ಲಿ ನಡೆದ ಕೈಗಾರಿಕಾ ಕ್ರಾಂತಿಯ ಅನಂತರ ಇನ್ನೂ ಹೆಚ್ಚಿನ ಶಕ್ತಿಯ ಯಂತ್ರಗಳನ್ನು ಸಂಶೋಧಕರು ತಯಾರಿಸಿದ್ದು ಚಕ್ರಗಳ ಜೋಡಣೆಯಿಂದಲೇ.

ಹೀಗೆ ಒಂದು ರೀತಿ ಶಕ್ತಿಯ ಮೂಲವಾದ ಚಕ್ರವನ್ನು ಮಾನವ ಪೂಜಿಸುತ್ತಿದ್ದುದೂ ಧರಿಸುತ್ತಿದ್ದುದೂ ಉಂಟು. ವೃತ್ತವು ಅನಂತವೆಂದೂ ಕೊನೆಮೊದಲಿಲ್ಲದ ಈ ವೃತ್ತವನ್ನು ಹೋಲುವ ಚಕ್ರ ಅಷ್ಟೇ ಪವಿತ್ರವೆಂದೂ ಭಯಭಕ್ತಿಗಳಿಂದ ಕಾಣುತ್ತಿದ್ದರು.

ಸಂದೇಶಗಳನ್ನು ಕಳುಹಿಸುವುದರಲ್ಲಿಯೂ ಚಕ್ರದ ಪಾತ್ರವಿದೆಯೆಂದರೆ ಸೋಜಿಗವೆನಿಸಬಹುದು. ಒಂದು ಕಾಲದಲ್ಲಿ ಅಚ್ಚು ಮತ್ತು ಅದರ ಎರಡು ಚಕ್ರಗಳಿಗೆ ಒಣಹುಲ್ಲನ್ನು ಸುತ್ತಿ ಬೆಂಕಿಹಚ್ಚಿ ಬೆಟ್ಟದ ತುದಿಯಿಂದ ಕೆಳಗೆ ಉರುಳಿಸುತ್ತಿದ್ದರು. ಇದು ದುಷ್ಟಶಕ್ತಿಗಳನ್ನು ದೂರಮಾಡಲು ಮತ್ತು ಸಾಂಕೇತಿಕವಾಗಿ ಆ ಪ್ರದೇಶದಲ್ಲಿ ಸಂಭವಿಸಿರುವ ಸಂಕಟವನ್ನು ಸೂಚಿಸಲು ಅನುಸರಿಸುತ್ತಿದ್ದ ಮಾರ್ಗ.

## ಚರ್ಚಿಲ್, ವಿನ್‌ಸ್ಟನ್

'ವಿ' ಗುರುತು (V) ವಿಜಯಕ್ಕೆ, ಎಂದು ಎರಡು ಬೆರಳೆತ್ತಿ ತೋರಿಸಿದವರು ಸರ್ ವಿನ್‌ಸ್ಟನ್ ಚರ್ಚಿಲ್. ನಿರಾಶೆಯ ಸಮಯದಲ್ಲಿಯೂ ಅಪಾರ ಧೈರ್ಯವನ್ನು ಇಂಗ್ಲೆಂಡ್ ದೇಶಕ್ಕೆ ಅವರು ತಂದುಕೊಟ್ಟರು; ಎರಡನೆಯ ಜಾಗತಿಕ ಯುದ್ಧದಲ್ಲಿ ಇಂಗ್ಲೆಂಡಿಗೆ ಅಪೂರ್ವ ವಿಜಯ ದೊರೆಯುವಂತೆ ಮಾಡಿದರು.

ಚರ್ಚಿಲ್ ಜೀವನ ಚರಿತ್ರೆಯೆಂದರೆ ಇಂಗ್ಲೆಂಡಿನ ಇಪ್ಪತ್ತನೆಯ ಶತಮಾನದ ಪೂರ್ವಾರ್ಧದ ಇತಿಹಾಸವೆಂದೇ ಹೇಳಬಹುದು. ತಮ್ಮ ದೇಶದ ಪ್ರತಿಯೊಂದು ಘಟನೆಯಲ್ಲೂ ಚರ್ಚಿಲ್ ಭಾಗವಹಿಸಿದ್ದರು. ಬೋಯರ್ ಯುದ್ಧದಿಂದ ಹಿಡಿದು ದ್ವಿತೀಯ ಮಹಾಯುದ್ಧದವರೆಗೆ ಅವರು ಆರು ಜನ ಬ್ರಿಟಿಷ್ ಪ್ರಭುಗಳ ಸೇವೆ ಮಾಡಿದರು. ಅವರದು ಬಹುಮುಖ ಪ್ರತಿಭೆಯ ಬದುಕು; ರಾಜಕಾರಣಿ, ಸೈನಿಕ. ಲೇಖಕ, ಚಿತ್ರಕಾರ, ಪತ್ರಿಕೋದ್ಯಮಿ ಮತ್ತು ಪ್ರಧಾನಮಂತ್ರಿ (ಎರಡು ಬಾರಿ).

ಚರ್ಚಿಲ್ ಇಂಗ್ಲೆಂಡಿನ ಚರಿತ್ರೆಯಲ್ಲಿ ನೂರಾರು ವರ್ಷ ಮುಖ್ಯ ಪಾತ್ರ ವಹಿಸಿದ್ದ ಶ್ರೇಷ್ಠ ವಂಶದಲ್ಲಿ ಜನಿಸಿದರು. ಇವರ ತಂದೆ ಇಂಗ್ಲೆಂಡಿನ ಹಣಕಾಸಿನ ಮಂತ್ರಿಯಾಗಿದ್ದರು. ಚರ್ಚಿಲ್ ತಮ್ಮ ಇಪ್ಪತ್ತೊಂದನೆಯ ವಯಸ್ಸಿನಲ್ಲಿ ಬ್ರಿಟಿಷ್ ಸೈನ್ಯಕ್ಕೆ ಸೇರಿಕೊಂಡರು. ಮತ್ತು ಕೆಲವು ಕಾಲ ಭಾರತದಲ್ಲಿ–ಬೆಂಗಳೂರಿನಲ್ಲಿ–ಇದ್ದರು. ಅವರು ಬರಹಗಾರರಾಗಿ ರೂಪುಗೊಂಡದ್ದು ಬೆಂಗಳೂರಿನಲ್ಲಿದ್ದ ವೇಳೆಯಲ್ಲೇ. 1900ರಲ್ಲಿ ಬೋಯರ್ ಯುದ್ಧ ನಡೆದಾಗ



ರಾಜಕಾರಣಿ, ಸೈನಿಕ, ಲೇಖಕ, ಚಿತ್ರಕಾರ, ಪತ್ರಿಕೋದ್ಯಮಿ, ಪ್ರಧಾನ ಮಂತ್ರಿ - ಚರ್ಚಿಲ್

ಆಫ್ರಿಕದಲ್ಲಿ ಒಬ್ಬ ಪತ್ರಿಕಾ ವರದಿಗಾರರಾಗಿ ಕೆಲಸ ಮಾಡುತ್ತಿದ್ದರೂ ಬಂದಿಯಾದರು. ಅಲ್ಲಿಂದ ಅವರು ತಪ್ಪಿಸಿಕೊಂಡು ಬಂದರು.

ಚರ್ಚಿಲ್ ಅದೇ ವರ್ಷ ಬ್ರಿಟಿಷ್ ಪಾರ್ಲಿಮೆಂಟಿನ ಸದಸ್ಯರಾಗಿ ಚುನಾಯಿತರಾದರು. ಪ್ರಥಮ ಮಹಾಯುದ್ಧದ ಕಾಲದಲ್ಲಿ ಬ್ರಿಟಿಷ್ ಮಂತ್ರಿಮಂಡಲದಲ್ಲಿ ಬಹಳ ಜವಾಬ್ದಾರಿಯುತ ಸ್ಥಾನದಲ್ಲಿದ್ದರು. ದ್ವಿತೀಯ ಮಹಾಯುದ್ಧ ಆರಂಭವಾದಾಗ ಮುಖ್ಯಮಂತ್ರಿಯಾದರು.

1940ರಲ್ಲಿ ನಾಜಿ ಜರ್ಮನಿಯ ವಿರುದ್ಧ ನಡೆದ ಯುದ್ಧದಲ್ಲಿ ಚರ್ಚಿಲ್ ವಹಿಸಿದ ನಾಯಕತ್ವದಿಂದ ಅವರ ಧೀರ ವ್ಯಕ್ತಿತ್ವದ ಅರಿವು ಇಡೀ ಲೋಕಕ್ಕೇ ಆಯಿತು. ಅಂದು ಅವರು ಆಡಿದ ಒಂದು ನುಡಿ ಇಂದಿಗೂ ಜನರ ನೆನಪಿನಲ್ಲಿ ಹಸಿರಾಗಿ ಉಳಿದಿದೆ. "ರಕ್ತ, ದುಡಿಮೆ, ಕಣ್ಣೀರು, ಮತ್ತು ಬೆವರಿನ ಹೊರತಾಗಿ ಬೇರೇನನ್ನೂ ನನ್ನ ಜನರಿಗೆ ನಾನು ಕೊಡಲಾರೆ." ಈ ಮಾತು ಬ್ರಿಟಿಷ್ ಜನರಲ್ಲಿ ಕೆಚ್ಚು ಮೂಡಿಸಿ, ಅವರನ್ನು ಅಜೇಯರನ್ನಾಗಿ ಮಾಡಿತು.

ಯುದ್ಧಾನಂತರ ನಡೆದ ಮಹಾಚುನಾವಣೆಯಲ್ಲಿ ಅವರು ಆರಿಸಿ ಬಂದರೂ ಅವರ ಪಕ್ಷಕ್ಕೆ ಸೋಲಾಯಿತು. ಮುಂದೆ ಕೆಲವು ವರ್ಷಗಳ ಅನಂತರ ಮತ್ತೊಮ್ಮೆ ಪ್ರಧಾನ ಮಂತ್ರಿಯಾದರು.

ಬ್ರಿಟಿಷ್ ಸಾಮ್ರಾಜ್ಯದ ಆಧಾರಸ್ತಂಭಗಳಲ್ಲಿ ಚರ್ಚಿಲ್ ಒಬ್ಬರಾಗಿದ್ದರು. ಭಾರತಕ್ಕೆ ಸ್ವಾತಂತ್ರ್ಯ ನೀಡುವುದು ಅವರಿಗೆ ಇಷ್ಟವಿರಲಿಲ್ಲ. ಗಾಂಧೀಜಿಯನ್ನು 'ನಗ್ನ ಫಕೀರ' ಎಂದು ಕರೆದಿದ್ದರು. "ಬ್ರಿಟಿಷ್ ಸಾಮ್ರಾಜ್ಯದ ವಿಸರ್ಜನಾ ಸಮಾರಂಭದ ಅಧ್ಯಕ್ಷತೆ ವಹಿಸಲು ನಾನು ಕುಳಿತಿಲ್ಲ." ಎಂದು ಹೇಳುತ್ತಿದ್ದರು.

ಸರ್ ವಿನ್‌ಸ್ಟನ್ ಲಿಯನಾರ್ಡ್ ಸ್ಪೆನ್ಸರ್ ಚರ್ಚಿಲ್ ರಾಜಕೀಯ ವಲಯದಲ್ಲಿ ಮಾತ್ರವಲ್ಲದೆ ಸಾಹಿತ್ಯಕ್ಷೇತ್ರದಲ್ಲೂ ಪ್ರಸಿದ್ಧಿ ಪಡೆದಿದ್ದರು. ತಮ್ಮ ಸಮಕಾಲೀನರಲ್ಲಿ ಶ್ರೇಷ್ಠ ವಾಗ್ಮಿ, ಉತ್ತಮ ಬರವಣಿಗಾರ ಎಂದು ಹೆಸರು ಪಡೆದಿದ್ದರು. ಚರ್ಚಿಲ್ ಅತ್ಯುತ್ತಮ ಚರಿತ್ರಕಾರ. ತಮ್ಮ ಆತ್ಮಚರಿತ್ರೆಯನ್ನೂ ಇಂಗ್ಲಿಷ್ ಭಾಷೆಯನ್ನಾಡುವ ಜನಾಂಗಗಳ ಚರಿತ್ರೆಯನ್ನೂ ಅವರು ಬರೆದಿದ್ದಾರೆ. ತಾವು ಬರೆದ ದ್ವಿತೀಯ ಮಹಾಯುದ್ಧದ ಚರಿತ್ರೆಗೆ ಚರ್ಚಿಲ್ 1953ರಲ್ಲಿ ನೊಬೆಲ್ ಬಹುಮಾನವನ್ನು ಪಡೆದರು. ಒಳ್ಳೆಯ ಚಿತ್ರಕಾರರೆಂದೂ ಅವರು ಹೆಸರಾಗಿದ್ದರು.

ರಾಜಕಾರಣ, ಇತಿಹಾಸ, ಸಾಹಿತ್ಯ ಮತ್ತು ಶೌರ್ಯಗಳ ಅಪೂರ್ವ ಸಮ್ಮಿಲನವನ್ನು ನಾವು ಸರ್ ವಿನ್‌ಸ್ಟನ್ ಚರ್ಚಿಲರ ವ್ಯಕ್ತಿತ್ವದಲ್ಲಿ ಕಾಣಬಹುದು. ಅವರ ಸಾವಿನಿಂದ ಇಂಗ್ಲೆಂಡಿನ ರಾಜಕೀಯದ ಒಂದು ಅಧ್ಯಾಯ ಮುಗಿಯಿತು.

ನೋಡಿ: ವಾಗ್ಮಿತೆ

## ಚಮೂದಳ

ಚಮೂದಳ ಅಥವಾ ಸ್ಕೌಟ್ ವ್ಯವಸ್ಥೆ ಇಪ್ಪತ್ತನೆಯ ಶತಮಾನದಲ್ಲಿ ಉದಿಸಿದ ಒಂದು ವೀರವೃತ್ತಿ. ಇದಕ್ಕೆ ಅಮೆರಿಕ ಸಂಯುಕ್ತ ಸಂಸ್ಥಾನ, ಆಫ್ರಿಕ, ಬ್ರಿಟಿಷ್ ದ್ವೀಪಗಳು, ಕೆನಡ, ಬೋಯರ್ ನಾಡು, ಆಸ್ಟ್ರೇಲಿಯ ಮತ್ತು ಇತರ ಹಲವಾರು ದೇಶಗಳಲ್ಲಿ ಪ್ರೋತ್ಸಾಹ ದೊರೆಯಿತು. ಬಾಲಕರಿಗೆ ಸ್ಕೌಟ್ ಹೇಗೋ ಹಾಗೆ 'ಗೈಡ್' ಎಂಬುದು ಬಾಲಕಿಯರಿಗೆ. ಇತರರಿಗೆ ನೆರವಾಗಲು ಸದಾ ಸಿದ್ಧತೆ, ಸದಾ ಹಸನ್ಮುಖ, ಸರಳತೆ ಇವು ಚಮೂಗಳ ಲಕ್ಷಣಗಳು. ಇವರು ಗೌರವ, ನಿಷ್ಠೆ, ಸ್ನೇಹ, ಸಾಹಸ ಮತ್ತು ಸ್ವಾರ್ಥತ್ಯಾಗ ಮುಂತಾದ ಸದ್ಗುಣಗಳಿಗೆ ಪ್ರಾಶಸ್ತ್ಯ ನೀಡುತ್ತಾರೆ.

ಉತ್ತಮ ಪ್ರಜೆಯಾಗುವುದನ್ನು ಚಮೂದಳ ಕಲಿಸುತ್ತದೆ. 'ದಿನಕ್ಕೆ ಒಂದಾದರೂ ಒಳ್ಳೆಯ ಕೆಲಸ' ಎಂಬುದು ಇದರ ಘೋಷಣೆ. ಇಂಥ ಸತ್ಕಾರ್ಯಕ್ಕೆ ಸಿದ್ಧನಾಗಿರುವುದೇ ಇದರ ಧ್ಯೇಯ. ಹಠಾತ್ತಾಗಿ ನೆರವು ಬೇಕಾದಲ್ಲಿ ಕೂಡಲೇ ಸಹಾಯ ಒದಗಿಸುವುದು ಚಮೂದಳದ ಎಲ್ಲ ಸದಸ್ಯರ ಕರ್ತವ್ಯ. "ನಾನು ಪ್ರಮಾಣವಾಗಿ, ದೇವರಿಗೆ ಮತ್ತು ನನ್ನ ದೇಶಕ್ಕೆ ಕರ್ತವ್ಯ ಸಲ್ಲಿಸುತ್ತೇನೆ; ಸ್ಕೌಟ್ ಕಾನೂನುಗಳಿಗೆ ವಿಧೇಯನಾಗಿರುತ್ತೇನೆ. ಇತರರಿಗೆ ಎಲ್ಲ ಸಮಯಗಳಲ್ಲೂ ನೆರವು ನೀಡುತ್ತೇನೆ: ದೈಹಿಕ ಬಲ, ಮಾನಸಿಕ ಎಚ್ಚರ, ನೈತಿಕ ಪ್ರಾಮಾಣಿಕತೆಗಳನ್ನು ಕಾಯ್ದುಕೊಳ್ಳುತ್ತೇನೆ" ಎಂಬ ಪ್ರಮಾಣವಚನ ಸ್ವೀಕರಿಸುತ್ತಾನೆ ಪ್ರತಿಯೊಬ್ಬ ಸ್ಕೌಟ್.

ಈ ಶ್ರೇಷ್ಠ ಚಟುವಟಿಕೆ ಆರಂಭವಾದದ್ದು ಇಂಗ್ಲೆಂಡಿನ ಬೇಡನ್ ಪೋವೆಲ್ ಎಂಬಾತನಿಂದ (1857–1941). ಸ್ಕೌಟರು ಬಿ. ಪಿ. ಎಂದೇ ಇವನ ಹೆಸರನ್ನು ನಿರ್ದೇಶಿಸುವುದು ವಾಡಿಕೆ. ಕ್ರೈಸ್ತಧರ್ಮಯಾಜಕನ



ಸ್ಕೌಟ್ ರ್‍ಯಾಲಿ

ಈತ ಸೈನಿಕರಿಗೆ ಸ್ಕೌಟಿನ ರೀತಿನೀತಿಗಳನ್ನು ತಿಳಿಸಿಕೊಟ್ಟ. ಬಾಲಕರಿಗೆ ಹೊಂದುವಂಥ ಸ್ಕೌಟ್ ಪದ್ಧತಿಗಳನ್ನೂ ವಿಧಾನಗಳನ್ನೂ ತೋರಿಸಿಕೊಡಬೇಕೆಂದು ಪೊವೆಲ್‌ನಿಗೆ ಬೇಡಿಕೆ ಬಂತು. ಹೀಗೆ 'ಸ್ಕೌಟ್' ಎಂಬುದು ಒಂದು ಆಟದಂತೆ ಆರಂಭವಾಯಿತು. ಆದರೆ ಆ ಆಟಕ್ಕೆ ಪೊವೆಲ್ ಒಂದು ಗುರಿ ಕಲ್ಪಿಸಿದ. ಅದೇ ಸಂಪನ್ನತೆ.

ಪ್ರಪಂಚದಲ್ಲಿ ಈಗ ಸುಮಾರು ತೊಂಬತ್ತು ಲಕ್ಷ ಸಕ್ರಿಯ ಸ್ಕೌಟ್ ಸದಸ್ಯರಿದ್ದಾರೆ. ಕಮ್ಯೂನಿಸ್ಟ್ ದೇಶಗಳಲ್ಲಿ ಈ ರೀತಿಯ ದಳಗಳಿಲ್ಲ. ಬೇರೆ ಬೇರೆ ಸಮವಸ್ತ್ರಗಳು, ಚಿಹ್ನೆ ಹಾಗೂ ಪದ್ಧತಿಗಳಿದ್ದರೂ ಎಲ್ಲ ದೇಶದ ಚಮೂದಳಗಳ ಆದರ್ಶ ಹಾಗೂ ಗುರಿಗಳು ಏಕರೂಪವಾಗಿರುತ್ತವೆ. 'ಸಿದ್ಧನಾಗಿರು' ಎಂಬ ಧ್ಯೇಯ ಎಲ್ಲ ಕಡೆ, ಎಲ್ಲ ಭಾಷೆಗಳಲ್ಲಿ ಇದೆ. ವಿಶ್ವ ಸ್ಕೌಟ್ ಕಾರ್ಯಾಲಯ ಕೆನಡದ ಒಟವದಲ್ಲಿದೆ. ಪ್ರತಿ ನಾಲ್ಕು ವರ್ಷಕ್ಕೊಮ್ಮೆ ಎಲ್ಲ ದೇಶದ ಸ್ಕೌಟುಗಳು ಒಂದೆಡೆ ಸೇರಿ ಜಾಗತಿಕ ಮಟ್ಟದ ಸ್ಕೌಟ್ ಸಮಾರಂಭ ಅಥವಾ ಉತ್ಸವದಲ್ಲಿ ಭಾಗವಹಿಸುತ್ತಾರೆ. ದೇಶಮಟ್ಟದಲ್ಲಿಯೂ ಹೀಗೆ ಚಮೂದಳದ ಸದಸ್ಯರು ಸೇರುತ್ತಾರೆ. ಜಾಗತಿಕ ಮಟ್ಟದ ಹದಿಮೂರನೆಯ ಸಮ್ಮೇಳನ 1971ರಲ್ಲಿ ಜಪಾನ್ ದೇಶದಲ್ಲಿ ನಡೆಯಿತು.

ಭಾರತದಲ್ಲಿ ಮೊಟ್ಟಮೊದಲಿನ ಚಮೂದಳ ಆರಂಭವಾದದ್ದು 1910ರಲ್ಲಿ, ಬೆಂಗಳೂರಿನಲ್ಲಿ. ದೊಡ್ಡಬಳ್ಳಾಪುರದಲ್ಲಿ ಈ ದಳದ ತರಬೇತಿ ಕೇಂದ್ರವೊಂದಿದೆ. ಇದು ಪ್ರಪಂಚದ ಸುಸಜ್ಜಿತ ತರಬೇತಿ ಕೇಂದ್ರಗಳಲ್ಲಿ ಒಂದು. ಸ್ವಾತಂತ್ರ್ಯ ಬಂದ ಮೇಲೆ 1950ರಲ್ಲಿ 'ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್' ಎಂಬ ರಾಷ್ಟ್ರೀಯ ಸಂಘ ಆರಂಭವಾಯಿತು.

ಸ್ವಾರ್ಥತ್ಯಾಗ, ಇತರರಿಗೆ ಸೇವೆ ಎಂಬುದು ಭಾರತೀಯ ಸಂಸ್ಕೃತಿಗೆ ಹೊಸ ಸೂತ್ರವೇನಲ್ಲ. ಇಂಥ ಸೂತ್ರವನ್ನೊಳಗೊಂಡ ಸ್ಕೌಟ್ ಚಮೂದಳ ಕೇವಲ ಒಂದು ಪುಸ್ತಕವನ್ನು ಓದಿ ಮರೆಯುವಂಥ ಚಟುವಟಿಕೆಯಲ್ಲ. ಅದು ಜೀವಿಸುವ ವಿಧಾನ, ಜೀವನಕ್ಕೆ ಆಧಾರ ಎಂದು ಹೇಳಿದ್ದಾನೆ ಬೇಡನ್ ಪೊವೆಲ್. ಇತರರನ್ನು ಸಂತೋಷಪಡಿಸುವುದರಲ್ಲಿ ನಮ್ಮ ಸಂತೋಷವೂ ಅಡಗಿದೆ ಎಂಬುದು ಅವನ ಸಂದೇಶ.

ಈ ದಳಗಳಲ್ಲಿ ಕೆಲವು ಚಿಹ್ನೆ (ಬ್ಯಾಡ್ಜ್)ಗಳನ್ನು ಪ್ರಶಂಸನೀಯ ಸ್ಕೌಟ್ ಕೆಲಸ ಮಾಡಿದವರಿಗೆ ನೀಡಿ ಪ್ರೋತ್ಸಾಹಿಸುತ್ತಾರೆ.

ಸ್ಕೌಟ್ ಮತ್ತು ಗೈಡ್ ಒಂದು ಶಿಕ್ಷಣ ರೀತಿ. ಎಳೆಯರಿಗೆ ನಾಗರಿಕತೆಯ ಹೊಣೆಯನ್ನು ಮನದಟ್ಟು ಮಾಡಿಕೊಡುತ್ತದೆ; ಅವರಲ್ಲಿ ಸೇವಾ ಮನೋಭಾವವನ್ನೂ ನಾಯಕತ್ವದ ಗುಣಗಳನ್ನೂ ಬೆಳೆಸುತ್ತದೆ. ಚಮೂಗಳು ಆಗಾಗ ಶಿಬಿರ ಹೂಡುತ್ತಾರೆ. ಇಲ್ಲಿ ಇತರರೊಡನೆ ಸಹಕಾರದಿಂದಲೂ ಸಂತೋಷದಿಂದಲೂ ಬಾಳುವುದನ್ನು ಕಲಿಯುತ್ತಾರೆ. ಪ್ರಥಮ ಚಿಕಿತ್ಸೆ, ಈಜುವುದು, ದಿನನಿತ್ಯದ ಜೀವನಕ್ಕೆ ಸಹಾಯವಾಗುವ ಹಲವು ಕೌಶಲಗಳು ಎಲ್ಲವನ್ನೂ ಕಲಿಸುತ್ತಾರೆ. ಇವರಲ್ಲಿ ಏಳರಿಂದ ಹನ್ನೊಂದು ವಯಸ್ಸಿನವರಿಗೆ ಮರಿಸ್ಕೌಟ್‌ಗಳೆಂದು ಹೆಸರು. 20ನೆಯ ವಯಸ್ಸಿನವರೆಗೆ ಬಾಲಚಮೂ ಎಂದು ಹೆಸರು. ಅನಂತರ ಸ್ಕೌಟ್ ಎನ್ನುವರು. ಬಾಲಕರಿಗೆ ಖಾಕಿ ಸಮವಸ್ತ್ರ; ಬಾಲಕಿಯರಿಗೆ (ಗೈಡ್) ನೀಲಿ ಹಾಗೂ ಬಿಳಿ.

ಮೈಸೂರು ರಾಜ್ಯದಲ್ಲಿ ಈಗ 13,314 ಸ್ಕೌಟ್‌ಗಳೂ 6,738 ಗೈಡ್‌ಗಳೂ ಇದ್ದಾರೆ.

## ಚರಿತ್ರೆ

"ನಮ್ಮ ತಾತ ಮುಂಬಯಿಯಿಂದ ಬೆಂಗಳೂರಿಗೆ ಬಂದು ನೆಲಸಿದರು."

"1947ನೆಯ ಆಗಸ್ಟ್ 15ರ ವರೆಗೂ ಭಾರತ ಇಂಗ್ಲಿಷರ ಆಳ್ವಿಕೆಯಲ್ಲಿತ್ತು."

"ಬುದ್ಧ ಬೌದ್ಧಮತದ ಸ್ಥಾಪಕ."

ಹೀಗೆ ಹೇಳುವುದೆಂದರೆ ನಾವು ಚಾರಿತ್ರಿಕವಾಗಿ ಮಾತನಾಡಿದಂತೆ.

ಚರಿತ್ರೆ ನಮ್ಮ ಜೀವನದಲ್ಲಿ ಹಾಸುಹೊಕ್ಕಾಗಿದೆ. ಹಳೆಯ ಸಂಗತಿಗಳನ್ನು ತಿಳಿಸುವುದಲ್ಲದೆ ಆ ಸಂಗತಿಗಳ ಅರ್ಥವಿವರಣೆಯನ್ನು ಚರಿತ್ರೆ ಕೊಡುತ್ತದೆ.

ಅಲೆಗ್ಸಾಂಡರ್, ಅಶೋಕ, ಅಕ್ಬರ್ ಇವರೆಲ್ಲರನ್ನು ನಾವು ನೋಡಿರದಿದ್ದರೂ ನಮಗೆ ಇವರ ವಿಚಾರ ಗೊತ್ತು. 'ಹೇಗೆ?' ಎಂದು ಯಾರಾದರೂ ಕೇಳಿದೊಡನೆ 'ಚರಿತ್ರೆಯಲ್ಲಿ ಓದಿದ್ದೇವೆ' ಎನ್ನುತ್ತೇವೆ.

ಹುಟ್ಟಿದಂದಿನಿಂದ ಇಂದಿನವರೆಗೂ ಮಾನವ ಮಹತ್ಸಾಧನೆಗಳನ್ನು ಸಾಧಿಸಿದ್ದಾನೆ; ನಾಗರಿಕತೆಯ ಶಿಖರವನ್ನು ಮುಟ್ಟಿದ್ದಾನೆ; ಅದ್ಭುತ ಅನುಭವಗಳನ್ನು ಪಡೆದಿದ್ದಾನೆ. ಅವನು ಅಂದಿನಿಂದ ಇಂದಿನವರೆಗೆ ಏನೇನು ಮಾಡಿದ್ದಾನೆ, ಮೊದಲಿನ ಅನಾಗರಿಕ ಸ್ಥಿತಿಯಿಂದ ಈಗಿನ ಅತ್ಯಾಧುನಿಕ ಸ್ಥಿತಿಯವರೆಗೆ ಮಾನವ ನಡೆದು ಬಂದಿರುವ ದಾರಿ ಎಂಥದು ಎಂಬುದನ್ನು ಹೇಳುವುದೇ ಚರಿತ್ರೆ.

ಚರಿತ್ರೆಯ ವ್ಯಾಪ್ತಿ ಬಹಳ ವಿಸ್ತಾರ. ಚರಿತ್ರೆ ಎಂದರೆ ಹೆಸರುಗಳ ಮತ್ತು ವರ್ಷಗಳ ಸಂತೆ ಎಂಬ ಭಾವನೆ ಹಲವರಿಗುಂಟು. ಆದರೆ ರಾಜಮಹಾರಾಜರ, ರಾಜ್ಯ ಸಾಮ್ರಾಜ್ಯಗಳ ಹುಟ್ಟು, ಸಾವು, ಏಳುಬೀಳುಗಳನ್ನು ಚಿತ್ರಿಸುವುದಷ್ಟೆ ಚರಿತ್ರೆಯ ಕೆಲಸವಲ್ಲ. ಮಾನವನ ಸಾಧನೆಗಳ ಸಮಗ್ರ ಚಿತ್ರವನ್ನು ನೀಡುವ ಜವಾಬ್ದಾರಿ ಚರಿತ್ರೆಯದು. ರಾಜಕೀಯ ಗೊಂದಲ, ಯುದ್ಧ, ಕಲಹಗಳೇ ಚರಿತ್ರೆಯ ಸಾರಸರ್ವಸ್ವವಲ್ಲ. ಮನುಷ್ಯನ ಜೀವನಕ್ಕೆ ಸಂಬಂಧಿಸಿದ ಧಾರ್ಮಿಕ, ಆರ್ಥಿಕ, ಸಾಮಾಜಿಕ, ರಾಜಕೀಯ ವಿಷಯಗಳಿಗೂ ಚರಿತ್ರೆಯಲ್ಲಿ ಸ್ಥಾನವುಂಟು.

ಮನೆಯಲ್ಲಿ ವಾಸಮಾಡುತ್ತೇವೆ. ಮನೆಗೆ ಕಿಟಕಿಗಳುಂಟು. ಬಾಗಿಲುಗಳುಂಟು. ಸಿಮೆಂಟಿನ ನೆಲವುಂಟು. ಮೆಟ್ಟಿಲುಗಳುಂಟು. ನಲ್ಲಿಯುಂಟು. ಎಲ್ಲಿಯೋ ಇರುವ ನೀರು ಅಡುಗೆ ಮನೆಯಲ್ಲಿ ಸುರಿಯುತ್ತದೆ. ನೂರಾರು ಕಿಲೋಮೀಟರುಗಳಾಚೆ ಧುಮುಕುವ ನೀರಿನಿಂದ ಅಥವಾ ಅಣೆಕಟ್ಟಿನಿಂದ ವಿದ್ಯುಚ್ಛಕ್ತಿಯನ್ನು ನಮ್ಮ ಕೊಠಡಿಯ ಮೇಜಿನ ಮೇಲಿನ ಬಲ್ಬಿಗೆ ಹರಿಸುವ ತಂತಿಗಳಿವೆ. ಕಂಬಗಳಿವೆ. ಬೆಳಗ್ಗೆ ಏಳುವ ಹೊತ್ತಿಗೆ ವೃತ್ತ ಪತ್ರಿಕೆ ಬಂದು ಬೀಳುತ್ತದೆ. ಸಾಮಾನು ಕೊಂಡುಕೊಳ್ಳಲು ನಾಣ್ಯಗಳನ್ನು ಬಳಸುತ್ತೇವೆ. ರಸ್ತೆಯಲ್ಲಿ ಗಾಡಿಗಳು, ಕಾರುಗಳು, ಲಾರಿಗಳು, ಮೇಲೆ ವಿಮಾನ. ಊರಿಂದೂರಿಗೆ ರೈಲು. ಬರೆಯಲು ಕಾಗದ–ಪೆನ್ನು. ಆಡಳಿತ ನಡೆಸಲು ಒಂದು ವ್ಯವಸ್ಥೆ. ಚುನಾವಣೆ. ಶಾಂತಿ ಕಾಪಾಡಲು ಪೋಲೀಸರು. ಚಿಕಿತ್ಸೆಗೆ ಆಸ್ಪತ್ರೆ. ಮನಸ್ಸಿಗೆ ಶಾಂತಿ ಬೇಕೆನ್ನಿಸಿದರೆ ಹತ್ತಿರ ದೇವಸ್ಥಾನ. ಅಥವಾ ಜಗಳ ಪರಿಹಾರಕ್ಕೆ ನ್ಯಾಯಸ್ಥಾನ; ಆಹಾರದ ಬೆಳೆಗೆ ನೇಗಿಲು. ಟ್ರ್ಯಾಕ್ಟರು. ಗೊಬ್ಬರದ ಮಿಶ್ರಣಗಳು; ರಾಷ್ಟ್ರ ರಾಷ್ಟ್ರಗಳು ಕದನ ನಡೆಸಿದರೆ. ಪರಸ್ಪರರ ಮೇಲೆ ಎಸೆಯಲು ಪರಮಾಣು ಅಸ್ತ್ರ. ಸಾಧನೆಗಳು ಒಂದಲ್ಲ. ಎರಡಲ್ಲ.

ಕಪಿ ಸಂತತಿಗೆ ಸೇರಿ. ಗವಿಗಳಲ್ಲಿ ವಾಸಿಸುತ್ತ. ಬತ್ತಲೆ ಅಲೆಯುತ್ತ. ಚಳಿಗೆ ಹೆದರಿ. ಬಿರುಗಾಳಿ. ಸಿಡಿಲು ಸಮುದ್ರಗಳಿಗೆ ಕೈಮುಗಿಯುತ್ತ. ಕೈಗೆ ಸಿಕ್ಕ ಪ್ರಾಣಿಗಳನ್ನು ಕೊಂದು ತಿಂದು ಒಮ್ಮೊಮ್ಮೆ ಆ ಪ್ರಾಣಿಗಳಿಗೇ ಆಹಾರವಾಗುತ್ತಿದ್ದ ಮನುಷ್ಯ ಈ ಸ್ಥಿತಿಯನ್ನು ಮುಟ್ಟಿದ್ದು ಹೇಗೆ ?

ಈ ಮಹಾಪರ್ಯಟನ ಕಥೆ–ಚರಿತ್ರೆ. ಎಂದರೆ. ಮಾನವನ ಸಮಗ್ರ ಜೀವನಕ್ಕೆ ಕನ್ನಡಿ ಚರಿತ್ರೆ. ಇಲ್ಲಿ ಎರಡು ಅರ್ಥಗಳುಂಟು. ಒಂದು ನಡೆದ ಘಟನೆಗಳು. ಇಂಗ್ಲಿಷರೊಂದಿಗೆ ಟಿಪ್ಪು ಹೋರಾಡಿದ್ದು ನಾಲ್ಕು ಮೈಸೂರು ಯುದ್ಧಗಳು. ಟಿಪ್ಪುವಿನ ಗೆಲುವು–ಸೋಲುಗಳು ಇವೆಲ್ಲ ಚರಿತ್ರೆ. ನಡೆದುದರ ದಾಖಲೆಯೂ ಚರಿತ್ರೆ. ಇಂಗ್ಲಿಷರು ಟಿಪ್ಪುವಿನ ಕದನಗಳ ವಿಷಯವನ್ನು ಯಾರಾದರೂ ಬರೆದಿಟ್ಟರೆ. ಅದೂ ಚರಿತ್ರೆಯೆ.

ಅಧ್ಯಯನ ಸೌಲಭ್ಯಕ್ಕಾಗಿ ಇತಿಹಾಸ ರಚನೆಗೆ ಸಹಾಯಕವಾಗಿರುವ ಸಾಮಗ್ರಿಗಳನ್ನು ಅವಲಂಬಿಸಿ. ಇತಿಹಾಸವನ್ನು ಮೂರು ಭಾಗಗಳಾಗಿ ವಿಂಗಡಿಸಿದ್ದಾರೆ. 1. ಪ್ರಾಕ್ಚಾರಿತ್ರಿಕ ಯುಗ—ಭೂ ಸಂಶೋಧನೆಯಿಂದ ದೊರೆತಿರುವ ಅವಶೇಷಗಳ ಆಧಾರದಿಂದ ರಚಿತವಾಗಿರುವ ಪ್ರಾಚೀನ ಮಾನವನ ಇತಿಹಾಸವೇ ಪ್ರಾಕ್ಚಾರಿತ್ರಿಕ ಯುಗ. ಆಗ ಬರೆಹ ಇನ್ನೂ ಬಳಕೆಯಲ್ಲಿರಲಿಲ್ಲ. ಆದ್ದರಿಂದ ಅವಶೇಷಗಳೇ ಐತಿಹಾಸಿಕ ಆಧಾರಗಳು. 2. ಮಧ್ಯ ಚಾರಿತ್ರಿಕ ಯುಗ—ದೊರೆತ ಅಲ್ಪ ಸ್ವಲ್ಪ ಬರಹಗಳ ಮತ್ತು ಭೂ ಸಂಶೋಧನೆಗಳ ಆಧಾರದ ಮೇಲೆ ರಚಿತವಾದ ಇತಿಹಾಸವೇ ಮಧ್ಯ ಚಾರಿತ್ರಿಕ ಯುಗ. 3. ಚಾರಿತ್ರಿಕ ಯುಗ—ಬರವಣಿಗೆಗಳ ಆಧಾರದ ಮೇಲೆಯೇ ರಚಿತವಾಗಿರುವ ಇತಿಹಾಸ. ಚಾರಿತ್ರಿಕ ಯುಗ.

ಸಾವಿರಾರು ವರ್ಷಗಳ ಹಿಂದಿನ ಚರಿತ್ರೆಗೆ ಆಧಾರವಾಗಿ ಬರಹಗಳು ದೊರೆಯುವುದು ಕಷ್ಟ. ಎಲ್ಲ ದೇಶಗಳಲ್ಲಿ. ಶತಮಾನಗಳ ಕಾಲ ಜನರ ಬಾಯಿಯಿಂದ ಬಾಯಿಗೆ ಬಂದು ಅನಂತರ ಬರೆದಿಟ್ಟ ಪೌರಾಣಿಕ ಕಥೆಗಳು. ಧಾರ್ಮಿಕ ಗ್ರಂಥಗಳು–ಇವುಗಳಲ್ಲಿ ಚರಿತ್ರೆಯ ಅಂಶ ಸೇರಿಕೊಂಡಿದೆ. ಹಿಂದಿನ ಶಾಸನಗಳು ಅಥವಾ ಬರಹಗಳು ದೊರೆತಾಗ ಆಗಿನ ಲಿಪಿಗಳು ಮಾಯವಾಗಿದ್ದರೆ ಅವನ್ನು ಓದುವುದು ಕಷ್ಟ. ಹರಪ್ಪ ಮೊಹೆಂಜೊದಾರೊದಲ್ಲಿ ದೊರೆತ ದಾಖಲೆಗಳನ್ನು ಓದುವುದು ಬಹಳ ಕಷ್ಟವಾಯಿತು.

ಈಗ ತಿಳಿದಿರುವ ಮಟ್ಟಿಗೆ ಪ್ರಾಚೀನ ಮೊದಲನೆಯ ಚರಿತ್ರಕಾರ ಗ್ರೀಸಿನ ಹೆರಾಡೊಟಸ್ (ಸುಮಾರು ಕ್ರಿ. ಪೂ. 484–430). ಇವನನ್ನು 'ಚರಿತ್ರೆಯ ತಂದೆ' ಎಂದು ಕರೆಯುತ್ತಾರೆ. ಹಲವು ದೇಶಗಳಲ್ಲಿ ಸುತ್ತಿದ ಈತ ಅವಶ್ಯ ಸಾಮಗ್ರಿಯನ್ನು ಶೇಖರಿಸಿದ. ಪ್ಯಾಲೆಸ್ಟೈನ್, ಈಜಿಪ್ಟ್, ಉತ್ತರ ಆಫ್ರಿಕ, ದಕ್ಷಿಣ ಇಟಲಿಯ ಗ್ರೀಕ್ ವಸಾಹತುಗಳು–ಹೀಗೆ ಎಲ್ಲ ಇವನು ಮಿತಿಯಿಲ್ಲದ ಕುತೂಹಲದಿಂದ ಹಿಂದಿನ–ಇಂದಿನ ಜೀವನದ ಬಗೆಗೆ ಪ್ರಶ್ನೆಗಳನ್ನು ಕೇಳಿದ. ವಿಷಯವನ್ನು ಸಂಗ್ರಹಿಸಿದ. ಬರೆದಿಟ್ಟ. ಇವನ ಚಾರಿತ್ರಿಕ ಬರಹ ಪರಿಪೂರ್ಣ ಎನ್ನುವಂತಿಲ್ಲ. ಗ್ರೀಕರಲ್ಲದವರೆಲ್ಲ ಅನಾಗರಿಕರು ಎಂದು ಇವನ ಭಾವನೆ. ಅಲ್ಲದೆ ವಾಸ್ತವಿಕ ಸಂಗತಿಗೂ ಕಥೆಗೂ ವ್ಯತ್ಯಾಸವಿಲ್ಲ ಇವನಿಗೆ. ಇದರಿಂದ ಈತನನ್ನು 'ಸುಳ್ಳುಗಳ ತಂದೆ' ಎಂದೂ ಕರೆಯುತ್ತಾರೆ. ಆದರೆ ಹೀಗೆ ಕರೆಯುವುದು ಹೆರಾಡೊಟಸ್‌ಗೆ ಅಪಚಾರ ಬಗೆದಂತೆ.

ಇತಿಹಾಸದ ಪೂರ್ಣ ಅರಿವಿಗೆ ಭೂಗೋಳ ಜ್ಞಾನವೂ ಅತ್ಯವಶ್ಯ. ಭೂಮಿಯ ಉತ್ಪತ್ತಿ. ಜೀವಿಗಳ ಬೆಳವಣಿಗೆ. ಮಾನವನ ಉಗಮ–ಇವುಗಳ ಆಧಾರದ ಮೇಲೆ ಅನೇಕ ವೇಳೆ ಇತಿಹಾಸವನ್ನು ರೂಪಿಸಲಾಗುತ್ತದೆ. ಇತಿಹಾಸ ಭೂಮಿಯ ಮೇಲೆ ವಾಸಿಸುವ ಮನುಷ್ಯರ ವಿಚಾರ ತಿಳಿಸಿದರೆ ಭೂಗೋಳ ಆ ಭೂಮಿಯ ಪರಿಚಯ ಮಾಡಿಕೊಡುತ್ತದೆ. ಒಂದು ದೇಶದ ಚರಿತ್ರೆಯಲ್ಲಿ ಆ ದೇಶದ ಮೇಲ್ಮೈ ಲಕ್ಷಣ ಸಹ ಪ್ರಮುಖ ಪಾತ್ರ ವಹಿಸುತ್ತದೆ. ಆದ್ದರಿಂದ ಭೂಗೋಳ ಇತಿಹಾಸ ಎರಡೂ ಅವಿಭಾಜ್ಯ ವಿಷಯಗಳು ಎನ್ನಬಹುದು.

ಚರಿತ್ರೆಯನ್ನು ಕೆಲವರು ಒಟ್ಟಾಗಿ ಬರೆಯಬಹುದು ಅಥವಾ ಒಬ್ಬೊಬ್ಬರೇ ಬೇಕಾದರೂ ಬರೆಯಬಹುದು. ಒಬ್ಬೊಬ್ಬರೇ ಬರೆಯುವ ಪದ್ಧತಿ ಹಿಂದೆ ರೂಢಿಯಲ್ಲಿದ್ದಿತು. ಆದರೆ ಆಧುನಿಕ ಯುಗದಲ್ಲಿ ಹತ್ತಾರು ಜನ ಇತಿಹಾಸಕಾರರು ಒಟ್ಟಾಗಿ ಸೇರಿ. ತಮಗೆ ಚೆನ್ನಾಗಿ ಗೊತ್ತಿರುವ ಒಂದು ನಿರ್ದಿಷ್ಟ ಕಾಲದ ಇತಿಹಾಸವನ್ನು ಒಬ್ಬೊಬ್ಬರೂ ರಚಿಸಿ ಒಟ್ಟಾಗಿ ಪ್ರಕಟಿಸಿದ್ದಾರೆ. 'ಆಕ್ಸ್‌ಫರ್ಡ್ ಹಿಸ್ಟರಿ ಆಫ್ ಇಂಗ್ಲೆಂಡ್' ಇನ್ನೂ ಅನೇಕ ಇತಿಹಾಸಗಳು ಹೀಗೆಯೇ ರಚಿತವಾಗಿವೆ. ಆದರೆ ಇಂದಿಗೂ ಅನೇಕ ಇತಿಹಾಸಕಾರರು ಒಬ್ಬಂಟಿಗರಾಗಿಯೇ ಇತಿಹಾಸವನ್ನು ರಚಿಸುತ್ತಿದ್ದಾರೆ.

ಇಂದು ನಾವು ಮಾಡಬೇಕಾಗಿರುವ ಕೆಲಸ ಬೆಟ್ಟದಷ್ಟಿರುವಾಗ ಹಿಂದಿನ ಚರಿತ್ರೆಯನ್ನು ಅಧ್ಯಯನ ಮಾಡುವುದರಿಂದ ಏನು ಪ್ರಯೋಜನ ಎಂಬ ಪ್ರಶ್ನೆ ಮೂಡಬಹುದು ಈ ಆಧುನಿಕ ಯುಗದಲ್ಲಿ. ಆದರೆ ಮಾನವನಿಗೆ ಇತಿಹಾಸ ಕಲಿಸುವ ಪಾಠ ಅಮೂಲ್ಯವಾದದ್ದು. ಒಬ್ಬ ವ್ಯಕ್ತಿ ಉತ್ತಮ ನಾಗರಿಕನಾಗಲು. ಉತ್ತಮ ರಾಜಕಾರಣಿಯಾಗಲು. ಸಮಾಜ ಸುಧಾರಕನಾಗಲು ಇತಿಹಾಸ ತರಬೇತಿ ನೀಡುತ್ತದೆ. ಒಂದು ನೆಲದಲ್ಲಿ ಒಳ್ಳೆಯ ಬೆಳೆ ತೆಗೆಯಬೇಕು. ಹಾಕುತ್ತಿರುವ ಬೆಳೆಯನ್ನು ಬದಲಾಯಿಸಬೇಕು ಎನ್ನುವವರು ಅದರ ಮಣ್ಣು. ನೀರಿನ ಆಸರೆ ಎಲ್ಲವನ್ನೂ ತಿಳಿಯಬೇಕು. ದೇಶವನ್ನು ಆಳಬೇಕು. ಸಮಾಜದ ರೀತಿಯನ್ನು ಬದಲಾಯಿಸಬೇಕು. ಉತ್ತಮಗೊಳಿಸಬೇಕು ಎನ್ನುವವರು ಆ ದೇಶದ ಸ್ಥಿತಿ ಹಾಗೇಕಾಯಿತು. ಅಲ್ಲಿನ ಸಂಸ್ಥೆಗಳು ಮತ್ತು ಪದ್ಧತಿಗಳು ಹುಟ್ಟಿ ಬೆಳೆದದ್ದು ಹೇಗೆ ಎಂದು ತಿಳಿಯಬೇಕು. ಬ್ಯಾಬಿಲನ್. ಈಜಿಪ್ಟ್. ಗ್ರೀಸ್. ರೋಮ್‌ಗಳಲ್ಲಿ ಮಹಾ ಸಾಮ್ರಾಜ್ಯಗಳು ಮೆರೆದು ಅಳಿದುವು. ಅಶೋಕ, ಅಕ್ಬರ್, ಕೃಷ್ಣದೇವರಾಯ ಕಟ್ಟಿದ ಸಾಮ್ರಾಜ್ಯಗಳು ಉರುಳಿದುವು. ಹಿಂದೆ ಉನ್ನತ ಸ್ಥಿತಿಗೆ ಬರುವ ಹಂಬಲವಿರುವ ದೇಶವಾದರೆ. ಒಂದು ರಾಷ್ಟ್ರದ

ಅಭಿವೃದ್ಧಿಗೆ ಕಾರಣಗಳೇನು ಎಂಬುದನ್ನು ಅರ್ಥ ಮಾಡಿಕೊಳ್ಳ ಬೇಕು. ಚರಿತ್ರೆಯ ಅಭ್ಯಾಸ ವಿವೇಕಕ್ಕೆ ದಾರಿ. ನನ್ನ ದೇಶವೇ ದೊಡ್ಡದು, ನನ್ನ ಧರ್ಮವೇ ದೊಡ್ಡದು, ನನ್ನ ಮತವೇ ದೊಡ್ಡದು—ಇಂಥ ಸಂಕುಚಿತ ಭಾವನೆಗಳೆಲ್ಲ ಕಳಚಿಬೀಳುತ್ತವೆ. ಸಾವಿರಾರು ವರ್ಷಗಳ ಇತಿಹಾಸದ ಸುರುಳಿ ಕಣ್ಣ ಮುಂದೆ ಬಿಚ್ಚಿದಾಗ ಮಾನುಕುಲವೆಲ್ಲ ಒಂದು ಎಂಬ ಭಾವನೆ ಬೆಳೆಯುತ್ತದೆ. ಇದಕ್ಕೆ ಇತಿಹಾಸ ಜ್ಞಾನ ಅತ್ಯವಶ್ಯ.

ಗತಕಾಲದ ಅನುಭವ ಮತ್ತು ಮಾರ್ಗದರ್ಶನಗಳ ಆಧಾರದ ಮೇಲೆ ಮುಂದಿನ ಬದುಕನ್ನು ರೂಪಿಸಬಯಸುವ ಮಾನವರಿಗೆ ಇತಿಹಾಸದ ಅಧ್ಯಯನ ಅನಿವಾರ್ಯ.

ಮಾನವನ ಈಗಿನ ವಿಚಾರ ಧೋರಣೆ ತಿಳಿದುಕೊಳ್ಳಲು ಅವನ ದೇಶದ ಹಿನ್ನಲೆಯ ಚರಿತ್ರೆಯು ಅಂತ್ರ ಅವಶ್ಯ. ಪ್ರತಿಯೊಂದು ದೇಶದ ಚರಿತ್ರೆಯನ್ನು ಸ್ವಲ್ಪವರಲ್ಲಿ ಮನವರಿಕೆ ಮಾಡಿಕೊಂಡರೆ, ಆ ದೇಶದ ಜನರ ರೀತಿ, ನೀತಿ, ವಿಚಾರ ಧೋರಣೆ ತಿಳಿದುಕೊಳ್ಳಲು ಸುಲಭ. ಆಧುನಿಕ ಪ್ರಪಂಚದಲ್ಲಿ ಪ್ರತಿಯೊಂದು ರಾಷ್ಟ್ರದ ಚರಿತ್ರೆ ತಿಳಿದುಕೊಳ್ಳುವುದು ಬಹಳ ಮಹತ್ವದ್ದು.

ಭೂಮಿ ಹುಟ್ಟಿ ಕೋಟ್ಯಂತರ ವರ್ಷಗಳಾದುವು. ಅಲ್ಲಿಂದ ಇಲ್ಲಿಯವರೆಗಿನ ಚರಿತ್ರೆಯನ್ನು ಅರ್ಥಮಾಡಿಕೊಳ್ಳಲು ಲಕ್ಷಗಟ್ಟಲೆ, ಕೋಟಿಗಟ್ಟಲೆ ವರ್ಷಗಳ ಅವಧಿಯಲ್ಲಿ ಯೋಚನೆ ಮಾಡಬೇಕು. ಇದನ್ನು ಸುಲಭಗೊಳಿಸಲು, ಭೂಮಿ ಹುಟ್ಟಿದಾಗಿನಿಂದ ಇಲ್ಲಿಯವರೆಗೆ ಒಂದು ವರ್ಷ, ಅದು ಜನವರಿ ಒಂದರಂದು ಹುಟ್ಟಿತು, ಈಗ ಡಿಸೆಂಬರ್ 31ರ ಮಧ್ಯರಾತ್ರಿ ಎಂದು ಇಟ್ಟುಕೊಳ್ಳೋಣ. ಆಗ ಭೂಮಿಯ ಚರಿತ್ರೆ ಹೀಗಿರುತ್ತದೆ :

ಜನವರಿ 1–ಆಗಸ್ಟ್ 31 ; ಜೀವಂತ ಪ್ರಾಣಿಯೇ ಇಲ್ಲ.

ಸೆಪ್ಟೆಂಬರ್ 1–ಅಕ್ಟೋಬರ್ 31; ತುಂಬ ಸರಳರೂಪದ ಪ್ರಾಣಿಗಳು.

ನವೆಂಬರ್ 1–ಡಿಸೆಂಬರ್ 7: ಕೀಟಗಳು, ಎಲುಬಿನ ಮೀನುಗಳು, ಹರಿದಾಡುವ ಪ್ರಾಣಿಗಳು, ಪಕ್ಷಿಗಳು.

ಡಿಸೆಂಬರ್ 8–15 ; ಸಸ್ತನಿ ಪ್ರಾಣಿಗಳು.

ಡಿಸೆಂಬರ್ 16–31 ; ಸಸ್ತನಿಗಳ ವಿಕಾಸ.

ಡಿಸೆಂಬರ್ 31, ರಾತ್ರಿ ಸುಮಾರು 11.45: ಮನುಷ್ಯ ಎಂದು ಗುರುತಿಸಬಹುದಾದ ಪ್ರಾಣಿ.

ಡಿಸೆಂಬರ್ 31, ರಾತ್ರಿ 11.59: ಮನುಷ್ಯ ಚರಿತ್ರೆಯನ್ನು ಬರೆಯಲು ಪ್ರಾರಂಭಿಸುವ ಕಾಲ.

## ಚಾರ್ಲ್ಸ್, ಮೊದಲನೆಯ

“ಅವನ ಬದುಕಿನಲ್ಲೆಲ್ಲ ಅವನಿಗೆ ತುಂಬ ಶೋಭಿಸಿದುದೆಂದರೆ ಆತ ಅದನ್ನು ಕೊನೆಗಾಣಿಸಿದ ರೀತಿ”.

ಹೀಗೆಂದು ಯಾರ ಬಗ್ಗೆ ಹೇಳಿರುವುದು ಗೊತ್ತೆ ?

ಆತ ಒಬ್ಬ ಅರಸ. ಇಂಗ್ಲೆಂಡಿನ ಚರಿತ್ರೆಯಲ್ಲಿ ಪ್ರಜೆಗಳಿಂದ ಮರಣಕ್ಕೆ ಒಳಗಾದವನು—ಮೊದಲನೆಯ ಚಾರ್ಲ್ಸ್.



ಪ್ರಜೆಗಳಿಂದ ಮರಣಕ್ಕೆ ಒಳಗಾದ ಅರಸ ಮೊದಲನೆಯ ಚಾರ್ಲ್ಸ್

ಗ್ರೇಟ್ ಬ್ರಿಟನ್ ಮತ್ತು ಐರ್‌ಲೆಂಡಿನ ರಾಜನಾದ ಚಾರ್ಲ್ಸ್, ಮೊದಲನೆಯ ಜೇಮ್ಸ್‌ನ ಮಗ. 1600ರ ನವೆಂಬರ್ 19ರಂದು ಸ್ಕಾಟ್ಲೆಂಡಿನ ಡನ್‌ಫರ್ಮ್‌ಲೈನಿನಲ್ಲಿ ಹುಟ್ಟಿದ. ಆತ ಕಾಯಿಲೆಯಲ್ಲಿ ಬಹಳವಾಗಿ ನೊಂದು ಬೆಳೆದ. ದೊಡ್ಡವನಾದ ಮೇಲೆ ಕೂಡ ಅವನ ಕಾಲುಗಳಲ್ಲಿ ತ್ರಾಣವಿರಲಿಲ್ಲ. ಆದ್ದರಿಂದಲೇ ಬಾಲ್ಯದಿಂದಲೂ ನಡೆಯುವುದಕ್ಕಿಂತ ಕುದುರೆ ಸವಾರಿಯೇ ಅವನಿಗೆ ಪ್ರಿಯವಾಯಿತು. ಮಾತನಾಡುವಾಗ ಉಗ್ಗುತ್ತಿದ್ದ.

1603ರಲ್ಲಿ ಆತನ ತಂದೆ ಇಂಗ್ಲೆಂಡಿನ ರಾಜನಾದ. ಚಾರ್ಲ್ಸ್‌ಗೆ ಹನ್ನೆರಡು ವರ್ಷ ವಯಸ್ಸಾಗಿದ್ದಾಗ ಅವನ ಅಣ್ಣ ಹೆನ್ರಿ ಸತ್ತುಹೋಗಲು ಚಾರ್ಲ್ಸ್ ಉತ್ತರಾಧಿಕಾರಿಯಾದ.

1626ರಲ್ಲಿ ಚಾರ್ಲ್ಸ್‌ನ ತಂದೆ ಸತ್ತಮೇಲೆ ಚಾರ್ಲ್ಸ್ ಇಂಗ್ಲೆಂಡಿನ ದೊರೆಯಾದ. ಆಳ್ವಿಕೆಯ ಮೊದಲ ಮೂರು ವರ್ಷಗಳಲ್ಲಿ ಅವನಿಗೆ ಬಕಿಂಗಂ ಡ್ಯೂಕ್‌ನ ನೆರವು ದೊರೆಯಿತು. ಆದರೆ 1628ರಲ್ಲಿ ಈ ಡ್ಯೂಕ್ ಕೊಲ್ಲಲ್ಪಟ್ಟ. ಆ ಸ್ಥಾನವನ್ನು ತುಂಬಲು ಯಾರೂ ದೊರೆಗೆ ಸಿಕ್ಕಲಿಲ್ಲ. ಎಲ್ಲ ವಿಷಯದಲ್ಲಿಯೂ ತನ್ನ ಹೆಂಡತಿಯ ಸಲಹೆಯನ್ನು ಕೇಳಲಾರಂಭಿಸಿದ. ಅವಳ ಸಲಹೆಯ ಮೇರೆಗೆ ಅನೇಕ ಬಾರಿ ಮೂರ್ಖ ಕೆಲಸಗಳನ್ನೂ ಮಾಡಿದ.

ರಾಜರ ದೇವದತ್ತ ಅಧಿಕಾರದ ಬಗೆಗೆ ನಂಬಿಕೆಯಿದ್ದ ಚಾರ್ಲ್ಸ್ ಶಾಸಕರ ಇಚ್ಛೆಗನುಗುಣವಾಗಿ ರಾಜ್ಯಭಾರ ಮಾಡಲು ಒಪ್ಪಲಿಲ್ಲ.

ಪಾರ್ಲಿಮೆಂಟಿನ ಒಪ್ಪಿಗೆ ಇಲ್ಲದೆ ತೆರಿಗೆ ವಿಧಿಸಕೂಡದೆಂಬ ತತ್ತ್ವವನ್ನು ಕಡೆಗಾಣಿಸಿ ತೆರಿಗೆಗಳನ್ನು ಹೇರಲು ಪ್ರಯತ್ನಿಸಿದ. ನೌಕಾದಳದ ಖರ್ಚಿಗಾಗಿ ವಿಧಿಸಿದಂಥ ತೆರಿಗೆಗಳು ಪ್ರಜೆಗಳಲ್ಲಿ ವಿಶೇಷ ವಿರೋಧವನ್ನು ಉಂಟುಮಾಡಿದುವು. ಹ್ಯಾಂಪ್ಡನ್ ಮತ್ತು ಇನ್ನೂ ನಾಲ್ವರು ಪಾರ್ಲಿಮೆಂಟ್ ಸದಸ್ಯರನ್ನು ಸೆರೆಹಿಡಿಯಲು ಚಾರ್ಲ್ಸ್ ಮಾಡಿದ ಪ್ರಯತ್ನ ಜನ ಕಂಡು ಕೋಪಗೊಂಡರು. ಶಾಸಕರು ಮತ್ತು ದೊರೆಯ ನಡುವಣ ಕಲಹ ಅಂತರ್ಯುದ್ಧಕ್ಕೆ ಎಡೆಗೊಟ್ಟಿತು. ಪ್ರಾರಂಭದಲ್ಲಿ ರಾಜನ ಸೈನ್ಯಕ್ಕೆ ಜಯವಾಯಿತು. ಆದರೆ ಆಲಿವರ್ ಕ್ರಾಮ್‌ವೆಲ್ ಎನ್ನುವ ಸೈನ್ಯಾಧಿಕಾರಿ ಪಾರ್ಲಿಮೆಂಟ್ ದಳಕ್ಕೆ ಜಯವನ್ನು ತಂದುಕೊಟ್ಟ. ಚಾರ್ಲ್ಸ್‌ನನ್ನು ಸೆರೆಹಿಡಿದರು. ಜೀವನದುದ್ದಕ್ಕೂ ದುರ್ಬಲನೂ ಅವಿವೇಕಿಯೂ ಆಗಿದ್ದ ಚಾರ್ಲ್ಸ್ ಸೆರೆಮನೆಯಲ್ಲಿ ಬಹು ಗಾಂಭೀರ್ಯದಿಂದಲೂ ತಾಳ್ಮೆಯಿಂದಲೂ ನಡೆದುಕೊಂಡ. 1649ರ ಜನವರಿ 3 ರಂದು ಅವನನ್ನು ಗಲ್ಲಿಗೇರಿಸಿದರು. ಧೈರ್ಯದಿಂದಲೂ ಸಮಚಿತ್ತದಿಂದಲೂ ರಾಜ ಸಾವನ್ನು ಎದುರಿಸಿದ.

ಚಾರ್ಲ್ಸ್ ಸ್ವಭಾವತಃ ಧಾರ್ಮಿಕ ಪ್ರವೃತ್ತಿಯವನು. ಆದರೆ ಅವನಿದ್ದ ಪರಿಸ್ಥಿತಿಗೆ ಅನುಗುಣವಾಗಿ ಅವನ ಮನೋಧರ್ಮವಿರಲಿಲ್ಲ. ಜನತೆ ಅವನನ್ನು ಅಪಾರ್ಥಮಾಡಿಕೊಂಡಿದ್ದಂತೆ ಅವನು ಜನರನ್ನು ಅಪಾರ್ಥಮಾಡಿಕೊಂಡಿದ್ದ. ಇವನಿಗೆ ವಿಜ್ಞಾನದಲ್ಲಿ ಆಸಕ್ತಿ ಇತ್ತು. ರಕ್ತಪರಿಚಲನೆ ಹೇಗೆ ನಡೆಯುವುದೆಂಬುದನ್ನು ಕಂಡುಹಿಡಿದ ಹಾರ್ವೆಯನ್ನು ಇವನು ಪ್ರೋತ್ಸಾಹಿಸಿದ.

ಚಾರ್ಲ್ಸ್‌ನ ಮರಣಾನಂತರ ಇಂಗ್ಲೆಂಡ್ ಗಣರಾಜ್ಯವಾಯಿತು. ಇಂಗ್ಲೆಂಡಿನ ಇತಿಹಾಸದಲ್ಲಿ ರಾಜಪ್ರಭುತ್ವವಿಲ್ಲದಿದ್ದುದು ಈ ಹನ್ನೊಂದು ವರ್ಷಗಳ ಕಾಲ ಮಾತ್ರ (1649-1660). ಚಾರ್ಲ್ಸ್‌ನ ಸೋಲು ಇಂಗ್ಲೆಂಡಿನಲ್ಲಿ ಪಾರ್ಲಿಮೆಂಟಿನ ಅಧಿಕಾರವನ್ನು ದೃಢಗೊಳಿಸಿತು. ರಾಜನು ಸಂಸತ್ತನ್ನು ಮೀರಿ ನಡೆಯುವಂತಿಲ್ಲ ಎಂಬುದು ಸ್ಪಷ್ಟವಾಯಿತು. 1649ರಲ್ಲಿ ಹೌಸ್ ಆಫ್ ಕಾಮನ್ಸ್, ದೇಶದ ಪರಮಾಧಿಕಾರ ಪ್ರಜೆಗಳಿಗೆ ಸೇರಿದ್ದೆಂದೂ ಅವರ ಪ್ರತಿನಿಧಿಯಾದ ಹೌಸ್ ಆಫ್ ಕಾಮನ್ಸ್‌ಗೆ ಎಲ್ಲ ಅಧಿಕಾರ ಸೇರಿದ್ದೆಂದೂ ಘೋಷಿಸಿತು. 1660ರಲ್ಲಿ ಇವನ ಮಗ ಎರಡನೆಯ ಚಾರ್ಲ್ಸ್‌ನನ್ನು ಇಂಗ್ಲೆಂಡಿನವರು ತಮ್ಮ ರಾಜನೆಂದು ಅಂಗೀಕರಿಸಿದರು.


Warrant to Execute King Charles the First. AD 1648.

ಚಾರ್ಲ್ಸ್‌ನಿಗೆ ಮರಣದಂಡನೆ ವಿಧಿಸುವ ನಿರ್ಣಯ:
ಕ್ರಾಮ್‌ವೆಲ್‌ನ ಸಹಿ ಮೊದಲನೆಯದು

## ಚಿಲಿ

ರಾಬಿನ್‌ಸನ್ ಕ್ರೂಸೋ ಕಥೆ ಎಷ್ಟು ಸೊಗಸಾಗಿದೆ! ಹಡಗು ಒಡೆದು ಒಬ್ಬನೇ ಒಂದು ದ್ವೀಪವನ್ನು ಸೇರಿ, ತನ್ನ ಸ್ವಂತ ಬುದ್ಧಿಯ ಬಲದಿಂದ, ಶ್ರಮದಿಂದ ಉಳಿದು ತಿಂಗಳುಗಟ್ಟಲೆ ವಾಸಮಾಡಿದ ಧೀರ ಅವನು.

ಇದು ಸಂಪೂರ್ಣವಾಗಿ ಕಥೆಯಲ್ಲ. ಅಲೆಕ್ಸಾಂಡರ್ ಸೆಲ್‌ಕರ್ಕ್ ಎಂಬ ಇಂಗ್ಲಿಷ್ ನಾವಿಕ ನಾಲ್ಕು ವರ್ಷ ನಾಲ್ಕು ತಿಂಗಳ ಕಾಲ ಜುಆನ್ ಫರ್ನಾಂಡಿಸ್ ಗುಂಪಿನ ಒಂದು ದ್ವೀಪದಲ್ಲಿ ಒಂಟಿಯಾಗಿ ವಾಸವಾಗಿದ್ದ. ಈ ದ್ವೀಪ ಚಿಲಿಗೆ ಸೇರಿದ್ದು; ತೀರದಿಂದ 644 ಕಿಲೊಮೀಟರು ದೂರದಲ್ಲಿದೆ. ಈಗ ಅದು ರಾಷ್ಟ್ರೀಯ ವನ.

ದಕ್ಷಿಣ ಅಮೆರಿಕದ ಪಶ್ಚಿಮಕ್ಕೆ ಶಾಂತಸಾಗರದ ತೀರದಲ್ಲಿ ಕಿರಿದಾಗಿ ಒಂದು ಪಟ್ಟಿಯ ಹಾಗಿರುವ ಚಿಲಿ, ಪರ್ವತ ಪ್ರದೇಶವೆನಿಸಿದೆ. ಅಸಂಖ್ಯಾತ ದ್ವೀಪಗಳಿಂದ ಕೂಡಿದೆ.

ಪೂರ್ವಕ್ಕೆ ಆ್ಯಂಡಿಸ್ ಪರ್ವತ, ಪಶ್ಚಿಮಕ್ಕೆ ಶಾಂತಸಾಗರ, ಉತ್ತರಕ್ಕೆ ಪೆರು ಮತ್ತು ದಕ್ಷಿಣಕ್ಕೆ ಡ್ರೇಕ್‌ದಾರಿ. (ಇಂಗ್ಲೆಂಡಿನ ಅನ್ವೇಷಕ ಫ್ರಾನ್ಸಿಸ್ ಡ್ರೇಕ್ 1578ರಲ್ಲಿ ಬಳಸಿದ ದಾರಿ). ಜುಆನ್ ಫರ್ನಾಂಡಿಸ್ ದ್ವೀಪಗಳು ಚಿಲಿಗೆ ಸೇರಿವೆ. ಉತ್ತರ ಚಿಲಿ, ಅಟಕಾಮಾ ಮರುಭೂಮಿ. ಇಲ್ಲಿಯೇ ಉತ್ಕೃಷ್ಟ ನೈಟ್ರೇಟ್ ನಿಕ್ಷೇಪವಿದೆ. ಇದರಿಂದ ಅಯೊಡಿನ್ ತೆಗೆಯುವುದು ಮುಖ್ಯ ಉದ್ಯೋಗವೆನಿಸಿದೆ. ಮಧ್ಯ ಚಿಲಿ ಫಲವತ್ತಾದ ಭಾಗ. ದಕ್ಷಿಣ ಚಿಲಿ ಸರೋವರ, ಕಾಡಿನಿಂದ ಕೂಡಿ ಮನೋಹರವಾಗಿದೆ. ಟೆರ್ರಾ ಡೆಲ್‌ಫ್ಯೂಗೋ ಅಥವಾ ಅಗ್ನಿಭೂಮಿದ್ವೀಪದ ಒಂದು ಭಾಗ ಚಿಲಿಗೆ ಸೇರಿದೆ.

ಉಷ್ಣವಲಯದಿಂದ ಶೀತವಲಯದವರೆಗೂ ಹರಡಿಕೊಂಡಿರುವ ಚಿಲಿಯಲ್ಲಿ ನಾನಾ ಬಗೆಯ ಹವಾಗುಣ. ಉತ್ತರದಲ್ಲಿ 30° ಫಾ. ಉಷ್ಣಾಂಶವಿದ್ದರೆ ದಕ್ಷಿಣದಲ್ಲಿ 40° ಫಾ. ಉಷ್ಣಾಂಶ. ಮಳೆಯೂ ಚೆನ್ನಾಗಿ ಆಗುತ್ತದೆ. ಮಧ್ಯ ಚಿಲಿಯಲ್ಲಿ ಗೋಧಿ, ಆಲೂಗಡ್ಡೆ, ಭತ್ತ, ಸಕ್ಕರೆಬೀಟ್, ಈರುಳ್ಳಿ, ಮುಸುಕಿನ ಜೋಳ ಮುಂತಾದುವನ್ನು ಬೆಳೆಯುತ್ತಾರೆ. ದ್ರಾಕ್ಷಿ ವಿಶೇಷವಾಗಿ ಬೆಳೆಸುತ್ತಾರೆ. ಚಿಲಿಯಲ್ಲಿ ಖನಿಜಸಂಪತ್ತು ಸಾಕಷ್ಟಿದೆ. ತಾಮ್ರದ ಉತ್ಪಾದನೆಯಲ್ಲಿ ಪ್ರಪಂಚದ ಪ್ರಮುಖ ದೇಶಗಳಲ್ಲಿ ಒಂದು.

ಹದಿನಾರನೆಯ ಶತಮಾನದಲ್ಲಿ ಇಲ್ಲಿಂದಲೇ ಆಲೂಗಡ್ಡೆಗಳನ್ನು ಮೊದಲಸಲ ಯೂರೋಪಿಗೆ ತೆಗೆದುಕೊಂಡು ಹೋದರು.

ಚಿಲಿಯ ಬಹುಪಾಲು ಜನ ಮೆಸ್ಟಿಜೋಗಳು. ಅಟಕಾನಿಯ ಇಂಡಿಯನ್ನರು ಮತ್ತು ಸ್ಪೇನಿನವರು ಇವರ ಪೂರ್ವಜರು. ಮಧ್ಯ ಚಿಲಿಯಲ್ಲಿ ಈಗಲೂ ಶುದ್ಧ ಅಟಕಾನಿಯ ಇಂಡಿಯನ್ನರಿದ್ದಾರೆ. ಯುದ್ಧ ಪ್ರಿಯರಾದ ಈ ಜನ ಅಸಾಧಾರಣ ವೀರರು. ಬೇಟೆ ಮತ್ತು ಮೀನು ಹಿಡಿಯುವುದೇ ಇವರ ಜೀವನೋಪಾಯವಾಗಿತ್ತು. [illegible] ಚಿಲಿಯನರು ರೋಮನ್ ಕ್ಯಾಥಲಿಕರು. ಸ್ಪ್ಯಾನಿಷ್ ಭಾಷೆ ದೇಶವಾದ್ಯಂತ ಬಳಕೆ

ಬಳಸಲು ಮೊದಲು ಮಾಡಿದರು. ಷಾಂಗ್ ಮನೆತನದವರು ಉತ್ತರ ಚೀನವನ್ನು ಆರು ಶತಮಾನಗಳ ಕಾಲ ಆಳಿದರು. ಪ್ರಾಣಿಗಳ ಮೂಳೆ ಮತ್ತು ಆಮೆಯ ಚಿಪ್ಪಿನಮೇಲೆ ಬರೆಯುವುದು ಇವರ ಕಾಲದಲ್ಲಿ ಪ್ರಾರಂಭವಾಯಿತು. ಕ್ರಿ. ಪೂ. 1028ರಿಂದ ಕ್ರಿ. ಪೂ. 256ರ ವರೆಗೆ ಚೌ ಮನೆತನದವರು ಉತ್ತರ ಚೀನದ ಪಶ್ಚಿಮ ಭಾಗದಲ್ಲಿ ಆಳಿದರು. ಇವರ ಕಾಲದಲ್ಲೇ ನಾಣ್ಯಗಳು ಜಾರಿಗೆ ಬಂದುವು. ಪಶ್ಚಿಮದಿಂದ ಆಕ್ರಮಣ ತಪ್ಪಿಸುವುದಕ್ಕೋಸ್ಕರ ಕಟ್ಟಿದ ಚೀನದ ಮಹಾಗೋಡೆಯ ಮೊದಲ ಭಾಗ ಇವರೇ ಕಟ್ಟಿಸಿದರು. ಮಹಾಕಾಲುವೆ ನಿರ್ಮಾಣವಾಯಿತು. ಖಗೋಳವಿಜ್ಞಾನ ಬೆಳಕಿಗೆ ಬಂತು. ಕ್ರಿ. ಪೂ. 202ರಿಂದ ಕ್ರಿ. ಶ. 220ರ ವರೆಗೆ ಹ್ಯಾನ್ ಮನೆತನದವರ ಕಾಲ. ಆಗ ಭಾರತದಿಂದ ಬಂದವರು ಬೌದ್ಧಮತ ಹರಡಿದರು. ಕಾಗದ ತಯಾರಿಸುವ ಶೋಧನೆ ನಡೆಯಿತು. ಐದರಿಂದ ಏಳನೆಯ ಶತಮಾನಗಳ ಅವಧಿಯಲ್ಲಿ ಚೀನೀ ಯಾತ್ರಿಕರು ಭಾರತಕ್ಕೆ ಬಂದರು. ಇವರ ಬರಹಗಳಿಂದ ಭಾರತದ ವಿಷಯ ನಮಗೆ ಎಷ್ಟೋ ವಿವರಗಳು ದೊರೆಯುತ್ತವೆ. 581 ರಿಂದ 618ರ ವರೆಗೆ ಆಳಿದ ಸುಯಿ ಮನೆತನದವರ ಕಾಲದಲ್ಲಿ ಚೀನ ಒಂದೇ ಚಕ್ರಾಧಿಪತ್ಯವಾಯಿತು. ಮರದ ಅಚ್ಚಿನಿಂದ ಮುದ್ರಿಸಿದ ಪುಸ್ತಕಗಳಾದುವು. 960 ರಿಂದ 1279ರ ಅವಧಿಯಲ್ಲಿ ಸುಂಗ್ ಮನೆತನದವರು ಆಳುತ್ತಿದ್ದರು. ಯುದ್ಧದಲ್ಲಿ ಸಿಡಿಮದ್ದನ್ನು ಉಪಯೋಗಿಸಲಾರಂಭಿಸಿದರು. ಸಾಹಿತ್ಯ ಮತ್ತು ಕಲೆಗಳು ಪ್ರವರ್ಧಮಾನಕ್ಕೆ ಬಂದುವು. ಹದಿಮೂರನೆಯ ಶತಮಾನದಲ್ಲಿ ಮಂಗೋಲಿಯನ್ನರು ಚೀನದ ಮೇಲೆ ದಾಳಿ ಮಾಡಿ ಕೆಲವು ಭಾಗಗಳನ್ನು ಗೆದ್ದುಕೊಂಡರು. 1260ರಲ್ಲಿ ಕುಬ್ಲಾಯ್ ಖಾನ್ ಇಡೀ ಚೀನವನ್ನು ಗೆದ್ದು ತಾನೇ ಚಕ್ರವರ್ತಿಯಾದ. ಇವನ ಕಾಲದಲ್ಲಿ ಮಾರ್ಕೊ ಪೋಲೋ ಚೀನಕ್ಕೆ ಬಂದಿದ್ದ. ಚೀನೀಯರು ಮಂಗೋಲಿಯನ್ನರನ್ನು 1368ರಲ್ಲಿ ಓಡಿಸಿ ಮಿಂಗ್ ವಂಶವನ್ನು ಸ್ಥಾಪಿಸಿದರು. ಪ್ರಬಲರಾದ ಮಿಂಗ್ ಅರಸರು ಮಂಗೋಲಿಯನ್ನರನ್ನು ಸೈಬೀರಿಯದವರೆಗೂ ಓಡಿಸಿಬಿಟ್ಟರು. 1644ರಲ್ಲಿ ಮಂಚೂಗಳು ದಾಳಿಮಾಡಿ ಚೀನವನ್ನು ಆಳತೊಡಗಿದರು. ಅವರು ಚೀನದವರ ಪದ್ಧತಿಗಳನ್ನು ಅನುಸರಿಸುತ್ತ, ದೇಶವನ್ನು ಸುಭಿಕ್ಷವಾಗಿಸಿದರು.

ಮಿಂಗ್‌ರ ಕಾಲದ ವಿಶ್ವಕೋಶದ ಪ್ರಥಮ ಪ್ರತಿಯೊಂದನ್ನು ಬ್ರಿಟಿಷ್ ವಸ್ತುಸಂಗ್ರಹಾಲಯದಲ್ಲಿ ಇಟ್ಟಿದ್ದಾರೆ.

1514ರಲ್ಲಿ ಪೋರ್ಚುಗೀಸರು ದಕ್ಷಿಣ ಚೀನದ ತೀರದಲ್ಲಿ ಬಂದಿಳಿದರು. ಯೂರೋಪಿಯನ್ನರು ಚೀನಕ್ಕೆ ಬಂದು ವ್ಯಾಪಾರ ಮಾಡಲು, ಇಲ್ಲಿಂದ ರೇಷ್ಮೆ, ಚಹ, ಪಿಂಗಾಣಿ ಸಾಮಾನುಗಳನ್ನು ತೆಗೆದುಕೊಂಡು ಹೋಗಲು, ಏನೊಂದು ನಿರ್ಬಂಧಗಳೂ ಇರಬಾರದು ಎಂದು ಬಯಸಿದರು. ಇದರಿಂದ ಆಗಾಗ ಯುದ್ಧಗಳಾಗತೊಡಗಿದುವು. 1842ರಲ್ಲಿ ಆದ ಯುದ್ಧದ ಪರಿಣಾಮವಾಗಿ ಚೀನದವರು ಕೆಲವು ಬಂದರುಗಳನ್ನು ವಿದೇಶೀ ವ್ಯಾಪಾರಕ್ಕಾಗಿ ತೆರೆಯಬೇಕಾಯಿತು. ಫ್ರಾನ್ಸ್, ಜರ್ಮನಿ ಮತ್ತು ರಷ್ಯಗಳವರೂ ಕೆಲವು ಪ್ರದೇಶಗಳನ್ನು ತಮ್ಮ ವ್ಯಾಪಾರ ಸೌಲಭ್ಯಕ್ಕಾಗಿ ಬಳಸಿಕೊಳ್ಳಲು ಮೊದಲುಮಾಡಿದರು.

1911ರಲ್ಲಿ ಕ್ರಾಂತಿಯಾಗಿ, ಚಕ್ರವರ್ತಿ ತನ್ನ ಅಧಿಕಾರವನ್ನು ತ್ಯಜಿಸಿದ. ಚೀನ ಗಣರಾಜ್ಯವಾಯಿತು. ಆದರೆ ದೇಶದಲ್ಲಿ ಅಂತರ್ಯುದ್ಧಗಳು ಆರಂಭವಾದುವು. ಸನ್ ಯಾತ್ ಸೇನ್ ರಾಷ್ಟ್ರೀಯ ಜನತಾ ಪಕ್ಷವೊಂದನ್ನು ಕಟ್ಟಿದರು. ಚೀನೀ ಭಾಷೆಯಲ್ಲಿ ಇದನ್ನು ಕೂಮಿನ್‌ಟಾಂಗ್ ಎನ್ನುತ್ತಾರೆ. ಈ ಪಕ್ಷದ ಬಲ ಚೀನದಲ್ಲಿ ಹೆಚ್ಚಿತು. 1925ರಲ್ಲಿ ಸನ್ ಯಾತ್ ಸೇನ್ ಮರಣಹೊಂದಿದಾಗ ಅದೇ ಪಕ್ಷದ ಚಿಯಾಂಗ್ ಕೈ-ಷೇಕ್ ನಾಯಕರಾದರು. ಇವರು ಕಮ್ಯೂನಿಸ್ಟರ ವಿರುದ್ಧ ಹೋರಾಡಿ ಸ್ವಲ್ಪಮಟ್ಟಿಗೆ ಯಶಸ್ವಿಯಾದರೂ ಕೆಲವು ಭಾಗಗಳಲ್ಲಿ ಕಮ್ಯೂನಿಸ್ಟರ ಅಧಿಕಾರ ಉಳಿಯಿತು. ಆರಂಭದಲ್ಲಿ ಪರಾಜಿತರಾದ ಕಮ್ಯೂನಿಸ್ಟರು ವಾಯುವ್ಯ ಭಾಗಕ್ಕೆ ಹೋಗಿ ಯೆನಾನ್‌ನಲ್ಲಿ ಸರಕಾರ ಸ್ಥಾಪಿಸಿದರು. 1931ರಲ್ಲಿ ಜಪಾನಿನವರು ಮಂಚೂರಿಯಾವನ್ನು ಗೆದ್ದರು. ಮಿತ್ರರಾಷ್ಟ್ರಗಳು 1945ರಲ್ಲಿ ಜಪಾನನ್ನು ಸೋಲಿಸಿದುವು. ಈ ಸೋಲಿನ ಬಳಿಕ ಕಮ್ಯೂನಿಸ್ಟ್ ಮತ್ತು ಕೂಮಿನ್‌ಟಾಂಗರ ನಡುವೆ ಯುದ್ಧ ತೀವ್ರಗೊಂಡಿತು. ಕಮ್ಯೂನಿಸ್ಟರು 1949ರಲ್ಲಿ ಪೀಕಿಂಗನ್ನು ಚೀನದ ಜನತಾ ಗಣರಾಜ್ಯದ ರಾಜಧಾನಿ ಮಾಡಿಕೊಂಡರು. ಟೈವಾನ್ (ಫಾರ್ಮೋಸ) ದ್ವೀಪಮಾತ್ರ ಕೂಮಿನ್‌ಟಾಂಗ್ ವಶ ಉಳಿಯಿತು. 1954ರ ಒಪ್ಪಂದದ ಪ್ರಕಾರ ಅಮೆರಿಕ ಸಂಯುಕ್ತ ಸಂಸ್ಥಾನ ಟೈವಾನನ್ನು ದಾಳಿಗಳಿಂದ ರಕ್ಷಿಸಲು ಒಪ್ಪಿಕೊಂಡಿತು. 1950ರಲ್ಲಿ ಚೀನೀಯರು ಟಿಬೆಟ್ಟನ್ನು ಆಕ್ರಮಿಸಿದರು. 1959ರಲ್ಲಿ ಸಹಸ್ರಾರು ಟಿಬೆಟನ್ನರು ನಿರಾಶ್ರಿತರಾಗಿ ಭಾರತಕ್ಕೆ ಬಂದರು. 1962ರಲ್ಲಿ ಕಮ್ಯೂನಿಸ್ಟ್ ಚೀನ ಮಿತ್ರರಾಷ್ಟ್ರವಾಗಿದ್ದ ಭಾರತದಮೇಲೆ ದಾಳಿಮಾಡಿ ಹದಿನೆಂಟು ದಿನಗಳ ಬಳಿಕ ಹಿಂದಕ್ಕೆ ಸರಿಯಿತು. 1964ರಲ್ಲಿ ಚೀನ ಪರಮಾಣುಬಾಂಬನ್ನು ಸ್ಫೋಟಿಸಿತು. ಕಮ್ಯೂನಿಸ್ಟ್ ಪ್ರಭುತ್ವದ ಮುಖ್ಯ ನಾಯಕ ಮಾವೊ ತ್ಸೆ-ತುಂಗ್. ಪ್ರಧಾನಿ ಚೌ ಎನ್-ಲೈ. ಕಮ್ಯೂನಿಸ್ಟ್ ಪ್ರಭುತ್ವ ಬಂದಬಳಿಕ ಪಂಚವಾರ್ಷಿಕ ಯೋಜನೆಗಳು ಕಾರ್ಯಗತವಾದುವು. ಕಬ್ಬಿಣ, ಉಕ್ಕು, ಮತ್ತು ರಾಸಾಯನಿಕ ವಸ್ತುಗಳ ಕಾರಖಾನೆಗಳು ರಷ್ಯನರ ಸಹಾಯದಿಂದ ಆರಂಭವಾದುವು. ಅನೇಕ ಹೊಸ ಕಟ್ಟಡಗಳು, ನೂತನ ರೈಲು ಮಾರ್ಗಗಳಾದುವು. ಪ್ರಾರಂಭದಲ್ಲಿ ಸಾವಿರಾರು ಕುಟುಂಬಗಳು ಸೇರಿ ಕೂಡುಬೇಸಾಯ ನಡೆಸುತ್ತಿದ್ದುದು ತಪ್ಪಿ 1961ರಲ್ಲಿ ಇಪ್ಪತ್ತೈದು ಕುಟುಂಬಗಳಿಗೆ ಸೇರಿ ಸಾಮುದಾಯಿಕ ಬೇಸಾಯ ಪದ್ಧತಿ ಬಂತು. ಬಹುಪತ್ನಿತ್ವ, ಮಕ್ಕಳ ಮದುವೆ ಮತ್ತು ಮದುವೆ ದಲ್ಲಾಳಿತನ ಎಲ್ಲವೂ ಕೊನೆಗಂಡವು. ಸ್ತ್ರೀಯರ ಸ್ಥಾನಮಾನ ಉತ್ತಮವಾಗಿ ಅವರಿಗೂ ಮತ ಚಲಾಯಿಸುವ ಹಕ್ಕು ದೊರೆಯಿತು. ಕಮ್ಯೂನಿಸ್ಟರದು ಬಿಗಿಮುಷ್ಟಿಯ ಆಡಳಿತ. ಪೂರ್ವಾಚಾರಗಳನ್ನು ತೊಡೆದುಹಾಕುವುದು ಅವರ ಒಂದು ಉದ್ದೇಶ. ಜನರಿಗೆ ಕಮ್ಯೂನಿಸ್ಟ್ ಧ್ಯೇಯಗಳ ಬಗ್ಗೆ ಕಡ್ಡಾಯ ಶಿಕ್ಷಣ ನೀಡುತ್ತಾರೆ. ಶ್ರಮ ಶಿಬಿರದಲ್ಲಿ ಸಾವಿರಾರು ಜನರು ತಮ್ಮ ಊರುಬಿಟ್ಟು ಬಹಳ ದೂರ ಬಂದು ಕೆಲಸ ಮಾಡುತ್ತಾರೆ. ವೃತ್ತಪತ್ರಿಕೆಗಳು, ಸಂಗೀತ, ಕಥೆ, ಕಾದಂಬರಿ, ನಾಟಕ, ರೇಡಿಯೊ, ಚಲನಚಿತ್ರ — ಎಲ್ಲ ಕಮ್ಯೂನಿಸ್ಟ್ ಪಕ್ಷ ಮತ್ತು ಮಾವೊ ತ್ಸೆ-ತುಂಗ್ ಇವರ ಹೊಗಳಿಕೆಗೆ ಮುಡಿಪು.

1966ರಲ್ಲಿ 'ದುಡಿಮೆಗಾರರ ಬೃಹತ್ ಸಾಂಸ್ಕೃತಿಕ ಕ್ರಾಂತಿ' ರಕ್ಷಣಾ ಮಂತ್ರಿ ಲಿನ್ ಪಿಯಾವೊನ ಮುಂದಾಳುತನದಲ್ಲಿ ನಡೆಯಿತು. ಚೀನದಲ್ಲಿ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವವನ್ನು ಕೊನೆಗಾಣಿಸುವುದು ಇದರ ಮುಖ್ಯಗುರಿ. ವೇಷಭೂಷಣ ಸಂಗೀತ ಮೊದಲಾದವುಗಳಲ್ಲಿ ಪಾಶ್ಚಾತ್ಯ ರೀತಿಯನ್ನು ಈ ಕ್ರಾಂತಿ ವಿರೋಧಿಸಿತು. ಮಾವೊ ತ್ಸೆ-ತುಂಗರ ವಿರೋಧಿಗಳನ್ನು ಸದೆಬಡಿಯುವುದೂ ಒಂದು ಉದ್ದೇಶ. ಅಲ್ಲದೆ ತರುಣ ಪೀಳಿಗೆಗೆ ಕ್ರಾಂತಿಯ ಪರಿಚಯ ಮಾಡಿಕೊಡಲು ಮಾವೊ ಮತ್ತು ಅವರ ಅನುಯಾಯಿಗಳು ಯೋಚಿಸಿದ್ದರು. ಆದುದರಿಂದ ಈ ಕ್ರಾಂತಿಯನ್ನು ವಿದ್ಯಾರ್ಥಿಗಳ 'ರೆಡ್ ಗಾರ್ಡ್' ಸಂಸ್ಥೆ ವಹಿಸಿಕೊಂಡಿತು. ದೇಶದಲ್ಲಿ ಗಲಭೆಗಳು ಹೆಚ್ಚಾದುವು. ಕಡೆಗೆ ಸರಕಾರ ಇದನ್ನು ಅಡಗಟ್ಟಬೇಕಾಯಿತು.

ಕಮ್ಯೂನಿಸ್ಟರು ವಿದ್ಯಾಭ್ಯಾಸಕ್ಕೆ ಬಹಳ ಪ್ರಾಮುಖ್ಯ ಕೊಟ್ಟರು. ಆದರೆ ವಿದ್ಯಾಭ್ಯಾಸ ಕ್ಷೇತ್ರದಲ್ಲಿ ಯಾರಿಗೂ ಸ್ವಾತಂತ್ರ್ಯವಿಲ್ಲ. ಜೀವನ ಮಟ್ಟ ಸ್ವಲ್ಪ ಮಟ್ಟಿಗೆ ಏರಿತು. ಆರೋಗ್ಯ ಮತ್ತು ನೈರ್ಮಲ್ಯಕ್ಕೂ ಗಮನ ಕೊಟ್ಟರು. ನೀಲಿ ಸಮವಸ್ತ್ರವನ್ನು ಎಲ್ಲರೂ ಧರಿಸಲೇ ಬೇಕೆಂದಾಯಿತು. ಬೇಗನೆ ಹಲವನ್ನು ಸಾಧಿಸುವ 'ಬೃಹತ್ ಲಂಘನ' ಎಂಬ ಸಾಂಸ್ಕೃತಿಕ ಚಳುವಳಿ ಪ್ರಾರಂಭವಾಯಿತಾದರೂ ದೇಶದಿಂದ ಕ್ಷಾಮ ಬಡತನಗಳು ತೊಲಗಿಲ್ಲ.

ಚಿಯಾಂಗ್ ಕೈ-ಷೇಕರ ಆಡಳಿತಕ್ಕೆ ಒಳಗಾದ ಫಾರ್ಮೋಸ ದ್ವೀಪ ಚೀನದ ಆಗ್ನೇಯ ತೀರದಿಂದ ಫಾರ್ಮೋಸ ಜಲಸಂಧಿಯಿಂದ ಬೇರ್ಪಟ್ಟು, ಪಶ್ಚಿಮ ಶಾಂತ ಸಾಗರದಲ್ಲಿದೆ. ಇದರ ವಿಸ್ತೀರ್ಣ 35,965 ಚದರ ಕಿಲೋಮೀಟರು. 'ಫಾರ್ಮೋಸ' ಎನ್ನುವ ಪೋರ್ಚುಗೀಸ್ ಪದದ ಅರ್ಥ 'ಸುಂದರ' ಎಂದು.

ದ್ವೀಪದ ಅರ್ಧಕ್ಕೂ ಹೆಚ್ಚು ಭಾಗ ಕಾಡು. ಇಲ್ಲಿ ಸಿಪ್ರಸ್, ಸೈಡರ್, ಜೂನಿಪರ್ ಮತ್ತು ಮೇಪಲ್ ಮರಗಳಿವೆ.

ಫಾರ್ಮೋಸದಲ್ಲಿ ಚೀನೀಯರೇ ಬಹುಮಂದಿ. ಚೀನೀಯರು ಏಳನೆಯ ಶತಮಾನದಲ್ಲಿಯೇ ಈ ದ್ವೀಪವನ್ನು ಕಂಡಿದ್ದರೂ ಇಲ್ಲಿ ನೆಲೆಸಲು ಬಂದುದು ಸಾವಿರ ವರ್ಷಗಳ ಅನಂತರ. 1590ರಲ್ಲಿ ಈ ದ್ವೀಪವನ್ನು ಪೋರ್ಚುಗೀಸರು ಕಂಡುಹಿಡಿದು ಫಾರ್ಮೋಸ ಎಂದು ಹೆಸರಿಟ್ಟರೂ ಅಲ್ಲಿ ನೆಲೆಸಬೇಕೆಂಬ ಅವರ ಯತ್ನಗಳು ಫಲಿಸಲಿಲ್ಲ. ಡಚ್ಚರು 1624ರಲ್ಲೂ ಸ್ಪೇನಿನವರು 1626ರಲ್ಲೂ ಇಲ್ಲಿ ಬಂದು ನೆಲೆಸಿದರು. 1895ರ ಚೀನ—ಜಪಾನ್ ಯುದ್ಧದ ಪರಿಣಾಮವಾಗಿ ಚೀನ ಫಾರ್ಮೋಸವನ್ನು ಜಪಾನಿಗೆ ವಹಿಸಿಕೊಟ್ಟಿತು. ಆ ವರ್ಷವೇ ಜೂನ್‌ನಲ್ಲಿ ಇಲ್ಲಿನ ಚೀನೀಯರ ವಿರೋಧವನ್ನು ಲೆಕ್ಕಿಸದೆ ಜಪಾನಿಯರು ಬಂದು ವಾಸಿಸತೊಡಗಿದರು. ಫಾರ್ಮೋಸ ಅಕ್ಕಿ ಮತ್ತು ಸಕ್ಕರೆಯನ್ನು ಜಪಾನಿಗೆ ಸರಬರಾಜು ಮಾಡುವಂತೆ ಅದನ್ನು ಅಭಿವೃದ್ಧಿಗೊಳಿಸಲಾಯಿತು. ನೀರಾವರಿ ಯೋಜನೆಗಳು, ವ್ಯವಸಾಯಾಭಿವೃದ್ಧಿ, ವಿದ್ಯುತ್ ಯೋಜನೆಗಳು ದ್ವೀಪವನ್ನು ಉತ್ತಮಪಡಿಸಿದುವು.

1913ರ ಕೈರೊ ಒಪ್ಪಂದದ ಪ್ರಕಾರ ಫಾರ್ಮೋಸ ದ್ವೀಪ ಚೀನಕ್ಕೆ ಸೇರಿತು. 1945ನೆಯ ಅಕ್ಟೋಬರ್ 25ರಂದು ಚಿಯಾಂಗ್ ಕೈ-ಷೇಕರು ಇಲ್ಲಿ ಆಡಳಿತ ಸ್ಥಾಪಿಸಿದರು. 1947ರಲ್ಲಿ ಹೊಸ ಆಡಳಿತದ ವಿರುದ್ಧ ಜನ ದಂಗೆ ಎದ್ದರು. ಚೀನದಲ್ಲಿ ಕಮ್ಯೂನಿಸ್ಟರ ವಿಜಯಾನಂತರ ಇಪ್ಪತ್ತು ಲಕ್ಷ ಕೂಮಿನ್‌ಟಾಂಗ್ ಸೈನಿಕರು ಫಾರ್ಮೋಸಕ್ಕೆ ಬಂದುಬಿಟ್ಟರು. ಅಮೆರಿಕ ಸಂಯುಕ್ತ ಸಂಸ್ಥಾನದವರು ಅವರಿಗೆ ಎಲ್ಲ ಬಗೆಯ ನೆರವು ನೀಡಿದರು. ಫಾರ್ಮೋಸದ ಚೀನ ಗಣರಾಜ್ಯ ವಿಶ್ವಸಂಸ್ಥೆಯ ಭದ್ರತಾ ಮಂಡಳಿಯ ಶಾಶ್ವತ ಸದಸ್ಯರಾಷ್ಟ್ರಗಳಲ್ಲಿ ಒಂದು.

ಚೀನದ ಜನತಾ ಗಣರಾಜ್ಯ

| | | |
|---|---|---|
| ಖಂಡ | : | ಏಷ್ಯ (ಪೂರ್ವ ಏಷ್ಯದ ಮಧ್ಯಭಾಗ) |
| ಅಕ್ಷಾಂಶ | : | 21° 9′ ಉ ದಿಂದ 53° 54′ ಉ |
| ರೇಖಾಂಶ | : | 73° 37′ ಪೂ ದಿಂದ 135° 05′ ಪೂ |
| ವಿಸ್ತೀರ್ಣ | : | 98,42,000 ಚ. ಕಿ. ಮೀ. |
| ಜನಸಂಖ್ಯೆ | : | 71,60,00,000 |
| ರಾಜಧಾನಿ | : | ಪೀಕಿಂಗ್ |
| ಭಾಷೆ | : | ಚೀನಿ |
| ಸರಕಾರ | : | ಕಮ್ಯೂನಿಸ್ಟ್ ಗಣರಾಜ್ಯ |
| ಬಾವುಟ | : | ಕೆಂಪು. ಎಡ ಮೇಲ್ಭಾಗದಲ್ಲಿ ಒಂದು ದೊಡ್ಡ ಹಾಗೂ ನಾಲ್ಕು ಸಣ್ಣ ಹಳದಿ ನಕ್ಷತ್ರಗಳು |

ಚೀನ ಗಣರಾಜ್ಯ

| | | |
|---|---|---|
| ಖಂಡ | : | ಏಷ್ಯ (ಚೀನದ ಆಗ್ನೇಯ ತೀರದಿಂದ 161 ಕಿ. ಮೀ. ದೂರದಲ್ಲಿರುವ ದ್ವೀಪಗಳು) |
| ಅಕ್ಷಾಂಶ | : | 21° 54′ ಉ ದಿಂದ 25° 18′ ಉ |
| ರೇಖಾಂಶ | : | 120° 03′ ಪೂ ದಿಂದ 122° ಪೂ |
| ವಿಸ್ತೀರ್ಣ | : | 35,965 ಚ ಕಿ. ಮೀ. |
| ಜನಸಂಖ್ಯೆ | : | 1,10,00,000 (1966) |
| ರಾಜಧಾನಿ | : | ಟೈಪಾ |
| ಭಾಷೆ | : | ಚೀನಿ |
| ಸರಕಾರ | : | ಗಣರಾಜ್ಯ |
| ಬಾವುಟ | : | ಕೆಂಪು ಬಣ್ಣದಲ್ಲಿ ಎಡ ಮೇಲ್ಭಾಗದ ಕಾಲುಭಾಗ ನೀಲಿ ಇದರಲ್ಲಿ ಸೂರ್ಯನ ಚಿತ್ರ |

## ಚೀನೀ ಯಾತ್ರಿಕರು

"ದೇಶದಲ್ಲಿ ಭದ್ರವಾದ ಮತ್ತು ದಕ್ಷತೆಯಿಂದ ಕೂಡಿದ ಸರಕಾರವಿತ್ತು. ಶಾಂತಿ ಸಮೃದ್ಧಿ ನೆಲೆಸಿದ್ದುವು. ಚಕ್ರವರ್ತಿಗೆ ಅಪರಿಮಿತ ಅಧಿಕಾರವಿದ್ದರೂ ಪ್ರಜಾಪಾಲನೆಯೇ ಅವನ ಗುರಿ. ಜನರು ಸ್ವತಂತ್ರರಾಗಿ ನಿರ್ಭಯರಾಗಿ ಸಂಚರಿಸುತ್ತಿದ್ದರು. ಕಳ್ಳಕಾಕರ ಭಯವಿರಲಿಲ್ಲ. ಅಪರಾಧಿಗಳಿಗೆ ಶಿಕ್ಷೆ ಕಠಿಣವಾಗಿರಲಿಲ್ಲ. ರಾಜನು ದಯೆಯಿಂದ, ಧರ್ಮದಿಂದ ಪ್ರಜಾಪಾಲನೆ ಮಾಡುತ್ತಿದ್ದ. ಪ್ರಯಾಣಿಕರಿಗೆ ಉಚಿತ ಊಟ ಮತ್ತು ವಸತಿ ಸೌಕರ್ಯವಿದ್ದಿತು. ಉಚಿತ ವೈದ್ಯಕೀಯ ಸೌಲಭ್ಯವಿತ್ತು. ಜನರು ಮಾದಕ ಪದಾರ್ಥಗಳನ್ನು ಸೇವಿಸುತ್ತಿರಲಿಲ್ಲ. ಅತಿಥಿ ಅಭ್ಯಾಗತರಿಗೆ ಅಪೂರ್ವ ಸತ್ಕಾರ ದೊರೆಯುತ್ತಿತ್ತು."

ಇದು ಐದನೆಯ ಶತಮಾನದ ಆರಂಭದಲ್ಲಿನ ಭಾರತದ ಚಿತ್ರ. ವೀಕ್ಷಕನಾಗಿ ಇದನ್ನು ಬರೆದವನು, ಆ ಕಾಲದಲ್ಲಿ ಭಾರತಕ್ಕೆ ಬಂದ ಚೀನೀ ಯಾತ್ರಿಕ ಫಾಹಿಯಾನ್.

ಪ್ರಾಚೀನ ಕಾಲದಲ್ಲಿ ಒಂದು ದೇಶದಿಂದ ಮತ್ತೊಂದು ದೇಶಕ್ಕೆ ಜನರು ಹೋಗುತ್ತಿದ್ದುದು ಅತಿ ವಿರಳ. ವಾಹನ ಸೌಕರ್ಯ ಇಲ್ಲದ್ದೇ ಇದಕ್ಕೆ ಕಾರಣ. ಆದರೂ ಕೆಲವು ಸಾಹಸಿಗಳು ವಿದೇಶಯಾತ್ರೆಯನ್ನು ಕೈಗೊಂಡುದುಂಟು. ಕೆಲವರು ಭಾರತಕ್ಕೂ ಬಂದಿದ್ದರು. ಅವರಲ್ಲಿ ಪ್ರಮುಖರಾದವರು ಚೀನೀ ಯಾತ್ರಿಕರು. ಅಶೋಕನಿಂದ ಬೌದ್ಧಮತ ಚೀನದೇಶಕ್ಕೆ ಹಬ್ಬಿದ ಮೇಲೆ ಚೀನೀ ಯಾತ್ರಿಕರು ಭಾರತಕ್ಕೆ ಬರಲಾರಂಭಿಸಿದರು. ಐದನೆಯ ಶತಮಾನದಿಂದ ಏಳನೆಯ ಶತಮಾನದವರೆಗೆ ಚೀನದ ಯಾತ್ರಿಕರು ಬಹುಸಂಖ್ಯೆಯಲ್ಲಿ ಭಾರತಕ್ಕೆ ಬಂದರು. ಇವರ ಭೇಟಿಯ ಉದ್ದೇಶ ಮೂರು : 1. ಭಾರತೀಯ ವಿಶ್ವವಿದ್ಯಾನಿಲಯಗಳಲ್ಲಿ ವ್ಯಾಸಂಗ ; 2. ಬೌದ್ಧಮತಕ್ಕೆ ಸೇರಿದ ಹಸ್ತಪ್ರತಿಗಳ, ಬುದ್ಧನ ಜೀವನಕ್ಕೆ ಸಂಬಂಧಿಸಿದ



ಬುದ್ಧ ಹುಟ್ಟಿದ ದೇಶಕ್ಕೆ ನಡೆದುಬಂದ ಚೀನೀ ಯಾತ್ರಿಕ

ಅವಶೇಷಗಳ ಮತ್ತು ಗ್ರಂಥಗಳ ಸಂಗ್ರಹಣೆ; ಮತ್ತು 3. ಬುದ್ಧನ ಪ್ರತಿಮೆಗಳನ್ನು ತಮ್ಮ ದೇಶಕ್ಕೆ ಕೊಂಡೊಯ್ಯುವುದು.

ಹೀಗೆ ಬಂದ ಯಾತ್ರಿಕರಲ್ಲಿ ಅತ್ಯಂತ ಪ್ರಸಿದ್ಧರಾದವರು ಫಾಹಿಯಾನ್ ಮತ್ತು ಹ್ಯು ಯೆನ್-ತ್ಸಾಂಗ್.

ಫಾಹಿಯಾನ್ ಎಂದರೆ 'ಧರ್ಮಜ್ಯೋತಿ'. ಎರಡನೆಯ ಚಂದ್ರಗುಪ್ತನ ಕಾಲದಲ್ಲಿ ಭಾರತಕ್ಕೆ ಭೇಟಿಯಿತ್ತು ಸುಮಾರು ಒಂಬತ್ತು ವರ್ಷಗಳ ಕಾಲ (402–411) ಉತ್ತರ ಭಾರತದಲ್ಲಿ ಸಂಚರಿಸಿದ. ಬಾಲ್ಯದಿಂದ ಬೌದ್ಧಮತ ತತ್ತ್ವಗಳನ್ನು ಅಭ್ಯಾಸಮಾಡಿದ್ದ ಅವನಿಗೆ ಬೌದ್ಧಮತದ ತವರಾದ ಭಾರತವನ್ನು ನೋಡಬೇಕೆಂದು ಆಸೆಯಾಯಿತು. 399ರಲ್ಲಿ ಕೆಲವು ಭಿಕ್ಷುಗಳೊಡನೆ ತನ್ನ ಯಾತ್ರೆಯನ್ನು ಆರಂಭಿಸಿದ. ಪ್ರಯಾಣ ಕಷ್ಟಕರವಾಗಿತ್ತು. ಫಾಹಿಯಾನನ ಸಹಪ್ರಯಾಣಿಕರಲ್ಲಿ ಇಬ್ಬರು ಬಿರುಗಾಳಿಗೆ ಸಿಕ್ಕಿ ಸತ್ತುಹೋದರು. ಮತ್ತಿಬ್ಬರು ಹಿಂತಿರುಗಿದರು. ಧೈರ್ಯವಂತನಾದ ಫಾಹಿಯಾನ್ 405ರಲ್ಲಿ ಪೆಷಾವರ್ ತಲಪಿದ. ಅವನು ಭಾರತದಲ್ಲಿ ಸಂದರ್ಶಿಸಿದ ಸ್ಥಳಗಳು ತಕ್ಷಶಿಲೆ, ಮಥುರೆ, ಕನೋಜ, ಶ್ರಾವಸ್ತಿ, ಸಾರನಾಥ, ಕಪಿಲವಸ್ತು, ವೈಶಾಲಿ, ಪಾಟಲೀಪುತ್ರ, ರಾಜಗೃಹ, ಗಯಾ ಮತ್ತು ವಾರಣಾಸಿ. ತಾನು ನೋಡಿದ ಸ್ಥಳ ಮತ್ತು ಭಾರತದ ಅಂದಿನ ಸ್ಥಿತಿಗತಿಗಳನ್ನು ಫಾಹಿಯಾನ್ ತನ್ನ ಕಥನದಲ್ಲಿ ಹೇಳಿದ್ದಾನೆ. ಇವನ ಬರಹಗಳಲ್ಲಿ ಬೌದ್ಧಮತದ ವಿಚಾರಗಳೇ ಹೆಚ್ಚು.

414ರಲ್ಲಿ ಸ್ವದೇಶಕ್ಕೆ ಹಿಂತಿರುಗಿದ ಫಾಹಿಯಾನ್ ಭಾರತದಿಂದ ತಾನು ತೆಗೆದುಕೊಂಡು ಹೋಗಿದ್ದ ಗ್ರಂಥಗಳನ್ನು ಚೀನೀ ಭಾಷೆಗೆ ಅನುವಾದಿಸಿದ; ಪ್ರವಾಸಕಥನವನ್ನು ಬರೆದ.

ಫಾಹಿಯಾನನ ಅನಂತರ ಭಾರತಕ್ಕೆ ಬಂದ ಚೀನೀ ಯಾತ್ರಿಕರಲ್ಲಿ ಪ್ರಸಿದ್ಧನಾದವನು ಹ್ಯು ಯೆನ್-ತ್ಸಾಂಗ್ (ಯುವಾನ್ ಚಾಂಗ್.)

ಹ್ಯು ಯೆನ್-ತ್ಸಾಂಗನಿಗೆ ಬಾಲ್ಯದಿಂದಲೂ ಬೌದ್ಧಧರ್ಮದಲ್ಲಿ ಆಸಕ್ತಿ. ಇಪ್ಪತ್ತನೆಯ ವಯಸ್ಸಿನಲ್ಲಿ ಸಂಪೂರ್ಣವಾಗಿ ಬೌದ್ಧಮತ ವನ್ನವಲಂಬಿಸಿದ. ಬೌದ್ಧಮತತತ್ತ್ವಗಳನ್ನು ಮೂಲಗ್ರಂಥಗಳಿಂದಲೇ ಓದಿ ತಿಳಿಯುವ ಉದ್ದೇಶದಿಂದ 629ರಲ್ಲಿ ಭಾರತಕ್ಕೆ ಬಂದ. ಆಗ ಭಾರತವನ್ನು ಉತ್ತರದಲ್ಲಿ ಹರ್ಷ ಚಕ್ರವರ್ತಿಯೂ ದಕ್ಷಿಣದಲ್ಲಿ ಚಾಳುಕ್ಯ ಸಮ್ರಾಟ ಇಮ್ಮಡಿ ಪುಲಿಕೇಶಿಯೂ ಆಳುತ್ತಿದ್ದರು. ಹರ್ಷವರ್ಧನ ಹ್ಯು ಯೆನ್-ತ್ಸಾಂಗನನ್ನು ಕರೆಸಿಕೊಂಡು, ಒಂದು ವಿಶೇಷ ಪಂಡಿತರ ಸಭೆಯನ್ನು ಸೇರಿಸಿ ಅದರಲ್ಲಿ ಅವನಿಗೆ ಅಗ್ರಸ್ಥಾನ ವನ್ನು ಕೊಟ್ಟು ಸತ್ಕರಿಸಿದ. ಹ್ಯು ಯೆನ್-ತ್ಸಾಂಗನು ಹರ್ಷನ ಆಸ್ಥಾನದಲ್ಲಿದ್ದಾಗ ಆಗಿನ ಕಾಲದಲ್ಲಿ ಸುಪ್ರಸಿದ್ಧವಾಗಿದ್ದ ನಲಂದಾ ವಿಶ್ವವಿದ್ಯಾನಿಲಯದಲ್ಲಿ ವ್ಯಾಸಂಗ ಮಾಡಿ, ನ್ಯಾಯಶಾಸ್ತ್ರದಲ್ಲಿ ಪಾರಂಗತನಾಗಿ, ಕೊನೆಯಲ್ಲಿ ಆ ವಿಶ್ವವಿದ್ಯಾನಿಲಯದ ಕುಲಪತಿ ಯಾದ. ಹರ್ಷ ಚಕ್ರವರ್ತಿ ಮತ್ತು ಭಾರತದ ಜನತೆಯ ಬಗೆಗೆ ಹ್ಯು ಯೆನ್-ತ್ಸಾಂಗ್ ಅಪಾರ ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾನೆ. ಭಾರತದಲ್ಲಿ ತಾನು ಕಂಡದ್ದನ್ನು ವಿವರವಾಗಿ ಬರೆದಿಟ್ಟಿದ್ದಾನೆ. "ರಾಜ್ಯಾಡಳಿತವು ಕಟ್ಟುನಿಟ್ಟುಗಳಿಲ್ಲದೆ ಔದಾರ್ಯಪೂರ್ಣವಾಗಿದೆ. ಬಲಾತ್ಕಾರದ ಕೆಲಸವಿಲ್ಲ. ಪ್ರಜೆಗಳ ಮೇಲೆ ತೆರಿಗೆಯ ಹೊರೆ ಕಡಮೆ. ಜೀವನಕ್ಕಾಗಿ ಎಲ್ಲರೂ ವ್ಯವಸಾಯವನ್ನು ಮಾಡುತ್ತಾರೆ. ದೇಶದ ಸಾಮಾನ್ಯ ಜನರು ಸರಳ ಜೀವಿಗಳು. ನೈತಿಕ ನಡೆನುಡಿಯಲ್ಲಿ ಶುದ್ಧರು. ಆಡಿದ ಮಾತಿಗೆ ಎಂದೂ ತಪ್ಪರು. ಆಡಳಿತವು ಧರ್ಮರೀತಿ ಯಿಂದಿರುವುದರಿಂದಲೂ ಜನರು ಅನ್ಯೋನ್ಯವಾಗಿರುವುದರಿಂದಲೂ ಪಾತಕ ಗಳ ಸಂಖ್ಯೆ ಬಹಳ ಕಡಮೆ." ಎಂದು ಬರೆದಿದ್ದಾನೆ.

648ರಲ್ಲಿ ಸ್ವದೇಶಕ್ಕೆ ಹಿಂದಿರುಗಿದ ಹ್ಯು ಯೆನ್-ತ್ಸಾಂಗ್ ತಾನು ಭಾರತ ದಿಂದ ತಂದಿದ್ದ ಗ್ರಂಥಗಳ ಭಾಷಾಂತರ ಕಾರ್ಯದಲ್ಲಿ ತೊಡಗಿದ. ಅನೇಕ ಭಾರತೀಯ ಮಿತ್ರರೊಡನೆ ಪತ್ರವ್ಯವಹಾರವನ್ನಿಟ್ಟುಕೊಂಡಿದ್ದ.

ಇದ್ದಿತು. (1,30,851 ÷ 718 = 576) ಚುನಾವಣೆಯಲ್ಲಿ ಮತದ ಬೆಲೆಯನ್ನು ಹೀಗೆ ನಿರ್ಧರಿಸುವ ವಿಧಾನಕ್ಕೆ 'ಪ್ರಮಾಣಾನುಗುಣ ಪ್ರಾತಿನಿಧ್ಯ ವಿಧಾನ' ಎನ್ನುವರು. ಅಮೆರಿಕದ ರಾಷ್ಟ್ರಾಧ್ಯಕ್ಷರ ಚುನಾವಣೆಯೂ ಅಪ್ರತ್ಯಕ್ಷ ರೀತಿಯದು.

ಸಾಮಾನ್ಯವಾಗಿ ಪ್ರಜಾಪ್ರಭುತ್ವದಲ್ಲಿ ಪ್ರತಿ ವಯಸ್ಕ ಪ್ರಜೆಗೂ ಒಂದು ಮತ. ಇದು ಪ್ರಜಾಪ್ರಭುತ್ವದ ಸಮಾನತೆಯ ತತ್ತ್ವದ ಪ್ರಕಾರ. ಆದರೆ ಕೆಲವು ವಿಶಿಷ್ಟ ಗುಂಪುಗಳಿಗೆ. ಅವರ ವಿದ್ಯಾಭ್ಯಾಸ ಅಥವಾ ವೃತ್ತಿಗಾಗಿ ಪ್ರತಿನಿಧಿಗಳನ್ನು ಕಳುಹಿಸುವ ಅವಕಾಶವನ್ನು ಕೊಟ್ಟಿರುತ್ತಾರೆ. ಪದವೀಧರರು. ಅಧ್ಯಾಪಕರು. ವ್ಯಾಪಾರಸಂಘಗಳು. ಪುರಸಭೆಗಳು ಇಂಥ ವ್ಯಕ್ತಿಗಳು ಅಥವಾ ಸಂಸ್ಥೆಗಳು ಈ ಅವಕಾಶವನ್ನು ಹೊಂದಿರಬಹುದು. ಭಾರತದಲ್ಲಿ ವಯಸ್ಕ ಪದವೀಧರ ಅಧ್ಯಾಪಕನಿಗೆ. ವಯಸ್ಕ ಪ್ರಜೆ ಎಂದು ಒಂದು. ಪದವೀಧರ ಎಂದು ಒಂದು. ಅಧ್ಯಾಪಕ ಎಂದು ಒಂದು ಹೀಗೆ ಮೂರು ಮತಗಳಿರುತ್ತವೆ.

ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿ ಸ್ಥಳೀಯ ಸಂಸ್ಥೆಗಳ ಪ್ರತಿನಿಧಿಗಳನ್ನು ಚುನಾವಣೆ ಮೂಲಕ ಆಯ್ಕೆ ಮಾಡುತ್ತಾರೆ. ಗ್ರಾಮಪಂಚಾಯತಿ. ತಾಲ್ಲೂಕು ಬೋರ್ಡ್. ನಗರಸಭೆ. ಸಹಕಾರಿ ಸಂಸ್ಥೆ ಭಾರತದ ಸ್ಥಳೀಯ ಸಂಸ್ಥೆಗಳು. ಇಂಥ ಸಂಸ್ಥೆಗಳು ಪ್ರಪಂಚದ ಅನೇಕ ರಾಷ್ಟ್ರಗಳಲ್ಲಿ ಇವೆ.

ಪ್ರಾಚೀನ ಕಾಲದಿಂದಲೂ ದಬ್ಬಾಳಿಕೆಯ ವಿರುದ್ಧ ಚುನಾವಣೆ ಅತ್ಯುತ್ತಮ ಅಸ್ತ್ರವಾಗಿದೆ. ಕ್ರಿಸ್ತ ಪೂರ್ವ ಕಾಲದ ಗ್ರೀಕರು ಮತ್ತು ಯಹೂದ್ಯ ಜನರು ತಮ್ಮ ಮುಖಂಡರನ್ನು ತಾವೇ ಆರಿಸುತ್ತಿದ್ದರು; ಗ್ರೀಕ್ ಸೈನಿಕರು ತಮ್ಮ ದಂಡನಾಯಕರನ್ನು ತಾವೇ ಆಯ್ಕೆಮಾಡುತ್ತಿದ್ದರು. ಪ್ರಾಚೀನ ಕಾಲದಲ್ಲಿ ಚುನಾವಣೆಯಿಂದಲೇ ಇಸ್ರೇಲ್ ದೇಶದ ಅರಸರು ಆರಿಸಲ್ಪಡುತ್ತಿದ್ದರು. ಉತ್ತರ ಯೂರೋಪಿನ ಟ್ಯೂಟಾನಿಕ್ ಜನಾಂಗದವರು ಶೂರರನ್ನು ತಮ್ಮ ಮುಖಂಡರನ್ನಾಗಿ ಚುನಾಯಿಸುತ್ತಿದ್ದರು. ತಮಗೆ ಯೋಗ್ಯರೆಂದು ತೋರಿದವರನ್ನು ನಾಯಕರಾಗಿ ಆಯ್ಕೆಮಾಡುವ ಪದ್ಧತಿ ಬ್ರಿಟನ್ನಿಗೆ ಸುಮಾರು 1,500 ವರ್ಷಗಳ ಹಿಂದೆ ಆಂಗ್ಲೋ–ಸ್ಯಾಕ್ಸನ್ ವಿಜಯಗಳಿಂದ ಬಂದಿತು. ಇದೇ ಮುಂದೆ ಅಮೆರಿಕ ದೇಶದಲ್ಲಿಯೂ ಕಾಲಿಟ್ಟಿತು.

ಮತದಾರರಿಗೆ ಚುನಾವಣೆಯಲ್ಲಿ ಮತಕೊಡುವ ಅಧಿಕಾರವಿದೆ. ಭಾರತ ಮತ್ತು ಇನ್ನು ಕೆಲವು ರಾಷ್ಟ್ರಗಳಲ್ಲಿ ಮತದಾರ ತನ್ನ ಹಕ್ಕನ್ನು ಬಳಸಬಹುದು. ಬಿಡಬಹುದು. ಆಸ್ಟ್ರೇಲಿಯ ಮತ್ತಿತರ ರಾಷ್ಟ್ರಗಳಲ್ಲಿ ಮತ ಚಲಾಯಿಸದಿದ್ದರೆ. ದಂಡ ಕೊಡಬೇಕಾಗುತ್ತದೆ. ದಕ್ಷಿಣ ಆಫ್ರಿಕ ಮತ್ತು ರೊಡೀಷಿಯದಂಥ ಕೆಲವು ರಾಷ್ಟ್ರಗಳಲ್ಲಿ ಯೂರೋಪಿನ ಮತದಾರರು (ಬಿಳಿಯ ಜನಾಂಗ) ಮತ್ತು ಪ್ರಾದೇಶಿಕ ಮತದಾರರು (ನೀಗ್ರೊ) ಇವರ ಹೆಸರುಗಳ ಪಟ್ಟಿಗಳು ಬೇರೆ ಬೇರೆಯಾಗಿಯೇ ಸಿದ್ಧವಾಗುತ್ತವೆ.

ನೋಡಿ : ಆಡಳಿತ ವ್ಯವಸ್ಥೆ; ಮತದಾನ

## ಚೆಂಗೀಸ್‌ಖಾನ್

ಪ್ರಪಂಚದ ಪ್ರಸಿದ್ಧ ಆಕ್ರಮಣಕಾರರಲ್ಲೊಬ್ಬ ಚೆಂಗೀಸ್‌ಖಾನ್. ಇವನು ಶಕ್ತಿ ಪರಾಕ್ರಮಗಳಿಗೆ ಹೆಸರಾದಾತ. ಪೂರ್ವದಲ್ಲಿ ಚೀನ ದೇಶದಿಂದ ಹಿಡಿದು ಪಶ್ಚಿಮದಲ್ಲಿ ಕ್ಯಾಸ್ಪಿಯನ್ ಸಮುದ್ರದವರೆಗೆ ವಿಸ್ತರಿಸಿದ ಮಂಗೋಲ ಸಾಮ್ರಾಜ್ಯದ ನಿರ್ಮಾಪಕ ಈತ.



ಮಂಗೋಲ ಸಾಮ್ರಾಜ್ಯ ನಿರ್ಮಾಪಕ ಚೆಂಗೀಸ್‌ಖಾನ್

ಪ್ರಾಯಶಃ 1162ರಲ್ಲಿ ಮಂಗೋಲಿಯದ ಈಶಾನ್ಯ ಭಾಗದಲ್ಲಿ ಜನಿಸಿದ. ಚೆಂಗೀಸ್‌ಖಾನನ ಹುಟ್ಟು ಹೆಸರು ಟೆಮುಚಿನ್ ಎಂದು. ಇವನ ತಂದೆ. ಮಂಗೋಲರ ಒಂದು ಗಣದ ನಾಯಕನಾಗಿದ್ದ.

ಆಕಾಶವನ್ನೇ ದೇವರೆಂದು ಪೂಜಿಸುತ್ತಿದ್ದ ಮಂಗೋಲರು ಅಲೆಮಾರಿಗಳು. ತಮ್ಮ ಕುರಿ ಮತ್ತು ಹಸುಗಳಿಗೆ ಯಥೇಷ್ಟವಾಗಿ ಹುಲ್ಲು ದೊರೆಯುತ್ತಿದ್ದ ಪ್ರದೇಶಗಳಲ್ಲಿ ಗುಡಾರಗಳನ್ನು ಕಟ್ಟಿಕೊಂಡು ಜೀವಿಸುತ್ತಿದ್ದರು. ಮಧ್ಯ ಏಷ್ಯದ ಹುಲ್ಲುಗಾವಲೆಂದರೆ ಇವರಿಗೆ ಆಕರ್ಷಣೆ. ಕುದುರೆ ಸವಾರಿಯಲ್ಲಿ ಇವರು ಬಹಳ ನಿಪುಣರಾಗಿದ್ದರು.

ಟೆಮುಚಿನ್ ಹದಿಮೂರು ವರ್ಷದವನಾಗಿದ್ದಾಗ ಅವನ ತಂದೆ ತೀರಿಹೋದ. ಬಾಲಕ ಟೆಮುಚಿನ್ ಆಡಳಿತವನ್ನು ನಿರ್ವಹಿಸಬೇಕಾಯಿತು. ಆದರೆ ಗುಂಪಿನವರು ಆತನ ಮಾತನ್ನು ಕೇಳಲಿಲ್ಲ. ಕೊರೆಯುವ ಚಳಿ. ಸುಡುವ ಬಿಸಿಲಲ್ಲೂ ಚಟುವಟಿಕೆ, ಬೇಟೆಯಲ್ಲಿ ನೈಪುಣ್ಯ, ಯುಕ್ತಿ ಇವುಗಳಿಂದ ಚೆಂಗೀಸ್‌ಖಾನ್ ಕ್ರಮೇಣ ಪ್ರಸಿದ್ಧಿಗೆ ಬಂದ. 1206ರಲ್ಲಿ ಮಂಗೋಲಿಯದ ಮೇಲೆ ಪ್ರಭುತ್ವ ಸ್ಥಾಪಿಸಿ. ಅಲ್ಲಿದ್ದ ಎಲ್ಲ ಪಂಗಡಗಳನ್ನೂ ಒಗ್ಗೂಡಿಸಿದ. ಆಗಲೇ ಅವನಿಗೆ 'ಚೆಂಗೀಸ್‌ಖಾನ್' ಅಂದರೆ ಅಪ್ರತಿಮ ರಾಜ, ಜನತೆಯ ಚಕ್ರವರ್ತಿ ಎಂಬ ಬಿರುದು ಬಂದಿತು. ಬಡಾಖಾನನೆಂದೂ ಜನರು ಅವನನ್ನು ಕರೆದರು.

1213ರಿಂದ ಮರಣದವರೆಗೂ (1227) ಚೆಂಗೀಸ್‌ಖಾನ್ [illegible] ಸಾಮ್ರಾಜ್ಯವನ್ನು [illegible]

ದೇಶದ ಮೇಲೆ ಬಿದ್ದಿತು. ಆ ದೇಶವನ್ನು ಬಹಳ ಸುಲಭವಾಗಿ ವಶಪಡಿಸಿಕೊಂಡ. ಭಾರತವನ್ನು ಜಯಿಸಬೇಕೆಂಬ ಬಯಕೆ ಆತನಿಗಿದ್ದಿತು. ಸಿಂಧೂ ನದಿ ತೀರದವರೆಗೂ ಬಂದ. ಆದರೆ ಭಾರತದ ಬಿಸಿಲನ್ನು ಅವನ ಸೈನಿಕರು ತಾಳಲಾರದೇ ಹೋದದ್ದರಿಂದ, ಹಿಂತಿರುಗಿದ. ಅನಂತರ ಆಫ್‌ಘಾನಿಸ್ತಾನ, ಪರ್ಷಿಯ ಮತ್ತು ರಷ್ಯ ದೇಶಗಳ ಕೆಲವು ಭೂಭಾಗವನ್ನು ಆಕ್ರಮಿಸಿಕೊಂಡ. 1227ರ ಹೊತ್ತಿಗೆ ಆತನ ಸಾಮ್ರಾಜ್ಯ ಶಾಂತಸಾಗರದಿಂದ ಕಪ್ಪು ಸಮುದ್ರ ಮತ್ತು ಪರ್ಷಿಯ ಕೊಲ್ಲಿಯುವರೆಗೆ ಹಬ್ಬಿತ್ತು. ಮಂಗೋಲರು ಹೋದೆಡೆಯೆಲ್ಲ ಭಯದ ವಾತಾವರಣ ಮೂಡಲಾರಂಭಿಸಿತು. ಯಾವುದಾದರೂ ಒಂದು ಪಟ್ಟಣ ಸುಲಭವಾಗಿ ವಶವಾಗದಿದ್ದರೆ ಅದನ್ನು ಅವನ ಸೈನಿಕರು ನಾಶಪಡಿಸುತ್ತಿದ್ದರು.

ಒಂದು ಪಟ್ಟಣವನ್ನು ಜಯಿಸಿದಮೇಲೆ ಅದರ ನಿವಾಸಿಗಳನ್ನು ಮುಂದಿನ ಯುದ್ಧದಲ್ಲಿ ತನ್ನ ಸೇನೆಯ ಮುಂಭಾಗದಲ್ಲಿ ನಡೆಸಿಕೊಂಡು ಹೋಗಿ ಜೀವಂತ ರಕ್ಷಾಕವಚವಾಗಿ ಉಪಯೋಗಿಸುವುದು ಚೆಂಗೀಸ್‌ಖಾನನ ಪದ್ಧತಿಯಾಗಿದ್ದಿತು.

ಕ್ರೂರಿಯಾಗಿದ್ದ ಚೆಂಗೀಸ್‌ಖಾನ್ ದಕ್ಷನಾದ ನಾಯಕನಾಗಿದ್ದ ಎಂಬುದರಲ್ಲಿ ಸಂದೇಹವಿಲ್ಲ. ಅವನ ಪಂಗಡ ಮತ್ತು ಬಂಧುಗಳ ಪಂಗಡ ಎಲ್ಲ ಸೇರಿದರೂ ಹತ್ತು ಲಕ್ಷಕ್ಕಿಂತ ಹೆಚ್ಚು ಜನರಿರಲಿಲ್ಲ. ಇದನ್ನು ಗಮನಿಸಿದಾಗ, ಅವನು ಕಟ್ಟಿದ ಸಾಮ್ರಾಜ್ಯದ ವಿಸ್ತಾರ ನಮ್ಮನ್ನು ಬೆರಗುಗೊಳಿಸುತ್ತದೆ. ನಾಗರಿಕ ದೇಶಗಳೆಲ್ಲ ಅವನಿಗೆ ಬಲಿ. ತಪ್ಪಿತಸ್ಥರನ್ನು ಅತ್ಯಂತ ಕ್ರೂರವಾಗಿ ಶಿಕ್ಷಿಸುತ್ತಿದ್ದ. ತನಗೆ ಅನುಕೂಲ ಕಂಡಂತೆ ಒಪ್ಪಂದಗಳನ್ನು ಮೈತ್ರಿಗಳನ್ನು ಮಾಡಿಕೊಳ್ಳುವ ಮತ್ತು ಕೊನೆಗಾಣಿಸುವ ಕಲೆ ಆತನಿಗೆ ಸಿದ್ಧಿಸಿತ್ತು.

1227ರಲ್ಲಿ ಚೆಂಗೀಸ್‌ಖಾನ್ ಕಾಲವಾದ. ಸಾಯುವ ಕಾಲಕ್ಕೆ, ಚಾಪೆಯನ್ನು ಹಾಸಲು ಹೇಳಿ ಅದರ ಮೇಲೆ ಮಲಗಿ, "ಚಾಪೆಯ ಮೇಲೆ ಹುಟ್ಟಿದೆ; ಚಾಪೆಯ ಮೇಲೆಯೇ ಸಾಯುವೆ," ಎಂದ. ಖಾನನ ಅನಂತರ ಸಾಮ್ರಾಜ್ಯವನ್ನು ಅವನ ಮಕ್ಕಳಲ್ಲಿ ನಾಲ್ವರು ಹಂಚಿಕೊಂಡರು.

## ಚೆಕೊಸ್ಲೊವಾಕಿಯ

ಪುರಭವನದ ಮೇಲೆ ಒಂದು ದೊಡ್ಡ ಗಡಿಯಾರ.
ಅದಕ್ಕೆ ಎರಡು ಮುಖಗಳು.

ಒಂದು ಮುಖದ ಮೇಲಿನ ಮುಳ್ಳುಗಳು ಸೂರ್ಯ ಮತ್ತು ಆಕಾಶದಲ್ಲಿನ ಇತರ ಮುಖ್ಯ ಗ್ರಹ ಮತ್ತು ಉಪಗ್ರಹಗಳ ಪಥವನ್ನು ತೋರಿಸುತ್ತವೆ. ಇನ್ನೊಂದು ಮುಖ ಕ್ಯಾಲೆಂಡರ್ ; ಇದರ ಮಧ್ಯೆ ಹಳೆಯ ಊರಿನ ಸಂಕೇತದ ಚಿತ್ರ.

ಈ ವಿಚಿತ್ರ ಗಡಿಯಾರ ಇರುವುದು ಪ್ರಾಗ್‌ನಲ್ಲಿ—ಚೆಕೊಸ್ಲೊವಾಕಿಯದ ರಾಜಧಾನಿಯಲ್ಲಿ.

1918ಕ್ಕೆ ಮೊದಲು ಚೆಕೊಸ್ಲೊವಾಕಿಯ ಎನ್ನುವ ದೇಶವೇ ಇರಲಿಲ್ಲ. ಮೊದಲನೆಯ ಮಹಾಯುದ್ಧದ ಅನಂತರ ಆಸ್ಟ್ರಿಯ ಹಂಗೆರಿಗಳ ಕೆಲವು ಭಾಗಗಳನ್ನು ಸೇರಿಸಿ ಒಂದು ಹೊಸ ದೇಶವನ್ನು ರೂಪಿಸಿದರು. ಆ ದೇಶದಲ್ಲಿ ಚೆಕ್ಕರು, ಸ್ಲೊವಾಕರು ಬಹುಸಂಖ್ಯೆಯಲ್ಲಿ ಇದ್ದುದರಿಂದ ಹೊಸ ಹೆಸರು ಚೆಕೊಸ್ಲೊವಾಕಿಯ ಎಂದಾಯಿತು.

ಚೆಕೊಸ್ಲೊವಾಕಿಯ ಮಧ್ಯ ಯೂರೋಪಿನಲ್ಲಿದೆ. ದೇಶದ ಪೂರ್ವ ಭಾಗವನ್ನು ಸ್ಲೊವಾಕಿಯ ಎಂದೂ ಪಶ್ಚಿಮ ಭಾಗವನ್ನು ಬೊಹೀಮಿಯ ಎಂದೂ ಕರೆಯುತ್ತಾರೆ. ಪ್ರಾಕೃತಿಕ ವಿಭಾಗಗಳು ಮೂರು : ಬೊಹೀಮಿಯದ ಪ್ರಸ್ಥಭೂಮಿ, ಮೊರಾವಿಯದ ತಗ್ಗು ಪ್ರದೇಶ ಮತ್ತು ಸ್ಲೊವಾಕಿಯದ ಪರ್ವತ ಪ್ರದೇಶ.

ದೇಶದ ಹವಾಗುಣ ಒಂದೊಂದು ಪ್ರದೇಶದಲ್ಲಿ ಒಂದೊಂದು ತರಹ. ಬೇಸಿಗೆಕಾಲದಲ್ಲಿ ಕೆಲವು ಕಡೆ ಬೆಚ್ಚಗಿದ್ದರೆ ಕೆಲವು ಕಡೆ ತಂಪಾಗಿರುತ್ತದೆ. ಚಳಿಗಾಲದಲ್ಲಿ ಒಂದು ಭಾಗದಲ್ಲಿ ಚಳಿಯ ಕೊರೆತ ಬಹಳವಿದ್ದರೆ ಇನ್ನೊಂದು ಭಾಗದಲ್ಲಿ ತಣ್ಣಗಿರುತ್ತದೆ. ಈ ದೇಶ ಸಮುದ್ರದಿಂದ ದೂರವಿದ್ದರೂ ಎಲ್ಬ ಮತ್ತು ಡಾನ್ಯೂಬ್ ನದಿಗಳು ಹಡಗುಗಳ ಸಾಗಾಟಕ್ಕೆ ಅನುಕೂಲವಾಗಿವೆ. ಸರಕುಗಳನ್ನು ಹೇರಿಕೊಂಡ ಹಡಗುಗಳು ಈ ನದಿಗಳ ಮೂಲಕ ಸಮುದ್ರವನ್ನು ಸೇರುತ್ತವೆ.

ಕಲ್ಲಿದ್ದಲು, ಕಬ್ಬಿಣದ ಅದಿರು, ಲಿಗ್ನೈಟ್, ಯುರೇನಿಯಂ, ಖನಿಜ ನಿಕ್ಷೇಪಗಳಿವೆ.

ಗೋಧಿ, ಬಾರ್ಲಿ, ರೈ, ಓಟ್ಸ್, ಮುಸುಕಿನ ಜೋಳ, ಸಕ್ಕರೆಬೀಟ್, ಆಲೂಗಡ್ಡೆ ಮುಂತಾದುವು ಬೆಳೆಯುತ್ತವೆ.

ಉಪಕರಣಗಳು, ಯಂತ್ರಗಳು, ವಾಹನಗಳು, ಮರದ ಕೆಲಸಗಳು, ರಾಸಾಯನಿಕಗಳು, ಕಾಗದ, ಮರದ ದಿಮ್ಮಿ, ಬೀರ್, ಕಬ್ಬಿಣ ಮತ್ತು ಉಕ್ಕು, ಗೊಬ್ಬರ, ಬಟ್ಟೆ, ಗಾಜು ಮುಂತಾದುವು ಕಾರಖಾನೆಗಳಲ್ಲಿ ತಯಾರಾಗುತ್ತವೆ. 1918ರ ಅನಂತರ ಚೆಕೊಸ್ಲೊವಾಕಿಯ ಹಲವು ಕೈಗಾರಿಕೆಗಳನ್ನು ವೇಗವಾಗಿ ವೃದ್ಧಿಗೊಳಿಸಿಕೊಂಡಿತು. ಗಾಜಿನ ಸಾಮಾನುಗಳು ಮತ್ತು ಉಣ್ಣೆಯ ಬಟ್ಟೆಯ ಉತ್ಪಾದನೆ ಬೆಳೆಯಿತು. ಪಾದರಕ್ಷೆಗಳನ್ನು ತಯಾರಿಸುವ ಬಾಟಾ ಕಂಪೆನಿಯ ಕಾರಖಾನೆ ಇದೇ ದೇಶದ ಲಿನ್ ಎಂಬ ನಗರದಲ್ಲಿದೆ.

ಚೆಕೊಸ್ಲೊವಾಕಿಯದ ಜನಸಂಖ್ಯೆ 1,39,00,000. ಚೆಕ್ ಮತ್ತು ಸ್ಲೊವಾಕ್ ಭಾಷೆಗಳು ಬಳಕೆಯಲ್ಲಿವೆ. ರೋಮನ್ ಕ್ಯಾಥಲಿಕರು ಬಹಳ. ಕೃಷಿ ಅಥವಾ ಪಶು ಸಂರಕ್ಷಣೆಯಲ್ಲಿ ಬಹುಜನ ನಿರತರು. ರಾಜಧಾನಿ ಪ್ರಾಗ್ ಸುಂದರ ನಗರ. ಪಿಲೆಸ್ ಶಸ್ತ್ರಾಸ್ತ್ರ ಮತ್ತು ಮದ್ಯ ತಯಾರಿಕೆಗಳ ಕೇಂದ್ರ.

ಐದನೆಯ ಶತಮಾನದಲ್ಲಿ ಸ್ಲಾವ್ ಬುಡಕಟ್ಟಿನ ಜನ ಈಗಿನ ಚೆಕೊಸ್ಲೊವಾಕಿಯದಲ್ಲಿ ಬಂದು ನೆಲೆಸಲಾರಂಭಿಸಿದರು. ಇವರಲ್ಲಿ ಪ್ರಬಲರಾಗಿದ್ದ ಬೊಹೀಮಿಯನ್ನರು ಎಲ್ಲ ಬುಡಕಟ್ಟಿನವರನ್ನೂ ಒಂದುಗೂಡಿಸಿ 900ರಲ್ಲಿ ಬೊಹೀಮಿಯ ರಾಜ್ಯವನ್ನು ಕಟ್ಟಿದರು. ಇದು ಅನೇಕ ಶತಮಾನಗಳ ಕಾಲ ಮಧ್ಯ ಯೂರೋಪಿನ ಪ್ರಬಲ ರಾಜ್ಯವಾಗಿತ್ತು. ಚೆಕೊಸ್ಲೊವಾಕಿಯದ ಬೇರೆ ಬೇರೆ ಭಾಗಗಳು ಆಸ್ಟ್ರಿಯ–ಹಂಗೆರಿಗಳ ವಶವಾಗಿದ್ದುವು. ಮೊದಲನೆಯ ಮಹಾಯುದ್ಧದ ಕಾಲದಲ್ಲಿ ಥಾಮಸ್ ಮಸಾರಿಕ್ (1850–1937)ನ ನಾಯಕತ್ವದಲ್ಲಿ ಸ್ವಾತಂತ್ರ್ಯ ಹೋರಾಟ ಶಕ್ತಿಗೂಡಿತು.

ಮೊದಲನೆಯ ಮಹಾಯುದ್ಧದ ಅಂತಿಮ ಕಾಲದಲ್ಲಿ ಚೆಕ್ಕರು, ಸ್ಲೊವಾಕರು ಬಹುದಿನಗಳಿಂದ ಆಶಿಸುತ್ತಿದ್ದ ಸ್ವಾತಂತ್ರ್ಯ ದೊರಕಿತು, ಚೆಕೊಸ್ಲೊವಾಕಿಯ ರಾಷ್ಟ್ರ ರೂಪುಗೊಂಡಿತು. 1938ರಲ್ಲಿ ಹಿಟ್ಲರ್ ಚೆಕೊಸ್ಲೊವಾಕಿಯದ ಸುಡೆಟನ್ ಪರ್ವತ ಪ್ರಾಂತ ಜರ್ಮನಿಗೆ ಸೇರಬೇಕೆಂದು ಬಯಸಿದ. ಯುದ್ಧದ ಗೊಡವೆ ಬೇಡವೆಂದು, ಅವನು ಕೇಳಿದಷ್ಟು ಪ್ರಾಂತವನ್ನು ಬಿಟ್ಟುಕೊಡಲಾಯಿತು. ಮುಂದೆ ಇಡೀ ಚೆಕೊಸ್ಲೊವಾಕಿಯ ಹಿಟ್ಲರನ ಭೂದಾಹಕ್ಕೆ

ಬಲಿಯಾಯಿತು. ಜರ್ಮನರು 1939ರಲ್ಲಿ ದೇಶವನ್ನು ಸ್ವಾಧೀನಪಡಿಸಿಕೊಂಡರು.

ಎರಡನೆಯ ಮಹಾಯುದ್ಧದಲ್ಲಿ ಜರ್ಮನಿ ಸೋತಾಗ ಚೆಕೊಸ್ಲೊವಾಕಿಯ ಪುನಃ ಒಂದಾಯಿತು. ರಷ್ಯದ ಸಹಾಯದಿಂದ ಚೆಕೊಸ್ಲೊವಾಕಿಯ ಸ್ವಾತಂತ್ರ್ಯವನ್ನು ಮರಳಿ ಗಳಿಸಿದ್ದರಿಂದ, ದೇಶದಲ್ಲಿ ಕಮ್ಯೂನಿಸ್ಟರ ಪ್ರಾಬಲ್ಯ ಹೆಚ್ಚಿತು. 1948ರ ಫೆಬ್ರುವರಿಯಲ್ಲಿ ರಷ್ಯ ಚೆಕೊಸ್ಲೊವಾಕಿಯವನ್ನು ಪೂರ್ಣವಾಗಿ ವಶಪಡಿಸಿಕೊಂಡಿತು. ಆಗಿನಿಂದ ರಷ್ಯದ ನೆರಳಿನಲ್ಲಿ ಚೆಕೊಸ್ಲೊವಾಕಿಯ ಬಾಳತೊಡಗಿತು. 1968ರಲ್ಲಿ ರಷ್ಯ ಮತ್ತು ಚೆಕೊಸ್ಲೊವಾಕಿಯಗಳ ಸಂಬಂಧದಲ್ಲಿ ವಿರಸವುಂಟಾಗಿ, ರಷ್ಯದ ಸೈನ್ಯಗಳು ಚೆಕೊಸ್ಲೊವಾಕಿಯನ್ನು ಪ್ರವೇಶಿಸಿದುವು. ಉದಾರ ನೀತಿಯನ್ನು ಅನುಸರಿಸಲು ಚೆಕ್ ನಾಯಕತ್ವದ ಒಂದು ಭಾಗ ಬಯಸಿತ್ತು. ಆದರೆ ರಷ್ಯದ ಮಧ್ಯ ಪ್ರವೇಶದಿಂದ ಆ ಗುಂಪಿಗೆ ಸೋಲಾಯಿತು.

| | | |
|---|---|---|
| ಖಂಡ | : | ಯೂರೋಪ್ |
| ಅಕ್ಷಾಂಶ | : | 47° 44′ ಉ ದಿಂದ 51° 03′ ಉ |
| ರೇಖಾಂಶ | : | 12° 05′ ಪೂ ದಿಂದ 22° 34′ ಪೂ |
| ವಿಸ್ತೀರ್ಣ | : | 1,27,827 ಚ. ಕಿ. ಮಿ. |
| ಜನಸಂಖ್ಯೆ | : | ಸುಮಾರು 1,39,00,000 |
| ರಾಜಧಾನಿ | : | ಪ್ರಾಗ್ |
| ಭಾಷೆ | : | ಚೆಕ್, ಸ್ಲೊವಾಕ್ (ಆಡಳಿತ ಭಾಷೆಗಳು) |
| ಸರಕಾರ | : | ಸಮಾಜವಾದಿ ಗಣರಾಜ್ಯ |
| ಬಾವುಟ | : | ಮೇಲರ್ಧಭಾಗ ಬಿಳಿ ಕೆಳ ಅರ್ಧ ಕೆಂಪು ಎಡಪಕ್ಕಕ್ಕೆ ದೊಡ್ಡ ನೀಲಿ ತ್ರಿಕೋಣ |

## ಛಾಪಾಪತ್ರ

ಯಾವುದೇ ವ್ಯವಹಾರದ ಷರತ್ತುಗಳು ಬಾಯಿಮಾತಿನಲ್ಲೇ ಉಳಿದರೆ. ಅವು ಕಾಲ ಕಳೆದಂತೆ ಮರೆತು ಹೋಗಬಹುದು. ಇಲ್ಲವೆ ಬುದ್ಧಿಪೂರ್ವಕವಾಗಿ ಯಾವನೇ ಪಕ್ಷದಾರನು ಷರತ್ತುಗಳು ಬೇರೆಯೇ ಇದ್ದುವು ಎನ್ನಬಹುದು. ಅಂಥ ಪರಿಸ್ಥಿತಿಗೆ ಎಡೆಕೊಡದಂತೆ ವ್ಯವಹಾರಗಳನ್ನು ಲಿಖಿತಗೊಳಿಸುವ ಅಗತ್ಯ ಉಂಟಾಯಿತು.

'ಅ' ಎನ್ನುವವನು 'ಬ' ನಿಂದ ಮನೆ ಕೊಂಡುಕೊಳ್ಳುತ್ತಾನೆ. ಮನೆಯ ಬಿಡೇಶನದ ಅಳತೆ ಎಲ್ಲೆಗಳು ಸ್ಪಷ್ಟವಾಗಿರಬೇಕು. ಎಷ್ಟು ಹಣಕ್ಕೆ 'ಬ' ಮನೆ ಮಾರುತ್ತಾನೆ ಎನ್ನುವುದು ಖಚಿತವಾಗಿರಬೇಕು. ಮನೆ ಸಂಪೂರ್ಣವಾಗಿ 'ಬ' ಗೆ ಸೇರಿದೆ, ಅದನ್ನು ಮಾರುವ ಹಕ್ಕು ಅವನಿಗಿದೆ ಎನ್ನುವುದನ್ನು 'ಅ' ಖಂಡಿತ ಮಾಡಿಕೊಳ್ಳಬೇಕು. ಮಾರಾಟವಾದ ಮೇಲೆ 'ಬ' ನ ಹೆಂಡತಿ ಮಕ್ಕಳು ಅಣ್ಣ ತಮ್ಮಂದಿರು ಯಾರೂ ಅದನ್ನು ಪ್ರಶ್ನಿಸುವುದಿಲ್ಲ ಎಂಬುದೂ ನಿಶ್ಚಯವಾಗಬೇಕು. ಇಂಥ ವ್ಯವಹಾರಗಳೆಲ್ಲ ಬಾಯಿಮಾತಿನಲ್ಲಿ ಆಗುವುದಿಲ್ಲ. ಎಷ್ಟೋ ವರ್ಷ ಕಳೆದ ಮೇಲೂ ಮಾರಾಟದ ವಿವರಗಳು ಸ್ಪಷ್ಟವಾಗಿರಬೇಕು. ಮಾರಾಟಮಾಡಿದವರೊ ಕೊಂಡವರೊ–ಅಥವಾ ಇಬ್ಬರೂ–ತೀರಿಕೊಂಡರೆ. ಈ ವ್ಯವಹಾರದ ವಿವರಗಳು ತಿಳಿಯುವಂತಿರಬೇಕು. 'ಅ' ನ ಮಗ ಅದನ್ನು ಮಾರಬೇಕಾದರೆ ಅವನ ತಂದೆ ಅದನ್ನು ಕೊಂಡಿದ್ದ, ಮನೆ ಅವನಿಗೆ ಸೇರಿದ್ದು ಎಂದು ತಿಳಿಯುವುದು ಹೇಗೆ ? ಅದಕ್ಕಾಗಿಯೇ ಮಾರಾಟದ ವ್ಯವಹಾರ ಲೇಖನದಲ್ಲಿರಬೇಕು.

ಮೇಲಿನ ಕಾರಣದಿಂದಾಗಿ ಹಣದ ಯಾವುದೇ ವಹಿವಾಟಿನಲ್ಲಿ ಸಾಮಾನ್ಯವಾಗಿ ಜನರು ಲಿಖಿತ ದಾಖಲೆಗಳನ್ನು ಅಪೇಕ್ಷಿಸುತ್ತಾರೆ. ಉಭಯತ್ರರೂ ಪರಸ್ಪರ ಮಾಡಿಕೊಂಡಿರುವ ವ್ಯವಹಾರ ಕಾಗದದ ಮೇಲೆ ಮೂಡುತ್ತದೆ.

ವಹಿವಾಟಿನ ಷರತ್ತುಗಳನ್ನು ನಮೂದಿಸಲು ಬಳಸುವ ವಿಶೇಷ ಕಾಗದಕ್ಕೆ ಛಾಪಾಪತ್ರ ಎನ್ನುತ್ತಾರೆ.

ವಹಿವಾಟು ಎಷ್ಟು ದೊಡ್ಡ ಮೊತ್ತ ಎಂಬುದನ್ನು ಅವಲಂಬಿಸಿ ಶುಲ್ಕ ತೆರಬೇಕಾಗುತ್ತದೆ. ಶುಲ್ಕದ ಮೊಬಲಗು ಎಷ್ಟಾಗುವುದೋ ಆ ಬೆಲೆಯ ಛಾಪಾಪತ್ರವನ್ನು ಕೊಳ್ಳಬೇಕು. ಛಾಪಾಪತ್ರವನ್ನು ರಾಜ್ಯ ಸರಕಾರ ಅಚ್ಚು ಮಾಡಿಸುತ್ತದೆ. ಅದರ ಮೇಲೆ ಸರಕಾರದ ಮುದ್ರೆ ಇದ್ದು ಅದಕ್ಕೆ ಕೊಡಬೇಕಾದ ಬೆಲೆಯನ್ನು ನಮೂದಿಸಿರುತ್ತದೆ. ಸರಕಾರ ಇಷ್ಟು ಹಣದ ವ್ಯವಹಾರಕ್ಕೆ ಇಷ್ಟು ಮೊಬಲಗಿನ ಛಾಪಾಪತ್ರ ಎಂದು ನಿಗದಿ ಮಾಡಿರುತ್ತದೆ. ಅಷ್ಟು ಹಣ ಕೊಟ್ಟು ಛಾಪಾಪತ್ರವನ್ನು ಕೊಂಡು ಅದರ ಮೇಲೆ ವ್ಯವಹಾರದ ವಿವರಗಳನ್ನು ಬರೆಯಬೇಕು. ವ್ಯವಹಾರಕ್ಕೆ ಸಂಬಂಧಿಸಿದವರೆಲ್ಲ ಸಹಿ ಹಾಕುತ್ತಾರೆ. ಇಬ್ಬರು ಸಾಕ್ಷಿಗಳೂ ಸಹಿ ಮಾಡುತ್ತಾರೆ. ಆಗ ಅದರ ಮೇಲೆ ಬರೆಯಲಾದ ವ್ಯವಹಾರ ನ್ಯಾಯಬದ್ಧವಾಗುತ್ತದೆ. ಛಾಪಾಪತ್ರದ ಮೇಲೆ ದಾಖಲಾಗಬೇಕೆಂದು ಕಾಯಿದೆಯ ನಿಯಮವಿರುವ ಕರಾರುಗಳು ಅಂಥ ಕಾಗದದ ಮೇಲೆ ಬರೆಯಲ್ಪಡದಿದ್ದರೆ. ಅವು ನ್ಯಾಯಾಲಯಗಳಲ್ಲಿ ಸ್ವೀಕೃತವಲ್ಲ.

ಮಾರಾಟ ಆಸ್ತಿ. ಅಡವಿನ ಸಾಲ. ಸಾಲ. ಪಾಲುಗಾರಿಕೆ ಒಪ್ಪಂದ. ಪಾಲುಗಾರಿಕೆಯಿಂದ ಬಿಡುಗಡೆ, ಗುತ್ತಿಗೆ ನೀಡುವುದು ಮುಂತಾದ ವಹಿವಾಟುಗಳಲ್ಲಿ ಛಾಪಾಪತ್ರಗಳು ಅಗತ್ಯ. ಛಾಪಾಪತ್ರದ ಒಕ್ಕಣೆಯನ್ನು ಶಾಯಿಯಲ್ಲಿ ಬರೆಯಬೇಕು ಇಲ್ಲವೆ ಬೆರಳಚ್ಚು ಮಾಡಬೇಕು. ಸಾಧ್ಯವಾದ ಮಟ್ಟಿಗೂ ತಿದ್ದುಪಡಿಗಳಿರಬಾರದು. ಅಳಿಸಿ ಬರೆಯಬಾರದು. ಒಂದೆರಡು ತಿದ್ದುಪಡಿಗಳಿದ್ದರೆ ಅವನ್ನು ಎಣಿಸಿ ಪುಟದ ಕಡೆಯಲ್ಲಿ ಗುರುತು ಮಾಡಿರಬೇಕು.

ಕೆಲವು ವ್ಯವಹಾರಗಳಲ್ಲಿ ಛಾಪಾಪತ್ರಗಳ ಮೇಲೆ ಬರೆದ ದಸ್ತಾವೇಜುಗಳನ್ನು ನೋಂದಾಯಿಸಬೇಕೆಂದು ಕಾಯಿದೆಯ ನಿರ್ಬಂಧವಿದೆ. ಉದಾ : ಸ್ಥಾವರ ಆಸ್ತಿಯನ್ನು ಮಾರಾಟ ಮಾಡುವ ದಸ್ತಾವೇಜು ನೋಂದಾಯಿಸಲ್ಪಡಲೇಬೇಕು. ನೋಂದಾಯಿಸದಿದ್ದರೆ, ಅದು ನ್ಯಾಯ

ಬಂದಿಗಳ ಹಿನ್ನೆಲೆ ಇರುವುದಿಲ್ಲ. ನೋಂದಾಯಿಸಿದ್ದರಿಂದ. ಅವರ ಮೂಲ ಪ್ರತಿ ನಷ್ಟವಾದರೂ ನೋಂದಾವಣೆ ಕಚೇರಿಯಿಂದ ಅವರ ನಕಲು ಪ್ರತಿ ಸಿಗುತ್ತದೆ. ಅಲ್ಲದೆ ನೋಂದಾವಣೆ ಮಾಡಿದ್ದರಿಂದ ಆ ಆಸ್ತಿಯ ಸಂಬಂಧ ದಲ್ಲಿ ಅದಕ್ಕೆ ಮೊದಲು ಯಾವಯಾವ ವ್ಯವಹಾರಗಳಾಗಿವೆ. ಯಾವ್ಯಾವು ಊರ್ಜಿತ ಇವೆ ಎಂಬುದನ್ನು ತಿಳಿದುಕೊಳ್ಳಬಹುದು. ಹಿಂದೆ ಆದ ವ್ಯವ ಹಾರಗಳ ಸರಿಯಾದ ತಿಳಿವಳಿಕೆ ಇಲ್ಲದಿದ್ದರೆ ಹೊಸದಾಗಿ ಆ ಆಸ್ತಿಯ ಸಂಬಂಧದಲ್ಲಿ ವ್ಯವಹಾರ ಮಾಡುವವನು ಮೋಸ ಹೋಗುವ ಸಂಭವವಿದೆ. ನೋಂದಾವಣೆ ಕಚೇರಿಯಲ್ಲಿ ಆ ಆಸ್ತಿಯ ಸಂಬಂಧದಲ್ಲಿ ಹಿಂದೆ ಆದ ವ್ಯವಹಾರಗಳ ಮಾಹಿತಿ ಸಿಗುವುದರಿಂದ ಅಂಥ ಸಂಭವ ತಪ್ಪುತ್ತದೆ.

## ಜನಗಣತಿ

"ನಿಮ್ಮ ಸಂಸಾರದಲ್ಲಿ ಎಷ್ಟು ಜನ ಇದ್ದಾರೆ ?"

"ದೊಡ್ಡವರೆಷ್ಟು. ಚಿಕ್ಕವರೆಷ್ಟು ಮಂದಿ ?"

"ನಿಮ್ಮ ಭಾಷೆ ಯಾವುದು ?"

"ಸಂಸಾರದ ಯಜಮಾನರಿಗೆ ಏನು ಕೆಲಸ? ಇನ್ನು ಯಾರಾದರೂ ಸಂಪಾದಿಸುವವರಿದ್ದಾರೆಯೆ ?"

ಹತ್ತು ವರ್ಷಕ್ಕೊಮ್ಮೆ ಹೀಗೆ ಮನೆಮನೆಗೆ ಬಂದು ಪ್ರಶ್ನೆಗಳನ್ನು ಕೇಳು ತ್ತಾರೆ. ಇದರ ಉದ್ದೇಶ. ದೇಶದಲ್ಲಿ ಇರುವ ಜನರ ಬಗೆಗೆ ವಿವರಗಳನ್ನು ಸಂಗ್ರಹಿಸುವುದು.

ಎಲ್ಲ ದೇಶಗಳೂ ತಮ್ಮ ದೇಶದಲ್ಲಿ ವಾಸಿಸುವ ಜನರನ್ನು ಆಗಿಂದಾಗ ಎಣಿಸಿ ದಾಖಲೆ ಇಡುತ್ತವೆ. ಇವುಗಳ ಆಧಾರದ ಮೇಲೆ ವಿಶ್ವಸಂಸ್ಥೆ ಪ್ರಪಂಚದ ಜನಸಂಖ್ಯೆಯನ್ನು ಲೆಕ್ಕಹಾಕುತ್ತದೆ.

ಒಂದು ನಿಯಮಿತ ಅವಧಿಯಲ್ಲಿ ಯಾವುದಾದರೊಂದು ಪ್ರದೇಶದಲ್ಲಿ ವಾಸಿಸುವ ಜನರ ಎಣಿಕೆ ನಡೆಸುತ್ತಾರೆ. ಅದಕ್ಕೆ ಜನಗಣತಿ ಎನ್ನುವರು.

ಕ್ರಿಸ್ತ ಶಕ ಆರಂಭವಾಗುವುದಕ್ಕೆ ಸುಮಾರು ಐನೂರು ವರ್ಷಗಳಿಗೆ ಹಿಂದೆಯೇ ಜನಗಣತಿಯು ರೋಮನರಲ್ಲೂ ಈಜಿಪ್ಟಿನವರಲ್ಲೂ ಬಳಕೆ ಯಲ್ಲಿತ್ತು. ಯಾರ ಮೇಲೆ ಎಷ್ಟು ತೆರಿಗೆಗಳನ್ನು ಹೇರಬಹುದು, ಯಾರನ್ನು ಸೈನ್ಯಕ್ಕೆ ಸೇರಿಸಿಕೊಳ್ಳಬಹುದು, ಈ ವಿವರಗಳನ್ನು ಪಡೆಯುವುದೇ ಆಗಿನ ಜನಗಣತಿಯ ಉದ್ದೇಶ. ರೋಮನರಲ್ಲಿ ಪ್ರತಿ ಐದು ವರ್ಷಕ್ಕೊಮ್ಮೆ ಜನಗಣತಿ ನಡೆಯುತ್ತಿತ್ತು. ಹನ್ನೊಂದನೆಯ ಶತಮಾನದಲ್ಲಿ ಇಂಗ್ಲೆಂಡಿನಲ್ಲಿ ವಿಜೇತ ವಿಲಿಯಂ ಜನಗಣತಿ ನಡೆಸಿದ. ಇದರ ವಿವರಗಳನ್ನು ಸಂಗ್ರ ಹಿಸಿದ ಪುಸ್ತಕವನ್ನು ಜನ ತಮಾಷೆಯಾಗಿ 'ಪ್ರಳಯದ ದಿನದ ಪುಸ್ತಕ' ಎಂದು ಕರೆದರು. ಈ ಜನಗಣತಿಯಲ್ಲಿ ಇಂಗ್ಲೆಂಡಿನ ಕೆಲವು ಭಾಗಗಳು ಬಿಟ್ಟು ಹೋದುವು. ರೋಮನ್ ನಾಗರಿಕತೆ ಅಳಿದಮೇಲೆ ವ್ಯಾಪಕವಾಗಿ ಜನಗಣತಿ ನಡೆಸುವ ಪದ್ಧತಿಯು ಹದಿನೇಳನೆಯ ಶತಮಾನದವರೆಗೆ ಇರಲೇ ಇಲ್ಲ.

ಹದಿನೇಳನೆಯ ಶತಮಾನದಲ್ಲಿ ಜರ್ಮನಿ. ಫ್ರಾನ್ಸ್, ಇಟಲಿ. ಡೆನ್ಮಾರ್ಕ್. ಸ್ವೀಡನ್‌ಗಳಲ್ಲಿ. ಅಮೆರಿಕನ್ ಮತ್ತು ಇಂಗ್ಲಿಷ್ ವಸಾಹತುಗಳಲ್ಲಿ ಜನರನ್ನು ಎಣಿಸಿ ದಾಖಲುಮಾಡುವುದು ರೂಢಿಗೆ ಬಂದಿತು. ಜನಸಂಖ್ಯೆಯನ್ನು ಗುರುತಿಸುವುದು ಮಾತ್ರವಲ್ಲದೆ ಪ್ರತಿಯೊಬ್ಬನ ಜೀವನವಿಧಾನದ ಬಗೆಗೂ ಮಾಹಿತಿಗಳನ್ನು ಸಂಗ್ರಹಿಸುವ ಪ್ರಯತ್ನ ಮೊದಲ ಬಾರಿ ನಡೆದದ್ದು ಅಮೆರಿಕದಲ್ಲಿ. 1790ರಲ್ಲಿ ನಡೆಸಿದ ಈ ಬಗೆಯ ಜನಗಣತಿಯ ಆಧಾರದ ಮೇಲೆ ಅಮೆರಿಕನ್ ಕಾಂಗ್ರೆಸಿನ ಪ್ರತಿನಿಧಿಗಳ ಚುನಾವಣೆ ನಡೆಯಿತು. ಅಂದಿ ನಿಂದ ಪ್ರತಿ ಹತ್ತು ವರ್ಷಕ್ಕೊಮ್ಮೆ ಅಮೆರಿಕ ಜನಗಣತಿಯನ್ನು ತಪ್ಪದೆ ನಡೆಸುತ್ತದೆ. ವ್ಯವಸಾಯ. ವ್ಯಾಪಾರ. ಕೈಗಾರಿಕೆ ಮತ್ತು ಕುಶಲಕಲೆ ಈ ರೀತಿ ಜನರ ಉದ್ಯೋಗವನ್ನು ವಿಂಗಡಿಸಿ ಕ್ರಮವಾಗಿ ಜನಗಣತಿ ನಡೆಸು ವುದನ್ನು ಇಂಗ್ಲೆಂಡ್ 1801ರಲ್ಲಿ ಪ್ರಾರಂಭಿಸಿತು. ಒಂದು ಬಾರಿ ತಪ್ಪಿರುವುದನ್ನು ಬಿಟ್ಟರೆ. ಇಂಗ್ಲೆಂಡ್ ಪ್ರತಿ ಹತ್ತು ವರ್ಷಕ್ಕೊಮ್ಮೆ ಜನಗಣತಿ ನಡೆಸಿದೆ.

ಜನಗಣತಿಯ ಪೂರ್ವಕಾಲದ ಉದ್ದೇಶ ತೆರಿಗೆಯ ವಸೂಲಿ ಮತ್ತು ಆಸ್ತಿಪಾಸ್ತಿಯ ಅಂದಾಜು ಮಾತ್ರ. ಸರಕಾರದಲ್ಲಿ ಪ್ರಾತಿನಿಧ್ಯ ನೀಡುವ ಸಲುವಾಗಿ ಜನಗಣತಿಯ ಮಾಹಿತಿಗೆ ಇತ್ತೀಚೆಗೆ ಬಹಳ ಮಹತ್ವ ಬಂದಿತು. ದೇಶದೊಳಗೆ ವಾಸಿಸುವ ಪ್ರತಿಯೊಬ್ಬರ ಹೆಸರು. ವಿಳಾಸ. ಸಂತಾನ. ಉದ್ಯೋಗ, ವರಮಾನ. ವಿವಾಹವಾಗಿದೆಯೊ ಇಲ್ಲವೊ ಎಂಬ ವಿವರ ಗಳನ್ನು ಮಾತ್ರವಲ್ಲದೆ ಭಾಷೆ. ಧರ್ಮ, ಆಹಾರ. ಸಾಕ್ಷರತೆ, ಆರೋಗ್ಯ ಇವುಗಳ ಬಗೆಗೂ ಇಂದಿನ ಜನಗಣತಿಗಳಲ್ಲಿ ಮಾಹಿತಿಯನ್ನು ಕಲೆಹಾಕಿ ಅಂಕಿಅಂಶಗಳನ್ನು ವರ್ಗೀಕರಿಸಿ ಇಡಲಾಗುತ್ತದೆ. ಎಲ್ಲಿ ಜನಸಾಂದ್ರತೆ ದಟ್ಟವಾಗಿದೆ : ಯಾವ ಪ್ರದೇಶದಲ್ಲಿ ಜನ ಹೆಚ್ಚು ಮುಂದುವರಿದಿದ್ದಾರೆ: ಆಹಾರ, ವಾಯುಗುಣ, ಮಳೆ ಮುಂತಾದ ಅಂಶಗಳು ಬೇರೆ ಬೇರೆ ಪ್ರದೇಶ ಗಳ ಮೇಲೆ ಹೇಗೆ ಪ್ರಭಾವ ಬೀರಿವೆ; ವಿಭಿನ್ನ ಧರ್ಮಗಳನ್ನು ಅನುಸರಿಸುವ ಜನ ಎಲ್ಲೆಲ್ಲಿ ಹೆಚ್ಚಿಗೆ ಕೇಂದ್ರೀಕರಿಸಿಗೊಂಡಿದ್ದಾರೆ—ಈ ಬಗೆಯ ವಿವರಗಳನ್ನು ಬೇರೆ ಬೇರೆ ಊರು. ಪ್ರದೇಶಗಳ ಅಂಕಿಅಂಶಗಳನ್ನು ವಿಶ್ಲೇಷಿಸುವುದರ ಮೂಲಕ ಪಡೆಯಬಹುದು.

ಜನರ ಜೀವನಮಟ್ಟ, ದೇಶದಲ್ಲಿ ಉಳಲು ಭೂಮಿಯನ್ನು ಸಾರ್ಥಕವಾಗಿ ಬಳಸಿಕೊಂಡಿದೆಯೇ. ಮತದಾನದ ಹಕ್ಕಿರುವವರು ಎಷ್ಟು ಮಂದಿ—ಇಂಥ ಕೆಲವು ವಿವರಗಳು ಸರಕಾರಕ್ಕೆ ಬೇಕಾಗುತ್ತವೆ. ಜನಗಣತಿಯಿಂದ ಈ ಎಲ್ಲ ಮಾಹಿತಿ ದೊರೆಯುತ್ತದೆ.

ಆಡಳಿತ ವ್ಯವಸ್ಥೆ ಹೆಚ್ಚು ದಕ್ಷವಾದಂತೆ ಜನಗಣತಿಯನ್ನು ಅತ್ಯಂತ ನಿಖರವಾಗಿಯೂ ಬೇರೆ ಬೇರೆ ವಿವರಗಳನ್ನು ಒಳಗೊಂಡಂತೆಯೂ ನಡೆಸುವುದು ಅನೇಕ ರಾಷ್ಟ್ರಗಳಲ್ಲಿ ಸಾಧ್ಯವಾಯಿತು. ಜನಸಂಖ್ಯೆಯ ಏರುವಿಕೆ. ಇಳಿಯುವಿಕೆ ಇಂಥ ಅಂಶಗಳನ್ನು ವೈಜ್ಞಾನಿಕವಾಗಿ ಅಭ್ಯಸಿಸಲು ಸುಧಾರಿತ ಜನಗಣತಿ ವಿಪುಲವಾದ ಅವಕಾಶಗಳನ್ನು ಒದಗಿಸಿದೆ.

ಈಗ ಪ್ರತಿಯೊಂದು ದೇಶದಲ್ಲಿಯೂ ಸರಕಾರವೇ ಜನಗಣತಿಯನ್ನು ನಡೆಸುತ್ತದೆ. ಜನಗಣತಿ ಸಮಯದಲ್ಲಿ ಸಂಗ್ರಹಿಸುವ ವಿವರಗಳು ದೇಶ ದಿಂದ ದೇಶಕ್ಕೆ ಬೇರೆ ಇರಬಹುದು. ಒಂದೇ ಒಂದು ಭಾಷೆಯನ್ನಾಡುವ ದೇಶದಲ್ಲಿ ಭಾಷೆಯ ಬಗೆಗೆ ವಿವರಗಳನ್ನು ಸಂಗ್ರಹಿಸುವುದು ಅನಗತ್ಯ. ಅದೇ ರೀತಿ ಮತ, ಸಾಕ್ಷರತೆ ಬಗೆಗೆ ಮಾಹಿತಿ ಅನೇಕ ದೇಶಗಳಲ್ಲಿ ಅಗತ್ಯವಿರುವುದಿಲ್ಲ. ಜನಗಣತಿಯಲ್ಲಿ ಪಡೆದ ವಿವರಗಳಿಂದ ತಿಳಿದುಬರುವ ಫಲಿತಾಂಶಗಳನ್ನು ಪ್ರಕಟಿಸಲಾಗುವುದೇ ಹೊರತು ವ್ಯಕ್ತಿಗಳ ವೈಯಕ್ತಿಕ ವಿವರಗಳನ್ನಲ್ಲ. ಭಾರತದಲ್ಲಿಯೂ ಹತ್ತು ವರ್ಷಕ್ಕೊಮ್ಮೆ ಜನಗಣತಿ ನಡೆಯುತ್ತದೆ. ಜನಗಣತಿಯ ಅಂಕಿಸಂಖ್ಯೆಗಳ ಆಧಾರದ ಮೇಲೆಯೇ ಭಾರತದಲ್ಲಿ ಭಾಷಾ ವಾರು ಪ್ರಾಂತಗಳು ರಚಿತವಾಗಿವೆ. ರಾಷ್ಟ್ರದ ಯೋಜನೆಗಳನ್ನು ರೂಪಿಸಲೂ ಜನಗಣತಿ ಬೇಕಾಗುತ್ತದೆ.

ಸ್ಪಷ್ಟವಾದ ಮತ್ತು ಪ್ರಾಮಾಣಿಕವಾದ ಮಾಹಿತಿಯನ್ನು ಜನಗಣತಿ ಸಮಯದಲ್ಲಿ ಒದಗಿಸುವುದು ಪ್ರತಿಯೊಬ್ಬರ ಕರ್ತವ್ಯ. ತಪ್ಪು ದಾಖಲೆ ಗಳಾದರೆ, ಇದರಿಂದ ಆಧಾರಿತವಾದ ಯೋಜನೆಗಳಿಗೆ ನಿಖರ ಫಲಿತಾಂಶ ದೊರೆಯುವುದಿಲ್ಲ.

1961ರ ಜನಗಣತಿಯಿಂದ ಭಾರತದ ಜನತೆಯ ವಿಷಯವಾಗಿ ತಿಳಿದು ಬಂದ ವಿವರಗಳಲ್ಲಿ ಕೆಲವು ಇವು :

ಜನಸಂಖ್ಯೆ : 43,92,34,771 (ಚ.ಕಿ.ಮೀ.ಗೆ ಜನಸಂಖ್ಯೆ-134.4)
ಗಂಡಸರು : 22,62,93,201
ಹೆಂಗಸರು : 21,29,41,570
ಗ್ರಾಮಗಳಲ್ಲಿ : 36,02,98,168 (ಶೇ : 82)
ಪಟ್ಟಣಗಳಲ್ಲಿ : 7,89,36,603 (ಶೇ : 18)

| | 1951 | 1961 |
|---|---|---|
| 1,000ಕ್ಕೆ ಜನನದ ಸಂಖ್ಯೆ | 40.9 | 40.00 |
| 1,000ಕ್ಕೆ ಸಾವಿನ ಸಂಖ್ಯೆ | 27.4 | 18.00 |
| ಆಯುಸ್ಸಿನ ಪರಿಮಿತಿಯ ನಿರೀಕ್ಷೆ | 32.0 | 45.00 |
| ಅಕ್ಷರಸ್ಥರ ಸಂಖ್ಯೆ ಶೇ. | 16.6 | 24.00 |

## ಜನಸಂಖ್ಯೆ

1961ರಲ್ಲಿ ಬೆಂಗಳೂರಿನ ಜನಸಂಖ್ಯೆ 12,06,961. ಎಂದರೇನು ?

ಆ ವರ್ಷ ಬೆಂಗಳೂರಿನಲ್ಲಿ ವಾಸವಾಗಿದ್ದವರ ಸಂಖ್ಯೆ ಇಷ್ಟು ಎಂದು.

ಊರಿನಲ್ಲಿ ಉತ್ಸವ ಅಥವಾ ಜಾತ್ರೆ ನಡೆದಾಗ ಅಲ್ಲಿಗೆ ಹೊರಗಿನಿಂದ ಜನರು ಬರುತ್ತಾರೆ, ಮುಗಿದ ಬಳಿಕ ವಾಪಸಾಗುತ್ತಾರೆ. ಅನೇಕ ಕೆಲಸ ಕಾರ್ಯಗಳ ಸಲುವಾಗಿ ಜನರು ದೊಡ್ಡ ನಗರಗಳಿಗೆ ಹೋಗಿಬರುತ್ತಾರೆ. ಇವರು ಆ ಸ್ಥಳಗಳ ಜನಸಂಖ್ಯೆಗೆ ಸೇರುವುದಿಲ್ಲ. ಊರಿನಲ್ಲಿಯೇ ವಾಸಿಸುತ್ತಿರುವ ಜನರ ಸಂಖ್ಯೆಯೇ ಅಲ್ಲಿನ ಜನಸಂಖ್ಯೆ. ದೇಶದೊಳಗಿನ ಜನರನ್ನು ಲೆಕ್ಕ ಹಾಕಿದರೆ ದೇಶದ ಜನಸಂಖ್ಯೆ ಸಿಗುತ್ತದೆ. ಹಾಗೆಯೇ ಪ್ರಪಂಚದ ಎಲ್ಲ ದೇಶಗಳಲ್ಲೂ ಜೀವಿಸುತ್ತಿರುವ ಜನ ಎಷ್ಟು ಮಂದಿ ಎಂದು ತಿಳಿದುಕೊಂಡರೆ ಅದು ಪ್ರಪಂಚದ ಜನಸಂಖ್ಯೆ.

ಒಂದು ಊರಿನ ಜನಸಂಖ್ಯೆ ಬದಲಾಗುತ್ತಿರುತ್ತದೆ. 1951ರಲ್ಲಿ ಬೆಂಗಳೂರಿನ ಜನಸಂಖ್ಯೆ 10,06,115. 1961ರಲ್ಲಿ ಎರಡು ಲಕ್ಷ ಹೆಚ್ಚಿತು. ಹೀಗೆಯೇ ದೇಶಗಳ ಜನಸಂಖ್ಯೆಯೂ ಬದಲಾಗುತ್ತಿರುತ್ತದೆ. ಯುದ್ಧದಲ್ಲಿ ಸೈನಿಕರು ಮಡಿಯುತ್ತಾರೆ; ಕ್ಷಾಮ ಮತ್ತು ಪ್ರವಾಹಗಳಿಗೆ ಜನ ತುತ್ತಾಗುವುದು ಅನಿವಾರ್ಯ; ರೋಗ ರುಜಿನಗಳು ಜನರನ್ನು ಆಹುತಿ ತೆಗೆದುಕೊಳ್ಳುತ್ತವೆ. ಈ ಕಾರಣಗಳಿಂದ ಜನಸಂಖ್ಯೆ ಇಳಿಮುಖವಾಗುತ್ತದೆ. ವಾಸಪ್ರದೇಶಗಳು ಆರೋಗ್ಯಕರವಾದಂತೆ, ಒಳ್ಳೆಯ ಔಷಧಿಗಳು ಲಭ್ಯವಾದಂತೆ ಮರಣದ ಸಂಖ್ಯೆ ಕಡಮೆಯಾಗುತ್ತದೆ.

ಪ್ರಪಂಚದ ಜನಸಂಖ್ಯೆ 1850ರಲ್ಲಿ 100 ಕೋಟಿ ಇತ್ತು. 1930ರ ತನಕ 200 ಕೋಟಿಗಿಂತ ಹೆಚ್ಚಿಗೆ ಜನಸಂಖ್ಯೆ ಏರಲಿಲ್ಲ. 1960ರ ವೇಳೆಗಾಗಲೇ ಪ್ರಪಂಚದಲ್ಲಿ 300 ಕೋಟಿ ಜನ ಜೀವಿಸುತ್ತಿದ್ದರು. ಅನಂತರ ಇಪ್ಪತ್ತು ವರ್ಷಕ್ಕೆ, ಅಂದರೆ 1980ಕ್ಕೆ ಪ್ರಪಂಚದ ಜನಸಂಖ್ಯೆ 400 ಕೋಟಿಗೆ ಏರಬಹುದು. ಕೇವಲ 130 ವರ್ಷಗಳ ಅವಧಿಯಲ್ಲಿ ಪ್ರಪಂಚದ ಜನಸಂಖ್ಯೆ ಒಂದಕ್ಕೆ ನಾಲ್ಕು ಪಟ್ಟು ಹೆಚ್ಚು. ಇದು 19ನೆಯ ಶತಮಾನದಿಂದ ಈಚಿನ ಲೆಕ್ಕಾಚಾರ. ಅದಕ್ಕೂ ಹಿಂದೆ ಇಷ್ಟೊಂದು ವೇಗವಾಗಿ ಜನಸಂಖ್ಯೆ ಏರುತ್ತಿರಲಿಲ್ಲ. ಪ್ರಾಚೀನ ಮತ್ತು ಮಧ್ಯಯುಗದಲ್ಲಿ ವರ್ಷಕ್ಕೆ ಸಾವಿರಕ್ಕೊಂದರಂತೆ ಜನಸಂಖ್ಯೆಯಲ್ಲಿ ಹೆಚ್ಚಳವಾಗುತ್ತಿತ್ತು. ಹದಿನೆಂಟನೆಯ ಶತಮಾನದ ಮೊದಲಿಗೆ ಸಾವಿರಕ್ಕೆ ಮೂರರಂತೆ ಜನಸಂಖ್ಯೆ ಪ್ರತಿ ವರ್ಷ ಹೆಚ್ಚುತ್ತಿತ್ತು.

ಹಿಂದೆ ರಾಜಪ್ರಭುತ್ವವಿದ್ದ ಸಮಯದಲ್ಲಿ ಅನೇಕ ದೇಶಗಳಲ್ಲಿ ಪದೇ ಪದೇ ಯುದ್ಧಗಳು ನಡೆಯುತ್ತಿದ್ದುವು. ಜನಹಾನಿಯಾಗುತ್ತಿತ್ತು.

ವೈದ್ಯಕೀಯ ಸೌಲಭ್ಯಗಳಿದ್ದು, ಜೀವನ ಸೌಕರ್ಯಗಳು ಹೆಚ್ಚಿರುವ ಈ ಕಾಲದಲ್ಲಿ ಮರಣಸಂಖ್ಯೆ ಕುಗ್ಗಿದೆ; ಅಂದರೆ, ಜನಸಂಖ್ಯೆ ತೀವ್ರವಾಗಿ ಇಳಿಮುಖವಾಗುತ್ತಿಲ್ಲ.

ಇಂದು ಪ್ರಪಂಚದಲ್ಲಿ ಸುಮಾರು 360 ಕೋಟಿ ಜನ ಜೀವಿಸುತ್ತಿದ್ದಾರೆ. ಅಷ್ಟು ಜನ 14 ಕೋಟಿ 81 ಲಕ್ಷ ಚದರ ಕಿ.ಮೀ. ವಿಸ್ತೀರ್ಣದ ಭೂಭಾಗವನ್ನು ಆವರಿಸಿಕೊಂಡಿದ್ದಾರೆ. ಅಂದರೆ ಸರಾಸರಿ ಒಂದು ಚದರ ಕಿ.ಮೀ.ಗೆ 24.3 ಮಂದಿ ವಾಸಿಸುತ್ತಾರೆ. ಇದು ಪ್ರಪಂಚದ ಜನಸಾಂದ್ರತೆ.

ಎಲ್ಲ ದೇಶಗಳಲ್ಲೂ ಪ್ರಪಂಚದ ಜನಸಂಖ್ಯೆ ಸರಿಸಮವಾಗಿ ಹಂಚಿಹೋಗಿಲ್ಲ. ಏಷ್ಯದಲ್ಲಿ ಅತಿ ಹೆಚ್ಚಿನ ಜನಸಂಖ್ಯೆಯಿದೆ. ಅನಂತರ ಯೂರೋಪ್, ಆಫ್ರಿಕ, ಉತ್ತರ ಅಮೆರಿಕ, ದಕ್ಷಿಣ ಅಮೆರಿಕ, ಆಸ್ಟ್ರೇಲಿಯ ಇವು ಅನುಕ್ರಮವಾಗಿ ಬರುತ್ತವೆ.

ನಾಲ್ಕು ದೇಶಗಳಲ್ಲಿ ಅತ್ಯಂತ ಹೆಚ್ಚಿನ ಜನಸಂಖ್ಯೆಯನ್ನು ನಾವು ಕಾಣಬಹುದು ; ಕಮ್ಯೂನಿಸ್ಟ್ ಚೀನ (71,60,00,000), ಭಾರತ (49,80,00,000), ಸೋವಿಯೆತ್ ರಷ್ಯ (22,50,00,000) ಮತ್ತು ಅಮೆರಿಕ ಸಂಯುಕ್ತ ಸಂಸ್ಥಾನ (19,50,00,000). ಇವು 1965–66ರ ಅಂದಾಜು ಸಂಖ್ಯೆಗಳು.

ಪ್ರಪಂಚದ ಜನಸಂಖ್ಯೆ ಹೀಗೆಯೇ ಏರಿದರೆ ಆಹಾರ ಸಾಲುವುದಿಲ್ಲ. ಇನ್ನು ಸುಮಾರು ಆರು ನೂರು ವರ್ಷಗಳಲ್ಲಿ ಎಲ್ಲರನ್ನೂ ಸಾಲು ಸಾಲಾಗಿ ನಿಲ್ಲಿಸಿದರೆ, ಪ್ರತಿಯೊಬ್ಬನೂ ಎರಡು ಕೈಗಳನ್ನು ಚಾಚಿ ನಿಲ್ಲುವಷ್ಟು ಸ್ಥಳ ಮಾತ್ರ ಇರುತ್ತದೆ.

ಜನನ ಪ್ರಮಾಣವನ್ನು ತಗ್ಗಿಸಿ ಜನಸಂಖ್ಯೆಯ ಏರಿಕೆ ತಡೆಗಟ್ಟಿ ಜೀವನವನ್ನು ಸುಗಮಗೊಳಿಸುವ ಪ್ರಯತ್ನಗಳೂ ನಡೆದಿವೆ.

ನೋಡಿ : ಜನಗಣತಿ

## ಜಪಾನ್

ಸುಮಾರು ಮೂರು ಲಕ್ಷ ಎಪ್ಪತ್ತುಸಾವಿರ ಚದರ ಕಿಲೊಮೀಟರುಗಳ ವಿಸ್ತೀರ್ಣದ ದೇಶ. ಎರಡನೆಯ ಮಹಾಯುದ್ಧ ಪ್ರಾರಂಭವಾದಾಗ ಏಳೂವರೆ ಕೋಟಿ ಜನಸಂಖ್ಯೆ.

ಆ ದೇಶ ಯುದ್ಧ ಆರಂಭಿಸಿತು.

ಯುದ್ಧ ಮುಗಿಯುವ ಹೊತ್ತಿಗೆ ಬೇರಾವ ದೇಶವೂ ಅನುಭವಿಸದ ವಿಪತ್ತನ್ನು ಈ ಪುಟ್ಟ ದೇಶ ಎದುರಿಸಿತು. ಎರಡು ಪರಮಾಣು ಬಾಂಬುಗಳ ದಾಳಿಯನ್ನು ಅನುಭವಿಸಿತು. ಎರಡನೆಯ ಮಹಾಯುದ್ಧದಲ್ಲಿ ಸತ್ತವರು 18,62,499, ಗಾಯಗೊಂಡವರು 46,16,000, ಶತ್ರುಗಳಿಗೆ ಸೆರೆಯಾಳಾದವರು ಸುಮಾರು 7 ಲಕ್ಷ, ದೇಶಕ್ಕೆ ಖರ್ಚಾದದ್ದು 5,600 ಕೋಟಿ ಡಾಲರು (ಸುಮಾರು 42,000 ಕೋಟಿ ರೂಪಾಯಿ). ಇಷ್ಟಲ್ಲದೆ, ಈ ದೇಶ ಸೋತುಹೋಯಿತು. ಅಮೆರಿಕದ ಸೈನ್ಯಗಳು ಬಂದು ನಿಂತುವು ಈ ಭೂಮಿಯ ಮೇಲೆ. ಕಾರಖಾನೆಗಳು ಬಾಂಬುಗಳ ದಾಳಿಯಿಂದ ಚೂರುಚೂರಾಗಿ ಕುಸಿದಿದ್ದುವು.



ಪಶ್ಚಿಮದ ಆಧುನಿಕ ನಗರಗಳನ್ನು ಮೀರಿಸುವ ಟೋಕಿಯೊ

ಹೀಗೆ ತತ್ತರಿಸಿದ ಪುಟ್ಟ ದೇಶ—ಜಪಾನ್. ಇಂದು ಅದು ತನ್ನನ್ನು ಸೋಲಿಸಿದ ಅಮೆರಿಕ, ಇಂಗ್ಲೆಂಡ್‌ಗಳೊಂದಿಗೆ ಕೈಗಾರಿಕೆಯಲ್ಲಿ ಸ್ಪರ್ಧಿಸುತ್ತಿದೆ, ಜಗತ್ತಿನ ಮಾರುಕಟ್ಟೆಗಳಲ್ಲಿ ಎಷ್ಟೋ ದೇಶಗಳನ್ನು ಹಿಂದೆ ಹಾಕಿದೆ. ಕೈಗಾರಿಕೆ ಮತ್ತು ವಾಣಿಜ್ಯಗಳಿಗೆ ಅಗತ್ಯವಾದ ಖನಿಜ ಸಂಪತ್ತು ಮತ್ತು ಕಚ್ಚಾ ಸಾಮಾನುಗಳಲ್ಲಿ ಜಪಾನ್ ಬಡ ದೇಶ. ಹೀಗಿದ್ದೂ ಕಚ್ಚಾ ಸಾಮಾನುಗಳ ಬಳಕೆಯಲ್ಲಿ ಅಮೆರಿಕದ ಸಂಯುಕ್ತ ಸಂಸ್ಥಾನ ಪ್ರಪಂಚದಲ್ಲಿ ಮೊದಲನೆಯದು, ಪುಟ್ಟ ಜಪಾನ್ ಎರಡನೆಯದು. ಹತ್ತಿ ಬಟ್ಟೆಗಳ ಉತ್ಪಾದನೆಯಲ್ಲಿ ಜಪಾನ್ ಮೂರನೆಯದು. ಹಡಗುಗಳ ನಿರ್ಮಾಣದಲ್ಲಿ ಮೊದಲನೆಯದು, ಪೆಟ್ರೋಲಿಯಂ ಶುದ್ಧೀಕರಣದಲ್ಲಿ ಮೂರನೆಯದು, ರೇಡಿಯೊ ಟೆಲಿವಿಷನ್ ಉಪಕರಣ ಉತ್ಪಾದನೆಯಲ್ಲಿ ಎರಡನೆಯದು, ಉಕ್ಕಿನ ಉತ್ಪಾದನೆಯಲ್ಲಿ ನಾಲ್ಕನೆಯದು.

ಜಪಾನಿನ ವಿಸ್ತೀರ್ಣ ಭಾರತದ ವಿಸ್ತೀರ್ಣದಲ್ಲಿ ಸುಮಾರು ಒಂಬತ್ತರಲ್ಲಿ ಒಂದು ಭಾಗ. ನೈಸರ್ಗಿಕ ಸಂಪನ್ಮೂಲಗಳಲ್ಲಿ ಬಡ ಜಪಾನನ್ನು ಭಾರತ ದೊಡನೆ ಹೋಲಿಸುವಂತೆಯೇ ಇಲ್ಲ.

ಇಪ್ಪತ್ತೈದು ವರ್ಷಗಳಲ್ಲಿ ಜಪಾನ್ ಸಾಧಿಸಿದ ಪ್ರಗತಿ ಪವಾಡವೆನ್ನುವಷ್ಟು ಅಸಾಧಾರಣವಾದದ್ದು. ಕಾರ್ಯಶೀಲತೆ, ದೇಶಾಭಿಮಾನ, ಜಾಣ್ಮೆ, ಕಷ್ಟಪಟ್ಟು ಕೆಲಸಮಾಡುವ ಶ್ರದ್ಧೆ ಇವು ಜಪಾನಿನ ಅಭಿವೃದ್ಧಿಗೆ ಅಡಿಗಲ್ಲು.

ಹೊಸತು ಮತ್ತು ಹಳೆಯದರ ಸುಂದರ ಸಮ್ಮಿಳನವನ್ನು ಜಪಾನಿನಲ್ಲಿ ಕಾಣಬಹುದು. ಹಿಂದಿನ ಕಲ್ಲಿನ ಲಾಂದ್ರ—ಇಂದಿನ ನಿಯಾನ್ ದೀಪ. ಪ್ರಾಚೀನ ದೇವಸ್ಥಾನಗಳ ಗಂಟೆ ಮತ್ತು ಆಧುನಿಕ ಕಾರಖಾನೆಗಳ ಗದ್ದಲ. ಕಿಮೊನೋ ಧರಿಸಿದ ಹುಡುಗಿ ಚಹ ನೀಡುವ ಕಲೆಯಲ್ಲಿ ನಿಷ್ಣಾತಳಾಗಿದ್ದರೆ. ಕಚೇರಿಯಲ್ಲಿ ಕಾರ್ಯದರ್ಶಿ ವಿದ್ಯುತ್ ಕಂಪ್ಯೂಟರ್‌ಗೆ ನಿರ್ದಿಷ್ಟವಾದ ವಿವರಗಳನ್ನು ಒದಗಿಸುತ್ತಿದ್ದಾಳೆ–ಹೀಗೆ ಜಪಾನಿನಲ್ಲಿ 2.000 ವರ್ಷಗಳ ಸಂಪ್ರದಾಯ, ಆಧುನಿಕತೆಯೊಡನೆ ಹಾಸು ಹೊಕ್ಕಾಗಿದೆ.

ಜಪಾನು 2,414 ಕಿ. ಮೀಟರುಗಳಷ್ಟು ಉದ್ದ ಇರುವ ನಾಲ್ಕು ದ್ವೀಪಗಳ ಸಮೂಹ. ಹಾನ್‌ಶು, ಕ್ಯೂಶು, ಶಿಕೋಕು, ಹೊಕ್ಕೈಡೊ ಮತ್ತು ಇತರ ಸಣ್ಣ ದ್ವೀಪಗಳೂ ಜಪಾನಿಗೆ ಸೇರಿವೆ. ಜಪಾನಿನಲ್ಲಿ ಅನೇಕ ಪರ್ವತಗಳಿವೆ. ಫ್ಯೂಜಿಯಾಮಾದಂಥ ಅಗ್ನಿಪರ್ವತಗಳೂ ಇವೆ.

ಹೊಕ್ಕೈಡೊನಲ್ಲಿ ಚಳಿಗಾಲದಲ್ಲಿ ಹಿಮ ಜಾಸ್ತಿ. ಅಲ್ಪ ಕಾಲಾವಧಿ ಇರುವ ಬೇಸಿಗೆ ತಂಪಾಗಿರುತ್ತದೆ. ದಕ್ಷಿಣದಲ್ಲಿ ಉಷ್ಣ ವಲಯದ ಹವಾಗುಣವಿದೆ. ಆಗಸ್ಟ್–ಸೆಪ್ಟೆಂಬರ್‌ನಲ್ಲಿ ಬಿರುಗಾಳಿ ಬೀಸುತ್ತದೆ. ಜಪಾನಿನಲ್ಲಿ ಭೂಕಂಪ ಆಗುತ್ತಲೇ ಇರುತ್ತದೆ. ಕೆಲವು ಸಲ ತೀವ್ರತರ ಭೂಕಂಪ ಆದಾಗ ಸಾವು ನೋವುಗಳುಂಟಾಗುತ್ತವೆ. ಆದರೂ ಜಪಾನಿಯರು ಹೆದರುವುದಿಲ್ಲ.

ಶಿನಾನೊಗಾವಾ, ಇಶಿಕಾರಿ, ಟೋನ್ ಮತ್ತಿತರ ನದಿಗಳು ರಭಸವಾಗಿ ಹರಿಯುವುದರಿಂದ ವಿದ್ಯುದುತ್ಪಾದನೆಗೆ ಸಹಕಾರಿಯಾಗಿವೆ. ಬಿವಾ ಸರೋವರ ಸುಂದರ ಪ್ರಕೃತಿಯ ಮಡಿಲಲ್ಲಿದೆ.

ಜಪಾನಿನ ಶೇಕಡಾ 16ರಷ್ಟು ನೆಲ ಸಾಗುವಳಿಗೆ ಯೋಗ್ಯವಾಗಿದೆ. ಅಷ್ಟು ಸ್ಥಳದಲ್ಲೇ ಅವರು ಭತ್ತ ಮುಂತಾದ್ದು ಬಿತ್ತುವರು. ಜಪಾನಿನಲ್ಲಿ ವರ್ಷಕ್ಕೆ 2–3 ಸಲ ಭತ್ತದ ಫಸಲು ಆಗುತ್ತದೆ. ಅದೇ ಮುಖ್ಯ ಬೆಳೆ. ಭಾರತ ಜಪಾನಿನ ವ್ಯವಸಾಯ ನಿಪುಣರ ಸಲಹೆಯನ್ನು ಪಡೆದಿದೆ.

ಜಪಾನ್ ಎಲ್ಲಿಯೂ ವಿಸ್ತಾರವಾಗಿಲ್ಲ. ಸಮುದ್ರ ತೀರ ಎಲ್ಲ ಪಟ್ಟಣಗಳಿಗೂ ಸಮೀಪದಲ್ಲಿಯೇ ಇದ್ದು, ಬಂದರುಗಳ ನಿರ್ಮಾಣಕ್ಕೂ ಯೋಗ್ಯವಾಗಿದೆ. ಈ ಸೌಲಭ್ಯದಿಂದ ಜಪಾನಿಯರು ಮೀನುಗಾರಿಕೆಯ ಉದ್ಯೋಗದಲ್ಲಿ ನೈಪುಣ್ಯ ಪಡೆದಿದ್ದಾರೆ.

ಹಡಗು ಕಟ್ಟುವ ಉದ್ಯೋಗದಲ್ಲಿಯೂ ಜಪಾನ್ ಪ್ರಪಂಚದಲ್ಲಿಯೇ ಮುಂದುವರಿದ ರಾಷ್ಟ್ರಗಳಲ್ಲಿ ಒಂದಾಗಿದೆ. ವಿವಿಧ ರೀತಿಯ ಉದ್ಯೋಗಗಳು ಜಪಾನಿನಲ್ಲಿವೆ. ಅಡುಗೆ ಸಾಮಾನುಗಳನ್ನು ಮಾಡುವುದರಿಂದ ಹಿಡಿದು, ದೊಡ್ಡ ಯಾಂತ್ರಿಕ ಸಾಮಾನುಗಳನ್ನು ತಯಾರಿಸುವಲ್ಲಿಯೂ ಜಪಾನಿಯರು ಕುಶಲರು. ಜಪಾನಿನಲ್ಲಿ ಸಿದ್ಧವಾದ ಪದಾರ್ಥಗಳಿಗೆ ಪ್ರಪಂಚದ ಪೇಟೆಗಳಲ್ಲಿ ಬಹಳ ಬೇಡಿಕೆ.

ಟೋಕಿಯೊದಿಂದ ಒಸಾಕಾಕ್ಕೆ ಹೋಗುವ ರೈಲೊಂದು ಪ್ರಪಂಚದಲ್ಲಿಯೇ ಅತ್ಯಂತ ವೇಗವಾದದ್ದು.

ಜಪಾನಿನ ಜನಸಂಖ್ಯೆ 9,64,00,000. ಜಪಾನಿಯರು ಮಂಗೋಲಿಯ ಬುಡಕಟ್ಟಿಗೆ ಸೇರಿದ ಜನ. ಷಿಂಟೊ, ಬೌದ್ಧ ಮತ್ತು ಕ್ರೈಸ್ತ ಮತಗಳು ಹೆಚ್ಚು ಪ್ರಚಾರದಲ್ಲಿವೆ. ಜಪಾನಿ ಆಡಳಿತ ಭಾಷೆ. ಲಿಪಿ ಚೀನಿ ಭಾಷೆಯದರ ತರಹ ಚಿತ್ರದಂತಿರುತ್ತದೆ.

ರಾಜಧಾನಿ ಟೋಕಿಯೊ ವಿಶ್ವದಲ್ಲೇ ದೊಡ್ಡನಗರ. ಯೋಕೊಹಾಮಾ ಬಂದರು ನಗರ. ಒಸಾಕಾ ಸಾಗಾಣಿಕೆಯ ಕೇಂದ್ರ. ಕ್ಯೋಟೊ ಜಪಾನಿನ ಪ್ರಾಚೀನ ರಾಜಧಾನಿ. ಇಲ್ಲಿ ಮರದಿಂದ ಕೆತ್ತಲ್ಪಟ್ಟಿರುವ ಸುಮಾರು 15 ಮೀಟರು ಎತ್ತರದ ಬುದ್ಧನ ಪ್ರತಿಮೆಯಿದೆ. ನಗೋಯಾ ಕೈಗಾರಿಕಾ ನಗರ ಹಾಗೂ ಬಂದರು. ಕೋಬ್ ದೊಡ್ಡ ಬಂದರು.

ಜಪಾನಿನವರು ತಮ್ಮ ದೇಶವನ್ನು 'ನಿಪ್ಪನ್' ಅಥವಾ 'ನಿಹನ್' ಎಂದು ಕರೆಯುತ್ತಾರೆ. ಹೀಗೆಂದರೆ 'ಸೂರ್ಯನ ಮೂಲ'. ಅವರ ಬಾವುಟದಲ್ಲಿ ಎದ್ದು ಕಾಣುವ ಕೆಂಪು ಚೆಂಡೂ ಸೂರ್ಯನ ನೆನಪನ್ನು ಕೊಡುತ್ತದೆ. ತಮ್ಮ

ದೇಶದ ವಿಷಯವಾಗಿ ಅವರು ಒಂದು ಪೌರಾಣಿಕ ಕಥೆ ಹೇಳುತ್ತಾರೆ. ಬಹಳ ಕಾಲದ ಹಿಂದೆ ಇಜನಾಗಿ ಎಂಬ ದೇವತೆ ರತ್ನಖಚಿತ ಈಟಿಯನ್ನು ಸಮುದ್ರದಲ್ಲಿ ಅದ್ದಿದಾಗ ಕೆಲವು ಹೊಳೆಯುವ ಹನಿಗಳು ಹಾರಿಬಿದ್ದುವು. ಅವೇ ಜಪಾನ್ ದ್ವೀಪಗಳಾದುವು. ತನ್ನ ವಂಶಜರೇ ಜಪಾನನ್ನು ಆಳಬೇಕೆಂದು ಇಜನಾಗಿ ಇಚ್ಛಿಸಿದಳು. 660ರಲ್ಲಿ ಜಪಾನ್ ಚಕ್ರಾಧಿಪತ್ಯವನ್ನು ಸ್ಥಾಪಿಸಿದ ಜಮ್ಮು ಈ ವಂಶದವನು ಎಂದು ಹೇಳುತ್ತಾರೆ. 1542ರಲ್ಲಿ ಪೋರ್ಚುಗೀಸರು ಜಪಾನನ್ನು ತಲಪಿದರು. ಅವರಲ್ಲಿದ್ದ ಬಂದೂಕನ್ನು ಮೊದಲ ಬಾರಿಗೆ ಕಂಡ ಜಪಾನಿಯರು ತಾವೂ ಅದೇ ರೀತಿಯ ಬಂದೂಕನ್ನು ತಯಾರಿಸಿ ಉಪಯೋಗಿಸಲಾರಂಭಿಸಿದರು. ಇತರ ದೇಶಗಳ ಜನರೂ ಜಪಾನಿಗೆ ಬರಲಾರಂಭಿಸಿದರು. ಮೊದಲನೆಯ ಮಹಾಯುದ್ಧದಲ್ಲಿ ಜಪಾನ್ ಮಿತ್ರರಾಷ್ಟ್ರಗಳ ಜೊತೆ ಸೇರಿ ಪ್ರಪಂಚದ ಐದು ಪ್ರಬಲ ರಾಷ್ಟ್ರಗಳಲ್ಲೊಂದೆನಿಸಿತು. 1940ರಲ್ಲಿ ಜರ್ಮನಿ ಮತ್ತು ಇಟಲಿಯೊಡನೆ ಸ್ನೇಹ ಬೆಳೆಸಿಕೊಂಡು ಅಕ್ಷ ಶಕ್ತಿಗಳಲ್ಲಿ ಒಂದು ಎನಿಸಿಕೊಂಡಿತು. 1941ರಲ್ಲಿ ಅಮೆರಿಕ ಸಂಯುಕ್ತ ಸಂಸ್ಥಾನಕ್ಕೆ ಸೇರಿದ ಪರ್ಲ್ ಹಾರ್ಬರ್ ಮೇಲೆ ದಾಳಿಮಾಡಿ ಎರಡನೆಯ ಮಹಾಯುದ್ಧವನ್ನು ಜಪಾನ್ ಪ್ರವೇಶಿಸಿತು. ಆಗ ಜಪಾನಿಗೆ ಕೊರಿಯ, ಚೀನದ ಬಹು ಭಾಗ, ಮಲಯ, ಬರ್ಮ ಮತ್ತು ಫಿಲಿಪೀನ್ಸ್‌ಗಳು ಸೇರಿದ್ದುವು. ಮಿತ್ರ ರಾಷ್ಟ್ರಗಳು ಜರ್ಮನಿ ಮತ್ತು ಇಟಲಿಯನ್ನು ಸೋಲಿಸಿದರೂ ಜಪಾನ್ ಶರಣಾಗತವಾಗಲು ಒಪ್ಪಲಿಲ್ಲ. ಆದರೆ ಹಿರೋಷಿಮಾ ಮತ್ತು ನಾಗಸಾಕಿಗಳ ಮೇಲೆ ಪರಮಾಣು ಬಾಂಬ್ ದಾಳಿಯಾದ ಬಳಿಕ 1945 ಆಗಸ್ಟ್ 15ರಂದು ಜಪಾನ್ ಶರಣಾಗತವಾಯಿತು. ನಾಶವಾಗಿದ್ದ ಊರುಗಳಲ್ಲಿ ಪುನರ್ನಿರ್ಮಾಣ ಕಾರ್ಯಗಳು ನಡೆದುವು. ಹೊಸತನ್ನು ಬೇಗ ಹೊಂದಿಸಿಕೊಂಡು ಹೋಗುವುದು ಜಪಾನೀಯರ ಗುಣ. ಅದು ಅವರ ಅಭಿವೃದ್ಧಿಯ ಅಡಿಗಲ್ಲು. ಜಪಾನಿಯರಿಗೆ ಹಿಂದೆ ಚಕ್ರವರ್ತಿ ಎಂದರೆ ಬಹು ಭಕ್ತಿ. ಅವನಲ್ಲಿ ದೇವಾಂಶ ಇದೆ ಎಂದು ನಂಬಿದ್ದರು. ಸಾಮಾನ್ಯ ಜನ ಅವನ ಮುಖವನ್ನು ನೋಡುತ್ತಿರಲಿಲ್ಲ. ಅಂಚೆ ಚೀಟಿಯಲ್ಲಿ ಅವನ ಚಿತ್ರದ ಮೇಲೆ ಮುದ್ರೆ ಒತ್ತುತ್ತಿರಲಿಲ್ಲ; ಅವನು ರಸ್ತೆಯಲ್ಲಿ ಹಾದುಹೋಗುವಾಗ ಎಲ್ಲ ಬಾಗಿಲುಗಳನ್ನೂ ಕಿಟಕಿಗಳನ್ನೂ ಮುಚ್ಚಿರುತ್ತಿದ್ದರು. ಈಗ ಆ ಪೂಜೆ ಹೋಗಿದ್ದರೂ ಪ್ರೀತಿ ಗೌರವಗಳಿವೆ. ಈಗಿನ ಜಪಾನಿನ ಚಕ್ರವರ್ತಿ ಹಿರೋಹಿಟೊ. ಯುವರಾಜ ಅಕಿಹಿಟೊ ಸಾಮಾನ್ಯ ಮನೆತನದ ಮಿಚಿಕೊ ಷೋಡಾಳನ್ನು ಮದುವೆಯಾಗಿ, ಪುರಾತನ ಪದ್ಧತಿಯನ್ನು ಮುರಿದು ಹೊಸ ಅಧ್ಯಾಯವನ್ನು ಆರಂಭಿಸಿದ.

1956ರಲ್ಲಿ ಜಪಾನ್ ವಿಶ್ವಸಂಸ್ಥೆಯನ್ನು ಸೇರಿತು. 1964ರಲ್ಲಿ ಒಲಿಂಪಿಕ್ ಕ್ರೀಡೆ ಟೋಕಿಯೊದಲ್ಲಿ ನಡೆಯಿತು. ಜಪಾನಿನ 'ಇಕಬಾನ' ಜಗತ್‌ಪ್ರಸಿದ್ಧವಾಗಿದೆ. ಇದು ಹೂವುಗಳನ್ನು ಚಿತ್ರಮಯವಾಗಿ ಜೋಡಿಸಿ ಅಲಂಕರಿಸುವ ಕಲೆ. ಈ ಜೋಡಣೆಯಲ್ಲಿ ಪ್ರತಿ ವಿವರಕ್ಕೂ ಅರ್ಥಪೂರ್ಣ ಸಂಕೇತ. ಹೂವುಗಳ ವಿನ್ಯಾಸದ ಕಲೆಯನ್ನು ಏಳನೆಯ ಶತಮಾನದಿಂದ ಬೆಳೆಸಿಕೊಂಡು ಬಂದಿದ್ದಾರೆ. ಇದಕ್ಕಾಗಿಯೆ ಜಪಾನಿನಲ್ಲಿ ಎರಡು ಸಾವಿರಕ್ಕೂ ಹೆಚ್ಚು ಶಾಲೆಗಳಿವೆ.

ನೋಡಿ : ಟೋಕಿಯೊ ; ಹಿರೋಷಿಮಾ – ನಾಗಸಾಕಿ ; ಪಿಂಟೊ

| | | |
|---|---|---|
| ಖಂಡ | : | ಏಷ್ಯ |
| ಅಕ್ಷಾಂಶ | : | 26° 59′ ಉ ದಿಂದ 45° 31′ ಉ |
| ರೇಖಾಂಶ | : | 128° 06′ ಪೂ ದಿಂದ 145° 49′ ಪೂ |
| ವಿಸ್ತೀರ್ಣ | : | 3,70,370 ಚ. ಕಿ. ಮೀ. |
| ಜನಸಂಖ್ಯೆ | : | 9,64,00,000 (1966) |
| ರಾಜಧಾನಿ | : | ಟೋಕಿಯೊ |
| ಭಾಷೆ | : | ಜಪಾನಿ |
| ಸರಕಾರ | : | ಸಂವಿಧಾನಬದ್ಧ ರಾಜಪದ್ಧತಿ |
| ಬಾವುಟ | : | ಬಿಳಿ, ಮಧ್ಯೆ ಕೆಂಪು ವೃತ್ತ |

## ಜರ್ಮನಿ

ಕಷ್ಟಸಹಿಷ್ಣುಗಳ ಉದ್ಯೋಗಪ್ರಿಯರ ರಾಷ್ಟ್ರ ಜರ್ಮನಿ. ಕೈಗಾರಿಕೋದ್ಯಮಗಳಲ್ಲಿ ಮುಂದುವರಿದ ದೇಶ. ಜರ್ಮನರ ವೈಜ್ಞಾನಿಕ ಮತ್ತು ತಾಂತ್ರಿಕ ಜ್ಞಾನ ಅಸಾಧಾರಣವಾದದ್ದು. ನೊಬೆಲ್ ಬಹುಮಾನ ವಿಜೇತರಲ್ಲಿ 37 ಮಂದಿ ಬರ್ಲಿನ್‌ನಲ್ಲಿ ಹುಟ್ಟಿದವರು ಅಥವಾ ದುಡಿದವರು.

ಎರಡು ಮಹಾಯುದ್ಧಗಳಿಗೂ ಮೂಲ ಕಾರಣರು ಜರ್ಮನಿಯ ಆಗಿನ ಸೂತ್ರಧಾರರು. ಯುದ್ಧದ ಕಹಿ ಉಂಡಿರುವ ಜರ್ಮನ್ ಜನತೆ ಈಗ ಶಾಂತಿಪ್ರಿಯರು.

ಜರ್ಮನಿ ಎರಡನೆಯ ಮಹಾಯುದ್ಧದಲ್ಲಿ ಸೋತ ಅನಂತರ, ಪೂರ್ವ ಜರ್ಮನಿ ಮತ್ತು ಪಶ್ಚಿಮ ಜರ್ಮನಿ ಎಂದು ಇಬ್ಭಾಗವಾಗಿದೆ.

ಜರ್ಮನಿ ಮಧ್ಯ ಯೂರೋಪಿನಲ್ಲಿದೆ. ನದಿ, ಪರ್ವತಗಳ ರೂಪದಲ್ಲಿ ನೈಸರ್ಗಿಕ ರಕ್ಷಣೆಗಳು ಹೆಚ್ಚಿಲ್ಲ. ಉತ್ತರದ ತಗ್ಗು ಪ್ರದೇಶ, ಮಧ್ಯದ ಎತ್ತರ ಪ್ರದೇಶ ಮತ್ತು ದಕ್ಷಿಣದ ಪರ್ವತ ಪ್ರದೇಶ ಎಂದು ಮೂರು ಪ್ರಾಕೃತಿಕ ವಿಭಾಗಗಳಿವೆ.

ಜರ್ಮನಿಯ ಬಹು ಭಾಗದಲ್ಲಿರುವುದು ಹೆಚ್ಚು ವ್ಯತ್ಯಾಸಗಳಿಲ್ಲದ ಹವಾಗುಣ. ಚಳಿಗಾಲದಲ್ಲಿ ಶಾಖ 30° ಫಾ.ಗಳಷ್ಟಿರುತ್ತದೆ. ಒಳನಾಡು ಮತ್ತು ಪೂರ್ವಭಾಗಗಳಲ್ಲಿ ಸೆಕೆ, ಚಳಿ ಎರಡೂ ಅಧಿಕ. ದಕ್ಷಿಣದಲ್ಲಿ ಬೇಸಿಗೆ ಕಾಲದಲ್ಲಿ ಚೆನ್ನಾಗಿ ಮಳೆ ಬೀಳುತ್ತದೆ. ರೈನ್, ಸ್ಪ್ರೀ, ಎಲ್ಬ್, ಡ್ಯಾನ್ಯೂಬ್, ಓಡರ್ ನದಿಗಳು ಹೆದ್ದಾರಿಗಳಂತಿವೆ. ಸರೋವರಗಳೂ ಇವೆ.

ವ್ಯವಸಾಯ ಬಹಳ ಕಡಮೆ, ಶೇಕಡಾ 10 ಜನ ಮಾತ್ರ ಬೇಸಾಯಗಾರರು. ಆದರೆ ಅತ್ಯಲ್ಪ ಭೂಮಿಯಲ್ಲಿ ಹೆಚ್ಚು ಬೆಳೆ ತೆಗೆಯುವುದರಲ್ಲಿ ಜರ್ಮನರು ದಕ್ಷರು.

ಜರ್ಮನರು ಯಂತ್ರೋಪಯೋಗಿ ಉದ್ಯೋಗ ಮಾಡುವುದೇ ಬಹಳ. ಎರಡನೆಯ ಜಾಗತಿಕ ಮಹಾಯುದ್ಧದಲ್ಲಿ ಸಂಪೂರ್ಣ ನಾಶವಾದಂತಿದ್ದ ಜರ್ಮನಿ ಇಂದು ಮತ್ತೆ ಶ್ರೇಷ್ಠದರ್ಜೆಯ ರಾಷ್ಟ್ರವೆನಿಸಿದೆ. ರೂರ್ ಜಿಲ್ಲೆಯಲ್ಲಿ ಕಲ್ಲಿದ್ದಲು ಸಂಪತ್ತಿದೆ. ಉಕ್ಕಿನ ಉತ್ಪಾದನೆಯಲ್ಲಿ ರಷ್ಯ, ಅಮೆರಿಕದ ಸಂಯುಕ್ತ ಸಂಸ್ಥಾನದ ಅನಂತರ ಪಶ್ಚಿಮ ಜರ್ಮನಿಯೇ ಪ್ರಧಾನ ರಾಷ್ಟ್ರ. ರೇಡಿಯೊ, ಟೆಲಿಫೋನ್ ಮುಂತಾದ ಯಂತ್ರಗಳ ತಯಾರಿಕೆಯಲ್ಲಿ ಜರ್ಮನಿ ಸಿದ್ಧಹಸ್ತ. ಪ್ಲಾಸ್ಟಿಕ್ ಉತ್ಪಾದನೆಯಲ್ಲಿ ಪ್ರಪಂಚದಲ್ಲಿ ಎರಡನೆಯ ಸ್ಥಾನ ಜರ್ಮನಿಗೆ. ಉತ್ತಮ ಔಷಧಿಗಳ ತಯಾರಿಕೆಗೂ ಜರ್ಮನಿ ಪ್ರಸಿದ್ಧ.

ಜರ್ಮನಿಯಲ್ಲಿ ಜನಸಂಖ್ಯೆ ಏಳುಕೋಟಿ ನಲವತ್ತು ಲಕ್ಷ. ಬಹು ಮಂದಿ ಪ್ರಾಟೆಸ್ಟಂಟರು ಮತ್ತು ರೋಮನ್ ಕ್ಯಾಥಲಿಕರು. ಆಡಳಿತ ಭಾಷೆ ಜರ್ಮನ್. ಪಶ್ಚಿಮ ಜರ್ಮನಿಯ ರಾಜಧಾನಿ ಬಾನ್. ಇದು ಸಂಗೀತಗಾರ ಬಿಥೋವನ್‌ನ ಜನ್ಮ ಸ್ಥಳ. ಪೂರ್ವ ಜರ್ಮನಿಯ ರಾಜಧಾನಿ ಪೂರ್ವ ಬರ್ಲಿನ್. ಫ್ರಾಂಕ್‌ಫರ್ಟ್. ಡ್ರೆಸ್ಡೆನ್, ಲೀಪ್‌ಜಿಗ್—ಇವು ಕೈಗಾರಿಕೆ, ಶಿಕ್ಷಣಗಳ ಕೇಂದ್ರಗಳಾಗಿವೆ. ಹತ್ತೊಂಬತ್ತನೆಯ ಶತಮಾನದ ವಿಶ್ವ ಪ್ರಸಿದ್ಧ ಕವಿ ಗಟೆ ಹುಟ್ಟಿದ ವೈಮರ್ ಇತಿಹಾಸಪ್ರಸಿದ್ಧ ಸ್ಥಳವಾಗಿದೆ. ಹ್ಯಾಂಬರ್ಗ್ ಹಿರಿಯ ಬಂದರು. ರೂರ್. ಎಸ್ಸೆನ್, ಡಾರ್ಟ್‌ಮಂಡ್, ಡುಸೆಲ್‌ಡಾರ್ಫ್, ಕಲೋನ್ ಪ್ರಮುಖ ಪಟ್ಟಣಗಳು. ಹೈಡಲ್‌ಬರ್ಗ್ ವಿಶ್ವವಿದ್ಯಾನಿಲಯ ಸಹಸ್ರಾರು ಮಂದಿಯನ್ನು ಆಕರ್ಷಿಸುತ್ತದೆ. ನ್ಯೂರೆಂಬರ್ಗ್‌ನಲ್ಲಿ ಪೂರ್ವ ಕಾಲದ ಗೋಡೆ. ಗೋಪುರಗಳು, ಅರಮನೆಗಳು—ಎಲ್ಲವನ್ನೂ ಚೆನ್ನಾಗಿ ರಕ್ಷಿಸಿದ್ದಾರೆ. ಮ್ಯೂನಿಕ್‌ನಲ್ಲಿ ವಸ್ತು ಸಂಗ್ರಹಾಲಯಗಳಿವೆ.

ಕ್ರಿ. ಪೂ. 58ರಲ್ಲಿ ಜೂಲಿಯಸ್ ಸೀಸರ್ ಜರ್ಮನಿಯ (ಆಗಿನ ಗಾಲ್) ಮೇಲೆ ದಂಡೆತ್ತಿಹೋದ. ರೈನ್ ನದಿಯ ಬಳಿ ಆಗ ಯುದ್ಧದಲ್ಲಿ ಜರ್ಮನರು ಬಲವಾಗಿ ಹೋರಾಡಿದರು. ರೋಮನರು ಉತ್ತರ ರೈನಿನ ಜನರನ್ನು ಸೋಲಿಸಲಾರದೆ ಹಿಮ್ಮೆಟ್ಟಿ ಕೆಳ ರೈನ್‌ನಲ್ಲಿ ಪಟ್ಟಣಗಳನ್ನು ಕಟ್ಟಿಕೊಂಡರು. ರೋಮನ್ನರ ಪ್ರಾಬಲ್ಯ ಕ್ಷೀಣಿಸಿದಾಗ ಜರ್ಮನರು ಆ ಪಟ್ಟಣಗಳನ್ನು ಗೆದ್ದುಕೊಂಡರು. ಷಾರ್ಲ್‌ಮೇನ್ (742–814) ಪಶ್ಚಿಮ ಯೂರೋಪಿನ ಬಹುಭಾಗವನ್ನು ತನ್ನ ಚಕ್ರಾಧಿಪತ್ಯಕ್ಕೆ ಸೇರಿಸಿಕೊಂಡ. ಅವನ ಕಾಲಾನಂತರ ಅವನ ಮೊಮ್ಮಗ ಲೂಯಿಗೆ ರೈನ್‌ನಿಂದ ಎಲ್ಬ್ ವರೆಗಿನ ಪ್ರದೇಶ ಕೊಡಲ್ಪಟ್ಟಿತು. ಅದೇ ಜರ್ಮನಿ. ಅಲ್ಲಿ ಅನೇಕ ಸಣ್ಣ ಸಣ್ಣ ರಾಜ್ಯಗಳಾದುವು. ಚಕ್ರವರ್ತಿ ದೂರ ಇರುತ್ತಿದ್ದುದರಿಂದ ರಾಜರು ಪ್ರಬಲರಾದರು. ಚಕ್ರವರ್ತಿ ಒಂದನೆಯ ಫ್ರೆಡರಿಕ್ ಜರ್ಮನಿಯನ್ನು ಒಂದುಗೂಡಿಸುವುದರಲ್ಲಿ ಯಶಸ್ವಿಯಾದ. ಅವನ ತರುವಾಯ ಪುನಃ ರಾಜರ ಪ್ರಾಬಲ್ಯ ಹೆಚ್ಚಿತು.

ಹದಿನಾರನೆಯ ಶತಮಾನದವರೆಗೆ ರೋಮನ್ ಕ್ಯಾಥಲಿಕ್ ಧರ್ಮ ಉಳಿದ ವಿಚಾರಗಳಲ್ಲಿದ್ದ ವೈರವನ್ನು ಮರೆಸಿ ರಾಜ್ಯಗಳನ್ನು ಒಂದುಗೂಡಿಸಿತ್ತು. 1517ರಲ್ಲಿ ಮಾರ್ಟಿನ್ ಲೂಥರ್ ಪ್ರಾಟೆಸ್ಟೆಂಟ್ ಮತವನ್ನು ಸ್ಥಾಪಿಸಿದ. ಚಕ್ರವರ್ತಿ ಐದನೆಯ ಚಾರ್ಲ್ಸ್ ಕ್ಯಾಥಲಿಕ್ ಮತದವನು, ಉತ್ತರದ ರಾಜರು ಪ್ರಾಟೆಸ್ಟೆಂಟರು. 1555ರಲ್ಲಿ ಇವರು ಒಂದು ಒಪ್ಪಂದವನ್ನು ಮಾಡಿಕೊಂಡರು. ಈ ಒಪ್ಪಂದದಿಂದ ದೇಶಕ್ಕೆ ಯಾವ ಮತವನ್ನಾದರೂ ಆರಿಸಲು ಅವಕಾಶವಾಯಿತು. 1618ರಿಂದ 1648ರ ವರೆಗೆ ಧಾರ್ಮಿಕ ಕಾರಣಗಳಿಂದ ಯುದ್ಧ ನಡೆದು ದೇಶ ಹಲವು ಭಾಗಗಳಾಯಿತು. ಇದರಲ್ಲಿ ಒಂದು ವಿಸ್ತಾರವಾಗಿ ಪ್ರಷ್ಯ ಎನಿಸಿಕೊಂಡಿತು. 1712ರ ತನಕ ಎರಡನೆಯ ಫ್ರೆಡರಿಕ್ ಮಹಾಶಯನ ಆಡಳಿತ ಕಾಲದಲ್ಲಿ ಪ್ರಷ್ಯ ಬಹುಮುಖ ಪ್ರಗತಿ ಸಾಧಿಸಿತು. ವಿಸ್ತಾರವೂ ಹೆಚ್ಚಿತು. ಪ್ರಷ್ಯದ ಹಿಡಿತದಿಂದ ಬೇರೆಯಾಗಿ ಜರ್ಮನಿ ಸಂವಿಧಾನಬದ್ಧ ರಾಜಪದ್ಧತಿ ಹೊಂದಬೇಕೆಂದು ಜರ್ಮನರು ಯತ್ನಿಸಿದರು. ಆದರೆ ಸಫಲರಾಗಲಿಲ್ಲ. ಮುಂದೆ ಬಿಸ್ಮಾರ್ಕ್ (1815–98) ಜರ್ಮನಿಯನ್ನು ಒಂದುಗೂಡಿಸಿ ಅದರ ಅಭ್ಯುದಯಕ್ಕೆ ಕಾರಣನಾದ. ಮೊದಲನೆಯ ಮಹಾಯುದ್ಧದಲ್ಲಿ ಸೋತ ಜರ್ಮನಿ ಮಿತ್ರರಾಷ್ಟ್ರಗಳಿಗೆ [illegible] ಕೊಡಬೇಕಾಯಿತು—25,000 ಕೋಟಿ ರೂಪಾಯಿ [illegible].

1919ರಲ್ಲಿ ಜರ್ಮನಿ ಸಂಯುಕ್ತ ಗಣರಾಜ್ಯವಾಯಿತು. ಸಂವಿಧಾನ ರಚನೆಯಾಯಿತು. ಯುದ್ಧದಿಂದ ದೇಶ ಅಪಾರ ಹಾನಿಗೊಳಗಾಗಿತ್ತು. ಹೊಸದಾಗಿ ರಚಿತವಾದ ನಾಜಿ ಪಕ್ಷ ಜನರ ಅತೃಪ್ತಿಯನ್ನು ಬಳಸಿಕೊಂಡಿತು. ನಾಜಿಗಳು ಜರ್ಮನಿಯನ್ನು ಪುನಃ ಸಂಪದ್ಭರಿತ ಮಾಡುವೆವೆಂದು ಘೋಷಿಸಿದರು. ಈ ಪಕ್ಷದ ನಾಯಕ ಅಡಾಲ್ಫ್ ಹಿಟ್ಲರ್ 1934ರಲ್ಲಿ ಸರ್ವಾಧಿಕಾರಿಯಾದ. ದ್ವಿತೀಯ ಮಹಾಯುದ್ಧಕ್ಕೂ ಕಾರಣನಾದ. ಯುದ್ಧದಲ್ಲಿ ಜರ್ಮನಿ ಸೋಲನ್ನನುಭವಿಸಿತು. ಮಿತ್ರರಾಷ್ಟ್ರಗಳು ಜರ್ಮನಿಯನ್ನು ನಾಲ್ಕು ವಲಯಗಳನ್ನಾಗಿ ಮಾಡಿದುವು. ರಷ್ಯ, ಬ್ರಿಟನ್. ಅಮೆರಿಕ ಸಂಯುಕ್ತ ಸಂಸ್ಥಾನ ಮತ್ತು ಫ್ರಾನ್ಸ್‌ಗಳ ವಲಯಗಳಾದುವು. ಬರ್ಲಿನನ್ನೂ ಒಡೆದರು. ಮುಂದೆ ಗೋಡೆ ಕಟ್ಟಿ ಪೂರ್ವ ಪಶ್ಚಿಮ ಎಂದು ಎರಡು ಭಾಗಗಳನ್ನು ಸ್ಥಿರಗೊಳಿಸಿದರು. ಪೂರ್ವ ಜರ್ಮನಿ ಕಮ್ಯೂನಿಸ್ಟರ ವಶದಲ್ಲುಳಿಯಿತು. ಪಶ್ಚಿಮ ಜರ್ಮನಿ ಮಿತ್ರ ರಾಷ್ಟ್ರಗಳ ನೆರವಿನಿಂದ ಬೇಗ ಚೇತರಿಸಿಕೊಂಡಿತು. ಪೂರ್ವ ಜರ್ಮನಿ ರಷ್ಯದ ನೆರವಿನಿಂದ ಆರ್ಥಿಕಾಭಿವೃದ್ಧಿಯನ್ನು ಸಾಧಿಸಿತು. 1955ರಲ್ಲಿ ಪಶ್ಚಿಮ ಜರ್ಮನಿಗೆ ಮಿತ್ರರಾಷ್ಟ್ರಗಳು ಸ್ವಾತಂತ್ರ್ಯ ನೀಡಿದುವು. ರಷ್ಯ ಪೂರ್ವ ಜರ್ಮನಿಯನ್ನು ಸ್ವತಂತ್ರ ರಾಷ್ಟ್ರವಾಗಿ ಅಂಗೀಕರಿಸಿತು.

ಪೂರ್ವ ಜರ್ಮನಿ

ಖಂಡ : ಯೂರೋಪ್ (ಮಧ್ಯ)
ಅಕ್ಷಾಂಶ : 50° 12′ ಉ ದಿಂದ 54° 41′ ಉ
ರೇಖಾಂಶ : 9° 53′ ಪೂ ದಿಂದ 15° 02′ ಪೂ
ವಿಸ್ತೀರ್ಣ : 1,07.835 ಚ. ಕಿ. ಮೀ.
ಜನಸಂಖ್ಯೆ : 1.70.00.000 (1966)
ರಾಜಧಾನಿ : ಪೂರ್ವ ಬರ್ಲಿನ್
ಭಾಷೆ : ಜರ್ಮನ್
ಸರಕಾರ : ಜನತಾ ಪ್ರಜಾಪ್ರಭುತ್ವ
ಬಾವುಟ : ಕಪ್ಪು. ಕೆಂಪು ಮತ್ತು ಹಳದಿಬಣ್ಣದ ಅಡ್ಡಪಟ್ಟೆಗಳು. ಮತ್ತು ನಡುವೆ ಹೂವಿನಾಕಾರದ ಒಂದು ವರ್ತುಲ

ಪಶ್ಚಿಮ ಜರ್ಮನಿ

ಖಂಡ : ಯೂರೋಪ್ (ಮಧ್ಯ)
ಅಕ್ಷಾಂಶ : 47° 16′ ಉ ದಿಂದ 55° 03′ ಉ
ರೇಖಾಂಶ : 5° 56′ ಪೂ ದಿಂದ 13° 50′ ಪೂ
ವಿಸ್ತೀರ್ಣ : 2.48.415 ಚ. ಕಿ. ಮೀ.
ಜನಸಂಖ್ಯೆ : 5.70.00.000 (1966)
ರಾಜಧಾನಿ : ಬಾನ್
ಭಾಷೆ : ಜರ್ಮನ್
ಸರಕಾರ : ಗಣರಾಜ್ಯ
ಬಾವುಟ : ಕಪ್ಪು. ಕೆಂಪು ಮತ್ತು ಹಳದಿ ಬಣ್ಣದ ಅಡ್ಡಪಟ್ಟೆಗಳು

ಯುದ್ಧದಿಂದಾಗಿ ಅಪಾರ ಹಾನಿಗೆ ಒಳಗಾದ ಜರ್ಮನಿ. ವಿಭಜನೆಯೊಂದನ್ನು ಬಿಟ್ಟರೆ, ಉಳಿದ ವಿಷಯಗಳಲ್ಲಿ ಚೇತರಿಸಿಕೊಂಡಿದೆ.

ಪಾಶ್ಚಾತ್ಯ ಸಂಗೀತ ಕಲೆಗೆ ಜರ್ಮನಿಯ ಕೊಡುಗೆ ಅಮೂಲ್ಯ. ಯೊಹಾನ್ ಸೆಬ್ಯಾಸ್ಟಿಯನ್ ಬ್ಯಾಕ್. ಜಾರ್ಜ್ ಫ್ರೆಡರಿಕ್ ಹ್ಯಾಂಡಲ್ (18ನೆಯ ಶತಮಾನ). ಲಡ್ವಿಗ್ ವಾನ್ ಬಿಥೋವನ್. ರಾಬರ್ಟ್ ಶೂಮನ್—ಇಂಥ ಅಮರ ಸಂಗೀತ ಕಲಾವಿದರೆಲ್ಲ ಜರ್ಮನಿಯವರು.

ಹತ್ತೊಂಬತ್ತನೆಯ ಶತಮಾನದಲ್ಲಿ ಭಾರತಕ್ಕೂ ಜರ್ಮನಿಗೂ ಸಂಸ್ಕೃತಿಯ ಕ್ಷೇತ್ರದಲ್ಲಿ ಹೊಸ ಬಾಂಧವ್ಯ ಬೆಳೆಯಿತು. ಡಾ. ಫ್ರೆಡರಿಕ್ ಮ್ಯಾಕ್ಸ್ ಮುಲ್ಲರ್ (1823–1900) ಎಂಬ ಜರ್ಮನ್ ವಿದ್ವಾಂಸ ಬರ್ಲಿನ್ ಮತ್ತು ಪ್ಯಾರಿಸ್‌ಗಳಲ್ಲಿ ಸಂಸ್ಕೃತ. ಅರಬಿ. ಪರ್ಷಿಯನ್. ಗ್ರೀಕ್. ಬಂಗಾಳಿ ಮತ್ತು ಹಿಂದೂಸ್ತಾನಿ ಭಾಷೆಗಳನ್ನು ಕಲಿತು. ತನ್ನ ಜೀವನವನ್ನೇ ಭಾರತದ ಸಾಹಿತ್ಯ ತತ್ತ್ವಶಾಸ್ತ್ರ ಮತ್ತು ಇತರ ಶಾಸ್ತ್ರಗಳ ಅಧ್ಯಯನಕ್ಕೆ ಧಾರೆಯೆರೆದ. ವೇದಗಳನ್ನು ಇಂಗ್ಲಿಷ್ ಭಾಷೆಗೆ ಭಾಷಾಂತರಿಸಿ. ವ್ಯಾಖ್ಯಾನಗಳನ್ನು ರಚಿಸಿದ. ಮ್ಯಾಕ್ಸ್ ಮುಲ್ಲರನ ಪುಸ್ತಕಗಳು ಮತ್ತು ಉಪನ್ಯಾಸಗಳು ಯೂರೋಪಿನ ಜನತೆಗೆ ಭಾರತದ ವೇದಾಂತ ಮತ್ತು ಸಾಹಿತ್ಯಗಳ ಪರಿಚಯ ಮಾಡಿಸಿಕೊಟ್ಟುವು. ಕನ್ನಡನಾಡಿನಲ್ಲಿ ಇಂದಿಗೂ ಬೆಲೆಬಾಳುವ ಕೃತಿಯಾದ ಕನ್ನಡ—ಕನ್ನಡ–ಇಂಗ್ಲಿಷ್ ನಿಘಂಟನ್ನು ರಚಿಸಿದ (1889) ರೆವರೆಂಡ್ ಕಿಟೆಲ್ (1832–1903) ಜರ್ಮನಿ ದೇಶದವನು. ಇವನು ಕನ್ನಡ ಸಾಹಿತ್ಯ ಚರಿತ್ರೆಯನ್ನು ಇಂಗ್ಲಿಷಿನಲ್ಲಿ ಬರೆದ ; ಕನ್ನಡ ಸಾಹಿತ್ಯವನ್ನು ಕುರಿತು ಜರ್ಮನ್ ಭಾಷೆಯಲ್ಲಿ ಲೇಖನಗಳನ್ನು ಬರೆದ. ಕನ್ನಡ ವ್ಯಾಕರಣ ಕೃತಿಗಳನ್ನು ರಚಿಸಿದ. ಮ್ಯಾಕ್ಸ್ ಮುಲ್ಲರ್ ಅಲ್ಲದೆ ಫ್ರೆಡರಿಕ್ ವಾನ್ ಶ್ಲೆಗಲ್ ಮೊದಲಾದ ಸುಮಾರು ಇಪ್ಪತ್ತು ಮಂದಿ ಜರ್ಮನಿಯ ವಿದ್ವಾಂಸರು ವೇದಗಳ ಭಾಷಾಂತರ ಅಥವಾ ವ್ಯಾಖ್ಯಾನದ ಕೆಲಸವನ್ನು ಮಾಡಿದರು. ಆಲ್ಬರ್ಟ್ ವೆಬರ್ ರಾಮಾಯಣವನ್ನು ಜರ್ಮನ್ ಭಾಷೆಗೆ ಅನುವಾದಿಸಿದ. ಭಾರತದ ಸಂಸ್ಕೃತಿಯ ಪರಿಚಯವನ್ನು ಪಾಶ್ಚಾತ್ಯ ಜಗತ್ತಿಗೆ ಪರಿಚಯ ಮಾಡಿಸಿಕೊಟ್ಟ ಕೀರ್ತಿಯಲ್ಲಿ ಬಹುಪಾಲು ಜರ್ಮನಿಯ ವಿದ್ವಾಂಸರದು.

ನೋಡಿ : ಬರ್ಲಿನ್ ; ಮಹಾಯುದ್ಧಗಳು; ಹಿಟ್ಲರ್. ಅಡಾಲ್ಫ್

## ಜರತುಷ್ಟ್ರ



ದೇವರು ಒಬ್ಬನೇ–ಎಂದು ಸಾರಿದ ಜರತುಷ್ಟ್ರ

ಹಿಂದೆ ಪರ್ಷಿಯ (ಇರಾನ್) ದೇಶದ ಜನರು ಉಳಿದ ಕೆಲವು ದೇಶಗಳ ಜನರಂತೆ ಹಲವಾರು ದೇವರುಗಳನ್ನು ಪೂಜೆ ಮಾಡುತ್ತಿದ್ದರು. ಇದು ಸರಿಯಲ್ಲವೆಂದೂ ದೇವರು ಒಬ್ಬನೆ ಎಂದೂ ಸಾರಿದವನು ಜರತುಷ್ಟ್ರ (ಹಳೆಯ ಪರ್ಷಿಯನ್ ರೂಪದಲ್ಲಿ ಜರ ಉಷ್ಟ್ರ.)

ಜರತುಷ್ಟ್ರನು ಯಾವಾಗ ಹುಟ್ಟಿದ ಎನ್ನುವುದು ಸರಿಯಾಗಿ ತಿಳಿದಿಲ್ಲ. ಕ್ರಿ.ಪೂ. ಆರನೆಯ ಅಥವಾ ಏಳನೆಯ ಶತಮಾನದಲ್ಲಿದ್ದಿರಬಹುದು ಎಂದು ಊಹೆ.

ಜರತುಷ್ಟ್ರ ದೇವರು ಒಬ್ಬನೆ ಎಂದು ಘೋಷಿಸಿದ. ಆ ದೇವರು ಅಹುರಮಜ್ದ. ಅವನು ಮಾನವನನ್ನು ಸೃಷ್ಟಿಸಿದ್ದಾನೆ. ಅವನಿಗೆ ಮಾನವನಲ್ಲಿ ಪ್ರೀತಿ. ದೇವರ ಸೃಷ್ಟಿಯಾದ ಮಾನವನನ್ನು ಹೇಗಾದರೂ ಮಾಡಿ ನಾಶಮಾಡಬೇಕು ಎನ್ನುವ ಹಟದಿಂದ ಕೆಲಸ ಮಾಡುತ್ತಿದ್ದಾನೆ ದೇವರ ವೈರಿ ಅಹ್ರಿಮನ್. ದೇವನಾದ ಅಹುರಮಜ್ದನು ಮನುಷ್ಯನಿಗೆ ಸ್ನೇಹ, ಪ್ರೀತಿ. [illegible] [illegible] ಕಲಿಸಿದ್ದಾನೆ. ಮನುಷ್ಯ ಒಳ್ಳೆಯದನ್ನಾದರೂ ಆರಿಸಿಕೊಳ್ಳಬಹುದು. ಕೆಟ್ಟದನ್ನಾದರೂ ಆರಿಸಿಕೊಳ್ಳಬಹುದು. ಈ ಸ್ವಾತಂತ್ರ್ಯವನ್ನು ಅಹುರಮಜ್ದ ಕೊಟ್ಟಿದ್ದಾನೆ. ಒಳ್ಳೆಯದನ್ನು ಆರಿಸಿಕೊಂಡವರು ಒಳ್ಳೆಯ ಮಾತು, ಒಳ್ಳೆಯ ಯೋಚನೆ, ಒಳ್ಳೆಯ ಕೆಲಸಗಳಿಂದ ಅಹುರಮಜ್ದನ ಕಡೆಯವರಾಗುತ್ತಾರೆ. ಅಹ್ರಿಮನ್‌ನ ಸೋಲಿಗೆ ಸಹಾಯಮಾಡುತ್ತಾರೆ ಹೀಗೆ ಜರತುಷ್ಟ್ರ ಬೋಧಿಸಿದ.

ಜರತುಷ್ಟ್ರ ಸ್ಥಾಪಿಸಿದ ಮತಕ್ಕೆ ಜೊರಾಸ್ಟ್ರಿಯನ್ ಮತವೆಂದು ಹೆಸರು. ಭಾರತದಲ್ಲಿರುವ ಪಾರಸಿ ಜನ ಈ ಮತದವರು.

ಜರತುಷ್ಟ್ರನ ಜನ್ಮದ ವಿಷಯವಾಗಿ ಒಂದು ಸ್ವಾರಸ್ಯವಾದ ಕಥೆ ಇದೆ :

ದೇವರಾದ ಅಹುರಮಜ್ದನಿಗೂ ದೇವರ ವೈರಿಯಾದ ಅಹ್ರಿಮನ್‌ನಿಗೂ ಹೋರಾಟ ನಡೆಯುತ್ತಲೇ ಇತ್ತು. ಒಂದು ಸಲ ಗುಡ್ಡಗಾಡಿನ ಜನರೆಲ್ಲ ಸೇರಿ ಬಯಲು ಭೂಮಿಯ ಜನರ ಮೇಲೆ ದಾಳಿಮಾಡಿದರು. ದಾಳಿ

ಕಾರರು ಬಯಲು ಭೂಮಿಯವರ ಹಸುಗಳನ್ನು ಕದ್ದುಕೊಂಡು ಹೋದರು. ಆಗ ಆ ಪಶುಗಳು ತಮ್ಮ ದೇವನಾದ ಗೊಸುರ್ವಾನನನ್ನು ಮೊರೆಹೊಕ್ಕುವು. ಗೊಸುರ್ವಾನನು "ಒಳ್ಳೆಯ ಮನುಷ್ಯರನ್ನು ರಕ್ಷಿಸುವವರು ಯಾರು ?" ಎಂದು ಅಹುರಮಸ್ದನನ್ನು ಕೇಳಿದ. ಆಗ ಅವರ ರಕ್ಷಣೆಗಾಗಿ ಅಹುರಮಸ್ದ ಜರತುಷ್ಟ್ರನನ್ನು ಸೃಷ್ಟಿಸಿದ.

ಜರತುಷ್ಟ್ರನನ್ನು ನಾಶಮಾಡಲು ಅಹ್ರಿಮನ್‌ನ ದುಷ್ಟಶಕ್ತಿಗಳು ಬಹಳವಾಗಿ ಪ್ರಯತ್ನಿಸಿದುವೆಂದೂ ಆದರೆ ಅವನನ್ನು ಅಹುರಮಸ್ದನು ರಕ್ಷಿಸಿದನೆಂದೂ ಅವನ ಅನುಯಾಯಿಗಳು ನಂಬುತ್ತಾರೆ.

ಜರತುಷ್ಟ್ರ ತನ್ನ ಏಳನೆಯ ವಯಸ್ಸಿನಿಂದ ಗುರುವಿನ ಬಳಿ ಹದಿನೈದು ವರ್ಷಗಳ ಕಾಲ ಸಾಧಕನಾಗಿ ಬಾಳಿದ. ತಾನೊಬ್ಬನೆ ಬೆಟ್ಟಗುಡ್ಡಗಳ ಮೇಲೆ ಅಲೆದಾಡುತ್ತಿದ್ದ. ಜನರ ಜೊತೆಯಲ್ಲಿ ಸೇರಿ ಅವರ ಕಷ್ಟಸುಖಗಳಲ್ಲಿ ಪಾಲುಗೊಳ್ಳುವುದನ್ನು ಕಲಿತ. ರೋಗಿಗಳ ಸೇವೆ ಮಾಡಿದ.

ಒಮ್ಮೆ ಸಬಲಾನ್ ಎನ್ನುವ ಪರ್ವತದ ಮೇಲೆ ಏಕಾಕಿಯಾಗಿ ಧ್ಯಾನದಲ್ಲಿ ನಿರತನಾಗಿದ್ದಾಗ ಅವನಿಗೆ ದಿವ್ಯದರ್ಶನವಾದಂತೆ ಭಾಸವಾಯಿತು. ಜರತುಷ್ಟ್ರ ದೇವರು ಎಂದರೆ ಚಿರಪ್ರಕಾಶ, ಶಾಶ್ವತಜೀವನ, ಸರ್ವಜ್ಞತೆ, ಶಕ್ತಿ, ಪಾವಿತ್ರ್ಯ, ಕರುಣೆ, ಸದಾಚಾರ ಈ ಏಳು ವಿಶೇಷ ಗುಣಗಳು ಉಳ್ಳವನು ಎಂದುಕೊಂಡಿದ್ದ. ಅದರಿಂದಲೇ ಅಹುರಮಸ್ದನು ಏಳು ಮುಖದವನಾಗಿ ಅವನಿಗೆ ಕಾಣಿಸಿದ. ಸತ್ಯಕ್ಕೂ ಅಸತ್ಯಕ್ಕೂ ಇರುವ ವ್ಯತ್ಯಾಸವನ್ನು ಬೋಧಿಸಿದ. ದೇವರಿಂದ ತಾನು ಪಡೆದ ಜ್ಞಾನವನ್ನು ಮನುಷ್ಯರಿಗೆ ತಿಳಿಸಬೇಕು ಎಂದು ಜರತುಷ್ಟ್ರನು ತನ್ನ ಕೆಲಸವನ್ನು ಆರಂಭಿಸಿದ. ಇಲ್ಲಿಯೂ ದುಷ್ಟಶಕ್ತಿಯಾದ ಅಹ್ರಿಮನ್ ವಿಘ್ನಗಳನ್ನು ಒಡ್ಡಿದ. ಹತ್ತು ವರ್ಷ ಕಾಲ ಪ್ರಚಾರಮಾಡಿದರೂ ಅವನಿಗೆ ಒಬ್ಬ ಶಿಷ್ಯ ಕೂಡ ಸಿಕ್ಕಿರಲಿಲ್ಲ. ಆದರೆ ಜರತುಷ್ಟ್ರ ತನ್ನ ಕಾರ್ಯವನ್ನು ಬಿಡಲಿಲ್ಲ. ಅವನ ಚಿಕ್ಕಪ್ಪನ ಮಗನಾದ ಮೆಕ್ಯೊಮನು ಅವನ ಶಿಷ್ಯನಾದ.

ಪಾರಸಿಗಳ ಧರ್ಮಗ್ರಂಥ ಜೆಂಡ ಅವೆಸ್ತ (ಅವೆಸ್ತ : ಜ್ಞಾನ). ಜರತುಷ್ಟ್ರ ತಾನು ಬೋಧಿಸಿದ ಮೂಲತತ್ತ್ವಗಳನ್ನು ದನದ ಚರ್ಮದ ಮೇಲೆ ಬರೆದಿಟ್ಟ. ಅಲೆಗ್ಸಾಂಡರ್ ದಾಳಿ ಮಾಡಿದಾಗ ಇವುಗಳಲ್ಲಿ ಹಲವು ಸುಟ್ಟು ಹೋದುವು. ಆದರೆ ಜರತುಷ್ಟ್ರ ರಚಿಸಿದ ಐದು ಗಾಥೆಗಳು (ಗಾಥೆ : ಗೀತೆ, ಹಾಡು) ಉಳಿದುವು. ಇವುಗಳಲ್ಲಿ ಜರತುಷ್ಟ್ರನಿಗೂ ಅಹುರಮಸ್ದನಿಗೂ ನಡೆದ ಸಂಭಾಷಣೆಗಳಿವೆ. ಪೂಜೆ ಮೊದಲಾದುವುಗಳಿಗೆ ಸಂಬಂಧಿಸಿದ ವಿಷಯಗಳನ್ನು ಅನಂತರ ಬರೆದು ಸೇರಿಸಿದಂತೆ ಕಾಣುತ್ತದೆ.

ಸದ್ವಿಚಾರ (ಒಳ್ಳೆಯ ಯೋಚನೆಗಳು) ಸದುಚ್ಚಾರ (ಒಳ್ಳೆಯ ಮಾತುಗಳು) ಸದಾಚಾರ (ಒಳ್ಳೆಯ ನಡತೆ)–ಇದು ಜರತುಷ್ಟ್ರನ ಸಂದೇಶದ ಸಾರ. ಜರತುಷ್ಟ್ರ ಗ್ರೀಕ್, ಯೆಹೂದ್ಯ ಮತ್ತು ಕ್ರೈಸ್ತ ಮತಗಳ ಹಲವು ಬೋಧನೆಗಳನ್ನು ನೂರಾರು ವರ್ಷ ಮೊದಲೇ ಉಪದೇಶಿಸಿದ್ದನೆಂಬುದು ಗಮನಾರ್ಹವಾದ ಸಂಗತಿ.

ಜರತುಷ್ಟ್ರನ ಮತವನ್ನು ಅವಲಂಬಿಸಿದನೆಂದು ಇರಾನಿನ ದೊರೆ ವಿಷ್ಟಪನನ್ನು ನೆರೆರಾಜ್ಯಗಳವರು ವಿರೋಧಿಸಿದರು. ಎಂಟು ಸಲ ಅವನ ಮೇಲೆ ದಂಡೆತ್ತಿ ಬಂದರು. ಎಂಟು ಸಲವೂ ವಿಷ್ಟಪನಿಗೆ ಜಯವಾಯಿತು. ಒಂಬತ್ತನೆಯ ಸಲ ಬಂದಾಗ ಎಂಬತ್ತು ಜನ ಪೂಜಾರಿಗಳ ಜೊತೆಯಲ್ಲಿ ಅಗ್ನಿದೇವನ ಗುಡಿಯಲ್ಲಿ ಅಗ್ನಿಕಾರ್ಯದಲ್ಲಿ ನಿರತನಾಗಿದ್ದ ಜರತುಷ್ಟ್ರನನ್ನೂ ಅವನ ಜೊತೆಗಿದ್ದ ಪೂಜಾರಿಗಳನ್ನೂ ಕೊಲೆಮಾಡಿದರು. ಅವೆಸ್ತವನ್ನು ಸುಟ್ಟರು. ಅಗ್ನಿದೇವಾಲಯವನ್ನು ಕೆಡವಿದರು.

ಪಾರಸಿಕರು ಮತ್ತೆ ಮತ್ತೆ ಆಕ್ರಮಣಕ್ಕೆ ತುತ್ತಾದರು. ಮೊದಲು ಆಕ್ರಮಣ ಮಾಡಿದವರು ಗ್ರೀಕರು. ಎರಡನೆಯದಾಗಿ ಕ್ರೈಸ್ತರು. ಕ್ರಿ. ಶ. ಏಳನೆಯ ಶತಮಾನದಲ್ಲಿ ಮುಸಲ್ಮಾನರ ಆಕ್ರಮಣಕ್ಕೆ ಗುರಿಯಾದಾಗಲಂತೂ ಪಾರಸಿಕರಲ್ಲಿ ಬಹಳ ಜನ ನಾಶವಾದರು. ಆಗ ಹಲವರು ಅಲ್ಲಿಂದ ವಲಸೆ ಬಂದು ನಮ್ಮ ದೇಶದಲ್ಲಿ ಮುಂಬಯಿಯ ಸುತ್ತಮುತ್ತಲೂ ನೆಲೆಸಿದರು. ಅವರೇ ಪಾರಸಿಗಳು.

ಪಾರಸಿಗಳು ಮೃತದೇಹವನ್ನು ಮಣ್ಣುಮಾಡುವುದೂ ಇಲ್ಲ; ದಹನ ಮಾಡುವುದೂ ಇಲ್ಲ. ಶವವನ್ನು ಅದಕ್ಕಾಗಿಯೇ ಕಟ್ಟಿದ ಕಟ್ಟಡದಲ್ಲಿ ಹದ್ದುಗಳಿಗೆ ಹಾಕಿಬಿಡುತ್ತಾರೆ. ಬದುಕಿರುವಾಗ ಉಪಕಾರಿಯಾಗಿ ಬಾಳಬೇಕಾದ ಮಾನವ ಸತ್ತಮೇಲೂ ಯಾವುದಾದರೊಂದು ರೀತಿ ಉಪಯೋಗವಾಗಲೇಬೇಕು. ನೆಲ, ಜಲ, ಅಗ್ನಿ ಎಲ್ಲವೂ ಪವಿತ್ರವಾದದ್ದರಿಂದ ಶವವನ್ನು ನೆಲದಲ್ಲಾಗಲಿ, ಅಗ್ನಿಯಲ್ಲಾಗಲಿ ಹಾಕಿ ಅವನ್ನು ಅಪವಿತ್ರಗೊಳಿಸುವುದು ಸರಿಯಲ್ಲ ಎಂಬುದು ಪಾರಸಿಗಳ ನಿಲುವು.

ಜರತುಷ್ಟ್ರನ ಅನುಯಾಯಿಗಳು, ಅಗ್ನಿಯ ವಿಷಯದಲ್ಲಿ ಪರ್ಷಿಯನ್ನರಿಗೆ ಇದ್ದ ಭಕ್ತಿಯನ್ನು ತಮ್ಮ ಪಂಥದ ಆಚರಣೆಗೆ ಬಳಸಿಕೊಂಡರು. ಅಹುರಮಸ್ದನ ಅತಿಶ್ರೇಷ್ಠ ಸಂಕೇತ ಅಗ್ನಿ. ಈ ಮತದವರ ದೇವಾಲಯಗಳಲ್ಲಿ ಸದಾ ಅಗ್ನಿ ಉರಿಯುತ್ತಿರುತ್ತದೆ.

ಈಗ ಇರಾನಿನಲ್ಲಿ ಸುಮಾರು 20,000, ಭಾರತದಲ್ಲಿ 1,20,000 ಪಾರಸಿಗಳು–ಜರತುಷ್ಟ್ರನ ಧರ್ಮಾನುಯಾಯಿಗಳು–ಇರುವರು.

ಭಾರತ ದೇಶದ ಪ್ರಗತಿಗೆ ಪಾರಸಿಗಳು ಬಹಳವಾಗಿ ಶ್ರಮಿಸಿದ್ದಾರೆ. ವೈಜ್ಞಾನಿಕ ಕ್ಷೇತ್ರದಲ್ಲಿ, ಔದ್ಯೋಗಿಕ ಕ್ಷೇತ್ರದಲ್ಲಿ, ತಾಂತ್ರಿಕ ಕ್ಷೇತ್ರದಲ್ಲಿ ಇವರು ಗಣನೀಯ ಕೆಲಸ ಮಾಡಿದ್ದಾರೆ.

## ಜಲಸಂಧಿ

ಭಾರತದ ಖ್ಯಾತ ಈಜುಗಾರ ಮಿಹಿರ ಸೇನ್ ಏಳು ಜಲಸಂಧಿಗಳನ್ನು ಈಜಿ ದಾಟಿ ವಿಕ್ರಮ ಸ್ಥಾಪಿಸಿದರು.

ಜಲಸಂಧಿ ಎಂದರೇನು? ಎರಡು ದೇಶಗಳನ್ನು ಬೇರ್ಪಡಿಸುವ ಅಥವಾ ಎರಡು ಸಮುದ್ರಗಳನ್ನು ಒಂದುಗೂಡಿಸುವ ಅಥವಾ ಭೂಮಿಯ ಕಡೆಗೆ ಚಾಚಿಕೊಂಡಿರುವ ಸಮುದ್ರ ಭಾಗವನ್ನು ಜಲಸಂಧಿ ಎನ್ನುತ್ತಾರೆ. ಇದು ಭೌಗೋಳಿಕ ಅರ್ಥ. ಕಾನೂನು ಪ್ರಕಾರ ಜಲಸಂಧಿ ಎಂದರೆ ಎರಡು ದೇಶಗಳ ಸಮುದ್ರಗಳ ಸೇರುವಿಕೆ. ಅನೇಕ ದೇಶಗಳು ತೀರದಿಂದ ಇಂತಿಷ್ಟು ಕಿಲೊಮೀಟರು ಸಮುದ್ರ ತಮ್ಮದೆಂದು (ಸಾಧಾರಣವಾಗಿ 4.8 ಕಿ.ಮೀ. ಮತ್ತು ಮೇಲ್ಪಟ್ಟು) ಹಕ್ಕು ಸ್ಥಾಪಿಸುವುದರಿಂದ ಜಲಸಂಧಿಯ ಅಗಲ ಇಷ್ಟು ಎಂದು ನಿಖರವಾಗಿ ಹೇಳಲಾಗುವುದಿಲ್ಲ. ಫಾರ್ಮೋಸಾ ಜಲಸಂಧಿ ಚೀನ ಮತ್ತು ಫಾರ್ಮೋಸಾಗಳ ನಡುವೆ ಇದೆ.

ಅಂತರರಾಷ್ಟ್ರೀಯ ಸಾರಿಗೆಗೆ ಮುಖ್ಯವಾದ ಸುಮಾರು ಮೂವತ್ತು ಜಲಸಂಧಿಗಳಿವೆ. ಅಂತರರಾಷ್ಟ್ರೀಯ ಕಾನೂನಿನ ಪ್ರಕಾರ ಈ ಜಲಸಂಧಿಗಳಲ್ಲಿ ಪ್ರತಿಯೊಂದು ದೇಶದ ಎಲ್ಲ ಹಡಗುಗಳಿಗೂ ಮುಕ್ತಮಾರ್ಗವಿದೆ.

## ಜವಾಹರಲಾಲ ನೆಹರು

[illegible]

## ಜಾಗೃತ ಆಯೋಗ

ಲಂಚ, ರುಷುವತ್ತು ಪಡೆಯುವುದು, ಮತ್ತು ಇತರ ರೀತಿಯಲ್ಲಿ ಸ್ವಂತ ಪ್ರಯೋಜನಕ್ಕೆ ಅಥವಾ ತಮಗೆ ಬೇಕಾದವರ ಪ್ರಯೋಜನಕ್ಕೆ ಅಧಿಕಾರದ ದುರುಪಯೋಗ–ಇವು ಅಧಿಕಾರದ ಪ್ರಯೋಗಕ್ಕೆ ಯಾವಾಗಲೂ ಅಂಟಿಕೊಂಡವೇ ಆಗಿವೆ. ಆದರೆ ಇವು ಅತಿಯಾಗಿ ಬಲಗೊಂಡರೆ ಸಮಾಜಕ್ಕೇ ಕುತ್ತೊದಗುತ್ತದೆ. ನಮ್ಮ ದೇಶದಲ್ಲಿ ಇಂಥ ಪರಿಸ್ಥಿತಿಯೊದಗದಂತೆ ಸಲಹೆ ಮಾಡಲು ಕೇಂದ್ರ ಸರಕಾರವು ಕೆ. ಸಂತಾನಂ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನೇಮಿಸಿತು. ಅದರ ಸಲಹೆಗಳಲ್ಲಿ ಅತ್ಯಂತ ಮುಖ್ಯವಾದದ್ದು 'ಜಾಗೃತ ಆಯೋಗ'ವೆಂಬ ಸಂಸ್ಥೆಯ ನೇಮಕ. ಕೇಂದ್ರ ಸರಕಾರ ಈ ಸಲಹೆಯನ್ನು ಒಪ್ಪಿ 'ಜಾಗೃತ ಆಯೋಗ'ವನ್ನು ಸ್ಥಾಪಿಸಿತು. ಅದರ ವ್ಯಾಪ್ತಿ ಕೇಂದ್ರ ಸರಕಾರದ ಆಡಳಿತ ವರ್ಗದ ನಡವಳಿಕೆಗೆ ಸಂಬಂಧಪಟ್ಟದ್ದು. ಆದರೆ ಮಂತ್ರಿಗಳ ನಡವಳಿಕೆ ಈ ವ್ಯಾಪ್ತಿಗೆ ಸೇರತಕ್ಕದ್ದಲ್ಲ. ಇದೇ ರೀತಿ ಬಹುಮಟ್ಟಿನ ಸಂಸ್ಥಾನಗಳೂ 'ಜಾಗೃತ ಆಯೋಗ'ಗಳನ್ನು ಸ್ಥಾಪಿಸಿದುವು.

ಈ ಆಯೋಗಗಳಿಗೆ ಸಂಬಂಧಪಟ್ಟ ಮುಖ್ಯ ಅಂಶಗಳೇನೆಂದರೆ : ಆಯೋಗದ ಸದಸ್ಯರು ಒಬ್ಬರೇ. ಅವರ ಸಹಾಯಕ್ಕೆ ತಕ್ಕ ಸಿಬ್ಬಂದಿಯಿರುತ್ತದೆ.

ಆಯೋಗವು ನ್ಯಾಯಾಂಗ, ಆಡಿಟರ್ ಜನರಲ್, ಪಬ್ಲಿಕ್ ಸರ್ವಿಸ್ ಕಮಿಷನ್ ಇವುಗಳಂತೆಯೇ ಸರ್ವಸ್ವಾತಂತ್ರ್ಯವುಳ್ಳದ್ದಾಗಿರುತ್ತದೆ.

ಸಾರ್ವಜನಿಕರಿಂದ ಅಧಿಕಾರಿಗಳ ನಡತೆಗೆ ಸಂಬಂಧಪಟ್ಟಂತೆ ಬಂದ ದೂರುಗಳನ್ನು ವಿಮರ್ಶೆ ಮಾಡುತ್ತದೆ. ಇಷ್ಟೇ ಅಲ್ಲದೆ, ಅಂಥ ವಿಷಯಗಳು ತನ್ನ ಗಮನಕ್ಕೆ ಬಂದರೆ ಅವುಗಳನ್ನೂ ವಿಮರ್ಶೆ ಮಾಡುವ ಅಧಿಕಾರ ಅದಕ್ಕಿರುತ್ತದೆ.

ಸರಕಾರದ ಎಲ್ಲ ಶಾಖೆಗಳೂ ಖಾತೆಗಳೂ ಉದ್ಯೋಗ ಸಂಸ್ಥೆಗಳೂ ತಮ್ಮ ತಮ್ಮ ಕ್ಷೇತ್ರಕ್ಕೆ ಸಂಬಂಧಪಟ್ಟ ಅಂಥ ವಿಷಯಗಳನ್ನು, ಎಂದರೆ, ಅಧಿಕಾರಿಗಳ ಸಂದೇಹಾಸ್ಪದ ನಡತೆಗೆ ಸಂಬಂಧಪಟ್ಟ ವಿಷಯಗಳನ್ನು, ಆಯೋಗಕ್ಕೆ ತಿಳಿಸಿ ಅದರ ಸಲಹೆ ಪಡೆಯತಕ್ಕದ್ದು. ಪ್ರತಿ ಶಾಖೆಯಲ್ಲಿಯೂ ಇದಕ್ಕೆ ಸಂಬಂಧಪಟ್ಟ ಒಬ್ಬ ಮುಖ್ಯ ಅಧಿಕಾರಿಯೂ ತಕ್ಕ ಸಿಬ್ಬಂದಿಯೂ ಇದ್ದು ಅವರು ಆಯೋಗ ವಿಮರ್ಶಾ ಕಾರ್ಯದಲ್ಲಿ ಸಂಪೂರ್ಣ ಸಹಕಾರ ನೀಡತಕ್ಕದ್ದು.

ಅದೇ ರೀತಿ, ಈ ವಿಷಯಗಳನ್ನು ವಿಮರ್ಶಿಸುವ ಪೋಲೀಸ್ ದಳವೂ ಆಯೋಗಕ್ಕೆ ಸಂಪೂರ್ಣ ಸಹಕಾರ ಕೊಡತಕ್ಕದ್ದು.

ವಿಮರ್ಶೆಯ ಫಲವಾಗಿ ಆಯೋಗವು ಮಾಡತಕ್ಕ ಸಲಹೆಯನ್ನು ಸರಕಾರ ಸಾಮಾನ್ಯವಾಗಿ ಒಪ್ಪಿ ಕಾರ್ಯಗತ ಮಾಡುವುದು ರೂಢಿಯಲ್ಲಿದೆ.

ಆಯೋಗವು ವರ್ಷಕ್ಕೊಮ್ಮೆ ತನ್ನ ಚಟುವಟಿಕೆಯ ವರದಿಯನ್ನು ಸಿದ್ಧಗೊಳಿಸುವುದು. ಅದರಲ್ಲಿ ಸರಕಾರವು ಆಯೋಗದ ಯಾವುದಾದರೂ ಸಲಹೆಗಳನ್ನು ಒಪ್ಪಿಕೊಂಡಿಲ್ಲದಿದ್ದರೆ ಅವುಗಳನ್ನು ಕಾಣಿಸುವುದು. ಈ ವರದಿಯನ್ನು ಸಂಸತ್ತಿಗೆ ಒಪ್ಪಿಸಲಾಗುವುದು. ಸರಕಾರದ ಆಡಳಿತ ಕ್ರಮಗಳನ್ನೂ ವಿಧಾನಗಳನ್ನೂ ವಿಮರ್ಶಿಸಿ ಅಧಿಕಾರಿಗಳ ನಡತೆಯನ್ನು ಉತ್ತಮಗೊಳಿಸುವ ದೃಷ್ಟಿಯಿಂದ ಸೂಕ್ತ ಸಲಹೆ ಮಾಡುವುದು.

ಈ ಆಯೋಗಗಳ ಕೆಲಸ ಹಲವು ಅಂಶಗಳಲ್ಲಿ 'ಓಂಬಡ್ಸ್‌ಮನ್' ಸಂಸ್ಥೆಯ ಕೆಲಸಕ್ಕೆ ಹೋಲುವುದರಿಂದ, ಕೇಂದ್ರ ಆಯೋಗದ ಕೆಲಸವನ್ನೂ ಹೊಸದಾಗಿ ಏರ್ಪಾಡಾಗಲಿರುವ ಲೋಕಪಾಲ, ಲೋಕಾಯುಕ್ತರೂ ಅಧಿಕಾರಿಗಳನ್ನುಳ್ಳ ಸಂಸ್ಥೆಗೆ ಒಪ್ಪಿಸಿ ಮುಂದುವರಿಸಲು 'ಲೋಕಪಾಲ' ಮಸೂದೆಯಲ್ಲಿ ಅವಕಾಶವೊದಗಿಸಿದ್ದಾರೆ.

ನೋಡಿ : ಲೋಕಪಾಲ, ಲೋಕಾಯುಕ್ತ, ಓಂಬಡ್ಸ್‌ಮನ್

## ಜಾತಿ

'ಜಾತಿ' ಭಾರತದ ಹಿಂದೂಗಳಲ್ಲಿ ಬೆಳೆದುಬಂದ ಸಾಮಾಜಿಕ ಪದ್ಧತಿ. 'ಜಾತಿ' ಎಂದರೆ 'ಹುಟ್ಟಿದ್ದು'. 'ಹುಟ್ಟು' ಎಂದರ್ಥ.

ವೇದಗಳ ಕಾಲದಲ್ಲಿ ಭಾರತೀಯ ಸಮಾಜ ಗಾತ್ರದೃಷ್ಟಿಯಿಂದ ಚಿಕ್ಕದಾಗಿತ್ತು. ಸಮಾಜದ ಸದಸ್ಯರು ವೃತ್ತಿಗಳನ್ನು ಹಂಚಿಕೊಳ್ಳಬೇಕಾಯಿತು. ಅದಕ್ಕಾಗಿ ಸಮಾಜವನ್ನು ವಿಂಗಡಿಸಿದರು. ಪ್ರತಿಯೊಂದು ವಿಭಾಗವನ್ನೂ ಒಂದೊಂದು 'ವರ್ಣ' ಎಂದು ಕರೆದರು. ಒಂದೇ ಬಗೆಯ ಕೆಲಸಗಳನ್ನು ಮಾಡುವವರೆಲ್ಲರೂ ಒಂದು ವಿಭಾಗದಲ್ಲಿರುತ್ತಿದ್ದರು. ಪ್ರಾಚೀನ ಭಾರತದಲ್ಲಿ ಇದ್ದುದು ನಾಲ್ಕು ವರ್ಣಗಳ ಪದ್ಧತಿ. ಅಧ್ಯಯನದಲ್ಲಿ ನಿರತರಾದ ವಿದ್ವಾಂಸರು, ಓದು ಬರಹ, ಇತರರಿಗೆ ಮಾರ್ಗದರ್ಶನ, ಇವನ್ನು ಮುಖ್ಯವಾಗಿಟ್ಟುಕೊಂಡು, ದೇವರನ್ನು ತಿಳಿಯಲು ಪ್ರಯತ್ನಪಡುತ್ತಿದ್ದವರು–ಬ್ರಾಹ್ಮಣರು. ದೇಶವನ್ನೂ ಜನರನ್ನೂ ಸಮಾಜವನ್ನೂ ರಕ್ಷಿಸುವವರು, ಯುದ್ಧಭೂಮಿಗೆ ಹೋಗಿ ಹೋರಾಡುವವರು–ಕ್ಷತ್ರಿಯರು. ಸಮಾಜದಲ್ಲಿ ವಾಣಿಜ್ಯ ವ್ಯಾಪಾರದ ಚಟುವಟಿಕೆಗಳಿಗೆ ಕಾರಣರು–ವೈಶ್ಯರು. ಧಾನ್ಯಗಳನ್ನು ಬೆಳೆದು ಸಮಾಜಕ್ಕೆ ಬೇಕಾದ ಅನ್ನ ಬಟ್ಟೆಗಳ ಪೂರೈಕೆ ಮಾಡುತ್ತಿದ್ದವರು–ಶೂದ್ರರು.

ಈ ವ್ಯವಸ್ಥೆಯಲ್ಲಿ ಕೆಲಸದ ವಿಭಾಗವೂ ಇತ್ತು. ಪ್ರಾಯಶಃ ಗೆದ್ದ ಆರ್ಯರು ಸೋತವರನ್ನು ದೂರವಿಡಲು 'ಶೂದ್ರ' ಜಾತಿಯನ್ನು ನಿರ್ಮಿಸಿರಬಹುದು. (ಇತರ ದೇಶಗಳಲ್ಲಿ ಗೆದ್ದವರು ಸೋತವರನ್ನು ನಿರ್ಮೂಲಗೊಳಿಸುತ್ತಿದ್ದರು, ಭಾರತದಲ್ಲಿ ಹೀಗಿರಲಿಲ್ಲ.) ಅಲ್ಲದೆ, ಭಾರತದಲ್ಲಿ ಮೊದಲಿನಿಂದಲೂ ವ್ಯಕ್ತಿಯ ಹಕ್ಕುಗಳಿಗಿಂತ ಹೊಣೆಗೆ ಹೆಚ್ಚು ಮಹತ್ವ. ಇದರಿಂದ ಗುಂಪಿನಲ್ಲಿ ವ್ಯಕ್ತಿಯ ಸ್ಥಾನವನ್ನು ನಿರ್ಧರಿಸುವ ವಿಧಾನವನ್ನು ಕಾಣುತ್ತೇವೆ. ಅವಿಭಕ್ತ ಕುಟುಂಬ, ಜಾತಿ ಪದ್ಧತಿ, ಹಳ್ಳಿಯ ವ್ಯವಸ್ಥೆ ಇವು ಇಂಥ ಪದ್ಧತಿಗಳು.

ಕಾಲಕ್ರಮದಲ್ಲಿ ನಾಲ್ಕು ವರ್ಣಗಳಿಂದ ಹೊಸ ಜಾತಿಗಳು, ಉಪಜಾತಿಗಳು ನಿರ್ಮಾಣವಾದುವು. ಒಂದು ಜಾತಿಯಲ್ಲಿ ಪಂಗಡಗಳು, ಒಳಪಂಗಡಗಳು ಹುಟ್ಟಿ, ಈ ಸಾಮಾಜಿಕ ಪದ್ಧತಿ ಜನರ ಒಗ್ಗಟ್ಟನ್ನು ಮುರಿಯಿತು. ಈಗ ಭಾರತದಲ್ಲಿ ಮೂರುಸಾವಿರ ಜಾತಿಗಳಿವೆ.

ಜಾತಿ ಪದ್ಧತಿಗಳು ಹೀಗೆ ಬೆಳೆದು ಸಮಾಜಕ್ಕೆ ಕೆಡುಕನ್ನೇ ಉಂಟುಮಾಡುವಂತಾಯಿತು. ಒಂದೊಂದು ಜಾತಿಯವರು ಪ್ರತ್ಯೇಕ ಸ್ಥಳಗಳಲ್ಲೇ ವಾಸವಾದರು. ಮದುವೆ ಮತ್ತು ಮನೆತನಗಳ ಸಂಬಂಧ ಆಯಾ ಜಾತಿಯವರಿಗಷ್ಟೇ ಸೀಮಿತವಾಯಿತು. ಸಂಕುಚಿತ ಪ್ರವೃತ್ತಿ ಬೆಳೆಯಿತು.

ಹಿಂದಿನಿಂದಲೂ ನಮ್ಮ ಸಂತರು, ತತ್ತ್ವಜ್ಞಾನಿಗಳು, ಕವಿಗಳು, ಸಮಾಜ ಸುಧಾರಕರು ಜಾತಿಗೆ ಮನ್ನಣೆ ಕೊಡಬಾರದು ಎಂದಿದ್ದಾರೆ. ಆಧುನಿಕ ಭಾರತದಲ್ಲಿ ಆರ್ಥಿಕ ವ್ಯವಸ್ಥೆಯಲ್ಲಿ ಬದಲಾವಣೆಯಾದಂತೆ ಜಾತಿ ಪದ್ಧತಿ ಸ್ವಲ್ಪ ಮಟ್ಟಿಗೆ ದುರ್ಬಲವಾಗತೊಡಗಿದೆ. ವಿದ್ಯಾಭ್ಯಾಸ ಮತ್ತು

ಉದ್ಯೋಗಗಳಿಗಾಗಿ ಕುಟುಂಬದ ಸದಸ್ಯರು ಚದರುತ್ತಾರೆ. ಒಂದೇ ಕಚೇರಿಯಲ್ಲಿ ಕಾರ್ಖಾನೆಯಲ್ಲಿ ಬೇರೆ ಬೇರೆ ಜಾತಿಯವರು ಒಟ್ಟಿಗೆ ಕೆಲಸ ಮಾಡುತ್ತಾರೆ. ಒಬ್ಬನ ಕೈಯಲ್ಲಿ ಊಟ ತರಿಸಿಕೊಳ್ಳುತ್ತಾರೆ. ಸಾರ್ವಜನಿಕ ವಿದ್ಯಾರ್ಥಿನಿಲಯಗಳು. ಫಲಾಹಾರ ಮಂದಿರಗಳು. ಭಾರತದಲ್ಲಿ ಜಾತಿ ಪದ್ಧತಿ ಕಡಿಮೆಯಾಗುತ್ತಿರುವುದಕ್ಕೆ ನಿದರ್ಶನಗಳು.

ಭಾರತದ ಸಂವಿಧಾನದ ಪ್ರಕಾರ ಎಲ್ಲರೂ ಸಮಾನರು. ಭಾರತ ಜಾತ್ಯತೀತ ರಾಷ್ಟ್ರ. ಎಂದರೆ ಯಾವ ಒಂದು ಜಾತಿ ಅಥವಾ ಮತವನ್ನೂ ಎತ್ತಿಹಿಡಿಯದೆ ಇವನ್ನು ಮೀರಿ ನಿಂತ ರಾಷ್ಟ್ರ. ಇಲ್ಲಿ ಎಲ್ಲ ಧರ್ಮಗಳೂ ಒಂದೇ.

ನೆಹರು ಅವರು ತಮ್ಮ 'ಭಾರತದರ್ಶನ' ಗ್ರಂಥದಲ್ಲಿ ಹೇಳಿದಂತೆ, ಯೂರೋಪಿನ ಮಧ್ಯಯುಗದ ವೃತ್ತಿ ಸಂಘಗಳಂತೆ ಇದ್ದಿತು ಭಾರತದ ಜಾತಿಪದ್ಧತಿ. ಜನರಿಗೆ ತಮ್ಮ ಕರ್ತವ್ಯದ ನೆನಪನ್ನು ಕೊಟ್ಟು ಒಂದು ಗುಂಪಿನ ಭಾಗವನ್ನಾಗಿ ಮಾಡುವುದು, ತಲೆಮಾರಿನಿಂದ ತಲೆಮಾರಿಗೆ ಒಂದು ವೃತ್ತಿಯ ತಾಂತ್ರಿಕ ವಿದ್ಯೆ ತಡೆಯಿಲ್ಲದೆ ಸಾಗುವುದು—ಇವು ಪ್ರಾರಂಭದಲ್ಲಿ ಜಾತಿಪದ್ಧತಿಯಿಂದ ಸಾಧ್ಯವಾದುವು. ಇಂದಿನ ಪರಿಸ್ಥಿತಿಯಲ್ಲಿ ಜಾತಿಪದ್ಧತಿ ಒಳಿತಿಗಿಂತ ಕೆಡುಕನ್ನು ಮಾಡುತ್ತಿದೆ.

ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಜಾತಿಪದ್ಧತಿ ಇಲ್ಲ. ಆದರೆ ಅಲ್ಲಿನ ಸಮಾಜದಲ್ಲಿ 'ವರ್ಗ' ವಿಭಾಗವಿದೆ. 'ವರ್ಣ' ವಿಭಾಗವಿದೆ. ಶ್ರೀಮಂತ ವರ್ಗ, ಮಧ್ಯಮ ವರ್ಗ. ಕೆಳ ವರ್ಗ. ಬಿಳಿಯ ಜನ, ಕಪ್ಪುಜನ, ಹೀಗೆ ವಿಭಾಗಗಳಿವೆ. ವಿವಿಧ ಮತಾವಲಂಬಿಗಳಲ್ಲಿ ಬೇರೆ ಬೇರೆ ಪಂಗಡಗಳೂ ಇರುತ್ತವೆ. ಈ ವಿಭಾಗಗಳಿಂದಲೂ ಸಾಕಷ್ಟು ಕೆಡುಕು ಉಂಟಾಗಿದೆ.



ಸಿಂಹಳದ ಕ್ಯಾಂಡಿ ನಗರದ ವಿಶಿಷ್ಟ ಜಾತ್ರೆ

## ಜಾತ್ರೆ

ಬೆಟ್ಟದ ಮೇಲೆ ಎಲ್ಲಿ ನೋಡಿದರೂ ಜನ. ಹೆಂಗಸರು. ಗಂಡಸರು. ಕಿರಿಯರು, ಹಿರಿಯರು ಕಿಕ್ಕಿರಿದು ನೆರೆದಿದ್ದಾರೆ. ರಂಗುರಂಗಿನ ಬಟ್ಟೆಗಳು. ಗಾಡಿಗಳಲ್ಲಿ ಪೇರಿಸಿದ ಸಿಹಿ ತಿಂಡಿಗಳು, ಪಾನೀಯಗಳು. ಅಂಗಡಿಯ ಸಾಲುಗಳು. ಇಲ್ಲಿ ಹಾವಾಡಿಗರ ಪುಂಗಿಯ ನಾದ. ಕೋತಿ ಕುಣಿಸುವವರ ಕೋಲಿನ ಬಡಿತ, ಅವುಗಳ ಜೊತೆಗೆ ಕಣ್ಕಟ್ಟು ಕಾಲ್ಚಳಕದವರ ಪ್ರದರ್ಶನ. ಭಿಕ್ಷುಕರ "ಕಾಸು ಕೊಡು ಶಿವಾ." ಮಕ್ಕಳ ಅಳು. ಗುಜುಗುಜು ಮಾತು ಎಲ್ಲವೂ ಇರುತ್ತವೆ. ಇವುಗಳ ಮಧ್ಯೆ ದೇವಸ್ಥಾನದಲ್ಲಿ ಗಂಟೆಗಳ ನಾದ. ಭಕ್ತಾದಿಗಳ ಸಾಲು ಸಾಲು. ದೇವರಿಗೆ ಧೂಪ, ದೀಪ, ನೈವೇದ್ಯ, ಮಂಗಳಾರತಿ. ಇದು ಜಾತ್ರೆ. ಎರಡು ಮೂರು ದಿನ ಬಿಟ್ಟು ಬಂದು ನೋಡಿದರೆ ಜಾಗವೆಲ್ಲವೂ ಖಾಲಿ.

ಯಾತ್ರಾಸ್ಥಳ ಪವಿತ್ರ ಪ್ರದೇಶ; ಜಾತ್ರೆಯೂ ಪವಿತ್ರವೇ. ಅಲ್ಲಿ ಯಾವುದಾದರೊಂದು ದೇವಸ್ಥಾನವಿದ್ದೇ ಇರುತ್ತದೆ. ಯಾತ್ರಾಸ್ಥಳಕ್ಕೆ ವರ್ಷವಿಡೀ ಯಾತ್ರಿಕರು ಬರುವುದುಂಟು. ಆದರೆ ಜಾತ್ರೆ ವರ್ಷದಲ್ಲಿ ಕೆಲವೊಂದು ದಿನವಿರುತ್ತದೆ ತೇರು ಎಳೆಯುವುದು, ದೇವರ ಪೂಜೆ ಮುಂತಾದುವು ಅಲ್ಲಿ ನಡೆಯುವುದುಂಟು. ಕೆಲವು ವಿಶೇಷ ಕಾರ್ಯಕ್ರಮಗಳೂ ನಡೆಯುತ್ತವೆ. ವ್ಯಾಪಾರ. ಮನೋರಂಜನೆ. ವಸ್ತುಪ್ರದರ್ಶನ ಇವೂ ಉಂಟು. ಭಾರತದ (ಹಳ್ಳಿಯ) ಜನರಿಗೆ ಜಾತ್ರೆ ಇಷ್ಟ. ವರ್ಷದಲ್ಲಿ ಅದೊಂದು ದೊಡ್ಡ ಹಬ್ಬ.

ಜಾತ್ರೆಗಳು ಪ್ರಾಚೀನ ಕಾಲದಿಂದಲೂ ನಡೆಯುತ್ತ ಬಂದಿವೆ. ಪ್ರಪಂಚದಲ್ಲಿ ಅನೇಕ ಕಡೆ ಜಾತ್ರೆಗಳು ಜರಗುತ್ತವೆ. ಧಾರ್ಮಿಕ ಅಂಶ ಬಹಳ ಕಡಮೆಯಾಗಿರುವ ಜಾತ್ರೆಗಳೂ ಉಂಟು. ವಾಣಿಜ್ಯ ವ್ಯಾಪಾರ ಪದಾರ್ಥಗಳ ಹಂಚಿಕೆ ಇವು ಈಗಿನ ಹಾಗೆ ಅಭಿವೃದ್ಧಿ ಹೊಂದದೆ ಇದ್ದಾಗ, ಸ್ಥಿರ ಮಾರುಕಟ್ಟೆಗಳು ಇಲ್ಲದಿದ್ದಾಗ ಈ 'ಸಂತೆ' ಗಳಿಗೆ ಬಹಳ ಪ್ರಾಮುಖ್ಯ ಇತ್ತು. ಭಾರತದಲ್ಲಿಯೂ ಸಂತೆಗಳು ಬಹಳ ದೊಡ್ಡ ಪ್ರಮಾಣದಲ್ಲಿ ನಡೆಯುತ್ತಿದ್ದುವು. ಈಗಲೂ ಅನೇಕ ಹಳ್ಳಿಗಳಲ್ಲಿ ವಾರಕ್ಕೊಂದು ಅಥವಾ ತಿಂಗಳಿಗೊಂದು ಸಂತೆ ಇರುತ್ತವೆ.

ಜಾತ್ರೆಗಳು ವಿವಿಧ ಭಾಗಗಳಲ್ಲಿನ ಜನ ಒಟ್ಟಿಗೆ ಒಂದೆಡೆ ಸೇರಲು ಅವಕಾಶವನ್ನು ಮಾಡಿಕೊಡುತ್ತವೆ. ಧಾರ್ಮಿಕ ಶ್ರದ್ಧೆ ಬೆಳೆಯಲು. ಮನೋರಂಜನೆ ಸಿಗಲು. ವ್ಯಾಪಾರ ನಡೆಸಲು ಸಹಾಯಕವಾಗಿವೆ.



ದಕ್ಷಿಣ ಭಾರತದ ರಥೋತ್ಸವ

ಹನ್ನೆರಡು ವರ್ಷಗಳಿಗೊಮ್ಮೆ ಪ್ರಯಾಗದಲ್ಲಿ ನಡೆಯುವ ಕುಂಭ ಮೇಳ, ಪುರಿಯಲ್ಲಿ ನಡೆಯುವ ಜಗನ್ನಾಥ ರಥೋತ್ಸವ ಇವೂ ದೊಡ್ಡ ಜಾತ್ರೆಗಳೇ. ಆದರೆ ಈ ಜಾತ್ರೆಗಳಲ್ಲಿ ಧಾರ್ಮಿಕ ಅಂಶಕ್ಕೆ ಪ್ರಾಧಾನ್ಯ.

ಮೈಸೂರು ರಾಜ್ಯದಲ್ಲಿ ಮಹದೇಶ್ವರ ಬೆಟ್ಟದ ಮೇಲೆ ವರ್ಷಕ್ಕೊಮ್ಮೆ ನಡೆಯುವ ಜಾತ್ರೆ, ಧಾರವಾಡದ ಮುರುಘಾ ಮಠದ ಜಾತ್ರೆ, ಸವದತ್ತಿಯ ಎಲ್ಲಮ್ಮನ ಜಾತ್ರೆ, ಗದಗಿನ ತೋಂಟದಾರ್ಯ ಸ್ವಾಮಿಗಳ ಜಾತ್ರೆ, ಬಾದಾಮಿಯಲ್ಲಿನ ಬನಶಂಕರಿ ಜಾತ್ರೆ ಇವು ಕೆಲವು ಸುಪ್ರಸಿದ್ಧ ಜಾತ್ರೆಗಳು.

ಜಾತ್ರೆಯಲ್ಲಿ ದೇವರ ಉತ್ಸವ, ಮೆರವಣಿಗೆ ಮುಖ್ಯವಾದವರೆ. ಆ ಜಾತ್ರೆಗೆ 'ತೇರು'. 'ರಥೋತ್ಸವ' ಎಂದು ಹೆಸರು ಬರುತ್ತದೆ.

ಕುಂಚನಕಟ್ಟೆ ಹಾಗೂ ಹಾಸನ ಮುಂತಾದ ಊರುಗಳಲ್ಲಿ ನಡೆಯುವುದು ದನಗಳ ಜಾತ್ರೆ. ಜಾತ್ರೆಯಲ್ಲಿ ವ್ಯಾಪಾರ. ವಿನಿಮಯ ಎಷ್ಟು ಪ್ರಾಮುಖ್ಯ ಪಡೆಯುತ್ತಿತ್ತು ಎಂಬುದಕ್ಕೆ ಇವು ದೃಷ್ಟಾಂತಗಳು.

ಜಾತ್ರೆಗಳಲ್ಲಿ ನೈರ್ಮಲ್ಯವಿಲ್ಲದೆ ಅನೇಕ ಕಾಯಿಲೆಗಳು ಹರಡಬಹುದು. ಕಳ್ಳತನ ದರೋಡೆ ಆಗಬಹುದು.

ಭಾರತದಲ್ಲಿ ನೂರಾರು ವರ್ಷಗಳ ಹಿಂದೆ ನಡೆಯುತ್ತಿದ್ದ ಜಾತ್ರೆಗಳು ಇನ್ನೂ ನಡೆಯುತ್ತಲೇ ಇರುವುದಕ್ಕೆ ಅವುಗಳಲ್ಲಿ ಜನರಿಗಿರುವ ನಂಬಿಕೆಗೆ ಕಾರಣ.

## ಜಾನಪದ

"ಒಂದೂರಲ್ಲಿ ಒಬ್ಬ ರಾಜ ಇದ್ದನಂತೆ. ಆ ರಾಜನಿಗೆ ಇಬ್ಬರು ಹೆಂಡತೀರು. ಆ ಹೆಂಡತೀರಿಬ್ರು ಯಾವಾಗ್ಲೂ ಜಗಳ ಆಡ್ತಾ ಇರ್ತಿದ್ರಂತೆ. ರಾಜನಿಗೆ ಕೋಪಬಂದ್ಬಿಟ್ಟು ಅವರಿಬ್ಬರನ್ನೂ ಕಾಡಿಗೆ ಓಡಿಸ್ಬಿಟ್ನಂತೆ......"

ಬಾಲ್ಯದಲ್ಲಿ ಇಂಥ ಕಥೆಗಳನ್ನು ಕೇಳುವುದು ಎಂದರೆ ಕಲ್ಲು ಸಕ್ಕರೆ ತಿಂದಷ್ಟು ಸಂತೋಷ. ಅಜ್ಜಿಯೊ ತಾತನೊ ಕಥೆ ಹೇಳುತ್ತಾರೆ ಎಂದರೆ ಸಾಕು. ಬಿಟ್ಟ ಕಣ್ಣು, ತೆರೆದ ಬಾಯಿ ಯೊಡನೆ ಮಕ್ಕಳು ಸಿದ್ಧರಾಗುತ್ತಾರೆ.

ಮೇಲಿನದು ಜಾನಪದ ಕಥೆ. ಜನಪದ ಗೀತೆ, ಲಾವಣಿ ಒಗಟು, ಗಾದೆ, ನಾಟಕ, ಯಕ್ಷಗಾನ, ಬಯಲಾಟ ಇವೂ ಸಹ ಜಾನಪದ ಕಥೆಗಳಷ್ಟೇ ರಂಜನೀಯ.

ಹಳ್ಳಿಯ ಜೀವನಕ್ಕೆ ಸಂಬಂಧಿಸಿದ ಸಮಸ್ತವೂ ಜಾನಪದ ಎನಿಸಿಕೊಳ್ಳುತ್ತದೆ. ಪರಂಪರಾನುಗತವಾಗಿ ಬಂದ ಸಂಪ್ರದಾಯ ವನ್ನೊಳಗೊಂಡುದೇ ಜಾನಪದ.

ಜಾನಪದ ವ್ಯಕ್ತಿಯಿಂದ ವ್ಯಕ್ತಿಗೆ, ತಲೆಮಾರಿನಿಂದ ತಲೆಮಾರಿಗೆ ಬಂದಿದೆ. ಬರಹ ನಾಗರಿಕ ಜಗತ್ತಿಗೆ ಕಾಲಿಡುವ ಮುನ್ನವೇ ತಂದೆಯಿಂದ ಮಗನಿಗೆ, ಮಗನಿಂದ ಮೊಮ್ಮಗನಿಗೆ ಅನುವಂಶಿಕ ವಾಗಿ ಬಂದ ಬಳುವಳಿ ಇದು.

ಜಾನಪದದ ವ್ಯಾಪ್ತಿ ಅನಂತ. ಜಾನಪದ ಕಥೆ, ಗೀತೆ, ಲಾವಣಿ, ಗಾದೆ, ಒಗಟು, ನೃತ್ಯ, ನಾಟಕ, ಚಿತ್ರ, ಶಿಲ್ಪ, ನಂಬಿಕೆ, ಆಚಾರ, ಸಂಪ್ರದಾಯ, ಆಟ, ವೈದ್ಯ, ಮಂತ್ರ, ಮಾಟ, ಜಾನಪದ ವಾದ್ಯಗಳು, ವೇಷ ಭೂಷಣಗಳು ಇವೆಲ್ಲ ಆ ಜಾನಪದ ವೃಕ್ಷದ ಶಾಖೆಗಳು.

ಜಾನಪದ ಸಾಹಿತ್ಯದ ಸೃಷ್ಟಿಗೆ ಪ್ರೇರಕವಾದ ಪರಿಸರವೆಂದರೆ ಹಳ್ಳಿಯ ಜೀವನ. ನಗರಜೀವನದಲ್ಲೂ ಜಾನಪದದ ಪ್ರಭಾವ ಇಲ್ಲದಿಲ್ಲ. ಅನೇಕ ನಂಬಿಕೆಗಳಲ್ಲಿ ಆಚಾರವಿಚಾರಗಳಲ್ಲಿ ನಾಗರಿಕರೂ ಸ್ವಲ್ಪಮಟ್ಟಿನ ಜಾನಪದ ಅಂಶವನ್ನು ಉಳಿಸಿಕೊಂಡೇ ಬಂದಿರುತ್ತಾರೆ. ನೈಸರ್ಗಿಕ ಹಿನ್ನೆಲೆಯಲ್ಲಿ ಮೂಡಿಬಂದಿರುವ ಅನುಭವದ ತುಣುಕು ಸಾರ್ವಕಾಲಿಕ ಸತ್ಯ.

'ಅತ್ತೆಯ ಮನೆಯಲ್ಲಿ ಮುತ್ತಾಗಿ ಇರಬೇಕು ।
ಹೊತ್ತಾಗಿ ನೀಡಿದರೆ ಉಣಬೇಕು ಮಗಳೆ ।
ತೌರಿಗೆ ಹೆಸರ ತರಬೇಕು ॥ '

—ಇದು ಜಾನಪದ ಗರತಿ ಗಂಡನ ಮನೆಗೆ ಹೊರಟ ಮಗಳ ಕಿವಿಯಲ್ಲಿ ಉಸುರುವ ಮಾತು. ಇಂದೂ ಸುಸಂಸ್ಕೃತ ತಾಯಿ ಮಾಡುವ ಕೆಲಸ ಇದೇ.

ಅನ್ನ ಅಂದರೇ ಸಿಕ್ಕ ಜೀವನದ ಅನುಭವದ ತುಣುಕುಗಳನ್ನು ಜೀವಂತ ವಾಗಿ ಕಡೆದಿಟ್ಟಿರುವ ಜಾನಪದ ಕವಿಗಳ ನೆನಪು ಸದಾ ಹಸಿರು.

ಹಾಡು ಮತ್ತು ಕಥೆಗಳಲ್ಲಿ ಹೇಗೋ ಹಾಗೆಯೇ ಗಾದೆ ಮತ್ತು ಒಗಟು ಗಳಲ್ಲಿಯೂ ಜಾನಪದ ಕವಿಗಳು ಅಭಿವ್ಯಕ್ತಿ ಪಡೆದುಕೊಂಡಿದ್ದಾರೆ. ಗಾದೆ ಗಳು, ಅವರ ಆಚಾರ ವ್ಯವಹಾರಗಳಲ್ಲಿ ಮೂಡಿದ ನೀತಿಸೂತ್ರಗಳು. [illegible]



ಭಾರತದ ಕುಲು ಕಣಿವೆಯ ಜಾನಪದ ನೃತ್ಯ

"ಅಪ್ಪನಿಗೆ ಐಶ್ವರ್ಯ ಬಂದರೆ ಅರ್ಧರಾತ್ರೀಲಿ ಕೊಡೆ ಹಿಡಿದಂಗೆ"
"ಕೂತು ಉಣ್ಣುವವನಿಗೆ ಕುಡಿಕೆ ಹಣ ಸಾಲದು"

—ಇಂಥ ನೂರಾರು ಗಾದೆಗಳನ್ನು ನಾವು ಉಪಯೋಗಿಸುತ್ತಿರುತ್ತೇವೆ. ಇವೆಲ್ಲ ಜಾನಪದದ ಸಂಪತ್ತು.

ಒಗಟುಗಳು ಜನಪದದ ರಸಿಕತೆಗೆ ಕೈಗನ್ನಡಿ. ಸೊಗಸಾದ ನುಡಿಗಳಲ್ಲಿ ವಸ್ತುಸ್ಥಿತಿಯನ್ನು ಮರೆಸಿ, ಎದುರಿಗಿರುವವರ ಮೇಲೆ ಸವಾಲನ್ನೆಸೆದು, ಅವರು ಉತ್ತರ ತೋಚದೆ ಪೆಚ್ಚುಪೆಚ್ಚಾದಾಗ ಅವರನ್ನು ಅಣಕಿಸುವುದರಲ್ಲಿ ಜಾನಪದದವರಿಗೆ ಅತಿ ಪ್ರೀತಿ. "ಅಂಗಡಿಯಿಂದ ತರೋದು, ಅಂಗಿ ಬಿಚ್ಕೊಂಡು ನುಂಗೋದು" ಏನಿರಬಹುದು ಇದು ? ಉತ್ತರ : ಬಾಳೆ ಹಣ್ಣು. ಇದು ಜಾನಪದದಲ್ಲಿ ಕಂಡುಬರುವ ಅತ್ಯಂತ ಸರಳವಾದ ಒಗಟು. ಇದಕ್ಕಿಂತ ನೂರು ಪಟ್ಟು ಕಷ್ಟವಾಗಿರುವ ಒಗಟುಗಳೂ ಉಂಟು. ಒಗಟುಗಳನ್ನೇ ಒಟ್ಟು ಕೋಲಾಟವಾಡುವುದೂ ಉಂಟು.

ಒಬ್ಬನ್ನ ಕಟ್ಟಿದ್ದೆ, ಒಬ್ಬನ್ನ ಬಿಟ್ಟಿದ್ದೆ ।
ಒಬ್ಬನ್ನ ಕರಕೊಂಡು ಒಳಗ್ಹೋದೆ ಮಲ್ಲಿಗೆ
ಕೋಲು ಕೋಲಣ್ಣ ಕೋಲೆ ॥

ಏನಿದು? ಯಾರನ್ನು ಕಟ್ಟಿದ್ದು?......ಬಿಟ್ಟಿದ್ದು ಯಾರನ್ನು? ಉತ್ತರ : ಹಸುವನ್ನು ಕಟ್ಟಿದ್ದೆ, ಕರುವನ್ನು ಬಿಟ್ಟಿದ್ದೆ, ಹಾಲನ್ನು ಕರಕೊಂಡು ಒಳಗ್ಹೋದೆ ಮಲ್ಲಿಗೆ!

ಜಾನಪದ ಗೀತೆಗಳು ಹಳ್ಳಿಯ ಜನರ ಜೀವಗೀತೆಗಳು—ಅವರ ನಿತ್ಯ ಜೀವನದ ಕರ್ಮಗಳ ಜೊತೆಯಲ್ಲಿ ಅನಿವಾರ್ಯವೋ ಎಂಬಂತೆ ಬೆರೆತು ಹೋಗಿವೆ. ದಿನನಿತ್ಯದ ಬದುಕಿನ ಆಸರಿಕೆ ಬೇಸರಿಕೆಗಳನ್ನು ದುಡಿತದ ಆಯಾಸವನ್ನು ಮನದಣಿಯೆ ಹಾಡಿ ಹಳ್ಳಿಯ ಜನ ಮರೆಯುತ್ತಾರೆ.

ಹಾಡು ಅವರ ನಿತ್ಯಜೀವನದಲ್ಲಿ ಅನಿವಾರ್ಯವಾಗಿ ಬೆರೆತಂತೆ ಅದಕ್ಕನುಗುಣವಾಗಿ ಕಾಲು ತಾಳಹಾಕತೊಡಗಿರಬೇಕು. ಜನಪದ ನೃತ್ಯ ಪ್ರಪಂಚ, ಗೀತ ಪ್ರಪಂಚದಷ್ಟೇ ವೈವಿಧ್ಯಪೂರ್ಣವಾಗಿಯೂ ಆಕರ್ಷಕವಾಗಿಯೂ ಇದೆ. ಕುಣಿದಷ್ಟೂ ಅವರು ದಣಿಯರು. ಕೋಲಾಟ, ಸುಗ್ಗಿ ಕುಣಿತ, ಕರಗ ಕುಣಿತ, ಸೋಮನ ಕುಣಿತ, ಪೂಜಾ ಕುಣಿತ, ವೀರಗಾಸೆ ಕುಣಿತ, ಭೂತ ಕುಣಿತ, ಡೊಳ್ಳು ಕುಣಿತ, ಕರಡಿಮಜಲು ಕುಣಿತ...ತಾಳ ತಮಟೆಗಳೊಡನೆ ಅವರು ಆಡುವ ನೃತ್ಯಗಳು ಅಸಂಖ್ಯಾತ.

ಜನಪದ ಕಲೆಗಳಲ್ಲಿ ಹೆಸರಾಂತಿರುವುದು ಯಕ್ಷಗಾನ ಮತ್ತು ಬಯಲಾಟ. ಇದಲ್ಲದೆ ತೊಗಲು ಬೊಂಬೆಯಾಟ, ಸೂತ್ರದ ಬೊಂಬೆಯಾಟ ಇವುಗಳಲ್ಲಿಯೂ ಜನಪದದವರ ಪ್ರತಿಭೆ ಮಿಂಚಿದೆ.

ಹಬ್ಬದ ಸಂಭ್ರಮದಲ್ಲಿ ಪಾಲ್ಗೊಳ್ಳುವುದೆಂದರೆ ಹಳ್ಳಿಗರಿಗೆ ಎಲ್ಲಿಲ್ಲದ ಉತ್ಸಾಹ. ಅವರ ಕಾವ್ಯ ಗಂಗೆಯ ಉಗಮಸ್ಥಾನ ಅನೇಕ ಹಬ್ಬಗಳು. ಗೋಕುಲಾಷ್ಟಮಿ ಪದಗಳು, ಮೊಹರಂ ಪದಗಳು, ಹೋಳಿ ಹುಣ್ಣಿಮೆ ಲಾವಣಿ, ಮಾರ್ನವಮಿ ಪದ ಇವುಗಳ ಮೂಲ ಆಯಾ ಹಬ್ಬಗಳೇ. ಅನೇಕ ಹಬ್ಬಗಳನ್ನು ಇಡೀ ಹಳ್ಳಿಯವರೆಲ್ಲ ಸಾಮೂಹಿಕವಾಗಿ ಆಚರಿಸುತ್ತಾರೆ. ನಾಗರಪಂಚಮಿ, ಮಾರ್ನವಮಿ, ಶಿವರಾತ್ರಿ, ಹೋಳಿ, ಗ್ರಾಮದೇವತೆಗಳ ಹಬ್ಬ ಇವು ಕೆಲವು ಮುಖ್ಯ ಹಬ್ಬಗಳು.

ಜಾನಪದದಲ್ಲಿ ಆಡುನುಡಿ ಬೇರೆ, ಕಾವ್ಯ ಭಾಷೆ ಬೇರೆ ಅಲ್ಲ. ಸಾಮಾನ್ಯವಾಗಿ ಸಾಹಿತ್ಯವನ್ನು ರಚಿಸುವವರು ಆಡುವ ಭಾಷೆಯನ್ನು ಹಾಗೆಯೇ ಬಳಸಿಕೊಳ್ಳುವುದಿಲ್ಲ. ಕೆಲವು ಪದಗಳನ್ನು ಅವು ತಕ್ಕಷ್ಟು ಗಂಭೀರವಲ್ಲ ಎಂದೋ ಕಿವಿಗೆ ಇಂಪಾಗಿಲ್ಲ ಎಂದೋ ಯಾವುದಾದರೂ ಕಾರಣದಿಂದ ಉಪಯೋಗಿಸದೆ ಬಿಡುತ್ತಾರೆ. ವಾಕ್ಯಗಳನ್ನು ಕಟ್ಟುವ ರೀತಿಯೂ ಹೆಚ್ಚು ವ್ಯಾಕರಣಬದ್ಧವಾಗಿರುತ್ತದೆ. ಆದರೆ ಜಾನಪದದಲ್ಲಿರುವುದು ನಿತ್ಯ ನಾವು ಬಳಸುವ ಪದಗಳೇ. ನೈಜವಾದ ಭಾವನೆಯಿಂದ ಆಡುಭಾಷೆ ಇಲ್ಲಿ ಹೊಸ ತೇಜಸ್ಸನ್ನು ಪಡೆಯುತ್ತದೆ.

ಪ್ರತಿಯೊಂದು ದೇಶವೂ ತನ್ನದೇ ಆದ ಜಾನಪದವನ್ನು ಹೊಂದಿದೆ. ಒಂದು ದೇಶದ ಜಾನಪದ ಆ ದೇಶದ ಅಪೂರ್ವ ಸಂಪತ್ತು. ತಲೆತಲಾಂತರದಿಂದ ಉಳಿದು ಬಂದಿರುವುದರಿಂದ ಆ ದೇಶದ ಸಂಸ್ಕೃತಿಯ ಆಳವನ್ನರಿಯಲು ಅದರ ಜಾನಪದ ಅಧ್ಯಯನ ಅತ್ಯವಶ್ಯ. ಆದ್ದರಿಂದ ಸಂಪೂರ್ಣವಾಗಿ ಅಳಿಯುವ ಮುನ್ನವೇ ಅದನ್ನು ಉಳಿಸಿಕೊಳ್ಳಬೇಕೆಂಬ ಹಂಬಲ ಎಲ್ಲ ದೇಶಗಳಲ್ಲೂ ಮೂಡಿದೆ. ಅತ್ಯಂತ ಮುಂದುವರಿದ ದೇಶಗಳಾದ ಅಮೆರಿಕ, ರಷ್ಯಗಳಲ್ಲಿ ಜಾನಪದ ಸಂಗ್ರಹದ ಬಗೆಗೆ ತೀವ್ರ ಆಸಕ್ತಿ ತೋರುತ್ತಾರೆ. ಕನ್ನಡನಾಡಿನಲ್ಲಿಯೂ ಈ ಬಗೆಯ ಪ್ರಯತ್ನಗಳು ನಡೆಯುತ್ತಿವೆ.

ಎಲ್ಲ ದೇಶಗಳ ಜಾನಪದದಲ್ಲೂ ಸಮಾನ ಅಂಶಗಳಿರುವುದು ವಿಸ್ಮಯದ ಸಂಗತಿ.

## ಜಾವಿಹಾನು

"ನಾನು ಹೇಳಲಿಲ್ಲವೇ ನಿನಗೆ. ನೀನು [illegible] ಕೆಲಸ ಮಾಡುತ್ತಿದ್ದೀ ಎಂದು. ಸಾಯುವುದಕ್ಕೋಸ್ಕರ ಹಿಂದಕ್ಕೆ [illegible]! ನೀನು ಬುದ್ಧಿ ಇಲ್ಲದೆ ಪ್ರಾಣ ಕಳೆದುಕೊಳ್ಳುತ್ತಿದ್ದೀಯೆ".

"ಅವನು ಬರದಿರುವುದೇ ನನಗೂ ಬೇಕು. ಅವನ ಪ್ರಾಣ ಉಳಿದರೆ ಸಾಕು. ನಾನು ಹೋದರೇನು ? "

ಮೊದಲು ಮಾತನಾಡಿದವನು ಸಿರಕ್ಯೂಸ್ ಎನ್ನುವ ಗ್ರೀಕ್ ನಗರ ರಾಜ್ಯದ ಅರಸ ಡೈಒನೀಷಿಅಸ್ (ಕ್ರಿ. ಪೂ. 405–367). ಉತ್ತರ ಕೊಟ್ಟವನು ಡೇಮನ್, ಇನ್ನೇನು ಒಂದು ಕ್ಷಣದಲ್ಲಿ ಸಾವಿಗೆ ತುತ್ತಾಗಬೇಕಾದ ಕೈದಿ.

ಡೇಮನ್ ಮತ್ತು ಫಿಂತಿಯಾಸ್ ಪ್ರಾಣಸ್ನೇಹಿತರು. ಫಿಂತಿಯಾಸ್‌ನಿಗೆ ರಾಜ ಮರಣದಂಡನೆ ವಿಧಿಸಿದಾಗ ತನ್ನ ಊರಿಗೆ ಹೋಗಿ ಬರಲು ಅವಕಾಶ ಬೇಡಿದ ಫಿಂತಿಯಾಸ್. ಅರಸ ಒಪ್ಪಲಿಲ್ಲ. ಫಿಂತಿಯಾಸ್ ಹಿಂದಿರುಗಿ ಬರದಿದ್ದರೆ ತಾನು ಅವನ ಬದಲು ಸಾಯುವೆನೆಂದು ಮುಂದೆ ಬಂದ ಡೇಮನ್. ಒಮ್ಮೆ ಹೋದ ಫಿಂತಿಯಾಸ್ ಮರಳಿ ಮೃತ್ಯುವಿನ ಬಾಯಿಗೆ ಬೀಳುವನೆಂದು ಅರಸ ನಂಬಲಿಲ್ಲ. ಆದರೂ ಡೇಮನನ ಬೇಡಿಕೆಗೆ ಒಪ್ಪಿದ. ಸಾವಿಗೆ ಗೊತ್ತುಮಾಡಿದ ದಿನವೂ ಬಂದಿತು. ಫಿಂತಿಯಾಸ್ ಹಿಂದಿರುಗಲಿಲ್ಲ. ಡೇಮನನನ್ನು ಗಲ್ಲಿಗೇರಿಸಲು ಸಿದ್ಧತೆಯೆಲ್ಲ ಆಯಿತು. ಆದರೂ ಫಿಂತಿಯಾಸನ ಸುಳಿವಿಲ್ಲ. ಆಗಲೇ ಈ ಸಂಭಾಷಣೆ ನಡೆದದ್ದು.

ಇನ್ನೇನು ಗಲ್ಲಿಗೇರಿಸಬೇಕು. ದೂರದಲ್ಲಿ ಕುದುರೆ ಶಬ್ದ ಕೇಳಿತು. ನಾಗಾಲೋಟದಿಂದ ಬಂದ ಫಿಂತಿಯಾಸ್.

ಅಚ್ಚರಿಗೊಂಡ ರಾಜ ಶಿಕ್ಷೆಯನ್ನು ಮನ್ನಾ ಮಾಡಿದ.

ಇಲ್ಲಿ ಫಿಂತಿಯಾಸನಿಗೆ ಜಾಮೀನು ಡೇಮನ್.

ಅಪರಾಧ ಮಾಡಿದವರನ್ನು ಪೋಲೀಸರು ಬಂಧಿಸಿ ನ್ಯಾಯಾಲಯಕ್ಕೆ ಒಪ್ಪಿಸುತ್ತಾರೆ. ಬಂಧಿತನಾದವನ ವಿಚಾರಣೆ ನ್ಯಾಯಾಲಯದಲ್ಲಿ ನಡೆಯಬೇಕಾಗುತ್ತದೆ. ವಿಚಾರಣೆ ಆರಂಭವಾಗುವ ದಿನಾಂಕ ಇನ್ನೂ ಮುಂದೆ ಇರುವಾಗ, ಅಪರಾಧಿಯನ್ನು ಪೋಲೀಸರ ಬಂಧನದಲ್ಲಿಡದೆ ಹೊರಗೆ ಬಿಡಬಹುದು. ಹಾಗೆ ಬಿಡುವುದು ಜಾಮೀನಿನ ಮೇಲೆ.

ವಿಚಾರಣೆಯ ದಿವಸ ಅಪರಾಧಿ ನ್ಯಾಯಾಲಯಕ್ಕೆ ಬರುವನೆಂಬ ಭರವಸೆಗಾಗಿ ನ್ಯಾಯಾಧೀಶ ಹೇಳಿದಷ್ಟು ಹಣವನ್ನು ನ್ಯಾಯಾಲಯದಲ್ಲಿ ಸಲ್ಲಿಸಿದರೆ ಅವನನ್ನು ತಾತ್ಕಾಲಿಕವಾಗಿ ಬಿಡುಗಡೆ ಮಾಡುತ್ತಾರೆ. ನಗರದ ಪ್ರತಿಷ್ಠಿತ ನಾಗರಿಕನೂ ಅಪರಾಧಿಯ ಪರವಾಗಿ ಆಶ್ವಾಸನೆ ಕೊಡಬಹುದು. ಇಂಥ ನಾಗರಿಕ ಆ ಊರಲ್ಲಿ ಆಸ್ತಿಯುಳ್ಳವನಾಗಿರಬೇಕು. ಜಾಮೀನಿನ ಹಣಕ್ಕೆ ಸಮನಾದ ಚರ ಆಸ್ತಿ ಆತನಿಗಿರಬೇಕು. ಮತ್ತು ನ್ಯಾಯಾಧೀಶ ಆ ನಾಗರಿಕನ ಹೇಳಿಕೆಯನ್ನು ಒಪ್ಪಿಕೊಳ್ಳಬೇಕು. ಆ ರೀತಿ ಭರವಸೆ ನೀಡುವುದಕ್ಕೆ ಜಾಮೀನು ಎನ್ನುತ್ತಾರೆ. ವಿಚಾರಣೆಯ ದಿವಸ ಅಪರಾಧಿ ನ್ಯಾಯಾಲಯದಲ್ಲಿ ಹಾಜರಾಗದಿದ್ದರೆ ಜಾಮೀನು ನಿಂತವನು ಹಣ ತೆರಬೇಕಾಗುತ್ತದೆ.

ಜಾಮೀನನ್ನು ಅಂಗೀಕರಿಸುವುದು ಅಥವಾ ನಿರಾಕರಿಸುವುದು ನ್ಯಾಯಾಧೀಶನ ಹೊಣೆ. ಅಪರಾಧಕ್ಕೆ ತಕ್ಕಂತೆ ಜಾಮೀನು ಹಣದ ಮೊತ್ತವೂ ಇರುತ್ತದೆ.

ಭಾರತದಲ್ಲಿ ಕೊಲೆ ಅಪರಾಧಿಗಳನ್ನೂ ಜಾಮೀನಿನ ಮೇಲೆ ಬಿಡುಗಡೆ ಮಾಡುತ್ತಾರೆ. ಈ ರೀತಿ ಬಿಡಲು ವಿಚಾರಣೆಗೆ ಯಾವ ರೀತಿಯಲ್ಲಿಯೂ ಬಿಡುಗಡೆ ಅಡ್ಡಿಯಾಗುವುದಿಲ್ಲ ಎಂಬುದು ನ್ಯಾಯಾಧೀಶನಿಗೆ ಮನವರಿಕೆಯಾಗಬೇಕು.

ಕೆಳಗಿನ ನ್ಯಾಯಾಲಯದವರು ಜಾಮೀನಿನ ಮೇಲೆ ಅಪರಾಧಿಯನ್ನು ಬಿಡಲು ಒಪ್ಪದಿದ್ದರೆ ಅಪರಾಧಿ ಮೇಲಿನ ನ್ಯಾಯಾಲಯಗಳಿಗೆ ಮನವಿ ಮಾಡಿಕೊಳ್ಳಲು ಆಸ್ಪದವಿದೆ.

## ಜಾಹೀರಾತು

ನಮಗೆ ಚಹಾಪುಡಿ ಕೊಳ್ಳುವ ಅಗತ್ಯ ಬಂದಾಗ ಒಂದು ಅಂಗಡಿಗೆ ಹೋಗುತ್ತೇವೆ. ಯಾವುದೋ ಒಂದು ನಿರ್ದಿಷ್ಟ ಗುರುತಿನ ಚಹ ಕೊಳ್ಳುವುದು ನಮ್ಮ ವಾಡಿಕೆ. ಆ ಗುರುತಿನ ಚಹವನ್ನೇ ಕೊಳ್ಳಬೇಕೆಂಬ ಆಲೋಚನೆ ನಮಗೇಕೆ ಬರುತ್ತದೆ ? ಆ ಮಾರ್ಕಿನ ಚಹದ ಬಗ್ಗೆ ಜಾಹೀರಾತುಗಳನ್ನು ಪತ್ರಿಕೆಗಳಲ್ಲಿ ನಾವು ಓದಿರುತ್ತೇವೆ : ಇಲ್ಲವೇ ಕೇಳಿರುತ್ತೇವೆ. ಆದ್ದರಿಂದ ಚಹ ಬೇಕಾದಾಗ ಅದನ್ನು ಕೊಳ್ಳುತ್ತೇವೆ.

ಮಾರಾಟಗಾರರು ಮತ್ತು ತಯಾರಕರು ತಮ್ಮ ವ್ಯಾಪಾರವನ್ನು ಕುದುರಿಸಿಕೊಳ್ಳಲು ಜಾಹೀರಾತು ವಿಧಾನವನ್ನು ಬಳಸುತ್ತಾರೆ. ನಿರ್ದಿಷ್ಟವಾದ ಒಂದು ಗುರುತಿನ ಸರಕನ್ನೇ ಕೊಳ್ಳುವಂತೆ ಜಾಹೀರಾತುಗಳು ಮನವೊಲಿಸುತ್ತವೆ. ಪದಾರ್ಥಗಳು ಎಲ್ಲಿ ಸಿಗುತ್ತವೆ ? ಅವುಗಳ ಗುಣಗಳೇನು ? ಬೆಲೆ ಎಷ್ಟು ? ಮುಂತಾದುವನ್ನು ನಾವು ಜಾಹೀರಾತುಗಳಿಂದ ತಿಳಿಯಬಹುದು. ಚಲನಚಿತ್ರ, ನಾಟಕ ಪ್ರದರ್ಶನ, ನೃತ್ಯ, ಸಂಗೀತ ಮುಂತಾದುವುಗಳ ಬಗೆಗೂ ವಿವರಗಳನ್ನು ಜಾಹೀರಾತುಗಳಿಂದ ತಿಳಿಯಬಹುದು.

ಸಾಮಾನ್ಯವಾಗಿ ಜಾಹೀರಾತುಗಳಿಲ್ಲದ ಪತ್ರಿಕೆಗಳಿಲ್ಲ. 'ಬೇಕಾಗಿದ್ದಾರೆ,' 'ಬಿಕರಿಗಿದೆ', 'ಮನೆ ಬಾಡಿಗೆಗೆ ಬೇಕು', 'ಜಮೀನು ಮಾರಾಟಕ್ಕಿದೆ' ಮುಂತಾದ ಜಾಹೀರಾತುಗಳು ಬಹು ಕಡಮೆ ಸ್ಥಳವನ್ನು ಆಕ್ರಮಿಸಿಕೊಳ್ಳುತ್ತವೆ. ಅಂಥವನ್ನು ಒಂದೆಡೆ ಅಚ್ಚು ಹಾಕುತ್ತಾರೆ. ಚಿತ್ರಗಳನ್ನೂ ರೇಖಾವಿನ್ಯಾಸಗಳನ್ನೂ ಒಳಗೊಂಡ ದೊಡ್ಡ ಜಾಹೀರಾತುಗಳನ್ನು ಪತ್ರಿಕೆಗಳಲ್ಲಿ ಪುಟಗಳ ಬೇರೆ ಬೇರೆ ಕಡೆ ಆಕರ್ಷಕವಾಗಿ ಜೋಡಿಸಿ ಅಚ್ಚು ಮಾಡುತ್ತಾರೆ. ಜಾಹೀರಾತು ಹೆಚ್ಚು ಸ್ಥಳವನ್ನು ಆವರಿಸಿಕೊಂಡಾಗ, ಪತ್ರಿಕೆಯ ಮೊದಲ ಮತ್ತು ಕಡೆಯ ಪುಟ ಬೇಕೆನಿಸಿದಾಗ, ಪತ್ರಿಕೆಯ ಶೀರ್ಷಿಕೆಯ ಅಕ್ಕ ಪಕ್ಕಗಳಲ್ಲಿರುವ ಸ್ಥಳವನ್ನು ಕೋರಿದಾಗ, ಬಣ್ಣಗಳಲ್ಲಿ ಜಾಹೀರಾತುಗಳನ್ನು ಪ್ರಕಟಿಸಲು ಬಯಸಿದಾಗ, ಹೆಚ್ಚು ಹಣ ಕೊಡಬೇಕಾಗುತ್ತದೆ. ಜಾಹೀರಾತುಗಳಿಂದ ಪತ್ರಿಕೆಗಳಿಗೆ ಆದಾಯವಿರುವುದರಿಂದಲೇ ಅಗ್ಗದ ದರದಲ್ಲಿ ಪತ್ರಿಕೆ ನಮಗೆ ಸಿಗಲು ಸಾಧ್ಯ. ಜಾಹೀರಾತುಗಳು ಸಾಕಷ್ಟು ಸಿಕ್ಕದಿದ್ದರೆ ಪತ್ರಿಕೆಗಳನ್ನು ನಡೆಸುವುದಕ್ಕೆ ತೊಂದರೆಯಾಗುತ್ತದೆ. ಹೆಚ್ಚು ಪ್ರಸಾರವಿರುವ ಪತ್ರಿಕೆಯಲ್ಲಿ ತಮ್ಮ ಜಾಹೀರಾತುಗಳನ್ನು ಪ್ರಕಟಿಸಲು ಜಾಹೀರಾತುದಾರರು ಬಯಸುತ್ತಾರೆ.



ಹೊಸ ವಸ್ತುವನ್ನು ಪ್ರಚಾರ ಮಾಡುವ ಜಾಹೀರಾತು ಮೆರವಣಿಗೆ

[illegible] ಜೋಡಣೆಗಳು. [illegible] ದಾರಿಗಳು ಇವೆಲ್ಲವೂ ಜಾಹೀರಾತಿಗೆ ಜನ ಬಳಸುತ್ತಾರೆ. ಜನ ಸೇರುವ ಹೋಟೆಲುಗಳು, ಸಿನಿಮಾ ಮಂದಿರಗಳು ಇಂಥ ಸ್ಥಳಗಳನ್ನು ಅವರು ಆರಿಸುತ್ತಾರೆ. ರೇಡಿಯೋ ಟೆಲಿವಿಷನ್‌ಗಳ ಮೂಲಕವೂ ಜಾಹೀರಾತು ಮಾಡುತ್ತಾರೆ. ಸಿನಿಮಾ ಮಂದಿರಗಳಲ್ಲಿ ಸ್ಥಿರಚಿತ್ರಗಳನ್ನೂ ಕಿರು ಚಲನಚಿತ್ರಗಳನ್ನೂ ಪ್ರದರ್ಶಿಸಿ ತಯಾರಕರು ತಮ್ಮ ವಸ್ತುಗಳನ್ನು ಜಾಹೀರು ಮಾಡುತ್ತಾರೆ.

ದೊಡ್ಡ ಸಂಸ್ಥೆಗಳವರು ತಮ್ಮ ಸರಕನ್ನು ಜಾಹೀರು ಪಡಿಸಲು ಸುತ್ತೋಲೆಗಳನ್ನೂ ಪುಸ್ತಕಗಳನ್ನೂ ಪ್ರತ್ಯೇಕವಾಗಿ ಪ್ರಕಟಿಸುವುದುಂಟು. ಅಂಥ ಪ್ರಕಟಣೆಗಳನ್ನು ತಮ್ಮ ಕ್ಷೇತ್ರಕ್ಕೆ ಸಂಬಂಧಪಟ್ಟವರಿಗೆ ಮಾತ್ರ ಕಳುಹಿಸಿ ಕೊಡುತ್ತಾರೆ. ಔಷಧಿಗಳನ್ನು ತಯಾರಿಸುವ ಸಂಸ್ಥೆ ಇಂಥ ಪ್ರಕಟಣೆಗಳನ್ನು ವೈದ್ಯರಿಗೂ ಔಷಧ ವ್ಯಾಪಾರಿಗಳಿಗೂ ಕ್ರಮವಾಗಿ ಕಳುಹಿಸಿಕೊಡುತ್ತದೆ. ಹೊಸ ಹೊಸ ಸಂಶೋಧನೆಗಳ ಬಗ್ಗೆ ಇಂಥ ಪ್ರಕಟಣೆಗಳಲ್ಲಿ ವಿವರಗಳನ್ನು ನೀಡಿರುತ್ತಾರೆ. ಆಯಾ ಸಂಸ್ಥೆಗಳು ತಯಾರಿಸುವ ಔಷಧಿಗಳು ಹೇಗೆ ದೇಹದಲ್ಲಿ ಕೆಲಸ ಮಾಡುತ್ತವೆ, ಅವಕ್ಕೆ ಇರುವ ಜನಪ್ರಿಯತೆ, ಸಿಗುವ ವಿಧಾನ, ಬೆಲೆ–ಈ ಬಗ್ಗೆ ಮಾಹಿತಿಗಳನ್ನು ಇಂಥ ಪ್ರಕಟಣೆಗಳಲ್ಲಿ ಮುದ್ರಿಸಲಾಗುತ್ತದೆ. ಪುಸ್ತಕ ಪ್ರಕಾಶಕರೂ ಮಾಹಿತಿಗಳಿರುವ ಪ್ರಕಟಣೆಗಳನ್ನು ಪುಸ್ತಕ ವ್ಯಾಪಾರಿಗಳು ಗ್ರಂಥಾಲಯಗಳು ಮುಂತಾದ ಕಡೆಗಳಿಗೆ ಅಂಚೆಯ ಮೂಲಕ ಕಳುಹಿಸುತ್ತಾರೆ. ಪದಾರ್ಥಗಳ ಮಾದರಿಗಳನ್ನು ಉಚಿತವಾಗಿ ಒದಗಿಸುವ ವಿಧಾನವೂ ಇದೆ. ಮಾದರಿಯನ್ನು ಬಳಸಿ ಅದು ಉತ್ತಮ ಮಟ್ಟದ್ದಾಗಿದ್ದರೆ ಅದನ್ನು ಕೊಳ್ಳಬಹುದು.

ಮುಖ್ಯಪಟ್ಟಣಗಳಲ್ಲಿ ಜಾಹೀರು ಏಜೆನ್ಸಿಗಳು ಕೆಲಸ ಮಾಡುತ್ತವೆ. ಯಾವ ಬಗೆಯ ಜನರಿಗೆ ಯಾವ ರೀತಿಯ ಜಾಹೀರಾತುಗಳು ಮೆಚ್ಚಿಗೆಯಾಗುತ್ತವೆ; ಯಾವ ಬಗೆಯ ಪತ್ರಿಕೆಗಳಲ್ಲಿ ಜಾಹೀರಾತುಗಳನ್ನು ನೀಡಿದರೆ ಪದಾರ್ಥದ ಮಾರಾಟ ಕುದುರಬಹುದು; ಯಾವ ಬಗೆಯ ಸರಕಿಗೆ ಯಾವ ಪ್ರದೇಶದಲ್ಲಿ ಬೇಡಿಕೆ ಇದೆ: ಈ ಎಲ್ಲ ಮಾಹಿತಿಗಳನ್ನೂ ಜಾಹೀರು ಏಜೆನ್ಸಿಗಳು ಸಂಗ್ರಹಿಸುತ್ತವೆ. ತಯಾರಕ ಸಂಸ್ಥೆ ಮತ್ತು ಜಾಹೀರಾತುಗಳನ್ನು ಪ್ರಕಾಶ ಪಡಿಸುವವರು ಇವರಿಬ್ಬರ ನಡುವೆ ಇಂಥ ಏಜೆನ್ಸಿಗಳು ಮಧ್ಯವರ್ತಿಗಳಂತೆ ಕೆಲಸ ಮಾಡುತ್ತವೆ. ಕೆಲವು ದೊಡ್ಡ ಸಂಸ್ಥೆಗಳವರು ತಮ್ಮ ಸರಕನ್ನು ಜಾಹೀರು ಮಾಡುವ ಉದ್ದೇಶದಿಂದ ಪ್ರತ್ಯೇಕವಾದ ವಿಭಾಗವೊಂದನ್ನು ರಚಿಸುತ್ತಾರೆ. ಜಾಹೀರು ಏಜೆನ್ಸಿಯಂತೆ ಈ ವಿಭಾಗವೂ ವಿಷಯ ಸಂಗ್ರಹ ಮಾಡುತ್ತದೆ. ಜಾಹೀರಾತುಗಳಲ್ಲಿ ಹೊಸ ಹೊಸ ವಿಧಾನ ಮತ್ತು ನಕ್ಷೆಗಳನ್ನು ಜಾಹೀರು ತಜ್ಞರು ಸೃಷ್ಟಿಸುತ್ತಾ ಇರುತ್ತಾರೆ. ಜಾಹೀರು ಮಾಡುವಲ್ಲಿ ಸಂಸ್ಥೆ–ಸಂಸ್ಥೆಗಳ ಪೈಪೋಟಿ ಇರುತ್ತದೆ.

ಒಂದು ನಿರ್ದಿಷ್ಟ ಪದಾರ್ಥದ ಜಾಹೀರಾತು ಪದೇ ಪದೇ ನಮ್ಮ ಗಮನಕ್ಕೆ ಬರುತ್ತಿದ್ದರೆ ಆ ಪದಾರ್ಥ ನಮ್ಮ ಮನಸ್ಸಿನಲ್ಲಿ ಉಳಿದುಹೋಗುತ್ತದೆ. ಆ ಪದಾರ್ಥದ ಗುಣವೂ ಉತ್ತಮ ಮಟ್ಟದ್ದೆಂದು ನಮಗೆ ಮನವರಿಕೆ ಮಾಡಿದ್ದರೆ ಯಾವಾಗಲೂ ಆ ಪದಾರ್ಥವನ್ನೇ ಬಳಸಲು ಪ್ರಾರಂಭಿಸುತ್ತೇವೆ. ತಯಾರಕ ಸಂಸ್ಥೆಯು ಪದಾರ್ಥದ ಗುಣವನ್ನು ಕಾಪಾಡಿ ಸತತವಾಗಿ ಅದರ ಜಾಹೀರಾತು ಪ್ರಕಟಿಸುತ್ತಿದ್ದರೆ ಸರಕು ಸುಲಭವಾಗಿ ಮಾರಾಟವಾಗುತ್ತದೆ.

ಜಾಹೀರಾತು [illegible] ಇಂದು ದೊಡ್ಡ ಕಲೆ. [illegible] ಜಾಹೀರಾತು ವಿಧಾನ ವೈಜ್ಞಾನಿಕವಾಗಿದೆ.

## ಜ್ವಾಲಾಮುಖಿ

1902ರ ಮೇ 8. ಮುಂಜಾನೆ.

ಬಂದರಿನಲ್ಲಿದ್ದ ಹಡಗೊಂದರ ಅಧಿಕಾರಿಗಳು ಎದುರಿಗಿದ್ದ ಪರ್ವತದ ಕಡೆ ನೋಡುತ್ತಿದ್ದರು. ಪರ್ವತ ಹೊಗೆಯಾಡುತ್ತಿತ್ತು. ಇದ್ದಕ್ಕಿದ್ದಂತೆಯೇ ಕಾರ್ಮೋಡದಂಥ ಹೊಗೆ ಹೊಳೆಯಾಗಿ ನಗರವನ್ನೆಲ್ಲಾ ಆವರಿಸಿ ಬಂದರಿನ ಕಡೆಗೂ ನುಗ್ಗಿತು. ಒಂದೆರಡು ನಿಮಿಷಗಳಲ್ಲಿ ಕಪ್ಪು ಮೋಡ ಕರಗಿ ಹೋಯಿತು. ಬಂದರಿನಲ್ಲಿ ಅನೇಕ ಹಡಗುಗಳು ಮುಳುಗಿದ್ದುವು. ಸುಟ್ಟು ವಿಕಾರವಾದ ಕೆಲವರು ಸಮುದ್ರದಲ್ಲಿ ಒದ್ದಾಡುತ್ತಿದ್ದರು. ದಂಡೆಯ ಮೇಲಿನ ಪಟ್ಟಣದ 30,000 ಜನ ಸತ್ತುಬಿದ್ದಿದ್ದರು.

ವೆಸ್ಟ್ ಇಂಡೀಸ್‌ನ ಮಾರ್ಟಿನಿಕ್ ದ್ವೀಪದ ಸೇಂಟ್ ಪ್ಯೇರ್ ನಗರ ಜ್ವಾಲಾಮುಖಿಯ ಆಕ್ರೋಶಕ್ಕೆ ಬಲಿಯಾಗಿತ್ತು.

ಜ್ವಾಲೆಯನ್ನು ಕಾರುವ ಬೆಟ್ಟ ಅಥವಾ ಪರ್ವತ, ಜ್ವಾಲಾಮುಖಿ. ಅದನ್ನು ಅಗ್ನಿಪರ್ವತವೆಂದೂ ಕರೆಯಬಹುದು.

ಭೂಮಿಯ ಮೇಲಿನ ರಂಧ್ರಗಳಿಂದ, ಬಿರುಕಿನಿಂದ ಕಲ್ಲು, ಅನಿಲ ಹೊರ ಬರುತ್ತದೆ. ಹಾಗೆ ಬರುವ ಕಲ್ಲು ಎಷ್ಟು ಬಿಸಿಯಾಗಿರುತ್ತದೆಂದರೆ, ಆ ಬಿಸಿಗೆ ಅದು ಕರಗಿಹೋಗಿ ದ್ರವವಾಗಿರುತ್ತದೆ. ಕೆಲವು ಸಲ ಆ ದ್ರವ ನಿಶ್ಶಬ್ದವಾಗಿ ಹೊರಕ್ಕೆ ಬರುತ್ತದೆ. ಆದರೆ ಇನ್ನು ಕೆಲವು ಸಲ ಅದರ ಜೊತೆ ಬರುವ ಅನಿಲಗಳು ವಿಕಸಿತವಾಗಿ, ಒತ್ತಡ ಹೆಚ್ಚಿ ಸಿಡಿಯುತ್ತವೆ. ಇದರಿಂದ ಕಲ್ಲುಗಳು ಎತ್ತರಕ್ಕೆ ಹಾರಿ ಬೀಳುತ್ತವೆ. ಇದೇ ಜ್ವಾಲಾಮುಖಿಯ ಸ್ಫೋಟ.

ದ್ರವದ ರೂಪದಲ್ಲಿರುವ ಕಲ್ಲಿಗೆ ಮ್ಯಾಗ್ಮ ಎಂದು ಹೆಸರು. ಈ ಮ್ಯಾಗ್ಮ ಭೂಮಿಯ ಮೇಲ್ಭಾಗಕ್ಕೆ ಬಂದಾಗ ತಣ್ಣಗಾಗಿ ಮತ್ತೆ ಕಲ್ಲಾಗುತ್ತದೆ. ದ್ರವದ ರೂಪದ ಕಲ್ಲಲ್ಲಿ ಆ ಕಲ್ಲಿನ ಹರಳು ಇರುತ್ತವೆ. ಭೂಮಿಯಿಂದ ಹೊರಕ್ಕೆ ಬರುವ ಶಿಲಾದ್ರವಕ್ಕೆ ಲಾವಾ ಎನ್ನುತ್ತಾರೆ.

ಪ್ರಪಂಚದ ಅನೇಕ ಕಡೆಗಳಲ್ಲಿ ಜ್ವಾಲಾಮುಖಿಗಳಿವೆ. ಕೆಲವು ಬಹಳ ಹಿಂದೆಯೇ ನಿರ್ಜೀವವಾಗಿವೆ. ಕೆಲವು ಆಗಾಗ ಕೆಂಡ ಕಾರುತ್ತವೆ. ಕೆಲವು ಯಾವಾಗಲೂ ಜೀವಂತವಾಗಿಯೇ ಇರುತ್ತವೆ.

ಭೂಮಿಯ ಒಳಗಿನ ಕಲ್ಲು, ಬಂಡೆ. ಶಿಲಾದ್ರವ ಇವೆಲ್ಲಾ ಏಕೆ ಹೊರಕ್ಕೆ ಬರಬೇಕು ? ಭೂಮಿಯೊಳಗಿನ ಉಷ್ಣತೆಯ ಒತ್ತಡವೇ ಇದಕ್ಕೆ ಮುಖ್ಯ ಕಾರಣ. ಭೂಮಿಯ ಮೇಲ್ಭಾಗ ಎಲ್ಲಿ ಬಹಳ ದುರ್ಬಲವಾಗಿದೆಯೋ ಅಲ್ಲಿ ಲಾವಾ ಉಕ್ಕಿ ಹೊರಬರುತ್ತದೆ. ಕೆಲವು ಜ್ವಾಲಾಮುಖಿಗಳು ಬೆಂಕಿಯನ್ನು ಕಾರುವಂತೆ. ಕೆಲವು ಕೆಸರನ್ನೂ ಕೆಲವು ಬರೀ ಹೊಗೆ ಮತ್ತು ಬಿಸಿನೀರನ್ನೂ ಕಾರುತ್ತವೆ.

ಜ್ವಾಲಾಮುಖಿಯಿಂದ ಎಷ್ಟು ಅಪಾಯ ! ಜ್ವಾಲಾಮುಖಿಗಳು ಇರದಿದ್ದರೆ ಚೆನ್ನಾಗಿತ್ತು ಎನಿಸುವುದಲ್ಲವೇ ? ಆದರೆ ಜ್ವಾಲಾಮುಖಿಗಳಿರುವುದು ಒಳ್ಳೆಯದು. ಜ್ವಾಲಾಮುಖಿಗಳನ್ನು ‘ಅಪಾಯ ತಪ್ಪಿಸುವ ಕವಾಟ’ ಎಂದು ಕರೆದಿದ್ದಾರೆ. ಭೂಮಿಯ ಒಳಗೆ ಉಂಟಾಗುವ ಅತಿಶಯವಾದ ಕಾವಿನ ಒತ್ತಡವನ್ನು ಹೊರಕ್ಕೆ ತರಲು ಜ್ವಾಲಾಮುಖಿ ಬಹಳ ಸಹಕಾರಿಯಾಗಿದೆ. ಜ್ವಾಲಾಮುಖಿ [illegible]. ಭೂಗರ್ಭದೊಳಗೆ [illegible] ಒತ್ತಡ ಉಂಟಾಗುತ್ತದೆ. [illegible] ಭೂಮಿ ಕಂಪಿಸುತ್ತದೆ. ಅದು ಭೂಕಂಪ.



ಜಿನ್ನಾ, ಮಹಮುದಾಲಿ

ಆಳುವ ನೀತಿಯನ್ನು ಅನುಸರಿಸುತ್ತಿದ್ದ ಸಾಮ್ರಾಜ್ಯಶಾಹಿ ಈ ಕಾರ್ಯದಲ್ಲಿ ಅವರಿಗೆ ಉತ್ತೇಜನ ನೀಡಿತು.

ಬ್ರಿಟಿಷ್ ಆಳ್ವಿಕೆಯನ್ನು ಕೊನೆಗಾಣಿಸಿ ಸ್ವತಂತ್ರವಾಗಲೆಂದು ಭಾರತ ಹೋರಾಟ ನಡೆಸಿತು. ಭಾರತ ಸ್ವತಂತ್ರವಾಗುವುದೇ ಆದರೆ ಮುಸಲ್ಮಾನರಿಗೆ ಪ್ರತ್ಯೇಕ ರಾಷ್ಟ್ರ ಬೇಕೆಂದು 1940ರಲ್ಲಿ ಮಹಮುದಾಲಿ ಜಿನ್ನಾ ಸಾರಿದರು.

ಪಾಕಿಸ್ತಾನವನ್ನು ಕಟ್ಟುವ ಮುಸ್ಲಿಂ ಲೀಗಿನ ಪ್ರಯತ್ನಕ್ಕೆ ಕಾಂಗ್ರೆಸ್ ಒಪ್ಪಲಿಲ್ಲ. ಮುಸ್ಲಿಂ ಲೀಗು ತನ್ನ ಪಟ್ಟು ಬಿಡಲಿಲ್ಲ. ಕೊನೆಗೆ 1947ರಲ್ಲಿ ವೈಸ್‌ರಾಯ್ ಲಾರ್ಡ್ ಮೌಂಟ್‌ಬ್ಯಾಟನರ ಸಂಧಾನದ ಫಲವಾಗಿ, ಸಿಂಧ್, ವಾಯವ್ಯ ಗಡಿ ಪ್ರದೇಶ, ಪಶ್ಚಿಮ ಪಂಜಾಬ್ ಮತ್ತು ಪೂರ್ವ ಬಂಗಾಳ ಇವುಗಳನ್ನು ಸೇರಿಸಿ ಸ್ವತಂತ್ರ ರಾಷ್ಟ್ರವಾದ ಪಾಕಿಸ್ತಾನವನ್ನು ನಿರ್ಮಿಸಬೇಕೆಂದೂ ಉಳಿದ ಭಾಗಗಳನ್ನು ಭಾರತದ ಒಕ್ಕೂಟ ಎಂದು ಕರೆಯಬೇಕೆಂದೂ ತೀರ್ಮಾನವಾಯಿತು.

ಪಾಕಿಸ್ತಾನದ ಚಳುವಳಿಗೆ ನಾಯಕರಾದ ಜಿನ್ನಾ, ಮುಸಲ್ಮಾನರಿಗೆ ಅತ್ಯಂತ ಪ್ರಿಯರಾಗಿ ಪರಿಣಮಿಸಿದರು. 'ಕಾಯ್‌ದೆ ಅಜಮ್'—ಮಹಾ ನಾಯಕ—ಎಂಬ ಬಿರುದನ್ನು ಸಹ ಅವರು ಪಡೆದರು.

1947ರಲ್ಲಿ ಸ್ವತಂತ್ರ ಪಾಕಿಸ್ತಾನದ ಪ್ರಪ್ರಥಮ ಗೌರ್ನರ್ ಜನರಲ್ ಆಗಿ ಜಿನ್ನಾ ನೇಮಕಗೊಂಡರು. ಆದರೆ ಆ ಹಿರಿಯ ಸ್ಥಾನದಲ್ಲಿ ಅವರು ಇದ್ದುದು ಒಂದು ವರ್ಷ ಮಾತ್ರ. 1948ರಲ್ಲಿ ತಮ್ಮ ಎಪ್ಪತ್ತೆರಡನೆಯ ವಯಸ್ಸಿನಲ್ಲಿ ಜಿನ್ನಾ ನಿಧನರಾದರು.

## ಜಿನೀವ

ಯುದ್ಧಗಳಿಂದ ಬೇಸತ್ತ ಮಾನವಕೋಟಿ ಶಾಂತಿಗಾಗಿ ಅಂತರರಾಷ್ಟ್ರೀಯ ಮಟ್ಟದಲ್ಲಿ ಮೊಟ್ಟಮೊದಲು ಪ್ರಯತ್ನಮಾಡಿದ್ದು ಮೊದಲನೆಯ ಮಹಾಯುದ್ಧದ ಅನಂತರ. ಇದಕ್ಕಾಗಿ ರಾಷ್ಟ್ರಸಂಘ ಸ್ಥಾಪಿತವಾಯಿತು. ಈ ಸಂಘದ ಕಾರ್ಯಾಲಯಕ್ಕಾಗಿ ಆರಿಸಿದ ಸ್ಥಳ, ಜಿನೀವ.

ಜಿನೀವ ಸ್ವಿಟ್ಜರ್‌ಲೆಂಡಿನ ದಕ್ಷಿಣಭಾಗದಲ್ಲಿದೆ ; ಜಿನೀವ ಸರೋವರದ ದಡದಲ್ಲಿದ್ದು ಇದು ತುಂಬ ಆಕರ್ಷಕವಾಗಿದೆ. ಜನಸಂಖ್ಯೆ ಹದಿನೇಳು ಲಕ್ಷ. ಯೂರೋಪಿನ ಇತಿಹಾಸದಲ್ಲಿ ಮತ್ತು ಜಾಗತಿಕ ಚಟುವಟಿಕೆಗಳಲ್ಲಿ ಜಿನೀವ ಪ್ರಮುಖ ಸ್ಥಾನ ಪಡೆದಿದೆ.

ಜಿನೀವ ಬಹು ಸುಂದರ ನಗರ. ಜಿನೀವ ಸರೋವರದಿಂದ ಹರಿದು ಬರುವ ರೋನ್ ನದಿ ಪಟ್ಟಣವನ್ನು ಇಬ್ಭಾಗಿಸಿದೆ.

ವಿಶ್ವ ಆರೋಗ್ಯ ಸಂಸ್ಥೆಯ ಪ್ರಧಾನ ಕಚೇರಿ ಜಿನೀವದಲ್ಲಿದೆ. ವಿಶ್ವ ಸಂಸ್ಥೆಯ ಅನೇಕ ವಿಶೇಷ ಕಾರ್ಯಗಳು ಇಲ್ಲಿ ನಡೆಯುತ್ತಿವೆ. ಅಂತರ ರಾಷ್ಟ್ರೀಯ ಕಾರ್ಮಿಕರ ಸಂಸ್ಥೆ ಮತ್ತು ಅಂತರರಾಷ್ಟ್ರೀಯ ರೆಡ್‌ಕ್ರಾಸ್ ಸಂಸ್ಥೆ ಇವುಗಳ ಪ್ರಧಾನ ಕಚೇರಿಗಳಿರುವುದೂ ಇಲ್ಲಿಯೇ. ಸ್ವಿಟ್ಜರ್‌ಲೆಂಡಿನ ತಟಸ್ಥ ನೀತಿ, ಅನೇಕ ಅಂತರರಾಷ್ಟ್ರೀಯ ಸಭೆಗಳು ಜಿನೀವದಲ್ಲಿ ನಡೆಯಲು ಕಾರಣವಾಗಿದೆ.

ಜಿನೀವದಲ್ಲಿ ಕೆಲವು ಪ್ರಾಚೀನ, ಆಕರ್ಷಕ ಕಟ್ಟಡಗಳಿವೆ. ಹದಿನಾಲ್ಕನೆಯ ಶತಮಾನದಲ್ಲಿ ಕಟ್ಟಿದ ಸೇಂಟ್ ಪೀಟರ್ ಆರಾಧನಾ ಮಂದಿರ ಅಂಥ ಕಟ್ಟಡಗಳಲ್ಲಿ ಒಂದು. ಕ್ಯಾಲ್ವಿನ್ ಎಂಬ ಹದಿನಾರನೆಯ ಶತಮಾನದ ಧರ್ಮಾಧಿಕಾರಿ ಸ್ಥಾಪಿಸಿದ ವಿದ್ಯಾಮಂದಿರ ಈಗ ವಿಶ್ವವಿದ್ಯಾನಿಲಯವಾಗಿ ಮಾರ್ಪಟ್ಟಿದೆ. ಶ್ರೇಷ್ಠ ವಾಚನಾಲಯಗಳೂ ವಸ್ತು ಸಂಗ್ರಹಾಲಯಗಳೂ ಇವೆ. ಪ್ರಾಟೆಸ್ಟಂಟರಿಗೆ ಜಿನೀವ ಕೇಂದ್ರ ಸ್ಥಾನ.

ಗಡಿಯಾರಗಳು, ಒಡವೆಗಳು, ವೈಜ್ಞಾನಿಕ ಉಪಕರಣಗಳ ತಯಾರಿಕೆ ಇವುಗಳಿಗೆಲ್ಲ ಜಿನೀವ ಹೆಸರುವಾಸಿಯಾಗಿದೆ.

ನೋಡಿ : ರಾಷ್ಟ್ರಸಂಘ, ವಿಶ್ವಸಂಸ್ಥೆ

## ಜಿಪ್ಸಿ

ಊರ ಹೊರಗಡೆ ಖಾಲಿಯಾಗಿದ್ದ ಬಯಲಿನಲ್ಲಿ ಇದ್ದಕ್ಕಿದ್ದ ಹಾಗೆಯೇ ಹತ್ತಾರು ಗುಡಾರಗಳು. ಬಣ್ಣಬಣ್ಣದ ಲಂಗಗಳನ್ನೂ ಕುಪ್ಪಸಗಳನ್ನೂ ತೊಟ್ಟ ಹೆಂಗಸರು. ಅವರ ಜೊತೆ ಮಕ್ಕಳು. ಗಂಡಸರ, ಹೆಂಗಸರ ಕೊರಳ ತುಂಬ ಮಣಿಸರಗಳು. ಬಂದರೆಲ್ಲ ತಮ್ಮದೇ ಎನ್ನುವಹಾಗೆ ಓಡಾಟ.

ಬಯಲಿನಲ್ಲೇ ಅಡುಗೆ, ಊಟ. ಊರಿನಲ್ಲೆಲ್ಲಾ ಅವರೇ. ಮನೆ ಮನೆ ಮುಂದೆಯೂ ನೃತ್ಯ. ಹಾಡು, ಕಣಿ ಹೇಳುವುದು, ಭವಿಷ್ಯ ನುಡಿಯುವುದು. ಅನಂತರ ಅಕ್ಕಿ, ಬಟ್ಟೆ ಕೇಳಿ ತೆಗೆದುಕೊಳ್ಳುವುದು. ನಾಲ್ಕು ದಿನ ಕಳೆದು ಐದನೆಯ ದಿನ ಊರಿನಲ್ಲಿ ಅವರ ಸುಳಿವೇ ಇಲ್ಲ. ಮತ್ತೆ ಅಂಥ ಗುಂಪನ್ನೂ ಅವರ ಚಟುವಟಿಕೆಗಳನ್ನೂ ನೋಡುವುದು ಹಲವಾರು ವರ್ಷಗಳಾದ ಮೇಲೆ. ಭಾರತದಲ್ಲಿ ಎಲ್ಲ ಕಡೆಯೂ ಹರಡಿರುವ ಇವರಿಗೆ ಒಂದೊಂದು ಪ್ರದೇಶದಲ್ಲಿ ಒಂದೊಂದು ಹೆಸರಿದೆ. ಬಂಜರ, ನಾಟ್, ಬೆರಿಯ, ರಾಫರ್, ಬರೆಧಿಯ, ಜೋಹನ್, ಬಂಟ್ರು, ಕುರವ್ಯೆ, ಕುರುಮೇರು, ಲಂಬಾಣಿ, ಕಂಜಾರಿ, ಕನೋಜ, ದುಂಬಾರಿ, ಪಕಾನಾಟಿ, ಸುಕಟಿ–ಇವೆಲ್ಲವೂ ಜಿಪ್ಸಿ ಜನರಿಗೆ ಭಾರತದಲ್ಲಿರುವ ಹೆಸರುಗಳು.

ಊರೂರು ಅಲೆಯುವ ಈ ಜನರಿಗೆ 'ಜಿಪ್ಸಿ' ಗಳು ಎಂದೂ ಹೆಸರು.

'ಜಿಪ್ಸಿ' ಎನ್ನುವ ಪದ 'ಈಜಿಪ್‌ಷಿಯನ್' ಪದದಿಂದ ಬಂದಿದೆ. 'ಜಿಪ್ಸಿ'ಗಳು ಯಾರು ಎಲ್ಲಿದ್ದರು ಎಂದು ಖಚಿತವಾಗಿ ತಿಳಿದಿಲ್ಲ. ಮೊದಲ ಬಾರಿ ಅವರು ಇಂಗ್ಲೆಂಡಿನಲ್ಲಿ ಕಾಣಿಸಿಕೊಂಡಾಗ ಅವರು ಈಜಿಪ್ಟಿನವರಿರಬೇಕೆಂದು ಅವರನ್ನು ಜಿಪ್ಸಿ ಎಂದರು. ಆ ಹೆಸರೇ ಅಂಟಿಕೊಂಡಿತು.

'ಜಿಪ್ಸಿ'ಗಳು ಎಲ್ಲಿದ್ದರು, ಎಲ್ಲಿಂದ ಬಂದರು ಎನ್ನುವುದನ್ನು ತಿಳಿಯಲು ಸ್ವಲ್ಪ ಮಟ್ಟಿಗೆ ಸಹಾಯಮಾಡುವ ಅಂಶ, 'ರೋಮನಿ' ಎಂದು ಕರೆಯಲ್ಪಡುವ ಅವರ ಭಾಷೆ. ಇದು ಸಂಸ್ಕೃತವನ್ನು ಹೋಲುತ್ತದೆ. ಇದು ಅಶುದ್ಧ ಹಿಂದಿ ಎಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಇಂದು ಪ್ರಪಂಚದಲ್ಲೆಲ್ಲಾ ಹರಡಿರುವ ಜಿಪ್ಸಿ ಜನ ಮೊದಲಿಗೆ ಉತ್ತರ ಭಾರತದಲ್ಲಿ ಇದ್ದಂತೆಯೂ 1000ದ ಸುಮಾರಿಗೆ ಪಶ್ಚಿಮದತ್ತ ಹೊರಟು ಇರಾನ್, ಆರ್ಮಿನಿಯಗಳಲ್ಲಿ ಹರಡಿಕೊಂಡಂತೆಯೂ ತೋರುತ್ತದೆ ಎಂದು ಬಹು ಮಂದಿ ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಇವರು ಭಾರತವನ್ನು ಬಿಟ್ಟು ಏಕೆ ಬೇರೆ ದೇಶಗಳಿಗೆ ಹೋದರು ಎನ್ನುವುದು ಸ್ಪಷ್ಟವಾಗಿಲ್ಲ.

ಹದಿನೈದನೆಯ ಶತಮಾನದ ಹೊತ್ತಿಗಾಗಲೆ ಅವರು ಅನೇಕ ಪಾಶ್ಚಾತ್ಯ ದೇಶಗಳನ್ನು ಹೋಗಿ ಸೇರಿದರು, ಸ್ವಿಟ್ಸರ್‌ಲೆಂಡ್, ಜರ್ಮನಿ, ಫ್ರಾನ್ಸ್, ರೋಮ್ ಇಲ್ಲೆಲ್ಲ ಜಿಪ್ಸಿಗಳು ಅಲೆದಾಡುತ್ತಿದ್ದರು.

ಎರಡನೆಯ ಮಹಾಯುದ್ಧಕ್ಕೆ ಮೊದಲು ಯೂರೊಪಿನಲ್ಲಿ ಸುಮಾರು 15,00,000 ಮಂದಿ, ಅಮೆರಿಕದಲ್ಲಿ ಒಂದು ಲಕ್ಷ ಮಂದಿ ಜಿಪ್ಸಿಗಳಿದ್ದರೆಂದು ಅಂದಾಜು ಮಾಡಿದ್ದಾರೆ.

ಜಿಪ್ಸಿಗಳು ಒಂದು ಊರಿನಲ್ಲಿ ತಂಗಿದ್ದಾಗ ಅಲ್ಲಿ ವಾಸಿಸುವುದಕ್ಕೆ ಡೇರೆಗಳನ್ನು ಕೂಡಲೇ ಸಿದ್ಧಮಾಡುತ್ತಾರೆ. ಬಂಡಿಯಲ್ಲಿ ಅಥವಾ ಪ್ರಾಣಿಗಳ ಮೇಲೆ ಸಾಮಾನು ಸಾಗಾಣಿಕೆ. ಕತ್ತೆ, ಎತ್ತು, ಕುದುರೆಗಳಿರುತ್ತವೆ. ನಾಯಿ ಕೋಳಿಗಳೂ ಇರುತ್ತವೆ. ಅವರು ಅಲೆದಾಡುವುದು ಒಂದು ಚಿಕ್ಕ ಸರ್ಕಸ್ ತಂಡದಂತೆ. ಅನೇಕ ವೇಳೆ ಆಹಾರ ಪದಾರ್ಥಗಳಂತೆ ಬಟ್ಟೆಗಳನ್ನೂ ಅಪರಿವರಿಂದ ಪಡೆಯುತ್ತಾರೆ. ಬಣ್ಣಬಣ್ಣದ ಬಟ್ಟೆಗಳು ಅವರಿಗೆ ಬಹಳ ಮೆಚ್ಚುಗೆ. ಬಹಳ ಬೆಲೆಬಾಳುವ ನಾಗರಿಕವೆನಿಸುವ ಆಭರಣಗಳನ್ನು ಧರಿಸದಿದ್ದರೂ ಜಿಪ್ಸಿ ಹೆಂಗಸರು ಮಣಿಸರಗಳನ್ನೂ ಬೆಳ್ಳಿಯಿಂದ ಮಾಡಿದ ಆಭರಣಗಳನ್ನೂ ಧರಿಸುತ್ತಾರೆ. ಇವರು ಪ್ರಾಣಿಗಳ ಚಿಕಿತ್ಸೆಯಲ್ಲಿ ಮತ್ತು ಪಾತ್ರೆಗಳನ್ನು ಸರಿಮಾಡುವುದರಲ್ಲಿ ನಿಪುಣರು. ಸಂಗೀತಪ್ರಿಯರು.

ಜಿಪ್ಸಿಗಳಿಗೆ ತಮ್ಮದೇ ಆದ ಕಾನೂನು ಕಟ್ಟಲೆಗಳಿವೆ. ಅವರದು ಬಹಳ ಸರಳವಾದ ವ್ಯವಸ್ಥೆ. ಪ್ರತಿಯೊಂದು ಗುಂಪೂ ತನ್ನ ಮುಖ್ಯಸ್ಥನನ್ನು ಚುನಾಯಿಸುತ್ತದೆ. ಎಲ್ಲಿಗೆ ಪ್ರಯಾಣ ಮಾಡಬೇಕು ಎಂಬುದನ್ನು ಮುಖ್ಯಸ್ಥ ನಿರ್ಧರಿಸುತ್ತಾನೆ. ಮುಖ್ಯಸ್ಥನೆದುರಿಗೆ ವಿವಾಹಗಳಾಗಬೇಕು. ಪ್ರತಿಯೊಂದು ಗುಂಪಿಗೂ ಒಬ್ಬ ತಾಯಿ ಇರುತ್ತಾಳೆ. ಏನೇ ಸಮಸ್ಯೆ ಬಂದರೂ ಆಕೆಯನ್ನು ಕೇಳುತ್ತಾರೆ. ಅವಳು ಹೊರಗೆಲ್ಲೂ ಬರುವುದಿಲ್ಲ.

ಜಿಪ್ಸಿಗಳಿಗೆ ವ್ಯವಸ್ಥಿತವಾದ ಧರ್ಮ ಇಲ್ಲದಿದ್ದರೂ ಕೆಲವೊಂದು ವಿಷಯಗಳು ನಿಷಿದ್ಧ. ಜಿಪ್ಸಿ ಜಿಪ್ಸಿಯಿಂದ ಇನ್ನೊಬ್ಬ ಜಿಪ್ಸಿ ಕದಿಯುವುದು, ಮಾತಿಗೆ ತಪ್ಪಿ ನಡೆಯುವುದು. ನಾಯಿ ಅಥವಾ ಕುದುರೆ ಮಾಂಸವನ್ನು ತಿನ್ನುವುದು. ಇವು ಮಹಾಪರಾಧಗಳು. ಇಂಥ ಅಪರಾಧಗಳನ್ನು ಮಾಡಿದವರನ್ನು ಜಿಪ್ಸಿ ಗುಂಪಿನಿಂದ ಹೊರಕ್ಕೆ ಹಾಕುವುದು.

ಜಿಪ್ಸಿಗಳು ಸರ್ವಶಕ್ತನಾದ ದೇವರಿದ್ದಾನೆ ಎಂದು ನಂಬುತ್ತಾರೆ. ಆದರೆ ದೇವರ ಬಗೆಗೆ ಸ್ಪಷ್ಟವಾದ ಕಲ್ಪನೆ ಏನೂ ಇಲ್ಲ. ತೊಂದರೆಗಳನ್ನುಂಟು ಮಾಡುವ ಕೆಟ್ಟಶಕ್ತಿಯೊಂದಿದೆ ಎಂದೂ ನಂಬುತ್ತಾರೆ. ಆದರಿಂದ ರಕ್ಷಣೆ ಪಡೆಯಲು ತಾಯಿತಿಗಳನ್ನು ಉಪಯೋಗಿಸುತ್ತಾರೆ.

ಪಾಶ್ಚಾತ್ಯ ದೇಶಗಳಲ್ಲಿರುವ ಜಿಪ್ಸಿಗಳು ಒಬ್ಬ ಸತ್ತವರನ್ನು ಒಬ್ಬ ಪೂಜಾರಿಯ ಸಮ್ಮುಖದಲ್ಲಿ ಹೂಳುತ್ತಾರೆ. ಸತ್ತವನಿಗಾಗಿ ಪ್ರಾರ್ಥಿಸಿ ಅನಂತರ ಗಟ್ಟಿಯಾಗಿ ಅಳುತ್ತಾರೆ. ಅನಂತರ ಶವದ ಮೇಲೆ ಯಾವ ಬಟ್ಟೆಯನ್ನೂ ಹೊದಿಸದೆ ಪೆಟ್ಟಿಗೆಯಲ್ಲಿಟ್ಟು ಇಷ್ಟವಾದ ಅವನ ಎಲ್ಲ ಸಾಮಾನುಗಳನ್ನು. ಕೊನೆಗೆ ಅವನ ಪಿಟೀಲನ್ನು ಕೂಡ, ಇಟ್ಟು ಸ್ವಲ್ಪ ದ್ರಾಕ್ಷಾರಸ ಹಾಕುತ್ತಾರೆ. ಬಳಿಕ ಕೆಂಪುಬಟ್ಟೆಯಲ್ಲಿ ಸ್ವಲ್ಪ ಹಣ ಕಟ್ಟಿ ಇಡುತ್ತಾರೆ. ಕಿರುಬೆರಳನ್ನು ಮುರಿಯುತ್ತಾರೆ. ಕೆಂಪುಬಟ್ಟೆಯಲ್ಲಿ ಕಟ್ಟಿದ ಹಣ ಸತ್ತವರ ನದಿಯಲ್ಲಿ ಯಾನಮಾಡಲು ಸತ್ತವನು ಕೊಡಬೇಕಾದ ಪ್ರಯಾಣದ ಶುಲ್ಕ. ಸತ್ತವನು ಕೆಟ್ಟವನಾಗಿದ್ದರೆ ಅವನನ್ನು ಮಣ್ಣುಮಾಡಿ ಸಮಾಧಿಯಮೇಲೆ ಮುಳ್ಳು ಮರಗಳನ್ನು ಹೇರುತ್ತಾರೆ–ಸತ್ತವನು ತಿರುಗಿ ಬಾರದೆ ಇರಲಿ ಎಂದು.

ಜಿಪ್ಸಿ ನೃತ್ಯ, ಸಂಗೀತಗಳಿದ್ದರೂ ಜಿಪ್ಸಿ ಸಾಹಿತ್ಯವಿಲ್ಲ. ಜಿಪ್ಸಿ ಹೆಂಗಸರು ಕೆಲವರು ಕಸೂತಿ ಹೊಲಿಗೆ ಮೊದಲಾದವುಗಳಲ್ಲಿ ಪರಿಣತರು. ಕೆಲವೆಡೆ ಬುಟ್ಟಿ ಹೆಣಿಗೆ ಮತ್ತಿತರ ಗೃಹಕೈಗಾರಿಕೆಗಳನ್ನು ಮಾಡುತ್ತಾರೆ.

ಜಿಪ್ಸಿಗಳು ಅದರಲ್ಲೂ ಜಿಪ್ಸಿ ಹೆಂಗಸರು ಕಣಿ ಹೇಳುವುದರಲ್ಲಿ ಪ್ರಸಿದ್ಧರು. ಆದರೆ ಅವರು ಹೇಳುವ ಕಣಿ ಯಾವಾಗಲೂ ಸತ್ಯವಾಗುತ್ತದೆಂದೇನೂ ಇಲ್ಲ.

ಜಿಪ್ಸಿಗಳು ಸಮಾಜಕ್ಕೂ ಸರಕಾರಕ್ಕೂ ಸಮಸ್ಯೆಯಾಗಿದ್ದಾರೆ. ಅನೇಕ ದೇಶಗಳಲ್ಲಿ ಅವರ ಚಟುವಟಿಕೆಗಳನ್ನು ನಿಷೇಧಿಸುವ ಕಾನೂನಿವೆ. ಜರ್ಮನಿಯಲ್ಲಿ ನಾಜಿಗಳು ಅವರನ್ನು ಸದೆಬಡಿಯಬೇಕೆಂದು ತೀರ್ಮಾನಿಸಿದ್ದರಿಂದ 18,000 ದಿಂದ ಅವರ ಸಂಖ್ಯೆ 6,000ಕ್ಕೆ ಇಳಿದುಹೋಯಿತು. ಹದಿನಾರನೆಯ ಶತಮಾನದಲ್ಲಿ ಜಿಪ್ಸಿ ಜನರ ಜೊತೆ ಸ್ನೇಹ ಬೆಳೆಸಿದ ಎಲ್ಲರನ್ನೂ ಮರಣದಂಡನೆಗೆ ಗುರಿಮಾಡಲು ಇಂಗ್ಲೆಂಡ್ ಒಂದು ಕಾನೂನು ಮಾಡಿತು.

'ಜಿಪ್ಸಿ' ಜನರನ್ನು ಅಲೆಮಾರಿ ಜೀವನದಿಂದ ಬಿಡಿಸಿ ಸಮಾಜದಲ್ಲಿ ವ್ಯವಸ್ಥಿತ ರೂಪದಲ್ಲಿ ನೆಲೆಸುವಂತೆ ಮಾಡಬೇಕೆಂದು ಎಷ್ಟೋ ಪ್ರಯತ್ನಗಳು ನಡೆದಿದ್ದರೂ ಅವು ಸಾರ್ಥಕವಾಗಿಲ್ಲ.

ನೋಡಿ : ಜಿಪ್ಸಿ

## ಜೀತ

ಇಷ್ಟವಿರಲಿ ಇಲ್ಲದಿರಲಿ, ಕೈಯಲ್ಲಾಗಲಿ ಆಗದಿರಲಿ ದುಡಿಯಬೇಕು. ದುಡಿದದ್ದಕ್ಕೆ [illegible] ಕೂಲಿ [illegible] ಕೇಳುವಂತಿಲ್ಲ.

ಏನನ್ನಾದರೂ ಕೊಟ್ಟರೆ. ಕೊಟ್ಟಷ್ಟನ್ನು ತೆಗೆದುಕೊಳ್ಳಬೇಕು. ಅನ್ಯಾಯ! ಇದು 'ಜೀತ'. ದುಡಿಮೆಗಾರರ ಇಷ್ಟಕ್ಕೆ ವಿರುದ್ಧವಾಗಿ ಒತ್ತಾಯದಿಂದ ಪಡೆದ ದುಡಿಮೆಯೇ ಜೀತ.

ಜೀತದ ಕ್ರೌರ್ಯ ಜಗತ್ತಿನಲ್ಲಿ ಬಹು ಹಳೆಯದು. ರೋಮನ್ ರಾಜ್ಯದಲ್ಲಿ ಸಾರ್ವಜನಿಕ ಕೆಲಸಗಳ ಸಲುವಾಗಿ ಪ್ರಜೆಗಳು ಜೀತದಾಳುಗಳಾಗಿ ದುಡಿಯಬೇಕಿತ್ತು. ಪಾರ್ಶಿಯದ ದೊರೆಗಳು ಸರಕನ್ನು ಸಾಗಿಸಲು ಬಲವಂತವಾಗಿ ಆಳುಗಳಿಂದ ದುಡಿಸಿಕೊಳ್ಳುತ್ತಿದ್ದರು. ಈಜಿಪ್ಟಿನ ಪಿರಮಿಡ್ಡುಗಳು ಮತ್ತು ಕಾಲುವೆಗಳ ನಿರ್ಮಾಣ ಜೀತದಾಳುಗಳಿಂದ ನಡೆಯಿತು. ಮಧ್ಯಯುಗದ ಯೂರೋಪಿನ ಅರಸರು ಜೀತದಾಳುಗಳನ್ನು ಇಟ್ಟುಕೊಂಡಿದ್ದರು.

ಜೀತಪದ್ಧತಿ ಬಹುಮಟ್ಟಿಗೆ ಬಿಳಿಯರ ವಸಾಹತು ದೇಶಗಳಲ್ಲಿ ಇತ್ತೀಚಿನವರೆಗೂ ಜಾರಿಯಲ್ಲಿತ್ತು. ಉಷ್ಣಪ್ರದೇಶದ ವಸಾಹತುಗಳಲ್ಲಿ ಬಿಳಿಯ ಆಡಳಿತಗಾರರು ಕಷ್ಟಪಟ್ಟು ಕೆಲಸ ಮಾಡಲು ಸಿದ್ಧರಿರುವುದಿಲ್ಲ. ಶ್ರಮಪೂರ್ಣ ದುಡಿಮೆಗೆ ಸ್ಥಳೀಯರ ಮೊರೆಹೊಗಬೇಕಾಗುತ್ತದೆ. ಸ್ಥಳೀಯ ನಿವಾಸಿಗಳ ಅಗತ್ಯಗಳೂ ಕಡಮೆಯಿದ್ದು ಹೆಚ್ಚು ಹಣ ಅವರಿಗೆ ಬೇಡದಿದ್ದರೂ ಬಂಡವಾಳಗಾರರು ತಮ್ಮ ಪುರೋಭಿವೃದ್ಧಿಯ ಸಲುವಾಗಿ ದುಡಿಯಲು ಒತ್ತಾಯಪಡಿಸುತ್ತಿದ್ದರು. ಇವರಿಬ್ಬರ ನಡುವಣ ಘರ್ಷಣೆ ಜೀತಕ್ಕೆ ಎಡೆಕೊಟ್ಟಿತು. ಆಫ್ರಿಕದ ವಸಾಹತುಗಳಲ್ಲಂತೂ ಬಲವಂತದ ದುಡಿಮೆ ಬಹಳವಾಗಿ ಜಾರಿಯಲ್ಲಿತ್ತು. ಮತ್ತೆ ಕೆಲವು ವಸಾಹತುಗಳಲ್ಲಿ ಜೀತವನ್ನು ನೇರವಾಗಿ ಅಪೇಕ್ಷಿಸುತ್ತಿರಲಿಲ್ಲ. ಬ್ರಿಟಿಷ್ ದಕ್ಷಿಣ ಆಫ್ರಿಕದಲ್ಲಿ ಸ್ವಂತ ಸಾಗುವಳಿಗೆ ಭೂಮಿ ಇಲ್ಲದ ಸ್ಥಳೀಯರನ್ನು ಐರೋಪ್ಯರ ಒಡೆತನದಲ್ಲಿದ್ದ ಗಣಿಗಳಲ್ಲಿ ಕಾಫಿ, ಟೀ ತೋಟಗಳಲ್ಲಿ ಕೆಲಸಗಾರರಾಗುವಂತೆ ಒತ್ತಾಯಪಡಿಸಲಾಗುತ್ತಿತ್ತು. ಅಧಿಕವಾದ ತೆರಿಗೆಗಳನ್ನು ಹೇರಿ ಜನ ದುಡಿಮೆಯಾಳುಗಳಾಗುವಂತೆ ಪರೋಕ್ಷವಾಗಿ ಬಲಾತ್ಕರಿಸುತ್ತಿದ್ದರು. ತಮ್ಮ ಉತ್ಪನ್ನಗಳನ್ನು ಸರಕಾರ ನಿಯಮಿಸಿದ ಮಾರುಕಟ್ಟೆಯ ದರಗಳಿಗಿಂತ ಕಡಮೆ ಬೆಲೆಗೆ ಮಾರುವುದರ ಮೂಲಕ ಫ್ರೆಂಚ್ ಕಾಂಗೋದ ನಿವಾಸಿಗಳು ತೆರಿಗೆಯನ್ನು ಸಲ್ಲಿಸಬೇಕಾಗುತ್ತಿತ್ತು. ಜೀತದಾಳುಗಳಾಗುವುದಕ್ಕಿಂತ ಇಂಥ ದುಬಾರಿ ತೆರಿಗೆಗಳನ್ನು ಕೊಡುವುದಕ್ಕೇ ಸಮ್ಮತಿಸುತ್ತಿದ್ದರು. ನಿರುದ್ಯೋಗಿಗಳು ಕಾರಖಾನೆಗಳಲ್ಲಿ ದುಡಿಯಬೇಕೆಂಬ ಕಾನೂನಿನ ಮೂಲಕ ಜೀತ ದುಡಿಮೆ ಪಡೆಯುವ ಪ್ರಯತ್ನಗಳು ಕೂಡ ನಡೆದುವು. ಸ್ಥಳೀಯ ಪ್ರಜೆಗಳು ದುಡಿಯುವುದು ಅವರ ಕರ್ತವ್ಯ ಎಂದು ಸಾರಲಾಗುತ್ತಿತ್ತು. ಕೆಲಸ ಮಾಡುವ ರೀತಿ, ದೇಶದ ಸಂಪನ್ಮೂಲಗಳನ್ನು ಬಳಸುವ ವಿಧಾನ, ಹೊರಗಿನ ಸಮಾಜದೊಡನೆ ಹೊಂದಿಕೊಳ್ಳುವ ಬಗೆ ಇವನ್ನೆಲ್ಲಾ ಅರಿಯಲು ಸ್ಥಳೀಯರು ಜೀತದಾಳುಗಳಾಗಿ ದುಡಿಯಬೇಕು ಎಂದು ಉಪದೇಶ ಮಾಡಿ ಜನರನ್ನು ಜೀತಕ್ಕೆ ಒಪ್ಪಿಸಲು ವಸಾಹತುಗಳಲ್ಲಿ ಆಡಳಿತಗಾರರು ಪ್ರಯತ್ನಿಸುತ್ತಿದ್ದರು.

ಈಗಲೂ ಶ್ರಮಶಿಬಿರಗಳಲ್ಲಿ, ಸೈನ್ಯಗಳಲ್ಲಿ ಬಲವಂತದ ದುಡಿಮೆ ಅನೇಕ ದೇಶಗಳಲ್ಲಿ ಜಾರಿಯಲ್ಲಿದೆ. ಸೆರೆಮನೆಗಳಲ್ಲಿ ಸೈನ್ಯದ ಕಾರ್ಯಾಗಾರಗಳಲ್ಲಿ ಬಲವಂತದ ದುಡಿಮೆಯನ್ನು ಬಳಸುವುದುಂಟು.

ಭಾರತದಲ್ಲಿ ಸಂವಿಧಾನದ ೨೩ನೆಯ ವಿಧಿಯ ಪ್ರಕಾರ ಜೀತ ನಿಷೇಧಿಸಲ್ಪಟ್ಟಿದೆ. ಆದರೂ ಕೆಲವು ರಾಜ್ಯಗಳಲ್ಲಿ ಜೀತಪದ್ಧತಿ ಅಕ್ರಮ ರೂಪದಲ್ಲಿ ಉಳಿದಿದೆ.

ಮದುವೆ ಮುಂತಾದ ಸಂದರ್ಭಗಳಲ್ಲಿ ಸಂಭ್ರಮಕ್ಕಾಗಿ ನಿಮ್ನ ವರ್ಗದವರು ಮತ್ತು ಆದಿವಾಸಿಗಳು ವಿಪರೀತ ವೆಚ್ಚ ಮಾಡುತ್ತಾರೆ. ಲೇವಾದೇವಿಗಾರರಿಂದ ಈ ಉದ್ದೇಶಗಳಿಗಾಗಿ ಹಣ ಸಾಲ ಪಡೆದು ಜೀತಕ್ಕೆ ಒಳಪಡುತ್ತಾರೆ. ಅನುತ್ಪಾದಿತ ಉದ್ದೇಶಗಳಿಗೂ ಇವರಿಗೆ ಸಾಲಗಳನ್ನು ಒದಗಿಸಿ ಲೇವಾದೇವಿಗಾರರ ಹಿಡಿತದಿಂದ ಪಾರುಮಾಡಬೇಕೆಂಬ ಸಲಹೆ ಕೆಲವು ರಾಜ್ಯಸರಕಾರಗಳ ಪರಿಶೀಲನೆಯಲ್ಲಿದೆ. ವಯಸ್ಕರ ಶಿಕ್ಷಣ ಯೋಜನೆಯನ್ನು ಆದಿವಾಸಿಗಳಿಗೂ ವಿಸ್ತರಿಸಿದರೆ ಹಿಂದೆ ಹೇಳಿದಂತೆ ಜೀತಪ್ರಾಪ್ತಿ ತಪ್ಪಬಹುದು ಎಂಬ ಅಭಿಪ್ರಾಯವೂ ಇದೆ.

## ಜೀವನ ಮಟ್ಟ

"ಮನೆಗೆ ಒಂದು ರೇಡಿಯೊ ತರಬೇಕು."

"ಸ್ಕೂಟರ್ ಇಲ್ಲದೆ ಇಷ್ಟು ದೊಡ್ಡ ಊರಿನಲ್ಲಿ ಓಡಾಟ ಕಷ್ಟ. ಕೊಂಡುಕೊಳ್ಳಬೇಕು."

ಇಂಥ ಮಾತುಗಳನ್ನು ಮತ್ತೆ ಮತ್ತೆ ಕೇಳುತ್ತಿರುತ್ತೇವೆ.

ಜೀವನದ ಅಗತ್ಯಗಳು ದಿನೇ ದಿನೇ ಏರುವುದನ್ನು ನಾವು ಗಮನಿಸಬಹುದು. ಹತ್ತು ವರ್ಷಗಳ ಹಿಂದೆ ಈಗ ಬಳಸುತ್ತಿರುವಷ್ಟು ವಸ್ತುಗಳನ್ನು ಜನ ಬಳಸುತ್ತಿರಲಿಲ್ಲ. ಈಗ ಲಭ್ಯವಾಗಿರುವ ಅನೇಕ ಸೇವಾ ಸೌಲಭ್ಯಗಳೂ ಹಿಂದೆ ಇರಲಿಲ್ಲ. ಮೂವತ್ತು ವರ್ಷಗಳ ಹಿಂದೆ ರೇಡಿಯೊ ಇರುತ್ತಿದ್ದ ಮನೆಗಳೇ ಕಡಮೆ. ಇಪ್ಪತ್ತು ವರ್ಷಗಳ ಹಿಂದೆ ಈಗಿನಂತೆ ಟ್ರಾನ್ಸಿಸ್ಟರ್ ಬಳಕೆಯಲ್ಲಿರಲಿಲ್ಲ. ಟೆರಿಲಿನ್, ನೈಲಾನ್, ಸ್ಕೂಟರ್ ಇರಲಿಲ್ಲ. ಎಲ್ಲ ಇತ್ತೀಚೆಗೆ ಬಂದುವು. ಮೊದಲು ಹೆಚ್ಚು ಮಕ್ಕಳು ಶಾಲೆಗೆ ಹೋಗುತ್ತಿರಲಿಲ್ಲ. ಈಗ ಹೋಗುತ್ತಾರೆ. ಎಷ್ಟೋ ಹಳ್ಳಿಗಳಿಗೆ ಹೊಸದಾಗಿ ಶಾಲೆಗಳು ಬಂದಿವೆ. ಆದ್ದರಿಂದ, ಜೀವನ ಮಟ್ಟ ಸುಧಾರಿಸಿದೆ ಎಂದು ಈಗ ಹೇಳುತ್ತೇವೆ. ಒಬ್ಬ ವ್ಯಕ್ತಿ ಬಳಸುವ ವಸ್ತುಗಳೂ ಆತನಿಗಿರುವ ಸೌಕರ್ಯಗಳೂ ಆತನ ಜೀವನ ಮಟ್ಟವನ್ನು ತೋರಿಸುತ್ತವೆ. ಒಂದು ದೇಶದ ಪ್ರಜೆಯ ಜೀವನ ಮಟ್ಟ ಆತನ ಸಂಪಾದನೆಯನ್ನೂ ಆ ದೇಶದಲ್ಲಿ ದೊರೆಯುವ ವಸ್ತುಗಳನ್ನೂ ಸೇವಾ ಸೌಲಭ್ಯಗಳನ್ನೂ ಅವಲಂಬಿಸಿದೆ.

ಗಣಿಗಳು, ಅರಣ್ಯದಲ್ಲಿ ಬೆಳೆಯುವ ಬಗೆಬಗೆಯ ಗಿಡಮರಗಳು, ದೇಶದಲ್ಲಿ ಹರಿಯುವ ನದಿಗಳು ಮುಂತಾದ ನೈಸರ್ಗಿಕ ಸಂಪನ್ಮೂಲಗಳು ಉತ್ಪಾದನೆಗೆ ಕಾರಣವಾಗುತ್ತವೆ. ಪ್ರತಿ ದೇಶದಲ್ಲಿಯೂ ಎಲ್ಲ ಸಂಪನ್ಮೂಲಗಳೂ ಲಭ್ಯವಿರುವುದಿಲ್ಲ. ಇಂಗ್ಲೆಂಡಿನಲ್ಲಿ ವ್ಯವಸಾಯಕ್ಕೆ ಯೋಗ್ಯವಾದ ಭೂಮಿ ಕಡಮೆ. ಆದರೆ ಕೈಗಾರಿಕಾ ವಸ್ತುಗಳನ್ನು ಹೆಚ್ಚು ರಫ್ತು ಮಾಡಿ ಆ ದೇಶ ತನ್ನ ಸಂಪತ್ತನ್ನು ಬೆಳೆಸಿಕೊಳ್ಳುತ್ತದೆ. ತನಗೆ ಅಗತ್ಯವಾದ ಆಹಾರವನ್ನು ಇತರ ದೇಶಗಳಿಂದ ಕೊಳ್ಳುತ್ತದೆ. ಹೀಗೆ ದೇಶದೊಳಗೆ ಉತ್ಪನ್ನವಾಗುವ ವಸ್ತು ಮತ್ತು ಸೇವಾ ಸೌಲಭ್ಯಗಳೇ ಅಲ್ಲದೆ, ವ್ಯಾಪಾರವೂ ಜೀವನ ಮಟ್ಟವನ್ನು ನಿರ್ಧರಿಸುವುದರಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಜನಸಂಖ್ಯೆ ಸಹ ಜೀವನ ಮಟ್ಟದ ಮೇಲೆ ತೀವ್ರವಾದ ಪರಿಣಾಮ ಬೀರುತ್ತದೆ. ದೇಶದಲ್ಲಿ ಉತ್ಪಾದನೆ ಹೆಚ್ಚಿದಂತೆಲ್ಲಾ ವ್ಯಾಪಾರ ವೃದ್ಧಿಯಾದಂತೆಲ್ಲಾ ಜನಸಂಖ್ಯೆ ಕೂಡಾ ಏರುತ್ತಿದ್ದರೆ, ಆಗ ವಸ್ತು ಮತ್ತು ಸೇವಾ ಸೌಲಭ್ಯಗಳನ್ನು ಜನ ಹೆಚ್ಚು ಬಳಸಲು ಸಾಧ್ಯವಾಗುವುದಿಲ್ಲ. ಅಂದರೆ ಜೀವನ ಮಟ್ಟ ಏರುವುದಿಲ್ಲ. ದೇಶದಲ್ಲಿ ಕಾರ್ಖಾನೆಗಳು ಬೆಳೆದಿದ್ದಾಗಲೂ ಹೆಚ್ಚು ಇದ್ದರೆ ಉತ್ಪಾದನೆ ಸಾಲದು. ನೈಸರ್ಗಿಕ

ಸಂಪನ್ಮೂಲಗಳನ್ನು ಹೆಚ್ಚು ಹೆಚ್ಚಾಗಿ ಬಳಸಿಕೊಳ್ಳುವ ಸಾಮರ್ಥ್ಯ ಒದಗಿಬರುತ್ತದೆ. ಜೀವನ ಮಟ್ಟ ಏರುತ್ತದೆ. ಜನಸಂಖ್ಯೆ ವಿಪರೀತ ಬೆಳೆದಲ್ಲಿ ನಿರುದ್ಯೋಗಿಗಳು ಹಾಗೂ ವೃದ್ಧರ ಸಂಖ್ಯೆ ಹೆಚ್ಚುತ್ತದೆ. ಇವರು ಉತ್ಪಾದನೆಗೆ ನೆರವಾಗುವುದಿಲ್ಲ. ಆದುದರಿಂದ ಜೀವನ ಮಟ್ಟ ಉತ್ತಮ ಗೊಳ್ಳುವುದಿಲ್ಲ.

ದೇಶದ ಜನರ ಮನೋಧರ್ಮ ಕೂಡಾ ಜೀವನ ಮಟ್ಟವನ್ನು ನಿರ್ಧರಿಸು ತ್ತದೆ. ಪ್ರಜೆಗಳು ಕಷ್ಟಪಟ್ಟು ಕೆಲಸಮಾಡುವ ಸ್ವಭಾವದವರಾದರೆ ಮತ್ತು ಅವರಿಗೆ ದೇಶವನ್ನು ಮುಂದಕ್ಕೆ ತರಬೇಕೆಂಬ ಅಭಿಮಾನವಿದ್ದರೆ ರಾಷ್ಟ್ರ ಪ್ರಗತಿ ಹೊಂದಬಹುದು. ದೇಶದ ರಾಜಕೀಯ ಪರಿಸ್ಥಿತಿಗಳು ಕೂಡ ಜೀವನ ಮಟ್ಟವನ್ನು ನಿರ್ಣಯಿಸುತ್ತವೆ. ಭಾರತದಲ್ಲಿ ವಿಪುಲವಾದ ನೈಸರ್ಗಿಕ ಸಂಪತ್ತು ಇದ್ದರೂ ಅದರ ಸದುಪಯೋಗವಾಗಿಲ್ಲ. ಏಕೆಂದರೆ ಭಾರತ ನೂರಾರು ವರ್ಷಗಳ ರಾಜಕೀಯ ದಾಸ್ಯವನ್ನು ಅನುಭವಿಸಿತು. ಆಗ ಅದು ಬಡತನದಲ್ಲಿಯೇ ಉಳಿದಿತ್ತು. ಸ್ವಾತಂತ್ರ್ಯ ಲಭಿಸಿದ ಮೇಲೆಯೇ ಯೋಜನೆಗಳನ್ನು ರೂಪಿಸಿಕೊಂಡು ಅಭಿವೃದ್ಧಿ ಕಾರ್ಯಗಳಲ್ಲಿ ತೊಡಗಲು ಸಾಧ್ಯವಾಯಿತು.

ದೇಶದ ಪ್ರಜೆಯು ಸರಾಸರಿ ಜೀವನ ಮಟ್ಟವನ್ನು ತಿಳಿಯಲು ದೇಶದಲ್ಲಿ ಬಳಸಲಾಗುವ ಎಲ್ಲ ವಸ್ತು ಮತ್ತು ಸೇವಾ ಸೌಲಭ್ಯಗಳನ್ನು ಅರಿತುಕೊಳ್ಳ ಬೇಕು. ಅದರ ಬೆಲೆಯನ್ನು ಹಣದ ರೂಪದಲ್ಲಿ ಲೆಕ್ಕಹಾಕಬೇಕು. ಅನಂತರ ಆ ಮೊತ್ತವನ್ನು ದೇಶದ ಜನಸಂಖ್ಯೆಯಿಂದ ಭಾಗಿಸಬೇಕು. ಆಗ ವ್ಯಕ್ತಿಯ ಸರಾಸರಿ ಜೀವನ ಮಟ್ಟದ ಸೂಚ್ಯಂಕ ದೊರೆಯುತ್ತದೆ.

ಮನುಷ್ಯನ ಆರ್ಥಿಕ ಪರಿಸ್ಥಿತಿ ಸುಧಾರಿಸಿದಂತೆ, ಎಂದರೆ ಅವನ ಆದಾಯ ಹೆಚ್ಚಿದಂತೆ ಹೆಚ್ಚು ಹೆಚ್ಚು ಅಗತ್ಯಗಳನ್ನು ಪೂರೈಸಿಕೊಳ್ಳಲು ಸಾಧ್ಯವಾಗುತ್ತದೆ. ಆತನ ಜೀವನ ಮಟ್ಟ ಉತ್ತಮವಾಗುತ್ತದೆ. ಸಂಪದ್ಭರಿತ ರಾಷ್ಟ್ರಗಳಲ್ಲಿ ಹಿಂದುಳಿದ ರಾಷ್ಟ್ರಗಳಿಗಿಂತ ಜೀವನ ಮಟ್ಟ ಉತ್ತಮ. ಅಮೆರಿಕದಲ್ಲಿ ಪ್ರತಿ ಐದು ಮಂದಿಯಲ್ಲಿ ಇಬ್ಬರು ಮೋಟರ್ ವಾಹನವನ್ನು ಹೊಂದಿರುತ್ತಾರೆ. ಕೆನಡದಲ್ಲಿ ಪ್ರತಿ ಹತ್ತು ಮಂದಿಯಲ್ಲಿ ಮೂವರಿಗೆ ಸ್ವಂತ ಮೋಟರ್ ವಾಹನಗಳಿವೆ.

ಹಿಂದುಳಿದ ರಾಷ್ಟ್ರಗಳ ಜೀವನ ಮಟ್ಟವನ್ನು ಉತ್ತಮಗೊಳಿಸುವ ಪ್ರಯತ್ನಗಳೂ ನಡೆದಿವೆ. ವಿಶ್ವಸಂಸ್ಥೆಯ ತಾಂತ್ರಿಕ ನೆರವು ಯೋಜನೆ, ಕಾಮನ್‌ವೆಲ್ತ್‌ನ ಕೊಲಂಬೊ ಯೋಜನೆ–ಇವು ಹಿಂದುಳಿದ ರಾಷ್ಟ್ರಗಳು ಅಭಿವೃದ್ಧಿಹೊಂದಿ ಉತ್ತಮ ಜೀವನ ಮಟ್ಟವನ್ನು ಸಾಧಿಸುವಂತೆ ಶ್ರಮಿಸು ತ್ತಿವೆ. ದೇಶ ಸಂಪದ್ಯುಕ್ತವಾದರೆ ಜನರ ಆದಾಯ ಕೂಡ ಹೆಚ್ಚುತ್ತದೆ.

ಆದಾಯ ಏರಿದಂತೆ ಜನ ಉಳಿತಾಯ ಮಾಡಿ ಹಣವನ್ನು ಮತ್ತೆ ಮತ್ತೆ ಉತ್ಪಾದನೆಯಲ್ಲಿ ತೊಡಗಿಸಿದರೆ ದೇಶ ಮತ್ತಷ್ಟು ಶ್ರೀಮಂತವಾಗುತ್ತದೆ. ಜೊತೆಗೆ ಜೀವನ ಮಟ್ಟ ಏರುತ್ತದೆ.

ಯುದ್ಧ, ಭೂಕಂಪ, ಅತಿವೃಷ್ಟಿ, ಅನಾವೃಷ್ಟಿ–ಇಂಥ ಕೆಲವು ಅನಾಹುತ ಗಳು ಜೀವನ ಮಟ್ಟ ಕುಸಿಯುವಂತೆ ಮಾಡುತ್ತವೆ.

ನೋಡಿ : ಜೀವನ ವೆಚ್ಚ

## ಜೀವನ ವೆಚ್ಚ

ಬೆಂಗಳೂರು ಅಥವಾ ಮುಂಬಯಿಯಲ್ಲಿ ಜೀವನ ನಡೆಸುವ ಮಾತು ಬಂದಾಗ ಅಲ್ಲಿ ಜೀವನ ವೆಚ್ಚ ಬಹಳ ಹೆಚ್ಚು ಎನ್ನುವ ಉದ್ಗಾರ ಕೇಳುತ್ತೇವೆ. ಧಾರಣೆಗಳು ಮತ್ತೆ ಮತ್ತೆ ಏರುತ್ತವೆ ಎನ್ನುತ್ತೇವೆ. ಆದ್ದರಿಂದ ಹೆಚ್ಚಿಗೆ ಸಂಪಾದನೆ ಬರಬೇಕೆಂದು ಲೆಕ್ಕಹಾಕುತ್ತೇವೆ.

ಧಾರಣೆಗಳಲ್ಲಿ ಆಗುವ ಏರಿಕೆ ಪ್ರತಿಯೊಬ್ಬರ ಮೇಲೂ ಪ್ರಭಾವ ಬೀರುತ್ತದೆ. ಧಾರಣೆಗಳು ಬದಲಾಗುವುದರಿಂದ ನಿನ್ನೆ ಇದ್ದ ಪರಿಸ್ಥಿತಿ ಇಂದು ಇರುವುದಿಲ್ಲ. ಇಂದಿನ ಪರಿಸ್ಥಿತಿ ನಾಳೆ ಇರುವುದಿಲ್ಲ. ಆದ್ದರಿಂದ ಜೀವನ ಮಟ್ಟವೂ ಬದಲಾಗುತ್ತ ಹೋಗುತ್ತದೆ. ಧಾರಣೆಗಳ ಏರಿಕೆಗೆ ಅನುಗುಣವಾಗಿ ಆದಾಯ ಹೆಚ್ಚಿದರೆ, ಅಂಥವರು ಜೀವನ ಮಟ್ಟ ಉಳಿಸಿ ಕೊಳ್ಳುತ್ತಾರೆ. ಪ್ರತಿ ತಿಂಗಳು ಒಂದೇ ಸಂಬಳ ಪಡೆಯುವವರು, ಧಾರಣೆಗಳು ಯಾವ ಪ್ರಮಾಣದಲ್ಲಿ ಏರುತ್ತವೋ ಅದೇ ಪ್ರಮಾಣದಲ್ಲಿ ಸಂಪಾದನೆಯ ಏರಿಕೆಯನ್ನು ಕಾಣದವರು ಕಡಮೆ ಮಟ್ಟದ ಜೀವನವನ್ನು ನಡೆಸುತ್ತಾರೆ. ವಾಸ್ತವವಾಗಿ ಧಾರಣೆಗಳು ಏರುತ್ತಲೇ ಇರುವುದರಿಂದ ಆ ಪ್ರಮಾಣದಲ್ಲಿ ತಿಂಗಳ ವೇತನ, ಭತ್ಯಗಳನ್ನು ಏರಿಸಬೇಕೆಂಬ ಬೇಡಿಕೆ ಸದಾ ಇರುತ್ತದೆ.

ಜನರ ಆದಾಯಕ್ಕೂ ಅವರ ಖರ್ಚಿಗೂ ಇರುವ ಸಂಬಂಧವನ್ನು ಜೀವನ ವೆಚ್ಚ ಎಂದು ಹೇಳಬಹುದು. ಯುದ್ಧಕಾಲದಲ್ಲಿ, ಅತಿವೃಷ್ಟಿ ಮತ್ತು ಕ್ಷಾಮ ಮುಂತಾದ ಅಭಾವ ಕಾಲದಲ್ಲಿ, ಜೀವನ ವೆಚ್ಚ ತೀವ್ರವಾಗಿ ಬದಲಾಗುತ್ತದೆ. ಸಿಗುತ್ತಿದ್ದ ಕೆಲವು ವಸ್ತುಗಳ ಪೂರೈಕೆ ಫಟ್ಟನೆ ನಿಂತು ಹೋಗುವುದು ಅಥವಾ ಕಡಮೆಯಾಗುವುದು ಇದಕ್ಕೆ ಕಾರಣ. ಆಗ ಧಾರಣೆಗಳ ನಿಯಂತ್ರಣ, ಆಹಾರಧಾನ್ಯಗಳ ಪಡಿತರ ವ್ಯವಸ್ಥೆ ಮುಂತಾದ ಕಾರ್ಯಕ್ರಮಗಳಿಂದ ಜೀವನ ವೆಚ್ಚ ತೀವ್ರವಾಗಿ ವ್ಯತ್ಯಾಸವಾಗುವುದನ್ನು ಸ್ವಲ್ಪಮಟ್ಟಿಗೆ ಹತೋಟಿಗೆ ತರಬಹುದು.

ಈ ಜೀವನ ವೆಚ್ಚ ನಿಗದಿಯಾಗಿ ಇರುವಂಥದಲ್ಲ. ಬೇರೆ ಬೇರೆ ವಾತಾವರಣದಲ್ಲಿ ಜೀವಿಸುವ, ಬೇರೆ ಬೇರೆ ಪರಿಸ್ಥಿತಿಗಳಲ್ಲಿ ಜೀವನ ನಡೆಸುವ, ಜನರ ಜೀವನ ವೆಚ್ಚಗಳು ಬೇರೆ ಬೇರೆಯಾಗಿರುತ್ತವೆ. ಚಳಿ ಪ್ರದೇಶದಲ್ಲಿರುವವರ ಉಡುಪಿನ ಅಗತ್ಯ, ಉಷ್ಣ ಪ್ರದೇಶದಲ್ಲಿರುವವರ ಉಡುಪಿನ ಅಗತ್ಯ ಬೇರೆ ಬೇರೆಯಾಗಿರುತ್ತವೆ. ಜನರ ಆದಾಯವೂ ಅವರು ಮಾಡುವ ವೆಚ್ಚಗಳೂ ಬದಲಾಗುತ್ತ ಇರುವುದರಿಂದ ಅವೆರಡರ ನಡುವಣ ಸಂಬಂಧ ದಿನದಿನಕ್ಕೂ ವ್ಯತ್ಯಾಸವಾಗುತ್ತಾ ಇರುತ್ತದೆ. ಒಂದೊಂದು ಪ್ರದೇಶದ ಜನರ ಜೀವನ ವೆಚ್ಚವೂ [illegible] ರೀತಿ ಬದಲಾಗುತ್ತದೆ. ಜೀವನ ವೆಚ್ಚ ಬದಲಾದಂತೆ [illegible] ಕೆಲವು ವರ್ಗಗಳಿಗೆ ಅನುಕೂಲವಾಗುತ್ತದೆ. ಮತ್ತೆ ಕೆಲವು ವರ್ಗಗಳಿಗೆ ಅನನುಕೂಲ ವಾಗುತ್ತದೆ. ಈ ಕಾರಣದಿಂದಲೂ ಜೀವನ ವೆಚ್ಚ [illegible] ವ್ಯತ್ಯಾಸ ವಾಗುವುದನ್ನು ತಡೆಗಟ್ಟಬೇಕು ಎನ್ನುತ್ತಾರೆ.

ಚಿಲ್ಲರೆ ವ್ಯಾಪಾರಸ್ಥರಿಗೆ ಪದಾರ್ಥಗಳ ಧಾರಣೆಗಳ [illegible] ರಿಂದ ಗಣನೀಯವಾದ ಲಾಭವಾಗಲೀ ನಷ್ಟವಾಗಲೀ ಆಗುವುದಿಲ್ಲ. ಆದರೆ ಸಗಟು ವ್ಯಾಪಾರಮಾಡುವ ದಾಸ್ತಾನುಗಾರರಿಗೆ ವಿಪರೀತ ಲಾಭದ ಅಥವಾ ವಿಪರೀತ ನಷ್ಟದ ಸಂಭವಗಳು ಹೆಚ್ಚು. ಧಾರಣೆಗಳು [illegible] ಹಣವನ್ನು ವಹಿವಾಟುಗಳಲ್ಲಿ ತೊಡಗಿಸಬೇಕೆನ್ನುವ [illegible] ಅವಕಾಶಗಳು ವಿಪುಲವಾಗಿರುತ್ತವೆ. ಧಾರಣೆಗಳು ತೀವ್ರವಾಗಿ ಏರಿಳಿತ ವಾಗುತ್ತಿದ್ದರೆ, ತೊಡಗಿಸಿದ ಹಣಕ್ಕೆ ಭದ್ರತೆ ಇರುವುದಿಲ್ಲ.

ಧಾರಣೆಗಳ ಏರಿಳಿತ ಇತರ ವರ್ಗಗಳಂತೆಯೇ ಶ್ರಮಜೀವಿಗಳ ಮೇಲೂ ಪರಿಣಾಮ ಬೀರುತ್ತದೆ. ಬಹಳ ಬೇಡಿಕೆಯನ್ನು ಗಳಿಸಿ ಒಳ್ಳೆಯ ಧಾರಣೆಯನ್ನು ಪಡೆಯುವ ವಸ್ತುಗಳನ್ನು ತಯಾರುಮಾಡುವ ಉದ್ಯಮ

ಗಳ ಕಾರ್ಮಿಕರಿಗೆ ವೇತನ ಭತ್ಯಗಳು ಹೆಚ್ಚಿಗೆ ಸಿಗುವ ಸಂಭವ ಇರುತ್ತದೆ. ಇತರರ ಆದಾಯ ಹೆಚ್ಚುವ ಸಾಧ್ಯತೆ ಇರುವುದಿಲ್ಲ.

ಧಾರಣೆಗಳ ಸೂಚ್ಯಂಕಗಳು ಏರಿಳಿತಗಳನ್ನು ದಾಖಲೆ ಮಾಡುತ್ತವೆ. ಜೀವನ ವೆಚ್ಚವನ್ನು ಲೆಕ್ಕಹಾಕಲು ಯಾವುದಾದರೂ ಒಂದು ವರ್ಗವನ್ನು ಆಯ್ದುಕೊಳ್ಳುತ್ತಾರೆ. ಉದಾಹರಣೆಗೆ ಶ್ರಮಜೀವಿ ವರ್ಗವನ್ನು ಆಯ್ದುಕೊಂಡರೆ ಆ ವರ್ಗದ ಕೆಲವು ಸಂಸಾರಗಳನ್ನು ಸಂದರ್ಶಿಸುತ್ತಾರೆ. ಆ ಸಂಸಾರಗಳು ಸಾಧಾರಣವಾಗಿ ಯಾವ ಯಾವ ದಿನಬಳಕೆ ಪದಾರ್ಥಗಳಿಗಾಗಿ ಮತ್ತು ಇತರ ಪದಾರ್ಥಗಳಿಗಾಗಿ ಎಷ್ಟೆಷ್ಟು ವೆಚ್ಚ ಮಾಡುತ್ತವೆ ಎಂಬುದನ್ನು ಗುರುತು ಮಾಡಿಕೊಳ್ಳುತ್ತಾರೆ. ಆ ಮಾಹಿತಿಯು ಲೆಕ್ಕಹಾಕಿದ ದಿನಕ್ಕೆ ಮಾತ್ರ ಸಂಬಂಧಿಸಿದ್ದು. ಪ್ರತಿದಿನ ಒಂದು ಸಂಸಾರದಲ್ಲಿ ಒಂದು ಕಿಲೊಗ್ರಾಮ್ ಅಕ್ಕಿಯನ್ನು ಖರೀದಿ ಮಾಡಬಹುದು. ಆದರೆ ಪ್ರತಿ ದಿನವೂ ಅವರು ಸೀಮೆ ಎಣ್ಣೆಯನ್ನು ಕೊಳ್ಳುವುದಿಲ್ಲ. ತಿಂಗಳಿಗೊಮ್ಮೆ ಮಾತ್ರ ಒಂದು ಡಬ್ಬ ಸೀಮೆ ಎಣ್ಣೆಯನ್ನು ಕೊಳ್ಳಬಹುದು. ಆದ್ದರಿಂದ ಒಂದು ತಿಂಗಳಲ್ಲಿ ಕೊಳ್ಳುವ ಅಕ್ಕಿ, ಸೀಮೆ ಎಣ್ಣೆ–ಇತ್ಯಾದಿಗಳ ಲೆಕ್ಕ ಹಾಕುತ್ತಾರೆ. ಒಂದು ದಿನದ ಸರಾಸರಿ ವೆಚ್ಚ ಎಷ್ಟೆಂದು ಕಂಡುಹಿಡಿಯುತ್ತಾರೆ. ಅನಂತರ ಪದಾರ್ಥದ ಬೆಲೆಗಳು ದಿನೇ ದಿನೇ ಹೇಗೆ ಬದಲಾಗುತ್ತವೆ, ಅವು ಜೀವನ ವೆಚ್ಚದ ಮೇಲೆ ಹೇಗೆ ಪ್ರಭಾವ ಬೀರುತ್ತವೆ ಎಂಬುದನ್ನು ಕಂಡುಹಿಡಿಯುತ್ತಾರೆ. ಮಾಹಿತಿ ಕಲೆಹಾಕಿದ ದಿನದ ಮೂಲ ಸೂಚ್ಯಂಕ 100 ಎಂದು ಇಟ್ಟುಕೊಳ್ಳುತ್ತಾರೆ. ಈ ಮೂಲ ಸೂಚ್ಯಂಕ, ಧಾರಣೆಗಳು ಬದಲಾದಂತೆ ತಾನೂ ಬದಲಾಗಿ ಜೀವನ ವೆಚ್ಚ ಹೇಗೆ ವ್ಯತ್ಯಾಸವಾಗುತ್ತದೆ ಎಂಬುದನ್ನು ಸೂಚಿಸುತ್ತದೆ. ಯಾವುದೋ ಒಂದು ನಿಶ್ಚಿತವಾದ ದಿನ ಒಂದು ಕಿಲೊಗ್ರಾಮ್ ಅಕ್ಕಿಯ ಬೆಲೆ ರೂ. 1–60 ಇದ್ದು ಮಾರನೆಯ ದಿನ ರೂ. 1–80ಕ್ಕೆ ಏರಬಹುದು. ಆಗ ಮೂಲ ಸೂಚ್ಯಂಕ 100 ಇದ್ದದ್ದು ಬದಲಾಗುತ್ತದೆ. ಬದಲಾದ ಸೂಚ್ಯಂಕ $100 \times \frac{180}{160} = 112.5$. ಇದು ಅಕ್ಕಿಗೆ ಸಂಬಂಧಿಸಿದಂತೆ ಮಾತ್ರ ಮಾಡಿದ ಲೆಕ್ಕ. ಹೀಗೆ ಎಲ್ಲ ಅಗತ್ಯವಸ್ತುಗಳಿಗೂ ಸಂಬಂಧಿಸಿದ ಸೂಚ್ಯಂಕಗಳನ್ನು ಲೆಕ್ಕ ಹಾಕಬಹುದು. ಕೇವಲ ವಸ್ತುಗಳನ್ನೇ ಅಲ್ಲದೇ ರೈಲು, ಬಸ್ಸು, ಅಂಚೆ ಮುಂತಾದ ಕೆಲವೊಂದು ಸೇವಾಸೌಲಭ್ಯಗಳನ್ನು ಪಡೆಯಲೂ ಜನ ವೆಚ್ಚ ಮಾಡುತ್ತಾರೆ. ಅದನ್ನೂ ಗಣನೆಗೆ ತೆಗೆದುಕೊಳ್ಳಬೇಕು.

ವಿವಿಧ ಧಾರಣೆಗಳಲ್ಲಿ ಆಗುವ ಬದಲಾವಣೆಗಳನ್ನು ಗುರುತಿಸಲು ಧಾರಣೆ ಸೂಚ್ಯಂಕಗಳನ್ನು ವಿಂಗಡಿಸುವುದು ಈ ರೀತಿ – ಮಾರುಕಟ್ಟೆ ಧಾರಣೆ ಸೂಚ್ಯಂಕ, ಸಗಟುಧಾರಣೆ ಸೂಚ್ಯಂಕ, ಬಳಕೆದಾರರ ಸೂಚ್ಯಂಕ.

ಮಾರುಕಟ್ಟೆ ಸೂಚ್ಯಂಕವು ಆಹಾರಪದಾರ್ಥಗಳು, ಲೋಹಗಳು, ಕೈಗಾರಿಕಾ ಕಚ್ಚಾವಸ್ತುಗಳು, ಎಣ್ಣೆ, ವನಸ್ಪತಿ ಮುಂತಾದ ಕೊಬ್ಬುಗಳು, ನೂಲು, ಬಟ್ಟೆ ಮತ್ತಿತರ ವಸ್ತುಗಳ ಧಾರಣೆಗಳು ಹೇಗೆ ಬದಲಾಗುತ್ತವೆ ಎಂಬುದನ್ನು ತಿಳಿಸುತ್ತದೆ. ಈ ವಸ್ತುಗಳ ಧಾರಣೆ ಸ್ವಲ್ಪ ಬದಲಾದರೂ ಸೂಚ್ಯಂಕ ತೀವ್ರವಾಗಿ ವ್ಯತ್ಯಾಸಗೊಳ್ಳುತ್ತದೆ. ಏಕೆಂದರೆ ಇವು ಮೂಲಭೂತ ವಸ್ತುಗಳಾಗಿದ್ದು ಇವುಗಳ ಧಾರಣೆ ವ್ಯತ್ಯಾಸವಾದರೆ ಇದರಿಂದ ತಯಾರಾದ ಸಿದ್ಧ ವಸ್ತುಗಳ ಧಾರಣೆಗಳೂ ಬದಲಾಗುತ್ತವೆ.

ಸಗಟುಧಾರಣೆ ಸೂಚ್ಯಂಕವು ಮಾರುಕಟ್ಟೆಯಲ್ಲಿ ಸಿಗುವ ಸಾವಿರಾರು ಬಗೆಯ ವಿವಿಧೋಪಯೋಗಿ ವಸ್ತುಗಳ ಧಾರಣೆಗಳಲ್ಲಿ ಆಗುವ ವ್ಯತ್ಯಾಸವನ್ನು ಸೂಚಿಸುತ್ತದೆ. ನಿತ್ಯಜೀವನದಲ್ಲಿ ನಮಗೆ ಹೆಚ್ಚಿಗೆ ಗಮನಕ್ಕೆ ಬರುವುದು ಈ ವಸ್ತುಗಳ ಧಾರಣೆಗಳಲ್ಲಿ ಆಗುವ ವ್ಯತ್ಯಾಸವೇ.

ಬಳಕೆದಾರರ ಸೂಚ್ಯಂಕವನ್ನು, ಬಹುಸಂಖ್ಯಾತ ಸಾಮಾನ್ಯ ಸಂಸಾರಗಳನ್ನು ಮುಖ್ಯವಾಗಿ ಪರಿಗಣಿಸಿ ಲೆಕ್ಕಹಾಕಲಾಗುವುದು. ಅವರು ಮಾಡುವ ವೆಚ್ಚಗಳ ಪೈಕಿ ಬಸ್ಸಿಗಾಗಿ ವೆಚ್ಚಮಾಡಿದ್ದು, ಮನೆಯ ಉಸ್ತುವಾರಿಗಾಗಿ ವೆಚ್ಚಮಾಡಿದ್ದು, ರೇಡಿಯೊ ಸಿನಿಮಾಗಳಿಗಾಗಿ ವೆಚ್ಚ ಮಾಡಿದ್ದು ಮುಂತಾದುವನ್ನೆಲ್ಲ ಸೇರಿಸಲಾಗುವುದು.

ಸಗಟುಧಾರಣೆ ಸೂಚ್ಯಂಕಕ್ಕೂ ಬಳಕೆದಾರರ ಸೂಚ್ಯಂಕಕ್ಕೂ ವ್ಯತ್ಯಾಸವಿರುತ್ತದೆ. ಕೊಂಡ ಅಥವಾ ಮಾರಿದ ವಸ್ತುಗಳನ್ನು ರವಾನೆ ಮಾಡಲು ಹಣ ಖರ್ಚಾಗಿರುತ್ತದೆ. ಅಲ್ಲದೆ ಬಳಕೆದಾರರ ಮತ್ತು ವ್ಯಾಪಾರವಿಧಾನಗಳ ಬಾಡಿಗೆ, ವಿಮೆ ಮುಂತಾದ ವೆಚ್ಚಗಳು ಮಧ್ಯೆ ಸೇರಿರುತ್ತವೆ. ಈ ಅಂಶಗಳಿಂದ ಎರಡು ಬಗೆಯ ಸೂಚ್ಯಂಕಗಳ ನಡುವೆ ವ್ಯತ್ಯಾಸವಾಗುತ್ತದೆ.

ಯಾವುದೇ ಬಗೆಯ ಸೂಚ್ಯಂಕದಲ್ಲಿ ವ್ಯತ್ಯಾಸ ಕಂಡುಬಂದರೂ ಯಾವುದೋ ಒಂದು ಪದಾರ್ಥ ಅಥವಾ ಸೇವಾ ಸೌಲಭ್ಯದ ಧಾರಣೆ ತೀವ್ರವಾಗಿ ಬದಲಾಗುತ್ತಿದೆ ಎಂದು ಅರ್ಥ. ಅದಕ್ಕೆ ಅನುಗುಣವಾಗಿ ಜೀವನ ಮಟ್ಟ ಬದಲಾಗುತ್ತಿದೆಯೆಂಬುದು ಆಗ ಸ್ಪಷ್ಟವಾಗುತ್ತದೆ.

ಧಾರಣೆಗಳ ಸರಾಸರಿ ಸೂಚ್ಯಂಕ ತೋರುವ ಬದಲಾವಣೆಗಳನ್ನು ನಕ್ಷೆಯಲ್ಲಿ ಗುರುತಿಸಲಾಗುತ್ತದೆ. ಸರಾಸರಿ ಆದಾಯವನ್ನು ಅದೇ ನಕ್ಷೆಯಲ್ಲಿ ಗುರುತಿಸುತ್ತಾರೆ. ಈ ಎರಡೂ ನಕ್ಷಾರೇಖೆಗಳ ಸಂಘಟಿತ ಪರಿಣಾಮ ಜೀವನ ವೆಚ್ಚವನ್ನು ತೋರಿಸುತ್ತದೆ.

ನೋಡಿ : ಜೀವನ ಮಟ್ಟ

## ಜೆರೂಸಲೆಂ

ಯೆಹೂದ್ಯರು, ಕ್ರೈಸ್ತರು, ಮುಸಲ್ಮಾನರು ಈ ಮೂರು ಧರ್ಮಗಳವರಿಗೂ ಪವಿತ್ರವಾದ ಸ್ಥಳ ಜೆರೂಸಲೆಂ. ಮೂರು ಸಾವಿರ ವರ್ಷಗಳಿಗೂ ಹಿಂದೆ ಸ್ಥಾಪಿಸಲ್ಪಟ್ಟ ಈ ನಗರ ಪ್ರಪಂಚದ ಅತ್ಯಂತ ಪುರಾತನ ಪವಿತ್ರ ನಗರಗಳಲ್ಲೊಂದು.

ಜ್ಯೂಡಿಯ ಬೆಟ್ಟಗಳ ಮೇಲಿರುವ ಜೆರೂಸಲೆಂ ಸಮುದ್ರದ ಮಟ್ಟದಿಂದ 763 ಮೀಟರು ಎತ್ತರದಲ್ಲಿದೆ. ಭೂಮಧ್ಯ ಸಮುದ್ರತೀರದ ಪೂರ್ವಕ್ಕೆ 40 ಕಿ. ಮೀ. ದೂರದಲ್ಲಿದೆ.

ಜೆರೂಸಲೆಂ ನಗರವನ್ನು ಎರಡು ದೇಶಗಳು ಹಂಚಿಕೊಂಡಿದ್ದವು. ಜೆರೂಸಲೆಂನ ಒಂದು ಭಾಗ ಇಸ್ರೇಲ್ ರಾಜ್ಯದಲ್ಲಿತ್ತು. ಇನ್ನೊಂದು ಭಾಗ ಜೋರ್ಡಾನ್ ರಾಜ್ಯದಲ್ಲಿ. 1948ರಲ್ಲಿ ಇಸ್ರೇಲ್ ರಾಜ್ಯ ಸ್ಥಾಪನೆಯಾದ ಮೇಲೆ ಭೀಕರ ಯುದ್ಧ ನಡೆದು, ವಿಶ್ವಸಂಸ್ಥೆಯ ನಿರ್ಧಾರದಂತೆ ಈ ವಿಭಜನೆಯಾಯಿತು. 1967ರಲ್ಲಿ ಅರಬ್ ರಾಜ್ಯಗಳಿಗೂ ಇಸ್ರೇಲಿಗೂ ನಡೆದ ಯುದ್ಧದಲ್ಲಿ ಜೆರೂಸಲೆಂ ಸಂಪೂರ್ಣವಾಗಿ ಇಸ್ರೇಲಿನ ವಶವಾಯಿತು. ಈಗ ಜೆರೂಸಲೆಮಿನ ಒಟ್ಟು ಜನಸಂಖ್ಯೆ ಸುಮಾರು 2,42,000.

ಇಸ್ರೇಲಿನಲ್ಲಿದ್ದ ಜೆರೂಸಲೆಂ ಭಾಗಕ್ಕೆ ಹೊಸ ನಗರವೆಂದೂ ಜೋರ್ಡಾನಿನಲ್ಲಿದ್ದ ಭಾಗಕ್ಕೆ ಹಳೆಯ ನಗರವೆಂದೂ ಹೆಸರು. ಚಾರಿತ್ರಿಕವಾಗಿ ಪ್ರಸಿದ್ಧವಾದ, ಪವಿತ್ರವೆಂದು ಪರಿಗಣಿಸಲ್ಪಟ್ಟಿರುವ ಭಾಗಗಳು ಇರುವುದು ಹೆಚ್ಚಾಗಿ

ಹಳೆಯ ನಗರದಲ್ಲೆ. ಇಲ್ಲಿ ಹಳೆಯ ಒಡಂಬಡಿಕೆಯ ಕಥೆಗಳ ಪ್ರಸಿದ್ಧವಾದ ಸ್ಥಳಗಳನ್ನೂ ಹೊಸ ಒಡಂಬಡಿಕೆಯಲ್ಲಿ ಹೆಸರಿಸಿರುವ ಪವಿತ್ರ ಪ್ರಾರ್ಥನಾ ಮಂದಿರಗಳನ್ನೂ ನೋಡಬಹುದು. ಯೇಸು ಕ್ರಿಸ್ತ ಉಪದೇಶಿಸಿದ್ದು, ಮುಹಮ್ಮದ್ ಪೈಗಂಬರ್ ಧ್ಯಾನಮಾಡಿದ್ದು ಇಲ್ಲಿಯೇ.

ಹೊಸ ನಗರಕ್ಕಿಂತ ಹಳೆಯ ನಗರ ಚಿಕ್ಕದು, ಜನಸಂಖ್ಯೆ 62,000. ಅವರಲ್ಲಿ ಬಹು ಭಾಗ ಮುಸಲ್ಮಾನರು. ಉಳಿದವರು ಕ್ರೈಸ್ತರು.

ಹಳೆಯ ನಗರದಲ್ಲಿರುವ ಮೊರೈಯ ಬೆಟ್ಟದ ಮೇಲೆ ಮುಸಲ್ಮಾನರಿಗೆ ಪೂಜ್ಯನಾದ ಇಬ್ರಾಹಿಂ, ದೇವರ ಅಪ್ಪಣೆಯಂತೆ ತನ್ನ ಮಗ ಐಸಾಕ್‌ನನ್ನು ಬಲಿಕೊಡಲು ಸಿದ್ಧನಾಗಿದ್ದನೆಂದು ಹೇಳುತ್ತಾರೆ. ಅಲ್ಲದೆ ಈ ಬೆಟ್ಟದ ಮೇಲೆ ಮುಹಮ್ಮದ್ ಪೈಗಂಬರ್ ಕಾಲವಾಗುವುದಕ್ಕೆ ಮೊದಲು ಧ್ಯಾನ ಮಾಡಿದರೆಂದು ನಂಬಿಕೆಯಿದೆ.

ಈ ಸ್ಥಳ ಯೆಹೂದ್ಯರಿಗೂ ಪವಿತ್ರ. ಬೈಬಲಿನ ಹಳೆಯ ಒಡಂಬಡಿಕೆಯಲ್ಲಿ ಪ್ರಸಿದ್ಧನಾದ ಸಾಲೊಮನ್ ರಾಜನ ಮೊದಲ ಪ್ರಾರ್ಥನಾಮಂದಿರ ಇಲ್ಲೇ ಇತ್ತೆಂದು ಅವರ ನಂಬಿಕೆ. ಮೊರೈಯ ಬೆಟ್ಟದ ಮೇಲಿರುವ ಭವ್ಯ ಮಸೀದಿಯ ಪಶ್ಚಿಮದ ಗೋಡೆಯ ಬಳಿ ನಿಂತು ಯೆಹೂದ್ಯರು ಬ್ಯಾಬಿಲೋನಿಯದವರಿಂದ ತಮ್ಮ ಮಂದಿರ ನಾಶವಾದದ್ದಕ್ಕಾಗಿ ಅಳುವ ಪದ್ಧತಿ ಇದೆ. ಇದರಿಂದಾಗಿ ಈ ಗೋಡೆಗೆ 'ಅಳುವ ಗೋಡೆ' ಎಂದು ಹೆಸರು ಬಂದಿದೆ.

ಹಳೆಯ ನಗರದ ವಾಯುವ್ಯ ಭಾಗದಲ್ಲಿ ಕ್ರೈಸ್ತರಿಗೆ ಪವಿತ್ರವಾದ ಅನೇಕ ಮಂದಿರಗಳಿವೆ. ಇಲ್ಲಿರುವ 'ದುಃಖದ ದಾರಿ' ಅಥವಾ 'ಶಿಲುಬೆಯ ದಾರಿ' ಮಾರ್ಗವಾಗಿ ಯೇಸು ಕ್ರಿಸ್ತ ಶಿಲುಬೆಯನ್ನು ಹೊತ್ತು ಶಿಲುಬೆಗೇರಿಸಿದ ಸ್ಥಳ ಗೊಲ್ಗೊಥಕ್ಕೆ ಹೋದನೆಂದು ಹೇಳುತ್ತಾರೆ.

ಜೆರೂಸಲೆಮಿನ ಹೊಸ ನಗರ ಇಸ್ರೇಲಿನ ರಾಜಧಾನಿ. ಯೆಹೂದ್ಯರಿಗೆ ಪವಿತ್ರ ಸ್ಥಳ. ಎರಡನೆಯ ಮಹಾಯುದ್ಧವಾದ ಮೇಲೆ ನಿರಾಶ್ರಿತರಾದ ಯೆಹೂದ್ಯರಿಗೆ ಆಶ್ರಯ ಕೊಟ್ಟ ಪ್ರಮುಖ ನಗರ. 1950ರಲ್ಲಿ ಜೆರೂಸಲೆಂ ಇಸ್ರೇಲಿನ ರಾಜಧಾನಿಯಾದ ಮೇಲೆ ಅದರ ಜನಸಂಖ್ಯೆ ಇಮ್ಮಡಿಯಾಗಿದೆ. ಈಗ 1,80,000ಕ್ಕೂ ಹೆಚ್ಚು ಜನರಿದ್ದಾರೆ. ಅವರಲ್ಲಿ ಬಹು ಭಾಗ ಯೆಹೂದ್ಯರು ; ಉಳಿದವರು ಕ್ರೈಸ್ತರು, ಮುಸಲ್ಮಾನರು.

ಹೊಸ ನಗರ ಜೆರೂಸಲೆಂ ಆಧುನಿಕವಾಗಿದೆ. ವಿಶಾಲವಾದ ರಸ್ತೆಗಳು, ಭವನಗಳ ಜೊತೆಗೆ ಅನೇಕ ಕಾರಖಾನೆಗಳಿವೆ. ವಜ್ರಕ್ಕೆ ಮೆರುಗು ಕೊಡುವುದು, ವಿದ್ಯುಚ್ಛಕ್ತಿ ಮತ್ತು ಪ್ಲಾಸ್ಟಿಕ್ ಸಾಮಾನುಗಳ ತಯಾರಿಕೆ ಇವು ಮುಖ್ಯ ಉದ್ಯಮಗಳು.

ಇಸ್ರೇಲಿ ಸಂಸತ್ ಭವನ, ಅತ್ಯುಚ್ಚ ನ್ಯಾಯಸ್ಥಾನ, ರಾಷ್ಟ್ರಾಧ್ಯಕ್ಷರ ಭವನ, ಯೆಹೂದ್ಯ ಧರ್ಮದ ಮುಖ್ಯ ಆಡಳಿತ ಕೇಂದ್ರ–ಇವುಗಳೆಲ್ಲ ಹೊಸ ನಗರದಲ್ಲಿವೆ.

ಹೊಸ ನಗರದಲ್ಲಿರುವ ಹಿಬ್ರೂ ವಿಶ್ವವಿದ್ಯಾನಿಲಯದಲ್ಲಿ 10,000 ವಿದ್ಯಾರ್ಥಿಗಳಿದ್ದಾರೆ. ನಗರದಲ್ಲಿರುವ ಪುರಾತತ್ತ್ವ ಸಂಗ್ರಹಾಲಯ ಮತ್ತು ಬೈಬಲಿನಲ್ಲಿ ಹೆಸರಿಸಿರುವ ಪ್ರಾಣಿಗಳ ಸಂಗ್ರಹಾಲಯ ಬಹಳ ಪ್ರಸಿದ್ಧ. ಜೆರೂಸಲೆಂ ನಗರವನ್ನು 3,000 ವರ್ಷಗಳ ಹಿಂದೆ ಪ್ರಾಚೀನ ಇಸ್ರೇಲಿಗಳ ರಾಜಧಾನಿಯಾಗಿ ಮಾಡಿದ ಒಂದನೆಯ ಡೇವಿಡ್‌ನ ಸಮಾಧಿ. ಯೇಸು ಕ್ರಿಸ್ತ ತನ್ನ ಕೊನೆಯ ಭೋಜನ ಮಾಡಿದ ಸ್ಥಳ, ಪ್ರವಾದಿ ಜಾನನ ಜನ್ಮಸ್ಥಳ ಇವು ಹೊಸ ನಗರದಲ್ಲಿವೆ.

ಕ್ರಿ. ಪೂ. ಹತ್ತೊಂಬತ್ತನೆಯ ಶತಮಾನದಲ್ಲಿ ಈಜಿಪ್ಟಿನ ಶಾಸನಗಳಲ್ಲಿ ಮೊದಲ ಬಾರಿ ಜೆರೂಸಲೆಂ ನಗರದ ಹೆಸರನ್ನು ನೋಡುತ್ತೇವೆ. ಕ್ರಿ. ಪೂ. ಸುಮಾರು 1000ದಲ್ಲಿ ಅರಸ ಡೇವಿಡ್ ಅದನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡ. ಅನಂತರ ಅಲ್ಲಿ ಸಾಲೊಮನ್ ದೊರೆ ಪ್ರಾರ್ಥನಾಮಂದಿರವನ್ನು ಕಟ್ಟಿಸಿದ. ಕ್ರಿ. ಪೂ. 586ರಲ್ಲಿ ಆ ಮಂದಿರವನ್ನು ಬ್ಯಾಬಿಲೋನಿಯದವರು ನಾಶಮಾಡಿದರು. ಬಳಿಕ ಅದನ್ನು ಯೆಹೂದ್ಯರು ಮರಳಿ ಕಟ್ಟಿದರು. ನೂರೈವತ್ತು ವರ್ಷಕ್ಕೂ ಹೆಚ್ಚು ಕಾಲ ಜೆರೂಸಲೆಂ ಗ್ರೀಕರು, ಈಜಿಪ್ಟಿನವರು, ಸೆಲ್ಯೂಸಿಡ್ ಮನೆತನದವರು ಇವರ ಆಳ್ವಿಕೆಯಲ್ಲಿತ್ತು. ಕ್ರಿ. ಪೂ. 37ರಲ್ಲಿ ರೋಮನರು ಜೆರೂಸಲೆಮನ್ನು ವಶಪಡಿಸಿಕೊಂಡರು. ರೋಮನರ ಆಳ್ವಿಕೆಯಲ್ಲೇ ಯೇಸು ಕ್ರಿಸ್ತ ಹುಟ್ಟಿದ್ದು, ಶಿಲುಬೆಗೇರಿಸಲ್ಪಟ್ಟದ್ದು. 638ರಲ್ಲಿ ಅರಬರು ಜೆರೂಸಲೆಂ ನಗರವನ್ನು ವಶಪಡಿಸಿಕೊಂಡರು. ಮೊದಲನೆಯ ಮಹಾಯುದ್ಧದವರೆಗೂ ಜೆರೂಸಲೆಂ ಅರಬಿ ಮತ್ತು ತುರ್ಕಿ ಜನರ ಆಳ್ವಿಕೆಯಲ್ಲಿತ್ತು. ಅಲ್ಲಿಂದ ಬ್ರಿಟಿಷರ ಆಳ್ವಿಕೆಯಲ್ಲಿದ್ದು, 1948ರಲ್ಲಿ ಬ್ರಿಟಿಷರಿಂದ ಯೆಹೂದ್ಯರ ಕೈಗೆ ಬಂದಿತು.

ನೋಡಿ : ಜೋರ್ಡಾನ್; ಇಸ್ರೇಲ್

## ಜೋರ್ಡಾನ್

ಜೋರ್ಡಾನ್ ಏಷ್ಯದ ನೈಋತ್ಯ ಭಾಗದಲ್ಲಿದೆ. ಜೋರ್ಡಾನ್ ನದಿ ದೇಶವನ್ನು ಎರಡು ಭಾಗಮಾಡಿದೆ. ಪಶ್ಚಿಮ ಭಾಗದಲ್ಲಿ ಬೆಟ್ಟಗಳು ಹೆಚ್ಚು. ಜೆರೂಸಲೆಂ, ಬೆತ್ಲೆಹೇಮ್‌ಗಳು ಇರುವುದು ಇಲ್ಲಿಯೇ. ಪೂರ್ವ ಭಾಗದಲ್ಲಿ ಮರಳುಗಾಡು ಪ್ರದೇಶವೇ ಬಹಳ.

ಜೋರ್ಡಾನಿನಲ್ಲಿ ಮಳೆ ಕಡಮೆ. ಬೇಸಿಗೆಯಲ್ಲಿ ಉಷ್ಣಾಂಶ 90° ಫಾ. ನಷ್ಟಿರುತ್ತದೆ.

ಜೋರ್ಡಾನ್ ನದಿಯೇ ಮುಖ್ಯವಾದದ್ದು, ಹಿಬ್ರೂ ಭಾಷೆಯ ಪದ ಜೋರ್ಡಾನ್—'ಕೆಳಗಿಳಿ' ಎಂದು ಇದರ ಅರ್ಥ. ಜೋರ್ಡಾನ್ ನದಿ 2,745 ಮೀಟರುಗಳ ಮೇಲೆ ಪರ್ವತದಲ್ಲಿ ಹುಟ್ಟಿ ಕೆಳಗಿಳಿದು ಬಂದು ಮೃತ ಸಮುದ್ರವನ್ನು ಸೇರುತ್ತದೆ. ಆ ನದೀಮುಖ ಸಮುದ್ರ ಮಟ್ಟಕ್ಕಿಂತ 397 ಮೀಟರುಗಳಷ್ಟು ಕೆಳಗಿದ್ದು ಅತಿ ತಗ್ಗು ಪ್ರದೇಶವೆನಿಸಿದೆ.

ಜೋರ್ಡಾನಿನಲ್ಲಿ ಮಳೆ ಅಲ್ಪವಾದುದರಿಂದ, ವ್ಯವಸಾಯಕ್ಕೆ ಉಪಯುಕ್ತ ಭೂಮಿ ಇಲ್ಲದ್ದರಿಂದ ಇಲ್ಲಿ ಬೆಳೆ ಕಡಮೆ. ಮರದ ನೇಗಿಲು ಮುಂತಾದ ಹಳೆಯ ಉಪಕರಣಗಳನ್ನೇ ಜನ ವ್ಯವಸಾಯದಲ್ಲಿ ಬಳಸುತ್ತಾರೆ. ಗೋಧಿ, ಬಾಳೆಹಣ್ಣು, ದ್ರಾಕ್ಷಿ ಇವು ಕೆಲವೇ ಉತ್ತಮ ಬೆಳೆಗಳು.

ಮೃತಸಮುದ್ರದ ನೀರನ್ನು ಬಾಷ್ಪೀಕರಣ ಮಾಡುವುದರಿಂದ ಸಾರವತ್ತಾದ ಪೊಟ್ಯಾಷ್ ಗೊಬ್ಬರ ದೊರೆಯುತ್ತದೆ.

ಸೌದಿ ಅರೇಬಿಯದಿಂದ ಜೋರ್ಡಾನ್ ಕಲ್ಲೆಣ್ಣೆ ಪಡೆಯುತ್ತದೆ.

ಜೋರ್ಡಾನಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಇರುವವರು ಅರಬರು, ಕಾಕಸಸ್‌ನಿಂದ ಬಂದ ಬುಡಕಟ್ಟಿನ ಜನರೂ ಇದ್ದಾರೆ.

ರಾಜಧಾನಿ ಅಮಾನ್. ಜೆರೂಸಲೆಂ, ಅಕಾಬಾ [illegible] ಜೆರಿಕೊ, ಬೆತ್ಲೆಹೇಮ್, ಹಿಬ್ರಾನ್ ಮುಖ್ಯನಗರಗಳು. [illegible] ಕೊರೆದು, ನಸುಗೆಂಪು ಕಲ್ಲಿನಿಂದ ಕಟ್ಟಿರುವ [illegible]

2,000 ವರ್ಷಗಳ ಹಿಂದೆ ರೋಮ್ ಮತ್ತು [illegible] ಜೋರ್ಡಾನಿನ ಮೇಲೆ ಪೂರ್ಣ ಅಧಿಕಾರ ಪಡೆ[illegible]

ಶತಮಾನದಲ್ಲಿ 'ಧರ್ಮಯುದ್ಧ'ದಲ್ಲಿ ತೊಡಗಿದ್ದರು. ಹನ್ನೆರಡನೆಯ ಶತಮಾನದಲ್ಲಿ ಇದನ್ನು ಗೆದ್ದ ಕ್ರೈಸ್ತ ಧರ್ಮಯೋಧರು ಜೋರ್ಡಾನಿನ ಅಕಾಬಾವರೆಗೆ ಅನೇಕ ಕಾವಲು ಕೋಟೆಗಳನ್ನು ಕಟ್ಟಿದರು. ಆದರೂ ಅರಬರು ಜೋರ್ಡಾನನ್ನು ಪುನಃ ಜಯಿಸಿದರು. 1516ರಲ್ಲಿ ತುರ್ಕಿಯವರು ಜೋರ್ಡಾನನ್ನು ಗೆದ್ದು ಸಿರಿಯಕ್ಕೆ ಸೇರಿಸಿಕೊಂಡರು, ಡಮಾಸ್ಕಸ್ ರಾಜಧಾನಿಯಾಯಿತು. 400 ವರ್ಷಗಳ ಕಾಲ ತುರ್ಕಿಯವರು ಆಳಿದ ಜೋರ್ಡಾನನ್ನು ಮೊದಲನೆಯ ಮಹಾಯುದ್ಧದಲ್ಲಿ ಬ್ರಿಟಿಷರು ವಶಪಡಿಸಿಕೊಂಡರು. ರಾಷ್ಟ್ರಸಂಘ ದೇಶದ ಒಂದು ಭಾಗ ಟ್ರಾನ್ಸ್‌ಜೋರ್ಡಾನನ್ನು ಬ್ರಿಟನಿಗೆ ಕೊಟ್ಟಿತು. ಮೊದಲನೆಯ ಮಹಾಯುದ್ಧದಲ್ಲಿ ಬ್ರಿಟಿಷರಿಗೆ ಸಹಾಯ ಮಾಡಿದ ಅಬ್ದುಲ್ಲ ಇಬ್ನ್ ಹುಸೇನ್ ಟ್ರಾನ್ಸ್‌ಜೋರ್ಡಾನಿನ ಅಮೀರನಾದ. 1946ರಲ್ಲಿ ಟ್ರಾನ್ಸ್‌ಜೋರ್ಡಾನ್ ಸ್ವತಂತ್ರ ರಾಜ್ಯವಾದಾಗ ಅಬ್ದುಲ್ಲ ಅಲ್ಲಿನ ದೊರೆಯಾದ. 1948ರಲ್ಲಿ ಅರಬ್–ಇಸ್ರೇಲ್ ಯುದ್ಧವಾದಾಗ ಜೋರ್ಡಾನ್ ಪೂರ್ವ ಪ್ಯಾಲೆಸ್ಟೈನನ್ನು ಗೆದ್ದುಕೊಂಡಿತು. 1951ರಲ್ಲಿ ದೊರೆ ಅಬ್ದುಲ್ಲನ ಹತ್ಯೆಯಾದ ಅನಂತರ ಮಗ ತಲಾಲ್ ರಾಜನಾದ. 1952ರಲ್ಲಿ ಅವರ ಮಗ ಹುಸೇನ್ ಪಟ್ಟಕ್ಕೆ ಬಂದರು. ಜೋರ್ಡಾನ್ ವಿಶ್ವಸಂಸ್ಥೆಯ ಸದಸ್ಯರಾಷ್ಟ್ರವಾಗಿ, ಅಭಿವೃದ್ಧಿ ಹಾದಿಯಲ್ಲಿ ಮುಂದುವರಿಯುತ್ತಿದೆ.

| | | |
|---|---|---|
| ಖಂಡ | : | ಏಷ್ಯ (ನೈಋತ್ಯ) |
| ಅಕ್ಷಾಂಶ | : | 29° 17′ ಉ ದಿಂದ 33° 23′ ಉ |
| ರೇಖಾಂಶ | : | 34° 53′ ಪೂ ದಿಂದ 39° 18′ ಪೂ |
| ವಿಸ್ತೀರ್ಣ | : | 95,830 ಚ. ಕಿ. ಮೀ. |
| ಜನಸಂಖ್ಯೆ | : | 20,00,000 (ಸುಮಾರು) |
| ರಾಜಧಾನಿ | : | ಅಮಾನ್ |
| ಭಾಷೆ | : | ಅರಬಿ |
| ಸರಕಾರ | : | ಸಂವಿಧಾನಬದ್ಧ ರಾಜ ಪ್ರಭುತ್ವ |
| ಬಾವುಟ | : | ಕಪ್ಪು, ಬಿಳಿ, ಹಸಿರು, ಅಡ್ಡಪಟ್ಟಿಗಳು ; ಹಿಡಿಕೆ ಭಾಗದಲ್ಲಿ ಕೆಂಪು ತ್ರಿಕೋಣ ಮಧ್ಯದಲ್ಲಿ ಬಿಳಿ ನಕ್ಷತ್ರ |

ನೋಡಿ : ಪ್ಯಾಲೆಸ್ಟೈನ್

## ಜೋನ್ ದ ಆರ್ಕ್

ಹದಿನೈದನೆಯ ಶತಮಾನದ ಫ್ರಾನ್ಸಿನ ಒಂದು ಪಟ್ಟಣ. ಅಲ್ಲಿನ ಮಾರುಕಟ್ಟೆ. ಆ ಸಾರ್ವಜನಿಕ ಸ್ಥಳದಲ್ಲಿ ಮಾಟಗಾತಿಯೊಬ್ಬಳನ್ನು ದಂಡಿಸುವ ಸಂಭ್ರಮ. ಎತ್ತರದ ಬಿದಿರುಗಳ ಮೇಲೆ ಅಪರಾಧಿಯನ್ನು ಕಟ್ಟಿದ್ದಾರೆ. ಸುತ್ತಲೂ ಉಗುಳುವ, ಚೀರುವ, ಕುಣಿಯುವ ಉನ್ಮತ್ತ ಜನ—ಆಂಗ್ಲರು ಹಾಗೂ ಅವರ ಫ್ರೆಂಚ್ ಮಿತ್ರರು. ಮರಣದಂಡನೆ! ಬೊಂಬುಗಳಿಗೆ ಬೆಂಕಿ ಇಟ್ಟರು. ಉಸಿರುಕಟ್ಟಿ, ಉರಿ ಆವರಿಸಿದಂತೆ, "ದೇವರೇ" ಎಂಬ ಪದ ಆಪಾದಿತಳ ಬಾಯಿಯಿಂದ ಹೊರಬಿತ್ತು...ದಹನಶಿಕ್ಷೆಗೆ ಒಳಗಾದವಳು ಹತ್ತೊಂಬತ್ತು ವರ್ಷದ ತರುಣಿ. ಹೆಸರು ಜೋನ್ ದ ಆರ್ಕ್.

ಜೋನ್ 1412 ಜನವರಿ 6ರಂದು ಫ್ರಾನ್ಸಿನ ಡಾಮ್ರೆಮಿ ಎಂಬ ಹಳ್ಳಿಯಲ್ಲಿ ಒಂದು ರೈತ ಕುಟುಂಬದಲ್ಲಿ ಹುಟ್ಟಿದಳು. ಅವಳ ಬಾಲ್ಯ ಎಲ್ಲರ ಬಾಲ್ಯದಂತಿರಲಿಲ್ಲ. ಅವಳು ಶಾಲೆಗೆ ಹೋಗಲಿಲ್ಲ. ಆದರೆ ತಾಯಿಯಿಂದ ನೂಲುವುದು ಮತ್ತು ನೇಯುವುದನ್ನು ಕಲಿತಳು. ತನ್ನ ನೆರೆಹೊರೆಯವರ ಕಷ್ಟಗಳಲ್ಲಿ ಸಹಾಯ ಮಾಡುತ್ತ ಅವರೆಲ್ಲರ ಅಚ್ಚುಮೆಚ್ಚಿನ ಹುಡುಗಿಯಾಗಿದ್ದಳು.

ಆ ಕಾಲದಲ್ಲಿ ಫ್ರಾನ್ಸಿನ ಬಹು ಭಾಗ ಬರ್ಗಂಡಿಯ ಜನರ ಆಳ್ವಿಕೆಯಲ್ಲಿತ್ತು. ಫ್ರಾನ್ಸಿನ ದೊರೆ ಆರನೆಯ ಚಾರ್ಲ್ಸ್ ಮರಣಹೊಂದಿದ್ದ. ಉತ್ತರಾಧಿಕಾರಿಯಾಗಿದ್ದ ಯುವರಾಜ ದಕ್ಷಿಣ ಫ್ರಾನ್ಸಿನಲ್ಲಿ ಆಸರೆ ಪಡೆದಿದ್ದ.

ಜೋನ್ ಹದಿಮೂರು ವರ್ಷದ ಹುಡುಗಿಯಾಗಿದ್ದಾಗ ಅವಳ ಜೀವನ ಒಂದು ವಿಚಿತ್ರ ತಿರುವನ್ನು ಪಡೆಯಿತು. ಆಕೆ ವಿಧ ವಿಧವಾದ ಅಶರೀರ ವಾಣಿಗಳನ್ನು ಕೇಳಲಾರಂಭಿಸಿದಳು. ಇಗರ್ಜಿಯ ಗಂಟೆಯ ಧ್ವನಿಯಲ್ಲೂ ಆಕೆ ಮಾತುಗಳನ್ನು ಗುರುತಿಸಿದಳು. ಅವು 'ಸಂತರ ವಾಣಿ' ಎಂದಳು. ಆ ಸಂತರು ಅವಳಿಗೆ ಕನಸಿನಲ್ಲಿ ಕಾಣಿಸಿಕೊಂಡು "ಯುವರಾಜನನ್ನು ರಾಜನಾಗಿ ಮಾಡಿ ಫ್ರಾನ್ಸಿನಲ್ಲಿ ಶಾಂತಿಯನ್ನು ತರಬೇಕು," ಎಂದು ಹೇಳಿದರಂತೆ. "ಇಷ್ಟೊಂದು ಪುಟ್ಟ ಹುಡುಗಿಯಾದ ನಾನು ಈ ಅಗಾಧವಾದ ಕೆಲಸವನ್ನು ಹೇಗೆ ಮಾಡಬಲ್ಲೆ?" ಎಂದು ಜೋನ್ ಆ ಅಶರೀರವಾಣಿಗಳನ್ನು ಕೇಳಿದಳಂತೆ. "ಇದು ದೇವರ ಆಜ್ಞೆ," ಎಂದಿಷ್ಟೇ ಉತ್ತರ ಬಾಧಿತಂತೆ. ಇದು ಜೋನಳ ಬಾಲ್ಯವನ್ನು ಕುರಿತು ಪ್ರಚಲಿತ ಕಥೆ.

ಮೊದಮೊದಲು ಜೋನಳ ವರ್ತನೆಯನ್ನು ಮೂರ್ಖತನ ಎಂದು ಹೀಗಳೆದರೂ ಕ್ರಮೇಣ ಜನ ಅವಳನ್ನು ನಂಬಲಾರಂಭಿಸಿದರು. ಹತ್ತಿರದ ನಗರದ ಒಬ್ಬ ಸೈನ್ಯಾಧಿಕಾರಿಯ ಮನವೊಲಿಸಿ, ಕೆಲವು ಸೈನಿಕರನ್ನು ಪಡೆದು, ಜೋನ್ ಯುವರಾಜನಿದ್ದ ಚಿನಾನ್ ನಗರಕ್ಕೆ ಬಂದಳು.

ಜೋನಳಿಗೆ ನಿಜವಾದ ಶಕ್ತಿ ಇದೆಯೋ ಇಲ್ಲವೋ ಎಂದು ಪರೀಕ್ಷಿಸಲು ಯುವರಾಜ ಒಂದು ಉಪಾಯವನ್ನು ಹೂಡಿದ. ಸಾಮಾನ್ಯ ಮನುಷ್ಯನಂತೆ ವೇಷ ಧರಿಸಿಕೊಂಡು ಹಲವರು ಆಸ್ಥಾನಿಕರ ಮಧ್ಯದಲ್ಲಿ ಸೇರಿಕೊಂಡ. ಯುವರಾಜನನ್ನು ಗುರುತಿಸಬೇಕೆಂದು ಅವನ ಜನ ಜೋನಳನ್ನು ಕೇಳಿದರು. ಜೋನ್ ಅವನನ್ನು ಹಿಂದೆಂದೂ ನೋಡಿರಲಿಲ್ಲ. ಆದರೂ ಅವನನ್ನು ಗುರುತಿಸಿದಳು. ಅಷ್ಟೂ ಅಲ್ಲದೆ, ಯುವರಾಜನಿಗೆ ಮಾತ್ರ ಗೊತ್ತಿದ್ದ ಕೆಲವು ರಹಸ್ಯ ವಿಷಯಗಳ ಬಗೆಗೆ ಅವನೊಡನೆ ಜೋನ್ ಪ್ರಸ್ತಾಪಿಸಿದಳು. ಇದರಿಂದ ಆತನಿಗೆ ಜೋನಳ ದೈವಿಕ ಶಕ್ತಿಯ ಬಗೆಗೆ ವಿಶ್ವಾಸ ಮೂಡಿತು. "ಇಂಗ್ಲಿಷರನ್ನು ಹೊಡೆದು ಓಡಿಸುವುದು ನನ್ನ ಉದ್ದೇಶ," ಎಂದು ಸಾರಿದ ಜೋನಳ ವಿಷಯದಲ್ಲಿ ಗೌರವ ಹುಟ್ಟಿತು. ಆ ವೇಳೆಯಲ್ಲಿ ಇಂಗ್ಲಿಷರು ಆಕ್ರಮಿಸಲು ಯತ್ನಿಸುತ್ತಿದ್ದ ಆರ್ಲಿಯನ್ಸ್ ಎಂಬ ಮುಖ್ಯ ಪಟ್ಟಣಕ್ಕೆ ಜೋನಳ ನಾಯಕತ್ವದಲ್ಲಿ ಪಡೆಯನ್ನು ಕಳುಹಿಸಲು ಅವನು ಒಪ್ಪಿದ. ಯುದ್ಧ ಪ್ರಾರಂಭವಾಯಿತು. ಜೋನಳಿಗೆ ಪೆಟ್ಟು ಸಾಕಷ್ಟು ಬಿದ್ದಿತು.

ಅವಳು ಧೃತಿಗೆಡಲಿಲ್ಲ. ಅವಳ ಕೆಚ್ಚೆದೆ ಉಳಿದ ಸೈನಿಕರ ಧೈರ್ಯವನ್ನು ದ್ವಿಗುಣಗೊಳಿಸಿತು. ಅವರೆಲ್ಲರೂ ಜೀವದ ಹಂಗು ತೊರೆದು ಹೋರಾಡಿದರು. ಇವರ ಪ್ರಚಂಡ ಯುದ್ಧ ವೈಖರಿಯನ್ನು ಕಂಡು ಇಂಗ್ಲಿಷ್ ಪಡೆ ತತ್ತರಿಸಿತು. ಜೋನ್ ಒಬ್ಬ ಮಾಟಗಾತಿ ಎಂದು ಇಂಗ್ಲಿಷ್ ಸೈನಿಕರು ಭಾವಿಸಿ, ದಿಕ್ಕುಪಾಲಾಗಿ ಓಡಿಹೋದರು. ಆರ್ಲಿಯನ್ಸ್‌ನ ರಕ್ಷಣೆ ಅಸಾಧ್ಯ ಎಂದು ಫ್ರಾನ್ಸಿನ ಸೈನ್ಯಾಧಿಕಾರಿಗಳೇ ಭಾವಿಸಿದ್ದರು. ಹದಿನೇಳು ವರ್ಷದ ಹುಡುಗಿ ದೇವರ ಹೆಸರಿನಲ್ಲಿ ಹೋರಾಡಿ ನಗರವನ್ನು ಉಳಿಸಿದ್ದು ಫ್ರೆಂಚ್ ಸೈನಿಕರಲ್ಲಿ ಹೊಸ ಚೈತನ್ಯ ತುಂಬಿತು ; ದೇವರು ತಮ್ಮ ಕಡೆಗೆ ಇದ್ದಾನೆ ಎನ್ನುವ ಭರವಸೆಯನ್ನು ತಂದಿತು.

ಜೋನ್ 1429 ಜುಲೈ 16ರಂದು ರೀಮ್ಸ್ ನಗರವನ್ನು ಪ್ರವೇಶಿಸಿ ದಳು. ಮರುದಿನ ಯುವರಾಜನಿಗೆ ಪಟ್ಟ ಕಟ್ಟಿಸಿದಳು. ಏಳನೆಯ ಚಾರ್ಲ್ಸ್ ದೊರೆ ಎನ್ನಿಸಿಕೊಂಡು ಆತ ಅಧಿಕಾರಕ್ಕೆ ಬಂದ.

ಆದರೆ ಫ್ರಾನ್ಸನ್ನು ಸ್ವತಂತ್ರಗೊಳಿಸುವ ಮತ್ತೊಂದು ಕರ್ತವ್ಯ ಹಾಗೆಯೇ ಉಳಿಯಿತು. ಅದಕ್ಕಾಗಿ ಯುದ್ಧವನ್ನು ಮುಂದುವರಿಸಬೇಕೆಂದು ಕೇಳಿಕೊಂಡಳು. ಈ ವೇಳೆಗಾಗಲೇ ಚಾರ್ಲ್ಸ್ ದೊರೆ ಬೇಸತ್ತುಹೋಗಿದ್ದ. ಯುದ್ಧವೆಂದರೆ ಅವನಿಗೆ ಜಿಗುಪ್ಸೆ ಬಂದು ಬಿಟ್ಟಿತ್ತು. ಆದುದರಿಂದ ಜೋನಳ ಸಲಹೆಗೆ ಒಪ್ಪಲಿಲ್ಲ. ಅದೂ ಅಲ್ಲದೆ ಅವನ ಸ್ನೇಹಿತರಲ್ಲಿ ಅನೇಕರು ಅಸೂಯೆಯಿಂದ ಅವಳ ವಿರುದ್ಧ ರಾಜನೊಡನೆ ಚಾಡಿ ಹೇಳಿದರು. ಜೋನ್ ಒಂದು ಊರಿನ ರಕ್ಷಣೆಗೆಂದು ಹೋದಳು. ರಾಜಬೆಂಬಲವಿಲ್ಲದ ಜೋನಳನ್ನು ಬರ್‌ಗಂಡಿಯ ಜನ ಸುಲಭವಾಗಿ ಸೆರೆ ಹಿಡಿದರು.

ಅವಳ ಬಿಡುಗಡೆಗೆ ಚಾರ್ಲ್ಸ್ ಯಾವ ಪ್ರಯತ್ನವನ್ನೂ ಮಾಡಲಿಲ್ಲ. ಆದರೆ ಇಂಗ್ಲಿಷರು ಅವಳನ್ನು ಅತ್ಯಂತ ಆಸಕ್ತಿಯಿಂದ ಕೊಂಡುಕೊಂಡರು. 'ಮಾಟಗಾತಿ' ಎಂದು ಆರೋಪಿಸಿದರು. ವಿಚಾರಣೆಯೂ ನಡೆಯಿತು. ತನ್ನ ತಪ್ಪಿಲ್ಲ ಎಂದು ಜೋನ್ ಬಹಳ ಧೈರ್ಯದಿಂದ ನುಡಿದಳು. ಆದರೂ ಅವಳಿಗೆ ಮರಣದಂಡನೆ ವಿಧಿಸಿದರು. ಅದಾದ ಮೇಲೆ, ತನ್ನನ್ನು ಸೆರೆಹಿಡಿದವರ ಅತಿಯಾದ ಒತ್ತಾಯದಿಂದ ಮತ್ತು ಬಿಡುಗಡೆಯಾದೀತೆಂಬ ಅಂತರಾಳದ ಆಸೆಯಿಂದ, ಜೋನ್ ತನ್ನದು ತಪ್ಪು ಎಂದು ಒಪ್ಪಿಕೊಂಡಳು. ಆದರೆ ಅವಳನ್ನು ಬಿಡುಗಡೆ ಮಾಡದೆ ಜೀವಾವಧಿ ಶಿಕ್ಷೆಯನ್ನು ವಿಧಿಸಿದರು. ಜೋನ್ ತನ್ನ ತಪ್ಪೊಪ್ಪಿಗೆಯನ್ನು ವಾಪಸು ಪಡೆದಳು. ಮತ್ತೆ ಅವಳಿಗೆ ಮರಣದಂಡನೆ ವಿಧಿಸಲಾಯಿತು.

1431 ಮೇ 30ರಂದು ಹತ್ತೊಂಬತ್ತು ವರ್ಷದ ತರುಣಿ ಜೋನಳನ್ನು ಜೀವಂತವಾಗಿ ಸುಟ್ಟುಹಾಕಿದರು.

ಮುಂದೆ ಇಂಗ್ಲಿಷರನ್ನು ಫ್ರಾನ್ಸಿನಿಂದ ಹೊರದೂಡಿದರು. ಚಾರ್ಲ್ಸ್ ದೊರೆ ಜೋನಳ ಮೇಲಿನ ಆರೋಪಗಳ ಬಗ್ಗೆ ವಿಚಾರಣೆ ನಡೆಸಿದ. ಜೋನ್ ನಿರ್ದೋಷಿ ಎಂದು ತೀರ್ಮಾನವಾಯಿತು. ಆದರೆ ನಿರಪರಾಧಿ ಜೋನ್ ಈ ತೀರ್ಪನ್ನು ಕೇಳಲು ಬದುಕಿರಲಿಲ್ಲ.

ಸರಳ ಮನಸ್ಸಿನ ಜೋನ್ "ಇಂಗ್ಲಿಷರು ಫ್ರಾನ್ಸಿನಲ್ಲಿರಬೇಕೆಂದು ಭಗವಂತನ ಇಚ್ಛೆಯಾಗಿದ್ದರೆ ಅವರು ಫ್ರಾನ್ಸ್‌ನಲ್ಲೇ ಹುಟ್ಟುವಂತೆ ಮಾಡುತ್ತಿದ್ದ. ಆದುದರಿಂದ ಇಂಗ್ಲಿಷರು ಫ್ರಾನ್ಸ್‌ಗೆ ಬಂದುದು ಪಾಪಕರ," ಎಂದು ಘೋಷಿಸಿದಳು. ತನಗರಿಯದೆಯೇ ರಾಷ್ಟ್ರೀಯ ಮನೋಭಾವವನ್ನು ಯೂರೋಪಿನಲ್ಲಿ ಬೆಳೆಸಿದಳು ಜೋನ್. ಆಕೆಯ ಈ ಘೋಷಣೆ ಯೂರೋಪಿನ ಮುಂದಿನ ಚರಿತ್ರೆಯ ಮೇಲೆ ಪ್ರಭಾವ ಬೀರಿತು.



ಯೂರೋಪಿನಲ್ಲಿ ರಾಷ್ಟ್ರೀಯ ಮನೋಭಾವದ ಬೆಳವಣಿಗೆಗೆ ಕಾರಣಳಾದ ಜೋನ್ ದ ಆರ್ಕ್

1920ರಲ್ಲಿ ಕ್ಯಾಥಲಿಕ್ ಧರ್ಮಪೀಠದವರು ಜೋನಳನ್ನು 'ಸಂತಳು' ಎಂದು ಗೌರವಿಸಿದರು. ಆಕೆಯ ಪುಣ್ಯದಿನವನ್ನು ಪ್ರತಿವರ್ಷ ಮೇ 30ರಂದು ಫ್ರಾನ್ಸಿನಾದ್ಯಂತ ಆಚರಿಸುತ್ತಾರೆ.

## ಟಿಬೆಟ್

ಪ್ರಪಂಚದ ಛಾವಣಿ ಯಾವುದು ? — ಟಿಬೆಟ್. ಇದು ಜಗತ್ತಿನ ಬಹು ಎತ್ತರವಾದ ಭೂಮಿ. ಸಮುದ್ರ ಮಟ್ಟಕ್ಕಿಂತ [illegible] ಮೀಟರುಗಳ ಎತ್ತರದಲ್ಲಿದೆ.

ಟಿಬೆಟ್ ಹಿಮಾಲಯ ಪರ್ವತಗಳಿಂದ ಸುತ್ತುವರಿಯಲ್ಪಟ್ಟ ಎತ್ತರದ ಪ್ರಸ್ಥಭೂಮಿ. ಸಾಂಗ್ಪೊ ಕಣಿವೆ ಪ್ರದೇಶ, ಚಾಂಗ್‌ಟಾಂಗ್ ಮತ್ತು ಖಾಮ್ ಎಂಬ ಮೂರು ಪ್ರಾಕೃತಿಕ ವಿಭಾಗಗಳಿವೆ.

ಬಹಳ ಎತ್ತರದಲ್ಲಿರುವುದರಿಂದ ಟಿಬೆಟಿನಲ್ಲಿ ಹವಾಗುಣವೂ ವಿಪರೀತದ್ದೇ ಆಗಿದೆ. ವರ್ಷವೆಲ್ಲಾ ಹೆಚ್ಚಾಗಿ ಚಳಿ ಇರುತ್ತದೆ. ಹಿಮಗಾಳಿ ಬಿರುಗಾಳಿ, ಸುಂಟರಗಾಳಿ ಬೀಸುತ್ತಲೇ ಇರುತ್ತವೆ. ಮಳೆ ಕಡಮೆ

ಸಿಂಧೂ, ಬ್ರಹ್ಮಪುತ್ರ, ಸಟ್ಲೆಜ್ ನದಿಗಳ ಜನ್ಮಸ್ಥಳ ಟಿಬೆಟ್ ದೇಶ. ಚಿನ್ನ, ಕಲ್ಲಿದ್ದಲು, ತೈಲ, ಉಪ್ಪು, ಬೊರಾಕ್ಸ್‌ಗಳ ನಿಕ್ಷೇಪವಿದೆ. ಗೋಧಿ, ಬಾರ್ಲಿ ಮತ್ತಿತರ ಧಾನ್ಯಗಳನ್ನು ಬೆಳೆಯುತ್ತಾರೆ. ಭಾರತದ ಎಮ್ಮೆಯನ್ನು ಹೋಲುವಂಥ ರೂಪುಟವುಳ್ಳ ಯಾಕ್ ಪ್ರಾಣಿಯನ್ನು ಸವಾರಿಗೆ ಮತ್ತು ಆಹಾರಕ್ಕಾಗಿ ಬಳಸುತ್ತಾರೆ. ಕುರಿ ಆಡುಗಳನ್ನು ಸಾಕುತ್ತಾರೆ. ಲೋಹದ ಕೆಲಸ, ನೆಯ್ಗೆ, ಮಡಕೆಮಾಡುವುದು, ಮರದ ಕೆತ್ತನೆಯ ಕೆಲಸ, ಯಾಕ್‌ನ ಕೂದಲಿನಿಂದ ಗುಡಾರ ತಯಾರಿಸುವುದು—ಈ ಉದ್ಯಮಗಳಿವೆ. ಟಿಬೆಟಿನ ಜನ ಮಂಗೋಲಿಯನ್ನರ ಲಕ್ಷಣಗಳುಳ್ಳ ಬುಡಕಟ್ಟಿನವರು. ಆದರೆ ಸಂಪೂರ್ಣವಾಗಿ ಆ ಗುಂಪಿಗೆ ಸೇರಿದವರಲ್ಲ. ಅವರು ಮಾತಾಡುವ ಭಾಷೆ ಚೀನೀ ಭಾಷೆಯನ್ನು ಹೋಲುತ್ತದೆ. ಆದರೆ ಲಿಪಿಯನ್ನು ಸಂಸ್ಕೃತದಿಂದ ಅಳವಡಿಸಿಕೊಂಡಿದ್ದಾರೆ. ಲಾಮಾ ಮತ ಅವರ ಧರ್ಮ. ದಲೈ ಲಾಮಾ ಅವರ ಧರ್ಮಗುರು.

ರಾಜಧಾನಿ ಲ್ಹಾಸಾ. ಶಿಗಾಟ್ಸೆ ಇನ್ನೊಂದು ಮುಖ್ಯ ನಗರ. 1950 ಅಕ್ಟೋಬರಿನಲ್ಲಿ ಚೀನಿ ಕೆಂಪು ಸೇನೆ ಟಿಬೆಟನ್ನು ಪ್ರವೇಶಿಸಿತು. 1951 ಮೇ ತಿಂಗಳಲ್ಲಿ ಒಂದು ಒಪ್ಪಂದವಾಗಿ ಚೀನ ರಾಷ್ಟ್ರದಲ್ಲಿ ಟಿಬೆಟ್ ಸ್ವಯಂ ಆಡಳಿತ ರಾಜ್ಯವಾಯಿತು. ಆದರೆ ನಿಜವಾಗಿ ಟಿಬೆಟ್ ಜನರಿಗೆ ಯಾವ ಅಧಿಕಾರವೂ ಇರಲಿಲ್ಲ. 1959ರಲ್ಲಿ ಟಿಬೆಟಿನ ಜನ ಚೀನೀಯರ ವಿರುದ್ಧ ದಂಗೆ ಎದ್ದಾಗ ಅದನ್ನು ಅಡಗಿಸಲು ಚೀನೀ ಕೆಂಪು ಸೇನೆ ಬಂದಿತು. ದಲೈ ಲಾಮಾ ತಪ್ಪಿಸಿಕೊಂಡು ಭಾರತಕ್ಕೆ ಓಡಿಬಂದು ರಕ್ಷಣೆ ಹೊಂದಿದರು. ಹೀಗಾಗಿ ಎಷ್ಟೋ ವರ್ಷ ಸ್ವತಂತ್ರವಾಗಿದ್ದ ಟಿಬೆಟ್ ಈಗ ಚೀನ ಗಣರಾಜ್ಯಕ್ಕೆ ಸೇರಿದೆ.

ನಿರಾಶ್ರಿತರಾಗಿ ಆಶ್ರಯಕೋರಿ ಭಾರತಕ್ಕೆ ಬಂದ ಟಿಬೆಟ್ ಜನರು ದೇಶದ ವಿವಿಧ ಭಾಗಗಳಲ್ಲಿ ಬೀಡು ಬಿಟ್ಟಿದ್ದಾರೆ. ಮೈಸೂರು ರಾಜ್ಯದ ಕುಶಾಲನಗರದ ಬಳಿಯ ಬೈಲುಕುಪ್ಪೆಯಲ್ಲಿ ಟಿಬೆಟಿನ ಹಲವು ಸಹಸ್ರ ಜನರು ನೆಲೆಸಿ, ಕೃಷಿ ವ್ಯವಸಾಯದಲ್ಲಿ ನಿರತರಾಗಿದ್ದಾರೆ. ಉತ್ತರ ಕನ್ನಡದ ಮುಂಡಗೋಡದಲ್ಲಿಯೂ ಟಿಬೆಟಿನ ನಿರಾಶ್ರಿತರಿಗೆ ಪುನರ್ವಸತಿ ಕಲ್ಪಿಸಲಾಗಿದೆ.



## ಟೈಪ್‌ರೈಟರ್

ಅಕ್ಷರಗಳನ್ನು ಪ್ರತಿ ದಿನ ಸುಂದರವಾಗಿ ಸ್ಪಷ್ಟವಾಗಿ ಬರೆಯಬೇಕೆಂದರೆ ನಮಗೆ ಅದೆಷ್ಟು ತೊಂದರೆ! ಆದರೆ ಯಾವ ಕೈಬೆರಳುಗಳಿಂದ ನಾವು



ಅನಂತ ಕನ್ನಡ ಬೆರಳಚ್ಚು

ಬರೆಯುತ್ತೇವೆಯೋ, ಅವೇ ಕೈಬೆರಳು ಒಂದು ಯಂತ್ರದ ಮೇಲೆ ಆಡಿದರೆ ಸುಂದರವಾದ ಅಕ್ಷರಗಳು ಮೂಡುತ್ತವೆ. 'ಟೈಪ್‌ರೈಟರ್' ಅಕ್ಷರ ಮೂಡಿಸುವ ಯಂತ್ರ. ಬೆರಳನ್ನು ಅಕ್ಷರದ ಮೇಲೆ ಒತ್ತಿದಾಗ ಆ ಅಕ್ಷರ ಮೂಡುವುದರಿಂದ ಇದನ್ನು ಬೆರಳಚ್ಚು ಎಂದು ಕನ್ನಡದಲ್ಲಿ ಕರೆಯುತ್ತಾರೆ.

ಮೊಟ್ಟಮೊದಲಿಗೆ ಕೇವಲ ಇಂಗ್ಲಿಷ್ ಭಾಷೆಯ ವರ್ಣಮಾಲೆಗೆ ಮಾತ್ರ ಅಳವಡಿಸಲಾಗಿದ್ದ ಟೈಪ್‌ರೈಟರನ್ನು ಈಗ ನೂರಾರು ಭಾಷೆಗಳಿಗೆ ಅಳವಡಿಸಿದ್ದಾರೆ. ಚಿತ್ರಲಿಪಿಗಳನ್ನು ಕೂಡ ಇದಕ್ಕೆ ಜೋಡಿಸಲಾಗುತ್ತಿದೆ. ಕೈಬರಹದಲ್ಲಿ ಒಂದು ಬಾರಿಗೆ ಕಾರ್ಬನ್ ಬಳಸಿದರೂ ಎರಡಕ್ಕಿಂತ ಹೆಚ್ಚು ಪ್ರತಿ ದೊರೆಯಲಾರದು. ಸ್ಟೆನ್ಸಿಲ್ ಎನ್ನುವ ಕಾಗದದ ಮೇಲೆ ಉಕ್ಕಿನ ಲೇಖನಿಯಿಂದ ಕೊರೆದು ಕಾಗದವನ್ನು ಉರುಳುಗಳ ಮಧ್ಯೆ ಜೋಡಿಸಿ, ಮಸಿಯ ಉಪಯೋಗದಿಂದ ಹಲವಾರು ಪ್ರತಿಗಳನ್ನು ತೆಗೆಯಬಹುದು. ಆದರೂ ಇದರಲ್ಲಿ ಬರವಣಿಗೆ ಸ್ಪಷ್ಟವಾಗಿ ಓರಣವಾಗಿ ಬರಲಾರದು. ಟೈಪ್‌ರೈಟರ್ ಇವೆಲ್ಲವನ್ನೂ ಸಾಧಿಸುತ್ತದೆ. ಮುದ್ರಣದಂಥ, ಯಾರು ಬೇಕಾದರೂ ಓದಬಹುದಾದ ಬರವಣಿಗೆ, ಒಂದೇ ಸಮನಾದ ಅಕ್ಷರಗಳು, ಒಂದೇ ಸಮನಾದ ಅಂಚು, ಮತ್ತು ಕೈಬರಹಗಾರನ ಅಳತೆಗೆ ಮೀರಿದ ಓಟ; ಸುಧಾರಿಸಿದ ಯಂತ್ರದಲ್ಲಿ ಅನೇಕ ಪ್ರತಿಗಳನ್ನು ತೆಗೆಯಬಹುದು. ಸ್ಟೆನ್ಸಿಲ್‌ಕಾಗದದ ಮೇಲೆ ಟೈಪ್ ಮಾಡುವುದರಿಂದ ನೂರಾರು ಪ್ರತಿಗಳನ್ನು ತೆಗೆಯಬಹುದು.

ನಾಗರಿಕ ವ್ಯವಹಾರ ರಂಗದಲ್ಲಿ ವಿಶಿಷ್ಟ ಸ್ಥಾನಗಳಿಸಿರುವ ಟೈಪ್‌ರೈಟರ್ 1868ರಲ್ಲಿ ಇಂದಿನ ಯಂತ್ರದ ಹೋಲಿಕೆಯುಳ್ಳ ಟೈಪ್‌ರೈಟರ್ ರೂಪದಲ್ಲಿ ಹೊರಬಂದಿತು. ಅದಕ್ಕೆ ಒಂದೂವರೆ ಶತಮಾನದ ಹಿಂದೆಯೇ ಇಂಗ್ಲೆಂಡಿನ ಹೆನ್ರಿ ಮಿಲ್ ಎಂಬವನು ಬರೆಯುವ ಯಂತ್ರಕ್ಕಾಗಿ ಲಿಖಿತ ಹಕ್ಕನ್ನು ಪಡೆದಿದ್ದ. ಆದರೆ ಆ ಯಂತ್ರ ಬೆಳಕಿಗೆ ಬರಲಿಲ್ಲ. ಸುಲಭವಾಗಿ ಉಪಯೋಗಿಸಬಹುದಾದ ಟೈಪ್‌ರೈಟರನ್ನು ಕ್ರಿಸ್ಟಫರ್ ಶೋಲೆ ಎಂಬವನು ಇತರರೊಡನೆ ತಯಾರಿಸಿದ.

ಒಂದು ಟೈಪ್‌ರೈಟರಿನಲ್ಲಿ 42ರಿಂದ 46 ಕೀಲಿಗಳಿರುತ್ತವೆ. ಪ್ರತಿ ಕೀಲಿಯ ಮೇಲೆ ಅಕ್ಷರ ಅಥವಾ ಅಂಕಿ ಅಥವಾ ಚಿಹ್ನೆ ಇರುತ್ತದೆ. ಇದನ್ನು ಬೆರಳಿನಿಂದ ಒತ್ತಿದರೆ ಒತ್ತಿದ ಅಕ್ಷರವೇ ಮೂಡುತ್ತದೆ. ಇಂಗ್ಲಿಷ್

ಲಿಪಿಗೆ ಷಿಫ್ಟ್ ಕೀಲಿಯನ್ನು ಒತ್ತಿ ದೊಡ್ಡಕ್ಷರ ಅಥವಾ ಸಣ್ಣಕ್ಷರಗಳನ್ನು ಮೂಡಿಸಬಹುದು. ಈ ಕೀಲಿಯ ಅನುಕೂಲವನ್ನು ಭಾರತೀಯ ಭಾಷೆಗಳಿಗೆ ಒತ್ತಕ್ಷರ, ದೀರ್ಘ ಮೊದಲಾದುವುಗಳಿಗೆ ಉಪಯೋಗಿಸಿಕೊಂಡಿದ್ದಾರೆ. ಡೆಡ್ ಕೀ ಅಥವಾ ನಿಶ್ಚೇಷ್ಟಿತ ಕೀಲಿಯನ್ನು ಒಂದೇ ಅಕ್ಷರಕ್ಕೆ ಕೊಂಬು, ಕೋಡುಗಳನ್ನು ಮೂಡಿಸುವುದಕ್ಕೆ ಉಪಯೋಗಿಸುತ್ತಾರೆ.

ಪ್ರತಿಯೊಂದು ಕೀಲಿಗೂ ಟೈಪ್‌ಬಾರ್ ಎಂಬ ಭಾಗಗಳು ಜೋಡಿಸಲ್ಪಟ್ಟಿರುತ್ತವೆ. ಇವರ ಅಗ್ರದಲ್ಲಿ ಮೇಲೊಂದು ಮತ್ತು ಕೆಳಗೊಂದು ಅಕ್ಷರ ಅಥವಾ ಚಿಹ್ನೆಗಳು ಉಬ್ಬಿದಂತೆ ಕೊರೆದ ಅಚ್ಚುಗಳ ರೂಪದಲ್ಲಿರುತ್ತವೆ. ಷಿಫ್ಟ್ ಕೀಲಿಯನ್ನು ಒತ್ತಿತೆಗೆಯುವುದರ ಮೂಲಕ ಮೇಲು ಕೆಳಗಿನ ಸಾಲುಗಳ ಅಕ್ಷರ ಅಥವಾ ಚಿಹ್ನೆಗಳನ್ನು ಬರೆಯಬಹುದು. ಟೈಪ್ ಮಾಡಬೇಕಾದ ಹಾಳೆಗಳನ್ನು ಎರಡು ಉರುಳುಗಳು ಅಥವಾ ಸ್ತಂಭಾಕೃತಿಯ ಮಧ್ಯೆ ಸಿಕ್ಕಿಸಲಾಗಿರುತ್ತದೆ. ಕಾಗದವನ್ನು ಮೇಲೆ ಕೆಳಗೆ ಅಕ್ಕಪಕ್ಕಗಳಿಗೆ ಸರಿಸಬಹುದು. ಕಾಗದಕ್ಕೂ ಅಚ್ಚಿಗೂ ಮಧ್ಯೆ ಬಣ್ಣದ ಪಟ್ಟಿ (ರಿಬ್ಬನ್) ಒಂದಿರುತ್ತದೆ. ಕೀಲಿಯೊತ್ತಿದಾಗ ಅದರ ಮೇಲೆ ಅಚ್ಚು ಒತ್ತುತ್ತದೆ. ಕಾಗದದ ಮೇಲೆ ಅಕ್ಷರ ಮೂಡುತ್ತದೆ. ಪ್ರತಿಯೊಂದು ಅಕ್ಷರದ ಅನಂತರವೂ ಒತ್ತು ಯಂತ್ರ ತಾನಾಗಿ ಒಂದು ಜಾಗ ಸರಿಯುತ್ತದೆ. ಮಧ್ಯೆ ಖಾಲಿ ಜಾಗ ಬೇಕಾದರೆ ಸರಿಸಲು ಅಂತರದ ಕಂಬಿಯನ್ನು ಒತ್ತಬೇಕಾಗುವುದು. ನಮಗೆ ಅವಶ್ಯವಿದ್ದಷ್ಟು ಮಾರ್ಜಿನ್ ಅಥವಾ ಎಡಗಡೆಯ ಅಂಚನ್ನು ಮೊದಲೇ ಯಂತ್ರದಲ್ಲಿ ನಿರ್ಧರಿಸಿ ಸರಿಪಡಿಸಿದ್ದರೆ ಪ್ರತಿಯೊಂದು ಸಾಲಿಗೂ ಯಂತ್ರವು ಅಂಚಿಗೆ ಸರಿಯಾಗಿ ಬಂದು ನಿಲ್ಲುತ್ತದೆ. ಸಾಲಿನ ಬಲಗಡೆಯ ಕೊನೆಗೆ ಬರುತ್ತಲೇ ಗಂಟೆಯೊಂದು ಮುಂದಿನ ಸಾಲಿಗೆ ಹೋಗಬೇಕೆಂದು ಸೂಚಿಸುತ್ತದೆ. ಸಾಧಾರಣವಾಗಿ 2.54 ಸೆಂಟಿಮೀಟರಿಗೆ ಹತ್ತು ಅಕ್ಷರಗಳು ಬರುತ್ತವೆ. ಇದಕ್ಕಿಂತಲೂ ದೊಡ್ಡ ಮತ್ತು ಸಣ್ಣ ಅಕ್ಷರಗಳ ಟೈಪ್‌ರೈಟರುಗಳೂ ಇರುತ್ತವೆ. ಹೀಗೆ ಮೇಲೆ, ಕೆಳಗೆ, ಹಿಂದಕ್ಕೆ, ಮುಂದಕ್ಕೆ ಯಾವ ರೀತಿಯಲ್ಲಿ ಬೇಕಾದರೂ ಯಂತ್ರವನ್ನು ಚಲಿಸಿ ಬೇಕಾದ ತಿದ್ದುಪಡಿಗಳನ್ನು ಮಾಡಬಹುದು. ಟೈಪ್‌ರೈಟರನ್ನು ಅನೇಕ ಪರಿಶ್ರಮಿಗಳು ಕಲೆಯಸಾಧನವಾಗಿ ಉಪಯೋಗಿಸಿ ಚಿತ್ರಣವನ್ನೂ ಕರಗತ ಮಾಡಿಕೊಂಡಿದ್ದಾರೆ.

ಬೆರಳಚ್ಚು ಕಚೇರಿಗಳಲ್ಲಿ ಅತ್ಯವಶ್ಯ. ಇದರಿಂದ ಪತ್ರ ವ್ಯವಹಾರಕ್ಕೆ ಬಹಳ ಅನುಕೂಲ.

ಕನ್ನಡದಲ್ಲಿ ಮೊದಲು ಬೆರಳಚ್ಚು ತಯಾರಿಸಿದವರು ಅನಂತ ಸುಬ್ಬರಾಯರು. ಈ ಯಂತ್ರದ ಬಗೆಗೆ ಸಾಕಷ್ಟು ವಿಚಾರವಿನಿಮಯ ನಡೆದು ಈಗ ಕನ್ನಡ ಬೆರಳಚ್ಚು ಎಲ್ಲೆಡೆಗಳಲ್ಲೂ ಉಪಯೋಗದಲ್ಲಿದೆ.

ಟೈಪ್‌ರೈಟರುಗಳಲ್ಲಿ ಹಲವಾರು ವಿಧಗಳು. ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸಾಗಿಸಬಹುದಾದಂಥ ಪುಟ್ಟ ಯಂತ್ರಗಳು, ಕಚೇರಿಗಳಲ್ಲಿ ಉಪಯೋಗಕ್ಕೆ ಬರುವಂಥದು, ನಿಶ್ಶಬ್ದವಾಗಿ ಕೆಲಸ ಮಾಡುವುದು. ವಿದ್ಯುತ್ ಚಾಲಿತಯಂತ್ರ—ಹೀಗೆ ಅನೇಕ ವಿಧಗಳಿವೆ. ಇದೇ ಯಂತ್ರದಿಂದ ಗಣಕಯಂತ್ರ ಅಂದರೆ ಲೆಕ್ಕ ಹಾಕುವ ಯಂತ್ರಗಳು ಬಂದಿವೆ. ಟೈಪ್ ಮಾಡಲು ಚೆನ್ನಾಗಿ ಬಲ್ಲವನು ಒಂದು ನಿಮಿಷಕ್ಕೆ 125 ಪದಗಳನ್ನು ಕೂಡ ಒತ್ತಬಲ್ಲ. ಕೇವಲ ಯಾಂತ್ರಿಕ ಜೋಡಣೆಯಾದರೆ 1,00,000 ಅಕ್ಷರಗಳನ್ನು ಟೈಪ್ ಮಾಡಬಹುದು ಎನ್ನುತ್ತಾರೆ.

ಟೈಪ್ ಮಾಡುವಾಗ ಬೆನ್ನು ಬಾಗಬಾರದು. ಕುರ್ಚಿ ಮೇಜುಗಳ ಎತ್ತರ ಸರಿಯಾಗಿರಬೇಕು. ಮತ್ತು ಕೆಲಸಗಾರರಿಗೆ ಹಿತವೆನಿಸುವಂತಿರಬೇಕು. ಕೈಗಳು ಶ್ರಮವಿಲ್ಲದೆ ಕೀಲಿಗಳ ಮೇಲಿರಬೇಕು. ಸರಿಯಾದ ರೀತಿಯಲ್ಲಿ ಕೆಲಸ ಮಾಡಿದರೆ ಆಯಾಸವಿಲ್ಲದೆ ಹೆಚ್ಚು ಬರವಣಿಗೆ ಸಾಧ್ಯ.

## ಟೋಕಿಯೊ

ಸುಂದರ ಉದ್ಯಾನಗಳ ನಗರವಾದ ಟೋಕಿಯೊ, ಪ್ರಪಂಚದಲ್ಲೇ ಅತಿ ದೊಡ್ಡ ನಗರವೆನಿಸಿದೆ. ಬೆಟ್ಟಗಳ ಶ್ರೇಣಿ ಮೂರು ಕಡೆಗಳಲ್ಲಿ ನಗರವನ್ನು ಸುತ್ತುವರಿದಿದೆ. ಟೋಕಿಯೊ, ಜಪಾನಿನ ದೊಡ್ಡ ದ್ವೀಪ ಹಾನ್‌ಷು ನಲ್ಲಿದೆ. ಜಪಾನಿನ ರಾಜಕೀಯ, ಸಾಂಸ್ಕೃತಿಕ ಮತ್ತು ಕೈಗಾರಿಕಾ ನೆಲೆ ಟೋಕಿಯೊ.

ಟೋಕಿಯೊದ ಜನಸಂಖ್ಯೆ ಸುಮಾರು ಒಂದು ಕೋಟಿ ಎರಡೂವರೆ ಲಕ್ಷ. ಜಪಾನಿನ ಜನರಲ್ಲಿ ಹತ್ತರಲ್ಲಿ ಒಂದು ಭಾಗ ಇಲ್ಲಿ ವಾಸಿಸುತ್ತಾರೆ. ಅಗ್ನಿ.



ಅತ್ಯಾಧುನಿಕ ನಗರದ ನಡುವೆ ಪ್ರಶಾಂತ ದೇವಾಲಯ

ಭೂಕಂಪಗಳ ಹಾವಳಿಯಿಂದ ಪ್ರತಿ ವರ್ಷ ಅಪಾರ ನಷ್ಟ ಸಂಭವಿಸುತ್ತಲೇ ಇರುತ್ತದೆ. ಹಳೆ ಮಾದರಿಯ ಕಟ್ಟಡಗಳು ಮುರಿದು ಬಿದ್ದಾಗ ಅವುಗಳ ಜಾಗದಲ್ಲಿ ಪಾಶ್ಚಾತ್ಯ ಮಾದರಿಯ ಹೊಸ ಕಟ್ಟಡ ಕಟ್ಟುತ್ತಾರೆ. 1923ರ ಸೆಪ್ಟೆಂಬರಿನಲ್ಲಿ ಆದ ಭೂಕಂಪ ಬಹು ಭಯಾನಕವಾದದ್ದು. ಒಂದೂವರೆ ಲಕ್ಷ ಮಂದಿ ಸಾವುನೋವಿಗೀಡಾದರಲ್ಲದೆ ನಗರದ ಅನೇಕ ಭಾಗಗಳು ಸುಟ್ಟು ಬೂದಿಯಾದುವು.

ಎರಡನೆಯ ಮಹಾಯುದ್ಧದ ಅಂತ್ಯ ಭಾಗದಲ್ಲಿ ಟೋಕಿಯೊ ಬಾಂಬ್ ದಾಳಿಗೆ ತುತ್ತಾಯಿತು. ನಗರವೆಲ್ಲಾ ಗುರುತಿಸಲಾಗದಂತೆ ನಾಶವಾಗಿತ್ತು. ನಗರದ ಪುನರ್ನಿರ್ಮಾಣ ಅತ್ಯಂತ ನವ್ಯ ವಿಧಾನದಲ್ಲಿ ಚುರುಕಾಗಿ ನಡೆಯಿತು.

ಜಪಾನ್ ಚಕ್ರವರ್ತಿಯ ಅರಮನೆ ನಗರದ ಮಧ್ಯಭಾಗದಲ್ಲಿದೆ. ಅದರ ಸಮೀಪದಲ್ಲೇ ಸರಕಾರಿ ಕಚೇರಿಗಳು, ರಾಯಭಾರಿ ಕಚೇರಿಗಳು ಇವೆ. ಇಲ್ಲಿನ ರಸ್ತೆಗಳು ಅಂಕು ಡೊಂಕು. ಬಹು ವರ್ಷಗಳು ಇಲ್ಲಿಯೇ ವಾಸಿಸಿದವರೂ ದಾರಿ ತಪ್ಪುತ್ತಾರಂತೆ. ನಗರ ವೇಗವಾಗಿ ಬೆಳೆಯುತ್ತಿದೆ. ಹಿಸಾಕೀರ ಕಾನೊ ಎಂಬಾತ ಒಂದೊಂದರಲ್ಲಿ ಮೂವತ್ತು ಸಾವಿರ ಜನ ವಾಸಿಸಬಹುದಾದ ಆರು ಕಟ್ಟಡಗಳನ್ನು ಕಟ್ಟಿದ್ದಾನೆ. ವಾಹನಗಳ ವೇಗದ ಓಡಾಟಕ್ಕೆಂದು ನೆಲದಿಂದ ಎತ್ತರದಲ್ಲಿ ರಸ್ತೆಗಳನ್ನು ನಿರ್ಮಿಸಿದ್ದಾರೆ.

1603ರಲ್ಲಿ ಟೋಕಿಯೊ ಜಪಾನಿನ ರಾಜಧಾನಿಯಾಯಿತು. ಟೋಕಿಯೊ ಎಂದರೆ ಪೂರ್ವದ ರಾಜಧಾನಿ. ಇದಕ್ಕೆ ಮೊದಲು ರಾಜಧಾನಿಯಾಗಿದ್ದುದು 'ಕೊಯಟೊ'—ಪಶ್ಚಿಮದ ರಾಜಧಾನಿ. ಟೋಕಿಯೊ ವಿಶ್ವವಿದ್ಯಾನಿಲಯ 1877ರಲ್ಲಿ ಸ್ಥಾಪಿತವಾಯಿತು. 1964ರ ಒಲಿಂಪಿಕ್ ಪಂದ್ಯಗಳು ಟೋಕಿಯೊದಲ್ಲಿ ನಡೆದುವು.

ನೋಡಿ : ಜಪಾನ್



ಮಾನವನಿಗೂ ಮಂಗನಿಗೂ ಸಂಬಂಧ ಕಲ್ಪಿಸಿದ ಡಾರ್ವಿನ್

## ಡಾರ್ವಿನ್, ಚಾರ್ಲ್ಸ್

1831ನೆಯ ಇಸವಿ. ಬಿರುಗಾಳಿ ಬಲವಾಗಿ ಬೀಸುತ್ತಿತ್ತು. ಮೈ ಕೊರೆಯುತ್ತಿದ್ದ ಚಳಿ. ಸಮುದ್ರದಲ್ಲಿ ಹೋಗುತ್ತಿದ್ದ ಹಡಗೊಂದು, ಏರುತ್ತಿದ್ದ ಅಲೆಗಳ ಕೈಯಲ್ಲಿ ಸಿಕ್ಕು ಬುಗರಿಯಂತಾಡುತ್ತಿತ್ತು. ನೀರು ಬಾನುಗಳ ಈ ಸರಸ ಹಡಗಿನ ಇಪ್ಪತ್ತೆರಡರ ಯುವಕ ಪ್ರಯಾಣಿಕನೊಬ್ಬನಿಗೆ ಪ್ರಾಣ ಸಂಕಟವನ್ನೇ ತಂದಿತು. ಹಡಗಿನ ಹೊರಳಿಕೆ, ಏರುವಿಕೆ, ಇಳಿಯುವಿಕೆ ಇವೆಲ್ಲವೂ ಅವನ ಅಸ್ವಸ್ಥತೆಯನ್ನು ಇಮ್ಮಡಿಸಿದುವು. ಸಮುದ್ರ ಪಿತ್ತದ ಬವಣೆಗೆ ಸಿಕ್ಕಿ ನೊಂದ ಆ ವ್ಯಕ್ತಿ ಮತ್ತೆಂದೂ ತಾನು ಸಮುದ್ರ ಪ್ರಯಾಣವನ್ನು ಕೈಗೊಳ್ಳುವುದಿಲ್ಲ ಎಂದುಕೊಂಡ. ಹಾಗಿದ್ದರೂ ತಾನಾಗಿಯೇ ಆರಿಸಿಕೊಂಡ ಈ ಕೆಲಸವನ್ನು ಬಿಡುವುದುಂಟೆ? ಅದು ಆಗದ ಮಾತು. ಏನೇ ಆದರೂ ತಾನು ಹಿಮ್ಮೆಟ್ಟುವುದಿಲ್ಲ ಎಂಬ ಅಚಲ ನಿರ್ಧಾರಕ್ಕೆ ಬಂದ. ಅಂದು ಅವನು ಕೈಗೊಂಡ ನಿರ್ಧಾರದಿಂದ ಜಗತ್ತಿಗೆ ಒಬ್ಬ ಅಪ್ರತಿಮ ವಿಜ್ಞಾನಿ ದೊರಕಿದ.

ಹಡಗಿನಲ್ಲಿದ್ದ ಯುವಕ ಚಾರ್ಲ್ಸ್ ಡಾರ್ವಿನ್; ಹಡಗು, ಪ್ರಪಂಚದ ಅನ್ವೇಷಣೆಗಾಗಿ ಇಂಗ್ಲೆಂಡಿನ ರಾಣಿ ನಿಯಮಿಸಿದ್ದ 'ಬೀಗ್ಲ್' ಎಂಬುದು.

ಡಾರ್ವಿನ್ ಇಂಗ್ಲೆಂಡಿನ ಶ್ರೂಸ್‌ಬರಿಯಲ್ಲಿ 1809 ಫೆಬ್ರವರಿ 12ರ ದಿನಾಂಕ ಅಮೆರಿಕದ ಅಬ್ರಹಾಂ ಲಿಂಕನ್ ಜನಿಸಿದ ದಿನದಂದೇ ಹುಟ್ಟಿದ. ಅವನ ತಂದೆ ರಾಬರ್ಟ್ ಡಾರ್ವಿನ್‌ಗೆ ತನ್ನಂತೆಯೇ ಮಗನೂ ವೈದ್ಯಪತಿಯಾಗಬೇಕೆಂದು ಆಸೆ. ಆದರೆ ವಿಜ್ಞಾನದಲ್ಲಿ ಚಾರ್ಲ್ಸ್‌ಗೆ ಇದ್ದ ಆಸಕ್ತಿಯನ್ನು ಅವನು ಮೆಚ್ಚದಿರಲಿಲ್ಲ.

ಡಾರ್ವಿನ್, ತನ್ನ ಆರನೆಯ ವಯಸ್ಸಿನಲ್ಲಿ ಶಾಲೆಗೆ ಸೇರಿದ. ಶಾಲೆಯ ನೀರಸ ಜೀವನ ಅವನಿಗೆ ಬೇಸರವನ್ನು ತಂದಿತು. ಪಠ್ಯಕ್ರಮ ಉಪಯುಕ್ತವಾಗಿರಲಿಲ್ಲ. ಚಾರ್ಲ್ಸ್‌ನ ಕುತೂಹಲವನ್ನು ತಣಿಸುವ ತಾಳ್ಮೆ ಅವನ ಉಪಾಧ್ಯಾಯರಿಗೆ ಇರಲಿಲ್ಲ. ಶಾಲೆಯಲ್ಲಿ ಅವನು ಪೆಚ್ಚಾಗಿ ಕುಳಿತಿರುತ್ತಿದ್ದ. ಎಲ್ಲರೂ ಅವನನ್ನು 'ಪೆದ್ದು', 'ಮಂಕು' ಎಂದರು.

ಚಿಕ್ಕಂದಿನಿಂದಲೂ ಡಾರ್ವಿನನಿಗೆ ಪ್ರಕೃತಿಯ ಬಗೆಗೆ ಆತ್ಮೀಯತೆ. ತೋಟದಲ್ಲಿ ಆಟವಾಡುವುದೆಂದರೆ ಎಲ್ಲಿಲ್ಲದ ಹಿಗ್ಗು. ಬಣ್ಣದ ಚಿಟ್ಟೆಗಳನ್ನು ಸಂಗ್ರಹಿಸುತ್ತಿದ್ದ. ಹಕ್ಕಿಗಳನ್ನು ಹಿಡಿಯುವುದೆಂದರೆ ಬೇಟೆಯಾಡುವುದೆಂದರೆ ತುಂಬ ಆಸೆ. ಬಿಡುವಿನ ವೇಳೆಯಲ್ಲಿ ಕಲ್ಲುಚೂರು, ಲೋಹದ ಚೂರು ಮತ್ತು ನಾಣ್ಯಗಳನ್ನು ಸಂಗ್ರಹಿಸಿ ಅವನ್ನು ವಿಂಗಡಿಸಿ, ಅವುಗಳ ವಿಚಾರ ಹೆಚ್ಚು ತಿಳಿಯಲು ಪ್ರಯತ್ನಿಸುತ್ತಿದ್ದ. ಇದರಿಂದ ವಿವರಗಳನ್ನು ಗಮನಿಸುವ ಶಕ್ತಿ, ವೈಚಾರಿಕತೆ ಮತ್ತು ಪರಿಶೀಲನಾ ಸಾಮರ್ಥ್ಯಗಳು ಅವನಲ್ಲಿ ಹೆಚ್ಚುತ್ತಾ ಬಂದುವು. ಪ್ರಕೃತಿಯೇ ಅವನ ಶಾಲೆ, ಶಾಲೆಯೇ ಅವನ ವಿಶ್ರಾಂತಿಧಾಮ. ಸಸ್ಯಶಾಸ್ತ್ರ ಮತ್ತು ಪ್ರಾಣಿಶಾಸ್ತ್ರದ ಬಗೆಗೆ ಪುಸ್ತಕಗಳನ್ನು ಓದಿ ತನ್ನ ಅಭಿರುಚಿಯನ್ನು ಡಾರ್ವಿನ್ ವೃದ್ಧಿಪಡಿಸಿಕೊಂಡ.

ಸ್ವಲ್ಪಕಾಲ ವೈದ್ಯ ವಿಜ್ಞಾನವನ್ನೂ ಅನಂತರ ಮತಧರ್ಮವನ್ನೂ ಅಧ್ಯಯನ ಮಾಡಿ, ಡಾರ್ವಿನ್ ಕೇಂಬ್ರಿಜ್‌ನಲ್ಲಿ ಜೀವವಿಜ್ಞಾನದ ಅಭ್ಯಾಸವನ್ನು ಮುಂದುವರಿಸಿದ. ಹೆನ್‌ಸ್ಲೊ ಎಂಬ ತಜ್ಞರ ಬಳಿ ಸಸ್ಯ ವಿಜ್ಞಾನವನ್ನು ಕಲಿತ. ಅವನ ಪ್ರತಿಭೆಯನ್ನು ಹೆನ್‌ಸ್ಲೊ ಚೆನ್ನಾಗಿ ಅರಿತಿದ್ದರು. ತಮ್ಮ ಜ್ಞಾನ ಭಂಡಾರವನ್ನೆ ಅವನಿಗೆ ಧಾರೆಯೆರೆದರು. ಚಾರ್ಲ್ಸ್ 1831ರಲ್ಲಿ ಬಿ. ಎ. ಪದವೀಧರನಾದ.

ಹೆನ್‌ಸ್ಲೊ ಅವರ ಪ್ರಯತ್ನದಿಂದ ದಕ್ಷಿಣಾರ್ಧಗೋಳದ ಪರ್ಯಟನೆಗೆ ಹೊರಟಿದ್ದ 'ಬೀಗಲ್'ನಲ್ಲಿ ಚಾರ್ಲ್ಸ್‌ಗೆ ಪ್ರಕೃತಿ ವಿಜ್ಞಾನಿಯ ಕೆಲಸ ದೊರೆಯಿತು. ಅವನ ತಂದೆ ಮನಸ್ಸಿಲ್ಲದ ಮನಸ್ಸಿನಿಂದ ಇದಕ್ಕೆ ಒಪ್ಪಿದ. ಪ್ರಯಾಣ 1831ರಿಂದ 1836ರವರೆಗೆ ನಡೆಯಿತು. ಈ ಪ್ರವಾಸ ಡಾರ್ವಿನನ ಜೀವನದಲ್ಲಿಯೂ ವಿಜ್ಞಾನದ ಇತಿಹಾಸದಲ್ಲಿಯೂ ಮಹತ್ವದ ಸ್ಥಾನ ಪಡೆಯಿತು.

ಪ್ರವಾಸ ಕಾಲದಲ್ಲಿ ನೋಡಿದ, ತೋರಿದ ಅಂಶಗಳೆಲ್ಲವನ್ನೂ ಡಾರ್ವಿನ್ ಬರೆದಿಟ್ಟ. ಅಗ್ನಿಪರ್ವತಗಳ ವಿನ್ಯಾಸ, ತೀರ ಪ್ರದೇಶಗಳ ಭೂಲಕ್ಷಣ, ಕೀಟ ಮತ್ತು ವಿಶೇಷ ಸಸ್ಯಗಳ ಪರಿಶೀಲನೆ, ವಿವಿಧ ಪ್ರಾಣಿಗಳ ಸಹಜೀವನ-ಹೋರಾಟ, ಇವೆಲ್ಲವೂ ಅವನಿಗೆ ಅಚ್ಚರಿಯ ಸಂಗತಿಗಳಾಗಿದ್ದುವು. ಉಷ್ಣವಲಯದ ಜೀವಿಗಳನ್ನೂ ಅವುಗಳ ಅಸಂಖ್ಯಾತ ಶಾಖೆಗಳನ್ನೂ ನೋಡಿ ಬೆರಗಾದ.

ದೀರ್ಘಕಾಲದ ಸತತ ಅಧ್ಯಯನದಿಂದ ಜೀವಿಜಾತಿಗಳ ಉಗಮದ ಬಗೆಗೆ ತನ್ನದೇ ಆದ ಸಿದ್ಧಾಂತವೊಂದನ್ನು ಮಂಡಿಸಲು ಡಾರ್ವಿನ್ ಸಮರ್ಥನಾದ. ಇತರ ವಿಜ್ಞಾನಿಗಳ ಸಲಹೆಯನ್ನೂ ಪಡೆದು ವಿಕಾಸ ತತ್ತ್ವದ ಮೇಲೆ 'ಪ್ರಕೃತಿಯ ಆಯ್ಕೆಯಿಂದ ಜೀವಿಜಾತಿಗಳ ಉಗಮ ಅಥವಾ ಬದುಕಿನ ಹೋರಾಟದಲ್ಲಿ ಅತಿ ಯೋಗ್ಯವಾದುವುಗಳ ಉಳಿಕೆ' ಎಂಬ ಪುಸ್ತಕವನ್ನು ಬರೆದು ಪ್ರಕಟಿಸಿದ (1858). ಈ ಪುಸ್ತಕ ಪ್ರಕಟವಾಗುವ ಮೊದಲೇ ವ್ಯಾಲೆಸ್ ಎಂಬವನು ಇದೇ ತತ್ತ್ವವನ್ನು ಪ್ರತಿಪಾದಿಸಿದ್ದ. ವಿಜ್ಞಾನ ರಂಗದಲ್ಲಿ ಬಹುಕಾಲದಿಂದ ದುಡಿದಿರುವನೆಂಬ ಗೌರವದಿಂದ ಆ ತತ್ತ್ವ ನಿರೂಪಣೆಯ ಹಕ್ಕನ್ನು ವ್ಯಾಲೆಸ್ ಡಾರ್ವಿನನಿಗೆ ಬಿಟ್ಟುಕೊಟ್ಟ.

ಜಗತ್ತಿನ ಜೀವರಾಶಿ ಎಲ್ಲ ಒಂದೇ ಕಾಲದಲ್ಲಿ ಸೃಷ್ಟಿಯಾಗಲಿಲ್ಲ. ಕೆಲವು ಬಗೆಯ ಪ್ರಾಣಿಗಳು ಮಾರ್ಪಾಡಾದುವು, ಕೆಲವು ನಿರ್ನಾಮವಾದುವು, ಹೊಸ ಜಾತಿಗಳು ಬಂದುವು, ಉಳಿವಿನ ಹೋರಾಟದಲ್ಲಿ ಬದುಕಲು ಸಮರ್ಥರಾದ ಜಾತಿಗಳು ಮಾತ್ರ ಉಳಿಯುತ್ತವೆ, ಜಾತಿಗಳಲ್ಲಿ ಸಹಾಯಕವಾದ ಮಾರ್ಪಾಡುಗಳಾದರೆ ಉಳಿಯುತ್ತವೆ, ಇಲ್ಲವಾದರೆ ನಾಶವಾಗುತ್ತವೆ, ಮನುಷ್ಯನೂ ಮಾರ್ಪಾಡುಗಳ ಸರಪಳಿಯ ಒಂದು ಕೊಂಡಿ, ಹಿಂದಿನ ಕೊಂಡಿ ಮಂಗ-ಎಂದು ವಾದಿಸಿದ ಡಾರ್ವಿನ್. ಇದು ಅವನ ಜಗತ್ಪ್ರಸಿದ್ಧ ವಾದವಾದ 'ವಿಕಾಸವಾದ.'

ಡಾರ್ವಿನನ ಈ ವಿಕಾಸವಾದ ಬೆಳಕಿಗೆ ಬಂದೊಡನೆ ವಿಜ್ಞಾನ ಪ್ರಪಂಚದಲ್ಲಿ ಅಲ್ಲೋಲಕಲ್ಲೋಲವಾಯಿತು. ಮಂಗನಿಂದ ಮಾನವರ ಉಗಮವೆಂಬ ಮಾತು ಇಡೀ ಮಾನವ ಕುಲಕ್ಕೆ ಅವಮಾನಕರ ಎಂದು ಕೆಲವರು ಭಾವಿಸಿದರು. ದೇವರು ಜಗತ್ತನ್ನು ಆರು ದಿನಗಳಲ್ಲಿ ಸೃಷ್ಟಿಸಿದ, ಆರನೆಯ ದಿನ ಮನುಷ್ಯನನ್ನು ತನ್ನ ಪ್ರತಿಬಿಂಬವಾಗಿ ನಿರ್ಮಾಣ ಮಾಡಿದ, ಮಾನವ ಪ್ರಾಣಿಗಳ ಪ್ರಭು, ದೇವರ ಪ್ರತಿನಿಧಿ ಎಂಬ ನಂಬಿಕೆಗಳನ್ನು ಇಟ್ಟುಕೊಂಡಿದ್ದ ಶ್ರದ್ಧಾವಂತರು ಕೋಪಗೊಂಡರು. ಎರಡು ಪಕ್ಷಗಳಲ್ಲಿಯೂ ವಾದವಿವಾದಗಳು ಬಿರುಸಾಗಿ ನಡೆದುವು.

ವಿಕಾಸವಾದದ ಭಾವನೆಯನ್ನು ಮೊಟ್ಟಮೊದಲಿಗೆ ತಿಳಿಸಿದವನು ಡಾರ್ವಿನ್ ಅಲ್ಲ. ಇತಿಹಾಸದಲ್ಲಿ ಅರಿಸ್ಟಾಟಲನ ಕಾಲದಿಂದಲೂ ಈ ಭಾವನೆ ಬಂದಿದೆ. ಅಲ್ಲದೆ ಕಾಲಕಳೆದಂತೆ ಅವನ ಸಿದ್ಧಾಂತವನ್ನು ಇತರ ವಿಜ್ಞಾನಿಗಳು ಮಾರ್ಪಡಿಸಿದ್ದಾರೆ. ಆದರೆ ಹಿಂದಿನವರು ಯಾರೂ ಈ ವಾದದ ಪ್ರತಿಪಾದನೆಗೆ ತಕ್ಕ ಪ್ರಮಾಣಗಳನ್ನು ಕೊಟ್ಟಿರಲಿಲ್ಲ. ವಿಕಸನದ ರೀತಿಗೆ ಸಕಾರಣ ವಿವರಣೆಯನ್ನು ಪ್ರಪ್ರಥಮವಾಗಿ ಡಾರ್ವಿನ್ ಒದಗಿಸಿದ. ಇದು ಅವನ ಮಹತ್ಸಾಧನೆ ; ವಿಜ್ಞಾನ ಪ್ರಪಂಚಕ್ಕೆ ಅವನ ಅಪೂರ್ವ ಕೊಡುಗೆ.

ಡಾರ್ವಿನ್ ತನ್ನ 73ನೆಯ ವಯಸ್ಸಿನಲ್ಲಿ (1882 ಏಪ್ರಿಲ್ 19) ನಿಧನನಾದ.

ಮಾನವನ ಬೌದ್ಧಿಕ ಮುನ್ನಡೆಗೆ ಕಾರಣರಾದ ಮಹಾ ಮೇಧಾವಿಗಳ ಅಗ್ರಪಂಕ್ತಿಗೆ ಸೇರಿದವನು ಡಾರ್ವಿನ್.

## ಡೆನ್ಮಾರ್ಕ್

ಸುಮಾರು 15,000 ವರ್ಷಗಳ ಹಿಂದೆ, ಹಿಮ ಕರಗಿ, ಜಿಂಕೆಗಳು ಆ ನೆಲದಲ್ಲಿ ಕಾಣಿಸಿಕೊಂಡುವು. ಜಿಂಕೆಗಳನ್ನು ಬೆನ್ನಟ್ಟಿ ಬೇಟೆಗಾರರು ಕಾಲಿಟ್ಟರು. ಆ ನೆಲವೇ ಈಗಿನ ಡೆನ್ಮಾರ್ಕ್. ಆ ಬೇಟೆಗಾರರೇ ಅಲ್ಲಿಗೆ ಬಂದ ಮೊದಲ ಮಾನವರು.

ಡೆನ್ಮಾರ್ಕ್ ದಕ್ಷಿಣದಲ್ಲಿ ಜರ್ಮನಿಯನ್ನು ಬಿಟ್ಟರೆ, ಉಳಿದ ಕಡೆಗಳಲ್ಲಿ ಸಮುದ್ರದಿಂದ ಸುತ್ತುವರಿಯಲ್ಪಟ್ಟಿದೆ. ಜಟ್‌ಲೆಂಡ್ ಮತ್ತು ಅದರ ಹತ್ತಿರ ಇರುವ ಐದು ಸಣ್ಣ ನಡುಗಡ್ಡೆಗಳು ಕೂಡಿ ಡೆನ್ಮಾರ್ಕ್ ಎನಿಸಿದೆ. ಡೆನ್ಮಾರ್ಕಿನಲ್ಲಿ ಚಿಕ್ಕ ಚಿಕ್ಕ ಬೆಟ್ಟಗಳೂ ಕಡಲು ಒಳಬಂದು ಆಗಿರುವ ಚಿಕ್ಕ ಕಾಲುವೆಗಳೂ ತುಂಬಿವೆ.

ಡೆನ್ಮಾರ್ಕಿನದು ಸಮಶೀತೋಷ್ಣ ಹವಾಗುಣ.

ಮಣ್ಣು ಇಲ್ಲಿನ ಮುಖ್ಯ ನೈಸರ್ಗಿಕ ಸಂಪತ್ತು. ಅಧಾರಶಿಲೆ, ಸುಣ್ಣಕಲ್ಲು, ಸೀಮೆಸುಣ್ಣ, ಕೇಯೊಲಿನ್‌ಗಳೂ ತುಂಬಾ ಸಿಗುತ್ತವೆ. ಸಸ್ಯಾಂಗಾರ ಮುಖ್ಯ ಖನಿಜ.

ದನಗಳನ್ನು ಸಾಕುವುದೂ ಗಿಣ್ಣು ಮತ್ತು ಬೆಣ್ಣೆ ತಯಾರಿಸುವುದೂ ಮುಖ್ಯ ಉದ್ಯೋಗಗಳು. ಬೆಣ್ಣೆ, ಗಿಣ್ಣು ರಫ್ತಾಗುತ್ತವೆ.

ಡೆನ್ಮಾರ್ಕಿನ ಜನ–ಡೇನರು–ಒಳ್ಳೆಯ ನಾವಿಕರು; ಮೀನು ಹಿಡಿಯುವುದರಲ್ಲಿ ಗಟ್ಟಿಗರು. ಕ್ರಿ. ಪೂ. 2500ರ ಹೊತ್ತಿಗೆ ಡೆನ್ಮಾರ್ಕಿನ ಜನ ವ್ಯವಸಾಯ ಮಾಡಲು ಕಲಿತರು. ಇಲ್ಲಿ ತಯಾರಾಗುವ ಮರದ ಮೇಜು, ಕುರ್ಚಿ ಇಂಥ ಉಪಕರಣಗಳು ಅತ್ಯಾಧುನಿಕವಾಗಿ ಆಕರ್ಷಕವಾಗಿರುತ್ತವೆ. ಜಾಗತಿಕ ಪೇಟೆಯಲ್ಲಿ ಇವುಗಳಿಗೆ ಬೆಲೆ ಇದೆ.

ರಾಜಧಾನಿ ಕೋಪನ್‌ಹೇಗನ್ ದೊಡ್ಡ ಬಂದರು ಮತ್ತು ಪ್ರಮುಖ ಕೈಗಾರಿಕಾ ನಗರ. ಡೆನ್ಮಾರ್ಕಿನ ಜನಸಂಖ್ಯೆಯ ಆರನೆಯ ಒಂದು ಭಾಗ ಇಲ್ಲಿಯೇ ವಾಸಿಸುತ್ತಾರೆ.

ಐದನೆಯ ಶತಮಾನದಲ್ಲಿ ಡೇನಿಷ್ ಮತ್ತು ಜರ್ಮನ್ ಬುಡಕಟ್ಟಿನ ಜನರು ಉತ್ತರ ಸಮುದ್ರದ ಕಡೆಯಿಂದ ನುಗ್ಗಿಬಂದು ಬ್ರಿಟಿಷ್ ದ್ವೀಪದ ಪೂರ್ವಭಾಗದಲ್ಲಿ ನೆಲೆಸಿ, ಆಗಾಗ ಪಶ್ಚಿಮ ಯೂರೋಪಿನ ತೀರ ಪ್ರದೇಶಗಳ ಮೇಲೆ ದಾಳಿ ಮಾಡುತ್ತಿದ್ದರು. ಮುಂದೆ ಕ್ರೈಸ್ತಧರ್ಮ ಪ್ರಚಾರಕ್ಕೂ ವ್ಯಾಪಾರಕ್ಕೂ ಪೂರ್ವ ದಿಕ್ಕಿನತ್ತ ಹೊರಟರು. ಮಧ್ಯಯುಗದಲ್ಲಿ

ಡೆನ್ಮಾರ್ಕ್ ಬಾಲ್ಟಿಕ್ ಸಮುದ್ರದ ವಾಣಿಜ್ಯವನ್ನು ಹತೋಟಿಗೆ ತೆಗೆದು ಕೊಂಡು, ಅಲ್ಲಿ ಹಾದು ಹೋಗುವ ಹಡಗುಗಳ ಮೇಲೆ 1857ರ ತನಕ ಸುಂಕವನ್ನು ವಸೂಲು ಮಾಡುತ್ತಿದ್ದಿತು. ಸ್ವೀಡನ್ನಿನವರು ಇವರನ್ನು ಹಿಂದೂಡಿದರು. ರಷ್ಯದವರ ಪ್ರಾಬಲ್ಯ ಬೆಳೆಯಿತು. ಜರ್ಮನಿಯೂ ತನ್ನ ಬಲವನ್ನು ಹೆಚ್ಚಿಸಿಕೊಂಡಿತು. ನಾರ್ವೆ ಮತ್ತು ಅದಕ್ಕೆ ಸೇರಿದ ವಸಾಹತುಗಳು ಮಾತ್ರ ಡೆನ್ಮಾರ್ಕಿಗೆ ಉಳಿದುವು. 1814ರಲ್ಲಿ ಡೆನ್ಮಾರ್ಕ್ ನೆಪೋಲಿಯನ್ ಕಡೆ ಸೇರಿದ್ದರಿಂದ, ನಾರ್ವೆಯನ್ನು ಸ್ವೀಡನ್ನಿಗೆ ಸೇರಿಸಲಾಯಿತು. 1863–64ರ ಯುದ್ಧಾನಂತರ ಜರ್ಮನರು ಜೆಟ್‌ಲೆಂಡಿನ ದಕ್ಷಿಣ ಭಾಗದಲ್ಲಿದ್ದ ಷ್ಲೆಸ್‌ವಿಕ್-ಹೋಲ್‌ಸ್ಟೈನ್ ಪ್ರದೇಶಗಳನ್ನು ವಶಪಡಿಸಿಕೊಂಡರು. ಮೊದಲನೆಯ ಮಹಾಯುದ್ಧದಲ್ಲಿ ಜರ್ಮನರು ಸೋತುಹೋದ ಮೇಲೆ ಷ್ಲೆಸ್‌ವಿಕ್-ಹೋಲ್‌ಸ್ಟೈನ್ ಇವು ಮತ್ತೆ ಡೆನ್ಮಾರ್ಕಿಗೆ ಸೇರಿದುವು. 1940ರಲ್ಲಿ ಹಿಟ್ಲರ್ ಡೆನ್ಮಾರ್ಕನ್ನು ಗೆದ್ದು ಅದನ್ನು ಐದು ವರ್ಷಗಳ ಕಾಲ ಆಕ್ರಮಿಸಿಕೊಂಡಿದ್ದ. 1944ರಲ್ಲಿ ಐಸ್‌ಲೆಂಡ್ ಸ್ವಾತಂತ್ರ್ಯ ಘೋಷಣೆ ಮಾಡಿ ಗಣರಾಜ್ಯವಾಯಿತು. ಎರಡನೆಯ ಜಾಗತಿಕ ಯುದ್ಧದ ಅನಂತರ ಡೇನರು ಸ್ವತಂತ್ರರಾದರು.

ಡೆನ್ಮಾರ್ಕಿನದು ಸಂವಿಧಾನಬದ್ಧ ರಾಜಪದ್ಧತಿ. ನಾಲ್ಕು ವರ್ಷಗಳಿಗೊಮ್ಮೆ ಆಯ್ಕೆಯಾಗುವ 179 ಸದಸ್ಯರುಳ್ಳ ಸಂಸತ್ತು ರಾಜನಿಗೆ ಸಹಾಯಕವಾಗಿರುತ್ತದೆ. ಇವರ ಪೈಕಿ ಇಬ್ಬರು ಫ್ಯಾರೋ ದ್ವೀಪಗಳಿಂದಲೂ ಇಬ್ಬರು ಗ್ರೀನ್‌ಲೆಂಡಿನಿಂದಲೂ ಆಯ್ಕೆಯಾಗಿರುತ್ತಾರೆ.

ಚಿಕ್ಕದಾದರೂ ಸಂಪದ್ಭರಿತವಾದ ಡೆನ್ಮಾರ್ಕ್. ಪ್ರಜಾಪ್ರಭುತ್ವ ರಾಜ್ಯ.

| | | |
|---|---|---|
| ಖಂಡ | : | ಯೂರೋಪ್ (ವಾಯುವ್ಯ) |
| ಅಕ್ಷಾಂಶ | : | 57° 45′ ಉ ದಿಂದ 54° 33′ ಉ |
| ರೇಖಾಂಶ | : | 8° 05′ ಪೂ ದಿಂದ 12° 48′ ಪೂ |
| ವಿಸ್ತೀರ್ಣ | : | 42,932 ಚ. ಕಿ. ಮಿ. (ಡೆನ್ಮಾರ್ಕ್) |
| | | 1,399 ಚ. ಕಿ. ಮಿ. (ಫ್ಯಾರೋ ದ್ವೀಪ) |
| | | 21,75,600 ಚ. ಕಿ. ಮಿ. (ಗ್ರೀನ್‌ಲೆಂಡ್) |
| ರಾಜಧಾನಿ | : | ಕೋಪನ್‌ಹೇಗನ್ |
| ಜನಸಂಖ್ಯೆ | : | 46,17,000 (1966) |
| ಭಾಷೆ | : | ಡೇನಿಷ್ |
| ಸರಕಾರ | : | ಸಂವಿಧಾನಬದ್ಧ ರಾಜಪದ್ಧತಿ |
| ಬಾವುಟ | : | ಕೆಂಪು, ಬಿಳಿಯ ಶಿಲುಬೆ |

## ತತ್ತ್ವಶಾಸ್ತ್ರ

ಸೂರ್ಯ ಹುಟ್ಟುತ್ತಾನೆ, ಮುಳುಗುತ್ತಾನೆ.
ಮೇಲೆಸೆದ ಕಲ್ಲು ಕೆಳಕ್ಕೆ ಬಂದು ಬೀಳುತ್ತದೆ.
ಪ್ರತಿಕ್ಷಣ ಹುಟ್ಟು, ಸಾವು ಆಗುತ್ತಲೆ ಇರುತ್ತವೆ.

"ಹೇಗೆ ?" ಎಂಬ ಪ್ರಶ್ನೆಯನ್ನು ಒಬ್ಬ ಕೇಳುತ್ತಾನೆ. ಸೂರ್ಯ ಹೇಗೆ ಹುಟ್ಟುತ್ತಾನೆ, ಹೇಗೆ ಮುಳುಗುತ್ತಾನೆ ಎಂದು ಕೇಳಿಕೊಂಡು, ಸೂರ್ಯ ಹುಟ್ಟುವುದಿಲ್ಲ, ಮುಳುಗುವುದಿಲ್ಲ, ಭೂಮಿ ಸೂರ್ಯನನ್ನು ಸುತ್ತುತ್ತದೆ ಎಂಬ ಸತ್ಯವನ್ನು ಕಂಡುಹಿಡಿಯುತ್ತಾನೆ. ಕಲ್ಲು ಕೆಳಕ್ಕೆ ಬೀಳುವುದು ಗುರುತ್ವಾಕರ್ಷಣ ಶಕ್ತಿಯಿಂದ ಎಂದು ಅರಿತುಕೊಳ್ಳುತ್ತಾನೆ. ಭೂಮಿ ಸುತ್ತುವುದಕ್ಕೂ ಕಲ್ಲು ಬೀಳುವುದಕ್ಕೂ ಸಾಮಾನ್ಯವಾದ ನಿಯಮ–ಆಕರ್ಷಣೆಯ ನಿಯಮ–ಇದೆ ಎಂದು ಸಾರುತ್ತಾನೆ. ಮಗು ತಾಯಿಯ ಹೊಟ್ಟೆಯಲ್ಲಿ ಹೇಗೆ ಬೆಳೆಯುತ್ತದೆ, ಮನುಷ್ಯನಿಗೆ ರೋಗ ಹೇಗೆ ಬರುತ್ತದೆ, ಸಾವು ಹೇಗೆ ಉಂಟಾಗುತ್ತದೆ ಎಂದು ಕಂಡುಹಿಡಿಯುತ್ತಾನೆ ಇನ್ನೊಂದು ಬಗೆಯ ಸತ್ಯ.

ಇನ್ನೊಬ್ಬ 'ಏಕೆ ? ಇದರ ಅರ್ಥವೇನು ?' ಎಂದು ಕೇಳಿಕೊಳ್ಳುತ್ತಾನೆ. ಸೂರ್ಯೋದಯ, ಸೂರ್ಯಾಸ್ತ, ಹುಟ್ಟು ಸಾವು ಎಲ್ಲ ಏಕಾಗಬೇಕು ? ಮನುಷ್ಯ ಬದುಕಿರುವಾಗಲೂ ದೇಹವಿರುತ್ತದೆ, ಸತ್ತರೂ ದೇಹ ಇರುತ್ತದೆ, ಆದರೆ ಶವ ಏಳಲಾರದು, ಮಾತನಾಡಲಾರದು. ಈ ವ್ಯತ್ಯಾಸವನ್ನುಂಟುಮಾಡುವ ಅಂಶ ಯಾವುದು ? ಈ ಅಂಶ ಬಂದದ್ದು ಹೇಗೆ ? ಏಕೆ ? ಪ್ರಶ್ನೆಗಳನ್ನು ಕೇಳುತ್ತ ಜೀವನದ ಸತ್ಯವನ್ನು ಇನ್ನೊಂದು ದೃಷ್ಟಿಯಿಂದ ಹುಡುಕುತ್ತ ಹೊರಡುತ್ತಾನೆ.

ಮೊದಲನೆಯವನು ವಿಜ್ಞಾನಿ ; ಎರಡನೆಯವನು ತತ್ತ್ವಜ್ಞಾನಿ.

ತತ್ತ್ವಶಾಸ್ತ್ರ. ಉಳಿದೆಲ್ಲ ಶಾಸ್ತ್ರಗಳಿಗಿಂತ ಬಹು ಪ್ರಾಚೀನವಾದ ಶಾಸ್ತ್ರ. ಮನುಷ್ಯನಲ್ಲಿ ಯೋಚನಾಶಕ್ತಿ ಹುಟ್ಟಿದಂದೇ ತತ್ತ್ವಶಾಸ್ತ್ರ ಹುಟ್ಟಿತೆನ್ನಬಹುದು.

ತತ್ತ್ವ (ತತ್+ತ್ವ) ಎಂದರೆ ಅದು ಅದೇ, ಅದರತನ, ವಾಸ್ತವಸ್ಥಿತಿ, ಸತ್ಯ ಎಂದರ್ಥ. ನಮಗೆ ಕಾಣುವ ಜಗತ್ತಿನ ನಿಜವಾದ ಸ್ವರೂಪವನ್ನು ತಿಳಿಯುವುದೇ ತತ್ತ್ವಶಾಸ್ತ್ರದ ಮೂಲ ಧ್ಯೇಯ. ಆಂಗ್ಲಭಾಷೆಯಲ್ಲಿ ತತ್ತ್ವಶಾಸ್ತ್ರ, ತತ್ತ್ವಜ್ಞಾನವನ್ನು 'ಫಿಲಾಸಫಿ' ಎನ್ನುತ್ತಾರೆ. 'ಫಿಲಾಸಫಿ' ಪದ ಎರಡು ಗ್ರೀಕ್ ಪದಗಳಿಂದ ಬಂದಿದೆ. 'ಫಿಲಾಸಫಿ' ಎಂದರೆ ವಿವೇಕದ ಬಗೆಗೆ ಒಲವು ಎಂದರ್ಥ. ವಾಸ್ತವಸ್ಥಿತಿಯನ್ನು ಅರಿತವನು, ಅರಿಯಲು ಪ್ರಯತ್ನಿಸುವವನು ತತ್ತ್ವಜ್ಞಾನಿ. ತತ್ತ್ವಜ್ಞ.

ಜಗತ್ತಿನ ಸ್ವರೂಪವನ್ನು ತಿಳಿಯುವುದು ಸುಲಭವಲ್ಲ. ಮಾನವ ತನ್ನ ಇಂದ್ರಿಯಗಳ ನೆರವಿನಿಂದ, ಬುದ್ಧಿಶಕ್ತಿಯ ಸಹಾಯದಿಂದ ತಿಳಿಯಬಲ್ಲ ಭಾಗ ಸ್ವಲ್ಪ ಮಾತ್ರ. ಜಗತ್ತಾದರೋ ಅಗಾಧವಾದದ್ದು. ವಿಜ್ಞಾನ ಒಬ್ಬ ತಂದೆತಾಯಿಯ ಮಕ್ಕಳ ಬುದ್ಧಿಶಕ್ತಿಯನ್ನು ಅಳೆಯಬಲ್ಲುದು. ಆದರೆ ಒಬ್ಬ ದಡ್ಡನಾಗುತ್ತಾನೆ, ಮತ್ತೊಬ್ಬ ಬುದ್ಧಿವಂತ. 'ಏಕೆ ?' ಇದಕ್ಕೆ ವಿಜ್ಞಾನ ಉತ್ತರ ಹೇಳಲಾರದು. ಸೂರ್ಯನ ಸುತ್ತ ತಿರುಗುವ ಗ್ರಹಗಳಿಂದ ಹಿಡಿದು ಮೇಲಿನಿಂದ ಕೆಳಕ್ಕೆ ಬೀಳುವ ಹಣ್ಣಿನವರೆಗೆ ಎಲ್ಲ ಚಲನೆಯ ಹಿಂದೆ ಅದೇ ನಿಯಮಗಳು ; ನಯಾಗರ ಜಲಪಾತದಿಂದ ಹಿಡಿದು ಕೈಯಿಂದ ಬೀಳುವ ತೊಟ್ಟು ನೀರಿನವರೆಗೆ ನೀರಿನ ಚಲನೆಯ ಹಿಂದೆ ಒಂದೇ ನಿಯಮ. ಇಷ್ಟು ನಿಯಮಬದ್ಧವಾದ ಸೌಂದರ್ಯ–ರೌದ್ರ–ಕುರೂಪ ಎಲ್ಲ ಬೆರೆತ, ವೈವಿಧ್ಯಮಯ ಜಗತ್ತು ಸೃಷ್ಟಿಯಾದದ್ದು ಹೇಗೆ ? ಒಂದು ಸುಂದರ ಎನ್ನುತ್ತೇವೆ, ಇನ್ನೊಂದು ಸುಂದರವಲ್ಲ ಎನ್ನುತ್ತೇವೆ. ಸೌಂದರ್ಯ ಎಂದರೇನು? ಇಂಥ ಪ್ರಶ್ನೆಗಳಿಗೆ ವಿಜ್ಞಾನ ಉತ್ತರ ಕೊಡಲಾರದು ; ತತ್ತ್ವಶಾಸ್ತ್ರದಿಂದಲೂ ಸತ್ಯದ ಅರಿವಾಗುತ್ತದೆ ಎಂದು ತತ್ತ್ವಶಾಸ್ತ್ರಜ್ಞ ಹೇಳುತ್ತಾನೆ. ಆದರೆ ತತ್ತ್ವಜ್ಞಾನಿಗಳು ಪೂರ್ಣಸತ್ಯದ ಅರಿವನ್ನು ಪಡೆದಿದ್ದಾರೆಂದು ಹೇಳಲು ಆಗುವುದಿಲ್ಲ. ಅವರಲ್ಲೇ ಜಗತ್ತಿನ

ಮುಮ್ತಾಜ್ ಮತ್ತು ಷಹಜಹಾನರ ಸಮಾಧಿಗಳು ಆ ಕೋಣೆಯ ಕೆಳಗೆ ನೆಲಮಾಳಿಗೆಯಲ್ಲಿವೆ. ಕಟ್ಟಡದ ಒಳಭಾಗಕ್ಕೆ ಸುಂದರವಾಗಿ ಚಿತ್ರಿತವಾಗಿರುವ ಕಲ್ಲು ಕಿಟಕಿಗಳ ಸಂದುಗಳ ಮೂಲಕ ಬೆಳಕು ಬರುತ್ತದೆ.

1658–1707ರಲ್ಲಿ ಭಾರತವನ್ನು ಆಳುತ್ತಿದ್ದ ಔರಂಗ್‌ಜೇಬ್ ತಾಜಮಹಲಿನಂಥದೇ ಕಟ್ಟಡವೊಂದನ್ನು ಔರಂಗಾಬಾದಿನಲ್ಲಿ ಕಟ್ಟಿಸಿದ. ಬಣ್ಣ (ಹಳದಿ) ಮತ್ತು ಗಾತ್ರ (ಚಿಕ್ಕದು) ಇವುಗಳನ್ನು ಬಿಟ್ಟರೆ ಮಿಕ್ಕೆಲ್ಲದರಲ್ಲೂ ಈ ಮರಿ ತಾಜಮಹಲ್ ದೊಡ್ಡದರ ತದ್ರೂಪ. ಬೀಬಿ ಕಾ ಮಕ್‌ಬರಾ ಎಂಬ ಈ ಸ್ಮಾರಕವನ್ನು ಔರಂಗ್‌ಜೇಬ್ ತನ್ನ ಪತ್ನಿಯ ಸ್ಮರಣೆಗಾಗಿ ಕಟ್ಟಿಸಿದ.

ತಾಜಮಹಲನ್ನು ಷಹಜಹಾನ್ ಕಟ್ಟಿಸಲಿಲ್ಲ; ಮೂಲದಲ್ಲಿ ಅದೊಂದು ಶಿವಾಲಯವಾಗಿತ್ತು–ಎಂದು ಕೆಲವರು ಅಭಿಪ್ರಾಯಪಟ್ಟಿದ್ದಾರೆ.

## ತಾಟಸ್ಥ್ಯ

ಸುಮಾರು ಮೂವತ್ತು ವರ್ಷಗಳ ಅವಧಿಯಲ್ಲಿ ಸ್ವಲ್ಪ ಹೆಚ್ಚು ಕಡಮೆ ಯೂರೋಪಿನ ಎಲ್ಲ ರಾಷ್ಟ್ರಗಳೂ ಎರಡು ಮಹಾಯುದ್ಧಗಳ ಬೇಗೆಯಲ್ಲಿ ಬೆಂದುವು.

ಸ್ವಿಟ್ಜರ್‌ಲೆಂಡ್ ಎರಡು ಯುದ್ಧಗಳಿಂದಲೂ ಬವಣೆ ಪಡಲಿಲ್ಲ; ಅಷ್ಟು ಮಾತ್ರವಲ್ಲ; ಒಂದು ನೂರು ವರ್ಷಗಳಿಂದ ಯುದ್ಧದ ಬಿಸಿ ಇದಕ್ಕೆ ತಾಗಿಲ್ಲ. ಇದಕ್ಕೆ ಕಾರಣ ಸ್ವಿಟ್ಜರ್‌ಲೆಂಡ್ ಎಚ್ಚರಿಕೆಯಿಂದ ತಾಟಸ್ಥ್ಯ ನೀತಿಯನ್ನು ಪಾಲಿಸಿಕೊಂಡು ಬಂದಿರುವುದು.

ತಟಸ್ಥ ರಾಷ್ಟ್ರವೆಂದರೆ ಯಾವ ಪಕ್ಷಕ್ಕೂ ಸೇರದ ರಾಷ್ಟ್ರ ಎಂದರ್ಥ. ತಾಟಸ್ಥ್ಯ ಎಂಬುದು ಮುಖ್ಯವಾಗಿ ಪ್ರಥಮ ಮಹಾಯುದ್ಧದ ಬಳಿಕ ರೂಢಿಗೆ ಬಂದ ಪದವೆನ್ನಬಹುದು. ಯಾವ ಪಕ್ಷಕ್ಕೂ ಸೇರದೆ, ಯುದ್ಧದಲ್ಲಿ ಭಾಗವಹಿಸದಿರುವ ರಾಷ್ಟ್ರವನ್ನು ತಟಸ್ಥ ರಾಷ್ಟ್ರವೆನ್ನುತ್ತಾರೆ. ಅಂದರೆ ತಾನು ಭಾಗವಹಿಸದಿರುವುದಷ್ಟೇ ಅಲ್ಲದೆ, ಭಾಗವಹಿಸುವ ರಾಷ್ಟ್ರಗಳಿಗೆ ಯಾವ ವಿಧದ ಸಹಾಯವನ್ನೂ ಈ ರಾಷ್ಟ್ರವು ಒದಗಿಸಕೂಡದು. ಇದು ತಟಸ್ಥರಾಷ್ಟ್ರಗಳ ನಿಯಮ.

1907ರಲ್ಲಿ ಹೇಗ್ ಸಮ್ಮೇಳನದಲ್ಲಿ ಸಮುದ್ರ ಹಾಗು ನೆಲದ ಮೇಲಿನ ಯುದ್ಧಗಳ ಬಗೆಗೆ ತಾಟಸ್ಥ್ಯದ ಒಪ್ಪಂದಗಳನ್ನು ನಿರೂಪಿಸಲಾಯಿತು. ಇದರ ಪ್ರಕಾರ, ಯುದ್ಧ ಹೂಡಿದವರು ತಟಸ್ಥ ರಾಷ್ಟ್ರದೊಳಗೆ ಹಾಯಕೂಡದು, ಅಲ್ಲಿ ರೇಡಿಯೊ ಸಂಪರ್ಕವಿಟ್ಟುಕೊಳ್ಳಕೂಡದು, ತಟಸ್ಥ ರಾಷ್ಟ್ರ ಸೈನಿಕ ನೆಲೆಯಾಗಕೂಡದು. ಇದೇ ರೀತಿ ಹೋರಾಡುವ ರಾಷ್ಟ್ರಗಳು ತಟಸ್ಥ ರಾಷ್ಟ್ರಕ್ಕೆ ಯಾವ ಹಾನಿಯನ್ನೂ ಮಾಡಲಾಗದು. ಅದರ ಸುತ್ತಲ ಜಲಪ್ರದೇಶದಲ್ಲಿ ಯುದ್ಧವನ್ನಾಗಲೀ, ತಟಸ್ಥ ಬಂದರುಗಳ ಉಪಯೋಗವನ್ನಾಗಲೀ ಮಾಡಬಾರದು. ಅನಿವಾರ್ಯವಾಗಿ ಆ ಬಂದರನ್ನು ಪ್ರವೇಶಿಸಿದರೂ 24 ಗಂಟೆಗಳೊಳಗಾಗಿ ಅದನ್ನು ಬಿಟ್ಟು ತೆರಳಬೇಕು.

ಯುದ್ಧ ಸಾಮಗ್ರಿಗಳನ್ನು ಯಾವರೂ ತಟಸ್ಥ ರಾಷ್ಟ್ರದ ಹಡಗು ಒಯ್ಯುತ್ತಿದ್ದರೆ ಅದನ್ನು ವಶಪಡಿಸುವ ಹಕ್ಕು ಹೋರಾಡುವ ರಾಷ್ಟ್ರಗಳಿಗಿದೆ.

ಆದರೆ ಎರಡು ಜಾಗತಿಕ ಮಹಾಯುದ್ಧಗಳ ಅನುಭವಗಳು ಈ ಸಮಸ್ಯೆಯನ್ನು ಇನ್ನೂ ಜಟಿಲಗೊಳಿಸಿವೆ. ತಟಸ್ಥ ರಾಷ್ಟ್ರಗಳು ಇಕ್ಕಟ್ಟಿಗೆ ಸಿಕ್ಕಿದ ಸಂದರ್ಭಗಳೂ ಉಂಟು. ತಟಸ್ಥವೆನಿಸಿದ ರಾಷ್ಟ್ರಗಳೂ ಯುದ್ಧದಲ್ಲಿ ಪಾಲುಗೊಳ್ಳುವಂಥ ಪರಿಸ್ಥಿತಿ ಒದಗಿತು. ಮಹಾಯುದ್ಧದಲ್ಲಿ ಯುದ್ಧ ಸಾಮಗ್ರಿಗಳಲ್ಲದ ಪದಾರ್ಥಗಳನ್ನು ತನ್ನ ಹಡಗಿನಲ್ಲಿ ಒಯ್ಯಬಹುದು ಎನ್ನುವ ಹಕ್ಕಿದ್ದರೂ, ಯಾವುದು ಯುದ್ಧಸಾಮಗ್ರಿ ಯಾವುದು ಅಲ್ಲ ಎಂಬುದನ್ನು ಸ್ಪಷ್ಟವಾಗಿ ತೀರ್ಮಾನಿಸಿ ಪಟ್ಟಿ ಮಾಡುವುದು ಸಾಧ್ಯವಾಗದೇ ಹೋಯಿತು. ತಟಸ್ಥ ರಾಷ್ಟ್ರವೊಂದು ಯುದ್ಧದಲ್ಲಿ ಭಾಗಿಯಾಗುವ ರಾಷ್ಟ್ರಕ್ಕೆ ಆಹಾರ ಸಾಮಗ್ರಿಯನ್ನು ಕಳುಹಿಸಿದಾಗ ತಟಸ್ಥ ರಾಷ್ಟ್ರದ ಸಾಮಾನ್ಯ ಅವಶ್ಯತೆಗಳ ಪೂರೈಕೆಗೂ ಧಕ್ಕೆ ಬಂದಿತು. ಅದರ ವಾಣಿಜ್ಯ ಸ್ಥಗಿತಗೊಂಡಿತು. ಅಲ್ಲದೆ, ತನ್ನದೆ ರಕ್ಷಣೆಗೋಸ್ಕರ ಸೇನೆಯು ಸಿದ್ಧತೆಯಲ್ಲಿ ತೊಡಗಬೇಕಾಯಿತು. ಯುದ್ಧರಾಷ್ಟ್ರಗಳಿಂದ ಬಂದ ಸಾವಿರಾರು ಜನರನ್ನು ನಿರ್ಬಂಧದಲ್ಲಿಡುವ ಜವಾಬ್ದಾರಿಯನ್ನು ವಹಿಸಬೇಕಾಯಿತು. ತಾಟಸ್ಥ್ಯದ ಹೆಸರಿನಲ್ಲಿ ನೆರವು ನೀಡದೆ ಯುದ್ಧರಾಷ್ಟ್ರದ ಪ್ರತೀಕಾರಕ್ಕೆ ಔತಣಕೊಟ್ಟ ಸಣ್ಣರಾಷ್ಟ್ರಗಳೂ ಉಂಟು. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ಅದು ಯುದ್ಧಕ್ಕೆ ತೊಡಗಬೇಕು, ಇಲ್ಲವೆ ನಷ್ಟಕ್ಕೊಳಗಾಗಬೇಕು. ಹೀಗೆ ಅನೇಕ ರಾಷ್ಟ್ರಗಳು ಉಭಯ ಸಂಕಟಗಳಿಗೀಡಾಗಿ ಎರಡನೆಯ ಮಹಾಯುದ್ಧವು ಜಾಗತಿಕ ಯುದ್ಧವಾಗಿ ಪರಿಣಮಿಸಿತು. ಯೂರೋಪಿನಲ್ಲಿ ತಟಸ್ಥ ನೀತಿಯನ್ನು ಯಥಾರ್ಥವಾಗಿ ಆಚರಿಸಿದ ರಾಷ್ಟ್ರಗಳು ಸ್ವೀಡನ್ ಹಾಗೂ ಸ್ವಿಟ್ಜರ್‌ಲೆಂಡ್ ಮಾತ್ರ. ಅಮೆರಿಕದ ಸಂಯುಕ್ತ ಸಂಸ್ಥಾನ ತಟಸ್ಥ ನೀತಿಯನ್ನು ಘೋಷಿಸಿದರೂ ಹಲವಾರು ಒತ್ತಡಗಳಿಂದ ರಣಾಂಗಣವನ್ನು ಅದು ಪ್ರವೇಶಿಸಬೇಕಾಯಿತು.

ಸಾರಿಗೆ ಸಂಪರ್ಕಗಳು ಅತ್ಯಂತ ಮುಂದುವರಿದಿರುವ ಈಗಿನ ಕಾಲದಲ್ಲಿ ತಟಸ್ಥ ರಾಷ್ಟ್ರ ತನ್ನ ನೀತಿಯನ್ನು ಪರಿಪಾಲಿಸುವುದು ಬಹಳ ಕಷ್ಟಕರವಾಗಿದೆ. ಈ ನೀತಿಯನ್ನು ಪುನರ್ವಿಮರ್ಶಿಸಬೇಕೇ ಹೇಗೆ ಎಂಬುದು ಕೂಡ ವಾದಾಸ್ಪದ. ಏಕೆಂದರೆ ಎಲ್ಲ ರಾಷ್ಟ್ರಗಳಿಗೂ ಅನ್ವಯಿಸುವಂಥ ಸಾಮೂಹಿಕ ಭದ್ರತೆ ಸಾಧ್ಯವಾಗದಿದ್ದರೆ, ಎರಡು ಬಲವತ್ತರ ರಾಷ್ಟ್ರಗಳ ಪಕ್ಷ ವಹಿಸಲಾಗದ ಮೂರನೆಯ ರಾಷ್ಟ್ರದ ಗತಿಯೇನು ? ಅವುಗಳ ಮಾರಕಾಸ್ತ್ರಗಳಿಗೆ ಬಲಿಯಾಗಬೇಕೆ ? ಇಲ್ಲವೆ ಇಂಥ ರಾಷ್ಟ್ರಗಳಿಂದ ಆದಷ್ಟು ದೂರವಿರುವ ನಿಲುವನ್ನು ತಳೆಯಬೇಕೆ ? ಹಾಗೆ ತಳೆದರೂ ಪರಮಾಣು ಅಸ್ತ್ರಗಳ ಭಯ ತಪ್ಪಿದ್ದಲ್ಲ. ಇಂಥ ಸಮಯದಲ್ಲಿ ಭದ್ರತಾ ಸಮಿತಿಯ ನಿಯಂತ್ರಣ ಶಕ್ತಿಯೂ ಉಪಯೋಗಕ್ಕೆ ಬಾರದು. ಈ ಮಾರಕಾಸ್ತ್ರಗಳಿಲ್ಲದ ನಿಸ್ಸಹಾಯ ರಾಷ್ಟ್ರಗಳ ನುಡಿಗೆ ಭದ್ರತಾ ಸಮಿತಿಯಲ್ಲಿ ಬೆಲೆಯೂ ಇರದು. ಹೀಗಾಗಿ 'ತಾಟಸ್ಥ್ಯ' ಎನ್ನುವುದು ಕಷ್ಟದ ದಾರಿಯಾಗಿಯೇ ಉಳಿದಿದೆ.

ಭಾರತ ಸ್ವಾತಂತ್ರ್ಯವನ್ನು ಪಡೆದ ಮೇಲೆ ಭಾರತ ಸರಕಾರ ವಿದೇಶಾಂಗ ವ್ಯವಹಾರಗಳಲ್ಲಿ ತಟಸ್ಥ ನೀತಿಯನ್ನು ಅನುಸರಿಸುವುದಾಗಿ ತೀರ್ಮಾನಿಸಿತು. ರಷ್ಯದ ನಾಯಕತ್ವದಲ್ಲಿನ ಕಮ್ಯೂನಿಸ್ಟ್ ರಾಷ್ಟ್ರಗಳು, ಅಮೆರಿಕದ ನಾಯಕತ್ವದಲ್ಲಿನ ಪಲವು ರಾಷ್ಟ್ರಗಳು ಬಣಗಳಾಗಿ ನಿಂತಾಗ ಭಾರತ ಯಾವ ಬಣಕ್ಕೂ ಸೇರದ ತಟಸ್ಥ ನೀತಿಯನ್ನು ಅನುಸರಿಸಿತು. ಪ್ರತಿ ವಿಷಯದಲ್ಲಿಯೂ ಸನ್ನಿವೇಶದಲ್ಲಿಯೂ ನಿಷ್ಪಕ್ಷಪಾತವಾದ ಧೋರಣೆಯನ್ನು ತಾಳಲು ತೀರ್ಮಾನಿಸಿತು. ಆದರೆ ಭಾರತ 'ತಟಸ್ಥ' ಎಂಬ ಪದವನ್ನು ಬಳಸುವುದಿಲ್ಲ. ತನ್ನದು ಯಾವ ಬಣಕ್ಕೂ ಸೇರದ—ಅಲಿಪ್ತ—ನೀತಿ ಎನ್ನುತ್ತದೆ.

## ತಾಯಿತಿ

ತಾಯಿಯ ತೋಳುಗಳಲ್ಲಿ ಸೊರಗಿ ಬಡಕಲಾಗಿರುವ ಮಗು. ಮಗ್ಗುಲಲ್ಲಿ ವೈದ್ಯರಿಂದ ತಂದ ಔಷಧ. ಆ ಮಗುವಿನ ಕೊರಳಲ್ಲಿ ಒಂದು ಕರಿ ಬಣ್ಣದ ದಾರ. ಅದರ ಮಧ್ಯದಲ್ಲಿ ನೇತಾಡುತ್ತಿದೆ ದುಂಡಗಿನ ಚಿಕ್ಕ ಕೊಳವೆಯಾಕಾರದ ತಾಮ್ರದ ವಸ್ತು. ಅದು ತಾಯಿತಿ. ತನ್ನ ಮಗುವಿಗೆ ಬೇಗ ಗುಣವಾಗಬೇಕು ಎಂಬ ಹಂಬಲ ಆ ತಾಯಿಯ ಕಣ್ಣುಗಳಲ್ಲಿ, ವೈದ್ಯರ ಔಷಧಿಗಿಂತಲೂ ಅದರಲ್ಲೇ ತಾಯಿಗೆ ಹೆಚ್ಚು ವಿಶ್ವಾಸ.

ತನಗೆ ಅರ್ಥವಾಗದ, ತಾನು ಹಿಡಿತದಲ್ಲಿ ಇಟ್ಟುಕೊಳ್ಳಲಾಗದ ಹಲವಾರು ಶಕ್ತಿಗಳಿಂದ ರಕ್ಷಣೆ ಪಡೆಯಲು ಮಾನವ ಅನೇಕ ವಿಧಾನಗಳನ್ನು ಅನುಸರಿಸಿದ್ದಾನೆ. ಅವುಗಳಲ್ಲಿ ತಾಯಿತಿಯೂ ಒಂದು.

ಪ್ರಶಸ್ತ ಹರಳುಗಳು, ಲೋಹಗಳು, ಪ್ರಾಣಿಗಳ ಹಲ್ಲು, ಉಗುರು ಮೊದಲಾದುವುಗಳಿಗೆ ದುಷ್ಟಶಕ್ತಿಗಳಿಂದ ಮಾನವನನ್ನು ರಕ್ಷಿಸುವ ಸಾಮರ್ಥ್ಯವಿದೆ ಎಂದು ಮಾನವ ನಂಬಿದ್ದಾನೆ. ಗ್ರಹಗಳು, ದೆವ್ವ ಭೂತಗಳು ಮೊದಲಾದ ದುಷ್ಟಶಕ್ತಿಗಳಿಂದ ರಕ್ಷಣೆ ಪಡೆಯಲು ಹುಲಿಯುಗುರು, ಹಂದಿಯ ಎಲುಬು, ಕರಡಿ, ಆನೆಗಳ ಕೂದಲು ಮೊದಲಾದುವನ್ನು ಬೆಳ್ಳಿ ಚಿನ್ನಗಳಲ್ಲಿ ಕಟ್ಟಿ ಮೈಮೇಲೆ ಧರಿಸುತ್ತಾರೆ. ಹೀಗೆ ಲೋಹದಿಂದ ಕಟ್ಟಿದ ವಸ್ತು ತಾಯಿತಿ.

ತಾಯಿತಿಗಳನ್ನು ಮಾಡುವ ಪದ್ಧತಿ ವಿಶ್ವವ್ಯಾಪಕವಾಗಿದೆ. ಹಿಂದೂಗಳು ಮಂತ್ರಗಳನ್ನು ಬರೆದ ತಾಮ್ರದ ತಗಡುಗಳನ್ನು ಬೆಳ್ಳಿ ಅಥವಾ ಚಿನ್ನದ ಕೊಳವೆಯಲ್ಲಿಟ್ಟು, ಭದ್ರಮಾಡಿ ಧರಿಸಿದರೆ, ಬೈಬಲ್, ಖುರಾನ್ ಇವುಗಳಿಂದ ಆಯ್ದ ಸಾಲುಗಳುಳ್ಳ ಲೋಹದ ತಗಡುಗಳನ್ನು ಕ್ರೈಸ್ತರು, ಮುಸಲ್ಮಾನರು ಧರಿಸುತ್ತಾರೆ. ಮಂತ್ರದ ಸಾಲುಗಳ ಜೊತೆಗೆ ಮಾಯಾ ಮಂತ್ರಗಳಿಗೆ ಸಂಬಂಧಿಸಿದ ವಿಶೇಷ ಚಿಹ್ನೆಗಳೂ ಸಂಖ್ಯೆಗಳೂ ಇರುತ್ತವೆ.

ಯಾವ ಯಾವ ಶಕ್ತಿಯ ವಿರುದ್ಧ ಹೋರಾಡಬೇಕಾಗಿದೆಯೋ ಆ ಶಕ್ತಿಗಳಿಗೆ ತಕ್ಕಂತೆ, ವಸ್ತುಗಳನ್ನಾಯ್ದು ತಾಯಿತಿಗಳನ್ನು ಸಿದ್ಧಗೊಳಿಸುತ್ತಾರೆ.

ಮಾನವ ಜನಿಸಿದಾಗಿನಿಂದ ಬಂದಿರುವ ಈ ಪದ್ಧತಿ, ಮಾನವ ನಾಗರಿಕನಾಗುತ್ತ ಹೋದಂತೆಲ್ಲ ಚಿತ್ರವಿಚಿತ್ರವಾಗಿ ಬೆಳೆಯುತ್ತ ಬಂದಿದೆ. ಮೊದಲು ನಿಸರ್ಗದಲ್ಲಿ ಸಿಗುವ ಹರಳು, ಪ್ರಾಣಿ ಪಕ್ಷಿಗಳ ಹಲ್ಲು ಅಥವಾ ಉಗುರು, ಎಲೆಬಳ್ಳಿಗಳು ಮೊದಲಾದುವನ್ನು ಮಾನವ ಬಳಸಿದ. ಲೋಹಗಳ ಬಳಕೆ ತಿಳಿದಾಗ ಅವನ್ನು ಉಪಯೋಗಿಸಿದ. ಅನಂತರ ಬರವಣಿಗೆ, ಚಿತ್ರಕಲೆ ಕಲಿತಾಗ ಅವನ್ನೂ ಬಳಸಿದ. ಮಂತ್ರ–ತಂತ್ರ ಬಲ್ಲವರಿಂದ ಅವನ್ನು ಬರೆಯಿಸಿ ಧರಿಸಿದಾಗ ಅವನ ದೃಷ್ಟಿಯಲ್ಲಿ ಅವು ಬರಿ ತಗಡಿನ ಚೂರಾಗಿ ಉಳಿಯದೆ ಶಕ್ತಿಯುತ ವಸ್ತುಗಳೆನಿಸಿದುವು.

ಈಜಿಪ್ಟಿನ ಜನ ತಾಯಿತಿಗಳನ್ನು ತಾವು ಧರಿಸುತ್ತಿದ್ದುದೇ ಅಲ್ಲದೆ, ತಮ್ಮ ಮನೆಗಳಲ್ಲಿ, ಪ್ರಾರ್ಥನಾಮಂದಿರಗಳಲ್ಲಿ, ಸಮಾಧಿಗಳಲ್ಲಿ, ಕೊನೆಗೆ ಸತ್ತವರ ದೇಹದ ಮೇಲೆ ಕೂಡ ಇಡುತ್ತಿದ್ದರು.

ಕ್ರೈಸ್ತರಲ್ಲಿ ಶಿಲುಬೆ ಈಗಲೂ ಅತ್ಯಂತ ಪ್ರಭಾವಶಾಲಿಯಾದ ತಾಯಿತಿ ಎಂದು ಪರಿಗಣಿಸಲ್ಪಟ್ಟಿದೆ. ಆದರೆ ಈ ನಂಬಿಕೆಗೆ ಕ್ರೈಸ್ತ ಧರ್ಮಗುರುಗಳ ಬೆಂಬಲವಿಲ್ಲ. ತಾಯಿತಿಗಳಲ್ಲಿನ ನಂಬಿಕೆ ಸರ್ವಶಕ್ತ ದೇವರಲ್ಲಿನ ನಂಬಿಕೆಯನ್ನು ಕಡಮೆ ಮಾಡುತ್ತದೆ ಎಂಬ ವಾದ ಇದಕ್ಕೆ ಕಾರಣ. ಭಾರತದಲ್ಲಿ ತಾಯಿತಿಗಳನ್ನು ಧರಿಸುವುದು ಬಹಳವಾಗಿ ಬಳಕೆಯಲ್ಲಿದೆ. ಭಾರತದಲ್ಲಿ ಜ್ಯೋತಿಷಿಗಳು, ಮಂತ್ರವಾದಿಗಳು, ಜಪತಪ ಬಲ್ಲವರು, ತಾಯಿತಿಗಳನ್ನು ಸಿದ್ಧಮಾಡಿಕೊಡುತ್ತಾರೆ. ಅವುಗಳನ್ನು ಮೈಮೇಲೆ ಧರಿಸಬೇಕು. ಇಲ್ಲವೆ ಪವಿತ್ರವಾದ ಸ್ಥಳದಲ್ಲಿಟ್ಟು ಪೂಜಿಸಬೇಕು ; ಇಲ್ಲದೆ ಹೋದರೆ ಕೆಡುಕಾಗುತ್ತದೆ—ಎಂದೂ ಹೇಳುತ್ತಾರೆ.

ಇದು ವಿಜ್ಞಾನಯುಗ. ಆದರೂ ಎಲ್ಲ ದೇಶಗಳಲ್ಲೂ ಎಲ್ಲ ಮಾನವರಲ್ಲೂ ತಾಯಿತಿಯ ಬಳಕೆಯುಂಟು.

## ತ್ಯಾಗ

ಗೌತಮಬುದ್ಧ ರಾಜನ ಮಗನಾಗಿ ಹುಟ್ಟಿದ. ಸಂಕಟ ಎಂದರೇನು ಎಂಬುದನ್ನು ತಿಳಿಯದೆ ರಾಜವೈಭವದಲ್ಲಿ ಬೆಳೆದ. ಎಲ್ಲ ಸುಖ ಸಂಪತ್ತೂ ಅವನಿಗೆ ಇದ್ದುವು. ಆದರೆ ಒಂದು ರಾತ್ರಿ ಅದೆಲ್ಲವನ್ನೂ ಬಿಟ್ಟು ಕಾಡಿಗೆ ಹೊರಟುಹೋದ. ಸಿದ್ಧಾರ್ಥ ತ್ಯಾಗ ಮಾಡಿದ.

ಬ್ರಿಟಿಷ್ ಚಕ್ರವರ್ತಿ ಐದನೆಯ ಜಾರ್ಜರ ಅನಂತರ ಅವರ ಮಗ ಎಡ್ವರ್ಡ್ (ಎಂಟನೆಯ ಎಡ್ವರ್ಡ್) ಚಕ್ರವರ್ತಿಯಾದ. ಆತ ಅಮೆರಿಕದ ಒಬ್ಬ ಸಾಮಾನ್ಯ ಮಹಿಳೆಯನ್ನು ಮದುವೆಯಾಗಲು ಬಯಸಿದ. ಇದು ಆಂಗ್ಲ ಧರ್ಮಾಧಿಕಾರಿಗಳಿಗೂ ಸಂಪುಟಕ್ಕೂ ಒಪ್ಪಿಗೆಯಾಗಲಿಲ್ಲ. ಎಡ್ವರ್ಡ್ ತಾನು ಮದುವೆಯಾಗಬೇಕೆಂದಿದ್ದ ಶ್ರೀಮತಿ ಸಿಮ್‌ಸನಳಿಗಾಗಿ ಸಿಂಹಾಸನ ತ್ಯಾಗಮಾಡಿದ.

ಸಿದ್ಧಾರ್ಥ ಆತ್ಮೋದ್ಧಾರದ ಮಾರ್ಗವನ್ನು ಕಾಣಲು ತ್ಯಾಗಮಾಡಿದರೆ, ಎಡ್ವರ್ಡ್ ಪ್ರೇಮಕ್ಕಾಗಿ ತ್ಯಾಗಮಾಡಿದ.

ಸಮರಗಳ ಸೂಚನೆಯಾಗಲಿ, ಭಯವಾಗಲಿ ಇಲ್ಲದೆ ಜಗತ್ತಿನಲ್ಲಿ ಶಾಂತಿ ನೆಲಸಬೇಕಾದರೆ ಬಲಿಷ್ಠ ರಾಷ್ಟ್ರಗಳು ಮಾರಕಾಸ್ತ್ರಗಳನ್ನು ತ್ಯಾಗ ಮಾಡಬೇಕು. ನಿಶ್ಶಸ್ತ್ರೀಕರಣವನ್ನು ಪಾಲಿಸಬೇಕು – ಇದು ಶಾಂತಿಪ್ರಿಯರ ವಾದ.

ರಾಷ್ಟ್ರದ ಹಿತಕ್ಕಾಗಿ ತಮ್ಮ ವೈಯಕ್ತಿಕ ಸುಖವನ್ನೂ ತ್ಯಾಗಮಾಡಿದರು ಮಹಾತ್ಮಾ ಗಾಂಧಿ ಮತ್ತು ಅವರ ಅನುಯಾಯಿಗಳು.

'ತ್ಯಾಗ' ಎಂದರೆ ಬಿಟ್ಟುಬಿಡುವುದು. ತ್ಯಾಗದ ದಾರಿ ಹೂವಿನ ಹಾಸಿಗೆಯಲ್ಲ. ಅನೇಕ ಕಷ್ಟ ಕಾರ್ಪಣ್ಯಗಳನ್ನು ಸಹಿಸಬೇಕಾಗುತ್ತದೆ. ಹರಿಶ್ಚಂದ್ರ ಸತ್ಯವನ್ನು ಸಾಧಿಸಲು ತನ್ನ ರಾಜ್ಯವನ್ನು, ಸತಿಸುತರನ್ನು ಬಿಡಬೇಕಾಯಿತು. ಎಷ್ಟೋ ಕಷ್ಟಗಳನ್ನು ಎದುರಿಸಬೇಕಾಯಿತು.

ಹಣಬೇಕು. ನೆಲಬೇಕು. ಅಧಿಕಾರ ಬೇಕು. ಸುಖ ಬೇಕು—ಒಟ್ಟಿನಲ್ಲಿ ತನಗೆ ಏನಾದರೂ ಬೇಕು ಎಂದು ಆಸೆ ಹುಟ್ಟಿರೆ ಅದಕ್ಕೆ ಕೊನೆಯೇ ಇಲ್ಲ. ಇನ್ನೂ ಹಣ ಬೇಕು. ಇನ್ನೂ ಭೂಮಿ ಬೇಕು. ಇನ್ನೂ ಅಧಿಕಾರ ಬೇಕು. ಇನ್ನೂ ಸುಖ ಬೇಕು ಎನ್ನಿಸುತ್ತದೆ. ದೊಡ್ಡದಾದ ಒಂದು ಆದರ್ಶಕ್ಕೆ ದುಡಿದಾದರೆ ಅದಕ್ಕಾಗಿ ದುಡಿಯುವುದರಲ್ಲಿ, ತ್ಯಾಗ ಮಾಡುವುದರಲ್ಲಿ, ಬಾಳಿಗೆ ಅರ್ಥ ಹಿಂದೆ ಬರುತ್ತದೆ; ತೃಪ್ತಿ ದೊರೆಯುತ್ತದೆ. ಪ್ರಪಂಚದ ಪ್ರಗತಿಗೆ ಕಾರಣರು ತ್ಯಾಗ ಮಾಡಿದವರು: ಮೇಡಮ್ ಕ್ಯೂರಿಯಂತೆ, ಚಾರ್ಲ್ಸ್ ಡಾರ್ವಿನ್‌ನಂತೆ ಜ್ಞಾನಕ್ಕಾಗಿ ಸುಖವನ್ನು ತ್ಯಾಗ ಮಾಡಿದ ವಿಜ್ಞಾನಿಗಳು: ಸ್ಕಾಟ್, ನಾನ್ಸೆನ್, ಕೊಲಂಬಸನಂತೆ ಜ್ಞಾನಕ್ಕಾಗಿ ನೆಮ್ಮದಿಯ ಜೀವನವನ್ನು ಕಡೆಗಾಣಿಸಿದ ಧೀರ ಯಾತ್ರಿಕರು; ಬಾಲ ಗಂಗಾಧರ ತಿಲಕ್, ಸುಭಾಷ್ ಚಂದ್ರ ಬೋಸರಂತೆ ದೇಶಕ್ಕಾಗಿ ತಮ್ಮ ಸಂಪತ್ತುಗಳನ್ನು ಬಿಟ್ಟುಕೊಟ್ಟವರು; ಬುದ್ಧ, ಏಸು, ಗಾಂಧೀಜಿಯವರಂತೆ ಮನುಷ್ಯಕೋಟಿಗೆ ವಿವೇಕ, ಪ್ರೇಮ, ಶಾಂತಿಗಳ ದಾರಿಯನ್ನು ತೋರಿದವರು.

ತಮ್ಮ ವೈಯಕ್ತಿಕ ಸುಖಗಳನ್ನು ಜನಗಳಿಗಾಗಿ ತಳ್ಳಿ ಹಾಕಿದವರು. ತ್ಯಾಗದ ಹಿರಿಮೆ ಹೆಚ್ಚಾದಷ್ಟೂ ಸಾಧನೆಯ ಹಿರಿಮೆಯೂ ಹೆಚ್ಚು.

ಭಾರತೀಯ ಸಂಸ್ಕೃತಿಯಲ್ಲಂತೂ 'ತ್ಯಾಗ' ಕ್ಕೆ ಬಲು ದೊಡ್ಡ ಸ್ಥಾನ. ತ್ಯಾಗಿಯ ಜೀವನ ಅತ್ಯಂತ ಶ್ರೇಷ್ಠ ಜೀವನ. ಸರ್ವಸಂಗಗಳನ್ನೂ ಪರಿತ್ಯಾಗ ಮಾಡಿದವನು ಪರಮಾತ್ಮನಿಗೆ ಅತ್ಯಂತ ಪ್ರಿಯನಾದವನು ಎಂದು ಭಗವದ್ಗೀತೆಯಲ್ಲಿ ಹೇಳಿದೆ. ಅಲ್ಲದೆ ಹಿರಿಯ ಧ್ಯೇಯಕ್ಕೋಸ್ಕರ ಕಿರಿದನ್ನು ತ್ಯಾಗಮಾಡು ಎಂದು ತ್ಯಾಗದ ಅವಶ್ಯಕತೆಯನ್ನೂ ಅದರ ವ್ಯಾಪ್ತಿಯನ್ನೂ ಸೂಚಿಸಿದೆ ಮಹಾಭಾರತದ ಒಂದು ಶ್ಲೋಕ :

"ಕುಲಕ್ಕಾಗಿ ಒಂದು ಜೀವವನ್ನೂ ಗ್ರಾಮಕ್ಕಾಗಿ ಕುಲವನ್ನೂ ಜನಪದಕ್ಕಾಗಿ ಗ್ರಾಮವನ್ನೂ ಹಾಗೆಯೇ ಆತ್ಮಕ್ಕಾಗಿ ಲೋಕವನ್ನೂ ತ್ಯಾಗಮಾಡಲು ಸಿದ್ಧನಾಗಿರಬೇಕು". ಎನ್ನುತ್ತದೆ.

ಸ್ವಾರ್ಥದಿಂದ ಬಾಳು ಹಾಳು. ತ್ಯಾಗದಿಂದ ಜೀವನದ ಸುಖ.

## ತಿಂಗಳು

ಹೊಸ ವರ್ಷದ ದಿನ ಬಂದಿತು ಎಂದರೆ ಒಂದು ಉತ್ಸಾಹ; ಹರ್ಷ.

ಆದರೆ ಎಲ್ಲ ದೇಶಗಳವರಿಗೂ ಎಲ್ಲ ಮತಗಳವರಿಗೂ ಗುಂಪುಗಳವರಿಗೂ ಒಂದೇ ದಿನ ಹೊಸ ವರ್ಷ ಪ್ರಾರಂಭವಾಗುವುದಿಲ್ಲ. ದಕ್ಷಿಣ ಭಾರತದಲ್ಲಿ ಬಹುಮಟ್ಟಿಗೆ ಆಚರಿಸುವುದು ಚಾಂದ್ರಮಾನ ಯುಗಾದಿ. ಭೂಮಿ ತನ್ನ ಅಕ್ಷದಲ್ಲಿ ತಿರುಗುವುದನ್ನು 'ದಿನ' ಎನ್ನುತ್ತೇವೆ. ಚಂದ್ರ ಭೂಮಿಯ ಸುತ್ತಲೂ ಸುತ್ತುವುದು 'ತಿಂಗಳು'. ಭೂಮಿ ಸೂರ್ಯನ ಸುತ್ತಲೂ ಸುತ್ತುವುದು 'ವರ್ಷ'. ಸೂರ್ಯನ ಗತಿಯನ್ನು ಅವಲಂಬಿಸಿರುವ ಎಣಿಕೆಯನ್ನು ಸೌರಮಾನ ಎನ್ನುತ್ತೇವೆ. ಚಂದ್ರನ ಗತಿಯನ್ನು ಅನುಸರಿಸುವ ಎಣಿಕೆ ಚಾಂದ್ರಮಾನ. ಒಂದು ವರ್ಷಕ್ಕೆ ಹನ್ನೆರಡು ಸೂರ್ಯನ ತಿಂಗಳು ಇರುತ್ತವೆ. ಆದರೆ ಒಂದು ಅಮಾವಾಸ್ಯೆಯಿಂದ ಮತ್ತೊಂದಕ್ಕೆ ಚಂದ್ರನ ತಿಂಗಳ ಲೆಕ್ಕಾಚಾರ. ಅಮಾವಾಸ್ಯೆಯಿಂದ ಅಮಾವಾಸ್ಯೆಗೆ 29 ದಿನ 12 ಗಂಟೆ 44 ಮಿನಿಟುಗಳಾದ್ದರಿಂದ ಸೌರಮಾನದ 12 ತಿಂಗಳಿಗೆ ಚಾಂದ್ರಮಾನದ $12\frac{3}{8}$ ತಿಂಗಳು ಸಮ. ಚಾಂದ್ರ ಸಂವತ್ಸರ ಆರಂಭವಾಗುವುದು ಚೈತ್ರ ಮಾಸದಿಂದ. ಆದ್ದರಿಂದ ಚಾಂದ್ರ ಸಂವತ್ಸರವನ್ನು ಚೈತ್ರಾದಿಯ ವರ್ಷ ಎಂದೂ ಹೇಳುತ್ತಾರೆ.

ಸಾಮಾನ್ಯವಾಗಿ ಪ್ರಪಂಚದ ಎಲ್ಲ ಜನಾಂಗಗಳಲ್ಲಿಯೂ ಒಂದು ವರ್ಷದಲ್ಲಿ ಹನ್ನೆರಡು ತಿಂಗಳು. ಆದರೆ ತಿಂಗಳಿನಲ್ಲಿ ದಿನಗಳೆಷ್ಟು ಎನ್ನುವುದು ಸಂವತ್ಸರ ಪದ್ಧತಿಯನ್ನು ಅವಲಂಬಿಸುತ್ತದೆ.

ಹಿಂದೆ ಭಾರತೀಯರಲ್ಲಿ ವರ್ಷದ ಅವಧಿಯನ್ನು ಐದು ರೀತಿಯಿಂದ ಎಣಿಸುವ ಪದ್ಧತಿಯಿತ್ತು : ಚಾಂದ್ರ, ಸೌರ, ಸಾವನ, ನಕ್ಷತ್ರ ಮತ್ತು ಬಾರ್ಹಸ್ಪತ್ಯ. ಈ ಐದು ಪದ್ಧತಿಗಳಲ್ಲಿ ಚಾಂದ್ರಮಾನ ಪದ್ಧತಿ ಅನುಕೂಲವಾಗಿ ಕಂಡಿದ್ದರಿಂದ ಭಾರತದಲ್ಲಿ ಚಾಂದ್ರಮಾನ ಸಂವತ್ಸರ ಹೆಚ್ಚು ಪ್ರಚಲಿತವಾಗಿದೆ. ಚಾಂದ್ರ ಸಂವತ್ಸರದ ಪ್ರಕಾರ ವರ್ಷಕ್ಕೆ 354 ದಿನಗಳು.

ಈ 354 ದಿನಗಳನ್ನು ಹನ್ನೆರಡು ತಿಂಗಳುಗಳಾಗಿ ವಿಂಗಡಿಸಲಾಗಿದೆ. ಚಿತ್ರಾ, ವಿಶಾಖಾ, ಜ್ಯೇಷ್ಠಾ, ಪೂರ್ವಾಷಾಢ, ಶ್ರವಣ, ಪೂರ್ವಾಭಾದ್ರ, ಅಶ್ವಿನಿ, ಕೃತ್ತಿಕಾ, ಮೃಗಶಿರ, ಪುಷ್ಯ, ಮಘ, ಉತ್ತರ ಫಾಲ್ಗುಣಿ ಎಂಬ ನಕ್ಷತ್ರಗಳ ಹೆಸರುಗಳಿಂದ ಕ್ರಮವಾಗಿ ಚೈತ್ರ, ವೈಶಾಖ, ಜ್ಯೇಷ್ಠ, ಆಷಾಢ, ಶ್ರಾವಣ, ಭಾದ್ರಪದ, ಆಶ್ವಯುಜ, ಕಾರ್ತಿಕ, ಮಾರ್ಗಶಿರ, ಪುಷ್ಯ, ಮಾಘ ಮತ್ತು ಫಾಲ್ಗುಣ ಎಂದು ತಿಂಗಳುಗಳಿಗೆ ಹೆಸರು ಬಂದಿದೆ.

ಸೂರ್ಯನ ಗತಿಯನ್ನು ಅನುಸರಿಸಿ ಎಣಿಸುವ ವರ್ಷ ಸೌರಮಾನ, ಸೌರ ಸಂವತ್ಸರ. ಸೂರ್ಯನು ಮೇಷರಾಶಿಯನ್ನು ಪ್ರವೇಶಿಸಿದ ದಿನ ಪ್ರಾರಂಭವಾಗುವ ಈ ಸಂವತ್ಸರ ಮೀನರಾಶಿಯನ್ನು ಆತನು ಬಿಡುವ ದಿನಕ್ಕೆ ಮುಗಿಯುತ್ತದೆ. ಹನ್ನೆರಡು ರಾಶಿಗಳಲ್ಲಿ ಚಲಿಸುವುದಕ್ಕೆ ಸೂರ್ಯನಿಗೆ 365 ದಿನ ಬೇಕು. ಆದ್ದರಿಂದಲೇ ಸೌರ ಸಂವತ್ಸರದಲ್ಲಿ 365 ದಿನಗಳಿವೆ. ಆದರೆ ಚಾಂದ್ರಮಾನ ಸೌರಮಾನಗಳು ಜ್ಯೋತಿಷ್ಯದ ಗಣಿತಕ್ಕೆ ಸರಿಯಾಗಬೇಕೆಂದು ಚಾಂದ್ರಮಾನದವರು 33 ತಿಂಗಳಿಗೊಂದು ಸಲ ಅಧಿಕ ಮಾಸವೊಂದನ್ನು ಸೇರಿಸಿಕೊಂಡಿದ್ದಾರೆ.

ಸಾವನ ಪದ್ಧತಿಯ ಪ್ರಕಾರ ಪ್ರತಿಯೊಂದು ತಿಂಗಳಿಗೂ 30 ದಿನಗಳು, ಹನ್ನೆರಡು ತಿಂಗಳ ವರ್ಷಕ್ಕೆ 360 ದಿನಗಳು.

ನಕ್ಷತ್ರಗಳ ಚಟುವಟಿಕೆಯನ್ನು ಅನುಸರಿಸಿ ಎಣಿಸುವ ವರ್ಷ ನಕ್ಷತ್ರ ವತ್ಸರ. ಗುರುಗ್ರಹದ ಗತಿಯ ಮೂಲಕ ಎಣಿಸುವ ವರ್ಷ ಬಾರ್ಹಸ್ಪತ್ಯ ವತ್ಸರ. ಒಂದು ರಾಶಿಯನ್ನು ದಾಟಿ ಇನ್ನೊಂದು ರಾಶಿಗೆ ಹೋಗಲು ಗುರುವಿಗೆ 361 ದಿನಗಳು. ಸಾವನ ಪದ್ಧತಿಯೂ ಬಾರ್ಹಸ್ಪತ್ಯ ಪದ್ಧತಿಯೂ ಜನಪ್ರಿಯವಾಗಲಿಲ್ಲ.

ಈಗ ಬಹಳ ಬಳಕೆಯಲ್ಲಿರುವ ಕ್ಯಾಲೆಂಡರ್, ಪಾಶ್ಚಾತ್ಯ ಪದ್ಧತಿಯದು. ಇದನ್ನು ಆರಂಭಿಸಿದವರು ರೋಮನರು. ಒಂದು ಅಮಾವಾಸ್ಯೆಯಿಂದ ಇನ್ನೊಂದು ಅಮಾವಾಸ್ಯೆಗೆ ಒಂದು ತಿಂಗಳು. ಪ್ರತಿ ಚಾಂದ್ರಮಾನ ತಿಂಗಳೂ $29\frac{1}{2}$ ದಿನ. ಹೀಗಾಗಿ ರೋಮನರ ವರ್ಷಕ್ಕೂ ಭಾರತೀಯ ಚಾಂದ್ರಮಾನ ಪದ್ಧತಿಯಂತೆಯೇ 354 ದಿನಗಳು.

ಜೂಲಿಯಸ್ ಸೀಸರ್ ರೋಮನ್ನು ಆಳುತ್ತಿದ್ದಾಗ ಈ ಕ್ಯಾಲೆಂಡರ್ 80 ದಿನಗಳಷ್ಟು ತಪ್ಪು ಕಾಲವನ್ನು ಸೂಚಿಸುತ್ತಿತ್ತೆಂದು ಕಂಡುಬಂದಿದೆ. ಏಕೆಂದರೆ ಕ್ಯಾಲೆಂಡರ್ ವಸಂತ ಮಾಸ ಬಂದಾಗ ಇನ್ನೂ ಚಳಿಗಾಲದ ಮಧ್ಯಭಾಗವೇ ನಡೆಯುತ್ತಿತ್ತು. ಆಗ ಆತನು ಖಗೋಳಶಾಸ್ತ್ರಜ್ಞರಿಂದ ವರ್ಷಕ್ಕೆ $365\frac{1}{4}$ ದಿನಗಳೆಂಬುದನ್ನು ಅರಿತ. ಸಾಮಾನ್ಯ ವರ್ಷಕ್ಕೆ 365 ದಿನಗಳೆಂದೂ ಫೆಬ್ರವರಿಯಲ್ಲಿ 28 ದಿನಗಳೆಂದೂ ನಾಲ್ಕು ವರ್ಷಗಳಿಗೊಮ್ಮೆ (ಅಧಿಕ ದಿನ ವರ್ಷವೆಂದು) ಫೆಬ್ರವರಿ ತಿಂಗಳಿಗೆ ಒಂದು ದಿನವನ್ನು ಹೆಚ್ಚಾಗಿ ಸೇರಿಸಬೇಕೆಂದೂ ನಿರ್ಧರಿಸಿದ. ಅಲ್ಲದೆ ಒಂದು ತಿಂಗಳೆಂದರೆ 30 ಅಥವಾ 31 ದಿನಗಳ ಅವಧಿಯೆಂದೂ ನಿಗದಿಮಾಡಿದ.

ಸೀಸರನ ಈ ಹೊಸ ಪದ್ಧತಿ ಕ್ರಿ. ಪೂ. 46ರಲ್ಲಿ ಜಾರಿಗೆ ಬಂದಿತು. ಮಾರ್ಚ್ ಮೊದಲನೆಯ ದಿನ ಆರಂಭವಾಗುತ್ತಿದ್ದ ಹೊಸ ವರ್ಷವನ್ನು ಜನವರಿ ಒಂದು ಎಂದು ಮಾಡಿದವನೂ ಆತನೇ ಎನ್ನುತ್ತಾರೆ ಕೆಲವರು.

ಕ್ರಿಶ್ಚಿಯನ್ ಕ್ಯಾಲೆಂಡರಿನಲ್ಲಿ ಹನ್ನೆರಡು ತಿಂಗಳಿವೆ. ಆ ತಿಂಗಳುಗಳಿಗೆ ಹೆಸರುಗಳು ಹೇಗೆ ಬಂದುವು ಎಂಬುದು ಕುತೂಹಲಕಾರಿ. ಪ್ರಾಚೀನ ರೋಮನ್ ದೇವತೆಯಾದ ಜೇನಸ್‌ನಿಗೆ ಎರಡು ಮುಖ. ಒಂದು ಮುಖ ಕಳೆದುಹೋದ ದಿನಗಳನ್ನು ನೋಡುತ್ತಿರುವುದಕ್ಕೆ ; ಇನ್ನೊಂದು ಮುಖ ಮುಂದಾಗುವುದನ್ನು ನೋಡುತ್ತಿರುವುದಕ್ಕೆ. ಭೂತ ಭವಿಷ್ಯಗಳೆರಡರಲ್ಲೂ ಆಸಕ್ತಿಹೊಂದಿದ ದೇವನ ಹೆಸರು ಮೊದಲನೆಯ ತಿಂಗಳು ಜನವರಿಗೆ.

ತಿಂಗಳುಗಳಲ್ಲೆಲ್ಲ ಅತ್ಯಂತ ಚಿಕ್ಕ ಅವಧಿಯದು ಫೆಬ್ರುವರಿ. ಮೂಲ, ರೋಮನರ ಹಬ್ಬ ಫೆಬ್ರುವ.

ಮೊದಲಿಗೆ ರೋಮನ್ ಕ್ಯಾಲೆಂಡರ್‌ನಲ್ಲಿ ವರ್ಷದ ಪ್ರಾರಂಭದ ತಿಂಗಳು ಮಾರ್ಚ್. ರೋಮನರು ಯುದ್ಧ ದೇವತೆಯಾದ ಮಾರ್ಸ್‌ನ ಹೆಸರನ್ನು ತಿಂಗಳಿಗಿಟ್ಟರು. ಮಾರ್ಚ್ ಇಪ್ಪತ್ತೊಂದರಂದು ಹಗಲು ರಾತ್ರಿಗಳೆರಡೂ ಪ್ರಪಂಚದ ಎಲ್ಲೆಡೆಯಲ್ಲೂ ಸಮನಾಗಿರುತ್ತವೆ

ವರ್ಷದ ನಾಲ್ಕನೆಯ ತಿಂಗಳಿಗೆ ಏಪ್ರಿಲ್ ಎಂಬ ಹೆಸರು ಹೇಗೆ ಬಂತೆಂದು ಹೇಳುವುದು ಕಷ್ಟ. ಅದು ಗ್ರೀಕರ ಪ್ರೇಮದೇವತೆ ಆಫ್ರದೈತೆಯಿಂದ ಬಂದಿರಬೇಕೆಂದು ಕೆಲವರ ಊಹೆ. ಅದು 'ಅರಳುವುದು' ಎಂಬ ಪದದ ಧಾತುವಿನಿಂದ ಬಂದಿರಬಹುದೆಂದೂ ಹೇಳುತ್ತಾರೆ. ಏಪ್ರಿಲ್‌ನಲ್ಲಿ ವಸಂತ ಋತು ಇರುತ್ತದೆ.

ಮೇ ತಿಂಗಳೂ ವಸಂತದ ತಿಂಗಳೇ. ಈ ತಿಂಗಳಿಗೆ ಮೇ ಎಂಬ ಹೆಸರು ಬರಲು ರೋಮನರ ವಸಂತದ ದೇವತೆ ಮೇಯ ಮೆಜೆಸ್ಟ ಕಾರಣ. ರೋಮನರು ಮೇ ತಿಂಗಳ ಮೊದಲ ದಿನ ಪುಷ್ಪಗಳ ದೇವತೆಯಾದ ಫ್ಲೋರಳನ್ನು ಆರಾಧಿಸುತ್ತಿದ್ದರು. ಇದು ಯೂರೋಪಿನ ಉಳಿದ ಭಾಗಗಳಿಗೂ ಹರಡಿ ತುಂಬ ಸಂತೋಷದ ಹಬ್ಬವಾಯಿತು.

ಪ್ರಾಚೀನ ರೋಮನರು ಬೇಸಿಗೆಯ ಮೊದಲ ತಿಂಗಳನ್ನು ಜೂನ್ ಎಂದು ಕರೆದರು. ಅದು ವಿವಾಹಗಳ ತಿಂಗಳು. ಆದ್ದರಿಂದಲೇ ಸ್ತ್ರೀಯರು, ವಿವಾಹ, ಗೃಹ ಇವುಗಳೆಲ್ಲದರ ದೇವತೆ ಜ್ಯೂನೋ ಹೆಸರನ್ನು ತಿಂಗಳಿಗೂ ಇಟ್ಟರು.

ಕ್ಯಾಲೆಂಡರ್ ಬದಲಾಗುವುದಕ್ಕೆ ಮೊದಲು ಜುಲೈ ತಿಂಗಳಿಗೆ ಕ್ವಿಂಟಿಲಿಸ್ ಎಂದು ಹೆಸರಿತ್ತು. ಮಾರ್ಕ್ ಆಂಟನಿ ಈ ತಿಂಗಳಿಗೆ ಜೂಲಿಯಸ್ ಸೀಸರನ ಜ್ಞಾಪಕಾರ್ಥ ಜುಲೈ ಎಂದು ಹೆಸರಿಟ್ಟ.

ರೋಮನ್ ಚಕ್ರವರ್ತಿ ಅಗಸ್ಟಸ್ ತನ್ನ ಹೆಸರನ್ನೇ ತಿಂಗಳಿಗೂ ಇಟ್ಟ. ಆಗಸ್ಟ್ ವರುಷದ ಎಂಟನೆಯ ತಿಂಗಳು.

ಪ್ರಾಚೀನ ರೋಮ್‌ನಲ್ಲಿ ಹೊಸ ವರ್ಷ ಮಾರ್ಚ್ ಒಂದರಂದು ಪ್ರಾರಂಭವಾಗುತ್ತಿದ್ದುದರಿಂದ ಸೆಪ್ಟೆಂಬರ್ ಏಳನೆಯ, ಅಕ್ಟೋಬರ್ ಎಂಟನೆಯ, ನವೆಂಬರ್ ಒಂಬತ್ತನೆಯ ಮತ್ತು ಡಿಸೆಂಬರ್ ಹತ್ತನೆಯ ತಿಂಗಳುಗಳಾಗಿದ್ದುವು. ಅವುಗಳ ಹೆಸರುಗಳೇ ಇದನ್ನು ಸೂಚಿಸುತ್ತವೆ. ಲ್ಯಾಟಿನ್ ಮತ್ತು ಸಂಸ್ಕೃತ ಒಂದೇ ಗುಂಪಿನ ಭಾಷೆಗಳು, ಇವುಗಳ ಹಲವು ಪದಗಳಿಗೆ ರೂಪದಲ್ಲಿ ಮತ್ತು ಅರ್ಥದಲ್ಲಿ ಸಂಬಂಧ ಉಂಟು. ಸೆಪ್ಟೆಂಬರ್ (ಸಪ್ತ) ಏಳನೆಯ ತಿಂಗಳು, ಅಕ್ಟೋಬರ್ (ಅಷ್ಟ) ಎಂಟನೆಯ ತಿಂಗಳು, ನವೆಂಬರ್ (ನವ) ಒಂಬತ್ತನೆಯ ತಿಂಗಳು ಮತ್ತು ಡಿಸೆಂಬರ್ (ದಶ) ಹತ್ತನೆಯ ತಿಂಗಳು. ಇವುಗಳ ಹೆಸರುಗಳು ಹಾಗೆಯೇ ಉಳಿದುವು.

ಮುಸಲ್ಮಾನರು ವರ್ಷವನ್ನು ಚಂದ್ರನ ಗತಿಯನ್ನು ಅನುಸರಿಸಿ ಹನ್ನೆರಡು ತಿಂಗಳನ್ನಾಗಿ ವಿಭಾಗಿಸಿದ್ದಾರೆ. ಒಂದು ತಿಂಗಳು 30 ದಿನ, ಅದರ ಮುಂದಿನ ತಿಂಗಳು 29 ದಿನ, ಮತ್ತೆ 30 ದಿನಗಳ ತಿಂಗಳು—ಹೀಗೆ ಅವರ ವರ್ಷಕ್ಕೆ 354 ದಿನಗಳು; ಒಮ್ಮೊಮ್ಮೆ ಕಡೆಯ ತಿಂಗಳಿಗೆ ಇನ್ನೊಂದು ದಿನ ಸೇರಿ 355 ದಿನಗಳಾಗುತ್ತವೆ.

ಹಬ್ಬಗಳಿಂದ ವಿಶೇಷೋತ್ಸವಗಳಿಂದ ಹಿಂದೂಗಳು ತಮ್ಮ ಸಂವತ್ಸರದ ಎಲ್ಲ ತಿಂಗಳುಗಳನ್ನೂ ಪವಿತ್ರವಾಗಿ, ಪ್ರಸಿದ್ಧವಾಗಿ ಮಾಡಿದ್ದಾರೆ.

**ನೋಡಿ :** ಋತುಗಳು ; ಪಂಚಾಂಗ ; ಹಬ್ಬಗಳು ; ಸೀಸರ್, ಜೂಲಿಯಸ್

## ತಿಲಕ್, ಬಾಲಗಂಗಾಧರ

"ಸ್ವರಾಜ್ಯ ನನ್ನ ಜನ್ಮಸಿದ್ಧ ಹಕ್ಕು. ಅದನ್ನು ನಾನು ದೊರಕಿಸಿಯೇ ತೀರುವೆ," ಎಂದು ಗರ್ಜಿಸಿದವರು ಬಾಲಗಂಗಾಧರ ತಿಲಕರು. ತಮ್ಮ ಸುಸಂಸ್ಕೃತ ನಡತೆಯಿಂದ ಧೀರೋದಾತ್ತ ಬದುಕಿನಿಂದ ಲೋಕಮಾನ್ಯ ಎಂಬ ಬಿರುದನ್ನು ಪಡೆದ ತಿಲಕರು ಈ ಶತಮಾನದ ಆರಂಭದ ದಶಕಗಳಲ್ಲಿ ಭಾರತದಲ್ಲಿ ಅತ್ಯಂತ ಜನಪ್ರಿಯ ವ್ಯಕ್ತಿಯಾಗಿದ್ದರು.

ತಿಲಕ್ 1856 ಜುಲೈ 26 ರಂದು ಮಹಾರಾಷ್ಟ್ರದ ರತ್ನಾಗಿರಿಯಲ್ಲಿ ಜನಿಸಿದರು. ಗಂಗಾಧರ ಪಂತ ಮತ್ತು ಪಾರ್ವತಿಬಾಯಿ. ತಿಲಕರ ತಂದೆ ತಾಯಿ. ಹುಟ್ಟುಹೆಸರು ಕೇಶವ. ಮುದ್ದಿಗಾಗಿ 'ಬಾಲ' ಎಂದು ತಂದೆತಾಯಿ ಕರೆಯುತ್ತಿದ್ದರು. ಮುಂದೆ ಬಾಲಗಂಗಾಧರ ತಿಲಕ್ ಎಂಬ ಹೆಸರಿನಿಂದಲೇ ಅವರು ಪ್ರಸಿದ್ಧರಾದರು.

ತಿಲಕರ ಮನೆತನ ಬಡತನದ್ದು. ಅವರ ತಂದೆ ಶಾಲೆಯ ಅಧ್ಯಾಪಕ. ಗಣಿತ, ಸಂಸ್ಕೃತ ಇವುಗಳಲ್ಲಿ ಮಹಾಪಂಡಿತರಾಗಿದ್ದ ಗಂಗಾಧರ ಪಂತರು ಮಗನಿಗೆ ಮನೆಯಲ್ಲೇ ಪಾಠ ಹೇಳಿಕೊಡುತ್ತಿದ್ದರು. ಐದು ವರ್ಷದ ವೇಳೆಗೆ 'ಅಮರಕೋಶ'ದ ಕೆಲವು ಭಾಗಗಳನ್ನು ತಿಲಕರು ಕಂಠಪಾಠ ಮಾಡಿದ್ದರು.

ತಿಲಕರಿಗೆ ಹತ್ತು ವರ್ಷ ವಯಸ್ಸಾದಾಗ ಅವರ ತಂದೆಗೆ ಪುಣೆ ನಗರಕ್ಕೆ ವರ್ಗವಾಯಿತು. ತಿಲಕ್ ಅಲ್ಲಿನ ಇಂಗ್ಲಿಷ್ ಶಾಲೆಯಲ್ಲಿ ಓದು ಮುಂದುವರಿಸಿದರು. ಗುರುಗಳಾಗಲಿ, ಸ್ನೇಹಿತರಾಗಲಿ ತಪ್ಪಿದರೆ ಇದ್ದುದನ್ನು ಇದ್ದ ಹಾಗೆ ಹೇಳಿಬಿಡುತ್ತಿದ್ದುದರಿಂದ 'ಜಗಳಗಂಟ'ರೆಂದು ತಿಲಕ್ ಶಾಲೆಯಲ್ಲಿ ಪ್ರಸಿದ್ಧರಾಗಿದ್ದರು.

ವಿದ್ಯಾಭ್ಯಾಸವನ್ನು ಮುಗಿಸಿ 1880 ಜನವರಿ 1 ರಂದು ತಿಲಕರು ತಮ್ಮ ಸ್ನೇಹಿತರೊಂದಿಗೆ ಒಂದು ಶಾಲೆ ಸ್ಥಾಪಿಸಿದರು. ಭಾರತದ ಮಕ್ಕಳಲ್ಲಿ ಸ್ವಾತಂತ್ರ್ಯದ ಅರಿವು ಮೂಡಿಸಲು ಶಿಕ್ಷಣವೇ ಉತ್ತಮ ಸಾಧನ. ನಮ್ಮದಾದ ಶಾಲೆಯೊಂದು ಇದಕ್ಕೆ ಅತ್ಯಗತ್ಯ ಎಂಬುದು ಅವರ ಭಾವನೆಯಾಗಿದ್ದಿತು. ಆರಂಭದ ದಿನವೇ 150 ವಿದ್ಯಾರ್ಥಿಗಳು ಸೇರಿದರು. ಮೂರು ತಿಂಗಳಲ್ಲಿ ಅವರ ಸಂಖ್ಯೆ 500 ಆಗಿ, ನಾಲ್ಕು ವರ್ಷಗಳಲ್ಲಿ ಸಾವಿರ ಮುಟ್ಟಿತು. ಜನರಿಗೆ ಪತ್ರಿಕಾ ಸೌಲಭ್ಯವನ್ನು ಒದಗಿಸಲು ಮುದ್ರಣಾಲಯವನ್ನು ಸ್ಥಾಪಿಸಿ 'ಕೇಸರಿ' ಎಂಬ ಪತ್ರಿಕೆಯನ್ನಾರಂಭಿಸಿದರು (1881). ಪತ್ರಿಕೆಯಲ್ಲಿ ನಿರ್ಭಯವಾಗಿ ಸತ್ಯವನ್ನು ಸಾರುತ್ತಿದ್ದರು ; ಆಳುತ್ತಿದ್ದ ಬ್ರಿಟಿಷ್ ಸರಕಾರವನ್ನೇ ಖಂಡಿಸುತ್ತಿದ್ದರು. ಇದರ ಫಲವಾಗಿ ತಿಲಕ್ ಆ ವರ್ಷ ಸೆರೆಮನೆ ಸೇರಿದರು. ಮರುವರ್ಷ ಅವರ ಬಿಡುಗಡೆಯಾಯಿತು.

1885 ಜನವರಿ 2ರಂದು ಪುಣೆಯಲ್ಲಿ ಫರ್ಗ್ಯೂಸನ್ ಕಾಲೇಜನ್ನು ಆರಂಭಿಸಿ. 1890ರಲ್ಲಿ ಆಡಳಿತದ ವಿಷಯದ ವಿರಸದಿಂದ ಕಾಲೇಜು ಕೆಲಸಕ್ಕೆ ರಾಜೀನಾಮೆ ನೀಡಿದರು. ಧೈರ್ಯಗೆಡದೆ 'ಕೇಸರಿ' ಪತ್ರಿಕೆಯನ್ನು ಮುಂದುವರಿಸಿದರು.

1893ರಲ್ಲಿ ಮುಂಬಯಿಯಲ್ಲಿ ಹಿಂದೂ–ಮುಸಲ್ಮಾನರ ಗಲಭೆ ಪ್ರಾರಂಭವಾಯಿತು. ಇದರಿಂದ ಜನರಿಗಾದ ಅಪಾರ ನಷ್ಟವನ್ನು ಕಂಡು ನೊಂದ ತಿಲಕರು ಹಿಂದೂಗಳಲ್ಲಿ ಹುದುಗಿದ್ದ ಧಾರ್ಮಿಕ ಭಾವನೆಗೆ ಹೊಸ ರೂಪ ಕೊಡುವ ಕಾರ್ಯದಲ್ಲಿ ತೊಡಗಿದರು. ಗಣೇಶನ ಹಬ್ಬವನ್ನು ನಾಡಹಬ್ಬವನ್ನಾಗಿ ಪರಿವರ್ತಿಸಿದರು. ಮಹಾರಾಷ್ಟ್ರದಲ್ಲಿ ರಾಷ್ಟ್ರೀಯ ಭಾವನೆ ಬೆಳೆಯಲಾರಂಭಿಸಿತು. 1897ರಲ್ಲಿ ಮತ್ತೆ ಸರಕಾರ ಅವರನ್ನು ಸೆರೆಮನೆಗೆ



'ರಾಷ್ಟ್ರೀಯ ಅಸಂತೋಷದ ಜನಕ'-ತಿಲಕ್

ಕಳುಹಿಸಿದರು. ಸಂಸ್ಕೃತದ ಅಭಿಮಾನಿ ಜರ್ಮನಿಯ ಮ್ಯಾಕ್ಸ್ ಮುಲ್ಲರ್ ಆಗ ಭಾರತದಲ್ಲಿದ್ದರು. ಅವರ ಪರಿಶ್ರಮದಿಂದ ಮರುವರ್ಷ ತಿಲಕರ ಬಿಡುಗಡೆಯಾಯಿತು.

'ಜನರು ಸ್ವದೇಶದ ವಸ್ತುಗಳನ್ನು ಪ್ರೀತಿಸಬೇಕು. ಅವುಗಳನ್ನೇ ಉಪಯೋಗಿಸಬೇಕು; ವಿದೇಶಿ ವಸ್ತುಗಳು ನಿಷಿದ್ಧ. ಅವುಗಳನ್ನು ಬಹಿಷ್ಕರಿಸಬೇಕು,' ಎಂದು 1905ರಲ್ಲಿ ತಿಲಕರು ಉಪದೇಶಿಸಲಾರಂಭಿಸಿದರು. ಭಾರತದ ರಾಷ್ಟ್ರೀಯ ಮಹಾಸಭೆಯಲ್ಲಿ ಉಗ್ರಗಾಮಿಗಳೆಂದು ಹೆಸರಾದರು.

1908ರಲ್ಲಿ ಮತ್ತೆ ಸರಕಾರದ ವಿರುದ್ಧ ಲೇಖನ ಬರೆದ ಅಪಾದನೆಯ ಮೇಲೆ ತಿಲಕರನ್ನು ಬಂಧಿಸಲಾಯಿತು. ತಿಲಕರಿಗೆ ಆಗ 52 ವರ್ಷ. ಅವರಿಗೆ ಆರು ವರ್ಷ ಕಾಲ ಗಡಿಪಾರು ಶಿಕ್ಷೆ ವಿಧಿಸಿದರು. ಜನರ ಕಣ್ಣು ತಪ್ಪಿಸಿ ಅರ್ಧರಾತ್ರಿಯಲ್ಲಿ ಸಾಬರಮತಿ ಸೆರೆಮನೆಗೆ ಕರೆದೊಯ್ದರು. ಅಲ್ಲಿಂದ ಬರ್ಮ ದೇಶದ ಮಾಂಡಲೆ ಎಂಬಲ್ಲಿಗೆ ಒಯ್ದು ಸುರಂಗದ ಕತ್ತಲು ಕೋಣೆಯಲ್ಲಿ ಬಂಧಿಸಿಟ್ಟರು. ತಿಲಕರಿಗೆ ಅಲ್ಲಿ ದೊರೆತ ಏಕೈಕ ಸೌಲಭ್ಯವೆಂದರೆ ಪುಸ್ತಕ. ಅವರು ಕೇಳಿದಾಗ ಪುಸ್ತಕಗಳನ್ನು ಒದಗಿಸುತ್ತಿದ್ದರು. ಗೀತೆಯನ್ನು ಚೆನ್ನಾಗಿ ಅಭ್ಯಾಸಮಾಡಿ ಗೀತಾರಹಸ್ಯ ಎಂಬ ಗ್ರಂಥ ಬರೆದರು. ಫ್ರೆಂಚ್, ಜರ್ಮನ್, ಪಾಲಿ ಭಾಷೆಗಳನ್ನು ಅಲ್ಲಿಯೇ ಅಭ್ಯಾಸ ಮಾಡಿದರು.

1912ರಲ್ಲಿ ತಿಲಕ್ ಸೆರೆಮನೆಯಲ್ಲಿದ್ದಾಗಲೇ ಅವರ ಪತ್ನಿ ತೀರಿಕೊಂಡರು.

ಸೆರೆಮನೆ ವಾಸ ಮುಗಿದ ಬಳಿಕ ತಿಲಕರು ಮತ್ತೆ ಸ್ವಾತಂತ್ರ್ಯ ಚಳುವಳಿಯಲ್ಲಿ ಮಗ್ನರಾದರು. 1918ರಲ್ಲಿ ದಿಲ್ಲಿಯಲ್ಲಿ ಜರುಗಿದ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನಕ್ಕೆ ಬಾಲಗಂಗಾಧರ ತಿಲಕರು ಅಧ್ಯಕ್ಷರಾದರು.

ಆ ವರ್ಷ ಸ್ವರಾಜ್ಯಮಂತ್ರವನ್ನು ಇಂಗ್ಲೆಂಡಿಗೂ ಮುಟ್ಟಿಸಲು ಒಂದು ಶಿಷ್ಟಮಂಡಲ ಆ ದೇಶಕ್ಕೆ ಹೊರಟಿತು. ಅದರಲ್ಲಿ ತಿಲಕ್ ಸಹ ಇದ್ದರು. ಬ್ರಿಟಿಷರು ಭಾರತದ ಬೇಡಿಕೆಗೆ ಮಹತ್ವ ನೀಡಲಿಲ್ಲ. ಬ್ರಿಟಿಷರಲ್ಲಿ ತಿಲಕ್ ಪ್ರಚಾರ ನಡೆಸಲಾರಂಭಿಸಿದರು. 'ರಾಷ್ಟ್ರೀಯ ಅಸಂತೋಷದ ಜನಕ' ಎಂದು ಬ್ರಿಟಿಷ್ ಪತ್ರಿಕೆಗಳು ತಿಲಕರನ್ನು ದೂಷಿಸಿದುವು. ಹದಿಮೂರು ತಿಂಗಳ ವಿದೇಶ ಪ್ರವಾಸ ಸುಖಕರವಾಗಿರಲಿಲ್ಲ. ತಿಲಕರು ಭಾರತಕ್ಕೆ ಮರಳಿದರು. ಅಪಾರ ದ್ರವ್ಯ ನಷ್ಟದಿಂದ ಅವರು ಬಡವರಾಗಿದ್ದರು. ಆದರೆ ಜನತೆ ಅವರಿಗಾಗಿ ಸಹಾಯನಿಧಿ ಸಂಗ್ರಹವನ್ನು ಆರಂಭಿಸಿತು. ರವೀಂದ್ರನಾಥ ಠಾಕೂರ್, ಅರವಿಂದ ಘೋಷ್ ಮುಂತಾದವರು ನಿಧಿಸಂಗ್ರಹದ ಮುಂದಾಳಾದರು ; ಮೂರು ಲಕ್ಷ ರೂಪಾಯಿಗಳನ್ನು ತಿಲಕರಿಗೆ ಜೂನ್ 1920ರಲ್ಲಿ ಅರ್ಪಿಸಿದರು.

ಆ ವೇಳೆಗೆ ಗಾಂಧಿಜಿ ಆಫ್ರಿಕದಿಂದ ಭಾರತಕ್ಕೆ ಮರಳಿದ್ದರು. ಗಾಂಧಿಜಿಯಲ್ಲಿ ಹಿರಿಯ ನಾಯಕನ ಗುಣಗಳಿದ್ದುದನ್ನು ತಿಲಕರು ಮನಗಂಡರು.

ಸತತ ಪರಿಶ್ರಮದಿಂದ ಬಳಲಿದ್ದ ತಿಲಕರ ಜೀವ 1920 ಆಗಸ್ಟ್ 1ರಂದು ಮುಂಬಯಿಯಲ್ಲಿ ಚಿರವಿಶ್ರಾಂತಿಯನ್ನು ಪಡೆಯಿತು.

ತಿಲಕರು ಭಾರತಕ್ಕಾಗಿ ಬಾಳಿದರು, ಭಾರತಕ್ಕಾಗಿಯೇ ಪ್ರಾಣ ಕೊಟ್ಟರು.

ವಿವರ : ಬಳಸಿದ ಸಂಪುಟ

## ತುರ್ಕಿ

ಎರಡು ಖಂಡಗಳಲ್ಲಿ ಚಾಚಿಕೊಂಡಿರುವ ಕೆಲವೇ ದೇಶಗಳಲ್ಲಿ ತುರ್ಕಿ ಒಂದು.

ಮೂರು ಸಾವಿರ ವರ್ಷಗಳ ಹಿಂದಿನಿಂದಲೂ ಚಿಕ್ಕ ಚಿಕ್ಕ ರಾಜ್ಯಗಳಾಗಿ ವಿಚ್ಛಿನ್ನವಾಗಿದ್ದ ತುರ್ಕಿ, ಕೆಮಾಲ್ ಅಟಾಟರ್ಕನ ಆಡಳಿತದಲ್ಲಿ ಹೊಸ ಸ್ವರೂಪ ಪಡೆಯಿತು. ಹೊಸ ಕೈಗಾರಿಕೆ, ರೈಲುಮಾರ್ಗ ಮತ್ತು ಶಾಲೆಗಳು ಸ್ಥಾಪಿತವಾದುವು.

ತುರ್ಕಿ, ಏಷ್ಯ-ಯೂರೋಪ್ ಎರಡು ಖಂಡಗಳಲ್ಲೂ ಇದೆ. ಏಷ್ಯಕ್ಕೆ ಸೇರಿರುವ ಭಾಗವನ್ನು ಏಷ್ಯ ಮೈನರ್ ಎಂದೂ ಯೂರೋಪಿನ ಕಡೆಗಿರುವುದನ್ನು ಥ್ರೇಸ್ ಎಂದೂ ಕರೆಯುತ್ತಾರೆ. ಏಷ್ಯಮೈನರ್ ಪರ್ವತಗಳಿಂದ ಕೂಡಿದ ಎತ್ತರ ಪ್ರದೇಶ. ಎರಡು ಪರ್ವತಗಳ ನಡುವಿನ

ಪ್ರಸ್ಥಭೂಮಿ ಉಪ್ಪು ನೀರಿನ ಸರೋವರಗಳಿಂದ ತುಂಬಿದೆ. ಪಶ್ಚಿಮ ಭಾಗ ಫಲವತ್ತಾಗಿದೆ.

ತೀರ ಪ್ರದೇಶಗಳಲ್ಲಿ ಮೆಡಿಟರೇನಿಯನ್ ಹವಾಗುಣ: ಮಳೆ ಹೆಚ್ಚು. ಪ್ರಸ್ಥಭೂಮಿ ಮತ್ತು ಪರ್ವತ ಪ್ರದೇಶಗಳಲ್ಲಿ ಚಳಿ ಮತ್ತು ಸೆಕೆ ಬಹಳ.

ಕಿಜಿಲ್ ಇರ್ಮಾಕ್, ಸಕರ್ಯಾ ದೊಡ್ಡ ನದಿಗಳು. ಆದರೆ ನೀರು ಉಪ್ಪು. ಇತರ ನದಿಗಳು ಮಳೆ ಬಂದಾಗ ರಭಸವಾಗಿ ಹರಿದು. ಬೇಸಿಗೆಯಲ್ಲಿ ಒಣಗಿ ಹೋಗುತ್ತವೆ.

ಪೆಟ್ರೋಲಿಯಂ. ತಾಮ್ರ. ಕಲ್ಲಿದ್ದಲು ದೊರೆಯುತ್ತವೆ.

ಗೋಧಿ. ಮತ್ತಿತರ ಧಾನ್ಯಗಳು. ಹತ್ತಿ. ಹೊಗೆಸೊಪ್ಪು ಬೆಳೆಯುತ್ತಾರೆ. ಕುರಿ. ಮೃದುತುಪ್ಪಟವುಳ್ಳ ಆಡುಗಳನ್ನು ಸಾಕುತ್ತಾರೆ.

ಗಣಿ ಉದ್ಯಮ ಮತ್ತು ಸಿಮೆಂಟ್. ಬಟ್ಟೆ, ರತ್ನಗಂಬಳಿ. ಉಕ್ಕು. ಕಾಗದ ತಯಾರಿಕೆಯ ಕೈಗಾರಿಕೆಗಳಿವೆ.

ತುರ್ಕಿ ಜನರು ಮಧ್ಯ ಏಷ್ಯದಿಂದ ಬಂದು ನೆಲೆಸಿದರು. ಇವರೆಲ್ಲ ಮುಸಲ್ಮಾನರು. ತುರ್ಕಿ ಭಾಷೆ ಆಡುತ್ತಾರೆ. ಲಿಪಿ ಮಾತ್ರ ರೋಮನ್ ಅಕ್ಷರಗಳನ್ನು ಅಳವಡಿಸಿ ಮಾಡಿದ್ದು. ಈ ಕ್ರಾಂತಿಕಾರಕ ಬದಲಾವಣೆಯನ್ನು ಅಟಾಟರ್ಕ್ ಸಾಧಿಸಿದ.

ರಾಜಧಾನಿ ಅಂಕಾರಾದಲ್ಲಿ ಹಳೆಯ ನಗರವಲ್ಲದೆ ಹೊಸ ನಗರವೂ ಸೇರಿಕೊಂಡಿದೆ. ಇಸ್ತಾಂಬೂಲಿನ ಹಿಂದಿನ ಹೆಸರು ಬೈಜಾಂಟಿಯಂ. ಆಮೇಲೆ ಅದನ್ನು ಕಾನ್‌ಸ್ಟಾಂಟಿನೋಪಲ್ ಎನ್ನುತ್ತಿದ್ದರು. ಗಲಾಟಾ ಸೇತುವೆ ಹೊಸ ಮತ್ತು ಹಳೆಯ ನಗರಗಳನ್ನು ಜೋಡಿಸುತ್ತದೆ. ಇಜಿಮಿರ್ ದೊಡ್ಡ ಬಂದರು.

ತುರ್ಕಿ ಗಣರಾಜ್ಯ 1945ರಲ್ಲಿ ವಿಶ್ವಸಂಸ್ಥೆಯನ್ನು ಸೇರಿತು.

| | | |
|---|---|---|
| ಖಂಡ | : | ಯೂರೊಪ್ ಮತ್ತು ಏಷ್ಯ |
| ಅಕ್ಷಾಂಶ | : | 35° 49′ ಉ ದಿಂದ 42° 06′ ಉ |
| ರೇಖಾಂಶ | : | 26° 03′ ಪೂ ದಿಂದ 44° 49′ ಪೂ |
| ವಿಸ್ತೀರ್ಣ | : | 7,67,119 ಚ .ಕಿ. ಮೀ. |
| ಜನಸಂಖ್ಯೆ | : | 3,11,18,000 |
| ರಾಜಧಾನಿ | : | ಅಂಕಾರ |
| ಸರಕಾರ | : | ಗಣರಾಜ್ಯ |
| ಭಾಷೆ | : | ತುರ್ಕಿ |
| ಬಾವುಟ | : | ಕೆಂಪು, ಬಿಳಿಯ ಅರ್ಧಚಂದ್ರ ಮತ್ತು ನಕ್ಷತ್ರ |

ನೋಡಿ : ಅಟಾಟರ್ಕ್, ಕೆಮಾಲ್

## ತೂಕ, ಅಳತೆ

ಹೂವಾಡಿಗ ಹೂಮಾಲೆಯನ್ನು ಮೊಳ ಅಥವಾ ಮಾರು ಒಂದಕ್ಕೆ ಇಷ್ಟು ಬೆಲೆ ಎಂದು ಮಾರುತ್ತಾನೆ. ಹಕ್ಕಿಗಳಿಗೆ ಎರಚಲು, ಬಿತ್ತನೆ ಮಾಡಲು ಹಿಡಿ ಹಿಡಿ ಧಾನ್ಯ ಕೈಗೆ ತೆಗೆದುಕೊಳ್ಳಬೇಕಾಗುತ್ತದೆ. ಕುಡಿಯಲು ಬೊಗಸೆ ನೀರು ಬೇಕು. ಹುಲ್ಲನ್ನು ಒಬ್ಬ ಮನುಷ್ಯ ಎತ್ತಿ ಇಳಿಸುವಷ್ಟು ಮಾತ್ರ ಹೊರೆ ಕಟ್ಟುತ್ತಾರೆ. ಮೊಳ. ಮಾರು. ಹಿಡಿ. ಬೊಗಸೆ. ಹೊರೆ ಇವು ವಸ್ತುಗಳ ಬೇರೆ ಬೇರೆ ಪ್ರಮಾಣಗಳು.

ಹಾಲನ್ನು ಅಥವಾ ಎಣ್ಣೆಯನ್ನು ಕೊಳ್ಳುವಾಗ ಲೀಟರ್ ಒಂದಕ್ಕೆ ಇಷ್ಟು ಎಂಬುದಾಗಿ ಬೆಲೆ. ಬಟ್ಟೆಯ ಖರೀದಿ ಮೀಟರುಗಳ ಲೆಕ್ಕದಲ್ಲಿ. ಎರಡು ನಗರಗಳ ನಡುವಣ ಅಂತರ ಅನೇಕ ಕಿಲೊಮೀಟರುಗಳು. ಒಬ್ಬ ಮನುಷ್ಯ ಹಲವು ಕಿಲೊಗ್ರಾಮ್ ಭಾರದ ಧಾನ್ಯದ ಚೀಲವನ್ನು ಹೊರಬಲ್ಲ. ಚಿನ್ನ ಬೆಳ್ಳಿಯನ್ನು ಗ್ರಾಮ್‌ಗಳಲ್ಲಿ ತೂಗಬೇಕು. ಲೀಟರ್. ಮೀಟರ್. ಕಿಲೊಗ್ರಾಮ್ ಇವು ನಿಗದಿಯಾದ ಪ್ರಮಾಣಗಳು. ಮೊಳ. ಮಾರು. ಹಿಡಿ. ಬೊಗಸೆ. ಹೊರೆ ಮುಂತಾದುವು ಮನುಷ್ಯನಿಂದ ಮನುಷ್ಯನಿಗೆ ವ್ಯತ್ಯಾಸವಾಗುತ್ತವೆ. ಆದರೆ ಲೀಟರ್. ಮೀಟರ್. ಕಿಲೊಗ್ರಾಮ್‌ಗಳು. ಮನುಷ್ಯನಿಂದ ಮನುಷ್ಯನಿಗೆ. ದೇಶದಿಂದ ದೇಶಕ್ಕೆ ವ್ಯತ್ಯಾಸವಾಗುವುದಿಲ್ಲ. ಆದರೆ ಎಲ್ಲ ದೇಶಗಳಲ್ಲೂ ಲೀಟರ್. ಮೀಟರ್ ಮತ್ತು ಕಿಲೊಗ್ರಾಮ್‌ಗಳನ್ನು ಬಳಸುವುದಿಲ್ಲ. ಅಮೆರಿಕದಲ್ಲಿ ಲೀಟರ್. ಮೀಟರ್. ಕಿಲೊಗ್ರಾಮ್‌ಗಳು ಬಳಕೆಯಲ್ಲಿವೆ. ಗ್ಯಾಲನ್. ಗಜ ಮತ್ತು ಪೌಂಡುಗಳು ಇಂಗ್ಲೆಂಡಿನಲ್ಲಿ ಬಳಕೆಯಲ್ಲಿದ್ದು. ಈಗ ಅಲ್ಲಿಯೂ ದಶಮಾಂಶ ಪದ್ಧತಿಯನ್ನು ಸ್ವೀಕರಿಸಿದ್ದಾರೆ.

ಲೀಟರ್. ಮೀಟರ್. ಕಿಲೊಗ್ರಾಮ್‌ಗಳಲ್ಲಿ ಪ್ರಮಾಣ ದೊಡ್ಡವು. ಚಿಕ್ಕ ಅಳತೆಗಳ ಸಲುವಾಗಿ ಅವನ್ನು ಸಣ್ಣ ಸಣ್ಣದಾಗಿ ವಿಂಗಡಿಸಲಾಗಿದೆ. ಮಿಲಿಲೀಟರ್. ಸೆಂಟಿಮೀಟರ್, ಗ್ರಾಮ್ ಇವು ಕ್ರಮವಾಗಿ ಅವುಗಳ ಸಣ್ಣ ಮಾನಗಳು. ಇವನ್ನು ಮೂಲಮಾನಗಳು ಎನ್ನುತ್ತೇವೆ. ಅದೇ ರೀತಿ ಘನ ಅಂಗುಲ, ಅಂಗುಲ ಮತ್ತು ಔನ್ಸ್ ಇವು ಕ್ರಮವಾಗಿ ಗ್ಯಾಲನ್. ಗಜ. ಮತ್ತು ಪೌಂಡ್‌ಗಳ ಮೂಲಮಾನಗಳು.

ವಸ್ತುಗಳನ್ನು ವಿನಿಮಯ ಮಾಡಿಕೊಳ್ಳಲು ಮನುಷ್ಯ ಎಂದು ಪ್ರಾರಂಭಿಸಿದನೋ ಅಂದಿನಿಂದಲೇ ತೂಗುವುದು ಮತ್ತು ಅಳೆಯುವುದು ಪ್ರಾರಂಭವಾಯಿತು. ಈಜಿಪ್ಟ್, ಮೆಸಪಟೇಮಿಯ ನಾಗರಿಕತೆಗಳಲ್ಲಿ ಮೊಳದ ಆಧಾರದ ಮೇಲೆಯೇ ಉದ್ದವನ್ನು ಅಳೆಯಲಾಗುತ್ತಿತ್ತು. ಮೊಳದ ಉದ್ದ ವ್ಯಕ್ತಿಯಿಂದ ವ್ಯಕ್ತಿಗೆ ಬೇರೆಯಾಗುವುದರಿಂದ ನ್ಯಾಯಬದ್ಧವಾದ ಉದ್ದವನ್ನು ನಿರೂಪಿಸಿ ಲೋಹದ ಸಲಾಕೆಯೊಂದನ್ನು ಮಾಡುತ್ತಿದ್ದರು. ಅರಮನೆಯಲ್ಲಾಗಲೀ ದೇವಾಲಯದಲ್ಲಾಗಲೀ ಅದನ್ನು ಕಾಯ್ದಿಟ್ಟು ಅದಕ್ಕೆ ಸಮಾನ ಉದ್ದದ ಸಲಾಕೆಗಳನ್ನು ಜನರ ಉಪಯೋಗದ ಸಲುವಾಗಿ ತಯಾರಿಸುವುದು ಆಗಿನ ಪದ್ಧತಿ. ಒಬ್ಬ ಮನುಷ್ಯ ಒಂದು ದಿನಕ್ಕೆ ಸಾಮಾನ್ಯವಾಗಿ ಉಳುವಷ್ಟು ಜಮೀನು ಎಂದು ವಿಸ್ತೀರ್ಣವನ್ನು ತಿಳಿಸಲಾಗುತ್ತಿತ್ತು. ಇಂಗ್ಲಿಷಿನ ಒಂದು ಗ್ರೇನ್ ಎಂಬುದು ಒಂದು ದುಂಡನೆಯ ಗೋಧಿ ಅಥವಾ ಬಾರ್ಲಿ ಕಾಳಿನ ತೂಕ. ಕಾಲಕ್ರಮದಲ್ಲಿ ಆ ತೂಕ 1/7000 ಪೌಂಡ್ ಎಂದು ನಿರ್ಧಾರವಾಯಿತು. ಭಾರತದಲ್ಲಿ ಕಾಳುಗಳ ತೂಕದ ಆಧಾರದ ಮೇಲೆ ಬಂಗಾರ ಬೆಳ್ಳಿಗಳನ್ನು ತೂಗುತ್ತಿದ್ದುದಾಗಿ ಕ್ರಿ. ಪೂ. ನಾಲ್ಕನೆಯ ಶತಮಾನದ ದಾಖಲೆಗಳು ತಿಳಿಸುತ್ತವೆ. ಬಂಗಾರವನ್ನು ಐದು ಗುಲಗಂಜಿಗಳ ಜೊತೆ ತೂಗಿದರೆ ಅದು ಒಂದು ‘ಸುವರ್ಣ ಮಾಷ’. ೮೮ ಕಾಳು ಬಿಳಿಯ ಸಾಸಿವೆಯ ತೂಕದ ಬೆಳ್ಳಿ ಒಂದು ‘ರಜತ ಮಾಷ’ ಎನಿಸಿಕೊಳ್ಳುತ್ತದೆ. ಚಿನ್ನ ಬೆಳ್ಳಿಗಳನ್ನು ಅಂದಾಜಾಗಿ ತೂಗಲು ಇಂದಿಗೂ ಗುಲಗಂಜಿಗಳನ್ನು ನಮ್ಮ ದೇಶದಲ್ಲಿ ಬಳಸಲಾಗುತ್ತದೆ. 180 ಗುಲಗಂಜಿಗಳು ಒಂದು ತೊಲ ಅಂದರೆ 11.664 ಗ್ರಾಮ್ ಎಂದು ಲೆಕ್ಕ.

ತೂಕ ಮತ್ತು ಅಳತೆಯ ಪ್ರಮಾಣೀಕರಣ ಅರಸರ ಅಧಿಕಾರ ವ್ಯಾಪ್ತಿಗೆ ಒಳಪಟ್ಟಿತ್ತು. ನಾಣ್ಯ ಛಾಪಿಸುವಂತೆಯೇ ತೂಕ ಅಳತೆಯ ಮಾನಗಳನ್ನು

ಕಾನೂನುಬದ್ಧಗೊಳಿಸಲು ಪ್ರಾರಂಭವಾಯಿತು. ಹದಿಮೂರನೆಯ ಶತಮಾನದ ವೇಳೆಗೆ ಇಂಗ್ಲೆಂಡಿನಲ್ಲಿ ನ್ಯಾಯಬದ್ಧ ಪ್ರಮಾಣಗಳು ಬಳಕೆಯಲ್ಲಿದ್ದುವು. ಇಂಗ್ಲೆಂಡಿನ ವ್ಯಾಪಾರ ಸಂಬಂಧಗಳು ಹಲವಾರು ದೇಶಗಳಿಗೆ ಹರಡಿಕೊಂಡಂತೆ ಬ್ರಿಟಿಷರು ಬಳಸುತ್ತಿದ್ದ ತೂಕ ಅಳತೆಯ ಮಾನಗಳಿಗೆ ಸರಿಸುಮಾರಾಗಿ ಸಮನಾದ ಮಾನಗಳು ಎಲ್ಲೆಲ್ಲೂ ಜಾರಿಗೆ ಬಂದುವು.

1795ರಲ್ಲಿ ಫ್ರಾನ್ಸ್ ಅಳತೆ ಮತ್ತು ತೂಕದ ದಶವಾಂಶ ಪದ್ಧತಿಯನ್ನು ಜಾರಿಗೆ ತಂದಿತು. ಭೂಗೋಳದ ಪರಿಧಿಯ ಉದ್ದದಲ್ಲಿ 40 ಲಕ್ಷದ ಕ್ಲೊಂದು ಪಾಲು ಉದ್ದವನ್ನು ಮೀಟರ್ ಎಂಬುದಾಗಿ ಕರೆಯಲಾಯಿತು. ಯೂರೊಪಿನಲ್ಲಿ ಬ್ರಿಟಿಷ್ ಪೌಂಡಿಗೆ ಸರಿಸಮನಾದ 391 ತೂಕದ ಮಾನಗಳು ಇದ್ದುವು. ಅವುಗಳಲ್ಲಿ 370ರ ಬದಲು ಕಿಲೊಗ್ರಾಮ್ ಬಳಕೆಗೆ ಬಂದಿತು. ತೂಕ ಮತ್ತು ಅಳತೆಯ ಅಂತರರಾಷ್ಟ್ರೀಯ ಸಮ್ಮೇಳನವೊಂದು 1870ರಲ್ಲಿ ನಡೆದು ಮೀಟರ್ ಮತ್ತು ಕಿಲೊಗ್ರಾಮ್ ಪ್ರಮಾಣಗಳನ್ನು ಕರಾರುವಾಕ್ಕಾಗಿ ನಿರೂಪಿಸಿ ಆ ಪದ್ಧತಿಯನ್ನನುಸರಿಸುವ ಎಲ್ಲ ದೇಶಗಳಿಗೂ ಮಾದರಿಗಳನ್ನು ಹಂಚುವ ಕ್ರಮ ಕೈಗೊಳ್ಳಲು ನಿರ್ಧರಿಸಿತು. ಅದರ ಫಲವಾಗಿ ಜನಿಸಿದ ಸಂಸ್ಥೆ: ಇಂಟರ್‌ನ್ಯಾಷನಲ್ ಬ್ಯೂರೋ ಆಫ್ ವೈಟ್ಸ್ ಅಂಡ್ ಮೆಷರ್ಸ್ (ತೂಕ-ಅಳತೆಗಳ ಅಂತರರಾಷ್ಟ್ರೀಯ ಸಂಘ).

1957 ಜುಲೈ 1ರಂದು ಭಾರತ ಮೆಟ್ರಿಕ್ ಪದ್ಧತಿಯನ್ನು ಜಾರಿಗೆ ತಂದಿತು.

ದೇಶದಲ್ಲೆಲ್ಲ ಬಳಕೆಯಲ್ಲಿರುವ ಅಳತೆ ಮತ್ತು ತೂಕದ ಉಪಕರಣಗಳನ್ನು ಆಗಿಂದಾಗ ಪರೀಕ್ಷಿಸುವುದು. ಅಳೆಯುವ, ತೂಗುವ ಸಲುವಾಗಿ ತಯಾರಿಸಲಾಗುವ ಎಲ್ಲ ಬಗೆಯ ಮಾಪನ ಉಪಕರಣಗಳ ತಯಾರಿಕೆಯಲ್ಲಿ ನಿಖರತೆಯನ್ನು ಕಾಪಾಡುವುದು, ಮೋಸ ಅಥವಾ ಉಲ್ಲಂಘನೆ ನಡೆಸಿದವರನ್ನು ಶಿಕ್ಷೆಗೆ ಗುರಿಪಡಿಸುವುದು ಮುಂತಾದ ಕ್ರಮಗಳನ್ನು ಎಲ್ಲ ರಾಷ್ಟ್ರಗಳಲ್ಲೂ ಕೈಗೊಳ್ಳಲಾಗುತ್ತದೆ.

ಉದ್ದದ ಅಳತೆ

| | | |
|---|---|---|
| 10 ಮಿಲಿಮೀಟರ್ | ... | 1 ಸೆಂಟಿಮೀಟರ್ |
| 10 ಸೆಂಟಿಮೀಟರ್ | ... | 1 ಡೆಸಿಮೀಟರ್ |
| 10 ಡೆಸಿಮೀಟರ್ | ... | 1 ಮೀಟರ್ |
| 1,000 ಮಿಲಿಮೀಟರ್ | ... | 1 ಮೀಟರ್ |
| 10 ಮೀಟರ್ | ... | 1 ಡೆಕಾಮೀಟರ್ |
| 10 ಡೆಕಾಮೀಟರ್ | ... | 1 ಹೆಕ್ಟೊಮೀಟರ್ |
| 10 ಹೆಕ್ಟೊಮೀಟರ್ | ... | 1 ಕಿಲೊಮೀಟರ್ |
| 1,000 ಮೀಟರ್ | ... | 1 ಕಿಲೊಮೀಟರ್ |

ಹೀಗೆ ದೊಡ್ಡ ಮಾನ ಹಿಂದಿನ ಚಿಕ್ಕ ಮಾನದ 10 ರಷ್ಟಿರುತ್ತದೆ.

(ಮಿಲಿ–), (ಸೆಂಟಿ–), (ಡೆಸಿ-), (ಡೆಕಾ-), (ಹೆಕ್ಟೊ-) ಈ ಪೂರ್ವ ಪದಗಳನ್ನು ಬಳಸಿ ಲೀಟರ್ ಮತ್ತು ಗ್ರಾಮ್‌ಗಳ ವಿಭಾಗಗಳನ್ನು ಸೂಚಿಸುವುದು ದಶವಾಂಶ ಅಳತೆ ಮತ್ತು ತೂಕದ ಪದ್ಧತಿ.

## ತೆರಿಗೆ

ನಾವು ರಸ್ತೆಗಳಲ್ಲಿ ಸಂಚರಿಸುತ್ತೇವೆ. ಆಸ್ಪತ್ರೆಗಳು ನಮ್ಮ ಆರೋಗ್ಯವನ್ನು ಕಾಪಾಡುವುದರಲ್ಲಿ ನೆರವಾಗುತ್ತವೆ. ಶಾಲೆ–ಕಾಲೇಜುಗಳು ಶಿಕ್ಷಣ ನೀಡುತ್ತವೆ. ನ್ಯಾಯಾಲಯಗಳು ವಿವಾದಗಳನ್ನು ಪರಿಶೀಲಿಸಿ ನ್ಯಾಯ ನಿರ್ಣಯವನ್ನು ಕೊಡುತ್ತವೆ. ಉದ್ಯಾನ, ಪುಸ್ತಕ ಭಂಡಾರ, ವಸ್ತು ಸಂಗ್ರಹಾಲಯ ಇವೆಲ್ಲ ನಮ್ಮ ಅಗತ್ಯಗಳು. ಚರಂಡಿಗಳು ನೀರು ಹರಿದು ಹೋಗಲು ಸರಿಯಾಗಿ ಅವಕಾಶ ಮಾಡಿ, ಊರನ್ನು ಸ್ವಚ್ಛ ಮಾಡುತ್ತವೆ. ಪ್ರವಾಹ, ಬೆಂಕಿ, ಶತ್ರುಗಳಿಂದ ಆಕ್ರಮಣ ಸಂಭವಿಸಿದಾಗ ನಮಗೆ ರಕ್ಷಣೆ ಬೇಕು. ಪರಿಹಾರ ಅಗತ್ಯ. ಈ ಸೌಲಭ್ಯಗಳ ಸಲುವಾಗಿ ಸರಕಾರ ಹಣವನ್ನು ವೆಚ್ಚಮಾಡುತ್ತದೆ. ಸರಕಾರಕ್ಕೆ ಈ ಹಣ ಎಲ್ಲಿಂದ ಬರುತ್ತದೆ? ಅದು ಬಹು ಮಟ್ಟಿಗೆ ಹಣವನ್ನು ಪ್ರಜೆಗಳಿಂದಲೇ ಪಡೆಯಬೇಕು. ಪ್ರಜೆಗಳಿಗಾಗಿ ವೆಚ್ಚ ಮಾಡಿದ ಹಣದ ಬಾಬಿಗಾಗಿ ವಸೂಲು ಮಾಡಲಾಗುವ ಹಣ ತೆರಿಗೆ.

ರಾಜಪ್ರಭುತ್ವದ ಕಾಲದಲ್ಲಿ ಸಾಮಂತರು, ಜಮೀನುದಾರರು ಕಪ್ಪಕಾಣಿಕೆಗಳನ್ನು ಸಲ್ಲಿಸುತ್ತಿದ್ದರು. ಯುದ್ಧ ಕಾಲದಲ್ಲಿ ಸೋತವರಿಂದ ಗೆದ್ದವರಿಗೆ ದಂಡ ಅಥವಾ ಪರಿಹಾರ ದ್ರವ್ಯ ಸಿಗುತ್ತಿತ್ತು. ಪ್ರಭುತ್ವದ ಸಂಪಾದನೆಯ ಮಾರ್ಗಗಳು ಹಲವು. ನೈಸರ್ಗಿಕ ಸಂಪನ್ಮೂಲಗಳಿಂದ ಉತ್ಪತ್ತಿ ಇರುತ್ತದೆ. ಇವುಗಳ ಜೊತೆಗೆ ಜನರ ಮೇಲೆ ತೆರಿಗೆಗಳು. ಸರಕಾರಗಳ ವರಮಾನದಲ್ಲಿ ಗಣನೀಯ ಅಂಶ ತೆರಿಗೆಗಳಿಂದ ಬರುವ ವರಮಾನವೇ ಆಗಿರುತ್ತದೆ.

ತೆರಿಗೆಗಳು ಎಲ್ಲ ದೇಶಗಳಲ್ಲಿಯೂ ನೂರಾರು ವರ್ಷಗಳಿಂದ ಪರಿಚಿತ. ಪ್ರಾಚೀನ ಭಾರತದಲ್ಲಿ ಪ್ರಜೆ ತನ್ನ ಆದಾಯದ ಆರರಲ್ಲಿ ಒಂದು ಭಾಗವನ್ನು ಅರಸನಿಗೆ ಒಪ್ಪಿಸಬೇಕಾಗಿತ್ತು. ಅಕ್ಬರ್ ಉಳಿದೆಲ್ಲ ತೆರಿಗೆಗಳನ್ನು ತೆಗೆದುಹಾಕಿ, ಭೂಕಂದಾಯವನ್ನು ವರಮಾನದ ಮೂರರಲ್ಲಿ ಒಂದು ಭಾಗ ಎಂದು ವಿಧಿಸಿದ. ಜಪಾನಿನಲ್ಲಿ ಏಳನೆಯ ಶತಮಾನದಲ್ಲಿ ರೈತ ತನ್ನ ಬೆಳೆಯ ಶೇಕಡಾ 6 ಭಾಗವನ್ನು ಸರಕಾರಕ್ಕೆ ಕೊಡಬೇಕಾಗಿತ್ತು. 12ನೆಯ ಶತಮಾನದಲ್ಲಿ ಇದು ಶೇಕಡಾ 72ಕ್ಕೆ ಏರಿತು.

ಪ್ರಜೆಗಳಿಗೆ ಸೌಲಭ್ಯಗಳನ್ನು ಒದಗಿಸುವ ಒಂದೇ ಕಾರಣದಿಂದ ತೆರಿಗೆಗಳನ್ನು ಹೇರುವುದಿಲ್ಲ. ಜನ ಹೆಚ್ಚು ಹೆಚ್ಚು ಆಮದಾದ ವಸ್ತುಗಳನ್ನು ಬಯಸಬಾರದು ; ಮಾದಕ ದ್ರವ್ಯಗಳನ್ನು ಹೆಚ್ಚು ಬಯಸುವುದು ಅಪಾಯಕರ ; ಆಮದು ವಸ್ತುಗಳ ಮೇಲೂ ಮಾದಕ ದ್ರವ್ಯಗಳ ಮೇಲೂ ಹೆಚ್ಚು ತೆರಿಗೆ ಹಾಕಿದರೆ ಅವು ದುಬಾರಿಯಾಗಿ ಜನ ಕಡಮೆ ಕೊಳ್ಳುತ್ತಾರೆ. ಶ್ರೀಮಂತರ ಮೇಲೆ ಹೆಚ್ಚಿಗೆ ತೆರಿಗೆ ಹೇರಿ, ಬಡವರ ಮೇಲೆ ಕಡಮೆ ತೆರಿಗೆಯನ್ನು ಹಾಕಿದರೆ ಸಂಪತ್ತು ಕೆಲವೇ ಮಂದಿಯ ಬಳಿ ಸಂಗ್ರಹವಾಗುವುದನ್ನು ಸ್ವಲ್ಪ ಮಟ್ಟಿಗೆ ತಡೆಯಬಹುದು. ಹೀಗೆ ಮಾಡುವುದೂ ತೆರಿಗೆಯ ಉದ್ದೇಶ. ಸರಕಾರದ ಬೊಕ್ಕಸವನ್ನು ತೆರಿಗೆ ತುಂಬುತ್ತದೆ. ರಾಜ್ಯಾಂಗಕ್ಕೆ ಅನುಗುಣವಾದ ಕ್ರಮವನ್ನು ಅನುಸರಿಸಿ ತೆರಿಗೆಯನ್ನು ವಿಧಿಸುವುದು ಸರಕಾರದ ಹಕ್ಕು. ವಿಧಿಸಲಾದ ತೆರಿಗೆಯನ್ನು ಸಲ್ಲಿಸಬೇಕಾದುದು ಪ್ರಜೆಯ ಕರ್ತವ್ಯ. ತೆರಿಗೆಯನ್ನು ತಪ್ಪಿಸುವುದು ಕಾನೂನಿಗೆ ವಿರುದ್ಧ.

ಕೃಷಿ, ಕೈಗಾರಿಕೆ, ವ್ಯಾಪಾರ, ಉದ್ಯೋಗ ಇವು ಪ್ರಜೆಗಳ ಸಂಪಾದನೆಯ ಮಾರ್ಗಗಳು. ಎಲ್ಲರ ಆದಾಯವೂ ಒಂದೇ ಸಮನಾಗಿರುವುದಿಲ್ಲ. ಹೆಚ್ಚಿಗೆ ಆದಾಯವಿರುವವನ ಮೇಲೆ ಹೆಚ್ಚಿಗೆ ತೆರಿಗೆ ಹೇರಿದರೆ ಆತನು ಅದನ್ನು ತುಂಬಬಲ್ಲ. ಕಡಮೆ ಆದಾಯದ ವ್ಯಕ್ತಿಗೆ ಅವನ ಆದಾಯಕ್ಕೆ ತಕ್ಕಂತೆ ತೆರಿಗೆ ವಿಧಿಸಿದರೆ ಮಾತ್ರ ಅದನ್ನು ತೆರಲು ಆತ ಶಕ್ತ. ಒಂದೇ ಆದಾಯವಿರುವ ಎಲ್ಲ ವ್ಯಕ್ತಿಗಳಿಗೂ ಒಂದೇ ಬಗೆಯ ತೆರಿಗೆ ಹಾಕಕೂಡದು. ಏಕೆಂದರೆ ದೊಡ್ಡ ಸಂಸಾರವುಳ್ಳ ವ್ಯಕ್ತಿ ಹೆಚ್ಚು ತೆರಿಗೆಯನ್ನು ತಡೆಯಲಾರ. ಒಂಟಿ ವ್ಯಕ್ತಿಗೆ ಜೀವನ ವೆಚ್ಚವು ಕಡಮೆಯಿರುತ್ತದೆ.

ತೆರಿಗೆ ತೊಂದರೆ ಎನಿಸುವುದಿಲ್ಲ. ಆಸ್ತಿಪಾಸ್ತಿ, ಜೀವನೋಪಾಯದ ವೃತ್ತಿ ಇತ್ಯಾದಿಗಳನ್ನು ತೆರಿಗೆಯನ್ನು ವಿಧಿಸುವಾಗ ಪರಿಗಣಿಸಲಾಗುವುದು. ತೆರಿಗೆಯನ್ನು ವಸೂಲು ಮಾಡುವ ಕಾರ್ಯದಲ್ಲಿ ತೆರಿಗೆದಾರ ಸರಕಾರದೊಡನೆ ಸಹಕರಿಸುವುದು ಅಗತ್ಯ. ಸಂಬಳ ಮತ್ತು ಕಂಪೆನಿ ಡಿವಿಡೆಂಡುಗಳು ಪಾವತಿಯಾಗುವಾಗ ಆದಾಯ ತೆರಿಗೆಯನ್ನು ಮುರಿಸಿಕೊಳ್ಳುವುದು ವಾಡಿಕೆ. ಸುಗ್ಗಿಯ ಕಾಲದಲ್ಲಿ ರೈತ ತೆರಿಗೆಯನ್ನು ಸುಲಭವಾಗಿ ಸಲ್ಲಿಸಬಲ್ಲ. ಹಡಗು ಕಟ್ಟೆ, ವಿಮಾನ ನಿಲ್ದಾಣ ಮತ್ತು ರೈಲು ನಿಲ್ದಾಣಗಳಲ್ಲಿ ಸುಂಕವನ್ನು ವಸೂಲು ಮಾಡುವುದು ಸುಲಭ. ಯಾವ ಯಾವ ಆದಾಯದ ಬಾಬಿಗೆ ಎಷ್ಟು ತೆರಿಗೆಯೆಂಬುದು ನಿಶ್ಚಿತವಾಗಿರುತ್ತದೆ. ತೆರಿಗೆಯನ್ನು ವಸೂಲು ಮಾಡುವ ಪ್ರತ್ಯೇಕ ವಿಭಾಗದ ಅಧಿಕಾರಿಗಳು, ಪ್ರಜೆಯ ತೆರಿಗೆಯನ್ನು ಆತನ ಆದಾಯಕ್ಕೆ ಅನುಗುಣವಾಗಿ ನಿರ್ಧರಿಸಿ ತಿಳಿಸುತ್ತಾರೆ. ಒಂದು ನಿಶ್ಚಿತ ಸಮಯದ ಒಳಗೆ ತೆರಿಗೆಯನ್ನು ಸಲ್ಲಿಸಬೇಕು. ತೆರಿಗೆಯ ಬಾಕಿ ಉಳಿಸಿಕೊಂಡರೆ ತೆರಿಗೆಯ ಮೊಬಲಗಿನ ಮೇಲೆ ಬಡ್ಡಿ ವಸೂಲುಮಾಡುತ್ತಾರೆ. ತೆರಿಗೆ ತಪ್ಪಿದರೆ, ವಿಳಂಬ ಮಾಡಿದರೆ, ದಂಡ ವಿಧಿಸುವುದುಂಟು.

ತೆರಿಗೆಗಳ ಪೈಕಿ ಅತಿ ಮುಖ್ಯವಾದದ್ದು ಆದಾಯ ತೆರಿಗೆ. ಒಬ್ಬ ವ್ಯಕ್ತಿಯ ವಾರ್ಷಿಕ ಆದಾಯ ಎಷ್ಟೆಂಬುದನ್ನು ಗಮನಿಸಿ ತೆರಿಗೆ ವಿಧಿಸಲಾಗುತ್ತದೆ. ಜೀವವಿಮೆ, ಉಳಿತಾಯ ಮುಂತಾದ ಬಾಬುಗಳಿಗೆ ಮೀಸಲಾದ ಹಣ ಕಳೆದ ಮೇಲೆ ಉಳಿಯುವುದೇ ನಿವ್ವಳ ಆದಾಯ. ಪ್ರತಿಯೊಬ್ಬನಿಗೂ ಜೀವನಕ್ಕೆ ಅತ್ಯಂತ ಅಗತ್ಯವಾದ ಹಣ ಎಷ್ಟು ಎಂದು ಅಂದಾಜು ಮಾಡಲಾಗುತ್ತದೆ. ವರಮಾನ ಅದಕ್ಕಿಂತ ಕಡಮೆಯಿದ್ದಲ್ಲಿ ತೆರಿಗೆ ಆತನ ಪಾಲಿಗೆ ಭಾರ. ಆದ್ದರಿಂದ ಒಂದು ನಿಶ್ಚಿತ ಆದಾಯದ ಪರಿಮಿತಿಯನ್ನು ಮೀರಿದ್ದರೆ ಮಾತ್ರ ಆ ಆದಾಯದ ಮೇಲೆ ತೆರಿಗೆಯನ್ನು ಹಾಕಲಾಗುತ್ತದೆ. ಪಿತ್ರಾರ್ಜಿತ ಆಸ್ತಿಯಿಂದ ಬರುವ ವರಮಾನದ ಸಲುವಾಗಿ ಪ್ರಜೆ ಶ್ರಮ ಪಡುವುದಿಲ್ಲ. ಉದ್ಯಮಗಳಿಗೆ ಬಂಡವಾಳ ಒದಗಿಸಲಾಗಿದ್ದು ಅದರಿಂದ ಬರುವ ಉತ್ಪತ್ತಿ ಸ್ವಯಂ ದುಡಿಮೆಯಿಂದ ಬಂದುದಲ್ಲ. ಈ ಬಗೆಯ ಆದಾಯಗಳ ಮೇಲೆ ಸ್ವಲ್ಪ ಹೆಚ್ಚಿನ ಆದಾಯ ತೆರಿಗೆ ವಿಧಿಸಲಾಗುತ್ತದೆ. ಉದ್ಯಮಗಳಲ್ಲಿ ಬರುವ ಲಾಭಕ್ಕೆ ಒಂದು ಪರಿಮಿತಿಯನ್ನು ಗೊತ್ತು ಮಾಡಿ, ಅದನ್ನು ಮೀರಿದ ಲಾಭದ ಮೊಬಲಗಿನ ಮೇಲೆ ತೆರಿಗೆಯನ್ನು ವಿಧಿಸಲಾಗುತ್ತದೆ. ಧಾರಣೆಗಳು ಒಂದೇ ಸಮನೆ ಏರುವಾಗ ಉದ್ದಿಮೆದಾರರಿಗೆ ವಿಪರೀತ ಲಾಭ ಲಭಿಸುತ್ತದೆ. ಜಮೀನು, ಕಟ್ಟಡ ಮುಂತಾದ ಆಸ್ತಿಗಳ ಮೇಲಿನ ತೆರಿಗೆಗೆ ಕಂದಾಯವೆಂದು ಹೆಸರು.

ಇವೆಲ್ಲ ಪ್ರತ್ಯಕ್ಷವಾದ ತೆರಿಗೆಗಳು. ಇದರ ಹೊರೆ ಸ್ವತಃ ಮಾಲಿಕ ಅಥವಾ ವಾರಸುದಾರನದು. ತಾನು ಸಲ್ಲಿಸಿದ ತೆರಿಗೆಯನ್ನು ಇತರರಿಂದ ವಸೂಲು ಮಾಡಲು ಅಶಕ್ಯ. ರೇಡಿಯೊ ಬಳಸಲು ಕೊಳ್ಳಬೇಕಾದ ರಹದಾರಿ, ಕೋರ್ಟು ಫೀ ಮತ್ತು ಛಾಪಾಪತ್ರಗಳ ರೂಪದಲ್ಲಿ ತೆರಿಗೆ ವಸೂಲು ಮಾಡುವುದು ಕೂಡ ಪ್ರತ್ಯಕ್ಷ ತೆರಿಗೆಯೇ.

ಸರಕಾರಕ್ಕೆ ಆದಾಯವನ್ನು ತರುವ ಮತ್ತೊಂದು ಮುಖ್ಯ ತೆರಿಗೆ, ಮಾರಾಟ ತೆರಿಗೆ. ಈ ತೆರಿಗೆಯನ್ನು ಮಾರಾಟವಾದ ಸರಕುಗಳ ಮೊಬಲಗಿನ ಮೇಲೆ ವಿಧಿಸುತ್ತಾರೆ. ಇದನ್ನು ವ್ಯಾಪಾರಸ್ಥರು ತೆರುವವರಾದರೂ ತೆರಿಗೆಯನ್ನು ಕೊಳ್ಳುವವರಿಂದ ವಸೂಲು ಮಾಡಿಬಿಡುತ್ತಾರೆ. ಅದೇ ರೀತಿ ಆಮದು-ರಫ್ತು ಸುಂಕ, ಅಬ್ಕಾರಿ ಸುಂಕ, ಇವು ದಾಸ್ತಾನಿನ ಅಥವಾ ತಯಾರಿಕೆಯ ಕೇಂದ್ರಗಳಲ್ಲೇ ವಸೂಲಾಗುತ್ತವೆ. ವಸ್ತುಗಳನ್ನು ಕೊಳ್ಳುವವರು ಕೊನೆಗೆ ಅದನ್ನು ತೆರುತ್ತಾರೆ. ಸಕ್ಕರೆಯ ಮೇಲೆ ಕಾರಖಾನೆಯಿಂದ ಹೊರಬರುವಾಗಲೇ ತೆರಿಗೆ ವಿಧಿಸಿದರೆ ಅದು ಅಂತಿಮವಾಗಿ ಸಕ್ಕರೆಯ ಬೆಲೆಯಲ್ಲಿ ಕೂಡಿಕೊಂಡಿರುತ್ತದೆ. ಕೊಳ್ಳುವವನು ತಾನು ಬೆಲೆಯನ್ನು ತೆರುವುದಾಗಿ ಭಾವಿಸಿರುತ್ತಾನೆಯೇ ಹೊರತು ತೆರಿಗೆಯನ್ನು ಸಲ್ಲಿಸುತ್ತಿರುವ ಅರಿವು ಆತನಿಗೆ ಇರುವುದಿಲ್ಲ. ಮನೋರಂಜನೆಗಾಗಿ ನೀಡುವ ಹಣದ ಸ್ವಲ್ಪ ಅಂಶ ತೆರಿಗೆಯ ರೂಪದಲ್ಲಿ ಸರಕಾರವನ್ನು ಸೇರುತ್ತದೆ. ಮಾದಕ ದ್ರವ್ಯಗಳ ಬೆಲೆಯಲ್ಲಿ ತಯಾರಿಕೆಗಾರ ಅಥವಾ ಮಾರಾಟಗಾರ ಸಲ್ಲಿಸಿರುವ ಅಬ್ಕಾರಿ ಸುಂಕ ಸೇರಿರುತ್ತದೆ.

ಬಳಕೆದಾರನ ಮೇಲೆ ಅಂತಿಮವಾಗಿ ಹೊರಿಸಲ್ಪಡುವ ತೆರಿಗೆಗೆ ಪರೋಕ್ಷ ತೆರಿಗೆ ಎಂದು ಹೆಸರು. ಪ್ರತ್ಯಕ್ಷ ತೆರಿಗೆಯನ್ನು ವ್ಯಕ್ತಿಗಳ ಮೇಲೆ ಹೊರಿಸುತ್ತಾರೆ. ಪರೋಕ್ಷ ತೆರಿಗೆಯನ್ನು ಸಾಮಾನ್ಯವಾಗಿ ವಸ್ತುಗಳ ಮೇಲೆ ವಿಧಿಸಲಾಗುತ್ತದೆ. ಪರೋಕ್ಷ ತೆರಿಗೆಯ ದರ ಅತ್ಯಲ್ಪವಿರಬಹುದು. ಆದರೆ ಮಾರಾಟದ ಅಥವಾ ವ್ಯವಹಾರದ ಹೆಚ್ಚಿನ ಪ್ರಮಾಣದಿಂದ ವಸೂಲಾಗುವ ಮೊಬಲಗು ದೊಡ್ಡ ಪ್ರಮಾಣದಲ್ಲಿರುತ್ತದೆ.

ಭಾರತದ ಪ್ರಜೆಯ ವಾರ್ಷಿಕ ವರಮಾನ ರೂ. 481. ಆ ಪೈಕಿ ರೂ. 64ನ್ನು ತೆರಿಗೆಗಳ ರೂಪದಲ್ಲಿ ಆತ ಪಾವತಿ ಮಾಡುತ್ತಾನೆ. 1961-62ರ ಸಾಲಿನಲ್ಲಿ ರಾಷ್ಟ್ರೀಯ ವರಮಾನದ ಶೇಕಡಾ 10.8 ಅಂಶ ತೆರಿಗೆಗಳ ರೂಪದಲ್ಲಿ ವಸೂಲಾಗುತ್ತಿತ್ತು. 1966-67ರಲ್ಲಿ ತೆರಿಗೆಗಳು ರಾಷ್ಟ್ರೀಯ ವರಮಾನದ ಶೇಕಡಾ 13.3ರಷ್ಟಿದ್ದುವು. 1970-71ರಲ್ಲಿ ಅದು ಶೇಕಡಾ 17ಕ್ಕೇರುತ್ತದೆಂದು ನಿರೀಕ್ಷೆ.

ನಮ್ಮ ದೇಶದಲ್ಲಿ ಕೆಲವು ತೆರಿಗೆಗಳನ್ನು ಕೇಂದ್ರ ಸರಕಾರವೂ ಮತ್ತೆ ಕೆಲವು ತೆರಿಗೆಗಳನ್ನು ರಾಜ್ಯ ಸರಕಾರಗಳೂ ವಸೂಲು ಮಾಡುತ್ತವೆ. ವಿದೇಶಿ ಸುಂಕ, ಅಬ್ಕಾರಿ ಸುಂಕ, ಆದಾಯ ತೆರಿಗೆ, ಆಮದು-ರಫ್ತು ಸುಂಕ ಇತ್ಯಾದಿಗಳ ವಸೂಲಿ ಕೇಂದ್ರ ಸರಕಾರದ ಹೊಣೆ. ವ್ಯಾಪಾರ ತೆರಿಗೆ, ರಾಜ್ಯ ಅಬ್ಕಾರಿ ಸುಂಕ, ಮನೋರಂಜನೆ ತೆರಿಗೆ, ಕೋರ್ಟು ಫೀ, ಛಾಪಾ ಪತ್ರ, ರಿಜಿಸ್ಟ್ರೇಷನ್ ರುಸುಮು, ಮುಂತಾದುವನ್ನು ರಾಜ್ಯ ಸರಕಾರಗಳು ವಸೂಲು ಮಾಡುತ್ತವೆ. ಕೇಂದ್ರ ಸರಕಾರವು ತಾನು ವಸೂಲು ಮಾಡಿದ ಹಣದ ಸ್ವಲ್ಪ ಅಂಶವನ್ನು ರಾಜ್ಯ ಸರಕಾರಗಳಿಗೆ ಹಂಚುತ್ತದೆ.

## ತೇನ್‌ಸಿಂಗ್ ನಾರ್ಕೆ

ಫಾಂಗ್ ಲಾ ಮಿಂಗ್ಮ ತನ್ನ ಮಗನಾದ ತೇನ್‌ಸಿಂಗನನ್ನು ಬೌದ್ಧ ಮಠಕ್ಕೆ ಕಳುಹಿಸಿ ಕೊಟ್ಟ. ಮಗ ಧರ್ಮಗುರು ಆಗಬೇಕೆಂಬ ಆಸೆ ತಂದೆಗೆ. ಆದರೆ ಮಠದಲ್ಲಿ ಗುರು ಒಂದು ದಿನ ತೇನ್‌ಸಿಂಗನ ಬೋಳಿಸಿದ್ದ ತಲೆಗೆ ದೊಣ್ಣೆಯಿಂದ ಹೊಡೆದ. ಸಿಟ್ಟಿಗೆದ್ದ ತೇನ್‌ಸಿಂಗ್ ಮಠವನ್ನು ಬಿಟ್ಟ. ತಂದೆಯ ಇಚ್ಛೆಯಂತೆ ಬೌದ್ಧಗುರುವಾಗದೆ, ಮುಂದೆ ಪರ್ವತಾರೋಹಿಗಳಿಗೆ ಗುರುವಾದ.

ಎವರೆಸ್ಟ್ ಶಿಖರವನ್ನು ಏರಬೇಕೆಂಬುದೇ ಚಿಕ್ಕಂದಿನಿಂದಲೂ ತೇನ್‌ಸಿಂಗನ ಕನಸು. ಏಳು ಸಲ ಪ್ರಯತ್ನಿಸಿದ ಬಳಿಕ ಆ ಕನಸು ನನಸಾಯಿತು.

ನೇಪಾಳ ರಾಜ್ಯದ ತಾಮೆ ಎಂಬ ಚಿಕ್ಕ ಹಳ್ಳಿಯಲ್ಲಿ 1914ರಲ್ಲಿ ತೇನ್‌ಸಿಂಗ್ ಜನಿಸಿದ. ಇವನು ಶೆರ್ಪಾ ಮನೆತನದವನು. ಅವನ ತಂದೆ ಫಾಂಗ್ ಲಾ ಮಿಂಗ್ಮ ತುಂಬ ಬಡವ. ಕೂಲಿ ಮಾಡುತ್ತಿದ್ದ. ತಾಯಿ ಕಿಂಜೋಮ್. ತಂದೆತಾಯಿಗಳ ಹನ್ನೊಂದನೆಯ ಮಗು ತೇನ್‌ಸಿಂಗ್. ಅವನ ಹುಟ್ಟು ಹೆಸರು ನಾಮ್‌ಗ್ಯಾಲ್ ವಾಂಗ್ದಿ ಎಂದು. ಮಗುವಿನ ಭವಿಷ್ಯವನ್ನು



ಎವರೆಸ್ಟ್ ಶಿಖರದ ಮೇಲೆ ಭಾರತದ ಬಾವುಟವನ್ನೇರಿಸಿದ ತೇನ್‌ಸಿಂಗ್ ನಾರ್ಕೆ

ನೋಡಿದ ಬೌದ್ಧ ಗುರುವೊಬ್ಬ ಅವನ್ನು ತೇನ್‌ಸಿಂಗ್ ನಾರ್ಕೆ ಎಂದು ಬದಲಿಸಿದ. ತೇನ್‌ಸಿಂಗ್ ಎಂದರೆ ಧರ್ಮ ರಕ್ಷಕ ಎಂದೂ ನಾರ್ಕೆ ಎಂದರೆ ಶ್ರೀಮಂತ ಅದೃಷ್ಟಶಾಲಿ ಎಂದೂ ಅರ್ಥ.

ತೇನ್‌ಸಿಂಗ್ ಹದಿನೆಂಟು ವರ್ಷ ವಯಸ್ಸಾದಾಗ ಅವನ ಕುಟುಂಬ ಸೋಲಾ ಖುಂಬ ಎಂಬ ಹಳ್ಳಿಗೆ ಬಂದಿತು. ಈ ಹಳ್ಳಿ ಡಾರ್ಜಲಿಂಗ್ ಪಟ್ಟಣದ ಸಮೀಪದಲ್ಲಿದೆ.

ಡಾರ್ಜಲಿಂಗ್‌ನ 'ಹಿಮಾಲಯ ಕ್ಲಬ್ಬಿ' ನಲ್ಲಿ ಪರ್ವತಾರೋಹಿಗಳ ಸಾಮಾನುಗಳನ್ನು ಒಯ್ಯಲು ಕೂಲಿಗಳಿದ್ದಾರೆ. ಅಂಥ ಕೂಲಿಗಳಲ್ಲಿ ಒಬ್ಬನಾಗಿ ತೇನ್‌ಸಿಂಗ್ ದುಡಿಯತೊಡಗಿದ.

ಹಿಮಾಲಯ ಪರ್ವತದಲ್ಲಿರುವ 8,854 ಮೀಟರುಗಳ ಎವರೆಸ್ಟ್ ಶಿಖರ ಜಗತ್ತಿನಲ್ಲೇ ಅತ್ಯಂತ ಎತ್ತರದ್ದು. ಅದರ ತುತ್ತತುದಿಯನ್ನು ಮುಟ್ಟಲು ಜಗತ್ತಿನ ಹಲವು ದೇಶಗಳ ಸಾಹಸಿಗಳು ಪ್ರಯತ್ನಿಸಿ ಸೋತಿದ್ದರು, ಕೆಲವರು ಪ್ರಾಣವನ್ನೂ ಅರ್ಪಿಸಿದ್ದರು.

1933ರಲ್ಲಿ ತೇನ್‌ಸಿಂಗ್ ಈ ಸಾಹಸಕ್ಕೆ ಕೈಯಿಟ್ಟ. ಪರದೇಶಗಳ ಪರ್ವತಾರೋಹಿಗಳ ಕೂಲಿಯಾಗಿ ಅವನು ಹೋಗುತ್ತಿದ್ದ. ಕಾಲಕ್ರಮೇಣ ಕೂಲಿಗಳ ಮುಂದಾಳಾದ. ಪರದೇಶದಿಂದ ಬಂದವರಿಗೆ ಇವನೇ ಮಾರ್ಗದರ್ಶಿ. ಇವನ ಸೌಜನ್ಯ ಎಲ್ಲರ ಮೆಚ್ಚುಗೆಯನ್ನೂ ಗಳಿಸಿತು.

1952ರಲ್ಲಿ ಸ್ವಿಟ್ಜರ್‌ಲೆಂಡ್‌ನಿಂದ ಸಾಹಸಿಗಳ ಒಂದು ತಂಡ ಬಂದಿತು. ಅವರು ತೇನ್‌ಸಿಂಗನನ್ನು ಕೂಲಿ ಎಂದು ಭಾವಿಸದೆ ತಮ್ಮ ಸಂಗಡದ ಸದಸ್ಯನಾಗಿ ಸೇರಿಸಿಕೊಂಡರು. ಈ ತಂಡದ ಮುಂದಾಳು ಲ್ಯಾಂಬರ್ಟ್. ತೇನ್‌ಸಿಂಗ್ ಮತ್ತು ಲ್ಯಾಂಬರ್ಟ್ ಇಬ್ಬರೂ 8,540 ಮೀಟರುಗಳ ಎತ್ತರವನ್ನೇರಿದರು. ಅಲ್ಲಿನ ಚಳಿ ಹೇಳತೀರದು. ಭಯಂಕರ ಹಿಮ. ಬಾಯಿಯಿಂದ ಉಗುಳಿದ ನೀರು ಹಿಮದ ಗೋಲಿಯಾಗಿ ಉರುಳುತ್ತಿದ್ದಿತಂತೆ. ಇನ್ನೂ ಮೇಲೇರಲು ಆಸೆ. ಆದರೆ ಸಾಧನ ಸೌಕರ್ಯಗಳು ಸಾಕಷ್ಟು ಇಲ್ಲದಿದ್ದುದರಿಂದ ನಿರಾಶರಾಗಿ ಕೆಳಗಿಳಿದರು. 1952ರ ಈ ಅನುಭವದಿಂದ ತೇನ್‌ಸಿಂಗನ ಉತ್ಸಾಹ ಮತ್ತೂ ಹೆಚ್ಚಿತು.

1953ರಲ್ಲಿ ಇಂಗ್ಲೆಂಡಿನಿಂದ ಪರ್ವತಾರೋಹಿಗಳ ತಂಡವೊಂದು ಬಂದಿತು. ಈ ತಂಡದ ಮುಂದಾಳು ಕರ್ನಲ್ ಜಾನ್ ಹಂಟ್. ತೇನ್‌ಸಿಂಗ್ ಈ ತಂಡವನ್ನು ಸೇರಿಕೊಂಡ. ಮಾರ್ಚ್ ತಿಂಗಳಿನಲ್ಲಿ ಈ ತಂಡದವರು ತಮ್ಮ ಸಾಹಸಯಾತ್ರೆಯನ್ನು ಆರಂಭಿಸಿದರು. ಬೀಡುಬಿಡಲು ಯೋಗ್ಯ ಜಾಗಗಳು ದೊರೆತೆಡೆಗಳಲ್ಲಿ ಡೇರೆಗಳನ್ನು ಕಟ್ಟಿದರು. ಮಂಜುಗಡ್ಡೆಯ ಬಂಡೆಗಳಲ್ಲಿ ಮೊಳೆಯನ್ನು ಹೊಡೆದು. ಅವುಗಳಿಗೆ ಹಗ್ಗವನ್ನು ಕಟ್ಟಿ. ಅದರ ಸಹಾಯದಿಂದ ಮೇಲೇರುತ್ತಿದ್ದರು. ಕೈಜಾರಿ ಬಿದ್ದರೆ ಮುಗಿಯಿತು ಕಥೆ. ಬಹಳ ಶ್ರಮದಿಂದ 8,235 ಮೀಟರುಗಳನ್ನು ಮುಟ್ಟಿದರು. ಚಳಿ ಬಹಳ ಕ್ರೂರವಾಗಿತ್ತು. ಕಣ್ಣಿಗೆ ಹಿಮದ ಪುಡಿಯ ಭಯ. ಅಷ್ಟೊಂದು ಎತ್ತರದ ಪ್ರದೇಶದಲ್ಲಿ ಉಸಿರಾಡುವುದು ಕಷ್ಟ. ಅದಕ್ಕಾಗಿ ಆಮ್ಲಜನಕದ ಕೊಳವೆ ಅವರ ಬಳಿಯಿದ್ದಿತು. ಮಂಜುಗಡ್ಡೆಗಳನ್ನು ಕಡಿದು ಮೆಟ್ಟಿಲುಗಳಂತೆ ಮಾಡಿಕೊಂಡು ಅವರು ಮುಂದುವರಿದರು. 1953 ಮೇ 28ರ ಸಂಜೆ ತಂಡದವರು 8,540 ಮೀ. ಏರಿದ್ದರು.

ಮರುದಿನದ ಮುಂಜಾವದಲ್ಲಿ ತೇನ್‌ಸಿಂಗ್ ನಾರ್ಕೆ ಮತ್ತು ಎಡ್ಮಂಡ್ ಹಿಲರಿ ಪರ್ವತವನ್ನೇರಲು ಆರಂಭಿಸಿದರು. ಹಿಮಗಾಳಿ ಕಡಮೆಯಾಗಿತ್ತು. ಅವರು ಹತ್ತಿ ಮುಗಿಸಬೇಕಾದದ್ದು ಮುನ್ನೂರು ಮೀಟರುಗಳಷ್ಟು ಮಾತ್ರವಾದರೂ ಪರ್ವತ ಬಹಳ ಕಡಿದಾಗಿತ್ತು. ಮೇಲೆ ಆಕಾಶ. ಕೆಳಗೆ ಪಾತಾಳ. ಎಲ್ಲೆಲ್ಲೂ ಹಿಮ. ಹಿಮ ! ಅಂತೂ ಸತತವಾದ ಶ್ರಮದಿಂದ ಸುಮಾರು ಹನ್ನೊಂದು ಗಂಟೆಗೆ ತೇನ್‌ಸಿಂಗ್ ಮತ್ತು ಹಿಲರಿ ಪರ್ವತಾಗ್ರವನ್ನು ಸೇರಿದರು. ಅಲ್ಲಿಯವರೆಗೆ ಪ್ರಪಂಚದ ಯಾವ ಒಬ್ಬ ಮಾನವನೂ ಕಾಲಿಡದ ಉತ್ತುಂಗ ಶೃಂಗದಲ್ಲಿ ನಿಂತರು. ತೇನ್‌ಸಿಂಗ್ ಭಾರತದ ಬಾವುಟವನ್ನು ಏರಿಸಿದ. ಪ್ರಪಂಚದ ಅತ್ಯಂತ ಎತ್ತರ ಶಿಖರದ ಮೇಲೆ ಭಾರತದ ತ್ರಿವರ್ಣಧ್ವಜ ಹಾರಾಡಿತು. ಜೊತೆಗೆ ಇಂಗ್ಲೆಂಡ್ ಮತ್ತು ವಿಶ್ವಸಂಸ್ಥೆಯ ಧ್ವಜಗಳನ್ನೂ ನೆಟ್ಟರು.

ಎವರೆಸ್ಟ್ ಶಿಖರದ ಮೇಲೆ ತೇನ್‌ಸಿಂಗ್ ಬುದ್ಧದೇವನಿಗೆ ಪ್ರಾರ್ಥನೆ ಸಲ್ಲಿಸಿದ. ಮಗಳು ನೀಮಾ ಎವರೆಸ್ಟ್ ಶಿಖರದಲ್ಲಿಡಬೇಕೆಂದು ಒಂದು ತುಂಡು ಪೆನ್ಸಿಲ್ ಕೊಟ್ಟಿದ್ದಳು. ಅದನ್ನು ಅತ ಅಲ್ಲಿ ಅರ್ಪಿಸಿದ. ಅವರಿಬ್ಬರೂ ಹದಿನೈದು ನಿಮಿಷಗಳ ಕಾಲ ಶಿಖರದ ಮೇಲಿದ್ದು, ಇಳಿಯಲಾರಂಭಿಸಿದರು.

ತೇನ್‌ಸಿಂಗರನ್ನು ಹಲವು ರಾಷ್ಟ್ರಗಳು ಗೌರವಿಸಿದುವು. ಸನ್ಮಾನ ನೀಡಿದುವು. ಆದರೆ ತೇನ್‌ಸಿಂಗ್ ವಿನಯಶಾಲಿಯಾಗಿಯೇ ಉಳಿದನು.

ಅಂದು ಕೂಲಿಯವನಾಗಿದ್ದು ಪರ್ವತಾರೋಹಿಗಳ ಸಾಮಾನುಗಳನ್ನು ಹೊರುತ್ತಿದ್ದ ತೇನ್‌ಸಿಂಗ್ ಇಂದು ಹಿಮಾಲಯದ ತಪ್ಪಲಲ್ಲಿ ಇರುವ

ಪರ್ವತಾರೋಹಿಗಳ ತರಬೇತಿ ಕಾಲೇಜಿನ ಮುಖ್ಯಾಧಿಕಾರಿ. ತಮ್ಮ ಎವರೆಸ್ಟ್ ಆರೋಹಣ ಕಥೆಯನ್ನು ತೇನ್‌ಸಿಂಗ್ ಬರೆದಿದ್ದಾರೆ.

ನೋಡಿ: ಎವರೆಸ್ಟ್: ಹಿಲರಿ, ಎಡ್ಮಂಡ್

## ತೈಮೂರ್ ಲಂಗ್

ಮನುಷ್ಯ ಎನಿಸಿಕೊಂಡವನು ಎಷ್ಟು ಕೆಟ್ಟವನಾಗಬಹುದು, ಕ್ರೂರಿಯಾಗಬಹುದು? ತೈಮೂರ್ ಲಂಗನಷ್ಟು–ಎನ್ನುವುದು ಒಂದು ಉತ್ತರ.

1336ರಲ್ಲಿ ಹುಟ್ಟಿದ ಇವನು, ಮಂಗೋಲ ನಾಯಕ ಚೆಂಗೀಸ್‌ಖಾನನ ವಂಶಸ್ಥ. ಬಾಲ್ಯದಿಂದಲೂ ಒಳ್ಳೆಯ ವಿದ್ಯಾರ್ಥಿಯಾಗಿದ್ದ. ಇತಿಹಾಸದಲ್ಲಿ ಅವನಿಗೆ ಆಸಕ್ತಿ. ಚೆಂಗೀಸ್‌ಖಾನನು ಕಟ್ಟಿದಂಥ ಸಾಮ್ರಾಜ್ಯವನ್ನು ಮತ್ತೆ ಕಟ್ಟಬೇಕೆಂಬುದು ಇವನ ಹಿರಿಯಾಸೆ.

ಇಪ್ಪತ್ತೈದು ವರ್ಷದವನಾಗಿದ್ದಾಗ ಸೈನಿಕರಂಗಕ್ಕೆ ಕಾಲಿಟ್ಟ ಕುಂಟನಾಗಿದ್ದ ತೈಮೂರ್ ಸಾಯುವವರೆಗೂ ಮೋಸದ ಮತ್ತು ಹಿಂಸಾತ್ಮಕ ಆಕ್ರಮಣಗಳನ್ನು ನಡೆಸುವುದರಲ್ಲಿಯೇ ಕಾಲ ಕಳೆದ. ಅವನ ಮೊಟ್ಟ ಮೊದಲ ಕೃತ್ಯ, ತನ್ನ ರಕ್ತ ಸಂಬಂಧಿಯಾಗಿದ್ದ ಹಾಜಿ ಬಾರ್ಲ್ಲಾನನ್ನು ಹಿಂದಕ್ಕೆ ಸರಿಸಿ, ಕೆಷ್ ಪ್ರಾಂತದ ರಾಜನಾದದ್ದು. ಅನಂತರ ಅವನ ಸಂಬಂಧಿಯಾದ ಮಿರ್ ಹುಸೇನನೊಡನೆ ಸೇರಿಕೊಂಡು ಟ್ರಾನ್ಸ್‌ಕೋಸಿಯದ ರಾಜನನ್ನು ಹಿಮ್ಮೆಟ್ಟಿಸಿದ. ತನಗೆ ಬೇಕಾದ ಸಹಾಯ ಮಿರ್ ಹುಸೇನನಿಂದ ದೊರೆತ ತಕ್ಷಣ ಅವನ ವಿರುದ್ಧ ಪಿತೂರಿ ನಡೆಸಿ ಅವನನ್ನು ಸೋಲಿಸಿ ತನ್ನ ರಾಜ್ಯದಿಂದ ಹೊರಗಟ್ಟಿದ. ಮಿರ್ ಹುಸೇನನ ಹತ್ಯೆಗೂ ತೈಮೂರನೇ ಕಾರಣ ಎಂಬ ಮಾತು ಪ್ರಚುರವಾಗಿದೆ.

ಅದಾದ ಬಳಿಕ ಯಾವ ಅಡ್ಡಿ ಆತಂಕಗಳೂ ಇಲ್ಲದೆ ತೈಮೂರ್ ಸಮರ್ಕಂದನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ಆಳತೊಡಗಿದ.

ತನ್ನ ಜೀವನದ ಮಿಕ್ಕ ದಿನಗಳನ್ನು ತೈಮೂರ್ ಪರ್ಷಿಯ, ಆರ್ಮೀನಿಯ, ಮೆಸಪಟೇಮಿಯ ಮತ್ತು ಜಾರ್ಜಿಯ ದೇಶಗಳನ್ನು ವಶಪಡಿಸಿಕೊಳ್ಳುವುದರಲ್ಲಿ ಕಳೆದ. ಮಾಸ್ಕೊ ಪಟ್ಟಣವನ್ನು ಕೈವಶಪಡಿಸಿಕೊಂಡ. ಹೀಗೆ ವಶಪಡಿಸಿಕೊಂಡ ಸ್ಥಳಗಳನ್ನು ಒಂದಾಗಿ ಸೇರಿಸಿ ಚಕ್ರಾಧಿಪತ್ಯವನ್ನು ಕಟ್ಟುವ ಬದಲು, ಅವನ್ನು ಲೂಟಿ ಮಾಡಿ ನಾಶಮಾಡಿದ. ಅಲ್ಲಿನ ನಿವಾಸಿಗಳ ಕಗ್ಗೊಲೆಗೆ ಕಾರಣನಾದ. ಕೊಲೆಯಾದವರ ಕಪಾಲಗಳಿಂದ ಗೋಪುರಗಳನ್ನು ಕಟ್ಟಿಸುವುದು ಅವನ ಹವ್ಯಾಸವಾಗಿತ್ತು. ರಾಜರನ್ನು ಮುಳ್ಳು, ಕಲ್ಲು, ಗಾಜು ತುಂಬಿದ ದಾರಿಯಲ್ಲಿ ರಥ ಎಳೆಯಲು ಉಪಯೋಗಿಸುತ್ತಿದ್ದನಂತೆ. ಕೈದಿಗಳನ್ನು ಕಬ್ಬಿಣದ ಪಂಜರದಲ್ಲಿ ಕೂಡಿಹಾಕುತ್ತಿದ್ದ.

1398ರಲ್ಲಿ 62 ವರ್ಷ ವಯಸ್ಸಾಗಿದ್ದಾಗ ತೈಮೂರ್ ಭಾರತಕ್ಕೆ ಮುತ್ತಿಗೆ ಹಾಕಿದ. ಆಗ ಭಾರತ ದೇಶವನ್ನು ರಕ್ಷಿಸಲು ಅಸಮರ್ಥನಾಗಿದ್ದ ತುಘಲಕ್ ಸಂತತಿಯ ದುರ್ಬಲ ದೊರೆ ಓಡಿಹೋದ. ಯಾವ ಅಡೆತಡೆಯೂ ಇಲ್ಲದೆ ತೈಮೂರನ ಅನುಯಾಯಿಗಳು ದೆಹಲಿಯನ್ನು ಸೂರೆಗೊಂಡರು. ದೆಹಲಿಯಲ್ಲಿ ಅಸಂಖ್ಯಾತ ಮುಗ್ಧರ ರಕ್ತದ ಕಾಲುವೆಯೇ ಹರಿಯಿತು. ಸೈನಿಕರು ಕೊಳ್ಳೆಹೊಡೆದರು. ಆಹಾರ ಮಳಿಗೆಗಳಿಗೆ ಬೆಂಕಿಯಿಟ್ಟರು. ಇಂದು ಆದ ನಷ್ಟವನ್ನು ತುಂಬಿಕೊಳ್ಳಲು ಮುಂದೆ ಭಾರತದ ಜನತೆಗೆ ಒಂದು ಶತಮಾನವೇ ಬೇಕಾಯಿತು. ಹೀಗೆ ದೆಹಲಿಯನ್ನು ಸೂರೆಗೊಂಡ ಮೇಲೆ ತನ್ನ ಪ್ರತಿನಿಧಿಯಾಗಿ ಅಧಿಕಾರಿಯೊಬ್ಬನನ್ನು ನೇಮಿಸಿ ತೈಮೂರ್ ಸ್ವದೇಶಕ್ಕೆ ಹಿಂತಿರುಗಿದ.

ಒಂದು ವರ್ಷದ ಅನಂತರ ಮತ್ತೆ ಇವನ ದಂಡಯಾತ್ರೆ ಆರಂಭವಾಯಿತು. ಅಲೆಪ್ಪೊ ಮತ್ತು ಬಾಗ್ದಾದ್ ಪಟ್ಟಣಗಳನ್ನು ವಶಮಾಡಿಕೊಂಡು ತೈಮೂರನ ಸೈನಿಕರು ತುರ್ಕಿಯ ಸುಲ್ತಾನನ ಸೈನ್ಯವನ್ನು ನಾಶಮಾಡಿದರು.

1404ರಲ್ಲಿ ಚೀನದೇಶವನ್ನು ಆಕ್ರಮಿಸಲು ಉದ್ದೇಶಿಸಿ ತೈಮೂರ್ ಸೈನ್ಯದೊಡನೆ ಹೊರಟ. ಆದರೆ ಮಾರ್ಗಮಧ್ಯದಲ್ಲಿ ಜ್ವರಪೀಡಿತನಾಗಿ 1405ರಲ್ಲಿ ಕಾಲವಾದ.

ತೈಮೂರನು ವಿದ್ಯಾವಂತನಾಗಿದ್ದರೂ ಜನಹಿತಕಾರ್ಯ ಒಂದನ್ನೂ ಮಾಡಲಿಲ್ಲ. ಎಲ್ಲವನ್ನೂ ನಾಶಪಡಿಸುವುದೇ ಅವನ ಗುರಿ. ಅವನು ನಿಂತ ನೆಲ ಸ್ಮಶಾನವಾಯಿತು; ಹಾದುಹೋದ ದೇಶ ಮರುಭೂಮಿಯಾಯಿತು.

ನೋಡಿ: ಚೆಂಗೀಸ್‌ಖಾನ್

## ಥೈಲೆಂಡ್

ಆಕ್ಕಿಯ ಕಣಜ ಎಂದು ಹೆಸರು ಗಳಿಸಿರುವ ಥೈಲೆಂಡ್ ಆಗ್ನೇಯ ಏಷ್ಯದಲ್ಲಿದೆ. ಹದಿಮೂರನೆಯ ಶತಮಾನದಿಂದಲೂ ಇದು ಸ್ವತಂತ್ರ ರಾಷ್ಟ್ರವಾಗಿ ಬೆಳೆದಿದೆ. ಹಿಂದೆ ಈ ರಾಷ್ಟ್ರದ ಹೆಸರು ಸಯಾಂ ಎಂದಿತ್ತು. 1949ರಲ್ಲಿ ಅದನ್ನು ಥೈಲೆಂಡ್ ಎಂದು ಬದಲಾಯಿಸಿದರು. ಥೈಲೆಂಡ್ ಎಂದರೆ ಥಾಯಿ ಭಾಷೆಯಲ್ಲಿ ಸ್ವತಂತ್ರರ ಭೂಮಿ ಎಂದು ಅರ್ಥ.

ಥೈಲೆಂಡಿನ ಆಕಾರ ಸುಂದರ ಹೂವಿನಂತೆ.

ಥೈಲೆಂಡನ್ನು ನಾಲ್ಕು ಪ್ರಾಕೃತಿಕ ವಿಭಾಗಗಳನ್ನಾಗಿ ಮಾಡಬಹುದು. ವಾಯುವ್ಯ ಭಾಗದಲ್ಲಿ ಕಾಡುಗಳೂ ಪರ್ವತಗಳೂ ಇವೆ; ಪರ್ವತ ಪಂಕ್ತಿಗಳ ಮಧ್ಯೆ ಫಲವತ್ತಾದ ಕಣಿವೆಗಳಿವೆ. ಇವಲ್ಲದೆ ಈಶಾನ್ಯದ ಪ್ರಸ್ಥಭೂಮಿ, ಮಲಯದ ಪರ್ಯಾಯದ್ವೀಪ ಪ್ರದೇಶ ಮತ್ತು ಮಧ್ಯದ ಸಮತಟ್ಟಾದ ಪ್ರದೇಶ.

ಚಾಪ್ರೋ ಫ್ರಾಯ ಮತ್ತು ಉಪನದಿಗಳು, ಮೀಕಾಂಗ್, ಸಾಲ್ವೀನ್ ನದಿಗಳು ದೇಶಕ್ಕೆಲ್ಲ ನೀರು ಒದಗಿಸುತ್ತವೆ.

ಥೈಲೆಂಡಿನ ನೈಸರ್ಗಿಕ ಸಂಪತ್ತು, ಕಾಡುಗಳೇ. ಇಲ್ಲಿ ಬಿಳಿಯ ಆನೆಗಳಿವೆ. ಉತ್ತಮ ತೇಗದ ಮರಗಳು ಹೇರಳವಾಗಿ ಬೆಳೆಯುತ್ತವೆ. ಮರಗಳನ್ನು ಕಡಿದು ದಿಮ್ಮಿಗಳನ್ನು ಆನೆಯ ನೆರವಿನಿಂದ ನದಿಯ ದಂಡೆಗಳಿಗೆ ಒಯ್ದು, ನದಿಯಲ್ಲಿ ತೇಲಿಬಿಟ್ಟು ಮುಂದೆ ಸಾಗಿಸುತ್ತಾರೆ.

ನೀಸ, ಟಂಗ್‌ಸ್ಟನ್, ಲಿಗ್ನೈಟ್, ಸತು, ಇವರ ಮೊದಲಾದುವು ದೊರಕುತ್ತವೆ. ಭತ್ತ ವಿಶೇಷವಾಗಿ ಬೆಳೆಯುತ್ತದೆ. ರಬ್ಬರ್, ಕಬ್ಬು, ಕೊಕೊ ಇವುಗಳ ಬೆಳೆಯೂ ಸಾಕಷ್ಟಿದೆ.

ಥಾಯಿ ಜನರು, ಚೀನೀಯರು ಮತ್ತಿತರರು ಥೈಲೆಂಡಿನಲ್ಲಿದ್ದಾರೆ. ಬೌದ್ಧ ಮತಾನುಯಾಯಿಗಳೇ ಬಹಳ. ಮುಖ್ಯ ಭಾಷೆ ಥಾಯಿ. ರಾಜಧಾನಿ ಬ್ಯಾಂಕಾಕ್ ಥೈಲೆಂಡಿನ ಜೀವನಾಡಿ ಎನ್ನಬಹುದು. ದೇಶದ ಮೂರು ನದಿಗಳನ್ನು ಸೇರಿಸುವ ಕಾಲುವೆಗಳು ಸಂಧಿಸುವ ಸ್ಥಳದಲ್ಲಿದೆ ಈ ನಗರ. ಬಹು ಕಾಲ ಕಾಲುವೆಗಳೇ ಊರಿನ ಮುಖ್ಯ ಸಂಪರ್ಕಸಾಧನಗಳಾಗಿದ್ದುವು. ರಸ್ತೆಗಳು ನಿರ್ಮಾಣವಾದ ಮೇಲೂ ಕಾಲುವೆಗಳ ಪ್ರಾಮುಖ್ಯ ಕುಂದಿಲ್ಲ.

ದೋಣಿಗಳಲ್ಲಿ ಸಾಮಾನುಗಳನ್ನು ಮಾರಲು ವ್ಯಾಪಾರಸ್ಥರು ಸಂಚರಿಸುವುದರಿಂದ ಇಲ್ಲಿ ತೇಲುವ ಮಾರುಕಟ್ಟೆಯೂ ಇದೆ.

ಥಾಯಿ ಜನರು ಹಳ್ಳಿಯಲ್ಲಿ ಹೆಚ್ಚಾಗಿ ವಾಸಿಸುತ್ತಾರೆ. ಥೈಲೆಂಡಿನಲ್ಲಿ ನದಿಗಳೂ ಕಾಲುವೆಗಳೂ ಬಹಳವಾದ್ದರಿಂದ ಎಷ್ಟೋ ಥಾಯಿ ಜನರಿಗೆ ನೀರಲ್ಲಿರುವ ದೋಣಿಗಳೇ ಮನೆಗಳು. ಅವರು ಬಿದಿರಿನಿಂದಲೇ ಮನೆ ಕಟ್ಟುವುದು ಹೆಚ್ಚು. ಬಿದಿರು ಅಡವಿಗಳಲ್ಲಿ ಹೇರಳವಾಗಿ ಸಿಗುತ್ತದೆ.

ದಕ್ಷಿಣ ಚೀನದಲ್ಲಿ ನ್ಯಾನ್‌ಚಾವೋ ಎಂಬ ಥಾಯ್ ಜನರ ಪ್ರಬಲ ಚಕ್ರಾಧಿಪತ್ಯವಿತ್ತು. ಟಿಬೆಟನ್ನರು ಮತ್ತು ಚೀನೀಯರಿಗೆ ಥಾಯ್ ರಾಜ್ಯವನ್ನು ಆಕ್ರಮಿಸಬೇಕೆಂಬ ಹಂಬಲ. ಇವರ ಒತ್ತಡದಿಂದಾಗಿ ಅವರು ದಕ್ಷಿಣದ ಕಡೆ ವಲಸೆ ಹೋದರು. ಹದಿಮೂರನೆಯ ಶತಮಾನದಲ್ಲಿ ಇವರು ತಮ್ಮದೇ ರಾಜ್ಯ ಕಟ್ಟಿಕೊಂಡು, ಇಂಡೋಚೀನ ಮತ್ತು ಮಲಯ ಪರ್ಯಾಯದ್ವೀಪಗಳ ಕಡೆ ರಾಜ್ಯವನ್ನು ವಿಸ್ತರಿಸಲು ಹೊರಟರು. 1450ರ ಹೊತ್ತಿಗೆ ಇದು ಆಗ್ನೇಯ ಏಷ್ಯದ ಪ್ರಬಲ ರಾಜ್ಯವಾಗಿತ್ತು. ಹತ್ತೊಂಬತ್ತನೆಯ ಶತಮಾನದಲ್ಲಿ ಬ್ರಿಟಿಷರು ಮತ್ತು ಫ್ರೆಂಚರು ಆಗ್ನೇಯ ಏಷ್ಯದಲ್ಲಿ ವಸಾಹತುಗಳನ್ನು ಸ್ಥಾಪಿಸ ಹೊರಟಾಗ ಥೈಲೆಂಡ್ ತನಗೆ ಸೇರಿದ್ದ ಕೆಲವು ಪ್ರದೇಶಗಳನ್ನು ಕಳೆದುಕೊಳ್ಳಬೇಕಾಯಿತು.

1804ರಿಂದ 1868ರ ವರೆಗಿದ್ದ ದೊರೆ ಮಾಂಗ್‌ಕುಟ್ ಮತ್ತು 1910ರ ವರೆಗೆ ಆಳಿದ ಚುಲ ಲೊಂಗ್‌ಕೋರ್ನ್ ಇವರು ಥೈಲೆಂಡ್‌ನಲ್ಲಿದ್ದ ಊಳಿಗ ಮಾನ್ಯ ಪದ್ಧತಿಯನ್ನು ಬದಲಿಸಲು ನೆರವಾದರು. ಈಗ ಅರಸುಮನೆತನ ವಿದ್ದರೂ ದೇಶದಲ್ಲಿ ಹೊಸ ದೃಷ್ಟಿ ಮೂಡಿದೆ.

ಥೈಲೆಂಡಿನ ಈಗಿನ ಅರಸ ಭೂಮಿಬೋಲ್ ಅಮಲ್ ಅದುಲ್ಯದೇಜ್ ಜನಪ್ರಿಯ ದೊರೆ. ಥೈಲೆಂಡ್ ವಿಶ್ವಸಂಸ್ಥೆಯ ಸದಸ್ಯರಾಷ್ಟ್ರ.

| | | |
|---|---|---|
| ಖಂಡ | : | ಏಷ್ಯ (ಆಗ್ನೇಯ) |
| ಅಕ್ಷಾಂಶ | : | 5° 32′ ಉ ದಿಂದ 20° 28′ ಉ |
| ರೇಖಾಂಶ | : | 97° 21′ ಪೂ ದಿಂದ 105° 38′ ಪೂ |
| ವಿಸ್ತೀರ್ಣ | : | 5.14,115 ಚ. ಕಿ. ಮೀ |
| ಜನಸಂಖ್ಯೆ | : | ಸುಮಾರು 3.00,00,000 |
| ರಾಜಧಾನಿ | : | ಬ್ಯಾಂಕಾಕ್ |
| ಭಾಷೆ | : | ಥಾಯಿ |
| ಸರ್ಕಾರ | : | ಸಂವಿಧಾನಬದ್ಧ ರಾಜಪದ್ಧತಿ |
| ಬಾವುಟ | : | ಕೆಂಪು. ಬಿಳಿ. ನೀಲಿ (ಏರಡರಷ್ಟು ಅಗಲವಾಗಿ) ಬಿಳಿ ಕೆಂಪು ಬಣ್ಣಗಳ ಅಡ್ಡಪಟ್ಟಿಗಳು |

## ದಂಡವಿಧಿ

ಸಮಾಜದ ಹಿತದೃಷ್ಟಿಯಿಂದ ಸರಕಾರ ಕಾಯಿದೆಗಳನ್ನು ಮಾಡುತ್ತದೆ. ಯಾರಾದರೂ ಆ ಕಾಯಿದೆಗಳನ್ನು ಭಂಗಪಡಿಸುವುದರ ಮೂಲಕ ಸಮಾಜ ಹಿತಕ್ಕೆ ಅಡ್ಡಿಬಂದರೆ, ಅಂಥವರನ್ನು ಸರಕಾರ ಶಿಕ್ಷಿಸುತ್ತದೆ. ಸಮಾಜದ ಕ್ಷೇಮಕ್ಕೆ ಭಂಗತರುವ ಮತ್ತು ಸಾಮಾಜಿಕ ಆದರ್ಶಗಳಿಗೆ ಧಕ್ಕೆ ಉಂಟು ಮಾಡುವ ಕಾರ್ಯಗಳು ಅಪರಾಧ. ಅಪರಾಧ ಎಸಗಿದವನು ಅಪರಾಧಿ. ಅವನನ್ನು ನ್ಯಾಯಾಲಯ ದಂಡವಿಧಿ ಕಾಯಿದೆಗಳ ಪ್ರಕಾರ ಶಿಕ್ಷಿಸುತ್ತದೆ.

ಅಪರಾಧ ಗುರುತರವಿರಬಹುದು, ಅಥವಾ ಗೌಣವಿರಬಹುದು. ಅದನ್ನು ಪರಾಮರ್ಶಿಸಿ ತಕ್ಕ ಶಿಕ್ಷೆಯನ್ನು ವಿಧಿಸುವ ಅಧಿಕಾರ ಸರಕಾರದ ನ್ಯಾಯಾಂಗಕ್ಕೆ ಸೇರಿದ್ದು.

ಅಪರಾಧ ಎನಿಸಿಕೊಂಡ ತಪ್ಪು ನಡತೆಗೆ ಮಾತ್ರ ಈ ದಂಡವಿಧಿ ಅನ್ವಯಿಸುತ್ತದೆ. ಮಿಕ್ಕವು ವ್ಯವಹಾರವಿಧಿಗೆ ಸೇರುತ್ತವೆ. ಕಳವು, ದರೋಡೆ ಮುಂತಾದ ಕೃತ್ಯಗಳು ಅಪರಾಧಗಳ ಗುಂಪಿಗೆ ಸೇರಿದವು. ಶಿಕ್ಷೆಯ ಉದ್ದೇಶ ಎರಡು. ಸಮಾಜಕ್ಕೆ ಆಗಿರುವ ಹಾನಿಯನ್ನು ಆ ವ್ಯಕ್ತಿಯೇ ತುಂಬುವಂತೆ ಮಾಡುವುದು ; ಮುಂದೆ ಯಾರೂ ಇಂಥ ಕೃತ್ಯಗಳನ್ನು ಎಸಗದಂತೆ ಅಂಜಿಕೆ ಹುಟ್ಟಿಸುವುದು. ಸಮಾಜ ರಕ್ಷಣೆಯೇ ಇಂಥ ದಂಡನೆಗಳ ಗುರಿಯಾದುದರಿಂದ ಸಾಮಾನನ್ನು ಕಳೆದುಕೊಂಡವರು ಹೋದರೆ ಹೋಯಿತು ಎಂದು ಸುಮ್ಮನಿದ್ದರೂ, ಕೊಲೆಯಾದವನ ಸಂಬಂಧಿಕರು ಅಪರಾಧಿಯನ್ನು ಕ್ಷಮಿಸಿದರೂ, ಸರಕಾರ ತಾನಾಗಿಯೇ ಅಪರಾಧಿಯ ವಿರುದ್ಧ ಕ್ರಮ ಕೈಗೊಂಡು ಅವನನ್ನು ಶಿಕ್ಷಿಸುತ್ತದೆ.

ಮೇಲೆ ಹೇಳಿದ ನಿಯಮಗಳು ಮಹತ್ವದ್ದೆಂದು ಪರಿಗಣಿಸಲಾಗುವ ಅಪರಾಧಗಳಿಗೆ ಮಾತ್ರ ಅನ್ವಯಿಸುತ್ತವೆ. ಅಂಥ ಅಪರಾಧಗಳನ್ನು ತನಿಖೆ ಮಾಡಿ ಅಪರಾಧಿಗಳ ಮೇಲೆ ಮೊಕದ್ದಮೆ ಹೂಡಲು ಪೋಲೀಸ್ ಇಲಾಖೆ ಇದೆ. ಅಂಥ ಅಪರಾಧದ ಸುದ್ದಿ ತಿಳಿದೊಡನೆಯೇ ಅವರು ತನಿಖೆ ಮಾಡಿ ಅಪರಾಧಿಯ ಮೇಲೆ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡುತ್ತಾರೆ. ಅಪರಾಧಿಯನ್ನು ದಸ್ತಗಿರಿ ಮಾಡಿ ನ್ಯಾಯಾಲಯದ ಮುಂದೆ ಹಾಜರುಪಡಿಸುವ ಅಧಿಕಾರವೂ ಅವರಿಗಿದೆ. ತನಿಖೆ ಸುಗಮವಾಗುವಂತೆ, ಅಪರಾಧದ ಯಾವುದೇ ಅಂಶದ ಮಾಹಿತಿ ಇದ್ದ ಜನರನ್ನು ಪ್ರಶ್ನಿಸುವ, ತನಿಖೆಗೆ ಇಲ್ಲವೆ ನ್ಯಾಯನಿರ್ಣಯಕ್ಕೆ ಸಹಾಯಕವಾಗುವ ವಸ್ತುವಿನ ಶೋಧಕ್ಕಾಗಿ ಮನೆಗಳ ಜಪ್ತಿ ಮಾಡುವ ಅಧಿಕಾರವೂ ಅವರಿಗಿದೆ.

ಕೆಲವು ಅಪರಾಧಗಳಿಂದ ಆಗುವ ಹಾನಿ ಅಲ್ಪ ; ಇಂಥವು ವೈಯಕ್ತಿಕ ಅಪರಾಧಗಳೆಂದು ಪರಿಗಣಿಸಲ್ಪಡುತ್ತವೆ. ಅಂಥ ಅಪರಾಧಗಳಲ್ಲಿ ಸರಕಾರ ಪ್ರವೇಶಿಸುವುದಿಲ್ಲ. ಹಾನಿ ಹೊಂದಿದವನು ತಾನೇ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಬೇಕು. ಉದಾ : ಬಹುಪತ್ನಿತ್ವ, ಖೊಟ್ಟಿ ವ್ಯಾಪಾರಿ ಚಿಹ್ನೆಯ ಉಪಯೋಗ, ಅಲ್ಪ ಸ್ವರೂಪದ ಪೆಟ್ಟು, ಮಾನಹಾನಿ ಇತ್ಯಾದಿ.

ಅಪರಾಧಿಗಳ ಸಂಬಂಧವಲ್ಲಿ ಇನ್ನೊಂದು ವೈಶಿಷ್ಟ್ಯ : ಘೋರವೆಂದು ಪರಿಗಣಿಸಲಾಗುವ ಅಪರಾಧಗಳಲ್ಲಿ ರಾಜಿಮಾಡಿಕೊಳ್ಳಲು ಕಾಯಿದೆ ಬಿಡುವುದಿಲ್ಲ. ಉದಾ : ಕಳವು, ದರೋಡೆ, ಖೂನಿ.

ಅಷ್ಟು ಘೋರವಲ್ಲವೆಂದು ಪರಿಗಣಿಸಲಾಗುವ ಅಪರಾಧಗಳಲ್ಲಿ ನ್ಯಾಯಾಲಯದವರು ಅನುಮತಿ ನೀಡಿದರೆ ಮಾತ್ರವೇ ರಾಜಿಮಾಡಿಕೊಳ್ಳಬಹುದು. ಉದಾ : ಬಹು ಪತ್ನಿತ್ವ. ಹರಿತವಾದ ಆಯುಧದಿಂದ ಅಲ್ಪ ಗಾಯ.

ತೀರ ವೈಯಕ್ತಿಕ ಹಾಗೂ ಸಮಾಜದ ದೃಷ್ಟಿಯಿಂದ ಕ್ಷುಲ್ಲಕವೆನ್ನಬಹುದಾದ ಅಪರಾಧಗಳಲ್ಲಿ ರಾಜಿಮಾಡಿಕೊಳ್ಳಲು ಹಾನಿಹೊಂದಿದವನಿಗೆ ಸಂಪೂರ್ಣ ಸ್ವಾತಂತ್ರ್ಯವಿದೆ. ಉದಾ : ಮಾನಹಾನಿ, ಅಲ್ಪ ಸ್ವರೂಪದ ಪೆಟ್ಟು. ಎರಡು ದಿನಗಳಿಗಿಂತ ಕಡಮೆ ಅವಧಿಯ ಅಕ್ರಮ ಬಂಧನ. ರಾಜಿ ಮಾಡಿಕೊಂಡ ಬಳಿಕ ಅದರಿಂದ ಹಿಂದೆ ಸರಿಯುವ ಅಧಿಕಾರ ಹಾನಿ ಹೊಂದಿದವನಿಗೆ ಇಲ್ಲ. ಹಾಗೂ ರಾಜಿಯಾದ ಬಳಿಕ ಅಪರಾಧಿಯನ್ನು ದಂಡಿಸಲು ನ್ಯಾಯಾಲಯಗಳಿಗೆ ಅಧಿಕಾರವಿಲ್ಲ.

ದಂಡವಿಧಿಯ ಪ್ರಕಾರ ನಾಗರಿಕ ರಾಷ್ಟ್ರಗಳಲ್ಲಿ ಕೊಡುವ ಶಿಕ್ಷೆಯೆಂದರೆ, ಮರಣದಂಡನೆ. ಜೀವಾವಧಿ ಇಲ್ಲವೆ ನಿರ್ದಿಷ್ಟ ಅವಧಿಯವರೆಗಿನ

ಕಾರಾಗೃಹವಾಸ ಅಥವಾ ಜುಲ್ಮಾನೆ: ಅಪರಾಧಿಯ ಸ್ವತ್ತಿನ ಮುಟ್ಟುಗೋಲು ಕೆಲವು ಸಂದರ್ಭಗಳಲ್ಲಿ ವಿಧಿಸಬಹುದು. ಛಡಿಕೊಡುವ ಶಿಕ್ಷೆಯನ್ನೂ ಕೆಲವೆಡೆ ಕೆಲವು ಅಪರಾಧಗಳಿಗೆ ವಿಧಿಸಲಾಗುತ್ತದೆ.

ಚಿತ್ರಹಿಂಸೆ, ಅವಯವಗಳ ವಿಚ್ಛೇದನ ಇತ್ಯಾದಿ ಕ್ರೂರ ಶಿಕ್ಷೆಗಳು ಪ್ರಾಚೀನ ಕಾಲದಲ್ಲಿ ರೂಢಿಯಲ್ಲಿದ್ದುವು. ಈಗ ನಾಗರಿಕ ರಾಷ್ಟ್ರಗಳ ದಂಡ ವಿಧಿಯಲ್ಲಿ ಅಂಥವುಗಳಿಗೆ ಸ್ಥಾನವಿಲ್ಲ.

ದಂಡಿಸಲರ್ಹವಾದ ಎಲ್ಲ ಅಪರಾಧಗಳ ವಿಚಾರಣೆಗೆ ದಂಡವಿಧಿಯನ್ನು ಬಳಸುತ್ತಾರೆ.

ಪ್ರಾಚೀನ ಕಾಲದಲ್ಲಿ ಅಪರಾಧ ಮತ್ತು ಅಪಕೃತ್ಯಗಳ ನಡುವಣ ಭೇದ ಅಷ್ಟಾಗಿ ಇರಲಿಲ್ಲ. ಕೆಲವೆಡೆಗಳಲ್ಲಿ ಕಂಡುಬಂದರೂ ಅಸ್ಪಷ್ಟವಾಗಿತ್ತು. ವೈಯಕ್ತಿಕ ಹಾನಿ, ಸಾಮಾಜಿಕ ಹಾನಿ ಎರಡಕ್ಕೂ ಹೆಚ್ಚು ವ್ಯತ್ಯಾಸವಿರುತ್ತಿರಲಿಲ್ಲ. ಇಂದಿನ ಘೋರ ಅಪರಾಧವಾಗಿರುವ ಕೊಲೆಯೂ ಹಿಂದೆ ಕೇವಲ ಆ ಕುಟುಂಬಕ್ಕಾದ ನಷ್ಟ ಎಂದು ಎಣಿಸಲ್ಪಡುತ್ತಿತ್ತು. ಕೊಲೆಯಾದವನ ಕುಟುಂಬದವರು ಸೇಡು ತೀರಿಸಿಕೊಳ್ಳಲು ಅವಕಾಶವಿತ್ತು ಅಥವಾ ಸ್ವಲ್ಪ ಪರಿಹಾರ ಧನವನ್ನು ಕೊಡುವುದರ ಮೂಲಕ ಅಪರಾಧಿ ಪಾರಾಗಬಹುದಿತ್ತು. ಮುಂದೆ ಅರಸೊತ್ತಿಗೆ ಪ್ರಧಾನವಾದಾಗ ರಾಜದಂಡವನ್ನು ಕೊಡುವುದರ ಮೂಲಕ ಶಿಕ್ಷೆಯನ್ನು ತಪ್ಪಿಸಿಕೊಳ್ಳುತ್ತಿದ್ದರು. ರಾಜದಂಡವನ್ನು ಕೊಡಲು ಶಕ್ತಿಯಿಲ್ಲದ ಅಪರಾಧಿಯ ದೇಹ, ಆಸ್ತಿ, ಪ್ರಾಣಗಳು ಸಂಪೂರ್ಣವಾಗಿ ರಾಜನಿಗೆ ಸೇರುತ್ತಿದ್ದುವು.

ಆದರೆ ಪ್ರಾಚೀನ ಹಿಂದೂಧರ್ಮಶಾಸ್ತ್ರದಲ್ಲಿ, ಆಧುನಿಕ ಕಾಲದಲ್ಲಿ ಕಂಡುಬರುತ್ತಿರುವ ಅಪರಾಧ ಮೀಮಾಂಸೆಗೆ ಸರಿದೂಗುವ ವಿಚಾರಗಳನ್ನು ಕಾಣಬಹುದು. ಭಾರತದಲ್ಲಿ ರಾಜನ ಆಸ್ಥಾನದಲ್ಲಿ ನಿರ್ಣಯವಾಗಬೇಕಾಗಿದ್ದ ವಿವಾದಗಳು ವ್ಯವಹಾರ ಎನಿಸಿಕೊಂಡಿದ್ದುವು. ಇಂದು ನಾವು ಅಪರಾಧ ಎಂದು ಕರೆಯುವುದನ್ನು ಅಂದು 'ಸಾಹಸ' ಎಂದು ಕರೆಯುತ್ತಿದ್ದರು—ಕಳ್ಳತನ, ಕೊಲೆ ಮುಂತಾದುವು ಮೊದಲ ದರ್ಜೆಯ 'ಸಾಹಸ'ಗಳಾಗಿದ್ದುವು. ಇವುಗಳಿಗೆ ಚಿತ್ರಹಿಂಸೆ, ಜುಲ್ಮಾನೆ, ಮರಣದಂಡನೆ—ಮೊದಲಾದ ಶಿಕ್ಷೆಗಳನ್ನು ರಾಜ ಕ್ರಮವರಿತು ವಿಧಿಸಬೇಕಿತ್ತು. 'ಸಾಹಸ'ಗಳ ಬಗ್ಗೆ ರಾಜನಿಗೆ ದೂರು ಬರಲಿ ಅಥವಾ ಬಿಡಲಿ ರಾಜನೇ ತನ್ನ ಚಾರರ ಮತ್ತು ಗೂಢಚಾರರ ಮುಖಾಂತರ ವಿಷಯವನ್ನು ತಿಳಿದುಕೊಂಡು 'ಸಾಹಸಿ'ಯನ್ನು ದಂಡಿಸಬೇಕಿತ್ತು. ಈ ರೀತಿ ಹಿಂದೂಧರ್ಮಶಾಸ್ತ್ರಗಳ ಕಾಲದಲ್ಲಿ ಅಪರಾಧ ಮತ್ತು ಅಪರಾಧೇತರ ಎಂಬ ಭೇದವಿದ್ದುದು ಸ್ಪಷ್ಟವಾಗಿದೆ. ದಂಡನೆ ದುಷ್ಟನಿಗ್ರಹಾರ್ಥ. ದುರ್ಬುದ್ಧಿಯಿಲ್ಲದೆ ಘಟಿಸಿದ ಅಕೃತ್ಯ ಕೇಡುಗಳಿಗೆ ದಂಡವಿಲ್ಲ. ಆಕಸ್ಮಿಕವಾಗಿ, ಮದ್ಯದ ಅಮಲಿನಲ್ಲಿದ್ದಾಗ, ಬುದ್ಧಿವೈಕಲ್ಯವಾದಾಗ, ಮೌಢ್ಯದಿಂದ, ಅಜ್ಞಾನದಿಂದ ಬಾಲ್ಯಾವಸ್ಥೆಯಲ್ಲಿ ಮಾಡಿದ ಅಪರಾಧ ಶಿಕ್ಷಾರ್ಹವಲ್ಲ—ಈ ಮುಂತಾದ ವಿಷಯಗಳು ಧರ್ಮಶಾಸ್ತ್ರದ ವ್ಯವಹಾರಾಧ್ಯಾಯದಲ್ಲಿ ಕಂಡುಬರುತ್ತವೆ. ಅಪರಾಧ—ಶಿಕ್ಷೆಗಳ ಸಮಂಜಸತೆ ಏನೇ ಆಗಿರಲಿ, ಅಪರಾಧಿ ಸಮಾಜಕ್ಕೆ ಕಂಟಕಪ್ರಾಯ. ದುರ್ಬುದ್ಧಿಯಿಂದ ಮಾಡಿದ ಅಕೃತ್ಯ ಬರಿಯ ಪರಿಹಾರ ನೀಡುವುದರಿಂದ ಬಗೆಹರಿಯುವುದಿಲ್ಲ; ಅದು ರಾಜದಂಡನೆಗೆ ಅರ್ಹ—ದಂಡವಿಧಿಯ ಮೂಲತತ್ತ್ವಗಳು ಆ ಕಾಲದಲ್ಲಿಯೂ ಇದ್ದುವು.

ಸಮಾಜ ಹಿತಕ್ಕಾಗಿ ಕಾಯಿದೆಗಳು ನಿರ್ಮಾಣಗೊಳ್ಳುತ್ತವೆ. ಸಮಾಜ ಬದಲಾದಂತೆ ಕಾಯಿದೆಗಳೂ ಬದಲಾಗುತ್ತವೆ.

ರೋಮನ್ ದೇಶದಲ್ಲಿ ಹೆಬ್ಬಾಗಿಲಿನಿಂದ ಪ್ರವೇಶಿಸದೆ ಕೋಟೆಯನ್ನೇರಿ ಬರುವುದು ಮಹಾಪರಾಧವಾಗಿತ್ತು. ಅದಕ್ಕೆ ಮರಣದಂಡನೆಯೇ ಶಿಕ್ಷೆ. ಒಂದು ದೇಶದಲ್ಲಿ ಅಪರಾಧ ಎನಿಸಿಕೊಂಡಿರುವುದು ಮತ್ತೊಂದೆಡೆ ದೊಡ್ಡಸ್ತಿಕೆಯ ಲಕ್ಷಣವಾಗಬಹುದು. ಬಹುಪತ್ನಿತ್ವ ಈಗ ಹಿಂದುಗಳಲ್ಲಿ ಅಪರಾಧ. ಆದರೆ ಈ ಬಹುಪತ್ನಿತ್ವವೇ ಹಿಂದೆ ಭಾರತದಲ್ಲಿ ದೊಡ್ಡಸ್ತಿಕೆಯ ಕುರುಹಾಗಿತ್ತು. ಒಂದೇ ದೇಶದಲ್ಲಿ ಒಂದೆಡೆ ಅಪರಾಧವೆನಿಸಿದ ಕೃತ್ಯ ಇನ್ನೊಂದೆಡೆ ಅಪರಾಧವಲ್ಲದಿರಬಹುದು. ಹೆಂಡ ಕುಡಿಯುವುದು ಭಾರತದ ಕೆಲವು ರಾಜ್ಯಗಳಲ್ಲಿ ಅಪರಾಧ, ಕೆಲವೆಡೆ ಅಪರಾಧವಲ್ಲ. ಆತ್ಮಹತ್ಯೆಗೆ ಪ್ರಯತ್ನ ಇಂಗ್ಲೆಂಡಿನಲ್ಲಿ ಇಂದು ಅಪರಾಧವಲ್ಲ; ಆದರೆ ನಮ್ಮಲ್ಲಿ ಬ್ರಿಟಿಷರ ಕಾಲದ ಆದರೆ ಈಗಲೂ ಜಾರಿಯಲ್ಲಿರುವ ಕಾಯಿದೆಯಂತೆ ಅದು ಅಪರಾಧ. ಹೀಗೆ ಆಯಾ ದೇಶದ ಸಂಸ್ಕೃತಿ, ಧರ್ಮ, ನೈತಿಕ ಭಾವನೆ, ರಾಜ್ಯವ್ಯವಸ್ಥೆ ಇವುಗಳಿಗನುಗುಣವಾಗಿ ಅಪರಾಧ ಕಾಯಿದೆಗಳು ರೂಪುಗೊಳ್ಳುತ್ತವೆ.

ಒಂದು ದೇಶದ ದಂಡವಿಧಿಯಲ್ಲಿ ಇದರ ವ್ಯಾಪ್ತಿಗೆ ಒಳಪಡುವ ಕೃತ್ಯಗಳು ಯಾವುವು, ಅವುಗಳಲ್ಲಿ ಯಾವುದನ್ನು ಯಾವ ನ್ಯಾಯಾಲಯ ವಿಚಾರಿಸಬೇಕು, ವಿಚಾರಣೆ ಕ್ರಮ ಯಾವುದು, ಸಾಕ್ಷ್ಯದಲ್ಲಿ ಎಂಥದನ್ನು ಗಮನಕ್ಕೆ ತೆಗೆದುಕೊಳ್ಳಬೇಕು, ತೀರ್ಪು ಕೊಡಲು ಮತ್ತು ಶಿಕ್ಷೆಯನ್ನು ನಿರ್ಧರಿಸಲು ಆಧಾರ ಯಾವುದು, ತೀರ್ಪಿನಿಂದ ಅತೃಪ್ತರಾದವರು ಯಾವ ರೀತಿ ಪರಿಹಾರವನ್ನು ಪಡೆಯಲು ಪ್ರಯತ್ನಿಸಬೇಕು—ಇಂಥ ಎಲ್ಲ ವಿವರಗಳು ಇರುತ್ತವೆ. ಆರೋಪಿ ಕೃತ್ಯಮಾಡಿದ್ದಾನೆ ಎಂಬುದನ್ನು ಸಾಮಾನ್ಯ ವಿವೇಚನಾವಂತನಿಗೆ ಸಂಶಯ ಬಾರದಂತೆ ಸಾಕ್ಷ್ಯದಿಂದ ತೋರಿಬರಬೇಕು; ಸಂದೇಹ ಬಂದರೆ ಅದರ ಲಾಭ ಆರೋಪಿಗೆ. ಏಕೆಂದರೆ ಅಪರಾಧ ಮಾಡಿದವನಿಗೆ ಶಿಕ್ಷೆಯಾಗದೆ ಹೋದರೂ, ನಿರಪರಾಧಿಗೆ ಸರ್ವಥಾ ಶಿಕ್ಷೆಯಾಗಬಾರದೆಂಬುದು ಆಧುನಿಕ ನ್ಯಾಯಶಾಸ್ತ್ರದ ತತ್ತ್ವ. ದಂಡವಿಧಿಯ ಸೂತ್ರಗಳನ್ನು ಸಂಸತ್ತು ಅಥವಾ ರಾಜ್ಯದ ಶಾಸನಸಭೆ ಒಪ್ಪಿರಬೇಕು. ನ್ಯಾಯಾಧೀಶರ ನೇಮಕ ನಿಯಮಬದ್ಧವಾಗಿ ಆಗಿರಬೇಕು.

ನೋಡಿ : ಅಡ್ವೊಕೇಟ್; ಅಪರಾಧ; ನ್ಯಾಯಾಲಯ; ವ್ಯವಹಾರವಿಧಿ ; ಶಿಕ್ಷೆ–ದಂಡನೆ.

## ದಂಡಿನ ಶಾಸನ

ಒಂದು ಪ್ರದೇಶದಲ್ಲಿ ಗಲಭೆಯಾಯಿತು ಎನ್ನೋಣ. ಅದನ್ನು ಅಡಗಿಸುವುದು ಹೇಗೆ ? ಪೋಲೀಸರು ಬರುತ್ತಾರೆ. ಅವರಿಗೆ ಗಲಭೆ ಅಡಗಿಸಲು ಆಗದಿದ್ದರೆ ಸೈನ್ಯವನ್ನು ಕರೆಸುತ್ತಾರೆ. ಸೈನಿಕರಿಗೂ ಸುಲಭವಾಗಿ ಗಲಭೆಯನ್ನು ಕೊನೆಗಾಣಿಸಲು ಆಗದಿದ್ದರೆ ಅಲ್ಲಿ ದಂಡಿನ ಶಾಸನವನ್ನು ಜಾರಿಗೆ ತರುತ್ತಾರೆ.

ಶಾಂತಿ ಸಮಯದಲ್ಲಿ ದಂಡಿನ ಶಾಸನ ಜಾರಿಯಲ್ಲಿದ್ದಾಗ, ಆಡಳಿತ ನಿರ್ವಹಿಸುವುದು ದೇಶದ ಸರಕಾರವೇ. ಆದರೆ, ದಂಡಿನ ಶಾಸನಕ್ಕೆ ಒಳಗಾದ ಪ್ರದೇಶದಲ್ಲಿ ಅಲ್ಲಿನ ಸೈನ್ಯಾಧಿಕಾರಿಗೆ ಸಂಪೂರ್ಣ ಅಧಿಕಾರ. ಅವನ ಆಜ್ಞೆಗೆ ಅನುಸಾರವಾಗಿ ಪೌರಾಧಿಕಾರಿಗಳು ನಡೆದುಕೊಳ್ಳಬೇಕು. ಪೌರಭದ್ರತೆಗಾಗಿ ಮರಣ ದಂಡನೆ ವಿಧಿಸುವ ಅಧಿಕಾರ ಕೂಡ ಈ ಸೈನ್ಯಾಧಿಕಾರಿಗೆ ಇರುತ್ತದೆ.

ಪ್ರಕ್ಷುಬ್ಧಗೊಂಡಿದ್ದ ಪ್ರದೇಶ ಶಾಂತ ಪರಿಸ್ಥಿತಿಗೆ ಬಂದಿದೆ ಎಂದು ಅಧಿಕಾರಿಗಳಿಗೆ ಮನದಟ್ಟಾಗುವವರೆಗೂ ದಂಡಿನ ಶಾಸನ ಅಲ್ಲಿ ಜಾರಿಯಲ್ಲಿರುತ್ತದೆ

ಇಂಥ ರಾಷ್ಟ್ರದಲ್ಲಿ ದಂಡಿನ ಆಳ್ವಿಕೆ ಜಾರಿಗೆ ಬಂದಾಗ, ಎಷ್ಟೋ ಕಡೆಗಳಲ್ಲಿ ದಂಡನಾಯಕನು ಸರ್ವಾಧಿಕಾರಿಯಾಗಿ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಕೊನೆಗಾಣಿಸುವುದೂ ಉಂಟು.

ಒಂದು ರಾಷ್ಟ್ರದಲ್ಲಿ ರಾಜಕೀಯ ಅವ್ಯವಸ್ಥೆ ಉಂಟಾದರೆ, ಸರಕಾರ ಆಡಳಿತ ನಿರ್ವಹಿಸಲು ಅಶಕ್ತವಾದರೆ ಅಥವಾ ಯುದ್ಧಕಾಲದಲ್ಲಿ ಒಂದು ಪ್ರದೇಶದ ಹಿತರಕ್ಷಣೆ ಅವಶ್ಯವಿದ್ದರೆ ದಂಡಿನ ಶಾಸನ ಜಾರಿಗೆ ಬರುತ್ತದೆ. ದಂಡಿನ ಶಾಸನಕ್ಕೆ ಒಳಗಾದ ರಾಷ್ಟ್ರದ ಸರಕಾರವನ್ನು ಯಾರಾದರೂ ಟೀಕಿಸಿದರೆ, ವಿರೋಧಿಸಿದರೆ ಅಥವಾ ಸರಕಾರಕ್ಕೆ ವಿರೋಧವಾದ ಚಟುವಟಿಕೆಗಳಲ್ಲಿ ತೊಡಗಿದರೆ ಅಂಥವರನ್ನು ಕಠಿಣಶಿಕ್ಷೆಗೆ ಗುರಿಪಡಿಸಲಾಗುತ್ತದೆ.

ದಂಡಿನ ಶಾಸನವನ್ನು ರೂಪಿಸಿದ್ದು ಯುದ್ಧಕಾಲದ ಸಹಾಯಕ್ಕಾಗಿ. ಒಂದು ಪ್ರದೇಶ ಸರಕಾರಕ್ಕೆ ವಿರುದ್ಧವಾದ ಅಥವಾ ಕಾನೂನುಬಾಹಿರ ಗುಂಪುಗಳಿಂದ ತುಂಬಿದೆ ಎನ್ನೋಣ. ಅದರಿಂದ ಸಾಮಾನ್ಯ ನ್ಯಾಯಾಲಯಗಳು ಕೆಲಸ ಮಾಡಲು ಸಾಧ್ಯವೇ ಇಲ್ಲದೆ ಹೋಗುತ್ತದೆ ಎಂದಿಟ್ಟುಕೊಳ್ಳೋಣ. ಆಗ ನ್ಯಾಯಪಾಲನೆ, ಶಾಂತಿಪಾಲನೆ ಹೇಗೆ ? ಇದಕ್ಕಾಗಿ ದಂಡಿನ ಶಾಸನ ರೂಪಿತವಾಯಿತು. ಜನರಲ್ಲಿ ಶಿಸ್ತು ಸಂಯಮಗಳನ್ನು ಮೂಡಿಸಲು ಅಧಿಕಾರವಿರುವ ಸೈನಿಕ ದಳದವರು ಈ ದಂಡಿನ ಶಾಸನವನ್ನು ನಿಯಂತ್ರಿಸುತ್ತಿದ್ದರು. ಸೈನಿಕರೇ ನಿರ್ವಹಿಸಿದರೂ ಸೈನ್ಯದ ಶಾಸನಕ್ಕೂ ದಂಡಿನ ಶಾಸನಕ್ಕೂ ವ್ಯತ್ಯಾಸವಿದೆ. ಸೈನ್ಯದ ಶಾಸನ ಸೈನ್ಯಕ್ಕೆ ಸಂಬಂಧಪಟ್ಟವರಿಗೆ ಮಾತ್ರ ಅನ್ವಯಿಸುತ್ತದೆ. ಆದರೆ ದಂಡಿನಶಾಸನ, ಸರ್ವರಿಗೂ ಅನ್ವಯವಾಗುತ್ತದೆ. ದಂಡಿನ ಶಾಸನಕ್ಕೊಳಗಾದ ಪ್ರದೇಶದ ಪೌರರೆಲ್ಲರೂ ಅದಕ್ಕೆ ತಲೆಬಾಗಲೇ ಬೇಕು. ರಾಜ್ಯದ ಸಮಸ್ತ ಅಧಿಕಾರವೂ ಆಗ ದಂಡಿನ ಶಾಸನದ ನಿರಂಕುಶ ಪ್ರಭುತ್ವದ ಅಧೀನ.

## ದಗಾಲ್, ಚಾರ್ಲ್ಸ್

"ನನ್ನ ಬಾಳಿನುದ್ದಕ್ಕೂ ನಾನು ಫ್ರಾನ್ಸಿನ ವಿಷಯವಾಗಿ ಒಂದೇ ರೀತಿಯಲ್ಲಿ ಯೋಚಿಸಿದ್ದೇನೆ: ಉದಾತ್ತವಾದ, ಅತಿ ವಿರಳವಾದ ಗುರಿಗೆ ಫ್ರಾನ್ಸ್ ಮುಡಿಪಾಗಿದೆ ಎಂದು ಭಾವಿಸಿದ್ದೇನೆ. ಹಿರಿಮೆ ಇಲ್ಲದ ಫ್ರಾನ್ಸ್, ಫ್ರಾನ್ಸೇ ಅಲ್ಲ."



"ನಮ್ಮ ದೇಶ ಉನ್ನತ ಶಿಖರಗಳತ್ತ ಸಾಗಲು ಮಾಡುವ ಕಡೆಯ ಉತ್ಸಾಹದ ಪ್ರಯತ್ನದ ಪ್ರತಿನಿಧಿಯಾಗಿರಲೆಂದೇ ನಾನು ಹುಟ್ಟಿರುವೆನೇನೊ. ನಮ್ಮ ದೇಶದ ಹಿರಿಮೆಯ ಪುಸ್ತಕದ ಕಡೆಯ ಪುಟಗಳನ್ನು ನಾನು ಬರೆಯುತ್ತಿರುವೆನೇನೊ—ಎಂದು, ಯುದ್ಧದ ಕತ್ತಲು ಕವಿದ ಗಳಿಗೆಯಲ್ಲಿ ಒಮ್ಮೊಮ್ಮೆ ನನಗೆ ಎನ್ನಿಸುತ್ತಿತ್ತು."

ತಮ್ಮ ನಾಡಿನ ಹಾಗೂ ತಮ್ಮ ಸ್ವಂತದ ವಿಷಯವಾಗಿ ಇಂಥ ದೃಢ ವಿಶ್ವಾಸದ ಮಾತುಗಳನ್ನು ಆಡಿದವರು ಫ್ರಾನ್ಸಿನ ನಾಯಕ, ದ ಗಾಲ್.

ಚಾರ್ಲ್ಸ್ ದ ಗಾಲ್ ಫ್ರಾನ್ಸಿನ ಲಿಲಿಯಲ್ಲಿ 1890 ನವೆಂಬರ್ 22ರಂದು ಜನ್ಮತಾಳಿದರು. ತಂದೆ ಹೆನ್ರಿ ದ ಗಾಲ್, ಇತಿಹಾಸದ ಪ್ರಾಧ್ಯಾಪಕ. ಚಾರ್ಲ್ಸ್ ದ ಗಾಲ್‌ಗೆ ಮೊದಲಿನಿಂದಲೂ ಪುಸ್ತಕಗಳೇ ಮಿತ್ರರು. ಚಿಕ್ಕವರಾಗಿದ್ದಾಗಲೇ ಫ್ರಾನ್ಸಿನ ಚರಿತ್ರೆಯನ್ನು ಅವರು ಆಳವಾಗಿ ಅಭ್ಯಾಸ ಮಾಡಿದ್ದರು.

ದ ಗಾಲ್ ಸೈನಿಕ ಶಿಕ್ಷಣಶಾಲೆಗೆ ಸೇರಿ 1912ರಲ್ಲಿ ಎರಡನೆಯ ಲೆಫ್ಟಿನೆಂಟ್ ಆಗಿ ಪದವೀಧರರಾದರು. ಮೊದಲನೆಯ ಮಹಾಯುದ್ಧದಲ್ಲಿ ಮೂರು ಬಾರಿ ಗಾಯಗೊಂಡು 1916ರಲ್ಲಿ ಜರ್ಮನರಿಗೆ ಸೆರೆ ಸಿಕ್ಕಿದರು : ತಪ್ಪಿಸಿಕೊಳ್ಳುವ ಅವರ ಪ್ರಯತ್ನ ವಿಫಲವಾಯಿತು. 1918ರಲ್ಲಿ ಯುದ್ಧ ಕೊನೆಗೊಂಡಾಗ ಬಿಡುಗಡೆ ಮಾಡಲ್ಪಟ್ಟರು.

ಯುದ್ಧಾನಂತರ ಅನೇಕ ಸೇನಾನೆಲೆಗಳಲ್ಲಿ ಸೇವೆ ಸಲ್ಲಿಸಿದರು. 1921ರಲ್ಲಿ ಸೆಂಟ್‌ಸೀರ್‌ನಲ್ಲಿ ಶಿಕ್ಷಕರಾಗಿದ್ದರು. ರಾಷ್ಟ್ರೀಯ ರಕ್ಷಣೆಯ ಅತ್ಯುಚ್ಚ ಸಮಿತಿಯ ಕಾರ್ಯದರ್ಶಿಯಾಗಿ ಪದಾತಿ ಸೈನ್ಯಕ್ಕೆ ಯಂತ್ರಗಳನ್ನು ಒದಗಿಸುವುದರ ಅಗತ್ಯವನ್ನು ಹೇಳಿ 'ಭವಿಷ್ಯದ ಸೇನೆ' ಎನ್ನುವ ಪುಸ್ತಕವನ್ನು ಬರೆದರು. ಫ್ರಾನ್ಸಿನ ಸೈನ್ಯಾಧಿಕಾರಿಗಳು ಅವರ ಅಭಿಪ್ರಾಯಗಳನ್ನು ಕಂಡು ನಕ್ಕರು. ಜರ್ಮನಿಯವರು ಅವನ್ನು ಆಚರಣೆಗೆ ತಂದರು !

ಎರಡನೆಯ ಮಹಾಯುದ್ಧ 1939ರಲ್ಲಿ ಆರಂಭವಾದಾಗ ಚಾರ್ಲ್ಸ್ ದ ಗಾಲ್ ಕರ್ನಲ್ ಆಗಿದ್ದರು. ಆಗ ಪ್ರಧಾನಿಯಾಗಿದ್ದ ಪಾಲ್ ರೇನಾ, ದ ಗಾಲರನ್ನು ಯುದ್ಧ ಖಾತೆಯ ಉಪಕಾರ್ಯದರ್ಶಿಯನ್ನಾಗಿ ನೇಮಿಸಿದರು. ಆಗ ಎರಡು ಬಾರಿ ಲಂಡನಿಗೆ ಹೋಗಿ ಚರ್ಚಿಲ್ಲರನ್ನು ಭೇಟಿಮಾಡಿದ್ದರು. ಪೇಟಾನ್ ಪ್ರಧಾನಿಯಾದಾಗ ಅವರು ಶಸ್ತ್ರವಿರಾಮ ಬಯಸಿದ್ದನ್ನು ಕಂಡು ದ ಗಾಲ್ ಲಂಡನಿಗೆ 1940ರಲ್ಲಿ ಹೋಗಿ ಜೂನ್ 18ರಂದು ಮನಕಲಕುವ ಪ್ರಸಾರ ಭಾಷಣ ಮಾಡಿದರು. "ಫ್ರಾನ್ಸ್ ಒಂದು ಕದನದಲ್ಲಿ ಸೋತಿದೆ, ಅಷ್ಟೆ ; ಯುದ್ಧದಲ್ಲಿ ಸೋತಿಲ್ಲ." ಎಂದು ಘೋಷಿಸಿದರು. ಅದರ ಮೂಲಕ ಫ್ರಾನ್ಸಿನ ಜನತೆಯನ್ನು ಹೋರಾಟ ಮುಂದುವರಿಸುವಂತೆ ಹುರಿದುಂಬಿಸಿದರು. ಫ್ರಾನ್ಸ್‌ನಲ್ಲಿ ಗುಟ್ಟಾಗಿ ನಾಜಿಗಳಿಗೆ ವಿರುದ್ಧವಾಗಿ ಹೋರಾಡುತ್ತಿದ್ದ ಗುಂಪುಗಳೊಂದಿಗೆ ಸಂಪರ್ಕವನ್ನಿಟ್ಟುಕೊಂಡು 1942ರಲ್ಲಿ ಅವರ ನಾಯಕರಾದರು. ಮಿತ್ರರಾಷ್ಟ್ರಗಳ ಕೆಲವರು ನಾಯಕರು ಅವರನ್ನು ತಿರಸ್ಕಾರದಿಂದ ಕಂಡರೂ ದ ಗಾಲ್ ಪ್ರತಿಭಟಿಸುವ ಫ್ರೆಂಚರ ಸೈನ್ಯ ಕಟ್ಟಿದರು. ಶತ್ರುಗಳ ಸೈನಿಕರು ಗುಂಡನ್ನು ಸುರಿಸುತ್ತಿದ್ದಂತೆಯೆ, 1944 ಆಗಸ್ಟ್ 25ರಂದು ಪ್ಯಾರಿಸ್ ನಗರವನ್ನು ಪ್ರವೇಶಿಸಿದರು. ಫ್ರಾನ್ಸಿನ ತಾತ್ಕಾಲಿಕ ಅಧ್ಯಕ್ಷರಾಗಿ ನೇಮಕಗೊಂಡರು.

ದ ಗಾಲ್ ಫ್ರೆಂಚರಲ್ಲಿ ಚೈತನ್ಯ ತುಂಬಿ, 1947ರಿಂದ 1953ರ ವರೆಗೆ ರಾಜಕೀಯ ಕ್ಷೇತ್ರದಲ್ಲಿ ಅತ್ಯಂತ ಪ್ರಭಾವಶಾಲಿ ವ್ಯಕ್ತಿಯಾದರು. ಆಗ ಪ್ರಚಲಿತವಿದ್ದ ಸಂವಿಧಾನ ದ ಗಾಲ್‌ಗೆ ಒಪ್ಪಿತವಾಗಿರಲಿಲ್ಲ. ಅವರಿಗೆ ಅಧಿಕಾರಯುಕ್ತ ಅಧ್ಯಕ್ಷ ಇರುವ ಗಣರಾಜ್ಯ ಬೇಕಿತ್ತು. ಎಷ್ಟೋ

ಫ್ರಾನ್ಸಿನ ಬಿಡುಗಡೆಗಾಗಿ ದುಡಿದ
ನಾಯಕ ಚಾರ್ಲ್ಸ್ ದ ಗಾಲ್

ಪ್ರಯತ್ನಿಸಿದರೂ ಫಲಕಾರಿಯಾಗಲಿಲ್ಲ. ಸಾರ್ವಜನಿಕ ಜೀವನದಿಂದ ದೂರವಾಗಿ ನಿಂದು ಮೂರು ಸಂಪುಟಗಳ ಪುಸ್ತಕವೊಂದನ್ನು ಬರೆದರು.

ಆರಡಿ ನಾಲ್ಕಂಗುಲ (1.93 ಮೀಟರು) ಎತ್ತರದ ಈ ಗಂಭೀರ ವ್ಯಕ್ತಿಯು ಬದುಕು ಜನರಲ್ಲಿ ವಿಶ್ವಾಸ ಹುಟ್ಟಿಸಲು ಯಶಸ್ವಿಯಾಯಿತು. ಅಲ್ಜೀರಿಯದ ಜನತೆ ಸ್ವಾತಂತ್ರ್ಯಕ್ಕಾಗಿ ದಂಗೆ ಎದ್ದಾಗ ಫ್ರಾನ್ಸಿನಲ್ಲೂ ಅಂತರ್ಯುದ್ಧದ ಭೀತಿಯಿತ್ತು. ಆ ಬಿಕ್ಕಟ್ಟಿನ ಗಳಿಗೆಯಲ್ಲಿ 1958 ಜೂನ್ 1ರಂದು ದ ಗಾಲ್ ಪುನಃ ಪ್ರಧಾನಿಯಾದರು. ಹೊಸ ಸಂವಿಧಾನವನ್ನು ರಚಿಸಿ ಅದಕ್ಕೆ ಜನರ ಒಪ್ಪಿಗೆ ಪಡೆದರು. ಗಣರಾಜ್ಯದ ಅಧ್ಯಕ್ಷರಾಗಿ ದ ಗಾಲ್ 1958 ಜೂನ್ ೮ರಂದು ಆಯ್ಕೆಯಾದರು. ಅಧಿಕಾರಾವಧಿ ಏಳು ವರ್ಷಗಳು. ಜಗತ್ತಿನಲ್ಲಿ ಫ್ರಾನ್ಸಿಗೆ ಹಿಂದಿದ್ದ ಉಚ್ಚ ಸ್ಥಾನವನ್ನು ಮತ್ತೆ ಗಳಿಸಿಕೊಡ ಬೇಕೆಂಬುದು ದ ಗಾಲರ ಹಿರಿಯಾಸೆ. 1962ರಲ್ಲಿ ಅಲ್ಜೀರಿಯಕ್ಕೆ ಸ್ವಾತಂತ್ರ್ಯ ನೀಡಿ ಬಹಳ ವರ್ಷಗಳಿಂದ ನಡೆದು ಬಂದ ಯುದ್ಧಕ್ಕೆ ಮಂಗಳ ಹಾಡಿದರು. 1965ರಲ್ಲಿ ದ ಗಾಲ್ ಎರಡನೆಯ ಅವಧಿಗೆ ಅಧ್ಯಕ್ಷರಾದರು.

ಪಶ್ಚಿಮ ಜರ್ಮನಿಯೊಡನೆ ದ ಗಾಲ್ ಸ್ನೇಹ ಒಪ್ಪಂದ ಮಾಡಿಕೊಂಡರು. ಕಮ್ಯೂನಿಸ್ಟ್ ಚೀನಕ್ಕೆ ಮನ್ನಣೆ ಕೊಟ್ಟರು. ಫ್ರಾನ್ಸಿನಲ್ಲಿ ಪರಮಾಣು ಅಸ್ತ್ರಗಳ ತಯಾರಿಕೆಗೆ ವಿಶೇಷ ಪ್ರೋತ್ಸಾಹ ನೀಡಿದರು.

ಐರೋಪ್ಯ ಸಾಮಾನ್ಯ ಮಾರುಕಟ್ಟೆಯ ಅತ್ಯಂತ ಪ್ರಭಾವಶಾಲಿ ವ್ಯಕ್ತಿ ದ ಗಾಲ್. ಆ ಮಾರುಕಟ್ಟೆಯ ಸದಸ್ಯತ್ವ ಪಡೆಯಲು ಬ್ರಿಟನ್ ಮಾಡಿದ ಯತ್ನವೆಲ್ಲ ದ ಗಾಲರ ವಿರೋಧದಿಂದ ವ್ಯರ್ಥವಾಯಿತು. ಫ್ರಾನ್ಸಿನ ಆರ್ಥಿಕ ಪುನರುಜ್ಜೀವನಕ್ಕೆ ದ ಗಾಲ್ ಕಾರಣರಾದರು.

1968ರಲ್ಲಿ ವಿದ್ಯಾರ್ಥಿ ಸಮುದಾಯ ದಂಗೆಯೆದ್ದು, ದ ಗಾಲರ ಪ್ರತಿಷ್ಠೆ ಬಹಳ ಕುಂದಿದರೂ ಅವರು ನಿಶ್ಚಲವಾಗಿ ನಿಂತರು. 1969ರಲ್ಲಿ ಮಾತ್ರ ದ ಗಾಲ್ ರಾಜಕಾರಣದಿಂದ ದೂರ ಸರಿಯಬೇಕಾಯಿತು. ಇಪ್ಪತ್ತೈದು ವರ್ಷಗಳ ಕಾಲ ಯೂರೊಪಿನ ಅತಿ ಮುಖ್ಯ ವ್ಯಕ್ತಿಗಳಲ್ಲಿ ಒಬ್ಬನಾಗಿದ್ದ ಉಕ್ಕಿನ ಮನುಷ್ಯ ರಂಗಮಧ್ಯದಿಂದ ನಿರ್ಗಮಿಸಿದಂತಾಯಿತು.

ದ ಗಾಲ್ ಹೆಚ್ಚು ಜನರೊಂದಿಗೆ ಸೇರದ ಏಕಾಂತಪ್ರಿಯ, ಹಟಮಾರಿ ವ್ಯಕ್ತಿ. ಒಮ್ಮೊಮ್ಮೆ ಅವರ ಸ್ನೇಹಿತರಿಗೂ ಅವರನ್ನು ಅರ್ಥಮಾಡಿಕೊಳ್ಳುವುದು ಕಷ್ಟವಾಗುತ್ತಿತ್ತು. ತಮ್ಮ ಸಾಮರ್ಥ್ಯದಲ್ಲಿ ಅವರ ವಿಶ್ವಾಸ, ತಾವು ಹುಟ್ಟಿದ್ದೇ ಫ್ರಾನ್ಸಿನ ಹಿರಿಮೆಯನ್ನು ಮತ್ತೆ ಗಳಿಸಿ ಸಾರುವುದಕ್ಕೆ ಎಂಬ ನಿಶ್ಚಲ ನಂಬಿಕೆ, ಇವು ಒಮ್ಮೊಮ್ಮೆ ಅವರು ಅಹಂಕಾರಿಯೇನೊ ಎಂಬ ಭಾವನೆಗೆ ಎಡೆಕೊಡುತ್ತಿದ್ದುವು. ಆದರೂ 1940ರಿಂದ ಫ್ರಾನ್ಸ್‌ಗೆ ಸಮರ್ಥ ನಾಯಕತ್ವ ಅಗತ್ಯವಾದಾಗಲೆಲ್ಲ ಒದಗಿಸಿಕೊಟ್ಟವರು ದ ಗಾಲ್.

## ದಕ್ಷಿಣ ಅಮೆರಿಕ

ದಕ್ಷಿಣ ಅಮೆರಿಕ ವಿಶಾಲವಾದ ಭೂಪ್ರದೇಶ. ಶಾಂತಸಾಗರ ಮತ್ತು ಅಟ್ಲಾಂಟಿಕ್ ಮಹಾಸಾಗರಗಳಿಂದ ಸುತ್ತುವರಿಯಲ್ಪಟ್ಟಿದೆ. ಈ ಭೂಭಾಗವನ್ನು 1498ರಲ್ಲಿ ಕೊಲಂಬಸ್ ಮೊದಲು ಕಂಡುಹಿಡಿದ. ಅನಂತರ ಸ್ಪೇನ್, ಪೋರ್ಚುಗಲ್ ಮತ್ತಿತರ ಐರೋಪ್ಯ ರಾಷ್ಟ್ರಗಳ ಜನರು ಬಂದು ಇಲ್ಲಿ ನೆಲೆಸಿದರು. ಹತ್ತೊಂಬತ್ತನೆಯ ಶತಮಾನದ ಮೊದಲ ಭಾಗದಲ್ಲಿ ಒಂದೇ ಸಮನೆ ಯುದ್ಧವಾಗಿ ಅನೇಕ ವಸಾಹತುಗಳು ಸ್ವತಂತ್ರವಾದುವು. ಈಗ ಬ್ರೆಜಿಲ್, ವೆನಿಜೂಲ, ಕೊಲಂಬಿಯಾ, ಈಕ್ವೆಡಾರ್, ಪೆರು, ಬೊಲಿವಿಯಾ, ಚಿಲಿ, ಅರ್ಜೆಂಟೀನ, ಉರುಗ್ವೇ, ಪೇರಗ್ವೇ ಈ ಹತ್ತು ಗಣರಾಜ್ಯಗಳಿವೆ; ಬ್ರಿಟಿಷ್ ಗಿಯಾನಾ ಇದೀಗ ಸ್ವತಂತ್ರವಾಗಿದೆ. ಫ್ರೆಂಚ್ ಗಿಯಾನಾ, ಡಚ್ ಗಿಯಾನಾ ಈ ಎರಡು ವಸಾಹತುಗಳಿವೆ.

ಪಶ್ಚಿಮ ತೀರದಲ್ಲಿ ಆಂಡೀಸ್ ಪರ್ವತದ ಎತ್ತರವಾದ ಸಾಲುಗಳು. ಎಷ್ಟೋ ಪರ್ವತ ಶಿಖರಗಳು, ಜ್ವಾಲಾಮುಖಿಗಳು. ಭೂಮಧ್ಯರೇಖೆಯ ಉತ್ತರ ಭಾಗದಲ್ಲಿ ದೊಡ್ಡ ನದಿ ಅಮೆಜಾನ್ ಬ್ರೆಜಿಲ್ ಮತ್ತು ಕೊಲಂಬಿಯಾಗಳಲ್ಲಿ ಹರಿಯುತ್ತದೆ. ಇದರಿಂದ ದಟ್ಟವಾದ ಅರಣ್ಯಗಳು ಹಬ್ಬಿವೆ. ಈ ಗೊಂಡಾರಣ್ಯಗಳ ಕೆಲವು ಭಾಗಗಳಲ್ಲಿ ಮನುಷ್ಯ ಕಾಲಿಟ್ಟಿಲ್ಲವಂತೆ. ಓರಿನೋಕೊ, ಪರಾನಾ ಮುಂತಾದುವು ಇತರ ದೊಡ್ಡ ನದಿಗಳು.

ಅಮೆಜಾನ್ ನದಿಯ ದಡದಲ್ಲಿರುವ ಅಡವಿಯಲ್ಲಿ ಅಪಾರ ವೃಕ್ಷ ಸಂಪತ್ತಿದೆ. ಓರಿನೋಕೊ ಜಲಾನಯನ ಭೂಮಿಯಲ್ಲಿ ಹುಲ್ಲುಗಾವಲಿದೆ. ಮುಳ್ಳು ಹಂದಿ, ಮಾರ್ಗೆ, ಪೂಮಾ, ಚುಕ್ಕೆಗಳುಳ್ಳ ನರಿ, ಕ್ಯಾಪಿಬಾರಾ, ಕೊಂಬಿರುವ ಕೂಟ್ ಮೊದಲಾದ ವಿಶಿಷ್ಟ ಪ್ರಾಣಿಗಳು ಅಡವಿಗಳಲ್ಲಿ ವಾಸಿಸುತ್ತವೆ. ಸಾಕಷ್ಟು ಖನಿಜ ಸಂಪತ್ತೂ ಈ ದೇಶಗಳಲ್ಲಿದೆ. ವಜ್ರ, ಪಚ್ಚೆ, ಪಾದರಸ ಎಲ್ಲವೂ ಇಲ್ಲಿ ದೊರೆಯುತ್ತವೆ. ಇಲ್ಲಿಯ ಖನಿಜ ಸಂಪತ್ತನ್ನು ಕೈಗಾರಿಕಾ ದೇಶಗಳಿಗೆ ರಫ್ತು ಮಾಡುತ್ತಾರೆ.

ದಕ್ಷಿಣ ಅಮೆರಿಕದ ಬಹುಪಾಲು ಜನರ ವಾಸ ಬ್ರೆಜಿಲ್‌ನಲ್ಲಿ. ಮೂಲ ನಿವಾಸಿಗಳಾದ ರೆಡ್ ಇಂಡಿಯನರ ಸಂಖ್ಯೆ ಕಡಮೆ. ಪೋರ್ಚುಗೀಸ್, ಸ್ಪ್ಯಾನಿಷ್, ಡಚ್ ಮುಂತಾದ ಭಾಷೆಗಳನ್ನು ಜನ ಆಡುತ್ತಾರೆ. ಬ್ರೆಜಿಲ್ ದಕ್ಷಿಣ ಅಮೆರಿಕದ ದೊಡ್ಡ ದೇಶ. ಫ್ರೆಂಚ್ ಗಿಯಾನಾ ತೀರ ಚಿಕ್ಕದು. ಬ್ಯೂನಸ್ ಏರೆಸ್, ಜಾರ್ಜ್ ಟೌನ್, ಕಾರಾಕಾಸ್ ಮುಂತಾದುವು ದೊಡ್ಡ ಪಟ್ಟಣಗಳಾಗಿವೆ.



## ದಕ್ಷಿಣ ಆಫ್ರಿಕ

ರಾತ್ರಿ ಒಂಬತ್ತು ಗಂಟೆ. ರೈಲಿನ ಮೊದಲನೆಯ ತರಗತಿಯ ಗಾಡಿಯಲ್ಲಿ ಒಬ್ಬನೇ ಪ್ರಯಾಣಿಕ. ಒಂದು ನಿಲ್ದಾಣದಲ್ಲಿ ಅದು ನಿಂತಿತು. ಬಿಳಿಯನೊಬ್ಬ ಗಾಡಿಯೊಳಕ್ಕೆ ಬಂದ. ಒಳಗಿದ್ದ ಕಂದು ಬಣ್ಣದ ಭಾರತೀಯನನ್ನು ನೋಡಿದ. ಹೊರಕ್ಕೆ ಹೋಗಿ ಒಬ್ಬ ರೈಲ್ವೆ ಅಧಿಕಾರಿಯನ್ನು ಕರೆತಂದ.

ರೈಲ್ವೆ ಅಧಿಕಾರಿ ಭಾರತೀಯನಿಗೆಂದ: "ಬಾ ಹೊರಕ್ಕೆ. ಸಾಮಾನಿನ ಗಾಡಿಯಲ್ಲಿ ಕುಳಿತುಕೊಳ್ಳಬೇಕು ನೀನು."

ಪ್ರಯಾಣಿಕ ಹೇಳಿದ: "ನನ್ನ ಬಳಿ ಮೊದಲ ತರಗತಿಯ ಟಿಕೆಟ್ ಇದೆ."

"ಇದ್ದರೇನಂತೆ? ನಾನು ಹೇಳುತ್ತಿದ್ದೇನೆ. ನೀನು ಸಾಮಾನಿನ ಗಾಡಿಗೆ ಹೋಗಬೇಕು."

"ನಾನು ಇದೇ ಗಾಡಿಯಲ್ಲಿ ಹೋಗುತ್ತೇನೆ."

"ಉಹುಂ. ಅದಾಗುವುದೇ ಇಲ್ಲ. ನೀನಾಗಿ ಇಳಿಯದಿದ್ದರೆ ಪೋಲೀಸಿನವನನ್ನು ಕರೆಯಬೇಕಾಗುತ್ತದೆ."

"ಕರೆಯಿರಿ. ನಾನಾಗಿ ಗಾಡಿಬಿಡುವವನಲ್ಲ."

ಪೋಲೀಸಿನವನು ಬಂದ. ಭಾರತೀಯನನ್ನು ಹೊರಕ್ಕೆ ದೂಡಿ ಅವನ ಸಾಮಾನುಗಳನ್ನು ಹೊರಕ್ಕೆಸೆದ. ಮತ್ತೊಂದು ಗಾಡಿಗೆ ಹೋಗಲೊಲ್ಲೆ ಎಂದ ಭಾರತೀಯ. ಅವನನ್ನು ಪ್ಲಾಟ್‌ಫಾರಂ ಮೇಲೆಯೇ ಬಿಟ್ಟು ರೈಲು ಹೊರಟು ಹೋಯಿತು.

ಆ ಭಾರತೀಯ ಮೋಹನದಾಸ ಕರಮಚಂದ ಗಾಂಧಿ. ಇದು ನಡೆದದ್ದು 1893ರಲ್ಲಿ. ದಕ್ಷಿಣ ಆಫ್ರಿಕದಲ್ಲಿ.

ಅನಂತರ ತಿಳಿಯಿತು ಗಾಂಧಿಜಿಗೆ—ಅಲ್ಲಿನ ಬಿಳಿಯರ ಸರಕಾರದ ಕಣ್ಣಿನಲ್ಲಿ ಬಿಳಿಯರಲ್ಲದವರು ಮನುಷ್ಯರೇ ಅಲ್ಲ ಎಂದು. ಅಂಚೆ ಕಚೇರಿಗೆ ಹೋದರೆ ಬಣ್ಣದ ಜನರಿಗೆ ಬೇರೆ ಕಿಟಕಿ. ಬಸ್ಸಿನಲ್ಲಿ ಬಿಳಿಯರೊಡನೆ ಅವರು ಕೂಡುವಂತಿಲ್ಲ. ಕ್ಷೌರದ ಅಂಗಡಿಯಲ್ಲಿ ಬಿಳಿಯ ಕ್ಷೌರಿಕರು ಬಣ್ಣದವರ ಕೂದಲನ್ನು ಮುಟ್ಟರು.

ಈ ಅನ್ಯಾಯವನ್ನು ಪ್ರತಿಭಟಿಸಲು ನಿಶ್ಚಯಿಸಿದರು ಬಾಪೂ. 'ಸತ್ಯಾಗ್ರಹ'ದ ಅಪೂರ್ವ ಅಸ್ತ್ರವನ್ನು ಅವರು ಅಣಿಗೊಳಿಸಿದರು.

ಅಂಥ ಅಸ್ತ್ರ ರೂಪುಗೊಂಡದ್ದು ದಕ್ಷಿಣ ಆಫ್ರಿಕದಲ್ಲಿ.

ಅಟ್ಲಾಂಟಿಕ್ ಮತ್ತು ಹಿಂದೂಮಹಾಸಾಗರಗಳು ಕೂಡುವೆಡೆಯಲ್ಲಿ ದಕ್ಷಿಣ ಆಫ್ರಿಕವಿದೆ. ಇದು ಆಫ್ರಿಕದ ಅತ್ಯಂತ ಶ್ರೀಮಂತ ರಾಷ್ಟ್ರ. ಸಮುದ್ರ ಮಟ್ಟದಿಂದ ನೋಡಿದರೆ ದಕ್ಷಿಣ ಆಫ್ರಿಕ ತಟ್ಟೆ ಮಗುಚಿ ಇಟ್ಟಂತೆ ಕಾಣುತ್ತದೆ. ಮಧ್ಯದಲ್ಲಿ ಮಟ್ಟಸ ಭಾಗ. ದೇಶದ ಹೆಚ್ಚಿನ ಭಾಗ ಸಮುದ್ರ ಮಟ್ಟಕ್ಕಿಂತ 915 ಮೀಟರು ಎತ್ತರದಲ್ಲಿದೆ. ಬೆಟ್ಟಗಳಿಂದ ಮಧ್ಯೆ ಹುಲ್ಲುಗಾವಲು. ಅಗಲ ಕಿರಿದಾದ ತೀರ ಪ್ರದೇಶ. ನದಿ ಲಿಂಪೋಪೊ (ಮೊಸಳೆಯ ಹೊಳೆ) ಹರಿಯುವ ಭಾಗದಲ್ಲಿ ದಟ್ಟವಾದ ಅರಣ್ಯವಿದೆ.

ದಕ್ಷಿಣ ಆಫ್ರಿಕದಲ್ಲಿ ಸಮಶೀತೋಷ್ಣ ಹವಾಗುಣವಿದೆ. ನವೆಂಬರ್‌ನಿಂದ ಮಾರ್ಚ್‌ವರೆಗೆ ಬೇಸಗೆಕಾಲದಲ್ಲಿ ಮಳೆಯಾಗುತ್ತದೆ. ಆದರೆ ಕೇಪ್ ಟೌನ್ ಮತ್ತು ಅದರ ಸುತ್ತಲಿನಲ್ಲಿ ಚಳಿಗಾಲದಲ್ಲಿ ಮಳೆ ಬೀಳುತ್ತದೆ.

ಬಂಗಾರದ [illegible] ದಕ್ಷಿಣ ಆಫ್ರಿಕ ವಿದೇಶೀಯರ ಗಮನ ಸೆಳೆಯಿತು. ಬಂಗಾರದ ರಫ್ತಿನಿಂದ ಹಣಗಳಿಸಿ ದೇಶ ಶ್ರೀಮಂತವಾಗಿದೆ. ಉಣ್ಣೆಯ ಬಟ್ಟೆಗಳ ರಫ್ತು ಸಹ ಇದೆ. ಮುಸುಕಿನ ಜೋಳ, ಗೋಧಿ, ಕಬ್ಬು ಮುಂತಾದುವನ್ನು ಬೆಳೆಯುತ್ತಾರೆ.

ಮೂಲನಿವಾಸಿಗಳಲ್ಲದೆ ದಕ್ಷಿಣ ಆಫ್ರಿಕದಲ್ಲಿ ಯೂರೋಪ್, ಏಷ್ಯ ಮುಂತಾದ ವಿವಿಧ ಖಂಡಗಳಿಂದ ಬಂದ ಜನ ನೆಲೆಸಿದ್ದಾರೆ. ಇವರಲ್ಲಿ ಕ್ರೈಸ್ತ ಮತಾನುಯಾಯಿಗಳು, ಯೆಹೂದ್ಯರು, ಹಿಂದೂ, ಮುಸಲ್ಮಾನ ಪಂಥಾನುಯಾಯಿಗಳು ಇದ್ದಾರೆ. ಆಫ್ರಿಕನ್ನರಲ್ಲಿ ಬಂಟು, ಬುಷ್‌ಮನ್, ಹಾಟೆನ್‌ಟಾಟ್ ಬುಡಕಟ್ಟಿನವರುಗಳಿದ್ದಾರೆ. ಇವರ ಭಾಷೆ, ವೇಷ-ಭೂಷಣ, ಪದ್ಧತಿ ಎಲ್ಲ ಬೇರೆ ಬೇರೆ. ಇಂಗ್ಲಿಷ್ ಮತ್ತು ಆಫ್ರಿಕ ಭಾಷೆಗಳು ಬಳಕೆಯಲ್ಲಿವೆ.

ದಕ್ಷಿಣ ಆಫ್ರಿಕದಲ್ಲಿರುವ ಕ್ರೂಗರ್ ರಾಷ್ಟ್ರೀಯ ಉದ್ಯಾನವನ ಪ್ರಪಂಚದ ಅತ್ಯುತ್ತಮ ವನ್ಯಮೃಗ ರಕ್ಷಣಾ ಕೇಂದ್ರಗಳಲ್ಲೊಂದು. ಅಲ್ಲಿ ಆಫ್ರಿಕದ ಸುಪ್ರಸಿದ್ಧ ವನ್ಯಮೃಗಗಳಾದ ಆನೆ, ಸಿಂಹ, ಸಾರಂಗ ಎಲ್ಲಾ ಸ್ವೇಚ್ಛೆಯಾಗಿ ಓಡಾಡುತ್ತವೆ.

ದಕ್ಷಿಣ ಆಫ್ರಿಕದಲ್ಲಿ ಮೂರು ರಾಷ್ಟ್ರೀಯ ರಾಜಧಾನಿಗಳಿವೆ. ಕೇಪ್‌ಟೌನ್‌ನಲ್ಲಿ ಶಾಸಕಾಂಗವಿದೆ. ಇಲ್ಲಿಯೇ ಸಂಸತ್ ಸಭೆ ಸೇರುವುದು. ಪ್ರಿಟೋರಿಯಾದಲ್ಲಿ ಮುಖ್ಯಮಂತ್ರಿ ಮತ್ತು ಸಚಿವರುಗಳಿದ್ದು ಆಡಳಿತ ವಿಭಾಗದ ನೆಲೆಯಾಗಿದೆ. ಬ್ಲೋಮ್ ಫಾಂಟೈನ್ ದಕ್ಷಿಣ ಆಫ್ರಿಕದಲ್ಲಿಯೇ ದೊಡ್ಡ ನಗರ. ಇಲ್ಲಿ ಚಿನ್ನದ ಗಣಿ ಇದೆ. ಇದು 1886ರಲ್ಲಿ ಪ್ರಾರಂಭವಾಯಿತು. ಕೇಪ್‌ಟೌನ್ ದಕ್ಷಿಣ ಆಫ್ರಿಕದ ಪುರಾತನ ನಗರ. 1652ರಲ್ಲಿ ಸ್ಥಾಪಿತವಾದ ದೊಡ್ಡ ಬಂದರಿದೆ. ಡರ್ಬಾನ್ ಕೈಗಾರಿಕಾ ಕೇಂದ್ರ ಮತ್ತು ಬಂದರು. ಇಲ್ಲಿ ಏಷ್ಯನರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ.

ಪೋರ್ಚುಗೀಸ್ ನಾವಿಕ ಬಾರ್ತಲೋಮ್ಯು ಡಿ ಅಸ್ 1488ರಲ್ಲಿ ಗುಡ್‌ಹೋಪ್ ಭೂಶಿರವನ್ನು ಕಂಡುಹಿಡಿದ. 1497ರಲ್ಲಿ ವಾಸ್ಕೊ ದ ಗಾಮಾ ನಟಾಲಿಗೆ ಬಂದಿದ್ದ. 1815ರಲ್ಲಿ ಬ್ರಿಟಿಷರು ಕೇಪ್ ಪ್ರಾಂತವನ್ನು ಡಚ್ಚರಿಂದ ವಶಪಡಿಸಿಕೊಂಡರು. 1869ರಲ್ಲಿ ಕಿಂಬರ್ಲಿ ಹತ್ತಿರ ವಜ್ರ ಇರುವುದು ಆಕಸ್ಮಾತ್ತಾಗಿ ಪತ್ತೆಯಾಯಿತು. 1886ರಲ್ಲಿ ಪ್ರಿಟೋರಿಯದಲ್ಲಿ ಚಿನ್ನ ದೊರೆಯುತ್ತದೆಂದು ಗೊತ್ತಾಯಿತು. ಈ ಎರಡು ಶೋಧನೆಗಳು ದಕ್ಷಿಣ ಆಫ್ರಿಕದ ಜೀವನಗತಿಯನ್ನೇ ಬದಲಾಯಿಸಿದುವು. ಅದೃಷ್ಟ ಪರೀಕ್ಷೆ ಬಯಸಿ ಪ್ರಪಂಚದ ಎಲ್ಲ ಭಾಗಗಳಿಂದಲೂ ಜನ ಬರಲಾರಂಭಿಸಿದರು. ಇವರಲ್ಲಿ ಸಿಸಿಲ್ ರೋಡ್ಸ್ ಎಂಬಾತ ವಜ್ರದ ಗಣಿಗಳನ್ನು ತನ್ನ ಅಧೀನಕ್ಕೆ ತೆಗೆದುಕೊಂಡು ಕೇಪ್ ವಸಾಹತಿನ ಮುಖ್ಯಮಂತ್ರಿಯೂ ಆದ. ಅವನಿಗೆ ಡಚ್ಚರ ಎರಡು ವಸಾಹತುಗಳನ್ನು ಬ್ರಿಟಿಷ್ ಅಧಿಪತ್ಯಕ್ಕೆ ಒಳಪಡಿಸಬೇಕೆಂದು ಆಸೆಯಿತ್ತು. ಆದರೆ ಅವನ ಯತ್ನ ಸಫಲವಾಗಲಿಲ್ಲ. ಡಚ್ ವಸಾಹತಾದ ಟ್ರಾನ್ಸ್‌ವಾಲ್‌ನ ಡಚ್ಚರು—ಇವರನ್ನು ಬೋಯರರು ಎನ್ನುತ್ತಾರೆ—ಬ್ರಿಟಿಷರ ಜೊತೆ ಯುದ್ಧ ಮಾಡಿದರು. ಇದೇ ಬೋಯರ್ ಯುದ್ಧ. ತಾವು ಬ್ರಿಟಿಷ್ ಸಾಮ್ರಾಜ್ಯದ ಪ್ರಜೆಯಾದುದರಿಂದ ಬ್ರಿಟಿಷ್ ಸರಕಾರಕ್ಕೆ ಸಹಾಯ ಮಾಡುವುದು ತಮ್ಮ ಕರ್ತವ್ಯ ಎಂದು ಗಾಂಧಿಜಿ ಕೆಲವರು ಸಂಗಡಿಗರೊಡನೆ ಗಾಯಾಳುಗಳ ಉಪಚಾರಕ್ಕೆ ನೆರವಾದರು. ಈ ಸಮಯದಲ್ಲಿ ಅವರಿಗೆ ಒಂದು ಪದಕವನ್ನು ನೀಡಲಾಯಿತು. ಡಚ್ಚರು ಈ ಯುದ್ಧದಲ್ಲಿ ಸೋತರು. ಉಭಯ ಪಕ್ಷಗಳ ಮುಖಂಡರೂ ಸೇರಿ ತೀರ್ಮಾನವಾಗಿ 1910ರಲ್ಲಿ ಸಂಯುಕ್ತ ದಕ್ಷಿಣ ಆಫ್ರಿಕ ರಚಿಸಿಕೊಂಡರು.

ಎರಡನೆಯ ಮಹಾಯುದ್ಧವಾದ ಮೇಲೆ ಜಾನ್ ಸ್ಮಟ್ಸ್ ಮುಖ್ಯ ಮಂತ್ರಿಯಾದರು. 1948ರಲ್ಲಿ ರಾಷ್ಟ್ರೀಯ ಪಕ್ಷದ ಡ್ಯಾನಿಯಲ್ ಮಲಾನ್, ಸ್ಮಟ್ಸ್‌ನನ್ನು ಸೋಲಿಸಿ ಪದವಿಗೆ ಬಂದರು. ಇವರು ವರ್ಣನೀತಿಯನ್ನು ಸರಕಾರದ ಧೋರಣೆಯಾಗಿ ಮಾಡಿದರು. ಮೂಲನಿವಾಸಿಗಳಾದ ಆಫ್ರಿಕನರು ಕರಿಯರೆಂದು ಗಣಿಸಲ್ಪಟ್ಟು ಯೂರೋಪಿನ ಬಿಳಿಯರಿಂದ ಅವರನ್ನು ದೂರವಿಡಲಾಯಿತು. ಇವನ ಅನಂತರ ಬಂದ ಹೆಂಡ್ರಿಕ್ ವೆರೆಘರ್ಡ್ ಸಹ ಇದೇ ನೀತಿಯನ್ನು ಮುಂದುವರಿಸಿದರು. ಅನೇಕ ದೇಶಗಳು ವರ್ಣ ದ್ವೇಷವನ್ನು ವಿರೋಧಿಸಿದವು. ವಿಶ್ವಸಂಸ್ಥೆ ದಕ್ಷಿಣ ಆಫ್ರಿಕ ನೀತಿಯನ್ನು ಬದಲಾಯಿಸಿಕೊಳ್ಳಲು ಸೂಚಿಸಿತು. ಆದರೆ ದಕ್ಷಿಣ ಆಫ್ರಿಕ ನಿಲುವನ್ನು ಬದಲಾಯಿಸಲಿಲ್ಲ. ಕಾಮನ್‌ವೆಲ್ತ್ ರಾಷ್ಟ್ರಗಳ ಸದಸ್ಯತ್ವದಿಂದಲೂ ದೂರವಾಯಿತು. 1961ರ ಮೇ 31ರಂದು ದಕ್ಷಿಣ ಆಫ್ರಿಕ ಗಣರಾಜ್ಯವಾಯಿತು.

ಕೇಪ್ ಪ್ರಾಂತ್ಯದ ಉತ್ತರಕ್ಕಿರುವ ನೈಋತ್ಯ ಆಫ್ರಿಕವನ್ನು ಮೊದಲನೆಯ ಮಹಾಯುದ್ಧವಾದ ಮೇಲೆ ರಾಷ್ಟ್ರಸಂಘದ ಪಾಲನಾಧಿಕಾರಿಯಾಗಿ ದಕ್ಷಿಣ ಆಫ್ರಿಕ ಆಳುತ್ತಿದೆ. ವಿಶ್ವಸಂಸ್ಥೆಯ ನ್ಯಾಯಾಧಿಕಾರವನ್ನು ಮಾನ್ಯ ಮಾಡಲು ನಿರಾಕರಿಸಿ ತನ್ನ ವರ್ಣಭೇದ ನೀತಿಯನ್ನು ನೈಋತ್ಯ ಆಫ್ರಿಕದಲ್ಲೂ ಜಾರಿಗೆ ತಂದಿದೆ. 1966ರಲ್ಲಿ ವಿಶ್ವಸಂಸ್ಥೆಯ ಸರ್ವ ಸದಸ್ಯ ಸಭೆ ನೈಋತ್ಯ ಆಫ್ರಿಕ ವಿಶ್ವಸಂಸ್ಥೆಯ ಆಡಳಿತಕ್ಕೊಳಪಡುತ್ತದೆಂದು ಘೋಷಿಸಿ ಪಾಲನಾಧಿಕಾರವನ್ನು ಅಂತ್ಯಗೊಳಿಸಿತು. ಆದರೆ ದಕ್ಷಿಣ ಆಫ್ರಿಕ ಇದನ್ನು ಲಕ್ಷ್ಯಕ್ಕೆ ತಂದುಕೊಳ್ಳಲಿಲ್ಲ.

ಅಧ್ಯಕ್ಷನೇ ರಾಷ್ಟ್ರದ ಪ್ರಮುಖ. ಏಳು ವರ್ಷಗಳಿಗೊಮ್ಮೆ ಸೆನೆಟ್ ಮತ್ತು ಅಸೆಂಬ್ಲಿ ಸದಸ್ಯರನ್ನು ಚುನಾಯಿಸುತ್ತಾರೆ. ಮುಖ್ಯಮಂತ್ರಿ ಸರಕಾರದ ಮುಖ್ಯಸ್ಥ. ಸಂಸತ್ತಿನಲ್ಲಿ ಬಿಳಿಯರಿಗೆ ಮಾತ್ರ ಅವಕಾಶ.




## ದ್ರಾವಿಡರು

ಭಾರತದ ಪೂರ್ವನಿವಾಸಿಗಳಲ್ಲೆಲ್ಲ ಅತ್ಯಂತ ಪ್ರಮುಖವಾದ ಜನಾಂಗ ದ್ರಾವಿಡರದು. ದ್ರಾವಿಡರು ಎಲ್ಲಿಂದ ಬಂದವರು ಎಂಬುದನ್ನು ಖಚಿತವಾಗಿ ಹೇಳಲು ಆಗುವುದಿಲ್ಲ. ಇವರು ಭೂಮಧ್ಯಸಮುದ್ರ ಜನಾಂಗದವರು ಎಂದು ಕೆಲವರು ಊಹಿಸಿದ್ದಾರೆ. ದ್ರಾವಿಡರು ತಮ್ಮ ಮೂಲಸ್ಥಾನವಾದ ಮಧ್ಯ ಏಷ್ಯ ಪ್ರಾಂತದಿಂದ ಹೊರಟು ಭಾರತಕ್ಕೆ ಬಂದರು ಎಂಬ ಮಾತೂ ಇದೆ. ಹರಪ್ಪ ಮೊಹೆಂಜೊದಾರೊಗಳಲ್ಲಿ ದೊರೆತ ಅವಶೇಷಗಳಿಂದ ದ್ರಾವಿಡರು ಸಿಂಧೂ ನದಿಯ ಕೊಳ್ಳದಲ್ಲಿದ್ದರೆಂದು ತಿಳಿದುಬಂದಿದೆ. ಅಲ್ಲಿಂದ ವಿಂಧ್ಯಪರ್ವತ ದಾಟಿ ಕೆಳಗಡೆ ಬಂದಿರಬೇಕು ಎಂದು ಇತಿಹಾಸಜ್ಞರ ಊಹೆ.

ಆರ್ಯರು ಭಾರತಕ್ಕೆ ಬಂದಾಗ ದ್ರಾವಿಡ ಸಂಸ್ಕೃತಿಯಿಂದ ಅನೇಕ ವಿಷಯಗಳನ್ನು ಕಲಿತರು. ದ್ರಾವಿಡರ ಮತಪದ್ಧತಿ, ನಡೆ ನುಡಿಗಳು ಆರ್ಯರ ಸಂಸ್ಕೃತಿಯೊಡನೆ ಬೆರೆತುಹೋದುವು. ಉದಾಹರಣೆಗೆ: ಪಶುಪತಿ, ಗಣೇಶ, ಹನುಮಂತ, ದುರ್ಗಾ ಪೂಜೆಗಳನ್ನು ಆರ್ಯರು ದ್ರಾವಿಡರಿಂದ ಕಲಿತರು. ಈ ಪದ್ಧತಿಗಳು ಇಂದೂ ಹಿಂದೂಮತದವರಲ್ಲಿ ಪ್ರಚುರವಾಗಿವೆ.

ವೇದದ ಕೆಲವು ಋಕ್ಕುಗಳನ್ನು ನೋಡಿದರೆ ದ್ರಾವಿಡರು ನಾಗರಿಕರಾಗಿದ್ದರೆಂದೂ 'ದ್ರಾವಿಡ ನಾಗರಿಕತೆ' ಎಂಬುದು ಆಗಿನ ಕಾಲದಲ್ಲಿ ಪ್ರಸಿದ್ಧವಾಗಿತ್ತೆಂದೂ ತಿಳಿದುಬರುತ್ತದೆ. ಆರ್ಯರು ಭಾರತಕ್ಕೆ ಬಂದಾಗ ದ್ರಾವಿಡರು ಅವರೊಡನೆ ಯುದ್ಧಮಾಡಿದರು. ಆರ್ಯರು ಅವರನ್ನು ಸೋಲಿಸಿ ವಿಂಧ್ಯ ಪರ್ವತದ ದಕ್ಷಿಣಕ್ಕೆ ಅಟ್ಟಿದರು. ಆರ್ಯರಿಂದ ಸೋತರೂ ದ್ರಾವಿಡರು ಹಿಮ್ಮೆಟ್ಟದೆ ವಿಂಧ್ಯಪರ್ವತದ ದಕ್ಷಿಣ ಭಾಗದಲ್ಲಿ ನೆಲೆಸಿದರು. ಆರ್ಯರ ಕೆಲವು ಸಭ್ಯ ನಡವಳಿಕೆಗಳನ್ನು ತಾವೂ ಕಲಿತರು, ಕಾಲಕ್ರಮದಲ್ಲಿ ನಾಗರಿಕತೆಯನ್ನು ಇನ್ನೂ ಬೆಳೆಸಿಕೊಂಡು ಬಂದರು. ರಾಜ್ಯಗಳನ್ನೂ ಚಕ್ರಾಧಿಪತ್ಯಗಳನ್ನೂ ಕಟ್ಟಿಕೊಂಡರು.

ಸುಮಾರು ಐದು ಸಹಸ್ರ ವರ್ಷಗಳ ಪೂರ್ವ ದ್ರಾವಿಡರು ಜಗತ್ತಿನ ಬೇರೆ ಬೇರೆ ಭಾಗಗಳಲ್ಲಿ ನೆಲೆಸಿದ್ದರು. ಹೆಚ್ಚಾಗಿ ಅವರು ಈಜಿಪ್ಟ್, ಇರಾನ್, ಭಾರತ ದೇಶಗಳಲ್ಲಿ ವಾಸಿಸಿದ್ದರು. ಅದಕ್ಕೆ ಮೊದಲು ದ್ರಾವಿಡರು ಭಾರತದಿಂದ ಇರಾನ್, ಈಜಿಪ್ಟ್ ಮೊದಲಾದ ನಾಡುಗಳಿಗೆ ಹೋಗಿರಬಹುದೆಂದು ಭಾರತದ ಇತಿಹಾಸ ಸಂಶೋಧಕರು ಅಭಿಪ್ರಾಯಪಟ್ಟಿದ್ದಾರೆ.

ಈ ಸಂಸ್ಕೃತಿಗಳು ತಾಮ್ರ-ಕಂಚಿನ ಯುಗಕ್ಕೆ ಸಂಬಂಧಿಸಿವೆ. ಎಲ್ಲವೂ ಒಂದೇ ಕಾಲದಲ್ಲಿ ಇದ್ದುವು. ಮೊಹೆಂಜೊದಾರೊದ ಜನರು ದ್ರಾವಿಡರೆಂದು ಈಗಾಗಲೆ ಖಚಿತವಾದ್ದರಿಂದ ಮೇಲಿನ ಎಲ್ಲ ಸಂಸ್ಕೃತಿಗಳೂ ದ್ರಾವಿಡರಿಗೆ ಸಂಬಂಧಪಟ್ಟಿರಲೇಬೇಕೆಂದು ತೋರುತ್ತದೆ. ಈ ಸಂಸ್ಕೃತಿಗಳಲ್ಲಿ ಸ್ತ್ರೀಯರಿಗೆ ಹೆಚ್ಚಿನ ಸ್ಥಾನ ಕಲ್ಪಿಸಿಕೊಡಲಾಗಿತ್ತು. ಎಲ್ಲ ಸಂಸ್ಕೃತಿಗಳಲ್ಲಿ ನಗರ ರಾಜ್ಯಗಳನ್ನು ಸ್ಥಾಪಿಸಲಾಗಿತ್ತು. ಬ್ಯಾಬಿಲೋನಿಯ ಸಂಸ್ಕೃತಿಯ 'ತಮ್ಮರಜ್' ಎಂಬ ಗಂಡುದೇವತೆ 'ಈಸ್ಟರ್' ಎಂಬ ಹೆಣ್ಣುದೇವತೆ ಇವು ಮೊಹೆಂಜೊದಾರೊದ ಶಿವ ಮತ್ತು ಶಕ್ತಿ (ಪಾರ್ವತಿ) ದೇವತೆಗಳನ್ನು ಹೋಲುತ್ತವೆ. ಈ ದೇವತೆಗಳು ದಂಪತಿ [illegible]

ಗಳು. ಅಮ್ಮನ ಗರ್ಭದೇವತೆ. ಸರ್ಪದೇವತೆ ಮತ್ತು ಕೊಂಬು ಹೊಂದಿರುವ ವೃಕ್ಷದೇವತೆ ಮತ್ತು ಸರ್ಪದೇವತೆಗಳಲ್ಲಿ ನಂಬಿಕೆ ಕಂಡುಬರುತ್ತದೆ. ಇಲ್ಲಿ ಸಂಸ್ಕೃತಿಗಳ ಲಿಪಿ ಚಿತ್ರಲಿಪಿ. ಈ ಸಂಸ್ಕೃತಿಗಳ ಜನರಲ್ಲಿ ವ್ಯಾಪಾರ ಸಂಪರ್ಕವಿತ್ತು. ಭಾರತದಿಂದ ಇತರ ಸಂಸ್ಕೃತಿಯ ನಾಡುಗಳಿಗೆ ಹತ್ತಿ, ಮಸಾಲೆ ಸಾಮಾನುಗಳನ್ನು ರಫ್ತುಮಾಡ ಲಾಗುತ್ತಿತ್ತು. ಮೆಸಪೊಟೇಮಿಯದ ಅಕ್ಕಡ ಬಳಿ ಮೊಹೆಂಜೊದಾರೊದ ವ್ಯಾಪಾರಿ ದಸಾವಜು ಇತ್ತು. ಇರಾನಿನ ಮಾರ್ಗವಾಗಿ ಭಾರತದ ವ್ಯಾಪಾರ ಸಾಗುತ್ತಿತ್ತು. ಮೆಸಪೊಟೇಮಿಯನ್ನರು ಭಾರತದಿಂದ ಹತ್ತಿ, ದಂತ, ಮಸಾಲೆ, ರತ್ನಗಳನ್ನು ತರಿಸಿಕೊಳ್ಳುತ್ತಿದ್ದರು. ಎಲಮ್ ನಗರ ಮತ್ತು ಮೆಸಪೊಟೇಮಿಯಗಳಲ್ಲಿ ಮೊಹೆಂಜೊದಾರೊದ ಎರಡು ಮುದ್ರೆಗಳು ದೊರೆತಿವೆ. ಮೊಹೆಂಜೊದಾರೊ ನಗರದಲ್ಲಿ ಸುಮೇರಿಯದ ಕ್ಯೂನಿ ಫಾರ್ಮ್ ಲಿಪಿ ಶಾಸನ ಸಿಕ್ಕಿದೆ. ಈ ಎಲ್ಲ ಸಂಸ್ಕೃತಿಗಳ ಜನರು ಶಾಂತಿ ಪ್ರಿಯರು. ಸೌಂದರ್ಯಪ್ರೇಮಿಗಳು. ಭಾರತದ ಮೊಹೆಂಜೊದಾರೊ ನಗರ ಉತ್ಕೃಷ್ಟ ಕಲಾಕೃತಿ. ನಗರದ ಅಚ್ಚುಕಟ್ಟು, ಸ್ವಚ್ಛತೆ, ನೈರ್ಮಲ್ಯ ಅಚ್ಚರಿಯನ್ನುಂಟುಮಾಡುತ್ತವೆ; ಈಜುವ ಕೊಳ, ಉದ್ಯಾನಗಳಿಂದ ನಗರ ರಾರಾಜಿಸುತ್ತಿತ್ತೆಂದು ತಿಳಿಯುತ್ತದೆ.

ಭಾಷಾಶಾಸ್ತ್ರದಲ್ಲಿ ದ್ರಾವಿಡ ಭಾಷಾ ವಿಜ್ಞಾನ ಪ್ರಮುಖ ಅಧ್ಯಯನ ಅಂಗವಾಗಿದೆ. ದ್ರಾವಿಡ ಭಾಷಾವರ್ಗಕ್ಕೆ ಸೇರಿದ ಕನ್ನಡ, ತುಳು, ಕೊಡವ, ತಮಿಳು, ಮಲೆಯಾಳ ಮತ್ತು ತೆಲುಗು ಭಾಷೆಗಳನ್ನಾಡುವ ಜನರು ದಕ್ಷಿಣ ಭಾರತದ ವಿವಿಧ ಭಾಗಗಳಲ್ಲಿ ನೆಲೆಸಿದ್ದಾರೆ. ಸಿಂಹಳದ ಕೆಲವು ಭಾಗಗಳಲ್ಲೂ ದ್ರಾವಿಡ ಭಾಷೆಗಳನ್ನಾಡುವ ಜನರಿದ್ದಾರೆ.

## ದಿವಾಳಿ

ನಮಗೆ ಪರಿಚಿತವಾಗಿರುವ ಅಂಗಡಿಯೊಂದರಲ್ಲಿ ಕ್ರಮೇಣ ವ್ಯಾಪಾರ ಕಡಮೆಯಾಗುತ್ತ ಬಂದು ಒಮ್ಮೆ ಮುಚ್ಚಿಹೋದರೆ, ಆ ಅಂಗಡಿಯವನು ದಿವಾಳಿಯಾದ ಎನ್ನುತ್ತೇವೆ.

ದಿವಾಳಿ ಎಂದರೇನು ?

ಸಾಮಾನ್ಯವಾದ ಅರ್ಥದಲ್ಲಿ ದಿವಾಳಿಯೆಂದರೆ ಮಾಡಿಕೊಂಡಿರುವ ಸಾಲವನ್ನು ತೀರಿಸುವಷ್ಟು ಆಸ್ತಿಪಾಸ್ತಿ ಇಲ್ಲದ ವ್ಯಕ್ತಿ ಎಂದು. ಆದರೆ ಕಾನೂನಿನ ದೃಷ್ಟಿಯಿಂದ ನೋಡಿದಾಗ ದಿವಾಳಿ ಪದದ ವ್ಯಾಪ್ತಿ ಹೆಚ್ಚು. ಅವಧಿ ಮುಗಿಯುವ ಮೊದಲು ಸಾಲವನ್ನು ತೀರಿಸದ ಎಲ್ಲ ವ್ಯಕ್ತಿಗಳೂ ಕಾನೂನಿನ ದೃಷ್ಟಿಯಲ್ಲಿ ದಿವಾಳಿಯಾದವರೇ. ಕೆಲವರಿಗೆ ತಮ್ಮ ಸಾಲಕ್ಕಿಂತ ಹೆಚ್ಚು ಆಸ್ತಿಯಿರಬಹುದು. ಆದರೂ ಅವರು ಸಾಲವನ್ನು ತೀರಿಸದಿದ್ದಲ್ಲಿ ದಿವಾಳಿ ಎನ್ನಿಸಿಕೊಳ್ಳುವರು.

ಅವಧಿ ಮೀರಿದ ಕಾರಣದಿಂದ ಋಣಿ ವ್ಯಕ್ತಿಯನ್ನು ನ್ಯಾಯಾಲಯಕ್ಕೆ ಬರಮಾಡಬಹುದು. ಆಗ ನ್ಯಾಯಾಲಯ ಅವನ ಆಸ್ತಿಪಾಸ್ತಿಗಳನ್ನು ವಶಪಡಿಸಿಕೊಂಡು ಅವನ ಸಾಲಗಾರರಿಗೆ ಹಂಚುತ್ತದೆ. ಸಾಲದ ಮೊತ್ತಕ್ಕಿಂತ ಆಸ್ತಿ ಹೆಚ್ಚಿನ ಬೆಲೆಯುಳ್ಳದ್ದಾದರೆ, ಸಾಲವನ್ನು [illegible]. [illegible] ವರ್ಗದ [illegible]ಗಳನ್ನು [illegible]. [illegible] [illegible] [illegible] ಎಂದು ಬಿಟ್ಟುಕೊಡುತ್ತದೆ.

ಬಹಳ ಹಿಂದಿನಕಾಲದಿಂದಲೂ ಪೌರ ಸರಕಾರದ ಇತಿಹಾಸದಲ್ಲಿ, ದಿವಾಳಿ ವಿರುದ್ಧ ನ್ಯಾಯಾಲಯಕ್ಕೆ ಹೋಗುವ ಪದ್ಧತಿ ರೂಢಿಯಲ್ಲಿದೆ. ಸಾಲಗಾರರು ದಿವಾಳಿಯ ವಿರುದ್ಧ ಕ್ರಮ ಕೈಗೊಳ್ಳಬಹುದೆಂಬ ಕಾನೂನು ಪಾಶ್ಚಾತ್ಯ ದೇಶಗಳಲ್ಲಿ ಹಿಂದಿನಿಂದಲೂ ಇದೆ. ಆತನ ಆಸ್ತಿಯನ್ನು ವಶಪಡಿಸಿಕೊಂಡು ಸಾಲಗಾರರ ಸಾಲವನ್ನು ತೀರಿಸುತ್ತಿದ್ದರು. ಎಲ್ಲರ ಸಾಲವನ್ನೂ ಪೂರ್ತಿಯಾಗಿ ತೀರಿಸಲು ದಿವಾಳಿಯ ಆಸ್ತಿ ಸಾಲದಾದಾಗ ಆಯಾ ಸಾಲಗಾರರು ಕೊಟ್ಟಿರುವ ಸಾಲದ ಪ್ರಮಾಣಕ್ಕನುಸಾರವಾಗಿ ಹಣದ ಹಂಚಿಕೆಯಾಗುತ್ತಿತ್ತು. ಈ ಕಾನೂನು ಮೊದಲ ಹಕ್ಕಿನ ಸಾಲಗಳಿಗೆ ಮಾತ್ರ ಅನ್ವಯಿಸುತ್ತಿತ್ತು. ಮೊದಲ ಹಕ್ಕಿನ ಸಾಲ ಎಂದರೆ ಯಾರು ಯಾವಾಗ ಸಾಲ ನೀಡಿರುವರೋ ಆ ಕ್ರಮದಲ್ಲಿ ಸಾಲ ತೀರಿಸುವುದು.

ಮೊದಲ ಹಕ್ಕಿನ ಸಾಲವನ್ನು ಸಂಪೂರ್ಣವಾಗಿ ತೀರಿಸುವುದಕ್ಕೆ ದಿವಾಳಿಯ ಆಸ್ತಿಯೆಲ್ಲವನ್ನೂ ಉಪಯೋಗಿಸಬೇಕಾದ ಸಂದರ್ಭ ಬಂದರೂ, ಕಾನೂನು ಹಿಂಜರಿಯುವುದಿಲ್ಲ. ಆದರೆ ನಿತ್ಯೋಪಯೋಗಕ್ಕೆ ಬೇಕಾದ ಕೆಲವು ಅತ್ಯವಶ್ಯ ವಸ್ತುಗಳನ್ನು ಮಾತ್ರ ಅವನ ಆಸ್ತಿಯೆಂದು ಪರಿಗಣಿಸದೆ ಅವನಿಗೇ ಬಿಡುತ್ತಾರೆ.

## ದ್ವೀಪ

ಯಾವುದೇ ಒಂದು ಭೂಭಾಗದ ಸುತ್ತ ಎಲ್ಲಾ ಕಡೆಯಲ್ಲೂ ನೀರಿದ್ದರೆ ಅದನ್ನು ದ್ವೀಪ ಎನ್ನುತ್ತಾರೆ. ಅತಿ ಚಿಕ್ಕ ಹವಳದ ದ್ವೀಪದಿಂದ ಹಿಡಿದು ಗ್ರೀನ್‌ಲೆಂಡಿನಷ್ಟು ದೊಡ್ಡದರವರೆಗೂ ದ್ವೀಪಗಳಿವೆ. ಶ್ರೀರಂಗಪಟ್ಟಣ ಕಾವೇರಿ ನದಿಯಲ್ಲಿನ ಒಂದು ಪುಟ್ಟ ದ್ವೀಪವೇ. ಭಾರತದ ದಕ್ಷಿಣದಲ್ಲಿ ಸಿಂಹಳ ದ್ವೀಪವಿದೆ.

ದ್ವೀಪಗಳಲ್ಲಿ ಮುಖ್ಯವಾಗಿ ಎರಡು ಬಗೆ—ಖಂಡಾಂತರ ದ್ವೀಪಗಳು ಮತ್ತು ಸಾಗರ ದ್ವೀಪಗಳು.

ಖಂಡಾಂತರ ದ್ವೀಪಗಳು ಖಂಡಕ್ಕೆ ಸಮೀಪವಾಗಿ ಇರುತ್ತವೆ. ಒಂದು ಕಾಲದಲ್ಲಿ ಖಂಡದ ಭಾಗವಾಗಿದ್ದು ಸಮುದ್ರ ಉಕ್ಕಿ ಬಂದುದರಿಂದ ಇವು ಬೇರೆಯಾದುವು. ಬ್ರಿಟಿಷ್ ದ್ವೀಪಗಳು ಈ ಬಗೆಯವು. ಕೆಲವು ವೇಳೆ ಭೂಭಾಗವನ್ನು ಸಮುದ್ರ ಕೊರೆದು ಒಂದು ಭಾಗ ಬೇರೆಯೇ ಆಗುವಂತೆ ಮಾಡುತ್ತದೆ. ಒಮ್ಮೊಮ್ಮೆ, ಮುಳುಗಿಹೋದ ಪರ್ವತದ ಶಿಖರವೂ ದ್ವೀಪವಾಗುತ್ತದೆ.

ಪ್ರಪಂಚದಲ್ಲಿ ಸಾಗರ ದ್ವೀಪಗಳೇ ಬಹಳ. ಇವು ಸಾಗರ ಮಧ್ಯದಲ್ಲಿ ಖಂಡಗಳಿಂದ ದೂರವಾಗಿರುತ್ತವೆ. ಅಗ್ನಿ ಪರ್ವತಗಳಿಂದ ಬಂದ ಲಾವಾ ಸಾಗರದ ತಳಕ್ಕಿಳಿದು ಅಲ್ಲಿ ಕ್ರಮೇಣ ಶಿಖರಗೊಂಡು, ಎತ್ತರವಾಗಿ, ಮೇಲೆ ಏಳುತ್ತವೆ. ಹವಾಯ್ ದ್ವೀಪಗಳು ಇಂಥವು. ಹವಳದ ದ್ವೀಪಗಳು ಆಳ ಕಡಮೆ ಇರುವ ಸಾಗರ ಭಾಗದಲ್ಲಿ ಕಾಣಬರುತ್ತವೆ. ಇದಕ್ಕೆ ಕಾರಣ ಸಾಗರದಲ್ಲಿರುವ ಸಣ್ಣದೊಂದು ಪ್ರಾಣಿ. ಇದನ್ನು ಕೋರಲ್ ಪಾಲಿಪ್ ಎನ್ನುತ್ತಾರೆ. ಈ ಜಲಚರಿಯ ಮೂಳೆ ದೇಹದ ಹೊರಗೆ ಬೆಳೆದಿದ್ದು, ಪ್ರಾಣಿ ದೊಡ್ಡದಾಗುತ್ತಾ ಹೋದಂತೆ ಮೂಳೆಯೂ ದೊಡ್ಡದಾಗುತ್ತದೆ. ಅದು ಸತ್ತಮೇಲೆ ಮೂಳೆ ಅಲ್ಲಿಯೇ ಉಳಿದುಬಿಡುತ್ತದೆ. ಹಲವು ಸಹಸ್ರ ವರ್ಷಗಳ ಅವಧಿಯಲ್ಲಿ ಕೋಟ್ಯಂತರ

ಮೂಳೆಗಳು ಬಿದ್ದು ಕಡೆ ಸೇರಿದಾಗ ಆ ಗಡ್ಡೆ ಸಮುದ್ರದ ಮೇಲೆ ಕಾಣಿಸಿಕೊಂಡು ಹವಳದ ದ್ವೀಪ ವಿಕಸಿಕೊಳ್ಳುತ್ತದೆ. ಈ ಬಗೆಯ ದ್ವೀಪಗಳು ದಕ್ಷಿಣ ಶಾಂತಸಾಗರದಲ್ಲಿವೆ.

ಕೆಲವು ದ್ವೀಪಗಳು ಬೇರೆ ಬೇರೆ ಕಾರಣಗಳಿಗಾಗಿ ಪ್ರಾಮುಖ್ಯ ಪಡೆದಿವೆ. ಜಪಾನ್ ಕೈಗಾರಿಕೆಯ ಅಭಿವೃದ್ಧಿಗೆ ಹೆಸರಾಗಿದೆ. ಫ್ರಾನ್ಸಿನ ಬಳಿ ಇದ್ದು ಇಂಗ್ಲೆಂಡಿಗೆ ಸೇರಿರುವ ಛಾನಲ್ ದ್ವೀಪಗಳಂಥವು ಅಂತರರಾಷ್ಟ್ರೀಯ ರಾಜಕೀಯ ಪ್ರಾಧಾನ್ಯ ಹೊಂದಿವೆ. ಸಿಂಹಳ, ಜಾಂಜಿಬಾರ್ ದ್ವೀಪಗಳು ವಾಣಿಜ್ಯ ಕೇಂದ್ರಗಳು. ನೌಕಾ ನೆಲೆಗಟ್ಟಾಗಿ ಸೈಪ್ರಸ್, ಮಾರೀಷಿಯಸ್ ದ್ವೀಪಗಳು ಹೆಸರುವಾಸಿ. ಕೆಲವು ದ್ವೀಪಗಳಲ್ಲಿ ಸಮಾಜಕ್ಕೆ ಅಪಾಯಕಾರಿಗಳೆಂದು ಕಂಡುಬಂದ ಕೈದಿಗಳನ್ನು ಇಡಲಾಗಿದೆ. ಫ್ರೆಂಚ್ ಗಿಯಾನಾದ ಡೆವಿಲ್ (ಪಿಶಾಚ) ದ್ವೀಪ ಇಂಥದು.

## ದುರ್ಗ (ಕೋಟೆ)

ಚಿತ್ರದುರ್ಗ, ನಂದಿದುರ್ಗ, ದೇವರಾಯನ ದುರ್ಗ—ಇಂಥ ಎಲ್ಲ ಊರುಗಳಿಗೂ ಸಮಾನವಾದ ಒಂದು ಅಂಶವಿದೆ. ಅದು ದುರ್ಗ ಅಥವಾ ಕೋಟೆ.

ವೈರಿಗಳಿಗೆ ಪ್ರವೇಶಿಸಲು ದುರ್ಗಮವಾದದ್ದು ದುರ್ಗ. ಇಲ್ಲಿ ಸೈನಿಕರು ಮದ್ದು ಗುಂಡುಗಳನ್ನು ಇಟ್ಟುಕೊಂಡು ಯುದ್ಧಕ್ಕೆ ಸಿದ್ಧರಾಗಿರುತ್ತಿದ್ದರು. ದುರ್ಗದ ರಚನೆ ಅವರಿಗೆ ನೆರವಾಗುತ್ತಿತ್ತು. ಸಾಮಾನ್ಯವಾಗಿ ದುರ್ಗಗಳಿರುವುದು ಬೆಟ್ಟಗಳ ಮಧ್ಯೆ. ಇಲ್ಲಿ ಊರಿನ ಸುತ್ತಲೂ ರಕ್ಷಣೆಗಾಗಿ ಕಟ್ಟಿದ ಗೋಡೆ ಎದ್ದು ಕಾಣಿಸುತ್ತದೆ. ಈಗಿನ ಕಾಲದಲ್ಲಿ ಇಂಥ ಗೋಡೆಗೆ ಬೆಲೆ ಇಲ್ಲ. ಹಿಂದಿನ ಕಾಲದಲ್ಲಾದರೆ ಪ್ರತಿಯೊಂದು ಊರಿಗೂ ಒಂದು ಕೋಟೆ ಇರುತ್ತಿತ್ತು. ಸೈನ್ಯ ಸರಂಜಾಮುಗಳಿದ್ದ ಕೆಲವೆಡೆಗಳಲ್ಲಿ ಕೋಟೆ ಹೆಚ್ಚು ಭದ್ರ. ದುರ್ಗಮ.

ಕೋಟೆಯ ಗೋಡೆಗಳನ್ನು ಕಟ್ಟುವುದು ಬಹಳ ಹಿಂದಿನಿಂದಲೂ ಇರುವ ಪದ್ಧತಿ. ಕ್ರಿ. ಪೂ. 600ರಲ್ಲೇ ಪೂರ್ವ ಭೂಮಧ್ಯ ಸಮುದ್ರ ರಾಷ್ಟ್ರಗಳ ಜನ ಇಡೀ ಪಟ್ಟಣದ ಸುತ್ತ ರಕ್ಷಣೆಗಾಗಿ ಗೋಡೆಗಳನ್ನು ಕಟ್ಟುತ್ತಿದ್ದರು. ಕ್ರಿ. ಪೂ. 3ನೆಯ ಶತಮಾನದಲ್ಲಿ ಚೀನೀಯರು ಚೀನದ ಮಹಾ ಗೋಡೆ ಕಟ್ಟಿದರು.

ಈಜಿಪ್ಟಿನಲ್ಲಿ 36.6 ಮೀಟರು ಎತ್ತರ, 9.2 ಮೀಟರು ದಪ್ಪ ಕೋಟೆಯ ಗೋಡೆಗಳನ್ನು ಕಟ್ಟುತ್ತಿದ್ದರು. ಗ್ರೀಸ್ ಮತ್ತೆ ರೋಮ್‌ಗಳಲ್ಲಿನ ದುರ್ಗ ನಿರ್ಮಾಣ ಅತಿ ಶ್ರೇಷ್ಠ ಮಟ್ಟವನ್ನು ಮುಟ್ಟಿತ್ತು.

ಮಧ್ಯಯುಗದಲ್ಲಿ ನಾಡಿನ ಅಧಿಪತಿಗಳು ಬಲವಾದ ದುರ್ಗಗಳನ್ನು ಕಟ್ಟಿಸುತ್ತಿದ್ದರು. ನಾಡಿನ ಅಧಿಪತಿಗಳು, ಊರ ಪಾಳೆಯಗಾರರು ದುರ್ಗದೊಳಗಿನ ಅರಮನೆಯಲ್ಲಿ ವಾಸಿಸುತ್ತಿದ್ದರು.

ದುರ್ಗದ ಎತ್ತರದ ಗೋಡೆಯ ಸುತ್ತ ದೊಡ್ಡ ಕಂದಕ. ದುರ್ಗದೊಳಕ್ಕೆ ಹೋಗಲು ಬೇಕಾದಾಗ ಬಳಸಿ, ಬೇಡದಿದ್ದಾಗ ಬಗೆಗೆಳೆದುಕೊಳ್ಳಬಹುದಾದ ಸೇತುವೆ. ದುರ್ಗವನ್ನು ಶತ್ರುಗಳು ಮುತ್ತಿದಾಗ ಸೇತುವೆಯನ್ನು ಒಳಗೆಳೆದು ದುರ್ಗದ ಬಾಗಿಲನ್ನು ಮುಚ್ಚಿಬಿಡುತ್ತಿದ್ದರು.

ದುರ್ಗದೊಳಗೆ ಹಲವು ಹಂತವಾಗಿ ಬಂದ ಒಳಗೋಡೆ ಗೋಡೆಗಳು ಇರುತ್ತಿದ್ದುವು. ದೊಡ್ಡ ಬಾವಿ ಮುಂತಾದುವು ನೀರನ್ನು ಪೂರೈಸುತ್ತಿದ್ದುವು. ಬಹಳ ದಿನಗಳಿಗೆ ಸಾಕಾಗುವಷ್ಟು ಆಹಾರ ಸಂಗ್ರಹವಿರುತ್ತಿತ್ತು. ರಕ್ಷಣೆಗಾಗಿ ಮದ್ದಿನ ಸಂಗ್ರಹವೂ ಇರುತ್ತಿತ್ತು. ವೈರಿ ದುರ್ಗದೊಳಗೆ ಬಂದರೆ, ದುರ್ಗದೊಳಗಿನವರು ಹೋರಾಡಲು ಸಾಧ್ಯವಿಲ್ಲದೆ ಹೋದರೆ, ಪಾರಾಗಿ ಹೋಗಲು ಭೂಮಿಯೊಳಗಿನ ಗುಪ್ತಮಾರ್ಗಗಳು ಇರುತ್ತಿದ್ದುವು.



ಯೂರೋಪಿನ ಮಧ್ಯಯುಗೀನ ದುರ್ಗ

ಕೋಟೆಯ ಒಳಗಡೆ ಶತ್ರುಗಳನ್ನು ಎದುರಿಸಲು ಸರ್ವಸಿದ್ಧತೆಯನ್ನೂ ಮಾಡಿಕೊಳ್ಳುತ್ತಿದ್ದರು. ಕೋಟೆಯ ಗೋಡೆಯ ಮೇಲೆ ಕಾವಲುಗಾರರು ಎತ್ತರದಿಂದ ಕಾದಿರುತ್ತಿದ್ದರು. ಶತ್ರುಗಳು ಮುತ್ತಿದಾಗ ಮೇಲಿಂದ ಅವರ ಮೇಲೆ ಬಿಲ್ಲು ಬಾಣಗಳ ಮಳೆಗರೆಯುತ್ತಿದ್ದರು. ಕುದಿವ ಎಣ್ಣೆ, ಕಾದ ಮರಳು ಇವನ್ನೂ ಮೇಲಿನಿಂದ ಸುರಿಯುತ್ತಿದ್ದರು.

ಕೋಟೆಯ ಗೋಡೆ ಹತ್ತುವುದು ಬಹಳ ಕಷ್ಟದ ಕೆಲಸ. [illegible] ಎತ್ತರವಾಗಿದ್ದ ಆ ಗೋಡೆಗಳನ್ನು ಏರಲು ಶತ್ರುಗಳು ಅನೇಕ ರೀತಿಯ ಸಲಕರಣೆಗಳನ್ನೂ ಹಗ್ಗವನ್ನೂ ಏಣಿಗಳನ್ನೂ ಉಪಯೋಗಿಸುತ್ತಿದ್ದರು. ಅಲ್ಲದೆ ಕೋಟೆಯೊಳಗಿರುವವರ [illegible] ಮಾಡುತ್ತಿದ್ದರು. ಕೆಲವು ಸಲ ದುರ್ಗದ [illegible] ಸುತ್ತಿ [illegible] ಹಿಡಿಯುತ್ತಿದ್ದರು.

ಯುದ್ಧಕಲೆ ಬದಲಾದಂತೆಲ್ಲ ದುರ್ಗ, ಕೋಟೆಗಳ ಪಾದರಿಯೂ ಮಾರ್ಪಾಟಾಗುತ್ತ ಹೋಯಿತು. ಸಿಡಿಮದ್ದಿನ ಶೋಧನೆಯಂತೂ ದುರ್ಗಗಳ ಭದ್ರತೆಯನ್ನು ಬಹಳ ಕಡಮೆಮಾಡಿತು.

ಆಧುನಿಕ ಯುದ್ಧವೈಖರಿಯ ಕಾರಣ ದುರ್ಗಗಳು ಈ ದಿನ ನಿಷ್ಪ್ರಯೋಜಕವಾಗಿವೆ: ಗತಕಾಲದ ಬದುಕಿನ ಕುರುಹಾಗಿ ಉಳಿದಿವೆ.

ನಾಲ್ಕು ರೀತಿಯ ದುರ್ಗಗಳ ವರ್ಣನೆ ಶಾಸನಗಳಲ್ಲಿ ದೊರೆಯುತ್ತದೆ.

1. ಎರಡು ನದಿಗಳ ಸಂಗಮದ ಮಧ್ಯದಲ್ಲಿರುವುದು ಜಲದುರ್ಗ. ಇದರ ಸುತ್ತಲೂ ದೊಡ್ಡ ಕೆರೆಗಳು, ಒರಟು ಮುಳ್ಳುಗಳಿಂದ ಕೂಡಿದ ಸರೋವರಗಳು.

2. ಬೆಟ್ಟಗಳ ಮಧ್ಯೆ ಇರುವುದು ಗಿರಿದುರ್ಗ. ನಾಲ್ಕು ಕಡೆಗಳಲ್ಲೂ ಬಹಳ ಎತ್ತರವಾದ ಗಿರಿಶಿಖರಗಳು; ಒಂದೇ ಬಾಗಿಲು. ಬೆಟ್ಟದ ಮಧ್ಯೆ ನೀರು ಬೀಳುವಲ್ಲಿ ಸಣ್ಣದಾರಿ.

3. ಹೊರಗಡೆ ನೀರು, ಗಿಡ, ಮರ ಬಳ್ಳಿ ಯಾವುದೂ ಇಲ್ಲ. ಆದರೆ ಒಳಗೆ ಇವೆಲ್ಲವೂ ಸಮೃದ್ಧವಾಗಿವೆ. ಹೊರಗೆ ಮಾತ್ರ ಉಪ್ಪು ನೀರು, ಅಥವಾ ಕುಡಿಯಲು ಆಗದ ನೀರು ಇದೆ. ಇದು ಸ್ಥಲದುರ್ಗ.

4. ಕೊನೆಯದು ವನದುರ್ಗ. ಸುತ್ತಲೂ ನೀರು, ಕೆಸರು, ದಟ್ಟವಾದ ಮರ ಗಿಡಗಳು, ಹುಲ್ಲು.

ಕನ್ನಡನಾಡಿನಲ್ಲಿ ಪ್ರಸಿದ್ಧವಾಗಿರುವ ಬನವಾಸಿ ಒಂದು ವನದುರ್ಗ. ಗಿರಿದುರ್ಗಕ್ಕೆ ಬಾದಾಮಿ ಕೋಟೆ ಒಂದು ಉತ್ತಮ ಉದಾಹರಣೆ. ಆ ಕೋಟೆಯನ್ನು 543ರಲ್ಲಿ ಕಟ್ಟಲಾಯಿತು. ಶ್ರೀರಂಗಪಟ್ಟಣದ ಕೋಟೆ ಜಲದುರ್ಗಕ್ಕೆ ಉದಾಹರಣೆ. ಬೆಂಗಳೂರು, ಹಂಪೆ, ರಾಯಚೂರು. ಬಿಜಾಪುರ ಮೊದಲಾದ ಸ್ಥಳಗಳಲ್ಲಿನ ಕೋಟೆಗಳು ಸ್ಥಲದುರ್ಗಗಳು.

## ದೆವ್ವ

ಸತ್ತುಹೋದವರ ಆಕೃತಿ ಭೂಮಿಯಲ್ಲಿ ಕಾಣಿಸಿಕೊಂಡಿತು ಎಂದು ಒಮ್ಮೊಮ್ಮೆ ಬದುಕಿದವರಿಗೆ ಅನಿಸುತ್ತದೆ. ಆಗ 'ದೆವ್ವ ಕಾಣಿಸಿತು' ಎನ್ನುತ್ತಾರೆ.

ದೆವ್ವಗಳ ವಿಷಯದಲ್ಲಿ ಹಲವಾರು ನಂಬಿಕೆಗಳುಂಟು. ಆಸೆ, ಆಕಾಂಕ್ಷೆಗಳನ್ನು ಇಟ್ಟುಕೊಂಡು ಸತ್ತವರು, ದುರ್ಮರಣಕ್ಕೆ ಈಡಾದವರು, ಸತ್ತ ಮೇಲೆ ಭೂಮಿಗೆ ವಾಪಸು ಬರುತ್ತಾರೆ; ಆದರೆ ಹಳೆಯ ದೇಹ ಅವರಿಗೆ ಸಿಗುವುದಿಲ್ಲ, ಹೊಸ ದೇಹ ಅವರಿಗೆ ಇನ್ನೂ ಬಂದಿರುವುದಿಲ್ಲ. ಆದ್ದರಿಂದ ದೇಹವಿಲ್ಲದವರಾಗಿ ಸುತ್ತುತ್ತಿರುತ್ತಾರೆ—ಎಂದು ಹಲವರ ನಂಬಿಕೆ. ಇವು 'ದೆವ್ವ'ಗಳು. ಭೂತ, ಪ್ರೇತ, ಪಿಶಾಚಿ ಎಂದೂ ಇವುಗಳಿಗೆ ಹೆಸರು.

ದೆವ್ವಕ್ಕೆ ಪಾದಗಳು ಹಿಂದುಮುಂದಾಗಿರುತ್ತವೆ. ದೇವರ ಹೆಸರನ್ನು ದೆವ್ವ ಕೇಳಲಾರದು, ಕೇಳಿದರೆ ಓಡಿಹೋಗುತ್ತದೆ ಎಂಬ ನಂಬಿಕೆ ಹಲವು ದೇಶಗಳಲ್ಲುಂಟು. ದೆವ್ವಗಳು ಸೂರ್ಯ ಮುಳುಗಿದ ಮೇಲೆ ಈ ಜಗತ್ತಿಗೆ ಬರುತ್ತವೆ, ಕೋಳಿ ಕೂಗುವ ಹೊತ್ತಿಗೆ ತಮ್ಮ ಲೋಕಕ್ಕೆ ಹಿಂದಿರುಗುತ್ತವೆ ಎಂದು ಪಾಶ್ಚಾತ್ಯರಲ್ಲಿ ಹಲವರ ನಂಬಿಕೆ.

ಹಿಂದಿನಕಾಲದಲ್ಲಿ ದೆವ್ವದ ಕಾಟವನ್ನು ಹೋಗಲಾಡಿಸಲು ಎಲ್ಲ ದೇಶಗಳಲ್ಲೂ ಕ್ರೂರ ವಿಧಾನಗಳನ್ನು ಅನುಸರಿಸುತ್ತಿದ್ದರು. ದೆವ್ವಗಳನ್ನು ವಶಮಾಡಿಕೊಂಡು ಮಂತ್ರವಾದಿಗಳು ಏನು ಕೆಲಸ ಬೇಕಾದರೂ ಅವುಗಳ ಕೈಯಲ್ಲಿ ಮಾಡಿಸಿಕೊಳ್ಳುತ್ತಾರೆಂಬ ನಂಬಿಕೆಯಿದೆ.

ನಮ್ಮ ದೇಶದಲ್ಲಿ ಮೆಣಸಿನಕಾಯಿ ಘಾಟು ಹಾಕುವುದು ಮೊದಲಾದ ಅನೇಕ ಅನಾಗರಿಕ ಪದ್ಧತಿಗಳನ್ನು ಅನುಸರಿಸುತ್ತಿದ್ದರು. ಜನರಿಗೆ ವಿಜ್ಞಾನ ಸ್ವಲ್ಪ ತಿಳಿವಳಿಕೆಯನ್ನು ನೀಡುತ್ತಿದ್ದರೂ ಇಂಥ ಪದ್ಧತಿಗಳು ಇನ್ನೂ ಕೆಲವು ಕಡೆ ಉಳಿದಿವೆ. ಹುಚ್ಚರಿಗೆ ದೆವ್ವ ಹಿಡಿದಿದೆ ಎಂದು, ಹಿಂಸೆಕೊಟ್ಟು ದೆವ್ವವನ್ನು ಓಡಿಸುವ ಪ್ರಯತ್ನ ನಮ್ಮ ದೇಶದಲ್ಲಿಯೂ ಇತರ ದೇಶಗಳಲ್ಲಿಯೂ ನಡೆಯುತ್ತಿತ್ತು. ಹುಚ್ಚು ರೋಗದಲ್ಲಿ ಹುಚ್ಚರಿಗೆ ಸಹಾನುಭೂತಿ ಅಗತ್ಯ ಎಂಬುದು ಈಚೆಗೆ ಅರ್ಥವಾಗಿದೆ.

'ಕೊಳ್ಳಿ ದೆವ್ವ' ಎಂದರೆ ಒಂದಾನೊಂದು ಕಾಲದಲ್ಲಿ ಬಹಳ ಹೆದರಿಕೆ ಇತ್ತು. ರಾತ್ರಿ ಕಾಡಿನಲ್ಲಿ ಪ್ರಯಾಣಮಾಡುವಾಗ ಕಾಣಿಸಿಕೊಳ್ಳುತ್ತಿದ್ದ ಉರಿಯನ್ನು ದೆವ್ವದ ಕಾಟವೆಂದೇ ಹಿಂದೆ ನಂಬಿದ್ದರು. ಆದರೆ ಅದು ಜೌಗುಪ್ರದೇಶದಲ್ಲಿ ತನಗೆ ತಾನೇ ಹೊತ್ತಿಕೊಳ್ಳುವ ಒಂದು ಅನಿಲವೆಂದು ತಿಳಿದಮೇಲೆ. ಜನರ ಭೀತಿ ಕಡಮೆಯಾಗಿದೆ.

ದೆವ್ವದ ಇರುವಿಕೆಯ ಬಗೆಗೆ ವೈಜ್ಞಾನಿಕವಾಗಿ ತಿಳಿಯಲು ಸಂಶೋಧನಾ ಕೇಂದ್ರಗಳು 1882ರಲ್ಲಿ ಲಂಡನಿನಲ್ಲಿ, ಅನಂತರ ಅಮೆರಿಕದಲ್ಲಿ, ಸ್ಥಾಪಿತವಾದುವು. ವಾಹಕರ ಮೇಲೆ ಅನೇಕ ರೀತಿಯ ಪ್ರಯೋಗಗಳನ್ನು ಮಾಡಲಾಯಿತು. ಆದರೆ ಪ್ರೇತಾತ್ಮಗಳು ಇವೆ ಎನ್ನುವುದನ್ನು ಖಚಿತವಾಗಿ ಹೇಳುವುದಕ್ಕೆ ಸಾಕಾದಷ್ಟು ಆಧಾರಗಳು ಸಿಕ್ಕಿಲ್ಲ. ಕೆಲವರಲ್ಲಿ ಮನಸ್ಸು ಕೆಲವೊಮ್ಮೆ ಬಾಹ್ಯ ವಾತಾವರಣದ ಹಾಗೂ ಕಾಲದ ಮಿತಿಗಳನ್ನು ದಾಟಿ ಹೋಗುತ್ತದೆ; ಸಾಧಾರಣವಾಗಿ ತಿಳಿದುಕೊಳ್ಳಲಾಗದ ವಿಷಯಗಳನ್ನು ತಿಳಿದುಕೊಳ್ಳುತ್ತ ಇವರು 'ವಾಹಕ'ರಾಗಿ ತಾವು ಪ್ರೇತಗಳಿಂದ ಸಮಾಚಾರ ತಂದೆವೆಂದು ಹೇಳುವುದು ವಾಡಿಕೆ. ಇದನ್ನು ವಿಜ್ಞಾನಿಗಳು ಒಪ್ಪಿಲ್ಲ.

ಪ್ರೇತಗಳ ರಾಜ್ಯ ವಿಜ್ಞಾನಿಗೊಂದು ಸವಾಲು. ವಿಜ್ಞಾನ ಈ ವಿಷಯವಾಗಿ ಖಚಿತವಾದ ಸಿದ್ಧಾಂತವನ್ನು ರೂಪಿಸಲು ಶಕ್ಯವಾಗಿಲ್ಲ.

ಪಾಶ್ಚಾತ್ಯರಲ್ಲಿ 'ಡೆವಿಲ್' (ದುಷ್ಟಾತ್ಮ)ಗಳು ಇವೆ ಎಂಬ ನಂಬಿಕೆಯಿದೆ. ಇವುಗಳ ಪ್ರಭು ಸೇಟನ್ (ಸೈತಾನ್) ದೈವದ್ವೇಷಿ. ದೇವರ ಜೊತೆಯಲ್ಲಿ ಜಗಳ ಕಾದು ಕೆಳಗೆ ತಳ್ಳಲ್ಪಟ್ಟು ತನ್ನದೇ ಆದ ದುಷ್ಟರ ರಾಜ್ಯವನ್ನು ಸ್ಥಾಪಿಸಿ ನರಕದಲ್ಲಿ ಆಳುತ್ತಿರುವವನು. ಇವನೂ ಇವನ ಕಡೆಯವರೂ ದೇವರ ಒಳ್ಳೆಯ ಕೆಲಸಗಳಿಗೆ ಅಡ್ಡಿ ತರುವವರು, ಮಾನವರನ್ನು ಕೆಟ್ಟದಾರಿಗೆ ಎಳೆದು ಸಂತೋಷಪಡುವವರು.

ಇದಕ್ಕೆ ಸಮನಾದ 'ಶಕ್ತಿ'ಯನ್ನು ಹಿಂದೂಗಳು ಚಿತ್ರಿಸಿಲ್ಲ. ಕ್ರೈಸ್ತರಲ್ಲಿ ಡೆವಿಲ್ ಅಥವಾ ಸೈತಾನ ಇದ್ದಹಾಗೆ ಪಾರಸಿಗಳಲ್ಲಿ 'ಅಹ್ರಿಮನ್', ಬೌದ್ಧರಲ್ಲಿ 'ಮಾರ'. 'ಡೆವಿಲ್' ಎನ್ನುವ ಪದವನ್ನು ಕೆಲವು ಸಲ 'ದೆವ್ವ' ಎನ್ನುವ ಅರ್ಥದಲ್ಲಿ ಬಳಸಿದರೂ 'ದೆವ್ವ' ಸತ್ತವರ ಪ್ರೇತ. ಆದರೆ ಸೇಟನ್ ದೈವಶಕ್ತಿಗೆ ಎದುರಾಳಿಯಾದ ದುಷ್ಟಶಕ್ತಿ. ಆಂಗ್ಲ ಪದ 'ಘೋಸ್ಟ್' ನಮ್ಮ ಪದ 'ದೆವ್ವ' ಇವೆರಡೂ ಸಮಾನಾರ್ಥ ಪದಗಳು. 'ದೆವ್ವ'ದ ಬಗೆಗೆ ನಮ್ಮಲ್ಲೇನು ನಂಬಿಕೆಗಳಿವೆಯೋ 'ಘೋಸ್ಟ್' ಬಗೆಗೆ ಪಾಶ್ಚಾತ್ಯರಲ್ಲಿ ಆ ನಂಬಿಕೆಗಳಿವೆ. ಒಂದಾನೊಂದು ಕಾಲದಲ್ಲಿ 'ದೆವ್ವ' (ಡೆವಿಲ್) ಗಳ ಸಹಾಯದಿಂದ ದುಷ್ಕಾರ್ಯಗಳನ್ನು ಮಾಡುತ್ತಿದ್ದರೆಂದು ಆಪಾದಿಸಿ ಮಂತ್ರವಾದಿಗಳನ್ನೂ ಮಂತ್ರವಾದಿನಿಯರನ್ನೂ ಪಾಶ್ಚಾತ್ಯರು ಹಿಡಿದು ಕೊಲ್ಲಿಸುತ್ತಿದ್ದರು.

ಪ್ರಪಂಚದಲ್ಲಿ ಅತ್ಯಂತ ಸಣ್ಣದೆನಿಸಿದ ಕಥೆ 'ದೆವ್ವ'ಕ್ಕೆ ಸಂಬಂಧಿಸಿದ್ದು.

'ನಿಮಗೆ ದೆವ್ವದಲ್ಲಿ ನಂಬಿಕೆ ಇದೆಯೇ?' ಎಂದು ಒಬ್ಬ ಕೇಳಿದನಂತೆ. 'ಇಲ್ಲ' ಎಂದು ಹೇಳಿ ಪಕ್ಕದಲ್ಲಿದ್ದವನು ಅದೃಶ್ಯನಾದನಂತೆ.



ಕೆಂಪು ಕೋಟೆ

## ದೆಹಲಿ

ಶತಶತಮಾನಗಳ ಭಾರತದ ಚರಿತ್ರೆ ಕಣ್ಣಿನ ಮುಂದೆ ನಿಲ್ಲುವಂತೆ ಮಾಡುವ ನಗರ ದೆಹಲಿ.

ಎಷ್ಟೋ ಶತಮಾನಗಳ ಹಿಂದೆಯೇ ದೆಹಲಿ ರಾಜಧಾನಿಯಾಗಿತ್ತು. ಹೊಸ ಹೊಸ ವಿಜೇತರು, ರಾಜಮನೆತನಗಳವರು ನಗರವನ್ನು ಪುನರ್ ನಿರ್ಮಾಣ ಮಾಡಿದರು.

ದೆಹಲಿ ಭಾರತದ ವಾಯುವ್ಯ ಭಾಗದಲ್ಲಿದೆ. ಇದರಲ್ಲಿ ಹೊಸ ದೆಹಲಿ ಮತ್ತು ಹಳೆ ದೆಹಲಿ ಎಂದು ಎರಡು ಭಾಗಗಳಿವೆ.

ಪಾಂಡವರ ರಾಜಧಾನಿ ಇಂದ್ರಪ್ರಸ್ಥ ಈಗಿನ ಹಳೆಯ ಕೋಟೆ ಇರುವ ಸ್ಥಳದಲ್ಲಿ ಇದ್ದಿತೆಂದು ಹೇಳುತ್ತಾರೆ. ಮೊಗಲ ಬಾದಷಹರ ಕಾಲದಲ್ಲಿ ದೆಹಲಿ ಬಹಳ ಉನ್ನತ ಸ್ಥಿತಿಯಲ್ಲಿತ್ತು. ಅವರ ಆಳ್ವಿಕೆಯಲ್ಲಿ ಕಟ್ಟಲಾದ ಎಷ್ಟೋ ಕಟ್ಟಡಗಳು, ಕೆಲವು ಕಟ್ಟಡಗಳ ಅವಶೇಷಗಳು ಈಗಲೂ ಉಳಿದಿವೆ. ಈಸ್ಟ್ ಇಂಡಿಯಾ ಕಂಪೆನಿಯ ಪ್ರಾಬಲ್ಯ ಹೆಚ್ಚಿದಂತೆ ಕಲ್ಕತ್ತ ಆಂಗ್ಲ ಆಕ್ರಮಣಕಾರರ ರಾಜಧಾನಿಯಾಯಿತು. 1911ರಲ್ಲಿ ಬ್ರಿಟಿಷ್ ಚಕ್ರವರ್ತಿ ಐದನೆಯ ಜಾರ್ಜ್ ದೊರೆ ಕಿರೀಟಧಾರಣೆಯ ಅನಂತರ ದೆಹಲಿಯಲ್ಲಿ ಸಭೆ ನಡೆಸಿದರು. ಇನ್ನು ಮುಂದೆ ದೆಹಲಿ ರಾಜಧಾನಿ ಎಂದು ಘೋಷಿಸಿದರು. 1912ರಿಂದ ದೆಹಲಿ ಮತ್ತೆ ಭಾರತದ ರಾಜಧಾನಿಯಾಯಿತು.

ಹೊಸ ದೆಹಲಿ ಹಳೆಯ ದೆಹಲಿಗೆ ದಕ್ಷಿಣಕ್ಕೆ ಸುಮಾರು ಆರೂವರೆ ಕಿಲೊ ಮೀಟರ್ ದೂರದಲ್ಲಿದೆ. ವಿಶಾಲವಾದ ಬೀದಿಗಳು, ನವೀನ ವಾಸ್ತುಶಿಲ್ಪ ಬಳಸಿ ಕಟ್ಟಿದ ಕಟ್ಟಡಗಳು ನಗರಕ್ಕೆ ಶೋಭೆಯನ್ನು ತಂದುವು. ಇಲ್ಲಿನ ಜಂತರ್ ಮಂತರ್ ಪ್ರಸಿದ್ಧವಾದದ್ದು. ಇದು ಜಯಪುರದ ರಾಜಾ ಜಯಸಿಂಹನು ಕಟ್ಟಿಸಿದನೆಂದು ಹೇಳಲಾದ ಖಗೋಳ ವೀಕ್ಷಣಾಲಯ. ಇದು ಹದಿನೆಂಟನೆಯ ಶತಮಾನದ ಪೂರ್ವಾರ್ಧದಲ್ಲಿ ಕಟ್ಟಲ್ಪಟ್ಟಿತು. ಕನಾಟ್ ಸರ್ಕಸ್ ಮುಖ್ಯ ವ್ಯಾಪಾರ ಕೇಂದ್ರ. ಇದರಲ್ಲಿ ಎರಡು ಸುತ್ತುಗಳಿವೆ. ಹೊರ ಸುತ್ತಿನಿಂದ ಸೂರ್ಯ ಕಿರಣಗಳಂತೆ ಹೊರಟ ರಸ್ತೆಗಳಿವೆ. ನವ ದೆಹಲಿಯ ಯೋಜನೆ ಇದೇ ರೀತಿ ವೃತ್ತಗಳು ಮತ್ತು ಅವುಗಳಿಂದ ಹೊರಡುವ ರಸ್ತೆಗಳಂತೆ ರಚಿಸಿದೆ. ಈ ಎಲ್ಲ ರಸ್ತೆಗಳೂ ಸೇರುವ ಬೃಹತ್ ಪರಿಧಿಗೆ ರಿಂಗ್ ರೋಡ್ ಎಂದು ಹೆಸರು. ಹಳೆಯ ದೆಹಲಿಯಲ್ಲಿ ಚಾರಿತ್ರಿಕ ಸ್ಮಾರಕಗಳು ಅನೇಕವಿವೆ. ಷಹಜಹಾನ್ ಕಟ್ಟಿದ ಕೆಂಪು ಅರಮನೆ (ಈಗ ಕೆಂಪು ಕೋಟೆ), ಅವನ ಇನ್ನೊಂದು ಅರಮನೆ ದಿವಾನ್-ಇ-ಖಾಸ್, ದೆಹಲಿಯ ಬಳಿ ಇರುವ ಕುತುಬ್‌ಮಿನಾರ್ (1200ರಲ್ಲಿ) 157 ಮೀ.ಗಳ ಸ್ತಂಭ ಇವು ಕೆಲವು ಮುಖ್ಯ ಸ್ಮಾರಕಗಳು. ಹೊಸ ದೆಹಲಿಯಲ್ಲಿ ರಾಷ್ಟ್ರಪತಿ ಭವನ, ವೃತ್ತಾಕಾರದ ಸಂಸತ್ ಭವನ, ಸರಕಾರದ ಕಾರ್ಯಾಗಾರ ಭವನ ಇವು ನೋಡುವಂಥವು.

ರಾಷ್ಟ್ರಪತಿ ಭವನ



ಭಾರತದ ಅತ್ಯುಚ್ಚ ನ್ಯಾಯಾಲಯ–ಸುಪ್ರೀಂ ಕೋರ್ಟ್–ಇರುವುದು ದೆಹಲಿಯಲ್ಲಿ. ಬೇರೆ ಬೇರೆ ರಾಷ್ಟ್ರಗಳಿಂದ ಭಾರತಕ್ಕೆ ಬಂದ ರಾಯಭಾರಿಗಳ ಕಚೇರಿಗಳೂ ನಿವಾಸಗಳೂ ದೆಹಲಿಯಲ್ಲಿವೆ.

ಒಟ್ಟು ದೆಹಲಿಯ ವಿಸ್ತೀರ್ಣ 2.700 ಚ. ಕಿ. ಮೀ. ಜನಸಂಖ್ಯೆ 26.58.612.

ರಾಜಘಾಟ್‌ನಲ್ಲಿ ಮಹಾತ್ಮ ಗಾಂಧಿ, ಜವಾಹರಲಾಲ ನೆಹರು, ಲಾಲ್ ಬಹದ್ದೂರ್ ಶಾಸ್ತ್ರಿ ಇವರ ಸಮಾಧಿಗಳಿವೆ. ನೆಹರುರವರು ವಾಸಿಸುತ್ತಿದ್ದ ತೀನ್‌ಮೂರ್ತಿ ಭವನವನ್ನು ಪ್ರವಾಸಿಗರು ಸಂದರ್ಶಿಸುತ್ತಾರೆ.

## ದೇವರು

ತಲೆಯೆತ್ತಿ ನೋಡಿದರೆ ಮೇಲೆ ಆಕಾಶ. ಬೆಳಗಿನ ಹೊತ್ತು ಹೊಳೆಯುವ ಸೂರ್ಯ. ರಾತ್ರಿಯಾದರೆ ತಂಪನ್ನು ಕೊಡುವ ಚಂದ್ರ. ಮಿನುಗುವ ನಕ್ಷತ್ರಗಳು. ಸುತ್ತಲೂ ನೋಡಿದರೆ ಗಿಡಮರ ಬಳ್ಳಿಗಳು. ಒಂದು ಕಡೆ ಭೋರ್ಗರೆವ ಸಮುದ್ರ. ಇನ್ನೊಂದು ಕಡೆ ಮುಗಿಲನ್ನು ಮುಟ್ಟುವ ಪರ್ವತಗಳು. ಕ್ರಮಬದ್ಧವಾಗಿ ಸೂರ್ಯ ಹುಟ್ಟುತ್ತಾನೆ, ಮುಳುಗುತ್ತಾನೆ. ಬೇಸಗೆ, ಚಳಿಗಾಲ, ಮಳೆಗಾಲ, ಎಲ್ಲ ಋತುಗಳು ಬರುತ್ತವೆ. ಮರೆಯಾಗುತ್ತವೆ. ಸಣ್ಣ ಬೀಜವೊಂದು ದೊಡ್ಡ ಮರವಾಗಿ ಬೆಳೆಯುತ್ತದೆ. ನಮ್ಮ ಸುತ್ತಲೂ ಇರುವ ಸೃಷ್ಟಿಯ ವೈಚಿತ್ರ್ಯ ನೂರೆಂಟು. ಇವೆಲ್ಲಾ ಹೇಗೆ ಆಗುತ್ತವೆ ? ಮನುಷ್ಯನನ್ನು ಯಾರು ಸೃಷ್ಟಿ ಮಾಡಿದರು ? ಪ್ರಶ್ನೆಗಳನ್ನು ಕೇಳುತ್ತ ಹೋದರೆ ಮಾನವನಿಗೆ ತನ್ನನ್ನೂ ಸುತ್ತಲಿನ ಪ್ರಪಂಚವನ್ನೂ ಸೃಷ್ಟಿಮಾಡಿದವನೊಬ್ಬ ಇದ್ದಾನೆ ಎನಿಸಿತು. ಹೀಗೆ ಸೃಷ್ಟಿಗೆ ಕಾರಣವಾದ ಅದರೆ ಕಣ್ಣಿಗೆ ಕಾಣದ ಶಕ್ತಿಯನ್ನು 'ದೇವರು' ಎಂದು ಅವರು ಕರೆದರು.

ದೇವರ ವಿಷಯವಾಗಿ ಅನೇಕ ಬಗೆಯ ವಿಚಾರಗಳಿವೆ. ಕೆಲವರು ಒಬ್ಬನೇ ಒಬ್ಬ ದೇವರನ್ನು ಪೂಜೆ ಮಾಡುವರು. ಅನೇಕ ದೇವರುಗಳನ್ನು ಪೂಜೆ ಮಾಡುವವರು

ಇದ್ದಾರೆ. ಪ್ರಾಚೀನ ಗ್ರೀಸ್ ಮತ್ತು ಈಜಿಪ್ಟ್‌ಗಳಲ್ಲಿ ಜನರು ಹಲವು ದೇವರುಗಳನ್ನು ಪೂಜಿಸುತ್ತಿದ್ದರು. ಹಿಂದೂಗಳು ದೇವರನ್ನು ವಿವಿಧ ಹೆಸರುಗಳಿಂದ ಕರೆದು ಹಲವು ರೂಪಗಳಲ್ಲಿ ಪೂಜೆಮಾಡುತ್ತಾರೆ. ಆದರೆ ಈ ಎಲ್ಲ ದೇವರುಗಳೂ ಒಂದೇ ಎನ್ನುವ ಭಾವನೆಯೂ ಹಿಂದೂಗಳಲ್ಲಿ ಇದೆ.

ದೇವರು ಎಲ್ಲ ಕಡೆಯಲ್ಲೂ ಇದ್ದಾನೆ ಎನ್ನುವುದನ್ನು ಒಪ್ಪುವವರೂ ದೇವರು ಒಂದು ಪ್ರತ್ಯೇಕ ಲೋಕದಲ್ಲಿರುತ್ತಾನೆ ಎಂದು ನಂಬಿ ಅದನ್ನು ಸ್ವರ್ಗ ಎಂದು ಕರೆದಿದ್ದಾರೆ. ಒಳ್ಳೆಯ ಕೆಲಸ ಮಾಡಿದವರು ದೇವರ ಬಳಿಗೆ ಸ್ವರ್ಗಕ್ಕೆ ಹೋಗುತ್ತಾರೆ ಎನ್ನುವ ನಂಬಿಕೆ. ದೇವರಿಗೂ ಹೆಂಡತಿ ಮಕ್ಕಳನ್ನು ಮನುಷ್ಯ ಕಲ್ಪಿಸಿದ್ದಾನೆ; ತನ್ನ ಜೀವನದ ಹಲವು ಸಂಬಂಧಗಳನ್ನು ದೇವರಿಗೂ ಆರೋಪಿಸಿದ್ದಾನೆ.

ಅನನ್ಯ ಭಕ್ತಿಯಿಂದ ಪ್ರಾರ್ಥಿಸಿ ದೇವರನ್ನು ನೋಡಿದ್ದೇವೆಂದು ಕೆಲವರು ಹೇಳಿದ್ದಾರೆ. ತ್ಯಾಗರಾಜರಿಗೆ ಶ್ರೀರಾಮನೂ ಭಕ್ತೆ ಮೀರಾಗೆ ಶ್ರೀಕೃಷ್ಣನೂ ಪ್ರತ್ಯಕ್ಷವಾಗಿದ್ದರೆಂಬ ಭಾವನೆ ಇದೆ. ರಾಮಕೃಷ್ಣ ಪರಮಹಂಸರನ್ನು ನರೇಂದ್ರನಾಥ (ಸ್ವಾಮಿ ವಿವೇಕಾನಂದ) "ನೀವು ದೇವರನ್ನು ನೋಡಿದ್ದೀರಾ?" ಎಂದು ಕೇಳಿದಾಗ "ನೋಡಿದ್ದೇನೆ, ನೀನೂ ನೋಡಬಹುದು!" ಎಂದು ಪರಮಹಂಸರು ಹೇಳಿದರು.

ದೇವರು ಹಲವು ಸಲ ಮನುಷ್ಯರೂಪದಲ್ಲೋ ಪ್ರಾಣಿರೂಪದಲ್ಲೋ ಪ್ರಪಂಚದಲ್ಲಿ ಕಾಣಿಸಿಕೊಳ್ಳುತ್ತಾನೆ ಎನ್ನುವ ಅಭಿಪ್ರಾಯವೂ ಇದೆ.

ನಮಗೆ ಕಷ್ಟಗಳು ಬಂದಾಗ ದೇವರನ್ನು ಪ್ರಾರ್ಥಿಸಿದರೆ ಕಷ್ಟಗಳು ಹೋಗುತ್ತವೆ ಎಂದು ಭಾವಿಸುತ್ತೇವೆ. ನಮಗೆ ಏನಾದರೂ ತೊಂದರೆಗಳು ಬಂದಾಗ ದೇವರನ್ನು ಪ್ರಾರ್ಥಿಸಿಕೊಂಡು ದೇವರಿಗೆ ಯಾವುದಾದರೂ ವಿಶೇಷ ರೀತಿಯ ಕಾಣಿಕೆ ನೀಡುವುದಾಗಿ ಹರಕೆ ಹೊರುವ ಸಂಪ್ರದಾಯ ಉಂಟು.

ಭೂಮಿಯ ಮೇಲೆ ಮನುಷ್ಯ ಹುಟ್ಟಿದ ಪ್ರಾರಂಭದಲ್ಲಿ ಮನುಷ್ಯ ಗುಡುಗು, ಮಿಂಚು, ಸಿಡಿಲು, ಬಿರುಗಾಳಿ, ಸಮುದ್ರದ ಆರ್ಭಟ, ಕಾಡು ಕಿಚ್ಚು ಇಂಥವುಗಳಿಗೆ ಬೆದರಿ ತನ್ನಿಂದಾಚೆ ಇರುವ ಶಕ್ತಿಯೊಂದರ ಕಡೆಗೆ ಭಯದಿಂದ ಮನಸ್ಸನ್ನು ತಿರುಗಿಸಿದ. ದೇವರೆಂದರೆ ಉಗ್ರನಾದ ಶಕ್ತಿ, ಕಾಣಿಕೆ ಪ್ರಾರ್ಥನೆಗಳಿಂದ ಅವನನ್ನು ಒಲಿಸಿಕೊಳ್ಳಬಹುದು—ಎಂಬ ಕಲ್ಪನೆ ಅವನಿಗೆ ಬಂದಿತು. ನಾಗರಿಕತೆ ಬೆಳೆದು ನ್ಯಾಯದ ಕಲ್ಪನೆ ಮನುಷ್ಯನ ಮನಸ್ಸಿನಲ್ಲಿ ಬೆಳೆದಾಗ, ದೇವರೆಂದರೆ ನಿಷ್ಠುರ ನ್ಯಾಯಮೂರ್ತಿ ಎನ್ನುವ ಭಾವನೆ ಅವನಲ್ಲಿ ಬೆಳೆಯಿತು. ಮನುಷ್ಯ ಸುಸಂಸ್ಕೃತನಾದಂತೆ ಭಗವಂತ ಪ್ರೇಮಮಯಿ, ಕರುಣಾಮೂರ್ತಿ ಎಂದು ಅವನಿಗೆ ಭಾಸವಾಗತೊಡಗಿತು. ಮಾನವ ಸುತ್ತಲಿನ ನಿಸರ್ಗದ ಸೌಂದರ್ಯಕ್ಕೆ ಮಾರುಹೋದಾಗ ದೇವರೇ ಸೌಂದರ್ಯವನ್ನೆಲ್ಲ ಸೃಷ್ಟಿಸಿದ ಸೌಂದರ್ಯಪ್ರಿಯ ಶಕ್ತಿ ಇರಬೇಕು ಎನ್ನಿಸಿತು.

ದೇವರ ಹೆಸರಿನಲ್ಲಿ ಅನ್ಯಾಯ ನಡೆಯುವುದೂ ಅಪರೂಪವಲ್ಲ.

ದೇವರು ಇಲ್ಲ ಎನ್ನುವ ನಾಸ್ತಿಕರಿಗೆ, ದೇವರಿದ್ದಾನೆ ಎನ್ನುವ ಆಸ್ತಿಕರು (ಅಸ್ತಿ—ಇದೆ—ಎನ್ನುವವರು) ಹೇಳುವ ಉತ್ತರ ಇದು: ಸೃಷ್ಟಿಕರ್ತನಿಲ್ಲದೆ ಸೃಷ್ಟಿಯಾಗಲು ಸಾಧ್ಯವಿಲ್ಲ. ದೇವರು ಎಂಬುವನೊಬ್ಬ ಇಲ್ಲದಿದ್ದರೆ ಮನುಷ್ಯನಲ್ಲಿ ಹುಟ್ಟಿನಿಂದಲೇ ಬರುವ ನ್ಯಾಯ ಧರ್ಮ ಇವುಗಳ ಭಾವನೆ ಮತ್ತು ಸೌಂದರ್ಯಪ್ರಜ್ಞೆಯಾಗಲಿ ಹೇಗೆ ಸಾಧ್ಯ ?

ದೇವರೊಬ್ಬನೇ. ದೇವರಿಲ್ಲ. ಅನೇಕ ದೇವರುಗಳಿದ್ದಾರೆ— ಈ ಎಲ್ಲ ವಾದ ವಿವಾದಗಳು ಇದ್ದಾಗಲೂ, ಭಾರತದಲ್ಲಿ ಅನೇಕ ಮಹಾನುಭಾವರು ಎಲ್ಲ ಧರ್ಮಗಳು ಪೂಜಿಸುವ ದೇವರು ಒಂದೇ ಎನ್ನುವುದನ್ನು ಬೋಧಿಸಿದ್ದಾರೆ.

## ಧರ್ಮ

"ಸತ್ಯಂ ವದ ಧರ್ಮಂ ಚರ" ಎನ್ನುವ ಮಾತನ್ನು ಕೇಳುತ್ತೇವೆ: ಅದಕ್ಕೆ ಏನರ್ಥ?—"ಸತ್ಯವನ್ನು ಹೇಳು. ಧರ್ಮಮಾರ್ಗದಲ್ಲಿ ಹೋಗು". ಇದು ಉಪನಿಷತ್ತಿನ ಮಾತು. ಇಲ್ಲಿ ಧರ್ಮವೆಂದರೇನು?

ಯಾವುದು ಧರಿಸಿ ನಿಲ್ಲುತ್ತದೋ ಅದೇ ಧರ್ಮ. ಮನುಷ್ಯನನ್ನೂ ಸಮಾಜವನ್ನೂ ಹಲವು ಕಾಲ ನಿಲ್ಲಿಸಬಲ್ಲದ್ದು ಧರ್ಮ. ಸಾವಿರಾರು ವರ್ಷಗಳಿಂದ ಸೂರ್ಯೋದಯ, ಸೂರ್ಯಾಸ್ತ, ಗಾಳಿ ಬೀಸುವುದು, ಮಳೆ ಬೀಳುವುದು, ವಸಂತದಲ್ಲಿ ಗಿಡಮರಗಳು ಹಸಿರನ್ನು ತೊಡುವುದು —ಇವೆಲ್ಲ ನಡೆದುಕೊಂಡು ಬರುತ್ತಿವೆ. ಹೀಗೆ ಕ್ರಮಬದ್ಧವಾಗಿ ಎಲ್ಲ ನಡೆದುಕೊಂಡು ಹೋಗುವುದು ಹೇಗೆ ? ಈ ಎಲ್ಲವನ್ನೂ ಹೊತ್ತು ಸರಿಯಾಗಿ, ಯಥಾವತ್ತಾಗಿ ನಡೆಸುವುದು ಧರ್ಮ. ಒಂದು ನಿಯಮ. ಯಾರಿಗೆ ಇದು ಬೇಕು, ಯಾರಿಗೆ ಅದು ಬೇಡ ಎನ್ನುವ ಪ್ರಶ್ನೆಯ ಗೊಡವೆ ಇಲ್ಲದೆ ಈ ಎಲ್ಲ ವಸ್ತುಗಳೂ ಶಕ್ತಿಗಳೂ ತಮ್ಮ ಸ್ವಭಾವಕ್ಕೆ ಅನುಗುಣವಾಗಿ, ಒಂದು ನಿಯಮಕ್ಕೆ ಅನುಸಾರವಾಗಿ, ತಮ್ಮ ಕರ್ತವ್ಯವನ್ನು ಮಾಡಿಕೊಂಡು ಸಾಗುತ್ತವೆ. ಇವೆಲ್ಲವನ್ನು ಧರಿಸಿ—ಇವಕ್ಕೆ ಆಧಾರವಾಗಿ—ನಡೆಸಿಕೊಂಡು ಹೋಗುವ ಶಕ್ತಿ ಧರ್ಮ.

ಧರ್ಮ ಎನ್ನುವ ಪದ 'ಧೃ' ಎನ್ನುವ ಧಾತುವಿನಿಂದ ಬಂದಿದೆ. ಯಾವ ಗುಣವಿಶೇಷ ತಾನೂ ಅಚಲವಾಗಿದ್ದು ಇತರರೂ ಅಚಲವಾಗಿ ನಿಲ್ಲುವಂತೆ ಮಾಡುತ್ತದೋ ಅದೇ ಧರ್ಮ. ತಾನೂ ಸ್ಥಿರವಾಗಿ ನಿಂತು ಇತರರನ್ನೂ ಸ್ಥಿರವಾಗಿ ನಿಲ್ಲಿಸುವುದೇ ಧರ್ಮ.

ಈ 'ಧರ್ಮ'ದ ಅಗತ್ಯವೇನು? ಪ್ರತಿಯೊಬ್ಬನಿಗೂ ಇಷ್ಟ ಅನಿಷ್ಟಗಳಿರುತ್ತವೆ. ಬಹು ಮಂದಿಗೆ ಐಶ್ವರ್ಯ ಬೇಕು, ಬಡತನ ಬೇಡ; ವಿರಾಮ ಬೇಕು, ಶ್ರಮ ಬೇಡ; ಅಧಿಕಾರ ಬೇಕು, ಇತರರಿಗೆ ಅಧೀನರಾಗಿರುವುದು ಬೇಡ. ಪ್ರತಿಯೊಬ್ಬನೂ ತನಗೆ ಬೇಕಾದದ್ದನ್ನು ಪಡೆಯುವುದು, ಬೇಡವಾದದ್ದನ್ನು ಬಿಡುವುದು ಇಷ್ಟನ್ನೇ ಮಾಡುತ್ತಿರುವುದಾದರೆ, ಶಕ್ತಿವಂತನಾದವನು ಇತರರನ್ನು ಕಾಲಿನ ಕೆಳಕ್ಕೆ ಹಾಕಿ ತುಳಿದಾನು; ತನ್ನ ಗುಲಾಮರನ್ನಾಗಿ ಮಾಡಿಕೊಂಡಾನು. ರಾಕ್ಷಸ ಮಾಡಿದ್ದೇ ಸರಿ ಎಂದಾದೀತು. ಇದು ಹುಲಿ, ಸಿಂಹ, ತೋಳಗಳ ರೀತಿ. ಗಾಳಿಗೆ ಒಂದು ಕಡೆಯಿಂದ ಬೀಸುವುದು 'ಧರ್ಮ'. ಸೂರ್ಯನಿಗೆ ಬೆಳಕು ಕೊಡುವುದು 'ಧರ್ಮ'. ಗಾಳಿಯು ಬೆಳಕನ್ನು ಕೊಡದು—ಅದು ಸೂರ್ಯನಲ್ಲವಾದ್ದರಿಂದ: ಸೂರ್ಯ ಬೀಸಲಾರ—ಅವನು ಗಾಳಿಯಲ್ಲವಾದ್ದರಿಂದ. ಹಾಗೆಯೇ ಮನುಷ್ಯ ಹುಲಿಯಾಗಿ, ಸಿಂಹವಾಗಿ, ತೋಳವಾಗಿ, ತಿಗಣೆಯಾಗಿ, ಸೊಳ್ಳೆಯಾಗಿ ಹುಟ್ಟಿಲ್ಲ: ಆದ್ದರಿಂದ ಅವುಗಳಂತೆ ಬಾಳಲಾಗದು. ಅವುಗಳಿಗೆ ಇಲ್ಲದ ಶಕ್ತಿ — ವಿವೇಚನಾ ಶಕ್ತಿ, ನ್ಯಾಯಾನ್ಯಾಯ ಪ್ರಜ್ಞೆ—ಅವನಿಗೆ ಇರುವುದರಿಂದ ಅವನ ಧರ್ಮ ಬೇರೆ: ಅದು ತನ್ನ ಇಷ್ಟ, ಅನಿಷ್ಟಗಳನ್ನು ಮರೆತು ನ್ಯಾಯಬದ್ಧವಾಗಿ ನಡೆಯುವುದು.

ಪ್ರಾಚೀನ ಭಾರತೀಯರು ಧರ್ಮವೆಂದರೇನು ಎಂಬುದನ್ನು ಸ್ಪಷ್ಟ ತಿಳಿಸಿದರು. ಅದನ್ನು ಪ್ರತಿಪಾದಿಸುವುದಕ್ಕಾಗಿ ಹಲವು ಶಾಸ್ತ್ರಗಳು

ಸೃಷ್ಟಿಸಿವರು. ಪ್ರಾಚೀನ ಭಾರತೀಯ ಸಾಹಿತ್ಯದಲ್ಲಿನ ಪಾತ್ರಗಳಲ್ಲಿ ಶ್ರೀರಾಮ, ಸೀತೆ, ಧರ್ಮರಾಯ, ಹರಿಶ್ಚಂದ್ರ ಇಂಥ ಪಾತ್ರಗಳು ಮರೆಯಲಾಗದಂಥವು. ಸತ್ಯದ ದಾರಿಯನ್ನು ಬಿಡದೆ ಇರುವುದು, ಪರರಿಗೆ ಉಪಕಾರ ಮಾಡುವುದು, ಯಾವ ರೀತಿಯ ಅನೀತಿಯೂ ಇಲ್ಲದಿರುವುದು, ನ್ಯಾಯದಿಂದ ಬಾಳುವುದು ಮೊದಲಾದ ನೀತಿ ನಿಯಮಗಳು ಧರ್ಮದ ಆಧಾರಸ್ತಂಭಗಳು.

ಧರ್ಮದ ಪರಿಪಾಲನೆಯಲ್ಲಿ ಪ್ರತಿಯೊಬ್ಬನೂ ಔಚಿತ್ಯವನ್ನೂ ತನ್ನ ಸಾಮರ್ಥ್ಯವನ್ನೂ ಅಗತ್ಯವನ್ನೂ ತಿಳಿದುಕೊಂಡು ಅದಕ್ಕೆ ಅನುಗುಣವಾಗಿ ನಡೆಯಬೇಕು. ಸಮಾಜದಲ್ಲಿ ಪ್ರತಿಯೊಬ್ಬನಿಗೂ ಅವನದೇ ಆದ ಒಳ್ಳೆಯ ರೀತಿನೀತಿಗಳಿವೆ. ರಾಜನಿಗೆ ರಾಜಧರ್ಮ, ಶಿಷ್ಯನಿಗೆ ಶಿಷ್ಯಧರ್ಮ, ಗುರುವಿಗೆ ಆಚಾರ್ಯಧರ್ಮ. ಪ್ರತಿಯೊಬ್ಬನೂ ತನಗೆ ಒಪ್ಪುವ ಧರ್ಮಕ್ಕೆ ಅನುಗುಣವಾಗಿ ನಡೆಯಬೇಕಾಗುತ್ತದೆ. ಕಷ್ಟದ ಪರಿಸ್ಥಿತಿಗಳು ಬಂದಾಗ ಸ್ವರಕ್ಷಣೆಗಾಗಿ ಯುದ್ಧ ಮಾಡುವುದು ಧರ್ಮ. ಮಾನವ ಹುಟ್ಟಿರುವುದೇ ಧರ್ಮಕ್ಷೇತ್ರದಲ್ಲಿ. ಯಾರು ಧರ್ಮವನ್ನು ರಕ್ಷಿಸುತ್ತಾರೋ ಅವರನ್ನು ಧರ್ಮ ರಕ್ಷಿಸುತ್ತದೆ—'ಧರ್ಮೋ ರಕ್ಷತಿ ರಕ್ಷಿತಃ'. ಯಾರು ಧರ್ಮಕ್ಕಾಗಿ ಹೋರಾಡುತ್ತಾರೋ, ತಮ್ಮ ಜೀವನವನ್ನು ಮೀಸಲಾಗಿಡುತ್ತಾರೋ ಅವರನ್ನು ಅವರ ಧರ್ಮವೇ ರಕ್ಷಿಸುತ್ತದೆ; ಅವರ ನಡತೆ ಅವರನ್ನು ಕಾಪಾಡುತ್ತದೆ.

ಲೋಕಕಲ್ಯಾಣಕ್ಕಾಗಿ, ಸರ್ವಜನರ ಹಿತಕ್ಕಾಗಿ, ಆತ್ಮೋನ್ನತಿಗಾಗಿ ಯಾವ ಮಾರ್ಗವನ್ನು ಅನುಸರಿಸಬೇಕು, ಮಾನವನ ನಡೆನುಡಿ ಹೇಗಿರಬೇಕು ಎಂಬುದನ್ನು ವಿವಿಧ ಮತ ಪ್ರಚಾರಕರು ವಿವಿಧ ರೀತಿಗಳಲ್ಲಿ ಹೇಳಿದ್ದಾರೆ. ಅವರು ಸೂಚಿಸಿರುವ ವಿಧಾನಗಳು ಬೇರೆ ಬೇರೆಯಾಗಿ ಕಾಣಬಹುದಾದರೂ ಅವೆಲ್ಲದರ ಗುರಿಯೂ ಒಂದೇ. ಧಾರ್ಮಿಕ ಜೀವನದಿಂದ ಲೋಕದ ಹಿತ, ಮಾನವ ಹಿತ.

ನಮ್ಮ ರಾಷ್ಟ್ರಧ್ವಜದಲ್ಲಿ ಧರ್ಮಚಕ್ರವನ್ನು ಸಂಕೇತವಾಗಿ ಹಾಕಿರುವುದೂ ಇದೇ ಉದ್ದೇಶದಿಂದ. ಭಾರತೀಯರು ಎಂದೆಂದಿಗೂ ಧರ್ಮಮಾರ್ಗದಲ್ಲಿ ಚಲಿಸಲಿ ಎಂಬ ಸಂದೇಶವನ್ನು ಸಾರುತ್ತ ಹಾರುತ್ತಿದೆ ಭಾರತದ ತ್ರಿವರ್ಣ ಧ್ವಜ.

ಲೋಕದ ಎಲ್ಲ ನಾಗರಿಕ ಸಮಾಜಗಳಲ್ಲೂ ಧರ್ಮದ ಪಾಲನೆಯುಂಟು.

ನೋಡಿ : ಕ್ರಿಸ್ತ, ಯೇಸು; ಜರತುಷ್ಟ್ರ ; ನಾನಕ್, ಗುರು ; ನೀತಿಶಾಸ್ತ್ರ ; ಬಹಾಯ್ ; ಬುದ್ಧ ; ಮಹಮ್ಮದ್ ಪೈಗಂಬರ್ ; ಮಹಾವೀರ ; ಹಿಂದೂಧರ್ಮ.

## ಧರ್ಮದರ್ಶಿತ್ವ

ಶ್ರೀಮಂತನೊಬ್ಬನಿಗೆ ಅಪಾರವಾದ ಆಸ್ತಿ ಇದೆ. ಧರ್ಮಬುದ್ಧಿಯೂ ಇದೆ ಎಂದುಕೊಳ್ಳೋಣ. ತನ್ನ ಆಸ್ತಿಯನ್ನು ಇತರರಿಗೆ ಸಹಾಯವಾಗುವಂತೆ ಏರ್ಪಾಟುಮಾಡಬೇಕೆಂದು ಅವನ ಆಸೆ. ಅವನು ಹೋದ ಅನಂತರವೂ ಆ ಹಣ ಅವನು ಇಷ್ಟಪಟ್ಟಂತೆ ವಿನಿಯೋಗವಾಗುವುದು ಹೇಗೆ? ಯಾರೋ ಹೇಗೋ ಅದನ್ನು ಉಪಯೋಗಿಸಿಬಿಡಬಹುದಲ್ಲವೇ?

ಅದಕ್ಕಾಗಿ ಅವನು ತನ್ನ ಆಸ್ತಿಗೆ ತನ್ನ ಒಡೆತನವನ್ನು ಬಿಟ್ಟುಕೊಟ್ಟು ಹಲವರನ್ನು ಒಡೆಯರನ್ನಾಗಿ ಮಾಡುತ್ತಾನೆ. ಅಂಥವರಲ್ಲಿ ತಾನೂ ಇರಬಹುದು. ಆದರೆ ಅವರು ಆ ಆಸ್ತಿಗೆ ಹೆಸರಿಗೆ ಮಾತ್ರ ಯಜಮಾನರು. ಆ ಆಸ್ತಿಯನ್ನು ಅವರು ಉಪಯೋಗಿಸುವ ಹಾಗಿಲ್ಲ; ಅದು ಇತರರ ಪ್ರಯೋಜನಕ್ಕಾಗಿ. ಯಾವ ಧರ್ಮಕಾರ್ಯಗಳನ್ನು ಮಾಡಬೇಕೆಂದು ನಿಜವಾದ ಒಡೆಯ ಬಯಸುತ್ತಾನೋ ಆ ಧರ್ಮಕಾರ್ಯಗಳಿಗಾಗಿ ಆ ಆಸ್ತಿಯ ವಿನಿಯೋಗ. ಇದೇ ಧರ್ಮದರ್ಶಿತ್ವ.

ಧರ್ಮದರ್ಶಿತ್ವಕ್ಕೆ ಇಂಗ್ಲಿಷಿನಲ್ಲಿ 'ಟ್ರಸ್ಟ್' ಎನ್ನುತ್ತಾರೆ. ಟ್ರಸ್ಟ್ ಎಂದರೆ ನಂಬಿಕೆ, ವಿಶ್ವಾಸ. ಮತ್ತೊಬ್ಬರ ಪ್ರಯೋಜನಾರ್ಥವಾಗಿ ನಿರ್ವಹಿಸಬೇಕಾದ ಆಸ್ತಿಗೆ ಒಬ್ಬನನ್ನಾಗಲಿ ಹಲವರನ್ನಾಗಲಿ ಹೆಸರಿಗೆ ಮಾತ್ರ ಒಡೆಯರನ್ನಾಗಿ ಮಾಡಿ ಅವರಲ್ಲಿ ಇಡುವ ವಿಶ್ವಾಸ–ಇದೇ ಟ್ರಸ್ಟ್ ; ಆಸ್ತಿಯ ಸದ್ವಿನಿಯೋಗಕ್ಕಾಗಿ ಅಸ್ತಿತ್ವಕ್ಕೆ ಬಂದದ್ದು ಧರ್ಮದರ್ಶಿತ್ವ.

ಹನ್ನೊಂದನೆಯ ಶತಮಾನದಲ್ಲಿಯೇ ಇಂಗ್ಲೆಂಡಿನಲ್ಲಿ 'ಯೂಸ್' (ಉಪಯೋಗ) ಎಂಬ ಒಂದು ಕಾನೂನುಬದ್ಧ ಸಂಸ್ಥೆಯನ್ನು ಸ್ಥಾಪಿಸಿದರು. ಆಸ್ತಿಯನ್ನು ಒಬ್ಬರಿಗೆ ವಹಿಸಿ ಇನ್ನೊಬ್ಬರ ಉಪಯೋಗಕ್ಕಾಗಿ ವಿನಿಯೋಗಿಸುವಂತೆ ಮಾಡುವುದೇ ಈ ಸಂಸ್ಥೆಯ ಧ್ಯೇಯವಾಗಿತ್ತು.

'ಧರ್ಮದರ್ಶಿತ್ವ' ಅಥವಾ 'ಟ್ರಸ್ಟ್' ಶಾಸನ ರೀತ್ಯಾ ಸ್ವೀಕೃತವಾಗಿದೆ. ಇಂಗ್ಲೆಂಡಿನ ನ್ಯಾಯಾಂಗದ ವೈಶಿಷ್ಟ್ಯಗಳಲ್ಲಿ ಇದೊಂದು. ಇಂಗ್ಲಿಷ್ ನ್ಯಾಯಾಂಗವನ್ನು ಅನುಸರಿಸುವಲ್ಲೆಲ್ಲ ಇದು ರೂಢಿಯಲ್ಲಿದೆ. ಭಾರತದಲ್ಲಿಯೂ 'ಧರ್ಮದರ್ಶಿತ್ವ' ಇಂಗ್ಲೆಂಡಿನ ನ್ಯಾಯಾಂಗವನ್ನು ಅನುಸರಿಸಿದೆ.

ಇದಲ್ಲದೆ, ಧರ್ಮಛತ್ರ, ಸದಾವರ್ತ ಇವೇ ಮುಂತಾದ ಸಂಸ್ಥೆಗಳು ಹಿಂದೂ ನ್ಯಾಯಶಾಸ್ತ್ರದ ಪ್ರಕಾರವೂ, ವಕ್ಫ್ ಎಂದು ಕರೆಯಲಾಗುವ ಸಂಸ್ಥೆಗಳು ಮಹಮ್ಮದೀಯ ನ್ಯಾಯಶಾಸ್ತ್ರದ ಪ್ರಕಾರವೂ ಹಿಂದಿನಿಂದ ನಡೆದುಬಂದಿವೆ.

ಉದ್ದೇಶಗಳಿಗನುಗುಣವಾಗಿ ಧರ್ಮದರ್ಶಿತ್ವಗಳನ್ನು ಎರಡು ವಿಧಗಳಾಗಿ ವಿಂಗಡಿಸಿದ್ದಾರೆ. ವೈಯಕ್ತಿಕವಾಗಿ ಹೆಸರಿರುವ ವ್ಯಕ್ತಿಗಳ ಪ್ರಯೋಜನಕ್ಕಾಗಿ ಸ್ಥಾಪಿಸಲ್ಪಟ್ಟಂಥವು. ಸೇವಾರ್ಥ–ಸಮಾಜದ ಪ್ರಯೋಜನಕ್ಕಾಗಿ ಸ್ಥಾಪಿಸಲ್ಪಟ್ಟಂಥವು, ಆಸ್ತಿಯಿರುವ ಯಾರು ಬೇಕಾದರೂ ಅಥವಾ ಆಸ್ತಿಯ ಮೇಲೆ ಹಕ್ಕಿರುವ ಯಾರು ಬೇಕಾದರೂ ಧರ್ಮದರ್ಶಿತ್ವ ಸ್ಥಾಪಿಸಬಹುದು. ಆಸ್ತಿ ಹಣವಾಗಲಿ, ಸ್ಥಿರ ಆಸ್ತಿಯಾಗಲಿ, ಸ್ಕಂಧ, ಸಾಲಪತ್ರ ಅಥವಾ ವಿಮಾ ಪತ್ರಗಳಾಗಲಿ ಆಗಬಹುದು. ಧರ್ಮದರ್ಶಿತ್ವ ನಡೆಯಲು ಅದನ್ನು ನಡೆಸುವ ನಂಬಿಕಸ್ಥ ಜನ ಬೇಕು. ಇವರಿಗೆ ಧರ್ಮದರ್ಶಿಗಳೆಂದು ಹೆಸರು. ಯಾರು ಧರ್ಮದರ್ಶಿತ್ವವನ್ನು ಏರ್ಪಡಿಸುವರೋ ಅವರೇ ಧರ್ಮದರ್ಶಿಗಳನ್ನು ಸೂಚಿಸಬಹುದು. ಕೆಲವೊಮ್ಮೆ ನ್ಯಾಯಾಲಯ ನಿರ್ಧರಿಸುವುದೂ ಉಂಟು. ಧರ್ಮದರ್ಶಿಯೆಂದು ಸೂಚಿತನಾದವನು ಆ ಹೊಣೆಯನ್ನು ಒಪ್ಪಿಕೊಳ್ಳಬಹುದು, ಒಪ್ಪಿಕೊಳ್ಳದೆಯೂ ಇರಬಹುದು. ಒಪ್ಪಿಕೊಂಡ ಮೇಲೆ ರಾಜಿನಾಮೆ ಸಲ್ಲಿಸಲೂಬಹುದು. ಧರ್ಮದರ್ಶಿತ್ವವನ್ನು ಒಪ್ಪಿಕೊಳ್ಳುವುದಕ್ಕೆ ಮೊದಲು ಧರ್ಮದರ್ಶಿ ಕೆಲವೊಂದು ನಿಯಮಗಳನ್ನು ಪಾಲಿಸಿ ಕೆಲವು ನಿಬಂಧನೆಗಳಿಗೆ ಸಮ್ಮತಿಸಬೇಕು. ಯಾವುದೇ ಕಾರಣಕ್ಕೂ ಧರ್ಮದರ್ಶಿ ತನ್ನಲ್ಲಿಟ್ಟಿರುವ ನಂಬಿಕೆಗೆ ವಿರುದ್ಧವಾಗಿ ನಡೆಯಬಾರದು.

ಇವಿಷ್ಟು ಕಾನೂನಿನ ದೃಷ್ಟಿಯಲ್ಲಿ ಧರ್ಮದರ್ಶಿತ್ವ.

ಗಾಂಧಿಜಿ ಧರ್ಮದರ್ಶಿತ್ವದ ಕಲ್ಪನೆಯನ್ನು ಸಾಮಾಜಿಕ ವ್ಯವಸ್ಥೆಗೆ ವಿಸ್ತರಿಸಬೇಕೆಂದು ಬಯಸಿದರು. ಶ್ರೀಮಂತರೆಲ್ಲ ತಾವು ಧರ್ಮದರ್ಶಿಗಳು. ತಮ್ಮ ಆಸ್ತಿ ತಮ್ಮದಲ್ಲ, ಸಮಾಜಕ್ಕಾಗಿ ವಿನಿಯೋಗಿಸಲು ಭಗವಂತ ಕೊಟ್ಟುದು ಎಂದು ಭಾವಿಸಬೇಕು—ಎಂದು ಬೋಧಿಸಿದರು.

ಕೆ–ರ

# ಧ್ರುವ, ಧ್ರುವಪ್ರದೇಶಗಳು

ಎಲ್ಲಿ ನೋಡಿದರೂ ಹಿಮ. ಹಿಮ ; ವಿಪರೀತ ಚಳಿ. ಸೂರ್ಯಕಿರಣಗಳ ದರ್ಶನವೇ ಇಲ್ಲ. ಅಲ್ಲಿ ವಾಸಿಸುವುದು ಕಷ್ಟಸಾಧ್ಯದ ವಿಷಯ. ಭೂಮಿಯ ಆ ಭಾಗ ಧ್ರುವಪ್ರದೇಶ. ಇದು ಶೀತವಲಯದಲ್ಲಿ ಇದೆ.

ತಿರುಗುತ್ತಿರುವ ಅದ್ಭುತವಾದ ಚೆಂಡು. ಭೂಮಿ. ಅದು ತನ್ನ ಅಕ್ಷ ಅಥವಾ ಅಚ್ಚಿನ ಸುತ್ತಲೂ ತಿರುಗುತ್ತದೆ. ಅಚ್ಚಿನ (ಅಕ್ಷದ) ತುದಿ ಧ್ರುವ. ಭೂಮಿಯ ಉತ್ತರ ತುದಿ, ಉತ್ತರ ಧ್ರುವ ; ದಕ್ಷಿಣ ತುದಿ. ದಕ್ಷಿಣ ಧ್ರುವ. ರೇಖಾಂಶ ವೃತ್ತಗಳೆಲ್ಲವೂ ಎರಡೂ ಧ್ರುವಗಳಿಗೆ ಬಂದು ಕೂಡುತ್ತವೆ.

## ಉತ್ತರ ಧ್ರುವಪ್ರದೇಶ (ಆರ್ಕ್‌ಟಿಕ್)

ಉತ್ತರ ಧ್ರುವ ನಿರಂತರ ನೀರು ಹೆಪ್ಪುಗಟ್ಟಿರುವ (ಉತ್ತರ ಧ್ರುವ) ಸಾಗರ ಮಧ್ಯದಲ್ಲಿದೆ. ಈ ಸಾಗರದಲ್ಲಿ ಮಂಜುಗಡ್ಡೆ ಬಹಳ. ಅದರ ಹೊರವಲಯದಲ್ಲಿ ಕೆನಡ, ಅಲಾಸ್ಕಾ, ರಷ್ಯ. ಫಿನ್‌ಲೆಂಡ್, ನಾರ್ವೆ, ಸ್ವೀಡನ್ ಮತ್ತು ಗ್ರೀನ್‌ಲೆಂಡ್—ಈ ದೇಶಗಳ ಭಾಗಗಳೂ ಹಲವಾರು ದ್ವೀಪಗಳೂ ಇವೆ. ಇವೆಲ್ಲವನ್ನೂ ಒಟ್ಟಾಗಿ ಉತ್ತರ ಧ್ರುವ (ಆರ್ಕ್‌ಟಿಕ್) ಪ್ರದೇಶವೆನ್ನುತ್ತಾರೆ. ಆರು ತಿಂಗಳು ಹಗಲು. ಆರು ತಿಂಗಳು ರಾತ್ರಿ. ಇದು ಆರ್ಕ್‌ಟಿಕ್ ಪ್ರದೇಶದ ವೈಶಿಷ್ಟ್ಯ. ಈ ಧ್ರುವಪ್ರದೇಶದ ವಿಸ್ತೀರ್ಣ ಸುಮಾರು 1,39.86,000 ಚದರ ಕಿಲೊಮೀಟರು.

ಹಿಂದೆ ಈ ಪ್ರದೇಶದಲ್ಲಿ ಉಷ್ಣವಲಯದ ಹವಾಮಾನ ಇತ್ತೋ ಏನೋ ಎಂದು ಅನುಮಾನಹುಟ್ಟುವಂತೆ, ಪ್ರಾಣಿಗಳ ಮತ್ತು ಸಸ್ಯಗಳ ಹಲವು ಪಳೆಯುಳಿಕೆಗಳು ದೊರೆತಿವೆ.

ಉತ್ತರ ಧ್ರುವದಲ್ಲಿ ಅಮಿತ ಖನಿಜಸಂಪತ್ತು ಅಡಗಿದೆ. ಕಬ್ಬಿಣ, ಯುರೇನಿಯಂ, ಕಲ್ಲಿದ್ದಲು. ಪೆಟ್ರೋಲಿಯಂ. ಚಿನ್ನ. ತಾಮ್ರ, ಸತು, ನಿಕ್ಕಲ್—ಮೊದಲಾದ ಖನಿಜ ನಿಕ್ಷೇಪಗಳು ಪತ್ತೆಯಾಗಿವೆ. ಅಲ್ಲಿ ಸಿಗುವ ವಾಲ್‌ರಸ್ ಎನ್ನುವ ಪ್ರಾಣಿಯ ದಂತ, ತಿಮಿಂಗಿಲದ ಎಣ್ಣೆ ಸಹ ಅಮೂಲ್ಯವಾದವು.

ಗ್ರೀನ್‌ಲೆಂಡಿನ ಹಿಮಮಯ ಪ್ರಸ್ಥಭೂಮಿ ಕೆಲವು ಭಾಗಗಳಲ್ಲಿ 3,050 ಮೀಟರುಗಳಿಗಿಂತ ಹೆಚ್ಚು ಎತ್ತರವಾಗಿದೆ. ಇಲ್ಲಿಯ ಹಿಮರಾಶಿಯು ಸಮುದ್ರದ ಕಡೆಗೆ ಜಾರುತ್ತ ಸಾಗಿದಂತೆ ಒಡೆದು ಹಿಮಬಂಡೆಗಳಾಗಿ ಉತ್ತರ ಅಟ್ಲಾಂಟಿಕ್ ಸಾಗರದಲ್ಲಿ ತೇಲುತ್ತದೆ. ಈ ಹಿಮಬಂಡೆಗಳು ಆ ಸಾಗರದ ನೌಕಾಯಾನಕ್ಕೆ ಅಪಾಯ ತಂದೊಡ್ಡುವುದುಂಟು.

ಧ್ರುವವೃತ್ತದ ಉತ್ತರಕ್ಕಿರುವ ಪ್ರದೇಶ ಅತಿ ಶೀತ ಮತ್ತು ಹಿಮದಿಂದ ತುಂಬಿದ್ದು ಅಲ್ಲಿ ಮನುಷ್ಯವಾಸ ಸಾಧ್ಯವಿಲ್ಲ. ಆದರೆ ದಕ್ಷಿಣದಲ್ಲಿ ಜನ ವಾಸಿಸುವಂಥ ಪ್ರದೇಶವಿದೆ. ಎಸ್ಕಿಮೊಗಳು ಇಲ್ಲಿನ ನಿವಾಸಿಗಳು. ಈ ಪ್ರದೇಶದ ಹೆಚ್ಚಿನ ಶೋಧನೆಯಾದಮೇಲೆ ಆಂಗ್ಲರು, ಡೇನರು. ಮತ್ತಿತರರು ನೆಲಸಿರುತ್ತಾರೆ.

ಏಷ್ಯಕ್ಕೆ ಹೊಸ ಮಾರ್ಗ ಹುಡುಕುವ ಕಾಲದಲ್ಲಿ ಎಂದರೆ ಹದಿನಾರನೆಯ ಶತಮಾನದಲ್ಲಿ ಉತ್ತರ ಧ್ರುವ ಶೋಧನೆಯಲ್ಲಿ ಯೂರೊಪಿಯನ್ನರು ಆಸಕ್ತಿ ವಹಿಸಿದರು. ನಾನ್‌ಸನ್ (1861–1930) ಎಂಬ ನಾರ್ವೆ ಸಾಹಸಿಯು ಹಿಮ ಮುಚ್ಚಿದ ತನ್ನ ಹಡಗನ್ನು ಬಿಟ್ಟು ಹಿಮಗಡ್ಡೆಯೊಡನೆಯೇ ಬಹು ದೂರ ತೇಲಿಹೋದನು. 1909ರಲ್ಲಿ ರಾಬರ್ಟ್ ಪಿಯರಿ ಉತ್ತರ ಧ್ರುವವನ್ನು ಮುಟ್ಟಿದ ಮೊದಲ ಮನುಷ್ಯ. ರೋಆಲ್ಡ್ ಅಮುಂಡ್‌ಸನ್, ರಿಚರ್ಡ್ ಬಯರ್ಡ್, ಲಿಂಕನ್ ಎಲ್ಸ್‌ವರ್ತ್ ಮತ್ತು ಉಂಬರ್ಟೊ ನೊಬೈಲ್ ಧ್ರುವ ಪ್ರದೇಶಕ್ಕೆ ವಿಮಾನದಲ್ಲಿ ತಲಪಿದವರಲ್ಲಿ ಮೊದಲಿಗರು. ವಿಮಾನ ಸಂಚಾರದಲ್ಲಿ ಉತ್ತರ ಧ್ರುವ ಮೂಲಕದ ಮಾರ್ಗ ಉತ್ತರಾರ್ಧಗೋಳದ ಮುಖ್ಯ ಸ್ಥಳಗಳಿಗೆ ಅತಿ ಸಮೀಪದ ದಾರಿಯಾದುದರಿಂದ ಉತ್ತರ ಧ್ರುವದ ಪ್ರಾಧಾನ್ಯ ಹೆಚ್ಚಾಯಿತು. ಉತ್ತರ ಅಮೆರಿಕ, ಏಷ್ಯ ಮತ್ತು ಯೂರೊಪ್ ಖಂಡಗಳ ರಾಷ್ಟ್ರಗಳೆಲ್ಲ ತೀರ ಹತ್ತಿರದ ದೇಶಗಳಾದುವು. ಅಮೆರಿಕದ ಸಂಯುಕ್ತ ಸಂಸ್ಥಾನದವರು. ಕೆನಡದವರು. ಡೇನರು. ರಷ್ಯನರು ವಿಮಾನ ನೆಲೆ, ರಕ್ಷಣಾಪಡೆಗಳ ನೆಲೆ. ವಿಜ್ಞಾನ ಸಂಶೋಧನೆ—ಎಲ್ಲವನ್ನೂ ಅಲ್ಲಿ ನಡೆಸುತ್ತಿದ್ದಾರೆ. ಎಲ್ಲ ರಾಷ್ಟ್ರಗಳು ಸಹಕರಿಸಿ ಕೆಲಸ ಮಾಡುತ್ತಿವೆ. 1958ರಲ್ಲಿ ಅಮೆರಿಕನರ ಅಣುಶಕ್ತಿಚಾಲಿತ ಪ್ರಥಮ ಜಲಾಂತರ್ಗಾಮಿ ನೌಕೆಯಾದ 'ನಾಟಿಲಸ್' ಉತ್ತರ ಧ್ರುವದ ಹಿಮಮಯ ಸಾಗರದೊಳಗೆ ಹಾದುಬಂತು. ಇದು ಉತ್ತರ ಧ್ರುವಶೋಧನೆಯಲ್ಲಿ ಇತ್ತೀಚೆಗೆ ನಡೆದ ಅತ್ಯಂತ ಸಾಹಸಕಾರ್ಯಗಳಲ್ಲೊಂದು. ಇದರಿಂದ ಶೋಧನೆಯ ಹೊಸ ಅಧ್ಯಾಯವೇ ತೆರೆಯಿತು. ಉತ್ತರ ಧ್ರುವ ಪ್ರದೇಶ ನೈಸರ್ಗಿಕ ಸಂಪತ್ತಿನ ನೆಲೆಯಷ್ಟೇ ಅಲ್ಲ ಸಂಗ್ರಾಮದ ದೃಷ್ಟಿಯಿಂದ ಅತ್ಯಂತ ಆಯಕಟ್ಟಿನ ಕೇಂದ್ರವೂ ಹೌದು.

## ದಕ್ಷಿಣಧ್ರುವ ಪ್ರದೇಶ (ಅಂಟಾರ್ಕ್‌ಟಿಕಾ)

1.07–1.22 ಮೀಟರು ಎತ್ತರ ನೆಟ್ಟಗೆ ನಿಂತ ಪಕ್ಷಿ ತನ್ನ ರೂಪವನ್ನು ತೋರಿಸಿಕೊಳ್ಳುವ ಸಂಭ್ರಮ. ಆದರೆ ಹಾರಲಾರದು : ಈಜುವುದರಲ್ಲಿ ಮಾತ್ರ ಎತ್ತಿದ ಕೈ. ವರ್ಷಕ್ಕೆ ಇಡುವುದು ಒಂದೇ ಮೊಟ್ಟೆ. ಮೊಟ್ಟೆಯನ್ನು ನೋಡಿಕೊಳ್ಳುವ ಕೆಲಸ ತಂದೆ ಪಕ್ಷಿಯದು. ಹೊಟ್ಟೆಯ ಕೆಳಗಡೆ ಚೀಲದಂಥ ಒಂದು ಭಾಗದಲ್ಲಿ ಮೊಟ್ಟೆಯ ರಕ್ಷಣೆ. ತಾಯಿ ಪಕ್ಷಿ ಉತ್ತರಕ್ಕೆ ದೂರ ನೀರಿರುವೆಡೆಗೆ ಹೋಗಿ ನೀರಿನ ಪ್ರಾಣಿಗಳನ್ನು ತಿಂದು ಹಿಂದಿರುಗುತ್ತದೆ. ಕಾಲಕ್ರಮದಲ್ಲಿ ಮರಿ ಮೊಟ್ಟೆಯಿಂದ ಹೊರಕ್ಕೆ ಬರುತ್ತದೆ.

ಪಕ್ಷಿಯಂತಲ್ಲದ ಈ ವಿಚಿತ್ರ ಪಕ್ಷಿಯ ಹೆಸರು ಗೊತ್ತೆ ?

ಚಕ್ರವರ್ತಿ (ಎಂಪರರ್) ಪೆಂಗ್ವಿನ್ ಎಂದು. ಇದು ಆ ಜಾತಿಯ ಪಕ್ಷಿಗಳ ಐದು ವರ್ಗಗಳಲ್ಲಿ ನಿಲುವು, ನಡೆಗಳಲ್ಲಿ ಆಡಂಬರಪೂರ್ಣವಾದದ್ದು. ಇನ್ನೊಂದು ಅಡಿಲೆ ಪೆಂಗ್ವಿನ್ ಆಕಾರದಲ್ಲಿ ಚಿಕ್ಕದಾದರೂ ಬಹು ಸಂಖ್ಯೆಯಲ್ಲಿದ್ದು ನೋಡುವವರ ಕಣ್ಣಿಗೆ ಹಬ್ಬವನ್ನುಂಟುಮಾಡುತ್ತದೆ.

ಈ ಪೆಂಗ್ವಿನ್‌ಗಳ ವಾಸ ಅಂಟಾರ್ಕ್‌ಟಿಕಾ ಖಂಡದಲ್ಲಿ.

ಮಾನವ ವಾಸಮಾಡದಿರುವ ಭೂಭಾಗವೂ ಇದೆಯೆಂದರೆ ಆಶ್ಚರ್ಯವಾಗಬಹುದು. ಆದರೆ ದಕ್ಷಿಣ ಧ್ರುವಪ್ರದೇಶದಲ್ಲಿರುವ ಅಂಟಾರ್ಕ್‌ಟಿಕಾ ಇಂಥ ಭೂಖಂಡ. ಕೆಲವೊಂದು ಸಲ ಸಂಶೋಧನೆಗಳಿಗಾಗಿ ಬಂದು ಹೋಗುವವರಲ್ಲದೆ ಬೇರೆ ಮನುಷ್ಯರ ಸುಳಿವೇ ಇಲ್ಲದ ಖಂಡವದು. ಅಲ್ಲಿ ಪೆಂಗ್ವಿನ್ ಪಕ್ಷಿಗಳದೇ ಸಾಮ್ರಾಜ್ಯ. ತಿಮಿಂಗಿಲ ಕಡಲಾನೆಗಳು ಇತರ ಮುಖ್ಯ ಜೀವಿಗಳು. ಹಾವಸೆ. ಲಿಚೆನ್‌ಗಳು ಮಾತ್ರ ಇಲ್ಲಿಯ ಸಸ್ಯಗಳು. ಅಂಟಾರ್ಕ್‌ಟಿಕಾ ಪ್ರಪಂಚದ ಅತ್ಯುನ್ನತ. ಅತಿ ಹಿಮಾವೃತ. ಅತಿ ಶೀತ ಮತ್ತು ಶುಷ್ಕ ಮಾರುತಗಳ ಜನವಿಹೀನ ಭೂಖಂಡ. ಪ್ರಪಂಚದ ಹಿಮದಲ್ಲಿ ಶೇಕಡಾ 90 ರಷ್ಟು ಇಲ್ಲಿಯೇ ಇದೆ. ಕೆಲವು ಕಡೆಯಂತೂ 3.2 ಕಿಲೊಮೀಟರು ಎತ್ತರದ ಹಿಮ ಕೂಡ ಇದ್ದಿರುತ್ತದೆ. ಈ ಹಿಮವೇನಾದರೂ ಕರಗಿದರೆ ಸಮುದ್ರದ ನೀರು 61 ಮೀಟರುಗಳಷ್ಟು ಉಕ್ಕಿ ಎಷ್ಟೋ ಭೂಭಾಗಗಳು ಮುಳುಗಿಹೋಗುತ್ತವೆ. ದಕ್ಷಿಣಧ್ರುವವು ಈ ಹಿಮಮಯ ಭೂಖಂಡದ ಕೇಂದ್ರದಲ್ಲಿದೆ. ಅಂಟಾರ್ಕ್‌ಟಿಕಾದ ಸುತ್ತಲೂ ಶಾಂತ ಸಾಗರ, ಅಟ್ಲಾಂಟಿಕ್, ಹಿಂದೂಮಹಾಸಾಗರಗಳಿವೆ. ದಕ್ಷಿಣ ಧ್ರುವ

ಖಂಡದ ಹಿಮರಾಶಿಯಿಂದ ಮೂವತ್ತು–ಅರವತ್ತು ಮೀಟರು ಎತ್ತರದ ವಿಶಾಲ ಹಿಮಾಕೃತಿಗಳೂ ಹೊರ ಅಂಚಿನಿಂದ ಹಿಮಖಂಡಗಳೂ ತೇಲುವ ಹಿಮಬಂಡೆಗಳೂ ಇಲ್ಲಿ ಕಾಣುವ ದೃಶ್ಯಗಳು. ಈ ಖಂಡದಲ್ಲಿರುವ ಎರಿಬಸ್ ಪರ್ವತ ಒಂದು ಜೀವಂತ ಜ್ವಾಲಾಮುಖಿ.

ಸದಾ ಬೀಸುವ ಶೀತಮಾರುತ ಮತ್ತು ಹಿಮವನ್ನು ಹೊತ್ತು ಬೀಸುವ ಬಿರುಗಾಳಿ—ಇವುಗಳಿಂದ ಇಲ್ಲಿನ ಹವಾಮಾನ ತುಂಬ ಅಹಿತವಾಗಿರುತ್ತದೆ. ಡಿಸೆಂಬರ್‌ನಿಂದ ಮಾರ್ಚ್‌ವರೆಗೆ ಬೇಸಿಗೆ; ಉಳಿದ ಆರು ತಿಂಗಳು ಚಳಿಗಾಲ. ಅತಿ ದೀರ್ಘ ಚಳಿಗಾಲ, ಅತಿ ದೀರ್ಘ ಬೇಸಿಗೆ. ಭೂಖಂಡ (ದಿಗಂತ)ದ ಅಂಚಿನಲ್ಲಷ್ಟೇ ಸೂರ್ಯೋದಯಾಸ್ತಗಳು. ಚಳಿಗಾಲದ ಶೀತವೆಂದರೆ ಅಸಹನೀಯ; ಅವರ್ಣನೀಯ.

ಮಾನವ ಇನ್ನೂ ಈ ಖಂಡದ ಪೂರ್ಣಪರಿಚಯ ಮಾಡಿಕೊಂಡಿಲ್ಲ. ೧೮೨೦ರಲ್ಲಿ ನಥೇನಿಯಲ್ ಪಾಮರ್ ಹಡಗಿನಿಂದ ಅಂಟಾರ್ಕ್‌ಟಿಕಾವನ್ನು ನೋಡಿದ. ಕ್ಯಾಪ್ಟನ್ ಕುಕ್ ಈ ಶೋಧನೆಯಲ್ಲಿ ಅಡಿ ಇಟ್ಟಿದ್ದ. ದಕ್ಷಿಣ ಧ್ರುವವನ್ನು ಮೊದಲು ಶೋಧಿಸಿದವನು ಅಮುಂಡ್‌ಸನ್ (1911). ರಾಬರ್ಟ್ ಸ್ಕಾಟ್ ಕೆಲವೇ ದಿನಗಳ ಅನಂತರ (1912) ಆ ಕಾರ್ಯವನ್ನು ಮಾಡಿದ. ಇನ್ನೂ ಎಷ್ಟೋ ಅನ್ವೇಷಕರು ಈ ಖಂಡದ ಶೋಧನೆಯಲ್ಲಿ ಅಪಾರ ಧೈರ್ಯ, ಸಾಹಸಗಳನ್ನು ತೋರಿದರು.

ಭೂವಿಜ್ಞಾನಿಗಳು ಇಲ್ಲಿ ಕಲ್ಲಿದ್ದಲು ಮೊದಲಾದ ಖನಿಜಗಳು ಇರಬಹುದೆಂದು ಊಹಿಸಿದ್ದಾರೆ. ಆದರೆ ಆ ಹಿಮರಾಶಿಯ ಕೆಳಗೆ ಏನಿವೆ ಎಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ವೈಜ್ಞಾನಿಕ ಸಂಶೋಧನೆಯೇ ಈ ಹಿಮಮಯ ಭೂಖಂಡದ ಮುಖ್ಯ ಆಕರ್ಷಣೆ. ಆದ್ದರಿಂದ ಅದು ಅಂತರರಾಷ್ಟ್ರೀಯ ಪ್ರಯೋಗಶಾಲೆಯಾಗಿದೆ. ಯಾವ ರಾಷ್ಟ್ರವೂ ಈ ಪ್ರದೇಶದ ಮೇಲೆ ರಾಜಕೀಯ ಹಕ್ಕನ್ನು ಇಟ್ಟುಕೊಳ್ಳಕೂಡದೆಂದೂ ಭೂಮಿಯ ಆಕರ್ಷಣ ಶಕ್ತಿ, ವಾತಾವರಣ, ಹಿಮರಾಶಿ, ಅಡಿಯ ಶಿಲಾ ರಚನೆ, ಸಾಗರಗಳು, ಹವಾಮಾನ—ಇವೇ ಮೊದಲಾದ ವಿಷಯಗಳ ಅಭ್ಯಾಸಕ್ಕಾಗಿ ಮಾತ್ರ ಅದನ್ನು ಉಪಯೋಗಿಸಬೇಕೆಂದೂ ಪ್ರಪಂಚದ ಹನ್ನೆರಡು ರಾಷ್ಟ್ರಗಳವರು 1939ರಲ್ಲಿ 30 ವರ್ಷಗಳ ಅವಧಿಯ ಒಪ್ಪಂದ ಮಾಡಿಕೊಂಡಿದ್ದಾರೆ. ಅಲ್ಲಿ ಪರಮಾಣುಶಕ್ತಿ ಸ್ಫೋಟನೆಯ ಪ್ರಯೋಗ ಮಾಡುವುದು ನಿಷಿದ್ಧ.

ನೋಡಿ : ಅಮುಂಡ್‌ಸನ್, ರೋಆಲ್ಡ್; ಸ್ಕಾಟ್, ರಾಬರ್ಟ್; ಕುಕ್, ಕ್ಯಾಪ್ಟನ್; ವಲಯಗಳು; ಅಕ್ಷಾಂಶ, ರೇಖಾಂಶ; ಎಸ್ಕಿಮೊ.

## ನಗದು

"ಈ ದಿನ ನಗದು, ನಾಳೆ ಸಾಲ" ಎಂಬ ಫಲಕ ಅಂಗಡಿಗಳಲ್ಲಿ ಸಾಮಾನ್ಯ. ವರ್ತಕನಿಂದ ಕೊಂಡ ಸರಕಿಗೆ ಕೂಡಲೇ ಹಣ ಸಲ್ಲಿಸಬೇಕು ಎಂಬುದು ಇದರ ಅರ್ಥ. ಮುಂದೆ ಹಣ ಕೊಡುವುದಾಗಿ ಹೇಳಿದರೆ ಅದು ಸಾಲ. ತಕ್ಷಣವೇ ಕೈಮೇಲೆಯೇ ಹಣ ಕೊಟ್ಟರೆ ಅದು ನಗದು. ನಾಳೆ ಕೊಡುವೆನೆಂದು ಹೇಳಿದವನ ಹಣ ಬಾರದೆ ಹೋಗುವ ಸಂಭವವುಂಟು. ಪದಾರ್ಥ ಮಾರಿದ್ದಕ್ಕೆ ಪ್ರತಿಯಾಗಿ ಆಗಲೇ ಹಣ ಬಂದರೆ ಅದನ್ನು ವರ್ತಕ ತನಗೆ ಇಷ್ಟಬಂದಂತೆ ಬಳಸಿಕೊಳ್ಳಬಲ್ಲ. ಮುಂದೆ ಕೊಡುವುದಾಗಿ ವಾಗ್ದಾನ ಪಡೆದರೆ ಅದರಿಂದ ತಕ್ಷಣದಲ್ಲಿ ಅವನಿಗೆ ಪ್ರಯೋಜನವಿಲ್ಲ. ಸರಕಾರದವರು ಚಲಾವಣೆಗೆ ತಂದಿರುವ ನಾಣ್ಯಗಳೂ ರಾಷ್ಟ್ರದ ಕೇಂದ್ರೀಯ ಬ್ಯಾಂಕಾದ ರಿಸರ್ವ್ ಬ್ಯಾಂಕು ನೀಡಿರುವ ನೋಟುಗಳೂ ನಗದು. ವಾಗ್ದಾನಪತ್ರ, ಚೆಕ್ಕು ಮುಂತಾದವು ಇದರಲ್ಲಿ ಸೇರುವುದಿಲ್ಲ.

ನಗದು ಎಂಬುದಕ್ಕೆ ಇಂಗ್ಲಿಷ್‌ನಲ್ಲಿ ಕ್ಯಾಷ್ ಎಂಬುದು ಸಮಾನಪದ. ಭಾರತ ಹಾಗೂ ಚೀನ ದೇಶಗಳ ಕೇವಲ ಸಣ್ಣ ನಾಣ್ಯವನ್ನು ಇಂಗ್ಲಿಷ್‌ನಲ್ಲಿ ಕ್ಯಾಷ್ ಎನ್ನುವುದುಂಟು. ದಕ್ಷಿಣ ಭಾರತದ 'ಕಾಸು', ಸಿಂಹಳದ 'ಕಾಸಿ' ಎಂಬ ಪದಗಳು ಇಂಗ್ಲಿಷಿನ ಕ್ಯಾಷ್ ಎಂಬ ಪದವನ್ನೆ ಹೋಲುತ್ತವೆ.

ಹಣಕ್ಕೆ ಎರಡು ಗುಣಗಳಿವೆ. ಚಕ್ರದಂತೆ ಸುತ್ತುತ್ತಿರುವುದು ಅದರ ಒಂದು ಲಕ್ಷಣ; ಸರಕು-ಸೇವೆಗಳ ಮಾರಾಟ ಕೊಳ್ಳುವಿಕೆಗಳಲ್ಲಿ ಮಧ್ಯವರ್ತಿಯಾಗಿ ವರ್ತಿಸುವಾಗ ಅದರ ಈ ಗುಣ ವ್ಯಕ್ತವಾಗುತ್ತದೆ. ಅದನ್ನು ಹಾಗೆ ಚಲನೆಯಲ್ಲಿ ತೊಡಗಿಸದೆ ಒಂದೇ ಕಡೆ ಸ್ವಲ್ಪ ಕಾಲ ನಿಲ್ಲುವಂತೆ ಮಾಡಿದಾಗ ಅದು ಚಪ್ಪಟೆಯಾಗಿ ಅಲ್ಲೇ ಮಲಗುತ್ತದೆ. ಪ್ರತಿಯೊಬ್ಬರೂ ತಮಗೆ ಬಂದ ಹಣದಲ್ಲಿ ಒಂದು ಭಾಗವನ್ನು ಚಪ್ಪಟೆಯಾಗಿ ತಂಗುವಂತೆ ಮಾಡುತ್ತಾರೆ. ಅದನ್ನು ಉಳಿಸಿಕೊಳ್ಳುತ್ತಾರೆ. ವರ್ತಕರು ಸಾಮಾನ್ಯವಾಗಿ ತಮಗೆ ಬಂದ ನಗದಿನಲ್ಲಿ ಸ್ವಲ್ಪಭಾಗವನ್ನು ಅಂಗಡಿಯಲ್ಲಿ ತಕ್ಷಣದ ವ್ಯವಹಾರಕ್ಕಾಗಿ ಉಳಿಸಿಕೊಂಡು ಉಳಿದದ್ದನ್ನು ಬ್ಯಾಂಕುಗಳಲ್ಲಿಡುತ್ತಾರೆ. ದಿನದಿನವೂ ಬರುವ ಹೋಗುವ ನಗದನ್ನು ನಗದು ಪುಸ್ತಕದಲ್ಲಿ ಬರೆದಿಡುತ್ತಾರೆ. ಬ್ಯಾಂಕಿನಲ್ಲಿಟ್ಟ ಹಣವೂ ಅವರ ದೃಷ್ಟಿಯಲ್ಲಿ ನಗದೇ. ಬೇಕೆಂದಾಗ ಅವರು ಚೆಕ್ ಬರೆದು ಬ್ಯಾಂಕಿಗೆ ಕಳುಹಿಸಿ ತಮಗೆ ಬೇಕಿದ್ದಷ್ಟು ಹಣ ಪಡೆಯಬಹುದು. ಇಂಥವರಿಗೆ ಇಷ್ಟು ಹಣ ಕೊಡಿ ಎಂದು ಬ್ಯಾಂಕಿಗೆ ಆದೇಶ ನೀಡಿ ಚೆಕ್ ಬರೆದು ಇನ್ನೊಬ್ಬರಿಗೆ ಕೊಡಬಹುದು.

## ನಗರ

ಗಡಿಬಿಡಿಯಿಂದ ಸಾಗುತ್ತಿರುವ ಜನಸಾಗರ. ಕಾರು, ಬಸ್ಸು, ಸ್ಕೂಟರುಗಳ ಶಬ್ದ, ಮಧ್ಯೆ ನುಸುಳುವ ರಿಕ್ಷಾ, ಸೈಕಲ್ಲುಗಳು. ಹಳ್ಳಿಯಿಂದ ಹೊಸದಾಗಿ ಬಂದವರಿಗೆ ನಗರಗಳು ದಿಕ್ಕುತೋಚದಂತೆ ಮಾಡುತ್ತವೆ.

ಕೈಗಾರಿಕೆಗಳು ಬೆಳೆದ ಮೇಲೆ ಪ್ರಪಂಚದ ಎಲ್ಲ ಭಾಗಗಳಲ್ಲೂ ಇಂಥ ಆಧುನಿಕ ನಗರಗಳು ತಲೆಯೆತ್ತಿವೆ.

ಮಾನವ ಮೂಲತಃ ಸಂಘಜೀವಿ. ಅಲೆಮಾರಿ ಜನರು, ನಿರ್ಭಯವಾಗಿ ಸುರಕ್ಷಿತವಾಗಿ ಇರುವುದಕ್ಕೋಸ್ಕರ ದುರ್ಗಮ ಸ್ಥಳಗಳಲ್ಲಿ ವಾಸಿಸುವ ಅಗತ್ಯವನ್ನು ಕಂಡರು.

ಹೀಗೆ ಜನರು ಒಟ್ಟಿಗೆ ವಾಸಮಾಡುತ್ತಿದ್ದ ಸ್ಥಳಗಳಲ್ಲಿ ಕೆಲವು ಬೆಳೆದು ಪಟ್ಟಣಗಳು, ನಗರಗಳು ಎನ್ನಿಸಿಕೊಂಡುವು.

ರೋಮ್ ಮತ್ತು ಗ್ರೀಸಿನ ಚರಿತ್ರೆಯಲ್ಲಿ, ಕೋಟೆಯಲ್ಲಿರುವ ಪಟ್ಟಣ ಮತ್ತು ಅದರ ಸುತ್ತಲ ಪ್ರದೇಶವನ್ನು ನಗರವೆಂದಿದ್ದಾರೆ. ಕೋಟೆಯ ಹೊರಗೆ ವಾಸಿಸುವ ಜನರಿಗೂ ಪೌರತ್ವದ ಸೌಲಭ್ಯಗಳು ದೊರಕುತ್ತಿದ್ದುವು. ಅಥೆನ್ಸ್ ಮತ್ತು ರೋಮ್ ಬಹಳ ಪುರಾತನ ನಗರಗಳು.

ಪೌರಸಂಸ್ಥೆಯುಳ್ಳ, ಬಿಷಪ್ಪರ ಪೀಠವಿರುವ ಊರನ್ನು ನಗರವೆಂದು ಇಂಗ್ಲೆಂಡಿನಲ್ಲಿ ಹೇಳುವುದುಂಟು.

ಅಮೆರಿಕ ಸಂಯುಕ್ತ ಸಂಸ್ಥಾನದಲ್ಲಿ ನಗರವೆಂದರೆ ಶಾಸನದ ರೀತ್ಯಾ ವಿಧ್ಯುಕ್ತವಾಗಿ ಸೇರಿಸಿಕೊಂಡ ಪಟ್ಟಣ ವಿಭಾಗ.



ಪ್ರಪಂಚದ ಅತಿ ದೊಡ್ಡ ನಗರಗಳಲ್ಲಿ ಒಂದಾದ ಟೋಕಿಯೊದಲ್ಲಿ ನೆಲದಿಂದ ಎತ್ತರದಲ್ಲಿ ವಾಹನ ಸಂಚಾರ ಮಾರ್ಗಗಳು

ಸುಮಾರು 5.000 ವರ್ಷಗಳ ಹಿಂದೆ ಈಜಿಪ್ಟ್, ಇರಾಕ್ ಮತ್ತು ಭಾರತಗಳಲ್ಲಿ ದೇವಾಲಯಗಳ ಸುತ್ತ ನಗರಗಳ ನಿರ್ಮಾಣವಾಗಿದ್ದುವು. ಗ್ರೀಸಿನಲ್ಲಂತೂ ಪ್ರತಿ ನಗರವೂ ಸ್ವತಂತ್ರ ರಾಜ್ಯವಾಗಿತ್ತು; ಇದನ್ನು ನಗರರಾಜ್ಯವೆನ್ನುತ್ತಿದ್ದರು.

ಹಳ್ಳಿ ನಗರವಾಗುವುದು ಹೇಗೆ? ಅದರ ವಾಯುಗುಣ ಚೆನ್ನಾಗಿದ್ದು ನೀರಿನ ಸೌಕರ್ಯವಿದ್ದರೆ ಅನೇಕ ಜನ ಅಲ್ಲಿ ಸೇರುತ್ತಾರೆ. ಕೆಲವು ಸ್ಥಳಗಳಲ್ಲಿ ಪಾಳೆಯಗಾರರು ನೆಲೆಸಿದ್ದುದರಿಂದ ಅವುಗಳ ಪ್ರಾಮುಖ್ಯ ಹೆಚ್ಚಿತು. ಹಲವು ಮುಖ್ಯ ಸ್ಥಳಗಳನ್ನು ಸೇರಿಸುವ ರಸ್ತೆಗಳು ಸಂಧಿಸುವಂತಿದ್ದರೆ ಆ ಸ್ಥಳದ ಮಹತ್ವ ಮತ್ತೂ ಹೆಚ್ಚು. ರೈಲುಮಾರ್ಗಗಳು ಹಾದುಹೋದ ಸ್ಥಳಗಳಿಗೆ ನೀರಿನ ಸೌಕರ್ಯ ಇತರ ಅನುಕೂಲಗಳಿದ್ದರೆ ಕೈಗಾರಿಕೆಗಳೂ ಅಭಿವೃದ್ಧಿಯಾಗುತ್ತವೆ. ಬೆಂಗಳೂರು ಬೆಳೆದುಬಂದ ರೀತಿ ಇದನ್ನು ತೋರಿಸುತ್ತದೆ.

ಪುಣ್ಯಕ್ಷೇತ್ರಗಳು ಯಾತ್ರಿಕರ ಬರಹೋಗುವಿಕೆಯಿಂದ ಬೆಳೆಯುತ್ತವೆ. ತಿರುಪತಿ, ವಾರಣಾಸಿ, ಜೆರೂಸಲೆಮ್ ಇಂಥವು.

ಸಮುದ್ರದಂಡೆಯ ನಗರದಲ್ಲಿ ಹಡಗುಕಟ್ಟೆಯ ಹಾಗೂ ವ್ಯಾಪಾರದ ಮಡಿಮೆಗಾರರು ಹೆಚ್ಚು. ಪರದೇಶದಿಂದ ಬರುವ ಜನರೂ ಬಹಳ. ಇದರಿಂದಾಗಿ ನಗರ ವಿಸ್ತಾರವಾಗುತ್ತದೆ. ನ್ಯೂ ಯಾರ್ಕ್. ಲಂಡನ್. ಮುಂಬಯಿ ಇಂಥ ನಗರಗಳು.

ಕಾರಖಾನೆಗಳು. ಗಿರಣಿಗಳಿರುವ ಸ್ಥಳ ನಗರವಾಗಿ ಬೆಳೆಯುವುದಕ್ಕೆ ಹೆಚ್ಚು ಕಾಲ ಬೇಕಾಗುವುದಿಲ್ಲ. ಭದ್ರಾವತಿ. ಭಿಲಾಯಿ ಕೈಗಾರಿಕಾ ನಗರಗಳು.

ಯಾವುದಾದರೊಂದು ನಗರ ಆಡಳಿತ ಕೇಂದ್ರವಾಗುವುದರಿಂದಲೂ ಅದರ ಮಹತ್ವ ಹೆಚ್ಚುತ್ತದೆ.

ನಗರ ಬೆಳೆದ ಮೇಲೆ ಹಲವಾರು ಸಮಸ್ಯೆಗಳು ತಲೆಯೆತ್ತುತ್ತವೆ. ಬೆಳೆಯುತ್ತಿರುವ ಜನಸಂಖ್ಯೆಗೆ ತಕ್ಕಂತೆ ವಾಸದ ಮನೆಗಳು ಕಟ್ಟಬೇಕು. ನಗರವನ್ನು ಚೊಕ್ಕಟವಾಗಿಟ್ಟುಕೊಳ್ಳಲು ವ್ಯವಸ್ಥೆ ಮಾಡಬೇಕು. ಇಲ್ಲದಿದ್ದರೆ ಹಲವು ಕಾಯಿಲೆಗಳು ಹರಡುತ್ತವೆ. ಒಳಚರಂಡಿ ವ್ಯವಸ್ಥೆ ಈ ದಿಕ್ಕಿನಲ್ಲಿ ಪ್ರಥಮ ಹೆಜ್ಜೆ. ಜನರ ಸೌಕರ್ಯಕ್ಕಾಗಿ ಆಸ್ಪತ್ರೆಗಳು. ಗ್ರಂಥಾಲಯಗಳು, ಆಟದಬಯಲು. ಉದ್ಯಾನಗಳು. ಇವೆಲ್ಲದರ ನಿರ್ಮಾಣ. ಸಂಚಾರಯೋಗ್ಯವಾದ ವಿಶಾಲ ರಸ್ತೆಗಳು. ಕುಡಿಯುವ ನೀರಿನ ವ್ಯವಸ್ಥೆ. ದೀಪದ ವ್ಯವಸ್ಥೆ. ಮಾರುಕಟ್ಟೆಗಳನ್ನು ಕಟ್ಟುವುದು ಇವೆಲ್ಲಕ್ಕೂ ಗಮನ ಕೊಡಬೇಕು. ನಗರದ ಸಾಮಾನ್ಯ ಆಡಳಿತವನ್ನು ನಿರ್ವಹಿಸಿಕೊಂಡು ಹೋಗಲು ಆಡಳಿತ ಅತ್ಯವಶ್ಯ. ಇದನ್ನು ಪುರಸಭೆ ಎನ್ನುವರು.

ವಿಸ್ತಾರವಾದ ನಗರದಲ್ಲಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹೋಗಿಬರಲು ಬಸ್ಸು. ಸ್ಥಳೀಯ ರೈಲುಗಳ ಏರ್ಪಾಡು ಇರುತ್ತದೆ. ಪೋಲೀಸು ಇಲಾಖೆ ರಕ್ಷಣೆಯ ಹೊಣೆ ಹೊತ್ತಿರುತ್ತದೆ. ಸಂಚಾರ ಹೆಚ್ಚಾಗಿರುವ ಭಾಗಗಳಲ್ಲಿ ನಿಯಮಿತವಾದ ಚೌಕಗಳಲ್ಲಿ ನಿಂತು ಸೂಚನೆಗಳನ್ನು ಕೊಟ್ಟು ಸಂಚಾರ ಸುಲಭವಾಗಿ ಸಾಗುವಂತೆ ಮಾಡುವುದು ಪೋಲೀಸರ ಕೆಲಸ.

ನಗರದಲ್ಲಿ ಸಣ್ಣ ಶಾಲೆಯಿಂದ ಹಿಡಿದು ಕಾಲೇಜು ವಿದ್ಯಾಭ್ಯಾಸದವರೆಗೆ ಶಿಕ್ಷಣಕ್ಕೆ ಅನುಕೂಲವಿರಬೇಕು. ಇದನ್ನು ಪುರಸಭೆ. ಸರಕಾರ. ವಿಶ್ವವಿದ್ಯಾನಿಲಯಗಳು ನಿರ್ವಹಿಸುತ್ತವೆ.

ಈಗ ಹಲವು ನಗರಗಳು ಹೊಸದೊಂದು ಸಮಸ್ಯೆಯನ್ನು ಎದುರಿಸುತ್ತಿವೆ. ಹಲವಾರು ಕಾರಖಾನೆಗಳು ವರ್ಷಗಟ್ಟಲೆ ಹೊರಕ್ಕೆ ಉಗುಳುವ ಹೊಗೆಯಿಂದ ಗಾಳಿ ಕೆಡುತ್ತದೆ. ಗಾಳಿಯಲ್ಲಿನ ಆಮ್ಲಜನಕ ಪ್ರಮಾಣ ಕಡಮೆಯಾಗುತ್ತದೆ. ಜನರಿಗೆ. ಪ್ರಾಣಿಗಳಿಗೆ ಮತ್ತು ಗಿಡಮರಗಳಿಗೆ ಇದರಿಂದ ತೊಂದರೆ.

ಹಲವು ನಗರಗಳು ಶತಮಾನಗಳಲ್ಲಿ ಬೆಳೆದುಕೊಂಡು ಬಂದಿವೆ. ಇವುಗಳ ಬೆಳವಣಿಗೆಯನ್ನು ವ್ಯವಸ್ಥಿತಗೊಳಿಸಲು ಈಗ ಪ್ರಯತ್ನ ಮಾಡುತ್ತಿದ್ದಾರೆ. ಹೊಸ ಬಡಾವಣೆಗಳ ನಕ್ಷೆಗಳನ್ನು ಸಿದ್ಧಗೊಳಿಸಿ ಅವನ್ನು ರೂಪಿಸಲಾಗುತ್ತಿದೆ. ಗಗನಚುಂಬಿ ಕಟ್ಟಡಗಳು ನಿರ್ಮಾಣವಾಗುತ್ತಿವೆ. ಅನೇಕ ನಗರಗಳಲ್ಲಿ ಕೊಳಚೆ ಪ್ರದೇಶಗಳು ಬೆಳೆದಿವೆ. ಇಲ್ಲಿ ವಾಸಿಸುವವರ ಸ್ಥಿತಿ ಬಹು ಕಷ್ಟ. ಗಾಳಿ, ಬೆಳಕು. ನೀರು. ಎಲ್ಲದಕ್ಕೂ ಅಭಾವ. ಇವುಗಳ ನಿರ್ಮೂಲನ ನಗರಗಳಿಗೆ ಸಮಸ್ಯೆಯಾಗಿದೆ.

4.000 ವರ್ಷಗಳ ಹಿಂದೆಯೇ ಮೊಹೆಂಜೊದಾರೊದಲ್ಲಿ ವ್ಯವಸ್ಥಿತವಾಗಿ ರಸ್ತೆಗಳನ್ನು ನಿರ್ಮಿಸಿದ್ದರು. ಬಹಳ ಹಿಂದಿನ ಪ್ರಾಚೀನ ನಗರಗಳು ಎಂದರೆ ಕ್ರಿಸ್ತಪೂರ್ವ ಹನ್ನೆರಡನೆಯ ಶತಮಾನದ ಬ್ಯಾಬಿಲನ್. ಮೆಸಪಟೇಮಿಯಗಳು ಉತ್ತಮವಾಗಿ ನಿಯೋಜಿಸಲಾಗಿದ್ದ ನಗರಗಳು.

ಕ್ಯಾನ್‌ಬೆರಾ. ನವದೆಹಲಿ. ಚಂಡೀಘಡ ಇವೆಲ್ಲ ಈ ಶತಮಾನದ ಸುಯೋಜಿತ ನಗರಗಳಲ್ಲಿ ಕೆಲವು.

ಪಾಂಡಿಚೆರಿಯಿಂದ ಐದು ಕಿಲೊಮೀಟರು ದೂರವಿರುವ ಆರೋವಿಲ್ (ಅರವಿಂದರ ಹೆಸರಿನ ಸ್ಮರಣೆ ತರುವ ಹೆಸರು) ಬೇರೆ ಬೇರೆ ರಾಷ್ಟ್ರಗಳಿಂದ ಬಂದವರು ಸಹಕಾರದಿಂದ ವಾಸಿಸಬೇಕೆಂಬ ಆದರ್ಶದಿಂದ ನಿರ್ಮಾಣವಾಗಿದೆ. ಇದು ಇಪ್ಪತ್ತು ಚದರ ಕಿಲೊಮೀಟರ್ ವಿಸ್ತೀರ್ಣವನ್ನು ಹೊಂದಿದೆ.

ಪ್ರಪಂಚದಲ್ಲಿಯೇ ಅತಿ ದೊಡ್ಡ ನಗರಗಳು ನ್ಯೂ ಯಾರ್ಕ್, ಟೋಕಿಯೊ, ಲಂಡನ್ ಮತ್ತು ಪ್ಯಾರಿಸ್. ಭಾರತದಲ್ಲಿ ಕಲ್ಕತ್ತ, ಮುಂಬಯಿ ಇವು ಪ್ರಸಿದ್ಧ.

'ನಾಗರಿಕತೆ' ಎನ್ನುವ ಪದ 'ನಗರ' ಮೂಲದಿಂದ ಬಂದದ್ದು.

## ನದಿ

ಪ್ರಪಂಚದ ನೀರೆಲ್ಲ ಸಮುದ್ರಗಳಲ್ಲಿದ್ದು, ನದಿಗಳು ಇಲ್ಲದೆ ಹೋಗಿದ್ದರೆ ? ಮನುಷ್ಯನ ಚರಿತ್ರೆಯೇ ಬೇರೆಯಾಗುತ್ತಿತ್ತು. ಕುಡಿಯುವ ನೀರು ನಮಗೆ ಬರುವುದು ನದಿಗಳಿಂದಲೇ. ಸಮುದ್ರದ ನೀರು ಉಪ್ಪು, ಕುಡಿಯುವುದಕ್ಕಾಗುವುದಿಲ್ಲ.

ಈಜಿಪ್ಟಿನ ಮರಳುಗಾಡಿನಲ್ಲಿ ಅಸಂಖ್ಯ ಜೀವಿಗಳಿಗೆ ಆಧಾರವಾಗಿ ಹರಿಯುವ ನೈಲನ್ನು 'ಜೀವನದಿ' ಎನ್ನುತ್ತಾರೆ; 'ಈಜಿಪ್ಟಿನ ವರಪ್ರಸಾದ' ಎನ್ನುತ್ತಾರೆ.

ಗಂಗೋತ್ರಿ ಗಂಗಾ ನದಿಯ ಉಗಮಸ್ಥಾನ; ಹಿಮಾಲಯ ಪರ್ವತ ಪ್ರದೇಶದಲ್ಲಿದೆ. ಭಗೀರಥನ ತಪಸ್ಸಿಗೆ ಮೆಚ್ಚಿ ಗಂಗೆ ಭೂಮಿಗಿಳಿದಳು ಎಂಬ ನಂಬಿಕೆಯಿಂದ ಭಾಗೀರಥಿ ಎನ್ನುವ ಹೆಸರಿನಿಂದಲೂ ಕರೆಯುತ್ತಾರೆ. ಕಾವೇರಿ ನದಿಯ ಮೂಲ ತಲಕಾವೇರಿ, ಮೈಸೂರು ರಾಜ್ಯದ ಕೊಡಗು ಜಿಲ್ಲೆಯಲ್ಲಿದೆ. ಸುತ್ತ ಹಸಿರು ಮರಗಳು, ಮಧ್ಯೆ ಒಂದು ಸಣ್ಣ ಜಾಗದಲ್ಲಿ ಮೇಲಕ್ಕೆ ಚಿಮ್ಮುವ ಸೆಲೆಯನ್ನು ನೋಡಿದರೆ ಮುಂದೆ ಬೃಹದಾಕಾರವಾಗಿ ಇದು ಹರಿದು ಲಕ್ಷೋಪಲಕ್ಷ ಜನರಿಗೆ ಜೀವನಾಧಾರವಾಗಲು ಹೇಗೆ ಸಾಧ್ಯ ಎಂದು ಆಶ್ಚರ್ಯವಾಗುತ್ತದೆ.

ನದಿ ಹುಟ್ಟುವುದಾದರೂ ಹೇಗೆ? ಮಳೆಯಾಗಿ ಬಿದ್ದ ನೀರು, ಕರಗಿದ ಹಿಮದ ನೀರು ಭೂಮಿಯ ಇಳಿಜಾರಿನಲ್ಲಿ. ಪರ್ವತದಿಂದ ಸುಲಭವಾಗಿ ಒಂದು ದಾರಿಮಾಡಿಕೊಂಡು ಹರಿದುಬರುತ್ತದೆ. ನೀರು ರಭಸವಾಗಿ ಹರಿಯುವಾಗ ನದಿಯ ಪಾತ್ರ ವಿಶಾಲವಾಗುತ್ತದೆ, ಆಳ ಹೆಚ್ಚುತ್ತದೆ. ಕಿರಿದಾದ, ಆಳವಿಲ್ಲದ ಚಿಕ್ಕ ನದಿಗಳನ್ನು ತೊರೆ ಅಥವಾ ಹೊಳೆ ಎಂದು ಕರೆಯುತ್ತಾರೆ. ದೊಡ್ಡ ನದಿಯನ್ನು ಸೇರುವ ಚಿಕ್ಕನದಿಯನ್ನು ಉಪನದಿ ಎನ್ನುತ್ತಾರೆ.

ಮಳೆ ಬಿದ್ದಾಗ ಸುರಿದ ಎಲ್ಲ ನೀರು ನದಿಯಾಗಿ ಹರಿದುಹೋಗುವುದಿಲ್ಲ. ಸ್ವಲ್ಪ ಭಾಗ ಭೂಮಿಯೊಳಕ್ಕೆ ಇಳಿಯುತ್ತದೆ. ತುಂಬಾ ಆಳಕ್ಕೆ ಇಳಿದದ್ದು ಪತ್ತೆಯಾಗುವುದಿಲ್ಲ. ಮೇಲೆ ಇರುವ ನೀರು ಊಟೆಯಾಗಿ ಉಕ್ಕಿ ಬರುತ್ತದೆ. ಬಾವಿ ತೋಡಿದಾಗ ನೀರು ಕಾಣಿಸಿಕೊಳ್ಳುವುದು ಒಳಗೆ ನೀರು ಇರುವುದರಿಂದಲೇ. ಪವಿತ್ರ ಪ್ರಯಾಗ ಕ್ಷೇತ್ರದಲ್ಲಿ ತ್ರಿವೇಣಿ ಸಂಗಮ ಇದೆ ಎನ್ನುತ್ತೇವೆ. ಮೇಲೆ ಗೋಚರವಾಗುವುದು ಗಂಗಾ-ಯಮುನಾ ನದಿಗಳು ಮಾತ್ರ. ಗುಪ್ತಗಾಮಿನಿ ಸರಸ್ವತಿ ನದಿ ಭೂಮಿಯ ಒಳಗೆ ಹರಿಯುತ್ತದೆ.

ನದಿಗಳಲ್ಲೂ ಎಷ್ಟೋ ವಿಧ. ಕೆಲವು ನದಿಗಳು ಶಾಂತವಾಗಿ, ನಿಧಾನವಾಗಿ ಹರಿದರೆ ಮತ್ತೆ ಕೆಲವು ನದಿಗಳು ಭೋರ್ಗರೆಯುತ್ತ ಸಾಗುತ್ತವೆ. ನದಿ ಆರಂಭವಾಗುವ ಕಡೆಗೆ ಮೂಲವೆಂದೂ ಸಮುದ್ರ ಅಥವಾ ಸರೋವರವನ್ನು ನದಿ ಸೇರುವ ಸ್ಥಳವನ್ನು ನದೀಮುಖವೆಂದೂ ನದಿ ದೊಡ್ಡ ನದಿಗೆ ಸೇರುವ ಸ್ಥಳವನ್ನು ಸಂಗಮ ಎಂದೂ ಕರೆಯುತ್ತಾರೆ.

ಬೇಸಿಗೆಕಾಲದಲ್ಲಿ ಗಂಗಾನದಿ ಬಹಳ ರಭಸವಾಗಿ ಹರಿಯುತ್ತದೆ. ಹಿಮಾಲಯ ಪರ್ವತದಲ್ಲಿ ಶೇಖರವಾಗಿರುವ ಹಿಮರಾಶಿ ಬಿಸಿಲಿನಲ್ಲಿ ಭಾಗಶಃ ಕರಗುವುದರಿಂದ ಆ ನೀರು ಗಂಗಾನದಿಗೆ ಸೇರಿಕೊಳ್ಳುತ್ತದೆ.

ಅರೇಬಿಯ, ಅಲ್ಜೀರಿಯ, ಲಿಬಿಯಗಳಂಥ ಒಣ ಪ್ರದೇಶಗಳಲ್ಲಿ ಮಳೆಗಾಲದಲ್ಲಿ ಮಾತ್ರ ನದಿಯಲ್ಲಿ ನೀರು ಸಮೃದ್ಧವಾಗಿರುತ್ತದೆ. ಬೇಸಿಗೆ ಕಾಲದಲ್ಲಿ ನೀರು ಇಂಗಿಹೋಗಿ, ಭೂಮಿಯೊಳಕ್ಕೆ ಇಳಿದು ನದಿಯ ಪಾತ್ರ ಒಣಗಿಹೋಗಿರುತ್ತದೆ.

ನದಿಗಳು ಮನುಷ್ಯನಿಗೆ ನೀರನ್ನು ಒದಗಿಸುವುದು ಮಾತ್ರವಲ್ಲ, ಅವನ ಪ್ರಗತಿಯ ಮೇಲೆ ಪ್ರಭಾವ ಬೀರುತ್ತವೆ. ಮನುಷ್ಯ ಚರಿತ್ರೆಯ ಮೊದಲಲ್ಲಿ ಅನೇಕ ಗುಂಪುಗಳು ನೆಲೆಸಿದ್ದು ನದೀ ತೀರಗಳಲ್ಲಿ. ಪ್ರಪಂಚದ ಪ್ರಾಚೀನ ನಾಗರಿಕತೆಗಳು ಅರಳಿದ್ದು ನದೀ ತೀರಗಳಲ್ಲಿ. ಭಾರತದಲ್ಲಿ ನದಿಗಳ ಬಗೆಗೆ ಪೂಜ್ಯಭಾವನೆ ಇದೆ.

ನದಿ ಸಂಪರ್ಕ ಹಾಗೂ ವಾಣಿಜ್ಯ ಸಾಧನವೂ ಆಗಿದೆ. ದೋಣಿ ಅಥವಾ ನಾವೆಯಲ್ಲಿ ಕುಳಿತು ಒಂದು ಊರಿನಿಂದ ಮತ್ತೊಂದು ಊರಿಗೆ ಹೋಗಬಹುದು. ಮರದ ದಿಮ್ಮಿಗಳನ್ನು ಊರಿಂದೂರಿಗೆ ತೇಲಿಸಿಕೊಂಡು ಹೋಗಲು ನದಿ ಸಹಾಯಕ.

ನದಿಯಿಂದ ಮನುಷ್ಯ ಹೊಸ ಹೊಸ ಜಾಗಗಳನ್ನು ಶೋಧಿಸಲೂ ಅನುಕೂಲವಾಗಿದೆ. ಆದಿಮಾನವ ಈ ರೀತಿ ನದಿಯಲ್ಲಿ ಸಾಗಿಯೇ ಹೊಸ ಹೊಸ ಜಾಗಗಳನ್ನು ಕಂಡುಕೊಂಡ.

ನದಿ ರಭಸವಾಗಿ ಹರಿದುಬರುವಾಗ ಮೆಕ್ಕಲುಮಣ್ಣನ್ನು ಹೊತ್ತು ತರುತ್ತದೆ. ಇಂಥ ಮಣ್ಣು ಶೇಖರವಾದ ನದೀ ಪಾತ್ರ ವ್ಯವಸಾಯಕ್ಕೆ



ಶಾಂತವಾಗಿ ಹರಿಯುತ್ತಿರುವ ಗಂಡಕ್ ನದಿ

ಬಹಳ ಉತ್ತಮ. ಪ್ರವಾಹ ಕಾಲದಲ್ಲಿ ಕೆಲವು ವೇಳೆ ನದಿ ದಡ ಮೀರಿ ಹರಿಯುವುದುಂಟು. ಪ್ರವಾಹ ಇಳಿದ ಮೇಲೆ ಇಂಥ ಭಾಗದಲ್ಲಿ ಮೆಕ್ಕಲುಮಣ್ಣು ನಿಂತು, ಆ ನೆಲ ಫಲವತ್ತಾಗುತ್ತದೆ.

ನದಿಯಿಂದ ನಾವು ಎಷ್ಟೊಂದು ಪ್ರಯೋಜನ ಪಡೆಯುತ್ತೇವೆ! ಆದರೆ ಪ್ರವಾಹ ಕಾಲದಲ್ಲಿ ಮಾತ್ರ ಜನ, ಮನೆ, ಪ್ರಾಣಿಗಳನ್ನು ಕಳೆದುಕೊಂಡು ಗೋಳಾಡುತ್ತಾರೆ. ವರ್ಷಕ್ಕೊಮ್ಮೆ ಅಸ್ಸಾಮಿನಲ್ಲಿ ಪ್ರವಾಹದ ಹಾವಳಿ ತಪ್ಪಿದ್ದಲ್ಲ. ಪೈರು ಸಹ ಕೊಚ್ಚಿ ಹೋಗುತ್ತದೆ.

ಈಚೆಗೆ ಪ್ರವಾಹದ ಹಾವಳಿಯನ್ನು ತಡೆಗಟ್ಟಲು ಎತ್ತರದ ಅಡ್ಡಗೋಡೆಯನ್ನು ಕಟ್ಟುತ್ತಾರೆ. ಮಿಸಿಸಿಪಿ ನದಿಗೆ 1960ರ ವೇಳೆಗೆ 5,632 ಕಿ. ಮೀ. ಉದ್ದ, ಸರಾಸರಿ 7.32 ಮೀಟರು ಎತ್ತರದ ಅಡ್ಡಗೋಡೆಯನ್ನು ನಿರ್ಮಿಸಿದ್ದಾರೆ.

ಪ್ರಪಂಚದಲ್ಲಿ ಅತಿ ಉದ್ದವಾದ ಐದು ನದಿಗಳು :

| ನದಿ | ಕಿಲೊಮೀಟರ್ |
|---|---|
| 1 ನೈಲ್ (ಆಫ್ರಿಕ) | 6,690 |
| 2 ಅಮೆಜಾನ್ (ದಕ್ಷಿಣ ಅಮೆರಿಕ) | 6,280 |
| 3 ಮಿಸಿಸಿಪಿ (ಉತ್ತರ ಅಮೆರಿಕ) | 6,260 |
| 4 ಓಬ್-ಇರ್‌ತಿಷ್-ಬ್ಯಾಕ್ ಇರ್‌ತಿಷ್ (ಏಷ್ಯ) | 5,150 |
| 5 ಯಾಂಗ್‌ಟ್ಸೆ (ಚೀನ) | 4,990 |

ಭಾರತದಲ್ಲಿ ಮುಖ್ಯವಾದ ನದಿಗಳು :

| | |
|---|---|
| 1 ಸಿಂಧೂ | 2,900 |
| 2 ಬ್ರಹ್ಮಪುತ್ರಾ | 2,900 |
| 3 ಗಂಗಾ | 2,510 |
| 4 ಗೋದಾವರಿ | 1,450 |
| 5 ಕೃಷ್ಣಾ | 1,290 |
| 6 ನರ್ಮದಾ | 1,290 |
| 7 ಮಹಾನದಿ | 890 |
| 8 ಕಾವೇರಿ | 760 |

## ನವೋದಯ

1323. ನ್ಯಾಯಶಾಸ್ತ್ರವನ್ನು ಓದಲೆಂದು ಹುಡುಗನನ್ನು ಇಟಲಿ ದೇಶದ ಬೊಲೊನ್ ಎಂಬಲ್ಲಿಗೆ ಕಳುಹಿಸಿದರು ಅವನ ತಂದೆತಾಯಿ. ಹುಡುಗನಿಗೆ ಊರೇನೋ ಹಿಡಿಸಿತು. ಆದರೆ ನ್ಯಾಯಶಾಸ್ತ್ರದ ಓದು ಇಷ್ಟವಾಗಲಿಲ್ಲ. ರೋಮನ್ ನ್ಯಾಯಶಾಸ್ತ್ರವನ್ನು ಓದುವುದನ್ನು ಬಿಟ್ಟು ಹುಡುಗ ರೋಮನ್ ಮಹಾಕವಿಗಳ ಕಾವ್ಯಸಾಗರದಲ್ಲಿ ಮುಳುಗಿ ಬಿಟ್ಟ. ವರ್ಜಿಲ್, ಸಿಸಿರೊ, ಸೆನಿಕ ಮೊದಲಾದ ರೋಮನ್ ಕವಿಗಳು ಹುಡುಗನ ಗುರುಗಳಾದರು. ಅವನ ಜಗತ್ತಿಗೆ ಹೊಸ ಗಾಳಿ, ಬೆಳಕು ಬಂದಂತಾಯಿತು. ಮುಂದೆ ನ್ಯಾಯಶಾಸ್ತ್ರದ ಅಧ್ಯಯನವನ್ನು ಕೊನೆಗಾಣಿಸಿ ಪ್ರಾಚೀನ ಗ್ರೀಕ್ ಮತ್ತು ರೋಮನ್ ಕಾವ್ಯಗಳಲ್ಲಿ ಅತಿ ತಲ್ಲೀನನಾದ.

ಇವನ ಹೆಸರು ಫ್ರಾನ್ಸಿಸ್ಕೊ ಪೆಟ್ರಾರ್ಕ್. ಹುಟ್ಟಿದ್ದು 1304ರಲ್ಲಿ.

ಪ್ರಾಚೀನ ಗ್ರೀಕ್ ಮತ್ತು ರೋಮನ್ ಕಾವ್ಯಾಭ್ಯಾಸದಲ್ಲಿ ಅತೀವ ಆಸಕ್ತಿ ವಹಿಸಿದ ಪೆಟ್ರಾರ್ಕ್ ಪಾಶ್ಚಾತ್ಯ ಜಗತ್ತಿನ ನವೋದಯಕ್ಕೆ ನಾಂದಿ ಹಾಡಿದ.

ರೋಮನ್ ಸಾಮ್ರಾಜ್ಯದ ಪತನದ ಅನಂತರ 'ಮಧ್ಯಯುಗ' ಎನ್ನುವ ಕಾಲ (ಸುಮಾರು 400–1300) ಪ್ರಾರಂಭವಾಯಿತು. ಒಟ್ಟಿನಲ್ಲಿ ಇದು ಸ್ವಾತಂತ್ರ್ಯವಿಲ್ಲದ ಕಾಲ. ಊಳಿಗಮಾನ್ಯ ಪದ್ಧತಿಯಿಂದ ರಾಜನ ಮತ್ತು ಶ್ರೀಮಂತವರ್ಗದ ಅಧಿಕಾರ ಪ್ರಬಲವಾಗಿತ್ತು. ಧರ್ಮಸಂಸ್ಥೆ ಒಪ್ಪಿದ ಪುಸ್ತಕಗಳನ್ನು ಮಾತ್ರ ಓದಬಹುದಾಗಿತ್ತು. ಉಳಿದ ಪುಸ್ತಕಗಳನ್ನು ಓದಿದರೆ ಬಹಿಷ್ಕಾರದ ಭಯ. ಪ್ರಾಚೀನ ಗ್ರೀಕ್ ಮತ್ತು ರೋಮನ್ ಗ್ರಂಥಗಳನ್ನು ಓದಲು ಧರ್ಮಾಧಿಕಾರಿಗಳು ಅವಕಾಶ ಕೊಡುತ್ತಿರಲಿಲ್ಲ, ಅವುಗಳನ್ನು ಬರೆದವರು ಕ್ರೈಸ್ತರಲ್ಲ ಎಂಬ ಕಾರಣದಿಂದ. ಒಂದೇ ವಿನಾಯತಿ—ಅರಿಸ್ಟಾಟಲನ ಗ್ರಂಥಗಳು. ರಾಜ, ಶ್ರೀಮಂತ, ಮಠಾಧಿಕಾರಿ ಇವರ ಅಧಿಕಾರದಿಂದ ಇತರರ ಸ್ವಾತಂತ್ರ್ಯ ಮೊಟಕಾಗಿತ್ತು.

ಕ್ರಮೇಣ ಮಧ್ಯಯುಗದಲ್ಲಿಯೂ ಬದಲಾವಣೆಗಳು ಕಾಣಲಾರಂಭಿಸಿದುವು. ಮಧ್ಯವರ್ಗ—ಅಷ್ಟು ಶ್ರೀಮಂತರೂ ಅಲ್ಲ, ಬಡವರೂ ಅಲ್ಲದ ಜನರ ವರ್ಗ—ಬೆಳೆಯಿತು. ಇವರಿಗೆ ಮತದಲ್ಲಿ ಅಲ್ಲದೆ ಉಳಿದ ಹಲವು ವಿಷಯಗಳಲ್ಲಿ ಆಸಕ್ತಿ ಇದ್ದಿತು. ವಿಶ್ವವಿದ್ಯಾನಿಲಯಗಳು ಬೆಳೆದಂತೆ ಜ್ಞಾನದ ಬಯಕೆಯೂ ಗರಿಗೆದರಿತು. ಈ ಬದಲಾವಣೆಗಳಿಗೆ ಒಂದು ತೀವ್ರ ಗತಿ ಬಂದುದು ಪ್ರಾಚೀನ ಗ್ರೀಸ್ ಮತ್ತು ರೋಮ್‌ಗಳ ಸಾಹಿತ್ಯ, ತತ್ತ್ವಶಾಸ್ತ್ರ, ರಾಜ್ಯಶಾಸ್ತ್ರಗಳ ಕೃತಿಗಳನ್ನು ಓದಿದಾಗ. ಮಧ್ಯಯುಗದ ಜನರಿಗೆ ಹೊಸದೊಂದು ಲೋಕದಲ್ಲೇ ಪ್ರವೇಶಿಸಿದಂತಾಯಿತು. ಸಾಕ್ರಟೀಸ್, ಪ್ಲೇಟೋ, ಪಯಾಜೋರಸ್ ಮೊದಲಾದವರ ಸ್ವತಂತ್ರ ವಿಚಾರರೀತಿ ಅವರಿಗೆ ಸ್ಫೂರ್ತಿ ನೀಡಿತು. ಪ್ರಾಚೀನ ಸಂಸ್ಕೃತಿ ಮತ್ತೆ ಜನ್ಮತಾಳಿತು. 'ನವೋದಯ'ವಾಯಿತು.

ನವೋದಯ ಕಾಲ ಯೂರೋಪಿನಲ್ಲಿ ಸುಮಾರು 1300 ರಿಂದ 1600. ಮತಕ್ಕೆ ಹೆಚ್ಚು ಪ್ರಾಮುಖ್ಯ ಕೊಟ್ಟು, ಯಾವುದು ಪಾಪ, ಯಾವುದು ಪುಣ್ಯ, ಯಾವುದು ಕ್ರೈಸ್ತಮತದ ಬೋಧನೆಗೆ ಅನುಗುಣವಾಗಿದೆ ಎಂದು ಯೋಚಿಸುವುದರ ಬದಲು, ಮನುಷ್ಯನ ಆಸೆಗಳು, ಅವನ ಗುಣಗಳು, ಅವನ ಕೆಲಸ ಕಾರ್ಯಗಳು, ಅವನು ಕಟ್ಟಿದ ಸಾಮ್ರಾಜ್ಯಗಳು, ಅವನು ನಿರ್ಮಿಸಿದ ಭವನಗಳು, ಚಿತ್ರಗಳು, ವಿಗ್ರಹಗಳು, ಅವನ ಭಾವನೆಗಳು, ಸುಖದುಃಖಗಳು, ಅವನ ಚರಿತ್ರೆ—ಇವುಗಳಲ್ಲಿ ಆಸಕ್ತಿ ಬೆಳೆಯಿತು. ಇದನ್ನು 'ಮಾನವತಾವಾದ' ಎನ್ನುತ್ತಾರೆ.

'ನವೋದಯ' ಬಹುಮುಖ ಪ್ರತಿಭೆಯಿಂದ ಕೂಡಿದ ಚಳುವಳಿಯಾಯಿತು. ಸುಮಾರು 250–300 ವರ್ಷಗಳ ಕಾಲ ಯೂರೋಪಿನ ನಾವಿಕರು ಸಾಗರದ ಮೇಲೆ ನಿರ್ಭಯವಾಗಿ ಸಾಗಿಹೋದರು. ಪ್ರಪಂಚದ ಮೂಲೆಮೂಲೆಗಳನ್ನು ಮುಟ್ಟಿದರು. ತತ್ತ್ವಶಾಸ್ತ್ರ ವಿಜ್ಞಾನಗಳಲ್ಲಿ ಹೊಸಹೊಸ ವಿಚಾರಗಳು ಬಂದುವು.

ಸಾಹಿತ್ಯ, ಕಲೆ, ವಿಜ್ಞಾನ, ಭೌಗೋಳಿಕ ಪ್ರಜ್ಞೆ —ಈ ನಾಲ್ಕು ಅಂಗಗಳಲ್ಲಿ ನವೋದಯ ಸ್ಪಷ್ಟವಾಗಿ ಕಾಣಿಸಿತು. ಯೂರೋಪಿನ ಅನೇಕ ರಾಷ್ಟ್ರಗಳಲ್ಲಿ ಪ್ರತಿಭಾವಂತ ಸಾಹಿತಿಗಳು ತಲೆದೋರಿದರು. ಶ್ರೇಷ್ಠಮಟ್ಟದ ಸಾಹಿತ್ಯ ಸೃಷ್ಟಿಯಾಯಿತು.

ಬರವಣಿಗೆಯ ಕ್ಷೇತ್ರದಲ್ಲಿ ಇಟಲಿಯಲ್ಲಿ ಕವಿ ಪೆಟ್ರಾರ್ಕ್, ಅನಂತರ 'ಡೆಕಮೆರಾನ್' ಎಂಬ ಸ್ವಾರಸ್ಯ ಸಂಕಲನದ ಸೃಷ್ಟಿಕರ್ತ ಬೊಕಾಶಿಯೊ,

'ದಿ ಪ್ರಿನ್ಸ್' ಎಂಬ ರಾಜನೀತಿ ಕೈಪಿಡಿಯನ್ನು ಬರೆದ ಇಟಲಿಯ ರಾಜನೀತಿಜ್ಞ ಮ್ಯಾಕಿಯವೆಲಿ, ಹಾಲೆಂಡಿನ ಇರಾಸ್‌ಮಸ್, ಫ್ರಾನ್ಸಿನ ರಬೆಲೆ, 'ಡಾನ್ ಕ್ವಿಕ್ಸೋಟೆ' ಎಂಬ ಪ್ರಸಿದ್ಧ ಕಾದಂಬರಿಯನ್ನು ಬರೆದ ಸ್ಪೇನಿನ ಸರ್‌ವ್ಯಾಂಟಿಸ್. ಇಂಗ್ಲೆಂಡಿನ ಪ್ರಸಿದ್ಧ ಕವಿಗಳು ಛಾಸರ್ ಮತ್ತು ಸ್ಪೆನ್ಸರ್, ಜಗದ್ವಿಖ್ಯಾತ ಕವಿ. ನಾಟಕಕಾರ ವಿಲಿಯಂ ಷೇಕ್ಸ್‌ಪಿಯರ್ ಇವರೆಲ್ಲ 'ನವೋದಯ' ಕಾಲದ ಪ್ರಸಿದ್ಧ ಬರಹಗಾರರು.

ಸಾಹಿತ್ಯದಲ್ಲಷ್ಟೇ ಅಲ್ಲದೆ ಚಿತ್ರಕಲೆ. ಶಿಲ್ಪಕಲೆ. ವಾಸ್ತುಶಿಲ್ಪ ಮುಂತಾದ ಕಲೆಗಳಲ್ಲೆಲ್ಲ ಅಸಾಧಾರಣ ಬದಲಾವಣೆಗಳಾದುವು.

ಪುರಾತನ ಗ್ರೀಕ್ ಮತ್ತು ರೋಮನ್ ವಾಸ್ತುಶಿಲ್ಪವನ್ನು ಆಧರಿಸಿದ ವಾಸ್ತುಶಿಲ್ಪ ಶೈಲಿ ಬಳಕೆಗೆ ಬಂದಿತು. ರೋಮ್‌ನಲ್ಲಿ ಕಟ್ಟಲ್ಪಟ್ಟ ಸಂತ ಪೀಟರನ ಇಗರ್ಜಿ ನವೋದಯ ಕಾಲದ ಅತ್ಯಂತ ಪ್ರಸಿದ್ಧ ಕಟ್ಟಡ. ಈ ಕ್ರೈಸ್ತ ದೇವಾಲಯವನ್ನು ಕಟ್ಟಲು ನೂರಿಪ್ಪತ್ತು ವರ್ಷಗಳು ಹಿಡಿದುವು. ಈ ದೇವಾಲಯದ 133 ಮೀಟರ್ ಎತ್ತರದ ಗುಮ್ಮಟವನ್ನು ನಿರ್ಮಿಸಿದವನು ವಾಸ್ತುಶಿಲ್ಪಿ ಮೈಕೆಲೇಂಜಲೊ.

ಫಿಲಿಪ್ಪೊ ಬ್ರೂನೆಸ್‌ಕಿ (14–15ನೆಯ ಶತಮಾನ) ಫ್ಲಾರೆನ್ಸಿನ ಅತ್ಯಂತ ಪ್ರಸಿದ್ಧ ವಾಸ್ತುಶಿಲ್ಪಿ.

ಚಿತ್ರಕಲೆಯಲ್ಲೂ ನವೋದಯವಾಯಿತು. ನವೋದಯದ ಕಾಲದ ಪ್ರತಿಭಾವಂತನೆಂದು ಲಿಯೊನಾರ್ಡೊ ದ ವಿಂಚಿಯ ಹೆಸರು ಅಮರವಾಗಿದೆ. ಲಿಯೊನಾರ್ಡೊ ದ ವಿಂಚಿ ಮತ್ತು ಮೈಕೆಲೇಂಜಲೊ ಇಟಲಿಯ ಆ ಕಾಲದ ಇಬ್ಬರು ಪ್ರತಿಭಾಶಾಲಿಗಳು. ಲಿಯೊನಾರ್ಡೊ ಚಿತ್ರಕಾರನೂ ವಾಸ್ತುಶಿಲ್ಪಿಯೂ ಸಂಗೀತಗಾರನೂ ಕಲಾವಿಮರ್ಶಕನೂ ವಿಜ್ಞಾನಿಯೂ ಆಗಿದ್ದ.

ಮಧ್ಯಯುಗದ ಧಾರ್ಮಿಕ ಕಟ್ಟುಪಾಡುಗಳು ಸಡಿಲಗೊಂಡದ್ದರಿಂದಲೂ ಮಾನವೀಯತೆಯು ಹುಟ್ಟಿದ್ದರಿಂದಲೂ ವಿಚಾರಪರತೆ. ಸಂಶೋಧನಾತ್ಮಕತೆ, ಅನ್ವೇಷಣಾಪ್ರಿಯತೆ ಇವು ಬೆಳೆದು ವಿಜ್ಞಾನಕ್ಷೇತ್ರದಲ್ಲಿ 'ನವೋದಯ' ವಾಗಲು ಸಾಧ್ಯವಾಯಿತು. ಜಗತ್ತಿನ ಜೀವನದಲ್ಲಿ ಅಸಾಮಾನ್ಯ ಬದಲಾವಣೆಗೆ ಕಾರಣವಾದ ಮುದ್ರಣ ಯಂತ್ರ, ಸಿಡಿಮದ್ದು, ನಾವಿಕರ ದಿಕ್ಸೂಚಿ. ಇವು ನವೋದಯ ಕಾಲದ ವೈಜ್ಞಾನಿಕ ಸೃಷ್ಟಿಗಳು. ಆಧುನಿಕ ಖಗೋಳ ಶಾಸ್ತ್ರದ ಮೂಲಪುರುಷನೆಂದು ಕರೆಸಿಕೊಳ್ಳುವ ಕೊಪರ್ನಿಕಸ್ (1473–1543) ಈ ಯುಗದವನು.

ಮಧ್ಯಯುಗದ ಧರ್ಮಯುದ್ಧಗಳ ಕಾಲದಲ್ಲಾದ ವಾಣಿಜ್ಯ ಸಂಪರ್ಕ, ನವೋದಯ ಕಾಲದಲ್ಲಿ ಹೊಸ ಭೂಪ್ರದೇಶಗಳ ಅನ್ವೇಷಣೆಗೆ ಕಾರಣವಾಯಿತು.

ಭೌಗೋಳಿಕ ಅನ್ವೇಷಣೆಗಳಲ್ಲಿ ಪೋರ್ಚುಗಲ್ ಪ್ರಮುಖ ಪಾತ್ರ ವಹಿಸಿತು. 1394ರಿಂದ 1460ರ ವರೆಗೆ ಪೋರ್ಚುಗಲ್ಲನ್ನು ಆಳಿದ ಹೆನ್ರಿ ನಾವಿಕರ ಶಿಕ್ಷಣಕ್ಕೆ. ನೌಕಾಯಾನಕ್ಕೆ ಮತ್ತು ಹಡಗು ಕಟ್ಟುವ ಕೈಗಾರಿಕೆಗೆ ಪ್ರೋತ್ಸಾಹ ನೀಡಿದ. ಈ ಪ್ರೋತ್ಸಾಹದಿಂದ ಹೊಸ ಭೂ. ಜಲ ಮಾರ್ಗಗಳನ್ನು ಕಂಡುಹಿಡಿದು ಪ್ರಖ್ಯಾತರಾದ ಅನ್ವೇಷಣಕಾರರು, ಗುಡ್ ಹೋಪ್ ಭೂಶಿರವತ್ತ ಹೊರಟ ಬಾರ್ತಲೋಮ್ಯು ಡಿ ಅಜ್ ಮತ್ತು ಭಾರತಕ್ಕೆ ಬಂದ ವಾಸ್ಕೋ ದ ಗಾಮ.

ಭೌಗೋಳಿಕ ಅನ್ವೇಷಣೆಯಲ್ಲಿ ಆಸಕ್ತವಹಿಸಿದ ರಾಷ್ಟ್ರಗಳಲ್ಲಿ ಸ್ಪೇನ್ ದೇಶವೂ ಒಂದು. ಅಮೆರಿಕವನ್ನು ತಲುಪಿದ ಕ್ರಿಸ್ಟಫರ್ ಕೊಲಂಬಸ್ ಮತ್ತು ಅಮೆರಿಗೊ ವೆಸ್ಪುಸಿ ಈ ದೇಶದವರು. ಭೂ ಪ್ರದಕ್ಷಿಣೆ ಮಾಡಿದ ಮೊದಲನೆಯ ಹಡಗು ಸ್ಪೇನಿನ 'ವಿಕ್ಟೋರಿಯ'. ಇದರ ಯಾನನಾಯಕ ಧೀರ ಫರ್ಡಿನಾಂಡ್ ಮ್ಯಾಗಿಲಾನ್.

ಪಾಶ್ಚಾತ್ಯಯುಗದ 'ನವೋದಯ'ದ ಅನಂತರ, ಯಾವ ದೇಶದಲ್ಲಿಯಾದರೂ ನಿಸ್ತೇಜವಾದ ಒಂದು ಕಾಲ ಮುಗಿದು, ಹೊಸ ಉತ್ಸಾಹ. ಆತ್ಮವಿಶ್ವಾಸಗಳಿಂದ ಬೌದ್ಧಿಕ ಅಥವಾ ಕಲಾತ್ಮಕ ಚಟುವಟಿಕೆ ಪ್ರಾರಂಭವಾದರೆ. ಅದನ್ನು 'ನವೋದಯ' ಎನ್ನುತ್ತಾರೆ. ಬಂಗಾಳದಲ್ಲಿ ರಾಜಾ ರಾಮಮೋಹನರಾಯ್‌ರಿಂದ ಪ್ರಾರಂಭವಾಗಿ ರವೀಂದ್ರನಾಥರವರೆಗಿನ ಕಾಲ— ರಾಜಾ ರಾಮಮೋಹನ ರಾಯ್. ರಾಮಕೃಷ್ಣ ಪರಮಹಂಸ. ವಿವೇಕಾನಂದ. ಶರತ್‌ಚಂದ್ರ ಚಟರ್ಜಿ. ಜಗದೀಶ್‌ಚಂದ್ರ ಬೋಸ್ ಮೊದಲಾದವರ ಕಾಲಾವಧಿ—'ನವೋದಯ' ಕಾಲ.

ಈ ಶತಮಾನದಲ್ಲಿ ಹೊಸಗನ್ನಡ ಸಾಹಿತ್ಯ ಮೈದೋರಿದ ಅವಧಿ— ಎರಡನೆಯ, ಮೂರನೆಯ ದಶಕ—ನವೋದಯ ಕಾಲ.

ಮನುಷ್ಯನ ಚೇತನ ಪಂಜರದಿಂದ ಹೊರಬಂದ ಹಕ್ಕಿಯಂತೆ ಹಾರಾಡಿ ಹೊಸ ಹೊಸ ಶಿಖರಗಳನ್ನು ಮುಟ್ಟುವ ಕಾಲಾವಧಿ—ನವೋದಯ.

ನೋಡಿ : ಕೊಲಂಬಸ್ ; ಲಿಯೊನಾರ್ಡೊ ದ ವಿಂಚಿ

## ನಾಗರಿಕತೆ

"ಶುದ್ಧ ಅನಾಗರಿಕ !"

—ಯಾರದೋ ವರ್ತನೆ ಅಸಹ್ಯವೆನಿಸಿದಾಗ ಹೀಗೆ ಉದ್ಗರಿಸುತ್ತೇವೆ.

ಹುಟ್ಟಿನಿಂದ ನಾವೆಲ್ಲರೂ ಅನಾಗರಿಕರು. ನಾಗರಿಕತೆ ನಾವು ಕಷ್ಟಪಟ್ಟು ಕಲಿತದ್ದು. ಅದನ್ನು ಶಿಸ್ತಿನಿಂದ ಬೆಳೆಸಿದರೆ ಉಳಿಯುತ್ತದೆ. ಇಲ್ಲದಹೋದರೆ ಅಳಿಯುತ್ತದೆ.

ನಾಗರಿಕತೆ ಎನ್ನುವುದು 'ನಗರ' ಎನ್ನುವ ಪದದಿಂದ ಬಂದಿದೆ. ನಗರದ ಜನ ವಿದ್ಯಾವಂತರು. ಶಿಷ್ಟಾಚಾರ ಬಲ್ಲವರು, ಜೀವನವನ್ನು ಸಮೃದ್ಧಿಮಾಡಿಕೊಳ್ಳಲು ಬಲ್ಲವರು, ನಾಲ್ಕು ಜನರೊಂದಿಗೆ ಬೆರೆಯಲು ಬಲ್ಲವರು – ಬಾಳಲು ಬಲ್ಲವರು ಎಂಬ ಅಭಿಪ್ರಾಯ 'ನಾಗರಿಕತೆ' ಪದದ ಅರ್ಥದಲ್ಲಿ ಪ್ರತಿಬಿಂಬಿತವಾಗಿದೆ. ನಗರದ ಜನರ ರೀತಿ ನೀತಿ ನಾಗರಿಕತೆ. ರೂಢಿಯಲ್ಲಿ ಇದರ ಅರ್ಥವ್ಯಾಪ್ತಿ ಹಿರಿದು. ಉಡುಪು. ಮಾತು. ನಡವಳಿಕೆ. ಇವುಗಳಲ್ಲಿ ಇತರರಿಗೆ ಬೇಸರವಾಗದಂತೆ. ಮನಸ್ಸು ನೋಯದಂತೆ ನಡೆದುಕೊಳ್ಳುವುದು, ವ್ಯಕ್ತಿಯಾಗಿ ಸಮಾಜದ ಸದಸ್ಯನಾಗಿ ತನ್ನ ಹೊಣೆಯನ್ನು ಅರಿತು ಬಾಳುವುದು. ಎಲ್ಲರಲ್ಲಿಯೂ ನಾಲ್ಕು ಜನ ಒಪ್ಪುವ ಕ್ರಮವನ್ನು ವ್ಯವಸ್ಥೆಯನ್ನು ಪಾಲಿಸುವುದು. ನಿತ್ಯಜೀವನ ಅಡ್ಡಿ ಆತಂಕಗಳಿಲ್ಲದೆ ಸುಗಮವಾಗಿ ನಡೆದುಕೊಂಡು ಹೋಗಲು ಅಗತ್ಯವಾದ ವ್ಯವಸ್ಥೆ ಮಾಡುವುದು —ಒಟ್ಟಿನಲ್ಲಿ ಸಮಾಜದವರೆಲ್ಲ ಒಟ್ಟಿಗೆ. ಸಮೃದ್ಧಿಯಾಗಿ. ಸಂತೋಷವಾಗಿ ಬದುಕಲು ಅಗತ್ಯವಾದದ್ದೆಲ್ಲ 'ನಾಗರಿಕತೆ' ಪದದ ವ್ಯಾಪ್ತಿಯಲ್ಲಿ ಸೇರುತ್ತದೆ. ಒರಟಾಗಿ ಮಾತನಾಡುವುದು ಅನಾಗರಿಕತೆ : ಕ್ಯೂನಲ್ಲಿ ನಿಲ್ಲದೆ ನುಗ್ಗುವವನು ಅನಾಗರಿಕ : ಇತರರನ್ನು ಅಪಹಾಸ್ಯ ಮಾಡುವವನು ಅನಾಗರಿಕ ; ಕೊಳೆ ನೀರು ಹೋಗಲು ವ್ಯವಸ್ಥೆ ಇಲ್ಲದಿರುವುದು ಅನಾಗರಿಕತೆ: ಕಳ್ಳತನ ಮಾಡಿದ ಎಂದು ಅನುಮಾನ ಬಂದೊಡನೆ ಹಿಡಿದು ಹೊಡೆಯುವುದು ಅನಾಗರಿಕತೆ : ನಾಲ್ಕು ಜನ ಸೇರಿದಾಗ ತನ್ನ ವಿಷಯವನ್ನೇ ಮಾತನಾಡುವುದು, ಇನ್ನೊಬ್ಬರಿಗೆ ನೋವಾಗುವಂತೆ ಮಾತನಾಡುವುದು ಅನಾಗರಿಕತೆ : [illegible] ಇತರರಿಗೆ ನೋವಾಗುವಂತೆ ಮಾತನಾಡುವುದು, [illegible]

ವುದು, ಮನೆ-ರಸ್ತೆ-ಊರು ಶುಭ್ರವಾಗಿರುವಂತೆ ವ್ಯವಸ್ಥೆ ಮಾಡುವುದು, ಅಪರಾಧ ಮಾಡಿದ ಎಂದು ಅನುಮಾನ ಬಂದವನನ್ನು ಪೋಲೀಸರಿಗೆ ಒಪ್ಪಿಸಿ ನ್ಯಾಯಾಲಯದಲ್ಲಿ ಕಾನೂನಿಗೆ ಅನುಗುಣವಾಗಿ ವಿಚಾರಣೆ ನಡೆಸಿ ತೀರ್ಮಾನಿಸುವುದು – ಇವೆಲ್ಲ ನಾಗರಿಕ ವರ್ತನೆ. ಜನ ಒಟ್ಟಿಗೆ ಶಾಂತಿಯಿಂದ, ನೆಮ್ಮದಿಯಿಂದ ಬಾಳಲು ಅಗತ್ಯವಾದ ಮನೋಧರ್ಮ ನಾಗರಿಕತೆ.

1731ರಲ್ಲಿ ಫ್ರಾನ್ಸಿನ ಪಲಾನ್ಸ್–ಸರ್–ಮಾರ್‌ನಿ ಎಂಬಲ್ಲಿ ಒಬ್ಬಳು ಕಾಡು ಹುಡುಗಿಯನ್ನು ಪತ್ತೆಮಾಡಲಾಯಿತು. ಕಪಿಯ ಹಾಗೆ ಹಾರಿ ಅವಳು ಮೊಲಗಳನ್ನು ಪ್ರಾಣಿಗಳನ್ನು ಹಿಡಿದುಬಿಡುತ್ತಿದ್ದಳು. ತನ್ನ ಉಗುರುಗಳಿಂದ ಇವನ್ನು ಬಗೆದು ಹಾಗೆಯೇ ಹಸಿ ಹಸಿಯಾಗಿ ತಿಂದುಬಿಡುತ್ತಿದ್ದಳು. ಬದುಕಿರುವ ಪಾರಿವಾಳಗಳಿಂದ ರಕ್ತವನ್ನು ಹೀರಿ ಕುಡಿದುಬಿಡುತ್ತಿದ್ದಳು. ಅವಳಿಗೆ ಭಾಷೆ ಬರದು. ಕೂಗಲು ಕಿರುಚಲು ಮಾತ್ರ ಬರುತ್ತಿತ್ತು.

1731ರಲ್ಲೇ ಮಾನವ ಹುಡುಗಿಯೊಬ್ಬಳು ಹೀಗಿದ್ದರೆ ಭೂಮಿಯ ಮೇಲೆ ಮೊಟ್ಟಮೊದಲು ಉದಿಸಿದ ಮಾನವರೆಲ್ಲರೂ ಹೇಗೆ ಇದ್ದಿರಬೇಡ !

ಒಂದು ಕಾಲದಲ್ಲಿ ಭೂಮಿಯ ಮೇಲೆ ಜೀವವಿರುವ ಪ್ರಾಣಿಗಳೇ ಇರಲಿಲ್ಲ. ಅಸ್ಪಷ್ಟರೂಪದ ಜೀವಿಗಳು ಕಾಣಿಸಿಕೊಂಡು, ಅನಂತರ ಹಲವು ವರ್ಗದ ಪ್ರಾಣಿಗಳು ಅವತರಿಸಿದ ಮೇಲೆ, ಸುಮಾರು ಲಕ್ಷಾಂತರ ವರ್ಷಗಳ ನಂತರ ಮಾನವ ಕಾಣಿಸಿಕೊಂಡ. ಆಗ ಅವನಿಗೂ ಪ್ರಾಣಿ ವರ್ಗಕ್ಕೂ ಹೆಚ್ಚೇನೂ ವ್ಯತ್ಯಾಸವಿರಲಿಲ್ಲ. ಮನೆ ಕಟ್ಟುವುದಾಗಲಿ, ಬಟ್ಟೆ ಉಡುವುದಾಗಲಿ, ಭಾಷೆಯಾಗಲಿ, ಬರವಣಿಗೆಯಾಗಲಿ, ಬೆಳೆ ಬೆಳೆಯುವುದಾಗಲಿ, ಬೆಂಕಿಯ ಉಪಯೋಗವಾಗಲಿ, ಅವನಿಗೆ ತಿಳಿದಿರಲಿಲ್ಲ, ಅವನು ಅನಾಗರಿಕನಾಗಿದ್ದ. ಇಂದಿಗೂ ಪ್ರಪಂಚದ ವಿವಿಧ ಭಾಗಗಳಲ್ಲಿರುವ ಆದಿವಾಸಿಗಳು ನಾಗರಿಕತೆಯ ಪೂರ್ವದ ಪರಿಸರವನ್ನು ನೆನಪಿಗೆ ತರುತ್ತಾರೆ. ಆಸ್ಟ್ರೇಲಿಯದ ಜನರನ್ನಾಗಲಿ, ಆಫ್ರಿಕದ ಬುಷ್‌ಜನರನ್ನಾಗಲಿ, ನೀಲಗಿರಿಯ ತೋಡರನ್ನಾಗಲಿ ಅತ್ಯಾಧುನಿಕ ವಾತಾವರಣವಿರುವ ಇಂದಿನ ನಗರವಾಸಿಗಳಿಗೆ ಹೋಲಿಸಿದರೆ ಆಗ ನಮಗೆ ನಾಗರಿಕತೆಯ ಅರ್ಥ ಸ್ಪಷ್ಟವಾಗುತ್ತದೆ. ಭೂಮಿಯ ಮೇಲೆ ಕಣ್ಣಿಗೆಬಿದ್ದ ಪ್ರಕೃತಿ ವೈಚಿತ್ರ್ಯಗಳನ್ನು ಕಂಡು ಭಯಗೊಂಡು ಭಕ್ತಿಯಿಂದ ಕೈಮುಗಿದ ಮಾನವ ಇಂದು ಚಂದ್ರಉಪಗ್ರಹ ಯಾತ್ರೆ ಮಾಡಿದ್ದಾನೆ. ಗವಿಗಳಲ್ಲಿ ವಾಸಮಾಡುತ್ತಿದ್ದ ಮಾನವ ಇಂದು ಗಗನಚುಂಬಿ ಕಟ್ಟಡಗಳನ್ನು ಕಟ್ಟಿದ್ದಾನೆ. ಅಲೆಮಾರಿಯಾಗಿದ್ದ ಮಾನವ ಸಾಮ್ರಾಜ್ಯಗಳನ್ನು ಸ್ಥಾಪಿಸಿದ್ದಾನೆ. ಇಲ್ಲಿ ನೋಡುತ್ತೇವೆ ನಾವು ನಾಗರಿಕತೆಯ ಹುಟ್ಟು ಬೆಳವಣಿಗೆಗಳನ್ನು.

ನೆಮ್ಮದಿಯಿಂದ ಸೌಖ್ಯದಿಂದ ವಾಸಮಾಡಲು ಬೇಕಾದ ಹಿತಕರ ರೀತಿನೀತಿಗಳ ನಿರ್ಮಾಣವೇ ನಾಗರಿಕತೆಯ ಹೆಗ್ಗುರುತುಗಳು. ಸಂಸ್ಕೃತಿಯ ಸ್ಥಾಪನೆಗೆ ನಾಗರಿಕತೆಯೊಂದು ಸಾಧನ.

ಪ್ರಾಚೀನ ಇತಿಹಾಸದಲ್ಲಿ ಹಲವು ನಾಗರಿಕತೆಗಳ ಹೆಸರನ್ನು ಕೇಳುತ್ತೇವೆ. ಇವುಗಳ ವಿಷಯ ನಮಗೆ ತಕ್ಕಷ್ಟು ಮಾಹಿತಿ ದೊರೆತಿಲ್ಲ. ನೈಲ್ ನದಿಯ ಈಜಿಪ್ಟಿನವರ ನಾಗರಿಕತೆ, ಮೆಸಪಟೇಮಿಯದಲ್ಲಿ ಸುಮೇರಿಯನರು, ಬ್ಯಾಬಿಲೋನಿಯನರು, ಅಸೀರಿಯನರು, ಚಾಲ್ಡಿಯನರು ಇವರ ನಾಗರಿಕತೆಗಳು, ಭಾರತದ ಹರಪ್ಪ ಮೊಹೆಂಜೊದಾರೊ ನಾಗರಿಕತೆ, ಚೀನದ ನಾಗರಿಕತೆ. ಅಮೆರಿಕದ ಮಾಯಾ ಮತ್ತು ಅಜ್‌ಟೆಕ್ ಗುಂಪಿನವರ ನಾಗರಿಕತೆ. ಇಂಕಾ ಜನರ ನಾಗರಿಕತೆ. ಏಷ್ಯದ ಪಶ್ಚಿಮ ತೀರದ ಹಿಬ್ರೂಗಳ ನಾಗರಿಕತೆ, ಪರ್ಷಿಯನರ ನಾಗರಿಕತೆ—ಇವು ಪ್ರಾಚೀನ ಜಗತ್ತಿನ ಕೆಲವು ಮುಖ್ಯ ನಾಗರಿಕತೆಗಳು.

ನಾಗರಿಕತೆ ಹಲವು ಸಮಸ್ಯೆಗಳನ್ನು ತಂದಿದೆ. ಈ ಸಮಸ್ಯೆಗಳಲ್ಲಿ ಕೆಲವನ್ನು ಮನುಷ್ಯ ಪರಿಹರಿಸಿದ್ದಾನೆ. ಕೆಲವನ್ನು ಪರಿಹರಿಸಲು ಹೆಣಗುತ್ತಾನೆ. ಮನುಷ್ಯ ಅಡುಗೆಮಾಡಲು ಕಲಿತ. ಸಿಹಿತಿಂಡಿಗಳನ್ನು ಮಾಡಲು ಕಲಿತ. ಇದರಿಂದ ಅವನ ಹಲ್ಲುಗಳಿಗೆ ತೊಂದರೆ. ಪ್ರಾಣಿಗಳಿಗೂ ಅನಾಗರಿಕ ಪಂಗಡದವರಿಗೂ ನಾಗರಿಕ ಮನುಷ್ಯನಿಗಿರುವಷ್ಟು ಹಲ್ಲಿನ ತೊಂದರೆ ಕಣ್ಣಿನ ತೊಂದರೆ ಇಲ್ಲ. ಮಾನವ ಹಣವನ್ನು ಸೃಷ್ಟಿಸಿದ, ಅದನ್ನು ಕೂಡಿಡುವ ಆಸೆ ಬೆಳೆಸಿಕೊಂಡ, ಎಷ್ಟಾದರೂ ತೃಪ್ತಿಪಡದೆ ಅದಕ್ಕೆ ದಾಸನಾದ. ಇದರಿಂದ ಸ್ಪರ್ಧೆ, ಜಗಳ, ಯೋಚನೆ. ನಾಗರಿಕ ಜನಾಂಗಗಳಲ್ಲಿ ಹೃದಯದ ರೋಗಗಳಿಗೆ ಮತ್ತು ಮೆದುಳಿನ ರೋಗಗಳಿಗೆ ತುತ್ತಾಗುವವರ ಸಂಖ್ಯೆ ಏರುತ್ತಿದೆ. ಮನುಷ್ಯ ಕಾರಖಾನೆಗಳನ್ನು ಸ್ಥಾಪಿಸಿದ. ಕಾರಖಾನೆಗಳು ತಮ್ಮ ಕೊಳೆಯನ್ನೆಲ್ಲ ನದಿಗಳಿಗೆ ಬಿಟ್ಟು ನೀರನ್ನು ಕೆಡಿಸುತ್ತವೆ. ಅವುಗಳ ಮತ್ತು ವಿಮಾನಗಳ ಹೊಗೆಯಿಂದ ಎಷ್ಟೋ ಪಾಶ್ಚಾತ್ಯ ನಗರಗಳ ಮೇಲೆ ಹೊಗೆಯ ಪರದೆಯೇ ಕವಿದಿದೆ. ಇದರಿಂದ ಸೂರ್ಯನ ರಶ್ಮಿ ಹಿಂದಿನಂತೆ ಬೀಳುವುದಿಲ್ಲ. ಗಾಳಿಯಲ್ಲಿನ ಆಮ್ಲಜನಕ ಕಡಮೆಯಾಗುತ್ತದೆ. ನಗರಗಳನ್ನು ಕಟ್ಟಲು ಮನುಷ್ಯ ಮರಗಳನ್ನು ಉರುಳಿಸಿದ. ಸಸ್ಯವರ್ಗ ನೀಡುತ್ತಿದ್ದ ಆಮ್ಲಜನಕ ಇಲ್ಲವಾಗಿದೆ. ಮದ್ಯಪಾನ, ಅಫೀಮು ಸೇವನೆ, ಧೂಮಪಾನ ಇವೆಲ್ಲ ನಾಗರಿಕ ಮಾನವನ ಸೃಷ್ಟಿಗಳು. ಕೋಟ್ಯಂತರ ವರ್ಷಗಳಿಂದ ಭೂಮಿಯಲ್ಲಿ ಹುದುಗಿದ್ದ ಲೋಹಗಳನ್ನು ಕೆಲವೇ ಶತಮಾನಗಳಲ್ಲಿ ಮುಗಿಸಿಬಿಟ್ಟಿದ್ದಾನೆ ಮನುಷ್ಯ. ವಿಜ್ಞಾನವನ್ನು ಬೆಳೆಸಿಕೊಂಡು ತನ್ನ ಜೀವನವನ್ನು ನೆಮ್ಮದಿಮಾಡಿಕೊಂಡ, ಸಂಪತ್ತನ್ನೂ ಹೆಚ್ಚಿಸಿಕೊಂಡ—ವಿಷವಾಯು, ವಿಷಕ್ರಿಮಿಗಳು, ಆಟಂಬಾಂಬುಗಳ ಬಳಕೆಯನ್ನೂ ಕಂಡುಹಿಡಿದು ಮಾನವಕುಲದ ವಿನಾಶವನ್ನೂ ಸುಲಭ ಮಾಡಿದ್ದಾನೆ.

ಒಂದುಗೂಡಿ ಸುಖವಾಗಿ ಸುರಕ್ಷಿತವಾಗಿ ಬಾಳುವ ನಿಯಮಗಳನ್ನು ಪಾಲಿಸುವುದು ನಾಗರಿಕತೆಯ ಲಕ್ಷಣ. ಹಿಂದೆ ಇದ್ದಂತೆ ನಾವೀಗ ಚಿಕ್ಕ ಪುಟ್ಟ ರಾಜ್ಯಗಳಲ್ಲಿ ಅಥವಾ ಪ್ರದೇಶಗಳಲ್ಲಿ ಬಾಳುತ್ತಿಲ್ಲ. ನಾವೆಲ್ಲ ಬಾಳುತ್ತಿರುವುದು ಒಂದೇ ಲೋಕದಲ್ಲಿ. ಆದ್ದರಿಂದ ಒಂದುಗೂಡಿಕೆಯ ಆಧುನಿಕ ಜಗತ್ತಿನಲ್ಲಿ ಹೊಸ ನಿಯಮಗಳನ್ನು ನಾವು ಪಾಲಿಸಬೇಕು.

ನಗರಗಳಲ್ಲಿ ಇರುವವರು ಮಾತ್ರ ನಾಗರಿಕರಲ್ಲ. ಅವರಿಗಷ್ಟೇ ನಾಗರಿಕತೆ ಇದೆಯೆಂದಲ್ಲ. ಆದರೆ ಹಳ್ಳಿಯಲ್ಲಿಯೇ ಇರಲಿ, ನಗರಗಳಲ್ಲಿಯೇ ಇರಲಿ, ಕೂಡಿಬಾಳುವ ಒಳ್ಳೆ ವಿಚಾರಗಳನ್ನು ರೂಢಿಗೆ ತಂದಂತೆಲ್ಲ ನಾಗರಿಕತೆ ಇರುತ್ತದೆ. ಸಾಹಿತ್ಯ, ಚಿತ್ರ, ಸಂಗೀತ, ಆಟಪಾಠ, ಚರಿತ್ರೆ, ಇವೆಲ್ಲವುಗಳ ಪ್ರಗತಿ, ನಾಗರಿಕತೆಯನ್ನು ತೋರಿಸುತ್ತದೆ.

## ನಾಗಾರ್ಜುನ

"ಆತ ಕಬ್ಬಿಣವನ್ನು ಚಿನ್ನವನ್ನಾಗಿ ಮಾಡಬಲ್ಲನಂತೆ."

"ಅಷ್ಟೇ ಅಲ್ಲ, ಇದ್ದಕ್ಕಿದ್ದಂತೆ ಮಾಯವಾಗುವ ಇಂದ್ರಜಾಲ ಅವನಿಗೆ ಹಸ್ತಗತವಾಗಿದೆಯಂತೆ."

"ಮೂರೇ ತಿಂಗಳಲ್ಲಿ ತ್ರಿಪಿಟಕಗಳನ್ನು ಅಭ್ಯಸಿಸಿ ಮನನಮಾಡಿ ಪಾಂಡಿತ್ಯ ಸಂಪಾದಿಸಿದನಂತೆ."

ಆಚಾರ್ಯ ನಾಗಾರ್ಜುನನನ್ನು ಕುರಿತ ಮಾತುಗಳಿವು. ಆದರೆ ಕಟ್ಟುಕತೆಗಳೇ ಹೊರತು ಸತ್ಯವಲ್ಲ. ಇಂಥ ಹಲವು ಕಥೆಗಳು ನಾಗಾರ್ಜುನನ ವ್ಯಕ್ತಿತ್ವದ ಸುತ್ತ ಹೆಣೆದುಕೊಂಡಿವೆ. ಅವನ ಅದ್ಭುತ ಧೀಶಕ್ತಿ ಇದಕ್ಕೆ ಕಾರಣ. ಹತ್ತಾರು ತಲೆಮಾರುಗಳಿಂದ ಅವನ ಹೆಸರು ಮನೆಮಾತಾಗಿದೆ. ಆದರೂ ಕಟ್ಟುಕತೆಗಳಿಂದ ಅವನ ಜೀವನಚರಿತ್ರೆಯನ್ನು ಬೇರ್ಪಡಿಸುವುದೆಂದರೆ ಕಶ್ಮಲಭರಿತವಾದ ಅದಿರಿನಿಂದ ಚಿನ್ನವನ್ನು ಸಂಗ್ರಹಿಸುವಷ್ಟೇ ಕಷ್ಟದ ಕೆಲಸ. ಆ ರೀತಿ ಸಂಗ್ರಹಿಸಿದ ಹಲವು ಅಂಶಗಳು ವಿದ್ವಾಂಸರ ಸರ್ವಸಮ್ಮತಿ ಪಡೆದಿವೆ.

ನಾಗಾರ್ಜುನನ ಕಾಲ ಕ್ರಿಸ್ತಶಕ ಎರಡನೆಯ ಶತಕ. ದಕ್ಷಿಣ ದೇಶದ ಯಜ್ಞಶ್ರೀ ಶಾತಕರ್ಣಿ ಮತ್ತು ಉತ್ತರದ ಕಾನಿಷ್ಕ ಅವನ ಸಮಕಾಲೀನರು. ಗೋದಾವರಿ–ಕೃಷ್ಣಾನದಿಗಳ ನಡುವಣ ನಾಡು ಅವನ ಹುಟ್ಟೂರು. ನಾಗಾರ್ಜುನಕೊಂಡ ಅವನ ವಸತಿಯಿಂದ ಪ್ರಚುರಗೊಂಡ ಹೆಸರು. ಅವನ ತಂದೆತಾಯಿಗಳು ಬ್ರಾಹ್ಮಣರು, ಆದರೆ ಆತ ಮುಂದೆ ಬೌದ್ಧ ಮತವನ್ನು ಅವಲಂಬಿಸಿದ.

ನಾಗಾರ್ಜುನನ ಅಸಾಧಾರಣ ಪ್ರತಿಭೆ ನಾಡಿನ ಮೂಲೆ ಮೂಲೆಗೂ ಹಬ್ಬಲು ಬಹಳ ಕಾಲ ಬೇಕಾಗಲಿಲ್ಲ. ನಲಂದಾ ವಿಶ್ವವಿದ್ಯಾನಿಲಯ ದೇಶದಲ್ಲೆಲ್ಲ ಪ್ರಖ್ಯಾತವಾಗಿದ್ದ ಕಾಲವದು. ಅಲ್ಲಿ ನಾಗಾರ್ಜುನ ಪ್ರಧಾನ ಪ್ರಾಧ್ಯಾಪಕನಾದ. ಅನೇಕ ಪ್ರತಿಭಾಶಾಲಿಗಳು ಅವನಿಗೆ ಶಿಷ್ಯರಾಗಿ ದೊರೆತರು.

ನಾಗಾರ್ಜುನನು ಅನೇಕ ದರ್ಶನಗ್ರಂಥಗಳನ್ನೂ ಒಂದೆರಡು ಸ್ತೋತ್ರಗಳನ್ನೂ ಬರೆದ. ಅವನ ಗ್ರಂಥಗಳಲ್ಲಿ ಬಹು ಮುಖ್ಯವಾದದ್ದು 'ಮಾಧ್ಯಮಿಕ ಕಾರಿಕಾ.' ಅವನು ಬಳಸಿದ ಭಾಷೆ ಸಂಸ್ಕೃತ. ಅವನ ಗ್ರಂಥಗಳು ಮುಂದೆ ಚೀನೀ ಮತ್ತು ಟಿಬೆಟ್ ಭಾಷೆಗಳಿಗೆ ಅನುವಾದಗೊಂಡುವು. ಮೂಲ ಸಂಸ್ಕೃತ ಗ್ರಂಥಗಳು ನಷ್ಟವಾಗಿದ್ದರೂ ಅನುವಾದಗಳು ದೊರೆಯುತ್ತಿವೆ. ಅವು ನಾಗಾರ್ಜುನನ ಸಿದ್ಧಾಂತಕ್ಕೆ ಬೆಳಕಿಂಡಿಗಳು.

ಮಹಾಯಾನ ಪಂಥಕ್ಕೆ ಸೇರಿದ 'ಮಾಧ್ಯಮಿಕ ಸಿದ್ಧಾಂತ' ನಾಗಾರ್ಜುನನ ಕೊಡುಗೆ. ಅವನನ್ನೂ ಅವನ ಶಿಷ್ಯರನ್ನೂ ಮಾಧ್ಯಮಿಕರೆಂದು ಕರೆಯುತ್ತಾರೆ. 'ಪ್ರಜ್ಞಾಸಾರ ಸೂತ್ರ' ಎಂಬ ಗ್ರಂಥದಲ್ಲಿ ಮಾಧ್ಯಮಿಕ ಸಿದ್ಧಾಂತ ಬೀಜರೂಪದಲ್ಲಿ ಮೊದಲೇ ಪ್ರಚಾರದಲ್ಲಿತ್ತು. ಅದಕ್ಕೆ ನೀರೆರೆದು ಸಸಿಯಾಗಿ ಬೆಳೆಸಿ ಗಿಡವು ಪುಷ್ಪಭರಿತವಾಗಿ ಸೌರಭ ನಾಡಿನಲ್ಲೆಲ್ಲ ಬೀರುವಂತೆ ಮಾಡಿದ ಹಿರಿಮೆ ನಾಗಾರ್ಜುನನದು. ಹೀಗಾಗಿ ಮಾಧ್ಯಮಿಕ ಸಿದ್ಧಾಂತದ ಮೂಲಪುರುಷ ನಾಗಾರ್ಜುನ ಎಂಬ ಪ್ರತೀತಿ ಹಬ್ಬಿತು. ಪ್ರಜ್ಞಾಪಾರಮಿತ ಸೂತ್ರಗಳನ್ನೂ ನಾಗಾರ್ಜುನನೇ ಬರೆದನೆಂದು ಕೆಲವು ಪಂಡಿತರ ಅಭಿಪ್ರಾಯ. ಅದರ ಕಾಲ ನಾಗಾರ್ಜುನನಿಗಿಂತ ಬಹಳ ಹಿಂದಿನದು ಎಂದು ಭಾವಿಸುವ ವಿದ್ವಾಂಸರೂ ಬಹುಮಂದಿ ಇದ್ದಾರೆ.

ಮಾಧ್ಯಮಿಕ ಸಿದ್ಧಾಂತ ಕ್ಲಿಷ್ಟವಾದದ್ದು. ಸ್ಥೂಲವಾಗಿ ಅದನ್ನು ಹೀಗೆ ನಿರೂಪಿಸಬಹುದು. ಯಾವ ವಸ್ತುವನ್ನಾದರೂ ಉಂಟು ಅಥವಾ ಇಲ್ಲ ಎಂದು ನಿಖರವಾಗಿ ಹೇಳುವುದು ತಪ್ಪು. ಉಂಟು ಎಂಬುದರ ಗರ್ಭದಲ್ಲಿಯೇ ಇಲ್ಲ ಅಡಗಿದೆ. ಒಂದು ವಸ್ತು ಉಂಟು ಎಂದು ನಾವು ವ್ಯಾವಹಾರಿಕವಾಗಿ ಹೇಳಬಹುದು. ಸೂಕ್ಷ್ಮವಾಗಿ ವಿಚಾರ ಮಾಡಿದಾಗ ಅದು ಇಲ್ಲವಾಗುತ್ತದೆ. ಉಂಟು, ಇಲ್ಲಗಳೆಂಬ ಅತಿರೇಕಗಳ ನಡುವೆ ಅವುಗಳನ್ನು ಮೀರಿ ಸತ್ಯ ನಿಂತಿದೆ. ಈ ಸತ್ಯವೇ ಶೂನ್ಯ. ಪರಮಸತ್ಯವಾದ ಶೂನ್ಯವನ್ನು ಸಾಧಿಸುವುದೇ ಜೀವನದ ಪರಮೋದ್ದೇಶ. ಇದನ್ನು ತರ್ಕದಿಂದ, ಭಾಷೆಯ ಬಲದಿಂದ ತಿಳಿಯಲಾಗುವುದಿಲ್ಲ. ಕೇವಲ ಪ್ರಜ್ಞೆಯನ್ನು ಬಳಸಿಕೊಳ್ಳುವುದರ ಮೂಲಕ ಸಾಧಿಸಿಕೊಳ್ಳಬಹುದು. ಶೂನ್ಯ ತರ್ಕ ಸಿದ್ಧಾಂತವಲ್ಲ. ಜೀವನದಲ್ಲಿ ಸಾಧಿಸಬೇಕಾದ ಗುರಿ.

ನಾಗಾರ್ಜುನನು ತನ್ನ ಹೊಸ ಸಿದ್ಧಾಂತವನ್ನು ಪ್ರತಿಪಾದಿಸಲು ಒಂದು ಹೊಸ ತಂತ್ರವನ್ನು ಬಳಸಿಕೊಂಡ. ಅನಂತರದ ಆಚಾರ್ಯರೆಲ್ಲ ಇತರರ ವಾದಗಳನ್ನು ಖಂಡಿಸಿ ತಮ್ಮ ವಾದಗಳನ್ನು ಸ್ಥಾಪಿಸಲು ನಾಗಾರ್ಜುನನ ಆ ತಂತ್ರವನ್ನೇ ಬಳಸಿಕೊಂಡಿದ್ದಾರೆ. ಹೀಗೆ ದರ್ಶನ ಸಾಹಿತ್ಯದ ಬೆಳವಣಿಗೆಗೆ ನಾಗಾರ್ಜುನನು ಕಾರಣನಾಗಿದ್ದಾನೆ. ಪ್ರಪಂಚದ ಶ್ರೇಷ್ಠತಮ ತಾರ್ಕಿಕರಲ್ಲಿ ನಾಗಾರ್ಜುನನೊಬ್ಬ.

ನಾಗಾರ್ಜುನನಿಂದ ಬೌದ್ಧಮತಕ್ಕೆ ಸಂದ ಸೇವೆ ಅಪಾರ. ಅದಕ್ಕೆ ಒಂದು ಹೊಸ ತಿರುವನ್ನು ಕೊಟ್ಟು ನಾಡಿನಲ್ಲೆಲ್ಲ ಹಬ್ಬುವಂತೆ ಮಾಡಿದ ಕೀರ್ತಿ ಅವನದು. ಬಹು ಮಂದಿ ಪ್ರಚಂಡ ಮೇಧಾವಿಗಳು ಅವನಿಂದ ಪ್ರಭಾವಿತರಾಗಿ ಬೌದ್ಧಮತವನ್ನವಲಂಬಿಸಿದರು, ಅತ್ಯುತ್ಕೃಷ್ಟ ದರ್ಶನ ಗ್ರಂಥಗಳನ್ನು ರಚಿಸಿದರು. ಮಾತ್ರವಲ್ಲದೆ ದೂರದ ಚೀನ ಟಿಬೆಟ್‌ಗಳಿಗೆ ಬೌದ್ಧಧರ್ಮ ಪ್ರಸಾರವಾಗಲು ಕಾರಣರಾದರು. ಮೊನ್ನೆ ಮೊನ್ನೆಯವರೆಗೆ ಚೀನ ಮತ್ತು ಟಿಬೆಟ್ ದೇಶಗಳಲ್ಲಿ ಬಹುಜನರು ಅನುಸರಿಸುತ್ತಿದ್ದ ಧರ್ಮ ನಾಗಾರ್ಜುನನ ಮಹಾಯಾನ ಬೌದ್ಧಧರ್ಮ, ಅಲ್ಲಿ ಕಮ್ಯೂನಿಸಂ ಬಂದಮೇಲೆ ಮಹಾಯಾನ ಧರ್ಮ ಮಾಯವಾಗಿದೆ.

ನಾಗಾರ್ಜುನನಿಂದ ಬೌದ್ಧಧರ್ಮಕ್ಕೆ ಒಂದು ರೀತಿಯ ಹಾನಿಯೂ ಆಯಿತು. ಬೌದ್ಧಧರ್ಮದ ಮೂಲಗ್ರಂಥಗಳೆಲ್ಲ ಜನಸಾಮಾನ್ಯರ ಭಾಷೆಯಾದ ಪಾಳಿಯಲ್ಲಿರುವ ಪರಂಪರೆಗೆ ವ್ಯತಿರಿಕ್ತವಾಗಿ ಅವನೂ ಅವನ ಶಿಷ್ಯರೂ ಸಂಸ್ಕೃತ ಭಾಷೆಯಲ್ಲಿ ಬರೆದರು. ಬುದ್ಧನಿಗೆ ಸಂಸ್ಕೃತದಲ್ಲಿ ಅದ್ವಿತೀಯ ಪಾಂಡಿತ್ಯವಿದ್ದರೂ ಅನೇಕ ಶಿಷ್ಯರು ಪಂಡಿತಭಾಷೆಯಾದ ಸಂಸ್ಕೃತವನ್ನು ಬಳಸಬೇಕೆಂದು ಕೇಳಿಕೊಂಡರೂ ಅವನು ಪಾಳಿಯನ್ನೇ ಉಪಯೋಗಿಸಿದ್ದ. ಧರ್ಮಬೋಧೆ ಜನಸಾಮಾನ್ಯರಿಗೆ ಅರ್ಥವಾಗುವಂತೆ ಅವರ ಭಾಷೆಯಲ್ಲೇ ನಡೆಯಬೇಕೆಂದು ನಿಯಮಮಾಡಿದ್ದ. ಆದರೆ ನಾಗಾರ್ಜುನ ಮತ್ತು ಅವನ ಶಿಷ್ಯರು ಪಂಡಿತಮಾತ್ರರಿಗೆ ಅರ್ಥವಾಗುವ ಸಂಸ್ಕೃತದಲ್ಲಿ ಗ್ರಂಥರಚನೆ ಮಾಡಿದರು. ಇವರ ವಿಷಯ ಪ್ರತಿಪಾದನೆ ಧೀಮಂತರಿಗೆ ಮಾತ್ರ ಅರ್ಥವಾಗುವಂಥದು. ಹೀಗಾಗಿ ಧರ್ಮವು ಮಹಾಜನರ ಸಾಮಾನ್ಯ ಸ್ವತ್ತಾಗಿರದೆ ಪಂಡಿತರ ತರ್ಕಭೂಮಿಯ ವಸ್ತುವಾಯಿತು. ಪರಿಣಾಮವಾಗಿ ಬೌದ್ಧಧರ್ಮ ಪರದೇಶಿಯಾಯಿತು.

## ನಾನಕ್, ಗುರು

ನಾನಕ್ 'ಸಿಕ್ಖ' ಮತ ಸ್ಥಾಪಕರು. ಹದಿನೈದನೆಯ ಶತಮಾನದ ಅಂತ್ಯದಲ್ಲಿ ಹಿಂದೂ–ಮುಸಲ್ಮಾನ್ ಧರ್ಮಗಳನ್ನು ಸಮನ್ವಯಗೊಳಿಸಿದರು ಗುರು ನಾನಕ್. ಹಲವರು ಅವರ ಧರ್ಮವನ್ನು ಒಪ್ಪಿಕೊಂಡು ಶಿಷ್ಯರಾದರು : ಅವರನ್ನು ತಮ್ಮ 'ಗುರು' ಎಂದರು.

ಈಗ ಪಶ್ಚಿಮ ಪಾಕಿಸ್ತಾನದಲ್ಲಿರುವ ತಾಲ್ವಂಡಿ [illegible] ನಾನಕ್ 1496ರಲ್ಲಿ ಹಿಂದೂ ಕುಟುಂಬವೊಂದರಲ್ಲಿ ಜನಿಸಿದರು. ಮದುವೆಯಾಗಿ ಸಂಸಾರಿಯಾದರೂ ಅವರಿಗೆ ಮೊದಲಿನಿಂದಲೂ ಧಾರ್ಮಿಕ [illegible]ಗಳಲ್ಲಿ ಆಸಕ್ತಿ ಹೆಚ್ಚು. ತಮ್ಮ ಮೂವತ್ತನೆಯ ವಯಸ್ಸಿನಲ್ಲಿ [illegible]



ಹಿಂದೂ ಇಸ್ಲಾಂ ಧರ್ಮಗಳನ್ನು ಸಮನ್ವಯಗೊಳಿಸಿದ ಗುರು ನಾನಕ್

ರಾದರು : ಧಾರ್ಮಿಕ ಗುರುವಾದರು. ನಾನಕ್‌ರಿಗೆ ಹಿಂದೂ ಧರ್ಮದಿಂದ ತೃಪ್ತಿ ಸಿಗಲಿಲ್ಲ. ಇಸ್ಲಾಂ ಧರ್ಮದಲ್ಲಿ ಆಸಕ್ತರಾದರು. ಪರ್ಷಿಯನ್ ಭಾಷೆಯನ್ನು ಕಲಿತು ಅನೇಕ ಧಾರ್ಮಿಕ ಗ್ರಂಥಗಳನ್ನು ಓದಿದರು. ಆದರೆ ಇಸ್ಲಾಂ ಧರ್ಮದಿಂದಲೂ ಅವರಿಗೆ ತೃಪ್ತಿ ದೊರೆಯಲಿಲ್ಲ. ಆದ್ದರಿಂದ ಹಿಂದೂ ಧರ್ಮ, ಇಸ್ಲಾಂ ಎರಡರಲ್ಲೂ ತಮಗೆ ಸಮ್ಮತವೆಂದು ತೋರಿದ ಒಳ್ಳೆಯ ಗುಣಗಳನ್ನು ಸಮನ್ವಯಮಾಡಿ ಹೊಸದೊಂದು ಧರ್ಮವನ್ನು ಸ್ಥಾಪಿಸಿದರು.

ಒಮ್ಮೆ ನದಿಗೆ ಸ್ನಾನಕ್ಕೆ ಹೋದವರು ಮೂರು ದಿನ ಅದೃಶ್ಯರಾಗಿದ್ದರೆಂದೂ ಆಗ ದೇವರು ಅವರಿಗೆ ಪ್ರತ್ಯಕ್ಷನಾಗಿ ಒಂದು ಬಟ್ಟಲಿನಲ್ಲಿ ಅಮೃತವನ್ನು ನೀಡಿದನೆಂದೂ ಹೊಸ ದರ್ಶನವಾದ ನಾನಕ್ ಪ್ರಪಂಚಕ್ಕೆ ಉಪದೇಶ ಮಾಡಬೇಕೆಂದು ಆಜ್ಞಾಪಿಸಿದನೆಂದೂ ನಂಬಿಕೆಯುಂಟು.

ಧರ್ಮಕ್ಕೆ ಯಾವ ಹೆಸರನ್ನೂ ನಾನಕ್ ಕೊಡಲಿಲ್ಲ. ಆದರೆ ಅವರ ಶಿಷ್ಯರು ತಮ್ಮನ್ನು 'ಸಿಕ್ಖ್' (ಸಂಸ್ಕೃತದಲ್ಲಿ ಶಿಷ್ಯ) ಎಂದು ಕರೆದುಕೊಂಡರು.

ನಾನಕರ ಮೇಲೆ ಭಕ್ತಿಮಾರ್ಗ ಬಹಳ ಪ್ರಭಾವವನ್ನು ಬೀರಿತ್ತು. ಮುಸಲ್ಮಾನ ದಂಪತಿಗಳ ಮಗನಾಗಿ ಜನಿಸಿದರೂ ಸ್ವಾಮಿ ರಮಾನಂದರ ಪ್ರಭಾವಕ್ಕೆ ಒಳಗಾಗಿ ಹಿಂದೂಗಳ ದೇವರಾದ ರಾಮನನ್ನು ಭಕ್ತಿಪೂರ್ವಕ ಭಜಿಸಿ ಹಿಂದೂ-ಮುಸಲ್ಮಾನ ಮೈತ್ರಿಗೆ ಕಾರಣರಾಗಿ ದೇವರ ಬಳಿ ಮಾನವರೆಲ್ಲರೂ ಸರಿಸಮಾನರು ಎಂದು ಸಾರಿದ ಸಂತ ಕಬೀರ (1398-1518), ಹಾಗೂ ದೇವರೊಬ್ಬನೇ ಸತ್ಯ ಎಂದು ಸಾರಿದ ಮುಸಲ್ಮಾನರಲ್ಲಿನ ಸೂಫಿ ಪಂಗಡದವರು ನಾನಕ್‌ರಿಗೆ ಬಹಳ ಮೆಚ್ಚುಗೆಯಾದರು. ದೇವರ ಹೆಸರಿನ ಸ್ಮರಣೆ 'ನಾಮ್' (ನಾಮ ಪಾರಾಯಣ) ಮೋಕ್ಷಕ್ಕೆ ದಾರಿ ಎಂದು ಹೇಳಿದರು ನಾನಕ್. ಎಲ್ಲ ಮಾನವರು ಸರಿಸಮಾನರು ಎಂದು ಬೋಧಿಸಿದರು. ದೇವರನ್ನು [illegible] ವಿಧಿವಿಧಾನಗಳನ್ನು ಪಾಲಿಸುವುದು ಅನವಶ್ಯವೆಂದೂ ವಿವಾಹ, ಸಾಂಸಾರಿಕ ಜೀವನ ಇವು ಎಲ್ಲರಿಗೂ ಸಹಜವಾದುವೆಂದೂ ಹೇಳಿದರು. ಆಡಂಬರವಿಲ್ಲದ ಸರಳವಾದ ಜೀವನ, ಧರ್ಮಾಚರಣೆ, ಭಗವಂತನ ಧ್ಯಾನ, ನಾಮಸ್ಮರಣೆ, ಸತ್ಯದ ಆಚರಣೆ—ಇವು ಮುಖ್ಯವೆಂದು ಬೋಧಿಸಿದರು.

ನಾನಕ್ ಭಾರತದಲ್ಲೂ ಅರಬ್ ದೇಶಗಳಲ್ಲೂ ಬಹಳ ಸಂಚರಿಸಿದರು.

ಗುರು ನಾನಕರು 1511ರಲ್ಲಿ ದಕ್ಷಿಣ ಭಾರತದ ಪ್ರವಾಸ ಕೈಗೊಂಡು, ಬೀದರಿಗೆ ಭೇಟಿ ಇತ್ತಿದ್ದರು. ಬೀದರಿನಲ್ಲಿ ನೀರಿನ ಕೊರತೆ ಬಹುವಾಗಿತ್ತು. ಕರುಣಾಮಯಿ ನಾನಕರು ದೇವರನ್ನು ಪ್ರಾರ್ಥಿಸಿ ಒಂದು ಗುಡ್ಡದ ಬುಡದಲ್ಲಿಯ ಕಲ್ಲನ್ನು ತಮ್ಮ ಕಾಲಿನಿಂದ ಸರಿಸಿದರೆಂದೂ ಕೂಡಲೇ ನಿರ್ಮಲ ಜಲಧಾರೆ ಹೊರಕ್ಕೆ ಹರಿಯಿತೆಂದೂ ಹೇಳುತ್ತಾರೆ. ಈ ಸೊಗಸಾದ ನೀರಿನ ತೊರೆಗೆ ಇಂದೂ 'ಗುರು ನಾನಕ್ ಝರಾ' ಎಂದೇ ಹೆಸರು.

ನಾನಕ್ ತಾವು ಸ್ಥಾಪಿಸಿದ ಧರ್ಮವನ್ನು ಮುಂದುವರಿಸಲು ತಮ್ಮ ಶಿಷ್ಯರಲ್ಲಿ ಒಬ್ಬರಾದ ಅಂಗದ ಎಂಬವರನ್ನು ನೇಮಿಸಿ 1539ರಲ್ಲಿ ಕಾಲವಾದರು.

ಸಿಕ್ಖರಿಗೆ ಹತ್ತು ಜನ ಗುರುಗಳಿದ್ದಾರೆ, ಅವರಲ್ಲಿ ಎರಡನೆಯ ಗುರು ಅಂಗದ ; ಗುರುಮುಖಿ ಲಿಪಿಯನ್ನು ಇವರು ರೂಪಿಸಿದರು. ಐದನೆಯ ಗುರು ಅರ್ಜನ್ ; ಅಮೃತಸರ ನಗರವನ್ನು ಸ್ಥಾಪಿಸಿ ಅಲ್ಲಿ ಸುವರ್ಣ ಮಂದಿರವನ್ನು ಇವರು ಕಟ್ಟಿಸಿದರು. ತಮ್ಮ ಹಿಂದಿನ ಗುರುಗಳು ಮತ್ತು ಕೆಲವು ಹಿಂದೂ ಮತ್ತು ಮುಸಲ್ಮಾನ ಸಂತರ ಉಪದೇಶಗಳನ್ನು ಒಟ್ಟುಗೂಡಿಸಿ 'ಗ್ರಂಥ ಸಾಹಿಬ್' ಎಂಬ ಪವಿತ್ರಗ್ರಂಥವನ್ನು ಪ್ರಕಟಿಸಿದರು. ಇದು ಸಿಕ್ಖರ ಧಾರ್ಮಿಕ ಗ್ರಂಥ.

ಸಿಕ್ಖರು ಮೊದಲು ಒಂದು ಧರ್ಮದ ಅನುಯಾಯಿಗಳು ಮಾತ್ರ ಆಗಿದ್ದರು. ಕೆಲವು ಮೊಗಲ್ ಚಕ್ರವರ್ತಿಗಳು ಸಿಕ್ಖ್ ಧರ್ಮಗುರುಗಳನ್ನು ಬಹಳವಾಗಿ ಹಿಂಸಿಸಿ ಮರಣದಂಡನೆಗೆ ಗುರಿಪಡಿಸಿದ್ದರಿಂದ, ತಮ್ಮ ಧರ್ಮವನ್ನು ಉಳಿಸಿಕೊಳ್ಳಬೇಕಾದರೆ ತಾವು ವೀರರಾಗಿ ಹೋರಾಡಬೇಕೆಂದು ಸಿಕ್ಖರು ನಿರ್ಧರಿಸಿದರು. ಭಾರತೀಯ ಸೈನ್ಯಪಡೆಯಲ್ಲಿ ಸಿಕ್ಖರಿಗೆ ಪ್ರಮುಖ ಸ್ಥಾನ, ಇವರು ಬಲಶಾಲಿಗಳು, ಧೈರ್ಯವಂತರು. ಎಂಥ ಕಷ್ಟಮಯ ಜೀವನವನ್ನೂ ಸಾಗಿಸಲು ಗಟ್ಟಿಗರು. ಇಂದು ಸುಮಾರು ಎಂಬತ್ತು ಲಕ್ಷ ಜನ ಸಿಕ್ಖರಿದ್ದಾರೆ. ಅವರಲ್ಲಿ ಹೆಚ್ಚಿನವರು ಪೂರ್ವ ಪಂಜಾಬಿನಲ್ಲಿದ್ದಾರೆ. ಉಳಿದವರು ಪ್ರಪಂಚದ ಅನೇಕ ಭಾಗಗಳಲ್ಲಿ ಸಣ್ಣ ಸಣ್ಣ ಗುಂಪುಗಳಾಗಿ ನೆಲೆಸಿದ್ದಾರೆ.

ವಿವರ : ಏಳನೆಯ ಸಂಪುಟ

## ನಾನ್‌ಸನ್, ಫ್ರಿಟ್‌ಯಾಫ್ ಮತ್ತು ಆಡ್

ತಂದೆ ಮಕ್ಕಳಿಬ್ಬರೂ ಖ್ಯಾತಿ ಪಡೆಯುವುದು ವಿರಳ. ನಾರ್ವೆ ದೇಶದ ನಾನ್‌ಸನ್ ಮನೆತನದಲ್ಲಿ ಧೀರರೂ ಕೀರ್ತಿವಂತರೂ ಆದ ತಂದೆ-ಮಗನನ್ನು ಕಾಣಬಹುದು.

ಪ್ರಸಿದ್ಧ ಧ್ರುವಶೋಧಕನಾದ ಫ್ರಿಟ್‌ಯಾಫ್ ನಾನ್‌ಸನ್ (1861–1930) ನಾರ್ವೆಯವನು. ಅನ್ವೇಷಕನಷ್ಟೇ ಅಲ್ಲದೆ ಅವನು ವಿಜ್ಞಾನಿಯೂ ರಾಜಕಾರಣಿಯೂ ಮಾನವತಾವಾದಿಯೂ ಆಗಿದ್ದ. ಬಹುಮುಖ ಪ್ರತಿಭೆಯಿಂದ ಕೂಡಿತ್ತು ಅವನ ವ್ಯಕ್ತಿತ್ವ.

ಫ್ರಿಟ್‌ಯಾಫ್ ನಾನ್‌ಸನ್ ಕ್ರಿಸ್ತಿಯಾನಾ ವಿಶ್ವವಿದ್ಯಾನಿಲಯದಲ್ಲಿ ಪ್ರಾಣಿಶಾಸ್ತ್ರವನ್ನು ಅಭ್ಯಾಸಮಾಡಿದ. ಯೌವನದಲ್ಲಿ ಅವನು ಅತ್ಯುತ್ತಮ ಕ್ರೀಡಾಪಟುವಾಗಿದ್ದ. ಹಿಮದಲ್ಲಿ ಜಾರುವುದು, ಬೇಟೆಯಾಡುವುದು ಇವೆಲ್ಲ ಪ್ರಿಯವಾದ ಹವ್ಯಾಸಗಳಾಗಿದ್ದುವು. ವ್ಯಾಯಾಮಮಾಡಿ ಅವನು ಅದ್ಭುತ ದೇಹದಾರ್ಢ್ಯವನ್ನು ಪಡೆದಿದ್ದ.

ಪೂರ್ವ ದಿಕ್ಕಿನಿಂದ ಹೊರಟು ಗ್ರೀನ್‌ಲೆಂಡನ್ನು ದಾಟಬೇಕೆಂಬುದು ನಾನ್‌ಸನ್‌ನ ಆಸೆ. ಸರಕಾರ ಇದನ್ನು ಮಂಜೂರಿಸಲಿಲ್ಲ. ಸಾವಿಗೆ ಆಹ್ವಾನ ಎಂದಿತು. ಆದರೂ 1882ರಲ್ಲಿ ಅವನು ವೈಕಿಂಗ್ ಎಂಬ ಹಡಗಿನಲ್ಲಿ ಗ್ರೀನ್‌ಲೆಂಡಿಗೆ ಪ್ರಯಾಣ ಹೊರಟ. ಆ ಯಾನದಲ್ಲಿ ಅವನಿಗೆ ಗ್ರೀನ್‌ಲೆಂಡಿನ ಅಗಾಧ ಹಿಮ ಕಣ್ಣಿಗೆ ಬಿದ್ದಿತು. ಪ್ರಯತ್ನಪಟ್ಟರೆ ಅದನ್ನು ದಾಟಬಹುದೆಂದು ಅವನಿಗೆ ತೋರಿತು. ತುಂಬ ಯೋಚನೆಮಾಡಿ 1887ರಲ್ಲಿ ತನ್ನ ಉದ್ದೇಶವನ್ನು ಹೊರಗೆಡವಿದ. ಮರುವರ್ಷ ಆರು ಜನರನ್ನು ಕರೆದುಕೊಂಡು ಹೊರಟ. ಬಿರುಗಾಳಿ, ಮಳೆ, ಹಿಮ ಇವುಗಳು ಒಡ್ಡಿದ ಎಲ್ಲ ತಡೆಗಳನ್ನೂ ಧೈರ್ಯದಿಂದ ಎದುರಿಸಿ ನಾನ್‌ಸನ್ ಮುಂದೆ ಸಾಗಿದ. ಸೆಪ್ಟೆಂಬರ್ 5ರಂದು ಅತ್ಯಂತ ಎತ್ತರ ಪ್ರದೇಶವನ್ನು (2,721 ಮೀಟರ್) ಅವರು ಮುಟ್ಟಿದರು. ಸೆಪ್ಟೆಂಬರ್ 26ರಂದು ಗ್ರೀನ್‌ಲೆಂಡಿನ ಪಶ್ಚಿಮ ದಡವನ್ನು ಸೇರಿದರು. ಆ ವೇಳೆಗೆ ಚಳಿಗಾಲ ಅತ್ಯಂತ ಕ್ರೂರವಾಗಿದ್ದುದರಿಂದ ಅಲ್ಲಿಯೇ ಉಳಿದರು. ಈ ವೇಳೆಯಲ್ಲಿ ನಾನ್‌ಸನ್ ಎಸ್ಕಿಮೊ ಜನರ ಜೀವನವನ್ನು ಅಭ್ಯಾಸಮಾಡಿದ. ಇದರ ಸಹಾಯದಿಂದ ಮುಂದೆ ಎಸ್ಕಿಮೊಗಳ ಬಗೆಗೆ ಒಂದು ಪುಸ್ತಕವನ್ನು ಬರೆದ. ಅದ್ಭುತ ಯಶಸ್ಸನ್ನು ಸಾಧಿಸಿದ. ಈ ತಂಡ 1889ರಲ್ಲಿ ಸ್ವದೇಶಕ್ಕೆ ಹಿಂದಿರುಗಿತು.

1890ರಲ್ಲಿ ಹಿಂದಿಗಿಂತ ಹೆಚ್ಚು ಸಾಹಸದ ಯೋಜನೆಯನ್ನು ನಾನ್‌ಸನ್ ನಾರ್ವೆಯ ಭೌಗೋಳಿಕ ಸಂಸ್ಥೆಯ ಮುಂದಿಟ್ಟ. 1892ರಲ್ಲಿ ಅದೇ ಯೋಜನೆಯನ್ನು ಲಂಡನ್ನಿನ ರಾಯಲ್ ಜಿಯಾಗ್ರಫಿಕಲ್ ಸೊಸೈಟಿಯ ಮುಂದೂ ಇರಿಸಿದ. ಧ್ರುವ ಸಮುದ್ರದ ನೀರ್ಗಲ್ಲು ನಿಧಾನವಾಗಿ ಚಲಿಸುತ್ತಿರುವುದೆಂದು ವಾದಿಸಿದ. ಹಿಮದ ನಡುವೆ ಸಿಕ್ಕಿದರೂ ನುಚ್ಚುನುರಿಯಾಗದೆ ಮೇಲಕ್ಕೆ ಬರುವಂಥ ಹಡಗೊಂದನ್ನು ತಯಾರಿಸಿ ಹಿಮಪ್ರವಾಹ ಎತ್ತ ಒಯ್ದರೆ ಅತ್ತ ಆ ಹಡಗಿನಲ್ಲಿ ಹೋಗಿಬರುವ ಯೋಜನೆಯನ್ನು ಪ್ರಕಟಿಸಿದ. ಸಮಕಾಲೀನ ಅನ್ವೇಷಕರೆಲ್ಲ ಪರಿಹಾಸ್ಯಮಾಡಿದರು.

ಆದರೂ ನಾರ್ವೆಯ ಪಾರ್ಲಿಮೆಂಟ್ ಅವನು ಅಗತ್ಯವೆಂದುಕೊಂಡ ಹಣದ ಮೂರರಲ್ಲಿ ಎರಡು ಭಾಗವನ್ನು ನೀಡಿತು. ಉಳಿದುದನ್ನು ಸಹಾಯಧನಗಳಿಂದ ಕೂಡಿಸಲಾಯಿತು. ಅವನ ಯೋಜನೆಯಂತೆ ತಯಾರಿಸಲ್ಪಟ್ಟ ವಿಶಿಷ್ಟ ಹಡಗಿನ ಹೆಸರು 'ಮುನ್ನಡೆ'. ನಾನ್‌ಸನ್ ಸೈಬೀರಿಯದ ದ್ವೀಪಗಳತ್ತ ತನ್ನ ಪ್ರಯಾಣವನ್ನು 1893ರಲ್ಲಿ ಆರಂಭಿಸಿದ. ಧ್ರುವ ಸಮುದ್ರವನ್ನು ಪ್ರವೇಶಿಸಿದ ನಾನ್‌ಸನ್ ಹಿಮ ತನ್ನ ಹಡಗನ್ನು ಸುತ್ತುವರಿಯಲು ಧಾರಾಳವಾಗಿ ಅವಕಾಶವಿತ್ತ. ಹಿಮದ ಬಿಟ್ಟಿಲು ಮಂದಗಮನದಿಂದ ಮುಂದುವರಿದು ಧ್ರುವ ಪ್ರದೇಶವನ್ನು ಸೇರುತ್ತದೆ ಎಂಬುದು ಅವನ ನಂಬಿಕೆಯಾಗಿದ್ದಿತು. ಹಲವು ದಿನಗಳನ್ನು ತಾಳ್ಮೆಯಿಂದ ನಿರೀಕ್ಷಣೆಯಲ್ಲಿಯೇ ಕಳೆದ. ಹಡಗು ಬಹಳ ದೂರ ಚಲಿಸಿದಂತೆ ಕಾಣಲಿಲ್ಲ.

ಹೀಗೆ ಸಾಗುವುದರಿಂದ ಏನೂ ಪ್ರಯೋಜನವಿಲ್ಲ ಎಂಬುದು ಮನದಟ್ಟಾಯಿತು. ತನ್ನ ಸಂಗಡಿಗರಲ್ಲಿ ಹಿಜಾಲ್‌ಮರ್ ಜಾನ್‌ಸನ್ ಎಂಬುವನನ್ನು ಜೊತೆಗೆ ಕರೆದುಕೊಂಡು, ಜಾರುಬಂಡಿಗಳ ಮೇಲೆ ಉತ್ತರ ಧ್ರುವದ ಕಡೆ ಮುಂದುವರೆದ. ಅವರ ಪ್ರಯತ್ನ ಫಲಪ್ರದವಾಗಲಿಲ್ಲ. ಚಳಿಗಾಲ ಆರಂಭವಾದುದರಿಂದ ಆ ಪ್ರಯತ್ನವನ್ನು ಮಧ್ಯದಲ್ಲೇ ಕೈಬಿಡಬೇಕಾಯಿತು.



ಅನ್ವೇಷಕ, ಪ್ರಾಣಿಶಾಸ್ತ್ರಜ್ಞ, ರಾಜಕಾರಣಪಟು, ಮಾನವತಾವಾದಿ ನಾನ್‌ಸನ್

ನಾನ್‌ಸನ್ ಗುರಿಯನ್ನು ತಲಪದಿದ್ದುದು ನಿಜವಾದರೂ ಧ್ರುವ ಶೋಧನೆಗೆ ಅವನ ಕೊಡುಗೆ ಅಲ್ಪವೇನಲ್ಲ. ಧ್ರುವ ಪ್ರದೇಶದ ನೀರ್ಗಲ್ಲುಗಳ ಬಗೆಗೆ ಅವನ ಅಭಿಪ್ರಾಯ ಸತ್ಯ ಎಂಬುದು ಸ್ಪಷ್ಟವಾಯಿತು. ಧ್ರುವ ಸಮುದ್ರದ ಆಳ ಮತ್ತಿತರ ಮಾಹಿತಿಗಳನ್ನು ಅವನು ಒದಗಿಸಿದ. ಮುಂದಿನ ಶೋಧಕರಿಗೆ ಇದರಿಂದ ಬಹಳ ಸಹಾಯವಾಯಿತು. ಅಪ್ರತಿಮ ಸಾಹಸಿ ಎಂದು ನಾನ್‌ಸನ್‌ಗೆ ಗೌರವ ಸಂದಿತು.

ನಾನ್‌ಸನ್‌ನದು ಬಹುಮುಖ ಪ್ರತಿಭೆ. ಬರೀ ಸಾಗರ ಶೋಧನೆಗಳಿಂದ ಅವನು ತೃಪ್ತನಾಗಲಿಲ್ಲ. ರಾಜಕಾರಣದಲ್ಲಿ ಬಹಳ ಚಟುವಟಿಕೆಯ ಪಾತ್ರವನ್ನು ವಹಿಸಿ ಜನತೆಗೆ ಸೇವೆ ಸಲ್ಲಿಸಿದ. ಗ್ರೇಟ್ ಬ್ರಿಟನ್ನಿಗೆ ಹೋದ ನಾರ್ವೆಯ ಪ್ರಥಮ ರಾಯಭಾರಿ ಅವನು. 1919ರಲ್ಲಿ ರಾಷ್ಟ್ರಸಂಘ ಸಭೆ ಸೇರಿದಾಗ ನಾರ್ವೆಯ ಪ್ರಥಮ ಪ್ರತಿನಿಧಿಯಾಗಿ ನಾನ್‌ಸನ್ ಭಾಗವಹಿಸಿದ್ದ. 1920ರಲ್ಲಿ ಯುದ್ಧ ಕೈದಿಗಳನ್ನು ಸ್ವದೇಶಕ್ಕೆ ಹಿಂತಿರುಗಿಸುವ ಅಂತರ್ದೇಶೀಯ ಸಂಸ್ಥೆಯೊಂದರ ನಿರ್ದೇಶಕನಾಗಿ ನಿಯಮಿತನಾದ. ಈ ಸಂಸ್ಥೆ 'ನಾನ್‌ಸನ್ ಕಚೇರಿ' ಎಂದು ಪ್ರಸಿದ್ಧವಾಯಿತು. 1920–21ರಲ್ಲಿ ಸುಮಾರು 4,37,000 ಜನ ಕೈದಿಗಳು ಬಿಡುಗಡೆ ಹೊಂದಿ ಹಿಂದಿರುಗಿದರು. 1930ರ ವರೆಗೆ ಈ ಸಂಸ್ಥೆಯಲ್ಲಿ ಸಾವಿರಾರು ರಾಜಕೀಯ [illegible]

ಯಾರ್ಥವಾಗಿ ನಾನ್‌ಸನ್ ದುಡಿದ. 1920ರ ಮೊದಲಿನಲ್ಲಿ ಭಯಂಕರ ಕ್ಷಾಮದಿಂದ ರಷ್ಯ ದೇಶ ನರಳಿದಾಗ 120 ಲಕ್ಷ ಜನರಿಗೆ ಆಹಾರ ಒದಗಿಸುವ ಹೊಣೆಯನ್ನು ಹೊತ್ತ. 1922ರಲ್ಲಿ ಗ್ರೀಸ್ ಮತ್ತು ತುರ್ಕಿಗಳ ಯುದ್ಧದಲ್ಲಿ ಗ್ರೀಸ್ ಸೋತಿತು. ಲಕ್ಷಾಂತರ ಮಂದಿ ಗ್ರೀಕರೂ ಆರ್ಮೀನಿಯನರೂ ನಿಸ್ಸಹಾಯಕರಾದರು. ನಾನ್‌ಸನ್‌ನ ಸಂಸ್ಥೆ 12,50,000 ಮಂದಿಗೆ ಪುನರ್ವಸತಿಯನ್ನು ಕಲ್ಪಿಸಿತು. ಐದು ಲಕ್ಷ ತುರ್ಕಿಯವರು ಗ್ರೀಸಿನಿಂದ ತಮ್ಮ ರಾಷ್ಟ್ರಕ್ಕೆ ಮರಳಲು ಸಹಾಯಮಾಡಿತು. ಇದೇ ವರ್ಷ ನಾನ್‌ಸನ್ ಪ್ರಯತ್ನದಿಂದ ನಿರಾಶ್ರಿತರಿಗೆ ಗುರುತಿನ ಪತ್ರಗಳನ್ನು ನೀಡಲು ಅಂತರ ರಾಷ್ಟ್ರೀಯ ಒಪ್ಪಂದವಾಯಿತು. ಈ ಪತ್ರಗಳಿಗೆ 'ನಾನ್‌ಸನ್ ರಹದಾರಿ' ಎಂದು ಹೆಸರು. ಈ ಅಪೂರ್ವ ಕಾರ್ಯಗಳಿಗಾಗಿ 1923ರಲ್ಲಿ ಅವನಿಗೆ ನೊಬೆಲ್ ಶಾಂತಿ ಬಹುಮಾನ ದೊರಕಿತು. 1926ರಲ್ಲಿ ನಾನ್‌ಸನ್‌ನನ್ನು ನಾರ್ವೆಯ ಪ್ರಧಾನಿಯಾಗಬೇಕೆಂದು ಒತ್ತಾಯಪಡಿಸಿದರು. ಆದರೆ ಅವನು ಒಪ್ಪಲಿಲ್ಲ.

ಸಾಹಿತ್ಯದಲ್ಲಿಯೂ ಸಹ ನಾನ್‌ಸನ್ ತನ್ನ ಪ್ರತಿಭೆಯನ್ನು ಹೊರಸೂಸಿದ್ದಾನೆ. ಅವನ ಪ್ರವಾಸ ಕಥನಗಳು ಸೊಗಸಾಗಿವೆ.

ಅಪ್ರತಿಮ ಮೇಧಾವಿ, ಅಪೂರ್ವ ಸಾಹಸಿ ನಾನ್‌ಸನ್, ತನ್ನ 69ನೆಯ ಹುಟ್ಟಿದ ಹಬ್ಬವನ್ನು ಉತ್ತರಧ್ರುವದ ಮೇಲೆ ಹಾರಾಡುತ್ತಾ ಆಚರಿಸಬೇಕೆಂದಿದ್ದ. ಆದರೆ ಅದಕ್ಕೆ ಮೊದಲೇ 1930ರ ಮೇ 13ರಂದು ನಿಧನನಾದ.

ತಂದೆಯ ಜಾಡನ್ನೇ ಹಿಡಿದು ಹೊರಟ ಆಡ್ ನಾನ್‌ಸನ್, ನಾನ್‌ಸನ್‌ಗೆ ತಕ್ಕ ಮಗ. 1901ರಲ್ಲಿ ಹುಟ್ಟಿದ ಆಡ್ ನಾನ್‌ಸನ್‌ನಿಗೆ ಬಾಲ್ಯದಿಂದಲೂ ತಂದೆಯ ಸಾಹಸದ ಬಗೆಗೆ ಅಪಾರ ಮೆಚ್ಚುಗೆ. ಹಡಗು ನಿರ್ಮಾಣ, ನೌಕಾಯಾನ, ಅನ್ವೇಷಣೆ, ಸಾಗರ, ಸಾಗರದ ಜೀವಿಗಳು-ಇವುಗಳ ಬಗೆಗೆ ಪುಸ್ತಕಗಳನ್ನು ಓದುತ್ತಿದ್ದರೆ ಅವನಿಗೆ ಬಾಹ್ಯಪ್ರಪಂಚವೇ ಮರೆತುಹೋಗುತ್ತಿತ್ತು. 1920ರಲ್ಲಿ ಫ್ರಿಟ್‌ಯಾಫ್ ನಾನ್‌ಸನ್ ಯುದ್ಧ ಕೈದಿಗಳನ್ನು ಸ್ವದೇಶಕ್ಕೆ ಹಿಂದಿರುಗಿಸುವ ಕಾರ್ಯದಲ್ಲಿ ತೊಡಗಿದಾಗ ಯುವಕ ಆಡ್ ದುಡಿಮೆಯಲ್ಲಿ ಸಹಭಾಗಿಯಾದ.

ಎರಡನೆಯ ಮಹಾಯುದ್ಧದಲ್ಲಿ 1942ರ ಜನವರಿ 13ರಂದು ನಾರ್ವೆಯನ್ನು ಆಕ್ರಮಿಸಿದ ಜರ್ಮನರು ಸಹಸ್ರಾರು ಪೌರರೊಡನೆ ನಾನ್‌ಸನ್‌ನನ್ನು ಸಹ ಸೆರೆಹಿಡಿದು ಕೊಂಡೊಯ್ದರು. ಗಿನಿ ಎಂಬಲ್ಲಿ ಸೆರೆಯಲ್ಲಿದ್ದ ನಾನ್‌ಸನ್ ತನ್ನ ಅನುಭವಗಳನ್ನು ಕುರಿತು ದಿನಚರಿ ಬರೆಯುತ್ತಿದ್ದ. ಬೆಂಕಿಪೊಟ್ಟಣ, ಸಿಗರೇಟು ಪ್ಯಾಕುಗಳಲ್ಲಿ ಹೊರಗಿನವರಿಗೆ ಸಂದೇಶಗಳನ್ನು ಕಳುಹಿಸುತ್ತಿದ್ದ. ಏಕಾಂತವಾಸ, ಟೈಫಸ್ ಜ್ವರ ಬಂದ ಕೈದಿಗಳ ಮಧ್ಯೆ ವಾಸ, ಹೆಣಗಳ ಮಧ್ಯೆ ವಾಸ ಇವುಗಳಿಂದ ನಾನ್‌ಸನ್ ಪಟ್ಟ ಪಾಡು ವರ್ಣನೆಗೆ ಸಿಲುಕದು.

1945ರ ಮೇ ತಿಂಗಳಲ್ಲಿ ನಾನ್‌ಸನ್ ಬಿಡುಗಡೆಯಾಗಿ ಹಿಂದಿರುಗಿದ. 1947-48ರಲ್ಲಿ ಅಮೆರಿಕದ ಸಂಯುಕ್ತ ಸಂಸ್ಥಾನದ ಪ್ರತಿನಿಧಿಯಾಗಿ ಯೂರೋಪಿನ ದೇಶಗಳಲ್ಲಿ ಸಂಚರಿಸಿದ. ಎಲ್ಲೆಲ್ಲಿ ಹೋದರೂ ನೊಂದವರು ಬೆಂದವರ, ನಿರಾಶ್ರಿತರ ಮುಖಗಳೇ ಕಂಡುಬರುತ್ತಿದ್ದುವು. ಯೂರೋಪ್ ದೇಶವನ್ನು ಪುನರ್ನಿರ್ಮಿಸಲು ಕ್ಷಾಮ ಪೀಡಿತರಿಗೆ ಮತ್ತು ರೋಗಗ್ರಸ್ತರಿಗೆ ಸಹಾಯಮಾಡಿದರೆ ಸಾಲದು, ಪ್ರತಿಯೊಂದು ದೇಶದ ಯುವಜನಾಂಗವೂ ಪುನರ್ನಿರ್ಮಾಣದಲ್ಲಿ ನಾಯಕತ್ವವನ್ನು ವಹಿಸುವಂತೆ ಹುರಿದುಂಬಿಸಬೇಕು ಎಂದು ನಾನ್‌ಸನ್ ಭಾವಿಸಿದ. ಜಗತ್ತು ಒಂದೇ ಎಂಬ ಭಾವನೆಯನ್ನು ಎಲ್ಲರಲ್ಲೂ ಮೂಡಿಸಲು ಒಂದು ಸಂಘವನ್ನು ಸ್ಥಾಪಿಸಿ ಅದರ ಅಧ್ಯಕ್ಷನಾದ. 1949–50ರಲ್ಲಿ ನಾಜಿಗಳ ಸೆರೆಮನೆಯಲ್ಲಿ ನರಕವನ್ನು ಅನುಭವಿಸಿದ್ದರೂ ಜರ್ಮನಿಯ ಯುವಜನಾಂಗದ ಅಭಿವೃದ್ಧಿಗಾಗಿ ಯುನೆಸ್ಕೊವಿನ ನಿರ್ದೇಶಕರೊಡನೆ ಸೇರಿ ವಿದ್ಯಾಭ್ಯಾಸ ಮತ್ತು ಸಂಸ್ಕೃತಿಗಳ ಅಧ್ಯಯನ ಸೌಲಭ್ಯವನ್ನೊದಗಿಸಲು ದುಡಿದ. 'ದಿನದಿಂದ ದಿನಕ್ಕೆ' ಎಂಬ ಇವನ ಗ್ರಂಥ ಪ್ರಸಿದ್ಧವಾಗಿದೆ.

**ನೋಡಿ** : ಧ್ರುವ ; ನಿರಾಶ್ರಿತರು ; ವಲಸೆ, ಪುನರ್ವಲಸೆ

## ನಾರ್ವೆ

ಪ್ರತಿಯೊಂದು ಮನೆಯಲ್ಲಿಯೂ ವಿದ್ಯುದ್ದೀಪ. ಸಾಮಾನ್ಯವಾಗಿ ಶ್ರೀಮಂತರೇ ಹೆಚ್ಚು. ಎತ್ತರದ ನಿಲವು. ನೀಲಿಕಣ್ಣುಗಳು. ಸುಂದರ ಕೂದಲು. ಪರ್ವತ ಶ್ರೇಣಿಗಳ ನಿಸರ್ಗ ಸೌಂದರ್ಯದ ಮಧ್ಯೆ ಇಂಥ ಸ್ಫುರದ್ರೂಪಿಗಳು. ಆ ಎತ್ತರದ ಪರ್ವತಗಳಲ್ಲಿ ಹರಿಯುವ ನದಿಗಳೇ ಹೊಳೆಹೊಳೆಯುವ ವಿದ್ಯುದ್ದೀಪಗಳನ್ನು ಜನತೆಗೆ ಕೊಡಿಸಿವೆ.

ನಾರ್ವೆ ಯೂರೋಪಿನ ಉತ್ತರಕ್ಕಿರುವ ನಾಡು. ಚಿಕ್ಕ ದೊಡ್ಡ ಬೆಟ್ಟಗಳು ಅಸಂಖ್ಯ. ಜಲಪಾತಗಳು. ಅನೇಕ ತೋಟಗಳು, ಹಿಮಾಚ್ಛಾದಿತ ಶಿಖರಗಳು ಅಸಂಖ್ಯ ಪ್ರವಾಸಿಗಳ ಕಣ್ಮನಗಳನ್ನು ತಣಿಸುತ್ತವೆ. ಎಲ್ಲ ಮುಖ್ಯ ರೈಲುಗಾಡಿಗಳೂ ವಿದ್ಯುಚ್ಛಕ್ತಿಯಿಂದಲೇ ನಡೆಯುತ್ತವೆ.

ಸ್ಕಾಂಡಿನೇವಿಯ ಪರ್ಯಾಯದ್ವೀಪದ ಪಶ್ಚಿಮ ಭಾಗ ನಾರ್ವೆ. ನಾರ್ವೆಗೆ ಸ್ಪಿಟ್‌ಬರ್ಗ್ ಮತ್ತಿತರ ದ್ವೀಪಗಳು ಸೇರಿವೆ. ನಾರ್ವೆಯ ಬಹುಭಾಗ ಪರ್ವತಮಯ. ಕಣಿವೆಗಳು ಕಿರಿದಾಗಿವೆ. ತೀರದುದ್ದಕ್ಕೂ ಅಗಲ, ಕಿರಿದಾದ ಜಲಮಾರ್ಗಗಳಿವೆ. ಇದನ್ನು 'ಫ್ಯೋರ್ಡ್ಸ್' ಎನ್ನುತ್ತಾರೆ. ಈ ಭಾಗದಲ್ಲಿ ತುಂಬಾ ಸಣ್ಣ ಸಣ್ಣ ದ್ವೀಪಗಳಿವೆ. ಇವು ಮೀನು ಹಿಡಿಯುವ ಮುಖ್ಯ ನೆಲೆಗಳು. ಒಳನಾಡಿನ ಪ್ರಸ್ಥಭೂಮಿ ಹಿಮಾವೃತವಾಗಿದೆ. ಇಡೀ ಯೂರೋಪಿನಲ್ಲಿ, ನಾರ್ವೆಯಲ್ಲಿರುವಷ್ಟು ಹಿಮಬಂಡೆಗಳ ನದಿಗಳು ಇನ್ನೆಲ್ಲೂ ಇಲ್ಲ. ಈಶಾನ್ಯದಲ್ಲಿರುವ ಕಯೊಲೆನ್ ಪರ್ವತಗಳು ನಾರ್ವೆಯನ್ನು ಫಿನ್‌ಲೆಂಡ್ ಮತ್ತು ಸ್ವೀಡನಿನಿಂದ ಬೇರ್ಪಡಿಸುತ್ತವೆ.

ಗಲ್ಫ್ ಸ್ಟ್ರೀಮ್ ಎಂಬ ಬಿಸಿನೀರಿನ ಪ್ರವಾಹ ನಾರ್ವೆಯ ತೀರದ ಬಹುಭಾಗದಲ್ಲಿ ಹರಿದುಹೋಗುವುದರಿಂದ ದೇಶವನ್ನು ಬೆಚ್ಚಗಿಡುತ್ತದೆ. ತೀರ ಪ್ರದೇಶದಲ್ಲಿ ಚಳಿಗಾಲದಲ್ಲಿ ಹೆಚ್ಚು ಚಳಿ ಇಲ್ಲ. ಬೇಸಿಗೆಯಲ್ಲಿ ತಂಪು. ಒಳನಾಡಿನಲ್ಲಿ ಚಳಿ, ಸೆಕೆ ಎರಡೂ ಹೆಚ್ಚು. ಚಳಿಗಾಲದಲ್ಲಿ ಪರ್ವತ ಕಣಿವೆಯಲ್ಲೆಲ್ಲ ಹಿಮರಾಶಿ ತುಂಬಿದ್ದು, ನದಿಗಳು ಹೆಪ್ಪುಗಟ್ಟಿರುತ್ತವೆ. ಉತ್ತರ ಭಾಗ ಉತ್ತರ ಧ್ರುವದ ಸಮೀಪವಿರುವುದರಿಂದ ಬೇಸಿಗೆಯ ಎರಡು ತಿಂಗಳು ಕಾಲ ಹಗಲು, ರಾತ್ರಿ ಸೂರ್ಯ ಕಾಣಿಸುತ್ತಾನೆ. ಇದನ್ನು 'ಮಧ್ಯರಾತ್ರಿಯ ಸೂರ್ಯ' ಎನ್ನುವರು. ರಾತ್ರಿಯ ಸೂರ್ಯನ ಬೆಳಕಿನಲ್ಲಿ ಕಾಣುವ ದೃಶ್ಯ ಅದ್ಭುತವಾದುದು. ಚಳಿಗಾಲದಲ್ಲಿ ಸೂರ್ಯ ಕ್ಷಿತಿಜದ ಹತ್ತಿರವಷ್ಟೇ ಕಾಣಿಸುತ್ತಾನೆ.

ನಾರ್ವೆಯ ನಾಲ್ಕನೆಯ ಒಂದು ಭಾಗ ಕಾಡು. ಉತ್ತಮ ಬಗೆಯ ಮರಗಳು ಇಲ್ಲಿ ಸಿಗುತ್ತವೆ. ಶೀಘ್ರವಾಗಿ ಹರಿಯುವ ಜಲಪಾತಗಳಿರುವ ನದಿಗಳಿಂದ ವಿಪುಲ ವಿದ್ಯುದುತ್ಪಾದನೆ ಆಗುತ್ತದೆ.

ಕಬ್ಬಿಣ, ತಾಮ್ರ, ಕಲ್ಲಿದ್ದಲು, ಸತು, ಸೀಸ, ಸುಣ್ಣಕಲ್ಲು, ಡಾಲೊಮೈಟ್, ಇಲ್‌ಮೆನೈಟ್, ಪೈರೈಟ್ ಮೊದಲಾದ ಖನಿಜಗಳು ದೊರಕುತ್ತವೆ. ಮರದ ದಿಮ್ಮಿ, ಕಾಗದ, ಮೀನನ್ನು ಸಂಸ್ಕರಿಸುವುದು, ತಿಮಿಂಗಲ ಎಣ್ಣೆ, ಸೀಲ್‌ನ ಚರ್ಮ, ರಾಸಾಯನಿಕಗಳು, ಗೊಬ್ಬರ, ಲೋಹಸಂಸ್ಕರಣ, ಹಡಗು ನಿರ್ಮಾಣ, ಅಲ್ಯೂಮಿನಿಯಂ ಉತ್ಪಾದನೆ, ಬಟ್ಟೆ, ಆಹಾರ ಮತ್ತು ಪಾನೀಯಗಳು ಮೊದಲಾದ ಕೈಗಾರಿಕೆಗಳು ಬೆಳೆದಿವೆ. ಪ್ರವಾಸೋದ್ಯಮವೂ ಲಾಭದಾಯಕವಾಗಿ ನಡೆಯುತ್ತಿದೆ.

ನಾರ್ವೆಯವರ ಪೂರ್ವಜರು ವೈಕಿಂಗ್ ಜನಾಂಗದವರು. ಇವರ ಭಾಷೆ ಸ್ವೀಡಿಷ್ ಮತ್ತು ಡ್ಯಾನಿಷ್ ಭಾಷೆಗೆ ಸಂಬಂಧಿಸಿದಂತಿದೆ. ಶೇಕಡಾ 95ರಷ್ಟು ಜನ ಪ್ರಾಟೆಸ್ಟೆಂಟ್ ಪಂಥವನ್ನು ಅನುಸ ಸುತ್ತಾರೆ. ಜೀವನ ಮಟ್ಟ ಬಹಳ ಹೆಚ್ಚು. ಚಳಿಗಾಲದಲ್ಲಿ ಹಿಮದಾಟ ಆಡುವುದಕ್ಕೋಸ್ಕರ ಸಾವಿರಾರು ಜನ ಪರ್ವತ ಪ್ರದೇಶಗಳಿಗೆ ಹೋಗುತ್ತಾರೆ. ಬೇಸಿಗೆಯ ರಜಾದಿನಗಳಲ್ಲಿ ಸಮುದ್ರ ತೀರಕ್ಕೆ ಹೋಗಿ ಈಜಾಟ, ದೋಣಿಯಾನ, ಸೂರ್ಯಸ್ನಾನಗಳಲ್ಲಿ ಮಗ್ನರಾಗುತ್ತಾರೆ. ಪ್ರಕೃತಿಮಾತೆಯ ಮಡಿಲಲ್ಲಿ ಬೆಳೆದ ಈ ಜನ ನಿಸರ್ಗ ಪ್ರೇಮಿಗಳು.

ಹನ್ನೊಂದನೆಯ ಶತಮಾನದಲ್ಲಿ ಸ್ಥಾಪಿಸಲ್ಪಟ್ಟ ಆಸ್ಲೊ ರಾಜಧಾನಿ. ಬರ್ಗೆನ್, ನಗರವಲ್ಲದೆ ಹಿರಿಯ ಬಂದರೂ ಆಗಿದೆ. ಇಲ್ಲಿ ಮಧ್ಯಯುಗದ ಇಗರ್ಜಿಗಳು, ಕೋಟೆಗಳು ಇವೆ. ಸ್ಟಾವಾಂಗರ್ ಮತ್ತು ಟ್ರಾನ್‌ಹ್ಯಾಮ್ ಸಹ ದೊಡ್ಡ ನಗರಗಳು.

ವೈಕಿಂಗರ ಕಾಲದಲ್ಲಿ ನಾರ್ಸ್ ಹೆರಾಲ್ಡ್ ದೊರೆಯ ಆಳ್ವಿಕೆಯಲ್ಲಿ ನಾರ್ವೆ ಜನರು ಪ್ರಸಿದ್ಧಿಗೆ ಬಂದರು. ಒಂಬತ್ತನೆಯ ಶತಮಾನದಲ್ಲಿ ಒಂದು ರಾಷ್ಟ್ರವಾಗಿ ರೂಪುಗೊಂಡ ನಾರ್ವೆ 1262ರ ವೇಳೆಗೆ ಹಿರಿಯ ರಾಷ್ಟ್ರ ಎನ್ನಿಸಿಕೊಂಡಿತು. ಯೂರೊಪಿನಿಂದ ಗ್ರೀನ್‌ಲೆಂಡಿನ ತನಕ ಇದ್ದ ಎಲ್ಲ ವೈಕಿಂಗ್ ಪ್ರಾಂತಗಳೂ ನಾರ್ವೆಯ ಅರಸನ ಅಧೀನವಾಗಿರಲು ಒಪ್ಪಿದ್ದುವು. ಒಂದು ಶತಮಾನದ ಮೇಲೆ ನಾರ್ವೆಯ ಅರಸನ ವಂಶ ಇಲ್ಲದಂತಾಯಿತು, ಆಗ ನಾರ್ವೆ ಡೆನ್ಮಾರ್ಕಿಗೆ ಸೇರಿತು. ಹದಿನಾಲ್ಕನೆಯ ಶತಮಾನದಲ್ಲಿ ಬಂದ ಪ್ಲೇಗಿನಿಂದ ಮೂರನೆಯ ಒಂದು ಭಾಗ ಜನ ಮಡಿದರು. 1814ರ ವರೆಗೆ ಡೇನರ ಅಧೀನದಲ್ಲಿದ್ದ ನಾರ್ವೆ ಸ್ವೀಡನಿನ ಪಾಲಾಯಿತು. ಈ ಬದಲಾವಣೆಯ ಕಾಲದಲ್ಲಿ ನಾರ್ವೆ ಪ್ರಜಾಪ್ರಭುತ್ವ ಸಂವಿಧಾನ ರಚಿಸಿಕೊಂಡಿತು. 1905ರ ಜೂನ್‌ನಲ್ಲಿ ನಾರ್ವೆಯ ಸಂಸತ್ತಿನಲ್ಲಿ ಸ್ವೀಡನಿನ ಆಳ್ವಿಕೆಯನ್ನು ಅಂತ್ಯಗೊಳಿಸಬೇಕೆಂದು ತೀರ್ಮಾನವಾಯಿತು. ಅದೇ ಅಕ್ಟೋಬರ್‌ನಲ್ಲಿ ಎರಡು ದೇಶಗಳೂ ಸ್ನೇಹಭಾವದಿಂದ ಬೇರೆ ಬೇರೆ ಯಾದುವು. ನವೆಂಬರ್‌ನಲ್ಲಿ ಡೆನ್ಮಾರ್ಕಿನ ರಾಜಕುಮಾರ ಕಾರ್ಲ್ ನಾರ್ವೆಯ ಹೊಸ ರಾಜನಾದ. 1940ರಲ್ಲಿ ನಾರ್ವೆ ಜರ್ಮನಿಯ ವಶವಾಯಿತು. ಮಹಾಯುದ್ಧ ಕೊನೆಗಂಡ ಮೇಲೆ 1945ರಲ್ಲಿ ಸ್ವತಂತ್ರ ವಾಯಿತು.

ನಾರ್ವೆ ವಿಶ್ವಸಂಸ್ಥೆಯ ಸದಸ್ಯರಾಷ್ಟ್ರ.

ನಾರ್ವೆ ಪ್ರಕೃತಿಯ ಸಿರಿಮಡಿಲಿನಲ್ಲಿ ಮಲಗಿದೆ. ಮಧ್ಯರಾತ್ರಿಯ ಸೂರ್ಯ, 'ಸಪ್ತಸೋದರಿಯರ ಜಲಪಾತ', ಹಿಮಾವೃತ ಪರ್ವತ ಪ್ರದೇಶ ಪ್ರವಾಸಿಗರನ್ನು ಆಕರ್ಷಿಸುತ್ತವೆ.

ಸಮುದ್ರ ನಮ್ಮನ್ನು ಒಂದುಗೂಡಿಸುತ್ತದೆ, ಭೂಮಿ ನಮ್ಮನ್ನು ಬೇರೆ ಮಾಡುತ್ತದೆ—ಎನ್ನುತ್ತಾರೆ ನಾರ್ವೆಯ ಜನ.

ನಾರ್ವೆಯಲ್ಲಿರುವುದು ಸಂವಿಧಾನಬದ್ಧ ರಾಜಪ್ರಭುತ್ವ. ಮುಖ್ಯಮಂತ್ರಿ ಮತ್ತು ಸಚಿವ ಸಂಪುಟದವರು ರಾಜನಿಗೆ ಸಹಾಯಕರು.




## ನಾಸ್ತಿಕವಾದ

ಈ ಜಗತ್ತನ್ನೆಲ್ಲ ಸೃಷ್ಟಿಸಿದ ಶಕ್ತಿಯೊಂದಿದೆ; ಆ ಶಕ್ತಿ ಪ್ರಪಂಚವನ್ನು ಆಳುತ್ತದೆ, ನಡೆಸುತ್ತದೆ, ಕಾಯುತ್ತದೆ—ಎನ್ನುವ ನಂಬಿಕೆ ಬಹು ಮಂದಿಗಿದೆ. ಈ ಶಕ್ತಿಯನ್ನು ಅವರು ದೇವರು ಎಂದು ಕರೆಯುತ್ತಾರೆ. ಈ ನಂಬಿಕೆ ಇರುವವರು ಆಸ್ತಿಕರು. ಆದರೆ ದೇವರು ಇಲ್ಲ (ನ-ಅಸ್ತಿ) ಎಂದು ಹೇಳುವವರಿದ್ದಾರೆ. ಇವರು ನಾಸ್ತಿಕರು; ಇವರ ವಾದ ನಾಸ್ತಿಕವಾದ.

ಎಲ್ಲವನ್ನೂ ದೇವರು ನೋಡಿಕೊಳ್ಳುತ್ತಾನೆ. ಎಲ್ಲಕ್ಕೂ ಅವನೇ ಕಾರಣ ಎಂದಾದ್ದರಿಂದ ಮಾನವ ತನ್ನ ಕರ್ತವ್ಯವನ್ನು ಮರೆತುಬಿಡುತ್ತಾನೆ ಎನ್ನುತ್ತಾರೆ ನಾಸ್ತಿಕರು. ದೇವರನ್ನು ನಂಬುವವರು, ಅವನು ಎಲ್ಲವನ್ನೂ ಬಲ್ಲವನು, ಸರ್ವಶಕ್ತ, ಅಪಾರ ಕರುಣೆಯುಳ್ಳವನು ಎಂದು ಹೇಳುತ್ತಾರೆ. ಏನನ್ನಾದರೂ ಮಾಡುವ ಶಕ್ತಿ ಇರುವ ದೇವರು ಒಳ್ಳೆಯವರಿಗೆ ಕಷ್ಟ ಬಂದರೆ ಏಕೆ ಸುಮ್ಮನಿರುತ್ತಾನೆ ? ಹಾಗಾದರೆ ಅವನಿಗೆ ಕರುಣೆ ಇಲ್ಲವೆ ? ಕೆಟ್ಟವರಿಗೆ ಜಯ, ಅಭಿವೃದ್ಧಿ ಆದರೂ ಆತ ಏಕೆ ಅದನ್ನು ತಡೆಯುವುದಿಲ್ಲ ? ಅವನಿಗೆ ಶಕ್ತಿ ಇಲ್ಲವೆ ? ಎಂದು ನಾಸ್ತಿಕರು ವಾದಿಸುತ್ತಾರೆ.

ಪ್ರಾಚೀನ ಭಾರತದಲ್ಲಿಯೂ ನಾಸ್ತಿಕರಿದ್ದರು. ರಾಮಾಯಣದಲ್ಲಿ ಜಾಬಾಲಿ ಎಂಬವನು ಈ ವಾದವನ್ನು ಹೂಡುತ್ತಾನೆ. ಬುದ್ಧನಿಗಿಂತ ಮುಂಚೆ ಚಾರ್ವಾಕ ಪಂಥದವರು ನಾಸ್ತಿಕರಾಗಿದ್ದರು. ಚಾರ್ವಾಕ ಅವರ ಪ್ರಮುಖ; ಬೃಹಸ್ಪತಿ ಎಂಬುವನು ರಚಿಸಿದ ಸೂತ್ರಗಳಿಗೆ ಈತ ಭಾಷ್ಯವನ್ನು ಬರೆದ ಎಂದು ಹೇಳುತ್ತಾರೆ.

ಪಾಶ್ಚಾತ್ಯ ದೇಶಗಳಲ್ಲಿ ದೇವರು ಇರುವನೆಂದಾಗಲಿ ಇಲ್ಲವೆಂದಾಗಲಿ ಖಚಿತವಾದ ನಂಬಿಕೆ ಇಲ್ಲದಿರುವವರುಂಟು. ಮನುಷ್ಯನ ಬುದ್ಧಿಶಕ್ತಿ ಇಂಥ ಪ್ರಶ್ನೆಗೆ ಸ್ಪಷ್ಟವಾಗಿ ಉತ್ತರ ಕೊಡುವಷ್ಟು ಶಕ್ತವಲ್ಲ. ಎಂದು ಅವರ ಅಭಿಪ್ರಾಯ. ಇವರನ್ನು ಅಜ್ಞೇಯತಾವಾದಿಗಳು ಎನ್ನುತ್ತಾರೆ.

ನೋಡಿ : ದೇವರು

## ನ್ಯಾಯಶಾಸ್ತ್ರ

ಒಂದು ಸಮಾಜದ ವ್ಯಕ್ತಿಗಳು, ಒಬ್ಬರು ಇನ್ನೊಬ್ಬರ ಸಂಗಡ ನಡೆಸುವ ವ್ಯವಹಾರಗಳು ಕ್ರಮಬದ್ಧವಾದ ಕಟ್ಟಳೆಗಳಿಗೆ ಅನುಗುಣವಾಗಿರಬೇಕು. ಈ ಕಟ್ಟಳೆಗಳು ವ್ಯಕ್ತಿಗಳ ಪರಸ್ಪರ ಹಕ್ಕುಬಾಧ್ಯತೆಗಳನ್ನು ಕಾಪಾಡುತ್ತವೆ ಹಾಗೂ ಸಮಾಜ ಹಿತಕ್ಕಾಗಿ ವ್ಯಕ್ತಿಗಳು ನಡೆದುಕೊಳ್ಳಬೇಕಾದ ರೀತಿ ನೀತಿಗಳನ್ನು ವಿಧಿಸುತ್ತವೆ. ಇವಿಷ್ಟನ್ನೂ ಸಾಧಿಸುವ ಕಟ್ಟಳೆಗಳು ಬಹುಮಟ್ಟಿಗೆ ಒಂದು ಸಮಾಜವು ಯಾವ ರಾಜ್ಯದ ಆಡಳಿತಕ್ಕೆ ಒಳಪಟ್ಟಿರುತ್ತದೆಯೋ ಆ ರಾಜ್ಯದ ಶಾಸನಸಭೆಗಳಿಂದ ರಚಿಸಲ್ಪಟ್ಟವುಗಳು. ಹಲಕೆಲವು ಕಟ್ಟಳೆಗಳು, ಜನತೆಯಲ್ಲಿ ಅನೂಚಾನವಾಗಿ ರೂಢಿಯಲ್ಲಿರುವ ಪದ್ಧತಿಗಳನ್ನು ನ್ಯಾಯಸ್ಥಾನಗಳು ಮಾನ್ಯಮಾಡಿ ತನ್ಮೂಲಕ ಉದ್ಭವವಾಗುತ್ತವೆ. ಹೇಗಾದರೂ ಆಗಿರಲಿ, ಕಟ್ಟಳೆಗಳನ್ನು ಒಂದು ರಾಜ್ಯದ ಪ್ರತಿಯೊಬ್ಬ ಪ್ರಜೆಯೂ ಮಾನ್ಯಮಾಡಲೇಬೇಕು. ಇವುಗಳ ಉಲ್ಲಂಘನೆಯು ದಂಡನಾರ್ಹ. ಇಂಥ ಕಟ್ಟಳೆಗಳು ನಾನಾ ವಿಷಯಗಳಿಗೆ ಸಂಬಂಧಪಟ್ಟಿರುತ್ತವೆ. ಉದಾಹರಣೆಗೆ —ಒಡಂಬಡಿಕೆಯ ಕಾನೂನು, ಅಪರಾಧಗಳಿಗೆ ಸಂಬಂಧಪಟ್ಟ ಕಾನೂನು, ಉತ್ತರಾಧಿಕಾರಕ್ಕೆ ಸಂಬಂಧಪಟ್ಟ ಕಾನೂನು.

ನ್ಯಾಯಶಾಸ್ತ್ರವು ಮೇಲೆ ಹೇಳಿರುವ ಬೇರೆ ಬೇರೆ ವಿಷಯಗಳಿಗೆ ಸಂಬಂಧಪಟ್ಟ ಕಟ್ಟಳೆಗಳ ಮೊತ್ತವಲ್ಲ. ಕಟ್ಟಳೆಗಳ ಹಿಂದೆ ಅಡಗಿರುವ ಮೂಲತತ್ತ್ವಗಳನ್ನು, ಕಟ್ಟಳೆಗಳನ್ನು ಒಳಗೊಂಡ ಬೇರೆ ಬೇರೆ ಪದ್ಧತಿಗಳನ್ನು ಪರೀಕ್ಷಿಸುವುದು ನ್ಯಾಯಶಾಸ್ತ್ರದ ವ್ಯಾಪ್ತಿಗೆ ಒಳಪಟ್ಟಿದ್ದು. ಈ ಪರೀಕ್ಷೆ ಅಥವಾ ವಿಮರ್ಶೆಯನ್ನು ನ್ಯಾಯಶಾಸ್ತ್ರವು ತಾತ್ತ್ವಿಕ ದೃಷ್ಟಿಯಿಂದ ಸರ್ವಸಾಮಾನ್ಯವಾಗಿ ನಡೆಸುತ್ತದೆ. ಯಾವುದೋ ಒಂದು ಬಗೆಯ ವ್ಯವಹಾರಕ್ಕೆ ಸಂಬಂಧಪಡುವ ಕಟ್ಟಳೆಗಳ ವಿಮರ್ಶೆಯಲ್ಲಿ ನ್ಯಾಯಶಾಸ್ತ್ರವು ತೊಡಗುವುದಿಲ್ಲ. ನ್ಯಾಯಶಾಸ್ತ್ರವು ತನ್ನ ವಿಮರ್ಶೆಯಿಂದ ಹೊರಬೀಳುವ ಫಲಿತಾಂಶಗಳನ್ನು ಕಾರ್ಯರೂಪಕ್ಕೆ ತರುವ ಪ್ರಯತ್ನವನ್ನೂ ಮಾಡುವುದಿಲ್ಲ. ನೀತಿಗೂ ಕಟ್ಟಳೆಗಳಿಗೂ ಇರುವ ಸಂಬಂಧವನ್ನು ನ್ಯಾಯಶಾಸ್ತ್ರವು ಎತ್ತಿತೋರಿಸುತ್ತದೆ. ಅದು ಕಟ್ಟಳೆಗಳ ರಚನೆಗಳ ಕಾರಣಗಳನ್ನೂ ಅವು ಆಧಾರಿತವಾಗಿರುವ ತತ್ತ್ವಗಳನ್ನೂ ಪ್ರತಿಪಾದಿಸುತ್ತದೆ. ಹೊಸ ಕಟ್ಟಳೆಗಳ ರಚನೆಗೆ ಅದು ಕೈಹಾಕುವುದಿಲ್ಲ. ಈಗಾಗಲೇ ರಚಿಸಲ್ಪಟ್ಟಿರುವ ಕಟ್ಟಳೆಗಳ ಮೇಲೆ ಬೆಳಕನ್ನು ಚೆಲ್ಲುತ್ತದೆ.

ಕಟ್ಟಳೆಗಳನ್ನು ಕುರಿತ ಸಾಮಾನ್ಯಜ್ಞಾನವನ್ನು ನ್ಯಾಯಶಾಸ್ತ್ರವು ವಿಶ್ಲೇಷಿಸುತ್ತದೆ. ಅಸ್ತಿತ್ವದಲ್ಲಿರುವ ಕಟ್ಟಳೆಗಳು ಸಮಾಜದಲ್ಲಿ ವ್ಯವಸ್ಥೆಯನ್ನು ಕಾಪಾಡಿಕೊಂಡು ಬರಲು ಹೇಗೆ ಸಹಾಯಕವಾಗುತ್ತವೆ. ಈ ಕಟ್ಟಳೆಗಳು ಹೇಗೆ ಉತ್ಪತ್ತಿಯಾದುವು. ಇವು ಹೇಗೆ ಜಾರಿಗೆ ತರಲ್ಪಡುತ್ತವೆ, ಕಟ್ಟಳೆಗಳ ಪ್ರಭಾವವು ಸಮಾಜದ ಮೇಲೆ ಮತ್ತು ಸಮಾಜದ ಪ್ರಭಾವವು ಕಟ್ಟಳೆಗಳ ಮೇಲೆ ಹೇಗೆ ಉಂಟಾಗುತ್ತದೆ ಎಂಬ ಅಂಶಗಳನ್ನೂ ಕಟ್ಟಳೆಗಳಿಂದ ಸಮಾಜದ ವ್ಯವಸ್ಥೆಯ ಮೇಲೆ ಉಂಟಾಗಿರುವ ಪರಿಣಾಮವನ್ನೂ ಕಟ್ಟಳೆಗಳಿಗೆ ಸಮಾಜದ ವ್ಯಕ್ತಿಗಳು ತಲೆಬಾಗಿ ನಡೆಯುವಂತೆ ಮಾಡುವ ಪ್ರೇರಕಶಕ್ತಿಗಳನ್ನೂ ಕುರಿತು ನ್ಯಾಯಶಾಸ್ತ್ರವು ಜಿಜ್ಞಾಸೆ ನಡೆಸುತ್ತದೆ.

ಕಟ್ಟಳೆಗಳ ನಿಬಂಧನೆಗಳಲ್ಲಿ ಬಳಸಲ್ಪಡುವ 'ಹಕ್ಕು', 'ಜವಾಬ್ದಾರಿ', 'ಉದ್ದೇಶ', 'ಪ್ರೇರಕಶಕ್ತಿ', 'ಉದಾಸೀನತೆ', 'ಮಾಲಿಕತ್ವ', 'ಸ್ವಾಧೀನ' –ಮುಂತಾದ ಪದಗಳ ಅರ್ಥವನ್ನು ವಿಶ್ಲೇಷಿಸಿ, ತನ್ಮೂಲಕ ಕಟ್ಟಳೆಗಳನ್ನು ಪರಿಷ್ಕಾರವಾಗಿ ಅರ್ಥಮಾಡಿಕೊಳ್ಳಲು ನ್ಯಾಯವಾದಿಗಳಿಗೆ ನ್ಯಾಯಶಾಸ್ತ್ರವು ಸಹಾಯಮಾಡುತ್ತದೆ. ನ್ಯಾಯವಾದಿಗಳು ತಮ್ಮ ಮುಂದಿರುವ ಯಾವುದಾದರೂ ಒಂದು ವ್ಯವಹಾರಕ್ಕೆ ಸಂಬಂಧಪಟ್ಟ ಹಾಗೆ ಕಟ್ಟಳೆಗಳನ್ನು ಹೇಗೆ ಅನ್ವಯಿಸಬಹುದು ಎಂದು ವಾದ ಮಾಡಬೇಕಾಗುತ್ತದೆ. ಆಗ ನ್ಯಾಯಶಾಸ್ತ್ರದ ಸಹಾಯದಿಂದ ಪರಿಣಾಮಕಾರಿಯಾಗಿಯೂ ತರ್ಕಬದ್ಧವಾಗಿಯೂ ವಾದ ಮಾಡುವ ಸಾಮರ್ಥ್ಯವನ್ನು ಅವರು ಪಡೆಯುತ್ತಾರೆ.

## ನ್ಯಾಯಾಲಯ

ಶ್ರೇಷ್ಠ ನ್ಯಾಯಾಲಯ ಹೀಗೆ ತೀರ್ಪುಕೊಟ್ಟಿತು : ಹೈಕೋರ್ಟು ಅಪರಾಧಿಯ ಮನವಿಯನ್ನು ತಿರಸ್ಕರಿಸಿತು ; ಸೆಷನ್ಸ್ ನ್ಯಾಯಾಲಯ ಅಪರಾಧಿಯನ್ನು ಬಿಡುಗಡೆಮಾಡಿತು.

—ಇವು ಆಗಾಗ್ಗೆ ಪ್ರಕಟವಾಗುವ ಸುದ್ದಿಗಳು.

ಜನರು ಒಂದುಗೂಡಿ ಬಾಳುವ ಕಲೆ ನ್ಯಾಯವನ್ನು, ಅದರ ಅಭಾವದಲ್ಲಿ ಪ್ರಾಣಿಗಳು ಪರಸ್ಪರ ಕಾದಿದರೆ ಹೆಚ್ಚು ಬಲಶಾಲಿಯಾದ ಪ್ರಾಣಿ ಗೆಲ್ಲುತ್ತದೆ. ನಾಗರಿಕ ಮನುಷ್ಯರು ಹಾಗೆ ಕಾದಾಡುವುದಿಲ್ಲ. ಬುದ್ಧಿಶಕ್ತಿ ಹೊಂದಿರುವ ಮಾನವ, ಸಿದ್ಧಾಂತಗಳನ್ನು ಬಳಸುತ್ತಾನೆ. ನ್ಯಾಯವನ್ನು ಬಯಸುವ ಇಬ್ಬರೂ ತಮ್ಮ ತಮ್ಮ ಕೃತ್ಯವೇ ಸರಿ ಎಂದು ವಾದಿಸುವುದುಂಟು. ನ್ಯಾಯ

ನಡುವಣ ವಿವಾದ ತಮ್ಮಲ್ಲೇ ಪರಿಹಾರವಾಗದಿದ್ದರೆ. ಇಬ್ಬರ ವಾದವನ್ನೂ ಕೇಳಿದ ಮೂರನೆಯ ವ್ಯಕ್ತಿ ಸರಿ ಯಾವುದು ಅಥವಾ ತಪ್ಪು ಯಾವುದು ಎಂಬುದನ್ನು ನಿರ್ಣಯಿಸಬಲ್ಲ.

ಬಹಳ ಹಿಂದೆ ಗುಂಪು ಅಥವಾ ಪಂಗಡದ ಮುಖಂಡ ಯಾವುದು ನ್ಯಾಯ. ಯಾವುದು ಅನ್ಯಾಯ ಎಂಬುದನ್ನು ನಿರ್ಣಯಿಸುತ್ತಿದ್ದ. ಆ ನಿರ್ಣಯಕ್ಕೆ ಬರಲು ಬೇರೆ ಕೆಲವು ಮುಖ್ಯಸ್ಥರು ಅವನಿಗೆ ನೆರವಾಗುತ್ತಿದ್ದರು. ಈಗಲೂ ಇಂಥ ಪದ್ಧತಿ ಕೆಲವು ಆದಿವಾಸಿ ಜನಾಂಗಗಳಲ್ಲಿದೆ.

ರಾಜ್ಯಾಡಳಿತ ವ್ಯವಸ್ಥೆಗಳು ಕ್ರಮವಾಗಿ ರೂಪುಗೊಂಡಂತೆ. ಜನರ ಹಿತಗಳನ್ನು ರಕ್ಷಿಸುವ ಕಾನೂನುಗಳು ರಚಿತವಾದಂತೆ. ನ್ಯಾಯವನ್ನು ನಿರ್ಣಯಿಸುವ ಪ್ರತ್ಯೇಕ ಸಂಸ್ಥೆಯೇ ರೂಪುಗೊಂಡಿತು.

ಅದು ನ್ಯಾಯಾಲಯ.

ಪ್ರತಿಯೊಂದು ದೇಶದಲ್ಲಿ ನ್ಯಾಯಶಾಖೆ ಇರುತ್ತದೆ. ಸರಕಾರದಲ್ಲಿ ಶಾಸಕಾಂಗ. ಕಾರ್ಯಾಂಗ ಮತ್ತು ನ್ಯಾಯಾಂಗ ಇವು ಮೂರು ಮುಖ್ಯ ಅಂಗಗಳು. ಶಾಸಕಾಂಗ ಕಾನೂನುಗಳನ್ನು ಸಿದ್ಧಪಡಿಸಿದರೆ. ಕಾರ್ಯಾಂಗ ಅವುಗಳನ್ನು ಕಾರ್ಯರೂಪದಲ್ಲಿ ತರುತ್ತದೆ. ಕಾರ್ಯಾಚರಣೆಯಲ್ಲಿ ಅರೆಕೊರೆಗಳು ಕಂಡುಬಂದರೆ ಅವನ್ನು ನ್ಯಾಯಾಂಗ ಪರಿಶೀಲಿಸುತ್ತದೆ. ಕಾಯಿದೆಯ ಅರ್ಥವಿವರಣೆ ಮತ್ತು ವ್ಯಕ್ತಿ ವ್ಯಕ್ತಿಗಳ ನಡುವಿನ ಜಗಳವನ್ನು ಬಗೆಹರಿಸುವುದು. ವ್ಯಕ್ತಿ ಮತ್ತು ಸರಕಾರ ಇವುಗಳ ಜಗಳಗಳಲ್ಲಿ ತೀರ್ಪು ಕೊಡುವುದು ಇವೆಲ್ಲವೂ ನ್ಯಾಯಾಲಯಗಳಲ್ಲಿಯೇ ನಡೆಯುತ್ತವೆ. ಪ್ರಜೆಗಳ ಪ್ರಾಣ. ಆಸ್ತಿ. ಮರ್ಯಾದೆ ಮತ್ತು ಪೌರರ ಹಕ್ಕುಗಳನ್ನು ಕಾಯುವ ದೊಡ್ಡ ಕೆಲಸ ನ್ಯಾಯಾಲಯಕ್ಕೆ ಸೇರಿದೆ.

ನ್ಯಾಯಾಲಯಕ್ಕೆ ಎರಡು ಬಗೆಯ ವಿವಾದಗಳು ಬರುತ್ತವೆ. ಇಬ್ಬರು ಖಾಸಗಿ ವ್ಯಕ್ತಿಗಳ ನಡುವಣ ವಿವಾದ ನ್ಯಾಯಾಲಯಕ್ಕೆ ಬಂದರೆ ಅದು ವ್ಯಾವಹಾರಿಕ (ಸಿವಿಲ್) ವಿವಾದ. ಹಣವನ್ನು ಸಲ್ಲಿಸುವುದಾಗಿ ಬರೆದು ಕೊಟ್ಟವನು ಅದಕ್ಕೆ ತಪ್ಪಿದಲ್ಲಿ ಹಣದ ಬಾಕಿ ಇರುವವನು ನ್ಯಾಯಾಲಯಕ್ಕೆ ವಿವಾದವನ್ನು ತರುತ್ತಾನೆ. ಇದು ಒಂದು ವ್ಯಾವಹಾರಿಕ ವಿವಾದ.

ಕಳ್ಳನೊಬ್ಬ ಮನೆಯೊಂದರ ಬೀಗ ಮುರಿದು ಹಣ ಒಡವೆಗಳನ್ನು ದೋಚಿದನೆಂದು ಅವನನ್ನು ಹಿಡಿದು ಪೋಲೀಸರು ನ್ಯಾಯಾಲಯದ ಮುಂದೆ ತರುತ್ತಾರೆ. ಆತ ಕಳ್ಳತನ ಮಾಡಿದ್ದು ರುಜುವಾತಾದರೆ ಶಿಕ್ಷೆ ನೀಡಲಾಗುತ್ತದೆ. ಕಳ್ಳತನ, ದರೋಡೆ, ಕೊಲೆ ಮುಂತಾದುವು ಇಡೀ ಸಮಾಜದ ಶಾಂತಿಯನ್ನು ಕದಡುತ್ತವೆ. ಇಂಥ ವಿವಾದಗಳು ಅಪರಾಧಿಕ (ಕ್ರಿಮಿನಲ್) ವಿವಾದಗಳು. ತನಗೆ ನ್ಯಾಯ ಕೊಡಿಸಬೇಕೆಂದು ನ್ಯಾಯಾಲಯಕ್ಕೆ ತೀರ್ಪನ್ನು ಕೊಂಡೊಯ್ದವನು ವಾದಿ. ಯಾರ ಮೇಲೆ ದೂರು ಹೊರಿಸಲಾಗಿರುವುದೋ ಆತ ಪ್ರತಿವಾದಿ. ವಾದಿ ಪ್ರತಿವಾದಿಗಳು ತಮ್ಮ ತಮ್ಮ ವಾದಗಳನ್ನು ನ್ಯಾಯಾಧೀಶನ ಮುಂದೆ ಮಂಡಿಸುತ್ತಾರೆ. ವಾದಿ ಪ್ರತಿವಾದಿಗಳು ಸ್ವತಃ ತಾವೇ ವಾದಿಸಬೇಕೆಂಬುದಿಲ್ಲ. ಒಬ್ಬ ವಕೀಲ ವಾದಿಯ ಪರವಾಗಿಯೂ ಮತ್ತೊಬ್ಬ ವಕೀಲ ಪ್ರತಿವಾದಿಯ ಪರವಾಗಿಯೂ ವಾದಿಸುತ್ತಾರೆ. ಈ ವಕೀಲರು ಕಾನೂನುಗಳನ್ನು ಚೆನ್ನಾಗಿ ಅಭ್ಯಸಿಸಿದವರು.

ಸಮಾಜಕ್ಕೆ ಅಪಚಾರವೆಸಗುವಂತೆ ಕಾನೂನನ್ನು ಮುರಿದ ವ್ಯಕ್ತಿಯನ್ನು ಪೋಲೀಸರು ದಸ್ತಗಿರಿ ಮಾಡುತ್ತಾರೆ. ಆತನನ್ನು ನ್ಯಾಯಾಲಯದ ಮುಂದೆ ಹಾಜರುಪಡಿಸಿದಾಗ ಅಪರಾಧಿಕ ಮೊಕದ್ದಮೆ ಪ್ರಾರಂಭ. ದೂರು ಯಾರ ಮೇಲೆ ಇದೆಯೋ ಆತ ಆಪಾದಿತ. ತಾನು ತಪ್ಪಿತಸ್ಥನಲ್ಲ ಎಂದು ಆತ ವಾದಿಸಿದರೆ ಆತನಿಗೆ ತನ್ನ ನಿರ್ದೋಷಿತ್ವವನ್ನು ಸಾಬೀತುಮಾಡಿ



ವರಿಷ್ಠ ನ್ಯಾಯಾಲಯ. ನವದೆಹಲಿ

ಕೊಳ್ಳಲು ನ್ಯಾಯಾಧೀಶರು ಅವಕಾಶ ಕೊಡುತ್ತಾರೆ. ವಕೀಲನೊಬ್ಬನನ್ನು ನಿಯಮಿಸಿಕೊಳ್ಳಲು ಆತನಿಗೆ ಕಾಲಾವಕಾಶ ನೀಡಲಾಗುತ್ತದೆ. ಆಪಾದಿತನ ವಿರುದ್ಧ ಸರಕಾರದಿಂದ ನಿಯಮಿಸಲ್ಪಟ್ಟಿರುವ ವಕೀಲರಾದ ಪಬ್ಲಿಕ್ ಪ್ರಾಸಿಕ್ಯೂಟರ್ ವಾದಿಸುತ್ತಾರೆ. ಆಪಾದಿತ ಅಪರಾಧಿಯೆಂದು ಮನದಟ್ಟು ಮಾಡಿಸಿ ಕೊಡಲು ಪಬ್ಲಿಕ್ ಪ್ರಾಸಿಕ್ಯೂಟರ್ ಸಾಕ್ಷಿಗಳನ್ನು ನ್ಯಾಯಾಲಯದಲ್ಲಿ ಹಾಜರುಪಡಿಸುತ್ತಾರೆ. ಆಪಾದಿತ ಅಪರಾಧಿಯೆಂದು ಸಾಬೀತುಗೊಳಿಸುವ ಮಾಹಿತಿಗಳನ್ನು ಸಾಕ್ಷಿಗಳು ಒದಗಿಸುತ್ತಾರೆ. ಆಪಾದಿತನೂ ತನ್ನ ಪರ ಸಾಕ್ಷಿಗಳನ್ನು ಹಾಜರುಪಡಿಸುತ್ತಾನೆ.

ನ್ಯಾಯಾಲಯದಲ್ಲಿ ಸಿಗುವ ನ್ಯಾಯ ನಿಷ್ಪಕ್ಷಪಾತವಾಗಿರಬೇಕು. ಎಲ್ಲ ಪ್ರಜೆಗಳಿಗೂ ಯೋಗ್ಯ ನ್ಯಾಯ ದೊರೆಯಬೇಕು. ಇದಾಗಬೇಕಾದರೆ ನ್ಯಾಯಾಂಗ ಸ್ವತಂತ್ರವಿರಬೇಕಾಗುತ್ತದೆ. ಕಾರ್ಯಾಂಗದ ಒತ್ತಾಯ ಅದರ ಮೇಲೆ ಇರಕೂಡದು. ಅಂದರೆ ನಿಷ್ಪಕ್ಷಪಾತ ತೀರ್ಪುಗಳು ಸಾಧ್ಯ.

ನ್ಯಾಯಾಲಯಗಳು ರಾಷ್ಟ್ರಗಳಲ್ಲಿ ಆಡಳಿತವನ್ನು ಸುವ್ಯವಸ್ಥಿತಗೊಳಿಸುವ ಕಾರ್ಯದಲ್ಲಿ ಮಹತ್ವದ ಪಾತ್ರ ವಹಿಸುತ್ತವೆ.

ದೇಶದ ಶಾಸಕಾಂಗ. ನ್ಯಾಯಾಲಯ ಕೆಲಸ ಮಾಡಬೇಕಾದ ಕ್ರಮ. ತೀರ್ಪನ್ನು ನೀಡಬೇಕಾದಾಗ ಪರಿಶೀಲಿಸಬೇಕಾದ ಅಂಶಗಳು ಇವೆಲ್ಲವನ್ನು ನಿರ್ಧರಿಸಿರುತ್ತದೆ. ನ್ಯಾಯಾಧೀಶನ ಕರ್ತವ್ಯ. ವಿಚಾರಣೆ ಕಾನೂನಿಗೆ ಅನುಗುಣವಾಗಿ. ಕ್ರಮಬದ್ಧವಾಗಿ ನಡೆಯುವಂತೆ ನೋಡಿಕೊಳ್ಳುವುದು: ವಾದಿ–ಪ್ರತಿವಾದಿಗಳ. ಸಾಕ್ಷಿಗಳ ಮತ್ತು ಎರಡು ಪಕ್ಷಗಳ ವಕೀಲರ ಮಾತುಗಳನ್ನು ಗಮನವಿಟ್ಟು ಕೇಳುವುದು; ತನ್ನ ಮುಂದಿರುವ ಸಾಕ್ಷ್ಯದ ಆಧಾರದ ಮೇಲೆ. ದೇಶದ ಕಾನೂನಿಗೆ ಅನುಗುಣವಾಗಿ ನಿಷ್ಪಕ್ಷಪಾತವಾಗಿ ತೀರ್ಪು ನೀಡುವುದು. ನ್ಯಾಯಾಧೀಶನ ವೈಯಕ್ತಿಕ ಅಭಿಪ್ರಾಯಗಳಿಗೆ ಆತನ ಕರ್ತವ್ಯ ನಿರ್ವಹಣೆಯಲ್ಲಿ ಸ್ಥಳವಿಲ್ಲ. ಒಬ್ಬ ತಪ್ಪು ಮಾಡಿದ್ದಾನೆ ಎಂದು ಅವನಿಗನ್ನಿಸಬಹುದು; ಆದರೆ ಅವನ ಮುಂದಿರುವ ಸಾಕ್ಷ್ಯ ಸಂಶಯಕ್ಕೆ ಎಡೆಯೇ ಇಲ್ಲದಂತೆ ನ್ಯಾಯಾಧೀಶನ ಮುಂದಿರುವ ಮನುಷ್ಯ ತಪ್ಪು ಮಾಡಿದ್ದಾನೆ ಎಂದು ತೋರಿಸದಿದ್ದರೆ. ಆತನಿಗೆ ಬಿಡುಗಡೆ ಆಗಲೇಬೇಕು. ಮರಣದಂಡನೆ ಇರಬಾರದು ಎಂದು ನ್ಯಾಯಾಧೀಶನಿಗೆ ಸ್ವಂತ ಅಭಿಪ್ರಾಯ ಇರಬಹುದು. ಆದರೆ ದೇಶದ ಕಾನೂನಿನ ಪ್ರಕಾರ ಒಂದು ಅಪರಾಧಕ್ಕೆ ಮರಣದಂಡನೆಯೇ ಶಿಕ್ಷೆಯಾದರೆ, ಆ ಶಿಕ್ಷೆಯನ್ನು ಆತ ವಿಧಿಸಬೇಕು.

ಕೆಳಗಿನ ನ್ಯಾಯಾಲಯದಲ್ಲಿ ತನಗೆ ನ್ಯಾಯ ದೊರೆಯಲಿಲ್ಲವೆಂದು ಒಬ್ಬ ಮನುಷ್ಯನಿಗೆ ತೋರಿದರೆ. ಮೇಲಿನ ನ್ಯಾಯಾಲಯಕ್ಕೆ ಅವನು ಅಪೀಲು

ಬಹುದು. ಭಾರತದಲ್ಲಿ ದೆಹಲಿಯಲ್ಲಿರುವ ಶ್ರೇಷ್ಠ ನ್ಯಾಯಾಲಯವೇ (ಸುಪ್ರೀಂ ಕೋರ್ಟ್) ಅತ್ಯುಚ್ಚ ನ್ಯಾಯಾಲಯ; ಅದರ ತೀರ್ಪೇ ಕಡೆಯದು.

ಭಾರತದಲ್ಲಿ ನ್ಯಾಯಾಂಗದ ರಚನೆ ಹೀಗೆ ಇದೆ :

ವರಿಷ್ಠ ನ್ಯಾಯಾಲಯ ದೆಹಲಿಯಲ್ಲಿ
(ಪ್ರಧಾನ ನ್ಯಾಯಾಧೀಶ, ಸಹಾಯಕ ನ್ಯಾಯಾಧೀಶರು)
ಉಚ್ಚ ನ್ಯಾಯಾಲಯ-ಪ್ರತಿಯೊಂದು ರಾಜ್ಯದ ರಾಜಧಾನಿಯಲ್ಲಿ
(ಮುಖ್ಯ ನ್ಯಾಯಾಧೀಶ, ಸಹಾಯಕ ನ್ಯಾಯಾಧೀಶರು)
ಜಿಲ್ಲಾ ನ್ಯಾಯಾಲಯ
(ಜಿಲ್ಲಾ ನ್ಯಾಯಾಧೀಶ; ಸಂಯುಕ್ತ ಮತ್ತು ಅಧಿಕ ನ್ಯಾಯಾಧೀಶರು)
ಮೇಲ್ಮಟ್ಟದ ವ್ಯಾವಹಾರಿಕ ನ್ಯಾಯಾಲಯ
(ನ್ಯಾಯಾಧೀಶರು)
ಕೆಳಮಟ್ಟದ ವ್ಯಾವಹಾರಿಕ ನ್ಯಾಯಾಲಯ
(ನ್ಯಾಯಾಧೀಶರು)

ನ್ಯಾಯಾಲಯದಲ್ಲಿ ನ್ಯಾಯಾಧೀಶರು ಅನ್ಯಾಯ ಮಾಡಿದ್ದಾರೆಂದು ಆಪಾದನೆ ಮಾಡುವುದು. ನ್ಯಾಯಾಲಯದಲ್ಲಿ ಅವರಿಗೆ ತಕ್ಕ ಗೌರವ ತೋರಿಸದಿರುವುದು, ನ್ಯಾಯಾಲಯದ ತಿರಸ್ಕಾರವಾಗುತ್ತದೆ. ಇದಕ್ಕೆ ಶಿಕ್ಷೆ ವಿಧಿಸಬಹುದು.

ಪ್ರಜೆ ಸರಕಾರದಿಂದ ತನಗೆ ಅನ್ಯಾಯವಾಗಿದೆ ಎಂದು ಭಾವಿಸಿದರೂ ನ್ಯಾಯಾಲಯಕ್ಕೆ ಹೋಗಬಹುದು. ಸರಕಾರದಿಂದ ಬರಬೇಕಾದ ಹಣ ಬಂದಿಲ್ಲ ಅಥವಾ ಸರಕಾರ ತನಗೆ ನೌಕರಿಯಲ್ಲಿ ಅನ್ಯಾಯ ಮಾಡಿದೆ, ಇಲ್ಲವೆ ಸರಕಾರದ ಒಂದು ಆಜ್ಞೆ ಸಂವಿಧಾನಬದ್ಧವಲ್ಲ ಎಂದು ತೋರಿದರೆ, ಆತ ಸರಕಾರದ ವಿರುದ್ಧ ನ್ಯಾಯಾಲಯಕ್ಕೆ ಹೋಗಬಹುದು. ಇಂಥ ವಿಚಾರಣೆಗಳಲ್ಲಿ ಪ್ರಜೆಯ ಮತ್ತು ಸರಕಾರದ ಸ್ಥಾನಮಾನ ಸಮಾನ.

ನೋಡಿ : ಅಡ್ವೊಕೇಟ್ ; ಅಪರಾಧ ; ಗ್ರಾಮ ಪಂಚಾಯತಿ ; ದಂಡವಿಧಿ ; ವ್ಯವಹಾರವಿಧಿ ; ಶಿಕ್ಷೆ, ದಂಡನೆ.

## ನಿಘಂಟು

‘ಈ ಪದಕ್ಕೆ ಏನು ಅರ್ಥ ? ’

‘ನಿಘಂಟು ನೋಡಿ, ಸಿಕ್ಕುತ್ತದೆ.’

ಒಂದು ಭಾಷೆಯಲ್ಲಿರುವ ಎಲ್ಲ ಪದಗಳನ್ನೂ ಅಕಾರಾದಿಯಾಗಿ ಜೋಡಿಸಿ ಅವುಗಳಿಗೆ ಅರ್ಥ ಹೇಳುವ ಗ್ರಂಥ ನಿಘಂಟು. ಪದಗಳು ಯಾವ ಭಾಷೆಯಲ್ಲಿವೆಯೋ ಅರ್ಥ ಅದೇ ಭಾಷೆಯಲ್ಲಿರಬಹುದು. ಇಲ್ಲವೆ ಒಂದು ಭಾಷೆಯ ಪದಗಳಿಗೆ ಇನ್ನೊಂದು ಭಾಷೆಯಲ್ಲಿ ಅರ್ಥವಿರಬಹುದು. ನಿಘಂಟಿನಲ್ಲಿ ಪದಗಳ ಅರ್ಥ ಮಾತ್ರವಲ್ಲದೆ ಅವುಗಳ ಉಚ್ಚಾರಣೆಯೂ ಇರುತ್ತದೆ. ಪದಗಳ ಅರ್ಥ, ಉಚ್ಚಾರಣೆ, ಇವುಗಳ ಜೊತೆಗೆ ಪದಗಳ ವ್ಯಾಕರಣ, ಅವು ಆ ಭಾಷೆಗೆ ಸೇರಿದ್ದೇ ಅಥವಾ ಪರಭಾಷೆಯಿಂದ ಬಂದದ್ದೇ, ಆ ಪದದ ಮೂಲರೂಪ ಏನು, ಹೇಗೆ ಬೆಳೆದುಕೊಂಡು ಬಂದಿದೆ ಎಂಬುದನ್ನೆಲ್ಲ ಒಳ್ಳೆಯ ನಿಘಂಟು ತಿಳಿಸುತ್ತದೆ. ಪದಗಳಿಗೆ ಅರ್ಥ ತಿಳಿಸುವುದರ ಜೊತೆಗೆ ಸಮಾನಾರ್ಥ ಶಬ್ದಗಳನ್ನೂ ಕೊಡುತ್ತವೆ.

ಅಸೀರಿಯನ್ನರು ಸುಮಾರು 2,500 ವರ್ಷಗಳ ಕೆಳಗೆ ತಮ್ಮ ಭಾಷೆಯ ಒಂದು ನಿಘಂಟನ್ನು ತಯಾರಿಸಿದ್ದರು. ಕ್ರಿ. ಶ. ಒಂದನೆಯ ಶತಮಾನದಲ್ಲಿ ಗ್ರೀಸ್‌ನಲ್ಲಿ ಅಪೊಲೋನಿಯಸ್ ಎಂಬಾತ ಒಂದು ಪದಕೋಶವನ್ನು ರಚಿಸಿದ. ಅರಬರು, ಗ್ರೀಕರು, ರೋಮನರು ಕಷ್ಟವಾದ ಅಪೂರ್ವವಾದ ಪದಗಳನ್ನು ಮಾತ್ರ ನಿಘಂಟಿನಲ್ಲಿ ಸೇರಿಸುತ್ತಿದ್ದರು. ಮಧ್ಯಯುಗದ ಜನರಿಗೆ ಗ್ರೀಕ್ ಮತ್ತು ಲ್ಯಾಟಿನ್ ಭಾಷೆಗಳನ್ನು ಕಲಿಯಲು ಪರಭಾಷೆಯ ಶಬ್ದಗಳಿಗೆ ಅರ್ಥ ಹೇಳುವ ನಿಘಂಟುಗಳು ಬೇಕಾದುವು.

ನಿಘಂಟು ಎಂಬ ಪದ ಭಾರತದಲ್ಲಿ ವೇದಾಂಗವಾದ ನಿರುಕ್ತಗಳ ಕಾಲಕ್ಕೂ (ಕ್ರಿ. ಪೂ. 700) ಹಿಂದಿನಿಂದ ಬಳಕೆಯಲ್ಲಿದೆ.

ಭಾರತದಲ್ಲಿ ಕ್ಲಿಷ್ಟವಾದ ವೈದಿಕ ಶಬ್ದಗಳ ಸಂಗ್ರಹ ನಿಘಂಟು ಎಂದು ಪ್ರಸಿದ್ಧವಾಯಿತು. ಈ ನಿಘಂಟು ವೇದದಷ್ಟೇ ಪವಿತ್ರವೆಂದು ಹೆಸರು ಪಡೆದಿದೆ.

‘ನಿಘಂಟು’ ಐದು ಅಧ್ಯಾಯಗಳಲ್ಲಿದೆ. ಮೊದಲ ಮೂರು ಅಧ್ಯಾಯಗಳಿಗೆ ‘ನೈಘಂಟಿಕ ಕಾಂಡ’ ವೆಂದು ಹೆಸರು. ನೈಘಂಟಿಕ ಕಾಂಡದಲ್ಲಿ ಒಂದೇ ಅರ್ಥವುಳ್ಳ ಅನೇಕಾನೇಕ ಪದಗಳ 69 ಗಣಗಳಿವೆ. ಒಟ್ಟು 1,341 ಪದಗಳಿವೆ. ಉಳಿದ ಎರಡು ಕಾಂಡಗಳಾದ ನೈಗಮಕಾಂಡ, ದೈವತಕಾಂಡಗಳಲ್ಲಿ ಕ್ರಮವಾಗಿ 278 ಮತ್ತು 151 ಪದಗಳಿವೆ. ಹೀಗೆ ಒಟ್ಟು ನಿಘಂಟಿನಲ್ಲಿ 1,770 ಪದಗಳಿವೆ.

ವೇದ ಮಂತ್ರಗಳ ಅರ್ಥವನ್ನು ತಿಳಿಯಲು ನಿಘಂಟು ಬಹಳ ಉಪಯೋಗಕರ.

ನಿಘಂಟಿನ ಅನಂತರ ಬಂದ, ವೇದಾಂಗಗಳಲ್ಲಿ ಒಂದಾದ, ನಿರುಕ್ತ ‘ನಿಘಂಟು’ ಗ್ರಂಥದ ವಿವರಣೆ. ನಿರುಕ್ತವೂ ಒಂದು ರೀತಿಯ ನಿಘಂಟು.

ಸುಮಾರು ಮೂರು ನಾಲ್ಕನೆಯ ಶತಮಾನದ ಅಮರಕೋಶವೂ ಒಂದು ನಿಘಂಟು. ಸುಮಾರು 13,000 ಪದಗಳಿರುವ ಅಮರಕೋಶ ಸಂಸ್ಕೃತ ಭಾಷೆಯಲ್ಲಿದೆ. ಇದನ್ನು ಬರೆದವನು ಅಮರಸಿಂಹ.

ಹತ್ತನೆಯ ಶತಮಾನಕ್ಕೆ ಸೇರಿದ ‘ರನ್ನಕಂದ’ ಮೊದಲನೆಯ ಕನ್ನಡ ನಿಘಂಟು.

1552ರಲ್ಲಿ ಪ್ರಕಟವಾದ ರಿಚರ್ಡ್ ಹ್ಯೂಲೊಯೆಟ್‌ನ ನಿಘಂಟು ಹಾಗೂ 1604ರಲ್ಲಿ ಪ್ರಕಟವಾದ ರಾಬರ್ಟ್ ಕಾಡ್ರೆ ಬರೆದ ನಿಘಂಟು ಇವು ಇಂಗ್ಲ ಭಾಷೆಯಲ್ಲಿ ಪ್ರಕಟವಾದ ಪ್ರಥಮ ನಿಘಂಟುಗಳು. ‘ಡಿಕ್ಷನರಿ’ ಎಂಬ ಹೆಸರು ಹೊತ್ತ ಮೊದಲ ನಿಘಂಟು ಹೆನ್ರಿ ಕೋಕ್‌ರ್‍ಯಾಮ್‌ನ ‘ಇಂಗ್ಲಿಷ್ ಡಿಕ್ಷನರಿ’ (1623). 1775ರಲ್ಲಿ ಪ್ರಸಿದ್ಧ ಸಾಹಿತಿ ಸ್ಯಾಮ್ಯುಯಲ್ ಜಾನ್ಸನ್‌ನ ನಿಘಂಟು ಪ್ರಕಟವಾಗಿ ಬಹಳ ಜನಪ್ರಿಯವಾಯಿತು. ಜಾನ್ಸನ್ ಪದಗಳ ಅರ್ಥ ನಿರೂಪಣೆಯಲ್ಲಿ ಹಾಸ್ಯವನ್ನೂ ಬೆರೆಸಿದ. ಅವತರಣಿಕೆಗಳಿಂದ ಪದಗಳ ಅರ್ಥವನ್ನು ವಿವರಿಸುವ ಪದ್ಧತಿಯನ್ನು ಆರಂಭಿಸಿದ್ದು ಆತನೇ.

ನೋಆ ವೆಬ್‌ಸ್ಟರ್ ಎಂಬಾತ ಅಮೆರಿಕದಲ್ಲಿ ಇಂಗ್ಲಿಷ್ ಭಾಷೆಯ ನಿಘಂಟನ್ನು 1828ರಲ್ಲಿ ಪ್ರಕಟಿಸಿದ. ಇಪ್ಪತ್ತು ವರ್ಷಗಳ ಪರಿಶ್ರಮದ ಫಲವಾಗಿ ಪ್ರಕಟವಾದ ಈ ನಿಘಂಟಿನಲ್ಲಿ 70,000 ಕ್ಕಿಂತ ಹೆಚ್ಚು ಪದಗಳಿಗೆ ಅರ್ಥ ಕೊಟ್ಟಿದೆ. ಈ ನಿಘಂಟನ್ನು ಪರಿಷ್ಕರಿಸಿದ್ದಾರೆ. ಅದನ್ನು ವೆಬ್‌ಸ್ಟರ್ಸ್ ಇಂಟರ್‌ನ್ಯಾಷನಲ್ ಡಿಕ್ಷನರಿ ಎಂದು ಕರೆಯುತ್ತಾರೆ. 1884ರಲ್ಲಿ ಆರಂಭವಾಗಿ 1928ರಲ್ಲಿ ಮುಗಿದ ಆಕ್ಸ್‌ಫರ್ಡ್ ನಿಘಂಟಿನಲ್ಲಿ 4,30,000 ವಿವರಣೆಗಳು, 18,27,306 ಅವತರಣಿಕೆಗಳೂ ಇವೆ. ವೆಬ್‌ಸ್ಟರನ ಮೂರನೆಯ ಅಂತರರಾಷ್ಟ್ರೀಯ ನಿಘಂಟಿನಲ್ಲಿ ಐದು ಲಕ್ಷಕ್ಕೂ ಹೆಚ್ಚು ಪದಗಳಿವೆ.

ಮೇರುಕೃತಿ ಕಿಟಲ್ ನಿಘಂಟಿನಿಂದ

ಈ ದೊಡ್ಡ ನಿಘಂಟುಗಳ ಆಧಾರದ ಮೇಲೆ ಅನೇಕ ಸಣ್ಣ ಸಣ್ಣ ನಿಘಂಟುಗಳು ಈಗ ಬಂದಿವೆ. ವೆಬ್‌ಸ್ಟರನ ದೊಡ್ಡ ನಿಘಂಟು ಎತ್ತಲಾರದಷ್ಟು ಭಾರವಾಗಿದ್ದರೆ ವೆಬ್‌ಸ್ಟರನ ಪುಟ್ಟ ನಿಘಂಟನ್ನು ಜೇಬಿನಲ್ಲಿಟ್ಟುಕೊಳ್ಳಬಹುದು.

ವಿದ್ಯಾರ್ಥಿಗಳಿಗೆ ಉಪಯುಕ್ತವಾಗುವ ನಿಘಂಟುಗಳಿವೆ. ಕೆಲವು ನಿಘಂಟುಗಳು ಸಚಿತ್ರವಾಗಿಯೂ ಇರುತ್ತವೆ.

ನಿಘಂಟು ಒಂದೇ ಭಾಷೆಯದಾಗಿರಬೇಕಾಗಿಲ್ಲ. ಒಂದು ಭಾಷೆಯ ಪದಗಳ ವಿಷಯವನ್ನು ಇನ್ನೊಂದು ಭಾಷೆಯಲ್ಲಿ ತಿಳಿಸಬಹುದು. ಇದು ಮೊದಲನೆಯ ಭಾಷೆಯನ್ನು ಕಲಿಯುವ ಎರಡನೆಯ ಭಾಷೆಯವರಿಗೆ ಸಹಾಯವಾಗುತ್ತದೆ. ಫರ್ಗ್ಯುಸನ್ ಎಂಬವನು ಸಂಪಾದಿಸಿ 1773ರಲ್ಲಿ ಲಂಡನಿನಲ್ಲಿ ಪ್ರಕಟವಾದ ಇಂಗ್ಲಿಷ್-ಹಿಂದೂಸ್ತಾನಿ ಮತ್ತು ಹಿಂದೂಸ್ತಾನಿ-ಇಂಗ್ಲಿಷ್ ಕೋಶವೇ ಆಧುನಿಕ ಭಾರತೀಯ ಭಾಷೆಗಳಲ್ಲಿ ಮೊದಲನೆಯ ನಿಘಂಟು. ಇದು ರೋಮನ್‌ಲಿಪಿಯಲ್ಲಿ ಅಚ್ಚಾಗಿದೆ. 1824ರಲ್ಲಿ ಪ್ರಕಟವಾದ ವಿಲಿಯಂ ರೀವ್ ವಿರಚಿತ ಇಂಗ್ಲಿಷ್-ಕನ್ನಡ ನಿಘಂಟು (1824) ಈ ಎರಡು ಭಾಷೆಗಳ ಮೊದಲ ನಿಘಂಟು. ಕನ್ನಡದಲ್ಲಿ ಇಂದಿಗೂ ಮೇರುಕೃತಿಯಾಗಿ ನಿಂತಿರುವುದು ರೆವರೆಂಡ್ ಎಫ್. ಕಿಟಲ್ ವಿರಚಿತ ಶಬ್ದಕೋಶ. 1894ರಲ್ಲಿ ಪ್ರಕಟವಾದ ಕಿಟಲ್ ನಿಘಂಟು ಮಹತ್ವದ್ದಾಗಿದೆ. ಕಿಟಲ್ ಶಬ್ದಕೋಶದಲ್ಲಿ ಕನ್ನಡ ಜಾನಪದ, ಶಿಷ್ಟ, ಗ್ರಾಂಥಿಕ ಹಾಗೂ ವ್ಯಾವಹಾರಿಕ ಪದಗಳೂ ಅವುಗಳಿಗೆ ಅರ್ಥವೂ ಇವೆ. ಕಿಟಲ್ ಶಬ್ದಕೋಶದ ವೈಶಿಷ್ಟ್ಯವೆಂದರೆ ಪದಗಳಿಗೆ ಸಂಬಂಧಿಸಿದಂತೆ ಸಂಗ್ರಹಿತವಾಗಿರುವ ಗಾದೆಗಳು. ಈಗ ಈ ಶಬ್ದಕೋಶವನ್ನು ಮದರಾಸು ವಿಶ್ವವಿದ್ಯಾಲಯ ಪರಿಷ್ಕರಿಸಿ ಪ್ರಕಟಿಸಿದೆ. ಮೈಸೂರು ವಿಶ್ವವಿದ್ಯಾನಿಲಯ ಸಿದ್ಧಪಡಿಸಿದ ಇಂಗ್ಲಿಷ್-ಕನ್ನಡ ನಿಘಂಟು 1946ರಲ್ಲಿ ಪ್ರಕಟವಾಯಿತು. ಇದೇ ವಿಶ್ವವಿದ್ಯಾನಿಲಯ ಈಗ ಆ ನಿಘಂಟನ್ನು ಪರಿಷ್ಕರಿಸುತ್ತಿದೆ. ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತು ಕನ್ನಡ ಪದಗಳ ಬೃಹತ್‌ಕೋಶವನ್ನು ಸಿದ್ಧಮಾಡುತ್ತಿದೆ.

ಈಚಿನ ವರ್ಷಗಳಲ್ಲಿ ಪಾಶ್ಚಾತ್ಯ ದೇಶಗಳಲ್ಲಿ ಶಾಸ್ತ್ರೀಯ ನಿಘಂಟುಗಳು ಬೆಳೆಯುತ್ತಿವೆ. ವೈದ್ಯಶಾಸ್ತ್ರ, ವಾಸ್ತುಶಿಲ್ಪ ವಿಜ್ಞಾನ, ರಸಾಯನ ವಿಜ್ಞಾನ, ಭೌತ ವಿಜ್ಞಾನ, ಸಸ್ಯ ವಿಜ್ಞಾನ, ಹೀಗೆ ಒಂದೊಂದು ಶಾಸ್ತ್ರಕ್ಕೂ ಸಂಬಂಧಿಸಿದಂತೆ ನಿಘಂಟುಗಳು ಪ್ರಕಟವಾಗಿವೆ. ಪದಗಳ ಉಚ್ಚಾರಣೆಯನ್ನು ಸ್ಪಷ್ಟಗೊಳಿಸುವ ನಿಘಂಟುಗಳೂ ಇವೆ.

'ನಿಘಂಟು' ಪ್ರತಿಯೊಬ್ಬ ವಿದ್ಯಾವಂತನ ಹತ್ತಿರವೂ ಇರಬೇಕಾದ ಗ್ರಂಥ. ಸಾಮಾನ್ಯ ವಿದ್ಯಾರ್ಥಿಯಿಂದ ಹಲವು ಶಾಸ್ತ್ರಗಳ ತಜ್ಞರವರೆಗೆ, ಜ್ಞಾನ ಬಯಸುವವರಿಗೆ ನಿಘಂಟಿನ ಉಪಯೋಗ ಉಂಟು. ಸಾಮಾನ್ಯ ವಿದ್ಯಾರ್ಥಿಗೆ ಪದದ ಉಚಿತ ರೂಪ, ಅಕ್ಷರ ಸಂಯೋಜನೆ, ಉಚ್ಚಾರಣೆ ಎಲ್ಲ ನಿಘಂಟಿನಿಂದ ತಿಳಿಯುತ್ತದೆ. 'ಕಡಮೆ'-'ಕಡಿಮೆ', 'ಪ್ರಾಂತ್ಯ'-'ಪ್ರಾಂತ', 'ಪಾಶ್ಚಾತ್ಯ'-'ಪಾಶ್ಚಿಮಾತ್ಯ' ಈ ರೂಪಗಳಲ್ಲಿ ಯಾವುದು ಸರಿ, ಯಾವುದು ತಪ್ಪು? ಎಲ್ಲ ರೂಪಗಳನ್ನೂ ಬಳಸಬಹುದೆ ? ಇಂಥ ಪ್ರಶ್ನೆಗಳಿಗೆ ಉತ್ತರ ನಿಘಂಟಿನಲ್ಲಿ. ನಿಘಂಟಿನ ಸತತ ಅಭ್ಯಾಸದಿಂದ ನಮ್ಮ ಶಬ್ದ ಸಂಪತ್ತು, ಭಾಷಾ ಸಂಪತ್ತು ಹೆಚ್ಚುತ್ತವೆ. ಭಾಷೆಯ ಅಭ್ಯಾಸಕ್ಕೆ ನಿಘಂಟು ದಾರಿದೀಪ. ಒಂದು ದೇಶದ ಜನಜೀವನವನ್ನೂ ಸಂಸ್ಕೃತಿಯನ್ನೂ ಅಭ್ಯಾಸ ಮಾಡುವವರಿಗೆ ಭಾಷೆಯ ಪದಗಳ ಅಭ್ಯಾಸದಿಂದ ಪ್ರಯೋಜನ ಉಂಟು. ನಿಘಂಟು ಒಂದು ಪದದ ಮೂಲರೂಪ, ಅದರ ರೂಪದಲ್ಲಿಯೂ ಅರ್ಥದಲ್ಲಿಯೂ ಆದ ವ್ಯತ್ಯಾಸಗಳು ಇವನ್ನು ತಿಳಿಸುವುದು. ದೇಶದ ಚರಿತ್ರೆಯನ್ನು ಅಭ್ಯಾಸ ಮಾಡುವವರಿಗೆ ಸಹಾಯಕ. ಒಂದು ಭಾಷೆ ಇನ್ನೊಂದು ಭಾಷೆಯಿಂದ ತೆಗೆದುಕೊಂಡ ಪದಗಳು ಎರಡು ಭಾಷೆಗಳನ್ನಾಡುವವರ ನಾಗರಿಕತೆಯ ಮೇಲೂ ಬೆಳಕು ಚೆಲ್ಲುತ್ತವೆ.

ನಿಘಂಟನ್ನು ಸಿದ್ಧಗೊಳಿಸಬೇಕಾದರೆ ಘನವಿದ್ವಾಂಸರ ಪರಿಶ್ರಮ ಬೇಕು. ನಿಘಂಟಿನ ಸಿದ್ಧತೆಯಲ್ಲಿ ಪಾಲುಗೊಳ್ಳುವವನಿಗೆ ಭಾಷೆ ಚೆನ್ನಾಗಿ ತಿಳಿದಿರಬೇಕು. ಚರಿತ್ರೆ, ಭಾಷಾಶಾಸ್ತ್ರ, ವ್ಯಾಕರಣ, ಸಾಹಿತ್ಯ ಎಲ್ಲದರಲ್ಲಿ ಆಳವಾದ ವಿದ್ವತ್ತು ಬೇಕು. ಪದಗಳಿಗೆ ಉಚಿತವಾಗಿ, ಸ್ಪಷ್ಟವಾಗಿ ಅರ್ಥ ಹೇಳುವಷ್ಟು ಭಾಷಾ ಪ್ರಭುತ್ವಬೇಕು. ಸ್ಥೂಲವಾಗಿ ಒಂದೇ ಅರ್ಥವುಳ್ಳ, ಆದರೆ ಬಳಕೆಯಲ್ಲಿ ಸೂಕ್ಷ್ಮವಾದ ಅರ್ಥ ವ್ಯತ್ಯಾಸವುಳ್ಳ ಎರಡು ಪದಗಳಿರಬಹುದು ; ಅವನ್ನು ಗುರುತಿಸಿ ವಿವರಿಸುವ ಸಾಮರ್ಥ್ಯವಿರಬೇಕು. ಭಾಷೆ ಬದಲಾಗುತ್ತ ಇರುತ್ತದೆ. ವಿದ್ವಾಂಸರು, ರೈತರು, ವಿವಿಧ ವೃತ್ತಿಗಳವರು, ಪತ್ರಿಕೋದ್ಯಮಿಗಳು ಇವರೆಲ್ಲ ಹೊಸ ಹೊಸ ಪದಗಳನ್ನು ಸೃಷ್ಟಿಸುತ್ತಾರೆ. ಹಳೆಯ ಪದಗಳನ್ನು ಹೊಸ ಅರ್ಥದಲ್ಲಿ ಬಳಸುತ್ತಾರೆ. ಹೊಸ ವಸ್ತುಗಳು ಸೃಷ್ಟಿಯಾದಂತೆ-ಸ್ಕೂಟರ್, ಟೆರಿಲಿನ್, ನೈಲಾನ್ ಇಂಥ ಪದಗಳಂತೆ—ಹೊಸ ಪದಗಳೂ ಹುಟ್ಟುತ್ತವೆ. ನಿಘಂಟನ್ನು ತಯಾರಿಸುವವರು ಈ ಎಲ್ಲ ವ್ಯತ್ಯಾಸಗಳನ್ನು ಗಮನಿಸಬೇಕು.

## ನಿರಾಶ್ರಿತರು

ಭಾರತದ ಅನೇಕ ಹಳ್ಳಿ ಪಟ್ಟಣಗಳಲ್ಲಿ ಬಣ್ಣ ಬಣ್ಣದ ಸ್ವೆಟರುಗಳನ್ನು ಮಾರುತ್ತಿರುವ ಜನರನ್ನು ಕಾಣಬಹುದು. ಇವರ ವೇಷಭೂಷಣಗಳನ್ನು ನೋಡಿದಾಗ ಇವರೆಲ್ಲಿಯವರು ಎನಿಸುತ್ತದೆ. ಟಿಬೆಟಿನ ಮೇಲೆ ಚೀನಿಯರ ಆಕ್ರಮಣ ನಡೆದಾಗ, ದಬ್ಬಾಳಿಕೆ ಸಹಿಸಲಾರದೆ ತಮ್ಮ ದೇಶ ತ್ಯಜಿಸಿ ಬಂದವರು ಇವರು : ನಿರಾಶ್ರಿತರಾದವರು. ಇವರಲ್ಲಿ ಹಲವರು ಮೈಸೂರಿನಿಂದ ಮಡಿಕೇರಿಗೆ ಹೋಗುವ ಮಾರ್ಗದಲ್ಲಿರುವ ಬೈಲಕುಪ್ಪೆಯಲ್ಲಿ ನೆಲೆಸಿದ್ದಾರೆ.

ಒಂದು ನಾಡಿನಿಂದ ರಾಜಕೀಯ ಅಥವಾ ಧಾರ್ಮಿಕ ಕಾರಣಗಳಿಗಾಗಿ ಇಲ್ಲವೆ ಯುದ್ಧದ ದೆಸೆಯಿಂದಾಗಿ ಬಲಾತ್ಕಾರವಾಗಿ ಓಡಿಸಲ್ಪಟ್ಟವರನ್ನು ಅಥವಾ ಓಡಿಹೋದವರನ್ನು 'ನಿರಾಶ್ರಿತರು' ಎನ್ನುತ್ತೇವೆ. ಇಂಥವರು ಪರದೇಶಗಳಲ್ಲಿ ಆಶ್ರಯ ಪಡೆಯುತ್ತಾರೆ. ಹೀಗೆ ಆಶ್ರಯ ಪಡೆದವರಲ್ಲಿ



ಬೈಲಕುಪ್ಪೆಯಲ್ಲಿ ನೆಲೆಸಿರುವ ಟಿಬೆಟಿನ ಕಿರಿಯರು

ಶ್ರೇಷ್ಠ ವ್ಯಕ್ತಿಗಳೂ ಉಂಟು. ಉದಾಹರಣೆಗೆ. ಜರ್ಮನಿಯ ಆಲ್ಬರ್ಟ್ ಐನ್‌ಸ್ಟೈನ್–ಸಾಪೇಕ್ಷ ಸಿದ್ಧಾಂತವನ್ನು ಪ್ರತಿಪಾದಿಸಿದ ಮಹಾವಿಜ್ಞಾನಿ. ಹಿಟ್ಲರನ ಆಡಳಿತ ಯೆಹೂದ್ಯರನ್ನು ಹಿಂಸಿಸಿತು. ಲಕ್ಷಾಂತರ ಮಂದಿ ಆಸ್ತಿಪಾಸ್ತಿ ಕಳೆದುಕೊಂಡು, ದೇಶ ಬಿಟ್ಟರು. ಐನ್‌ಸ್ಟೀನ್ ಇವರಲ್ಲಿ ಒಬ್ಬ.

ನಿರಾಶ್ರಿತರಾದವರು ತಮಗೆ ಆಶ್ರಯಕೊಡುವ ರಾಷ್ಟ್ರವನ್ನೇ ತಮ್ಮ ಮುಂದಿನ ಜೀವನಕ್ಕಾಗಿ ಅವಲಂಬಿಸುತ್ತಾರೆ. ತಮ್ಮ ಜ್ಞಾನವನ್ನು ತಮಗೆ ಆಶ್ರಯವಿತ್ತ ರಾಷ್ಟ್ರದ ಅಭಿವೃದ್ಧಿಗಾಗಿ ಅವರು ಉಪಯೋಗಿಸುತ್ತಾರೆ.

ಈ ನಿರಾಶ್ರಿತರ ಸಮಸ್ಯೆ ಬಹಳ ಹಿಂದಿನಿಂದಲೂ ಬಂದಿದೆ. ರೋಮನ್ ಚಕ್ರಾಧಿಪತ್ಯದ ಆಶ್ರಯ ಪಡೆಯುತ್ತಿದ್ದ ಜರ್ಮನ್ ಬುಡಕಟ್ಟಿನವರು, ವೋಲ್ಗಾ ನದಿಯ ತೀರದಲ್ಲಿ ಮಂಗೋಲರೊಡನೆ ಘೋರ ಯುದ್ಧವಾದ ಬಳಿಕ ಹಂಗೆರಿಗೆ ಓಡಿಹೋದ ರೋಮನರು–ಇವರೆಲ್ಲ ನಿರಾಶ್ರಿತರು.

ಧಾರ್ಮಿಕ ಕಾರಣಗಳಿಂದ ಸಾವಿರಾರು ಮಂದಿ ನಿರಾಶ್ರಿತರಾಗಿದ್ದಾರೆ. ಜೆರೂಸಲೆಮನ್ನು ರೋಮನರು 70ರಲ್ಲಿ ನಾಶಗೊಳಿಸಿದ ಅನಂತರ ಬೇರೆ ರಾಷ್ಟ್ರಗಳಿಗೆ ಓಡಿಹೋದ ಯೆಹೂದ್ಯರನೇಕರು ನಿರಾಶ್ರಿತರಾದರು. ಭಾರತದ ವಿಭಜನೆಯಾದಾಗಲೂ ಪಶ್ಚಿಮ ಪಾಕಿಸ್ತಾನದಲ್ಲಿದ್ದ ಐವತ್ತು ಲಕ್ಷ ಹಿಂದೂಗಳು ಮತ್ತು ಸಿಕ್ಖರು ಭಾರತಕ್ಕೆ ಬಂದರು. ಇಲ್ಲಿದ್ದ ಕೆಲವರು ಮುಸಲ್ಮಾನರು ಅಲ್ಲಿಗೆ ಹೋದರು.

ನಿರಾಶ್ರಿತರಾದವರಿಗೆ ಸಹಾಯ ಒದಗಿಸಲು ರಾಷ್ಟ್ರಸಂಘ 1921ರಲ್ಲಿ ನಾರ್ವೆಯ ಡಾ. ಫ್ರಿಟ್‌ಯಾಫ್ ನಾನ್‌ಸನ್ ಎಂಬಾತನನ್ನು ನೇಮಿಸಿತು. ಇವನು ನಿರಾಶ್ರಿತರ ಗುರುತಿಗಾಗಿ ತಯಾರಿಸಿದ ರಹದಾರಿ 'ನಾನ್‌ಸನ್ ರಹದಾರಿ ' ಎಂದು ಪ್ರಸಿದ್ಧವಾಯಿತು. ಎಲ್ಲ ರಾಷ್ಟ್ರಗಳು ಇದನ್ನು ಅಂಗೀಕರಿಸಿದುವು.

ಇಂದು ನಿರಾಶ್ರಿತರ ಸಮಸ್ಯೆಯನ್ನು ಪರಿಹರಿಸಲು ವಿಶ್ವಸಂಸ್ಥೆಯ ಅಂಗವಾಗಿ ಅಂತರರಾಷ್ಟ್ರೀಯ ನಿರಾಶ್ರಿತರ ಸಂಸ್ಥೆಯೊಂದಿದೆ.

ನೋಡಿ : ನಾನ್‌ಸನ್, ಫ್ರಿಟ್‌ಯಾಫ್ ಮತ್ತು ಆಡ್ ; ವಿಶ್ವಸಂಸ್ಥೆ

## ನಿಶ್ಶಸ್ತ್ರೀಕರಣ

ಪ್ರಪಂಚದಲ್ಲಿ ವಿವಿಧ ರಾಷ್ಟ್ರಗಳ ನಡುವೆ ಮಾರಕಾಸ್ತ್ರಗಳ ಉತ್ಪಾದನೆಗಾಗಿ ನಡೆಯುತ್ತಿರುವ ಪೈಪೋಟಿಯನ್ನು ಕುರಿತು ಪತ್ರಿಕೆಗಳಲ್ಲಿ ಓದುತ್ತೇವೆ. ನಿಶ್ಶಸ್ತ್ರೀಕರಣದ ಬಗೆಗೂ ಕೇಳಿದ್ದೇವೆ.

ಒಂದು ರಾಷ್ಟ್ರದ ಸೈನ್ಯಶಕ್ತಿ ಮತ್ತು ಶಸ್ತ್ರಾಸ್ತ್ರ ಬಲವನ್ನು ಮೊದಲ ಮೊಟ್ಟಮೊದಲಾಗಿ ಮಿತಗೊಳಿಸಿ, ಅನಂತರ ಪೂರ್ತಿ ಇಲ್ಲವಾಗಿಸುವುದಕ್ಕೆ ನಿಶ್ಶಸ್ತ್ರೀಕರಣ ಎನ್ನುತ್ತೇವೆ. ಯಾವುದೇ ಒಂದು ರಾಷ್ಟ್ರ ಸ್ವಇಚ್ಛೆಯಿಂದ ತನ್ನ ಶಸ್ತ್ರಬಲವನ್ನು ಕಡಮೆ ಮಾಡಬಹುದು. ಅಥವಾ ರಾಷ್ಟ್ರಗಳು ತಮ್ಮೊಳಗೆ ಸಮಾಲೋಚಿಸಿ ಈ ನಿರ್ಧಾರ ಕೈಗೊಳ್ಳಬಹುದು. ಆದರೆ ರಾಷ್ಟ್ರಗಳ ನಡುವೆ ಶತ್ರುತ್ವ ಇದ್ದಾಗ ಈ ರೀತಿಯ ನಿಶ್ಶಸ್ತ್ರೀಕರಣದ ಒಪ್ಪಂದ ಸುಲಭವಾಗಿ ಆಗಲಾರದು.

ಸೋತ ರಾಷ್ಟ್ರದ ಮೇಲೆ ಕಡ್ಡಾಯವಾಗಿ ಹೊರಿಸಿದಾಗ ಅಥವಾ ಮಿತ್ರ ರಾಷ್ಟ್ರಗಳೊಟ್ಟಿಗೆ ಏರ್ಪಟ್ಟಾಗ ನಿಶ್ಶಸ್ತ್ರೀಕರಣ ಸಾಮಾನ್ಯವಾಗಿ ಯಶಸ್ವಿಯಾಗಿದೆ. ಉದಾಹರಣೆಗೆ, ಒಂದು ಯುದ್ಧದ ಅನಂತರ ರೋಮ್ ಕಾರ್ಥೇಜಿನ ಮೇಲೆ ಸಂಪೂರ್ಣ ನಿಶ್ಶಸ್ತ್ರೀಕರಣವನ್ನು ವಿಧಿಸಿತು. 1817ರಲ್ಲಿ ಅಮೆರಿಕ ಮತ್ತು ಬ್ರಿಟನಿನ ನಡುವೆ ಆದ ಒಪ್ಪಂದವು ನಿಶ್ಶಸ್ತ್ರೀಕರಣದ ಸಫಲತೆಗೆ ಮತ್ತೊಂದು ನಿದರ್ಶನ. ಈ ಒಪ್ಪಂದದ ಪ್ರಕಾರ ಎರಡು ರಾಷ್ಟ್ರಗಳು ಗ್ರೇಟ್ ಲೇಕ್ಸ್‌ನಲ್ಲಿ ತಮ್ಮ ಜಲ ಸೈನ್ಯವನ್ನು ಕಡಮೆ ಮಾಡಿಕೊಂಡುವು.

1899ರಲ್ಲಿ ಮೊದಲನೆಯ ಬಾರಿಗೆ ಹಾಲೆಂಡಿನ ಹೇಗ್‌ನಲ್ಲಿ ಅಂತರರಾಷ್ಟ್ರೀಯ ನಿಶ್ಶಸ್ತ್ರೀಕರಣವನ್ನು ಕುರಿತು ಸಮ್ಮೇಳನವೊಂದು ಜರಗಿತು. ಮೊದಲನೆಯ ಮಹಾಯುದ್ಧದ ಅನಂತರ ಜರ್ಮನಿಯನ್ನು ಕಡ್ಡಾಯವಾಗಿ ನಿಶ್ಶಸ್ತ್ರೀಕರಿಸಲಾಯಿತು. 1932ರಲ್ಲಿ ಮತ್ತೆ ರಾಷ್ಟ್ರಸಂಘವು ವಿಶ್ವ ನಿಶ್ಶಸ್ತ್ರೀಕರಣ ಸಮ್ಮೇಳನ ಕರೆಯಿತು. ಆದರೆ ಇಷ್ಟರಲ್ಲಿ ಜರ್ಮನಿಯು ಚೇತರಿಸಿಕೊಂಡು ಪುನಃ ಯುದ್ಧಕ್ಕೆ ಅನುವಾದುದರಿಂದ ಈ ಸಮ್ಮೇಳನ ಯಶಸ್ವಿಯಾಗಲಿಲ್ಲ.

ಎರಡನೆಯ ಮಹಾಯುದ್ಧದ ತರುವಾಯ ಮತ್ತೆ ನಿಶ್ಶಸ್ತ್ರೀಕರಣದ ಬಗೆಗೆ ಆಶಾಭಾವನೆಗಳು ಉದಿಸಿದುವು. 1952ರಲ್ಲಿ ವಿಶ್ವಸಂಸ್ಥೆಯು ಇದರ ಸಂಪೂರ್ಣ ಮಾಹಿತಿ ದೊರಕಿಸಿಕೊಳ್ಳುವುದಕ್ಕಾಗಿ ನಿಶ್ಶಸ್ತ್ರೀಕರಣ ಸಮಿತಿಯೊಂದನ್ನು ನೇಮಿಸಿತು.

ಪ್ರಪಂಚದಲ್ಲಿಂದು ಬಲಿಷ್ಠ ರಾಷ್ಟ್ರಗಳೆನಿಸಿಕೊಂಡಿರುವ ಅಮೆರಿಕ ಮತ್ತು ರಷ್ಯ ನಿಶ್ಶಸ್ತ್ರೀಕರಣದ ಬಗೆಗೆ ಸಮಾಲೋಚನೆ ನಡೆಸುತ್ತಲೇ ಇವೆ. ನಿಶ್ಶಸ್ತ್ರೀಕರಣ ಆಚರಣೆಗೆ ಬರದಿದ್ದರೂ 1953ರಲ್ಲಿ ಪರಮಾಣುಶಕ್ತಿಯನ್ನು ಶಾಂತಿ ಯೋಜನೆಗೆ ಉಪಯೋಗಿಸುವ ಸಲಹೆ ಸ್ವಲ್ಪಮಟ್ಟಿಗೆ ಮಾನ್ಯತೆ ಪಡೆಯಿತು. ನಾಲ್ಕು ವರ್ಷಗಳ ತರುವಾಯ ಇದು ಅಂತರರಾಷ್ಟ್ರೀಯ ಪರಮಾಣುಶಕ್ತಿ ಸಂಸ್ಥೆಯ ರಚನೆಗೆ ಎಡೆಮಾಡಿಕೊಟ್ಟಿತು.

1961ರಲ್ಲಿ ಅಮೆರಿಕ ಸರಕಾರ ಶಸ್ತ್ರಾಸ್ತ್ರ ಹತೋಟಿಯ ಮತ್ತು ನಿಶ್ಶಸ್ತ್ರೀಕರಣದ ಅಂಗ ಸಂಸ್ಥೆಯೊಂದನ್ನು ಸ್ಥಾಪಿಸಿತು. ರಾಷ್ಟ್ರಗಳ ನಡುವೆ ಇರುವ ವಿವಾದಗಳನ್ನು ಯುದ್ಧವಿಲ್ಲದೆ, ಕಾನೂನಿನ ಮುಖಾಂತರ ಶಾಂತಿಯುತವಾಗಿ ತೀರ್ಮಾನಿಸಿಕೊಳ್ಳಲು ಸಹಾಯಮಾಡುವುದೇ ಇದರ ಉದ್ದೇಶ.

ಭಯಂಕರ ಅಸ್ತ್ರಗಳ ಬಳಕೆಯನ್ನು ತಡೆಗಟ್ಟಲು ' ನ್ಯೂಕ್ಲಿಯರ್ ನಾನ್–ಪ್ರೊಲಿಫರೇಷನ್ ಟ್ರೀಟಿ ' (ಪರಮಾಣು ಅಸ್ತ್ರಗಳನ್ನು ಶೇಖರಿಸದಿರುವ ಒಪ್ಪಂದ) ಎಂಬ ಅಂತರರಾಷ್ಟ್ರೀಯ ಒಪ್ಪಂದವನ್ನು ಆಚರಣೆಗೆ ತರುವ ಪ್ರಯತ್ನಗಳು ನಡೆಯುತ್ತಿವೆ. ಪರಮಾಣು ಅಸ್ತ್ರಗಳನ್ನು ಹೆಚ್ಚಿಸಿಕೊಳ್ಳುವುದನ್ನು ಇದು ನಿರೋಧಿಸುತ್ತದೆ; ಈ ಕ್ಷೇತ್ರದಲ್ಲಿ ಶಾಂತಿಯುತ ಬಳಕೆಗೆ ಅಂತರರಾಷ್ಟ್ರೀಯ ಸಹಕಾರ ಗಳಿಸಲು ಯತ್ನಿಸುತ್ತದೆ. ಆದರೆ ಈ ಒಪ್ಪಂದ ಎಲ್ಲ ರಾಷ್ಟ್ರಗಳಿಗೆ ರಕ್ಷಣೆಯ ಭರವಸೆಯನ್ನು ನೀಡುವುದಿಲ್ಲ ಎಂದು ಹಲವು ದೇಶಗಳು ಇದನ್ನು ಒಪ್ಪಿಲ್ಲ.

## ನೀತಿಶಾಸ್ತ್ರ

'ಸತ್ಯವನ್ನು ನುಡಿಯಬೇಕು,' 'ಗುರುಹಿರಿಯರನ್ನು ಗೌರವಿಸಬೇಕು.' 'ಎಲ್ಲರನ್ನೂ ಪ್ರೀತಿಸಬೇಕು'–ಈ ಬಗೆಯ ಅನೇಕ ನೀತಿ ಮಾತುಗಳನ್ನು ನಾವು ಕೇಳಿದ್ದೇವೆ. ವ್ಯಕ್ತಿ ಹೇಗಿರಬೇಕು? ಸಂಸಾರ ಹೇಗಿರಬೇಕು? ಸಮಾಜ ಹೇಗಿರಬೇಕು? ಪಾಪ ಎನ್ನುವುದು ಏನು? ಪುಣ್ಯದ ಸ್ವರೂಪ ಏನು?

ಇಂಥ ವಿಚಾರಗಳನ್ನು ಕುರಿತ ಶಾಸ್ತ್ರಕ್ಕೆ ನೀತಿಶಾಸ್ತ್ರ ಎಂದು ಹೆಸರು. ಶುದ್ಧವಾದ ನಡತೆ. ಶುಭ್ರವಾದ ಜೀವನ ಇವು ನೀತಿಶಾಸ್ತ್ರದ ಗುರಿ. ಇವನ್ನು ಸಾಧಿಸುವುದು ಹೇಗೆ ಎನ್ನುವುದನ್ನು ನೀತಿಶಾಸ್ತ್ರ ವಿವರಿಸುತ್ತದೆ. ನಿತ್ಯ ಜೀವನದಲ್ಲಿ ಒಳಿತು–ಕೆಡುಕು. ಯುಕ್ತತೆ–ಅಯುಕ್ತತೆ. ಗುಣ–ಅವಗುಣಗಳನ್ನು ವಿವೇಚಿಸಿ ಮನುಷ್ಯನು ಯಾವ ರೀತಿಯಲ್ಲಿ ವರ್ತಿಸಬೇಕು ಎಂದು ತಿಳಿಸುತ್ತದೆ. ಮಾನವನ ಅನುಭವದ ಮೂರು ಮುಖ್ಯ ಅಂಶಗಳಾದ ಆಲೋಚನೆ. ಭಾವನೆ ಮತ್ತು ಕ್ರಿಯೆ ಇವುಗಳೊಡನೆ ನೀತಿಶಾಸ್ತ್ರದ ಸಂಪರ್ಕ ನಿಕಟವಾದದ್ದು.

ಕ್ರಿ.ಪೂ. ಮೂರನೆಯ ಶತಮಾನದಲ್ಲಿ ಸೈಪ್ರಸ್‌ನ ಜೀನೋ ನೀತಿಶಾಸ್ತ್ರವನ್ನು ವೈಜ್ಞಾನಿಕ ದೃಷ್ಟಿಯಿಂದ ವ್ಯವಸ್ಥೆಗೊಳಿಸಲು ಪ್ರಯತ್ನಿಸಿದ. ಗ್ರೀಕ್ ತತ್ತ್ವಜ್ಞಾನಿ ಸಾಕ್ರಟೀಸನು ನೀತಿಶಾಸ್ತ್ರದ ಬಗೆಗೆ ಆಳವಾಗಿ ಚಿಂತಿಸಿದವರಲ್ಲಿ ಮುಖ್ಯನಾದವನು. "ಸದ್ಗುಣವೇ ಜ್ಞಾನ" ಎನ್ನುವುದು ಸಾಕ್ರಟೀಸನ ನುಡಿ.

ಪ್ರಾಚೀನ ಕಾಲದಿಂದಲೂ ಮನುಷ್ಯನ ನೈತಿಕಮಟ್ಟವನ್ನು ಹೆಚ್ಚಿಸಲು ಭಾರತದಲ್ಲಿ ಹೆಚ್ಚು ಗಮನಕೊಡಲಾಗಿದೆ. ಇದರ ಸಲುವಾಗಿ ಅನೇಕ ನೀತಿಕಥೆಗಳು ರಚಿಸಲ್ಪಟ್ಟಿವೆ. (ಉಪನಿಷತ್ತುಗಳು, ಮಹಾಭಾರತ ಮತ್ತು ರಾಮಾಯಣದ ಕಥೆಗಳು ಮೊದಲಾದುವುಗಳಲ್ಲಿ ನೀತಿಯೇ ಪ್ರಧಾನ).

ಚಾಣಕ್ಯ ನೀತಿಸಾರ, ಭರ್ತೃಹರಿಯ ನೀತಿಶತಕ, ಆಪ್ತೋಪದೇಶ, ಆತ್ಮಬೋಧ ಮೊದಲಾದುವು ನೀತಿಶಾಸ್ತ್ರ ಪರವಾದ ಗ್ರಂಥಗಳು. ಪಂಚತಂತ್ರ. ಹಿತೋಪದೇಶ ಮೊದಲಾದ ಕಥೆಗಳಲ್ಲೂ ನೀತಿಯನ್ನೇ ಬೋಧಿಸುತ್ತಾರೆ.

ನೋಡಿ : ಮನು

## ನ್ಯೂಜಿಲೆಂಡ್

ನ್ಯೂಜಿಲೆಂಡ್ ಬಹು ಭಾಗ್ಯವಂತ ದೇಶ. ನಿರುದ್ಯೋಗ ಸಮಸ್ಯೆ ಎಷ್ಟು ದೇಶಗಳನ್ನು ಕಾಡುತ್ತಿಲ್ಲ! ನ್ಯೂಜಿಲೆಂಡಿನಲ್ಲಾದರೋ ಈ ಚಿಂತೆಯೇ ಇಲ್ಲ. ಇದಕ್ಕೆ ಕಾರಣ, ನೈಸರ್ಗಿಕ ಸಂಪತ್ತನ್ನು ಈ ಜನ ಬಳಸಿಕೊಂಡಿರುವ ಜಾಣ್ಮೆಯ ರೀತಿ. ಹಾಲಿನಿಂದ ತಯಾರಾದ ಸಾಮಗ್ರಿಗಳ ರಫ್ತಿನಲ್ಲಿ ನ್ಯೂಜಿಲೆಂಡ್‌ಗೆ ಪ್ರಪಂಚದಲ್ಲಿ ಮೊದಲನೆಯ ಪಂಕ್ತಿಯಲ್ಲಿ ಸ್ಥಾನ. ಮಾಂಸದ ರಫ್ತಿನಲ್ಲಿ ಪ್ರಪಂಚದ ದೇಶಗಳಲ್ಲಿ ಎರಡನೆಯದು. ಉಣ್ಣೆಯ ರಫ್ತಿನಲ್ಲಿ ಮೂರನೆಯದು.

ನ್ಯೂಜಿಲೆಂಡ್ ದಕ್ಷಿಣ ಶಾಂತಸಾಗರದಲ್ಲಿ ಆಸ್ಟ್ರೇಲಿಯದಿಂದ ಆಗ್ನೇಯಕ್ಕೆ 1,931 ಕಿಲೊಮೀಟರು ದೂರದಲ್ಲಿದೆ. ಕುಕ್ ಜಲಸಂಧಿಯಿಂದ ಬೇರ್ಪಟ್ಟು ನ್ಯೂಜಿಲೆಂಡ್ ಎರಡು ದ್ವೀಪಗಳಾಗಿ ಮಾರ್ಪಟ್ಟಿದೆ. ಉತ್ತರ ದ್ವೀಪ ಮತ್ತು ಸ್ಟೂಅರ್ಟ್ ದ್ವೀಪ. ಚಾತ್‌ಹ್ಯಾಮ್ ದ್ವೀಪಗಳೂ ನ್ಯೂಜಿಲೆಂಡಿಗೆ ಸೇರಿವೆ.

ನ್ಯೂಜಿಲೆಂಡ್ ಬಹು ಪಾಲು ಪರ್ವತಗಳಿಂದ ಕೂಡಿದೆ. ಉತ್ತರ ದ್ವೀಪದ ಪರ್ವತಗಳಲ್ಲಿ ಅನೇಕ ಬಿಸಿನೀರಿನ ಚಿಲುಮೆಗಳು, ಉಪ್ಪು ಮಿಶ್ರಿತ ನೀರಿನ ಚಿಲುಮೆಗಳು ಇರುವುದೊಂದು ವಿಶೇಷ. 581 ಮೀಟರು ಎತ್ತರದಿಂದ ಬೀಳುವ ಸದರ್‌ಲೆಂಡ್ ಜಲಪಾತ ಮಿಲ್‌ಫರ್ಡ್ ಸೌಂಡ್ ಹತ್ತಿರವಿದೆ. ಎಗ್ಮಾಂಟ್. ಜ್ವಾಲಾಮುಖಿ.

ನ್ಯೂಜಿಲೆಂಡಿನದು ಸಾಗರಿಕ ವಾಯುಗುಣ. ಬೇಸಿಗೆಯಲ್ಲಿ ಉಷ್ಣಾಂಶ ಕಡಮೆ. ಚಳಿಗಾಲ ತಂಪಾಗಿದ್ದು ಬಿರುಗಾಳಿ ಬೀಸುತ್ತಿರುತ್ತದೆ.

ದೇಶದ ಕಣಿವೆ ಪ್ರದೇಶದಲ್ಲಿ ಗೋಧಿ. ಓಟ್ಸ್. ಬಾರ್ಲಿ, ಹೊಗೆಸೊಪ್ಪು, ಹಣ್ಣುಗಳನ್ನು ಬೆಳೆಯುತ್ತಾರೆ. ಕುರಿ, ದನ ಸಾಕುವುದರಿಂದ ಉಣ್ಣೆ, ಬೆಣ್ಣೆ, ಗಿಣ್ಣು, ಮಾಂಸ ದೊರಕುತ್ತವೆ.

ಕಲ್ಲಿದ್ದಲು. ಸುಣ್ಣಕಲ್ಲು, ಚಿನ್ನ, ಕಬ್ಬಿಣದ ಅದಿರು, ಮ್ಯಾಂಗನೀಸ್, ಟಂಗ್‌ಸ್ಟನ್ ಮೊದಲಾದ ಖನಿಜಗಳು, ಲಿಗ್ನೈಟ್ ಎಂಬ ಕಂದು ಕಲ್ಲಿದ್ದಲು ಸಿಗುತ್ತವೆ.

ಹಾಲು–ಹೈನದ ಕಾರ್ಖಾನೆಗಳು. ಮಾಂಸ ಶೈತ್ಯೀಕರಣ, ಮರದ ಪದಾರ್ಥಗಳು, ಕಾರಿನ ಬಿಡಿಭಾಗಗಳನ್ನು ಜೋಡಿಸುವುದು, ಬಟ್ಟೆ. ಪಾದರಕ್ಷೆ, ರಬ್ಬರ್ ಸಾಮಾನುಗಳು, ವಿದ್ಯುತ್ ಉಪಕರಣಗಳು ಮೊದಲಾದ ಕೈಗಾರಿಕೆಗಳಿವೆ.

ನ್ಯೂಜಿಲೆಂಡಿನಲ್ಲಿ ಹಾವುಗಳು ಇಲ್ಲವೇ ಇಲ್ಲ ಎನ್ನಬಹುದು. ಎಲ್ಲಿಯೋ ಒಮ್ಮೊಮ್ಮೆ ನೀರಿನಲ್ಲಿ ತೇಲಿಕೊಂಡು ಬರುವ ಹಾವು ಕಾಣಿಸುತ್ತದೆ. ಇಲ್ಲಿ ಎಷ್ಟೋ ಪಕ್ಷಿಗಳಿಗೆ ಹಾರಲು ಬರುವುದಿಲ್ಲ. ಇಂಥದೊಂದು ಪಕ್ಷಿ 'ಕಿವಿ'. ಹಣೆಯಮೇಲೆ ಮೂರು ಕಣ್ಣುಗಳಿದ್ದ ಹಲ್ಲಿಗಳಿದ್ದುವಂತೆ ಹಿಂದೆ ಇಲ್ಲಿ.

ಪಶ್ಚಿಮ ದೇಶದವರು ಇಲ್ಲಿಗೆ ಬಂದಾಗ ಇಲ್ಲಿದ್ದವರು ಮಾವೋರಿ ಜನ. ಇವರು ಪಾಲಿನೇಷಿಯದಿಂದ ಬಂದು ನ್ಯೂಜಿಲೆಂಡಿನಲ್ಲಿ ನೆಲೆಸಿದವರು. ಪೂರ್ವಜರ ನೃತ್ಯ. ಮಂತ್ರ ಪಠಣ. ಭಾಷೆ. ಕಲೆಗಳನ್ನು ಈ ಜನ ಉಳಿಸಿಕೊಂಡು ಬಂದಿದ್ದಾರೆ. ಮರದ ಕೆತ್ತನೆಯ ಕೆಲಸದಲ್ಲಿ ಇವರದೇ ಆದ ಶೈಲಿ ಕಂಡುಬರುತ್ತದೆ. ಇವರನ್ನು ಬಿಟ್ಟರೆ ಬ್ರಿಟಿಷರದೇ ಹೆಚ್ಚಿನ ಸಂಖ್ಯೆ.

ಉತ್ತರ ದ್ವೀಪದ ದಕ್ಷಿಣ ತುದಿಯಲ್ಲಿರುವ ವೆಲ್ಲಿಂಗ್ಟನ್ ರಾಜಧಾನಿ.

| | | |
|---|---|---|
| ಖಂಡ | : | ಆಸ್ಟ್ರೇಲಿಯ (ದಕ್ಷಿಣ ಶಾಂತಸಾಗರದಲ್ಲಿ) |
| ಅಕ್ಷಾಂಶ | : | 34° 25′ ದ ದಿಂದ 47° 17′ ದ |
| ರೇಖಾಂಶ | : | 166° 27′ ಪೂ ದಿಂದ 178° 35′ ಪೂ |
| ವಿಸ್ತೀರ್ಣ | : | 2,68,676 ಚ. ಕಿ. ಮೀ. |
| ಜನಸಂಖ್ಯೆ | : | 25,75,000 |
| ರಾಜಧಾನಿ | : | ವೆಲ್ಲಿಂಗ್ಟನ್ |
| ಭಾಷೆ | : | ಇಂಗ್ಲಿಷ್, ಮಾವೋರಿ |
| ಸರಕಾರ | : | ಸಂವಿಧಾನಬದ್ಧ ರಾಜಪ್ರಭುತ್ವ |
| ಬಾವುಟ | : | ನೀಲಿ. ಬಿಳಿ ಅಂಚಿರುವ ನಾಲ್ಕು ಕೆಂಪು ನಕ್ಷತ್ರಗಳು ಎಡ ಮೇಲ್ಭಾಗದಲ್ಲಿ ಯೂನಿಯನ್ ಜ್ಯಾಕ್ |

ಸಮುದ್ರದಲ್ಲಿ ಲಾವಾ ಬಂದು ಕಡೆ ಸೇರುತ್ತ ಆಗಿರುವ ಸ್ಥಳವೇ ಇಲ್ಲಿನ ಬಂದರು. ಆಕ್ಲೆಂಡಿನಲ್ಲಿ ಎರಡು ಬಂದರುಗಳಿವೆ. ದಕ್ಷಿಣ ದ್ವೀಪದ ದೊಡ್ಡ ನಗರವಾದ ಕ್ರೈಸ್ಟ್‌ಚರ್ಚ್‌ನಲ್ಲಿ ತುಂಬಾ ಉದ್ಯಾನಗಳಿವೆ.

1642ರಲ್ಲಿ ಎಬಲ್ ಟಾಸ್‌ಮನ್ ಎನ್ನುವ ಡಚ್ ನಾವಿಕ ನ್ಯೂಜಿಲೆಂಡನ್ನು ಮೊದಲು ಕಂಡ. ಆದರೆ ನಾಡಿನ ಬಗೆಗೆ ಏನೂ ಹೆಚ್ಚಿನ ವಿಷಯ ತಿಳಿದುಕೊಳ್ಳದೆ ಹಿಂದಿರುಗಿದ. 1769ರಲ್ಲಿ ಕ್ಯಾಪ್ಟನ್ ಜೇಮ್ಸ್ ಕುಕ್ ನ್ಯೂಜಿಲೆಂಡಿಗೆ ಬಂದ. ಇವನು ಇಲ್ಲಿ ಜನರೊಡನೆ ಬೆರೆತು ಹೆಚ್ಚು ವಿಷಯಗಳನ್ನು ಸಂಗ್ರಹಿಸಿದ. 1840ರಲ್ಲಿ ನ್ಯೂಜಿಲೆಂಡ್ ಬ್ರಿಟಿಷರ ವಸಾಹತಾಯಿತು. 1853ರಲ್ಲಿ ಸ್ವಯಮಾಡಳಿತವಿರುವ ವಸಾಹತು ಎನಿಸಿತು. ಈಗ ಸಂವಿಧಾನಬದ್ಧ ರಾಜಪ್ರಭುತ್ವವಿದೆ. ಬ್ರಿಟನಿನ ಪ್ರಭುವೇ ಇಲ್ಲಿಗೂ ಪ್ರಭು. ಬ್ರಿಟಿಷ್ ಚಕ್ರವರ್ತಿಯ ಪ್ರತಿನಿಧಿ ಗವರ್ನರ್ ಜನರಲ್. ರಾಷ್ಟ್ರೀಯ ಚುನಾವಣೆ ಮೂರು ವರ್ಷಗಳಿಗೊಮ್ಮೆ ನಡೆಯುತ್ತವೆ.

## ನ್ಯೂ ಯಾರ್ಕ್

ಪ್ರಪಂಚದ ಶಾಂತಿಯ ಹಂಬಲದ ಪ್ರತೀಕವಾದ ವಿಶ್ವಸಂಸ್ಥೆಯ ಕೇಂದ್ರ ಕಚೇರಿ.

45.8 ಮೀಟರು ಎತ್ತರದ ಪೀಠದ ಮೇಲೆ ನಿಂತ 46.4 ಮೀಟರು ಎತ್ತರದ ಸ್ವಾತಂತ್ರ್ಯ ವಿಗ್ರಹ.

ಪ್ರಪಂಚದ ಅತ್ಯಂತ ಎತ್ತರದ ಕಟ್ಟಡವಾದ ಎಂಪೈರ್ ಸ್ಟೇಟ್ ಗಗನಚುಂಬಿ ( 381 ಮೀಟರು ಎತ್ತರ—ಅಂತಸ್ತುಗಳು 102).

—ನ್ಯೂ ಯಾರ್ಕ್ ನಗರ ಎಂದೊಡನೆ ಈ ಮೂರು ಚಿತ್ರಗಳು ಕಣ್ಣಿಗೆ ಕಟ್ಟುತ್ತವೆ.

ನ್ಯೂ ಯಾರ್ಕ್ ಅಮೆರಿಕ ಸಂಯುಕ್ತ ಸಂಸ್ಥಾನದ ಮಹಾನಗರ. ಸಂಯುಕ್ತ ಸಂಸ್ಥಾನದ ಪೂರ್ವ ತೀರದಲ್ಲಿ ಹಡ್ಸನ್ ನದಿ ಅಟ್ಲಾಂಟಿಕ್ ಸಾಗರವನ್ನು ಸೇರುವಲ್ಲಿ ಈ ನಗರವಿದೆ. ಪ್ರಪಂಚದ ದೊಡ್ಡ ನಗರಗಳಲ್ಲಿ ಇದು ಎರಡನೆಯದು (ಮೊದಲನೆಯದು ಟೋಕಿಯೊ).

ನ್ಯೂ ಯಾರ್ಕ್ ದ್ವೀಪಗಳ ನಗರ. ಇದರಲ್ಲಿ ಐದು ಬರೋ ಅಥವಾ ವಿಭಾಗಗಳಿವೆ: ಬ್ರಾಂಕ್ಸ್, ಕ್ವೀನ್ಸ್, ಬ್ರೂಕ್ಲಿನ್, ಮನ್‌ಹಟನ್ ಮತ್ತು ರಿಚ್‌ಮಂಡ್. ಇವುಗಳಲ್ಲಿ ಬ್ರಾಂಕ್ಸ್ ವಿಭಾಗವನ್ನು ಮಾತ್ರ ನೀರು ಸುತ್ತುವರಿದಿಲ್ಲ. ಲಿಬರ್ಟಿ ದ್ವೀಪದಲ್ಲಿದೆ ಸ್ವಾತಂತ್ರ್ಯ ದೇವತೆಯ ವಿಗ್ರಹ. ಇನ್ನೂ ಹಲವಾರು ದ್ವೀಪಗಳು ನ್ಯೂ ಯಾರ್ಕ್ ನಗರಕ್ಕೆ ಸೇರಿವೆ.

ನ್ಯೂ ಯಾರ್ಕ್‌ನಲ್ಲಿ ಪ್ರಪಂಚದ ಎಲ್ಲಾ ಭಾಗಗಳ ಜನರಿದ್ದಾರೆ. ಕ್ರಿಸ್ಲರ್ ಭವನ, ಜ್ಯಾಸಿನ್ ಟವರ್, ಉಲ್‌ವರ್ತ್ ಭವನ, ಸಿಂಗರ್ ಕಂಪನಿ ಕಟ್ಟಡ, ನ್ಯೂ ಯಾರ್ಕ್ ಟೆಲಿಫೋನ್ ಭವನ—ಇವೆಲ್ಲವೂ ಗಗನಚುಂಬಿ ಕಟ್ಟಡಗಳು.

ಡಚ್ಚರ ಕೈಕೆಳಗೆ ಕೆಲಸ ಮಾಡುತ್ತಿದ್ದ ಹೆನ್ರಿ ಹಡ್ಸನ್ ಎಂಬ ಇಂಗ್ಲಿಷ್ ನಾವಿಕ 1609ರಲ್ಲಿ ನ್ಯೂ ಯಾರ್ಕ್ ಸುತ್ತ ಶೋಧನೆ ನಡೆಸಿದ. 1615ರಲ್ಲಿ ಡಚ್ಚರು 24 ಡಾಲರ್ ಬೆಲೆಯ ಪದಾರ್ಥಗಳನ್ನು ಕೊಟ್ಟು ಅಮೆರಿಕನ್ ಇಂಡಿಯನರಿಂದ ಈ ಭೂಭಾಗವನ್ನು ಕೊಂಡರು. 1624ರಲ್ಲಿ ತಮ್ಮ ರಾಷ್ಟ್ರವಾದ ಹಾಲೆಂಡಿನ ರಾಜಧಾನಿಯನ್ನು ಸ್ಮರಿಸಿ ನ್ಯೂ ಆಮ್‌ಸ್ಟರ್‌ಡ್ಯಾಮ್ ಎಂದು ಹೆಸರಿಟ್ಟರು. ಇಂಗ್ಲಿಷರು ಇದು ತಮ್ಮ ವರ್ಜೀನಿಯ ವಸಾಹತಿಗೆ ಸೇರಬೇಕೆಂದು ಸಾರಿ ಡಚ್ಚರನ್ನು ಓಡಿಸಲೆತ್ನಿಸಿದರು. 1664ರಲ್ಲಿ ದೊರೆ ಎರಡನೆಯ ಚಾರ್ಲ್ಸ್ ನ್ಯೂ ಆಮ್‌ಸ್ಟರ್‌ಡ್ಯಾಮನ್ನು ತನ್ನ ಸೋದರ ಡ್ಯೂಕ್ ಆಫ್ ಯಾರ್ಕ್‌ಗೆ ಕೊಟ್ಟ. ಹೊಸ ಹೆಸರು ಬದಲಾಯಿಸಿ ನಗರವನ್ನು ನ್ಯೂ ಯಾರ್ಕ್ ಎಂದು ಕರೆದರು.

1783ರಲ್ಲಿ ಜಾರ್ಜ್ ವಾಷಿಂಗ್‌ಟನ್ ನ್ಯೂ ಯಾರ್ಕನ್ನು ರಾಜಧಾನಿಯಾಗಿ ಮಾಡಿಕೊಂಡ. ಅಲ್ಲಿಂದಾಚೆಗೆ ನ್ಯೂ ಯಾರ್ಕ್ ಪ್ರಗತಿಹೊಂದಿ ವ್ಯಾಪಾರ, ವಾಣಿಜ್ಯ ಉದ್ಯಮಗಳ ಕೇಂದ್ರವಾಯಿತು.



ಎಂಪೈರ್ ಸ್ಟೇಟ್ ಗಗನಚುಂಬಿ

ನ್ಯೂ ಯಾರ್ಕ್ ಸುಂದರ ಉದ್ಯಾನಗಳ ನಗರವೂ ಆಗಿದೆ. ಸೆಂಟ್ರಲ್ ಪಾರ್ಕ್ ಮನೋಹರವಾಗಿದೆ. ಬ್ರಾಂಕ್ಸ್ ಪ್ರಾಣಿ ಸಂಗ್ರಹಾಲಯ, ಬಟಾನಿಕಲ್ ಗಾರ್ಡನ್ ಅನೇಕ ಶ್ರೇಷ್ಠ ಉದ್ಯಾನಗಳಿಂದ ಕೂಡಿದೆ. ಅಮೆರಿಕನ್ ಮ್ಯೂಸಿಯಂ ಆಫ್ ನ್ಯಾಚುರಲ್ ಹಿಸ್ಟರಿ ಪ್ರಪಂಚದಲ್ಲೇ ಅಸಮಾನ ವಸ್ತು ಸಂಗ್ರಹಾಲಯ. ನಾಟಕ, ಸಂಗೀತ, ಕಲೆಗೂ ನ್ಯೂ ಯಾರ್ಕ್ ಸಂಯುಕ್ತ ಸಂಸ್ಥಾನಕ್ಕೆ ಕೇಂದ್ರ.

ಹಡ್ಸನ್ ನದಿ ಸಮುದ್ರ ಸೇರುವ ಕಡೆ ನ್ಯೂ ಯಾರ್ಕ್ ಇರುವುದರಿಂದ ಅದ್ಭುತ ಬಂದರಾಗಿ ರೂಪುಗೊಂಡಿದೆ. ಬಂದರಿನಲ್ಲಿ ನೀರು ಆಳವಾಗಿರುವುದರಿಂದ ದೊಡ್ಡ ಹಡಗುಗಳೂ ಹಡ್ಸನ್ ನದಿಯವರೆಗೆ ಬಂದು ನಿಲ್ಲುತ್ತವೆ. ನ್ಯೂ ಯಾರ್ಕ್‌ನಲ್ಲಿರುವ ಕೆನಡಿ ಅಂತರರಾಷ್ಟ್ರೀಯ ವಿಮಾನ ನಿಲ್ದಾಣದಿಂದ ಪ್ರತಿ ವರ್ಷ ಸುಮಾರು ಒಂದೂವರೆ ಕೋಟಿ ಪ್ರವಾಸಿಗರು ಪ್ರಯಾಣ ಮಾಡುತ್ತಾರೆ.

ನೋಡಿ : ಅಮೆರಿಕ ಸಂಯುಕ್ತ ಸಂಸ್ಥಾನ

## ನೃಪತುಂಗ

" ಕಲಿಯೊಳ್ ಭದ್ರಗುಣಂ ಕೇ
ವಲಿಯೊಳ್ ಮಾರ್ತ್ತಂಡ ಶೌರ್ಯಸಂಭೋನಿಧಿಯೊಳ್
ಶರಣಾಗತ ರಕ್ಷಣ ಪಟು
ಗುಣಿಯೊಳ್ ವಿಖ್ಯಾತನಪ್ಪ ನೃಪತುಂಗಂ "



ಅಪಾರ ಪಾಂಡಿತ್ಯದ ನೃಪತುಂಗ, ವಿದ್ವಾಂಸರೊಡನೆ

—ಇದು ನೃಪತುಂಗನನ್ನು ಹನ್ನೆರಡನೆಯ ಶತಮಾನದ ಲಾಕ್ಷಣಿಕ (ಕಾವ್ಯವೆಂದರೇನು ಎಂದು ವಿವರಿಸುವವನು) ನಾಗವರ್ಮ ತನ್ನ ಕಾವ್ಯಾವಲೋಕನದಲ್ಲಿ ಬಣ್ಣಿಸಿರುವ ರೀತಿ.

ನೃಪತುಂಗ ಕನ್ನಡನಾಡನ್ನು ಆಳಿದ ರಾಷ್ಟ್ರಕೂಟ ರಾಜವಂಶದಲ್ಲಿ ಸುಪ್ರಸಿದ್ಧ. ಅತ್ಯಂತ ಸುಸಂಸ್ಕೃತನಾದ ದೊರೆ. 'ಕವಿರಾಜ ಮಾರ್ಗ' ಕನ್ನಡದಲ್ಲಿ ಈವರೆಗೆ ಸಿಕ್ಕಿರುವ ಗ್ರಂಥಗಳಲ್ಲಿ ಮೊಟ್ಟಮೊದಲನೆಯದು. ಇದರ ಕರ್ತೃ ನೃಪತುಂಗ ಎಂದು ಹೇಳುತ್ತಾರೆ. ಕಾವ್ಯ ಸ್ವರೂಪಾದಿಗಳ ಬಗೆಗೆ ತಿಳಿಸುವ ಶಾಸ್ತ್ರಗ್ರಂಥ ಇದು. ಕನ್ನಡನಾಡು ಮತ್ತು ನುಡಿಯ ವಿಷಯವನ್ನು ಈ ಕೃತಿ ಸುಂದರವಾಗಿ ಹೇಳುತ್ತದೆ.

ನೃಪತುಂಗ ಸುಮಾರು 800ರಲ್ಲಿ ಹುಟ್ಟಿರಬೇಕು. ಇವನು ಮೂರನೆಯ ಗೋವಿಂದನ ಮಗ. ಹುಟ್ಟು ಹೆಸರು ಶರ್ವ ಎಂದು ಶಿಲಾಶಾಸನದಿಂದ ಗೊತ್ತಾಗುತ್ತದೆ. ಅಮೋಘವರ್ಷ ಎಂದೂ ಪ್ರಸಿದ್ಧನಾಗಿದ್ದ. 814ರಲ್ಲಿ ಪಟ್ಟವೇರಿದ. ಚಿಕ್ಕವಯಸ್ಸಿನಲ್ಲಿಯೇ ಪಟ್ಟಕ್ಕೆ ಬಂದುದರಿಂದ ಆಡಳಿತ ಸೂತ್ರವನ್ನು ಬಿಗಿಹಿಡಿಯುವುದು ಸ್ವಲ್ಪ ಕಷ್ಟವಾಯಿತು. ಶತ್ರುಗಳ ಹಾವಳಿ ಹೆಚ್ಚಾಯಿತು. ರಾಜನನ್ನು ಪಟ್ಟದಿಂದ ತಳ್ಳಬೇಕೆಂದು ಸಾಮಂತರೂ ದಾಯಾದಿಗಳೂ ಇತರ ಬಾಂಧವರೂ ಬಂಡಾಯಗಳನ್ನೆಬ್ಬಿಸಿ ದೇಶದಲ್ಲಿ ಅರಾಜಕತೆಯನ್ನುಂಟುಮಾಡಿದರು. ಆದರೆ ಹಿತಚಿಂತಕರ



ಸಹಾಯದಿಂದ ಈ ಬಂಡಾಯಗಳನ್ನು ನೃಪತುಂಗ ಮುರಿದಿಕ್ಕಿದ. ಹೀಗೆ ಏಕಕಾಲದಲ್ಲಿ ಒಳಹಗೆ ಹೊರಹಗೆ ಇಬ್ಬರನ್ನೂ ಎದುರಿಸ ಬೇಕಾಯಿತು. ಇಪ್ಪತ್ತು ವರ್ಷಗಳ ಕಾಲ ಶತ್ರುಗಳೊಡನೆ ಹೋರಾಡ ಬೇಕಾಯಿತು. ಅಂತೂ ಕಷ್ಟಪಟ್ಟು ತಂದೆ ಕಟ್ಟಿದ ನಾಡನ್ನು ಅಮೋಘ ವರ್ಷ ಅತ್ಯಂತ ಸಾಹಸದಿಂದ ಉಳಿಸಿಕೊಂಡ.

ರಾಜ್ಯದಲ್ಲಿ ಶಾಂತಿ ನೆಲೆಗೊಂಡೊಡನೆ ನೃಪತುಂಗ ಪ್ರಜಾಹಿತ ಕಾರ್ಯದಲ್ಲಿ ತೊಡಗಿದ. ರಾಜ್ಯಾಡಳಿತದಲ್ಲಿ ಎಷ್ಟು ಆಸಕ್ತಿಯಿದ್ದಿತೋ ಅಷ್ಟೇ ಆಸಕ್ತಿ ಕಾವ್ಯ. ಶಾಸ್ತ್ರ. ಧರ್ಮ ಮುಂತಾದ ವಿಷಯಗಳಲ್ಲಿಯೂ ಇದ್ದಿತು. ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಅವನಿಗೆ ಆಸ್ಥೆ. ಈತನ ಆಸ್ಥಾನದಲ್ಲಿ ಅನೇಕ ವಿದ್ವಾಂಸರೂ ಕವಿಗಳೂ ಇದ್ದರು. ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿ ನೃಪತುಂಗನಿಗೆ ಅಪಾರ ಪಾಂಡಿತ್ಯ. ವೈದಿಕ, ಜೈನ, ಬೌದ್ಧ ಮೂರು ಧರ್ಮಗಳಿಗೂ ಆಶ್ರಯವಿತ್ತಿದ್ದ. ನೃಪತುಂಗ ಎಲ್ಲ ಮತ, ಧರ್ಮಗಳನ್ನೂ ಸಮಾನಭಾವದಿಂದ ಗೌರವಿಸುತ್ತಿದ್ದ.

ಅರವತ್ತನಾಲ್ಕು ವರ್ಷಗಳ ಕಾಲ ಈತ ರಾಜ್ಯವಾಳಿದ. ರಾಷ್ಟ್ರಕೂಟ ಮನೆತನದ ಸಾರ್ವಭೌಮರಲ್ಲಿ ನೃಪತುಂಗನೇ ದೀರ್ಘ ಕಾಲ ರಾಜ್ಯಭಾರ ಮಾಡಿದ ಚಕ್ರವರ್ತಿ.

ಮಗ ಕೃಷ್ಣನಿಗೆ ನೃಪತುಂಗ 875ರಲ್ಲಿ ಪಟ್ಟಕಟ್ಟಿದ. ಮುಂದೆ ಮೂರು ವರ್ಷಗಳಲ್ಲಿ ಮರಣಹೊಂದಿದ.

ವಿವರ : ಏಳನೆಯ ಸಂಪುಟ

## ನೆದರ್‌ಲೆಂಡ್ಸ್

"ದೇವರು ವಿಶ್ವವನ್ನು ಸೃಷ್ಟಿಸಿದ; ಆದರೆ ಡಚ್ಚರು ಹಾಲೆಂಡನ್ನು ಸೃಷ್ಟಿಸಿದರು" ಎಂಬುದೊಂದು ಗಾದೆ. ಇದರಲ್ಲಿರುವ ಹಾಸ್ಯಕ್ಕೆ ಅರ್ಥವಿದೆ. ಜಾಗವಿರುವುದು 40,922 ಚದರ ಕಿಲೊಮಿಟರು. ಆದರೆ ಜನರಿರುವುದು ಒಂದು ಕೋಟಿ ಇಪ್ಪತ್ತು ಲಕ್ಷ. ಭೂ ಸಮಸ್ಯೆಯನ್ನು ನಿವಾರಿಸುವುದು ಹೇಗೆ ? ಆದ್ದರಿಂದಲೇ ಡಚ್ಚರು ಉತ್ತರ ಸಮುದ್ರದೊಂದಿಗೆ ಸಾವಿರ ವರ್ಷಗಳ ಸಮರಹೂಡಿ ಸಮುದ್ರದಿಂದ, ನದಿಗಳಿಂದ ಭೂಭಾಗವನ್ನು ತೆಗೆದುಕೊಂಡಿದ್ದಾರೆ. ಈ ವಾಯುವ್ಯ ಐರೋಪ್ಯ ರಾಜ್ಯದ ಅರ್ಧಭಾಗ ಜನ, ಮಾನವ ನಿರ್ಮಿತ ಭೂಭಾಗದ ಮೇಲೆ ವಾಸಿಸುತ್ತಾರೆ.

ಹಾಲೆಂಡ್ ದೇಶಕ್ಕೆ ಅಧಿಕೃತ ಹೆಸರು ನೆದರ್‌ಲೆಂಡ್ಸ್. ನೆದರ್‌ಲೆಂಡ್ಸ್ ಎಂದರೆ ತಗ್ಗು ಪ್ರದೇಶ ಎಂದರ್ಥ. ಹದಿನಾರನೆಯ ಶತಮಾನದಿಂದ ನೆದರ್‌ಲೆಂಡ್ಸ್ ಎಂಬುದೇ ಅಧಿಕೃತ ಹೆಸರು. ಆದರೆ ಉತ್ತರ ಹಾಗೂ ದಕ್ಷಿಣ ಹಾಲೆಂಡ್ ನೆದರ್‌ಲೆಂಡ್ಸಿನ ಒಂದು ಪ್ರಾಂತ ಮಾತ್ರ. ಆದರೆ ಬಹು ಕಾಲದವರೆಗೆ ರಾಜಕೀಯವಾಗಿ, ಆರ್ಥಿಕವಾಗಿ ಪ್ರಾಮುಖ್ಯ ಪಡೆದಿರುವುದರಿಂದ ಇಡೀ ದೇಶವನ್ನು ಈ ಹೆಸರಿನಿಂದ ಕರೆಯುವುದು ವಾಡಿಕೆಯಾಗಿ ಆ ಹೆಸರೇ ಜನಪ್ರಿಯವಾಗಿ ಉಳಿದುಬಿಟ್ಟಿತು.

ನೆದರ್‌ಲೆಂಡ್ಸ್ ಪ್ರಪಂಚದ ಅತ್ಯಂತ ಜನನಿಬಿಡ ದೇಶ. ಅಮೆರಿಕದ ಸಂಯುಕ್ತ ಸಂಸ್ಥಾನದಲ್ಲಿ ಚದರ ಕಿಲೊಮಿಟರು ಒಂದಕ್ಕೆ ಸರಾಸರಿ ಇಪ್ಪತ್ತೈದು ಮಂದಿ ವಾಸಿಸಿದರೆ ನೆದರ್‌ಲೆಂಡ್ಸಿನಲ್ಲಿ ಚದರ ಕಿ. ಮೀ. ಒಂದಕ್ಕೆ 300 ಜನ ವಾಸಮಾಡುತ್ತಾರೆ.

ನೆದರ್‌ಲೆಂಡ್ಸಿನ ಭಾಷೆ ಡಚ್. ಇದು ಇಂಗ್ಲಿಷ್ ಹಾಗೂ ಜರ್ಮನ್ ಭಾಷೆಗಳೊಡನೆ ನಿಕಟ ಸಂಪರ್ಕ ಹೊಂದಿರುವ ಭಾಷೆ.

ಬಹು ಭಾಗ ಜನರು ಕ್ರೈಸ್ತರು; ಉಳಿದವರಲ್ಲಿ ಸ್ವಲ್ಪ ಜನ ಯೆಹೂದ್ಯರು.

ಗಾಳಿಯಂತ್ರ ಗಿರಣಿಗಳು ಅನೇಕ ಕಡೆ ನೆದರ್‌ಲೆಂಡ್ಸ್‌ನಲ್ಲಿ ಕಾಣಸಿಗುತ್ತವೆ. ಇವುಗಳಿಂದಲೇ ಅನೇಕ ಉದ್ಯಮಗಳು ಸಾಗುತ್ತವೆ. ಇತ್ತೀಚೆಗೆ ವಿದ್ಯುಚ್ಛಕ್ತಿ ಪೂರೈಕೆಯಿಂದ ಗಾಳಿ ಯಂತ್ರ ಗಿರಣಿಗಳು ಕಡಮೆಯಾಗಿವೆ. ಎರಡನೆಯ ಮಹಾಯುದ್ಧದಲ್ಲಿ ನಾಜಿಗಳ ಕಾಲ್ತುಳಿತಕ್ಕೆ ಸಿಲುಕಿ ಹಾಲೆಂಡ್ ನುಚ್ಚುನೂರಿಯಾಯಿತು. ಆದರೂ ಡಚ್ಚರು ಯುದ್ಧ ಮುಗಿದೊಡನೆಯೇ ಶೀಘ್ರಗತಿಯಿಂದ ಚೇತರಿಸಿಕೊಂಡರು. ಸ್ಕೇಟಿಂಗ್ (ಹಿಮದಲ್ಲಿ ಜಾರುವುದು, ಓಟ) ಚಳಿಗಾಲದ ಜನಪ್ರಿಯ ಆಟ. ಫುಟ್‌ಬಾಲ್, ಹಾಕಿ, ಬಾಸ್ಕೆಟ್ ಬಾಲ್, ಈಜುವುದು, ಮೀನು ಹಿಡಿಯುವುದು ಇವು ಡಚ್ ಜನರಿಗೆ ಇಷ್ಟವಾದ ಕ್ರೀಡೆಗಳು.

ಹೂವಿನ ಹಬ್ಬಗಳು, ವಿಶೇಷವಾಗಿ ರಾಷ್ಟ್ರೀಯ ಪುಷ್ಪವಾದ ಟ್ಯೂಲಿಪ್ ಹೂವಿನ ಹಬ್ಬ, ಅನೇಕ ನಗರಗಳಲ್ಲಿ ನಡೆಯುತ್ತವೆ. ಈ ಹಬ್ಬಗಳೇ ಪ್ರತಿ ನಗರಕ್ಕೊಂದು ಹೊಸ ಕಳೆಬರುತ್ತದೆ. ಪ್ರತಿ ವಸಂತದಲ್ಲೂ ಲಿಸ್ಸೆ ಎಂಬಲ್ಲಿರುವ ಕ್ಯಾಕನ್ ಹಾಪ್ ಉದ್ಯಾನದಲ್ಲಿ ಏಳು ನೂರಕ್ಕೂ ಹೆಚ್ಚು ಬಗೆಯ ಟ್ಯೂಲಿಪ್‌ಗಳನ್ನು ಪ್ರದರ್ಶನಕ್ಕೆ ಇಡುತ್ತಾರೆ.

ಡಚ್ಚರಲ್ಲಿ ಹೈನ ಬಹಳ. ಹಾಲನ್ನು ಹೆಪ್ಪುಗಟ್ಟಿಸಿ ಹಾಲಿನ ಪುಡಿಯನ್ನು ಡಬ್ಬಗಳಲ್ಲಿ ರಫ್ತು ಮಾಡುತ್ತಾರೆ. ಗಿಣ್ಣೂ ರಫ್ತಾಗುತ್ತದೆ.

ಡಚ್ಚರು ಹೂದೋಟದ ಕಲೆಯನ್ನು ಬಲ್ಲವರು. ಪ್ರತಿಯೊಂದು ಮನೆಯ ಮುಂದೆ ಹೂವಿನ ತೋಟ ಇರುತ್ತದೆ.

ನೆದರ್‌ಲೆಂಡ್ಸಿನ ರಾಜಧಾನಿ ಆಮ್‌ಸ್ಟರ್‌ಡ್ಯಾಮ್. ಅದು ರಾಷ್ಟ್ರದ ಅತ್ಯಂತ ದೊಡ್ಡ ನಗರವೂ ಹೌದು. ಆಮ್‌ಸ್ಟರ್‌ಡ್ಯಾಮಿನಲ್ಲಿ ವಜ್ರಕ್ಕೆ ರೂಪುಕೊಡುವ ಕೇಂದ್ರವಿದೆ. ಚಿತ್ರಸಂಗ್ರಹಾಲಯ, ಉದ್ಯಾನ, ರಂಗಮಂದಿರ, ಪ್ರಾಣಿಸಂಗ್ರಹಾಲಯ ಇವುಗಳಿಂದ ಈ ನಗರ ಪ್ರಸಿದ್ಧವಾಗಿದೆ.

ಸರಕಾರ ಹಾಗೂ ಸಂಸತ್ತು ಇರುವುದು ತೀರ ಪ್ರದೇಶದ ಹೇಗ್‌ನಲ್ಲಿ; ವಿಶ್ವ ನ್ಯಾಯಾಲಯವಿರುವುದೂ ಇಲ್ಲಿಯೇ.

ರಾಟರ್‌ಡ್ಯಾಮ್ ಯೂರೋಪಿನಲ್ಲೆಲ್ಲ ಅತ್ಯಂತ ದೊಡ್ಡ ಬಂದರು. ನ್ಯೂಮಾಸ್ ನದಿಯ ಮೇಲಿರುವ ಈ ಪಟ್ಟಣದ ಮೂಲಕವೇ ಮಧ್ಯ ಯೂರೋಪಿನ ಬಹುಪಾಲು ಹಡಗು ವ್ಯಾಪಾರ. ನೆದರ್‌ಲೆಂಡ್ಸಿನ ಉಳಿದ ಪ್ರಮುಖ ನಗರಗಳು: ಪುಷ್ಪಗಳ ತವರಾದ ಹಾರ್‌ಲೆಮ್, ವ್ಯಾಪಾರ ಕೇಂದ್ರವಾದ ಗ್ರಾನಿಂಗೆನ್, ಪ್ರಾಚೀನ ವಿಶ್ವವಿದ್ಯಾನಿಲಯಗಳ ನಗರ ಲೈಡೆನ್ ಮತ್ತು ಉಟ್‌ರೆಕ್ಟ್ ಹಾಗೂ ಬಟ್ಟೆಗಳ ಕೇಂದ್ರವಾದ ಹೆನ್‌ಗೆಲೊ.

ಹಾಲೆಂಡ್ ಪ್ರದೇಶದ ಬಹು ಪಾಲಿನ ಜನ ವಾಸಿಸುವ ಪಶ್ಚಿಮ ಭಾಗ ಸಮುದ್ರಮಟ್ಟಕ್ಕೂ ಕೆಳಗಿದೆ. ಸಮುದ್ರ ದಂಡೆಯುದ್ದಕ್ಕೂ ನಿರ್ಮಿಸಿರುವ ತಡೆಗೋಡೆಗಳನ್ನೆಲ್ಲ ತೆಗೆದುಬಿಟ್ಟರೆ ಅರ್ಧಕ್ಕೂ ಹೆಚ್ಚು ಪ್ರದೇಶ ನೀರೊಳಗೆ ಮುಳುಗಿಹೋಗುತ್ತದೆ.

ಹತ್ತನೆಯ ಶತಮಾನದಿಂದ ಡಚ್ಚರು ಭೂಭಾಗವನ್ನು ಹೆಚ್ಚಿಸಿಕೊಳ್ಳುತ್ತ ಬಂದಿದ್ದಾರೆ.

ರೈನ್, ಮ್ಯೂಸ್, ಸ್ಕೆಲ್ಟ್ ಇವು ಪ್ರಮುಖ ನದಿಗಳು. ಹೊಸ ಜಲಮಾರ್ಗ, ಉತ್ತರ ಸಮುದ್ರ ಕಾಲುವೆ, ವಿಲ್‌ಹೆಲ್‌ಮಿನ ಕಾಲುವೆ ಇವು ಪ್ರಮುಖ ಕಾಲುವೆಗಳು.

8,045 ಕಿ. ಮೀ. ಸಂಚಾರಯೋಗ್ಯ ನದಿ ಹಾಗೂ ಕಾಲುವೆಗಳನ್ನುಳ್ಳ ಪ್ರಪಂಚದಲ್ಲೇ ಅತ್ಯಂತ ದಟ್ಟವಾದ ಜಲಮಾರ್ಗದ ಜಾಲ ನೆದರ್‌ಲೆಂಡಿನಲ್ಲಿದೆ. ಅರ್ಧ ಘಂಟೆಗೊಮ್ಮೆ ಮಳೆಯಾಗುವುದೂ ಉಂಟು. ಹವಾಮಾನ ಬಹು ಅನಿಶ್ಚಿತ. ವರ್ಷಕ್ಕೆ 76 ಸೆಂಟಿಮೀಟರು ಮಳೆಯಾಗುತ್ತದೆ. ಬೇಸಿಗೆ ತಂಪಾಗಿರುತ್ತದೆ. ಚಳಿಗಾಲ ಹಿತಕರ.

ನೆದರ್‌ಲೆಂಡ್ಸಿನಲ್ಲಿ ಪೆಟ್ರೋಲಿಯಂ, ಕಲ್ಲಿದ್ದಲು ಗಣಿಗಳಿವೆ. ಹೆಂಗೆಲೊದಲ್ಲಿ ಇಡೀ ಪ್ರಪಂಚಕ್ಕೆ ಇನ್ನೂ ನೂರು ವರ್ಷಗಳಿಗಾಗುವಷ್ಟು ಉಪ್ಪು ಸಂಗ್ರಹ ಇದೆ.

ಮೀನುಗಾರಿಕೆ, ವ್ಯವಸಾಯ, ನೌಕೆಗಳಿಗೆ ಸಂಬಂಧಪಟ್ಟ ವ್ಯವಹಾರ ಇವು ಡಚ್ ಅರ್ಥವ್ಯವಸ್ಥೆಯ ಮುಖ್ಯ ಅಂಶಗಳು. ಆದರೂ ಇಂದು ನಾಡಿನ ವರಮಾನಕ್ಕೆ ವ್ಯಾಪಾರ, ಕೈಗಾರಿಕೆ ಇವೇ ಮೂಲ.

ಒಂದು ಕಾಲಕ್ಕೆ ಡಚ್ ನಾವಿಕರು, ವ್ಯಾಪಾರಸ್ಥರು ಈ ಸಣ್ಣ ರಾಷ್ಟ್ರವನ್ನು ಪ್ರಪಂಚದ ಶಕ್ತಿಯುತ ರಾಷ್ಟ್ರಗಳಲ್ಲೊಂದಾಗಿ ಮಾಡಿದರು. ಇಂಡೊನೇಷ್ಯದಲ್ಲೂ ತಮ್ಮ ಅಧಿಕಾರವನ್ನು ಸ್ಥಾಪಿಸಿ ಡಚ್ ಸಾಮ್ರಾಜ್ಯವನ್ನು ಕಟ್ಟಿದರು.

ರಾಯಲ್ ಡಚ್-ಏರ್‌ಲೈನ್ಸ್ ಪ್ರಪಂಚದಲ್ಲೇ ಪ್ರಪ್ರಥಮವಾಗಿ ರೂಪುಗೊಂಡ ವಾಣಿಜ್ಯ ವಾಯುಸಂಪರ್ಕ. ಇಂದು ಡಚ್ ಏರಲೈನ್ಸ್ 68 ದೇಶಗಳ 104 ನಗರಗಳೊಂದಿಗೆ ಸಂಪರ್ಕ ಹೊಂದಿದೆ.

| | | |
|---|---|---|
| ಖಂಡ | : | ಯೂರೋಪ್ (ವಾಯವ್ಯ) |
| ಅಕ್ಷಾಂಶ | : | 50° 45′ ಉ ದಿಂದ 53° 33′ ಉ |
| ರೇಖಾಂಶ | : | 3° 22′ ಪೂ ದಿಂದ 7° 13′ ಪೂ |
| ವಿಸ್ತೀರ್ಣ | : | 40,922 ಚ. ಕಿ. ಮೀ. |
| ಜನಸಂಖ್ಯೆ | : | 1,20,00,000 |
| ಭಾಷೆ | : | ಡಚ್ |
| ಸರಕಾರ | : | ಸಂವಿಧಾನಬದ್ಧ ರಾಜಪ್ರಭುತ್ವ |
| ಬಾವುಟ | : | ಕೆಂಪು, ಬಿಳಿ, ನೀಲಿ, ಮೂರು ಬಣ್ಣಗಳ ಉದ್ದನೆಯ ಮೂರು ಪಟ್ಟಿಗಳು |



ಎಂಟೆದೆಯ ಧೀರ ನೆಪೋಲಿಯನ್ ಬೋನಪಾರ್ಟ್

ನೆದರ್‌ಲೆಂಡ್ಸ್‌ನಲ್ಲಿರುವುದು ವಂಶಪಾರಂಪರ್ಯವಾಗಿ ಬಂದ ಅರಸೊತ್ತಿಗೆ 1890ರಿಂದ ಒಬ್ಬರಾದನಂತರ ಒಬ್ಬರು ರಾಣಿಯರೇ ಆಳುತ್ತಿದ್ದಾರೆ. ಆಡಳಿತ ರಾಜ್ಯಾಂಗಕ್ಕೆ ಅನುಗುಣವಾಗಿ ನಡೆಯುತ್ತದೆ. ಸಂಸತ್ತಿನಲ್ಲಿ ಮೇಲ್ಮನೆ ಕೆಳಮನೆ ಎಂದು ಎರಡು ಸದನಗಳಿವೆ. ಕೆಳಮನೆಯ ಸದಸ್ಯರು 150. ಇವರನ್ನು ನಾಲ್ಕು ವರ್ಷಗಳಿಗೊಮ್ಮೆ ಚುನಾಯಿಸುತ್ತಾರೆ. ಮೇಲ್ಮನೆಯ ಸದಸ್ಯರು 75. ಇವರನ್ನು ಆರು ವರ್ಷಗಳಿಗೊಮ್ಮೆ ಚುನಾಯಿಸುತ್ತಾರೆ. 23 ವರ್ಷ ದಾಟಿದ ಎಲ್ಲರೂ ಮತದಾನ ಮಾಡಬಹುದು. ಆಡಳಿತದಲ್ಲಿರುವ ರಾಜಕೀಯ ಪಕ್ಷದಿಂದ ಪ್ರಧಾನ ಮಂತ್ರಿಯಾಗಿ ಒಬ್ಬರನ್ನು ರಾಣಿ ಆರಿಸುತ್ತಾಳೆ

ಎರಡು ಸಾವಿರ ವರ್ಷಗಳ ಹಿಂದೆ ನೆದರ್‌ಲೆಂಡ್ಸ್‌ನ ಪ್ರದೇಶದಲ್ಲಿ ಫ್ರಿಸಿಯನ್ನರು, ಬಟಾವಿ, ಬೆಲ್‌ಗೆ ಮೊದಲಾದ ಪಂಗಡದವರು ವಾಸಿಸುತ್ತಿದ್ದರು. ಮೊದಲನೆಯ ಶತಮಾನದಲ್ಲಿ ರೋಮನರ ಪ್ರಭಾವಕ್ಕೆ ಅವರು ಒಳಗಾದರು. ಷಾರ್ಲ್‌ಮೇನನ ಕಾಲದಲ್ಲಿ (742–814) ಆತನ ಚಕ್ರಾಧಿಪತ್ಯದ ಒಂದು ಭಾಗವಾದರು. 814ರಲ್ಲಿ ಷಾರ್ಲ್‌ಮೇನನ ಮರಣಾನಂತರ ಇವನ ಚಕ್ರಾಧಿಪತ್ಯ ಒಡೆಯಿತು. ನೆದರ್‌ಲೆಂಡ್ಸಿನ ಉತ್ತರ ಭಾಗ ಜರ್ಮನ್ ರಾಜಕುಮಾರರಿಗೂ ದಕ್ಷಿಣ ಭಾಗ ಫ್ರೆಂಚರಿಗೂ ಹೋದವು. 14-15ನೆಯ ಶತಮಾನಗಳಲ್ಲಿ ಬರ್‌ಗಂಡಿಯ ಫ್ರೆಂಚ್ ಡ್ಯೂಕರು ಕದನ, ವಿವಾಹ ಮುಂತಾದುವುಗಳ ಮೂಲಕ ನಾಡಿನ ಬಹು ಭಾಗವನ್ನು ಒಟ್ಟುಗೂಡಿಸಿದರು.

ಐದನೆಯ ಚಾರ್ಲ್ಸ್‌ನ ನಾಯಕತ್ವದಲ್ಲಿ ಸ್ಪ್ಯಾನಿಷ್ ಹ್ಯಾಪ್ಸ್‌ಬರ್ಗ್ ಅರಸುಮನೆತನದವರು 1506ರಲ್ಲಿ ನೆದರ್‌ಲೆಂಡ್ಸನ್ನು ವಂಶಪಾರಂಪರ್ಯವಾಗಿ ಪಡೆದರು. 1945ರಲ್ಲಿ ನೆದರ್‌ಲೆಂಡ್ಸ್ ಸ್ವತಂತ್ರವಾಗಿ ವಿಶ್ವಸಂಸ್ಥೆಯ ಸದಸ್ಯ ರಾಷ್ಟ್ರವಾಯಿತು.

ಮಹಾಯುದ್ಧಗಳು ಮುಗಿಯುವ ವೇಳೆಗೆ ಆರ್ಥಿಕ ಜೀವನ ಬಹುಮಟ್ಟಿಗೆ ಮಣ್ಣುಪಾಲಾಗಿತ್ತು. ವ್ಯಾಪಾರ ನಿಂತುಹೋಗಿತ್ತು. ಕಾರಖಾನೆಗಳು ಬಾಂಬ್ ದಾಳಿಗೆ ಗುರಿಯಾಗಿದ್ದುವು. ಪ್ರಾಣಿಸಂಪತ್ತು ನಾಶವಾಗಿತ್ತು. ತಡೆಗೋಡೆಗಳು ಒಡೆದು ಜಲಮಯವಾಗಿತ್ತು. ಆದರೆ ಕಷ್ಟಪಟ್ಟು ಕೆಲಸ ಮಾಡಿ, ಡಚ್ಚರು ಹತ್ತು ವರ್ಷಗಳಲ್ಲಿ ತಮ್ಮ ನಾಡನ್ನು ಮತ್ತೆ ಕಟ್ಟಿದರು.

1948ರಲ್ಲಿ ನೆದರ್‌ಲೆಂಡ್ಸ್, ಬೆಲ್ಜಿಯಂ ಹಾಗೂ ಲಕ್ಸೆಂಬರ್ಗ್ ಇವು ಆರ್ಥಿಕವಾಗಿ ಒಂದುಗೂಡಿದವು. ಇವನ್ನು 'ಬೆನೆಲಕ್ಸ್' ಎನ್ನುತ್ತಾರೆ.

1949ರಲ್ಲಿ ಡಚ್ ಈಸ್ಟ್ ಇಂಡೀಸ್ (ಈಗಿನ ಇಂಡೋನೇಷ್ಯ) ಸ್ವತಂತ್ರವಾಯಿತು. ನೆದರ್‌ಲೆಂಡ್ಸ್ ನ್ಯೂಗಿನಿ 1963ರಲ್ಲಿ ಇಂಡೋನೇಷ್ಯದ ಒಂದು ಭಾಗವಾಯಿತು.

ತನ್ನ ವಸಾಹತುಗಳನ್ನು ಕಳೆದುಕೊಂಡು ನೆದರ್‌ಲೆಂಡ್ಸ್ ಆರ್ಥಿಕವಾಗಿ ಬಡವಾದರೂ ಡಚ್ ಜನ ತಮ್ಮದೇ ಪರಿಶ್ರಮದಿಂದ ನಾಡನ್ನು ಈಗ ಅಭಿವೃದ್ಧಿಗೆ ತರುತ್ತಿದ್ದಾರೆ. ಮುಖಜಭೂಮಿಯ ಯೋಜನೆಯನ್ನು ಅವರು ಈಗ ಕೈಗೊಂಡಿದ್ದು, 1980ರಲ್ಲಿ ಇದು ಮುಗಿಯುವ ನಿರೀಕ್ಷೆ ಇದೆ. ನೀರನ್ನು ಹಿಂದಕ್ಕೆ ತಳ್ಳಿ ಪಡೆದ ಮತ್ತಷ್ಟು ಭೂಮಿ ಆಗ ಅವರಿಗೆ ದೊರೆಯುತ್ತದೆ.

## ನೆಪೋಲಿಯನ್ ಬೋನಪಾರ್ಟ್

"ಅಸಾಧ್ಯ ಎಂಬುದು ನನ್ನ ಶಬ್ದಕೋಶದಲ್ಲೇ ಇಲ್ಲ," ಎಂದು ನುಡಿದ ಎಂಟೆದೆಯ ಧೀರ. ನೆಪೋಲಿಯನ್ ಬೋನಪಾರ್ಟ್.

1769ರ ಆಗಸ್ಟ್ 15ರಂದು ನೆಪೋಲಿಯನ್ ಕಾರ್ಸಿಕ ದ್ವೀಪಕ್ಕೆ ಸೇರಿದ ಅಜಾಕಿಯೋ ಎಂಬ ಸಣ್ಣ ಪಟ್ಟಣದಲ್ಲಿ ಹುಟ್ಟಿದ. ಕಾರ್ಸಿಕ ಆಗ ಫ್ರೆಂಚ್ ಸರಕಾರದ ಅಧೀನದಲ್ಲಿದ್ದಿತು. ಫ್ರೆಂಚ್ ಸರಕಾರದ ದಬ್ಬಾಳಿಕೆಗೆ ಸಿಲುಕಿ ಕಾರ್ಸಿಕದ ಜನ ಕಡುನೊಂದಿದ್ದರು. ನೆಪೋಲಿಯನನ ತಾಯಿ "ಫ್ರೆಂಚರ ಸೊಕ್ಕನ್ನು ಮುರಿಯುವ ವೀರ ನನ್ನ ಹೊಟ್ಟೆಯಲ್ಲಿ ಹುಟ್ಟಿದ್ದಾನೆ" ಎಂದು ಹೇಳುತ್ತಿದ್ದಳಂತೆ. ನೆಪೋಲಿಯನನ ತಂದೆಗೆ ಸಾಹಿತ್ಯದಲ್ಲಿ ಅಭಿರುಚಿ. ತಾಯಿ ವೀರಮಹಿಳೆ. ಅವಳ ಮನಸ್ಥೈರ್ಯ, ದೃಢಸಂಕಲ್ಪ ಅನುಕರಣೀಯವಾಗಿದ್ದುವು. ನೆಪೋಲಿಯನನಲ್ಲಿ ಈ ಇಬ್ಬರ ಗುಣಗಳ ಸಾಮರಸ್ಯವನ್ನು ನಾವು ಕಾಣಬಹುದು. ಬಾಲ್ಯದಿಂದ ಯುದ್ಧವೆಂದರೆ ಅವನಿಗೆ ಬಹಳ ಆಸಕ್ತಿ. 'ನೆಪೋಲಿಯನ್' ಎಂಬ ಪದದ ಅರ್ಥ 'ಸಮರಸಿಂಹ' ಎಂದು. ತನ್ನ ಹದಿನೈದನೆಯ ವಯಸ್ಸಿನಲ್ಲಿ ಅವನು ಪ್ಯಾರಿಸಿನ ಸೈನಿಕಶಿಕ್ಷಣ ಶಾಲೆಯನ್ನು ಸೇರಿದ. ಸ್ವಭಾವತಃ ಹೆಚ್ಚು ಮಾತನಾಡದ ಈ ಹುಡುಗ ಶಾಲೆಯಲ್ಲಿ ಯಾರೊಡನೆಯೂ ಸೇರದೆ ತನ್ನ ಪಾಡಿಗೆ ತಾನಿರುತ್ತಿದ್ದ. ಶಾಲೆಯಲ್ಲಿ ಸಮಾಧಾನವಿರಲಿಲ್ಲ.

ವಿದ್ಯಾಭ್ಯಾಸ ಪೂರೈಸಿದ ಮೇಲೆ 1785ರಲ್ಲಿ ಮದ್ದು ಗುಂಡಿನ ಪಡೆಯಲ್ಲಿ ಒಂದು ಸಣ್ಣ ನೌಕರಿ ದೊರಕಿತು. "ಕತ್ತಿಯು ಒರೆ ಮಾತ್ರ ಫ್ರಾನ್ಸಿಗೆ ಸೇರಿದ್ದು. ಕತ್ತಿ ನನ್ನ ಬಳಿಯೇ ಇರುತ್ತದೆ," ಎಂದು ಈ ಕಾಲದಲ್ಲಿ ಹೇಳಿದ ನೆಪೋಲಿಯನನ ಮಾತಿನಿಂದ ಫ್ರಾನ್ಸಿನ ಜನತೆಯ ಬಗೆಗೆ ಅವನ ಪ್ರೇಮದ ಅಳವನ್ನು ತಿಳಿಯಬಹುದು. 1789ರಲ್ಲಿ ಫ್ರಾನ್ಸಿನಲ್ಲಿ ಮಹಾಕ್ರಾಂತಿ ಆರಂಭವಾದಾಗ ಅನೇಕ ಬದಲಾವಣೆಗಳಾದುವು. 1793ರಲ್ಲಿ ಯುದ್ಧ ಮೊದಲಾದಾಗ ನೆಪೋಲಿಯನನಿಗೆ ಸೈನ್ಯದಲ್ಲಿ ಉತ್ತಮ ಕೆಲಸ ದೊರೆಯಿತು. ಅಲ್ಲಿ ಜಯಗಳಿಸಿ ಸೈನ್ಯಾಧಿಕಾರಿಯ ಹುದ್ದೆಗೇರಿದ. ಅವನ ಈ ಮೇಲ್ಮೆ

ಯನ್ನು ಕಂಡು ಅಸೂಯೆಯಿಂದ ಕೆಲವು ಫ್ರೆಂಚ್ ಅಧಿಕಾರಿಗಳು ಸಂಚು ಹೂಡಿ ಅವನನ್ನು ಸೈನ್ಯದಿಂದ ಹೊರಹಾಕಿದರು. ಆದರೆ ಮುಂದೆ ಫ್ರೆಂಚ್ ಸರಕಾರ ಕಷ್ಟಕ್ಕೆ ಸಿಲುಕಿಕೊಂಡಾಗ, ಇಟಲಿಯ ಮುತ್ತಿಗೆಯ ಸಮಯದಲ್ಲಿ, ಅವರೇ ಬೇಡಿ ಅವನನ್ನು ಕರೆತಂದರು. 1795ರಲ್ಲಿ ಪ್ಯಾರಿಸಿನ ಜನರು ಸರ್ಕಾರದ ವಿರುದ್ಧ ದಂಗೆ ಏಳಲು ಯತ್ನಿಸಿದಾಗ ಪ್ಯಾರಿಸ್ ರಕ್ಷಣಾ ಪಡೆಯಲ್ಲಿದ್ದ ನೆಪೋಲಿಯನ್ ದಂಗೆಯನ್ನು ಅಡಗಿಸಿ ಅಂತರ್ಯುದ್ಧವೊಂದನ್ನು ತಪ್ಪಿಸಿದ. ಇದಕ್ಕಾಗಿ ಅವನಿಗೆ ಫ್ರೆಂಚ್ ಸೈನ್ಯದ ಮಹಾದಂಡನಾಯಕನ ಪದವಿ ದೊರೆಯಿತು.

1796ರಲ್ಲಿ ಜೋಸಫಿನ್ ಎಂಬ ವಿಧವೆಯನ್ನು ನೆಪೋಲಿಯನ್ ವಿವಾಹವಾದ. ಅವಳು ನೆಪೋಲಿಯನ್‌ಗಿಂತ ಆರು ವರ್ಷ ದೊಡ್ಡವಳು. ಮುಂದೆ ರಾಜಕೀಯ ಕಾರಣಗಳಿಗಾಗಿ ಅವಳಿಂದ ವಿವಾಹ ವಿಚ್ಛೇದನ ಪಡೆದರೂ ನೆಪೋಲಿಯನ್ನನಿಗೆ ಅವಳಲ್ಲಿ ಅಪಾರ ಪ್ರೇಮವಿದ್ದಿತು.

ಅದೇ ವರ್ಷ ಫ್ರಾನ್ಸ್ ಮತ್ತು ಆಸ್ಟ್ರಿಯಗಳ ನಡುವೆ ಯುದ್ಧ ನಡೆಯುತ್ತಿತ್ತು : ನೆಪೋಲಿಯನ್ ಸೈನ್ಯದ ನಿರ್ದೇಶಕನಾಗಿ ಇಟಲಿಗೆ ಹೋದ. ಇಟಲಿಯಲ್ಲಿ ಅವನು ಯುದ್ಧವನ್ನು ನಿರ್ದೇಶಿಸಿದ ಬಗೆ ಅವನ ಪ್ರತಿಭೆಯನ್ನು ಹೊರಸೂಸಿತು. ಅವನು ಒಂದೆಡೆಯಿಂದ ಒಂದೆಡೆಗೆ ಯುದ್ಧರಂಗದಲ್ಲಿ ಚಲಿಸುತ್ತಿದ್ದ ಮಿಂಚಿನ ವೇಗ, ಅವನ ಯೋಜನೆಗಳ ಸ್ಪಷ್ಟತೆ–ಇವು ಆಶ್ಚರ್ಯಕರವಾಗಿದ್ದುವು. ಎದೆಗುಂದಿದ್ದ ಫ್ರೆಂಚ್ ಸೈನಿಕರನ್ನು ಹುರಿದುಂಬಿಸಿ ಕೆಲವು ದಿನಗಳಲ್ಲೇ ಆಸ್ಟ್ರಿಯನರನ್ನು ಸಂಪೂರ್ಣವಾಗಿ ಸೋಲಿಸಿ ಮಿಲಾನ್ ನಗರವನ್ನು ಪ್ರವೇಶಿಸಿದ. 1797ರಲ್ಲಿ ಆಸ್ಟ್ರಿಯವನ್ನು ಆಕ್ರಮಿಸಿ ಅಲ್ಲಿಯ ಜನರಿಂದ ಒಂದು ಒಪ್ಪಂದಕ್ಕೆ ಸಹಿ ಹಾಕಿಸಿದ. ಇದರಿಂದ ಫ್ರಾನ್ಸ್‌ದೇಶದ ವಿಸ್ತೀರ್ಣ ಹೆಚ್ಚಾಗಿ, ಬೆಲ್ಜಿಯಂ ಸಹ ಅದರ ವ್ಯಾಪ್ತಿಗೆ ಒಳಪಟ್ಟಿತು.

1797ರ ಡಿಸೆಂಬರಿನಲ್ಲಿ ಮಧ್ಯಪ್ರಾಚ್ಯದ ಕಡೆ, ಈಜಿಪ್ಟ್ ಮತ್ತು ಸಿರಿಯ ಪ್ರದೇಶದಲ್ಲಿ ಫ್ರೆಂಚ್ ಸಾಮ್ರಾಜ್ಯ ಸ್ಥಾಪನೆಗಾಗಿ ದಂಡಯಾತ್ರೆ ಹೊರಟ. ಆದರೆ ಬ್ರಿಟಿಷ್ ನೌಕಾದಳದ ನಾಯಕ ಹೊರೇಷಿಯೊ ನೆಲ್ಸನ್ ನೆಪೋಲಿಯನನ ಹಡಗುಗಳನ್ನು ನಾಶಗೊಳಿಸಿ ಯೋಜನೆಗಳನ್ನು ತಲೆಕೆಳಗು ಮಾಡಿದ್ದರಿಂದ ಅವನು ಪ್ಯಾರಿಸಿಗೆ ಹಿಂದಿರುಗಬೇಕಾಯಿತು.

ಪ್ಯಾರಿಸಿಗೆ ಮರಳಿದ ನೆಪೋಲಿಯನ್ ಮೂರು ಕಾನ್ಸಲ್ (ಆಡಳಿತಾಧಿಕಾರಿಗಳು) ಗಳಲ್ಲಿ ಒಬ್ಬನಾದ. ಉಳಿದಿಬ್ಬರು ಹೆಸರಿಗೆ ಮಾತ್ರ ಅಧಿಕಾರಿಗಳಾಗಿದ್ದರು. ನೆಪೋಲಿಯನ್ ಆಡಳಿತ ವಿಧಾನದಲ್ಲಿ ಕೆಲವು ಸುಧಾರಣೆಗಳನ್ನು ಮಾಡಿದ. ಹಳೆಯ ಸರಕಾರವನ್ನು ಕಿತ್ತೊಗೆದು ಹೊಸದನ್ನು ಸ್ಥಾಪಿಸಿದ. ಜನರ ಆರ್ಥಿಕಸ್ಥಿತಿ ಉತ್ತಮಗೊಂಡಿತು. ಫ್ರಾನ್ಸಿನ ಕಾಯಿದೆಗಳನ್ನು ಪರಿಷ್ಕರಿಸಿ, ಎಲ್ಲ ವ್ಯಕ್ತಿಗಳೂ ಸಮಾನರು ಎನ್ನುವ ಆಧಾರದ ಮೇಲೆ ಕಾನೂನುಗಳ ಸಂಗ್ರಹವನ್ನು ಸಿದ್ಧಗೊಳಿಸಲು ವ್ಯವಸ್ಥೆ ಮಾಡಿದ. ಇದರ ಸ್ಪಷ್ಟವಾದ ಭಾಷೆ ಕಾನೂನುಗಳಲ್ಲಿ ಅಪೂರ್ವ. ಎಲ್ಲರೂ ಸಮಾನರು. ಹುಟ್ಟಿನಿಂದ ಯಾವ ಬಗೆಯ ಹಕ್ಕೂ ಬರಬಾರದು. ವ್ಯಕ್ತಿಸ್ವಾತಂತ್ರ್ಯ ನಿರಪೇಕ್ಷ–ಇವು ಇದರ ಮೂಲತತ್ತ್ವಗಳು. ಖಾಸಗಿಯವರ ಅಧೀನದಲ್ಲಿದ್ದ ವಿದ್ಯಾಭ್ಯಾಸದ ಏರ್ಪಾಟನ್ನು ಸರಕಾರಕ್ಕೆ ವಹಿಸಿದ. ವಿಶ್ವವಿದ್ಯಾನಿಲಯಗಳು ಆರಂಭವಾದುವು. ನೆಪೋಲಿಯನನ ಈ ಎಲ್ಲ ಸುಧಾರಣೆಗಳೂ ಫ್ರಾನ್ಸಿನ ಜನತೆಯನ್ನು ಅಭ್ಯುದಯ ಪಥದತ್ತ ನಡೆಸಿದುವು. ಜನರು ನೆಪೋಲಿಯನನನ್ನು ಆರಾಧಿಸಲಾರಂಭಿಸಿದರು.

1800ರ ಮೇ ತಿಂಗಳಲ್ಲಿ ನೆಪೋಲಿಯನ್ ಇಟಲಿಯನ್ನು ಆಕ್ರಮಿಸಿ ಆಸ್ಟ್ರಿಯನರನ್ನು ಸೋಲಿಸಿ, ಅವರೊಡನೆ ಶಾಂತಿ ಸಂಧಾನ ಮಾಡಿಕೊಂಡ. 1802ರಲ್ಲಿ ಅವನನ್ನು ಜೀವಾವಧಿ ಪ್ರಥಮ 'ಕಾನ್ಸಲ್' ಆಗಿ ಆರಿಸಲಾಯಿತು. ಇದೇ ವರ್ಷ ಬ್ರಿಟನ್ನಿನೊಡನೆ ಶಾಂತಿ ಸಂಧಾನ ನಡೆಸಿದ. 1801ರ ಡಿಸೆಂಬರ್ 2ರಂದು ಅವನ ಜೀವನದ ಏಕೈಕ ಮಹತ್ತರ ಆಸೆ-ಅವನ ತಾಯಿಯ ಬಹುದಿನದ ಕನಸು–ಕೈಗೂಡಿತು. ನೆಪೋಲಿಯನ್ ಫ್ರಾನ್ಸಿನ ಚಕ್ರವರ್ತಿಯಾದ.

ನೆಪೋಲಿಯನ್ ಮತ್ತೆ ಯುದ್ಧಕ್ಕೆ ಧಾವಿಸಿದ. ಆಸ್ಟ್ರಿಯನರ ಮೇಲೆ ಯುದ್ಧ ಹೂಡಿ ವಿಯೆನಾದವರನ್ನು ಮತ್ತು ರಷ್ಯನರನ್ನು ಸೋಲಿಸಿ ರಷ್ಯದ ಜಾರ್ ಶಾಂತಿಯ ಕರಾರಿಗೆ ಸಹಿಮಾಡುವಂತೆ ಬಲಾತ್ಕರಿಸಿದ. ಬ್ರಿಟನನ್ನು ಗೆಲ್ಲುವ ಬಯಕೆಯೂ ನೆಪೋಲಿಯನನಿಗಿತ್ತು.

ಮೊದಲ ಹೆಂಡತಿಯಿಂದ ವಿವಾಹ ವಿಚ್ಛೇದನ ಪಡೆದ ನೆಪೋಲಿಯನ್ 1809ರಲ್ಲಿ ಆಸ್ಟ್ರಿಯ ಚಕ್ರವರ್ತಿಯ ಮಗಳನ್ನು ಮದುವೆಯಾದ. ತಾನು ಗೆದ್ದ ಅನೇಕ ರಾಜ್ಯಗಳನ್ನು ಸಹೋದರರಿಗೂ ಸ್ನೇಹಿತರಿಗೂ ಹಂಚಿದ.

1812ರಲ್ಲಿ ರಷ್ಯದ ವಿರುದ್ಧ ಆತನ ದಂಡಯಾತ್ರೆ ಆರಂಭವಾಯಿತು. ಅಲ್ಲಿನ ಕ್ರೂರ ಹಿಮದಲ್ಲಿ ಸಾವಿರಾರು ಸೈನಿಕರು ಸಾವಿಗೀಡಾದರು.

1814ರಲ್ಲಿ ಫ್ರಾನ್ಸನ್ನು ಬ್ರಿಟಿಷರು ನೈಋತ್ಯದಿಂದಲೂ ಪರ್ಷಿಯ ಮತ್ತು ಆಸ್ಟ್ರಿಯದವರು ಪೂರ್ವದಿಂದಲೂ ಆಕ್ರಮಿಸಿದರು. ಮಾರ್ಚ್ 30ರಂದು ಪ್ಯಾರಿಸ್ ಅವರ ವಶವಾಯಿತು. ಏಪ್ರಿಲ್ 11ರಂದು ನೆಪೋಲಿಯನ್ ಸಿಂಹಾಸನ ತ್ಯಾಗಮಾಡಿ ಅಧಿಕಾರಿಗಳ ಆಜ್ಞೆಯಂತೆ ಮೆಡಿಟರೇನಿಯನ್ ಪ್ರದೇಶದ ಎಲ್ಬಾ ಎಂಬ ದ್ವೀಪಕ್ಕೆ ತೆರಳಿದ. ಆದರೆ ಅಲ್ಲಿಂದ ತಪ್ಪಿಸಿಕೊಂಡು ಫ್ರಾನ್ಸಿಗೆ ಬಂದ. ಸಾಕಷ್ಟು ಸೈನ್ಯವನ್ನು ಕೂಡಿಸಿದ. ಇದರಿಂದ ಕಳವಳಗೊಂಡ ಯೂರೋಪ್ ರಾಷ್ಟ್ರಗಳು ಅವನ ಮೇಲೆ ಯುದ್ಧ ಘೋಷಿಸಿದುವು. ನೆಪೋಲಿಯನ್ ಮಿಂಚಿನಂತೆ ಎರಗಲು ಪ್ರಯತ್ನಿಸಿದ. ಇಂಗ್ಲೆಂಡ್ ಮತ್ತು ಪರ್ಷಿಯಗಳ ಸೈನ್ಯಗಳಿಗೂ ನೆಪೋಲಿಯನನ ಸೈನ್ಯಕ್ಕೂ 1815ರಲ್ಲಿ ಕದನವಾಯಿತು. ವಾಟರ್‌ಲೂ ಎಂಬ ಸ್ಥಳದಲ್ಲಿ ನಡೆದ ಈ ಕದನದಲ್ಲಿ ಸೋತಾಗ ನೆಪೋಲಿಯನ್ ಬ್ರಿಟಿಷ್ ಅಧಿಕಾರಿಗಳಿಗೆ ಶರಣಾಗತನಾಗಬೇಕಾಯಿತು. ಈ ಬಾರಿ ನೆಪೋಲಿಯನನನ್ನು ಸೇಂಟ್ ಹೆಲೆನ ಎಂಬ ದ್ವೀಪಕ್ಕೆ ಗಡಿಪಾರು ಮಾಡಿದರು. ಸೋಲಿನ ಅಪಮಾನ, ಆಶಾಭಂಗ, ಸೆರೆಮನೆಯ ಚಿತ್ರಹಿಂಸೆಗಳನ್ನು ತಾಳಲಾರದೆ 1821ರ ಮೇ ೫ರಂದು ನೆಪೋಲಿಯನ್ ಸಾವಿಗೀಡಾದ. ವಿಷಮಿಶ್ರಿತ ಆಹಾರ ನೀಡಿ ಅವನನ್ನು ಕೊಲ್ಲಲಾಯಿತೆಂದೂ ಹೇಳುತ್ತಾರೆ.

ನೆಪೋಲಿಯನನಿಗೆ ಇಂಗ್ಲಿಷರ ಮೇಲೆ ಬಹಳ ದ್ವೇಷವಿದ್ದಿತಂತೆ. ಭಾರತಕ್ಕೆ ಬಂದು ಅವರನ್ನು ಓಡಿಸಬೇಕೆಂದು ಅವನು ಯೋಚಿಸಿದ್ದ. ಈ ವಿಷಯವಾಗಿ ಟಿಪ್ಪುಸುಲ್ತಾನ್ ಮತ್ತು ನೆಪೋಲಿಯನರ ನಡುವೆ ಪತ್ರವ್ಯವಹಾರ ನಡೆದಿದ್ದಿತು. "ನಾನು ಕೆಂಪು ಸಮುದ್ರದ ತೀರವನ್ನು ತಲುಪಿದ ಸುದ್ದಿ ನಿಮಗೆ ಈಗಾಗಲೇ ತಿಳಿದಿರಬಹುದು: ನನ್ನ ಹತ್ತಿರ ಅಜೇಯವಾದ ಅಸಂಖ್ಯ ಸೈನ್ಯವಿದೆ: ಇಂಗ್ಲೆಂಡಿನ ನೊಗದಿಂದ ನಿಮ್ಮನ್ನು ಬಿಡುಗಡೆ ಮಾಡುವ ಉತ್ಕಟ ಇಚ್ಛೆಯಿಂದ ಈ ಸೈನ್ಯ ಪ್ರೇರಿತವಾಗಿದೆ." ಇವು ಟಿಪ್ಪುವಿಗೆ ಆತ ಬರೆದಿದ್ದ ಒಂದು ಪತ್ರದಲ್ಲಿನ ಕೆಲವು ಸಾಲುಗಳು.

ಆ ಸಂದರ್ಭದಲ್ಲಿ ಬಿದ್ದ ಒಂದು ಕನಸನ್ನು ನೆಪೋಲಿಯನ್ ಹೀಗೆ ವರ್ಣಿಸಿದ್ದಾನೆ: "ಆನೆಯ ಮೇಲೆ ಕುಳಿತು ಭಾರತಕ್ಕೆ ನಾನು ಮುನ್ನಡೆಯುತ್ತಿದ್ದಂತೆ ಕಂಡೆ. ತಲೆಯ ಮೇಲೆ ರುಮಾಲು. ಕೈಯಲ್ಲೊಂದು

ಖುರಾನ್-ನನ್ನ ಅವಶ್ಯತೆಗಳಿಗೆ ಸರಿಹೋಗುವಂತೆ ರಚಿಸಲಾಗಿದ್ದ ಖುರಾನ್, ಎರಡು ಜಗತ್ತಿನ ಅನುಭವವನ್ನು ಅದರಲ್ಲಿ ನಾನು ಕ್ರೋಢೀಕರಿಸಿರಬೇಕು ; ಭಾರತದಲ್ಲಿನ ಆಂಗ್ಲಶಕ್ತಿಯ ಮೇಲೆ ದಾಳಿ ನಡೆಸಲು ಸಾಗಿರಬೇಕು."

ಆಂಗ್ಲರ ವಿಷಯದಲ್ಲಿ ನೆಪೋಲಿಯನನಿಗೆ ಕಡುಹಗೆತನವಿತ್ತಾದರೂ ಆತನಿಗೆ ಮುಖ್ಯವಾಗಿ ಇದ್ದುದು ಅಧಿಕಾರದ ಆಸೆ, ಪ್ರಭುತ್ವದ ಆಸೆ. ತಾನೇ ಸರ್ವಾಧಿಕಾರಿಯಾಗಬೇಕೆಂಬ ಅವನ ಬಯಕೆ ಅನೇಕ ಯುದ್ಧಗಳಿಗೆ ಎಡೆಕೊಟ್ಟಿತು. ಫ್ರಾನ್ಸಿನ ಜನತೆ ಆ ಯುದ್ಧಗಳಿಂದ ಆಗುತ್ತಿದ್ದ ತೊಂದರೆಯನ್ನು ಮರೆತು, ಆತನ ವಿಜಯ ಮತ್ತು ಸಾಧನೆಗಳನ್ನು ಮಾತ್ರ ನೆನೆಸಿಕೊಳ್ಳುತ್ತಿತ್ತು. ಸತ್ತ ಅನಂತರವೂ ಅವನು ಅವರ ಆದರ್ಶವೀರನಾಗಿದ್ದ. 1840ರಲ್ಲಿ ಅವನ ಅವಶೇಷಗಳನ್ನು ಫ್ರಾನ್ಸಿಗೆ ತಂದು ಅಲ್ಲಿ ಪುನಃ ಸಮಾಧಿ ಮಾಡಿದರು.

ನೆಪೋಲಿಯನನಷ್ಟು ಜ್ಞಾನಾಸಕ್ತರು ಇತಿಹಾಸದಲ್ಲಿ ಅತಿ ವಿರಳ. ಜ್ಞಾನ ಎಲ್ಲೇ ಇರಲಿ, ಅಲ್ಲಿಗೆ ಅವನ ನಮನ. ಉದಾಹರಣೆಗೆ, ಹತ್ತೊಂಬತ್ತನೆಯ ಶತಮಾನದ ಆದಿಭಾಗದಲ್ಲಿ ವಿದ್ಯುತ್‌ವಿಜ್ಞಾನ ಇನ್ನೂ ಶೈಶವಾವಸ್ಥೆಯಲ್ಲಿದ್ದಿತು. ಇದನ್ನು ಪ್ರೋತ್ಸಾಹಿಸಲು ನೆಪೋಲಿಯನ್ 3,000 ಫ್ರಾಂಕು ಬಹುಮಾನವನ್ನು ಆ ವಿಭಾಗದ ಉತ್ತಮ ಸಂಶೋಧನೆಗೆ ಮೀಸಲಾಗಿಟ್ಟಿದ್ದ. 1806ರಲ್ಲಿ ಇಂಗ್ಲೆಂಡಿನ ವಿಜ್ಞಾನಿ ಹಂಫ್ರಿ ಡೇವಿಯ ಸಂಶೋಧನ ಪ್ರಬಂಧ ಅತ್ಯುತ್ತಮವಾದುದೆಂದು ಹೇಳುತ್ತಿದ್ದರು. ಫ್ರಾನ್ಸ್ ಮತ್ತು ಇಂಗ್ಲೆಂಡುಗಳ ನಡುವೆ ದೀರ್ಘಕಾಲದಿಂದ ಯುದ್ಧ ನಡೆಯುತ್ತಿದ್ದು, ಎರಡರ ನಡುವೆ ಬದ್ಧದ್ವೇಷವಿದ್ದಿತು. ಆದರೂ ಇಂಗ್ಲಿಷಿನವನಾದ ಡೇವಿಗೆ ನೆಪೋಲಿಯನ್ ಬಹುಮಾನವನ್ನು ಕೊಟ್ಟು ಪುರಸ್ಕರಿಸಿದ. ತನ್ನ ದೇಶದಲ್ಲೂ ಅಂಥ ಬಹುಮಾನ ಪಡೆಯುವ ವಿಜ್ಞಾನಿಗಳು ಬೆಳೆಯಬೇಕೆಂದು ಲಕ್ಷಾಂತರ ಫ್ರಾಂಕುಗಳನ್ನು ಖರ್ಚುಮಾಡಿ ವೈಜ್ಞಾನಿಕ ಸಂಶೋಧನೆಗೆ ಎಲ್ಲ ಸೌಲಭ್ಯಗಳನ್ನೂ ಒದಗಿಸಿಕೊಟ್ಟ.

ಸ್ವಂತ ಬುದ್ಧಿಶಕ್ತಿ ಮತ್ತು ಸಾಮರ್ಥ್ಯಗಳಿಂದ ಜೀವನದುದ್ದಕ್ಕೂ ಹೋರಾಡಿ, ಸೈನ್ಯದಲ್ಲಿ ಸಣ್ಣ ಅಧಿಕಾರಿಯಾಗಿ ಸೇರಿದವನು ಒಂದು ದೊಡ್ಡ ಸಾಮ್ರಾಜ್ಯಕ್ಕೆ ಚಕ್ರವರ್ತಿಯಾಗಿ ಯೂರೊಪನ್ನು ನಡುಗಿಸಿದ ಧೀರ. ನೆಪೋಲಿಯನ್ ಬೋನಪಾರ್ಟ್.

## ನೆಹರು, ಜವಾಹರಲಾಲ

ದೆಹಲಿಯಲ್ಲಿ, 'ತೀನ್‌ಮೂರ್ತಿ ಭವನ' ದಲ್ಲಿ ಕಳವಳ—ಗಾಬರಿ. ರಾಷ್ಟ್ರದ ಪ್ರಧಾನಿ ಇದ್ದಕ್ಕಿದ್ದಂತೆ ತಮ್ಮ ನಿವಾಸದಿಂದ ಮಾಯವಾಗಿದ್ದರು. ಎಲ್ಲಿಗೆ ಹೋದರೆಂಬುದು ಯಾರಿಗೂ ತಿಳಿಯದು. ಭದ್ರತಾತಂಡಕ್ಕೂ ಅಂಗರಕ್ಷಕರಿಗೂ ದಿಗಿಲು. ನಗರದಲ್ಲೆಲ್ಲ ಶೋಧ ನಡೆಯಿತು.

ಊರಿನ ಹೊರವಲಯದಲ್ಲಿ, ಮಕ್ಕಳ ಉದ್ಯಾನದಲ್ಲಿ, ಕಿರಿಯರೊಂದಿಗೆ ಆಟವಾಡುತ್ತ ಮೈಮರೆತಿದ್ದರು ಸ್ವತಂತ್ರ ಭಾರತದ ಪ್ರಧಾನಿ.

"ಮಕ್ಕಳ ಜೊತೆಗಿರುವುದು, ಅವರೊಡನೆ ಮಾತನಾಡುವುದು, ಎಲ್ಲಕ್ಕೂ ಹೆಚ್ಚಾಗಿ ಅವರೊಂದಿಗೆ ಆಟವಾಡುವುದು ನನಗೆ ಇಷ್ಟ."

—ಇದು ಜವಾಹರಲಾಲ ನೆಹರು ಒಂದೆಡೆ ಬರೆದಿರುವ ಮಾತು.

ನವೆಂಬರ್ 14 (1889) ಜವಾಹರಲಾಲರ ಜನ್ಮದಿನ. ರಾಷ್ಟ್ರದಾದ್ಯಂತ ಅದನ್ನು ಆಚರಿಸುವುದು ಮಕ್ಕಳ ದಿನವೆಂದು. ಮಕ್ಕಳ ಪಾಲಿಗೆ ಆ ಹಿರಿಯ ವ್ಯಕ್ತಿ 'ನೆಹರೂ ಮಾಮ' (ಚಾಚಾ ನೆಹರು).



ಚಾಚಾ ನೆಹರು

ಕಾಶ್ಮೀರ. ಜವಾಹರಲಾಲರ ಪೂರ್ವಜರ ನಾಡು. ಔರಂಗಜೇಬನ ಅನಂತರ ಪಟ್ಟವನ್ನೇರಿದ ಫರುಖ್‌ಸಿಯರ್ ಬಾದಶಹ ಒಮ್ಮೆ ಕಾಶ್ಮೀರಕ್ಕೆ ಭೇಟಿ ನೀಡಿದಾಗ, ಅಲ್ಲಿ ಸಂಸ್ಕೃತ, ಪಾರಸೀ ಭಾಷೆಗಳೆರಡರಲ್ಲೂ ನಿಪುಣ ವಿದ್ವಾಂಸನಾಗಿದ್ದ ರಾಜ ಕೌಲ್ ಎಂಬಾತನ ಪರಿಚಯ ಆತನಿಗಾಯಿತು. ದೆಹಲಿಗೆ ಬಂದು ನೆಲೆಸುವಂತೆ ಕೌಲನನ್ನು ಬಾದಶಹ ಆಹ್ವಾನಿಸಿದ. ರಾಜ ಕೌಲ್ ಸಕುಟುಂಬನಾಗಿ (ಸುಮಾರು 1716) ದೆಹಲಿಗೆ ವಲಸೆಬಂದ. ರಾಜಧಾನಿಯ ಬಳಿ ಕಾಲುವೆ ಇದ್ದ ಜಹಗೀರೊಂದು ಕೌಲನಿಗೆ ದೊರೆಯಿತು. ಕಾಲುವೆಯ ದಡದಲ್ಲಿ ಮನೆ. ಉರ್ದೂ ಭಾಷೆಯಲ್ಲಿ ಕಾಲುವೆಗೆ

ನಹರ್ ಎನ್ನುತ್ತಾರೆ. ಕಾಶ್ಮೀರಿ ಪಂಡಿತ, ರಾಜಾಕೌಲ್ ನಹರ್ ಆದ. ಮುಂದೆ ರಾಜಾ ನೆಹರು ಎಂದು ರೂಪಾಂತರಹೊಂದಿತು ಹೆಸರು. ಆತನೇ ಜವಾಹರಲಾಲರ ಮುತ್ತಾತ.

ತಂದೆ ಮೋತಿಲಾಲರು ತಿಂಗಳಿಗೆ ಅರ್ಧ ಲಕ್ಷ ರೂಪಾಯಿ ವರಮಾನವಿದ್ದ ಸುಪ್ರಸಿದ್ಧ ನ್ಯಾಯವಾದಿ. ತಾಯಿ ಸ್ವರೂಪರಾಣಿ ಸಾಧ್ವೀಮಣಿ. ಜವಾಹರ್ ಒಬ್ಬನೇ ಮಗ. ಹದಿನಾಲ್ಕನೆಯ ವಯಸ್ಸಿನಲ್ಲೇ ಹುಡುಗ ವಿದ್ಯಾಭ್ಯಾಸಕ್ಕಾಗಿ ಇಂಗ್ಲೆಂಡಿಗೆ ಹೋದ. ಹ್ಯಾರೋ ಶಾಲೆಯ ಬಳಿಕ ಕೇಂಬ್ರಿಜಿನಲ್ಲಿ ಅಧ್ಯಯನ. ವಿಷಯಗಳು ರಸಾಯನಶಾಸ್ತ್ರ, ಭೂವಿಜ್ಞಾನ ಮತ್ತು ಸಸ್ಯಶಾಸ್ತ್ರ. ಪದವೀಧರನಾದ ಮೇಲೆ ಇಂಡಿಯನ್ ಸಿವಿಲ್ ಸರ್ವಿಸ್ ಪರೀಕ್ಷೆಗೆ ಕುಳಿತುಕೊಳ್ಳದೆ ನ್ಯಾಯಶಾಸ್ತ್ರದಲ್ಲಿ ಪಾರಂಗತರಾಗಿ ಬಾರ್-ಅಟ್-ಲಾ ಆದರು.

ಭಾರತಕ್ಕೆ ಮರಳಿದ ಯುವಕ ಜವಾಹರರು, ಪರತಂತ್ರ ಭಾರತದ ದಲಿತ ಕೋಟಿಯ ವಕಾಲತ್ತು ವಹಿಸಿ, ಪರಕೀಯ ಸರಕಾರದಿಂದ ನ್ಯಾಯ ಪಡೆಯುವ ಹೋರಾಟಗಾರನಾದರು. ಮುಂದೆ ಗಾಂಧಿಜಿಯ ಪ್ರಭಾವದಿಂದ ನೆಹರು ಮನೆತನ ಸರ್ವಸ್ವವನ್ನೂ ರಾಷ್ಟ್ರಕ್ಕಾಗಿ ಧಾರೆ ಎರೆಯಿತು. ಜವಾಹರಲಾಲರು, ಮಡದಿ ಕಮಲಾ, ತಂದೆ ತಾಯಿ ತಂಗಿಯರು ಎಲ್ಲರೂ ಸ್ವಾತಂತ್ರ್ಯ ಸಮರದಲ್ಲಿ ಭಾಗಿಗಳಾದರು ; ಸೆರೆಮನೆ ವಾಸದ ಸುಖ ಅನುಭವಿಸಿದರು.

ಜವಾಹರಲಾಲರು ಬುದ್ಧಿಜೀವಿ. ವಿಚಾರವೇತ್ತ. ಜಾಗತಿಕ ದೃಷ್ಟಿಕೋನವಿದ್ದವರು. ಅವರು ವಾಗ್ಮಿಯಲ್ಲ. ಮಾತನಾಡಲು ಕಲಿತದ್ದೇ ತಮ್ಮ ಪ್ರಾಂತದ ರೈತ ಜನರ ಸಮುದಾಯದಲ್ಲಿ. ಆದರೆ ಅವರ ನೇರ ಮಾತು, ಧೀರ ನಿಲುವು, ಸುಲಭವಾಗಿ ಅವರನ್ನು ಭಾರತೀಯರ ಆರಾಧ್ಯಮೂರ್ತಿಯಾಗಿ ಮಾಡಿದುವು. ಅವರ ಎಲ್ಲ ವಿಚಾರಗಳೂ ಗಾಂಧಿಜಿಗೆ ಒಪ್ಪಿಗೆಯಾಗುತ್ತಿರಲಿಲ್ಲ. ಆದರೂ ಮಹಾತ್ಮರು, ಜವಾಹರಲಾಲ ತಮ್ಮ ಉತ್ತರಾಧಿಕಾರಿ ಎಂದು ಸಾರಿದರು.

ಜವಾಹರರು ಅಧ್ಯಕ್ಷತೆ ವಹಿಸಿದ ಅಖಿಲಭಾರತ ಕಾಂಗ್ರೆಸಿನ ಲಾಹೋರ್ ಅಧಿವೇಶನ (1929), 'ಪೂರ್ಣಸ್ವಾತಂತ್ರ್ಯ'ವೇ ಗುರಿ ಎಂದು ಸಾರಿತು. ದೀನದಲಿತರ ಕಲ್ಯಾಣಕ್ಕಾಗಿ ಸಮಾಜವಾದವೇ ಮದ್ದು ಎಂಬುದು ಜವಾಹರಲಾಲರಿಗೆ ಮನವರಿಕೆಯಾಗಿತ್ತು. ಆ ವಿಚಾರವನ್ನು ಜನರ ನಡುವೆ ಅವರು ಪ್ರಚುರಗೊಳಿಸಿದರು.

ಸುದೀರ್ಘ ಹೋರಾಟದ ಬಳಿಕ 1947ರಲ್ಲಿ (ಆಗಸ್ಟ್ 15) ಭಾರತ ಸ್ವತಂತ್ರವಾದಾಗ ಜವಾಹರಲಾಲರು ಪ್ರಥಮ ಪ್ರಧಾನ ಮಂತ್ರಿಯಾದರು. ಆಗ ಅವರಿಗೆ 58 ವರ್ಷ ಪ್ರಾಯ. ಸಮರ್ಥ ಕಪ್ತಾನರಾಗಿ ಹದಿನೇಳು ವರ್ಷಗಳ ಕಾಲ ರಾಷ್ಟ್ರನೌಕೆಯನ್ನು ನಡೆಸಿ, 1964ರ ಮೇ 27ರಂದು ನಿಧನಹೊಂದಿದರು.

ಇತಿಹಾಸದ ಪ್ರಜ್ಞೆಯಿದ್ದ ಧೀಮಂತ ನಾಯಕ ನೆಹರು. ಬುದ್ಧನೆಂದರೆ ಭಕ್ತಿ. ಅಶೋಕ ಅವರ ಅಚ್ಚುಮೆಚ್ಚಿನ ಅರಸು. ಕಲೆ, ಸಾಹಿತ್ಯಗಳಲ್ಲಿ ಅವರಿಗೆ ಆಸಕ್ತಿ. ಆಂಗ್ಲ ನಾಟಕಕಾರ ಬರ್ನಾರ್ಡ್ ಷಾ, ತತ್ತ್ವವೇತ್ತ ಬರ್ಟ್ರಾಂಡ್ ರಸಲ್ ಅವರ ಮಿತ್ರರಾಗಿದ್ದರು. ಜವಾಹರರು ಇಂಗ್ಲಿಷಿನಲ್ಲಿ ಪರಿಣಾಮಕಾರಿ ಲೇಖಕ. ಅವರ 'ಆತ್ಮಕಥೆ', 'ಜಗತ್ತಿನ ಚರಿತ್ರೆಯ ಇಣುಕು ನೋಟಗಳು', 'ಭಾರತದರ್ಶನ'—ವಿಶ್ವಮಾನ್ಯ ಕೃತಿಗಳು. ಒಟ್ಟು ಒಂಬತ್ತು ಬಾರಿ ಸೆರೆಮನೆ ಸೇರಿ ಅಲ್ಲಿ ಬಂದಿಯಾಗಿ ಕಳೆದ ಒಟ್ಟು 1,041 ದಿನಗಳಲ್ಲಿ ಹೆಚ್ಚಿನ ವೇಳೆಯೆಲ್ಲ ಬರೆವಣಿಗೆ ಅಧ್ಯಯನಗಳಿಗೆ ವಿನಿಯೋಗವಾಯಿತು.

ನೆಹರು ನಿಸರ್ಗಪ್ರಿಯರಾಗಿದ್ದರು. ಬೆಟ್ಟಗಳನ್ನೇರುವುದು, ಗಿರಿಕಂದರಗಳಲ್ಲಿ ಅಲೆಯುವುದು ಅವರಿಗೆ ಇಷ್ಟವಾಗಿದ್ದ ಹವ್ಯಾಸ. ಕೆಂಗುಲಾಬಿ ಪ್ರೀತಿಯ ಹೂ. ಅವರ ಅವಿಶ್ರಾಂತ ದುಡಿಮೆ, ಶಿಸ್ತು, ಒಪ್ಪ ಓರಣ ಇತರರಿಗೆ ಮಾದರಿ.

ವಿಶ್ವಭ್ರಾತೃತ್ವದಲ್ಲಿ ಜವಾಹರರಿಗೆ ಅಚಲ ನಂಬಿಕೆ ಇತ್ತು. ಒಮ್ಮೆ ಅವರು ಯುರೋಪ್ಯ ಪ್ರವಾಸ ಕೈಗೊಂಡಿದ್ದಾಗ ಇಟಲಿಯ ಸರ್ವಾಧಿಕಾರಿ ಮುಸೋಲಿನಿ ಅವರನ್ನು ಕಾಣಲುಬಯಸಿದ. ಆದರೆ ಪ್ರಜಾಪ್ರಭುತ್ವವಾದಿ ನೆಹರು ಫ್ಯಾಸಿಸ್ಟ್ ಪ್ರಭೃತಿಯ ಆಮಂತ್ರಣವನ್ನು ತಿರಸ್ಕರಿಸಿದರು. ಅವರು ಸ್ವಭಾವತಃ ಯುದ್ಧ ವಿರೋಧಿ. ಶಾಂತಿಸಾಧಕ. ಜಗತ್ತಿನಲ್ಲಿ ಶಕ್ತಿ ಬಣಗಳಿಗೆ ಸೇರದ ಅಲಿಪ್ತ ರಾಷ್ಟ್ರಗಳ ಬಲವನ್ನು ನಿರ್ಮಿಸಲು ಅವರು ಕಾರಣರಾದರು. ಸಹಬಾಳ್ವೆಯ ಪಂಚಶೀಲ ಸೂತ್ರಗಳನ್ನು ಪ್ರತಿಪಾದಿಸಿದರು. ಆದರೆ ಮಿತ್ರನಂತೆ ನಟಿಸಿದ ಚೀನ ಬೆನ್ನಲ್ಲಿ ಇರಿದದ್ದರಿಂದ ಜವಾಹರಲಾಲರ ಮನಸ್ಸಿಗೆ ಘಾಸಿಯಾಯಿತು.

ಮಾನವಕೋಟಿಯ ಏಳ್ಗೆಗೆ ವಿಜ್ಞಾನ, ತಾಂತ್ರಿಕಜ್ಞಾನ ಅವಶ್ಯವೆಂದು ಸಾರಿ, ಭಾರತದ ಬೆಳವಣಿಗೆ ಯೋಜನಾಬದ್ಧವಾಗಿ ಆಗುವಂತೆ ಶ್ರಮಿಸಿದರು. ಅವರ ಪಾಲಿಗೆ ಕಾಯಕವೇ ಕೈಲಾಸ. ಅಣೆಕಟ್ಟುಗಳಂಥ ಭವ್ಯ ನಿರ್ಮಾಣಗಳನ್ನು ಕುರಿತು, 'ಇವೇಗ ನಾನು ಪೂಜೆ ಕೈಗೊಳ್ಳುವ ಭಾರತದ ನೂತನ ದೇವಾಲಯಗಳು, ಇವೇ ರಾಷ್ಟ್ರೀಯ ಯಾತ್ರಾಸ್ಥಳಗಳು' ಎಂದರು.

ಅನಭಿಷಿಕ್ತ ರಾಜನಂತಿದ್ದ ಜವಾಹರಲಾಲರು ಇಷ್ಟಪಟ್ಟಿದ್ದರೆ ಸರ್ವಾಧಿಕಾರಿಯಾಗಬಹುದಿತ್ತು. ಆದರೆ ಅವರು ಶ್ರೇಷ್ಠ ಪ್ರಜಾಪ್ರಭುತ್ವವಾದಿಯಾಗಿ ಬಾಳಿದರು.

ವಿವರ : ಏಳನೆಯ ಸಂಪುಟ

## ನೇಟೋ

ಎರಡನೆಯ ಮಹಾಯುದ್ಧದ ಅನಂತರ ಯುರೋಪ್ಯ ರಾಷ್ಟ್ರಗಳು ರಚಿಸಿಕೊಂಡ ಕೂಟ ನೇಟೋ. ನಾರ್ತ್ ಅಟ್ಲಾಂಟಿಕ್ ಟ್ರೀಟಿ ಆರ್ಗನೈಜೇಷನ್ ಪದಗಳ ಆದ್ಯಕ್ಷರಗಳ ರೂಪ ನೇಟೋ ಹೆಸರು. ಎರಡನೆಯ ಮಹಾಯುದ್ಧ ಮುಗಿದ ಮೇಲೂ ಸೋವಿಯೆತ್ ರಷ್ಯ, ಬಲಿಷ್ಠ ಸೈನಿಕ ಪಡೆ ಮತ್ತು ಯುದ್ಧೋಪಕರಣಗಳನ್ನು ಪೂರ್ವ ಯೂರೋಪಿನ ಕಮ್ಯೂನಿಸ್ಟ್ ರಾಷ್ಟ್ರಗಳಲ್ಲಿ ಮತ್ತು ಪೂರ್ವ ಜರ್ಮನಿಯಲ್ಲಿ ಶೇಖರಿಸಿ ಇಟ್ಟುಕೊಂಡಿತ್ತು. ಮಹಾಯುದ್ಧದ ಅನಂತರ ತೀವ್ರವಾಗಿ ಹಾನಿಗೊಳಗಾಗಿದ್ದ ಕೆಲವು ಕಮ್ಯೂನಿಸ್ಟೇತರ ಯೂರೋಪ್ ರಾಷ್ಟ್ರಗಳು ಸೋವಿಯೆತ್ ರಷ್ಯದ ಪ್ರಾಬಲ್ಯದಿಂದ ರಕ್ಷಿಸಿಕೊಳ್ಳಲು ನೇಟೋ ರಕ್ಷಣಾಕೂಟವನ್ನು ರಚಿಸಿಕೊಂಡುವು. ಅಮೆರಿಕದ ಸಂಯುಕ್ತ ಸಂಸ್ಥಾನ, ಕೆನಡ, ಬ್ರಿಟನ್, ಫ್ರಾನ್ಸ್, ಇಟಲಿ, ನಾರ್ವೆ, ಡೆನ್ಮಾರ್ಕ್, ಐಸ್‌ಲೆಂಡ್, ಹಾಲೆಂಡ್, ಬೆಲ್ಜಿಯಂ, ಲಕ್ಸೆಂಬರ್ಗ್, ಪೋರ್ಚುಗಲ್ ಈ ಹನ್ನೆರಡು ರಾಷ್ಟ್ರಗಳು ರಕ್ಷಣಾ ಕೌಲನ್ನು ರೂಪಿಸಿಕೊಂಡು 1949ರಲ್ಲಿ ಈ ಕೂಟವನ್ನು ಸ್ಥಾಪಿಸಿದುವು. ಗ್ರೀಸ್, ಟರ್ಕಿ, ಪಶ್ಚಿಮ ಜರ್ಮನಿ ಇವು ಕೂಡ ಕೂಟವನ್ನು ಸೇರಿದ ಮೇಲೆ ಅದರ ಸದಸ್ಯ ಸಂಖ್ಯೆ ಹದಿನೈದಕ್ಕೆ ಏರಿತು. ನೇಟೋ ಕೂಟ

ಜಾಗತಿಕ ಯುದ್ಧದ ಮಿತ್ರರಾಷ್ಟ್ರಗಳ ಬಣ ಒಡೆದುದನ್ನು ಸೂಚಿಸಿತು. ರಷ್ಯ ನೇತೃತ್ವದಲ್ಲಿ ಕಮ್ಯೂನಿಸ್ಟ್ ವಲಯದ ಎದುರಾಳಿ ರಾಷ್ಟ್ರಗಳ ಮಿಲಿಟರಿ ಕೂಟವಾಯಿತು ನೇಟೋ.

ಕೂಟದ ಸದಸ್ಯ ರಾಷ್ಟ್ರಗಳ ಉದ್ದೇಶ ಸಾಮೂಹಿಕ ರಕ್ಷಣೆ: ಯಾವುದೇ ಸದಸ್ಯ ರಾಷ್ಟ್ರದ ಅಥವಾ ರಾಷ್ಟ್ರಗಳ ಮೇಲೆ ಆಕ್ರಮಣ ನಡೆದಲ್ಲಿ ಒಟ್ಟಾಗಿ ಅದನ್ನು ನೇಟೋ ಎದುರಿಸುತ್ತದೆ. ಎಲ್ಲ ಸದಸ್ಯ ರಾಷ್ಟ್ರಗಳೂ ಒಂದೇ ಬಗೆಯ ರಕ್ಷಣಾ ಯೋಜನೆಗಳನ್ನು ರಚಿಸಿಕೊಳ್ಳುತ್ತವೆ. ಸಂಯುಕ್ತವಾಗಿ ಸೇನಾದಳಕ್ಕೆ ತರಬೇತಿ ನೀಡುತ್ತವೆ. ವೆಚ್ಚಗಳನ್ನು ಎಲ್ಲ ಸದಸ್ಯರಾಷ್ಟ್ರಗಳೂ ಭರಿಸುವುವಾದರೂ ಸಿಂಹಪಾಲನ್ನು ಅಮೆರಿಕದ ಸಂಯುಕ್ತ ಸಂಸ್ಥಾನ ಸಲ್ಲಿಸುತ್ತದೆ. ಯುರೋಪ್ಯ ಸದಸ್ಯರಾಷ್ಟ್ರಗಳ ರಕ್ಷಣಾ ಪೂರೈಕೆಗಳ ಭಾರವನ್ನು ಸಹ ಹೊರುವ ಅಮೆರಿಕ, ಪಶ್ಚಿಮ ಜರ್ಮನಿಯಲ್ಲಿ ಬಲವಾದ ಸೇನೆಯನ್ನೂ ಪರಮಾಣುಅಸ್ತ್ರಗಳನ್ನೊಳಗೊಂಡ ಯುದ್ಧೋಪಕರಣಗಳನ್ನೂ ಇಟ್ಟು ನೇಟೋ ಬಲಯುತವಾಗಲು ಕಾರಣವಾಗಿದೆ. ನೇಟೋ ಪ್ರತಿಯೊಂದು ಸದಸ್ಯರಾಷ್ಟ್ರದ ಶಾಶ್ವತ ಪ್ರತಿನಿಧಿಯನ್ನು ಒಳಗೊಂಡಿರುತ್ತದೆ. ನೇಟೋದ ಪ್ರಧಾನ ಕಚೇರಿ ಪ್ಯಾರಿಸಿನಲ್ಲಿತ್ತು. ದ ಗಾಲ್ ಪ್ರಧಾನಿಯಾಗಿದ್ದ ಫ್ರೆಂಚ್ ಸರಕಾರ 1960ರಲ್ಲಿಯೇ ನೇಟೋದ ಮಿಲಿಟರಿ ಸೈನ್ಯದ ವ್ಯವಸ್ಥೆಯ ಬಗೆಗೆ ತನ್ನ ಅಸಮಾಧಾನವನ್ನು ವ್ಯಕ್ತಮಾಡಿತು. ಅಮೆರಿಕದ ಮಿಲಿಟರಿ ಸೈನ್ಯ ಹೆಚ್ಚಾಗಿದ್ದುದು ಫ್ರೆಂಚರಿಗೆ ಒಪ್ಪಿಗೆಯಾಗಲಿಲ್ಲ. ಇದರಿಂದ ನೇಟೋದ ಪ್ರಧಾನ ಕಚೇರಿಯನ್ನು ಪ್ಯಾರಿಸಿನಿಂದ ಬ್ರಸೆಲ್ಸ್‌ಗೆ ಸ್ಥಳಾಂತರಿಸಿದರು.

ಕೂಟದ ಸಭೆಗಳಲ್ಲಿ ರಕ್ಷಣಾ ಸಮಸ್ಯೆಗಳಷ್ಟೇ ಅಲ್ಲದೆ ರಾಜಕೀಯ ಮತ್ತು ಆರ್ಥಿಕ ಸಮಸ್ಯೆಗಳೂ ಚರ್ಚಿಸಲ್ಪಡುತ್ತವೆ.

1950ರಲ್ಲಿ ಉತ್ತರ ಕೊರಿಯ ಕಮ್ಯೂನಿಸ್ಟರ ವಶಕ್ಕೆ ಬಂದ ಬಳಿಕ ನೇಟೋ ತನ್ನ ಬಲವನ್ನು ಹೆಚ್ಚಿಸಿಕೊಂಡಿತು.



ಕಠ್ಮಂಡು ಕಣಿವೆಯ ಪ್ರಾಚೀನ ದೇವಾಲಯದಲ್ಲಿ ವಿಷ್ಣು ಮತ್ತು ಲಕ್ಷ್ಮೀ

## ನೇಪಾಳ

ಭಗವಾನ್ ಬುದ್ಧ ಜಗದ್ವಂದ್ಯರಲ್ಲಿ ಒಬ್ಬ. ಈ ಮಹಾಪುರುಷ ಹುಟ್ಟಿದ್ದು ನೇಪಾಳದ ಕಪಿಲವಸ್ತುವಿನಲ್ಲಿ. ನೇಪಾಳ ಹಿಮಾಲಯದ ಇಳಿಜಾರು ಪ್ರದೇಶದಲ್ಲಿ ಭಾರತ ಮತ್ತು ಟಿಬೆಟ್‌ಗಳ ಮಧ್ಯೆ ಇರುವ ಸ್ವತಂತ್ರ ರಾಜ್ಯ. ಪೂರ್ವ ಪಶ್ಚಿಮಕ್ಕೆ 805 ಕಿಲೊಮೀಟರು ಉತ್ತರ ದಕ್ಷಿಣಕ್ಕೆ 145 ರಿಂದ 225 ಕಿಲೊಮೀಟರು. ಪ್ರಪಂಚದ ಅತ್ಯುಚ್ಚ ಶಿಖರಗಳಲ್ಲಿ ಸೇರಿರುವ ಎವರೆಸ್ಟ್, ಕಾಂಚನಗಂಗಾ, ಧವಳಗಿರಿ ಮತ್ತು ಅನ್ನಪೂರ್ಣಾ ನೇಪಾಳದಲ್ಲಿವೆ. ಹಿಮಾಲಯ ಪರ್ವತ ಪ್ರದೇಶ ಅರಣ್ಯದಿಂದ ಕೂಡಿದ್ದು. ಅಲ್ಲೊಂದು ಇಲ್ಲೊಂದು ಹಳ್ಳಿ ಇರುತ್ತದೆ. ಸ್ವಲ್ಪ ಭಾಗ ಜೌಗು ಪ್ರದೇಶ, ಇದಕ್ಕೆ ತೆರಾಯ್ ಎಂದು ಹೆಸರು. ದಕ್ಷಿಣ ಭಾಗ ಮೆಕ್ಕಲುಮಣ್ಣಿನಿಂದ ಕೂಡಿದ ಫಲವತ್ತಾದ ಭೂಮಿ. ನೇಪಾಳದ ಮುಖ್ಯ ನದಿಗಳಾದ ಕೋಸಿ, ಗಂಡಕ್ ಮತ್ತು ಕರ್ನಾಲಿ ಟಿಬೆಟಿನಿಂದ ಹರಿದುಬರುತ್ತವೆ.

| | | |
|---|---|---|
| ಖಂಡ | : | ಏಷ್ಯ (ದಕ್ಷಿಣ ಮಧ್ಯ) |
| ಅಕ್ಷಾಂಶ | : | 26° 21′ ಉ ದಿಂದ 30° 18′ ಉ |
| ರೇಖಾಂಶ | : | 80° 04′ ಪೂ ದಿಂದ 88° 13′ ಪೂ |
| ವಿಸ್ತೀರ್ಣ | : | ಸುಮಾರು 1,39,860 ಚ. ಕಿ. ಮಿ. |
| ಜನಸಂಖ್ಯೆ | : | ಸುಮಾರು 93,88,000 |
| ರಾಜಧಾನಿ | : | ಕಠ್ಮಂಡು |
| ಭಾಷೆ | : | ನೇಪಾಳಿ |
| ಸರಕಾರ | : | ಸಂವಿಧಾನಬದ್ಧ ರಾಜಪ್ರಭುತ್ವ |
| ಬಾವುಟ | : | ಕೆಂಪು ಬಣ್ಣವಿದ್ದು, ಸೂರ್ಯ ಮತ್ತು ಚಂದ್ರರ ಚಿತ್ರಗಳು |

ಪರ್ವತಗಳ ಕೊಳ್ಳ ಪ್ರದೇಶದಲ್ಲಿ ನೇಪಾಳಿಯರು ಹೆಚ್ಚಾಗಿ ಭತ್ತವನ್ನೂ ಕೆಲವೆಡೆ ಕಬ್ಬು, ತರಕಾರಿಗಳನ್ನೂ ಬೆಳೆಯುತ್ತಾರೆ. ಕಿತ್ತಳೆ ಮತ್ತು ಅನಾನಸ್ ಹಣ್ಣುಗಳಿಗೆ ನೇಪಾಳ ಪ್ರಸಿದ್ಧ. ಕಲ್ಲಿದ್ದಲು, ತಾಮ್ರ, ಸೀಸ ಮುಂತಾದ ಖನಿಜಗಳ ಪ್ರದೇಶಗಳು ನೇಪಾಳದಲ್ಲಿದ್ದರೂ ಪ್ರಮುಖವಾದ ಕಾರಖಾನೆಗಳು ಯಾವುವೂ ಇಲ್ಲಿ ಸ್ಥಾಪಿತವಾಗಿಲ್ಲ. ನೇವಾರ ಪಂಗಡದ ಜನರು ಈ ದೇಶದ ಶ್ರೀಮಂತ ವ್ಯಾಪಾರಿಗಳು. ವ್ಯಾಪಾರ ಮುಖ್ಯವಾಗಿ ಭಾರತದೊಂದಿಗೆ ನಡೆಯುತ್ತದೆ.

ನೇಪಾಳದ ನಿವಾಸಿಗಳ ಪೂರ್ವಜರು ಭಾರತೀಯರು ಮತ್ತು ಮಂಗೋಲಿಯನರು. [illegible]

ಸ್ವರಕ್ಷಣಾಪ್ರಿಯರು. ಗಟ್ಟಿ ಮೈಕಟ್ಟಿನವರು. ಸಾಹಸಪ್ರವೃತ್ತಿಯವರು, ಆದ್ದರಿಂದ ಅವರಲ್ಲಿ ಅನೇಕರು ಸೈನಿಕರಾಗುತ್ತಾರೆ ; ಕಾವಲುಗಾರರಾಗುತ್ತಾರೆ. ಗೂರ್ಖಾ ಜನರು ಸ್ವಾಮಿನಿಷ್ಠರು. ಎವರೆಸ್ಟ್ ಶಿಖರವನ್ನು ಹತ್ತಿದಂದ ಸಾಹಸಿ ಷೆರ್ಪಾ ತೇನ್‌ಸಿಂಗ್ ನಾರ್ಕೆ ಮೂಲತಃ ನೇಪಾಳದವನು. ನೇವಾರ, ಷೆರ್ಪಾ, ಲಿಂಬು, ಗೂರ್ಖಾ ನೇಪಾಳಿಗಳ ವಿವಿಧ ಬುಡಕಟ್ಟುಗಳು. ಬಹುತೇಕ ನೇಪಾಳಿಗಳು ಹಿಂದೂ ಮತ್ತು ಬೌದ್ಧ ಮತಾವಲಂಬಿಗಳು. ಅನೇಕ ಹಿಂದೂ ಮತ್ತು ಬೌದ್ಧ ದೇವಾಲಯಗಳು ನೇಪಾಳದಲ್ಲಿವೆ.

ಆಡಳಿತ ಭಾಷೆ ನೇಪಾಳಿ. ಜನ ಸ್ಥಳೀಯ ಉಪಭಾಷೆಗಳನ್ನೂ ಉಪಯೋಗಿಸುತ್ತಿದ್ದಾರೆ.

ರಾಜಧಾನಿ ಕಠ್ಮಂಡು ಹಿಮಾಲಯ ಪರ್ವತ ಪ್ರದೇಶದಲ್ಲಿದೆ. ಇದು ನೇಪಾಳದ ಆಡಳಿತ, ಆರ್ಥಿಕ ಮತ್ತು ಸಾಂಸ್ಕೃತಿಕ ಕೇಂದ್ರವಾಗಿದೆ. ಪಟಾನ್, ಭದ್‌ಗಾಂವ್, ಕಠ್ಮಂಡು ಕಣಿವೆಯಲ್ಲಿರುವ ನಗರಗಳು. 1559ರಿಂದ 1769ರವರೆಗೆ ಪ್ರತ್ಯೇಕ ರಾಜ್ಯದ ರಾಜಧಾನಿಯಾಗಿದ್ದ ಗೂರ್ಖಾದಲ್ಲಿ ಗೋರಖನಾಥನ ದೇವಾಲಯವಿದೆ. ಬಿರಾಟ್‌ನಗರ್ ಗಿರಣಿಗಳ ನಗರ. ಭಾರತ-ನೇಪಾಳದ ಹೆದ್ದಾರಿಯಲ್ಲಿರುವುದರಿಂದ ಬಿರ್‌ಗುಂಜ್ ಪ್ರಾಮುಖ್ಯ ಪಡೆದಿದೆ.

ವಿದ್ಯಾಭ್ಯಾಸ ಸೌಲಭ್ಯಗಳು ಕ್ರಮೇಣ ಹೆಚ್ಚುತ್ತಿವೆ. 1960ರಲ್ಲಿ ತ್ರಿಭುವನ ವಿಶ್ವವಿದ್ಯಾನಿಲಯ ಪ್ರಾರಂಭವಾಯಿತು. ಹದಿನೆಂಟನೆಯ ಶತಮಾನಕ್ಕೆ ಮುಂಚೆ ನೇಪಾಳದಲ್ಲಿ ಅನೇಕ ಚಿಕ್ಕಪುಟ್ಟ ರಾಜ್ಯಗಳಿದ್ದುವು. ಹದಿನೆಂಟನೆಯ ಶತಮಾನದ ಮಧ್ಯಭಾಗದಲ್ಲಿ ಗೂರ್ಖಾ ದೊರೆ ಪೃಥ್ವಿ ನಾರಾಯಣ ಶಾ ಎಂಬವನು ನೇಪಾಳವನ್ನು ಒಂದುಗೂಡಿಸಿ, ಶಾ ಮನೆತನವನ್ನು ಸ್ಥಾಪಿಸಿದ. ಈಗಲೂ ಶಾ ಮನೆತನದವರೇ ನೇಪಾಳವನ್ನಾಳುತ್ತಿದ್ದಾರೆ. 1816ರಲ್ಲಿ ಬ್ರಿಟಿಷರೊಡನೆ ಯುದ್ಧವಾಗಿ ತೆರಾಯಿ ಪ್ರದೇಶದ ಹಲವು ಪ್ರಶಸ್ತ ಭಾಗಗಳನ್ನು ಬಿಟ್ಟುಕೊಡಬೇಕಾಯಿತು. ಕಠ್ಮಂಡುವಿನಲ್ಲಿ ಬ್ರಿಟಿಷರ ಪ್ರತಿನಿಧಿ ಇರಲೂ ಒಪ್ಪಬೇಕಾಯಿತು. 1846ರಲ್ಲಿ ಮುಖ್ಯ ಮಂತ್ರಿ ಎಲ್ಲ ಅಧಿಕಾರವನ್ನೂ ತಾನೇ ವಹಿಸಿಕೊಂಡು ಮುಖ್ಯ ಮಂತ್ರಿ ಪದವಿ ವಂಶಪಾರಂಪರ್ಯವೆಂದು ಸಾರಿದ. ಇವರ ವಂಶ ರಾಣಾ ಎಂಬುದು. ಗೂರ್ಖಾಗಳು ಸಾಹಸಿಗಳು. ಯುದ್ಧವಿಶಾರದರು. ಮೊದಲನೆಯ ಮಹಾಯುದ್ಧದಲ್ಲಿ ಆಗ ಮುಖ್ಯಮಂತ್ರಿಯಾಗಿದ್ದ ಚಂದ್ರ ಶಂಷೇರ್ ಬ್ರಿಟಿಷರಿಗೆ ಗೂರ್ಖಾ ಪಡೆಯನ್ನು ಉಪಯೋಗಿಸಿಕೊಳ್ಳಲು ಅವಕಾಶಕೊಟ್ಟ. ಇದರ ಫಲವಾಗಿ ಯುದ್ಧ ಮುಗಿದ ಮೇಲೆ ನೇಪಾಳ ಸ್ವತಂತ್ರವಾಯಿತು. 1951ರಲ್ಲಿ ದೊರೆ ತ್ರಿಭುವನ ಸಂವಿಧಾನಬದ್ಧ ಆಡಳಿತವನ್ನು ಘೋಷಿಸಿದರು. ರಾಣಾ ಮನೆತನದ ಮುಖ್ಯಮಂತ್ರಿ ವರ್ಗದಿಂದ ಆಳುವುದು ಕೊನೆಗೊಂಡಿತು. 1959ರಲ್ಲಿ ಚುನಾಯಿತ ಸರಕಾರ ಅಧಿಕಾರಕ್ಕೆ ಬಂತು. 1962ರಲ್ಲಿ ದೊರೆ ಮಹೇಂದ್ರರಿಗೆ ಆಡಳಿತ ಅಧಿಕಾರ ಕೊಡುವ ಸಂವಿಧಾನ ಜಾರಿಗೆ ಬಂತು. ಒಂದು ವರ್ಷವಾದ ಮೇಲೆ ಚುನಾವಣೆ ನಡೆದು 125 ಜನ ಸದಸ್ಯರು ಶಾಸನಸಭೆಗೆ ಚುನಾಯಿತರಾದರು.

ಕಠ್ಮಂಡುವಿನಲ್ಲಿರುವ ಪಶುಪತಿನಾಥ ದೇವಾಲಯ



ನೇಪಾಳ 1955ರಲ್ಲಿ ವಿಶ್ವಸಂಸ್ಥೆಗೆ ಸೇರಿತು.

ಭಾರತ–ನೇಪಾಳಗಳ ಸಂಬಂಧ ಶತಮಾನಗಳದ್ದು. ನೇಪಾಳದಲ್ಲಿ ಬಹುಮಂದಿ ಹಿಂದೂಗಳು. ನೇಪಾಳದಲ್ಲಿ ಹುಟ್ಟಿದ ಸಿದ್ಧಾರ್ಥ ಬುದ್ಧನಾಗಿ ಸ್ಥಾಪಿಸಿದ ಬೌದ್ಧಮತ ಎರಡು ದೇಶಗಳಲ್ಲಿಯೂ ಹರಡಿತು. ನಾಲ್ಕನೆಯ ಶತಮಾನದಲ್ಲಿ ನೇಪಾಳದ ಕೇಂದ್ರ ಕಣಿವೆಯ ಪ್ರದೇಶದಲ್ಲಿ ಹಿಂದೂ-ಬೌದ್ಧ ಸಂಸ್ಕೃತಿ ಬೆಳೆಯಿತು. ಐದನೆಯ ಶತಮಾನದಿಂದ ಉಳಿದುಬಂದ ಶಿಲಾಶಾಸನಗಳು ಭಾರತ-ನೇಪಾಳ ಸ್ನೇಹದ ಕಥೆಯನ್ನು ಹೇಳುತ್ತವೆ. ಧರ್ಮ ಮತ್ತು ಸಾಹಿತ್ಯಗಳ ಭಾಷೆ ಸಂಸ್ಕೃತವಾಯಿತು. ಪ್ರಪಂಚದಲ್ಲೆಲ್ಲ ಅತಿ ದೊಡ್ಡದಾದ ಪ್ರಾಚೀನ ಭಾರತೀಯ ಹಸ್ತಪ್ರತಿಗಳ ಸಂಗ್ರಹವಿರುವುದು ಕಠ್ಮಂಡುವಿನಲ್ಲಿ. ನೇಪಾಳದ ಹಿಂದೂ ದೇವಾಲಯ ಶಿಲ್ಪದ ಮೂಲ ದಕ್ಷಿಣ ಭಾರತದ ವಾಸ್ತುಶಿಲ್ಪ: ನೇಪಾಳದ ದೇವಾಲಯಗಳ ಶಿಲ್ಪವನ್ನು ಕೇರಳದ ಪ್ರಾಚೀನ ದೇವಾಲಯಗಳಲ್ಲಿ ಕಾಣಬಹುದು. ಕಠ್ಮಂಡುವಿನಲ್ಲಿರುವ ಪಶುಪತಿನಾಥ ದೇವಾಲಯದಲ್ಲಿ ಯಾವಾಗಲೂ ಕೇರಳದ ನಂಬೂದಿರಿಗಳೇ ಅರ್ಚಕರು. ನೇಪಾಳೀ ಭಾಷೆ ಸಂಸ್ಕೃತ ಬುಡಕಟ್ಟಿಗೆ ಸೇರಿದ್ದು. ನೇಪಾಳದ ವ್ಯಾಪಾರ ಬಹುಮಟ್ಟಿಗೆ ಭಾರತದ ಮೂಲಕ ನಡೆಯುತ್ತದೆ. ನೇಪಾಳದ ಗೂರ್ಖರು ಭಾರತದ ಸೈನ್ಯದಲ್ಲಿ ಸೇವೆ ಸಲ್ಲಿಸಿದ್ದಾರೆ. ಸಲ್ಲಿಸುತ್ತಿದ್ದಾರೆ. ಭಾರತ ನೇಪಾಳಕ್ಕೆ ಹಲವು ರೀತಿಗಳಲ್ಲಿ ನೆರವಾಗುತ್ತಿದೆ.

## ನೈಜೀರಿಯ

ಇಪ್ಪತ್ತನೆಯ ಶತಮಾನದ ಮೊದಲಲ್ಲಿ ನೈಜೀರಿಯ ದೇಶ ಇನ್ನೂ ಅಸ್ತಿತ್ವಕ್ಕೆ ಬಂದಿರಲಿಲ್ಲ. ಪಶ್ಚಿಮ ಆಫ್ರಿಕದಲ್ಲಿರುವ ನೈಜೀರಿಯಕ್ಕೆ ಆ ಹೆಸರು ಬರಲು ಕಾರಣ ನೈಜರ್ ನದಿ. ಈ ನದಿ 'Y' ಆಕಾರದಲ್ಲಿ ಐ

ರಾಷ್ಟ್ರದಲ್ಲಿ 1,175 ಕಿಲೊಮೀಟರುಗಳ ಉದ್ದ ಹರಿದುಹೋಗುತ್ತದೆ. ಇದರಿಂದ ನಾಡು ಮೂರು ಭಾಗವಾಗಿದೆ.

ಪ್ರಾಕೃತಿಕವಾಗಿ ನೈಜೀರಿಯವನ್ನು ನಾಲ್ಕು ವಿಭಾಗಗಳಾಗಿ ವಿಂಗಡಿಸಬಹುದು. ತೀರ ಪ್ರದೇಶ ಜೌಗುಮಯವಾಗಿ ಸರೋವರ, ಕೊರಕಲುಗಳಿಂದ ಕೂಡಿದೆ. ಇದರ ಉತ್ತರಕ್ಕೆ ಉಷ್ಣವಲಯದ ಕಾಡಿದೆ. ಈ ಕಾಡಿನಲ್ಲಿ ಬೃಹತ್ ವೃಕ್ಷಗಳಿವೆ; ಕೆಲವು ಮರಗಳಂತೂ 61 ಮೀಟರು ಎತ್ತರ ಬೆಳೆದಿವೆ. ಕಾಡಿನಿಂದಾಚೆಗೆ ಸವಾನಾ ಹುಲ್ಲುಗಾವಲು ಪ್ರದೇಶವಿದೆ. ಉತ್ತರ ಭಾಗ ಮರುಭೂಮಿ.

ನೈಜೀರಿಯದಲ್ಲಿ ಉಷ್ಣವಲಯದ ಹವಾಗುಣ. ಉತ್ತರ ಭಾಗದಲ್ಲಿ ದಕ್ಷಿಣ ಭಾಗಕ್ಕಿಂತ ಮಳೆ ಕಡಮೆ. ತೇವ ಮತ್ತು ಒಣ ಹವೆಯ ಕಾಲಗಳೆರಡರ ಅವಧಿಗಳೂ ಒಂದೇ ಸಮ ; ಒಣ ಹವೆಯ ಕಾಲದಲ್ಲಿ ಮರಳು ಹೊತ್ತ ಹರ್‌ಮಟರ್ ಗಾಳಿ ಸಹಾರ ಕಡೆಯಿಂದ ಬೀಸಿಬರುತ್ತದೆ.

ನೈಜೀರಿಯದಲ್ಲಿ ವ್ಯವಸಾಯವೇ ಪ್ರಧಾನ. ಭತ್ತ, ಕೋಕೋ ಯಾಮ್, ತಾಳೆ ಎಣ್ಣೆ ಬೀಜ, ಹತ್ತಿ, ರಬ್ಬರ್ ಮುಂತಾದುವನ್ನು ಬೆಳೆಯುತ್ತಾರೆ. ಕಲ್ಲಿದ್ದಲು ಸಾಕಷ್ಟು ಇಲ್ಲಿ ಸಿಗುತ್ತದೆ. ಚರ್ಮಗಾರಿಕೆ, ಬುಟ್ಟಿ ಮತ್ತು ಹಗ್ಗಗಳನ್ನು ಮಾಡುವುದು ಮುಂತಾದ ಉದ್ಯೋಗಗಳಿವೆ. ಈಚೆಗೆ ಯುರೇನಿಯಂ ದೊರೆತಿದೆ.

ರಾಜಧಾನಿ ಲಾಗೋಸ್ ಮುಖ್ಯ ಬಂದರೂ ಆಗಿದೆ. ಇದರ ಜನಸಂಖ್ಯೆ ಸುಮಾರು ನಾಲ್ಕು ಲಕ್ಷ. ಹಿಂದೆ ಒಂದು ದ್ವೀಪದ ಮೇಲಿದ್ದ ಲಾಗೋಸ್ ಈಗ ಬೆಳೆಯುತ್ತ ದೊಡ್ಡ ನಗರವಾಗಿದೆ. ಸೇತುವೆಗಳು ಮುಖ್ಯ ಭೂಮಿಗೆ ಅದನ್ನು ಜೋಡಿಸಿವೆ. ಇಬದನ್ ಒಳನಾಡಿನಲ್ಲಿರುವ ಮತ್ತೊಂದು ದೊಡ್ಡ ಪಟ್ಟಣ. ಗುಡ್ಡಗಾಡು ಪ್ರದೇಶದಲ್ಲಿದೆ. ಉತ್ತರದಲ್ಲಿರುವ ಕಾನೊ ಹಲವು ಕಾರವಾನ್ ಮಾರ್ಗಗಳು ಸೇರುವ ಸ್ಥಳ.

ನೈಜೀರಿಯದ ಮೂಲನಿವಾಸಿಗಳು ನೀಗ್ರೊಗಳು. ಇವರಲ್ಲಿ ಸುಮಾರು 250 ವಿವಿಧ ಬುಡಕಟ್ಟುಗಳಿಗೆ ಸೇರಿದ ಜನರಿದ್ದಾರೆ. ಅವರ ಸಂಪ್ರದಾಯ ಸಂಸ್ಕೃತಿ ಭಾಷೆ ಎಲ್ಲ ಬೇರೆಯಾಗಿವೆ. ಪ್ರಮುಖ ಬುಡಕಟ್ಟುಗಳೆಂದರೆ ಯೋರುಬಾ, ಇಬೊ ಮತ್ತು ಹೌಸ. ಇವರಲ್ಲಿ ಬಹಳ ಜನ ಇಸ್ಲಾಂ ಮತಾನುಯಾಯಿಗಳು. ನೈಜೀರಿಯದ ಉತ್ತರ ಭಾಗದಲ್ಲಿ ಇಂದಿಗೂ ಹಿಂದಿನ ಕಾಲದ ಅನೇಕ ಪದ್ಧತಿಗಳು ಆಚರಣೆಯಲ್ಲಿವೆ. ಪ್ರತಿ ಬುಡಕಟ್ಟಿನ ಜನರೂ ಪ್ರತ್ಯೇಕ ಸಂಸ್ಥಾನದಲ್ಲಿ ವಾಸಿಸುತ್ತಾರೆ. ಸಂಸ್ಥಾನವನ್ನು ಅಮಿರೇಟ್ ಎಂದೂ ಅದನ್ನು ಆಳುವ ಅಧಿಕಾರಿಯನ್ನು ಅಮಿರ್ ಎಂದೂ ಕರೆಯುತ್ತಾರೆ. ನೃತ್ಯ, ಸಂಗೀತ ಅವರಿಗೆ ಪ್ರಿಯವಾದ ಹವ್ಯಾಸಗಳು.

ನೈಜೀರಿಯದ ಹಿಂದಿನ ಚರಿತ್ರೆ, ಕಥೆ ಸುದೀರ್ಘ ಪದ್ಯಗಳ ರೂಪದಲ್ಲಿ ತಲೆಮಾರಿನಿಂದ ತಲೆಮಾರಿಗೆ ಸಾಗಿಬರುತ್ತಿತ್ತು. ಈಚೆಗೆ ಅದನ್ನು ಬರೆದಿಡುತ್ತಿದ್ದಾರೆ. ಯೋರುಬಾ ಬುಡಕಟ್ಟಿನವರ ಸಂಸ್ಥಾನವಾಗಿದ್ದ ಒಯೊ ಪಶ್ಚಿಮ ಆಫ್ರಿಕದ ಪ್ರಬಲ ರಾಷ್ಟ್ರಗಳಲ್ಲೊಂದಾಗಿತ್ತು. ಹದಿನೆಂಟನೆಯ ಶತಮಾನದ ಹೊತ್ತಿಗೆ ಇವರು ಬಹಳ ಭಾಗವನ್ನು ಆಳುತ್ತಿದ್ದರು. ಹತ್ತೊಂಬತ್ತನೆಯ ಶತಮಾನದ ವೇಳೆಗೆ ಯೋರುಬಾ ಬುಡಕಟ್ಟು ಸತ್ವಹೀನವಾಗತೊಡಗಿತ್ತು. ಗುಲಾಮರ ವ್ಯಾಪಾರ ಮತ್ತು ಅಧಿಕಾರಕ್ಕಾಗಿ ಯೋರುಬಾ ಮುಖಂಡರಲ್ಲಿ ಹೋರಾಟ ಇದಕ್ಕೆ ಕಾರಣ. ಬೆನಿನ್‌ನ ಚಕ್ರಾಧಿಪತ್ಯವೂ ಈ ಕಾರಣಗಳಿಂದಲೇ ಅಂತ್ಯಗೊಂಡಿತು. ಕಲೆಗೆ ಹೆಸರುವಾಸಿಯಾಗಿದ್ದ ಬೆನಿನ್ ಆಳ್ವಿಕೆ, ಪಶ್ಚಿಮದಲ್ಲಿ ಲಾಗೋಸ್ ತನಕವೂ ಹಬ್ಬಿತ್ತು. 1472ರಲ್ಲಿ ನೈಜೀರಿಯಕ್ಕೆ ಮೊದಲು ಬಂದ ಯೂರೊಪಿನವರು ಗುಲಾಮ ವ್ಯಾಪಾರದಿಂದ ಮೊದಲುಮಾಡಿ, ಎಲ್ಲ ಅಧಿಕಾರವನ್ನೂ ಕ್ರಮೇಣ ತಮ್ಮ ಕೈಗೆ ತೆಗೆದುಕೊಂಡರು. 1914ರ ಜನವರಿ 1ರಂದು ನೈಜೀರಿಯ ಒಂದು ರಾಜ್ಯವಾಗಿ ಬ್ರಿಟಿಷ್ ಪಾಲನಾಧಿಕಾರಕ್ಕೆ ಒಳಪಟ್ಟಿತು. ಬುಡಕಟ್ಟಿನ ಮುಖಂಡರ ಮೂಲಕ ಆಳ್ವಿಕೆ ನಡೆಯುತ್ತಿತ್ತು. 1960ರ ಅಕ್ಟೋಬರ್ 1ರಂದು ನೈಜೀರಿಯ ಸ್ವತಂತ್ರ ಸಂಯುಕ್ತ ರಾಜ್ಯವಾಗಿ ಕಾಮನ್‌ವೆಲ್ತ್‌ಗೆ ಸೇರಿತು. 1963ರಲ್ಲಿ ಗಣರಾಜ್ಯವಾಯಿತು. 1966ರಲ್ಲಿ ಸೇನಾಮುಖಂಡರು ಸರಕಾರವನ್ನುರುಳಿಸಿ ಸೈನಿಕ ಆಡಳಿತವನ್ನು ಸ್ಥಾಪಿಸಿದರು.

ಉತ್ತರ, ಪೂರ್ವ, ಪಶ್ಚಿಮ, ಮಧ್ಯ ಪಶ್ಚಿಮ ಪ್ರದೇಶಗಳಿಗೆ ಪ್ರತ್ಯೇಕ ಸರಕಾರವಿದೆ. ಗವರ್ನರ್ ಇಲ್ಲಿ ಮುಖ್ಯಸ್ಥ. ಒಕ್ಕೂಟ ಸರಕಾರ ಲಾಗೋಸ್‌ನಲ್ಲಿದೆ. ಇಬದನ್‌ನಲ್ಲಿ ವಿಶ್ವವಿದ್ಯಾನಿಲಯವಿದೆ. ನೈಜೀರಿಯದ ಒಂದಂಗವಾಗಿದ್ದ ಬಯಾಫ್ರ 1967ರಲ್ಲಿ ಸಿಡಿದು ಸ್ವಾತಂತ್ರ್ಯ ಸಾರಿತು. ಮೂವತ್ತೆರಡು ತಿಂಗಳ ಕಾಲ ಅಂತರ್ಯುದ್ಧ ನಡೆದು ಬಯಾಫ್ರದ ಪಡೆಗಳು ನೈಜೀರಿಯದ ಮುಖಂಡರಿಗೆ 1970ರ ಜನವರಿಯಲ್ಲಿ ಶರಣಾದುವು.

| | | |
|---|---|---|
| ಖಂಡ | : | ಆಫ್ರಿಕ (ಪಶ್ಚಿಮ ಭಾಗ) |
| ಅಕ್ಷಾಂಶ | : | 3° 57′ ಉ ದಿಂದ 13° 54′ ಉ |
| ರೇಖಾಂಶ | : | 2° 39′ ಪೂ ದಿಂದ 14° 38′ ಪೂ |
| ವಿಸ್ತೀರ್ಣ | : | 9,23,773 ಚ. ಕಿ. ಮೀ. |
| ಜನಸಂಖ್ಯೆ | : | ಸುಮಾರು 5,57,00,000 |
| ರಾಜಧಾನಿ | : | ಲಾಗೋಸ್ |
| ಭಾಷೆ | : | ಇಂಗ್ಲಿಷ್, ಬುಡಕಟ್ಟಿನ ಭಾಷೆಗಳು |
| ಸರಕಾರ | : | ಸಂಯುಕ್ತ ಗಣರಾಜ್ಯ |
| ಬಾವುಟ | : | ಹಸಿರು, ಬಿಳಿ, ಹಸಿರು ಬಣ್ಣದ ಉದ್ದನೆಯ ಪಟ್ಟೆಗಳು |

## ನೈಟಿಂಗೇಲ್, ಫ್ಲಾರೆನ್ಸ್

ಮಧ್ಯರಾತ್ರಿ ಸಮಯ. ಎಲ್ಲರೂ ಗಾಢನಿದ್ರೆ ಮಾಡುವ ಕಾಲ. ಆದರೆ ಫ್ಲಾರೆನ್ಸ್ ನೈಟಿಂಗೇಲಿಗೆ ನಿದ್ದೆಯೇ ಇಲ್ಲ. ಅವಳ ಕೈಯಲ್ಲಿ ಒಂದು ದೀಪ. ಸದ್ದುಮಾಡದೆ ಬೇಗ ಬೇಗ ನಡೆಯುತ್ತಿದ್ದಾಳೆ. 'ಆರೋಗ್ಯವಾಗಿದ್ದೀರಾ ?' ಎಂದು ಕೇಳುತ್ತಾಳೆ. ಅವಳ ನುಡಿಯೇ ರೋಗಿಗೆ ಉಪ್ಶೌಷಧ. ಚಾಚಿರುವ ಹಾಸಿಗೆಗಳ ಹತ್ತಿರದಲ್ಲಿ [illegible] ಕಿಲೊಮೀಟರು ದೂರ ಹೀಗೆಯೇ ಸಾಗುತ್ತದೆ.

ನೂರು ವರ್ಷಗಳಿಗೂ ಹಿಂದೆ ತುರ್ಕಿ ದೇಶದ ಸ್ಕುಟಾರಿಯ ಆಸ್ಪತ್ರೆಯಲ್ಲಿ ಕತ್ತಲೆಯಲ್ಲಿ ಹೊತ್ತಿಸಿದ ಆ ದೀಪ ನಂದಾದೀಪವಾಗಿದೆ. ಲೋಕದಾದ್ಯಂತ ದಾದಿಯರು ಆ ದೀಪದ ಬೆಳಕಿನಲ್ಲಿ ದುಡಿಯುತ್ತಿದ್ದಾರೆ.



ತ್ಯಾಗ. ಪ್ರೇಮ, ಸೇವೆಗಳ ಹೊಂಬೆಳಕನ್ನು ಹರಡಿದ ಫ್ಲಾರೆನ್ಸ್ ನೈಟಿಂಗೇಲ್

ಫ್ಲಾರೆನ್ಸ್ ನೈಟಿಂಗೇಲ್ ಲೌಕಿಕ ಸುಖ ಸಂಪತ್ತನ್ನೆಲ್ಲ ತೊರೆದು ತ್ಯಾಗ, ಪ್ರೇಮ, ಸೇವೆಗಳ ಹೊಂಬೆಳಕನ್ನು ಜಗತ್ತಿನ ಮೂಲೆ ಮೂಲೆಗೂ ಹರಡಿದಳು.

ಫ್ಲಾರೆನ್ಸ್ ನೈಟಿಂಗೇಲ್ ಹುಟ್ಟಿದ್ದು 1820ರ ಮೇ 12ರಂದು. ಹುಟ್ಟಿದ ಊರಿನ ಹೆಸರನ್ನು ತಮ್ಮ ಮಕ್ಕಳಿಗೆ ಅವರ ತಂದೆ ತಾಯಿ ಇಡುತ್ತಿದ್ದರು. ಫ್ಲಾರೆನ್ಸ್‌ನಲ್ಲಿ ಹುಟ್ಟಿದ ಈಕೆ 'ಫ್ಲಾರೆನ್ಸ್' ಆದಳು.

ತಂದೆ ವಿಲಿಯಂ ಎಡ್ವರ್ಡ್ ನೈಟಿಂಗೇಲ್ ಇಂಗ್ಲೆಂಡಿನ ಆಗರ್ಭ ಶ್ರೀಮಂತ. ತಾಯಿ ಸಮಾಜದಲ್ಲಿ ಸ್ಥಾನ, ಪದವಿ, ಮರ್ಯಾದೆಗಳನ್ನು ಬಯಸುತ್ತಿದ್ದವಳು. ಆದರೆ ಬಾಲ್ಯದಿಂದಲೂ ಫ್ಲಾರೆನ್ಸ್‌ಗೆ ಇವು ಬೇಡವಾಗಿದ್ದುವು. ಆಕೆಗೆ ಒಂದೇ ಒಂದು ವಿಷಯದಲ್ಲಿ ಆಸಕ್ತಿ. ಅದು ಶುಶ್ರೂಷೆ. ಒಂದು ಸಲ ಕುರುಬನೊಬ್ಬನ ನಾಯಿ ಕಾಲುಮುರಿದುಕೊಂಡು ಕುಂಟಾದಾಗ ಅದನ್ನು ಆಕೆ ತಂದಿಟ್ಟುಕೊಂಡು ಆರೈಕೆ ಮಾಡಿದಳಂತೆ.

ಫ್ಲಾರೆನ್ಸ್ ನೈಟಿಂಗೇಲ್ ಬಾಳಿದ್ದು ಇಂಗ್ಲೆಂಡಿನ ವಿಕ್ಟೋರಿಯಾ ಯುಗದಲ್ಲಿ. ಸಂಪ್ರದಾಯಬದ್ಧತೆಯೇ ಆಗಿನ ಜೀವನ ವಿಧಾನ. ಮದುವೆ, ಮನೆ, ಸಂಸಾರ ಪ್ರಧಾನವಾಗಿದ್ದು ಉಳಿದ ವಿಷಯಗಳು ಹೆಂಗಸನ್ನು ಹೆಚ್ಚಾಗಿ ಆಕರ್ಷಿಸದೆ ಇದ್ದ ಕಾಲ. ಆದರೆ ಫ್ಲಾರೆನ್ಸಳಿಗೆ ಇದಕ್ಕಿಂತ ವಿಶಾಲವಾದ ಸೇವಾಜೀವನ ಬೇಕಾಗಿತ್ತು. ಮನಸ್ಸಿಗೆ ನೆಮ್ಮದಿ ಇರಲಿಲ್ಲ. ಸಾರ್ಥಕವಾಗಿ ಬದುಕಬೇಕೆಂಬ ಹಂಬಲ. ಫ್ಲಾರೆನ್ಸಳಿಗೆ ಹದಿನೇಳು ವರ್ಷವಾಗಿದ್ದಾಗ ದೇವವಾಣಿ ಕೇಳಿಸಿದಂತಾಯಿತು. ಸೇವೆಗೆ ಅವಳ ಜೀವನ ಮುಡಿಪು ಎಂದಂತೆ ಭಾಸವಾಯಿತು. ಆದರೆ ಯಾವ ಬಗೆಯ ಸೇವೆ ಎಂಬುದು ಸ್ಪಷ್ಟವಾಗಿರಲಿಲ್ಲ. 1844ರ ಹೊತ್ತಿಗೆ 24 ವರ್ಷವಾಗಿದ್ದ ಫ್ಲಾರೆನ್ಸಳಿಗೆ. ತನ್ನ ಸೇವಾಪಥದ ಬಗೆಗೆ ಸ್ಪಷ್ಟ ಕಲ್ಪನೆ ಮೂಡಿತು. ರೋಗಿಗಳ ಸೇವೆಗೆ ಮೀಸಲಾದ ದಾದಿಯ ಜೀವನ ತನ್ನದೆಂದು ನಿರ್ಧರಿಸಿದಳು. ಸೇವೆಗೆ ತನ್ನ ಜೀವನವನ್ನು ಮುಡುಪಿಟ್ಟು. ಹೆಂಗಸರ ಸಂಘವನ್ನು ಪ್ರಾರಂಭಿಸಬೇಕು. ದಾದಿಯ ಕೆಲಸದಲ್ಲಿ ಶಿಕ್ಷಣ ಪಡೆಯಬೇಕು—ಎಂದು ನಿರ್ಧರಿಸಿದಳು.

ಫ್ಲಾರೆನ್ಸಳ ಮನೆಯವರು ಈ ನಿರ್ಧಾರವನ್ನು ತೀವ್ರವಾಗಿ ವಿರೋಧಿಸಿದರು. ಶ್ರೀಮಂತ ಸುಸಂಸ್ಕೃತ ಕುಟುಂಬವೊಂದರ ಮಹಿಳೆ ದಾದಿಯಾಗುವುದೆ ? ದಾದಿಯರ ವೃತ್ತಿ ಹೀನವಾದದ್ದು ಎಂಬ ತಿರಸ್ಕಾರ ಭಾವನೆ ಅವರಿಗೆ. ದಾದಿಯರೂ ಕೂಡ ಸರಿಯಾದ ತಿಳಿವಳಿಕೆಯಿಲ್ಲದೆ, ರೀತಿ ನೀತಿಗಳಿಲ್ಲದೆ ಇರುತ್ತಿದ್ದರು. ದಾದಿಯಾಗುತ್ತೇನೆಂದು ಫ್ಲಾರೆನ್ಸ್ ನಿರ್ಧರಿಸಿದ್ದು ಇಂಥ ಕಾಲದಲ್ಲಿ. ಕೊನೆಗೆ (1851ರಲ್ಲಿ) ತಂದೆ ತಾಯಿ ಒಪ್ಪಬೇಕಾಯಿತು. ಫ್ಲಾರೆನ್ಸ್ ಜರ್ಮನಿಯ ಕೈಸರ್‌ವರ್ತ್ ಶಾಲೆಯಲ್ಲಿ ದಾದಿಯರ ಶಿಕ್ಷಣ ಪಡೆದು 1853ರಲ್ಲಿ ಕೆಲಸಕ್ಕೆ ಸೇರಿದಳು.

1854ರಲ್ಲಿ ಇಂಗ್ಲೆಂಡ್-ರಷ್ಯಗಳಿಗೆ ಕ್ರಿಮಿಯ ಎಂಬಲ್ಲಿ ಭೀಕರ ಯುದ್ಧ ಪ್ರಾರಂಭವಾಯಿತು. ಯುದ್ಧರಂಗದಲ್ಲಿ ಮಡಿದವರ ಸಂಖ್ಯೆಗಿಂತ ಶುಶ್ರೂಷೆ ಸರಿಯಾಗದೆ ಆಸ್ಪತ್ರೆಯಲ್ಲಿ ಪ್ರಾಣನೀಗಿದವರ ಸಂಖ್ಯೆಯೇ ಇಂಗ್ಲಿಷರ ಕಡೆ ಹೆಚ್ಚಾಯಿತು. ಆಸ್ಪತ್ರೆಗಳು ನರಕದಂತಿದ್ದುವು. ಗಾಯಗೊಂಡ ಸೈನಿಕ ಆಸ್ಪತ್ರೆಯಲ್ಲಿ ಅಂಟಿಕೊಂಡ ಜಾಡ್ಯದಿಂದಾಗಿ ಮಡಿಯುತ್ತಿದ್ದ. ಸತ್ತವರ ಹೆಣಗಳನ್ನು ನೀರಿಗೆಸೆಯುತ್ತಿದ್ದರು. ಅವರೇ ಪುಣ್ಯವಂತರೆಂದು ಬದುಕಿದ್ದ ರೋಗಿಗಳು ನಿಟ್ಟುಸಿರು ಬಿಡುತ್ತಿದ್ದರು.

ಫ್ಲಾರೆನ್ಸಳ ಯಶಸ್ಸು, ಕೀರ್ತಿ, ಅವಳ ಅಚ್ಚುಕಟ್ಟಿನ ಕೆಲಸ ಬ್ರಿಟಿಷ್ ಮಂತ್ರಿ ಮಂಡಲದಲ್ಲಿ ಯುದ್ಧ ಮಂತ್ರಿಯಾಗಿದ್ದ ಸಿಡ್ನಿ ಹರ್ಬರ್ಟ್‌ಗೆ ತಿಳಿಯಿತು. ತನ್ನ ದಾದಿಯರ ಬಳಗವನ್ನು ಕರೆದುಕೊಂಡು ಕ್ರಿಮಿಯದ ಯುದ್ಧರಂಗದಲ್ಲಿ ಸೈನಿಕರ ಶುಶ್ರೂಷೆಗಾಗಿ ಹೋಗಬೇಕೆಂದು ಫ್ಲಾರೆನ್ಸಳನ್ನು ಆತ ಕೇಳಿದ.

1854ರ ಅಕ್ಟೋಬರ್ ತಿಂಗಳಲ್ಲಿ ಫ್ಲಾರೆನ್ಸ್ ಮೂವತ್ತೆಂಟು ಜನ ದಾದಿಯರ ತಂಡದೊಡನೆ ಕ್ರಿಮಿಯಕ್ಕೆ ಹೊರಟಳು. ಯುದ್ಧರಂಗದಲ್ಲಿ ದಾದಿಯ ಕೆಲಸಮಾಡಲು ಹೊರಟ ಮಹಿಳೆಯರಲ್ಲಿ ಫ್ಲಾರೆನ್ಸ್ ನೈಟಿಂಗೇಲ್ ಮೊದಲಿಗಳು. ಆಂಗ್ಲ ಜನ ಬೆರಗಾದರು. ಅನೇಕರು ವಿರೋಧಿಸಿದರು.

ಒಂದು ತಿಂಗಳೊಳಗಾಗಿ ಫ್ಲಾರೆನ್ಸ್ ಐದು ಸಾವಿರ ಗಾಯಗೊಂಡ ಸೈನಿಕರ ಶುಶ್ರೂಷೆಯನ್ನು ಕೈಗೊಳ್ಳಬೇಕಾಯಿತು. ಮೊದಮೊದಲು ಫ್ಲಾರೆನ್ಸ್‌ಗೆ ಅಲ್ಲಿನ ವೈದ್ಯರಿಂದ ಯಾವ ಸಹಾಯವೂ ಸಿಗಲಿಲ್ಲ. ಅವರೆಲ್ಲರ ದ್ವೇಷಕ್ಕೆ ಪಾತ್ರಳಾಗಬೇಕಾಯಿತು. ಹೆಂಗಸಿನ ಮಾತಿಗೆ ನಡೆದುಕೊಳ್ಳುವುದು ಅವಮಾನ ಎಂದು ಅಲ್ಲಿನ ಸೈನ್ಯಾಧಿಕಾರಿಗಳಿಗೆ ತೋರಿತು.

ಆಸ್ಪತ್ರೆಗಳನ್ನು ವ್ಯವಸ್ಥಿತಗೊಳಿಸುವುದಂತೂ ದುಸ್ಸಾಧ್ಯವಾಗಿತ್ತು. ಅಂಥ ಪರಿಸ್ಥಿತಿಯಲ್ಲಿ ದಾದಿಯರಿಗೆ ಹುರುಪು ನೀಡುವುದು ಕಷ್ಟವೇ. ಆದರೆ ಫ್ಲಾರೆನ್ಸ್ ಧೈರ್ಯಗೆಡಲಿಲ್ಲ. ಸೈನಿಕರ ಶುಶ್ರೂಷೆಯನ್ನು ವ್ಯವಸ್ಥೆಗೊಳಿಸಿದಳು. ಸೈನಿಕ ಆಸ್ಪತ್ರೆಗಳಲ್ಲಿ ಸ್ವಚ್ಛತೆ ತಂದಳು. ಅವಳ ಮೇಲಧಿಕಾರಿಗಳು ಫ್ಲಾರೆನ್ಸ್‌ಗೆ ಹಣ ದೊರೆಯದಂತೆ ಮಾಡಿದರು. ಅವಳು ಇಂಗ್ಲೆಂಡಿನಲ್ಲಿನ ತನ್ನ ಸ್ನೇಹಿತರಿಗೆ ಕಾಗದ ಬರೆದು 7.000 ಪೌಂಡ್ ಕೂಡಿಸಿ ಸಾಮಾನುಗಳನ್ನು ಕೊಂಡಳು.

ರೋಗಿಗಳನ್ನು ಬಹಳ ಅನುಕಂಪದಿಂದ ಮಕ್ಕಳಂತೆ ನೋಡಿಕೊಳ್ಳುತ್ತಿದ್ದ ಫ್ಲಾರೆನ್ಸ್ ನೈಟಿಂಗೇಲ್, ಅಗತ್ಯಬಿದ್ದಾಗ ಬಂಡೆಯಂತೆ ದೃಢವಾಗಿ ನಿಲ್ಲಬಲ್ಲವಳಾಗಿದ್ದಳು. ಕೆಲಸದಲ್ಲಿ ಅವಳ ಶ್ರಮವರಿಯದ ಆಸಕ್ತಿ, ಓರೆ, ಸಾಮರ್ಥ್ಯ ಅಸಾಧಾರಣ.

ಸೈನಿಕರ ಪಾಲಿಗೆ ಫ್ಲಾರೆನ್ಸ್ ನೈಟಿಂಗೇಲ್ ಆರಾಧ್ಯದೇವತೆ. ಧ್ವನಿಯನ್ನು ಏರಿಸದೆ ಕೆಲವೇ ಮಾತುಗಳನ್ನಾಡಿ ತನ್ನ ಅಪ್ಪಣೆಯನ್ನು ಪರಿಪಾಲಿಸುವಂತೆ ಮಾಡುವ ವ್ಯಕ್ತಿತ್ವ ಅವಳದು.

ಫ್ಲಾರೆನ್ಸ್ ತನ್ನ ಸಹಾನುಭೂತಿಯಿಂದ, ಅನುಕಂಪದಿಂದ, ದಯೆಯಿಂದ, ಶಿಸ್ತಿನಿಂದ ದಾದಿವೃತ್ತಿಗೆ ಘನತೆ, ಗೌರವಗಳನ್ನು ತಂದುಕೊಟ್ಟಳು. ವೃದ್ಧಾಪ್ಯದಲ್ಲಿ ಅವಳು ಹೊರಕ್ಕೆ ಹೊರಟಾಗ ಜನ ಅವಳ ಕಾಲನ್ನೋ ಕೈಚೀಲವನ್ನೋ ಮುಟ್ಟಿದರೆ ಸಾಕೆಂದು ನುಗ್ಗುತ್ತಿದ್ದರು.

ಕ್ರಿಮಿಯದಲ್ಲಿ ಕೆಲಸಮಾಡಿದ್ದರ ಫಲವಾಗಿ ಫ್ಲಾರೆನ್ಸ್ ನೈಟಿಂಗೇಲಳ ಆರೋಗ್ಯ ಕೆಟ್ಟಿತು. ಆದರೂ ಕೆಲಸ ಮುಂದುವರಿಸಿದಳು.

ಅವಳ ಅನಾದೃಶ ಸೇವೆಗಾಗಿ ಬ್ರಿಟಿಷ್ ಸರಕಾರ 1907ರಲ್ಲಿ ಅತ್ಯುನ್ನತ ಪ್ರಶಸ್ತಿಯಾದ 'ಆರ್ಡರ್ ಆಫ್ ಮೆರಿಟ್' ಕೊಟ್ಟು ಗೌರವಿಸಿತು. ಅಭಿಮಾನಿಗಳು ಅವಳಿಗೆ 1,50,000 ಪೌಂಡು ನೀಡಿ ಸತ್ಕರಿಸಿದರು. ಅವಳು ಆ ಹಣವನ್ನು ದಾದಿಗಳ ಸಲುವಾಗಿ ನೈಟಿಂಗೇಲ್ ಸಂಸ್ಥೆಯನ್ನು ಸ್ಥಾಪಿಸಲು ದಾನಕೊಟ್ಟಳು.

ದಾದಿವೃತ್ತಿ, ರೋಗಿಗಳ ಶುಶ್ರೂಷೆ ಈ ವಿಷಯಗಳ ಮೇಲೆ ಅನೇಕ ಉಪಯುಕ್ತ ಪುಸ್ತಕಗಳನ್ನು ಫ್ಲಾರೆನ್ಸ್ ಬರೆದಿದ್ದಾಳೆ.

ಫ್ಲಾರೆನ್ಸ್ ಎಂದೂ ಪದವಿಯನ್ನಾಗಲಿ, ಗೌರವವನ್ನಾಗಲಿ, ಪ್ರಶಸ್ತಿಗಳನ್ನಾಗಲಿ ಬಯಸಿದವಳಲ್ಲ. ಅವಳು ಸರಳಜೀವಿ. 1910 ಆಗಸ್ಟ್ 10 ರಂದು ಅವಳು ಕಾಲವಾದಾಗ ಆರು ಮಂದಿ ಸೈನ್ಯಾಧಿಕಾರಿಗಳು ಶವವನ್ನು ಸಮಾಧಿ ಭೂಮಿಗೆ ಹೊತ್ತರು. ಇಂಗ್ಲಿಷ್ ಸೈನ್ಯ ಈ ರೀತಿ ತನ್ನ ಕೃತಜ್ಞತೆಯನ್ನು ತೋರಿಸಿತು.

## ನೈಸರ್ಗಿಕ ಸಂಪನ್ಮೂಲ

ಕಾವೇರಿ ದಡದಲ್ಲಿ, ಗಂಗಾನದಿ ತೀರದಲ್ಲಿ ಸುಲಭವಾಗಿ ಬಂಗಾರದಂಥ ಬೆಳೆ ಬೆಳೆಯುತ್ತಾರೆ. ಮರಳು ತುಂಬಿದ ಭೂಮಿ ಕುವೈತ್‌ಗೆ ಸಮೃದ್ಧ ತೈಲವನ್ನು ಒದಗಿಸಿದೆ. ಮೈಸೂರಿನ ಕಾಡಿನಲ್ಲಿ ಗಂಧದ ಮರ, ಆಫ್ರಿಕದ ಕಿಂಬರ್ಲಿಯಲ್ಲಿ ವಜ್ರದ ಗಣಿ. ಇವುಗಳಲ್ಲಿ ಒಂದೊಂದೂ ಒಂದೊಂದು ಬಗೆಯ ಆಸ್ತಿ. ನಿಸರ್ಗದ ಕೃಪೆಯಿಂದ ಮನುಷ್ಯ ಪಡೆದ ಸಂಪತ್ತು.

ಬೀಸುವ ಗಾಳಿ. ಬೀಳುವ ಮಳೆ. ಹರಿಯುವ ನದಿ. ಭೂಮಿಯಲ್ಲಿ ಅಡಗಿರುವ ಲೋಹ ಮತ್ತು ತೈಲ, ದಟ್ಟವಾದ ಮರಗಿಡಬಳ್ಳಿ ಮತ್ತು ಅವುಗಳ ಮರೆಯಲ್ಲಿರುವ ಮೃಗಪಕ್ಷಿಗಳು ಇವೆಲ್ಲವೂ ಮನುಷ್ಯನಿಗೆ ಪ್ರಕೃತಿ ಕರುಣಿಸಿದ ವರ. ಇವುಗಳನ್ನು ಸಮರ್ಥವಾಗಿ ಬಳಸಿಕೊಂಡಷ್ಟೂ ಅವನ ಜೀವನ ಸಮೃದ್ಧವಾಗುತ್ತದೆ. ಅರಣ್ಯ ಮೊದಲಾದ ವನ್ಯಸಂಪತ್ತುಗಳನ್ನು ಉಪಯೋಗಿಸಿಕೊಂಡಮೇಲೆ ಅವನ್ನು ಪುನಃ ಬೆಳೆಸಬೇಕು. ಹಣ್ಣು ಗೆಡ್ಡೆಗಳನ್ನು ಆರಿಸಿ, ಮೃಗ ಪಕ್ಷಿಗಳನ್ನು ಕೊಂದು ತನ್ನ ಆಹಾರವನ್ನು ಸಂಪಾದಿಸುತ್ತಿದ್ದ ಪ್ರಾಚೀನ ಮಾನವ ಗವಿಗಳಲ್ಲಿ ವಾಸಿಸುತ್ತಿದ್ದ; ಪ್ರಾಣಿಯ ಚರ್ಮಗಳನ್ನು ಹೊದೆಯುತ್ತಿದ್ದ. ನಿಸರ್ಗದಲ್ಲಿ ನೇರವಾಗಿ ಸಿಗುತ್ತಿದ್ದ ವಸ್ತುಗಳನ್ನಷ್ಟೇ ಆತ ಬಳಸುತ್ತಿದ್ದುದು. ಆತನ ಬುದ್ಧಿಶಕ್ತಿ ಬೆಳೆದಂತೆ ನಿಸರ್ಗದಲ್ಲಿ ಸಿಗುವ ವಸ್ತುಗಳನ್ನು ಶೋಧಿಸಿ ಹೆಚ್ಚು ಹೆಚ್ಚಾಗಿ ಬಳಸಲು ಆರಂಭಿಸಿದ. ಸುತ್ತಲಿನ ಭೌತಿಕ ಸಂಪತ್ತನ್ನು ಮನುಷ್ಯ ಬೆಳೆಸಿಕೊಂಡ. ಅದಕ್ಕೆ ಕಾರಣವಾದ ಗಾಳಿ, ಬೆಳಕು, ನೀರು, ಭೂಮಿ. ಲೋಹ. ತೈಲ, ಅರಣ್ಯ ಮತ್ತು ವನ್ಯಮೃಗಗಳು ಇವು ನೈಸರ್ಗಿಕ ಸಂಪನ್ಮೂಲಗಳು.

ಗಾಳಿಯಲ್ಲಿ ವಿಪುಲವಾಗಿ ಲಭ್ಯವಾಗುವ ಆಮ್ಲಜನಕವಿಲ್ಲದೆ ಪ್ರಾಣಿಜೀವಿಗಳು ಬದುಕಲಾರವು. ತಮ್ಮ ಜೀವಿತಕಾಲದಲ್ಲಿ ಪ್ರಾಣಿಗಳು. ಮಾನವರು ಬಿಟ್ಟುಕೊಡುವ ಇಂಗಾಲವಿಲ್ಲದೆ, ಸಸಾರಜನಕವಿಲ್ಲದೆ ಸಸ್ಯಗಳು ಉಳಿಯಲಾರವು. ಪ್ರಾಣಿಜೀವಿಗಳು ಹೊರಬಿಟ್ಟ ಇಂಗಾಲದ ಡೈ ಆಕ್ಸೈಡನ್ನು ಸಸ್ಯಗಳು ಬಳಸುತ್ತವೆ. ಸಕ್ಕರೆ ಮತ್ತು ಪಿಷ್ಟಗಳನ್ನು ತಯಾರಿಸುವ ಕ್ರಿಯೆಗೆ ಬೆಳಕು ನೆರವಾಗುತ್ತದೆ. ಪ್ರಾಣಿ ಮತ್ತು ಸಸ್ಯಗಳಿಗೆ ಶಾಖವನ್ನು ಒದಗಿಸುವುದು, ಬೆಳಕಿನ ಮೂಲವಾದ ಸೂರ್ಯರಶ್ಮಿ.

ಭೂಮಿ ಎಲ್ಲ ಬಗೆಯ ಜೀವಿಗಳ ನೆಲೆ. ಭೂಮಿಯಲ್ಲಿ ಸಸ್ಯಗಳು ಬೆಳೆಯುತ್ತವೆ. ಸಸ್ಯಗಳ ಮತ್ತು ಪ್ರಾಣಿಗಳ ಆಹಾರ ದೊರೆಯುವುದು ಭೂಮಿಯಲ್ಲಿಯೇ. ಸಸ್ಯ ಮತ್ತು ಪ್ರಾಣಿಗಳು ಜೀವ ಕಳೆದುಕೊಂಡನಂತರ ಮತ್ತೆ ಮಣ್ಣಿನಲ್ಲಿ ಹುದುಗುತ್ತವೆ.

ಭೂಪ್ರದೇಶಗಳ ಮೇಲೆ ಸುರಿಯುವ ಮಳೆ ಭೂಮಿಯಲ್ಲಿ ಬೆಳೆ ತೆಗೆಯಲು ಮೂಲ ಸಾಧನ. ಝರಿ, ತೊರೆಗಳು ಕೂಡಿ ನದಿಗಳಾಗಿ ಹರಿಯುವಾಗ ನೀರು ವ್ಯವಸಾಯದ ಸಾಗುವಳಿಗೆ ಒದಗಿಬರುತ್ತದೆ, ಸರಕುಗಳ ಸಾಗಾಟಕ್ಕೆ ಅನುಕೂಲವಾಗುತ್ತದೆ. ಜಲಪಾತವಾಗಿ ಜಿಗಿದಾಗ ವಿದ್ಯುಚ್ಛಕ್ತಿಯ ಉತ್ಪಾದನೆಗೆ ನೆರವಾಗುತ್ತದೆ. ಸಮುದ್ರಗಳು ಮೀನು ಮತ್ತು ಲವಣ ಮುಂತಾದವುಗಳ ನಿಧಿಗಳು, ಅಲ್ಲದೆ ಜಲಮಾರ್ಗಗಳು ಭೂಪ್ರದೇಶಗಳ ನಡುವೆ ಸಂಪರ್ಕ ಕಲ್ಪಿಸುತ್ತವೆ.

ಅರಣ್ಯಗಳು ಬೆಲೆಬಾಳುವ ಮರಮಟ್ಟುಗಳನ್ನು ಒದಗಿಸುವುದು ಮಾತ್ರವಲ್ಲದೆ ಹವಾಮಾನ ಮತ್ತು ಮಳೆಗಳನ್ನು ನಿಯಂತ್ರಿಸುತ್ತವೆ. ಫಲವತ್ತಾದ ಮೇಲುಮಣ್ಣಿನ ಸವೆತವನ್ನೂ ಪ್ರವಾಹಗಳನ್ನೂ ತಡೆಗಟ್ಟುತ್ತವೆ. ಸೌದೆ. ರಬ್ಬರ್, ಬಿದಿರು ಇವು ಅರಣ್ಯಗಳಿಂದ ನೇರವಾಗಿ ಬರುತ್ತವೆ. ವನ್ಯಮೃಗಗಳಿಗೆ ಅರಣ್ಯ ರಕ್ಷಣೆ ನೀಡುತ್ತದೆ.

ಪಾತ್ರೆಗಳು, ಯಂತ್ರಗಳು, ವಾಹನಗಳು ಎಲ್ಲಕ್ಕೂ ಲೋಹಗಳು ಬೇಕು. ಚಿನ್ನ, ಬೆಳ್ಳಿ, ತಾಮ್ರ, ಮ್ಯಾಂಗನೀಸ್, ಸತು ಮುಂತಾದುವು ಅದಿರುಗಳ ರೂಪದಲ್ಲಿ ಭೂಮಿಯಲ್ಲಿ ಸಿಗುತ್ತವೆ. ಚಿನ್ನ, ಬೆಳ್ಳಿ ಮುಂತಾದ ಅದಿರುಗಳು ಭೂಗರ್ಭದಲ್ಲಿ ಒಂದೆಡೆ ಸಂಗ್ರಹವಾಗಿ ಹುದುಗಿರುವುದರಿಂದ ಸುರಂಗಗಳನ್ನು ಕೊರೆದು ಅದಿರನ್ನು ಹೊರತೆಗೆಯಬೇಕು. ಅಂಥ ಸುರಂಗಗಳ ಜಾಲ ಗಣಿ. ಬಾಕ್ಸೈಟ್, ತಾಮ್ರ ಮುಂತಾದ ಲೋಹ ಅದಿರುಗಳು ಮೇಲ್ಮೈಗೆ ಸಮೀಪದಲ್ಲಿ ವಿಶಾಲವಾಗಿ ಹರಡಿಕೊಂಡಿರುತ್ತವೆ. ಗಣಿಗಳನ್ನು ತೋಡಿ ಅದಿರನ್ನು ಶೇಖರಿಸಬೇಕು. ಲೋಹಗಳು ಮಾತ್ರವಲ್ಲದೆ ಕಲ್ಲಿದ್ದಲು, ಗಂಧಕ ಮುಂತಾದುವೂ ಭೂಮಿಯಲ್ಲಿ ಸಿಗುತ್ತವೆ

ವನ್ಯಮೃಗಗಳು ಮನುಷ್ಯನ ವಿನೋದ ವಿಹಾರಗಳಿಗೆ ಮತ್ತು ಆಹಾರಕ್ಕೆ ಒದಗಿಬರುತ್ತವೆ. ಪ್ರಾಣಿಗಳ ಚರ್ಮ ಬೆಚ್ಚನೆಯ ಉಡುಪು ಆಗುತ್ತದೆ. ಆನೆಯ ದಂತ. ಕಾಡ್‌ಮೀನಿನ ಎಣ್ಣೆ–ಹೀಗೆ ಹಲವು ಪ್ರಾಣಿಗಳ ಹಲವು ಭಾಗಗಳನ್ನೂ ಮನುಷ್ಯ ಬಳಸುತ್ತಾನೆ.

ನೈಸರ್ಗಿಕ ಸಂಪನ್ಮೂಲಗಳಲ್ಲಿ ಎರಡು ವಿಧ: ಕೆಲವು ಅವಿನಾಶಿ; ಮತ್ತೆ ಹಲವು ಕ್ರಮೇಣ ನಶಿಸಿಹೋಗುತ್ತವೆ. 1. ನೀರು ಸತತವಾಗಿ ಹರಿಯುತ್ತಿರುತ್ತದೆ. ದಿಮ್ಮಿಗಳನ್ನೂ ನಾವೆಗಳನ್ನೂ ಹಾಯಿಸುವುದ ರಿಂದ ನೀರಿನ ಶಕ್ತಿ ಕುಂಠಿತವಾಗುವುದಿಲ್ಲ. ಜಲಪಾತಗಳಿಂದ ವಿದ್ಯುಚ್ಛಕ್ತಿ ಯನ್ನು ನಿರಂತರವಾಗಿ ಒದಗಿಸಲು ಸಾಧ್ಯ. ಅರಣ್ಯಗಳನ್ನು ಕ್ರಮಬದ್ಧ ವಾಗಿ ಕಡಿಯುತ್ತ ಮರಗಿಡಗಳನ್ನು ಮತ್ತೆ ನೆಟ್ಟು ಪೋಷಿಸುತ್ತ ಹೋದಲ್ಲಿ ಅರಣ್ಯವೂ ಸತತವಾಗಿ ಮನುಷ್ಯನ ಅಭಿವೃದ್ಧಿಗೆ ನೆರವಾಗುತ್ತದೆ. 2. ಕಲ್ಲಿದ್ದಲು, ತೈಲ ಮುಂತಾದ ಇಂಧನಗಳು ಹೆಚ್ಚು ಹೆಚ್ಚು ಬಳಸಿದಂತೆ ಕಡಮೆಯಾಗುತ್ತವೆ. ಕ್ರಮೇಣ ಅವುಗಳ ಸಂಗ್ರಹವೇ ಮುಗಿದುಹೋಗು ತ್ತದೆ. ಲೋಹಗಳ ಅದಿರು ಹೊರತೆಗೆದಂತೆ ಸಂಗ್ರಹ ಕಡಮೆ ಯಾದರೂ ಲೋಹಗಳು ಬೇರೆ ಬೇರೆ ಅವಸ್ಥೆಗಳನ್ನು ತಾಳಿ ಭೂಮಿಯ ಮೇಲೆ ಅನೇಕ ರೂಪಗಳಲ್ಲಿ ಸಾಕಷ್ಟು ಕಾಲ ಇರುತ್ತವೆ. ಇಂಧನಗಳಷ್ಟು ಶೀಘ್ರವಾಗಿ ಅವು ಕರಗಿಹೋಗುವುದಿಲ್ಲ.

ಪ್ರತಿಯೊಂದು ದೇಶದಲ್ಲೂ ಎಲ್ಲ ಬಗೆಯ ಸಂಪನ್ಮೂಲಗಳು ಶೇಖರ ವಾಗಿಲ್ಲ. ನೈಸರ್ಗಿಕ ಸಂಪನ್ಮೂಲಗಳು ಬೇಕಾದಷ್ಟು ಲಭ್ಯವಾಗಿದ್ದು, ಅವನ್ನು ಬಳಸಿಕೊಳ್ಳುವ ಸಾಮರ್ಥ್ಯ ಇರುವ ದೇಶಗಳು ಶೀಘ್ರವಾಗಿ ಶ್ರೀಮಂತ ದೇಶಗಳಾಗುತ್ತವೆ.

ಅಣೆಕಟ್ಟುಗಳನ್ನು ಹಾಕಲು, ಗಣಿಗಳನ್ನು ತೋಡಲು, ತೈಲದ ಬಾವಿ ಗಳನ್ನು ತೆಗೆಯಲು, ಅರಣ್ಯಗಳನ್ನು ಸಂರಕ್ಷಿಸಲು ವಿಜ್ಞಾನದ ನೆರವು ಬೇಕು. ಮುಂದುವರಿದ ರಾಷ್ಟ್ರಗಳು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಿಗೆ ನೈಸರ್ಗಿಕ ಸಂಪನ್ಮೂಲಗಳನ್ನು ಬಳಸಿಕೊಳ್ಳುವುದರಲ್ಲಿ ನೆರವಾಗುತ್ತವೆ. ತಾನು ಬಳಸಿ ಉಳಿದ ತೈಲ, ಅದಿರು, ಮರ ಮುಂತಾದ ಸಂಪನ್ಮೂಲಗಳನ್ನು ಪ್ರತಿಯೊಂದು ದೇಶವೂ ರಫ್ತು ಮಾಡುತ್ತದೆ. ತನಗೆ ಅಗತ್ಯವಾದ ಸಂಪನ್ಮೂಲಗಳನ್ನು ಇತರ ದೇಶಗಳಿಂದ ತರಿಸಿಕೊಳ್ಳುತ್ತದೆ.

ನೈಸರ್ಗಿಕ ಸಂಪತ್ತನ್ನು ಸಂಸ್ಕರಿಸಿದಾಗ ಕಚ್ಚಾ ಪದಾರ್ಥಗಳು ಲಭಿಸುತ್ತವೆ. ಸಂಸ್ಕರಿಸಿದ ಎಣ್ಣೆ, ಅದಿರಿನಿಂದ ಬೇರ್ಪಡಿಸಿ ಶುದ್ಧಿಗೊಳಿಸಿದ ಲೋಹ, ರಬ್ಬರ್ ಗಿಡಗಳ ಹಾಲಿನಿಂದ ತಯಾರಿಸಿದ ರಬ್ಬರ್ ತೊಗಟೆಗಳನ್ನು ತೆಗೆದು ಕತ್ತರಿಸಿದ ಮರ ಇವೆಲ್ಲವೂ ಬೇರೆ ಬೇರೆ ರೂಪಗಳನ್ನು ತಾಳುತ್ತವೆ. ಉದ್ಯಮ ಗಳಿಗೆ ಮೂಲಸಾಮಗ್ರಿ ಕಚ್ಚಾ ಪದಾರ್ಥಗಳ ರೂಪದಲ್ಲಿ ದೊರೆಯುತ್ತವೆ.

ನೈಸರ್ಗಿಕ ಸಂಪನ್ಮೂಲಗಳನ್ನು ಜಾಣತನದಿಂದ ಬಳಸಿಕೊಳ್ಳುವ ರೀತಿ ಆ ದೇಶದ ಅಭಿವೃದ್ಧಿಯನ್ನು ಸೂಚಿಸುತ್ತದೆ. ಇಂಥ ಬಳಕೆಯಿಂದ ದೇಶ ಸಂಪದ್ಭರಿತವಾಗುತ್ತದೆ.

[illegible]

## ನೊಬೆಲ್ ಬಹುಮಾನ

ನೊಬೆಲ್ ಬಹುಮಾನ ದೊರೆಯಿತೆಂದರೆ, ಬಹುಮಾನ ಪಡೆದವರಿಗೆ ಮಾತ್ರವಲ್ಲ, ಅವರ ರಾಷ್ಟ್ರಕ್ಕೇ ಗೌರವ.

1913ರಲ್ಲಿ ಬಂಗಾಳದ ರವೀಂದ್ರನಾಥ ಠಾಕೂರರು ನೊಬೆಲ್ ಬಹು ಮಾನ ಪಡೆದರು.

1930ರಲ್ಲಿ ಮೈಸೂರಿನವರಾದ ಚಂದ್ರಶೇಖರ ವೆಂಕಟ ರಾಮನ್‌ರಿಗೆ ದೊರೆಯಿತು.

ಅಮೆರಿಕದಲ್ಲಿ ನೆಲೆಸಿರುವ ಭಾರತೀಯ ವಿಜ್ಞಾನಿ ಹರಗೋವಿಂದ ಖೊರಾನ 1968ರಲ್ಲಿ ಅದನ್ನು ಪಡೆದರು.

ನೆನೆಸಿಕೊಂಡರೆ ನಮಗೆಷ್ಟು ಹೆಮ್ಮೆ ! ಈ ಪಾರಿತೋಷಕಗಳಿಂದ ಅವರು ವಿಶ್ವಮಾನ್ಯರಾದರು. ತಮ್ಮ ದೇಶದ ಘನತೆಯನ್ನು ಹೆಚ್ಚಿಸಿದರು.

ಒಂದು ಚಿನ್ನದ ಪದಕ, ಒಂದು ಸನ್ಮಾನ ಪತ್ರ, 2,25,000 ರೂಪಾಯಿ ಗಳಿಂದ 3,65,000 ರೂಪಾಯಿ ವರೆಗೆ ನಗದು ಹಣ, ಇವು ನೊಬೆಲ್ ಬಹುಮಾನಿತರಿಗೆ ದೊರೆಯುವ ಗೌರವ. ಇಷ್ಟು ದೊಡ್ಡ ಮೊತ್ತದ ಬಹುಮಾನ, ಇಷ್ಟು ವಿಶೇಷ ಸನ್ಮಾನ, ಪ್ರಪಂಚದಲ್ಲಿ ಉಳಿದ ಯಾವ ಬಹುಮಾನದಿಂದಲೂ ಲಭ್ಯವಾಗುವುದಿಲ್ಲ.

ನೊಬೆಲ್ ಬಹುಮಾನದ ಕಥೆ ಸ್ವಾರಸ್ಯಕರವಾಗಿದೆ. ಮನುಷ್ಯ ಕೋಟಿಯ ಹಿತಕ್ಕಾಗಿ ದುಡಿದವರಿಗೆ ಬಹುಮಾನಗಳನ್ನು ಕೊಡಲು ಸುಮಾರು 90 ಲಕ್ಷ ಡಾಲರುಗಳ (ಸುಮಾರು ಆರೂ ಮುಕ್ಕಾಲು ಕೋಟಿ ರೂಪಾಯಿ) ಹಣವನ್ನು ಬಿಟ್ಟುಹೋದ ಆಲ್‌ಫ್ರೆಡ್ ಬರ್ನಾರ್ಡ್ ನೊಬೆಲ್, ಸ್ಫೋಟಕ ವಸ್ತುಗಳನ್ನು ತಯಾರಿಸಿ, ಆ ವಿಧ್ವಂಸಕ ಸಾಮಗ್ರಿಯ ಮಾರಾಟದಿಂದ ಹಣ ಸಂಪಾದಿಸಿದವನು.

ಆಲ್‌ಫ್ರೆಡ್ ಬರ್ನಾರ್ಡ್ ನೊಬೆಲ್ 1833ರ ಅಕ್ಟೋಬರ್ 21ರಂದು ಸ್ವೀಡನಿನಲ್ಲಿ ಜನಿಸಿದ. ಈತನ ತಂದೆ ಇಮ್ಯಾನ್ಯುಯೆಲ್ ಒಬ್ಬ ವಾಸ್ತು ಶಿಲ್ಪಜ್ಞ. ನೊಬೆಲ್ ಹುಟ್ಟುವ ವೇಳೆಗೆ ದಿವಾಳಿಯಾಗಿದ್ದ ಆತ, ತನ್ನ ನೆಲೆಯನ್ನು ರಷ್ಯದ ಸೆಂಟ್ ಪೀಟರ್ಸ್‌ಬರ್ಗ್‌ಗೆ (ಈಗಿನ ಲೆನಿನ್‌ಗ್ರಾಡ್) ಬದಲಾಯಿಸಿದ. ಆತ ರಷ್ಯದ ಕಡಲು ತೀರದಲ್ಲಿ ಕೈಗೊಂಡದ್ದು, ರಕ್ಷಣೆಯ ಸಲುವಾಗಿ ನೀರಿನೊಳಗೆ ಓಡಾಡುವ ವಾಹನಗಳನ್ನು ಸ್ಫೋಟಿಸುವಂಥ ಮುಳುಗು ಸಿಡಿಮದ್ದನ್ನು ಹಾಸುವ ವೃತ್ತಿ.

ನೊಬೆಲ್ ಚಿಕ್ಕಂದಿನಿಂದಲೂ ಒಳ್ಳೆಯ ವಿದ್ಯಾರ್ಥಿ ಹಾಗೂ ಪುಸ್ತಕ ಪ್ರೇಮಿ. 1867ರಲ್ಲಿ ತನ್ನ ನಿರಂತರ ಪರಿಶೋಧನೆಯ ಮೂಲಕ ಸ್ಫೋಟಕ ಸಾಮಗ್ರಿಯನ್ನು ನೊಬೆಲ್ ಕಂಡುಹಿಡಿದ. ಇದಾದ ಎಂಟು ವರ್ಷಗಳ ಅನಂತರ ಇದಕ್ಕಿಂತಲೂ ಹೆಚ್ಚಿನ ಸ್ಫೋಟಕಶಕ್ತಿ ಹೊಂದಿದ್ದ ಬ್ಲಾಸ್ಟಿಂಗ್ ಜೆಲಟಿನ್ ಎಂಬುದನ್ನು ಕಂಡುಹಿಡಿದ. ಈ ಶೋಧನೆಗಳಿಂದ ಅವನ ಕೈಗಾರಿಕೋದ್ಯಮ ಬೆಳೆಯಿತು. ಅವನು ಅತ್ಯಂತ ಶ್ರೀಮಂತನಾದ. ನೊಬೆಲ್ ಸಿಡಿ ಹತ್ತಿಯನ್ನು ನೈಟ್ರೋಗ್ಲಿಸರಿನ್‌ನಲ್ಲಿ ಕರಗಿಸಿ ಇನ್ನೂ ಪ್ರಖರವಾದ ಕಾರ್ಡೈಟ್ ಸ್ಫೋಟಕಗಳನ್ನು ನಿರ್ಮಿಸಿದ. ಕೃತಕ ರೇಷ್ಮೆ ಹಾಗೂ ಕೃತಕ ರಬ್ಬರ್‌ಗಳ ಬಗೆಗೆ ಸಂಶೋಧನೆ ನಡೆಸಿದ.

ನೊಬೆಲ್‌ನಲ್ಲಿ ಶಾಂತಿಪ್ರಿಯತೆಯನ್ನು ಪ್ರಚೋದಿಸಿದವಳು ಬರ್ತಾ ಕಿನ್ಸ್ಕಿ ಎಂಬಾಕೆ ಎಂದು ಹೇಳುತ್ತಾರೆ. ತನ್ನ ಸ್ಫೋಟಕ ವಸ್ತುಗಳ ಸಂಶೋಧನೆ ಯಿಂದ ಅನೇಕ ಬಾರಿ ಉಂಟಾಗಿದ್ದ ಸಾವು ನೋವುಗಳು ಅವನ ಮನಸ್ಸನ್ನು ಘಾಸಿಪಡಿಸಿದ್ದುವು. ಅವನ ಹೃದಯ ಶಾಂತಿಗಾಗಿ ಪರಿತಪಿಸಿತು, ತುಡಿ ಯಿತು. 1896ರಲ್ಲಿ ಈತ ತೀರಿಕೊಂಡ. 1895ರಲ್ಲಿ ಬರೆದ ಉಯಿಲಿ ನಲ್ಲಿ 90 ಲಕ್ಷ ಡಾಲರನ್ನು ಬಹುಮಾನಗಳಿಗಾಗಿ ಕೊಟ್ಟ. ಇದರ ಮೇಲಿನ ಬಡ್ಡಿಯ ಹಣವನ್ನು ಪ್ರತಿ ವರ್ಷ ನೊಬೆಲ್ ಬಹುಮಾನಗಳಿಗೆ ಬಳಸುತ್ತಾರೆ.



ನೊಬೆಲ್ ಬಹುಮಾನಗಳ ದಾತ ಆಲ್‌ಫ್ರೆಡ್ ನೊಬೆಲ್

1901 ರಿಂದ ನೊಬೆಲ್ ಬಹುಮಾನಗಳನ್ನು ಕೊಡುತ್ತಿದ್ದಾರೆ. ಭೌತ ವಿಜ್ಞಾನ, ರಸಾಯನವಿಜ್ಞಾನ, ವೈದ್ಯವಿಜ್ಞಾನ, ಸಾಹಿತ್ಯ ಇವುಗಳಲ್ಲಿ ಶ್ರೇಷ್ಠ ಸಾಧನೆ ಮಾಡಿದವರಿಗೂ ಪ್ರಪಂಚದ ಶಾಂತಿಗೆ ಅತ್ಯಂತ ಮಹತ್ವದ ಕೊಡುಗೆ ನೀಡಿದವರಿಗೂ ಪಾರಿತೋಷಕಗಳನ್ನು ನೀಡಲಾಗುತ್ತದೆ. 1969 ರಿಂದ ಅರ್ಥಶಾಸ್ತ್ರದಲ್ಲಿ ಮಹತ್ವದ ಕೆಲಸ ಮಾಡಿದವರಿಗೂ ಬಹುಮಾನ ನೀಡಲು ತೀರ್ಮಾನಿಸಿದ್ದಾರೆ. ಭೌತವಿಜ್ಞಾನ ಮತ್ತು ರಸಾಯನ ವಿಜ್ಞಾನಗಳ ಬಹುಮಾನವನ್ನು 'ಸ್ವೀಡಿಷ್ ಅಕಾಡೆಮಿ ಆಫ್ ಸೈನ್ಸಸ್'. ವೈದ್ಯ ವಿಜ್ಞಾನದ ಬಹುಮಾನವನ್ನು 'ಸ್ಟಾಕ್ ಹೋಂ ಕರೋಲಿನ್ ಇನ್‌ಸ್ಟಿಟ್ಯೂಟ್', ಸಾಹಿತ್ಯದ ಬಹುಮಾನವನ್ನು 'ಸ್ವೀಡಿಷ್ ಅಕಾಡೆಮಿ ಆಫ್ ಲಿಟರೇಚರ್', ಶಾಂತಿ ಬಹುಮಾನವನ್ನು ನಾರ್ವೆಯ ಸಂಸತ್ತು ಆಯ್ಕೆ ಮಾಡುವ ಐವರು ಸದಸ್ಯರ ಸಮಿತಿ ನಿರ್ಧರಿಸುತ್ತವೆ. ಬಹುಮಾನಗಳನ್ನು ಪ್ರತಿವರ್ಷ ಡಿಸೆಂಬರ್ ಹತ್ತರಂದು ಹಂಚಲಾಗುತ್ತದೆ.

ನೊಬೆಲ್ ಬಹುಮಾನ ನೀಡಿಕೆಯ ಕ್ರಮ ಹೀಗೆ : ಸಾಹಿತ್ಯಕ್ಷೇತ್ರದ ದೃಷ್ಟಾಂತವಾದರೆ, ಗಣ್ಯರೊಬ್ಬರು ಅಭ್ಯರ್ಥಿಯ ಹೆಸರನ್ನು ಸಂಬಂಧಪಟ್ಟ ಸಂಸ್ಥೆಗಳಿಗೆ ಸೂಚಿಸುತ್ತಾರೆ. ಅಚ್ಚಾಗಿ ಪ್ರಕಟವಾಗಿರುವ ಸಾಹಿತ್ಯ ಕೃತಿಗಳನ್ನು ಮಾತ್ರವೇ ಸ್ವೀಡಿಷ್ ಅಕಾಡೆಮಿ ಪರಿಶೀಲನೆಗೆ ತೆಗೆದುಕೊಳ್ಳುತ್ತದೆ. ಒಂದು ನಿರ್ದಿಷ್ಟ ಗ್ರಂಥಕ್ಕೆಂದೇ ಹೇಳದೆ ಆ ಗ್ರಂಥಕರ್ತನ ಇಡೀ ಸಾಹಿತ್ಯಕ್ಕೆಂದು ಬಹುಮಾನ ಕೊಡಲೂಬಹುದು.

ವಿಜ್ಞಾನದಲ್ಲಿ ಹೊಸ ಸಂಶೋಧನೆಗಳಿಗೆ ಮಾತ್ರವೇ ಬಹುಮಾನ ನೀಡುವ ನಿಯಮವಿಲ್ಲ. 1957ರಲ್ಲಿ ಚೆನ್ಯಂಗ್ ಮತ್ತು ತ್ಸುಂಗ್‌ಲೀ ಎಂಬ ಅಮೆರಿಕದಲ್ಲಿದ್ದ ಇಬ್ಬರು ಯುವಕರು ಸಂಯುಕ್ತವಾಗಿ ಬಹುಮಾನ ಪಡೆದರು. ಅವರು ಹೊಸದೇನನ್ನೂ ಕಂಡುಹಿಡಿದಿರಲಿಲ್ಲ. ಕೆಲವೊಂದು ಬಗೆಯ ಪರಮಾಣು ಕಣಗಳ ನಡವಳಿಕೆಯನ್ನು ನಿರೂಪಿಸುವ 'ಕನ್ಸರ್ವೇಷನ್ ಆಫ್ ಪ್ಯಾರಿಟಿ' ಸಿದ್ಧಾಂತವನ್ನು ತಪ್ಪೆಂದು ತೋರಿಸಿಕೊಟ್ಟಿದ್ದರು.

ಶಾಂತಿ ಸಾಧನೆಯ ಬಹುಮಾನವನ್ನು ವ್ಯಕ್ತಿಗಳಲ್ಲದೆ, ಅಂತರರಾಷ್ಟ್ರೀಯ ಸಂಸ್ಥೆಗಳೂ ಪಡೆಯಬಹುದು. ನಿರಾಶ್ರಿತರನ್ನು ಸಲಹುವ ಅಥವಾ ಅವರಿಗೆ ಸೌಕರ್ಯಗಳನ್ನು ನೀಡುವ ಅನೇಕ ಸಂಸ್ಥೆಗಳು ಬಹುಮಾನ ಪಡೆದಿವೆ.

ಒಂದೇ ವ್ಯಕ್ತಿಗೆ ಎಷ್ಟು ಬಾರಿ ಬೇಕಾದರೂ ಬಹುಮಾನ ಪಡೆಯಲು ಅವಕಾಶವಿರುತ್ತದೆ. ಫ್ರಾನ್ಸಿನ ವಿಜ್ಞಾನಿ ಮಡಾಂ ಕ್ಯೂರಿ ಒಮ್ಮೆ ಭೌತ ವಿಜ್ಞಾನದಲ್ಲಿ, ಮತ್ತೊಮ್ಮೆ ರಸಾಯನ ವಿಜ್ಞಾನದಲ್ಲಿ ಬಹುಮಾನ ಪಡೆದರು. ಅಂತರರಾಷ್ಟ್ರೀಯ ರೆಡ್‌ಕ್ರಾಸ್ ಸಂಸ್ಥೆ ಮೊದಲನೆಯ ಮತ್ತು ಎರಡನೆಯ ಮಹಾಯುದ್ಧಗಳ ಕಾಲದಲ್ಲಿ ತಾನು ಸಲ್ಲಿಸಿದ ಸೇವೆಗಾಗಿ ಎರಡು ಬಾರಿ ಬಹುಮಾನ ಪಡೆಯಿತು.

ನೊಬೆಲ್ ಬಹುಮಾನವನ್ನು ಯಾವುದಾದರೂ ವರ್ಷ, ಯಾವ ವಿಭಾಗದಲ್ಲಾದರೂ ಕೊಡದಿರಬಹುದು. 1940–41–42 ಈ ಮೂರು ವರ್ಷಗಳಲ್ಲಿ ಯಾವುದೇ ಬಹುಮಾನವನ್ನು ಅದು ನೀಡಲಿಲ್ಲ.

ಇದುವರೆಗೆ ಅತಿ ಹೆಚ್ಚಿನ ಬಹುಮಾನಗಳಿಸಿರುವ ರಾಷ್ಟ್ರವೆಂದರೆ ಅಮೆರಿಕ. ಎರಡನೆಯದು ಜರ್ಮನಿ ಮತ್ತು ಮೂರನೆಯದು ಬ್ರಿಟನ್.

ನೊಬೆಲ್ ಪಾರಿತೋಷಕ ದೊರೆತಮೇಲೆ, ಅದನ್ನು ಸ್ವೀಕರಿಸಬಾರದೆಂದು ಬಹುಮಾನಿತ ರಾಷ್ಟ್ರ ಆದೇಶ ನೀಡಿದ ಸಂದರ್ಭ ಉಂಟು (ರಷ್ಯದ ಬೋರಿಸ್ ಪಾಸ್ಟರ್‌ನಾಕ್). ಪಾರಿತೋಷಕವನ್ನು ತಾವಾಗಿಯೇ ತಿರಸ್ಕರಿಸಿದ ಉದಾಹರಣೆಯೂ ಉಂಟು (ಫ್ರಾನ್ಸಿನ ಜೀನ್ ಪಾಲ್ ಸಾರ್ತ್ರ್). ಬಹುಮಾನ ನೀಡಿಕೆ ರಾಜಕೀಯ ಕಾರಣಗಳಿಗಾಗಿ ಆಗುತ್ತದೆ ಎಂಬ ಆರೋಪ ಇಲ್ಲದಿಲ್ಲ. ಹೀಗಿದ್ದರೂ, ನೊಬೆಲ್ ಪಾರಿತೋಷಕದ ಪ್ರಕಟಣೆಯನ್ನು ಪ್ರತಿವರ್ಷವೂ ವಿಶ್ವದಾದ್ಯಂತ ಜನರು ತವಕದಿಂದ ಇದಿರು ನೋಡುತ್ತಾರೆ.

## ನೌಕಾದಳ

ನೌಕಾ ದಳವೆಂದರೆ ಸಾಗರದಲ್ಲಿ ಯುದ್ಧ ಮಾಡಲು ಸಜ್ಜಾಗಿರುವ ಹಡಗುಗಳ ಸಮುದಾಯ. ಇಂಥ ಹಡಗುಗಳನ್ನು ನಡೆಸಲು ಬೇಕಾದ ಅಧಿಕಾರ ವರ್ಗ, ಹಡಗುಗಳ ನಿರ್ಮಾಣ ಮತ್ತು ಯುದ್ಧ ಹಡಗುಗಳಲ್ಲಿ ಇಡಲ್ಪಡುವ ವಿಮಾನ ಇವೆಲ್ಲವನ್ನೂ ಒಳಗೊಂಡ ವ್ಯವಸ್ಥೆ ನೌಕಾದಳ. ಕರಾವಳಿ ಪ್ರದೇಶವಿದ್ದು, ಸಮುದ್ರ ಮಾರ್ಗವಾಗಿ ವ್ಯಾಪಾರ ಸಂಪರ್ಕವಿಟ್ಟುಕೊಂಡಿರುವ ರಾಷ್ಟ್ರ ತನ್ನ ಕಡಲ ಗಡಿಯನ್ನು ರಕ್ಷಿಸಿಕೊಳ್ಳಲು ಯೋಗ್ಯ ನೌಕಾ ದಳವನ್ನು ಹೊಂದಿರದಿದ್ದರೆ ಅದು ವೈರಿಗಳ ಪಾಲಾಗುತ್ತದೆ. ಅದರ [illegible] ವ್ಯಾಪಾರಗಳೆಷ್ಟೇ ಹಿರಿದಾಗಿರಲಿ. ಆಕ್ರಮಣವನ್ನು ಎಷ್ಟೇ ಚತುರತೆಯಿಂದ

ನಿವಾರಿಸಿದರೂ ನೌಕಾದಳವಿಲ್ಲದೆ ಜಾಗತಿಕಮಟ್ಟದಲ್ಲಿ ಅದು ಪ್ರಥಮ ಶ್ರೇಣಿಯ ರಾಷ್ಟ್ರವಾಗಲಾರದು. ರಕ್ಷಣೆ ಹಾಗೂ ಆಕ್ರಮಣಗಳಿಗೆ ನೌಕಾದಳ ಒಂದು ಪ್ರಬಲ ಶಕ್ತಿ.

ನೌಕಾದಳದ ಆರಂಭವನ್ನು, ಮಾನವನ ಎಲ್ಲ ಚಟುವಟಿಕೆಗಳ ಉಗಮದಂತೆ ಅವನು ಆಹಾರವನ್ನು ಅರಸುತ್ತ ಹೋದ ಕಾಲದಿಂದ ಗುರುತಿಸಬಹುದು. ಮರದ ದಿಮ್ಮಿ ತೇಲುವುದನ್ನು ಕಂಡು, ಅದರ ಆಸರೆಯಿಂದ ಕಣ್ಣಿಗೆ ಕಾಣುವಷ್ಟು ದೂರದಲ್ಲಿರುವ ಕಡಲ ದಂಡೆಯ ಬಳಿ ಸಾಗಿ, ಅಲ್ಲಿ ತನ್ನ ಬಾಳನ್ನು ನೆಮ್ಮದಿಯಿಂದ ಕಳೆಯುವ ಹವಣಿಕೆಯಲ್ಲಿದ್ದವನಿಗೆ ಇದೇ ಕನಸು ಕಂಡ ಮತ್ತೊಬ್ಬ ಎದುರಾಳಿಯಾದ. ಅವನನ್ನು ನೀರಿನಲ್ಲಿ ಮುಳುಗಿಸುವ ಯೋಚನೆಯಿಂದ ಅವನೊಡನೆ ಮೊದಲಿಗ ಕಾದಿದ. ತಮ್ಮ ತಮ್ಮ ದಿಮ್ಮಿಗಳಿಗೆ ಆತುಕೊಂಡು ನಡೆಸಿದ ಈ ಹೋರಾಟದಿಂದ ನೌಕಾಸಮರ ಬೀಜದ ಬಿತ್ತನೆಯಾಯಿತು. ಇಂದಿಗೆ 3,000 ವರ್ಷಗಳ ಹಿಂದೆಯೇ ಈಜಿಪ್ಟ್ ಒಂದು ಪ್ರಚಂಡ ನೌಕಾಬಲವಾಗಿದ್ದಿತೆಂದು ಹೇಳಲಾಗಿದೆ. ಹುಟ್ಟುಹಾಕುವ ದೋಣಿಯಿಂದ ವ್ಯಾಪಾರಕ್ಕೆಂದು ಇಲ್ಲವೆ ಯುದ್ಧಗಳಿಗೆಂದು ನೌಕೆಗಳು ಉತ್ತಮಗೊಳ್ಳಲಾರಂಭಿಸಿದುವು. ಮರದ ಚಿಕ್ಕದೋಣಿ ಉಕ್ಕಿನ ಹಡಗುಗಳಿಗೆ ಎಡೆಮಾಡಿಕೊಟ್ಟಿದೆ. ಹುಟ್ಟು ಹಾಗೂ ಹಾಯಿಗಳಿಗೆ ಬದಲಾಗಿ ಉಗಿಯ, ಇಂಧನದ ಹಡಗುಗಳೂ ಪರಮಾಣುಶಕ್ತಿ ಚಾಲಿತ ಹಡಗುಗಳೂ ಮಾನವನ ನೌಕಾಸಮರವನ್ನು ಅತ್ಯಂತ ಜಟಿಲಗೊಳಿಸಿವೆ.

ಭಾರತಕ್ಕೆ ಸಮುದ್ರವು ವ್ಯಾಪಾರ ವಿನಿಮಯದ ಮುಖ್ಯ ಮಾರ್ಗವಾಗಿದ್ದಿತು. ಚಾಳುಕ್ಯ ಮನೆತನದ ಎರಡನೆಯ ಪುಲಿಕೇಶಿ, ಚೋಳ ವಂಶದ ಮೊದಲನೆಯ ರಾಜರಾಜ ಹಾಗೂ ಮೊದಲನೆಯ ರಾಜೇಂದ್ರರು ಸುಸ್ಪಷ್ಟ ಕಡಲನೀತಿಗಳನ್ನು ರಚಿಸಿಕೊಂಡಿದ್ದರು. ಇದರಿಂದ ಅವರು ನೌಕಾಬಲವನ್ನು ಹೊಂದಿದ್ದರೆಂದು ತಿಳಿಯಬಹುದು. ಸಮರ ನೌಕೆಗಳು ಹಿಂದೂಮಹಾಸಾಗರದಲ್ಲಿ ಹಾವಳಿ ನಡೆಸುತ್ತಿದ್ದ ಕಡಲುಗಳ್ಳರನ್ನು ಮಟ್ಟಹಾಕಲು ಯಾನ ಮಾಡುತ್ತಿದ್ದುವೆಂದು ಭಾರತೀಯ ಚರಿತ್ರೆಯನ್ನು ಬರೆದ ಅರಬ್ ಲೇಖಕರು ಹೇಳಿದ್ದಾರೆ. ಹೀಗೆ ಸಾಗರಾಧಿಪತ್ಯವೆಂದರೆ ತನ್ನ ಸಾಗರವನ್ನು ಕಾಯ್ದುಕೊಳ್ಳುವುದಷ್ಟೇ ಅಲ್ಲ ; ಯಾವ ಶತ್ರುವಿಗೇ ಆಗಲಿ, ಆಕ್ರಮಣಕಾರನಿಗೇ ಆಗಲಿ, ನೆರೆಯ ರಾಜ್ಯಕ್ಕೇ ಆಗಲಿ ಅಥವಾ ಕಡಲುಗಳ್ಳನಂಥ ದುಷ್ಟನಿಗೇ ಆಗಲಿ ಅದರ ಪ್ರವೇಶ ನಿರಾಕರಿಸುವುದು ಕೂಡಾ.

ಸುಮಾರು ಹತ್ತೊಂಬತ್ತನೆಯ ಶತಮಾನಕ್ಕಿಂತ ಮೊದಲು ಭೂಮಿಯ ಮೇಲೆ ಯುದ್ಧಮಾಡಲು ಉಪಯೋಗಿಸುತ್ತಿದ್ದ ಆಯುಧಗಳನ್ನೇ ನೌಕೆಗಳಲ್ಲಿ ಯುದ್ಧ ಮಾಡುವಾಗ ಸೈನಿಕರು ಉಪಯೋಗಿಸುತ್ತಿದ್ದರು. ಅನಂತರ ತೋಪುಗಳನ್ನು ಹಡಗುಗಳ ಮೇಲಿಟ್ಟು ವೈರಿಗಳ ನಾಶಕ್ಕಾಗಿ ತೋಪು ಹಾರಿಸುವುದು ರೂಢಿಗೆ ಬಂತು. ವಿಮಾನಗಳನ್ನು ಸಹ ಯುದ್ಧ ನೌಕೆಗಳಲ್ಲಿಡಲಾಯಿತು. ವೈರಿಗಳ ವಿಮಾನಗಳನ್ನು ಗುಂಡಿನೇಟಿನಿಂದ ಹೊಡೆದು ಕೆಳಗುರುಳಿಸಲು ವಿಮಾನ ಪ್ರತಿಬಂಧಕ ತೋಪುಗಳನ್ನು ಯುದ್ಧ ನೌಕೆಗಳಲ್ಲಿ ಸಜ್ಜುಗೊಳಿಸಲಾಯಿತು. ಹೀಗಾಗಿ ಆಧುನಿಕ ಯುದ್ಧ ನೌಕೆ ವಿಮಾನ, ತೋಪು, ಮದ್ದುಗುಂಡು ಮುಂತಾದುವುಗಳಿಂದ ಸುಸಜ್ಜಿತವಾಗಿರುತ್ತದೆ.

ನೌಕೆಯ ರಚನೆಯಲ್ಲಿ ಮಹತ್ತರ ಬದಲಾವಣೆಯಾದದ್ದೆಂದರೆ ಹದಿನಾರನೆಯ ಶತಮಾನದಲ್ಲಿ. ನೌಕಾತಂತ್ರ ಆರಂಭದಿಂದ ಅದುವರೆಗೆ ಹೆಚ್ಚುಕಡಮೆ ಒಂದೇ ಸಮನಾಗಿದ್ದಿತು. ದೀರ್ಘಕಾಲದ ಸಮುದ್ರಯಾನ, ನಿರ್ದಿಷ್ಟಕಾಲ ಸಮುದ್ರದಲ್ಲಿರುವುದು, ಮಾರುತಗಳಿಗೂ ವಿರುದ್ಧವಾಗಿ ಯಾನ ಮಾಡುವುದು—ಇವು ಹಡಗಿನ ಪ್ರಯಾಣದಲ್ಲಿ ಈಗ ನಾಲ್ಕುನೂರು ವರ್ಷಗಳ ಹಿಂದೆ ಒದಗಿಬಂದ ಸೌಕರ್ಯಗಳು. ಇದರಿಂದ ವಾಣಿಜ್ಯ ಪ್ರಪಂಚದಲ್ಲಿ ಹೊಸ ದಾರಿಗಳು ಹೊಸ ದೇಶಗಳು ಬೆಳಕಿಗೆ ಬಂದುವು. ಅಂತೆಯೇ ನೌಕಾ ಸಮರಶಕ್ತಿಯೂ ಬೆಳೆಯಿತು. ಫಿರಂಗಿಗಳನ್ನು ಹಡಗುಗಳು ಕೊಂಡೊಯ್ಯಲಾರಂಭಿಸಿದುವು. ನೂರಾರು ಫಿರಂಗಿಗಳನ್ನು ಒಂದೇ ಹಡಗಿನಲ್ಲಿ ಜೋಡಿಸುವ ಅನುಕೂಲವುಂಟಾಯಿತು.

1588ರಲ್ಲಿ ಸ್ಪೇನಿನ ನೌಕಾದಳವನ್ನು ಇಂಗ್ಲಿಷ್ ನೌಕಾದಳ ಸೋಲಿಸಿತು. ಅಜೇಯ ನೌಕಾದಳ ಎನ್ನಿಸಿಕೊಂಡು ಭೂತಾಕಾರದ ಹಡಗುಗಳನ್ನು ಹೊಂದಿದ ಸ್ಪೇನಿನ ನೌಕಾದಳವನ್ನು ಪುಟ್ಟ ಹಡಗುಗಳ ಇಂಗ್ಲಿಷ್ ದಳ ಸೋಲಿಸಿದ್ದು ಯೂರೋಪಿಗೆ ಬೆರಗನ್ನುಂಟುಮಾಡಿತು. 1805ರಲ್ಲಿ ಹೊರೇಷಿಯೋ ನೆಲ್ಸನನ ನಾಯಕತ್ವದಲ್ಲಿ ಇಂಗ್ಲಿಷರ ನೌಕಾದಳ ಫ್ರೆಂಚ್ ನೌಕೆಗಳ ಬಲವನ್ನು ಟ್ರಾಫಲ್ಗಾರ್‌ನಲ್ಲಿ ನಾಶಮಾಡಿತು. ಇದರಿಂದ ಇಂಗ್ಲೆಂಡ್ ಪ್ರಬಲವಾದ ನೌಕಾದಳವುಳ್ಳ ರಾಷ್ಟ್ರವಾಗಿ ಮೆರೆಯಿತು.

ಮನುಷ್ಯಬಲ, ಆಯುಧ ಮತ್ತಿತರ ಸಾಮಗ್ರಿಗಳ ದೃಷ್ಟಿಯಿಂದ ನೌಕಾಬಲದ ಚರಿತ್ರೆಯನ್ನು ಮೂರು ಕಾಲಗಳಾಗಿ ವಿಂಗಡಿಸಬಹುದು : 1. ಪುರಾತನ ಹಾಗೂ ಮಧ್ಯ ಯುಗದಲ್ಲಿದ್ದ ಹುಟ್ಟುಹಾಕುವ ನೌಕೆಗಳ ಕಾಲ (ಇದರಲ್ಲಿ ಮುಖ್ಯವಾಗಿ ಗುಲಾಮರೇ ಹುಟ್ಟುಹಾಕುತ್ತಿದ್ದರು) ; 2. ಹಾಯಿ ಹಡಗುಗಳ ಕಾಲ—ಇವು ಸ್ವತಂತ್ರ ಮಾನವನ ನೌಕಾಪ್ರಾವೀಣ್ಯದ ಅಳತೆಕೋಲುಗಳಾಗಿದ್ದವು ; 3. ತಾಂತ್ರಿಕ ಹಾಗೂ ಲೋಹವಿದ್ಯೆಯ ಪರಿಶ್ರಮಗಳ ಫಲವಾದ ನೌಕಾಯುಗ. ಅಂದರೆ ಈ ಮೂರನೆಯ ಕಾಲ ಆಧುನಿಕಯುಗಕ್ಕೆ ಸಂಬಂಧಿಸಿದ್ದು. ಕೈಗಾರಿಕೆಗಳ ಅಭಿವೃದ್ಧಿಯಾಗಿ ತಾಂತ್ರಿಕ ಸಂಪನ್ಮೂಲ, ವಸ್ತು ಹಾಗು ಮಾನವ ಬಲಗಳನ್ನು ಹೊಂದಿದ ರಾಷ್ಟ್ರ ಮಾತ್ರ ಈ ರೀತಿಯ ಸಾಗರಾಧಿಪತ್ಯವನ್ನು ಹೊಂದಬಹುದು.

ಭಾರತೀಯ ನೌಕಾದಳದ ನೌಕೆಗಳು ; ಎಡಗಡೆಗೆ, ಐ.ಎನ್.ಎಸ್. ಮೈಸೂರು

ಭಾರತದ ನೌಕಾದಳದ ಮುಖ್ಯ ಕಚೇರಿ ದೆಹಲಿಯಲ್ಲಿದೆ. ಅಲ್ಲಿಂದ ನೌಕೆಯ ಆಡಳಿತ ಹಾಗೂ ಕಾರ್ಯಾಚರಣೆಗೆ ಸಂಬಂಧಿಸಿ ಆದೇಶ ನೀಡಲಾಗುತ್ತದೆ. ನೌಕಾ ಸಿಬ್ಬಂದಿ ಬಲಾಧಿಪತಿಯು ಈ ವ್ಯವಸ್ಥೆಯ ಕಾರ್ಯನಿರ್ವಾಹಕರಾಗಿದ್ದಾರೆ. ಅವರ ಅಧೀನದಲ್ಲಿ ನೌಕೆಯ ಮೇಲೂ ದಡದ ಮೇಲೂ ಕೆಲಸಮಾಡುವ ಆಡಳಿತವರ್ಗದವರಿರುತ್ತಾರೆ. ಇವರು ದೈನಂದಿನ ಕಾರ್ಯಗಳ ನಿರ್ವಹಣೆಯನ್ನು ವಹಿಸಿಕೊಂಡಿರುತ್ತಾರೆ. ಈ ನಾಲ್ಕು ಮುಖ್ಯ ಅಧಿಕಾರಿಗಳೆಂದರೆ 1. ನೌಕಾ ಉಪಬಲಾಧಿಪತಿ ; 2. ನೌಕಾ ವರ್ಗಾಧಿಪತಿ; 3. ಸಾಮಗ್ರಿ ಅಧಿಪತಿ ಹಾಗೂ 4. ನೌಕಾ ಸಿಬ್ಬಂದಿಯ ಸಹಾಯಕ ಅಧಿಪತಿ.

ಭಾರತೀಯ ನೌಕಾಬಲದ ನೌಕೆಗಳು : 1. ಪಶ್ಚಿಮಗಣವನ್ನು ನಿರ್ದೇಶಿಸುವ ಧ್ವಜಾಧಿಪತಿಯ ಧ್ವಜನೌಕೆ ಐ.ಎನ್.ಎಸ್. 'ವಿಕ್ರಾಂತ್'. ಇದು ವಿಮಾನ ವಾಹಕ. 2. ಐ.ಎನ್.ಎಸ್. ಮೈಸೂರು—ಇದು ವಸತಿವರ್ಗದ ಸಂಚಾರೀ ನೌಕೆ. 3. ಐ.ಎನ್.ಎಸ್. ಡೆಲ್ಲಿ.

ನೌಕಾ ತಂಡಗಳು : 1. ಐ.ಎನ್.ಎಸ್. ರಜಪೂತ್, ರಂಜಿತ್ ಮತ್ತು ರಾಣಾ, 2. ಐ.ಎನ್.ಎಸ್. ಗೋದಾವರಿ, ಗೋಮತಿ ಮತ್ತು ಗಂಗಾ: ಎರಡನೆಯ ದರ್ಜೆಯ ಸಮರನೌಕೆಗಳು. ಐ.ಎನ್.ಎಸ್.ಕಾವೇರಿ, ಕೃಷ್ಣ, ತೀರ್, ಬ್ರಹ್ಮಪುತ್ರ, ಬಿಯಾಸ್, ಬೆಟ್ವ, ಖುಕ್ರಿ ಕಿರ್‌ಪಾನ್, ಕುಠಾರ್, ತಲ್‌ವಾರ್ ಹಾಗೂ ತ್ರಿಶೂಲ್.

ಸ್ಫೋಟನ ನಿವಾರಣಾ ತಂಡಗಳು : 18ನೆಯ ಸ್ಫೋಟನ ನಿವಾರಣಾ ತಂಡದಲ್ಲಿ ಐ.ಎನ್.ಎಸ್. ಬಸ್ಸೀನ್, ಬಿಮ್ಲಿಪಟಾಮ್, ಕಾಕಿನಾಡ, ಕಣ್ಣಾನೂರು ಹಾಗೂ ಕಡಲೂರು ನೌಕೆಗಳು ಸೇರಿವೆ.

ವೀಕ್ಷಕ ನೌಕೆಗಳು : ಐ. ಎನ್. ಎಸ್. ಪರಿಶೋಧಕ (ಇನ್‌ವೆಸ್ಟಿಗೇಟರ್), ಜಮುನಾ, ಸಟ್ಲೆಜ್ ಮತ್ತು ದರ್ಶಕ.

ಇತರ ನೌಕೆಗಳು : ಐ.ಎನ್.ಎಸ್. ಹಾಥಿ (ಸಮುದ್ರದ ಮೇಲೆ ಹೋಗುವ ಜಗ್ಗು ನೌಕೆ), ದೀಪಕ್ ಮತ್ತು ಶಕ್ತಿ (ಗಣ ಫಿರಂಗಿ ನೌಕೆಗಳು) ಮತ್ತು ಧಾರಿಣಿ (ಸಂಗ್ರಹ ಹಾಗೂ ರಿಪೇರಿ ನೌಕೆ).

ನೌಕಾಬಲದಲ್ಲಿ ಜಲಾಂತರ್ಗಾಮಿ ನೌಕೆಗಳೂ ಇರುತ್ತವೆ. ಎರಡನೆಯ ಜಾಗತಿಕ ಯುದ್ಧದಲ್ಲಿ ಜಲಾಂತರ್ಗಾಮಿ ನೌಕೆಗಳು ಕೆಲವು ಬಲಿಷ್ಠ ಯುದ್ಧ ನೌಕೆಗಳನ್ನು ನಾಶಮಾಡಲು ಶಕ್ತವಾದುವು.

ಭಾರತದಲ್ಲಿ ಎಲ್ಲ ರಕ್ಷಣಾಪಡೆಗಳ ಅತ್ಯುಚ್ಚ ದಂಡನಾಯಕರು ರಾಷ್ಟ್ರಪತಿಗಳೇ.

ಪ್ರಪಂಚದ ಮುಕ್ಕಾಲು ಭಾಗ ನೀರಿನಿಂದ ಆವೃತವಾಗಿರುವುದರಿಂದ ಸಮುದ್ರದ ಶಕ್ತಿಗಾಗಿ ಈ ಸ್ಪರ್ಧೆ ಸದ್ಯದ ಪರಿಸ್ಥಿತಿಯಲ್ಲಿ ತೀವ್ರವಾಗಿದೆ. ಅಮೆರಿಕದ ಸಂಯುಕ್ತ ಸಂಸ್ಥಾನ ನೌಕಾಬಲದಲ್ಲಿ ಅತ್ಯಂತ ಮುಂದುವರಿದ ದೇಶ. ಎರಡನೆಯದು ರಷ್ಯ. ಬ್ರಿಟನ್ ಮೂರನೆಯದು. ಜಾಗತಿಕ ಮಹಾಯುದ್ಧಗಳ ಅನಂತರ ರಷ್ಯದ ನಾವಿಕಶಕ್ತಿ ಅಸಾಧಾರಣವಾಗಿ ಬೆಳೆದಿದೆ. ನೌಕಾ ಸಮರದಲ್ಲಿ ಜಲಾಂತರ್ಗಾಮಿ ನೌಕೆಗಳು ಒಂದು ಹೊಸ ಅಧ್ಯಾಯವನ್ನು ಪ್ರಾರಂಭಿಸಿವೆ. ಅಲ್ಲದೆ ವಿಮಾನಗಳನ್ನು ಅಥವಾ ಕ್ಷಿಪಣಿಗಳನ್ನು ಹೊತ್ತು ಅವುಗಳನ್ನು ಏರಿಸುವ ನೌಕೆಗಳು ಈ ಸಮರಶಾಸ್ತ್ರವನ್ನು ಇನ್ನೂ ಮುಂದುವರಿಸಿವೆ. ಪರಮಾಣುಶಕ್ತಿ ಕಂಡುಕೊಂಡ ಮಾನವನಿಗೆ ಈ ದಿಶೆಯಲ್ಲಿ ಹೊಸ ಹೊಸ ಅವಕಾಶಗಳು ಒದಗಿವೆ. ಆದರೆ ಅದರಿಂದ ಒದಗಬಹುದಾದ ವಿನಾಶಕಾರಿ ಪರಿಣಾಮ ಅವನನ್ನು ಸ್ವಲ್ಪಮಟ್ಟಿಗೆ ತಡೆದಿದೆಯೆನ್ನಬಹುದು.

## ಪಂಚಶೀಲ

ಸ್ವತಂತ್ರ ಭಾರತ ಜಗತ್ತಿಗೆ ನೀಡಿದ ಸಹಬಾಳ್ವೆಯ ಸೂತ್ರ—ಪಂಚಶೀಲ. ಇದನ್ನು ರೂಪಿಸಿದವರು ಭಾರತದ ಪ್ರಧಾನಿಗಳಾಗಿದ್ದ ಜವಾಹರಲಾಲರು. ಆ ಸೂತ್ರಗಳಿಗೆ ಮೊದಲು ಸಹಿಹಾಕಿದವರು ಪ್ರಧಾನಿ ಜವಾಹರಲಾಲ ನೆಹರು ಹಾಗೂ ಕಮ್ಯೂನಿಸ್ಟ್ ಚೀನದ ಪ್ರಧಾನಿ ಚೌ ಎನ್-ಲೈ.

ಟಿಬೆಟನ್ನು ಚೀನ 1950ರಲ್ಲಿ ಆಕ್ರಮಿಸಿದಾಗ ಭಾರತ–ಚೀನಗಳ ನಡುವೆ ವಿರಸವೇರ್ಪಟ್ಟಿತು. ಆ ಹಿನ್ನೆಲೆಯಲ್ಲಿ ಸಹಬಾಳ್ವೆಯ ಸೂತ್ರಗಳನ್ನು ಖಚಿತಗೊಳಿಸುವ ಯತ್ನ ನಡೆಯಿತು.

ಪಂಚಶೀಲ ಒಪ್ಪಂದಕ್ಕೆ ಭಾರತ–ಚೀನಗಳ ನಾಯಕರ ಸಹಿಬಿದ್ದುದು 1954ರ ಏಪ್ರಿಲ್ 29 ರಂದು.

ನೆಮ್ಮದಿಯ ಸಹಬಾಳ್ವೆಯ ಆ ಐದು ನಿಯಮಗಳನ್ನು ಸ್ಥೂಲವಾಗಿ ಹೀಗೆ ರೂಪಿಸಲಾಗಿದೆ : 1. ಎರಡು ರಾಷ್ಟ್ರಗಳ ಭೂಪ್ರದೇಶಗಳ ಭದ್ರತೆ ಹಾಗೂ ಪರಮಾಧಿಕಾರಗಳನ್ನು ಕುರಿತಾದ ಪರಸ್ಪರ ಗೌರವ ಭಾವ ; 2. ಪರಸ್ಪರ ಅನಾಕ್ರಮಣ ; 3. ಒಂದು ರಾಷ್ಟ್ರದೊಳಗಿನ ವ್ಯವಹಾರದಲ್ಲಿ ಮತ್ತೊಂದು ರಾಷ್ಟ್ರ ಪ್ರವೇಶಿಸದಿರುವುದು ; 4. ಸಮಾನತೆ ಮತ್ತು ಪರಸ್ಪರ ಹಿತ ; 5. ನೆಮ್ಮದಿಯ ಸಹಬಾಳ್ವೆ.

ಇಂಡೋನೇಷ್ಯದ ಬಾಂಡುಂಗ್‌ನಲ್ಲಿ 1955 ಏಪ್ರಿಲ್‌ನಲ್ಲಿ ಏಷ್ಯದ ಮತ್ತು ಆಫ್ರಿಕದ ರಾಷ್ಟ್ರಗಳ ದೊಡ್ಡ ಸಮ್ಮೇಳನ ನಡೆಯಿತು. ಸ್ವತಂತ್ರ ಪೌರಸ್ತ್ಯ ರಾಷ್ಟ್ರಗಳು ಬಲಿಷ್ಠವಾಗಬಲ್ಲುವೆಂಬುದನ್ನು ಈ ಸಮ್ಮೇಳನ ಸಿದ್ಧಪಡಿಸಿತು. ಈ ಸಮ್ಮೇಳನದಲ್ಲಿ ಅಧಿಕೃತವಾಗಿ ಪಂಚಶೀಲ ತತ್ತ್ವವನ್ನು ಸ್ವೀಕರಿಸಲಾಯಿತು.

ದ್ವೇಷ, ದೌರ್ಜನ್ಯಗಳನ್ನು ತೊಡೆಯಬೇಕೆಂಬ ಉದಾತ್ತ ಧ್ಯೇಯದಂತೆ ಭಾರತ ನಡೆಯುತ್ತಿದೆ ; ಯಾವ ರಾಷ್ಟ್ರದೊಡನೆಯೂ ಭಾರತಕ್ಕೆ ವೈಷಮ್ಯವಿಲ್ಲ ; ಪಂಚಶೀಲ ತತ್ತ್ವದ ಆಧಾರದಮೇಲೆ ಬೆಳೆಸಿದ ಸಂಬಂಧ ಲೋಕ ಕಲ್ಯಾಣಕಾರಕ ; ಇದನ್ನು ಆಚರಿಸಿದರೆ ವಿಶ್ವಶಾಂತಿ ಸ್ಥಾಪನೆ ಖಚಿತ ಎಂದು ಭಾರತದ ನಾಯಕರು ಸಾರಿದರು. ಭಾರತದ ಈ ವಿದೇಶ ನೀತಿ 2,500 ವರ್ಷಗಳಿಗೆ ಹಿಂದೆ ಭಗವಾನ್ ಬುದ್ಧ ಸಾರಿದ ಶಾಂತಿ ಸಂದೇಶಕ್ಕೆ ಅನುಗುಣವಾಗಿದೆ. 1955ರಲ್ಲಿ ಬುದ್ಧನ 2,500 ವರ್ಷದ ಶತಾಬ್ದಿಯನ್ನು ದೇಶದಾದ್ಯಂತ ಆಚರಿಸಿದಾಗ, ಹಿಂಸೆ ಮತ್ತು ಘರ್ಷಣೆಯನ್ನು ನಿವಾರಿಸಲು ಬುದ್ಧನ ಮಾರ್ಗವೇ ಪರಮೋಪಾಯವೆಂದೂ ಪಂಚಶೀಲ ಆತನ ಸಂದೇಶವನ್ನು ಅವಲಂಬಿಸಿದೆಯೆಂದೂ ಆಗಿನ ರಾಷ್ಟ್ರಾಧ್ಯಕ್ಷ ರಾಜೇಂದ್ರ ಪ್ರಸಾದರು ನುಡಿದರು.

ಆದರೆ ಚೀನದ ಆಕ್ರಮಣ ನೀತಿಯಿಂದ ಈ ತತ್ತ್ವಕ್ಕೆ ಧಕ್ಕೆ ತಟ್ಟಿತು. ಹೀಗಿದ್ದರೂ ಭಾರತದ ವಿದೇಶ ನೀತಿ ಈಗಲೂ ಪಂಚಶೀಲವನ್ನು ಅವಲಂಬಿಸಿದೆ.

ಪ.ಶಿಶಿ

## ಪಂಚಾಂಗ

ಭಾರತದಲ್ಲಿ ಹಿಂದೂಗಳ ಮನೆಯಲ್ಲಿ ಮಗು ಹುಟ್ಟಿದರೆ ಪಂಚಾಗ ತೆಗೆದು ಯಾವ ನಕ್ಷತ್ರದಲ್ಲಿ ಜನಿಸಿದೆ ಎಂದು ಮನೆಯ ಹಿರಿಯರು ಗುರುತಿಸಿಕೊಳ್ಳುವುದು ಸಾಮಾನ್ಯ ಪದ್ಧತಿ.

ಪಂಚಾಂಗ ಎಂದರೆ ಏನು ? ಪಂಚಾಂಗವೆಂದರೆ ಪಂಚ ಅಥವಾ ಐದು ಅಂಗಗಳು. ವಾರ, ತಿಥಿ, ನಕ್ಷತ್ರ, ಯೋಗ ಮತ್ತು ಕರಣಗಳೇ ಈ ಐದು ಮುಖ್ಯ ಅಂಗಗಳು.

ನಕ್ಷತ್ರಗಳೇ ಮನುಷ್ಯನ ಜೀವನವನ್ನು ರೂಪಿಸುತ್ತವೆ ಎಂಬುದು ಕೆಲವರ ನಂಬಿಕೆ; ಅವರ ಪ್ರಕಾರ, ಕೆಲವು ನಕ್ಷತ್ರಗಳು ಶುಭದಾಯಕ; ಕೆಲವು ಅಶುಭ; ಮೂಲಾ ನಕ್ಷತ್ರದಲ್ಲಿ ಗಂಡುಮಗು ಹುಟ್ಟಿದರೆ ತಂದೆಗೆ, ರೋಹಿಣಿ ನಕ್ಷತ್ರವಾಗಿದ್ದರೆ ಸೋದರಮಾವನಿಗೆ ಅಪಾಯ. ನಕ್ಷತ್ರಗಳ ದೋಷ ನಿವಾರಣಾರ್ಥವಾಗಿ ಶಾಂತಿಕರ್ಮಗಳನ್ನು ಮಾಡಿಸುತ್ತಾರೆ.

ಜನ್ಮಕಾಲದ ನಕ್ಷತ್ರ ತಿಳಿದುಕೊಂಡು, ಮುಂದೆ ಪಂಚಾಂಗದ ನೆರವಿನಿಂದ ಮಗುವಿಗೆ ಜಾತಕವನ್ನು ಬರಸುವ ರೂಢಿಯುಂಟು. ಈ ಜಾತಕದಿಂದ ಮಗುವಿನ ಭವಿಷ್ಯವನ್ನು ಶಾಸ್ತ್ರೋಕ್ತವಾಗಿ ತಿಳಿಯಲು ಸಹಾಯಕವಾಗುತ್ತದೆ ಎಂದು ನಂಬಿಕೆ.

ವಾರದ ಏಳು ದಿನಗಳಿಗೆ ಏಳು ಗ್ರಹಗಳ ಹೆಸರುಗಳನ್ನು ಕೊಟ್ಟಿದ್ದಾರೆ. 16 ತಿಥಿಗಳು, 27 ನಕ್ಷತ್ರಗಳು, 27 ಯೋಗಗಳು ಮತ್ತು 11 ಕರಣಗಳಿವೆ. ಸೂರ್ಯ ಒಂದೊಂದು ರಾಶಿಯಲ್ಲಿ ಒಂದು ತಿಂಗಳು ಕಾಲ ಇರುತ್ತಾನೆ. ಇದು ಸೌರತಿಂಗಳು. ಚಂದ್ರ ಒಂದು ದಿನ ಒಂದು ನಕ್ಷತ್ರದಲ್ಲಿರುತ್ತಾನೆ. ವರ್ಷಕ್ಕೆ 12 ತಿಂಗಳು. ಸೂರ್ಯನಿಂದ ಲೆಕ್ಕ ಹಾಕುವುದನ್ನು ಸೌರಮಾನ ಸಂವತ್ಸರವೆಂದೂ ಚಂದ್ರನಿಂದ ಲೆಕ್ಕಹಾಕುವುದನ್ನು ಚಾಂದ್ರಮಾನ ಸಂವತ್ಸರವೆಂದೂ ಕರೆಯುತ್ತಾರೆ. ಗ್ರಹಗಳು ಯಾವ ನಕ್ಷತ್ರದಲ್ಲಿವೆ ಎಂಬ ವಿವರ, ರಾಹುಕಾಲ, ಮದುವೆ—ಉಪನಯನ ಮೊದಲಾದ ಶುಭಕಾರ್ಯಗಳಿಗೆ ಮುಹೂರ್ತ, ಹಬ್ಬದ ದಿನ, ಗ್ರಹಣ ಮೊದಲಾದ ಮಾಹಿತಿ ಪಂಚಾಂಗದಲ್ಲಿರುತ್ತದೆ.

ವೇದಗಳಲ್ಲಿ ಪಂಚಾಂಗದ ಉಲ್ಲೇಖವಿದೆ. ಋಗ್ವೇದದ ಕಾಲ, ಎಂದರೆ ಸುಮಾರು ಕ್ರಿ. ಪೂ. 1500 ರಲ್ಲಿಯೆ, ವರ್ಷವೊಂದಕ್ಕೆ 360 ದಿನಗಳೆಂದು ಅಂದಾಜುಮಾಡಿ, ತಿಂಗಳಿಗೆ 30 ದಿನವೆಂದೂ ವರ್ಷಕ್ಕೆ 12 ತಿಂಗಳು ಎಂದೂ ನಿಗದಿಮಾಡಿದರು. ವಾಸ್ತವವಾಗಿ ಭೂಮಿ ಸೂರ್ಯನ ಸುತ್ತ ಸುತ್ತಲು 365¼ ದಿವಸಗಳನ್ನು ತೆಗೆದುಕೊಳ್ಳುತ್ತದೆ. ಆದುದರಿಂದ ಐದು ವರ್ಷಗಳಿಗೊಮ್ಮೆ ಅಧಿಕಮಾಸವೆಂದು ಒಂದು ತಿಂಗಳನ್ನು ಹೆಚ್ಚಿಗೆ ಸೇರಿಸುತ್ತಿದ್ದರು. ಯಜುರ್ವೇದ ಮತ್ತು ಅಥರ್ವವೇದಗಳಲ್ಲಿ (ಕ್ರಿ. ಪೂ. 1500–1000) ನಕ್ಷತ್ರಗಳ ಪ್ರಸ್ತಾಪವಿದೆ.

ಹಿಂದೂಗಳ ಪಂಚಾಂಗದಲ್ಲಿ ತಿಂಗಳನ್ನು ಎರಡು ಪಕ್ಷ ಎಂದು ಭಾಗ ಮಾಡಿದ್ದಾರೆ. ಚಂದ್ರನ ಬೆಳಕು ಹೆಚ್ಚುವ ಪಾಡ್ಯದಿಂದ ಹುಣ್ಣಿಮೆವರೆಗೆ ಶುಕ್ಲಪಕ್ಷ; ಅವರಿಂದಾಚೆಗೆ ಪಾಡ್ಯದಿಂದ ಅಮಾವಾಸ್ಯೆವರೆಗೆ ಕೃಷ್ಣಪಕ್ಷ. ಒಂದು ವರ್ಷಕ್ಕೆ ಕಾಲಾನುಗುಣವಾಗಿ ಆರು ಋತುಗಳು. ಸೂರ್ಯ ಉತ್ತರ ದಿಕ್ಕಿನಲ್ಲಿ ಸಂಚಾರ ಆರಂಭಿಸಿದಾಗಿನಿಂದ ಆರು ತಿಂಗಳ ಕಾಲ ಉತ್ತರಾಯಣ. ಸೂರ್ಯ ದಕ್ಷಿಣವನ್ನು ಪ್ರವೇಶಿಸಿದ ಮೇಲೆ ಆರು ತಿಂಗಳು ದಕ್ಷಿಣಾಯನ.

ಕ್ರಿಸ್ತಶಕ ಆರಂಭದ ಶತಮಾನಗಳಲ್ಲಿ ಮೆಸಪಟೇಮಿಯ ಮತ್ತು ಗ್ರೀಸಿನಿಂದ ವೈಜ್ಞಾನಿಕ ವಿಷಯಗಳ ಮಾಹಿತಿ ದೊರೆಯಿತು. ಭಾರತೀಯರ ಖಗೋಳಶಾಸ್ತ್ರ ಜ್ಞಾನ ನೆರವು ನೀಡಿತು. ನಕ್ಷತ್ರ ಪದ್ಧತಿಯನ್ನು ಬಿಟ್ಟು 12 ರಾಶಿಗಳಿರುವ ಚಕ್ರವನ್ನು ತಮ್ಮ ಪಂಚಾಂಗಕ್ಕೆ ಅಳವಡಿಸಿಕೊಂಡರು. ಸೂರ್ಯ ಒಂದು ರಾಶಿಯನ್ನು ಪ್ರವೇಶಿಸುವುದಕ್ಕೆ ಸಂಕ್ರಮಣ ಎನ್ನುತ್ತಾರೆ. ಮಕರ ಸಂಕ್ರಮಣದಿಂದ ಉತ್ತರಾಯಣವೂ ಕಟಕ ಸಂಕ್ರಮಣದಿಂದ ದಕ್ಷಿಣಾಯನವೂ ಆರಂಭವಾಗುತ್ತವೆ.

ಸೂರ್ಯ ಒಂದೊಂದು ರಾಶಿಯಲ್ಲೂ ಒಂದು ತಿಂಗಳು ಇರುತ್ತಾನೆಂದು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಸಂಚರಿಸುವ ವೇಗದಲ್ಲಿ ಹೆಚ್ಚು ಕಡಮೆ ಆಗುತ್ತಿರುವುದರಿಂದ ರಾಶಿಯಲ್ಲಿರುವ ಅವಧಿಯಲ್ಲೂ ವ್ಯತ್ಯಾಸ ಉಂಟಾಗುತ್ತದೆ. ಒಂದು ವರ್ಷಕ್ಕೆ ಹನ್ನೆರಡು ಸೂರ್ಯನ ತಿಂಗಳುಗಳು ಇರುತ್ತವೆ. ಒಂದು ಅಮಾವಾಸ್ಯೆಯಿಂದ ಮತ್ತೊಂದಕ್ಕೆ ಚಂದ್ರನ ತಿಂಗಳು ಲೆಕ್ಕಾಚಾರ. ಚಂದ್ರನ ಮೊದಲ ಹುಣ್ಣಿಮೆ ಚಿತ್ತಾ ನಕ್ಷತ್ರದಲ್ಲಾಗುವುದರಿಂದ ಆ ಮಾಸಕ್ಕೆ ಚೈತ್ರಮಾಸವೆಂದು ಹೆಸರಾಯಿತು. ಹೀಗೆ ವರ್ಷವೊಂದಕ್ಕೆ 12 1/3 ಚಂದ್ರನ ತಿಂಗಳುಗಳಿರುತ್ತವೆ. ಈ ತರಹ ವ್ಯತ್ಯಾಸಗಳಿಂದ ಸೂರ್ಯ ಮತ್ತು ಚಂದ್ರರ ತಿಂಗಳುಗಳಲ್ಲಿ ವ್ಯತ್ಯಾಸ ಬರುವುದನ್ನು ಸರಿಪಡಿಸಲು ಮೂರು ವರ್ಷಗಳಿಗೊಮ್ಮೆ ವರ್ಷಕ್ಕೆ 13 ತಿಂಗಳು ಎಂದು ಮಾಡಲಾಗಿದೆ.

ಚಂದ್ರ ಮತ್ತು ಸೂರ್ಯರ ತಿಂಗಳು ನಡುವೆ ದಿವಸಗಳು ವ್ಯತ್ಯಾಸವಾಗುವುದರಿಂದ ಸೂರ್ಯನ ಒಂದು ತಿಂಗಳಿನಲ್ಲಿಯೇ ಚಂದ್ರನ ಎರಡು ತಿಂಗಳು ಬರುವುದೂ ಉಂಟು. ಮೊದಲನೆಯದನ್ನು ಅಧಿಕಮಾಸ ಎಂದೂ ಎರಡನೆಯದನ್ನು ನಿಜಮಾಸ ಎಂದೂ ಕರೆಯುತ್ತಾರೆ. ಹೆಸರು ಮಾತ್ರ ಎರಡಕ್ಕೂ ಒಂದೇ–ಚಂದ್ರಮಾನದ್ದು. ಎರಡನೆಯದೇ ನಿಜವಾದ ಚಂದ್ರನ ತಿಂಗಳೆಂದು ಪರಿಗಣಿಸುತ್ತಾರೆ. ಈ ತಿಂಗಳಿನಿಂದ ಚಂದ್ರ ಮತ್ತು ಸೂರ್ಯಮಾಸಗಳಲ್ಲಿ ಹೊಂದಿಕೆಯಾಗುತ್ತದೆ. ಅಪರೂಪವಾಗಿ ಎರಡು ಸೂರ್ಯ ಸಂಕ್ರಮಣಗಳು ಒಂದೇ ಚಂದ್ರಮಾಸದಲ್ಲಿ ಬರುತ್ತವೆ. ಇದರಿಂದಾಗಿ ಒಂದು ಚಂದ್ರಮಾಸ ಎರಡನೆಯ ಸಂಕ್ರಮಣಕ್ಕನುಗುಣವಾಗಿ ಕಡಮೆ ಆಗುತ್ತದೆ. ಇದನ್ನು ಕ್ಷಯಮಾಸವೆನ್ನುತ್ತಾರೆ. ಕೆಲವು ವೇಳೆ ಒಂದು ದಿವಸ ಎರಡು ತಿಥಿಗಳು ಬರುತ್ತವೆ.

ಪಂಚಾಂಗಗಳು ಬಹುಮಟ್ಟಿಗೆ ಖಗೋಳಶಾಸ್ತ್ರದ 'ಸೂರ್ಯಸಿದ್ಧಾಂತ' ಎಂಬ ಗ್ರಂಥವನ್ನು ಅವಲಂಬಿಸುತ್ತವೆ. 'ಸೂರ್ಯಸಿದ್ಧಾಂತ' ಗ್ರಂಥ ಒಂಬತ್ತನೆಯ ಶತಮಾನದಷ್ಟು ಹಿಂದೆಯೆ ಇತ್ತು.

ಭಾರತದಲ್ಲಿ ಅಸಂಖ್ಯ ಪಂಚಾಂಗಗಳಿವೆ.

ಭಾರತದಲ್ಲೆಲ್ಲ ಒಂದೇ ರೀತಿಯ ಪಂಚಾಂಗವಿರಬೇಕೆಂದು ಕೇಂದ್ರ ಸರಕಾರದವರು 1879ನೆಯ ಶಕವರ್ಷದ (ಶಾಲಿವಾಹನ ಶಕ ಎನ್ನುವ ಹೆಸರು ಹೇಗೆ ಬಂತು ಎನ್ನುವುದರಲ್ಲಿ ಭಿನ್ನಾಭಿಪ್ರಾಯವಿದೆ. ಸಾಧಾರಣವಾಗಿ ಶಾಲಿವಾಹನ ಎಂಬ ಹಿಂದೂ ರಾಜನಿಂದ ಈ ಹೆಸರು ಬಂತು ಎಂದು ಹೇಳುತ್ತಾರೆ. ಕಾನಿಷ್ಕ ಮತ್ತು ನಹಪಾನ ಎಂಬ ರಾಜರ ಹೆಸರು ಈ ನಿಟ್ಟಿನಲ್ಲಿ ಕೇಳಿಬರುತ್ತದೆ.) 1957ರ ಚೈತ್ರಮಾಸದ ಮೊದಲನೆಯ ದಿನದಿಂದ ಅಂದರೆ ಮಾರ್ಚ್ 22ರಿಂದ ಹೊಸ ಪಂಚಾಂಗವನ್ನು ಜಾರಿಗೆ ತಂದರು. ಕ್ರಿಸ್ತಶಕ ಈ ಶಕಕ್ಕಿಂತ 78 ವರ್ಷ ಹಿಂದಿನದು. ಚೈತ್ರ, ವರ್ಷದ ಪ್ರಥಮ ತಿಂಗಳು, ಸಾಧಾರಣವಾಗಿ ಚೈತ್ರಮಾಸದಲ್ಲಿ ಮೂವತ್ತು ದಿನಗಳೂ ಅಧಿಕ ದಿನ ವರ್ಷದಲ್ಲಿ ಮೂವತ್ತೊಂದು ದಿನಗಳೂ ಇರುತ್ತವೆ.

ಚೈತ್ರದಿಂದ ಮುಂದಿನ ಐದು ತಿಂಗಳಲ್ಲಿ ಮೂವತ್ತೊಂದು ದಿನಗಳಿದ್ದು, ಉಳಿದ ಆರು ತಿಂಗಳುಗಳಲ್ಲಿ ಮೂವತ್ತು ದಿನಗಳಿರುತ್ತವೆ. ಈ ಹೊಸ ಪಂಚಾಂಗ ಗ್ರಿಗೇರಿಯನ್ ಕ್ಯಾಲೆಂಡರಿಗೆ ಹೊಂದಿಕೆಯಾಗುತ್ತದೆ. ಪ್ರತಿ ವರ್ಷ ಚೈತ್ರಮಾಸದ ಮೊದಲ ದಿನ ಮಾರ್ಚ್ 22ರಂದು ಆದರೆ, ಅಧಿಕ ದಿನ ವರ್ಷದಲ್ಲಿ ಮಾರ್ಚ್ 21ರಂದು ಆಗುತ್ತದೆ. ಇದೇ ರಾಷ್ಟ್ರೀಯ ಪಂಚಾಂಗ.

ಪಾಶ್ಚಾತ್ಯ ದೇಶಗಳಲ್ಲಿ ಪಂಚಾಂಗಕ್ಕೆ ಕ್ಯಾಲೆಂಡರ್ ಎನ್ನುತ್ತಾರೆ. ಈ ಪದ ಲ್ಯಾಟಿನ್ ಭಾಷೆಯ ಕ್ಯಾಲೆಂಡಾಯ್ ಎಂಬುದರಿಂದ ಬಂದಿದೆ. ಶಬ್ದಶಃ ಇದರ ಅರ್ಥ 'ಲೆಕ್ಕಪತ್ರವಾಗುವ ದಿನಾಂಕ' ಎಂದು. ಗಡಿಯಾರದಿಂದ ಘಂಟೆ ತಿಳಿದುಕೊಳ್ಳುವಂತೆ ಪಂಚಾಂಗದಿಂದ ವಾರ, ತಿಥಿ, ನಕ್ಷತ್ರಗಳನ್ನು ನಾವು ತಿಳಿದುಕೊಳ್ಳುತ್ತೇವೆ. ನಮ್ಮ ಲೆಕ್ಕದಂತೆ 60 ವಿಘಳಿಗೆಗೆ ಒಂದು ಘಳಿಗೆ, 60 ಘಳಿಗೆಗೆ ಒಂದು ದಿನವಾದರೆ, ಪಾಶ್ಚಾತ್ಯರಲ್ಲಿ 60 ಸೆಕೆಂಡಿಗೆ ಒಂದು ಮಿನಿಟು, 60 ಮಿನಿಟಿಗೆ ಒಂದು ಘಂಟೆ ಮತ್ತು 24 ಘಂಟೆಗಳಿಗೆ ಒಂದು ದಿನ. ಒಂದು ದಿನವೆಂದರೆ ಭೂಮಿ ತನ್ನ ಅಕ್ಷದ ಸುತ್ತ ಪೂರ್ತಿ ಒಂದು ಬಾರಿ ಸುತ್ತಲು ಬೇಕಾಗುವ ಕಾಲ. ಚಂದ್ರ ಭೂಮಿಯ ಸುತ್ತ ಒಂದು ಬಾರಿ ತಿರುಗಲು ಬೇಕಾಗುವ ಕಾಲ ಒಂದು ತಿಂಗಳು. ಭೂಮಿ ಸೂರ್ಯನ ಸುತ್ತ ಒಂದು ಸುತ್ತು ಬರಲು ಬೇಕಾದ ಅವಧಿ ಒಂದು ವರ್ಷ. ಪಾಶ್ಚಾತ್ಯರು ಹಿಬ್ರು ಪಂಚಾಂಗವನ್ನು ಅನುಸರಿಸಿ 7 ದಿನಗಳಿಗೆ ಒಂದು ವಾರವೆಂದು ಮಾಡಿದರು. ಈ ಕಾಲವಿಭಾಗ ಪದ್ಧತಿ ಬೈಬಲ್‌ನಲ್ಲಿ ಪ್ರಸ್ತಾಪಿಸಲ್ಪಟ್ಟಿದೆ. ಹಿಬ್ರುಗಳು ಏಳು ದಿನಗಳಿಗೆ ಒಂದು ವಾರ ಎಂಬ ಕಾಲಮಾನ ಕಲಿತದ್ದು ಬೆಬಿಲೋನಿಯನರಿಂದ. ಗ್ರಹಗಳನ್ನು ಪೂಜಿಸುತ್ತಿದ್ದ ಬೆಬಿಲೋನಿಯನರು ಏಳು ದಿನಗಳೂ ಏಳು ಗ್ರಹಗಳ ಪ್ರತಿನಿಧಿಗಳೆಂದು ತಿಳಿದಿದ್ದರು.

ನೈಸರ್ಗಿಕ ಘಟನೆಗಳನ್ನನುಸರಿಸಿ ಜನ ಮೊದಲು ಕಾಲದ ಲೆಕ್ಕ ಇಡುತ್ತಿದ್ದರು. ಸೂರ್ಯೋದಯ, ನೆರಳಿನ ಉದ್ದ, ಚಂದ್ರನ ದೃಶ್ಯಭಾಗ, ನಕ್ಷತ್ರಗಳಿರುವ ಭಾಗದಿಂದ ಕಾಲಗಣನೆ ಮಾಡುತ್ತಿದ್ದುದು ಸರಿಯಾಗಲಿಲ್ಲ. ಸೂರ್ಯನ ವರ್ಷದ ಲೆಕ್ಕಾಚಾರ ಚಂದ್ರನ ತಿಂಗಳಿಗೆ ಹೊಂದುತ್ತಿರಲಿಲ್ಲ.

ಮಾನವನ ಬೌದ್ಧಿಕ ಸಾಧನೆಗಳಿಗೆ ಸಂಬಂಧಿಸಿ ಖಚಿತವಾಗಿ ತಿಳಿದಿರುವ ಮೊಟ್ಟಮೊದಲ ವರ್ಷ ಕ್ರಿಸ್ತ ಪೂರ್ವ 4236. ಅದೇ ವರ್ಷ ಈಜಿಪ್ಟಿನಲ್ಲಿ ಪಂಚಾಂಗವನ್ನು ಬಳಕೆಗೆ ತಂದರು. ವರ್ಷಕ್ಕೆ 12 ತಿಂಗಳೆಂದು ಮಾಡಿದವರು ರೋಮನರು. ಕ್ರಿ. ಪೂ. 47ರಲ್ಲಿ ಇವರ ಪಂಚಾಂಗದಲ್ಲಿ ವರ್ಷಕ್ಕೆ 354 ದಿನಗಳು ಎಂದಿತ್ತು. ಆದರೆ ಭೂಮಿ ಸೂರ್ಯನ ಸುತ್ತ ಬರಲು 365 1/4 ದಿನಗಳನ್ನು ತೆಗೆದುಕೊಳ್ಳುತ್ತದೆ. ಹೀಗೆ ಕಡಮೆಯಾದುದನ್ನು ಸರಿಪಡಿಸಲು 2–3 ವರ್ಷಗಳಿಗೊಮ್ಮೆ ಒಂದು ತಿಂಗಳು ಹೆಚ್ಚು ಮಾಡುತ್ತಿದ್ದರು. ಜೂಲಿಯಸ್ ಸೀಸರನಿಗೆ ಈ ಪಂಚಾಂಗ ಸರಿಯೆನಿಸಲಿಲ್ಲ. ಕ್ರಿ. ಪೂ. 46ರಲ್ಲಿ ಆಚರಣೆಗೆ ಬಂದ ಜೂಲಿಯನ್ ಕ್ಯಾಲೆಂಡರ್‌ನಲ್ಲಿ 365 ದಿನಗಳಿಗೆ ಒಂದು ವರ್ಷವೆಂದಾಯಿತು. 12 ತಿಂಗಳಲ್ಲಿ ಪ್ರತಿ ತಿಂಗಳೂ ದಿನಗಳೂ ಒಂದೇ ಸಮವಾಗಿರಲಿಲ್ಲ. ನಾಲ್ಕು ವರ್ಷಗಳಿಗೊಮ್ಮೆ ಫೆಬ್ರುವರಿಯಲ್ಲಿ ಒಂದು ದಿನ ಹೆಚ್ಚಿಸಿದರು. ಇದರಿಂದ ಋತುಗಳಿಗೂ ತಿಂಗಳುಗಳಿಗೂ ಇನ್ನೂ ಹೆಚ್ಚಿನ ಹೊಂದಾಣಿಕೆ ಆಯಿತು. ಆದರೂ 1582ರ ವೇಳೆಗೆ ಋತು–ತಿಂಗಳುಗಳ ಹೊಂದಾಣಿಕೆ ತಪ್ಪಿಹೋಯಿತು. ಪೋಪ್ 13ನೆಯ ಗ್ರಿಗರಿ 1582ರ ಅಕ್ಟೋಬರ್ ತಿಂಗಳಿನಲ್ಲಿ 5ರಿಂದ 15ರವರೆಗಿನ ದಿನಗಳನ್ನು ಬಿಟ್ಟುಬಿಡಲು ತಿಳಿಸಿದ. ದಿನಗಳನ್ನು ಸರಿಹೊಂದಿಸಲು, ನಾಲ್ಕರಿಂದ ಭಾಗವಾಗುವ ವರ್ಷಗಳಲ್ಲಿ ಫೆಬ್ರುವರಿಗೆ ಒಂದು ಹೆಚ್ಚು ದಿನವಾದರೂ, ನೂರು ವರ್ಷಗಳಾದಾಗ (1600, 1700, 1800, 1900, 2000 ಹೀಗೆ) 400ರಿಂದ ಭಾಗಿಸಲು ಬರುವ ವರ್ಷಗಳಲ್ಲಿ ಮಾತ್ರ ಫೆಬ್ರುವರಿಯಲ್ಲಿ ಒಂದು ದಿನ ಹೆಚ್ಚಿರಬೇಕೆಂದು ಮಾಡಿದ. ಎಂದರೆ 1600ರಲ್ಲಿ ಫೆಬ್ರುವರಿ 29 ದಿನ, 1700, 1800, 1900 ರಲ್ಲಿ ಇಲ್ಲ. ಮತ್ತೆ 2000 ರಲ್ಲಿ 29 ದಿನ. ಈ ಪಂಚಾಂಗವನ್ನು ಗ್ರಿಗೇರಿಯನ್ ಕ್ಯಾಲೆಂಡರ್ ಎನ್ನುವರು. ಇಂಗ್ಲೆಂಡಿನಲ್ಲಿ 1752ರಲ್ಲಿ ಗ್ರಿಗೇರಿಯನ್ ಕ್ಯಾಲೆಂಡರನ್ನು ಅನುಸರಿಸಲು ಆರಂಭಿಸಿದರು. ಕ್ಯಾಥಲಿಕ್ ದೇಶಗಳು ಗ್ರಿಗೇರಿಯನ್ ಕ್ಯಾಲೆಂಡರನ್ನು ಆ ಕೂಡಲೆ ಸ್ವೀಕರಿಸಿದರೂ ಪ್ರಾಟೆಸ್ಟೆಂಟ್ ದೇಶಗಳು ಹದಿನೆಂಟನೆಯ ಶತಮಾನದಲ್ಲಿ, ರಷ್ಯ 1918ರಲ್ಲಿ, ರುಮೇನಿಯ 1924ರಲ್ಲಿ ಇದನ್ನು ಜಾರಿಗೆ ತಂದುವು.

ಪಾಶ್ಚಾತ್ಯರಲ್ಲೂ ಜ್ಯೋತಿಷಿಗಳು 'ಎಫಿಮಿರಿಸ್' ಎಂಬ ಗ್ರಂಥವನ್ನು ಬಳಸುತ್ತಾರೆ. ಎಫಿಮಿರಿಸ್ ಭಾರತದ ಪಂಚಾಂಗವನ್ನು ಕೆಲಮಟ್ಟಿಗೆ ಹೋಲುತ್ತದೆ. ತಿಂಗಳಿನಲ್ಲಿ ಪ್ರತಿ ದಿನ ಮಧ್ಯಾಹ್ನ ಹನ್ನೆರಡು ಘಂಟೆಗೆ ಗ್ರಹಗಳ ಸ್ಥಾನಗಳನ್ನು ತೋರಿಸುತ್ತಾರೆ. ಪ್ರಪಂಚದ ಪ್ರಮುಖ ಸ್ಥಳಗಳಿಗೆಲ್ಲಾ ಅಕ್ಷಾಂಶ-ರೇಖಾಂಶಗಳ ಪಟ್ಟಿ ಇರುತ್ತದೆ. ಸೂರ್ಯೋದಯ ಮತ್ತು ಸೂರ್ಯಾಸ್ತಗಳ ಸಮಯವನ್ನೂ ತೋರಿಸುತ್ತಾರೆ.

ಯೆಹೂದ್ಯರು, ಮುಸಲ್ಮಾನರು ಮತ್ತು ಚೀನೀಯರ ಪಂಚಾಂಗಗಳು ಗ್ರಿಗೇರಿಯನ್ ಕ್ಯಾಲಂಡರಿಗಿಂತ ಬೇರೆಯಾಗಿವೆ.

ಯೆಹೂದ್ಯರ ಈಗಿನ ಪಂಚಾಂಗದಲ್ಲಿ ವರ್ಷವನ್ನು ಸೂರ್ಯನಿಂದಲೂ ತಿಂಗಳನ್ನು ಚಂದ್ರನಿಂದಲೂ ಎಣಿಸಿರುತ್ತಾರೆ.

ಕ್ರೈಸ್ತರ ಪಂಚಾಂಗ ಯೇಸು ಕ್ರಿಸ್ತನ ಜನನದಿಂದ ಲೆಕ್ಕವಿಡುತ್ತದೆ. ಆದುದರಿಂದ ಕ್ರಿಸ್ತನ ಜನನದ ಹಿಂದಿನ ವರ್ಷಗಳಲ್ಲಿ ಅವಧಿ ಸೂಚಿಸಬೇಕಾದರೆ, ಹೆಚ್ಚಿನ ಸಂಖ್ಯೆ ಮೊದಲು ಬರುತ್ತದೆ. ಕಡಮೆ ಸಂಖ್ಯೆ ಅನಂತರ ಬರುತ್ತದೆ. ಹತ್ತು ವರ್ಷಗಳ ಅವಧಿಯನ್ನು ಸೂಚಿಸುತ್ತಿದ್ದರೆ, ಕ್ರಿಸ್ತನಿಗೆ ಮೊದಲಾದರೆ ಕ್ರಿ. ಪೂ. 120–110 ಎಂದು ಬರೆಯುತ್ತೇವೆ. ಅನಂತರವಾದರೆ 110–120 ಎಂದು ಬರೆಯುತ್ತೇವೆ. ಕ್ರಿ. ಪೂ. ಅಥವಾ ಕ್ರಿ. ಶ. ಎಂದು ಸೂಚಿಸದಿದ್ದರೆ ಕ್ರಿಸ್ತನ ಅನಂತರ ಎಂದೇ ಅರ್ಥ.

ಮುಸಲ್ಮಾನರ ಪಂಚಾಂಗ ಮಹಮ್ಮದರು ಮೆಕ್ಕಾ ಬಿಟ್ಟುಹೋದ ದಿನದಿಂದ ಆರಂಭವಾಗುತ್ತದೆ. 622ರಲ್ಲಿ ನಡೆದ ಈ ಘಟನೆಯಿಂದ ಹಿಜಿರಾ ಎಂಬ ಶಕೆ ಆರಂಭವಾಯಿತು. ಅವರು ವರ್ಷಕ್ಕೆ 354 ದಿನಗಳೆಂದು ಇಟ್ಟುಕೊಂಡಿದ್ದಾರೆ.

ಎಲ್ಲ ವರ್ಷಗಳೂ ಒಂದೇ ರೀತಿಯಾಗಿದ್ದು ಒಂದೇ ದಿವಸದಿಂದ ಆರಂಭವಾಗುವಂಥ ಪಂಚಾಂಗವನ್ನು ಮಾಡಬೇಕೆಂದು ಯತ್ನಗಳು ನಡೆಯುತ್ತಿವೆ. ಆದರೆ ಪ್ರಪಂಚದಲ್ಲಿ ವಿವಿಧ ಧರ್ಮಗಳವರು, ರಾಷ್ಟ್ರಗಳವರು ಇರುವುದರಿಂದ ಈ ವಿಷಯದಲ್ಲಿ ಒಮ್ಮತ ಕಷ್ಟ. ಇದು ಯಶಸ್ವಿಯಾಗಲು ಎಲ್ಲ ರಾಷ್ಟ್ರಗಳಲ್ಲಿ ಒಪ್ಪಂದ ಏರ್ಪಡಬೇಕು.

ನೋಡಿ : ಋತುಗಳು ; ತಿಂಗಳು

## ಪತ್ರಿಕೋದ್ಯಮ

ನೋಡಿ : ವೃತ್ತಪತ್ರಿಕೆ

## ಪದಲಾಂಛನ

ಭಾರತದ ರಾಷ್ಟ್ರಾಧ್ಯಕ್ಷರು ಸಂಚರಿಸುವಾಗ ಅವರ ಕಾರಿನ ಮುಂಭಾಗದಲ್ಲಿ ಒಂದು ಧ್ವಜ ಹಾರಾಡುತ್ತಿರುತ್ತದೆ. ಇದು ಭಾರತದ ರಾಷ್ಟ್ರಧ್ವಜವಲ್ಲ. ಬೇರೆ ಬಗೆಯದು.

ಏಕೆ ? ಅದು ಅವರ ಪದಲಾಂಛನ—ಅವರ ಪದವಿಯನ್ನು ತೋರಿಸುವ ಗುರುತು. ಆ ಬಾವುಟ ಅವರ ನಿವಾಸ–ರಾಷ್ಟ್ರಪತಿಭವನ–ದಮೇಲೂ ಹಾರಾಡುತ್ತಿರುತ್ತದೆ.

ಮೈಸೂರಿನಲ್ಲಿ ದಸರಾ ಮಹೋತ್ಸವ ಆಚರಿಸುವಾಗ ಮಹಾರಾಜರು ಅರಮನೆಯಲ್ಲಿ ದರ್ಬಾರು ನಡೆಸುತ್ತಾರೆ. ಸಿಂಹಾಸನವನ್ನೇರುತ್ತಾರೆ. ಪಟ್ಟದ ಕತ್ತಿ ಧರಿಸುತ್ತಾರೆ. ಪಟ್ಟದಾನೆ ಪಟ್ಟದ ಕುದುರೆಗಳು ಬಂದು ಗೌರವ ಸಲ್ಲಿಸುತ್ತವೆ. ಇವೆಲ್ಲ ಮಹಾರಾಜರ ಪದವಿಸೂಚಕ.





ಭಾರತದ ರಾಷ್ಟ್ರಪತಿಯ ಪದಲಾಂಛನ

ಪದಲಾಂಛನ ಎಂದರೆ ಪದವಿಯ ಕುರುಹು ಅಥವಾ ಚಿಹ್ನೆ ಎಂದು ಅರ್ಥ. ಒಬ್ಬ ಮನುಷ್ಯನನ್ನೂ ಅವನ ಪದವಿಯನ್ನೂ ನೋಡಿದ ಕೂಡಲೇ ಆತ ಯಾರು ಎಂದು ಗುರುತು ಹಿಡಿಯುವುದೇ ಪದಲಾಂಛನದ ಮುಖ್ಯ ಉದ್ದೇಶ.

ಭಾರತದ ರಾಷ್ಟ್ರಾಧ್ಯಕ್ಷರಿಗೆ ವಿಶೇಷ ಧ್ವಜಲಾಂಛನವಿದೆ. ಈ ಬಾವುಟವನ್ನು ಗಣರಾಜ್ಯದಿನವಂದು ಅಥವಾ ರಾಷ್ಟ್ರಗಳ ಮುಖ್ಯಸ್ಥರ ಸ್ವಾಗತ ಇಂಥ ಪ್ರಮುಖ ಸಮಾರಂಭಗಳಲ್ಲಿ ಪ್ರದರ್ಶಿಸಲಾಗುವುದು. ಅಧ್ಯಕ್ಷರ ಈ ಸ್ವಂತ ಬಾವುಟವನ್ನು ಅವರ ಕಾರಿನ ಮೇಲೆ ಹಾರಿಸಲಾಗುವುದು. ಅವರು ವಿದೇಶೀಯ ನಾಯಕರೊಡನೆ ಪ್ರಯಾಣ ಮಾಡುವಾಗಲೂ ಈ ಪತಾಕೆ ಹಾರಿಸುವರು. ವಿಮಾನದಲ್ಲಿ ಅಧ್ಯಕ್ಷರು ಪ್ರಯಾಣ ಮಾಡುವಾಗ ಅವರ ಈ ಲಾಂಛನವನ್ನೇ ಹಾರಿಸಲಾಗುತ್ತದೆ.

ನ್ಯಾಯಾಧಿಪತಿಗಳು ನ್ಯಾಯಾಲಯದಲ್ಲಿ ತೀರ್ಪು ಘೋಷಿಸುವ ಸ್ಥಾನದಲ್ಲಿರುವಾಗ, ನಗರಪಾಲ (ಮೇಯರ್) ನಗರ ರಕ್ಷಣೆಯ ಜವಾಬ್ದಾರಿ ನಿರ್ವಹಿಸುವಾಗ, ವಿಶ್ವವಿದ್ಯಾಲಯದ ಸಮಾರಂಭದಲ್ಲಿ ಕುಲಪತಿ ಭಾಗವಹಿಸುವಾಗ ಪದಲಾಂಛನಗಳು ಇರಬೇಕೆಂಬುದು ಕಡ್ಡಾಯ. ಹಲವರು ಮಠಾಧಿಪತಿಗಳಿಗೆ ಪ್ರತ್ಯೇಕ ಲಾಂಛನಗಳಿರುತ್ತವೆ. ಅವುಗಳನ್ನು ಅವರು ಮಹೋತ್ಸವಗಳಲ್ಲಿ ಉಪಯೋಗಿಸುತ್ತಾರೆ.

ಪದಲಾಂಛನ ಹೇಗೆ ಆರಂಭವಾಯಿತು ಎಂದು ನಿರ್ದಿಷ್ಟವಾಗಿ ಹೇಳುವುದು ಕಷ್ಟ. ಹಿಂದಿನಕಾಲದ ಜನರಿಗೆ ರಾಜನ ಅಥವಾ ಮುಖ್ಯಸ್ಥನ ಪ್ರಾತಿನಿಧ್ಯ ಸೂಚಿಸಲು ಇವು ಹುಟ್ಟಿದುವೆಂದೂ ಇಂಥ ಸಂಕೇತರೂಪಗಳನ್ನು ಕಂಡಾಗ ಅವರು ಸಹಜವಾಗಿ ವಿಧೇಯತೆಯಿಂದ ವರ್ತಿಸುತ್ತಿದ್ದರೆಂದೂ ಒಂದು ಅಭಿಪ್ರಾಯವಿದೆ. ಪದಲಾಂಛನ ಯೂರೋಪಿನಲ್ಲಿ ದೊಡ್ಡ ಕಲೆಯಾಗಿ ಬೆಳೆಯಿತು. ಹಳೆಯ ಪದಲಾಂಛನಗಳು ಇಂದಿಗೂ ಅನೇಕ ದೇಶಗಳಲ್ಲಿ ಕಂಡುಬರುತ್ತವೆ.

ಪದಲಾಂಛನಗಳು ವ್ಯಕ್ತಿಯ ಸ್ಥಾನಮಾನ ಸೂಚಿಸುತ್ತವೆ.

'ಪ್ರಥಮ ಪ್ರಜೆ'ಯ ಅಧಿಕಾರ ದಂಡ

## ಪನಾಮ ಕಾಲುವೆ

ದೊಡ್ಡ ಹಡಗೊಂದು ಅಟ್ಲಾಂಟಿಕ್ ಸಾಗರದಿಂದ ಶಾಂತಸಾಗರದತ್ತ ಹೊರಟಿದೆ ಎನ್ನೋಣ. ಈಗ ಅದು ನೇರವಾಗಿ ಅಟ್ಲಾಂಟಿಕ್‌ನಿಂದ ಶಾಂತಸಾಗರಕ್ಕೆ ಸಾಗುತ್ತದೆ. ಮಧ್ಯೆ ಹಡಗು 26 ಮೀಟರುಗಳು ಮೇಲಕ್ಕೆ ಹೋಗಿ ಒಂದು ಕೃತಕ ಸರೋವರವನ್ನು–ಮನುಷ್ಯ ನಿರ್ಮಿಸಿದ ಅತ್ಯಂತ ದೊಡ್ಡ ಸರೋವರಗಳಲ್ಲಿ ಒಂದಾದ ಗಟುನ್ ಸರೋವರವನ್ನು–ದಾಟಿ, ಕ್ರಮವಾಗಿ ಸಾಗರದ ಮಟ್ಟಕ್ಕಿಳಿದು ಶಾಂತಸಾಗರವನ್ನು ಪ್ರವೇಶಿಸುತ್ತದೆ.

ಒಂದು ಕಾಲದಲ್ಲಿ ಆ ಸಾಗರಗಳ ಮಧ್ಯೆ ಸಣ್ಣ ಬೆಟ್ಟಗಳ ಸಾಲಿತ್ತು. ಹಡಗು ದಕ್ಷಿಣ ಅಮೆರಿಕವನ್ನು ಬಳಸಿಕೊಂಡು ಸಾಗಬೇಕಾಗಿತ್ತು.

ಈಗ ನೇರವಾಗಿ ಹೋಗುವುದರಿಂದ 12,668 ಕಿಲೊಮೀಟರುಗಳ ಪ್ರಯಾಣ ಉಳಿಯಿತು ; ಪ್ರಯಾಣದ ಅವಧಿ 20 ದಿನಗಳ ಮಟ್ಟಿಗೆ ಕಡಮೆಯಾದಂತಾಯಿತು.

ಇದು ಸಾಧ್ಯವಾಗಿರುವುದು ಪನಾಮ ಕಾಲುವೆಯಿಂದ.

ಈ ಕಾಲುವೆ ಮನುಷ್ಯನ ಶಿಲ್ಪವಿಜ್ಞಾನದ ಒಂದು ಪವಾಡ.

1500ರ ಸುಮಾರಿನಲ್ಲೇ ಅಟ್ಲಾಂಟಿಕ್ ಮತ್ತು ಶಾಂತಸಾಗರಗಳನ್ನು ಕೂಡಿಸಲು ಕಾಲುವೆ ಕಟ್ಟಬಹುದೆಂಬ ಯೋಜನೆ ಸಿದ್ಧವಾಗಿತ್ತು. ಮುಂದೆ ಕೆಲವು ಶತಮಾನಗಳ ಕಾಲ ಅನೇಕ ಮಾರ್ಗಗಳು ಸೂಚಿಸಲ್ಪಟ್ಟುವು. ಆದರೆ ಯಾವುದೂ ನಿರ್ಧಾರವಾಗಲಿಲ್ಲ. ಮೆಕ್ಸಿಕನ್ ಯುದ್ಧಾನಂತರ ಶಾಂತಸಾಗರದ ತೀರ ಸಂಯುಕ್ತ ಸಂಸ್ಥಾನಕ್ಕೆ ಸೇರಿದ ಮೇಲೆ, 1850ರಲ್ಲಿ ಫ್ರೆಂಚರು ಫರ್ಡಿನೆಂಡ್ ಡಿ ಲೆಸೆಪ್ಸ್‌ನ ನೇತೃತ್ವದಲ್ಲಿ ಪನಾಮ ಕಾಲುವೆಯ ನಿರ್ಮಾಣದ ಕೆಲಸವನ್ನು ಆರಂಭಿಸಿದರು. ಅವನು ಆದೇ ತಾನೆ ಸುಯೆಜ್ ಕಾಲುವೆಯನ್ನು

ಪೂರ್ಣಗೊಳಿಸಿದ್ದ. ಆದರೆ 'ಹಳದಿ ಜ್ವರ' (ಮಲೇರಿಯ) ದಿಂದ ಹದಿನಾರು ಸಾವಿರ ಕೆಲಸಗಾರರು ಅಸು ನೀಗಿದರು. ಹನ್ನೊಂದು ವರ್ಷ ಪರಿಶ್ರಮದ ಅನಂತರ ಈ ಪ್ರಯತ್ನ ನಿಂತಿತು. 1903ರಲ್ಲಿ ಸ್ವತಂತ್ರ ಪನಾಮ ಮತ್ತು ಸಂಯುಕ್ತ ಸಂಸ್ಥಾನಗಳಲ್ಲಿ ಒಪ್ಪಂದವಾಗಿ, ಸಂಯುಕ್ತ ಸಂಸ್ಥಾನ ಈಗ ಪನಾಮ ಕಾಲುವೆ ಇರುವ ಪ್ರದೇಶದಲ್ಲಿ ಸಂಪೂರ್ಣ ಹಕ್ಕು ಪಡೆಯಿತು.

ಕಾಲುವೆಯ ಕೆಲಸ 1904ರಲ್ಲಿ ಪುನಃ ಆರಂಭವಾಯಿತು. 1914 ಆಗಸ್ಟ್ 15 ರಂದು ಕಾಲುವೆಯನ್ನು ವಾಣಿಜ್ಯಕ್ಕಾಗಿ ತೆರೆದರು. ಇದನ್ನು ನಿರ್ಮಿಸಲು ದುಡಿದ ಕಾರ್ಮಿಕರ ಸಂಖ್ಯೆ ಸುಮಾರು 65,000.

ಪನಾಮ ಕಾಲುವೆಯನ್ನು ಹಡಗುಗಳು ಸಂಚರಿಸಲು ಅನುಕೂಲವಾಗುವಂತೆ ಹೆಬ್ಬಾಗಿಲುಗಳಿಂದ ಕಟ್ಟೆಯಂತೆ ಏರ್ಪಡಿಸಿ ಕಟ್ಟಲಾಗಿದೆ. ಹಡಗು ಸಾಗುವಾಗ ಹೆಬ್ಬಾಗಿಲುಗಳಿಂದ ಸಮುದ್ರಮಟ್ಟಕ್ಕಿಂತ ಹೆಚ್ಚು ಅಥವಾ ಕಡಮೆ ಮಟ್ಟಕ್ಕೆ ನೀರನ್ನು ತಂದು ಅನುಕೂಲ ಮಾಡಿಕೊಡುವ ವ್ಯವಸ್ಥೆ ಇದೆ. ಮೂರು ಹೆಬ್ಬಾಗಿಲುಗಳಿವೆ.

ಕಾಲುವೆ ವಾಯುವ್ಯದಿಂದ ಆಗ್ನೇಯಕ್ಕೆ ಹರಿಯುತ್ತದೆ. ಕಾಲುವೆಯ ಉದ್ದ ಎಂಬತ್ತು ಕಿಲೊಮಿಾಟರು. ಎಲ್ಲಿಯೂ ಹನ್ನೆರಡೂವರೆ ಮಿಾಟರು ಕಡಮೆ ಆಳವಿಲ್ಲ. ಕಾಲುವೆಯ ಎರಡೂ ಬದಿಗಳಿಗೆ ಎಂಟು ಕಿಲೊಮಿಾಟರು ಭೂಮಿ ಕಾಲುವೆ ಪ್ರದೇಶವಾಗಿದೆ. ಪನಾಮ ಕಾಲುವೆಯಲ್ಲಿ ಎರಡು ಸಂಚಾರ ಮಾರ್ಗಗಳಲ್ಲೂ ಒಟ್ಟಿಗೆ ಹಡಗುಗಳು ಹೋಗಬಹುದು. ಆದರೆ ಭಾರೀ ಹಡಗುಗಳಿಗೆ ಈ ವಿಸ್ತಾರ ಸಾಲದು.

ಕಾಲುವೆಯನ್ನು ಉಪಯೋಗಿಸಲು ಶುಲ್ಕ ಕೊಡಬೇಕು. ಸರಕು ತುಂಬಿದ ಹಡಗಿಗೆ ಒಂದು ಟನ್ನಿಗೆ 90 ಸೆಂಟು ; ಹಡಗು ತೂಗಾಡದಿರಲು ತಳಕ್ಕೆ ಭಾರ ಕಟ್ಟಿರುವ ಸರಕಿಲ್ಲದ ಹಡಗಿಗೆ ಟನ್ನೊಂದಕ್ಕೆ 72 ಸೆಂಟು.

ಪನಾಮ ಕಾಲುವೆ ಸಂಯುಕ್ತ ಸಂಸ್ಥಾನಕ್ಕೆ ಸೇರಿದೆ. ಅದರ ರಕ್ಷಣೆ ಮತ್ತು ಭದ್ರತೆಯನ್ನು ಸಂಯುಕ್ತ ಸಂಸ್ಥಾನ ನೋಡಿಕೊಳ್ಳುತ್ತದೆ. ಕಾಲುವೆಯ ಮೂಲಕ ಅವರು ಸುಲಭವಾಗಿ ತಮ್ಮ ಸೈನ್ಯವನ್ನು ಒಂದು ಸಾಗರದಿಂದ ಇನ್ನೊಂದಕ್ಕೆ ರವಾನಿಸಬಹುದು. ಈ ಕಾಲುವೆ ಇಪತ್ತನೆಯ ಶತಮಾನದ ವಾಣಿಜ್ಯದ ಮೇಲೆ ಅಪಾರ ಪ್ರಭಾವವನ್ನು ಬೀರಿದೆ. ಕಾಲುವೆಯನ್ನು ಉಪಯೋಗಿಸುವ ಹಡಗುಗಳಿಗೆ ವರ್ಷಕ್ಕೆ 15 ಕೋಟಿ ಡಾಲರು ಉಳಿತಾಯವಾಗುತ್ತದೆ. ಕಾಲುವೆ ಪ್ರಾರಂಭವಾದ ವರ್ಷ 1,108 ಹಡಗುಗಳು ಇದನ್ನು ಬಳಸಿದುವು. 1965ರಲ್ಲಿ 12,000 ಹಡಗುಗಳು ಬಳಸಿದುವು. 1951ರಿಂದ ಲಾಭ–ನಷ್ಟ ಎರಡೂ ಆಗಕೂಡದೆಂಬ ತತ್ತ್ವದ ಮೇಲೆ ಈ ಕಾಲುವೆಯ ವ್ಯವಸ್ಥೆ ನಡೆದಿದೆ.

ನೋಡಿ : ಅಟ್ಲಾಂಟಿಕ್‌ಸಾಗರ; ಅಮೆರಿಕದ ಸಂಯುಕ್ತ ಸಂಸ್ಥಾನ; ಶಾಂತಸಾಗರ

## ಪರ್ಯಾಯದ್ವೀಪ

ಮೂರು ಕಡೆ ನೀರಿನಿಂದ ಆವೃತವಾಗಿ, ಇನ್ನೊಂದು ಕಡೆ ಯಾವುದಾದರೂ ದೊಡ್ಡ ಭೂಭಾಗಕ್ಕೆ ಭೂಸಂಧಿಯಿಂದ ಸೇರಿದ ಪ್ರದೇಶ ಪರ್ಯಾಯದ್ವೀಪ ಎನ್ನುತ್ತಾರೆ. ಎಂಟು ಕಿಲೊಮಿಾಟರುಗಳಿಂದ ಹಿಡಿದು ನೂರಾರು ಕಿಲೊಮಿಾಟರುಗಳಷ್ಟು ಉದ್ದವಿರುವ ಪರ್ಯಾಯ [illegible]ಪಗಳಿವೆ.

ಸಮುದ್ರದತ್ತ ಚಾಚಿಕೊಂಡು, ಸುಮಾರಾಗಿ ಎಲ್ಲ ಕಡೆಗಳಲ್ಲೂ ನೀರಿನಿಂದ ಆವೃತವಾಗಿರುವ ಭೂಮಿಗೂ ಪರ್ಯಾಯದ್ವೀಪವೆನ್ನುತ್ತಾರೆ. ಭೂಭಾಗವೊಂದರ ಸಮುದ್ರಕ್ಕೆ ಚಾಚಿಕೊಂಡಿದ್ದು, ದೇಶ ಅಥವಾ ನಾಡಿಗೆ ಸೇರಿರುವ ಭಾಗ ಬಿಟ್ಟು ಉಳಿದ ಎಲ್ಲ ಕಡೆಗಳೂ ನೀರಿನಿಂದ ಆವೃತವಾಗಿದ್ದರೆ ಭೂಶಿರ ಎನ್ನುತ್ತಾರೆ. ದಕ್ಷಿಣ ಆಫ್ರಿಕದಲ್ಲಿರುವ ಗುಡ್‌ಹೋಪ್, ಭೂಶಿರಕ್ಕೆ ಉದಾಹರಣೆ. ಭೂಶಿರಕ್ಕೂ ಪರ್ಯಾಯದ್ವೀಪಕ್ಕೂ ಒಂದು ವ್ಯತ್ಯಾಸವಿದೆ. ಭೂಸಂಧಿಯೊಂದರಿಂದ ಪರ್ಯಾಯದ್ವೀಪ ಮುಖ್ಯ ಭೂಭಾಗಕ್ಕೆ ಸೇರಿರುತ್ತದೆ.

ಕೆಲವು ಪರ್ಯಾಯದ್ವೀಪಗಳು ಮುಖ್ಯ ಭೂಮಿಗೆ ಕೂಡಿಕೊಂಡಿರುತ್ತವೆ. ಭಾರತ ಇದಕ್ಕೆ ಉತ್ತಮ ಉದಾಹರಣೆ.

ಸ್ಕ್ಯಾಂಡಿನೇವಿಯ, ಮಲಯ, ಅರೇಬಿಯ ದೊಡ್ಡ ಪರ್ಯಾಯ ದ್ವೀಪಗಳು.

## ಪರಮಾಣು ಶಕ್ತಿ

ಅಡುಗೆ ಮಾಡಬೇಕು. ಲಾರಿ ಓಡಿಸಬೇಕು. ಚಂದ್ರನತ್ತ ಸಾಗಬೇಕು.

ಪ್ರತಿಯೊಂದಕ್ಕೂ 'ಶಕ್ತಿ' ಬೇಕು. ಈ ಶಕ್ತಿಯನ್ನು ಒದಗಿಸುವ ಮೂಲ ಇಂಧನ.

ಕಟ್ಟಿಗೆ, ಕಲ್ಲಿದ್ದಲು, ವಿದ್ಯುಚ್ಛಕ್ತಿ ಮುಂತಾದುವು ಇಂಧನ ಮೂಲಗಳು, ಇಂಧನಗಳನ್ನು ಉರಿಸುವುದರಿಂದ ಶಕ್ತಿಯ ಉತ್ಪಾದನೆ ಸಾಧ್ಯ. ಉತ್ಪನ್ನವಾದ ಶಕ್ತಿಯನ್ನು ತನ್ನ ಕೆಲಸಕಾರ್ಯಗಳಿಗೆ ಬಳಸಿಕೊಳ್ಳುವುದು ಹೇಗೆಂಬುದನ್ನು ಬೆಂಕಿಯ ಬಳಕೆ ತಿಳಿದಂದಿನಿಂದ ಇಂದಿನವರೆಗಿನ ಅನುಭವದಿಂದ ಮನುಷ್ಯ ಕಲಿತುಕೊಂಡಿದ್ದಾನೆ. ಇಪ್ಪತ್ತನೆಯ ಶತಮಾನದಲ್ಲಿ ಇನ್ನೊಂದು ಬಗೆಯ ಶಕ್ತ್ಯುತ್ಪಾದನೆ ಮಾನವನಿಗೆ ಗೊತ್ತಾಗಿದೆ. ಅದು ಪರಮಾಣು ಶಕ್ತಿ. ಅದರ ಉತ್ಪಾದನೆ ಜಟಿಲ; ಅತೀವ ವೈಜ್ಞಾನಿಕ. ಪರಮಾಣುವಿನ ಶಕ್ತಿಯನ್ನು ಊಹಿಸುವುದೂ ಕಷ್ಟ. ಇಡೀ ಭೂಮಂಡಲದ ಜೀವಗಳನ್ನೆಲ್ಲ ಪರಮಾಣು ಶಕ್ತಿ ಕ್ಷಣದಲ್ಲಿ ಸುಟ್ಟು ಬೂದಿಮಾಡಬಲ್ಲುದು.

ಪರಮಾಣು ಶಕ್ತಿಯನ್ನು ಪಡೆಯುವುದು ಹೇಗೆ ಎಂಬ ಕಲ್ಪನೆಯ ಉಗಮ ಐನ್‌ಸ್ಟೀನರ ಸಾಪೇಕ್ಷ ಸಿದ್ಧಾಂತದಲ್ಲಿ. ಪ್ರಪಂಚದಲ್ಲಿ ಯಾವುದೆ ರೂಪದ ವಸ್ತು ನಶಿಸಿಹೋಗುವಂತಿಲ್ಲ. ಇಂಧನ ಉರಿದಾಗ ಅದರ ವಸ್ತುರಾಶಿಯು ಬೆಳಕು, ಶಾಖ, ಕೆಲವು ಅನಿಲಗಳು, ಬೂದಿ ಮುಂತಾದುವಾಗಿ ಪರಿವರ್ತಿತವಾಗುತ್ತದೆ. ವಸ್ತುರಾಶಿಯ ನಾಶವೆಂದರೆ ಅದು ಚೈತನ್ಯವಾಗಿ ಮಾರ್ಪಡುವುದು. ಚೈತನ್ಯವಾಗಿ ಪರಿವರ್ತನೆ ಹೊಂದುವ ವಸ್ತುವಿನ ತೂಕ (ಮಾಸ್) 'ಎಮ್' ಎಂದುಕೊಳ್ಳೋಣ, ಇದು ಪರಿವರ್ತನೆ ಹೊಂದಿದಾಗ ಉತ್ಪತ್ತಿಯಾಗುವ ಶಕ್ತಿ 'ಇ' ಎಂದುಕೊಳ್ಳೋಣ. ಇವೆರಡರ ಸಂಬಂಧವನ್ನು ತೋರಿಸಲು ಐನ್‌ಸ್ಟೀನ್ ಒಂದು ಸಮೀಕರಣವನ್ನು ಕೊಟ್ಟರು.

$$E = Mc^2$$

c ಎಂದರೆ ಬೆಳಕಿನ ವೇಗ. ಬೆಳಕು ಸೆಕೆಂಡಿಗೆ 3 ಲಕ್ಷ ಕಿಲೊಮಿಾಟರು ಅಥವಾ $3 \times 10^{10}$ಸೆ. ಮಿಾಟರ್ ದಾಟುತ್ತದೆ. ಎಂದರೆ $E = M\ (3 \times 10^{10})^2$ ಎಂದಂತಾಯಿತು.

'ಎಮ್' ಎಷ್ಟೇ ಸ್ವಲ್ಪವಿದ್ದರೂ 'ಇ' ಅಗಾಧವಾಗಿರುತ್ತದೆ. ಇದು ಸಾಮಾನ್ಯ ಮನುಷ್ಯನ ಕಲ್ಪನೆಗೆ ಮಾರಿದ್ದು ಎನ್ನುವುದು [illegible] ಇದರಿಂದಲೇ ಪರಮಾಣು ಶಕ್ತಿ [illegible] [illegible]

ದೊಡ್ಡ ಯುದ್ಧದ ಹಡಗನ್ನು ಭೂಮಿಯ ಸುತ್ತಲೂ ಸುತ್ತಿಸಲು ಬೇಕಾಗುವಷ್ಟು ಶಕ್ತಿ ಒಂದು ಗ್ರಾಮ್ ವಸ್ತುರಾಶಿಯನ್ನು ಸಂಪೂರ್ಣ ಪರಿವರ್ತಿಸಿದಾಗ ಸಿಗುತ್ತದೆ.

ವಸ್ತುವಿನ ದ್ರವ್ಯರಾಶಿಯನ್ನು ಶಕ್ತಿಯನ್ನಾಗಿ ಮಾರ್ಪಡಿಸುವುದು ಹೇಗೆ ಎಂಬುದನ್ನು ವಿಜ್ಞಾನಿಗಳು ಪ್ರಯೋಗಗಳಿಂದ ಕಂಡುಹಿಡಿಯಬೇಕಾಗಿತ್ತು. ಅಗಾಧ ಶಕ್ತಿಯನ್ನು ಉತ್ಪಾದಿಸುವ ರಹಸ್ಯ ಪತ್ತೆಯಾಗಿಬಿಟ್ಟರೆ ಯಾವ ಶತ್ರುವನ್ನಾದರೂ ಗೆಲ್ಲಬಹುದೆಂಬ ಆಲೋಚನೆ ಮನುಷ್ಯನಿಗೆ ಬಂದುದು ಎರಡನೆಯ ಮಹಾಯುದ್ಧದ ಸಮಯದಲ್ಲಿ. ಜರ್ಮನಿಯಲ್ಲಿ ಈ ಬಗೆಯ ಬೃಹತ್ ಶಕ್ತಿಯನ್ನು ತಯಾರಿಸುವ ಈ ಪ್ರಯತ್ನಗಳು ನಡೆಯುತ್ತಿರುವುದರ ಸುಳಿವು ಸಿಕ್ಕ ತಕ್ಷಣ, ಇತರ ದೇಶಗಳವರೂ ಆ ದಿಸೆಯಲ್ಲಿ ಪ್ರಯತ್ನಗಳನ್ನು ನಡೆಸಿದರು.

ಯುರೇನಿಯಂ ಎಂಬ ಮೂಲವಸ್ತುವಿನ ಪರಮಾಣುಬೀಜಗಳನ್ನು ಒಡೆದು ಪರಮಾಣು ಶಕ್ತಿಯನ್ನು ಗಳಿಸಿಕೊಳ್ಳುವ ಪ್ರಯೋಗಗಳು ಯಶಸ್ವಿಯಾದುವು. ಅಗಾಧವಾದ ಶಕ್ತಿಯನ್ನು ಚೆಲ್ಲುವ ಪರಮಾಣುಬೀಜ ಒಡೆಯುವ ಕ್ರಿಯೆಗೆ ಪರಮಾಣುವಿದಳನ ಎಂದು ಹೆಸರು.

ಪರಮಾಣುವಿದಳನ ಕ್ರಿಯೆಯ ಮೂಲಕ ಮೊಟ್ಟಮೊದಲಿಗೆ ಪರಮಾಣು ಶಕ್ತಿ 1942ರ ಡಿಸೆಂಬರ್ 2 ರಂದು ಅಮೆರಿಕದ ಮ್ಯಾನ್‌ಹಟನ್ ಎಂಬಲ್ಲಿರುವ ಓಕ್‌ರಿಜ್ ಸಂಶೋಧನಾಲಯದಲ್ಲಿ ಹೊರಬಿದ್ದಿತು. ಪ್ರಯೋಗದ ಅಧ್ವರ್ಯು ಪ್ರಖ್ಯಾತ ವಿಜ್ಞಾನಿ ಎನ್ರಿಕೊ ಫರ್ಮಿ. ಆ ಪ್ರಯೋಗದ ಆಧಾರದ ಮೇಲೆ ದಾನ್‌ಫಾರ್ಡ್ ಎಂಬಲ್ಲಿ 1944ರಲ್ಲಿ ಪರಮಾಣು ಬಾಂಬಿನ ತಯಾರಿಕೆ ಪ್ರಾರಂಭವಾಯಿತು.

ಪರಮಾಣು ಬಾಂಬು ಪರಮಾಣುವಿದಳನ ಶಕ್ತಿಯ ಮಾರಕರೂಪ. ಶತ್ರು ನೆಲೆಯ ಮೇಲೆ ಬೇಕೆಂದಾಗ ಪರಮಾಣುವಿದಳನ ನಡೆಯುವಂತೆ ಮಾಡಿದರೆ ಆ ನೆಲೆ ನಾಶವಾಗುತ್ತದೆ. ಏಕಾಏಕಿ ಸರಪಳಿ ಕ್ರಿಯೆ ನಡೆದು ಕ್ಷಣಮಾತ್ರದಲ್ಲಿ ಸಿಡಿಯುತ್ತದೆ. ಸರಪಳಿ ಕ್ರಿಯೆ ಬೇಕೆಂದಾಗ ಸಂಭವಿಸುವಂಥ ಪರಮಾಣುವಿದಳನ ಕೋಶವೊಂದು ಸೃಷ್ಟಿಯಾಗಿರುತ್ತದೆ. ಅದು ಪರಮಾಣು ಬಾಂಬು. ಮೊಟ್ಟಮೊದಲಿಗೆ ಈ ಬಾಂಬನ್ನು ಸೃಷ್ಟಿಸಿದ್ದು ಅಮೆರಿಕದ ಸಂಯುಕ್ತ ಸಂಸ್ಥಾನ.

ಪರಮಾಣುವಿದಳನದ ಬಾಂಬನ್ನು ಮಾಡಿದಂತೆಯೇ ಪರಮಾಣು ಸಂಲಯನದ ಬಾಂಬಿನ ನಿರ್ಮಾಣವಾಯಿತು. ಅಂಥ ಬಾಂಬು ಜಲಜನಕ ಬಾಂಬು.

ಪರಮಾಣುಶಕ್ತಿಯ ಮಾರಕಸ್ವರೂಪ ಅತಿ ಭಯಂಕರವಾಗಿರುವಂತೆ ಅದರ ಶಾಂತಿಯುತ ಉಪಯೋಗವೂ ಅನಾದೃಶವಾದದ್ದು. ಮಾನವ ಪ್ರಗತಿಗಾಗಿಯೂ ಈ ಶಕ್ತಿಯನ್ನು ಉಪಯೋಗಿಸಬಹುದು. ಮರಳುಗಾಡುಗಳಲ್ಲಿ ಉತ್ತಮ ವ್ಯವಸಾಯವಾಗುವಂತೆ ಇದು ನೆರವಾಗಬಲ್ಲುದು. ರಿಯಾಕ್ಟರ್‌ಗಳಲ್ಲಿ ಪರಮಾಣುಶಕ್ತಿಯನ್ನು ಪಳಗಿಸಿ ಶಾಂತಿಕಾರ್ಯಗಳಿಗಾಗಿ ಸಮೃದ್ಧ ಜೀವನದ ಸಲುವಾಗಿ ಬಳಸಬಹುದು. ಜೀವಶಾಸ್ತ್ರದ ಕ್ಷೇತ್ರದಲ್ಲಿ, ಕೈಗಾರಿಕಾ ಹಾಗೂ ವೈದ್ಯಕೀಯ ಕ್ಷೇತ್ರದಲ್ಲಿ ಬಳಸಿಕೊಳ್ಳಲು ಪರಮಾಣು ಶಕ್ತಿಯಿಂದ ಐಸೊಟೋಪ್‌ಗಳೆಂಬ ಧಾತುರೂಪಗಳನ್ನು ತಯಾರಿಸಬಹುದು.

ಪರಮಾಣು ರಿಯಾಕ್ಟರಿನಿಂದ ವಿಕಿರಣಕಾರಕ ಮೂಲವಸ್ತುಗಳ ಬೇರೆ ಬೇರೆ ರೂಪಗಳಾದ ವಿಕಿರಣ ಸಮಸ್ಥಾನಿಗಳನ್ನು ಪಡೆಯಬಹುದು. ವಿಕಿರಣ ಸಮಸ್ಥಾನಿಗಳನ್ನು ವೈದ್ಯಶಾಸ್ತ್ರದಲ್ಲಿ ವಿಪುಲವಾಗಿ ಬಳಸುತ್ತಾರೆ. ದೇಹದಲ್ಲಿ ನಡೆಯುತ್ತಿರುವ ರಕ್ತಸಂಚಲನೆ, ಶರ್ಕರಪಿಷ್ಟಾದಿಗಳ ಅಂಶ, ವಿವಿಧ ರಸ ಜೀರ್ಣೋದಕಗಳ ಉತ್ಪತ್ತಿ ಇವುಗಳ ಸ್ವರೂಪವನ್ನು ವಿಕಿರಣ ಸಮಸ್ಥಾನಿಗಳ ಸಹಾಯದಿಂದ ಸುಲಭವಾಗಿ ತಿಳಿಯಬಹುದು. ವಿಕಿರಣ ಸಮಸ್ಥಾನಿಯನ್ನು ಅಲ್ಪ ಪ್ರಮಾಣದಲ್ಲಿ ಆಹಾರದಲ್ಲಿ ಸೇವಿಸಿದರೆ ಅದು ದೇಹದೊಳಗೆ ಆವರಿಸಿ ವಿಕಿರಣವನ್ನು ಹೊರಚೆಲ್ಲುತ್ತದೆ. ಆ ವಿಕಿರಣಗಳನ್ನು ವಿಶಿಷ್ಟ ಸಾಧನಗಳ ಮೂಲಕ ಅಳೆಯಬಹುದು. ದೇಹದ ಅವಯವಗಳು ಹೀರಿಕೊಂಡ ಪ್ರಮಾಣ, ಅವುಗಳಲ್ಲಿ ಶೇಖರವಾದ ಅಂಶ ಮುಂತಾದುವುಗಳ ಆಧಾರದ ಮೇಲೆ ಅವಯವಗಳ ಕ್ರಿಯೆಯನ್ನು, ಆರೋಗ್ಯವನ್ನು ಅರಿಯಬಹುದು. ವಿಕಿರಣ ಸೋಡಿಯಮನ್ನು ರಕ್ತಪ್ರವಾಹಕ್ಕೆ ಚುಚ್ಚುಮದ್ದಿನ ಮೂಲಕ ಸೇರಿಸಿ ರಕ್ತಪ್ರವಾಹವನ್ನು ಅಳೆಯುತ್ತಾರೆ. ವಿಕಿರಣ ಬೋರಾನ್, ವಿಕಿರಣ ರಂಜಕ, ವಿಕಿರಣ ಆರ್ಸೆನಿಕ್ ಇವುಗಳ ಸಹಾಯದಿಂದ ಮೆದುಳಿನ ಸಂಬಂಧವಾದ ವ್ರಣ ವಿಶೇಷಗಳನ್ನು ನಿರ್ಮೂಲಮಾಡಬಹುದು. ವಿಕಿರಣ ಅಯೊಡಿನ್‌ನಿಂದ ಥೈರಾಯಿಡ್ ಗ್ರಂಥಿಯ ನ್ಯೂನತೆಯನ್ನು ನಿವಾರಿಸಬಹುದು.

## ಪರ್ವತ

ಭಾರತದ ಉತ್ತರಕ್ಕೆ ಎತ್ತರವಾದ ಹಿಮಾಲಯ ಪರ್ವತಗಳು ಸಾಲು ಸಾಲಾಗಿ ನಿಂತಿವೆ. ಯೂರೋಪಿನ ದಕ್ಷಿಣದಲ್ಲಿ ಹೀಗೆಯೇ ಆಲ್ಪ್ಸ್ ಪರ್ವತಗಳಿವೆ. ಮೋಡಗಳಲ್ಲಿ ತಲೆ ಇಟ್ಟು ನಿಂತ ಈ ಪರ್ವತಗಳನ್ನು ಕಂಡು ಮೊದಲಿನಿಂದ ಮಾನವನಿಗೆ ಮೆಚ್ಚುಗೆ, ಭಕ್ತಿ. ನಮ್ಮ ಪೂರ್ವಜರು ಗಿರಿ ಶಿಖರಗಳನ್ನು ದೇವಲೋಕವೆಂದು ಭಾವಿಸಿದರು. ಶಿವಪಾರ್ವತಿಯರು ಇರುವ ಸ್ಥಳ ಕೈಲಾಸ, ಅದು ಹಿಮಾಲಯ ಪರ್ವತಗಳ ಶಿಖರಗಳಲ್ಲಿ ಎಂದು ಹೇಳಿದರು. ಎತ್ತರವಾದ ಪರ್ವತ ಒಲಿಂಪಸ್ ದೇವತೆಗಳ ಮನೆ ಎಂದು ಗ್ರೀಕರು ತಿಳಿದಿದ್ದರು.

ಟ್ರಾಂಬೆಯಲ್ಲಿರುವ ಪರಮಾಣು ರಿಯಾಕ್ಟರ್-ಸೈರಸ್

ಇಂದು ಆ ಸುಂದರ ಕಲ್ಪನೆಗಳು ಮಾಯವಾಗಿವೆ. ಮಾನವ ಸತ್ಯವನ್ನು ಹುಡುಕುತ್ತ ಈ ಪರ್ವತಗಳ ನಿಜಾಂಶಗಳನ್ನು ತಿಳಿದುಕೊಂಡಿದ್ದಾನೆ.

ಈ ಪರ್ವತಗಳು ಉಂಟಾದ ಬಗೆಗೆ ಹಲವಾರು ಅಭಿಪ್ರಾಯಗಳಿವೆ.

1. ಭೂಮಿಯ ಹೊರತೊಗಟೆ ಮಡಿಕೆಮಡಿಕೆಯಂತೆ ಆಗಿ ಮೇಲೇರಿ ಪರ್ವತಗಳಾಗಬಹುದು. ಹಿಮಾಲಯ, ಆ್ಯಂಡಿಸ್, ಆಲ್ಪ್ಸ ಮತ್ತು ರಾಕಿ ಪರ್ವತದ ಹೆಚ್ಚು ಭಾಗಗಳಲ್ಲಿ ಈ ರೀತಿ ಮೇಲೆದ್ದ ಪರ್ವತಗಳು. ಇದಕ್ಕೆ ಭೂಮಿಯ ಹೊರತೊಗಟೆಯಲ್ಲಿ, ಪ್ರತಿಸ್ಪರ್ಧಿ ಸೆಳೆತಗಳು ಅಥವಾ ಶಕ್ತಿಗಳು ಒಂದನ್ನೊಂದು ವಿರೋಧಿಸುವುದೇ ಕಾರಣ.

2. ಭೂಮಿ ಇಂದಿಗೂ ಆರುತ್ತಲೇ ಇದೆ ಎಂಬ ಊಹೆಯ ಮೇಲೆ, ಅದರಲ್ಲಿರುವ ವಸ್ತುರಾಶಿ ಇನ್ನೂ ಸರಿದಾಡುತ್ತಲೇ ಇದೆ ಎಂದು ಹೇಳುತ್ತಾರೆ. ಒಂದು ಕಡೆ ತಂಪು ಮತ್ತೊಂದು ಕಡೆ ಶಾಖ ವಿರುವ ಭೂಪದರಗಳು ಕೆಲವು ಜಟಿಲ ಕ್ರಿಯೆಗಳಿಗೆ ಒಳಗಾಗುತ್ತವೆ; ವಿಶೇಷ ಬದಲಾವಣೆಗಳಿಗೆ ಕಾರಣವಾಗುತ್ತವೆ. ಇದರಿಂದ ಭೂಮಿಯ ಹೊರತೊಗಟೆಯ ಕುಸಿತದಿಂದಲೂ ಪರ್ವತಗಳಾಗುತ್ತವೆ. ತೊಗಟೆ ಬಿರುಕು ಬಿಟ್ಟಿತೆನ್ನೋಣ. ಆಗ ಆಚೀಚಿನ ನೆಲ ಅಥವಾ ಬಂಡೆಗಳು ಮಧ್ಯದ ಪ್ರದೇಶವನ್ನು ಮೇಲಕ್ಕೆ ನೂಕುತ್ತವೆ.

3. ಜ್ವಾಲಾಮುಖಿಯಿಂದ ಬಂದ ಲಾವಾರಸದಿಂದ ಪರ್ವತ ನಿರ್ಮಾಣ ವಾಗಬಹುದು. ಅಲ್ಲದೆ ಕೇವಲ ಹವೆಯ ಪರಿಣಾಮಗಳಿಂದಲೂ ಪರ್ವತ ಗಳು ಉಂಟಾಗುತ್ತವೆ. ಇದಕ್ಕೆ ಅಸಂಖ್ಯಾತ ವರ್ಷಗಳ ಕಾಲಾವಧಿ ಬೇಕು. ಹರಿಯುವ ನೀರಿನ ಕೊರೆತ, ಗಾಳಿಯ ಹೊಡೆತ ಇವುಗಳಿಗೆ ಸಿಕ್ಕ ಪ್ರಸ್ಥ ಭೂಮಿ ಅಥವಾ ಬಯಲುಪ್ರದೇಶಗಳು ಸವೆಯಲಾರಂಭಿಸುತ್ತವೆ. ಇದು ಮುಂದುವರಿದು ಕಣಿವೆಗಳನ್ನು ತೋಡುತ್ತದೆ. ಕಣಿವೆ ಹಿರಿದಾಗು ತ್ತಲೂ ದಿಂಡು (ಪರ್ವತದ ಉಗಮ) ಕಡಿದಾಗುತ್ತಲೂ ಸಾಗುತ್ತವೆ. ಈ ದಿಂಡು ಅತಿ ಎತ್ತರವಾದಾಗ ಪರ್ವತವೆನಿಸುತ್ತದೆ. ಸಾಧಾರಣವಾಗಿ ಹೀಗೆ ಪರ್ವತ ನಿರ್ಮಾಣವಾಗುವುದು ಪ್ರಸ್ಥಭೂಮಿಯ ಕೊರೆತದಿಂದಲೇ,

ಈ ಬಗೆಯಾಗಿ ಪರ್ವತಗಳು ಉಂಟಾಗುವ ಮೂರು ರೀತಿಗಳನ್ನು ಗುರುತಿಸಬಹುದು.

ಪರ್ವತಗಳಿಗೆ ಹುಟ್ಟಿನಂತೆಯೇ ಮುಪ್ಪು-ಸಾವುಗಳೂ ಉಂಟು. ಮೊದಲೇ ಹೇಳಿದಂತೆ ನೀರು, ಗಾಳಿಗಳ ಹಾವಳಿಗೆ ಪರ್ವತಗಳು ತುತ್ತಾಗುತ್ತವೆ. ಅಲ್ಲದೆ ಪರ್ವತದ ಮಣ್ಣು ಸಡಿಲಗೊಂಡು ಜಾರಿ ಉರುಳುತ್ತದೆ. ಹೀಗೆ ಲಕ್ಷಾಂತರ ವರ್ಷಗಳ ತರುವಾಯ ಅವು ಬಯಲಲ್ಲಿ ಹರಡು ತ್ತವೆ. ಪರ್ವತಗಳೆಲ್ಲ ಜೀವಿಗಳ ಉದಯಕ್ಕೆ ಮೊದಲೇ ಅಸ್ತಿತ್ವಕ್ಕೆ ಬಂದುವು. ಭೂಮಿಯ ಸಮಗ್ರ ವಸ್ತುರಾಶಿ ಅತ್ಯಂತ ಚಟುವಟಿಕೆಯಲ್ಲಿ ತೊಡಗಿದ್ದಾಗ ಪರ್ವತಗಳು ಮುಖ್ಯವಾಗಿ ಮೂರು ಬಾರಿ ಉದಯಿಸಿರ ಬಹುದೆಂದು ಅಂದಾಜಿದೆ. ಅನೇಕ ಬಾರಿ ಇವು ಕುಸಿದು ಉಡುಗಿ ಹೋದುದೂ ನಿಜ. ಪರ್ವತಗಳಲ್ಲೆಲ್ಲ ಕಿರಿವಯಸ್ಸಿನ ಮತ್ತು ಅತ್ಯಂತ ಎತ್ತರವೆನಿಸಿದ ಹಿಮಾಲಯ ಪರ್ವತ ಕೂಡ ಸ್ವಲ್ಪ ಕುಗ್ಗಿದೆಯೆಂದು ತಜ್ಞರು ಹೇಳುತ್ತಾರೆ. ಸುಮಾರು ನಲವತ್ತು ಕೋಟಿ ವರ್ಷಗಳ ಕೆಳಗೆ ಪರ್ವತಗಳು ಮೊದಲಬಾರಿಗೆ ಕಾಣಿಸಿಕೊಂಡುವೆಂದೂ ಇಪ್ಪತ್ತು ಕೋಟಿ ವರ್ಷಗಳ ಅನಂತರ ಎರಡನೆಯ ಬಾರಿಗೆ ಪರ್ವತಗಳು ಉದ್ಭವವಾದು ವೆಂದೂ ಏಳು ಕೋಟಿ ವರ್ಷಗಳ ಹಿಂದೆ ರಾಕಿ, ಆ್ಯಂಡಿಸ್ ಪರ್ವತಗಳು ಹುಟ್ಟಿದುವೆಂದೂ ಹೇಳಲಾಗಿದೆ. ಹಿಮಾಲಯ ಕೇವಲ ಒಂದೂವರೆ ಕೋಟಿ ವರ್ಷದ ಪರ್ವತವೆಂದೂ ಹೇಳಿಕೆಯಿದೆ. ಮುಂಚೆ ಉಂಟಾದ ಪರ್ವತಗಳ ಕೊರೆತ, ಅವುಗಳಲ್ಲಿ ಕಂಡುಬರುವ ಭೂಮಿಯ ಪದರದ ಅಂಶ ಇವುಗಳ ಆಧಾರದ ಮೇಲೆ ಪರ್ವತದ ಅಂದಾಜು ವಯಸ್ಸನ್ನು ಲೆಕ್ಕಹಾಕುತ್ತಾರೆ.

ಪ್ರಪಂಚದ ಅತ್ಯುನ್ನತ ಪರ್ವತ ಶಿಖರಗಳಿರುವುದು ಹಿಮಾಲಯ ಮತ್ತು ಕಾರಾಕೋರಂ ಪರ್ವತಗಳಲ್ಲಿ. ಜಗದ್ವಿಖ್ಯಾತ ಎವರೆಸ್ಟ್ ಶಿಖರ (ನೇಪಾಳ-ಟಿಬೆಟ್) 8854 ಮೀಟರುಗಳ ಎತ್ತರವಿದೆ. ಗುಡ್ವಿನ್ ಆಸ್ಟಿನ್ (ಕಾಶ್ಮೀರ್-ಸಿಂಕಿಯಾಂಗ್) 8616 ಮೀಟರು, ಕಾಂಚನಗಂಗಾ (ನೇಪಾಳ-ಭಾರತ) 8604 ಮೀಟರು, ಮಕಾಲು (ಟಿಬೆಟ್-ನೇಪಾಳ) 8481 ಮೀಟರು, ಧವಳಗಿರಿ (ನೇಪಾಳ) 8177 ಮೀಟರು, ನಂಗಪರ್ವತ (ಕಾಶ್ಮೀರ) 8131 ಮೀಟರು—ಇವು ಪ್ರಪಂಚದ ಅತಿ ಎತ್ತರದ ಶಿಖರ ಗಳು. ಸಮುದ್ರಗರ್ಭದಿಂದ ಮೇಲೆದ್ದಿರುವ ಹವಾಯ್ ದ್ವೀಪದ ಜ್ವಾಲಾ ಮುಖಿ ಪರ್ವತವೊಂದು 9150 ಮೀಟರುಗಳಿಗೂ ಹೆಚ್ಚು ಎತ್ತರವಿದೆ. ಅಂದರೆ, ಇದು ಹಿಮಾಲಯವನ್ನೂ ಮೀರಿದ ಎತ್ತರ.

ಪರ್ವತಗಳ ಪ್ರಭಾವ ಪ್ರಕೃತಿಯಲ್ಲಿ ಬಹುರೂಪಿ. ಪರ್ವತಗಳು ದ್ರವ ರೂಪದ ಮೋಡಗಳನ್ನು ತಡೆದು ಮಳೆಬೀಳುವಂತೆ ಮಾಡುವುವು. ಇದರಿಂದ ಪರ್ವತಗಳ ಪ್ರದೇಶದಲ್ಲೇ ಅನೇಕ ನದಿಗಳ ಉಗಮ.

ಪರ್ವತಗಳು ಪ್ರಯಾಣಕ್ಕೆ ದುರ್ಗಮವಾದ ತಾಣಗಳು. ಅಡ್ಡಗೋಡೆ ಯಂತೆ ನಿಂತು ಆ ಬದಿ ಈ ಬದಿಯ ಎರಡು ಜನಾಂಗಗಳ ಜೀವನವನ್ನು ಸಂಪೂರ್ಣವಾಗಿ ಪ್ರತ್ಯೇಕಿಸುತ್ತವೆ.

ಪರ್ವತಗಳ ಫಲವತ್ತಾದ ಕಣಿವೆಗಳು ಜನಜೀವನಕ್ಕೆ ಅನುಕೂಲವಾಗಿವೆ. ಆದರೂ ಪರ್ವತ ಪ್ರದೇಶಗಳಲ್ಲಿ ಮುಖ್ಯ ವಾಣಿಜ್ಯ ಮತ್ತು ವ್ಯಾಪಾರ ಕೇಂದ್ರಗಳು ಹೆಚ್ಚಿಲ್ಲ. ಪರ್ವತಗಳ ನೆರೆಹೊರೆಯ ಪ್ರದೇಶಗಳೂ ಅವುಗಳ ಪ್ರಭಾವಕ್ಕೆ ಒಳಗಾಗುವುದು ಸಹಜ. ಹೀಗಾಗಿ ಪರ್ವತದ ನೆರಳು ಪ್ರದೇಶ ಗಳಲ್ಲಿ ಬೆಳೆಯೇ ಇಲ್ಲದೆ ಮರಳುಗಾಡು ಉಂಟಾಗುತ್ತದೆ. ಪರ್ವತಗಳಲ್ಲಿ ಸಸ್ಯಸಮೂಹ ಎತ್ತರಕ್ಕೆ ತಕ್ಕಂತೆ ವಿಧವಿಧವಾಗಿರುತ್ತದೆ. ಪರ್ವತದ ಉನ್ನತ ಶಿಖರಗಳಿಂದ ಕೆಳಗೆ ಸಾವಿರಾರು ಮೀಟರುಗಳವರೆಗೆ ಸಸ್ಯ ಸಂಪತ್ತಿರುವುದಿಲ್ಲ. ಉಷ್ಣವಲಯಗಳಲ್ಲಿ ಪರ್ವತಗಳ ತಪ್ಪಲು ಇಳಿಜಾರು ಪ್ರದೇಶಗಳನ್ನು ಆಹಾರೋತ್ಪಾದನೆಗಾಗಿ ಕೃಷಿಮಾಡುತ್ತಾರೆ. ಮಿಕ್ಕೆಡೆ ಗಳಲ್ಲಿ ಅರಣ್ಯಸಂಪತ್ತನ್ನು ಅಭಿವೃದ್ಧಿಗೊಳಿಸುತ್ತಾರೆ. ಪ್ರಪಂಚದ ಅತಿ ಎತ್ತರದ ಮರಗಳು ಅಮೆರಿಕದ ನೆವಾಡ ಪರ್ವತ ಪ್ರದೇಶದಲ್ಲಿ ಬೆಳೆಯು ತ್ತವೆ. 1525ರಿಂದ 2440 ಮೀಟರು ಎತ್ತರದಲ್ಲಿ ಬೆಳೆಯುವ ಸಿಕೋಯಾ ಮರಗಳು 119 ಮೀಟರುಗಳಿರುತ್ತವೆ. ಈ ಮರದ ಕಾಂಡದ ಸುತ್ತಳತೆ ಸುಮಾರು ಮೂವತ್ತು ಮೀಟರು. ದೇವದಾರು, ಪೀತದಾರುಗಳೆಂದು ಹೆಸರಾದ ಮರಗಳು ಸಾಮಾನ್ಯವಾಗಿ ಪರ್ವತಪ್ರದೇಶದಲ್ಲಿ ಬೆಳೆಯುತ್ತವೆ, ಇಲ್ಲಿನ ಹೂಗಿಡಗಳೂ ಹೂವುಗಳೂ ಆಹ್ಲಾದಕಾರಿಯಾಗಿರುತ್ತವೆ.

ಮಾರ್ಜಾಲಬಳಗದ, ಹಿಮಚಿರತೆ, ಹಿಮಕರಡಿ, ಅಲ್ಲದೆ ಹುಲಿ, ಕುಂದುಸಿಂಹಗಳಿರುತ್ತವೆ. ಉತ್ತರ ಅಮೆರಿಕದ ಒಂದು ವಿಚಿತ್ರ ಪರ್ವತ ಕರಡಿ 2.1 ಮೀಟರು ಎತ್ತರ ಬೆಳೆಯುತ್ತದೆ. ಹಿಮಾಲಯದಲ್ಲಿ ಕರಿಕರಡಿ ಹಾಗೂ ಪಂಡಾ ವಾಸಿಸುತ್ತವೆ. ಕುರಿ, ಮೇಕೆ, ಹರಿಣ, ಒಂಟೆಗಳೂ ಕಾಡುಕುರಿ, ಮೇಕೆಗಳೂ ಪರ್ವತದ ನಿವಾಸಿಗಳು. ಟಿಬೆಟ್‌ನಲ್ಲಿ ಯಾಕ್ ಎಂಬುದು ಮುಖ್ಯ ಚತುಷ್ಪಾದಿ. ಪ್ರಾಣಿಗಳೂ ಹಿಮ ಹೆಪ್ಪುಗಟ್ಟುವ ಎತ್ತರಕ್ಕಿಂತ ಕೆಳಗಿರುವ ಪ್ರದೇಶದಲ್ಲಿ ಮಾತ್ರ ಜೀವಿಸುತ್ತವೆ.

ಪರ್ವತಗಳ ಹವೆ ಶುದ್ಧ, ಉತ್ಸಾಹಕಾರಿ. ಅನೇಕ ಪರ್ವತಗಳಲ್ಲಿ ಆರೋಗ್ಯಧಾಮಗಳಿವೆ. ಪರ್ವತಗಳು ನಿಸರ್ಗಪ್ರಿಯರಿಗೆ ಅಚ್ಚುಮೆಚ್ಚು. ಸ್ವಿಟ್ಜರ್‌ಲೆಂಡಿನ ಜನ ಆಲ್ಪ್ಸ್ ಪರ್ವತ ಪ್ರದೇಶವನ್ನು ವಿಹಾರಧಾಮವನ್ನಾಗಿ ಮಾಡಿಕೊಂಡು ಚಳಿಗಾಲದ ಕ್ರೀಡೆಗಳನ್ನು ವ್ಯವಸ್ಥೆಗೊಳಿಸುತ್ತಾರೆ. ಹಿಮದ ಮೇಲೆ ಜಾರುವುದು, ಮೂವತ್ತು ಮೀಟರುಗಳ ಎತ್ತರದಿಂದ ಕೆಳಗೆ ಧುಮುಕುವುದು, ಆ ವೇಗದಲ್ಲೇ ಏರುವುದು, ಮನಸ್ಸಿಗೆ ಅಪೂರ್ವ ಚೇತನ ಕೊಡುತ್ತವೆ. ಖಗೋಳ ವೀಕ್ಷಣೆ ಹಾಗೂ ವಾತಾವರಣ ವೀಕ್ಷಣೆಯೂ ಪರ್ವತದ ಪ್ರದೇಶಗಳಲ್ಲಿ ವಿಜ್ಞಾನಿಗಳಿಂದ ಜರಗುವ ಕಾರ್ಯಗಳು. ಭಾರತದಲ್ಲಿ ಕೊಡೈಕೆನಾಲ್ ಇಂಥ ಸ್ಥಳ.

ಪರ್ವತಗಳು ಸಾಮರ್ಥ್ಯಕ್ಕೆ ಆಹ್ವಾನ ಎಂದು ಭಾವಿಸಿ, ಮನುಷ್ಯ ಇವುಗಳನ್ನು ಹತ್ತಲು ಮೊದಲುಮಾಡಿದ. ಪರ್ವತಾರೋಹಣ ಇಂದು ಒಂದು ದೊಡ್ಡ ಕಲೆ. ಇದಕ್ಕಾಗಿ ಎಲ್ಲೆಲ್ಲೂ ಶಿಕ್ಷಣಶಾಲೆಗಳೂ ಆರಂಭವಾಗಿವೆ. ಇಂದು ಮನುಷ್ಯ ಎಲ್ಲ ಎತ್ತರದ ಪರ್ವತಶಿಖರಗಳ ಮೇಲೂ ಹೆಜ್ಜೆಯೂರಿ ಅಲ್ಲಿ ತನ್ನ ಮುದ್ರೆಯೊತ್ತಿದ್ದಾನೆ. ಈ ಎಲ್ಲ ಕ್ರೀಡೆ, ವಿಹಾರ ಹಾಗೂ ಆರೋಹಣ ಅವರೋಹಣಗಳಲ್ಲಿ ಅವನಿಗೆ ಅಪಾಯ ತಪ್ಪಿದ್ದಲ್ಲ. ಹಿಮನದಿಗಳು, ಹಿಮಪ್ರಪಾತಗಳು ಥಟ್ಟನೆ ಮುನ್ಸೂಚನೆಯಿಲ್ಲದೆ ಅವನನ್ನು ಕಬಳಿಸಬಲ್ಲುವು. ಒಂದೊಂದು ಶಿಖರವೇರುವುದಕ್ಕೂ ಎಷ್ಟೋ ಮಾನವಜೀವಗಳು ಬಲಿಯಾಗಿವೆ. ಆದರೆ ಗುರಿಯನ್ನು ತಲಪುವ ದೃಷ್ಟಿಯಿಂದ ಇದು ಗೌಣ.

ಪರ್ವತದ ವಿಶಿಷ್ಟ ವಾಯುಗುಣಕ್ಕೆ ಹೊಂದಿಕೊಂಡು ಮನುಷ್ಯರ ಅಲ್ಲಿಯೇ ವಾಸಿಸುತ್ತಾರೆ. ಟಿಬೆಟ್ ದೇಶದ ಜನ ಇದಕ್ಕೆ ನಿದರ್ಶನ. ಅಲ್ಲಿನ ಜೀವನ ಕಠಿಣ. ಗಾಳಿಯ ಹೊಡೆತ ಹೆಚ್ಚು. ಶೀತ ಜಾಸ್ತಿ. ಆಹಾರ ಪದಾರ್ಥಗಳು ದುರ್ಲಭ. ಆದರೂ ಆ ಬಗೆಯ ಜೀವನವೂ ಅಲ್ಲಿನವರಿಗೆ ಮೈಗೂಡುತ್ತದೆ.

ನೋಡಿ : ಜ್ವಾಲಾಮುಖಿ; ಪರ್ವತಾರೋಹಣ; ಹಿಮಪಾತ; ಹಿಮಮಾನವ; ಹಿಮಾಲಯ.

## ಪರ್ವತಾರೋಹಣ

"ಪರ್ವತವನ್ನೇಕೆ ಏರಿದೆ?"

"ಅದು ಅಲ್ಲಿರುವುದರಿಂದ."

ಪ್ರತಿ ಪರ್ವತಾರೋಹಣ ಸಾಹಸದ ಹಿನ್ನೆಲೆಯಲ್ಲಿಯೂ ಇರುವ ಪ್ರೇರಕ ಶಕ್ತಿ ಇದೇ–ಪರ್ವತದ ಅಸ್ತಿತ್ವ. ಬೆಟ್ಟ ಎಷ್ಟೆಷ್ಟು ದುರ್ಗಮವೋ ಅದನ್ನು ಏರುವ ಬಯಕೆ ಅಷ್ಟಷ್ಟು ಅದಮ್ಯ.

ಕುದುರೆಮುಖ (ಮೈಸೂರು ರಾಜ್ಯದಲ್ಲಿ ಪರ್ವತಾರೋಹಣ ಸಾಹಸಕ್ಕೆ ಪರಮೋತ್ಕೃಷ್ಟವಾದ ಬೆಟ್ಟ) ವೀರರಿಂದ ತೊಡಗಿ ಹಿಮಾಲಯ ವೀರರವರೆಗೆ ಯಾರನ್ನೇ ಅವರ ಯಶಸ್ಸಿನ ರಹಸ್ಯ ಪ್ರಶ್ನಿಸಿದರೆ ದೊರೆಯುವ ಮೊದಲ ಉತ್ತರ ಒಂದೇ—'ಸ್ತೋಮಪ್ರಜ್ಞೆ'. ನಾವು ಒಂದು ಬಳಗ, ಏಕೋದ್ದೇಶ ಸಾಧನೆಗಾಗಿ ಒಂದುಗೂಡಿದವರು, ನಮ್ಮಲ್ಲಿ ಯಾರೊಬ್ಬನ ಜಯಾಪಜಯ ಇಡೀ ಬಳಗದ್ದು ಎಂಬ ತಿಳಿವಳಿಕೆ ಮತ್ತು ಅನುರೂಪ ನಡವಳಿಕೆಯೇ ಸ್ತೋಮಪ್ರಜ್ಞೆ.

ಆರೋಹಣ ದೃಷ್ಟಿಯಿಂದ ಪರ್ವತಗಳಲ್ಲಿ ಎರಡು ವರ್ಗಗಳು–ಏರಿದವು, ಏರದವು. ಏರಲಾಗದವು ಎಂದಿಲ್ಲ. ಎವರೆಸ್ಟ್ ಶಿಖರವೂ ಮಾನವನ ಧೃತಿಯ ಮುಂದೆ ಮಣಿಯಲೇಬೇಕಾಯಿತಷ್ಟೆ.

ಪರ್ವತ ಯಾವುದೇ ಇರಲಿ, ಅದರ ಆರೋಹಣದ ವಿವಿಧ ಸೋಪಾನಗಳು ಹೀಗಿವೆ : ಗುರಿನಿರ್ಧಾರ ; ಸಮರ್ಥ ನಾಯಕನ ಹಿರಿತನದಲ್ಲಿ ದಕ್ಷತಂಡದ ಆಯ್ಕೆ; ಮನೋ ದೈಹಿಕ ದಾರ್ಢ್ಯವರ್ಧನೆಗಾಗಿ ಪೂರ್ವ ಶಿಕ್ಷಣ; ಆಹಾರ, ಸಲಕರಣೆಗಳು, ವೈದ್ಯಕೀಯ ಸಹಾಯ ಇವುಗಳ ಯೋಜನೆ ಮತ್ತು ಏರ್ಪಾಡು; ಶಿಖರದೆಡೆಗೆ ದಾರಿ ಮತ್ತು ಅದನ್ನು ಸಾಧಿಸಲು ದೈನಂದಿನ ಕಾರ್ಯಕ್ರಮ; ಅನಿರೀಕ್ಷಿತ ಸಂದರ್ಭಗಳಲ್ಲಿ ವಹಿಸಬೇಕಾದ ಮುನ್ನೆಚ್ಚರಿಕೆ ; ಯೋಜನೆಯ ಪ್ರತ್ಯಕ್ಷರೂಪ ಅನುಭವಗಳ ವರದಿ ಮತ್ತು ಪ್ರಕಟಣೆ.

ಚಿಕ್ಕ ಪುಟ್ಟ ಬೆಟ್ಟಗಳನ್ನು ಏರುವಾಗ ಈ ಎಲ್ಲ ಸೋಪಾನಗಳನ್ನೂ ಪಾಲಿಸದೇ ಇರಬಹುದು. ಆದರೆ ಹಲವಾರು ದಿವಸಗಳ ಪರ್ವತಾರೋಹಣ ಕ್ರಿಯೆಯಲ್ಲಿ ಇವು ಒಂದೊಂದೂ ಬಲು ಮುಖ್ಯ. ಯಾವುದನ್ನೇ ಕಡೆಗಣಿಸಿದರೂ ಪರ್ವತಾರೋಹಣ ದುರಂತದಲ್ಲಿ ಕೊನೆಗಾಣಬಹುದು ಅಥವಾ ವಿಫಲವಾಗಬಹುದು.

ಯಾವ ಪರ್ವತವೂ ಒಂದು ನಿಶ್ಚಿತಯೋಜನೆ ಅಥವಾ ಅಪ್ಪಣೆಗೆ ಅನುಸಾರ ರಚಿತವಾಗಿರುವುದಿಲ್ಲ. ಒಂದೊಂದು ಪರ್ವತದ ಒಂದೊಂದು ಮೈಯೂ ಒಂದೊಂದು ವಿಧ. ಇಂಥ ವಿವರಗಳನ್ನು ಶಾಸ್ತ್ರೀಯವಾಗಿ ಅಭ್ಯಸಿಸಿ ಪರ್ವತಾರೋಹಿಗಳು ಅನುಸರಿಸಬೇಕಾದ ತಂತ್ರಗಳನ್ನು ರೂಪಿಸುತ್ತಾರೆ. ನಿಸರ್ಗದ ರುದ್ರಬಲಗಳೊಡನೆ ಮನುಷ್ಯನ ಕ್ಷೀಣ ಮತ್ತು ಸೂಕ್ಷ್ಮ ಶರೀರದ ಸಮರ್ಪಕ ಹೊಂದಾಣಿಕೆಗೆ ಪರ್ವತಾರೋಹಣ ಒಂದು ನಿದರ್ಶನ. 'ಪರ್ವತದೊಡನೆ ಸೆಣಸಬೇಡ, ಅನುವರ್ತಿಯಾಗಿ ಹೊಂದಿಕೊ,' ಇದು ಪರ್ವತಾರೋಹಿಗಳ ಮೊದಲ ಪಾಠ. ಪರ್ವತಾಗ್ರ ತಲಪಿದವನು 'ಗೆದ್ದೆ' ಎಂಬ ಅಹಂಭಾವ ತಳೆಯುವುದಿಲ್ಲ. 'ಪರ್ವತಾಗ್ರ ನನ್ನನ್ನು ಮೇಲೆತ್ತಿಕೊಂಡಿತು' ಎಂಬ ಸಮರ್ಪಣಭಾವ ಹೊಂದಿರುತ್ತಾನೆ.

ಭಾರತದ ಹಿಮಾಲಯ ಪರ್ವತಾರೋಹಣ ಸಂಸ್ಥೆ ಮನಾಲಿ ಮತ್ತು ಡಾರ್ಜಲಿಂಗುಗಳಲ್ಲಿ ಪರ್ವತಾರೋಹಣದಲ್ಲಿ ಪ್ರಾಯೋಗಿಕ ಶಿಕ್ಷಣವೀಯುತ್ತದೆ. ಅರ್ಹ ತರುಣ ತರುಣಿಯರಿಗೆ ಅಲ್ಲಿ ಸದಾ ಸ್ವಾಗತ ಉಂಟು. ವಿವಿಧ ರಾಜ್ಯಗಳಲ್ಲಿಯೂ ಸ್ಥಳೀಯ ಪರ್ವತಾರೋಹಣ ಸಂಸ್ಥೆಗಳಿವೆ. ಆರಿಸಿದ ಕೇಡೆಟ್ಟುಗಳಿಗೆ, ಆಫೀಸರರಿಗೆ ಈ ಶಿಕ್ಷಣವೀಯುವ ಸೌಲಭ್ಯ ಉಂಟು. 1967ರಲ್ಲಿ ಮೈಸೂರು ರಾಜ್ಯದ ಮೂವರು ಎನ್. ಸಿ. ಸಿ. ಕೇಡೆಟ್ಟುಗಳು ಹಿಮಾಲಯ ಶ್ರೇಣಿಗಳನ್ನು ಏರಿ ಹೊಸ ವಿಕ್ರಮ ಸಾಧಿಸಿದರು—ಏಳು ದಿವಸಗಳಲ್ಲಿ ಏಳು ಶಿಖರಗಳನ್ನು (6,100 ಮೀಟರುಗಳ ಸಮೀಪದವು) ಏರಿ ಇಳಿದರು; ಅವುಗಳ ಪೈಕಿ ನಾಲ್ಕು ಆ ಮೊದಲು ಯಾರೂ ಏರದ ಶಿಖರಗಳು.

## ಪ್ರಚಾರ

ನಮ್ಮನ್ನು ಬೇರೆಯವರು ಮೆಚ್ಚಿಕೊಳ್ಳಬೇಕು ಎಂಬ ಆಸೆ ಎಲ್ಲರಿಗೂ ಇರುತ್ತದೆ. ಅದೇ ರೀತಿ ಸಂಸ್ಥೆಗಳು ಸರಕಾರಗಳು ಕೂಡಾ ಜನರ ಮೆಚ್ಚಿಕೆ ಪಡೆಯಲು ಇಷ್ಟಪಡುತ್ತವೆ. ಹಾಗೆ ಜನರ ಮೆಚ್ಚಿಕೆಯನ್ನು ಸಂಪಾದಿಸಲು, ನಮ್ಮ ಅಭಿಪ್ರಾಯಗಳನ್ನು ಅಥವಾ ಕಾರ್ಯಗಳನ್ನು ಇತರರ ಮನಸ್ಸೊಲಿಸುವಂತೆ ಮತ್ತೆ ಮತ್ತೆ ಬಿತ್ತರಿಸುವುದೇ ಪ್ರಚಾರ. ಯಾವುದಾದರೂ ಒಂದು

ವಿಷಯವನ್ನು ಹಲವಾರು ರೀತಿ ಮತ್ತೆ ಮತ್ತೆ ಜನರು ಹೇಳಿದರೆ ಆ ವಿಷಯವನ್ನು ಜನರು ಕ್ರಮೇಣ ನಂಬುತ್ತಾರೆ. ಇದು ಪ್ರಚಾರದ ಗುಟ್ಟು.

ಪ್ರಚಾರದ ಪ್ರವೃತ್ತಿ ಮನುಷ್ಯನಲ್ಲಿ ಬಹಳ ಹಿಂದಿನಿಂದ ಇದೆ. ಸುಮಾರು 2,200 ವರ್ಷಗಳ ಹಿಂದೆ ನಮ್ಮ ದೇಶದ ಅಶೋಕ ಚಕ್ರವರ್ತಿ ಶಿಲೆಗಳ ಮೇಲೆ ಶಾಸನಗಳನ್ನು ಕೆತ್ತಿಸಿದ. ಸುಮಾರು 1,900 ವರ್ಷಗಳಷ್ಟು ಹಿಂದೆ ಇಟಲಿಯಲ್ಲಿದ್ದ ಪಾಂಪೆ ಎಂಬ ದೊಡ್ಡ ಪಟ್ಟಣದ ಅವಶೇಷಗಳ ಗೋಡೆಗಳ ಮೇಲೆ ಚುನಾವಣಾ ಪ್ರಚಾರದ ನುಡಿಗಟ್ಟುಗಳು ಕಂಡುಬಂದಿವೆ. ವಿವಿಧ ಮತಗಳ ಪ್ರಚಾರಕರು ತಮ್ಮ ದೇಶದಲ್ಲೂ ಹೊರದೇಶಗಳಲ್ಲೂ ಮತ ಪ್ರಚಾರದ ಸಲುವಾಗಿ ಸಂಚರಿಸುವುದು ವಾಡಿಕೆ. ಅಶೋಕ ತನ್ನ ಸಹೋದರ ಮಹೇಂದ್ರ ಮತ್ತು ಸಹೋದರಿ ಸಂಘಮಿತ್ರ ಇವರನ್ನು ಬೌದ್ಧ ಮತ ಪ್ರಚಾರದ ಸಲುವಾಗಿ ಸಿಂಹಳಕ್ಕೆ ಕಳುಹಿಸಿದನೆಂದು ನಾವು ಚರಿತ್ರೆಯಲ್ಲಿ ಓದಿದ್ದೇವೆ.

ಇಪ್ಪತ್ತನೆಯ ಶತಮಾನಕ್ಕೆ ಮುಂಚೆ ಪ್ರಚಾರ ಸಣ್ಣ ಪ್ರಮಾಣದಲ್ಲಿ ನಡೆಯುತ್ತಿತ್ತು. ಮುದ್ರಣಾನುಕೂಲಗಳು, ರೇಡಿಯೊ, ಟೆಲಿವಿಷನ್ ಮತ್ತು ಚಲನಚಿತ್ರ ಇವು ಬೆಳವಣಿಗೆ ಹೊಂದಿದಂತೆ ಪ್ರಚಾರದ ನೆರವಿಗೆ ಬಂದುವು. ಇಬ್ಬರ ನಡುವೆ ನಡೆಯುವ ಹರಟೆ ; ಚಿತ್ರಗಳನ್ನೂ ಶೀರ್ಷಿಕೆಗಳನ್ನೂ ಒಳಗೊಂಡ ಭಿತ್ತಿ ಪತ್ರಗಳನ್ನು ಹಿಡಿದ ಜನರ ಮೆರವಣಿಗೆ; ಧ್ವನಿವರ್ಧಕದಲ್ಲಿ ಘೋಷಣೆಗಳನ್ನು ಕೂಗುವುದು; ಊರಿಗೆ ಹೊಸದಾಗಿ ಸರ್ಕಸ್ ತಂಡ ಬಂದಾಗ ಪ್ರಾಣಿಗಳನ್ನು ಮೆರವಣಿಗೆ ತರುವುದು; ಇವೆಲ್ಲ ಪ್ರಚಾರದ ಬೇರೆ ಬೇರೆ ರೂಪಗಳು. ಚುನಾವಣೆಯ ಕಾಲದಲ್ಲಿ ಸ್ಪರ್ಧಿಗಳು ಬಹಳ ಬಿರುಸಿನ ಪ್ರಚಾರ ಕೈಗೊಳ್ಳುತ್ತಾರೆ. ಸಭೆಗಳು, ಘೋಷಣೆಗಳು ಇವುಗಳಿಂದ ಮಾತ್ರವಲ್ಲದೆ ಕಥಾ ಕಾಲಕ್ಷೇಪ, ಲಾವಣಿ, ಬಯಲಾಟ ಮುಂತಾದ ಕಾರ್ಯಕ್ರಮಗಳನ್ನು ಏರ್ಪಡಿಸುವುದರ ಮೂಲಕವೂ ಪ್ರಚಾರವನ್ನು ನಡೆಸುತ್ತಾರೆ.

ಪ್ರಪಂಚದ ಎಲ್ಲ ಸರಕಾರಗಳೂ ಪ್ರತ್ಯೇಕವಾದ ಪ್ರಚಾರಶಾಖೆಯನ್ನು ಹೊಂದಿರುತ್ತವೆ. ಆಡಳಿತದ ನೀತಿ ಸೂತ್ರಗಳನ್ನೂ ದೇಶ ಅನುಸರಿಸಿರುವ ಧ್ಯೇಯಗಳನ್ನೂ ಈ ಪ್ರಚಾರ ಶಾಖೆ ಜನರಿಗೆ ಮೇಲಿಂದ ಮೇಲೆ ತಿಳಿಯಪಡಿಸುತ್ತಿರುತ್ತದೆ. ಕೆಲವು ಸರಕಾರಗಳು ವಾರ್ತಾ ಪ್ರಸಾರವನ್ನೂ ಪ್ರಚಾರಕ್ಕೆ ಬಳಸಿಕೊಳ್ಳುವುದುಂಟು.

ವಸ್ತುಪ್ರದರ್ಶನ ಮತ್ತು ಚಲನಚಿತ್ರ ಪ್ರದರ್ಶನಗಳಲ್ಲಿ ಭಾರತದ ಯೋಜನೆ ಮತ್ತು ಅಭಿವೃದ್ಧಿಗಳನ್ನು ಕುರಿತ ಪ್ರಚಾರವನ್ನು ಕಾಣುತ್ತೇವೆ. ಭಾರತ ಸಾಧಿಸಿರುವ ಪ್ರಗತಿ, ಮುಂದೆ ಇರುವ ಗುರಿ ಇವುಗಳ ಬಗೆಗೆ ಲೇಖನಗಳೂ ಚಿತ್ರಗಳೂ ಪತ್ರಿಕೆಗಳಲ್ಲಿ ಅಚ್ಚಾಗುತ್ತವೆ. ಕುಟುಂಬ ಯೋಜನೆ, ಉಳಿತಾಯ ಮುಂತಾದ ಕೆಲವು ಮುಖ್ಯ ಯೋಜನೆಗಳಿಗೆ ಸಂಬಂಧಿಸಿದ ನುಡಿಗಟ್ಟುಗಳನ್ನು ಎದ್ದುಕಾಣುವ ಎಡೆಗಳಲ್ಲಿ ಪ್ರದರ್ಶಿಸುತ್ತಾರೆ.

ಯುದ್ಧಕಾಲದಲ್ಲಿ ಪ್ರಚಾರ ಪ್ರಮುಖವಾದ ಪಾತ್ರ ವಹಿಸುತ್ತದೆ. ಯೋಧರನ್ನು ಮತ್ತು ಜನರನ್ನು ಹುರಿದುಂಬಿಸುವಂಥ ದೇಶಭಕ್ತಿಯ ಮತ್ತು ಸಾಹಸದ ಗೀತೆಗಳು ಬಾನುಲಿ ಕೇಂದ್ರಗಳಲ್ಲಿ ವಿಶೇಷವಾಗಿ ಪ್ರಸಾರವಾಗುತ್ತವೆ. ಯುದ್ಧ ಸಮಯದಲ್ಲಿ ಶತ್ರು ದೇಶದ ಪ್ರಸಾರಗಳು ತನ್ನ ದೇಶದ ಜನರನ್ನು ತಲಪಬಾರದೆಂದು ಪ್ರತಿ ದೇಶವೂ ಬಯಸುತ್ತದೆ. ಶತ್ರು ಪ್ರಸಾರ ಯಾವ ತರಂಗಮಾನದಲ್ಲಿರುವುದೋ ಅದೇ ತರಂಗಮಾನದಲ್ಲಿ ತನ್ನ ಪ್ರಸಾರ ಬರುವಂತೆ ವ್ಯವಸ್ಥೆ ಮಾಡುತ್ತದೆ. ಯುದ್ಧ ಕಾಲದಲ್ಲಿ ಶತ್ರು ದೇಶಗಳಲ್ಲಿ ವಿಮಾನಗಳ ಮೂಲಕ ಹಸ್ತಪತ್ರಿಕೆಗಳನ್ನು ಸುರಿಸಿ, ತನ್ನ ಪರವಾಗಿ ಪ್ರತಿ ದೇಶವೂ ಪ್ರಚಾರ ನಡೆಸುತ್ತದೆ.

ನೋಡಿ : ಜಾಹೀರಾತು

## ಪ್ರಜಾಭಿಪ್ರಾಯ

ಭಾರತ ಪರಮಾಣುಬಾಂಬನ್ನು ತಯಾರಿಸಬೇಕೆ?

ನಮ್ಮ ನೆರೆರಾಷ್ಟ್ರವಾಗಿ, 1962ರಲ್ಲಿ ನಮ್ಮ ಮೇಲೆ ದಾಳಿಮಾಡಿದ ಚೀನ 1965ರಲ್ಲಿ ಒಂದು ಬಾಂಬನ್ನು ಸ್ಫೋಟಿಸಿತು; 1967ರಲ್ಲಿ ಖಂಡಾಂತರ ಕ್ಷಿಪಣಿಯನ್ನು ತಯಾರಿಸಿತು. ಈ ಸುದ್ದಿ ಭಾರತದಲ್ಲಿ ಕಳವಳ ಉಂಟುಮಾಡಿದ್ದು ಸ್ವಾಭಾವಿಕ. ಆಗಲೆ ಪರಮಾಣುಶಕ್ತಿಯ ಬಳಕೆಯ ವಿಷಯದಲ್ಲಿ ತಕ್ಕಷ್ಟು ಅಧ್ಯಯನವೂ ಪ್ರಗತಿಯೂ ಭಾರತದಲ್ಲಿ ಆಗಿದ್ದುವು. ಭಾರತ ಪರಮಾಣು ಬಾಂಬನ್ನು ತಯಾರಿಸಬೇಕು ಎಂದು ಕೆಲವರು, ತಯಾರಿಸಬಾರದು ಎಂದು ಕೆಲವರು ಸಂಸತ್ತಿನಿಂದ ಹಿಡಿದು ವಿದ್ಯಾರ್ಥಿಗಳ ಚರ್ಚಾಕೂಟಗಳವರೆಗೆ ಹಲವು ಸಭೆಗಳಲ್ಲಿ ಮತ್ತು ಪತ್ರಿಕೆಗಳಲ್ಲಿ ಸಹಸ್ರಾರು ಮಂದಿ ವಾದಿಸಿದರು.

ಪ್ರಜಾಭಿಪ್ರಾಯವನ್ನು ಮೂಡಿಸಲು ಇಂಥ ವಾದ ಸಹಕಾರಿ.

ಜನಸಮುದಾಯದ ಹಿತಕ್ಕೆ ಸಂಬಂಧಿಸಿದಂತೆ ಯಾವ ಸಮಸ್ಯೆ ಇದ್ದರೂ ಆ ಬಗೆಗೆ ಪ್ರಜೆಗಳು ತಮ್ಮದೇ ಆದ ದೃಷ್ಟಿಯನ್ನು ತಳೆಯುತ್ತಾರೆ. ಹಲವರ ದೃಷ್ಟಿ ವಿಷಯದ ಪರವಾಗಿ ಇರಬಹುದು; ಮತ್ತೆ ಹಲವರ ದೃಷ್ಟಿ ವಿಷಯದ ವಿರೋಧವಾಗಿ ಇರಬಹುದು.

ಹೀಗೆ ಅಭಿಪ್ರಾಯಗಳನ್ನು ವ್ಯಕ್ತಪಡಿಸುವುದರಿಂದ, ಚರ್ಚೆ ನಡೆಯುವುದರಿಂದ, ಒಟ್ಟು ಅಭಿಪ್ರಾಯ ಮೂಡಿಬರುವುದು ಸಾಧ್ಯವಾಗುತ್ತದೆ.

ಒಂದು ವಿಷಯದ ಮೇಲೆ ಜನ ಹೆಚ್ಚು ಕಡಮೆ ಒಮ್ಮತಕ್ಕೆ ಬರುವಂತಾದರೆ, ಸಮಸ್ಯೆಯ ಬಗೆಗೆ ಪ್ರಜಾಭಿಪ್ರಾಯ ಮೂಡಿದೆ ಎಂದು ಬಾವಿಸಬಹುದು.

ಭಾರತ ಸ್ವತಂತ್ರವಾಗಬೇಕೆಂಬ ವಿಚಾರ ಗಾಂಧಿಜಿಯವರಿಗಿಂತಲೂ ಹಿಂದೆಯೇ ಈ ದೇಶದಲ್ಲಿ ತಲೆದೋರಿತ್ತು. ಗಾಂಧಿಜಿಯವರು ಸತ್ಯಾಗ್ರಹವೆಂಬ ಸಾಧನವನ್ನು ಜನರ ಮುಂದಿಟ್ಟರು. ಪ್ರಜೆಗಳಿಗೆ ಅದು ಸಮ್ಮತವಾಯಿತು. ಎಲ್ಲ ಕಷ್ಟಗಳನ್ನೂ ಸೈರಿಸಲು ಜನ ಸಿದ್ಧರಾದರು; ಹೋರಾಡಿದರು. ಪ್ರಜಾಕೋಟಿಯ ಧ್ವನಿ ಬಲವಾಯಿತು. ಸ್ವಾತಂತ್ರ್ಯ ಲಭಿಸಿತು. ಪ್ರಜಾಭಿಪ್ರಾಯ ಫಲಿಸಿತು.

ಗಾಂಧಿಜಿಯವರ ಸತ್ಯಾಗ್ರಹವನ್ನು ಒಪ್ಪದ ಜನ ಆಗಲೂ ಇದ್ದರು. ಯಾವುದೇ ಸಮಸ್ಯೆಯ ಬಗೆಗೆ ಬಹಳ ಮಂದಿ ಒಪ್ಪಿದ್ದನ್ನು ಕೆಲವರು ಈಗಲೂ ಒಪ್ಪುವುದಿಲ್ಲ. ಪ್ರಜಾಭಿಪ್ರಾಯ ಜನರ ಮನೋಧರ್ಮವನ್ನು ಸೂಚಿಸುತ್ತದೆ. ಸತ್ಯಾಗ್ರಹಕ್ಕೆ ದೊರೆತ ವಿಜಯ ನಮ್ಮ ದೇಶದ ಜನರಿಗೆ ಅಹಿಂಸೆಯಲ್ಲಿ ಎಷ್ಟು ನಂಬಿಕೆ ಇದೆ ಎಂಬುದನ್ನು ಸಿದ್ಧಪಡಿಸಿತು.

ವಾಕ್ ಸ್ವಾತಂತ್ರ್ಯ, ಅಭಿಪ್ರಾಯ ಸ್ವಾತಂತ್ರ್ಯಗಳಿರುವ ದೇಶಗಳಲ್ಲಿ ಪ್ರಜೆಗಳ ಅಭಿಪ್ರಾಯಕ್ಕೆ ಸರಕಾರ ತಲೆಬಾಗುತ್ತದೆ. ಪ್ರಜೆಗಳ ಅಭೀಷ್ಟವನ್ನು ಈಡೇರಿಸಲು ಪ್ರಯತ್ನಿಸುತ್ತದೆ. ಪ್ರಜಾಭಿಪ್ರಾಯಕ್ಕೆ ಮನ್ನಣೆ ಇಲ್ಲವೆಂದು ವ್ಯಕ್ತವಾದಾಗ ಪ್ರಜೆಗಳು ಚುನಾವಣೆಯಲ್ಲಿ, ತಮ್ಮ ಅಭೀಷ್ಟಗಳನ್ನು ಈಡೇರಿಸುವಂಥ ಸರಕಾರ ರಚಿಸಬಲ್ಲ ಪಕ್ಷದ ಉಮೇದುವಾರರಿಗೆ ಮತ ನೀಡುತ್ತಾರೆ. ಸರ್ವಾಧಿಕಾರ, ಕಮ್ಯೂನಿಸ್ಟ್ ಪದ್ಧತಿ ಇಂಥ ಆಡಳಿತಗಳಿರುವ ದೇಶಗಳಲ್ಲಿ ಸರಕಾರದ ಅಭಿಪ್ರಾಯಕ್ಕೆ ಪ್ರಜಾಭಿಪ್ರಾಯ ತಲೆ

ಬಾಗುತ್ತದೆ; ಅವರ ನೀತಿ ಸೂತ್ರಗಳನ್ನು ಮರುಮಾತಿಲ್ಲದೆ ಅಂಗೀಕರಿಸುತ್ತದೆ.

ಒಮ್ಮೊಮ್ಮೆ ಜಟಿಲವಾದ ಒಂದು ಪ್ರಶ್ನೆಯನ್ನು ನೇರವಾಗಿ ಜನರ ಮತಕ್ಕೆ ಹಾಕಿ ಅಭಿಮತ ಸಂಗ್ರಹ ಮಾಡುವುದುಂಟು. 1966ರಲ್ಲಿ, ಗೋವಾ ನೆರೆರಾಜ್ಯದಲ್ಲಿ ವಿಲೀನವಾಗಬೇಕೆ? ಒಕ್ಕೂಟ ಪ್ರದೇಶವಾಗಿ ಉಳಿಯಬೇಕೆ? ಎಂದು ತಿಳಿಯಲು ಅಭಿಮತ ಸಂಗ್ರಹ ನಡೆಯಿತು. ಗೋವಾ ಇನ್ನೊಂದು ರಾಜ್ಯದೊಡನೆ ವಿಲೀನವಾಗಬಾರದೆಂದು ಜನ ತೀರ್ಪುಕೊಟ್ಟರು.

ಪ್ರಜಾಭಿಪ್ರಾಯವನ್ನು ರೂಪಿಸುವುದಕ್ಕಾಗಿ ಎಲ್ಲ ಕಡೆಗಳಲ್ಲೂ ಪ್ರಚಾರ ಮಾಧ್ಯಮವನ್ನು ಬಳಸುತ್ತಾರೆ. ಒಂದು ಪಕ್ಷದ ಇಲ್ಲವೆ ವ್ಯಕ್ತಿಯ ನಿರಂಕುಶಾಧಿಕಾರವಿರುವ ರಾಷ್ಟ್ರಗಳಲ್ಲಿ ರೇಡಿಯೊ, ಟೆಲಿವಿಷನ್, ಚಲಚ್ಚಿತ್ರ, ಪತ್ರಿಕೆ ಎಲ್ಲವೂ ಆ ಪ್ರಭುತ್ವದ ಅಪೇಕ್ಷೆಯಂತೆ ಪ್ರಜಾಭಿಪ್ರಾಯವನ್ನು ರೂಪಿಸುತ್ತವೆ.

ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿ ಹಲವಾರು ರಾಜಕೀಯ ಪಕ್ಷಗಳು ಧಾರ್ಮಿಕ ಪಂಥಗಳು, ಸರಕಾರ ಇವು ತಮ್ಮದೇ ಆದ ಅಭಿಪ್ರಾಯವನ್ನು ತಳೆಯುತ್ತವೆ. ಅದೇ ಅಭಿಪ್ರಾಯವನ್ನು ಜನರಲ್ಲೂ ಮೂಡಿಸಲು ಪ್ರಯತ್ನಿಸುತ್ತವೆ. ಪತ್ರಿಕೆಗಳು ಬೇರೆ ಬೇರೆ ಅಭಿಪ್ರಾಯದ ಸಂಪಾದಕೀಯಗಳನ್ನು ಬರೆಯುತ್ತವೆ. ಜನರು ಅವನ್ನು ಓದುತ್ತಾರೆ. ವಿಚಾರವೇದಿಕೆಗಳಲ್ಲಿ ಭಾಷಣಗಳು, ಚರ್ಚೆಗಳು ನಡೆಯುತ್ತವೆ; ಜನರು ಅವನ್ನು ಕೇಳುತ್ತಾರೆ. ಈ ಬಗೆಯ ಓದುವಿಕೆ ಕೇಳುವಿಕೆ ಅವರ ಮೇಲೆ ಪ್ರಭಾವ ಬೀರುತ್ತವೆ. ಪ್ರಖ್ಯಾತರು, ವಿದ್ವಾಂಸರು, ವಿಜ್ಞಾನಿಗಳು ಸಂದರ್ಶನ ಲೇಖನಗಳ ಮೂಲಕ ತಮ್ಮ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಇದರಿಂದ ಜನ ಪ್ರಭಾವಿತರಾಗುತ್ತಾರೆ. ಹೀಗೆ ಹಲವಾರು ಪ್ರಭಾವಗಳಿಗೆ ಒಳಗಾಗಿ ಪ್ರಜಾಭಿಪ್ರಾಯ ರೂಪುಗೊಳ್ಳುತ್ತದೆ.

ಪ್ರಜಾಭಿಪ್ರಾಯವನ್ನು ರೂಪಿಸಿ ಜನಮುಖಂಡರು ಕೆಲವು ರಾಷ್ಟ್ರಗಳಲ್ಲಿ ಕ್ರಾಂತಿ ಎಸಗಿರುವುದೂ ಉಂಟು. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ರಾಷ್ಟ್ರದ ಆಡಳಿತಕ್ಕೆ ಸಂಬಂಧಿಸಿ ಪ್ರಜಾಭಿಪ್ರಾಯವನ್ನು ವ್ಯಕ್ತಪಡಿಸುವ ಸಾಧನ, ಸಾರ್ವತ್ರಿಕ ಚುನಾವಣೆ.

ಪ್ರಜಾಪ್ರಭುತ್ವ ರಾಜ್ಯವ್ಯವಸ್ಥೆಯ ರಾಷ್ಟ್ರದ ಭವಿಷ್ಯತ್ತಿಗೆ ಸಂಬಂಧಿಸಿದ ನಿರ್ಧಾರಗಳನ್ನು ಜನಾಭಿಪ್ರಾಯವನ್ನು ಗ್ರಹಿಸಿಯೇ ಕೈಗೊಳ್ಳುತ್ತಾರೆ.

ಪ್ರಜಾಭಿಪ್ರಾಯವನ್ನು ತಮಗೆ ಬೇಕಾದ ಹಾಗೆ ರೂಪಿಸಿಕೊಳ್ಳುವ ಪ್ರಯತ್ನ ರೋಮನ್ ನಾಗರಿಕರ ಕಾಲದಲ್ಲಿ ನಡೆದಿತ್ತು. ಈವರೆಗೆ ಆಗಿಹೋದ ಅನೇಕ ಆಡಳಿತಗಾರರು ಮತ್ತು ಆಳರಸರು ಪ್ರಜೆಗಳ ಮನ್ನಣೆಗೆ ಹಾತೊರೆದು ಅವರನ್ನು ಪ್ರಭಾವಿತರನ್ನಾಗಿ ಮಾಡಲು ಹೆಣಗಿದರು. ತಮ್ಮ ಅರಸನನ್ನೊ, ಒಡೆಯನನ್ನೊ ಹಾಡಿಹೊಗಳಿದ ಕಾವ್ಯಗಳು ಅನೇಕ. ಇವು ಪ್ರಜಾಭಿಪ್ರಾಯ ಹೇಗೆ ಬೆಳೆಯುತ್ತಿತ್ತೆಂಬುದನ್ನು ನಿರೂಪಿಸುತ್ತವೆ.

## ಪ್ರಸ್ಥಭೂಮಿ

ಅಗಲವಾದ, ಮಟ್ಟಸವಾದ, ಸುತ್ತಲಿನ ಭೂಮಿಗಿಂತ ಎತ್ತರವಾದ ಪ್ರದೇಶವನ್ನು ಪ್ರಸ್ಥಭೂಮಿ ಎನ್ನುತ್ತಾರೆ.

ಪ್ರಸ್ಥಭೂಮಿ ಎತ್ತರವಾಗಿದ್ದರೂ ಬೆಟ್ಟವಲ್ಲ, ಏಕೆಂದರೆ ಅದು ಚಪ್ಪಟೆಯಾಗಿರುತ್ತದೆ. ಅದನ್ನು ಬರಿಯ ಬಯಲು ಸೀಮೆ ಎನ್ನುವಂತಿಲ್ಲ. ಅದರ ಎತ್ತರದ ಕಾರಣದಿಂದ.

ಪ್ರಸ್ಥಭೂಮಿಗಳಲ್ಲಿ ಎರಡು ಬಗೆ:

ಒಂದು ಅಗಲವಾಗಿ, ಮಟ್ಟಸವಾಗಿದ್ದು, ಕಡಿದಾದ ಇಳಿಜಾರಿನ ಅಂಚು ಹೊಂದಿರುತ್ತದೆ. ದಕ್ಷಿಣ ಆಫ್ರಿಕ, ಭಾರತದ ದಖ್ಖನ್ ಇಂಥವು.

ಇನ್ನೊಂದು, ದೇಶದ ಇತರ ಭಾಗಗಳಿಗಿಂತ ಎತ್ತರವಾಗಿ ಸುತ್ತಲೂ ಬೆಟ್ಟಗಳ ಪಂಕ್ತಿಯಿಂದ ಕೂಡಿರುತ್ತದೆ. ಇದು ಇರುವುದು ಎರಡು ಬೆಟ್ಟಗಳ ನಡುವೆ. ಉದಾಹರಣೆಗೆ ಟಿಬೆಟ್ ಮತ್ತು ಆ್ಯಂಡಿಸ್.

ಎತ್ತರ ಮತ್ತು ವಿಸ್ತೀರ್ಣಗಳಲ್ಲಿ ಟಿಬೆಟ್ ಮತ್ತು ಪಾಮಿರ್ ಪ್ರಸ್ಥಭೂಮಿಗಳು (ಎರಡೂ ಏಷ್ಯ ಖಂಡದಲ್ಲಿವೆ) ಮುಖ್ಯ. ಮಧ್ಯ ಏಷ್ಯದ ಪ್ರಸ್ಥಭೂಮಿಗಳು 3,050 ರಿಂದ 4,270 ಮೀಟರು ಎತ್ತರದಲ್ಲಿವೆ.

## ಪ್ರವಾಸ

ಕಾಶ್ಮೀರ ಕಣಿವೆಯ ರಮಣೀಯತೆ; ಬೇಲೂರಿನ ಶಿಲಾಬಾಲಿಕೆಯರ ಲಾಸ್ಯ; ಒರಿಸ್ಸದ ಕೊನಾರ್ಕಿನ ಸೂರ್ಯ ದೇವಾಲಯದ ನಿರ್ಮಾಣ ಕೌಶಲ, ಝಾನ್ಸಿಯಿಂದ ನೂರಅರವತ್ತು ಕಿಲೊಮೀಟರು ದೂರದಲ್ಲಿರುವ ಖಜುರಾಹೊದಲ್ಲಿನ ಶಿಲ್ಪವೈಭವ–ಬಿಡುವು ಸಿಕ್ಕಾಗ ಇವುಗಳನ್ನು ಕಂಡು ಅನುಭವಿಸಬೇಕೆಂದು ನಮ್ಮ ಮನಸ್ಸು ಹಾತೊರೆಯುತ್ತದೆ. ನಯಾಗರ ಅಲ್ಲದಿದ್ದರೆ ಜೋಗದ ಜಲಪಾತ; ಕಾಶ್ಮೀರವಲ್ಲದಿದ್ದರೆ ಉದಕಮಂಡಲ—ಇವುಗಳನ್ನಾದರೂ ಸಂದರ್ಶಿಸಲು ನಾವು ಆಸೆಪಡುತ್ತೇವೆ.

ಕಳೆದ ಶತಮಾನಗಳಲ್ಲಿ ಈ ಪ್ರೇಕ್ಷಣೀಯ ಸ್ಥಳಗಳು ಈಗಿನಷ್ಟು ಪ್ರಖ್ಯಾತವಾಗಿರಲಿಲ್ಲ. ಪರ್ವತ, ಕಡಲ ದಂಡೆಗಳು, ದೇಶದ ಪ್ರಮುಖ ನಗರಗಳು ಈಗ ಪ್ರವಾಸಿಗರನ್ನು ಆಕರ್ಷಿಸುವ ಪ್ರಮಾಣದಲ್ಲಿ ಹಿಂದೆ ಆಕರ್ಷಿಸುತ್ತಿರಲಿಲ್ಲ. ಪ್ರವಾಸ ಈಗ ಅತ್ಯಂತ ಪ್ರಿಯವಾದ ಹವ್ಯಾಸ.

ತಾನು ನೆಲೆಸಿದ ಸ್ಥಳದಲ್ಲಿ ದುಡಿದು ಜೀವನ ನಡೆಸುವ ಮನುಷ್ಯ ಸಹಜವಾಗಿ ಸ್ವಲ್ಪದಿನಗಳ ಮಟ್ಟಿಗಾದರೂ ಬದಲಾವಣೆ ಬಯಸುತ್ತಾನೆ. ತನ್ನ ಸುತ್ತಮುತ್ತ ಐತಿಹಾಸಿಕ ಸ್ಥಳಗಳು, ಕೌತುಕವನ್ನು ತಣಿಸುವಂಥ ಪ್ರೇಕ್ಷಣೀಯ ನಿವೇಶನಗಳು ಇವೆಯೆಂದು ಆತನಿಗೆ ಅರಿವಾದಾಗ, ಅವುಗಳನ್ನು ಸಂದರ್ಶಿಸಲು ಆತನ ಮನಸ್ಸು ಆತುರಪಡುತ್ತದೆ. ಪುಸ್ತಕ, ಪತ್ರಿಕೆ, ಸಾಕ್ಷ್ಯಚಿತ್ರ ಮುಂತಾದ ಮಾಧ್ಯಮಗಳು ಮನುಷ್ಯನ ಆಸಕ್ತಿ ಕೆರಳುವಂತೆ ಮಾಡುತ್ತವೆ, ಮನುಷ್ಯ ಪ್ರವಾಸಿಯಾಗುತ್ತಾನೆ.

ಪ್ರವಾಸ ಪ್ರವೃತ್ತಿ ಹೊಸದೇನಲ್ಲ. ಭಾರತದಲ್ಲಿ ಸಾರಿಗೆ ಸಂಪರ್ಕಗಳು ಇರದಿದ್ದ ಕಾಲದಲ್ಲಿ, ಒಮ್ಮೆ ಕಾಶಿ ಕ್ಷೇತ್ರವನ್ನು ಸಂದರ್ಶಿಸಿ ಬಂದವನು ಪುಣ್ಯಶಾಲಿ ಎನಿಸಿಕೊಳ್ಳುತ್ತಿದ್ದ. ಹಿಂದಿನ ರೋಮನರು ರೋಗನಿವಾರಕ ಸಾಮರ್ಥ್ಯವಿದ್ದ ನೀರಿನ ಚಿಲುಮೆಗಳಲ್ಲಿ ಮೀಯಲೆಂದು ದೂರ ಪ್ರದೇಶಗಳಿಗೆ ಪ್ರವಾಸ ಹೊರಡುತ್ತಿದ್ದರು. ಇಂಥ ಪ್ರವಾಸಗಳಲ್ಲಿ ಕಷ್ಟನಷ್ಟಗಳು ಎಷ್ಟು ಘೋರವಾಗಿದ್ದರೂ ಸಹಿಸುತ್ತಿದ್ದರು.

ಕೆಲವರು ಬೇರೆ ದೇಶಗಳನ್ನು ನೋಡುವ ಆಸೆಯಿಂದಲೋ ಹೊಸ ವಿಷಯಗಳನ್ನು ತಿಳಿಯುವ ಆಸೆಯಿಂದಲೋ ಕಷ್ಟಗಳಿಗೆ ಹೆದರದೆ ಪ್ರಯಾಣ ಮಾಡುತ್ತಿದ್ದರು.

ರೈಲು, ಹಡಗು, ವಿಮಾನ, ಮೋಟಾರು ಇವು ಪ್ರಯಾಣವನ್ನು ಸುಖಕರವಾಗಿ ಮಾಡುತ್ತವೆ.

ಸಾವಿರಾರು ವರ್ಷಗಳ ಅವಧಿಯಲ್ಲಿ ಸಂದರ್ಶಿಸಿದ ಹಲವಾರು ವಿದೇಶೀ ಪ್ರವಾಸಿಗರ ವೃತ್ತಾಂತ ವರ್ಣನೆಗಳು ದೇಶದ ಚರಿತ್ರೆಯನ್ನು ನಿರ್ಧರಿಸಲು ಸಹಾಯಕವಾಗಿವೆ. ಮಾರ್ಕೊ ಪೋಲೋ, ಹ್ಯುಯೆನ್–ತ್ಸಾಂಗ್, ಮೆಗಾಸ್ತನೀಸ್ ಮುಂತಾದ ಪ್ರವಾಸಿಗಳ ಬರಹಗಳು, ಭಾರತದ ಆಗಿನ ಜನಜೀವನದ ಮೇಲೆ ಬೆಳಕು ಚೆಲ್ಲುತ್ತವೆ. ಯಾವ ಅನುಕೂಲಗಳೂ ಇಲ್ಲದ ಸಮಯದಲ್ಲಿ ಅವರು ನಡೆಸಿದ ಸಾಹಸಯಾತ್ರೆಗಳ ಅನುಭವ ಮುಂದಿನ ತಲೆಮಾರುಗಳ ಪಾಲಿಗೆ ಅಮೂಲ್ಯ ಚಾರಿತ್ರಿಕ ದಾಖಲೆಗಳಾದುವು.

ಹತ್ತೊಂಬತ್ತು ಮತ್ತು ಇಪ್ಪತ್ತನೆಯ ಶತಮಾನಗಳಲ್ಲಿ ಪ್ರಜೆಗಳ ತಲಾವರಮಾನ ಗಣನೀಯವಾಗಿ ಏರಿದ್ದರಿಂದ ಪ್ರಯಾಣದ ವೆಚ್ಚ ಪ್ರವಾಸಪ್ರಿಯರಿಗೆ ಹೊರೆಯಾಗಲಿಲ್ಲ.

ತಾವು ಉಳಿಸಿದ ಹಣವನ್ನು ಪ್ರವಾಸಕ್ಕಾಗಿ ಜನ ವೆಚ್ಚ ಮಾಡುತ್ತಾರೆ. ಪ್ರೇಕ್ಷಣೀಯ ಸ್ಥಳಗಳು ಇದರಿಂದ ಸಂಪನ್ನವಾಗುತ್ತವೆ. ಕಾಶ್ಮೀರದ ಪ್ರಜೆಗಳ ಆದಾಯದ ಬಹುಪಾಲು, ಪ್ರವಾಸಿಗರು ಕಣಿವೆಯಲ್ಲಿ ವೆಚ್ಚ ಮಾಡುವುದರ ಫಲ. ಪರ್ವತಮಯ ದೇಶವಾದ ಸ್ವಿಟ್ಜರ್‌ಲೆಂಡ್ ತಾನು ರಫ್ತು ವ್ಯಾಪಾರದಿಂದ ಗಳಿಸುವಷ್ಟೇ ಹಣವ ್ನ ಪ್ರವಾಸೋದ್ಯಮದಿಂದ ಗಳಿಸುತ್ತದೆ. ವಸ್ತುಗಳನ್ನು ಉತ್ಪಾದಿಸುವುದರಿಂದ ದೇಶ ಹೇಗೆ ವರಮಾನ ಪಡೆಯುತ್ತದೆಯೋ, ಅದೇ ರೀತಿ ಪ್ರವಾಸಿಗರ ಸೌಕರ್ಯದ ಸಲುವಾಗಿ ಸೇವಾ ಸೌಲಭ್ಯಗಳನ್ನು ಕಲ್ಪಿಸುವುದರಿಂದಲೂ ಪಡೆಯುತ್ತದೆ. ವಿದೇಶೀ ಪ್ರವಾಸಿಗಳನ್ನು ಆಕರ್ಷಿಸಿದಷ್ಟೂ ವಿದೇಶೀ ವಿನಿಮಯದ ಸಂಪಾದನೆಯಾಗುತ್ತದೆ. ಪ್ರತಿ ದೇಶವೂ ತನ್ನ ದೇಶದ ಐತಿಹಾಸಿಕ ಅವಶೇಷಗಳ ಸಂರಕ್ಷಣೆ, ಪ್ರೇಕ್ಷಣೀಯ ಸ್ಥಳಗಳ ಅಭಿವೃದ್ಧಿ, ಸಾರಿಗೆ ವ್ಯವಸ್ಥೆ ಇವುಗಳಿಗಾಗಿ ಹಣವನ್ನು ವೆಚ್ಚಮಾಡುತ್ತದೆ. ಕೆಲವು ದೇಶಗಳ ಪ್ರವಾಸೋದ್ಯಮ ಇಲಾಖೆಗಳು ಪ್ರಪಂಚದಾದ್ಯಂತ ತಮ್ಮ ದೇಶಗಳ ಪ್ರೇಕ್ಷಣೀಯ ಸ್ಥಳಗಳನ್ನು ಕುರಿತು ಜಾಹೀರಾತು, ಸಾಕ್ಷ್ಯಚಿತ್ರ, ಕಿರುಹೊತ್ತಿಗೆ ಮುಂತಾದುವುಗಳ ಮೂಲಕ ಪ್ರಚಾರವನ್ನು ಕೈಗೊಳ್ಳುತ್ತವೆ.

ಪ್ರವಾಸಿಗರಿಗೆ ಪ್ರಯಾಣ ಸೌಕರ್ಯ ಒದಗಿಸುವುದು, ಮಾರ್ಗದರ್ಶಿಗಳನ್ನು ದೊರಕಿಸಿಕೊಡುವುದು, ಪ್ರೇಕ್ಷಣೀಯ ಸ್ಥಳಗಳ ಬಗೆಗೆ ವಿವರಗಳನ್ನು ಮುದ್ರಿಸಿ ಹಂಚುವುದು ಮುಂತಾದ ಕಾರ್ಯಗಳನ್ನು ಪ್ರವಾಸಿ ಸಂಸ್ಥೆಗಳು ಕೈಗೊಳ್ಳುತ್ತವೆ.

1968ನೆಯ ವರ್ಷವನ್ನು ಅಂತರರಾಷ್ಟ್ರೀಯ ಪ್ರವಾಸೀ ವರ್ಷವನ್ನಾಗಿ ಪ್ರಪಂಚದಾದ್ಯಂತ ಆಚರಿಸಲಾಯಿತು. ಅನೇಕ ದೇಶಗಳು ಪ್ರವಾಸಿಗರಲ್ಲಿ ವಿಶೇಷ ಆಸಕ್ತಿ ಹುಟ್ಟಿಸುವಂಥ ಕಾರ್ಯಕ್ರಮಗಳನ್ನು ಕೈಗೊಂಡಿದ್ದುವು. ಪ್ರವಾಸಿಗರಿಗೆ ಪ್ರಯಾಣದ ದರಗಳಲ್ಲಿ ರಿಯಾಯಿತಿಯನ್ನು ಕೊಟ್ಟುವು. ಮೈಸೂರು ರಾಜ್ಯದ ಖಾರಾಪುರ ಅರಣ್ಯ ಪ್ರದೇಶದಲ್ಲಿ ಖೆಡ್ಡಾ ಕಾರ್ಯಾಚರಣೆ, ಮದ್ರಾಸಿನಲ್ಲಿ ಅಂತರರಾಷ್ಟ್ರೀಯ ಕೈಗಾರಿಕಾ ಪ್ರದರ್ಶನ ಇವು ಭಾರತದ ಆ ವರ್ಷದ ಪ್ರವಾಸೀ ಕಾರ್ಯಕ್ರಮಗಳಾಗಿದ್ದುವು.

ಹಲವು ದೇಶಗಳಲ್ಲಿ ಪ್ರವಾಸಖಾತೆಯನ್ನು ಪ್ರತ್ಯೇಕಗೊಳಿಸಿ ಮಂತ್ರಿಯೊಬ್ಬರ ಮೇಲ್ವಿಚಾರಣೆಗೆ ವಹಿಸಿರುತ್ತಾರೆ. ಈ ಖಾತೆ ಪ್ರವಾಸಿಗರಿಗೆ ಸೌಕರ್ಯ ಒದಗಿಸಲು ಪ್ರಯತ್ನಿಸುತ್ತದೆ, ಅವರಿಗೆ ಅಗತ್ಯವಾದ ಪ್ರಕಟಣೆಗಳನ್ನೂ ಮಾಹಿತಿಯನ್ನೂ ನೀಡುತ್ತದೆ.

ಪ್ರವಾಸ ಆನಂದ ಕೊಡುತ್ತವೆ. ಜ್ಞಾನ ನೀಡುತ್ತದೆ. ಅಮೆರಿಕದ ಗ್ರಾಂಡ್ ಕ್ಯಾನಿಯನ್, ನಯಾಗರ ಜಲಪಾತ, ಕಾಶ್ಮೀರದ ಕಣಿವೆ, ಹಿಮಾಲಯದ ಶಿಖರಗಳು—ಇಂಥ ದೃಶ್ಯಗಳು ಸಂತೋಷ ನೀಡುತ್ತವೆ ; ಸೃಷ್ಟಿಯ ಭವ್ಯತೆ ವೈವಿಧ್ಯಗಳನ್ನು ಮನದಟ್ಟುಮಾಡಿ ನಮ್ಮನ್ನು ವಿಸ್ಮಯದಿಂದ ಮೂಕರನ್ನಾಗಿ ಮಾಡುತ್ತವೆ. ಈಜಿಪ್ಟಿನ ಪಿರಮಿಡ್ಡುಗಳು, ತಾಜಮಹಲ್, ಆಸ್ವಾನ್ ಅಣೆಕಟ್ಟು ಇಂಥ ಮಾನವ ನಿರ್ಮಿತ ಅದ್ಭುತಗಳು ಮನುಷ್ಯನ ಶಕ್ತಿಯ ರೋಮಾಂಚಕರ ಸಾಕ್ಷಿಗಳು ; ಹೊಸ ದೇಶಗಳು, ವಿವಿಧ ದೇಶೀಯರು, ಅವರ ಪದ್ಧತಿಗಳು, ಸಂಸ್ಥೆಗಳು–ಇವನ್ನು ಕಾಣುವುದು ಸಂಕುಚಿತ ದೇಶಾಭಿಮಾನಕ್ಕೂ ಪೂರ್ವಗ್ರಹ ಪೀಡಿತ ದೃಷ್ಟಿಗೂ ಮದ್ದು.

ಪ್ರದೇಶ–ಪ್ರದೇಶಗಳ ನಡುವೆ, ದೇಶ ದೇಶಗಳ ನಡುವೆ ಸಾಮರಸ್ಯ ಏರ್ಪಡುವಂತೆ ಮಾಡುವುದರಲ್ಲಿ ಪ್ರವಾಸ ಪರಿಣಾಮಕಾರಿ.

## ಪಾಕಿಸ್ತಾನ

1947ರ ಆಗಸ್ಟ್ 15 ಭಾರತದ ಚರಿತ್ರೆಯಲ್ಲಿ ಬಂಗಾರದ ಅಕ್ಷರಗಳಲ್ಲಿ ಬರೆದಿಡಬೇಕಾದ ದಿನ. ಭಾರತ ಅಂದು ಸ್ವಾತಂತ್ರ್ಯ ಪಡೆಯಿತು. ಮೇರೆಯರಿಯದ ಆನಂದ ಭಾರತೀಯರಿಗೆ. ಆದರೆ ಆ ಆನಂದದಲ್ಲಿ ವಿಷಾದವೂ ಬೆರೆಶಿತ್ತು. ರಾಷ್ಟ್ರ ಇಬ್ಭಾಗವಾಗಿತ್ತು. ಹಿಂದಿನ ದಿನದವರೆಗೆ ಭಾರತದ ಭಾಗವಾಗಿದ್ದ ಕೆಲವು ಪ್ರದೇಶಗಳು ಹೊಸ ರಾಷ್ಟ್ರವಾಗಿ, ಪಾಕಿಸ್ತಾನ ಅವತರಿಸಿತ್ತು. ದೇಶ ಒಡೆಯಿತೆಂದು ವಿಷಾದಪಟ್ಟರೂ ಭಾರತೀಯರು ಸೋದರ ರಾಷ್ಟ್ರಕ್ಕೆ ಶುಭವಾಗಲೆಂದು ಹಾರೈಸಿದರು.

ಪಾಕಿಸ್ತಾನದ ರಚನೆಗೆ ಭಾರತದ ಮುಸ್ಲಿಂ ಲೀಗ್, ಮಹಮದಾಲಿ ಜಿನ್ನಾ ಅವರ ನಾಯಕತ್ವದಲ್ಲಿ ತಳೆದ ಧೋರಣೆ ಕಾರಣ. ಮುಸಲ್ಮಾನರಿಗೆ ಬೇರೆ ರಾಷ್ಟ್ರ ಬೇಕು ಎಂದು ಅವರು ವಾದ ಹೂಡಿದರು. ಮತಕ್ಕೂ ರಾಷ್ಟ್ರೀಯತೆಗೂ ಸಂಬಂಧವಿಲ್ಲ, ಹಲವು ಮತಗಳವರು ಒಂದು ರಾಷ್ಟ್ರದ ಪ್ರಜೆಗಳಾಗಿ ಸ್ನೇಹದಿಂದ ಬದುಕಿಬಾಳಲು ಸಾಧ್ಯ ಎಂದು ಗಾಂಧಿಜಿ ಮತ್ತು ಇತರ ನಾಯಕರು ಅಭಿಪ್ರಾಯಪಟ್ಟರು. ಜಿನ್ನಾ ಒಪ್ಪಲಿಲ್ಲ. ಕಡೆಗೆ ಅನಿವಾರ್ಯವಾಗಿ ಪಾಕಿಸ್ತಾನದ ರಚನೆಗೆ ಸಮ್ಮತಿಸಬೇಕಾಯಿತು.

ದಕ್ಷಿಣ ಏಷ್ಯದಲ್ಲಿರುವ ಈ ದೇಶದಲ್ಲಿ ಪಶ್ಚಿಮ ಪಾಕಿಸ್ತಾನ ಮತ್ತು ಪೂರ್ವ ಪಾಕಿಸ್ತಾನವೆಂದು ಎರಡು ಭಾಗಗಳಿವೆ. ಪಶ್ಚಿಮ ಪಾಕಿಸ್ತಾನಕ್ಕೆ ಬಲೂಚಿಸ್ತಾನ್, ಸಿಂಧ್, ಪಂಜಾಬಿನ ಸ್ವಲ್ಪ ಭಾಗ ಮತ್ತು ವಾಯವ್ಯ ಸರಹದ್ದು ಪ್ರಾಂತ ಸೇರಿವೆ. ಬಂಗಾಳದ ಸ್ವಲ್ಪ ಭಾಗ ಮತ್ತು ಭಾಗಶಃ ಅಸ್ಸಾಂ ಸೇರಿ ಪೂರ್ವ ಪಾಕಿಸ್ತಾನವಾಗಿದೆ. ಪಶ್ಚಿಮ ಮತ್ತು ಪೂರ್ವ ಪಾಕಿಸ್ತಾನಗಳ ನಡುವೆ 1.480 ಕಿಲೊಮೀಟರು ಭಾರತದ ನೆಲ ಚಾಚಿದೆ.

ಪಶ್ಚಿಮ ಪಾಕಿಸ್ತಾನದ ಬಹುಭಾಗ ಮರಳುಕಾಡು, ಪರ್ವತಗಳಿಂದ ಕೂಡಿದೆ. ಸಿಂಧೂ ನದಿಯ ಪ್ರದೇಶ ಫಲವತ್ತಾದ ಭೂಮಿಯಾಗಿದೆ. ಸಿಂಧೂ ನದಿಗೆ ಕಟ್ಟಲಾಗಿರುವ ಸಕ್ಕೂರ್ ಅಣೆಕಟ್ಟು ವಿಸ್ತಾರವಾದ ಪ್ರದೇಶಕ್ಕೆ ನೀರೊದಗಿಸುತ್ತದೆ. ಪೂರ್ವ ಪಾಕಿಸ್ತಾನದಲ್ಲಿ ಅನೇಕ ನದಿಗಳು ಹರಿಯುವುದರಿಂದ ಭೂಮಿ ಫಲವತ್ತಾಗಿದ್ದರೂ ಪ್ರವಾಹದ ಹಾವಳಿ ಹೆಚ್ಚು.

ಪಶ್ಚಿಮ ಪಾಕಿಸ್ತಾನದಲ್ಲಿ ಚಳಿಗಾಲದಲ್ಲಿ ರಾತ್ರಿ 0° ಫಾ ದಷ್ಟಿರುವ ಉಷ್ಣಾಂಶ ಹಗಲಿನಲ್ಲಿ 75°ಫಾ. ಗಳಷ್ಟು ಏರಿಬಿಡುತ್ತದೆ. ಬೇಸಿಗೆ ಕಾಲದಲ್ಲಿ ತಡೆಯಲಸಾಧ್ಯವಾದ ಸೆಖೆ. ಆಗ ಉಷ್ಣಾಂಶ 90° ಫಾ. ದಿಂದ 120° ಫಾ.

ವರೆಗಿರುತ್ತದೆ. ವರ್ಷಕ್ಕೆ 18 ಸೆಂಟಿಮೀಟರ್ ಮಳೆ ಆಗುತ್ತದೆ. ಪೂರ್ವ ಪಾಕಿಸ್ತಾನದ್ದು ಉಷ್ಣವಲಯದ ಹವಾಗುಣ. ಉಷ್ಣಾಂಶವೂ ಹೆಚ್ಚು. ಶೈತ್ಯವೂ ಇರುತ್ತದೆ. ವರ್ಷಕ್ಕೆ 254 ಸೆ.ಮೀ. ಮಳೆ ಬೀಳುತ್ತದೆ.

ಪೂರ್ವ ಪಾಕಿಸ್ತಾನದ ಮುಖ್ಯ ಬೆಳೆ ಸಣಬು, ಕಬ್ಬು; ಪಶ್ಚಿಮ ಪಾಕಿಸ್ತಾನದ್ದು ಗೋಧಿ, ಭತ್ತ, ಬಾರ್ಲಿ, ಕಬ್ಬು, ಎಣ್ಣೆಕಾಳು, ಸಣಬು, ಹತ್ತಿ, ಜಂಬೀರ ಫಲಗಳು, ತೆಂಗಿನಕಾಯಿ, ಬಾಳೆಹಣ್ಣು, ಮಾವಿನಹಣ್ಣು. ದನ, ಮೇಕೆ, ಒಂಟೆ, ಕುರಿಸಾಕಣೆಯೂ, ಮೀನುಗಾರಿಕೆಯೂ ಉಂಟು.

ಪೆಟ್ರೋಲಿಯಂ, ಕ್ರೋಮೈಟ್, ಕಲ್ಲಿದ್ದಲು, ಸುಣ್ಣಕಲ್ಲು, ಜಿಪ್ಸಂ, ಗಂಧಕ, ಮೆಗ್ನೀಸಿಯಂ, ಪೊಟಾಸಿಯಂ ಉಪ್ಪುಗಳು, ಸೋಡಿಯಂ ಕಾರ್ಬೋನೇಟ್, ಪಟಿಕ, ಪೈರೇಟ್ ಮೊದಲಾದ ಖನಿಜಗಳು ದೊರಕುತ್ತವೆ.

ಹಡಗು ನಿರ್ಮಾಣ, ಎರಕ ಹೊಯ್ಯುವುದು, ಸಿಮೆಂಟ್, ವಿದ್ಯುಚ್ಛಕ್ತಿ ಸಾಮಾನುಗಳು, ನೂಲುವುದು ಮತ್ತು ನೇಯುವುದು (ಹತ್ತಿ ಮತ್ತು ಸಣಬು), ಕಾಗದ, ಕುಶಲ ಕೈಗಾರಿಕೆಗಳು ಮುಂತಾದ ಕೈಗಾರಿಕೆಗಳಿವೆ.

ಪಾಕಿಸ್ತಾನದಲ್ಲಿ ಶೇಕಡಾ 85 ಜನ ಮುಸಲ್ಮಾನರು. ಉಳಿದವರು ಹಿಂದೂಗಳು, ಕ್ರೈಸ್ತರು ಮತ್ತು ಬೌದ್ಧರು. ಜನರು ಹೆಚ್ಚಾಗಿ ಆಡುವ ಎರಡು ಭಾಷೆಗಳು—ಪಶ್ಚಿಮ ಪಾಕಿಸ್ತಾನದಲ್ಲಿ ಉರ್ದು, ಪೂರ್ವ ಪಾಕಿಸ್ತಾನದಲ್ಲಿ ಬಂಗಾಳಿ. ಶೇಕಡಾ ಇಪ್ಪತ್ತು ಜನ ಮಾತ್ರ ಓದುಬರಹ ಬಲ್ಲವರು. ಜನರ ಜೀವನ ರೀತಿ ಸಹ ಪಶ್ಚಿಮ ಮತ್ತು ಪೂರ್ವ ಪಾಕಿಸ್ತಾನಗಳಲ್ಲಿ ಬೇರೆ ಬೇರೆಯಾಗಿದೆ.

ರಾವಲ್ಪಿಂಡಿಯಿಂದ 145 ಕಿಲೊಮೀಟರು ದೂರದಲ್ಲಿರುವ ಇಸ್ಲಾಮಾಬಾದ್ ಹೊಸ ರಾಜಧಾನಿ. ಕರಾಚಿ ಹಿರಿಯ ಬಂದರು ಮತ್ತು ದೊಡ್ಡ ನಗರ. ಇಲ್ಲಿ ಅಂತರರಾಷ್ಟ್ರೀಯ ವಿಮಾನ ನಿಲ್ದಾಣ, ವಸ್ತುಸಂಗ್ರಹಾಲಯ, ಉತ್ತಮ ಗ್ರಂಥಭಂಡಾರಗಳಿವೆ. ಪಾಕಿಸ್ತಾನಕ್ಕೆ ಕರಾಚಿಯೇ ಮೊದಲು ರಾಜಧಾನಿಯಾಗಿತ್ತು. ಪಶ್ಚಿಮ ಪಾಕಿಸ್ತಾನದ ಆಡಳಿತ ಕೇಂದ್ರ ಲಾಹೋರ್, ರಾವಿ ನದಿಯ ದಂಡೆಯುಲ್ಲಿದೆ. ಇದು ಪುರಾತನ ಸ್ಮಾರಕಗಳು ತುಂಬಿರುವ ಚಾರಿತ್ರಿಕ ನಗರ. ಬಾದಷಾಹಿ ಮಸೀದಿ, ಅಕ್ಬರ್ ಕಟ್ಟಿಸಿದ್ದ ಕೋಟೆ, ಜಹಾಂಗೀರನ ಗೋರಿ, ಷಾಲಿಮಾರ್ ಉದ್ಯಾನ ಲಾಹೋರಿನಲ್ಲಿವೆ. ಪೂರ್ವ ಪಾಕಿಸ್ತಾನದ ಆಡಳಿತ ಕೇಂದ್ರ ಡಾಕಾ. ಚಿತ್ತಗಾಂಗ್ ಪೂರ್ವ ಪಾಕಿಸ್ತಾನದ ಮುಖ್ಯ ಬಂದರು.

ಭಾರತ ಸ್ವತಂತ್ರವಾದಾಗ ಕಾಶ್ಮೀರ ಸಂಸ್ಥಾನ ಅದನ್ನು ಸೇರಿತು. ಆದರೆ ಕಾಶ್ಮೀರದಲ್ಲಿ ಮುಸಲ್ಮಾನರು ಬಹುಸಂಖ್ಯಾತರಾಗಿರುವುದರಿಂದ ಅದು ಪಾಕಿಸ್ತಾನಕ್ಕೆ ಸೇರಬೇಕೆಂದು ವಾದಿಸಿ, ಪಾಕಿಸ್ತಾನ ಕಾಶ್ಮೀರದ ಮೇಲೆ 1947ರ ಕೊನೆಗೆ ದಾಳಿಮಾಡಿತು. ಕಾಶ್ಮೀರದ ಅರಸನ ಬಿನ್ನಹದಂತೆ ಭಾರತದ ಸೈನ್ಯ ಕಾಶ್ಮೀರವನ್ನು ಪ್ರವೇಶಿಸಿ, ಪಾಕಿಸ್ತಾನಿಗಳನ್ನು ಹೊರದೂಡಿತು. ಕಾಶ್ಮೀರದ ಸಮಸ್ಯೆ ವಿಶ್ವಸಂಸ್ಥೆಗೆ ಹೋಯಿತು. ಇತ್ಯರ್ಥವಾಗಲಿಲ್ಲ. ಪಾಕಿಸ್ತಾನ ಅಕ್ರಮವಾಗಿ ಆಕ್ರಮಿಸಿಕೊಂಡ ಭಾಗವನ್ನು ಇನ್ನೂ ಬಿಟ್ಟುಕೊಟ್ಟಿಲ್ಲ. ಕಾಶ್ಮೀರ ತನ್ನ ಒಂದು ರಾಜ್ಯವೆಂದೇ ಭಾರತ ಅಂಗೀಕರಿಸಿದೆ. 1965ರಲ್ಲಿ ಪಾಕಿಸ್ತಾನ ಭಾರತದ ಮೇಲೆ ಯುದ್ಧ ಹೂಡಿತು. ಆದರೆ ಅದು ಬಯಸಿದ್ದ ವಿಜಯ ದೊರೆಯಲಿಲ್ಲ. ಭಾರತ ಸೈನ್ಯ ಲಾಹೋರಿನವರೆಗೆ ಸಾಗಿಹೋಯಿತು. ಈ ಯುದ್ಧದಲ್ಲಿಯೇ ಬೆಂಗಳೂರಿನಲ್ಲಿ ತಯಾರಾದ 'ನಾಟ್' ವಿಮಾನ ಪ್ರಸಿದ್ಧಿಗೆ ಬಂದದ್ದು. ವಿಶ್ವಸಂಸ್ಥೆ ಮಧ್ಯಪ್ರವೇಶಿಸಿ, ಕದನವನ್ನು ನಿಲ್ಲಿಸಿತು.

1956ರಲ್ಲಿ ಪಾಕಿಸ್ತಾನ ಗಣರಾಜ್ಯವಾಯಿತು. ಎರಡು ವರ್ಷಗಳ ಅನಂತರ ದಂಡನಾಯಕ ಅಯೂಬ್‌ಖಾನರು ಆಗಿನ ಪ್ರಧಾನ ಮಂತ್ರಿಯನ್ನು ಪದಚ್ಯುತಗೊಳಿಸಿ ಸರಕಾರವನ್ನು ವಶಕ್ಕೆ ತೆಗೆದುಕೊಂಡರು. ಸಾರ್ವತ್ರಿಕ ಮತದಾನವಿಲ್ಲದೆ ಅಯೂಬ್‌ಖಾನರು ಸರ್ವಾಧಿಕಾರಿಯಂತೆ ವರ್ತಿಸಿ 'ಮೂಲಭೂತ' ಪ್ರಜಾಪ್ರಭುತ್ವವನ್ನು ಸ್ಥಾಪಿಸಲು ಹೊರಟರು. ಹೊಸ ಸಂವಿಧಾನವನ್ನು ರೂಪಿಸಿ 1965ರಲ್ಲಿ ಅಯೂಬ್‌ಖಾನ್ ಪಾಕಿಸ್ತಾನದ ಅಧ್ಯಕ್ಷರಾದರು. ರಾಷ್ಟ್ರದಲ್ಲಿ ಅವ್ಯವಸ್ಥೆ, ಗೊಂದಲ, ದಂಗೆಗಳು ಹೆಚ್ಚಾಗಿ 1969ರಲ್ಲಿ ಅಯೂಬ್‌ಖಾನರು ಅಧಿಕಾರ ತ್ಯಜಿಸಿದರು. ದಂಡನಾಯಕ ಯಾಹ್ಯಾಖಾನ್ ಅಧ್ಯಕ್ಷರಾದರು.

| | | |
|---|---|---|
| ಖಂಡ | : | ಏಷ್ಯ (ದಕ್ಷಿಣಭಾಗ) |
| ಅಕ್ಷಾಂಶ | : | 20° 46′ ಉ ದಿಂದ 36° 55′ ಉ |
| ರೇಖಾಂಶ | : | 60° 52′ ಪೂ ದಿಂದ 92° 41′ ಪೂ<br>ಪಾಕಿಸ್ತಾನದ ಪಶ್ಚಿಮ - ಪೂರ್ವ ಭಾಗಗಳ ನಡುವೆ 1,480 ಕಿ.ಮೀ. ಭಾರತದ ಪ್ರದೇಶವಿದೆ, |
| ವಿಸ್ತೀರ್ಣ | : | 9,44.669 ಚ. ಕಿ. ಮೀ. |
| ಜನಸಂಖ್ಯೆ | : | 11,00,00,000 |
| ರಾಜಧಾನಿ | : | ಇಸ್ಲಾಮಾಬಾದ್ |
| ಭಾಷೆ | : | ಇಂಗ್ಲಿಷ್, ಉರ್ದು, ಬಂಗಾಳಿ |
| ಸರಕಾರ | : | ಗಣರಾಜ್ಯ |
| ಬಾವುಟ | : | ದಟ್ಟ ಹಸಿರು, ಕೋಲಿನಕಡೆ ಬಿಳಿ ಉದ್ದನೆಯ ಪಟ್ಟಿ ಹಸಿರು ಭಾಗದಲ್ಲಿ ಅರ್ಧಚಂದ್ರ ಮತ್ತು ನಕ್ಷತ್ರ |

**ನೋಡಿ :** ಇಸ್ಲಾಮಾಬಾದ್ ; ಜಿನ್ನಾ, ಮಹಮದಾಲಿ

## ಪಾದರಕ್ಷೆ

ಪಾದಗಳಿಗೆ ರಕ್ಷಣೆ ಕೊಡುವುದು ಪಾದರಕ್ಷೆ.

ಉದ್ದವಾದ, ಮೊನಚಾದ ಪಾದರಕ್ಷೆ ಸಮಾಜದಲ್ಲಿ ಘನತೆಯ ಗುರುತಾಗಿತ್ತು–ಪ್ರಾಚೀನ ರೋಮ್‌ನಲ್ಲಿ.

ಹದಿನಾಲ್ಕನೆಯ ಶತಮಾನದಲ್ಲಿ, 'ಕ್ರ್ಯಾಕೊ' ಎಂಬ ಪಾದರಕ್ಷೆಯ ಹೆಬ್ಬೆರಳಿನ ಭಾಗ ಎಷ್ಟು ಉದ್ದವಾಗಿದ್ದಿತೆಂದರೆ ಒಂದು ಸರಪಳಿಯಿಂದ ಅದನ್ನು ಎತ್ತಿ ಹಿಡಿದರೆ ಮಾತ್ರ ನಡೆಯಲು ಸಾಧ್ಯವಾಗುತ್ತಿತ್ತು.

ಹದಿನಾರನೆಯ ಶತಮಾನದಲ್ಲಿ ಇಂಗ್ಲೆಂಡಿನಲ್ಲಿ 'ಡಕ್‌ಬಿಲ್' ಎಂಬ ಪಾದರಕ್ಷೆಯ ಅಗಲ ಬಹು ಹೆಚ್ಚಾಗಿ, ರಸ್ತೆಯಲ್ಲಿ ನಡೆಯುವವರಿಗೆ ಅನನುಕೂಲವಾಗಿ, ಮುಂಭಾಗ ಹದಿನೈದೂಕಾಲು ಸೆ.ಮೀ. ಮೀರಬಾರದೆಂದು ಶಾಸನ ಮಾಡಬೇಕಾಯಿತು.

ಹದಿನೇಳು ಮತ್ತು ಹದಿನೆಂಟನೆಯ ಶತಮಾನಗಳ 'ಜಾಕ್ ಬೂಟ್ಸ್' ಎಷ್ಟು ಬಿಗಿಯಾಗಿ, ಭಾರವಾಗಿ ಇದ್ದುವೆಂದರೆ ಅದನ್ನು ಹಾಕಿಕೊಳ್ಳಲು ಮತ್ತು ತೆಗೆಯಲು ಇತರರ ಸಹಾಯ ಅಗತ್ಯವಾಗಿತ್ತು.

ಪಾದರಕ್ಷೆ ವಿವಿಧ ರೂಪಗಳನ್ನು, ವಿಚಿತ್ರ ರೂಪಗಳನ್ನು ತಾಳಿದೆ.

ಪಾದರಕ್ಷೆಯನ್ನು ಧರಿಸಿ ನಾವು ನಿರ್ಭಯವಾಗಿ ಓಡಾಡಬಹುದು. ಮಳೆಗಾಲದಲ್ಲಿ ವನ್ಯಪ್ರದೇಶಗಳಲ್ಲಿ ಮೊಣಕಾಲಿನವರೆಗೆ ಬರುವ, ನೀರು ಹೀರದ, ಪಾದರಕ್ಷೆಗಳಿರುತ್ತವೆ. ಬೇಸಗೆಯ ಧಗೆಯನ್ನು ತಗ್ಗಿಸುವ ಮೇಲ್ಮುಸುಕಿಲ್ಲದ ಚಪ್ಪಲಿಗಳೂ ಪಟ್ಟಿಯಿಂದ ಬಿಗಿಯಬಹುದಾದ


ಪ್ರಾಚೀನ ಪಾದರಕ್ಷೆ ವಿವಿಧ ರೂಪಗಳಲ್ಲಿ

ನೀಡುತ್ತಿದ್ದುವು. ಹದಿನೇಳನೆಯ ಶತಮಾನದ ಮಧ್ಯದಿಂದ ಹದಿನೆಂಟನೆಯ ಶತಮಾನದ ಉತ್ತರಾರ್ಧದವರೆಗೆ ಜೋಡುಗಳೂ ಇರುತ್ತವೆ. ಅತಿ ಶೀತ ಪ್ರದೇಶಗಳಲ್ಲಿ ಉಣ್ಣೆಯ ಅಥವಾ ಕೃತಕ ಎಳೆಯ ಕಾಲುಚೀಲಗಳನ್ನು ತೊಟ್ಟು ಮೇಲು ಬೂಟುಗಳನ್ನು ಧರಿಸುವುದರಿಂದ ಪಾದಗಳನ್ನು ರಕ್ಷಿಸಿಕೊಳ್ಳುತ್ತಾರೆ.

ಪಾದರಕ್ಷೆ ಬಹಳ ಕಾಲದಿಂದ ಮನುಷ್ಯನ ಪಾದಗಳನ್ನು ಕಾಪಾಡುತ್ತಿದೆ ಎಂದು ಹೇಳಲಾಗಿದೆ. ಇದರ ಬಳಕೆ ಯಾವಾಗ ಪ್ರಾರಂಭವಾಯಿತೊ ತಿಳಿಯದು. ಹಿಮಯುಗದ ಮನುಷ್ಯ ಕೊರೆಯುವ ಹಿಮದಿಂದ ಪಾದವನ್ನು ರಕ್ಷಿಸಿಕೊಳ್ಳಲು ಚರ್ಮವನ್ನು ಚೀಲದಂತೆ ಕಾಲಿಗೆ ಕಟ್ಟಿಕೊಳ್ಳುತ್ತಿದ್ದಿರಬಹುದು. ಇದರೊಳಗೆ ಪಾದವನ್ನು ತೂರಿಸಿ, ಕಾಲಂದಿಗೆ ಬರುವ ಜಾಗದಲ್ಲಿ ಕಾಡಿನ ಬಳ್ಳಿಗಳಿಂದಲೋ ಚರ್ಮದ ಪಟ್ಟಿಯಿಂದಲೋ ಕಟ್ಟುತ್ತಿದ್ದ. ಆದಿಮಾನವನ ಈ ಪಾದರಕ್ಷೆಗಳು ಸ್ವಲ್ಪ ಕಾಲದಲ್ಲಿ ಕೊಳೆತು ನಾಶವಾಗುತ್ತಿದ್ದವು. ಚರ್ಮವನ್ನು ಬಹುಕಾಲ ಕೆಡದಂತೆ ಹದಗೊಳಿಸುವುದು ಅವನಿಗೆ ತಿಳಿದಿರಲಿಲ್ಲ.

ಕಾಲಕ್ರಮೇಣ ಪಾದರಕ್ಷೆ ಅನೇಕ ರೂಪಗಳನ್ನು ತಳೆಯಿತು. ವಿವಿಧ ಕೆಲಸಮಾಡುವವರು ತೊಡುವ ವಿವಿಧ ರೀತಿಯ ಪಾದರಕ್ಷೆಗಳು ಬಂದುವು. ಪದವಿ ಸೂಚಿಸುವ ಪಾದರಕ್ಷೆಗಳು ಸಿದ್ಧವಾದುವು. ಕ್ರಿ. ಪೂ. 4000 ದಲ್ಲಿ ಈಜಿಪ್ಟಿನವರು ಪೇಪಿರಸ್ ಎಂಬ ಜೊಂಡಿನಿಂದ ಮಾಡಿದ ಪಾದರಕ್ಷೆಯನ್ನು ಉಪಯೋಗಿಸುತ್ತಿದ್ದರು. ಕ್ರಿ. ಪೂ. 1350ರದೆಂದು ಹೇಳಲಾದ ಈಜಿಪ್ಟ್ ಜೋಡುಗಳು, ಚರ್ಮವನ್ನು ಹದಗೊಳಿಸುವುದರಲ್ಲಿ ಅವರಿಗಿದ್ದ ತಿಳಿವಳಿಕೆಯನ್ನು ಸೂಚಿಸುತ್ತವೆ. ಕಾದ ಮರಳಿನಿಂದ ರಕ್ಷಣೆಗೆಂದು ಇವುಗಳನ್ನು ತೊಡುತ್ತಿದ್ದರು. ಚೀನ, ಜಪಾನ್‌ಗಳಲ್ಲಿಯೂ ಪ್ರಾಚೀನಕಾಲದಲ್ಲಿ ಇಂಥ ಚಪ್ಪಲಿಗಳನ್ನು ತೊಡುತ್ತಿದ್ದರಂತೆ. ಗ್ರೀಕ್, ರೋಮನ್ ಸಾಮ್ರಾಜ್ಯಗಳಲ್ಲಿ ಪದವಿಸೂಚಕ ಪಾದರಕ್ಷೆಗಳು ಬಳಕೆಯಲ್ಲಿದ್ದುವು. ಅಸೀರಿಯ ಹಾಗೂ ರೋಮ್ ಯೋಧರು ಅಡ್ಡಲಾದ ಹಲವಾರು ಪಟ್ಟಿಗಳುಳ್ಳ ಜೋಡುಗಳನ್ನು ತೊಡುತ್ತಿದ್ದರು, ಉಚ್ಚ ಪದವಿಯವರು ಧರಿಸುವ ಪಾದರಕ್ಷೆಗಳಲ್ಲಿ ಕಾಲುಬೆರಳಿಗೆ ಬರುವ ಪಾದರಕ್ಷೆಯ ಭಾಗ ನೀಳವಾಗಿಯೂ ಮೊನಚಾಗಿಯೂ ಇರುತ್ತಿದ್ದಿತು. ಮಧ್ಯಯುಗದಲ್ಲಿ ಯೂರೊಪಿನಲ್ಲಿ ವಿಧವಿಧದ ಪಾದರಕ್ಷೆಗಳಿದ್ದುವು. ಅತಿ ಮೊನಚಾದ ಪಾದರಕ್ಷೆಗಳ ತುದಿ ನೆಲ ತಾಗದಂತಿರಲು ಸರಪಳಿ ಅಥವಾ ಆಲಂಕಾರಿಕ ಪಟ್ಟಿಗಳಿಂದ ಅದನ್ನು ಮೊಣಕಾಲಿಗೆ ಬಿಗಿಯುತ್ತಿದ್ದರು. ಹಲವು ಪಾದರಕ್ಷೆಗಳಿಗೆ ಎಂಥ ವಿಪರೀತ ರಚನೆಯಿರುತ್ತಿದ್ದಿತೆಂದರೆ ಅವುಗಳನ್ನು ಹಾಕಿಕೊಂಡವರು ನಡೆಯುವುದು ಕೂಡ ಪ್ರಯಾಸಕರವಾಗಿತ್ತು. ಹೊಲಗಳಲ್ಲಿ ಕೆಲಸಮಾಡುವವರು ಮತ್ತು ವ್ಯಾಪಾರಿಗಳು ಕಾಲಿಗೆ ಮರದ ಮೆಟ್ಟನ್ನು ಉಪಯೋಗಿಸುತ್ತಿದ್ದರು. ಈ ಮೆಟ್ಟುಗಳಿಗೆ ಕಬ್ಬಿಣದ ಬಳೆಗಳಿರುತ್ತಿದ್ದುವು. ಇವು ನೋಡಲು ಅಂದವಾಗಿಲ್ಲದಿದ್ದರೂ ಒಳ್ಳೆಯ ರಕ್ಷಣೆ

ಮೊಣಕಾಲುಗಳಿಗೂ ಮೇಲೆ ಬರುವ ಬೂಟುಗಳನ್ನು ತೊಡುತ್ತಿದ್ದರು. ಇವು ಅತಿ ಬಿಗಿಯಾಗಿಯೂ ಇಲ್ಲವೆ ಅತಿ ಸಡಿಲವಾಗಿಯೂ ಇರುತ್ತಿದ್ದುವು. ಹೀಗೆ ಮಧ್ಯಯುಗದಲ್ಲಿ, ಕಾಲಿನ ಆಕಾರ, ಅಳತೆಗಳಿಗೆ ಸರಿಹೊಂದುವ ಪಾದರಕ್ಷೆಗಳಿಗಿಂತ ಕೇವಲ ಆಲಂಕಾರಿಕ ಬೂಟುಗಳೇ ಪ್ರಧಾನವಾಗಿದ್ದುವು. ಭಾರತದಲ್ಲಿ ಮೊಗಲ್ ಸಾಮ್ರಾಜ್ಯದ ಕಾಲಕ್ಕೆ ವಿಶಿಷ್ಟ ರೀತಿಯ ಪಾದರಕ್ಷೆಗಳು ಬಳಕೆಗೆ ಬಂದುವು. ಮರದ ಪಾದರಕ್ಷೆಗಳ ಬಳಕೆ ಭಾರತದಲ್ಲಿ ನೂರಾರು ವರ್ಷಗಳಿಂದ ಇದೆ.

ಪಾದರಕ್ಷೆಗಳಿಗೆ ಮೊದಲು ಸಮತಲವಿದ್ದಿತು. ಸುಮಾರು ಹದಿನಾರನೆಯ ಶತಮಾನದ ಬಳಿಕ, ಐರೋಪ್ಯ ರಾಜ್ಯಗಳಲ್ಲಿ ಹಿಮ್ಮಡಿಯ ಭಾಗವನ್ನು ಎತ್ತರಿಸಿ ಮಾಡುತ್ತಿದ್ದರು. ಕಾರ್ಕ್ ಅಥವಾ ಕಟ್ಟಿಗೆಯ ತುಂಡನ್ನು ಈ ಭಾಗಗಳಲ್ಲಿ ಹೊಂದಿಸಲಾಗುತ್ತಿದ್ದಿತು. ಹದಿನೆಂಟನೆಯ ಶತಮಾನದಲ್ಲಿ ಇದು ಐದು ಸೆಂಟಿಮೀಟರುಗಳಿಗಿಂತಲೂ ಹೆಚ್ಚು ಎತ್ತರ ತಲಪಿತು. ಹತ್ತೊಂಬತ್ತನೆಯ ಶತಮಾನದಲ್ಲಿ ಪುರುಷರ ಪಾದರಕ್ಷೆಗಳಲ್ಲಿ ಹಿಮ್ಮಡಿಯ ಎತ್ತರ ತೆಗೆದುಹಾಕಲಾಯಿತು. ಮತ್ತು ಇಂದಿನವರೆಗೆ ಇದು ಸಾಧಾರಣ ಸ್ಥಿತಿಯಲ್ಲಿದೆ.

ಪೂರ್ವಕಾಲದಿಂದಲೂ ಆಲಂಕಾರಿಕ ಪಾದರಕ್ಷೆಗಳಿಗೆ ಅದರಲ್ಲೂ ಸ್ತ್ರೀಯರ ಪಾದರಕ್ಷೆಗಳಿಗೆ ಪ್ರಾಶಸ್ತ್ಯ ಹೆಚ್ಚು. ವಿವಿಧ ರಂಗುಗಳನ್ನು ಹಾಕುವುದು ; ಕಸೂತಿ ಕೆಲಸಮಾಡುವುದು ಮತ್ತು ಅಪೂರ್ವ ಲೋಹಗಳನ್ನು ಸೇರಿಸುವುದು, ಹರಳುಗಳನ್ನು ಇವುಗಳಲ್ಲಿ ಹೆಣೆಯುವುದು–ಇವುಗಳಿಂದ ಪಾದರಕ್ಷೆಯು ಕುಶಲ ಕೈಗಾರಿಕೆಯಾಗಿದ್ದಿತು. ಚೀನದಲ್ಲಿ ಮಧ್ಯಯುಗ ಕಾಲದಲ್ಲಿ ಶ್ರೀಮಂತ ಮಹಿಳೆಯರು ಅತಿ ಪುಟ್ಟ ಪಾದರಕ್ಷೆಗಳನ್ನು ಧರಿಸುತ್ತಿದ್ದರು. ಮಹಿಳೆಯ ಪಾದ ಕಿರಿದಾಗಿದ್ದರೆ ಉಚ್ಚ ಸಾಮಾಜಿಕ ವರ್ಗದ ಸಂಕೇತವೆಂದು ಅಲ್ಲಿ ಭಾವಿಸುತ್ತಿದ್ದರು.

ಈಗ ಪಾದರಕ್ಷೆಗಳು ಉಷ್ಣಪ್ರದೇಶಗಳಲ್ಲಿ ಚಪ್ಪಲಿಗಳಂತೆಯೂ ಶೀತ ಪ್ರದೇಶಗಳಲ್ಲಿ ಬೂಟುಗಳಂತೆಯೂ ಮೆರೆಯುತ್ತವೆ. ಇವು ಅಸಂಖ್ಯಾತ ಮಾದರಿಯಲ್ಲಿರುತ್ತವೆ. ಧರಿಸುವವರ ಹಿತವೇ ಈಗಿನ ಪಾದರಕ್ಷೆ ತಯಾರಿಕೆಯಲ್ಲಿ ಮುಖ್ಯ ಅಂಶವೆನಿಸಿದೆ. ಈ ತಯಾರಿಕೆ ಬೃಹತ್ ಪ್ರಮಾಣದಲ್ಲಿ ಎಲ್ಲೆಲ್ಲೂ ನಡೆಯುತ್ತದೆ. ಸಾಧಾರಣ ಕೆಲಸಕ್ಕೆ, ನಡಿಗೆಗೆ, ನಾನಾ ಕ್ರೀಡೆಗಳಿಗೆ, ನೀರಿನೊಳಗಣ ಓಡಾಟಕ್ಕೆ, ಅಂತರಿಕ್ಷಯಾನಕ್ಕೆ ಹೀಗೆ ಆಯಾ ಕೆಲಸಗಳಿಗೆ ತಕ್ಕುದಾದ ವಿಶಿಷ್ಟ ಪಾದರಕ್ಷೆಗಳಿರುತ್ತವೆ. ಈಗ ಜನರು ಉಡುಗೆಗಳಿಗೆ ತಕ್ಕ ಮಾದರಿಯ ಮತ್ತು ಬಣ್ಣದ ಪಾದರಕ್ಷೆ ಬಳಸುತ್ತಾರೆ.

ಬಗೆಬಗೆಯ ಆಧುನಿಕ ಪಾದರಕ್ಷೆಗಳು



ಹಿಂದಿನ ಕಾಲಕ್ಕೆ ಮಕಮಲ್, ಸ್ಯಾಟಿನ್ ಬಟ್ಟೆಗಳಿಂದ ಸ್ತ್ರೀಯರಿಗೆ ಬೇಕಾದ ಪಾದರಕ್ಷೆಗಳು ತಯಾರಾಗುತ್ತಿದ್ದುವು. ಆದರೆ ಈಗ ಸಾಧಾರಣ ವಾಗಿ ತೊಗಲಿನ ಪಾದರಕ್ಷೆಗಳೇ ಹೆಚ್ಚು. ಪ್ಲಾಸ್ಟಿಕ್ ಪಾದರಕ್ಷೆಗಳು ವಿಜ್ಞಾನದ ಕೊಡುಗೆ. ಈಗಿನ ಕಾಲದಲ್ಲಿ ಪಾದರಕ್ಷೆ ಸರಿಯಾಗಿ ಕೂಡು ವುದೇ ಇಲ್ಲವೇ ಎಂಬುದನ್ನು ಕ್ಷ–ಕಿರಣಗಳ ಮೂಲಕ ನಿರ್ಧರಿಸುತ್ತಾರೆ. ಹಸು, ಹಂದಿ, ಕಾಂಗರೂ, ಮೊಸಳೆ, ಸರೀಸೃಪ, ಷಾರ್ಕ್ ಮೀನು ಹಾಗೂ ರೇಷ್ಮೆ, ಸ್ಯಾಟಿನ್, ಮಲ್ಲುಗಳೂ ಇಂದಿನ ಪಾದರಕ್ಷೆಯ ತಯಾರಿಕೆ ಯಲ್ಲಿ ಶೋಭೆಗಾಗಿ ಉಪಯೋಗಿಸಲ್ಪಡುತ್ತಿವೆ. ಅತ್ಯಂತ ಮುಂದು ವರಿದ ಬೂಟು ತಯಾರಿಕೆಯಲ್ಲಿ ಒಂದು ಪಾದರಕ್ಷೆಗೆ 291 ವಿಭಾಗಗಳನ್ನು ಹೊಂದಿಸಲಾಗುವುದಂತೆ. ಇಂಥ ಪಾದರಕ್ಷೆಯ ಪ್ರಧಾನ ವಿಭಾಗಗಳು ಕೇವಲ ಐದು ಮಾತ್ರ.

ಪಾದರಕ್ಷೆಯ ಉದ್ಯಮ ಇಂದು ಎಲ್ಲ ದೇಶಗಳಲ್ಲಿಯೂ ಸಾವಿರಾರು ಜನರಿಗೆ ಜೀವನೋಪಾಯವನ್ನು ಕಲ್ಪಿಸಿದೆ. ಪ್ರಪಂಚದಲ್ಲಿ ಈ ಉದ್ಯಮ ದಲ್ಲಿ ಅಮೆರಿಕದ ಸಂಯುಕ್ತ ಸಂಸ್ಥಾನಕ್ಕೆ ಮೊದಲನೆಯ ಸ್ಥಾನ; ಅಲ್ಲಿ ವರ್ಷಕ್ಕೆ ಸುಮಾರು ಎಂಬತ್ತೈದು ಕೋಟಿ ಜೊತೆ ಪಾದರಕ್ಷೆಗಳು ಮಾರಾಟವಾಗುತ್ತವೆ. ಈ ಉದ್ಯಮದಲ್ಲಿ ಕೆಲಸ ಮಾಡುವವನು ಸರಾಸರಿ ವರ್ಷಕ್ಕೆ 2,900 ಜೊತೆಗಳನ್ನು ಮಾಡುತ್ತಾನೆ. ವರ್ಷ ವರ್ಷಕ್ಕೆ ಪಾದರಕ್ಷೆ ಗಳ ಉತ್ಪಾದನೆ ಒಂದು ಕೋಟಿ ಜೊತೆಯಷ್ಟು ಹೆಚ್ಚುತ್ತಿದೆ.

ಭಾರತದಲ್ಲಿ ಕಾರಖಾನೆಗಳಲ್ಲಿ ತಯಾರುಮಾಡುವ ಪಾದರಕ್ಷೆಗಳ ಸಂಖ್ಯೆ ಏರುತ್ತಲೇ ಇದೆ. 1964ರಲ್ಲಿ ವರ್ಷಕ್ಕೆ ಸುಮಾರು ಎಂಬತ್ತು ಲಕ್ಷ ಜೊತೆ ಇದ್ದುದು 1967ರ ಹೊತ್ತಿಗೆ ಒಂದು ಕೋಟಿ ಐದು ಲಕ್ಷವನ್ನು ಮೀರಿತು. ಭಾರತ ಪಾದರಕ್ಷೆಗಳನ್ನು ಇತರ ದೇಶಗಳಿಗೆ ರಫ್ತು ಮಾಡು ತ್ತದೆ. ಹೀಗೆ ರಫ್ತುಮಾಡಿದ ಪಾದರಕ್ಷೆಗಳ ಬೆಲೆ 1964–65ರಲ್ಲಿ ಮೂರು ಕೋಟಿ ನಲವತ್ತೆಂಟು ಲಕ್ಷ ರೂಪಾಯಿ; 1967–68ರಲ್ಲಿ ಏಳುಕೋಟಿ ಐವತ್ತೆರಡು ಲಕ್ಷ ರೂಪಾಯಿ.

## ಪಾನನಿರೋಧ

ಇಪ್ಪತ್ತೆಂಟು ವರ್ಷ ವಯಸ್ಸಿನ ಅಲೆಗ್ಸಾಂಡರನ ಮುಂದೆ ಪರ್ಷಿಯದ ಅಸಂಖ್ಯಾತ ಸೈನ್ಯವೂ ನಿಲ್ಲಲಿಲ್ಲ. ಭಾರತದ ಆನೆಗಳ ಬಲ ನಿಲ್ಲಲಿಲ್ಲ. ಎಲ್ಲರನ್ನೂ ಗೆದ್ದ ಅಲೆಗ್ಸಾಂಡರ್. ಅಂಥವನು ಸೋತ ಪ್ರಸಂಗವೂ ಇದ್ದಿತು.

ಅವನ ಆಪ್ತಸ್ನೇಹಿತ ಕ್ಲೈಟಸ್. ಒಮ್ಮೆ ಸಮರ್ಕಂದಿನಲ್ಲಿ ಅರಸ ಅಲೆಗ್ಸಾಂಡರ್, ಕ್ಲೈಟಸ್ ಮತ್ತು ಹಲವರು ಆಸ್ಥಾನಿಕರು ಆಮೋದ ಪ್ರಮೋದಗಳಲ್ಲಿ ಕಾಲ ಕಳೆಯುತ್ತಲಿದ್ದರು. ಎಲ್ಲರೂ ಮದ್ಯಪಾನ ಮಾಡು ತ್ತಲಿದ್ದರು. ಆಸ್ಥಾನಿಕರು ಅಲೆಗ್ಸಾಂಡರನನ್ನು ಮುಖಸ್ತುತಿ ಮಾಡು ತ್ತಿದ್ದರು. ಕ್ಲೈಟಸ್ ಇಂಥ ಸ್ತುತಿ ಸರಿಯಲ್ಲ ಎಂದ. ಮಾತು ಬೆಳೆಯಿತು. ಅಲೆಗ್ಸಾಂಡರನೂ ಮಾತಿಗೆ ಸೇರಿದ. ಜಗಳವಾಯಿತು. ಮದ್ಯದ ಪ್ರಭಾವ ದಲ್ಲಿ ಅಲೆಗ್ಸಾಂಡರ್ ತನ್ನ ಅಂಗರಕ್ಷಕನೊಬ್ಬನಿಂದ ಈಟಿಯೊಂದನ್ನು ಕಿತ್ತುಕೊಂಡು ಕ್ಲೈಟಸ್‌ನನ್ನು ತಿವಿದ. ಕ್ಲೈಟಸ್ ಕೆಳಕ್ಕೆ ಬಿದ್ದು ಸತ್ತ. ತನ್ನ ಎದುರಿನಲ್ಲಿ ರಕ್ತದ ಮಡುವಿನಲ್ಲಿ ಬಿದ್ದ ಆಪ್ತಗೆಳೆಯನನ್ನು ಕಂಡು ಅಲೆಗ್ಸಾಂಡರನಿಗೆ ವಿವೇಕ ಮರಳಿತು, ದುಃಖ ತುಂಬಿಬಂದಿತು, ತನ್ನನ್ನೆ ಕೊಂದುಕೊಳ್ಳಲು ಈಟಿಯನ್ನೆತ್ತಿದ. ಪರಿಜನರು ಬಂದು ತಡೆದರು. ಮೂರುದಿನ ಆಹಾರ ನಿದ್ರೆಗಳಿಲ್ಲದೆ ಗೋಳಿಟ್ಟ.

ಜಗತ್ತನ್ನೆ ಗೆದ್ದ ಅಪ್ರತಿಮ ವೀರನನ್ನು ಸೋಲಿಸಿತ್ತು ಮದ್ಯ.

ಔಷಧಿಯ ರೂಪದಲ್ಲಿಲ್ಲದೆ ಜನರ ಸಾಮಾನ್ಯ ಉಪಯೋಗಕ್ಕಾಗಿ ಮಾದಕಪಾನೀಯಗಳ ಮಾರಾಟ ಮತ್ತು ಉಪಯೋಗವನ್ನು ನಿಷೇಧಿ ಸುವುದೇ ಪಾನನಿರೋಧ.

ಮಾದಕಪಾನೀಯ ಸೇವನೆ ಒಂದು ಚಟವಾಗುತ್ತದೆ. ಇದಕ್ಕಾಗಿ ಬಡ ವರು ಸಾಲಮಾಡುತ್ತಾರೆ. ಮನೆಯಲ್ಲಿ ಹೆಂಡತಿ ಮಕ್ಕಳನ್ನು ಅನಾಗರಿಕ ರೀತಿಯಿಂದ ನಡೆಸಿಕೊಳ್ಳುತ್ತಾರೆ. ಇವೆಲ್ಲ ದುಷ್ಪರಿಣಾಮಗಳನ್ನು ಮನಗಂಡ ಗಾಂಧಿಜಿ, 'ಕುಡಿಯಬೇಡಿ' ಎಂದರು.

ಮಾದಕದ್ರವ್ಯಗಳ ಅತಿಯಾದ ಸೇವನೆಯಿಂದ ಮನುಷ್ಯ ತನ್ನಲ್ಲಿರಬಹು ದಾದ ಸಹಜ ಶಕ್ತಿಗಳನ್ನು ಬೆಳೆಸಿಕೊಳ್ಳಲು ಸಾಧ್ಯವಾಗದೆ ಹೋಗುತ್ತದೆ.

ಭಾರತಕ್ಕೆ ಸ್ವಾತಂತ್ರ್ಯ ಬಂದಮೇಲೆ ಪಾನನಿರೋಧವನ್ನು ಜಾರಿಗೆ ತರಲು ಪ್ರಯತ್ನಗಳಾದುವು.

ಮಾದಕಪಾನೀಯಗಳು ಮನಸ್ಸಿನ ಗೊಂದಲವನ್ನು ಮರೆಯುವಂತೆ ಮಾಡುವ ಬಹು ಸುಲಭವಾದ ದಾರಿ—ಎಂಬ ಒಂದು ಸಾಮಾನ್ಯ ಅಭಿ ಪ್ರಾಯದಿಂದ ಇದರ ನಿರೋಧ ಯಶಸ್ವಿಯಾಗಿಲ್ಲ. ಮಾದಕಪಾನೀಯಗಳಿಗೆ ಕೆಲವು ಸಾಮಾಜಿಕ ಗುಂಪುಗಳಲ್ಲಿ ಸ್ಥಾನವಿರುವುದರಿಂದಲೂ ಪೂರ್ಣ ಪಾನನಿರೋಧ ಶಕ್ಯವಾಗಿಲ್ಲ.

ಇಂಥ ಪಾನೀಯಗಳು ಶೀತವಲಯದ ದೇಶಗಳಲ್ಲಿ ಜನಪ್ರಿಯವಾಗಿವೆ. ಕಾರಣ ಅವು ನೀಡುವ ಕಾವು. ಆದರೂ ಅಮೆರಿಕದಲ್ಲಿ ಕಳೆದ ಶತಮಾನದ ಆದಿಯಿಂದ ಪಾನನಿರೋಧದ ಬಗೆಗೆ ಚಳುವಳಿ ಆರಂಭವಾಯಿತು. 1846 ರಿಂದ 1905ರವರೆಗೆ ಹತ್ತೊಂಬತ್ತು ರಾಷ್ಟ್ರಗಳಲ್ಲಿ ಪಾನನಿರೋಧ ಕಾನೂನು ಜಾರಿಗೆ ಬಂತು. ಆದರೆ 1906ರಲ್ಲಿ ಹದಿನಾರು ರಾಷ್ಟ್ರಗಳು ಪಾನ ನಿರೋಧವನ್ನು ಕೊನೆಗಾಣಿಸಿದುವು.

ಪ್ರಜಾಪ್ರಭುತ್ವದಲ್ಲಿ ಸಾಮಾಜಿಕ ಸುಧಾರಣೆಯನ್ನು ಶಾಸನದ ಮೂಲಕ ಮಾಡಬೇಕಾದರೆ ಪ್ರಬಲವಾದ ಜನಾಭಿಪ್ರಾಯದ ಸಮರ್ಥನೆ ಬೇಕು. ಅತಿಯಾದ ಮದ್ಯಪಾನದಿಂದ ಕೆಡುಕುಂಟು; ಬಡವರ್ಗಗಳಲ್ಲಂತೂ ಮದ್ಯಪಾನದಿಂದ ಸಂಸಾರಕ್ಕೆ ದುಃಖ–ಎಂಬುದನ್ನು ಎಲ್ಲರೂ ಒಪ್ಪುತ್ತಾರೆ. ಇನ್ನೂ ಅನಕ್ಷರಸ್ಥರ ಸಂಖ್ಯೆ ಹೆಚ್ಚಾದ ಭಾರತದಲ್ಲಿ ಸಾಮಾಜಿಕ ಸುಧಾರಣೆ ಸಮರ್ಥ, ವ್ಯವಸ್ಥಿತ ಪ್ರಚಾರವನ್ನು ಅವಲಂಬಿಸಿದೆ. ರಾಜ್ಯಾಂಗದ ಪ್ರಕಾರ ಪಾನನಿರೋಧ ರಾಜ್ಯಗಳಿಗೆ ಸೇರಿದ ವಿಷಯ.

## ಪಾನೀಯ

'ತಂಪಾದ ಪಾನೀಯಗಳು' ಎಂಬ ಫಲಕಗಳು ಬೇಸಿಗೆಯಲ್ಲಿ ಮನ ಸೆಳೆಯುತ್ತವೆ. ಹೊರಗಿನ ಬಿಸಿಲು, ಬೇಗೆಗಳನ್ನು ತಾಳಲಾರದೆ ಉಪಾಹಾರ ಮಂದಿರವನ್ನು ಹೊಕ್ಕು ತಂಪಾದ ಹಣ್ಣಿನ ರಸವನ್ನೊ, ಮಜ್ಜಿಗೆಯನ್ನೊ, ಇಲ್ಲವೆ ಶೀತಾಗಾರದಲ್ಲಿಟ್ಟ ಪಾನೀಯಗಳನ್ನೊ ಸೇವಿಸಿ ದೇಹ ದಾಹ ಗಳನ್ನು ತಣಿಸಿಕೊಳ್ಳುವವರು ಬಹಳ ಮಂದಿ.

ಭೇಟಿಗೆಂದು ಮನೆಗೆ ಹೋದರೆ ಹವೆಯನ್ನನುಸರಿಸಿ ತಂಪಾದ ಪಾನೀಯ ವನ್ನೋ ಇಲ್ಲವೆ ಹಿತವಾಗಿರುವ ಬಿಸಿ ಪಾನೀಯವನ್ನೋ ಕೊಟ್ಟು ಆದರಿಸಿ ಉಪಚರಿಸುವವರೂ ಉಂಟು. ಇದು ಸುಸಂಸ್ಕೃತರ ಲಕ್ಷಣ. ಬಂದ ವರನ್ನು ಆದರಿಸಿ ಅವರ ಮಾರ್ಗಾಯಾಸ ಪರಿಹಾರಕ್ಕೆಂದು ಪಾನೀಯ ಗಳನ್ನು ನೀಡುವುದು ಎಲ್ಲ ನಾಗರಿಕತೆಗಳಲ್ಲಿಯೂ ಕಂಡುಬರುತ್ತದೆ.

ಅತಿ ಶೈತ್ಯವಿರುವ ಪಾಶ್ಚಾತ್ಯ ದೇಶಗಳಲ್ಲಿ ಇಂಥ ಸತ್ಕಾರಕ್ಕೆ ಮಾದಕ ಪಾನೀಯಗಳನ್ನು ಬಳಸುತ್ತಾರೆ.

ಪಾನೀಯಗಳಲ್ಲಿ ಮುಖ್ಯವಾದುವು : ಕಾಫಿ, ಚಹ, ಕೋಕೋ, ಹಣ್ಣಿನ ರಸಗಳು. ಹಗುರ ಮಾದಕ ಪಾನೀಯ ಹಾಗೂ ಮಾದಕದ್ರವ್ಯಗಳು. ಕಾಫಿ ಅತ್ಯಂತ ಪರಿಚಿತ ಪಾನೀಯ. ಇದನ್ನು ಹಾಲು ಸೇರಿಸದ ಕಪ್ಪು ಕಾಫಿ ಮತ್ತು ಹಾಲು ಸೇರಿಸಿದ ಕಾಫಿ ಎಂದು ಸೇವಿಸುವುದುಂಟು. ಸಾರ ಹೆಚ್ಚಿರುವ ಕಾಫಿ ದ್ರವ್ಯವೂ ದೊರಕುತ್ತದೆ. ಅಮೆರಿಕದ ಸಂಯುಕ್ತ ಸಂಸ್ಥಾನದಲ್ಲಿ ಈ ಪಾನೀಯ ಬಹು ಜನಪ್ರಿಯ. ಸ್ವಲ್ಪ ಮಟ್ಟಿಗೆ ಪ್ರಚೋದನ ಶಕ್ತಿಯಿರುವ ಕಾಫಿ ಶೈತ್ಯ ವಾತಾವರಣದಲ್ಲಿ ಬಹು ಹಿತ.

ಚಹ ಇಂಗ್ಲೆಂಡ್, ಚೀನ, ಜಪಾನ್ ಹಾಗೂ ಸೋವಿಯೆತ್ ಒಕ್ಕೂಟಗಳಲ್ಲಿ ರಾಷ್ಟ್ರೀಯ ಪಾನೀಯವೆನಿಸಿದೆ. ಕಾಫಿಯನ್ನು ಬಿಟ್ಟರೆ ಚಹ ಅತ್ಯಂತ ಜನಪ್ರಿಯ ಪಾನೀಯ. ಇಂಗ್ಲೆಂಡ್‌ನಲ್ಲಿ ಇದರ ಪರಮಾವಧಿ ಬಳಕೆಯಿದೆ. ವರ್ಷಕ್ಕೆ ಇಂಗ್ಲೆಂಡಿನ ಪ್ರಜೆ 5 ಕಿ. ಗ್ರಾಮ್ ಚಹ ಬಳಸುತ್ತಾನೆಂಬ ಅಂದಾಜಿದೆ. ಜಪಾನಿನಲ್ಲಿ ಚಹ ನೀಡಿಕೆ ವೈಶಿಷ್ಟ್ಯಪೂರ್ಣ ಸಾಮಾಜಿಕ ಪದ್ಧತಿ. ಇದಕ್ಕೆ ನಿಶ್ಚಿತ ಕ್ರಮ ನಿಯಮ ಇರುತ್ತವೆ. ಚಹ ಸೇವಿಸುವ ಕೂಟಗಳಲ್ಲಿ ಇವನ್ನು ಪಾಲಿಸಲೇಬೇಕು. ಚಹ ಕೂಡ ಸಾಮಾನ್ಯವಾಗಿ ಬಿಸಿಯಾಗಿಯೇ ಸೇವಿಸುವ ಪಾನೀಯ. ಇದಕ್ಕೆ ಮಂಜುಗಡ್ಡೆ ಹಾಕಿ ಸೇವಿಸುವುದೂ ಉಂಟು. ಕೆನೆ ಹಾಗೂ ನಿಂಬೆ ರಸವನ್ನು ಬೆರೆಸಿಯೂ ಉಪಯೋಗಿಸುತ್ತಾರೆ. ಬ್ರಿಟಿಷರು ಚಹವನ್ನು ಬೆಳಗಿನ ಉಪಾಹಾರದ ಜೊತೆಗೂ 'ಮಧ್ಯಾಹ್ನದ ಚಹ' ಎಂದು ನಾಲ್ಕು ಗಂಟೆಗೂ ಸೇವಿಸುವ ಪದ್ಧತಿಯಿದೆ. ಸ್ಕಾಟ್ ಜನರು ಉಪಯೋಗಿಸುವ ಚಹ ಕಪ್ಪು ಕಾಫಿಯಷ್ಟೇ ಮಂದ. ಐರೋಪ್ಯರು ಸಕ್ಕರೆಯ ಗಟ್ಟಿಯೊಂದನ್ನು ತುಟಿಗಳ ಮಧ್ಯೆ ಹಿಡಿದು ಅದರ ಮೂಲಕ ಚಹ ಹರಿದುಬರುವಂತೆ ಸೇವಿಸುತ್ತಾರೆ. ಫ್ರೆಂಚರು ವಿಶಿಷ್ಟ ರೀತಿಯ ಸಕ್ಕರೆಯ ಚಿಕ್ಕಗಟ್ಟಿಯನ್ನು ಚಹಕ್ಕೆ ಬೆರೆಸುತ್ತಾರೆ. ರಷ್ಯನರು ಮಲ್ಲಿಗೆ, ಜಾಜಿ ಗುಂಪಿಗೆ ಸೇರಿದ ಸುಗಂಧಯುಕ್ತ ಪುಷ್ಪಗಳನ್ನು ಬೆರೆಸಿ ಪರಿಮಳವುಳ್ಳ ಚೇತೋಹಾರಿಯಾದ ಚಹ ತಯಾರಿಸುತ್ತಾರೆ. ರಷ್ಯದ ರೈಲ್ವೆ ನಿಲ್ದಾಣಗಳಲ್ಲೆಲ್ಲ ಬಿಸಿ ನೀರು ದೊರೆಯುವಂತೆ ಏರ್ಪಡಿಸುತ್ತಾರೆ. ಇದನ್ನು ಉಪಯೋಗಿಸಿ ಪ್ರತಿಯೊಬ್ಬ ಪ್ರಯಾಣಿಕ ತನ್ನ ಚಹವನ್ನು ತಾನೇ ತಯಾರಿಸಿಕೊಳ್ಳುತ್ತಾನೆ.

ಕೋಕೋ ಚಾಕಲೇಟ್‌ನಲ್ಲಿ ಬಳಸುವ ಮುಖ್ಯ ಪದಾರ್ಥ. ಆದರೆ ಇದರ ಪಾನೀಯವು ಸುವಾಸನೆಯಿಂದಲೂ ಸವಿಯಿಂದಲೂ ಕೂಡಿರುತ್ತದೆ. ಕೋಕೋ ಮುಖ್ಯವಾಗಿ ಹಾಲಿಗೆ ಬೆರೆಸಿ ತಯಾರಿಸುವ ಪಾನೀಯ.

ಹಣ್ಣಿನ ರಸಗಳು ಎಲ್ಲೆಡೆಯಲ್ಲಿಯೂ ಎಲ್ಲ ವಯೋಮಾನದವರಿಗೂ ಇಷ್ಟವಾದ ಪಾನೀಯಗಳು. ಎಷ್ಟು ಹಣ್ಣುಗಳಿವೆಯೋ ಅಷ್ಟೇ ರೀತಿಯ ಪಾನೀಯಗಳಿವೆ. ರಾಸಾಯನಿಕ ಕ್ರಿಯೆಯ ಮೂಲಕ ಬಾಳೆ, ಸೀಬೆ ಇವುಗಳಿಂದ ವಿಶಿಷ್ಟ ರುಚಿ, ಸುವಾಸನೆಗಳ ಪಾನೀಯಗಳನ್ನು ತಯಾರಿಸುವ ವಿಧಾನಗಳನ್ನು ಕ್ರಮಗೊಳಿಸಿದ್ದಾರೆ. ಇನ್ನು ಮಾವು, ಕಿತ್ತಳೆ ಜಾತಿಯ ಫಲಗಳು, ಸೇಬು, ಟೊಮಾಟೊ, ಅನಾನಸ್ ಹೀಗೆ ಹಣ್ಣಿನ ರಸಗಳಿಂದ ತಯಾರಾದ ಪಾನೀಯಗಳು ಅನೇಕ. ಆಕರ್ಷಕ ಬಣ್ಣಗಳುಳ್ಳ ವಿವಿಧ ಪರಿಮಳಗಳ ಈ ಪಾನೀಯಗಳು ಜನಾದರಣೀಯವಾಗಿ, ಅತಿಥಿ ಸತ್ಕಾರದಲ್ಲಿ ತಮ್ಮವೇ ಆದ ಸ್ಥಾನವನ್ನು ಪಡೆದಿವೆ. ಇವುಗಳನ್ನು ಹೆಚ್ಚು ಪ್ರಮಾಣದಲ್ಲಿ ತಯಾರಿಸಿ, ಶೇಖರಿಸುತ್ತಾರೆ. ಮನೆಗಳಲ್ಲಿ ಆಯಾ ಹಣ್ಣಿನ ಕಾಲದಲ್ಲಿ ಹೊಚ್ಚ ಹೊಸ ತಂಪಾದ ಪಾನೀಯದ ತಯಾರಿಕೆಯೂ ನಡೆಯುತ್ತದೆ.

ಲಘುಮಾದಕದ್ರವ್ಯಗಳಿರುವ ಪಾನೀಯಗಳಿವೆ. ಸಾಧಾರಣವಾಗಿ ಸೋಡಾ ನೀರು, ಸಕ್ಕರೆ ಹಾಗೂ ಸುವಾಸನೆ ನೀಡುವ ಪದಾರ್ಥಗಳ ಮಿಶ್ರಣದಿಂದಲೇ ತಯಾರಿಸುತ್ತಾರೆ. ಕೋಲಾ ಅಥವಾ ಕೋಕಾಕೋಲಾ ಎಂದು ಜನಪ್ರಿಯವಾಗಿರುವ ಪಾನೀಯ ಈ ಗುಂಪಿಗೆ ಸೇರಿದೆ. ಸೋಡಾ ನೀರೆಂದರೆ ಭಟ್ಟಿಯಿಳಿಸಿದ ನೀರಿನಲ್ಲಿ ಇಂಗಾಲದ ಡೈಆಕ್ಸೈಡ್ ಅನಿಲವನ್ನು ಹಾಯಿಸಿ ಗುಳ್ಳೆಗಳೇಳುವಂತೆ ಮಾಡಿದ ನೀರು.

ಮಾದಕದ್ರವ್ಯಗಳಲ್ಲಿ ಅನೇಕ ವಿಧಗಳಿವೆ. ದ್ರಾಕ್ಷಾರಸ ಅಥವಾ ವೈನ್, ತೀಕ್ಷ್ಣ ದ್ರಾಕ್ಷಾರಸ ಅಥವಾ ಬ್ರಾಂದಿ, ಮೊಳೆತ ಪದಾರ್ಥಗಳಿಂದ ತಯಾರಾದ ಬೀರ್, ಕಬ್ಬಿನದ್ರವ್ಯದಿಂದ ತಯಾರಾದ ರಮ್ ಇತ್ಯಾದಿ. ಮೂಲ ಪದಾರ್ಥಗಳು ಬೆರಳೆಣಿಸುವಷ್ಟೇ ಆದರೂ ಮಿಶ್ರಣ ಮದ್ಯಗಳು ಹೇರಳವಾಗಿವೆ. ಇವು ವೈಯಕ್ತಿಕ ಅಭಿರುಚಿ ಹಾಗೂ ಸ್ವಭಾವಗಳನ್ನು ಅವಲಂಬಿಸಿರುತ್ತವೆ. ಕೆಲವು ರಾಷ್ಟ್ರಗಳಲ್ಲಿ ಕೆಲವು ಮದ್ಯಗಳು ರಾಷ್ಟ್ರೀಯ ಅಭಿಮಾನದ ಪಾನೀಯಗಳಾಗಿವೆ. ರಷ್ಯದ ವೋಡ್ಕಾ, ಫ್ರಾನ್ಸಿನ ಷಾಂಪೇನ್, ಸ್ಕಾಟ್ಲೆಂಡಿನ ವಿಸ್ಕಿ ಇವು ಈ ಬಗೆಯವು.

ಪ್ರಾಚೀನ ಕಾಲದಲ್ಲಿ ಭಾರತದಲ್ಲಿ ಸುಗಂಧಯುಕ್ತ ಹಣ್ಣಿನರಸಗಳನ್ನು ವಸಂತೋತ್ಸವ ಕಾಲದಲ್ಲಿ ಸ್ತ್ರೀಪುರುಷರಾದಿಯಾಗಿ ಸೇವಿಸುವುದು ರೂಢಿಯಲ್ಲಿದ್ದಿತೆಂದು ತೋರುತ್ತದೆ. ಸುರಾಪಾನದ ವರ್ಣನೆ ಭಾರತೀಯ ಸಾಹಿತ್ಯದಲ್ಲಿ ಅಲ್ಲಲ್ಲಿ ಕಂಡುಬರುತ್ತದೆ. ಅರ್ಥಶಾಸ್ತ್ರ ಪರಿಣತ ಕೌಟಿಲ್ಯನ ಬರಹಗಳಲ್ಲಿ ಸುರಾಪಾನವು ಐಶ್ವರ್ಯನಾಶ, ಬುದ್ಧಿಭ್ರಮಣೆ, ಪ್ರಾಣನಾಶ, ಸ್ನೇಹಭಂಗ ಇತ್ಯಾದಿ ಕಡುಪರಿಣಾಮಗಳನ್ನು ಉಂಟುಮಾಡುವುದೆಂಬ ಎಚ್ಚರಿಕೆಯಿದೆ. ಮೌರ್ಯರ ಕಾಲವನ್ನು ಮದಿರಾಸಕ್ತರ ಸುವರ್ಣಯುಗವೆಂದು ಕರೆಯುವವರೂ ಇದ್ದಾರೆ.

ಮತ್ತೊಂದು ಗಮನಾರ್ಹ ಪಾನೀಯವೆಂದರೆ ಸೋಮರಸ. ಹಿಮಾಲಯ ಪರ್ವತಸಾಲಿನಲ್ಲಿ ಬೆಳೆಯುವ ಒಂದು ಅಮೂಲ್ಯ ಮೂಲಿಕೆಯನ್ನು, ಎಲೆಗಳನ್ನು ತರಿದ ಅನಂತರ ತೊಳೆದು, ಕುಟ್ಟಿ, ರುಬ್ಬಿ, ಹಿಂಡಿ ರಸ ತೆಗೆಯುತ್ತಿದ್ದರು. ಇದನ್ನು ಶೋಧಿಸಿ ಅನಂತರ ನೀರು, ಜೇನು, ಹಾಲು, ಮೊಸರು ಮುಂತಾದ ಇನ್ನೂ ಅನೇಕ ಪದಾರ್ಥಗಳೊಂದಿಗೆ ಬೆರೆಸಿ ಸೇವಿಸುತ್ತಿದ್ದರು. ಸೋಮರಸ ಸಿಹಿಯಾಗಿಯೂ ಮಧುರತರವಾಗಿಯೂ ಇದ್ದಿತೆಂದು ವೇದಗಳು ತಿಳಿಸುತ್ತವೆ. ಸೋಮಪಾನ ಮನುಷ್ಯನ ಧೈರ್ಯ ಸಾಹಸಗಳನ್ನು ಹೆಚ್ಚಿಸಿ, ವಿಶ್ವಾಸ ಮೂಡಿಸಿ, ವಾಕ್ಕು ಮತ್ತು ಐಶ್ವರ್ಯಗಳನ್ನು ಅಭಿವೃದ್ಧಿಗೊಳಿಸುತ್ತದೆಂಬುದು ವೇದಕಾಲದ ನಂಬುಗೆ. ಆರ್ಯರು ಈ ಪಾನೀಯವನ್ನು ಅಮೃತಸದೃಶ ಪಾನವೆಂದು ಸಾರಿದ್ದಾರೆ.

ಆಹಾರದ ಆಯ್ಕೆ ಮತ್ತು ಸೇವನೆಯಲ್ಲಿ ಎಚ್ಚರದಿಂದ [illegible], ಅಷ್ಟೇ ಎಚ್ಚರ ಪಾನೀಯಗಳ ಆಯ್ಕೆ ಮತ್ತು ಸೇವನೆಯಲ್ಲೂ [illegible] ಕಾಫಿಯಂಥ ಪಾನೀಯವನ್ನು [illegible] ಮದ್ಯಪಾನ ಒಳ್ಳೆಯದಲ್ಲ. [illegible]

## ಪ್ಯಾರಿಸ್

ಜಗತ್ತಿನ ಅತಿ ಪ್ರಸಿದ್ಧ ಅತ್ಯಂತ ಸುಂದರ ಪಟ್ಟಣಗಳಲ್ಲಿ ಒಂದು ಪ್ಯಾರಿಸ್. ಇತರ ಪಾಶ್ಚಾತ್ಯ ಮಹಾನಗರಗಳಂತೆ ಮೋಡಗಳನ್ನು ಮುಟ್ಟುವ ಎತ್ತರವಾದ ಸೌಧಗಳು ಇಲ್ಲಿಲ್ಲ: ಇಲ್ಲಿನ ಜನ ಆಕಾಶದಲ್ಲಿ ಬೆಳಕು ಕಿರಣಗಳನ್ನು ಸೂರ್ಯ ಚಂದ್ರ ತಾರೆಗಳ ಸೊಗಸಿನಲ್ಲಿ ಕಾಣಬಲ್ಲರು. ಕೈಗಾರಿಕೆಯ ಕೇಂದ್ರವಾದರೂ ಅತಿ ದೊಡ್ಡ ಕಾರಖಾನೆಗಳಿಲ್ಲ: ನಗರದ ಮೇಲೆ ಕಪ್ಪು ಹೊಗೆ ಮುಸುಕುವುದಿಲ್ಲ. 2.000 ವರ್ಷಗಳ ಚರಿತ್ರೆ ಇರುವ ಈ ನಗರ. ಇಂದೂ ಯೂರೊಪಿಗೆಲ್ಲ ನಡೆ. ಉಡುಗೆಗಳ 'ಫ್ಯಾಷನ್'ಗೆ ಗುರು.

ಸೀನ್ ನದಿಯ ಎರಡು ಕಡೆ ದಂಡೆಗಳ ಮೇಲೆ ಪ್ಯಾರಿಸ್ ನಗರವನ್ನು ಕಟ್ಟಿದ್ದಾರೆ. ಪ್ಯಾರಿಸ್ ಪ್ರಪಂಚದಲ್ಲಿ ಸುಯೋಜಿತ ಮತ್ತು ಸುರಚಿತ ನಗರವೆಂದು ಪ್ರಖ್ಯಾತವಾಗಿದೆ.

ಪ್ಯಾರಿಸಿನಲ್ಲಿ ಅನೇಕ ಸುಂದರ ಚಾರಿತ್ರಿಕ ಕಟ್ಟಡಗಳು, ಸ್ಮಾರಕಸ್ತಂಭಗಳು ಇವೆ. ಮೂವತ್ತು ವಸ್ತು ಸಂಗ್ರಹಾಲಯಗಳಿವೆ.

ಐಫೆಲ್ ಗೋಪುರ 305 ಮೀಟರ್ ಎತ್ತರವಿದೆ. ಇದು ಕಬ್ಬಿಣದ್ದು: 1889ರಲ್ಲಿ ಕಟ್ಟಿದರು. ಇದರ ಮೇಲಂತಸ್ತಿನಲ್ಲಿ ನಿಂತು ಪ್ಯಾರಿಸ್ ನಗರದ ಸುಂದರ ದೃಶ್ಯವನ್ನು ಕಾಣಬಹುದು. 'ವಿಜಯಕಮಾನು' ಇನ್ನೊಂದು ಸುಂದರ ನಿರ್ಮಾಣ.

ಪ್ಯಾರಿಸಿನ ಉದ್ಯಾನಗಳು, ಬೀದಿಗಳು. ಚೌಕಗಳು. ಚೇತೋಹಾರಿಯಾಗಿವೆ. ಎಡದಂಡೆ ಬೌದ್ಧಿಕ ಕ್ಷೇತ್ರ. ಇದು ಚಿತ್ರಕಲಾವಿದರ ಮತ್ತು ಬರಹಗಾರರ ವಾಸಸ್ಥಳ. ಅನೇಕ ಕಲಾಶಾಲೆಗಳೂ ಪ್ಯಾರಿಸ್ ವಿಶ್ವವಿದ್ಯಾನಿಲಯವೂ ಇಲ್ಲಿದೆ. ಸೀನ್‌ನದಿಯನ್ನು ಚಿತ್ರಿಸುವುದೆಂದರೆ ಅಲ್ಲಿನವರಿಗೆ ಬೇಸರವೇ ಇಲ್ಲ.

ನೇಟೊ. ಯುನೆಸ್ಕೊಗಳಂಥ ಕೆಲವು ಅಂತರರಾಷ್ಟ್ರೀಯ ಕಚೇರಿಗಳೂ ಪ್ಯಾರಿಸಿನಲ್ಲಿವೆ. ಅತ್ಯುತ್ತಮ ಮನೋರಂಜನೆಗೆ ಹೆಸರಾಂತ ನಗರ ಇದು. ಫ್ರಾನ್ಸಿನ ಕೈಗಾರಿಕೆಗಳಲ್ಲಿ ನಾಲ್ಕನೆಯ ಒಂದು ಭಾಗ ಪ್ಯಾರಿಸಿನಲ್ಲಿಯೆ ಇದೆ.

ಪ್ಯಾರಿಸಿನ ವಿಜಯಕಮಾನು



ಪ್ಯಾರಿಸಿನ ಜನಸ್ತರು ಸೀನ್ ನದಿಯ ಒಂದು ಸಣ್ಣ ದ್ವೀಪದಲ್ಲಿ ವಾಸಿಸುತ್ತಿದ್ದರು. ಜೂಲಿಯಸ್ ಸೀಸರನ ಕಾಲದಲ್ಲಿ ಇದು ಚಿಕ್ಕ ಹಳ್ಳಿಯಾಗಿತ್ತು. ರೋಮನರ ಆಡಳಿತಕಾಲದಲ್ಲಿ. ಹಳ್ಳಿಯಾಗಿದ್ದುದು ವಿಸ್ತಾರವಾದ ನಗರವಾಗಿ ಬೆಳೆಯಿತು. ಪ್ಯಾರಿಸ್ ಅನೇಕ ಬಾರಿ ದಾಳಿಗೆ ತುತ್ತಾಗಿ ನಷ್ಟವನ್ನು ಅನುಭವಿಸಿದೆ. ಒಂಬತ್ತನೆಯ ಶತಮಾನದಲ್ಲಿ ನಾರ್ಮನರು. ಜರ್ಮನರು. 1789ರಲ್ಲಿ ಕ್ರಾಂತಿಕಾರರು. 1871ರಲ್ಲಿ ಕಮ್ಯೂನ್ ಜನರ ತಂಡ ಇದರಿಂದ ನಗರ ಅಂದಗೆಟ್ಟಿತು. ಹತ್ತೊಂಬತ್ತನೆಯ ಶತಮಾನದಲ್ಲಿ ಮೂರನೆಯ ನೆಪೋಲಿಯನನ ಕಾಲದಲ್ಲಿ ಆಧುನಿಕ ನಗರ ರೂಪ ತಳೆಯಿತು. ಬ್ಯಾರನ್ ಹೌಸ್‌ಮನ್ ಎಂಬಾತ ವಿಶಾಲವಾದ ಬೀದಿಗಳು. ಸುಂದರವಾದ ಚೌಕಗಳು. ಹೊಸ ಮಾದರಿ ಮನೆಗಳನ್ನು ನಿರ್ಮಿಸಿದ. ಸಣ್ಣ ಬೀದಿಗಳು, ಕೊಳಚೆ ಸ್ಥಳಗಳು ನಿರ್ಮೂಲವಾಗಿ ಆ ಸ್ಥಳಗಳಲ್ಲಿ ಹೊಸ ಕಟ್ಟಡಗಳು ಎದ್ದುವು. 1959ರಲ್ಲಿ ಸರಕಾರ ಹಳೆಯ ಬಂಗಲೆಗಳಿಗೆಲ್ಲಕ್ಕೂ ಸುಣ್ಣ ಬಣ್ಣ ಮಾಡಿಸಿ ದಾರಿಗಳಲ್ಲಿ ಶುಭ್ರವಾದ ದೀಪಗಳನ್ನು ಹಾಕಿ ಹೊಸರೂಪ ನೀಡಿದ ಮೇಲೆ. ಪ್ಯಾರಿಸ್ 'ಬೆಳಕಿನ ನಗರ' ಎಂದು ಹೆಸರು ಗಳಿಸಿತು. ಪ್ಯಾರಿಸಿನ ವಿಸ್ತೀರ್ಣ 106 ಚದರ ಕಿಲೊಮೀಟರು. ಜನಸಂಖ್ಯೆ 34.00.000.

ಪ್ಯಾರಿಸ್ ಪ್ರಪಂಚದ ಎಲ್ಲ ನಾಗರಿಕರೂ ನೋಡಬಯಸುವ ನಗರ. ದೋಣಿಯಲ್ಲಿ ಕುಳಿತು ಸೀನ್ ನದಿಯಲ್ಲಿ ಸಾಗಿದರೆ ನಗರದ ಸೌಂದರ್ಯವನ್ನು ಚೆನ್ನಾಗಿ ಮನಗಾಣಬಹುದು.

ಪ್ಯಾರಿಸಿನ ಸುಗಂಧದ್ರವ್ಯ. ಆಭರಣಗಳು ಸುಪ್ರಸಿದ್ಧ. ಈ ಸುಗಂಧದ್ರವ್ಯಗಳನ್ನು ತಯಾರಿಸಲು ಬೇಕಾದ ಕಚ್ಚಾಮಾಲನ್ನು ಭಾರತವನ್ನೂ ಒಳಗೊಂಡು ಬೇರೆ ದೇಶಗಳಿಂದ ಆಮದು ಮಾಡುತ್ತಾರೆ.

ವಾಲ್ಟೇರ್, ವಿಕ್ಟರ್ ಹ್ಯೂಗೋ, ಬಾಲ್ಜಾಕ್. ಎಮಿಲಿ ಜೋಲಾರಂಥ ವಿಖ್ಯಾತ ಬರಹಗಾರರು ಪ್ಯಾರಿಸಿನವರು.

ನೋಡಿ : ನೇಟೊ ; ಫ್ರಾನ್ಸಿನ ಮಹಾಕ್ರಾಂತಿ : ಯುನೆಸ್ಕೊ

## ಪ್ಯಾಲೆಸ್ಟೈನ್

ಮೂರು ಧರ್ಮಗಳ ಅನುಯಾಯಿಗಳಿಗೆ ಪವಿತ್ರವಾದ ಪ್ರದೇಶ; ಜಗತ್ತು ವಿಸ್ಮಯಪಡುವಂಥ ಬುದ್ಧಿವಂತನೆನಿಸಿಕೊಂಡ ಯೆಹೂದ್ಯರ ರಾಜ ಸಾಲೊಮನ್ ಕಟ್ಟಿದ ಭವ್ಯ ದೇವಸ್ಥಾನ. ಮಹಮ್ಮದ್ ಪೈಗಂಬರರಿಗೆ ಅರ್ಪಿತವಾದ ಉಮರನ ಮಸೀದಿ, ಯೇಸು ಕ್ರಿಸ್ತನ ಜನ್ಮಸ್ಥಳ ಬೆತ್ಲೆಹೇಮ್ ಇವೆಲ್ಲವನ್ನೂ ಒಳಗೊಂಡು ಐದು ಸಾವಿರ ವರ್ಷಗಳ ಇತಿಹಾಸವನ್ನು ಪಡೆದ ನಾಡು—ಪ್ಯಾಲೆಸ್ಟೈನ್.

ಹಿಂದೆ ಪ್ಯಾಲೆಸ್ಟೈನ್ ಭೂಮಧ್ಯ (ಮೆಡಿಟರೇನಿಯನ್) ಸಮುದ್ರದ ಪೂರ್ವದ ಅಂಚಿನಲ್ಲಿ ಈಜಿಪ್ಟ್ ಮತ್ತು ಸಿರಿಯಗಳ ಮಧ್ಯೆ 27.091 ಚದರ ಕಿಲೊಮೀಟರು ವಿಸ್ತಾರವಾಗಿತ್ತು. ಇಂದು ಅದರ ವಿಸ್ತಾರದಲ್ಲಿ 20.720 ಚದರ ಕಿಲೊಮೀಟರುಗಳಷ್ಟು ಇಸ್ರೇಲಿಗೂ. ಉಳಿದ ಭಾಗ ಜೋರ್ಡಾನ್. ಸಿರಿಯ. ಲೆಬನಾನ್‌ಗಳಿಗೂ ಸೇರಿದೆ.

2.00.000 ವರ್ಷಗಳಿಗೂ ಹಿಂದೆ ಶಿಲಾಯುಗದ ಕಾಲದಲ್ಲಿ ಜನ ಪ್ಯಾಲೆಸ್ಟೈನಿನಲ್ಲಿ ವಾಸವಿದ್ದರೆಂದು ಪುರಾತತ್ತ್ವಶಾಸ್ತ್ರಜ್ಞರು ಹೇಳುತ್ತಾರೆ. 12.000 ವರ್ಷಗಳ ಹಿಂದೆ ಹೊಸ ಶಿಲಾಯುಗದ ಕಾಲದಲ್ಲಿದ್ದ [illegible] ಅನೇಕ ವಸ್ತುಗಳು [illegible]

ಕ್ರಿ. ಪೂ. 3000ದಲ್ಲಿ ಪ್ಯಾಲೆಸ್ಟೈನ್‌ಗೆ ಕ್ಯಾನಾನ್ ಎಂಬ ಹೆಸರಿತ್ತು. ಕ್ರಿ. ಪೂ. 1100ರ ಹೊತ್ತಿಗೆ ಅದನ್ನು ವಶಮಾಡಿಕೊಂಡ ಫಿಲಿಸ್ಟಿನ್ ಜನ ರಿಂದ ಅದಕ್ಕೆ ಪ್ಯಾಲೆಸ್ಟೈನ್ ಎಂಬ ಹೆಸರು ಬಂದಿತು.

ಪ್ಯಾಲೆಸ್ಟೈನಿನಲ್ಲಿದ್ದ ಇಸ್ರೇಲರು ಫಿಲಿಸ್ಟಿನ್ ಮತ್ತು ಕ್ಯಾನಾನ್ ಜನ ರೊಡನೆ ಸತತವಾಗಿ ಹೊಡೆದಾಡಬೇಕಾಗಿ ಬಂದಾಗ ಅವರು ಒಗ್ಗಟ್ಟಾಗಿ ಸಾಲ್‌ದೊರೆಯ ಆಡಳಿತದಲ್ಲಿ ಬಲವಾದ ರಾಜ್ಯ ಸ್ಥಾಪಿಸಿದರು. ಸಾಲ್ ದೊರೆಯ ಅನಂತರ ಬಂದ ಡೇವಿಡ್ (ಸುಮಾರು ಕ್ರಿ. ಪೂ. ಹತ್ತನೆಯ ಶತಮಾನ) ಇಸ್ರೇಲರನ್ನು ಶಕ್ತಿಯುತ ಜನಾಂಗವಾಗಿ ಬೆಳೆಸಿ ಜೆರೂಸಲೆ ಮನ್ನು ರಾಜಧಾನಿಯನ್ನಾಗಿ ಮಾಡಿದ. ಅವನ ಮಗ ಸಾಲೊಮನ್ ದೊರೆ ಜೆರೂಸಲೆಮಿನಲ್ಲಿ ಮೊದಲ ದೇವಸ್ಥಾನ ಕಟ್ಟಿದ.

ಸಾಲೊಮನ್ ದೊರೆ ಕಾಲವಾದಮೇಲೆ ರಾಜ್ಯ ಇಬ್ಭಾಗವಾಗಿ ಒಡೆ ಯಿತು; ಉತ್ತರದಲ್ಲಿ ಇಸ್ರೇಲ್, ದಕ್ಷಿಣದಲ್ಲಿ ಜ್ಯೂಡಾ. ಜ್ಯೂಡಾದ ಜನರಿಗೆ ಯೆಹೂದ್ಯರೆಂದು ಹೆಸರಾಯಿತು. ಕ್ರಿ.ಪೂ. 722ರಲ್ಲಿ ಇಸ್ರೇಲನ್ನು ಅಸೀರಿಯನ್ ಚಕ್ರಾಧಿಪತ್ಯವೂ ನೂರೈವತ್ತು ವರ್ಷಗಳಾದಮೇಲೆ ಜ್ಯೂಡಾ ವನ್ನು ಬ್ಯಾಬಿಲೋನಿಯದ ಚಕ್ರಾಧಿಪತ್ಯವೂ ಆಕ್ರಮಿಸಿದುವು.

ಕ್ರಿ. ಪೂ. 63ರಲ್ಲಿ ರೋಮನರು ಪ್ಯಾಲೆಸ್ಟೈನನ್ನು ವಶಪಡಿಸಿಕೊಂಡರು. ರೋಮನರ ಆಳ್ವಿಕೆಯ ಕಾಲದಲ್ಲೇ ಯೇಸು ಕ್ರಿಸ್ತ ಪ್ಯಾಲೆಸ್ಟೈನಿನಲ್ಲಿ ಕ್ರೈಸ್ತ ಧರ್ಮ ಸ್ಥಾಪಿಸಿದ್ದು, ಆ ಧರ್ಮವನ್ನು ಉಪದೇಶಿಸಿದ್ದು.

600ರಲ್ಲಿ ಪ್ಯಾಲೆಸ್ಟೈನ್ ಅರಬ್ ಜನರ ಆಡಳಿತಕ್ಕೆ ಒಳಗಾಯಿತು. ಮುಂದೆ ತುರ್ಕಿ ಜನರ ವಶವಾಗಿ, ಅನಂತರ ಕ್ರೈಸ್ತ ಹೋರಾಟಗಾರರ ಅಧೀನವಾಯಿತು.

ಆಕ್ರಮಣಕಾರರ ಕೈಗೆ ಸಿಕ್ಕು ಮರಳುಗಾಡಿನಂತಾಗಿದ್ದ ಪ್ಯಾಲೆಸ್ಟೈನ್ 1918ರಲ್ಲಿ ಮೊದಲನೆಯ ಮಹಾಯುದ್ಧದ ಕಾಲದಲ್ಲಿ ಮತ್ತೆ ಯುದ್ಧರಂಗ ವಾಯಿತು. 1922ರಲ್ಲಿ ಸಂಯುಕ್ತ ರಾಷ್ಟ್ರಸಂಘ ಪ್ಯಾಲೆಸ್ಟೈನಿನಲ್ಲಿ ಬ್ರಿಟಿಷ್ ಸರಕಾರದ ಆಳ್ವಿಕೆಯನ್ನು ಅಂಗೀಕರಿಸಿತು. ಇದಾದನಂತರ ಅನೇಕ ದೇಶಗಳಿಂದ ಯೆಹೂದ್ಯರು ಪ್ಯಾಲೆಸ್ಟೈನಿನಲ್ಲಿ ನೆಲೆಸಲು ಬಂದರು. ಆದರೆ ಅಲ್ಲಿದ್ದ ಅರಬ್ ಜನರಿಗೆ ಅದು ಯೆಹೂದ್ಯರ ರಾಷ್ಟ್ರವಾಗು ವುದು ಇಷ್ಟವಿರಲಿಲ್ಲ. 1936ರಿಂದ ಅರಬರ ಮತ್ತು ಯೆಹೂದ್ಯರ ನಡು ವಣ ಮನಸ್ತಾಪ ತೀವ್ರಗೊಂಡು ಕದನ ಆರಂಭವಾಯಿತು. ಅರಬ್ ಜನರಿಗೆ ಬೆಂಬಲ ನೀಡಿದ ಬ್ರಿಟಿಷರ ವಿರುದ್ಧ ಯೆಹೂದ್ಯರು ಹೋರಾಡಿ ದರು. ಅರಬರ ಮತ್ತು ಯೆಹೂದ್ಯರ ಪರಸ್ಪರ ದ್ವೇಷ ಬಿಡಿಸಲಾಗದ ಸಮಸ್ಯೆಯಾಯಿತು. ಈ ಸಮಸ್ಯೆಯನ್ನು ಪರಿಹರಿಸಬೇಕೆಂದು 1947ರಲ್ಲಿ ಬ್ರಿಟಿಷ್ ಸರಕಾರ ವಿಶ್ವಸಂಸ್ಥೆಯನ್ನು ಪ್ರಾರ್ಥಿಸಿತು. ವಿಶ್ವಸಂಸ್ಥೆ ಪ್ಯಾಲೆಸ್ಟೈನನ್ನು ಎರಡು ಭಾಗಗಳಾಗಿ ವಿಂಗಡಿಸಿ ಒಂದನ್ನು ಅರಬಿ ರಾಷ್ಟ್ರವಾಗಿ, ಇನ್ನೊಂದನ್ನು ಯೆಹೂದ್ಯರ ರಾಷ್ಟ್ರವಾಗಿ ಮಾಡಿತು.

1948ರಲ್ಲಿ ಬ್ರಿಟಿಷ್ ಸರಕಾರದ ಆಳ್ವಿಕೆ ಮುಗಿದು, ಯೆಹೂದ್ಯರು ಹೊಸ ಇಸ್ರೇಲ್ ರಾಜ್ಯವನ್ನು ಸ್ಥಾಪಿಸಿದರು.

ಪ್ಯಾಲೆಸ್ಟೈನಿನಲ್ಲಿರುವ ಪವಿತ್ರ ಸ್ಥಳಗಳ ಬಹು ಭಾಗ ಜೆರೂಸಲೆಮ್ ನಲ್ಲಿದೆ. 1967ರಲ್ಲಿ ಇಸ್ರೇಲಿಗೂ ಅರಬ್ ರಾಷ್ಟ್ರಗಳಿಗೂ ಯುದ್ಧವಾಯಿತು. ಅನಂತರ ಆಗಾಗ ಘರ್ಷಣೆಗಳಾಗುತ್ತಲೇ ಇದ್ದುವು. 1970ರ ಆಗಸ್ಟ್ 8ರಂದು ಕದನವಿರಾಮ ಏರ್ಪಟ್ಟು, 1,150 ದಿನಗಳ ಗುಡುಗಾಟದ ಬಳಿಕ ಫಿರಂಗಿಗಳು ಸ್ತಬ್ಧವಾದುವು.

*ನೋಡಿ : ಜೆರೂಸಲೆಮ್*

## ಪಿಯರಿ, ರಾಬರ್ಟ್ ಎಡ್ವಿನ್

ಅಮೆರಿಕದ ಸುಪ್ರಸಿದ್ಧ ಧ್ರುವ ಶೋಧಕನಾದ ರಾಬರ್ಟ್ ಎಡ್ವಿನ್ ಪಿಯರಿ ಎಂಟು ಬಾರಿ ಧ್ರುವ ಪ್ರದೇಶದ ಮಹಾಯಾತ್ರೆಯನ್ನು ಕೈಗೊಂಡಿದ್ದ. ಉತ್ತರ ಧ್ರುವದ ಅನ್ವೇಷಕನೆಂದು ಈತ ಪ್ರಸಿದ್ಧ.

1856ರ ಮೇ 26ರಂದು ಕ್ರೆಸ್ಸನ್ ಎಂಬ ಸ್ಥಳದಲ್ಲಿ ಪಿಯರಿ ಹುಟ್ಟಿದ. ಪದವೀಧರನಾದ ಅನಂತರ ಅಮೆರಿಕ ನೌಕಾದಳದ ಪೌರಶಿಲ್ಪ ವಿಭಾಗವನ್ನು ಸೇರಿಕೊಂಡ. 1885ರಿಂದ 1887ರ ವರೆಗೆ ನಿಕರಾಗ್ವಾ ಕಾಲುವೆಯ ಪರಿಶೀಲನೆಯಲ್ಲಿ ಭಾಗವಹಿಸಿದ. 1886ರಲ್ಲಿ ಒಬ್ಬ ಜೊತೆ ಗಾರನೊಡನೆ ಗ್ರೀನ್‌ಲೆಂಡಿನ ಒಳನಾಡಿನಲ್ಲಿ ಸಂಚಾರವನ್ನಾರಂಭಿಸಿದ. ಡಿಸ್ಕೋ ಕೊಲ್ಲಿಯಿಂದ ಗ್ರೀನ್‌ಲೆಂಡಿನ ಹಿಮದ ತೆರೆಯ ಮೇಲೆ 161 ಕಿಲೊ ಮೀಟರುಗಳವರೆಗೆ ಪ್ರಯಾಣಮಾಡಿದ. ಸಮುದ್ರಮಟ್ಟಕ್ಕಿಂತ 2,288 ಮೀಟರು ಎತ್ತರ ಪ್ರದೇಶ ಅದು. ಈ ಪ್ರವಾಸದಿಂದ ಅವನಿಗೆ ಅನ್ವೇಷಣೆಯ ಬಗೆಗೆ ಹೆಚ್ಚು ಕುತೂಹಲ ಮೂಡಿತು. ಪಿಯರಿಯ ಸಾಧನ ಅಮೆರಿಕದ ಫಿಲ್‌ಡೆಲ್ಫಿಯದ ಪ್ರಕೃತಿವಿಜ್ಞಾನ ಅಕಾಡಮಿಯ ಗಮನ ಸೆಳೆಯಿತು. ಉತ್ತರ ಧ್ರುವ ಶೋಧನೆಗಾಗಿ ಈ ಅಕಾಡಮಿ ಶ್ರಮಿಸುತ್ತಿತ್ತು. ಐದು ವರ್ಷಗಳ ಬಳಿಕ ಈ ಸಂಸ್ಥೆ ಅವನನ್ನು ಉತ್ತರ ಗ್ರೀನ್‌ಲೆಂಡಿನ ಯಾನವೊಂದರ ನಾಯಕನನ್ನಾಗಿ ಮಾಡಿತು. ಈ ಪ್ರಯಾಣ ದಿಂದ ಲಭಿಸಿದ ಲಾಭವೆಂದರೆ ಗ್ರೀನ್‌ಲೆಂಡ್ ಒಂದು ದ್ವೀಪ ಎಂಬುದಕ್ಕೆ ನಿಖರವಾದ ಸಾಕ್ಷ್ಯ. ಅನಂತರ ನಡೆದ 1893–95 ಮತ್ತು 1896–97ರ ಅನ್ವೇಷಣೆಗಳಿಂದ ಧ್ರುವಪ್ರದೇಶದ ಬಗೆಗೆ ಮತ್ತೂ ಕೆಲವು ವಿಷಯಗಳು ಬೆಳಕಿಗೆ ಬಂದುವು. ಪಿಯರಿ ಈ ಎಲ್ಲ ಯಾನಗಳ ವಿವರವನ್ನು ಬರೆದಿಟ್ಟ. 'ಅಗಾಧ ಹಿಮದ ಮೇಲೆ ಉತ್ತರದತ್ತ' ಎಂಬ ಹೆಸರಲ್ಲಿ, ಪುಸ್ತಕರೂಪದಲ್ಲಿ, 1898ರಲ್ಲಿ ಅದು ಪ್ರಕಟವಾಯಿತು.

1898ರಲ್ಲಿ ಉತ್ತರ ಧ್ರುವ ಶೋಧನೆಗಾಗಿ ಹೊರಟ ಪಿಯರಿ ನಾಲ್ಕು ವರ್ಷಕಾಲ ಪ್ರಯಾಣ ಮಾಡಿದರೂ ಧ್ರುವ ಇನ್ನೂ 628 ಕಿ.ಮೀ. ದೂರ ಇದ್ದಾಗ ಹಿಂದಿರುಗಬೇಕಾಯಿತು. 1908ರಲ್ಲಿ ಪಿಯರಿ ಮತ್ತೆ ಧ್ರುವಾನ್ವೇ ಷಣೆಯನ್ನು ಮುಂದುವರಿಸಿದ. ಅಮೆರಿಕದ ಶ್ರೀಮಂತರು 'ಪಿಯರಿ ಉತ್ತರ ಧ್ರುವ ಸಂಘ' ಎಂಬುದನ್ನು ಸ್ಥಾಪಿಸಿ ಸುಮಾರು ಎಪ್ಪತ್ತೈದು ಸಾವಿರ ರೂಪಾಯಿಗಳಷ್ಟು ಸಹಾಯಧನವನ್ನು ಸಂಗ್ರಹಿಸಿದರು. ಆ ಹಣದ ಸಹಾಯದಿಂದ ಪಿಯರಿ ತನ್ನ ಪ್ರಯಾಣದ ಸಲಕರಣೆಗಳನ್ನು ಕೂಡಿಸಿ ಕೊಂಡ. ಹದಿನೇಳು ಜನ ಎಸ್ಕಿಮೊಗಳು, ಒಬ್ಬ ನೀಗ್ರೊ, ಹತ್ತೊಂಬತ್ತು ಜನ ಜಾರುಬಂಡಿಯ ತಜ್ಞರ ಜೊತೆಯಲ್ಲಿ ಪತ್ನೀ ಸಮೇತನಾಗಿ ಪಿಯರಿ 1909ನೇ ಫೆಬ್ರವರಿಯಲ್ಲಿ 'ರೂಸ್‌ವೆಲ್ಟ್' ಎಂಬ ನೌಕೆಯನ್ನೇರಿ ಹಗಲು ಇರಳು ಒಂದೇ ಸಮನೆ ಮುಸುಕಿರುತ್ತಿದ್ದ ಕಗ್ಗತ್ತಲಲ್ಲಿ ಮಾರ್ಚ್ 5ರ ವರೆಗೆ ಪ್ರಯಾಣ ಮಾಡಿದ. ಮಾರ್ಚ್ 5ರಂದು ಸೂರ್ಯನ ಹೊಂಬಣ್ಣದ ಕಿರಣಗಳು ಕ್ಷಿತಿಜದಲ್ಲಿ ಕ್ಷಣಕಾಲ ಮಾತ್ರ ಮಿಂಚಿ ಮಾಯವಾದುವು. ಮತ್ತೆ ಕಗ್ಗತ್ತಲೆ. ದಾರಿ ಸವೆದಂತೆ ಯೋಜನೆಗನುಸಾರ ಕ್ರಮೇಣ ಜನರನ್ನು ಹಿಂದಕ್ಕೆ ಕಳುಹಿಸಿ ತನ್ನ ಭಾರವನ್ನು ಪಿಯರಿ ಕಡಮೆಮಾಡಿಕೊಂಡ.

ಕೊನೆಯ ಹದಿನಾರು ಕಿಲೊಮೀಟರುಗಳನ್ನು ಮುಗಿಸಲು ಪಿಯರಿ ತನ್ನ ಜೊತೆಗೆ ಮಾಥ್ಯೂ ಹೆನ್‌ಸನ್ ಎನ್ನುವ ನೀಗ್ರೊನನ್ನು ಮತ್ತು ನಾಲ್ಕು ಜನ ಎಸ್ಕಿಮೊಗಳನ್ನೂ ಆರಿಸಿದ. ಜಾರುಬಂಡಿಗಳ ಸಹಾಯದಿಂದ ಆ



ಉತ್ತರ ಧ್ರುವಪ್ರದೇಶ ಯಾತ್ರೆ ಕೈಗೊಂಡ ಪಿಯರಿ

ಗಾಧ ಹಿಮರಾಶಿಯನ್ನು ದಾಟಿ ಹೋದ. ಹೆನ್‌ಸನ್ ಮತ್ತು ಎಸ್ಕಿಮೋಗಳು 1909 ಏಪ್ರಿಲ್ 6ರಂದು ಉತ್ತರ ಧ್ರುವ ಪ್ರದೇಶದಲ್ಲಿ ನಿಂತರು. ಸುತ್ತಮುತ್ತ ಎಲ್ಲಿ ನೋಡಿದರೂ ಬಿಳುಪು. ಹಿಮಾಚ್ಛಾದಿತ ಪ್ರದೇಶ. ಸತತವಾದ ಅನ್ವೇಷಣೆಗಳಿಂದ ಆಳವಾದ ಅನುಭವವನ್ನು ಸಂಪಾದಿಸಿದ್ದ ಪಿಯರಿ ಕೊನೆಗೂ ಗುರಿ ತಲುಪಿದ. ಅಲ್ಲಿಂದ ಸುಖವಾಗಿ ಸ್ವದೇಶಕ್ಕೆ ಹಿಂದಿರುಗಿದ.

ಪಿಯರಿ 1920 ಫೆಬ್ರವರಿ 20ರಂದು ಮರಣಹೊಂದಿದ.

ಉತ್ತರ ಧ್ರುವಪ್ರದೇಶದಲ್ಲಿ ಪ್ರಯಾಣಮಾಡಿದ ಹಾಗೂ ಚಳಿಗಾಲದ ದಿನಗಳನ್ನು ಧ್ರುವಪ್ರದೇಶಗಳಲ್ಲಿ ಕಳೆದ ಏಕೈಕ ಮಹಿಳೆ ಪಿಯರಿಯ ಹೆಂಡತಿ. ಅಷ್ಟೇ ಅಲ್ಲ. ಪಿಯರಿ ದಂಪತಿಗಳಿಗೆ ಮಗಳು ಹುಟ್ಟಿದ್ದು ಆ ಹಿಮಾಚ್ಛಾದಿತ ಧ್ರುವ ಪ್ರದೇಶದಲ್ಲೇ.

## ಪಿರಮಿಡ್

ಒಂದು ಲಕ್ಷ ಜನ ಇಪ್ಪತ್ತು ಮೂವತ್ತು ವರ್ಷಗಳ ಕಾಲ ಒಂದು ಕಟ್ಟಡ ಕಟ್ಟಲು ಶ್ರಮಿಸಿದರಂತೆ!

ಈ ಕಟ್ಟಡ, ತಳದಲ್ಲಿ ಚೌಕವಿದ್ದು ಕೋನಾಕಾರವಾಗಿ ಮುಂದುವರಿದು ಸುಮಾರು 147 ಮೀಟರುಗಳ ಎತ್ತರದಲ್ಲಿ ನಾಲ್ಕು ಕಡೆಯ ತುದಿಗಳ ಸಂಗಮ. ತಳದ ವಿಸ್ತೀರ್ಣ ಸುಮಾರು 14 ಹೆಕ್ಟೇರುಗಳು. (ಚೌಕದ ಒಂದೊಂದು ಬಾಹುವಿನ ಉದ್ದ ಸುಮಾರು 240 ಮೀಟರುಗಳು.) ಕಲ್ಲಿನಿಂದಲೇ ಕಟ್ಟಲಾದ ಈ ಅದ್ಭುತದಲ್ಲಿ 23 ಲಕ್ಷ ಕಲ್ಲುಗಳಿವೆ. ಒಂದೊಂದು ಚಪ್ಪಡಿಯ ತೂಕ ಎರಡೂವರೆಯಿಂದ 15-30 ಟನ್‌ಗಳಷ್ಟು. 3,000 ವರ್ಷಗಳ ಹಿಂದಿನ ರಚನೆ. ಪಿರಮಿಡ್‌ಗಳ ಮೇಲೆ ದರೋಡೆ ಲೂಟಿಗಳಾಗಿವೆ. ಮಳೆ ಗಾಳಿಗಳ ಹೊಡೆತವೂ ಬಿದ್ದಿದೆ. ಆದರೂ ಪಿರಮಿಡ್‌ಗಳಲ್ಲಿ ಹೆಚ್ಚಿನವು ಸ್ಥಿರವಾಗಿ ನಿಂತಿವೆ.

ಈಜಿಪ್ಟಿನ ಜೀವನದಿಯಾದ ನೈಲ್‌ನ ಇಕ್ಕೆಲದ ದಡೆಗಳಲ್ಲಿ ಸುಮಾರು ಕ್ರಿ. ಪೂ. 4770 ರಿಂದ ಮುಂದೆ ಮೂವತ್ತು ರಾಜಮನೆತನಗಳು ಆಳಿದುವು. ಇವುಗಳಲ್ಲಿ ಮೂರನೆಯ ರಾಜಮನೆತನದಿಂದ ಒಂದು ಹೊಸ ಸಂಪ್ರದಾಯ ಹುಟ್ಟಿಕೊಂಡಿತು. ಇದೇ ಸೂರ್ಯಾರಾಧನೆ. 'ರಾ' ಎಂಬ ಹೆಸರಿನಿಂದ ಅರ್ಚಿಸಲ್ಪಟ್ಟ ಸೂರ್ಯನಿಗೆ ಸತ್ತವರ ಆತ್ಮ ಸೇರುವುದೆಂದೂ ಸಂಜೆಯಲ್ಲಿ ಅಸ್ತಮಿಸಿದ ಸೂರ್ಯ ಪುನರ್ಜನ್ಮ ಪಡೆಯುವನೆಂದೂ ನಂಬಿಕೆ ಇದ್ದಿತು. ಸೂರ್ಯನನ್ನು ಹಿಂಬಾಲಿಸುತ್ತಾ ಸತ್ತವರು ಹೋಗುವರು

ಎಂಬ ಅಭಿಪ್ರಾಯದಿಂದ ಪಿರಮಿಡ್‌ಗಳಲ್ಲಿ ಒಬ್ಬ ಮನುಷ್ಯ ಉಣ್ಣಲು, ಉಡಲು ಬೇಕಾದ ಸಾಮಾನು ಸರಂಜಾಮುಗಳನ್ನೆಲ್ಲಾ ಸಂಗ್ರಹಿಸಿ ಇಡಲಾಗುತ್ತಿದ್ದಿತು. ಸತ್ತವನ ಮರಣಾನಂತರದ ಜೀವನವನ್ನು ಕಲ್ಪಿಸಿಕೊಂಡು ಮಾಡಿದ ಈ ಸಿದ್ಧತೆಗಳ ಜೊತೆಗೆ ಒಂದು ದೋಣಿಯನ್ನೂ ಇಡುತ್ತಿದ್ದರು. ಕಾರಣ ಸೂರ್ಯನು ಇಂಥ ದೋಣಿಯಲ್ಲಿ ಸಂಚರಿಸುವನೆಂಬ ನಂಬಿಕೆ. ಇದರಿಂದಲೇ ಮೊದಲು ಎರಡು ರಾಜವಂಶಸ್ಥರು ಕಟ್ಟಿಸಿದ ಪಿರಮಿಡ್‌ಗಳು ಉತ್ತರಾಭಿಮುಖವಾಗಿದ್ದರೆ ಅನಂತರದ ಪಿರಮಿಡ್‌ಗಳು ಪಶ್ಚಿಮಾಭಿಮುಖವಾಗಿವೆ.

ಪಿರಮಿಡ್‌ಗಳಲ್ಲಿ ಅತಿ ಪ್ರಾಚೀನವಾದದ್ದು ಈಜಿಪ್ಟಿನ ಸಕ್ಕಾರದಲ್ಲಿದೆ. ಇದನ್ನು ಮೆಟ್ಟಿಲುಗಳ ಪಿರಮಿಡ್ ಎನ್ನುತ್ತಾರೆ. ತಳದಿಂದ ತುದಿಗೆ ಹಂತಗಳಂಥ ರಚನೆಯಿದೆ. ಇದು ಸುಮಾರು ಕ್ರಿ. ಪೂ. 2664–2616ರಲ್ಲಿ ರಚಿತವಾಯಿತೆಂಬ ಅಂದಾಜಿದೆ. ಕ್ರಿ. ಶ. 2690ರಿಂದ 2560ರ ಕಾಲವನ್ನು ಪಿರಮಿಡ್‌ಗಳ ಯುಗವೆಂದು ಕರೆಯುತ್ತಾರೆ. ಮೇಲೆ ಕೊಟ್ಟಿರುವ ಪರಮಾವಧಿ ಅಳತೆಗಳು ಮಹಾ ಪಿರಮಿಡ್ ಎನ್ನುವ ರಚನೆಯದು. ಇದು ನೈಲ್‌ನ ಪಶ್ಚಿಮದಡದಲ್ಲಿ ಖುಫು ರಾಜನಿಂದ ಕಟ್ಟಿಸಲ್ಪಟ್ಟಿದ್ದು. ಇದಕ್ಕಿಂತ ಸ್ವಲ್ಪ ಚಿಕ್ಕದು ಖಫ್ರಾ ಪಿರಮಿಡ್. ಮೂರನೆಯದು ಮೆಂಕಾತಾರಾ ಎಂಬುದು ಮಹಾ ಪಿರಮಿಡ್ಡಿನ ಅರ್ಧದಷ್ಟಿದೆ.

ಪಿರಮಿಡ್‌ಗಳ ಮಧ್ಯಭಾಗದಲ್ಲಿ ರಾಜಸಮಾಧಿ ಇರುತ್ತದೆ. ಮರಣಾನಂತರ ಜೀವನದಲ್ಲಿ ನಂಬುಗೆ ಇದ್ದ ಕಾರಣ, ಸತ್ತವರ ದೇಹಗಳನ್ನು ಕೆಡದಂತೆ ಕೆಲವು ರಾಸಾಯನಿಕಗಳಿಂದ ಪರಿಷ್ಕರಿಸಿ ರಕ್ಷಿಸಿ ಇಡುತ್ತಿದ್ದರು. ರಾಜನ ಸಮಾಧಿಯ ಒಂದು ಕಡೆಗೆ ಕಿರಿದಾದ ಓಣಿಯನ್ನು ಕ್ರಮಿಸಿದರೆ ರಾಣಿಯ ಗೋರಿಯಿರುತ್ತದೆ. ಅಲ್ಲದೆ ಆಸ್ಥಾನದ ಇತರ ಮುಖ್ಯಸ್ಥರ ಗೋರಿಗಳೂ ಹತ್ತಿರದಲ್ಲೇ ಇರುತ್ತವೆ. ಇವಿಷ್ಟು ಸಮಾಧಿಗಳನ್ನೂ ಒಂದೇ ಪಿರಮಿಡ್ಡಿನಲ್ಲಿಡಲು ಕಾರಣ, ಜೀವನದಂತೆ ಮರಣಾನಂತರ ಕೂಡ ರಾಜನೂ ಅವನ ಅನುಯಾಯಿಗಳೂ ನಿಕಟವಾಗಿ ವ್ಯವಹರಿಸಲಿ ಎಂದು. ಇದಲ್ಲದೆ ಪಿರಮಿಡ್ಡಿನ ಅಂತರ್ಗತ ಕೋಣೆಗಳ ಒಳಮೈ ಮೇಲೆ ಒಬ್ಬ ಮನುಷ್ಯ ನಡೆಯಬೇಕಾದ ಋಜುಮಾರ್ಗವನ್ನೂ ದೂರವಿಡಬೇಕಾದ ದುಷ್ಪರೀತಿಗಳನ್ನೂ ಬರಹ ಅಥವಾ ಚಿತ್ರಗಳ ಮೂಲಕ ಸೂಚಿಸಲಾಗುತ್ತಿದ್ದಿತು. ಇಷ್ಟೆಲ್ಲ ಸಿದ್ಧತೆಗಳ ಜೊತೆಗೆ ಅಪಾರ ಧನಸಂಪತ್ತನ್ನೂ ನಗನಾಣ್ಯಗಳನ್ನೂ ಶೇಖರಿಸಿಡಲಾಗುತ್ತಿತ್ತು. ಈ ಸಂಪತ್ತಿನ ಆಸೆಯಿಂದ ಒಂದು ಪಿರಮಿಡ್ಡನ್ನೂ ದರೋಡೆಕಾರರು ಸ್ವಲ್ಪವಾದರೂ ಛಿದ್ರಮಾಡದೆ ಬಿಟ್ಟಿಲ್ಲ.

ಮಹಾ ಪಿರಮಿಡ್ಡಿನ ರಾಜಕೋಣೆಗೆ ಎರಡು ವಾಯುಮಾರ್ಗಗಳೂ ಒಂದು ಪ್ರವೇಶಮಾರ್ಗವೂ ಇವೆ. ಈ ಮಾರ್ಗ ಪಿರಮಿಡ್‌ನ ತಳದಿಂದ 14 ಮೀಟರುಗಳ ಎತ್ತರದಲ್ಲಿ ಪ್ರವೇಶಮಾರ್ಗವನ್ನು



[illegible]

ಮುಚ್ಚಿರುವ ಕಲ್ಲನ್ನು ಸರಿಸಬೇಕಾಗುತ್ತದೆ. ರಾಜಕೋಣೆಯೇ ಎಲ್ಲಕ್ಕಿಂತ ಉನ್ನತವಾದದ್ದು. ಇದರಿಂದ ಕೆಳಗೆ ರಾಣಿಯ ಕೋಣೆಯೂ ಇನ್ನೂ ಕೆಳಗಡೆ ನೆಲಮಾಳಿಗೆಯೂ ಇರುತ್ತವೆ.

ಯಂತ್ರಗಳ ನೆರವಿಲ್ಲದೆ ಈ ಪಿರಮಿಡ್ಡುಗಳನ್ನು ಹೇಗೆ ಕಟ್ಟಿದರೆಂಬುದು ಇನ್ನೂ ತಿಳಿಯದು. ಅಚ್ಚರಿಯ ವಿಷಯವೇ ಆಗಿದೆ. ಈ ಪಿರಮಿಡ್ಡುಗಳ ನಿರ್ಮಾಣಕ್ಕೆ ಕಲ್ಲುಗಳನ್ನು ನೈಲ್ ನದಿಯ ಆಚೆಯ ದಡದಿಂದ ತರಲಾಗುತ್ತಿದ್ದಿತು. ನದಿಯಲ್ಲಿ ಮಹಾಪೂರ ಬಂದಾಗ ತೆಪ್ಪಗಳನ್ನು ಮಾಡಿ ಅವುಗಳ ಮೇಲೆ ಕಲ್ಲುಗಳನ್ನು ತೇಲಿಬಿಡುತ್ತಿದ್ದರು. ದಡದ ಮೇಲೆ ಮರದ ದಿಮ್ಮಿಗಳನ್ನು ಉರುಳುಗಳಂತೆ ಉಪಯೋಗಿಸಿ ಕಲ್ಲನ್ನು ಸಾಗಿಸುತ್ತಿದ್ದರು. ತಳದಿಂದ ತುದಿಗೇರಲು ಮಣ್ಣಿನ ಜಾರುದಿಬ್ಬಗಳನ್ನು ಕಟ್ಟುತ್ತಿದ್ದರು. ಹೇರಳವಾಗಿ ದೊರೆಯುತ್ತಿದ್ದ ಕಲ್ಲಿನ ಕಟ್ಟಡದ ಮೇಲೆ ಸುಣ್ಣಕಲ್ಲಿನ ಹೊರಮೈ ಕೊಟ್ಟು ಅದನ್ನು ನಯವಾಗಿ ಮಾಡಿ ಹತ್ತಲು ಅಸಾಧ್ಯವಾಗುವಂತೆ ರಚಿಸಲಾಗುತ್ತಿದ್ದಿತು. ಇಂಥ ಶಿಲ್ಪಗಳ ರಚನೆಗೆ ಉಪಯೋಗಿಸಿದ ಅತ್ಯುತ್ತಮ ಸಾಧನಗಳೆಂದರೆ ತಾಮ್ರದ ಗರಗಸ ಹಾಗೂ ತಾಮ್ರದ ಕೊರೆಯುವ ಸಳಿಕೆಗಳು.

ಈಜಿಪ್ಟಿನ ಪಿರಮಿಡ್ಡುಗಳನ್ನು ಪುರಾತನ ಪ್ರಪಂಚದ ಏಳು ಅದ್ಭುತಗಳಲ್ಲಿ ಒಂದು ಎಂದು ಪರಿಗಣಿಸಿದ್ದಾರೆ.

ಅಮೆರಿಕದ ಮೆಕ್ಸಿಕೊದಲ್ಲಿಯೂ ಸೂರ್ಯದೇವನ ಆರಾಧನೆಗಾಗಿ ಪಿರಮಿಡ್ಡುಗಳನ್ನು ಕಟ್ಟಲಾಗಿದೆ.

ಈಜಿಪ್ಟಿನಲ್ಲಿ ಇನ್ನೂ ಸುಮಾರು ಎಪ್ಪತ್ತೈದು ಪಿರಮಿಡ್ಡುಗಳು ಇವೆ. ಅವುಗಳಲ್ಲಿ ಬಹಳಷ್ಟು ಗುಂಪು ಗುಂಪಾಗಿಯೇ ಇದ್ದು, ಉತ್ತರದಿಂದ ದಕ್ಷಿಣಕ್ಕೆ ನೈಲ್ ನದಿಯ ಪಶ್ಚಿಮ ಭಾಗಕ್ಕೆ ಹರಡಿವೆ.

ನೋಡಿ : ಈಜಿಪ್ಟ್: ಪುರಾತನ ಪ್ರಪಂಚದ ಏಳು ಅದ್ಭುತಗಳು

## ಪೀಕಿಂಗ್

'ಟಿಯನ್ ಅನ್ ಮೆನ್'

ಸ್ವರ್ಗದ ಶಾಂತಿಯ ಹೆಬ್ಬಾಗಿಲು !

ಈ 'ಹೆಬ್ಬಾಗಿಲು' ವಾಸ್ತವವಾಗಿ ಒಂದು ಭವ್ಯ, ಸುಂದರ, ಪ್ರಾಚೀನ ಕಟ್ಟಡ. ಪೀಕಿಂಗ್ ಚಕ್ರವರ್ತಿಗಳ ರಾಜಧಾನಿಯಾಗಿದ್ದಾಗ ದಕ್ಷಿಣ ದ್ವಾರವನ್ನು ಕಾಯುತ್ತಿದ್ದ ಕಟ್ಟಡ. ಇಲ್ಲಿಂದಲೆ ಚಕ್ರವರ್ತಿಯ ಆಜ್ಞೆಗಳನ್ನು ಜನರಿಗೆ ಓದಿ ಹೇಳುತ್ತಿದ್ದರು.

1949ರ ಅಕ್ಟೋಬರ್ 1ರಂದು, ಚೀನದ ಜನತೆಯ ಗಣರಾಜ್ಯದ ಉದಯವನ್ನು ಮಾವೊ ತ್ಸೆ-ತುಂಗ್ ಘೋಷಿಸಿದ್ದು ಇಲ್ಲಿಂದಲೇ.

ಚಕ್ರವರ್ತಿಗಳ ಭವ್ಯ ಅರಮನೆ ಇಂದು ಚಾರಿತ್ರಿಕ ವಸ್ತುಸಂಗ್ರಹಾಲಯ.

ಪ್ರಪಂಚದ ಅತಿ ಪ್ರಾಚೀನ ನಗರಗಳಲ್ಲಿ ಒಂದು ಪೀಕಿಂಗ್. ಕ್ರಿ. ಪೂ. 1100ರ ಹೊತ್ತಿಗೇ ಇಲ್ಲಿ ಜನ ವಾಸಿಸುತ್ತಿದ್ದರು.

ಚೀನದ ಚರಿತ್ರೆಯು ಸಾಕಾರರೂಪತಾಳಿದೆ ಚೀನದ ರಾಜಧಾನಿ ಪೀಕಿಂಗ್ ನಗರ. ಯುಂಗ್‌ಟಿಂಗ್ ಮತ್ತು ಪಾಯ್ ನದಿಗಳ ಮಧ್ಯೆ ಇರುವ ವಿಶಾಲವಾದ ಬಯಲಿನಲ್ಲಿರುವ ಪೀಕಿಂಗ್ ಚೀನದ ಮಹಾ ಗೋಡೆಯ ಬಳಿ ಇದೆ. ಮಂಗೋಲರ ನಾಯಕ ಚೆಂಗೀಸ್‌ಖಾನ್ 1215ರಲ್ಲಿ ಪೀಕಿಂಗ್ ನಗರವನ್ನು ನಾಶಮಾಡಿದ್ದ. ಅವನ ಮೊಮ್ಮಗ ಕುಬ್ಲಾಯ್ ಖಾನ್ ಭವ್ಯವಾದ ಹೊಸ ನಗರವನ್ನು ನಿರ್ಮಾಣಮಾಡಿದ.

ಕುಬ್ಲಾಯ್ ಖಾನನ ಆಡಳಿತ ಕಾಲದಲ್ಲಿ ಹದಿಮೂರನೆಯ ಶತಮಾನದಲ್ಲಿ ಇಟಲಿಯಿಂದ ಮಾರ್ಕೊ ಪೋಲೊ ಚೀನಕ್ಕೆ ಬಂದಿದ್ದ. ನಗರದ ವಿಶಾಲ ಬೀದಿಗಳು, ದೊಡ್ಡ ಬೀದಿಗಳ ಉದ್ದಕ್ಕೂ ಇರುವ ಮರಗಳು, ಬುದ್ಧಿಮತ್ತೆಯಿಂದ ರಚಿಸಲ್ಪಟ್ಟ ನಗರದ ನಕ್ಷೆ ಮಾರ್ಕೊ ಪೋಲೋಗೆ ಬಹು ಮೆಚ್ಚಿಕೆಯಾದುವು.

ಪೀಕಿಂಗ್ ನಗರದ ಸುತ್ತ ಸುಮಾರು 35 ಕಿ. ಮೀ. ಗೋಡೆ ಇದೆ. ಇದಕ್ಕೆ ಸಮಾನಾಂತರವಾಗಿ ಹಾದಿರುವ ಹಲವಾರು ಬೀದಿಗಳಿವೆ. ಹೊರಗೋಡೆಯ ಒಳಭಾಗದಲ್ಲಿ 'ಚೀನ ಪೆಟ್ಟಿಗೆ' (ಒಂದರೊಳಗೊಂದು ಇರುವ ರೀತಿ) ಯನ್ನು ಹೋಲುವಂಥ, ನಗರದೊಳಗೆ ನಗರ ಕಟ್ಟಲ್ಪಟ್ಟಿದೆ. ಎಲ್ಲಕ್ಕಿಂತ ಒಳಗಿರುವುದು ಹಿಂದಿನ ಚಕ್ರವರ್ತಿಯ ಅರಮನೆ. ಅರಮನೆ ಇರುವುದು ಇಂಪೀರಿಯಲ್ ನಗರದ ಒಳಗೆ. ಈ ನಗರಕ್ಕೆ 6.4 ಕಿ. ಮೀ. ಗೋಡೆ ಇದ್ದು ಒಳಗೆ ಸರೋವರ, ಉದ್ಯಾನ, ದೇವಸ್ಥಾನಗಳು ಇವೆ.

ಪೀಕಿಂಗ್ ಚೀನದ ರಾಜಕೀಯ, ಸಾಂಸ್ಕೃತಿಕ ಮತ್ತು ಬೌದ್ಧಿಕ ಕೇಂದ್ರ. ಇದು ಅನೇಕ ರಾಜಮನೆತನಗಳ ರಾಜಧಾನಿಯಾಗಿತ್ತು. ಪೀಕಿಂಗ್ ಎಂದರೆ ಉತ್ತರದ ರಾಜಧಾನಿ ಎಂದರ್ಥ. ಈ ರಾಜಧಾನಿಗೆ ಬೇರೆ ಬೇರೆ ಕಾಲಕ್ಕೆ ವಿವಿಧ ನಾಮಕರಣಗಳಾಗಿವೆ. 1928ರಿಂದ 1949ರ ವರೆಗೆ ಪೀಕಿಂಗ್‌ನ ಹೆಸರು ಪೈಪಿಂಗ್, ಎಂದರೆ ಉತ್ತರದ ಶಾಂತಿ, ಎಂದು ಬದಲಾಗಿತ್ತು. 1368ರಿಂದ 1420ರವರೆಗೆ ನಾನ್‌ಕಿಂಗ್ ರಾಜಧಾನಿಯಾಗಿತ್ತು. ನಾನ್‌ಕಿಂಗ್ ಎಂದರೆ ದಕ್ಷಿಣದ ರಾಜಧಾನಿ. 1936ರ ಜುಲೈ 7ರಂದು ಜಪಾನ್–ಚೀನ ಯುದ್ಧ ಆರಂಭವಾದಾಗ, ಮೊದಲು ಆಹುತಿಯಾದ ನಗರ ಪೀಕಿಂಗ್. ಇದು 1945 ಸೆಪ್ಟೆಂಬರ್ ವರೆಗೆ ಜಪಾನರ ವಶದಲ್ಲಿತ್ತು. ಎರಡನೆಯ ಮಹಾಯುದ್ಧವಾಗಿ ಕಮ್ಯೂನಿಸ್ಟರು ಅಧಿಕಾರಕ್ಕೆ ಬಂದರು. ಚೀನದ ಜನತಾ ಗಣರಾಜ್ಯಕ್ಕೆ ಪೀಕಿಂಗ್ ರಾಜಧಾನಿಯಾಯಿತು. ಆದರೂ ಚಿಯಾಂಗ್ ಕೈ-ಷೆಕರ ಕಡೆಯವರು ನಗರವನ್ನು ಪೈಪಿಂಗ್ ಎಂದೇ ಕರೆಯುತ್ತಾರೆ.

ಹಳೆಯ ಪೀಕಿಂಗ್‌ನಲ್ಲಿ ಎರಡು ನಗರಗಳಿವೆ. ಚೌಕಾಕಾರದ ಒಳನಗರವನ್ನು ಟಾರ್‌ಟರ್ ನಗರ ಎನ್ನುತ್ತಾರೆ. ನಗರದ ಸುತ್ತ ಭಾರಿ ಗೋಡೆ ಇದ್ದು ಮಧ್ಯೆ ಕಾವಲು ಗೋಪುರಗಳಿವೆ. ಸುಂದರ ಉದ್ಯಾನಗಳು, ಹಳೆಯ ಅರಮನೆಗಳು, ಪಗೋಡಾಗಳು, ಬೌದ್ಧ ದೇವಾಲಯಗಳು ಇವೆ. ಅನೇಕ ಕಾಲೇಜುಗಳೂ ಗ್ರಂಥಭಂಡಾರಗಳೂ ಇವೆ. ಪೀಕಿಂಗ್ ವಿಶ್ವವಿದ್ಯಾನಿಲಯದ ಗ್ರಂಥಭಂಡಾರದಲ್ಲಿ ಯುವಕನಾಗಿದ್ದಾಗ ಮಾವೊ ತ್ಸೆ-ತುಂಗ್ ದುಡಿಯುತ್ತಿದ್ದ.

ಪೀಕಿಂಗ್‌ನ ದಕ್ಷಿಣ ಭಾಗದ ಸುತ್ತ ಬಣ್ಣದ ಇಟ್ಟಿಗೆಗಳಿಂದ ಕಟ್ಟಿದ್ದ ಗೋಡೆ ಇತ್ತು. ಈಗ ಅದರ ಬಹು ಭಾಗವನ್ನು ಕೆಡವಿಬಿಟ್ಟಿದ್ದಾರೆ. ಇಲ್ಲಿದ್ದ ರಾಜರ ಅರಮನೆಗಳಲ್ಲಿ ಈಗ ಸರಕಾರೀ ಕಚೇರಿಗಳಿವೆ.

1949ರಲ್ಲಿ ಚೀನ ಗಣರಾಜ್ಯವಾದ ಮೇಲೆ ನಗರದ ಗೋಡೆಯ ಹೊರಗೆ ಪಶ್ಚಿಮ ಭಾಗದಲ್ಲಿ ಶಾಲೆ, ಗ್ರಂಥಭಂಡಾರ, ಆಸ್ಪತ್ರೆಗಳನ್ನು ಕಟ್ಟಿದ್ದಾರೆ. ಪೂರ್ವ ಭಾಗದಲ್ಲಿ ಕೈಗಾರಿಕೆಗಳು ಸ್ಥಾಪಿಸಲ್ಪಟ್ಟಿವೆ.

ಇಲ್ಲಿಯ ಪ್ರಸಿದ್ಧ ಪರೀಕ್ಷಾ ಭವನ 10,000 ಚಿಕ್ಕ ಕೊಠಡಿಗಳಿರುವ ದೊಡ್ಡ ಕಟ್ಟಡ. ಹಿಂದಿನ ಕಾಲದಲ್ಲಿ ಸರಕಾರಿ ಕೆಲಸ ಬಯಸುವವರು ಇಲ್ಲಿ ಪರೀಕ್ಷೆಗೆ ಕುಳಿತುಕೊಳ್ಳಬೇಕಾಗಿತ್ತು. ಒಂದೊಂದು ಚಿಕ್ಕ ಕೋಣೆಯಲ್ಲಿ

(2.7 ಮೀಟರ್ ಉದ್ದ 1.2 ಮೀಟರ್ ಅಗಲ) ಒಬ್ಬೊಬ್ಬ ವಿದ್ಯಾರ್ಥಿಯನ್ನು ಕೂಡಿ ಬೀಗ ಹಾಕುತ್ತಿದ್ದರು. ಪರೀಕ್ಷೆ ಮುಗಿಯುವವರೆಗೂ (ಸುಮಾರು ಒಂದು ವಾರ) ಗೋಡೆಯ ಸಣ್ಣ ಕಿಂಡಿಯಿಂದ ಬೆಳಕು, ಆಹಾರ. ಪ್ರಶ್ನೆಗಳು ತುಂಬ ಕಠಿಣವಾಗಿರುತ್ತಿದ್ದುವಂತೆ; ಕೆಲವರಿಗೆ ಪರೀಕ್ಷೆ ಮುಗಿಯುವ ಹೊತ್ತಿಗೆ ಹುಚ್ಚೇ ಹಿಡಿಯುತ್ತಿದ್ದಿತಂತೆ. ಮೂರು ವರ್ಷಕ್ಕೊಮ್ಮೆ ಅಂತಿಮ ಪರೀಕ್ಷೆಗಳು ಚಕ್ರವರ್ತಿಯ ಸಮ್ಮುಖದಲ್ಲಿ ಜರುಗುತ್ತಿದ್ದವು.

ಲಾಮಾ ದೇವಸ್ಥಾನದ ಮುಂದೆ ಬೃಹದಾಕಾರದ ಬುದ್ಧನ ಮೂರ್ತಿ ಇದೆ. ಪ್ರಪಂಚದ ಅತಿ ಪುರಾತನ ವೀಕ್ಷಣಾಲಯವಿದೆ. ಇದನ್ನು ಕುಬಲಾಯ್ ಖಾನನ ಆಸ್ಥಾನದಲ್ಲಿದ್ದ ಪರ್ಷಿಯನ್ ಖಗೋಳಶಾಸ್ತ್ರಜ್ಞರು ಉಪಯೋಗಿಸುತ್ತಿದ್ದರು.

ಪೀಕಿಂಗಿನ ಜನಸಂಖ್ಯೆ 60,00,000.

ನೋಡಿ : ಚೀನ

## ಪೀಟರ್, ಮೊದಲನೆಯ

1697ರ ಆಗಸ್ಟ್ ತಿಂಗಳು. ಹಾಲೆಂಡಿನ ಆಮ್‌ಸ್ಟರ್‌ಡಾಮ್ ನಗರ. ಗೆರಿಟ್‌ಕಿಸ್ಟ್ ಎನ್ನುವ ಒಬ್ಬ ಕೆಲಸಗಾರ ರಸ್ತೆಯಲ್ಲಿ ಹೋಗುತ್ತಿದ್ದ. ಇದ್ದಕ್ಕಿದ್ದಂತೆ ಎತ್ತರವಾದ ಆಕರ್ಷಕ ವ್ಯಕ್ತಿಯೊಬ್ಬ ಅವನನ್ನು ನಿಲ್ಲಿಸಿ ಮಾತನಾಡಿಸಿದ. "ನಾನು ಯಾರೆಂದು ಒಬ್ಬರಿಗೂ ತಿಳಿಸಬೇಡ. ನಾನು ನಿನ್ನ ಮನೆಯಲ್ಲಿಯೇ ಇರುತ್ತೇನೆ," ಎಂದ. ಬಡ ಕೂಲಿಕಾರನ ಮನೆಯಲ್ಲಿ ಹಾಲೆಂಡ್ ದೇಶದ ಕಾರ್ಮಿಕನ ವೇಷ ಧರಿಸಿ, ಒಂದು ವಾರ ನೌಕಾಶಿಲ್ಪಿಗಳ ಕೆಲಸವನ್ನು ಆ ಅಪರಿಚಿತ ಅಭ್ಯಾಸಮಾಡಿದ. ಕೆಲಸ ಕಲಿತು ಮುಂದಕ್ಕೆ ಪ್ರಯಾಣ ಬೆಳೆಸಿದ.

ಒಂದು ಶತಮಾನದ ಬಳಿಕ ಫ್ರಾನ್ಸಿನ ಚಕ್ರವರ್ತಿ ನೆಪೋಲಿಯನ್, ರಷ್ಯದ ಚಕ್ರವರ್ತಿ ಮೊದಲನೆಯ ಅಲೆಗ್ಸಾಂಡರ್ ಆಮ್‌ಸ್ಟರ್‌ಡಾಮಿನ ಆ ಕಾರ್ಮಿಕ ವಸತಿಗೆ ಭೇಟಿ ನೀಡಿದರು. ದೇವಸ್ಥಾನವನ್ನು ಪ್ರವೇಶಿಸುವ ಭಕ್ತರಂತೆ ಆ ಮನೆಯ ಒಳಹೊಕ್ಕರು.



ಡಚ್ ಕವಿಯೊಬ್ಬ ಅಲ್ಲಿನ ಗೋಡೆಯ ಮೇಲೆ ಒಂದು ಪಂಕ್ತಿಯನ್ನು ಕೆತ್ತಿದ. "ಮಹಾ ಪುರುಷನಿಗೆ ಯಾವುದೂ ಸಣ್ಣದಲ್ಲ."

ಕೆಲಸಗಾರನ ಮನೆಯಲ್ಲಿದ್ದು ನೌಕೆಗಳ ಕೆಲಸ ಕಲಿತ ಆ ಮಹಾವ್ಯಕ್ತಿ ರಷ್ಯದ ಚಕ್ರವರ್ತಿ, ಮೊದಲನೆಯ ಪೀಟರ್.

ರಷ್ಯ ದೇಶದ ರೋಮನೋವ್ ಸಂತತಿಗೆ ಸೇರಿದ ಪೀಟರ್ ರಷ್ಯದ ಪ್ರಥಮ ಚಕ್ರವರ್ತಿಯಾಗಿ ನಲವತ್ತಮೂರು ವರ್ಷಗಳ ಕಾಲ, ನಿರಂಕುಶ ಮತಿಯಾಗಿದ್ದರೂ ಜನಾದರಣೀಯ ಪ್ರಭುವಾಗಿ, ಆಳಿದ. ಅನಾಗರಿಕವಾಗಿದ್ದ ರಷ್ಯ ದೇಶವನ್ನು ಪ್ರಗತಿಪಥದತ್ತ ನಡೆಸಿ ಅದನ್ನು ನಾಗರಿಕ ದೇಶವನ್ನಾಗಿ ಮಾಡಿದ ಹೆಮ್ಮೆ ಪೀಟರ್ ಮಹಾಶಯನದು.

ರಷ್ಯದ ರಾಜಧಾನಿ ಮಾಸ್ಕೋ ನಗರದಲ್ಲಿ 1672ನೆಯ ಮೇ 30ರಂದು ಪೀಟರ್ ಹುಟ್ಟಿದ. ನಾಲ್ಕು ವರ್ಷದವನಾಗಿದ್ದಾಗ ತಂದೆಯನ್ನು ಕಳೆದುಕೊಂಡ. ಹತ್ತು ವರ್ಷದ ಹುಡುಗನಾಗಿದ್ದಾಗ ತನ್ನ ತಾತನೂ ಸೋದರಮಾವಂದಿರೂ ತನ್ನ ಮುಂದೆಯೇ ಕೊಲೆಯಾದುದನ್ನು ಪೀಟರ್ ಕಂಡ.

ಬಾಲ್ಯದಿಂದಲೂ ರಷ್ಯ ಪಶ್ಚಿಮ ದೇಶಗಳ ಸರಿಸಮಾನವಾಗಬೇಕೆಂಬ ಹಂಬಲ ಅವನಿಗೆ. ರಷ್ಯಕ್ಕೆ ಮಂಜುಗಡ್ಡೆಯ ಕಾಟವಿಲ್ಲದ ಸಮುದ್ರ ತೀರದ ಸೌಲಭ್ಯವಿರಲಿಲ್ಲ. ಹೀಗಿದ್ದರೂ ಅವನಿಗೆ ನೌಕಾಪಡೆಯ ಕನಸು. ತಾನೇ ದೊಡ್ಡ ದೊಡ್ಡ ದೋಣಿಗಳನ್ನು ಕಟ್ಟುತ್ತಿದ್ದ.

1682ರಲ್ಲಿ ರಷ್ಯದ ಜಾರ್ ಆಗಿದ್ದ ಪೀಟರನ ಮಲಸೋದರ ಫಿಯೋದರ್ ತೀರಿಹೋಗಲು ರಾಜ್ಯಾಡಳಿತ ಪೀಟರ್ ಮತ್ತು ಅವನ ಮತ್ತೊಬ್ಬ ಮಲಸೋದರ ಇವಾನ್‌ರ ನಡುವೆ ಹಂಚಿಹೋಯಿತು. ಇವರಿಬ್ಬರೂ ಬಹಳ ಚಿಕ್ಕವರಾಗಿದ್ದುದರಿಂದ ಇವರ ಸೋದರಿ ಸೋಫಿಯಾ ರಾಜ್ಯಾಡಳಿತವನ್ನು ವಹಿಸಿಕೊಂಡಳು. 1689ರಲ್ಲಿ ಪೀಟರ್ ಅಧಿಕಾರದಿಂದ ಅವಳನ್ನು ಮುಕ್ತಗೊಳಿಸಿ, ಅಧಿಕಾರಸೂತ್ರವನ್ನು ತನ್ನ ಕೈಗೆ ತೆಗೆದುಕೊಂಡ. 1696ರಲ್ಲಿ ಇವಾನ್ ಸತ್ತುಹೋಗಲು ರಾಜ್ಯದ ಸಮಸ್ತ ಅಧಿಕಾರವೂ ಪೀಟರನಿಗೇ ಲಭಿಸಿತು. ಪಟ್ಟಕ್ಕೆ ಬಂದ ತಕ್ಷಣ ಅವ ಸಾಧಿಸಿದ ಮಹಾಕಾರ್ಯ ಎಂದರೆ ತುರ್ಕಿಯ ಅಜೋವ್ ಕೋಟೆಯನ್ನು ವಶಪಡಿಸಿಕೊಂಡದ್ದು (1696). ಈ ವಿಜಯದ ಅನಂತರ ಪೀಟರ್ ಪಶ್ಚಿಮ ಯೂರೋಪಿನಲ್ಲಿ ಪ್ರವಾಸ ಕೈಗೊಂಡ. ತಮ್ಮ ಚಕ್ರವರ್ತಿ ಅನ್ಯ ದೇಶಗಳಿಗೆ ಹೋಗುವುದು ರಷ್ಯನರಿಗೆ ಇಷ್ಟವಿರಲಿಲ್ಲ. ಆದುದರಿಂದ ವೇಷ ಮತ್ತು ಹೆಸರು ಮರೆಸಿಕೊಂಡು ಸಾಮಾನ್ಯ ರಷ್ಯನಾಗಿ ಪ್ರಯಾಣ ಮಾಡಿದ. ಬ್ರಿಟಿಷ್ ಮತ್ತು ಡಚ್ ನೌಕಾ ಕೇಂದ್ರಗಳಲ್ಲಿ ಅನಾಮಧೇಯನಾಗಿ ಕೆಲಸಮಾಡಿದ. ಆಮ್‌ಸ್ಟರ್‌ಡಾಮಿಗೆ ಎರಡನೆಯ ಬಾರಿ ಹೋದಾಗ ಅವನೂ ಅವನ ಜೊತೆಯವರಲ್ಲಿ ಹತ್ತು ಮಂದಿಯೂ ನಾಲ್ಕು ತಿಂಗಳು ಒಂದು ಹಡಗನ್ನು ಕಟ್ಟುವ ಕಾರ್ಯಕ್ರಮದಲ್ಲಿ ಸಾಮಾನ್ಯ ಕಾರ್ಮಿಕರಂತೆ ಭಾಗವಹಿಸಿದ್ದರು. ರಾತ್ರಿಹೊತ್ತು ರೇಖಾಗಣಿತವನ್ನು ಅಭ್ಯಾಸಮಾಡಿದ. [ವಸ್ತುಸಂಗ್ರಹಾಲಯಗಳು, ವಿಶೇಷ ಸಸ್ಯಗಳ ವನಗಳು, ಕಾರಖಾನೆಗಳು ಮತ್ತು ಆಸ್ಪತ್ರೆಗಳಿಗೆ ಭೇಟಿಕೊಟ್ಟ. ಮರೈನ್ ಇಂಜಿನಿಯರಿಂಗ್, ಯಂತ್ರಶಾಸ್ತ್ರ ಇವನ್ನು ಅಧ್ಯಯನಮಾಡಿದ. ನೂರಾರು ಜನ ಯಂತ್ರಶಿಲ್ಪಿಗಳನ್ನು ರಷ್ಯದೇಶದಲ್ಲಿ ಕೈಗಾರಿಕೋದ್ಯಮವನ್ನು ಉತ್ತಮಪಡಿಸುವುದಕ್ಕಾಗಿ ಕರೆತಂದ.

ರಷ್ಯಕ್ಕೆ [illegible]

1698ರಲ್ಲಿ ಮಾಸ್ಕೊಗೆ ಹಿಂದಿರುಗಿದ ಪೀಟರ್ 1700ರಲ್ಲಿ ಬಾಲ್ಟಿಕ್ ದ್ವೀಪಗಳನ್ನು ಅಧೀನಪಡಿಸಿಕೊಳ್ಳುವುದಕ್ಕಾಗಿ ಸ್ವೀಡನಿನ ಹನ್ನೆರಡನೆಯ ಚಾರ್ಲ್ಸ್ ದೊರೆಯೊಡನೆ ಯುದ್ಧ ಆರಂಭಿಸಿದ. ಆ ಯುದ್ಧ ಇಪ್ಪತ್ತು ವರ್ಷಗಳ ಕಾಲ ನಡೆದು, 1721 ಆಗಸ್ಟ್ 30ರಂದು ಒಂದು ಒಪ್ಪಂದ ವಾಯಿತು. ಆ ಒಪ್ಪಂದದ ಪ್ರಕಾರ ಬಾಲ್ಟಿಕ್ ಪ್ರದೇಶದ ಒಂದು ಅತ್ಯುತ್ತಮ ಬಂದರು ರಷ್ಯ ದೇಶಕ್ಕೆ ದೊರಕಿತು. ರಷ್ಯವು ಯೂರೋಪಿನ ಒಂದು ಪ್ರಬಲ ರಾಷ್ಟ್ರ ಎಂಬುದನ್ನು ಈ ವಿಜಯ ಸಾರಿತು.

ಪೀಟರ್ ರಷ್ಯದ ಪ್ರಗತಿಗಾಗಿ ಹಗಲಿರುಳೂ ದುಡಿದ. ಪಶ್ಚಿಮ ರಾಷ್ಟ್ರಗಳನ್ನು ರಷ್ಯ ಸರಿಗಟ್ಟಬೇಕೆಂಬ ಆಸೆಯಿಂದ ಪಾಶ್ಚಾತ್ಯರ ತೊಡುಗೆ. ಆಹಾರವ್ಯವಹಾರಗಳನ್ನು ರಷ್ಯದಲ್ಲಿ ಜಾರಿಗೆ ತಂದ. ರಷ್ಯನರು ಉದ್ದನೆಯ ನಿಲುವಂಗಿಗಳನ್ನು ತೊಡಬಾರದೆಂದೂ ಉದ್ದದ ಗಡ್ಡಗಳನ್ನು ಹೊಂದಿರಬಾರದೆಂದೂ ಆಜ್ಞೆ ಮಾಡಿದ. ಸ್ತ್ರೀಯರಿಗೂ ಸಮಾನವಾದ ಹಕ್ಕುಗಳನ್ನು ನೀಡಿ ಅವರು ಸಾರ್ವಜನಿಕ ಸಮಾರಂಭಗಳಲ್ಲಿ ಹೆಚ್ಚು ಹೆಚ್ಚಾಗಿ ಭಾಗವಹಿಸಲು ಅವಕಾಶ ಕಲ್ಪಿಸಿದ. ರಷ್ಯದಲ್ಲಿ ಹೊಸ ವರ್ಷ ಸೆಪ್ಟೆಂಬರ್ ತಿಂಗಳಲ್ಲಿ ಆರಂಭವಾಗುತ್ತಿತ್ತು. ಪೀಟರ್ ಅದನ್ನು ತಪ್ಪಿಸಿ ನೂತನ ಕ್ಯಾಲೆಂಡರ್ ಒಂದನ್ನು ತಯಾರಿಸಿ ಜನವರಿ ತಿಂಗಳಲ್ಲಿ ವರ್ಷ ಪ್ರಾರಂಭವಾಗುವಂತೆ ಮಾಡಿದ. ವ್ಯವಸಾಯ, ವಾಣಿಜ್ಯ ಮತ್ತು ಕೈಗಾರಿಕೆಗಳಲ್ಲಿ ಪಾಶ್ಚಾತ್ಯ ವಿಧಾನಗಳನ್ನು ಅನುಸರಿಸಲು ಅಪಾರ ಹಣ ವೆಚ್ಚಮಾಡಿದ. ತಂತ್ರಜ್ಞರನ್ನು ವಿದೇಶದಿಂದ ಬರಮಾಡಿಕೊಂಡು ರಷ್ಯನರಿಗೆ ತರಬೇತಿ ಕೊಡಿಸಿದ. ವೃತ್ತಿಶಿಕ್ಷಣ ಶಾಲೆಗಳನ್ನೂ ಸ್ಥಾಪಿಸಿದ. ವೃತ್ತಪತ್ರಿಕೆಯೂ ಸಹ ಇವನ ಕಾಲದಲ್ಲಿಯೇ ಆರಂಭವಾಯಿತು.

ಚರಿತ್ರೆಯ ಅತಿ ಕುತೂಹಲಕಾರಿ ವ್ಯಕ್ತಿಗಳಲ್ಲೊಬ್ಬನಾದ ಪೀಟರ್, ಆರು ಅಡಿ ಎಂಟೂವರೆ ಅಂಗುಲ (2.05 ಮೀಟರು) ಎತ್ತರವಿದ್ದ. ಈತ ದೇಹಶಕ್ತಿಯಲ್ಲಿ ರಾಕ್ಷಸನೇ. ತನ್ನ ಕೈಗಳಿಂದ ಬೆಳ್ಳಿಯ ತಟ್ಟೆಗಳನ್ನು ಮುರಿದುಬಿಡುತ್ತಿದ್ದ. ಅವನ ಉಡುಪು ಒರಟು. ಕಾಲುಚೀಲ ಹರಿದು ಹೋಗಿ ತೇಪೆಹಾಕಿದ್ದು. ಅವನ ಬಿರುಗಣ್ಣಿನ ನೋಟಕ್ಕೆ ಜನ ನಡುಗುತ್ತಿದ್ದರು. ಮಾತು. ರೀತಿ ಯಾವುದರಲ್ಲೂ ನಯವಿಲ್ಲ. ಒಮ್ಮೊಮ್ಮೆ ಅಸಭ್ಯವಾಗಿಯೂ ವರ್ತಿಸುತ್ತಿದ್ದ. ಸ್ನೇಹಿತರ ಮುಖಕ್ಕೆ ಗುದ್ದುತ್ತಿದ್ದ. ತಮಾಷೆಗಾಗಿ ಒಮ್ಮೆ ಒಬ್ಬ ಆಸ್ಥಾನಿಕನಿಗೆ ಆಮೆಯನ್ನು ತಿನ್ನುವಂತೆ ವಿಧಿಸಿದ. ಇನ್ನೊಮ್ಮೆ ಈ ನೀಳ ಶರೀರದ ದೊರೆ, ಮೂರರಿಂದ ಮೂರೂವರೆ ಅಡಿ ಎತ್ತರದ (0.90ರಿಂದ 1.07 ಮೀಟರು) ಇಪ್ಪತ್ತನಾಲ್ಕು ಕುಳ್ಳರೊಂದಿಗೆ ಮೆರವಣಿಗೆ ಹೊರಟ. ಇವನು ದಂತವೈದ್ಯವನ್ನು ಅಭ್ಯಾಸಮಾಡಿದ್ದು ಆಸ್ಥಾನಿಕರಿಗೆ ಅಪಾಯಕಾರಿಯಾಗಿತ್ತು. ನೆಪ ಸಿಕ್ಕಿದರೆ ಸಾಕು ಹಲ್ಲು ಕೀಳುತ್ತಿದ್ದ. ಆಗತ್ಯಬಿದ್ದಾಗ ಮಹಾ ಕ್ರೂರಿಯಾಗುತ್ತಿದ್ದ. ಒಮ್ಮೆ ತನ್ನ ಹೆಂಡತಿಯ ತಲೆಯನ್ನು ಕತ್ತರಿಸುವುದಾಗಿ ಹೆದರಿಸಿದ್ದ. ತನ್ನ ಮಗನನ್ನೇ ಕೊಲ್ಲಿಸಿದ.

ಆದರೆ ಹೊಸ ಹೊಸ ವಿಷಯಗಳನ್ನು ತಿಳಿಯಬೇಕೆಂಬ ಅವನ ಕುತೂಹಲ, ಶಿಸ್ತುಬದ್ಧ ಕೆಲಸ ಮಾಡುವ ಸ್ವಭಾವ, ಹಿಡಿದ ಕೆಲಸವನ್ನು ಸಾಧಿಸುವ ಛಲ– ಇವುಗಳಿಂದ ರಷ್ಯ ಲಾಭ ಪಡೆಯಿತು. ಕತ್ತಲೆ ಮನೆಯ ಕೊಠಡಿ ಬಾಗಿಲು ಕಿಟಕಿಗಳನ್ನು ತೆರೆದು ಗಾಳಿ ಬೆಳಕುಗಳನ್ನು ಒಳಕ್ಕೆ ಬಿಟ್ಟಂತೆ, ಸಂಪ್ರದಾಯದಲ್ಲಿ ಕೊಳೆತು ಹಿಂದುಳಿದಿದ್ದ ರಷ್ಯದೊಳಕ್ಕೆ ವೈಜ್ಞಾನಿಕ ಮನೋಧರ್ಮವೂ ಸಾಧನೆಗಳೂ ಬರಲು ಅವಕಾಶ ಮಾಡಿಕೊಟ್ಟ. ಅವನಿಗೆ ವೈಭವ ಬೇಕಿರಲಿಲ್ಲ. ಅರಸನಾಗುತ್ತಲೇ ಅರಮನೆಯಿಂದ ನೂರಾರು ಸೇವಕರನ್ನು ಕಳುಹಿಸಿಬಿಟ್ಟ. 3.000 ಕುದುರೆಗಳನ್ನು ಮಾರಿದ. ಅವನ ಆಸ್ಥಾನದಲ್ಲಿನ ಆಡಂಬರ ಸಾಕಷ್ಟು ಕಡಮೆ.

ಸ್ವಾರ್ಥ ಎನ್ನುವುದೇ ಅವನಿಗೆ ತಿಳಿಯದು. ಅವನು ಬದುಕಿದ್ದು ರಷ್ಯದ ಸೇವೆಗಾಗಿ. ಹೃತ್ಪೂರ್ವಕವಾಗಿ ಆ ಸೇವೆಯನ್ನು ಸಲ್ಲಿಸಿದ. ಆಧುನಿಕ ರಷ್ಯದ ಪಿತಾಮಹ ಎನ್ನಿಸಿಕೊಂಡ. 1725 ಜನವರಿ 23ರಂದು —ಕೇವಲ ಐವತ್ತುಮೂರನೆಯ ವಯಸ್ಸಿನಲ್ಲಿ ಪೀಟರ್ ಕಣ್ಮುಚ್ಚಿದ. ಪೀಟರನ ಕೆಲವು ಅಪೂರ್ಣ ಕೆಲಸಗಳನ್ನು ಪಟ್ಟಕ್ಕೆ ಬಂದ ಅವನ ಎರಡನೆಯ ಹೆಂಡತಿ ಕ್ಯಾಥರಿನ್ ಪೂರ್ಣಗೊಳಿಸಿದಳು.

## ಪೀಸಾ ಗೋಪುರ

ಒಂದು ಗೋಪುರದ ಮೇಲೆ ನಿಂತು ನೇರವಾಗಿ ಕೆಳಕ್ಕೆ ಒಂದು ಕಲ್ಲನ್ನು ಎಸೆದರೆ ಅದು ಗೋಪುರದ ಬುಡದಲ್ಲಿ ಬೀಳುತ್ತದೆ ಅಲ್ಲವೆ? ಆದರೆ ಪ್ರಪಂಚ ಪ್ರಸಿದ್ಧ ಗೋಪುರವೊಂದರ ತುದಿಯಲ್ಲಿ ನಿಂತು ಒಂದು ಕಲ್ಲನ್ನೆಸೆದರೆ ಅದು ಗೋಪುರದ ಬುಡದಿಂದ ಸುಮಾರು ಐದು ಮೀಟರುಗಳಷ್ಟು ದೂರದಲ್ಲಿ ಬೀಳುತ್ತದೆ. ಏಕೆನ್ನುವಿರಾ ? ಪೀಸಾದ ಈ ಗೋಪುರ ಭೂಮಿಗೆ ಲಂಬವಾಗಿ ನಿಲ್ಲದೆ ಒಂದು ಪಕ್ಕಕ್ಕೆ ಐದು ಮೀಟರುಗಳಷ್ಟು ವಾಲಿದೆ. ಗೋಪುರದ ಈ ವಾಲುವಿಕೆಯೇ ಅದಕ್ಕೆ ವಿಶ್ವಮಾನ್ಯತೆಯನ್ನು ಗಳಿಸಿಕೊಟ್ಟಿದೆ.

ಇಟಲಿ ದೇಶದ ಒಂದು ನಗರ ಪೀಸಾ. ಅಲ್ಲಿ ಬಹಳ ವರ್ಷಗಳ ಹಿಂದೆ ಕಟ್ಟಿದ ಈ ಗೋಪುರ ಬಾಗಿಕೊಂಡಿದ್ದರೂ ಬೀಳುತ್ತದೆ ಎಂದು ಕಂಡುಬಂದರೂ ಈವರೆಗೂ ಬಿದ್ದಿಲ್ಲ. ಇದೇ ಈ ಗೋಪುರದ ಅದ್ಭುತ.

ಈ ಗೋಪುರದ ಕಟ್ಟಡದ ನಿರ್ಮಾಣ 1174ರಲ್ಲಿ ಆರಂಭವಾಗಿ 1350ರಲ್ಲಿ ಪೂರ್ಣಗೊಂಡಿತು. ಕಟ್ಟಡಕ್ಕೆ ಬಳಸಿರುವುದು ಅಚ್ಚ ಬಿಳಿಯ ಅಮೃತಶಿಲೆ. 56.3 ಮೀಟರ್ ಎತ್ತರವಿರುವ ಈ ಗೋಪುರದಲ್ಲಿ ಎಂಟು ಅಂತಸ್ತುಗಳಿವೆ. ಗೋಪುರವನ್ನೇರಲು ಒಳಗೆ 296 ಮೆಟ್ಟಲುಗಳನ್ನು ಕಟ್ಟಿದ್ದಾರೆ. ಕೆಳಗಿನ ಅಂತಸ್ತುಗಳ ಗೋಡೆಯ ದಪ್ಪ ಸುಮಾರು ನಾಲ್ಕು ಮೀಟರು. ಮೇಲೇರುತ್ತ ಗೋಡೆಯ ದಪ್ಪ ಕಿರಿದಾಗುತ್ತ ಬಂದು ಕೊನೆಯ ಅಂತಸ್ತಿನಲ್ಲಿ ಕೆಳಗಿನ ಅರ್ಧದಷ್ಟು ದಪ್ಪವಿದೆ. ಗೋಪುರದ ತಳಪಾಯ ಕೇವಲ ಮೂರು ಮೀಟರುಗಳಷ್ಟು ಮಾತ್ರ ಆಳವಾಗಿದ್ದು ಅದರ ಸುತ್ತಳತೆಯೂ ಗೋಪುರದಷ್ಟೇ ಇದೆ. ತಳಪಾಯಕ್ಕೆ ಮರಳನ್ನೇ ಹೆಚ್ಚಾಗಿ ಬಳಸಲಾಗಿದೆ. ಕಟ್ಟಡ 3–4 ಅಂತಸ್ತುಗಳಷ್ಟು ಏಳುವಷ್ಟರಲ್ಲೇ ಈ ವಾಲುವಿಕೆ ಆರಂಭವಾಗಿದ್ದಿತು. ಆದರೂ ಅಲ್ಪಸ್ವಲ್ಪ ಬದಲಾವಣೆಗಳೊಡನೆ ಕಟ್ಟಡವನ್ನು ಪೂರೈಸಿದರು. ವರ್ಷಗಳುರುಳಿದಂತೆ ವಾಲುವಿಕೆಯೂ ಜಾಸ್ತಿಯಾಯಿತು.



ವಾಲುತ್ತಿರುವ ಪೀಸಾ ಗೋಪುರ

1990ರಲ್ಲಿ 1.7 ಮೀಟರು ವಾಲಿದ್ದ ಈ ಗೋಪುರ ಇದರ ಶಿಖರದ ಮಧ್ಯಭಾಗದ ವೇಳೆಗೆ ಮತ್ತೂ 0.3 ಮೀಟರ್ ವಾಲಿದ್ದಿತು. 1964ರಲ್ಲಿ ಈ ವಾಲುವಿಕೆಯನ್ನು ತಡೆಗಟ್ಟುವುದಕ್ಕಾಗಿ ತಳಪಾಯಕ್ಕೆ ಸಿಮೆಂಟು ಮುಂತಾದುವುಗಳನ್ನು ಸೇರಿಸಿದರು. ಅದರಿಂದ ಗೋಪುರದ ವಾಲುವಿಕೆಯ ಪ್ರಮಾಣ ಕಡಮೆಯಾಗಿದೆಯೇ ಹೊರತು ವಾಲುವಿಕೆ ಪೂರ್ಣವಾಗಿ ನಿಂತಿಲ್ಲ. ಪೀಸಾದ ಈ ವಾಲುಗೋಪುರ ಆಧುನಿಕ ಪ್ರಪಂಚದ ಏಳು ಅದ್ಭುತಗಳಲ್ಲೊಂದು ಎಂದು ಪರಿಗಣಿಸಲ್ಪಟ್ಟಿದೆ.

1969–70ರ ಒಂದು ವರ್ಷದಲ್ಲಿ ಗೋಪುರ ಒಂದು ಮಿಲಿಮೀಟರ್ ವಾಲಿತು. ಇದೇ ಪ್ರಮಾಣದಲ್ಲಿ ವಾಲುತ್ತ ಹೋದರೆ ಇನ್ನು 150 ವರ್ಷ ಈ ಗೋಪುರ ಉಳಿಯಬಹುದು.

## ಪುರಾತತ್ತ್ವಶಾಸ್ತ್ರ

ಹತ್ತೊಂಬತ್ತನೆಯ ಶತಮಾನದಲ್ಲಿ ಮೈಸೂರು ರಾಜ್ಯದ ಚಿತ್ರದುರ್ಗ ಜಿಲ್ಲೆಯ ಚಂದ್ರವಳ್ಳಿಯಲ್ಲಿ ಅದ್ಭುತ ಘಟನೆಯೊಂದು ನಡೆಯಿತು. ಚಿನ್ನವನ್ನು ಪತ್ತೆಮಾಡಲು ಖನಿಜಶಾಸ್ತ್ರಜ್ಞರು ಮತ್ತು ಇಂಜಿನಿಯರರು ಚಂದ್ರವಳ್ಳಿ ಪ್ರದೇಶಕ್ಕೆ ಹೋಗಿದ್ದರು. ಅವರು ಪ್ರಾಯೋಗಿಕ ಗುಳಿಗಳನ್ನು ಅಗೆದಾಗ ಶಾತವಾಹನರ ಮತ್ತು ಚೀನಿ ಚಕ್ರವರ್ತಿಯ ನಾಣ್ಯಗಳು ದೊರೆತುವು. ಅವರಿಗೆ ಆಶ್ಚರ್ಯವಾಯಿತು. ಆಗ ತಜ್ಞರು ಭೂಮಿಯನ್ನು ಅಗೆಸಿದರು. ಪ್ರಾಚೀನಕಾಲದ ಅನೇಕ ವಸ್ತುಗಳು ದೊರೆತುವಲ್ಲದೆ, ಶಿಲಾಯುಗದ ನಿವಾಸಸ್ಥಾನಗಳೂ ಸಿಕ್ಕುವು.

ಹರಪ್ಪಾ, ಮೊಹೆಂಜೊದಾರೊ, ನಾಗಾರ್ಜುನ ಕೊಂಡ ಮುಂತಾದ ಅನೇಕ ಕಡೆಗಳಲ್ಲೂ ಹೀಗೆಯೇ ಆಗಿದೆ. ಹೀಗೆ ಶೋಧಿಸಿ ತೆಗೆದ ವಸ್ತುಗಳೆಲ್ಲವೂ ಪ್ರಾಚೀನ ವಸ್ತುಸಂಗ್ರಹಾಲಯಕ್ಕೆ ಹೋಗಿವೆ.

ಈ ಪ್ರಾಚೀನ ಅವಶೇಷಗಳಿಂದ ಏನು ಪ್ರಯೋಜನ ? ಹೊಸದನ್ನು ಸರಿಯಾಗಿ ತಿಳಿದುಕೊಳ್ಳಬೇಕಾದರೂ ಪ್ರಾಚೀನ ರೀತಿಗಳನ್ನು ನಾವು ಅರಿಯಬೇಕು. ಪುರಾತತ್ತ್ವಶಾಸ್ತ್ರ ಎಂದರೆ ಪುರಾತನ ಕಾಲದ ಜನರ ಜೀವನದ ಅಧ್ಯಯನ. ಅದಕ್ಕೆ ಸಹಕಾರಿ, ಪ್ರಾಚೀನ ಅವಶೇಷಗಳು. ಈ ಅಧ್ಯಯನದಿಂದ ನಮ್ಮ ಹಿಂದಿನವರ ಜೀವನದ ವಿಷಯ ತಿಳಿಯುವುದಲ್ಲದೆ, ನಾಗರಿಕತೆ ಹೇಗೆ ಬೆಳೆಯುತ್ತ ಬಂದಿದೆ, ಜನಜೀವನ ಹೇಗೆ ಬದಲಾಗಿದೆ ಎನ್ನುವುದೂ ತಿಳಿಯುತ್ತದೆ.

ಪುರಾತತ್ತ್ವಶೋಧಕನ ಪ್ರಪಂಚ ಪುರಾತನವಾದದ್ದು. ದೊರೆಯುವ ಬರಹಗಳಿಂದ ಆ ಪ್ರಪಂಚವನ್ನು ತಿಳಿಯಲು ಸಾಧ್ಯವಿಲ್ಲ. ಏಕೆಂದರೆ ಕ್ರಿ. ಪೂ. 4000ಕ್ಕೆ ಹಿಂದೆ ಬರೆವಣಿಗೆ ಇರಲಿಲ್ಲ. ಆದರೆ ಸಾವಿರಾರು ವರ್ಷಗಳಿಂದ ಮಾನವ ನಾಗರಿಕನಾಗುತ್ತ ಬಂದಿದ್ದಾನೆ. ಹೀಗಾಗಿ, ಬರೆವಣಿಗೆಗೂ ಹಿಂದಿನ ವಿಷಯ ತಿಳಿಯಲು ಪುರಾತತ್ತ್ವ ಶೋಧನೆಯೇ ದಾರಿ.

ಪುರಾತತ್ತ್ವ ಶೋಧನೆಯಲ್ಲಿ ಸಾಮಾನ್ಯವಾಗಿ ಎರಡು ಭಾಗಗಳು : ಒಂದು ಭೂಮಿಯನ್ನು ಅಗೆದು ಶೋಧಿಸುವುದು. ಅಲ್ಲಿ ಸಿಕ್ಕಿದ ವಸ್ತುಗಳನ್ನು, ಅವಶೇಷಗಳನ್ನು ಸಂಗ್ರಹಿಸುವುದು. ಎರಡನೆಯದು, ಅಲ್ಲಿನ ಶೋಧನೆಗಳ ಆಧಾರದ ಮೇಲೆ ಹಿಂದಿನ ಕಾಲದ ಜನಜೀವನ ಹೇಗಿತ್ತು ಎಂಬುದನ್ನು ತರ್ಕಿಸುವುದು.

ಪುರಾತತ್ತ್ವ ಶೋಧನೆಯಲ್ಲಿ ಎರಡು ರೀತಿಯ ವಸ್ತುಗಳು ಸಿಗುತ್ತವೆ : ಮಾನವ ತನ್ನ ಉಪಯೋಗಕ್ಕಾಗಿ ಮಾಡಿದ ಆಯುಧಗಳು, ಕಟ್ಟಿದ ಮನೆಗಳು, ಉಪಯೋಗಿಸಿದ ಪಾತ್ರೆಗಳು, ವಸ್ತ್ರಗಳು, ಆಭರಣಗಳು, ವಾಸಸ್ಥಾನಗಳು ಇತ್ಯಾದಿ ; ಹಾಗೂ ಪ್ರಾಣಿಗಳ, ಮಾನವರ ಅಸ್ಥಿ ಅವಶೇಷಗಳು.

ಹದಿನೆಂಟನೆಯ ಶತಮಾನದವರೆಗೂ ಪುರಾತತ್ತ್ವ ಶೋಧನೆ ಶಾಸ್ತ್ರೀಯವಾಗಿ ಬೆಳೆದುಬರಲಿಲ್ಲ. ಆಧುನಿಕ ಕಾಲಕ್ಕೆ ಸಂಬಂಧಪಡದ ಆಯುಧಗಳನ್ನಾಗಲಿ, ಉಪಕರಣಗಳನ್ನಾಗಲಿ ಕಂಡರೆ ಅವು ಮಂತ್ರವಾದಿಗಳ ಸಲಕರಣೆಗಳೆಂದು ನಂಬುತ್ತಿದ್ದರು. ಕ್ರಮೇಣ ಪುರಾತತ್ತ್ವ ಶೋಧನೆಯಲ್ಲಿ ವಿಚಾರಿಗಳಿಗೆ ಆಸಕ್ತಿ ಮೂಡಿತು. ಅಮೆರಿಕದ ಸಂಯುಕ್ತ ಸಂಸ್ಥಾನದ ಮೂರನೆಯ ಅಧ್ಯಕ್ಷ ಥಾಮಸ್ ಜೆಫರ್‌ಸನ್ ಪುರಾತತ್ತ್ವ ಶೋಧಕರಲ್ಲಿ ಮೊದಲಿಗ. ವರ್ಜೀನಿಯದಲ್ಲಿದ್ದ ಗುಡ್ಡಗಳನ್ನು ಅಗೆದು ತಾನು ಕಂಡ ವಿಷಯಗಳ, ವಸ್ತುಗಳ ವಿವರಗಳನ್ನು ಎಚ್ಚರಿಕೆಯಿಂದ ಬರೆದಿಟ್ಟ. ಅವುಗಳಿಂದ ಪ್ರಾಚೀನರ ಬಗೆಗೆ ಕೆಲವು ನಿರ್ಧಾರಗಳಿಗೆ ಬಂದ. ಜೆಫರ್‌ಸನ್‌ನಂತೆಯೇ ಪುರಾತತ್ತ್ವ ಶೋಧನೆಯ ಬೆಳವಣಿಗೆಗೆ ಕಾರಣರಾದ ಮೊದಲಿಗರಲ್ಲಿ ಪ್ರಮುಖ ನೆಪೋಲಿಯನ್. ಆತ ಈಜಿಪ್ಟಿನ ಮೇಲೆ ದಂಡೆತ್ತಿ ಹೋದಾಗ ಸೈನಿಕರ ಜೊತೆಗೆ ವಿಜ್ಞಾನಿಗಳನ್ನೂ ಕಲಾವಿದರನ್ನೂ ಕರೆದುಕೊಂಡು ಹೋದ. ಈಜಿಪ್ಟಿನ ಪ್ರಾಚೀನ ಇತಿಹಾಸವನ್ನೆಲ್ಲ ಶೋಧಿಸಿ ತೆಗೆಯಲು ಆಜ್ಞೆಯಿತ್ತ.

ಈಗ, ಪುರಾತತ್ತ್ವಶೋಧನೆ ಜೆಫರ್‌ಸನ್, ನೆಪೋಲಿಯನರ ಕಾಲಕ್ಕಿಂತ ಬಹಳ ಮುಂದುವರಿದಿದೆ. ಈಗಿನ ಪುರಾತತ್ತ್ವಶೋಧಕ ಈ ವಿಷಯದಲ್ಲಿ ತಜ್ಞ. ಅವನು ಕೆಲಸವನ್ನು ಆರಂಭಿಸುವ ಮೊದಲು ಯಾವ ಪ್ರದೇಶದಲ್ಲಿ ಕೆಲಸಮಾಡಬೇಕೆಂದಿರುವನೋ ಅಲ್ಲಿನ ಸರಕಾರದ ಒಪ್ಪಿಗೆ ಪಡೆಯಬೇಕು. ಅನಂತರ ಆ ಪ್ರದೇಶದಲ್ಲಿನ ನಿವೇಶನವನ್ನು ಸರಿಯಾಗಿ ಗುರುತಿಸಬೇಕು. 'ನಿವೇಶನ'ವೆಂದರೆ ಪುರಾತನರು ಎಲ್ಲಿ ವಾಸಮಾಡಿದ್ದರೊ, ಕೆಲಸ ಮಾಡಿದ್ದರೊ, ಮನೆಗಳನ್ನು ಕಟ್ಟಿದ್ದರೊ ಅದರ ಕುರುಹು ಇರುವ ಸ್ಥಳ. ಆ ದೇಶದಲ್ಲಿರುವ ವಸ್ತುಸಂಗ್ರಹಾಲಯಗಳಿಂದ ಪುರಾತತ್ತ್ವ ಶೋಧಕನಿಗೆ ಶೋಧನೆಗೆ ಯಾವ ನಿವೇಶನ ತೆಗೆದುಕೊಳ್ಳಬಹುದು ಎಂಬುದರ ಬಗೆಗೆ ಸೂಚನೆ ಸಿಗಬಹುದು. ನಿವೇಶನವನ್ನು ಆರಿಸುವ ಮೊದಲು ವಿಮಾನದಿಂದ ನಿವೇಶನಗಳ ಛಾಯಾಚಿತ್ರ ತೆಗೆದು ನಿವೇಶನವನ್ನು ಗುರುತಿಸಬಹುದು. ರಾಸಾಯನಿಕವಾಗಿ ನೆಲದ ಮಣ್ಣನ್ನು ಪರೀಕ್ಷಿಸಬಹುದು. ಏಕೆಂದರೆ ಹೂತುಹೋದ ನಗರಗಳಿದ್ದ ಕಡೆ ಮಣ್ಣಿನಲ್ಲಿ ಫಾಸ್ಫೇಟಿನ ಅಂಶ ಹೆಚ್ಚು.

ನಿವೇಶನವನ್ನು ಆರಿಸಿದ ಮೇಲೆ ಪುರಾತತ್ತ್ವಶೋಧಕ ಅದನ್ನು ಅಗೆಯಲಾರಂಭಿಸುತ್ತಾನೆ. ಭೂಮಿಯೊಳಗಿದ್ದ ಅವಶೇಷಗಳಿಗೆ ಏನೂ ಭಂಗಬರದಂತೆ ನೆಲವನ್ನು ಅಗೆಯಬೇಕಾಗುತ್ತದೆ. ನಿವೇಶನವನ್ನು ಅಗೆಯುತ್ತ ಹೋದ ಹಾಗೆಲ್ಲ ವಿವಿಧ ಹಂತಗಳು ಸಿಗುತ್ತವೆ. ಅತ್ಯಂತ ಮೇಲುಭಾಗದಲ್ಲಿ ಸಿಗುವ ಅಸ್ಥಿ ಅವಶೇಷಗಳು ಈಚಿನ ಕಾಲದ್ದು. ಅದರ ಅನಂತರ ಸಿಗುವುದು ಅದರ ಹಿಂದಿನ ಕಾಲದ್ದು. ಹೀಗೆ ಒಂದು ಹಂತವಾದ ಮೇಲೊಂದು ಹಂತದಲ್ಲಿ ಪುರಾತತ್ತ್ವಶೋಧಕ ಹಿಂದಿನ ನಾಗರಿಕತೆಯನ್ನು ಮತ್ತೆ ಕಾಣುತ್ತಾನೆ. ಉದಾಹರಣೆಗೆ ಅತಿ ಕೆಳಭಾಗದಲ್ಲಿ ಮಡಕೆಗಳ ಚೂರು ಸಿಗದಿದ್ದರೆ, ಆ ಜನರಿಗೆ ಮಡಕೆಗಳ ಉಪಯೋಗ ಇದಿರಲಿಲ್ಲ ಎಂದು ಭಾವಿಸಬಹುದು. ಅದರ ಮೇಲಿನ ಹಂತದಲ್ಲಿ ಮಡಕೆ ಚೂರುಗಳು, ಮಡಕೆಗಳು, ಬಣ್ಣದ ಪಾತ್ರೆಗಳು, ದೊರೆತಾಗ ಆಗ ಆ ಜನರಿಗೆ ಅದರ ಬಳಕೆ ಇತ್ತು ಎಂದು ಅರ್ಥಮಾಡಿಕೊಳ್ಳಬಹುದು.

ಶೋಧನೆಯನ್ನು ಪೂರ್ಣವಾಗಿ ಆರಂಭಿಸುವುದಕ್ಕೆ ಮೊದಲು ಪರೀಕ್ಷಾರ್ಥವಾಗಿ ಕೆಲವೊಂದು ಭಾಗಗಳನ್ನು ಅಗೆದು ನೋಡುತ್ತಾನೆ ಶೋಧಕ. ಗುಪ್ಪೆಯ ಒಂದು ಭಾಗವನ್ನು ಕೆಳಗಿನವರೆಗೂ ಒಂದು ಪಕ್ಕದಲ್ಲಿ ಅಗೆದು ನೋಡಿದರೆ. ಎಷ್ಟು ಪದರಗಳಿವೆ ಎಂಬುದು ತಿಳಿಯುತ್ತದೆ.

ಅಗೆದ ಹಾಗೆ ಒಂದ [illegible] ಒಂದು ಕಿರು ಗುದ್ದು [illegible]. ಅಗೆಯುವಾಗ ಬಹಳ ಎಚ್ಚರವಹಿಸಬೇಕು : ಸಿಕ್ಕಿದ ಎಲ್ಲ ವಸ್ತುಗಳನ್ನೂ ಜೋಪಾನವಾಗಿ ಎತ್ತಿಡಬೇಕು. ಹೀಗೆ ಅಗೆಯುವಾಗ [illegible] ಪಾತ್ರೆ ಪದಾರ್ಥಗಳಷ್ಟೇ ಅಲ್ಲದೆ ಗೋಡೆಗಳು ಕಾಣಲಾರಂಭಿಸಿ ಅವುಗಳಿಗೆ ಅಂಟಿದ ಮಣ್ಣಿನ ಭಾಗ ತೆಗೆದಾಗ ಕೊಠಡಿಗಳೂ, ಅದನ್ನು ಚೊಕ್ಕಟ ಮಾಡಿದಾಗ ಮನೆಗಳೂ. ಅದನ್ನು ಶುಭ್ರವಾಡಿದಾಗ [illegible] ಹಳ್ಳಿಗಳೂ ಅಥವಾ ಪಟ್ಟಣಗಳೂ ಸಿಗುವುದುಂಟು.

ಪುರಾತತ್ತ್ವಶಾಸ್ತ್ರಜ್ಞನಿಗೆ ಭೂಗರ್ಭದ ವಿಷಯ ತಿಳಿದಿರಬೇಕು. ದೊರೆತ ವಸ್ತುಗಳನ್ನು ಹೇಗೆ ಸಂಗ್ರಹಿಸಬೇಕು. ರಕ್ಷಿಸಬೇಕು ಎಂಬುದನ್ನು ಆತ ಅರಿತಿರಬೇಕು. ರಾಸಾಯನಿಕ ವಸ್ತುಗಳನ್ನು ಬಳಸುವ ರೀತಿ ಆತನಿಗೆ ಗೊತ್ತಿರಬೇಕು. ಪ್ರಾಚೀನ ಚರಿತ್ರೆ ತನ್ನ ಅಂಗೈಯಂತೆ ಪರಿಚಿತವಾಗಿರಬೇಕು. ಆತ ಹಲವು ಲಿಪಿಗಳ ಬೆಳವಣಿಗೆಯ ಅಧ್ಯಯನ ಮಾಡಿರಬೇಕು. ಒಂದು ರೀತಿಯಲ್ಲಿ ನೋಡಿದರೆ ಅವನೊಬ್ಬ ಪತ್ತೆದಾರ. ಕೆಲವೇ ಸುಳಿವಿನ ಸಹಾಯದಿಂದ ಎಂದೋ ಆಗಿಹೋದದ್ದನ್ನು ಕಂಡುಹಿಡಿಯಬೇಕು ಆತ. ಹೆಸರುಗಳ ಅರ್ಥ ಅವನಿಗೆ ತಿಳಿದಿರಬೇಕು. (ಇಂಗ್ಲೆಂಡಿನಲ್ಲಿ ಒಬ್ಬ ರೈತ ತನ್ನ ತೋಟದ ಹೆಸರು ನೂಬರಿ ವುಡ್ ಎಂದ. ಅವನ ಸ್ನೇಹಿತ. 'ಹಾಗೆಂದರೆ ಕೋಟೆಯಿಂದ ರಕ್ಷಿತವಾದ ಸ್ಥಳ ಎಂದರ್ಥ' ಎಂದ. ಅಲ್ಲಿ ಅಗೆದಾಗ ಹಿಂದಿನ ಕಾಲದ ಕೋಟೆಯ ಗೋಡೆಗಳು ಕಂದಕಗಳು ಕಂಡುಬಂದುವು). ವಿಮಾನದಿಂದ ತೆಗೆದ ಛಾಯಾಚಿತ್ರಗಳಲ್ಲಿ ಕಾಣುವ ಗುರುತುಗಳನ್ನು ಅರ್ಥಮಾಡಿಕೊಳ್ಳಲು ಆತ ತಿಳಿದಿರಬೇಕು. ಪುರಾತತ್ತ್ವಶಾಸ್ತ್ರಜ್ಞ ವಿದ್ಯುತ್‌ವಾಹಕತ್ವವನ್ನೂ ನೆಲದಲ್ಲಿನ ನೀರಿನ ಅಂಶವನ್ನೂ ಕಂಡುಹಿಡಿಯುವ ಉಪಕರಣಗಳಿಂದ ಎಲ್ಲಿ ಮನುಷ್ಯ ನೆಲವನ್ನು ಹಿಂದೆ ಅಗೆದಿದ್ದ ಎಂದು ಪತ್ತೆ ಹಚ್ಚಬೇಕು. ಪ್ರತಿನಿತ್ಯ ಸಿಕ್ಕ ವಸ್ತುಗಳಿಗೆ ಸಂಖ್ಯೆಗಳನ್ನು ಕೊಟ್ಟು ಯಾವುದು, ಎಲ್ಲಿ, ಯಾವ ಆಳದಲ್ಲಿ, ಸ್ಥಿತಿಯಲ್ಲಿ ದೊರೆಯಿತು ಎಂದು ದಿನಚರಿಯಲ್ಲಿ ಬರೆದಿಡಬೇಕು.

ಪುರಾತತ್ತ್ವಶೋಧನೆಯಲ್ಲಿ ಅನೇಕ ತಜ್ಞರು ಭಾಗವಹಿಸಬೇಕಾಗುತ್ತದೆ. ಅಗೆಯುವವರು, ಚಿತ್ರಕಾರರು, ಸಸ್ಯಶಾಸ್ತ್ರಜ್ಞರು. ಪ್ರಾಣಿಶಾಸ್ತ್ರಜ್ಞರು. ಭೂವಿಜ್ಞಾನಿಗಳು, ಹಳೆಯ ಲಿಪಿಗಳನ್ನು ಓದಲು ಬಲ್ಲವರು. ಇವರೆಲ್ಲರೂ ಸೇರಿ ಕೆಲಸ ಮಾಡಿದಾಗ ಪ್ರಾಚೀನ ಕಾಲದ ಜನ ಹೇಗಿದ್ದರು ಎಂಬುದರ ಪೂರ್ಣ ಚಿತ್ರ ದೊರೆಯುತ್ತದೆ : ಪುರಾತತ್ತ್ವಶೋಧನೆ ಪರಿಪೂರ್ಣ ಹಂತಕ್ಕೆ ಬರುತ್ತದೆ.

ಈ ಬಗೆಯ ಶೋಧನೆ ಬೇಗ ಮುಗಿಯುವ ಕೆಲಸವಲ್ಲ. ಒಂದೇ ಸಲ ಮಾಡಿ ಮುಗಿಸುವ ಕೆಲಸವೂ ಅಲ್ಲ. ಅನೇಕ ವರ್ಷ ಹಿಡಿಯುತ್ತದೆ. ಶೋಧನೆ ಮಾಡಿದಾಗ ಅಲ್ಲಿ ಸಂಗ್ರಹಿಸಿದ ವಸ್ತುಗಳನ್ನು ಶುಭ್ರಮಾಡಿ. ಅಧ್ಯಯನಮಾಡಿ, ಅವುಗಳ ಕಾಲವನ್ನು ನಿರ್ಣಯಿಸಬೇಕಾಗುತ್ತದೆ. ಕಾಲ ನಿರ್ಣಯವನ್ನು ಅನೇಕ ರೀತಿಯಲ್ಲಿ ಮಾಡುತ್ತಾರೆ. ಉದಾಹರಣೆಗೆ ಮನೆಯನ್ನು ಕಟ್ಟಲು ಮರವನ್ನು ಉಪಯೋಗಿಸಿದ್ದರೆ. ಆ ಮರ ಕೆಟ್ಟು ಹೋಗದಿದ್ದರೆ ಮರದಲ್ಲಿ ಉಂಟಾಗಿರುವ ಚಕ್ರಗಳಿಂದ, ವಿವಿಧ ಮರಗಳ ಚಕ್ರಗಳ ತುಲನೆಯಿಂದ ಕಾಲವನ್ನು ನಿರ್ಧರಿಸಬಹುದು. ಮರದಲ್ಲಿ ಉಂಟಾಗಿರುವ



ಸಿಂಧೂ ಕಣಿವೆಯ ನಾಗರಿಕತೆಗಿಂತಲೂ ಹಿಂದಿನದಾದ ಘಗ್ಗರ್ ಕಣಿವೆಯಲ್ಲಿ ಪುರಾತತ್ತ್ವಶೋಧಕರು ಕಂಡುಹಿಡಿದ ಪ್ರಾಚೀನ ನಗರ ವ್ಯವಸ್ಥೆ

ಚಕ್ರ ದೊಡ್ಡದಾಗಿದೆಯೋ, ಕಿರಿದಾಗಿದೆಯೋ ಎನ್ನುವುದರಿಂದ ಆ ಮರ ಯಾವಾಗ ಕಡಿಯಲ್ಪಟ್ಟಿರಬಹುದು ಎಂಬುದನ್ನು ನಿರ್ಧರಿಸಿ ಅದರಿಂದ ಅದನ್ನು ಉಪಯೋಗಿಸಿದ ಜನರ ಕಾಲ ನಿರ್ಣಯ ಮಾಡುತ್ತಾರೆ. ಮಣ್ಣಿನ ಪಾತ್ರೆಯ ತುಣುಕುಗಳು, ಪ್ರಾಣಿಗಳ ಮತ್ತು ಮಾನವನ ಅಸ್ಥಿಪಂಜರಗಳು ಪ್ರಾಚೀನತೆಯನ್ನು ತಿಳಿದುಕೊಳ್ಳಲು ಮಹತ್ವದ ಆಧಾರಗಳು. ಈ ಎಲುಬುಗಳನ್ನು ಪರೀಕ್ಷಿಸಿ, ತಜ್ಞರು ಅಲ್ಲಿನ ಜನರ ಕಾಲ ನಿರ್ಣಯ ಮಾಡುವುದುಂಟು. ಇನ್ನೂ ಅನೇಕ ವೈಜ್ಞಾನಿಕ ವಿಧಾನಗಳಿವೆ.

ಆಸಕ್ತಿಯನ್ನು ಉಂಟುಮಾಡುವ ಅಧ್ಯಯನ ಪುರಾತತ್ತ್ವಶೋಧನೆ. ಇದು ಈಗ ವಿಶ್ವವಿದ್ಯಾನಿಲಯಗಳಲ್ಲಿ ಅಧ್ಯಯನದ ವಿಷಯವಾಗಿದೆ.

ಭಾರತದ ಪ್ರತಿಯೊಂದು ರಾಜ್ಯದಲ್ಲಿಯೂ ಸಾಮಾನ್ಯವಾಗಿ ಪುರಾತತ್ತ್ವಶೋಧನೆಯ ಮುಖ್ಯ ಕಛೇರಿಗಳಿವೆ.

ಆಸಕ್ತಿ, ಉತ್ಸಾಹ, ದೈಹಿಕ ಶಕ್ತಿಸಾಮರ್ಥ್ಯ, ಬುದ್ಧಿ ಕೌಶಲ, ತಾಳ್ಮೆ—ಈ ಗುಣಗಳುಳ್ಳ ವ್ಯಕ್ತಿ ಉತ್ತಮ ಪುರಾತತ್ತ್ವ ಶೋಧಕನಾಗಬಲ್ಲ.

## ಪುರಾತನ ಪ್ರಪಂಚದ ಏಳು ಅದ್ಭುತಗಳು

ಒಂದು ಬಂದರು. [illegible] ವಂಥದು. ಬಂದರಿನ ಈ ಕಡೆಗೆ ಒಂದು ಹೆಜ್ಜೆ, ಆ ಕಡೆಗೆ ಒಂದು ಹೆಜ್ಜೆ ಇಟ್ಟ ಭವ್ಯ ಕಂಚಿನ ಪ್ರತಿಮೆ ಬಂದರಿನ ಬಾಗಿಲಿನಲ್ಲಿ. ಅದರ ಎತ್ತರ 32 ಮೀಟರುಗಳು. ಒಂದು ಹಡಗು ಹಾಗಬಹುದು ಆ ಕಾಲುಗಳ ಮಧ್ಯೆ!

ಈ ಪ್ರತಿಮೆ [illegible]

ಮಾನವನು ಚಿರಗಾಗುವ ಪ್ರಾಚೀನ ಶಿಲ್ಪಸೃಷ್ಟಿಗಳು ಜಗತ್ತಿನಲ್ಲಿವೆ. ವಾಸ್ತುಶಿಲ್ಪಿಗಳ ಅಪೂರ್ವ ಪ್ರತಿಭೆಯನ್ನು, ಕಲಾಕೌಶಲವನ್ನು ಅವುಗಳಲ್ಲಿ ನಾವು ಕಾಣಬಹುದು. ಸಾವಿರಾರು ವರ್ಷಗಳಿಂದ ಇಂಥ ಅದ್ಭುತ ಕೃತಿಗಳನ್ನು ವಾಸ್ತುಶಿಲ್ಪಿಗಳು ನಿರ್ಮಿಸುತ್ತ ಬಂದಿದ್ದಾರೆ. ಅವೆಲ್ಲವನ್ನೂ ಪರಿಶೀಲಿಸಿ ಅಲೆಗ್ಸಾಂಡರನ ಕಾಲದಲ್ಲಿ (ಕ್ರಿ. ಪೂ. 356–323) [illegible]



ಪ್ರಚಂಡಾಕೃತಿಯ ಪಿರಮಿಡ್

ಏಳು ಅದ್ಭುತಗಳನ್ನು ನಿರ್ಣಯಿಸಿದರು. ಅವನ್ನು ಪುರಾತನ ಪ್ರಪಂಚದ ಏಳು ಅದ್ಭುತಗಳು ಎಂದು ಈಗ ಕರೆಯುತ್ತಾರೆ. ಅವುಗಳಲ್ಲಿ ಕೆಲವು ಇನ್ನೂ ಇವೆ : ಕೆಲವು ಆಗಲೇ ನಾಶವಾಗಿವೆ.

ಮೇಲೆ ಪ್ರಸ್ತಾಪಿಸಿದ ಪಿಲಆಸ್‌ನ ಪ್ರತಿಮೆ. ಪ್ರಾಚೀನ ಜಗತ್ತಿನ ಏಳು ಅದ್ಭುತಗಳಲ್ಲಿ ಒಂದು ಎಂದು ಪರಿಗಣಿಸಲ್ಪಟ್ಟಿದೆ.

1. **ಈಜಿಪ್ಟಿನ ಪಿರಮಿಡ್ಡುಗಳು**

ಕ್ರಿ. ಪೂ. 3000ದಿಂದ 1800ರ ವರೆಗಿನ ಅವಧಿಯಲ್ಲಿ ಕಟ್ಟಿದ ಪ್ರಚಂಡಾಕೃತಿಯ ಕಟ್ಟಡಗಳು ಇವು. ಇವನ್ನು ಮೀರಿಸುವ ಸ್ಮಾರಕಗಳು ಈ ತನಕ ಬೇರೆ ನಿರ್ಮಾಣವಾಗಿಲ್ಲ.

ಹಿಂದೆ ಈಜಿಪ್ಟಿನ ರಾಜರು ರಾಣಿಯರು ಮರಣಾನಂತರ ತಮ್ಮ ಮೃತ ದೇಹಕ್ಕೆ ಬೇಕಾಗುವ ಸಮಾಧಿಗಳನ್ನು ತಾವೇ ಸಿದ್ಧಮಾಡಿಸುತ್ತಿದ್ದರು. ಅವು ಈ ಪಿರಮಿಡ್ಡುಗಳು.

2. **ಬ್ಯಾಬಿಲೋನಿಯದ ತೂಗು ತೋಟಗಳು**

ಇಂದು ನಾಮಮಾತ್ರವಾಗಿರುವ ಬ್ಯಾಬಿಲೋನಿಯದ ತೂಗು ಉದ್ಯಾನಗಳು ಪ್ರಾಚೀನಕಾಲದ ಸೌಂದರ್ಯಾರಾಧಕರ ಕಲ್ಪನೆಗೆ ರಸದೌತಣ ಎನಿಸಿದ್ದುವು. ಗುಡ್ಡ ಪ್ರದೇಶದಿಂದ ಬಂದ ತನ್ನ ಪ್ರೇಯಸಿ ಅಮಿಮಿರಾಣಿಯ ಬೇಸರವನ್ನು ನೀಗಿಸುವುದಕ್ಕೋಸ್ಕರ ತರು. ಲತೆಗಳಲ್ಲಿ ಅವಳಿಗಿದ್ದ ಅಪಾರ ಪ್ರೇಮವನ್ನು ಗಮನಿಸಿ. ನೆಬುಕ್ಯಾಡ್‌ರೆಜರ್ ಎಂಬ ರಾಜ ಕ್ರಿ. ಪೂ. 600ರಲ್ಲಿ ತೂಗು ಉದ್ಯಾನಗಳನ್ನು ಏಷ್ಯ ಖಂಡದ ನೈಋತ್ಯ ಭಾಗದಲ್ಲಿರುವ ಬ್ಯಾಬಿಲೋನಿಯ ಪಟ್ಟಣದಲ್ಲಿ ನಿರ್ಮಿಸಿದ.

ಪ್ರೇಮದರಸಿಗೆ ಕಾಣಿಕೆ—ತೂಗು ಉದ್ಯಾನ



ಇವು ಚಚ್ಚೌಕಾಕಾರದಲ್ಲಿದ್ದ ಐದು ಕ್ರೀಡಾವನಗಳ ಸಮೂಹ. ಯೂಫ್ರೇಟಿಸ್ ನದಿಯ ದಂಡೆಯ ಉದ್ದಕ್ಕೆ ಇವು ಹಬ್ಬಿದ್ದುವು. ಅಂತಸ್ತು ಅಂತಸ್ತಾಗಿ 107 ಮೀಟರು ಎತ್ತರದವರೆಗೂ ಈ ಉದ್ಯಾನ ಏರಿದ್ದಿತು. ಅಮೃತಶಿಲೆಯ ಮೆಟ್ಟಿಲುಗಳನ್ನು ಹಾಕಿಸಿದ್ದರು. ದೊಡ್ಡ ವೃಕ್ಷಗಳು. ಪೊದರುಗಳು. ನಾನಾ ಬಗೆಯ ನಾನಾ ವರ್ಣದ ಪುಷ್ಪರಾಶಿಗಳು. ಅಲ್ಲಲ್ಲಿ ವಿಶ್ರಮಿಸಿಕೊಳ್ಳಲು ಬಳ್ಳಿಮಾಡಗಳು. ಸಾಲುಮರಗಳ ಮಾರ್ಗಗಳು ಇವುಗಳಿಂದ ಆ ಉದ್ಯಾನ ಸಮುಚ್ಚಯ ಬಹಳ ರಮ್ಯವಾಗಿತ್ತು. ನದಿಯ ನೀರನ್ನು ಮೇಲೆತ್ತಿ ಅಂತಸ್ತುಗಳಲ್ಲಿದ್ದ ನೀರಿನ ತೊಟ್ಟಿಗಳಲ್ಲಿ ತುಂಬಿ ಅಲ್ಲಿಂದ ಕೊಳವೆಗಳ ಮೂಲಕ ಗಿಡಗಳಿಗೆ ನೀರನ್ನು ಒದಗಿಸುತ್ತಿದ್ದರು.

3. **ಒಲಿಂಪಿಯ ನಗರದ ಜ್ಯೂಸ್ ದೇವತೆಯ ಅತಿ ದೊಡ್ಡ ವಿಗ್ರಹ**

ದಂತ. ಚಿನ್ನ ಮತ್ತು ನವರತ್ನಗಳಿಂದ ರಚಿಸಲ್ಪಟ್ಟ 12.2 ಮೀಟರು ಎತ್ತರದ ಈ ಅಪ್ರತಿಮ ಪ್ರತಿಮೆಯನ್ನು ಪ್ರಾಚೀನ ಗ್ರೀಸ್ ದೇಶದ ಅತ್ಯಂತ ಪ್ರತಿಭಾನ್ವಿತ ಶಿಲ್ಪಿ ಫಿಡಿಯಾಸ್ ನಿರ್ಮಿಸಿದ. ಗ್ರೀಕರ ನಂಬಿಕೆಯ ಪ್ರಕಾರ ಜ್ಯೂಸ್ ದೇವತೆಗಳ ರಾಜ. ಈ ಸ್ವರ್ಗದ ಪ್ರಭು ಮತ್ತು. ವೈಢೂರ್ಯಗಳಿಂದ ಹೊಳೆಯುತ್ತಿದ್ದ ಚಿನ್ನ, ದಂತ ಮತ್ತು ದೇವದಾರು ಮರಗಳ

ಚಿನ್ನ, ದಂತ. ನವರತ್ನ ಖಚಿತ ಜ್ಯೂಸ್ ವಿಗ್ರಹ



ಸಿಂಹಾಸನದ ಮೇಲೆ ಕುಳಿತಿದ್ದ ವಿಗ್ರಹ ಇದು. ಗ್ರೀಸ್ ದೇಶದ ಒಲಿಂಪಿಯ ನಗರದಲ್ಲಿ ಕ್ರಿ. ಪೂ. 457ರಲ್ಲಿ ಇದು ನಿರ್ಮಾಣಗೊಂಡಿತು. ಮಾಂಸವಿರಬೇಕಾದ ಸ್ಥಳಗಳಲ್ಲಿ ಮರ ಅಥವಾ ಕಲ್ಲಿನ ತಿರುಳಿನ ಮೇಲೆ ನವುರಾದ ದಂತದ ಕೆಲಸ, ಶೃಂಗಾರ ಸಾಧನಗಳೆಡೆಯಲ್ಲಿ ಬಂಗಾರದ ರಚನೆ. ಬಲಗೈಯಲ್ಲಿ ದಂತದ ಜಯದಂಡ ಮತ್ತು ಚಿನ್ನದ ಪ್ರತಿಮೆ. ಎಡಗೈಯಲ್ಲಿ ರಾಜದಂಡ, ಅದರ ಮೇಲೊಂದು ಗಿಡುಗ. ಮಾಣಿಕ್ಯದ ಹರಳುಗಳಿಂದ ಮಾಡಿದ ಆ ದೇವತೆಯ ಕಣ್ಣುಗಳು ವಿಗ್ರಹಕ್ಕೆ ಜೀವಕಳೆಯನ್ನು ತಂದಿದ್ದುವು.

ಒಲಿಂಪಿಯದಲ್ಲಿದ್ದ ಈ ವಿಗ್ರಹವನ್ನು ಒಂದನೆಯ ಥಿಯೋಡರಸ್ ಚಕ್ರವರ್ತಿ ಕಾನ್‌ಸ್ಟಾಂಟಿನೋಪಲಿಗೆ ಸ್ಥಳಾಂತರಿಸಿದ. ಕ್ರಿ. ಪೂ. 375ರ ಒಂದು ಬೆಂಕಿಯ ಅನಾಹುತದಲ್ಲಿ ಈ ವಿಗ್ರಹ ನಾಶವಾಯಿತು.

### 4. ರೋಡ್ಸ್ ಪಟ್ಟಣದ ಕಂಚಿನ ವಿಗ್ರಹ

ಲೇಖನದ ಪ್ರಾರಂಭದಲ್ಲಿ ವರ್ಣಿಸಿದ್ದು ಈ ವಿಗ್ರಹವನ್ನೇ. ಗ್ರೀಸ್ ದೇಶದ ರೋಡ್ಸ್ ಬಂದರಿನಲ್ಲಿ ಕ್ರಿ. ಪೂ. 292ರಿಂದ 280ರ ವರೆಗೆ ಹನ್ನೆರಡು ವರ್ಷಗಳ ಸತತ ಶ್ರಮದಿಂದ ಇದು ನಿರ್ಮಾಣವಾಯಿತು.

ಬಂದರಿನ ಆಚೆ-ಈಚೆ ಕಾಲಿಟ್ಟ ಹಿಲಿಆಸ್ ವಿಗ್ರಹ





120 ವರ್ಷಗಳ ಶ್ರಮದ ನಿರ್ಮಾಣ — ಆರ್ಟಿಮಿಸ್ ಗುಡಿ

ಇದನ್ನು ಸೃಷ್ಟಿಸಿದವನು ಛಾರೀಸ್ ಎನ್ನುವವನು. ರೋಡ್ಸ್ ನಗರಕ್ಕೆ ಮುತ್ತಿಗೆ ಹಾಕಿದ ಡಿಮಿಟ್ರಿಯಾಸ್ ಎಂಬವನನ್ನು ಸೋಲಿಸಿ, ಅವನು ಬಳಸಿದ್ದ ಯಂತ್ರಗಳನ್ನು ಕರಗಿಸಿ ಆ ಲೋಹವನ್ನು ಈ ವಿಗ್ರಹಕ್ಕೆ ಬಳಸಿದರು. ಈ ವಿಗ್ರಹ 56 ವರ್ಷಗಳ ಕಾಲ ಮಾತ್ರ ಉಳಿದಿತ್ತು. ಕ್ರಿ. ಪೂ. 224ರ ಭೂಕಂಪ ಒಂದರಲ್ಲಿ ಅದು ಉರುಳಿಹೋಗಿ ಚೂರು ಚೂರಾಯಿತು. ಅದರ ದೊಡ್ಡ ದೊಡ್ಡ ತುಂಡುಗಳು [illegible]96 ವರ್ಷಗಳ ಕಾಲ ಅಲ್ಲಿಯೇ ಇದ್ದುವು. ಅನಂತರ 672ರಲ್ಲಿ ಅದನ್ನು ಯೆಹೂದ್ಯನೊಬ್ಬನು ಕೊಂಡುಕೊಂಡ.

### 5. ಆರ್ಟಿಮಿಸ್ ದೇವತೆಯ ಗುಡಿ

ಏಷ್ಯ ಮೈನರಿನ ಎಫಿಸಸ್ ಎಂಬ ಊರಿನಲ್ಲಿ ನೆಲೆಸಿದ್ದ ಗ್ರೀಕ್ ಜನರು ಆರ್ಟಿಮಿಸ್ ಎಂಬ ದೇವತೆಗೆಂದು (ಇದೇ ದೇವತೆಗೆ ಡಯಾನ ಎಂದೂ ಹೆಸರು) ಭವ್ಯವಾದ ದೇವಾಲಯವನ್ನು ಅರ್ಪಿಸಿದ್ದರು. ಇದನ್ನು ಕಟ್ಟಿದ್ದು ಕ್ರಿ.ಪೂ. ಆರನೆಯ ಶತಮಾನದಲ್ಲಿ. ವಿಸ್ತೀರ್ಣ 0.81 ಹೆಕ್ಟೇರ್, 18 ಮೀಟರು ಎತ್ತರವಾಗಿದ್ದ ಈ ಗುಡಿಯಲ್ಲಿ 100 ಆಧಾರಸ್ತಂಭಗಳಿದ್ದುವು. ಇದರಲ್ಲಿ ಪಾತಿವ್ರತ್ಯದ ದೇವತೆ (ಚಂದ್ರದೇವತೆ) ಆರ್ಟಿಮಿಸಳ ಸುಂದರ ವಿಗ್ರಹವಿತ್ತು. ಇದನ್ನು ಕಟ್ಟಲು 120 ವರ್ಷಗಳ ಕಾಲ ಬೇಕಾಯಿತು. ಜನರಿಂದ ಚಂದಾಹಣವನ್ನು ವಸೂಲುಮಾಡಿ ಕಟ್ಟಡದ ವೆಚ್ಚದ ಹಣ ಸಂಗ್ರಹಿಸಿದರಂತೆ. ಹೆರೋಸ್ಟ್ರೇಟಸ್ ಎಂಬವನು ತನ್ನ ಹೆಸರನ್ನು ಜನರು ಸದಾಕಾಲ ನೆನಪಿಸಬೇಕೆಂಬ ಉದ್ದೇಶದಿಂದ ಅಪೂರ್ವ ಕಲಾಕೃತಿಗಳಿದ್ದ ಈ ದೇವಾಲಯವನ್ನು ಕ್ರಿ. ಪೂ. 356ರಲ್ಲಿ ಬೆಂಕಿ ಹಚ್ಚಿ ನಾಶಪಡಿಸಿದ. ಗುಡಿಯ ಕಂಬಗಳ ತುಂಡುಗಳು ಇಂದೂ ಕೂಡ ಲಂಡನ್ನಿನ ವಸ್ತು ಸಂಗ್ರಹಾಲಯ ಒಂದರಲ್ಲಿ ಕಾಣಬರುತ್ತವೆ.

### 6. ಹಾಲಕಾರ್ನೆಸ್ ಪಟ್ಟಣದ ಸಮಾಧಿ

ಏಷ್ಯ ಮೈನರಿನ ಕೇರಿಯಾ ಎಂಬ [illegible] ಮಾಸೋಲಸ್ (ಕ್ರಿ. ಪೂ. 353) ಎಂಬ ರಾಜನಿದ್ದ. ಅವನ ಮಡದಿಗೆ ಅವನಲ್ಲಿ ಅಪಾರ ಪ್ರೇಮ. ರಾಜ [illegible] ತನ್ನ ಪ್ರೇ[illegible]

ಪ್ರತೀಕವಾಗಿ ರಾಣಿ ಆರ್ಟೆಮಿಸಿ ಒಂದು ಅಮೂಲ್ಯ ಸ್ಮಾರಕವನ್ನು ನಿರ್ಮಿಸ[illegible]ಕಲ್ಪಿಸಿದಳು. ಅದರಂತೆ ಫಿಡಿಯಾಸ್ ಎಂಬವನ ಚಿಂತನದಲ್ಲಿ ಗ್ರೀಕಿನ ನೂರಾರು ಪರಿಣತ ಶಿಲ್ಪಿಗಳು ಸೇರಿ ಕೆತ್ತನೆಯ ಕೆಲಸಗಳಿಂದ ಶೃಂಗರಿಸಲ್ಪಟ್ಟ ಒಂದು ಭವ್ಯವಾದ ಬಿಳಿಯ ಅಮೃತಶಿಲೆಯ ಕಟ್ಟಡವನ್ನು

ಪ್ರೇಮದ ಪ್ರತೀಕ—ಮಾಸೋಲಸ್ ಸಮಾಧಿ



ಅಲೆಗ್ಸಾಂಡ್ರಿಯದ ಮಾರ್ಗದರ್ಶಿ ದೀಪಗೋಪುರ

ನಿರ್ಮಿಸಿದರು. ಇದರ ಎತ್ತರ 43 ಮೀಟರು. ಸುತ್ತಳತೆ 34 ಮೀಟರು. ಕಟ್ಟಡದ ಮೇಲೆ ಬಂಗಾರದ ವರ್ಣದ ರಥದಲ್ಲಿ ಮಾಸೋಲಸ್ ಮತ್ತು ಆರ್ಟೆಮಿಸಿಯರ ವಿಗ್ರಹಗಳು ಇದ್ದುವು. 15ನೆಯ ಶತಮಾನಕ್ಕೆ ಮುಂಚೆಯೇ ಒಂದು ಭೂಕಂಪದಲ್ಲಿ ಇದು ನಾಶವಾಯಿತು. ಇದರ ಅವಶೇಷಗಳು ಲಂಡನ ವಸ್ತು ಸಂಗ್ರಹಾಲಯದಲ್ಲಿವೆ.

## 7. ಅಲೆಗ್ಸಾಂಡ್ರಿಯ ಪಟ್ಟಣದ ದೀಪಗೋಪುರ

ಈ ದೀಪಗೋಪುರ ಈಜಿಪ್ಟ್ ದೇಶದ ಅಲೆಗ್ಸಾಂಡ್ರಿಯ ಕೊಲ್ಲಿಯ ಒಂದು ದ್ವೀಪದಲ್ಲಿದ್ದಿತು. ಕ್ರಿ. ಪೂ. 270ರಲ್ಲಿ ಎರಡನೆಯ ಟಾಲೆಮಿ ಎಂಬ ರಾಜನ ಆಳ್ವಿಕೆಯಲ್ಲಿ ಇವನ್ನು ಕಟ್ಟಿದರು. 30.5 ಮೀಟರು ಎತ್ತರದ ಗದ್ದುಗೆಯ ಮೇಲೆ 122 ಮೀಟರು ಎತ್ತರವಾಗಿದೆ ಈ ದೀಪಸ್ತಂಭ. 15 ಶತಮಾನಗಳ ಕಾಲ ಈ ದೀವಿಗೆ ಮನೆಯು ಸಮುದ್ರ ಪ್ರಯಾಣಿಕರಿಗೆ ದಾರಿದೀಪವಾಗಿದಿತು. ರೋಮನ್ ಚಕ್ರಾಧಿಪತ್ಯದ ಸಮುದ್ರ ತೀರಗಳಲ್ಲಿ

ಮುಂದೆ ಇದೇ ರೀತಿಯ ದೀಪಗೋಪುರಗಳನ್ನು ಕಟ್ಟಿದರು. 955ರಲ್ಲಿ ಆದ ಭೂಕಂಪದಿಂದ ಈ ಗೋಪುರ ಶಿಥಿಲಗೊಂಡಿತು. 1300ರ ಹೊತ್ತಿಗೆ ಸಂಪೂರ್ಣವಾಗಿ ನಾಶವಾಯಿತು.

ನೋಡಿ : ಪಿರಮಿಡ್

## ಪುರಾಣ

ದೇವತೆಗಳು ಒಮ್ಮೆ ತಮ್ಮ ಆಯುಧಗಳನ್ನೆಲ್ಲ ದಧೀಚಿ ಎಂಬ ಋಷಿಯ ಬಳಿ ಇಟ್ಟು ಹೋದರು. ಎಷ್ಟು ದಿನಗಳಾದರೂ ಬಂದು ತೆಗೆದುಕೊಂಡು ಹೋಗಲಿಲ್ಲ. ಅವಕ್ಕೆ ತುಕ್ಕು ಹಿಡಿಯಲು ಪ್ರಾರಂಭವಾಯಿತು. ದಧೀಚಿ ಅವನ್ನು ಅಭಿಮಂತ್ರಿಸಿ ಪಾನಮಾಡಿಬಿಟ್ಟ. ಅನಂತರ ರಾಕ್ಷಸರೊಡನೆ ಯುದ್ಧ ಪ್ರಾಪ್ತವಾದಾಗ ದೇವತೆಗಳು ಬಂದು ಆಯುಧಗಳನ್ನು ಕೇಳಿದರು. ದಧೀಚಿ, "ಅವೆಲ್ಲ ನನ್ನಲ್ಲಿ ಸೇರಿಹೋಗಿವೆ. ಯೋಗಬಲದಿಂದ ನಾನು ದೇಹತ್ಯಾಗ ಮಾಡುತ್ತೇನೆ. ನೀವು ನನ್ನ ಬೆನ್ನೆಲುಬಿನಿಂದ ಬೇಕಾದ ಆಯುಧಗಳನ್ನು ಮಾಡಿಕೊಳ್ಳಿ," ಎಂದು ಹೇಳಿದ. ಹಾಗೆಯೇ ಅವನ ಬೆನ್ನೆಲುಬನ್ನು ತೆಗೆದು ದೇವತೆಗಳು ಶಸ್ತ್ರಾಸ್ತ್ರಗಳನ್ನು ಮಾಡಿಕೊಂಡರು. ದೇವತೆಗಳ ವಿಜಯಕ್ಕಾಗಿ ದಧೀಚಿ ಪ್ರಾಣತ್ಯಾಗ ಮಾಡಿದ.

ಇದೊಂದು ಭಾರತದ ಪುರಾಣ ಕಥೆ.

ಪುರಾಣವೆಂದರೇನು ?

ಪುರಾಣವೆಂದರೆ ನಂಬಲಸಾಧ್ಯವಾದ ಕಲ್ಪನೆ ಎಂಬ ಭಾವನೆ ರೂಢಿಯಲ್ಲಿ ಬೆಳೆದುಬಂದಿದೆ.

ಪುರಾಣವೆಂದರೆ ಕಾಲ್ಪನಿಕ ಕಥೆ. ಇಲ್ಲಿನ ಕಥೆ, ವ್ಯಕ್ತಿ, ವಸ್ತು ಎಲ್ಲವೂ ಕಲ್ಪನೆ. ಇವಕ್ಕೆ ವಾಸ್ತವಾಂಶದ ತಿರುಳು ಇರಬಹುದು, ಇಲ್ಲದಿರಬಹುದು. ಆದ್ದರಿಂದಲೇ ಪುರಾಣಗಳಲ್ಲಿನ ಸಾಧ್ಯತೆ ಅಸಾಧ್ಯತೆಗಳನ್ನು ಪ್ರಶ್ನಿಸಬೇಕಾಗಿಲ್ಲ.

ಪುರಾಣ, ಪೌರಾಣಿಕ ಸಾಹಿತ್ಯ ಎಲ್ಲ ಕಾಲಗಳಲ್ಲೂ ಜನರನ್ನು ಆಕರ್ಷಿಸಿವೆ. ಪ್ರಾಚೀನ ಗ್ರೀಸ್, ಈಜಿಪ್ಟ್, ಅಸೀರಿಯ, ಭಾರತ, ಚೀನ, ಬ್ಯಾಬಿಲೋನಿಯ—ಇವುಗಳ ಪೌರಾಣಿಕ ಸಾಹಿತ್ಯ ಇಂದಿಗೂ ಜನಪ್ರಿಯವಾಗಿ ಜನರ ಮೇಲೆ ಪ್ರಭಾವ ಬೀರುತ್ತಿವೆ.

ಪೌರಾಣಿಕ ಕಥೆಗಳ ಕಾಲ ಅತ್ಯಂತ ಪ್ರಾಚೀನ. ಮಾನವ ಬರಹ ಕಲೆಯನ್ನು ಕಲಿಯುವುದಕ್ಕೂ ಮೊದಲೇ ಕಥೆಗಳನ್ನು ಹೇಳಲು ಕಲಿತಿದ್ದ. ಅನೇಕ ಪೌರಾಣಿಕ ಕಥೆಗಳು ಬಾಯಿಂದ ಬಾಯಿಗೆ ಹರಡಿಬಂದುವು.

ಪೌರಾಣಿಕ ಕಥೆಗಳ ಕಲ್ಪನೆಯ ಹಿಂದೆ ಅರ್ಥವಾಗದ ಜಗತ್ತನ್ನು ಅರ್ಥ ಮಾಡಿಕೊಳ್ಳುವ ಪ್ರಯತ್ನವಿರುವುದನ್ನು ನಾವು ನೋಡಬಹುದು. ಸೃಷ್ಟಿ ಹೇಗಾಗಿರಬಹುದು ಎಂಬುದರ ಬಗೆಗೆ ಇರುವ ಅನೇಕ ಕಥೆಗಳು ಪೌರಾಣಿಕ ಕಥೆಗಳು. ಸುಮಾರು 200 ಕೋಟಿ ವರ್ಷಗಳ ಹಿಂದೆ ಸೂರ್ಯನಿಂದ ಸಿಡಿದ ಕಿಡಿಯೊಂದು ಆರಿ ಭೂಮಿಯಾಯಿತು ಎಂಬುದು ವೈಜ್ಞಾನಿಕ ವಾದ. ಆದರೆ ಪುರಾಣಗಳ ಕಲ್ಪನೆಯೇ ಬೇರೆ. ಸೃಷ್ಟಿಕರ್ತ ದೇವರು, ಬ್ರಹ್ಮ. ಇವನು ಹಿರಣ್ಯಗರ್ಭ. ಬಂಗಾರದ ಕತ್ತಿಯ ಒಂದು ಸೀಳಿನಿಂದ ದೇವಲೋಕವೂ, ಇನ್ನೊಂದು ಸೀಳಿನಿಂದ ಭೂಲೋಕವೂ ಸೃಷ್ಟಿಯಾದುವು. ಇದು ಒಂದು ಕಥೆ. ಹಳೆಯ ಒಡಂಬಡಿಕೆಯಲ್ಲಿ ಬರುವ 'ಸೃಷ್ಟಿ' ಕಥೆಯೂ ಪೌರಾಣಿಕ ಕಥೆಯೇ. ಮತ್ಸ್ಯಾವತಾರದ ಕಥೆ, ನೋಅನ ನಾವೆಯ ಕಥೆ, ಮನುವಿನ ಕಥೆ—ಇವೆಲ್ಲವೂ ಪುರಾಣದ ಕಥೆಗಳೇ. ಕೆಲವು ಕಥೆಗಳು ನಿಸರ್ಗದಲ್ಲಿ ನಡೆಯುವ ಕ್ರಿಯೆಗಳಿಗೆ ವಿವರಣೆ ಕೊಡುವ ಪ್ರಯತ್ನಗಳು. ಉದಾಹರಣೆಗೆ ಭಾರತೀಯ ಪೌರಾಣಿಕ ಸಾಹಿತ್ಯದಲ್ಲಿ ಪ್ರಸಿದ್ಧವಾದ ಸಮುದ್ರ ಮಥನದ ಕಥೆಯನ್ನು ತೆಗೆದುಕೊಳ್ಳಬಹುದು. ಎಂಥ ಅದ್ಭುತ ಕಲ್ಪನೆ ! ದೇವ ದಾನವರು ಮಂದರಪರ್ವತಕ್ಕೆ ವಾಸುಕಿಯೆಂಬ ಹಾವನ್ನು ಕಟ್ಟಿ ಕ್ಷೀರಸಮುದ್ರವನ್ನು ಕಡೆದರು. ಆಗ ಅದರಿಂದ ಸೂರ್ಯ, ಚಂದ್ರ, ಲಕ್ಷ್ಮೀದೇವಿ, ಕಾಮಧೇನುವೆಂಬ ಹಸು, ಐರಾವತವೆಂಬ ಆನೆ ಮೊದಲಾದುವೆಲ್ಲ ಮೇಲೆ ಬಂದುವು. ಅಮೃತವೂ ಬಂತು. ಅಮೃತಕ್ಕಾಗಿ ದೇವ ದಾನವರಿಬ್ಬರಿಗೂ ಹೊಡೆದಾಟವಾಯಿತು. ಆಗ ವಿಷ್ಣು ಮೋಹಿನೀ ರೂಪವನ್ನು ಧರಿಸಿ ದೇವದಾನವರಿಬ್ಬರನ್ನೂ ಬೇರೆ ಬೇರೆಯಾಗಿ ಕೂಡಿಸಿ ದೇವತೆಗಳಿಗೆ ಮಾತ್ರ ಅಮೃತವನ್ನು ಹಂಚಿದ. ಇದನ್ನು ಕಂಡುಕೊಂಡ ಒಬ್ಬ ರಾಕ್ಷಸ ಹೇಗೋ ಮಾಡಿ ದೇವತೆಗಳ ಸಾಲಿನಲ್ಲಿ ಹೋಗಿ ಸೇರಿದ. ಮೋಹಿನಿ ಅವನಿಗೂ ಅಮೃತವನ್ನು ಬಡಿಸಿದಳು. ಅದನ್ನು ಸೂರ್ಯ ಚಂದ್ರರು ನೋಡಿ ಮೋಹಿನಿಯ ಅವತಾರದಲ್ಲಿದ್ದ ವಿಷ್ಣುವಿಗೆ ಅದನ್ನು ತಿಳಿಸಿದರು. ಆಗ ವಿಷ್ಣು ಚಕ್ರದಿಂದ ಆ ರಾಕ್ಷಸನ ತಲೆ ಕತ್ತರಿಸಿದ. ಆದರೂ ಅವನ ರುಂಡಮುಂಡಗಳು ಬದುಕಿದ್ದುವು. ಅವೇ ರಾಹು ಕೇತುಗಳು. ಇವರು ಸೂರ್ಯ ಚಂದ್ರರ ಮೇಲಿನ ಕೋಪದಿಂದ ಆಗಾಗ ಅವರನ್ನು ಬಂದು ನುಂಗುತ್ತಾರೆ. ಇದೇ ಗ್ರಹಣ.

ಇದು ಭಾರತೀಯ ಪೌರಾಣಿಕ ಕಥೆಯಾದರೆ, ಗ್ರಹಣಗಳು ಏಕಾಗುತ್ತವೆ ಎನ್ನುವುದಕ್ಕೆ ಕೊರಿಯದಲ್ಲಿ ಒಂದು ಪೌರಾಣಿಕ ಕಥೆ ಇದೆ. ಗಮಾಗ್‌ನಗ ಎಂಬುದೊಂದು ಕತ್ತಲೆಯ ನಗರ. ಅದರ ರಾಜನಿಗೆ ಕತ್ತಲೆಯನ್ನು ಓಡಿಸಬೇಕೆಂಬ ಆಸೆ. ಬೆಂಕಿಯನ್ನುಗುಳುವ ನಾಯಿಯನ್ನು ಕಳುಹಿಸುತ್ತಾನೆ. ಒಂದು ಸಲ ಸೂರ್ಯನನ್ನು ಕಚ್ಚಿಕೊಂಡುಬರಲು, ಒಂದು ಸಲ ಚಂದ್ರನನ್ನು ಕಚ್ಚಿಕೊಂಡುಬರಲು ನಾಯಿ ಪ್ರಯತ್ನಿಸುತ್ತದೆ. ಆದರೆ ಯಶಸ್ವಿಯಾಗುವುದಿಲ್ಲ. ಹೀಗೆಯೇ ಗ್ರಹಣಗಳಾಗುವುದು.

ಭೂಮಿದೇವಿ ಸಿರಿಸ್‌ನ ಮಗಳು ಪರ್ಸಿಫೋನಿಯನ್ನು ಪಾತಾಳ ಲೋಕದ ರಾಜ ಪ್ಲೂಟೊ ಅಪಹರಿಸಿದ ; ಭೂಮಿ ಮಗಳನ್ನು ಎಲ್ಲೆಲ್ಲಿಯೂ ಹುಡುಕಿ ಬೆಂಡಾದಳು ; ಕಡೆಗೆ ದೇವತೆಗಳು ಪರ್ಸಿಫೋನಿ ಆರು ತಿಂಗಳು ತಾಯಿಯ ಜೊತೆಯಲ್ಲಿ ಇರುವುದು, ಆರು ತಿಂಗಳು ಗಂಡನ ಅರಮನೆಯಲ್ಲಿ ಇರುವುದು ಎಂದು ತೀರ್ಮಾನಿಸಿದರು. ಮಗಳು ತಾಯಿಯೊಡನಿದ್ದಾಗ ಭೂಮಿ ನಗುತ್ತಿರುತ್ತದೆ, ಗಿಡಗಳು ಚಿಗುರುತ್ತವೆ, ಹೂ ಹಣ್ಣು ಸಮೃದ್ಧಿ. ಮಗಳು ಪಾತಾಳಲೋಕಕ್ಕೆ ಹೋದಾಗ ಭೂಮಿ ಬೇಸರಗೊಳ್ಳುತ್ತಾಳೆ. ಆಗ ಹಿಮ, ಗಾಳಿ, ಮರಗಳೆಲ್ಲ ಎಲೆ ಹೂಗಳಿಲ್ಲದೆ ಬರಡು. ಈ ಗ್ರೀಕ್ ಕಥೆ ಋತುಗಳನ್ನು ಕುರಿತ [illegible].

ಭಾರತದಲ್ಲಿ ಇಂಥ ಪೌರಾಣಿಕ ಕಥೆಗಳು—ಇಂದ್ರ, ಬ್ರಹ್ಮ, ಯಮ ಅಗ್ನಿ ಇಂಥ ದೇವತೆಗಳ ಕಥೆಗಳು—ಬೇಕಾದಷ್ಟಿವೆ.

ಪುರಾಣ ಎಂಬುದನ್ನು ಇಲ್ಲಿ ಇನ್ನೊಂದು ಅರ್ಥದಲ್ಲಿಯೂ ಬಳಸುತ್ತಾರೆ. ಇವು ಕೆಲವು ಗ್ರಂಥಗಳು

ಎರಡನೆಯ ಶತಮಾನದ ಹೊತ್ತಿಗೆ ಚೀನೀಯರು ಕಾಗದವನ್ನು ಕಂಡು ಹಿಡಿದಿದ್ದರು. ಚಿತ್ರಕಾರರು ಆ ಕಾಗದಗಳ ಮೇಲೆ ಅಲಂಕಾರದ ಚಿತ್ರಗಳನ್ನು ಬರೆಯುತ್ತಿದ್ದರು.

ಇಂಗ್ಲಿಷರು ಹಾಗೂ ರೋಮನರು ಮರದ ಹಲಗೆಗಳ ಮೇಲೆ ಬರೆಯುತ್ತಿದ್ದರು. ಇಂಗ್ಲೆಂಡಿನಲ್ಲಿ ಬೀಚ್ ಮರದ ಹಲಗೆಗಳ ಮೇಲೆ ಬರೆಯಲಾಗುತ್ತಿತ್ತು. ಬೀಚ್ ಮರಕ್ಕೆ ಆ್ಯಂಗ್ಲೋ-ಸ್ಯಾಕ್ಸನ್ ಭಾಷೆಯಲ್ಲಿ 'ಬಾಕ್' ಎನ್ನುತ್ತಿದ್ದರು. 'ಬುಕ್' (ಪುಸ್ತಕ) ಎನ್ನುವ ಪದ ಬಂದಿರುವುದು ಇದರಿಂದ.

ರೋಮನರು ಮರದ ಹಲಗೆಗಳಲ್ಲಿ ರಂಧ್ರಮಾಡಿ ಲೋಹದ ಉಂಗುರಗಳನ್ನು ಹಾಕಿ ಹಲಗೆಗಳನ್ನು ಒಂದಕ್ಕೊಂದು ಜೋಡಿಸುತ್ತಿದ್ದರು. ಮರದ ಕಾಂಡಕ್ಕೆ ಲ್ಯಾಟಿನ್ ಭಾಷೆಯಲ್ಲಿ 'ಕೋಡೆಕ್ಸ್' ಎಂದು ಹೆಸರು. ಹೀಗಾಗಿ ರೋಮನರ ಪುಸ್ತಕಗಳಿಗೆ ಕೋಡೆಕ್ಸ್ ಎಂಬ ಹೆಸರು ಬಂದಿತು.

ಈ ಕೋಡೆಕ್ಸ್‌ಗಳ ಮೇಲೆ ರೋಮನರ ಬರವಣಿಗೆ ವೈಶಿಷ್ಟ್ಯಪೂರ್ಣವಾಗಿರುತ್ತಿತ್ತು. ಮೊದಲು ಸೀಮೆಸುಣ್ಣ ಹಾಗೂ ಗೋಂದಿನ ಮಿಶ್ರಣವನ್ನು ಈ ಹಲಗೆಗಳ ಮೇಲೆ ಸವರುತ್ತಿದ್ದರು. ಅದು ಒಣಗಿದ ಮೇಲೆ ಕರಿ ಬಣ್ಣದ ಮೇಣವನ್ನು ಅದರ ಮೇಲೆ ತೆಳುವಾಗಿ ಸವರುತ್ತಿದ್ದರು. ಅನಂತರ ಸ್ಟೈಲಸ್ ಎಂಬ ಚೂಪಾದ ಉಪಕರಣದಿಂದ ಆ ಹಲಗೆಗಳ ಮೇಲೆ ಅಕ್ಷರಗಳನ್ನು ಕೆತ್ತುತ್ತಿದ್ದರು. ಹೀಗಾಗಿ ಕಪ್ಪುಹಲಗೆಯ ಮೇಲೆ ಬಿಳಿಯ ಅಕ್ಷರಗಳಾಗುತ್ತಿದ್ದುವು. ಹೀಗೆ 'ಸ್ಟೈಲ್'—ಶೈಲಿ—ಪದ ಬಂದುದು.

ಒಂದನೆಯ ಶತಮಾನದ ಹೊತ್ತಿಗೆ ರೋಮನರು ಹಲಗೆಗಳ ಮಧ್ಯೆ ಪ್ಯಾಪಿರಸ್ ಹಾಳೆಗಳನ್ನಿಟ್ಟು ಒಂದು ಮಗ್ಗುಲಲ್ಲಿ ಉಂಗುರಗಳನ್ನು ಪೋಣಿಸಿದರು. ಪುಸ್ತಕದ ಹಾಳೆಗಳ ಕಟ್ಟುವಿಕೆ ಹೀಗೆ ಮೊದಲಾಯಿತು. ಎರಡು ಹಲಗೆಗಳ ಮಧ್ಯೆ ರೋಮನರು ಹಾಳೆಗಳಿಟ್ಟಾಗ ಮೊದಲನೆಯ ಪುಸ್ತಕ ಅವತರಿಸಿತು. ಪುಸ್ತಕದ ಚರಿತ್ರೆ ಆರಂಭವಾದದ್ದು ಇಪ್ಪತ್ತು ಶತಮಾನಗಳ ಹಿಂದೆ. ನಾಲ್ಕನೆಯ ಶತಮಾನದ ಹೊತ್ತಿಗೆ ಸುರಳಿಗಳ ಬಳಕೆ ಬಹುಮಟ್ಟಿಗೆ ಕಡಮೆಯಾಗಿತ್ತು.

ಪ್ಯಾಪಿರಸ್‌ಗೆ ಬದಲಾಗಿ ಕುರಿ, ಮೇಕೆ, ಕರು ಇವುಗಳ ಚರ್ಮವನ್ನೂ ಉಪಯೋಗಿಸುತ್ತಿದ್ದರು. ಚರ್ಮವನ್ನು ತೊಳೆದು ಸುಣ್ಣ ಸವರಿ ಅದರ ಕೂದಲು ತೆಗೆದು ನಯಮಾಡಿ ಅದರ ಮೇಲೆ ಬರೆಯಲಾಗುತ್ತಿತ್ತು.

ಪ್ರಾಚೀನ ಕಾಲದಲ್ಲಿ 'ಪುಸ್ತಕ'ಗಳೆಂದರೆ ಕೈ ಬರಹದ ಪ್ರತಿಗಳೇ. ಕ್ರೈಸ್ತ ಮಠಗಳಲ್ಲಿ ಸನ್ಯಾಸಿಗಳು ಕೈಬರಹದ ಪ್ರತಿಗಳನ್ನು ಆದಷ್ಟು ತಯಾರಿಸುತ್ತಿದ್ದರು. ಹದಿಮೂರನೆಯ ಶತಮಾನದವರೆಗೂ ಯೂರೋಪಿನಲ್ಲಿ ಬರೆಯಲ್ಪಟ್ಟ ಸುಮಾರು ಎಲ್ಲ ಪುಸ್ತಕಗಳನ್ನೂ ತಯಾರಿಸಿದವರು ಇವರೇ.

ಮಧ್ಯಯುಗದ ಕಾಲದಲ್ಲಿ ಕ್ರೈಸ್ತ ಸನ್ಯಾಸಿಗಳು ಸಾಮಾನ್ಯವಾಗಿ ಚರ್ಮದ ಮೇಲೆ ಬರೆಯುತ್ತಿದ್ದರು. ನಾಲ್ಕು ಚರ್ಮಗಳನ್ನು ಒಂದರ ಮೇಲೊಂದಿಟ್ಟು ಅದನ್ನು ಎರಡು ಭಾಗವಾಗಿ ಮಡಿಕೆ ಮಾಡುತ್ತಿದ್ದರು. [illegible] ಹದಿನಾರು ಪುಟಗಳೂ ದೊರೆಯುತ್ತಿದ್ದುವು. [illegible] ಒಂದೊಂದೇ ಪುಟವಾಗಿ ಬರೆದುಕೊಂಡು ಹೋಗುತ್ತಿದ್ದ. ವಾಕ್ಯಗಳ ಮೊದಲ ಅಕ್ಷರಗಳನ್ನು ಕೆಂಪು, ಹಳದಿ, ನೀಲಿ ಬಣ್ಣಗಳಿಂದ ಸಿಂಗರಿಸಿ ದೊಡ್ಡ ದೊಡ್ಡ ಅಕ್ಷರಗಳಾಗಿ ಬರೆಯುತ್ತಿದ್ದರು. ಬರವಣಿಗೆ [illegible] ಅಲಂಕರಿಸುತ್ತಿದ್ದರು. [illegible] ಚರ್ಮವನ್ನು ಕಾದ ಕಬ್ಬಿಣದಿಂದ ಕೊರೆದು ಸಿಂಗರಿಸಲಾಗುತ್ತಿತ್ತು. ಚಿನ್ನ, ಬೆಳ್ಳಿ, ದಂತ ಇವುಗಳಿಂದಲೂ ರಕ್ಷಾಪುಟವನ್ನು ಅಲಂಕರಿಸಲಾಗುತ್ತಿತ್ತು.

ಮೊದಮೊದಲು ಪುಸ್ತಕವನ್ನು ಸಿಂಗರಿಸುವುದಕ್ಕೆ ಬಹಳ ಕಾಲ ವ್ಯಯ ಮಾಡುತ್ತಿದ್ದರು. ಪುಸ್ತಕದ ರಚನೆ ಕಲಾವಿದನ ಕೆಲಸವಾಗಿತ್ತು. ಪುಸ್ತಕ ಆತನ ಕೌಶಲಕ್ಕೆ ನಿದರ್ಶನವಾಗುತ್ತಿತ್ತು.

ಆದರೆ ಹದಿಮೂರನೆಯ ಶತಮಾನದಲ್ಲಿ ಯೂರೋಪಿನಲ್ಲಿ ವಿಶ್ವವಿದ್ಯಾನಿಲಯಗಳು ಸ್ಥಾಪಿತವಾದ ಮೇಲೆ ಹೆಚ್ಚಿನ ಸಂಖ್ಯೆಯಲ್ಲಿ ಹಸ್ತ ಪುಸ್ತಕಗಳು ಅವಶ್ಯವಾದುವು. ಚರ್ಮದ ಬದಲು ಕಾಗದದ ಬಳಕೆ ಆರಂಭವಾದ ಬಳಿಕ ಪುಸ್ತಕಗಳ ಶೃಂಗಾರ ಕಡಮೆಯಾಯಿತು. ಹಾಗೂ ಸಂಖ್ಯೆ ಹೆಚ್ಚಿತು. ಆದರೂ ಶ್ರೀಮಂತರು ತಮ್ಮ ಪುಸ್ತಕಗಳನ್ನು ಕಲಾತ್ಮಕವಾಗಿ ರಚಿಸಲು ಸುಂದರ ಹಸ್ತಾಕ್ಷರದ ಬರಹಗಾರರನ್ನು ನಿಯಮಿಸಿಕೊಳ್ಳುತ್ತಿದ್ದರು.

1456ರಲ್ಲಿ ಯೊಹಾನೆಸ್ ಗುಟೆನ್‌ಬರ್ಗ್ ಮುದ್ರಣ ಯಂತ್ರವನ್ನು ಕಂಡುಹಿಡಿದ. ಪುಸ್ತಕದ ಚರಿತ್ರೆಯಲ್ಲಿ ಮಹತ್ತರ ಕ್ರಾಂತಿಯಾಯಿತು.

ಮುದ್ರಿತವಾದ ಮುಖ್ಯ ಮೊದಲನೆಯ ಪುಸ್ತಕ ಬೈಬಲ್. 'ಗುಟೆನ್‌ಬರ್ಗನ ಬೈಬಲ್' ಎಂದು ಪರಿಚಿತವಾದ ಈ ಕೃತಿಯ 200 ಪ್ರತಿಗಳನ್ನು 1452–55ರಲ್ಲಿ ಅಚ್ಚುಮಾಡಲಾಯಿತು. ಇವುಗಳಲ್ಲಿ 47 ಪ್ರತಿಗಳು ಹಾಳಾಗದೆ ಉಳಿದಿವೆ. ಇದರಲ್ಲಿ 1,282 ಪುಟಗಳಿವೆ, ಪುಟಕ್ಕೆ 42 ಪಂಕ್ತಿಗಳು.

ಅಂದಿನ ಆ ಮುದ್ರಿತ ಪುಸ್ತಕ ಇಂದು ಪ್ರತಿದಿನವೂ ತಯಾರಾಗುತ್ತಿರುವ ಕೋಟ್ಯಂತರ ಪುಸ್ತಕಗಳಿಗೆ ನಾಂದಿ ಹಾಡಿತು. ಪುಸ್ತಕ ತಯಾರಿಕೆ ಒಂದು ಉದ್ಯಮವಾಗಿ ಬೆಳೆಯುವುದು ಸಾಧ್ಯವಾಯಿತು. ಜನಸಾಮಾನ್ಯನಿಗೂ ಪುಸ್ತಕ ಮಿತ್ರನಾಗುವ ಅವಕಾಶ ದೊರೆಯಿತು. ಪುಸ್ತಕಗಳು ಅತಿ ಹೆಚ್ಚಿನ ಸಂಖ್ಯೆಯಲ್ಲಿ ತಯಾರಾಗಿ ಅಸಂಖ್ಯಾತ ಜನರ ಕೈಸೇರಿದುವು. ಪುಸ್ತಕ ಮನುಷ್ಯನ ನಾಗರಿಕತೆಯ ಅಭಿವೃದ್ಧಿಗೆ ಅಮೂಲ್ಯ ಸಾಧನವಾಗಿ ಪೀಳಿಗೆಯಿಂದ ಪೀಳಿಗೆಗೆ ಉಳಿದುಬರುವ ಜ್ಞಾನಕ್ಕೆ ಮಿತಿ ಇಲ್ಲದಂತಾಯಿತು. ಜ್ಞಾಪಕಶಕ್ತಿಯ ಮೇಲಿನ ಹೊರೆ ಕಡಮೆಯಾಯಿತು. ಒಬ್ಬರಿಂದೊಬ್ಬರಿಗೆ ಮಾತಿನಿಂದ, ಕಂಠಪಾಠದಿಂದ ಜ್ಞಾನ ಸಾಗುವಾಗ ಆಗಬಹುದಾದ ತಪ್ಪುಗಳಿಗೆ ಅವಕಾಶವಿಲ್ಲದೆ, ವಿಷಯವನ್ನು ಮೊದಲು ಹೇಳುವವನ ಮಾತಿನಲ್ಲಿಯೇ ಅದು ಖಚಿತವಾಗಿ ಉಳಿಯುವಂತಾಯಿತು. ಇದರಿಂದ ಪೀಳಿಗೆಯಿಂದ ಪೀಳಿಗೆಗೆ ಜ್ಞಾನ ಸತತವಾಗಿ ಬೆಳೆಯುವುದು ಸಾಧ್ಯವಾಯಿತು. ಕಾಲ, ದೇಶಗಳ ಅಂತರ ಕಡಮೆಯಾಯಿತು. ಪ್ರಪಂಚದ ಒಂದು ಭಾಗದವರು ಇನ್ನೊಂದು ಭಾಗದವರನ್ನು ಅರ್ಥಮಾಡಿಕೊಳ್ಳಲು ಪುಸ್ತಕಗಳ ಸಹಾಯ ಅಸಾಧಾರಣ; ಅಲ್ಲದೆ ಪ್ರಪಂಚದ ಯಾವ ಭಾಗದಲ್ಲಿ ಸಂಪಾದಿಸಿದ ಜ್ಞಾನವನ್ನಾದರೂ ಬಳಸಿಕೊಂಡು, ಮಾನವಕುಲವೆಲ್ಲ ಒಂದಾಗಿ ಮುಂದುವರಿಯಲು ಸಾಧನ—ಪುಸ್ತಕ.

ನೋಡಿ : ಭಾಷೆ ; ಮುದ್ರಣ ; ಲಿಪಿ

## ಪೂರ್ವಜರ ಪೂಜೆ

ನಮಗೆ ತುಂಬ ಪೂಜ್ಯರಾಗಿದ್ದವರು, ನಮ್ಮನ್ನು ವಿಶ್ವಾಸದಿಂದ ಕಂಡು ಸಹಾಯ ಮಾಡುತ್ತಿದ್ದವರು ತೀರಿಕೊಂಡಾಗ, ಅವರಿನ್ನು ಇಲ್ಲವೇ ಇಲ್ಲ; ನಮಗೂ ಅವರಿಗೂ ಸಂಬಂಧವೇ ಇಲ್ಲ, ಅವರು ನಮಗೆ ಸಹಾಯಕರಾಗಿ ಕೈಹಿಡಿದು ನಡೆಸುವಂತಿಲ್ಲ—ಎಂದು ನಂಬುವುದು ಕಷ್ಟವಾಗುತ್ತದೆ. ಅವರು ನಮ್ಮ ಕಣ್ಣ ಮುಂದೆ ಇಲ್ಲದಿರಬಹುದು. ಆದರೂ ಎಲ್ಲಿಯೋ ಇದ್ದಾರೆ ಎನ್ನಿಸುತ್ತದೆ.

ಸಿಂಹದಂತೆ ಬದುಕಿದ ಮನುಷ್ಯ ಕಣ್ಮುಚ್ಚಿದಾಗಲೂ, ಅವನ ಶಕ್ತಿ ದರ್ಪಗಳೆಲ್ಲ ಮಾಯವಾಗಿಯೇ ಹೋದುವು ಎಂದು ನಂಬುವುದು ಕಷ್ಟ. ಎಲ್ಲಿಯೋ ಇನ್ನೂ ಇದೆ ಅವನ ಚೇತನ ಎನ್ನಿಸುತ್ತದೆ.

ಇಂಥ ಭಾವನೆಗಳೇ ಪೂರ್ವಜರ ಪೂಜೆಯ ಮೂಲ.

ನಮ್ಮ ಹಿಂದಿನ ಹಿರಿಯರನ್ನು ಜ್ಞಾಪಿಸಿಕೊಂಡು ಅವರಿಗೆ ಗೌರವವನ್ನು ಸೂಚಿಸುವುದಕ್ಕೆ ಪೂರ್ವಜರ ಪೂಜೆ ಎನ್ನುತ್ತೇವೆ.

ನಮಗಿಂತ ಹಿಂದೆ ಇದ್ದು ಕಾಲವಾಗಿ ಹೋದ ಹಿರಿಯರು ನಮ್ಮ ಮನೆತನಕ್ಕೆ ಸಂಬಂಧಿಸಿದವರಾಗಿರಬಹುದು. ಇಲ್ಲವೆ ಒಂದು ಗುಂಪಿಗೆ, ಒಂದು ಧರ್ಮಕ್ಕೆ ಸೇರಿದವರಾಗಿರಬಹುದು. ಇಲ್ಲವೆ ಇಡೀ ದೇಶಕ್ಕೆ ಸೇರಿದವರೇ ಆಗಿರಬಹುದು. ಒಂದು ಕುಟುಂಬಕ್ಕೆ ಸೇರಿದವರನ್ನು ಗೌರವಿಸುವುದಕ್ಕೆ ಆ ಕುಟುಂಬದವರು ಮಾತ್ರ ನೆರೆಯುತ್ತಾರೆ. ಆದರೆ ಒಂದು ಗುಂಪಿಗೋ ಧರ್ಮಕ್ಕೋ ಸೇರಿದ ಹಿರಿಯರನ್ನು ಗೌರವಿಸಲು ಆ ಗುಂಪಿನ ಜನರೆಲ್ಲ ಒಂದಾಗುತ್ತಾರೆ. ದೇಶದ ಹಿರಿಯರನ್ನು ಇಡೀ ದೇಶ ಗೌರವಿಸುತ್ತದೆ. ಆದ್ದರಿಂದ ಪೂರ್ವಜರ ಪೂಜೆ ವೈಯಕ್ತಿಕವಾಗಿ ನಡೆಯಬಹುದು: ಸಾಮೂಹಿಕವಾಗಿ ನಡೆಯಬಹುದು.

ಪೂರ್ವಜರ ಪೂಜೆ ಅನೇಕ ದೇಶಗಳಲ್ಲಿ ವಾಡಿಕೆಯಲ್ಲಿದೆ. ಪ್ರಾಚೀನ ರೋಮ್, ಚೀನ, ಆಫ್ರಿಕ, ಜಪಾನ್, ಭಾರತ—ಇಲ್ಲೆಲ್ಲ ನಾವು ಇದನ್ನು ನೋಡಬಹುದು.

ಭಾರತದಲ್ಲಿ ಆಧ್ಯಾತ್ಮಿಕ ಚೇತನಗಳು ಕಣ್ಮರೆಯಾದ ದಿನವನ್ನು 'ಪುಣ್ಯತಿಥಿ' 'ಆರಾಧನೆ' ಎನ್ನುತ್ತಾರೆ. (ಕುಟುಂಬಗಳಲ್ಲಿ ನಡೆಯುವ ಪೂರ್ವಜರ ಪೂಜೆಯನ್ನು ಶ್ರಾದ್ಧ, ತಿಥಿ, ಪಕ್ಷ ಎನ್ನುತ್ತಾರೆ. ಶ್ರದ್ಧೆಯಿಂದ ಮಾಡುವ ಪೂಜೆ ಶ್ರಾದ್ಧ.)

ಸತ್ತವರಿಗೂ ನಮಗೂ ಸಂಬಂಧವೇ ಇಲ್ಲ ಎಂದು ಹೇಳುವಂತಿಲ್ಲ; ಸತ್ತವರ ಆತ್ಮಗಳಿಗೆ ತಮ್ಮ ಅನ್ನಪಾನೀಯಗಳನ್ನು ತಾವೇ ದೊರಕಿಸಿಕೊಳ್ಳುವುದು ಸಾಧ್ಯವಿಲ್ಲ; ಅದನ್ನು ಬದುಕಿರುವ ಅವರ ಬಂಧುಗಳು, ಆಪ್ತರು ಅವರಿಗೆ ಕೊಡಬೇಕು; ಕೊಡದೆಹೋದರೆ ಅವರು ಅತೃಪ್ತರಾಗಬಹುದು, ಕೋಪಗೊಳ್ಳಬಹುದು, ಹಿಂಸೆಪಡಬಹುದು; ಇದರಿಂದ ಬದುಕಿರುವವರಿಗೆ ಹಾನಿ ತಟ್ಟಬಹುದು—ಎನ್ನುವ ನಂಬಿಕೆ ಇದೆ.

ಸಾವಿನ ಬಗೆಗೆ, ಸತ್ತವರ ಬಗೆಗೆ, ಬದುಕಿನ ಅನಂತರದ ಜೀವನದ ಬಗೆಗೆ ಹೆಚ್ಚಿಗೆ ತಿಳಿಯದೆ ಭಯವೇ ಆವರಿಸಿದ್ದ ಕಾಲದಲ್ಲಿ, ಪೂರ್ವಜರ ಪೂಜೆಯಲ್ಲಿ ಗೌರವದ ಜೊತೆಗೆ ಭೀತಿಯೂ ಬಹಳವಾಗಿ ಸೇರಿತ್ತು. ಆದರೆ ನಾಗರಿಕತೆ ಬೆಳೆದಹಾಗೆ ಭೀತಿ ಕಡಮೆಯಾಗತೊಡಗಿದೆ. ಈಗಲೂ ಒಂದಲ್ಲ ಒಂದು ರೀತಿಯಲ್ಲಿ ಪೂರ್ವಜರ ಪೂಜೆಯನ್ನು ಮಾಡುವವರು, ಮುಖ್ಯವಾಗಿ ಪ್ರೀತಿ ಗೌರವಗಳಿಗಾಗಿ ಮಾಡುತ್ತಾರೆ.

ಭಾರತದಲ್ಲಿ ಮಹಾಪುರುಷರ 'ಆರಾಧನೆ' (ಪುಣ್ಯ ತಿಥಿ ದಿನಾಚರಣೆ) ಬಹಳ ಮಟ್ಟಿಗೆ ಧಾರ್ಮಿಕ ಶ್ರದ್ಧೆಯಿಂದ ನಡೆಯುತ್ತದೆ. ರಾಘವೇಂದ್ರ ಸ್ವಾಮಿಗಳು, ರಾಮಕೃಷ್ಣ ಪರಮಹಂಸರು, ರಮಣ ಮಹರ್ಷಿಯವರು, ಅರವಿಂದರು—ಮೊದಲಾದವರ ಆರಾಧನೆ ಸಾಮೂಹಿಕವಾಗಿ ನಡೆಯುತ್ತದೆ: ಪೂಜೆ ಪ್ರಾರ್ಥನೆಗಳಾಗುತ್ತವೆ.

1957ರಲ್ಲಿ ಘಾನದ ಸ್ವಾತಂತ್ರ್ಯೋತ್ಸವದಲ್ಲಿ ನಾಯಿನ ಪೂರ್ವಿಕರ ಪೂಜೆಯನ್ನು ಮಾಡಿದರು.

ಕುಟುಂಬಗಳಲ್ಲಿ ನಡೆಯುವ ಪೂರ್ವಜರ ಪೂಜೆಯಲ್ಲಿ ಹಿರಿಯರನ್ನು ಸ್ಮರಿಸಿಕೊಂಡು ಅನ್ನಪಾನೀಯಗಳನ್ನು ಕೊಡುವುದು ಮುಖ್ಯವಾದ ವಿಧಿ. ಇದು ಚೀನ, ಭಾರತ, ಜಪಾನ್, ಈ ರಾಷ್ಟ್ರಗಳಲ್ಲೆಲ್ಲ ಇದೆ. ಭಾರತದಲ್ಲಿ ಈ ವಿಧಿಯನ್ನು ಮಾಡಿಸಲು ಪುರೋಹಿತರು ಇರುತ್ತಾರೆ. ಚೀನ, ಜಪಾನ್ ಮುಂತಾದ ದೇಶಗಳಲ್ಲಿ ಪೂರ್ವಜರಿಗಾಗಿಯೇ ಕಾದಿರಿಸಿದ ಕೋಣೆಯಿರುತ್ತದೆ. ಅಲ್ಲಿ ಮನೆತನದ ಹಿರಿಯರೆಲ್ಲರ ಹೆಸರಿನಲ್ಲಿ ಒಂದೊಂದು ಕಂಬ ಅಥವಾ ಚೌಕಟ್ಟು ಇರುತ್ತದೆ. ಚೌಕಟ್ಟನ್ನು ಮೇಜಿನ ಮೇಲೆ ಇಟ್ಟಿರುತ್ತಾರೆ. ಮಧ್ಯದಲ್ಲಿ ಧೂಪಪಾತ್ರೆ. ಕೆಲವೆಡೆ ಪ್ರತಿದಿನವೂ ಮನೆಯ ಮಗ ಊಟಕ್ಕೆ ಮೊದಲು ಆ ಕೋಣೆಯ ಬಾಗಿಲನ್ನು ತೆರೆದು ಗಂಟೆ ಬಾರಿಸುತ್ತಾನೆ. ಅನಂತರ ಹಿರಿಯರೆಲ್ಲರ ಹೆಸರನ್ನು ಓದುತ್ತಾನೆ. ಮನೆಮಂದಿಯೆಲ್ಲ ಅಲ್ಲಿ ಸೇರುತ್ತಾರೆ. ಮಾಡಿದ ತಿಂಡಿ ತೀರ್ಥಗಳನ್ನೆಲ್ಲ ಮೇಜಿನ ಮೇಲಿಡುತ್ತಾರೆ. ಎಲ್ಲರೂ ತಲೆತಗ್ಗಿಸಿ ನಿಲ್ಲುತ್ತಾರೆ. ಸ್ವಲ್ಪ ಹೊತ್ತಾದ ಮೇಲೆ ಮತ್ತೆ ಗಂಟೆ ಬಾರಿಸಿ ಊಟದ ಪದಾರ್ಥಗಳನ್ನೆಲ್ಲ ಅಲ್ಲಿಂದ ತೆಗೆದುಕೊಂಡು ಹೊರಟುಬರುತ್ತಾರೆ. ಚೀನದಲ್ಲಿ ಪ್ರತಿಯೊಬ್ಬರಿಗೂ ಮೂರು ಆತ್ಮಗಳಿರುತ್ತವೆ ಎನ್ನುವ ನಂಬಿಕೆ ಇದ್ದಿತು. ಆದ್ದರಿಂದ ಮನೆಯಲ್ಲಿ, ಸಮಾಧಿಯಲ್ಲಿ ಮತ್ತು ದೇವಾಲಯದಲ್ಲಿ ಅವಕ್ಕೆ ಪ್ರತ್ಯೇಕವಾಗಿ ಪೂಜೆ ಸಲ್ಲಿಸುತ್ತಿದ್ದರು.

ಕೆಲವೆಡೆ ಈ ಊಟ ತಿಂಡಿಗಳ ಅರ್ಪಣೆ, ಪ್ರಾರ್ಥನೆ ವರ್ಷದ ಕೆಲವು ಗೊತ್ತಾದ ಕಾಲಗಳಲ್ಲಿ ಮಾತ್ರ ನಡೆಯುತ್ತದೆ. ಆಗ ಸತ್ತವರ ಆತ್ಮಗಳು ಭೂಮಿಗೆ ವಾಪಸು ಬರುತ್ತವೆಂಬ ನಂಬಿಕೆಯಿಂದ ಕುಟುಂಬಗಳವರು ತಮ್ಮ ಹಿರಿಯರನ್ನು ಸಂಭ್ರಮದಿಂದ ಸ್ವಾಗತಿಸುತ್ತಾರೆ. ಊಟ ತಿಂಡಿಗಳಾದ ಮೇಲೆ ಪ್ರಾರ್ಥನೆ ಸಲ್ಲಿಸಿ ಬಾಗಿಲಿನಲ್ಲಿ ಬಾಣ ಬಿರುಸು ಪಟಾಕಿ ಹಾರಿಸಿ ಬೀಳ್ಕೊಡುತ್ತಾರೆ.

ರೋಮ್‌ನಲ್ಲಿ ಸತ್ತ ಒಬ್ಬ ವ್ಯಕ್ತಿಯನ್ನಾಗಲಿ, ಇಲ್ಲವೆ ಕೆಲವು ವ್ಯಕ್ತಿಗಳನ್ನಾಗಲಿ ಸ್ಮರಿಸಿಕೊಳ್ಳುವುದಕ್ಕಿಂತ ಹೆಚ್ಚಾಗಿ, ಒಂದು ಕುಟುಂಬದ ಎಲ್ಲ ವ್ಯಕ್ತಿಗಳ 'ಬಾಳಶಕ್ತಿ' ಯನ್ನು ಪೂಜಿಸುತ್ತಾರೆ. ಮನೆತನದ ಮುಂದುವರಿಕೆಗೆ, ಏಳಿಗೆಗೆ, ಕೆಡುಕಿಗೆ—ಎಲ್ಲದಕ್ಕೂ ಈ ಬಾಳಶಕ್ತಿಯೇ ಕಾರಣ ಎಂದು ಅವರ ನಂಬಿಕೆ.

ಗ್ರೀಕರು ದೇವತೆಗಳಿಗೆ ಸಲ್ಲಿಸುತ್ತಿದ್ದ ಗೌರವವನ್ನೇ ಕೆಲವೊಂದು ಹಿರಿಯ ವ್ಯಕ್ತಿಗಳಿಗೆ ಸಲ್ಲಿಸುತ್ತಿದ್ದರು.

ಸ್ಕ್ಯಾಂಡಿನೇವಿಯ, ಐಸ್‌ಲೆಂಡ್, ಪ್ರಾಚೀನ ರಷ್ಯ–ಇಲ್ಲೆಲ್ಲ ಪೂರ್ವಜರ ಪೂಜೆ ಪ್ರಾಮುಖ್ಯ ಪಡೆದಿತ್ತು.

ಆಧುನಿಕ ಭಾರತೀಯ ಜೀವನದಲ್ಲಿ ಪೂರ್ವಜರ ಪೂಜೆ, ಒಂದು ಪ್ರಮುಖ ಧಾರ್ಮಿಕ ವಿಧಿಯಾಗಿ ಮಹತ್ವ ಕಳೆದುಕೊಳ್ಳುತ್ತಿದೆ. ಇದಕ್ಕೆ ವಿಜ್ಞಾನದ ಬೆಳವಣಿಗೆ ಹಾಗೂ ಸಾಮಾಜಿಕ ಬದಲಾವಣೆಗಳು ಕಾರಣ.

## ಪೂರ್ವಮಾನವ

ಜೀವವಿಕಾಸದಲ್ಲಿ ಮಾನವನ ಹುಟ್ಟು ಅತಿ ಮುಖ್ಯ ಸಾಧನೆ.

ಜೀವವು ಸರಳರೂಪಗಳಿಂದ ಕ್ರಮೇಣ ಜಟಿಲರೂಪಗಳನ್ನು ತಾಳುತ್ತ ಸರಳ ಕಾರ್ಯ ನಿರ್ವಹಣೆಗಾಗಿ ಅಳವಾಗಿ, ಅನಂತರ ಜಟಿಲ ಕಾರ್ಯ ನಿರ್ವಹಣೆಗಾಗಿ ಅಳವಡುತ್ತ ಬಂದಿದೆ. ಸನ್ನಿವೇಶಕ್ಕೆ ತನ್ನ ರೂಪವನ್ನು ಹೊಂದಿಸಿಕೊಳ್ಳಲು ಜೀವ ಸರ್ವಪ್ರಯತ್ನ ಮಾಡುತ್ತದೆ. ಈ ಪ್ರಯತ್ನದಲ್ಲಿ ಸನ್ನಿವೇಶಕ್ಕೆ ಅತ್ಯಂತ ಅನುಗುಣವಾದ ರೂಪಗಳು ಉಳಿಯುತ್ತವೆ: ಇತರ ರೂಪಗಳು ನಾಶವಾಗುತ್ತವೆ. ಇವು ವಿಕಾಸದ ಮುಖ್ಯ ತತ್ತ್ವಗಳು.

ನಿಯಾಂಡರ್‌ತಲ್ ಮಾನವ : ಸುಮಾರು 1,50,000 ವರ್ಷಗಳ ಹಿಂದಿನಿಂದ 35,000 ವರ್ಷಗಳ ಹಿಂದಿನವರೆಗೆ ಯೂರೋಪಿನ ಬಹುಭಾಗದಲ್ಲಿ ನೆಲೆಸಿ ಶಿಲಾಸಂಸ್ಕೃತಿಯನ್ನು ಉಚ್ಛ್ರಾಯಸ್ಥಿತಿಗೆ ತಂದವನು ನಿಯಾಂಡರ್‌ತಲ್ ಮಾನವ. ಪಶ್ಚಿಮ ಜರ್ಮನಿಯಲ್ಲಿರುವ ನಿಯಾಂಡರ್ ಕಣಿವೆಯಲ್ಲಿ ಮೊದಲು ಇವನ ಅವಶೇಷಗಳು ದೊರೆತುದರಿಂದ ನಿಯಾಂಡರ್‌ತಲ್ ಮಾನವ ಎಂಬ ಹೆಸರು.

ನಿಯಾಂಡರ್‌ತಲ್ ಮಾನವನ ತಲೆ ಹಿಂಭಾಗದಲ್ಲಿ ಮುಚ್ಚಾಗಿರುತ್ತಿತ್ತು. ಇಳಿಜಾರು ಹಣೆ. ತಲೆಬುರುಡೆಯ ಒಳ ಅಳತೆ 1,530 ಘ. ಸೆ. ಮಿ. ಗಳು. ಮಾನವನಿಗಿಂತ 200 ಘ. ಸೆ. ಮಿ. ಗಳು ಹೆಚ್ಚು. ಇವನಿಗೆ ಕತ್ತು ಬಹಳ ಬಲವಾಗಿದ್ದು. ಸ್ವಲ್ಪ ಮುಂದಕ್ಕೆ ತೂಗಿ ಬಿದ್ದಿರುತ್ತಿದ್ದ ತಲೆಯನ್ನು ಹಿಡಿದಿತ್ತು ಎಂದೂ ಕಾಲುಗಳು ಮಂಡಿಯ ಬಳಿ ಡೊಂಕಾಗಿದ್ದು ನಡೆಯುವಾಗ ಒಂದಕ್ಕೊಂದು ತಗಲುತ್ತಿದ್ದುವೆಂದೂ ಗೂನಾಗಿದ್ದನೆಂದೂ ಅಭಿಪ್ರಾಯವಿತ್ತು. ಆದರೆ ಇತ್ತೀಚಿನ ಸಂಶೋಧನೆಗಳು ಇವನ್ನೆಲ್ಲ ಅಲ್ಲಗಳೆದು ತಲೆಯ ರಚನೆಯಲ್ಲಿನ ವ್ಯತ್ಯಾಸ ಹೊರತು ದೇಹ, ಬುದ್ಧಿಗಳಲ್ಲಿ ಈತ ಮಾನವನಂತೆಯೇ ಇದ್ದ ಎಂದು ನಿರ್ಧರಿಸಿವೆ. ಕೆಲವು ಮಾನವಶಾಸ್ತ್ರಜ್ಞರು ಇವನನ್ನು ಮಾನವನೆಂದೇ ಪರಿಗಣಿಸುತ್ತಾರೆ.

ನಿಯಾಂಡರ್‌ತಲ್ ಮಾನವನ ಪ್ರಸಿದ್ಧಿಗೆ ಕಾರಣ ಅವನು ರಚಿಸಿ ಬಿಟ್ಟು ಹೋಗಿರುವ ಸುಂದರವಾದ ಶಿಲಾಯುಧಗಳು. ಗುಂಡುಕಲ್ಲು, ಚಾಕು, ಕತ್ತಿ, ರಂಪಿ ಮೊದಲಾದ ಜಜ್ಜುವ, ಕೊಯ್ಯುವ, ಹೆರೆಯುವ ಹಲವು ಆಯುಧಗಳು ದೊರೆತಿವೆ. ಬಂಡೆಗಳನ್ನು ಸೀಳಿ ತಮಗೆ ಬೇಕಾದಂಥ ಚಕ್ಕೆಗಳನ್ನು ತೆಗೆದು ಮಾಡಿರುವ ಆಯುಧಗಳಿವು. ಅವುಗಳನ್ನು ಬೇರೊಂದು ಕಲ್ಲಿನ ಸಣ್ಣ ಏಟುಗಳಿಂದ ಒಪ್ಪಗೊಳಿಸಲಾಗಿದೆ.

ಸತ್ತವರನ್ನು ಹೂಳುವ ಪದ್ಧತಿ ಮೊದಲಿಗೆ ಕಂಡುಬಂದಿರುವುದು ಇವನಲ್ಲಿಯೇ. ಆಹಾರವನ್ನೂ ಆಯುಧಗಳನ್ನೂ ಹೆಣದೊಂದಿಗೆ ಹೂಳುತ್ತಿದ್ದ. ಇವನ ನೆಲೆಗಳಲ್ಲಿ ಇದ್ದಲು, ಬೂದಿ ದೊರೆತಿರುವುದರಿಂದ ಬೆಂಕಿಯ ಉಪಯೋಗವೂ ಈತನಿಗೆ ತಿಳಿದಿದ್ದಿರಬಹುದು. ಸಿಂಧೂರದಂಥ ಲೋಹ ಮೂಲದ ಬಣ್ಣಗಳ ಬಳಕೆಯೂ ಇವನಿಗೆ ಗೊತ್ತಿತ್ತು.

ನಿಯಾಂಡರ್‌ತಲ್ ಮಾನವ ನಿರ್ನಾಮವಾಗಲು ಮಾನವ ಕಾರಣ ಎಂದು ಒಂದು ಅಭಿಪ್ರಾಯವಿದೆ. ಮತ್ತೆ ಕೆಲವರು ಮಾನವನೊಂದಿಗೆ ನಿಯಾಂಡರ್‌ತಲ್ ಮಾನವ ಬೆರೆತುಹೋಗಿದ್ದಾನೆಂದೂ ಅದಕ್ಕೆ ಸಾಕ್ಷ್ಯವಾಗಿ ಯೂರೋಪಿನ ಹಲವರಲ್ಲಿ ನಿಯಾಂಡರ್‌ತಲ್ ಲಕ್ಷಣಗಳನ್ನು ಕಾಣಬಹುದೆಂದೂ ಅಭಿಪ್ರಾಯಪಡುತ್ತಾರೆ. ಒಂದೊಂದು ನೆಲೆಯಲ್ಲಿ ಹಲವಾರು ಮಂದಿಯ ಅವಶೇಷಗಳು ದೊರೆತಿರುವುದರಿಂದ ಸಮಾಜಜೀವನವೂ ಆಗ ಬಹಳಷ್ಟು ಮುಂದುವರಿದಿದ್ದಿರಬೇಕು.

ಪೂರ್ವಮಾನವರನ್ನು ಕುರಿತ ಸಂಶೋಧನೆಗಳು ಪ್ರಪಂಚದ ಹಲವೆಡೆಗಳಲ್ಲಿ ಮುಂದುವರಿಯುತ್ತಿವೆ: ಹೊಸ ಸಾಕ್ಷ್ಯಾಧಾರಗಳು ದೊರೆತಂತೆ ಪೂರ್ವಮಾನವನನ್ನು ಕುರಿತ ನಮ್ಮ ಜ್ಞಾನವೂ ಬೆಳೆಯುತ್ತಿದೆ; ಅಭಿಪ್ರಾಯ, ನಿರ್ಧಾರಗಳೂ ಬದಲಾಗುತ್ತಿವೆ.

## ಪೆರಿಕ್ಲೀಸ್

ಸುಂದರ ದೇವಾಲಯಗಳು ಮತ್ತು ಕಟ್ಟಡಗಳಿಂದ ತನ್ನ ರಾಜ್ಯದ ರಾಜಧಾನಿಯನ್ನು ನಗರವನ್ನಾಗಿ ಮಾಡಬೇಕೆಂದು ಅವನ ಬಯಕೆ. ಆಗಲೇ ಕೂಡಿಸಿಟ್ಟ ಹಣದಲ್ಲಿ ರಕ್ಷಣೆಗೆ ಬೇಕಾದಷ್ಟನ್ನು ತೆಗೆದಿಟ್ಟು, ಉಳಿದುದನ್ನು ಇದಕ್ಕೆ ಖರ್ಚುಮಾಡಬೇಕೆಂದು ಸಲಹೆ ಮಾಡಿದ. ಇದಕ್ಕೆ ರಾಜ್ಯದ ಆಡಳಿತ ಸಭೆಯ ಒಪ್ಪಿಗೆ ಬೇಕು. 'ಕಟ್ಟಡಗಳಿಗೆ ಇಷ್ಟು ಖರ್ಚೆ?' ಎಂದು ಸಭೆಯ ಸದಸ್ಯರ ಆಕ್ಷೇಪಣೆ. ಅವನಿಗೆ ಆಗದಿದ್ದವರು ಅವನನ್ನು ಸೋಲಿಸಬೇಕೆಂದು ಇತರರನ್ನು ಎತ್ತಿಕಟ್ಟಿದರು.

ವಿಷಯವನ್ನು ಮತಕ್ಕೆ ಹಾಕಿದರೆ ನಾಯಕನಿಗೆ ಸೋಲು ಎಂಬುದು ಸ್ಪಷ್ಟವಾಯಿತು.

ನಾಯಕನೆಂದ : "ಆಗಲಿ, ಈ ಕಟ್ಟಡಗಳ ಖರ್ಚು ನಿಮಗೆ ಬೇಡ. ನಾನೇ ವಹಿಸಿಕೊಳ್ಳುತ್ತೇನೆ. ಅವುಗಳ ಮೇಲೆ ನನ್ನ ಹೆಸರನ್ನೇ ಕೆತ್ತಲಿ."

ಕೂಡಲೇ ಸದಸ್ಯರೆಂದರು : "ಬೇಡ ಬೇಡ, ಎಷ್ಟು ಬೇಕಾದರೂ ಖರ್ಚುಮಾಡಿ. ಎಲ್ಲ ಕಟ್ಟಡಗಳೂ ಮುಗಿಯಲಿ. ಹಣದ ಯೋಚನೆ ಬೇಡ."

ಇದು ನಡೆದದ್ದು ಗ್ರೀಸಿನ ಅಥೆನ್ಸ್ ರಾಜ್ಯದಲ್ಲಿ ಕ್ರಿ. ಪೂ. ಐದನೆಯ ಶತಮಾನದಲ್ಲಿ. ಆ ನಾಯಕ ಪ್ರಪಂಚದ ಚರಿತ್ರೆಯ ಮಹಾನಾಯಕರಲ್ಲಿ ಒಬ್ಬ—ಪೆರಿಕ್ಲೀಸ್.



ಪ್ರಪಂಚದ ಮಹಾನಾಯಕರಲ್ಲೊಬ್ಬ ಪೆರಿಕ್ಲೀಸ್

ಪೆರಿಕ್ಲೀಸ್ ಕ್ರಿ. ಪೂ. 495ರ ಸುಮಾರಿಗೆ ಅಥೆನ್ಸಿನಲ್ಲಿ ಹುಟ್ಟಿದ. ಅವನ ತಲೆ ಉದ್ದ. ಅದನ್ನು ಕುರಿತು ಆತನ ಇದಿರಾಳಿಗಳು ಅಪಹಾಸ್ಯ ಮಾಡುತ್ತಿದ್ದುದೂ ಉಂಟು. ಪೆರಿಕ್ಲೀಸ್ ಅನೇಕ ವಿದ್ಯೆಗಳಲ್ಲಿ ಪಾಂಡಿತ್ಯ ಪಡೆದ. ಸಂಗೀತ ಸಾಹಿತ್ಯಗಳನ್ನು ಅಭ್ಯಾಸಮಾಡುವುದರ ಜೊತೆಗೆ ಅರ್ಥಶಾಸ್ತ್ರ, ಯುದ್ಧವಿದ್ಯೆಗಳನ್ನೂ ಕಲಿತ. ಗ್ರೀಸಿನಲ್ಲಿ ಜನ್ಮತಾಳಿದ ಸಮಗ್ರ ಮಾನವ ಇವನು. ತನ್ನ ಸುತ್ತಲಿನ ಸುಸಂಸ್ಕೃತ ಜೀವನದ ಅನೇಕ ಅಂಶಗಳನ್ನು ತನ್ನ ವ್ಯಕ್ತಿತ್ವದಲ್ಲಿ ಅಳವಡಿಸಿಕೊಂಡು ಬೆಳೆದ.

ಚಿಕ್ಕಂದಿನಲ್ಲೇ ರಾಜಕೀಯವನ್ನು ಪ್ರವೇಶಿಸಿದ ಪೆರಿಕ್ಲೀಸ್, ರಾಜಕೀಯದಲ್ಲಿನ ಪ್ರತಿಯೊಂದು ಅಂಶವನ್ನೂ ಎಚ್ಚರಿಕೆಯಿಂದ ಅಭ್ಯಾಸಮಾಡುತ್ತಿದ್ದ. ಯೋಚನೆಮಾಡದೆ ಯಾವ ಕೆಲಸಕ್ಕೂ ಧುಮುಕುತ್ತಿರಲಿಲ್ಲ. ವಿದ್ಯಾಭ್ಯಾಸದ ಯಾವ ಅಂಗವನ್ನೂ ಉಪೇಕ್ಷಿಸಲಿಲ್ಲ. ಮಾತು ಎಷ್ಟು ಬೇಕೋ ಅಷ್ಟು. ಆದರೆ ಆಡಿದ ಮಾತಿನಲ್ಲಿ ಮಿಂಚಿನ ಹೊಳಪು. ಸಿಂಹದ ಕೆಚ್ಚು. ಪೆರಿಕ್ಲೀಸನಂಥ ವಾಗ್ಮಿಯನ್ನು ಅಥೆನ್ಸ್ ನೋಡಿಯೇ ಇರಲಿಲ್ಲ.

ಪೆರಿಕ್ಲೀಸ್ ಜನರ ಕಣ್ಮಣಿಯಾದ. ಅವನಲ್ಲಿ ದುರಾಸೆಯಾಗಲಿ, ಸ್ವಾರ್ಥವಾಗಲಿ ಇರಲಿಲ್ಲ. ಕ್ರಿ. ಪೂ. 460ರಿಂದ 428ರ ವರೆಗೆ ಸುಮಾರು ಮೂವತ್ತೆರಡು ವರ್ಷಗಳ ಕಾಲ ಅಥೆನ್ಸಿನ ಜನ ಪೆರಿಕ್ಲೀಸನನ್ನು ಮತ್ತೆ ಮತ್ತೆ ತಮ್ಮ ಹತ್ತು ಮಂದಿ ನಾಯಕರಲ್ಲಿ ಒಬ್ಬನನ್ನಾಗಿ ಚುನಾಯಿಸಿದರು. ಈ ಪುನರಾಯ್ಕೆಗಳಿಂದ ಪೆರಿಕ್ಲೀಸ್ ಬಹಳ ಪ್ರಭಾವಶಾಲಿ ನಾಯಕನಾದ. ಆದರೆ ಅವನು ತನ್ನ ಸ್ಥಾನವನ್ನು ದುರುಪಯೋಗಪಡಿಸಿಕೊಳ್ಳಲಿಲ್ಲ. ಪೆರಿಕ್ಲೀಸನ ಕಾಲದಲ್ಲಿ ಅಥೆನ್ಸ್ ಪ್ರಜಾಪ್ರಭುತ್ವದಲ್ಲಿರುವ ಎಲ್ಲ ಸೌಲಭ್ಯಗಳನ್ನೂ ಹೊಂದಿತಲ್ಲದೆ ಶ್ರೀಮಂತ ಪ್ರಭುತ್ವ ಹಾಗೂ ನಿರಂಕುಶ ಪ್ರಭುತ್ವದಲ್ಲಿ ಸಿಗುವ ಸೌಲಭ್ಯಗಳನ್ನೂ ಪಡೆಯಿತು. ಸುಖೀ ರಾಜ್ಯ ಎನಿಸಿಕೊಂಡಿತು. ಪ್ರಜಾಪ್ರಭುತ್ವದಿಂದ ಜೀವನಕ್ಕೆ ವೈವಿಧ್ಯ, ಸಾಮರ್ಥ್ಯ ಬಂದಿದ್ದುವು. ಶ್ರೀಮಂತರ ಆಳ್ವಿಕೆ ಜೀವನಕ್ಕೆ ಒಂದು ವ್ಯವಸ್ಥೆಯನ್ನೂ ಸಂಸ್ಕಾರವನ್ನೂ ಕೊಟ್ಟಿದ್ದಿತು. ಇವನ ಕಾಲ ಅಥೆನ್ಸಿನ ಸ್ವರ್ಣಯುಗ.

ರಾಜ್ಯದಲ್ಲಿ ರಾಜಕೀಯ ಭದ್ರತೆಯನ್ನು ಸ್ಥಾಪಿಸಿ ಪೆರಿಕ್ಲೀಸ್ ರಾಜ್ಯದ ಆರ್ಥಿಕಸ್ಥಿತಿಯ ಸುಧಾರಣೆಗೆ ಗಮನಕೊಟ್ಟ. ಕೆಲಸವಿಲ್ಲದವರಿಗೆ ಸರಕಾರ ಕೆಲಸ ಕೊಡುವಂತೆ ಮಾಡಿದ. ವಿದೇಶಗಳಲ್ಲಿ ಅಥೆನ್ಸಿನ ಬಡ ಜನರ ವಸಾಹತುಗಳನ್ನು ಸ್ಥಾಪಿಸಿದ. ನೌಕಾಪಡೆಗೆ ಹೊಸ ಹಡಗುಗಳನ್ನು ಸೇರಿಸಿದ. ಆಕ್ರಮಣದಿಂದ ಅಥೆನ್ಸನ್ನು ರಕ್ಷಿಸಲು 13 ಕಿ. ಮೀ. ಉದ್ದದ ಗೋಡೆ ಕಟ್ಟಲು ನಿರ್ಧರಿಸಿದ. ಇದರಿಂದ ಅಥೆನ್ಸ್ ನಗರಕ್ಕೆ ಭದ್ರತೆ ದೊರೆಯಿತು.

ಅಥೆನ್ಸ್ ಕಲೆಯ ನೆಲೆಯಾಗುವಂತೆ ಪೆರಿಕ್ಲೀಸ್ ಪ್ರಯತ್ನಿಸಿದ. ಪರ್ಷಿಯನರು ಧ್ವಂಸಮಾಡಿದ ದೇವಾಲಯಗಳನ್ನು ಪುನರ್ನಿರ್ಮಾಣ ಮಾಡುವ ಪ್ರತಿಜ್ಞೆ ತೊಟ್ಟ. ಈ ದೇವಾಲಯಗಳ ನಿರ್ಮಾಣಕ್ಕಾಗಿ ಸಾವಿರಾರು ಶಿಲ್ಪಿಗಳು ತಮ್ಮ ಕಲಾಪ್ರತಿಭೆಯನ್ನು ತೋರಿಸಿ ದುಡಿದರು.

ಸಾಹಿತಿಗಳಿಗೂ ತತ್ತ್ವಜ್ಞಾನಿಗಳಿಗೂ ಪೆರಿಕ್ಲೀಸ್ ಆಶ್ರಯನೀಡಿದ. ಇವನ ಆಶ್ರಯದಲ್ಲಿ ಗ್ರೀಸಿನ ವಿಖ್ಯಾತ ನಾಟಕಕಾರರಾದ ಏಸ್ಕಿಲಸ್, ಸಫೋಕ್ಲೀಸ್ ಮತ್ತು ಯೂರಿಪಿಡೀಸ್ ಸೊಗಸಾದ ನಾಟಕಗಳನ್ನು ಬರೆದರು. ಸಾಕ್ರಟೀಸ್ ಇವನ ಕಾಲದವನು. ಸುಪ್ರಸಿದ್ಧ ಶಿಲ್ಪಿ ಫಿಡಿಯಸ್ ಇವನಿಂದ ಪ್ರೋತ್ಸಾಹ ಪಡೆದವನು. ಇವನ ಕೃತಿಗಳು ಬ್ರಿಟಿಷ್ ವಸ್ತುಸಂಗ್ರಹಾಲಯದಲ್ಲಿವೆ. ಅವನ್ನು ನೋಡಲು ಇಂದಿಗೂ ಪ್ರಪಂಚದ ಮೂಲೆಮೂಲೆಗಳಿಂದ ಜನ ಅಲ್ಲಿಗೆ ಹೋಗುತ್ತಾರೆ. ಪ್ರಸಿದ್ಧ ತತ್ತ್ವಜ್ಞಾನಿ ಅನಕ್ಸಗೋರಸ್ ಇವನ ಸ್ನೇಹಿತ. ತನ್ನ ರಾಜ್ಯ ಕಾರ್ಯಗಳಲ್ಲಿ ಸ್ವಲ್ಪ ಕಾಲ ಪೆರಿಕ್ಲೀಸ್ ಈತನನ್ನು ಮರೆತ. ಅವನ ಮುಪ್ಪಿನಲ್ಲಿ ಅನಕ್ಸಗೋರಸ್ ಕಷ್ಟದಲ್ಲಿರುವನೆಂದು ಕೇಳಿ ಅವನಿಗೆ ಸಹಾಯಮಾಡಲು ಧಾವಿಸಿದ. ಆ ಮುಪ್ಪಿನ ತತ್ತ್ವಜ್ಞಾನಿ, "ದೀಪದ ಅಗತ್ಯವಿರುವವರು ಅದಕ್ಕೆ ಎಣ್ಣೆ ಹಾಕಬೇಕು" ಎಂದನಂತೆ. ರಾಜ್ಯಕ್ಕೆ ಜ್ಞಾನಿಗಳು ಬೇಕಾದರೆ ಅವರನ್ನು ರಾಜ್ಯದ ನಾಯಕರು ಸರಿಯಾಗಿ ನೋಡಿಕೊಳ್ಳಬೇಕು. ಪೆರಿಕ್ಲೀಸ್ ಈ ಕರ್ತವ್ಯವನ್ನು ಮಾಡಲಿಲ್ಲ ಎಂಬ ಅರ್ಥದ ಮಾತನ್ನು ಅಥೆನ್ಸ್ ಮಹಾನಾಯಕ ತಲೆಬಾಗಿ ಕೇಳಿಕೊಂಡು ಬಂದನಂತೆ. ಗ್ರೀಸಿನ ಉಳಿದ ನಗರಗಳು ಸಾಹಿತ್ಯ ಸಂಗೀತಗಳ ಅವನತಿಯನ್ನು ಕಾಣುತ್ತಿದ್ದಾಗ, ಅಥೆನ್ಸ್ ಪ್ರಜಾಪ್ರಭುತ್ವದ ಸ್ವಾತಂತ್ರ್ಯ, ಸಂಪದಭಿವೃದ್ಧಿ, ನಿಪುಣ ಸುಸಂಸ್ಕೃತ ನಾಯಕತ್ವ ಇವುಗಳಿಂದ ಶೋಭಿಸುತ್ತಿತ್ತು. ಪ್ರತಿಭಾವಂತ ನಾಯಕತ್ವದಲ್ಲಿ ಕಲೆ, ವಿಜ್ಞಾನ, ತತ್ತ್ವಶಾಸ್ತ್ರ, ಸಾಹಿತ್ಯ, ಧರ್ಮ, ನೀತಿ—ಇವುಗಳ ಮಧುರ ಸಮನ್ವಯವಾಗಿತ್ತು.

ಆದರೆ ಇಂಥ ಸುಖೀ ರಾಜ್ಯಕ್ಕೂ ಕಷ್ಟ ಬಂದಿತು. ಪೆರಿಕ್ಲೀಸನ ಜೀವನದ ಕೊನೆಯ ಭಾಗ ಬಿರುಗಾಳಿಗೆ ಸಿಲುಕಿ ನುಚ್ಚುನೂರಾಯಿತು. ಅವನು ನೀತಿವಂತಳಲ್ಲದ ಹೆಂಗಸೊಬ್ಬಳ ಮೋಹದ ಬಲೆಗೆ ಬಿದ್ದಿರುವನೆಂದು ಅವನ ಮೇಲೆ ಅಪವಾದ ಹೊರಿಸಿದರು. ಅಥೆನ್ಸಿನ ಅಭಿವೃದ್ಧಿಯನ್ನು ಕಂಡು ಅಸೂಯೆಪಟ್ಟ ನೆರೆರಾಜ್ಯಗಳು ಅಥೆನ್ಸಿನ ಮೇಲೆ ದಾಳಿಮಾಡಿದುವು. ಇದರ ಜೊತೆಗೆ ರಾಜ್ಯದಲ್ಲಿ ಪ್ಲೇಗ್ ಹಬ್ಬಿತು. ನೂರಾರು ಮಂದಿ ಸತ್ತರು. (ಪೆರಿಕ್ಲೀಸನ ಅತ್ಯಂತ ಪ್ರೀತಿಪಾತ್ರನಾದ ಕಡೆಯ ಮಗ ಇದರಿಂದ ಮೃತನಾದ.) ತಮ್ಮ ಎಲ್ಲ ಸಂಕಟಗಳಿಗೂ ಜನ ಪೆರಿಕ್ಲೀಸನನ್ನು ಹೊಣೆಯಾಗಿ ಮಾಡಿದರು.

ಪೆರಿಕ್ಲೀಸನ ಜೀವನದ ಬೆಳಕು ಆರಿತು. ಸುಖೀ ರಾಜ್ಯದ ಸ್ವರ್ಣಯುಗ ಕೊನೆಗಂಡಿತು.

ತನ್ನ ದೇಶದ ಪ್ರಜಾಪ್ರಭುತ್ವವನ್ನು ವರ್ಣಿಸುತ್ತ ಹೀಗೆಂದ ಪೆರಿಕ್ಲೀಸ್: "ವೈಯಕ್ತಿಕ ಕಲಹಗಳನ್ನು ತೀರ್ಮಾನಿಸುವಾಗ, ಎಲ್ಲರೂ ಶಾಸನದ ಮುಂದೆ ಸಮಾನರು; ಸಾರ್ವಜನಿಕ ಹೊಣೆ ಇರುವ ಸ್ಥಾನಗಳಿಗೆ ಜನರನ್ನು ಆರಿಸುವಾಗ, ಆ ಮನುಷ್ಯ ಯಾವ ವರ್ಗಕ್ಕೆ ಗುಂಪಿಗೆ ಸೇರಿದವನು ಎನ್ನುವುದು ಮುಖ್ಯವಲ್ಲ. ಅವನ ಸಾಮರ್ಥ್ಯ ಮುಖ್ಯ."

ಇಂಥ ಆದರ್ಶ ಪ್ರಜಾಪ್ರಭುತ್ವದ ಪ್ರಜೆ ಹೇಗಿದ್ದನೆಂಬುದನ್ನು ಪೆರಿಕ್ಲೀಸ್ ಹೀಗೆ ವರ್ಣಿಸಿದ್ದಾನೆ ;

"ಆತ ಬಾಳಿನಲ್ಲಿ ಯಾವುದು ಸವಿ, ಯಾವುದು ಭಯಂಕರ ಎನ್ನುವುದನ್ನು ಚೆನ್ನಾಗಿ ತಿಳಿದುಕೊಂಡು, ಬಂದದ್ದನ್ನು ಎದುರಿಸಲು ಅಂಜದೆ ಮುನ್ನಡೆಯುವ ಧೈರ್ಯಶಾಲಿ".

## ಪ್ಲೇಟೋ

ನಾವು ಈಚೆಗೆ 'ಅಕಾಡಮಿ' ಪದವನ್ನು ಅನೇಕ ಬಾರಿ ಉಪಯೋಗಿಸುತ್ತೇವೆ. ಸಾಹಿತ್ಯ ಅಕಾಡಮಿ, ಸಂಗೀತ ಅಕಾಡಮಿ, ಲಲಿತಕಲಾ ಅಕಾಡಮಿ —ಈ ಪದಗಳು ನಮಗೆ ಪರಿಚಿತವಾಗಿವೆ. 'ಅಕಾಡಮಿ' ಪದವನ್ನು ಮೊದಲು ಬಳಸಿದವನು ಗ್ರೀಕ್ ತತ್ತ್ವಶಾಸ್ತ್ರಜ್ಞ ಪ್ಲೇಟೋ.

ಅತ್ಯಂತ ಪ್ರಸಿದ್ಧವಾದ ಪಾಶ್ಚಾತ್ಯ ತತ್ತ್ವಜ್ಞಾನಿಗಳಲ್ಲಿ ಪ್ಲೇಟೋ ಒಬ್ಬ. ಇವನು ಕ್ರಿ. ಪೂ. 427ರ ಸುಮಾರಿಗೆ ಅಥೆನ್ಸ್ [illegible] ಹುಟ್ಟಿದ-



ಅಕಾಡಮಿ ಸ್ಥಾಪಕ ಪ್ಲೇಟೋ

ಉತ್ತಮ ವಂಶಸ್ಥನಾದ ಪ್ಲೇಟೋ ತನ್ನ ಹತ್ತೊಂಬತ್ತನೆಯ ವರ್ಷದಲ್ಲಿ ಗ್ರೀಸಿನ ಅದ್ವಿತೀಯ ತತ್ತ್ವಜ್ಞಾನಿ ಸಾಕ್ರಟೀಸನ ಪರಿಚಯ ಮಾಡಿಕೊಂಡ. ಪ್ಲೇಟೋ ಮೇಲೆ ಸಾಕ್ರಟೀಸ್ ಬಹಳ ಮಟ್ಟಿನ ಪ್ರಭಾವವನ್ನು ಬೀರಿದ. ಸಾಕ್ರಟೀಸ್ ವ್ಯಕ್ತಪಡಿಸುತ್ತಿದ್ದ ಅಭಿಪ್ರಾಯಗಳ ಹೊಸತನ, ಅವುಗಳನ್ನು ಅತ ಹೇಳುತ್ತಿದ್ದ ಹೊಸ ವಿಧಾನ, ಸತ್ಯಕ್ಕಾಗಿ ಹೋರಾಡುವುದರಲ್ಲಿ ಅವನ ನಿರ್ಭಯತೆ ಇವು ಪ್ಲೇಟೋಗೆ ಬಹಳ ಮೆಚ್ಚುಗೆಯಾದುವು.

ಪ್ಲೇಟೋ ಯುವಕನಾಗಿದ್ದಾಗ ಅಥೆನ್ಸ್–ಸ್ಪಾರ್ಟಾಗಳ ನಡುವೆ ಅನೇಕ ವರ್ಷ ಯುದ್ಧ ನಡೆಯಿತು. ಎಲ್ಲ ದೃಢಕಾಯ ಯುವಕರಂತೆ ಇವನೂ ಐದು ವರ್ಷಗಳ ಕಾಲ ಸೈನ್ಯದಲ್ಲಿ ಸೇವೆ ಸಲ್ಲಿಸಿದ. ಆಗ ಅಥೆನ್ಸಿನ ರಾಜಕೀಯದಲ್ಲಿ ಹೆಚ್ಚಿನ ಆಸಕ್ತಿಯನ್ನು ತೋರಿಸುತ್ತಿದ್ದ ಈತ ಮುಂದೆ ಉತ್ತಮ ರಾಜಕಾರಣಿಯಾಗುತ್ತಾನೆಂದು ಜನ ನಂಬಿದ್ದರು. ಆದರೆ ಅಥೆನ್ಸಿನ ರಾಜಕಾರಣಿಗಳು ಸಾಕ್ರಟೀಸನ ಹಿರಿಮೆಯನ್ನು ಅರ್ಥಮಾಡಿಕೊಳ್ಳದೆ ಅವನಿಗೇ ವಿಷಕೊಟ್ಟು ಕೊಂದುದರಿಂದ ಪ್ಲೇಟೋಗೆ ಅಂದಿನ ರಾಜಕೀಯದಲ್ಲಿ ಜಿಗುಪ್ಸೆ ಹುಟ್ಟಿತು. ಅವನು ರಾಜಕೀಯರಂಗದಿಂದ ದೂರ ಸರಿದ. ಊರನ್ನೇ ಬಿಟ್ಟು ಹನ್ನೆರಡು ವರ್ಷಗಳ ಕಾಲ ಹೊರಗಿದ್ದುಬಿಟ್ಟ. ಈ ಕಾಲದಲ್ಲಿ ವ್ಯಕ್ತಿ ತನ್ನ ಸ್ವಂತ ಜೀವನದಲ್ಲಿ ಮತ್ತು ಸಾರ್ವಜನಿಕರಂಗದಲ್ಲಿ ಹೇಗೆ ನಡೆದುಕೊಳ್ಳಬೇಕು ಎನ್ನುವುದನ್ನು ಕುರಿತು ಹಾಗೂ ರಾಜಕೀಯ ತತ್ತ್ವಗಳ ಬಗೆಗೆ ದೀರ್ಘವಾಗಿ ಆಲೋಚಿಸಿದ.

ಪ್ಲೇಟೋ ಸಿಸಿಲಿ ಮತ್ತು ಇಟಲಿಗಳನ್ನು ಸಂದರ್ಶಿಸಿ ಮರಳಿದ ಮೇಲೆ. ಯುವಕರಿಗೆ ಸಾಮಾಜಿಕ. ರಾಜಕೀಯ. ವೈಜ್ಞಾನಿಕ ವಿಷಯಗಳಲ್ಲಿ ಕ್ರಮಬದ್ಧ ಶಿಕ್ಷಣ ನೀಡಿ ಅವರಿಗೆ ಅವರ ಜವಾಬ್ದಾರಿಯನ್ನು ಕಲಿಸಿಕೊಡುವುದಕ್ಕಾಗಿ ಒಂದು ಶಾಲೆಯನ್ನು ತೆರೆದ. ಅಕಾಡಮಸ್ ಎನ್ನುವ ವೀರನಿಗೆ ಪ್ರಿಯವಾಗಿದ್ದ ತೋಪಿನಲ್ಲಿ ಈ ಶಾಲೆಯನ್ನು ಆರಂಭಿಸಿದ್ದರಿಂದ ಅದಕ್ಕೆ 'ಅಕಾಡಮಿ' ಎಂದು ಹೆಸರಿಟ್ಟ. ಗ್ರೀಕ್ ಮೂಲದಿಂದ ಬಂದ 'ಅಕಾಡಮಿ' ಮತ್ತು 'ಅಕೆಡೆಮಿಕ್' ಎನ್ನುವ ಪದಗಳನ್ನು ಇಂಗ್ಲಿಷ್ ಭಾಷೆಯಲ್ಲಿ ವಿಶೇಷ ವಿದ್ವತ್ತು ಎನ್ನುವುದನ್ನು ಸೂಚಿಸಲು ಬಳಸುತ್ತಾರೆ.

ಪ್ಲೇಟೋನ 'ಅಕಾಡಮಿ'ಯನ್ನು ಜಗತ್ತಿನ ಮೊದಲ ವಿಶ್ವವಿದ್ಯಾನಿಲಯ ಎನ್ನಬಹುದು. ಆರಿಸಿದ ವಿದ್ಯಾರ್ಥಿಗಳಿಗೆ ಪ್ಲೇಟೋ ಹಾಗೂ ಅವನ ಸಂಗಡಿಗರು ಮತ್ತು ಸ್ನೇಹಿತರು. ಗಣಿತಶಾಸ್ತ್ರ. ನೀತಿಶಾಸ್ತ್ರ. ರಾಜ್ಯಶಾಸ್ತ್ರ. ತತ್ತ್ವಶಾಸ್ತ್ರಗಳನ್ನು ಕಲಿಸುತ್ತಿದ್ದರು. ಗಣಿತಶಾಸ್ತ್ರ ಮತ್ತು ತರ್ಕಶಾಸ್ತ್ರಗಳಿಗೆ ವಿಶೇಷ ಪ್ರಾಧಾನ್ಯ. ಪ್ಲೇಟೋನ 'ಅಕಾಡಮಿ' ಎಂಟು ಶತಮಾನಗಳ ಕಾಲ ಬಹಳ ಚೆನ್ನಾಗಿ ಕೆಲಸಮಾಡಿತು. ಅದನ್ನು ೫೨೯ರಲ್ಲಿ ಒಂದನೆಯ ಜಸ್ಟೀನಿಯನ್ ಅರಸು ಮುಚ್ಚಿಬಿಟ್ಟ.

ಪ್ಲೇಟೋ ತನ್ನ ಮಧ್ಯವಯಸ್ಸಿನಲ್ಲಿ ರಾಜನೊಬ್ಬನ ಆಹ್ವಾನವನ್ನು ಮನ್ನಿಸಿ ಮಾರ್ಗದರ್ಶನ ಮಾಡಲು ಸಿಸಿಲಿಗೆ ಹೋದ. ಆದರೆ ಆ ರಾಜ—ಎರಡನೆಯ ಡೈಯೊನೀಸಿಅಸ್–ಅವನ ಬುದ್ಧಿವಾದಕ್ಕೆ ಹೆಚ್ಚು ಗಮನ ಕೊಡಲಿಲ್ಲ. ತನ್ನ 81ನೆಯ ವಯಸ್ಸಿನಲ್ಲಿ ಪ್ಲೇಟೋ ಅಥೆನ್ಸಿನಲ್ಲಿ ಕಾಲವಾದ. ಅಕಾಡಮಿಯ ನಿವೇಶನದಲ್ಲಿ ಅವನನ್ನು ಸಮಾಧಿಮಾಡಿದರು.

ಪ್ಲೇಟೋವಿನ ಶಿಷ್ಯರಲ್ಲಿ ಅತ್ಯಂತ ಪ್ರಸಿದ್ಧನಾದವನು ಅರಿಸ್ಟಾಟಲ್. ಅರಿಸ್ಟಾಟಲ್ ಅಕಾಡಮಿಯಲ್ಲಿ ಇಪ್ಪತ್ತು ವರ್ಷಗಳ ಕಾಲ ದುಡಿದ.

ಪ್ಲೇಟೋ ಸುಮಾರು ಇಪ್ಪತ್ತೈದು ಗ್ರಂಥಗಳನ್ನು ಬರೆದಿದ್ದಾನೆ. ಈ ಎಲ್ಲ ಗ್ರಂಥಗಳೂ ನಿರೂಪಣೆಗಳಲ್ಲ. ಪ್ಲೇಟೋ ಒಂದು ಹೊಸ ರೀತಿಯನ್ನು ತನ್ನ ಗ್ರಂಥಗಳಲ್ಲಿ ಬಳಸಿದ. ಅವನು ಬರೆದ ಗ್ರಂಥಗಳಲ್ಲಿ ಬಹುಪಾಲು 'ಸಂವಾದ'ಗಳು. ಇವುಗಳಲ್ಲಿ ಸಾಕ್ರಟೀಸ್ ತನ್ನ ಸ್ನೇಹಿತರೊಡನೆ. ಶಿಷ್ಯರೊಡನೆ. ಕೊನೆಗೆ ತನ್ನ ಶತ್ರುಗಳೊಡನೆ ಕೂಡ ನಡೆಸಿದ ಸಂಭಾಷಣೆಗಳನ್ನು ಕೇಳುತ್ತೇವೆ. ಈ ಸಂವಾದಗಳ ಭಾಷೆ ಸಹಜವಾಗಿದೆ: ಇಲ್ಲಿ ಲವಲವಿಕೆಯಿದೆ. ಜನರು ಆಸಕ್ತಿಯಿಂದ ಚರ್ಚೆ ಮಾಡುವುದನ್ನು ನಾವೇ ಕೇಳುತ್ತಿದ್ದೇವೇನೊ ಎನಿಸುತ್ತದೆ. ಪ್ರತಿ ಸಂವಾದದಲ್ಲೂ ಯಾವುದಾದರೊಂದು ವಿಷಯದ ಮೇಲೆ ಚರ್ಚೆ ನಡೆಯುತ್ತದೆ. ರಾಜಕೀಯ. ನೀತಿ. ಧರ್ಮ. ಸೌಂದರ್ಯ ಇವುಗಳಿಗೆ ಸಂಬಂಧಿಸಿದ ಚರ್ಚೆ ಪ್ರಾರಂಭವಾಗುವ ಮುನ್ನ ಚಿಕ್ಕ ರೂಪದ ಸಂಭಾಷಣೆಯೇ ಮನಸ್ಸನ್ನು ಸೆಳೆಯುತ್ತದೆ. ಇಲ್ಲಿ ಪ್ಲೇಟೋನ ಹೆಸರು ಬರುವುದು ಬಹಳ ಕಡಮೆ. ತಾನೇ ಸ್ವತಂತ್ರವಾಗಿ ಆಲೋಚಿಸಿ ಬರೆದರೂ ತಾನು ಬರೆಯುತ್ತಿರುವುದೆಲ್ಲ ಸಾಕ್ರಟೀಸನ ಅಭಿಪ್ರಾಯಗಳೇ ಎಂದು ಜನ ತಿಳಿಯಬೇಕೆಂಬುದು ಪ್ಲೇಟೋವಿನ ಅಪೇಕ್ಷೆಯಾಗಿತ್ತು. ಸಾಕ್ರಟೀಸನನ್ನು ವಿಚಾರಣೆಗೆ ಗುರಿಮಾಡಿದಾಗ ಅವನು ತನ್ನನ್ನು ಸಮರ್ಥಿಸಿಕೊಂಡು ಬಹು ಸೊಗಸಾಗಿ ವಾದ ಮಾಡಿದ್ದ. ಈ ವಾದವನ್ನು ಪ್ಲೇಟೋ 'ಸಮರ್ಥನೆ' (ಅಪಾಲಜಿ) ಎನ್ನುವ ಸಂವಾದದಲ್ಲಿ ಬಹಳ ಚೆನ್ನಾಗಿ ನಿರೂಪಿಸಿದ್ದಾನೆ.

ತನ್ನ ಗ್ರಂಥಗಳಲ್ಲಿ ಹಲವಾರು ಜನ ಸೇರಿ ಚರ್ಚಿಸುವ ವಿಧಾನವನ್ನು ಅನುಸರಿಸಿ ಪ್ಲೇಟೋ, ಓದುಗರು ತಮ್ಮ ಮನಸ್ಸಿನಲ್ಲಿ ತಾವೇ ಯಾರ ಅಭಿಪ್ರಾಯ ಸರಿ. ಯಾರದು ಅಲ್ಲ ಎಂದು ಆಲೋಚಿಸುವಂತೆ ಮಾಡುತ್ತಿದ್ದ. ಜನರಲ್ಲಿ ಆಲೋಚನಾಪರತೆ. ತರ್ಕಶಕ್ತಿ. ವಿವೇಚನ ಬೆಳೆಯಲು ಬಹಳ ಮಟ್ಟಿಗೆ ಕಾರಣನಾದ.

ತನ್ನ ಸಂವಾದಗಳಲ್ಲಿ ಪ್ಲೇಟೋ ಮುಖ್ಯವಾಗಿ ಒಳ್ಳೆಯತನ ಎಂದರೇನು? ಜ್ಞಾನ ಎಂದರೇನು? ಎಂಬ ಐದು ಪ್ರಶ್ನೆಗಳನ್ನು ಚರ್ಚಿಸಿದ. 'ಗಣರಾಜ್ಯ' ಮತ್ತು 'ವಿಚಾರ ಸಂಕಿರಣ' ಎಂಬ ಸಂವಾದಗಳು ಬಹಳ ಪ್ರಸಿದ್ಧವಾದವು

'ಗಣರಾಜ್ಯ' ಗ್ರಂಥದಲ್ಲಿ ರಾಜ್ಯವ್ಯವಸ್ಥೆ, ರಾಜನೀತಿ, ಪೌರಜೀವನ ಮೊದಲಾದವುಗಳಿಗೆ ಸಂಬಂಧಿಸಿದ ಅನೇಕ ವಿಷಯಗಳನ್ನು ಚರ್ಚಿಸಿದೆ. ಪ್ಲೇಟೋಗೆ ಪ್ರಜಾಪ್ರಭುತ್ವದಲ್ಲಿ ನಂಬಿಕೆ ಇರಲಿಲ್ಲ. ತತ್ತ್ವ ಶಿಕ್ಷಣ ಪಡೆದು, [illegible] ಗುತ್ತು ವಿವೇಕದಿಂದ ಇತರರನ್ನು ಅರ್ಥಮಾಡಿಕೊಂಡು [illegible]. ಇದಕ್ಕೆ ತಕ್ಕ ಯೋಗ್ಯತೆ ಇರುವವರು ಮಾತ್ರ ಆಡಳಿತಕ್ಕೆ [illegible] ಎಂಬುದೇ ಅವನ ಅಭಿಪ್ರಾಯ. 'ವಿಚಾರ ಸಂಕಿರಣ'ದಲ್ಲಿ ಆದರ್ಶರೀತಿಯ ಪ್ರೇಮ ಹೇಗೆ ನಮ್ಮನ್ನು ಪರಿಪೂರ್ಣರಾಗಲು ಸಹಾಯ ಮಾಡಬಲ್ಲುದು ಎಂಬುದರ ಚಿತ್ರಣವಿದೆ.

ಪ್ಲೇಟೋ, "ನಮ್ಮ ಈ ಪ್ರಪಂಚ ಬದಲಾಗುತ್ತಲೇ ಹೋಗುವ ಪ್ರಪಂಚ. ಇಲ್ಲಿ ಪರಿಪೂರ್ಣತೆ ಪಡೆಯುವುದು ಕಷ್ಟ. ಆದರೆ ಪರಿಪೂರ್ಣವಾದ ಒಂದು ಪ್ರಪಂಚ ಈ ಪ್ರಪಂಚದ ಆಚೆ ಇದೆ" ಎಂದು ಹೇಳಿದ. "ನಮ್ಮ ದೇಹಗಳು ಇಲ್ಲಿನ ಪ್ರಪಂಚಕ್ಕೆ ಸೇರಿದವು, ಅವು ಇಲ್ಲಿ ಸಾಯುತ್ತವೆ. ಆದರೆ ಆತ್ಮ ಶಾಶ್ವತ" ಎಂದ.

ಪ್ಲೇಟೋವಿನ ಅಭಿಪ್ರಾಯಗಳು ಪಾಶ್ಚಾತ್ಯರ ಮೇಲೆ ಅಸಾಧಾರಣ ಪ್ರಭಾವ ಬೀರಿದುವು. ಆತ್ಮ ಸಾಯುವುದಿಲ್ಲವೆಂಬ ಮತ್ತಿತರ ಅವನ ನಂಬಿಕೆಗಳು ಕ್ರೈಸ್ತ ಮತದವರಿಗೂ ಒಪ್ಪಿಗೆಯಾದುವು. ಪಾಶ್ಚಾತ್ಯ ತತ್ತ್ವಶಾಸ್ತ್ರದ ಮೇಲೆ ಪ್ಲೇಟೋನದು ವಿಶೇಷ ಪ್ರಭಾವ. ಸ್ಪೆನ್ಸರ್, ಷೆಲಿ ಮೊದಲಾದ ಆಂಗ್ಲ ಕವಿಗಳೂ ಅವನ ಅಭಿಪ್ರಾಯಗಳಿಂದ ಪ್ರಭಾವಿತರಾದರು.

ತತ್ತ್ವಜ್ಞಾನಿ ಪ್ಲೇಟೋವಿನ ಶೈಲಿ, ಸಾಹಿತ್ಯರಚನೆಗೂ ಸ್ಫೂರ್ತಿ ಕೊಟ್ಟಿದೆ. ಅವನ ಭಾಷೆ, ಶೈಲಿ ಅನೇಕ ವೇಳೆ ಕಾವ್ಯಮಯ.

## ಪೈಥಾಗೊರಸ್

ಒಂದು ನಾಯಿಯನ್ನು ಒಬ್ಬಾತ ಒಂದೇ ಸಮನೆ ಹೊಡೆಯುತ್ತಿದ್ದ. ದಾರಿಯಲ್ಲಿ ಹೋಗುತ್ತಿದ್ದವನೊಬ್ಬ ಅವನ ಬಳಿಗೆ ಓಡಿ ಹೇಳಿದ :

"ಆ ನಾಯಿಯನ್ನು ಹೊಡೆಯಬೇಡ. ಅದರಲ್ಲಿರುವುದು ನನ್ನ ಸ್ನೇಹಿತನ ಆತ್ಮ. ಅದು ನೋವಿನಿಂದ ಅತ್ತಾಗ ನನಗೆ ತಿಳಿಯಿತು."

ಹೀಗೆ ಹೇಳಿದವನು ಪೈಥಾಗೊರಸ್. ಕ್ರಿಸ್ತಪೂರ್ವ ಆರನೆಯ ಶತಮಾನದಲ್ಲಿ ಸ್ಯಾಮಾಸ್ ಎಂಬ ದ್ವೀಪದಲ್ಲಿ ಹುಟ್ಟಿದ. ಅವನಿಗೆ ವಿಜ್ಞಾನದಲ್ಲಿ [illegible]. [illegible]. ಸುಮಾರು ಮೂವತ್ತು ವರ್ಷ ಕಾಲ ಈಜಿಪ್ಟ್, ಅರೇಬಿಯ, ಸಿರಿಯ, ಫಿನೀಷ್ಯ, ಭಾರತ, ಗಾಲ್ ಇಲ್ಲೆಲ್ಲ ಪ್ರವಾಸಮಾಡಿ ಹಿಂತಿರುಗಿದ ಎಂದು ಹೇಳುತ್ತಾರೆ.

ಕ್ರಿ. ಪೂ. 529ರ ಹೊತ್ತಿಗೆ ಅವನು ತನ್ನ ಹುಟ್ಟೂರನ್ನು ಬಿಟ್ಟು ದಕ್ಷಿಣ ಇಟಲಿಯ ಕ್ರೊಟೋನಾ ಎಂಬಲ್ಲಿ ನೆಲೆಸಿದ. ಈಜಿಯನ್ ಸಮುದ್ರದಲ್ಲಿನ ಸ್ಯಾಮಾಸ್ ದ್ವೀಪವನ್ನು ದುರಾಕ್ರಮಣಮಾಡಿ ವಶಪಡಿಸಿಕೊಂಡ ಪಾಲಿಕ್ರೇಟೀಸನ ಅಮಾನುಷಕೃತ್ಯಗಳಿಗೆ ಬೇಸರಿಸಿ ಸ್ಯಾಮಾಸನ್ನು ಬಿಟ್ಟುಹೋದ ಎಂದು ಹೇಳುತ್ತಾರೆ. ಅಷ್ಟುಹೊತ್ತಿಗೆ ಅವನಿಗೆ ಐವತ್ತು ವರ್ಷಕ್ಕೂ ಹೆಚ್ಚು ವಯಸ್ಸಾಗಿತ್ತು.

ಕ್ರೊಟೋನಾದಲ್ಲಿ ಅವನು ಒಂದು ಸಂಘವನ್ನು ಸ್ಥಾಪಿಸಿದ. ಇಲ್ಲಿ ತನ್ನ ತತ್ತ್ವಶಾಸ್ತ್ರವನ್ನು ಬೋಧಿಸಿದ.

ಪೈಥಾಗೊರಸನ ಶಿಷ್ಯರು ಕಠಿಣ ಶಿಸ್ತನ್ನು ಪಾಲಿಸಬೇಕಾಗುತ್ತಿತ್ತು. ವ್ಯಾಯಾಮ, ಶಿಕ್ಷಣ, ಗಣಿತಶಾಸ್ತ್ರ, ಸಂಗೀತ ಕಡ್ಡಾಯ. ಮಾಂಸಾಹಾರ ನಿಷಿದ್ಧ.

ಒಂದು ದೇಹ ಅಳಿದಮೇಲೆ ಅದರಲ್ಲಿನ ಆತ್ಮ ಬೇರೊಂದು ರೂಪದಲ್ಲಿ ಇನ್ನೊಂದು ಜನ್ಮ ಪಡೆಯುತ್ತದೆ ; ಮನುಷ್ಯರು ಮನುಷ್ಯರಾಗಿ ಹುಟ್ಟಬಹುದು. ಇಲ್ಲವೆ ಪ್ರಾಣಿಗಳಾಗಿ ಹುಟ್ಟಬಹುದು ; ಪರಿಶುದ್ಧವಾದ ಜೀವನ ನಡೆಸಿದ ಮನುಷ್ಯನ ಆತ್ಮಕ್ಕೆ ಸಾವಿಲ್ಲ—ಎಂದು ನಂಬಿದವನು ಪೈಥಾಗೊರಸ್. ತಾನು ಹಿಂದಿನ ಜನ್ಮದಲ್ಲಿ ಟ್ರೋಜನ್ ಯುದ್ಧದಲ್ಲಿ ಹೋರಾಡಿದ ವೀರನಾಗಿದ್ದೆ ಎಂದು ಆತ ಹೇಳುತ್ತಿದ್ದ. ಪುನರ್ಜನ್ಮದಲ್ಲಿ ಪೈಥಾಗೊರಸನಿಗಿದ್ದ ನಂಬಿಕೆಗೆ, ವಿಷ್ಯ ಮೈನರಿನ ಜನರ ನಂಬಿಕೆಗಳ ಪರಿಚಯ ಕಾರಣ ಎಂದು ತೋರುತ್ತದೆ.

'ನಾನು ಯಾವುದರಲ್ಲಿ ಅಯಶಸ್ವಿಯಾಗಿದ್ದೇನೆ ? ನಾನು ಏನಾದರೂ ಒಳ್ಳೆಯದನ್ನು ಮಾಡಿರುವೆನೆ ? ಮಾಡಬೇಕಾಗಿದ್ದ ಯಾವುದನ್ನಾದರೂ ನಾನು ಮಾಡದೆ ಬಿಟ್ಟಿರುವೆನೆ ?' ಎಂದು ಪ್ರತಿಯೊಬ್ಬನೂ ತನ್ನನ್ನು ತಾನೇ ಪ್ರಶ್ನಿಸಿಕೊಂಡು ಅವುಗಳಿಗೆ ಸಮರ್ಪಕವಾದ ಉತ್ತರವನ್ನು ಹುಡುಕಿದರೆ, ಅವನ ಜೀವನ ಪರಿಶುದ್ಧವಾಗುತ್ತದೆ ಎಂದು ಪೈಥಾಗೊರಸ್ ನಂಬಿದ್ದ. ಮನಸ್ಸನ್ನು ಪರಿಶುದ್ಧಗೊಳಿಸುವ ಸಾಧನಗಳಲ್ಲಿ ಸಂಗೀತವೂ ಒಂದು ಎಂದು ಆತ ಭಾವಿಸಿದ್ದ.

ಸ್ತ್ರೀ ಪುರುಷರಿಬ್ಬರಿಗೂ ಸರಿಸಮನಾದ ಅವಕಾಶವಿರಬೇಕೆಂಬ ವಿಚಾರವನ್ನು ಗ್ರೀಸಿನ ದಾರ್ಶನಿಕ ಪ್ಲೇಟೋ ಹೇಳುವುದಕ್ಕೆ ಇನ್ನೂರು ವರ್ಷಗಳ ಮೊದಲೇ ಪೈಥಾಗೊರಸ್ ಮನಗಂಡಿದ್ದ. ತನ್ನ ಶಾಲೆಗೆ ಸ್ತ್ರೀ ಪುರುಷರಿಬ್ಬರಿಗೂ ಪ್ರವೇಶವಿತ್ತ. ಮಹಿಳೆಯರಿಗೆ ಉಳಿದ ವಿಷಯಗಳ ಜೊತೆಗೆ ತತ್ತ್ವಶಾಸ್ತ್ರ, ಸಾಹಿತ್ಯ, ಗೃಹವಿಜ್ಞಾನಗಳನ್ನು ಕಲಿಸಿದ. ಇದರಿಂದ ಪೈಥಾಗೊರಸನ ಶಾಲೆಯಲ್ಲಿ ಕಲಿತ ಸ್ತ್ರೀಯರು ಗ್ರೀಸಿನ ಅತ್ಯಂತ ಆದರ್ಶ ಸ್ತ್ರೀಯರೆಂದು ಗೌರವ ಪಡೆದರು.

ಗಾಳಿ, ಬೆಂಕಿ, ನೀರು ಮೊದಲಾದವುಗಳಿಂದ ಜಗತ್ತು ಸೃಷ್ಟಿಯಾಗಿದೆ ಎಂದು ಆಗಿನ ಕಾಲದ ನಂಬಿಕೆ. ಪೈಥಾಗೊರಸ್ ಸಂಖ್ಯೆಗಳಿಂದಲೇ ಪ್ರಪಂಚದ ಸೃಷ್ಟಿ ಎಂದು ಬೋಧಿಸಿದ.

ಭೂಮಿ ಸ್ಥಿರವಾಗಿದೆ. ಭೂಮಿಯ ಸುತ್ತಲೂ ಸೂರ್ಯನೂ ಇತರ ಗ್ರಹಗಳೂ ಸುತ್ತುತ್ತಿವೆ ಎಂಬ ನಂಬಿಕೆ ಪ್ರಾಚೀನ ಕಾಲದಿಂದ ಬಂದಿತ್ತು. ಆದರೆ ಸೂರ್ಯಗೋಳ ಸ್ಥಿರವಾಗಿದೆ. ಅದರ ಸುತ್ತಲೂ ಭೂಮಿ ಸುತ್ತುತ್ತಿದೆ ; ಮತ್ತು ಭೂಮಿ ಗುಂಡಗಿದೆ—ಎನ್ನುವ ಸಿದ್ಧಾಂತಗಳನ್ನು ಪ್ರತಿಪಾದಿಸಿದವರಲ್ಲಿ ಮೊದಲಿಗ ಪೈಥಾಗೊರಸ್. ಪೈಥಾಗೊರಸನ ರೇಖಾಗಣಿತದ ಪ್ರಮೇಯ ಬಹಳ ಪ್ರಸಿದ್ಧವಾದದ್ದು. ಒಂದು ಸಮಕೋನ ತ್ರಿಕೋನದಲ್ಲಿ ಕರ್ಣದ ಮೇಲಿನ ಚೌಕ ಉಳಿದೆರಡು ಬಾಹುಗಳ ಮೇಲಿನ ಚೌಕಗಳ ಮೊತ್ತಕ್ಕೆ ಸಮ ಎಂಬುದು ಯೂಕ್ಲಿಡ್ ಎಂಬ ಪ್ರಸಿದ್ಧ ಗಣಿತ ಶಾಸ್ತ್ರಜ್ಞನ ಪ್ರಮೇಯಗಳಲ್ಲೊಂದು, ಈ ಸಿದ್ಧಾಂತವನ್ನು ಯೂಕ್ಲಿಡನಿಗೆ ಮೊದಲು ಸಿದ್ಧಪಡಿಸಿ ತೋರಿಸಿದವನು ಪೈಥಾಗೊರಸ್. ಈ ಪ್ರಮೇಯ ಎಷ್ಟು ಆಸಕ್ತಿ ಕೆರಳಿಸಿತೆಂದರೆ, ಗಣಿತಶಾಸ್ತ್ರಜ್ಞರು ಇದನ್ನು ನೂರಕ್ಕಿಂತಲೂ ಹೆಚ್ಚು ರೀತಿಯಲ್ಲಿ ಸಿದ್ಧಮಾಡಿ ತೋರಿಸಿದ್ದಾರೆ. ಯೂಕ್ಲಿಡನ ರೇಖಾಗಣಿತದ ಮೊದಲ ಪುಸ್ತಕಕ್ಕೆ ಪೈಥಾಗೊರಸನೇ ಸ್ಫೂರ್ತಿ.

ಪೈಥಾಗೊರಸ್ ತನ್ನ ಗಣಿತದ ಜ್ಞಾನವನ್ನು ಸಂಗೀತಕ್ಕೂ ಬಳಸಿದ. ಪರಸ್ಪರ ಸರಳ ಪ್ರಮಾಣಗಳಿರುವ ಉದ್ದದ ತಂತಿಗಳ ನಾದಗಳು ಹೊಂದಿ

1147ರಿಂದಲೂ ಲಿಸ್ಬನ್ ಪೋರ್ಚುಗಲ್ಲಿನ ರಾಜಕೀಯ ಕೇಂದ್ರ. 1755ರ ಭಾರಿ ಭೂಕಂಪವಾದ ಮೇಲೆ ಹೊಸ ಯೋಜನೆಯನ್ನು ತಯಾರಿಸಿ ನಗರ ನಿರ್ಮಿಸಿದರು. ಬೆಟ್ಟಗಳ ಸಾಲಿನ ಮೇಲೆ ಕಟ್ಟಿರುವ ಈ ನಗರದಲ್ಲಿ ಒಂದು ಕಡೆಯಿಂದ ಇನ್ನೊಂದು ಕಡೆಗೆ ಮೇಲೆತ್ತುವ ಯಂತ್ರ (ಲಿಫ್ಟ್) ದಲ್ಲಾಗಲೀ ಕೇಬಲ್ ಕಾರ್‌ಗಳಲ್ಲಾಗಲೀ ಹೋಗಬೇಕು. ಪೋರ್ಟೋ ನಗರದ ಬೇರೆ ಬೇರೆ ಭಾಗಗಳೂ ವಿವಿಧ ಎತ್ತರಗಳಲ್ಲಿವೆ. ಪುರಾತನ ಪೋರ್ಟಸ್ ಕ್ಯಾಲ್ ಎಂಬ ಬಂದರಿದ್ದ ಜಾಗದಲ್ಲಿ ಈ ನಗರವಿದೆ. ಪೋರ್ಟಸ್ ಕ್ಯಾಲ್ ಎನ್ನುವುದರಿಂದಲೇ ಪೋರ್ಚುಗಲ್ ಎನ್ನುವ ಹೆಸರು ಬಂತು.

ಪೋರ್ಚುಗಲಿಗೆ ದೂರವಿರುವ ಮದೀರಾ, ಅಜೋರ್‍ಸ್ ದ್ವೀಪಗಳೂ ಸೇರಿವೆ.

ಪೋರ್ಚುಗೀಸರು ಅನ್ವೇಷಣೆಯಲ್ಲಿ ತೊಡಗಿದ್ದ ಕಾಲದಲ್ಲಿ ಆಫ್ರಿಕ ಮತ್ತು ಏಷ್ಯಗಳಲ್ಲಿ ವಸಾಹತುಗಳನ್ನು ಸ್ಥಾಪಿಸಿದರು. ಈಗ ಈ ಪ್ರಾಂತಗಳಿಗೆಲ್ಲ ಪೋರ್ಚುಗೀಸ್ ಗವರ್ನರ್ ಇದ್ದು, ಸ್ಥಳೀಯ ಸರಕಾರಗಳೇ ಆಯಾ ಪ್ರಾಂತಗಳ ವ್ಯವಹಾರಗಳನ್ನು ನೋಡಿಕೊಳ್ಳುತ್ತವೆ. ಪೋರ್ಚುಗೀಸ್ ಗಿನಿ, ಕೇಪ್‌ವರ್ಡ್ ದ್ವೀಪಗಳು, ಸೆಂಟ್ ಥಾಮಸ್ ದ್ವೀಪಗಳು, ಅಂಗೋಲ, ಮೊಜಾಂಬಿಕ್, ಟಿಮರ್, ಮಕಾವೊ ವಸಾಹತುಗಳು ಪೋರ್ಚುಗಲಿನ ಆರ್ಥಿಕತೆಗೆ ಬೆಂಬಲವಾಗಿವೆ. ಈ ವಸಾಹತುಗಳು ಪೋರ್ಚುಗಲಿನ ಶೇಕಡಾ 20ರಷ್ಟು ರಫ್ತುಪದಾರ್ಥಗಳನ್ನು ಕೊಳ್ಳುತ್ತವೆ ; ಕಾಫಿ, ರಬ್ಬರ್, ಸಕ್ಕರೆ ಮುಂತಾದ ಬೆಲೆಬಾಳುವ ಪದಾರ್ಥಗಳನ್ನು ಉತ್ಪಾದಿಸುತ್ತವೆ.

| | | |
|---|---|---|
| ಖಂಡ | : | ಯೂರೋಪ್ (ನೈಋತ್ಯ ಐಬೀರಿಯನ್ ಪರ್ಯಾಯದ್ವೀಪದ ಪಶ್ಚಿಮ ಭಾಗ) |
| ಅಕ್ಷಾಂಶ | ; | 36° 58′ ಉ ದಿಂದ 42° 9′ ಉ |
| ರೇಖಾಂಶ | : | 6° 11′ ಪ ದಿಂದ 9° 30′ ಪ |
| ವಿಸ್ತೀರ್ಣ | : | 91,945 ಚ. ಕಿ. ಮಿ. (ಮದೀರಾ, ಅಜೋರ್‍ಸ್ ಸೇರಿ) |
| ಜನಸಂಖ್ಯೆ | : | 90,00,000 |
| ರಾಜಧಾನಿ | : | ಲಿಸ್ಬನ್ |
| ಭಾಷೆ | : | ಪೋರ್ಚುಗೀಸ್ |
| ಸರಕಾರ | : | ಗಣರಾಜ್ಯ |
| ಬಾವುಟ | : | ಹಸಿರು, ಕೆಂಪು ಬಣ್ಣ ಮಧ್ಯೆ ಲೋಹವಲಯ ಮಧ್ಯೆ ಫಲಕ |

ಆರಂಭದಲ್ಲಿ ರೋಮನರು, ಜರ್ಮನರು, ಮೂರರ ದಾಳಿಗೆ ಪೋರ್ಚುಗಲ್ ತುತ್ತಾಯಿತು. 1140ರ ವರೆಗೆ ಪೋರ್ಚುಗಲ್ ಸ್ಪೇನಿನವರ ಆಡಳಿತದಲ್ಲಿದ್ದಿತು. ಮುಂದೆ ಸಿಕ್ಕಿದ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳಲು ಆಗಾಗ ಪ್ರಬಲ ನೆರೆರಾಜ್ಯಗಳೊಡನೆ ಹೋರಾಡುತ್ತಲೇ ಇರಬೇಕಾಯಿತು. ಹದಿಮೂರನೆಯ ಶತಮಾನದಲ್ಲಿ ಪೋರ್ಚುಗೀಸರು ಪೂರ್ವರಾಷ್ಟ್ರಗಳಿಗೆ ಹೋಗಲು ದಾರಿ ಹುಡುಕಲಾರಂಭಿಸಿದರು. ಹದಿನೈದನೆಯ ಶತಮಾನದಲ್ಲಿ ಅವರು ಮದೀರಾ, ಅಜೋರ್‍ಸ್ ದ್ವೀಪಗಳನ್ನು ಕಂಡರು. ಬಾರ್ಥಲೋಮ್ಯು ಡಿ ಆಷ್, ವಾಸ್ಕೋ ದ ಗಾಮರಂಥ ಸಾಹಸಿಗರು ಪ್ರಪಂಚವನ್ನು ಸುತ್ತಾಡಿ ಇತರ ವಸಾಹತುಗಳನ್ನು ಪೋರ್ಚುಗಲಿಗೆ ಸೇರಿಸಿದರು. 1580ರಲ್ಲಿ ಪೋರ್ಚುಗಲನ್ನು ಸ್ಪೇನಿನವರು ತಮ್ಮ ರಾಷ್ಟ್ರಕ್ಕೆ ಮತ್ತೆ ಸೇರಿಸಿಕೊಂಡರು. 1640ರಲ್ಲಿ ಸಿಡಿದೆದ್ದು ಪೋರ್ಚುಗಲ್ ಸ್ವತಂತ್ರವಾಯಿತು. 1755ರಲ್ಲಿ ಭೂಕಂಪ, ನೆಪೋಲಿಯನನ ದಂಡಯಾತ್ರೆಗಳು, ಆ ದೇಶಕ್ಕೆ ಬಹಳ ಹಾನಿಯುಂಟುಮಾಡಿದುವು. ಹತ್ತೊಂಬತ್ತನೆಯ ಶತಮಾನದಲ್ಲಿ ಪೋರ್ಚುಗಲನ್ನು ಅನೇಕ ಸರ್ವಾಧಿಕಾರಿಗಳು ಆಳಿದರು. ಹಲವು ಬಾರಿ ಅಂತರ್ಯುದ್ಧಗಳಾದುವು.

ಪೋರ್ಚುಗಲ್ 1910ರಲ್ಲಿ ಗಣರಾಜ್ಯವಾಯಿತು. ಎರಡನೆಯ ಮಹಾಯುದ್ಧದಲ್ಲಿ ಪೋರ್ಚುಗಲ್ ತಟಸ್ಥವಾಗಿ ಉಳಿಯಿತು. ಆದರೆ ಲಿಸ್ಬನ್ ಗೂಢಚಾರ ಕೇಂದ್ರವೆಂದು ಪ್ರಸಿದ್ಧಿಗೆ ಬಂತು. 1955ರಲ್ಲಿ ಪೋರ್ಚುಗಲ್ ವಿಶ್ವಸಂಸ್ಥೆಗೆ ಸೇರಿತು.

ಪೋರ್ಚುಗಲಿನ ಅಧ್ಯಕ್ಷನನ್ನು ಏಳು ವರ್ಷಗಳ ಅವಧಿಗೆ ಆರಿಸುತ್ತಾರೆ. ಡಾ. ಆಂಟೋನಿಯೋ ಡಿ ಬಲಿವಿಯರಾ ಸಾಲಝಾರ್ (ನಿಧನ : 1970) ಮೂವತ್ತು ವರ್ಷಗಳಿಗೂ ಹೆಚ್ಚು ಕಾಲ ಅಧ್ಯಕ್ಷರಾಗಿದ್ದು, ಸರ್ವಾಧಿಕಾರಿಯಾಗಿ ಆಳಿದರು.

## ಪೋಪ್

ಪೋಪ್ ಪದ ಲ್ಯಾಟಿನ್ ಭಾಷೆಯ 'ಪಪ', ಗ್ರೀಕಿನ 'ಪಪ್ಪಾಸ್' ಪದಗಳಿಂದ ಬಂದಿದೆ. ಪೋಪ್ ಎಂದರೆ 'ತಂದೆ' ಎಂದರ್ಥ.

ಯೇಸು ಕ್ರಿಸ್ತ ತನ್ನ ಧರ್ಮವನ್ನು ಬೋಧಿಸಲು ಹನ್ನೆರಡು ಜನ ಶಿಷ್ಯರನ್ನು ಕಳುಹಿಸಿದ. ಅವರಲ್ಲಿ ಪೀಟರ್ ಒಬ್ಬ. ಪೀಟರನನ್ನು ಕುರಿತು ಯೇಸು ಹೀಗೆ ನುಡಿದ :

"ನಿನಗಿದನ್ನು ನಾನು ಹೇಳುತ್ತೇನೆ. ನೀನೇ ಪೀಟರ್ (ಪೀಟರ್ ಎಂದರೆ ಬಂಡೆ). ಈ ಪೀಟರಿನ ಮೇಲೆ ನಾನು ನನ್ನ ಇಗರ್ಜಿ ಕಟ್ಟುತ್ತೇನೆ. ನರಕದ ಬಾಗಿಲೂ ಇದಕ್ಕೆ ಅಡ್ಡ ಬರಲು ಸಾಧ್ಯವಿಲ್ಲ."

ಕ್ರಿಸ್ತ ಹೇಳಿದ ಈ ಮಾತನ್ನು ಯೇಸುವಿನ ಶಿಷ್ಯ ಮ್ಯಾಥ್ಯು ಉದ್ಧರಿಸಿದ್ದಾನೆ. ಪೀಟರ್ ಕ್ರಿಸ್ತನ ಧರ್ಮವನ್ನು ಉಪದೇಶಮಾಡುತ್ತ ರೋಮ್‌ಗೆ ಬಂದ. ಅವನು ರೋಮ್ ಧರ್ಮಪೀಠದ ಮುಖ್ಯಾಧಿಕಾರಿಯಾದನೆಂದೂ ಮುಂದೆ ಅವನಿಗೆ 'ಸಂತ' ಪದವಿಯನ್ನು ಕೊಡಲಾಯಿತೆಂದೂ ಹೇಳಿದೆ. ಕ್ರಿಸ್ತನ ಆಜ್ಞೆಯಂತೆ ಕ್ರೈಸ್ತ ಧಾರ್ಮಿಕ ಸಂಸ್ಥೆಗೆ ಪೀಟರ್ ಅಡಿಪಾಯ ಹಾಕಿದ. ಪೀಟರ್ ರೋಮನ್ ಕ್ಯಾಥೊಲಿಕ್ ಧರ್ಮದ ಗುರುವಾದ. ಸಂತ ಪೀಟರ್ ಮೊದಲನೆಯ ಪೋಪ್.

ಆರಂಭದಲ್ಲಿ ಈ ಪದವನ್ನು ವಿಶ್ವಾಸದಿಂದ, ಗೌರವದಿಂದ ಯಾವ ಕ್ರೈಸ್ತ ಧರ್ಮಗುರುವಿಗಾದರೂ ಅನ್ವಯಿಸುತ್ತಿದ್ದರು. ಮೂರು, ನಾಲ್ಕು

ಕೂಗಿಕೊಂಡ. ಬರುತ್ತಿದ್ದುದು ಟಾರ್ಟರರ ಶತ್ರು ಸೈನ್ಯ ; ಊರಿನ ದಂಡು ಎಚ್ಚೆತ್ತಿತು. ಊರು ಉಳಿಯಿತು.

ವ್ರೋಕ್ಲಾ ಜರ್ಮನಿಯಿಂದ ಬಂದ ಭಾಗದಲ್ಲಿದೆ. ಪೋಜ್‌ನ್ಯಾಸ್, ಲುಜ್ ಮುಖ್ಯ ಕೈಗಾರಿಕಾ ನಗರಗಳು.

| | |
|---|---|
| ಖಂಡ | : ಯೂರೊಪ್ (ಈಶಾನ್ಯ ಮಧ್ಯ) |
| ಅಕ್ಷಾಂಶ | : 49° ಉ ದಿಂದ 54° 50′ ಉ |
| ರೇಖಾಂಶ | : 14° 08′ ಪೂ ದಿಂದ 24° 09′ ಪೂ |
| ವಿಸ್ತೀರ್ಣ | : 3,11,730 ಚ. ಕಿ. ಮೀ. |
| ಜನಸಂಖ್ಯೆ | : 3,00,00,000 (ಅಂದಾಜು) |
| ರಾಜಧಾನಿ | : ವಾರ್ಸಾ |
| ಭಾಷೆ | : ಪೋಲಿಷ್ |
| ಸರಕಾರ | : ಜನತಾ ಗಣರಾಜ್ಯ |
| ಬಾವುಟ | : ಮೇಲರ್ಧ ಭಾಗ ಬಿಳಿ, ಕೆಳ ಅರ್ಧಭಾಗ ಕೆಂಪು |

ಸ್ಲವೋನಿಕ್ ಬುಡಕಟ್ಟಿನ ಜನರು ಐದರಿಂದ ಏಳನೆಯ ಶತಮಾನಗಳಲ್ಲಿ ಪೂರ್ವ ಯೂರೊಪಿನಲ್ಲಿ ನೆಲೆಸಿದರು. 966ರ ವೇಳೆಗೆ ಕ್ರೈಸ್ತಧರ್ಮ ಬೇರೂರಿತ್ತು. ಹನ್ನೊಂದನೆಯ ಶತಮಾನದ ಹೊತ್ತಿಗೆ ಪೋಲೆಂಡ್ ರಾಜ್ಯ ಬಾಲ್ಟಿಕ್ ಸಮುದ್ರದಿಂದ ಕಾರ್ಪೇಥಿಯನ್ ಪರ್ವತದವರೆಗೆ ಹಬ್ಬಿತ್ತು. ಇದು ಸುಮಾರು ಈಗಿನ ಪೋಲೆಂಡಿನ ವಿಸ್ತಾರ ಎಂದು ಹೇಳಬಹುದು. ಹದಿಮೂರನೆಯ ಶತಮಾನದಲ್ಲಿ ಚೆಂಗೀಸ್‌ಖಾನನ ದಂಡು ಪೋಲೆಂಡ್, ಹಾಲೆಂಡ್ ಮೂಲಕ ಹಾದುಹೋಯಿತು. ಟಾರ್ಟರರನ್ನು ಆ ಶತಮಾನದಲ್ಲಿಯೇ ಪೋಲೆಂಡಿನಿಂದ ಓಡಿಸಿದರು. ಹದಿನೈದನೆಯ ಶತಮಾನದಲ್ಲಿ ಪೋಲೆಂಡಿನವರು ಪ್ರಷ್ಯದವರ ಜೊತೆ ಹೋರಾಡಬೇಕಾಯಿತು. ದೊರೆ ಜ್ಯಾಗೆಲೊ ಪ್ರಷ್ಯನರನ್ನು ಸೋಲಿಸಿದ. ಇವನ ವಂಶಜರು ಪೋಲೆಂಡನ್ನು ಕಪ್ಪುಸಮುದ್ರದವರೆಗೆ ವಿಸ್ತರಿಸಿದರು. 1572ರವರೆಗೆ ಲಿಥುವೇನಿಯವನ್ನೂ ಆಳಿದರು. ಈ ಕಾಲ ಪೋಲೆಂಡಿನ ಚರಿತ್ರೆಯ ಸ್ವರ್ಣಯುಗ. ಮುಂದೆ ಒಂದು ಶತಮಾನ ಜರ್ಮನಿ, ರಷ್ಯಗಳೊಡನೆ ಆಗಾಗ ಯುದ್ಧವಾಗುತ್ತಲೇ ಇತ್ತು. 1772ರಲ್ಲಿ ಪೋಲೆಂಡಿನ ಬಹು ಭಾಗ ರಷ್ಯನರು ಮತ್ತು ಪ್ರಷ್ಯದವರ ವಶವಾಯಿತು. ಅಮೆರಿಕದ ಸ್ವಾತಂತ್ರ್ಯ ಸಮರದಲ್ಲಿ ಜಾರ್ಜ್ ವಾಷಿಂಗ್‌ಟನನ ಸೈನ್ಯದಲ್ಲಿದ್ದ ಥಾಡಿಯಸ್ ಕೋಸಿಯುಸ್ಕೊ (1746–1817) ಎಂಬ ಪೋಲೆಂಡಿನ ವೀರ ತನ್ನ ಮಾತೃಭೂಮಿಗೆ ಹಿಂದಿರುಗಿ ಸ್ವಾತಂತ್ರ್ಯ ಹೋರಾಟವನ್ನು ಪ್ರಾರಂಭಿಸಿದ. ತನ್ನ ಜನರನ್ನು ಒಟ್ಟುಗೂಡಿಸಿ ರಷ್ಯನರನ್ನು ಓಡಿಸಿದ. ಆದರೆ ಈತ ಪ್ರಷ್ಯನರ ಕೈಗೆ ಸಿಕ್ಕಿ ಬಂಡಾಯ ವಿಫಲವಾಯಿತು. 1795ರಿಂದ 123 ವರ್ಷಗಳ ಕಾಲ ಪೋಲೆಂಡಿನ ಹೆಸರೇ ಅಳಿದುಹೋಯಿತು. ಪೋಲಿಷರು ದಂಗೆ ಏಳಲು ಮಾಡಿದ ಮೂರು ಪ್ರಯತ್ನಗಳೂ ಯಶಸ್ವಿಯಾಗಲಿಲ್ಲ. ಮೊದಲನೆಯ ಮಹಾಯುದ್ಧದ ಕೊನೆಗೆ 1918ರಲ್ಲಿ ಮಿತ್ರರಾಷ್ಟ್ರಗಳು ಸೇರಿ ಪೋಲೆಂಡನ್ನು ಪುನರುದ್ದೀಪನಗೊಳಿಸಿದುವು. ಮುಂದೆ ಪೋಲೆಂಡಿಗೆ ಹಿಟ್ಲರನ ಸೇನೆಯ ಭಯ ಉಂಟಾದಾಗ ಬ್ರಿಟನ್ ಪೋಲೆಂಡಿನ ರಕ್ಷಣೆಗೆ ಧಾವಿಸುವುದಾಗಿ ಮಾತು ಕೊಟ್ಟಿತು. 1939ರ ಸೆಪ್ಟೆಂಬರ್ ಮೊದಲನೆಯ ದಿನ ಹಿಟ್ಲರನ ಸೈನ್ಯ ಪೋಲೆಂಡಿನ ಮೇಲೆ ದಾಳಿ ಮಾಡಿತು. ಎರಡು ದಿನಗಳ ಅನಂತರ ಇಂಗ್ಲೆಂಡ್ ಮತ್ತು ಫ್ರಾನ್ಸ್ ಯುದ್ಧ ಘೋಷಿಸಿದುವು. ಅದೇ ಕಾಲಕ್ಕೆ ರಷ್ಯನರೂ ಪೋಲೆಂಡಿನ ಮೇಲೆ ಯುದ್ಧ ಆರಂಭಿಸಿದರು. ಪುನಃ ಪೋಲೆಂಡ್ ಪರಾಧೀನವಾಯಿತು. 1945ರ ಯಾಲ್ಟಾ ಸಮ್ಮೇಳನದಲ್ಲಿ ರಷ್ಯ, ಅಮೆರಿಕ ಸಂಯುಕ್ತ ಸಂಸ್ಥಾನ ಮತ್ತು ಬ್ರಿಟನ್ ಪೋಲೆಂಡಿನವರಿಗೆ ಸ್ವಯಂ ನಿರ್ಧಾರದ ಹಕ್ಕು ಕೊಡಬೇಕೆಂದು ತೀರ್ಮಾನಿಸಿದುವು. 1947ರ ಅನಂತರ ಪೋಲೆಂಡ್ ರಷ್ಯದ ಪ್ರಭಾವವಲಯದಲ್ಲಿರುವ ಕಮ್ಯೂನಿಸ್ಟ್ ದೇಶವಾಗಿದೆ.

ಪೋಲೆಂಡಿನದು ಕಮ್ಯೂನಿಸ್ಟ್ ಪಕ್ಷದ ಹಿಡಿತದಲ್ಲಿರುವ ಜನತಾ ಗಣರಾಜ್ಯ. ಪಕ್ಷದ ಪ್ರಥಮ ಕಾರ್ಯದರ್ಶಿಗೇ ಪ್ರಾಧಾನ್ಯ. ಸಚಿವ ಸಂಪುಟದ ಮುಖ್ಯಸ್ಥ ಪ್ರಧಾನಿ.

## ಪೋಲೋ, ಮಾರ್ಕೊ

ನೋಡಿ : ಮಾರ್ಕೊ ಪೋಲೋ

## ಪೌರ, ಪೌರತ್ವ

ನಾವೆಲ್ಲ ಭಾರತೀಯರು. ಭಾರತದ ಪೌರರು ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತೇವೆ.

ಭಾರತದ ಪೌರರು ಹೇಗಾದೆವು ?

ನಾವು ಹುಟ್ಟಿರುವುದು ಭಾರತದಲ್ಲಿ. ಭಾರತದ ಯಾವ ಭಾಗದಲ್ಲಿಯೇ ಹುಟ್ಟಿದವನಾದರೂ — ಬೆಂಗಳೂರಾಗಬಹುದು, ತಿರುವನಂತಪುರವಾಗಬಹುದು, ಕಲ್ಕತ್ತವಾಗಬಹುದು, ದೆಹಲಿಯಾಗಬಹುದು—ಅವನು ಭಾರತದ ಪೌರ. ದೇಶದ ಸರಕಾರ ಅವನಿಗೆ ರಕ್ಷಣೆ ಕೊಡುತ್ತದೆ. ಉದ್ಯೋಗ ಸ್ವಾತಂತ್ರ್ಯ, ಮತ ಸ್ವಾತಂತ್ರ್ಯ ಇಂಥ ವಿವಿಧ ಸ್ವಾತಂತ್ರ್ಯಗಳೂ ಇಪ್ಪತ್ತೊಂದು ವರ್ಷದವನಾಗುತ್ತಲೇ ಮತದಾನ ನೀಡುವ ಹಕ್ಕೂ ಇಲ್ಲಿ ದೊರೆಯುತ್ತದೆ.

ಆದರೆ ತಂದೆತಾಯಿ ಬೇರೆ ದೇಶದ ಪ್ರಜೆಗಳಾಗಿದ್ದು ಭಾರತದಲ್ಲಿದ್ದಾಗ ಮಗು ಹುಟ್ಟಿದರೆ, ಅದು ಭಾರತೀಯ ಪೌರ ಆಗುವುದಿಲ್ಲ.

ಪ್ರಾಚೀನ ಗ್ರೀಸಿನ ಅಥೆನ್ಸ್ ಪಟ್ಟಣ ತನ್ನ ರಾಜ್ಯಭಾರ ಕ್ರಮಕ್ಕೆ ಹೆಸರು ಪಡೆದಿತ್ತು. ಅಥೆನ್ಸಿನಲ್ಲಿ ಹುಟ್ಟಿ ಬೆಳೆದ ಪುರುಷರೇ ಅದರಲ್ಲಿ ಪ್ರಧಾನ ಪಾತ್ರಧಾರಿಗಳು. ಅಧಿಕಾರ ನಿರ್ವಹಣೆ, ನ್ಯಾಯ ವಿಚಾರಣೆಯಲ್ಲಿ ಭಾಗವಹಿಸುವುದು, ಸೈನಿಕರಾಗುವ ಅವಕಾಶ, ಕಾನೂನುಗಳ ಅಂಗೀಕಾರದ

ಸಲುವಾಗಿ ಮತ ಚಲಾವಣೆ ಇವು ಅಥೆನ್ಸಿನ ಪೌರರಿಗೆ ದೊರೆತಿದ್ದ ಸೌಲಭ್ಯಗಳು. ಸ್ತ್ರೀಯರು ಮತ್ತು ಗುಲಾಮರು ಪೌರರಾಗುವಂತಿರಲಿಲ್ಲ. ಅಥೆನ್ಸಿಗೆ ಬಂದ ಹೊರಗಿನವರು ಪೌರರಲ್ಲ.

ರೋಮನರಲ್ಲೂ ಪೌರತ್ವ ನೀಡುವ ಪದ್ಧತಿ ಜಾರಿಯಲ್ಲಿತ್ತು. ರಾಜ್ಯದ ರಕ್ಷಣೆಗೆ ಸಾಕಾಗುವಷ್ಟು ಪ್ರಜೆಗಳು ಇಲ್ಲದೆ ಇದ್ದ ಪ್ರಸಂಗದಲ್ಲಿ, ಹೆಚ್ಚು ವಿದೇಶೀಯರಿಗೆ ಪೌರತ್ವ ನೀಡುವ ಔದಾರ್ಯವನ್ನು ರೋಮನರು ತೋರಬೇಕಾಯಿತು. ಅಂಥ ಸಂದರ್ಭಗಳಲ್ಲಿ ಗ್ರೀಕರೂ ಇತರರಿಗೆ ಪೌರತ್ವ ನೀಡಿದುದುಂಟು.

ಪಾಶ್ಚಾತ್ಯ ದೇಶಗಳಲ್ಲಿ ಈಗ ಎರಡು ಬಗೆಯ ಪೌರತ್ವಗಳಿವೆ. ಇಂಗ್ಲಿಷ್ ದಂಪತಿಗೆ ಅಮೆರಿಕದಲ್ಲಿರುವಾಗ ಮಗು ಜನಿಸಿದರೆ ಜನನ ಮೂಲದ ಪ್ರಕಾರ ಅದಕ್ಕೆ ಇಂಗ್ಲಿಷ್ ಪೌರತ್ವ ಸಿಗುತ್ತದೆ. ಆದರೆ ಆ ಮಗು ಅಮೆರಿಕದಲ್ಲಿ ಜನಿಸಿದ್ದು. ಸ್ಥಾನಮೂಲದ ಪ್ರಕಾರವಾದರೆ ಅದು ಅಮೆರಿಕದ ಪೌರನಾಗುತ್ತದೆ. ಹೀಗೆ ಒಬ್ಬ ವ್ಯಕ್ತಿ ಎರಡು ದೇಶಗಳ ಪೌರನಾಗಿರಲು ಸಾಧ್ಯ. ತನ್ನ ತಂದೆ ತಾಯಿಗಳ ದೇಶಕ್ಕೆ ವ್ಯಕ್ತಿ ಹಿಂದಿರುಗಿದರೆ ಜನನ ಮೂಲ ಪೌರತ್ವ ಒಂದೇ ಉಳಿಯುತ್ತದೆ. ಹುಟ್ಟಿದ ದೇಶದಲ್ಲಿಯೇ ಉಳಿದು ತನಗೆ ಜನನ ಮೂಲ ಸೌಲಭ್ಯ ಬೇಡವೆಂದು ಪ್ರಾಪ್ತವಯಸ್ಸಿಗೆ ಬಂದ ವ್ಯಕ್ತಿ ಇಚ್ಛೆಪಟ್ಟರೆ ಸ್ಥಾನ ಮೂಲ ಪೌರತ್ವ ಉಳಿಯುತ್ತದೆ. ಎರಡು ಪೌರತ್ವಗಳನ್ನೂ ಉಳಿಸಿಕೊಂಡಲ್ಲಿ ಯುದ್ಧ ಮುಂತಾದ ಆಕಸ್ಮಿಕ ಸಮಯಗಳಲ್ಲಿ ಎರಡು ದೇಶಗಳು ಆತನ ಸೇವೆಯನ್ನು ಬಯಸಬಹುದು.

ಹೆಂಗಸು ಮತ್ತೊಂದು ದೇಶದ ಪೌರನನ್ನು ವಿವಾಹವಾದರೆ ತನ್ನ ಜನ್ಮಭೂಮಿಯ ಪೌರತ್ವವನ್ನು ಕಳೆದುಕೊಳ್ಳುತ್ತಾಳೆ. ಸ್ತ್ರೀಪುರುಷರು ತಮ್ಮ ದೇಶವನ್ನು ಬಿಡಲು ಉದ್ದೇಶಿಸಿ ಮತ್ತೊಂದು ದೇಶದಲ್ಲಿ ಅನಿರ್ದಿಷ್ಟಕಾಲ ಅಥವಾ ಸ್ಥಿರವಾಗಿ ವಾಸಿಸಬೇಕೆಂದು ನಿರ್ಧರಿಸಿ ಅಲ್ಲಿ ನೆಲಸಿದರೆ, ತಮ್ಮ ದೇಶದ ಪೌರತ್ವ ಕಳೆದುಕೊಳ್ಳುತ್ತಾರೆ. ಆ ನಡುವೆ ತಾವು ನೆಲೆಸಿದ ದೇಶದ ಪೌರತ್ವವನ್ನು ಪಡೆಯದಿದ್ದರೆ, ಮುಂದೆ ಆ ದೇಶ ಪೌರತ್ವವನ್ನು ನೀಡದಿದ್ದರೆ, ಅವರಿಗೆ ಪೌರತ್ವ ಇಲ್ಲದಂತಾಗುತ್ತದೆ.

ಸ್ವದೇಶವನ್ನು ಬಿಟ್ಟು ಬಂದು ಬಹಳ ಕಾಲ ಮತ್ತೊಂದು ದೇಶದಲ್ಲಿ ಬಾಳ ಬಯಸುವವರು ಆ ದೇಶದ ಪೌರತ್ವವನ್ನು ಪಡೆಯಬಹುದು. ಒಂದು ದೇಶದ ಪ್ರಜೆ ಮತ್ತೊಂದು ದೇಶದ ಪ್ರಜೆಯಾಗುವ ವಿಧಾನಕ್ಕೆ ಪೌರತ್ವ ನೀಡಿಕೆ ಎಂದು ಹೆಸರು.

ಯಾರು ಯಾವಾಗ ಬೇಕಾದರೂ ತಮ್ಮ ರಾಷ್ಟ್ರೀಯತೆಯನ್ನು ಬದಲಿಸಿಕೊಳ್ಳುವಂತಿಲ್ಲ. ಅದಕ್ಕೆ ಕೆಲವು ನಿಯಮಗಳುಂಟು. ಭಾರತದ ಪೌರತ್ವ ದೊರೆಯಬೇಕಾದರೆ ಕೆಳಗೆ ಕಾಣಿಸಿದ ನಿಯಮಗಳನ್ನು ಪೂರೈಸಬೇಕು :

1. ತನ್ನ ಜನ್ಮಭೂಮಿಯನ್ನು ಬಿಟ್ಟು ಭಾರತದ ಪ್ರಜೆಯಾಗ ಬಯಸುವವನು ತನ್ನ ಹಿಂದಿನ ರಾಷ್ಟ್ರದ ಬಗೆಗೆ ತನಗಿದ್ದ ನಿಷ್ಠೆಯನ್ನು ತೊರೆದು ಹೊಸ ರಾಷ್ಟ್ರಕ್ಕೆ ಅದನ್ನು ಮೀಸಲಿಡುತ್ತೇನೆ ಎಂದು ಘೋಷಿಸಬೇಕು.

2. ಯಾವ ರಾಷ್ಟ್ರ ಭಾರತದ ಪ್ರಜೆಗೆ ಪೌರತ್ವ ನೀಡುವುದೋ ಅಂಥ ರಾಷ್ಟ್ರದ ಪ್ರಜೆಗೆ ಮಾತ್ರ ಭಾರತ ಪೌರತ್ವ ನೀಡುವುದು.

3. ಪೌರತ್ವ ಬೇಕೆಂದು ಅರ್ಜಿಹಾಕಿದ ದಿನದಿಂದ ಹಿಂದೆ ಒಂದು ವರ್ಷ ಕಾಲ ಅವನು ಭಾರತದಲ್ಲೇ ಇದ್ದಿರಬೇಕು. ಒಟ್ಟು ಅವನು ಭಾರತದಲ್ಲಿ ನಾಲ್ಕು ವರ್ಷ ನೆಲೆಸಿರಬೇಕು.

4. ಭಾರತದ ಯಾವುದಾದರೊಂದು ಭಾಷೆಯಲ್ಲಿ ಮಾತನಾಡುವ ಶಕ್ತಿಯಿರಬೇಕು.

5. ಅವನ ನಡತೆ ಉತ್ತಮವಾಗಿರಬೇಕು.

ಭಾರತದ ಪೌರನೊಬ್ಬ ಅಧಿಕೃತ ಅಧಿಕಾರಿಯ ಮುಂದೆ ತನಗೆ ಭಾರತದ ಪೌರತ್ವ ಬೇಡವೆಂದು ಹೇಳಿಕೆ ನೀಡಿದರೆ ಪೌರತ್ವ ಕಳೆದುಕೊಳ್ಳುತ್ತಾನೆ. ಯುದ್ಧ ನಡೆದಿರುವಾಗ ಅವನು ಬೇರೆ ರಾಷ್ಟ್ರದ ಪೌರತ್ವ ಪಡೆದರೂ ಅದನ್ನು ಭಾರತ ಸರಕಾರ ಮನ್ನಿಸುವುದಿಲ್ಲ. ಸಂವಿಧಾನಕ್ಕೆ ವಿರುದ್ಧವಾಗಿ ನಡೆಯುವುದು ಅಥವಾ ವೈರಿಗೆ ನೆರವು ಕೊಡುವುದು ಇಂಥವನ್ನು ಭಾರತದ ಪೌರ ಮಾಡಿದರೆ, ಭಾರತ ಸರಕಾರ ಅವನ ಪೌರತ್ವವನ್ನು ರದ್ದುಪಡಿಸಬಹುದು.

ಭಾರತದ ಪೌರ ಯಾವುದೇ ರಾಷ್ಟ್ರದ ಪೌರತ್ವವನ್ನು ಪಡೆದ ಕೂಡಲೇ ಇಲ್ಲಿನ ಪೌರತ್ವವನ್ನು ಕಳೆದುಕೊಳ್ಳುತ್ತಾನೆ. ಪೌರತ್ವವನ್ನು ಒಬ್ಬ ವ್ಯಕ್ತಿಗೆ ಅಥವಾ ಒಟ್ಟಾಗಿ ಒಂದು ಗುಂಪಿಗೆ ನೀಡಬಹುದು. ಹೊಸ ಪ್ರದೇಶ ಒಂದು ರಾಷ್ಟ್ರಕ್ಕೆ ಸೇರಿದರೆ ಅಲ್ಲಿನ ಸರಕಾರದ ಆಜ್ಞೆಯಂತೆ ಆ ಪ್ರದೇಶದ ಜನರೆಲ್ಲರಿಗೂ ಪೌರತ್ವ ದೊರೆಯುತ್ತದೆ.

ಪೌರತ್ವದ ಯಾವುದೇ ನಿಯಮಗಳನ್ನು ಮಾಡುವುದಕ್ಕೂ ಬಿಡುವುದಕ್ಕೂ ಎಲ್ಲ ದೇಶಗಳಿಗೂ ಪೂರ್ಣ ಸ್ವಾತಂತ್ರ್ಯವಿದೆ.

ರಾಜಕೀಯ ಹಕ್ಕುಬಾಧ್ಯತೆಗಳಿರುವ ಸಮಾಜದ ಸದಸ್ಯತ್ವ ಪೌರನ ಲಕ್ಷಣ. ಪೌರ ನೀಡುವ ಮತಕ್ಕೆ, ಅವನ ಅಭಿಪ್ರಾಯಕ್ಕೆ ರಾಜಕೀಯ ಸಮುದಾಯದಲ್ಲಿ ಬೆಲೆಯಿದೆ. ಪೌರತ್ವದಿಂದ ವ್ಯಕ್ತಿಗೆ ಲಭ್ಯವಿರುವ ಆಗಲೇ ಬೇಕಾದ ಅನುಕೂಲತೆಗಳನ್ನು ಹಕ್ಕುಗಳೆನ್ನುತ್ತೇವೆ. ತನಗೆ ಇಷ್ಟಬಂದ ವೃತ್ತಿಯನ್ನು ಹಿಡಿಯುವುದು, ಶಿಕ್ಷಣ ಪಡೆಯುವುದು, ತನಗೆ ಬೇಕಾದವರಿಗೆ ಮತ ನೀಡುವುದು ಮುಂತಾದುವು ಪೌರನ ಹಕ್ಕುಗಳು. ಪೌರನಾದವನಿಗೆ ತನ್ನ ಹಕ್ಕುಗಳಲ್ಲಿರುವಷ್ಟೇ ಆಸಕ್ತಿ ತನ್ನ ಹೊಣೆಯಲ್ಲಿರಬೇಕು. ಯಾವ ಆಸೆಗೂ ಒಳಗಾಗದೆ, ಸಂಕುಚಿತ ಅಭಿಪ್ರಾಯಗಳಿಗೆ ತಲೆಬಾಗದೆ, ದೇಶದ ಹಿತದೃಷ್ಟಿಯಿಂದ ಮತದಾನ ಮಾಡುವುದು, ದೇಶದ ಆಡಳಿತ ಹೇಗೆ ನಡೆಯುತ್ತಿದೆ ಎನ್ನುವುದನ್ನು ಎಚ್ಚರಿಕೆಯಿಂದ ಗಮನಿಸಿ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸುವುದು, ದೇಶದ ರಕ್ಷಣೆಗೆ ನೆರವಾಗುವುದು, ದೇಶಕ್ಕೆ ಅಹಿತವಾಗುವಂತೆ ವರ್ತಿಸದಿರುವುದು, ದೇಶದ ಸ್ವತ್ತನ್ನು ರಕ್ಷಿಸುವುದು, ತಾನು ಸಲ್ಲಿಸಬೇಕಾದ ತೆರಿಗೆಯನ್ನು ಕೊಡುವುದು—ಇವು ಅವನ ಹೊಣೆಗಳಲ್ಲಿ ಕೆಲವು. ಪೌರರು ಪಡೆಯುವ ಸೌಲಭ್ಯಗಳೆಲ್ಲ ಅವರು ತೆತ್ತ ತೆರಿಗೆಯಿಂದ ಬರುತ್ತವೆ.

ನೋಡಿ : ಗೌರವ ಪೌರತ್ವ

## ಫ್ರಾನ್ಸ್

ವಾಯುವ್ಯ ಫ್ರಾನ್ಸಿನಲ್ಲಿ ಛಾರ್ಟರ್ಸ್ ಎಂಬ ಒಂದು ಪಟ್ಟಣ. ಜನಸಂಖ್ಯೆ ಸುಮಾರು 35.000. ಇಲ್ಲಿನ ಕ್ರೈಸ್ತ ದೇವಾಲಯಗಳಲ್ಲಿ ಎರಡು ಸಾವಿರಕ್ಕೂ ಹೆಚ್ಚು ಸುಂದರ ಶಿಲ್ಪಕೃತಿಗಳಿವೆ. ಇವನ್ನು ನಿಧಾನವಾಗಿ ಪರೀಕ್ಷಿಸಿ ಅಭ್ಯಾಸಮಾಡಲು ಒಂದು ಜೀವಮಾನ ಸಾಲದು.

ಫ್ರಾನ್ಸಿನ ನಿಸರ್ಗ ಸೌಂದರ್ಯ ಕಣ್ಣಿಗೆ ಹಬ್ಬ. ಅದಕ್ಕೆ ಸಂಗಟ್ಟುವ ಸೌಂದರ್ಯವನ್ನು ಕಲ್ಲಿನಲ್ಲಿ, ಮಣ್ಣಿನಲ್ಲಿ ಸೃಷ್ಟಿಸಿದ್ದಾರೆ ಇಲ್ಲಿಯ ಕಲೆಗಾರರು. ಸೌಂದರ್ಯ, ಸಂತೋಷ ಇವು ಫ್ರಾನ್ಸಿನ ಜನರ ನಿತ್ಯಜೀವನದಲ್ಲಿ ಹಾಸುಹೊಕ್ಕಾಗಿವೆ. ಜನ ಕಲಾಪ್ರಿಯರು. ಆಮೋದಪ್ರಿಯರು. ವರ್ಣಚಿತ್ರರು. [illegible]

ಅಧಿಕಾರಾವಧಿಯಲ್ಲಿ ತೆರಿಗೆ ವಸೂಲಿ. ನ್ಯಾಯಾಂಗ. ಆಡಳಿತ ಎಲ್ಲ ಹೊಸ ಸ್ವರೂಪ ಪಡೆದುವು. ವಾಟರ್‌ಲೂ ಕದನದ ಅನಂತರ ಫ್ರಾನ್ಸ್ ಪುನಃ ರಾಜರ ಆಳ್ವಿಕೆಗೆ ಒಳಗಾಯಿತು. 1830ರಿಂದ 1848ರ ವರೆಗೆ ಕ್ರಾಂತಿಯಾಯಿತು. ಆಗ ಎರಡನೆಯ ಗಣರಾಜ್ಯ ಸ್ಥಾಪಿತವಾಯಿತು. ನೆಪೋಲಿಯನನ ಸೋದರ ಅಳಿಯ ಗಣರಾಜ್ಯದ ಮುಂದಾಳಾಗಿದ್ದವನು ಫ್ರಾನ್ಸಿನ ಚಕ್ರವರ್ತಿಯಾದ. 1870ರಲ್ಲಿ ಪ್ರಷ್ಯದೊಡನೆ ಯುದ್ಧಕ್ಕೆ ಹೋಗಿ ಸೋಲುಂಟಾಯಿತು. ಪುನಃ ಫ್ರಾನ್ಸ್ ಗಣರಾಜ್ಯವಾಯಿತು.




ಮುಂದಿನ ನಲವತ್ತು ವರ್ಷಗಳ ಕಾಲ ಫ್ರಾನ್ಸ್ ಶಾಂತಿಯ ಮಡಿಲಿನಲ್ಲಿ ಸಂಪದ್ಭರಿತವಾಯಿತು. ಆಫ್ರಿಕ ಹಾಗೂ ಏಷ್ಯಗಳಲ್ಲಿದ್ದ ತನ್ನ ವಸಾಹತುಗಳನ್ನು ದರ್ಪದಿಂದಲೂ ಚಾಕಚಕ್ಯದಿಂದಲೂ ಆಳಿತು. ಮುಂದೆ ಎರಡು ಜಾಗತಿಕ ಯುದ್ಧಗಳಲ್ಲಿ ಫ್ರಾನ್ಸ್ ಬಹಳ ಕಷ್ಟ ಸಹಿಸಬೇಕಾಯಿತು.

ಜರ್ಮನರನ್ನು ಓಡಿಸಿದಮೇಲೆ 1944ರಲ್ಲಿ ದ ಗಾಲ್ ಅಧಿಕಾರ ವಹಿಸಿಕೊಂಡು ತಾತ್ಕಾಲಿಕ ಸರಕಾರವೊಂದನ್ನು ರಚಿಸಿದರು. 1944ರಿಂದ 1958ರ ಅವಧಿಯಲ್ಲಿ ಫ್ರಾನ್ಸಿನಲ್ಲಿ ಇಪ್ಪತ್ತೈದು ಬೇರೆ ಬೇರೆ ಸರಕಾರಗಳಾದುವು. ಅನೇಕ ರಾಜಕೀಯ ಪಕ್ಷಗಳಿದ್ದು ಯಾವುದೊಂದೂ ಪ್ರಬಲವಾಗಿರಲಿಲ್ಲ. ಜನರಲ್ಲಿ ಅತೃಪ್ತಿ ಮೂಡಿ ಗಲಭೆಗಳು ಆರಂಭವಾದುವು. ವಿದೇಶದ ವಸಾಹತುಗಳು ಸ್ವಾತಂತ್ರ್ಯಕ್ಕಾಗಿ ಚಳುವಳಿ ಹೂಡಿದುವು. 1946ರಿಂದ 1954ರ ವರೆಗೆ ಇಂಡೊಚೀನದಲ್ಲೂ 1954ರಲ್ಲಿ ಅಲ್ಜೀರಿಯದಲ್ಲೂ ದಂಗೆಗಳಾದುವು. 1958ರಲ್ಲಿ ಅಲ್ಜೀರಿಯದ ಪರಿಸ್ಥಿತಿ ವಿಷಮಗೊಂಡಿತು.

1959ರಲ್ಲಿ ದ ಗಾಲ್ ಮತ್ತೆ ಅಧ್ಯಕ್ಷರಾದರು : 1968ರಲ್ಲಿ ನಿವೃತ್ತರಾದರು.

ವೆಸ್ಟ್ ಇಂಡೀಸ್ ದ್ವೀಪಗಳು. ಭಾರತದ ವಾಣಿಜ್ಯ ಕೇಂದ್ರಗಳು ಕೆಲವು. ಫ್ರೆಂಚ್ ಗಿನಿ. ಮಡಗಾಸ್ಕರ್. ಇಂಡೊಚೀನ ಪರ್ಯಾಯದ್ವೀಪ. ಸೋಮಾಲಿಲ್ಯಾಂಡ್. ಸೆನೆಗಲ್. ಅಲ್ಜೀರಿಯ. ಶಾಂತಸಾಗರದ ಅನೇಕ ದ್ವೀಪಗಳು. ಕಾಂಗೋ. ಫ್ರೆಂಚ್ ಈಕ್ವಟೋರಿಯಲ್ ಆಫ್ರಿಕ. ಐವರಿ ಕೋಸ್ಟ್. ಟ್ಯುನೀಷಿಯ. ಮೊರಾಕೊ. ಇವೆಲ್ಲವೂ ಫ್ರಾನ್ಸಿನ ಅಧೀನಕ್ಕೆ ಒಳಪಟ್ಟ ವಸಾಹತುಗಳು. ಇವುಗಳಲ್ಲಿ ಇಂಡೊಚೀನ. ಆಫ್ರಿಕದ ವಸಾಹತುಗಳು. ಅಲ್ಜೀರಿಯ. ಸೆನೆಗಲ್. ಭಾರತದ ಭಾಗಗಳು ಸ್ವಾತಂತ್ರ್ಯ ಪಡೆದುವು.

ಫ್ರಾನ್ಸ್ ಗಣರಾಜ್ಯ. ಅಧ್ಯಕ್ಷರು ಪ್ರಮುಖ ಆಡಳಿತಾಧಿಕಾರಿ. ಪ್ರಧಾನ ಮಂತ್ರಿಯೂ ಮಂತ್ರಿ ಸಂಪುಟವೂ ಆಡಳಿತಕ್ಕೆ ಹೊಣೆಗಾರರು.

ನೋಡಿ : ಜೋನ್ ದ ಆರ್ಕ್ : ದ ಗಾಲ್. ಚಾರ್ಲ್ಸ್ : ನೆಪೋಲಿಯನ್ ಬೋನಾಪಾರ್ಟ್ : ಪ್ಯಾರಿಸ್.

## ಫ್ರಾನ್ಸಿನ ಮಹಾಕ್ರಾಂತಿ

ಸ್ವಾತಂತ್ರ್ಯ, ಸಮಾನತೆ ಮತ್ತು ಸಹೋದರತ್ವ—ಈ ಘೋಷವನ್ನು ಜಗತ್ತಿನಲ್ಲಿ ಪ್ರಥಮ ಬಾರಿಗೆ ಮೊಳಗಿಸಿದ್ದು ಫ್ರಾನ್ಸಿನ ಮಹಾಕ್ರಾಂತಿ (1789). ಆ ಕ್ರಾಂತಿ ನಡೆದದ್ದು ನಿರಂಕುಶ ಅರಸೊತ್ತಿಗೆಯ ವಿರುದ್ಧ, ರೂಢಮೂಲ ಸಮಾಜ ವ್ಯವಸ್ಥೆಯ ವಿರುದ್ಧ.

ಹದಿನೆಂಟನೆಯ ಶತಮಾನದಲ್ಲಿ ಫ್ರಾನ್ಸಿನ ಸ್ಥಿತಿ ಬಹಳ ಶೋಚನೀಯವಾಗಿತ್ತು. ನಿರಂಕುಶಪ್ರಭುಗಳು ಜನರ ಹಿತವನ್ನಾಗಲಿ. ಅವರ ಕಷ್ಟಸುಖಗಳನ್ನಾಗಲಿ ಗಮನಿಸುತ್ತಿರಲಿಲ್ಲ. ದೇಶದ ಸಂಪತ್ತು ಶ್ರೀಮಂತರಲ್ಲಿ ಸಂಗ್ರಹಿತವಾಗಿತ್ತು. ಜನಸಾಮಾನ್ಯರು ಬಡತನ ಸಂಕಟದಲ್ಲಿ ನರಳುತ್ತಿದ್ದರು.

ಫ್ರಾನ್ಸಿನ ಅರಸ ಹದಿನಾಲ್ಕನೆಯ ಲೂಯಿ (1638–1715) ರಾಜ್ಯ ಭಗವಂತ ವಹಿಸಿಕೊಟ್ಟ ತನ್ನ ಸ್ವಂತ ಆಸ್ತಿ ಎಂದೇ ತಿಳಿದುಕೊಂಡಿದ್ದ. ರಾಜನಿಗೆ ಪ್ರಜೆಗಳ ಆಸ್ತಿಯ ಮೇಲೆ ಮಾತ್ರವಲ್ಲ. ಪ್ರಾಣದ ಮೇಲೂ ಸಂಪೂರ್ಣ ಹಕ್ಕುಂಟು ಎಂದು ಇವನು ನಂಬಿದ್ದ. ಒಮ್ಮೆ ಯಾರೋ “ದೇಶ ಏನೆನ್ನುತ್ತದೆ ?” ಎಂದಾಗ “ದೇಶ ? ದೇಶ ? ನಾನೇ ದೇಶ” ಎಂದ ಈ ಭೂಪ. ತನ್ನ ಅಧಿಕಾರ. ಸುಖ, ವೈಭವ ಇವೇ ಮುಖ್ಯವಾಗಿದ್ದುವು ಅವನಿಗೆ.

ಅವನ ಮಂತ್ರಿಗಳಲ್ಲಿ ಕಾಲ್‌ಬರ್ಟ್‌ನಂಥ ಸಮರ್ಥರೂ ಇದ್ದರು. ಇವರಲ್ಲಿ ಕೆಲವರು ಕೈಗಾರಿಕೆಗಳಿಗೆ ಉತ್ತೇಜನ ಕೊಟ್ಟರು. ಭೂಸೈನ್ಯ. ನೌಕಾದಳಗಳನ್ನು ಉತ್ತಮಗೊಳಿಸಿದರು ; ಆಡಳಿತದ ವ್ಯವಸ್ಥೆಯನ್ನು ಸುಧಾರಿಸಿದರು. ಇವನ ಕಾಲದಲ್ಲಿ ಸಾಹಿತಿಗಳಿಗೆ ಮತ್ತು ಕಲಾವಿದರಿಗೆ ಪ್ರೋತ್ಸಾಹವಿತ್ತು. ಆದರೂ ಇವನದು ನಿರಂಕುಶಪ್ರಭುತ್ವ. ಕ್ಯಾಥಲಿಕರಲ್ಲದವರಿಗೆ ತುಂಬ ಕಿರುಕುಳ ಕೊಟ್ಟ. ಸಾವಿರಾರು ಮಂದಿ ಪ್ರಾಟೆಸ್ಟಂಟರು ಫ್ರಾನ್ಸ್ ಬಿಟ್ಟು ಓಡಿಹೋದರು. ದೆಕಾರ್ತ್ ಎಂಬ ಪ್ರತಿಭಾ

ನಿಂತ ತನ್ನ ತಾನ್ನ ಇವನ ರಾಜ್ಯದಲ್ಲಿದ್ದ. ಆದರೆ ತನ್ನ ಪುಸ್ತಕಗಳನ್ನು ಫ್ರಾನ್ಸಿನಲ್ಲಿ ಪ್ರಕಟಿಸಲು ಲೂಯಿ ಆತನಿಗೆ ಅವಕಾಶ ಕೊಡಲಿಲ್ಲ. ತನ್ನ ಮಾವರಕ್ಷೆಯ ಹಿಮ್ಮತಿಗೆ ಪತ್ರಗಳನ್ನು ಹಾಕಿಸಿ ಹದಿನಾಲ್ಕನೆಯ ಲೂಯಿ. ಜನರ ಕಷ್ಟನಿವಾರಣೆಗಾಗಲಿ ದೇಶದ ವ್ಯಾಪಾರ ವಾಣಿಜ್ಯಗಳಿಗಾಗಲಿ ಗಮನ ಕೊಡಲಿಲ್ಲ. ತನ್ನ ಅಧಿಕಾರವಾದಕ್ಕಾಗಿ ಇತರ ರಾಜ್ಯಗಳೊಡನೆ ಯುದ್ಧ ಮಾಡಿ ದೇಶದ ಹಣವನ್ನು ಹಾಳುಮಾಡಿದ. ತನ್ನ ವೈಭವಕ್ಕಾಗಿ ಶ್ರೀಮಂತ ವರ್ಗದವರು ಸದಾ ತನ್ನೊಡನಿರಬೇಕೆಂದು ವಿಧಿಸಿ ಅವರಿಗೂ ರೈತರಿಗೂ ಇದ್ದ ನೇರವಾದ ಸಂಪರ್ಕವನ್ನು ಕಡಿದುಹಾಕಿದ. ಇವನೂ ಇವನ ಅನಂತರ ಬಂದ 15ನೆಯ ಲೂಯಿ ಮತ್ತು 16ನೆಯ ಲೂಯಿ ಬೊಕ್ಕಸ ಬರಿದಾದಾಗ ಹೊರಲಾಗದ ತೆರಿಗೆಗಳನ್ನು ಜನಸಾಮಾನ್ಯರ ಮೇಲೆ ಹಾಕುತ್ತಿದ್ದರು. ಪಾದ್ರಿಗಳಿಗೆ ಮತ್ತು ಶ್ರೀಮಂತರಿಗೆ ಮಾತ್ರ ತೆರಿಗೆ ಇರಲಿಲ್ಲ. ಜನಾಭಿಪ್ರಾಯಕ್ಕೆ ಮನ್ನಣೆ ಇರಲೇ ಇಲ್ಲ. ಈ ಎಲ್ಲ ಕಾರಣಗಳಿಂದ 1789ರ ವೇಳೆಗೆ ಫ್ರಾನ್ಸಿನ ಜನರು ಅತ್ಯಂತ ಕಷ್ಟಸ್ಥಿತಿಯಲ್ಲಿದ್ದರು.

ಸುಮಾರು 175 ವರ್ಷ ಕಾಲ ಪ್ರಜೆಗಳ ಪ್ರತಿನಿಧಿಗಳ ಸಭೆಯನ್ನು ಪ್ರಭುಗಳು ಕರೆದಿರಲಿಲ್ಲ ; ಹದಿನಾರನೆಯ ಲೂಯಿ ಅಂಥದೊಂದು ಸಭೆಯನ್ನು ಕರೆದ. ಚುನಾಯಿತರಾದ ಜನತೆಯ ಪ್ರತಿನಿಧಿಗಳು. ಕೆಲವುಕಾಲದ ಅನಂತರ ಫ್ರಾನ್ಸ್ ತನ್ನದೇ ಆದ ಸುವಿಧಾನ ಒಂದನ್ನು ಪಡೆದಿರಬೇಕೆಂದೂ ಸರಕಾರವನ್ನು ಸಂವಿಧಾನಬದ್ಧವಾಗಿ ನಡೆಸಬೇಕೆಂದೂ ರಾಜನು ಅದಕ್ಕೆ ತಲೆಬಾಗಬೇಕೆಂದೂ ಒತ್ತಾಯಪಡಿಸಿದರು. ಈ ಒತ್ತಾಯಕ್ಕೆ ಹೆದರಿದ ಹದಿನಾರನೆಯ ಲೂಯಿ ಪ್ರತಿನಿಧಿಗಳ ಗುಂಪನ್ನು ವಿಸರ್ಜಿಸಿ, "ನಿಮ್ಮ ಕೆಲಸ ಮುಗಿಯಿತು" ಎಂದು ಹೇಳಿದ. ಆದರೆ ಅವರು ಸುಮ್ಮನೆ ಕೂಡಲಿಲ್ಲ. 'ರಾಷ್ಟ್ರೀಯ ಸಭೆ' ಎಂಬ ಹೆಸರಿನಲ್ಲಿ ಕಾರ್ಯಾಚರಣೆಗೆ ತೊಡಗಿದರು. ಫ್ರಾನ್ಸಿನಾದ್ಯಂತ ಜನರು ತಮ್ಮ ಆಡಳಿತಗಾರರಿಗೆ ಎದುರುಬಿದ್ದರು. ಈ ವಿಪ್ಲವ 1789ನೆಯ ಮೇ 5ನೆಯ ದಿನಾಂಕ ಆರಂಭವಾಯಿತು. 'ಮಾನವನ ಹಕ್ಕುಗಳ ಘೋಷಣೆ' ಯೊಂದನ್ನು ರಾಷ್ಟ್ರೀಯ ಸಭೆ ಹೊರಡಿಸಿತು. 'ಸ್ವಾತಂತ್ರ್ಯ, ಮತ್ತು ಸಮಾನತೆ ಮತ್ತು ಸಹೋದರತ್ವ' ತನ್ನ ಧ್ಯೇಯ ಎಂದು ಆ ಘೋಷಣೆಯಲ್ಲಿ ಅದು ಸಾರಿತು. ಜನರು ಚರ್ಚ್ ಮತ್ತು ಪಾದ್ರಿಗಳ ಅಧಿಕಾರವನ್ನು ಕಸಿದುಕೊಂಡು ಅವರ ಆಸ್ತಿಗಳನ್ನು ಮುಟ್ಟುಗೋಲು ಹಾಕಿದರು. ಅಕ್ಟೋಬರ್ ತಿಂಗಳಿನಲ್ಲಿ, ಪಟ್ಟಣದ ಹೊರಗೆ ವಾಸಿಸುತ್ತಿದ್ದ ಲೂಯಿ ಮತ್ತು ಅವನ ಕುಟುಂಬವನ್ನು ಜನರ ಗುಂಪೊಂದು ಪ್ಯಾರಿಸ್‌ಗೆ ಕರೆದುಕೊಂಡು ಬಂದಿತು.

ಹದಿನಾರನೆಯ ಲೂಯಿ ಕೆಟ್ಟವನಾಗಿರಲಿಲ್ಲ. ಆದರೆ ತುಸು ಮೂರ್ಖನಾಗಿದ್ದ. ಆತ ಗದ್ದುಗೆ ಏರಿದ ಸಮಯದಲ್ಲಿ ಫ್ರಾನ್ಸಿನ ಜನತೆ ತಮ್ಮ ಭವಿಷ್ಯ ಸ್ವಲ್ಪ ಮಟ್ಟಿಗಾದರೂ ಉತ್ತಮಗೊಳ್ಳಬಹುದೆಂದು ಭಾವಿಸಿದ್ದಿತು. ಅವನೂ ಕೈಲಾದಷ್ಟು ಪ್ರಯತ್ನಮಾಡಬೇಕೆಂದಿದ್ದ. ಆದರೆ ಪರಿಸ್ಥಿತಿ ಆ ವೇಳೆಗೆ ಹದಗೆಟ್ಟಿತ್ತು. ಅಲ್ಲದೆ ಸ್ವಾರ್ಥದ ಮೂರ್ತಿಯೆನ್ನುತಿದ್ದ ಅವನ ಅವಿವೇಕಿ ಹೆಂಡತಿ ಮೇರಿ ಆಂಟನೆಟಳ ಸಹಕಾರ ಅವನಿಗೆ ಸ್ವಲ್ಪವೂ ದೊರಕಲಿಲ್ಲ. ವಿಲಾಸಜೀವನವೇ ಸರ್ವಸ್ವ ಎಂದು ಭಾವಿಸಿದ್ದ ಮೇರಿ ಜನರ ಕಾರ್ಪಣ್ಯಗಳನ್ನು ತೃಣಸಮಾನವಾಗಿ ಕಂಡು ಹಣವನ್ನು ತನ್ನ ಉಡುಪು ಮತ್ತು ಶೃಂಗಾರ ಸಾಧನಗಳಿಗೆ ನೀರಿನಂತೆ ಖರ್ಚುಮಾಡುತ್ತಿದ್ದಳು. "ಜನರಿಗೆ ತಿನ್ನಲು ರೊಟ್ಟಿ ಇಲ್ಲ" ಎಂದಾಗ, "ಹಾಗಾದರೆ ಕೇಕ್ ತಿನ್ನಲಿ" ಎಂದು ಉತ್ತರಿಸಿದ ವಿಲಕ್ಷಣ ರಾಣಿ ಆಂಟನೆಟ್ ; ಪ್ರಜೆಗಳಿಗೆ ದೊರೆಯ ಮೇಲೆ ಉಂಟಾದ ಅಸಮಾಧಾನಕ್ಕೆ ಅವನ ಅರಸಿಯ ದುಂದುಗಾರಿಕೆ, ಸ್ವಾರ್ಥ ಮನೋಭಾವ ಕೂಡಾ ಕಾರಣ.

1791ನೆಯ ಜೂನ್ 20 ರಂದು ಫ್ರಾನ್ಸ್ ಈ ಗಲಭೆಗಳಿಂದ ಮುಕ್ತವಾಗಿ ಶಾಂತವಾಗುವ ಮೊದಲೇ ಲೂಯಿ ದೊರೆ ಮತ್ತು ಅವನ ಕುಟುಂಬದವರು ಪ್ಯಾರಿಸಿನಿಂದ ತಪ್ಪಿಸಿಕೊಳ್ಳಲು ಪ್ರಯತ್ನಮಾಡಿ ವಿಫಲರಾದರು. ಹೊಸ ವಿಚಾರಗಳಲ್ಲಿ ಅರಸನಿಗೆ ಇಷ್ಟವಿಲ್ಲ ಎನ್ನುವುದಕ್ಕೆ ಈ ನಡತೆಯಿಂದ ಪುಷ್ಟಿದೊರೆತು ಫ್ರಾನ್ಸಿನಲ್ಲಿ ಅಪಾರ ಬದಲಾವಣೆಗಳು ಆಗತೊಡಗಿದುವು. ತಮಗೆ ರಾಜನ ಅವಶ್ಯತೆಯೇ ಇಲ್ಲವೆಂದು ಜನರು ಭಾವಿಸಲಾರಂಭಿಸಿದರು. ರಾಜನಿಗೆ ಬೆಂಬಲ ನೀಡುವ ನೆಪದಿಂದ ಫ್ರಾನ್ಸನ್ನು ಆಕ್ರಮಿಸಲು ಬಂದ ಆಸ್ಟ್ರಿಯ ಮತ್ತು ಪರ್ಷಿಯಗಳ ವಿರುದ್ಧ ಯುದ್ಧ ಪ್ರಾರಂಭವಾಯಿತು. ಈ ಆಕ್ರಮಣದ ಹಿಂದೆ ಲೂಯಿಯ ಮತ್ತು ಅವನ ಪತ್ನಿ ಮೇರಿ ಆಂಟನೆಟ್‌ಳ ಕೈವಾಡವೂ ಇದೆ ಎಂಬ ಸಂಶಯ ಜನರಲ್ಲಿ ಮೂಡಿತು. ಅವರ ಸಿಟ್ಟು ಎಲ್ಲೆಮೀರಿತು. ಕಲ್ಲು ಕಟ್ಟಡದ ಬ್ಯಾಸ್ಟಿಲ್ ಎನ್ನುವ ಸೆರೆಮನೆಯಲ್ಲಿ ಹಲವರು ಕೈದಿಗಳು ಕೊಳೆಯುತ್ತಿದ್ದರು. ಬ್ಯಾಸ್ಟಿಲ್ ಹೆಸರು ಕೇಳಿದರೆ ಜನರಿಗೆ ದ್ವೇಷ ಕುದಿಯುತ್ತಿತ್ತು. 'ಬ್ಯಾಸ್ಟಿಲ್' ಎಂದರೆ ದುರ್ಗಮವಾದ ಕಟ್ಟಡ. ಕಟ್ಟಡದ ಸುತ್ತ ಸುಮಾರು

ಜನರ ದ್ವೇಷಕ್ಕೆ ಪಾತ್ರವಾಗಿದ್ದ ಬ್ಯಾಸ್ಟಿಲ್ ಪತನ



36 ಮೀಟರುಗಳ ಅಗಲದ ಕಂದಕ. ಕಟ್ಟಡಕ್ಕೆ ಎಂಟು ಗೋಪುರಗಳು; ಪ್ರತಿಯೊಂದರಲ್ಲಿಯೂ ಎಪ್ಪತ್ತು ಸಣ್ಣ ಕತ್ತಲು ಕೋಣೆಗಳು. ಈ ಕಟ್ಟಡ ಸೆರೆಮನೆಗಾಗಿ ಕಟ್ಟಿದ್ದಲ್ಲ. 1370ರಲ್ಲಿ ಪ್ಯಾರಿಸ್ ಪಟ್ಟಣದ ರಕ್ಷಣೆಯ ಕೋಟೆ ಎಂದು ಅದು ನಿರ್ಮಾಣವಾಯಿತು. ಕ್ರಮೇಣ ಅದು ಬಂದೀ ಖಾನೆಯಾಯಿತು. ಅಲ್ಲಿಗೆ ಹೋದಮೇಲೆ ಜೀವಂತಸಮಾಧಿ ಎಂಬ ನಂಬಿಕೆ ಬೆಳೆದಿತ್ತು. ಜನ 'ದೆವ್ವದ ಮನೆ' ಎಂದು ಅದಕ್ಕೆ ಹೆದರು ತ್ತಿದ್ದರು. ಫ್ರಾನ್ಸಿನ ಮಹಾಕ್ರಾಂತಿಯನ್ನು ಹೊತ್ತಿಸಿದ ಕಿಡಿ ಬಂದದ್ದು ಬ್ಯಾಸ್ಟಿಲ್‌ನಿಂದ. 1789ರ ಜುಲೈ 14ರಂದು ಜನ ಈ ಸೆರೆಮನೆಯನ್ನು ಮುತ್ತಿದರು. ಅಗತ್ಯವಿದ್ದರೆ ಜನರ ಮೇಲೆ ಗುಂಡು ಹಾರಿಸುವಂತೆ ಸೆರೆಮನೆಯ ಮುಖ್ಯಾಧಿಕಾರಿಗೆ ಅಪ್ಪಣೆಯಾಗಿದೆ ಎಂಬ ಸುದ್ದಿ ಜನರನ್ನು ರೊಚ್ಚಿಗೆಬ್ಬಿಸಿತು. ಬಂದೂಕಿನ ಅಂಗಡಿಗಳಿಂದ ಬಂದೂಕುಗಳನ್ನು ಎಳೆದು ಕೊಂಡು ಸಾವಿರಾರು ಜನ ನುಗ್ಗಿದರು. ಕೆಲವು ಗಂಟೆಗಳ ಕಾಲ ಹೋರಾಟ ವಾದ ಬಳಿಕ ಅಧಿಕಾರಿಗಳು ಶರಣಾಗತರಾದರು. ಜನರಿಗೆ ತಮ್ಮ ಶಕ್ತಿಯ ಅರಿವು ಬಂದಿತು. ಬ್ಯಾಸ್ಟಿಲ್ ಪತನ ಕ್ರಾಂತಿಯ ನಾಂದಿಯಾಯಿತು. ಬ್ಯಾಸ್ಟಿಲ್‌ನಲ್ಲಿ ಇದ್ದವರು ಏಳೇ ಮಂದಿ ಬಂದಿಗಳು. ಅವರನ್ನು ಜನ ಬಿಡುಗಡೆ ಮಾಡಿದರು. (ಈಗಲೂ ಫ್ರಾನ್ಸಿನ ಜನ ಜುಲೈ 14ರಂದು 'ಬ್ಯಾಸ್ಟಿಲ್ ದಿನ' ವನ್ನು ಸಂಭ್ರಮದಿಂದ ಆಚರಿಸುತ್ತಾರೆ.) ಕೊನೆಗೆ ಅರಸನು 'ರಾಷ್ಟ್ರೀಯ ಸಭೆ'ಯ ಮೊರೆಹೊಕ್ಕ. ಆದರೆ ಕಾಲ ಮಿಂಚಿತ್ತು. ರಾಜನನ್ನು ಪದಚ್ಯುತಿಗೊಳಿಸಿ ಕುಟುಂಬ ಸಹಿತ ಸೆರೆಯಲ್ಲಿಟ್ಟರು. ಪ್ರತಿ ಯೊಬ್ಬ ವಯಸ್ಕನಿಗೂ ಒಂದೊಂದು ಮತವನ್ನು ಕೊಟ್ಟು ಸಾರ್ವಜನಿಕ ಚುನಾವಣೆ ನಡೆಸಬೇಕೆಂದು ಆಜ್ಞೆ ನೀಡಲಾಯಿತು.

1792ರ ಸೆಪ್ಟೆಂಬರ್‌ನಿಂದ ಆಡಳಿತ, ದೂರದೃಷ್ಟಿ ಇಲ್ಲದವರ ಕೈ ಸೇರಿತು. ಕೆಲವು ಕದನಗಳಲ್ಲಿ ದೊರೆತ ಜಯದಿಂದ ಇವರು ಅವಿವೇಕಿ ಗಳಾಗಿ ನೆದರ್‌ಲೆಂಡ್ಸನ್ನು ಮುತ್ತಿ ಇಂಗ್ಲೆಂಡ್ ಮತ್ತು ಸ್ಪೇನ್‌ಗಳ ವಿರೋಧ ವನ್ನು ಕಟ್ಟಿಕೊಂಡರು. ರಾಜ ರಾಣಿಯರನ್ನು ಗಲ್ಲಿಗೇರಿಸಿದರು. . ದೇಶ ದಲ್ಲಿ ರಕ್ತದ ಕಾಲುವೆ ಹರಿಯಿತು. ಈ ಕಾಲವನ್ನು 'ಭಯಾನಕ ಪ್ರಭುತ್ವ' ಎಂದು ಕರೆಯುತ್ತಾರೆ. ಅಂಥ ಆಡಳಿತದ ಲಾಭ ಪಡೆದು ನೆಪೋಲಿಯನ್ ಬೋನಪಾರ್ಟ್ ಎಂಬ ಯುವಕ ಅಧಿಕಾರಿ ಪ್ರಬಲನಾದ. ಮೊದಲು 'ಕಾನ್ಸಲ್' (ಆಡಳಿತಾಧಿಕಾರಿ) ಆಗಿ ಆಯ್ಕೆಯಾದವನು 1804ರಲ್ಲಿ ಫ್ರಾನ್ಸಿನ ಚಕ್ರವರ್ತಿಯಾದ.

ಸ್ವಾತಂತ್ರ್ಯ, ಸಮಾನತೆ ಮತ್ತು ಸಹೋದರತ್ವಗಳಿಗಾಗಿ ಪ್ರಾರಂಭವಾದ ಈ ಕ್ರಾಂತಿ ದಾರಿ ತಪ್ಪಿದುದರಿಂದ ಮತ್ತೆ ಫ್ರಾನ್ಸ್ ಒಬ್ಬ ರಾಜನ ಆಳ್ವಿಕೆಗೆ ಒಳಗಾಯಿತು. ಕ್ರಾಂತಿ ಈ ರೀತಿ ಮುಕ್ತಾಯಗೊಂಡರೂ ಅದು ಆರಂಭ ವಾದ ಉದ್ದೇಶ, ಪರದೇಶಗಳ ಮೇಲೆ ಅಪಾರವಾದ ಪ್ರಭಾವ ಬೀರಿ, ಜನತೆಯ ದೃಷ್ಟಿಕೋನವನ್ನೇ ಬದಲಿಸಿತು. ಯೂರೋಪಿನಲ್ಲಿ ರಾಜಪ್ರಭುತ್ವದ ಅಂತ್ಯಕ್ಕೆ ಅದು ನಾಂದಿಯಾಯಿತು.

ಫ್ರೆಂಚ್ ಮಹಾಕ್ರಾಂತಿ ಬರಿಯ ಸಾಮಾಜಿಕ ಮತ್ತು ರಾಜಕೀಯ ವಲಯಗಳಲ್ಲಿ ಮಾತ್ರವಲ್ಲದೆ ಸಾಹಿತ್ಯ ಪ್ರಪಂಚದಮೇಲೂ ವಿಶೇಷ ಪ್ರಭಾವ ಬೀರಿತು. ಎಲ್ಲ ಮನುಷ್ಯರೂ ಸಮಾನರೆಂಬ ತತ್ತ್ವದಿಂದ ಬಡ ಬಗ್ಗರು, ಕಾರ್ಮಿಕರು, ನಿಸರ್ಗದ ಮಡಿಲಲ್ಲಿ ಬಾಳುವ ರೈತರು— ಇಂಥವರ ಜೀವನದ ಬಗೆಗೆ ಹೊಸ ಆಸಕ್ತಿ ತಲೆದೋರಿತು. ರೊಮ್ಯಾಂಟಿಕ್ ಪಂಥದ ಕವಿಗಳಾದ ಷೆಲಿ, ಬೈರನ್ ಮುಂತಾದ ಇಂಗ್ಲಿಷ್ ಕವಿಗಳು ಈ ಕ್ರಾಂತಿಯಿಂದ ಸ್ಫೂರ್ತಿಗೊಂಡು ಅನೇಕ ಪದ್ಯಗಳನ್ನು ಬರೆದಿದ್ದಾರೆ. ಆ ಕಾಲದವರ ಭಾವನೆಗಳನ್ನು ವರ್ಡ್ಸ್‌ವರ್ತ್, "ಅಂಥ ಮುಂಜಾವಿನಲ್ಲಿ ಬದುಕಿದ್ದುದೇ ಒಂದು ಸುಯೋಗ, ಅದರಲ್ಲೂ ಯುವಕನಾಗಿದ್ದರೆ ಅದೊಂದು ಸ್ವರ್ಗ," ಎಂದು ಹಾಡಿದ್ದಾನೆ. ಚಾರ್ಲ್ಸ್ ಡಿಕನ್ಸ್‌ನ ಸುಪ್ರಸಿದ್ಧ ಕಾದಂಬರಿ 'ಎರಡು ನಗರಗಳ ಕಥೆ' ಎಂಬುದೂ ಈ ಕ್ರಾಂತಿಯ ಹಿನ್ನೆಲೆ ಯಲ್ಲೇ ರಚಿತವಾಗಿದೆ.

ಫ್ರಾನ್ಸಿನ ಮಹಾಕ್ರಾಂತಿ ಜಗತ್ತಿನಲ್ಲಿ ಎಲ್ಲ ವಲಯಗಳಲ್ಲೂ ಅಳಿಸ ಲಾಗದ ಪ್ರಭಾವವನ್ನು ಬೀರಿದೆ.

ನೋಡಿ : ನೆಪೋಲಿಯನ್ ಬೋನಪಾರ್ಟ್

## ಫ್ರಾನ್ಸಿಸ್, ಅಜೇಸೀಯ ಸಂತ

ಊರ ಹೊರಗೊಂದು ಪಾಳು ಪ್ರಾರ್ಥನಾ ಮಂದಿರ. ಯುವಕ ನೊಬ್ಬ ಅಲ್ಲಿ ಪ್ರಾರ್ಥಿಸುತ್ತಿದ್ದ. ಇದ್ದಕ್ಕಿದ್ದಂತೆಯೇ ಅವನಿಗೊಂದು ಅಶರೀರವಾಣಿ ಕೇಳಿಬಂದಂತಾಯಿತು. ಆ ವಾಣಿ ಪಾಳುಬಿದ್ದಿದ್ದ ಪ್ರಾರ್ಥನಾ ಮಂದಿರವನ್ನು ಜೀರ್ಣೋದ್ಧಾರಮಾಡು ಎಂದಂತಾಯಿತು. ಕೂಡಲೇ ಆ ಯುವಕ ತನ್ನ ತಂದೆಯ ಅಂಗಡಿಗೆ ಹೋಗಿ ಅಲ್ಲಿಂದ ಒಂದಿಷ್ಟು ಬಟ್ಟೆ ಯನ್ನು ತೆಗೆದುಕೊಂಡು ಬಂದ. ಆ ಬಟ್ಟೆಯನ್ನೂ ತನ್ನ ಕುದುರೆಯನ್ನೂ ಮಾರಿದ. ಬಂದ ದುಡ್ಡಿನಿಂದ ಪ್ರಾರ್ಥನಾಮಂದಿರದ ಜೀರ್ಣೋದ್ಧಾರ ಮಾಡುವ ಉದ್ದೇಶ ಅವನದು. ವಿಷಯ ತಂದೆಗೆ ತಿಳಿಯಿತು. ಕೋಪ ದಿಂದ ನ್ಯಾಯಾಲಯಕ್ಕೆ ದೂರು ಕೊಟ್ಟ. ನ್ಯಾಯಾಲಯದಲ್ಲಿ ಯುವಕ, ಒಂದು ತುಂಡು ಬಟ್ಟೆಯನ್ನುಳಿದು ತಾನು ತೊಟ್ಟಿದ್ದ ಸೊಗಸಾದ ಬಟ್ಟೆ ಗಳೆಲ್ಲವನ್ನೂ ತೆಗೆದಿಟ್ಟು, ದೇವರನ್ನು ಮಾತ್ರ ತಾನು ತಂದೆಯೆಂದು ಪರಿಗಣಿಸುತ್ತೇನೆ ಎಂದು ಸಾರಿದ.

ಆತನೇ ಮುಂದೆ ಅಜೇಸೀಯ ಸಂತನೆಂದು ಪ್ರಸಿದ್ಧನಾದ ಫ್ರಾನ್ಸಿಸ್.

ಫ್ರಾನ್ಸಿಸ್ 1182ರಲ್ಲಿ ಇಟಲಿಯ ಅಜೇಸೀಯಲ್ಲಿ ಹುಟ್ಟಿದ. ನೋಡಲು ಸುಂದರ. ಹುಡುಗನಾಗಿದ್ದಾಗ ಆಟಪಾಠದಲ್ಲಿ ತುಂಬ ಆಸಕ್ತಿ. ಒಮ್ಮೆ ಆತನ ತಾಯಿ ಹೇಳಿದಳು : " ಈಗ ಅವನು ರಾಜಕುಮಾರನ ಹಾಗಿದ್ದಾನೆ. ಮುಂದೆ ಅವನು ದೇವರ ಮಗ."

ತಾಯಿಯ ಮಾತು ಸುಳ್ಳಾಗಲಿಲ್ಲ. ಫ್ರಾನ್ಸಿಸ್ ಸ್ವಲ್ಪ ಕಾಲ ಸೈನಿಕ ನಾಗಿದ್ದು, ಒಂದು ವರ್ಷ ಕಾಲ ಶತ್ರುಗಳ ಸೆರೆಯಲ್ಲಿದ್ದ. ಸೆರೆಮನೆಯಲ್ಲಿ ತುಂಬ ಗೆಲುವಾಗಿದ್ದ ; ಇತರ ಸೆರೆಯಾಳುಗಳನ್ನು ಬಹು ಅಕ್ಕರೆಯಿಂದ ಕಾಣುತ್ತಿದ್ದ. ತಂದೆಯೊಡನೆ ಜಗಳವಾದದ್ದು ಸೆರೆಯಿಂದ ಹಿಂದಿರುಗಿದ ಅನಂತರ. 1209ರಲ್ಲಿ ಬೈಬಲಿನಲ್ಲಿ ಸಂತ ಮ್ಯಾಥ್ಯೂನ ಉಪದೇಶವನ್ನು ಓದಿದಾಗ, ಬಡತನವನ್ನೇ ಸಂತೋಷವಾಗಿ ಒಪ್ಪಿಕೊಂಡು ಕ್ರೈಸ್ತನ ಉಪ ದೇಶದ ಪ್ರಸಾರಕ್ಕಾಗಿ ಜೀವನವನ್ನು ಮುಡುಪಿಡಲು ತೀರ್ಮಾನಿಸಿದ. ಒಂದು ಸಲ ತೊನ್ನುರೋಗಿಯೊಬ್ಬನನ್ನು ನೋಡಿ ಅಸಹ್ಯದಿಂದ ಹೊರಟು ಹೋದನಂತೆ ; ಮರುಕ್ಷಣ ತಾನು ಕ್ರಿಸ್ತನ ಹಾದಿಯನ್ನು ಬಿಟ್ಟೆ ಎಂದು ಪಶ್ಚಾತ್ತಾಪದಿಂದ ಹಿಂದಿರುಗಿ. ತನ್ನಲ್ಲಿದ್ದ ಹಣವನ್ನೆಲ್ಲ ಕೊಟ್ಟು ತೊನ್ನಾ ಗಿದ್ದ ಅವನ ಕೈಯನ್ನು ಮುತ್ತಿಟ್ಟನಂತೆ. ಇಗರ್ಜಿಯೊಂದರಲ್ಲಿ ಹಲವು ದಿನಗಳನ್ನು ಭಗವಂತನ ಧ್ಯಾನ. ತನ್ನ ಜೀವನದ ರೀತಿಯ ಚಿಂತನೆ ಇವು ಗಳಲ್ಲಿ ಕಳೆದು ಮತ್ತೆ ರಸ್ತೆಗಿಳಿದಾಗ ಬೇಡಿಕೊಂಡಿದ್ದ. [illegible] ಬಟ್ಟೆ ಹರಿದಿತ್ತು. ' ಹುಚ್ಚ, ಹುಚ್ಚ ' ಎಂದು ಇವನನ್ನು ಅಟ್ಟಿಸಿಕೊಂಡು ಬಂದರು ಹುಡುಗರು.

ಫ್ರಾನ್ಸಿಸ್ ತನ್ನ ಸಕಲ ಸಂಪತ್ತನ್ನೂ ಬಂಧುಬಳಗವನ್ನೂ ಬಿಟ್ಟು ಏಕಾಂಗಿಯಾಗಿ ನಡೆದ. ಭಿಕ್ಷೆಯೆತ್ತಿ ಜೀವಿಸಿದ. ತನ್ನ ಕೈಗಳಿಂದಲೇ ಆ ಮುರುಕಲು ಇಗರ್ಜಿಯ ದುರಸ್ತಿಯನ್ನು ಪ್ರಾರಂಭಿಸಿದ. ಹಣವನ್ನು ಕಸದಂತೆ ಕಾಣಿರಿ ಎಂದು ಉಪದೇಶಿಸಿದ. ತಾನು ಹಾಗೆಯೇ ನಡೆದ. ಜನ ಬೆರಗಾಗಿ ಅವನನ್ನು ದಿಟ್ಟಿಸಿದರು, ಅವನ ಮಾತನ್ನು ಕೇಳಿದರು. ಹನ್ನೆರಡು ಮಂದಿ ಅವನ ಶಿಷ್ಯರಾದರು. ಆ ಶಿಷ್ಯರು ಉಪದೇಶ ಮಾಡಿ ತಿರುಗಿ ಬಂದಾಗ ಫ್ರಾನ್ಸಿಸ್ ಅವರ ಕಾಲು ತೊಳೆಯುತ್ತಿದ್ದ. ಅವನೂ ಅವನ ಶಿಷ್ಯರೂ ಎಲ್ಲ ಕೆಲಸವನ್ನೂ ತಾವೇ ಮಾಡಿಕೊಳ್ಳುತ್ತಿದ್ದರು. ಸೋಮಾರಿಗಳಿಗೆ ಅವರ ಬಳಿ ಸ್ಥಾನವಿರಲಿಲ್ಲ. ಕಳ್ಳರು ಅವರನ್ನು ಮುತ್ತಿದಾಗ, ಜನ ಹಾಸ್ಯಮಾಡಿ ಹೊಡೆದಾಗ, ಅವರು ಶಾಂತರಾಗಿದ್ದರು. ರೋಗಿಗಳ, ಬಡವರ, ಸಹಾಯವಿಲ್ಲದವರ ಸೇವೆಗಾಗಿ ತನ್ನ ಜೀವನವನ್ನು ಮೀಸಲಿಟ್ಟು, ಯೇಸು ಕ್ರಿಸ್ತ ನಡೆದ ದಾರಿಯಲ್ಲಿ ನಡೆದು, ಪರಮ ಕಾರುಣ್ಯಮೂರ್ತಿಯಾದ. ಮನುಷ್ಯರನ್ನು ಮಾತ್ರವಲ್ಲದೆ ಸಮಸ್ತ ಪ್ರಾಣಿವರ್ಗವನ್ನು ಅನುಕಂಪದಿಂದ, ಕರುಣೆಯಿಂದ, ಪ್ರೀತಿ ವಿಶ್ವಾಸಗಳಿಂದ ಕಂಡ.

ಫ್ರಾನ್ಸಿಸನ ಪ್ರಾಣಿದಯೆ ಪ್ರಾಣಿಗಳಿಗೂ ಕೂಡಾ ಎಷ್ಟು ಸ್ಪಷ್ಟವಾಗಿ ತಿಳಿದಿತ್ತೆಂದರೆ, ಕಾಡು ಮೊಲಗಳು ರಕ್ಷಣೆಗಾಗಿ ಅವನ ಬಳಿಗೆ ಓಡಿಬರುತ್ತಿದ್ದುವಂತೆ ; ಕೋಳಿಗಳು ಅವನ ಕಾಲ ಬಳಿ ಕುಳಿತು ಬಿಡುತ್ತಿದ್ದುವಂತೆ.

ಫ್ರಾನಿಸನ ಆದರ್ಶಜೀವನ ಅನೇಕರನ್ನು ಆಕರ್ಷಿಸಿತು. ಫ್ರಾನ್ಸಿಸ್ಕನ್ಸ್ ಎಂಬ ಸನ್ಯಾಸಿ ಪಂಥ ಉದಯವಾಯಿತು. ಫ್ರಾನ್ಸಿಸ್ ಹಾಗೂ ಅವನ ಸನ್ಯಾಸಿ ಹಿಂಬಾಲಕರು ಸ್ಪೇನ್, ಇಟಲಿ, ದಕ್ಷಿಣ ಫ್ರಾನ್ಸ್, ಈಜಿಪ್ಟ್ ಮೊದಲಾದ ದೇಶಗಳಲ್ಲೆಲ್ಲ ಸಂಚರಿಸಿ ಯೇಸು ಕ್ರಿಸ್ತನ ಉಪದೇಶವನ್ನು ಜನರಿಗೆ ವಿವರಿಸಿದರು. ತಾವು ಅದರ ಜೀವಂತ ನಿದರ್ಶನಗಳಾದರು.

ಫ್ರಾನ್ಸಿಸ್ಕನ್ ಸನ್ಯಾಸಿಗಳ ಸಂಖ್ಯೆ ಹತ್ತು ವರ್ಷಗಳಲ್ಲಿ ಐದು ಸಾವಿರವಾಗಿ ಒಂದು ಕಾಲಕ್ಕೆ 1,00,000 ಆಯಿತು.

1224ರಲ್ಲಿ ಒಂದು ದಿನ ಫ್ರಾನ್ಸಿಸನಿಗೆ ಶಿಲುಬೆಗೇರಿಸಿದ ಮಾನವನೊಬ್ಬನ ಪ್ರತಿಮೆಯನ್ನು ಹೊತ್ತ ದೇವದೂತನನ್ನು ಕಂಡಂತೆ ಭಾಸವಾಯಿತು. ಆ ಅಲೌಕಿಕ ನೋಟ ಮಾಯವಾದೊಡನೆ ಯೇಸು ಕ್ರಿಸ್ತನ ದೇಹದ ಮೇಲಾಗಿದ್ದ ಗಾಯಗಳೆಲ್ಲ ತನ್ನ ದೇಹದ ಮೇಲಾಗಿದ್ದುದನ್ನು ಕಂಡನಂತೆ. ಅಸ್ವಸ್ಥನಾಗಿದ್ದಾಗ ತಾನು ಇನ್ನು ಬಹು ದಿನ ಬದುಕಿರುವುದಿಲ್ಲ ಎಂದು ವೈದ್ಯರಿಂದ ತಿಳಿದಾಗ, ಸಾವನ್ನು ಸೋದರಿ ಎಂದು ವರ್ಣಿಸಿ, ಭಗವಂತನನ್ನು ಸ್ತುತಿಸಿ ಹಾಡಿದನಂತೆ.

ಫ್ರಾನ್ಸಿಸ್ 1226ರಲ್ಲಿ ಅಜೇಸೀಯಲ್ಲಿ ಕಾಲವಾದ. 1228ರಲ್ಲಿ ಫ್ರಾನ್ಸಿಸ್‌ನನ್ನು ಸಂತನೆಂದು ಪರಿಗಣಿಸಲಾಯಿತು. ಅಕ್ಟೋಬರ್ 4ರಂದು ಅವನ ಹಬ್ಬದಾಚರಣೆ.

ನೋಡಿ : ಸಂತರು ; ಸನ್ಯಾಸಿ

## ಫ್ರಾಯ್ಡ್, ಸಿಗ್ಮಂಡ್

ಒಬ್ಬ ಯುವಕ ಒಬ್ಬರ ಮನೆಗೆ ಕೆಲವು ದಿನಗಳ ಮಟ್ಟಿಗೆ ಇರಲು ಬಂದ. ತೋಟದಲ್ಲಿ ಗೆಡ್ಡೆ ಜಾತಿಯ ಕೆಲವು ಗಿಡಗಳನ್ನು ಆಗತಾನೆ ನೆಟ್ಟಿದ್ದರು. ಕೆಲವು ದಿನಗಳ ಅನಂತರ ಆತನಿಗೆ ಒಂದು ಕನಸು ಬಿದ್ದಿತು. ಅದರಲ್ಲಿ ಆ ಗಿಡಗಳು ಬೆಳೆದು ಹೂವು ಬಿಟ್ಟಿದ್ದುವು.

ಯುವಕ ಹಾಗೇಕೆ ಕನಸು ಕಂಡ ? ಆಕಸ್ಮಾತ್ತಾಗಿ. ಕಾರಣವೇ ಇಲ್ಲದೆ ಆ ಕನಸು ಬಿತ್ತೆ ?

ಇಲ್ಲ ಎಂದು ಫ್ರಾಯ್ಡನ ಉತ್ತರ. ಆ ಯುವಕ ಆ ಮನೆಯಲ್ಲಿ ತುಂಬ ಸಂತೋಷದಿಂದಿದ್ದ. ನಾಲ್ಕೇ ದಿನ ಇದ್ದು ಹೋಗಲು ಅವನ ಮನಸ್ಸು ಒಪ್ಪಲಿಲ್ಲ. ಆ ಗಿಡಗಳು ಮೇಲೆ ಬಂದು ಹೂವು ಬಿಡಲು ಅನೇಕ ತಿಂಗಳು ಬೇಕಾಗುತ್ತದೆ. 'ಅಷ್ಟು ದಿನ ನಾನು ಇಲ್ಲಿರಬಾರದೆ ?' ಎನ್ನುವುದು ಕನಸಿನ ಅರ್ಥ.

ಸ್ವಪ್ನ, ಅದರ ಅರ್ಥ, ಅದಕ್ಕೆ ಕಾರಣ ಇವುಗಳ ಬಗೆಗೆ ಅತ್ಯಂತ ಪ್ರಸಿದ್ಧವಾದ ಗ್ರಂಥವನ್ನು ಬರೆದಿದ್ದಾನೆ, ಸಿಗ್ಮಂಡ್ ಫ್ರಾಯ್ಡ್.

ಮನಸ್ಸನ್ನು ಆಳವಾಗಿ ಪರೀಕ್ಷಿಸಿ ಅದರ ಚಟುವಟಿಕೆಗಳನ್ನು ದೀರ್ಘವಾಗಿ ಅಭ್ಯಾಸಮಾಡಿ ವೈಜ್ಞಾನಿಕವಾಗಿ ಮನಸ್ಸಿನ ವ್ಯಾಪಾರದ ಬಗೆಗೆ ತಿಳಿವಳಿಕೆ ನೀಡಿದ ಜಗತ್ತಿನ ಅತ್ಯಂತ ಪ್ರಸಿದ್ಧ ಮನೋವಿಜ್ಞಾನಿ ಫ್ರಾಯ್ಡ್.

1856 ಮೇ 6ರಂದು ಈಗಿನ ಚೆಕೊಸ್ಲೊವಾಕಿಯಾದ ಫ್ರೀಬರ್ಗ್ ಎಂಬಲ್ಲಿ ಯೆಹೂದ್ಯ ಕುಟುಂಬವೊಂದರಲ್ಲಿ ಫ್ರಾಯ್ಡ್ ಹುಟ್ಟಿದ. ಚಿಕ್ಕಂದಿನಿಂದಲೂ ಆತನಿಗೆ ಓದಿನಲ್ಲಿ ಅಪಾರ ಆಸಕ್ತಿ. ಹದಿನೇಳು ವರ್ಷವಾಗಿದ್ದಾಗ ವಿಯೆನ್ನ ವಿಶ್ವವಿದ್ಯಾನಿಲಯದಲ್ಲಿ ವೈದ್ಯಕೀಯ ಶಿಕ್ಷಣ ಪಡೆಯಲು ಸೇರಿದ. ಫ್ರಾಯ್ಡ್ ಬಹಳ ಬಡವನಾಗಿದ್ದರೂ ಅಭಿಮಾನಿಗಳ ಹಾಗೂ ಸ್ನೇಹಿತರ ಸಹಾಯದಿಂದ ವಿದ್ಯಾಭ್ಯಾಸವನ್ನು ಮುಂದುವರಿಸಿದ. 1881ರಲ್ಲಿ ವೈದ್ಯಪದವಿಯನ್ನು ಪಡೆದ. ಪ್ಯಾರಿಸಿನಲ್ಲಿ ನರಗಳ ತಜ್ಞ ಜೀನ್ ಮಾರ್ಟಿನ್ ಚಾರ್ಕ್ಕಾ ಹತ್ತಿರ ಅಭ್ಯಾಸಮಾಡಿದ. ಈ ಅಧ್ಯಯನ ಫ್ರಾಯ್ಡ್‌ನ ಜೀವನದ ಗತಿಯನ್ನು ಬದಲಾಯಿಸಿತು. ಚಾರ್ಕ್ಕಾ ಹುಚ್ಚರ ಬಗೆಗೆ ನಡೆಸುತ್ತಿದ್ದ ಸಂಶೋಧನೆ ಫ್ರಾಯ್ಡನ ಮೇಲೆ ಬಹಳ ಪ್ರಭಾವ ಬೀರಿತು. ದೇಹವನ್ನು ಅದರಲ್ಲೂ ನರಗಳ ವ್ಯಾಧಿಯನ್ನು ಪರೀಕ್ಷಿಸುತ್ತಿದ್ದ ಫ್ರಾಯ್ಡ್ ಆಗಿನಿಂದ ಮನಸ್ಸಿನ ವಿವಿಧ ವ್ಯಾಪಾರಗಳ ಅಧ್ಯಯನಕ್ಕೆ ತೊಡಗಿದ.

1886ರಲ್ಲಿ ನರಗಳ ತಜ್ಞನಾಗಿ ಖಾಸಗಿ ಕೇಂದ್ರವನ್ನು ತೆರೆದ. ಮನಸ್ಸನ್ನು ವಿಶ್ಲೇಷಿಸುವುದನ್ನು ಆರಂಭಿಸಿದ. ದೇಹದ ಅನೇಕ ಕಾಯಿಲೆಗಳಿಗೆ ಮನಸ್ಸೇ ಕಾರಣ ಎಂದು ಕಂಡುಹಿಡಿದ. ಕೈಕಾಲು ಅಲ್ಲಾಡಿಸಲಾಗದೆ ಪಾರ್ಶ್ವವಾಯುವಿನಿಂದ ಪೀಡಿತರಾಗಿದ್ದ ಕೆಲವು ರೋಗಿಗಳಿಗೆ ಕಾಯಿಲೆ ಬರಲು ಅವರ ದೇಹವಲ್ಲ, ಮನಸ್ಸು ಕಾರಣವಾಗಿತ್ತು. ಬಾಲ್ಯದಲ್ಲಿ ಕೆಲವು ಕಹಿ ಘಟನೆಗಳು, ಭಯಂಕರ ಘಟನೆಗಳು ಸಂಭವಿಸಬಹುದು. ಕೆಲವು ದಿನಗಳ ಅನಂತರ ಮಗು ಅವನ್ನು ಮರೆಯಬಹುದು. ಆದರೆ ಅವು ಮನಸ್ಸಿನ ಅಜಾಗ್ರತಪ್ರಜ್ಞೆಯಲ್ಲಿ ಅಡಗಿರುತ್ತವೆ. ಆತ ದೊಡ್ಡವನಾದರೂ ಅವನಿಗೆ ಅರಿಯದೆಯೇ ಅವು ಅವನ ಮನಸ್ಸನ್ನು ಕದಡುತ್ತಿರುತ್ತವೆ. ಇದರಿಂದ ಕಾಯಿಲೆ ಬರುತ್ತದೆ.

ಮೊದಮೊದಲು ಫ್ರಾಯ್ಡ್ ತನ್ನ ರೋಗಿಗಳು ಬಿಚ್ಚುಮನಸ್ಸಿನಿಂದ ಮಾತನಾಡಲು ಸಮ್ಮೋಹನ ಮಾರ್ಗವನ್ನು ಅನುಸರಿಸುತ್ತಿದ್ದ. ಅನಂತರ ಮನೋವಿಶ್ಲೇಷಣೆಯ ಮಾರ್ಗವನ್ನು ಬಳಸಿದ. ಮನಸ್ಸಿನಲ್ಲಿ ಮೂಡಿದ್ದನ್ನೆಲ್ಲ, ತೋರಿದ್ದನ್ನೆಲ್ಲ ತಿಳಿಸುವಂತೆ ತನ್ನ ರೋಗಿಗಳಿಗೆ ಹೇಳುತ್ತಿದ್ದ. ಹಿಂದೆ ಆದ ಘಟನೆಗಳನ್ನು ಜ್ಞಾಪಿಸಿಕೊಳ್ಳುವಂತೆ ಪ್ರೋತ್ಸಾಹಿಸುತ್ತಿದ್ದ. ರೋಗಿ ಹೇಳಿದ ಎಲ್ಲ ವಿಷಯಗಳನ್ನು ಟಿಪ್ಪಣಿಮಾಡಿ ಅವನ ಕಾಯಿಲೆಗೆ ಕಾರಣವನ್ನು ಹುಡುಕಿ ಅದನ್ನು ಅವನಿಗೆ ಹೇಳಿ ರೋಗವನ್ನು ಗುಣಪಡಿಸುತ್ತಿದ್ದ. ಮನಸನ್ನು ಪದರ ಪದರವಾಗಿ ಬಿಡಿಸಿ ಅರ್ಥಮಾಡಿಕೊಳ್ಳುವುದೇ ಮನೋವಿಶ್ಲೇಷಣೆಯ ರೀತಿ.



ಮನಸ್ಸಿನ ಗವಿಯ ಬಾಗಿಲು ತೆರೆದ ಫ್ರಾಯ್ಡ್

ಮನೋವಿಶ್ಲೇಷಣೆ ಮನಶ್ಶಾಸ್ತ್ರದಲ್ಲಿ ಕ್ರಾಂತಿಕಾರಕ ಬದಲಾವಣೆಗಳನ್ನು ಮಾಡಿತು. ಫ್ರಾಯ್ಡ್ ಮನಶ್ಶಾಸ್ತ್ರದಲ್ಲಿ ಬಹಳ ಉಪಯುಕ್ತವಾದ ಹೊಸ ಅಧ್ಯಾಯವನ್ನು ಆರಂಭಿಸಿದ.

ಆರಂಭದಲ್ಲಿ ಫ್ರಾಯ್ಡ್‌ನ ಪದ್ಧತಿಯನ್ನು ಕೆಲವರು ಒಪ್ಪಲಿಲ್ಲ. ಅವನಿಗೆ ತೀವ್ರವಾದ ವಿರೋಧ ಕಂಡಿತು. ಆದರೆ ಅನೇಕ ಕಾಯಿಲೆಗಳಿಗೆ ಮನಸ್ಸು ಮೂಲ ಎಂದು ಫ್ರಾಯ್ಡ್ ಹೇಳಿದ್ದನ್ನು ಸ್ವಲ್ಪಕಾಲದ ಬಳಿಕ ಹಲವರು ಒಪ್ಪಿದರು.

ಫ್ರಾಯ್ಡ್ ಬರೆದ ಪುಸ್ತಕಗಳು ಹಲವಾರು. ಅವುಗಳಲ್ಲಿ 'ಕನಸುಗಳ ಅರ್ಥ ನಿರೂಪಣೆ' ಹಾಗೂ 'ದಿನನಿತ್ಯಕ್ಕೆ ಬೇಕಾದ ಮನೋವಿಶ್ಲೇಷಣೆ' ಪ್ರಸಿದ್ಧ ಗ್ರಂಥಗಳು.

ಹೆಣ್ಣು ಗಂಡಿನ ಆಕರ್ಷಣೆ ಮನುಷ್ಯ ಸ್ವಭಾವದಲ್ಲಿ ತುಂಬ ಬಲವತ್ತರವಾಗಿರುತ್ತದೆ. ಇದು ಚಿಕ್ಕಂದಿನಿಂದ ಹಲವು ರೀತಿಗಳಲ್ಲಿ ಕಾಣಿಸಿಕೊಳ್ಳುತ್ತದೆ ಎಂದು ಹೇಳಿದ ಫ್ರಾಯ್ಡ್ ತನ್ನ ಗ್ರಂಥಗಳಲ್ಲಿ ಈ ವಿಷಯವನ್ನು ವಿವರವಾಗಿ ವಿಮರ್ಶಿಸಿದ್ದಾನೆ.

1930ರ ಹೊತ್ತಿಗೆ ಫ್ರಾಯ್ಡನ ಅಭಿಪ್ರಾಯಗಳು ಜಗತ್ತಿನಲ್ಲೆಲ್ಲ ಜನರ ಮೆಚ್ಚುಗೆಗೆ ಪಾತ್ರವಾದುವು. ಜನತೆ ಅವನನ್ನು ಹೊಗಳಿತು. ಆದರೆ 1938ರಲ್ಲಿ ನಾಜಿಗಳು ವಿಯೆನ್ನವನ್ನು ವಶಪಡಿಸಿಕೊಂಡಾಗ ಯೆಹೂದ್ಯ ಫ್ರಾಯ್ಡ್ ವಿಯೆನ್ನ ಬಿಟ್ಟು ತೆರಳಿದ. ತನ್ನ 83ನೆಯ ವರ್ಷದಲ್ಲಿ ಇಂಗ್ಲೆಂಡಿನಲ್ಲಿ ತೀರಿಕೊಂಡ.

ಫ್ರಾಯ್ಡ್ ಹೇಳಿದ ಮನೋವಿಶ್ಲೇಷಣೆ ಈಗ ವಿಜ್ಞಾನವಾಗಿ ಬೆಳೆದಿದೆ. ವೈದ್ಯರು ಎಷ್ಟೋ ಬೇನೆಗಳಿಗೆ ಮನಸ್ಸೇ ಮೂಲ ಎಂಬುದನ್ನು ಅರಿತಿದ್ದು ರೋಗಿಗಳ ಮನಸ್ಸಿನ ಪರಿಸ್ಥಿತಿಯನ್ನು ತಿಳಿಯಲು ಪ್ರಯತ್ನಿಸುತ್ತಾರೆ. ಮಾನಸಿಕ ಚಿಕಿತ್ಸಾಲಯಗಳಲ್ಲಂತೂ ಫ್ರಾಯ್ಡನ ಮನೋವಿಶ್ಲೇಷಣೆಯನ್ನು ಆಧರಿಸಿದ ಪ್ರಯೋಗಗಳೇ ನಡೆಯುತ್ತವೆ.

ಫ್ರಾಯ್ಡನ ಮನೋವಿಶ್ಲೇಷಣೆ ಸಾಹಿತ್ಯದ ಮೇಲೂ ಪ್ರಭಾವ ಬೀರಿದೆ. ಹಲವು ಆಧುನಿಕ ಸಾಹಿತ್ಯಕೃತಿಗಳಲ್ಲಿ ಮನೋವಿಶ್ಲೇಷಣ ವಿಜ್ಞಾನದ ಆಧಾರದ ಮೇಲೆ ಶ್ರೇಷ್ಠ ಪಾತ್ರಗಳ ಚಿತ್ರಣವಾಗಿದೆ.

ಜನರ ಯೋಚನೆಯ ವಿಧಾನದಲ್ಲಿಯೇ ಕ್ರಾಂತಿಯುಂಟು ಮಾಡಿದ ಚಾರಿತ್ರಿಕ ಪುರುಷರ ಪಂಕ್ತಿಗೆ ಫ್ರಾಯ್ಡ್ ಸೇರಿದ್ದಾನೆ. ಈಗ ಅವನ ಕೆಲವು ಸಿದ್ಧಾಂತಗಳನ್ನು ಮನೋವಿಜ್ಞಾನಿಗಳು ಒಪ್ಪುವುದಿಲ್ಲ. ಅದು ಹೇಗೆಯೇ ಇರಲಿ. ಸ್ವಭಾವವನ್ನು ಅರ್ಥಮಾಡಿಕೊಳ್ಳಲು ಹೊಸದೊಂದು ಹೆದ್ದಾರಿಯನ್ನೇ ನಿರ್ಮಿಸಿದ ಧೀಮಂತ ಸಂಶೋಧಕ ಫ್ರಾಯ್ಡ್.

ನೋಡಿ : ಮನೋವಿಜ್ಞಾನ

## ಫಿನ್‌ಲೆಂಡ್

ವಿದ್ಯಾವಂತರು ತಮ್ಮ ದೇಶಭಾಷೆಯನ್ನು ಅನಾಗರಿಕವೆಂದು ತಿರಸ್ಕರಿಸಿ ಸ್ವೀಡಿಷ್ ಭಾಷೆಯನ್ನು ಆಡುತ್ತಿದ್ದರು. ಅಂಥ ಪರಿಸ್ಥಿತಿಯಲ್ಲಿ ಹಳ್ಳಿಯ ದರ್ಜಿಯೊಬ್ಬ ವರ್ಷಗಟ್ಟಲೆ ಹಳ್ಳಿ ಹಳ್ಳಿ ತಿರುಗಿ ಅರೆಮರೆಯಾಗಿದ್ದ ಕಥೆಗಳನ್ನು ಸಂಗ್ರಹಿಸತೊಡಗಿದ. ತಾನು ಕೇಳಿದ ಕಥೆಗಳನ್ನು ಸೇರಿಸಿ ಒಂದು ಬೃಹತ್ ಕಾವ್ಯವನ್ನು ರಚಿಸಿದ. ಕೆಲವು ವರ್ಷಗಳು ಕಳೆದುವು. ಪಾರತಂತ್ರ್ಯದಲ್ಲಿದ್ದ ನಾಡಿನಲ್ಲಿ ಸ್ವಾತಂತ್ರ್ಯದ ಬಯಕೆ ಮೊಳೆಯಿತು. ಸ್ವಾತಂತ್ರ್ಯದ ಹೋರಾಟಗಾರರು ಈ ಹಾಡುಗಳನ್ನೇ ಬಳಸಿಕೊಂಡರು. ಸ್ವತಂತ್ರರಾದ ಮೇಲೆ, ತಮ್ಮ ನಾಡಿನ ಭಾಷೆಯನ್ನು ಬಳಸುವ ನಿರ್ಧಾರ ಮಾಡಿದರು. ಆ ಭಾಷೆಯ ಸೊಗಸನ್ನೂ ಸಂಪತ್ತನ್ನೂ ಅರಿವುಮಾಡಿಕೊಟ್ಟವನು ಆ ದರ್ಜಿ ಹುಡುಗ.

ಇದು ನಡೆದದ್ದು ಫಿನ್‌ಲೆಂಡಿನಲ್ಲಿ ಹತ್ತೊಂಬತ್ತನೆಯ ಶತಮಾನದಲ್ಲಿ. ಆ ದರ್ಜಿ ಈಲಿಯಾಸ್ ಲಾನ್‌ರಾಟ್. ಸಂಗ್ರಹಿಸಿದ ಕಾವ್ಯದ ಹೆಸರು

26*

'ಕಲೆವಾಲ'. ಕಲೆವಾಲ ಎಂದರೆ 'ವೀರರ ನಾಡು.' ಇದು ಜಗತ್ತಿನ ಮಹಾ ಕಾವ್ಯಗಳ ಪಂಕ್ತಿಗೇ ಇದು ಸೇರಿದೆ.

ಫಿನ್‌ಲೆಂಡ್ ಉತ್ತರ ಯೂರೋಪಿನಲ್ಲಿದೆ. ಪೂರ್ವಕ್ಕೆ ಪ್ರಬಲ ರಾಷ್ಟ್ರ ರಷ್ಯ; ಪಶ್ಚಿಮಕ್ಕೆ ಸ್ವೀಡನ್, ಉತ್ತರಕ್ಕೆ ನಾರ್ವೆ ಮತ್ತು ದಕ್ಷಿಣಕ್ಕೆ ಬಾಲ್ಟಿಕ್ ಸಮುದ್ರ. ಸಾವಿರಾರು ದ್ವೀಪಗಳು ಫಿನ್‌ಲೆಂಡಿನ ತೀರವನ್ನು ಆಶ್ರಯಿಸಿವೆ. 60,000 ಸರೋವರಗಳು ನೀಲಿ ತುಂಡುಗಳಂತೆ ಫಿನ್‌ಲೆಂಡಿನಾದ್ಯಂತ ಹರಡಿಕೊಂಡಿವೆ. ಇನಾರಿ, ಸೈಮಾ, ಪೇಎಯಾನೆ ದೊಡ್ಡ ಸರೋವರಗಳು. ಫಿನ್‌ಲೆಂಡ್ ಹಿಂದೊಮ್ಮೆ ಹಿಮದಿಂದ ಮುಚ್ಚಿಹೋಗಿತ್ತು. ಹಿಮದ ಭಾರಕ್ಕೆ ನೆಲ ತಟ್ಟಿದಂತೆ ಆಯಿತು. ಹಿಮ ಕರಗಿದಾಗ ಬೆಟ್ಟದಲ್ಲಿ ಕೊರಕಲುಗಳು ಕಂಡುಬಂದುವು. ಕೆಲವು ಕಡೆ ಮರಳು ಗುಡ್ಡಗಳೇ ಆಗಿದ್ದುವು. ಹಿಮ ಕರಗಿ ಸಮುದ್ರಕ್ಕೆ ಸೇರಿದ ಮೇಲೆ ಬೇರೆ ದೃಶ್ಯವೇ ಗೋಚರವಾಯಿತು. ತಟ್ಟಿದಂತಾಗಿದ್ದ ನೆಲ ಮೇಲಕ್ಕೇರಿತು. ಈಗಲೂ ಅದು ಏರುತ್ತಲಿದೆ. ವಾಸಾ ನಗರದ ಹತ್ತಿರವಂತೂ ಮೂವತ್ತು ವರ್ಷಗಳಿಗೆ 30 ಸೆಂಟಿಮೀಟರಿನಂತೆ ಏರುತ್ತಿದೆ. ಹೀಗೆ ನೆಲ ಏರಿ, ನೀರೆಲ್ಲ ಒಣಗಿ ಹೋಗುವುದರಿಂದ ಉಳುಮೆಗೆ ಫಲವತ್ತಾದ ನೆಲ ದೊರೆಯುತ್ತದೆ. ಅದರ ವಿಸ್ತೀರ್ಣ ವರ್ಷವೊಂದಕ್ಕೆ ಸುಮಾರು ಹತ್ತು ಚದರ ಕಿಲೊಮೀಟರುಗಳಷ್ಟು ಹೆಚ್ಚುತ್ತಿದೆ.

ಫಿನ್‌ಲೆಂಡಿನ ಬಹು ಭಾಗ ನಿತ್ಯಹಸಿರಿನ ಕಾಡು. ಮರ ಕಡಿದು ದಿಮ್ಮಿಗಳನ್ನು ಸಾಗಿಸುವುದು ಬಹು ಜನರಿಗೆ ಉದ್ಯೋಗ ಒದಗಿಸಿದೆ. ಅಲ್ಲಿಂದ ಕೆಳಗೆ ಬಂಜರುಭೂಮಿ. ಫಿನ್‌ಲೆಂಡಿನ ತೀರ ಉತ್ತರದ ನೆಲ ಬೆಂಗಾಡು. ಮಧ್ಯ ಸ್ವಲ್ಪ ಭಾಗ ಪ್ರಸ್ಥಭೂಮಿ. ಜನ ಬಹಳ ಕಷ್ಟಜೀವಿಗಳು. ಕಾಡು ಕಡಿದರು. ಜೌಗು ಪ್ರದೇಶವನ್ನು ಹದಕ್ಕೆ ತಂದು ಕೃಷಿ ಮಾಡಲು ಸಾಧ್ಯವಾಗುವಂತೆ ಮಾಡಿಕೊಂಡರು. ಹವಾಗುಣ ಅನುಕೂಲವಲ್ಲ. ಚಳಿಗಾಲ ದೀರ್ಘವಾಗಿ, ಬೇಸಿಗೆಕಾಲ ಕಡಮೆ. ಚಳಿಗಾಲದಲ್ಲಿ ಹಿಮ ಬೀಳುತ್ತದೆ. ಬೇಸಿಗೆಯಲ್ಲಿ ಮಳೆ.

ಇಂಥ ತೊಂದರೆಗಳಿಗೆ ಮಣಿಯದೆ ಫಿನಿಷ್ ಜನರು ಆಲೂಗಡ್ಡೆ, ಗೋಧಿ, ಬಾರ್ಲಿ ಮತ್ತಿತರ ಧಾನ್ಯಗಳನ್ನು ಬೆಳೆಯುತ್ತಾರೆ.

ಹಿಮಜಿಂಕೆಗಳನ್ನು ಸಾಕುವುದರಿಂದ ಮಾಂಸ, ಹಾಲು, ಹೈನುಗಳಿಗೆ ಕೊರತೆ ಇಲ್ಲ.

ಖನಿಜ ಸಂಪತ್ತು ಬಹು ಕಡಮೆ. ತಾಮ್ರ, ಕಬ್ಬಿಣದ ಪೈರೆಟ್ ಎರಡೇ ದೊರಕುವುದು. ಕಟ್ಟಡಕ್ಕೆ ಬಳಸಬಹುದಾದಂಥ ಕೆಂಪು ಗ್ರಾನೈಟ್ ಶಿಲೆ ಸಿಗುತ್ತದೆ.

ಜಲಪಾತದ ನೀರಿನಿಂದ ವಿದ್ಯುಚ್ಛಕ್ತಿ ದೊರೆಯುತ್ತಿದ್ದು ಅದರಿಂದ ಉದ್ಯೋಗಗಳನ್ನು ಬೆಳೆಸಿಕೊಂಡಿದ್ದಾರೆ. ಕಾಗದ ತಯಾರಿಕೆಯೂ ಇದೆ. ಮರಗಳು ಫಿನ್‌ಲೆಂಡಿಗೆ ಭಾರಿ ಆಸ್ತಿ.

ಫಿನ್‌ಲೆಂಡಿನಲ್ಲಿ ಬಹಳ ಮನೆಗಳಿಗೆ ಮಹಡಿಗಳಿಲ್ಲ; ಮತ್ತು ಮನೆಗಳನ್ನು ಹೆಚ್ಚಾಗಿ ಮರದಿಂದಲೇ ಕಟ್ಟಿರುತ್ತಾರೆ. ಹಿಮ ಬೇಗನೆ ಜಾರಿ ಬೀಳಬೇಕೆಂದು, ಮನೆಯ ಛಾವಣಿಗಳು ಇಳಿಜಾರಾಗಿರುತ್ತವೆ.

ಫಿನ್‌ಲೆಂಡಿನಲ್ಲಿ ಜನ ಹಳೆಯ ಪದ್ಧತಿಯೊಡನೆ ಹೊಸತನ್ನು ಮೈಗೂಡಿಸಿಕೊಂಡು ಬಾಳುವುದನ್ನು ಕಾಣುತ್ತೇವೆ. ಫಿನ್ನಿಷ್ ಮುಖ್ಯ ಭಾಷೆ. ಜನ ವಿದ್ಯಾಸಕ್ತರು. 'ಹಿಮ ಜಾರದವರು ಮದುವೆಯಾಗಬಾರದು' ಎಂಬ ಸಂಪ್ರದಾಯವಿತ್ತು ಫಿನ್‌ಲೆಂಡಿನಲ್ಲಿ.

ಫಿನ್‌ಲೆಂಡಿನ ಮೊದಲ ನಿವಾಸಿಗಳೆಂದರೆ ಬೆಸ್ತರು ಮತ್ತು ಬೇಟೆಗಾರರು. 1100ರವರೆಗೆ ಇವರು ಸುಖವಾಗಿದ್ದರು. ಮುಂದೆ ಸ್ವೀಡನಿನವರು ಈ ಜನರನ್ನು ಗೆದ್ದರು. ಕ್ರೈಸ್ತಮತ ಪ್ರಸಾರವಾಯಿತು. 1809ರಲ್ಲಿ ರಷ್ಯ ಫಿನ್‌ಲೆಂಡನ್ನು ವಶಪಡಿಸಿಕೊಂಡಿತು. 1917ರ ರಷ್ಯ ಕ್ರಾಂತಿಯ ಲಾಭ ಪಡೆದು ಫಿನಿಷರು ತಾವು ಸ್ವತಂತ್ರರೆಂದು ಘೋಷಿಸಿದರು. ಫಿನ್‌ಲೆಂಡಿನವರು ತನ್ನ ಬೇಡಿಕೆಗಳನ್ನು ನಡೆಸಿಕೊಡಲಿಲ್ಲವೆಂದು ರಷ್ಯ 1939ರಲ್ಲಿ ಯುದ್ಧ ಆರಂಭಿಸಿತು. ರಷ್ಯಕ್ಕೆ ಸುಲಭ ಜಯ ಲಭಿಸಲಿಲ್ಲ. ಅಪಾರ ನಷ್ಟ ಅನುಭವಿಸಿದ ಬಳಿಕ ಫಿನಿಷರು ಶಾಂತಿ ಕೋರಿದರು. ರಷ್ಯ ಪೆಟ್ಸಾಮೊ, ಕರೆಲಿಯಾ ಪ್ರದೇಶಗಳನ್ನು ವಶಪಡಿಸಿಕೊಂಡಿತು. ಜರ್ಮನರು 1941ರಲ್ಲಿ ರಷ್ಯದೊಡನೆ ಯುದ್ಧ ಸಾರಿದಾಗ ಫಿನ್‌ಲೆಂಡ್ ತಾನೂ ಯುದ್ಧ ಸಾರಿತು. ಪುಟ್ಟ ಫಿನ್‌ಲೆಂಡ್ ಬೃಹತ್ ರಾಷ್ಟ್ರವಾದ ರಷ್ಯದೊಂದಿಗೆ ಬಹು ದಿಟ್ಟತನದಿಂದ ಹೋರಾಡಿತು. ಕಡೆಗೆ ಫಿನಿಷರು 250 ಕೋಟಿ ರೂಪಾಯಿ ಮೊತ್ತದ ಸಾಮಗ್ರಿಗಳನ್ನು ಕೊಡಲು ಒಪ್ಪಿಕೊಳ್ಳಬೇಕಾಯಿತು. 1952ರ ವೇಳೆಗೆ ಪೂರ್ಣ ಮೊತ್ತವನ್ನು ಸಲ್ಲಿಸಿದರು.

ಫಿನ್‌ಲೆಂಡ್ ಗಣರಾಜ್ಯ. ಆರು ವರ್ಷಕ್ಕೊಮ್ಮೆ ಅಧ್ಯಕ್ಷರನ್ನು ಆರಿಸುತ್ತಾರೆ.



| | | |
|---|---|---|
| ಖಂಡ | : | ಯೂರೋಪ್ (ಉತ್ತರ) |
| ಅಕ್ಷಾಂಶ | : | 59° 30′ ಉ ದಿಂದ 70° 06′ ಉ |
| ರೇಖಾಂಶ | : | 19° 07′ ಪೂ ದಿಂದ 31° 35′ ಪೂ |
| ವಿಸ್ತೀರ್ಣ | : | 3.36.920 ಚ. ಕಿ. ಮೀ. |
| ಜನಸಂಖ್ಯೆ | : | 45.25.000 |
| ರಾಜಧಾನಿ | : | ಹೆಲ್ಸಿಂಕಿ |
| ಭಾಷೆ | : | ಫಿನ್ನಿಷ್ |
| ಸರಕಾರ | : | ಗಣರಾಜ್ಯ |
| ಬಾವುಟ | : | ಬಿಳಿ. ನೀಲಿ ಶಿಲುಬೆ |

## ಫಿಲಿಪೀನ್ಸ್

ರಾಕ್ಷಸನೊಬ್ಬ ದೊಡ್ಡ ಬಂಡೆಯನ್ನು ಎತ್ತಿ ಸಮುದ್ರಕ್ಕೆ ಎಸೆದುಬಿಟ್ಟ. ಅದು ಚೂರುಗಳಾಗಿ ಪ್ರತಿ ಚೂರೂ ಒಂದು ದ್ವೀಪವಾಗಿ ಬೆಳೆಯಿತು.

ಹೀಗೆ ಫಿಲಿಪೀನ್ಸ್ ವಿಷಯ ಅಲ್ಲಿನ ದೊಡ್ಡವರು ಮಕ್ಕಳಿಗೆ ಕಥೆ ಹೇಳುತ್ತಾರೆ. ಫಿಲಿಪೀನ್ಸ್ 7,100 ದ್ವೀಪಗಳ ಸಮೂಹ. ಇವುಗಳಲ್ಲಿ ಸುಮಾರು 500 ಬಹು ಚಿಕ್ಕವು. ಕೆಲವಕ್ಕೆ ಹೆಸರೇ ಇಲ್ಲ. ಲೂಸನ್ ದೊಡ್ಡ ದ್ವೀಪ. ಮಿಂಡಾನಾವೊ ನೇಗ್ರೋಸ್, ಪಾನಾಯಿ, ಸೇಬೂ, ಸಾಮಾರ್, ಪಾಲಾವಾನ್, ಮಿಂಡೋರೋ, ಲೇಟೆ, ಬೊಹೊಲ್, ಮಾಸ್‌ಬಾಟೆ ಮತ್ತು ಸೂಲೂ ದ್ವೀಪಗಳ ಸಮೂಹ ಮುಖ್ಯವಾದುವು.

ಫಿಲಿಪೀನ್ಸ್ ದ್ವೀಪಗಳು ಏಷ್ಯದ ಆಗ್ನೇಯ ಭಾಗದಲ್ಲಿವೆ. ಪಶ್ಚಿಮಕ್ಕೆ ಚೀನ ಸಮುದ್ರ, ಪೂರ್ವಕ್ಕೆ ಶಾಂತಸಾಗರ, ದಕ್ಷಿಣಕ್ಕೆ ಸೆಲೆಬಸ್ ಸಮುದ್ರ, ಉತ್ತರಕ್ಕೆ ಲುಜಾನ್ ಖಾರಿಗಳಿಂದ ಸುತ್ತುವರಿಯಲ್ಪಟ್ಟಿದೆ. 400 ವರ್ಷಗಳ ಹಿಂದೆ ಸ್ಪೇನಿನ ರಾಜಕುಮಾರನಾಗಿದ್ದ ಫಿಲಿಪ್ ಎಂಬವನ ಗೌರವಾರ್ಥ ಸ್ಪೇನಿನವರು ಈ ದ್ವೀಪಗಳನ್ನು 'ಫಿಲಿಪೀನ್ಸ್' ಎಂದು ಕರೆದರು. ಫಿಲಿಪೀನ್ಸ್ ದ್ವೀಪ ಸಮುದ್ರದ ಒಳಗಿರುವ ಪರ್ವತದ ಮೇಲ್ಭಾಗ. ದೇಶದ ಬಹು ಭಾಗ ಪರ್ವತಮಯ. ಉನ್ನತ ಪರ್ವತ ಅಪೊ ಸುಮಾರು 2,959 ಮೀಟರು ಎತ್ತರವಿದೆ. ನದಿ ಕಣಿವೆಗಳು, ತಗ್ಗುಭೂಮಿಗಳು ಎಲ್ಲ ದ್ವೀಪಗಳಲ್ಲೂ ಇವೆ. ದೇಶದ ಮೂರನೆಯ ಎರಡು ಭಾಗ ಅರಣ್ಯ; ಉತ್ತಮವಾದ ಛಟ್ಟಿ ಮರಗಳು ಇಲ್ಲಿವೆ.

ಫಿಲಿಪೀನ್ಸ್‌ನದು ಉಷ್ಣವಲಯದ ಹವಾಗುಣ. ವರ್ಷದ ಸರಾಸರಿ ಮಳೆ 200 ಸೆಂಟಿಮೀಟರು. ಉಷ್ಣಾಂಶ 75° ಫಾ. ನಿಂದ 85° ಫಾ. ವರೆಗೆ.

ಫಿಲಿಪೀನ್ಸ್‌ನಲ್ಲಿ ಹತ್ತು ಸಾವಿರ ಬಗೆಗಳ ಹೂಗಿಡಗಳು, ಜರಿ ಜಾತಿಯ ಸಸ್ಯಗಳು ಇವೆ. 750 ವಿವಿಧ ಜಾತಿಗಳ ಪಕ್ಷಿಗಳಿವೆ. ಸಣ್ಣ ಜಿಂಕೆ, ಟಾರ್ಸಿಯರ್ ಎಂಬ ಸಣ್ಣ ಕೋತಿ, ಎಮ್ಮೆಯನ್ನು ಹೋಲುವಂಥ ಟಮಾರಾ ಎಂಬ ಪ್ರಾಣಿ ಇಲ್ಲಿವೆ.

ಅಕ್ಕಿ ಪ್ರಮುಖ ಆಹಾರ. ಭತ್ತ, ಮುಸುಕಿನ ಜೋಳ, ತೆಂಗು, ಕಬ್ಬು, ಹೊಗೆಸೊಪ್ಪು, ಬಾಳೆಹಣ್ಣು, ಗೆಣಸು ಬೆಳೆಯುತ್ತಾರೆ.

ಇಲ್ಲಿ ನೀರೆಮ್ಮೆಯನ್ನು ಉಳುಮೆ ಕೆಲಸಕ್ಕೂ ಉಪಯೋಗಿಸುತ್ತಾರೆ.

ಕ್ರೋಮೈಟ್, ತಾಮ್ರ, ಮ್ಯಾಂಗನೀಸ್ ನಿಕ್ಷೇಪಗಳಿವೆ. ಕಬ್ಬಿಣದ ಅದಿರು, ಚಿನ್ನ ಸಹ ದೊರಕುತ್ತವೆ.

ಎರಡನೆಯ ಮಹಾಯುದ್ಧವಾದ ಮೇಲೆ ಫಿಲಿಪೀನ್ಸ್‌ನಲ್ಲಿ ಕೈಗಾರಿಕೆಗಳು ಅಭಿವೃದ್ಧಿ ಹೊಂದಿದುವು. ವ್ಯವಸಾಯೋತ್ಪನ್ನಗಳ ಸಂಸ್ಕರಣ ಪ್ರಮುಖ ಉದ್ಯಮ. ರಾಸಾಯನಿಕಗಳು, ರಬ್ಬರ್ ವಸ್ತುಗಳು, ಉಕ್ಕಿನ ಸಾಮಾನುಗಳು. ಅಲ್ಯೂಮಿನಿಯಂ. ಗಾಜು. ಪ್ಲಾಸ್ಟಿಕ್ ಇವುಗಳ ಕೈಗಾರಿಕೆಗಳು ಮನಿಲಾ, ಕ್ವಿಜಾನ್ ಮತ್ತು ಹತ್ತಿರದ ಕೆಲವು ಪಟ್ಟಣಗಳಲ್ಲಿವೆ.

ಹಿಂದೆ ಕಾಯಿಲೆಗಳ ತವರೂರಾಗಿತ್ತು ಫಿಲಿಪೀನ್ಸ್. ಸಾರ್ವಜನಿಕ ಆರೋಗ್ಯ ಯೋಜನೆ ಯಶಸ್ವಿಯಾಗಿದೆ.

ಫಿಲಿಪೀನರು ಮಂಗೋಲಿಯ ಬುಡಕಟ್ಟಿನ ಜನ. ಚೀನ, ಜಪಾನ್, ಮಲೇಷ್ಯ ಜನರೊಂದಿಗೆ ಹತ್ತಿರದ ಸಂಬಂಧವಿದೆ. ಇಲ್ಲಿ ಗಣನೀಯ ಸಂಖ್ಯೆಯಲ್ಲಿ ಚೀನೀಯರಿದ್ದಾರೆ. 1.22 ರಿಂದ 1.37 ಮೀಟರು ಎತ್ತರವಿರುವ 'ಪಿಗ್ಮಿ'ಗಳು ಒಳನಾಡಿನಲ್ಲಿದ್ದಾರೆ. ಇವರು ನೀಗ್ರೊಗಳ ಬುಡಕಟ್ಟಿಗೆ ಸೇರಿದವರು; ಬಹು ಹಿಂದುಳಿದವರು. ಇಲ್ಲಿ ಸುಮಾರು ಎಂಬತ್ತು ಭಾಷೆಗಳಿವೆ. 1937ರಲ್ಲಿ ಟಗಲಾಗ್ ರಾಷ್ಟ್ರಭಾಷೆಯಾಗಿ ಆಯ್ಕೆಯಾಯಿತು. ಇಂಗ್ಲಿಷ್ ಪ್ರಮುಖ ಭಾಷೆ. ಶೇಕಡಾ 90 ಜನ ಕ್ರೈಸ್ತ ಮತಾವಲಂಬಿಗಳು. ಏಷ್ಯದಲ್ಲಿ ಕ್ರೈಸ್ತರು ಬಹುಸಂಖ್ಯಾತರಾಗಿರುವ ರಾಷ್ಟ್ರ ಇದೊಂದೇ.

ಕೊಬ್ಬರಿ, ಸಕ್ಕರೆ, ಮರದ ದಿಮ್ಮಿಗಳನ್ನು ರಫ್ತು ಮಾಡುತ್ತಾರೆ.

ಯಂತ್ರಗಳು, ಬಟ್ಟೆ, ಅಕ್ಕಿ, ಕಾರು, ಪೆಟ್ರೋಲಿಯಂ ಪದಾರ್ಥಗಳು, ಕಬ್ಬಿಣ ಮತ್ತು ಉಕ್ಕಿನ ಸಾಮಾನುಗಳು, ಕಾಳುಗಳು, ಕಾಗದ ಇವನ್ನು ಆಮದು ಮಾಡಿಕೊಳ್ಳುತ್ತಾರೆ.

ಮನಿಲಾ ಫಿಲಿಪೀನ್ಸಿನ ಹಿಂದಿನ ರಾಜಧಾನಿ. ಈಗ ಕೈಗಾರಿಕೆ, ವಾಣಿಜ್ಯಗಳ ಕೇಂದ್ರವಾಗಿದ್ದು ಆಧುನಿಕ ನಗರವೆನಿಸಿದೆ.

ಫಿಲಿಪೀನ್ಸಿನಲ್ಲಿ 2,50,000 ವರ್ಷಗಳ ಹಿಂದೆಯೇ ಜನ ವಾಸಿಸುತ್ತಿದ್ದರು. ಹದಿನಾರನೆಯ ಶತಮಾನದಲ್ಲಿ ಮಾರ್ಕೊ ಪೋಲೋ ಫಿಲಿಪೀನ್ಸ್ ದ್ವೀಪಗಳನ್ನು ಮೊದಲು ಕಂಡ. 1521ರಲ್ಲಿ ಫರ್ಡಿನೆಂಡ್ ಮ್ಯಾಗೆಲಾನ್ ಇಲ್ಲಿಗೆ ಬಂದ. 1565ರಲ್ಲಿ ಸ್ಪೇನಿನವರು ತಮ್ಮ ಮೊದಲ ವಸಾಹತನ್ನು ಸೇಬೂನಲ್ಲಿ ಸ್ಥಾಪಿಸಿದರು. ಸ್ಪೇನಿನವರ ಪ್ರಭಾವದಿಂದ ಜನ ಕ್ರೈಸ್ತ ಮತಾವಲಂಬಿಗಳಾದರು. ಪಶ್ಚಿಮದ ವರ್ಣಮಾಲೆ, ಸ್ಪ್ಯಾನಿಷ್ ಭಾಷೆ. ಕ್ಯಾಲೆಂಡರ್ ಫಿಲಿಪೀನ್ಸಿಗೆ ಸ್ಪ್ಯಾನಿಷ್ ಜನರ ಕೊಡುಗೆ ಎನ್ನಬೇಕು. 1898ರಲ್ಲಿ ಅಮೆರಿಕದವರು ಇಪ್ಪತ್ತು ಕೋಟಿ ಡಾಲರುಗಳಿಗೆ ಫಿಲಿಪೀನ್ಸನ್ನು ಕೊಂಡುಕೊಂಡರು. ಆದರೆ ಇಲ್ಲಿನ ಜನರಿಗೆ ತಾವು ಸ್ವತಂತ್ರರಾಗಿರಬೇಕೆಂಬ ಹಂಬಲ ಬೆಳೆಯಿತು. ಜಪಾನೀಯರು 1941ರ ಡಿಸೆಂಬರ್ 8ರಂದು ದ್ವೀಪದ ಮೇಲೆ ದಾಳಿ ಮಾಡಿದರು. ಎಷ್ಟೇ ದಿಟ್ಟತನದಿಂದ ಹೋರಾಡಿದರೂ ಸಫಲವಾಗದೆ ಫಿಲಿಪೀನ್ಸ್ ಶರಣಾಗತವಾಯಿತು. 1945ರ ಸೆಪ್ಟೆಂಬರಿನಲ್ಲಿ ಜಪಾನೀಯರು ಫಿಲಿಪೀನ್ಸನ್ನು ಬಿಟ್ಟುಕೊಟ್ಟರು. 1946ರ ಜುಲೈ 4ರಂದು ದೇಶ ಸ್ವಾತಂತ್ರ್ಯ ಗಳಿಸಿತು. 1953ರಿಂದ 1957ರವರೆಗೆ ಅಧ್ಯಕ್ಷರಾಗಿದ್ದ ಮ್ಯಾಗ್ಸೆಸೆ ಅವರ ಕಾಲದಲ್ಲಿ ಆರೋಗ್ಯ ಕೇಂದ್ರಗಳು, ಶಾಲೆಗಳು, ರಸ್ತೆ ನಿರ್ಮಾಣವಾದುವು. ಮ್ಯಾಗ್ಸೆಸೆ 1957ರಲ್ಲಿ ವಿಮಾನಾಪಘಾತದಲ್ಲಿ ಮಡಿದರು.

1959ರಲ್ಲಿ ಅಮೆರಿಕ ಸಂಯುಕ್ತ ಸಂಸ್ಥಾನ ಹಾಗೂ ಫಿಲಿಪೀನ್ಸ್‌ಗಳ ಪರಸ್ಪರ ರಕ್ಷಣಾ ಮಂಡಲಿ ರಚಿತವಾಯಿತು. ಈಗಲೂ ಇಲ್ಲಿನ ಕೆಲವು ಸೇನಾನೆಲೆಗಳು 1984ರ ವರೆಗೆ ಅಮೆರಿಕದವರಿಗೆ ಗುತ್ತಿಗೆಯಾಗಿವೆ.

ಫಿಲಿಪೀನ್ಸ್ ಗಣರಾಜ್ಯದಲ್ಲಿ ಅಧ್ಯಕ್ಷರೇ ಪ್ರಮುಖರು ಮತ್ತು ಆಡಳಿತ ವಿಭಾಗದ ಮುಖ್ಯಸ್ಥರು.

| | | |
|---|---|---|
| ಖಂಡ | : | ಏಷ್ಯ (ಆಗ್ನೇಯ) |
| ಅಕ್ಷಾಂಶ | : | 4° 38′ ಉ ದಿಂದ 19° 35′ ಉ |
| ರೇಖಾಂಶ | : | 116° 57′ ಪೂ ದಿಂದ 126° 36′ ಪೂ |
| ವಿಸ್ತೀರ್ಣ | : | 2,99,404 ಚ. ಕಿ. ಮೀ. |
| ಜನಸಂಖ್ಯೆ | : | 3,10,00,000 |
| ರಾಜಧಾನಿ | : | ಕ್ವಿಜಾನ್ ನಗರ |
| ಭಾಷೆ | : | ಟಗಲಾಗ್ (ರಾಷ್ಟ್ರಭಾಷೆ) |
| ಸರಕಾರ | : | ಗಣರಾಜ್ಯ |
| ಬಾವುಟ | : | ಮೇಲರ್ಧ ಭಾಗ ನೀಲಿ. ಕೆಳ ಅರ್ಧ ಭಾಗ ಕೆಂಪು. ಬಿಳಿ ತ್ರಿಕೋಣದ ಒಳಗೆ ಚಿನ್ನದ ಬಣ್ಣದ ಸೂರ್ಯ. ಮೂರು ನಕ್ಷತ್ರಗಳು ಕೋನಗಳ ಕಡೆಗೆ |

## ಬಂಡವಾಳ

ಒಂದು ಅಂಗಡಿಯಲ್ಲಿ ಹೆಚ್ಚಾಗಿ ಸರಕುಗಳೂ ವ್ಯಾಪಾರ ಸಾಧನಗಳಾದ ನಾನಾ ಉಪಕರಣಗಳೂ ಇದ್ದರೆ, ಅಂಗಡಿಯಲ್ಲಿ ಹೆಚ್ಚು ಬಂಡವಾಳ ಹಾಕಿದೆ ಎನ್ನುತ್ತಾರೆ. ಬಂಡವಾಳ ಎಂದರೆ ಏನು ?

ಹಣವನ್ನು ಬಂಡವಾಳವೆನ್ನುವುದು ಜನರಲ್ಲಿ ರೂಢಿ. ನಿರ್ಜೀವ ವಸ್ತುವಿನಂತೆ ಕಣಜದ ಕತ್ತಲಿನಲ್ಲಿ ಬಿದ್ದಿದ್ದ ಬೀಜವನ್ನು ಹೊರಬೆಳಕಿಗೆ ತಂದು ನೆಲದಲ್ಲಿ ಚೆಲ್ಲಿದರೆ ಅನುಕೂಲ ಪರಿಸರದಲ್ಲಿ ಅದು ಮೊಳೆತು ಜೀವ ತಳೆಯುವಂತೆ, ಮನೆಯ ತಿಜೋರಿಯಲ್ಲಿ ಮಲಗಿದ್ದ ಹಣವನ್ನು ಹೊರಗೆ ತಂದು ಅಂಗಡಿಯಲ್ಲಿ ಇಟ್ಟೊಡನೆಯೇ ವ್ಯಾಪಾರಿಯ ದೃಷ್ಟಿಯಲ್ಲಿ ಅದು ಬಂಡವಾಳವಾಗುತ್ತದೆ. ಏಕೆಂದರೆ ಆಗ ಆ ಹಣ ಜೀವ ತಳೆಯುತ್ತದೆ; ವರಮಾನ ಗಳಿಸುವ ಸಾಧನವಾಗುತ್ತದೆ. ಹಣ ಕವಲೊಡೆದು ಸರಕಾಗಿ, ಬೀರುವಾಗಿ, ಮೇಜಾಗಿ, ಕುರ್ಚಿಯಾಗಿ, ಯಂತ್ರವಾಗಿ, ಹೀಗೆ ಇನ್ನೂ ನಾನಾ ರೂಪು ತಳೆಯುತ್ತದೆ. ವ್ಯಾಪಾರಿಗೆ ಲಾಭ ತರಲು ನೆರವಾಗುತ್ತದೆ. ಒಳಗಿಂದಲೇ ಬೆಳೆಯುವ ಜೀವಿಯಂತೆ ಇದೂ ಬೆಳೆಯುತ್ತ ಸಾಗುತ್ತದೆ. ಬೆಳೆಯುವುದು ಇದರ ಸಹಜಧರ್ಮ; ಇದು ಬೆಳೆಯಬೇಕೆಂಬುದೇ ವ್ಯಾಪಾರಿಯ ಉದ್ದೇಶ. ಬಂಡವಾಳ ಬೆಳೆದಷ್ಟೂ ವ್ಯಾಪಾರಿಗೆ ಲಾಭ. ಬಂಡವಾಳದ ಮೊದಲಿನ ಸ್ಥಿತಿಗೂ ಅನಂತರದ ಸ್ಥಿತಿಗೂ ಇರುವ ವ್ಯತ್ಯಾಸವೇ ಲಾಭ. (ಅನಂತರದ ಸ್ಥಿತಿ ಮೊದಲಿನ ಸ್ಥಿತಿಗಿಂತ ತಗ್ಗಿನದಾದರೆ ನಷ್ಟ. ಆದರೆ ಯಾವ ವ್ಯಾಪಾರಿಯೂ ಹೀಗಾಗಬೇಕೆಂದು ಬಯಸುವುದಿಲ್ಲ.)

ವ್ಯಾಪಾರಿಗೆ ಅನ್ವಯವಾಗುವ ಮಾತನ್ನೇ ನಾವು ಇಡಿಯ ನಾಡಿಗೂ ಅನ್ವಯಿಸಬಹುದು. ಬಂಡವಾಳದ ಸರ್ವಾಂತರ್ಯಾಮಿತ್ವವನ್ನು ಕಾಣಬಹುದು. ಜನರ ಸುಖಸಂತೋಷಗಳನ್ನು ಹೆಚ್ಚಿಸಬಲ್ಲ ಅಥವಾ ಅವರ ಕಷ್ಟಗಳನ್ನು ನಿವಾರಿಸಬಲ್ಲ, ಅವರ ಬಯಕೆಗಳನ್ನು ಪೂರೈಸಬಲ್ಲ ಸಾಧನಗಳೆಲ್ಲ ಬಂಡವಾಳ. ನೆಲದಿಂದೆತ್ತಿದ ಖನಿಜ, ನೀರಿನಿಂದುತ್ಪಾದಿಸಿದ ವಿದ್ಯುತ್ತು, ಯಂತ್ರ, ಕಾರ್ಖಾನೆ, ಕಾಲುವೆ—ಹೀಗೆ ಮನುಷ್ಯ ಉತ್ಪಾದಿಸಿದ, ಹೆಚ್ಚು ಉತ್ಪಾದನೆಗೆ ಒದಗಿಬರುವ ಎಲ್ಲವೂ ಬಂಡವಾಳವೇ.

ಮೇಲೆ ಬರೆದಿರುವ ಮಾತನ್ನು ಎಚ್ಚರಿಕೆಯಿಂದ ಓದಿದರೆ ಒಂದು ವಿಚಾರ ಸ್ಪಷ್ಟವಾಗುತ್ತದೆ. ಮನುಷ್ಯನ ಕೈವಾಡವಿಲ್ಲದೆ ಪ್ರಕೃತಿಯಲ್ಲಿ ಸಹಜಸ್ಥಿತಿಯಲ್ಲಿರುವುದು ಬಂಡವಾಳವಲ್ಲ. ಉದಾಹರಣೆಗೆ ಭೂಮಿ. ಇದು ಮೂಲ ವಸ್ತು. ಒಂದು ದೃಷ್ಟಿಯಲ್ಲಿ ಇದು ಜಡ. ಈ ಜಡಕ್ಕೆ ಮನುಷ್ಯನ ಚೈತನ್ಯ ತಾಕಿದರೆ—ಅವನ ದುಡಿಮೆಯನ್ನು ತೊಡಗಿಸಿದರೆ—ಆಗ ಸಂಪತ್ತು ಉದ್ಭವಿಸುತ್ತದೆ. ನೆಲ ದುಡಿಮೆಗಳ ಸಂಯೋಗದಿಂದ ಹುಟ್ಟಿದ ಸಂಪತ್ತನ್ನು ಮಾನವನ ಉಪಯೋಗಕ್ಕೆ ಬಳಸಿಕೊಂಡರೆ ಆಗ ಏನೂ ಉಳಿಯುವುದಿಲ್ಲ. ಬದಲಾಗಿ ಅದನ್ನು ಮತ್ತೆ ಸಂಪತ್ತಿನ ಉತ್ಪಾದನೆಗಾಗಿ ತೊಡಗಿಸಿದರೆ ಆಗ ಅದು ಬಂಡವಾಳ. ಉಳಿತಾಯವೇ ಬಂಡವಾಳದ ಮೂಲ. ಇವನ್ನೆಲ್ಲ ಹಣದ ಲೆಕ್ಕದಲ್ಲಿ ಹೇಳುವುದೂ ವ್ಯವಹಾರ ಮಾಡುವುದೂ ನಮ್ಮ ವಾಡಿಕೆ. ಏಕೆಂದರೆ ಇದು ಸುಲಭೋಪಾಯ.

ಇಡಿಯ ಸಮಾಜದ ದೃಷ್ಟಿಯಲ್ಲಿ ಬಂಡವಾಳವೆಂದರೆ ಏನೆಂಬುದನ್ನು ಸ್ಥೂಲವಾಗಿ ಅರಿತುಕೊಂಡದ್ದಾಯಿತು. ಇನ್ನು ಬಂಡವಾಳದ ನಾನಾ ರೂಪಗಳನ್ನು ಸೂಕ್ಷ್ಮವಾಗಿ ಪರಿಶೀಲಿಸೋಣ. ವ್ಯಾಪಾರಸ್ಥ ತನ್ನ ಬಂಡವಾಳವನ್ನು ಹಣದ ರೂಪದಲ್ಲಿ ತಂದ. ಅವನ ದೃಷ್ಟಿಯಲ್ಲಿ ಹಣವೇ ಬಂಡವಾಳ. ಆದರೆ ವಾಸ್ತವವಾಗಿ ಹಣ ಒಂದು ಸಂಕೇತ. ಅವನಲ್ಲಿ ಎಷ್ಟು ಹಣ ಇದೆಯೋ ಅಷ್ಟು ಪ್ರಮಾಣದಲ್ಲಿ ಅವನು ಇತರರಿಂದ ತನಗೆ ಬೇಕಾದ ಏನನ್ನಾದರೂ ಪಡೆಯಬಹುದು ಎಂದು ಇದರ ಅರ್ಥ. ಬರೀ ಹಣವೇ ನೇರವಾಗಿ ಯಾವ ಪ್ರಯೋಜನಕ್ಕೂ ಬರುವುದಿಲ್ಲ. ಈ ಹಣದಿಂದ ಕೊಂಡು ತಂದ ಪದಾರ್ಥಗಳು ಬಂಡವಾಳದ ನಾನಾ ರೂಪಗಳು.

ಅಂಗಡಿಯ ಜಮೀನು, ಕಟ್ಟಡ ಮುಂತಾದುವು ಸ್ಥಿರ ಬಂಡವಾಳ. ಅವನ್ನು ಮಾರಾಟ ಮಾಡುವುದು ಅವನ ಉದ್ದೇಶವಲ್ಲ. ಕಾರ್ಖಾನೆ, ಅದರಲ್ಲಿರುವ ಯಂತ್ರ, ಜಮೀನಿನ ಉಳುಮೆ ಯಂತ್ರ ಇವೆಲ್ಲವೂ ಸ್ಥಿರಬಂಡವಾಳ. ಒಮ್ಮೆ ಬಳಸಿದ ಮಾತ್ರಕ್ಕೆ ಇವು ನಾಶವಾಗುವುದಿಲ್ಲ. ಅಂಗಡಿಯಲ್ಲಿರುವ ಸರಕು, ಕಾರ್ಖಾನೆಯ ಕಚ್ಚಾಸಾಮಗ್ರಿ, ತಯಾರಿಕೆಯ ಹಂತದಲ್ಲಿರುವ ವಸ್ತು, ಇಂಧನ ಇವೆಲ್ಲ ಕಾರ್ಯೋಪಯೋಗಿ ಬಂಡವಾಳ. ಕಾರ್ಮಿಕರಿಗೆ ಕೊಡಬೇಕಾದ ವೇತನದ ಹಣ, ಸರಕು ಕೊಳ್ಳಲೂ ಇತರ ವೆಚ್ಚಗಳಿಗೂ ಅಗತ್ಯವಾದ ಹಣ ಇವನ್ನೂ ಕಾರ್ಯೋಪಯೋಗಿ ಬಂಡವಾಳವೆಂದು ಪರಿಗಣಿಸಬಹುದು. ಈ ಹಣ ಭಾಗಶಃ ಕೈಯಲ್ಲಿರಬಹುದು; ಉಳಿದದ್ದು ಬ್ಯಾಂಕಿನಲ್ಲಿ ಠೇವಣಿಯ ರೂಪದಲ್ಲಿರಬಹುದು.

ಹೀಗೆ ಲಾಭ ಸಂಪಾದನೆಗಾಗಿ ಪ್ರತ್ಯಕ್ಷವಾಗಿಯೋ ಅಪ್ರತ್ಯಕ್ಷವಾಗಿಯೋ ತೊಡಗಿಸಿರುವ ಎಲ್ಲ ಆಸ್ತಿಗಳನ್ನೂ ಬಂಡವಾಳವೆನ್ನಬಹುದಾದರೂ, ವ್ಯಾಪಾರ ಅಥವಾ ಉದ್ಯಮದ ಒಡೆಯನ ದೃಷ್ಟಿಯಿಂದ ಇದೆಲ್ಲವೂ ಬಂಡವಾಳವೆನ್ನಿಸಿಕೊಳ್ಳುವುದಿಲ್ಲ. ಅವನಲ್ಲಿರುವ ನಗದು, ಬ್ಯಾಂಕು ಠೇವಣಿ, ಸರಕು, ಉಪಕರಣ, ಅಣೆಕಟ್ಟು, ಯಂತ್ರ, ಕಟ್ಟಡ, ಬರಬೇಕಾದ ಸಾಲ, ಆ ಸಂಸ್ಥೆಯ ಸುನಾಮ ಇವೆಲ್ಲದರ ಮೌಲ್ಯಗಳನ್ನೂ ಕೂಡಿಸಿ, ಆತ ತೆರಬೇಕಾದ ಸಾಲಗಳ (ಜವಾಬ್ದಾರಿಗಳ) ಒಟ್ಟನ್ನು ಆತನ ಆಸ್ತಿಗಳ ಮೊತ್ತದಿಂದ ಕಳೆದರೆ ಉಳಿಯುವುದೇ ಅವನ ನಿಜ ಬಂಡವಾಳ. ವ್ಯಾಪಾರಿ ನಿಯೋಜಿಸಿದ ಒಟ್ಟು ಆಸ್ತಿಗಳಿಂದ ಲಾಭ ಸಂಪಾದನೆಯಾದಂತೆಲ್ಲ ಈ ಬಂಡವಾಳದ ಗಾತ್ರವೂ ಹೆಚ್ಚುತ್ತ ಹೋಗುತ್ತದೆ. ನಷ್ಟ ಸಂಭವಿಸಿದಂತೆಲ್ಲ ಆಸ್ತಿಗಳು ಕರಗುತ್ತವೆ; ಅಥವಾ ಜವಾಬ್ದಾರಿ (ಸಾಲ) ಹೆಚ್ಚುತ್ತದೆ, ಪರಿಣಾಮವಾಗಿ ಬಂಡವಾಳದ ಮೈ ಸಣ್ಣಗಾಗುತ್ತದೆ. ಇದೇ ಸ್ಥಿತಿ ಮುಂದುವರಿದರೆ ಅದು ಸೊನ್ನೆಯೂ ಆಗಬಹುದು. ಜವಾಬ್ದಾರಿಗಳೇ (ಸಾಲಗಳೇ) ಆಸ್ತಿಗಳಿಗಿಂತ ಅಧಿಕವಾಗಬಹುದು.

ಒಂದು ಉದ್ಯಮಕ್ಕೆ ಅದರ ಒಡೆಯನೋ ಒಡೆಯರೋ ಖಾಸಗಿಯಾಗಿ ಬಂಡವಾಳ ಒದಗಿಸಿಕೊಳ್ಳಬಹುದು. ಉದ್ಯಮದ ಗಾತ್ರ ಬೆಳೆದು ಅದಕ್ಕೆ ಹೆಚ್ಚು ಬಂಡವಾಳ ಅಗತ್ಯವಾದಾಗ ಅನೇಕರಿಂದ ಬಂಡವಾಳ ಸಂಗ್ರಹಿಸಬಹುದು. ಇಂಥ ಉದ್ಯಮಕ್ಕೆ ಬೇಕಾದ ಬಂಡವಾಳವನ್ನು ಸಮಾನಗಾತ್ರದ ಹಲವು ಅಂಶಗಳಾಗಿ (ಷೇರುಗಳಾಗಿ) ಮಾಡಿ ಇವನ್ನು ಸಾರ್ವಜನಿಕರಿಂದ ಚಂದಾ ಎತ್ತಬಹುದು. ಹೀಗೆ ರಚಿತವಾದ ಸಂಸ್ಥೆಯನ್ನು ಕೂಡು ಬಂಡವಾಳ ಕಂಪೆನಿಯೆನ್ನುತ್ತಾರೆ. (ಸಹಕಾರ ಸಂಘಗಳ ಬಂಡವಾಳವೂ ಇದೇ ರೀತಿ ಬರುವುದಾದರೂ ಅಲ್ಲಿ ಉದ್ದೇಶ ಲಾಭವಲ್ಲ; ಸ್ವಸಹಾಯ, ಪರಸ್ಪರ ಸಹಾಯ.)

ಒಂದು ಉದ್ಯಮಕ್ಕೆ ಬಂಡವಾಳ ಸಾಲದೆ ಬಂದರೆ ಆಗ ಅದನ್ನು ಇತರ ಮೂಲಗಳಿಂದ ಪಡೆಯುವುದು ಅವಶ್ಯವಾಗುತ್ತದೆ. ಈ ಅಭಾವ ತಾತ್ಕಾಲಿಕವಾದದ್ದಾದರೆ ಕಾರ್ಯವಾಹಕ ಬಂಡವಾಳದ ಕೊರತೆಯಾಗಿದ್ದರೆ, ಆಗ ಬ್ಯಾಂಕುಗಳಿಂದ ಅದಕ್ಕೆ ಬೇಕಾದ ಹಣವನ್ನು ಕಿರುಗಡವಾಗಿ ಪಡೆಯಬಹುದು. ಹಾಗಲ್ಲದೆ ಈ ಕೊರತೆ ದೀರ್ಘಕಾಲಿಕವಾದರೆ, ಸ್ಥಿರ ಬಂಡವಾಳದ ಅಭಾವ ತುಂಬಲು ಹಣ ಬೇಕಾದರೆ, ಅಂಥ ಸನ್ನಿವೇಶದಲ್ಲಿ ಈ ಕೊರತೆಯನ್ನು ತುಂಬಲು ದೀರ್ಘಕಾಲಿಕ ಸಾಲ ಪಡೆಯಬೇಕು. ಅದು ಕೂಡು ಬಂಡವಾಳ ಕಂಪೆನಿಯಾಗಿದ್ದರೆ ಸಾರ್ವಜನಿಕರಿಗೆ ಷೇರುಗಳನ್ನು/ ಸಾಲಪತ್ರಗಳನ್ನೋ ನೀಡಿ ಹೆಚ್ಚು ಬಂಡವಾಳ ಸಂಗ್ರಹಿಸಬಹುದು. ಒಂದು ಉದ್ಯಮದಲ್ಲಿ ಅಗತ್ಯವಾದ್ದಕ್ಕಿಂತ ಹೆಚ್ಚು ಹಣ ಇದ್ದು ಅದನ್ನು

ಬ್ಯಾಂಕಿನಲ್ಲಿ ಇಟ್ಟಿದ್ದರೆ, ಅಥವಾ ಅದು ಉಪಯೋಗಕ್ಕೆ ಬಾರದ ಬೇರೆ ರೂಪದಲ್ಲಿದ್ದರೆ ಆಗ ಅದರ ಬಂಡವಾಳ ಹೆಚ್ಚಾಯಿತು ಎನ್ನಬಹುದು.

ಒಟ್ಟಿನಲ್ಲಿ ಬಂಡವಾಳವೇ ಪ್ರಗತಿಯ ಮೂಲ. ಅದು ಒಂದು ಉದ್ಯಮದ ಜೀವಸತ್ತ್ವ, ದೇಶದ ಚೈತನ್ಯ. ಬಂಡವಾಳವಿದ್ದಾಗಲೇ ಉದ್ಯಮದ ಅಂಗಾಂಗಗಳು ಚಲಿಸುತ್ತವೆ. ಉತ್ಪಾದನೆ ವ್ಯಾಪಾರ ವಹಿವಾಟು ಸಾಧ್ಯವಾಗುತ್ತದೆ. ಉದ್ಯಮಿಗೆ ಲಾಭವೂ ದುಡಿಮೆಗಾರನಿಗೆ ವೇತನವೂ ಅನುಭೋಗಿಗೆ ಸೇವೆ–ಸರಕುಗಳೂ ದೊರಕುತ್ತವೆ. ಖನಿಜವನ್ನು ನೆಲದ ಅಡಿಯಿಂದ ಮೇಲೆತ್ತಲೂ, ಮುಂದೆ ಎಂದೋ ಒದಗಿಬರುವ ಗಿರಾಕಿಗಾಗಿ ಮೊದಲೇ ಸರಕಿನ ಉತ್ಪಾದನೆಯಲ್ಲಿ ತೊಡಗಲೂ ಬಂಡವಾಳ ಅಗತ್ಯ.

ಮುಂಚೆಯೇ ಹೇಳಿದ ಹಾಗೆ, ಉತ್ಪತ್ತಿಯಾದ ಸಂಪತ್ತನ್ನು ಅನುಭೋಗಕ್ಕಾಗಿ ಬಳಸದೆ ಉಳಿಸಿದ್ದು ಬಂಡವಾಳ. ಬಂಡವಾಳದಿಂದ ಹೆಚ್ಚು ಸಂಪತ್ತಿನ ಉತ್ಪಾದನೆ. ಆಗ ಹೆಚ್ಚು ಉಳಿತಾಯ. ಮತ್ತೆ ಹೆಚ್ಚು ಬಂಡವಾಳ.

ಹಿಂದುಳಿದ ರಾಷ್ಟ್ರಗಳಲ್ಲಿ ಜನರ ಬಳಕೆಗೆ ಅವಶ್ಯವಾದಷ್ಟು ಸಂಪತ್ತಿನ ಉತ್ಪಾದನೆಯೇ ಸಾಧ್ಯವಿಲ್ಲವಾದ್ದರಿಂದ ಉಳಿತಾಯ ಅಸಾಧ್ಯ ; ಅಥವಾ ಕಷ್ಟಸಾಧ್ಯ. ಇಂಥ ರಾಷ್ಟ್ರ ಅಭಿವೃದ್ಧಿ ಹೊಂದಲು ಹೆಚ್ಚು ಮುಂದುವರಿದ ರಾಷ್ಟ್ರಗಳ ಜನರು ತಾವು ಉಳಿತಾಯ ಮಾಡಿದ್ದನ್ನು, ಎಂದರೆ ಬಂಡವಾಳವನ್ನು, ಈ ದೇಶಗಳಿಗೆ ಕೊಡಬಹುದು. ಹಿಂದುಳಿದ ರಾಷ್ಟ್ರಗಳು ಮುಂದೆ ಬರಲೆಂಬ ಒಳ್ಳೆಯ ಉದ್ದೇಶದಿಂದ ಈ ರಾಷ್ಟ್ರಗಳು ಬಂಡವಾಳದ ನೆರವು ನೀಡಿದರೆ ಆಗ ಚೆನ್ನು. ಹೀಗೆ ಅನ್ಯ ರಾಷ್ಟ್ರಗಳಿಂದ ಬಂದ ಬಂಡವಾಳವನ್ನು ಹಣದ ಲೆಕ್ಕದಲ್ಲಿ ಹೇಳಬಹುದಾದರೂ ಅದು ವಾಸ್ತವವಾಗಿ ವಸ್ತುಗಳ ಅಥವಾ ಸೇವೆಗಳ ರೂಪದಲ್ಲೇ ಬರುತ್ತದೆ. ಕಚ್ಚಾ ಸಾಮಗ್ರಿ, ಯಂತ್ರ ಸಾಧನ, ತಾಂತ್ರಿಕಜ್ಞಾನ ಇವೆಲ್ಲವೂ ಬಂಡವಾಳವೇ.

ಇಪ್ಪತ್ತನೆಯ ಶತಮಾನದ ಎಲ್ಲ ಅದ್ಭುತ ಸಾಧನೆಗಳೂ ಬಂಡವಾಳದ ಫಲ ; ಪ್ರಕೃತಿಯೊಂದಿಗೆ ಮಿಳಿತವಾದ ಮಾನವನ ದೇಹಶಕ್ತಿ. ಬುದ್ಧಿಶಕ್ತಿಗಳ ಪರಿಣಾಮ. ಆದ್ದರಿಂದ ಇದು ಯಾರೊಬ್ಬರ ಅಥವಾ ಕೆಲವರ ಸ್ವತ್ತಲ್ಲ ; ಇದನ್ನು ಉತ್ಪತ್ತಿಮಾಡಲು ನೆರವಾದ ಇಡೀ ಮಾನವ ಸಮುದಾಯದ–ಸಮಾಜದ–ಸಮಷ್ಟಿಯ ಆಸ್ತಿ. ರಾಷ್ಟ್ರದ ಸಂಪತ್ತನ್ನು ಹೆಚ್ಚಿಸಲು ನೆರವಾಗುವ ಈ ಬಂಡವಾಳವೆಲ್ಲ ರಾಷ್ಟ್ರದ ಸ್ವತ್ತಾಗಬೇಕು—ಎಂದರೆ ರಾಷ್ಟ್ರೀಕರಣವಾಗಬೇಕು—ಎಂಬ ವಾದಕ್ಕೆ ಈ ಭಾವನೆಯೇ ಮೂಲ.

## ಬಂಡಾಯ

ಸರಕಾರದ ಇಲ್ಲವೆ ಅದರ ಅಧಿಕಾರಿಗಳ ವಿರುದ್ಧ ಪ್ರತಿಭಟಿಸಿ. ಆಡಳಿತ ವ್ಯವಸ್ಥೆಯನ್ನು ಬಲಪ್ರಯೋಗದಿಂದ ಉರುಳಿಸಲು ಯತ್ನಿಸುವುದು ಬಂಡಾಯ, ಇಲ್ಲವೆ ದಂಗೆ.

ಪ್ರಪಂಚದ ಇತಿಹಾಸದಲ್ಲಿ ಇಂಥ ದಂಗೆಗಳು ಹಲವಾರು ನಡೆದಿವೆ. ಬ್ರಿಟನ್ನಿನಲ್ಲಿ ಆಗಿರುವ ಬಂಡಾಯಗಳಿಗೆ ಲೆಕ್ಕವಿಲ್ಲ. ನೌಕಾಬಂಡಾಯ, ಸೈನ್ಯದ ಬಂಡಾಯ–ಇವುಗಳನ್ನು ನಿವಾರಿಸುವುದು ಅಲ್ಲಿ ದೊಡ್ಡ ಸಮಸ್ಯೆಯಾಗಿತ್ತು. ಕೊನೆಗೆ ಕಾನೂನು ಕಾಯಿದೆಗಳ ಮೂಲಕ ಅವನ್ನು ತಹಬಂದಿಗೆ ತಂದರು. ಭಾರತದಲ್ಲಿಯೂ ಹಿಂದಿನಿಂದಲೂ ಬಂಡಾಯಗಳನ್ನು ನಾವು ಗುರುತಿಸಬಹುದು. ಹದಿನೆಂಟನೆಯ ಶತಮಾನದಿಂದ ಸ್ವಾತಂತ್ರ್ಯ ದೊರಕುವವರೆಗೆ ಭಾರತದಲ್ಲಿ ಇಪ್ಪತ್ತಮೂರು ಬಂಡಾಯಗಳಾಗಿದ್ದುವು. ಭಾರತದ ಸ್ವಾತಂತ್ರ್ಯ ಸಂಗ್ರಾಮಕ್ಕೆ ನಾಂದಿಹಾಡಿದ ಸೈನಿಕರ ಬಂಡಾಯ ಇತಿಹಾಸದ ಒಂದು ಪ್ರಮುಖ ಘಟನೆ. 1857ರಲ್ಲಿ ಭಾರತೀಯರು ಬ್ರಿಟಿಷರ ವಿರುದ್ಧ ದಂಗೆ ಎದ್ದರು. ಬ್ರಿಟಿಷರು ಅದನ್ನು 'ಸಿಪಾಯಿ ದಂಗೆ' ಎಂದು ಕರೆದರು. ಅದು ಪರಕೀಯ ದಾಸ್ಯದ ನೊಗವನ್ನು ಕಿತ್ತೊಗೆಯುವ ಪ್ರಯತ್ನವೇ ಆಗಿತ್ತು. ಒಂದು ವರ್ಷ ಕಾಲ ಸತತವಾಗಿ ನಡೆದ ಈ ದಂಗೆಯನ್ನು ಹತ್ತಿಕ್ಕಬೇಕಾದರೆ ಬ್ರಿಟಿಷರು ಬಹಳ ಶ್ರಮ ಪಡಬೇಕಾಯಿತು.

ದ್ವಿತೀಯ ಮಹಾಯುದ್ಧದ ಅವಧಿಯಲ್ಲಿ ದೇಶದ ಹೊರಗೆ ಬರ್ಮ, ಸಿಂಗಪುರ, ಮತ್ತಿತರ ಕಡೆಗಳಲ್ಲಿ ಹೋರಾಡುತ್ತಿದ್ದ ಭಾರತೀಯ ಸೈನಿಕರು ಸುಭಾಷರ ನೇತೃತ್ವದಲ್ಲಿ ಆಜಾದ್ ಹಿಂದ್ ದಳವನ್ನು ರಚಿಸಿದರು. ಬಂಡಾಯವೆದ್ದರೆಂದು ಆ ಸೈನಿಕರನ್ನು ಯುದ್ಧಾನಂತರ ದಂಡಿಸುವ ಪ್ರಯತ್ನವನ್ನು ಭಾರತವನ್ನು ಆಳುತ್ತಿದ್ದ ಬ್ರಿಟಿಷ್ ಸರಕಾರ ಮಾಡಿತು.

1946ರಲ್ಲಿ ಭಾರತದಲ್ಲಿ ನಡೆದ ನೌಕಾ ಬಂಡಾಯ ಹಾಗೂ ವೈಮಾನಿಕ ಬಂಡಾಯ ಬ್ರಿಟಿಷ್ ಆಡಳಿತಗಾರರನ್ನು ಮತ್ತಷ್ಟು ಭೀತರನ್ನಾಗಿ ಮಾಡಿತು ; ಸ್ವಾತಂತ್ರ್ಯ ನೀಡಿಕೆ ಅನಿವಾರ್ಯ ಎಂಬುದಕ್ಕೆ ಇದು ಮತ್ತೊಂದು ಪ್ರಬಲ ಕಾರಣವಾಯಿತು.

ಸ್ವತಂತ್ರ ರಾಷ್ಟ್ರದ ಸೈನ್ಯದಲ್ಲಿ ಬಂಡಾಯ ಬಹು ಅಪಾಯಕಾರಿ. ದೇಶದ ರಕ್ಷಣೆಯ ಹೊಣೆಯನ್ನು ಹೊತ್ತ ಸೈನಿಕರು ಬಂಡಾಯವೆದ್ದರೆ ದೇಶದ ಸುಭದ್ರತೆಗೇ ವಿಪತ್ತು. ಇದರಿಂದ ಎಲ್ಲ ದೇಶಗಳಲ್ಲಿಯೂ ಸೈನಿಕರ ಬಂಡಾಯಕ್ಕೆ ಉಗ್ರಶಿಕ್ಷೆಯನ್ನು ವಿಧಿಸುತ್ತಾರೆ. ಆದರೆ ಎಲ್ಲಿ ಪರಕೀಯರ ದಬ್ಬಾಳಿಕೆ ಇದೆಯೋ, ಎಲ್ಲಿ ಪ್ರಜಾಪ್ರಭುತ್ವ ಮಣ್ಣುಗೂಡಿ ಸರ್ವಾಧಿಕಾರ ಸ್ಥಾಪಿತವಾಗುತ್ತದೋ, ಎಲ್ಲಿ ಉಗ್ರ ದಬ್ಬಾಳಿಕೆಯಿಂದ ಜನ ನರಳುತ್ತಾರೋ ಅಲ್ಲಿ ಜನತೆ ಬಂಡಾಯವೇಳುವುದು ಅನಿವಾರ್ಯವಾಗುತ್ತದೆ.

## ಬಂದರು

ಸಮುದ್ರದ ತೆರೆಗಳ ಮೇಲೆ ಹೊಗೆ. ತೀರದಲ್ಲಿ ದೊಡ್ಡ ದೊಡ್ಡ ಉಗಿಹಡಗುಗಳು ನಿಂತಿವೆ. ನೂರಾರು ಜನ ಹಡಗುಗಳ ಮೇಲೂ ದಡದ ಮೇಲೂ ಕೆಲಸದಲ್ಲಿ ನಿರತರಾಗಿದ್ದಾರೆ. ಅಸಂಖ್ಯ ಸರಕುಗಳು ದಡದಮೇಲೆ ಬಂದು ಬಿದ್ದಿವೆ.

ಕಲ್ಕತ್ತ ಬಂದರು.



ದೊಡ್ಡ ಉಗಿಹಡಗುಗಳು ಬೇಗೆ ಹಾಯಾಗಿ, ಮಾರುತಗಳಿಂದ ರಕ್ಷಣೆ ಪಡೆದು ಭೂಮಿಯ ಸಮೀಪ ನಿಲ್ಲುವ ಸ್ಥಳವೇ ಬಂದರು. ಒಂದು ದೇಶದಿಂದ ಮತ್ತೊಂದು ದೇಶಕ್ಕೆ ಸರಕನ್ನು ಸಾಗಿಸುವುದರಲ್ಲಿ ಹಡಗುಗಳು ಪ್ರಮುಖಪಾತ್ರ ವಹಿಸಿವೆ. ಆಮದು-ರಫ್ತುಗಳ ಆಧಾರ ಬಂದರು.

ಬಂದರುಗಳಲ್ಲಿ ಎರಡು ವಿಧ : ನೈಸರ್ಗಿಕ ಮತ್ತು ಕೃತಕ. ಕೊಲ್ಲಿ. ನದಿಯ ಅಳಿವೆಗಳಿಂದ ತಾವಾಗಿಯೇ ಆದಂಥವು ನೈಸರ್ಗಿಕ ಬಂದರುಗಳು. ಒಂದು ದೇಶದ ಸಮುದ್ರದ ತೀರ ಅಂಕುಡೊಂಕಾಗಿದ್ದಷ್ಟೂ ನೈಸರ್ಗಿಕ ಬಂದರುಗಳ ಸಂಖ್ಯೆ ದೊಡ್ಡದು. ಇಂಗ್ಲೆಂಡಿನ ಸಮುದ್ರ ತೀರಗಳಲ್ಲಿ ನೈಸರ್ಗಿಕ ಬಂದರುಗಳು ಹೇರಳವಾಗಿವೆ. ಭಾರತದ ಭೂಪ್ರದೇಶ ಮೂರು ಕಡೆಗಳಿಂದ ನೀರಿನಿಂದ ಆವರಿಸಲ್ಪಟ್ಟಿದೆ. ಆದರೆ ಸಮುದ್ರತೀರ ಬಹಳ ನೇರ; ಅಂಕುಡೊಂಕುಗಳಿಲ್ಲ. ಆದ್ದರಿಂದ ಬಂದರುಗಳು ಹೆಚ್ಚಿಲ್ಲ. ಉತ್ತರದ ಆರ್ಕ್‌ಟಿಕ್ ಸಮುದ್ರದ ನೀರು ಹೆಪ್ಪುಗಟ್ಟುವುದರಿಂದ ಸೋವಿಯೆತ್ ದೇಶಕ್ಕೆ ಸುದೀರ್ಘ ಸಮುದ್ರ ದಂಡೆ ಇದ್ದರೂ ಬಂದರುಗಳು ಕಡಮೆ.

ನೈಸರ್ಗಿಕ ಬಂದರುಗಳ ಕೊರತೆಯುಂಟಾದಾಗ ಕೃತಕವಾಗಿ ಬಂದರುಗಳನ್ನು ನಿರ್ಮಿಸುತ್ತಾರೆ. ಸಮುದ್ರದ ಅಲೆಗಳ ಹೊಡೆತ ತೀರದ ಮೇಲೆ ಬಲವಾಗಿರದಿದ್ದರೆ, ದಂಡೆ ಸ್ವಲ್ಪ ಓರೆಕೋರೆಯಾಗಿದ್ದರೂ ಕೃತಕ ಬಂದರನ್ನು ಕಟ್ಟಬಹುದು. ಸಮುದ್ರಕ್ಕೆ ಸೇರುವ ನದಿ ಆಳವಾಗಿಯೂ ವಿಶಾಲವಾಗಿಯೂ ಇದ್ದರೆ, ಹಡಗುಗಳು ಸಮುದ್ರದಿಂದ ನದಿಯನ್ನು ಪ್ರವೇಶಿಸಿ ಒಳಪ್ರದೇಶದಲ್ಲಿ ತಂಗುವಂತೆ ನದಿಯ ದಡದ ಮೇಲೆ ಕೃತಕ ಬಂದರನ್ನು ನಿರ್ಮಿಸಲು ಶಕ್ಯ. ಮದರಾಸು ಕೃತಕ ಬಂದರು. ಮುಂಬಯಿ, ಕಲ್ಕತ್ತ, ಕಾರವಾರ ನೈಸರ್ಗಿಕ ಬಂದರುಗಳು. ಕಲ್ಕತ್ತೆಯ ಬಂದರು ಗಂಗಾನದಿ ಸಮುದ್ರವನ್ನು ಕೂಡುವಲ್ಲಿ ರೂಪುಗೊಂಡಿದೆ. ಮಂಗಳೂರಿನದು ಕೃತಕ ಬಂದರಿನ ನಿರ್ಮಾಣ. ಕೆನಡದ ಮಾಂಟ್ರಿಯಲ್ ಬಂದರನ್ನು ತಲಪಲು ಸಮುದ್ರದ ತೀರದಿಂದ 1,609 ಕಿ. ಮೀ. ಒಳಕ್ಕೆ ಹೋಗಬೇಕು. ಪೋರ್ಟ್ ಆರ್ಥರ್ 3,218 ಕಿಲೊಮೀಟರು ಒಳಗಿದೆ. ಮಾಸ್ಕೋ ನಗರವನ್ನು ಬಂದರನ್ನಾಗಿ ಮಾರ್ಪಡಿಸಲು ವೋಲ್ಗಾ ನದಿಯಿಂದ ಕಾಲುವೆ ತೋಡಲಾಯಿತು.

ಬಂದರಿನ ಮೂಲಕ ವ್ಯಾಪಾರವೂ ಸಾರಿಗೆಯೂ ವೃದ್ಧಿಯಾಗುವುದರಿಂದ ಬಂದರಿನ ಸುತ್ತ ದೊಡ್ಡ ನಗರಗಳು ಹುಟ್ಟಿಕೊಳ್ಳುತ್ತವೆ. ಲಂಡನ್, ನ್ಯೂ ಯಾರ್ಕ್, ಸಾನ್‌ಫ್ರಾನ್ಸಿಸ್ಕೋ, ಬ್ಯೂನಸ್ ಏರಿಸ್, ಕಲ್ಕತ್ತ, ಸಿಡ್ನಿ, ಗ್ಲಾಸ್ಗೊ ಮುಂತಾದ ನಗರಗಳು ಬಂದರಿನ ಸುತ್ತ ಬೆಳವಣಿಗೆ ಕಂಡುವು.

ಪ್ರಾಚೀನಕಾಲದಿಂದಲೂ ಬಂದರುಗಳು ಅಭಿವೃದ್ಧಿಯ ಸಂಕೇತ. ಸುಮೇರಿಯನ್ನರು ಅರ್ ನಗರದಲ್ಲಿ ಎರಡು ಬಂದರುಗಳನ್ನು ಬಳಸುತ್ತಿದ್ದರು. ಪ್ರಾಚೀನ ಈಜಿಪ್ಟಿನ ರಾಜಧಾನಿಗಳಾದ ಮೆಂಫಿಸ್ ಮತ್ತು ಥೀಬ್ಸ್ ನಗರಗಳು ನದಿಯ ದಂಡೆಯಲ್ಲಿ ನಿರ್ಮಿಸಲಾಗಿದ್ದ ಎರಡು ಕೃತಕ ಬಂದರುಗಳು. ಈಜಿಪ್ಟಿನ ಅಲೆಗ್ಸಾಂಡ್ರಿಯ ಬಂದರಿನ ಪೂರ್ವಕಥೆ ಕುತೂಹಲಕರ. ಕ್ರಿ. ಪೂ. 332ರಲ್ಲಿ ಅಲೆಗ್ಸಾಂಡರ್ ಈಜಿಪ್ಟನ್ನು ಗೆದ್ದ. ಯೂರೋಪಿನ ಜೊತೆ ಸಂಪರ್ಕ ಸಾಧಿಸುವಂಥ ಬಂದರನ್ನು ನಿರ್ಮಿಸುವ ಆಶಯದಿಂದ ನೈಲ್ ನದಿಯಮೇಲೆ ಪ್ರಯಾಣ ಬೆಳಸಿದ. ಸಮುದ್ರಕ್ಕೂ ಮಾರಿಯೋಟಿಸ್ ಎಂಬ ಸರೋವರಕ್ಕೂ ನಡುವೆ ಇರುವ ನಡುಗಡ್ಡೆಯನ್ನು ಅಲೆಗ್ಸಾಂಡರನ ನಾವೆ ತಲಪಿತು. ಅಲ್ಲಿಯೇ ಬಂದರು ನಿರ್ಮಾಣವಾಗಲಿ ಎಂದ ಅಲೆಗ್ಸಾಂಡರ್. ಕ್ರಿ. ಪೂ. 285ರಲ್ಲಿ ಇದರ ಬಳಿಯ ಫೆರೋನ ದ್ವೀಪದಲ್ಲಿ ದೀಪಗೋಪುರವನ್ನು ನಿರ್ಮಿಸಿದರು. 91.5 ಮೀಟರು ಎತ್ತರದ, 48 ಕಿಲೊಮೀಟರು ಪರಿಸರಕ್ಕೆ ಬೆಳಕು ತೋರುವ ಈ ದೀಪಗೋಪುರವೇ ಪ್ರಪಂಚದಲ್ಲಿ ಮೊಟ್ಟಮೊದಲನೆಯದು.



ಕೊಲಂಬೊ ಬಂದರು

ಹಿಟ್ಲರನ ಹಿಡಿತಕ್ಕೆ ಸಿಲುಕಿದ ಯೂರೋಪನ್ನು ಗೆಲ್ಲಬೇಕಾದರೆ ಎರಡನೆಯ ಮಹಾಯುದ್ಧದಲ್ಲಿ ತೊಡಗಿದ್ದ ಮಿತ್ರರಾಷ್ಟ್ರಗಳಿಗೆ ಒಂದು ಫ್ರೆಂಚ್ ಬಂದರು ಅವಶ್ಯವಿತ್ತು. ಇಲ್ಲದಿದ್ದರೆ ತುಕಡಿಗಳನ್ನೂ ಸರಂಜಾಮುಗಳನ್ನೂ ಒಳಹೊಗಿಸಲು ತೊಂದರೆ. ಫ್ರಾನ್ಸಿನ ಯಾವ ಬಂದರನ್ನು ಹಿಡಿಯಹೊರಟರೂ ಜರ್ಮನಿ ಆ ಬಂದರನ್ನು ಮೊದಲೇ ನಾಶಪಡಿಸುವುದರಲ್ಲಿ ಸಂಶಯವಿರಲಿಲ್ಲ. ಆದ್ದರಿಂದ ಬ್ರಿಟನಿನ ದಂಡೆಯ ಮೇಲೆಯೇ ಎರಡು ಕೃತಕ ಬಂದರುಗಳನ್ನು ನಿರ್ಮಿಸಿ, ಅವನ್ನು ಇಂಗ್ಲಿಷ್ ಕಡಲ್ಗಾಲುವೆಯಲ್ಲಿ ತೇಲಿಸಿಕೊಂಡು ಫ್ರಾನ್ಸಿನ ಬಳಿ ಅದನ್ನು ಲಂಗರುಹಾಕಿ ನಿಲ್ಲಿಸಿದರು. ಅವುಗಳಲ್ಲೊಂದು ಬಿರುಗಾಳಿಗೆ ಸಿಕ್ಕಿ ಕೊಚ್ಚಿಹೋಯಿತಾದರೂ ಇನ್ನೊಂದು ಕೃತಕ ಬಂದರಿನ ನೆರವಿನಿಂದ ಮಿತ್ರರಾಷ್ಟ್ರಗಳ ಲಕ್ಷಾಂತರ ಸೈನಿಕರನ್ನೂ ಸರಂಜಾಮನ್ನೂ ಫ್ರಾನ್ಸಿನಲ್ಲಿ ಇಳಿಸಲು ಸಾಧ್ಯವಾಯಿತು.

ವಿಮಾನ ಸಾರಿಗೆ ರೂಪುಗೊಳ್ಳುವವರೆಗೆ ಹಡಗುಗಳಿಗೂ ಬಂದರುಗಳಿಗೂ ವಿಶೇಷ ಪ್ರಾಮುಖ್ಯವಿತ್ತು. ಹಡಗಿನಿಂದ ಬಂದ ಸರಕಿನ ಮೇಲೆ ಸುಂಕ ಹೇರುವುದಕ್ಕೂ ಬಂದರು ಅತ್ಯಂತ ಸೂಕ್ತ ಸ್ಥಳ.

ಪ್ರಪಂಚದಲ್ಲಿ ಹತ್ತರಲ್ಲಿ ಮೂರುಭಾಗ ಭೂಮಿ, ಏಳು ಭಾಗ ನೀರು. ಆದ್ದರಿಂದಲೇ ಜಲಪರ್ಯಟನ ಮಾಡುವ ಹಡಗುಗಳಿಗೂ ಅವು ತಂಗುವ ಬಂದರುಗಳಿಗೂ ವಿಶೇಷ ಮಹತ್ವ. ಹಡಗು ಅಧಿಕ ಪ್ರಮಾಣದಲ್ಲಿ ವಸ್ತುಗಳನ್ನು ಹೊತ್ತು ತರಬಲ್ಲುದು. ಬಂದರು ಕೈಗಾರಿಕಾ ಕೇಂದ್ರದ ಹತ್ತಿರವಿದ್ದರೆ ಕಚ್ಚಾಪದಾರ್ಥಗಳನ್ನು ತರಲು ಮತ್ತು ಸಿದ್ಧವಾದ ಸರಕನ್ನು ಹೊರದೇಶಗಳಿಗೆ ಕಳುಹಿಸಲು ಅನುಕೂಲ. ಕೆಲವು ಬಂದರುಗಳು ಸರ್ವಋತು ಬಂದರುಗಳು; ವರ್ಷದ ಎಲ್ಲ ಕಾಲಗಳಲ್ಲಿಯೂ ಅವನ್ನು ಬಳಸಬಹುದು. ಕೆಲವು, ವರ್ಷದ ಕೆಲವು ಕಾಲಗಳಲ್ಲಿ ಮಾತ್ರ ಬಳಸುವಂಥವು.

## ಬರ್ಮ

ಭಾರತದ ನೆರೆಯ ನಾಡುಗಳಲ್ಲಿ ಒಂದು ಬರ್ಮ. ಸಾಧಾರಣ ಎತ್ತರದ ಚಪ್ಪಟೆ ಮೂಗಿನ ಅಗಲಮುಖದ ಜನರು ಬರ್ಮೀಯರು. ಇವರದು

ಮಂಗೋಲಿಯನ್ ಬುಡಕಟ್ಟು. ಸ್ತ್ರೀಯರು ಜಗಜಗಿಸುವ ಬಣ್ಣಬಣ್ಣದ 'ಲಂಗಾಯಿ' ಉಡುವರು. ಲಂಗಾಯಿ ಲುಂಗಿಯಂತೆ ಇರುತ್ತದೆ. ಈ ಲಂಗಾಯಿಯ ಮೇಲೆ ಪುರುಷರು 'ಪಾಸೊ' ಎಂಬ ಲಂಗದಂಥ ಉಡುಪು ಉಟ್ಟು, ತಲೆಗೆ ರೇಷ್ಮೆ ವಸ್ತ್ರವನ್ನು ಸುತ್ತುತ್ತಾರೆ. ಸ್ತ್ರೀಯರು ಬಿಳಿಬಣ್ಣದ ರವಕೆ ತೊಡುತ್ತಾರೆ. ಈ ಜನರಿಗೆ ತಮ್ಮ ವೇಷಭೂಷಣಗಳಲ್ಲಿ ವಿವಿಧ ಬಣ್ಣದ ಅಭಿರುಚಿ.

ಮಗು ಹುಟ್ಟಿದ ದಿನದ ಹೆಸರಿನ ಮೊದಲ ಅಕ್ಷರದಿಂದಲೇ ಮಗುವಿನ ಹೆಸರೂ ಪ್ರಾರಂಭವಾಗಬೇಕು. ಏಕೆಂದರೆ ಇಂಥ ದಿನಗಳಲ್ಲಿ ಹುಟ್ಟಿದವರು ಇಂಥ ದಿನಗಳಲ್ಲಿ ಹುಟ್ಟಿದವರನ್ನೇ ಮದುವೆಯಾಗಬೇಕೆಂದು ಸಂಪ್ರದಾಯ.

ಬರ್ಮದಲ್ಲಿ ಇದೊಂದು ಪದ್ಧತಿ.

ಇನ್ನೊಂದು : ಪ್ರತಿಯೊಬ್ಬ ಹುಡುಗನೂ ಕೆಲವು ದಿನಗಳ ಕಾಲ ಸನ್ಯಾಸಿ ಮಂದಿರದಲ್ಲಿರಬೇಕು. ಅವನು ಸನ್ಯಾಸಿಯಾಗದೆ ಇರಬಹುದು, ಆದರೆ ಕೆಲವು ದಿನಗಳಾದರೂ ಸನ್ಯಾಸಿಗಳ ಉಡುಪು ಧರಿಸಿ ಅವರ ಮಂದಿರದ ನಿಯಮಗಳನ್ನು ಪಾಲಿಸಬೇಕು.

ಬರ್ಮೀಯರಲ್ಲಿ ಬಹಳ ಮಂದಿ ಬೌದ್ಧರು. ಪ್ರತಿ ಹಳ್ಳಿಯಲ್ಲೂ ಒಬ್ಬ ಬೌದ್ಧ ಸನ್ಯಾಸಿ, ಒಂದು ಆರಾಧನಮಂದಿರ (ಪಗೋಡ). ಹದಿನೈದನೆಯ ಶತಮಾನದಲ್ಲಿ ರಾಣಿ ಶಿನ್‌ಸಾಬು ತನ್ನ ತೂಕದ ಚಿನ್ನ ಕೊಟ್ಟು ಶ್ವೆಡ್ಯಾಗನ್ ಪಗೋಡದ ಗೋಪುರಕ್ಕೆ ಚಿನ್ನದ ಮೆರಗು ಕೊಡಿಸಿದಳು. ಬರ್ಮದಲ್ಲಿ ಚಿನ್ನವಷ್ಟೇ ಅಲ್ಲ; ಕೆಂಪು ಪಚ್ಚೆ ಮತ್ತಿತರ ಅಮೂಲ್ಯ ಹರಳುಗಳೂ ದೊರಕುತ್ತವೆ.

ಬರ್ಮ ಆಗ್ನೇಯ ಏಷ್ಯದಲ್ಲಿದೆ. ಉತ್ತರಕ್ಕೆ ಟಿಬೆಟ್, ಪೂರ್ವಕ್ಕೆ ಚೀನ, ಲಾವೋಸ್, ಥೈಲೆಂಡ್, ದಕ್ಷಿಣಕ್ಕೆ ಹಿಂದೂ ಮಹಾಸಾಗರ ಮತ್ತು ಪಶ್ಚಿಮಕ್ಕೆ ಭಾರತ, ಪೂರ್ವ ಪಾಕಿಸ್ತಾನ ಮತ್ತು ಬಂಗಾಳ ಕೊಲ್ಲಿಗಳಿವೆ. ಬೆಟ್ಟಗಳ ಸಾಲು ಕುದುರೆಲಾಳದ ಆಕಾರದಲ್ಲಿ ಬರ್ಮ ಮೇರೆಯಲ್ಲಿ ಹರಡಿಕೊಂಡಿದೆ. ಬೆಟ್ಟಗಳಿಂದಾಗಿ ಬರ್ಮ ಇತರ ದೇಶಗಳೊಡನೆ ಸಂಪರ್ಕ ಬೆಳೆಸಿಕೊಳ್ಳಲು ಕಷ್ಟವಾದರೂ ದಕ್ಷಿಣ ಮತ್ತು ಪಶ್ಚಿಮಕ್ಕಿರುವ ಸಮುದ್ರ ಈ ದೃಷ್ಟಿಯಿಂದ ಬಹಳ ಸಹಾಯಕವಾಗಿದೆ. ಅರಕಾನ್ ತೀರಪ್ರದೇಶ, ಟೆನಾಸೆರಿಮ್ ತೀರಭಾಗ, ಪಶ್ಚಿಮದ ಬೆಟ್ಟ ಪ್ರದೇಶ, ಉತ್ತರದ ಬೆಟ್ಟ ಪ್ರಾಂತ, ಮಧ್ಯ ಬರ್ಮದ ಒಳವಲಯ, ಇರಾವತಿ, ಸಿತಾಂಗ್ ಮತ್ತಿತರ ನದಿಗಳ ಮುಖಜಭೂಮಿ ಮತ್ತು ಷಾನ್ ಪ್ರಸ್ಥಭೂಮಿ ಎಂದು ಏಳು ಪ್ರಾಕೃತಿಕ ವಿಭಾಗಗಳಿವೆ. 2,092 ಕಿಲೊಮೀಟರು ಉದ್ದವಿರುವ ಇರಾವತಿಯಲ್ಲದೆ ಸಾಲ್ವೀನ್, ಸಿತಾಂಗ್ ಮುಖ್ಯ ನದಿಗಳು.

ಬರ್ಮದಲ್ಲಿ ಮೂರು ಋತುಗಳು. ಅಕ್ಟೋಬರ್ ಕೊನೆಯಿಂದ ಫೆಬ್ರವರಿ ವರೆಗೆ ತಂಪಾಗಿದ್ದು, ಮಳೆಯಿಲ್ಲದ ಹವೆ ಇರುತ್ತದೆ. ಮಾರ್ಚ್‌ನಿಂದ ಮೇ ಅಂತ್ಯದ ವರೆಗೆ ಮಳೆ ಇಲ್ಲದ ಸೆಕೆ. ಆಗ ನದಿಯ ನೀರು ಬಹುಮಟ್ಟಿಗೆ ಇಂಗುತ್ತದೆ. ಜೂನ್‌ನಿಂದ ಅಕ್ಟೋಬರ್ ವರೆಗೆ ಮಳೆಗಾಲ.

ಅರಣ್ಯ ಬರ್ಮದ ನೈಸರ್ಗಿಕ ಸಂಪತ್ತು. ತೇಗದ ಮರ ಹೇರಳವಾಗಿದೆ. ಬೊಂಬು, ತಾಳೆಮರಗಳೂ ಇವೆ. ಬೊಗಳುವ ಜಿಂಕೆ, ಕೋತಿಯ ತರಹೆ ಇರುವ ಗಿಬನ್, ಕಾಳಿಂಗ ಸರ್ಪ ಇಲ್ಲಿನ ವಿಚಿತ್ರ ಪ್ರಾಣಿಗಳು. ಅಡವಿಯಲ್ಲಿ ಮರದ ದಿಮ್ಮಿಗಳನ್ನು ಸಾಗಿಸಲು ಆನೆಗಳನ್ನು ಉಪಯೋಗಿಸುತ್ತಾರೆ.

ಬರ್ಮದ ವ್ಯವಸಾಯ ಭೂಮಿ ಹೆಚ್ಚು ಪಾಲು ಸಿತಾಂಗ್ ಮತ್ತು ಇರಾವತಿ ನದಿಗಳ ಮುಖಜಭೂಮಿಯಾಗಿದೆ. ಭತ್ತ ಇಲ್ಲಿಯ ಮುಖ್ಯ ಬೆಳೆ. ಬರ್ಮದ ಅಕ್ಕಿ ಪ್ರಸಿದ್ಧ ; ರಫ್ತಾಗುತ್ತದೆ.

ಪೆಟ್ರೋಲಿಯಂ ಬಹಳ ದೊರಕುತ್ತದೆ. ಕಲ್ಲೆಣ್ಣೆ, ಬೆಳ್ಳಿ, ಸೀಸ, ಸತು, ಟಂಗ್‌ಸ್ಟನ್ ಸಿಗುತ್ತವೆ.

ಗಣಿ, ಮರದದಿಮ್ಮಿಯ ಕೆಲಸ, ಕುಶಲ ಕೈಗಾರಿಕೆ ಇವು ಪ್ರಮುಖ ಉದ್ಯಮಗಳು. ಚಿನ್ನ ಮತ್ತು ಬೆಳ್ಳಿಯ ಒಡವೆಗಳು, ರೇಷ್ಮೆಬಟ್ಟೆ, ದಂತದ ಕೆತ್ತನೆ ಕೆಲಸಗಳನ್ನೂ ಮಾಡುತ್ತಾರೆ.

ಬಟ್ಟೆ, ಯಂತ್ರಗಳು, ಕಬ್ಬಿಣ ಮತ್ತು ಉಕ್ಕು, ರಾಸಾಯನಿಕಗಳನ್ನು ಬರ್ಮ ಆಮದು ಮಾಡಿಕೊಳ್ಳುತ್ತದೆ.

ಬರ್ಮದ ರಾಜಧಾನಿ ರಂಗೂನ್: ದೊಡ್ಡ ಬಂದರೂ ಅದೇ. ಶ್ವೆಡ್ಯಾಗನ್ ಪಗೋಡ ಜನರನ್ನು ಆಕರ್ಷಿಸುತ್ತದೆ. ಮಾಂಡಲೆ ಬೌದ್ಧರ ಕಾಶಿ ಎನ್ನುತ್ತಾರೆ. ಅಲ್ಲಿ ನೂರಾರು ಪಗೋಡಗಳಿವೆ. 1784ರಲ್ಲಿ ರಂಗೂನಿಗೆ ಮುಂಡಲೆಯಿಂದ ತಂದ ಬುದ್ಧನ ಪ್ರತಿಮೆ ಅರಕಾನ್ ಪಗೋಡದಲ್ಲಿದೆ. ಬುದ್ಧನ ಜೀವಿತಕಾಲದಲ್ಲಿಯೇ ಮಾಡಿದ ಒಂದೇ ಒಂದು ಪ್ರತಿಮೆ ಇದು ಎಂದು ಹೇಳುತ್ತಾರೆ. ಪೆಗು, ಅವ, ಪಗನ್ ಭೂಸಂಶೋಧನಾ ಪ್ರದೇಶಗಳಾಗಿದ್ದು ಪ್ರವಾಸಿ ಕೇಂದ್ರಗಳಾಗಿ ಹೆಸರುವಾಸಿಯಾಗಿವೆ.



ಖಂಡ : ಏಷ್ಯ (ಆಗ್ನೇಯ)
ಅಕ್ಷಾಂಶ : 9° 58′ ಉ ದಿಂದ 28° 29′ ಉ
ರೇಖಾಂಶ : 92° 11′ ಪೂ ದಿಂದ 101° 10′ ಪೂ
ವಿಸ್ತೀರ್ಣ : 6,77,951 ಚ. ಕಿ. ಮೀ.
ಜನಸಂಖ್ಯೆ : 2,52,46,000 (1966ರಲ್ಲಿ)
ರಾಜಧಾನಿ : ರಂಗೂನ್
ಭಾಷೆ : ಬರ್ಮೀ
ಸರಕಾರ : ಗಣರಾಜ್ಯ
ಬಾವುಟ : ಕೆಂಪು, ಎಡ ಮೇಲ್ಭಾಗದಲ್ಲಿ ನೀಲಿ ಚೌಕದೊಳಗೆ ಒಂದು ದೊಡ್ಡ ಬಿಳಿ ನಕ್ಷತ್ರ, ಸುತ್ತ ಐದು ಪುಟ್ಟ ನಕ್ಷತ್ರಗಳು

ಬರ್ಮದ ಇತಿಹಾಸದ ಪುಟಗಳನ್ನು ತಿರುವಿದರೆ ಮೊದಮೊದಲು ಯುದ್ಧ ಹೋರಾಟಗಳೇ ಕಂಡುಬರುತ್ತವೆ. ಮುಂಚೆ ಪೋರ್ಚುಗೀಸರು, ಡಚ್ಚರು ಇಲ್ಲಿಗೆ ಮೊದಲು ಬಂದವರು. ಹದಿನೇಳನೆಯ ಶತಮಾನದಲ್ಲಿ ಐರೋಪ್ಯರು ಈ ದೇಶದೊಡನೆ ವ್ಯಾಪಾರ ಮಾಡತೊಡಗಿದರು. ಹತ್ತೊಂಬತ್ತನೆಯ ಶತಮಾನದಲ್ಲಿ ಬರ್ಮ ಬ್ರಿಟಿಷರ ಆಕ್ರಮಣಕ್ಕೊಳಗಾಯಿತು, ಬ್ರಿಟಿಷ್ ಚಕ್ರಾಧಿಪತ್ಯಕ್ಕೆ ಸೇರಿತು. ಆ ಶತಮಾನದ ಅಂತ್ಯದಲ್ಲಿ ಬರ್ಮ ಬ್ರಿಟಿಷ್ ಇಂಡಿಯದ ಒಂದು ಪ್ರಾಂತವಾಯಿತು. 1937ರಲ್ಲಿ ಸ್ವಾಯತ್ತತೆಯನ್ನು

ಚೀನಕ್ಕೆ ಕಳುಹಿಸಲು ಬರ್ಮದ ಹೆದ್ದಾರಿ ನಿರ್ಮಾಣವಾಯಿತು. 1941ರಲ್ಲಿ ಜಪಾನ್ ಬರ್ಮವನ್ನು ಆಕ್ರಮಣಮಾಡಿತು. 1945ರ ವರೆಗೂ ಬರ್ಮ ಜಪಾನರ ಹಿಡಿತದಲ್ಲಿದ್ದಿತು. ಬರ್ಮಕ್ಕೆ ಸ್ವಾತಂತ್ರ್ಯ ಬರುವ ಮುನ್ನ ಅಲ್ಲಿಯ ಶಾಸನಸಭೆಯ ಅಧ್ಯಕ್ಷ ಥಾಕಿನ್ ನು ಪ್ರಧಾನಿಯಾಗಿದ್ದ. ತಾತ್ಕಾಲಿಕ ಮಂತ್ರಿಮಂಡಲ ಅಧಿಕಾರ ವಹಿಸಿಕೊಂಡಿತು. ಆದರೆ ಸ್ವಾತಂತ್ರ್ಯದ ಉದಯಕ್ಕೆ ಕೆಲವೇ ದಿನಗಳಿದ್ದಾಗ ಆಂಗ್‌ಸಾನ್ ಎಂಬ ಜನಪ್ರಿಯ ಮಂತ್ರಿ ಮತ್ತು ಇನ್ನೂ ಆರು ಜನ ಮಂತ್ರಿಗಳ ಹತ್ಯೆಯಾಯಿತು. 1948ರಲ್ಲಿ ಈ ಹತ್ಯೆಗೆ ಸೂತ್ರಧಾರಿ ಎಂದು ಹಿಂದಿನ ಮುಖ್ಯಮಂತ್ರಿ ಊ ಸಾ ಅನ್ನು ಗಲ್ಲಿಗೇರಿಸಲಾಯಿತು.

1948ರಲ್ಲಿ ಬರ್ಮ ಸ್ವಾತಂತ್ರ್ಯ ಗಳಿಸಿತು. ಮೊದಲ ಹತ್ತು ವರ್ಷಗಳು ಉ ನು ಪ್ರಧಾನಿಯಾಗಿದ್ದರು. 1958ರ ಸೆಪ್ಟೆಂಬರ್‌ನಲ್ಲಿ ಜನರಲ್ ನೆ ವಿನ್ ಅಧಿಕಾರಕ್ಕೆ ಬಂದರು. 1960ರ ಫೆಬ್ರುವರಿಯಲ್ಲಿ ಪುನಃ ಉ ನು ಚುನಾಯಿತರಾದರು. ಆದರೆ ಎರಡು ವರ್ಷಗಳ ಬಳಿಕ (1962) ನೆ ವಿನ್ ಕೈಗೆ ಮತ್ತೆ ಆಡಳಿತ ಬಂತು. 1948ರಿಂದ ಬರ್ಮ ವಿಶ್ವಸಂಸ್ಥೆಯ ಸದಸ್ಯರಾಷ್ಟ್ರ. ಬರ್ಮದ ಉ ಥಾಂಟ್ 1962ರಿಂದ ವಿಶ್ವಸಂಸ್ಥೆಯ ಕಾರ್ಯದರ್ಶಿ ಆಗಿದ್ದಾರೆ.

ಬರ್ಮ ಗಣರಾಜ್ಯ. 1948ರಿಂದ ಪಶ್ಚಿಮ ದೇಶಗಳಲ್ಲಿರುವ ಸಂಸದೀಯ ಸಂವಿಧಾನವನ್ನು ಅನುಸರಿಸುತ್ತಿದ್ದರು. ಜನರಲ್ ನೆ ವಿನ್ ಅಧಿಕಾರಕ್ಕೆ ಬಂದಮೇಲೆ ಆಡಳಿತ ನೀತಿ ಬದಲಾಯಿತು. ಆರ್ಥಿಕ ಕ್ಷೇತ್ರಗಳಲ್ಲೆಲ್ಲ ರಾಷ್ಟ್ರೀಕರಣ ತತ್ತ್ವವನ್ನು ಜಾರಿಗೆ ತರುವ ಯತ್ನ ನಡೆಯಿತು. ಭಾರತ–ಬರ್ಮಗಳ ಸ್ನೇಹಸಂಬಂಧವನ್ನು ಇನ್ನೂ ದೃಢಗೊಳಿಸಲು ಎರಡು ದೇಶಗಳೂ ಶ್ರಮಿಸುತ್ತಿವೆ.

## ಬಯಲುಭೂಮಿ

ಉತ್ತರ ಭಾರತದಲ್ಲಿ ಗಂಗಾ ಯಮುನಾ ನದಿಗಳ ಮಧ್ಯೆ ವಿಶಾಲವಾದ ಫಲವತ್ತಾದ ಭೂಮಿಯಿದೆ. ಇಲ್ಲಿ ಗಿರಿಕಂದರಗಳು ಕಡಮೆ. ಹೀಗೆ ವಿಸ್ತಾರವಾಗಿ ಹರಡಿರುವ ಮಟ್ಟಸ ಭೂಭಾಗಕ್ಕೆ ಬಯಲುಭೂಮಿ ಎನ್ನುತ್ತಾರೆ. ಬಯಲುಭೂಮಿಯ ಯಾವ ಭಾಗವೂ ಸಾಮಾನ್ಯವಾಗಿ ಸಮುದ್ರಮಟ್ಟಕ್ಕೆ ಹಲವು ನೂರು ಮೀಟರುಗಳಿಗಿಂತ ಹೆಚ್ಚು ಎತ್ತರವಾಗಿರುವುದಿಲ್ಲ. ಬಯಲುಭೂಮಿ ಸ್ವಲ್ಪ ಇಳಿಜಾರಾಗಿರಬಹುದು. ನೆಲ ಕ್ರಮೇಣ ಏರುತ್ತ ಹೋದಾಗ ಅತಿ ಎತ್ತರ ಪ್ರದೇಶ ಕೆಲವೊಮ್ಮೆ ಸಮುದ್ರಮಟ್ಟಕ್ಕಿಂತ 915 ಮೀಟರ್ ಎತ್ತರವಿರುವುದೂ ಉಂಟು. ಆದರೂ ಅದಕ್ಕೆ ಬಯಲು ಪ್ರದೇಶ ಎಂದೇ ಹೆಸರು. ಉತ್ತರ ಅಮೆರಿಕದ ಹುಲ್ಲುಗಾವಲು ಇದಕ್ಕೆ ಉದಾಹರಣೆ. ನೆಲ ಇಳಿಜಾರಾಗಿಲ್ಲದೆ, ಮಟ್ಟ ಕ್ರಮೇಣ ಏರದೆ ಸುತ್ತಲಿನ ಪ್ರದೇಶಕ್ಕಿಂತ ಎತ್ತರವಾಗಿರುವ ಬಯಲು ಭೂಮಿಗೆ ಪ್ರಸ್ಥಭೂಮಿ ಎಂದು ಹೆಸರು.

ಬಯಲುಭೂಮಿಗಳು ಹಲವಾರು ಕಾರಣಗಳಿಂದ ರೂಪುಗೊಳ್ಳುತ್ತವೆ. ನದಿಗಳು ತಂದು ಹರಡಿದ ಮಣ್ಣು ಮತ್ತು ಮರಳು ಇವುಗಳ ರಚನೆಗೆ ಕಾರಣವಾಗಬಹುದು. ಗಂಗಾನದಿಯ ಬಯಲು ಈ ರೀತಿಯದು.

ಬಿರುಗಾಳಿ, ನದಿಗಳು, ಹಿಮನದಿಗಳು ಇವುಗಳಿಂದ ಭೂಪ್ರದೇಶ ಸವೆದು ಹೋಗುವುದರಿಂದಲೂ ಬಯಲುಭೂಮಿ ಉಂಟಾಗುತ್ತದೆ. ಇಂಗ್ಲೆಂಡಿನ ಯಾರ್ಕ್ ಮತ್ತು ಸಾಲಿಸ್‌ಬರಿ ಬಯಲುಭೂಮಿಗಳು ಭೂಸವೆತದಿಂದಲೇ ರೂಪುಗೊಂಡುವು.

ನೋಡಿ : ಪ್ರಸ್ಥಭೂಮಿ

## ಬರ್‌ನಾದೆತ್, ಸಂತ

1858 ಫೆಬ್ರುವರಿ 11ನೆಯ ದಿನಾಂಕ.

ಐದು ಸಾವಿರ ಜನಸಂಖ್ಯೆಯ ಊರು, ಲೌರ್ದ್. ಅಲ್ಲಿ ಬಳಸದೆ ಬಿಟ್ಟಿದ್ದ ಸೆರೆಮನೆಯೊಂದರ ಭಾಗದಲ್ಲಿ ಒಂದು ಬಡ ಸಂಸಾರದ ವಾಸ. ಆ ಸಂಸಾರಕ್ಕೆ ಸೇರಿದ ಹದಿನಾಲ್ಕು ವರ್ಷದ ಹುಡುಗಿ, ಅವಳ ತಂಗಿ, ಒಬ್ಬ ಗೆಳತಿ ಚಕ್ಕೆಗಳನ್ನಾಯ್ದು ತರಲು ಹೊರಟವರು, ಗುಹೆಯೊಂದರ ಬಳಿ ಹೋದರು. ಹದಿನಾಲ್ಕು ವರ್ಷದ ಹುಡುಗಿಗೆ ಅಲ್ಲಿ 'ಸುಂದರ ತರುಣಿ' ಯೊಬ್ಬಳು ಕಾಣಿಸಿದಂತೆ ಭಾಸವಾಯಿತು.

ಆ ದಿನ ಆ ಊರಿನ ಚರಿತ್ರೆಯಲ್ಲಿ ಸ್ಮರಣೀಯ ದಿನವಾಯಿತು. ಲೌರ್ದ್ ಎಂಬ ಊರು ಫ್ರಾನ್ಸಿನಲ್ಲಿ ಇದ್ದ ಸಂಗತಿಯೇ ಎಷ್ಟೋ ಮಂದಿಗೆ ತಿಳಿದಿರಲಿಲ್ಲ. ಕೆಲವೇ ವರ್ಷಗಳಲ್ಲಿ ಆ ಹುಡುಗಿಯಿಂದಾಗಿ, ಲೌರ್ದ್ ಪ್ರಸಿದ್ಧ ಯಾತ್ರಾಸ್ಥಳವಾಯಿತು.

ಆಕೆ ಬರ್‌ನಾದೆತ್.

ತಾನು ಅಂದು ಕಂಡ ಆಕೃತಿಯೇ ಮತ್ತೆ ಮತ್ತೆ ಬರ್‌ನಾದೆತ್‌ಗೆ ಅದೇ ಸ್ಥಳದಲ್ಲಿ ಕಾಣಿಸಿದಂತಾಯಿತು. ತನಗೆ ಆದದ್ದು ಯೇಸು ಕ್ರಿಸ್ತನ ತಾಯಿ ಮೇರಿಯ ದರ್ಶನ ಎನ್ನಿಸಿತು ಅವಳಿಗೆ. ಅವಳಿಗೆ ಈ ರೀತಿ ಒಂಬತ್ತನೆಯ ಬಾರಿ ದರ್ಶನವಾದಾಗ ಅವಳು ಒಂದು ಚಿಲುಮೆಯನ್ನು ತೋರಿಸಿದಳಂತೆ. ಕಲ್ಲು ಒಡೆಯುವ ಕುರುಡನೊಬ್ಬ ತನ್ನ ಕಣ್ಣನ್ನು ಅಲ್ಲಿ ತೊಳೆದಾಗ ಅವನಿಗೆ ದೃಷ್ಟಿ ಬಂದಿತಂತೆ.

1844 ಜನವರಿ 7ರಂದು ಫ್ರಾನ್ಸಿನ ಲೌರ್ದ್ ಎಂಬಲ್ಲಿ ಜನಿಸಿದ ಬರ್‌ನಾದೆತ್ ಒಡಹುಟ್ಟಿದ ಒಂಬತ್ತು ಮಂದಿಯಲ್ಲಿ ಹಿರಿಯಳು. ಅತ್ಯಂತ ಬಡತನದಲ್ಲಿ ಅವಳ ಬಾಲ್ಯ ಕಳೆಯಿತು. ಶಾಲೆಯ ಓದಿನಲ್ಲಿ ಬಹಳ ಹಿಂದಿದ್ದರೂ ಹುಡುಗಿ ಸುಶೀಲೆಯೂ ವಿನಯವಂತಳೂ ಆಗಿದ್ದಳು. ಚಟುವಟಿಕೆಯಿಂದ ಕೂಡಿದ್ದಳು. ಎಲ್ಲರ ಮೆಚ್ಚುಗೆಗೆ ಪಾತ್ರಳಾಗಿದ್ದಳು.

ಹದಿನಾಲ್ಕು ವರ್ಷಗಳವರೆಗೂ ಎಲ್ಲರಂತೆ ಬೆಳೆದ ಮಗಳು ಒಂದು ದಿನ ತನಗೆ ದಿವ್ಯದರ್ಶನವಾಯಿತೆಂದು ಹೇಳಿದಾಗ ತಂದೆತಾಯಿಗಳಿಗೆ ಗಾಬರಿಯಾಯಿತು. ಊರಿನ ಧರ್ಮಕಾರ್ಯಕರ್ತರ, ಹಿರಿಯರ, ಎಲ್ಲರ ಟೀಕೆಗೆ ಆ ಕುಟುಂಬ ಒಳಗಾಯಿತು. ಬರ್‌ನಾದೆತ್ ಆ ಕಾಣ್ಕೆಗಳು ಸತ್ಯವೆಂದು ವಾದಿಸಿದಳು. ಈ ಘಟನೆಯ ಅನಂತರವೂ ಅವಳ ನಡತೆ ಮಾತ್ರ ಬದಲಾಗಲಿಲ್ಲ. ಮೊದಲಿನ ಸರಳತೆಯಿಂದಲೇ ಎಲ್ಲರಂತೆ ಶಾಲೆಗೆ ಹೋಗಿ ಬರುತ್ತಿದ್ದಳು. ಅವಳಿಗೆ ವಿಶೇಷ ಅನುಭವವಾದ ಗುಹೆಯನ್ನು ಮುಚ್ಚಬೇಕೆಂದು ಪೋಲೀಸರು ಯತ್ನಿಸಿದರೂ, ಜನರು ಅಲ್ಲಿಗೆ ಯಾತ್ರೆ ಬರುವುದು ನಿಲ್ಲಲಿಲ್ಲ. ಅದನ್ನು ಹಾಗೆಯೇ ಬಿಡುವಂತೆ ಮೂರನೆಯ ನೆಪೋಲಿಯನ್ ಅಪ್ಪಣೆ ಕೊಟ್ಟ. 1886ರಲ್ಲಿ ದೇವತಾರಾಧನೆಗೆಂದು ಗುಂಪುಗೂಡಿದ್ದ ಕ್ರೈಸ್ತ ಸನ್ಯಾಸಿನಿಯರ ನಡುವೆ ಬರ್‌ನಾದೆತ್ ಕಾಡಿ ಬೇಡಿ ಸ್ಥಾನ ದೊರಕಿಸಿಕೊಂಡಳು. ಮುಂದಿನ ಹನ್ನೆರಡು ವರ್ಷಗಳನ್ನು ಅವಳು ನೆವರ್ಸ್ ಎಂಬಲ್ಲಿ ಪ್ರಾರ್ಥನೆ ಮಂತಾದುವುಗಳಲ್ಲಿ ಕಳೆದಳು. ಏಕಾಂತವಾಸ ಅವಳಿಗೆ ಬಹಳ ಪ್ರಿಯವಾಗಿತ್ತು. [illegible]

ಮುಖದಲ್ಲಿ ಯಾವಾಗಲೂ ಅರಳಿರುತ್ತಿದ್ದ ನಗೆ–ಇವುಗಳಿಂದ ಬರ್‌ನಾದೆತ್ ಜನಪ್ರಿಯಳಾದಳು. ಸದಾ ಅನಾರೋಗ್ಯ ಪೀಡಿಸುತ್ತಿದ್ದರೂ ಧೈರ್ಯವಂತಳಾಗಿಯೂ ಹರ್ಷಚಿತ್ತಳಾಗಿಯೂ ಇದ್ದಳು. ಕ್ಷಯದಿಂದ ನರಳಿ 1879ರ ಏಪ್ರಿಲ್ 16ರಂದು ಬರ್‌ನಾದೆತ್ ಕಾಲವಾದಳು. 1933ರಲ್ಲಿ ಫ್ರಾನ್ಸಿನಲ್ಲಿ ಆಕೆಗೆ ರೋಮನ್ ಕ್ಯಾಥಲಿಕ್ ಧರ್ಮಪೀಠದವರು ಸಂತ ಪದವಿಯನ್ನಿತ್ತರು.

ಈಗಲೂ ಲೌರ್ದ್‌ಗೆ ಪ್ರಪಂಚದ ಬೇರೆ ಬೇರೆ ಭಾಗಗಳಿಂದ ಸಾವಿರಾರು ಮಂದಿ ರೋಗಿಗಳು ಕಾಯಿಲೆ ಗುಣವಾಗಲೆಂಬ ಹಾರೈಕೆಯಿಂದ ಯಾತ್ರೆ ಬರುತ್ತಾರೆ. ಬರ್‌ನಾದೆತ್‌ಗೆ ದಿವ್ಯದರ್ಶನವಾಯಿತೆಂದು ಹೇಳಲಾದ ಗುಹೆಯ ಚಿಲುಮೆಯಲ್ಲಿ ಸ್ನಾನಮಾಡುತ್ತಾರೆ.

## ಬರಹ ಕಲೆ

ಮಹಾಭಾರತ ಯುದ್ಧದಲ್ಲಿ ದುರ್ಯೋಧನ ಸೈನ್ಯವನ್ನೆಲ್ಲ ಕಳೆದುಕೊಂಡ. ವೈಶಂಪಾಯನ ಸರೋವರಕ್ಕೆ ಹೋಗಿ ಅಡಗಿಕೊಂಡ. ಪಾಂಡವರೂ ಕೃಷ್ಣನೂ ಅಲ್ಲಿಗೆ ಬಂದರು. ಭೀಮ ದುರ್ಯೋಧನನನ್ನು ಮೂದಲಿಸಿದ. ಮೊದಲೇ ದುರ್ಯೋಧನನಿಗೆ ಆತ್ಮಗೌರವ ಬಹಳ. ಅವನು ಅಭಿಮಾನಧನ. ಅವನಿಗೆ ತಡೆಯಲಾರದಷ್ಟು ಸಿಟ್ಟು ಬಂದಿತು.

ಅವನಿಗೆ ಎಷ್ಟು ಸಿಟ್ಟುಬಂದಿತು ಎಂದು ಕಥೆ ಕೇಳುವವರಿಗೆ ಮನಮುಟ್ಟುವ ಹಾಗೆ ವರ್ಣಿಸುವುದು ಹೇಗೆ?

'ತುಂಬ ಸಿಟ್ಟು', 'ವಿಪರೀತ ಸಿಟ್ಟು'. 'ತಡೆಯಲಾರದಷ್ಟು ಸಿಟ್ಟು,' 'ಮೈ ಜುಂಕಿರಾಗುವಷ್ಟು ಸಿಟ್ಟು' —ಸಾಲದಲ್ಲವೇ?

"ನೀರೊಳಗಿರ್ದುಂ ಬೆಮರ್ದನುರುಗ ಪತಾಕಂ"

(ಸರ್ಪಧ್ವಜನಾದ ದುರ್ಯೋಧನ ತಣ್ಣಗೆ ಕೊರೆಯುವ ನೀರಿನಲ್ಲಿದ್ದರೂ, ಕೋಪದಿಂದ ಮೈಯೆಲ್ಲ ಬೆವರಿತು.)

ಎಷ್ಟು ಪರಿಣಾಮಕಾರಿಯಾಗಿದೆ!

ಕನ್ನಡ ಕವಿ ರನ್ನನ ವರ್ಣನೆ ಇದು.

ಅಕ್ಷರಸ್ಥರೆಲ್ಲರೂ ಬರೆಯಬಲ್ಲರಾದರೂ ಬರೆದದ್ದೆಲ್ಲ ಓದಲು ಚೆನ್ನಾಗಿರುವುದಿಲ್ಲ. ಕುತೂಹಲ ಮೂಡಿಸುವುದಿಲ್ಲ. ನಮ್ಮ ಮೇಲೆ ಪ್ರಭಾವ ಬೀರುವುದಿಲ್ಲ. ಸಾಮಾನ್ಯ ಬರವಣಿಗೆ ಒಂದು ವರದಿಯಾಗುತ್ತದೆ. ಆದರೆ ಕೆಲವು ಪ್ರತಿಭಾವಂತರ ಕೈಯಲ್ಲಿ ಬರವಣಿಗೆ ಸಾಹಿತ್ಯವಾಗುತ್ತದೆ. ಪದಗಳ ಆಯ್ಕೆ, ವರ್ಣನೆ, ವಿವರಣೆ, ಉಪಮಾನ ಉಪಮೇಯ. ವಿವಿಧ ರಸಗಳ ಬಳಕೆ ಇವುಗಳಿಂದ ಬರವಣಿಗೆಗೊಂದು ಸೊಗಸು ಬರುತ್ತದೆ. ಈ ಸೊಗಸನ್ನು ಬರವಣಿಗೆಯಲ್ಲಿ ತಂದಾಗ ಬರಹ ಕಲೆಯಾಗುತ್ತದೆ.

ನಾವು 'ಸಾಹಿತ್ಯ' ಎಂದು ಕರೆಯುವ ಬರಹದಲ್ಲಿ ಒಂದು ಮುಖ್ಯವಾದ ಅಂಶ ಈ ನಿರೂಪಣೆಯ ಸೊಗಸು.

ಭಾಷೆಯನ್ನು ಚೆನ್ನಾಗಿ ಕಲಿತಷ್ಟೂ ನಮ್ಮ ಬರವಣಿಗೆ ಚೆನ್ನಾಗುತ್ತದೆ.

ಬರಹ ಕಲೆ ಹಸ್ತಗತವಾಗಬೇಕಾದರೆ ಭಾಷೆಯ ಮೇಲೆ ಪ್ರಭುತ್ವ ಇರಬೇಕು. ಪದಗಳನ್ನು ಎಷ್ಟು ವಿಧಗಳಲ್ಲಿ ಹೇಗೆ ಉಪಯೋಗಿಸಬಹುದು ಎಂಬುದನ್ನು ತಿಳಿದುಕೊಳ್ಳಬೇಕು. ಅಲ್ಲದೆ ವಸ್ತುವನ್ನು ಕುರಿತು ಯೋಚಿಸಬೇಕು. ಅನಂತರ ಬರೆದು ಬರೆದು ಪಳಗಬೇಕು.

ಪತ್ರವೇ ಆಗಲಿ, ಕಥೆಯೇ ಆಗಲಿ, ಕಾವ್ಯವೇ ಆಗಲಿ, ಹೇಗೆ ಆರಂಭಿಸಬೇಕು, ಹೇಗೆ ಮುಂದುವರಿಸಬೇಕು ಎಂದು ಯೋಚಿಸುವುದು ಅಗತ್ಯ. ನಾವು ಏನನ್ನು ಹೇಳಬೇಕೆಂದಿರುವೆವೋ ಅದನ್ನು ಓದುವವನು ಸಂಪೂರ್ಣವಾಗಿ ಅರ್ಥಮಾಡಿಕೊಂಡು ಆನಂದಪಡುವ ರೀತಿಯಲ್ಲಿ ಬರೆಯಬೇಕು. ಉದ್ದುದ್ದ ವಾಕ್ಯಗಳನ್ನು ಆದಷ್ಟು ಬಿಡುವುದು ಅವಶ್ಯ. ವಾಕ್ಯ ಅತಿ ಉದ್ದವಾಗಿಬಿಟ್ಟರೆ ಅದರ ಆರಂಭ ಎಲ್ಲಿ, ಮುಕ್ತಾಯ ಎಲ್ಲಿ ಎಂದು ತಿಳಿಯುವುದೇ ಕಠಿಣವಾಗುತ್ತದೆ. ಜಟಿಲವಾದ ವಾಕ್ಯಗಳು ಬರಹ ಕಲೆಗೆ ಬಾಧಕ. ವಸ್ತು, ವಿಷಯ ಸ್ಪಷ್ಟವಾಗುವಂತಿರಬೇಕು. ಓದಿದ ಮೇಲೆ ಯಾವುದರ ಬಗೆಗೆ ಲೇಖನ ಎನ್ನುವಂತಾಗಬಾರದು. ಓದುವವನ ಮನಸ್ಸಿನಲ್ಲಿ ವಿಷಯ ಸ್ಫುಟವಾಗಿ ಮೂಡಬೇಕು. ಬರೆಯುವುದನ್ನು ಮನಸ್ಸಿಗೆ ಮುಟ್ಟುವಂತೆ, ಕಣ್ಣಿಗೆ ಕಟ್ಟುವಂತೆ, ಸ್ವಾರಸ್ಯವಾಗಿ ಹೇಳಬೇಕು. "ಪ್ರಪಂಚದಲ್ಲಿ ಎಷ್ಟು ಜನ ಕೆಟ್ಟವರಿದ್ದರೇನು, ಒಳ್ಳೆಯವನು ತನ್ನಿಂದಾದಷ್ಟು ಒಳ್ಳೆಯದನ್ನು ಮಾಡಬಹುದು" ಎನ್ನುವುದಕ್ಕೂ "ಪ್ರಪಂಚದಲ್ಲಿರುವ ಕತ್ತಲೆಯೆಲ್ಲ ಒಂದು ಸಣ್ಣ ಹಣತೆ ಬೆಳಗುವುದನ್ನು ತಡೆಯಲಾರದು" ಎನ್ನುವುದಕ್ಕೂ–ಎರಡರ ಅರ್ಥವೂ ಒಂದೇ ಆದರೂ–ಪರಿಣಾಮದಲ್ಲಿ ಎಷ್ಟು ವ್ಯತ್ಯಾಸ!

ಬರಹ ಕಲೆಗೆ ಸಂಬಂಧಿಸಿ ಗಮನಿಸಬೇಕಾದ ಇನ್ನೊಂದು ವಿಷಯವಿದೆ. ಏನನ್ನೇ ಬರೆಯಲಿ–ಪತ್ರವಾಗಲಿ, ಪ್ರಬಂಧವಾಗಲಿ, ಲೇಖನವಾಗಲಿ–ವಿಷಯಕ್ಕೆ ತಕ್ಕಷ್ಟು ಸ್ಥಳ ಬಿಡಬೇಕು. ಅಕ್ಷರಗಳು ಬಿಡಿಯಾಗಿ, ಸ್ಫುಟವಾಗಿ ಇರಬೇಕು. ಬರಹವನ್ನು ಚಿತ್ತು ಮಾಡಬಾರದು. ಪುಟವನ್ನು ನೋಡಿದರೆ ಸಂತೋಷವಾಗಬೇಕು. ಪ್ರತಿ ರೀತಿಯ ಬರಹದ ಸಾಮಾನ್ಯ ನಿಯಮಗಳನ್ನು ತಿಳಿದಿರಬೇಕು. ಪ್ರಬಂಧ, ಲೇಖನ ಇಂಥವಾದರೆ, ಮೇಲೆ ಶೀರ್ಷಿಕೆ ಬರೆಯಬೇಕು. ಸಾಮಗ್ರಿಯನ್ನು ಸರಿಯಾಗಿ ಜೋಡಿಸಿ ಹೊಂದಿಸಿಕೊಳ್ಳಬೇಕು. ಓದಲು ಬೇಸರವಾಗದಂತೆ, ವಿಷಯ ಸ್ಪಷ್ಟವಾಗುವಂತೆ 'ಪ್ಯಾರಾ' ಗಳನ್ನು (ವಾಕ್ಯ ಸಮುದಾಯಗಳನ್ನು) ಮಾಡಬೇಕು. ಪತ್ರವಾದರೆ, ಬಲಗಡೆ ಮೇಲಿನ ತುದಿಯಲ್ಲಿ ಊರು, ಅದರ ಕೆಳಗಡೆ ದಿನಾಂಕ ಬರೆಯಬೇಕು. ಯಾರಿಗೆ ಕಾಗದ ಬರೆಯುತ್ತೇವೆಯೋ ಅವರಿಗೂ ನಮಗೂ ಇರುವ ಪರಿಚಯ, ಕಾಗದದ ಉದ್ದೇಶ ಇವನ್ನು ಹೊಂದಿಕೊಂಡಂತೆ ಪ್ರಾರಂಭವಾಗಬೇಕು: ಮುಕ್ತಾಯ ಆಗಬೇಕು. ವ್ಯಾವಹಾರಿಕ ಕಾಗದವಲ್ಲದೆ ವೈಯಕ್ತಿಕವಾದರೆ, ಅದರಲ್ಲಿ ಆತ್ಮೀಯತೆ ಇರಬೇಕು. ಕಾಗದ ಚೆನ್ನಾಗಿದ್ದರೆ, ನಮಗೆ ಕಾಗದ ಓದುತ್ತಿದ್ದೇವೆ ಎನಿಸುವುದೇ ಇಲ್ಲ; ಬರೆದವರು ಪಕ್ಕದಲ್ಲಿ ಕುಳಿತು ಮಾತನಾಡುತ್ತಿದ್ದಾರೆ ಎನಿಸುತ್ತದೆ. ಸುಮಾರು ಇನ್ನೂರು ವರ್ಷಗಳ ಕೆಳಗೆ ಲೇಡಿ ಮೇರಿ ವರ್ಟ್ಲೀ ಮಾಂಟಗೂ ಎನ್ನುವಾಕೆ ಇಂಗ್ಲೆಂಡಿನಿಂದ ತುರ್ಕಿಗೆ ಹೋದಳು. ಅಲ್ಲಿಂದ ಅವಳು ಬರೆದ ಪತ್ರಗಳನ್ನು ಇಂದಿಗೂ ಆಸಕ್ತಿಯಿಂದ ಓದಬಹುದು. ತಾನು ಕಂಡುದ್ದನ್ನೂ ಕೇಳಿದ್ದನ್ನೂ ಅಷ್ಟು ರಸವತ್ತಾಗಿ, ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾಳೆ. ಗಾಂಧಿಜಿ ತಮ್ಮ ಸ್ನೇಹಿತರಿಗೆ, ಅನುಯಾಯಿಗಳಿಗೆ ಬರೆದ ಪತ್ರಗಳು. ಜವಾಹರಲಾಲ ನೆಹರು ಅವರು ಮಗಳು ಇಂದಿರಾ (ಗಾಂಧಿ)ಗೆ ಬರೆದ ಪತ್ರಗಳು. ಶ್ರೀನಿವಾಸ ಶಾಸ್ತ್ರಿಯವರು ಅವರ ಮಗಳು ರುಕ್ಮಿಣಿಗೆ ಬರೆದ ಪತ್ರಗಳು–ಇಂಥವನ್ನು ಯಾರು ಓದಿದರೂ ಪ್ರಯೋಜನವಿದೆ.

ಹುಟ್ಟಿನಿಂದಲೇ ಕೆಲವರಿಗೆ ಬರಹ ಕಲೆ ಸಾಧಿಸಿರುತ್ತದೆ. ಆದರೆ ವ್ಯವಸಾಯದಿಂದ ಅದನ್ನು ಅಭಿವೃದ್ಧಿಪಡಿಸಿಕೊಳ್ಳಬೇಕು. ವ್ಯಾಪಕವಾದ ವ್ಯಾಸಂಗ. ಸತತವಾದ ಬರವಣಿಗೆ. ಆಳವಾದ ಅಧ್ಯಯನ ಇವುಗಳಿಂದ ನಮ್ಮ ಬರಹಗಳನ್ನು ಒಂದು ಮಟ್ಟಕ್ಕೆ ಕಲೆಯಾಗಿ ಮಾಡಬಹುದು. ಎಂಗ್ಲಿಷ್. ಶ್ರೀ ಮಾಮ್, ಡಿ. ವಿ. ಎಸ್. ಹಾಲ್ಡೇನ್

ಮೊದಲಾದವರು ಪ್ರೌಢ ವೈಜ್ಞಾನಿಕ ವಿಷಯಗಳನ್ನೂ ಸರಳವಾಗಿ, ಸಾಮಾನ್ಯಜನಕ್ಕೆ ಅರ್ಥವಾಗುವಂತೆ, ಆಸಕ್ತಿಯನ್ನು ಹುಟ್ಟಿಸುವಂತೆ ನಿರೂಪಿಸಬಹುದು ಎನ್ನುವುದನ್ನು ತೋರಿಸಿದ್ದಾರೆ.

## ಬಲಸಮತೋಲನ

ತಕ್ಕಡಿಯ ಎರಡು ತಟ್ಟೆಗಳಲ್ಲಿ ವಸ್ತುಗಳನ್ನಿಟ್ಟು ತೂಗಿ ನೋಡೋಣ. ತೂಕಸೂಚಕ ಮುಳ್ಳು ಎರಡು ತಟ್ಟೆಗಳಲ್ಲಿ ಸರಿಸಮ ಭಾರವಿವೆಯೆಂದು ತೋರಿಸುವ ಮೊದಲು ಎಷ್ಟೋ ಹೊಯ್ದಾಡುತ್ತದೆ. ಅನಂತರ ಸಮತೂಕ ತೋರಿಸುತ್ತ ನಿಶ್ಚಲವಾಗುತ್ತದೆ. ಅದು ಸಮತೋಲನ.

ರಾಷ್ಟ್ರಗಳ ನಡುವೆ ಸಮತೋಲನ ವಿವಿಧ ಕ್ಷೇತ್ರಗಳಲ್ಲಿ ಸಾಧಿಸಲ್ಪಡುತ್ತದೆ. ತಾನು ಉತ್ಪಾದಿಸಿದ ವಸ್ತುಗಳನ್ನು ತನಗೆ ಅಗತ್ಯವಾದ ವಸ್ತುಗಳ ಜತೆ ವಿನಿಮಯಗೊಳಿಸಲು ಪ್ರತಿಯೊಂದು ದೇಶವೂ ಇತರ ದೇಶಗಳೊಡನೆ ವ್ಯಾಪಾರ ಸಂಬಂಧ ಬೆಳೆಸುತ್ತದೆ. ಅಂತರರಾಷ್ಟ್ರೀಯ ಸಂಬಂಧ ವಾಣಿಜ್ಯಕ್ಕೆ ಮಾತ್ರ ಸೀಮಿತವಾಗುವುದಿಲ್ಲ. ಪರಸ್ಪರ ಹೋಲುವ ಸಂಸ್ಕೃತಿ, ಏಕರೂಪದ ಸಮಸ್ಯೆಗಳು ಮುಂತಾದ ಹಿತಾಸಕ್ತಿಗಳು ಅಂತರರಾಷ್ಟ್ರೀಯ ಸಂಬಂಧವನ್ನು ರೂಪಿಸುತ್ತವೆ. ಇವೆಲ್ಲಕ್ಕಿಂತ ಮುಖ್ಯವಾದದ್ದು ರಾಜಕೀಯ ಅಂತರರಾಷ್ಟ್ರೀಯ ಸಂಬಂಧ.

ದೌರ್ಬಲ್ಯ ಆಕ್ರಮಣಕ್ಕೆ ಆಹ್ವಾನ. ಮನುಷ್ಯನ ಚರಿತ್ರೆಯಲ್ಲಿ ಬಹು ಕಾಲದಿಂದ ಇದನ್ನ ಕಾಣುತ್ತೇವೆ. ಹದಿನಾರನೆಯ ಶತಮಾನದಲ್ಲಿ ಚಾರ್ಲ್ಸ್ ಬೂರ್‌ಬನ್ ಎಂಬ ಪ್ರಭು ರೋಮ್ ನಗರವನ್ನು ದೂರದಿಂದ ನೋಡಿದಾಗ, 'ಕೊಳ್ಳೆ ಹೊಡೆಯಲು ಎಂಥ ಸೊಗಸಾದ ಊರು!' ಎಂದನಂತೆ. ಕೆಲವು ವರ್ಷಗಳ ಅನಂತರ ಅದನ್ನು ಆತ ಆಕ್ರಮಣ ಮಾಡಿದ; ರೋಮ್ ನಗರವನ್ನು ಅವನ ಸೈನಿಕರು ಸೂರೆಗೊಂಡರು.

ಪ್ರತಿ ದೇಶವೂ ಇತರರಿಂದ ತನ್ನನ್ನು ರಕ್ಷಿಸಿಕೊಳ್ಳಲು ಪ್ರಯತ್ನಿಸುತ್ತದೆ. ಇನ್ನೊಂದು ದೇಶದ ಮೇಲೆ ಪ್ರಭಾವ ಬೀರಲು ಪ್ರಯತ್ನಿಸುತ್ತದೆ. ಒಗ್ಗಟ್ಟಾದ ಹಲವು ದೇಶಗಳ ಪ್ರಭಾವವನ್ನು ಎದುರಿಸಲು ಮತ್ತೆ ಕೆಲವು ದೇಶಗಳು ಒಂದುಗೂಡುತ್ತವೆ. ಯಾವುದಾದರೂ ಒಂದು ದೇಶ ಅಥವಾ ದೇಶಗಳ ಗುಂಪು ತಮಗಿಂತ ಬಲಶಾಲಿಯಾಗಬಾರದೆಂದು ಎಲ್ಲ ದೇಶಗಳೂ ಪ್ರಯತ್ನಿಸುತ್ತವೆ. ಅಲ್ಲದೆ, ತಾವು ಅತ್ಯಂತ ಪ್ರಭಾವಶಾಲಿಯಾಗಬೇಕೆಂದು ಬಯಸುತ್ತವೆ. ಹೀಗೆ ಪ್ರತಿ ದೇಶವೂ, ತನಗಿಂತ ತನ್ನ ವಿರೋಧಿಗಳು ಹೆಚ್ಚು ಬಲಶಾಲಿಯಾಗದಂತೆ ನೋಡಿಕೊಳ್ಳಲು ಹೆಣಗುತ್ತದೆ. ತನ್ನ ವಿರುದ್ಧ ಎರಡು ದೇಶಗಳು ಒಂದುಗೂಡಿದರೆ, ತಾನು ಒಂದು ಮಿತ್ರ ದೇಶವನ್ನು ಸಂಪಾದಿಸಲು ಪ್ರಯತ್ನಿಸುತ್ತದೆ. ತನ್ನ ಶತ್ರುದೇಶದ ವೈರಿಯನ್ನು ತನ್ನ ಮಿತ್ರನೆಂದು ಪರಿಗಣಿಸಲು ಕೂಡಾ ಆತುರ. ಇದು ಬಲಸಮತೋಲನ ಸಾಧಿಸುವ ಯತ್ನ. ಪ್ರಪಂಚದ ಬೇರೆ ಬೇರೆ ದೇಶಗಳು ಪರಸ್ಪರ ತಳೆಯುವ ಪಕ್ಷಪಾತ, ವಿರೋಧ, ಸ್ನೇಹ ಮುಂತಾದ ಧೋರಣೆಗಳ ಒಟ್ಟು ಪರಿಣಾಮ ಬಲಸಮತೋಲನ.

ಘರ್ಷಣೆ, ಯುದ್ಧ, ದಬ್ಬಾಳಿಕೆ ಇವನ್ನು ತಪ್ಪಿಸುವುದರ ಸಲುವಾಗಿ ಬಲಸಮತೋಲನವನ್ನು ಕಾಯ್ದುಕೊಳ್ಳಬೇಕು. ಕೆಲವು ದೇಶಗಳು ಏಳಿಗೆಯನ್ನು ಕಾಣುತ್ತಿರುತ್ತವೆ; ಮತ್ತೆ ಕೆಲವು ದೇಶಗಳು ಅವನತಿಯ ಹಾದಿ ಹಿಡಿದಿರುತ್ತವೆ. ಬೆಳೆಯುತ್ತಿರುವ ದೇಶಗಳು ತಮ್ಮ ಪ್ರಾಬಲ್ಯವನ್ನು ಅಂತರರಾಷ್ಟ್ರೀಯ ರಾಜಕಾರಣದಲ್ಲಿ ಹೆಚ್ಚಿಸಿಕೊಳ್ಳಲು ಹವಣಿಸಿದರೆ, ಕುಸಿಯುತ್ತಿರುವ ದೇಶಗಳು ತಮ್ಮ ಪ್ರಾಬಲ್ಯವನ್ನು ಆದಷ್ಟೂ ಉಳಿಸಿಕೊಳ್ಳಲು ಹೆಣಗುತ್ತವೆ. ಇವೆರಡು ಬಗೆಯ ಪ್ರಯತ್ನಗಳಲ್ಲಿ ಸಾಮರಸ್ಯವಿದ್ದರೆ ಬಲಸಮತೋಲನ ಸಿದ್ಧಿಸುತ್ತದೆ.

ದೇಶವನ್ನು ಅಥವಾ ದೇಶಗಳ ಗುಂಪನ್ನು ಆವರಿಸಿಕೊಂಡ ಭೂಪ್ರದೇಶ ಬಲಸಮತೋಲನವನ್ನು ಕಾಯ್ದುಕೊಳ್ಳುವುದರಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಕಡಲು ಹಾಗೂ ವಾಯುಮಾರ್ಗಗಳು, ಸುತ್ತಮುತ್ತ ಇರುವ ದೇಶಗಳು, ಆ ದೇಶಗಳಲ್ಲಿ ಇರುವ ಆಡಳಿತ ವ್ಯವಸ್ಥೆಗಳು, ಇವೆಲ್ಲ ಅಂತರರಾಷ್ಟ್ರೀಯ ಸಂಬಂಧಗಳನ್ನು ನಿರೂಪಿಸುತ್ತವೆ. ಬಲಸಮತೋಲನ ಅದರಿಂದ ನಿರ್ಧರಿಸಲ್ಪಡುತ್ತದೆ. ಒಂದು ಭೂಪ್ರದೇಶದಲ್ಲಿ ದೊರೆಯುವ ನೈಸರ್ಗಿಕ ಸಂಪನ್ಮೂಲಗಳು, ಅಲ್ಲಿನ ಪ್ರಜೆಗಳಲ್ಲಿ ಇರುವ ಸ್ವರಕ್ಷಣೆ ಅಥವಾ ಆಕ್ರಮಣ ನಡೆಸುವ ಸಾಮರ್ಥ್ಯ ಆ ದೇಶದ ಬಲವನ್ನು ರೂಪಿಸುತ್ತವೆ.

ಬಲಸಮತೋಲನ ಎಂಬ ಪದ ಹದಿನಾರನೆಯ ಶತಮಾನದಿಂದ ರೂಢಿಯಲ್ಲಿದೆ.

ಹದಿನಾರನೆಯ ಶತಮಾನದಲ್ಲಿ ಪವಿತ್ರ ರೋಮನ್ ಚಕ್ರವರ್ತಿ ಐದನೆಯ ಚಾರ್ಲ್ಸ್ ಅತ್ಯಂತ ಪ್ರಬಲನಾದ; ಉಳಿದ ಐರೋಪ್ಯ ದೇಶಗಳಿಗೆ ಇದರಿಂದ ಅಂಜಿಕೆ ಹುಟ್ಟಿತು. ಫ್ರಾನ್ಸಿನ ಮೊದಲ ಫ್ರಾನ್ಸಿಸ್ ದೊರೆ ಕ್ರೈಸ್ತಧರ್ಮಕ್ಕೆ ನಿಷ್ಠನಾಗಿಲ್ಲದೆ ತುರ್ಕಿ ದೊರೆಯ ಜೊತೆ ಸ್ನೇಹ ಬೆಳೆಸಿದ. ಇಂಗ್ಲೆಂಡಿನ ದೊರೆ ಎಂಟನೆಯ ಹೆನ್ರಿಯ ಬೆಂಬಲ ಕೂಡ ದೊರಕಿತು. ಬಲಸಮತೋಲನವನ್ನು ಹೀಗೆ ಕಾಯ್ದುಕೊಂಡರು. ಈ ಸಮತೋಲನ ಮುರಿದುಬಿದ್ದುದು, ಕ್ಯಾಥಲಿಕ್ ಮತ್ತು ಪ್ರಾಟೆಸ್ಟೆಂಟರಿಗೆ ಮೂವತ್ತು ವರ್ಷ ನಡೆದ ಧರ್ಮಯುದ್ಧಕ್ಕೆ ನಾಂದಿಯಾಯಿತು.

ಆ ಶತಮಾನದ ಅಂತ್ಯದಲ್ಲಿ ಫ್ರಾನ್ಸಿನ ಹದಿನಾಲ್ಕನೆಯ ಲೂಯಿ ಪ್ರಬಲನಾದಾಗ ಇತರ ಐರೋಪ್ಯ ರಾಷ್ಟ್ರಗಳು ಇಂಗ್ಲೆಂಡ್ ಮತ್ತು ಹಾಲೆಂಡ್‌ಗಳ ನೇತೃತ್ವದಲ್ಲಿ ಒಂದಾಗಿ ಬಲಸಮತೋಲನ ಕಾಯ್ದುವು.

ಐರೋಪ್ಯ ರಾಷ್ಟ್ರಗಳ ನಡುವೆ ಇಂಗ್ಲೆಂಡ್ ಪ್ರಬಲವಾಗಿದ್ದಾಗ, ಆ ದೇಶ ಯಾವ ದೇಶದ ಜತೆಗೂ ಶಾಶ್ವತವಾಗಿ ಅಂಟಿಕೊಳ್ಳದೆ ಬಲಸಮತೋಲನ ಕಾಯುವುದರಲ್ಲಿ ಪ್ರಮುಖ ಪಾತ್ರವಹಿಸಿತು.

ಪ್ರಥಮ ಜಾಗತಿಕ ಮಹಾಯುದ್ಧಕ್ಕೆ ಮೊದಲು ಎರಡು ಸಮಾನ ಬಲಗಳು ರೂಪುಗೊಂಡಿದ್ದುವು—ಇಂಗ್ಲೆಂಡ್, ಫ್ರಾನ್ಸ್, ರಷ್ಯ ಒಂದು ಗುಂಪು, ಜರ್ಮನಿ ಮತ್ತು ಆಸ್ಟ್ರಿಯ ಇನ್ನೊಂದು ಗುಂಪು. ದ್ವಿತೀಯ ಜಾಗತಿಕ ಮಹಾಯುದ್ಧದ ಅನಂತರ ಬಲಸಮತೋಲನ ರಾಜಕೀಯ ತತ್ತ್ವಗಳ ನಡುವೆ ತೂಗಾಡುತ್ತಿದೆ. ಕಮ್ಯೂನಿಸ್ಟ್ ಅಧ್ವರ್ಯು ಸೋವಿಯೆತ್ ರಷ್ಯ ಮತ್ತು ಅದರ ಹಿಂಬಾಲಕರದು ಒಂದು ಬಣವಾದರೆ, ಕಮ್ಯೂನಿಸ್ಟೇತರರದು ಇನ್ನೊಂದು ಬಣ. ಆದರೆ ಬರಬರುತ್ತ ಎರಡೂ ಬಣಗಳ ಒಳಗೇ ಸಮತೋಲನ ತಪ್ಪಿದೆ. ಕಮ್ಯೂನಿಸ್ಟ್ ಚೀನ ಸೋವಿಯೆತ್ ದೇಶವನ್ನು ತನ್ನ ನಾಯಕನೆಂದು ಪರಿಗಣಿಸುವುದಿಲ್ಲ. ಅನೇಕ ಅಲಿಪ್ತ ರಾಷ್ಟ್ರಗಳು ಯಾವ ಬಣಕ್ಕೂ ನಿರ್ದಿಷ್ಟವಾಗಿ ಸೇರುವುದಿಲ್ಲ. ಭಾರತದ ಪ್ರಧಾನಿ ನೆಹರು ಎರಡು ಬಣಗಳ ನಡುವಣ ಸೇತುವೆಯಂತಿದ್ದರು. ಬಲಸಮತೋಲನ ಕಾಯುವುದರಲ್ಲಿ ಆ ಧೋರಣೆ ಅಗತ್ಯವಿತ್ತು.

ಬಲಸಮತೋಲನವನ್ನು ಕಾಪಾಡಿಕೊಳ್ಳುವ ಪ್ರಯತ್ನ ನಡೆಯುತ್ತಲೇ ಇರುತ್ತದೆ. ಕಮ್ಯೂನಿಸ್ಟ್ ಚೀನ ಮತ್ತು ರಷ್ಯದ ಪ್ರಾಬಲ್ಯ ಹೆಚ್ಚಿತೆಂದು ಏಷ್ಯದ ಕೆಲವು ರಾಷ್ಟ್ರಗಳಿಗೆ ಅಮೆರಿಕ ಶಸ್ತ್ರಾಸ್ತ್ರಗಳನ್ನು ನೀಡಿ ಒಪ್ಪಂದಗಳಿಂದ ತನ್ನ ಬಣಕ್ಕೆ ಸೇರಿಸಿಕೊಳ್ಳಲು ಯತ್ನಿಸಿತು. ರಷ್ಯ ಕ್ಯೂಬಕ್ಕೆ ನೆರವಾಗಿ

ಅಮೆರಿಕದ ಬಲವನ್ನು ಕುಂದಿಸಲು ಯತ್ನಿಸಿತು. ತಮ್ಮ ಪ್ರಭಾವ ವಲಯಗಳನ್ನು ವಿಸ್ತರಿಸಿಕೊಂಡು ಬಲಸಮತೋಲನವನ್ನು ಕಾಪಾಡಿಕೊಳ್ಳುವ ಪ್ರಯತ್ನವನ್ನು ಇತರ ರೀತಿಗಳಲ್ಲೂ ಮಹಾರಾಷ್ಟ್ರಗಳು ಮಾಡುವುದುಂಟು. ಹಣ ಸಹಾಯ, ಯಂತ್ರ ಮತ್ತು ಇತರ ವಸ್ತುಗಳನ್ನು ಪೂರೈಸುವುದು, ತಾಂತ್ರಿಕಜ್ಞಾನವನ್ನು ಒದಗಿಸುವುದು ಇವನ್ನು ತಮ್ಮ ಪ್ರಭಾವವನ್ನು ಬೆಳೆಸಿಕೊಳ್ಳಲು ಉಪಯೋಗಿಸಬಹುದು. ಇಸ್ರೇಲ್–ಅರಬ್ ರಾಜ್ಯಗಳ ಘರ್ಷಣೆಯಲ್ಲಿ ಅಮೆರಿಕ ಇಸ್ರೇಲಿಗೆ ನೆರವು ನೀಡಿದೆ ಎಂದು ರಷ್ಯದ ಆಪಾದನೆ; ರಷ್ಯ ಅರಬಿ ರಾಷ್ಟ್ರಗಳಿಗೆ ನೆರವು ನೀಡುತ್ತಿದೆ ಎಂದು ಅಮೆರಿಕದ ಆರೋಪ. ಯಾವಾಗಲೂ ಬಲದ ಸ್ಪರ್ಧೆಯಲ್ಲಿ ತಾನು ಹಿಂದುಳಿಯದಂತೆ ನೋಡಿಕೊಳ್ಳುವುದು ಪ್ರತಿ ರಾಷ್ಟ್ರಕ್ಕೆ ಅನಿವಾರ್ಯ.

ನೋಡಿ : ರಾಜನೀತಿ ; ರಾಷ್ಟ್ರ

## ಬರ್ಲಿನ್

ನೊಬೆಲ್ ಬಹುಮಾನ ಪಡೆದವರಲ್ಲಿ 37 ಮಂದಿ ಬರ್ಲಿನಿನಲ್ಲಿ ಹುಟ್ಟಿದವರು ಅಥವಾ ಸಂಶೋಧನೆ ಮಾಡಿದವರು !

ಇಂಥ ಕೀರ್ತಿಶಾಲಿ ನಗರ ಬರ್ಲಿನ್ ಜರ್ಮನಿಯ ರಾಜಧಾನಿ. ಎರಡು ಜಾಗತಿಕ ಮಹಾಯುದ್ಧಗಳಲ್ಲಿ ಬರ್ಲಿನ್ ಸಹಿಸಿದಷ್ಟು ಕಷ್ಟನಷ್ಟಗಳನ್ನು ಬೇರೆ ಯಾವ ನಗರವೂ ಅನುಭವಿಸಿರಲಿಕ್ಕಿಲ್ಲ. ಇಂದು ಬರ್ಲಿನ್ ಇಬ್ಭಾಗವಾಗಿ ಹೋಗಿದೆ. ನಡುವೆ ಒಂದು ಗೋಡೆ. ಗೋಡೆ, ಪೂರ್ವ ಬರ್ಲಿನ್ ಮತ್ತು ಪಶ್ಚಿಮ ಬರ್ಲಿನ್‌ಗಳನ್ನು ನಿರ್ಮಿಸಿದೆ.

ಬರ್ಲಿನ್ ಪಾಶ್ಚಾತ್ಯ ಜಗತ್ತಿನಲ್ಲಿ ಎಷ್ಟೋ ಯುದ್ಧಗಳ ಪ್ರಾರಂಭಗಳನ್ನು ಕಂಡಿದೆ. ನೆಪೋಲಿಯನ್ ಬ್ರಿಟನಿನ ಮೇಲೆ ಯುದ್ಧ ಘೋಷಿಸಿದ್ದು ಇಲ್ಲಿಂದ. ಮೊದಲನೆಯ ಮತ್ತು ಎರಡನೆಯ ಮಹಾಯುದ್ಧಗಳಿಗೆ ಕಾರಣರಾದ ಕೈಸರ್ ಚಕ್ರವರ್ತಿ ಮತ್ತು ಹಿಟ್ಲರ್ ಮುಖ್ಯ ನಿರ್ಧಾರಗಳನ್ನು ಕೈಗೊಂಡದ್ದು, ಘೋಷಣೆಗಳನ್ನು ಮಾಡಿದ್ದು ಬರ್ಲಿನಿನಿಂದ.

ಕೋಲ್ನ್ ಮತ್ತು ಬರ್ಲಿನ್ ಎರಡು ಪುಟ್ಟ ಹಳ್ಳಿಗಳು. ಅವೆರಡೂ 1300ರಲ್ಲಿ ಒಂದೇ ಆದುವು. ಊರು ಬೆಳೆದಂತೆ ಅದರ ಹೆಸರು ಬರ್ಲಿನ್ ಎಂದಾಯಿತು. 1807ರಲ್ಲಿ ಫ್ರಾನ್ಸಿನ ನೆಪೋಲಿಯನ್ ಬರ್ಲಿನನ್ನು ವಶಪಡಿಸಿಕೊಂಡ. 1871ರಲ್ಲಿ ಜರ್ಮನ್ ಚಕ್ರಾಧಿಪತ್ಯದ ರಾಜಧಾನಿಯಾದ ಬರ್ಲಿನ್ ಬಹು ಬೇಗ ಪ್ರಾಮುಖ್ಯ ಪಡೆಯಿತು. ಎಲ್ಬ್ ಮತ್ತು ಓಡರ್ ನದಿಗಳ ಮಧ್ಯೆ ಇರುವ ಬರ್ಲಿನ್ ರೈಲ್ವೆ ಹಾದಿಗಳ ನಿರ್ಮಾಣವಾದ ಮೇಲೆ ಸಂಪತ್ತಿನ ಆಗರವಾಯಿತು. ಅರಮನೆಗಳು, ಇಗರ್ಜಿಗಳು, ಸರ್ಕಾರಿ ಕಟ್ಟಡಗಳು, ವಾಸದ ಬಡಾವಣೆಗಳು ಬರ್ಲಿನಿನ ಸೌಂದರ್ಯವನ್ನು ಹೆಚ್ಚಿಸಿದುವು.

1945ರಲ್ಲಿ ಎರಡನೆಯ ಮಹಾಯುದ್ಧದ ಸಮಯದಲ್ಲಿ ಬರ್ಲಿನ್ ಬಾಂಬ್ ದಾಳಿಗೆ ತುತ್ತಾಯಿತು. ದೊಡ್ಡ ದೊಡ್ಡ ಕಟ್ಟಡಗಳು ಉರುಳಿ ಬಿದ್ದವು. ಜರ್ಮನಿ ಸೋತ ಮೇಲೆ ಪೂರ್ವ ಜರ್ಮನಿ ಮತ್ತು ಪಶ್ಚಿಮ ಜರ್ಮನಿ ಎಂದು ಎರಡು ಭಾಗಗಳಾಗಿ ಒಡೆಯಲ್ಪಟ್ಟಿತು. ಪೂರ್ವ ಜರ್ಮನಿಯಲ್ಲಿನ ಬರ್ಲಿನ್ ನಗರ ನಾಲ್ಕು ಭಾಗವಾಯಿತು. ರಷ್ಯ, ಅಮೆರಿಕ ಸಂಯುಕ್ತ ಸಂಸ್ಥಾನ, ಬ್ರಿಟನ್ ಮತ್ತು ಫ್ರಾನ್ಸ್‌ಗಳಿಗೆ ಒಂದೊಂದು ಹಂಚಿಹೋಯಿತು. ಉಳಿದ ಮೂರು ದೇಶಗಳವರನ್ನು



ಬಹು ವೈಭವ ಕಂಡ ಬರ್ಲಿನ್ ನಗರ

ಬರ್ಲಿನಿನಿಂದ ಹೊರಗಟ್ಟಬೇಕೆಂದು, ಪಶ್ಚಿಮ ಜರ್ಮನಿಯಿಂದ ಪಶ್ಚಿಮ ಬರ್ಲಿನಿಗೆ ಬರುವ ಎಲ್ಲ ಭೂಸಾಗಾಣಿಕೆಗಳನ್ನು ರಷ್ಯನರು ತಡೆಗಟ್ಟಿದರು. ಈ ತಡೆ ಸುಮಾರು ಒಂದು ವರ್ಷ ಕಾಲ ನಡೆಯಿತು. ಆಗ ಅಮೆರಿಕದ ಸಂಯುಕ್ತ ಸಂಸ್ಥಾನ ಮತ್ತು ಬ್ರಿಟನ್ ವಿಮಾನದಲ್ಲಿ ಆಹಾರ ಸಾಮಗ್ರಿ, ಔಷಧಗಳನ್ನು ಪಶ್ಚಿಮ ಬರ್ಲಿನಿಗೆ ಸರಬರಾಜು ಮಾಡಿದುವು. ಪಶ್ಚಿಮ ಬರ್ಲಿನಿಗೆ ಜನ ನಿರಾಶ್ರಿತರಾಗಿ ಹೋಗುವುದನ್ನು ತಪ್ಪಿಸಲು ಪೂರ್ವ ಜರ್ಮನಿಯ ಪೋಲೀಸರು 1961ರಲ್ಲಿ 42.6 ಕಿ. ಮೀ. ಉದ್ದದ ಗೋಡೆಯೊಂದನ್ನು ಕಟ್ಟಿದರು. ವೈಭವದಿಂದ ಮೆರೆದಿದ್ದ ಬರ್ಲಿನ್ ನಗರ ಸಂಪೂರ್ಣವಾಗಿ ಎರಡು ಭಾಗವಾಯಿತು.

ಪಶ್ಚಿಮ ಬರ್ಲಿನ್ ಮನೋಹರವಾದ ನಗರ. ಪ್ರಸಿದ್ಧರಾದ ವಾಸ್ತುಶಿಲ್ಪಿಗಳು ಹೊಸ ನಗರವನ್ನು ಕೌಶಲದಿಂದ ನಿರ್ಮಿಸಿದ್ದಾರೆ. ರಸ್ತೆ ಬದಿಯ ಉಪಾಹಾರ ಮಂದಿರಗಳು, ಈಜುವ ಮತ್ತು ಸೂರ್ಯಸ್ನಾನ ಮಾಡುವ ಸೌಲಭ್ಯಗಳು ಇಲ್ಲಿವೆ. ಚಾರಿತ್ರಿಕ ವಸ್ತುಸಂಗ್ರಹಾಲಯ, ಕಾಂಗ್ರೆಸ್ ಹಾಲ್, ಆಧುನಿಕ ಸಿನಿಮಾ ಮಂದಿರಗಳು ಕಟ್ಟಲ್ಪಟ್ಟಿವೆ.

ಪೂರ್ವ ಬರ್ಲಿನ್ ಕಮ್ಯೂನಿಸ್ಟರ ಆಡಳಿತದಲ್ಲಿರುವ ನಗರ. ಎಲ್ಲವೂ ಸುವ್ಯವಸ್ಥಿತ. ಆದರೆ ಪಶ್ಚಿಮ ಬರ್ಲಿನಿನ ಅನಿರ್ಬಂಧಿತ ವಾತಾವರಣಕ್ಕಿಂತ ಇಲ್ಲಿನದು ಭಿನ್ನ.

| | ಪೂರ್ವ ಬರ್ಲಿನ್ | ಪಶ್ಚಿಮ ಬರ್ಲಿನ್ |
|---|---|---|
| ವಿಸ್ತಾರ : | 404 ಚ. ಕಿ. ಮೀ. | 482 ಚ. ಕಿ. ಮೀ. |
| ಜನಸಂಖ್ಯೆ : | 12,00,000 | 22,50,000 |

ನೋಡಿ : ಜರ್ಮನಿ

## ಬಲ್ಗೇರಿಯ

ಗುಲಾಬಿಯ ಅತ್ತರು. ಎಂಥ ಸುವಾಸನೆ! ಬಲ್ಗೇರಿಯದ ಮಧ್ಯಭಾಗದ ಸುವಾಸನೆಯ ಗುಲಾಬಿ ಹೂಗಳಿಂದ ತುಂಬಿದ ಪ್ರದೇಶ. ಜನ ಇಲ್ಲಿ ಗುಲಾಬಿ ಅತ್ತರನ್ನು ತಯಾರಿಸುತ್ತಾರೆ.

ಬಲ್ಗೇರಿಯ ಆಗ್ನೇಯ ಯೂರೋಪಿನಲ್ಲಿರುವ ಕಮ್ಯೂನಿಸ್ಟ್ ದೇಶ. ಉತ್ತರಕ್ಕೆ ರುಮೇನಿಯ, ಪೂರ್ವಕ್ಕೆ ಕಪ್ಪು ಸಮುದ್ರ, ದಕ್ಷಿಣಕ್ಕೆ ಗ್ರೀಸ್ ಮತ್ತು ತುರ್ಕಿ ಮತ್ತು ಪಶ್ಚಿಮಕ್ಕೆ ಯುಗೊಸ್ಲಾವಿಯ.

ಬಲ್ಗೇರಿಯದ ಮೂರನೆಯ ಒಂದು ಭಾಗ ಅರಣ್ಯ ಪ್ರದೇಶ. ಓಕ್, ಪೈನ್, ಬೀಚ್‌ಗಳಂಥ ಉತ್ತಮ ಮರಗಳು ಇಲ್ಲಿ ಬೆಳೆಯುತ್ತವೆ. ಡ್ಯಾನ್ಯೂಬ್ ಕಣಿವೆ ಪ್ರದೇಶ ಪ್ರಸ್ಥಭೂಮಿಯಂತಿದೆ. ಮಾರಿಟ್ಸ ಕಣಿವೆ ಬಹಳ ಫಲವತ್ತಾಗಿದೆ. ಮಧ್ಯ ಬಲ್ಗೇರಿಯವನ್ನು ಗುಲಾಬಿ ಕಣಿವೆ ಎನ್ನುತ್ತಾರೆ. ಬಾಲ್ಕನ್ ಬೆಟ್ಟ ಪೂರ್ವದಿಂದ ಪಶ್ಚಿಮಕ್ಕೆ ಹಬ್ಬಿ ದೇಶವನ್ನು ಎರಡು ಭಾಗಗಳಾಗಿ ಮಾಡಿದೆ.

ಡ್ಯಾನ್ಯೂಬ್ ನದಿ ಬಲ್ಗೇರಿಯ, ರುಮೇನಿಯಗಳ ನಡುವೆ ಮೇರೆ ಯಂತಿದೆ. ಮರಿಟ್ಸ ಮತ್ತು ಅದರ ಉಪನದಿಗಳು ನಾಡನ್ನು ಫಲವತ್ತಾಗಿಸಿವೆ. ಬಾಲ್ಕನ್ ಪರ್ವತ ಶಿಖರ 2927 ಮೀಟರ್ ಎತ್ತರವಿದೆ. (ಇದಕ್ಕೆ ಸ್ಟಾಲಿನ್ ಶಿಖರ ಎಂದು ಹೆಸರಿಟ್ಟಿದ್ದಾರೆ.)

ಏಳನೆಯ ಶತಮಾನದಲ್ಲಿ ಬಲ್ಗರು ವೋಲ್ಗಾ ಪ್ರದೇಶದಿಂದ ಇಲ್ಲಿಗೆ ಬಂದರು. ಬಲ್ಗರು ನೆಲೆಸಿದ ನಾಡಿಗೆ ಬಲ್ಗೇರಿಯ ಎಂದು ಹೆಸರಾಯಿತು. ಇಲ್ಲಿನ ಮೊದಲ ನಿವಾಸಿಗಳಾಗಿದ್ದ ಸ್ಲಾವ್ ಜನರೊಡನೆ ವಿವಾಹ ಸಂಬಂಧ ಬೆಳೆಸಿದರು. ಸ್ಲಾವ್ ಭಾಷೆ, ಪದ್ಧತಿ, ಆಚಾರಗಳನ್ನು ತಮ್ಮದಾಗಿಸಿಕೊಂಡರು. ಸುಮಾರು ಶೇಕಡಾ 10 ರಷ್ಟು ಜನ ತುರ್ಕರು. ಜಾನಪದ ನೃತ್ಯ, ವರ್ಣರಂಜಿತ ರಾಷ್ಟ್ರೀಯ ಉಡುಪು, ಮತೀಯ ಕಟ್ಟಳೆಗಳು ಇವತ್ತಿಗೂ ಉಳಿದುಕೊಂಡು ಬಂದಿವೆ. ಬಲ್ಗೇರಿಯನ್ ಪ್ರಮುಖ ಭಾಷೆ. ಇತರ ಉಪಭಾಷೆಗಳೂ ಬಳಕೆಯಲ್ಲಿವೆ. ಬಹಳ ಜನ ಬಲ್ಗೇರಿಯದ ಧರ್ಮಪೀಠಕ್ಕೆ ಸೇರಿದವರು. ಯೆಹೂದ್ಯರು, ರೋಮನ್ ಕ್ಯಾಥಲಿಕರು, ಪ್ರಾಟೆಸ್ಟೆಂಟರು ಇದ್ದಾರೆ. ವಿದ್ಯಾಕ್ಷೇತ್ರದಲ್ಲಿ ಬಲ್ಗೇರಿಯ ಬಹಳ ಮುಂದುವರಿದಿದೆ.

ಬಲ್ಗೇರಿಯದ ಬಹು ಭಾಗದಲ್ಲಿ ಬೇಸಿಗೆಯಲ್ಲಿ ಸೆಕೆ ಹೆಚ್ಚು. ಚಳಿಗಾಲ ದಲ್ಲಿ ಹೆಚ್ಚು ಚಳಿ. ಬಾಲ್ಕನ್ ಪರ್ವತದ ಮರೆಯಲ್ಲಿರುವ ಮಾರಿಟ್ಸ ಕಣಿವೆ ಪ್ರದೇಶ ರಷ್ಯ ಕಡೆಯಿಂದ ಬೀಸುವ ಶೀತಗಾಳಿಯಿಂದ ರಕ್ಷಿತವಾಗಿದೆ. ಚಳಿಗಾಲದಲ್ಲಿ ಇಲ್ಲಿ ಮಳೆಯಾಗುತ್ತದೆ.

ಹೊಗೆಸೊಪ್ಪು, ಪ್ರಮುಖ ವಾಣಿಜ್ಯ ಬೆಳೆ. ದ್ರಾಕ್ಷಿ, ಹತ್ತಿ, ರೇಷ್ಮೆಹುಳು ಸಾಕುವುದು, ಮಾರಿಟ್ಸ ಕಣಿವೆಯ ಉತ್ಪನ್ನ. ಗೋಧಿ, ಮತ್ತಿತರ ಧಾನ್ಯಗಳು, ಆಲೂಗೆಡ್ಡೆ, ಭತ್ತ, ಸಕ್ಕರೆ ಬೀಟ್, ಹಣ್ಣುಗಳನ್ನು ಬೆಳೆಯುತ್ತಾರೆ.

[illegible]

ಚಿನ್ನ, ಕ್ರೋಮ್, ಮ್ಯಾಂಗನೀಸ್, ಯುರೇನಿಯಂ, ಪೆಟ್ರೋಲಿಯಂಗಳೂ ಸಿಕ್ಕುತ್ತವೆ.

1947ರವರೆಗೆ ಬಲ್ಗೇರಿಯದಲ್ಲಿ ಕೈಗಾರಿಕೆಗಳು ಸಾಕಷ್ಟು ಅಭಿವೃದ್ಧಿ ಹೊಂದಿರಲಿಲ್ಲ. ಕಮ್ಯೂನಿಸ್ಟ್ ಸರಕಾರ ಆಡಳಿತ ವಹಿಸಿಕೊಂಡ ಮೇಲೆ ಇದ್ದ ಕೈಗಾರಿಕೆಗಳನ್ನು ರಾಷ್ಟ್ರೀಕರಣ ಮಾಡಿದರು. ಕಚ್ಚಾಮಾಲಿನ ಅಭಾವವನ್ನು ಲೆಕ್ಕಿಸದೆ ಹೊಸ ಹೊಸ ಕೈಗಾರಿಕೆಗಳನ್ನು ಆರಂಭಿಸಲು ಯೋಜನೆಗಳನ್ನು ತಯಾರಿಸಿದರು. ಆಹಾರ ಸಂಸ್ಕರಣ, ಯಂತ್ರ ಉತ್ಪಾದನೆ, ಕಬ್ಬಿಣ ಮತ್ತು ಉಕ್ಕು, ಸಿಮೆಂಟು, ರಾಸಾಯನಿಕಗಳು. ವಿದ್ಯುತ್ ಉಪಕರಣಗಳು ಮೊದಲಾದ ಕೈಗಾರಿಕೆಗಳು ಸ್ಥಾಪಿತವಾದುವು.

ಯಂತ್ರಗಳು, ಇಂಧನ, ಕಚ್ಚಾ ಸಾಮಗ್ರಿಗಳನ್ನು ಆಮದು ಮಾಡಿ ಕೊಳ್ಳುತ್ತಾರೆ. ಹಳ್ಳಿಗಳ ನಾಡು ಬಲ್ಗೇರಿಯ. ನಗರಗಳು ಕಡಮೆ. ರಾಜಧಾನಿ ಸೋಫಿಯ ಕೈಗಾರಿಕಾ ಕೇಂದ್ರ. ಕಪ್ಪು ಸಮುದ್ರದ ದಂಡೆ ಯಲ್ಲಿರುವ ಸ್ಟಾಲಿನ್ ಬಂದರಿನಲ್ಲಿ ಹಡಗು ನಿರ್ಮಾಣ ಉದ್ಯಮವಿದೆ.

679ರಲ್ಲಿ ಬಲ್ಗರು ಬಲ್ಗೇರಿಯ ರಾಜ್ಯ ಸ್ಥಾಪನೆಮಾಡಿದರು. ಒಂದನೆಯ ಸಿಮಿಅನ್ (893–927) ರಾಜ್ಯವನ್ನು ಬಹಳವಾಗಿ ವಿಸ್ತರಿಸಿದ. ಇವನ ಅನಂತರ ಬಲ್ಗೇರಿಯ ಬೈಜಾಂಟಿಯನ್ ಚಕ್ರಾಧಿಪತ್ಯಕ್ಕೆ ಸೇರಿತು. 1186ರಲ್ಲಿ ಜಾನ್ ಅಸೆನ್ ಬೈಜಾಂಟಿಯನ್‌ಅನ್ನು ವಿರೋಧಿಸಿ ಬಲ್ಗೇರಿಯಕ್ಕೆ ಸ್ವಾತಂತ್ರ್ಯ ದೊರಕಿಸಿಕೊಂಡ. ಸಾಹಿತ್ಯ, ಕಲೆ, ವಾಣಿಜ್ಯ ಗಳು ಎರಡನೆಯ ಜಾನ್ ಅಸೆನ್‌ನ ಆಡಳಿತಕಾಲದಲ್ಲಿ ಅಭಿವೃದ್ಧಿ ಹೊಂದಿ ದುವು. 1396ರಲ್ಲಿ ತುರ್ಕಿಯವರು ಬಲ್ಗೇರಿಯವನ್ನು ವಶಪಡಿಸಿ ಕೊಂಡರು. ಸುಮಾರು 500 ವರ್ಷಗಳ ಕಾಲ ಬಲ್ಗೇರಿಯ ತುರ್ಕಿಯವರ ಆಡಳಿತದಲ್ಲಿತ್ತು. ಅನಂತರ ರಷ್ಯದವರ ಸಹಾಯದಿಂದ ಉತ್ತರ ಭಾಗ ಮಾತ್ರ ಸ್ವತಂತ್ರವಾಯಿತು. 1885ರಲ್ಲಿ ದಕ್ಷಿಣ ಬಲ್ಗೇರಿಯ ತುರ್ಕಿ ಯವರ ಮುಷ್ಟಿಯಿಂದ ಪಾರಾಗಿ ಉತ್ತರ ಬಲ್ಗೇರಿಯದ ಜೊತೆ ಸೇರಿ ಕೊಂಡಿತು.

| | | |
|---|---|---|
| ಖಂಡ | : | ಯೂರೋಪ್ (ಆಗ್ನೇಯ) |
| ಅಕ್ಷಾಂಶ | : | 41° 14′ ಉ ದಿಂದ 44° 13′ ಉ |
| ರೇಖಾಂಶ | : | 22° 22′ ಪೂ ದಿಂದ 28° 37′ ಪೂ |
| ವಿಸ್ತೀರ್ಣ | : | 1,10,842 ಚ. ಕಿ. ಮೀ. |
| ಜನಸಂಖ್ಯೆ | : | ಸುಮಾರು 82,58,000 (1966ರ ಜನಗಣತಿಯಂತೆ) |
| ಸರಕಾರ | : | ಕಮ್ಯೂನಿಸ್ಟ್ ಗಣರಾಜ್ಯ |
| ರಾಜಧಾನಿ | : | ಸೋಫಿಯ |
| ಭಾಷೆ | : | ಬಲ್ಗೇರಿಯನ್ |
| ಬಾವುಟ | : | ಬಿಳಿ, ಹಸಿರು, ಕೆಂಪು ಬಣ್ಣದ ಅಡ್ಡ ಪಟ್ಟಿಗಳು ಮೇಲ್ಗಡೆ ಎಡಭಾಗದಲ್ಲಿ ಗೌರವ ಲಾಂಛನ |

1908ರಲ್ಲಿ ಸ್ವಲ್ಪಮಟ್ಟಿಗೆ ಉಳಿದುಬಂದಿದ್ದ ತುರ್ಕಿಯ ಅಧಿಕಾರವನ್ನು ಕಿತ್ತೊಗೆದು ಫರ್ಡಿನೆಂಡ್ ಬಲ್ಗೇರಿಯದ ಸ್ವಾತಂತ್ರ್ಯವನ್ನು ಘೋಷಿಸಿದ; ತಾನೇ ದೊರೆಯಾದ. ಹಿಂದೆ ಬಲ್ಗೇರಿಯಕ್ಕೆ ಸೇರಿದ್ದ ಪ್ರದೇಶಗಳನ್ನು ಪುನಃ ಪಡೆಯಬೇಕೆಂದು ಎರಡು ಬಾರಿ ಯುದ್ಧಮಾಡಿದ. ಈ ಯುದ್ಧಗಳು ಬಾಲ್ಕನ್ ಯುದ್ಧಗಳೆಂದು ಪ್ರಸಿದ್ಧವಾಗಿವೆ. ಬಾಲ್ಕನ್ ರಾಷ್ಟ್ರಗಳೆಲ್ಲಾ ಸೇರಿ ನಡೆಸಿದ ಮೊದಲನೆಯ ಯುದ್ಧದಲ್ಲಿ ಇವರಿಗೇ ಜಯವಾಯಿತು. ಆದರೆ ಬಾಲ್ಕನ್ ರಾಷ್ಟ್ರಗಳ ನಡುವೆ ಒಡಕುಂಟಾಗಿ ಎರಡನೆಯ ಬಾಲ್ಕನ್ ಯುದ್ಧ ನಡೆಯಿತು. ಮೊದಲನೆಯ ಮಹಾಯುದ್ಧದಲ್ಲಿ ಬಲ್ಗೇರಿಯ ತನ್ನ ಹಲವು ಪ್ರದೇಶಗಳನ್ನು ಕಳೆದುಕೊಳ್ಳಬೇಕಾಯಿತು. ಎರಡನೆಯ ಮಹಾಯುದ್ಧದಲ್ಲಿ ಬಲ್ಗೇರಿಯ ತಟಸ್ಥವಾಗಿತ್ತು. ರಷ್ಯನರು ಹಠಾತ್ತಾಗಿ ಆಕ್ರಮಣಮಾಡಿ ಬಲ್ಗೇರಿಯವನ್ನು ಗೆದ್ದರು. ರಷ್ಯದೊಡನೆ ಸ್ನೇಹದಿಂದಿರುವ ಸರಕಾರವನ್ನು ಅಲ್ಲಿ ರಚಿಸಲಾಯಿತು. ಬಲ್ಗೇರಿಯದ ಅನೇಕ ಮುಂದಾಳುಗಳನ್ನು ಸೆರೆಯಲ್ಲಿಟ್ಟರು. ಮಿತ್ರರರು ಹತರಾದರು. ಕಮ್ಯೂನಿಸ್ಟ್ ನಾಯಕ ಜಾರ್ಜ್ ಡಿಮಿಟ್ರೊವ್ (ನಿಧನ: 1949) ರಷ್ಯದ ಮಾದರಿಯ ಗಣರಾಜ್ಯವನ್ನು ಸ್ಥಾಪಿಸಿದ.

ಬಲ್ಗೇರಿಯದ ರಾಷ್ಟ್ರೀಯ ಸಭೆ ಕಾನೂನುಗಳನ್ನು ಮಾಡುವುದಲ್ಲದೆ ಪ್ರೆಸೀಡಿಯಂನ (ಅತ್ಯುಚ್ಚ ಕಾರ್ಯನಿರ್ವಾಹಕ ಸಮಿತಿ) ಸದಸ್ಯರನ್ನೂ ಆರಿಸುತ್ತದೆ. ಸಚಿವ ಸಂಪುಟ ಆಡಳಿತ ನಿರ್ವಹಿಸುತ್ತದೆ.



ಕಾಯಕವೇ ಕೈಲಾಸ ಎಂದ ಬಸವೇಶ್ವರರು

## ಬಸವೇಶ್ವರರು

'ಅಯ್ಯ' ಎಂದಡೆ ಸ್ವರ್ಗ : 'ಎಲವೊ' ಎಂದಡೆ ನರಕ.
'ಆಚಾರವೇ ಸ್ವರ್ಗ. ಅನಾಚಾರವೇ ನರಕ'
'ದಯೆಯೇ ಧರ್ಮದ ಮೂಲವಯ್ಯಾ'
'ಸತ್ಯವ ನುಡಿವುದೇ ದೇವಲೋಕ, ಮಿಥ್ಯವ ನುಡಿವುದೇ ಮರ್ತ್ಯಲೋಕ'.

ಮುತ್ತಿನಂಥ ಮಾತುಗಳು : ಇವನ್ನು ನುಡಿದವರು ಬಸವೇಶ್ವರರು.

ಬಸವಣ್ಣನವರು ಸುಮಾರು ಎಂಟುನೂರು ವರ್ಷಗಳ ಹಿಂದೆ ಈಗಿನ ಬಿಜಾಪುರ ಜಿಲ್ಲೆಯಲ್ಲಿರುವ ಬಾಗೇವಾಡಿಯಲ್ಲಿ ಜನಿಸಿದರು. ಇವರ ತಂದೆ ಮಾದರಸ : ತಾಯಿ ಮಾದಲಾಂಬಿಕೆ. ಈ ದಂಪತಿಗಳು ಶಿವಭಕ್ತರು. ಶಿವನ ವಾಹನವಾದ ನಂದಿಯ ಅನುಗ್ರಹದಿಂದ ಹುಟ್ಟಿದ ಮಗನೆಂದು ಭಾವಿಸಿ 'ಬಸವ' ಎಂದು ಹೆಸರಿಟ್ಟರು. ಬಸವ ಶಿವಭಕ್ತರಾದರು.

ತಮ್ಮ ಸುತ್ತ ಸಮಾಜದಲ್ಲಿ ನಡೆಯುತ್ತಿದ್ದ ಬರಿ ಆಡಂಬರದ ಪೂಜೆಗಳು. ಯಜ್ಞಯಾಗಗಳಲ್ಲಿ ಪ್ರಾಣಿಹತ್ಯೆ ಮೊದಲಾದವನ್ನು ನೋಡಿ ಹುಟ್ಟಿನಿಂದ ಬ್ರಾಹ್ಮಣರಾದ ಬಸವೇಶ್ವರರು ಆ ಮತವನ್ನು ತೊರೆದರು. ವೀರಶೈವ ಧರ್ಮವನ್ನವಲಂಬಿಸಿ ಭಕ್ತಿಗೆ ಹೊಸದೊಂದು ರೂಪವನ್ನು ಕೊಟ್ಟರು. ಬಸವಣ್ಣ ಹುಟ್ಟುವುದಕ್ಕೆ ಮೊದಲೇ ವೀರಶೈವ ಮತ ಇದ್ದಿತಾದರೂ ಅದು ಅವರ ಕಾಲದಲ್ಲಿ ಹೊಸದೊಂದು ಪಂಥವೇನೊ ಎನ್ನುವಷ್ಟು ಉತ್ಸಾಹದಿಂದ ಬೆಳೆದು ಹಬ್ಬಿತು.

ಆಗ ಕಲ್ಯಾಣದ ದೊರೆ ಬಿಜ್ಜಳ ಬಹಳ ಪ್ರಬಲನಾಗಿದ್ದ. ಅವನ ಆಸ್ಥಾನದಲ್ಲಿದ್ದ ಬಲದೇವ ತನ್ನ ಸೋದರಳಿಯ ಬಸವೇಶ್ವರರಿಗೆ ತನ್ನ ಮಗಳು ಗಂಗಾದೇವಿಯನ್ನು ಕೊಟ್ಟು ಮದುವೆ ಮಾಡಿದ. ಬಸವಣ್ಣನವರಿಗೆ ಆಸ್ಥಾನದಲ್ಲಿ ಉತ್ತಮವಾದ ಸ್ಥಾನ ದೊರೆಯಿತು. ಅವರು ಶ್ರದ್ಧೆಯಿಂದ ನಿಷ್ಠೆಯಿಂದ ದುಡಿದು ದಕ್ಷ ಅಧಿಕಾರಿ ಎನ್ನಿಸಿಕೊಂಡರು. ಬಲದೇವ ಕಾಲವಾದ ಮೇಲೆ ಬಿಜ್ಜಳನ ಆಸ್ಥಾನದಲ್ಲಿ ಪ್ರಧಾನಮಂತ್ರಿಯಾದರು. ಜೊತೆಗೆ ದಂಡನಾಯಕನೂ ಕೋಶಾಧಿಕಾರಿಯೂ ಆದರು. ಅವರು ಆಡಳಿತವನ್ನು ಉತ್ತಮಗೊಳಿಸಿದರು. ರಾಜ್ಯದ ಬೊಕ್ಕಸವನ್ನು ತುಂಬಿದರು. ಶಿವಭಕ್ತರಿಗೆ ನೆರವಾದರು.

ಬಸವಣ್ಣನವರು ಎಂಟುನೂರು ವರ್ಷಗಳ ಹಿಂದೆಯೇ ಜನರಲ್ಲಿ ಹೊಸ ಜಾಗೃತಿಯನ್ನು ಮೂಡಿಸುವ ಪ್ರಯತ್ನ ಮಾಡಿದರು. ಜಾತಿ ಭೇದ ತಪ್ಪು, ಹುಟ್ಟಿದ ಜಾತಿ ಮುಖ್ಯವಲ್ಲ. ಭಕ್ತಿ ಮುಖ್ಯ, ಶುಭ್ರಜೀವನ ಮುಖ್ಯ ಎಂದು ಸಾರಿದರು.

ಆ ಕಾಲದಲ್ಲಿ ಹೆಂಗಸರಿಗೆ ಹಿರಿಯಸ್ಥಾನವಿರಲಿಲ್ಲ. ಬಸವಣ್ಣನವರು ಧಾರ್ಮಿಕ ಕ್ಷೇತ್ರದಲ್ಲಿ ಮಹಿಳೆಯರಿಗೂ ಪುರುಷರಷ್ಟೇ ಹಕ್ಕು ಇದೆಯೆಂದು ಹೇಳಿದರು. ಅವರಿಗೂ ಲಿಂಗಧಾರಣೆ, ದೀಕ್ಷಾಸಂಸ್ಕಾರಗಳಿಗೆ ಅವಕಾಶ ಕೊಟ್ಟು, ಸ್ವತಂತ್ರವಾಗಿ ಪೂಜೆ ಮಾಡಲು ಸಮಾನ ಸೌಕರ್ಯಗಳನ್ನು ಕಲ್ಪಿಸಿ ಕೊಟ್ಟರು.

ಬರಿಯ ಒಣ ಆಡಂಬರದ ಭಕ್ತಿಯಿಂದ ಪ್ರಯೋಜನವಿಲ್ಲ. ಈ ಲೋಕ ಕರ್ತಾರನ ಕಮ್ಮಟ. ಕಾಯಕವೇ ಕೈಲಾಸ. ಪ್ರತಿಯೊಬ್ಬರೂ ದುಡಿಯಬೇಕು. ತಮ್ಮ ತಮ್ಮ ಕೆಲಸವನ್ನು ನಿಷ್ಠೆಯಿಂದ ಮಾಡಬೇಕು. ನಾವು ಜೀವನವನ್ನು ಹೇಗೆ ನಡೆಸುತ್ತೇವೆ ಎನ್ನುವುದು ಮುಖ್ಯ. ಏನು ಹೇಳುತ್ತೇವೆ ಎನ್ನುವುದಲ್ಲ ಎಂದು ಬಸವಣ್ಣನವರು ಸಾರಿದರು.

ಬಸವೇಶ್ವರರು ವಿನಯಮೂರ್ತಿ. 'ಎನಗಿಂತ ಕಿರಿಯರಿಲ್ಲ. ಶಿವ ಭಕ್ತರಿಗಿಂತ ಹಿರಿಯರಿಲ್ಲ'. ಎಂದು ಜನಸಾಮಾನ್ಯರ ಸೇವೆಯಲ್ಲಿ ಶಿವಭಕ್ತರ ಸೇವೆಯಲ್ಲಿ ತೊಡಗಿದ್ದನ್ನು ಕಂಡು. ಜನ ಸಾವಿರಾರು ಸಂಖ್ಯೆಯಲ್ಲಿ ಬಂದರು. ಬಸವಣ್ಣನವರನ್ನು ನಂದಿಯ ಅವತಾರವೆಂದು ಪೂಜಿಸಿದರು.

ಬಸವಣ್ಣನವರು ಹೀಗೆ ಜನಪ್ರಿಯರಾದುದನ್ನು ಕಂಡು ಆಸ್ಥಾನದಲ್ಲಿದ್ದ ಕೆಲವರು ದೊರೆಯಲ್ಲಿ ದೂರು ಹೇಳಿದರು. ರಾಜನಿಗೂ ಅಷ್ಟುಹೊತ್ತಿಗೆ ಬಸವಣ್ಣನವರ ಮೇಲಿದ್ದ ಅಭಿಮಾನ ಕಡಮೆಯಾಗುತ್ತ ಬಂದಿತ್ತು. ಇದನ್ನು ಕಂಡು ಬಸವಣ್ಣನವರು, 'ಅರಸು ಮುನಿದರೆ ನಾಡಿನೊಳಗಿರ ಬಾರದಯ್ಯಾ', ಎಂದು ಹೇಳಿ ಕಲ್ಯಾಣವನ್ನು ಬಿಟ್ಟು ತಮ್ಮ ಇಷ್ಟದೇವರಾದ ಕೂಡಲಸಂಗಮನ ಬೀಡಾದ ಕೂಡಲಸಂಗಮಕ್ಕೆ ಹೋದರು. ಅಲ್ಲಿ 1167ರ ಉತ್ತರಾರ್ಧದಲ್ಲಿ ಶಿವೈಕ್ಯರಾದರು.

ಬಸವಣ್ಣನವರು ಕಲ್ಯಾಣದಲ್ಲಿದ್ದಾಗ ಅಲ್ಲಿ ಅಲ್ಲಮಪ್ರಭು ಮೊದಲಾದ ಶಿವಭಕ್ತರ ನೆರವಿನಿಂದ ಅನುಭವ ಮಂಟಪವನ್ನು ಕಟ್ಟಿದರು. ಇಲ್ಲಿ ಶಿವಶರಣ ಶರಣೆಯರು ಸೇರಿ ಧರ್ಮದ ಬಗ್ಗೆ ವಿವೇಚನೆ ನಡೆಸುತ್ತಿದ್ದರು.

ಬಸವಣ್ಣನವರ ವಚನಗಳಲ್ಲಿ ಗಾಢವಾದ ಚಿಂತನೆ ಇದೆ. ಭಾಷೆ ಬಹು ಸರಳ. ಈ ವಚನಗಳಿಂದ ಕನ್ನಡ ಸಾಹಿತ್ಯಕ್ಕೆ ಹೊಸ ಕಸುವು ಬಂದಿತು. ಅವರು ಪ್ರತಿನಿತ್ಯದ ಜೀವನದ ಅನುಭವಗಳಿಂದ ಉಪಮಾನಗಳನ್ನು ಬಳಸಿ ತಮ್ಮ ಉಪದೇಶ ಎಲ್ಲರ ಮನಸ್ಸಿಗೆ ಸುಲಭವಾಗಿ ಮುಟ್ಟುವಂತೆ ಮಾಡಿದರು.

ತಮ್ಮ ಎಲ್ಲ ವಚನಗಳ ಕೊನೆಯಲ್ಲಿ ತಮ್ಮ ಇಷ್ಟದೇವರು 'ಕೂಡಲ ಸಂಗಮ' ಎನ್ನುವ ಹೆಸರನ್ನು ಅವರು ಸೇರಿಸಿದ್ದಾರೆ.

ಕಲ್ಯಾಣ ಬಿಜ್ಜಳನ ರಾಜ್ಯವಾಗಿದ್ದರೂ ಬಸವಕಲ್ಯಾಣವೆಂದೇ ಅದು ಪ್ರಸಿದ್ಧವಾಗಿದೆ.

ಬಸವೇಶ್ವರರ ಮುಖ್ಯ ವಚನಗಳಲ್ಲೊಂದು ಅವರ ಉಪದೇಶದ ಸಾರ ವನ್ನು ಹೇಳುತ್ತದೆ :

'ಕಳಬೇಡ, ಕೊಲಬೇಡ, ಹುಸಿಯ ನುಡಿಯಲುಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ, ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ, ಇದೇ ನಮ್ಮ ಕೂಡಲ ಸಂಗಮದೇವನನೊಲಿಸುವ ಪರಿ.'

ಜಗಜ್ಯೋತಿ ಎನ್ನಿಸಿಕೊಂಡ ಬಸವೇಶ್ವರರ ಎಂಟನೆಯ ಶತ ಮಾನೋತ್ಸವ 1968ರಲ್ಲಿ ರಾಷ್ಟ್ರದ ನಾನಾ ಕಡೆಗಳಲ್ಲಿ ವಿಜೃಂ ಭಣೆಯಿಂದ ಆಚರಿಸಲ್ಪಟ್ಟಿತು. ಆ ಸಂದರ್ಭದಲ್ಲಿ ಬಸವೇಶ್ವರರ ವಚನಗಳು ಹಲವು ಭಾಷೆಗಳಲ್ಲಿ ಪ್ರಕಟಗೊಂಡುವು.

ನೋಡಿ : ಕಲ್ಯಾಣಕ್ರಾಂತಿ

ವಿವರ : ಏಳನೆಯ ಸಂಪುಟ

## ಬಹಾಯ್

ಮಿರ್ಜಾ ಹುಸೇನ್ ಆಲಿ ನೂರಿ (ಜನನ 1817; ಟೆಹರಾನಿನಲ್ಲಿ) ಸ್ಥಾಪಿಸಿದ ಧರ್ಮ, ಬಹಾಯ್. ಈ ಧರ್ಮದ ಅನುಯಾಯಿಗಳು ಇಂದು ಇನ್ನೂರೈವತ್ತಕ್ಕೂ ಹೆಚ್ಚು ದೇಶಗಳಲ್ಲಿದ್ದಾರೆ.

1844ರ ಮೇ 23ರಂದು 'ಬಾಬ್' (ಮಹಾದ್ವಾರ) ಎಂದು ಪ್ರಸಿದ್ಧನಾದ ಸೈಯದ್ ಆಲಿ ಮುಹಮ್ಮದ್ ಎಂಬಾತ ಒಂದು ಘೋಷಣೆ ಮಾಡಿದ. ಬುದ್ಧ, ಮಹಮ್ಮದ್, ಕ್ರೈಸ್ತರಂಥ ಪ್ರವಾದಿಯೊಬ್ಬನನ್ನು ಅಲ್ಲಿಂದ ಹತ್ತೊಂಬತ್ತು ವರ್ಷಗಳಲ್ಲಿ ಭಗವಂತನು ಕಳುಹಿಸುವನೆಂದು ಸಾರಿದ. ಹಿಂದಿನ ಧರ್ಮಗಳಿಗೆ ಚೇತನಕೊಟ್ಟು, ಬರಲಿರುವ ಪ್ರವಾದಿಯ ದೂತನಾಗಲು ತಾನು ಹುಟ್ಟಿರುವೆ ಎಂದು ಹೇಳಿದ. ಸಾವಿರಾರು ಜನ ಅವನನ್ನು ಅನುಸರಿಸಿದರು. ಇದರಿಂದ ಕೋಪಗೊಂಡ ಕೆಲವರು ಅವನನ್ನು ಮರಣ ದಂಡನೆಗೆ ಗುರಿಮಾಡಿದರು (1850). ಅವನ ಅನುಯಾಯಿಗಳು ಅವನ ದೇಹವನ್ನು ಐವತ್ತು ವರ್ಷಗಳ ಕಾಲ ಬಚ್ಚಿಟ್ಟು ಅನಂತರ ಕಾರ್ಮೆಲ್ ಬೆಟ್ಟದ ಮೇಲೆ ಸಮಾಧಿ ಮಾಡಿದರು. ಈಗಲೂ ಅದು ಈ ಮತದವರಿಗೆ ಯಾತ್ರಾಸ್ಥಳ.

ಯಾರು ಆಲಿ ಮುಹಮ್ಮದ್‌ನನ್ನು ಕೊನೆಗಾಣಿಸಿದರೋ ಅವರೇ ಮುಂದೆ 1853ರಲ್ಲಿ 'ಬಹಾಉಲ್ಲಾ' (ದೇವರ ಮಹಿಮೆ) ಎಂದು ಪ್ರಸಿದ್ಧನಾದ ಮಿರ್ಜಾ ಹುಸೇನ್ ಆಲಿಯನ್ನು ಟೆಹರಾನಿನಲ್ಲಿ ನೆಲಮಾಳಿಗೆಯ ಕಾರಾಗೃಹ ದಲ್ಲಿ ಬಂಧಿಸಿಟ್ಟರು. ಅನಂತರ ಅವನನ್ನು ಬಾಗ್ದಾದಿಗೆ ಗಡಿಪಾರು ಮಾಡಲಾಯಿತು. ಅಲ್ಲಿ ಅವನ ತತ್ತ್ವಗಳು ಬಹಳವಾಗಿ ಪ್ರಚಾರವಾದುವು. ಅವನ ಕೀರ್ತಿ ಹರಡಿತು. ಶಿಷ್ಯರು ಹೆಚ್ಚಿದರು. 1863ರಲ್ಲಿ ಅವನನ್ನೂ ಅವನ ಶಿಷ್ಯರನ್ನೂ ಇಸ್ತಾಂಬೂಲ್‌ಗೆ ಗಡಿಪಾರು ಮಾಡಿದರು. 1866–67ರಲ್ಲಿ ಹುಸೇನ್ ಆಲಿ ತಾನು ವಿಶ್ವಪ್ರವಾದಿಯೆಂದೂ 'ಬಾಬ್'ನ ಭವಿಷ್ಯ ವಾಣಿ ಸತ್ಯವಾಗುವ ಕಾಲ ಬಂದಿದೆಯೆಂದೂ ಸಾರ್ವಜನಿಕವಾಗಿ ಘೋಷಿಸಿ, ಬಹಾಉಲ್ಲಾನೆಂದು ಪ್ರಸಿದ್ಧನಾದ.

ಬಹಾಉಲ್ಲಾ ತನ್ನ ಹಿರಿಯ ಮಗ ಅಬ್ದುಲ್ ಬಹಾನನ್ನು ಬಹಾಯ್ ಧರ್ಮದ ಮುಖ್ಯ ಪ್ರಚಾರಕನನ್ನಾಗಿಯೂ ಬಹಾಯ್‌ಗಳ ಮುಖ್ಯಸ್ಥನ ನ್ನಾಗಿಯೂ ನೇಮಿಸಿ 1892ರಲ್ಲಿ ಕಾಲವಾದ. ಅಬ್ದುಲ್ ಬಹಾ ಮತ್ತು ಅವನ ಮೊಮ್ಮಗ ಸೋಗಿ ಎಫೆಂದಿ ಈ ಧರ್ಮವನ್ನು ಹಲವು ದೇಶಗಳಲ್ಲಿ ಪ್ರಚಾರ ಮಾಡಿದರು. ಸೋಗಿ ಎಫೆಂದಿಯ ಅನಂತರ ಈ ಧರ್ಮದ ವಿಶ್ವ ಪ್ರಚಾರ ನಿರ್ವಹಣೆ ಮೊದಲಾದ ಕಾರ್ಯಗಳನ್ನು ಇಪ್ಪತ್ತೇಳು ಮಂದಿ ಬಹಾಯ್ ಧರ್ಮದ ಅನುಯಾಯಿಗಳು ಆರಿಸುವ ಒಂಬತ್ತು ಜನ ಪ್ರಮುಖರು ಮಾಡುತ್ತಾರೆ.



[illegible]

"ಹೀಗೆ ಅಕ್ಷರರೂಪಿಯಾದ ಪರಬ್ರಹ್ಮನನ್ನರಿಯದೆ ಈ ಲೋಕದಲ್ಲಿ ಅನೇಕ ಸಹಸ್ರ ವರ್ಷಗಳು ಯಾಗಮಾಡಿದರೂ ತಪಸ್ಸನ್ನಾಚರಿಸಿದರೂ ಅವರ ಫಲ ಭೋಗಾಂತದಲ್ಲಿ ಕ್ಷಯಿಸುವುದು. ಯಾವನು ಆ ಅಕ್ಷರನನ್ನು ತಿಳಿದು ಈ ಲೋಕವನ್ನೇ ಬಿಡುವನೋ ಅವನು ಬ್ರಹ್ಮಜ್ಞನೆನಿಸುವನು."

ಸೃಷ್ಟಿಗೆ ಮೊದಲು ಬ್ರಹ್ಮನೊಬ್ಬನೆ ಇದ್ದವನು. ಅವನು ಆಗ 'ಏಕಮೇವ ಅದ್ವಿತೀಯ' ನಾಗಿದ್ದ. ಆಗ ಬ್ರಹ್ಮ ಅನೇಕವಾಗಬೇಕೆಂದು ಅತ ಅಪೇಕ್ಷಿಸಿದ. ಹೀಗೆ ಸಂಕಲ್ಪಮಾಡಿ ತೇಜಸ್ಸನ್ನು ಸೃಷ್ಟಿಸಿದ. ಆ ತೇಜಸ್ಸು ತಾನು ಅನೇಕವಾಗಬೇಕೆಂದು ಸಂಕಲ್ಪಮಾಡಿ ಜಲವನ್ನು ಸೃಷ್ಟಿಸಿತು. ಆ ಜಲಗಳು ತಾವು ಅನೇಕವಾಗಲು ಬಯಸಿ ಅನ್ನವನ್ನು ಸೃಷ್ಟಿಸಿದುವು.

ತೇಜಸ್ಸು, ಜಲ, ಅನ್ನಗಳನ್ನು ಸೃಷ್ಟಿಸಿದ ಮೇಲೆ ಇವನ್ನು ಒಂದು ಗೂಡಿಸಿ ಅವುಗಳಲ್ಲಿ ಜೀವದೊಡನೆ ಪ್ರವೇಶಮಾಡಿ ಹಲವು ರೂಪಗಳ ಹಲವು ಹೆಸರುಗಳ ವಸ್ತುಗಳಿಂದ ತುಂಬಿದ ಜಗತ್ತನ್ನು ಬ್ರಹ್ಮ ಸೃಷ್ಟಿಸಿದ.

ಬ್ರಹ್ಮಸಂಕಲ್ಪದಿಂದ ಸೃಷ್ಟಿಯೆಂದೂ ಅವುಗಳೊಳಗೆ ಬ್ರಹ್ಮ ಅಂತಃ ಪ್ರವೇಶ ಮಾಡಿದನೆಂದೂ ಉಪನಿಷತ್ತುಗಳು ಹೇಳಿವೆ. ಛಾಂದೋಗ್ಯೋಪ ನಿಷತ್ತು 'ಸರ್ವಂ ಖಲ್ವಿದಂ ಬ್ರಹ್ಮ' ಎಂದು ನುಡಿದಿದೆ.

ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯುವುದೇ ಮಾನವ ಜೀವಿತದ ಗುರಿ ಯಾಗಬೇಕೆಂದು ಉಪನಿಷತ್ತುಗಳು ಸಾರಿವೆ.

ನೋಡಿ : ಉಪನಿಷತ್ತು

## ಬಾಗ್ದಾದ್

ಅಲ್ಲಾವುದ್ದೀನನ ಅದ್ಭುತ ದೀಪ, ಆಲಿಬಾಬ ಮತ್ತು ನಲವತ್ತು ಕಳ್ಳರು ಈ ಕಥೆಗಳನ್ನು ಎಷ್ಟು ದೇಶಗಳಲ್ಲಿ ಮಕ್ಕಳು ಕೇಳಿ ಸಂತೋಷಪಟ್ಟಿಲ್ಲ!

ಇವುಗಳ ಮೂಲ ಯಾವುದು ?

ಅರೇಬಿಯದ ರಾತ್ರಿಗಳು ಅಥವಾ ಒಂದು ಸಾವಿರದೊಂದು ರಾತ್ರಿ ಗಳು ಎನ್ನುವ ಕಥೆಗಳ ಕೋಶದಲ್ಲಿ ಈ ಕಥೆಗಳಿವೆ. ಇಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುವ ಅರಸ ಹರೂನ್ ಆಲ್ ರಷೀದ್ (766–809) ಬಾಗ್ದಾದಿನ ಪ್ರಭು. ಅಲ್ಲಾವುದ್ದೀನ್, ಆಲಿಬಾಬ, ಸಿಂದಬಾದ್ ಕಥಾವೀರರ ಬಾಗ್ದಾದ್, ಕಾಲ್ಪನಿಕ ನಗರವಲ್ಲ. ಬಾಗ್ದಾದ್ ಇರಾಕಿನ (ಹಿಂದಿನ ಮೆಸಪಟೇಮಿಯ) ರಾಜಧಾನಿ : ಪ್ರಪಂಚದ ಅತಿ ಪ್ರಾಚೀನ ನಗರಗಳಲ್ಲೊಂದು. ಇದರ ವಯಸ್ಸು ಸುಮಾರು 4,000 ವರ್ಷಗಳು !

ಶತಮಾನಗಳ ವೈಭವಕಾಲ ಕಂಡ ನಗರ ಇದು. 762ರಲ್ಲಿ ಅಲ್ ಮನ್ಸೂರ್ ಎಂಬ ಖಲೀಫನು ಇದನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡು ನಗರವನ್ನು ಪುನರ್ನಿರ್ಮಾಣ ಮಾಡಲು ಒಂದು ಲಕ್ಷ ಮಂದಿ ಶಿಲ್ಪಿಗಳು ಮತ್ತು ಕೆಲಸಗಾರರನ್ನು ನೇಮಿಸಿದ. ಈ ಕೆಲಸ ನಾಲ್ಕು ವರ್ಷ ಸಾಗಿತು. ಹತ್ತನೆಯ ಶತಮಾನದಲ್ಲಿ ಖಲೀಫನ ಅರಮನೆಯ ದ್ವಾರಪಾಲಕರ ಸಂಖ್ಯೆ 700 ಇದ್ದಿತಂತೆ. ಜರಿ ಸೇರಿಸಿದ ರೇಷ್ಮೆಯ ಪರದೆಗಳು 12,500 ಇದ್ದುವಂತೆ. ಅರಮನೆಯಲ್ಲಿ 22,000 ರತ್ನಗಂಬಳಿಗಳನ್ನು ಹಾಸಿದ್ದರಂತೆ, 18 ಕೊಂಬೆಗಳಿದ್ದ ಚಿನ್ನ ಮತ್ತು ಬೆಳ್ಳಿಯ ಮರವನ್ನು ಮಾಡಿದ್ದರಂತೆ. ಅದರಲ್ಲಿ ಚಿನ್ನ, ಬೆಳ್ಳಿಯ ಪಕ್ಷಿಗಳು ಮತ್ತು ಎಲೆಗಳು ಇದ್ದುವಂತೆ.

ಖಲೀಫ್ ಹರೂನ್ ಆಲ್ ರಷೀದ್ ಮತ್ತು ಖಲೀಫ್ ಮಮೂನರ ಕಾಲದಲ್ಲಿ ಬಾಗ್ದಾದ್ ಸ್ವರ್ಣಯುಗವನ್ನು ಕಂಡಿತು.

ಸಣ್ಣ ಹಳ್ಳಿಯಾಗಿದ್ದ ಬಾಗ್ದಾದ್ ಬಹು ಬೇಗ ಬೆಳೆಯಿತು. ತುರ್ಕಿ, ಪರ್ಷಿಯ, ಮಧ್ಯ ಏಷ್ಯ, ಪರ್ಷಿಯದ ಕೊಲ್ಲಿ, ಅರೇಬಿಯ, ಭಾರತ, ಸಿರಿಯ, ಭೂಮಧ್ಯ ಸಮುದ್ರ ಮೊದಲಾದ ರಾಷ್ಟ್ರೀಯ ವ್ಯಾಪಾರ ಮಾರ್ಗಗಳಲ್ಲಿ ಮಹತ್ವದ ಸ್ಥಳವಾಯಿತು. ಅಲ್ಲದೆ ಬಾಗ್ದಾದ್, ಇರಾಕ್ ದೇಶದ ವ್ಯಾಪಾರ ಸಂಪರ್ಕ ಹಾಗೂ ಸಂಸ್ಕೃತಿ ಕೇಂದ್ರ. ಇದು ಇರುವುದು ಮಧ್ಯ ಪ್ರಾಚ್ಯದ ಮಧ್ಯದಲ್ಲಿ, ಟೈಗ್ರಿಸ್—ಯೂಫ್ರೇಟಿಸ್ ಕಣಿವೆಯಲ್ಲಿ.

ಬಾಗ್ದಾದ್ ಎಂದರೆ, ಪರ್ಷಿಯನ್ ಭಾಷೆಯಲ್ಲಿ 'ದೇವರು ಕೊಟ್ಟ ವರ'. ಜನಸಂಖ್ಯೆ ಸುಮಾರು 10,07,605 (1965ರಲ್ಲಿ).

ಟೈಗ್ರಿಸ್ ನದಿ ಬಾಗ್ದಾದಿನ ಮಧ್ಯದಲ್ಲಿ ಹರಿಯುತ್ತದೆ. ನದಿಯ ಪೂರ್ವಕ್ಕಿರುವ ಭಾಗ ಪ್ರಾಚೀನವಾದದ್ದು, ಹೆಚ್ಚು ವಿಸ್ತಾರವಾದದ್ದು. ವಾಹನಗಳ ಮೂರು ಸೇತುವೆ ಮತ್ತು ಒಂದು ರೈಲು ಸೇತುವೆ ನಗರದ ಎರಡು ಭಾಗಗಳಿಗೆ ಸಂಪರ್ಕ ಕಲ್ಪಿಸಿವೆ.

1200ರಿಂದ 1900ರವರೆಗೂ ಬಾಗ್ದಾದ್ ಹಲವು ದಾಳಿಗಳಿಗೆ ತುತ್ತಾಯಿತು.

ಮೊದಲನೆಯ ಮಹಾಯುದ್ಧವಾದ ಮೇಲೆ ಇರಾಕ್ ಒಂದು ಪ್ರತ್ಯೇಕ ರಾಷ್ಟ್ರವಾಗಿ, ಬಾಗ್ದಾದ್ ಅದರ ರಾಜಧಾನಿಯಾಯಿತು.

ಬಾಗ್ದಾದಿನಲ್ಲಿ ರೈಲು ನಿಲ್ದಾಣ, ಅಂತರರಾಷ್ಟ್ರೀಯ ವಿಮಾನ ನಿಲ್ದಾಣ, ಐದು ಚಾರಿತ್ರಿಕ ಸಂಗ್ರಹಾಲಯಗಳು, ಒಂದು ಪ್ರಕೃತಿವಿಜ್ಞಾನದ ಸಂಗ್ರಹಾಲಯ ಇವೆ. ಸ್ವರ್ಣಯುಗದ ಕೆಲವೊಂದು ಅವಶೇಷಗಳೂ ಇಲ್ಲಿವೆ. ಬಾಗ್ದಾದಿನಲ್ಲಿರುವ ಎರಡು ವಿಶ್ವವಿದ್ಯಾನಿಲಯಗಳಲ್ಲಿ ಹತ್ತು ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳಿದ್ದಾರೆ.

ಮಹಮ್ಮದ್ ಪೈಗಂಬರರ ನಿಜವಾದ ಉತ್ತರಾಧಿಕಾರಿಗಳೆಂದು ಪರಿಗಣಿತರಾದ ಮೂಸ್–ಅಲ್–ಕದಿಮ್ ಮತ್ತು ಮಹಮ್ಮದ್ ಅಲ್–ಜವಾದ್ ಇವರ ಗೋರಿಗಳು ಬಾಗ್ದಾದಿನಲ್ಲಿವೆ. ಇಸ್ಲಾಂ ಧರ್ಮದ ಒಂದು ಪ್ರಮುಖ ಶಾಖೆಯಾದ ಷಿಯಾ (ಷೀಯತ್ ಆಲಿ–ಆಲಿಯ ಪಕ್ಷ) ಮುಸಲ್ಮಾನರಿಗೆ ಯಾತ್ರಾಸ್ಥಳ ಈ ನಗರ. ಚರ್ಮ, ರೇಷ್ಮೆ, ತಂಬಾಕು ಮುಂತಾದ ಇರಾಕಿನ ಅನೇಕ ಕೈಗಾರಿಕೆಗಳು ಬಾಗ್ದಾದಿನಲ್ಲಿವೆ.

ಜಗತ್ತಿನ ಚರಿತ್ರೆಯಲ್ಲಿ ಬಾಗ್ದಾದಿಗೆ ಒಂದು ಗಣನೀಯ ಸ್ಥಾನ ಉಂಟು. ಅದು ರಾಜಧಾನಿಯಾದ ಎಪ್ಪತ್ತೈದು ವರ್ಷಗಳಲ್ಲಿ ಅಲ್ಲಿನ ವಿದ್ವಾಂಸರು ಗ್ರೀಸ್, ಪರ್ಷಿಯ ಮತ್ತು ಭಾರತಗಳ ಹಲವು ಗ್ರಂಥಗಳನ್ನು ಭಾಷಾಂತರಿಸಿದರು. ಗ್ರೀಕ್ ಸಾಹಿತ್ಯವನ್ನೂ, ಭಾರತದ ವೈಜ್ಞಾನಿಕ ವಿಚಾರವನ್ನೂ ಉಳಿಸಿಕೊಂಡವರು ಅರಬರು.

ಪೂರ್ವ-ಪಶ್ಚಿಮಗಳ ವಿಚಾರವಾಹಿನಿಗಳ ಸಂಗಮ ಬಾಗ್ದಾದ್.

## ಬಾಲಕಾರ್ಮಿಕರು

ಇಪ್ಪತ್ತನೆಯ ಶತಮಾನದಲ್ಲಿ ಮಕ್ಕಳು ಎಂದೊಡನೆ, ಯಾವ ಆತಂಕವೂ ಇಲ್ಲದೆ ಸಂತಸದಿಂದ ಕುಣಿಯುತ್ತ, ನಲಿಯುತ್ತ, ಆಟವಾಡುತ್ತಿರುವ ಎಳೆಯರ ಚಿತ್ರ ಕಣ್ಣುಮುಂದೆ ಸುಳಿಯುತ್ತದೆ. ಆದರೆ ಹದಿನೆಂಟು, ಹತ್ತೊಂಬತ್ತನೆಯ ಶತಮಾನಗಳಲ್ಲಿ ಪಾಶ್ಚಾತ್ಯ ದೇಶಗಳ ಹಲವು ಮಕ್ಕಳಿಗೆ ಆಟ, ಕುಣಿತ, ನಲಿವುಗಳ ಭಾಗ್ಯ ಇರಲಿಲ್ಲ. ಎಳೆಯವಯಸ್ಸಿನಲ್ಲೇ ಇವರು ಬೆಳಗಿನಿಂದ ಸಂಜೆಯವರೆಗೆ ಗಾಣದೆತ್ತಿನಂತೆ ದುಡಿದು ಬಾಡುತ್ತಿದ್ದರು.

# ಪ್ರಪಂಚದ ವಿವಿಧ ರಾಷ್ಟ್ರಗಳ ಬಾವುಟಗಳು


ಭಾರತ


ನೇಪಾಳ


ಸಿಂಹಳ


ಬರ್ಮ


ಪಾಕಿಸ್ತಾನ


ಅಫ್ಘಾನಿಸ್ತಾನ


ಜಪಾನ್


ಇಂಡೊನೇಷ್ಯ


ಮಲೇಷ್ಯ


ಥೈಲೆಂಡ್


ಲಾವೋಸ್


ಕಾಂಬೋಡಿಯ


ಐಕ್ಯ ಅರಬ್ ಗಣರಾಜ್ಯ


ಇರಾಕ್


ಸಿರಿಯ


ಇರಾನ್


ತುರ್ಕಿ


ಇಸ್ರೇಲ್


ಸೋವಿಯೆತ್ ಒಕ್ಕೂಟ


ಚೆಕೊಸ್ಲೊವಾಕಿಯ


ಹಂಗೆರಿ


ರುಮೇನಿಯ


ಬಲ್ಗೇರಿಯ


ಪೋಲೆಂಡ್


ಇಂಗ್ಲೆಂಡ್


ಐರ್ಲೆಂಡ್


ಫ್ರಾನ್ಸ್


ಇಟಲಿ


ಸ್ವೀಡನ್


ನಾರ್ವೆ


ನೆದರ್‌ಲೆಂಡ್ಸ್


ಡೆನ್ಮಾರ್ಕ್


ಐಸ್‌ಲೆಂಡ್


ಸ್ಪೇನ್


ಪೋರ್ಚುಗಲ್


ಯುಗೊಸ್ಲಾವಿಯ


ಅಮೆರಿಕ ಸಂಯುಕ್ತ ಸಂಸ್ಥಾನ


ಕೆನಡ


ಕ್ಯೂಬ


ಆಸ್ಟ್ರೇಲಿಯ


ಗ್ರೀಸ್


ಸ್ವಿಟ್ಜರ್‌ಲೆಂಡ್


ಕೇಂದ್ರ ಆಫ್ರಿಕ ಗಣರಾಜ್ಯ


ಕೀನ್ಯ


ಜಾಂಬಿಯ


ಘಾನ


ದಕ್ಷಿಣ ಆಫ್ರಿಕ


ಇಥಿಯೋಪಿಯ


ಬ್ರೆಜಿಲ್


ಚಿಲಿ


ಅರ್ಜೆಂಟೀನ


ಮೆಕ್ಸಿಕೊ


ಉರುಗ್ವೆ


ಚೀನ

ಆ ಅವಧಿಯಲ್ಲಿ ಪಾಶ್ಚಾತ್ಯ ದೇಶಗಳಲ್ಲಿ ಬಡಮನೆತನದ ಐದು-ಆರು ವರ್ಷದ ಮಕ್ಕಳು ಬಹಳ ದುಡಿಯಬೇಕಾಗಿತ್ತು. 1815ರಲ್ಲಿ ಅಮೆರಿಕದ ಬಾಲಕಾರ್ಮಿಕರು ಬೆಳಗಿನಿಂದ ಸಂಜೆಯವರೆಗೆ ದಿನವೂ ದುಡಿದರೆ ಆರು ದಿನಗಳಿಗೆ ಒಂದು ಡಾಲರ್ ದೊರೆಯುತ್ತಿತ್ತು. ರೋಡ್ ನಡುಗಡ್ಡೆಯ ಪಾಟ್‌ಕೆಟ್‌ನಲ್ಲಿ ಹತ್ತಿ ಗಿರಣಿ ಆರಂಭವಾದ ಅನಂತರ 1801ರಲ್ಲಿ ಸುಮಾರು ನೂರು ಬಾಲಕಾರ್ಮಿಕರು ಕೆಲಸ ಮಾಡುತ್ತಿದ್ದರು. 1832ರಲ್ಲಿ ಇಂಗ್ಲೆಂಡಿನಲ್ಲಂತೂ ಗಿರಣಿಯ ಕಾರ್ಮಿಕರಲ್ಲಿ ಐವರಲ್ಲಿ ಇಬ್ಬರು ಬಾಲಕಾರ್ಮಿಕರೇ ಇರುತ್ತಿದ್ದರು. ಕೆಲವು ಮಕ್ಕಳು ಹದಿನೆಂಟು ಘಂಟೆಗಳ ಕಾಲ ಕೊಳಕು ಕಟ್ಟಡಗಳ ಉಸಿರುಗಟ್ಟುವಂಥ ಕತ್ತಲ ಕೋಣೆಗಳಲ್ಲಿ ಕೆಲಸ ಮಾಡುತ್ತಿದ್ದರು. ದುಡಿಯುತ್ತಿದ್ದ ಪರಿಸರದಂತೆಯೇ ಅವರು ಮಾಡುತ್ತಿದ್ದ ಕೆಲಸಗಳೂ ಕಠಿಣತರ. ಗಣಿಗಳಲ್ಲಿ, ಹತ್ತಿಗಿರಣಿಗಳಲ್ಲಿ, ಕಾರಖಾನೆಗಳಲ್ಲಿ, ಈ ದುಡಿಮೆ. ಕಲ್ಲಿದ್ದಲ ಗಣಿಗಳಲ್ಲಿ, ಭೂಗರ್ಭ ಸುರಂಗಮಾರ್ಗಗಳ ಕಾರ್ಗತ್ತಲಿನಲ್ಲಿ ತೆವಳಿ, ಕಲ್ಲಿದ್ದಲ ಬುಟ್ಟಿಯನ್ನು ಎಳೆಯಬೇಕಾಗುತ್ತಿತ್ತು. ಹತ್ತಿ ಗಿರಣಿಗಳಲ್ಲಿ ಮಕ್ಕಳನ್ನು ಮಗ್ಗಗಳಿಗೆ ಕಟ್ಟಿಹಾಕಿ ದಿನಕ್ಕೆ ಹದಿನೈದು ಘಂಟೆಗಳ ಕಾಲ ದುಡಿಸುತ್ತಿದ್ದುದೂ ಉಂಟು. ಕಾರಖಾನೆಯಲ್ಲಿ ಎತ್ತರವಾದ ಹೊಗೆ ಕೊಳವೆಯ ಮೇಲೆ ಮಕ್ಕಳು ಹತ್ತಿ ಅನಂತರ ಅದರೊಳಗೆ ಇಳಿದು ಅದನ್ನು ಒರೆಸಬೇಕಾಗುತ್ತಿತ್ತು.

ಬಿಡುವಿಲ್ಲದ ಈ ದುಡಿಮೆ ಎಳೆಯರನ್ನು ದುರ್ಬಲಗೊಳಿಸಿತು. ಮಕ್ಕಳು ರೋಗಿಷ್ಠರಾದರು. ಕಾರಖಾನೆಗಳ ಸಂಖ್ಯೆ ಜಾಸ್ತಿಯಾದಂತೆ ಬಾಲಕಾರ್ಮಿಕರ ಸಂಖ್ಯೆಯೂ ಹೆಚ್ಚಿತು. ದುರಾಸೆಯ ಮಾಲಿಕರು ಮಕ್ಕಳನ್ನು ಶಕ್ತಿಮೀರಿ ದುಡಿಸಲಾರಂಭಿಸಿದರು. ಕೆಲಸದ ಅವಧಿ ಹೆಚ್ಚಾಯಿತು. ಕೆಲಸದ ವೇಳೆಯಲ್ಲಿ ಅಪ್ಪಿತಪ್ಪಿ ಮಕ್ಕಳು ಕ್ಷಣಕಾಲ ಸುಮ್ಮನಿದ್ದರೂ ಕ್ರೂರ ಶಿಕ್ಷೆ ವಿಧಿಸಲಾಗುತ್ತಿತ್ತು.

ಬಾಲಕಾರ್ಮಿಕರ ಈ ಸ್ಥಿತಿಗೆ ಕಾರಣ ಆಗಿನ ಸರಕಾರಗಳ ಧೋರಣೆ. ಇದಕ್ಕೆ 'ಲೇಸೇ-ಫೇರ್' (ಕೈ ಹಾಕಬೇಡಿ) ಎಂದು ಹೆಸರು. ಕೆಲಸಕ್ಕೆ ನೇಮಿಸಿಕೊಳ್ಳುವ ಮಾಲಿಕನಿಗೂ ಕೆಲಸಗಾರನಿಗೂ ಸಮಾನ ಸ್ವಾತಂತ್ರ್ಯವಿದೆ; ಕೆಲಸಗಾರನ ಷರತ್ತುಗಳು ಮಾಲಿಕನಿಗೆ ಒಪ್ಪಿಗೆಯಾಗದಿದ್ದರೆ ಅವನು ಅವನನ್ನು ನೇಮಿಸಿಕೊಳ್ಳಬೇಕಾಗಿಲ್ಲ. ಮಾಲಿಕನ ಷರತ್ತುಗಳು ಕೆಲಸಗಾರನಿಗೆ ಒಪ್ಪಿಗೆಯಾಗದಿದ್ದರೆ ಅವನು ಕೆಲಸವನ್ನು ಒಪ್ಪಿಕೊಳ್ಳಬೇಕಾಗಿಲ್ಲ. ಆದ್ದರಿಂದ ಈ ವಿಷಯದಲ್ಲಿ ಸರಕಾರ ಕೈಹಾಕಬಾರದು ಎಂಬುದು ಈ ಧೋರಣೆ. ಆದರೆ ಹೊಟ್ಟೆಗಿಲ್ಲದ ಕೆಲಸಗಾರ, ಮಾಲಿಕ ಯಾವ ಷರತ್ತುಗಳನ್ನು ಹಾಕಿದರೂ ಒಪ್ಪಲೇಬೇಕಾಗುತ್ತಿತ್ತು.

ಬಾಲಕಾರ್ಮಿಕರನ್ನು ಈ ಕ್ರೂರ ಶ್ರಮದಿಂದ ಬಿಡಿಸುವ ಪ್ರಯತ್ನ ಮೊದಲು ನಡೆದದ್ದು ಬ್ರಿಟನಿನಲ್ಲಿ. ಜನಪ್ರಮುಖರನೇಕರ ಸತತ ಹೋರಾಟದಿಂದ ನಿಧಾನವಾಗಿ ಬಾಲಕಾರ್ಮಿಕರ ಕೆಲಸದ ಪರಿಸ್ಥಿತಿಗಳಲ್ಲಿ ಸುಧಾರಣೆ ಕಂಡುಬಂದಿತು. ಬ್ರಿಟನ್ ಕೆಲವು ಕಾನೂನು ಕಾಯಿದೆಗಳನ್ನು ರೂಪಿಸಿತು. ಮೊದಲನೆಯ ಬಾಲಕಾರ್ಮಿಕ ಕಾಯಿದೆ 1802ರಲ್ಲಿ ಜಾರಿಗೆ ಬಂದಿತು. ಕೆಲಸದ ಅವಧಿಯನ್ನು ದಿನಕ್ಕೆ ಹನ್ನೆರಡು ಗಂಟೆಗಳ ಕಾಲ ಎಂದು ನಿಗದಿಮಾಡಿ ರಾತ್ರಿ ಕೆಲಸವನ್ನು ನಿಷೇಧಿಸಲಾಯಿತು. 1809ರ ಶಾಸನದಲ್ಲಿ ಒಂಬತ್ತು ವರ್ಷಕ್ಕೆ ಕೆಳಗಿರುವ ಮಕ್ಕಳನ್ನು ಹತ್ತಿ ಗಿರಣಿಗಳಿಗೆ ಸೇರಿಸಿಕೊಳ್ಳಬಾರದೆಂದು ಆಜ್ಞೆಯಾಯಿತು. ಇಲ್ಲಿಂದ ಮುಂದೆ ಹಲವು ಶಾಸನಗಳು ಬಾಲಕಾರ್ಮಿಕರ ಕೆಲಸದ ಅವಧಿಯನ್ನು ಇಳಿಸಿದುವು. ಅವರ ವಿದ್ಯಾಭ್ಯಾಸಕ್ಕೆ ಅನುಕೂಲ ಮಾಡಿಕೊಟ್ಟುವು. ಕಾರಖಾನೆಗಳಲ್ಲಿ ಕಾಯಿದೆಗಳನ್ನು ಪಾಲಿಸುವ ರೀತಿಯನ್ನು ಪರೀಕ್ಷಿಸಲು ವ್ಯವಸ್ಥೆಯಾಯಿತು.

ಉಳಿದ ಕೈಗಾರಿಕಾ ರಾಷ್ಟ್ರಗಳೂ ಬಾಲಕಾರ್ಮಿಕರ ಕೆಲಸದ ಪರಿಸ್ಥಿತಿಯಲ್ಲಿ ಸುಧಾರಣೆಗಳನ್ನು ಮಾಡಲಾರಂಭಿಸಿದುವು. 1919ರಲ್ಲಿ ಇದಕ್ಕಾಗಿಯೇ ಒಂದು ಅಂತರರಾಷ್ಟ್ರೀಯ ಕಾರ್ಮಿಕ ಸಂಘ ಸ್ಥಾಪಿತವಾಯಿತು. ಎಲ್ಲ ರಾಷ್ಟ್ರಗಳಲ್ಲಿಯೂ ಬಾಲಕಾರ್ಮಿಕರ ದುಡಿಮೆಯ ಪರಿಸ್ಥಿತಿಯನ್ನು ಉತ್ತಮಗೊಳಿಸುವುದು ಈ ಸಂಸ್ಥೆಯ ಗುರಿ.

## ಬಾಲ್ಟಿಕ್ ಸಮುದ್ರ

1,609 ಕಿ. ಮೀ. ಉದ್ದವಿರುವ ಉತ್ತರ ಯೂರೋಪಿನ ಈ ಸಮುದ್ರ ಪ್ರಪಂಚದ ಸಮುದ್ರಗಳಲ್ಲೆಲ್ಲ ಅತ್ಯಂತ ಕಡಮೆ ಆಳವುಳ್ಳದ್ದು. ಡೆನ್ಮಾರ್ಕ್, ಸ್ವೀಡನ್, ಫಿನ್‌ಲೆಂಡ್, ಪೋಲೆಂಡ್, ಜರ್ಮನಿ, ಸೋವಿಯೆತ್ ಒಕ್ಕೂಟ ಮತ್ತು ಸೋವಿಯೆತ್ ಗಣರಾಜ್ಯಗಳಾದ ಎಸ್ಟೋನಿಯ, ಲಾಟ್ವಿಯ ಮತ್ತು ಲಿಥುವೆನಿಯ ದೇಶಗಳ ಅಂಚನ್ನು ತಾಗಿಕೊಂಡಿದೆ. ಈ ಸಮುದ್ರದ ವಿಸ್ತೀರ್ಣ 4,11,400 ಚದರ ಕಿಲೊಮೀಟರು.

ಬಾಲ್ಟಿಕ್ ಸಮುದ್ರದಲ್ಲಿ ಮೂರು ಮುಖ್ಯ ಕೊಲ್ಲಿಗಳಿವೆ. ಉತ್ತರದಲ್ಲಿ ಸ್ವೀಡನ್ ಮತ್ತು ಫಿನ್‌ಲೆಂಡ್‌ಗಳ ನಡುವೆ ವಿಸ್ತಾರವಾದ ಬಾತ್ನಿಯ ಕೊಲ್ಲಿ; ಪೂರ್ವದಲ್ಲಿ ಫಿನ್‌ಲೆಂಡ್ ಮತ್ತು ಎಸ್ಟೋನಿಯಗಳ ನಡುವೆ ಇರುವ ಫಿನ್‌ಲೆಂಡ್ ಕೊಲ್ಲಿ ಮತ್ತು ರಷ್ಯದ ಲೆನಿನ್‌ಗ್ರಾಡ್ ಪಟ್ಟಣದ ಬಳಿ ಸೇರುವ ರೀಗ್ ಕೊಲ್ಲಿ. ಈ ಎಲ್ಲ ಕೊಲ್ಲಿಗಳ ಸಂಗಮ ಬಾಲ್ಟಿಕ್ ಜಲ ಸಮುದಾಯ.

ಬಾಲ್ಟಿಕ್ ಸಮುದ್ರದಲ್ಲಿ ಅನೇಕ ದ್ವೀಪಗಳೂ ಮರಳುದಿಂಡೆಗಳೂ ಇವೆ. 250ಕ್ಕೂ ಹೆಚ್ಚು ನದಿಗಳು ಈ ಸಮುದ್ರವನ್ನು ಸೇರುತ್ತವೆ. ಗಾಳಿ ಮಳೆಗಳ ಕಾಟವೂ ಬಹಳ. ಆಳವೂ ಕಡಮೆ. ಈ ಎಲ್ಲ ಕಾರಣಗಳಿಂದ ಹಡಗುಗಳನ್ನು ನಡೆಸುವುದು ಕಷ್ಟ. ಉತ್ತರದಲ್ಲಿ ಆರು ತಿಂಗಳ ಕಾಲ, ದಕ್ಷಿಣದಲ್ಲಿ ಎರಡು ತಿಂಗಳ ಕಾಲ ನೀರು ಹೆಪ್ಪುಗಟ್ಟಿರುತ್ತದೆ. ಸಮುದ್ರದ ನೀರಿನಲ್ಲಿ ಸಾಮಾನ್ಯವಾಗಿ ಇರುವುದರ ಕಾಲುಭಾಗದಷ್ಟೇ ಉಪ್ಪು ಈ ನೀರಿನಲ್ಲಿರುವುದು ಇದಕ್ಕೆ ಕಾರಣ. ಇದರಿಂದ ವ್ಯಾಪಾರಕ್ಕೆ ಅನುಕೂಲವಿಲ್ಲ. ಆದರೂ ಮಂಜುಗಡ್ಡೆಯನ್ನು ಕೊರೆದು ಮುಂದೆ ನುಗ್ಗುವ ವಿಶೇಷ ಹಡಗುಗಳ ಮೂಲಕ ವ್ಯಾಪಾರ ನಡೆಸುತ್ತಾರೆ.

ಹೆಲ್ಸಿಂಕಿ (ಫಿನ್‌ಲೆಂಡ್), ಕೋಪನ್ ಹೇಗನ್ (ಡೆನ್ಮಾರ್ಕ್), ಸ್ಟಾಕ್‌ಹೋಮ್ (ಸ್ವೀಡನ್), ಲೆನಿನ್‌ಗ್ರಾಡ್ ಮತ್ತು ರೀಗ್ (ಸೋವಿಯೆತ್ ಒಕ್ಕೂಟ), ಸ್ಟೆಟಿನ್ (ಪೋಲೆಂಡ್) ಮತ್ತು ಕೈಲ್ (ಜರ್ಮನಿ) ಇವು ಮುಖ್ಯ ಬಂದರುಗಳು.

ಎರಡನೆಯ ಮಹಾಯುದ್ಧದ ಕಾಲದಿಂದ ಬಾಲ್ಟಿಕ್ ಸಮುದ್ರ ಸೋವಿಯೆತ್ ದೇಶದ ಅಧೀನ ಪ್ರಭಾವದಲ್ಲಿದೆ. ರಷ್ಯದ ಹಡಗುಗಳು ಈ ಮಾರ್ಗವಾಗಿ ಅಟ್ಲಾಂಟಿಕ್ ಸಾಗರ ಸೇರುತ್ತವೆ.

## ಬಾವುಟ

ಕೇಸರಿ, ಬಿಳುಪು, ಹಸಿರು, ನಡುವೆ ಧರ್ಮಚಕ್ರ—ಈ ಬಾವುಟವನ್ನು ನೋಡಿದರೆ ಹರ್ಷವಾಗುತ್ತದೆ. ಅದು ನಮ್ಮ ರಾಷ್ಟ್ರಧ್ವಜ: ನಾವು ಸ್ವತಂತ್ರರೆಂದು ನೆನಪುಕೊಡುವ, ಸಾರುವ ಧ್ವಜ.

ಕೇಸರಿ ಬಣ್ಣ ನಿಸ್ವಾರ್ಥತೆ ಮತ್ತು ತ್ಯಾಗ ಸೂಚಕ: ಬಿಳಿ ಬಣ್ಣ ಪರಿಶುದ್ಧತೆಯ ದ್ಯೋತಕ: ಹಸಿರು ಸಮೃದ್ಧಿಯ ಪ್ರತೀಕ: ಅಶೋಕ ಚಕ್ರ ಧರ್ಮದ ಸಂಕೇತ.

ಪ್ರತಿಯೊಂದು ಸ್ವತಂತ್ರ ರಾಷ್ಟ್ರಕ್ಕೂ ತನ್ನದೇ ಆದ ಬಾವುಟವಿದೆ.

ಬಾವುಟಗಳ ಪ್ರಸ್ತಾಪವನ್ನು ರಾಮಾಯಣ, ಮಹಾಭಾರತಗಳಲ್ಲಿ ಕಾಣಬಹುದು. ರಾಮ ಲಕ್ಷ್ಮಣರು ಕಾಡಿನಲ್ಲಿದ್ದಾಗ, ದೂರದ ಬಾವುಟವನ್ನು ಕಂಡೇ ಅಯೋಧ್ಯೆಯ ಸೈನ್ಯ ಬರುತ್ತಿದೆ ಎಂದು ಅರಿತರು. ಅರ್ಜುನನ ಧ್ವಜದಲ್ಲಿ ಆಂಜನೇಯನಿದ್ದ ಎಂದು ಕಥೆಯಲ್ಲಿ ಹೇಳುತ್ತಾರೆ.

ಸಾವಿರಾರು ವರ್ಷಗಳ ಹಿಂದೆ ಯೋಧರು ಮತ್ತು ಬೇಟೆಗಾರರು ತಾವು ಯಾರೆಂಬುದನ್ನು ತಿಳಿಸುವುದಕ್ಕಾಗಿ ಏನಾದರೂ ಸಂಕೇತವನ್ನು ಹಿಡಿದು ಕೊಂಡು ಹೋಗುತ್ತಿದ್ದರು. ಕೋಲಿನ ತುದಿಗೆ ಯಾವುದಾದರೂ ಪ್ರಾಣಿಯ ಚರ್ಮವನ್ನು ಅಥವಾ ಗರಿಯನ್ನು ಕಟ್ಟಿರುತ್ತಿದ್ದರು. ಇದನ್ನು ನೋಡಿಯೇ, ಬರುತ್ತಿರುವವರು ಮಿತ್ರರೇ ಅಥವಾ ಶತ್ರುಗಳೇ ಎಂಬುದನ್ನು ಅರಿತುಕೊಳ್ಳಬಹುದಾಗಿತ್ತು.

ಈಜಿಪ್ಟಿನ ಸೈನಿಕರು ಲೋಹದಲ್ಲಿ ಕೆತ್ತಿದ ಪ್ರಾಣಿಯ ಅಥವಾ ಪಕ್ಷಿಯ ವಿಗ್ರಹವನ್ನು ಕೋಲಿಗೆ ಹಾಕಿಕೊಂಡಿರುತ್ತಿದ್ದರು. ಸೈನ್ಯದ ಪ್ರತಿ ಭಾಗಕ್ಕೂ ಬೇರೆ ಧ್ವಜ. ಇದರಿಂದ ನಾಯಕರು ದಳದ ವಿವಿಧ ಭಾಗಗಳನ್ನು ಸುಲಭವಾಗಿ ಗುರುತಿಸಬಹುದಾಗಿತ್ತು. ಯೂರೋಪಿಯನರು ಲೋಹದ ವಿಗ್ರಹವನ್ನು ಬಳಸುತ್ತಿದ್ದ ಕಾಲದಲ್ಲಿ ಚೀನೀಯರು ಬಟ್ಟೆಯಲ್ಲಿ ಬಾವುಟ ಮಾಡಿಕೊಂಡಿದ್ದರು. ಚಾರಿತ್ರಿಕವಾಗಿ ಮೊದಲನೆಯ ಬಟ್ಟೆಯ ಬಾವುಟ ಸುಮಾರು ಕ್ರಿಸ್ತ ಪೂರ್ವ 1100ರಲ್ಲಿದ್ದಿರಬಹುದೆಂದು ಊಹಿಸಲಾಗಿದೆ. ಫ್ರಾನ್ಸಿನ ಮಹಾಕ್ರಾಂತಿಯಲ್ಲಿ ತ್ರಿವರ್ಣ (ನೀಲಿ, ಬಿಳಿ, ಕೆಂಪು) ಧ್ವಜವನ್ನು ಉಪಯೋಗಿಸಲಾಯಿತು. ಪ್ರಪಂಚದ ಅತಿ ಹಳೆಯ ಬಾವುಟಗಳಲ್ಲಿ ಒಂದು ಡೆನ್ಮಾರ್ಕಿನ ಧ್ವಜ (ಕೆಂಪು ಹಿನ್ನೆಲೆಯ ಮೇಲೆ ಬಿಳಿ ಶಿಲುಬೆ). ಈ ಬಾವುಟವನ್ನು 1219ರಲ್ಲಿ ಮೊದಲು ಬಳಸಿದರು.

ಒಂದು ರಾಷ್ಟ್ರದ ಧ್ವಜ ಅದರ ಸ್ವಾತಂತ್ರ್ಯದ ಗುರುತು ಮತ್ತು ಸಂಕೇತ. ಆದ್ದರಿಂದ ಅದಕ್ಕೆ ಬಹು ಹೆಚ್ಚಿನ ಗೌರವ ಸಲ್ಲುತ್ತದೆ. ಎಂಥ ಸಂದರ್ಭದಲ್ಲಿಯೇ ಆಗಲಿ ಅದರ ಘನತೆಯನ್ನು ರಕ್ಷಿಸುತ್ತಾರೆ. ರಾಷ್ಟ್ರ ಧ್ವಜದ ಬಳಕೆಗೆ ಗೊತ್ತಾಗಿರುವ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಾರೆ. ಧ್ವಜ ಕೊಳೆಯಾಗಿರಬಾರದು, ಹರಿದಿರಬಾರದು. ರಾಷ್ಟ್ರಧ್ವಜದ ಎತ್ತರಕ್ಕೆ ಬೇರಾವ ಧ್ವಜವನ್ನೂ ಹಾರಿಸಬಾರದು. ಧ್ವಜ ನೆಲವನ್ನು ತಗಲಬಾರದು. ಅದನ್ನು ಮಡಿಸುವಾಗ ಇಬ್ಬರು ಹಿಡಿದುಕೊಂಡು ಮಡಿಸಬೇಕು. ಅದನ್ನು ಸ್ತಂಭದ ಮೇಲ್ಭಾಗದಲ್ಲಿ ಹಾರಿಸಬೇಕು. ರಾಷ್ಟ್ರದ ಹಿರಿಯರು ತೀರಿಕೊಂಡಾಗ ಅಥವಾ ಇತರ ಶೋಕ ಸಂದರ್ಭಗಳಲ್ಲಿ ಮಾತ್ರ ಧ್ವಜ ಅರ್ಧಮಟ್ಟದಲ್ಲಿರಬಹುದು. ರಾಷ್ಟ್ರಧ್ವಜವನ್ನು ಆರೋಹಣಕ್ಕಷ್ಟೇ ಬಳಸಬೇಕಲ್ಲದೆ ಬೇರೆ ಉದ್ದೇಶಗಳಿಗೆ ಬಳಸಬಾರದು. ಅದರ ಮಾದರಿಯನ್ನು ಬರಿಯ ಅಲಂಕಾರಕ್ಕಾಗಿ ಉಪಯೋಗಿಸಬಾರದು. ಒಂದಕ್ಕಿಂತ ಹೆಚ್ಚು ರಾಷ್ಟ್ರಗಳ ಧ್ವಜವನ್ನು ಒಂದೇ ಸ್ತಂಭದಿಂದ ಹಾರಿಸಬಾರದು. ಧ್ವಜವನ್ನು ಹಿಡಿದು ನಡೆಯುವಾಗ ಬಲಗೈಯಲ್ಲಿ ಹಿಡಿಯಬೇಕು. ಧ್ವಜವನ್ನು ಏರಿಸುವಾಗ ಮತ್ತು ಇಳಿಸುವಾಗ ಅನುಸರಿಸಬೇಕಾದ ಕ್ರಮ ಚಾಚೂ ಮೀರಬಾರದು. ಧ್ವಜದ ಮೇಲ್ಭಾಗ ಯಾವುದು ಎಂಬುದನ್ನು ನೆನಪಿಟ್ಟು ಎಚ್ಚರಿಕೆಯಿಂದ ಹಾರಿಸಬೇಕು.

ಬಾವುಟ ಜನತೆಯಲ್ಲಿ ರಾಷ್ಟ್ರೀಯ ಭಾವನೆಯನ್ನು, ಐಕ್ಯವನ್ನು ಪ್ರಚೋದಿಸುತ್ತದೆ: ದೇಶಾಭಿಮಾನವನ್ನು ಬೆಳೆಸುತ್ತದೆ. ರಾಷ್ಟ್ರಕ್ಕಾಗಿ, ಅದರ ರಕ್ಷಣೆಗಾಗಿ ದುಡಿಯಬೇಕು, ದೇಶ ಸೇವೆಗಾಗಿ ನಮ್ಮ ಜೀವ ತ್ಯಾಗಮಾಡಬೇಕು ಎಂಬ ನೆನಪಿಗೆ ಬಾವುಟ ಸದಾ ಪ್ರೇರಕವಾಗಿರುತ್ತದೆ. ಅಂತೆಯೇ ಬಾವುಟಗಳಿಗೆ ಜನತೆ ವಂದಿಸುತ್ತದೆ: ಅವನ್ನು ಗೌರವಿಸುತ್ತದೆ.

ವಿಶ್ವಸಂಸ್ಥೆಯ ಕಟ್ಟಡದ ಮುಂದೆ ಸದಸ್ಯತ್ವ ಪಡೆದ ಪ್ರಪಂಚದ ಎಲ್ಲ ರಾಷ್ಟ್ರಗಳ ಬಾವುಟಗಳೂ ಹಾರಾಡುತ್ತಿರುತ್ತವೆ.

ಕೆಲವು ಅಂತರರಾಷ್ಟ್ರೀಯ ಬಾವುಟಗಳೂ ಇವೆ. ರೆಡ್‌ಕ್ರಾಸ್ ಬಾವುಟ, ವಿಶ್ವಸಂಸ್ಥೆಯ ಬಾವುಟ, ಒಲಿಂಪಿಕ್ ಪಂದ್ಯಗಳ ಬಾವುಟ, ಸಹಕಾರದ ಬಾವುಟ–ಇಂಥವು.

ರಾಷ್ಟ್ರಧ್ವಜವಲ್ಲದ ಬಾವುಟಗಳನ್ನು ಹಲವು ರೀತಿಗಳಲ್ಲಿ ಬಳಸಬಹುದು. ಸಂದೇಶಗಳನ್ನು ಕಳುಹಿಸಲು ಹಡಗಿನವರೂ ನೌಕಾದಳದವರೂ ಬಾವುಟಗಳನ್ನು ಉಪಯೋಗಿಸುತ್ತಾರೆ.

ಬಿಳಿಯ ಬಾವುಟ ಶರಣಾಗತಿಯ ಸಂಕೇತ. ಕೆಂಪು ಬಾವುಟ ಪ್ರತಿಭಟನೆಯ ಸೂಚಕ.

## ಬ್ಯಾಂಕ್

ನಮ್ಮ ಪೂರ್ವಿಕರು ಹಣವನ್ನು ಮಡಕೆಗಳಲ್ಲಿ ತುಂಬಿ ನೆಲದಲ್ಲೋ ಗೋಡೆಯೊಳಗೋ ಬಾವಿಯ ಬಳಿಯಲ್ಲೋ ಬಚ್ಚಿಡುತ್ತಿದ್ದರು. ಆದರೆ ಈಗ ಕೂಡಿಟ್ಟ ಹಣವನ್ನು ನಾವು ಬ್ಯಾಂಕಿನಲ್ಲಿಡುತ್ತೇವೆ. ಬ್ಯಾಂಕಿನಲ್ಲಿ ಹಣ ಭದ್ರ. ಬಡ್ಡಿಯೂ ದೊರೆಯುತ್ತದೆ.

ಠೇವಣಿ–ಅಂದರೆ, ಹಣವನ್ನು ಇರಿಸಲು ನೀಡುವುದು, ವಾಪಸು ಪಡೆಯುವುದು ಮುಂತಾದ ವ್ಯವಹಾರ ನಡೆಸುವ–ಸಂಸ್ಥೆಯನ್ನು ಬ್ಯಾಂಕ್ ಎನ್ನುತ್ತೇವೆ. ಬ್ಯಾಂಕ್ ನಡೆಸುವ ವಹಿವಾಟು ಬ್ಯಾಂಕಿಂಗ್ ವಹಿವಾಟು ಎನಿಸಿಕೊಳ್ಳುತ್ತದೆ.

ಪ್ರಪಂಚದ ಎಲ್ಲ ಬ್ಯಾಂಕಿಂಗ್ ವ್ಯವಸ್ಥೆಯೂ ಕ್ರಿ. ಪೂ. 3000ದ ಸುಮಾರಿನಲ್ಲಿ ಪೌರಸ್ತ್ಯ ಜನರಲ್ಲಿ ರೂಢಿಯಲ್ಲಿದ್ದ ಠೇವಣಿಯಿಂದ ಹುಟ್ಟಿತೆಂದು ತಿಳಿದುಬರುತ್ತದೆ. ಬ್ಯಾಬಿಲೋನಿಯ ಅವಶೇಷಗಳಲ್ಲಿ ಸಿಗುವ ದಾಖಲೆಗಳ ಪ್ರಕಾರ ಶಿನಾರ್ ಪ್ರದೇಶದಲ್ಲಿ ವಾಸಿಸುತ್ತಿದ್ದ ಭಾರತೀಯ ಬುಡಕಟ್ಟಿಗೆ ಸೇರಿದ ಸುಮೇರಿಯನ್ನರು ಮಿಸರ್ ಮತ್ತು ದೂರ ಪ್ರಾಚ್ಯಗಳ ನಡುವಣ ಮಾರ್ಗಗಳಲ್ಲಿ ಆಗ ವ್ಯಾಪಾರ ನಡೆಸುತ್ತಿದ್ದರು. ಕ್ರಿ. ಪೂ. 2500ರ ಹೊತ್ತಿಗೆ ಈ ಜನ ಸೂಕ್ಷ್ಮತರ ಠೇವಣಿ ವಿಧಾನ ನಡೆಸುತ್ತಿದ್ದರು. ಸಾಲಪತ್ರಗಳನ್ನು ಬಳಸುತ್ತಿದ್ದರು.

ಕೌಟಿಲ್ಯನ 'ಅರ್ಥಶಾಸ್ತ್ರ'ದಲ್ಲಿ (ಕ್ರಿ. ಪೂ. 4ನೆಯ ಶತಮಾನ) ಆಗಿನ ಬ್ಯಾಂಕಿಂಗ್ ವ್ಯವಸ್ಥೆಯ ಮೂಲರೂಪ ಸ್ಪಷ್ಟವಾಗಿ ಕಾಣಬರುತ್ತದೆ. ವಿವಿಧ ಬಡ್ಡಿಯ ದರಗಳನ್ನು ಕೌಟಿಲ್ಯ ಪ್ರಸ್ತಾಪಿಸಿದ್ದಾನೆ. ವ್ಯಾವಹಾರಿಕ ಬಡ್ಡಿ–ಅಂದರೆ, ವ್ಯಾಪಾರದಲ್ಲಿ ತೊಡಗಿಸಿದ ಹಣಕ್ಕೆ ಬಡ್ಡಿ–ಮತ್ತು ಸಾಮಾನ್ಯ ಬಡ್ಡಿ ಎಂದು ಆಗ ಎರಡು ಬಗೆಯ ಬಡ್ಡಿಗಳಿದ್ದುವು. ಕಡಲ ಮೇಲೆ ಹೋಗಿ ವ್ಯಾಪಾರ ಮಾಡುವವರು ಹೆಚ್ಚಿನ ಬಡ್ಡಿಯನ್ನು ನೀಡುತ್ತಿದ್ದರು.

ಏಷ್ಯದಲ್ಲಿ ಪ್ರಾರಂಭವಾಯಿತೆಂದು ಭಾವಿಸಲಾದ ಬ್ಯಾಂಕಿಂಗ್ ಪದ್ಧತಿ ಅಲ್ಲಿಂದ ಯೂರೋಪಿಗೆ ಹರಡಿತು. ಕ್ರಿ. ಪೂ. 400ರ



ಸ್ಕಾಟ್ಲೆಂಡಿನ ಬ್ಯಾಗ್‌ಪೈಪ್ ವಾದ್ಯಗಾರರು

ಸ್ಕಾಟ್ಲೆಂಡನ್ನು ಪ್ರಾಕೃತಿಕವಾಗಿ ಮೂರು ಭಾಗಗಳಾಗಿ ವಿಂಗಡಿಸಿದ್ದಾರೆ. ಉತ್ತರ ಪ್ರದೇಶ, ಮಧ್ಯದ ತಗ್ಗುಪ್ರದೇಶ ಮತ್ತು ದಕ್ಷಿಣದ ಎತ್ತರ ಪ್ರದೇಶ. ಅತ್ಯುಚ್ಚ ಶಿಖರ ಬೆನ್‌ನೆವಿಸ್ (1,344 ಮೀಟರು). ಸ್ಕಾಟ್ಲೆಂಡಿಗೆ ಸೇರಿರುವ ದ್ವೀಪಗಳು [illegible]00 ; ಜನ ವಾಸಿಸುತ್ತಿರುವುದು [illegible]ರಲ್ಲಿ ಮಾತ್ರ.

ತೀರ ಉತ್ತರದಲ್ಲಿದ್ದರೂ ಸ್ಕಾಟ್ಲೆಂಡಿನಲ್ಲಿ ಚಳಿಗಾಲ ಹಿತಕರವಾಗಿರುವಂತೆ ಕೊಲ್ಲಿಯಲ್ಲಿ ಹರಿಯುವ ಉಷ್ಣಪ್ರವಾಹ ಮಾಡುತ್ತದೆ. ಸ್ಕಾಟ್ಲೆಂಡ್ ಪ್ರಕೃತಿಯ ಸೊಬಗಿನ ತವರು. ಅಲ್ಲಿನ ನದಿಗಳೂ, ಸೇಂಟ್ ಮೇರಿ, ಲೆವೆನ್, ಲೋಮಂಡ್ ಮುಂತಾದ ಸರೋವರಗಳೂ ದೊಡ್ಡವು. ಫೋರ್ತ್, ಕ್ಲೈಡ್, ಟೇ, ಟ್ವೀಡ್ ನದಿಗಳಲ್ಲಿ ಮೀನು ಚೆನ್ನಾಗಿ ದೊರೆಯುತ್ತದೆ.

ಸ್ಕಾಟ್ಲೆಂಡಿನಲ್ಲಿ ಅರಣ್ಯ ಸಂಪತ್ತು ಉತ್ತಮವಾಗಿದೆ. ಪೈನ್ ಮರಗಳು ಇರುವುದಲ್ಲದೆ ಮರದ ದಿಮ್ಮಿ ಉದ್ಯಮಕ್ಕೂ ಅವಕಾಶವಿದೆ.

ಸ್ಕಾಟ್ಲೆಂಡಿನ ದೇಶಭಾಷೆ ಇಂಗ್ಲಿಷ್. ಈಗಲೂ ಹಲವು ಕಡೆಗಳಲ್ಲಿ ಗ್ಯಾಲಿಕ್ ಭಾಷೆ ಮಾತನಾಡುತ್ತಾರೆ.

ರಾಜಧಾನಿ ಎಡಿನ್‌ಬರೊ ಯೂರೋಪಿನ ಸುಂದರ ನಗರವೆನಿಸಿದೆ. ಹಳೆಯ ನಗರಭಾಗದಲ್ಲಿ ಚಾರಿತ್ರಿಕ ಕಟ್ಟಡಗಳಿವೆ. ಎಡಿನ್‌ಬರೊ ವಿಶ್ವವಿದ್ಯಾನಿಲಯ ಪ್ರಸಿದ್ಧವಾದದ್ದು. ಗ್ಲಾಸ್ಗೊ ವಿಜ್ಞಾನ, ಕೈಗಾರಿಕೆಗಳ ನಗರ. ಡಂಡಿ, ಅಬರ್‌ಡೀನ್‌ಗಳಲ್ಲೂ ಕಾರಖಾನೆಗಳಿವೆ. ಸ್ಕಾಟ್ಲೆಂಡಿನ ಜಾನಪದ ನೃತ್ಯ ಪ್ರಸಿದ್ಧ. ಸ್ಕಾಟ್ಲೆಂಡಿನವರ 'ಬ್ಯಾಗ್‌ಪೈಪ್' ವಿಶಿಷ್ಟ ವಾದ್ಯ.

ವೇಲ್ಸ್ ಬೆಟ್ಟಗುಡ್ಡಗಳ ಪ್ರದೇಶ. 219 ಕಿಲೊಮೀಟರು ಉದ್ದ. 154 ಕಿಲೊಮೀಟರು ಅಗಲ ಈ ಪ್ರಸ್ಥಭೂಮಿ. ಇಂಗ್ಲೆಂಡ್ ಮತ್ತು ವೇಲ್ಸ್‌ಗಳಲ್ಲಿ ಅತಿ ಎತ್ತರ ಶಿಖರವಾದ ಸ್ನೊಡೌನ್ (1,086 ಮೀಟರು) ವೇಲ್ಸ್‌ನಲ್ಲಿದೆ. ಇಲ್ಲಿ ಖನಿಜ ಸಂಪತ್ತು ಸಮೃದ್ಧವಾಗಿದೆ. ಬ್ರಿಟನಿನ ಕಲ್ಲಿದ್ದಲಿನಲ್ಲಿ ಮೂರನೆಯ ಒಂದು ಭಾಗ ಸಿಕ್ಕುವುದು ಇಲ್ಲಿ. ಇಲ್ಲಿಯ ಜನ ಕೆಲ್ಟಿಕ್ ಸಂತತಿಯವರು. ಬ್ರಿಟನಿನ ಪೌರಾಣಿಕ ಕಥೆಗಳ ಪ್ರಸಿದ್ಧನಾಯಕ ಅರಸ ಆರ್ಥರ್ ಮತ್ತು ಅವನ ದುಂಡು ಮೇಜಿನ ವೀರರು ವೇಲ್ಸ್‌ನವರೆ.

ನೋಡಿ : ಎಲಿಜಬೆತ್, ಮೊದಲನೆಯ ; ಐರ್‌ಲೆಂಡ್ ; ಚರ್ಚಿಲ್. ವಿನ್‌ಸ್ಟನ್ ; ಚಾರ್ಲ್ಸ್. ಮೊದಲನೆಯ ; ವಿಕ್ಟೋರಿಯ.

## ಬೀಟ್ಲ್‌ಗಳು

ಬಸ್ಸಿನಲ್ಲಿದ್ದ ಹತ್ತು ವರ್ಷದ ಹುಡುಗ ಚೂಟಿಯಾಗಿದ್ದ. ಕಂಡಕ್ಟರನಿಗೆ ಅವನನ್ನು ಕಂಡರೆ ಇಷ್ಟ. ಇಳಿಯುವ ಹೊತ್ತಿಗೆ ಬಾಯಲ್ಲಿಟ್ಟು ಬಾರಿಸುವ ಸ್ವರಪೇಟಿಯನ್ನು ಕಂಡಕ್ಟರ್ ಜೇಬಿನಿಂದ ಹೊರತೆಗೆದು ಆ ಹುಡುಗನಿಗೆ ಕೊಟ್ಟ. ಬಾಲಕ ಬಾರಿಸಿದಾಗ ಹೊರಟ ಮೊದಲ ಧ್ವನಿಯೊಂದಿಗೆ ಹುಟ್ಟಿತು ಬೀಟ್ಲ್ ಸಂಗೀತ.

ಹುಡುಗ. ಜಾನ್ ಲೆನನ್. ಎಳೆಯ ವಯಸ್ಸಿನಲ್ಲೆ 'ಆಲಿಸ್ ಇನ್ ವಂಡರ್‌ಲೆಂಡ್' ('ಪಾತಾಳದಲ್ಲಿ ಪಾಪಚ್ಚಿ') ಓದಿ ಒಳ್ಳೆಯ ಸಾಹಿತ್ಯದ ರುಚಿಕಂಡವನು. ಜನನ ಬಡ ಕುಟುಂಬದಲ್ಲಿ, ಇಂಗ್ಲೆಂಡಿನ ಔದ್ಯೋಗಿಕ ನಗರವಾದ ಲಿವರ್‌ಪೂಲಿನ ಕಾರ್ಮಿಕ ಪ್ರದೇಶದಲ್ಲಿ.

ಜಾನ್ ಲೆನನ್ ಪ್ರೌಢನಾಗುತ್ತಿದ್ದ ಕಾಲದಲ್ಲಿ ಅಮೆರಿಕದ ರಾಕ್ ಎನ್ ರೋಲ್ ಸಂಗೀತ–ಸಾಗರದ ಹೊಯ್ದಾಟವನ್ನು ಹೋಲುವ ಹಾಡುಗಾರಿಕೆ–ಇಂಗ್ಲೆಂಡಿನ ದಂಡೆಗಳಿಗೆ ಅಪ್ಪಳಿಸಿತು (1954). ಅದಕ್ಕೆ ಪ್ರತಿಧ್ವನಿ ಎನ್ನುವಂತೆ ಸೃಷ್ಟಿಯಾಯಿತು ವೈಶಿಷ್ಟ್ಯಪೂರ್ಣ ಬೀಟ್ಲ್ ಸಂಗೀತ. ಲೆನನನ್ನು ಸೇರಿಕೊಂಡವನು ಪಾಲ್ ಮೆಕಾರ್ಟ್ನಿ. ಅವರಿಗೆ ಜೊತೆಯಾದವನು ರೆಕ್ಸ್ ಹ್ಯಾರಿಸನ್. ಬಳಿಕ ಬಂದವನು ಬ್ರಯನ್ ಇಪ್‌ಸ್ಟೀನ್. ಮುಂದೆ ಇಪ್‌ಸ್ಟೀನನ ಸ್ಥಾನದಲ್ಲಿ ತಾನಿದ್ದು ನಾಲ್ವರ ಆ ಗುಂಪಿನಲ್ಲಿ ಒಬ್ಬನಾದವನು ರಿಂಗೊ ಸ್ಟಾರ್.

ಇವರು ಯಾರೂ ಶಾಸ್ತ್ರೀಯ ಸಂಗೀತವನ್ನು ಅಭ್ಯಸಿಸಿದವರಲ್ಲ. ಅವರು ಆಡಿದ್ದೇ ಹಾಡು, ಹಾಕಿದ್ದೇ ರಾಗ. ಜನಸಮುದಾಯಕ್ಕೆ, ಅದರಲ್ಲೂ ಎಳೆಯರಿಗೆ, ಸುಲಭವಾಗಿ ಮೆಚ್ಚುಗೆಯಾಯಿತು ಈ ಸ್ವಚ್ಛಂದ ಸಂಗೀತ. ಯಾತನೆ ಕ್ರೋಧ ಪ್ರತಿಘಟನೆಗಳಿಗೆಲ್ಲ ಸಂಕೇತವಾಯಿತು ಬೀಟ್ಲ್ ಹಾಡುಗಾರಿಕೆ.

ಬೀಟ್ ಎಂದರೆ ಬಡಿತ. ತಾಳ. ನಾವು ಬೀಟ್ಲ್‌ಗಳು—ತಾಳತಗಾರರು—ಎಂದು ತಮ್ಮನ್ನು ಈ ನಾಲ್ವರು ಕರೆದುಕೊಂಡರು. ಜನರ ಗಮನ ಸೆಳೆಯಲೆಂದು "ನಾವು ಜರ್ಮನಿಯಿಂದ ಬಂದವರು" ಎಂದರು. ಸ್ವಲ್ಪ ಸಮಯದಲ್ಲೇ ಈ ಜನ ಸಂಗೀತ ಪಾಶ್ಚಾತ್ಯ ರಾಷ್ಟ್ರಗಳನ್ನು ಗೆದ್ದಿತು; ಇತರ ದೇಶಗಳ ಯುವಜನಾಂಗಕ್ಕೂ ಮೋಹಕವಾಗಿ ಕಂಡಿತು. ಆರನೆಯ ದಶಕದ ಆರಂಭದೊಡನೆ ಬೀಟ್ಲ್ ಸಂಗೀತ ಮನೆಮಾತಾಯಿತು.

ಈ ಯುವಕರು ಭಾರತದ ಅಧ್ಯಾತ್ಮ ಚಿಂತನೆಯಲ್ಲೂ ಸಿತಾರ್ ವಾದನದಲ್ಲೂ ಆಸಕ್ತಿ ತೋರಿದರು. ಅವರು ಹೀಗೆ ಮಾಡಿದ್ದು ತಮ್ಮ ಪ್ರಯೋಗಶೀಲ ಪ್ರವೃತ್ತಿಗೆ ಅನುಗುಣವಾಗಿ. ಆಸಕ್ತಿ ಸಹಜವಾಗಿಯೇ ಅಲ್ಪಾಯುವಾಯಿತು.

ಒಂದು ದಶಕವಿಡೀ ಬೀಟ್ಲ್ ಸಂಗೀತ ಕಲಾಜಗತ್ತಿನ ಮೇಲೆ ಮೋಡಿ ಬೀಸಿತು. ಅದರ ಆಚಾರ್ಯರಾದ ಜಾನ್, ಪಾಲ್, ರೆಕ್ಸ್, ರಿಂಗೋ ವೈಭವದಿಂದ ಮೆರೆದರು. ಅವರ ಹಾಡುಗಳ ಧ್ವನಿಮುದ್ರಿಕೆಗಳು ಪ್ರಪಂಚದ ವಿವಿಧ ರಾಷ್ಟ್ರಗಳಲ್ಲಿ ಮೂವತ್ತುಕೋಟಿಯಷ್ಟು ಖರ್ಚಾದುವು. ಬಡ ಹುಡುಗರು ಅರಸು ಕುಮಾರರಾದರು.

ಏಳನೆಯ ದಶಕದ ಆರಂಭದೊಂದಿಗೆ ಈ ಗುಂಪಿನ ಸಾಂಘಿಕ ಚಟುವಟಿಕೆ ಮುಕ್ತಾಯಗೊಂಡಿತೆನ್ನಬಹುದು. ಪಾಲ್ ಮೆಕಾರ್ಟ್ನಿ ತಂಡವನ್ನು ತ್ಯಜಿಸಿದ. ಮುಂದೆ ಈ 'ಜನಸಂಗೀತ' ಯಾವ ರೂಪ ತಳೆಯುವುದೋ ಹೇಳುವುದು ಕಷ್ಟ. ಆದರೆ ಚಾರಿತ್ರಿಕವಾಗಿ ಬೀಟ್ಲ್ ಸಂಗೀತದ—ಬೀಟ್ಲ್‌ಗಳ—ಸ್ಥಾನ ಭದ್ರವಾಗಿದೆ ಎನ್ನಬಹುದು.

## ಬುದ್ಧ

"ನೀವು ಯಾವ ಪ್ರಾಣಿಗೂ ಜೀವ ಕೊಡಲಾರಿರಿ. ಜೀವ ಕೊಡುವ ಶಕ್ತಿ ಇಲ್ಲ ನಿಮಗೆ. ಜೀವ ತೆಗೆಯುವ ಹಕ್ಕೂ ಇಲ್ಲ. ನಾವು ನಮ್ಮ ದೇಹವನ್ನೂ ಪ್ರಾಣವನ್ನೂ ಪ್ರೀತಿಸುವ ಹಾಗೆಯೇ ಇತರ ಪ್ರಾಣಿಗಳನ್ನೂ ಪ್ರೀತಿಸಬೇಕು."

ಯಜ್ಞ ಮಾಡಿ ಮೇಕೆಗಳನ್ನು ಬಲಿ ಕೊಡಬೇಕೆಂದಿದ್ದ ರಾಜ ಬಿಂಬಿಸಾರನಿಗೆ. ಹೀಗೆಂದು ಹೇಳಿ ಜ್ಞಾನೋದಯವನ್ನುಂಟು ಮಾಡಿದ ಗೌತಮಬುದ್ಧ.

ಎರಡು ಸಾವಿರದೈನೂರು ವರ್ಷಗಳ ಕೆಳಗೆ ಈಗಿನ ನೇಪಾಳ ಭಾರತದ ಒಂದು ಭಾಗವಾಗಿತ್ತು. ಆ ಪ್ರದೇಶದ ರಾಜ್ಯದ ದೊರೆ ಶುದ್ಧೋದನ. ರಾಣಿ ಮಾಯಾದೇವಿ. ಕ್ರಿ. ಪೂ. 563ರಲ್ಲಿ ವೈಶಾಖ ಶುದ್ಧ ಹುಣ್ಣಿಮೆಯ ದಿನ ಲುಂಬಿನಿ ಕಾಡಿನಲ್ಲಿ ಮಾಯಾದೇವಿಗೆ ಗಂಡು ಮಗು ಹುಟ್ಟಿತು. ಅವನಿಗೆ ಸಿದ್ಧಾರ್ಥನೆಂದು ಹೆಸರಿಟ್ಟರು. [illegible] ವಾದಳು. ಮಲತಾಯಿ ಮಹಾಪ್ರಜಾಪತಿ ಗೌತಮಿ ಅವನನ್ನು ಸಾಕಿದುದರಿಂದ ಅವನಿಗೆ ಗೌತಮನೆಂದೂ ಹೆಸರಾಯಿತು.

ಶುದ್ಧೋದನ ಮಹಾರಾಜನ ಮಗ ಸಿದ್ಧಾರ್ಥ ಸನ್ಯಾಸಿಯಾಗುತ್ತಾನೆಂದು ಒಬ್ಬ ವಿದ್ವಾಂಸ ಭವಿಷ್ಯ ನುಡಿದ. ಇದಕ್ಕೆ ಹೆದರಿ ರಾಜ. ಮಗನು ಹೊರಗಿನ ಪ್ರಪಂಚದ ಕಷ್ಟಗಳನ್ನು ನೋಡಲು ಬಿಡದೆ. ಅತನನ್ನು ಅರಮನೆಯಲ್ಲೇ ಬೆಳೆಸಿದ. ಸಿದ್ಧಾರ್ಥನಿಗೆ ಸುಪ್ರಬೋಧನ ಮಗಳು ಯಶೋಧರೆಯೊಡನೆ ವಿವಾಹವಾಯಿತು. ಅವರ ಮಗ ರಾಹುಲ.

ಅರಮನೆಯ ಒಳಗಿದ್ದ ಸಿದ್ಧಾರ್ಥನಿಗೆ ಹೊರಗಿನ ಪ್ರಪಂಚವನ್ನು ನೋಡಿಬರುವ ಆಸೆಯಾಯಿತು. ನಗರ ಸಂದರ್ಶನಕ್ಕೆ ಹೋದಾಗ ಯಾವ ರೀತಿಯ ನೋವಿನ ದೃಶ್ಯವನ್ನೂ ಮಗನು ಕಾಣಬಾರದೆಂದು ರಾಜ ಮುನ್ನೆಚ್ಚರಿಕೆಯನ್ನು ತೆಗೆದುಕೊಂಡರೂ. ಮುಪ್ಪಿನಿಂದ ಕುಗ್ಗಿದವನನ್ನೂ ರೋಗದಿಂದ ನರಳುತ್ತಿದ್ದವನನ್ನೂ ಒಂದು ಶವವನ್ನೂ ಸಿದ್ಧಾರ್ಥ ನೋಡಿದ. ಮುಪ್ಪು. ರೋಗ, ಸಾವು ಯಾರಿಗೂ ತಪ್ಪಿದ್ದಲ್ಲವೆಂಬುದನ್ನು ಅರಿತ, ಆಗ ಅವನಿಗೆ ಪ್ರಪಂಚದಲ್ಲಿ ಸುಖ ಎಂಬುದು ಸುಳ್ಳು ಎಂದು ತೋರಿತು. ವೈರಾಗ್ಯ ಹುಟ್ಟಿತು. ಹುಟ್ಟುಸಾವುಗಳಿಂದ ತಪ್ಪಿಸಿಕೊಳ್ಳುವ ದಾರಿಯನ್ನು ಹುಡುಕಬೇಕೆನ್ನಿಸಿತು.

ಸಿದ್ಧಾರ್ಥ ರಾಜಪುತ್ರನಾಗಿರಲು ಇಷ್ಟಪಡದೆ, ಸನ್ಯಾಸಿಯಾಗಿ ಪ್ರಪಂಚದ ಕಷ್ಟಗಳಿಗೆ ಪರಿಹಾರ ಹುಡುಕಲು, ಒಂದು ರಾತ್ರಿ ಯಾರಿಗೂ ಹೇಳದೆ ಅರಮನೆ ಬಿಟ್ಟು ಹೊರಟ. ಕಾಡಿನಲ್ಲಿ ತಪಸ್ಸು ಮಾಡಿದ. ಉಪವಾಸ. ಬಳಲಿಕೆಯಿಂದ ಜ್ಞಾನ ತಪ್ಪುವಷ್ಟು ದೇಹವನ್ನು ದಂಡಿಸಿದ. ಆರು ವರ್ಷ ಧ್ಯಾನ ಮಾಡಿದ, ಆದರೆ ಜ್ಞಾನೋದಯವಾಗಲಿಲ್ಲ.

ಕೊನೆಗೆ ಬೋಧಿವೃಕ್ಷದ ಕೆಳಗೆ ಕುಳಿತು ಧ್ಯಾನಮಗ್ನನಾದ. ವೈಶಾಖ ಪೂರ್ಣಿಮೆಯ ಮಧ್ಯರಾತ್ರಿ ಅವನಿಗೆ ಜ್ಞಾನೋದಯವಾಯಿತು. ಅಲ್ಲಿಯ

ಸಿದ್ಧಾರ್ಥನ ಗೃಹತ್ಯಾಗ—ಕಲೆಗಾರನ ಕಲ್ಪನೆ; ನಾಗಾರ್ಜುನಕೊಂಡ ಅವಶೇಷಗಳಿಂದ



ಸಂಗೂ ಸಿದ್ಧಾರ್ಥನಾಗಿದ್ದವನು ಅಂದು 'ಬುದ್ಧ'ನಾದ. ಬುದ್ಧ ಎಂದರೆ ಜ್ಞಾನವನ್ನು ಪಡೆದವನು ಎಂದರ್ಥ.

ಪ್ರಪಂಚದ ಕಷ್ಟಗಳಿಗೆ ಏನು ಮಾಡಿದರೆ ಪರಿಹಾರ ಸಿಕ್ಕುತ್ತದೆ, ಮನಸ್ಸಿಗೆ ಶಾಂತಿ ದೊರೆಯುತ್ತದೆ ಎನ್ನುವುದನ್ನು ತಿಳಿದುಕೊಳ್ಳುವುದಕ್ಕಾಗಿ ಸಿದ್ಧಾರ್ಥ ತಪಸ್ಸು ಮಾಡಿದ. ಜ್ಞಾನೋದಯದೊಂದಿಗೆ ಅವನ ಪ್ರಶ್ನೆಗಳಿಗೆ ಉತ್ತರ ಸಿಕ್ಕಿತು. ಅವನಿಗೆ ತಿಳಿವಳಿಕೆ ಬಂದಿತು.

ಸಿದ್ಧಾರ್ಥ ಬುದ್ಧನಾದ ಅನಂತರ ವಾರಣಾಸಿಗೆ ಹೋಗಿ ತಾನು ಕಂಡ ಸತ್ಯವನ್ನು ಜನರಿಗೆ ಉಪದೇಶಿಸಿದ. ಹಲವರು ಇವನ ಮತವನ್ನು ಸ್ವೀಕರಿಸಿದರು. ಅಲ್ಲಿಂದ ಧರ್ಮ ಪ್ರಸಾರಕ್ಕಾಗಿ ದೇಶದಲ್ಲೆಲ್ಲ ಸುತ್ತಾಡಿದ; ಕಪಿಲವಸ್ತುವಿಗೂ ಹೋಗಿ ಶುದ್ಧೋದನ, ಯಶೋಧರೆ, ರಾಹುಲರನ್ನು ಕಂಡ. ರಾಹುಲ ಸನ್ಯಾಸಿಯಾದ. ಇನ್ನೂ ಕೆಲವರು ಸ್ತ್ರೀಯರೂ ಪುರುಷರೂ ಸನ್ಯಾಸಿಗಳಾದರು. ಆನಂದ, ಸಾರಿಪುತ್ರ, ಮೌದ್ಗಲ್ಯಾಯನ ಬುದ್ಧನ ಶಿಷ್ಯರಲ್ಲಿ ಮುಖ್ಯರು. ಬೌದ್ಧಸನ್ಯಾಸಿಗಳು—ಭಿಕ್ಷುಗಳು—ವಾಸಿಸಲು ವಿಹಾರಗಳೆಂಬ ಮಠಗಳನ್ನು ಸ್ಥಾಪಿಸಲಾಯಿತು. ಅಂಗುಲಿಮಾಲ ಎನ್ನುವ ದರೋಡೆಕಾರ ಬುದ್ಧನ ಕಾರುಣ್ಯಕ್ಕೆ ಸೋತು ಅವನ ಶಿಷ್ಯನಾದ.

ಬುದ್ಧ ಕುಶಿನಗರದಲ್ಲಿ ತನ್ನ ಎಂಬತ್ತನೆಯ ವಯಸ್ಸಿನಲ್ಲಿ ನಿರ್ವಾಣ ಹೊಂದಿದ. ಸಿದ್ಧಾರ್ಥ ಹುಟ್ಟಿದ್ದು ವೈಶಾಖ ಹುಣ್ಣಿಮೆಯಂದು, ಬುದ್ಧನಾದದ್ದೂ ವೈಶಾಖ ಹುಣ್ಣಿಮೆಯಂದು, ಪರಿನಿರ್ವಾಣಹೊಂದಿದ್ದೂ ವೈಶಾಖ ಹುಣ್ಣಿಮೆಯಂದೇ. ಆತ ಪ್ರಚಾರಮಾಡಿದ ಧರ್ಮ ಬೌದ್ಧ ಧರ್ಮವೆಂದು ಪ್ರಸಿದ್ಧವಾಯಿತು. ಭಾರತದಾಚೆಗೂ—ಸಿಂಹಳ, ಚೀನ, ಬರ್ಮ, ಥೈಲೆಂಡ್‌ಗಳಿಗೂ ಹರಡಿತು. ಇಂದು ಭಾರತದಲ್ಲಿ ಬೌದ್ಧಮತದ ಅನುಯಾಯಿಗಳು ಕೆಲವೇ ಮಂದಿ ಇದ್ದರೂ ಸಿಂಹಳ, ಟಿಬೆಟ್, ಚೀನ, ಮಂಗೋಲಿಯ, ಕೊರಿಯ, ಜಪಾನ್‌ಗಳಲ್ಲಿ ಬೌದ್ಧಧರ್ಮ ನೆಲಸಿದೆ.

ಬುದ್ಧ ಹೇಳಿದ ಸತ್ಯಗಳು ನಾಲ್ಕು: ದುಃಖ, ದುಃಖಸಮುದಾಯ, ದುಃಖ ನಿರೋಧ, ದುಃಖನಿರೋಧಗಾಮಿನಿ ಪ್ರತಿಪತ್.

ಅಂದರೆ, ಪ್ರಪಂಚದಲ್ಲಿ ದುಃಖವಿದೆ; ನಾವು ನಮ್ಮ ಸುತ್ತಲೂ ಇರುವ ವಸ್ತುಗಳು ಬೇಕು ಎಂದು ಆಸೆಪಡುವುದೇ ದುಃಖಕ್ಕೆ ಕಾರಣ; ಆಸೆಯನ್ನು ಬಿಟ್ಟರೆ ದುಃಖ ಇರುವುದಿಲ್ಲ; ಎಂಟು ಮುಖ್ಯ ವಿಷಯಗಳನ್ನು ನಾವು ಜ್ಞಾಪಕದಲ್ಲಿಟ್ಟುಕೊಂಡು ಆ ರೀತಿ ನಡೆದರೆ ದುಃಖದಿಂದ ಬಿಡುಗಡೆ ಹೊಂದುತ್ತೇವೆ.

ಆ ಅಷ್ಟಾಂಗಮಾರ್ಗಗಳು ಇವು:

1. ಒಳ್ಳೆಯ ಯೋಚನೆಗಳು. 2. ಒಳ್ಳೆಯ ಉದ್ದೇಶದಿಂದ ಕೆಲಸ ಮಾಡುವುದು. 3. ಸತ್ಯವಾದ ಮಾತನ್ನಾಡುವುದು. 4. ಒಳ್ಳೆಯ ಕೆಲಸವನ್ನು ಮಾಡುವುದು. 5. ಶುದ್ಧವಾದ ರೀತಿಯಲ್ಲಿ ಜೀವನ ನಡೆಸುವುದು. 6. ಪ್ರಾಮಾಣಿಕವಾಗಿ ಪ್ರಯತ್ನ ಮಾಡುವುದು. 7. ಇತರರ ವಿಷಯದಲ್ಲಿ ಒಳ್ಳೆಯದನ್ನು ಯೋಚಿಸುವುದು. 8. ಒಳ್ಳೆಯ ವಿಷಯಗಳಲ್ಲಿ ಮನಸ್ಸನ್ನು ನಿಶ್ಚಲವಾಗಿ ನಿಲ್ಲಿಸುವುದು.

ಬುದ್ಧ ಜಾತಿಭೇದಗಳನ್ನು ಒಪ್ಪಲಿಲ್ಲ. ಎಲ್ಲರಿಗೂ ಐದು ವ್ರತಗಳನ್ನು ಉಪದೇಶಿಸಿದ: 1. ಹಿಂಸೆ ಮಾಡದಿರುವುದು, ಎಲ್ಲ ಜೀವಿಗಳ ಸಂರಕ್ಷಣೆ; 2. ಕಳ್ಳತನ ಮಾಡದೇ ಇರುವುದು, ದಾನ ಮಾಡುವುದು; 3. ಸುಳ್ಳು ಹೇಳದಿರುವುದು, ಸದಾ ಸತ್ಯವನ್ನು ನುಡಿಯುವುದು; 4. ಮದ್ಯಪಾನ ಮಾಡದಿರುವುದು, ಆಹಾರ ಪಾನೀಯಗಳಲ್ಲಿ ಸಂಯಮವನ್ನು ಪಾಲಿಸುವುದು; 5. ಶೀಲವನ್ನು ಕಾಪಾಡಿಕೊಳ್ಳುವುದು. ಇವು ಬುದ್ಧ ಬೋಧಿಸಿದ ಪಂಚಶೀಲ. "ಇತರರ ಕೋಪವನ್ನು ತಾಳ್ಮೆಯಿಂದ, ದ್ವೇಷವನ್ನು ಒಳ್ಳೆಯತನದಿಂದ ಗೆಲ್ಲಿರಿ. ನೀವು ಜಯಗಳಿಸಿದರೂ ನಿಮ್ಮ ವಿರೋಧಿ ನಿಮ್ಮನ್ನು ದ್ವೇಷಿಸುತ್ತಾನೆ. ದ್ವೇಷವನ್ನು ಪ್ರೀತಿಯಿಂದ ಮಾತ್ರ ಗೆಲ್ಲಲು ಸಾಧ್ಯ." ಎಂದು ಆತ ಉಪದೇಶಿಸಿದ. ಹುಟ್ಟು ಸಾವುಗಳ ಬಂಧನದಿಂದ ತಪ್ಪಿಸಿಕೊಳ್ಳುವುದು ಮುಖ್ಯವಾಗಿ ತೋರಿತು ಅವನಿಗೆ. ದೇವರಿರುವನೆ, ಆತ್ಮವುಂಟೆ, ಪ್ರಪಂಚ ಹೇಗೆ ಸೃಷ್ಟಿಯಾಯಿತು—ಇಂಥ ಪ್ರಶ್ನೆಗಳು ಅಪ್ರಕೃತ ಎಂದು ಭಾವಿಸಿದ. ಸದಾಚಾರಕ್ಕೆ ಅವನು ಪ್ರಾಶಸ್ತ್ಯ ಕೊಟ್ಟ.

ಬುದ್ಧನ ಅನಂತರ ಸುಮಾರು ಇನ್ನೂರು ವರ್ಷಗಳಲ್ಲಿ ಬೌದ್ಧಮತ ಭಾರತದಲ್ಲಿ ಬೇರೂರಿತು. ಸಮ್ರಾಟ್ ಅಶೋಕ ಪಸರಿಸಿದ [illegible] ಧರ್ಮಗಳಲ್ಲಿ ಬೌದ್ಧ ಧರ್ಮ ಮುಖ್ಯವಾದದ್ದು.

ಬೌದ್ಧ ಗ್ರಂಥಗಳು ಪಾಲಿ ಭಾಷೆಯಲ್ಲಿವೆ. ಅವನ್ನು [illegible] ಭಾಷೆಗಳಿಗೆ ಭಾಷಾಂತರ ಮಾಡಿದ್ದಾರೆ.

ಬುದ್ಧ ಶುದ್ಧ ಚಾರಿತ್ರ್ಯದ [illegible] ಕಾರುಣ್ಯಮೂರ್ತಿ. [illegible] ಪ್ರಪಂಚಕ್ಕೆ [illegible].

ನೋಡಿ: ಅಶೋಕ; ನಾಗಾರ್ಜುನ

ಏಷಿಯಾಖಂಡದ ಕಾರುಣ್ಯಮೂರ್ತಿ ಬುದ್ಧ





ಇಸ್ರೇಲಿನ ಪಿತಾಮಹ, ಡೇವಿಡ್ ಬೆನ್-ಗರಿಅನ್

ಹೊಸ ಇಸ್ರೇಲ್ ರಾಷ್ಟ್ರದಲ್ಲಿ 1948ರಿಂದ 1963ರ ವರೆಗೆ (1953ರ ಡಿಸೆಂಬರಿನಿಂದ 1955 ಜೇಸಿಗೆಯ ಅವಧಿಯನ್ನು ಬಿಟ್ಟು) ಪ್ರಧಾನ ಮಂತ್ರಿ ಹಾಗೂ ರಕ್ಷಣಾಮಂತ್ರಿಯಾಗಿ ಅಧಿಕಾರ ನಿರ್ವಹಿಸಿದರು. ಇಸ್ರೇಲಿಗೆ ಬರಲು ಬಯಸಿದ ಎಲ್ಲ ಯೆಹೂದ್ಯರಿಗೂ ಅವಕಾಶ ಕಲ್ಪಿಸಿಕೊಡುವುದು ಅವರ ಗುರಿಯಾಗಿತ್ತು. ದೇಶಾಂತರ ಹೋಗಿದ್ದ ಯೆಹೂದ್ಯರಲ್ಲಿ ಹತ್ತು ಲಕ್ಷ ಜನ ಇಸ್ರೇಲಿಗೆ ಬಂದರು.

1963ರಲ್ಲಿ ಬೆನ್-ಗರಿಅನ್ ರಾಜೀನಾಮೆಯಿತ್ತರು. ಚುನಾವಣಾ ಪದ್ಧತಿಯನ್ನು ಸುಧಾರಿಸಬೇಕೆಂಬ ಅವರ ಸೂಚನೆಯನ್ನು ಕಾರ್ಮಿಕ ಪಕ್ಷ ಒಪ್ಪದೆ ಹೋದುದರಿಂದ ಆ ಪಕ್ಷವನ್ನು ಅವರು 1965ರಲ್ಲಿ ಬಿಟ್ಟರು.

ಆದರೂ ಇಸ್ರೇಲಿನ ಬಹುಮಂದಿಗೆ ಡೇವಿಡ್ ಬೆನ್-ಗರಿಅನ್ ಈಗಲೂ ಅಚ್ಚುಮೆಚ್ಚಿನ ಪಿತಾಮಹ. ಅವರು ಇಸ್ರೇಲಿನ ಪ್ರಭಾವಶಾಲಿ ವ್ಯಕ್ತಿ.

ನೋಡಿ : ಇಸ್ರೇಲ್

## ಬೆನ್‌ಥಾಮ್, ಜೆರಿಮಿ

ಲಂಡನಿನ ವಿಶ್ವವಿದ್ಯಾನಿಲಯದ ಸಂಗ್ರಹಾಲಯ. ಕುರ್ಚಿಯೊಂದರ ಮೇಲೆ ಒಂದು ಅಸ್ಥಿಪಂಜರಕ್ಕೆ ಸಂಪೂರ್ಣವಾಗಿ ಉಡುಪು ತೊಡಿಸಿ ಕೂಡಿಸಿದ್ದಾರೆ. ಶಿರೋಭಾಗ ಮಾತ್ರ ಬರಿಯ ಅಸ್ಥಿಪಂಜರವಲ್ಲ: ಸುವಾಸನಾ ದ್ರವ್ಯಗಳನ್ನು ಲೇಪಿಸಿ ರಕ್ಷಿಸಲ್ಪಟ್ಟಿರುವ ನೈಜ ತಲೆ. ವೈದ್ಯಶಾಸ್ತ್ರ ವಿದ್ಯಾರ್ಥಿಗಳು ಜೆರಿಮಿ ಬೆನ್‌ಥಾಮ್‌ಗಾಗಿ ನಿರ್ಮಿಸಿರುವ ಸ್ಮಾರಕ ಇದು.



'ಅತ್ಯಧಿಕ ಸಂಖ್ಯೆಯ ಜನರ ಅತ್ಯಧಿಕ ಸುಖವೇ ನ್ಯಾಯವಾದ ಸರಕಾರದ ಗುರಿ' ಎಂದು ವಾದಿಸಿ, ಲೋಕಹಿತಕ್ಕಾಗಿ ಶ್ರಮಿಸಿದ ಹತ್ತೊಂಬತ್ತನೆಯ ಶತಮಾನದ ಅರ್ಥಶಾಸ್ತ್ರಜ್ಞ, ರಾಜಕೀಯ ತತ್ತ್ವಜ್ಞ, ಸಮಾಜ ಸುಧಾರಕ, ನ್ಯಾಯಶಾಸ್ತ್ರಜ್ಞ, ಇಂಗ್ಲೆಂಡಿನ ಜೆರಿಮಿ ಬೆನ್‌ಥಾಮ್. ಸತ್ತಮೇಲೆ ತನ್ನ ದೇಹವನ್ನು ವೈದ್ಯಕೀಯ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಕೊಡಬೇಕೆಂದು ಆತ ಬಯಸಿದ್ದ. ಅದರಿಂದ ಪ್ರಯೋಜನ ಪಡೆದ ವಿದ್ಯಾರ್ಥಿಗಳು ಬೆನ್‌ಥಾಮನಿಗೆ ಅಂಥ ಅಸಾಧಾರಣ ಸ್ಮಾರಕ ನಿರ್ಮಿಸಿದರು.

ಬೆನ್‌ಥಾಮ್ ಲಂಡನಿನಲ್ಲಿ ಹುಟ್ಟಿದ (1748). ತಂದೆ ವಕೀಲ.

ಉಚ್ಚ ವಿದ್ಯಾಭ್ಯಾಸ ಆಕ್ಸ್‌ಫರ್ಡಿನಲ್ಲಿ. ನ್ಯಾಯಶಾಸ್ತ್ರವನ್ನು ಕಲಿತು ವಕೀಲನಾದರೂ ಆ ವೃತ್ತಿಗೆ ಸೇರಲಿಲ್ಲ.

ಬೆನ್‌ಥಾಮ್ ಬರೆದ ಮೊದಲ ಪುಸ್ತಕ 'ಸರಕಾರದ ಬಗೆಗೆ ಎರಡು ಮಾತು'. ರಷ್ಯದಲ್ಲಿದ್ದ ಅಣ್ಣನನ್ನು ನೋಡಲು ಹೋದ ಬೆನ್‌ಥಾಮ್ ಅಲ್ಲಿನ ಅರ್ಥಶಾಸ್ತ್ರದ ಬಗೆಗೆ ತನ್ನ ಮೊದಲ ಪುಸ್ತಕವನ್ನು ಬರೆದ. ಇದರಲ್ಲಿರುವುದು ವ್ಯಕ್ತಿ ಮತ್ತು ಅವನ ಆರ್ಥಿಕ ಸ್ವಾತಂತ್ರ್ಯದ ಸಮಸ್ಯೆಯ ವಿವೇಚನೆ.

ರಾಜಕೀಯ ರಂಗದಲ್ಲಿ ಅಷ್ಟೇನೂ ಯಶಸ್ಸು ಗಳಿಸದ ಬೆನ್‌ಥಾಮ್ 1788ರಲ್ಲಿ 'ನೀತಿ ಹಾಗೂ ಶಾಸನ ರಚನೆಯ ಮೂಲತತ್ತ್ವಗಳಿಗೊಂದು ಪ್ರವೇಶಿಕೆ' ಎಂಬ ಉದ್ಗ್ರಂಥವನ್ನು ಬರೆಯತೊಡಗಿದ. ಜನರು ಏನನ್ನು ಮಾಡಿದರೂ ಅದಕ್ಕೆ ಎರಡರಲ್ಲಿ ಒಂದು ಉದ್ದೇಶವಿರುತ್ತದೆ. ಸಂತೋಷ

ಅರ್ಥಶಾಸ್ತ್ರಜ್ಞ, ಸಮಾಜ ಸುಧಾರಕ, ನ್ಯಾಯಶಾಸ್ತ್ರಜ್ಞ ಜೆರಿಮಿ ಬೆನ್‌ಥಾಮ್



ಪಡೆಯುವುದು ಇದರ ನೀತಿ. ಪ್ರಯೋಜನವಾದ ಎಂಬ ಸಿದ್ಧಾಂತ ಎಂದು ಪ್ರಾರಂಭಿಸಿ. ಅತ್ಯಧಿಕ ಸಂಖ್ಯೆಯ ಜನರ ಅತ್ಯಧಿಕ ಹಿತಸಾಧನೆಯೇ ಸರಕಾರದ ಕರ್ತವ್ಯ ಎಂಬ ವಾದವನ್ನು ಈ ಗ್ರಂಥದಲ್ಲಿ ಎತ್ತಿಹಿಡಿದ. ಹತ್ತೊಂಬತ್ತನೆಯ ಶತಮಾನದಲ್ಲಿ ಇವನ ಈ ವಿಚಾರ ಅನೇಕರಿಗೆ ಸ್ಫೂರ್ತಿ ನೀಡಿತು.

ಇಂಗ್ಲೆಂಡಿನಲ್ಲಿ ಮಾತ್ರವಲ್ಲದೆ ಫ್ರಾನ್ಸ್, ಅಮೆರಿಕ ಮುಂತಾದ ದೇಶಗಳಲ್ಲಿಯೂ ಈ ಗ್ರಂಥದ ಪ್ರಭಾವ ಹರಡಿತು. ಬೆನ್‌ಥಾಮ್ ಕಾರಾಗೃಹಗಳ ಸುಧಾರಣೆಗಾಗಿ ಶ್ರಮಿಸಿದ ಮೊದಲಿಗರಲ್ಲೊಬ್ಬ. ಸೂಯೆಜ್ ಪನಾಮ ಕಾಲುವೆಗಳ ನಿರ್ಮಾಣವಾಗುವುದಕ್ಕೆ ಎಷ್ಟೋ ವರ್ಷಗಳಿಗೆ ಹಿಂದೆಯೇ ಆ ಸೂಚನೆ ನೀಡಿದವನು ಬೆನ್‌ಥಾಮ್. ಜನನ, ಮದುವೆ, ಮರಣಗಳ ದಾಖಲೆಗಳನ್ನು, ಜನಗಣತಿಯನ್ನು ಸಮರ್ಥಿಸಿದವನೂ ಅವನೇ. ಬೆನ್‌ಥಾಮ್ ಗುಲಾಮಗಿರಿಯ ವಿರುದ್ಧ ಹೋರಾಟವನ್ನು ಆರಂಭಿಸಿದ. 'ಅಂತರರಾಷ್ಟ್ರೀಯ' ಎನ್ನುವ ಪದವನ್ನು ಸೃಷ್ಟಿಸಿದವನೂ ಅವನೇ. ಇಷ್ಟೆಲ್ಲ ಉದಾತ್ತ ಕಾರ್ಯಕ್ರಮಗಳನ್ನು ಆತ ಮುಂದಿಟ್ಟರೂ ಸರಕಾರದ ಸಹಕಾರ ಸಿಗಲಿಲ್ಲ. ಅವನಿಗೆ ರಾಜಕೀಯ ಧುರೀಣರ ಹಾಗೂ ಅಧಿಕಾರಿಗಳ ಸುಧಾರಣಾ ಕಾರ್ಯದಲ್ಲಿ ನಂಬಿಕೆ ನಷ್ಟವಾಯಿತು.

ಬಹು ಮನುಷ್ಯ ಮಾಡುವ ಕೆಲಸದಿಂದ ಎಷ್ಟು ಸಂತೋಷ ಪ್ರಾಪ್ತಿಯಾಗುತ್ತದೆ ಅಥವಾ ಎಷ್ಟರಮಟ್ಟಿಗೆ ಕೆಟ್ಟುದನ್ನು ತಪ್ಪಿಸಲು ಸಾಧ್ಯವೆಂಬುದಕ್ಕೆ ಗಮನಕೊಟ್ಟ ಬೆನ್‌ಥಾಮನ ವಾದವನ್ನು 'ಪ್ರಯೋಜಕತಾವಾದ' ಎನ್ನುತ್ತಾರೆ. ಆಗಿನ ಕಾಲಕ್ಕೆ ಬೆರಗುಗೊಳಿಸುವಂಥ ಹಲವು ಸುಧಾರಣೆಗಳನ್ನು ಸಮರ್ಥಿಸಿದ್ದರಿಂದ (ಉದಾಹರಣೆ : ಗುಪ್ತ ಮತದಾನ, ಮತನೀಡುವ ಹಕ್ಕನ್ನು ಬಹುಮಂದಿಗೆ ವಿಸ್ತರಿಸುವುದು) ಇವನ ವಾದವನ್ನು 'ತೀವ್ರ ಸುಧಾರಣಾವಾದ' ಎಂದು ಕರೆದರು.

ಬೆನ್‌ಥಾಮ್ 1832 ಜೂನ್ 6ರಂದು ತನ್ನ 85ನೆಯ ವಯಸ್ಸಿನಲ್ಲಿ ಕಾಲವಾದ. ಅವನ ಆದೇಶದಂತೆ ಅವನ ಮಿತ್ರರ ಎದುರಲ್ಲೇ ವೈದ್ಯಕೀಯ ವಿದ್ಯಾರ್ಥಿಗಳು ಆತನ ಶವದ ಅಂಗಛೇದನ ಮಾಡಿದರು. ಅನಂತರ ಅಸ್ಥಿಪಂಜರವನ್ನು ಜೋಡಿಸಿ ಅದಕ್ಕೆ ಅವನದೇ ಉಡುಪು ತೊಡಿಸಿ ಲಂಡನ್ ಸಂಗ್ರಹಾಲಯದಲ್ಲಿ ಅದನ್ನು ಇಟ್ಟರು.

## ಬೆಲ್ಜಿಯಂ

ಬೆಲ್ಜಿಯಂ ಚಿಕ್ಕದೇಶ. ಆದರೂ ಕೈಗಾರಿಕೆಗಳ ಹೆಚ್ಚಳದಿಂದ ಸಂಪದಭಿವೃದ್ಧಿಯ ರಾಷ್ಟ್ರ. ಕಲ್ಲಿದ್ದಲು ಗಣಿಗಳಲ್ಲಿ ಇಲ್ಲವೆ ಕಾರಖಾನೆಗಳಲ್ಲಿ ದುಡಿಯುವವರ ಸಂಖ್ಯೆ ದೊಡ್ಡದು. ಈ ರಾಷ್ಟ್ರಕ್ಕೆ ಯೂರೊಪಿನ ಕರ್ಮಾಗಾರ ಎಂಬ ಹೆಸರಿದೆ.

'ಗಾಲ್ ಬುಡಕಟ್ಟಿನ ಜನರಲ್ಲಿ ಬೆಲ್ಜರು ಬಹು ಧೈರ್ಯಶಾಲಿಗಳು' ಎಂದು ಜೂಲಿಯಸ್ ಸೀಸರ್ ಮೆಚ್ಚುಗೆಯ ಮಾತನ್ನು ಆಡಿದ್ದ. ಅವನು ಬೆಲ್ಜಿಯಮನ್ನು ಗೆದ್ದದ್ದು ಕ್ರಿ. ಪೂ. ಐವತ್ತರಲ್ಲಿ.

ಬೆಲ್ಜಿಯಂ ವಾಯುವ್ಯ ಯೂರೊಪಿನಲ್ಲಿದೆ. ಉತ್ತರಕ್ಕೆ ನೆದರ್‌ಲೆಂಡ್ಸ್, ದಕ್ಷಿಣಕ್ಕೆ ಫ್ರಾನ್ಸ್, ಪೂರ್ವಕ್ಕೆ ಲಕ್ಸೆಂಬರ್ಗ್ ಮತ್ತು ಜರ್ಮನಿ ಹಾಗೂ ವಾಯುವ್ಯಕ್ಕೆ ಉತ್ತರ ಸಮುದ್ರಗಳಿವೆ.

ಅನುಕೂಲ ಸ್ಥಳದಲ್ಲಿರುವುದರಿಂದ ಬೆಲ್ಜಿಯಂ ಒಳ್ಳೆಯ ವ್ಯಾಪಾರ ಕೇಂದ್ರ. ಇದೇ ಕಾರಣಕ್ಕಾಗಿ ಯುದ್ಧ ಕಾಲದಲ್ಲಿ ಅದು ರಣರಂಗವಾಯಿತು. ಹೂಣ, ರೋಮನ್, ಆಸ್ಟ್ರಿಯ, ಸ್ಪೇನ್, ಫ್ರಾನ್ಸ್‌ಗಳ ದಾಳಿಯನ್ನು ಅನುಭವಿಸಿದೆ. 1830 ಅಕ್ಟೋಬರ್ 4ರಂದು ಬೆಲ್ಜಿಯಂ ಸ್ವಾತಂತ್ರ್ಯ ಪಡೆಯಿತು. ಮೊದಲನೆಯ ದೊರೆ ಲಿಯೊಪಾಲ್ಡ್ (1790–1865). ಇವನ ಆಳ್ವಿಕೆಯಲ್ಲಿ ಬೆಲ್ಜಿಯಂ ಕೈಗಾರಿಕಾ ಕ್ರಾಂತಿಯಲ್ಲಿ ಪ್ರಮುಖ ಪಾತ್ರವಹಿಸಿತು. 1908ರಲ್ಲಿ ಆಫ್ರಿಕದ ಕಾಂಗೊ ಬೆಲ್ಜಿಯಮಿನ ವಸಾಹತಾಯಿತು. ಮೊದಲನೆಯ ಮಹಾಯುದ್ಧದಲ್ಲಿ ಜರ್ಮನರು ಬೆಲ್ಜಿಯಮಿನ ಬಹುಭಾಗವನ್ನು ಆಕ್ರಮಿಸಿಕೊಂಡರು. ಧೈರ್ಯಶಾಲಿಗಳಾದ ಬೆಲ್ಜರು ಯುದ್ಧದಲ್ಲಿ ಹಾಳಾಗಿದ್ದ ದೇಶ ಬಹು ಬೇಗ ಚೇತರಿಸಿಕೊಳ್ಳುವಂತೆ ಮಾಡಿದರು. 1940ರಲ್ಲಿ ಎರಡನೆಯ ಮಹಾಯುದ್ಧದಲ್ಲಿಯೂ ಜರ್ಮನರು ಬೆಲ್ಜಿಯಮಿನಲ್ಲಿ ತಳವೂರಿದರು. 1945ರ ಫೆಬ್ರವರಿಯಲ್ಲಿ ಬೆಲ್ಜಿಯಂ ಸ್ವತಂತ್ರವಾಯಿತು. ಮತ್ತೊಮ್ಮೆ ಪುನರ್ನಿರ್ಮಾಣ ಕಾರ್ಯ ಆರಂಭವಾಯಿತು. ದೇಶ ಸಂಪದ್ಭರಿತವಾಯಿತು. 1960ರಲ್ಲಿ ತನ್ನ ವಸಾಹತು ಕಾಂಗೊಗೆ ಬೆಲ್ಜಿಯಂ ಸ್ವಾತಂತ್ರ್ಯ ನೀಡಿತು.

ಉತ್ತರ ಮತ್ತು ಪಶ್ಚಿಮದ ತಗ್ಗು ಪ್ರದೇಶ, ಮಧ್ಯದ ಪ್ರಸ್ಥಭೂಮಿ ಮತ್ತು ದಕ್ಷಿಣ ಮತ್ತು ಆಗ್ನೇಯದ ಎತ್ತರ ಪ್ರದೇಶಗಳೆಂದು ಮೂರು ಪ್ರಾಕೃತಿಕ ವಿಭಾಗಗಳನ್ನು ಮಾಡಬಹುದು. ಬೆಲ್ಜಿಯಂ ಮಟ್ಟಸವಾದ ದೇಶ. ಭೂಮಿ ಫಲವತ್ತಾಗಿದೆ. ಸ್ಕೆಲ್ಟ್ ಮತ್ತು ಮರ್ಸ್ ನದಿಗಳು ಮತ್ತು ಇವುಗಳಿಂದ ತೆಗೆದಿರುವ ನಾಲೆಗಳು ಕೃಷಿಗೆ ಸಹಾಯಕವಾಗಿವೆ. ಬೆಲ್ಜಿಯಮಿನಲ್ಲಿ ಅರಣ್ಯಸಂಪತ್ತು ಹೇರಳವಾಗಿ ಸಂಗ್ರಹವಾಗಿದೆ.

ಬೆಲ್ಜಿಯಮಿನಲ್ಲಿ ಚಳಿಗಾಲದಲ್ಲಿ ಹೆಚ್ಚು ಚಳಿಯಿಲ್ಲ. ಬೇಸಿಗೆ ತಂಪು. ಬೆಲ್ಜಿಯಮಿನ ಮುಖ್ಯ ಖನಿಜ ಕಲ್ಲಿದ್ದಲು. ಫಾಸ್ಫೇಟುಗಳು ಕೂಡ ದೊರಕುತ್ತವೆ. ಬೆಲ್ಜಿಯಂ ಕೈಗಾರಿಕಾಭಿವೃದ್ಧಿ ಹೊಂದಿರುವ ದೇಶ. ಬಟ್ಟೆ ಮತ್ತು ಲೇಸ್ ಉದ್ಯಮ ಘೆಂಟ್‌ನಲ್ಲಿವೆ. ಬೆಲ್ಜಿಯಂನ ಲೇಸ್ ಯೂರೊಪಿನಲ್ಲೆಲ್ಲಾ ಹೆಸರುವಾಸಿಯಾಗಿದೆ. ಗಾಜಿನ ತಯಾರಿಕೆಗೆ ಬೆಲ್ಜಿಯಂ ಪ್ರಸಿದ್ಧ. ಕಬ್ಬಿಣ ಮತ್ತು ಉಕ್ಕು, ಸಿಮೆಂಟ್, ಕಾಗದ, ಕತ್ತರಿಸಿದ ವಜ್ರ, ಮರದ ದಿಮ್ಮಿ ಮೊದಲಾದುವುಗಳ ಕೈಗಾರಿಕೆಗಳಿವೆ. ಆದರೂ ಕಚ್ಚಾಮಾಲು ಹೊರದೇಶಗಳಿಂದ ಪೂರೈಕೆಯಾಗಬೇಕು. ಕಾರು, ವಿದ್ಯುತ್ ಉಪಕರಣಗಳು, ಲೋಹ, ಅದಿರು, ಯಂತ್ರಗಳನ್ನು ಆಮದು ಮಾಡಿಕೊಳ್ಳುತ್ತಾರೆ.

ಯೂರೊಪಿನಲ್ಲೇ ಬೆಲ್ಜಿಯಂ ಜನಸಾಂದ್ರ ಪ್ರದೇಶ. ಸರಾಸರಿ ಒಂದು ಚದರ ಕಿಲೊಮೀಟರಿಗೆ 301 ಜನರಿದ್ದಾರೆ. ಇವರಲ್ಲಿ ಎರಡು ಪ್ರಮುಖ ಗುಂಪುಗಳಿವೆ—ಫ್ಲೆಮಿಂಗರು ಮತ್ತು ವಾಲೂನರು. ಫ್ಲೆಮಿಂಗರು ಜರ್ಮನ್ ವಂಶಜರು. ಡಚ್ ಮತ್ತು ಫ್ಲೆಮಿಷ್ ಮಾತನಾಡುತ್ತಾರೆ. ಉತ್ತರ ಭಾಗದಲ್ಲಿ ಇವರ ವಾಸ. ಬಹಳ ಜನರು ದೇಶದ ರೋಮನ್ ಕ್ಯಾಥಲಿಕರು. ಫ್ರೆಂಚ್ ಮಾತನಾಡುವ ವಾಲೂನರು ದಕ್ಷಿಣ ಭಾಗದಲ್ಲಿದ್ದಾರೆ. ಶಾಲೆಗಳಲ್ಲಿ ಎರಡು ಭಾಷೆಗಳನ್ನೂ ಕಲಿಸುತ್ತಾರೆ. ನಗರಗಳ ಹೆಸರುಗಳನ್ನು ಎರಡು ಭಾಷೆಗಳಲ್ಲೂ ಬರೆದಿರುತ್ತಾರೆ.

ಬೆಲ್ಜಿಯಮಿನ ಜೀವನ ಮಟ್ಟ ಮೇಲ್ಮಟ್ಟದ್ದು. ವಿದ್ಯುಚ್ಛಕ್ತಿಯ ಉಪಯೋಗ ಸಾಮಾನ್ಯವಾಗಿ ಪ್ರತಿಯೊಂದು ಮನೆಯಲ್ಲೂ ಇದೆ. ಇಂಥ ಆಧುನಿಕ ಜೀವನದ ಬಗೆಗೆ ಬೆಲ್ಜರು ಹೆಮ್ಮೆಪಟ್ಟುಕೊಳ್ಳುತ್ತಾರೆ. ಬೆಲ್ಜಿಯಮಿನ ಅಡುಗೆಯವರು ಯೂರೊಪಿನಲ್ಲಿ ಪ್ರಸಿದ್ಧರು.

ಬೆಲ್ಜಿಯಮಿನಲ್ಲಿ ರಾಜನೇ ದೇಶದ ಪ್ರಮುಖ, ಸೈನ್ಯದ ದಂಡನಾಯಕ. ಸಂಸತ್ತು ಮಾಡುವ ಕಾನೂನುಗಳನ್ನು ದೊರೆ ಒಪ್ಪಿದ ಮೇಲೆ ಜಾರಿಗೆ ತರುತ್ತಾರೆ. ಪ್ರಧಾನಮಂತ್ರಿಯೇ ಮುಖ್ಯ ಆಡಳಿತಾಧಿಕಾರಿ.

ವಿಶ್ವಸಂಸ್ಥೆಯ ಸದಸ್ಯರಾಷ್ಟ್ರ ಬೆಲ್ಜಿಯಂ.

ರಾಜಧಾನಿ ಬ್ರಸೆಲ್ಸ್ ನೂರಾರು ವರ್ಷಗಳ ಗತಇತಿಹಾಸವನ್ನೂ ಉಳಿಸಿಕೊಂಡು, ಹೊಸತನ್ನೂ ಮೈಗೂಡಿಸಿಕೊಂಡಿರುವ ನಗರ. ಆಂಟ್‌ವರ್ಪ್, ಘೆಂಟ್ ಬಂದರುಗಳು. ಆಂಟ್‌ವರ್ಪ್‌ನ ನಾಟರ್‌ಡ್ಯಾಮ್ ಇಗರ್ಜಿ, ವಿಶೇಷ ಸಸ್ಯೋದ್ಯಾನ, ಮೃಗಾಲಯ ನೋಟಕರ ಮನ ತಣಿಸುತ್ತವೆ. ಘೆಂಟ್‌ನಲ್ಲಿ ಪ್ರಸಿದ್ಧ ಫ್ಲೆಮಿಷ್ ವಿಶ್ವವಿದ್ಯಾನಿಲಯವಿದೆ. ಈ ಊರಿನಲ್ಲಿಯೆ 1812ರಲ್ಲಿ ಅಮೆರಿಕ ಸಂಯುಕ್ತ ಸಂಸ್ಥಾನ ಮತ್ತು ಇಂಗ್ಲೆಂಡಿನ ಪ್ರತಿನಿಧಿಗಳು ಯುದ್ಧ ನಿಲ್ಲಿಸಿವ ಒಪ್ಪಂದಕ್ಕೆ ಸಹಿಹಾಕಿದರು. ಬ್ರಗ್ಸ್ ನಗರ ಉತ್ತರದ ವೆನಿಸ್ ಎನಿಸಿದೆ. ನಾಲೆಗಳನ್ನು ದಾಟಲು ಇಲ್ಲಿ ಐವತ್ತು ಸೇತುವೆಗಳಿವೆ.

| | | |
|---|---|---|
| ಖಂಡ | : | ಯೂರೋಪ್ (ವಾಯುವ್ಯ) |
| ಅಕ್ಷಾಂಶ | : | 49° 30′ ಉ ದಿಂದ 51° 30′ ಉ |
| ರೇಖಾಂಶ | : | 2° 35′ ಪೂ ದಿಂದ 6° 25′ ಪೂ |
| ವಿಸ್ತೀರ್ಣ | : | 30,497 ಚ. ಕಿ. ಮೀ. |
| ಜನಸಂಖ್ಯೆ | : | 92,00,000 |
| ರಾಜಧಾನಿ | : | ಬ್ರಸೆಲ್ಸ್ |
| ಭಾಷೆ | : | ಫ್ರೆಂಚ್, ಡಚ್ |
| ಸರಕಾರ | : | ಜನ್ಮಸಿದ್ಧ, ಸಂವಿಧಾನಬದ್ಧ ರಾಜಪದ್ಧತಿ |
| ಬಾವುಟ | : | ಕಪ್ಪು, ಹಳದಿ ಮತ್ತು ಕೆಂಪು ಬಣ್ಣದ ಅಡ್ಡ ಪಟ್ಟೆಗಳು |

## ಬೆಲೆ

ಒಂದು ಪದಾರ್ಥದ ಬೆಲೆ ಇಷ್ಟು ಎಂದು ಹೇಳುತ್ತೇವೆ. ಅಷ್ಟು ಹಣ ಕೊಟ್ಟು ಪದಾರ್ಥ ಪಡೆಯುತ್ತೇವೆ. ಒಬ್ಬ ಕೆಲಸ ಮಾಡಿದರೆ ಅವನ ಶ್ರಮಕ್ಕೆ ನೀಡುವ ಬೆಲೆ ವೇತನ ಎನಿಸಿಕೊಳ್ಳುತ್ತದೆ. ವೇತನ ಕೊಟ್ಟು ಒಬ್ಬರ ಕೆಲಸದ ಪ್ರಯೋಜನ ಪಡೆಯುತ್ತೇವೆ. ವಿನಿಮಯ ಮಾಡಿಕೊಳ್ಳಲಾಗುವ ಪದಾರ್ಥದ ಅಥವಾ ಸೇವೆಯ ಮೌಲ್ಯವೆ ಬೆಲೆ.

ಹಣವನ್ನು ಆಹಾರದಂತೆ ತಿನ್ನಲಾರೆವು. ಉಡುಪಿನಂತೆ ತೊಡಲಾರೆವು. ಆದರೆ ಹಣದಿಂದ ಯಾವ ವಸ್ತು ಅಥವಾ ಸೌಲಭ್ಯಗಳನ್ನಾದರೂ ಪಡೆಯಬಹುದು : ವಿನಿಮಯ ಮಾಡಿಕೊಳ್ಳಬಹುದು. ಈ ಸಾಮರ್ಥ್ಯವೇ ಅದರ ಮುಖ್ಯ ಗುಣ. ಎಷ್ಟು ಹಣ ನೀಡಿದರೆ ಒಂದು ಕಿಲೊಗ್ರಾಮ್ ಅಕ್ಕಿ ಸಿಗುತ್ತದೆ ? ಒಂದು ಸೈಕಲ್ ಕೊಳ್ಳಲು ಎಷ್ಟು ರೂಪಾಯಿ ತೆರಬೇಕು ? ಒಂದು ಹೆಕ್ಟೇರ್ ಗದ್ದೆಗೆ ಎಷ್ಟು ರೂಪಾಯಿ ಕೊಡಬೇಕು ? ಹೀಗೆ ಬೆಲೆಯನ್ನು ಹೇಳುತ್ತೇವೆ. ವಸ್ತು ಅಥವಾ ಸೇವಾ ಸೌಲಭ್ಯಗಳನ್ನು ಪಡೆಯಲು ನೀಡಬೇಕಾದ ಹಣವೇ ಬೆಲೆ.

ಬೆಲೆಗಳು ಒಂದೇ ರೀತಿ ಇರುವುದಿಲ್ಲ. ಹತ್ತು ವರ್ಷಗಳ ಹಿಂದೆ ವಸ್ತುಗಳು ಮತ್ತು ಸೇವೆಗಳು ಕಡಿಮೆ ಬೆಲೆಗೆ ಸಿಗುತ್ತಿದ್ದುವು. ಈಗ ಅದೇ ವಸ್ತುಗಳು ಮತ್ತು ಸೇವೆಗಳ ಬೆಲೆ ಹೆಚ್ಚು. ಬೆಲೆಗಳು ಏರುತ್ತವೆ. ಇಳಿಯುತ್ತವೆ. ಜೋಳ ಅಥವಾ ಭತ್ತದ ಬೆಳೆ ಕಡಿಮೆಯಾದ ವರ್ಷ ಆ ಧಾನ್ಯದ ಬೆಲೆ ಏರುತ್ತದೆ. ಒಳ್ಳೆಯ ಫಸಲು ಬಂದ ವರ್ಷ ಬೆಲೆ ಇಳಿಯುತ್ತದೆ. ಸುಗ್ಗಿಯ ಆರಂಭದಲ್ಲಿ ಎಲ್ಲ ಕಡೆಗಳಲ್ಲೂ ಧಾನ್ಯ ಸುಲಭವಾಗಿ ದೊರಕುವುದರಿಂದ ಬೆಲೆ ಕಡಮೆ. ಆದರೆ ವರ್ಷದ ಕೊನೆ ಕೊನೆಯಲ್ಲಿ ದಾಸ್ತಾನು ಮುಗಿದುಹೋಗುತ್ತಿದ್ದಂತೆ ಬೆಲೆ ಏರುತ್ತದೆ. ಕೆಲವು ರಾಸಾಯನಿಕ ಪದಾರ್ಥಗಳನ್ನು ನಾವು ಆಮದು ಮಾಡಿಕೊಳ್ಳುತ್ತೇವೆ. ಅವುಗಳು ಸಾಕಷ್ಟು ಸಿಕ್ಕದಿದ್ದರೆ ಬೆಲೆ ಏರುತ್ತದೆ. ಸಮೃದ್ಧವಾಗಿ ಸರಬರಾಜು ಆದರೆ ಬೆಲೆ ಇಳಿಯುತ್ತದೆ. ಒಂದು ವಸ್ತುವಿನ ಬೆಲೆ ಏರಿದರೆ ಅದಕ್ಕೆ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಸಂಬಂಧವಿರುವ ಇತರ ಅನೇಕ ಪದಾರ್ಥಗಳು ಮತ್ತು ಸೇವೆಗಳ ಬೆಲೆಗಳು ಏರುತ್ತವೆ. ಎಣ್ಣೆಯ ಬೆಲೆ ಏರಿದಲ್ಲಿ ಸಾಬೂನಿನ ಬೆಲೆ ಏರುತ್ತದೆ ; ಸೌಂದರ್ಯ ಸಾಧನಗಳ ಬೆಲೆ ಏರುತ್ತದೆ; ತಿಂಡಿ ತಿನಿಸುಗಳ ಬೆಲೆ ಏರುತ್ತದೆ. ಏಕೆಂದರೆ ಇವೆಲ್ಲಕ್ಕೂ ಎಣ್ಣೆ ಬೇಕು. ಪೆಟ್ರೋಲಿನ ಬೆಲೆ ಏರಿದಲ್ಲಿ ಬಸ್ಸು ಟ್ಯಾಕ್ಸಿಗಳ ಪ್ರಯಾಣದ ದರ ಏರುತ್ತದೆ. ಭತ್ತದ ಬೆಲೆ ಏರಿದರೆ ಹೆಚ್ಚು ಬೆಲೆ ಕೊಟ್ಟು ಅದನ್ನು ಕೊಳ್ಳಲಾಗದ ಕೆಲವರು ರಾಗಿಯನ್ನೂ ಜೋಳವನ್ನೂ ಕೊಳ್ಳಲು ಬಯಸುತ್ತಾರೆ. ಅದಕ್ಕೆ ಬೇಡಿಕೆ ಹೆಚ್ಚಿದಾಗ ಅವುಗಳ ಬೆಲೆಯೂ ಏರುತ್ತದೆ.

ಬೆಲೆಗಳ ಇಳಿತವೂ ಇದೇ ಬಗೆಯ ಪರಿಣಾಮಗಳನ್ನು ಉಂಟುಮಾಡುತ್ತದೆ. ಸಾಮಾನ್ಯವಾಗಿ ಎಲ್ಲ ಬೆಲೆಗಳೂ ಏರುತ್ತ ಇರುತ್ತವೆ. ಒಮ್ಮೊಮ್ಮೆ ಕೆಲವು ಬೆಲೆಗಳು ಶಾಶ್ವತವಾಗಿ ಇಳಿದುಹೋಗುವುದುಂಟು. ಬೃಹತ್ ಪ್ರಮಾಣದಲ್ಲಿ ತಯಾರಿಕೆ ನಡೆಸುವುದರಿಂದಲೋ ವಿಜ್ಞಾನದ ಒಂದು ಶೋಧನೆಯನ್ನು ಕೈಗಾರಿಕೆಯಲ್ಲಿ ಬಳಸಿಕೊಳ್ಳುವುದರಿಂದಲೋ ಕೆಲವು ಪದಾರ್ಥಗಳ ಬೆಲೆ ಇಳಿದುಹೋಗುವ ಸಂಭವವಿದೆ. ರೇಡಿಯೊ ಟ್ರಾನ್ಸಿಸ್ಟರುಗಳು ಭಾರತದಲ್ಲಿ ಹಿಂದೆ ಬಹಳ ದುಬಾರಿಯಾಗಿದ್ದುವು. ಎಲೆಕ್ಟ್ರಾನಿಕ್ ಉಪಕರಣಗಳ ತಯಾರಿಕೆ ಭಾರತದಲ್ಲಿ ವಿಪುಲವಾಗಿ ಆಗತೊಡಗಿದಾಗ ಅವುಗಳ ಬೆಲೆ ಇಳಿಯಿತು. ನಮ್ಮ ದೇಶದಲ್ಲಿ ಸಿಕ್ಕದ ಕೆಲವು ವಸ್ತುಗಳನ್ನು ಹೆಚ್ಚು ಬೆಲೆ ಕೊಟ್ಟು ಆಮದುಮಾಡಿಕೊಳ್ಳುತ್ತೇವೆ. ಅವು ನಮ್ಮ ದೇಶದಲ್ಲೇ ಸಿಗುವಂತಾದರೆ ಕಡಮೆ ಬೆಲೆಗೆ ಸಿಗುತ್ತವೆ. ಎರಡು ದಶಕಗಳ ಹಿಂದೆ ಪೆನಿಸಿಲಿನ್ ಹೊರದೇಶದಿಂದಲೇ ಆಮದಾಗಬೇಕಿತ್ತು. ತಯಾರಿಸುವ ವಿಧಾನ ನಮ್ಮಲ್ಲಿ ರೂಪುಗೊಂಡ ಅನಂತರ ಪೂನಾದ ಬಳಿ ಪಿಂಪ್ರಿಯ ಕಾರಖಾನೆಯಲ್ಲಿ ಪೆನಿಸಿಲಿನ್ ಸಿದ್ಧವಾಗತೊಡಗಿ, ಅಗ್ಗವಾಗಿಯೂ ಸುಲಭವಾಗಿಯೂ ಅದು ದೊರೆಯುವಂತಾಯಿತು.

ಬೆಲೆಗಳು ಏರಿಳಿಯಲು, ಪದಾರ್ಥಗಳಿಗಾಗಿ ಬೇಡಿಕೆ ಮತ್ತು ಅವುಗಳ ಸರಬರಾಜು ಕಾರಣ. ಬೇಡಿಕೆ ಹೆಚ್ಚಿಗೆ ಇದ್ದು ಸರಬರಾಜು ಕಡಮೆ ಇದ್ದಲ್ಲಿ ಬೆಲೆ ಏರಿಕೆ. ಬೇಡಿಕೆ ಕಡಮೆ ಇದ್ದು ಸರಬರಾಜು ಹೆಚ್ಚಿಗೆ ಇದ್ದಲ್ಲಿ ಬೆಲೆ ಇಳಿತ. ಕೆಲವೊಂದು ವಸ್ತುಗಳ ಬೆಲೆಗಳು ಬಹಳ ತೀವ್ರವಾದ ಏರಿಳಿತಗಳನ್ನು ತೋರುತ್ತವೆ. ಪ್ರಪಂಚದ ಮಾರುಕಟ್ಟೆ ಮತ್ತು ಸ್ವದೇಶದ ಮಾರುಕಟ್ಟೆಗಳಲ್ಲಿ ಕಾಣಬರುವ ಬೇಡಿಕೆ ಮತ್ತು ಸರಬರಾಜುಗಳನ್ನು ಅನುಸರಿಸಿ ರಬ್ಬರ್, ಸಕ್ಕರೆ, ಚಹ, ಸಣಬು ಮುಂತಾದುವುಗಳ ಬೆಲೆಗಳು ಏರಿಳಿಯುತ್ತವೆ. ಕೆಲವು ವ್ಯಾಪಾರಸ್ಥರು ವಸ್ತುಗಳನ್ನು ದೊಡ್ಡ ಪ್ರಮಾಣದಲ್ಲಿ ಶೇಖರಿಸಿ, ಅವನ್ನು ಮಾರಾಟಕ್ಕೆ ಹೊರಬಿಡದೆ ಕೃತಕ

ಅಭಾವಕ್ಕೆ ಕಾರಣವಾಗಬಹುದು. ಆಗ ಅವಕ್ಕೆ ಬೇಡಿಕೆ ವಿಪರೀತವಾಗಿ ಬೆಲೆಗಳು ಏರುತ್ತವೆ.

ಕಚ್ಚಾ ವಸ್ತುಗಳ ಬೆಲೆಗಳು ಸಿದ್ಧ ವಸ್ತುಗಳ ಬೆಲೆಗಳಿಗಿಂತ ಹೆಚ್ಚು ಏರಿಳಿತಗಳನ್ನು ತೋರುತ್ತವೆ. ವ್ಯವಸಾಯೋತ್ಪನ್ನಗಳಾದ ಕಚ್ಚಾ ವಸ್ತುಗಳಿಗಿಂತ ಸಿದ್ಧ ವಸ್ತುಗಳ ಬೆಲೆಗಳನ್ನು ಹತೋಟಿಯಲ್ಲಿಡುವುದು ಸುಲಭ. ಬೆಲೆಗಳು ಏರುವುದನ್ನು ಇಳಿಯುವುದನ್ನು ಸಿದ್ಧ ವಸ್ತುಗಳ ತಯಾರಿಕೆಗಾರ ಅಥವಾ ಹಂಚಿಕೆದಾರ ತಡೆಯುತ್ತಾನೆ. ಬೆಲೆಗಳು ಶೀಘ್ರವಾಗಿ ಇಳಿಯತೊಡಗಿದರೆ ತಯಾರಿಕೆಗಾರ ವಸ್ತುಗಳ ತಯಾರಿಕೆಯನ್ನು ಕಡಮೆ ಮಾಡುತ್ತಾನೆ. ಅಥವಾ ಹಂಚಿಕೆದಾರ ಮಾರಾಟವನ್ನು ತಡೆಯುತ್ತಾನೆ. ಬೆಲೆಗಳು ಮತ್ತೆ ಏರುವವರೆಗೆ ಕಾದು ಸಿದ್ಧವಸ್ತುಗಳನ್ನು ಮಾರುಕಟ್ಟೆಗೆ ತರುತ್ತಾನೆ. ಬೆಲೆಗಳು ಏರುತ್ತಿದ್ದಾಗ ಸಿದ್ಧವಸ್ತುಗಳಿಗೆ ಗಿರಾಕಿ ಕಡಮೆಯಾಗುತ್ತದೆ. ವಸ್ತುಗಳ ನಮೂನೆಗಳನ್ನು ಬದಲಾಯಿಸುವುದು, ತಯಾರಿಕಾ ವಿಧಾನಗಳನ್ನು ಬದಲಾಯಿಸುವುದು ಮುಂತಾದ ಕ್ರಮಗಳನ್ನು ಕೈಗೊಂಡು ಬೆಲೆಗಳನ್ನು ಸ್ಥಿಮಿತಗೊಳಿಸಬಹುದು. ವ್ಯವಸಾಯೋತ್ಪನ್ನಗಳು ಸುಲಭವಾಗಿ ಇಂಥ ಹತೋಟಿಗೆ ಒಳಪಡುವುದಿಲ್ಲ. ಏಕೆಂದರೆ ಅವುಗಳ ಸರಬರಾಜು ಬಹುಮಟ್ಟಿಗೆ ಪ್ರಕೃತಿಯನ್ನು ಅವಲಂಬಿಸಿರುತ್ತದೆ ; ಅದನ್ನು ಉತ್ಪಾದಿಸುವವರ ಸಂಖ್ಯೆಯೂ ಹೇರಳವಾಗಿರುತ್ತದೆ. ಸಿದ್ಧವಸ್ತುಗಳಂತೆ ಇವನ್ನು ಬಹುಕಾಲ ಕೆಡದಂತೆ ರಕ್ಷಿಸಿ ಇಡುವುದು ಕಷ್ಟ.

ಸರಕಾರ ಪ್ರತ್ಯಕ್ಷ ಮತ್ತು ಅಪ್ರತ್ಯಕ್ಷ ವಿಧಾನಗಳಿಂದ ಬೆಲೆಗಳನ್ನು ನಿಯಂತ್ರಿಸುತ್ತದೆ. ದೇಶದೊಳಗೆ ಅಂಚೆಯ ದರಗಳು ಎಲ್ಲ ಕಡೆಯೂ ಒಂದೇ. ನಮ್ಮ ದೇಶದಲ್ಲಿ ಔಷಧಿ ಮತ್ತು ಕೆಲವು ದರ್ಜೆಯ ಬಟ್ಟೆಗಳ ಮೇಲೆ ಪರಮಾವಧಿ ಚಿಲ್ಲರೆ ಬೆಲೆಯನ್ನು ಮುದ್ರಿಸಬೇಕೆಂದು ಕಡ್ಡಾಯ ಮಾಡಲಾಗಿದೆ. ಇದು ಬೆಲೆಗಳ ಪ್ರತ್ಯಕ್ಷ ನಿಯಂತ್ರಣ. ಆಮದು ಮತ್ತು ರಫ್ತುಗಳಿಗೆ ಸಹಾಯಧನ ನೀಡುವುದು, ಉತ್ಪಾದನೆಗೆ ಅನುಮತಿ ನೀಡುವುದು ಮತ್ತು ಇಂಥ ಉದ್ಯಮಕ್ಕೆ ಈ ಸಾಮಾನು ಇಷ್ಟು ಕೊಡಬಹುದು ಎಂದು ಸಮ್ಮತಿಸುವುದು, ಮದ್ಯಸಾರಯುಕ್ತ ಪದಾರ್ಥಗಳು ಮತ್ತು ಅಮದಾದ ಪದಾರ್ಥಗಳನ್ನೊಳಗೊಂಡ ವಸ್ತುಗಳ ಮೇಲೆ ಅಬ್ಕಾರಿ ಸುಂಕವನ್ನು ಹೇರುವುದು, ಈ ಬಗೆಯ ಕ್ರಮಗಳಿಂದ ಮಾರುಕಟ್ಟೆಗೆ ಬರುವ ವಸ್ತುಗಳ ಪ್ರಮಾಣವನ್ನು ನಿಯಂತ್ರಿಸಿ ಬೆಲೆಗಳನ್ನು ಹತೋಟಿಯಲ್ಲಿ ಇಡಬಹುದು. ಇದು ಸರಕಾರದ ಅಪ್ರತ್ಯಕ್ಷ ನಿಯಂತ್ರಣ. ಸಾರಿಗೆಯನ್ನು ಭಾಗಶಃ ರಾಷ್ಟ್ರೀಕರಣಗೊಳಿಸುವುದರಿಂದ ಪ್ರಯಾಣ ದರಗಳನ್ನು ಸ್ವಲ್ಪಮಟ್ಟಿಗೆ ನಿಯಂತ್ರಿಸಬಹುದು. ಸರಕಾರವೇ ಆಹಾರಧಾನ್ಯಗಳನ್ನು ಸುಗ್ಗಿಯಕಾಲದಲ್ಲಿ ಕಡ್ಡಾಯವಾಗಿ ನಿರ್ದಿಷ್ಟ ಬೆಲೆಯಲ್ಲಿ ಕೊಂಡು, ವರ್ಷಪೂರ್ತಿ ದಾಸ್ತಾನಿನ ಹಂಚಿಕೆಯನ್ನು ಕ್ರಮಗೊಳಿಸಿ, ಆಹಾರಧಾನ್ಯಗಳ ಬೆಲೆ ತೀವ್ರವಾಗಿ ಏರಿಳಿಯುವುದನ್ನು ತಡೆಯಬಹುದು. ನಮ್ಮ ದೇಶದ 'ಆಹಾರ ಕಾರ್ಪೊರೇಷನ್', 'ಸ್ಟೇಟ್ ಟ್ರೇಡಿಂಗ್ ಕಾರ್ಪೊರೇಷನ್', 'ಕಾಫಿ ಬೋರ್ಡ್' ಮುಂತಾದ ಸಂಸ್ಥೆಗಳು ವಿತರಣೆಯ ಜೊತೆಗೆ ಬೆಲೆ ನಿಯಂತ್ರಣದ ಕಡೆಗೂ ಗಮನಹರಿಸುತ್ತವೆ.

ಬೆಲೆಗಳ ಏರಿಳಿತ ಪಕ್ಷದ ಮೇಲೆ ತೀವ್ರ ಪರಿಣಾಮ ಬೀರುತ್ತದೆ. ವಾಣಿಜ್ಯ ವ್ಯಾಪಾರಗಳ ಮೇಲೂ ಪ್ರಭಾವ ಬೀರುತ್ತದೆ.

ನೋಡಿ: ಅರ್ಥಶಾಸ್ತ್ರ ; ಬೆಲೆ ನೀತಿ ; ಹಣದುಬ್ಬರ ; ಸರಬರಾಜು ಮತ್ತು ಬೇಡಿಕೆ.

## ಬೆಳೆ

"ಬೆಳೆ ಹೇಗಿದೆ ?" ರೈತ ತನ್ನ ಇನ್ನೊಬ್ಬ ಮಿತ್ರನಿಗೆ ಕೇಳುವ ಕುಶಲ ಪ್ರಶ್ನೆ. ರೈಲು ಬಸ್ಸುಗಳಲ್ಲಿ ಅಪರಿಚಿತರೂ ಒಬ್ಬರನ್ನೊಬ್ಬರು 'ನಿಮ್ಮ ಕಡೆ ಬೆಳೆ ಹೇಗಿದೆ ?' ಎಂದು ಕೇಳುತ್ತಾರೆ.

ಮನುಷ್ಯ ತನ್ನ ಉಪಯೋಗಕ್ಕಾಗಿ ಬೆಳಸುವ ಸಸ್ಯಸಮೂಹಗಳು ಬೆಳೆ. ಬೆಳೆಯಲ್ಲಿ ಹಲವಾರು ವಿಧಗಳಿವೆ. ಅಕ್ಕಿ, ರಾಗಿ, ಗೋಧಿ, ಜೋಳ, ನವಣೆ, ಸಜ್ಜೆ, ತರಕಾರಿ ಮತ್ತು ಹಣ್ಣು ಹಂಪಲು ಇಂಥವು ಆಹಾರದ ಬೆಳೆಗಳು. ಹತ್ತಿ ಮತ್ತು ಸೆಣಬು ಬಟ್ಟೆ ತಯಾರಿಕೆಗೆ ಪ್ರಯೋಜನವಾಗುವಂಥವು. 1930ರಿಂದೀಚೆಗೆ ಕೈಗಾರಿಕೆಗೆ ಬೇಕಾದ ಬೆಳೆಗಳನ್ನೂ ಬೆಳೆಯಲಾಗುತ್ತಿದೆ.

ಕೆಲವು ಬೆಳೆಗಳು ಭೂಮಿಯ ಮೇಲ್ಭಾಗದಲ್ಲಿ ಕಾಣುವುವು—ಸೊಪ್ಪುಗಳು, ಬದನೆಕಾಯಿ, ಕಬ್ಬು, ಭತ್ತ ಇಂಥವು. ಭೂಮಿಯ ಮೇಲೆ ಕಾಣದಿರುವುವು ಕೆಲವು. ಗೆಡ್ಡೆಗೆಣಸುಗಳು ಭೂಮಿಯಲ್ಲಿ ಹುದುಗಿರುತ್ತವೆ. ಧಾನ್ಯವುಳ್ಳ ಸಸ್ಯಗಳನ್ನು ಬೇರುಸಹಿತ ಕಿತ್ತು, ಒಟ್ಟು ಹಾಕಿ, ಅದರ ಬೀಜಗಳನ್ನು ಬೇರ್ಪಡಿಸಿ ತೆಗೆಯುತ್ತಾರೆ. ಉಳಿದ ಸಸ್ಯಭಾಗವನ್ನು, ಭೂಮಿಯನ್ನು ಫಲವತ್ತಾಗಿಸಲು, ಇಲ್ಲವೆ ಒಣಗಿಸಿ ಬೆಂಕಿ ಮಾಡಲು ಉಪಯೋಗಿಸುತ್ತಾರೆ. ಈಚೆಗೆ ಇದನ್ನು ಕಾಗದದ ತಯಾರಿಕೆಯಲ್ಲೂ ಸೇರಿಸುವುದುಂಟು. ಎಲ್ಲ ಬೆಳೆಯನ್ನೂ ಭೂಮಿಯಿಂದ ತೆಗೆದೇ ಉಪಯೋಗಿಸಬೇಕಾಗಿಲ್ಲ. ಮೇವಿಗಾಗಿ ಹಾಕಿದ ಬೆಳೆಯನ್ನು ದನಕರುಗಳು ಬಯಲಿನಲ್ಲೇ ಮೇಯ್ದು ಮುಗಿಸುತ್ತವೆ. ಬೆಳೆಗಳನ್ನು ತೆಗೆದ ಅನಂತರ ಗಾಳಿ ಮತ್ತು ನೀರಿನ ಪ್ರಭಾವದಿಂದ ಭೂಮಿಯ ಸವೆತವನ್ನು ರಕ್ಷಿಸಲು ಅದೇ ಜಾಗದಲ್ಲಿ ಭೂಮಿ ಮುಚ್ಚುವಂತೆ ಸಸ್ಯ ಬೆಳೆಸಿ ಅದನ್ನೇ ಗೊಬ್ಬರವಾಗಿಯೂ ಉಪಯೋಗಿಸುತ್ತಾರೆ.

ಕೆಲವು ಬೆಳೆಗಳನ್ನು ಮಾನವ ನೇರವಾಗಿ ಉಪಯೋಗಿಸಬಹುದು. ಹಣ್ಣು ತರಕಾರಿಗಳು ಇಂಥವು. ಧಾನ್ಯಗಳನ್ನು ಪರಿಷ್ಕೃತಗೊಳಿಸಿ, ಸಂಸ್ಕರಿಸಿ ಬಳಸಬಹುದು. ಧಾನ್ಯದ ಗಿರಣಿಯಲ್ಲಿ ಬರುವ ಉಪ ಉತ್ಪನ್ನವಾದ ತೌಡು ಅಥವಾ ಹೊಟ್ಟು ದನಕರುಗಳ ಆಹಾರವಾಗುತ್ತದೆ. ಕೆಲವನ್ನು ಪರೋಕ್ಷವಾಗಿ ಬಳಸುತ್ತಾರೆ. ಕಬ್ಬಿನಿಂದ ಸಕ್ಕರೆ, ಎಣ್ಣೆ ಬೀಜಗಳಿಂದ ಎಣ್ಣೆ–ಹೀಗೆ ಬೆಳೆಯ ಬಳಕೆ ಪರ್ಯಾಯವಾಗಿ ಆಗುತ್ತದೆ. ಆಹಾರ ಅಥವಾ ಮೇವಿನ ಬೆಳೆಗಳು ಎಂದು ನಿಖರವಾಗಿ ಬೆಳೆಗಳನ್ನು ವಿಭಾಗಮಾಡಲು ಆಗುವುದಿಲ್ಲ. ಕೆಲವೆಡೆ ಆಹಾರವಾದದ್ದು ಕೆಲವೆಡೆ ಮೇವಿಗಾಗಿ ಮತ್ತಾವುದಾದರೂ ಉಪಯೋಗಕ್ಕಾಗಿ ಬಳಸಲ್ಪಡಬಹುದು. ಸೋಯಾ ಅವರೆ ಆಗ್ನೇಯ ಏಷ್ಯದಲ್ಲಿ ಒಂದು ಮುಖ್ಯ ಆಹಾರ ಪದಾರ್ಥವಾದರೆ ಅಮೆರಿಕದ ಸಂಯುಕ್ತ ಸಂಸ್ಥಾನದಲ್ಲಿ ಅದನ್ನು ಎಣ್ಣೆಗಾಗಿ, ಕೈಗಾರಿಕೆಗಳಲ್ಲಿ ಮತ್ತು ಭೂಮಿಯನ್ನು ಹಸನು ಮಾಡುವುದಕ್ಕಾಗಿ ಬೆಳೆಸುತ್ತಾರೆ.

ಕೆಲವು ಬೆಳೆಗಳು ಮುಖ್ಯ ಉತ್ಪನ್ನಗಳಿಗಷ್ಟೇ ಅಲ್ಲದೆ ಅವುಗಳ ಉಪ ಉತ್ಪನ್ನಗಳಿಗಾಗಿಯೂ ಮಹತ್ವ ಪಡೆದಿವೆ. ಹತ್ತಿ ಮುಖ್ಯವಾಗಿ ನೂಲಿಗೆಂದು ಬೆಳೆಯಲ್ಪಡುತ್ತಿದೆ. ಆದರೆ ಅದರಿಂದ ಗಮನಾರ್ಹವಾದ ಅಂಶದಲ್ಲಿ (ಬೀಜದಿಂದ) ಎಣ್ಣೆ, ಹಿಂಡಿ, ಸಿಪ್ಪೆ ಹಾಗೂ ನೂಲಿನ ತುಂಡು ಎಳೆಗಳೂ ದೊರೆಯುತ್ತವೆ. ಎಣ್ಣೆಬೀಜಗಳಿಂದ ಎಣ್ಣೆ ಹಾಗೂ

ಸಸಾರಜನಕ ಅಧಿಕವಾಗಿರುವ ಆಹಾರ ಪದಾರ್ಥವನ್ನು ಪಡೆಯಬಹುದು. ಹೀಗೆಯೇ ಕಬ್ಬಿನಿಂದ ಬೆಲ್ಲ, ಸಕ್ಕರೆ ಪಡೆಯುವಾಗಲೂ ಅವಶಿಷ್ಟವಾಗಿ ಹಲವು ಉಪಯುಕ್ತ ವಸ್ತುಗಳು ದೊರೆಯುತ್ತವೆ.

ಹವೆ, ಭೂಮಿ ಹಾಗೂ ಆರ್ಥಿಕ ಸಮರ್ಥನೆಗಳು ಬೆಳೆಯನ್ನು ಎಷ್ಟು ಭೂಮಿಯಲ್ಲಿ ಯಾವ ರೀತಿಯಲ್ಲಿ ಬೆಳೆಯಬೇಕು ಎಂಬುದನ್ನು ನಿರ್ಧರಿಸುತ್ತವೆ. ವೈಜ್ಞಾನಿಕ ರೀತಿಯಲ್ಲಿ ಅಭಿವೃದ್ಧಿಗೊಳಿಸಲಾದ ಉತ್ತಮ ತಳಿಗಳು, ಸತ್ತ್ವಶಾಲಿ ಬೆಳೆಗಳು ಮತ್ತು ಆಧುನಿಕ ಯಂತ್ರಗಳ ಬಳಕೆಯಿಂದ ಬೆಳೆಗಳ ಉತ್ಪನ್ನ ಮಟ್ಟವನ್ನು ಇನ್ನೂ ಹೆಚ್ಚು ಏರಿಸಬಹುದು. ಹಾಗೆಯೇ ಬೆಳೆಗಳ ಸಂಸ್ಕರಣಾ ವಿಧಾನಗಳಲ್ಲಿಯೂ ಸುಧಾರಣೆಗಳನ್ನು ಅಳವಡಿಸಿಕೊಳ್ಳಬಹುದು. ಹವೆ ಮತ್ತು ಭೂಮಿಯ ಪರಿಸ್ಥಿತಿಗಳಿಂದ ಬೆಳೆಯ ಹರಹಿನಲ್ಲಷ್ಟೇ ಅಲ್ಲದೆ ಅದರ ಗುಣ ವಿಶೇಷಗಳಲ್ಲಿಯೂ ವ್ಯತ್ಯಾಸ ತೋರುತ್ತದೆ. ಸೋವಿಯೆತ್ ಒಕ್ಕೂಟದ ಕೆಲವು ಶುಷ್ಕ ಪ್ರದೇಶಗಳಲ್ಲಿ ಚಳಿಗಾಲದ ಹಾಗೂ ವಸಂತದಲ್ಲಿ ಬೆಳೆಯಲಾದ ಗೋಧಿ ಗಟ್ಟಿ ಕಾಳಿನದು, ಇವುಗಳಲ್ಲಿ ಸಸಾರಜನಕದ ಅಂಶ ಹೆಚ್ಚು. ಬ್ರೆಡ್ ತಯಾರಿಕೆಗೋಸ್ಕರ ಈ ಗೋಧಿಗೆ ವಿಶೇಷ ಬೇಡಿಕೆ. ಪಶ್ಚಿಮ ಯೂರೋಪ್ ಹಾಗೂ ಅಮೆರಿಕದ ಕೆಲವು ಭಾಗಗಳಲ್ಲಿ ತೇವಪೂರಿತ ಹವೆಯಲ್ಲಿ ಬೆಳೆದ ಗೋಧಿಯ ಕಾಳು ಮಿದು. ಇದು ಹಿಟ್ಟಿನ ತಯಾರಿಕೆಗಳಿಗೆ ಹೆಚ್ಚು ಯೋಗ್ಯ.

ಬೆಳೆಗಳಿಗೆ ಮಳೆ ಮುಖ್ಯ. ಇದನ್ನು ಅವಲಂಬಿಸಿ ಬೆಳೆ ತೆಗೆಯಬೇಕು. ಶಾಖ ಹಾಗೂ ಸೂರ್ಯನ ಬೆಳಕಿಗೆ ಬೆಳೆಯ ಕೃಷಿಯಲ್ಲಿ ಪ್ರಧಾನ ಪಾತ್ರ. ಮೇವಿಗೆ ಬೇಕಾದ ಸಸ್ಯದ ಬೆಳೆಗೆ ತೇವವೂ ಶಾಖವೂ ಇರುವ ಹವೆ ಬೇಕು. ಬೆಳೆಗಳನ್ನು ಬಿತ್ತುವ ಕಾಲ ಮುಖ್ಯ. ವಸಂತದಲ್ಲಿ ಆಲೂಗಡ್ಡೆ, ಬಟಾಣಿ, ಕಬ್ಬು ಇತ್ಯಾದಿಗಳನ್ನು ಬಿತ್ತುತ್ತಾರೆ. ಬೆಳೆಗಳ ವಿಧವನ್ನು ಅನುಸರಿಸಿ ವ್ಯವಸಾಯ ರೀತಿಯನ್ನು ರೂಢಿಸಿಕೊಳ್ಳಬೇಕು. ಗೊಬ್ಬರ, ಕೃತಕ ಗೊಬ್ಬರಗಳ ಉಪಯೋಗ ಕ್ರಮಗಳನ್ನು ಅರಿತಿರಬೇಕು. ಸಾಧಾರಣ ಗೊಬ್ಬರ ಸಸ್ಯಗಳಿಗೆ ಪುಷ್ಟಿ ನೀಡುತ್ತದೆ. ಭೂಮಿಯನ್ನು ಫಲವತ್ತಾಗಿ ಮಾಡುತ್ತದೆ. ಕೃತಕಗೊಬ್ಬರ ತಾತ್ಕಾಲಿಕವಾಗಿ ಸಸ್ಯಕ್ಕೆ ಪುಷ್ಟಿಕೊಡುತ್ತದೆ. ಬೆಳೆಯ ವ್ಯವಸಾಯದಲ್ಲಿ ಕ್ರಿಮಿಕೀಟಾದಿಗಳ ಉಪಟಳ ಹೋಗಲಾಡಿಸುವ ಚಿಕಿತ್ಸೆ ಗಣನೀಯವಾದದ್ದು. ಇದಕ್ಕೆ ತಕ್ಕ ನಿವಾರಣೆ ಅಥವಾ ಪರಿಹಾರ ಕ್ರಮಗಳನ್ನು ಕೈಗೊಳ್ಳಬೇಕಾಗುತ್ತದೆ.

ಒಂದು ಬೆಳೆ ಬೆಳೆದ ಅನಂತರ ಅದೇ ನೆಲದಲ್ಲಿ ಮತ್ತೊಂದು ಬೆಳೆಯನ್ನು ಬೆಳೆಯುತ್ತಾರೆ. ಇದಕ್ಕೆ ಬೆಳೆಗಳ ಆವರ್ತನೆ ಎಂದು ಹೆಸರು. ಇದರಿಂದ ಎರಡು ಪ್ರಯೋಜನಗಳುಂಟು. ಭೂಮಿಯ ಗುಣವನ್ನು ಉತ್ತಮಗೊಳಿಸುವುದು ಮತ್ತು ಒಂದಾದ ಮೇಲೊಂದರಂತೆ ಬೆಳೆಯ ಉತ್ಪನ್ನ ಪಡೆಯುವುದು. ಈ ವಿಧದ ವ್ಯವಸಾಯ ಈಜಿಪ್ಟ್ ದೇಶದ ಪುರಾತನ ಸಂಸ್ಕೃತಿಯ ಕಾಲದಿಂದ ರೂಢಿಯಲ್ಲಿದೆ.

ಭಾರತದ ಮುಖ್ಯಬೆಳೆಗಳ ವಿಂಗಡಣೆ ಈ ರೀತಿ: 1. ಆಹಾರ ಬೆಳೆಗಳು: ಭತ್ತ, ಗೋಧಿ, ಬಾರ್ಲಿ, ದ್ವಿದಳ ಧಾನ್ಯಗಳು, ಕಾಳುಗಳು, ಕಬ್ಬು ಮತ್ತು ಸಾಂಬಾರ ಪದಾರ್ಥಗಳು. 2. ಎಣ್ಣೆ ಬೀಜಗಳು: ಸಾಸಿವೆ, ಎಳ್ಳು, ಹರಳು, ನೆಲಗಡಲೆ ಹಾಗೂ ತೆಂಗು. 3. ಎಳೆಯಿರುವ ಪದಾರ್ಥಗಳು: ಹತ್ತಿ, ತೆಂಗಿನ ನಾರು, ಸಣಬು, 4. ಔಷಧಿ ಹಾಗೂ ಪಾನೀಯ ಪದಾರ್ಥಗಳ ಬೆಳೆಗಳು: ಗಸಗಸೆ, ಹೊಗೆಸೊಪ್ಪು, ಚಹ, ಕಾಫಿ, ಸಿಂಕೋನಾ.

ಮುಕ್ಕಾಲು ಭಾಗ ವ್ಯವಸಾಯ ಭೂಮಿಯನ್ನು ಆಹಾರ ಬೆಳೆಗಳಿಗಾಗಿಯೂ ಮಿಕ್ಕ ಭೂಮಿಯನ್ನು ವಾಣಿಜ್ಯ ಬೆಳೆಗಳಿಗೋಸ್ಕರವೂ ರೂಢಿಸಲಾಗುತ್ತದೆ. ಬೆಳೆಗಾಗಿ ಉಪಯೋಗವಾಗುವ ಭೂಮಿಯಲ್ಲಿ ಶೇಕಡಾ ಇಪ್ಪತ್ತೆರಡು ಭಾಗ ಭತ್ತ ಉತ್ಪನ್ನಕ್ಕೆ, ಒಂಬತ್ತು ಭಾಗ ಗೋಧಿಗೆ. ಎಣ್ಣೆ ಬೀಜಗಳು, ಹತ್ತಿ, ಕಬ್ಬು ಮತ್ತು ನಾರು ಮುಖ್ಯ ವಾಣಿಜ್ಯ ಬೆಳೆಗಳು.

ಖಾರಿಫ್ ಹಾಗೂ ರಾಬಿ ಎಂದು ಬೆಳೆಯುವ ಕಾಲವನ್ನು ಭಾರತದಲ್ಲಿ ವಿಂಗಡಿಸಿದ್ದಾರೆ. ಖಾರಿಫ್ ನವೆಂಬರ್‌ನಿಂದ ಹಿಡಿದು ಮುಂದಿನ ಅಕ್ಟೋಬರ್ ವರೆಗೆ, ರಾಬಿ ಮೇಯಿಂದ ಏಪ್ರಿಲ್ ವರೆಗೆ. ಖಾರಿಫ್ ಬೆಳೆಯಲ್ಲಿ ಅಕ್ಕಿ, ಜೋಳ, ಮುಸುಕಿನ ಜೋಳ, ಹತ್ತಿ, ಕಬ್ಬು, ಎಳ್ಳು ಹಾಗೂ ನೆಲಗಡಲೆಗಳು ಬೆಳೆಯುತ್ತವೆ. ರಾಬಿ ಬೆಳೆಯಲ್ಲಿ ಗೋಧಿ, ಬಾರ್ಲಿ, ಕಾಳುಗಳು, ಲಿನ್‌ಬೀಜ ಮತ್ತು ಸಾಸಿವೆ ಬೆಳೆಯುತ್ತವೆ.

ಹೆಚ್ಚು ಬೆಳೆ ಬೆಳೆಯುವ ಯೋಜನೆಯಲ್ಲಿ ಹೊಸ ಪ್ರಯೋಗಗಳು ಭಾರತದಲ್ಲಿ ನಡೆದಿದ್ದು, ಅವು ಫಲಕಾರಿಯಾಗುತ್ತಿವೆ. ಜಪಾನಿನಲ್ಲಿ ಬೆಳೆಯುವ ಭತ್ತದ ರೀತಿಯನ್ನು ಅನುಕರಣೆಮಾಡಿ ವರ್ಷಕ್ಕೆ ಎರಡು, ಮೂರು ಸಲ ಭತ್ತ ತೆಗೆಯುತ್ತಾರೆ. ಮಿಶ್ರತಳಿ ಜೋಳ ಮುಂತಾದುವನ್ನು ಬೆಳೆಯುತ್ತಾರೆ. ಬಿತ್ತಿದ ಮಿಶ್ರತಳಿ ಬೀಜ ಬಳಸಿದರೆ ಸಾಮಾನ್ಯ ಬೀಜ ಬಳಸಿ ಪಡೆಯುವುದಕ್ಕಿಂತ ಬೇಗನೆ ಬೆಳೆ ಪಡೆಯಬಹುದು.

ಸಮೃದ್ಧಿಯಾದ ಬೆಳೆ—ಕಣ್ಣಿಗೆ, ಮನಸ್ಸಿಗೆ ಹಬ್ಬ



## ಬ್ರೆಜಿಲ್

ಸ್ವತಂತ್ರ ಗಣರಾಜ್ಯವಾಗಲು ಅನೇಕ ರಾಷ್ಟ್ರಗಳು ಯುದ್ಧಮಾಡಿವೆ; ರಕ್ತಪಾತವಾಗಿದೆ. ಆದರೆ ಯಾವ ಯುದ್ಧವೂ ಇಲ್ಲದೆಯೇ ಹತ್ತೊಂಬತ್ತನೆಯ ಶತಮಾನದಲ್ಲಿ ಗಣರಾಜ್ಯವಾದ ರಾಷ್ಟ್ರ ಬ್ರೆಜಿಲ್.

ಬ್ರೆಜಿಲ್ ಎಂಬುದು ಒಂದು ಬಗೆಯ ಮರದ ಹೆಸರು. ಯೂರೊಪಿನಲ್ಲಿ ಬಹಳ ವರ್ಷಗಳ ಹಿಂದೆ ಅರಸರೂ ಸರದಾರರೂ ಹಾಕಿಕೊಳ್ಳುತ್ತಿದ್ದ ಹೊಳೆಹೊಳೆಯುವ ಕೆಂಪು ಬಟ್ಟೆಗಳಿಗೆ ಬಣ್ಣಹಾಕಲು ಈ ಮರ ಅತ್ಯವಶ್ಯವಾಗಿತ್ತು. ಬ್ರೆಜಿಲ್‌ನ ದಟ್ಟವಾದ ಅಡವಿ ಅಟ್ಲಾಂಟಿಕ್ ಸಾಗರದಲ್ಲಿ ಒಂದು ದ್ವೀಪದಲ್ಲಿದೆಯೆಂದು ಹದಿನೈದನೆಯ ಶತಮಾನದಲ್ಲಿ ಯೂರೊಪಿನಲ್ಲಿ ಸುದ್ದಿ ಇದ್ದಿತು. ಈ ನಡುಗಡ್ಡೆಗಾಗಿ ಅನ್ವೇಷಣೆ ನಡೆಯಿತು. ಕೊನೆಗೆ 1500ರಲ್ಲಿ ಪೋರ್ಚುಗಲಿನ ನಾವಿಕ ಪೆದ್ರೊ ಅಲ್ವಾರಿಸ್ ಕಾಬ್ರಾಲ್ ಈ ಗಿಡಗಳನ್ನು ಕಂಡುಹಿಡಿದ. ದ್ವೀಪದಲ್ಲಲ್ಲ, ಸಾಮಾನ್ಯ ಪ್ರದೇಶದಲ್ಲಿಯೇ ಅವು ಇದ್ದುವು. ಬ್ರೆಜಿಲ್ ಗಿಡಗಳು ದೊರೆತ ಕಾರಣ ಆ ಪ್ರದೇಶಕ್ಕೆ ಬ್ರೆಜಿಲ್ ಎಂದೇ ಹೆಸರಾಯಿತು.

ಬ್ರೆಜಿಲ್ ದಕ್ಷಿಣ ಅಮೆರಿಕದಲ್ಲಿಯೇ ದೊಡ್ಡ ದೇಶ. ಪ್ರಪಂಚದ ದೊಡ್ಡ ನದಿ ಅಮೆಜಾನ್, ಅತಿ ಅಗಲವಾದ ಎಲೆಗಳುಳ್ಳ ಮರಗಳು, ಜಗತ್ತಿನಲ್ಲಿ ಭಾರಿಯಾದ ಫುಟ್‌ಬಾಲ್ ಕ್ರೀಡಾಂಗಣ ಬ್ರೆಜಿಲ್‌ನಲ್ಲಿವೆ. ಪ್ರಪಂಚದಲ್ಲೇ ಹೆಚ್ಚು ಕಾಫಿ ಬೆಳೆಯುವ ದೇಶ ಬ್ರೆಜಿಲ್.

ಬ್ರೆಜಿಲ್‌ನಲ್ಲಿ ಈಗಿರುವವರು ಪೋರ್ಚುಗೀಸರು. ನೀಗ್ರೊ ಗುಲಾಮರು, ಮೂಲನಿವಾಸಿಗಳಾದ ಇಂಡಿಯನರು, ಐರೋಪ್ಯರು ಇವರೆಲ್ಲರ ಮಿಶ್ರ ಸಂತತಿಯವರು. ಶೇಕಡಾ ತೊಂಬತ್ತಮೂರು ಜನ ರೋಮನ್ ಕ್ಯಾಥಲಿಕರು. ಪೋರ್ಚುಗೀಸ್ ಮಾತಾಡುವ ಏಕೈಕ ಪಶ್ಚಿಮಾರ್ಧಗೋಳದ ದೇಶವೆಂದರೆ ಬ್ರೆಜಿಲ್. ವಿದ್ಯಾವಂತರು ಸ್ಪ್ಯಾನಿಷ್, ಇಂಗ್ಲಿಷ್ ಮತ್ತು ಫ್ರೆಂಚ್ ಭಾಷೆಗಳನ್ನೂ ಬಲ್ಲರು. ಈಗಲೂ ಶೇಕಡಾ ನಲವತ್ತೈದು ಮಂದಿ ಅವಿದ್ಯಾವಂತರಿದ್ದಾರೆ. ಸಂಚಾರಿ ಶಾಲೆ. ವಯಸ್ಕರ ವಿದ್ಯಾಯೋಜನೆಗಳು ಕಾರ್ಯಗತವಾಗಿವೆ.

ಲ್ಯಾಟಿನ್ ಅಮೆರಿಕದ ಈ ಬೃಹತ್ ದೇಶವನ್ನು ಐದು ಪ್ರಾಕೃತಿಕ ವಿಭಾಗಗಳನ್ನಾಗಿ ವಿಂಗಡಿಸಬಹುದು. ಗಿಯಾನ ಎತ್ತರದ ಭೂಮಿ, ಅಮೆಜಾನ್ ಜಲಾನಯನ ಭೂಮಿ, ಅಮೆಜಾನಿನ ದಕ್ಷಿಣ ಮತ್ತು ನೈಋತ್ಯದ ಪ್ರಸ್ಥಭೂಮಿ, ಪರಾನ ನದಿಯ ಜಲಾನಯನ ಭೂಮಿ ಮತ್ತು ಪೂರ್ವ ತೀರದ ಬಯಲು ಪ್ರದೇಶ. ಅಮೆಜಾನ್ ಮತ್ತು ಅದರ ಉಪನದಿಗಳು, ಪರಾನ, ಸಾವೊ ಫ್ರಾನ್ಸಿಸ್ಕೋ ನದಿಗಳಿಂದ ದೇಶ ಫಲವತ್ತು. 2,888 ಮೀಟರು ಎತ್ತರವಿರುವ ಪಿಕೊಡ ಬಂಡೇರ ಉನ್ನತ ಶಿಖರ.

ಬ್ರೆಜಿಲಿನಲ್ಲಿ ಹವಾಗುಣ ಎಲ್ಲ ಕಡೆಯಲ್ಲೂ ಒಂದೇ ಬಗೆಯಾಗಿಲ್ಲ. ಇದು ಭೂಮಧ್ಯ ರೇಖೆಯ ಉತ್ತರಕ್ಕೆ 595 ಕಿಲೊಮೀಟರು ಮತ್ತು ದಕ್ಷಿಣಕ್ಕೆ 1,126 ಕಿಲೊಮೀಟರು ಈ ವೃತ್ತದಲ್ಲಿ ಹಬ್ಬಿಕೊಂಡಿದೆ. ಒಟ್ಟಿನಲ್ಲಿ ಉಷ್ಣವಲಯದ ಹವಾಗುಣವೆಂದು ಹೇಳಬಹುದು. ಎತ್ತರದ ಪ್ರದೇಶ ಹೊರತು ಉಳಿದ ಕಡೆಯಲ್ಲಿ ಚಳಿಗಾಲ ತೇವಮಯವಾಗಿದ್ದು ಬೇಸಿಗೆಯಲ್ಲಿ ಒಣಹವೆ ಇರುತ್ತದೆ. ಎತ್ತರ ಪ್ರದೇಶದಲ್ಲಿ ಆಗಾಗ್ಗೆ ಅನಾವೃಷ್ಟಿಯಿಂದ ತೊಂದರೆಯಾಗುತ್ತಿರುತ್ತದೆ. ಚಳಿ, ಬೇಸಿಗೆಗಳೆರಡೂ ಹಿತವಾಗಿರುತ್ತದೆ.

ವಿಮಾನದಲ್ಲಿ ಬ್ರೆಜಿಲನ್ನು ದಾಟುವ ಪ್ರಯಾಣಿಕನಿಗೆ ಕಾಣಿಸುವುದು ಹಸಿರು ಕಾಡುಗಳೇ. ಅಮೆಜಾನ್ ಅರಣ್ಯ ದಟ್ಟವಾಗಿದೆ. ಅಲ್ಲಿ ಬೆಳೆಯುವ ಸಿಂಕೋನ ಮರದಿಂದ ಕ್ವಿನೈನನ್ನೂ ಟಿಂಬೊ ಮರದಿಂದ ಕ್ರಿಮಿನಾಶಕ ಪುಡಿಯನ್ನೂ ತಯಾರಿಸುತ್ತಾರೆ. ಯೆರ್ಬಮಟಾ ಮರದ ಎಲೆಯಿಂದ ಟೀ ಮಾಡುತ್ತಾರೆ. ಇದನ್ನು ಖಾಸಗಿಯಾಗಿ ಕೃಷಿಕರೂ ಬೆಳೆಯುತ್ತಾರೆ. ಅಮೆಜಾನ್ ಜಲಾನಯನ ಭೂಮಿಯಲ್ಲಿ ಸಸ್ಯಸಂಪತ್ತು ಹೇರಳವಾಗಿದೆ.

ಬ್ರೆಜಿಲಿನ ಶೇಕಡಾ ಎಪ್ಪತ್ತು ಜನ ತೀರಪ್ರದೇಶಗಳಲ್ಲಿ ವಾಸಿಸುತ್ತಿದ್ದಾರೆ. ಮುಖ್ಯ ಕಸಬು ಕೃಷಿ. ಕಾಫಿ, ಕೋಕೋ ಉತ್ಪನ್ನದಲ್ಲಿ ಬ್ರೆಜಿಲ್ ದಾಖಲೆ ಸ್ಥಾಪಿಸಿದೆ ಎನ್ನಬಹುದು. ಕಬ್ಬು, ಹತ್ತಿ, ಭತ್ತ, ಮಾವು, ಮಾಂಡಿಯೋಕ (ಒಂದು ಬಗೆಯ ಮರಗೆಣಸು), ಕಿತ್ತಲೆ, ಹೊಗೆಸೊಪ್ಪು ಇವನ್ನು ಬೆಳೆಯುತ್ತಾರೆ. ರಬ್ಬರ್ ಒಂದು ಕಾಲಕ್ಕೆ ಕಾಡುಗಳಲ್ಲಿ ಹೇರಳವಾಗಿ ದೊರೆಯುತ್ತಿದ್ದು ಅದಕ್ಕೆ ಬೇಡಿಕೆಯೂ ಇತ್ತು. ಇಂದಿಗೂ ಪಾರಾ ಸಂಸ್ಥಾನದಲ್ಲಿ ಬೆಳೆಯುವ ರಬ್ಬರ್ ಪ್ರಪಂಚದಲ್ಲಿಯೇ ಉತ್ತಮವಾದದ್ದು ಎನಿಸಿಕೊಂಡಿದೆ. ಒಬ್ಬ ಇಂಗ್ಲಿಷರವನು ಮಲಯಕ್ಕೆ ಇದನ್ನೊಯ್ದು ತೋಟವನ್ನಾರಂಭಿಸಿದ ಮೇಲೆ ಇಲ್ಲಿ ಬೇಡಿಕೆ ಕಡಮೆಯಾಯಿತು. ಹಸು ಸಾಕುವುದೂ ಪ್ರಮುಖ ಉದ್ಯಮ. 1961ರಲ್ಲಿ 7,30,00,00। ಹಸುಗಳಿದ್ದುವು.

ಬ್ರೆಜಿಲ್‌ನಲ್ಲಿ ವಜ್ರ, ಚಿನ್ನಗಳ ನಿಕ್ಷೇಪ ಅಪಾರವಾಗಿತ್ತು. ಇಲ್ಲಿನ ವಜ್ರದ ಪ್ರಾಮುಖ್ಯ ದಕ್ಷಿಣ ಆಫ್ರಿಕದಲ್ಲಿ ವಜ್ರ ಸಿಗತೊಡಗಿದಾಗ ಕಡಮೆಯಾಯಿತು. ಚಿನ್ನವೂ ದೊರಕುತ್ತದೆ. ಮಿನಾಸ್‌ಜೆರಿಯಾಸ್‌ನಲ್ಲಿರುವ ಬೆಟ್ಟದಲ್ಲಿಯೇ ಶೇಕಡಾ 70ರಷ್ಟು ಕಬ್ಬಿಣದ ಅದಿರು ಸಿಗುತ್ತದೆ. ಇದರ ಸಮೀಪದಲ್ಲಿ. ಪಶ್ಚಿಮಾರ್ಧಗೋಳದಲ್ಲಿಯೇ ಅತಿ ಹೆಚ್ಚಿನ ಪ್ರಮಾಣದ ಮ್ಯಾಂಗನೀಸ್ ಇದೆ. ಪೆಟ್ರೋಲಿಯಂ ಉತ್ಪತ್ತಿ ಸರಕಾರ ವಹಿಸಿಕೊಂಡ ಮೇಲೆ ಹೆಚ್ಚಿದೆ. ನೈಸರ್ಗಿಕ ಅನಿಲ, ಕಲ್ಲಿದ್ದಲು, ಬೆಳ್ಳಿ, ಕ್ರೋಮ್, ಅಭ್ರಕಗಳೂ ದೊರಕುತ್ತವೆ.

ಬ್ರೆಜಿಲ್‌ನ ಪ್ರಮುಖ ಉದ್ಯೋಗವೆಂದರೆ ಹತ್ತಿ ಬಟ್ಟೆ ನೇಯುವುದು. ಎಲ್ಲ ದೊಡ್ಡ ನಗರಗಳಲ್ಲೂ ಹತ್ತಿಗಿರಣಿಗಳಿರುತ್ತವೆ. ಸಕ್ಕರೆ ಸಂಸ್ಕರಣ, ಉಕ್ಕಿನ ಕಾರ್ಖಾನೆ, ಆಹಾರ ಸಂಸ್ಕರಣ, ಪಾನೀಯಗಳು, ವಿದ್ಯುತ್ ಸಾಮಗ್ರಿಗಳ ಉದ್ಯಮಗಳೂ ಇವೆ.

ಹಿಂದೆ ರಾಜಧಾನಿಯಾಗಿದ್ದ ರಿಯೋಡಿಜನೈರೊ ಪ್ರವಾಸಿಗಳನ್ನು ವಿಶೇಷವಾಗಿ ಆಕರ್ಷಿಸುತ್ತದೆ. ಆರ್ಗನ್ ಪರ್ವತಗಳ ಚಿತ್ರವಿಚಿತ್ರ ಶಿಖರಗಳು, ನಗರ ಇರುವ ಸುಂದರ ತಾಣ, ಹೊಸದಾಗಿ ಕಟ್ಟಿರುವ ನಗರ ಭಾಗ ಚೆನ್ನಾಗಿವೆ. 1960ರ ಏಪ್ರಿಲ್ 21ರಂದು ಹೊಸ ರಾಜಧಾನಿ ಬ್ರಾಸಿಲಿಯ ಆರಂಭವಾಯಿತು. ಆಧುನಿಕ ವಾಸ್ತುಶಿಲ್ಪಿಗಳು ಕಟ್ಟಿರುವ ಕಟ್ಟಡಗಳು ಅವರ ಕೌಶಲಕ್ಕೆ ಸಾಕ್ಷಿಯಾಗಿವೆ. ಸಂಸತ್‌ಭವನ, ಶಾಸಕಾಂಗ ಕಟ್ಟಡಗಳು, ಅಧ್ಯಕ್ಷರ ನಿವಾಸದ ವಿನ್ಯಾಸಗಳು ಅಸದೃಶವೆನಿಸಿವೆ. ಸೌನ್ ಪೌಲೊ, ಸೌನ್, ಸಾಲ್ವಡಾರ್ ಪುರಾತನ ನಗರಗಳು. ಸಾಲ್ವಡಾರ್‌ಗೆ ಅನ್ವೇಷಕ ಅಮೆರಿಗೊ ವೆಸ್ಪುಸ್ಸಿ 1503ರಲ್ಲಿ ಬಂದಿಳಿದ.

1500ರಲ್ಲಿ ಪೋರ್ಚುಗೀಸರ ಒಡೆತನಕ್ಕೆ ಬ್ರೆಜಿಲ್ ಸೇರಿತು. 1808ರಲ್ಲಿ ನೆಪೋಲಿಯನ್ ಪೋರ್ಚುಗಲನ್ನು ಗೆದ್ದಾಗ ದೊರೆ ಆರನೆಯ ಜಾನ್ ಬ್ರೆಜಿಲ್‌ನಲ್ಲಿ ಆಶ್ರಯ ಪಡೆದ. ಹೀಗೆ ಬ್ರೆಜಿಲ್‌ನಲ್ಲಿ ಅರಸರ ಆಧಿಪತ್ಯ ಪ್ರಾರಂಭವಾಯಿತು. 1821ರಲ್ಲಿ ಜಾನ್ ತನ್ನ ಮಗ ಡಾನ್ ಪೆದ್ರೊನನ್ನು ಬ್ರೆಜಿಲ್‌ನಲ್ಲಿರಿಸಿ ತಾನು ಪೋರ್ಚುಗಲ್ಲಿಗೆ ಮರಳಿದ. ಮರುವರ್ಷ ಪೆದ್ರೊ,

ಬ್ರೆಜಿಲ್ ಸ್ವತಂತ್ರ ದೇಶವೆಂದು ಸಾರಿದ. ಜನ ಅವನನ್ನು ಚಕ್ರವರ್ತಿಯಾಗಿ ಮಾಡಿಕೊಂಡರು. 1889ರಲ್ಲಿ ಬ್ರೆಜಿಲ್ ಗಣರಾಜ್ಯವಾಯಿತು.

ಎರಡನೆಯ ಮಹಾಯುದ್ಧದ ಬಳಿಕ ಬ್ರೆಜಿಲ್ ಆಶ್ಚರ್ಯಕರ ರೀತಿಯಲ್ಲಿ ಪ್ರಗತಿ ಸಾಧಿಸಿದೆ.

ಬ್ರೆಜಿಲ್ ಗಣರಾಜ್ಯದಲ್ಲಿ ಇಪ್ಪತ್ತೆರಡು ಸಂಸ್ಥಾನಗಳಿವೆ. ಅಧ್ಯಕ್ಷರನ್ನು ಐದು ವರ್ಷದ ಅವಧಿಗೆ ಚುನಾಯಿಸುತ್ತಾರೆ.

ಬ್ರೆಜಿಲ್ ವಿಶ್ವಸಂಸ್ಥೆಯ ಸದಸ್ಯರಾಷ್ಟ್ರ.

| | |
|---|---|
| ಖಂಡ : | ದಕ್ಷಿಣ ಅಮೆರಿಕ (ಪೂರ್ವ) |
| ಅಕ್ಷಾಂಶ : | 5° 16′ ಉ ದಿಂದ 33° 45′ ದ |
| ರೇಖಾಂಶ : | 34° 45′ ಪ ದಿಂದ 74° 03′ ಪ |
| ವಿಸ್ತೀರ್ಣ : | 85,15,511 ಚ. ಕಿ. ಮೀ. |
| ಜನಸಂಖ್ಯೆ : | 8,20,00,000 |
| ರಾಜಧಾನಿ : | ಬ್ರಾಸಿಲಿಯ |
| ಭಾಷೆ : | ಪೋರ್ಚುಗೀಸ್ |
| ಸರಕಾರ : | ಗಣರಾಜ್ಯ |
| ಬಾವುಟ : | ಹಸಿರು, ಹಳದಿ ವಜ್ರದಾಕಾರದ ಮಧ್ಯೆ ನೀಲಿಯ ವೃತ್ತ |

## ಬೇಟೆ

ಬೇಟೆ ಅನಾದಿಕಾಲದಿಂದ ಮಾನವ ಬೆಳೆಸಿಕೊಂಡು ಬಂದಿರುವ ಪ್ರವೃತ್ತಿ. ತನ್ನ ಆಹಾರ ಒದಗಿಸಿಕೊಳ್ಳಲು ಇತಿಹಾಸಪೂರ್ವ ಮಾನವನಿಗೆ ಇದ್ದುದೊಂದೇ ಆಧಾರ—ಬೇಟೆ. ಪೈರನ್ನು ಬೆಳೆಯಲು ಬರದು. ಪ್ರಾಣಿಗಳನ್ನು ಸಾಕುವುದೂ ತಿಳಿಯದು. ಹಿಡಿತಕ್ಕೆ ಸಿಕ್ಕಿದ ಪ್ರಾಣಿ ಹಾಗೂ ಕಣ್ಣಿಗೆ ಬಿದ್ದ ಸಸ್ಯಮೂಲ ಆಹಾರಗಳೇ ಅವನ ಖಾದ್ಯಪದಾರ್ಥಗಳು. ಪ್ರಾಚೀನ ಸಂಶೋಧನೆಯಲ್ಲಿ ದೊರೆತಿರುವ ಮಾನವನ ಹಲ್ಲುಗಳು ಅವನು ಎಲ್ಲ ರೀತಿಯ ಆಹಾರ ತಿನ್ನುತ್ತಿದ್ದನೆಂದು ಸ್ಪಷ್ಟಪಡಿಸಿವೆ. ಎಲುಬಿನಲ್ಲಿ ಅಡಗಿರುವ ಸಾರವನ್ನು ಪಡೆಯುವುದಕ್ಕೋಸ್ಕರ ಪ್ರಾಣಿಗಳ ಎಲುಬುಗಳನ್ನು ಜಜ್ಜಿರುವ ನಿದರ್ಶನಗಳೂ ದೊರೆತಿವೆ. ಪ್ರಾಣಿಗಳ ತಲೆಬುರುಡೆ ಹಾಗೂ ಬೆನ್ನೆಲುಬುಗಳಲ್ಲಿ ಹೊಸ ಶಿಲಾಯುಗದ ಆಯುಧಗಳು ಹುದುಗಿರುವುದು ಕಂಡುಬಂದಿದೆ. ಯುಕ್ತಿಯಿಂದ ಪ್ರಾಣಿಗಳ ಬೇಟೆ ಸಾಧಿಸಲು ಪುರಾತನ ಮಾನವನು ಮಾಡುತ್ತಿದ್ದ ಯತ್ನಗಳನ್ನು ಗವಿಚಿತ್ರಗಳು ತೋರಿಸುತ್ತವೆ.

ಹೀಗೆ ವ್ಯವಸಾಯವರಿಯದ ಮಾನವನಿಗೆ ಪ್ರಾಣಿಯೇ ಮೂಲ ಆಹಾರವಾಗಿತ್ತು. ಅದು ಬೇಟೆ ಹಾಗೂ ಮೀನು ಹಿಡಿಯುವುದರ ಮೂಲಕ ದೊರೆಯುತ್ತಿದ್ದಿತು. ಮುಂದೆ ಬೇಟೆ ಆತನಿಗೆ ಒಗ್ಗಿಹೋಯಿತು. ವ್ಯವಸಾಯದಿಂದ ದೊರೆತ ಸಸ್ಯಮೂಲ ಆಹಾರವನ್ನು ಒದಗಿಸಿಕೊಳ್ಳಲಾರಂಭಿಸಿದ. ಬೇಟೆ ಆಹಾರಕ್ಕಷ್ಟೇ ಅಲ್ಲದೆ ವಿನೋದ ವಿಹಾರಗಳ ಗುಂಪಿಗೂ ಸೇರಿತು. ಇಲ್ಲವೆ ಸ್ವಯಂ ರಕ್ಷಣೆಗೆಂದೋ ತನ್ನ ಸಾಕುಪ್ರಾಣಿಗಳನ್ನು ಹಿಂಸ್ರಪಶುಗಳಿಂದ ರಕ್ಷಿಸಲೆಂದೋ ಆತ ಬೇಟೆಯಾಡುತ್ತಿದ್ದ. ಹೆಂಗಸು ಹೊಲಗಳಲ್ಲಿ ವ್ಯವಸಾಯ ಮಾಡಿದರೆ ಗಂಡಸು ಬೇಟೆಯಾಡಿ ಬರುತ್ತಿದ್ದ. ಆದರೆ ಪ್ರಕೃತಿ ಫಲಭರಿತವಾಗಿರುವ ಪ್ರದೇಶಗಳಲ್ಲಿ ಬೇಟೆಯ ಮಹತ್ವ ಕಡಿಮೆಯಾಯಿತು. ಮೀನು ದೊರೆಯುವ ಸ್ಥಳಗಳಲ್ಲಿಯೂ ಹೀಗೆಯೇ. ಒಟ್ಟಿನಲ್ಲಿ ಬರಬರುತ್ತ ಮನುಷ್ಯನ ವೃತ್ತಿ ವ್ಯವಸಾಯ ಪ್ರಧಾನವಾಯಿತು. ನಾಗರಿಕತೆ ಬೆಳೆದಂತೆ ಬೇಟೆ ಅಥವಾ ಷಿಕಾರಿ ಕೇವಲ ಹವ್ಯಾಸದ ರೂಪದಲ್ಲಿ ನಿಂತು. ರಾಜಮನೆತನದ ಮನೋರಂಜನೆಯಾಗಿ ಹಾಗೂ ಸಾಹಸಪ್ರಿಯರ ವಿನೋದವಾಗಿ ಉಳಿಯಿತು.

ದೇಶ, ಬೇಟೆಯ ಪ್ರಾಣಿ, ಅಲ್ಲಿನ ಬೇಟೆಗಾರರ ಚಾತುರ್ಯ ಹಾಗೂ ಅವನಿಗೆ ಸುಲಭ ಸಾಧ್ಯವಾದ ಸಲಕರಣೆಗಳು ಇವನ್ನು ಅನುಸರಿಸಿ ಬೇಟೆಯ ವಿವಿಧ ರೀತಿಗಳನ್ನು ಗುರುತಿಸಬಹುದು. ಆಸ್ಟ್ರೇಲಿಯ ಖಂಡದ ಮೂಲ ನಿವಾಸಿಗಳು, ಐರೋಪ್ಯ ಸಂಪರ್ಕದ ಮೊದಲು, ಅತಿ ಸರಳವಾದ ಕೆಲವೇ ವಿಧದ ಆಯುಧಗಳನ್ನು ಉಪಯೋಗಿಸಲು ಅರಿತಿದ್ದರು. ಕಲ್ಲು ಅಥವಾ ಎಲುಬು ಮೊನೆಗಳು, ಭರ್ಜಿ, ಗದೆಯ ರೂಪದ ಮರದ ದೊಣ್ಣೆ, ಮತ್ತು ಬೂಮ್‌ರ್‍ಯಾಂಗ್ (ಹೋಗಿ ಹಿಂದಕ್ಕೆ ಬರುವುದು) ಎಂಬ ಅವರದೇ ವಿಶಿಷ್ಟ ಆಯುಧ—ಇವು ಅವರ ಸಾಧನಗಳು. ಗುಳಿಗಳಲ್ಲಿ ಪ್ರಾಣಿಗಳು, ಪಕ್ಷಿಗಳು ಬೀಳುವಂತೆ ಮಾಡುತ್ತಿದ್ದರು. ಇಲ್ಲವೆ ವಿಷಪೂರಿತ ಮೊನೆಯುಳ್ಳ ಆಯುಧ ಪ್ರಹಾರದಿಂದ ಪ್ರಾಣಿಗಳನ್ನು ಕೆಡವುತ್ತಿದ್ದರು. ಜಿಂಕೆಯಂಥ ಪ್ರಾಣಿಯನ್ನು ಅದು ಬಿಸಿಲಿನ ಬೇಗೆಗೆ ಬಳಲಿ ಕಂಗಾಲಾಗಿ ಉರುಳುವವರೆಗೆ ತಾಳ್ಮೆಯಿಂದ ಬೆನ್ನಟ್ಟುವುದು ಆಫ್ರಿಕದ ಬೇಟೆಯ ರೀತಿ. ಎಸ್ಕಿಮೊ ಜನ ಸಮುದ್ರ ಜೀವಿಯೊಂದನ್ನು ಇದೇ ರೀತಿ ಸತಾಯಿಸಿ ಕೊನೆಗೆ ಅದನ್ನು ಕೈಯಲ್ಲೇ ಸೆರೆಹಿಡಿಯುತ್ತಾರೆ. ಕಾಡುಕೋಣಗಳನ್ನು ಅಮೆರಿಕದ ಇಂಡಿಯನರು ಅತ್ಯಂತ ಹಿಮವಿರುವೆಡೆಗಳಿಗೆ ಹಿಮ್ಮೆಟ್ಟಿಸಿ, ಅದು ಕಾಲೂರುವುದಕ್ಕೂ ಆಗದೆ ಒದ್ದಾಡಿ ಶರಣಾಗುವಂತೆ ಮಾಡುತ್ತಾರೆ.

ತಾಳ್ಮೆ ಹಾಗೂ ತಂತ್ರ ಈ ವಿಧದ ಬೇಟೆಗಳಲ್ಲಿ ಕಂಡುಬರುತ್ತವೆ. ತಾನು ಒಡ್ಡಿರುವ ಬಲೆ, ಗುಣಿ ಅಥವಾ ಉರುಳುಗಳಿಗೆ ಪ್ರಾಣಿ ಸಿಕ್ಕಿಕೊಳ್ಳುವವರೆಗೆ ಕಾಯುತ್ತಿರಬೇಕು. ನೀರುಕೋಳಿಯನ್ನು ಬೆನ್ನಟ್ಟುವವನು ನೀರಿನ ಆ ಪಕ್ಷಿಗೆ ತನ್ನ ರೂಪ ಕಾಣದಂತೆ ವೇಷ ಧರಿಸುತ್ತಾನೆ. ತಲೆಯ ಮೇಲೆ ಮಣ್ಣು ಸುರಿದು, ಒಣಗಿದ ಹುಲ್ಲಿನಂತೆಯೇ ವೇಷ ಮರೆಸಿ, ಹಕ್ಕಿಯ ಪುಕ್ಕವೊಂದನ್ನು ಸಿಕ್ಕಿಸಿ ಅವರ ಅನುಕರಣೆ ಮಾಡುತ್ತಾನೆ. ಇವನು ಬಂದೂಕು, ಪಿಸ್ತೂಲುಗಳನ್ನು ಬಳಸಲಾರ. ಇವನ ಉದ್ದೇಶ ತನ್ನ ಬೇಟೆಗೆ ಆದಷ್ಟು ಹತ್ತಿರ ಸರಿದು ಪ್ರಾಣಿಯನ್ನು ಹಿಡಿಯುವುದು. ಸುತ್ತಲ ಹಕ್ಕಿಗಳಂತೆ ಕೂಗುವುದು, ಹಾಡುವುದು—ಈ ಅನುಕರಣೆ ಅವನಿಗೆ ಸುಲಭ. ಪ್ರಾಣಿಗಳ ಚರ್ಮವನ್ನು ಹೊದೆದು ವೇಷ ಮರೆಸುವುದು ಮತ್ತೊಂದು ರೀತಿ. ಬೆಂಕಿ ಉರಿಸಿ, ಹುಯಿಲೆಬ್ಬಿಸಿ ಆಗ ಬೆದರಿದ ಪ್ರಾಣಿಗಳನ್ನು ಸುಲಭವಾಗಿ ವಶಪಡಿಸಿಕೊಳ್ಳುವುದೂ ಉಂಟು. ಆಫ್ರಿಕದಲ್ಲಿ ಆನೆಗಳ ಹಿಂಡನ್ನೆ ಈ ರೀತಿ ಬೆಂಕಿಯಿಂದ ಸುತ್ತುವರಿದು, ಕಣ್ಣುಕಾಣದಂತೆ ಮಾಡಿ ಹಿಡಿಯುತ್ತಿದ್ದರು.

ಆಹಾರವನ್ನು ಅರಸಲು ಹೊರಟ ಮಾನವ ಉಪಯೋಗಿಸುತ್ತಿದ್ದ ಆಯುಧಗಳು ಕಲ್ಲು, ಎಲುಬು, ಬಿಲ್ಲುಬಾಣ, ವಿಶೇಷ ಆಕೃತಿಗಳ ದೊ

ಅವನು ಅಲುಗಿನಂತೆ ಕಲ್ಲಿಗೇ ರೂಪಕೊಡುತ್ತಿದ್ದ. ಈ ಆಯುಧಗಳ ಮೊನೆಗೆ ವಿಷವನ್ನು ವಿವಿಧ ಮೂಲಗಳಿಂದ ತಂದು ಹಚ್ಚುತ್ತಿದ್ದ. ಇವಲ್ಲದೆ ನಾಯಿಗಳನ್ನು ಉಪಯೋಗಿಸಿ ಹೊಸ ಶಿಲಾಯುಗದ ಮತ್ತು ಅದರ ಹಿಂದಿನ ಮಾನವ ಬೇಟೆಯಾಡುತ್ತಿದ್ದನೆಂಬುದೂ ಅವಶೇಷಗಳಿಂದ ತಿಳಿದು ಬಂದಿದೆ.

ಮೀನುಗಳನ್ನು ಬೇಟೆಯಾಡುವುದೂ ಮೂಲನಿವಾಸಿಗಳ ಕ್ರಮಗಳಲ್ಲಿ ಒಂದು. ಕೈಯಲ್ಲಿ ಥಟ್ಟನೆ ಹಿಡಿಯುವುದು, ಬಾಣ ಹೂಡುವುದು ಅಥವಾ ಭರ್ಜಿಯಿಂದ ತಿವಿಯುವುದು ಮೀನು ಹಿಡಿಯುವ ಬಗೆಗಳು. ಮೀನು ಹಿಡಿಯುವುದರಲ್ಲಿಯೂ ನಾಯಿಗಳನ್ನು ಬಳಸುತ್ತಾರೆ.

ಎಸ್ಕಿಮೊ ಬೇಟೆಗಾರ ತನ್ನ ನಾಯಿಯನ್ನು ಕರೆದುಕೊಂಡು ಹೋಗುತ್ತಾನೆ. ಹಿಮಪ್ರದೇಶದಲ್ಲಿನ ಬಿರುಕುಗಳ ಬಳಿ ಹೋಗುವಾಗ ನಾಯಿ ಒಂದು ಬಿರುಕಿನ ಬಳಿ ವಾಸನೆ ನೋಡುತ್ತ ನಿಂತುಕೊಳ್ಳುತ್ತದೆ. ಆಗ ಎಸ್ಕಿಮೊ ಬೇಟೆಗಾರ ಆ ಬಿರುಕಿನೊಳಗೆ ಬಾಣ ಪ್ರಯೋಗಮಾಡುತ್ತಾನೆ. ಕೂಡಲೆ ನೀರು ಚಿಮ್ಮಿ ಹೊರಬರುತ್ತದೆ. ಅದರೊಂದಿಗೆ ಮೀನುಗಳೂ ಹೊರಬಂದಾಗ ಎಸ್ಕಿಮೊ ಅವುಗಳನ್ನು ಹಿಡಿಯುತ್ತಾನೆ.

ವಾಣಿಜ್ಯ ದೃಷ್ಟಿಯಿಂದ ಬೇಟೆಗೆ ಇನ್ನೂ ಹೆಚ್ಚಿನ ಸ್ಥಾನ ದೊರೆತಿದೆ. ಕಾಡು ಪ್ರಾಣಿಗಳ ತೊಗಲು ವಿದೇಶೀ ವಿನಿಮಯ ಒದಗಿಸುತ್ತದೆ.

ಮೈಸೂರು ರಾಜ್ಯದಲ್ಲಿ ಸಿದ್ಧವಾಗುವ ದಂತದ ಸಾಮಾನುಗಳು ಲೋಕ ಪ್ರಸಿದ್ಧ. ಈ ದಂತಕ್ಕಾಗಿ ಆನೆಗಳಿಗೆ ಬಹಳ ಬೆಲೆ. ಮೈಸೂರು ರಾಜ್ಯದಲ್ಲಿ ಖೆಡ್ಡಾ ವಿಧಾನದಿಂದ ಆನೆಗಳನ್ನು ಒಂದೆಡೆಗೆ ಅಟ್ಟಿಸಿಕೊಂಡು ಬಂದು, ಆಮೇಲೆ ಹಿಡಿಯುತ್ತಾರೆ.

ಸೀಲ್ ಎಂಬ ನೀರು ಪ್ರಾಣಿಯನ್ನು ಅದರ ಎಣ್ಣೆಗಾಗಿ ಮತ್ತು ಚರ್ಮಕ್ಕಾಗಿ ಬೇಟೆಯಾಡುತ್ತಾರೆ. ಚರ್ಮಪ್ರಸಾಧನ (ಪ್ರಾಣಿಯ ಚರ್ಮಕ್ಕೆ ಮೆತ್ತೆ ಮೊದಲಾದುವುಗಳನ್ನು ತುಂಬಿ ಜೀವಂತಪ್ರಾಣಿಯ ಹಾಗೆ ಕಾಣುವಂತೆ ಮಾಡುವುದು) ಕಲೆಯೂ ಆಗಿದೆ, ಉದ್ಯಮವೂ ಆಗಿದೆ.

ಬೇಟೆಯಾಡುವುದರಿಂದ ಮನುಷ್ಯನಿಗೆ ಹಲವು ಪ್ರಯೋಜನಗಳುಂಟು. ದುಷ್ಟಮೃಗಗಳಿಂದ ಅವನು ತನ್ನನ್ನೂ ತನ್ನವರನ್ನೂ ತನ್ನ ಪ್ರಾಣಿಗಳನ್ನೂ ರಕ್ಷಿಸಬೇಕು. ಬೇಟೆಯಾಡಿ ಕೊಂದ ಮೃಗಗಳಿಂದ ಅವನು ಪಡೆಯುವ ವಸ್ತುಗಳು—ಚರ್ಮ, ಕೊಂಬು, ದಂತ, ಎಣ್ಣೆ—ಇಂಥವು ಅವನಿಗೆ ಪ್ರಯೋಜನಕರ. ಅಲ್ಲದೆ, ಮನುಷ್ಯನ ಸಾಹಸಪ್ರವೃತ್ತಿಗೆ ಇದೊಂದು ತೃಪ್ತಿ. ಆದರೆ ಬೇಟೆಯಿಂದ ಹಲವು ಪ್ರಾಣಿಗಳ ಸಂತತಿಗಳೇ ನಾಶವಾಗುತ್ತಿವೆ. ಭಾರತದಲ್ಲಿ ಗಿರ್‌ಸಿಂಹಗಳ ಸಂತತಿ ಇಳಿಮುಖವಾಗಿದೆ. ಬಂಗಾಳದ ಹುಲಿಗಳ ಸಂಖ್ಯೆ ತೀರ ಕಡಮೆಯಾಗಿದೆ. ಅಲ್ಲದೆ, ವಿವೇಚನೆ ಇಲ್ಲದ ಬೇಟೆ ಪ್ರಕೃತಿಯಲ್ಲಿನ ಸಮತೋಲನವನ್ನು ಕೆಡಿಸುತ್ತದೆ. ಒಂದು ಪ್ರಾಣಿ ಇನ್ನೊಂದು ಪ್ರಾಣಿಯನ್ನು ಕೊಲ್ಲುವುದರಿಂದ ಪ್ರಕೃತಿಯಲ್ಲಿ ಯಾವ ವರ್ಗದ ಪ್ರಾಣಿಯ ಸಂಖ್ಯೆಯೂ ಮಿತಿಮೀರದಂತೆ ತಡೆ ಇರುತ್ತದೆ. ಹಲವು ಪಕ್ಷಿಗಳು ಹುಳುಗಳನ್ನು ತಿನ್ನುವುದರಿಂದ ಸಸ್ಯವರ್ಗಕ್ಕೆ ಕ್ಷೇಮ. ಈ ಪಕ್ಷಿಗಳನ್ನು ಕೊಂದರೆ ಹುಳುಗಳು ಹೆಚ್ಚಿ ಬೆಳೆಗೆ ತೊಂದರೆ. ಇದರಿಂದ ಈಗ ಎಲ್ಲ ದೇಶಗಳಲ್ಲಿಯೂ ವನ್ಯಮೃಗ ರಕ್ಷಣೆಗೆ ಕ್ರಮ ಕೈಗೊಳ್ಳುತ್ತಿದ್ದಾರೆ.

ನೋಡಿ : ವನ್ಯಮೃಗ ರಕ್ಷಣೆ

ವಿವರ : ಸಂಪುಟ ಆರು

## ಬೈಜಾಂಟಿಯಂ ಸಾಮ್ರಾಜ್ಯ

ಒಂದು ಸಾವಿರಕ್ಕೂ ಹೆಚ್ಚು ವರ್ಷಗಳ ಕಾಲ ವೈಭವದಿಂದ ಮೆರೆದ ಬೈಜಾಂಟಿಯಂ ಸಾಮ್ರಾಜ್ಯ ಕಲೆಯ ತವರಾಗಿತ್ತು. ಕ್ರೈಸ್ತ ದೇವಾಲಯಗಳಲ್ಲಿ ಆಗಿನವರ ಕಲಾವಂತಿಕೆಯನ್ನು ಇಂದಿಗೂ ಕಾಣಬಹುದು. ವೆನಿಸ್‌ನ ಸಂತ ಮಾರ್ಕ್ ಇಗರ್ಜಿ ಮತ್ತು ಗ್ರೀಸಿನ ಡ್ಯಾಫ್ನೆಯಲ್ಲಿರುವ ಕ್ರೈಸ್ತ ದೇವಾಲಯಗಳು ಹನ್ನೊಂದನೆಯ ಶತಮಾನದವು. ಡ್ಯಾಫ್ನೆ ಇಗರ್ಜಿಯ ಗುಮ್ಮಟವನ್ನು ಮದ್ದಳೆಯ ಮೇಲೆ ಕಟ್ಟಿದ್ದಾರೆ. ಶಬಲಖಚಿತ ಚಿತ್ರಗಳನ್ನು ಇಗರ್ಜಿಗಳಲ್ಲಿ ಬಹಳವಾಗಿ ನಿರ್ಮಿಸುತ್ತಿದ್ದರು. ಮೊದಲು ಬೈಜಾಂಟಿಯಂ ಸಾಮ್ರಾಜ್ಯದ ರಾಜಧಾನಿಯಾಗಿದ್ದ ಕಾನ್‌ಸ್ಟಾಂಟಿನೋಪಲ್ ಈಗ ಇಸ್ತಾಂಬೂಲ್ ಎನಿಸಿಕೊಂಡಿದೆ.

ಬೈಜಾಂಟಿಯಂ ಕ್ರಿ. ಪೂ. 660ರಲ್ಲಿ ಬಾಸ್ಪರಸ್ ಜಲಸಂಧಿಯ ದಡದಲ್ಲಿ ಬೈಜಾಸ್ ಎಂಬವನಿಂದ ಸ್ಥಾಪಿತವಾಯಿತು. ಅವನು ತನ್ನ ಹೆಸರನ್ನೇ ರಾಜ್ಯಕ್ಕೂ ಇಟ್ಟ. ಯೂರೋಪ್ ಮತ್ತು ಏಷ್ಯಾ ಮೈನರ್‌ಗಳ ವ್ಯಾಪಾರ ಮಾರ್ಗ ಸೇರುವ ಕಡೆ ರಾಜ್ಯ, ಇದ್ದುದರಿಂದ ಅದರ ಒಡೆತನಕ್ಕಾಗಿ ಗ್ರೀಕ್‌ರಾಜ್ಯಗಳು ಹೊಡೆದಾಡುತ್ತಿದ್ದುವು.

323ರಲ್ಲಿ ಕಾನ್‌ಸ್ಟೆಂಟೈನ್ ರೋಮಿನ ಚಕ್ರವರ್ತಿ ಅಸಿನಿಯಸ್‌ನನ್ನು ಸೋಲಿಸಿದ. ಅವನು ವಿಶಾಲವಾದ ರೋಮನ್ ಚಕ್ರಾಧಿಪತ್ಯದ ಅರಸನಾದ. ಆ ಚಕ್ರಾಧಿಪತ್ಯದ ಪೂರ್ವಭಾಗವೇ ಬೈಜಾಂಟಿಯಂ ಸಾಮ್ರಾಜ್ಯವೆಂದು ಖ್ಯಾತಿಗಳಿಸಿತ್ತು. ಒಂದು ಸಾವಿರ ವರ್ಷಗಳ ಹಿಂದೆ ಕಾನ್‌ಸ್ಟಾಂಟಿನೋಪಲ್ ಪ್ರಪಂಚದ ದೊಡ್ಡ ಸುಪತ್ಸಮೃದ್ಧ ನಗರವಾಗಿತ್ತು. ಇಲ್ಲಿನ ಭವ್ಯ ಅರಮನೆಗಳು, ಮನೋಹರವಾದ ಇಗರ್ಜಿ ಮತ್ತು ಅಂಗಡಿಗಳನ್ನು ನೋಡಲು ದೂರದ ಸ್ಥಳಗಳಿಂದ ಜನ ಬರುತ್ತಿದ್ದರು.

330ರಲ್ಲಿ ತನ್ನ ರಾಜಧಾನಿಯನ್ನು ರೋಮಿನಿಂದ ಬೈಜಾಂಟಿಯಮಿಗೆ ಕಾನ್‌ಸ್ಟೆಂಟೈನ್ ಬದಲಾಯಿಸಿದ. ಜನ ಹೊಸ ರಾಜಧಾನಿಯನ್ನು ಕಾನ್‌ಸ್ಟಾಂಟಿನೋಪಲ್ ಎನ್ನತೊಡಗಿದರು. ಆ ಅರಸ ನಗರವನ್ನು ಪುನಃ ನಿರ್ಮಿಸಿ ಕೋಟೆಗಳನ್ನು ಕಟ್ಟಿದ. ಕಾನ್‌ಸ್ಟೆಂಟೈನ್‌ನ ನಿಧನದ ಅನಂತರ ಅವನ ಉತ್ತರಾಧಿಕಾರಿಗಳಿಗೆ ವಿಶಾಲವಾದ ರೋಮನ್ ಚಕ್ರಾಧಿಪತ್ಯವನ್ನು ಆಳುವುದು ಕಷ್ಟವಾಯಿತು. 395ರಲ್ಲಿ ದೇಶವನ್ನು ಎರಡು ಭಾಗ ಮಾಡಲಾಯಿತು. ಪಶ್ಚಿಮ ಭಾಗವನ್ನು ರೋಮಿನಿಂದಲೂ ಪೂರ್ವ ಭಾಗವನ್ನು ಕಾನ್‌ಸ್ಟಾಂಟಿನೋಪಲ್‌ನಿಂದಲೂ ಆಳುತ್ತಿದ್ದರು. ಅನಂತರ ಒಂದು ಶತಮಾನದಲ್ಲಿ ಪಶ್ಚಿಮಾರ್ಧದ ಅನೇಕ ಭಾಗಗಳನ್ನು ಕಳೆದುಕೊಳ್ಳಬೇಕಾಯಿತು.

379ರಿಂದ 395ರ ಪರ್ಯಂತ ಆಳಿದ ಥಿಯೋಡೋಸಿಯಸ್ ಚಕ್ರವರ್ತಿಯ ಕಾಲದಲ್ಲಿ ಕ್ರೈಸ್ತ ಧರ್ಮ ರಾಜ್ಯದ ಧರ್ಮವಾಯಿತು.

476ರಿಂದ 565ರ ವರೆಗಿನ ಅವಧಿ ಸಾಮ್ರಾಜ್ಯದ ಸ್ವರ್ಣಯುಗವೆನ್ನಬಹುದು. ಜಸ್ಟಿನಿಯನ್ ತನ್ನ ಆಡಳಿತಕಾಲದಲ್ಲಿ ಇಟಲಿಯನ್ನು ಪುನಃ ಗೆದ್ದುಕೊಂಡುದಲ್ಲದೆ, ಒಳವಿದ್ರೋಹಗಳನ್ನು ಅಡಗಿಸಿದ. ಇವನು ಕಟ್ಟಿಸಿದ ಸ್ಯಾಂಕ್ಟಾ ಸೋಫಿಯ ಇಗರ್ಜಿ ಈಗ ವಸ್ತುಸಂಗ್ರಹಾಲಯವಾಗಿದೆ. ಜಸ್ಟಿನಿಯನ್ ಅರಸು ರೋಮನ್ ಕಾಯಿದೆ ಕಾನೂನುಗಳನ್ನು ಕ್ರೋಢೀಕರಿಸಿದ. ಅಲ್ಲದೆ ಕಾನೂನುಗಳಿಗೆ ವಿವರಣೆಗಳನ್ನೂ ಸಿದ್ಧಗೊಳಿಸಿ ಪ್ರಕಟಿಸಿದ.

ನೂರಾರು ವರ್ಷಗಳ ಕಾಲ ಬಾಳಿದ ಬೈಜಾಂಟಿಯಂ ಸಾಮ್ರಾಜ್ಯ ನೆರೆಹೊರೆ ರಾಷ್ಟ್ರಗಳಿಂದ ತೊಂದರೆ ಎದುರಿಸಬೇಕಾಯಿತು. ಪರ್ಷಿಯನ ರನ್ನು ಹಿಮ್ಮೆಟ್ಟಿಸಿದ್ದಾಯಿತು ಎನ್ನುವಷ್ಟರಲ್ಲೆ, ಅರಬರು ಯುದ್ಧಕ್ಕೆ (628) ಬಂದರು. ಏಷ್ಯದ ಕೆಲವು ದೇಶಗಳೂ ಆಕ್ರಮಣ ನಡೆಸಿದುವು. ಈ ದಾಳಿಗಳಿಂದಾಗಿ ದೇಶದ ವಿಸ್ತೀರ್ಣ ಆಗಿಂದಾಗ್ಗೆ ವ್ಯತ್ಯಾಸವಾಗುತ್ತಿತ್ತು.

ಸಾಮ್ರಾಜ್ಯದ ಸೈನ್ಯಬಲ ಉತ್ತಮವಾಗಿತ್ತು. ಶಿಸ್ತಿನ ಸೈನ್ಯ, ಉತ್ತಮ ಶಸ್ತ್ರಾಸ್ತ್ರಗಳಿದ್ದುವು. ವೈದ್ಯಕೀಯ ನೆರವು, ಸಂದೇಶಗಳನ್ನು ಕಳುಹಿಸುವ ವ್ಯವಸ್ಥೆಗಳಿದ್ದುವು. ಮರದ ಹಡಗನ್ನು ಉಪಯೋಗಿಸುತ್ತಿದ್ದ ಆ ದಿನಗಳಲ್ಲಿ ಕೊಳವೆಯಿಂದ ಶತ್ರುಗಳ ಹಡಗಿಗೆ ಬೆಂಕಿ ಎರಚುತ್ತಿದ್ದರು.

ಸಾಮ್ರಾಜ್ಯದ ಸಂಪತ್ತನ್ನು ವ್ಯಾಪಾರ ಹೆಚ್ಚಿಸಿತು. ಯೂರೋಪಿನಿಂದ ಮಧ್ಯಪ್ರಾಚ್ಯಗಳ ದಾರಿಯೂ ಕಾನ್‌ಸ್ಟಾಂಟಿನೋಪಲನ್ನು ಹಾದುಹೋಗುತ್ತಿತ್ತು. ತನ್ನ ರಾಜಧಾನಿಯಿಂದ ಹೊರಕ್ಕೆಹೋಗುವ ಮತ್ತು ಒಳಕ್ಕೆ ಬರುವ ವಸ್ತುಗಳಿಗೆ ಚಕ್ರವರ್ತಿ ಕರ ವಸೂಲು ಮಾಡುತ್ತಿದ್ದ. ರಾಜಧಾನಿಯಲ್ಲಿ ಒಂದೊಂದು ವಸ್ತುವನ್ನು ಒಂದೊಂದು ಭಾಗದಲ್ಲಿ ಮಾರಾಟ ಮಾಡುವ ಏರ್ಪಾಡಿತ್ತು. ವಿದೇಶೀ ವಸ್ತುಗಳು ಯಥೇಚ್ಛವಾಗಿ ಸಿಗುತ್ತಿದ್ದುವು.

ಬೈಜಾಂಟಿಯಂನ ಕಲೆ, ಪಾಂಡಿತ್ಯ ಹೊರದೇಶಗಳಿಗೂ ಪಸರಿಸಿದುವು. ಇದರ ಪ್ರಭಾವದಿಂದಲೇ ಇಟಲಿಯ ಕಲೆ ಮತ್ತು ಸಾಹಿತ್ಯ ಪುನರುಜ್ಜೀವಿತವಾದುವು. ರಷ್ಯದ ಕಲೆ ಮತ್ತು ಕಟ್ಟಡಗಳಲ್ಲೂ ಬೈಜಾಂಟಿಯಮಿನ ಪ್ರಭಾವವಿದೆ. ಹತ್ತರಿಂದ ಹನ್ನೆರಡನೆಯ ಶತಮಾನಗಳಲ್ಲಿ ಕಲೆ ಉತ್ತುಂಗ ಶಿಖರಕ್ಕೇರಿತ್ತು. ಬಹು ಬೆಲೆಬಾಳುವ ಸಾಮಗ್ರಿಗಳನ್ನು ಉಪಯೋಗಿಸಿ, ಬಣ್ಣಗಳ ಸಹಾಯದಿಂದ ತಮ್ಮ ಕಲೆಗೆ ರೂಪುಕೊಡುತ್ತಿದ್ದರು. ಇಗರ್ಜಿಗಳಲ್ಲಿ ಅವರ ಕಲೆಗಾರಿಕೆ ಎದ್ದುತೋರುತ್ತಿತ್ತು. ಕ್ರೈಸ್ತ ದೇವಾಲಯದ ಪಾತ್ರೆಗಳಿಗೆ ಬಂಗಾರದ ಮೆರಗು ಕೊಟ್ಟು, ಹರಳುಗಳನ್ನು ಕೂಡಿಸುತ್ತಿದ್ದರು. ಬಟ್ಟೆಗೆ ಚಿನ್ನದ ಎಳೆಕೂಡಿಸಿ ನೇಯುವುದನ್ನೂ ಅರಿತಿದ್ದರು. ಜಾರ್ಜ್ ಪಿಸಿಡಿಸ್ (ಏಳನೆಯ ಶತಮಾನ) ಮಹಾಕಾವ್ಯಗಳನ್ನು ಆಗ ರಚಿಸಿದ ಕವಿ.

ಬೈಜಾಂಟಿಯನರ ಭಾಷೆ ಗ್ರೀಕ್. ಪ್ಲೇಟೋ, ಅರಿಸ್ಟಾಟಲರ ಪುಸ್ತಕಗಳ ಅಧ್ಯಯನ ಶಾಲೆಗಳಲ್ಲಿ ನಡೆಯುತ್ತಿತ್ತು.

ತಂದೆಯ ಅನಂತರ ಮಗ ಪಟ್ಟಕ್ಕೆ ಬರುವುದು ರೂಢಿ. ಕೆಲವು ಬಾರಿ ಬಲಾಢ್ಯನಾದವನು ಉತ್ತರಾಧಿಕಾರಿಯನ್ನು ತಳ್ಳಿ ಅಥವಾ ಕೊಂದು ತಾನು ಪಟ್ಟವೇರಿದುದೂ ಉಂಟು. ಜಗಳಗಳು ಸಾಮ್ರಾಜ್ಯದ ಬಲವನ್ನು ಕುಗ್ಗಿಸಿದುವು. 1204ರಲ್ಲಿ ಪಶ್ಚಿಮದಿಂದ ಬಂದ ತಂಡ ಧಾರ್ಮಿಕಯುದ್ಧ ಆರಂಭಿಸಿತು. ಈ ಯುದ್ಧದಲ್ಲಿ ಜಯಿಸಿದ ಪಶ್ಚಿಮ ದೇಶದವರ ಆಡಳಿತ 1216ರ ವರೆಗೆ ನಡೆಯಿತು. ತರುವಾಯ ಬೈಜಾಂಟಿಯಂ ಚಕ್ರವರ್ತಿಗಳು ತಲೆಯೆತ್ತಲಾರದೆ ಹೋದರು; ಅನಂತರ ಬಂದ ತುರ್ಕಿಯವರು ಒಂದೊಂದಾಗಿ ರಾಜ್ಯಗಳನ್ನೆಲ್ಲಾ ಗೆದ್ದು, ಕೊನೆಗೆ 1453ರಲ್ಲಿ ರಾಜ್ಯವಿಲ್ಲದೆ ರಾಜಧಾನಿಯಾಗಿದ್ದ ಕಾನ್‌ಸ್ಟಾಂಟಿನೋಪಲನ್ನು ವಶಪಡಿಸಿಕೊಂಡರು. ಹೀಗೆ ಮಹಾಸಾಮ್ರಾಜ್ಯವೊಂದು ನಾಶವಾಯಿತು.

ಹನ್ನೆರಡನೆಯ ಕಾನ್‌ಸ್ಟೆಂಟೈನ್ ಯುದ್ಧದಲ್ಲಿ ಮಡಿದದ್ದು ಮಂಗಳವಾರ. ಈಗಲೂ ಗ್ರೀಸಿನಲ್ಲಿ ಮಂಗಳವಾರವನ್ನು ಅಶುಭವೆಂದು ಪರಿಗಣಿಸಿ ಯಾವ ಮಹತ್ವದ ಕೆಲಸವನ್ನೂ ಆ ದಿನ ಆರಂಭಿಸುವುದಿಲ್ಲ.

**ನೋಡಿ :** ಸಾಮ್ರಾಜ್ಯ

## ಬೈಬಲ್

ಬೈಬಲ್ ಕ್ರೈಸ್ತರ ಪೂಜ್ಯಗ್ರಂಥ : ಅದನ್ನು ಪವಿತ್ರ ಬೈಬಲ್ ಎಂದೂ ಅನೇಕ ವೇಳೆ ಕರೆಯುತ್ತಾರೆ. ಅದು ಒಂದೇ ಗ್ರಂಥವಲ್ಲ. ಅನೇಕ ಪುಸ್ತಕಗಳ ಸಂಗ್ರಹ. ಹಲವು ಶತಮಾನಗಳ ಅವಧಿಯಲ್ಲಿ. ಹಿಬ್ರೂ, ಆರಮೇಯಿಕ್ ಮತ್ತು ಗ್ರೀಕ್ ಈ ಮೂರು ಭಾಷೆಗಳಲ್ಲಿ. ಈ ಪುಸ್ತಕಗಳು ರಚಿತವಾಗಿವೆ. ಕುರಿಗಾಹಿ, ಅರಸು, ಮಹಾವಿದ್ವಾಂಸರು, ಅಜ್ಞರು ಎಲ್ಲರೂ ಈ ಗ್ರಂಥಗಳ ಕರ್ತೃಗಳು. 'ಸ್ತೋತ್ರ ಗೀತೆಗಳ ಪುಸ್ತಕ'ದಲ್ಲಿ ಸಾಹಿತ್ಯದಲ್ಲಿನ ಅತ್ಯುದಾತ್ತ ಭಾವಗೀತೆಗಳಿವೆ. 'ಅರಸರ ಪುಸ್ತಕ'ದ್ದು ರಸವಂತಿಕೆಯಿಲ್ಲದ ಗದ್ಯ. 'ಮಾರ್ಕನ ಸುವಾರ್ತೆ'ಯಲ್ಲಿರುವುದು, ಸಾದಾ ಸರಳ ಶೈಲಿ. 'ಕೋಲೋಸ್ಸಿಯನ್ನರಿಗೂ ಹಿಬ್ರೂಗಳಿಗೂ ಬರೆದ ಧರ್ಮ ಪ್ರವರ್ತಕನ ಪತ್ರಗಳ ಪುಸ್ತಕ'ದಲ್ಲಿರುವುದು ಬೆರಗುಗೊಳಿಸುವಂಥ ಕಲ್ಪನೆ–ಚಿಂತನೆ. ವೈವಿಧ್ಯಮಯ ಸಾಹಿತ್ಯವನ್ನು ಒಳಗೊಂಡಿರುವುದೇ ಬೈಬಲಿನ ಅತಿ ದೊಡ್ಡ ವೈಶಿಷ್ಟ್ಯ. ಈ ವೈವಿಧ್ಯದಲ್ಲೂ ಒಂದು ಐಕ್ಯವಿದೆ–ವಸ್ತುವಿನ ಐಕ್ಯ. ಆ ವಸ್ತು, ಯೆಹೂದ್ಯರ ಇತಿಹಾಸದ ಮೂಲಕ ಮಾನವನಿಗೆ ಕ್ರಮವಾಗಿ ಆಗುವ ದೇವದರ್ಶನ.

ಬೈಬಲಿನಲ್ಲಿ ಎರಡು ಭಾಗಗಳಿವೆ—ಹಳೆಯ ಒಡಂಬಡಿಕೆ ಮತ್ತು ಹೊಸ ಒಡಂಬಡಿಕೆ. ಹಳೆಯ ಒಡಂಬಡಿಕೆ ಹಿಬ್ರೂ ಭಾಷೆಯ 39 ಪುಸ್ತಕಗಳ ಸಂಗ್ರಹ. ಬಹುಮಂದಿ ವಿದ್ವಾಂಸರ ಅಭಿಪ್ರಾಯದಂತೆ ಕ್ರಿಸ್ತ ಪೂರ್ವ 1200 ರಿಂದ 100ರ ಅವಧಿಯಲ್ಲಿ ಅವು ಬರೆಯಲ್ಪಟ್ಟುವು. ಈ ಪುಸ್ತಕಗಳಲ್ಲಿರುವುದು ಪ್ಯಾಲೆಸ್ಟೈನ್ (ಆಧುನಿಕ ಇಸ್ರೇಲ್) ವಾಸಿಗಳಾದ ಸೆಮೆಟಿಕ್ ಜನರಾದ ಯೆಹೂದ್ಯರ ಧಾರ್ಮಿಕ, ಚಾರಿತ್ರಿಕ, ನ್ಯಾಯಸಂಬಂಧದ, ತತ್ವಜ್ಞಾನ ಸಂಬಂಧದ ಮತ್ತು ಕಾವ್ಯಸ್ವರೂಪದ ಬರವಣಿಗೆ. ಹಳೆಯ ಒಡಂಬಡಿಕೆ ಯೆಹೂದ್ಯರ ಪವಿತ್ರಗ್ರಂಥ.

ಹೊಸ ಒಡಂಬಡಿಕೆಯೆಂದು ಕರೆಯಲ್ಪಡುವ ಬೈಬಲಿನ ಇನ್ನೊಂದು ಭಾಗದಲ್ಲಿ ಇಪ್ಪತ್ತೇಳು ಪುಸ್ತಕಗಳಿವೆ. ಇವು ರಚಿತವಾದದ್ದು ಗ್ರೀಕ್ ಭಾಷೆಯಲ್ಲಿ, ಕ್ರಿಸ್ತಶಕ ಮೊದಲ ಹಾಗೂ ಎರಡನೆಯ ಶತಮಾನಗಳಲ್ಲಿ. ಈ ಪುಸ್ತಕಗಳಲ್ಲಿರುವುದು ಯೇಸುವಿನ ಜೀವನ ಹಾಗೂ ಬೋಧನೆಗಳು ; ಯೇಸುವಿನ ಅನುಯಾಯಿಗಳ ಚಟುವಟಿಕೆಗಳ ಮತ್ತು ಆರಂಭದ ಕ್ರೈಸ್ತ ಸಮಾಜಗಳ ರಚನೆಯ ವಿವರ. ವೇದಗಳು ಹಿಂದೂಗಳಿಗೆ, ಖುರಾನ್ ಮುಸಲ್ಮಾನರಿಗೆ ಮತ್ತು ಜೆಂಡ–ಅವೆಸ್ತ ಪಾರಸೀ ಜನರಿಗೆ ಪವಿತ್ರವಾಗಿರುವಂತೆಯೇ ಹಳೆಯ ಮತ್ತು ಹೊಸ ಒಡಂಬಡಿಕೆಗಳನ್ನು ಒಳಗೊಂಡ ಬೈಬಲ್ ಕ್ರೈಸ್ತರಿಗೆ ಪವಿತ್ರ.

## ಬೈಸಿಕಲ್

ಜನಸಾಮಾನ್ಯರಿಗೆ ಅತಿ ಉಪಯುಕ್ತವಾದ ವಾಹನ ಬೈಸಿಕಲ್.

ಬೈಸಿಕಲಿನಲ್ಲಿ ಪ್ರಧಾನವಾಗಿ ಕಾಣುವುದು ಎರಡು ಚಕ್ರಗಳು (ಬೈ ಸೈಕಲ್). ಚಕ್ರದ ಉದಯ ಪ್ರಾಚೀನ. ಬಹು ಮುಂಚೆಯೇ ಬಂದ ಚಕ್ರಗಳು ಬೈಸಿಕಲ್ ರೂಪ ತಳೆಯಲು ಸಾವಿರಾರು ವರ್ಷಗಳ ಕಾಲ ಬೇಕಾಯಿತು.

ಇಂದಿನ ಬೈಸಿಕಲಿನ ಪಿತಾಮಹವಾಹನ ಕೇವಲ 1816ರಲ್ಲಿ ಫ್ರಾನ್ಸ್ ಪ್ರಜೆಯೊಬ್ಬನ ಪ್ರಯತ್ನದಿಂದ ರೂಪುಗೊಂಡಿತು. ಇದಕ್ಕೂ ಮೊದಲು

1760ರಲ್ಲಿ ಒಬ್ಬ ಶಾಲಾ ಅಧ್ಯಾಪಕನೊಬ್ಬ ಕಾಲುಗಳಿಂದ ತಳ್ಳಿಕೊಳ್ಳಬಹುದಾದ ನಾಲ್ಕು ಚಕ್ರಗಳ ವಾಹನವೊಂದನ್ನು ಮಾಡಿದ್ದನೆಂಬ ಉಲ್ಲೇಖವಿದೆ. ಫ್ರಾನ್ಸಿನ ದ್ವಿಚಕ್ರ ವಾಹನದ ಸುಧಾರಿತ ರೂಪ 1818ರಲ್ಲಿ ಇಂಗ್ಲೆಂಡಿನಲ್ಲಿ ಬಳಕೆಗೆ ಬಂದಿತು. ಸ್ಕಾಟ್ಲೆಂಡಿನ ಕರ್ಕ್‌ಪ್ಯಾಟ್ರಿಕ್ ಮ್ಯಾಕ್‌ಮಿಲನ್ ಎಂಬವನು 1839ರಲ್ಲಿ ಕಾಲುಗಳನ್ನು ಭೂಮಿಯ ಮೇಲಿಡದೆಯೇ ನಡೆಸಬಹುದಾದ ದ್ವಿಚಕ್ರ ವಾಹನವನ್ನು ನಿರ್ಮಿಸಿದ. ಕಾಲಿನಿಂದ ಒತ್ತುವ ಪೆಡಲ್‌ಗಳನ್ನು ಮುಂದಿನ ಚಕ್ರಕ್ಕೆ ಜೋಡಿಸಲಾಗಿದ್ದಿತು. ಆಗಿನ ದ್ವಿಚಕ್ರ ವಾಹನಗಳಿಗೆ ಕಬ್ಬಿಣದ ಪಟ್ಟಿಗಳಿದ್ದ ಮರದ ಚಕ್ರಗಳಿದ್ದುವು. ಇದರಿಂದ ಈ ವಾಹನ ಭಾರವಾಗಿ ರಸ್ತೆಯ ತಗ್ಗುದಿನ್ನೆಗಳ ಮೇಲೆ ಸವಾರಿ ಮಾಡುವಾಗ ಅತ್ಯಂತ ತೊಂದರೆಯಾಗುತ್ತಿದ್ದಿತು. ಗುಡ್ಡಗಳ ಇಳಿಜಾರಿನಲ್ಲಿ ಹೋಗಬೇಕಾದರೆ ಹತೋಟಿ ಮೀರಿದ ವೇಗದಲ್ಲಿ ಅವು ಉರುಳುತ್ತಿದ್ದುವು. ಆಮೇಲೆ ಬಂದ ವಾಹನದಲ್ಲಿ ಬೇರೆ ಬೇರೆ ಅಳತೆಗಳ ಚಕ್ರಗಳಿದ್ದುವು. ಮುಂದಿನ ಚಕ್ರ 127 ರಿಂದ 152 ಸೆಂಟಿಮೀಟರ್ ವ್ಯಾಸವುಳ್ಳದ್ದಾದರೆ ಹಿಂದಿನ ಚಕ್ರ ತೀರಾ ಕುಬ್ಜ. ಅದರ ವ್ಯಾಸ ಕೇವಲ 36ರಿಂದ 46 ಸೆಂಟಿಮೀಟರ್. ಇದೇ ಇಂದಿನ ಬೈಸಿಕಲಿನ ತಂದೆ. ಇದರ ಮೇಲೆ ನೀಳ ಶರೀರದವರು ಮಾತ್ರ ಸುಲಭವಾಗಿ ಸಂಚರಿಸುವಂತಿತ್ತು. ಏಕೆಂದರೆ ಈ ವಾಹನದ ವೇಗ ದೊಡ್ಡ ಚಕ್ರ ಉರುಳುವ ವೇಗಕ್ಕೆ ಹೊಂದಿಕೊಂಡಿತ್ತು.

1870ರ ವೇಳೆಗೆ ಗಾಳಿ ರಬ್ಬರ್ ಪಟ್ಟಿಗಳುಳ್ಳ ಚಕ್ರಗಳು ಬೈಸಿಕಲಿನ ಜೋಡಣೆಗೆ ಸೇರಿದುವು. ಅಲ್ಲದೆ ಮರದ ಕಡ್ಡಿಯ ಸ್ಪೋಕ್‌ಗಳಿಗೆ ಬದಲಾಗಿ ಉಕ್ಕಿನ ಕಡ್ಡಿಗಳನ್ನು ಹೊಂದಿಸಲಾಯಿತು. ಮಾರ್ಗದ ಏರುತಗ್ಗುಗಳಿಂದ ಒದಗುವ ಧಕ್ಕೆಯನ್ನು ಸವಾರನಿಗೆ ಕಡಮೆ ಮಾಡಲು ಸ್ಪ್ರಿಂಗುಗಳೂ ಈ ವಾಹನದ ರಚನೆಯಲ್ಲಿ ಸೇರಿಕೊಂಡುವು. ಈ ಕಾಲದಲ್ಲಿ ಮೂರು ಚಕ್ರಗಳ ವಾಹನ ಬಳಕೆಗೆ ಬಂತು. ಆದರೆ ಅವು ಅಷ್ಟು ವೇಗವಾಗಿ ಹೋಗುತ್ತಿರಲಿಲ್ಲ, ಆದುದರಿಂದ ಜನಪ್ರಿಯವಾಗಲಿಲ್ಲ. ಅಸಮ ಚಕ್ರಗಳ ಬೈಸಿಕಲ್ ತಯಾರಿಕೆ ಅಮೆರಿಕದಲ್ಲಿ ಆರಂಭವಾಗಿ 1868ರಲ್ಲಿ ಮೊದಲ ಬಾರಿಗೆ ಅದು ವಿದೇಶಗಳಿಗೆ ರಫ್ತಾಯಿತು. ಯೂರೋಪಿನಲ್ಲಿ ಇದಕ್ಕೆ ಮೊದಲೇ ಬೈಸಿಕಲುಗಳನ್ನು ತಯಾರಿಸುತ್ತಿದ್ದರು. ಮಿಕಾಕ್ ಎಂಬ ಫ್ರೆಂಚರವನು ಬೈಸಿಕಲ್ ತಯಾರಿಕೆಯಲ್ಲಿ ಆದ್ಯಪ್ರವರ್ತಕನೆನ್ನಬಹುದು. ಮನುಷ್ಯನ ಎಲುಬನ್ನು ಜಳ್ಳಾಗಿಸುವ ವಾಹನವೆಂದು ಹೆಸರುಗಳಿಸಿದ ಈ ಯಂತ್ರವನ್ನು 1867ರ ಪ್ಯಾರಿಸ್ ಪ್ರದರ್ಶನದಲ್ಲಿ ಇಡಲಾಗಿದ್ದಿತು.

ಇದೇ ಕಾಲಕ್ಕೆ ಸುರಕ್ಷಿತ ಬೈಸಿಕಲು ಅಸ್ತಿತ್ವಕ್ಕೆ ಬಂದಿತು. ಇವರಲ್ಲಿನ ಮುಖ್ಯ ಸುಧಾರಣೆಯೆಂದರೆ, ವೇಗಸಾಧನೆಗೆ ಚಕ್ರಗಳನ್ನು ಹಿರಿದಾಗಿ ಮಾಡುವುದರ ಬದಲು ಹಲ್ಲುಗಳಂತೆ ಅಂಚಿರುವ ಪುಟ್ಟ ಚಕ್ರಗಳ ಅಥವಾ 'ಗೇರ್'ಗಳ ಜೋಡಣೆಯಿಂದ ವಾಹನದ ವೇಗವನ್ನು ಹೆಚ್ಚಿಸಿದ್ದು; ಗಾಡಿಯ ದೂಡುವಿಕೆ ಮುಂದಿನ ಚಕ್ರಕ್ಕೆ ಬದಲು ಹಿಂದಿನ ಚಕ್ರದಿಂದ ಆರಂಭವಾಗುವಂತೆ ಮಾರ್ಪಾಡಾದದ್ದು. ಸೈಕಲಿಗೆ ಸರಪಣಿ ಸೇರಿದ್ದೂ ಆಗಲೇ. 1879ರಲ್ಲಿ ಈ ಸರಪಣಿ ಜೋಡಣೆ ಬೈಸಿಕಲ್ ಇತಿಹಾಸದಲ್ಲಿ ಪ್ರಧಾನ ಘಟ್ಟ. ಇಂಥದೇ ಇನ್ನೊಂದು ಮುಖ್ಯ ಘಟ್ಟ ಪಶುವೈದ್ಯನಾಗಿದ್ದ ಜೆ.ಬಿ. ಡನ್‌ಲಪನ ಸಂಶೋಧನೆ (1888). ತನ್ನ ಮಗುವಿನ ತ್ರಿಚಕ್ರವಾಹನಕ್ಕೆ ಗಾಳಿ ತುಂಬಿದ ರಬ್ಬರ್ ಭಾಗವನ್ನು ಜೋಡಿಸಿ ಅದರ ಅನುಕೂಲವನ್ನು ಕಂಡುಕೊಂಡ ಡನ್‌ಲಪ್ ಕೂಡಲೇ ಈ ಶೋಧನೆಗೆ ಏಕಸ್ವ ಪಡೆದುಕೊಂಡ. ದಟ್ಟವಾದ ಬಟ್ಟೆಯ ಹೊರ ಪದರುಳ್ಳ ಗಾಳಿ ತುಂಬಿದ ರಬ್ಬರ್ ಕೊಳವೆಯುಳ್ಳ ಚಕ್ರಗಳು ಬರತೊಡಗಿದುವು. ಮುಂದೆ ಬಟ್ಟೆಯ ಪದರಕ್ಕೆ ಬದಲಾಗಿ ಉಕ್ಕಿನ ಚಕ್ರದ ಪಟ್ಟಿಗಳು ಉಪಯೋಗಕ್ಕೆ ಬಂದುವು. ಇಷ್ಟರ ವೇಳೆಗೆ ಬೈಸಿಕಲಿನ ರಚನೆ ಪೂರ್ಣಗೊಂಡಿತೆನ್ನಬಹುದು. ಮುಂದೆ ಬದಲಾವಣೆಗಳಾದರೂ ಅವು ಅಲ್ಪ ಸ್ವಲ್ಪ.

ಹತ್ತೊಂಬತ್ತನೆಯ ಶತಮಾನದ ಕೊನೆಯ ದಶಕವನ್ನು ಬೈಸಿಕಲಿನ ಸುವರ್ಣ ಯುಗವೆನ್ನುತ್ತಾರೆ. ಈ ವೇಳೆಗೆ ಪೂರ್ಣವಾಗಿ ಅಭಿವೃದ್ಧಿ ಹೊಂದಿದ ಈ ವಾಹನ ವಿಹಾರಕ್ಕೆ ಒಂದು ಮುಖ್ಯ ಸಾಧನವೆನಿಸಿಕೊಂಡಿತು. ಬೈಸಿಕಲ್ ಸಂಘಗಳು ಅಸ್ತಿತ್ವಕ್ಕೆ ಬಂದುವು. ವೇಗಸ್ಪರ್ಧೆ ಹಾಗೂ ಪ್ರವಾಸಗಳನ್ನು ಈ ಸಂಘಗಳ ಆಶ್ರಯದಲ್ಲಿ ಏರ್ಪಡಿಸಲಾಯಿತು. 1896ರಿಂದ 1898ರ ವೇಳೆಗೆ ಹದಿನೇಳು ದೇಶಗಳನ್ನು ಸಂದರ್ಶಿಸಿ 27,734 ಕಿಲೊಮೀಟರುಗಳನ್ನು ಬೈಸಿಕಲ್ ಸವಾರಿಯಲ್ಲೇ ಕ್ರಮಿಸಿದರು ಮೂರು ಜನ ಆಂಗ್ಲರು. ಫ್ರಾನ್ಸಿನಲ್ಲಿ ಪ್ರತಿ ಬೇಸಿಗೆಯಲ್ಲಿ 4,827 ಕಿಲೊಮೀಟರುಗಳ ಸ್ಪರ್ಧೆ ಏರ್ಪಡುತ್ತದೆ. ಒಟ್ಟಿಗೆ ಐದು ಮಂದಿ ಸವಾರಿ ಮಾಡಬಹುದಾದ ಬೈಸಿಕಲು ಕೂಡ 1896ರ ಒಂದು ಸ್ಪರ್ಧೆಯಲ್ಲಿ ಪ್ರವೇಶಿಸಿದ್ದಿತಂತೆ. ಇದೇ ರೀತಿ ಇಬ್ಬರು ಸೇರಿ ನಡೆಸುವ ಬೈಸಿಕಲುಗಳು ಇದ್ದುವು.

ವಿವಿಧ ರೀತಿಯ ಬೈಸಿಕಲುಗಳನ್ನು ಈಗಲೂ ನಾವು ಸರ್ಕಸಿನಲ್ಲಿ ನೋಡಬಹುದು. ಇಲ್ಲಿ ಬೈಸಿಕಲ್ ಹಗ್ಗದ ಮೇಲೆಯೂ ಚಲಿಸುತ್ತದೆ.

ಕುದುರೆ ಗಾಡಿಗಳಿನ್ನೂ ಬಳಕೆಯಲ್ಲಿದ್ದಾಗ, ರೈಲುಮಾರ್ಗ ವಿಸ್ತರಿಸುತ್ತಿದ್ದಾಗ, ಬೈಸಿಕಲು ಅವತರಿಸಿತು. ಇತರರನ್ನು ನೆಚ್ಚದೆ ತನ್ನ ಪಾಡಿಗೆ ತಾನು ವ್ಯಕ್ತಿ ಓಡಾಡಲು ಇದರಿಂದ ಸಾಧ್ಯವಾಯಿತು. ಕೆಲಸಕ್ಕಾಗಿ, ವಿಹಾರಕ್ಕಾಗಿ ಜನ ಸಂಚಾರ ಮಾಡುವುದು ಹೆಚ್ಚಾಯಿತು. ಒಟ್ಟಿನಲ್ಲಿ ಬೈಸಿಕಲಿನ ಆಗಮನ ಸಾಮಾನ್ಯ ಜನರ ಜೀವನದಲ್ಲಿ ಗಮನಾರ್ಹವಾದ ಬದಲಾವಣೆಯನ್ನು ಮಾಡಿತು.

ಬೈಸಿಕಲ್ ಸಾಗಿ ಬಂದ ದಾರಿ



## ಬೋಸ್, ಸುಭಾಷ್‌ಚಂದ್ರ

ನೋಡಿ : ಸುಭಾಷ್‌ಚಂದ್ರ ಬೋಸ್

## ಭಗವದ್ಗೀತೆ

"ನನ್ನ ತಾಯಿ" ಎಂದು ಗಾಂಧಿಜಿಯಿಂದ ಬಣ್ಣಿಸಲ್ಪಟ್ಟ ಭವ್ಯಗ್ರಂಥ ಭಗವದ್ಗೀತೆ.

ಭಾರತೀಯ ಮಹಾಕಾವ್ಯಗಳಲ್ಲೊಂದಾದ ಮಹಾಭಾರತದ ಭೀಷ್ಮ ಪರ್ವದ 25ರಿಂದ 42ರ ವರೆಗೆ ಅಧ್ಯಾಯಗಳೇ ಭಗವದ್ಗೀತೆಯ ಒಡಲು.

ಭಗವದ್ಗೀತೆ ಶತಮಾನಗಳಿಂದ ಭಾರತದ ಆಧ್ಯಾತ್ಮಿಕ ಜೀವನದಲ್ಲಿ ಬೆಳಕಾಗಿದೆ.

ಗೀತೆ ಎಂದರೆ ಹಾಡು. ಭಗವದ್ಗೀತೆ ಭಗವಂತನಾದ ಶ್ರೀ ಕೃಷ್ಣನು ಹೇಳಿದ ಕಾವ್ಯರೂಪವಾದ ಉಪದೇಶ. ಇದನ್ನು ಸಾಮಾನ್ಯವಾಗಿ ಗೀತೆ ಎನ್ನುತ್ತಾರೆ.

ಮಹಾಭಾರತ, ಪಾಂಡವರಿಗೂ ಕೌರವರಿಗೂ ನಡೆದ ಮಹಾಯುದ್ಧದ ಕಥೆಯನ್ನು ಹೇಳುತ್ತದೆ.

ಕುರುಕ್ಷೇತ್ರದಲ್ಲಿ ಪಾಂಡವರ ಮತ್ತು ಕೌರವರ ಸೈನ್ಯಗಳು ಎದುರಾದುವು. ಘೋರ ಯುದ್ಧ ಇನ್ನೇನು ಪ್ರಾರಂಭವಾಗಬೇಕು.

ಪಾಂಡವರಲ್ಲೊಬ್ಬನಾದ ಅರ್ಜುನನ ರಥ ಎರಡು ಸೈನ್ಯಗಳ ಮಧ್ಯೆ ನಿಂತಿತು. ಅವನ ಸಾರಥಿ ಕೃಷ್ಣ. ಎದುರು ಪಕ್ಷದಲ್ಲಿದ್ದವರನ್ನು ನೋಡಿದ ಕೂಡಲೇ ಅರ್ಜುನನ ಯುದ್ಧೋತ್ಸಾಹವೆಲ್ಲ ಇಳಿದುಹೋಯಿತು. ಅರ್ಜುನ ಯುದ್ಧ ಮಾಡಬೇಕಾಗಿದ್ದುದು ಆತನ ಬಂಧು ಬಾಂಧವರೊಡನೆ. ಗುರುಹಿರಿಯರೊಡನೆ. ಇವರನ್ನೆಲ್ಲ ಕೊಂದು ರಾಜ್ಯವನ್ನು ಗಳಿಸಲು ಅವನ ಮನಸ್ಸು ಒಪ್ಪಲಿಲ್ಲ. ತನ್ನ ಶಸ್ತ್ರಾಸ್ತ್ರಗಳನ್ನು ಕೆಳಗೆ ಹಾಕಿ. ತಾನು ಯುದ್ಧ ಮಾಡುವುದಿಲ್ಲ ಎಂದು ಕುಳಿತುಬಿಟ್ಟ. ಹೀಗೆ ಸ್ವಜನ ಮೋಹಕ್ಕೆ ಒಳಗಾಗಿ ತನ್ನ ಕರ್ತವ್ಯವನ್ನು ಮರೆತ ಅರ್ಜುನನಿಗೆ, ಅವನ ಕರ್ತವ್ಯದ ಬಗೆಗೆ ಎಚ್ಚರಿಕೆ ನೀಡಿದ ಶ್ರೀ ಕೃಷ್ಣನ ಸಂದೇಶವೇ ಭಗವದ್ಗೀತೆ. "ಕೆಟ್ಟವರನ್ನು ಶಿಕ್ಷಿಸಲು ಮಾಡುವ ಯುದ್ಧ ಧರ್ಮಯುದ್ಧ, ಮಾನವನ ಕರ್ತವ್ಯ," ಎಂದು ಕೃಷ್ಣ ಉಪದೇಶಿಸಿದ.

ಯಾವುದು ಧರ್ಮ, ಯಾವುದು ಅಧರ್ಮ, ಯಾವಾಗ ಹೇಗೆ ನಡೆದುಕೊಳ್ಳಬೇಕು, ಮನುಷ್ಯ ಹೇಗೆ ಬದುಕಬೇಕು, ದೇವರಿಗೆ ಹೇಗೆ ಶರಣು ಹೋಗಬೇಕು ಮೊದಲಾದ ವಿಷಯಗಳನ್ನು ತಿಳಿಸುವ ಶ್ರೀಕೃಷ್ಣಾರ್ಜುನ ಸಂವಾದವೇ ಭಗವದ್ಗೀತೆ.

'ಯೋಗಿಯು ತಪಸ್ವಿಗಳಿಗಿಂತಲೂ ಶ್ರೇಷ್ಠ; ವೈದಿಕಜ್ಞಾನ ಗಳಿಸಿರುವವನಿಗಿಂತಲೂ ಶ್ರೇಷ್ಠ; ಅಲ್ಲದೆ ಫಲಾಪೇಕ್ಷೆಯಿಂದ ಕರ್ಮವನ್ನು ಆಚರಿಸುವವರಿಗಿಂತಲೂ ಶ್ರೇಷ್ಠ,' ಎಂದು ಗೀತೆ ಸಾರಿದೆ. ಈ ಯೋಗಿ ಯಾರು? ಪರಮಾತ್ಮನಲ್ಲಿ ಮನಸ್ಸನ್ನು ನೆಟ್ಟು, ಫಲವನ್ನೆಲ್ಲ ಅವನಿಗೇ ಅರ್ಪಿಸಿ. ಸ್ವಾಭಿಮಾನವನ್ನೂ, ಕರ್ಮಫಲವನ್ನೂ ಸಂಪೂರ್ಣವಾಗಿ ತೊರೆದು ತನ್ನ ಕರ್ತವ್ಯವನ್ನು ದೈವಪ್ರೀತ್ಯರ್ಥವಾಗಿ ಆತ್ಮಾದರದಿಂದ ತಪ್ಪದೆ ಮಾಡುವವನು ಯೋಗಿ.



ಗೀತೋಪದೇಶ

ಆತ್ಮಸಾಕ್ಷಾತ್ಕಾರಕ್ಕೆ ಕರ್ಮಯೋಗವೇ ಸಾಧನ ಎಂಬುದೇ ಗೀತೆಯ ಸಂದೇಶ. ಭಕ್ತಿ. ಜ್ಞಾನ. ಸನ್ಯಾಸ ಇವೆಲ್ಲವೂ ಕರ್ಮಯೋಗದಲ್ಲಿ ಸೇರಿವೆ. ವೈರಾಗ್ಯವೆಂದರೆ ಕರ್ಮದಿಂದ ಬರುವ ಫಲದ ಬಗೆಗೆ ಆಸೆಪಡದೆ. ಯಾವಾಗಲೂ ಕರ್ಮನಿರತನಾಗಿರುವುದು.

ಕರ್ಮ--ಎಂದರೆ ಕೆಲಸ–ಬಾಳಿಗೆ ಅಂಟಿಕೊಂಡದ್ದು. ಬೇಡ ಎಂದು ಅದನ್ನು ಬಿಡುವಂತಿಲ್ಲ. ಏಕೆಂದರೆ ಉಸಿರಾಡಲೇ ಬೇಕು. ಆಹಾರ ಸೇವಿಸಲೇ ಬೇಕು. ಎದ್ದು ಓಡಾಡಲೇ ಬೇಕು, ನಾಲ್ಕು ಜನರ ಜೊತೆಗೆ ಬಾಳಲೇ ಬೇಕು. ಇದರಲ್ಲಿ ಯಾವುದು ಸರಿ, ಯಾವುದು ತಪ್ಪು ಎಂದು ಸಾಮಾನ್ಯ ಮನುಷ್ಯ ನಿರ್ಧರಿಸುವುದು ಹೇಗೆ? ಸಾಮಾನ್ಯ ಮನುಷ್ಯನ ತಿಳಿವಳಿಕೆ ಬಹಳ ಮಿತವಾದದ್ದು, ಆದರೆ 'ತನ್ನ ಜ್ಞಾನ ಮಿತವಾದದ್ದು. ತಾನು ಪಾಪ ಪುಣ್ಯಗಳನ್ನು ನಿರ್ಧರಿಸಲಾರೆ' ಎಂದು ಬಿಡುವಂತೆಯೂ ಇಲ್ಲ. ಕರ್ಮ ಮಾಡಿದರೆ, ಕರ್ಮ–ಅದರ ಫಲ ಈ ಚಕ್ರಕ್ಕೆ ಸಿಕ್ಕಿಕೊಳ್ಳಬೇಕು. ಇದರಿಂದ ಬಿಡುಗಡೆ ಹೇಗೆ? ಶ್ರೀ ಕೃಷ್ಣ ಹೇಳಿದ :

"ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ.
ಮಾ ಕರ್ಮಫಲಹೇತುರ್ಭೂರ್ಮಾ ತೇ ಸಂಗೋಸ್ತ್ವ
ಕರ್ಮಣಿ"

—ಕರ್ಮವನ್ನು ಮಾಡಲು ಮಾತ್ರ ನಿನಗೆ ಅಧಿಕಾರ. ಫಲ ಬೇಡಲು ನಿನಗೆ ಅಧಿಕಾರವಿಲ್ಲ. ಫಲದ ಆಸೆಯನ್ನಿಟ್ಟುಕೊಂಡು ಕರ್ಮ ಮಾಡಬೇಡ. ಆದರೆ ಕರ್ಮದ ಫಲದ ಆಸೆಯಿಲ್ಲವೆಂದು ಕರ್ಮವನ್ನೇ ಬಿಡುತ್ತೇನೆ ಎಂಬ ಹಟ ಬೇಡ.

"ಸರ್ವಭೂತಸ್ಥಮಾತ್ಮಾನಂ, ಸರ್ವಭೂತಾನಿಚಾತ್ಮನಿ.
ಈಕ್ಷತೇ ಯೋಗ ಯುಕ್ತಾತ್ಮಾ, ಸರ್ವತ್ರ ಸಮದರ್ಶನಃ"

ಯಾರು ಎಲ್ಲರನ್ನೂ ಸಮನಾಗಿ ಕಾಣುತ್ತಾನೊ, ಯಾರು ತನ್ನ ಆತ್ಮವೇ ಎಲ್ಲರಲ್ಲಿ ನೆಲೆಸಿದೆ, ಎಲ್ಲರ ಆತ್ಮ ತನ್ನಲ್ಲಿದೆ ಎಂದು ಭಾವಿಸುತ್ತಾನೊ, ಅವನು ಯೋಗಿ, ಅವನು ಸದಾ ಭಗವಂತನಲ್ಲಿ ಒಂದಾಗಿರುತ್ತಾನೆ. ಕರ್ಮಯೋಗಿ ದೃಢವಾದ ಆಸ್ತಿಕ. ಭಗವಂತನಲ್ಲಿ ಅಚಲ ನಂಬಿಕೆ ಇಡುವುದು ಕರ್ಮಯೋಗಿಯ ವ್ಯಕ್ತಿತ್ವದ ವೈಶಿಷ್ಟ್ಯ.

"ಜೀವನದಲ್ಲಿ ಕರ್ತವ್ಯವನ್ನು ಎಂದಿಗೂ ಬಿಡಬೇಡ. ಆದರೆ ಅದರಲ್ಲಿ ಎಂದಿಗೂ ಸ್ವಾರ್ಥಕ್ಕೆ ಎಡೆ ಬೇಡ," ಎಂದಿದೆ ಗೀತೆ.

ಭಗವದ್ಗೀತೆ ಈ ಸಂದೇಶವನ್ನು ಸಾರಿದ್ದರಿಂದಲೇ ಅದು ಲೋಕಮಾನ್ಯ ತಿಲಕ್, ಮಹಾತ್ಮ ಗಾಂಧಿ, ಅನಿ ಬೆಸೆಂಟ್ ಮೊದಲಾದ ಮಹಾವ್ಯಕ್ತಿಗಳ, ದಾರಿದೀಪವಾಯಿತು.

ಭಗವದ್ಗೀತೆ ಸ್ಥಿತಪ್ರಜ್ಞನನ್ನು ವರ್ಣಿಸಿದೆ. ಸ್ಥಿತಪ್ರಜ್ಞ ಎಂದರೆ ಬಣ್ಣಿಸಲಾಗದಂಥ ಶಾಂತಿಯನ್ನು ಅನುಭವಿಸುವವನು. ಇಂಥವನು ಶತ್ರುಗಳನ್ನೂ ಮಿತ್ರರನ್ನೂ ಒಂದೇ ರೀತಿಯಲ್ಲಿ ಕಾಣುತ್ತಾನೆ. ಹೊಗಳಿದರೆ ಉಬ್ಬುವುದಿಲ್ಲ, ತೆಗಳಿದರೆ ಕುಗ್ಗುವುದಿಲ್ಲ. ಸುಖ, ದುಃಖ ಎರಡೂ ಆತನಿಗೆ ಒಂದೇ ಸಮ. ನಾನು ಎನ್ನುವುದನ್ನು ಬಿಟ್ಟು ಎಲ್ಲವನ್ನೂ ದೇವರಿಗೆ ಸಮರ್ಪಿಸುತ್ತಾನೆ. ಈ ಭಾಗ ಬಾಪೂಜಿಯವರಿಗೆ ಬಹಳ ಪ್ರಿಯವಾಗಿತ್ತು.

ಭಗವದ್ಗೀತೆಯ ಒಂದು ಭಾಗದಲ್ಲಿ ವಿಶ್ವರೂಪದರ್ಶನದ ವರ್ಣನೆ ಇದೆ. ಅರ್ಜುನನು ಕೃಷ್ಣನ ವಿಶ್ವರೂಪವನ್ನು ನೋಡಲು ಬಯಸುತ್ತಾನೆ. ಶ್ರೀ ಕೃಷ್ಣ ಆ ರೂಪವನ್ನು ತೋರಿಸುತ್ತಾನೆ. ಸೃಷ್ಟಿ ಎಲ್ಲ ಭಗವಂತನಲ್ಲಿದೆ ಎನ್ನುವುದನ್ನು, ದೇವತೆಗಳು, ಅಸುರರು, ಮಾನವರು, ಸೂರ್ಯಚಂದ್ರರು, ಎಲ್ಲ ಪ್ರಾಣಿಗಳು, ಎಲ್ಲ ಲೋಕಗಳು ಭಗವಂತನಲ್ಲಿ ಅಡಕವಾಗಿರುವುದನ್ನು ಅರ್ಜುನ ಕಾಣುತ್ತಾನೆ.

ಒಂದು ಮಹಾಯುದ್ಧ ನಡೆದಾಗ ಜೀವನ ಸಾರಸರ್ವಸ್ವವಾದ ಇಷ್ಟು ದೊಡ್ಡ ಗೀತೆಯನ್ನು ಭಗವಾನ್ ಶ್ರೀ ಕೃಷ್ಣ ಹೇಳಿರುವುದು ಹೇಗೆ ಸಾಧ್ಯ ಎಂದೂ ಕೇಳಿದವರುಂಟು. ಮಹಾಭಾರತವನ್ನು ಬರೆದ ವ್ಯಾಸಮಹರ್ಷಿ ಭಗವದ್ಗೀತೆಯನ್ನು ಬರೆಯಲಿಲ್ಲವೆಂದೂ ಬೇರೊಬ್ಬರು ಬರೆದು ಅದನ್ನು ಮಹಾಭಾರತದಲ್ಲಿ ಸೇರಿಸಿದ್ದಾರೆಂದೂ ಕೆಲವರು ಹೇಳುತ್ತಾರೆ. ಭಗವದ್ಗೀತೆಯ ಕರ್ತೃವಿನ ಬಗೆಗೆ ವಾದವಿವಾದಗಳು ಏನೇ ಇದ್ದರೂ ಭಗವದ್ಗೀತೆಯ ಸಂದೇಶ ಅಮೂಲ್ಯವಾದದ್ದು. ಉಪನಿಷತ್ತುಗಳ ಸಾರವೆಲ್ಲ ಗೀತೆಯಲ್ಲಿದೆ.

ಗೀತೆ ಅತ್ಯುತ್ತಮ ಸಾಹಿತ್ಯವೂ ಹೌದು. ಅದರ ಶ್ಲೋಕಗಳು ಅನೇಕ ಸಾಲುಗಳು, ಪದಗಳು ನಮ್ಮ ದಿನನಿತ್ಯದ ಭಾಷೆಯ ಭಾಗವಾಗಿಬಿಟ್ಟಿವೆ.

ಗೀತೆಯ ತತ್ತ್ವಜ್ಞಾನ ಒಂದು ಧರ್ಮಕ್ಕೆ ಮಾತ್ರ ಸಂಬಂಧಪಟ್ಟುದಲ್ಲ. ಅದು ಮಾನವ ಜೀವನಕ್ಕೆ ಸಂಬಂಧಿಸಿದ್ದು. ಗೀತೆಯ ಸಂದೇಶಕ್ಕೆ ದೇಶಕಾಲಗಳ ಪರಿಮಿತಿಯಿಲ್ಲ.

ನೊಂದ ಜನರಿಗೆ ಭರವಸೆ ನೀಡುವ ಗ್ರಂಥ ಭಗವದ್ಗೀತೆ.

"ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್.
ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ"

ಯಾವಾಗ ಧರ್ಮ ಕ್ಷಯಿಸಿ ಅಧರ್ಮ ವೃದ್ಧಿಯಾಗುವುದೊ ಆಗ ಒಳ್ಳೆಯವರನ್ನು ರಕ್ಷಿಸುವುದಕ್ಕಾಗಿ ಕೆಟ್ಟವರನ್ನು ಶಿಕ್ಷಿಸುವುದಕ್ಕಾಗಿ ನಾನು ಯುಗಯುಗಗಳಲ್ಲೂ ಅವತರಿಸುತ್ತೇನೆ ಎಂದಿದ್ದಾನೆ, ಗೀತೆಯಲ್ಲಿ ಶ್ರೀ ಕೃಷ್ಣ.

ಗೀತೆ ಪ್ರಪಂಚದ ಹಲವು ಭಾಷೆಗಳಿಗೆ ಭಾಷಾಂತರವಾಗಿದೆ. ಸಾಗರಗಳಾಚೆಯೂ ಓದುಗರನ್ನು ಪಡೆದಿರುವ ಗ್ರಂಥ. ಭಾರತದಲ್ಲಂತೂ ತತ್ತ್ವವೇತ್ತನಿರಲಿ, ರಾಜಕಾರಣಿಯಿರಲಿ, ಸಾಮಾನ್ಯನಾಗರಿಕನಿರಲಿ ಗೀತೆಯ ಶ್ಲೋಕಗಳನ್ನು ನಿತ್ಯಜೀವನದಲ್ಲಿ ಉಲ್ಲೇಖಿಸುತ್ತಾರೆ.

ಗೀತೆಯನ್ನು ಕುರಿತ ಭಾಷ್ಯಗಳು ಹಲವಾರು.

ಗೀತೋಪದೇಶ ಚಿತ್ರಕಾರರಿಗೂ ಶಿಲ್ಪಿಗಳಿಗೂ ಮೆಚ್ಚುಗೆಯ ವಸ್ತು. ಕನ್ನಡ ನಾಡಿನ ಗುಡಿಗಾರರು ಗಂಧದ ಮರದಲ್ಲೂ ಹಸ್ತಿದಂತದಲ್ಲೂ ಗೀತೋಪದೇಶದ ಸನ್ನಿವೇಶವನ್ನು ಸೊಗಸಾಗಿ ರೂಪಿಸುತ್ತಾರೆ.

## ಭರತ–ಇಳಿತ

ಪೂರ್ಣಿಮೆಯ ದಿನ ರಾತ್ರಿ ಸಮುದ್ರದಲ್ಲಿ ವಿಪರೀತ ಅಬ್ಬರ.

ಈ ಅಬ್ಬರವೇ ಭರತ; ನೀರು ಕುಗ್ಗಿ ಕೆಳಗಿಳಿದು ಹೋಗುವುದು ಇಳಿತ.

ಇಂಥ ಬದಲಾವಣೆಗಳಾಗಲು ಏನು ಕಾರಣ?

ಚಂದ್ರ ಮತ್ತು ಸೂರ್ಯರ ಗುರುತ್ವಾಕರ್ಷಣಶಕ್ತಿ ಭೂಮಿಯ ಮೇಲಿನ ಎಲ್ಲ ನದಿ, ಸರೋವರ, ಸಮುದ್ರ ಮತ್ತು ಸಾಗರಗಳಲ್ಲಿನ ನೀರಿನ 'ಏರಿಳಿತ'ಕ್ಕೆ ಕಾರಣ. ನದಿ ಮತ್ತು ಸರೋವರಗಳಲ್ಲಿನ ಭರತ ಮತ್ತು ಇಳಿತ ಗಮನಕ್ಕೆ ಬರದಷ್ಟು ಕಡಮೆ. ಎರಡು ಭೂಖಂಡಗಳು ಅಥವಾ ಎರಡು ಸಾಗರಗಳು ಸೇರುವ ಕಡೆ ಏರಿಳಿತ ಬಲು ಹೆಚ್ಚು.

ಒಂದನೆಯ ಶತಮಾನದಲ್ಲೇ ರೋಮಿನ ಪ್ರಕೃತಿ ವಿಜ್ಞಾನಿ ಪ್ಲಿನಿ ಎಂಬವನು ಭರತ–ಇಳಿತಗಳ ಮೇಲೆ ಚಂದ್ರನ ಪ್ರಭಾವವನ್ನು ಕುರಿತು ಬರೆದಿದ್ದ. 1687ರಲ್ಲಿ ಐಸಾಕ್ ನ್ಯೂಟನ್ ಗುರುತ್ವಾಕರ್ಷಣ ನಿಯಮವನ್ನು ಕಂಡುಹಿಡಿದ. ಇದರಿಂದ ಚಂದ್ರ ಮತ್ತು ಸೂರ್ಯರ ಗುರುತ್ವಾಕರ್ಷಣ ಶಕ್ತಿ ಭೂಮಿಯ ಮೇಲೆ ಪರಿಣಾಮವನ್ನುಂಟುಮಾಡುತ್ತದೆ ಎಂಬುದು ಸ್ಪಷ್ಟವಾಯಿತು. ಚಂದ್ರನಿಗಿಂತ ಸೂರ್ಯನ ತೂಕ 2,70,00,000 ಪಟ್ಟು ಹೆಚ್ಚಾಗಿದೆ. ಆದರೆ ಸೂರ್ಯ, ಭೂಮಿಯಿಂದ ಚಂದ್ರನಿರುವ ಅಂತರದ 390 ಪಾಲು ಹೆಚ್ಚು ದೂರ ಇರುವುದರಿಂದ, ಚಂದ್ರನ ಶಕ್ತಿಯೇ ಹೆಚ್ಚು ಪ್ರಭಾವಶಾಲಿ. ಒಂದು ಭರತದಿಂದ ಮತ್ತೊಂದು ಭರತಕ್ಕೆ ಸುಮಾರು 12 ಗಂಟೆ 25 ಮಿನಿಟು ಅಂತರವಿರುತ್ತದೆ. ಚಂದ್ರ ಚಲಿಸುವಾಗ ಗುರುತ್ವಾಕರ್ಷಣ ಶಕ್ತಿ ಹತ್ತಿರವಿರುವ ನೀರನ್ನು ಸೆಳೆಯುತ್ತದೆ.

ಭೂಮಿಯ ಒಂದು ಕಡೆ ಚಂದ್ರ ಆಕರ್ಷಿಸುವ ದಿಕ್ಕಿನಲ್ಲಿ ನೀರು ಉಬ್ಬುವಂತೆಯೇ ಇನ್ನೊಂದು ಗೋಲಾರ್ಧದಲ್ಲೂ ಸಾಗರಗಳ ನೀರು ಉಬ್ಬುತ್ತದೆ. ಈ ಉಬ್ಬುವಿಕೆ ಕೇವಲ ಚಂದ್ರನಿರುವ ಒಂದೇ ದಿಕ್ಕಿಗೆ ಮಾತ್ರವಲ್ಲ, ವಿರುದ್ಧ ದಿಕ್ಕಿನಲ್ಲೂ ಉಂಟಾಗುತ್ತದೆ. ಸಮುದ್ರದ ನೀರು ತೀರ ಪ್ರದೇಶದಲ್ಲಿ ಎತ್ತರದ ನೀರಿನ ಮಟ್ಟವನ್ನು ನಿಧಾನವಾಗಿ ಆರು ಗಂಟೆಗಳ ಕಾಲದಲ್ಲಿ ತಲಪಿ ಮತ್ತೆ ಇಳಿಯುತ್ತ ಬಂದು ಕೆಳಮಟ್ಟವನ್ನು ಮುಟ್ಟಲು ಆರು ಗಂಟೆಗಳ ಕಾಲ ತೆಗೆದುಕೊಳ್ಳುತ್ತದೆ. ಪ್ರತಿ ತಿಂಗಳೂ ಅಮಾವಾಸ್ಯೆ ಮತ್ತು ಪೂರ್ಣಿಮೆಯ ದಿನಗಳಲ್ಲಿ ಚಂದ್ರ ಮತ್ತು ಸೂರ್ಯ ಬಾನಿನ ಮಧ್ಯಕ್ಕೆ ಬರುವಾಗ ಸೆಳೆತ ಹೆಚ್ಚಾಗಿ ಭರತವೂ ಜೋರಾಗುತ್ತದೆ. ಇದನ್ನು ಪರಮಾವಧಿಯ ಭರತ ಎನ್ನುತ್ತಾರೆ.

ಸೂರ್ಯ ತಿಂಗಳಿಗೆ ಎರಡು ಬಾರಿ ಚಂದ್ರನ ಸಮಕೋನಕ್ಕೆ ಇರುತ್ತಾನೆ. ಆಗ ಅವುಗಳ ಆಕರ್ಷಣೆ ಒಂದಕ್ಕೊಂದು ವಿರುದ್ಧ. ಆ ದಿನಗಳಲ್ಲಿ ಅತಿ ಕಡಮೆ ಭರತ–ಇಳಿತಗಳು ಉಂಟಾಗುತ್ತವೆ. ಇವುಗಳಿಗೆ ಅತ್ಯಲ್ಪ ಭರತ ಎನ್ನುತ್ತಾರೆ. ಉಳಿದ ದಿವಸಗಳಲ್ಲಿ ಇವೆರಡರ ನಡುವಣ ಪ್ರಮಾಣಗಳಲ್ಲಿ ಭರತ–ಇಳಿತಗಳು ಕ್ರಮವಾಗತವಾಗಿ ಉಂಟಾಗುತ್ತವೆ.

ಭೂಮಿ ತನ್ನ ಅಕ್ಷದ ಮೇಲೆಯೂ ಚಂದ್ರ ಭೂಮಿಯ ಸುತ್ತಲೂ ಸುತ್ತುವುದರಿಂದ ಭರತ ಮತ್ತು ಇಳಿತಗಳುಂಟಾಗುತ್ತವೆ. ಸಮುದ್ರದ ಆಕಾರ, ವಿಸ್ತೀರ್ಣ, ಆಳಗಳು ಭರತ ಮತ್ತು ಇಳಿತದಲ್ಲಿ ವ್ಯತ್ಯಾಸ ಉಂಟು ಮಾಡುತ್ತವೆ. ಅಟ್ಲಾಂಟಿಕ್ ಸಾಗರದಲ್ಲಿ ಭರತ ಮತ್ತು ಇಳಿತಗಳು ದಿನಕ್ಕೆ ಎರಡು ಸಲವಾದರೆ, ಶಾಂತಸಾಗರದಲ್ಲಿ ಕೆಲವು ಕಡೆಗಳಲ್ಲಿ ಒಂದು ಭರತ ಇನ್ನೊಂದಕ್ಕಿಂತ ಬಹು ದೊಡ್ಡದಾಗಿದ್ದು 24 ಗಂಟೆಗೆ ಒಂದೇ ಭರತ ಎಂದು ಹೇಳಬಹುದು. ಕೆನಡದ ನ್ಯೂಬ್ರನ್ಸ್‌ವಿಕ್ ಮತ್ತು ನೋವಾ ಸ್ಕಾಟಿಯಗಳ ನಡುವೆ ಇರುವ ಫಂಡಿಕೊಲ್ಲಿ ಬರಬರುತ್ತಾ ಕಿರಿದಾಗುವುದರಿಂದ ಭರತ ಮತ್ತು ಇಳಿತಗಳ ಮಧ್ಯೆ ನೀರಿನ ಮಟ್ಟಗಳಲ್ಲಿ ಹದಿನೈದು ಮೀಟರುಗಳ ವ್ಯತ್ಯಾಸ ಬರುತ್ತದೆ. ಭೂಮಧ್ಯ ಸಮುದ್ರದಲ್ಲಿ ಈ ವ್ಯತ್ಯಾಸ 0.61 ಮೀಟರಿಗಿಂತ ಹೆಚ್ಚಿರುವುದಿಲ್ಲ.

ನಾವಿಕರಿಗೆ ಭರತ–ಇಳಿತಗಳ ಬಗೆಗೆ ಚೆನ್ನಾಗಿ ತಿಳಿವಳಿಕೆ ಇರಬೇಕಾದದ್ದು ಅಗತ್ಯ. ಭರತವಿರುವಾಗ ಆಳವಿಲ್ಲದ ಬಂದರುಗಳಿಗೆ ದೊಡ್ಡ ಹಡಗುಗಳು ಸುಲಭವಾಗಿ ಬರುತ್ತವೆ. ಏಕೆಂದರೆ ಆಗ ನೀರಿನ ಮಟ್ಟ ಏರಿರುತ್ತದೆ. ಭರತ–ಇಳಿತಗಳಿಂದ ಬಂದರು ಚೊಕ್ಕಟವಾಗುವುದು ಒಂದು ವಿಶೇಷ ಲಾಭ. ಭರತ ಬಂದು ನೀರಿನ ಮಟ್ಟ ಹೆಚ್ಚಾದಾಗ ಬಂದರಿನಲ್ಲಿದ್ದ ಕೊಳೆ ಕಸ ಸಮುದ್ರದಾಳಕ್ಕೆ ಸಾಗುತ್ತದೆ. ಬಂದರಿನ ನಿರ್ಮಾಣ ಕಾರ್ಯ, ಮನುಷ್ಯ ಸಮುದ್ರದಾಳಕ್ಕೆ ಇಳಿಯುವುದು, ಹೂಳು ತೆಗೆಯುವುದು ಮತ್ತು ನೌಕಾ ಎಂಜಿನಿಯರಿಂಗ್ ಕೆಲಸಗಳು ನಡೆಯುವುದು ಭರತ ಇಳಿತವನ್ನು ಅವಲಂಬಿಸಿರುತ್ತವೆ. ಭರತದ ನೀರು ಏರುವ ಬಳಿ ಇರುವ ತೈಲ ಬಾವಿಯ ಕೆಲಸ ಮತ್ತು ಉಪ್ಪು ಶೇಖರಿಸುವ ಮೈದಾನದ ಕೆಲಸಗಳೂ ಭರತ ಇಳಿತಗಳ ಮೇಲೆ ನಿರ್ಧಾರವಾಗುತ್ತವೆ. ಸಾಗರಶಾಸ್ತ್ರದ ಅಧ್ಯಯನದಲ್ಲಿ ಇದರ ಪಾತ್ರವೂ ಹಿರಿದು. ಹೂತು ಹೋಗಿರುವ ಅವಶೇಷಗಳನ್ನು ತೆಗೆಯುವುದರಲ್ಲಿ ಭರತ–ಇಳಿತಗಳನ್ನು ಅನುಸರಿಸಬೇಕಾಗುತ್ತದೆ. ಬೆಸ್ತರ ಜೀವನದಲ್ಲಂತೂ ಭರತ–ಇಳಿತದ ಸ್ಥಾನ ಅತಿಮಹತ್ವದ್ದು. ಪ್ರತಿ ದಿನದ ಕೆಲಸಕ್ಕೂ ಅವರು ಇದನ್ನು ಅನುಸರಿಸಿ ನಡೆಯಬೇಕು.

## ಭವಿಷ್ಯ

ಮುಂದಾಗುವುದನ್ನು ತಿಳಿದುಕೊಳ್ಳುವ ಬಯಕೆ ಬಹುಜನರಿಗೆ ಉಂಟು. ಪ್ರಾಚೀನ ಈಜಿಪ್ಟ್, ಗ್ರೀಸ್, ಭಾರತಗಳಲ್ಲಿ ಕನಸಿನ ಮತ್ತು ಶಕುನಗಳ ಆಧಾರದಿಂದ ಭವಿಷ್ಯದ ಪುಟಗಳನ್ನು ಓದಲೆತ್ನಿಸಿದ ಪ್ರಯತ್ನಗಳನ್ನು ಅಲ್ಲಿನ ಕಥೆ—ಕಾವ್ಯಗಳು ತೋರುತ್ತವೆ. ಬೈಬಲಿನಲ್ಲಿ ಕನಸು ಭವಿಷ್ಯವನ್ನು ತೋರಿತೆಂಬ ವೃತ್ತಾಂತವಿದೆ. ದೇವಸ್ಥಾನಗಳಲ್ಲಿ ದೇವತೆಗಳನ್ನು ಪೂಜಿಸಿ ಅವರ ಅರ್ಚಕರ ಮೂಲಕ ಭವಿಷ್ಯವನ್ನು ತಿಳಿಯುವ ಪ್ರಯತ್ನವನ್ನು ಚಕ್ರವರ್ತಿಗಳೂ ಜನಸಾಮಾನ್ಯರೂ ಮಾಡುತ್ತಿದ್ದರು. ಗ್ರೀಸಿನ ಹಲವು ರಾಜ್ಯಗಳೂ ಪರ್ಷಿಯದ ಚಕ್ರವರ್ತಿಗಳೂ ಡೆಲ್ಫಿ ಎನ್ನುವ ಸ್ಥಳದ ಅಪೋಲೊ ದೇವತೆಯ ಭವಿಷ್ಯವಾಣಿಯನ್ನು ನೆಚ್ಚುತ್ತಿದ್ದರು.

ಇಂದೂ ಭಾರತದಲ್ಲಿ ಮಾತ್ರವಲ್ಲದೆ ಹಲವು ದೇಶಗಳಲ್ಲಿ ಅನೇಕರು ಭವಿಷ್ಯವನ್ನು ತಿಳಿದುಕೊಳ್ಳುವ ಯತ್ನ ಮಾಡುತ್ತಾರೆ. ಭವಿಷ್ಯವನ್ನು ತಿಳಿಸಬಲ್ಲ ಶಕ್ತಿ ಇದೆ ಎಂದು ಹೇಳುವವರೂ ಹಲವರು. ಇವರಲ್ಲಿ ಕೆಲವರು ಪಂಜರದ ಪಕ್ಷಿಗಳು ಎತ್ತಿಕೊಡುವ ಚೀಟಿ, ಕವಡೆಗಳು ಇಂಥವುಗಳನ್ನೆ ನೆಚ್ಚುತ್ತಾರೆ.

ಭವಿಷ್ಯ ಕಥನಕ್ಕೆ ಆಧಾರವುಳ್ಳ ಪದ್ಧತಿಗಳೂ ಉಂಟು. ಇವರಲ್ಲಿ ಹಸ್ತಸಾಮುದ್ರಿಕ ಒಂದು. ಅಂಗೈಯ ಆಕಾರ, ಲಕ್ಷಣ, ಅದರಲ್ಲಿರುವ ಗೆರೆಗಳು, ಬೆರಳುಗಳ ಆಕಾರ—ಇವುಗಳ ಆಧಾರದ ಮೇಲೆ ವ್ಯಕ್ತಿಯ ಸ್ವಭಾವವನ್ನೂ ಜೀವನದ ಗತಿಯನ್ನೂ ವಿವರಿಸಲು ಹಸ್ತಸಾಮುದ್ರಿಕ ಯತ್ನಿಸುತ್ತದೆ. ಉದಾಹರಣೆಗೆ, ಹಸ್ತದ ಆಕಾರ, ಬಣ್ಣ ಮತ್ತು ಮೃದುತ್ವವನ್ನು ಅನುಸರಿಸಿ, ಅಸಂಸ್ಕೃತ, ಚೌಕಾಕೃತಿ, ಭಾವುಕ, ಬೌದ್ಧಿಕ, ಆದರ್ಶ ಮತ್ತು ಮಿಶ್ರ ಎಂಬ ಏಳು ವರ್ಗಗಳನ್ನು ಮಾಡುತ್ತಾರೆ. ರೇಖೆಗಳನ್ನು ಆಯುಷ್ಯರೇಖೆ, ಜ್ಞಾನರೇಖೆ, ಸಂಪತ್ತಿನರೇಖೆ, ಸಂಸಾರ ಸುಖದ ರೇಖೆ—ಹೀಗೆ ಗುರುತಿಸುತ್ತಾರೆ. (ಬೇರೆ ಬೇರೆ ದೇಶಗಳ ಹಸ್ತಸಾಮುದ್ರಿಕ ಗ್ರಂಥಗಳು ರೇಖೆಗಳಿಗೆ ಬೇರೆ ಬೇರೆ ವ್ಯಾಖ್ಯಾನ ಕೊಟ್ಟಿವೆ.) ಪ್ರತಿ ಬೆರಳಿನ ಬುಡದ ಉಬ್ಬಿನ ಲಕ್ಷಣದಿಂದ ವ್ಯಕ್ತಿಯ ಜೀವನದ ಒಂದೊಂದು ಮುಖವನ್ನೂ ಅರಿಯಬಹುದು ಎನ್ನುತ್ತಾರೆ.

ಹಸ್ತಸಾಮುದ್ರಿಕ ಚೀನದಲ್ಲಿ ಕ್ರಿ. ಪೂ. 3000ದಲ್ಲಿಯೇ ಪ್ರಚಾರದಲ್ಲಿತ್ತು ಎಂದು ತೋರುತ್ತದೆ.

ವ್ಯಕ್ತಿಯ ಜೀವನದ ಆಗುಹೋಗುಗಳ ಮೇಲೆ ಅವನ ಜನನ ಕಾಲದಲ್ಲಿ ಗ್ರಹಗಳು ಇದ್ದ ಸ್ಥಿತಿ ಪ್ರಭಾವ ಬೀರುತ್ತವೆ ಎಂಬ ನಂಬಿಕೆ ಜ್ಯೋತಿಷ ಶಾಸ್ತ್ರಕ್ಕೆ ಆಧಾರ. ಮಗು ಹುಟ್ಟಿದ ಕೆಲವು ದಿನಗಳಲ್ಲಿ ಜನ್ಮಕುಂಡಲಿ ಬರೆಸುವುದು, ಸಂಪ್ರದಾಯಮತ ಹಿಂದೂಗಳಲ್ಲಿ ಈಗಲೂ ನಡೆದು ಬಂದಿದೆ. ಪ್ರಾಚೀನ ಈಜಿಪ್ಟ್‌ನಲ್ಲಿ ಕ್ರಿ. ಪೂ. ಎರಡನೆಯ ಶತಮಾನದಲ್ಲಿ ಜ್ಯೋತಿಷ ಶಾಸ್ತ್ರದ ಗ್ರಂಥ ರಚಿತವಾಯಿತು. ಪಾಶ್ಚಾತ್ಯ ದೇಶಗಳಲ್ಲಿಯೂ ಜಾತಕದ ಆಧಾರದಿಂದ ಭವಿಷ್ಯವನ್ನು ತಿಳಿಸುವ ಜ್ಯೋತಿಷ್ಕರು ಅನೇಕರಿದ್ದಾರೆ. ಜ್ಯೋತಿಷಶಾಸ್ತ್ರದಲ್ಲಿಯೂ ಏಕಮತವಿಲ್ಲ; ಹಲವು ಪದ್ಧತಿಗಳಿವೆ. 587ರಲ್ಲಿ ಕಾಲವಾದ ಪ್ರಸಿದ್ಧ ಜ್ಯೋತಿಷಿ ವರಾಹಮಿಹಿರ ಪೈತಾಮಹ, ರೋಮಕ ಮತ್ತು ಪೌಲಿಷ ಸಿದ್ಧಾಂತಗಳನ್ನು ಹೆಸರಿಸುತ್ತಾನೆ. ಭಾರತದಲ್ಲಿ ರಾಹು ಮತ್ತು ಕೇತುಗಳ ಪ್ರಭಾವ ಗಣನೆಗೆ ತೆಗೆದುಕೊಳ್ಳುತ್ತಾರೆ. ಇತರ ದೇಶಗಳಲ್ಲಿ ಈ ಗ್ರಹಗಳ ಕಲ್ಪನೆ ಇಲ್ಲ. ಎಲ್ಲ ಪದ್ಧತಿಗಳೂ ಗ್ರಹಗಳ ಚಲನೆಯನ್ನು ಅನುಸರಿಸಿ ವ್ಯಕ್ತಿಯ ಜೀವನದ ಕಷ್ಟ–ಸುಖಗಳನ್ನು ನಿರ್ಧರಿಸುತ್ತವೆ. ಈಚೆಗೆ, ರಾಷ್ಟ್ರನಾಯಕರ ಜಾತಕಗಳು, ರಾಷ್ಟ್ರಗಳು ಸ್ವಾತಂತ್ರ್ಯ ಗಳಿಸಿದ ಹೊತ್ತಿನ ಗ್ರಹಗಳ ಸ್ಥಾನಬಲ—ಇವುಗಳ ಆಧಾರದಿಂದ ರಾಷ್ಟ್ರಗಳ ಭವಿಷ್ಯವನ್ನು ನುಡಿಯುವ ಪ್ರಯತ್ನಗಳೂ ನಡೆದಿವೆ.

ಜ್ಯೋತಿಷಶಾಸ್ತ್ರ ಪ್ರಾಯಶಃ ಮೆಸಪಟೇಮಿಯದಲ್ಲಿ ಕ್ರಿ.ಪೂ. ಮೂವತ್ತನೆಯ ಶತಮಾನದಲ್ಲಿಯೇ ಪ್ರಾರಂಭವಾಯಿತು. ಭಾರತದಲ್ಲಿ ವರಾಹ ಮಿಹಿರ (ಆರನೆಯ ಶತಮಾನ)ನಿಗೆ ಮೊದಲು ರಚಿತವಾದ ಯಾವ ಸಿದ್ಧಾಂತಗಳೂ ಮೂಲರೂಪದಲ್ಲಿ ದೊರೆತಿಲ್ಲ. ಈ ಶಾಸ್ತ್ರದಲ್ಲಿ ಹಿರಿಯ ವ್ಯಕ್ತಿಗಳು : ಆರ್ಯಭಟ (ಐದನೆಯ ಶತಮಾನ), ಬ್ರಹ್ಮಗುಪ್ತ (ಏಳನೆಯ ಶತಮಾನ) ಮತ್ತು ಭಾಸ್ಕರಾಚಾರ್ಯ (ಹನ್ನೆರಡನೆಯ ಶತಮಾನ).

ಸಂಖ್ಯೆಗಳ ಆಧಾರದಿಂದ ವ್ಯಕ್ತಿಯ ಜೀವನದ ರೀತಿಯನ್ನು ನಿರೂಪಿಸುವ ಪ್ರಯತ್ನವೂ ನಡೆದಿದೆ. ಅವನು ಹುಟ್ಟಿದ ದಿನಾಂಕ, ತಿಂಗಳಿನ ಸಂಖ್ಯೆ,

ವರ್ಷದ ಸಂಖ್ಯೆ—ಇವುಗಳಲ್ಲಿನ ಅಂಕಿಗಳನ್ನು ಕೂಡಿ, ಅವುಗಳ ಆಧಾರದಿಂದ ಅವನ ಸ್ವಭಾವ, ಅದೃಷ್ಟ, ದುರದೃಷ್ಟಗಳನ್ನು ಕೆಲವರು ವಿವರಿಸಲು ಯತ್ನಿಸುತ್ತಾರೆ.

ಜ್ಯೋತಿಷಶಾಸ್ತ್ರ ಗ್ರಹಗಳ ಚಲನೆಯನ್ನೇ ಆಧಾರವಾಗಿಟ್ಟುಕೊಳ್ಳುವುದರಿಂದ, ಹಲವು ನಾಗರಿಕತೆಗಳಲ್ಲಿ ಜ್ಯೋತಿಷಶಾಸ್ತ್ರ ಖಗೋಳಶಾಸ್ತ್ರದ ಅಧ್ಯಯನಕ್ಕೆ ದಾರಿ ಮಾಡಿತು. ಪ್ರಾಚೀನ ಕಾಲದಲ್ಲಿ ಹಲವು ಜನಾಂಗಗಳಲ್ಲಿ ಪಂಚಾಂಗ ಸಿದ್ಧವಾದದ್ದು, ಗ್ರಹಣಗಳ ಕಾಲವನ್ನು ನಿಖರವಾಗಿ ನಿರ್ಧರಿಸಲು ಸಾಧ್ಯವಾದದ್ದು ಜನರಿಗೆ ಜ್ಯೋತಿಷದಲ್ಲಿದ್ದ ಆಸಕ್ತಿಯಿಂದ. ಕ್ರಮೇಣ ಖಗೋಳ ವಿಜ್ಞಾನ ಪ್ರತ್ಯೇಕ ಶಾಖೆಯಾಗಿ ಮುಂದುವರಿಯಿತು.

## ಭಾರತ

ಸುಜಲಾಂ, ಸುಫಲಾಂ, ಮಲಯಜ ಶೀತಲಾಂ. ಸಸ್ಯ ಶ್ಯಾಮಲಾಂ–ಎಂದು ವಂದೇ ಮಾತರಂ ಗೀತೆಯಲ್ಲಿ ಭಾರತವನ್ನು ಸುಂದರವಾಗಿ ವರ್ಣಿಸಿದೆ. ಭಾರತದಷ್ಟು ದೀರ್ಘವಾದ ಇತಿಹಾಸವಿರುವ ದೇಶಗಳು ಪ್ರಪಂಚದಲ್ಲಿಯೇ ವಿರಳ. ಸುಮಾರು ಐದು ಸಾವಿರ ವರ್ಷಗಳ ಚರಿತ್ರೆ ಇದೆ ಈ ದೇಶಕ್ಕೆ. ಮೈಸೂರು ರಾಜ್ಯದ ಚಿತ್ರದುರ್ಗ ಜಿಲ್ಲೆಯಲ್ಲಿ ದೊರೆತ ಅವಶೇಷಗಳು ಸುಮಾರು ಕ್ರಿ. ಪೂ. 4000 ರಲ್ಲಿ ಬಳಸುತ್ತಿದ್ದ ಸಲಕರಣೆಗಳನ್ನು ಸೂಚಿಸುತ್ತವೆ ಎನ್ನಲಾಗಿದೆ. ಹೊಸ ಅವಶೇಷಗಳು ದೊರೆತಂತೆ ಈ ಇತಿಹಾಸದ ಕಾಲ ಇನ್ನೂ ಹಿಂದಕ್ಕೆ ಹೋಗುವುದು ಸಂಭವನೀಯ.

ಭಾರತವಿರುವುದು ಏಷ್ಯಾಖಂಡದ ದಕ್ಷಿಣ ಭಾಗದಲ್ಲಿ. 1947ರಲ್ಲಿ ಭಾರತ ಜಗತ್ತಿನ ಸ್ವತಂತ್ರ ರಾಷ್ಟ್ರಗಳ ಪಂಕ್ತಿಯಲ್ಲಿ ಸೇರಿ, 1950ರಲ್ಲಿ ಗಣರಾಜ್ಯವಾಯಿತು.

ಪುರಾತನ ಕಾಲದಲ್ಲಿ ಈ ಭೂಖಂಡ ಜಂಬೂದ್ವೀಪವೆನಿಸಿತ್ತು. ಮುಂದೆ ಆರ್ಯಾವರ್ತವಾಯಿತು. ಪುರಾಣಕಾಲದ ಭರತ ಚಕ್ರವರ್ತಿಯ ಕಾಲದಲ್ಲಿ ಭರತವರ್ಷ ಎನಿಸಿಕೊಂಡಿತು. ಮುಂದೆ ಪರ್ಷಿಯದಿಂದ ಬಂದ ಆಕ್ರಮಣಕಾರರು, ಸಿಂಧೂ ನದೀ ತೀರದ ನಿವಾಸಿಗಳನ್ನು ಹಿಂದೂಗಳು ಎಂದರು, ಈ ದೇಶವನ್ನು ಹಿಂದೂಸ್ಥಾನವೆಂದರು. ಭಾರತೀಯರ ಉಚ್ಚಾರದಂತೆ ಹಿಂದೂಸ್ಥಾನ ಆಯಿತು. ಆಂಗ್ಲರು ಇಂಡಿಯಾ ಎಂದು ಕರೆದರು.

| | | |
|---|---|---|
| ಖಂಡ | : | ಏಷ್ಯ (ದಕ್ಷಿಣ) |
| ಅಕ್ಷಾಂಶ | : | 8° 04′ ಉ ದಿಂದ 37° 18′ ಉ |
| ರೇಖಾಂಶ | : | 68° 07′ ಪೂ ದಿಂದ 97° 24′ ಪೂ |
| ವಿಸ್ತೀರ್ಣ | : | 32,68,090 ಚ. ಕಿ. ಮೀ. |
| ಜನಸಂಖ್ಯೆ | : | ಸುಮಾರು 49,80,00,000 (1967) |
| ರಾಜಧಾನಿ | : | ನವದೆಹಲಿ |
| ಭಾಷೆ | : | ಆಡಳಿತ ಭಾಷೆ ಹಿಂದಿ. ಸಹಆಡಳಿತ ಭಾಷೆ ಇಂಗ್ಲಿಷ್. ಮುಖ್ಯ ಭಾರತೀಯ ಭಾಷೆಗಳು : ಅಸ್ಸಾಮಿ, ಉರ್ದು, ಒರಿಯಾ, ಕನ್ನಡ, ಕಾಶ್ಮೀರಿ, ಗುಜರಾತಿ, ತಮಿಳು, ತೆಲಗು, ಪಂಜಾಬಿ, ಬಂಗಾಳಿ, ಮರಾಠಿ, ಮಲೆಯಾಳಂ, ಸಂಸ್ಕೃತ, ಸಿಂಧಿ, ಹಿಂದಿ |
| ಸರಕಾರ | : | ಗಣರಾಜ್ಯ |
| ಬಾವುಟ | : | ಕೇಸರಿ, ಬಿಳಿ, ಹಸಿರು ಬಣ್ಣದ ಅಡ್ಡ ಪಟ್ಟೆಗಳು, ಮಧ್ಯದಲ್ಲಿ ಅಶೋಕ ಚಕ್ರ, ನೀಲಿ ಬಣ್ಣದಲ್ಲಿ |

ಪೂರ್ವಕ್ಕೆ ಬಂಗಾಳಕೊಲ್ಲಿ, ಪಶ್ಚಿಮಕ್ಕೆ ಅರಬಿ ಸಮುದ್ರ, ದಕ್ಷಿಣಕ್ಕೆ ಹಿಂದೂ ಮಹಾಸಾಗರ, ಉತ್ತರಕ್ಕೆ ಹಿಮಾಲಯ ಪರ್ವತ ಭಾರತದ ಮೇರೆಗಳು. ವಾಯುವ್ಯಕ್ಕೆ ಪಶ್ಚಿಮ ಪಾಕಿಸ್ತಾನ. ಉತ್ತರಕ್ಕೆ ಚೀನ, ಟಿಬೆಟ್ ಮತ್ತು ನೇಪಾಳ, ಪೂರ್ವಕ್ಕೆ ಬರ್ಮ ಭಾರತದ ನೆರೆ ನಾಡುಗಳು. ಪ್ರಾಕೃತಿಕವಾಗಿ ಭಾರತವನ್ನು ಮೂರು ಭಾಗಗಳಾಗಿ ವಿಂಗಡಿಸಲಾಗಿದೆ ; ಹಿಮಾಲಯ ಪರ್ವತ ಪ್ರದೇಶ ಮತ್ತು ಅದರ ತಪ್ಪಲು, ಉತ್ತರದ ಬಯಲು ಭೂಮಿ ಮತ್ತು ದಕ್ಷಿಣದ ಪ್ರಸ್ಥಭೂಮಿ.

ಗಂಗಾ, ಯಮುನಾ, ಸಿಂಧೂ, ಬ್ರಹ್ಮಪುತ್ರಾ, ತಪತಿ, ನರ್ಮದಾ, ಗೋದಾವರಿ, ಮಹಾನದಿ, ಕೃಷ್ಣ, ಕಾವೇರಿ ಮುಖ್ಯ ನದಿಗಳು.

ಭಾರತ ಫಲವತ್ತಾದ ಭೂಮಿ. ಭತ್ತ, ಗೋಧಿ, ಕಬ್ಬು, ಹತ್ತಿ, ಚಹ, ಕಾಫಿ, ರಬ್ಬರ್, ಮೆಣಸು, ಏಲಕ್ಕಿ, ತೆಂಗು, ಗೇರುಬೀಜ, ಬಾಳೆಹಣ್ಣು, ಕಡಲೆಕಾಯಿ, ಸಾಸಿವೆ, ಹೊಗೆಸೊಪ್ಪು, ಸಣಬು, ಅಫೀಮು, ಜೋಳ, ದ್ವಿದಳ ಧಾನ್ಯಗಳು, ನವಣೆ, ರಾಗಿ, ಎಣ್ಣೆಕಾಳುಗಳು, ಅಡಿಕೆ ಇವೆಲ್ಲ ಇಲ್ಲಿ ಬೆಳೆಯುತ್ತವೆ.

ಭಾರತದ್ದು ಉಷ್ಣವಲಯದ ಹವಾಗುಣ. ಮುಖ್ಯವಾಗಿ ಮೂರು ಋತುಗಳಿವೆ. ಮಾರ್ಚ್‌ನಿಂದ ಜೂನ್‌ವರೆಗೆ ಬೇಸಿಗೆ ಕಾಲ. ಜೂನ್‌ನಿಂದ ಸೆಪ್ಟೆಂಬರ್ ವರೆಗೆ ಮಳೆಗಾಲ. ಅಕ್ಟೋಬರ್‌ನಿಂದ ಫೆಬ್ರವರಿ ವರೆಗೆ ಚಳಿಗಾಲ. ಉತ್ತರ ಭಾರತದಲ್ಲಿ ಸೆಖೆ, ಚಳಿ ಎರಡೂ ತೀವ್ರತರ.

ಭಾರತದಲ್ಲಿ ಹೇರಳ ಅರಣ್ಯ ಸಂಪತ್ತಿದೆ. ಶ್ರೀಗಂಧ, ತೇಗ ಮೊದಲಾದ ಬೆಲೆ ಬಾಳುವ ಮರಗಳು, ಕಾಗದದ ಉತ್ಪಾದನೆಗೆ ಉಪಯುಕ್ತವಾದ ಬಿದಿರು ಮೆಳೆ ಬೆಳೆಯುತ್ತವೆ.

ಒಳ್ಳೆಯ ಖನಿಜಸಂಪತ್ತುಳ್ಳ ದೇಶ ಭಾರತ. ಕಬ್ಬಿಣ, ಅಭ್ರಕ, ಮ್ಯಾಂಗನೀಸ್, ತಾಮ್ರ, ಕ್ರೋಮ್, ಪೆಟ್ರೋಲಿಯಂ, ಬಾಕ್ಸೈಟ್, ಚಿನ್ನ ಎಲ್ಲ ದೊರೆಯುತ್ತವೆ ; ಇಲ್ಲಿ ಹಿಂದೆ ವಜ್ರದ ಗಣಿಗಳೂ ಇದ್ದುವು.

ಹತ್ತಿ, ಉಣ್ಣೆ, ರೇಷ್ಮೆಯ ಕೈಗಾರಿಕೆಗಳು, ಕಬ್ಬಿಣ, ಉಕ್ಕು, ಕಾರ್ಖಾನೆಗಳು ಇಲ್ಲಿ ಬೆಳೆದಿವೆ. ಯಂತ್ರೋಪಕರಣಗಳು, ರೈಲ್ವೆ ಮತ್ತು ಡೀಸೆಲ್ ಎಂಜಿನ್‌ಗಳು, ಹಡಗು, ವಿಮಾನ ಇವುಗಳ ತಯಾರಿಕೆ ಸ್ವಾತಂತ್ರ್ಯ ಬಂದ ಮೇಲೆ ಪ್ರಾರಂಭವಾಗಿದೆ. ಭಾರತದಲ್ಲಿ ಕೈಗಾರಿಕಾಕರಣ ವ್ಯವಸ್ಥಿತವಾಗಿ ಸಾಗಿದೆ.

ಚಹ, ಸಣಬು, ಕಬ್ಬಿಣ, ಮ್ಯಾಂಗನೀಸ್ ಅದಿರು, ಗೇರುಬೀಜ, ಹೊಗೆಸೊಪ್ಪು, ಚರ್ಮ, ಹತ್ತಿಯ ಬಟ್ಟೆ, ಹರಳೆಣ್ಣೆ, ಸಂಸ್ಕರಿಸಿದ ಸಕ್ಕರೆ, ಕಲ್ಲಿದ್ದಲು, ರೇಷ್ಮೆಬಟ್ಟೆ, ಕುಶಲ ಕೆಲಸದ ಸಾಮಾನುಗಳು ರಫ್ತಾಗುತ್ತವೆ. ಭಾರತದ ಯಂತ್ರ ಸಾಮಗ್ರಿಗಳಿಗೆ ವಿದೇಶಗಳಿಂದ ಬೇಡಿಕೆಯಿದೆ. ಟೆಲಿಫೋನಿನಂಥ ಕುಶಲ ಯಂತ್ರೋಪಕರಣವನ್ನು ಬ್ರಿಟನ್ ಕೂಡ ಕೊಳ್ಳುತ್ತದೆ. ಕುಶಲ ಕೈಗಾರಿಕೆಯ ಗಂಧದ ಮತ್ತು ದಂತದ ವಸ್ತುಗಳಿಗೆ ವಿದೇಶದಲ್ಲಿ ಸಾಕಷ್ಟು ಬೇಡಿಕೆ ಇದೆ.

ಕೈಗಾರಿಕೆಗಳಿಗೆ ಬೇಕಾದ ಕೆಲವು ಯಂತ್ರಗಳು ಆಮದಾಗುತ್ತವೆ.

ಪ್ರಾಚೀನ ಭಾರತದ ಇತಿಹಾಸ ದಂಗುಬಡಿಸುವಂಥದು. ಸಿಂಧೂ ಕಣಿವೆ [illegible]. ಮೊಹೆಂಜೊದಾರೊ ಅವಶೇಷಗಳನ್ನು ಪುರಾತತ್ತ್ವ ಶಾಸ್ತ್ರಜ್ಞರು ಪತ್ತೆಹಚ್ಚಿದ್ದಾರೆ. ಇದು ಕ್ರಿ. ಪೂ. 3000 ವರ್ಷಗಳಷ್ಟು

ಕನ್ನಡನಾಡಿನ ಹುಡುಗ ಹುಡುಗಿಯರು ಇದನ್ನು ಓದಿದ್ದು ಹೇಗೆ ?

ಆ ಕೃತಿಯ ಕನ್ನಡ ಭಾಷಾಂತರದಲ್ಲಿ.

ಎಲ್ಲರಿಗೂ ಎಲ್ಲ ಭಾಷೆಗಳೂ ತಿಳಿದಿರುವುದು ಅಸಂಭವ. ಹಾಗಾದರೆ ತಮಗೆ ತಿಳಿಯದ ಭಾಷೆಗಳ ಸಾಹಿತ್ಯವನ್ನು ಅವರು ಸವಿಯುವ ಮಾರ್ಗವೇ ಇಲ್ಲವೆ ?

ಆ ಮಾರ್ಗ—ಭಾಷಾಂತರ. ಇದರಿಂದಲೇ ಎಲ್ಲ ಯುಗಗಳ ಎಲ್ಲ ದೇಶಗಳ ಜ್ಞಾನಭಂಡಾರ ನಮ್ಮದಾಗಲು ಸಾಧ್ಯ. ಒಂದು ಭಾಷೆಗೂ ಮತ್ತೊಂದು ಭಾಷೆಗೂ ಸಂಪರ್ಕವನ್ನೇರ್ಪಡಿಸಲು ನಿರ್ಮಿತವಾಗಿರುವ ಸೇತುವೆ ಇದು.

ಭಾಷಾಂತರ ಸಾಮಾನ್ಯವಾಗಿ ಮೂರು ಬಗೆ : ಸರಳಾನುವಾದ ; ಭಾವಾನುವಾದ ; ರೂಪಾಂತರ.

ಸರಳಾನುವಾದ : ಮೂಲದಲ್ಲಿರುವುದನ್ನು ಚಾಚೂ ತಪ್ಪದೆ ಮತ್ತೊಂದು ಭಾಷೆಗೆ ಅನುವಾದಿಸುವುದು. ಇದು ನೇರವಾದ ಭಾಷಾಂತರ. ಮೂಲದಲ್ಲಿ ಹೇಗೆ ಹೇಳಿದೆಯೋ ಅದೇ ಕ್ರಮದಲ್ಲಿ, ಮೂಲದ ಒಂದೊಂದು ಪದಕ್ಕೂ ಸಮಾನಪದವನ್ನಾರಿಸಿ ಉಪಯೋಗಿಸಬೇಕು ಇಲ್ಲಿ. ಉದಾಹರಣೆಗೆ : ' ಮೇರಿ ಲೈಕ್ಸ್ ಟು ಪ್ಲೇ ವಿತ್ ಚಿಲ್ಡ್ರನ್, ಬಿಕಾಸ್ ದೆ ಆರ್ ಇನೊಸೆಂಟ್ '. ಈ ವಾಕ್ಯವನ್ನು 'ಮೇರಿಯು ಮಕ್ಕಳೊಡನೆ ಆಡಲು ಇಷ್ಟಪಡುತ್ತಾಳೆ, ಏಕೆಂದರೆ ಅವರು ಮುಗ್ಧರು' ಎಂದು ಅನುವಾದಿಸಿದಾಗ ಅದು ಸರಳಾನುವಾದ ಎನ್ನಿಸಿಕೊಳ್ಳುತ್ತದೆ. ಸರಳಾನುವಾದ ಮಾಡುವಾಗ ಮೂಲಪದಕ್ಕೆ ಸಮಾನವಾದ ಪದ ಇನ್ನೊಂದು ಭಾಷೆಯಲ್ಲಿ ಇಲ್ಲದಿದ್ದರೆ ಭಾಷಾ ನಿಯಮವನ್ನು ಮೀರದೆ ಹೊಸ ಪದವೊಂದನ್ನು ಸೃಷ್ಟಿಸಬೇಕಾದ ಹೊಣೆ ಭಾಷಾಂತರಕಾರನದು.

ಭಾವಾನುವಾದ : ಮೂಲಕೃತಿಯಲ್ಲಿರುವುದನ್ನು ಹೇಗಿದೆಯೋ ಹಾಗೆಯೇ ಅನುವಾದಿಸದೆ ಅದರ ಸಾರವನ್ನುಳಿಸಿಕೊಂಡು ತನ್ನದೇ ಆದ ರೀತಿಯಲ್ಲಿ ಹೇಳುವುದಕ್ಕೆ ಭಾವಾನುವಾದ ಎನ್ನುತ್ತೇವೆ. ಸರಳಾನುವಾದ ಮಾಡುವಾಗ ಭಾಷಾಂತರಕಾರ ಮೂಲದ ಶೈಲಿಯನ್ನು ಉಳಿಸಿಕೊಂಡಿರಬೇಕು. ಆದರೆ ಭಾವಾನುವಾದ ಮಾಡುವಾಗ ಮೂಲದ ಭಾವವನ್ನುಳಿಸಿಕೊಂಡು ಶೈಲಿಯಲ್ಲಿ ಬದಲಾವಣೆಯನ್ನು ತರಬಹುದು. ಮೇಲಿನ ಉದಾಹರಣೆಯ ಭಾವಾನುವಾದ ಹೀಗಾಗುತ್ತದೆ—'ಮುಗ್ಧರಾದ ಮಕ್ಕಳೊಡನೆ ಆಡುವುದೆಂದರೆ ಮೇರಿಗೆ ಬಹಳ ಇಷ್ಟ.'

ರೂಪಾಂತರ : ಭಾಷಾಂತರದ ಮತ್ತೊಂದು ಬಗೆ ರೂಪಾಂತರ. ಯಾವಾಗ ಮೂಲದ ಪರಿಸರ, ಪಾತ್ರ ಮತ್ತು ಸನ್ನಿವೇಶಗಳು ನಮ್ಮ ಭಾಷೆಯ, ಸಂಸ್ಕೃತಿಯ ಜಾಯಮಾನಕ್ಕೆ ಒಗ್ಗುವುದಿಲ್ಲ ಎನ್ನಿಸುವುದೋ ಆಗ ಕೃತಿಯನ್ನು ರೂಪಾಂತರಗೊಳಿಸಿ ಭಾಷಾಂತರಿಸುವುದುಂಟು. ಈ ರೀತಿ ಭಾಷಾಂತರಿಸುವಾಗ ಭಾಷಾಂತರಕಾರ ಮೂಲವನ್ನು ಸಂಪೂರ್ಣವಾಗಿ ತನ್ನದಾಗಿಸಿಕೊಂಡು ಹೇಳಬೇಕು. ಮೇಲಿನ ಉದಾಹರಣೆಯ ವಾಕ್ಯದ ರೂಪಾಂತರ—"ಲಕ್ಷ್ಮಿಗೆ ಮುಗ್ಧರಾದ ಮಕ್ಕಳೊಡನಾಡಲು ತುಂಬ ಇಷ್ಟ." ಮೇರಿ ರೂಪಾಂತರಹೊಂದಿ ಲಕ್ಷ್ಮಿಯಾದಳು. ಆದರೆ ಅವರ ಸ್ವಭಾವ ಮಾತ್ರ ಏಕರೀತಿಯಲ್ಲಿ ವರ್ಣಿತವಾಗಿದೆ. ಅಂದರೆ ರೂಪಾಂತರದಲ್ಲಿ ಮೂಲ ನಿಷ್ಠೆಗೆ, ಪಾತ್ರಕ್ಕೆ ಧಕ್ಕೆಬಾರದಂತೆ ಪರಿಸರವನ್ನು ಮಾತ್ರ ಬದಲಿಸಬೇಕು.

ಭಾಷಾಂತರ ಯಾವ ರೀತಿಯದೇ ಆಗಲಿ ಭಾಷಾಂತರಿಸುವವರ ಹೊಣೆ ದೊಡ್ಡದು. ಮೂಲ ಕೃತಿಯನ್ನು ಓದಿದಾಗ ಯಾವ ಒಂದು ತೃಪ್ತಿ, ಸಮಾಧಾನ, ಸಂತೋಷ ನಮಗಾಗುವುದೋ ಅದೇ ಬಗೆಯ ಅನುಭವ ನಮಗೆ ಆ ಕೃತಿಯ ಭಾಷಾಂತರದಿಂದಲೂ ಆಗಬೇಕು. ಮೂಲ ಸಾಹಿತ್ಯದ ಬಗೆಗೆ ನಮಗೆ ಮೂಡುವ ಅಭಿಪ್ರಾಯಗಳು ಭಾಷಾಂತರವನ್ನು ಅವಲಂಬಿಸಿರುವುದರಿಂದ ಮೂಲವನ್ನು ಸಾಧ್ಯವಾದ ಮಟ್ಟಿಗೂ ಅನುಸರಿಸಿ, ಮೂಲಕ್ಕೆ ಆದಷ್ಟೂ ಹತ್ತಿರದಲ್ಲಿರಬೇಕು. ಮೂಲ ಕೃತಿಯ ಭಾವ, ರಸ, ಶೈಲಿ, ಛಂದಸ್ಸು ಇವುಗಳನ್ನು ಅದೇ ರೂಪದಲ್ಲಿರಿಸುವುದು ಒಳ್ಳೆಯದು. ಮೂಲ ಪದಕ್ಕೆ ಪ್ರತಿ ಪದ ದೊರೆಯದಿದ್ದಲ್ಲಿ ಅದೇ ಅರ್ಥ ಬರುವ ಪದಗಳ ಪ್ರಯೋಗ ಮಾಡಬೇಕು.

ಭಾಷಾಂತರಕಾರ ಎಲ್ಲಕ್ಕಿಂತಲೂ ಮುಖ್ಯವಾಗಿ ಅನುಸರಿಸಬೇಕಾದ ನಿಯಮವೆಂದರೆ, ಮೂಲಕೃತಿಕಾರ ತನ್ನ ಕೃತಿಯನ್ನು ಬರೆಯುವಾಗ ಯಾವ ಮನೋಧರ್ಮ ಹೊಂದಿದ್ದನೊ ಅದನ್ನೆ ಸಾಧಿಸುವುದು, ಅವನ ವ್ಯಕ್ತಿತ್ವವನ್ನು ತಾನು ತಂದುಕೊಳ್ಳುವುದು. ಅಂದರೆ ಮೂಲ ಕರ್ತೃವಿನೊಡನೆ ಒಂದಾಗಿ ಅವನ ವ್ಯಕ್ತಿಸ್ವರೂಪವನ್ನು ಪಡಿಮೂಡಿಸುವಂಥ ಸಾಮರ್ಥ್ಯವನ್ನು ಭಾಷಾಂತರಕಾರರು ಹೊಂದಿರಬೇಕು. ತಲ್ಲೀನತೆ ಭಾಷಾಂತರವನ್ನು ಮೂಲ ಕೃತಿಯ ಅತಿ ಸಮೀಪಕ್ಕೆ ತರಲು ಸಹಾಯ ಮಾಡುತ್ತದೆ. ಇದು ಸುಲಭವಾದ ಕೆಲಸವಲ್ಲ. ಏಕೆಂದರೆ ಮೂಲ ಗ್ರಂಥಕಾರ ಮತ್ತು ಭಾಷಾಂತರಕಾರರಿಬ್ಬರೂ ಭಿನ್ನಭಿನ್ನ ವ್ಯಕ್ತಿಗಳು. ಅವರ ದೇಶಗಳು, ಯುಗಗಳು, ಪದ್ಧತಿಗಳು, ನಂಬಿಕೆಗಳು ಎಲ್ಲ ಬೇರೆಯಾಗಿರಬಹುದು. ಜೀವನಾನುಭವ, ತತ್ತ್ವದೃಷ್ಟಿ, ಶೈಲಿ ಕೂಡ ಹಾಗೆಯೇ. ಆದರೆ ತನ್ನದೆಲ್ಲವನ್ನೂ ತಡೆಹಿಡಿದು ಭಾಷಾಂತರಕಾರ ಮೂಲಕೃತಿಕಾರನಲ್ಲಿ ಒಂದಾಗಬೇಕು.

ಭಾಷಾಂತರವೆಂದರೆ, ಶಬ್ದಶಃ ಪರಿವರ್ತಿಸಿ ಬರೆಯುವುದಾಗಲಿ ಸಾರಾಂಶವನ್ನು ತಿಳಿಸುವುದಾಗಲಿ ಅಲ್ಲ. ಮೂಲ ಕೃತಿಕಾರನೇ ಬೇರೊಂದು ಭಾಷೆಯಲ್ಲಿ ಬರೆದರೆ ಹೇಗಿರುವುದೋ ಅದೇ ರೀತಿ ಭಾಷಾಂತರಗೊಂಡಿರಬೇಕು.

ಮೂಲ ಕೃತಿಕಾರನಷ್ಟೇ ಪ್ರತಿಭೆ, ತಿಳಿವಳಿಕೆ, ಭಾಷಾಂತರಕಾರನಿಗೂ ಇದ್ದರೆ ಭಾಷೆಗಳ ಮೇಲೆ ಪ್ರಭುತ್ವ ಇದ್ದರೆ, ಭಾಷಾಂತರ ಕಾರ್ಯ ಯಶಸ್ವಿಯಾಗುತ್ತದೆ.

ಪ್ರಪಂಚದಲ್ಲಿ ಜ್ಞಾನ ಒಂದು ದೇಶದಿಂದ ಮತ್ತೊಂದು ದೇಶಕ್ಕೆ ಹರಡುವುದು ಕೃತಿಗಳ ಭಾಷಾಂತರದಿಂದಲೇ. ಇಂದು ಭಗವದ್ಗೀತೆ, ಬೈಬಲ್, ಖುರಾನ್, ರಾಮಾಯಣ, ಮಹಾಭಾರತ ಮುಂತಾದ ಪವಿತ್ರ ಗ್ರಂಥಗಳ ಪರಿಚಯ ಎಲ್ಲ ದೇಶಗಳ ಜನತೆಗೆ ಆಗುತ್ತಿರುವುದು ಭಾಷಾಂತರದ ಮೂಲಕವೇ.

ಹಲವು ಭಾಷೆಗಳನ್ನಾಡುವ ಜನರಿರುವ ಭಾರತದಲ್ಲಿ ಭಾಷಾಂತರಕ್ಕೆ ಮಹತ್ವದ ಪಾತ್ರವಿದೆ.

ವಿಜ್ಞಾನ, ತಾಂತ್ರಿಕಜ್ಞಾನ ಇವು ಬಹು ಮುಖ್ಯವಾದ ಈ ಯುಗದಲ್ಲಿ ಭಾಷಾಂತರ ನಾಡಿನ ಜೀವನದ ಭಾಗವಾಗಿರಬೇಕು. ಪ್ರಪಂಚದ ಯಾವ ಭಾಷೆಯಲ್ಲಾದರೂ ಉತ್ತಮ ವೈಜ್ಞಾನಿಕ ಗ್ರಂಥ ಪ್ರಕಟವಾದರೆ ಹದಿನೈದು ದಿನಗಳಲ್ಲಿ ಅದನ್ನು ತಮ್ಮ ಭಾಷೆಗೆ ಭಾಷಾಂತರ ಮಾಡಲು ಜಪಾನೀಯರು ವ್ಯವಸ್ಥೆ ಮಾಡಿದ್ದಾರೆ. ವೈಜ್ಞಾನಿಕ ಗ್ರಂಥಗಳ ಭಾಷಾಂತರದಲ್ಲಿ ನಿಷ್ಕೃಷ್ಟತೆ, ಸರಳತೆ ಮುಖ್ಯ. ತಾಂತ್ರಿಕ ಶಬ್ದಗಳನ್ನು—ರಾಡಾರ್, ಕಂಪ್ಯೂಟರ್ ಮುಂತಾದ ಶಬ್ದಗಳನ್ನು—ಹಲವು ದೇಶಗಳವರು ಉಳಿಸಿಕೊಳ್ಳುತ್ತಾರೆ. ಇದರಿಂದ ಇತರ ಭಾಷೆಗಳನ್ನು ಕಲಿತಾಗ ಆ ಭಾಷೆಗಳಲ್ಲಿನ ವೈಜ್ಞಾನಿಕ ಮತ್ತು ತಾಂತ್ರಿಕ ಗ್ರಂಥಗಳನ್ನು ಅಭ್ಯಾಸ ಮಾಡುವುದು ಸುಲಭವಾಗುತ್ತದೆ.

ಭಾಷಾಂತರ ಜನತೆಯ ಜ್ಞಾನ ವಿಸ್ತಾರದ ಸಾಧನ. ಆದರೂ ಕೆಲವು ಕುರುಡು ನಂಬಿಕೆಗಳಿಂದ ಭಾಷಾಂತರ ಕೃತಿಗಳನ್ನು ಜನ ಬಹಿಷ್ಕರಿಸಿದ್ದುಂಟು. ಧರ್ಮಗ್ರಂಥಗಳಲ್ಲಿ ಪದಗಳೇ ಪವಿತ್ರವೆಂದೂ, ಬೇರೆ ಭಾಷೆಯ ಪದಗಳನ್ನು ಬಳಸುವುದು ಪವಿತ್ರ ಗ್ರಂಥಕ್ಕೆ ಅಪಮಾನ ಮಾಡಿದಂತೆ ಎಂದೂ ಕೆಲವರ ಭಾವನೆ. ಬೈಬಲ್ ಇಂಗ್ಲಿಷ್ ಭಾಷೆಗೆ ಬಂದುದು ಗ್ರೀಕ್ ಮೂಲಕ. ಇಂಗ್ಲಿಷಿನಲ್ಲಿ ಅದು ಪ್ರಕಟವಾದಾಗ ಇಂಗ್ಲೆಂಡಿನಲ್ಲಿ ಗೊಂದಲವಾಯಿತು. ಇಂಗ್ಲೆಂಡಿನ ಧರ್ಮಪೀಠದವರು ಗಲಭೆ ಎಬ್ಬಿಸಿ ಕೈಗೆ ಸಿಕ್ಕ ಅನುವಾದಿತ ಪ್ರತಿಗಳೆಲ್ಲವನ್ನೂ ಸುಟ್ಟುಹಾಕಿದರು. ಆದರೆ ನಾಗರಿಕತೆ ಮುಂದುವರಿದಂತೆ ಜನತೆಗೆ ಭಾಷಾಂತರದ ಮಹತ್ವ ತಿಳಿಯಿತು. ಈಗ ಬೈಬಲ್ ವಿಶ್ವದ ಅನೇಕ ಭಾಷೆಗಳಿಗೆ ಅನುವಾದವಾಗಿದೆ.

1611ರಲ್ಲಿ ಸಿದ್ಧವಾದ ಇಂಗ್ಲಿಷ್ ಭಾಷಾಂತರವನ್ನು ಅರಸ ಜೇಮ್ಸನ ಬೈಬಲ್ ಅಥವಾ ಅಧಿಕೃತ ರೂಪಾಂತರ ಎನ್ನುತ್ತಾರೆ. ಅರಸ ಜೇಮ್ಸ್ ಭಾಷಾಂತರ ಮಾಡಿಸಿದ್ದರಿಂದ ಇದಕ್ಕೆ ಈ ಹೆಸರು ಬಂದಿತು. ಇದರಲ್ಲಿ ಸೋಜಿಗವೆಂದರೆ ನಲವತ್ತೇಳು ಮಂದಿ ವಿದ್ವಾಂಸರು ಬೈಬಲ್‌ನ ಬೇರೆಬೇರೆ ಭಾಗಗಳನ್ನು ಭಾಷಾಂತರಿಸಿದರೂ, ಮೊದಲಿನಿಂದ ಕಡೆಯವರೆಗೆ ಒಬ್ಬರೇ ಭಾಷಾಂತರಿಸಿದರೇನೋ ಎನ್ನುವಂತಿದೆ ಶೈಲಿ. 1970ರಲ್ಲಿ ಬೈಬಲಿನ ಇನ್ನೊಂದು ಇಂಗ್ಲಿಷ್ ಭಾಷಾಂತರ ಪ್ರಕಟವಾಯಿತು. ಇಲ್ಲಿ ಭಾಷೆ ಆಧುನಿಕ, ಅತ್ಯಂತ ಸರಳ.

ಅನುವಾದ ಬರವಣಿಗೆಯ ಕ್ಷೇತ್ರದಲ್ಲಿ ಮಾತ್ರವಲ್ಲ, ಮಾನವನ ಇತರ ಕಲಾಪಗಳಲ್ಲಿಯೂ ಮಹತ್ವದ ಸ್ಥಾನವನ್ನು ಹೊಂದಿದೆ. ಪರದೇಶದವರೊಡನೆ ವ್ಯವಹಾರ ಕುದುರಿಸಲು ಹಿಂದಿನಿಂದಲೂ ರಾಜರ ಆಸ್ಥಾನದಲ್ಲಿ ದುಭಾಷಿಗಳು ಇರುತ್ತಿದ್ದರು. ಇವರಿಗೆ ಹಲವು ಭಾಷೆಗಳು ತಿಳಿದಿರುತ್ತಿದ್ದುವು. ಇವರ ನೆರವಿನಿಂದ ಪರಭಾಷೆಗಳ ಜನರೊಡನೆ ರಾಜನ ವ್ಯವಹಾರ ಸಾಗುತ್ತಿತ್ತು. ಇಂದಿನ ರಾಜಕಾರಣದಲ್ಲೂ ದುಭಾಷಿಗಳು ಸಾಕಷ್ಟು ಮಹತ್ವದ ಪಾತ್ರವನ್ನು ವಹಿಸುತ್ತಾರೆ.

ವಿಜ್ಞಾನಕ್ಕೆ ಅಳವಡದ ವಸ್ತುವೇ ಇಲ್ಲ. ವಿಶ್ವಸಂಸ್ಥೆ ಭಾಷಾಂತರದಲ್ಲಿ ಒಂದು ಅದ್ಭುತವನ್ನೇ ಸಾಧಿಸಿದೆ. ವಿಶ್ವಸಂಸ್ಥೆಗೆ ವಿಶ್ವದ ಮೂಲೆ ಮೂಲೆಯಿಂದಲೂ ಪ್ರತಿನಿಧಿಗಳು ಬಂದಿರುತ್ತಾರೆ. ಅವರೆಲ್ಲರೂ ಹಲವು ಭಾಷೆಗಳನ್ನು ಬಲ್ಲವರಲ್ಲ. ಆದ್ದರಿಂದ ಚರ್ಚಿಸುವ ವಿಷಯ ಸರ್ವ ಸದಸ್ಯರಿಗೂ ಅರ್ಥವಾಗಬೇಕೆಂದು ವಿಶ್ವಸಂಸ್ಥೆ ಕಂಪ್ಯೂಟರ್‌ಗಳ ನೆರವು ಪಡೆದಿದೆ. ಭಾಷಣಕಾರ ಯಾವ ಭಾಷೆಯಲ್ಲೇ ಮಾತನಾಡಲಿ ಅವರವರಿಗೆ ಅರ್ಥವಾಗುವ ಭಾಷೆಯಲ್ಲಿ ಆ ಭಾಷಣದ ಅನುವಾದವನ್ನು ಧ್ವನಿವರ್ಧಕಗಳು ಏಕಕಾಲದಲ್ಲಿಯೇ ಸದಸ್ಯರಿಗೆ ತಲಪಿಸುತ್ತವೆ.

ಈಚೆಗೆ ಕಂಪ್ಯೂಟರ್ ಯಂತ್ರಗಳ ಬಳಕೆಯಿಂದ ಗ್ರಂಥಗಳ ಭಾಷಾಂತರ ಮಾಡುವ ಪ್ರಯೋಗವೂ ನಡೆದಿದೆ. ಒಂದು ಪದಕ್ಕೆ ಇನ್ನೊಂದು ಪದವನ್ನು ಸುಲಭವಾಗಿ ಆರಿಸುವಾಗ ಒಂದು ಪದಕ್ಕೆ ಸಮಾನವಾದ ಇನ್ನೊಂದು ಪದವಿರುವಾಗ, ಯಂತ್ರಗಳು ಅವನ್ನು ಭಾಷಾಂತರ ಮಾಡಬಹುದು. "ನೀರಿನಲ್ಲಿ ಎರಡು ಭಾಗ ಜಲಜನಕ, ಒಂದು ಭಾಗ ಆಮ್ಲಜನಕ" —ಇಂಥ ವಾಕ್ಯಗಳ ಯಾಂತ್ರಿಕ ಭಾಷಾಂತರ ಸುಲಭ. "ಶಿಲೆಯ ಮೆಟ್ಟಿ ಕುಲಕೆ ತಂದೆ"—ಇಂಥ ವಾಕ್ಯಗಳನ್ನು ಭಾಷಾಂತರಿಸಲು ಮನುಷ್ಯನ ಅಂತಃಕರಣವೇ ಬೇಕು.

ಪ್ರಪಂಚವೆಲ್ಲ ಒಂದೇ ಎಂಬ ಭಾವನೆಯನ್ನು ಜನರಲ್ಲಿ ಮೂಡಿಸಲು ನಮಗಿರುವ ಉತ್ತಮ ಸಾಧನ ಭಾಷಾಂತರ.

## ಭಾಷಾ ವಿಜ್ಞಾನ

ಭಾಷೆಯನ್ನು ಆಳವಾಗಿ ಅಭ್ಯಸಿಸಲು ಭಾಷಾವಿಜ್ಞಾನದಲ್ಲಿ ಅನೇಕ ರೀತಿಗಳಿವೆ. ಧ್ವನಿಗಳ ಲಕ್ಷಣಗಳನ್ನೂ ಅವುಗಳ ಹುಟ್ಟನ್ನೂ ಕುರಿತು ನಾವು ಇದರಲ್ಲಿ ವಿವರವಾಗಿ ಅಭ್ಯಾಸ ಮಾಡುತ್ತೇವೆ.

ನಾವು ಮಾತನಾಡುವಾಗ ವಿವಿಧ ಅಂಗಗಳನ್ನು ಬಳಸುತ್ತೇವೆ. ಈ ಅಂಗಗಳನ್ನು ಧ್ವನ್ಯಂಗಗಳು ಎನ್ನುತ್ತೇವೆ. ಧ್ವನಿಗಳು ಹುಟ್ಟುವ ಸ್ಥಾನ ಹಾಗೂ ಕ್ರಮ ಇವುಗಳನ್ನು ಗಮನಿಸಿ ಧ್ವನಿಗಳನ್ನು ವರ್ಗೀಕರಿಸುತ್ತೇವೆ. ಸ್ಥಾನಕ್ಕೆ ಅನುಗುಣವಾಗಿ—

ಕಂಠ್ಯ—ಕ್, ಗ್ ; ದಂತ್ಯ—ತ್, ದ್ ಇತ್ಯಾದಿ.

ಕ್ರಮಕ್ಕೆ ಅನುಗುಣವಾಗಿ :—

ಸ್ಪರ್ಶ—ಕ್, ಗ್ ; ಅನುನಾಸಿಕ—ಙ್, ನ್ ಇತ್ಯಾದಿ.

ಮನುಷ್ಯ ಭಾಷೆಯಲ್ಲಿ ಬಳಸಬಹುದಾದಂತೆ ಉತ್ಪಾದಿಸಬಹುದಾದ ಧ್ವನಿಗಳ ಅಭ್ಯಾಸ ಧ್ವನಿವಿಜ್ಞಾನದ ಕೆಲಸ.

ಈ ಧ್ವನಿಗಳನ್ನು ಯಾವುದೇ ಒಂದು ಭಾಷೆ ತನ್ನ ಬಳಕೆಗೆ ಆಯ್ದುಕೊಂಡಾಗ ಅಂಥ ಧ್ವನಿಗಳಿಗೆ ಒಂದು ವಿಶೇಷ ಸ್ವರೂಪ ಬರುತ್ತದೆ. ಹೀಗೆ ಒಂದು ಭಾಷೆಯಲ್ಲಿ ಬಳಸಲಾದ ಧ್ವನಿಗಳ ಅಧ್ಯಯನವನ್ನು ಧ್ವನಿಮವಿಜ್ಞಾನ ಎನ್ನುತ್ತೇವೆ.

ಈ ಧ್ವನಿಮ, ಧ್ವನಿಮಗಳ ಗುಂಪು ಅರ್ಥವನ್ನು ಪಡೆದಾಗ ಬೇರೆ ಘಟಕವಾಗುತ್ತವೆ. ಹೀಗೆ ಅರ್ಥವತ್ತಾದ ಘಟಕಗಳ ಅಧ್ಯಯನವನ್ನು ಆಕೃತಿಮಾವಿಜ್ಞಾನವೆಂದೂ ಅವುಗಳು ಗುಂಪುಗೊಂಡ ವಾಕ್ಯಗಳ ರಚನೆಯ ಅಧ್ಯಯನವನ್ನು ವಾಕ್ಯವಿಜ್ಞಾನವೆಂದೂ ಕರೆಯುತ್ತೇವೆ.

ಭಾಷೆ ಒಂದು ಘಟ್ಟದಲ್ಲಿ ಹೇಗಿದೆಯೋ ಹಾಗೆ ಅಭ್ಯಸಿಸುವುದು ವಿವರಣಾತ್ಮಕ ಭಾಷಾವಿಜ್ಞಾನ. ಇಲ್ಲಿ ಶಬ್ದದ ಇತಿಹಾಸಕ್ಕೆ ಗಮನಕೊಡುವುದಿಲ್ಲ. ಪಾಕೀಟು, ಮೋಟಾರು, ರೈಲು, ರೇಷನ್ನು ಇವು ಇಂಗ್ಲಿಷಿನಿಂದ ಹೇಗೆ ಎಂದು ಬಂದುವು ಎಂಬುದನ್ನು ವಿಚಾರಿಸಲು ಹೋಗುವದಿಲ್ಲ. ಅವು ಕನ್ನಡದ ಬಳಕೆ ಶಬ್ದಗಳೇ ಎಂದು ಗ್ರಹಿಸಿ ಅವುಗಳ ಬಗೆಗೆ ಭಾಷಾವಿಜ್ಞಾನಿ ಇಲ್ಲಿ ಅಭ್ಯಾಸ ಮಾಡುತ್ತಾನೆ. ವಿವರಣಾತ್ಮಕ ಭಾಷಾವಿಜ್ಞಾನದಲ್ಲಿ ಪದಗಳ ಸೃಷ್ಟಿಯ ಬಗೆಯನ್ನೂ ಅಭ್ಯಾಸ ಮಾಡುತ್ತಾರೆ. ಭಾಷೆಯಲ್ಲಿ ಒಂದೊಂದು ಪ್ರಕೃತಿ (ಮೂಲಶಬ್ದ) ಹಲವು ಆಕಾರಗಳನ್ನು ತಾಳಿ ಬೇರೆ ಬೇರೆ ಅರ್ಥಗಳನ್ನು ಕೊಡುತ್ತದೆ. ನೋಡು ಎಂಬುದು ಪ್ರಕೃತಿ, ಇದರಿಂದ ನೋಡುತ್ತಾಳೆ, ನೋಡುವಿಕೆ, ನೋಟ ಮುಂತಾದ ಪದಗಳು ನಿರ್ಮಾಣವಾಗುತ್ತವೆ, ಇವು ವ್ಯಾಕರಣದಲ್ಲಿ ಕ್ರಿಯಾಪದ, ನಾಮಪದ ಮುಂತಾದ ರೀತಿಗಳಲ್ಲಿ ಬಳಕೆಯಾಗುತ್ತವೆ. ಭಾಷೆಯನ್ನು ಒಂದು ಕಾಲಕ್ಕೆ ಸೀಮಿತಗೊಳಿಸಿ, ಬಳಕೆಯಲ್ಲಿರುವ ಶಬ್ದ, ವಾಕ್ಯ ಮುಂತಾದುವನ್ನು ಅಭ್ಯಾಸ ಮಾಡುವುದು ವಿವರಣಾತ್ಮಕ ಭಾಷಾವಿಜ್ಞಾನ.

ಅದರ ಇತಿಹಾಸವನ್ನು ಆಧರಿಸಿ ಒಂದು ಭಾಷೆಯನ್ನು ಅಭ್ಯಾಸ ಮಾಡುವುದೇ ಐತಿಹಾಸಿಕ ಭಾಷಾ ವಿಜ್ಞಾನ. ಪ್ರತಿಯೊಂದು ಭಾಷೆಗೆ ಅನೇಕ ವರ್ಷಗಳ ಚರಿತ್ರೆ ಇರುತ್ತದೆ. ಕನ್ನಡಕ್ಕೆ ಪ್ರಾಚೀನ ಇತಿಹಾಸವಿದೆ. ಐದನೆಯ ಶತಮಾನದ ಹಲ್ಮಿಡಿ ಶಾಸನ ದೊರಕಿದೆ. ಅಂದರೆ ಅದಕ್ಕೂ ಪೂರ್ವಕಾಲದಿಂದಲೂ ಕನ್ನಡ ಭಾಷೆಯಿದ್ದಿತು ಎಂದು ಅರ್ಥವಾಗುತ್ತದೆ. ಭಾಷೆಯಲ್ಲಿ ಮೊದಲು ಮಾತು, ಆಮೇಲೆ ಬರಹ. ಒಂದು ಕಾಲದಲ್ಲಿ

ಒಂದು ಶಬ್ದದ ರೂಪವನ್ನು ಅದಕ್ಕೂ ಹಿಂದಿನ ಕಾಲದ ಶಬ್ದಗಳೊಡನೆ ಹೋಲಿಸಿ ನೋಡಲು, ಅವುಗಳ ಅಭ್ಯಾಸ ಮಾಡಲು, ಸಾಧ್ಯವಿದೆ. ಏಕೆಂದರೆ ಭಾಷೆ ಬರಹ ರೂಪದಲ್ಲಿ ಇರುತ್ತದೆ. ಇದಕ್ಕೆ ಗ್ರಾಂಥಿಕ ಭಾಷೆ ಎನ್ನುವರು. 'ಆಳು' ಎಂಬ ಕನ್ನಡ ಶಬ್ದವನ್ನು ಉದಾಹರಣೆಗಾಗಿ ನೋಡೋಣ. 'ಆಳ್' ಎಂಬ ಶಬ್ದಕ್ಕೆ ಮನುಷ್ಯ ಎಂಬರ್ಥವಿತ್ತು, 'ಬಿಲ್ಲಾಳ್' ಅಂದರೆ ಬಿಲ್ಲು ವಿದ್ಯೆ ಬಲ್ಲ ಮನುಷ್ಯ. ಈಗ ನಾವು ಆಳ್ ಅಥವಾ ಆಳು ಎಂದರೆ ಮನುಷ್ಯ ಎಂಬ ಅರ್ಥದಲ್ಲಿ ಉಪಯೋಗಿಸುವುದಿಲ್ಲ. 'ಕೆಲಸ ಮಾಡಲು ಆಳನ್ನು ಕಳಿಸಿದ್ದೇವೆ' ಎಂಬ ವಾಕ್ಯದಲ್ಲಿ ಆಳು ಎಂದರೆ ಕೂಲಿ ಮಾಡುವವ. 'ಆಳುವವರು' ಎಂಬಪದದಲ್ಲಿ 'ಆಳು' ನಿರ್ವಹಿಸುವ ಕೆಲಸ ಬೇರೆಯೇ. ಹೀಗೆ ಇನ್ನೂ ಎಷ್ಟೋ ಶಬ್ದಗಳ ಮತ್ತು ವಾಕ್ಯಗಳ ಇತಿಹಾಸವಿದೆ. ಕಾಲಕಾಲಕ್ಕೆ ನಡೆದ ಭಾಷೆಯ ಮಾರ್ಪಾಡುಗಳ ಸ್ಥಿತಿಗತಿಗಳನ್ನು ಶಾಸ್ತ್ರೀಯವಾಗಿ ಅಧ್ಯಯನ ಮಾಡುವುದೇ ಐತಿಹಾಸಿಕ ಭಾಷಾ ವಿಜ್ಞಾನ.

ಭಾಷೆಗಳನ್ನು ಪರಸ್ಪರ ಹೋಲಿಸಿ, ಅವುಗಳ ಸಂಬಂಧವನ್ನು ಪರಿಶೀಲಿಸಿ ಅಧ್ಯಯನ ಮಾಡುವುದು ತೌಲನಿಕ ಭಾಷಾ ವಿಜ್ಞಾನ. 'ಎರಡು' ಎಂಬ ಕನ್ನಡ ಭಾಷೆಯಲ್ಲಿಯ ಸಂಖ್ಯಾವಾಚಕ ಪದ ತೆಗೆದುಕೊಳ್ಳೋಣ. ತಮಿಳು ಭಾಷೆಯಲ್ಲಿ ಇದನ್ನೇ 'ಇರಂಡು' ಎನ್ನುವರು. ತೆಲುಗು ಭಾಷೆಯಲ್ಲಿ ಇದಕ್ಕೆ 'ರಂಡು' ಎನ್ನುವರು. ಕನ್ನಡ ತಮಿಳು ತೆಲುಗು ಈ ಭಾಷೆಗಳಲ್ಲಿ ಈ ಶಬ್ದ ಸಾಮಾನ್ಯವಾಗಿ ಒಂದೇ ರೀತಿಯಾಗಿದೆ. ತೌಲನಿಕ ಭಾಷಾ ಶಾಸ್ತ್ರಕ್ಕೆ ಐತಿಹಾಸಿಕ ಭಾಷಾ ಶಾಸ್ತ್ರದ ಹಿನ್ನಲೆಯೂ ಬೇಕು. ಆಗ ಆಧಾರ ಸಹಿತ ನಿರ್ಣಯಮಾಡಲು ಅನುಕೂಲ. ತೌಲನಿಕ ಭಾಷಾಶಾಸ್ತ್ರದ ಅಭ್ಯಾಸದಿಂದ ಕನ್ನಡ, ತಮಿಳು, ತೆಲುಗು, ಮಲೆಯಾಳ ಮುಂತಾದುವು ದ್ರಾವಿಡ ಮೂಲದ ಭಾಷೆಗಳು ಎಂದು ತಿಳಿದು ಬಂದಿದೆ. ಇದೇ ರೀತಿ ಯುರೋಪಿನಲ್ಲಿ ಇಟಾಲಿಯನ್, ಫ್ರೆಂಚ್, ಸ್ಪ್ಯಾನಿಷ್, ಪೋರ್ಚುಗೀಸ್ ಮುಂತಾದ ಭಾಷೆಗಳಿಗೆ ಲ್ಯಾಟಿನ್ ಭಾಷೆ ಮೂಲವೆಂದು ನಿರ್ಣಯಿಸಲಾಗಿದೆ.

ಹೀಗೆ ಭಾಷೆಯನ್ನು ಬೇರೆ ಬೇರೆ ರೀತಿಯಿಂದ ಶಾಸ್ತ್ರೀಯವಾಗಿ ಭಾಷಾ ವಿಜ್ಞಾನ ಅಭ್ಯಾಸ ಮಾಡುತ್ತದೆ.

ಪಾಶ್ಚಾತ್ಯ ದೇಶದ ಜನ ಏಷ್ಯ, ಆಫ್ರಿಕ ದೇಶಗಳಿಗೆ ಬಂದು ಆ ದೇಶಗಳ ಭಾಷೆಗಳನ್ನು ಅಭ್ಯಾಸಿಸತೊಡಗಿ, ಭಾಷಾವಿಜ್ಞಾನಕ್ಕೆ ಹೆಚ್ಚು ಮಹತ್ವ ಬಂದಿತು. ವಿವಿಧ ಭಾಷೆಗಳ ತುಲನಾತ್ಮಕ ಅಭ್ಯಾಸಕ್ಕೆ ಹತ್ತೊಂಬತ್ತನೆಯ ಶತಮಾನದಲ್ಲಿ ಸಾಕಷ್ಟು ಅವಕಾಶ ದೊರೆಯಿತು. ಸಾಮಾನ್ಯವಾಗಿ ಆಧುನಿಕ ಭಾಷಾ ವಿಜ್ಞಾನ ಹತ್ತೊಂಬತ್ತನೆಯ ಶತಮಾನದಿಂದ ಆರಂಭವಾಯಿತೆಂದು ಹೇಳಬಹುದು.

ಭಾಷಾ ವಿಜ್ಞಾನ ಇಂದು ಪ್ರಪಂಚದ ಎಲ್ಲ ದೇಶಗಳಲ್ಲಿಯೂ ಪ್ರಚಲಿತವಿದೆ. ಭಾಷೆಯ ಅಧ್ಯಯನಕ್ಕೆ ಇದು ತುಂಬಾ ಸಹಕಾರಿಯಾಗಿದೆ. ವಿಶ್ವವಿದ್ಯಾನಿಲಯಗಳ ಅಭ್ಯಾಸಕ್ರಮದಲ್ಲಿ ಭಾಷಾ ವಿಜ್ಞಾನವೂ ಒಂದು.

## ಭಾಷೆ

"ಕುಹೂ......ಕುಹೂ......" ಮಾವಿನ ಮರದ ಮೇಲಿದ್ದ ಕೋಗಿಲೆಯೊಂದು ಕೂಗುತ್ತದೆ. ಮರುಕ್ಷಣವೇ ಮತ್ತೆಲ್ಲಿಂದಲೋ ಅದೇ ಬಗೆಯ ಕೂಗು ಕೇಳಿಬರುತ್ತದೆ. ಮತ್ತೆ ಈ ಕೋಗಿಲೆ ಕುಹೂ ಎನ್ನುತ್ತದೆ. ಪುನಃ ಆ ಕೋಗಿಲೆ......ದಿನ ಬೆಳಗಾದರೆ ನಾವು ಕೋಗಿಲೆಯ ಕುಹೂ ಗಾನ, ಪಕ್ಕಿಗಳ ಚಿಲಿಪಿಲಿ, ದುಂಬಿಯ ಝೇಂಕಾರ ಎಲ್ಲವನ್ನೂ ಕೇಳುತ್ತಲೇ ಇರುತ್ತೇವೆ. ಏನಿದು ?

ನಮಗೆ ಬರಿಯ ಶಬ್ದ ಮಾತ್ರ, ಆ ಕೂಗು. ಆದರೆ ಆ ಜೀವಿಗಳಿಗೆ ಒಂದರ ಭಾವನೆಯನ್ನು ಮತ್ತೊಂದಕ್ಕೆ ತಿಳಿಸಲು ಅದು ಸಾಧನ. ಇಂಥ ಕಲರವಗಳ ಮೂಲಕ ತಮ್ಮತಮ್ಮೊಳಗೆ ವಿಚಾರ ವಿನಿಮಯ ಮಾಡಿಕೊಳ್ಳುತ್ತವೆ. ಪ್ರಾಣಿ ಪಕ್ಷಿಗಳು, ಇರುವೆಗಳಿಗೂ ಇಂಥ ಒಂದೊಂದು ಭಾಷೆ ಇದೆ. ನಾವು ಬಾಯಿ ಬಿಟ್ಟು ಮಾತನಾಡುತ್ತೇವೆ, ಆದರೆ ಅವು ತಮ್ಮ ಕ್ರಿಯೆಯ ಮೂಲಕವೊ ಇಲ್ಲ ಧ್ವನಿಯ ಮೂಲಕವೊ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತವೆ. ಅವುಗಳ ಪಾಲಿಗೆ ಇದೂ ಒಂದು ಬಗೆಯ ಭಾಷೆಯೇ.

ಭಾಷೆ ಎಂದರೆ ಒಂದು ಸಮಾಜದ ವ್ಯಕ್ತಿಗಳು ಸಾಂಪ್ರದಾಯಿಕವಾಗಿ ಒಪ್ಪಿ ಪರಸ್ಪರ ವ್ಯವಹಾರಕ್ಕಾಗಿ ಬಳಸುವ ಧ್ವನಿ ಸಂಕೇತಗಳ ವ್ಯವಸ್ಥೆ.

ಇಲ್ಲಿ ಸಾಂಪ್ರದಾಯಿಕವಾಗಿ ಎಂದರೆ, 'ಮೊದಲಿನಿಂದಲೂ ಸರ್ವರೂ ಒಪ್ಪಿಕೊಂಡು ಬಂದಿರುವ' ಎಂಬರ್ಥ. ಉದಾಹರಣೆಗೆ ಪುಸ್ತಕ ಎಂಬ ಪದವನ್ನು ತೆಗೆದುಕೊಳ್ಳೋಣ. ಒಂದು ಸಮಾಜದಲ್ಲಿ ಒಬ್ಬೊಬ್ಬರು ಆ ವಸ್ತುವನ್ನು ಒಂದೊಂದು ಹೆಸರಿನಲ್ಲಿ ಕರೆದರೆ ಅದು ಸಾಂಪ್ರದಾಯಿಕ ಹೆಸರಾಗುವುದಿಲ್ಲ. ಎಲ್ಲರೂ ಅದನ್ನು ಬಹಳ ಹಿಂದಿನಿಂದ ಪುಸ್ತಕ ಎಂದು ಕರೆಯಲು ಒಪ್ಪಿದ್ದಾರೆ. ಆದ್ದರಿಂದ ಅದರ ಹೆಸರು 'ಪುಸ್ತಕ'. ಈ 'ಪುಸ್ತಕ' ಪದ ಸಾಂಪ್ರದಾಯಿಕ ಸಂಕೇತವಾಗುತ್ತದೆ, ಸಮಾಜದಲ್ಲಿ ಬಳಕೆಯಲ್ಲಿರುತ್ತದೆ.

ನಾವು ನಮ್ಮ ಭಾವನೆಗಳನ್ನು ಒಂದು ಭಾಷೆಯ ಮೂಲಕ ಮತ್ತೊಬ್ಬರಿಗೆ ಯಾವ ತಡೆಯೂ ಇಲ್ಲದೆ ತಿಳಿಸಬಲ್ಲೆವು. ಆದಿಮಾನವನಿಗೆ ಇಂಥ ಅವಕಾಶ ಯಾವ ಬಗೆಯಾಗಿತ್ತೊ ? ಪ್ರಾಚೀನ ಮಾನವನೂ ಪ್ರಾಣಿ ಪಕ್ಷಿಗಳಂತೆ ಕೂಗು, ಸಂಜ್ಞೆಗಳ ಮೂಲಕ ತನಗೆ ಅನಿಸಿದ್ದನ್ನು ಇತರರಿಗೆ ತಿಳಿಸುತ್ತಿದ್ದನೇನೊ. ಹಾಗಾದರೆ ಈಗ ನಾವು ಉಪಯೋಗಿಸುತ್ತಿರುವ ಭಾಷೆ ಹೇಗೆ ರೂಪುಗೊಂಡಿತು ? ಆ ಬಗೆಗೆ ಏಕಾಭಿಪ್ರಾಯವಿಲ್ಲ. ಭಾಷೆಯ ಉಗಮದ ವಿಷಯದಲ್ಲಿ ನಡೆದಿರುವ ಚರ್ಚೆ ಬೇಕಾದಷ್ಟು ; ಪ್ರಕಟವಾಗಿರುವ ಗ್ರಂಥಗಳು ಲೆಕ್ಕವಿಲ್ಲದಷ್ಟು. ಈ ಕುರಿತು ಅನೇಕ ಸಿದ್ಧಾಂತಗಳು ಹುಟ್ಟಿವೆ. ಒಬ್ಬ ಭಾಷಾ ವಿಜ್ಞಾನಿ ಹೇಳಿದಂತೆ ಅದರಲ್ಲಿ ಬಹು ಪಾಲು ಕೇವಲ ಗಾಳಿ ಮಾತು.

ಭಾಷೆಯ ಉಗಮದ ಬಗೆಗೆ ಅನೇಕ ವಾದಗಳು ಎದ್ದಿವೆ.

ಮನೆಯಲ್ಲಿ ಬೆಕ್ಕಿನ ಮರಿ ಇದ್ದರೆ ಅದರ ಹಿಂದೆ–ಮುಂದೆ ಮಕ್ಕಳು ಮಿಯಾಂವ್.........ಮಿಯಾಂವ್ ಎಂದು ಓಡಾಡುವುದನ್ನು ನಾವು ಕಾಣಬಹುದು. ಮನುಷ್ಯನಿಗೆ ಅನುಕರಣೆ ಮಾಡುವುದರಲ್ಲಿ ಹಿಂದಿನಿಂದಲೂ ಬಹಳ ಪ್ರೀತಿ. ಆದಿಮಾನವ ಸದ್ದುಗಳನ್ನು ಸೂಕ್ಷ್ಮವಾಗಿ ಗಮನಿಸಿರಬೇಕು. ಆ ಶಬ್ದಗಳನ್ನು ತನ್ನ ಧ್ವನಿಗಳಿಂದ ಅನುಕರಿಸಲು ಯತ್ನಿಸಿರಬೇಕು. ಆ ಅನುಕರಣ ಯತ್ನದ ಫಲವೇ ಭಾಷೆ. ಇದು ಅನುಕರಣವಾದದ ಸಿದ್ಧಾಂತ. ಪ್ರತಿಪಾದಿಸಿದವನು ಲಿಬ್ನಿಜ್ ಎಂಬ ವಿದ್ವಾಂಸ. ಈ ವಾದ ಭಾಗಶಃ ನಿಜ. ಮಾನವನ ಅನುಕರಣದ ಯತ್ನದಿಂದಲೇ ಗುಡುಗು, ಕೋಳಿ, ಕಾಗೆ, ಗೂಬೆ, ಮೇಕೆ ಮುಂತಾದ ಹೆಸರುಗಳು ಬಂದಿವೆ. ಆದರೆ ಭಾಷೆಯ ಎಲ್ಲ ಪದಗಳೂ ಇದೇ ರೀತಿ ಬಂದಿಲ್ಲ. ಮ್ಯಾಕ್ಸ್‌ಮುಲ್ಲರ್ ಎಂಬ ವಿದ್ವಾಂಸ ಈ ವಾದವನ್ನು ಅಲ್ಲಗಳೆದು ತಮಾಷೆಗಾಗಿ ಇದನ್ನು ಬೌ...ಬೌ...ವಾದ ಎಂದು ಕರೆದ.

ಆದಿಮಾನವನಿಗಾದ ಉತ್ಕಟ ಭಾವಾವೇಶಗಳ ಫಲವಾಗಿ ಹೊರಟ ಉದ್ಗಾರಗಳೇ ಭಾಷೆಯ ಉಗಮ ಎಂಬುದು ಉದ್ಗಾರವಾದದ ಸಾರ. ಹೊ, ಓಹೋ, ಹುಶ್ ಮುಂತಾದ ಶಬ್ದಗಳು ಕೆಲವು ಉದ್ಗಾರಗಳಿಂದ ಹುಟ್ಟಿದುವುಗಳಾದರೂ, ಒಂದು ಭಾಷೆಯಲ್ಲಿ ಇವುಗಳ ಸಂಖ್ಯೆ ಅತ್ಯಲ್ಪ. ನಾವು ಭಾಷೆಯನ್ನು ಬಳಸುವ ಉದ್ದೇಶ ಏನು ? ನಮ್ಮ ಮನಸ್ಸಿನಲ್ಲಿರುವುದನ್ನು ಇನ್ನೊಬ್ಬರಿಗೆ ತಿಳಿಸುವುದು. ಇದಕ್ಕಾಗಿ ಪ್ರಯತ್ನಪಟ್ಟು ಮಾತುಗಳನ್ನು ಉಪಯೋಗಿಸುತ್ತೇವೆ. ಆದರೆ 'ಓ', 'ಅಯ್ಯೋ' ಇಂಥ ಉದ್ಗಾರಗಳಲ್ಲಿ ನಾವು ಇತರರಿಗೆ ಅದನ್ನು ತಿಳಿಸಲು ಪ್ರಯತ್ನಿಸುತ್ತಿಲ್ಲ. ಆದ್ದರಿಂದ ಈ ವಾದವನ್ನು ಒಪ್ಪುವಂತಿಲ್ಲ. ಮ್ಯಾಕ್ಸ್‌ಮುಲ್ಲರ್ ಉದ್ಗಾರವಾದವನ್ನು ಪೂಃ ಪೂಃ ವಾದ ಎಂದು ಪರಿಹಾಸ್ಯಮಾಡಿದ.

ಸಂಜ್ಞಾಭಾಷೆಯೇ ಉಗಮಕ್ಕೆ ಕಾರಣ ಎಂಬುದು ಇನ್ನೊಂದು ವಾದ. ಆದಿಮಾನವರು ಭಾವಾಭಿವ್ಯಕ್ತಿಗೆ ಸಂಜ್ಞೆಗಳನ್ನು ಉಪಯೋಗಿಸುತ್ತಿದ್ದುದು ನಿಜ. ಸಂಜ್ಞೆಗಳೇ ವಿಕಾಸವಾಗಿ ಭಾಷೆಯಾಗಿ ಪರಿಣಮಿಸಿದ್ದರೆ, ಸಾವಿರಾರು ವರ್ಷಗಳಿಂದ ಸಂಜ್ಞೆಗಳಿಂದಲೇ ಸಂಭಾಷಿಸುತ್ತಿರುವ ಚಿಂಪನ್‌ಜೀಗಳಿಗೂ ಭಾಷೆಯೊಂದು ಹುಟ್ಟಲಿಲ್ಲವೇಕೆ ಎಂಬ ಪ್ರಶ್ನೆ ಏಳುತ್ತದೆ. ಆದ್ದರಿಂದ ಈ ವಾದ ಸರಿಹೋಗುವುದಿಲ್ಲ.

ಭಾಷೆ ಹೇಗೆ ಹುಟ್ಟಿತು ಮತ್ತು ಬೆಳೆಯಿತು ಎನ್ನುವುದರ ವಿಷಯವಾಗಿ ಇವಲ್ಲದೆ ಇನ್ನೂ ಹಲವು ಅಭಿಪ್ರಾಯಗಳುಂಟು. ವಾಸ್ತವವಾಗಿ, ಭಾಷೆಯ ಹುಟ್ಟು ಕೊನೆಗಾಣದ ಚರ್ಚೆಗೆ ವಸ್ತುವಾಗಿದೆ.

ಭಾಷೆಯನ್ನು ಭಗವಂತನೇ ಸೃಷ್ಟಿಸಿದನೆಂದು ಪ್ರಾಚೀನರು ನಂಬಿದ್ದರು. ವಸ್ತುಗಳ ಜೊತೆಗೆ ಅವುಗಳ ಹೆಸರನ್ನೂ ದೇವರು ಸೃಷ್ಟಿಸಿದನೆಂದು ಅವರ ಭಾವನೆಯಾಗಿತ್ತು. ಆದರೆ ಇವೆಲ್ಲ ನಮ್ಮ ಕಲ್ಪನೆಗಳು, ನಂಬಿಕೆಗಳು, ಅಷ್ಟೆ. ವಸ್ತುವಿಗೂ ಅದನ್ನು ಸೂಚಿಸುವ ಪದಕ್ಕೂ ತಾತ್ತ್ವಿಕವಾದ ಯಾವ ಸಂಬಂಧವೂ ಇಲ್ಲ. ಭಾಷೆ ಮಾನವ ತನ್ನ ಸೌಕರ್ಯಕ್ಕಾಗಿ ಸ್ವತಃ ಸೃಷ್ಟಿಸಿಕೊಂಡ ಸಾಧನ.

ಪ್ರಪಂಚದಲ್ಲಿ ಸುಮಾರು 3,000 ಭಾಷೆಗಳಿವೆ ಎನ್ನುತ್ತಾರೆ. ಅಭ್ಯಾಸ ಸೌಲಭ್ಯಕ್ಕಾಗಿ ಅವುಗಳನ್ನು ಕೆಲವು ಗುಂಪುಗಳಾಗಿ ವರ್ಗೀಕರಣ ಮಾಡಿದ್ದಾರೆ. ಈ ವರ್ಗೀಕರಣದಲ್ಲಿ ಎರಡು ವಿಧ. 1. ರಚನಾ ವರ್ಗೀಕರಣ—ಭಾಷೆಗಳಲ್ಲಿನ ಪದರಚನೆ ಮತ್ತು ವಾಕ್ಯರಚನೆಗೆ ಇಲ್ಲಿ ಪ್ರಾಮುಖ್ಯ. 2. ವಾಂಶಿಕ ವರ್ಗೀಕರಣ—ಇದು ಭಾಷೆಗಳ ಇತಿಹಾಸದ ಮೇಲೆ ಆಧಾರಿತವಾದದ್ದು.

ವಾಂಶಿಕ ವರ್ಗೀಕರಣದ ಆಧಾರದ ಮೇಲೆ ಭಾಷೆಗಳನ್ನು ಅನೇಕ ಪರಿವಾರಗಳನ್ನಾಗಿ ವಿಂಗಡಿಸಿದ್ದಾರೆ. ನಮ್ಮ ದೇಶದಲ್ಲಿ ಮುಖ್ಯವಾದ ನಾಲ್ಕು ಪರಿವಾರಗಳಿವೆ : 1. ಇಂಡೋ ಆರ್ಯನ್ (ಇಂಡೊ–ಯೂರೋಪಿಯನ್ ಪರಿವಾರದ ಒಂದು ಶಾಖೆ) 2. ದ್ರಾವಿಡ 3. ಆಸ್ಟ್ರಿಕ್ 4. ಟಿಬೆಟೊ ಬರ್ಮನ್ (ಸಿನೋ–ಟಿಬೆಟನ್ ಪರಿವಾರದ ಒಂದು ಶಾಖೆ). ಇವುಗಳಲ್ಲಿ ಇಂಡೋ–ಯೂರೊಪಿಯನ್ ಭಾಷಾವರ್ಗ ಅತ್ಯಂತ ಪ್ರಮುಖವಾದದ್ದು. ನಮ್ಮ ಸಂಸ್ಕೃತ ಮತ್ತು ಹಿಂದಿ ಭಾಷೆಗಳು ಈ ಭಾಷಾವರ್ಗಕ್ಕೆ ಸೇರುತ್ತವೆ.

ದ್ರಾವಿಡ ಭಾಷಾವರ್ಗದಲ್ಲಿ—ಕನ್ನಡ, ತಮಿಳು, ಮಲೆಯಾಳಂ, ತೆಲುಗು. ತುಳು ಮುಂತಾದ ಭಾಷೆಗಳು ಸೇರುತ್ತವೆ.

ಭಾಷೆ ಒಂದು ನಿರಂತರ ಪ್ರವಾಹ. ಅದು ನಿಂತ ನೀರಲ್ಲ. ಎಲ್ಲ ಜೀವಂತ ಭಾಷೆಗಳೂ ವ್ಯತ್ಯಾಸವಾಗುತ್ತಲೇ ಇರುತ್ತವೆ. ಭಾಷಾ ವ್ಯತ್ಯಾಸಕ್ಕೆ ಉದಾಹರಣೆಗಾಗಿ ಹಳಗನ್ನಡ ಮತ್ತು ಹೊಸಗನ್ನಡಗಳನ್ನು ನೋಡಬಹುದು. ಈ ಭಾಷಾ ವ್ಯತ್ಯಾಸಕ್ಕೆ ಕಾರಣ ಹಲವಾರು. ಮೊದಲನೆಯದು. ಆಡುಗರು ಬಯಸುವ ಉಚ್ಚಾರಣಾ ಸೌಲಭ್ಯ.

ಎರಡನೆಯದು, ಒಂದು ಭಾಷೆಯನ್ನಾಡುವ ಜನರು ಮತ್ತೊಂದು ಭಾಷೆಯ ಜನರೊಡನೆ ಸಂಪರ್ಕ ಹೊಂದಿದಾಗ ಪರಸ್ಪರ ಪ್ರಭಾವದಿಂದ ಭಾಷೆಗಳಲ್ಲಿ ಆಗುವ ಬದಲಾವಣೆ. ಸಂಸ್ಕೃತದ ಅಸಂಖ್ಯ ಪದಗಳು ಕನ್ನಡದಲ್ಲಿ ನುಸುಳಿರುವುದಕ್ಕೆ ಇದೇ ಕಾರಣ. ಇಂಗ್ಲಿಷಿನಿಂದ 'ಬಲ್ಬ್', 'ಫ್ಯಾಕ್', 'ಇಂಜೆಕ್ಷನ್' ಇಂಥ ಪದಗಳು ಕನ್ನಡಕ್ಕೆ ಬಂದಿವೆ. 'ಪಂಡಿತ್', 'ಸಾಹೇಬ್', 'ಶಾಲು' ಮುಂತಾದ ಪದಗಳನ್ನು ಇಂಗ್ಲಿಷ್ ಭಾರತದಿಂದ ಪಡೆದುಕೊಂಡಿದೆ.

ಆಯಾ ಭಾಷೆಯಲ್ಲಿ ಪ್ರಭಾವಶಾಲಿಗಳಾಗಿರುವ ಕವಿಗಳು, ರಾಜಕಾರಣಿಗಳು, ಪತ್ರಿಕಾಕರ್ತರು ಇವರ ಮೂಲಕವೂ ಭಾಷೆ ಬೆಳೆಯುತ್ತದೆ. ಬದಲಾಗುತ್ತದೆ. ಹಾಗೆಂದ ಮಾತ್ರಕ್ಕೆ ಯಾರು ಬೇಕಾದರೂ ಹೇಗೆ ಬೇಕಾದರೂ ಭಾಷೆಯನ್ನು ಬದಲಾಯಿಸಬಹುದೇ ಎಂಬ ಸಂದೇಹ ತಲೆದೋರಬಹುದು. ಇದು ಸಾಧ್ಯವಿಲ್ಲ. ಭಾಷಾ ಬದಲಾವಣೆಯೂ ಸಾರ್ವಜನಿಕ ಮನ್ನಣೆ ಪಡೆದಿರಬೇಕು. ಭಾಷೆ ಜನರಿಗೆ ಅತಿ ಹತ್ತಿರವಾಗಿರುವ ವಸ್ತು, ಜನಜೀವನದ ಉಸಿರು ಅದು. ಅದನ್ನು ಮನಬಂದಂತೆ ಬಳಸಲು ಅವಕಾಶವಿಲ್ಲ.

ಪದಗಳೆಂದರೆ ಸಂಕೇತಗಳೆಂದು ಮೊದಲೇ ಹೇಳಿದೆ. ಈ ಸಂಕೇತಗಳನ್ನು ಬಳಸಿ ವಾಕ್ಯಗಳನ್ನು ಮಾಡುತ್ತೇವೆ. ಒಂದು ಭಾಷೆಯಲ್ಲಿ ಎಷ್ಟು ವಾಕ್ಯಗಳನ್ನು ಮಾಡಬಹುದೊ ಲೆಕ್ಕವಿಲ್ಲ. ಮಾತನಾಡಲು ನಾವು ಬಳಸುವ ಅಂಗಗಳು ಹಲವು ಪ್ರಾಣಿಗಳಿಗೆ ಇವೆ. ಆದರೆ ಅವು ಮಾತನಾಡಲಾರವು. ಭಾಷೆಯನ್ನು ಬಳಸಲಾರವು : ಸಂಕೇತಗಳನ್ನು ಬಳಸಿ ವಾಕ್ಯಗಳನ್ನು ಕಟ್ಟಲು ಅಗತ್ಯವಾದ ಬುದ್ಧಿಶಕ್ತಿ ಅವುಗಳಿಗಿಲ್ಲ.

ಬರಹಕ್ಕೂ ಮೊದಲೇ ಭಾಷೆ ಬಂದಿತು. ಭಾಷೆಯಿಂದ ಮನುಷ್ಯ ತಾನು ಪಡೆದ ಅನುಭವವನ್ನು, ಜ್ಞಾನವನ್ನು ಇತರರಿಗೆ ಬಂಡವಾಳವಾಗಿ ಕೊಡಲು ಸಾಧ್ಯವಾಯಿತು. ನಮ್ಮ ವೇದ, ಉಪನಿಷತ್ತುಗಳು ಬಾಯಿಯಿಂದ ಬಾಯಿಗೆ ದಾಟಿಯೇ ನೂರಾರು ವರ್ಷಗಳ ಕಾಲ ಉಳಿದುವು. ಪಾಶ್ಚಾತ್ಯ ಜಗತ್ತಿನ ಮೊದಲ ಕಾವ್ಯಗಳು 'ಇಲಿಯಡ್', 'ಆಡಿಸಿ', 'ರಾಮಾಯಣ', 'ಮಹಾಭಾರತ' ಹೀಗೆಯೇ ನಾಲಿಗೆಗಳಲ್ಲಿ ನೆಲೆಸಿದ್ದುವು. ಭಾಷೆ ನಾಗರಿಕತೆಯ ಬಾಗಿಲಿನ ಬೀಗ ತೆಗೆಯಿತು.

ಭಾಷೆಯ ಪರಿಶುದ್ಧತೆಯನ್ನು ಕಾಯ್ದುಕೊಳ್ಳಲೆಂದು ವ್ಯಾಕರಣ ಸಿದ್ಧವಾಯಿತು.

ನೋಡಿ : ಉಪಭಾಷೆ ; ಭಾಷಾವಿಜ್ಞಾನ

## ಭೂಖಂಡ

ಭೂಮಿಯ ವಿಶಾಲವಾದ ಭೂಪ್ರದೇಶಗಳಿಗೆ ಭೂಖಂಡಗಳೆಂದು ಹೆಸರು. ಭೂಖಂಡಗಳು ಏಳು. 1. ಉತ್ತರ ಅಮೆರಿಕ. 2. ದಕ್ಷಿಣ ಅಮೆರಿಕ. 3. ಯೂರೋಪ್, 4. ಆಫ್ರಿಕ. 5. ಏಷ್ಯ. 6. ಆಸ್ಟ್ರೇಲಿಯ. 7. ದಕ್ಷಿಣ ಧ್ರುವ ಪ್ರದೇಶ.

ಉತ್ತರ ಮತ್ತು ದಕ್ಷಿಣ ಅಮೆರಿಕ ಒಂದು ಭೂಖಂಡದ ಎರಡು ಭಾಗಗಳು. ಯೂರೋಪ್. ಆಫ್ರಿಕ ಮತ್ತು ಏಷ್ಯಗಳು ಭೂಮಿಯ ಮತ್ತೊಂದು ಭೂಖಂಡದ ಬೇರೆ ಬೇರೆ ಪ್ರದೇಶಗಳು. ಆಸ್ಟ್ರೇಲಿಯ

ಮತ್ತು ದಕ್ಷಿಣ ಧ್ರುವಪ್ರದೇಶ ಸಂಪೂರ್ಣವಾಗಿ ಬೇರೆ ನಿಂತ ಖಂಡಗಳು. ಇವೆರಡನ್ನೂ ನೀರು ಸುತ್ತುವರಿದಿದೆ. ದಕ್ಷಿಣ ಶಾಂತ ಸಾಗರದ ಮಧ್ಯದಲ್ಲಿ ಅಲ್ಲಲ್ಲಿ ಚದರಿಹೋಗಿರುವ ಆಸ್ಟ್ರೇಲಿಯ, ಮೆಲನೇಷ್ಯ, ಮೈಕ್ರೋನೇಷ್ಯ. ಪಾಲಿನೇಷ್ಯ ಇವುಗಳನ್ನು ಒಟ್ಟಾಗಿ ಓಷಿಯಾನ ಎಂದು ಕರೆಯುತ್ತಾರೆ.

ಭೂಮಿಯ ಪೂರ್ಣ ವಿಸ್ತೀರ್ಣ 51,02,30,000 ಚ. ಕಿ. ಮೀ. ಇದರಲ್ಲಿ 14.84,07.000 ಚ. ಕಿ. ಮೀ. ಮಾತ್ರ ಭೂಭಾಗ. ಮಿಕ್ಕ ಭಾಗವೆಲ್ಲ ಜಲಮಯ.

ಹಿಮಾವೃತ ಪ್ರದೇಶವಾದ ದಕ್ಷಿಣ ಧ್ರುವವನ್ನು ಬಿಟ್ಟರೆ ಮಿಕ್ಕೆಲ್ಲ ಖಂಡಗಳೂ ಸಮುದ್ರ ಮಟ್ಟದಿಂದ ಸರಾಸರಿ 869 ಮೀಟರ್‌ಗಳಷ್ಟು ಎತ್ತರದಲ್ಲಿವೆ. ಅವರಲ್ಲಿ ಅತ್ಯಂತ ಎತ್ತರದ ಖಂಡ 976 ಮೀಟರ್ ಮೇಲಿರುವ ಏಷ್ಯ. ಯೂರೋಪ್ ಅತ್ಯಂತ ತಗ್ಗಿನ ಖಂಡ. ಅದರ ಎತ್ತರ 351 ಮೀಟರು ಮಾತ್ರ.

ಪ್ರತಿಯೊಂದು ಖಂಡವೂ ತನಗೇ ವಿಶಿಷ್ಟವಾದ ರೀತಿಯಲ್ಲಿ ನದಿ. ಕಾಡು. ಪರ್ವತ. ಹುಲ್ಲುಗಾವಲು ಮುಂತಾದುವನ್ನು ಪಡೆದಿವೆ. ಈ ಕಾರಣಗಳಿಂದ ಮಳೆ. ಬೆಳೆ, ಹವಾಮಾನ, ಜನಸಂಖ್ಯೆ ಮತ್ತಿತರ ಅಂಶಗಳಲ್ಲಿ ಖಂಡಗಳ ನಡುವೆ ವ್ಯತ್ಯಾಸಗಳಿವೆ.

ಹಿಂದೆ ಸಂಚಾರ ಸೌಲಭ್ಯಗಳಿರದಿದ್ದ ಕಾಲದಲ್ಲಿ ಒಂದು ಖಂಡಕ್ಕೂ ಇನ್ನೊಂದು ಖಂಡಕ್ಕೂ ಸಂಬಂಧವೇ ಇರಲಿಲ್ಲ. ತಮ್ಮದನ್ನು ಬಿಟ್ಟು ಬೇರೆ ಖಂಡ ಭೂಮಿಯ ಮೇಲಿದೆ ಎಂಬುದು ಒಂದು ಖಂಡದಲ್ಲಿದ್ದ ನಿವಾಸಿಗಳಿಗೆ ಗೊತ್ತೇ ಇರಲಿಲ್ಲ. ಆದರೆ ಮಾನವ ನಾಗರಿಕತೆಯ ಶಿಖರವನ್ನೇರುತ್ತಿರುವ ಈ ವೈಜ್ಞಾನಿಕ ಯುಗದಲ್ಲಿ ಭೌಗೋಳಿಕವಾಗಿ ಖಂಡಗಳು ಬೇರೆ ಬೇರೆಯಾಗಿದ್ದರೂ ವ್ಯಾವಹಾರಿಕವಾಗಿ ಅವು ಒಂದೇ ಎನಿಸಿಕೊಂಡಿವೆ. ಸುಮಾರು ಇಪ್ಪತ್ತು ಕೋಟಿ ವರ್ಷಗಳ ಹಿಂದೆ ಎಲ್ಲ ಭೂಖಂಡಗಳೂ ಒಂದಾಗಿದ್ದುವು, ಕ್ರಮೇಣ ಇವು ದೂರ ಸರಿದುವು ಎಂಬ ವಿಚಾರ ಸರಣಿಗೆ 1959ರಿಂದ ಈಚೆಗೆ ನಡೆದ ಸಂಶೋಧನೆ ಸಮರ್ಥನೆ ನೀಡಿದೆ. ಈಗಲೂ ಭೂಖಂಡಗಳು ನಿಧಾನವಾಗಿ ಸರಿಯುತ್ತಿವೆ. ಉತ್ತರ ಅಮೆರಿಕ ಯೂರೋಪ್ ಖಂಡದಿಂದ ವರ್ಷಕ್ಕೆ ಒಂದು ಅಂಗುಲ (2.54 ಸೆಂಟಿ ಮೀಟರು) ಹೆಚ್ಚು ದೂರವಾಗುತ್ತಿದೆ.

| ಖಂಡ | ವಿಸ್ತೀರ್ಣ ಚ. ಕಿ. ಮೀ. | ಜನಸಂಖ್ಯೆ |
|---|---|---|
| ಏಷ್ಯ | 4.52,25,500 | 1.86,70,00,000 |
| ಆಫ್ರಿಕ | 3,02,94,121 | 31,80,00,000 |
| ಯೂರೋಪ್ | 91,31,705 | 44.90,00,000 |
| ಉ. ಅಮೆರಿಕ | 2,42,34,697 | 21,70,00,000 |
| ದ. ಅಮೆರಿಕ | 1,77,88,374 | 25,10,00,000 |
| ಆಸ್ಟ್ರೇಲಿಯ | 85,54,775 | 1,80,00,000 |
| ದ. ಧ್ರುವ ಪ್ರದೇಶ | 1,32,09,000 | ಇಲ್ಲಿಯೇ ವಾಸಿಸುವವರ ಸಂಖ್ಯೆ ತೀರ ಅಲ್ಪ |

## ಭೂಗೋಳ

ರೈಲು ಪ್ರಯಾಣ ಮಾಡುವಾಗ ಕಿಟಕಿಯಿಂದ ಕಾಣಿಸುವ ನೋಟ ಎಷ್ಟು ರಮ್ಯ! ಒಮ್ಮೆ ವಿಶಾಲವಾದ ಭೂಮಿ. ಮತ್ತೊಮ್ಮೆ ಪರ್ವತಗಳ ಸಾಲು. ನದಿ, ಹಳ್ಳಕೊಳ್ಳಗಳನ್ನು ದಾಟಿ ರೈಲು ಓಡುತ್ತದೆ. ಅಬ್ಬಾ! ಒಮ್ಮೊಮ್ಮೆ ದಟ್ಟಡವಿಯಲ್ಲಿ ಎಷ್ಟು ದೊಡ್ಡ ಮರಗಳು! ಈ ಭೂಮಿ ತೀರ ವಿಚಿತ್ರ. ಎಷ್ಟು ನೋಡಿದರೂ ಎಷ್ಟು ತಿಳಿದುಕೊಂಡರೂ ತೃಪ್ತಿಯಾಗದು. ಒಂದು ಪ್ರಯಾಣದಲ್ಲಿ ಕಾಣುವ ಸ್ವಲ್ಪ ಪ್ರದೇಶದಲ್ಲಿಯೇ ಇಷ್ಟು ವೈವಿಧ್ಯ ವೈಚಿತ್ರ್ಯಗಳಾದರೆ ಒಟ್ಟು ಭೂಮಿ ಹೇಗಿರಬೇಡ! ಪರ್ವತಗಳು. ಸಮುದ್ರಗಳು. ನದಿಗಳು. ಮರುಭೂಮಿಗಳು. ಕಾಡುಗಳು–ಎಷ್ಟೊಂದು ವೈವಿಧ್ಯ! ಏನು ಅಚ್ಚರಿ!

ಒಂದು ಸ್ಥಳ ಇನ್ನೊಂದು ಸ್ಥಳಕ್ಕಿಂತ ಬೇರೆ ರೀತಿಯಲ್ಲಿ ಇರುವುದು ಏಕೆ?

ಭೂಮಿಯನ್ನು ಕುರಿತು ಈ ಎಲ್ಲ ವಿಷಯಗಳನ್ನು ತಿಳಿಸುವ ಶಾಸ್ತ್ರ ಭೂಗೋಳ ವಿಜ್ಞಾನ.

ಭೂಗೋಳ ವಿಜ್ಞಾನಿ ಕೇಳಿಕೊಳ್ಳುವ ಪ್ರಶ್ನೆಗಳು ಇವು: ಈ ಸ್ಥಳ ಇರುವುದೆಲ್ಲಿ? ಇದರ ನೆಲ ಹೇಗಿದೆ? ಎಂಥ ಸಸ್ಯಗಳು, ಪ್ರಾಣಿಗಳು ಇಲ್ಲಿವೆ? ಇದರ ವಾಯುಗುಣ ಎಂಥದ್ದು? ಇಲ್ಲಿ ಮನುಷ್ಯ ಹೇಗೆ ಬದುಕಬಹುದು? ಅವನು ಈ ನೆಲವನ್ನು ಹೇಗೆ ಬಳಸಿಕೊಂಡಿದ್ದಾನೆ, ಬಳಸಿಕೊಂಡು ಬದಲಾಯಿಸಿದ್ದಾನೆ? ಇಲ್ಲಿನ ಉದ್ಯೋಗವೇನು, ಕೈಗಾರಿಕೆ ಏನು? ಈ ಸ್ಥಳ ಇತರ ಯಾವ ಸ್ಥಳಗಳಂತಿದೆ? ಸುತ್ತಮುತ್ತಲಿನ ಸ್ಥಳಗಳಿಗಿಂತ ಭಿನ್ನವಾಗಿದೆಯೆ? ವ್ಯತ್ಯಾಸಗಳೇನು?

ಅನ್ವೇಷಣಾನಿರತನಾದ ಮಾನವ ತನ್ನ ಸುತ್ತಮುತ್ತಲ ಪ್ರದೇಶಗಳನ್ನು ಅರಸಿ ಹೊರಟುದೇ ಭೂಗೋಳ ಜ್ಞಾನದ ಆರಂಭ. ಭೂಗೋಳದ ಅಧ್ಯಯನದಲ್ಲಿ ಮೊದಲು ನಿರತರಾದವರು ಗ್ರೀಕರು. ಆಗ. ಭೂಮಿ ಚಪ್ಪಟೆಯಾಗಿದೆ; ಅಲ್ಲಲ್ಲಿ ಪರ್ವತಗಳಿದ್ದು ಭೂಮಿ ಸಮುದ್ರ ಮಧ್ಯದಲ್ಲಿದೆ–ಎಂಬ ತಿಳಿವಳಿಕೆ ಇದ್ದಿತು. ಕ್ರಿ. ಪೂ. ಆರನೆಯ ಶತಮಾನದಲ್ಲಿ ಗ್ರೀಸಿನ ಥೇಲ್ಸ್ ಎಂಬವನು ಭೂಮಿ ಗುಂಡಗಿದೆ ಎಂದು ಖಚಿತವಾಗಿ ನುಡಿದ. ಗ್ರೀಸಿನ ಸ್ಟ್ರಾಬೊ ಎಂಬಾತ ಬರೆದ ಹದಿನೇಳು ಸಂಪುಟಗಳ ಭೂಗೋಳ ವಿಜ್ಞಾನ ಆಗ ಗ್ರೀಕರಿಗೆ ತಿಳಿದಿದ್ದ ಭೂ ವಿವರಗಳನ್ನೆಲ್ಲ ಸಂಗ್ರಹಿಸಿತು. ಅಲೆಗ್ಸಾಂಡರನ ವಿಜಯಯಾತ್ರೆಗಳು, ಕೊಲಂಬಸ್ ಮತ್ತು ಮಾರ್ಕೊ ಪೋಲೋರಂಥ ಸಾಹಸಿಗಳ ಸಮುದ್ರಯಾನ-ಪ್ರವಾಸಗಳು, ಭೂಮಿ ದೊಡ್ಡದಾಗಿದೆ, ಅಲ್ಲಿ ಇನ್ನೂ ಎಷ್ಟೋ ದೇಶಗಳಿವೆ–ಎಂಬುದನ್ನು ತೋರಿಸಿಕೊಟ್ಟುವು.

ಭೂಗೋಳ ವಿಜ್ಞಾನದಲ್ಲಿ ನಾಲ್ಕು ಮುಖ್ಯ ವಿಭಾಗಗಳಿವೆ–ಪ್ರಾಕೃತಿಕ ಭೂಗೋಳ. ಮಾನವ ಭೂಗೋಳ, ಪ್ರಾಣಿ ಭೂಗೋಳ (ಜೂ ಜಿಯಾಗ್ರಫಿ) ಮತ್ತು ಪ್ರಾದೇಶಿಕ ಭೂಗೋಳ.

ಪ್ರಾಕೃತಿಕ ಭೂಗೋಳದಲ್ಲಿ ಪ್ರಾಕೃತಿಕ ಲಕ್ಷಣ, ವಾತಾವರಣ, ಭೂವಿಜ್ಞಾನ, ಸಾಗರ ವಿವರಣೆ, ಹವಾಗುಣ ಮತ್ತು ಪರ್ವತಶಾಸ್ತ್ರಗಳು ಸೇರಿವೆ.

ಭೂಮಿಯ ಮೇಲೆ ವಾಸಿಸುವ ಎಲ್ಲ ಮಾನವ ಗುಂಪುಗಳು, ಅವರ ಜೀವನದ ರೀತಿ, ವಾಣಿಜ್ಯ–ಇವೆಲ್ಲ ಸೇರಿ ಮಾನವ ಭೂಗೋಳ.

ಪ್ರಾಣಿ ಭೂಗೋಳದಲ್ಲಿ ಪ್ರಪಂಚದ ಬೇರೆ ಬೇರೆ ಭಾಗಗಳಲ್ಲಿ ಎಂಥ ಪ್ರಾಣಿಗಳಿವೆ, ಅವು ಎಲ್ಲಿಂದ ಬಂದುವು, ಅಲ್ಲಿಯ ವಾತಾವರಣಕ್ಕೆ ಹೇಗೆ ಹೊಂದಿಕೊಂಡಿವೆ—ಇಂಥ ವಿಷಯಗಳನ್ನು ಅಭ್ಯಾಸ ಮಾಡುತ್ತಾರೆ.

ಪ್ರಾದೇಶಿಕ ಭೂಗೋಳ ವಾಯುಗುಣ ಒಂದೊಂದು ಪ್ರತ್ಯೇಕ ಭೂಭಾಗದಲ್ಲಿ ಹೇಗಿದೆ ಎಂಬುದನ್ನು ತಿಳಿಸಿಹೇಳುತ್ತದೆ.

ಜನಸಂಖ್ಯೆಯ ಭೂಗೋಳ, ವಾಸ್ತವ್ಯ ಭೂಗೋಳ, ರಾಜಕೀಯ ಭೂಗೋಳ, ನಗರ ಭೂಗೋಳ, ಆರ್ಥಿಕ ಭೂಗೋಳ, ಸೈನಿಕ ಭೂಗೋಳ,

ಭೂಪಟ ತಯಾರಿಕೆ ಮತ್ತು ಭೂಗೋಳ ಕಲಿಯುವ ವೈಜ್ಞಾನಿಕ ರೀತಿ ಮೊದಲಾದ ವಿಭಾಗಗಳೂ ಇವೆ.

ಭೂಗೋಳದ ಪುಸ್ತಕಗಳಲ್ಲಿ ಸಾಮಾನ್ಯವಾಗಿ ಪ್ರತಿ ದೇಶದ ಬಗೆಗೂ ಅದರ ಪ್ರಾಕೃತಿಕ ವಿಭಾಗ, ಹವಾಗುಣ, ಬೆಳೆಗಳು, ಪ್ರಾಣಿಗಳು, ಖನಿಜ ಸಂಪತ್ತು, ಕೈಗಾರಿಕೆಗಳು, ಆಮದು–ರಫ್ತು, ಜನಜೀವನ, ಸರಕಾರ ಮತ್ತು ಚರಿತ್ರೆ ಈ ವಿವರಗಳನ್ನು ಕೊಟ್ಟಿರುತ್ತಾರೆ.

ಭೂಮಿ ಮೊದಲಿಗೆ ಅಖಂಡವಾಗಿದ್ದಿತು. ಕಾಲಾನುಕ್ರಮದಲ್ಲಿ ನೆಲದ ಕುಸಿತ, ಸಮುದ್ರಮಟ್ಟ ಏರುವಿಕೆ ಮೊದಲಾದ ಕಾರಣಗಳಿಂದ ವಿವಿಧ ಭೂಖಂಡಗಳು ಏರ್ಪಟ್ಟುವು.

ಒಟ್ಟು ಪ್ರಪಂಚದ ವಿಸ್ತಾರ 51,02,30,000 ಚದರ ಕಿಲೊಮೀಟರು.

ಭೂಗೋಳ ವಿಜ್ಞಾನ ಇಂದಿನ ಜಗತ್ತಿನಲ್ಲಿ ಮಹತ್ವ ಪಡೆದಿದೆ. ಶಾಲೆಯಿಂದ ಹಿಡಿದು ರಾಜಧಾನಿಯವರೆಗೆ ಯಾವುದನ್ನು ಕಟ್ಟಬೇಕಾದರೂ ನೆಲದ ಗುಣ, ಹವಾಗುಣ, ಸಂಪರ್ಕದ ಸೌಲಭ್ಯ, ನೀರಿನ ಸೌಕರ್ಯ ಇಂಥ ವಿವರಗಳ ಜ್ಞಾನ ಬೇಕು. ಕೈಗಾರಿಕೆ ಬೆಳೆಯ ಅಭಿವೃದ್ಧಿ, ಆಮದು ರಫ್ತುಗಳು ಇವೆಲ್ಲ ಜನರ ಭೂಗೋಳ ಜ್ಞಾನವನ್ನು ಅವಲಂಬಿಸಿವೆ. ದೇಶದ ರಕ್ಷಣೆಗಂತೂ ಈ ಅರಿವು ಅತಿ ಮುಖ್ಯ.

ಜನಸಂಖ್ಯೆಯ ಭೂಗೋಳದಲ್ಲಿ ಜನಸಾಂದ್ರತೆ ಯಾವ ಯಾವ ಭಾಗ ದಲ್ಲಿ ಎಷ್ಟೆಷ್ಟಿದೆ ಎನ್ನುವುದನ್ನು ಅಭ್ಯಾಸ ಮಾಡಬಹುದು. ಎಂಥೆಂಥ ಪಂಗಡಗಳ ಜನರಿದ್ದಾರೆ, ಪುರುಷರೆಷ್ಟು, ಸ್ತ್ರೀಯರೆಷ್ಟು, ಮತ, ಭಾಷೆ– ಎಲ್ಲವನ್ನೂ ಈ ವಿಭಾಗ ತಿಳಿಸುತ್ತದೆ.

ಮಾನವ ತಾನು ವಾಸಮಾಡುವ ಸ್ಥಳದಲ್ಲಿ ಏನೇನು ಅನುಕೂಲಗಳನ್ನು ಮಾಡಿಕೊಳ್ಳುತ್ತಾನೆ ಎನ್ನುವುದನ್ನು ವಿವರಿಸುವುದು ವಾಸ್ತವ್ಯ ಭೂಗೋಳ. ಮನೆಯ ವಿಧಾನಗಳು, ರಸ್ತೆ ಇವುಗಳನ್ನು ಬೇರೆ ಬೇರೆ ವಿಭಾಗಗಳಾಗಿ ಇದು ಅಭ್ಯಸಿಸುತ್ತದೆ.

ರಾಜಕೀಯ ಭೂಗೋಳದಲ್ಲಿ ರಾಜಕೀಯ ಪ್ರದೇಶಗಳ ಅಧ್ಯಯನ. ರಾಜಧಾನಿ, ಕೈಗಾರಿಕಾ ವಿಭಾಗ, ಜನವಸತಿ ಪ್ರದೇಶ, ಗಡಿ, ಕಚ್ಚಾ ಪದಾರ್ಥಗಳು ಸಿಕ್ಕುವ ಜಾಗಗಳು ಮೊದಲಾದ ವ್ಯವಸ್ಥೆಗಳನ್ನು ಸಮರ್ಥ ಆಡಳಿತಗಾರ ತನ್ನ ದೇಶದಲ್ಲಿ ಹೇಗೆ ಮಾಡುತ್ತಾನೆಂಬುದನ್ನು ಇದು ತಿಳಿಯ ಪಡಿಸುತ್ತದೆ.

ನಗರ ನಿರ್ಮಾಣದಲ್ಲಿ ನಗರ ಭೂಗೋಳದ ಪಾತ್ರ ಹಿರಿದು, ನಗರ ವ್ಯವಸ್ಥೆ ನಿರ್ಮಾಣದ ರೀತಿ, ಸರಕು ಸಾಗಾಣಿಕೆ ಇದರಲ್ಲಿ ಸೇರುತ್ತವೆ.

ಆರ್ಥಿಕ ಭೂಗೋಳ ಆ ಪ್ರದೇಶದ ಸಾಧನ ಸಂಪತ್ತು ಎಷ್ಟು, ಖನಿಜ ಮತ್ತು ಲೋಹಗಳು ದೊರೆಯುತ್ತವೆಯೇ, ವ್ಯವಸಾಯೋಪಯೋಗಿ ಭೂಮಿ ಎಷ್ಟು, ಏನೇನು ಬೆಳೆಯಬಹುದು, ಕೈಗಾರಿಕೆಗಳಿಗಿರುವ ಅವಕಾಶ ವೇನು ಎಂಬುದನ್ನು ವಿಮರ್ಶಿಸುತ್ತವೆ.

ಸೈನಿಕ ಭೂಗೋಳ ಎರಡನೆಯ ಮಹಾಯುದ್ಧದ ಸಮಯದಲ್ಲಿ ಆರಂಭವಾಯಿತು. ಒಂದು ಪ್ರದೇಶ ಸೈನ್ಯಾಚರಣೆಗೆ ಅನುಕೂಲವಾಗಿ ದೆಯೇ, ಅದು ಆಯಕಟ್ಟಿನ ಸ್ಥಳದಲ್ಲಿದೆಯೆ—ಎಂಬುದನ್ನು ಕಂಡು ಹಿಡಿಯುವುದು ಸೈನಿಕ ಭೂಗೋಳ.

ಭೂಗೋಳವಿಜ್ಞಾನದ ಅಭ್ಯಾಸದಲ್ಲಿ ಭೂಪಟಗಳ ಪಾತ್ರ ಮುಖ್ಯ. ಭೂಪಟ ತಯಾರಿಕೆ ಕಲೆಯೂ ಹೌದು ; ವಿಜ್ಞಾನವೂ ಹೌದು. ಅಳತೆಪಟ್ಟಿ ಹಿಡಿದು ಶ್ರಮವಹಿಸಿ ಮಾಡುತ್ತಿದ್ದ ಕೆಲಸ ಇಂದು ವಿಜ್ಞಾನದ ನೆರವಿನಿಂದ ಸುಲಭವಾಗಿದೆ. ವಿಮಾನದಿಂದ ಛಾಯಾಚಿತ್ರ ತೆಗೆದು ಅದರ ನೆರವಿನಿಂದ ಭೂಪಟಗಳನ್ನು ತಯಾರಿಸುತ್ತಾರೆ.

ವೈಜ್ಞಾನಿಕವಾಗಿ ಭೂಗೋಳ ಕಲಿಯುವ ರೀತಿ 1920ರಿಂದೀಚೆಗೆ ಪ್ರಾರಂಭವಾಯಿತು. ಲಿಖಿತ ದಾಖಲೆಗಳು, ಭೂಪಟಗಳು, ಛಾಯಾ ಚಿತ್ರಗಳು, ಅಂಕಿ ಅಂಶಗಳು, ಸ್ವತಃ ಪ್ರದೇಶವನ್ನು ವೀಕ್ಷಿಸುವುದು, ವಿಚಾರ ತಿಳಿದಿರುವವರೊಡನೆ ಸಂದರ್ಶನ ಇವುಗಳಿಂದ ಬೇಕಾದ ವಿಷಯಗಳನ್ನು ಕಲೆಹಾಕಿ ಅವನ್ನು ಪೃಥಕ್ಕರಿಸುತ್ತಾರೆ, ಭೂಗೋಳ ವಿಜ್ಞಾನಿಗಳು.

## ಭೂತಾನ

ಸುತ್ತಲೂ ದಟ್ಟವಾದ ಅರಣ್ಯಗಳು. ಎತ್ತರವಾದ ಬೆಟ್ಟಗಳು : ಟಿಬೆಟ್ ಮತ್ತು ಭಾರತದ ಮಧ್ಯೆ ಪೂರ್ವ ಹಿಮಾಲಯದಲ್ಲಿ ಒಂದು ಪುಟ್ಟ ರಾಜ್ಯ. ಅದು ಭೂತಾನ. ಬಂಗಾಳದ ಮೈದಾನ ಪ್ರದೇಶಗಳಿಂದ ಟಿಬೆಟಿನ ಪ್ರಸ್ಥಭೂಮಿಯವರೆಗೆ ಇರುವ ದೈತ್ಯಾಕಾರದ ಮೆಟ್ಟಿಲುಗಳ ಶ್ರೇಣಿ ಎಂದು ವರ್ಣಿಸಬಹುದು ಈ ರಾಷ್ಟ್ರವನ್ನು.

ಭೂತಾನದ ಬಹಳ ಜನ ಒಳ ಹಿಮಾಲಯ ಪ್ರದೇಶದ ಕಣಿವೆಗಳ ಸಣ್ಣ ಹಳ್ಳಿಗಳಲ್ಲಿ ವಾಸಿಸುತ್ತಾರೆ. ಈ ಪ್ರದೇಶದ ಉತ್ತರಕ್ಕಿರುವ ಹಿಮಾಲಯದ ಎತ್ತರ ಪ್ರದೇಶಗಳಲ್ಲೂ ದಕ್ಷಿಣಕ್ಕಿರುವ ಬಯಲು ಭೂಮಿಯಲ್ಲೂ ವಾಸಿಸುವವರ ಸಂಖ್ಯೆ ಬಹಳ ಕಡಿಮೆ. ಜನಸಂಖ್ಯೆ ಎಂಟು ಲಕ್ಷ (1966).

ಭೂತಾನಕ್ಕೆ ಪ್ರಯಾಣ ಮಾಡುವುದು ಸುಲಭವಲ್ಲ. ರೈಲು ರಸ್ತೆ ಗಳಾಗಲಿ, ವಿಮಾನ ಮಾರ್ಗಗಳಾಗಲಿ ಇಲ್ಲ. ಇರುವ ರಸ್ತೆಗಳಲ್ಲೂ ಸಂಚಾರ ಕಷ್ಟ.

ಉತ್ತರದಲ್ಲಿ ಹಿಮಾಲಯದ ಮಹಾಪರ್ವತ ಶ್ರೇಣಿಯ ಅನೇಕ ಶಿಖರಗಳಿವೆ. 7,320 ಮೀಟರುಗಳಷ್ಟು ಎತ್ತರದ ಭೂಮಿ. ಅತಿ ತಗ್ಗು ಪ್ರದೇಶ ಕೂಡ 3,660 ಮೀಟರು ಮೇಲಿದೆ. ಅಲ್ಲಲ್ಲಿ ಕಾಣುವ ಬೌದ್ಧ ವಿಹಾರಗಳನ್ನು ಬಿಟ್ಟರೆ ಇಲ್ಲಿ ಬೇರೆ ಜನ ವಾಸಿಸುವುದಿಲ್ಲವೆಂದೇ ಹೇಳಬೇಕು. ದಕ್ಷಿಣದ ಬಯಲು ಪ್ರದೇಶ ಜೌಗು ಪ್ರದೇಶ. ಇಲ್ಲಿ ಮಲೇರಿಯದ ಭೀತಿಯಿಂದಾಗಿ ಜನವಸತಿ ಇಲ್ಲ.

ಭೂತಾನ ಅಭಿವೃದ್ಧಿಹೊಂದುತ್ತಿರುವ ರಾಷ್ಟ್ರ. ಪಟ್ಟಣ ಎನಿಸಿ ಕೊಳ್ಳಬಹುದಾದಂಥ ಊರುಗಳಾಗಲಿ, ಬ್ಯಾಂಕುಗಳಾಗಲಿ, ಚಲನಚಿತ್ರ ನಾಟಕ ಮಂದಿರಗಳಾಗಲಿ, ಅಂಗಡಿಗಳಾಗಲಿ ಇಲ್ಲ. ಆಧುನಿಕತೆಯ ಸಂಕೇತವಾಗಿ ಅಲ್ಲಿರುವುದು ಮೂರು ಅಂಚೆ ಕಚೇರಿಗಳು ಮಾತ್ರ.

ಭೂತಾನದ ರಾಜಧಾನಿ ಥಿಂಬು. ಆಧುನಿಕ ರಾಜಧಾನಿಯಾಗುವಂತೆ ಮಾಡಲು ಪ್ರಯತ್ನಿಸಲಾಗುತ್ತಿದೆ. ಸದ್ಯಕ್ಕೆ ಅಲ್ಲಿರುವುದು ಒಂದು ಕೋಟೆ. ಕೆಲವೊಂದು ಮನೆಗಳ ಸಮುಚ್ಚಯ.

ಭೂತಾನಿಗಳು ಟಿಬೆಟ್ ಭಾಷೆಯ ಒಂದು ಉಪಭಾಷೆಯನ್ನು ಮಾತಾಡು ತ್ತಾರೆ. ಅವರಲ್ಲಿ ಬಹು ಮಂದಿ ಬೌದ್ಧಧರ್ಮೀಯರು. ಉಳಿದವರು ಪ್ರಕೃತಿ ಪೂಜೆ ಮಾಡುತ್ತಾರೆ.

ಭೂತಾನಿ ಮಕ್ಕಳಲ್ಲಿ ಓದು ಕಲಿಯಲು ಹೋಗುವವರು ಕಡಿಮೆ. ಕ್ರಿ.ಶ. 1960ಕ್ಕೆ ಮೊದಲು ಅಲ್ಲಿ ಶಾಲೆಗಳು ಇರಲಿಲ್ಲ. ಅಕ್ಷರಸ್ಥರ ಸಂಖ್ಯೆ ನೂರಕ್ಕೆ ಒಂದು ಭಾಗವೂ ಇಲ್ಲ. ಈಗೀಗ ಶಾಲೆಗಳು ಸ್ಥಾಪಿತ ವಾಗುತ್ತಿವೆ. ಭೂತಾನದ ಶಾಲೆಗಳಲ್ಲಿ ಭಾರತೀಯ ಉಪಾಧ್ಯಾಯರಿದ್ದಾರೆ.

ಭೂತಾನದಲ್ಲಿ ವ್ಯವಸಾಯವೇ ಮುಖ್ಯ ಉದ್ಯೋಗ. ಭತ್ತ ಭೂತಾನದ ಪ್ರಧಾನ ಬೆಳೆ. ರಫ್ತು ಮಾಡುವಷ್ಟು ಭತ್ತ. ಬಾರ್ಲಿ, ಗೋಧಿ, ಕಾಳು. ಹಣ್ಣು. ತರಕಾರಿ ಇವನ್ನು ಬೆಳೆಯುತ್ತಾರೆ.

ಕುರಿ. ಮೇಕೆ. ಯಾಕ್ ಇವುಗಳನ್ನು ಸಾಲಿಗೆ ಬಳಸುತ್ತಾರೆ. ಈ ಪ್ರಾಣಿಗಳನ್ನು ಹೇರು ಹೊರುವುದಕ್ಕಷ್ಟೇ ಅಲ್ಲದೆ ಅವುಗಳ ಚರ್ಮಕ್ಕಾಗಿ. ಹಾಲಿಗಾಗಿ, ಮಾಂಸಕ್ಕಾಗಿ ಸಾಕುತ್ತಾರೆ.

ಭೂತಾನದ ಪುರಾತನ ಚರಿತ್ರೆ ಸ್ಪಷ್ಟವಾಗಿ ತಿಳಿದುಬಂದಿಲ್ಲ. ಹದಿನಾರನೆಯ ಶತಮಾನದಲ್ಲಿ ಟಿಬೆಟ್ಟಿನ ಧರ್ಮಗುರುವೊಬ್ಬ ಭೂತಾನನ್ನು ಗೆದ್ದು ಅದರ ಮೊದಲ ಧರ್ಮರಾಜನೆಂದು ಘೋಷಿಸಿಕೊಂಡ. 1907ರಲ್ಲಿ ಟಾನ್‌ಗ್ಸದ ಪಾಲಕನಾದ ಯಗ್‌ಯೆನ್ ವಾಂಗ್ ಚಕ್ ಎಂಬವನನ್ನು ಭೂತಾನದ ಮಹಾರಾಜನನ್ನಾಗಿ ರಾಜಕೀಯ ಹಾಗೂ ಧಾರ್ಮಿಕ ನಾಯಕರು ನೇಮಿಸಿದರು. ಇದಕ್ಕೆ ಬ್ರಿಟಿಷರೂ ಕಾರಣ.

1947ರಲ್ಲಿ ಭಾರತ ಸ್ವತಂತ್ರವಾದಾಗ ಭೂತಾನದ ಮೇಲಣ ಬ್ರಿಟಿಷ್ ಹತೋಟಿ ಕೊನೆಗಂಡಿತು. 1949ರಲ್ಲಿ ಭೂತಾನ-ಭಾರತ ಇವುಗಳ ನಡುವೆ ಹೊಸ ಒಪ್ಪಂದವಾಯಿತು. ಇದರಿಂದ ಭೂತಾನದ ಒಳ ಆಡಳಿತದ ಸಂಪೂರ್ಣ ಸ್ವಾತಂತ್ರ್ಯದನ್ನೂ ಅಲ್ಲಿನ ರಾಜರ ಆಳ್ವಿಕೆಯನ್ನೂ ಭಾರತ ಒಪ್ಪಿತು. ವಿದೇಶ ವ್ಯವಹಾರದಲ್ಲಿ ಭಾರತದ ಮಾರ್ಗದರ್ಶನ ಪಡೆಯಲು ಭೂತಾನ ಸಮ್ಮತಿಸಿತು. ವಾರ್ಷಿಕ ಸಹಾಯಧನ ಬ್ರಿಟಿಷರ ಕಾಲದಲ್ಲಿದ್ದ ಒಂದು ಲಕ್ಷದಿಂದ ಐದು ಲಕ್ಷ ರೂಪಾಯಿಗಳಿಗೆ ಏರಿತು. ಬ್ರಿಟಿಷರು ಆಕ್ರಮಿಸಿದ್ದ ದೇವನಗಿರಿ ಪ್ರದೇಶವನ್ನು ಭಾರತ ಭೂತಾನಕ್ಕೆ ಹಿಂದಿರುಗಿಸಿತು.

1952ರಲ್ಲಿ ಯಗ್ ಯೆನ್ ವಾಂಗ್ ಚಕ್‌ನ ಮೊಮ್ಮಗ ಜಿಗ್ಮೆ ದೋರ್‌ಜಿ ರಾಜನಾದರು.

1961ರಲ್ಲಿ ಭಾರತ ಸರಕಾರದೊಂದಿಗೆ ನಡೆದ ಸಮಾಲೋಚನೆಗಳಿಂದ ಭೂತಾನದ ಅಭಿವೃದ್ಧಿಗೆ ಹದಿನೇಳು ಕೋಟಿ ರೂಪಾಯಿ ವೆಚ್ಚದ ಪಂಚವಾರ್ಷಿಕ ಯೋಜನೆಯೊಂದು ಸಿದ್ಧವಾಯಿತು. ಈ ಯೋಜನೆಯ ಒಂದು ಕಾರ್ಯಕ್ರಮ ಹಲವಾರು ರಸ್ತೆಗಳ ನಿರ್ಮಾಣ. ಪಶ್ಚಿಮ ಬಂಗಾಳದ ಗಡಿಯಿಂದ ಭೂತಾನದ ರಾಜಧಾನಿಯವರೆಗೆ 177 ಕಿ. ಮೀ. ಗಳ ಮಾರ್ಗ, ಅಸ್ಸಾಂ ಗಡಿಯಿಂದ ಪೂರ್ವ ಭೂತಾನಕ್ಕೆ 193 ಕಿ. ಮೀ. ಉದ್ದದ ಮಾರ್ಗ—ಹೀಗೆ ಎರಡು ಮುಖ್ಯ ಮಾರ್ಗಗಳು ಸಿದ್ಧವಾಗಿವೆ. ಭೂತಾನ ಆದಷ್ಟು ಸ್ವಾವಲಂಬಿಯಾಗಲು, ತನ್ನ ಜನರ ಜೀವನಮಟ್ಟ ಹೆಚ್ಚಿಸಲು ಭಾರತ ಸಹಾಯ ನೀಡುತ್ತಿದೆ.




## ಭೂದಾನ

ನೋಡಿ : ವಿನೋಬಾ

## ಭೂಮಧ್ಯ ರೇಖೆ

ಉತ್ತರಧ್ರುವ, ದಕ್ಷಿಣಧ್ರುವ—ಇವುಗಳ ಮಧ್ಯದಲ್ಲಿ ಭೂಮಿಯ ಅಕ್ಷಕ್ಕೆ ಸಮಕೋನವಾಗಿ ಅದರ ಸುತ್ತ ಹಾದುಹೋಗುವ ರೇಖೆ ಭೂಮಧ್ಯ ರೇಖೆ.

ಯಾರು ನೋಡಿದ್ದಾರೆ ಇದನ್ನು? ನಿಜವಾಗಿ ಅಂಥ ರೇಖೆ ಇಲ್ಲ. ಆದರೆ ಸ್ಥಳಗಳ ಗುರುತು ಹೇಳಲು ಅನುಕೂಲವಾಗಲಿ ಎಂದು ಹಾಗೊಂದು ರೇಖೆ ಇದೆ ಎಂದು ಭಾವಿಸಬೇಕು. ಕೆಲವೊಂದು ವಿಶೇಷ ಸ್ಥಳಗಳಲ್ಲಿ ಈ ರೇಖೆಯನ್ನು ಭೂಮಿಯ ಮೇಲೆ ಗುರುತಿಸಿದ್ದೂ ಇದೆ. ಈಕ್ವೆಡಾರ್ (ದಕ್ಷಿಣ ಅಮೆರಿಕ)ನ ಕ್ವಿಟೊ ನಗರದ ಸಮೀಪ ಭೂಮಧ್ಯ ರೇಖೆ ಸೂಚಿಸುವ ಒಂದು ಸ್ಮಾರಕವಿದೆ. ಕೀನ್ಯಾ (ಆಫ್ರಿಕ) ದ ಶಾಲೆಯೊಂದರ ಕಾಲ್ಚೆಂಡಿನ ಆಟದಬಯಲಿನಲ್ಲಿ ಭೂಮಧ್ಯ ರೇಖೆಯೇ ಮಧ್ಯವಿಭಾಗ ರೇಖೆಯಾಗಿದೆ.

ಭೂಮಧ್ಯರೇಖೆ ಭೂಗೋಳದ ಸುತ್ತ ಪೂರ್ವ ಪಶ್ಚಿಮ ಎಳೆಯಬಹುದಾದ ಅತಿ ದೊಡ್ಡ ವೃತ್ತವೂ ಹೌದು. ಅದರ ಉದ್ದ ಸುಮಾರು 40,225 ಕಿಲೊಮೀಟರು.

ಈ ರೇಖೆ ಭೂಮಿಯನ್ನು ಎರಡು ಸಮಾನ ಗೋಳಗಳಾಗಿ ವಿಭಜಿಸುವುದರಿಂದ ಇದಕ್ಕೆ ಸಮಭಾಜಕವೃತ್ತ ಎಂಬ ಹೆಸರೂ ಉಂಟು. ಈ ರೇಖೆಯ ಉತ್ತರಕ್ಕಿರುವ ಭೂಭಾಗ ಉತ್ತರಾರ್ಧಗೋಳ, ದಕ್ಷಿಣಕ್ಕಿರುವುದು ದಕ್ಷಿಣಾರ್ಧಗೋಳ. ಈ ರೇಖೆಯನ್ನು ವಿಷುವವೃತ್ತವೆಂದೂ ಕರೆಯುವರು.

ಭೌಗೋಳಿಕ ಸ್ಥಾನಗಳನ್ನು ಗುರುತಿಸಲು ಈ ರೇಖೆಯನ್ನು ಆಧಾರದ ಗೆರೆಯನ್ನಾಗಿ ಇಟ್ಟುಕೊಳ್ಳುತ್ತಾರೆ. ಅಕ್ಷಾಂಶ ರೇಖೆಗಳನ್ನು ಭೂಮಧ್ಯ ರೇಖೆಯ ಉತ್ತರ ಮತ್ತು ದಕ್ಷಿಣ ಭಾಗಗಳಲ್ಲಿ ಗುರುತಿಸಿದ್ದಾರೆ.

ಸಿಂಗಪುರ (ಏಷ್ಯ), ನೈರೋಬಿ (ಕೀನ್ಯ). ಸ್ಟ್ಯಾನ್ಲಿವಿಲ್ (ಕಾಂಗೊ). ಎಂಟೆಬ್ಬೆ (ಉಗಾಂಡ), ಬೆಲಯ್ (ಬ್ರೆಸಿಲ್) ಮತ್ತು ಕ್ವಿಟೊ (ಈಕ್ವೆಡಾರ್) ಇವು ಭೂಮಧ್ಯರೇಖೆಯ ಬಳಿ ಇರುವ ಕೆಲವು ಮುಖ್ಯ ಸ್ಥಳಗಳು.

ಭೂಮಧ್ಯರೇಖೆಯ ಬಳಿ ಇರುವ ನೆಲ ತೇವವಾಗಿಯೂ ಶಾಖವಾಗಿಯೂ ದಟ್ಟವಾದ ಸಸ್ಯಗಳಿಂದ ಕೂಡಿದ್ದಾಗಿಯೂ ಇರುತ್ತದೆ. ಈ ರೇಖೆಯ ಬಳಿಯಿರುವ ಆಫ್ರಿಕದ ಕಾಡುಗಳಲ್ಲಿ ಹಗಲಿನಲ್ಲಿ ಬಿಸಿಲು 98° ಫಾ. ಗಿಂತ ಹೆಚ್ಚು. ಈ ಪ್ರದೇಶಗಳಲ್ಲಿ 254 ಸೆಂಟಿಮೀಟರುಗಳಿಗಿಂತಲೂ ಹೆಚ್ಚಾಗಿ ಮಳೆ ಬೀಳುವುದುಂಟು. ಗುಡುಗು ಮಿಂಚು ಸಹಿತವಾದ ಮಳೆ ಪ್ರತಿದಿನ ಎಂಬಂತೆ ವರ್ಷವಿಡೀ ಬೀಳುತ್ತದೆ. ಅತಿ ಶಾಖ ಮತ್ತು ಕಡಮೆ ಒತ್ತಡಗಳಿವೆ. ಆದ್ದರಿಂದ ಭೂಮಧ್ಯ ರೇಖೆಯ ಬಳಿ ಪದೇ ಪದೇ ದಿಕ್ಕು ಬದಲಾಯಿಸಿ ಬೀಸುವ ನಸುಗಾಳಿಯು

ಸ್ತಬ್ಧ (ಶಾಂತ) ವಾಯುಪ್ರದೇಶವಿರುತ್ತದೆ. ಭೂಮಧ್ಯ ರೇಖೆಯ ಹತ್ತಿರವಿರುವ ಎಲ್ಲ ಪ್ರದೇಶಗಳಲ್ಲಿಯೂ ಶಾಖ ಹೆಚ್ಚಾಗಿರುವುದಿಲ್ಲ. ಎತ್ತರದ (ಪರ್ವತ) ಪ್ರದೇಶಗಳಲ್ಲಿ ಹವೆ ತಂಪಾಗಿರುತ್ತದೆ. ಉದಾ: ಆಫ್ರಿಕದ ಕೀನ್ಯ ಪರ್ವತ ಮತ್ತು ದಕ್ಷಿಣ ಅಮೆರಿಕದ ಕೊಟೊಪಾಕ್ಸಿ ಪರ್ವತ (ಇವು ಈ ರೇಖೆಯ ಬಳಿಯಿದ್ದರೂ ತಂಪಾಗಿರುವ ಪ್ರದೇಶಗಳಾಗಿವೆ).

ಪ್ರತಿ ವರ್ಷ ಮಾರ್ಚ್ 21 ಮತ್ತು ಸೆಪ್ಟೆಂಬರ್ 21ರಂದು ಸೂರ್ಯ ಭೂಮಧ್ಯರೇಖೆಯ ಮೇಲೆ ನೇರವಾಗಿ ಪ್ರಕಾಶಿಸುತ್ತಾನೆ. ಸೂರ್ಯ ಈ ರೇಖೆಯನ್ನು ಪ್ರವೇಶಿಸುವ ಬಿಂದುಗಳಿಗೆ ವಿಷುವದ್ಬಿಂದುಗಳು ಎಂದು ಹೆಸರು. ಪ್ರಪಂಚದಾದ್ಯಂತ ರಾತ್ರಿ ಮತ್ತು ಹಗಲು ಎರಡು ಒಂದೇ ಸಮನಾಗಿರುವುದು ಈ ಎರಡು ದಿನಗಳಲ್ಲಿ ಮಾತ್ರ. ಭೂಮಧ್ಯರೇಖೆಯ ಬಳಿಯಲ್ಲಾದರೋ ರಾತ್ರಿ ಮತ್ತು ಹಗಲು ಯಾವಾಗಲೂ ಒಂದೇ ಸಮನಾಗಿರುತ್ತವೆ.

ನೋಡಿ : ಅಕ್ಷಾಂಶ–ರೇಖಾಂಶ

## ಭೂಮಧ್ಯ ಸಮುದ್ರ

ಸುಮಾರು ಮೂರು ಸಾವಿರ ವರ್ಷಗಳಿಂದ ಈ ಸಮುದ್ರದ ತೀರ ಪ್ರದೇಶದ ಹತೋಟಿಗಾಗಿ ಯುದ್ಧಗಳು ನಡೆದಿವೆ—ಅಷ್ಟು ಮುಖ್ಯವಾದದ್ದು ಭೂಮಧ್ಯ ಸಮುದ್ರ.

ಸುತ್ತಲೂ ಯೂರೋಪ್, ಏಷ್ಯ ಮತ್ತು ಆಫ್ರಿಕ ಖಂಡಗಳು. ಮಧ್ಯೆ ವಿಶಾಲವಾದ, ಶಾಂತವಾದ ಅಗಾಧ ಸಮುದ್ರ. ಪಾಶ್ಚಾತ್ಯ ನಾಗರಿಕತೆಯು ಶಿಶು ಜನಿಸಿದ್ದು ಇದರ ಮಡಿಲಲ್ಲೇ.

ಬಗೆಬಗೆಯ ಮೀನುಗಳು, 400ಕ್ಕೂ ಹೆಚ್ಚಿನ ವೈವಿಧ್ಯ. 14–15ನೆಯ ಶತಮಾನಗಳ ವರೆಗೆ ಅಂತರರಾಷ್ಟ್ರೀಯ ವ್ಯಾಪಾರದ ಬಹುಭಾಗ ಈ ಸಮುದ್ರದ ಮೂಲಕವೇ ನಡೆಯಿತು. ಈಗ ದಂಡೆ ಸುಮಾರು 20 ದೇಶಗಳ ನಡುವೆ ಹಂಚಿಹೋಗಿದೆ. ಈ ಸಮುದ್ರದ ದ್ವೀಪ ಮತ್ತು ಪರ್ಯಾಯ ದ್ವೀಪಗಳು ಕಲೆ, ವಾಸ್ತುಶಿಲ್ಪ, ಸಾಹಿತ್ಯ ಮುಂತಾದುವುಗಳ ಕೊಡುಗೆಯಿತ್ತು ಪ್ರಪಂಚದ ನಾಗರಿಕತೆಯನ್ನು ಸಮೃದ್ಧಗೊಳಿಸಿವೆ. ಅನ್ವೇಷಕರ ಆಕರ್ಷಕ ಕೇಂದ್ರ. ನೌಕಾಯಾನದ ತೊಟ್ಟಿಲು: ಅಪಾರ ಸಂಪತ್ತಿನ ಆಗರ. ಇದನ್ನು ಮೆಡಿಟರೇನಿಯನ್ (ಎಂದರೆ ಭೂಮಧ್ಯ) ಸಮುದ್ರ ಎಂದು ಕರೆಯುತ್ತಾರೆ.

ಭೂಮಧ್ಯ ಸಮುದ್ರದ ಉದ್ದ 3.862 ಕಿಲೊಮೀಟರ್. ಪರಮಾವಧಿ ಅಗಲ 1,770 ಕಿ. ಮೀ. ವಿಸ್ತೀರ್ಣ 24.99.350 ಚ. ಕಿ. ಮೀ. ಪರಮಾವಧಿ ಆಳ 4,407 ಮೀಟರು; ಸರಾಸರಿ ಆಳ 1,373 ಮೀಟರು.

ಜಿಬ್ರಾಲ್ಟರ್ ಜಲಸಂಧಿ ಭೂಮಧ್ಯ ಸಮುದ್ರವನ್ನು ಅಟ್ಲಾಂಟಿಕ್ ಸಾಗರಕ್ಕೆ ಸೇರಿಸುತ್ತದೆ. ಇದಕ್ಕೆ ಕಪ್ಪು ಸಮುದ್ರದೊಡನೆ ಸಂಪರ್ಕ ಮಾರ್ಮರ ಸಮುದ್ರ ಮತ್ತು ಬಾಸ್ಪರಸ್ ಜಲಸಂಧಿಗಳ ಮೂಲಕ. ಸೂಯೆಜ್ ಕಾಲುವೆಯಿಂದ ಭೂಮಧ್ಯ ಸಮುದ್ರಕ್ಕೆ ಹಿಂದೂ ಮಹಾಸಾಗರದ ಸಂಪರ್ಕ ಒದಗಿದೆ.

ಈ ಸಮುದ್ರದ ದಂಡೆ 22.526 ಕಿ. ಮೀ. ಗಳಷ್ಟು ಉದ್ದ. ದಕ್ಷಿಣ ದಂಡೆಯಲ್ಲಿ ಭೂಮಿ ಮಟ್ಟಸ. ಕೆಲವು ಒಳ್ಳೆಯ ಬಂದರುಗಳಿವೆ. ಮುಖ್ಯವಾದದ್ದು ಅಲೆಗ್ಸಾಂಡ್ರಿಯಾ. ಉತ್ತರದ ದಂಡೆ ಒಂದೇ ಸಮನಾಗಿಲ್ಲ. ಪರ್ಯಾಯದ್ವೀಪಗಳು ದಂಡೆಯನ್ನು ಅಂಕುಡೊಂಕಾಗಿಸಿವೆ. ಆಳವಾದ ಕೊಲ್ಲಿಗಳು, ಖಾರಿಗಳು, ಅಸಂಖ್ಯಾತ ದ್ವೀಪಗಳು, ಸುಂದರ ಬಂದರುಗಳು ಇರುವುದು ಉತ್ತರ ದಂಡೆಯಲ್ಲೇ.

ಭೂಮಧ್ಯ ಸಮುದ್ರದ ಮುಖ್ಯ ದ್ವೀಪಗಳು ಬೆಲೆರಿಕ್ಸ್, ಸಾರ್ಡಿನಿಯಾ, ಕಾರ್ಸಿಕ, ಸಿಸಿಲಿ, ರೋಡ್ಸ್, ಕ್ರೀಟ್, ಮಾಲ್ಟಾ ಮತ್ತು ಸೈಪ್ರಸ್. ಸಮುದ್ರಕ್ಕೆ ಬಂದು ಸೇರುವ ನದಿಗಳಲ್ಲಿ ಅತಿ ಉದ್ದವಾದದ್ದು ಈಜಿಪ್ಟಿನ ನೈಲ್. ಇದಲ್ಲದೆ ಎಬ್ರೊ (ಸ್ಪೇನ್), ರೋನ್ (ಫ್ರಾನ್ಸ್) ಮತ್ತು ಪೋ (ಇಟಲಿ) ಈ ನದಿಗಳೂ ಭೂಮಧ್ಯ ಸಮುದ್ರವನ್ನು ಸೇರುತ್ತವೆ.

ಸುತ್ತಲೂ ಭೂಖಂಡಗಳಿಂದ ಆವೃತವಾದ ಈ ಸಮುದ್ರದಲ್ಲಿ ಅಲೆಗಳ ಹೊಡೆತ ಬಹಳ ಕಡಮೆ. ಆಫ್ರಿಕದ ದಂಡೆಯಲ್ಲಿ ಒಮ್ಮೊಮ್ಮೆ 1.83 ಮೀಟರುಗಳಷ್ಟು ಎತ್ತರ ಏರುತ್ತದೆ.

ಅಟ್ಲಾಂಟಿಕ್ ಸಾಗರಕ್ಕಿಂತಲೂ ಭೂಮಧ್ಯ ಸಮುದ್ರದಲ್ಲಿ ನೀರಿನ ಉಷ್ಣ ಹೆಚ್ಚು. ಕಪ್ಪು ಸಮುದ್ರದಿಂದ ಹರಿದುಬರುವ ಪ್ರಬಲ ಪ್ರವಾಹವೊಂದು ನೀರು ಅಟ್ಲಾಂಟಿಕ್ ಸಾಗರಕ್ಕಿಂತಲೂ ವೇಗ ಆವಿಯಾಗುವಂತೆ ಮಾಡುತ್ತದೆ.

ಈ ಸಮುದ್ರದಲ್ಲಿ ಕೆಂಪು ಹವಳ ಹೇರಳವಾಗಿ ಸಿಗುತ್ತದೆ.

ಸಾಹಸಿಗಳು ಭೂಮಧ್ಯ ಸಮುದ್ರದ ಆಳವನ್ನು ಹೊಕ್ಕು ತಳಮುಟ್ಟಿ ಒಡಮಣ್ಣು ತಂದಿದ್ದಾರೆ. ಅಟ್ಲಾಂಟಿಕ್ ಮತ್ತು ಶಾಂತಸಾಗರಗಳ ತಳಕ್ಕಿಂತ ಈ ಸಮುದ್ರದ ನೆಲ ಒರಟಾಗಿರುವಂತೆ ಕಾಣುತ್ತದೆ. ವಿಜ್ಞಾನಿಗಳು ಸಮುದ್ರ ತಳದ ನೆಲದ ಪದರ ಪದರವನ್ನೂ ಛೇದಿಸಿ ನೋಡಿದ್ದಾರೆ. ಅದರ ಇತಿಹಾಸವನ್ನು ರೂಪಿಸಲೆತ್ನಿಸಿದ್ದಾರೆ.

ಉತ್ತಮ ವಾಣಿಜ್ಯ ಮಾರ್ಗವಾಗಿ ವ್ಯಾಪಾರಿಗಳನ್ನೂ ಸುಂದರ ತಾಣಗಳಿಂದ ರಸಿಕರನ್ನೂ ಅದ್ಭುತ ಅಗೋಚರ ವೈವಿಧ್ಯಗಳಿಂದ ಸಂಶೋಧಕರನ್ನೂ ಆಕರ್ಷಿಸುತ್ತಿರುವ ಈ ಸಮುದ್ರ 5° 21′ ಪಶ್ಚಿಮ, 36° 10′ ಪೂರ್ವ ಈ ರೇಖಾಂಶಗಳ ಮಧ್ಯೆ ವ್ಯಾಪಿಸಿದೆ.

ನೋಡಿ : ಜಲಸಂಧಿ

## ಭೂಮಿ

“ಕ್ಷಮಯಾ ಧರಿತ್ರೀ”

—ಭೂಮಿಯಂತೆ ಕ್ಷಮಾಶೀಲ.

ನಮ್ಮ ಹಿಂದಿನವರು ಮುತ್ತಿನಂಥ ಈ ಮಾತನ್ನು ಹೇಳಿದರು. ಭೂಮಿಯನ್ನು ತುಳಿಯುತ್ತೇವೆ, ಅಗೆಯುತ್ತೇವೆ. ಭೂಮಿಯ ಮೇಲೆ ಹೋರಾಡುತ್ತೇವೆ. ಭೂಮಿಗೆ ರಕ್ತಸ್ನಾನ ಮಾಡಿಸುತ್ತೇವೆ. ಆದರೂ ಭೂಮಿ ನಮ್ಮನ್ನು ಹೊರುತ್ತದೆ. ಆಹಾರ ನೀಡುತ್ತದೆ. ಇದು ಕವಿ ಕಲ್ಪನೆ ನಿಜ. ವೈಜ್ಞಾನಿಕವಾಗಿ ನೋಡಿದರೆ ಭೂಮಿಗೆ ಒಳ್ಳೆಯ ಮತ್ತು ಕೆಟ್ಟ ಗುಣಗಳಿಲ್ಲ. ಆದರೆ ಈ ಮಾತು, ಭೂಮಿಯ ಮತ್ತು ಮನುಷ್ಯನ ಆತ್ಮೀಯ ಸಂಬಂಧವನ್ನು ತೋರಿಸುತ್ತದೆ.

ಭೂಮಿ ಗೋಳಾಕಾರವಾಗಿದೆ. ಪ್ರಾಚೀನರು ಈ ಭೂಮಿ ಚಪ್ಪಟೆಯಾಗಿದೆ ಎಂದು ನಂಬಿದ್ದರು. ಪ್ರಥಮವಾಗಿ ಇದು ತಪ್ಪು ಎಂದವನು ಪೈಥಾಗೊರಸ್ ಎಂಬ ಗ್ರೀಕ್ ವಿದ್ವಾಂಸ, ಕ್ರಿ. ಪೂ. 6ನೆಯ ಶತಮಾನದಲ್ಲಿ. ಮುಂದೆ ಎರಡು ನೂರು ವರ್ಷಗಳ ನಂತರ ಅರಿಸ್ಟಾರ್ಕಸ್ ಎಂಬುವನು, ಭೂಮಿ ಸೂರ್ಯನನ್ನು ಸುತ್ತುತ್ತಿದೆ ಎಂದು ಸೂಚಿಸಿದ.

ಅನಂತರ ನೂರು ವರ್ಷಗಳಾದ ಮೇಲೆ ಅಲೆಕ್ಸಾಂಡ್ರಿಯದ ಇರಾಟೊಸ್ತನೀಸ್ ಎಂಬುವನು ಭೂಮಿಯ ಸುತ್ತಳತೆಯನ್ನು ತಿಳಿಸಿದ.

ಭೂಮಿಯನ್ನು ಸೃಷ್ಟಿಸಿದವನು ದೇವರು ; ಇದು ಚಪ್ಪಟೆಯಾಗಿದೆ ; ಇದರಾಚೆ ಸಾಗರಗಳಿವೆ ; ಭೂಮಿಯನ್ನು ಎಂಟು ದಿಗ್ಗಜಗಳು ಹೊತ್ತು ನಿಂತಿವೆ ; ಭೂಲೋಕದ ಕೆಳಗೆ ಏಳು ಲೋಕಗಳಿವೆ—ಎಂದೆಲ್ಲ ಕಲ್ಪನೆಯನ್ನು ಹರಿಸಿದರು ನಮ್ಮ ಪೂರ್ವಿಕರು. ಆದರೆ ವಿಜ್ಞಾನಿಗಳು ಕೊಟ್ಟ ವಿವರಣೆಯೇ ಬೇರೆ.

ಒಂದು ಸಾವಿರ ಕೋಟಿ ವರ್ಷಗಳ ಹಿಂದೆ ಭೂಮಿ, ಸೂರ್ಯ, ಸೌರ ವ್ಯೂಹದ ಉಳಿದ ಗ್ರಹಗಳು ಎಲ್ಲ ಒಂದಾಗಿದ್ದು, ಬರಿದಾದ ಬಾಹ್ಯಾಕಾಶದಲ್ಲಿ ತಣ್ಣನೆಯ ಧೂಳಿನ ಕಣಗಳ ರಾಶಿ ಸುತ್ತುತ್ತಿತ್ತು.

ಕಾಲಕ್ರಮದಲ್ಲಿ ಇವು ಒಂದಕ್ಕೊಂದು ಆಕರ್ಷಿತವಾದುವು. ಒಟ್ಟು ಸೇರಿ ಇವು ಬೃಹದಾಕಾರದ ತಿರುಗು ಮಂಡಲವಾದುವು. ತಿರುಗುತ್ತ ತಿರುಗುತ್ತ ಈ ಮಂಡಲ ಬೇರೆ ಬೇರೆ ವರ್ತುಲಗಳಾದುವು. ಎಷ್ಟು ವೇಗವಾಗಿ ತಿರುಗುತ್ತಿದ್ದುವೆಂದರೆ ಆ ವೇಗಕ್ಕೆ ಇವು ವಿಪರೀತ ಕಾವು ಪಡೆದುವು.

ಈ ತಿರುಗು ಮಂಡಲದ ಮಧ್ಯಭಾಗವೇ ಸೂರ್ಯ. ಹೊರ ವರ್ತುಲಗಳಲ್ಲಿದ್ದ ಕಣಗಳು, ಅನಿಲ ಹಾಗೂ ಕಾದದ್ರವಗಳಿಂದ ಕೂಡಿದ ಬೆಂಕಿಯುಂಡೆಗಳಾದುವು. ಕ್ರಮೇಣ ಇವು ಸಣ್ಣಗೂ ತಣ್ಣಗೂ ಆಗಲಾರಂಭಿಸಿದುವು. ಇವುಗಳಿಗೆ ಘನರೂಪ ಬಂದದ್ದೂ ಆಗಲೇ. ಸುಮಾರು ನಲವತ್ತು ಅಥವಾ ಐವತ್ತು ಕೋಟಿ ವರ್ಷಗಳ ಹಿಂದೆ ಇವು ಭೂಮಿ, ಮಂಗಳ, ಶುಕ್ರ ಮೊದಲಾದ ಗ್ರಹಗಳಾದುವು. ಭೂಮಿ ಹೇಗೆ ಸೃಷ್ಟಿಯಾಗಿರಬಹುದು ಎಂಬುದಕ್ಕೆ ಇದು ವೈಜ್ಞಾನಿಕ ವಿವರಣೆ.

ಮೊದಲು ಸೂರ್ಯ ಹುಟ್ಟಿದ ; ಅನಂತರ ಗ್ರಹಗಳಾದುವು ಎನ್ನುವ ವಿವರಣೆಗಿಂತ ಸೌರಮಂಡಲ ಏಕಕಾಲದಲ್ಲಾಯಿತು ಎಂಬ ಅಭಿಪ್ರಾಯ ಹಲವರು ವಿಜ್ಞಾನಿಗಳ ಒಪ್ಪಿಗೆ ಪಡೆದಿದೆ.

ಸೂರ್ಯನಿಗೆ ತೀರ ಸಮೀಪದಲ್ಲಿರುವ ಗ್ರಹ ಬುಧ. ಸೂರ್ಯನ ಎರಡನೆಯ ಸುತ್ತಿನಲ್ಲಿರುವ ಗ್ರಹ ಶುಕ್ರ. ಶುಕ್ರ ಗ್ರಹದ ಹೊರಗಿನಿಂದ ಸೂರ್ಯನನ್ನು ಸುತ್ತುತ್ತಿರುವ ಗ್ರಹ ಭೂಮಿ. ಭೂಮಿ ಸ್ಥಿರವಾಗಿದೆ, ಸೂರ್ಯ ಭೂಮಿಯ ಸುತ್ತ ತಿರುಗುತ್ತಾನೆ ಎಂಬ ನಂಬಿಕೆ ಬಹಳ ಕಾಲದವರೆಗೂ ಇತ್ತು. ಸೌರವ್ಯೂಹಕ್ಕೆ ಸೂರ್ಯನೇ ಕೇಂದ್ರ. ಅವನ ಸುತ್ತಲೂ ಬುಧ, ಶುಕ್ರ, ಭೂಮಿ, ಮಂಗಳ, ಗುರು, ಶನಿ ಗ್ರಹಗಳು ಸುತ್ತುತ್ತಿವೆ ಎಂದು ತೋರಿಸಿದವನು ಖಗೋಳಜ್ಞ ಕೊಪರ್ನಿಕಸ್ (1473–1543.)

ಭೂಮಿಯ ಬಗೆಗೆ ವೈಜ್ಞಾನಿಕವಾಗಿ ತಿಳಿದಿರುವಷ್ಟು ಬೇರೆ ಯಾವ ಗ್ರಹದ ಬಗೆಗೂ ಮಾನವನಿಗೆ ಈಗ ತಿಳಿದಿಲ್ಲ.

ಭೂಮಿ ಸೂರ್ಯನಿಂದ ಸುಮಾರು 14.94.76,100 ಕಿ. ಮೀ. ದೂರದಲ್ಲಿದೆ. ಭೂಮಿ ಸೂರ್ಯನ ಸುತ್ತಲೂ ಸಂಪೂರ್ಣವಾಗಿ ಶುದ್ಧ ವೃತ್ತದಲ್ಲಿ ಸುತ್ತದೇ ಇರುವುದರಿಂದ ಸೂರ್ಯ ಭೂಮಿಯಿಂದ ಅತ್ಯಂತ ದೂರವಾದಾಗ 15.20.[illegible] ಕಿ. ಮೀ. ಅಂತರದಲ್ಲೂ ಸಮೀಪ ಬಂದಾಗ 14.72.23.[illegible] ಕಿ. ಮೀ. ಅಂತರದಲ್ಲೂ ಇರುತ್ತಾನೆ. [illegible] ಸೆಕೆಂಡಿಗೆ 2.99.274 ಕಿ. ಮೀ. ಪ್ರಯಾಣಮಾಡುವ ಬೆಳಕಿನ ಕಿರಣ ಸೂರ್ಯನಿಂದ ಭೂಮಿಯನ್ನು ತಲಪಲು ಎಂಟು ನಿಮಿಷ ಹಿಡಿಯುತ್ತದೆ. (ಇನ್ನೊಂದು ರೀತಿಯಲ್ಲಿ ಹೇಳು[illegible]ವುದಾದರೆ, ಸೆಕೆಂಡಿಗೆ 8 ಕಿ. ಮೀ. ಹೋಗುವ ರಾಕೆಟ್ ಇದೆ ಎಂದುಕೊಳ್ಳಿರಿ. ಅದು ಭೂಮಿಯನ್ನು ಬಿಟ್ಟು ಏಳು ತಿಂಗಳಿಗೆ ಸೂರ್ಯನನ್ನು ಸೇರುತ್ತದೆ.) ಭೂಮಿ ಸೂರ್ಯನಿಂದ ಇಷ್ಟು ದೂರದಲ್ಲಿರುವುದರಿಂದ ಇಲ್ಲಿ ಶಾಖ ಹಿತವಾಗಿದ್ದು ಜೀವಿಗಳು ಜೀವಿಸಲು ಸಾಧ್ಯವಾಗಿದೆ.

ಭೂಮಧ್ಯ ರೇಖೆಯಲ್ಲಿ ಭೂಮಿಯ ವ್ಯಾಸ 12.755 ಕಿ. ಮೀ.; ಧ್ರುವಗಳಲ್ಲಿ ವ್ಯಾಸ 12.711 ಕಿ. ಮೀ.; ಧ್ರುವ ಪ್ರದೇಶದಲ್ಲಿ ಸ್ವಲ್ಪ ಚಪ್ಪಟೆಯಾಗಿದ್ದು ಭೂಮಿ ಸಂಪೂರ್ಣ ಗೋಲವೆನಿಸಿಲ್ಲ. ಭೂಮಿಯ ಸುತ್ತಳತೆ 40,225 ಕಿ. ಮೀ. ಗಂಟೆಗೆ 97 ಕಿ. ಮೀ. ಹೋಗುವ ರೈಲು ಎಲ್ಲಿಯೂ ನಿಲ್ಲದೆ ಪ್ರಯಾಣ ಮಾಡಿದರೆ ಭೂಮಿಯನ್ನು ಒಮ್ಮೆ ಸುತ್ತಲು ಸುಮಾರು ಹದಿನೆಂಟು ದಿನಗಳಾಗುತ್ತವೆ. ಭೂಮಿಯ ತೂಕವೂ ಹೆಚ್ಚು. ಭೂಮಿಯ ತೂಕ ಎಂದರೆ ನಮಗೆ ಆಶ್ಚರ್ಯವಾಗಬಹುದು. ಭೂಮಿಯ ತೂಕವನ್ನು ಕಂಡುಹಿಡಿಯುವುದಾದರೂ ಹೇಗೆ ? ಭೂಮಿಯನ್ನು ತಕ್ಕಡಿಯಲ್ಲಿಟ್ಟು ತೂಗಲು ಸಾಧ್ಯವೆ ? ಆದರೆ ವಿಜ್ಞಾನಿಗಳು ಭೂಮಿಯ ತೂಕವನ್ನು ಅಂದಾಜು ಮಾಡಿದ್ದಾರೆ. ಅದು ಹೀಗೆ: ಭೂದ್ರವ್ಯವು ನೀರಿಗಿಂತ ಐದೂವರೆ ಪಾಲಿನಷ್ಟು ಸಾಂದ್ರವಾಗಿರುವುದರಿಂದ ಭೂಮಿಯಷ್ಟೇ ದೊಡ್ಡ ನೀರಿನ ಗೋಲವಿದ್ದರೆ ಅದರ ಐದೂವರೆ ಪಾಲಿನಷ್ಟು ತೂಕ ಭೂಮಿಗೆ ಇರುತ್ತದೆ. ನೆವಿಲ್ ಮೆಸ್ಕಲೀನ್ ಎಂಬುವನು 1775ರಲ್ಲಿ ಮೊದಲ ಬಾರಿಗೆ ಭೂಮಿಯ ತೂಕವನ್ನು ತಿಳಿಯಲು ಪ್ರಯತ್ನಿಸಿದ. ಅನಂತರ ಹಲವಾರು ವಿಜ್ಞಾನಿಗಳು ಭೂಮಿಯ ದ್ರವ್ಯರಾಶಿ ಎಷ್ಟೆಂದು ಕಂಡುಹಿಡಿದು ಅದರ ಸಹಾಯದಿಂದ ಭೂಮಿಯ ತೂಕ $5,976 \times 10^{27}$ ಗ್ರಾಮ್‌ಗಳು ಎಂದು ಅಂದಾಜು ಮಾಡಿದ್ದಾರೆ. ಗುರುತ್ವ ಹೆಚ್ಚಾಗಿರುವುದರಿಂದಲೇ ಭೂಮಿ ವಾಯುಮಂಡಲವನ್ನು ಸೆಳೆದು ಹಿಡಿಯುವುದು ಸಾಧ್ಯವಾಗಿದೆ. ಭೂಮಿಯಲ್ಲಿ ವಾಯು ಮತ್ತು ನೀರು ಧಾರಾಳವಾಗಿರುವುದರಿಂದ ಬದುಕು ಸಾಧ್ಯವಾಗಿದೆ.

ಸೂರ್ಯನನ್ನು ಸುತ್ತಲು ಭೂಮಿಗೆ 365.25 ದಿನಗಳು ಬೇಕು.

ಭೂಮಿ ಸೂರ್ಯನ ಸುತ್ತಲೂ ಸುತ್ತುವುದಲ್ಲದೆ ತನ್ನ ಅಕ್ಷದ ಸುತ್ತ ತಾನೇ 24 ಘಂಟೆಗಳಿಗೊಂದು ಸಲ ತಿರುಗುತ್ತದೆ. ಭೂಮಿಯ ಅಕ್ಷ ತನ್ನ ವೃತ್ತ ಪಥಕ್ಕೆ $23\frac{1}{2}°$ ವಾಲಿದೆ. ಹೀಗೆ ವಾಲಿರುವುದರಿಂದ ಸೂರ್ಯನ ಸುತ್ತಲೂ ಚಲಿಸುವಾಗ ಸೂರ್ಯನಿಂದ ಬರುವ ಶಾಖದಲ್ಲಿ ವ್ಯತ್ಯಾಸಗಳು ಉಂಟಾಗುತ್ತವೆ. ಹವಾಗುಣದಲ್ಲಿ ಬದಲಾವಣೆಗಳಾಗುವುದಕ್ಕೂ ಋತು ಬದಲಾವಣೆಗಳಿಗೂ ಇದು ಕಾರಣ.

ಭೂಮಿ ಸೂರ್ಯನ ಸುತ್ತಲೂ ಸುತ್ತುವಾಗ ಸೆಕೆಂಡಿಗೆ 28 ಕಿ. ಮೀ. ವೇಗವಿರುತ್ತದೆ. ಅದೇ ಸಮಯಕ್ಕೆ ತನ್ನ ಅಕ್ಷದಲ್ಲಿ ಭೂಮಿ 24 ಘಂಟೆಗಳಿಗೊಮ್ಮೆ ಸುತ್ತುತ್ತಿರುವುದರಿಂದಲೇ ಭೂಮಧ್ಯರೇಖೆಯಲ್ಲಿರುವ ವಸ್ತು ಗಂಟೆಗೆ ಸುಮಾರು 1,609 ಕಿ. ಮೀ. ವೇಗದಲ್ಲಿ ತಿರುಗುತ್ತಿರುತ್ತದೆ.

ಭೂಮಿಯ ಹೊರಮೈ ತೊಗಟೆ ಗಟ್ಟಿಯಾಗಿದ್ದು ಇದರ ಮೇಲೆ ಉನ್ನತ ಪರ್ವತಗಳೂ ಆಳವಾದ ಸಾಗರಗಳೂ ಇವೆ. ಸಾಗರಗಳ ಕೆಳಗೂ ಗಟ್ಟಿ ಭೂಮಿಯೇ ಇದೆ. ಭೂಮಿಯ ಹೊರತೊಗಟೆ 16.1 ರಿಂದ [illegible].3 ಕಿ. ಮೀ. ಗಳಷ್ಟು ದಪ್ಪನಾಗಿದೆ. ಇದರ ಕೆಳಗೆ ಸುಮಾರು 2,896 ಕಿ.ಮೀ. ಗಳಷ್ಟು ದಪ್ಪನಾದ ಕವಚ ಇದೆ. ಇದು ಭೂಮಿಯ ಒಳಗಿರುವ ಶಾಖಕ್ಕೆ [illegible] ಕರಗಿ [illegible]. ಭೂಮಿಯ [illegible] ಈ ಕೇಂದ್ರದ ವ್ಯಾಸ 6.951 ಕಿ.ಮೀ. ಇದು ನಿಕ್ಕಲ್ ಮತ್ತು ಕಬ್ಬಿಣಗಳಂಥ ಭಾರದ ವಸ್ತುಗಳಿಂದ ಆಗಿದೆ. ಭೂಮಿಯ ಹೊರಮೈ ದ್ರವ

ರೂಪದಲ್ಲಿದ್ದು ಒಳಭಾಗ ಗಟ್ಟಿಯಾಗಿದೆ. ಈ ತಿರುಳಿನ ಮಧ್ಯದಲ್ಲಿ ಶಾಖ 8,000° ಫಾ. ಸೂರ್ಯನ ಹೊರಾವರಣದ ಶಾಖಕ್ಕಿಂತ ಇದು ಅಷ್ಟೇನೂ ಕಡಮೆಯಲ್ಲ. ಭೂಮಿಯ ಹೊರ ತೊಗಟೆಯಿಂದ ಒಳಗಿನ ತಿರುಳಿನ ಮಧ್ಯಭಾಗಕ್ಕೆ ಇರುವ ದೂರ 6,372 ಕಿ. ಮೀ.

ಭೂಮಿ ದೊಡ್ಡ ಅಯಸ್ಕಾಂತದಂತೆ ವರ್ತಿಸುತ್ತದೆ. ಎಲ್ಲ ಕಾಂತ ಸೂಜಿಗಳೂ ಭೂಮಿಯ ಮೇಲೆ ಎಲ್ಲಿದ್ದರೂ ಸುಮಾರು ಉತ್ತರ-ದಕ್ಷಿಣ ದಿಕ್ಕುಗಳನ್ನು ಸೂಚಿಸಿ ನಿಲ್ಲುತ್ತವೆ.

ಭೂಮಿ ಎಲ್ಲ ವಸ್ತುಗಳನ್ನೂ ತನ್ನ ಕಡೆಗೆ ಸೆಳೆಯುತ್ತದೆ. ಇದಕ್ಕೆ ಗುರುತ್ವಾಕರ್ಷಣ ಶಕ್ತಿ ಎಂದು ಹೆಸರು.

ಭೂಮಿಯ ತೊಗಟೆಯ ಮೇಲೆ ನೀರಿನ ಭಾಗವೇ ಅಧಿಕ. ನೆಲದ ಭಾಗ ಕಡಮೆ. ಭೂ ಖಂಡಗಳ ವಿಸ್ತಾರ 14,84,07,000 ಚದರ ಕಿ. ಮೀ.; ಆದರೆ ಸಾಗರಗಳು 36,18,23,000 ಚ. ಕಿ. ಮೀ. ವಿಶಾಲವಾಗಿವೆ.

ಭೂಮಿಯ ಹೊರಮೈ ಒಂದೇ ರೀತಿಯಾಗಿ ಉಳಿದಿಲ್ಲ. ಭೂಮಿಯ ಒಳಗೆ ಆಗುವ ಚಟುವಟಿಕೆಗಳಿಂದ, ಮಳೆ, ಬಿಸಿಲು, ಗಾಳಿಗಳಿಂದ ಭೂಮಿಯ ಸ್ವರೂಪದಲ್ಲಿ ವ್ಯತ್ಯಾಸಗಳಾಗುತ್ತಲೇ ಇವೆ.

ಭೂಮಿಯ ಹೊರಮೈಯಲ್ಲಿ ವಿಸ್ತರಿಸಿರುವ ವಸ್ತು ಮಣ್ಣು. ಭೂಮಿಯ ಹೊರತೊಗಟೆ ಹುಟ್ಟಿದಾಗ ಈ ಮಣ್ಣು ಇರಲಿಲ್ಲ ಎಂದು ತೋರುತ್ತದೆ. ಆದರೆ ಆಗ ಇದ್ದ ಶಿಲೆಗಳು ಗಾಳಿ ಮಳೆ ಬಿಸಿಲುಗಳಿಗೆ ಸಿಕ್ಕಿ ಪುಡಿಯಾಗಿ 'ಮಣ್ಣು' ಆಗಿರಬೇಕು. ಮಣ್ಣು ಬಹಳ ಆಳವಾಗಿಲ್ಲ. ಅದರ ಕೆಳಗೆ ಗಟ್ಟಿ ಶಿಲೆಯಿದೆ.

**ಭೂಮಿ**

| | | |
|---|---|---|
| ಸುತ್ತಳತೆ | : | 40,225 ಕಿ. ಮೀ. (ಭೂಮಧ್ಯ ರೇಖೆ ಪ್ರದೇಶ) |
| ತೂಕ | : | $5,976 \times 10^{27}$ ಗ್ರಾಮ್‌ಗಳು |
| ಸೂರ್ಯನಿಂದ ಇರುವ ದೂರ | : | 14,94,76,100 ಕಿ. ಮೀ. (ಸುಮಾರು) |
| ಸೂರ್ಯನ ಸುತ್ತ ಸುತ್ತು ಬರುವ ಕಾಲ | : | 365.25 ದಿನಗಳು |
| ತನ್ನ ಸುತ್ತ ಸುತ್ತುವ ಕಾಲ | : | 23 ಗಂಟೆ 56 ಮಿನಿಟು 4.09 ಸೆಕೆಂಡುಗಳು |
| ವಿಸ್ತೀರ್ಣ | : | 51,02,30,000 ಚ. ಕಿ. ಮೀ. |
| ಭೂ ಪ್ರದೇಶ | : | 14,84,07,000 ಚ. ಕಿ. ಮೀ. ಭೂಮಿಯ ಶೇಕಡಾ 29 ಭಾಗ. |
| ಅತ್ಯಂತ ಎತ್ತರದ ಬಿಂದು | : | 8,854 ಮೀ. ಗಳು (ಎವರೆಸ್ಟ್ ಶಿಖರ) |
| ಅತ್ಯಂತ ಕೆಳ ಬಿಂದು | : | 10,919 ಮೀ. ಗಳು (ಛಾಲೆಂಜರ್ ಡೀಪ್) |
| ಭೂ ಭಾಗದಲ್ಲಿ ಅತ್ಯಂತ ತಗ್ಗಿನ ಬಿಂದು | : | 397 ಮೀ. (ಮೃತ ಸಮುದ್ರ) |
| ಭೂಮಿಯ ಪ್ರಾಯ | : | 45 ಕೋಟಿ ವರ್ಷಗಳು |

ಭೂಮಿಯ ತೊಗಟೆ ಶಿಲಾದ್ರವದಿಂದ ಆದ ವಸ್ತು. ಆಮ್ಲಜನಕ, ಸಿಲಿಕಾನ್, ಅಲ್ಯೂಮಿನಿಯಂ, ಕಬ್ಬಿಣ, ಕ್ಯಾಲ್ಸಿಯಂ, ಸೋಡಿಯಂ, ಪೊಟಾಸಿಯಂ, ಮೆಗ್ನೀಸಿಯಂ, ಟೈಟೇನಿಯಂ, ಜಲಜನಕ ಈ ಹತ್ತು ಧಾತುಗಳೇ ತೊಗಟೆಯ 99 ಭಾಗ.

ಭೂಮಿಯಲ್ಲಿ ಮೊದಲು ಜೀವಿಗಳು ಕಾಣಿಸಿದ್ದು ಸಾಗರಗಳಲ್ಲಿ.

ನೋಡಿ : ಗಣಿ ; ಜ್ವಾಲಾಮುಖಿ ; ದ್ವೀಪ ; ಧ್ರುವ, ಧ್ರುವಪ್ರದೇಶಗಳು ; ಪರ್ವತಗಳು ; ಪಳೆಯುಳಿಕೆಮಾನವ ; ಪ್ರಸ್ಥಭೂಮಿ ; ಬಯಲುಭೂಮಿ ; ಭೂಖಂಡ ; ಭೂಗೋಳ ; ಮರುಭೂಮಿ ; ಮಾನವ ; ವಲಯುಗಳು ; ವಿಜ್ಞಾನ ; ಸಮುದ್ರ, ಸರೋವರ ; ಸಾಗರ ; ಹವಾಗುಣ ; ಹಿಮಪಾತ.

ವಿವರ : ಮೂರನೆಯ ಸಂಪುಟ

## ಭೂಸೈನ್ಯ

ಮನುಷ್ಯರು ಗುಂಪಾಗಿ ವಾಸಮಾಡಲು ತೊಡಗಿದಂದೇ ಗುಂಪಾಗಿ ಹೋರಾಡುವುದು ಪ್ರಾರಂಭವಾಯಿತು. ಗುಂಪಿಗೊಬ್ಬ ಮುಖಂಡನಾದ. ಮೊದಲು ಕಲ್ಲು, ಕೋಲುಗಳು ಇವರ ಆಯುಧ. ಅನಂತರ ಕವಣೆ ಬಿಲ್ಲು, ಕತ್ತಿ, ಈಟಿ ಇಂಥ ಸಾಧನಗಳು ಬಂದುವು. ಬಹು ಕಾಲ ಎಲ್ಲ ಗಂಡಸರೂ ಯಾವಾಗ ಅಗತ್ಯವಾದರೂ ಯುದ್ಧಮಾಡಲು ಸಿದ್ಧರಾಗಿರ ಬೇಕಾಗಿತ್ತು. ವ್ಯವಸಾಯ ತಿಳಿದನಂತರ, ಕೆಲವರು ಆಹಾರಕ್ಕಾಗಿ ದುಡಿಯ ದಿದ್ದರೂ ಉಳಿದವರು ಎಲ್ಲರಿಗೆ ಬೇಕಾದಷ್ಟು ಆಹಾರವನ್ನು ಒದಗಿಸಲು ಸಾಧ್ಯವಾಯಿತು. ಹೀಗೆ ಆಹಾರದ ಉತ್ಪಾದನೆಯಿಂದ ಬಿಡುಗಡೆಯಾದವರಲ್ಲಿ ಕೆಲವರು ವೃತ್ತಿಯಿಂದ ಸೈನಿಕರಾದರು, ಭೂಸೈನ್ಯ ಉದಿಸಿತು. ಆದರೂ ಮಧ್ಯಯುಗದವರೆಗೆ ದೃಢಕಾಯರಾದ ಗಂಡಸರೆಲ್ಲ ಅಗತ್ಯವಾದಾಗ ತಮ್ಮ ಪ್ರಭುವಿಗಾಗಿ ಹೋರಾಡಲು ಸಿದ್ಧರಾಗಿರಬೇಕಾಗಿತ್ತು.

ಮನುಷ್ಯ ಪ್ರಾಣಿಗಳನ್ನು ಪಳಗಿಸಲು ಕಲಿತಮೇಲೆ ಕುದುರೆಗಳನ್ನು ಯುದ್ಧಕ್ಕೆ ಬಳಸಲು ಪ್ರಾರಂಭಿಸಿದ. ಕೆಲವು ದೇಶಗಳಲ್ಲಿ ಆನೆಗಳೂ ಸೈನ್ಯದ ಭಾಗವಾದುವು. ಅಲೆಗ್ಸಾಂಡರನನ್ನು ಉತ್ತರ ಭಾರತದಲ್ಲಿ ಎದುರಿಸಿದ ಪೋರಸನ ಸೈನ್ಯದಲ್ಲಿ ಇನ್ನೂರು ಆನೆಗಳಿದ್ದುವು. ಮೊದಲು ಗ್ರೀಕರು ಆನೆಗಳನ್ನು ನೋಡಿ ಬೆದರಿದರಂತೆ. ಚಕ್ರದ ಉಪಯೋಗ ತಿಳಿದ ಮನುಷ್ಯ ರಥಗಳನ್ನು ರಣರಂಗದಲ್ಲಿ ಉಪಯೋಗಿಸಿದ. ಅಸಾಧಾರಣ ವೀರ ಸೀಸರನ ಸುಶಿಕ್ಷಿತ ಸೈನ್ಯ ಸಹ ಕ್ರಿ. ಪೂ. ಒಂದನೆಯ ಶತಮಾನದಲ್ಲಿ (ಈಗಿನ) ಬ್ರಿಟನಿಗೆ ದಾಳಿ ಇಟ್ಟಾಗ, ಅಲ್ಲಿಯವರ ರಥಗಳಿಂದ ಕಂಗೆಟ್ಟಿತು.

ಮೊದಮೊದಲು ಸೈನಿಕರ ಧೈರ್ಯ, ಶಕ್ತಿ, ಅವರ ಆಯುಧಗಳು, ಸೈನ್ಯವನ್ನು ನಿಲ್ಲಿಸುವ ರೀತಿ—ಇವು ವಿಜಯವನ್ನು ನಿರ್ಧರಿಸುತ್ತಿದ್ದುವು. ಆದರೆ ಸಿಡಿಮದ್ದು ಬಂದನಂತರ ಇದು ಬದಲಾಯಿತು. ವಿಮಾನಗಳ ಬಳಕೆಯಂತೂ ಪರಿಸ್ಥಿತಿಯನ್ನು ಪೂರ್ಣವಾಗಿ ಮಾರ್ಪಡಿಸಿತು. ಈಗಿನ ಸೇನೆ ಬಹಳ ಜಟಿಲ ವ್ಯವಸ್ಥೆಯುಳ್ಳದ್ದು. ಇದಕ್ಕೆ ವೈಜ್ಞಾನಿಕ ನೆರವು ಬಹು ಅಗತ್ಯ. ಹೊಸ ಹೊಸ ಯಂತ್ರಗಳು, ಸಾಧನಗಳು ಇವೆಲ್ಲ ಬಳಕೆಗೆ ಬಂದಿವೆ. ಬಲಿಷ್ಠ ರಾಷ್ಟ್ರಗಳು ಪರಮಾಣುಅಸ್ತ್ರಗಳನ್ನು ಹಿಡಿದು ಹೆದರಿಸುತ್ತವೆ. ಇವುಗಳಿಂದಾಗುವ ನಷ್ಟ ಅಪಾರ.

ಪ್ರಾಚೀನ ಭಾರತದಲ್ಲಿ ಸೇನೆಯ ಯೋಧರಲ್ಲಿ ಆನುವಂಶಿಕರು, ವ್ಯಾಪಾರಿಗಳಿಂದ ಸಾಲವಾಗಿ ಬಂದ ಯೋಧರು, ಕಾಡುಜನರ ಸೈನಿಕರು, ಸಾಮಂತ

ರಾಜನಿಂದ ಬಳಸಲ್ಪಟ್ಟ ಯೋಧರು, ಕತ್ತು ಹಿಡಿಯುವ ತೆಗೆದು ಹಾಕಲ್ಪಟ್ಟವರು, ಮತ್ತು ಹೊರಕಕ್ಷೆಯಿಂದ ಬಳಸಿದವರು ಎಂದು ಆರು ವಿಧಗಳನ್ನು ಗುರುತಿಸಲಾಗಿದೆ. ಕ್ಷತ್ರಿಯರೇ ಅಜನ್ಮ ಯೋಧರಾಗಿದ್ದರೂ ಬಿಕ್ಕಿಳ್ಳ ವರ್ಣದವರು ಯುದ್ಧದಲ್ಲಿ ಪಾಲುಗೊಳ್ಳುತ್ತಿದ್ದರು. ಆಗಿನ ಭಾರತೀಯ ಸೈನ್ಯ ಗಜಾರೋಹಿಗಳ, ಅಶ್ವಾರೋಹಿಗಳ, ರಥಾರೂಢರ ಮತ್ತು ಪದಾತಿಗಳ ಸಮೂಹ. ಆನೆಗಳು ವೈರಿಗಳ ಮೇಲೇರಿ ಹೋಗಿ ಭೀತಿ ಹುಟ್ಟಿಸುತ್ತಿದ್ದುವು. ಪದಾತಿ ಸೈನ್ಯ ಅಥವಾ ಕಾಲಾಳು ಬಲವೇ ಸೈನ್ಯದ ಬೆನ್ನುಮೂಳೆ. ರಾಜನಿಗಿದ್ದ ಅಂಗರಕ್ಷಕರ ಪಡೆಗೆ ವಿಶೇಷ ಗೌರವಗಳಿದ್ದುವು. ಸೈನ್ಯದಲ್ಲಿ ವೈದ್ಯಕೀಯ ನೆರವು ಯಾವಾಗಲೂ ಸಿದ್ಧವಾಗಿರುತ್ತಿದ್ದಿತು. ಪತ್ತಿ ಎಂಬುದು ಸೇನೆಯ ಅತ್ಯಂತ ಸಣ್ಣ ತುಕಡಿ. ಒಬ್ಬ ಗಜಾರೋಹಿ, ಒಬ್ಬ ರಥಾರೋಹಿ, ಮೂವರು ಅಶ್ವಾರೋಹಿಗಳು, ಐವರು ಕಾಲಾಳುಗಳು ಸೇರಿ ಒಂದು ಪತ್ತಿ. ಇಂಥ ಮೂರು ಒಂದು ಸೇನಾಮುಖ. ಈ ಮೂರು ಒಂದು ಗುಲ್ಮವೆನಿಸಿ, ಹೀಗೆಯೇ ಬೆಳೆದು ಒಂದು ಅಕ್ಷೋಹಿಣಿ ಸೈನ್ಯವಾಗುತ್ತಿದ್ದಿತು. 21,870 ಪತ್ತಿಗಳಿಗೆ ಒಂದು ಅಕ್ಷೋಹಿಣಿ. ಮಧ್ಯಯುಗದ ವೇಳೆಗೆ ಭಾರತೀಯ ಸೇನೆ ಸಾಕಷ್ಟು ದೊಡ್ಡದಾಗಿರುತ್ತಿದ್ದಿತು. ಸೈನ್ಯವನ್ನು ರಚಿಸುವ ರೀತಿ–ವ್ಯೂಹ–ನಾಯಕನ ಕೌಶಲವನ್ನು ಅವಲಂಬಿಸಿತ್ತು. ಮಹಾಭಾರತದಲ್ಲಿನ ಚಕ್ರವ್ಯೂಹ ಪ್ರಸಿದ್ಧ. ಒಂದು ರಾಜ್ಯದಲ್ಲಿ ಸಾವಿರಾರು ಅಶ್ವಾರೋಹಿಗಳು, ರಥಾರೋಹಿಗಳು, ಲಕ್ಷಗಟ್ಟಲೆ ಪದಾತಿಗಳೂ ಇರುತ್ತಿದ್ದರು. ಮಹಾಸೇನಾಪತಿ, ಸೇನಾಪತಿ ಇವು ಸೈನ್ಯದ ಅತ್ಯುನ್ನತ ಪದವಿಗಳಿಗೆ ಇರುತ್ತಿದ್ದ ಹೆಸರುಗಳು. ಇವರು ರಾಜನ ಆದೇಶವನ್ನು ಪಾಲಿಸುವವರು. ಇವರ ಕೆಳಗೆ ನಾಯಕ, ದಂಡನಾಯಕ ಎಂಬ ದರ್ಜೆಯವರಿರುತ್ತಿದ್ದರು. ಬಿಲ್ಲು ಬಾಣ, ಬೆಂಕಿ ಬಾಣಗಳು, ವಿಷಪೂರಿತ ಬಾಣಗಳು, ಸಾಧಾರಣ ಬಾಣಗಳು, ಕತ್ತಿ, ಈಟಿ, ಭರ್ಜಿ ಇವೆಲ್ಲ ಆಯುಧಗಳು ಬಳಕೆಯಲ್ಲಿದ್ದುವು. ಸೈನಿಕರಿಗೆ ಕವಚ ರೂಢಿಗೆ ಬಂದುದು ಹೊರದೇಶದಿಂದ ಬಂದ ಆಕ್ರಮಣಕಾರರ ಅನುಕರಣೆಯಿಂದ. ಅಂದರೆ ಮಧ್ಯಯುಗದ ಕಾಲದಲ್ಲಿ ಇದು ಬೆಳೆಯಿತು.

ಪ್ರಾಚೀನ ಈಜಿಪ್ಟ್ ತನ್ನ ಸೈನ್ಯಕ್ಕೆ ಹೆಸರಾಗಿದ್ದಿತು. ಸುಮಾರು ಕ್ರಿ.ಪೂ. 1300ರಲ್ಲಿ ಅಲ್ಲಿನ ದೊರೆಗೆ ಹತ್ತುಲಕ್ಷಕ್ಕೂ ಮೀರಿದ ಸೈನ್ಯವಿದ್ದಿತು. ಹೀಗೆಯೇ ಪರ್ಷಿಯನರು ಸೈನ್ಯ ಸಂಗ್ರಹಣೆಗೆ ಹೆಸರಾಗಿದ್ದರು. ಪುರಾತನ ಗ್ರೀಕ್ ಸೈನ್ಯದಲ್ಲಿ ಪದಾತಿ ಹಾಗೂ ಅಶ್ವಾರೋಹಿಗಳೆಂಬ ಎರಡು ವಿಭಾಗಗಳಿದ್ದುವು. ನಾಡಿನ ಪ್ರತಿಯೊಬ್ಬ ಪ್ರಜೆಯೂ ಸೈನಿಕ ತರಬೇತಿ ಪಡೆಯಬೇಕಾದ ನಿರ್ಬಂಧವಿದ್ದಿತು. ಆಗಿನ ಗ್ರೀಕರು ಅವರ ಅಭೇದ್ಯ ವ್ಯೂಹರಚನೆಗೆ ಪ್ರಸಿದ್ಧರು. ಅಲೆಗ್ಸಾಂಡರನ ತಂದೆ ಫಿಲಿಪ್ 'ಫಲಾಂಕ್ಸ್' ಸೈನ್ಯ ರಚನೆಯ ವಿಧಾನ ಪ್ರಾರಂಭಿಸಿದವನು : ಇಪ್ಪತ್ತೊಂದು ಅಡಿಗಳ (6.4 ಮೀಟರುಗಳ) ಉದ್ದದ ಈಟಿಯನ್ನು ಹಿಡಿದ ಯೋಧರ ಹದಿನಾರುಸಾಲು 'ಫಲಾಂಕ್ಸ್'. ಸಾಲು ಸಾಲಿನ ಮಧ್ಯೆ ಮೂರು ಅಡಿ (0.9 ಮೀಟರು). ಇದರಿಂದ ಮೊದಲ ಐದು ಪಂಗ್ತಿಯ ಯೋಧರ ಈಟಿಗಳು 'ಫಲಾಂಕ್ಸ್'ನಾಚೆ ಚಾಚಿಕೊಂಡಿದ್ದು ರಕ್ಷಣೆ ಒದಗಿಸುತ್ತಿದ್ದುವು. ಈ ಹೊಸ ರಚನೆ ಅವನಿಗೆ ಅನೇಕ ವಿಜಯಗಳನ್ನು ತಂದಿತು. ಈ ಎಲ್ಲ ಸೈನ್ಯಗಳಿಗಿಂತಲೂ ಹೆಚ್ಚು ಸುವ್ಯವಸ್ಥಿತವೆಂದು ಪ್ರಾಚೀನ ರೋಮನ್ ಸೈನ್ಯ ಕೀರ್ತಿಪಡೆದಿತ್ತು. ಜೂಲಿಯಸ್ ಸೀಸರನ ಪಡೆಗೆ ಸೋಲೆಂಬುದೇ ಇಲ್ಲವೆನ್ನುವಂತಿತ್ತು. ಯೂರೋಪಿನ ಮಧ್ಯಯುಗದಲ್ಲಿ ಊಳಿಗಮಾನ್ಯ ಪದ್ಧತಿ ಪ್ರಧಾನವಾಗಿದ್ದು, ಒಗ್ಗಟ್ಟು, ಅಪಾರ ಸೇನೆಗಳ ವ್ಯವಸ್ಥೆ ಸಾಧ್ಯವಾಗಲಿಲ್ಲ. ಹದಿನೆಂಟನೆಯ ಶತಮಾನದಲ್ಲಿ ಜರಗಿದ ಫ್ರಾನ್ಸಿನ ಮಹಾಕ್ರಾಂತಿಯಿಂದಾಗಿ ಸೇನೆಯ ಸ್ವರೂಪ ಬದಲಾಯಿತು. ಆಧುನಿಕ ಸೈನ್ಯ ಪದ್ಧತಿ ಆರಂಭವಾಯಿತು.

ಭಾರತದ ಭೂಸೈನ್ಯದ ವೀರ ಜವಾನರು — ದೇಶಕ್ಕಾಗಿ ಶ್ರಮ



ಹಿಮಾಲಯ ಗಡಿಯನ್ನು ಕಾಯುವ ಭಾರತದ ಸೈನ್ಯ ಸಾವಿರಾರು ಮೀಟರುಗಳ ಎತ್ತರದಲ್ಲಿ ಹೋರಾಡಲು ಶಿಕ್ಷಣ ಪಡೆದಿದೆ.

ಭಾರತದ ಈಗಿನ ಭೂಸೈನ್ಯದ ಮುಖ್ಯ ಕಚೇರಿ ದೆಹಲಿಯಲ್ಲಿದೆ. ಮುಖ್ಯ ಕಾರ್ಯನಿರ್ವಾಹಕರು ಸೈನ್ಯ ಬಲಾಧಿಪತಿಗಳು. ಇವರಿಗೆ ಸಹಾಯಕರೆಂದರೆ : ಸೈನ್ಯ ಉಪ ಬಲಾಧಿಪತಿಗಳು, ನಾಲ್ಕು ಮುಖ್ಯ ಪ್ರಶಾಸನಾಧಿಕಾರಿಗಳು (ಡೆಪ್ಯೂಟಿ ಬಲಾಧಿಪತಿ, ಮಹಾಸಹಾಯಕ, ಮಹಾಶಿಬಿರ ನಾಯಕ, ಆಯುಧ ಮಹಾಧಿಕಾರಿ). ಇಬ್ಬರು ಶಾಖಾ ಅಧಿಕಾರಿಗಳು (ಚಮೂಪತಿ ಅಂತಸ್ತಿನ ಸೈನಿಕ ಕಾರ್ಯದರ್ಶಿ, ಉಪಸೇನಾಪತಿ ಅಂತಸ್ತಿನ ಶಿಲ್ಪತಜ್ಞರು). ಸೈನ್ಯ ಉಪಬಲಾಧಿಪತಿಯನ್ನುಳಿದು, ಮಿಕ್ಕ ನಾಲ್ಕು ಪ್ರಶಾಸನಾಧಿಕಾರಿಗಳು ಹಾಗೂ ಇಬ್ಬರು ಶಾಖಾಧಿಕಾರಿಗಳು ಆಯಾ ಹೆಸರಿನ ಶಾಖೆಯ ಕಾರ್ಯನಿಯಂತ್ರಣ ಮಾಡುತ್ತಾರೆ.

ಸೇನೆಯ ರಚನೆ : 1 ಕವಚಯುಕ್ತ ದಳ ; 2 ಫಿರಂಗಿದಳ ; 3 ಶಿಲ್ಪಿಗಳ ದಳ ; 4 ಸಂಕೇತಗಳ ದಳ ; 5 ಪದಾತಿ ದಳ ; 6 ಸೇನಾ ಸಹಾಯಕ ದಳ ; 7 ಆಯುಧ ದಳ ; 8 ವಿದ್ಯುತ್ ಹಾಗೂ ಯಂತ್ರಶಿಲ್ಪಿಗಳ ದಳ ; 9 ಸೇನಾ ವೈದ್ಯಕೀಯ ದಳ ; 10 ಸೇನಾ ದಂತವೈದ್ಯ ದಳ ; 11 ಸೇನಾ ಶಿಕ್ಷಣ ದಳ ; 12 ಪ್ರತ್ಯಕ್ಷ, ಪಶುವೈದ್ಯ ಹಾಗೂ ಕೃಷಿಕ್ಷೇತ್ರದಳ ; 13 ಸೈನ್ಯ ಪೊಲೀಸ್ ; 14 ಛತ್ರಿದಳ.

ಭಾರತೀಯ ಸೇನೆಯನ್ನು ನಾಲ್ಕು ಸಮಾದೇಶ ವಿಭಾಗಗಳಾಗಿ ರೂಪಿಸಲಾಗಿದೆ. ಪೂರ್ವ, ಕೇಂದ್ರ, ಪಶ್ಚಿಮ ಹಾಗೂ ದಕ್ಷಿಣ ಸಮಾದೇಶಗಳು. ಇವುಗಳನ್ನು ಕ್ಷೇತ್ರಗಳಾಗಿ, ಉಪಕ್ಷೇತ್ರಗಳಾಗಿ ಮತ್ತು ಜಿಲ್ಲಾ ಭಾಗಗಳಾಗಿ ವಿಭಾಗಿಸಲಾಗಿದೆ.

ಸೇನೆಯ ಪದವಿಗಳು : ಆಯುಕ್ತಾಧಿಕಾರಿಗಳು–ಮಹಾಸೇನಾನಿ, ಮಹಾಸೇನಾಧಿಪತಿ, ಚಮೂಪತಿ, ವಾಹಿನೀಪತಿ, ಮಹಾಬಲಾಧಿಪತಿ, ಉಪಸೇನಾಧಿಪತಿ ಮತ್ತು ಎರಡನೆಯ ಉಪಸೇನಾಧಿಪತಿ.

ಕೂವಂ ನದಿ ಮದರಾಸು ನಗರದ ಮಧ್ಯಭಾಗದಲ್ಲಿ ಹಾದು ಹೋಗುತ್ತದೆ. ದಕ್ಷಿಣಕ್ಕೆ ಅಡೆಯಾರ್ ನದಿ ಹರಿಯುತ್ತದೆ. ಬಕಿಂಗಂ ಕಾಲುವೆ ಇವೆರಡನ್ನೂ ಕೂಡಿಸುತ್ತದೆ.

ಮದರಾಸು ಕೃತಕ ಬಂದರು. ಇದು 1862–1876 ಅವಧಿಯಲ್ಲಿ ನಿರ್ಮಾಣಗೊಂಡಿತು. ಐದು ವರ್ಷಗಳ ಅನಂತರ ಸುಂಟರಗಾಳಿಗೆ ಸಿಲುಕಿ ಬಹು ಭಾಗ ನಾಶವಾಯಿತು. ಅದನ್ನು ಪುನಃ ಕಟ್ಟಿದರು.

ಮದರಾಸು ದೊಡ್ಡ ರೈಲುನಿಲ್ದಾಣ ಕೂಡ. ಭಾರತದ ಪ್ರಮುಖ ರೈಲುಮಾರ್ಗಗಳು ಇಲ್ಲಿ ಸಂಧಿಸುತ್ತವೆ. ಕಬ್ಬಿಣ, ಸಿಮೆಂಟ್, ಬಟ್ಟೆ ಇವುಗಳ ಕಾರಖಾನೆಗಳಿವೆ. ಚರ್ಮದ ಬಣ್ಣದ ಉದ್ಯಮವೂ ಅಭಿವೃದ್ಧಿಗೊಳ್ಳುತ್ತಿದೆ.

ಮದರಾಸು ಶಿಕ್ಷಣ, ಸಂಸ್ಕೃತಿ ಮತ್ತು ಕೈಗಾರಿಕೆಗಳ ಕೇಂದ್ರ. 1857ರಲ್ಲಿ ಮುಂಬಯಿ ಮತ್ತು ಕಲ್ಕತ್ತ ವಿಶ್ವವಿದ್ಯಾನಿಲಯಗಳು ಸ್ಥಾಪಿತವಾದಾಗಲೇ ಮದರಾಸು ವಿಶ್ವವಿದ್ಯಾನಿಲಯ ಸ್ಥಾಪಿತವಾಯಿತು. ಭಾರತದ ಮೊಟ್ಟಮೊದಲ ವಿಶ್ವವಿದ್ಯಾನಿಲಯಗಳಲ್ಲಿ ಇದು ಒಂದು. ಮದರಾಸು ವಸ್ತುಸಂಗ್ರಹಾಲಯ ಮತ್ತು ಸಾರ್ವಜನಿಕ ಗ್ರಂಥಭಂಡಾರ ನೋಡಬೇಕಾದಂಥವು. 1889ರಲ್ಲಿ ಕಡಲದಂಡೆಯಲ್ಲಿ ಸ್ಥಾಪಿತವಾದ ದೀಪಗೋಪುರ 49 ಮೀಟರು ಎತ್ತರವಿದೆ. ರೈಲು ಇಂಟೆಗ್ರಲ್ ಕೋಚ್ ಫ್ಯಾಕ್ಟರಿ ಇಲ್ಲಿದೆ. ಬಟ್ಟೆ, ಬೈಸಿಕಲ್‌ಗಳು, ಚಲನಚಿತ್ರಗಳು ಇವುಗಳ ತಯಾರಿಕೆಯ ಕೇಂದ್ರ ಈ ನಗರ. ವೃತ್ತಪತ್ರಿಕೆಗಳ ಪ್ರಕಟಣೆಯಲ್ಲಿಯೂ ಇದು ಭಾರತದಲ್ಲಿ ಹೆಸರಾಗಿದೆ.

ವಿವರ : ಏಳನೆಯ ಸಂಪುಟ

## ಮಧ್ಯ ಅಮೆರಿಕ



ಉತ್ತರ ಮತ್ತು ದಕ್ಷಿಣ ಅಮೆರಿಕಗಳನ್ನು ಜೋಡಿಸುವ ಮಧ್ಯ ಅಮೆರಿಕ ತನ್ನ ಸ್ಥಾನಬಲದಿಂದ ಮಹತ್ವದ ಭೂಭಾಗವಾಗಿದೆ. ಈ ಪ್ರದೇಶದ ತುಂಬ ಪರ್ವತಗಳು. ಕೆಲವಂತೂ ಅಗ್ನಿಪರ್ವತಗಳಿರುವ ಶಿಖರಗಳು; ಇಳಿಜಾರು ಪ್ರದೇಶಗಳಲ್ಲಿ ಅಗ್ನಿಪರ್ವತದ ಬೂದಿ ಬಿದ್ದು ನೆಲ ಫಲವತ್ತು.

ಗ್ವಾಟೆಮಾಲ, ಸಾಲ್ವಡೊರ್, ಹೊಂಡುರಾಸ್, ನಿಕರಾಗುವಾ, ಕೋಸ್ಟರಿಕ ಮತ್ತು ಪನಾಮಾ ಹೀಗೆ ಆರು ಸ್ವತಂತ್ರ ಗಣರಾಜ್ಯಗಳು ಮಧ್ಯ ಅಮೆರಿಕದಲ್ಲಿವೆ. ಉಸುಮಸಿಂಟ್ ಮುಖ್ಯ ನದಿ; ಉದ್ದ ಸುಮಾರು 965 ಕಿಲೊಮೀಟರು. ಶಾಂತಸಾಗರದ ಕಡೆ ಭೂಮಿ ಎತ್ತರವಾಗಿರುವುದರಿಂದ ಅಟ್ಲಾಂಟಿಕ್ ಸಾಗರದ ಕಡೆಗಿಂತ ನದಿಗಳ ಉದ್ದ ಕಡಮೆ. ಜಗತ್ಪ್ರಸಿದ್ಧ ಪನಾಮಾ ಕಾಲುವೆ ಇದೇ ಪ್ರದೇಶದಲ್ಲಿದೆ.

ಎತ್ತರ ಪ್ರದೇಶಗಳಲ್ಲಿ ಹವೆ ತಂಪು. ಕ್ಯಾರಿಬಿಯನ್ ಸಮುದ್ರದ ತೀರದಲ್ಲಿ ವಿಪರೀತ ಸೆಕೆ. ಪ್ರತಿ ದಿನವೂ ಮಳೆ ಬೀಳುತ್ತದೆ. ಉಷ್ಣವಲಯದ ಕಾಡುಗಳಲ್ಲಿ ರಬ್ಬರ್ ಮತ್ತು ಮಹಗನಿ ಮರಗಳು ಹೇರಳವಾಗಿವೆ. ಅಪಾರ ತೈಲ ಸಂಪತ್ತಿದೆ.

ಜನರು ಹೆಚ್ಚಾಗಿ ಐರೋಪ್ಯರು. ಕೆಲವು ನಗರಗಳಲ್ಲಿ ರೆಡ್ ಇಂಡಿಯನ್ನರನ್ನು ಕಾಣಬಹುದು. ತೋಟಗಳಲ್ಲಿ ದುಡಿಯಲು ಕರೆತಂದ ನೀಗ್ರೋಗಳು ಮಧ್ಯ ಅಮೆರಿಕದ ತುಂಬ ಹರಡಿಕೊಂಡಿದ್ದಾರೆ.

## ಮಧ್ಯ ಆಫ್ರಿಕ ಗಣರಾಜ್ಯ

ಕೆಲವೇ ದಶಕಗಳ ಹಿಂದೆ ಮೀನು ಹಿಡಿಯುತ್ತಿದ್ದರು, ಬೇಟೆಯಾಡುತ್ತಿದ್ದರು, ಇತರ ಬುಡಕಟ್ಟಿನ ಜನರ ದಾಳಿಯಿಂದ ಸ್ವರಕ್ಷಣೆ ಮಾಡಿಕೊಳ್ಳುತ್ತಿದ್ದರು. ಈಗಲೋ ಮಕ್ಕಳನ್ನು ಶಾಲೆಗೆ ಕಳುಹಿಸುತ್ತಾರೆ, ಆಧುನಿಕ ಪದ್ಧತಿಯಲ್ಲಿ ವ್ಯವಸಾಯ ಮಾಡುತ್ತಾರೆ. ಇಂಥ ಅದ್ಭುತ ಬದಲಾವಣೆ ಹೊಂದಿದೆ ಮಧ್ಯ ಆಫ್ರಿಕ ಗಣರಾಜ್ಯ.

ಮಧ್ಯ ಆಫ್ರಿಕವೊಂದು ಪ್ರಸ್ಥಭೂಮಿ. ನೈರುತ್ಯದಲ್ಲಿ ಉಷ್ಣವಲಯದ ಕಾಡು; ಈಶಾನ್ಯದಲ್ಲಿ ಬಂಜರು ಬೆಟ್ಟಗಳು. ಉಬಾಂಗಿ ನದಿ ಮತ್ತು ಶಾರಿ ನದಿ ಮುಖ್ಯ ನದಿಗಳು. ಈ ರಾಜ್ಯ ಮಧ್ಯ ಆಫ್ರಿಕದಲ್ಲಿ ಭೂಮಧ್ಯರೇಖೆಗೆ ಸ್ವಲ್ಪ ಉತ್ತರದಲ್ಲಿದೆ. ಇಲ್ಲಿ ಉಷ್ಣವಲಯದ ಹವಾಗುಣವಿದೆ. ಜುಲೈನಿಂದ ಅಕ್ಟೋಬರ್‌ವರೆಗೆ ಭಾರಿ ಮಳೆ ಆಗುತ್ತದೆ.

ಜನ ವಸತಿ ವಿರಳ. ನೀಗ್ರೊ ಬುಡಕಟ್ಟಿನ ಜನರಲ್ಲಿ ಮುಖ್ಯರಾದವರು ಉಬಾಂಗಿ, ಮಂಡಿಯ, ಬಾಯ್ ಮತ್ತು ಬಂಡಗಳು. ಬೇಸಿಗೆ ಕಳೆದ ಮೇಲೆ ಹೊದೆ ಗಿಡಗಳನ್ನು ಸುಟ್ಟುಬಿಡುತ್ತಾರೆ. ಇದೇ ಗೊಬ್ಬರ. ಹಲವು ಬುಡಕಟ್ಟುಗಳ ಭಾಷೆಗಳನ್ನು ಜನ ಆಡುತ್ತಾರೆ. ಫ್ರೆಂಚ್ ಅಧಿಕೃತ ಭಾಷೆ.

ಹತ್ತಿ, ಕಾಫಿ, ಕಡಲೆಕಾಯಿ, ಅಕ್ಕಿ, ಹೊಗೆಸೊಪ್ಪು, ಹಣ್ಣುಗಳು, ಮರಗೆಣಸು ಬೆಳೆಸುತ್ತಾರೆ. ರಬ್ಬರ್, ಮರದ ದಿಮ್ಮಿ, ಹತ್ತಿ, ಕಡಲೆಕಾಯಿ, ಕಾಫಿ ರಫ್ತಾಗುತ್ತದೆ. ಸಾಮಾನ್ಯವಾಗಿ ಪ್ರತಿಯೊಂದು ಮನೆಯಲ್ಲೂ ಕೋಳಿ ಮತ್ತು ಹಂದಿ ಸಾಕುತ್ತಾರೆ. ಇಂಧನ, ಬಟ್ಟೆ, ಆಹಾರ ಸಾಮಗ್ರಿಗಳು, ವಾಹನ, ಲೋಹ ಮತ್ತು ಸಿಮೆಂಟ್‌ಗಳು ಆಮದಾಗುತ್ತವೆ.

ಇಲ್ಲಿ ವಜ್ರದ ಗಣಿಗಳಿವೆ. 1966ರಲ್ಲಿ 2,70,000 ಕ್ಯಾರಟ್‌ಗಳಷ್ಟು ವಜ್ರ ದೊರಕಿತ್ತು. ಇದು ರಫ್ತಾಗುತ್ತದೆ. ಇದಲ್ಲದೆ ಚಿನ್ನ, ಕಬ್ಬಿಣ, ಸೀಸ ಮತ್ತು ಸತು ಸಿಗುತ್ತವೆ.

ಸಮುದ್ರ ತೀರವಿಲ್ಲದಿರುವುದು, ಕಡಮೆ ರೈಲು ಸೌಲಭ್ಯ ದೇಶದ ಆರ್ಥಿಕ ಬೆಳವಣಿಗೆಗೆ ಅಡ್ಡಿ. ಜನ ಪ್ರಗತಿಯ ಹೆಜ್ಜೆಯಲ್ಲಿದ್ದಾರೆ.

ಹತ್ತೊಂಬತ್ತನೆಯ ಶತಮಾನದ ಕೊನೆಯಲ್ಲಿ ಐರೋಪ್ಯರು ಇಲ್ಲಿಗೆ ಬಂದರು. ಮಧ್ಯ ಆಫ್ರಿಕದ ಬಗೆಗೆ ಅವರಿಗಿನ ವಿವರ ಏನೂ ತಿಳಿಯದು. ಬುಡಕಟ್ಟಿನ ಜನರ ಬಳಿಯೂ ತಮ್ಮ ಪೂರ್ವಜರನ್ನು ಕುರಿತ ದಾಖಲೆಗಳೇನೂ ಇಲ್ಲ. ಒಮ್ಮೆ ಸೂಡಾನ್ ಮತ್ತು ಆಫ್ರಿಕಗಳ ಮುಸಲ್ಮಾನ ಗುಲಾಮ ವ್ಯಾಪಾರಿಗಳಿಗೆ ಇದು ಕೇಂದ್ರದಂತಿತ್ತು. ಇವರಲ್ಲದೆ, ದಕ್ಷಿಣ ಮತ್ತು ಪಶ್ಚಿಮ ಭಾಗಗಳ ಬುಡಕಟ್ಟಿನ ಜನರೂ ಗುಲಾಮರನ್ನು ಕರೆದೊಯ್ಯುವ ಸಲುವಾಗಿ ಆಗಾಗ್ಗೆ ದಾಳಿ ಮಾಡುತ್ತಿದ್ದರು. ಮಧ್ಯ ಆಫ್ರಿಕದ ಜನ ನೆಮ್ಮದಿಯಿಂದ ಇರುವಂತಿರಲಿಲ್ಲ. 1898ರಲ್ಲಿ ಫ್ರೆಂಚರು ಬಾಂಗ್ವಿಯಲ್ಲಿ ವಾಣಿಜ್ಯ ನೆಲೆಯನ್ನು ಮಾಡಿಕೊಂಡರು. ಐದು ವರ್ಷಗಳ ತರುವಾಯ ಉಬಾಂಗಿ–ಶಾರಿ ಅಧೀನಪ್ರಾಂತದ ರಚನೆಯಾಯಿತು. ಮುಂದಕ್ಕೆ 1910ರಲ್ಲಿ ಉಬಾಂಗಿ–ಶಾರಿ, ಚಾಡ್, ಕಾಂಗೊ ಮತ್ತು ಗಾಬನ್ ಫ್ರೆಂಚ್ ಪ್ರದೇಶಗಳನ್ನು ಒಗ್ಗೂಡಿಸಿ ಫ್ರೆಂಚ್ ಭೂಮಧ್ಯ ಪ್ರದೇಶ ಆಫ್ರಿಕದ ರಚನೆಯಾಯಿತು. ಗವರ್ನರನ ಪ್ರೋತ್ಸಾಹದಿಂದ ಹತ್ತಿ ಬೆಳೆಯುವುದಕ್ಕೆ ತೊಡಗಿದರಲ್ಲದೆ, ರಸ್ತೆಗಳನ್ನೂ ನಿರ್ಮಿಸಿದರು. 1958ರಲ್ಲಿ ಉಬಾಂಗಿ–ಶಾರಿ ಸ್ವಯಮಾಧಿಕಾರವುಳ್ಳ ಫ್ರೆಂಚ್ ಪ್ರಾಂತವಾಯಿತು. ಆಗ ಇದನ್ನು ಮಧ್ಯ ಆಫ್ರಿಕ ಗಣರಾಜ್ಯ ಎಂದು ಕರೆದರು. 1960 ಆಗಸ್ಟ್ 13ರಂದು ರಾಜಧಾನಿ ಬಾಂಗ್ವಿಯಲ್ಲಿ ಸ್ವಾತಂತ್ರ್ಯ ಘೋಷಣೆಯಾಯಿತು.

ಉಬಾಂಗಿ ನದಿಯ ದಡದಲ್ಲಿದೆ, ರಾಜಧಾನಿ ಬಾಂಗ್ವಿ.




## ಮಧ್ಯಯುಗ

ದಿನ, ವಾರ, ತಿಂಗಳು, ವರ್ಷ ಇವನ್ನೆಲ್ಲ ಮಾನವ ತನ್ನ ಅನುಕೂಲಕ್ಕಾಗಿ ನಿರ್ಮಿಸಿಕೊಂಡಿದ್ದಾನೆ. ಒಂದು ವರ್ಷ ಕಳೆದು ಇನ್ನೊಂದು ವರ್ಷ ಬಂದಾಗಲೇ ಆಗಲಿ, ಒಂದು ಶತಮಾನ ಕಳೆದು ಇನ್ನೊಂದು ಶತಮಾನ ಬಂದಾಗಲೇ ಆಗಲಿ, ಒಂದನ್ನು ಇನ್ನೊಂದರಿಂದ ಸ್ಪಷ್ಟವಾಗಿ ಪ್ರತ್ಯೇಕಿಸುವಂಥ ಬದಲಾವಣೆಗಳು ಇರುವುದಿಲ್ಲ. ಬದಲಾವಣೆಗಳು ಕಾಲಕ್ರಮೇಣ ಆಗುತ್ತವೆ. ಶತಮಾನ ಕಳೆದ ಕೂಡಲೇ ಬದಲಾವಣೆಯಾಗಬೇಕೆಂದಿಲ್ಲ. ಆದರೆ ಚರಿತ್ರೆಯಲ್ಲೂ ಸಾಹಿತ್ಯದಲ್ಲೂ ಅಧ್ಯಯನಕ್ಕೆ ಅನುಕೂಲವಾಗುವಂತೆ ಕೆಲವೊಂದು ಘಟನೆಗಳ, ಕೆಲವೊಂದು ವಿಶೇಷ ಗುಣಗಳ ಆಧಾರದಿಂದ ಚಾರಿತ್ರಿಕ ಕಾಲವನ್ನು ವಿಂಗಡಿಸಿ ಅವುಗಳಿಗೆ ಹೆಸರು ಕೊಡುತ್ತಾರೆ. ಒಂದು ಕಾಲದಲ್ಲಿ ಇನ್ನೊಂದು ಕಾಲದ ಗುಣಗಳು ಕಂಡುಬರುವುದು ಸಹಜ. ಆದ್ದರಿಂದ ಈ ಹೆಸರುಗಳು ಕೆಲವು ಸಲ ಅಸಮರ್ಪಕವಾಗಿ, ಅಸಹಜವಾಗಿ ಕಾಣುತ್ತವೆ.

'ಮಧ್ಯಯುಗ' ಎನ್ನುವುದು ಚರಿತ್ರೆಯ ಅಧ್ಯಯನದಲ್ಲಿ ಅನುಕೂಲವಾಗಲೆಂದು ಕೊಟ್ಟ ಹೆಸರು. ಚರಿತ್ರಕಾರರಿಂದ ಅದು ಬಳಕೆಗೆ ಬಂದಿದೆ.

ಪ್ರಾಚೀನ ಕಾಲಕ್ಕೂ ಆಧುನಿಕ ಕಾಲಕ್ಕೂ ಮಧ್ಯದ ಕಾಲವನ್ನು ಯೂರೋಪಿನ ಚರಿತ್ರೆಯಲ್ಲಿ ಮಧ್ಯಯುಗ ಎನ್ನುತ್ತಾರೆ. ಪ್ರಾಚೀನ ಕಾಲ ಯಾವಾಗ ಅಂತ್ಯವಾಯಿತು, ಮಧ್ಯಯುಗ ಯಾವಾಗ ಆರಂಭವಾಯಿತು ಎಂದು ಗೆರೆ ಎಳೆದು ಹೇಳುವುದು ಕಷ್ಟ. ಸಾಮಾನ್ಯವಾಗಿ 476ರಲ್ಲಿ ರೋಮನ್ ಚಕ್ರಾಧಿಪತ್ಯ ಅಂತ್ಯವಾದಾಗ ಮಧ್ಯಯುಗ ಆರಂಭವಾಯಿತು; ಅದು ಹದಿನಾರನೆಯ ಶತಮಾನದ ಆರಂಭದಲ್ಲಿ ಎಲ್ಲೆಲ್ಲಿಯೂ ಕಂಡುಬಂದ ನವೋದಯದ (ಹೊಸ ಹುಟ್ಟು) ಕಾಲದ ವರೆಗೆ ಇದ್ದಿತು—ಎಂದು ಭಾವಿಸಬಹುದು.

ರೋಮನ್ ಸಾಮ್ರಾಜ್ಯದ ಪತನದ ಕಾಲದಿಂದ ನವೋದಯದ ಕಾಲದ ವರೆಗೆ, ಅಂದರೆ 500–1500 (ಸುಮಾರು ಸಾವಿರ ವರ್ಷಗಳ ಅವಧಿ), ಮಧ್ಯಯುಗ. ಈ ಒಂದು ಸಾವಿರ ವರ್ಷಗಳಲ್ಲಿ ರೋಮನ್ ಸಾಮ್ರಾಜ್ಯದ ಸಂಸ್ಕೃತಿ, ನಾಗರಿಕತೆ, ಘನತೆಗಳು ನಷ್ಟವಾದುವು. ಅನಾಗರಿಕ ಜರ್ಮನ್ ದಾಳಿಕಾರರು ಯೂರೋಪಿನ ಮೇಲೆ ಆಕ್ರಮಣ ನಡೆಸಿದರು. ಇದರ ಫಲವಾಗಿ, ಉಚ್ಚಸ್ಥಿತಿಯಲ್ಲಿದ್ದ ನಾಗರಿಕ ಜೀವನದ ಎಲ್ಲ ಪ್ರಕಾರಗಳೂ ಅವನತಿಹೊಂದಿದುವು. ಜರ್ಮನ್ ದಾಳಿಕಾರರಿಗೆ ನಾಗರಿಕ ಜೀವನದ ಪರಿಚಯವಿರಲಿಲ್ಲ. ಹೀಗಾಗಿ ಯೂರೋಪಿನ ಚರಿತ್ರೆಯಲ್ಲಿ ಅನಾಗರಿಕತೆಯ ಕಾಲ ಆರಂಭವಾಯಿತು. ಮಧ್ಯಯುಗದ ಆರಂಭದ ಶತಮಾನಗಳನ್ನು 'ಕತ್ತಲೆಯ ಯುಗ' ಎಂದೂ ಕರೆಯುತ್ತಾರೆ.

ಮಧ್ಯಯುಗದಲ್ಲಿ ಪ್ರಾಮುಖ್ಯ ಪಡೆದು ಬಹುಕಾಲ ನೆಲೆಸಿದ್ದು ಉಂಬಳಿಗ ಮಾನ್ಯ ಪದ್ಧತಿ. ಈ ಪದ್ಧತಿಯಲ್ಲಿ, ಕೆಲವರು ನೆಲದ ಒಡೆಯರಾದರು, ಕೋಟೆದುರ್ಗಗಳನ್ನು ಕಟ್ಟಿಕೊಂಡರು. ರೈತರು ಮೊದಲಾದ ಊರಿನ ಜನ ಅವರನ್ನು ತಮ್ಮ ಅಧಿಪತಿಗಳೆಂದು ಒಪ್ಪಿಕೊಂಡು, ಯುದ್ಧದ ಸಮಯದಲ್ಲಿ ಬೇಕಾದ ಸಹಾಯವನ್ನು ಒದಗಿಸುತ್ತೇವೆಂಬ ಕರಾರಿನ ಮೇಲೆ ಜಮೀನನ್ನು ಉತ್ತು ಅನುಭವಿಸಿದರು. ಭಾರತದಲ್ಲಿನ ಪಾಳೆಯಗಾರ ಪದ್ಧತಿಗೆ ಮಧ್ಯಯುಗದ ಯೂರೋಪಿನ ಉಂಬಳಿಗಮಾನ್ಯ ಪದ್ಧತಿಯನ್ನು ಹೋಲಿಸಬಹುದು. ರಾಷ್ಟ್ರದ ದೊರೆಗೆ ಪಾಳೆಯಗಾರರು ಅಧೀನ. ಪಾಳೆಯಗಾರರಿಗೆ ಆ ಪಾಳೆಯದ ಜನ ಅಧೀನ. ರಾಜನಿಗೂ ರೈತನಿಗೂ ಮಧ್ಯೆ ಪಾಳೆಯಗಾರ; ಇದರಿಂದಾಗಿ ಪಾಳೆಯಗಾರರಿಗೆ ಅಧೀನರಾದ ಜಮೀನುದಾರ, ಜಹಗೀರುದಾರ ಮತ್ತು ಸಾಮಂತರ ಸಂತತಿ ಬೆಳೆಯಿತು. ತಮ್ಮ ಉಂಬಳಿಗದಲ್ಲಿದ್ದ ರೈತರ ರಕ್ಷಣೆ ಪಾಳೆಯಗಾರರ ಹೊಣೆ. ಪಾಳೆಯಗಾರರು ಭಾರತದಲ್ಲಿದ್ದಂತೆಯೇ ಮಧ್ಯಯುಗದ ಯೂರೋಪಿನಲ್ಲೂ ಅತ್ಯಂತ ಪ್ರಬಲರಾಗಿದ್ದರು. ಶ್ರೀಮಂತ ಪ್ರಭುಗಳ ಪ್ರದೇಶದಲ್ಲಿದ್ದ ಕೋಟೆಯನ್ನು [illegible] ಕಾಗಿತ್ತು. ಅದರ ದುರ್ಗದ ಸುತ್ತ ರೈತರು ತಮ್ಮ ಹಳ್ಳಿಗಳನ್ನು ಕಟ್ಟಿ

ಮುದ್ದೆಯನ್ನು ಹೊರಕ್ಕೆ ತೆಗೆದುಕೊಂಡರು. ಜನಕ್ಕೆ ಆಶ್ಚರ್ಯವಾಯಿತು. ಗೋಪೀಚಂದನವನ್ನು ತೊಳೆದಾಗ ಅದರಲ್ಲಿ ಸುಂದರ ಬಾಲಕೃಷ್ಣನ ವಿಗ್ರಹ ಕಂಡುಬಂತು. "ಇದು ರುಕ್ಮಿಣಿ ಪೂಜಿಸುತ್ತಿದ್ದ ವಿಗ್ರಹ" ಎಂದು ಹೇಳಿ ಮಧ್ವಾಚಾರ್ಯರು ಅದನ್ನು ಉಡುಪಿಯಲ್ಲಿ ಪ್ರತಿಷ್ಠೆ ಮಾಡಿದರು.

—ಪ್ರಸಿದ್ಧ ಯಾತ್ರಾಸ್ಥಳವಾದ ಉಡುಪಿಯ ಶ್ರೀಕೃಷ್ಣ ದೇವಾಲಯದಲ್ಲಿನ ಬಾಲಕೃಷ್ಣನ ವಿಗ್ರಹವನ್ನು ಕುರಿತು ಪ್ರಚಲಿತವಿರುವ ಕಥೆ ಇದು. ವಿಗ್ರಹವನ್ನು ಪ್ರತಿಷ್ಠಾಪಿಸಿದವರು ಮಧ್ವಾಚಾರ್ಯರು. ಇದನ್ನು ಆಚಾರ್ಯರು ದ್ವಾರಕೆಯಿಂದ ತಂದರೆಂಬ ಹೇಳಿಕೆಯೂ ಇದೆ.

ಮಧ್ವಾಚಾರ್ಯರು ಉಡುಪಿ ಹತ್ತಿರದ ಪಾಜಕ ಎಂಬಲ್ಲಿ 1238ರಲ್ಲಿ ಹುಟ್ಟಿದರು. ತಂದೆ ಮಧ್ಯಗೇಹ ಭಟ್ಟ. ತಾಯಿ ವೇದವತಿ. ಮಧ್ವಾಚಾರ್ಯರಿಗೆ ತಂದೆ ತಾಯಿ ಇಟ್ಟ ಹೆಸರು ವಾಸುದೇವ. ಇವರನ್ನು ಪೂರ್ಣಪ್ರಜ್ಞ (ಪರಿಪೂರ್ಣನಾದ ಬ್ರಹ್ಮನನ್ನು ತಿಳಿದವರು) ಮತ್ತು ಆನಂದತೀರ್ಥ (ಆನಂದವನ್ನು ತಂದುಕೊಡುವ ಉಪದೇಶವನ್ನು ಮಾಡಿದವರು) ಎಂದೂ ಕರೆಯುತ್ತಾರೆ. ದ್ವೈತಮತಕ್ಕೆ ಪೂರ್ಣಪ್ರಜ್ಞದರ್ಶನ ಎಂದೂ ಹೆಸರು. ಇವರು ಹಿಂದಿನ ಅವತಾರಗಳಲ್ಲಿ ಹನುಮ ಮತ್ತು ಭೀಮರಾಗಿದ್ದರೆಂದು ನಂಬಿಕೆ ಇದೆ.

ವಾಸುದೇವ ಬಹಳ ಚಿಕ್ಕವಯಸ್ಸಿನಲ್ಲಿಯೇ ಅಸಾಧಾರಣ ಪ್ರತಿಭೆಯನ್ನು ತೋರಿದ. ವೇದಾಭ್ಯಾಸ ಮಾಡಿ ತನ್ನ ಹನ್ನೆರಡನೆಯ ವಯಸ್ಸಿನಲ್ಲಿ ಅಚ್ಯುತ ಪ್ರೇಕ್ಷಕರೆಂಬ ಗುರುವಿನಿಂದ ಸನ್ಯಾಸವನ್ನು ಪಡೆದ. ಅಲ್ಲಿಂದ ಮುಂದೆ ಮಧ್ವಾಚಾರ್ಯ ಎಂಬ ಹೆಸರು.

ಶಂಕರಾಚಾರ್ಯ, ರಾಮಾನುಜಾಚಾರ್ಯರ ಹಾಗೆ ಮಧ್ವಾಚಾರ್ಯರೂ ಭಾರತದಲ್ಲೆಲ್ಲ ಸಂಚಾರ ಮಾಡಿದರು. ದ್ವೈತಮತ ಪ್ರಸಾರ ಮಾಡಿದರು. ಕಾಶಿ, ಬದರಿ, ಹರಿದ್ವಾರ ಮುಂತಾದ ಸ್ಥಳಗಳಿಗೆ ಭೇಟಿಯಿತ್ತರು. ಶ್ರೀಹರಿಯನ್ನು ಭಜಿಸಿ ಭಕ್ತಿಯಿಂದ ಪೂಜೆಮಾಡಿ ಎಂದು ಸಾರಿದರು. ಶ್ರೀಕೃಷ್ಣನ ವಿಗ್ರಹದ ಪ್ರತಿಷ್ಠಾಪನೆಯಾದದ್ದು ಅವರು ಉಡುಪಿಗೆ ಮರಳಿ ಬಂದಮೇಲೆ.

ಮಧ್ವಾಚಾರ್ಯರು ಎಂಟು ಮಠಗಳನ್ನು ಸ್ಥಾಪಿಸಿದರು. ಅನೇಕ ವೇದಾಂತ ಮತ್ತು ಧರ್ಮಗ್ರಂಥಗಳನ್ನು ಸಂಸ್ಕೃತದಲ್ಲಿ ಬರೆದರು. ಸುಮಾರು ಎಂಬತ್ತು ವರ್ಷಗಳ ಕಾಲ ಜೀವಿಸಿದ್ದರು. ರಚಿಸಿದ ಕೃತಿಗಳಲ್ಲಿ ಬ್ರಹ್ಮಸೂತ್ರ ಭಾಷ್ಯ, ಅಣುವ್ಯಾಖ್ಯಾನ, ಗೀತಾಭಾಷ್ಯ, ಉಪನಿಷತ್‌ಭಾಷ್ಯ, ಮಹಾಭಾರತ ತಾತ್ಪರ್ಯ ನಿರ್ಣಯ ಇವು ಮುಖ್ಯವಾದುವು. ಇವರು 32 ಗ್ರಂಥಗಳನ್ನು ಬರೆದಿರುವರು.

ಪರಮಾತ್ಮ ಎಲ್ಲವನ್ನೂ ಬಲ್ಲವನು : ಅವನ ಶಕ್ತಿಗೆ ಮಿತಿಯೇ ಇಲ್ಲ ; ಅವನು ಎಲ್ಲ ಕಡೆ ಇದ್ದಾನೆ. ಅವನಿಗೆ ಹುಟ್ಟಿಲ್ಲ; ಕೊನೆಯಿಲ್ಲ : ದೇವರಲ್ಲಿ ದೋಷವೇ ಇಲ್ಲ ಎಂದರು ಮಧ್ವಾಚಾರ್ಯರು. ದ್ವೈತಮತದ ಸಂಸ್ಥಾಪಕರೆಂದು ಅವರು ಪ್ರಸಿದ್ಧರಾದರು. 'ದ್ವೈತ' ಎಂದರೆ ಭೇದ. ಜೀವರಿಗೂ ಪರಮಾತ್ಮನಿಗೂ ಭೇದವುಂಟು. ಜೀವಿಗಳು ಜನನ, ಮರಣ, ದುಃಖ ಇತ್ಯಾದಿ ದೋಷಗಳಿಂದ ಕೂಡಿದವರು. ಜೀವ ಜಡಗಳಿಗೂ ಭೇದವುಂಟು. ಹೀಗೆ ಎಲ್ಲರಲ್ಲೂ ಭೇದವನ್ನು ಗುರುತಿಸುವುದರಿಂದಲೇ ಮಧ್ವಾಚಾರ್ಯರ ಪಂಥಕ್ಕೆ 'ದ್ವೈತ' ಎಂದು ಹೆಸರು. ಎಲ್ಲವೂ ಒಂದೇ. ಅದು ಬ್ರಹ್ಮ. ಅದನ್ನು ಬಿಟ್ಟರೆ ಬೇರೆ ಯಾವುದೂ ಇಲ್ಲ ಎಂದು ಅದ್ವೈತ



ದ್ವೈತ ಮತ ಸ್ಥಾಪನೆ ಮಾಡಿದ ಮಧ್ವಾಚಾರ್ಯರು

ಮತ ಬೋಧಿಸುತ್ತದೆ : ಬ್ರಹ್ಮ, ಜೀವ, ಜಗತ್ತು ಎಲ್ಲವೂ ಇವೆ, ಆದರೆ ಅವು ಬೇರೆ ಬೇರೆ. ಪರಮಾತ್ಮನಿಗೆ ಅಧೀನ ಎಂದು ದ್ವೈತಮತ ಬೋಧಿಸುತ್ತದೆ.

ಮಧ್ವಾಚಾರ್ಯರು ಭಕ್ತಿಯ ಮಹತ್ವವನ್ನು ತಿಳಿಯಹೇಳಿದರು. ಇವರ ಪಂಥದಲ್ಲಿ ವಿಷ್ಣುವಿಗೆ ಅಗ್ರಸ್ಥಾನವಿರುವುದರಿಂದ ಮಧ್ವಾಚಾರ್ಯರು ಪ್ರಚಾರಮಾಡಿದ ಮತವನ್ನು ವೈಷ್ಣವ ಮತ ಎಂದು ಕರೆಯುತ್ತಾರೆ. ಮಧ್ವರ ವೇದಾಂತದಲ್ಲಿ 'ವಾಯು' ವಿಗೆ ಬಹಳ ಮುಖ್ಯಸ್ಥಾನವಿದೆ. ವಾಯು ಮುಖ್ಯಪ್ರಾಣ; ವಾಯು ಜೀವೋತ್ತಮ (ಎಲ್ಲ ಜೀವಿಗಳಲ್ಲಿ ಉತ್ತಮ) : ಆದರೆ ಹರಿ 'ಸರ್ವೋತ್ತಮ' (ಎಲ್ಲರಿಗಿಂತ—ವಾಯುವಿಗಿಂತಲೂ—ಶ್ರೇಷ್ಠ) : ವಾಯುವೇ ಎಲ್ಲ ಜೀವರಿಗೂ ಸನ್ಮಾರ್ಗದರ್ಶನ ಮಾಡಿಸುವವನು.

ಮಧ್ವಾಚಾರ್ಯರ ದ್ವೈತತತ್ತ್ವಜ್ಞಾನ ಮತ್ತು ವೈಷ್ಣವ ಮತ ಇಂದಿಗೂ ಭಾರತದಲ್ಲಿ ಪ್ರಮುಖ ಧರ್ಮ ಮಾರ್ಗಗಳಲ್ಲಿ ಒಂದಾಗಿದೆ. ಬಂಗಾಳದಲ್ಲಿಯ ಚೈತನ್ಯ ಸಂಪ್ರದಾಯ ಈ ಮತದಿಂದಲೇ ಸ್ಫೂರ್ತಿ ಪಡೆದಿದೆ. ದಕ್ಷಿಣ ಭಾರತದ ಎಲ್ಲ ರಾಜ್ಯಗಳಲ್ಲೂ ಮಹಾರಾಷ್ಟ್ರದಲ್ಲೂ ಈ ಮತದ ಅನುಯಾಯಿಗಳಿದ್ದಾರೆ. ಗಯೆ ಮತ್ತು ಬೃಂದಾವನಗಳಲ್ಲಿಯೂ ಈ ಪಂಥದ ಕೆಲವರಿದ್ದಾರೆ.

ಚಿತ್ರ : [illegible]

## ಮನು

'ಜಲ ಪ್ರಳಯವಾಯಿತು; ಮಾನವರು ನಾಶವಾದರು' ಎಂದು ಮೀನೊಂದು ಮನುವನ್ನು ಎಚ್ಚರಿಸಿತು. ಆಗ ಮನು ಒಂದು ನಾವೆಯನ್ನು ಮಾಡಿ. ಅದನ್ನು ಮೀನಿಗೆ ಕಟ್ಟಿ ಆ ನಾವೆಯಲ್ಲಿ ಕುಳಿತ. ಹೀಗೆ ಪ್ರಳಯಕಾಲದಲ್ಲಿ ಮೀನು ಮನುವನ್ನು ರಕ್ಷಿಸಿತು. ಮನು ಒಬ್ಬನೇ ಉಳಿದ. ಅವನು ನೀರಿನಲ್ಲಿ ಯಾಗಮಾಡಿ ಮೊಸರು ಬೆಣ್ಣೆಯನ್ನು ನೀರಿಗೆ ಹಾಕಿದ. ಒಂದು ವರ್ಷದ ಮೇಲೆ ನೀರಿನಿಂದ ಹೆಂಗಸೊಬ್ಬಳು ಹುಟ್ಟಿ ಬಂದಳು. ಅವಳು ಮನುವಿನ ಮಗಳು. ಹೀಗೆ ಮತ್ತೆ ಸೃಷ್ಟಿ ಆರಂಭ ವಾಯಿತು.

ಈ ಕಥೆ ಶತಪಥ ಬ್ರಾಹ್ಮಣದಲ್ಲಿ ಮತ್ಸ್ಯಾವತಾರದಲ್ಲಿದೆ. (ಇದು ಬೈಬಲಿ ನಲ್ಲಿ ಬರುವ ನೋಆನ ಕತೆಯಂತಿದೆ.)

ಹಿಂದೂಗಳ ಧಾರ್ಮಿಕ ಗ್ರಂಥಗಳ ಪ್ರಕಾರ ಮನು ಮಾನವ ಜನಾಂಗದ ಮೂಲಪುರುಷ.

ಮನು ಪೌರಾಣಿಕ ವ್ಯಕ್ತಿ. ಚಾರಿತ್ರಿಕವಾಗಿ ಅವನ ಬಗೆಗೆ ಏನೂ ತಿಳಿದಿಲ್ಲ.

ಹಿಂದೂ ಧರ್ಮಶಾಸ್ತ್ರ ಪ್ರಪಂಚದಲ್ಲೇ ಅತ್ಯಂತ ಪ್ರಾಚೀನವಾದದ್ದು. ಈ ಧರ್ಮಶಾಸ್ತ್ರದ ಆದ್ಯ ಕರ್ತೃ ಮನು. ಮನುವಿನ ರಚನೆ ಎಂದು ಹೇಳಲಾದ ಮನುಸ್ಮೃತಿ (ಮನುಧರ್ಮಶಾಸ್ತ್ರ) ಉಳಿದೆಲ್ಲ ಹಿಂದೂ ಧರ್ಮಶಾಸ್ತ್ರಗಳಿಗೆ ಬುನಾದಿ.

ಮನುವಿನ ಹೆಸರನ್ನು ನಾವು ಪ್ರಾಚೀನಕಾಲದಲ್ಲೇ ಕೇಳುತ್ತೇವೆ. ವೇದ ಗಳಲ್ಲಿ ಮಹಾಭಾರತದಲ್ಲಿ ಮಾನವರ ಮೂಲಪುರುಷ ಮನು ಎಂದಿದೆ. ಮನುಧರ್ಮಶಾಸ್ತ್ರದ ಮೊದಲ ಅಧ್ಯಾಯದಲ್ಲಿ ಮನು ತಾನು ಪರಮಾತ್ಮನ ಅಂಶವಾದ ವಿರಾಜನಿಂದ ಸೃಷ್ಟಿಸಲ್ಪಟ್ಟವನೆಂದೂ ಪ್ರಪಂಚ ವನ್ನು ತಾನು ಸೃಷ್ಟಿಸಿರುವುದಾಗಿಯೂ ಹೇಳಿದ್ದಾನೆ.

ಪುರಾಣಗಳಲ್ಲಿ. ಮನುಸ್ಮೃತಿಯಲ್ಲಿ ಸೃಷ್ಟಿಯ ಬಗೆಗೆ ಹೇಳುತ್ತ 'ಕಲ್ಪ' (ಬ್ರಹ್ಮನ ಒಂದು ದಿನ) ವನ್ನು ಹದಿನಾಲ್ಕು ವಿಭಾಗಗಳನ್ನಾಗಿ ಮಾಡಿ ದ್ದಾರೆ: ಒಂದು 'ಕಲ್ಪ' ನಮ್ಮ 432 ಕೋಟಿ ವರ್ಷಗಳು. ಒಂದೊಂದು ವಿಭಾಗಕ್ಕೂ ಒಬ್ಬೊಬ್ಬ ಮನು ಮುಖ್ಯಸ್ಥ. ಒಟ್ಟು ಮನು ಗಳು ಹದಿನಾಲ್ಕು. ಒಬ್ಬೊಬ್ಬ ಮನುವಿನ ಅವಧಿ ಮುಗಿದಾಗಲೂ ಒಬ್ಬೊಬ್ಬ ಹೊಸ ಮನು ಸೃಷ್ಟಿಯಾಗುತ್ತಾನೆ. ಪ್ರತಿ ಮನುವಿನ ಕಾಲಕ್ಕೆ 'ಮನ್ವಂತರ' ಎಂದು ಹೆಸರು. ನಾವು ಈಗ ಇರುವುದು ಏಳನೆಯ (ವೈವಸ್ವತ) ಮನ್ವಂತರದಲ್ಲಿ. ಹದಿನಾಲ್ಕನೆಯ ಮನುವಾದ ಮೇಲೆ ಸೃಷ್ಟಿ ಮುಗಿಯು ತ್ತದೆ. ಅನೇಕ ವರ್ಷಗಳಾದ ಮೇಲೆ ಮತ್ತೆ ಸೃಷ್ಟಿ ಆರಂಭವಾಗುತ್ತದೆ ಎಂದು ಹೇಳಿದೆ.

ಮನು ವಿರಚಿತವೆಂದು ಹೇಳಲಾದ ಮನುಸ್ಮೃತಿ. ವೇದದ ಅನಂತರ ಬಂದ ಅತ್ಯಂತ ಪ್ರಸಿದ್ಧ ನ್ಯಾಯಧರ್ಮಶಾಸ್ತ್ರ ಗ್ರಂಥ. ಮನುಸ್ಮೃತಿ ಯಾವ ಕಾಲದಲ್ಲಿ ಬರೆಯಲ್ಪಟ್ಟಿತೆಂದು ನಿರ್ದಿಷ್ಟವಾಗಿ ತಿಳಿದಿಲ್ಲ. ಆದರೆ ವಿದ್ವಾಂಸರು ಅದು ಕ್ರಿ. ಪೂ. ಎರಡನೆಯ ಶತಮಾನ ಮತ್ತು ಕ್ರಿ. ಶ. ಎರಡನೆಯ ಶತಮಾನಗಳ ನಡುವೆ ರಚಿತವಾದ ಗ್ರಂಥವಿರಬೇಕೆಂದು ನಿರ್ಧರಿಸಿದ್ದಾರೆ. ಮನುಸ್ಮೃತಿಯ ಹನ್ನೆರಡು ಅಧ್ಯಾಯಗಳಲ್ಲಿ 1. ಸೃಷ್ಟಿ; 2. ನಾಲ್ಕು ಆಶ್ರಮಗಳು: ಅವುಗಳ ಧ್ಯೇಯಗಳು ಬ್ರಹ್ಮಚಾರಿ ಶಿಷ್ಯ– ವಿದ್ಯಾಭ್ಯಾಸ ಕಾಲದ ಕರ್ತವ್ಯಗಳು; 3. ಮದುವೆ–ಗೃಹಸ್ಥನ ಹೊಣೆಗಾರಿಕೆ; 4. ವ್ಯಕ್ತಿ ಅವನ ನಡತೆ, ನೀತಿ; 5. ಆಹಾರ, ನೈರ್ಮಲ್ಯ, ಹೆಂಗಸರ ಕರ್ತವ್ಯ; 6. ವಾನಪ್ರಸ್ಥ ಮತ್ತು ಸನ್ಯಾಸಾಶ್ರಮಗಳ ಧರ್ಮ; 7. ರಾಜ ಧರ್ಮ, ರಾಜನ ಮತ್ತು ಕ್ಷತ್ರಿಯರ ಕೆಲಸಕಾರ್ಯಗಳು, ಕರ್ತವ್ಯಗಳು; 8. ವ್ಯಕ್ತಿಧರ್ಮ. ಅಪರಾಧಿಗಳು, ಅಪರಾಧಿಯ ದಂಡನೆ; 9 ವ್ಯಾಪಾರ ವ್ಯವಸಾಯ ಮತ್ತು ಇತರ ಕೆಲಸಗಳನ್ನು ಮಾಡುವವರ ಕರ್ತವ್ಯಗಳು; 10. ಜಾತಿಗಳಲ್ಲಿ ಬೆರಕೆ, ಕಷ್ಟಕಾಲದಲ್ಲಿ ಜಾತಿಗಳ ಕರ್ತವ್ಯ; 11. ತಪಸ್ಸು, ಪ್ರಾಯಶ್ಚಿತ್ತ; 12. ದೇಹಾಂತರ ಮತ್ತು ಅಂತಿಮ ಆನಂದ—ಇವೆಲ್ಲದರ ನಿರೂಪಣೆಯುಂಟು.

ಮನುಸ್ಮೃತಿಯನ್ನು ಓದಿದರೆ ಇಡೀ ಗ್ರಂಥವನ್ನು ಒಂದೇ ಕಾಲದಲ್ಲಿ ಒಬ್ಬನೇ ಬರೆದ ಎಂದು ಹೇಳುವುದು ಕಷ್ಟ. ಕೆಲವು ವೇಳೆ ಭಾವನೆಗಳು ಒಂದಕ್ಕೊಂದು ವಿರುದ್ಧವಾಗಿದ್ದು ಹೊಂದಿಕೊಳ್ಳದೆ ಹೋಗುತ್ತವೆ. 'ಮನು' ಎಂಬ ಒಬ್ಬ ವ್ಯಕ್ತಿ ರಚಿಸಿದನೆಂದು ನಂಬಿಕೆ ಇದ್ದರೂ, ಮನುಸ್ಮೃತಿ–ಮನುಧರ್ಮಶಾಸ್ತ್ರ–ನಿಜವಾಗಿ ಪ್ರಾಚೀನ ಭಾರತದಲ್ಲಿ ರಚಿತವಾದ ಅತ್ಯಂತ ಪುರಾತನ ಮಾನವ ಧರ್ಮಶಾಸ್ತ್ರ ಎಂದಿಷ್ಟು ಮಾತ್ರ ಹೇಳಬಹುದು.

## ಮನೆ

ಪ್ರಪಂಚದಲ್ಲಿ ಮನೆಯಂಥ ಸ್ಥಳ ಬೇರಾವುದೂ ಇಲ್ಲ. ಬಡವರಿರಲಿ, ಶ್ರೀಮಂತರಿರಲಿ, ಎಲ್ಲರಿಗೂ ಮನೆ ಬೇಕೇಬೇಕು. ಅರಮನೆಯಿರಬಹುದು, ಕಿರುಮನೆ ಇರಬಹುದು: ಪರ್ಣಕುಟಿಯೂ ಇರಬಹುದು–ಎಲ್ಲರಿಗೂ ಮನೆಯೆಂದರೆ ಸಂತೋಷ. ಮನೆಗಳು ಹಲವು ಬಗೆಯವು. ಮಣ್ಣಿನಲ್ಲಿ ಕಟ್ಟಿ ಹುಲ್ಲಿನ ಚಾವಣಿ ಹೊದಿಸಿದ ಗುಡಿಸಿಲಿನಿಂದ, ಜಲ್ಲಿ ಗಾರೆಯಿಂದ ಕಟ್ಟಿ ರುವ ನವ ವಾಸ್ತುಶಿಲ್ಪದ ಮನೆಗಳವರಿಗೆ ವಿವಿಧ ಮನೆಗಳನ್ನು ಕಾಣುತ್ತೇವೆ. ಎಂಥೆಂಥ ವಿನ್ಯಾಸಗಳು. ಎಷ್ಟು ಬಗೆಯ ಆಧುನಿಕ ಸೌಲಭ್ಯಗಳು. ಎಷ್ಟು ಬಗೆಯ ಕಟ್ಟಡದ ಸಾಮಗ್ರಿಗಳನ್ನು ಉಪಯೋಗಿಸುತ್ತಾರೆ ಈಗಿನ ಮನೆ ಗಳಲ್ಲಿ !

ಗವಿಯಲ್ಲಿ ಮಾನವ ವಾಸ ಮಾಡುತ್ತಿದ್ದುದು. ತನ್ನನ್ನು ಮಳೆ ಬಿಸಿಲು ಮತ್ತು ಕ್ರೂರಮೃಗಗಳಿಂದ ರಕ್ಷಿಸಿಕೊಳ್ಳಲು. ಗವಿಗೆ ಕಲ್ಲಿನ ಚಪ್ಪಡಿ ಯನ್ನೇ ಬಾಗಿಲಿಗೆ ಬದಲಾಗಿ ಉಪಯೋಗಿಸುತ್ತಿದ್ದರು. ನೆಲದಲ್ಲಿ ಗುಂಡಿ ತೋಡಿ. ಗುಂಡಿಯ ಸುತ್ತ ಮರದ ಕೊಂಬುಗಳನ್ನು ನೆಟ್ಟು. ಅದರ ಮೇಲೆ ಹುಲ್ಲನ್ನು ಹೊದಿಸಿದಂಥ ಮನೆಗಳ ಅವಶೇಷಗಳು ಉತ್ತರಾರ್ಧಗೋಳದಲ್ಲಿ ಸಾಕಷ್ಟು ದೊರೆತಿವೆ. ಈ ಮನೆಗಳು ಶಿಲಾಯುಗದ್ದೆಂದು ಪುರಾತತ್ತ್ವ ಶಾಸ್ತ್ರಜ್ಞರ ಅಭಿಪ್ರಾಯ. ಪ್ರಪಂಚದಲ್ಲಿ ಇವೇ ಮನೆಯ ಮೊದಲಿನ ರೂಪಗಳು.

ಜನ ಬಂದು ಸ್ಥಳದಲ್ಲಿ ಆ ಪ್ರದೇಶದ ಹವಾಗುಣಕ್ಕೆ ತಕ್ಕಂತೆ ಮನೆ ಕಟ್ಟುತ್ತಾರೆ. ಈಜಿಪ್ಟಿನಂಥ ಸೆಕೆ ಪ್ರದೇಶದಲ್ಲಿ ಶಾಖವನ್ನು ದೂರವಿಡುವುದಕ್ಕೋಸ್ಕರ ಮನೆಗಳ ಗೋಡೆಗಳು ಬಲು ದಪ್ಪ. ಮೈಸೂರು ರಾಜ್ಯದ ಕರಾವಳಿಯಲ್ಲಿ ಮಳೆ ವಿಪರೀತ. ನೀರು ನಿಲ್ಲಬಾರದೆಂದು ಮಾಡುಗಳನ್ನು ಇಳಿಜಾರಾಗಿ ಚಾವಣಿ ಕಟ್ಟುತ್ತಾರೆ. ನೀರು ಹರಿಯುವ ಸ್ಥಳಗಳಲ್ಲಿ, ತೇವವಾಗಿ ಇರುವೆಡೆಗಳಲ್ಲಿ ನೆಲದ ಮೇಲೆ ಕಂಬಗಳನ್ನು ನೆಟ್ಟು ಅದರ ಮೇಲೆ ಮನೆ ಕಟ್ಟುತ್ತಾರೆ. ಎಸ್ಕಿಮೋ ಮನೆಗಳಿಗೆ, ಮಳೆ ಗಾಳಿ ಹೊಡೆತ ತಡೆಯುವಂತೆ, ಹೊರಗೋಡೆಗಳಿಗೆ ಬಾಗು ಇರಿಸುತ್ತಾರೆ.

ಶೀತ ಪ್ರದೇಶದ ಬಹು ಮನೆಗಳಲ್ಲಿ ನಡುಮನೆಯಲ್ಲಿ, ಕುಳಿತುಕೊಳ್ಳುವ ಕೋಣೆಯಲ್ಲಿ ಬೆಂಕಿ ಉರಿಯಲು ಸ್ಥಳ ಮಾಡಿರುತ್ತಾರೆ: ವಿಪರೀತ ಚಳಿಯೇ ಇದಕ್ಕೆ ಕಾರಣ.

ಮನೆ ಕಟ್ಟಲು ಸಾಧನಗಳು ಬೇಕಲ್ಲವೆ ? ರೈಲು ಮಾರ್ಗಗಳಾದ ಮೇಲೆ ಸಾಮಾನುಗಳನ್ನು ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಾಗಿಸುವುದು ಸುಲಭವಾಯಿತು. ಇದಕ್ಕೆ ಮೊದಲು ಮನುಷ್ಯ ಸ್ಥಳದಲ್ಲಿ ದೊರೆಯುತ್ತಿದ್ದ ವಸ್ತುಗಳಿಂದಲೇ ಮನೆಕಟ್ಟಿಕೊಳ್ಳುತ್ತಿದ್ದ. ಧ್ರುವಪ್ರದೇಶದಲ್ಲಿ ವಾಸಿಸುವ ಎಸ್ಕಿಮೊಗಳು ಮನೆಕಟ್ಟುವುದು ಹಿಮಗಡ್ಡೆಯ ತುಂಡುಗಳಿಂದ. ಇದಕ್ಕೆ 'ಇಗ್ಲೂ' ಎನ್ನುವರು. ಮರವನ್ನು ಬಳಸಲು ಕಲಿತ ಬಳಿಕ ಮರದಲ್ಲಿ ಮನೆ ಕಟ್ಟಿ ಮೇಲೆ ಪ್ರಾಣಿಯ ಚರ್ಮವನ್ನು ಹೊದಿಸುವುದು ಪ್ರಾರಂಭವಾಯಿತು. ಕಲ್ಲಿನಲ್ಲಿ ಕೊಡಲಿ ಮಾಡಿಕೊಂಡ ಮೇಲೆ ಮರ ಕಡಿದು, ಹಲಗೆ ಮಾಡಿಕೊಂಡು ಮರದ ಮನೆ ಕಟ್ಟಲು ಆರಂಭಿಸಿದರು. ಉತ್ತರ ಅಮೆರಿಕದ ನೈಋತ್ಯ ಭಾಗಗಳಲ್ಲಿ ಪೂಬ್ಲೊ ಇಂಡಿಯನರು ಬಿಸಿಲಿನಲ್ಲಿ ಒಣಗಿಸಿದ ಮಣ್ಣಿನಿಂದ ಮನೆ ನಿರ್ಮಿಸುತ್ತಾರೆ. ಸ್ಲೇಟು ಹಲಗೆ ತುಂಬಾ ದೊರಕುವ ವೇಲ್ಸ್, ಕಾರನ್‌ವಾಲ್‌ಗಳಲ್ಲಿ ಮನೆಯ ಛಾವಣಿಗೆ ಯಾವ ಬಣ್ಣದ ಸ್ಲೇಟು ಹಲಗೆ ದೊರೆಯುತ್ತದೆಯೋ ಅದನ್ನೇ ಬಳಸುತ್ತಾರೆ. ಕಾಂಗೊದಲ್ಲಿ ತಾಳೆ ಎಲೆಗಳನ್ನು ಹೆಣೆದು ಮಣ್ಣಿನ ಮನೆಯ ಮೇಲೆ ಹೊದಿಸುತ್ತಾರೆ. ಸೋಮಾಲಿಯ, ನೈಜರ್‌ಗಳಲ್ಲಿ ಜೊಂಡಿನ ಚಾಪೆಯನ್ನು ಬೊಂಬಿನ ಆಧಾರದ ಮೇಲೆ ಅಥವಾ ಹಾಗೆಯೇ ನಿಲ್ಲಿಸಿ ಮನೆ ಮಾಡಿಕೊಳ್ಳುತ್ತಾರೆ.

ನಾರ್ವೆ, ಸ್ವಿಟ್ಜರ್‌ಲೆಂಡ್‌ಗಳಂಥ ದೇಶಗಳಲ್ಲಿ ಹಿಮ ಬೀಳುವಿಕೆಯನ್ನೂ ಜೋರಾಗಿ ಬೀಸುವ ಗಾಳಿಯನ್ನೂ ತಡೆಯುವಂತೆ ಗಟ್ಟಿಮುಟ್ಟಾದ ಮನೆ ಕಟ್ಟುತ್ತಾರೆ. ಬಾಗಿಲ ಬಳಿ ಹಿಮರಾಶಿ ಬಂದು ಶೇಖರವಾಗದಂತೆ ಬಾಗಿಲನ್ನು ಎತ್ತರವಾಗಿರಿಸಿ, ಮನೆಯ ಮಹಡಿ ಭಾಗವನ್ನು ಕೆಳಭಾಗಕ್ಕಿಂತ ವಿಸ್ತಾರವಾಗಿ ಕಟ್ಟುತ್ತಾರೆ.

ಅರಬ್ ಅಲೆಮಾರಿ ಜನರು, ಸಾಗಿಸಲು ಸುಲಭವಾದ ಒಂಟೆಯ ಕೂದಲಿನಿಂದ ಹೆಣೆದ ಬಟ್ಟೆಯ ಡೇರೆಗಳನ್ನು ಬಳಸುತ್ತಾರೆ. ಆಫ್ರಿಕದ ಅಲೆಮಾರಿ ಜನರೂ ಹಾಗೆಯೇ ಒಂದು ಕಡೆಯಿಂದ ಮತ್ತೊಂದಕ್ಕೆ ಸುಲಭವಾಗಿ ಸಾಗಿಸಲು ಬರುವಂಥ ಹಗುರವಾದ ಜೊಂಡಿನ ಚಾಪೆಗಳಿಂದ ಮನೆಗಳನ್ನು ಕಟ್ಟಿಕೊಳ್ಳುತ್ತಾರೆ.

ಭೂಕಂಪಗಳ ದೇಶ ಜಪಾನು. ಅಲ್ಲಿನ ಮನೆಗಳು ಹಗುರವಾಗಿ ಬೊಂಬು ಮತ್ತು ಮರದಿಂದ ನಿರ್ಮಿಸಲ್ಪಟ್ಟಿರುತ್ತವೆ. ಮನೆ ಬಿದ್ದರೂ ಹಗುರವಾದ ಸಾಮಗ್ರಿಗಳಿಂದಾಗಿ ಒಳಗಿರುವ ಜನರಿಗೆ ಪೆಟ್ಟು ತಗಲುವುದಿಲ್ಲ. ಅಲ್ಲದೆ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಈ ಮನೆಗಳನ್ನು ಸಾಗಿಸುವುದೂ ಸುಲಭ. ಹಾಲೆಂಡಿನಂತೆ ಪ್ರವಾಹ ಭೀತಿ ಇರುವ ದೇಶಗಳಲ್ಲಿ ಎತ್ತರದ ಸ್ಥಳಗಳಲ್ಲಿ ಮನೆಗಳಿರುತ್ತವೆ. ಡಚ್ಚರಂತೆ ಇನ್ನೂ ಅನೇಕರು ಒಡ್ಡನ್ನು ಕಟ್ಟಿ ಪ್ರವಾಹದ ವಿರುದ್ಧ ಹೋರಾಡುತ್ತಾರೆ.

ಪ್ರಪಂಚದ ಅನೇಕ ಭಾಗಗಳಲ್ಲಿ ಚಂಡಮಾರುತದಿಂದ ತೊಂದರೆಯಾಗುತ್ತದೆ. ಕೆಲವು ಕಡೆಗಳಲ್ಲಿ ನೆಲಮಾಳಿಗೆಯಲ್ಲಿ ಅನುಕೂಲವಾದ ಮನೆಯನ್ನು ಕಟ್ಟಿಕೊಂಡಿರುತ್ತಾರೆ. ಚಂಡಮಾರುತ ಕಳೆಯುವವರೆಗೂ ಅವರ ವಾಸ ನೆಲಮಾಳಿಗೆಯಲ್ಲಿಯೇ.

ಮಧ್ಯಯುಗದಲ್ಲಿ ಯೂರೊಪಿನಲ್ಲಿ ಅರಮನೆಗಳ ಸುತ್ತ ಆಳವಾದ ಕಂದಕಗಳಿರುತ್ತಿದ್ದುವು. ಇವು ವೈರಿಗಳಿಂದ ರಕ್ಷಿಸಿಕೊಳ್ಳುವುದಕ್ಕೋಸ್ಕರ. ಅನಾಗರಿಕ ಜನಾಂಗದವರು ಸರೋವರ ಮತ್ತು ನದಿಗಳಲ್ಲಿ ಮರ ಅಥವಾ ಬೊಂಬು ನೆಟ್ಟು ಅದರ ಮೇಲೆ ಮನೆಯನ್ನು ಕಟ್ಟಿಕೊಳ್ಳುತ್ತಿದ್ದರು. ತೀರಕ್ಕೆ ಹೋಗಲು ಸೇತುವೆಗಳಿರುತ್ತಿದ್ದುವು.

ಕಾಶ್ಮೀರದ ದೋಣಿ ಮನೆಗಳು ಪ್ರವಾಸಿಗರ ಪ್ರಮುಖ ಆಕರ್ಷಣೆ. ಈ ದೋಣಿಗಳಲ್ಲಿ ಕುಳಿತು, ಸರೋವರದಲ್ಲಿ ತಿರುಗಾಡಿ ಸೃಷ್ಟಿ ಸೌಂದರ್ಯವನ್ನು ಅನುಭವಿಸಬಹುದು. ಚೀನದಲ್ಲಿ ಕೆಲವು ಸಂಸಾರಗಳು ದೋಣಿ ಮನೆಗಳಲ್ಲಿಯೇ ವಾಸವಾಗಿರುತ್ತವೆ. ಪಾಶ್ಚಾತ್ಯ ದೇಶಗಳಲ್ಲಿ ದೋಣಿ ಮನೆಗಳನ್ನು ಮೀನು ಹಿಡಿಯಲು ಉಪಯೋಗಿಸುತ್ತಾರೆ. ಅಲ್ಲಿ ನೀರಿನ ಆಳ ಕಡಮೆ.

ಸ್ಥಳ ಇಕ್ಕಟ್ಟಾಗಿದ್ದ ಪ್ರದೇಶಗಳಲ್ಲಿ ಮಹಡಿ ಮನೆಗಳನ್ನು ಕಟ್ಟಲು ಮನುಷ್ಯ ಆರಂಭಿಸಿದ. ಈಗ ಕಲ್ಕತ್ತ, ಮುಂಬಯಿ, ನ್ಯೂ ಯಾರ್ಕ್‌ಗಳಂಥ ನಗರಗಳಲ್ಲಿ ಅನೇಕ ಅಂತಸ್ತುಗಳಿರುವ ಗಗನಚುಂಬಿ ಮನೆಗಳಿವೆ.

ಮನೆ ಕಟ್ಟಲು ಬಳಸುವ ಸಾಮಗ್ರಿಗಳ ವೈವಿಧ್ಯ ಆಶ್ಚರ್ಯಕರ. ಮೊದಲಿಗೆ ಮರವನ್ನು ಕುಯ್ದು, ಹಲಗೆಗಳನ್ನಾಗಿ ಮಾಡಿಕೊಂಡು ಅದರಲ್ಲಿ ಮನೆ ಕಟ್ಟುತ್ತಿದ್ದರು. ಹಿಂದಿನ ಜಪಾನಿ ಮತ್ತು ಚೀನೀಯರ ಮನೆಗಳು ಮರದ ಮನೆಗಳೇ ಆಗಿದ್ದುವು. ಈಗ ರಷ್ಯದ ಕೆಲವು ಕಾರ್ಖಾನೆಗಳಲ್ಲಿ ಕೆಲಸಗಾರರಿಗೆ ಮರದ ಮನೆಗಳನ್ನು ಕಟ್ಟಿಸಿಕೊಟ್ಟಿದ್ದಾರೆ. ಸ್ಕ್ಯಾಂಡಿನೇವಿಯ ಮತ್ತು ಅಮೆರಿಕ ಸಂಯುಕ್ತ ಸಂಸ್ಥಾನಗಳಲ್ಲೂ ಮರವನ್ನು ಉಪಯೋಗಿಸಿ ಆಕರ್ಷಕವಾಗಿ ಮನೆ ಕಟ್ಟುತ್ತಾರೆ. ಜಪಾನಿನಲ್ಲಿ ಕಾಗದ ಮತ್ತು ಮರವನ್ನು ಹೇರಳವಾಗಿ ಉಪಯೋಗಿಸುತ್ತಾರೆ.

ಬಿದಿರಿನ ಹೆಣಿಕೆಗೆ ಮಣ್ಣನ್ನು ಮೆತ್ತಿದ ಮನೆಗಳು ಉಷ್ಣಪ್ರದೇಶದಲ್ಲಿ ಹಿತಕರವಾಗಿರುತ್ತವೆ. ಮುಂದಕ್ಕೆ ಮಣ್ಣಿನಿಂದ ಇಟ್ಟಿಗೆ ತಯಾರಿಸಿ ಮನೆ ಕಟ್ಟುವ ಪರಿಪಾಠ ಬಂದಿತು. ಭಾರತ, ಈಜಿಪ್ಟ್, ಮೆಕ್ಸಿಕೊ, ಸ್ಪೇನ್ ಮತ್ತು ದಕ್ಷಿಣ ಅಮೆರಿಕಗಳಲ್ಲಿ ಇಟ್ಟಿಗೆ ಮನೆಗಳಿವೆ. ಭಾರತದಲ್ಲಿ ಮಣ್ಣಿನ ಮನೆಯ ನೆಲವನ್ನು ಸೆಗಣಿಯಿಂದ ಸಾರಿಸುತ್ತಿದ್ದರು. ಸೆಗಣಿಗೆ ಕ್ರಿಮಿನಾಶಕ ಶಕ್ತಿ ಇದೆ.

ಕಲ್ಲಿನ ಕಟ್ಟಡಗಳು ಬಹುಕಾಲ ಇರುತ್ತವೆ. ಗಾಳಿ, ಮಳೆಯಾಗಲೀ ಬೆಂಕಿಯಾಗಲೀ ಕಲ್ಲಿನ ಕಟ್ಟಡವನ್ನು ನಾಶಪಡಿಸುವಂತಿಲ್ಲ. ಪ್ರಪಂಚದ ಅನೇಕ ಭಾಗಗಳಲ್ಲಿ ಕಲ್ಲಿನ ದೇವಾಲಯಗಳು, ಅರಮನೆಗಳು ಮತ್ತು ಸಾರ್ವಜನಿಕ ಕಟ್ಟಡಗಳನ್ನು ಕಾಣಬಹುದು. ಈಚೆಗೆ ಸಿಮೆಂಟು ಮತ್ತು ಜಲ್ಲಿಗಾರೆಗಳನ್ನು ವಿಶೇಷವಾಗಿ ಬಳಸಲಾಗುತ್ತಿದೆ. ಅಚ್ಚಿನಲ್ಲಿ ಹಾಕಿ ಸಿಮೆಂಟಿನಲ್ಲಿ ಇಟ್ಟಿಗೆ ಮತ್ತು ತೊಲೆಗಳನ್ನು ತಯಾರಿಸಿ ಬಳಸುತ್ತಾರೆ.

ಪೂರ್ವ ಕಾಲದಲ್ಲಿ ಯೂರೊಪಿನ ಲಂಬಾಣಿಗಳು ಗಾಡಿಗಳನ್ನೆ ಮನೆಯಾಗಿ ಮಾಡಿಕೊಂಡಿದ್ದರು. ಅಡುಗೆಮಾಡಲು ಮತ್ತು ಮಲಗಲು ಕೂಡ ಗಾಡಿಗಳಲ್ಲಿ ಸೌಕರ್ಯ ಕಲ್ಪಿಸಿಕೊಂಡಿರುತ್ತಿದ್ದರು. ಈಗ ಪಾಶ್ಚಾತ್ಯ ದೇಶಗಳಲ್ಲಿ ವ್ಯಾನ್‌ಗಳಲ್ಲಿ ಪುಟ್ಟ ವಿದ್ಯುಚ್ಛಕ್ತಿ ಸ್ಟೌವ್, ಸಣ್ಣ ರೆಫ್ರಿಜಿರೇಟರ್, ಸಾಮಾನುಗಳನ್ನಿರಿಸಿಕೊಳ್ಳಲು ಹಲಗೆಗಳು, ಮಲಗಲು ಜಾಗ ಎಲ್ಲ ಅನುಕೂಲತೆಗಳನ್ನೂ ಒದಗಿಸಿರುತ್ತಾರೆ. ಅಂಥವುಗಳಲ್ಲಿ ಏನೂ ತೊಂದರೆಯಿಲ್ಲದೆ ಪ್ರಪಂಚವನ್ನು ಸುತ್ತಿಬರಬಹುದು.

ಅಮೆರಿಕದ ಫ್ಲಾಗ್‌ಸ್ಟಾಫ್ ಸಮೀಪದಲ್ಲಿರುವ ಒಹಾಯೋ ಬೆಟ್ಟದ ಮೇಲೆ ಕಲ್ಪನಾತೀತವಾದ ಮನೆಯೊಂದಿದೆ. ಕ್ಯಾರೆಲ್ ಗ್ರಿಫ್ ಮೂವತ್ತು ವರ್ಷಗಳ ಕಾಲ ಈ ಮನೆ ಕಟ್ಟಲು ಏಕಾಂಗಿಯಾಗಿ ದುಡಿದಿದ್ದಾನೆ. ಏಳು ಅಂತಸ್ತುಗಳು ಮತ್ತು ಮೂವತ್ತೈದು ಕೋಣೆಗಳಿರುವ ಈ ಮನೆಯನ್ನು.

ನಿರುಪಯುಕ್ತವೆಂದು ಎಸೆಯಲ್ಪಟ್ಟಿದ್ದ ಸಾಮಾನುಗಳಿಂದಲೇ ಆತ ಕಟ್ಟಿದ್ದಾನೆ. ಕಾರುಗಳ ಸ್ಟಿಯರಿಂಗ್‌ಚಕ್ರ, ಟೈರು, ಕೊಡೆ, ಗಿಟಾರ್, ಹಳೇ ಬೈಸಿಕಲ್, ಬಲ್ಬು, ಬಟ್ಟೆ ಒಗೆಯುವ ಯಂತ್ರ, ಇವನ್ನೆಲ್ಲ ಸಿಮೆಂಟಿನೊಂದಿಗೆ ಬಳಸಿಕೊಂಡು ನಿರ್ಮಿಸಿದ್ದಾನೆ.

ಈಚೆಗೆ ಪೂರ್ವನಿರ್ಮಿತ ಗೃಹಗಳೂ ಕಾಣುತ್ತಿವೆ. ಸಿಮೆಂಟಿನಲ್ಲಿ ಇಟ್ಟಿಗೆ ತಯಾರಿಸುವಂತೆಯೆ ಗೋಡೆಗಳು, ತೊಲೆಗಳು ಮೊದಲಾದುವನ್ನು ನಿರ್ಮಿಸಿಕೊಳ್ಳುತ್ತಾರೆ. ಸಾವಿರಾರು ಇಟ್ಟಿಗೆ ಜೋಡಿಸುವ ಕಡೆ ಮೂರು ನಾಲ್ಕು ಗೋಡೆಗಳು ಸಾಕು. ಅವನ್ನು ಸಿಮೆಂಟಿನಿಂದ ಕೂಡಿಸಿ ಚಾವಣಿಗೆ ಸಿಮೆಂಟಿನ ಹಾಳೆಗಳನ್ನು ಬಳಸುತ್ತಾರೆ. ಇಂಥ ಹಲವಾರು ಮನೆಗಳನ್ನು ಕೆಲವೇ ದಿನಗಳಲ್ಲಿ ಕಟ್ಟಬಹುದು.

ಮನೆ ಗವಿಯೆ ಆಗಿರಲಿ, ದಿವ್ಯಸೌಧವೆ ಆಗಿರಲಿ. ಕುಟುಂಬದ ಸದಸ್ಯರನ್ನು ಹತ್ತಿರ ತರಲು ಸಾಧಕ. ಕುಟುಂಬದವರಿಗೆ ತಮ್ಮೆಲ್ಲರ ಬಾಳು ಒಂದಾಗಿ ಸಾಗಬೇಕು ಎನ್ನುವ ಭಾವನೆಯನ್ನು ಮನೆ ಬೆಳೆಸುತ್ತದೆ. ಸಮಾಜದಲ್ಲಿ ಕುಟುಂಬಗಳು ಬೇರೆ ಬೇರೆ ಮಾನಗಳಾಗಿ ಬೆಳೆದು ಬರುವುದರಲ್ಲಿ ಮನೆಯ ಪಾತ್ರ ಹಿರಿದು. ವಾಸ್ತುಶಿಲ್ಪದ ಅಭ್ಯುದಯದಲ್ಲಿ ಮನೆಯ ಪಾತ್ರವೂ ಗಮನಾರ್ಹ.

## ಮನೋರಂಜನೆ

ಹೊಲದಲ್ಲಿ ದಿನವಿಡೀ ದುಡಿವ ರೈತರು ಸಂಜೆ ಒಂದುಗೂಡಿ ಲಾವಣಿ ಪದಗಳನ್ನು ಹಾಡುತ್ತಾರೆ. ಕಾರಖಾನೆಯ ಕಾರ್ಮಿಕರು ಕೆಲಸದ ಅನಂತರ ಚಲಚ್ಚಿತ್ರವನ್ನು ನೋಡಲು ಅಥವಾ ಸಂಗೀತವನ್ನು ಕೇಳಲು ತವಕಿಸುತ್ತಾರೆ. ಮೇಜಿನ ಮುಂದೆ ಕುಳಿತು ಕಚೇರಿಗಳಲ್ಲಿ ದುಡಿಯುವ ಕರ್ಮಚಾರಿ ದಿನದ ಕೆಲಸ ಮುಗಿದೊಡನೆಯೇ ಮೈಗೆ ಹಿತವನ್ನು ನೀಡುವ ಯಾವುದಾದರೊಂದು ಆಟವಾಡಲು ಬಯಸುತ್ತಾನೆ. ಒಂದೇ ಬಗೆಯ ಹಲವಾರು ಗಂಟೆಗಳ ದುಡಿತದ ಅನಂತರ ಹೊಸ ಬಗೆಯ ಚಟುವಟಿಕೆಯನ್ನು ಮನುಷ್ಯ ಅಪೇಕ್ಷಿಸುತ್ತಾನೆ. ಜನಸಾಮಾನ್ಯರಿರಲಿ, ಅಸಾಧಾರಣ ವ್ಯಕ್ತಿಗಳಿರಲಿ–ಎಲ್ಲರಲ್ಲೂ ಈ ಅಪೇಕ್ಷೆ ಇದ್ದದ್ದೇ.

ಸರ್ ವಿನ್‌ಸ್ಟನ್ ಚರ್ಚಿಲ್ ಇಪ್ಪತ್ತನೆಯ ಶತಮಾನದ ಅತ್ಯಂತ ಪ್ರಸಿದ್ಧ ವ್ಯಕ್ತಿಗಳಲ್ಲೊಬ್ಬರು ; ಎರಡನೆಯ ಮಹಾಯುದ್ಧದ ಕಾಲದಲ್ಲಿ ಇಂಗ್ಲೆಂಡಿನ ಮುಖ್ಯ ಮಂತ್ರಿಯಾಗಿ ದೇಶದಲ್ಲಿ ಹೊಸ ಆತ್ಮವಿಶ್ವಾಸ ಮತ್ತು ಚೈತನ್ಯಗಳನ್ನು ಹರಿಸಿದವರು.

ಅವರು ಗೋಡೆ ಕಟ್ಟುತ್ತಿದ್ದರು, ತಮ್ಮ ತೋಟದಲ್ಲಿ.

ಏಕೆ ?

ಮನಸ್ಸಿನ ಉಲ್ಲಾಸಕ್ಕಾಗಿ. ಹಾಗೆಯೆ ಅವರು ಚಿತ್ರಗಳನ್ನು ಬರೆಯುತ್ತಿದ್ದರು.

ಇಂಗ್ಲೆಂಡಿನ ಅರಸ ಐದನೆಯ ಜಾರ್ಜ್, ಅಮೆರಿಕದ ಅಧ್ಯಕ್ಷ ಫ್ರಾಂಕ್ಲಿನ್ ರೂಸ್‌ವೆಲ್ಟ್ ಇವರ ಸ್ಟಾಂಪ್ ಸಂಗ್ರಹಗಳು ಪ್ರಪಂಚದ ಸಂಗ್ರಹಗಳಲ್ಲಿಯೇ ಹೆಸರುವಾಸಿ.

ಇವೆಲ್ಲ ಮೈಗೆ ಅಥವಾ ಮನಸ್ಸಿಗೆ ಹಿತವಾಗುವ ಸಂತೋಷ ಮತ್ತು ಸಮಾಧಾನ ಕೊಡುವ ಚಟುವಟಿಕೆ. ಇಂಥ ಚಟುವಟಿಕೆಯೇ ಮನೋರಂಜನೆ.

ನಾವು ಪ್ರತಿದಿನದ ಕೆಲಸವನ್ನು ಮುಗಿಸಿ, ನಮ್ಮ ಸಂತೋಷಕ್ಕಾಗಿ ಮಾಡುವುದೆಲ್ಲ ಮನೋರಂಜನೆಗಳೇ.

ಜೀವನ ಯಾಂತ್ರಿಕವಾದಂತೆ ಮನೋರಂಜನೆಯು ಅಗತ್ಯ ಜಾಸ್ತಿಯಾಗುತ್ತದೆ. ನಗರ ಜೀವನದಲ್ಲಿ ಯಂತ್ರಗಳೊಡನೆ ಸಂಪರ್ಕ ಹೆಚ್ಚಿ ಮನುಷ್ಯನೂ ಯಂತ್ರದಂತೆ ಒಂದೇ ಬಗೆಯ ಕೆಲಸಮಾಡುತ್ತಾನೆ. ಯಂತ್ರಗಳು ಮನುಷ್ಯನ ಶ್ರಮವನ್ನು ಕಡಮೆಮಾಡಿವೆ ನಿಜ : ಆದರೆ ಯಂತ್ರಗಳನ್ನು ಉಪಯೋಗಿಸಿ ಕೆಲಸ ಮಾಡುವುದರಿಂದ ಬೇಸರ ಬಳಲಿಕೆಗಳೂ ಉಂಟಾಗುತ್ತವೆ. ಅದಕ್ಕೆ ತುತ್ತಾದ ನಗರ ಪ್ರದೇಶಗಳ ನಾಗರಿಕರು ಮನೋರಂಜನೆಯ ಮೊರೆಹೊಗುವುದು ಅನಿವಾರ್ಯ. ನಗರಗಳಲ್ಲಿ ಮನೋರಂಜನೆಗೆ ಅವಕಾಶ ಬಹಳ.

ಜೀವನದ ರೀತಿ ಬದಲಾದಂತೆಲ್ಲ ಹೊಸ ಬಗೆಯ ಮನೋರಂಜನೆ ಜನಸಮುದಾಯಕ್ಕೆ ಅಗತ್ಯವಾಯಿತು. ಹಳ್ಳಿಗಳಲ್ಲಿಯೇ ಬಹು ಜನ ವಾಸಿಸುತ್ತಿದ್ದಾಗ ಹಳ್ಳಿಗರ ನೃತ್ಯಗಳು ಆಟಗಳು ಇದ್ದುವು. ವಿದ್ಯುಚ್ಛಕ್ತಿ ಬರುವ ಮೊದಲು ರೇಡಿಯೊ ಇರಲಿಲ್ಲ ; ಚಲನಚಿತ್ರಗಳಿರಲಿಲ್ಲ. ಈಗ ನಗರಗಳಲ್ಲಿ ಉದ್ಯಾನ, ರೇಡಿಯೊ, ಸಂಗೀತ, ಚಲನಚಿತ್ರಮಂದಿರ, ಆಟದ ಬಯಲು ಇವು ಇದ್ದೇ ತೀರಬೇಕು. ಅನ್ನ, ಅರಿವೆ, ವಸತಿಗಳಂತೆಯೇ ಮನೋರಂಜನೆ ಕೂಡ ಜನಜೀವನದ ಒಂದು ಅಗತ್ಯ.

ಈ ಅಗತ್ಯವನ್ನು ಪೂರೈಸುವ ಸಲುವಾಗಿ ಹಲವಾರು ಲಾಭದಾಯಕ ಉದ್ಯಮಗಳು ಹುಟ್ಟಿಕೊಂಡಿವೆ. ಚಲನಚಿತ್ರ ಉದ್ಯಮವೂ ಹೌದು ; ಕಲೆಯೂ ಹೌದು. ಸಂಗೀತ, ನೃತ್ಯ ನಾಟಕಗಳು ಬರಿಯ ಹವ್ಯಾಸವಾಗಿ ಉಳಿದಿಲ್ಲ ; ಉದರಪೋಷಣೆಗೂ ನೆರವಾಗುತ್ತವೆ. ಸರ್ಕಸ್ ಜನಮನವನ್ನು ರಂಜಿಸುತ್ತದೆ. ಈಜುಕೊಳ, ಕ್ರೀಡಾಂಗಣ, ಆಟದ ಬಯಲು, ಗ್ರಂಥಭಂಡಾರ, ಇವೆಲ್ಲಕ್ಕೂ ಜನಜೀವನದಲ್ಲಿ ಸ್ಥಾನವಿದೆ. ಸಮುದಾಯ ವಿಕಾಸ ಯೋಜನೆಗಳಲ್ಲಿ ಮನೋರಂಜನೆಯೂ ಒಂದು ಅಂಶ. ಕ್ರೀಡೋತ್ಸವಗಳನ್ನೂ ಸ್ಪರ್ಧೆಗಳನ್ನೂ ಏರ್ಪಡಿಸುವುದರಲ್ಲಿ ಸರಕಾರವೂ ಸಾರ್ವಜನಿಕ ಸಂಘ ಸಂಸ್ಥೆಗಳೂ ಪಾಲುಗೊಳ್ಳುತ್ತವೆ.

ದೇಶದ ಜನರ ಜೀವನಮಟ್ಟವೂ ಮನೋರಂಜನೆಯನ್ನು ನಿರ್ಧರಿಸುತ್ತದೆ. ಮುಂದುವರಿದ ರಾಷ್ಟ್ರಗಳಲ್ಲಿ ಮನೋರಂಜನೆಗೋಸ್ಕರ ತಮ್ಮ ಸಂಪಾದನೆಯ ಒಂದಂಶವನ್ನು ಜನ ವೆಚ್ಚಮಾಡುತ್ತಾರೆ. ಅಮೆರಿಕ, ಇಂಗ್ಲೆಂಡ್ ಮುಂತಾದ ದೇಶಗಳಲ್ಲಿ ಮನೋರಂಜನೆಯ ಉದ್ಯಮಗಳಿಗೆ ಅವಕಾಶ ಹೆಚ್ಚು. ರಾತ್ರಿಯ ಕ್ಲಬ್ಬುಗಳು, ಇಸ್ಪೀಟು ಕೂಟಗಳು, ನಾಟ್ಯ ನಾಟಕ ಮಂದಿರಗಳು, ಟೆನಿಸ್, ಪೋಲೊ, ಬಿಲಿಯರ್ಡ್ಸ್ ಕ್ರೀಡೆಗಳು ಇವು ಆ ದೇಶಗಳಲ್ಲಿ ಬಹಳ ಬೆಳೆದಿವೆ.

ಮನೋರಂಜನೆಯ ಉದ್ಯಮಗಳು ಅಭಿವೃದ್ಧಿಗೊಂಡಂತೆ ಜೂಜುಗಾರಿಕೆ, ಮೋಸ, ಮರುಳುಗೊಳಿಸುವಿಕೆ–ಸಮಾಜಕ್ಕೆ ಕೆಟ್ಟದನ್ನು ಮಾಡುವ ಈ ಪ್ರವೃತ್ತಿಗಳೂ ಬೆಳೆಯುತ್ತವೆ. ಆದ್ದರಿಂದ ಸರಕಾರಗಳು ಮನೋರಂಜನೆ ಉದ್ಯಮಗಳ ಮೇಲೆ ನಿಯಂತ್ರಣವನ್ನು ಹೇರುತ್ತವೆ. ಅವುಗಳನ್ನು ನಡೆಸಲು ಸರಕಾರದ ಅನುಮತಿ ಬೇಕು. ಕ್ರೀಡೆಗಳು ನಡೆಯುವ ಸ್ಥಳದಲ್ಲಿ ಸಂಭವಿಸಬಹುದಾದ ಬೆಂಕಿ ಮುಂತಾದ ಅಪಘಾತಗಳಿಂದ ತತ್‌ಕ್ಷಣದ ರಕ್ಷಣೆಗೆ ವ್ಯವಸ್ಥೆಗಳಿರಬೇಕು. ಒಳ್ಳೆಯ ಗಾಳಿ ಒಳಕ್ಕೆ ಬರುವಂತಿರಬೇಕು. ಜನರಿಗೆ ಕೂಡಲು ಅನುಕೂಲವಾದ ಆಸನಗಳನ್ನು ಒದಗಿಸಬೇಕು. ಈ ಅಗತ್ಯಗಳನ್ನು ಹೆಚ್ಚು ಹೆಚ್ಚು ಪೂರೈಸಿದಂತೆ ಮನೋರಂಜನೆ ಜನರ ಪಾಲಿಗೆ

ದುಬಾರಿಯಾಗುತ್ತದೆ. ಮನೋರಂಜನೆಯ ಮೇಲೆ ಸರಕಾರಗಳು ತೆರಿಗೆ ವಿಧಿಸುವುದೂ ಉಂಟು.

ಜನರ ಅಭಿರುಚಿ ತಿದ್ದುವುದರಲ್ಲಿ, ಅನಕ್ಷರಸ್ಥರಿಗೆ ವಿಷಯಗಳನ್ನು ತಿಳಿಸುವುದರಲ್ಲಿ ಮನೋರಂಜನೆ ಒಂದು ಮಾಧ್ಯಮವಾಗುತ್ತದೆ. ಭಾರತದಲ್ಲಿ ಚಲನಚಿತ್ರ ವಿಭಾಗ ಸಿದ್ಧಪಡಿಸುವ ವಾರ್ತಾ ಚಿತ್ರಗಳು, ಕಿರುಚಿತ್ರಗಳು ದೇಶದಲ್ಲಿ ನಡೆಯುತ್ತಿರುವುದನ್ನು ತೋರಿಸುವುದಲ್ಲದೆ ಮನೋರಂಜನೆಯನ್ನು ನೀಡುತ್ತವೆ. ಗ್ರಾಮೀಣ ಪ್ರದೇಶಗಳಲ್ಲಿ ಸಂಜೆ ವೇಳೆ ರೇಡಿಯೊ ಕಾರ್ಯಕ್ರಮಗಳನ್ನು ಬಿತ್ತರಿಸುತ್ತಾರೆ.

ಎಲ್ಲ ದೇಶಗಳಲ್ಲೂ ಶಾಲೆ ಕಾಲೇಜುಗಳು ಮನೋರಂಜನೆಯಲ್ಲಿ ಒಳ್ಳೆಯ ಅಭಿರುಚಿ ಮೂಡಿಸಲು ಶ್ರಮಿಸುತ್ತವೆ. ಚರ್ಚಾಸ್ಪರ್ಧೆ, ನಾಟಕ ಪ್ರದರ್ಶನ, ಉದ್ಯಾನವ್ಯವಸ್ಥೆ ಮುಂತಾದ ಪಠ್ಯೇತರ ಚಟುವಟಿಕೆಗಳು ವಿದ್ಯಾರ್ಥಿಗಳ ಮಾನಸಿಕ ಹಾಗೂ ದೈಹಿಕ ಆರೋಗ್ಯವನ್ನು ಕಾಪಾಡುತ್ತವೆ.

ಭಾರತದ ಜಾತ್ರೆಗಳ ಮನೋರಂಜನೆಗಳು ಬಹಳ ಹಿಂದಿನಿಂದಲೂ ಹೆಸರು ಪಡೆದಿವೆ. ಟಗರು–ಕೋಳಿ ಪಂದ್ಯಗಳು, ಕುಸ್ತಿ, ಕುಣಿತಗಳು; ಯಕ್ಷಗಾನ ಬಯಲಾಟ; ಇವು ಜಾತ್ರೆಯ ಮನೋರಂಜನೆಯ ಅಂಶಗಳಾಗಿರುತ್ತವೆ. ಇಡೀ ರಾತ್ರಿ ನಡೆಯುವ ಯಕ್ಷಗಾನ ಮತ್ತು ಬಯಲಾಟಗಳು ಇತರ ಸಂದರ್ಭಗಳಲ್ಲೂ ಗ್ರಾಮಾಂತರ ಪ್ರದೇಶಗಳಲ್ಲಿ ನಡೆಯುತ್ತವೆ.

ದೇಶದ ಮನೋರಂಜನೆಯ ವಿಧಾನಗಳು ಜನರ ಸ್ವಭಾವ ಮತ್ತು ಪ್ರವೃತ್ತಿಗಳನ್ನು ನಿರೂಪಿಸುತ್ತವೆ. ಮನೋರಂಜನೆಯ ಕಾರ್ಯಕ್ರಮಗಳಿಂದ ಕಲೆ ಸಾಹಿತ್ಯಗಳ ಪ್ರಗತಿಯೂ ಆಗುತ್ತದೆ. ಆಧುನಿಕ ನಾಗರಿಕತೆಯಲ್ಲಿ ಮನೋರಂಜನೆ ಹಲವು ಸಮಸ್ಯೆಗಳನ್ನು ಉಂಟುಮಾಡುತ್ತದೆ. ಜನಸಂಖ್ಯೆ ಏರಿದಂತೆ, ಮನೆಗಳಿಗೆ ಸ್ಥಳ ಬೇಕಾಗಿ, ಆಟದ ಮೈದಾನಗಳನ್ನು ಮಾಡಿಕೊಡುವುದು ಕಷ್ಟವಾಗುತ್ತದೆ. ಮನೋರಂಜನೆ ಒದಗಿಸಲು ಮನಸ್ಸಿಗೆ ಆರೋಗ್ಯಕರವಲ್ಲದ ಕಥೆಯ ಪುಸ್ತಕಗಳನ್ನು, ಚಲನಚಿತ್ರಗಳನ್ನು ಕೆಲವರು ಹಣಕ್ಕಾಗಿ ಸೃಷ್ಟಿಮಾಡುತ್ತಾರೆ. ಹಿಂದಿನ ಕಾಲದ ಹಳ್ಳಿಗಳ ಮನೋರಂಜನೆಯಲ್ಲಿ ಸಾಮಾನ್ಯವಾಗಿ ಎಲ್ಲರೂ ಭಾಗವಹಿಸುತ್ತಿದ್ದರು. ಅವರ ಹಾಡುಗಳು, ಕುಣಿತಗಳು, ಲಗ್ಗೆಚೆಂಡಿನಂಥ ಆಟಗಳು–ಇವುಗಳಲ್ಲಿ ಎಲ್ಲರ ಪಾತ್ರವಿರುತ್ತಿತ್ತು ; ಎಲ್ಲರ ದೇಹ ಮತ್ತು ಮನಸ್ಸಿಗೆ ಕೆಲಸವಿರುತ್ತಿತ್ತು. ಈಗ ಇಂಥ ಸಂಘಕ್ರೀಡೆಗಳು ಕಡಮೆಯಾಗಿವೆ. ಹಿಂದೆ ಹಾಡಿನಲ್ಲಿ ನೃತ್ಯದಲ್ಲಿ ವೈವಿಧ್ಯವಿರುತ್ತಿತ್ತು. ಒಬ್ಬೊಬ್ಬರ ಮನೆಯಲ್ಲಿ ಒಂದೊಂದು ಹಾಡು, ಬೇರೆ ಬೇರೆ ಬಗೆಯ ಸಂಗೀತ ಇರುತ್ತಿತ್ತು. ಈಗ ಎಲ್ಲರೂ ಏಕಕಾಲದಲ್ಲಿ ರೇಡಿಯೊದಲ್ಲಿ ಅದೇ ಹಾಡುಗಳನ್ನು ಕೇಳುತ್ತಾರೆ. ಚಲನಚಿತ್ರ ಮಂದಿರದಲ್ಲಿ ಅದೇ ಚಿತ್ರಗಳನ್ನು ನೋಡುತ್ತಾರೆ. ಇದು ಆಧುನಿಕ ಮನೋರಂಜನೆಯ ಇನ್ನೊಂದು ಮುಖ.

## ಮನೋವಿಜ್ಞಾನ

ಮಂಚದ ಮೇಲೆ ಮಲಗಿ ಕಣ್ಣು ಮುಚ್ಚಿಕೊಂಡು ಸಮುದ್ರದ ಮೇಲೆ ಹಡಗಿನಲ್ಲಿ ಹೋಗುತ್ತಿರುವಂತೆಯೋ ಇಲ್ಲವೆ ಆಕಾಶದಲ್ಲಿ ವಿಮಾನದಲ್ಲಿ ಹಾರುತ್ತಿರುವಂತೆಯೋ ಕಲ್ಪಿಸಿಕೊಳ್ಳಬಹುದು.

ಮಾವಿನಹಣ್ಣು ತಿನ್ನುವಾಗ ಹಿಂದೆ ಯಾವಾಗಲೋ ಮಾವಿನಮರ ಹತ್ತಲು ಹೋಗಿ ಮರದಿಂದ ಬಿದ್ದು ಕಾಲು ಮುರಿದುಕೊಂಡ ಘಟನೆ ಜ್ಞಾಪಕಕ್ಕೆ ಬರಬಹುದು.

ಕತ್ತಲೆಯಲ್ಲಿ ಹೋಗುವಾಗ ಹಾವಿದೆ ಎನಿಸಿ ಅಥವಾ ಕಳ್ಳರ ನೆನಪಾಗಿ ಮೈ ಜುಮ್ ಎನ್ನಬಹುದು.

ಯಾವುದೋ ಅಪ್ರಿಯ ಘಟನೆಯಿಂದಾಗಿ ನಮಗೆ ಯಾವ ಕೆಲಸವನ್ನೂ ಮಾಡಲು ಆಗದೆ ಹೋಗಬಹುದು, ದೈಹಿಕ ಕಾಯಿಲೆ ಇಲ್ಲದಿದ್ದರೂ ನಿದ್ದೆ ಬಾರದಿರಬಹುದು, ಊಟ ಸೇರದಿರಬಹುದು. ಪರೀಕ್ಷೆಗೆ ಹೆದರುವ ವಿದ್ಯಾರ್ಥಿ, ಪರೀಕ್ಷೆ ಬಂದ ಕೂಡಲೆ ಅಸ್ವಸ್ಥನಾಗಬಹುದು.

ಹಣ ಕಳೆದುಕೊಂಡು ಹುಚ್ಚೇ ಹಿಡಿಯಬಹುದು. ಕೋಪ ಬರು[illegible] ರೇಗಾಡಬಹುದು. ದ್ವೇಷದಿಂದ ಹೊಡೆದು ಬಡಿದಾಡಬಹುದು. ಅತ್ಯಾಸೆಯಿಂದ ಕೊಲೆ ಮಾಡಬಹುದು.

ಇವೆಲ್ಲಕ್ಕೂ ಮೂಲ ಕಾರಣ ಮನಸ್ಸು ಎನ್ನುತ್ತೇವೆ. ಮನಸ್ಸನ್ನು ಅಭ್ಯಸಿಸುವ ವಿಜ್ಞಾನ ಮನೋವಿಜ್ಞಾನ ಎಂದು ಸಾಮಾನ್ಯವಾಗಿ ಹೇಳುತ್ತೇವೆ. ಇದು ಸಮರ್ಪಕವಾದ ವಿವರಣೆಯಲ್ಲ. ಮನಸ್ಸು ಎನ್ನುವುದು ಖಚಿತ ವಿವರಣೆಗೆ ಸಿಗುವುದಿಲ್ಲ. ವೈಜ್ಞಾನಿಕ ರೀತಿಯಲ್ಲಿ ಪ್ರಯೋಗಗಳನ್ನು ಮಾಡಿ ಅಭ್ಯಾಸ ಮಾಡಲು ಸಾಧ್ಯವಿಲ್ಲ. ಆದ್ದರಿಂದ 'ಮನಸ್ಸು' ಎನ್ನುವುದರ ಬದಲು 'ಮನುಷ್ಯನ ವರ್ತನೆ ಮತ್ತು ಆಂತರಿಕ ಅನುಭವಗಳು' ಎನ್ನುತ್ತಾರೆ.

ಮನೋವಿಜ್ಞಾನ ಬೆಳೆದದ್ದು ಹತ್ತೊಂಬತ್ತನೆಯ ಶತಮಾನದಿಂದ. ಈ ವಿಜ್ಞಾನದಲ್ಲಿ ಸಿಗ್ಮಂಡ್ ಫ್ರಾಯ್ಡ್ (1856–1939) ಹೆಸರುವಾಸಿ. ಇವನಿಂದಾಗಿ ಮನೋರೋಗಿಗಳ ಚಿಕಿತ್ಸೆಯಲ್ಲಿಯೂ ಬಹಳ ಬದಲಾವಣೆಯಾಯಿತು.

ದೇಹ ಆರೋಗ್ಯವಾಗಿದ್ದರೂ ಮನಸ್ಸಿನ ಗೊಂದಲದಿಂದ ಕಾಯಿಲೆಗಳು ಬರಬಹುದು. ಕಾಯಿಲೆಯ ಬೇರನ್ನು ಮನಸ್ಸಿನಲ್ಲಿ ಹುಡುಕಿ ಕಿತ್ತೊಗೆದರೆ ಮಾತ್ರ ಕಾಯಿಲೆ ವಾಸಿಯಾದೀತು. ಇದಕ್ಕೆ ಮನೋವಿಜ್ಞಾನ ಸಹಾಯಕವಾಗಿದೆ. ಹಿಂದೆ ಹುಚ್ಚು ಹಿಡಿದರೆ ದೆವ್ವದ ಕಾಟ ಎಂದು ರೋಗಿಗೆ ಹಿಂಸೆ ಕೊಡುತ್ತಿದ್ದುದುಂಟು. ಈಗ ಇಂಥ ರೋಗಿಗಳ ಚಿಕಿತ್ಸೆಗೆ ಮನೋವಿಜ್ಞಾನ ನೆರವಾಗುತ್ತದೆ. ಉಳಿದೆಲ್ಲ ವೈಜ್ಞಾನಿಕ ಅಧ್ಯಯನಗಳಂತೆ ಮನೋವಿಜ್ಞಾನದಲ್ಲೂ ಸತ್ಯವನ್ನು ತಿಳಿಯುವುದೇ ಮೂಲೋದ್ದೇಶ. ತಿಳಿದುಬಂದ ವಿಷಯಗಳಿಂದ ಹೆಚ್ಚಿನ ಸಂಶೋಧನೆ ನಡೆಸಿ ಮಾನವನ ಹಿತವನ್ನು ಸಾಧಿಸಬಹುದು.

ಮನೋವಿಜ್ಞಾನ ಇಂದು ವಿವಿಧ ಪ್ರಕಾರಗಳಲ್ಲಿ ಬಹಳವಾಗಿ ಅಭಿವೃದ್ಧಿಹೊಂದಿದೆ. ಬಾಲರ ಮನೋವಿಜ್ಞಾನ, ಶೈಕ್ಷಣಿಕ ಮನೋವಿಜ್ಞಾನ, ವೈದ್ಯಕೀಯ ಮನೋವಿಜ್ಞಾನ, ಮನೋವಿಶ್ಲೇಷಣೆ, ಕೈಗಾರಿಕಾ ಮನೋವಿಜ್ಞಾನ, ಅನ್ವಯ ಮನೋವಿಜ್ಞಾನ ಹೀಗೆ ವಿವಿಧ ಭಾಗಗಳಿವೆ. ಪ್ರತಿ ಶಾಖೆಯೂ ಅದ್ಭುತವಾಗಿ ಬೆಳೆದಿದೆ.

ಮನೋವ್ಯಾಪಾರದ ಬಗೆಗೆ, ಮಾನವನ ವರ್ತನೆಯ ಬಗೆಗೆ ತಿಳಿಯಲು ವಸ್ತುಸ್ಥಿತಿ, ವ್ಯಕ್ತಿತ್ವ, ಸುತ್ತಮುತ್ತಲಿನ ಸ್ಥಿತಿ, ಆನುವಂಶತೆ, ಸಮಾಜದ ಪ್ರಭಾವ. ಗತಕಾಲದ ಆಗುಹೋಗುಗಳು, ಕುಟುಂಬಜೀವನ, ವ್ಯಕ್ತಿ ವ್ಯಕ್ತಿಯ ನಡುವಿನ ಸಂಬಂಧ, ಮಾನವನ ಸಹಜ ಆಸೆ ಆಕಾಂಕ್ಷೆಗಳು. ಇವೆಲ್ಲವನ್ನೂ ಮನೋವಿಜ್ಞಾನ ಅಭ್ಯಾಸ ಮಾಡಬೇಕು.

ಮನೋವಿಜ್ಞಾನದ ಸ್ಫೂರ್ತಿಯಿಂದ ಅನೇಕ ಉದ್ದಾಮ ಕೃತಿಗಳು ವಿಶ್ವ ಸಾಹಿತ್ಯದಲ್ಲಿ ಸೃಷ್ಟಿಯಾಗಿವೆ.

ನೋಡಿ : ಫ್ರಾಯ್ಡ್, ಸಿಗ್ಮಂಡ್
[illegible] : [illegible]

## ಮರುಭೂಮಿ

ನೀರಿಲ್ಲ. ನೆರಳಿಲ್ಲ. ಸಮೃದ್ಧವಾಗಿರುವುದು ಒಂದೇ ಒಂದು. ಅದು ಮರಳು. ಈ ನೆಲದಲ್ಲಿ ಈ ಹವಾಗುಣಕ್ಕೆ ಒಗ್ಗುವ ವಿಶೇಷ ಪ್ರಾಣಿಗಳು ಮತ್ತು ಸಸ್ಯಗಳನ್ನು ಬಿಟ್ಟರೆ ಮತ್ತಾವುವೂ ಇಲ್ಲಿ ಬಾಳುವುದಿಲ್ಲ. ವಿಸ್ಮಯದ ಸಂಗತಿ ಎಂದರೆ, ಏನೂ ಬೆಳೆಯದ ಈ ಮರುಭೂಮಿಗಳು ಬೆಳೆಯನ್ನು ಹೆಚ್ಚಿಸಲು ನೆರವಾಗಬಹುದು. ದಕ್ಷಿಣ ಅಮೆರಿಕದ ತಮರುಗಲ್ ಮತ್ತು ಅಟಕಾಮ ಮರುಭೂಮಿಗಳು ಲಕ್ಷಾಂತರ ಮೆಟ್ರಿಕ್ ಟನ್ ಪೆಟ್ಲುಪ್ಪನ್ನು (ಯವಾ ಕ್ಷಾರ) ಒದಗಿಸುತ್ತವೆ. ಅಟಕಾಮ ಕೃತಕ ಗೊಬ್ಬರವನ್ನೂ ಕೊಡುತ್ತದೆ !

ಮರುಭೂಮಿ ವರ್ಷಕ್ಕೆ 25.4 ಸೆಂಟಿಮೀಟರ್‌ಗಳಿಗಿಂತಲೂ ಕಡಮೆ ಮಳೆ ಬೀಳುವ ಶುಷ್ಕ ಭೂಮಿ. ಒಂದು ಪ್ರದೇಶ ಮರುಭೂಮಿಯಾಗಲು ಮಳೆಯ ಅಭಾವ ಮುಖ್ಯ ಕಾರಣ. ಸಾಗರಗಳಿಂದ ಬಹಳ ದೂರವಿರುವ ಪ್ರದೇಶಗಳು ಮರುಭೂಮಿಗಳಾಗುತ್ತವೆ. ಮಳೆಯ ಮಾರುತಗಳು ಬೀಸುವ ದಿಕ್ಕಿಗೆ ಎದುರಾಗಿ ಎತ್ತರವಾದ ಪರ್ವತಗಳಿದ್ದರೆ ಅದರ ಮತ್ತೊಂದು ಪಕ್ಕ ಮರುಭೂಮಿಯೇ. ಸಹಸ್ರ ಸಹಸ್ರ ವರ್ಷಗಳ ಅವಧಿಯಲ್ಲಿ ಬಂಡೆಗಳು ಸೂರ್ಯ ತಾಪಕ್ಕೆ ಕಾದು ಕಾದು, ಒಡೆದು ಪುಡಿಯಾಗಿ ಮರಳಾಗುತ್ತವೆ. ಮರುಭೂಮಿಗಳು ಆಫ್ರಿಕದ ಸಹಾರ ಮರುಭೂಮಿಯಂತೆ ಉಷ್ಣ ಭೂಮಿ. ಇಲ್ಲವೆ ಸೈಬೀರಿಯದ ತಂದ್ರಾ ಮರುಭೂಮಿಯಂತೆ ಶೀತ ಮರುಭೂಮಿ ಆಗಿರಬಹುದು. ಅಧಿಕವಾದ ಬಿಸಿಲು ಸಹಾರ ಮರುಭೂಮಿಯಾಗಲು ಕಾರಣವಾದರೆ ಆ ಬಿಸಿಲಿನ ಅಭಾವವೇ ತಂದ್ರಾ ಮರುಭೂಮಿಗೆ ಕಾರಣ.

ಮರುಭೂಮಿಗಳ ಹವಾಗುಣದಲ್ಲಿ ವೈಪರೀತ್ಯವಿರುತ್ತದೆ. ಸಾಮಾನ್ಯವಾಗಿ ಮೋಡಗಳಿಲ್ಲದ ಆಕಾಶ. ಪ್ರಖರ ಸೂರ್ಯಪ್ರಕಾಶ. ಸ್ವಲ್ಪ ಮಳೆ ಬಿದ್ದರೂ ಒಡನೆಯೇ ನೀರು ಆವಿಯಾಗಿ ಬಿಡುತ್ತದೆ. ಸಹಾರದಂಥ ಉಷ್ಣ ಮರುಭೂಮಿಯಲ್ಲಿ ಹಗಲಿನಲ್ಲಿ ಬಹಳ ಬಿಸಿಲು. ಕೆಲವು ಬಾರಿ 135° ಫಾ. ವರೆಗೆ ಉಷ್ಣತೆ ಏರುವುದುಂಟು. ಚಿಲಿ ದೇಶದ ಅಟಕಾಮ ಮರುಭೂಮಿಯಲ್ಲಿ ಹಗಲಿನಲ್ಲಿ 145° ಫಾ. ವರೆಗೆ ಉಷ್ಣ : ಶೀತ ಕಾಲದಲ್ಲಿ 70° ಫಾ. ನಷ್ಟು ಕಡಮೆ.

ಮರುಭೂಮಿಗಳಲ್ಲಿ ಮಳೆ ಬೀಳುವುದು ಬಹಳ ಅಲ್ಪ ಪ್ರಮಾಣದಲ್ಲಿ: ಬೀಳುವುದೂ ಅನಿಶ್ಚಿತ. ಒಂದು ಹದ ಮಳೆ ಬಿದ್ದು ಮತ್ತೊಂದು ಹದ ಬೀಳುವ ವೇಳೆಗೆ ವರ್ಷಗಳೇ ಉರುಳಿಹೋಗಬಹುದು. ಚಿಲಿ ದೇಶದ ಅಟಕಾಮ ಮರುಭೂಮಿಯಲ್ಲಿ ಒಮ್ಮೆ ಮಳೆ ಬಿದ್ದಮೇಲೆ ಮತ್ತೆ ನಾಲ್ಕು ವರ್ಷಗಳ ಕಾಲ ಒಂದಿಷ್ಟೂ ಮಳೆ ಬಂದಿರಲಿಲ್ಲ. ಐದನೆಯ ವರ್ಷ 1.5 ಸೆಂಟಿ ಮೀಟರುಗಳಷ್ಟು ಮಳೆಯಾಯಿತು. ಮತ್ತೊಮ್ಮೆ ಒಂದೇ ಬಾರಿಗೆ 6.4 ಸೆಂಟಿಮೀಟರು ಮಳೆ. ಮಳೆ ಎಷ್ಟೇ ಬಿದ್ದರೂ ಸುಡು ನೆಲವನ್ನು ಮುಟ್ಟಿದೊಡನೆ ಆವಿಯಾಗುತ್ತದೆ.

ಮರುಭೂಮಿಯ ಬಿಸಿ ಮರಳಿನ ಮೇಲೂ ಸಹ ಕೆಲವೆಡೆ ಕಣ್ಣಿಗೆ ತಂಪೆನಿಸುವ ಮರಗಳ ಗುಂಪು ಕಂಡುಬರುತ್ತವೆ. ಇವೇ ಓಯಸಿಸ್. ಓಯಸಿಸ್ ಇಲ್ಲದಿರುವಾಗಲೂ ಮರಳುಗಾಡಿನಲ್ಲಿ ನಡೆದಂತೆ ದೂರದಲ್ಲಿ ನೀರನ್ನು ಕಂಡಂತೆ ಭ್ರಮೆಯಾಗುವುದು ಮರುಭೂಮಿಯ ವೈಚಿತ್ರ್ಯ.

ಮರುಭೂಮಿಯಲ್ಲಿ ಜೀವಿಸುವ ಪ್ರಾಣಿ ಮತ್ತು ಸಸ್ಯಗಳಿಗೆ ಅಲ್ಲಿನ ಹವಾಗುಣಕ್ಕೆ ಹೊಂದಿಕೆಯಾಗುವಂಥ ಸ್ವರೂಪವಿರುತ್ತದೆ. ಒಂಟೆ. ಮರುಭೂಮಿಯ ಹಡಗು. ಒಂಟೆಯಿಂದಲೇ ಅಲ್ಲಿ ವ್ಯಾಪಾರೋದ್ಯಮ. ಮರುಭೂಮಿಯಲ್ಲಿ ನೀರು ದೊರಕುವುದಿಲ್ಲ. ಅದ್ದರಿಂದ ಒಂಟೆ ತನ್ನ ಡುಬ್ಬದಲ್ಲಿ ನೀರು ತುಂಬಿಕೊಂಡಿದ್ದು ಬಾಯಾರಿಕೆಯನ್ನು ನೀಗಿಕೊಳ್ಳುತ್ತದೆ. ಮರುಭೂಮಿಯಲ್ಲಿ ನಡೆಯಲು ಅನುಕೂಲವಾಗುವಂತೆ ಅದರ ಕಾಲುಗಳು ನೀಳವಾಗಿ ಪಾದ ಅಗಲವಾಗಿದೆ. ಕಾಂಗರೂ ಸಹ ನೀರಿಗಾಗಿ ಬಹು ದೂರ ಪ್ರಯಾಣ ಮಾಡುವ ಪ್ರಾಣಿ. ಬೇಸಿಗೆಯನ್ನು ಬಹ್ವಂಶ ಪ್ರಾಣಿಗಳು ನಿದ್ದೆಯಲ್ಲೇ ಕಳೆಯುತ್ತವೆ.

ಮರುಭೂಮಿಯಲ್ಲಿ ಹೆಚ್ಚಾಗಿ ಬೆಳೆಯುವುದು ಕಳ್ಳಿಗಿಡ. ಕಳ್ಳಿ ತನ್ನ ದಪ್ಪವಾದ ಕಾಂಡದಲ್ಲಿ ನೀರನ್ನು ತುಂಬಿಕೊಂಡು ಅದರ ಸಹಾಯದಿಂದ ಬೆಳೆಯುತ್ತದೆ. ಮಿಕ್ಕ ಕುರುಚಲು ಗಿಡಗಳ ಬೇರು ಆಳವಾಗಿ ಭೂಮಿಯೊಳಕ್ಕೆ ಇಳಿದು ಅಲ್ಲಿ ವಿಶಾಲವಾಗಿ ಹರಡಿಕೊಂಡು ನೀರನ್ನು ಸಂಪಾದಿಸುತ್ತವೆ. ಖರ್ಜೂರ ಮರಳುಗಾಡು ನೀಡುವ ಸಿಹಿ ಹಣ್ಣು. ಮರುಭೂಮಿಯಲ್ಲಿ ವಾಸಿಸುವ ಮನುಷ್ಯರು ಅಲ್ಲಿನ ವಾತಾವರಣಕ್ಕೆ ಹೊಂದಿಕೊಂಡಿರುತ್ತಾರೆ. ಅಲ್ಲಿನ ನಿವಾಸಿಗಳು ಇತರರಿಗಿಂತ ಕಡಮೆ ಆಹಾರ ಸೇವಿಸಿ ಜೀವಿಸಬಲ್ಲರು. ಸಾಧಾರಣವಾಗಿ ಓಯಸಿಸ್‌ಗಳ ಬಳಿಯಲ್ಲಿಯೇ ಮಾನವರ ವಾಸ.

ಪ್ರಪಂಚದಲ್ಲಿ ಹನ್ನೊಂದು ಪ್ರಮುಖ ಮರುಭೂಮಿಗಳಿವೆ. ಅತ್ಯಂತ ವಿಸ್ತಾರ ಮರುಭೂಮಿ ಉತ್ತರ ಆಫ್ರಿಕದ ಸಹಾರ. ಇದು ಪೂರ್ವದಲ್ಲಿ ಕೆಂಪು ಸಮುದ್ರದಿಂದ ಪಶ್ಚಿಮದಲ್ಲಿ ಅಟ್ಲಾಂಟಿಕ್‌ವರೆಗೆ 4.827 ಕಿಲೊಮೀಟರು ಉದ್ದ ಹಬ್ಬಿದೆ. ಉತ್ತರದಿಂದ ದಕ್ಷಿಣಕ್ಕೆ ಸರಾಸರಿ ಇದರ ಅಗಲ 965 ಕಿಲೊಮೀಟರು. ಇದರ ವಿಸ್ತೀರ್ಣ ಯೂರೋಪಿನ ಮೂರರಲ್ಲಿ ಎರಡು ಭಾಗದಷ್ಟು. ನಾಗರಿಕತೆ ಪ್ರಾರಂಭವಾದದ್ದು ಇಲ್ಲಿ ಎಂದು ಹಲವರು ಪುರಾತತ್ತ್ವ ಶೋಧಕರು ಅಭಿಪ್ರಾಯ ಪಟ್ಟಿದ್ದಾರೆ. ಮಧ್ಯಸಹಾರದ ಗುಹೆಗಳಲ್ಲಿ ನೂರಾರು ಚಿತ್ರಗಳು ಕಂಡುಬಂದಿವೆ. ನೀರು ಬತ್ತಿದುದರಿಂದ ಇಲ್ಲಿದ್ದವರು ನೈಲ್‌ನದಿಯತ್ತ ಹೋಗಿರಬೇಕು. ಆಫ್ರಿಕ ಖಂಡದಲ್ಲಿ ಕಲಾಹಾರಿ. ಗೋಬಿ ಎಂಬ ಮತ್ತೆರಡು ಮರುಭೂಮಿಗಳಿವೆ: ಭಾರತದಲ್ಲಿ ಥಾರ್ ಮರುಭೂಮಿಯಿದೆ. ಯೂರೋಪ್ ಬಿಟ್ಟು ಮಿಕ್ಕೆಲ್ಲ ಭೂಖಂಡಗಳಲ್ಲಿಯೂ ವಿಸ್ತಾರ ಮರುಭೂಮಿಗಳಿವೆ. ಭೂಮಿಯ ವಿಸ್ತೀರ್ಣದಲ್ಲಿ ಐದರಲ್ಲೊಂದು ಭಾಗ ಮರುಭೂಮಿಯೇ.

ಕೆಲವು ಮರುಭೂಮಿ ಪ್ರದೇಶಗಳಲ್ಲಿ ತೈಲದ ಖನಿಜ ಸಂಪತ್ತು ಸಮೃದ್ಧವಾಗಿದೆ. ಇರಾಕ್, ಇರಾನ್ ಮುಂತಾದ ದೇಶಗಳು ತೈಲದ ಉತ್ಪನ್ನದಿಂದಲೇ ತಮ್ಮ ಆರ್ಥಿಕಸ್ಥಿತಿಯನ್ನು ಉತ್ತಮಪಡಿಸಿಕೊಂಡಿವೆ. ಸಹಾರದಲ್ಲಿ 1,220 ಮೀಟರುಗಳ ಕೆಳಗೆ ಒಂದು ವಿಶಾಲ ಸರೋವರ ಇದೆ ಎಂದು ಭೂಗರ್ಭಶಾಸ್ತ್ರಜ್ಞರು ಕಂಡುಹಿಡಿದಿದ್ದಾರೆ. ಇದು 805 ಕಿಲೊಮೀಟರು ಉದ್ದವಿದ್ದು, 80ರಿಂದ 241 ಕಿಲೊಮೀಟರು ಅಗಲವಿದೆ. ಈ ನೀರನ್ನು ಮೇಲಕ್ಕೆ ತರಲು ಸಾಧ್ಯವಾದರೆ ಎಷ್ಟೋ ಭಾಗ ಫಲವತ್ತಾಗಬಹುದು.

ಆಧುನಿಕ ನೀರಾವರಿ ಯೋಜನೆಗಳ ಸಹಾಯದಿಂದ ಮರುಭೂಮಿಯನ್ನು ನೆಲೆಸಲು ಯೋಗ್ಯವಾಗುವಂತೆ ಮಾಡುತ್ತಿದ್ದಾರೆ. ಅರಿಜೋನಾದಲ್ಲಿ ಮರುಭೂಮಿ ಪ್ರದೇಶ ಮಾನವನ ಪ್ರಯತ್ನದಿಂದ ಫಲವತ್ತಾದ ಪ್ರದೇಶವಾಗಿದೆ. ಪ್ಯಾಲೆಸ್ಟೈನ್ ಮರುಭೂಮಿ ಪ್ರದೇಶವನ್ನು ಇದೇ ರೀತಿಯಾಗಿ ಇಸ್ರೇಲರು ಹಸನುಗೊಳಿಸಿದ್ದಾರೆ.

ನೋಡಿ : ಓಯಸಿಸ್

## ಮಲೇಷ್ಯ

ಮಲಯ ಒಕ್ಕೂಟ. ಸ್ವಯಮಾಡಳಿತದ ಸಿಂಗಪುರ. ಬ್ರಿಟಿಷ್ ವಸಾಹತುಗಳಾಗಿದ್ದ ಸಾರವಾಕ್ ಮತ್ತು ಸಬಾಹ್ (ಉತ್ತರ ಬೋರ್ನಿಯೊ)ಗಳು ಸೇರಿ 1963 ಸೆಪ್ಟೆಂಬರ್ 16ರಂದು ಮಲೇಷ್ಯ ಎಂದಾಯಿತು. ಎರಡು ವರ್ಷಗಳ ತರುವಾಯ ಸಿಂಗಪುರ ಒಕ್ಕೂಟದಿಂದ ಹಿಂದೆಗೆದು ಸ್ವತಂತ್ರವಾಯಿತು. ಮಲಯ ಮತ್ತು ಸಾರವಾಕ್ – ಸಬಾಹ್‌ಗಳ ನಡುವೆ 641 ಕಿಲೊಮೀಟರು ಸಾಗರ ಇದೆ.

ಮಲಯಕ್ಕೆ ಭಾರತದ ಕೊಡುಗೆ ಅಪಾರ. ಆಗ್ನೇಯ ಏಷ್ಯದ ಮೊದಲನೆಯ ಪ್ರಮುಖ ಹಿಂದೂ ರಾಜ್ಯ ಫೌನಾನ್. ಇದು ಉತ್ತರ ಮಲಯ. ಥೈಲೆಂಡ್ ಮತ್ತು ಇಂಡೋಚೀನಗಳನ್ನು ಒಳಗೊಂಡಿತ್ತು. ಲಂಗ್‌ಕಸುಕ ಎಂಬ ಬೌದ್ಧ ರಾಜ್ಯ ಈ ಹಿಂದೂರಾಜ್ಯದ ಅಧೀನ ರಾಜ್ಯವಾಗಿದ್ದಿರಬೇಕು. ಭಾರತ ಮಲಯಕ್ಕೆ ವರ್ಣಮಾಲೆ. ಮತಗಳು, ಜ್ಯೋತಿಷ್ಯ. ವೈದ್ಯಶಾಸ್ತ್ರ. ಕಾನೂನು. ರಾಜಕೀಯ ವ್ಯವಸ್ಥೆ. ಸಾಹಿತ್ಯ. ಚಿನ್ನ ಮತ್ತು ಬೆಳ್ಳಿ ಕೆಲಸ ಮಾಡುವಿಕೆ. ರೇಷ್ಮೆಯ ನೆಯ್ಗೆ ಮೊದಲಾದುವನ್ನು ನೀಡಿತು. ಪರ್ಷಿಯದವರ ಮಾದರಿಯಲ್ಲಿ ಭಾರತದಲ್ಲಿ ಹಡಗುಗಳು ನಿರ್ಮಾಣವಾಗಿ. ಬೌದ್ಧ ಧರ್ಮ ಹರಡಿ. ಸಾಗರದಾಟುವುದಕ್ಕೆ ಮತೀಯ ವಿರೋಧಗಳಾವುವೂ ಉಳಿಯದಿದ್ದಾಗ ಭಾರತೀಯರು ಇಂಡೊನೇಷ್ಯ ಮತ್ತು ಮಲಯಗಳಿಗೆ ಹಡಗಿನಲ್ಲಿ ಬರಲಾರಂಭಿಸಿದರು. ಕೇಡಾ ಮತ್ತು ವೆಲೆಸ್ಲಿಗಳಲ್ಲಿ ನಾಲ್ಕನೆಯ ಶತಮಾನದ ಸಂಸ್ಕೃತ ಶಾಸನಗಳು. ಕೇಡಾ ಮತ್ತು ಪೆರಾಕ್‌ಗಳಲ್ಲಿ ದೊರೆತ ಬೌದ್ಧರ ಕುಮಾಕುಂಚಿನ ವಸ್ತುಗಳು. ಮಲಯಕ್ಕೆ ಭಾರತದಿಂದ ಬಂದ ಮೊದಲಿಗರು ಬೌದ್ಧರೆಂಬುದನ್ನು ಸೂಚಿಸುತ್ತವೆ. 1025ರಲ್ಲಿ ಚೋಳ ದೊರೆ ಒಂದನೆಯ ರಾಜೇಂದ್ರ ಚೋಳನು ದೇವಪಲೆಂಬಾಂಗ್. ಸುಮಾತ್ರದ ಜಾಂಬಿ. ಲಂಗ್‌ಕಸುಕ ಮತ್ತು ಕೇಡಾಗಳನ್ನು ಗೆದ್ದನೆಂದು ಸಾರಿದ. ಆದರೆ ಹದಿಮೂರನೆಯ ಶತಮಾನದಲ್ಲಿ ಜಾಂಬಿ ಬೇರೆಯಾಯಿತು.

1400ರ ಸುಮಾರಿನಲ್ಲಿ ಮಲಯದ ದೊರೆ ಮಲಕ್ಕ ನಗರವನ್ನು ಸ್ಥಾಪಿಸಿದ. ನಗರ ಬೆಳೆದಂತೆ ಅರಬ್ ವ್ಯಾಪಾರಿಗಳು. ಧರ್ಮಪ್ರಚಾರಕರು ಇಸ್ಲಾಂ ಧರ್ಮವನ್ನು ಹರಡಿದರು. ಮಲಕ್ಕ ಆಗ್ನೇಯ ಏಷ್ಯದ ಪ್ರಬಲ ರಾಜ್ಯವಾಯಿತು. ಹದಿನಾರನೆಯ ಶತಮಾನದಿಂದ ಪೋರ್ಚುಗೀಸರು. ಡಚ್ಚರು ಮತ್ತು ಬ್ರಿಟಿಷರು ಒಬ್ಬರ ಅನಂತರ ಒಬ್ಬರು ದಾಳಿ ಮಾಡಿದರು. ಕಡೆಗೆ ಮಲಯ ಪೂರ್ತಿ ಬ್ರಿಟಿಷರ ಅಧಿಪತ್ಯಕ್ಕೆ ಒಳಪಟ್ಟಿತು. ಎರಡನೆಯ ಮಹಾಯುದ್ಧದಲ್ಲಿ ಜಪಾನರು ಮಲಯವನ್ನು ವಶಮಾಡಿಕೊಂಡರು. 1945ರಲ್ಲಿ ಬ್ರಿಟಿಷರು ಪುನಃ ಮಲಯವನ್ನು ಆಕ್ರಮಿಸಿಕೊಂಡು ಅದನ್ನು ಒಂಬತ್ತು ಸಂಸ್ಥಾನಗಳಾಗಿ ಮಾಡಿದರು. ಕಮ್ಯೂನಿಸ್ಟ್ ಕ್ರಾಂತಿ 1948ರಿಂದ 1960ರ ವರೆಗೆ ದೇಶವನ್ನು ಆವರಿಸಿತು. 1957ರಲ್ಲಿ ಮಲಯಕ್ಕೆ ಸ್ವಾತಂತ್ರ್ಯ ನೀಡಿದ ಬ್ರಿಟಿಷರು ಪೀನಾಂಗ್ ಮತ್ತು ಮಲಕ್ಕಗಳನ್ನು ಬಿಟ್ಟುಕೊಟ್ಟರು.

ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ಸರ್ ಥಾಮಸ್ ಸ್ಟ್ಯಾಮ್‌ಫರ್ಡ್ ರ‍್ಯಾಫಲ್ಸ್ ಸಿಂಗಪುರದಲ್ಲಿ 1819ರಲ್ಲಿ ಬ್ರಿಟಿಷ್ ವಸಾಹತು ಸ್ಥಾಪಿಸಿದ. ಇಂಗ್ಲಿಷರವನಾದ ಸರ್ ಜೇಮ್ಸ್ ಬ್ರೂಕ್ ಎಂಬವನನ್ನು 1841ರಲ್ಲಿ ಸಾರವಾಕ್‌ನ ಸಿಂಹಾಸನದಲ್ಲಿ ಕುಳ್ಳಿರಿಸಿದ. 1888ರಲ್ಲಿ ಸಾರವಾಕ್ ಮತ್ತು ಉತ್ತರ ಬೋರ್ನಿಯೊ ಬ್ರಿಟಿಷ್ ಸರಕಾರದ ರಕ್ಷಣೆಗೊಳಪಟ್ಟುವು. 1959ರಲ್ಲಿ ಸಿಂಗಪುರ ಕಾಮನ್‌ವೆಲ್ತಿನಲ್ಲಿರುವ ಸ್ವಯಮಾಡಳಿತ ಪ್ರದೇಶವಾಯಿತು. 1963 ಸೆಪ್ಟೆಂಬರ್ 16ರಂದು ಸ್ವತಂತ್ರ ಮಲಯ. ಸಿಂಗಪುರ. ಸಾರವಾಕ್ ಮತ್ತು ಸಬಾಹಗಳನ್ನು ಒಳಗೊಂಡ ಮಲೇಷ್ಯ ಅಸ್ತಿತ್ವ ಪಡೆಯಿತು. ಕೇಂದ್ರ ಸರಕಾರವೇ ಮುಂದಾಗಿ 1965ರಲ್ಲಿ ಸಿಂಗಪುರ ಒಕ್ಕೂಟದಿಂದ ಸಿಡಿದು ಸ್ವತಂತ್ರವಾಗುವಂತೆ ಮಾಡಿತು. ಬ್ರಿಟಿಷ್ ಸರಕಾರ ಮಲೇಷ್ಯದಲ್ಲಿದ್ದ ತನ್ನ ರಕ್ಷಣಾಪಡೆಗಳನ್ನೆಲ್ಲ ಹಿಂತೆಗೆದುಕೊಳ್ಳುವುದಾಗಿಯೂ ದೂರಪ್ರಾಚ್ಯದಲ್ಲಿನ ರಕ್ಷಣಾಪಡೆಗಳನ್ನು 1971ರ ಒಳಗಾಗಿ ಹಿಂತೆಗೆದುಕೊಳ್ಳುವುದಾಗಿಯೂ 1968ರಲ್ಲಿ ಘೋಷಿಸಿತು.

ಮಲಯದ ಮಧ್ಯದಿಂದ ಪರ್ವತ ಪಂಕ್ತಿ ಹಾದುಹೋಗಿದೆ. ಪರ್ವತ ಮತ್ತು ಸಮುದ್ರದ ಮಧ್ಯೆ ತಗ್ಗು ಪ್ರದೇಶವಿದೆ. ಪೂರ್ವ ಮತ್ತು ಪಶ್ಚಿಮ ತೀರಪ್ರದೇಶಗಳು ಬೇರೆ ಬೇರೆಯಾಗಿವೆ. ಪೂರ್ವ ತೀರದಲ್ಲಿ ಒಳ್ಳೆಯ ದಂಡೆ ಇದ್ದು ಸಮೀಪದಲ್ಲಿ ಸುಂದರ ದ್ವೀಪಗಳಿವೆ. ಪಶ್ಚಿಮ ತೀರ ಜೌಗು ಪ್ರದೇಶದಂತಿದ್ದು. ಉತ್ತಮ ಬಂದರುಗಳಿವೆ. ಪೆರಾಕ್ ಮತ್ತು ಪೆಹಾಂಗ್ ನದಿಗಳ ಎರಡು ದಡಗಳಲ್ಲೂ ವ್ಯವಸಾಯ ಭೂಮಿ ಹಸಿರು ತುಂಬಿ ನಲಿಯುತ್ತಿರುತ್ತದೆ. 2,192 ಮೀಟರ್ ಎತ್ತರವಿರುವ ಗುನಾಂಗ್ ಟಹಾನ್, 2,184 ಮೀ. ಎತ್ತರವಿರುವ ಗುನಾಂಗ್ ಕೊರ್ಬು ಎತ್ತರದ ಶಿಖರಗಳು. ಮಲಯದಲ್ಲಿ ದೊರೆಯುವಷ್ಟು ಕಚ್ಚಾ ರಬ್ಬರ್ ಪ್ರಪಂಚದಲ್ಲಿ ಬೇರೆ ದೇಶಗಳಲ್ಲಿ ಸಿಗುವುದಿಲ್ಲ. ರಬ್ಬರ್ ತೆಗೆಯುವ ಉದ್ಯೋಗಕ್ಕಾಗಿಯೆ ವಿದೇಶದಿಂದ ಜನ ಮಲಯಕ್ಕೆ ಬಂದು ನೆಲೆಸಿರುವರು. ಭಾರತ. ಚೀನ. ಸಯಾಂ ಮುಂತಾದ ದೇಶಗಳ ಜನ ಇಲ್ಲಿ ವಾಸಿಸುವುದರಿಂದ ಮಲಯ ಏಷ್ಯದ ಕಲಸುಮೇಲೋಗರ ದೇಶವೆಂದು ಹೆಸರಾಗಿದೆ. ಮಲಯದಲ್ಲಿ ಸೆಕೆ ಮತ್ತು ತೇವದ ಹವಾಗುಣವಿದೆ. ಮಳೆ ಬಹಳ. ಮಲಯದ ನೈಸರ್ಗಿಕ ಸಂಪತ್ತು ಉತ್ತಮವಾಗಿದೆ. ರಬ್ಬರ್. ಪರ್ವತದ ಪೂರ್ವಭಾಗದ ಕಾಡಿನಲ್ಲಿ ಸಮೃದ್ಧಿ. ಮರದ ದಿಮ್ಮಿಯೂ ಸಿಗುತ್ತದೆ. ಪ್ರಪಂಚದಲ್ಲಿ ದೊರಕುವ ಮೂರನೆಯ ಒಂದು ಭಾಗ ತವರ ಇಲ್ಲಿಯದು. ಕಬ್ಬಿಣದ ಅದಿರು. ಪೆಟ್ರೋಲಿಯಂ. ಚಿನ್ನ, ಬಾಕ್ಸೈಟ್ ಮತ್ತು ಕಲ್ಲಿದ್ದಲು ದೊರಕುತ್ತವೆ. ಭತ್ತ. ತೆಂಗಿನಕಾಯಿ. ಕೋಕೋ ಹಣ್ಣುಗಳು ಮತ್ತು ತರಕಾರಿಗಳನ್ನು ಜನ ಬೆಳೆಯುತ್ತಾರೆ. ಕರಕುಶಲವಸ್ತುಗಳೂ ತಯಾರಾಗುತ್ತವೆ. ಮಲಯ ದೇಶದ ಜನ ಕುಳ್ಳ : ಅವರ ಮೈಬಣ್ಣ ಕಂದು : ತಲೆಯ ಮೇಲಿನ ಕೂದಲು ಕಪ್ಪು. ಇವರಲ್ಲಿ ಜಾನಪದ ಕತೆಗಳು ಸಮೃದ್ಧವಾಗಿವೆ. ಮಲಯದಲ್ಲಿ ಹೆಚ್ಚು ಜನ ಮುಸಲ್ಮಾನರು. ಸಾಮಾನ್ಯವಾಗಿ ಮಲಯದೇಶದ ಹಳ್ಳಿಗಳಲ್ಲಿ ಜನ ಮನೆಗಳನ್ನು ಕಟ್ಟಿಗೆಯ ಕಂಬಗಳ ಮೇಲೆ ಆಧರಿಸಿ ಎತ್ತರದಲ್ಲಿ ಕಟ್ಟುತ್ತಾರೆ. ಇದರಿಂದ ಅವು ಹಾವುಗಳ ಉಪದ್ರವದಿಂದ ಸುರಕ್ಷಿತವಿರುತ್ತವೆ. ಅದೂ ಅಲ್ಲದೆ ಎಷ್ಟೇ ಮಳೆಯಾದರೂ ನೆಲದಲ್ಲಿ ತೇವ ಇರುವುದಿಲ್ಲ. ಇಂಥ ಮನೆಗಳನ್ನು ಕೆಲವು ನಗರಗಳಲ್ಲಿ ಇಂದೂ ನೋಡಬಹುದು.

ಸಬಾಹದ ತೀರ ಅಂಕುಡೊಂಕಾಗಿದ್ದು 1,448 ಕಿ. ಮೀ. ಉದ್ದವಿದೆ. 4,104 ಮೀಟರು ಎತ್ತರವಿರುವ ಕಿನಬಾಲು ಪರ್ವತವಿದೆ. ಕಿನಬಟಾಂಗನ್ ನದಿ ಯಾನಕ್ಕೆ ಅನುಕೂಲ. ಪ್ರಸ್ಥಭೂಮಿ ಮೆಕ್ಕಲುಮಣ್ಣಿನಿಂದ ಕೂಡಿದೆ. ಅಕ್ಟೋಬರ್‌ನಿಂದ ಫೆಬ್ರವರಿ ವರೆಗೆ ಚೆನ್ನಾಗಿ ಮಳೆಯಾಗುತ್ತದೆ. ರಬ್ಬರ್, ಕೊಬ್ಬರಿ ಮತ್ತು ಹೊಗೆಸೊಪ್ಪು ಮುಖ್ಯ ಬೆಳೆಗಳು. ಮರದ

ಸುಮಾರು ಶೇಕಡಾ 80ರಷ್ಟು ಕಾಡು. ಕಡಜಾನ್, ಚೀನೀಯರು ಮತ್ತು ಬಜಾವ್ ಜನರಿದ್ದಾರೆ. ಚೀನೀಯರದು ವ್ಯಾಪಾರ ಹಾಗೂ ಕಾಡು ಕಡಿಯುವ ಉದ್ಯೋಗ. ಕಡಜಾನರು ವ್ಯವಸಾಯದಲ್ಲೂ ಬಜಾವರು ದನ, ಕುದುರೆಗಳನ್ನು ಸಾಕುವುದರಲ್ಲಿಯೂ ನಿರತರು. ಸಬಾಹದ ರಾಜಧಾನಿ ಜೆಸಲ್ಟನ್.

ಸಬಾಹದ ದಕ್ಷಿಣಕ್ಕಿರುವ ಸಾರವಾಕನ್ನು ಮೂರು ಪ್ರಾಕೃತಿಕ ಭಾಗಗಳಾಗಿ ವಿಂಗಡಿಸಬಹುದು : ಮೆಕ್ಕಲು ಮತ್ತು ಜೌಗುಳ್ಳ ತೀರಪ್ರದೇಶ ; ಅನಂತರದ ಪ್ರದೇಶ ಅಲ್ಲಲ್ಲಿ ಪರ್ವತಗಳಿರುವ ಬಯಲು ; ಒಳನಾಡಿನ ಪರ್ವತ ಪ್ರದೇಶ. ಎತ್ತರದ ಶಿಖರವೆಂದರೆ 2,425 ಮೀಟರುಗಳ ಗುನಾಗ್ ಮುರುಡೆ. ಬಟಾಂಗ್ ರಜಾಂಗ್ ದೊಡ್ಡನದಿ. ಬಹುಸಂಖ್ಯೆಯ ಇಬಾನರು, ಚೀನೀಯರು, ಮಲಯರು ಮತ್ತು . ಮೆಲನೀಷನರು ಇದ್ದಾರೆ. ಕುಚಿಂಗ್, ಸಿಬು ಮತ್ತು ಮಿರಿ ವ್ಯಾಪಾರ ನಗರಗಳು.

ಮಲೇಷ್ಯದಲ್ಲಿ 1973ರ ತನಕ ಇಂಗ್ಲಿಷ್ ಸಹ ಆಡಳಿತ ಭಾಷೆ. ಭಾರತದ ವರ್ಣಮಾಲೆಯನ್ನು ಆಧರಿಸಿರುವ ಮಲಯ ರಾಷ್ಟ್ರಭಾಷೆ.

ಮಲೇಷ್ಯದ್ದು ಸಂವಿಧಾನಬದ್ಧ ರಾಜಪದ್ಧತಿ. ಐದು ವರ್ಷಗಳಿಗೊಮ್ಮೆ ಒಂಬತ್ತು ಸಂಸ್ಥಾನಗಳ ಅರಸರ ಪೈಕಿ ಒಬ್ಬರನ್ನು ರಾಜಪ್ರಮುಖರನ್ನಾಗಿ ಚುನಾಯಿಸುತ್ತಾರೆ.

ಖಂಡ : ಏಷ್ಯ (ಆಗ್ನೇಯ)
ಅಕ್ಷಾಂಶ : 0° 52′ ಉ ದಿಂದ 7° 22′ ಉ
ರೇಖಾಂಶ : 99° 38′ ಪೂ ದಿಂದ 119° 16′ ಪೂ
ವಿಸ್ತೀರ್ಣ : 3.30.670 ಚ. ಕಿ. ಮೀ.
ಜನಸಂಖ್ಯೆ : 90.00.000 (1966)
ರಾಜಧಾನಿ : ಕೌಲಾಲಂಪುರ
ಭಾಷೆ : ಮಲಯ
ಸರಕಾರ : ಸಂವಿಧಾನಬದ್ಧ ರಾಜಪದ್ಧತಿ
ಬಾವುಟ : ಏಳು ಕೆಂಪು ಮತ್ತು ಏಳು ಬಿಳಿ ಅಡ್ಡಪಟ್ಟಿಗಳು. ಎಡ ಮೇಲ್ಭಾಗದಲ್ಲಿ ನೀಲಿ ಹಿನ್ನೆಲೆಯಲ್ಲಿ ಹಳದಿ ಅರ್ಧಚಂದ್ರ ಮತ್ತು ನಕ್ಷತ್ರ

## ಮುಹಮ್ಮದ್ ಪೈಗಂಬರ್

"ಮುಹಮ್ಮದ್ ಇಬ್ನ್ ಅಬ್ದುಲ್ಲಾ ಇಬ್ನ್ ಅಬ್ದಲ್ ಮುತ್ತಲಿಬ್ ಇಬ್ನ್‌ನ್ ಹಿಷೀಂ"–ಇದು ಒಬ್ಬ ಪ್ರವಾದಿಯ ಹೆಸರು. ಆ ಪ್ರವಾದಿಯೇ ಇಸ್ಲಾಂ (ಮುಸಲ್ಮಾನ) ಮತದ ಸ್ಥಾಪಕರಾದ ಮುಹಮ್ಮದ್ ಪೈಗಂಬರ್. 'ಇಸ್ಲಾಂ' ಎಂದರೆ ಶರಣಾಗತನಾಗು, ಶಾಂತಿ ಮೂಡಿಸು ಎಂದರ್ಥ.

ಅರೇಬಿಯ ದೇಶದಲ್ಲಿ ಸೂರ್ಯನ ತಾಪ ಹೆಚ್ಚು. ಎಲ್ಲೆಲ್ಲೂ ಸುಡುವ ಮರುಭೂಮಿ. ಅಲ್ಲಲ್ಲಿ ಸಿಹಿನೀರಿನ ಚಿಲುಮೆಗಳು. ಇಲ್ಲಿ ಬೆಡೋಯಿನ್ [illegible] ವಾಸಿಸುತ್ತಿದ್ದರು. ಇವರ ಪ್ರವಾದಿ ಮುಹಮ್ಮದ್. 'ಪ್ರವಾದಿ' ಎಂದರೆ ದೇವರಿಂದ ಪ್ರೇರಿತನಾದ ಧರ್ಮೋಪದೇಶಕ.

ಇವರ ತಂದೆ ಮೆಕ್ಕ ನಗರದ ಅಬ್ದುಲ್ಲಾ. ತಾಯಿ ಆಮಿನಾ. [illegible] ಕಳೆದುಕೊಂಡರು. [illegible] ಅವರ ತಾತ, ಅನಂತರ ಒಬ್ಬ ನೆಂಟ, ಅವರನ್ನು ಬೆಳೆಸಿದರು. ಚಿಕ್ಕಂದಿನಿಂದಲೇ ಅವರಿಗೆ ದೇವರ ಬಗೆಗೆ ಆಸಕ್ತಿ ಮೂಡಿತು. ಆದರೂ ಅವರ ಬಂಧು ಅವರಿಗೆ ವ್ಯಾಪಾರ ಮಾಡುವುದನ್ನು ಹೇಳಿಕೊಟ್ಟ. ಓದು ಬರಹ ಹೆಚ್ಚೇನೂ ಕಲಿಸಲಿಲ್ಲ. ಲೆಕ್ಕಾಚಾರ ಮಾಡುವುದನ್ನು ತಿಳಿಸಿಕೊಟ್ಟ. ಮುಹಮ್ಮದ್ ತಮ್ಮ ಬಂಧುವಿನೊಡನೆ ಈಜಿಪ್ಟ್, ಸಿರಿಯ ಮುಂತಾದ ಕಡೆಗಳಲ್ಲೆಲ್ಲ ಸುತ್ತಾಡಿ ವ್ಯಾಪಾರ ಮಾಡಿದರು.

ಅವರು ಬಹಳ ಪ್ರಾಮಾಣಿಕರಾದ ವರ್ತಕರೆಂದು ತಿಳಿದಮೇಲೆ ಖತೀಜಾ ಎಂಬ ಶ್ರೀಮಂತ ಮಹಿಳೆ, ಗತಿಸಿದ್ದ ತನ್ನ ಗಂಡನ ವ್ಯಾಪಾರವೆಲ್ಲವನ್ನೂ ಅವರಿಗೆ ವಹಿಸಿದಳು. ಮುಹಮ್ಮದರು ವಿದೇಶ ವ್ಯಾಪಾರದಿಂದ ಹಿಂದಿರುಗಿದ ಮೇಲೆ, ಖತೀಜಾ ಅವರನ್ನು ಮದುವೆಯಾದಳು. ಆಗ ಅವಳಿಗೆ ನಲವತ್ತು ವರ್ಷ. ಮುಹಮ್ಮದರಿಗೆ ಇಪ್ಪತ್ತೈದು ವರ್ಷ. ಅವಳು ಶಿರಿಕೊಂಡ ಮೇಲೆ ಅವರು ಬೇರೆಯವರನ್ನು ಮದುವೆಯಾದರು. ಅನಾಥರಾಗಿದ್ದಾಗ ತಮ್ಮ ಮಾತನ್ನು ನಂಬಿ ತಮ್ಮ ಬಡತನವನ್ನು ನೀಗಿ ಸಹಾಯ ಮಾಡಿದ ಖತೀಜಾಳ ಮೇಲೆ ಅವರಿಗೆ ಬಹಳ ಅಭಿಮಾನವಿತ್ತು. ಅವರು ಎಷ್ಟು ನಂಬಿಗಸ್ಥರಾಗಿದ್ದರೆಂದರೆ ಜನ ಅವರಿಗೆ 'ಅಲ್–ಅಮೀನ್' ಎಂದರೆ 'ನಂಬಿಗಸ್ಥ' ಎನ್ನುವ ಹೆಸರನ್ನು ಕೊಟ್ಟರು.

ಯೆಹೂದ್ಯರನ್ನೂ ಕ್ರೈಸ್ತರನ್ನೂ ಮುಹಮ್ಮದರು ಕಂಡಿದ್ದರು. ಭಗವಂತನಿಂದ ಅನುಗ್ರಹಿಸಲ್ಪಟ್ಟವೆಂದು ಹೇಳಲಾದ ಮತಗ್ರಂಥಗಳ ಪ್ರಭಾವ ಅವರಿಗೆ ಅರ್ಥವಾಗಿತ್ತು. ಸಮಾಜದಲ್ಲಿದ್ದ ಕೆಟ್ಟ ಚಾಳಿಗಳನ್ನು ನೋಡಿ ಬಹಳ ಕೋಪಗೊಂಡಿದ್ದರು. ಕುಡಿತ, ಕಳ್ಳತನ, ದರೋಡೆ, ಮೂಢನಂಬಿಕೆಗಳಿಂದ ಜನರನ್ನು ಹೇಗೆ ದೂರವಿಡಬೇಕೆಂದು ಅವರು ಹಗಲು ರಾತ್ರಿ ಯೋಚಿಸತೊಡಗಿದರು. ಅರೇಬಿಯದ ಖುರೇಷಿ ಪಂಗಡದವರು ವಿಗ್ರಹಾರಾಧಕರಾಗಿದ್ದರು. ಜನರು ಅನೇಕ ರೀತಿಯ ಬಲಿಗಳನ್ನು ಅರ್ಪಿಸುತ್ತಿದ್ದರು. ವಿಗ್ರಹಾರಾಧನೆಯನ್ನು ನಿಲ್ಲಿಸಬೇಕೆಂದು ಪೈಗಂಬರ್ ವಾದಿಸಿದರು. ಗುಡ್ಡಗಾಡುಗಳಲ್ಲಿ ಅಲೆದಾಡಲು ಪ್ರಾರಂಭಿಸಿದರು. ಒಂದು ದಿನ ಹೀರಾಪರ್ವತದ ಮೇಲೆ ಅವರಿಗೆ ಒಂದು ವಿಶಿಷ್ಟವಾದ ಅನುಭವವಾಯಿತು. ದೇವದೂತ ಗೇಬ್ರಿಯಲನ ಮೂಲಕ ಮುಹಮ್ಮದರು ದೇವವಾಣಿಯನ್ನು ಕೇಳಿದಂತಾಯಿತು. ಮುಹಮ್ಮದರಿಗೆ ಮುಂದೆಯೂ ಇಂಥ ಅನುಭವಗಳು ಅನೇಕ ಬಾರಿ ಆದುವು.

ಅಂದಿನಿಂದ ಮುಹಮ್ಮದರು ಸಂತೆಬೀದಿಗಳಲ್ಲಿ ನಿಂತು "ಅಲ್ಲಾಹ್ ಬಿಟ್ಟರೆ ಬೇರೊಬ್ಬ ದೇವರಿಲ್ಲ. ಮುಹಮ್ಮದ್ ಅವನ ಸಂದೇಶ ಸಾರುವ ಪ್ರಚಾರಕ " ('ಅಲ್ಲಾಹ್' ಎಂದರೆ ಅರಬಿ ಭಾಷೆಯಲ್ಲಿ 'ದೇವರು' ಎಂದು ಅರ್ಥ) ಎಂದು ಹೇಳುತ್ತಾ ಬಂದರು. ಆದರೆ ಆ ಕೂಡಲೇ ಜನರು ಮುಹಮ್ಮದರ ಮಾತುಗಳನ್ನು ನಂಬಲಿಲ್ಲ. ಅವರಿಗೆ ಹುಚ್ಚು ಹಿಡಿದಿದೆ ಎಂದುಕೊಂಡರು.

ಮುಹಮ್ಮದರು ತಮ್ಮ ಮನೆಯಲ್ಲೇ ತಮ್ಮ ಹೆಂಡತಿಗೆ. ಬಂಧುಗಳಿಗೆ. ಮಿತ್ರರಿಗೆ ಸೇವಕರಿಗೆ ಬೋಧಿಸಲು ಆರಂಭಿಸಿದರು. ಅವರೆಲ್ಲರೂ ಅವರ ಮಾತುಗಳನ್ನು ನಂಬಿದರು. ಅವರ ಮೊದಲ ಶಿಷ್ಯೆ ಅವರ ಹೆಂಡತಿ ಅನಂತರ ಅವರ ಬಂಧು ಆಲಿ, ಸೇವಕ ಜೈದ್, ಸ್ನೇಹಿತ ಅಬೂಬಕರ್ ಅನುಯಾಯಿಗಳಾದರು.

ಅಷ್ಟರಲ್ಲಿ ಪೈಗಂಬರರಿಗೆ ದೇವರಿಂದ ಹೊಸದೊಂದು ಆಣತಿ ಬಂದಂತೆ ಅನಿಸಿತು. ಅಲ್ಲಾಹನ ಸಂದೇಶವನ್ನು ಬಹಿರಂಗಪಡಿಸು ಎಂಬ ದೇವರ ಆಜ್ಞೆಯಿಂದ ಪೈಗಂಬರರು ಧೈರ್ಯ ತಂದುಕೊಂಡರು. ಪೇಟೆ ಸಂತೆ

ಬೀದಿಯಲ್ಲಿ ನಿಂತು ತಮ್ಮ ಹೊಸ ಮತದ ಬಗೆಗೆ ಸಾರಿ ಹೇಳಿದರು. ಮೊದ ಮೊದಲು ಖುರೇಷಿಗಳು ಪರಿಹಾಸ್ಯ ಮಾಡಿದರು. ಅನಂತರ ಸಿಟ್ಟಿಗೆದ್ದರು. ಅವರ ಮೇಲೆ ಕೈಮಾಡಲು ಹೋದರು. ಮುಹಮ್ಮದರು ತಲೆತಪ್ಪಿಸಿಕೊಂಡು ಮನೆ ಸೇರಿದರು. ಹೊಸ ಮತದವರಿಗೆ ಖುರೇಷಿಗಳು 'ಮುಸಲ್ಮಾನ' (ಶರಣಾಗತರಾದವರು) ಎಂದು ಹೆಸರಿಟ್ಟರು. ಮುಸಲ್ಮಾನರನ್ನು ಖುರೇಷಿಗಳು ಕಲ್ಲಿನಿಂದ ಹೊಡೆದು ಬಡಿದು ಬಾಧಿಸುತ್ತಿದ್ದರು. ಮುಹಮ್ಮದರು ಗುಲಾಮರನ್ನು ಬಿಡುಗಡೆ ಮಾಡಿಸಿ ತಮ್ಮ ಮತಕ್ಕೆ ಅವರನ್ನು ಸೇರಿಸಿಕೊಳ್ಳುತ್ತಿದ್ದುದು ಅವರಿಗೆ ತುಂಬ ಕೋಪವನ್ನುಂಟುಮಾಡಿತು.

ಮುಹಮ್ಮದರು ತಮ್ಮ ಹಿಂಬಾಲಕರಲ್ಲಿ ಕೆಲವರನ್ನು ಹೊಸ ಮತದ ವಿಷಯ ಪ್ರಚಾರ ಮಾಡಲು ಅಬಿಸೀನಿಯಕ್ಕೆ ಕಳುಹಿಸಿದರು. ಮುಹಮ್ಮದರೂ ಮೆಕ್ಕದಿಂದ ಟೈಫ್ ಪ್ರಾಂತ್ಯಕ್ಕೆ ಹೋಗಿ ಅಲ್ಲಿ ಮತಪ್ರಚಾರವನ್ನು ಆರಂಭಿಸಿದರು. ಆದರೆ ಅಲ್ಲಿನ ಜನ ಇವರನ್ನು ಲೇವಡಿ ಮಾಡಿ ಕಲ್ಲಿನಿಂದ ಹೊಡೆದರು. ಮುಹಮ್ಮದರು ಮೆಕ್ಕಕ್ಕೆ ಹಿಂದಿರುಗಿದರು. 616ರಲ್ಲಿ ಅದುವರೆಗೆ ಇಸ್ಲಾಂ ಮತವನ್ನು ಕಠಿಣವಾಗಿ ವಿರೋಧಿಸುತ್ತಿದ್ದ ಉಮರ್ ಇಬ್ನ್ ಅಲ್–ಖತಬ್ ಹೊಸ ಮತವನ್ನು ಸೇರಿದ್ದು, ಮುಹಮ್ಮದರ ಪಾಲಿನ ಪ್ರಚಂಡ ವಿಜಯವಾಯಿತು.

ಅಷ್ಟು ಹೊತ್ತಿಗಾಗಲೇ. ಮೆಕ್ಕದಲ್ಲಿ ಪ್ರವಾದಿಯೊಬ್ಬ ಹುಟ್ಟಿದ್ದಾನೆ ಎಂಬ ಸುದ್ದಿ ಹಬ್ಬಿತು. ಬೇರೆ ಬೇರೆ ದೇಶಗಳಿಂದ ಜನರು ಬಂದರು. ಆ ವೇಳೆಗೆ ಮುಹಮ್ಮದರನ್ನು ಕೊಲ್ಲಬೇಕೆಂದು ಖುರೇಷಿಗಳು ನಿರ್ಧರಿಸಿದರು. ಆಗ ಮುಹಮ್ಮದರು ಅಬೂಬಕರನ ಜೊತೆ ಗವಿಯೊಂದರಲ್ಲಿ ಅಡಗಿಕೊಂಡರು. ಅವರ ಹಿಂಬಾಲಕರು ಒಬ್ಬೊಬ್ಬರಾಗಿ ಮೆಕ್ಕ ಪಟ್ಟಣವನ್ನು ಬಿಟ್ಟು ಯಥ್ರಿಬ್ ಪಟ್ಟಣವನ್ನು ಸೇರಿದರು. ಮುಹಮ್ಮದರೂ ಅಬೂಬಕರನೂ ರಬಿ–ಉಲ್–ಅವ್ವಲ್ ಎನ್ನುವ ತಿಂಗಳ ಹದಿನಾರನೆಯ ದಿನ (ಸೆಪ್ಟೆಂಬರ್ 24. 622) ಆ ಪಟ್ಟಣವನ್ನು ಸೇರಿದರು. ಮುಹಮ್ಮದರು ಮೆಕ್ಕವನ್ನು ಬಿಟ್ಟ ದಿನದಿಂದ (ಜುಲೈ 16. 622) ಮುಸಲ್ಮಾನರ ಹಿಜಿರಾ ಶಕೆ ಆರಂಭವಾಯಿತು. ಮುಹಮ್ಮದರನ್ನೂ ಅವರ ಅನುಯಾಯಿಗಳನ್ನೂ ಆ ಪಟ್ಟಣದ ಜನ ಉತ್ಸಾಹದಿಂದ ಬರಮಾಡಿಕೊಂಡರು. ತಮ್ಮ ಪಟ್ಟಣದ ಹೆಸರನ್ನು ಬದಲಾಯಿಸಿ 'ಮದೀನ' ಎಂದು ಹೆಸರಿಟ್ಟರು. ಮೆಕ್ಕದಿಂದ ಬಂದ ಬಡ ಮುಸಲ್ಮಾನರಿಗೆ ಆಸ್ತಿಯಲ್ಲಿನ ಅರ್ಧ ಭಾಗ ಕೊಟ್ಟದ್ದಲ್ಲದೆ ಊರಿನ ಮಧ್ಯೆ ಒಂದು ಪ್ರಾರ್ಥನಾ ಮಂದಿರವನ್ನು ಕಟ್ಟಿಸಿದರು. ಅಂದಿನಿಂದ ಮುಹಮ್ಮದರಿಗೆ ಇಸ್ಲಾಂ ಮತವನ್ನು ಬೆಳೆಸಲು ಅನುಕೂಲವಾಯಿತು.

ಆದರೆ ಈ ಮತಕ್ಕೆ ಸೇರಿದ ಕೆಲವರು ಮುಹಮ್ಮದರಿಗೆ ದ್ರೋಹ ಬಗೆದರು. ಹಲವು ವರ್ಷಗಳ ಕಾಲ, ಮುಹಮ್ಮದರ ಬೆಂಬಲಿಗರಿಗೂ ಖುರೇಷಿಗಳಿಗೂ ಯುದ್ಧ ನಡೆಯಿತು. ಕಡೆಗೆ ಮುಹಮ್ಮದರು ಮೆಕ್ಕದವರ ಜೊತೆಗೆ ಒಂದು ಒಪ್ಪಂದವನ್ನು ಮಾಡಿಕೊಂಡರು. ಅಂದಿನಿಂದ ಮದೀನಾದವರು ಮೆಕ್ಕಕ್ಕೂ ಮೆಕ್ಕದವರು ಮದೀನಕ್ಕೂ ಹೋಗಿಬರಲು ಅವಕಾಶವಾಯಿತು. ಇದರಿಂದ ಮುಸಲ್ಮಾನರ ಸಂಖ್ಯೆ ಹೆಚ್ಚಾಯಿತು.

ಹಿಜಿರಾ 2ರಲ್ಲಿ ಯೆಹೂದ್ಯರಿಗೂ ಮುಸಲ್ಮಾನರಿಗೂ ಯುದ್ಧವಾಗಿ ಯೆಹೂದ್ಯರು ಸೋತರು. ಮದೀನದಲ್ಲಿ ಮುಸಲ್ಮಾನರೊಡನೆ ಮುಹಮ್ಮದರು ಮೆಕ್ಕದ ಜನರನ್ನು ಎದುರಿಸಲು ಹೋದರು. ಆ ಸೈನ್ಯವನ್ನು ಎದುರಿಸಲಾರದೆ ಮೆಕ್ಕದ ಜನ ಶರಣಾಗತರಾದರು.

ಮುಹಮ್ಮದರು ಪ್ರೀತಿಯಿಂದ ಅವರನ್ನು ಬರಮಾಡಿಕೊಂಡರು. ಮೆಕ್ಕದವರಲ್ಲಿ ಬಹು ಮಂದಿ ಮುಸಲ್ಮಾನರಾದರು. ಮೆಕ್ಕ ಮತ್ತು ಮದೀನಗಳ ಜನರಲ್ಲದೆ ಸುತ್ತ ಮುತ್ತಲಿನವರೂ ಹೊಸ ಮತವನ್ನು ಸ್ವೀಕರಿಸಿದರು. ಮುಹಮ್ಮದರು ತಮ್ಮ ಜೀವನದ ಕಡೆಯ ವರ್ಷಗಳಲ್ಲಿ ಆಡಳಿತ ವ್ಯವಸ್ಥೆ. ಸಾಮಾಜಿಕ ಜೀವನದ ವ್ಯವಸ್ಥೆ ಇವುಗಳಿಗೆ ಹೆಚ್ಚಾಗಿ ಗಮನಕೊಡಬೇಕಾಯಿತು. ಮುಸಲ್ಮಾನ ಧರ್ಮವನ್ನು ಪ್ರಪಂಚದ ಎಲ್ಲ ಕಡೆಗಳಲ್ಲಿಯೂ ಹರಡಬೇಕೆಂದು ಅವರು ಆಶಿಸಿದರು. ಆದರೆ 627ರಲ್ಲಿ ಅರವತ್ತೆರಡನೆಯ ವಯಸ್ಸಿನಲ್ಲಿ ಕಾಲವಾದರು. ಅಲ್ಲಿಂದ ಇಪ್ಪತ್ತೈದು ವರ್ಷಗಳಲ್ಲಿ ಮುಸಲ್ಮಾನ ಧರ್ಮ ಈಜಿಪ್ಟ್. ಆಫ್ರಿಕ. ಪರ್ಷಿಯ. ಮೆಸಪಟೇಮಿಯಗಳಿಗೂ ಸ್ಪೇನ್. ರಷ್ಯ. ಭಾರತ, ಚೀನಗಳಿಗೂ ಹಬ್ಬಿತು.

ಮುಹಮ್ಮದರು ಇಪ್ಪತ್ತೆರಡು ಸಲ ಯುದ್ಧ ಮಾಡಿದರು. ಆದರೆ ತಮ್ಮ ಮತವನ್ನು ಮುರಿಯಲು ಬಂದವರ ವಿರುದ್ಧ ಮಾತ್ರ ಹೋರಾಡಿದರು.

ಮುಹಮ್ಮದರು ಸೋತವರಿಗೆ ಯಾವ ರೀತಿಯ ದಯೆ ತೋರಿಸುತ್ತಿದ್ದರು ಎನ್ನುವುದು ಗಮನಾರ್ಹ. ಅವರು ಬಡವರಿಗಾಗಿ ಎಲ್ಲವನ್ನೂ ದಾನಮಾಡಿದರು. ಬಹಳ ಸರಳವಾದ ಜೀವನವನ್ನು ನಡೆಸಿದರು. ಸಾಧಾರಣವಾಗಿ ಅವರು ವಾಸವಾಗಿದ್ದುದು 4.2 ಮೀಟರುಗಳ ಚದರ. 2.4 ಮೀಟರುಗಳ ಎತ್ತರದ ಗೋಡೆಗಳ ಮನೆಗಳಲ್ಲಿ. ಹಣ್ಣು ಮತ್ತು ರೊಟ್ಟಿ ಸಾಮಾನ್ಯವಾಗಿ ಅವರ ಆಹಾರ. ಗುಲಾಮನು ಊಟಕ್ಕೆ ಕರೆದರೂ ಒಪ್ಪಿ ಹೋಗುತ್ತಿದ್ದರು. ಎಂದೂ ಹಿರಿತನವನ್ನು ತೋರುತ್ತಿರಲಿಲ್ಲ. ತಾವು ದೇವರ ಸಂದೇಶ ಪ್ರಚಾರಕ ಎಂದು ಮಾತ್ರ ಹೇಳುತ್ತಿದ್ದರು. ಕೆಟ್ಟ ಕೆಲಸವನ್ನು ಮಾಡುವವರನ್ನು ಅಲ್ಲಾಹ್ ಶಿಕ್ಷಿಸುತ್ತಾನೆ: ಒಳ್ಳೆಯ ಕೆಲಸ ಮಾಡಿದವರನ್ನು ಅವನು ರಕ್ಷಿಸುತ್ತಾನೆ ಎನ್ನುತ್ತಿದ್ದರು. ದೇವರು ಮತ್ತು ಭಕ್ತರ ನಡುವೆ ಪೂಜಾರಿಯ ಅಗತ್ಯವಿಲ್ಲ ಎಂದು ತೋರಿಸಿಕೊಟ್ಟರು.

ಮುಹಮ್ಮದರಿಗೆ ಹೀರಾ ಪರ್ವತದ ಮೇಲೆ ಕೇಳಿಬಂದ ಮೊದಲ ಸಂದೇಶದಿಂದ ಹಿಡಿದು ಅವರು ಕಾಲವಾಗುವವರೆಗೆ ಕೇಳಿಸಿದ ಎಲ್ಲ ಸಂದೇಶಗಳನ್ನೂ ಮುಸಲ್ಮಾನರ ಪವಿತ್ರ ಗ್ರಂಥ ಖುರಾನಿನಲ್ಲಿ ಸಂಗ್ರಹಿಸಲಾಗಿದೆ.

ಮುಹಮ್ಮದರು ಯಾವಾಗಲೂ ದೇವರ ಸ್ಮರಣೆ ಮಾಡುತ್ತಿದ್ದರು. ಅಲ್ಲಾಹ್‌ನನ್ನು ಬಿಟ್ಟರೆ ಬೇರೆ ದೇವರಿಲ್ಲ. ಅವನು ಸರ್ವಜ್ಞ. ಸರ್ವಶಕ್ತ. ದಯಾಮಯ, ಎಲ್ಲವೂ ಅವನ ಇಚ್ಛೆಯಂತೆಯೇ ನಡೆಯುತ್ತವೆ–ಎಂದು ಬೋಧಿಸಿದರು. ಒಂದು ದಿನಕ್ಕೆ ಐದು ಸಲ ಪ್ರಾರ್ಥನೆ ಮಾಡಬೇಕು. ವರ್ಷಕ್ಕೆ ಒಂದು ತಿಂಗಳ ಕಾಲ ಉಪವಾಸವಿರಬೇಕು. ಒಬ್ಬೊಬ್ಬರೂ ತಮ್ಮ ವರಮಾನದಲ್ಲಿ ಕೊನೆಯ ಪಕ್ಷ ಹತ್ತನೆಯ ಒಂದು ಭಾಗವನ್ನಾದರೂ ಬಡವರಿಗೆ ದಾನ ಮಾಡುವ ಪದ್ಧತಿಯನ್ನಿಟ್ಟುಕೊಳ್ಳಬೇಕು. ಇವು ಅವರ ಮತದ ಕೆಲವು ಮುಖ್ಯ ಕಟ್ಟಳೆಗಳು. ಅಲ್ಲಾಹ್‌ನ ಎದುರಿಗೆ ಮಾನವರೆಲ್ಲರೂ ಸಮಾನರು ಎಂದು ಸಾರುವುದು ಈ ಮತದ ಹಿರಿಮೆ. ಮುಹಮ್ಮದರು ಸ್ತ್ರೀಯರಿಗೂ ಆಸ್ತಿ ಹೊಂದುವ ಅಧಿಕಾರವನ್ನು ನೀಡಿದರು.

ಪ್ರಪಂಚದಲ್ಲಿ ನಲವತ್ತು ಕೋಟಿಗೂ ಹೆಚ್ಚು ಮುಸಲ್ಮಾನರಿದ್ದಾರೆ. ಮುಹಮ್ಮದರು ಚರಿತ್ರೆಗೆ ತಿರುವನ್ನು ನೀಡಿದವರಲ್ಲಿ ಒಬ್ಬರು.

ನೋಡಿ: ಖುರಾನ್ : ಪ್ರವಾದಿ

## ಮಹಾಯುದ್ಧಗಳು

ಮನುಷ್ಯನ ಚರಿತ್ರೆ ಆರಂಭವಾದಂದಿನಿಂದ ಯುದ್ಧಗಳು ನಡೆಯುತ್ತಲೇ ಇವೆ. ಆದರೆ ಇತ್ತೀಚಿನ ಶತಮಾನಗಳಲ್ಲಿ ಮಹಾಯುದ್ಧ ಎನಿಸಿಕೊಂಡ ಯುದ್ಧಗಳು ಎರಡು. 1914ರಿಂದ 1918ರ ವರೆಗೆ ನಡೆದದ್ದು ಮೊದಲ

1939ರಿಂದ 1945ರ ವರೆಗಿನದು. ಇವನ್ನು ಜಾಗತಿಕ ಯುದ್ಧಗಳು ಎಂದೂ ಹೇಳುತ್ತಾರೆ. ಏಕೆ ?

1914ಕ್ಕೆ ಮೊದಲು ಕೆಲವು ರಾಷ್ಟ್ರಗಳಿಗೆ ಅಥವಾ ರಾಷ್ಟ್ರಗಳ ಬಣಗಳಿಗೆ ಯುದ್ಧವಾದದ್ದುಂಟು. ಆದರೆ ಇಷ್ಟೊಂದು ರಾಷ್ಟ್ರಗಳು ಅವರೆಗೆ ಒಂದೇ ಯುದ್ಧದ ಸುಳಿಗೆ ಸಿಲುಕಿರಲಿಲ್ಲ. ಯುದ್ಧದ ಕಾವು, ಕ್ರೌರ್ಯ ಎಲ್ಲ ಖಂಡಗಳಿಗೂ ಹಬ್ಬಿದ್ದು ಈ ಎರಡು ಯುದ್ಧಗಳಲ್ಲಿ ಮಾತ್ರ. ಅಲ್ಲದೆ ಅತ್ಯಂತ ಘೋರ ಮತ್ತು ವಿನಾಶಕರ ಯುದ್ಧಗಳು ಇವೆರಡೇ. ಹಿಂದಿನ ಯುದ್ಧಗಳಲ್ಲಿ ವಿಜ್ಞಾನವನ್ನು ಬಳಸಿದ್ದರೂ ಅದನ್ನು ವ್ಯವಸ್ಥಿತವಾಗಿ ಶತ್ರುನಾಶಕ್ಕೆ ಅತಿ ಹೆಚ್ಚಿನ ಪ್ರಮಾಣದಲ್ಲಿ ಬಳಸಿದ್ದು, ಹೊಸ ಮಾರಕ ಆಯುಧಗಳ ಸೃಷ್ಟಿಯಾದದ್ದು ಈ ಯುದ್ಧಗಳಲ್ಲೇ. ಯುದ್ಧರಂಗದಿಂದ ಬಹು ದೂರವಿದ್ದ ನಗರಗಳೂ ವಿಮಾನ ದಾಳಿಯನ್ನು ಅನುಭವಿಸಿದ್ದು 1914–18ರ ಯುದ್ಧದಲ್ಲಿ, ಪರಮಾಣು ಬಾಂಬು ಮೊದಲು ಪ್ರಯೋಗವಾದದ್ದು 1939–45ರ ಯುದ್ಧದಲ್ಲಿ. ಮೊದಲನೆಯ ಮಹಾಯುದ್ಧದಲ್ಲಿ ಖರ್ಚಾದ ಹಣ ಸುಮಾರು ಐವತ್ತೈದು ಲಕ್ಷ ಕೋಟಿ ರೂಪಾಯಿ. ಅಷ್ಟು ಹಣವನ್ನು ಬೆಳ್ಳಿಯ ನಾಣ್ಯಗಳಾಗಿ ಪರಿವರ್ತಿಸಿ ಒಂದರ ಮೇಲೆ ಒಂದನ್ನು ಗೋಡೆಯಂತೆ ಪೇರಿಸಿದರೆ 2 ಮೀಟರು ಎತ್ತರ 0.6 ಮೀಟರು ದಪ್ಪ 760 ಕಿಲೊ ಮೀಟರು ಉದ್ದದ ಗೋಡೆ ತಯಾರಾಗುತ್ತದೆ !

**ಮೊದಲನೆಯ ಮಹಾಯುದ್ಧ**

1914ರ ಜುಲೈ 28ರಂದು ಆಸ್ಟ್ರಿಯ ಹಂಗೆರಿಗಳ ಆರ್ಚ್‌ಡ್ಯೂಕನನ್ನು ಕೊಲ್ಲಲು ಸರ್ಬಿಯದ ವಿದ್ಯಾರ್ಥಿಯೊಬ್ಬ ಗುಂಡುಹಾರಿಸಿದ. ಅದೇ ಮೊದಲನೆಯ ಮಹಾಯುದ್ಧದ ಮೊದಲ ಗುಂಡು. ಇಲ್ಲಿಂದ ಇತರ ದೇಶಗಳಿಗೆ ಘರ್ಷಣೆ ಹಬ್ಬಿ, 1914ರ ಆಗಸ್ಟ್ 4ರಂದು ಜರ್ಮನಿಯ ಮೇಲೆ ಇಂಗ್ಲೆಂಡ್ ಯುದ್ಧ ಘೋಷಿಸಿತು.

ಈ ಯುದ್ಧಕ್ಕೆ ಪ್ರೇರಕವಾದ ಬಹು ಮುಖ್ಯ ಅಂಶಗಳೆಂದರೆ. ಆರ್ಥಿಕ ಬಿಕ್ಕಟ್ಟು, ರಾಷ್ಟ್ರೀಯ ಭಾವನೆಗಳಿಂದ ಹುಟ್ಟಿಕೊಂಡ ಅನೇಕ ರೀತಿಯ ಆಸಕ್ತಿಗಳು, ಮತ್ತು ಶಸ್ತ್ರಗಳ ಅಭಿವೃದ್ಧಿಯಲ್ಲಾದ ಸ್ಪರ್ಧೆ. ಈ ಎಲ್ಲ ಕಾರಣಗಳಿಂದ 1914ರ ಹೊತ್ತಿಗೆ ಯೂರೊಪ್ ಒಣಗಿದ ಹುಲ್ಲಿನ ರಾಶಿಯಾಗಿದ್ದಿತು, ಬೆಂಕಿ ಕಡ್ಡಿಗೀರುವ ಕೆಲಸವನ್ನು ಆಸ್ಟ್ರಿಯ ಹಂಗೆರಿಗಳ ಆರ್ಚ್‌ಡ್ಯೂಕ್ ಮತ್ತು ಅವನ ಪತ್ನಿಯನ್ನು ಕೊಂದ ವಿದ್ಯಾರ್ಥಿ ಮಾಡಿದ. ನಡೆಯಬಾರದ ಘಟನೆಗಳೆಲ್ಲ ನಡೆದು ಭೂಮಿಗೆ ರಕ್ತಸ್ನಾನವಾಯಿತು. ಒಟ್ಟು ಆರು ಕೋಟಿ ಜನರು ಭಾಗವಹಿಸಿದ ಈ ಯುದ್ಧದಲ್ಲಿ ಒಂದೂವರೆ ಕೋಟಿಗೂ ಹೆಚ್ಚು ಜನರು ಸಾವನ್ನಪ್ಪಿದರು. ಇದರಲ್ಲಿ ಒಂದು ಕೋಟಿಗೂ ಹೆಚ್ಚು ಸೈನಿಕರಾದರೆ, ಮಿಕ್ಕ ಅರ್ಧ ಕೋಟಿ ಪೌರರು.

ಈ ಯುದ್ಧ ಆರಂಭವಾಗುವುದಕ್ಕೆ ಬಹಳ ಮುಂಚೆಯೇ ಐರೋಪ್ಯ ರಾಷ್ಟ್ರಗಳಲ್ಲಿ ಬಿಕ್ಕಟ್ಟು ಮೊದಲಾಗಿತ್ತು. ಆಸ್ಟ್ರಿಯ, ಹಂಗೆರಿ ಮತ್ತು ಸರ್ಬಿಯಗಳ ನಡುವಣ ಸಂಬಂಧ ಮೈತ್ರಿಯುತವಾಗಿರಲಿಲ್ಲ. ಆರ್ಚ್‌ಡ್ಯೂಕನ ಕೊಲೆಯಿಂದ ವಿರಸ ಹೆಚ್ಚಿ, ಆಸ್ಟ್ರಿಯ-ಹಂಗೆರಿ ಸರ್ಬಿಯದ ಮೇಲೆ ಯುದ್ಧ ಘೋಷಿಸಿತು. ಆಸ್ಟ್ರಿಯ-ಹಂಗೆರಿ ಜೊತೆಗೆ ಜರ್ಮನಿ, ತುರ್ಕಿ ಮತ್ತು ಬಲ್ಗೇರಿಯಗಳು. ಇವುಗಳಿಗೆ ಎದುರಾಗಿ ಬ್ರಿಟನ್ ಹಾಗೂ ಅದಕ್ಕೆ ನೆರವಿತ್ತ ಅಮೆರಿಕ, ಫ್ರಾನ್ಸ್, ರಷ್ಯ, ಇಟಲಿ. ಇವು ಮಿತ್ರ ರಾಷ್ಟ್ರಗಳೆನಿಸಿಕೊಂಡುವು.

ಯುದ್ಧಾರಂಭದಲ್ಲಿ ಜರ್ಮನಿ ಮುಂದಾಗಿ ಬೆಲ್ಜಿಯಮನ್ನು ವಶಪಡಿಸಿಕೊಂಡಿತು. ಅನಂತರ ಫ್ರಾನ್ಸಿನ ಕಡೆ ತನ್ನ ದಂಡನ್ನು ತಿರುಗಿಸಿತು. ಇನ್ನೇನು ಪ್ಯಾರಿಸ್ ಸ್ವಲ್ಪವೇ ದೂರವಿದೆ ಎನ್ನುವಾಗ ಫ್ರಾನ್ಸ್ ಮತ್ತು ಬ್ರಿಟನಿನ ಸೇನೆಗಳು ಒಟ್ಟಾಗಿ ಜರ್ಮನಿಯನ್ನು ಎದುರಿಸಿದುವು. ಪೂರ್ವದಲ್ಲಿ ಜರ್ಮನಿ, ಆಸ್ಟ್ರಿಯ-ಹಂಗೆರಿ ಪಡೆಗಳು ಪೋಲೆಂಡಿನ ಮೇಲೆ ದಾಳಿ ನಡೆಸುತ್ತ ರಷ್ಯದ ಕಡೆಗೆ ನುಗ್ಗಿದುವು.

1915ರಲ್ಲಿ ಇಟಲಿ ಮಿತ್ರರಾಷ್ಟ್ರಗಳೊಡನೆ ಸೇರಿಕೊಂಡಿತು. ಇದರಿಂದ ಜರ್ಮನಿಗೆ ದಕ್ಷಿಣದಲ್ಲಿಯೂ ಶತ್ರುಗಳ ಕಾಟ ಆರಂಭವಾಯಿತು.

1915–16ರಲ್ಲಿ ಜರ್ಮನಿ ಮತ್ತಿತರ ಮಧ್ಯ ಯೂರೊಪಿನ ರಾಷ್ಟ್ರಗಳಿಗೆ ಅನೇಕ ಕಡೆ ಗೆಲುವಾಯಿತು. 1916ರಲ್ಲಿ ಪ್ರಪಂಚದ ರೋಮಾಂಚಕಾರಕ ನೌಕಾ ಕದನಗಳಲ್ಲಿ ಒಂದಾದ ಜಟ್ಲೆಂಡ್ ಕದನ ಬ್ರಿಟಿಷ್ ಮತ್ತು ಜರ್ಮನ್ ನೌಕಾಪಡೆಗಳ ನಡುವೆ ಸಂಭವಿಸಿತು. ಯಾವ ಪಕ್ಷವೂ ಗೆಲ್ಲಲಿಲ್ಲ.

1917, ಆ ಯುದ್ಧದ ಇತಿಹಾಸದಲ್ಲಿ ಒಂದು ನಿರ್ಣಾಯಕ ಘಟ್ಟ. ಪ್ರಬಲ ರಾಷ್ಟ್ರವಾದ ಅಮೆರಿಕ ಯುದ್ಧರಂಗವನ್ನು ಪ್ರವೇಶಿಸಿತು. ಯುದ್ಧ ಆರಂಭವಾದಾಗ, ಅದು ಯೂರೊಪಿಗೆ ಸಂಬಂಧಿಸಿದ ವಿಷಯವೆಂದು ಅಮೆರಿಕ ತಟಸ್ಥವಾಗಿತ್ತು. ಬ್ರಿಟನಿನ ಹಡಗುಗಳನ್ನು ನಾಶಪಡಿಸಲು ಜರ್ಮನಿ ಜಲಾಂತರ್ಗಾಮಿ ನೌಕೆಗಳನ್ನು ಉಪಯೋಗಿಸುತ್ತಿತ್ತು. ಕ್ರಮೇಣ ಸಮುದ್ರದಲ್ಲಿ ಯಾವ ಹಡಗೇ ಆಗಲಿ, ತಟಸ್ಥ ರಾಷ್ಟ್ರಗಳ ಹಡಗಾದರೂ, ಜರ್ಮನಿಯ ಜಲಾಂತರ್ಗಾಮಿ ನೌಕೆಗಳಿಗೆ ಬಲಿಯಾಗಬೇಕಾಯಿತು.

ಲುಸಿಟೇನಿಯ ಎನ್ನುವ ಬ್ರಿಟಿಷ್ ಹಡಗಿನಲ್ಲಿ 197 ಜನ ಅಮೆರಿಕನರು ಪ್ರಯಾಣ ಮಾಡುತ್ತಿದ್ದರು. ಜರ್ಮನಿಯ ಜಲಾಂತರ್ಗಾಮಿ ನೌಕೆಯೊಂದು ಇದನ್ನು ಮುಳುಗಿಸಿತು. ಇದರಿಂದ ಕೋಪಗೊಂಡ ಅಮೆರಿಕದ ಕಾಂಗ್ರೆಸ್ (ಏಪ್ರಿಲ್ 6ರಂದು) ಜರ್ಮನಿಯ ವಿರುದ್ಧ ಯುದ್ಧ ಘೋಷಿಸಿತು. 1917ರ ಅಕ್ಟೋಬರ್ ಕ್ರಾಂತಿಯಿಂದಾಗಿ ರಷ್ಯ ಯುದ್ಧದಿಂದ ದೂರವಾಯಿತು. 1918ರಲ್ಲಿ 20,00,000 ಜನರ ಅಮೆರಿಕನ್ ಸೈನ್ಯ ಫ್ರಾನ್ಸಿಗೆ ಧಾವಿಸಿತು. ದಿಕ್ಕುಗೆಟ್ಟಿದ್ದ ಫ್ರೆಂಚ್ ಮತ್ತು ಬ್ರಿಟಿಷ್ ಪಡೆಗಳು ಉತ್ಸಾಹಗೊಂಡುವು. ಮಧ್ಯ ಐರೋಪ್ಯ ರಾಷ್ಟ್ರಗಳು ಸೋಲುತ್ತ ಬಂದುವು. ಕೊನೆಗೆ 1918ರ ನವಂಬರ್ 11ರಂದು ಜರ್ಮನಿ ಶಸ್ತ್ರ ವಿರಾಮಕ್ಕೆ ಒಪ್ಪಿತು.

1919ರ ಜೂನ್ 28ರಂದು ವರ್ಸೇಲ್ಸ್ ಒಪ್ಪಂದಕ್ಕೆ ಸಹಿ ಬಿತ್ತು, ಈ ಒಪ್ಪಂದದ ಪ್ರಕಾರ ಜರ್ಮನಿ ಸಂಪೂರ್ಣವಾಗಿ ನಿಶ್ಶಸ್ತ್ರೀಕರಣಕ್ಕೆ ಒಳಗಾಯಿತು. ಅದರ ಕೆಲವು ಪ್ರದೇಶಗಳು ಫ್ರಾನ್ಸ್, ಪೋಲೆಂಡ್, ಡೆನ್ಮಾರ್ಕ್ ಮತ್ತು ಬೆಲ್ಜಿಯಂಗಳ ನಡುವೆ ಹಂಚಿಹೋದುವು. ಜರ್ಮನಿ ತನ್ನ ವಸಾಹತುಗಳನ್ನು, ಮುಂದೆ ಯುದ್ಧಗಳಾಗದಂತೆ ತಡೆಗಟ್ಟಲು ಹುಟ್ಟಿದ ರಾಷ್ಟ್ರಸಂಘಕ್ಕೆ ಒಪ್ಪಿಸಿತು.

ಮೊದಲನೆಯ ಮಹಾಯುದ್ಧದ ತರುವಾಯ ಯೂರೊಪಿನ ಲಕ್ಷಣವೇ ಬದಲಾಯಿತು. ಜರ್ಮನಿ, ತುರ್ಕಿ, ಆಸ್ಟ್ರಿಯ ರಾಷ್ಟ್ರಗಳ ಕ್ಷೇತ್ರಗಳು ಕಿರಿದಾದುವು. ಚೆಕೊಸ್ಲೊವಾಕಿಯ, ಪೋಲೆಂಡ್ ಮತ್ತು ಯುಗೊಸ್ಲಾವಿಯಗಳಿಗೆ ಮನ್ನಣೆ ದೊರಕಿತು.

ಮೊದಲನೆಯ ಮಹಾಯುದ್ಧ ಕಾಲದಲ್ಲಿಯೇ ಪ್ರಪ್ರಥಮವಾಗಿ ವಿಮಾನ ದಾಳಿ ನಡೆದದ್ದು; ಕಂದಕವನ್ನು ತೋಡಿ ಯುದ್ಧ ಮಾಡುವ ಕೌಶಲ ಆರಂಭವಾದದ್ದು; ರೋಮಾಂಚಕರ 'ರಹಸ್ಯ ಆಯುಧ'ದ ತಯಾರಿಕೆಯಾದದ್ದು. ಆ ಹೊಸ ಆಯುಧವೇ ಟ್ಯಾಂಕ್ (ಫಿರಂಗಿ ರಥ);

ಇದು ಇಂಗ್ಲೆಂಡಿನವರ ರಹಸ್ಯ ಆಯುಧ. ಜರ್ಮನರೂ ಒಂದು ರಹಸ್ಯ ಆಯುಧವನ್ನು ಕಂಡುಹಿಡಿದರು. ಅದೇ ವಿಷವಾಯು ಪ್ರಯೋಗ. ಈ ವಿಷವಾಯುವನ್ನು ಪ್ರಯೋಗಿಸಿದೊಡನೆಯೇ ಸೈನಿಕರ ಕಣ್ಣು ಮೂಗುಗಳಲ್ಲಿ ನೀರು ಧಾರಾಕಾರವಾಗಿ ಸುರಿದು ತಲೆತಿರುಗಿ ಅವರು ಬಿದ್ದು ಹೋಗುತ್ತಿದ್ದರು. ಒಮ್ಮೊಮ್ಮೆ ಗಾಳಿ ವಿರುದ್ಧ ದಿಕ್ಕಿನಿಂದ ಬೀಸಿದಾಗ ಜರ್ಮನರು ಪ್ರಯೋಗಿಸಿದ ಈ ಅಸ್ತ್ರ ಅವರೆಡೆಗೇ ಹಿಂದಿರುಗಿ ಬರುತ್ತಿತ್ತು. ವಿಷವಾಯುವಿನಿಂದ ರಕ್ಷಿಸಿಕೊಳ್ಳಲು ಮುಖವಾಡಗಳನ್ನು ಬಳಸಲಾಯಿತು.

ವೈಜ್ಞಾನಿಕ ಯುದ್ಧ ರೀತಿಯ ಭೀಕರತೆ ಏನೆಂಬುದನ್ನು ಈ ಯುದ್ಧ ತೋರಿಸಿಕೊಟ್ಟಿತು. ಗೆದ್ದವರು ಸೋತವರಷ್ಟೇ ಬೆಲೆ ತೆತ್ತರು. ಯುದ್ಧದಲ್ಲಾದ ಭಾರಿ ಹಾನಿಯೆಂದರೆ ಜೀವನಷ್ಟ. 1.29.91.000 ಸೈನಿಕರ ಭೀಕರ ಹತ್ಯೆ ಈ ಯುದ್ಧದಲ್ಲಿ ಆಯಿತು. ಕ್ಷಾಮ, ಕಾಯಿಲೆಗಳು, ಮುಂತಾದ ಕಾರಣಗಳಿಂದ ಸತ್ತ ಸುಮಾರು ಒಂದು ಕೋಟಿ ಪೌರರ ಸಂಖ್ಯೆಯನ್ನು ಈ ಭಾರಿ ಮೊತ್ತಕ್ಕೆ ಸೇರಿಸಿ ಆದ ಸಾವು ನೋವುಗಳನ್ನು ನೆನೆದರೆ ಎದೆಯೊಡೆಯುತ್ತದೆ. 2.12.19.000 ಜನ ಸೈನಿಕರು ತೀವ್ರವಾಗಿ ಗಾಯಗೊಂಡರು. ಹಣವಂತೂ ಹೊಳೆಯಂತೆ ಹರಿದುಹೋಯಿತು.

ಮೊದಲ ಮಹಾಯುದ್ಧದ ಅನಂತರ ಯುದ್ಧಗಳನ್ನು ನಿವಾರಿಸಲು ರಾಷ್ಟ್ರಸಂಘ ಸ್ಥಾಪನೆಯೇನೋ ಆಯಿತು. ಆದರೆ ವರ್ಸೇಲ್ಸ್ ಒಪ್ಪಂದದಲ್ಲಿಯೇ ಮತ್ತೊಂದು ಯುದ್ಧದ ಬೀಜಗಳು ಅಡಗಿದ್ದುವು. ಆ ಒಪ್ಪಂದದಿಂದ ಜರ್ಮನಿಯ ರಕ್ತವೆಲ್ಲ ಬಸಿದು ಹೋಯಿತು. ಜರ್ಮನಿ ತನಗಾದ ನಷ್ಟ ಮತ್ತು ಅಪಮಾನಗಳಿಗೆ ಪ್ರತೀಕಾರ ಮಾಡಲು ಸಮಯ ಸಾಧಿಸಿತು.

**ಎರಡನೆಯ ಮಹಾಯುದ್ಧ**

1939ರಲ್ಲಿ ಪ್ರಪಂಚ ಮತ್ತೊಂದು ಮಹಾಯುದ್ಧವನ್ನು ಎದುರಿಸಬೇಕಾಯಿತು. ಯುದ್ಧಗಳನ್ನು ನಿಲ್ಲಿಸಲು ರಾಷ್ಟ್ರಸಂಘ ನಡೆಸಿದ ಪ್ರಯತ್ನ ವಿಫಲವಾಯಿತು. ಜಗತ್ತನ್ನು ಮತ್ತೊಮ್ಮೆ ರಕ್ತದ ಕಡಲಿಗೆ ನೂಕಿದ ಈ ಯುದ್ಧದ ಆರಂಭಕ್ಕೆ ಕಾರಣಗಳು ಹಲವು.

ಮೊದಲನೆಯ ಮಹಾಯುದ್ಧದಲ್ಲಾದ ಅಪಜಯ, ಆರ್ಥಿಕ ನಷ್ಟ ಮತ್ತು ಅಪಮಾನಕರ ಒಪ್ಪಂದಗಳಿಂದ ಜರ್ಮನರು ರೋಸಿಹೋಗಿದ್ದರು. ಜನತೆಯ ಮನಸ್ಸಿನ ಈ ಸ್ಥಿತಿಗೆ ಸರಿಯಾದ ನಾಯಕ ದೊರೆತ. ಅಡಾಲ್ಫ್ ಹಿಟ್ಲರ್ ಜರ್ಮನಿಯ ಸರ್ವಾಧಿಕಾರಿಯಾದ ಮೇಲೆ ವರ್ಸೇಲ್ಸ್ ಒಪ್ಪಂದವನ್ನು ಮುರಿದು ಅಸಂಖ್ಯಾತ ಸೈನಿಕರ ಸೇನೆಯನ್ನು ಸಿದ್ಧಪಡಿಸಿ ಆಕ್ರಮಣಗಳಲ್ಲಿ ತೊಡಗಿದ.

ಮೊದಲನೆಯ ಮಹಾಯುದ್ಧದಲ್ಲಾದ ಒಪ್ಪಂದಗಳಲ್ಲಿ ಅತೃಪ್ತಿಯನ್ನು ಹೊಂದಿದ್ದ ಇನ್ನೆರಡು ರಾಷ್ಟ್ರಗಳು ಇಟಲಿ ಮತ್ತು ಜಪಾನ್. ಯುದ್ಧದ ಪ್ರತಿಫಲ ತಮಗೆ ಸರಿಯಾಗಿ ದೊರೆಯಲಿಲ್ಲ ಎಂಬುದು ಈ ರಾಷ್ಟ್ರಗಳ ಅಸಮಾಧಾನ. ಅವಕಾಶ ದೊರೆತರೆ ಸಾಕು ಈ ರಾಷ್ಟ್ರಗಳು ಯುದ್ಧ ಮಾಡಲು ಸಿದ್ಧವಾಗಿದ್ದುವು. ಮೊದಲನೆಯ ಯುದ್ಧದಲ್ಲಿ ಬ್ರಿಟಿಷರ ಮಿತ್ರರಾಷ್ಟ್ರಗಳಾಗಿದ್ದ ಇಟಲಿ ಮತ್ತು ಜಪಾನ್ ಈ ಯುದ್ಧದಲ್ಲಿ ಜರ್ಮನಿಯ ಪಕ್ಷಕ್ಕೆ ಸೇರಿದುವು.

ಎಲ್ಲಕ್ಕಿಂತ ಮುಖ್ಯವಾದ ಕಾರಣ ಸದಸ್ಯ ರಾಷ್ಟ್ರಗಳನ್ನು ನಿಯಂತ್ರಿಸುವುದರಲ್ಲಿ ಮತ್ತು ನಿಶ್ಶಸ್ತ್ರೀಕರಣ ಸಮಸ್ಯೆಯನ್ನು ಬಗೆಹರಿಸುವುದರಲ್ಲಿ ರಾಷ್ಟ್ರಸಂಘ ವಿಫಲವಾದದ್ದು.

ಯೂರೋಪಿನ ಮಧ್ಯ ದೇಶಗಳಾದ ಇಟಲಿಯಲ್ಲಿ ಮತ್ತು ಜರ್ಮನಿಯಲ್ಲಿ ಸರ್ವಾಧಿಕಾರಿಗಳು ದುರ್ಬಲ ರಾಷ್ಟ್ರಗಳನ್ನು ಕಬಳಿಸುವ ಸನ್ನಾಹದಲ್ಲಿ ತೊಡಗಿದರು. ಈ ಸರ್ವಾಧಿಕಾರಿಗಳ ಆಕ್ರಮಣ ನೀತಿ ಹೊಗೆಯಾಡುತ್ತಿದ್ದ ಯುದ್ಧಜ್ವಾಲೆಗೆ ತುಪ್ಪವನ್ನು ಸುರಿದಂತಾಯಿತು. 1939ರಲ್ಲಿ ಹಿಟ್ಲರ್ ಪೋಲೆಂಡಿನ ಮೇಲೆ ಮುತ್ತಿಗೆ ಹಾಕಿದ. ಸೈನ್ಯವನ್ನು ಹಿಂತೆಗೆದುಕೊಳ್ಳುವಂತೆ ಇಂಗ್ಲೆಂಡ್ ಮತ್ತು ಫ್ರಾನ್ಸ್‌ಗಳು ಜರ್ಮನಿಗೆ ನಿರೂಪ ನೀಡಿದುವು. ಜರ್ಮನಿ ಇದಕ್ಕೆ ಸಮ್ಮತಿಸಲಿಲ್ಲ. 1939ರ ಸೆಪ್ಟೆಂಬರ್ 3ರಂದು ಇಂಗ್ಲೆಂಡ್ ಮತ್ತು ಫ್ರಾನ್ಸ್ ಜರ್ಮನಿಯ ಮೇಲೆ ಯುದ್ಧ ಘೋಷಿಸಿದುವು. ಪ್ರಪಂಚ ಎರಡನೆಯ ಮಹಾಯುದ್ಧದ ಭೀಕರ ಜ್ವಾಲೆಗೆ ಆಹುತಿಯಾಯಿತು.

ಮೊದಲ ಮಹಾಯುದ್ಧದ ಆರಂಭದಲ್ಲಿ ತಟಸ್ಥವಾಗಿದ್ದಂತೆಯೇ ಇದು ಯೂರೋಪಿನ ರಾಷ್ಟ್ರಗಳ ಯುದ್ಧವೆಂದು ಅಮೆರಿಕ ಈ ಬಾರಿಯೂ ತಟಸ್ಥವಾಗಿದ್ದಿತು. ಆದರೆ 1941ರ ಡಿಸೆಂಬರ್ 7ರಂದು ಹವಾಯ್ ದ್ವೀಪದ ಪರ್ಲ್ ಹಾರ್ಬರ್ ನೌಕಾ ಕೇಂದ್ರದ ಮೇಲೆ ಜಪಾನ್ ಬಾಂಬ್ ದಾಳಿ ನಡೆಸಿದಾಗ ಅಮೆರಿಕ ಜಪಾನಿನ ವಿರುದ್ಧ ಯುದ್ಧ ಘೋಷಿಸಿ ಇಂಗ್ಲೆಂಡ್, ಫ್ರಾನ್ಸ್ ಮತ್ತು ರಷ್ಯಗಳ ಪಕ್ಷವನ್ನು ಸೇರಿತು. ಸ್ವಲ್ಪ ಕಾಲದಲ್ಲಿಯೇ ಜಗತ್ತಿನ ನಾನಾ ರಾಷ್ಟ್ರಗಳು ಒಂದಲ್ಲ ಒಂದು ಕಾರಣದಿಂದ ಒಂದೊಂದು ಪಕ್ಷವನ್ನು ಸೇರಿಕೊಂಡು ಯುದ್ಧದಲ್ಲಿ ಭಾಗವಹಿಸಲಾರಂಭಿಸಿದುವು. ಯುದ್ಧ ಪ್ರಪಂಚಕ್ಕೆಲ್ಲ ಹರಡಿತು. ಮುಖ್ಯವಾಗಿ ಯೂರೋಪ್, ಏಷ್ಯ ಮತ್ತು ಆಫ್ರಿಕ ಖಂಡಗಳು ಯುದ್ಧರಂಗಗಳಾದುವು. ಮಿತ್ರರಾಷ್ಟ್ರಗಳು (ಇಂಗ್ಲೆಂಡ್, ಫ್ರಾನ್ಸ್, ರಷ್ಯ, ಅಮೆರಿಕದ ಸಂಯುಕ್ತ ಸಂಸ್ಥಾನ, ಚೀನ, ಆಸ್ಟ್ರೇಲಿಯ ಮುಂತಾದ ಇಪ್ಪತ್ತೆರಡಕ್ಕೂ ಹೆಚ್ಚು ರಾಷ್ಟ್ರಗಳು) ಮತ್ತು ಅಕ್ಷ ರಾಷ್ಟ್ರಗಳು (ಜರ್ಮನಿ, ಜಪಾನ್ ಮತ್ತು ಇಟಲಿ) ಇವುಗಳ ನಡುವೆ ಯುದ್ಧ ನಡೆಯಿತು.

ಪ್ರಾರಂಭದಲ್ಲಿ ಅಕ್ಷರಾಷ್ಟ್ರಗಳಿಗೆ ಗೆಲುವು. ಹಿಟ್ಲರ್ ಅತ್ಯುತ್ಕಟದ ಪ್ರಚಂಡ ಸೈನ್ಯದ ನೆರವಿನಿಂದ, ಅಸಾಧಾರಣ ಶೌರ್ಯದಿಂದ ಹತ್ತು ತಿಂಗಳೊಳಗೆ ಪೋಲೆಂಡ್, ಡೆನ್ಮಾರ್ಕ್, ನಾರ್ವೆ, ಹಾಲೆಂಡ್, ಬೆಲ್ಜಿಯಂ ಮತ್ತು ಫ್ರಾನ್ಸ್‌ಗಳನ್ನು ವಶಪಡಿಸಿಕೊಂಡ. ಪೂರ್ವದಲ್ಲಿ ಜಪಾನೀಯರು ಚೀನದ ಅನೇಕ ಭಾಗಗಳನ್ನೂ ಆಗ್ನೇಯ ಏಷ್ಯದ ರಾಜ್ಯಗಳನ್ನೂ ಶಾಂತ ಸಾಗರದ ಕೆಲವು ದ್ವೀಪಗಳನ್ನೂ ವಶಪಡಿಸಿಕೊಂಡರು. 1940ರ ಆಗಸ್ಟ್‌ನಲ್ಲಿ ಹಿಟ್ಲರ್ ತನ್ನ ಗಮನವನ್ನು ಬ್ರಿಟನ್‌ನತ್ತ ತಿರುಗಿಸಿದ. 1940ರ ಆಗಸ್ಟ್‌ನಿಂದ 1941ರ ಮೇ ವರೆಗೆ ಬ್ರಿಟನಿನ ಮೇಲೆ ಒಂದೇ ಸಮನೆ ವಿಮಾನದಾಳಿ ನಡೆಯಿತು. ಬ್ರಿಟನಿಗೆ ಅಪಾರ ನಷ್ಟವಾಯಿತು. ಆದರೂ ಬ್ರಿಟಿಷರು ಕಂಗೆಡಲಿಲ್ಲ.

1941ರ ಜೂನ್‌ನಲ್ಲಿ ಹಿಟ್ಲರ್ ರಷ್ಯದ ಮೇಲೆ ತನ್ನ ದಾಳಿಯನ್ನಾರಂಭಿಸಿ ಅನೇಕ ನಗರಗಳನ್ನು ವಶಪಡಿಸಿಕೊಂಡ. ಜರ್ಮನಿಗೂ ರಷ್ಯಕ್ಕೂ ಸ್ಟಾಲಿನ್‌ಗ್ರಾಡ್‌ನಲ್ಲಿ ಯುದ್ಧ ಭಯಂಕರವಾಗಿ ನಡೆಯಿತು. ಅನಿರೀಕ್ಷಿತವಾದ ದಾಳಿಯಿಂದ ರಷ್ಯನರು ಆರಂಭದಲ್ಲಿ ಸ್ವಲ್ಪ ಕಂಗೆಟ್ಟರೂ ಮುಂದೆ ರಷ್ಯದ ಕೆಂಪು ಪಡೆ ವೀರಾವೇಶದಿಂದ ಹೋರಾಡಿತು. 1944ರ ವೇಳೆಗೆ ಜರ್ಮನರು ರಷ್ಯದಿಂದ ಸಂಪೂರ್ಣವಾಗಿ ಕಾಲ್ತೆಗೆಯಬೇಕಾಯಿತು. 1943ರಲ್ಲಿ ಇಟಲಿಯ ಸೈನ್ಯಗಳಿಗೆ ಪರಾಜಯವಾಯಿತು. 1945ರ ಏಪ್ರಿಲ್ 24ರಂದು ರಷ್ಯನರು ಬರ್ಲಿನ್ ನಗರಕ್ಕೆ ಮುತ್ತಿಗೆ ಹಾಕಿದರು. ರಷ್ಯನರು ಬರ್ಲಿನ್ ನಗರವನ್ನು ವಶಪಡಿಸಿಕೊಳ್ಳುತ್ತಿದ್ದಂತೆ ಹಿಟ್ಲರ್ ಮೇ 1ರಂದು ಆತ್ಮಹತ್ಯೆ ಮಾಡಿ

ಪಕ್ಕ ಪಕ್ಕದಲ್ಲಿ ಹರಿಯುವಾಗ ಉಂಟಾಗುವ ಬದಲಾವಣೆ ಮಳೆಯನ್ನು ತರುವುದುಂಟು.

ಅನೇಕ ಬಾರಿ ಮಳೆತರುವ ಮೋಡಗಳು ಮಳೆಯುದುರಿಸದೆ ಹಾಗೆಯೇ ಹಾದು ಹೋಗುವುದನ್ನು ಕಂಡಿದ್ದೇವೆ. ಇದರಿಂದ ಮನುಷ್ಯನಿಗೆ ಕಷ್ಟ ಕೋಟಲೆಗಳು ಸಂಭವಿಸುತ್ತವೆ. ಹಿಂದೆ ಇದಕ್ಕೆ ನರಬಲಿ, ಪ್ರಾಣಿಬಲಿ ಕೊಡುತ್ತಿದ್ದರು; ಯಜ್ಞಗಳನ್ನು ಮಾಡುತ್ತಿದ್ದರು. ಹವಾಮಾನ ವಿಜ್ಞಾನದ ಅಭಿವೃದ್ಧಿಯಿಂದ ಕೃತಕ ಮಳೆ ಬರಿಸುವ ಯತ್ನಗಳು ಈಗ ಸಾಗಿವೆ. ಮಳೆಯುಂಟಾಗಬೇಕಾದರೆ ಸೂಕ್ಷ್ಮ ತುಂತುರುಗಳು ಹನಿಗಳಾಗಬೇಕು. ಹೀಗೆ ತುಂತುರುಗಳನ್ನು ಪ್ರಚೋದಿಸಲು ಕಾರ್ಬನ್ ಡೈ ಆಕ್ಸೈಡ್ ಹರಳುಗಳನ್ನು ಗಾಳಿಯಲ್ಲಿ ಚಿತ್ತರಿಸಿ ಹನಿಗೂಡುವಂತೆ ಮಾಡುವುದು ಒಂದು ವಿಧ. ಸಿಲ್ವರ್ ಅಯೊಡೈಡ್ ಎಂಬ ಪದಾರ್ಥವನ್ನು ಹೊಗೆಯ ರೂಪದಲ್ಲಿ ಮೇಲಕ್ಕೆ ಕಳುಹಿಸಿ ಮಳೆತರಿಸುವ ಯತ್ನವೂ ನಡೆದಿದೆ. ಕೆಲವು ಕಡೆ ಸ್ಥಳೀಕವಾಗಿ ಈ ರೀತಿ ಮಳೆಯನ್ನು ಬರಿಸಲಾಗಿದೆ. ಆದರೆ ಸಂಪೂರ್ಣ ಯಶಸ್ಸು –ಅಂದರೆ ಅಪಾರ ಭೂಪ್ರದೇಶದ ಮೇಲೆ ಬೀಳುವ ಕೃತಕ ಮಳೆ ಸಾಧ್ಯವೆ ಎಂಬುದನ್ನು ಈಗಲೇ ಹೇಳುವಂತಿಲ್ಲ. ಬಾನಂಗಳವನ್ನು ಮುಗಿಲ ಮಾಲೆಯಾಗಿ ತುಂಬಿ ಭೂಮಿತಾಯಿಗೆ ಹಸಿರು ಉಡುಗೆಯನ್ನು ತೊಡಿಸಿ ಜೀವಿಗಳನ್ನು ನಲಿದಾಡಿಸಿ, ಹರ್ಷದ ಹೊನಲನ್ನೇ ಸುರಿಸುವ ಈ ಸೃಷ್ಟಿ ಲೀಲೆಯನ್ನು, ಅಷ್ಟೇ ಚೆಲುವಾಗಿ ಕೃತಕವಾಗಿ ಮೂಡಿಸುವ ಕೌಶಲ ಮಾನವನಿಗೆ ಸಿದ್ಧಿಸುವುದೋ ಇಲ್ಲವೋ ಕಾದುನೋಡಬೇಕು.

## ಮಾಂಟಿಸೊರಿ ಪದ್ಧತಿ



ಮಕ್ಕಳ ಶಿಕ್ಷಣದಲ್ಲಿ ಹೊಸ ಪದ್ಧತಿ ಆರಂಭಿಸಿದ ಡಾ. ಮಾಂಟಿಸೊರಿ

ಮಾಂಟಿಸೋರಿ ಪದ್ಧತಿ ಅಂದರೆ ಡಾ. ಮಾಂಟಿಸೋರಿ ನಿರೂಪಿಸಿದ ಶಿಕ್ಷಣದ ಒಂದು ವಿಧಾನ. ಮೂರರಿಂದ ಆರರ ವಯೋಮಿತಿಯ ಮಕ್ಕಳಿಗೆ ಕೊಡುವ ಶಿಕ್ಷಣ. ಮರೈಯ ಮಾಂಟಿಸೋರಿ (1870–1952) ಇಟಲಿ ದೇಶದ ಒಬ್ಬ ಹೆಸರಾದ ಮಹಿಳೆ. ವೈದ್ಯ ವಿಜ್ಞಾನ ಅಧ್ಯಯನ ಮಾಡಿ ಅವರು ಡಾಕ್ಟರೇಟ್ ಪಡೆದಿದ್ದರು. ರೋಮ್ ನಗರದಲ್ಲಿ ಒಂದು ಸದ್ಗೃಹ ಸಂಘವು ಸ್ಥಾಪಿತವಾಗಿದ್ದಿತು. ಬಡಜನರ ಶಿಕ್ಷಣವೂ ಇದರ ಅಂಗವಾಗಿತ್ತು. ಅದಕ್ಕಾಗಿ ಮಕ್ಕಳ ಮನೆ ಎಂಬ ಶಾಲೆಯೂ ಸಂಘಟಿತವಾಗಿತ್ತು. ಇಲ್ಲಿ 3–6 ವಯಸ್ಸಿನ ಮಕ್ಕಳಿಗೆ ಕಲಿಸುವ ಏರ್ಪಾಟು ಇತ್ತು. ದುರ್ಬಲ ಮನಸ್ಸಿನ ಮಕ್ಕಳಿಗೆ ಶಿಕ್ಷಣ ಕೊಡುವ ಪ್ರಯೋಗದಲ್ಲಿ ಚಿಕ್ಕಮಕ್ಕಳ ಸಾಮಾನ್ಯ ಶಿಕ್ಷಣದ ಅನುಭವವನ್ನೂ ಮಾಂಟಿಸೋರಿ ಪಡೆದರು. ಆಮೇಲೆ ಅವರು ಚಿಕ್ಕಮಕ್ಕಳ ಶಿಕ್ಷಣದ ಒಂದು ಯೋಜನೆಯನ್ನು ರೂಪಿಸಿದರು. ಅದಕ್ಕೆ ಮಾಂಟಿಸೋರಿ ಪದ್ಧತಿ ಎಂದು ಹೆಸರು ಬಂತು.

ಜಗತ್ತಿನಲ್ಲೆಲ್ಲ ಮಕ್ಕಳ ಶಿಕ್ಷಣವು ಸಾಮಾನ್ಯವಾಗಿ ಆರನೆಯ ಅಥವಾ ಏಳನೆಯ ವರ್ಷದಲ್ಲಿ ಪ್ರಾರಂಭವಾಗುತ್ತದೆ. ಇದಕ್ಕೂ ಮುನ್ನ ಮಕ್ಕಳ ಶಿಕ್ಷಣವು ಮೊದಲಾಗಬೇಕು. ಬಾಲ್ಯಾವಸ್ಥೆಯ ಪೂರ್ವ ಭಾಗದಲ್ಲಿ ಅಂದರೆ ಮೂರರಿಂದ ಆರು ವಯಸ್ಸಿನಲ್ಲಿ ಕೊಡಬೇಕಾದ ಶಿಕ್ಷಣ ಮಹತ್ವದ್ದು. ಈ ಅವಧಿಯಲ್ಲಿ ಮಾನವನ ಎಲ್ಲ ಶಕ್ತಿಗಳೂ ಸ್ಫುಟವಾಗುತ್ತವೆ. ಇದನ್ನು ಪೂರ್ವ ಪ್ರಾಥಮಿಕ ಶಿಕ್ಷಣ ಎಂದು ಕರೆಯುವರು.

ಈ ಅವಧಿಯಲ್ಲಿ ಮಕ್ಕಳು ಆಟಗಳಲ್ಲಿ ತಲ್ಲೀನರು. ಆದಕಾರಣ ಆಟವನ್ನೊಳಗೊಂಡ ವಿವಿಧ ಚಟುವಟಿಕೆಗಳನ್ನು ಈ ಮಕ್ಕಳಿಗಾಗಿ ಯೋಜಿಸಲಾಯಿತು. ಜ್ಞಾನೇಂದ್ರಿಯಗಳು ಶಿಕ್ಷಣದ ಬಾಗಿಲುಗಳು. ಕಣ್ಣು, ಮೂಗು, ಕಿವಿ, ನಾಲಗೆ, ಕೈ ಇವುಗಳನ್ನು ಬಳಸಿ ಮಕ್ಕಳು ಬಾಹ್ಯ ಜಗತ್ತಿನ ಜ್ಞಾನವನ್ನು ಪಡೆಯುತ್ತಾರೆ. ಮಾಂಟಿಸೊರಿ ಯೂರೋಪಿನ ಹಲವು ದೇಶಗಳಲ್ಲಿ ಸಂಚರಿಸಿ ಅಲ್ಲಿನ ವಿದ್ಯಾಭ್ಯಾಸ ಪದ್ಧತಿಗಳನ್ನು ಅಧ್ಯಯನ ಮಾಡಿದರು. ಎಳೆಯ ಮಕ್ಕಳು ತರಗತಿಗಳಲ್ಲಿ, ಚಟುವಟಿಕೆ ಇಲ್ಲದೆ ಮಂಕು ಕವಿದು ಕುಳಿತಿದ್ದುದನ್ನು ಕಂಡರು. ಮಕ್ಕಳು ಕಣ್ಣು ಕಿವಿ ಕೈಗಳನ್ನು ಬಳಸಿ ಚಟುವಟಿಕೆಯಿಂದ ಆಡುತ್ತ ಸಂತೋಷದಿಂದ ಮನಸ್ಸನ್ನು ಅರಳಿಸುವ ಅಗತ್ಯವನ್ನು ಗುರುತಿಸಿದರು. ಇಂದ್ರಿಯಗಳ ತರಬೇತಿಗಾಗಿ ಶೈಕ್ಷಣಿಕ ಸಲಕರಣೆಗಳನ್ನು ಮಾಂಟಿಸೊರಿ ಸಿದ್ಧಗೊಳಿಸಿದರು. ಈ ಸಲಕರಣೆಗಳು ಮಕ್ಕಳ ಆಟದ ಸಾಮಾನುಗಳೇ. ಇವನ್ನು ಬಳಸಲು ಅವಕಾಶ ಕೊಟ್ಟಾಗ ಮೂರು-ನಾಲ್ಕು ವರ್ಷದ ಮಕ್ಕಳು ಸಹ ಹೇಳಿಕೊಟ್ಟುದನ್ನು ಒಂದೇ ಮನಸ್ಸಿನಿಂದ ಕಲಿತುದನ್ನು ಆಕೆ ಕಂಡರು. ಈ ಅವಧಿಯಲ್ಲಿ ಮಕ್ಕಳಿಗೆ ಕಥೆಗಳಲ್ಲಿ ಆಸಕ್ತಿ ಅಧಿಕ. ಆದಕಾರಣ ಅವರಿಗೆ ಮನ ಹಿಡಿಯುವ ಕಥೆಗಳನ್ನು ಹೇಳತೊಡಗಿದರು.

ಈ ಪದ್ಧತಿಯನ್ನು ಅನುಸರಿಸಿ ಮಕ್ಕಳ ವಯಸ್ಸಿಗೆ ತಕ್ಕಂತೆ ಹೊಸ ವಿಷಯಗಳನ್ನು ಹೇಳಿಕೊಡಬಹುದು. ಮಾಂಟಿಸೊರಿ ಆರು ವರ್ಷದ ಒಳಗಿನ ಮಕ್ಕಳಿಗೆ ಓದು, ಬರಹ, ಎಣಿಸುವುದು ಇವನ್ನು ಕಲಿಸಿದರು. ಆರು ವರ್ಷ ಕಳೆದ ಮಕ್ಕಳಿಗೆ ವ್ಯಾಕರಣ, ರೇಖಾಗಣಿತ, ಸಂಗೀತ, ಭೂಗೋಳ, ಜೀವವಿಜ್ಞಾನಗಳನ್ನು ಕಲಿಸಿದರು. ಈ ಪದ್ಧತಿಯಲ್ಲಿ ಮಗುವೇ ತನಗೆ ಕೊಟ್ಟ ಸಾಮಾನುಗಳನ್ನು ಸ್ವತಂತ್ರವಾಗಿ ಬಳಸುತ್ತ ವಿದ್ಯೆ ಕಲಿಯುತ್ತದೆ.

ಇವಲ್ಲದೆ ಮಕ್ಕಳಿಗೆ ಸಾಮೂಹಿಕ ಹಾಡುಗಳನ್ನು ಕಲಿಸುವ ವ್ಯವಸ್ಥೆಯನ್ನೂ ಮಾಡಿದರು. ಮಕ್ಕಳು ಕಥೆಯ ಹಾಡುಗಳನ್ನು ಹೇಳುತ್ತ ಆಡುತ್ತಾರೆ. ಹೀಗೆ ಕಥೆ. ಹಾಡು, ಆಟ ಇವುಗಳಲ್ಲಿ ಪರಸ್ಪರ ಹೊಂದಾಣಿಕೆ ಉಂಟಾಗಿ. ಶಿಕ್ಷಣದಲ್ಲಿ ಕ್ರೀಡಾಭಾವ ಬೆಳೆದುಕೊಳ್ಳುವುದು. ಆಟವು ಪಾಠವಾಗುತ್ತದೆ, ಪಾಠ ಆಟವಾಗುತ್ತದೆ. ಇದು ನೂತನ ಪದ್ಧತಿಯ ವೈಶಿಷ್ಟ್ಯ. ಮಾಂಟಿಸೊರಿ ವಿಧಾನ ಪೂರ್ವ ಪ್ರಾಥಮಿಕ ಶಿಕ್ಷಣದ ಸಂಯೋಜನೆ; ಶಿಕ್ಷಣ ಕ್ರಾಂತಿಯಲ್ಲಿ ಒಂದು ಮಹತ್ವದ ಹೆಜ್ಜೆ. ಶಿಕ್ಷಣದ ಅಸ್ತಿಭಾರವೇ ಅದು ಎಂದರೆ ಅತ್ಯುಕ್ತಿಯಲ್ಲ.

ಹಲವು ದೇಶಗಳಿಗೆ ಭೇಟಿ ಇತ್ತ ಮಾಂಟಿಸೊರಿ ಭಾರತಕ್ಕೂ ಬಂದರು. ಈಕೆ ಇಲ್ಲಿದ್ದಾಗ ಎರಡನೆಯ ಮಹಾಯುದ್ಧ ಪ್ರಾರಂಭವಾಯಿತು. ಈಕೆ ಶತ್ರುದೇಶದ ಪ್ರಜೆಯೆಂದು ಬ್ರಿಟಿಷ್ ಸರಕಾರ ಭಾರತದಲ್ಲಿ ಈಕೆಯನ್ನು ಬಂಧಿಸಿತು. ಬಿಡುಗಡೆಯಾದ ಅನಂತರ ಇಟಲಿಗೆ ಹಿಂದಿರುಗಿದರು.

## ಮಾರ್ಕ್ಸ್, ಕಾರ್ಲ್

ಯಾವುದೇ ರಾಜ್ಯದ ಪಾಳೆಯಗಾರನಲ್ಲ; ಬೆಂಬಲಕ್ಕೆ ನಾಲ್ಕು ಜನ ಸೈನಿಕರೂ ಇಲ್ಲ; ಒಂದು ಗುಂಡೂ ಹಾರಿಸಲಿಲ್ಲ; ಒಂದು ಕತ್ತಿ ಹಿರಿಯಲಿಲ್ಲ. —ಆದರೂ ಜಗತ್ತಿನ ಇತಿಹಾಸವನ್ನೇ ಬದಲಾಯಿಸಿದ ಈ ವ್ಯಕ್ತಿ.

ಸೈನ್ಯಗಳಿಗಿಂತ ಬಲವಾದುವು ಆಲೋಚನೆಗಳು ಎನ್ನುವುದರ ನಿದರ್ಶನ ಕಾರ್ಲ್ ಮಾರ್ಕ್ಸ್‌ನ ಜೀವನ.

ಸಂಪತ್ತು ಹಲವೇ ಮಂದಿಯ ಕೈಯಲ್ಲಿ ಶೇಖರವಾಗಬಾರದು; ಸಮಾಜದ ಸಂಪತ್ತಿನ ಹಂಚಿಕೆಯಲ್ಲಿ ಪಕ್ಷಪಾತವಿರಬಾರದು—ಎಂಬ ವಾದಕ್ಕೆ ಹತ್ತೊಂಬತ್ತನೆಯ ಶತಮಾನದಲ್ಲಿ ಪ್ರಾಶಸ್ತ್ಯ ದೊರಕಿತು. 1818ರಲ್ಲಿ ಜರ್ಮನಿಯಲ್ಲಿ ಜನಿಸಿದ ಕಾರ್ಲ್ ಮಾರ್ಕ್ಸ್ ಕಮ್ಯೂನಿಸಮಿನ ಪ್ರವಾದಿ ಎನಿಸಿಕೊಂಡ.

1818ರ ಮೇ 5ರಂದು ಜರ್ಮನಿಯ ಟ್ರೀವ್ಸ್ ಎಂಬ ಊರಲ್ಲಿ ಜನಿಸಿದ. ಕಾರ್ಲ್ ಮಾರ್ಕ್ಸ್‌ನ ತಂದೆ ಒಬ್ಬ ಯಹೂದ್ಯ ವಕೀಲ. ಆತನಿಗೆ ತತ್ತ್ವಶಾಸ್ತ್ರದಲ್ಲಿ ತುಂಬ ಅಭಿರುಚಿ. ಮಾರ್ಕ್ಸ್ ಆರು ವರ್ಷಗಳ ಹುಡುಗನಾಗಿದ್ದಾಗ ಅವನ ಕುಟುಂಬ ಕ್ರೈಸ್ತ ಮತವನ್ನು ಸ್ವೀಕರಿಸಿತು. ಚರಿತ್ರೆ ಮತ್ತು ತತ್ತ್ವಶಾಸ್ತ್ರಗಳನ್ನು ಬಾನ್ ಮತ್ತು ಬರ್ಲಿನ್ ನಗರಗಳಲ್ಲಿ ಮಾರ್ಕ್ಸ್ ಅಭ್ಯಾಸಮಾಡಿದ. ತನ್ನ 23ನೆಯ ವಯಸ್ಸಿನಲ್ಲಿ ಜೇನಾ ವಿಶ್ವವಿದ್ಯಾನಿಲಯದ ಡಾಕ್ಟರೇಟ್ ಪಡೆದ. ಈ ಸಮಯದಲ್ಲಿ ಹೇಗೆಲ್ ಎಂಬ ಜರ್ಮನ್ ತತ್ತ್ವಶಾಸ್ತ್ರಜ್ಞನ ವಿಚಾರ ರೀತಿಗೆ ಮಾರುಹೋದ.

ತನ್ನ ವಿಚಾರಗಳನ್ನು ಹರಡಿಸಲು ಪತ್ರಿಕೋದ್ಯಮಕ್ಕಿಂತ ಉತ್ತಮ ಸಾಧನವು ಆತನಿಗೆ ಕಾಣಲಿಲ್ಲ. ಕಲೋನ್ ನಗರದಲ್ಲಿ ಪ್ರಕಟವಾಗುತ್ತಿದ್ದ ಪತ್ರಿಕೆಯೊಂದರ ಸಂಪಾದಕನಾದ. ಒಂದು ವರ್ಷದಲ್ಲಿಯೇ ಪತ್ರಿಕಾ ಸಂಪಾದಕ ಮಾರ್ಕ್ಸ್ ಮತ್ತು ಜರ್ಮನಿಯ ಸರಕಾರ ಇವರ ನಡುವೆ ಘರ್ಷಣೆ ನಡೆಯಿತು. ಆತ ಜರ್ಮನಿಯನ್ನು ಬಿಡಲು ನಿರ್ಧರಿಸಿದ. ಆಗಿನ್ನೂ ಮದುವೆಯಾಗಿ ಒಂದು ವರ್ಷವೂ ಆಗಿರಲಿಲ್ಲ. ಪತ್ನಿ ಜೆನ್ನಿ ಅವನ ಬಾಲ್ಯಸಂಗಾತಿ; ಒಬ್ಬ ಸರಕಾರೀ ಅಧಿಕಾರಿಯ ಮಗಳು. 1843ರಲ್ಲಿ ಪ್ಯಾರಿಸಿಗೆ ಹೋಗಿ ನೆಲೆಸಿದ. ಇಲ್ಲಿ ಮಾರ್ಕ್ಸ್‌ನಿಗೆ ಕೆಲವು ಸಮಾಜವಾದಿಗಳ ನಿಕಟಸಂಪರ್ಕ ಉಂಟಾಯಿತು. ಅಂಥ ಸಂಪರ್ಕಗಳಲ್ಲಿ ಅಮೂಲ್ಯವಾದದ್ದು ಜರ್ಮನಿಯ ಫ್ರೆಡರಿಕ್ ಎಂಗೆಲ್ಸ್ ಎಂಬಾತನ ಸ್ನೇಹ

ಮಾರ್ಕ್ಸ್‌ನ ಎಲ್ಲ ಸಾಧನೆಗಳಿಗೂ ಎಂಗೆಲ್ಸ್ ಸಹಕಾರಿಯಾದ; ಪಾಲುದಾರನಾದ. ಅವರಿಬ್ಬರೂ ಅನೇಕ ಪುಸ್ತಕಗಳನ್ನು ಕೂಡಿ ಬರೆದರು. ಎಂಗೆಲ್ಸನ ನೆರವಿಲ್ಲದಿದ್ದರೆ ಮಾರ್ಕ್ಸ್‌ನ ಬಾಳು ಇನ್ನೂ ದುಸ್ತರವಾಗುತ್ತಿತ್ತು.

ತಮ್ಮ ಕಾಲದ ಸಾಮಾಜಿಕ ಪರಿಸ್ಥಿತಿಯಲ್ಲಿ ಬಡತನ ಮತ್ತು ಶೋಷಣೆಗಳನ್ನು ಗಮನಿಸಿದ ಅವರಿಬ್ಬರ ಮನಸ್ಸು ರೋಸಿತ್ತು. ಸಮಾಜವಾದದ ಮುಖ್ಯ ಪ್ರತಿಪಾದಕ ರಾಬರ್ಟ್ ಓವನನ ವಿಚಾರಧಾರೆಗೆ ಅವರು ಮಾರುಹೋದರು. ಪ್ಯಾರಿಸಿನಲ್ಲಿಯೂ ಮಾರ್ಕ್ಸ್ ಸಮಾಜವಾದೀ ಪತ್ರಿಕೆಯೊಂದರ ಸಂಪಾದಕರಲ್ಲಿ ಒಬ್ಬನಾಗಿ ಕೆಲಸಮಾಡಿದ. ಹೇಗೆಲನ ವಿಚಾರಗಳ ಬಗೆಗೆ ಲೇಖನಗಳನ್ನು ಬರೆದ. ಇವನ ಸಮಾಜವಾದೀ ಬರಹಗಳಿಂದ ಭೀತಿಗೊಂಡ ಫ್ರೆಂಚ್ ಸರಕಾರ ಆತನನ್ನು 1845ರಲ್ಲಿ ಪ್ಯಾರಿಸಿನಿಂದ ಹೊರದೂಡಿತು. ಮುಂದೆ ಬೆಲ್ಜಿಯಂ ದೇಶದ ಬ್ರಸೆಲ್ಸಿಗೆ ಪ್ರಯಾಣ. ಪ್ರೂದಾನ್ ಎಂಬ ಸಮಾಜವಾದಿ ಬರೆದ 'ಬಡತನದ ತತ್ತ್ವಜ್ಞಾನ' ಎಂಬುದಕ್ಕೆ ಉತ್ತರ ರೂಪವಾಗಿ ಮಾರ್ಕ್ಸ್ ತಾನೊಂದು ಪುಸ್ತಕ ಬರೆದ. ಸಮಾಜದಲ್ಲಿ ಬದಲಾವಣೆಯಾಗಬೇಕಿದ್ದರೆ ಅತ್ಯಂತ ಕಟ್ಟುನಿಟ್ಟಾದ ನೀತಿಬದ್ಧವಾದ ವ್ಯವಸ್ಥೆಯೊಂದು ಏರ್ಪಡಬೇಕು ಎಂಬುದು ಪ್ರೂದಾನನ ವಾದ. ಆದರೆ ಮಾರ್ಕ್ಸ್, ಕಾಲಕಳೆದ ಹಾಗೆ ಪರಿಸ್ಥಿತಿಗಳ ಒತ್ತಡಕ್ಕೆ ಅನುಗುಣವಾಗಿ ಸಾಮಾಜಿಕ ವ್ಯವಸ್ಥೆ ಮೂಡಿಬರುತ್ತದೆ ಎಂದ. ಈ ಆಲೋಚನೆ ಮುಂದೆ ಬರೆದ 'ಕಮ್ಯೂನಿಸ್ಟ್ ಪ್ರಣಾಳಿಕೆ' ಗೆ (1848) ನಾಂದಿಯಾಯಿತು.

ಮಾರ್ಕ್ಸ್ ಮತ್ತು ಎಂಗೆಲ್ಸ್ ಬರೆದ 'ಕಮ್ಯೂನಿಸ್ಟ್ ಪ್ರಣಾಳಿಕೆ'ಯ ವಿಚಾರದೃಷ್ಟಿ ಇದು: ಚರಿತ್ರೆ ತೋರಿಸುವುದು ವರ್ಗಗಳ ನಡುವಣ ಹೋರಾಟವನ್ನು. ಕಾರ್ಮಿಕರು ಬೆವರು ಸುರಿಸಿ ಉತ್ಪಾದನೆಯನ್ನು ಹೆಚ್ಚಿಸುತ್ತಾರೆ. ಈ ಉತ್ಪಾದನೆಯೇ—ಅದು ಬೆಳೆಯಾಗಲಿ, ಇಟ್ಟಿಗೆಯಾಗಲಿ, ಕಲ್ಲಿದ್ದಲಾಗಲಿ—ಆಸ್ತಿ, ಬಂಡವಾಳ. ಈ ಆಸ್ತಿಯ ಲಾಭ ಬಂಡವಾಳಗಾರನಿಗೆ ಹೋಗುತ್ತದೆ. ಆರ್ಥಿಕ ವ್ಯವಸ್ಥೆಗಳು ಹೇಗೆ ಬದಲಾದರೂ ಶ್ರಮಜೀವಿಗಳು ಮೇಲಿಂದ ಮೇಲೆ ಶೋಷಣೆಗೆ ಒಳಪಡುತ್ತಾರೆ. ಕಾರ್ಮಿಕರು–ಪ್ರಪಂಚದ ಎಲ್ಲ ಕಾರ್ಮಿಕರು—ಒಂದಾಗಬೇಕು ಎಂದು ಮಾರ್ಕ್ಸ್ ಬೋಧಿಸಿದ. 'ನಿಮ್ಮ ಸಂಕೋಲೆಗಳ ಹೊರತಾಗಿ ನೀವು ಕಳೆದುಕೊಳ್ಳುವಂಥದು ಏನೂ ಇಲ್ಲ' ಎಂದು ಸಾರಿದ. ಶ್ರಮಜೀವಿಗಳ ಹಿತ ಕಾರ್ಮಿಕವರ್ಗದ ಸರ್ವಾಧಿಕಾರತ್ವದಲ್ಲಿ ಮಾತ್ರ ಸಾಧ್ಯ ಎಂದ.

1848ರಲ್ಲಿ ಕಾರ್ಲ್ ಮಾರ್ಕ್ಸ್ ಬ್ರಸೆಲ್ಸಿನಿಂದಲೂ ಹೊರದೂಡಲ್ಪಟ್ಟ. ಕ್ರಾಂತಿಗೆ ಅನುಕೂಲವಾಗಿದ್ದ ಶಕ್ತಿಗಳ ಪ್ರಭಾವ ಜರ್ಮನಿಯಲ್ಲಿ ಹೆಚ್ಚಿತ್ತು. ಮಾರ್ಕ್ಸ್ ಸ್ವದೇಶದಲ್ಲಿ ತಿರುಗಿ ನೆಲೆಸಿದನಾದರೂ ಮುಂಚಿನ ಪತ್ರಿಕೆಯನ್ನು ಪುನಃ ಆರಂಭಿಸುವುದಕ್ಕಾಗಲೀ ಕಾರ್ಮಿಕರನ್ನು ಒಂದುಗೂಡಿಸುವುದಕ್ಕಾಗಲೀ ಆತನಿಗೆ ಸಾಧ್ಯವಾಗಲಿಲ್ಲ. ಒಂದೇ ವರ್ಷದೊಳಗೆ ಅವನು ಜರ್ಮನಿಯಿಂದ ಪುನಃ ಹೊರಬೀಳಬೇಕಾಯಿತು. ಅನಂತರದ ತನ್ನ ಆಯುಸ್ಸನ್ನೆಲ್ಲ ಆತ ಲಂಡನಿನಲ್ಲಿ ಕಳೆದ. ಲಂಡನಿನಲ್ಲಿದ್ದಾಗ ಮಾರ್ಕ್ಸ್ ಅಮೆರಿಕದ 'ನ್ಯೂ ಯಾರ್ಕ್ ಟ್ರಿಬ್ಯೂನ್' ಪತ್ರಿಕೆಯ ಸುದ್ದಿಗಾರನಾಗಿಯೂ ಕೆಲಸ ಮಾಡಿದ.

ಕಾರ್ಲ್ ಮಾರ್ಕ್ಸ್, ಸಿದ್ಧಾಂತಗಳನ್ನು ಮಂಡಿಸುವ ತತ್ತ್ವಜ್ಞಾನಿ ಮಾತ್ರ ಆಗಿ ಉಳಿಯಲಿಲ್ಲ. ಅವನ್ನು ಜನಜೀವನದಲ್ಲಿ ಕೃತಿಗಿಳಿಸಲು ಯತ್ನಿಸಿದ. ರಾಜಕೀಯ ಮತ್ತು ಆರ್ಥಿಕ ಸಮಸ್ಯೆಗಳನ್ನು ವಿಶ್ಲೇಷಿಸುವಾಗಲೂ ವಿಜ್ಞಾನವನ್ನು ಅಭ್ಯಸಿಸುವಾಗ ಅನುಸರಿಸುವ ಕ್ರಮನಿಯಮಗಳನ್ನು ಅನುಸರಿಸಿದ್ದು ಆತನ ಹೆಗ್ಗಳಿಕೆ. ತತ್ತ್ವಜ್ಞಾನ ಪ್ರಪಂಚವನ್ನು ವಿವರಿಸಿ

ಅಷ್ಟರಲ್ಲೇ ಮುಗಿದುಹೋಗಬಾರದು : ಅದನ್ನು ಬದಲಾಯಿಸಲು ಸಾಧಕವಾಗಬೇಕು—ಇದು ಅವನ ವಿಚಾರ ರೀತಿ.

ಕಾರ್ಲ್ ಮಾರ್ಕ್ಸನ ಈ ಸಿದ್ಧಾಂತದಿಂದ ಸಂಪ್ರದಾಯಸ್ಥ ಸಮಾಜವಾದಿಗಳು ಹತಾಶರಾದರು. ಸಮಾಜವಾದದಂತೆ ಕಮ್ಯೂನಿಸಮಿನ ಗುರಿ ಸಮಾಜದ ವ್ಯವಸ್ಥೆಯನ್ನು ಬದಲಾಯಿಸುವುದು. ಆದರೆ ಸಮಾಜವಾದ ಸಂವಿಧಾನಬದ್ಧವಾಗಿ, ಬಲಪ್ರಯೋಗವಿಲ್ಲದೆ ಬಡವರಿಗೂ ಶ್ರೀಮಂತರಿಗೂ ಇರುವ ವ್ಯತ್ಯಾಸವನ್ನು ಕೊನೆಗಾಣಿಸಲು ಪ್ರಯತ್ನಿಸುತ್ತದೆ. ಬಲಪ್ರಯೋಗವಿಲ್ಲದೆಯೇ ಬಂಡವಾಳಗಾರರು ತಮ್ಮ ಹಣ ಅಧಿಕಾರಗಳನ್ನು ಬಿಡುವರೆಂದು ಕಮ್ಯೂನಿಸಂ ಭಾವಿಸುವುದಿಲ್ಲ, ಬಂಡವಾಳಗಾರರ ಮನವೊಲಿಸಿ ಅವರು ಕಾರ್ಮಿಕರ ಶೋಷಣೆಯನ್ನು ಬಿಡುವಂತೆ ಮಾಡಬಹುದೆಂಬ ನಂಬಿಕೆಗೆ ಕಮ್ಯೂನಿಸಮಿನಲ್ಲಿ ಸ್ಥಾನವಿಲ್ಲ.

ವರ್ಷಗಳ ಕಾಲ ಒಂದೇ ಸಮನೆ ದುಡಿದು ಮಾರ್ಕ್ಸ್ ಅಂತರರಾಷ್ಟ್ರೀಯ ದುಡಿಮೆಗಾರರ ಸಂಸ್ಥೆಯೊಂದನ್ನು 1864ರಲ್ಲಿ ರೂಪಿಸಿದ. ಹಲವಾರು ಬಾರಿ ಆರ್ಥಿಕ ಮುಗ್ಗಟ್ಟನ್ನು ಎದುರಿಸಬೇಕಾಯಿತು. ಅಂಥ ಸಮಯದಲ್ಲಿ ಸ್ವತಃ ಹತ್ತಿಯ ಗಿರಣಿಯ ಮಾಲಿಕನಾಗಿದ್ದ ಏಂಗೆಲ್ಸ್ ಆತನಿಗೆ ಸಹಾಯ ಮಾಡಿದ. ಅದರ ಫಲವಾಗಿ ಕಾರ್ಲ್ ಮಾರ್ಕ್ಸನ 'ಬಂಡವಾಳ' ಉದ್ಗ್ರಂಥ ಹೊರಬಿತ್ತು. ಈ ಗ್ರಂಥದಲ್ಲಿ ಬಂಡವಾಳ ಪದ್ಧತಿಯನ್ನು ಆದ್ಯಂತವಾಗಿ ವಿಶ್ಲೇಷಿಸಿರುವುದಲ್ಲದೆ ವಾಸ್ತವವಾಗಿ ಕಮ್ಯೂನಿಸವನ್ನು ಹೇಗೆ ರೂಢಿಗೆ ತರಬಹುದೆಂಬುದರ ಬಗೆಗೂ ವಿವರವಾದ ನಿರೂಪಣೆಯಿದೆ. ಮಾರ್ಕ್ಸನ ವಿಚಾರಧಾರೆ 'ವೈಜ್ಞಾನಿಕ ಸಮಾಜವಾದ' ಎಂದು ಪ್ರಸಿದ್ಧವಾಗಿದೆ.

ಕೊನೆಯುಸಿರಿನವರೆಗೂ ತಾನು ನಂಬಿದುದರ ಪ್ರಚಾರಕ್ಕೆ ತನ್ನ ಚೈತನ್ಯವನ್ನೆಲ್ಲ ಮಾರ್ಕ್ಸ್ ಮುಡಿಪಿಟ್ಟ. 1883 ಮಾರ್ಚ್ 11ರಂದು ಆತ ಕಾಲವಾದ.

ತನ್ನ ಸಿದ್ಧಾಂತಗಳು ಯಾವುದೇ ದೇಶದ ಚರಿತ್ರೆಗೆ ಹೊಸ ತಿರುವನ್ನು ಕೊಟ್ಟುದನ್ನು ಮಾರ್ಕ್ಸ್ ಕಣ್ಣಾರೆ ಕಾಣಲಿಲ್ಲ. ಅದು ಸಾಧ್ಯವಾದದ್ದು 1917ರಲ್ಲಿ ರಷ್ಯದಲ್ಲಿ. ಲೆನಿನ್ ಮಾರ್ಕ್ಸ್‌ವಾದದ ನಿಷ್ಠಾವಂತ ಅನುಯಾಯಿ. ಅವನೂ ಅವನ ಬೆಂಬಲಿಗರೂ ಮಾಡಿದ ಕೃಷಿಯ ಫಲ ಅಕ್ಟೋಬರ್ ಕ್ರಾಂತಿ. ಮಾರ್ಕ್ಸ್ ಪ್ರತಿಪಾದಿಸಿದ ಸಿದ್ಧಾಂತವನ್ನು ಸೋವಿಯೆತ್ ರಷ್ಯ ತನ್ನ ಪರಿಸ್ಥಿತಿಗೆ ತಕ್ಕಂತೆ ಅನ್ವಯಿಸಿತು.

ಹೀಗಿದ್ದರೂ ಮಾರ್ಕ್ಸ್, ಜಗತ್ತಿನ ಇತಿಹಾಸದ ನಿಟ್ಟನ್ನು ಬದಲಾಯಿಸಿದ ಮಹಾ ವ್ಯಕ್ತಿಗಳಲ್ಲಿ ಒಬ್ಬ. ಇಂದು ಸೋವಿಯೆತ್ ರಷ್ಯ, ಚೀನಗಳಲ್ಲದೆ ಚೆಕೊಸ್ಲೊವಾಕಿಯ, ರುಮೇನಿಯ, ಬಲ್ಗೇರಿಯ, ಪೋಲೆಂಡ್ ಮೊದಲಾದ ರಾಷ್ಟ್ರಗಳು ಒಂದಲ್ಲ ಒಂದು ರೀತಿಯಲ್ಲಿ ಕಮ್ಯೂನಿಸವನ್ನು ಪ್ರತಿಪಾದಿಸುತ್ತವೆ. ಅಲ್ಲದೆ ಮಾರ್ಕ್ಸನ ಸಿದ್ಧಾಂತಗಳನ್ನು ಒಪ್ಪದಿರುವ ರಾಷ್ಟ್ರಗಳೂ ಕಾರ್ಮಿಕರ ವಿಷಯದಲ್ಲಿ ಇಷ್ಟವಿರಲಿ, ಇಲ್ಲದಿರಲಿ ಹೆಚ್ಚು ನ್ಯಾಯದಿಂದ ನಡೆದುಕೊಳ್ಳುತ್ತವೆ.

ನೋಡಿ : ಅಕ್ಟೋಬರ್ ಕ್ರಾಂತಿ ; ಓವನ್, ರಾಬರ್ಟ್ : ಕಮ್ಯೂನಿಸಂ ; ಲೆನಿನ್ ; ಹೆಗೆಲ್.

## ಮಾರ್ಕೊ ಪೋಲೋ

ಐಸ್ ಕ್ರೀಂ ಮೊಟ್ಟಮೊದಲು ಯಾರು ತಯಾರಿಸಿದರು ? [illegible] ಹೇಗೆ ಮಾಡುತ್ತಿದ್ದರು ? ಕ್ರಿ. ಪೂ. 3000ದಲ್ಲಿ ಚೀನದಲ್ಲಿ ಹಾಲನ್ನು [illegible] ಮಂಜುಗಡ್ಡೆಯನ್ನು ಮಾಡುತ್ತಿದ್ದರಂತೆ. ಮಧ್ಯಯುಗದಲ್ಲೂ [illegible] ಚೀನದಲ್ಲಿ ಐಸ್‌ಕ್ರೀಂ ಬಳಕೆಯಲ್ಲಿತ್ತು. ಭದ್ರವಾಗಿ ಪ್ಯಾಕ್‌ಮಾಡಿದ ಮಂಜುಗಡ್ಡೆಯಲ್ಲಿ ಜೇನುತುಪ್ಪ ಅಥವ ಹಣ್ಣಿನ ರಸವನ್ನು ಇಟ್ಟು ಸ್ವಲ್ಪ ಸಮಯದ ಅನಂತರ 'ಐಸ್‌ಕ್ರೀಂ' ಪಡೆಯುತ್ತಿದ್ದರು. [illegible] ನವರಿಗೆ ತಿಳಿಯದ್ದನ್ನು ಮಾರ್ಕೊ ಪೋಲೋ (1250–1324) ನಿಂದ. ಈ ರೀತಿ ಐಸ್‌ಕ್ರೀಂ ಮಾಡುವುದನ್ನು ಮಾರ್ಕೊ ಪೋಲೋ ಚೀನದಲ್ಲಿ ಕಂಡು, ಇಟಲಿಗೆ ಹಿಂದಿರುಗಿದ ಮೇಲೆ ಅಲ್ಲಿಯವರಿಗೆ ಹೇಳಿಕೊಟ್ಟ.

ಇವನ ತಂದೆ ಮತ್ತು ಚಿಕ್ಕಪ್ಪ ವೆನಿಸ್‌ನ ಪ್ರಸಿದ್ಧ ವ್ಯಾಪಾರಿಗಳು. ವ್ಯಾಪಾರಕ್ಕಾಗಿ ಅವರು ಆಗಾಗ ಇತರ ದೇಶಗಳಿಗೆ ಪ್ರಯಾಣ ಮಾಡುತ್ತಿದ್ದರು. ಮಾರ್ಕೊ ಪೋಲೋಗೆ ಹದಿನೇಳು ವರ್ಷ ವಯಸ್ಸಾಗಿದ್ದಾಗ ತಂದೆಯ ಜೊತೆ ಅವನೂ ಚೀನ ದೇಶಕ್ಕೆ ಹೊರಟ. ಪ್ರಯಾಣ ಮಾರ್ಗದಲ್ಲಿ ತಾನು ಕಂಡದ್ದನ್ನೆಲ್ಲ ಜ್ಞಾಪಕದಲ್ಲಿಟ್ಟುಕೊಂಡ. ಅವನ ಆ ಅನುಭವ ಮುಂದೆ ಆ ಗ್ರಂಥರಚನೆಗೆ ವಸ್ತುವಾಯಿತು.

ಹೀಗೆ ಒಂದು ಬಾರಿ ಅವನ ತಂದೆ ಮತ್ತು ಚಿಕ್ಕಪ್ಪ ಚೀನ ದೇಶಕ್ಕೆ ಹೋಗಿ ಬಂದಿದ್ದರು. ಅವರಿಗೆ ಪ್ರಯಾಣಗಳ ಕಷ್ಟಗಳು ಅಭ್ಯಾಸವಾಗಿದ್ದುವು. ಆದರೆ ಕಿರಿಯ ಮಾರ್ಕೊ ಚಿಕ್ಕಹುಡುಗ. ಮರುಭೂಮಿ. ಅತ್ಯಂತ ಶೀತಪ್ರದೇಶಗಳು, ಕಾಡುಮೇಡುಗಳಲ್ಲೆಲ್ಲ ಸುತ್ತಿಸುತ್ತಿ ಬಹಳ ಸೋತುಹೋದ. ಅಷ್ಟೇ ಅಲ್ಲ ವೃದ್ಧಾಪ್ಯದಲ್ಲಿಯೂ ಅವನು ಅನೇಕ ಕಾಯಿಲೆಗಳಿಂದ ನರಳಬೇಕಾಯಿತು. ಆದರೆ ಕೆಚ್ಚೆದೆಯಿಂದ ಎಲ್ಲವನ್ನೂ ಎದುರಿಸಿದ.

ಮಾರ್ಕೊ ಪೋಲೋ, ಅವನ ತಂದೆ ಮತ್ತು ಚಿಕ್ಕಪ್ಪ ಬಾಗ್ದಾದಿನ ಮೂಲಕ ಪರ್ಷಿಯದ ಕೊಲ್ಲಿಯ ದಡದಲ್ಲಿದ್ದ ಹಾರಮುಜ್‌ಗೆ ಬಂದು ಸೇರಿದರು. ಅಲ್ಲಿಂದ ಮುಂದೆ ಸಾಗರ ಪ್ರಯಾಣ ಕೈಕೊಳ್ಳಬೇಕೆಂದು ಅವರ ಆಸೆಯಾಗಿದ್ದಿತು. ಆದರೆ ಸಮುದ್ರದಲ್ಲಿ ಪ್ರಯಾಣ ಮಾಡಲು ಯೋಗ್ಯವಾದ ಹಡಗುಗಳು ದುರ್ಲಭವಾಗಿದ್ದುದರಿಂದ ಅವರು ತಮ್ಮ ಮನಸ್ಸನ್ನು ಬದಲಾಯಿಸಿ ಭೂಪ್ರಯಾಣ ಕೈಗೊಂಡರು. ಮೊದಲು ಪರ್ಷಿಯ ಮತ್ತು ಅಫ್ಘಾನಿಸ್ತಾನಗಳನ್ನು, ಬಳಿಕ ಪಾಮಿರ್ ಪರ್ವತಗಳನ್ನು ದಾಟಿ, ಗೋಬಿ ಮರುಭೂಮಿಯನ್ನು ಹಾದು ಚೀನ ದೇಶವನ್ನು ತಲಪಿದರು. ಈ ಪ್ರಯಾಣಕ್ಕೆ ಅವರಿಗೆ ಮೂರೂವರೆ ವರ್ಷ ಹಿಡಿಯಿತು.

ಚೀನ ದೇಶವನ್ನು ಆಗ ಚೆಂಗೀಸ್ ಖಾನನ ಮೊಮ್ಮಗ ಕುಬ್ಲಾಯಿ ಖಾನ್ ಆಳುತ್ತಿದ್ದ. ಕುಬ್ಲಾಯಿ ಖಾನ್ ಪೋಲೋ ವ್ಯಾಪಾರಿಗಳಿಗೆ ಅಪೂರ್ವ ಸ್ವಾಗತ ನೀಡಿದ, ಅವರು ಮುಂದೆ ಇಪ್ಪತ್ತಮೂರು ವರ್ಷಗಳ ಕಾಲ ಚೀನ ದೇಶದಲ್ಲಿಯೇ ಇದ್ದರು. ರಾಜನ ಆಶ್ರಯದಲ್ಲಿ ಮಾರ್ಕೊ ಬೆಳೆದು ತನ್ನ ಚುರುಕುಬುದ್ಧಿ ಮತ್ತು ಚಾಕಚಕ್ಯತೆಗಳಿಂದ ರಾಜನ ಮನಸ್ಸನ್ನು ಗೆದ್ದುಕೊಂಡ. ಚೀನೀ ಭಾಷೆಯನ್ನು ಕಲಿತು ಹದಿನೇಳು ವರ್ಷಗಳ ಕಾಲ ಪ್ರಮುಖ ಅಧಿಕಾರದಲ್ಲಿದ್ದು, ರಾಜನ ಸೇವೆ ಮಾಡಿದ. ಒಂದು ನಗರದ ರಾಜ್ಯಪಾಲನೂ ಆಗಿದ್ದ. ಅವನ ಕಾರ್ಯನಿಷ್ಠೆಯನ್ನು ಕಂಡ ಚಕ್ರವರ್ತಿ ಅವನನ್ನು ಬರ್ಮ ಮತ್ತು ಜಾವಾ ಸುಮಾತ್ರಾಗಳಿಗೆ ರಾಯಭಾರಿಯಾಗಿ ಕಳುಹಿಸಿದ. ಪ್ರತಿ ಪ್ರಯಾಣದಿಂದ ಹಿಂದಿರುಗಿದಾಗಲೂ ತಾನು ಕಂಡ ದೇಶಗಳ ಜನರ ಮತ್ತು ವಸ್ತುಗಳ ವಿಷಯವಾಗಿ ಮಾರ್ಕೊ ಪೋಲೋ [illegible] ವಿಷಯಭಂಡಾರ ಚಕ್ರವರ್ತಿಯನ್ನು [illegible].

ಪೋಲೋ [illegible] ತಮ್ಮ ದೇಶಕ್ಕೆ ಹಿಂದಿರುಗಬೇಕೆಂಬ [illegible] ಹುಟ್ಟಿತು. ಅವರನ್ನು ಹಿಂದಕ್ಕೆ ಕಳುಹಿಸಲು ರಾಜ ಮೊದಲು [illegible] ಆದರೆ 1292ರಲ್ಲಿ ಕುಬ್ಲಾಯಿ ಖಾನ್ ಅವರನ್ನು [illegible]. ಈ



ಪ್ರಯಾಣದಲ್ಲಿ ಇವರು ಭಾರತಕ್ಕೆ ಬಂದರೆಂದು ಉಲ್ಲೇಖವಿದೆ. ಪೋಲೋ ಕುಟುಂಬದವರು 1295ರಲ್ಲಿ ವೆನಿಸ್ ಪಟ್ಟಣವನ್ನು ತಲಪಿದರು. ಅವರೊಡನೆ ಐಶ್ವರ್ಯದ ಹೊರೆಯೇ ಬಂದಿದ್ದಿತು. ಇಪ್ಪತ್ತನಾಲ್ಕು ವರ್ಷಗಳ ಕಾಲ ಕಣ್ಮರೆಯಾಗಿದ್ದು ಈಗ ಇದ್ದಕ್ಕಿದ್ದಂತೆ ಬಂದಿಳಿದ ಆಗಂತುಕರನ್ನು ಉಳಿದ ಪೋಲೋ ವಂಶಸ್ಥರು ಮೊದಲು ಗುರುತಿಸಲೇ ಇಲ್ಲ. ವಂಚಕರ ಸಂಚು ಇದು ಎಂದು ಸುಮ್ಮನಾದರಂತೆ. ಬಹಳ ಕಷ್ಟಪಟ್ಟು ಅವರನ್ನು ನಂಬಿಸಬೇಕಾಯಿತು !

ಮಾರ್ಕೊ ಪೋಲೋ ತಮ್ಮ ಪ್ರಯಾಣದ ವಿವರಗಳನ್ನು ತನ್ನ ಸ್ನೇಹಿತರಿಗೆ ಹೇಳಿದ. ಅವರು ಅದೆಲ್ಲ ಪೊಳ್ಳು ಎಂದು ನಕ್ಕುಬಿಟ್ಟರು.

1298ರಲ್ಲಿ ವೆನಿಸ್ ಮತ್ತು ಜಿನೋವ ನಡುವಣ ಯುದ್ಧದಲ್ಲಿ ಭಾಗವಹಿಸಿದ್ದ ಮಾರ್ಕೊ. ನೌಕಾಯುದ್ಧವೊಂದರಲ್ಲಿ ಸೆರೆಸಿಕ್ಕಿದ. ಜಿನೋವದ ಸೆರೆಮನೆಯಲ್ಲಿ ಪೀಸಾನಗರದ ರಸ್ಟಿ ಸಿಯಾನೋ ಎಂಬ ಲೇಖಕ ಮಾರ್ಕೊವಿನ ಜೊತೆಗಾರನಾಗಿದ್ದ. ಮಾರ್ಕೊ ತನ್ನ ಸಾಹಸಕಥೆಗಳನ್ನು ಜೊತೆಗಾರನಿಗೆ ಹೇಳಿದ. ರಸ್ಟಿಸಿಯಾನೊ ಅವುಗಳನ್ನು ಬರೆದುಕೊಂಡ. 'ಮಾರ್ಕೊ ಪೋಲೊ ಪ್ರವಾಸಗಳು' ಎಂದು ಅದರ ಹೆಸರು. ಅದು ಪ್ರಪಂಚದ ಪ್ರಸಿದ್ಧ ಪ್ರವಾಸ ಕಥನ.

1299ರಲ್ಲಿ ಸೆರೆಮನೆಯಿಂದ ಮಾರ್ಕೊನಿಗೆ ಬಿಡುಗಡೆಯಾಯಿತು. ಆತನು ಮನೆಗೆ ಹಿಂದಿರುಗಿದ. 1324ರಲ್ಲಿ, ಎಪ್ಪತ್ತನಾಲ್ಕನೆಯ ವಯಸ್ಸಿನಲ್ಲಿ ಕಾಲವಾದ. ಅವನ ಕೃತಿ ಮುಂದಿನ ಅನೇಕ ಅನ್ವೇಷಕರಿಗೆ ದಾರಿತೋರಿತು. ಮುದ್ರಣ ಬಳಕೆಗೆ ಬರುವ ಮೊದಲೇ ಅವನ ಪುಸ್ತಕ ಹಲವು ಭಾಷೆಗಳಿಗೆ ಭಾಷಾಂತರವಾಯಿತು. ಸುಪ್ರಸಿದ್ಧ ಅನ್ವೇಷಕ ಕೊಲಂಬಸ್ ಆ ಕೃತಿಯ ಲ್ಯಾಟಿನ್ ಭಾಷಾಂತರವನ್ನು ಮಾರ್ಗದರ್ಶನಕ್ಕಾಗಿ ತನ್ನ ಬಳಿಯಲ್ಲಿ ಇಟ್ಟುಕೊಂಡಿದ್ದನಂತೆ. ಭೂಪಟ ತಯಾರಕರಿಗೂ ಅದು ಕೈದೀವಿಗೆಯಾಯಿತು.

## ಮಾನ ನಷ್ಟ

ಇಬ್ಬರು ಮಾತನಾಡುತ್ತಿರುತ್ತಾರೆ. ಮೂರನೆಯ ವ್ಯಕ್ತಿಯನ್ನು ಕುರಿತು ಒಬ್ಬ ಇನ್ನೊಬ್ಬನಿಗೆ. "ಅವನೊಬ್ಬ ಸುಳ್ಳುಗಾರ. ಮೋಸಗಾರ. ನಂಬಿಕೆಗೆ ಯೋಗ್ಯನಲ್ಲ." ಎನ್ನುತ್ತಾನೆ. ಇದರಿಂದ ಮೂರನೆಯವನ ಮರ್ಯಾದೆ ಹೋಯಿತು—ಮಾನ ನಷ್ಟವಾಯಿತು : ಏಕೆಂದರೆ ಈ ಮಾತನ್ನು ಕೇಳಿದವನು ಅವನಲ್ಲಿ ಇಟ್ಟಿದ್ದ ಗೌರವಕ್ಕೆ ಕುಂದಾಯಿತು.

ಹೀಗೆ ಮಾತನಾಡಿದವನಿಗೆ ಮೂರನೆಯವನನ್ನು ಅಪಹಾಸ್ಯ, ದ್ವೇಷ ಹಾಗೂ ಅಪಮಾನಗಳಿಗೆ ಒಳಪಡಿಸುವ ಆಲೋಚನೆಯಿರಬಹುದು. ಅಥವಾ. ಎಲ್ಲರೂ ಅವನನ್ನು ದೂರ ಇಡುವಂತೆ ಮಾಡುವ ವಿಚಾರವೂ ಇರಬಹುದು.

ಮಾನ ನಷ್ಟ ಎರಡು ರೀತಿಯದು : ಮೊದಲನೆಯದು ಬರಹ. ಮುದ್ರಣ ಅಥವಾ ಚಿತ್ರಗಳಲ್ಲಿ ಮಾನಹಾನಿ ಸೂಚನೆ ಇರುವುದು. ಇದಕ್ಕೆ ಶಾಶ್ವತ ಮಾನ ನಷ್ಟ ಎನ್ನುತ್ತಾರೆ. ಎರಡನೆಯದು ತಾತ್ಕಾಲಿಕ ರೂಪದ್ದು; ಅಪವಾದ ಮಾತು ಅಥವಾ ಇಂಗಿತಗಳಿಂದ ಮಾಡಿದ ನಿಂದೆ. ಮೊದಲನೆಯದನ್ನು ಮಾನ ನಷ್ಟವೆಂದೂ ಎರಡನೆಯದನ್ನು ಅಪವಾದವೆಂದೂ ಇಟ್ಟುಕೊಳ್ಳಬಹುದು. ಮಾನ ನಷ್ಟ ಸೂಚನೆಯೂ ಪುಸ್ತಕ. ನಿಯತಕಾಲಿಕ, ವೃತ್ತಪತ್ರಿಕೆ, ಪರಿಪತ್ರ. ಕಾಗದಗಳಲ್ಲಿ ಪ್ರಕಾಶಕ್ಕೆ ಬಂದಿರಬಹುದು. ಚಿತ್ರ. ವ್ಯಂಗ್ಯ ಚಿತ್ರ. ವಿಗ್ರಹ. ಪ್ರತಿಮೆ ಅಥವಾ ಬೊಂಬೆ ಮತ್ತು ಪದಗಳು ಕೂಡ ಮಾನಹಾನಿಕರವೆಂದು ಪರಿಗಣಿಸಲ್ಪಡುತ್ತವೆ. ಏಕೆಂದರೆ ಇವುಗಳಲ್ಲಿ ಭೌತಿಕ ರೂಪದಲ್ಲಿ ಈ ಸೂಚನೆ ಬೆಳಕಿಗೆ ಬಂದಿರುತ್ತದೆ. ಒಬ್ಬ ಮನುಷ್ಯ ನಂಬಿಕೆಗೆ ಅರ್ಹನಲ್ಲ. ಅವನದು ಕೆಟ್ಟ ನಡತೆ. ಇಂಥ ಆರೋಪಗಳೂ ಮಾನ ನಷ್ಟದ ಗುಂಪಿಗೆ ಸೇರಿವೆ.

ಮಾನ ನಷ್ಟ ಆರೋಪದ ಮೇಲೆ ಮೊಕದ್ದಮೆ ಹೂಡಲು ನ್ಯಾಯಶಾಸ್ತ್ರದ ರೀತ್ಯ ಅದು ಪ್ರಕಟಿತ ಅಥವಾ ಪ್ರಕಾಶಿತವಾಗಿರಬೇಕು. ಇದೊಂದು ಪಾರಿಭಾಷಿಕ ಪ್ರಯೋಗ. ವ್ಯಾವಹಾರಿಕವಾಗಿ ಹೇಳಬೇಕೆಂದರೆ 'ಅ' ಎನ್ನುವವನು 'ಇ' ಎನ್ನುವವನ ಬಗೆಗೆ ಅಪಮಾನವಾಗುವಂಥ ಮಾತುಗಳನ್ನು ಆಡುತ್ತಾನೆ ಅಥವಾ ಬರೆಯುತ್ತಾನೆ ಎನ್ನೋಣ. 'ಅ' ಈ ಮಾತನ್ನು 'ಇ' ಗೆ ಹೇಳಿದರೆ ಅಥವಾ ಬರೆದರೆ ಮಾನ ನಷ್ಟವಲ್ಲ. ಆರೋಪವನ್ನು 'ಇ' ಗಲ್ಲದೆ ಮೂರನೆಯವನೊಬ್ಬನಿಗೆ ತೋರಿಸಿರಬೇಕು. ಆಕಸ್ಮಿಕವಾಗಿ ಅಥವಾ ನಿರುದ್ದೇಶವಾಗಿ ಈ ವಿಷಯವು ಮೂರನೆಯವನಿಗೆ ತಿಳಿದರೆ ಅದರಲ್ಲಿ ಹಾನಿಯಿಲ್ಲ. ಇಲ್ಲವೆ 'ಇ' ಅಥವಾ ಅವನ ಪಕ್ಷದವರು ತಾವಾಗಿಯೇ ತೋರಿಸಿದಲ್ಲಿ ಅದು 'ಪ್ರಕಟಿತ' ಎನ್ನಿಸಿಕೊಳ್ಳುವುದಿಲ್ಲ.

ಕೆಲವು ನಿರ್ದಿಷ್ಟ ಸಂದರ್ಭಗಳನ್ನುಳಿದು ಸಾಧಾರಣವಾಗಿ ಎಲ್ಲ ರೀತಿಯ ಮಾನ ನಷ್ಟಕಾರಕ ಆರೋಪಗಳಿಗಾಗಿ ಮೊಕದ್ದಮೆ ಹೂಡಬಹುದು. ತನಗೆ ಮಾನ ನಷ್ಟವಾಯಿತೆಂದು 'ಇ' ಭಾವಿಸಿದರೆ 'ಅ'ನ ವಿರುದ್ಧ ನ್ಯಾಯಾಲಯಕ್ಕೆ ಹೋಗಬಹುದು. ಆಗ 'ಅ' ತಾನು [illegible]

ಎಂದು ತೋರಿಸಿಕೊಡಲು ಮೂರು ದಾರಿಗಳಿವೆ. 1. ಆರೋಪ ನ್ಯಾಯ ಸಮ್ಮತ, ಅಕ್ಷರಶಃ ನಿಜ ಎಂದು ತೋರಿಸಿಕೊಡುವುದು. 2. ತಾನು 'ಇ' ವಿಷಯ ವೈಯಕ್ತಿಕ ದ್ವೇಷದಿಂದ ಹಾಗೆ ಆರೋಪಮಾಡಲಿಲ್ಲ, ಇದನ್ನು ತಿಳಿಸುವುದು ಸಾರ್ವಜನಿಕರಿಗೆ ಒಳ್ಳೆಯದು ಎಂದು ಮಾಡಿದೆ ಎಂದು ರುಜುವಾತು ಮಾಡುವುದು. 3. ತನ್ನ ಆರೋಪವನ್ನು 'ಇ' ಅವನ ಮಾತುಗಳಲ್ಲಿಯೆ ಅಥವಾ ಅಭಿಪ್ರಾಯದಲ್ಲಿಯೆ ಒಪ್ಪಿಕೊಂಡಿದ್ದಾನೆ ಎಂದು ತೋರಿಸುವುದು.

ಇಲ್ಲವಾದರೆ 'ಅ,' ತಾನು ಆಗಲೆ 'ಇ'ನ ಕ್ಷಮಾಪಣೆ ಬೇಡಿದ್ದೇನೆ, ತನ್ನಿಂದ ಆತನಿಗಾದ ತೊಂದರೆಗೆ ಪರಿಹಾರ ಕೊಟ್ಟಿದ್ದೇನೆ ಎಂದು ತೋರಿಸಬಹುದು ; ಅಥವಾ ತಾನು ಆರೋಪ ಮಾಡಿದ ಮೇಲೆ, ಆದಷ್ಟು ಬೇಗ, ಬಹಿರಂಗವಾಗಿ ತಿದ್ದಿಕೊಂಡಿದ್ದೇನೆ—ಎಂದು ತೋರಿಸಿಕೊಡಬಹುದು.

ಒಂದು ವೇಳೆ ದ್ವೇಷದಿಂದಲೇ ಈ ನುಡಿಗಳನ್ನು ಹೊರಗೆಡಹಿದ್ದರೂ ಕೆಲವು ವಿಶೇಷಾಧಿಕಾರಗಳಿಂದ ಇದರ ಮೇಲೆ ಮೊಕದ್ದಮೆ ಹೂಡಲಾಗದು. ನ್ಯಾಯಸ್ಥಾನದ ಕಾರ್ಯ, ರಾಜ್ಯದ ಅಧಿಕೃತ ವರ್ಗದವರ ಕರ್ತವ್ಯ ನಿರ್ವಹಣ, ಲೋಕಸಭೆಯ ಕಲಾಪ, ಲೋಕಸಭೆಯ ಆಣತಿಯಂತೆ ಹೊರ ಬಂದ ವರದಿ, ಶಾಸಕಾಂಗಗಳ ಕಲಾಪದ ಪತ್ರಿಕಾ ವರದಿ. ಇಂಥ ಸಂದರ್ಭಗಳಲ್ಲೂ ಮಾನನಷ್ಟದ ಮೊಕದ್ದಮೆ ಸಾಧ್ಯವಿಲ್ಲ. ವಕೀಲ ತನ್ನ ಕಕ್ಷಿಗಾರನಿಗೆ ಕರ್ತವ್ಯ ನಡೆಸುವ ದೃಷ್ಟಿಯಿಂದ ಹೇಳುವ ಮಾತುಗಳ ವಿಷಯವಾಗಿ ಮಾನನಷ್ಟ ಪರಿಹಾರ ಕೇಳುವಂತಿಲ್ಲ.

ಕೆಲವು ಅಸಾಧಾರಣ ಸಂದರ್ಭಗಳಲ್ಲಿ ಶಾಶ್ವತ ಮಾನನಷ್ಟವು ದಸ್ತಗಿರಿ ಮತ್ತು ಶಿಕ್ಷೆಯಂಥ ಅಪರಾಧಿಕ ಕ್ರಮಕ್ಕೆ ಅರ್ಹವೆನಿಸಬಹುದು.

## ಮಾನವ

ಮಾನವ ಚಂದ್ರ ಉಪಗ್ರಹಕ್ಕೆ ಹೋಗಿ ಬಂದ. ಕಳುಹಿಸಿದ್ದು ಒಂದು ದೇಶ ; ಹೋಗಿ ಬಂದವರು ಕೆಲವರು ಮಾತ್ರ. ಆದರೆ ಅದರ ಹಿನ್ನೆಲೆಯಲ್ಲಿ ಮಾನವ ಕುಲದ ಇತಿಹಾಸವೇ ನಿಂತಿದೆ. ಒಂದು ದೃಷ್ಟಿಯಿಂದ ಅದು ಇಡೀ ಮಾನವಕೋಟಿಯ ಸಾಧನೆ. ಇಂಥ ಸಾಧನೆಗೆ ತಕ್ಕ ಶಕ್ತಿ, ಸಾಮರ್ಥ್ಯಗಳನ್ನು ಮಾನವ ಎಲ್ಲಿಂದ ಪಡೆದ ?

ಈವರೆಗಿನ ಜೀವವಿಕಾಸದಲ್ಲಿ ಮಾನವ ಅತ್ಯಂತ ಪ್ರಭಾವಶಾಲಿಯಾದ ಶ್ರೇಷ್ಠತಮ ಸೃಷ್ಟಿ.

ಎರಡು ಕಾಲುಗಳ ಮೇಲೆ ದೇಹದ ಸಂಪೂರ್ಣ ಭಾರವನ್ನು ಹೊತ್ತು, ಸುಲಭವಾಗಿ ನಡೆದಾಡಲು ಅನುಕೂಲವಾದ ದೇಹ ರಚನೆ ಮಾನವನದು. ಕತ್ತಿನ ಮೇಲೆ ದೇಹದ ಮುಂಡದ ಭಾಗಕ್ಕೆ ತಲೆ ಸುಭದ್ರವಾಗಿ ಅಂಟಿಕೊಂಡಿದೆ. ಎರಡೂ ಕಣ್ಣುಗಳ ನೋಟ ಒಂದೇ ಬಿಂದುವಿನ ಮೇಲೆ ಕೇಂದ್ರೀಕೃತವಾಗಿ ಉದ್ದ, ಅಗಲ, ದೂರಗಳನ್ನು ಅಂದಾಜು ಮಾಡಬಲ್ಲುದು, ಬಣ್ಣಗಳನ್ನು ತಿಳಿದುಕೊಳ್ಳಬಲ್ಲುದು. ಬಾಯಿ ಉಸಿರನ್ನು ತಡೆಹಿಡಿದು ನಾಲಿಗೆ, ಹಲ್ಲು, ತುಟಿಗಳ ಸಹಾಯದಿಂದ ಬೇರೆ ಬೇರೆ ಶಬ್ದಗಳನ್ನು ಉಚ್ಚರಿಸಬಲ್ಲುದು. ಮೃದು ಅಸ್ಥಿಯಿಂದಾದ ಮೂಗು ಮುಖದಿಂದ ಸ್ವಲ್ಪ ಮುಂದೆ ಚಾಚಿ ನಿಂತಿದೆ. ಹಸ್ತಗಳಲ್ಲಿ ಹೆಬ್ಬೆರಳು ಇತರ ನಾಲ್ಕು ಬೆರಳುಗಳಿಗೆ ಎದುರಾಗಿದ್ದು ಹಿಡಿತಕ್ಕೆ ಅನುಕೂಲವಾಗಿದೆ ; ತೋಳಿನ ಸ್ನಾಯುಗಳು ಬಲವಾಗಿದ್ದು ಮಾಡುವ ಕೆಲಸಕ್ಕೆ ಅಗತ್ಯವಾದ ಶಕ್ತಿಯನ್ನು ಕೈಗಳಿಗೆ ಒದಗಿಸುತ್ತವೆ. ದೇಹದ ಮೇಲೆ ರೋಮ ತೆಳುವಾಗಿದೆ. ಆದರೆ ತಲೆಯ ಮೇಲೆ ದಟ್ಟವಾಗಿದೆ : ಪಾದಗಳ ಸ್ಪ್ರಿಂಗಿನಂಥ ರಚನೆ ಇಡೀ ದೇಹವನ್ನು ಸಮತೋಲನದಲ್ಲಿಡುತ್ತದೆ.

ಇದು ಹೊರನೋಟಕ್ಕೆ ಕಾಣಸಿಗುವ ಮಾನವರೂಪ. ಈ ಎಲ್ಲ ಅಂಗಾಂಗಗಳ ಕೆಲಸಗಳನ್ನೂ ಹಿಡಿತದಲ್ಲಿಟ್ಟುಕೊಳ್ಳಲು ಸಾಧ್ಯವಾಗುವ ರೀತಿಯಲ್ಲಿ ಕ್ಲಿಷ್ಟ ರಚನೆಯ ಮಿದುಳು ಮಾನವನ ತಲೆಯೋಡಿನಲ್ಲಿದೆ. ಇದರ ಅಳತೆ ಸರಾಸರಿ 1350 ಘ. ಸೆ. ಮೀ. ಗಳು. ಪದರ ಪದರವಾಗಿರುವ ಇದರ ರಚನೆಯನ್ನು ಸಹಸ್ರಾರು ಫ್ಯೂಸುಗಳ ವಿದ್ಯುಜ್ಜಾಲಕ್ಕೆ ಹೋಲಿಸಬಹುದು.

ಈ ವಿಶಿಷ್ಟವಾದ ಅಂಗರಚನೆ ಮಾನವನಿಗೆ ಕೆಲವು ವಿಶೇಷ ಶಕ್ತಿಗಳನ್ನು ದಯಪಾಲಿಸಿದೆ. ಅವುಗಳಲ್ಲಿ ಮುಖ್ಯವಾದುವು, ಸ್ಮರಣೆ ಮತ್ತು ಕಲ್ಪನೆ. ಕಣ್ಣುಗಳು ಕಂಡದ್ದನ್ನು, ಕಿವಿಯಲ್ಲಿ ಕೇಳಿದ್ದನ್ನು ಮಾನವನು ತನ್ನ ಮಿದುಳಿನಲ್ಲಿ ಸಂಗ್ರಹಿಸಿಡಬಲ್ಲ. ಪುನಃ ಕಲ್ಪಿಸಿಕೊಂಡು ಮನಸ್ಸಿನ ಕಣ್ಣು ಕಿವಿಗಳಿಂದ ಪರಿಸ್ಥಿತಿಯನ್ನು ಗ್ರಹಿಸಬಲ್ಲ, ಕಲಿಯಬಲ್ಲ, ಕಲಿಸಬಲ್ಲ.

ಮಿದುಳಿನ ಈ ಶಕ್ತಿಗಳಿಂದಲೂ ಗಂಟಲು ಮತ್ತು ಶ್ವಾಸನಾಳದ ರಚನಾ ವಿಧಾನದಿಂದಲೂ ಮಾನವನು ಉಸಿರನ್ನು ಬಾಯಿಯಲ್ಲಿ ಕುಣಿಸಿ ಆಡಿಸಿ ಶಬ್ದಗಳನ್ನು ಸೃಷ್ಟಿಸಬಲ್ಲ. ಅದು ಕ್ರಮೇಣ ಭಾಷೆಯ ಸ್ವರೂಪ ತಾಳಿದೆ. ವಿಚಾರಗಳನ್ನು ಗ್ರಹಿಸಲೂ ಕೂಡಿಡಲೂ ಅತ್ಯನುಕೂಲವಾದ ಸಂಕೇತ ಪದ್ಧತಿಯನ್ನು ಭಾಷೆ ಒದಗಿಸಿದೆ. ಅನುಭವಗಳನ್ನು ಭಾಷಾ ಸಂಕೇತಕ್ಕೆ ಪರಿವರ್ತಿಸಿ ಹತ್ತು ಮಂದಿಗೆ ತಿಳಿಸಲು ಸಾಮರ್ಥ್ಯ ಕೊಟ್ಟಿದೆ.

ನೂರು ಸೂಕ್ಷ್ಮರೀತಿಗಳಲ್ಲಿ ತಿರುಗಿ, ಒತ್ತಿ, ಹಿಡಿದು, ಹರಿದು, ಮನಸ್ಸು ಕಂಡುದನ್ನು ರೂಪಿಸಬಲ್ಲ ಶಕ್ತಿ ಮಾನವನ ಕೈಗಳಿಗಿದೆ. ಈ ಮೂರು ಶಕ್ತಿಗಳ ಸಮ್ಮಿಲನದಿಂದ ಮಾನವ ಹಿರಿದಾದ ಒಂದು ಆಸ್ತಿಯನ್ನು ಗಳಿಸಿದ್ದಾನೆ. ಅದೇ ನಾಗರಿಕತೆ. ಸನ್ನಿವೇಶಕ್ಕೆ ಹೊಂದಿಕೊಳ್ಳಲು ಇತರ ಪ್ರಾಣಿಗಳಿಗೆ ವಿಶಿಷ್ಟವಾದ ಅಂಗರಚನೆಯೂ ಸಹಾಯಕವಾದರೆ, ಮಾನವನಿಗೆ ನಾಗರಿಕತೆಯೂ ಈ ಬಗೆಯ ಹೊಂದಾಣಿಕೆಗೆ ನೆರವಾಗುತ್ತದೆ. ಒಂದು ಉದಾಹರಣೆ : ಧ್ರುವಪ್ರದೇಶದ ಕರಡಿ ತನ್ನ ಬಿಳಿ ಬಣ್ಣ, ದಟ್ಟವಾದ ಮೈಗೂದಲುಗಳಿಂದಾಗಿ ಶತ್ರುಗಳಿಂದ ಮತ್ತು ಚಳಿಯಿಂದ ರಕ್ಷಣೆ ಪಡೆಯುತ್ತದೆ. ಅದೇ ಪ್ರದೇಶದಲ್ಲಿ ವಾಸಿಸುವ ಮಾನವನಾದರೋ ತಕ್ಕ ಉಡುಪು, ಮನೆ, ಬೆಂಕಿ ಇವುಗಳ ಸಹಾಯ ಪಡೆದು ಚಳಿಯನ್ನೆದುರಿಸುತ್ತಾನೆ.

ನಾಗರಿಕತೆಯೆಂದರೆ ಮಾನವನ ಅನುಭವಗಳ ಸಂಗ್ರಹ ; ಸಮಾಜದಲ್ಲಿ ಅವನು ಕಲಿತ ನಡವಳಿಕೆಗಳು ; ಅವನು ಸೃಷ್ಟಿಸಿದ ಸಕಲ ಭೌತಿಕ (ಹಾಗೂ ಆಧ್ಯಾತ್ಮಿಕ) ಸಂಪತ್ತು. ನಾಗರಿಕತೆ, ಎಷ್ಟು ತುಂಬಿದರೂ ತುಂಬದ, ಎಷ್ಟು ತೆಗೆದರೂ ಬರಿದಾಗದ ಪಾತ್ರೆಯಂತೆ. ಒಂದೊಂದು ತಲೆಮಾರೂ ನಾಗರಿಕತೆಯನ್ನು ತನ್ನ ಹಿರಿಯರಿಂದ ಪಡೆದು, ಅದನ್ನು ತನ್ನ ಬದುಕಿಗೆ ಅನುಗೊಳಿಸಿಕೊಂಡು, ಮುಂದಿನ ಪೀಳಿಗೆಗಳಿಗೆ ಬಿಟ್ಟು ಹೋಗುತ್ತದೆ. ನಾಗರಿಕತೆ ಸಂದರ್ಭಗಳಿಗನುಗುಣವಾಗಿ ಪರರಿಂದ ಎರವಲು ಪಡೆದೊ ಸ್ವಂತವಾಗಿಯೊ ಜೀವನ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡು ಹಿಡಿಯುತ್ತದೆ.

ಪ್ರಾತತ್ತ್ವ ಸಂಶೋಧಕರು ಮತ್ತು ಮಾನವ ವಿಜ್ಞಾನಿಗಳು ಪ್ರಪಂಚದ ವಿವಿಧ ಭಾಗಗಳಲ್ಲಿ ಹಳೆಯ ಅವಶೇಷಗಳನ್ನು ಅಗೆದು ತೆಗೆದು, ಅವುಗಳನ್ನು ಹೋಲಿಸಿ, ಪರಸ್ಪರ ಸಂಬಂಧಗಳನ್ನು ನಿರ್ಣಯಿಸಿ ಮಾನವ ನಾಗರಿಕತೆ ಬೆಳೆದು ಬಂದ ರೀತಿಯ ಮುಖ್ಯ ಘಟ್ಟಗಳನ್ನು ಗುರುತಿಸಿದ್ದಾರೆ. ಪ್ರಪಂಚದ ಎಲ್ಲ ಭಾಗಗಳಲ್ಲಿ ದೊರೆತ ಅವಶೇಷಗಳು ನಾಗರಿಕತೆಯ ಇತಿಹಾಸದ ಈ ನಿರೂಪಣೆಯಲ್ಲಿ ನೆರವಾಗಿವೆ. ಇಲ್ಲಿ ಹೇಳುವ ಘಟ್ಟಗಳು ಎಲ್ಲ [illegible]

ಗಳಿಗೂ ಏಕಪ್ರಕಾರವಾಗಿ ಅನ್ವಯವಾಗುವ ನಿಯಮರೂಪದವು. ಕೆಲವೊಂದು ಸಮಾಜಗಳು ಕೆಲವು ಘಟ್ಟಗಳಲ್ಲಿ ಹೆಚ್ಚು ಕಾಲ ಅಥವಾ ಕಡಿಮೆ ಕಾಲ ಕಳೆದಿರಬಹುದು ಅಥವಾ ಹಾರಿ ಮುಂದುವರಿದಿರಬಹುದು.

ಆ ಮುಖ್ಯ ಘಟನೆಗಳನ್ನು ಹೀಗೆ ನಿರೂಪಿಸಬಹುದು.

| ಆರಂಭಕಾಲ ವರ್ಷಗಳ ಹಿಂದೆ | ಘಟ್ಟದ ಹೆಸರು | ಸಂಸ್ಕೃತಿಯ ಮುಖ್ಯ ಅಂಶಗಳು |
|---|---|---|
| 5.00.000 | ಪುರಾತನ ಶಿಲಾಯುಗ (ಅ) ಪ್ರಥಮ | ಕಲ್ಲಿನ ತುಂಡುಗಳಿಂದ, ಹಲ್ಲೆಗಳಿಂದ ತಯಾರಿಸಿದ ಆಯುಧಗಳು. ಮರದ ದೊಣ್ಣೆಗಳು ಈಟಿಗಳು. ಬೆಂಕಿಯ ಉಪಯೋಗ. ಅಲೆಮಾರಿ ಜೀವನ. |
| 1.15.000 | ಪುರಾತನ ಶಿಲಾಯುಗ (ಆ) ಮಧ್ಯಮ | ಕಲ್ಲಿನಲ್ಲಿ ಕೆತ್ತಿ, ಒಪ್ಪಮಾಡಿದ ಆಯುಧಗಳು. ಶವಗಳನ್ನು ಹೂಳುವ ಕ್ರಮ. ಲೋಹ, ಮೂಲ ಬಣ್ಣಗಳ ಉಪಯೋಗ. |
| 50,000 | ಪುರಾತನ ಶಿಲಾಯುಗ (ಇ) ಉತ್ತಮ | ಬಿಲ್ಲು ಬಾಣಗಳ ಬಳಕೆ, ಸಣ್ಣ ಗುಂಪುಗಳಲ್ಲಿ ಜೀವನ. ಬೇಸಿಗೆಯಲ್ಲಿ ಗುಡಿಸಲುಗಳಲ್ಲಿಯೂ ಚಳಿಗಾಲದಲ್ಲಿ ಮನೆ ಅಥವಾ ಗುಹೆಗಳಲ್ಲಿಯೂ ವಾಸ. ನಯವಾದ ಕಲ್ಲುಗೆಲಸ. |
| 12,000 | ಮಧ್ಯ ಶಿಲಾಯುಗ | ದೋಣಿ. ಎಳೆಯುವ ಬಂಡಿ. ಕೈಯಲ್ಲಿ ಮಾಡಿದ ಮಡಕೆಗಳು, ಮೀನು ಬಲೆಗಳು. ಕಾವು ಇರುವ ಕೊಡಲಿ, ಪಿಕಾಸಿಗಳು, ಮೂಳೆಯಿಂದ ತಯಾರಿಸಿದ ಈಟಿಗಾಳಗಳು, ಹೆಣೆದ ಬುಟ್ಟಿಗಳು ; ಅರಣ್ಯಗಳಲ್ಲಿ ಆಹಾರ ಸಂಗ್ರಹ. |
| 8,000 | ಹೊಸ ಶಿಲಾಯುಗ | ವ್ಯವಸಾಯ. ಪಶುಪಾಲನೆಯಲ್ಲಿ ಉನ್ನತಿ. ಬಟ್ಟೆಗಳ ನೇಯ್ಗೆ. ಚಕ್ರದಿಂದ ಮಾಡಿದ ಮಡಕೆಗಳು. ಮರ, ಮೂಳೆ, ಕಲ್ಲಿನ ನಯವಾದ ಆಯುಧಗಳು. ಕಲ್ಗೊಡಲಿಗಳಿಂದ ಮರ ಕಡಿಯುವುದು. ಕಲ್ಲಿನ ಗಣೆಗಳು. ಗ್ರಾಮ ಜೀವನ. |
| 4.000 | ಕಂಚಿನಯುಗ | ಆಯುಧಗಳನ್ನು ಮಾಡಲು ಲೋಹಗಳ ಬಳಕೆ. ಚಕ್ರವುಳ್ಳ ಬಂಡಿಗಳು. ವ್ಯಾಪಕವಾದ ವ್ಯಾಪಾರ, ಲಿಪಿಯ ಬಳಕೆ. ಚಿನ್ನ ಮತ್ತು ಶಿಲಾರಾಳ ಆಭರಣಗಳು. ವಿಸ್ತಾರವಾದ ರಾಜ್ಯಗಳ ಸ್ಥಾಪನೆ. |
| 3.000 | ಕಬ್ಬಿಣದ ಯುಗ | ಕಬ್ಬಿಣದ ಆಯುಧಗಳು. ನಾಣ್ಯಗಳು. ಕುದುರೆ ಸವಾರಿ. ನಗರಗಳ ಆರಂಭ. |

ಈ ಪಟ್ಟಿಯಲ್ಲಿ ಕಾಲಗಳು ಸುಮಾರಾದುವು. ಈಗ್ಗೆ ಸುಮಾರು ಮೂರು ಶತಮಾನಗಳ ಹಿಂದೆ ಯಂತ್ರಯುಗ ಆರಂಭವಾಯಿತೆನ್ನಬಹುದು.

ಇದರಿಂದ ಒಂದು ವಿಷಯ ಸ್ಪಷ್ಟವಾಗುತ್ತದೆ. ನಾಗರಿಕತೆಯ ಮೊದಲ ಘಟ್ಟಗಳು ಬಹುಕಾಲ ತೆಗೆದುಕೊಂಡು, ಕ್ರಮೇಣ ಬಂದ ಘಟ್ಟಗಳ ಬದಲಾವಣೆಯ ವೇಗ ಹೆಚ್ಚಿರುವುದನ್ನು ಗಮನಿಸಬಹುದು. ಹಾಗೆಯೇ ಪ್ರಪಂಚದ ಹೆಚ್ಚು ಹೆಚ್ಚು ಪ್ರದೇಶಗಳು ಒಂದೇ ವ್ಯವಸ್ಥೆಯ ಅಂಕೆಗೆ ಒಳಪಡುತ್ತ ಹೋಗಿವೆ.

ಮಾನವ ಇಂದು ಭೂಮಿಯ ಮೇಲಿನ ಎಲ್ಲದಕ್ಕೂ ಒಡೆಯನಾಗಿದ್ದಾನೆ. ಅವನ ಪ್ರಭಾವಕ್ಕೆ ಇತರ ಗ್ರಹಗಳೂ ಒಳಗಾಗುತ್ತಿವೆ.

## ಮಾನವಿಕಶಾಸ್ತ್ರ

ಮಾನವನ ಬೌದ್ಧಿಕ, ನೈತಿಕ, ಸಾಂಸ್ಕೃತಿಕ ಜೀವನಕ್ಕೆ ಸಂಬಂಧಪಟ್ಟ ವಿಷಯಗಳ ಶಾಸ್ತ್ರಕ್ಕೆ ಮಾನವಿಕ ಶಾಸ್ತ್ರವೆಂದು ಹೆಸರು. ಮಾನವನ ಮಾನವೀಯತೆಯ, ಮನುಷ್ಯ ಧರ್ಮದ ಅರಿವಾಗುತ್ತದೆ ಮಾನವಿಕಶಾಸ್ತ್ರದಲ್ಲಿ. ಸಾಹಿತ್ಯ, ತತ್ತ್ವಜ್ಞಾನ, ಚರಿತ್ರೆ ಇವು ಸಾಮಾನ್ಯವಾಗಿ ಮಾನವಿಕ ಶಾಸ್ತ್ರದ ವ್ಯಾಪ್ತಿಗೆ ಒಳಪಟ್ಟಿವೆ.

ರಾಜ್ಯಶಾಸ್ತ್ರ, ಅರ್ಥಶಾಸ್ತ್ರ, ಸಮಾಜಶಾಸ್ತ್ರ ಇವುಗಳೂ ಮಾನವನ ಜೀವನಕ್ಕೆ ಸಂಬಂಧಪಟ್ಟವು. ಮಾನವಿಕಶಾಸ್ತ್ರಗಳೆಂದೇ ಸ್ಥೂಲವಾಗಿ ಪರಿಗಣಿತವಾದರೂ ಸಾಮಾಜಿಕಶಾಸ್ತ್ರಗಳೆಂದು ಇವು ಹೆಸರು ಪಡೆದಿವೆ.

ಮನುಷ್ಯ ತನ್ನ ತಿಳಿವಳಿಕೆಯನ್ನು ಹೆಚ್ಚಿಸಿಕೊಳ್ಳಬೇಕು. ಸುತ್ತಲಿನ ಜಗತ್ತಿನ ವಿಷಯವನ್ನು ಹೆಚ್ಚು ಹೆಚ್ಚಾಗಿ ತಿಳಿದುಕೊಳ್ಳಬೇಕು. ತನ್ನ ದೇಶದ ವಿಷಯ ಅಭ್ಯಾಸ ಮಾಡಬೇಕು. ಜಗತ್ತಿನ ಸಂಪತ್ತನ್ನೂ ಜನರ ನೆಮ್ಮದಿಯನ್ನೂ ಹೆಚ್ಚಿಸುವ ಶಕ್ತಿಯನ್ನು ಪಡೆಯಬೇಕು. ಆದರೆ ಸಂಯಮ, ಸಹನೆ, ಸ್ನೇಹಪರತೆ ಬೆಳೆಯದಿದ್ದರೆ ಅವನ ತಿಳಿವಳಿಕೆ ಹುಚ್ಚನ ಕೈಯ ಬಾಕುವಿನಂತೆ. ಜಗತ್ತಿನ ಅತಿ ಭಯಂಕರ ಶಸ್ತ್ರಗಳನ್ನು ಕಂಡುಹಿಡಿದವರೆಲ್ಲ ಬುದ್ಧಿವಂತರೇ. ಅಲ್ಲರೇ. ಅಸಾಧಾರಣ ಬುದ್ಧಿಶಾಲಿಗಳೆಷ್ಟೊ ಮಂದಿ ಸೆರೆಮನೆ ಕಂಡಿದ್ದಾರೆ–ಕಳ್ಳರಾಗಿ, ಕೊಲೆಗಾರರಾಗಿ, ದೇಶದ್ರೋಹಿಗಳಾಗಿ. ಮನುಷ್ಯ 'ಮನುಷ್ಯ' ಎಂದು ಕರೆಸಿಕೊಳ್ಳುವ ಯೋಗ್ಯತೆ ಪಡೆಯಬೇಕಾದರೆ ಅವನು ಸುಸಂಸ್ಕೃತನಾಗಬೇಕು. ದೂರಾಲೋಚನೆಯ

ಮನೋಭಾವವನ್ನು ರೂಪಿಸಿಕೊಳ್ಳಬೇಕು, ಸಾಹಿತ್ಯ, ಚರಿತ್ರೆ, ತತ್ತ್ವಶಾಸ್ತ್ರ ಮುಂತಾದುವು ಈ ಗುಣಗಳನ್ನು ಬೆಳೆಸಬಲ್ಲುವು; ಮನುಷ್ಯನ ಸ್ವಾರ್ಥ ಮತ್ತು ದುರಾಸೆಗಳಿಗೆ ಕಡಿವಾಣ ಹಾಕಬಲ್ಲುವು. ತನ್ನನ್ನು ಮರೆತು ಇತರರ ಸ್ಥಾನದಲ್ಲಿ ನಿಂತು ಯೋಚಿಸುವುದು, ವ್ಯಕ್ತಿಗಳು, ಸಾಮ್ರಾಜ್ಯಗಳು ಮೇಲೇರಿ ಕೆಳಗುರುಳಿದ ರೀತಿಗಳನ್ನೂ ಕಾರಣಗಳನ್ನೂ ಅಭ್ಯಾಸ ಮಾಡುವುದು, ಎಂದೂ ಉಳಿಯುವ ತತ್ತ್ವ ಮತ್ತು ಜ್ಞಾನಗಳಲ್ಲಿ ಮನಸನ್ನು ತೊಡಗಿಸುವುದು—ಈ ರೀತಿಗಳಲ್ಲಿ ಮನುಷ್ಯ ತನ್ನ ಸ್ವಾರ್ಥವನ್ನೂ ಸಣ್ಣತನವನ್ನೂ ಬದಿಗೊತ್ತಲು ಮಾನವಿಕ ಶಾಸ್ತ್ರಗಳು ನೆರವಾಗುತ್ತವೆ.

ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದವರೆಗೆ ವಿದ್ಯಾರ್ಥಿಗಳು ಮುಖ್ಯವಾಗಿ ಓದುತ್ತಿದ್ದುದು ವ್ಯಾಕರಣ, ಸಾಹಿತ್ಯ, ತತ್ತ್ವಶಾಸ್ತ್ರ, ಚರಿತ್ರೆ. ಈಚೆಗಿನ ವರ್ಷಗಳಲ್ಲಿ ವಿಜ್ಞಾನದ ಮಹತ್ವ ಎಲ್ಲ ದೇಶಗಳಿಗೂ ಅರಿವಾಗಿದೆ; ಶಿಕ್ಷಣದಲ್ಲಿ ವಿಜ್ಞಾನಕ್ಕೆ ಪ್ರಾಧಾನ್ಯ ದೊರೆತಿದೆ. ಆದರೆ ಸಮತೂಕದ ವಿದ್ಯಾಭ್ಯಾಸದಲ್ಲಿ ಮಾನವಿಕಶಾಸ್ತ್ರಗಳ ಅಧ್ಯಯನವೂ ಸೇರಿರಲೇಬೇಕೆಂಬ ಅಂಶವನ್ನು ಮರೆಯುವಂತಿಲ್ಲ.

## ಮಾರಕಾಸ್ತ್ರ

ರಾಮಾಯಣ ಮತ್ತು ಮಹಾಭಾರತ ಕಾವ್ಯಗಳಲ್ಲಿ ವಿವರವಾದ ಯುದ್ಧದ ವರ್ಣನೆಗಳನ್ನು ನಾವು ಓದುತ್ತೇವೆ. ಈ ಕಥೆಗಳಲ್ಲಿ ಬರುವ ವೀರರು ಅನೇಕ ಬಗೆಯ ಅಸ್ತ್ರಗಳನ್ನು ಬಳಸುತ್ತಾರೆ. ಅಗ್ನ್ಯಸ್ತ್ರವನ್ನು ಪ್ರಯೋಗಿಸಿ ಬೆಂಕಿಯ ಮಳೆ ಸುರಿಸುತ್ತಾರೆ. ಶತ್ರು ಪಾಳೆಯದವರು ವರುಣಾಸ್ತ್ರವನ್ನು ಪ್ರತ್ಯಸ್ತ್ರವಾಗಿ ಪ್ರಯೋಗಿಸಿ ಮಳೆ ತರಿಸುತ್ತಾರೆ. ಸಮ್ಮೋಹನಾಸ್ತ್ರವನ್ನು ಪ್ರಯೋಗಿಸಿ ಶತ್ರು ಸೈನಿಕರಿಗೆ ಮಂಪರು ಕವಿಯುವಂತೆ ಮಾಡುತ್ತಾರೆ. ಎಲ್ಲವೂ ಅದ್ಭುತ.

ಪ್ರಾಚೀನಕಾಲದ ಕವಿ ವರ್ಣನೆಯ ಮಾರಕಾಸ್ತ್ರಗಳು ಇಂದಿನ ಯುದ್ಧ ವಿಧಾನದಲ್ಲಿ ವಾಸ್ತವರೂಪ ತಳೆದಿವೆ. ವೈಜ್ಞಾನಿಕ ಸಾಧನಗಳು ದಿನದಿನವೂ ಅಭಿವೃದ್ಧಿಗೊಂಡು ಸಮರ್ಥ ಅಸ್ತ್ರಗಳಾಗುತ್ತಿವೆ. ಹೆಚ್ಚು ನಾಶಪಡಿಸುವ ಶಕ್ತಿಯ ಯುದ್ಧಾಸ್ತ್ರಗಳನ್ನು ಹೊಸ ಸಂಶೋಧನೆಗಳು ರೂಪಿಸುತ್ತವೆ.

ಬಿಲ್ಲು–ಬಾಣ, ಖಡ್ಗ–ಗುರಾಣಿ, ಕತ್ತಿ, ಬರ್ಜಿ ಮುಂತಾದುವು ಸಾಮಾನ್ಯವಾಗಿ ಆತ್ಮರಕ್ಷಣೆಗೆ ನೆರವಾಗುವ ಅಸ್ತ್ರಗಳು. ಯುದ್ಧಗಳಲ್ಲಿ ಪರಸ್ಪರ ಹೋರಾಡಲು ಸೈನಿಕರು ಇವನ್ನು ಹಿಂದೆ ಬಳಸುತ್ತಿದ್ದರು.

ಒಂದೇ ಒಂದು ವಿನ್ಯಾಸವನ್ನು ಪ್ರಯೋಗಿಸುವುದರಿಂದ ಅನೇಕ ಮಂದಿ ಸೈನಿಕರನ್ನೂ ಅವರ ಸಲಕರಣೆಗಳನ್ನೂ ನಾಶಮಾಡುವ ಅಸ್ತ್ರ ಮಾರಕಾಸ್ತ್ರ. ಮಾರಕಾಸ್ತ್ರಗಳು ಶತ್ರು ಪಂಗಡದವರನ್ನು ನಾಶಪಡಿಸುವುದಷ್ಟೇ ಅಲ್ಲದೆ ಸೈನಿಕರಲ್ಲದ ಪ್ರಜೆಗಳ ಜೀವನಕ್ಕೂ ಧಕ್ಕೆ ತರುತ್ತವೆ. ಇಂಥ ಮಾರಕಾಸ್ತ್ರಗಳು ಹತ್ತೊಂಬತ್ತು ಮತ್ತು ಇಪ್ಪತ್ತನೆಯ ಶತಮಾನಗಳಲ್ಲಿ ಅಗಾಧ ಬೆಳವಣಿಗೆಯನ್ನು ಕಂಡುವು.

ಪ್ರಖ್ಯಾತ ನೊಬೆಲ್ ಬಹುಮಾನಗಳ ದಾತ ಆಲ್‌ಫ್ರೆಡ್ ಬರ್ನಾರ್ಡ್ ನೊಬೆಲ್ 1866ರಲ್ಲಿ ಕಂಡುಹಿಡಿದ ಡೈನಮೈಟ್ ಸಿಡಿಮದ್ದಿನ ಸ್ಫೋಟಕಶಕ್ತಿ ಆಶ್ಚರ್ಯಕರವಾಗಿತ್ತು. ಗಣಿಗಳನ್ನು ತೋಡಲು, ರಸ್ತೆಗಳನ್ನು ನಿರ್ಮಿಸಲು, ಬಂಡೆಗಳನ್ನು ಸಿಡಿಸಲು ಡೈನಮೈಟ್ ನೆರವಾಗುವುದೆಂದು ನೊಬೆಲ್ ನಿರೀಕ್ಷಿಸಿದ್ದ. ಆದರೆ ವಿಧ್ವಂಸಕ ಕಾರ್ಯಗಳಿಗಾಗಿಯೇ ಹೆಚ್ಚಾಗಿ ಅವನ್ನು ಬಳಸಲಾಯಿತು. ಆಧುನಿಕ ಜಗತ್ತಿನ ಮೇಲೆ ಪ್ರಭಾವ ಬೀರಿದ ಮಾರಕಾಸ್ತ್ರಗಳಲ್ಲಿ ಮೊದಲನೆಯದು ಡೈನಮೈಟ್.

ಎರಡನೆಯ ಮಹಾಯುದ್ಧದ ಪ್ರಾರಂಭದಲ್ಲಿ ಪ್ರಬಲರಾಗಿದ್ದ ಜರ್ಮನರು 1944ರಲ್ಲಿ ಇಂಗ್ಲೆಂಡಿನ ಮೇಲೆ ಬಾಂಬಿನ ಮಳೆ ಸುರಿಸಿದರು. ನೆಲ ತಾಕಿ ಸ್ಫೋಟಿಸುವ ಬಾಂಬುಗಳನ್ನು ಅವರು ವಿಮಾನಗಳ ಮೂಲಕ ಸುರಿಯಲಿಲ್ಲ. ತಮ್ಮ ನೆಲೆಗಳಲ್ಲಿಯೆ ನಿಂತು ಶತ್ರುಪಾಳೆಯದ ಕಡೆಗೆ ಬಾಂಬುಗಳನ್ನು ಚಿಮ್ಮಿಸುವುದು ಅವರು ಅನುಸರಿಸಿದ ವಿಧಾನ. ಅವು ಜಿಗಿಯುವ ಬಾಂಬುಗಳು. ಸುಮಾರು ಮೂರು ತಿಂಗಳ ಅವಧಿಯಲ್ಲಿ ಜರ್ಮನರು ಇಂಗ್ಲೆಂಡಿನ ಮೇಲೆ 8,000 ಜಿಗಿಯುವ ಬಾಂಬುಗಳನ್ನು ಪ್ರಯೋಗಿಸಿದರು. ಲಂಡನಿನ ಸುತ್ತಮುತ್ತ 2,300 ಬಾಂಬುಗಳು ಬಿದ್ದು 23,000 ಕಟ್ಟಡಗಳನ್ನೂ 5,000 ಜನರನ್ನೂ ನಾಶಪಡಿಸಿದುವು.

ಎರಡನೆಯ ಮಹಾಯುದ್ಧದ ಸಮಯದಲ್ಲಿ ಪ್ರಸಿದ್ಧಿಗೆ ಬಂದ ಮತ್ತೊಂದು ಅಸ್ತ್ರ 'ವಿ–2 ರಾಕೆಟ್.' 14 ಮೀಟರು ಉದ್ದದ ವಿ–2 ರಾಕೆಟ್ ಭೂಮಿಯಿಂದ 97 ಕಿಲೊಮೀಟರು ಎತ್ತರಕ್ಕೆ ಏರುತ್ತಿತ್ತು. ಅದರ ವೇಗ ಗಂಟೆಗೆ 5,471 ಕಿಲೊಮೀಟರು. ಅನಂತರ ಶತ್ರುನೆಲೆಯ ದಿಕ್ಕಿನಲ್ಲಿ ಇಳಿಯುವಾಗ ಅದರ ವೇಗ 3,218 ಕಿಲೊಮೀಟರು. ಮೊದಲೇ ಗುರಿಯಾಗಿ ಆರಿಸಿದ ಕೇಂದ್ರದ ಕಡೆ ರಾಕೆಟ್ ಧ್ವನಿವೇಗಕ್ಕಿಂತ ಮೂರು ಪಟ್ಟು ವೇಗದೊಡನೆ ತಾನೇ ಧಾವಿಸುತ್ತದೆ. ರಾಕೆಟ್ಟಿನ ನೆತ್ತಿಯ ಮೇಲೆ ಹುದುಗಿಸಿರುವ ಬಾಂಬು ಸ್ಫೋಟವಾದ ಮೇಲೆಯೇ ಅದು ಧಾವಿಸಿ ಬಂದದ್ದು ತಿಳಿಯುತ್ತದೆ. ಇಂಥ ವಿ–2 ರಾಕೆಟ್‌ಗಳ ವ್ಯಾಪ್ತಿ 354 ಕಿಲೊಮೀಟರು. ಪಟ್ಟಣ, ಶತ್ರುಶಿಬಿರ ಮುಂತಾದ ಸ್ಥಿರವಾದ ಗುರಿಗಳ ಕಡೆ ವಿ–2 ರಾಕೆಟ್‌ಗಳನ್ನು ಸುಲಭವಾಗಿ ಹಾರಿಸಬಹುದಾದರೂ ಚಲಿಸುವ ಟ್ಯಾಂಕ್, ತೇಲುವ ಹಡಗು, ಹಾರುತ್ತಿರುವ ವಿಮಾನ ಮುಂತಾದ ಚಲನೆಯಲ್ಲಿರುವ ಗುರಿಗಳನ್ನು ಇಂಥ ರಾಕೆಟ್‌ಗಳು ತಲಪಲಾರವು. ವಿ–2 ರಾಕೆಟ್‌ಗಳನ್ನು ಸಮುದ್ರದ ಮೇಲೆ ಹಾಯಿಸಿ ನ್ಯೂ ಯಾರ್ಕ್ ನಗರದ ಮೇಲೆ ಪ್ರಯೋಗಿಸುವ ಆಲೋಚನೆಯೂ ನಡೆದಿತ್ತು.

ಎರಡನೆಯ ಮಹಾಯುದ್ಧ ಕೊನೆಗಂಡದ್ದು ಪರಮಾಣುಬಾಂಬು ಸ್ಫೋಟನೆಯೊಂದಿಗೆ. ಮನುಷ್ಯ ಪ್ರಯೋಗಿಸಿರುವ ಮಾರಕಾಸ್ತ್ರಗಳಲ್ಲಿ ಅತ್ಯಂತ ಪ್ರಖರವಾದದ್ದು ಪರಮಾಣುಬಾಂಬು. 1945 ಆಗಸ್ಟ್ 6ರಂದು ಅಮೆರಿಕದ ವಿಮಾನವೊಂದು ಜಪಾನಿನ ಹಿರೋಷಿಮಾ ನಗರದ ಮೇಲೆ 9,150 ಮೀಟರು ಎತ್ತರದಿಂದ ಬೀಳಿಸಿತು. ಮೂರು ದಿನಗಳ ಅನಂತರ ಜಪಾನಿನ ನಾಗಸಾಕಿ ಕೈಗಾರಿಕಾ ಕೇಂದ್ರದ ಮೇಲೆ ಅಮೆರಿಕನರು ಮತ್ತೊಂದು ಪರಮಾಣುಬಾಂಬನ್ನು ಹಾಕಿದರು. ಹಿರೋಷಿಮಾ ಮತ್ತು ನಾಗಸಾಕಿ ನಗರಗಳಲ್ಲಿ ಸುಮಾರು ಹತ್ತು ಚದರ ಕಿಲೊಮೀಟರು ವಿಸ್ತೀರ್ಣದಲ್ಲಿ ಯಾವ ಜೀವರಾಶಿಯೂ ಕಟ್ಟಡವೂ ಉಳಿಯಲಿಲ್ಲ. ಅತ್ಯಂತ ಬಲಿಷ್ಠ ಕಟ್ಟಡಗಳ ಸಿಮೆಂಟ್ ಚೌಕಟ್ಟುಗಳೂ ಕಂಬಗಳೂ ಎಲುಬಿನ ಪಂಜರಗಳಂತೆ ಬೋಳು ಬೋಳಾಗಿ ಉಳಿದುವು.

ಪರಮಾಣುಬಾಂಬಿನ ಸ್ಫೋಟ ಎರಡನೆಯ ಮಹಾಯುದ್ಧವನ್ನು ಕೊನೆಗಾಣಿಸಿತಾದರೂ ಅಮೆರಿಕ, ಇಂಗ್ಲೆಂಡ್, ಸೋವಿಯೆಟ್ ರಷ್ಯಾ, ಫ್ರಾನ್ಸ್ ದೇಶಗಳು ಪರಮಾಣುಬಾಂಬುಗಳನ್ನು ಸಿಡಿಸುವ ಹವ್ಯಾಸವನ್ನು ಬಿಡಲಿಲ್ಲ. ತಾವು ತಯಾರಿಸುವ ಅಸ್ತ್ರದ ವಿಧ್ವಂಸಕ ಸಾಮರ್ಥ್ಯ, ಅವು ಉಗುಳುವ ವಿಸರಣ ಕಿರಣಗಳ ಪ್ರಮಾಣ, ಭೂ ವಾಯು ಜಲಪ್ರದೇಶಗಳ ಮೇಲೆ [illegible]

ಮರಳುಗಾಡುಗಳಲ್ಲೂ ಭೂಗರ್ಭದಲ್ಲೂ ಪರೀಕ್ಷಾರ್ಥ ಪರಮಾಣು ಅಸ್ತ್ರಗಳ ಸ್ಫೋಟನೆಯನ್ನು ಈ ದೇಶಗಳು ನಡೆಸಿದುವು. ಪರಮಾಣು ಬಾಂಬನ್ನು ತಯಾರಿಸಿದ ಚೀನವೂ ಪರೀಕ್ಷಾರ್ಥವಾಗಿ ಪರಮಾಣು ಅಸ್ತ್ರಗಳನ್ನು ಸ್ಫೋಟಿಸಲಾರಂಭಿಸಿತು.

ಪರಮಾಣುಬಾಂಬಿನ ಸ್ಫೋಟನೆ ಸಮತೋಲನದಿಂದ ಬೀಸುವ ಮಾರುತಗಳನ್ನು ಕೆಡಿಸುತ್ತದೆ. ಭೂಮಿಯೊಳಗೆ ನಡೆಸಿದ ಸ್ಫೋಟ ಭೂಕಂಪಗಳಿಗೆ ಕಾರಣವಾಗುತ್ತದೆ. ವಿಸರಣ ಭಸ್ಮ ಭೂಮಿಯ ಸುತ್ತ ವಾತಾವರಣದಲ್ಲಿ ಹರಡಿಕೊಂಡು ಭೂಮಿಗೆ ಬೀಳುತ್ತದೆ. ಹಲವಾರು ಬಗೆಗಳಲ್ಲಿ ಮನುಷ್ಯನ ಆರೋಗ್ಯಕ್ಕೆ ಇದರಿಂದ ಧಕ್ಕೆಯುಂಟು.

ಪರೀಕ್ಷಾರ್ಥವಾಗಿ ಪರಮಾಣು ಅಸ್ತ್ರಗಳನ್ನು ಸ್ಫೋಟಿಸಬಾರದೆಂಬ ಒಪ್ಪಂದ 1963 ಅಗಸ್ಟ್ 3 ರಂದು ಜಾರಿಗೆ ಬಂದಿತು. ಆದರೆ ಭೂಗರ್ಭದಲ್ಲಿನ ಪರೀಕ್ಷಾರ್ಥ ಸ್ಫೋಟನ ನಿಷೇಧಕ್ಕೆ ಒಳಪಡಲಿಲ್ಲ. ವಿಶ್ವಸಂಸ್ಥೆಯಿಂದ ಹೊರಗಿರುವ ಚೀನ ಯಾವ ಕಟ್ಟುಪಾಡಿಗೂ ಒಳಗಾಗಿಲ್ಲ.

ಪರಮಾಣು ಬಾಂಬಿಗಿಂತಲೂ ಪ್ರಖರವಾದ ಅಸ್ತ್ರ ಜಲಜನಕ ಬಾಂಬು. ಜಲಜನಕ ಬಾಂಬನ್ನು ತಯಾರಿಸುವುದು ಹೇಗೆಂಬ ಸುಳಿವು ಕೆಲವು ರಾಷ್ಟ್ರಗಳಿಗೆ ಪತ್ತೆಯಾಗಿದ್ದರೂ ಅದರ ಪ್ರಯೋಗ ನಡೆದಿಲ್ಲ. ಪರಮಾಣು ಬಾಂಬನ್ನಾಗಲೀ ಜಲಜನಕ ಬಾಂಬನ್ನಾಗಲೀ ಪ್ರಯೋಗಿಸಲು ಇಚ್ಛಿಪಡುವ ಯಾವುದೇ ರಾಷ್ಟ್ರ ತನ್ನ ರಕ್ಷಣೆಯ ಬಗೆಗೆ ಮೊದಲು ಚಿಂತಿಸುತ್ತದೆ. ತನ್ನ ಶತ್ರುವಿನ ಮೇಲೆ ತಾನು ಮಾರಕಾಸ್ತ್ರ ಪ್ರಯೋಗಿಸಿದರೆ, ಇನ್ನೊಂದು ದೇಶ ತನ್ನ ಮೇಲೆ ಮಾರಕಾಸ್ತ್ರ ಪ್ರಯೋಗಿಸುವ ಸಂಭವವಿದೆ. ಇಂಥ ಜಟಿಲ ರಕ್ಷಣಾ ವಿಧಾನಗಳ ಬಗೆಗೆ ರಾಷ್ಟ್ರಗಳ ಗಮನ ಹರಿಯುವುದು ಸಹಜ.

ಮಾರಕಾಸ್ತ್ರಗಳನ್ನು ಕೊಂಡೊಯ್ಯಲು ರೂಪಿಸಿದ ಸಾಧನಗಳೇ ಕ್ಷಿಪಣಿಗಳು. ಪ್ರದೇಶಕ್ಕೆ ಚಿಮ್ಮುವ ಕ್ಷಿಪಣಿಗಳು ತಮ್ಮ ನೆತ್ತಿಯಲ್ಲಿ ಮಾರಕಾಸ್ತ್ರಗಳನ್ನು ಹೊತ್ತು, ಉದ್ದೇಶಿತ ಸ್ಥಳದ ಮೇಲೆ ಅವನ್ನು ಹಲವೇ ಸೆಕೆಂಡುಗಳ ಅವಧಿಯಲ್ಲಿ ಒಗೆಯಬಲ್ಲುವು. ಅತ್ಯಂತ ವಿಸ್ತಾರವಾದ ವ್ಯಾಪ್ತಿಯನ್ನು ಹೊಂದಿರುವ ಖಂಡಾಂತರ ಕ್ಷಿಪಣಿಗಳನ್ನು ಪರಮಾಣುಅಸ್ತ್ರತಯಾರಿಕೆ ರಾಷ್ಟ್ರಗಳು ತಯಾರಿಸಿರುವ ಬಗೆಗೆ ಸೂಚನೆಗಳಿವೆ. ಎರಡನೆಯ ಮಹಾಯುದ್ಧದಲ್ಲಿ ವಿ–2 ರಾಕೆಟ್‌ಗಳ ಪ್ರಯೋಗವಾದಾಗ ಖಂಡಾಂತರ ಚಿಮ್ಮುವ ಕ್ಷಿಪಣಿಗಳಿಗೆ ಅದು ನಾಂದಿಯಾದೀತೆಂದು ಯಾರೂ ಭಾವಿಸಿರಲಿಲ್ಲ.

ಮೊದಲನೆಯ ಮಹಾಯುದ್ಧ ನಡೆಯುತ್ತಿರುವಾಗ ಜರ್ಮನರು ಫ್ರೆಂಚರ ಮೇಲೆ ಒಮ್ಮೆ 171 ಮೆಟ್ರಿಕ್ ಟನ್ ಕ್ಲೋರಿನ್ ಅನಿಲವನ್ನು ಸುರಿದರು. ಕ್ಲೋರಿನ್ ಮೋಡದಿಂದಾಗಿ ಸುಮಾರು 15,000 ಮಂದಿ ಹಾನಿಗೊಳಗಾದರು. ಶ್ವಾಸಕೋಶ ಹೊಕ್ಕ ಅನಿಲ, ಅಲ್ಲಿ ಜೀವಕೋಶಗಳನ್ನು ನಾಶಪಡಿಸಿ ಆಮ್ಲಜನಕದ ಸೇವನೆಗೆ ನಿರ್ಬಂಧ ಒಡ್ಡಿ ಶ್ವಾಸಬಂಧನಕ್ಕೆ ಕಾರಣವಾಗುತ್ತದೆ. ಪರಿಣಾಮ, ಸಾವು.

ರಾಸಾಯನಿಕ ಪದಾರ್ಥಗಳನ್ನು ಮಾರಕಾಸ್ತ್ರಗಳಂತೆ ಬಳಸಲು 1915 ರಲ್ಲಿ ಹೀಗೆ ಮೊದಲಾಯಿತು. ಇದನ್ನು ರಾಸಾಯನಿಕ ಸಮರ ಎಂದು ಕರೆದರು. ಪ್ರಥಮ ಜಾಗತಿಕ ಸಮರದಲ್ಲಿ ಜರ್ಮನರು ಒಟ್ಟು 1.27 ಲಕ್ಷ ಮೆಟ್ರಿಕ್ ಟನ್ ರಾಸಾಯನಿಕ ದ್ರವ್ಯಗಳನ್ನು ಪ್ರಯೋಗಿಸಿದರು. ಕ್ಲೋರಿನ್ ನಂತೆಯೇ ಮಾರಕತ್ವವೆನಿಸುವ ಫೋಸ್‌ಜೀನ್, ಕ್ಲೋರೋ ಪಿಕ್ರಿನ್, ಟ್ರೈಕ್ಲೋರೋ ಮಿಥೈಲ್ ಫೋರ್ಮೇಟ್ ಈ ಅನಿಲಗಳನ್ನೂ ವಿಶೇಷವಾಗಿ ಬಳಸಿದರು. ಮಸ್ಟರ್ಡ್ ಅನಿಲವನ್ನು ಅನಿಲಕೋಶಗಳಲ್ಲಿ ತುಂಬಿ ಶತ್ರುಗಳ ಕಡೆ ಎಸೆಯುತ್ತಿದ್ದರು. ಇವು ಒಡೆಯುತ್ತಿದ್ದಂತೆ ಹೊರಬರುತ್ತಿದ್ದ ಅನಿಲ ಕಣ್ಣು ಮತ್ತು ಕಿವಿಗಳನ್ನು ಊನಗೊಳಿಸುತ್ತಿತ್ತು, ಚರ್ಮ ಬಿರಿಯುತ್ತಿತ್ತು. ಎರಡನೆಯ ಮಹಾಯುದ್ಧದ ಸಮಯದಲ್ಲಿ ಕಂಡುಹಿಡಿಯಲಾದ 'ಆರ್ಗನೋ ಫಾಸ್ಫರಸ್ ಎಸ್ಟರು'ಗಳು–ನರಾನಿಲಗಳು–ಕ್ರಿಮಿನಾಶಕಗಳಂತೆ ವರ್ತಿಸುತ್ತವೆ. ಮಾತ್ರವಲ್ಲ, ಇವುಗಳಿಗೆ ಮನುಷ್ಯನಿಗೆ ಅಮಲು ಹುಟ್ಟಿಸುವ ಗುಣ ಇದೆ. ಈ ನರಾನಿಲಗಳ ಒಂದು ಸೂಕ್ಷ್ಮ ಕಣ ಮೈಮೇಲೆ ಬಿದ್ದರೂ ಚರ್ಮದ ಮುಖಾಂತರ ದೇಹವನ್ನು ಪ್ರವೇಶಿಸಿ ರಕ್ತದೊಡನೆ ಬೆರೆತು ವ್ಯಾಪಿಸಿಕೊಳ್ಳುತ್ತದೆ. ನರಮಂಡಲದ ಕೆಲವು ನರಗಳು ಸಂದೇಶಗಳನ್ನು ರವಾನಿಸದಂತೆ ಮಾಡುವುದು ನರಾನಿಲಗಳ ಕಾರ್ಯಭಾರ. ಉಸಿರಾಟಕ್ಕೆ ಸಂಬಂಧಪಟ್ಟ ಸ್ನಾಯುಗಳು ನಿರ್ಬಲವಾಗಿ ಮನುಷ್ಯ ಸಾಯುತ್ತಾನೆ.

ಮರಣವನ್ನು ತಾರದೆ ಕಿರುಕುಳವನ್ನೂ ಬೇನೆಗಳನ್ನೂ ಒದಗಿಸುವ ರಾಸಾಯನಿಕ ವಸ್ತುಗಳು ಕೂಡ ಅತ್ಯಂತ ಉಪದ್ರವಕಾರಿ. ಸ್ನಾಯುಗಳು ನಿಶ್ಚೇಷ್ಟಿತವಾಗುವುದು; ಮೂರ್ಛೆ, ಅಂಧತೆ, ಸಮಯ ಮತ್ತು ದೂರವನ್ನು ತಪ್ಪಾಗಿ ತಿಳಿಯುವಂತೆ ಮಾಡುವುದು—ಈ ಪರಿಣಾಮಗಳನ್ನು ಉಂಟುಮಾಡುವ ರಾಸಾಯನಿಕ ದ್ರವ್ಯಗಳನ್ನು ಶತ್ರು ಪಾಳೆಯದ ಸೈನಿಕರು ಸೇವಿಸುವಂತೆ ಮಾಡಿದರೆ ಸಾಕು–ಆ ಸೈನಿಕರು ಜೀವಂತ ಶವಗಳಾದಂತೆಯೇ. ಕೆಮ್ಮು, ಸೀನು, ವಾಂತಿ, ಕಣ್ಣೀರು ಮುಂತಾದ ಪ್ರತಿಕ್ರಿಯೆಗಳನ್ನು ಉಂಟುಮಾಡುವ ಅನಿಲಗಳು ಅತ್ಯಂತ ಸಾಮಾನ್ಯವಾದುವು. ಪರಮಾಣು ಅಸ್ತ್ರಗಳ ಜತೆ ಹೋಲಿಸಿದರೆ ರಾಸಾಯನಿಕ ಅಸ್ತ್ರಗಳ ತಯಾರಿಕೆ ಬಹಳ ಅಗ್ಗ. ಅಮೆರಿಕ, ಬ್ರಿಟನ್, ರಷ್ಯ, ಕೆನಡ, ಸ್ವೀಡನ್, ಈಜಿಪ್ಟ್, ಇಸ್ರೇಲ್, ಚೀನ ಮುಂತಾದ ರಾಷ್ಟ್ರಗಳು ರಾಸಾಯನಿಕ ಯುದ್ಧಸಾಮಗ್ರಿಗಳನ್ನು ಉತ್ಪಾದಿಸುತ್ತಿವೆ.

ಪರಮಾಣು ಅಸ್ತ್ರ ಮತ್ತು ರಾಸಾಯನಿಕ ಅಸ್ತ್ರಗಳಿಗಿಂತಲೂ ಹೆಚ್ಚು ಘೋರವಾದ ಅಸ್ತ್ರಗಳು ರೋಗಾಣುಗಳು. ಭೀಕರ ರೋಗಗಳನ್ನು ಶತ್ರುಪ್ರದೇಶದಲ್ಲಿ ಹಬ್ಬಿಸಿ ವಿಜಯ ಸಾಧಿಸುವ ತಂತ್ರ ಸಿದ್ಧಿಸುವುದು ರೋಗಾಣುಗಳ ಬಳಕೆಯಿಂದ. ರೋಗಾಣುಗಳನ್ನು ಉದ್ದೇಶಿತ ನೆಲೆಗೆ ಸಾಗಿಸುವುದು ಇತರ ಅಸ್ತ್ರಗಳ ಸಾಗಣೆಗಿಂತ ಸುಲಭ. ಒಂದು ಚದರ ಕಿಲೊಮೀಟರ್ ಕ್ಷೇತ್ರವನ್ನು ನಾಶಗೊಳಿಸಲು ಒಂದು ನೂರರಿಂದ ಒಂದು ಸಾವಿರ ಗ್ರಾಮ್‌ಗಳಷ್ಟು ಭಾರವಿರುವ ಪರಮಾಣು ಅಸ್ತ್ರ ಬೇಕಾಗುತ್ತದೆ. ಅಂಥ ಅಸ್ತ್ರ ಉಂಟುಮಾಡುವ ಸಾವು ನೋವುಗಳನ್ನು ಒಂದು ಲಕ್ಷ ಕಿಲೊಗ್ರಾಮ್‌ಗಳಷ್ಟು ನರಾನಿಲಗಳನ್ನು ಬಳಸಿಯೂ ಉಂಟುಮಾಡಬಹುದು. ಒಂದು ಗ್ರಾಮ್‌ನ ಹತ್ತರಲ್ಲೊಂದು ಪಾಲು ತೂಕದ ರೋಗಾಣುಗಳಿಂದಲೂ ಅದು ಸಾಧ್ಯ. ಯುದ್ಧದಲ್ಲಿ ಉಪಯೋಗಿಸಲಾದ ಪರಮಾಣು ಅಸ್ತ್ರಗಳಿಂದ ಅಂಗವಿಕಲತೆ, ಆನುವಂಶಿಕ ದೋಷ ದೌರ್ಬಲ್ಯಗಳು ಬಾಂಬು ಸ್ಫೋಟಿಸಿದ ಸ್ಥಳದ ಸುತ್ತಮುತ್ತಲಿನ ಜನರಲ್ಲಿ ಕಾಣಿಸಿಕೊಳ್ಳುತ್ತವೆ. ರಾಸಾಯನಿಕ ಅಸ್ತ್ರಗಳು ಆನುವಂಶಿಕ ನ್ಯೂನತೆಗಳನ್ನು ಉಂಟುಮಾಡುವುದಿಲ್ಲವಾದರೂ ಜೀವನ ಪರ್ಯಂತ ಅನುಭವಿಸಬೇಕಾದ ಪರಿಣಾಮಗಳಿಗೆ ಕಾರಣವಾಗುತ್ತವೆ. ಆದರೆ ರೋಗಾಣು ಅಸ್ತ್ರಗಳು ಹಿಂದೆ ಕಾಣದಿದ್ದಂಥ ರೋಗರುಜಿನಗಳನ್ನು ಸೃಷ್ಟಿಸಬಹುದು.

ರೋಗಾಣುಗಳಲ್ಲಿ ಯಾವುದು ಅತ್ಯಂತ ಮಾರಕ? ಅವುಗಳ ಬಳಕೆ ಮತ್ತು ನಿಯಂತ್ರಣ ಹೇಗೆ? ಈ ಅಂಶಗಳನ್ನು ಕುರಿತು ಸಂಶೋಧನೆಗಳು ರಷ್ಯ, ಅಮೆರಿಕ, ಜರ್ಮನಿ ಮತ್ತು ಬ್ರಿಟನ್ ದೇಶಗಳಲ್ಲಿ ನಡೆಯುತ್ತಿವೆ. ಯುದ್ಧದಲ್ಲಿ ರೋಗಾಣುಗಳನ್ನು ಬಳಸಿದರೆ ಈ ಗ್ರಹದ ಮೇಲಿನ ಮನುಷ್ಯ

ಕುಲವೇ ನಿರ್ನಾಮವಾಗಬಹುದು ಎಂದು ವಿಜ್ಞಾನಿಗಳು ತೀವ್ರವಾದ ಎಚ್ಚರಿಕೆ ನೀಡಿದ್ದಾರೆ.

ಕದನ ಕುತೂಹಲಿಯಾದ ಮನುಷ್ಯನಿಂದ ನಿರ್ಮಿತವಾದ ಮಾರಕಾಸ್ತ್ರಗಳು ಈಗ ಅವನ ಕುಲವನ್ನೇ ನಾಶಮಾಡುವ ಶಕ್ತಿ ಪಡೆದಿವೆ.

## ಮಾರುಕಟ್ಟೆ

ತರಕಾರಿ ಹೂವು ಹಣ್ಣು ಯಾವುದು ಬೇಕೆಂದರೂ ತಟ್ಟನೆ ಮನಸ್ಸಿಗೆ ಬರುವುದು ಮಾರುಕಟ್ಟೆ. ಅಂಗಡಿಗಳೂ ವ್ಯಾಪಾರವೂ ಕೇಂದ್ರೀಕೃತವಾಗಿರುವ ಪ್ರದೇಶ ಮಾರುಕಟ್ಟೆ ಪ್ರದೇಶ ಎನಿಸಿಕೊಳ್ಳುತ್ತದೆ. ಕೊಳ್ಳುವವರೂ ಮಾರುವವರೂ ಪರಸ್ಪರ ಕೂಡುವುದು ಮಾರುಕಟ್ಟೆಯಲ್ಲಿ. ಗ್ರಾಮಾಂತರ ಪ್ರದೇಶದಲ್ಲಿ ವಾರಕ್ಕೊಮ್ಮೆ ನಡೆಯುವ ಸಂತೆಯ ಸುಧಾರಿತ ರೂಪ ಮಾರುಕಟ್ಟೆ. ನಿತ್ಯ ವ್ಯವಹಾರದಲ್ಲಿ ಒಂದು ಕಟ್ಟಡ ಅಥವಾ ಪ್ರದೇಶ ಮಾತ್ರ ಮಾರುಕಟ್ಟೆ ಎನಿಸಿಕೊಂಡರೂ ಅರ್ಥಶಾಸ್ತ್ರದ ರೀತ್ಯ ಮಾರುಕಟ್ಟೆಗೆ ವಿಶಾಲವಾದ ಅರ್ಥವಿದೆ. ಕೊಳ್ಳುವುದು, ಮಾರುವುದು, ಹಣ ಈ ಮೂರು ಅಂಶಗಳನ್ನು ಆಧರಿಸಿದ ಕ್ಷೇತ್ರ ಮಾರುಕಟ್ಟೆ. ಲೇವಾದೇವಿಯಲ್ಲಿ ಕೊಳ್ಳುವುದು–ಮಾರುವುದು ನಡೆಯದು. ಆದರೆ ವ್ಯಾಪಾರದ ಜೊತೆ ಅದರ ಸಂಬಂಧ ಅವಿಭಾಜ್ಯ. ಅದು ಹಣದ ಮಾರುಕಟ್ಟೆ. ವಸ್ತುಗಳ ಉತ್ಪಾದನೆ–ಮಾರಾಟ, ಸರಬರಾಜು–ಬೇಡಿಕೆ ಇವನ್ನು ಆಧರಿಸಿದಂತೆ ಷೇರುಗಳ ಸ್ಕಂಧಗಳ ಮಾರಾಟದಲ್ಲಿ ಏರುಪೇರುಗಳಾಗುತ್ತವೆ. ಇದು ಷೇರು ಮಾರುಕಟ್ಟೆ.

ಮಾರುಕಟ್ಟೆಯಲ್ಲಿ ಎರಡು ವಿಧ. ಪೈಪೋಟಿಯ ಮಾರುಕಟ್ಟೆ ಮತ್ತು ಏಕಾನುಭೋಗಿ ಮಾರುಕಟ್ಟೆ.

ಪೈಪೋಟಿಯ ಮಾರುಕಟ್ಟೆಯಲ್ಲಿ ಬೆಲೆಗಳು ಮುಕ್ತವಾಗಿ ಏರಿಳಿಯುತ್ತವೆ. ಸರಬರಾಜು–ಬೇಡಿಕೆಯನ್ನು ಆಧರಿಸಿ ಬೆಲೆ ಬದಲಾಗುತ್ತಿರುತ್ತದೆ. ಹತ್ತಿ, ಗೋಧಿ, ಲೋಹಗಳು ಮುಂತಾದುವುಗಳ ಜಗತ್ತಿನ ಮಾರುಕಟ್ಟೆಗಳು ಈ ಬಗೆಯವು. 'ಈ ದಿನದ ಬೆಲೆ' ಎಂಬುದು ಇಂಥ ಮಾರುಕಟ್ಟೆಗಳ ಪ್ರಸಿದ್ಧ ವಾಕ್ಯ. ನ್ಯೂ ಯಾರ್ಕ್ ಕಾಟನ್ ಮಾರುಕಟ್ಟೆ ಎಂಬ ಸಿರೋನಾಮೆಯಡಿ ಸಾಮಾನ್ಯವಾಗಿ ಎರಡು ಬೆಲೆಗಳನ್ನು ಪ್ರಕಟಿಸುತ್ತಾರೆ. ಗ್ರಾಹಕ ಕೊಂಡ ಪರಮಾವಧಿ ಬೆಲೆ ಮತ್ತು ಮಾರಾಟಗಾರ ಸರಕನ್ನು ಮಾರಿದ ಕನಿಷ್ಠ ಬೆಲೆ ಇವೇ ಆ ಎರಡು ಬೆಲೆಗಳು.

ಏಕಾನುಭೋಗಿ ಮಾರುಕಟ್ಟೆ ಇದಕ್ಕೆ ತದ್ವಿರುದ್ಧವಾದದ್ದು. ಒಬ್ಬನೇ ಮಾರಾಟಗಾರ ಮಾರಾಟದ ಹಕ್ಕನ್ನೆಲ್ಲ ತನ್ನ ವಶಕ್ಕೆ ತೆಗೆದುಕೊಳ್ಳುತ್ತಾನೆ. ಇತರರು ಅದೇ ವ್ಯಾಪಾರಕ್ಕೆ ಪ್ರವೇಶಿಸಲು ಅವಕಾಶವಿರುವುದಿಲ್ಲ. ಸರಬರಾಜನ್ನು ಕಡಮೆ ಮಾಡಿ ಬೆಲೆ ಏರಿಸುತ್ತಾನೆ; ಇಲ್ಲವೆ ಸರಬರಾಜು ಏರಿಸಿ ಬೆಲೆ ಇಳಿಸುತ್ತಾನೆ. ಬೆಲೆಯನ್ನು ಆಧರಿಸಿ ಬೇಡಿಕೆಯೂ ಏರುಪೇರಾಗುತ್ತದೆ. ಏನೇ ಆದರೂ ತನ್ನ ಪರಮಾವಧಿ ಲಾಭದ ಬಗೆಗೆ ದೃಷ್ಟಿ ಆತನಿಗೆ. ಮಾರುಕಟ್ಟೆಯನ್ನು ತನ್ನ ಹಿತಾಸಕ್ತಿಗೆ ಹೊಂದಿಕೊಂಡಂತೆ ಇರಿಸಿಕೊಳ್ಳುವುದು ಏಕಾನುಭೋಗಿಯ ಉದ್ದೇಶ.

ಪೈಪೋಟಿಯ ಮಾರುಕಟ್ಟೆಯಲ್ಲಿ ಪ್ರತಿಯೊಬ್ಬನೂ ಏಕಾನುಭೋಗಿಯಾಗಲು ಪ್ರಯತ್ನಿಸುತ್ತಾನೆ. ಪ್ರತಿ ಉದ್ಯಮಿಯೂ ತನ್ನದೇ ಆದ ವಿಶಿಷ್ಟ ಸರಕನ್ನು ತಯಾರಿಸುತ್ತಾನೆ. ವ್ಯಾಪಾರನಾಮ ನೋಂದಾಯಿಸಿದ ನಿರ್ದಿಷ್ಟ ಗುರುತು ಮುಂತಾದ ವಿಧಾನಗಳಿಂದ ತನ್ನ ಹಿತವನ್ನು ಕಾಪಾಡಿಕೊಂಡು ಪ್ರಚಾರ, ಜಾಹೀರಾತು, ಗುಣಮಟ್ಟ ರಕ್ಷಣೆ ಇವುಗಳ ಮೂಲಕ ವ್ಯಾಪಾರ ರೂಢಿಸಿಕೊಳ್ಳುವುದು ವಾಡಿಕೆ. ಆದರೆ ಅದೇ ಮಾರುಕಟ್ಟೆಯ ಮತ್ತೊಬ್ಬ ಉದ್ಯಮಿ ಅಂಥದೇ ಸರಕನ್ನು ಮಾರಾಟಕ್ಕೆ ತರುತ್ತಾನೆ. ಹೀಗೆ ಬೇಡಿಕೆಯಿರುವ ಸರಕಿಗೆ ಹಲವಾರು ಉದ್ಯಮಿಗಳು ಆಕರ್ಷಿತರಾಗಿ ಇತರರು ಅತ್ಯಧಿಕ ಲಾಭ ತಳೆಯುವುದನ್ನು ತಪ್ಪಿಸುತ್ತಾರೆ. ಹೀಗೆ ಪೈಪೋಟಿಯ ಕ್ಷೇತ್ರದಲ್ಲಿ ತಮ್ಮ ತಮ್ಮ ಸರಕಿಗೇ ಸೀಮಿತವಾದ ಏಕಾನುಭೋಗಿಗಳು ಹುಟ್ಟಿಕೊಳ್ಳುತ್ತಾರೆ.

ಮಾರುಕಟ್ಟೆಯಲ್ಲಿ ಪೈಪೋಟಿ ಹಲವಾರು ಮೂಲಗಳಿಂದ. ಬೇಡಿಕೆ ಮತ್ತು ಸರಬರಾಜು ಮುಂತಾದ ಅಂಶಗಳು ಬೆಲೆಗಳನ್ನು ಯಾರೊಬ್ಬರೂ ಹಿಡಿತದಲ್ಲಿ ಇಟ್ಟುಕೊಳ್ಳದಂತೆ ಮಾಡುತ್ತವೆ.

ಮಾರುಕಟ್ಟೆಗಳ ವ್ಯಾಪಾರ ಸಾಮಾನ್ಯವಾಗಿ ನಡೆಯುವುದು ಹರಾಜಿನ ಮೂಲಕ. ಆಹಾರ ಧಾನ್ಯದ ದೇಶದ ಒಳ ಮಾರುಕಟ್ಟೆಗಳಲ್ಲೂ ಕಾಫಿ, ಟೀ ಮುಂತಾದ ವಾಣಿಜ್ಯ ಬೆಳೆಗಳ ಮಾರುಕಟ್ಟೆಗಳಲ್ಲೂ ಹರಾಜಿನಲ್ಲಿ ಸಮ್ಮಿಶ್ರಿ ಕೂಗುವುದರ ಮೂಲಕ ಬೆಲೆಗಳು ನಿರ್ಧರಿಸಲ್ಪಡುತ್ತವೆ.

ಸರಕನ್ನು ಮುಂದೆ ಇರಿಸಿಕೊಂಡೋ ಅಥವಾ ಸರಕಿನ ಮಾದರಿಗಳನ್ನು ತರಿಸಿಕೊಂಡೋ ಬೆಲೆ ಕೂಗುವುದು ವಾಡಿಕೆ. ಆದರೆ ಅನೇಕ ಮಾರುಕಟ್ಟೆಗಳಲ್ಲಿ ಮಾರಾಟಕ್ಕೆ ಒಳಗಾಗುವ ವಸ್ತು ಎದುರಿಗೆ ಇರುವುದಿಲ್ಲ. ಉದಾ : ಸ್ಥಿರ ಆಸ್ತಿ, ಜಮೀನು, ಷೇರು ಪತ್ರ ಇಂಥವು. ಹತ್ತಿ, ಚಹ ಮುಂತಾದುವುಗಳ ದರ್ಜೆಗಳನ್ನು ನಿರ್ದಿಷ್ಟಪಡಿಸಿರುತ್ತಾರೆ. ಇಂಥ ದರ್ಜೆಗೆ ಈ ಬೆಲೆ ಎಂಬುದಾಗಿ ಮಾದರಿಗಳು ಇಲ್ಲದೆಯೇ ಬೆಲೆ ನಿಶ್ಚಯವಾಗುತ್ತದೆ.

ಹಣವನ್ನು ಬಡ್ಡಿಯ ಮೇಲೆ ಸಾಲ ತರುವುದು ಅಥವಾ ಸಾಲ ನೀಡುವ ಕ್ಷೇತ್ರ ಹಣದ ಮಾರುಕಟ್ಟೆ. ಹಣದ ಮಾರುಕಟ್ಟೆಯಲ್ಲಿ ಸಾಮಾನ್ಯವಾಗಿ ಸಣ್ಣ ಗಡುವಿನ ಲೇವಾದೇವಿಯೇ ಹೆಚ್ಚು. ಸಾಲಕ್ಕೆ ಸುಲಭವಾಗಿ ಹಣ ಒದಗದಾಗ ಬಡ್ಡಿಯ ದರ ಏರಿದಾಗ ಹಣದ ಮಾರುಕಟ್ಟೆ ಬಿಗಡಾಯಿಸಿತು ಎನ್ನುತ್ತಾರೆ.

ಉದ್ಯಮ ಸಂಸ್ಥೆಯ ಲಾಭನಷ್ಟಗಳನ್ನು ಆಧರಿಸಿ ಅದರ ಷೇರುಪತ್ರಗಳ ಬೆಲೆ ಏರಿಳಿಯುತ್ತದೆ. ಇವುಗಳ ಕ್ಷೇತ್ರ ಷೇರು ಮಾರುಕಟ್ಟೆ.

ವಿದೇಶೀ ವಿನಿಮಯ ಮಾರುಕಟ್ಟೆ ಅಂತರರಾಷ್ಟ್ರೀಯ ಬ್ಯಾಂಕುಗಳ ಪುಸ್ತಕಗಳ ಲೆಕ್ಕಾಚಾರಗಳಿಂದಲೇ ನಡೆಯುತ್ತದೆ.

ನೋಡಿ : ಕೈಗಾರಿಕೆ ; ಜಾಹೀರಾತು ; ಬೆಲೆ ; ವಾಣಿಜ್ಯ ವ್ಯಾಪಾರ ; ವಿದೇಶೀ ವಿನಿಮಯ ; ಸಾಲ ; ಹರಾಜು.

## ಮಾರುತ

ಚಲಿಸುವ ಗಾಳಿಯೇ ಮಾರುತ. ನಮಗೆ ಮಾರುತ ಮಳೆ ನೀಡುತ್ತದೆ. ಶೀತ ಮಾರುತ ಮತ್ತು ಉಷ್ಣ ಮಾರುತಗಳಿಂದ ಅತಿ ಶೀತ ಹಾಗೂ ಅತಿ ಉಷ್ಣ ಹವೆಗಳುಂಟಾಗುತ್ತವೆ. ಇದೇ ಬೇಸಿಗೆಯ ಕಾಲದಲ್ಲಿ ಬೀಸುವ ಗಾಳಿಯೂ ಚಳಿಗಾಲದಲ್ಲಿ ಬೀಸುವ ಗಾಳಿಯೂ [illegible] ಹಿತವನ್ನೀಯುತ್ತದೆ. ಗಾಳಿ [illegible] ಮರಗಳನ್ನು [illegible] [illegible] [illegible] [illegible] [illegible] [illegible] ಮಾರುತದ [illegible] [illegible] [illegible] [illegible]



ಚೀನೀ ಜನತಾ ಗಣರಾಜ್ಯದ ಸ್ಥಾಪಕ ಮಾವೊ ತ್ಸೆ-ತುಂಗ್

ಯನ್ನು ಸ್ವೀಕರಿಸಿತು. ಒಮ್ಮೆಲೆ ಅಭಿವೃದ್ಧಿ ಹೊಂದುವ 'ಮಹಾಲಂಘನ' ಪ್ರಯತ್ನಿಸಿತು. ಆದರೆ ನಿರೀಕ್ಷಿತ ಯಶಸ್ಸು ದೊರೆಯಲಿಲ್ಲ. ಈಚೆಗೆ ಮಾವೊ ತ್ಸೆ-ತುಂಗನ ವಿಷಯದಲ್ಲಿ ಆರಾಧನೆಯ ಮನೋಭಾವವನ್ನು ಚೀನದಲ್ಲಿ ಬೆಳಸಲಾಗುತ್ತಿದೆ. ಅವನ ಲೇಖನಗಳನ್ನು ಮುದ್ರಿಸಿ ಕೋಟ್ಯಂತರ ಪ್ರತಿಗಳನ್ನು ಹಂಚಿದ್ದಾರೆ. ಚೀನೀ ಕಮ್ಯೂನಿಸ್ಟರ ಪ್ರಕಾರ ಎಲ್ಲದಕ್ಕೂ ಮಾವೊ ಉಪದೇಶವೇ ಮದ್ದು ; ಆಹಾರ ಸಮಸ್ಯೆ ಮತ್ತಿತರ ಎಲ್ಲ ಕಷ್ಟಗಳಿಗೆ ಅದು ಸಂಜೀವಿನಿ, ಸರ್ವರೋಗ ಪರಿಹಾರಕ. 'ಮಾವೊ ವಿಚಾರಗಳು' ಆತನ ಅನುಯಾಯಿಗಳಿಗೆ ಪವಿತ್ರ ಗ್ರಂಥ. ವಿವಿಧ ಭಾಷೆಗಳಿಗೆ ಅದನ್ನು ಅನುವಾದಿಸಿ ವಿಶ್ವದಾದ್ಯಂತ ಹಂಚುವ ಪ್ರಯತ್ನವನ್ನು ಚೀನ ಮಾಡಿದೆ.

## ಮಾಸ್ತಿ ಕಲ್ಲು

ಅದೊಂದು ಹಳ್ಳಿ. ಅಲ್ಲೊಂದು ನಟ್ಟಕಲ್ಲು. ಅದರ ಮುಂದೆ ದೀಪಗಳನ್ನು ಹಚ್ಚಿಟ್ಟಿದ್ದಾರೆ. ಕಲ್ಲಿಗೆ ಅರಿಶಿನ ಕುಂಕುಮ ಪೂಜೆ ಮಾಡಿದ್ದಾರೆ. ಕಲ್ಲಿನ ಮೇಲೆ ಕೆತ್ತನೆಯಿದೆ. ಒಂದು ಕಂಬದಿಂದ ಹೊರಕ್ಕೆ ಚಾಚಿ ಮೇಲಕ್ಕೆ ಎತ್ತಿದ ಹಾಗಿರುವ ಒಂದು ದೊಡ್ಡ ತೋಳಿನ ಚಿತ್ರ. ಅದರ ಕೈಯಲ್ಲಿ ಹೆಬ್ಬೆರಳು ಮತ್ತು ತೋರ್ಬೆರಳುಗಳ ಮಧ್ಯೆ ಒಂದು ನಿಂಬೆಯ ಹಣ್ಣು (ಮಾದಲದ ಹಣ್ಣು). ಕೈಯ ಕೆಳಗಡೆ ಕೆತ್ತಿದ ಪುರುಷ ಹಾಗೂ ಸ್ತ್ರೀ ವಿಗ್ರಹಗಳು. ಅದರ ಪಕ್ಕದಲ್ಲಿ ಅಥವಾ ಮೇಲ್ಭಾಗದಲ್ಲಿ ಒಂದು ಶಿವಲಿಂಗ.

ಇದೊಂದು ಮಾಸ್ತಿ ಕಲ್ಲು.

ಹಿಂದಿನ ಕಾಲದಲ್ಲಿ ಪತಿ ಮರಣ ಹೊಂದಿದರೆ ಅವನೊಡನೆ ಸತಿ ಸಹಗಮನ ಮಾಡುವ ಪದ್ಧತಿಯಿತ್ತು. ಗತಿಸಿದವನಿಗಾಗಿ ಚಿತೆ ಹೊತ್ತಿಸಿದಾಗ ಅವನ ಹೆಂಡತಿ ತಾನೂ ಅದರಲ್ಲಿ ಬಿದ್ದು ಸಾವನ್ನಪ್ಪುತ್ತಿದ್ದಳು. ಇದರಲ್ಲಿ ಬಲಾತ್ಕಾರವಿರುತ್ತಿರಲಿಲ್ಲ, ತನ್ನ ಪತಿಯೇ ತನಗೆ ಸರ್ವಸ್ವ ಎಂದು ನಂಬಿದ್ದ ಹೆಂಡತಿ ಗಂಡನು ಗತಿಸಿದ ಮೇಲೆ ತಾನು ಬದುಕಿರಬಾರದೆಂದು ಬೆಂಕಿಯಲ್ಲಿ ಬಿದ್ದುಬಿಡುತ್ತಿದ್ದಳು. ಇದೇ ಸಹಗಮನ. ಇಂಥ ಸತಿಯರನ್ನು 'ಮಹಾಸತಿ' ಎನ್ನುತ್ತಿದ್ದರು. ಇವರು ಸಹಗಮನ ಮಾಡಿದ ಕಡೆ ಈ ಸತಿಯರ ನೆನಪಿಗಾಗಿ ಒಂದು ಕಲ್ಲನ್ನು ನೆಡುತ್ತಿದ್ದರು. ಇದೇ ಮಾಸ್ತಿಕಲ್ಲು.

ಮಾಸ್ತಿ ಕಲ್ಲಿನ ಮೇಲೆ ಕೆತ್ತಿದ ಬಲಗೈ ಮಹಾ ಸತಿಯ ಸೌಭಾಗ್ಯದ ಧನ್ಯ ಜೀವನದ ಸಂಕೇತ. ಶಿವಲಿಂಗದ ಕೆಳಗೆ ಸ್ತ್ರೀ ಪುರುಷರ ವಿಗ್ರಹಗಳನ್ನು ಕೆತ್ತುವುದು ಬಹುಶಃ ದೇವರ ಕೃಪಾಶ್ರಯದಲ್ಲಿ ಈ ಸತಿಪತಿಯರ ಪ್ರೇಮ ಹೇಗೆ ಬೆಳೆದು ಧನ್ಯವಾಯಿತು ಎಂಬುದನ್ನು ತೋರಿಸಲೆಂದು.

ಮಹಾಸತಿ ಕಲ್ಲುಗಳ ಮೇಲೆ ಸಾಮಾನ್ಯವಾಗಿ ಶಾಸನವಿರುವುದಿಲ್ಲ. ಸಹಗಮನ ಮಾಡಿದ ಸ್ತ್ರೀಯ ಹೆಸರಾಗಲೀ ಅವಳ ಪತಿಯ ಹೆಸರಾಗಲೀ ಇರುವುದಿಲ್ಲ.

ಎಲ್ಲ ಮಾಸ್ತಿಕಲ್ಲುಗಳೂ ಒಂದೇ ರೀತಿಯಿಲ್ಲ. ಅವುಗಳ ಮೇಲಿನ ಚಿತ್ರಗಳಲ್ಲಿ ವ್ಯತ್ಯಾಸಗಳಿವೆ. ಚಿತ್ರದ ಸಂಕೇತ ಏನೇ ಆದರೂ ಸತಿಪತಿಯರ ಅಮರ ಪ್ರೇಮಕ್ಕೆ ಮಾಸ್ತಿಕಲ್ಲು ಮೌನ ಸ್ಮಾರಕ.

972ರ ಶಾಸನವೊಂದರಲ್ಲಿ, ಬಿದಿಯಣ್ಣ ಎಂಬವನು ಮಡಿದಾಗ ಅವನ ಹೆಂಡತಿಯಾಗಿದ್ದ ಜಕ್ಕಬ್ಬೆಯೂ ಪ್ರಾಣವನ್ನು ತ್ಯಜಿಸಿದಳೆಂದೂ ಅವನ ತಂಗಿ ಜಾಜಿ ಎಂಬುವಳು ಕಲ್ಲನ್ನು ನಿಲ್ಲಿಸಿದಳೆಂದೂ ಹೇಳಿದೆ.

1051ರ ಶಾಸನವೊಂದರಲ್ಲಿ, ಬೊಗಾರ ಕರಡಿಯ ಸೆಟ್ಟಿ ಎಂಬುವನು ಮಡಿದಾಗ ಅವನ ಮದುವಣಗಿತ್ತಿ, ನಾಗಮ್ಮ ಎಂಬವಳು ಸಹಗಮನ ಮಾಡಿದ ವಿಷಯವೂ ಅವಳಿಗಾಗಿ ನಿಲ್ಲಿಸಿದ 'ಮಾಸ್ತಿಕಲ್ಲಿ'ನ ವಿಷಯವೂ ಇದೆ.

ಸಹಗಮನ ಪದ್ಧತಿಯನ್ನು ಒಪ್ಪದಿದ್ದರೂ ಮಹಾಸತಿಯರ ತ್ಯಾಗ, ಧೈರ್ಯ ಮೆಚ್ಚುವಂಥವೇ.

## ಮಾಸ್ಕೊ

ಒಂದಲ್ಲ, ಎರಡಲ್ಲ, ಪ್ರತಿ ದಿನವೂ ಕಾಣುವ ನೋಟವದು. ಚೌಕವೊಂದರಲ್ಲಿ ಜನರ ಸಾಲು ಸಾಲು. ಅಲ್ಲಿ ಯಾವ ಸಿನಿಮಾ ಮಂದಿರವೂ ಇಲ್ಲ, ಪ್ರದರ್ಶನ ಮಂದಿರವೂ ಇಲ್ಲ. ಆದರೂ ಜನರ ಸಾಲು, ಸಾಲು.

ಅವರು ಕೆಂಪು ಚೌಕದಲ್ಲಿರುವ ಲೆನಿನ್ ಸಮಾಧಿ ಭವನಕ್ಕೆ ಹೋಗುವವರು. ಹೊರಗಿನಿಂದ ಬಂದವರಲ್ಲ. ಸಾಮಾನ್ಯವಾಗಿ ಎಲ್ಲರೂ ಊರಿನವರೆ. ಆದರೆ ತಮ್ಮ ನಾಯಕನಲ್ಲಿ ಅಂಥ ಗೌರವ ಅವರಿಗೆ. ನಾಯಕನಿಗೆ ದಿನವೂ ಅಲ್ಲಿನ ಜನರ ಶ್ರದ್ಧಾಂಜಲಿ.

ಸುಪ್ರಸಿದ್ಧ ಕೆಂಪು ಚೌಕ ಇರುವುದು ಮಾಸ್ಕೊ ನಗರದಲ್ಲಿ. ಪ್ರಪಂಚದ ಅತಿ ಬಲಿಷ್ಠ, ಪ್ರಭಾವಯುತ ರಾಷ್ಟ್ರಗಳಲ್ಲೊಂದಾದ ರಷ್ಯದ ಸೋವಿಯೆತ್ ಸೋಷಲಿಸ್ಟ್ ರಿಪಬ್ಲಿಕಿನ ರಾಜಧಾನಿ ಈ ನಗರ. ಮಾಸ್ಕೊ ನದಿಯ

ದಂಡೆಯ ಮೇಲೆ ಇದೆ. ಮಾಸ್ಕೋ ನಗರದ ವಿಸ್ತೀರ್ಣ ೮೮ ಚ. ಕಿ. ಮಿ. ಈ ನಗರ ಸೋವಿಯೆತ್ ಒಕ್ಕೂಟದ ಸಾಂಸ್ಕೃತಿಕ ಕೇಂದ್ರವೂ ಹೌದು ಜಗದ್ವಿಖ್ಯಾತ ಬೊಲ್ಶೋಯಿ ರಂಗಮಂದಿರ ಇಲ್ಲಿದೆ. ರಷ್ಯದ ವಿಶಿಷ್ಟ ನೃತ್ಯಕಲೆಯಾದ ಬ್ಯಾಲೆ ರೂಪಕಗಳ ಪ್ರದರ್ಶನ ಈ ರಂಗಮಂದಿರ ದಲ್ಲಿ ನಡೆಯುತ್ತದೆ. ಸಂಗೀತ ನಾಟಕಗಳ ಮಂದಿರಗಳು, ನಾಟಕ ಮಂದಿರ ಗಳು, ಸೂತ್ರದ ಬೊಂಬೆ ಆಟದ ಮಂದಿರಗಳು—ಇವೆಲ್ಲ ಈ ನಗರದಲ್ಲಿವೆ.

ಮಾಸ್ಕೋ ಪ್ರಮುಖ ಚಿತ್ರೋದ್ಯಮ ಕೇಂದ್ರ. ಇಲ್ಲಿ 120 ಸಿನಿಮಾ ಮಂದಿರಗಳಿವೆ. 900 ಸಾರ್ವಜನಿಕ ಗ್ರಂಥಭಂಡಾರಗಳೂ ಸಾವಿರಾರು ವಿಶೇಷ ಜ್ಞಾನಭಂಡಾರಗಳೂ ಇವೆ. ಇಲ್ಲಿನ ಲೆನಿನ್ ರಾಜ್ಯ ಗ್ರಂಥಭಂಡಾರ ಪ್ರಪಂಚದ ಅತ್ಯಂತ ದೊಡ್ಡ ಗ್ರಂಥಭಂಡಾರಗಳಲ್ಲಿ ಮೂರನೆಯದು. ಇಲ್ಲಿ ಸುಮಾರು ಎರಡು ಕೋಟಿ ಪುಸ್ತಕಗಳಿವೆ. ಅವುಗಳಲ್ಲಿ ಕೆಲವು ಅತಿ ಪುರಾತನ ಗ್ರಂಥಗಳು, ಸಾಧಾರಣವಾಗಿ ಸಿಕ್ಕದ ಹಸ್ತಪ್ರತಿಗಳೂ ಇವೆ. 49 ಸಂಗ್ರಹಾ ಲಯಗಳೂ ಕಲಾ ಭಂಡಾರಗಳೂ ಇವೆ. ನಗರದ ಉತ್ತರಕ್ಕೆ ರಷ್ಯದ ಆರ್ಥಿಕ ಪ್ರಗತಿಯನ್ನು ಯಾವಾಗಲೂ ಸೂಚಿಸುವ ಒಂದು ಪ್ರದರ್ಶನವಿದೆ. ವೈಜ್ಞಾನಿಕ ಸಂಸ್ಥೆಗಳು 460ಕ್ಕೂ ಹೆಚ್ಚಿವೆ. 1775ರಲ್ಲಿ ಸ್ಥಾಪಿತವಾದ ಎಂ. ವಿ. ಲೊಮೊನೊಸೋವ್ ರಾಜ್ಯ ವಿಶ್ವವಿದ್ಯಾನಿಲಯದಲ್ಲಿ 20.000 ವಿದ್ಯಾರ್ಥಿಗಳಿದ್ದಾರೆ. ಇದಲ್ಲದೆ 90 ಉನ್ನತ ವ್ಯಾಸಂಗ ಸಂಸ್ಥೆಗಳಿವೆ. ಇದರಲ್ಲಿ 1960ರಲ್ಲಿ ಆಫ್ರಿಕ–ಏಷ್ಯ–ಲ್ಯಾಟಿನ್ ಅಮೆರಿಕ ವಿದ್ಯಾರ್ಥಿ ಗಳಿಗಾಗಿ ಸ್ಥಾಪಿತವಾದ 'ಪ್ಯಾಟ್ರಿಸ್ ಲುಮುಂಬ ಪೀಪಲ್ಸ್ ಫ್ರೆಂಡ್‌ಷಿಪ್ ಯುನಿವರ್ಸಿಟಿ' ಇದೆ, ಸಾವಿರಕ್ಕೂ ಹೆಚ್ಚು ಶಾಲೆಗಳಿವೆ. ಮಾಸ್ಕೋ ನಗರದಲ್ಲಿ ಅನೇಕ ಉದ್ಯಾನಗಳಿವೆ. ಇವುಗಳಲ್ಲೆಲ್ಲ ಅತಿ ದೊಡ್ಡದಾದದ್ದು ಗಾರ್ಕಿ ಪಾರ್ಕ್. ಗಾರ್ಕಿ ರಷ್ಯದ ಖ್ಯಾತ ಸಾಹಿತಿ (1868-1936).

ನೆಲದೊಳಗಿರುವ ರೈಲು ಮಾರ್ಗದ ನಿಲ್ದಾಣಗಳು ಮಾಸ್ಕೋದಲ್ಲಿ ಬಹು ಸುಂದರವಾಗಿವೆ. ನಿಲ್ದಾಣಗಳಲ್ಲಿರುವ ಅಲಂಕಾರ ಮನಮೋಹಕ.

ಮಾಸ್ಕೋದಲ್ಲಿ ಅಗತ್ಯವಾಗಿ ನೋಡಬೇಕಾದ ಮೂರು ಪ್ರದರ್ಶನಾಲಯ ಗಳಿವೆ. ಟಾಲ್‌ಸ್ಟಾಯ್ ಮ್ಯೂಸಿಯಂ : ಪ್ರಸಿದ್ಧ ಸಾಹಿತಿ ಟಾಲ್‌ಸ್ಟಾಯ್ ವಾಸಿಸುತ್ತಿದ್ದ ಮನೆಯಲ್ಲಿ ಅವನು ಉಪಯೋಗಿಸಿದ ಲೇಖನ ಸಾಮಗ್ರಿಗಳು. ಹಾಸಿಗೆ, ಬಟ್ಟೆ, ಚಿತ್ರಗಳು, ಎಲ್ಲವನ್ನೂ ಹಾಗೆಯೇ ಇಟ್ಟಿದ್ದಾರೆ. ಎರಡನೆ ಯದು ಇನ್ನೊಬ್ಬ ಸುಪ್ರಸಿದ್ಧ ಸಾಹಿತಿಯ ಗೌರವಾರ್ಥ. ಮ್ಯಾಕ್ಸಿಂ ಗಾರ್ಕಿ ವಾಸಿಸುತ್ತಿದ್ದ ಮನೆಯಲ್ಲಿ ಅವನು ಬಳಸುತ್ತಿದ್ದ ವಸ್ತುಗಳನ್ನು ಇಟ್ಟಿದ್ದಾರೆ. ಈ ಪ್ರದರ್ಶನಾಲಯಗಳು ರಷ್ಯದ ಜನತೆ ಮತ್ತು ಸರಕಾರ ಆ ಹಿರಿಯ ಸಾಹಿತಿಗಳಲ್ಲಿಟ್ಟಿರುವ ಮಮತೆ ಗೌರವಗಳಿಗೆ ಜೀವಂತ ಸಾಕ್ಷಿ. ಮೂರನೆಯದು ರಷ್ಯದ ಕ್ರಾಂತಿಗೆ ಸಂಬಂಧಿಸಿದ್ದು. 1900 ರಿಂದ ಈ ವರೆಗಿನ ರಷ್ಯದ ಚರಿತ್ರೆ ಕಣ್ಣಿಗೆ ಕಟ್ಟು ತ್ತದೆ ಇಲ್ಲಿ. ಎರಡು ವಾಕ್ ದೃಶ್ಯ ಪ್ರದರ್ಶನಗಳೂ ಇಲ್ಲಿ ಉಂಟು. ಇವನ್ನು ನೋಡಿದಾಗ 1905ರ ಕ್ರಾಂತಿ ಮತ್ತು 1917ರ ಅಕ್ಟೋಬರ್‌ಕ್ರಾಂತಿ ನಮ್ಮೆದುರಿಗೆ ನಡೆಯುತ್ತಿವೆ ಎಂದು ಭಾಸವಾಗುತ್ತದೆ. ಮಾಸ್ಕೋದ ಮಕ್ಕಳ ರಂಗಮಂದಿರದಲ್ಲಿ ಮಕ್ಕಳಿಗಾಗಿ ಆಡುವ ನಾಟಕಗಳಲ್ಲಿ ರಾಮಾಯಣವೂ ಒಂದು. ಇಲ್ಲಿ ಶ್ರೀಮಂತರ 'ಕ್ಲಬ್'ಗಳಿಲ್ಲ. ವಾಲಿಬಾಲ್. ಟೆನಿಸ್ ಮುಂತಾದುವನ್ನು ಆಡಲು ಪ್ರವೇಶ ಧನವಿಲ್ಲ. ಯಾರು ಯಾವ ಆಟ ವನ್ನು ಬೇಕಾದರೂ ವ್ಯಾಯಾಮ ಕೂಟಕ್ಕೆ ಹೋಗಿ ಆಡಬಹುದು.

ಮಾಸ್ಕೋ ಬಹಳ ಪುರಾತನವಾದದ್ದು. ಹೊಸ ಶಿಲಾಯುಗದ ಕಾಲಕ್ಕೇ (ಕ್ರಿ. ಪೂ. 8000) ಇಲ್ಲಿ ಜನರು ವಾಸಿಸುತ್ತಿದ್ದಂತೆ ತೋರುತ್ತದೆ. 1156ರಲ್ಲಿ ರಾಜಕುಮಾರ ಯೂರಿಡೊಲ್ ಗೊರೂಕಿ ಒಂದು ಕೋಟೆಯನ್ನು ಕಟ್ಟಿದ. ಚಕ್ರವರ್ತಿಯ ಅರಮನೆ ಮೊದಲಾದ ಭವನಗಳು ಈ ಕೋಟೆ ಯಲ್ಲಿದ್ದುವು. ಕ್ರೆಮ್ಲಿನ್ ಎಂದರೆ ಕೋಟೆ. ಇದರ ಸುತ್ತ ನಗರ ಬೆಳೆದಿದೆ.

1812ರಲ್ಲಿ ನೆಪೋಲಿಯನ್‌ನ ಆಕ್ರಮಣಕ್ಕೆ ಮಾಸ್ಕೋ ಒಳಗಾದದ್ದು ಅದರ ಚರಿತ್ರೆಯ ಮಹತ್ತರ ಘಟನೆಗಳಲ್ಲಿ ಒಂದು. ಫ್ರೆಂಚ್ ಸೈನ್ಯ ನಗರಕ್ಕೆ ಬೆಂಕಿ ಇಟ್ಟು ವ್ಯಾಪಾರ ಕೇಂದ್ರಗಳನ್ನೆಲ್ಲಾ ಧ್ವಂಸ ಮಾಡಿತು. ರಷ್ಯದಲ್ಲಿನ ಚಳಿಗಾಲ, ಸುಡುಗಾಡಿನಂತಾಗಿದ್ದ ನಗರ, ರೈತರ ದಂಗೆ ಇವು ನೆಪೋಲಿಯನ್ ಮಾಸ್ಕೋ ಬಿಟ್ಟು ಹೊರಡುವಂತೆ ಮಾಡಿದುವು. ದುರ್ಗ ವನ್ನು ನಾಶಪಡಿಸಬೇಕೆಂಬ ಅವನ ಬಯಕೆ ಫಲಿಸಲಿಲ್ಲ.

ನೆಪೋಲಿಯನನ ದಾಳಿಯ ಅನಂತರ ಮಾಸ್ಕೋ ಹೊಸ ಚೈತನ್ಯದಿಂದ ಬೆಳೆದು ರಷ್ಯದ ವಾಣಿಜ್ಯ, ಸಂಸ್ಕೃತಿ. ಸಾಹಿತ್ಯ, ಆಡಳಿತಗಳ ಕೇಂದ್ರ ಸ್ಥಾನ ವಾಯಿತು. 1917ರಲ್ಲಿ ಕ್ರಾಂತಿ ನಡೆದು, 1918 ಮಾರ್ಚ್ 10ರಂದು ಲೆನಿನನ ನಾಯಕತ್ವದಲ್ಲಿ ಸೋವಿಯೆತ್ ಸರಕಾರ ಮಾಸ್ಕೋದಲ್ಲಿ ಸ್ಥಾಪಿತವಾಯಿತು. ಮಾಸ್ಕೋ ಪ್ರಪಂಚದ ಪ್ರಥಮ ಕಮ್ಯೂನಿಸ್ಟ್ ರಾಷ್ಟ್ರದ ರಾಜಧಾನಿ ಯಾಯಿತು. 1924ರಲ್ಲಿ ಲೆನಿನ್ ಮರಣ ಹೊಂದಿದ. 1930ರಲ್ಲಿ ಕೆಂಪು ಚೌಕದಲ್ಲಿ ಲೆನಿನ್‌ನ ಸಮಾಧಿ ಭವನ ರಚಿತವಾಯಿತು.

ಎರಡನೆಯ ಮಹಾಯುದ್ಧದ ಕಾಲದಲ್ಲಿ ಮಾಸ್ಕೋ ಜರ್ಮನರ ಬಾಂಬ್ ದಾಳಿಗೆ ಸ್ವಲ್ಪಮಟ್ಟಿಗೆ ಗುರಿಯಾಯಿತು.

ಎರಡನೆಯ ಮಹಾಯುದ್ಧವಾದ ಮೇಲೆ ಮಾಸ್ಕೋ ಗುರುತೇ ಸಿಗದಷ್ಟು ಬೆಳೆದಿದೆ. ಪ್ರಪಂಚದ ದೊಡ್ಡ ನಗರಗಳಲ್ಲಿ ಒಂದೆನಿಸಿದೆ. ಲೆನಿನ್ ಬೆಟ್ಟ ಗಳ ಮೇಲಿರುವ ಮೂವತ್ತೆರಡು ಅಂತಸ್ತಿನ ವಿಶ್ವವಿದ್ಯಾನಿಲಯ ಸೌಧ. ಮಾಸ್ಕೋ ನಗರದ ಬೆಳವಣಿಗೆಗೆ ಒಂದು ನಿದರ್ಶನ.



ಇತಿಹಾಸ ಪ್ರಸಿದ್ಧ ಕೆಂಪು ಚೌಕ



ಗೇಟ್‌ವೇ ಆಫ್ ಇಂಡಿಯ

ವರ್ಷಕ್ಕೆ ಬಾಡಿಗೆ ಹತ್ತು ಪೌಂಡು, ಇದನ್ನು ಪ್ರತಿ ಸೆಪ್ಟೆಂಬರ್ ಮೂವತ್ತರಂದು ಚಿನ್ನದ ರೂಪದಲ್ಲಿ ಸಲ್ಲಿಸಬೇಕೆಂದು ಷರತ್ತು.

ಅಂದು ಮುಂಬಯಿ ಸಣ್ಣ ಕೊಳಕು ಸ್ಥಳ. ಇಂದು ಅದು ಭಾರತದ ಅತಿ ದೊಡ್ಡ ನಗರಗಳಲ್ಲಿ ಎರಡನೆಯದು. (ಮೊದಲನೆಯದು ಕಲ್ಕತ್ತ.) 'ಗೇಟ್‌ವೇ ಆಫ್ ಇಂಡಿಯಾ' ಮುಂಬಯಿಯ ಸಮುದ್ರ ತೀರದಲ್ಲಿದೆ. ವಿವಿಧ ಚಟುವಟಿಕೆಗಳಿಂದ ಮುಂಬಯಿ ನಿಜವಾಗಿಯೂ ಭಾರತದ ಹೆಬ್ಬಾಗಿಲೆನಿಸಿದೆ.

ಮುಂಬಾದೇವಿಯ ಊರು ಮುಂಬಯಿ ಆಯಿತು. ಐರೋಪ್ಯರು ಬಂಬೈ ಎಂದರು. ಅದು ಬಾಂಬೆ ಆಯಿತು, ಬೊಂಬಾಯಿ ಎಂದೂ ಆಯಿತು. ಏಳು ದ್ವೀಪಗಳ ಮೇಲೆ ನಿರ್ಮಿತವಾದ ನಗರ, ದ್ವೀಪಗಳ ಮಧ್ಯೆ ಇದ್ದ ಜೌಗುನೆಲದಿಂದಾಗಿ ಅನಾರೋಗ್ಯಕರವಾಗಿತ್ತು. ಜೌಗನ್ನು ಇಂಗಿಸಿದ ಮೇಲೆ ನಗರ ಒಂದೇ ದ್ವೀಪದಲ್ಲಿ ಇರುವಂತಾಯಿತು. ಒಂಬತ್ತನೆಯ ಶತಮಾನದಿಂದ 1348ರವರೆಗೆ ಮುಂಬಯಿ ವಿವಿಧ ಆಳರಸರ ವಶದಲ್ಲಿತ್ತು. ಗುಜರಾತಿನ ಸುಲ್ತಾನನಾಗಿದ್ದ ಬಹದ್ದೂರ್ ಶಹ ಮುಂಬಯಿಯನ್ನು ಪೋರ್ಚುಗೀಸರಿಗೆ 1534ರಲ್ಲಿ ಒಪ್ಪಿಸಿದ. ಪೋರ್ಚುಗೀಸರಿಂದ ಇದು ಇಂಗ್ಲಿಷ್ ಅರಸರಿಗೆ ಸೇರಿತು. ಹದಿನೇಳನೆಯ ಶತಮಾನದಲ್ಲಿ ಜೆರಾಲ್ಡ್ ಆಂಗೀರ ಎಂಬುವನು ದ್ವೀಪಗಳ ಮಧ್ಯೆ ಇದ್ದ ಕೊರಕಲನ್ನು ಮುಚ್ಚಿ, ಆಸ್ಪತ್ರೆ ನ್ಯಾಯಾಲಯಗಳನ್ನು ಸ್ಥಾಪಿಸಿದ. ಇವನೇ ಆಧುನಿಕ ಮುಂಬಯಿಯ ಸ್ಥಾಪಕ ಎನ್ನಬಹುದು. ಆಕ್ರಮಣಕಾರರನ್ನು ತಡೆಗಟ್ಟಲು ಬಲವಾದ ಕೋಟೆ ನಿರ್ಮಿಸಿದ. ಈಸ್ಟ್ ಇಂಡಿಯಾ ಕಂಪೆನಿಯ ಪ್ರಾಬಲ್ಯ ಬೆಳೆದ ವೇಳೆಗೆ ಮುಂಬಯಿ ಬೃಹತ್‌ನಗರವಾಗಿ ರೂಪುಗೊಂಡಿತು. ಮುಂದೆ ನಂತರದ ಪಾರಸಿ ಜನ ಹತ್ತಿಯ ಬಟ್ಟೆ ಕಾರಖಾನೆಗಳನ್ನು ಆರಂಭಿಸಿದರು. ಭಾರತದ ಆಮದು-ರಫ್ತು ವ್ಯವಹಾರ ಮುಂಬಯಿಯ ಮೂಲಕವೇ ಆಗ ತೊಡಗಿತು. ಸೂಯೆಜ್ ಕಾಲುವೆ ನಿರ್ಮಾಣವಾದ ಮೇಲೆ ಮುಂಬಯಿಯ ಪ್ರಾಮುಖ್ಯ ಹೆಚ್ಚಿತು.

ಭಾರತದ ಪಶ್ಚಿಮ ಭಾಗದಲ್ಲಿರುವ ಮುಂಬಯಿಯಲ್ಲಿ ನಾನಾ ಪ್ರದೇಶಗಳ ಜನರು ವಾಸಿಸುತ್ತಿದ್ದಾರೆ. ಮುಂಬಯಿಯ ಪ್ರಾಮುಖ್ಯಕ್ಕೆ ಪಾರಸಿಗಳ, ಗುಜರಾಥಿಗಳ, ಮಹಾರಾಷ್ಟ್ರೀಯರ, ಕನ್ನಡಿಗರ ಮತ್ತು ಇತರ ದಾಕ್ಷಿಣಾತ್ಯರ ಕೊಡುಗೆ ಅಪಾರ. ಮುಂಬಯಿಯ ನೈಸರ್ಗಿಕ ಬಂದರಿನ ವಿಸ್ತೀರ್ಣ 181.30 ಚದರ ಕಿಲೊಮಿಟರು. ನಗರದ ವಿಸ್ತಾರ 181.74 ಚದರ ಕಿಲೊಮಿಟರು.

ಆಂಗ್ಲರ ಕಾಲದಲ್ಲಿ ಬಾಂಬೆ ಆಧಿಪತ್ಯದ ರಾಜಧಾನಿಯಾಗಿತ್ತು ಮುಂಬಯಿ: ಬಳಿಕ ಗುಜರಾತ್–ಮಹಾರಾಷ್ಟ್ರಗಳನ್ನೊಳಗೊಂಡ ಮುಂಬಯಿ ರಾಜ್ಯದ ರಾಜಧಾನಿಯಾಗಿತ್ತು; ಆ ರಾಜ್ಯದ ವಿಭಜನೆಯಾಗಿ ಗುಜರಾತ್ ಮಹಾರಾಷ್ಟ್ರಗಳೆಂಬ ಪ್ರತ್ಯೇಕ ರಾಜ್ಯಗಳ ಸ್ಥಾಪನೆಯಾದ ಬಳಿಕ ಮಹಾರಾಷ್ಟ್ರ ರಾಜ್ಯದ ರಾಜಧಾನಿಯಾಗಿದೆ.

ಮುಂಬಯಿ ಹಲವು ರೀತಿಗಳಲ್ಲಿ ಪ್ರಸಿದ್ಧ. ಟ್ರಾಂಬೆಯಲ್ಲಿ ಪರಮಾಣು ರಿಯಾಕ್ಟರ್ ಕೆಲಸ ಮಾಡುತ್ತಿದೆ. ಹಾಪ್‌ಕಿನ್ಸ್ ಇನ್‌ಸ್ಟಿಟ್ಯೂಟಿನಲ್ಲಿ ಹಾವಿನ ವಿಷ ಸಂಗ್ರಹಿಸುತ್ತಾರೆ. ಸಾಂಕ್ರಾಮಿಕ ರೋಗಗಳ ನಿವಾರಣೆಗಾಗಿ ಸಂಶೋಧನೆಗಳು ನಡೆಯುತ್ತಿವೆ. ದೇಶವಿದೇಶಗಳ ಅಪೂರ್ವ ಕಲಾವಸ್ತುಗಳು ವಸ್ತುಸಂಗ್ರಹಾಲಯದಲ್ಲಿವೆ. ಭಾರತದ ಚಲನಚಿತ್ರೋದ್ಯಮದ ಪ್ರಮುಖ ಕೇಂದ್ರ ಮುಂಬಯಿ. ತಾತಾ ಇನ್‌ಸ್ಟಿಟ್ಯೂಟ್ ಆಫ್ ಫಂಡಮೆಂಟಲ್ ರಿಸರ್ಚ್ ಎನ್ನುವ ಸಂಸ್ಥೆಯಲ್ಲಿ ಭೌತಶಾಸ್ತ್ರ. ಗಣಿತಶಾಸ್ತ್ರ ಮತ್ತು ಇವಕ್ಕೆ ಸಂಬಂಧಿಸಿದ ಇತರ ಶಾಸ್ತ್ರಗಳಲ್ಲಿ ಮೂಲಸಂಶೋಧನೆ ನಡೆಯುತ್ತಿದೆ. ಫೋರ್ಟ್ ವಿಭಾಗವನ್ನು ಫ್ಲೋರಾ ಫೌಂಟನ್ ಪ್ರೇಕ್ಷಣೀಯಗೊಳಿಸಿದೆ. ಹದಿನೇಳನೆಯ ಶತಮಾನದ ಎಲಿಫೆಂಟಾ ಗುಹೆಗಳು ಮುಂಬಯಿಯ ಬಳಿ ಒಂದು ದ್ವೀಪದಲ್ಲಿವೆ. ಜೋಗೇಶ್ವರಿ ಸುಂದರ ಆರೋಗ್ಯ ಸ್ಥಳ. ಆರೆ ಹಾಲಿನ ಕೇಂದ್ರ. ಬ್ರೆಬೋರ್ನ್ ಕ್ರೀಡಾಂಗಣ. ಕಮಲಾ ನೆಹರೂ ಉದ್ಯಾನ. ಮಲಬಾರ್ ಹಿಲ್ಸ್‌ನಲ್ಲಿರುವ ತೂಗುತೋಟ ಪ್ರವಾಸಿಗರ ಮನಸ್ಸನ್ನು ಸೂರೆಗೊಳ್ಳುತ್ತವೆ.

ಹಲವು ಭಾಷೆಗಳನ್ನಾಡುವ 42 ಲಕ್ಷ ಜನ ಇಲ್ಲಿ ವಾಸಿಸುತ್ತಾರೆ.

ಆಕರ್ಷಕ 'ಮೆರಿನ್ ಡ್ರೈವ್' : ಕಡಲಿನ ದಂಡೆಯುದ್ದಕ್ಕೂ ಸೊಬಗಿನ ವಸತಿ ಪ್ರದೇಶ



## ಮುದ್ರಣ

ಬೇಸಿಗೆಯ ರಜ ಮುಗಿಯಿತು. ಹೊಸ ತರಗತಿಯ ಪಾಠಗಳಿಗೆ ಸಿದ್ಧವಾಗಬೇಕು. ಎಷ್ಟೊಂದು ಪಠ್ಯಪುಸ್ತಕಗಳು. ಸಹಾಯಕ ಪುಸ್ತಕಗಳು ಬೇಕು! ಅಂಗಡಿಗೆ ಹೋಗುತ್ತೇವೆ. ಬೆಲೆಕೊಟ್ಟು ಪುಸ್ತಕವನ್ನು ತರುತ್ತೇವೆ. ಅಲ್ಲಿಗೊಂದು ಧೈರ್ಯ. 'ಓದಲು ನನ್ನ ಬಳಿ ಪುಸ್ತಕ ಇದೆ' ಎಂದು.

ಬೆಳಗಾಗುತ್ತಲೆ ಕಾಯುತ್ತೇವೆ ನಮ್ಮ ಪತ್ರಿಕೆಗಾಗಿ ವಾರಕ್ಕೊಮ್ಮೆ ನಮ್ಮ ಪ್ರೀತಿಯ ವಾರ ಪತ್ರಿಕೆಗಾಗಿ.

ಮನೆಯಲ್ಲಿ ಮದುವೆ ನಿಶ್ಚಯವಾಗುತ್ತದೆ-ಅಚ್ಚಿನ ಮನೆಗೆ ಓಡುತ್ತೇವೆ. ಸುಂದರವಾಗಿ ಆಹ್ವಾನಪತ್ರಿಕೆಗಳನ್ನು ಅಚ್ಚುಹಾಕಿಸಿ ನಮ್ಮ ಬಂಧುಮಿತ್ರರಿಗೆ ಕಳುಹಿಸಲು.

ಪುಸ್ತಕಗಳು, ಪತ್ರಿಕೆಗಳು ಎಲ್ಲ ಲಕ್ಷಾಂತರ ಮಂದಿಗೆ ಲಭ್ಯವಾಗುವುದು ಮುದ್ರಣದ ಸೌಕರ್ಯದಿಂದ. ಮುದ್ರಣವೇ ಇಲ್ಲದಿದ್ದರೆ?

ಹಿಂದಿನ ಕಾಲದಲ್ಲಿ ಮುದ್ರಣವೇ ಇರಲಿಲ್ಲ–ಎಂದರೆ ನಂಬಲು ಸಾಧ್ಯವೆ? ವಾಸ್ತವವಾಗಿ. ಸುಮಾರು 1,500 ವರ್ಷಗಳ ಹಿಂದೆ ಮುದ್ರಣಯಂತ್ರ ಇರಲಿಲ್ಲ; ಸ್ವಲ್ಪ ಹೆಚ್ಚು ಕಡಮೆ ಮುದ್ರಣವೆಂದರೇನು ಎಂದೇ ಪ್ರಪಂಚದ ಬಹು ಭಾಗಗಳಲ್ಲಿ ಆಗ ತಿಳಿದಿರಲಿಲ್ಲ.

ಪ್ರಾಚೀನ ಈಜಿಪ್ಟಿನ ಪ್ಯಾಪಿರಸ್ ಎಲೆಯ ಮೇಲೆ ಬರೆಯುತ್ತಿದ್ದರು. ಭಾರತೀಯರು ಓಲೆಗರಿಯ ಮೇಲೆ ಪುಣ್ಯ ಗ್ರಂಥಗಳನ್ನೂ ಶಾಸ್ತ್ರ ಪ್ರಮಾಣಗಳನ್ನೂ ಮೂಡಿಸಿದರು. 165ರಲ್ಲಿ ಚೀನೀಯರು ಕನ್‌ಫ್ಯೂಷಿಯಸನ ಸಿದ್ಧಾಂತಗಳನ್ನು ಕಲ್ಲಿನ ಮೇಲೆ ಕೊರೆದು ಅದರ ಮೇಲೆ ಬಣ್ಣ ಬಳಿದು ಅನಂತರ ಅಚ್ಚು ಪ್ರತಿಯನ್ನು ಪಡೆಯುತ್ತಿದ್ದರು. ಕ್ರಿ. ಪೂ. 300–600ರ ನಡುವಣ ಅವಧಿಯಲ್ಲಿ ಚೀನೀಯರು ಲೋಹದಿಂದಲೂ ಮರದಿಂದಲೂ ಮಾಡಿದ ಅಚ್ಚುಗಳನ್ನು ಬಹಳವಾಗಿ ಬಳಸಿದರು.

ಸಿಂಧೂನದಿ ತೀರದ ನಾಗರಿಕರು ನಮ್ಮ ದೇಶದಲ್ಲಿ ಕ್ರಿ. ಪೂ. 3000ಕ್ಕೂ ಮುಂಚೆಯೇ ಲೋಹದ ಮುದ್ರೆಗಳನ್ನು ಬಳಸುತ್ತಿದ್ದರು. ಆಗಿನ ಸಂಸ್ಕೃತಿಯ ಅವಶೇಷಗಳಲ್ಲಿ ಸುಮಾರು ಒಂದು ಸಾವಿರ ಅಚ್ಚುಗಳು ದೊರಕಿವೆ.

767–770ರ ಅವಧಿಯಲ್ಲಿ ಒಮ್ಮೆ ಜಪಾನಿನ ಸಮ್ರಾಜ್ಞಿ ಶೊಟೊಕೂ ಅಪೇಕ್ಷೆಯಂತೆ ಹತ್ತು ಲಕ್ಷ ಬೌದ್ಧ ತಾಯಿತಿಗಳನ್ನು ಚೀನದಲ್ಲಿ ಮುದ್ರಿಸಲಾಯಿತು. ಜಗತ್ತಿನ ಅತ್ಯಂತ ಹಳೆಯ ಮುದ್ರಿತ ಪುಸ್ತಕದ ಒಂದು ಪ್ರತಿ 1900ರಲ್ಲಿ ಚೀನದ ಗಡಿಯ ಗುಹೆಯೊಂದರಲ್ಲಿ ದೊರೆಯಿತು. ಹೆಸರು 'ವಜ್ರಸೂತ್ರ.' ಇದರಲ್ಲಿ ತೋರಿಸಿದ ದಿನಾಂಕದ ಪ್ರಕಾರ. ಇದು ಅಚ್ಚಾದದ್ದು ನಮ್ಮ ಲೆಕ್ಕಾಚಾರದಂತೆ 868ನೇ ಇಸವಿ ಮೇ 11ರಂದು. ಇಂಗ್ಲೆಂಡಿನ ಬ್ರಿಟಿಷ್ ವಸ್ತು ಸಂಗ್ರಹಾಲಯದಲ್ಲಿ ನೋಡಬಹುದಾದ ಆ ಪುಸ್ತಕದ ಆರು ಹಾಳೆಗಳೆಲ್ಲ ಅಕ್ಷರಗಳು ತುಂಬಿವೆ. ಪ್ರತಿ ಹಾಳೆಯೂ 4.8 ಮೀಟರ್ ಉದ್ದ ಮತ್ತು 0.3 ಮೀಟರ್ ಅಗಲ ಇದೆ. ಮತ್ತೊಂದು ಚಿಕ್ಕ ಹಾಳೆಯಲ್ಲಿ ಚಿತ್ರಗಳಿವೆ. ವಾಂಗ್ ಚೀ ಎಂಬಾತ ತನ್ನ ತಂದೆಯ ಮತ್ತು ತಾಯಿಯ ಗೌರವಾರ್ಥವಾಗಿ ಉಚಿತವಾಗಿ ಹಂಚಲು ಮುದ್ರಿಸಿದ ಎಂದು ಅದರಲ್ಲಿ ನಮೂದಿಸಲಾಗಿದೆ. ಈ ಗುಹೆಯಲ್ಲಿ 1,130 ಕಟ್ಟುಗಳು ಸಿಕ್ಕಿದುವು: ಕಾಗದದ ಮೇಲೆ ಬರೆದ 15,000 ಪುಸ್ತಕಗಳು ಇಲ್ಲಿ ದೊರೆತುವು. ಅವನ್ನು ಗುಹೆಯಿಂದ ತೆಗೆದಾಗ ಕೆಡದೆ ಒಳ್ಳೆಯ ಸ್ಥಿತಿಯಲ್ಲಿದ್ದುವಂತೆ. ಇಲ್ಲಿ ದೊರೆತ ಇನ್ನೂ ಮೂರು ಅಚ್ಚಾದ ಪುಸ್ತಕಗಳಲ್ಲಿ ಒಂದನ್ನು ಇತರ ಪುಸ್ತಕಗಳ ಹಾಗೆ ಸುರುಳಿ ಸುತ್ತಿರಲಿಲ್ಲ. ಈಗಿನ ಪುಸ್ತಕಗಳಂತೆ ಮಡಿಸಿತ್ತು. 969ರ ಹೊತ್ತಿಗೆ ಚೀನದಲ್ಲಿ ಇಸ್ಪೀಟು ಕಾರ್ಡುಗಳು ಮುದ್ರಿತವಾಗಿದ್ದು ಹದಿನಾಲ್ಕನೆಯ ಶತಮಾನದಲ್ಲಿ ಅವು ಯೂರೋಪಿಗೆ ಬಂದುವು. ಹತ್ತನೆಯ ಶತಮಾನದಲ್ಲಿ ಚಕ್ರವರ್ತಿಯ ಆಜ್ಞೆಯಂತೆ ನೂರಮೂವತ್ತು ಶ್ರೇಷ್ಠ ಕೃತಿಗಳನ್ನು ಅಚ್ಚು ಮಾಡಲಾಯಿತು. ಈ ಕೆಲಸಕ್ಕೆ ಇಪ್ಪತ್ತು ವರ್ಷ ಕಾಲ ಹಿಡಿಯಿತು.

ಚೀನೀ ಭಾಷೆಯ ಪ್ರತಿ ಪದವನ್ನೂ ವಿಶಿಷ್ಟ ಚಿತ್ರ ವಿನ್ಯಾಸದ ಮೂಲಕ ನಿರೂಪಿಸಲಾಗುತ್ತದೆ. ವರ್ಣಮಾಲೆಯಲ್ಲಿ ಇಂತಿಷ್ಟೇ ಸಂಖ್ಯೆಯ ಅಕ್ಷರಗಳೆಂಬ ಪದ್ಧತಿ ಇಲ್ಲ. ಆದ್ದರಿಂದ ಮುದ್ರಣದ ಪ್ರಾರಂಭ ದೆಸೆಯಲ್ಲಿ ಪುಸ್ತಕದ ಪ್ರತಿ ಪುಟದ ಪಡಿಯಚ್ಚನ್ನೂ ಕೈಯಲ್ಲಿ ಕೊರೆದು ಅನಂತರ ಅಚ್ಚು ಮಾಡುವ ಅಗತ್ಯವಿತ್ತು. ಈ ಅಂಶ ಚೀನೀ ಮುದ್ರಣಕಲೆ ಬೆಳೆಯುವುದಕ್ಕೆ ಅಡ್ಡಿಯಾಯಿತು.

1403ರಲ್ಲಿ ಪ್ರಪಂಚದ ಚರಿತ್ರೆಯಲ್ಲಿ ಮೊದಲ ಬಾರಿಗೆ ಲೋಹದ ಅಚ್ಚಿನ ಮೊಳೆಗಳು ಕೊರಿಯದಲ್ಲಿ ಸಿದ್ಧವಾದುವು. ಸುಮಾರು 1500ರಲ್ಲಿ ಪಿ ಜೆಂಗ್ ಎಂಬಾತ ಚೀನೀ ಅಚ್ಚುಮೊಳೆಗಳನ್ನು ಮಾಡಿದ. ಒಂದೊಂದು ಚೀನೀ ಪದವನ್ನು ಬೇರೆ ಬೇರೆಯಾಗಿ ಕೆತ್ತಿ, ಬೇಕು ಬೇಕಾದ ಮೊಳೆಯನ್ನು ಅಗತ್ಯವಿದ್ದಂತೆ ಜೋಡಿಸುವುದು ಆತ ಅನುಸರಿಸಿದ ಕ್ರಮ. ಮೊಳೆಗಳನ್ನು ಒದ್ದೆಮಣ್ಣಿನಲ್ಲಿ ಕೊರೆದು ಅವನ್ನು ಸುಟ್ಟು ಜೋಡಿಸಲಾಗುತ್ತಿತ್ತು; ಆದ್ದರಿಂದ ಬಾಳಿಕೆ ಬರುವಂತಿರಲಿಲ್ಲ. ಚೀನೀ ಭಾಷೆಯ ಒಂದೊಂದು

ಯೂರೋಪಿಗೆ ಮುದ್ರಣದ ಕೊಡುಗೆಯನ್ನಿತ್ತ ಗುಟೆನ್‌ಬರ್ಗ್–ಅವನ ಮುದ್ರಣ ಯಂತ್ರ





ಪದಕ್ಕೂ ಒಂದೊಂದು ಅಚ್ಚು ಮೊಳೆಯೆಂದರೆ ಎಷ್ಟು ಸಾವಿರ ಸಂಖ್ಯೆ ಯುಳ್ಳ ಅವು ಬೇಕಾದಾವು! ತದರದಿಂದ ಎರಕಹೊಯ್ದ ಅಚ್ಚು ಮೊಳೆಗಳ ತಯಾರಿಕೆ ಕ್ರಮೇಣ ಪ್ರಾರಂಭವಾಯಿತು. ಮುದ್ರಣ ಯಂತ್ರದನ್ನಾಗಲೀ ಶಾಯಿಯನ್ನಾಗಲೀ ಚೀನೀಯರು ಕಂಡು ಹಿಡಿಯಲಿಲ್ಲ.

ಚೀನೀ ಮುದ್ರಣ ಕಲೆಯ ಸಂಪರ್ಕ ಪಡೆಯದೆಯೇ ಯೂರೋಪಿನಲ್ಲಿ ಮುದ್ರಣ ಕಲೆ ಬೆಳೆಯಿತು ಎಂಬ ಅಭಿಪ್ರಾಯವಿದ್ದರೂ, ಅದು ಎಂದು–ಹೇಗೆ ಪ್ರಾರಂಭವಾಯಿತು ಎನ್ನುವ ಬಗೆಗೆ ದಾಖಲೆಗಳು ಸಿಗುವುದಿಲ್ಲ. ಹದಿನಾಲ್ಕನೆಯ ಶತಮಾನಕ್ಕೆ ಮುಂಚೆ ಅರಸರ ಮುದ್ರೆಗಳನ್ನು ತೊಗಲಿನ ದಾಖಲೆಗಳ ಮೇಲೆ ಒತ್ತಲು ಬಳಸಲಾಗುತ್ತಿತ್ತು. 500 ವರ್ಷಗಳ ಹಿಂದೆ ಇಸ್ಪೀಟು ಎಲೆಗಳನ್ನು ಮುದ್ರಿಸಲಾಯಿತು.

ಯೂರೋಪಿನಲ್ಲಿ ಅಚ್ಚು ಮೊಳೆಗಳನ್ನು ಕಂಡು ಹಿಡಿದಾತ ಜರ್ಮನಿಯ ಜೊಹಾನೆಸ್ ಗುಟೆನ್‌ಬರ್ಗ್. ಅದು ಸುಮಾರು 1440ರಲ್ಲಿ. ಆತ ಮುದ್ರಣ ಯಂತ್ರವನ್ನೂ ಶಾಯಿಯನ್ನೂ ರೂಪಿಸಿದ. ಆತನಿಂದ ಮುದ್ರಿತವಾದ ಲ್ಯಾಟಿನ್ ವ್ಯಾಕರಣದ ಒಂದು ಭಾಗ ಮತ್ತು 1448ರ ಖಗೋಳಶಾಸ್ತ್ರೀಯ ಕ್ಯಾಲೆಂಡರ್ ದೊರೆತಿದೆ. 1455ರಲ್ಲಿ ಮುದ್ರಿತವಾದ ದ್ದೆಂದು ಹೇಳಲಾಗಿರುವ ಒಂದು ಬೈಬಲ್ ಪ್ರತಿಯೇ ಇದುವರೆಗೆ ಸಿಕ್ಕಿರುವ ಪುಸ್ತಕಗಳಲ್ಲಿ ಅತ್ಯಂತ ಹಳೆಯ ಪೂರ್ಣ ಪ್ರತಿ.

ನಾಲ್ಕುನೂರು ವರ್ಷಗಳ ಕಾಲ ಮುದ್ರಣಯಂತ್ರದ ವಿನ್ಯಾಸಗಳಲ್ಲಿ ಕ್ರಾಂತಿಕಾರಿ ಬದಲಾವಣೆಗಳೇನೂ ನಡೆಯಲಿಲ್ಲ. 1880ರ ಅನಂತರ ಅಚ್ಚು ಮೊಳೆಗಳನ್ನು ಬಿಡಿ ಬಿಡಿಯಾಗಿ ಎರಕಹೊಯ್ದು ಹಲವಾರು ಬಾರಿ ಅಚ್ಚು ಮಾಡಲು ಬಳಸುವಂತೆ ಸಿದ್ಧಪಡಿಸಿಟ್ಟುಕೊಳ್ಳುವುದರ ಬದಲು, ಸಾಲು ಸಾಲುಗಳನ್ನೇ ಬೇಕಾದಾಗ ಎರಕಹೊಯ್ದು ಪುಟ ಅಚ್ಚಾದನಂತರ ಅದನ್ನು ಮತ್ತೆ ಕರಗಿಸಿಬಿಡುವ ಪದ್ಧತಿ ಜಾರಿಗೆಬಂತು. ಲೈನೊ ಎಂದು ಪ್ರಸಿದ್ಧವಾಗಿರುವ ಈ ಅಕ್ಷರ ಜೋಡಣೆ ಪದ್ಧತಿ ಬಂದವನ್ನು ತಂದುದಲ್ಲದೆ ವೇಗವಾದ ಜೋಡಣೆಗೂ ದಾರಿ ಮಾಡಿತು. ಕೆಲವು ಭಾಷೆಗಳಿಗಾಗಿ ಮಾನೊಟೈಪ್ (ಬಿಡಿ ಅಕ್ಷರ) ಯಂತ್ರವೂ ಸಿದ್ಧವಾಯಿತು.

ಛಾಯಾಚಿತ್ರಗಳನ್ನು ಲೋಹದ ಮೇಲೆ ಎರಕಹೊಯ್ಯುವ ಪದ್ಧತಿಯಲ್ಲಿ ಆಗಿರುವ ಸುಧಾರಣೆ ಆಶ್ಚರ್ಯಕರ. ಲೋಹದ ಮೇಲ್ಮೈಯನ್ನು ಚಿತ್ರದ ಬೆಳಕು ನೆಳಲಿನ ಪ್ರಮಾಣದ ಆಧಾರದ ಮೇಲೆ ಚುಕ್ಕೆ ಚುಕ್ಕೆಗಳ ರೂಪದ ಹಳ್ಳ ತಿಟ್ಟುಗಳನ್ನು ಕೊರೆಯಲಾಗುತ್ತದೆ. ಕಾಗದದ ಮೇಲೆ ಹೀಗೆ ಲೋಹದಲ್ಲಿ ಮೂಡಿಸಿದ ಹಳ್ಳ ತಿಟ್ಟಿನ ಚಿತ್ರವನ್ನು ಅಚ್ಚೊತ್ತಿದಾಗ ಛಾಯಾ ಚಿತ್ರದಂಥದೇ ಚಿತ್ರ ಮೂಡುತ್ತದೆ. ಅಂಥ ಅಚ್ಚಿಗೆ ಹಾಫ್ ಟೋನ್ ಅಚ್ಚು ಎಂದು ಹೆಸರು. ಒಂದೇ ಚಿತ್ರದ ಹಲವಾರು ಅಚ್ಚುಗಳ ಬೇರೆ ಬೇರೆ ಪ್ರದೇಶಗಳನ್ನು ಬಣ್ಣಗಳಲ್ಲಿ ಒಂದೇ ಕಾಗದದ ಮೇಲೆ ಒಂದಾದ ಮೇಲೊಂದರಂತೆ ಮೂಡಿಸಿದಾಗ ವರ್ಣಮಯ ಚಿತ್ರ ಅಚ್ಚಾಗುತ್ತದೆ.

ಪ್ರಾರಂಭದ ಮುದ್ರಣ ಯಂತ್ರಗಳಲ್ಲಿ ಗಂಟೆಗೆ 800 ರಿಂದ ಒಂದು ಸಾವಿರ ಪ್ರತಿಗಳನ್ನು ಅಚ್ಚು ಮಾಡಲು ಸಾಧ್ಯವಿತ್ತು. ಆದರೆ ನವಶೋಧಿಸಿದ ರೋಟರಿ ಯಂತ್ರಗಳು ಒಂದು ಮಿನಿಟಿನಲ್ಲಿ ಅಚ್ಚು ಪ್ರತಿಗಳನ್ನು ಮುದ್ರಿಸುತ್ತವೆ. ಅಮೆರಿಕದಲ್ಲಿ 128 ಪುಟಗಳ ವೃತ್ತ ಪತ್ರಿಕೆಯ 60,000 ಪ್ರತಿಗಳನ್ನು ಒಂದು ಗಂಟೆಯಲ್ಲಿ ಮುದ್ರಿಸುವ ಯಂತ್ರಗಳಿವೆ.

ಕನ್ನಡದಲ್ಲಿ ಮೊದಲು ಕಲ್ಲಚ್ಚಿನಲ್ಲಿಯೇ ಗ್ರಂಥಗಳು ಪ್ರಕಟವಾದುವು. ಜಾನ್ ಮ್ಯಾಕೆರೆಲ್ ಅವರ ಕನ್ನಡ ಭಾಷೆಯ ವ್ಯಾಕರಣ 1820ರಲ್ಲಿ ಸಿದ್ಧವಾಯಿತು. [illegible] ಮುದ್ರಿತ ಕನ್ನಡ ಗ್ರಂಥ. ಇದರ ಪ್ರತಿ ಕನ್ನಡ ದೇಶದಲ್ಲಿ ಕಾಣಲು ಸಿಗುವುದಿಲ್ಲ. ನ್ಯೂ ಯಾರ್ಕ್ ನಗರದ ಸಾರ್ವಜನಿಕ ಗ್ರಂಥ ಭಂಡಾರದಲ್ಲಿ ಇದನ್ನು ಇಟ್ಟಿದ್ದಾರೆ. ಬಳ್ಳಾರಿ ಮತ್ತು ಮದರಾಸುಗಳಲ್ಲಿ ಆಗ ಕಲ್ಲುಛಾಪ ಗಳಿದ್ದುವು. ಮುಂದೆ 1852ರಲ್ಲಿ ಜಿ. ಪ್ಲೆಬೆಸ್ತ್ ಎಂಬ ಜರ್ಮನ್ ಮಿಷನರಿ ಮಂಗಳೂರಿನಲ್ಲಿ ಪ್ರಥಮತಃ ಕನ್ನಡ ಮೊಳೆಗಳನ್ನು ಮಾಡಲು ಆರಂಭಿಸಿದ. 1853ರಲ್ಲಿ ಕನ್ನಡದಲ್ಲಿ ಛಾಪಖಾನೆ (ಮುದ್ರಣಾಲಯ) ಪ್ರಾರಂಭವಾಯಿತು. ಹೀಗೆಯೇ ಭಾರತದ ಇತರ ಭಾಗಗಳಲ್ಲೂ ಮೂಲತಃ ಕ್ರೈಸ್ತ ಧರ್ಮ ಪ್ರಚಾರಕರ ಪ್ರಯತ್ನದಿಂದ ಅಚ್ಚಿನ ವ್ಯವಸ್ಥೆ ರೂಪುಗೊಂಡಿತು.

ಕೆಲವೇ ಮಂದಿ ಅಕ್ಷರಸ್ಥರ ಮತ್ತು ಪಂಡಿತರ ಸ್ವತ್ತಾಗಿದ್ದ ಜ್ಞಾನ ಎಲ್ಲರಿಗೂ ನಿಲುಕುವಂತೆ ಮಾಡುವುದರಲ್ಲಿ ಮುದ್ರಣ ವಹಿಸಿದ ಪಾತ್ರ ಹಿರಿದು. ಬಹುಮಟ್ಟಿಗೆ ಕಂಠಪಾಠದ ಮೂಲಕವೇ ಪೀಳಿಗೆಯಿಂದ ಪೀಳಿಗೆಗೆ ಸಾಗಬೇಕಾಗಿದ್ದ ಜ್ಞಾನ ಲಕ್ಷಾಂತರ ಮಂದಿಗೆ ಬೇರೆ ಬೇರೆ ದೇಶಗಳ ಬೇರೆ ಬೇರೆ ಪೀಳಿಗೆಗಳವರಿಗೆ, ಒಂದು ಕಡೆ ಶೇಖರವಾಗಿ ಲಭ್ಯವಾಗಲು ಸಾಧ್ಯವಾದದ್ದು ಮುದ್ರಣದಿಂದ. ಹದಿನೈದನೆಯ ಶತಮಾನದಲ್ಲಿ ಗುಟೆನ್‌ಬರ್ಗ್ ಬೈಬಲಿನ ಪೂರ್ಣ ಪ್ರತಿಯನ್ನು ಪುಸ್ತಕದ ರೂಪದಲ್ಲಿ ಅಚ್ಚು ಮಾಡಿದ್ದು ಚರಿತ್ರಾರ್ಹ ಘಟನೆಯಾಯಿತು; ಕೌತುಕದ ಸಂಗತಿಯಾಯಿತು. ಅಚ್ಚು ಪ್ರಾರಂಭವಾದ ಹೊಸದರಲ್ಲಿ, ಕೇಳಿದ ಬೆಲೆಕೊಟ್ಟು ಪುಸ್ತಕ ತೆಗೆದುಕೊಳ್ಳುತ್ತಿದ್ದರು. ಅದಕ್ಕಾಗಿ ಹೊಡೆದಾಟಗಳಾಗುತ್ತಿದ್ದುವು. ಮುದ್ರಣದ ಬಗೆಗೆ ಮೊದಲಿಗೆ ಇದ್ದ ಕೌತುಕ ಬೆಳೆದು ಹೊಸ ಹೊಸ ಅನ್ವೇಷಣೆಗಳಿಗೆ ಎಡೆಮಾಡಿಕೊಟ್ಟುದರಿಂದಲೇ ದೇಶಗಳ ಎಲ್ಲೆಗಳನ್ನು ಜ್ಞಾನ ದಾಟಿತು. ಶಿಕ್ಷಣದ ಅವಿಭಾಜ್ಯ ಅಂಗವಾಯಿತು, ಮುದ್ರಣ.

ಅಕ್ಷರಸ್ಥರ ಸಂಖ್ಯೆ ಬೆಳೆಯುವಲ್ಲಿ ಮುದ್ರಣದ ಮಹತ್ವ ಬಹಳ. ವರ್ಣಮಯ ಪುಸ್ತಕಗಳು ಓದುವ ಅಭಿರುಚಿ ಹುಟ್ಟಿಸಿವೆ. ನ್ಯೂ ಯಾರ್ಕಿನಲ್ಲಿ ವಿಶ್ವಸಂಸ್ಥೆ ಅಧಿವೇಶನ ಪ್ರಾರಂಭವಾಯಿತೆನ್ನೋಣ; ಅದು ಮುಗಿಯುವ ಮುಂಚೆಯೇ ಅದರ ಬಗ್ಗೆ ಸುದ್ದಿ ಮತ್ತು ಚಿತ್ರಗಳು ಅಚ್ಚಾಗಿ ಗೋಳದ ಇನ್ನೊಂದು ಭಾಗದಲ್ಲಿರುವ ನಮ್ಮ ಕೈ ತಲಪುತ್ತವೆ. ಪುಸ್ತಕವೊಂದರ ನೂರಾರು ಪುಟಗಳ ಛಾಯಾ ಚಿತ್ರಗಳನ್ನು ತೆಗೆದು ಅದರ ಪಡಿಯಚ್ಚುಗಳಿಂದ ಹಲವಾರು ಪುಟಗಳನ್ನು ದೊಡ್ಡ ಹಾಳೆಯ ಮೇಲೆ ಮುದ್ರಿಸಿ ಪುಸ್ತಕ ತಯಾರಿಸುತ್ತಾರೆ. ಹೀಗೆ ಬಹಳ ಅಗ್ಗವಾಗಿ ಬೃಹತ್ ಪ್ರಮಾಣದಲ್ಲಿ ಪುಸ್ತಕಗಳು ಸಿದ್ಧವಾಗುವುದರಿಂದ ಬಡವರಿಗೂ ಸುಲಭವಾಗಿ ಅವು ದೊರಕುತ್ತವೆ. ಧಾರ್ಮಿಕ ಕ್ರಾಂತಿಗಳು, ಅಮೆರಿಕದ ಸ್ವಾತಂತ್ರ್ಯ ಸಂಗ್ರಾಮ, ಫ್ರಾನ್ಸಿನ ಮಹಾಕ್ರಾಂತಿ, ಭಾರತದ ಸ್ವಾತಂತ್ರ್ಯದ ಹೋರಾಟ ಇವುಗಳಲ್ಲಿ ಮುದ್ರಣದ ಪಾತ್ರ ಹಿರಿದು.

ಮುದ್ರಣದಿಂದ ವಿವರಿಸಲಾಗದಷ್ಟು ಅನುಕೂಲವಾಗಿದೆ. ಕೆಲವು ರೀತಿಗಳಲ್ಲಿ ಅಪಕಾರವೂ ಆಗಿದೆ. ಇಂದು ಒಳ್ಳೆಯ ಪುಸ್ತಕಗಳ ಜೊತೆಗೆ ಕೆಟ್ಟವು, ಜನರ ಮನಸ್ಸನ್ನು ತಪ್ಪುದಾರಿಗೆ ಎಳೆಯುವಂಥವು ಕೂಡ ಸುಲಭವಾಗಿ ಹರಡುತ್ತವೆ. ಅಲ್ಲದೆ ಪುಸ್ತಕದ ಒಂದು ಪ್ರತಿ ದೊರೆಯುವುದು ಕಷ್ಟವಾಗಿದ್ದಾಗ, ಒಂದು ಪ್ರತಿಯನ್ನು ಓಲೆಯ ಗರಿಯ ಮೇಲೆ ಬರೆದೋ ಬೇರಾವ ರೀತಿಯಲ್ಲಿಯೋ ಹಲವು ತಿಂಗಳು ಶ್ರಮಪಟ್ಟು ಸಿದ್ಧಗೊಳಿಸಬೇಕಾಗಿದ್ದಾಗ, ಪುಸ್ತಕವೆಂದರೆ ವಿಶೇಷ ಶ್ರದ್ಧೆ, ಗೌರವ ಇರುತ್ತಿತ್ತು. ಒಂದೊಂದು ಪುಸ್ತಕವನ್ನೂ ಪೂರ್ಣವಾಗಿ ಬಳಸುತ್ತಿದ್ದರು.

ಮುಷ್ಕರಗಳು ಒಮ್ಮೊಮ್ಮೆ ದುಷ್ಕೃತ್ಯಗಳಿಗೆ ಕಾರಣವಾಗುವುದೂ ಉಂಟು.

ಬೇರೆ ಬೇರೆ ದೇಶಗಳಲ್ಲಿ ನಡೆಯುವ ಮುಷ್ಕರಗಳ ವೈಖರಿ ಕುತೂಹಲ ಕಾರಿ. ಡೆನ್ಮಾರ್ಕ್, ಇಂಗ್ಲೆಂಡ್ ಮತ್ತು ಜರ್ಮನಿಗಳಲ್ಲಿ ಕಾರ್ಮಿಕರ ಪೈಕಿ ಹಲವು ಮಂದಿ ಮಾತ್ರ ಮುಷ್ಕರಗಳಲ್ಲಿ ಭಾಗವಹಿಸುತ್ತಾರೆ. ಮುಷ್ಕರದ ಅವಧಿ ಚಿಕ್ಕದಾಗಿರುತ್ತದೆ. ನಾರ್ವೆ ಮತ್ತು ಸ್ವೀಡನುಗಳಲ್ಲಿ ಮುಷ್ಕರಗಳು ಅಪರೂಪ. ಆದರೆ ನಡೆದ ಮುಷ್ಕರಗಳು ದೀರ್ಘಾವಧಿಯವು. ಫ್ರಾನ್ಸ್, ಇಟಲಿ ಮತ್ತು ಭಾರತಗಳಲ್ಲಿ ನಡೆಯುವ ಮುಷ್ಕರಗಳಲ್ಲಿ ಬಹುತೇಕ ಕಾರ್ಮಿಕರು ಭಾಗವಹಿಸುತ್ತಾರೆ. ಸೋವಿಯೆತ್ ರಷ್ಯ ಮತ್ತಿತರ ಕಮ್ಯೂನಿಸ್ಟ್ ಆಡಳಿತವಿರುವ ರಾಷ್ಟ್ರಗಳಲ್ಲಿ ಕಾರ್ಮಿಕರ ಮುಷ್ಕರಗಳಿಗೆ ಅವಕಾಶವಿಲ್ಲ. ಕೂಲಿಕಾರರ ಸರ್ವಾಧಿಕಾರತ್ವ ಆಡಳಿತ ನಡೆಸುವಾಗ ಶ್ರಮ ಜೀವಿಗಳ ಮುಷ್ಕರದ ಅಗತ್ಯವಿಲ್ಲ ಎಂಬುದು ಅಲ್ಲಿನ ನಿಲುವು.

ಕೆಲಸಗಾರರು ತಮ್ಮ ಬೇಡಿಕೆಗಳ ಸಲುವಾಗಿ ಮುಷ್ಕರಗಳನ್ನು ನಡೆಸು ವಂತೆಯೆ ಮಾಲಿಕ ಅಥವಾ ಆಡಳಿತ ವರ್ಗದವರು ತಮ್ಮ ತೊಂದರೆಗಳ ನಿವಾರಣೆಗಾಗಿ 'ಹೊರಗೀಲಿ' (ಲಾಕ್ ಔಟ್) ಘೋಷಿಸುತ್ತಾರೆ; ಅಂದರೆ ಕಾರಖಾನೆಯನ್ನು ಮುಚ್ಚಿಬಿಡುತ್ತಾರೆ. ಕೆಲಸಗಾರರಲ್ಲಿ ಹಲವರು ಕೆಲಸ ಮಾಡಲಿಚ್ಛಿಸಿದರೂ ಸಾಧ್ಯವಾಗುವುದಿಲ್ಲ. ಕೆಲಸಗಾರರು ಮುಷ್ಕರದ ಬೆದರಿಕೆ ಹಾಕಿದರೆ, ಉತ್ಪಾದನೆಯನ್ನು ಪೂರ್ಣ ಪ್ರಮಾಣದಲ್ಲಿ ಲಾಭದಾಯಕ ವಾಗಿ ನಡೆಸುವುದರಲ್ಲಿ ಕಾರ್ಮಿಕರು ಸಹಕರಿಸದಿದ್ದರೆ, ಕಾರಖಾನೆಯ ಯಂತ್ರ ಆಸ್ತಿಪಾಸ್ತಿಗಳಿಗೆ ಧಕ್ಕೆಯಾಗುವಂತಿದ್ದರೆ ಅಥವಾ ದೊಂಬಿ, ಗಲಭೆ ಗಳ ಸೂಚನೆಯಿದ್ದರೆ ಆಡಳಿತಗಾರರು 'ಹೊರಗೀಲಿ' ಘೋಷಿಸುತ್ತಾರೆ.

ಆಧುನಿಕ ಸಮಾಜದಲ್ಲಿ ವೃತ್ತಿ ಸಂಘಗಳು ವ್ಯಾಪಕವಾಗಿವೆ. ಮುಷ್ಕರದ ಆಯುಧವನ್ನು ಬಡಕಾರ್ಮಿಕನಿಂದ ಹಿಡಿದು ನಾಲ್ಕು ಸಾವಿರ ರೂಪಾಯಿ ಗಳಿಗೂ ಹೆಚ್ಚು ಮಾಸಿಕ ವೇತನವಿರುವ ವಿಮಾನಚಾಲಕರವರೆಗೆ ಹಲವು ಬಗೆಯ ಉದ್ಯೋಗಿಗಳು ಬಳಸುತ್ತಾರೆ.

ಮುಷ್ಕರ ತುಂಬಾ ಪರಿಣಾಮಕಾರಿ. ಅದು ಯಾವ ವರ್ಗವೇ ಆಗಲಿ ಎಚ್ಚರಿಕೆಯಿಂದ ಬಳಸಬೇಕಾದ ಆಯುಧ.

## ಮುಸೋಲಿನಿ, ಬಾನಿಟೊ

1945ರ ಏಪ್ರಿಲ್ 28ರಂದು ಬೆಳಗ್ಗೆ.

ಇಟಲಿಯ ಮಿಲಾನ್ ನಗರದಲ್ಲಿ ಜನಭರಿತ ಚೌಕದಲ್ಲಿ ಒಬ್ಬ ಗಂಡಸು ಮತ್ತು ಒಬ್ಬ ಹೆಂಗಸಿನ ಶವಗಳನ್ನು ತಲೆಕೆಳಕಾಗಿ ನೇತು ಹಾಕಿದ್ದರು, ನೂರಾರು ಜನ ನೋಡುತ್ತಿದ್ದರು.

ಅದಕ್ಕೂ ಇಪ್ಪತ್ತೆರಡು ವರ್ಷಗಳ ಹಿಂದೆ, ತನ್ನ ವಾಕ್ಚಾತುರ್ಯದಿಂದ ಜನರಲ್ಲಿ ರೋಮಾಂಚನವನ್ನುಂಟುಮಾಡಿ, ಅವರ ರಕ್ತವನ್ನು ಕುದಿಸಿ, ಅವರನ್ನು ಮನ ಬಂದಂತೆ ಕುಣಿಸಿದ ಇಟಲಿಯ ಅಪ್ರತಿಮ ನಾಯಕ ಮುಸೋಲಿನಿಯ ದೇಹ ಒಂದು, ಅವನ ಹೆಂಡತಿಯದು ಇನ್ನೊಂದು.

ಕಮ್ಮಾರ ತಂದೆ, ಉಪಾಧ್ಯಾಯಿನಿ ತಾಯಿ. ಪ್ರಾರಂಭದಲ್ಲಿ ತಾನೂ ಉಪಾಧ್ಯಾಯ. ನಲವತ್ತನೆಯ ವಯಸ್ಸಿಗೆ ದೇಶದ ಸರ್ವಾಧಿಕಾರಿ. ತನ್ನ ದೇಶವನ್ನೂ ಇತರ ದೇಶಗಳನ್ನೂ ರಕ್ತದಲ್ಲಿ ಅದ್ದಿದ ರಣೋನ್ಮತ್ತ. ಅಂಥ ಬಾನಿಟೊ ಮುಸೋಲಿನಿಗೆ ಯುದ್ಧಗಳಿಂದ ಬೇಸತ್ತ ಜನತೆ ವಿಧಿಸಿದ ಶಿಕ್ಷೆ ಆ ಬಗೆಯ ಸಾವು.

1883 ಜುಲೈ 29ರಂದು ಒಂದು ಹಳ್ಳಿಯ ಬಡ ಕುಟುಂಬದಲ್ಲಿ ಬಾನಿಟೊ ಮುಸೋಲಿನಿಯ ಜನನ. ಹೆಚ್ಚು ಓದಲು ಹಣದ ಅಡಚಣೆ ಅಡ್ಡಿ ಬಂದುದ ರಿಂದ ಉನ್ನತ ವಿದ್ಯಾಭ್ಯಾಸದತ್ತ ಗಮನವೀಯದೆ ಮಾಧ್ಯಮಿಕ ಶಿಕ್ಷಣವನ್ನು ಮುಗಿಸಿದೊಡನೆಯೇ ಶಿಕ್ಷಕ ತರಬೇತಿ ಕೇಂದ್ರವನ್ನು ಬಾನಿಟೊ ಸೇರಿದ. ತನ್ನ ಹತ್ತೊಂಬತ್ತನೆಯ ವಯಸ್ಸಿನಲ್ಲಿ ಉಪಾಧ್ಯಾಯನಾದ.

ಮುಸೋಲಿನಿಗೆ ರಾಜಕೀಯ ವಿದ್ಯಾಭ್ಯಾಸವನ್ನು ಕಲಿಸಿದ ಶಾಲೆ ಅವನ ತಂದೆಯ ಕರ್ಮಾಗಾರ. ಸಂಜೆಯ ಹೊತ್ತಿನಲ್ಲಿ ಇಟಲಿಯ ಸಮಾಜವಾದಿ ಮುಖಂಡರು ಮುಸೋಲಿನಿಯ ತಂದೆಯ ಕರ್ಮಾಗಾರದಲ್ಲಿ ಕಲೆತು ದೇಶದ ಆಗುಹೋಗುಗಳ ಬಗೆಗೆ ಚರ್ಚಿಸುತ್ತಿದ್ದರು. ಬಾಲ್ಯದಿಂದಲೂ ಇದನ್ನೆಲ್ಲ ಕೇಳುತ್ತಿದ್ದ ಮುಸೋಲಿನಿಯ ಮನಸ್ಸು ಸಮಾಜವಾದದತ್ತ ಒಲಿಯಿತು. ಇಟಲಿಯ ಕ್ರಾಂತಿಕಾರಿ ಸಮಾಜವಾದಿ ಚಟುವಟಿಕೆಗಳ ನಾಯಕನಾದ; ಪ್ರಮುಖ ಸಮಾಜವಾದೀ ಪತ್ರಿಕೆಗಳ ಸಂಪಾದಕನ ಹೊಣೆಯನ್ನೂ ಹೊತ್ತ.

1914ರಲ್ಲಿ ಪ್ರಥಮ ಮಹಾಯುದ್ಧ ಆರಂಭವಾದಾಗ ಇಟಲಿ ತಟಸ್ಥ ರಾಷ್ಟ್ರವಾಗಿರಬೇಕೆಂದು ಹೇಳಿದ ಸಮಾಜವಾದಿಗಳೊಡನೆ ಭಿನ್ನಾಭಿಪ್ರಾಯ ಹೊಂದಿ, ಅವರಿಂದ ದೂರವಾಗಿ ಸೈನ್ಯ ಸೇರಿದ. ಯುದ್ಧದಲ್ಲಿ ಜರ್ಮನಿ ಭಾಗವಹಿಸಿತು. ಗಾಯಗೊಂಡ ಮುಸೋಲಿನಿ ಸಂಪಾದಕನ ದುಡಿಮೆಗೆ ಹಿಂದಿರುಗಿದ.

ಯುದ್ಧ ಮುಗಿಯಿತು. ಹೊಸದೊಂದು ರಾಜಕೀಯ ಪಕ್ಷವನ್ನು ಮುಸೋಲಿನಿ ಸ್ಥಾಪಿಸಿದ. ಈ ಪಕ್ಷಕ್ಕೆ ಪ್ರಜಾಪ್ರಭುತ್ವದಲ್ಲಿ ನಂಬಿಕೆ ಇರಲಿಲ್ಲ. ಸರ್ವಾಧಿಕಾರವನ್ನು ಇದು ಸಮರ್ಥಿಸುತ್ತಿತ್ತು. ಪ್ರಜೆಗಳಿರುವುದು ದೇಶ ಕ್ಕಾಗಿಯೇ, ಪ್ರಜೆಗಳಿಗೆ ಯಾವ ಹಕ್ಕೂ ಇಲ್ಲ, ನಾಯಕ ಹೇಳಿದಂತೆ ಕೇಳಲು ಮಾತ್ರ ಅವರು ಇರುವುದು ಎಂದು ಈ ಪಕ್ಷದ ವಾದ. ಇದೇ ಫ್ಯಾಸಿಸ್ಟ್ ಪಕ್ಷ. ಪ್ರಾಚೀನ ರೋಮಿನಲ್ಲಿ ಕೋಲುಗಳ ತುಂಡಿನ ಮಧ್ಯೆ ಕೊಡಲಿಯನ್ನು ಇಟ್ಟು ನ್ಯಾಯಾಧೀಶರ ಮುಂದೆ ಹಿಡಿದುಕೊಂಡು ಹೋಗುತ್ತಿದ್ದರು. ಇದು ಅವರ ಅಧಿಕಾರದ ಚಿಹ್ನೆ; ಇದಕ್ಕೆ 'ಫ್ಯಾಸೀಸ್' ಎಂದು ಹೆಸರು. ಇದರಿಂದ 'ಫ್ಯಾಸಿಸ್ಟ್' ಪದ ಬಂದಿದೆ. ಅತ್ಯಲ್ಪ ಕಾಲದಲ್ಲಿಯೇ ಹಲವಾರು ಅನುಯಾಯಿಗಳ ಬೆಂಬಲ ದೊರೆಯಿತು. ಯುದ್ಧಾನಂತರದ ಶಾಂತಿ ಸಂಧಾನಗಳಿಂದ ಇಟಲಿಯ ಜನತೆಗೆ ಬಹಳ ನಿರಾಶೆಯಾಗಿದ್ದಿತು. ಎಲ್ಲೆಲ್ಲಿ ನೋಡಿದರೂ ನಿರುದ್ಯೋಗ. ಬೇಸರ, ಅತೃಪ್ತಿ, ಆತಂಕ ತುಂಬಿ ತುಳುಕು ತ್ತಿದ್ದುವು. ಸರ್ಕಾರ ದುರ್ಬಲವಾಗಿತ್ತು. ದೇಶದಲ್ಲಿ ಲೂಟಿ, ದಂಗೆ ಕ್ರಾಂತಿಗಳು ಆರಂಭವಾದವು. ಅತ್ಯುತ್ತಮ ವಾಗ್ಮಿಯಾಗಿದ್ದ ಮುಸೋ ಲಿನಿಯ ಮಾತಿನ ಮೋಡಿಗೆ ಜನ ಸಂಪೂರ್ಣ ಮರುಳಾದರು. 1922ರ ಅಕ್ಟೋಬರ್ 27 ರಂದು ಇಟಲಿಯ ಸರಕಾರ ರಾಜಿನಾಮೆಯಿತ್ತಿತು. ಮುಸೋಲಿನಿ ತನ್ನ ಫ್ಯಾಸಿಸ್ಟ್ ಪಡೆಗೆ ರೋಮ್ ಪಟ್ಟಣವನ್ನು ಮುತ್ತಲು ಆಜ್ಞಾಪಿಸಿದ. ಇದನ್ನು ಕೇಳಿದೊಡನೆಯೇ ರಾಜನಾಗಿದ್ದ ಮೂರನೆಯ ವಿಕ್ಟರ್ ಇಮಾನ್ಯುಎಲ್ ಬೆದರಿ ಅವನನ್ನು ಪ್ರಧಾನಿಯನ್ನಾಗಿ ಮಾಡಿದ. ಅಂದಿನಿಂದ ಅಧಿಕಾರವೆಲ್ಲ ನಿಜವಾಗಿ ಮುಸೋಲಿನಿಯದಾಯಿತು.

ಅಧಿಕಾರಕ್ಕೆ ಬಂದ ಮುಸೋಲಿನಿ ಸರ್ಕಾರದಲ್ಲಿ ಮುಖ್ಯ ಬದಲಾವಣೆ ಗಳನ್ನು ಜಾರಿಗೆ ತಂದ. ವಿರುದ್ಧ ಪಕ್ಷವನ್ನೆಲ್ಲ ತೊಡೆದು ಹಾಕಿದ. ಸರಕಾರದ ವಿರುದ್ಧ ಯಾರೂ ಉಸಿರೆತ್ತುವಂತಿರಲಿಲ್ಲ.

ಒರಟನಾಗಿದ್ದರೂ ಮುಸೋಲಿನಿ ಇಟಲಿಯ ಅಭಿವೃದ್ಧಿಗಾಗಿ ಬಹಳ ಶ್ರಮಿಸಿದ. ಅದನ್ನು ಆಧುನಿಕ ಬಲಿಷ್ಠ ರಾಷ್ಟ್ರವನ್ನಾಗಿ ಮಾಡಬೇಕೆಂಬುದು ಅವನ ಹೆಬ್ಬಯಕೆ. ವ್ಯವಸಾಯದ ಉತ್ಪನ್ನವನ್ನು ಹೆಚ್ಚಿಸಲು ತಕ್ಕ ಕ್ರಮ



ಮಿತಿಮೀರಿದ ಅಧಿಕಾರ ಲಾಲಸೆಗೆ ಪ್ರತೀಕ—ಮುಸೋಲಿನಿ

ಕೈಗೊಂಡ, ಕೈಗಾರಿಕೋದ್ಯಮದಲ್ಲಿ ಹೊಸ ಹೊಸ ವಿಧಾನಗಳು ಬೆಳಕಿಗೆ ಬಂದುವು. ರೈಲುಗಳಿಗೆಲ್ಲ ವಿದ್ಯುಚ್ಛಕ್ತಿಯನ್ನು ಬಳಸಲಾಯಿತು. ಇಟಲಿಯ ಚರಿತ್ರೆಯಲ್ಲಿ ಪ್ರಥಮ ಬಾರಿಗೆ ರೈಲುಗಳು ವೇಳೆಗೆ ಸರಿಯಾಗಿ ಓಡಾಡಿದ್ದು ಇವನ ಕಾಲದಲ್ಲೇ. ವಿಮಾನಗಳನ್ನು ಬಳಕೆಗೆ ತಂದ. ಆಕಾಶಯಾನಕ್ಕೆ ಜನ ಹೆದರಬಾರದೆಂದು ಸ್ವತಃ ತಾನೇ ವಿಮಾನಗಳಲ್ಲಿ ಪ್ರಯಾಣ ಬೆಳೆಸಿ ಮೇಲ್ಪಂಕ್ತಿ ಹಾಕಿಕೊಟ್ಟ. ನಿರುದ್ಯೋಗ ಸಮಸ್ಯೆಯನ್ನು ನಿವಾರಿಸಲು ಮುಸೋಲಿನಿ ಎಲ್ಲ ಪ್ರಯುತ್ನಗಳನ್ನೂ ಮಾಡಿದ. ಇಟಲಿಯ ಪುರಾತನ ಕಾಲದ ವೈಭವವನ್ನು ತನ್ನ ಜನತೆಯ ನೆನಪಿಗೆ ತಂದು ಕೊಟ್ಟು, ಮತ್ತೆ ಆ ಭವ್ಯತೆಯನ್ನು ಗಳಿಸಲು ಶ್ರಮಿಸಬೇಕೆಂದು ಕರೆ ನೀಡಿದ. ನಿರಕ್ಷರತೆ ದೇಶದ ಅಭಿವೃದ್ಧಿಗೆ ಶತ್ರು ಎಂದು ಅದನ್ನು ತೊಡೆದು ಹಾಕಲೆತ್ನಿಸಿದ. ರಾಷ್ಟ್ರವೇ ದೇವರು, ಸರ್ವಾಧಿಕಾರಿಯೇ ರಾಷ್ಟ್ರ, ದೇವರು; ಅವನು ನುಡಿದಂತೆ ನಡೆದು ಬದುಕಿ ಸಾಯುವುದೇ ಪ್ರತಿ ಪ್ರಜೆಯ ಭಾಗ್ಯ—ಇದು ಅವನ ಪ್ರತಿಪಾದನೆ.

ಸಾಮ್ರಾಜ್ಯ ಕಟ್ಟಬೇಕೆಂಬ ಆಸೆಯಿಂದ ಮುಸೋಲಿನಿ ಯುದ್ಧಗಳಲ್ಲಿ ತೊಡಗಿದ. 1935ರಲ್ಲಿ ಆಫ್ರಿಕದ ಇಥಿಯೋಪಿಯ (ಅಬಿಸೀನಿಯ) ರಾಜ್ಯಕ್ಕೆ ಮುತ್ತಿಗೆ ಹಾಕಿದ. ಈ ಮುತ್ತಿಗೆ ರಾಷ್ಟ್ರ ಸಂಘದ ಧ್ಯೇಯಗಳಿಗೆ ವಿರುದ್ಧವಾದದ್ದು. ಆದರೆ ರಾಷ್ಟ್ರ ಸಂಘ ಏನನ್ನೂ ಮಾಡಲಿಲ್ಲ. ಮುಸೋಲಿನಿಯ ಮಾರ್ಗ ಜರ್ಮನಿಯ ಹಿಟ್ಲರನಿಗೆ ಮೇಲ್ಪಂಕ್ತಿಯಾಯಿತು.

ಪ್ರಪಂಚದ ಎರಡನೆಯ ಮಹಾಯುದ್ಧದಲ್ಲಿ ಮುಸೋಲಿನಿಯದು ಪ್ರಮುಖ ಪಾತ್ರ. ಇಟಲಿ ಹಿಟ್ಲರನ ಪಕ್ಷವನ್ನು ವಹಿಸಿ ಹೋರಾಡಿತು. 1943ರಲ್ಲಿ ಇಟಲಿ ಮಿತ್ರ ರಾಷ್ಟ್ರಗಳ ವಶವಾಯಿತು. ಮುಸೋಲಿನಿ ಪದಚ್ಯುತನಾದ. ಆತನನ್ನು ಸೆರೆಹಿಡಿದರು. ಮಿತ್ರ ರಾಷ್ಟ್ರಗಳೊಡನೆ ವ್ಯವಹಾರ ನಡೆಸಲು ಹೊಸ ಸರಕಾರವೊಂದು ಸ್ಥಾಪಿತವಾಯಿತು. ಮುಸೋಲಿನಿ ಸೆರೆಸಿಕ್ಕರೂ ಜರ್ಮನಿ ಯುದ್ಧ ನಿಲ್ಲಿಸಲಿಲ್ಲ. ಮುಸೋಲಿನಿಯನ್ನು ಸೆರೆಯಿಂದ ಹಾರಿಸಿಕೊಂಡು ಬಂದು ಜರ್ಮನರ ವಶದಲ್ಲಿದ್ದ ಉತ್ತರ ಇಟಲಿಯಲ್ಲಿ ಜರ್ಮನ್ ಪಡೆಗಳ ನಡುವೆ ಬಿಟ್ಟರು. 1945ರ ಏಪ್ರಿಲ್‌ನಲ್ಲಿ ಸ್ವಿಟ್ಜರ್‌ಲೆಂಡಿಗೆ ಪತ್ನಿಯೊಡನೆ ತಲೆ ತಪ್ಪಿಸಿಕೊಂಡು ಹೋಗುವ ಮುಸೋಲಿನಿ ಪ್ರಯತ್ನಿಸಿದಾಗ ಇಟಲಿಯ ಜನರೇ ಅವನನ್ನೂ ಜೊತೆಗಿದ್ದ ಅವನ ಮಡದಿ ಕ್ಲಾರಾ ಪೆಟಾಚಿಯನ್ನೂ ಅವನ ಹಿಂಬಾಲಕರಾದ ಹನ್ನೆರಡು ಜನ ಫ್ಯಾಸಿಸ್ಟರನ್ನೂ ಗುಂಡಿಕ್ಕಿ ಕೊಂದರು.

ಮುಸೋಲಿನಿಯ ಮರಣಾನಂತರ. ಅವನು ಸ್ಥಾಪಿಸಿದ್ದ ಪಂಥವಾದ ಫ್ಯಾಸಿಸಂ ಸಹ ಇಟಲಿಯಿಂದ ಕಣ್ಮರೆಯಾಯಿತು.

ಪ್ರಜಾಪ್ರಭುತ್ವಕ್ಕೆ ಮೃತ್ಯುವಾಗಿ. ಸರ್ವಾಧಿಕಾರವನ್ನು ಸ್ಥಾಪಿಸಿದವನು ಮುಸೋಲಿನಿ. ನ್ಯಾಯಾನ್ಯಾಯಗಳ ಲೆಕ್ಕವೇ ಇಲ್ಲದೆ ತನ್ನನ್ನು ವಿರೋಧಿಸಿದವರನ್ನು ನಿರ್ದಯವಾಗಿ ಬಲಿಕೊಟ್ಟವನು. ತನ್ನ ಸಾಮ್ರಾಜ್ಯದಾಹಕ್ಕೆ ಇಥಿಯೋಪಿಯದಂಥ ರಾಷ್ಟ್ರಗಳನ್ನು ನುಂಗಲೆತ್ನಿಸಿದವನು. ಮಿತಿ ಮೀರಿದ ಅಧಿಕಾರ ಲಾಲಸೆ ಕಡೆಗೆ ತಂದದ್ದು ಅವನ ದೇಶಕ್ಕೆ ಸೋಲನ್ನು, ಅವನಿಗೆ ಅಪಮಾನಕರ ಮರಣವನ್ನು.

ನೋಡಿ: ಆಡಳಿತ ವ್ಯವಸ್ಥೆ; ಇಟಲಿ: ಮಹಾಯುದ್ಧಗಳು; ರಾಜಕೀಯ ಸಿದ್ಧಾಂತ: ಹಿಟ್ಲರ್.

## ಮೂಢನಂಬಿಕೆ

ಬೆಕ್ಕು ಅಡ್ಡ ಬಂದಿತು—ಹೊರಟ ಕೆಲಸ ಆಗುವುದಿಲ್ಲ; ಕುದುರೆಯ ಲಾಳ ಸಿಕ್ಕಿತು—ಅದೃಷ್ಟ. ಇಂಥ ನಂಬಿಕೆಗಳನ್ನು ಹೊಂದಿರುವವರು ವಿರಳವಲ್ಲ.

ಯಾವುದೇ ಭಾವನೆಗೆ ಆಧಾರವೇನು ಎಂದು ವಿಚಾರಮಾಡದೆ ಒಪ್ಪಿಕೊಳ್ಳುವುದು ಮೂಢ ನಂಬಿಕೆ. ಅಸಮರ್ಪಕ ಜ್ಞಾನವೇ ಮೂಢನಂಬಿಕೆಗೆ ತಳಹದಿ.

ಪ್ರಪಂಚದಲ್ಲಿ ಮೂಢನಂಬಿಕೆಗಳಿಲ್ಲದ ದೇಶವೇ ಇಲ್ಲವೆನ್ನಬಹುದು. ಗ್ರಹಣವೆಂದರೆ ರಾಹು ಕೇತುಗಳು ಚಂದ್ರ-ಸೂರ್ಯರನ್ನು ನುಂಗುವರೆಂಬ ನಂಬಿಕೆ ಕೆಲವರಿಗೆ: ಏಣಿಯ ಕೆಳಗೆ ನಡೆಯುವುದು ದುರದೃಷ್ಟಕ್ಕೆ ಕಾರಣವಾಗುತ್ತದೆ ಎನ್ನುವ ನಂಬಿಕೆ ಪಾಶ್ಚಾತ್ಯರಲ್ಲುಂಟು.

ಸಾಂಕ್ರಾಮಿಕವಾಗಿ ಹರಡಿ ಜನ ಸಮೂಹಗಳನ್ನೇ ನಾಶಪಡಿಸುತ್ತಿರುವ ಕಾಲರ, ಪ್ಲೇಗ್ ಇವೆಲ್ಲ ಮಾರಮ್ಮನ ಕಾಟವೆಂದು ಭಾರತದ ಹಳ್ಳಿಗಳಲ್ಲಿ ಭಾವಿಸುವವರುಂಟು. ಬವೇರಿಯದಲ್ಲಿ 'ಜ್ವರ ಭೂತ, ನಾನು ಮನೆಯಲ್ಲಿಲ್ಲ ಹೋಗು' ಎಂದು ಬರೆದು ಯಾರ ಜೇಬಿಗಾದರೂ ಹಾಕುವುದು ಪದ್ಧತಿ.

ವೈರಿಗಳ ಆಕೃತಿಗಳನ್ನು ಮಾಡಿ ಅವುಗಳಿಗೆ ಮೊಳೆಗಳನ್ನು ಹೊಡೆದು ಇಲ್ಲವೆ ಹರಿತವಾದ ಆಯುಧಗಳನ್ನು ಚುಚ್ಚಿ ಅವರಿಗೆ ತೊಂದರೆ ಕೊಡಬಹುದು ಎಂಬ ನಂಬಿಕೆ ಭಾರತದಲ್ಲಷ್ಟೆ ಅಲ್ಲದೆ ಆಫ್ರಿಕ, ಆಸ್ಟ್ರೇಲಿಯ, ಸ್ಕಾಟ್ಲೆಂಡ್‌ಗಳಲ್ಲೂ ಇದೆ.

ಪ್ರಾಣಿಗಳಿಗೆ ಸಂಬಂಧಿಸಿದಂತೆ ಹಲವು ನಂಬಿಕೆಗಳುಂಟು. ಮಧ್ಯರಾತ್ರಿಗೆ ಸ್ವಲ್ಪ ಮೊದಲು ಕೋಳಿ ಕೂಗಿದರೆ ಅದು ಮರಣದ ಸೂಚನೆಯೆಂದು ಗ್ರೀಸಿನ ಮ್ಯಾಸಿಡೋನಿಯದವರ ನಂಬಿಕೆ. ಕೆಲವರ ನಂಬಿಕೆಯ ಪ್ರಕಾರ ನಾಯಿಗಳು ವಿಕಾರವಾಗಿ ಅತ್ತರೆ ಅದು ಅಪಶಕುನ: ಗೂಬೆ ಕೂಗಿದರೆ, ಕಾಗೆ ಮನೆಯೊಳಗೆ ಬಂದರೆ, ಕೇಡು.

ಅಂಕಿಗಳ ವಿಷಯದಲ್ಲಿಯೂ ನಂಬಿಕೆಗಳುಂಟು. ಒಂದು ದೇಶದಲ್ಲಿ 13 ಶುಭದ ಸಂಕೇತವಾದರೆ, ಇನ್ನೊಂದರಲ್ಲಿ ಅಶುಭದ ಸಂಕೇತ.

ಹಲವು ದೇಶಗಳಲ್ಲಿ ಒಂದೇ ಬಗೆಯ ನಂಬಿಕೆಗಳಿರುವುದು ಕುತೂಹಲಕರ. ಕನ್ನಡಿ ಒಡೆದರೆ ಅಶುಭವೆಂದು ಹಿಂದೂಗಳ ನಂಬಿಕೆ. ಪ್ರಾಚೀನ ರೋಮ್‌ನಲ್ಲಿ ಇದೇ ನಂಬಿಕೆ ಇದ್ದಿತು. ಧೂಮಕೇತು ಕಾಣಿಸಿಕೊಳ್ಳುವುದು ರಾಜರ ಅಥವಾ ಮಹಾವ್ಯಕ್ತಿಗಳ ಮರಣಕ್ಕೆ ಸೂಚಕ ಎಂದು ಪ್ರಾಚೀನ ಗ್ರೀಸಿನಲ್ಲಿ ನಂಬಿಕೆ ಇತ್ತು. ಈ ನಂಬಿಕೆ ಭಾರತದಲ್ಲಿಯೂ ಇದೆ.

ಸೀನಿದಾಗ, 'ದೇವರೆ ಒಳ್ಳೆಯದನ್ನು ಮಾಡು' ಎಂದು ಹೇಳುವ ಅಭ್ಯಾಸ ಭಾರತ, ಜರ್ಮನಿ, ಇಟಲಿಗಳಲ್ಲಿದೆ. ದೂರಪ್ರಾಚ್ಯದಲ್ಲಿ ಸೀನಿದಾಗ ಸೀನಿದವನ ಕಡೆ ನೋಡಿ ಅವನಿಗೆ ತಲೆಬಾಗುವ ಪದ್ಧತಿ ಇದೆ. ಮನುಷ್ಯನ ಪ್ರಾಣ ಗಾಳಿ ರೂಪದಲ್ಲಿರುತ್ತದೆಂದೂ ಸೀನಿದಾಗ ಅದು ಗಾಳಿಯಾಗಿ ಹೊರಗೆ ಹೊರಟುಹೋಗಬಹುದೆಂದೂ ನಂಬಿಕೆ; ಹಾಗಾಗದಿರಲೆಂದು ದೇವರಲ್ಲಿ ಮೊರೆ.

ಸ್ವಪ್ನಗಳ ವಿಷಯದಲ್ಲಿ ಹಲವು ನಂಬಿಕೆಗಳಿವೆ. ಸ್ವಪ್ನದಲ್ಲಿ ಎಮ್ಮೆಯನ್ನು ಕಂಡರೆ ಅದು ಮರಣ ಸೂಚಕ; ಶುದ್ಧವಾದ ನೀರನ್ನು ನೋಡಿದರೆ ದೀರ್ಘಾಯುಸ್ಸು ಎನ್ನುತ್ತಾರೆ.

ಪ್ರಾಚೀನ ಕಾಲದಲ್ಲಿ ಮಾನವ ನಿಸರ್ಗದ ಮಹಾಶಕ್ತಿಗಳಿಗೆ ಹೆದರುತ್ತಿದ್ದ. ಅವನಿಗಿದ್ದ ಹೆದರಿಕೆ ಅನೇಕ ವೇಳೆ ಮೂಢನಂಬಿಕೆಯಾಗುತ್ತಿತ್ತು. ಅನೇಕ ಮಾರಕ ಕಾಯಿಲೆಗಳಿಗೆ ಸಾಧಾರಣ ಕಣ್ಣಿಗೆ ಕಾಣದಂಥ ಕ್ರಿಮಿಗಳು ಕಾರಣವೆಂದು ವಿಜ್ಞಾನ ತಿಳಿಸುವವರೆಗೂ ಕೋಪಿಸಿಕೊಂಡ ದುಷ್ಟ ಶಕ್ತಿಯೇ ಕಾಯಿಲೆಗಳಿಗೆ ಕಾರಣ ಎಂದು ಆತ ನಂಬಿದ್ದ. ಆ ಶಕ್ತಿಯನ್ನು ಒಲಿಸಿಕೊಳ್ಳುವುದಕ್ಕೆ ವಿಶೇಷ ಪೂಜೆಗಳನ್ನು ಮಾನವ ಸಲ್ಲಿಸುತ್ತಿದ್ದ. ಯಂತ್ರ ತಾಯಿತಗಳನ್ನು ಧರಿಸುತ್ತಿದ್ದ.

ಮೊದಮೊದಲು ಯಾವುದಾದರೊಂದು ವಿಧಿ ಒಂದು ಕಾರಣಕ್ಕಾಗಿ ಆಚರಣೆಗೆ ಬಂದರೂ ಅನಂತರ ಅದರ ಕಾರಣ ಮರೆತುಹೋಗಿ ಅದು ಮೂಢನಂಬಿಕೆಯಾಗುತ್ತದೆ. ಹಿಂದೂಗಳಲ್ಲಿ ಮೊದಲಿಗೆ 'ಮಡಿ' ಆರೋಗ್ಯಕ್ಕೆ ಸಾಧನವಾಗಿದ್ದರೂ ಅದು ಇಂದು ಹಲವು ಬಾರಿ ಮೂಢನಂಬಿಕೆಯಾಗಿದೆ.

ಮೂಢನಂಬಿಕೆಗಳಿಂದ ಅನೇಕ ದುಷ್ಪರಿಣಾಮಗಳಾಗುತ್ತವೆ. ಭೀತಿ ಬೆಳೆದು ವಿಚಾರಶಕ್ತಿ ಕಡಮೆಯಾಗುತ್ತದೆ. ಮಂತ್ರವಾದಿಗಳು, ಜ್ಯೋತಿಷ್ಕರು ಮೊದಲಾದವರು ಮೋಸದಿಂದ ಜನರನ್ನು ಸುಲಿಗೆ ಮಾಡುವುದು ಹೆಚ್ಚುತ್ತದೆ. ಬಲಿ, ನರಬಲಿ ಕೂಡ ಆಗುತ್ತದೆ. ಯೂರೋಪಿನಲ್ಲಿ ಮಧ್ಯಯುಗದಲ್ಲಿ ಮಂತ್ರವಾದಿಗಳು, ಮಾಟಗಾತಿಯರು ಎಂದು ಎಷ್ಟೋ ಮಂದಿಯನ್ನು ನೀರಿನಲ್ಲಿ ಮುಳುಗಿಸಿ ಇಲ್ಲವೆ ಸುಟ್ಟು ಕೊಂದ ನಿದರ್ಶನಗಳುಂಟು. ಕ್ಯಾಕ್ಸ್‌ಟನ್ ಎಂಬುವನು ಅಚ್ಚುಕೂಟ ಸ್ಥಾಪಿಸಿದಾಗ, ಅವನಿಗೆ ದೆವ್ವದ ಸಹಾಯವಿದೆ ಎಂದು ಅಚ್ಚುಕೂಟವನ್ನು ಜನ ಸುಟ್ಟರು. ಮೂಢನಂಬಿಕೆ ಜ್ಞಾನದ ಬೆಳವಣಿಗೆಗೆ ಎಷ್ಟೋ ಬಾರಿ ಅಡ್ಡಿಯಾಗಿದೆ. ಕಾಯಿಲೆಗಳಿಗೆ ಸರಿಯಾದ ಚಿಕಿತ್ಸೆ ಮಾಡಿಸದೆ ರೋಗ ಉಲ್ಬಣಿಸಿ ರೋಗಿ ಕಾಲವಾಗುವ ಪರಿಸ್ಥಿತಿ ಬಂದರೂ ಬರಬಹುದು. ಭಾರತದಲ್ಲಿಯೂ ಪಾಶ್ಚಾತ್ಯ ದೇಶಗಳಲ್ಲಿಯೂ ಹುಚ್ಚಿಗೆ ದೆವ್ವಗಳ ಕಾಟ ಕಾರಣವೆಂಬ ನಂಬಿಕೆಯಿಂದ ಹುಚ್ಚರಿಗೆ ಚಿತ್ರಹಿಂಸೆ ಮಾಡುತ್ತಿದ್ದರು; ಅವರಿಗೆ ಚಿಕಿತ್ಸೆಯೇ ದೊರೆಯದೆ ಹೋಗುತ್ತಿತ್ತು.

ಮೂಢನಂಬಿಕೆಗಳನ್ನು ವಿಚಾರದಿಂದ, ವೈಜ್ಞಾನಿಕ ದೃಷ್ಟಿಯಿಂದ ವಿವೇಚಿಸಿ ತೊಡೆದು ಹಾಕುವುದು ಅಗತ್ಯ.

## ಮೂಲಭೂತ ಹಕ್ಕುಗಳು

ಹೊರಗಿನ ಆಕ್ರಮಣದ ವಿರುದ್ಧ ರಕ್ಷಣೆ, ಉತ್ತಮ ಆಡಳಿತ ವ್ಯವಸ್ಥೆ ಇವೆರಡನ್ನೂ ಸರಕಾರ ಒದಗಿಸಿದ ಮಾತ್ರಕ್ಕೆ ಜನರು ಜೀವನದಲ್ಲಿ ಪರಿಪೂರ್ಣರಾಗುವುದಿಲ್ಲ. ಪ್ರತಿಯೊಬ್ಬ ನಾಗರಿಕ ಮನುಷ್ಯನಿಗೂ ಗಾಳಿ, ಆಹಾರ, ವಸತಿಗಳಷ್ಟೇ ಅಗತ್ಯವಾದ ಕೆಲವು ಹಕ್ಕುಗಳುಂಟು. ಇವಿಲ್ಲದೆ ಅವನು ಪ್ರಜಾಪ್ರಭುತ್ವದ ಪ್ರಜೆ ಎನಿಸಿಕೊಳ್ಳಲಾರ. ಇವನ್ನು ಮೂಲಭೂತ ಹಕ್ಕುಗಳು ಎನ್ನುತ್ತಾರೆ.

ಅಭಿಪ್ರಾಯವನ್ನು ಬರಹದಲ್ಲಿ ಅಥವಾ ಮಾತಿನಲ್ಲಿ ವ್ಯಕ್ತಪಡಿಸುವ ಸ್ವಾತಂತ್ರ್ಯ, ಅಭಿಪ್ರಾಯಗಳನ್ನೂ ಸುದ್ದಿಗಳನ್ನೂ ಪ್ರಕಟಿಸುವ ಪತ್ರಿಕಾ ಸ್ವಾತಂತ್ರ್ಯ, ಸಭೆ ಸಮಾರಂಭಗಳನ್ನು ನಡೆಸುವ ಸ್ವಾತಂತ್ರ್ಯ, ಆರೋಪ ಬಂದಾಗ ನಿಷ್ಪಕ್ಷಪಾತವಾಗಿ ವಿಚಾರಣೆ ನಡೆಯುವುದು ಎಂಬ ಕಾನೂನಿನ ರಕ್ಷಣೆಯ ಸ್ವಾತಂತ್ರ್ಯ, ಒಪ್ಪಿಗೆಯಾದ ಮತವನ್ನು ಅವಲಂಬಿಸಿ ಆಚರಿಸುವ ಆರಾಧನಾ ಸ್ವಾತಂತ್ರ್ಯ, ಇವು ಮೂಲಭೂತ ಹಕ್ಕುಗಳಲ್ಲಿ ಕೆಲವು. 19 ಮತ್ತು 20 ನೆಯ ಶತಮಾನಗಳಲ್ಲಿ ರಚಿತವಾದ ಬಹುತೇಕ ಸಂವಿಧಾನಗಳು ಮೂಲಭೂತ ಹಕ್ಕುಗಳ ಘೋಷಣೆಗಳನ್ನು ಒಳಗೊಂಡಿವೆ. ಹುಟ್ಟಿನಿಂದ ಎಲ್ಲರೂ ಸಮಾನರು, ಮನುಷ್ಯ-ಮನುಷ್ಯರ ನಡವೆ ತಾರತಮ್ಯ ವಿರಬಾರದು ಎಂದು ಸಾರುವ ಮಾನವ ಹಕ್ಕುಗಳ ಘೋಷಣೆಗಳನ್ನು ವಿಶ್ವಸಂಸ್ಥೆ 1948 ರಲ್ಲಿ ಮಾಡಿತು. ಈ ಮಾನವ ಹಕ್ಕುಗಳ ಘೋಷಣೆ ಎಲ್ಲ ದೇಶಗಳಲ್ಲಿ ಎಲ್ಲ ಜನರಿಗೆ ದೊರೆಯಬೇಕಾದ ಮೂಲಭೂತ ಹಕ್ಕುಗಳನ್ನು ಸಾರುತ್ತದೆ.

ಇಂಗ್ಲೆಂಡಿನಲ್ಲಿ ' ಹಕ್ಕುಗಳ ಪತ್ರ ' ಎನ್ನುವ ಹೆಸರನ್ನು ಬಳಸದಿದ್ದರೂ ಮೊದಲ ಹಕ್ಕುಗಳ ಪತ್ರ ' ಮ್ಯಾಗ್ನ ಕಾರ್ಟ ' (1215). ಅದರ ಫಲವಾಗಿ ರಾಜನ ಅಧಿಕಾರ ಮಿತಿಗೊಂಡಿತು.

1869ರಲ್ಲಿ ಜಾರಿಗೆ ಬಂದ ಶಾಸನದಲ್ಲಿ 'ಹಕ್ಕುಗಳ ಪತ್ರ' ಎನ್ನುವ ಹೆಸರನ್ನು ಮೊದಲು ಬಳಸಿದರು. ರಾಜನಿಗಿದ್ದ ಅಧಿಕಾರ ವ್ಯಾಪ್ತಿಯನ್ನು ಮೊಟಕುಗೊಳಿಸಿ ಸಂಸತ್ತಿನ ಪರಮಾಧಿಕಾರ ಎತ್ತಿ ಹಿಡಿದ ಆ ಹಕ್ಕುಗಳ ಪತ್ರ ಜನರಿಗೆ ಕಾನೂನಿನ ಮೂಲಕ ನ್ಯಾಯ ದೊರಕಿಸಿಕೊಳ್ಳಲು ಹಕ್ಕನ್ನೂ ಯಾವ ನಿರ್ಬಂಧವೂ ಇಲ್ಲದೆ ಚುನಾವಣೆಗಳ ಭರವಸೆಯನ್ನೂ ನೀಡಿತು.

1789ರಲ್ಲಿ ಅಮೆರಿಕದ ಸಂಯುಕ್ತ ಸಂಸ್ಥಾನ ಮೂಲಭೂತ ಹಕ್ಕುಗಳ ಘೋಷಣೆಯನ್ನು ಒಳಗೊಂಡಿರುವಂತೆ ತನ್ನ ಸಂವಿಧಾನವನ್ನು ತಿದ್ದುಪಡಿ ಮಾಡಿತು. ಇದರ ಮೊದಲನೆಯ ತಿದ್ದುಪಡಿ ಪ್ರಜೆಗಳಿಗೆ ಮತ, ಅಭಿಪ್ರಾಯ ನಿರೂಪಣೆ, ಪತ್ರಿಕೆಗಳು, ಸಭೆಗಳು ಮತ್ತು ತಿದ್ದುಪಾಟುಗಳ ವಿಷಯಗಳಲ್ಲಿ ಸ್ವಾತಂತ್ರ್ಯ ನೀಡಿತು.

1789ರಲ್ಲಿ ಫ್ರಾನ್ಸಿನ ಮಹಾಕ್ರಾಂತಿಯಲ್ಲಿ 'ಸ್ವಾತಂತ್ರ್ಯ, ಸಮಾನತೆ, ಸಹೋದರತ್ವ' ಇವು ಆದರ್ಶಗಳಾಗಿದ್ದುವು. ಮುಂದೆ ಇವು ಫ್ರಾನ್ಸಿನ ಗಣರಾಜ್ಯ ಸಂವಿಧಾನದ ಒಂದು ಭಾಗವಾದುವು.

ಹಕ್ಕುಗಳ ಪತ್ರ ಮಾನವೀಯ ಧೋರಣೆಯ ಪ್ರತಿರೂಪ. ಅದರ ಆಚರಣೆ ಪವಿತ್ರ ಕರ್ತವ್ಯ.

ಭಾರತದ ಸಂವಿಧಾನದಲ್ಲಿ ಮೂಲಭೂತ ಹಕ್ಕುಗಳನ್ನು ಭಾರತೀಯರಿಗೆ ಕೊಡಲಾಗಿದೆ. ಈ ಹಕ್ಕುಗಳನ್ನು ಆರು ವರ್ಗಗಳಾಗಿ ವಿಂಗಡಿಸಿದ್ದಾರೆ.

1. ಸರ್ವಸಮಾನತೆಯನ್ನು ಸ್ಥಾಪಿಸುವ ಹಕ್ಕುಗಳು.
2. ವ್ಯಕ್ತಿ ಸ್ವಾತಂತ್ರ್ಯವನ್ನು ಸುರಕ್ಷಿತಗೊಳಿಸುವ ಹಕ್ಕುಗಳು.

3. ಧಾರ್ಮಿಕ ಸ್ವಾತಂತ್ರ್ಯವನ್ನು ಕಾಯುವ ಹಕ್ಕುಗಳು.
4. ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ಹಕ್ಕುಗಳು.
5. ಆಸ್ತಿಯನ್ನು ಅನುಭವಿಸುವ ಹಕ್ಕು.
6. ಸಂವಿಧಾನಕ್ಕೆ ಅನುಗುಣವಾಗಿ ಪರಿಹಾರ ಪಡೆಯುವ ಹಕ್ಕು.

ವ್ಯಕ್ತಿಯೇ ಆಗಲಿ ಸರಕಾರವೇ ಆಗಲಿ ಹಕ್ಕನ್ನು ಉಲ್ಲಂಘಿಸಿದಾಗ ನ್ಯಾಯಾಲಯಗಳಲ್ಲಿ ' ರಿಟ್ ' ಅರ್ಜಿ ಹಾಕಿದರೆ ಪರಿಹಾರ ದೊರೆಯುತ್ತದೆ.

ನೋಡಿ : ರಿಟ್ ; ಹೇಬಿಯಸ್ ಕಾರ್ಪಸ್

## ಮೂಲ ಶಿಕ್ಷಣ

ಮಾನವನ ಮೂಲ ಅವಶ್ಯತೆಗಳಾದ ಅನ್ನ, ಬಟ್ಟೆ, ವಸತಿ. ಸಾಮಾಜಿಕ, ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ಜೀವನ ಇವುಗಳನ್ನು ಆಧರಿಸಿ ರೂಪಿತವಾದ ಶಿಕ್ಷಣ ಕ್ರಮಕ್ಕೆ ಮೂಲ ಶಿಕ್ಷಣ ಎಂದು ಹೆಸರು. ನಿತ್ಯ ಜೀವನಕ್ಕೆ ಮೂಲವಾಗಿ ಬೇಕಾಗಿರುವ ದೈಹಿಕಶಕ್ತಿ, ಆರೋಗ್ಯ, ಬೌದ್ಧಿಕ ಬೆಳವಣಿಗೆ, ಭಾವನಾತ್ಮಕ ಮತ್ತು ಆಧ್ಯಾತ್ಮಿಕ ವಿಕಸನ ಇವುಗಳು ಸಾಂಘಿಕ ಜೀವನದ ಹಿನ್ನೆಲೆಯಲ್ಲಿ ಮೂಡಿಬರಬೇಕು. ಸಮಾಜ ಜೀವನದಲ್ಲಿ ನೈಪುಣ್ಯವನ್ನು ಸಾಧಿಸಲು, ಸಾಮಾಜಿಕ ಮನೋಭಾವನೆಗಳನ್ನು ಬೆಳೆಸಿಕೊಳ್ಳಲು, ಪ್ರೀತಿ, ವಿಶ್ವಾಸ, ಭ್ರಾತೃಭಾವನೆ, ಸ್ನೇಹಪರತೆ, ಸಹಕಾರ ಇತ್ಯಾದಿ ಗುಣಶೀಲಗಳನ್ನು ಹೆಚ್ಚಿಸಿಕೊಳ್ಳಲು ಅವಕಾಶಗಳಿರಬೇಕು. ದೈಹಿಕ ಬೌದ್ಧಿಕ ಶಕ್ತಿಗಳನ್ನು ವೃದ್ಧಿಪಡಿಸಿಕೊಂಡು ಆರ್ಥಿಕ ಸ್ವಾವಲಂಬನೆಯನ್ನು ಪಡೆಯುವಂತೆ ಯಾವುದಾದರೊಂದು ಸಮಾಜಕ್ಕೆ ಹಿತವಾದ ವೃತ್ತಿಯಲ್ಲಿ ನಿರತನಾಗಿ, ತನ್ನ ಕುಟುಂಬವನ್ನು ಲಾಲಿಸಿ, ಪಾಲಿಸಿ, ನೆರೆಹೊರೆಯವರಿಗೆ ಬೆಂಬಲಿಗನಾಗಿ, ಉತ್ತಮ ಪೌರನಾಗಿ, ರಾಷ್ಟ್ರಪ್ರೇಮಿಯಾಗಿ, ಅಂತರರಾಷ್ಟ್ರೀಯ ಮನೋಭಾವನೆಗಳನ್ನು ಹೊಂದಿರುವವನಾಗಿ ಮಗುವಿನ ವ್ಯಕ್ತಿತ್ವ ಅರಳಬೇಕು. ಇಂಥ ಹಸನಾದ ಸಾಂಸ್ಕೃತಿಕ ಜೀವನದ ಮೂಲ ಅವಶ್ಯತೆಗಳನ್ನು ಆಧರಿಸಿ ರೂಪಿಸಿದ ಶಿಕ್ಷಣ ಕ್ರಮವೇ ಮೂಲ ಶಿಕ್ಷಣ ಕ್ರಮ.

ಮೇಲೆ ನಿರೂಪಿಸಿದ ಸಮಗ್ರವೂ ಮೂಲಭೂತವೂ ಆದ ಶಿಕ್ಷಣ ಸಾಧನ ಕ್ರಮವನ್ನು ರೂಪಿಸಲು ಹಲವು ಶಿಕ್ಷಣ ತಜ್ಞರು ತಮ್ಮ ಕೊಡುಗೆಗಳನ್ನು ಕೊಟ್ಟಿರುವರು. ರೂಸೋ ಎಂಬ ಫ್ರಾನ್ಸ್ ದೇಶದ ತತ್ವಜ್ಞ 'ಅಕ್ಷರ ವಿದ್ಯೆ ಕೇಂದ್ರಿತ' ವಾಗಿದ್ದ ಶಿಕ್ಷಣ ಪದ್ಧತಿಯನ್ನು 'ಮಗು ಕೇಂದ್ರಿತ' ವಾಗಿರಬೇಕೆಂದು ಪ್ರತಿಪಾದಿಸಿದ. ಮಗುವಿನಲ್ಲಿ ಸ್ವಾಭಾವಿಕವಾಗಿ ಹುದುಗಿರುವ ಆಸಕ್ತಿಗಳು, ಅಭಿರುಚಿಗಳು, ಕುತೂಹಲಗಳನ್ನನುಸರಿಸಿ ಸ್ವತಂತ್ರ ವಾತಾವರಣದಲ್ಲಿ ಶಿಕ್ಷಣ ಮುಂದೆ ಸಾಗಬೇಕೆಂಬ ಮೂಲ ಸೂತ್ರವನ್ನು ವಿವರಿಸಿದ. ಉತ್ತಮತರ ವ್ಯಕ್ತಿಗಳಿಂದ ಉತ್ತಮತರ ಸಮಾಜ ನಿರ್ಮಾಣವಾಗುವುದೆಂದೂ ಪ್ರಚಲಿತ ಸಾಮಾಜಿಕ ವಾತಾವರಣ ಕಲುಷಿತವಾಗಿರುವುದರಿಂದ ಅದನ್ನು ಬಿಡಬೇಕೆಂದೂ ಅವನ ಅಪೇಕ್ಷೆ ; ಮಕ್ಕಳು ತಮ್ಮದೇ ಆದ ಮೂಲ ಅವಶ್ಯತೆಗಳನ್ನು ಹೊಂದಿ, ಸ್ವಾಭಾವಿಕ ಬೆಳವಣಿಗೆಗೆ ಅನುಗುಣವಾದ ತಮ್ಮದೇ ಆದ ವ್ಯಕ್ತಿತ್ವ ಹೊಂದಿರುತ್ತಾರೆ; ಆದ್ದರಿಂದ ವಯಸ್ಕರ ಆಸೆ, ಆಕಾಂಕ್ಷೆಗಳನ್ನು ಮಕ್ಕಳ ಮೇಲೆ ಹೇರಬಾರದು, ಉತ್ತಮವಾದ ನಿರ್ಮಲವಾದ ಸ್ವತಂತ್ರ ವಾತಾವರಣದಲ್ಲಿ ಸ್ವಾಭಾವಿಕವಾಗಿ ಮಕ್ಕಳಲ್ಲಿ ಹುದುಗಿರುವ ಗುಣಲಕ್ಷಣಗಳು ವಿಕಸಿಸುವಂತೆ ಮಾಡಬೇಕು ಎಂದು ವಿವರಿಸಿದ.

ಪೆಸ್ಟಲೊಟ್ಸೀ ಎಂಬ ಸ್ವಿಟ್ಜರ್‌ಲೆಂಡಿನ ಶಿಕ್ಷಣ ತಜ್ಞ ರೂಸೋವಿನಿಂದ ಸ್ಫೂರ್ತಿ ಪಡೆದು ಮಕ್ಕಳ ಸ್ವಾಭಾವಿಕ ಗುಣ ಲಕ್ಷಣಗಳಿಗನುಗುಣವಾಗಿ ಒಂದು ಮಾದರಿ ಶಾಲೆಯನ್ನು ಆರಂಭಿಸಿ, ಹಲವು ಶೈಕ್ಷಣಿಕ ತತ್ತ್ವಗಳನ್ನು ಪ್ರಯೋಗ ಮಾಡಿದ. ಮಕ್ಕಳು ಕಣ್ಣು, ಕಿವಿ, ಕೈ ಮೊದಲಾದ ಇಂದ್ರಿಯಗಳನ್ನೇ ಬಳಸಿ ವಿಷಯಗಳನ್ನು ತಾವೇ ತಿಳಿದುಕೊಳ್ಳಬೇಕು ಎಂದು ಇವನ ವಾದ. ಎಂದರೆ, ಒಂದು ಗಿಡದ ವಿಷಯ ಕಲಿಯುವಾಗ ತರಗತಿಯಲ್ಲಿ ಉಪಾಧ್ಯಾಯರು ಹೇಳುವುದನ್ನು ಕೇಳುತ್ತ ಕೂಡದೆ, ಗಿಡವನ್ನು ನೋಡಬೇಕು, ಮುಟ್ಟಬೇಕು. ಇದರಂತೆ ಶಾಲೆಯಲ್ಲಿ ದೇಹದ ಚಟುವಟಿಕೆಗಳು ಮತ್ತು ವಸ್ತುಗಳ ಮೂಲಕ ಇಂದ್ರಿಯದ ಅನುಭವಗಳನ್ನು ಪಡೆಯುವಂತೆ ಮಾಡಿದ.

ಇವನ ಸಂಪರ್ಕದಿಂದ ಉತ್ತೇಜಿತನಾದ ಫ್ರೊಬೆಲ್ ಎಂಬವನು 'ಮಕ್ಕಳ ತೋಟ' (ಕಿಂಡರ್ ಗಾರ್ಟನ್) ಎಂಬ ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಿದ. ಸಸಿಯನ್ನು ಉತ್ತಮವಾಗಿ ಬೆಳೆಸಿದರೆ, ಒಳ್ಳೆಯ ಗಿಡವಾಗಿ, ಮರವಾಗಿ, ಹೂವು ಕಾಯಾಗಿ, ಫಲಕೊಡುತ್ತದೆ; ಹಾಗೆಯೇ ಚಿಕ್ಕ ಮಕ್ಕಳ ಶಿಕ್ಷಣ–ಎಂದು ವಿವರಿಸಿದ. ಆಧುನಿಕ ಶಿಕ್ಷಣ ದರ್ಶನಕ್ಕೆ ಮತ್ತು ಸಂವಿಧಾನಗಳಿಗೆ ಫ್ರೊಬೆಲ್ಲನ ಕೊಡುಗೆ ಅಡಿಗಲ್ಲು.

ಜಾನ್ ಡ್ಯೂಯಿ ಎಂಬ ಅಮೆರಿಕದ ದಾರ್ಶನಿಕ, ಆಧುನಿಕ ಶಿಕ್ಷಣ ದರ್ಶನ ಮತ್ತು ಅಭ್ಯಾಸಗಳಿಗೆ ತನ್ನದೇ ಆದ ರೂಪ ಕೊಟ್ಟ. ವ್ಯಕ್ತಿಗೂ ಸಮಾಜಕ್ಕೂ ಇರುವ ನಿಕಟವಾದ, ಮೂಲಭೂತವಾದ ಪರಸ್ಪರ ಅವಲಂಬನೆಯ ಸಂಬಂಧವನ್ನು ಒತ್ತಿಹೇಳಿದ. ವ್ಯಕ್ತಿ ಶಿಕ್ಷಣದಲ್ಲಿ ಸಾಮಾಜಿಕ ಜನತೆಯ ಗುರಿಯನ್ನು ಪ್ರತಿಪಾದಿಸಿದ. ಶಿಕ್ಷಣ, ಮಗುವಿನ ಮನೋವಿಜ್ಞಾನವನ್ನು ಅನುಸರಿಸಿ ಆರಂಭವಾಗಬೇಕೆಂದು ತಿಳಿಸಿದ. ಆದರ್ಶ ಶಾಲೆ ಆದರ್ಶ ಮನೆಯಂತಿರಬೇಕೆಂದೂ ಸಹಜವಾದ ಸಾಮಾಜಿಕ ಜೀವನಕ್ಕೆ ಶಾಲಾ ಜೀವನ ಸಂಬಂಧಿಸಿರಬೇಕೆಂದೂ ವಿವರಿಸಿದ. ಶಾಲೆಯಲ್ಲಿ ನಿರ್ಮಲವಾದ, ಸರಳವಾದ ಮತ್ತು ಸಮತೋಲನದಿಂದ ಕೂಡಿದ ವಾತಾವರಣ ನಿರ್ಮಿತವಾಗಿ ವ್ಯಕ್ತಿಗಳ ಬೆಳವಣಿಗೆಗೆ ಪೂರ್ಣ ಸಹಕಾರಿಯಾಗಿರಬೇಕು ; ಶಿಕ್ಷಣದಲ್ಲಿ ತಾತ್ತ್ವಿಕ ಮತ್ತು ಪ್ರಾಯೋಗಿಕ ಮನೋಭಾವಗಳನ್ನು ಸಮತೋಲನವಾಗಿಟ್ಟುಕೊಂಡು, ಕಾರ್ಯ ಮತ್ತು ಆಲೋಚನೆಗಳೆರಡೂ ಸಮ್ಮಿಲನದಿಂದ ಸಾಗಬೇಕು–ಎಂದು ವಿವರಿಸಿದ. ಚಟುವಟಿಕೆಯಿಂದ ನೇರವಾದ ಅನುಭವ ಪಡೆದು ಜ್ಞಾನ ಗಳಿಸುವಂಥ ಶಾಲಾವಾತಾವರಣವನ್ನು ನಿರ್ಮಾಣ ಮಾಡಲು ಪ್ರಾಯೋಗಿಕ ಶಾಲೆಯನ್ನು ಏರ್ಪಡಿಸಿದ. ಒಂದು ಉದ್ದೇಶವಿರುವ ಚಟುವಟಿಕೆಯ ಮೂಲಕ ಜ್ಞಾನವನ್ನು ಪಡೆಯಬೇಕು, ಚಟುವಟಿಕೆಯಿಂದ ಜ್ಞಾನವನ್ನು ಹೆಚ್ಚಿಸಿಕೊಳ್ಳುತ್ತ ಹೋಗಬಹುದು ಎಂಬುದನ್ನು ತನ್ನ ಶಾಲೆಯಲ್ಲಿ ತೋರಿಸಿಕೊಟ್ಟ. ಕಾರ್ಯಕ್ಕೂ ಜ್ಞಾನಕ್ಕೂ ಇರುವ ಮೂಲಭೂತವಾದ ಸಂಬಂಧವನ್ನು ಡ್ಯೂಯಿ ವಿವರಿಸಿದ.

ಸುಮಧುರ ಮಾನವ ಜೀವನಕ್ಕೆ ಮೂಲಾಧಾರವಾದ ಪ್ರೀತಿ, ವಿಶ್ವಾಸ ಮತ್ತು ಭ್ರಾತೃತ್ವಗಳ ತಳಹದಿಯ ಮೇಲೆ ರವೀಂದ್ರನಾಥ ಠಾಕೂರರು ತಮ್ಮ ಶಿಕ್ಷಣ ಸಂಸ್ಥೆಗಳಾದ ಶಾಂತಿ ನಿಕೇತನ ಮತ್ತು ವಿಶ್ವಭಾರತಿ ವಿದ್ಯಾಲಯಗಳನ್ನು ಆರಂಭಿಸಿ, ಪ್ರಾಯೋಗಿಕವಾಗಿ ಅನೇಕ ಮೂಲ ಶಿಕ್ಷಣ ತತ್ತ್ವಗಳನ್ನು ಪ್ರತಿಪಾದಿಸಿದರು. ಇವರ ಸಾಧನೆಯೇ ಒಂದು ಮೇಲ್ಪಂಕ್ತಿ. ಪ್ರಪಂಚದ ಮನುಷ್ಯರೆಲ್ಲ ಅಣ್ಣ ತಮ್ಮಂದಿರಂತೆ ಬಾಳಬೇಕು. ಜೀವನವು ಕಲೆಯಂತೆ ಸುಂದರವಾಗಿರಬೇಕು ಎಂಬುದೇ ಅವರ ಸಂದೇಶ.

ಮಹಾತ್ಮ ಗಾಂಧಿಯವರು ಇತರ ಎಲ್ಲರಿಗಿಂತ ಒಂದು ಹೆಜ್ಜೆ ಮುಂದೆ ಹೋಗಿ ಮೂಲಶಿಕ್ಷಣ ಅಥವಾ ಜೀವನ ಶಿಕ್ಷಣದ ರೂಪರೇಷೆಗಳನ್ನು ತಮ್ಮ ಅನುಭವದಿಂದಲೇ ವಿವರಿಸಿದರು. ಶಿಕ್ಷಣ ಮಗುಕೇಂದ್ರಿತವಾಗಿ

ಮಗುವಿನ ಬೆಳವಣಿಗೆಗೆ ಅನುವು ಮಾಡಿಕೊಡಬೇಕು. ಶಿಕ್ಷಣ ಮನೋವಿಜ್ಞಾನದ ಮತ್ತು ಸಾಮಾಜಿಕ ಶಾಸ್ತ್ರದ ಮೂಲಾಂಶಗಳನ್ನು ಆಧರಿಸಿ ಮಕ್ಕಳ ಸರ್ವತೋಮುಖ ಬೆಳವಣಿಗೆಗೆ ಅವಕಾಶ ಮಾಡಿಕೊಡಬೇಕು. ಮಗುವಿನ ವ್ಯಕ್ತಿತ್ವ ಎಲ್ಲ ರೀತಿಗಳಲ್ಲಿ ಬೆಳೆಯಬೇಕಾದರೆ, ಅದು ನಿಸರ್ಗದಿಂದ ದೂರವಾಗಬಾರದು. ಸಮಾಜದಿಂದಲೂ ದೂರವಾಗಬಾರದು ; ನಿಸರ್ಗದ ಭಾಗವಾಗಿ, ಸಮಾಜದ ಭಾಗವಾಗಿ ಬಾಳಿ, ಹೊಸದನ್ನು ಸೃಷ್ಟಿಸುವ ಉತ್ಸಾಹದಿಂದ ಮಾಡುವ ಕೆಲಸ ಅಗತ್ಯ. ಕಾರ್ಯಾಚರಣೆಯಿಂದ ಜ್ಞಾನ ಮತ್ತು ತಿಳಿವಳಿಕೆ ಮೂಡಿಬರುವುವು. ಜೀವನದ ಮೂಲ ಅವಶ್ಯತೆಗಳನ್ನು ಪೂರೈಸುವಂತೆ ದೈಹಿಕ, ಸಾಮಾಜಿಕ, ಆಧ್ಯಾತ್ಮಿಕ ಬೆಳವಣಿಗೆಯಾಗುವುದು. ಶಿಕ್ಷಣ ಯಥಾರ್ಥಜೀವನಕ್ಕೆ ಸಂಬಂಧಿಸಿ ಮುಂದೆ ಸಾಗಬೇಕು. ಸಮುದಾಯ ಜೀವನಕ್ಕೂ ಮಗುವಿನ ನಿತ್ಯಜೀವನಕ್ಕೂ ಸಂಬಂಧವಿರಬೇಕು. ಸಮುದಾಯ ಜೀವನ, ಸಾಂಸ್ಕೃತಿಕ ಜೀವನದಲ್ಲಿ ಶಾಲೆ ಕೇಂದ್ರವಾಗಿರಬೇಕು. ಶಿಕ್ಷಣವು ಮಗುವಿನ ಸಹಜವಾದ ಜೀವನ ರೀತಿಗೆ ಹೊಂದಿಕೊಳ್ಳಬೇಕೇ ಹೊರತು, ಕೃತಕವಾಗಿ ನಿಯೋಜಿತ ಶಿಕ್ಷಣ ಕ್ರಮಕ್ಕೆ ಹೊಂದಿಸಲು ಪ್ರಯತ್ನಿಸಬಾರದು. ಆದ್ದರಿಂದಲೇ ಉತ್ಪಾದನ ಕಾರ್ಯಚಟುವಟಿಕೆಗಳಿಗೆ ಸಂಬಂಧಿಸಿದಂತೆ ಬೌದ್ಧಿಕ, ದೈಹಿಕ, ಸಾಮಾಜಿಕ, ಸಾಂಸ್ಕೃತಿಕ ಬೆಳವಣಿಗೆಗಳುಂಟಾಗುವುವು—ಹೀಗೆಂದು ಗಾಂಧಿಜಿ ವಿವರಿಸಿದರು.

## ಮೃಗಾಲಯ

ಹೆದರಿಕೆ ಹುಟ್ಟಿಸುವಂಥ, ಮುಖದಲ್ಲಿ ಕೋಪ ತುಂಬಿಕೊಂಡು ಅಲ್ಲಿಂದಿಲ್ಲಿಗೆ ತಿರುಗುತ್ತಿರುವ ಸಿಂಹ. ತನ್ನನ್ನು ನೋಡುತ್ತಿರುವ ಜನರನ್ನು ಲೆಕ್ಕಿಸದೆ ಮೂಲೆಯಲ್ಲಿ ಮಲಗಿದ ಸಿಂಹಿಣಿ. ದೂರದಲ್ಲಿ ನಿಧಾನವಾಗಿ ಸಾಗಿರುವ ಆನೆ. ಮರದ ಹಿಂದುಗಡೆ ಕತ್ತನ್ನೆತ್ತಿಕೊಂಡಿರುವ ಜಿರಾಫೆ. ಇನ್ನೊಂದು ಮೂಲೆಯಲ್ಲಿ ಕಿಚಿಕಿಚಿ ಶಬ್ದ ಮಾಡುತ್ತಿರುವ ಕೋತಿಗಳು.

ಎಲ್ಲವನ್ನೂ ಬಟ್ಟಲುಗಣ್ಣಿನಿಂದ ನೋಡುತ್ತಿರುವ ಎಳೆಯರು! ಕಾಡನ್ನು ಹೊಕ್ಕಂತೆ ಭಾಸವಾಗುತ್ತದೆ ಚಿಕ್ಕವರಿಗೆ ಮೃಗಾಲಯದಲ್ಲಿ. ಆದರೆ ಇಲ್ಲಿ ಸಿಂಹ ಕಂದಕದಾಚೆ ಇದೆ, ಆನೆಯೊಂದಿಗೆ ಮಾವುತನಿದ್ದಾನೆ. ಎಲ್ಲ ಸುರಕ್ಷಿತ.

ಜನ ನೋಡುವುದಕ್ಕಾಗಿ, ಪ್ರಾಣಿಶಾಸ್ತ್ರಜ್ಞರು ಮತ್ತು ಇತರರು ಅಭ್ಯಾಸ ಮಾಡುವುದಕ್ಕಾಗಿ ಬದುಕಿರುವ ಪ್ರಾಣಿಗಳನ್ನು, ಸಾಮಾನ್ಯವಾಗಿ ಕಾಡುಗಳಲ್ಲಿ ವಾಸಿಸುವ ಪ್ರಾಣಿಗಳನ್ನು, ಹಿಡಿದು ತಂದಿಟ್ಟಿರುವ ದೊಡ್ಡ ಆವರಣವಿರುವ ಸ್ಥಳ ಮೃಗಾಲಯ. ಅಲ್ಲಿ ನಾವು ಸುಲಭವಾಗಿ ಕಾಣಲಾಗದ ಅನೇಕ ಬಗೆಯ ಪ್ರಾಣಿಗಳನ್ನು ನೋಡಬಹುದು. ಪ್ರಪಂಚದಲ್ಲಿ ಪ್ರಾಣಿಗಳ ವೈವಿಧ್ಯ ಮೇರೆ ಇಲ್ಲದ್ದು. ಒಂದೊಂದು ದೇಶದ ಕಾಡಿನಲ್ಲಿ ಒಂದೊಂದು ಬಗೆಯ ಪ್ರಾಣಿ. ಭಾರತದ ಗಿರ್ ವನ್ಯ ಪ್ರದೇಶದಲ್ಲಿ ಸಿಂಹಗಳೂ ಆಫ್ರಿಕದ ಇಥಿಯೋಪಿಯದಲ್ಲಿ ಜೀಬ್ರಗಳೂ [illegible]. ಆಫ್ರಿಕ ಕಾಡುಗಳಲ್ಲಿ ಆನೆಗಳೂ, ಆಸ್ಟ್ರೇಲಿಯದಲ್ಲಿ ಕಾಂಗರುಗಳೂ ಧ್ರುವ ಪ್ರದೇಶದಲ್ಲಿ ಬಿಳಿಕರಡಿಗಳೂ ಪ್ರಸಿದ್ಧ. ಎಲ್ಲರ ಈ ಪ್ರಾಣಿಗಳಿರುವ ದೇಶಗಳಿಗೆ ಹೋಗಿ ಇವನ್ನು ನೋಡುವುದು ಅಗ ಮಾತು. ಮೃಗಾಲಯಗಳು ಮಾನವನ ಕುತೂಹಲವನ್ನು ತಣಿಸುತ್ತ ನಿಸರ್ಗದ ಶ್ರೀಮಂತಿಕೆ ಮತ್ತು ವೈವಿಧ್ಯಗಳನ್ನು ಸುಲಭವಾಗಿ ಪರಿಚ ಮಾಡಿಕೊಡುತ್ತವೆ.

ಹೀಗೆ ಪ್ರಾಣಿಗಳನ್ನು ವಿವಿಧ ಭಾಗಗಳಿಂದ ಒಂದೆಡೆ ಸಂಗ್ರಹಿಸುವುದ ಶತಮಾನಗಳಿಂದ ನಡೆದುಬಂದಿದೆ. ಚೀನದಲ್ಲಿ ಕ್ರಿ. ಪೂ. ಹನ್ನೆರಡನೆ ಶತಮಾನದಲ್ಲಿ ಚೌ ಮನೆತನದ ಮೊದಲ ದೊರೆ ವೆನ್ ವಾಂಗನು ತ ಅರಮನೆಯ ಬಳಿ ತನ್ನ ಚಕ್ರಾಧಿಪತ್ಯದ ವಿವಿಧ ಭಾಗಗಳಿಂದ ಪ್ರಾಣಿಗಳನ ಸಂಗ್ರಹಿಸಿ ಇಟ್ಟಿದ್ದ. ಸಾಲೊಮನ್ ದೊರೆ ನವಿಲು, ಕೋತಿಗಳನ್ ಬ್ಯಾಬಿಲನಿನ ನೆಬುಕ್ಯಾಡ್‌ರೆಜರ್ ಅರಸ (ಕ್ರಿ. ಪೂ. ಆರನೆಯ ಶತಮಾನ ಸಿಂಹಗಳನ್ನೂ ಸಂಗ್ರಹಿಸಿದ್ದರು.

ಪ್ರಾಚೀನ ಗ್ರೀಕರು, ಪಕ್ಷಿ ಮತ್ತು ಪ್ರಾಣಿಗಳ ಸಂಗ್ರಹಗಳನ್ನು ಇ ತ್ತಿದ್ದರು. ಅರಿಸ್ಟಾಟಲನ ಬಳಿ ಯೋಧರು ಹಿಡಿದುತಂದ ಪ್ರಾಣಿಗಳ ಸಂಗ್ರ ವಿತ್ತು. ರೋಮನರ ಬಳಿ ನೂರಾರು ಸಿಂಹಗಳ, ಹುಲಿಗಳ, ಚಿರತೆಗಳ ಸಂಗ್ರ ವಿರುತ್ತಿತ್ತು. ಅವರು ಈ ಮೃಗಗಳನ್ನು ಮನುಷ್ಯರೊಡನೆ ಕಾಳಗಕ್ಕ ಉಪಯೋಗಿಸುತ್ತಿದ್ದರು. ಹಸಿದ ಈ ಪ್ರಾಣಿಗಳ ಬಾಯಿಗೆ ತಪ್ಪು ಮಾಡಿದ ಮನುಷ್ಯರನ್ನು ನೂಕುವ ಪದ್ಧತಿಯೂ ಇತ್ತು. ಕ್ರಿ. ಪೂ. 29 ರಲ್ಲಿ ಅಗಸ್ಟಸ್ ಸೀಸರನು 420 ಹುಲಿ, 260 ಸಿಂಹ, 60 ಆಫ್ರಿಕದ ಪ್ರಾಣಿಗಳನ್ನು ಸಂಗ್ರಹಿಸಿದ್ದನಂತೆ. ಇವುಗಳಲ್ಲಿ ಚಿರತೆ, ಖ



ಮೃಗಾಲಯದಲ್ಲಿ [illegible]–
ಮನುಷ್ಯರಿಗೂ ಮೃಗಗಳಿಗೂ !

ಮೃಗ, ನೀರಾನೆ, ಕರಡಿಗಳು, ಆನೆಗಳು, ಹದ್ದುಗಳು, ಮೂವತ್ತಾರು ಮೊಸಳೆಗಳು ಇದ್ದುವಂತೆ.

ಮಧ್ಯಯುಗದಲ್ಲಿ ಪ್ರಾಣಿಗಳ ಸಂಗ್ರಹಾಲಯಗಳನ್ನು ಕೆಲವು ಸಲ ನಾಗರಿಕ ಸಂಸ್ಥೆಗಳು ನಡೆಸುತ್ತಿದ್ದುವು. ಫ್ಲಾರೆನ್ಸಿನಲ್ಲಿ ಇಂಥ ಸಂಸ್ಥೆ ಇತ್ತು. ಆದರೆ ಸಾಮಾನ್ಯವಾಗಿ ರಾಜರು, ಶ್ರೀಮಂತ ವರ್ಗದವರು ಪ್ರಾಣಿಸಂಗ್ರಹಾಲಯಗಳನ್ನು ಇಟ್ಟುಕೊಳ್ಳುತ್ತಿದ್ದರು.

ಪೀಕಿಂಗಿನಲ್ಲಿದ್ದ ಕುಬ್ಲಾಯ್‌ಖಾನನ (1216–1294) ಅರಮನೆಯಲ್ಲಿ ಸಿಂಹ, ಹುಲಿ, ಚಿರತೆ, ನೀರಾನೆ ಮೊದಲಾದುವುಗಳ ಸಂಗ್ರಹವಿತ್ತೆಂದು ಮಾರ್ಕೊ ಪೋಲೋ ಬರೆದಿದ್ದಾನೆ.

ಹತ್ತೊಂಬತ್ತನೆಯ ಶತಮಾನದಲ್ಲಿ ಪ್ರಪಂಚದ ಅನೇಕ ಭಾಗಗಳಲ್ಲಿ ಮೃಗಾಲಯಗಳು ಆರಂಭವಾದವು.

ಮೃಗಾಲಯದ ನಿವೇಶನ ಬಹಳ ದೊಡ್ಡದಾಗಿರುತ್ತದೆ. 1899ರಲ್ಲಿ ಸ್ಥಾಪಿಸಲ್ಪಟ್ಟ ನ್ಯೂ ಯಾರ್ಕ್ ಮೃಗಾಲಯ ಪ್ರಪಂಚದಲ್ಲಿರುವ ಅತ್ಯಂತ ದೊಡ್ಡ ಮೃಗಾಲಯಗಳಲ್ಲೊಂದು. ಇದರ ವಿಸ್ತೀರ್ಣ ಸುಮಾರು 10,120 ಚದರ ಮೀಟರುಗಳು. ಇಲ್ಲಿ 2,500 ಪ್ರಾಣಿಗಳಿವೆ. ವಾಷಿಂಗ್‌ಟನ್‌ನಲ್ಲಿರುವ ಮೃಗಾಲಯದಲ್ಲಿ 3,000 ಪ್ರಾಣಿಗಳಿವೆ.

ಕಲ್ಕತ್ತಾದ ಆಲಿಪುರದಲ್ಲಿ ಬಂಗಾಳದ ಸರಕಾರ 1875ರಲ್ಲಿ ಸ್ಥಾಪಿಸಿದ ಮೃಗಾಲಯ ಭಾರತದಲ್ಲಿರುವ ದೊಡ್ಡ ಮೃಗಾಲಯಗಳಲ್ಲೊಂದು. ಮೈಸೂರಿನ ಮೃಗಾಲಯ, ಹೈದರಾಬಾದಿನ ಹೊರವಲಯದಲ್ಲಿರುವ ನೆಹರು ಪ್ರಾಣಿವನ, ಮುಂಬಯಿಯ ವಿಕ್ಟೋರಿಯ ಪ್ರಾಣಿಸಂಗ್ರಹಾಲಯ ಪ್ರಖ್ಯಾತವಾಗಿವೆ.

ಮೃಗಾಲಯಗಳಲ್ಲಿ ಮೊದ ಮೊದಲು ಎಲ್ಲ ಪ್ರಾಣಿಗಳನ್ನೂ ಬೋನಿನಲ್ಲಿ ಇಡುತ್ತಿದ್ದರು. ಆದರೆ ಕಾಡುಗಳಲ್ಲಿ ಸ್ವೇಚ್ಛೆಯಿಂದ ಓಡಾಡಿಕೊಂಡಿರುವ ಪ್ರಾಣಿಗಳಿಗೆ ಬೋನಿನಲ್ಲಿ ಹಿಂಸೆಯಾಗುವುದೆಂದು ಈಚೆಗೆ ಅವನ್ನು ಕೃತಕವಾಗಿ ನಿರ್ಮಿಸಿದ ವನದ ವಾತಾವರಣದಲ್ಲಿ ಬಿಟ್ಟುಬಿಡುತ್ತಾರೆ. ಹುಲಿ ಸಿಂಹಗಳಿಗೆ ಬೋನುಗಳಿದ್ದರೂ ಅವು ಮೃಗಾಲಯದಲ್ಲಿ ಹೊರಗೆ ಸ್ವೇಚ್ಛೆಯಿಂದ ಓಡಾಡಿಕೊಂಡಿರುವುದನ್ನು ನೋಡಬಹುದು. ಆದರೆ ಅವು ಇರುವ ಜಾಗಕ್ಕೂ ಜನ ನಿಂತು ನೋಡುವ ಜಾಗಕ್ಕೂ ಮಧ್ಯೆ ದೊಡ್ಡ ಕಂದಕವಿರುತ್ತದೆ. ಸಿಂಹಗಳು 9.15 ಮೀಟರುಗಳಿಗಿಂತ ಉದ್ದ ಜಿಗಿಯಲಾರವು. 1.83 ಮೀಟರುಗಳಿಗಿಂತ ಹೆಚ್ಚು ಹಾರಲಾರವು. ಆದರೆ ಎಷ್ಟು ಉದ್ದವನ್ನಾಗಲೀ ಎತ್ತರವನ್ನಾಗಲೀ ಹಾರಬಲ್ಲ ಚಿರತೆ ಮೊದಲಾದುವನ್ನು ಬೋನಿನಲ್ಲೇ ಇಡಬೇಕು.

ಕೆಲವೊಂದು ಮೃಗಾಲಯಗಳಲ್ಲಿ ಪಳಗಿಸಿದ ಸಾಧು ಪ್ರಾಣಿಗಳನ್ನು ಮಕ್ಕಳ ವಿಹಾರಾರ್ಥವಾಗಿಯೇ ಇಟ್ಟಿರುತ್ತಾರೆ. ಆನೆ, ಒಂಟೆ ಇವುಗಳ ಮೇಲೆ ಸವಾರಿ ಮಾಡಬಹುದು.

ಕಾಡುಗಳಲ್ಲಿ ಸ್ವೇಚ್ಛೆಯಿಂದ ಓಡಾಡಿಕೊಂಡಿರುವ ಪ್ರಾಣಿಗಳು ಮೃಗಾಲಯದ ಬೋನುಗಳಲ್ಲಿ, ಪಂಜರಗಳಲ್ಲಿ, ಕೃತಕ ವಾತಾವರಣದಲ್ಲಿ ಸಂತೋಷವಾಗಿರಬಲ್ಲುವೆ? ಈ ಪ್ರಶ್ನೆ ಸಹಜವಾದದ್ದು. ಮೃಗಾಲಯಗಳ ಮೇಲ್ವಿಚಾರಣೆಯಲ್ಲಿ ಅನೇಕ ಸುಧಾರಣೆಗಳಾಗಿವೆ. ಅಪಾಯಕಾರಿ ಪ್ರಾಣಿಗಳನ್ನು ಬಿಟ್ಟರೆ ಉಳಿದ ಪ್ರಾಣಿಗಳಿಗೆ ಆದಷ್ಟು ಸ್ವಾತಂತ್ರ್ಯ ಕೊಡಲಾಗುತ್ತಿದೆ. ಆಹಾರಕ್ಕಾಗಿ ಬಹಳ ಓಡಾಡಬೇಕಾಗಿದ್ದ ಪ್ರಾಣಿಗಳಿಗೆ ಆಹಾರದ ಕೊರತೆ ಇಲ್ಲ. ಉಳಿದ ಪ್ರಾಣಿಗಳಿಂದ ಭಯ ತಪ್ಪಿದೆ. ಕೆಲವೊಂದು ಪ್ರಾಣಿಗಳು ಮನುಷ್ಯರ ಸಂಪರ್ಕವನ್ನೂ ಇಷ್ಟಪಟ್ಟಿವೆ.

ಮೃಗಾಲಯಗಳಿಗೋಸ್ಕರ ಪ್ರಾಣಿಗಳನ್ನು ಹಿಡಿಯುವುದೂ ಒಂದು ಕಲೆ. ಮೃಗಾಲಯದಲ್ಲಿರುವ ಪ್ರಾಣಿಗಳಿಗೆ ಮರಿಗಳು ಹುಟ್ಟಿ ಅವು ಮೃಗಾಲಯಗಳಲ್ಲೇ ಬೆಳೆದು ಕಾಡಿನ ವಾತಾವರಣವನ್ನೇ ಕಾಣದೆ ಇರುವ ನಿದರ್ಶನಗಳಿವೆ. ಡೆನ್‌ಮಾರ್ಕಿನ ಕೋಪನ್‌ಹೇಗನಿನ ಪ್ರಾಣಿ ಸಂಗ್ರಹಾಲಯದಲ್ಲಿರುವ ಒಂದು ಹಿಪ್ಪೊಪೊಟೊಮಸ್ (ನೀರಾನೆ) 1927 ರಿಂದ ಹದಿನೈದು ಸಲ ಮರಿ ಹಾಕಿದೆ. ಮೃಗಾಲಯದಲ್ಲಿ ಪ್ರಾಣಿಗಳ ಸ್ವಾತಂತ್ರ್ಯ ಕಡಮೆಯಾಗುತ್ತದೆಂಬುದು ನಿಜ. ಮೊದಮೊದಲು ಮೃಗಾಲಯದ ಜೀವನಕ್ಕೆ ಪ್ರಾಣಿಗಳು ಹೊಂದಿಕೊಳ್ಳುವುದು ಕಷ್ಟ. ಕಾಡಿನಲ್ಲಿ ತಮಗೆ ಸಹಜವಾದ ಜೀವನವನ್ನು ನಡೆಸುವ ಪ್ರಾಣಿಗಳು ಮೃಗಾಲಯದಲ್ಲಿ ಆ ರುದ್ರ ಚೆಲುವನ್ನು ಕಳೆದುಕೊಂಡು ಕೆಲಮಟ್ಟಿಗೆ ಸಾಧುಪ್ರಾಣಿಗಳೆನಿಸುವುದೂ ನಿಜ. ಆದರೆ ನಿಸರ್ಗದ ವೈವಿಧ್ಯವನ್ನು ಮಾನವ ಅರ್ಥಮಾಡಿಕೊಳ್ಳಲು ಅದರಿಂದ ಸಂತೋಷ ಹೊಂದಲು ಮೃಗಾಲಯ ಅವಶ್ಯ. ಅಳಿದುಹೋಗುವ ಪ್ರಾಣಿವರ್ಗಗಳನ್ನು ಉಳಿಸಿ ಬೆಳೆಸಲು ಮೃಗಾಲಯ ಸಹಾಯಕವಾಗುತ್ತದೆ.

ಮೃಗಾಲಯವನ್ನು ನೋಡಿಕೊಳ್ಳಲು ಅಧಿಕಾರಿಗಳಿರುತ್ತಾರೆ. ಪ್ರಾಣಿಗಳಿಗೆ ಹೊತ್ತು ಹೊತ್ತಿಗೆ ಆಹಾರ ಹಾಕುವುದು, ಮೃಗಾಲಯಕ್ಕೆ ಬರುವ ಜನರಿಂದ ಅವಕ್ಕೆ ತೊಂದರೆಯಾಗದಂತೆ ನೋಡಿಕೊಳ್ಳುವುದು, ಕಾಯಿಲೆ ಬಂದರೆ ಔಷಧ ಕೊಡುವುದು, ವಾಸಸ್ಥಾನ ಸ್ವಚ್ಛವಾಗಿರುವಂತೆ ಎಚ್ಚರ ವಹಿಸುವುದು ಇವನ್ನೆಲ್ಲ ಮೃಗಾಲಯದ ಅಧಿಕಾರಿಗಳೂ ಕೆಲಸಗಾರರೂ ಮಾಡುತ್ತಾರೆ.

## ಮೃತ ಸಮುದ್ರ

ಸಮುದ್ರದಲ್ಲಿ ಮನುಷ್ಯ ಬಿದ್ದರೆ ಏನಾಗುತ್ತದೆ? ಮನುಷ್ಯ ನೀರಿನಲ್ಲಿ ಮುಳುಗುತ್ತಾನೆ. ಈಜು ಬರುತ್ತಿದ್ದರೆ, ಶಕ್ತಿ ಇದ್ದರೆ, ಈಚೆಗೆ ಬರಬಹುದು. ಆದರೆ, ಬಿದ್ದ ಮನುಷ್ಯ ತಾನಾಗಿಯೇ ತೇಲುವ ಸಮುದ್ರವೂ ಉಂಟು. ಇದು 'ಮೃತ ಸಮುದ್ರ.' ಇದಕ್ಕೆ ಕಾರಣ ಅದರಲ್ಲಿರುವ ಉಪ್ಪಿನ ಪ್ರಮಾಣ. ಸಮುದ್ರ ಎಂದರೆ, ಅದರಲ್ಲಿ ನೂರಾರು ಪ್ರಾಣಿಗಳಿರುತ್ತವೆ, ಬಗೆಬಗೆಯ ಮೀನುಗಳು, ತಿಮಿಂಗಿಲಗಳು, ಸಣ್ಣ ಗಾತ್ರದ ಪ್ರಾಣಿಗಳು, ದೈತ್ಯಾಕಾರದ ಪ್ರಾಣಿಗಳು ಓಡಾಡುತ್ತಿರುತ್ತವೆ, ತಳದಲ್ಲಿ ಸಸ್ಯಗಳಿರುತ್ತವೆ ಎಂದು ನಮ್ಮ ಕಲ್ಪನೆ. ಆದರೆ ಮೃತ ಸಮುದ್ರದಲ್ಲಿ ಒಂದು ಪ್ರಾಣಿಯೂ ಇಲ್ಲ.

ಪ್ರಪಂಚದಲ್ಲೇ ಅತ್ಯಂತ ಹೆಚ್ಚಿನ ಪ್ರಮಾಣದ ಉಪ್ಪುಳ್ಳ (ಶೇಕಡಾ 24) ಈ ಸಮುದ್ರ ಇಸ್ರೇಲ್ ಮತ್ತು ಜೋರ್ಡಾನ್‌ಗಳ ನಡುವೆ ಇದೆ. ಉಳಿದ ಸಾಗರಗಳಿಗಿಂತ ಈ ಸಮುದ್ರದಲ್ಲಿ ಆರುಪಟ್ಟು ಉಪ್ಪಿನ ಅಂಶ ಜಾಸ್ತಿ. ಇದು ಭೂಮಧ್ಯ ಸಮುದ್ರಕ್ಕಿಂತ 393 ಮೀಟರು ತಗ್ಗಿನಲ್ಲಿದೆ. ಈ ಸಮುದ್ರದ ಪರಮಾವಧಿ ಆಳ 400 ಮೀಟರು. ಎಂಭತ್ತೆರಡು ಕಿಲೊಮೀಟರು ಉದ್ದ. ಹದಿನೆಂಟು ಕಿಲೊಮೀಟರು ಅಗಲವಾಗಿರುವ ಈ ಸಮುದ್ರಕ್ಕೆ ಹಲವಾರು ನದಿಗಳು ಬಂದು ಸೇರುತ್ತವೆ. ಅವುಗಳಲ್ಲಿ ಮುಖ್ಯವಾದದ್ದು ಜೋರ್ಡಾನ್ ಎಂಬ ನದಿ. ಜೋರ್ಡಾನ್ ಮತ್ತು ಇತರ ನದಿಗಳು ಸೇರಿ ಪ್ರತಿದಿನವೂ ಅರವತ್ತು ಲಕ್ಷ ಮೆಟ್ರಿಕ್ ಟನ್‌ಗಳಷ್ಟು ಹೊಸ ನೀರನ್ನು ಮೃತ ಸಮುದ್ರಕ್ಕೆ ಚೆಲ್ಲುತ್ತವೆ. ಆದರೂ ಸಮುದ್ರದ ಮಟ್ಟದ ಏರಿಕೆ ಒಂದೇ ಸಮ. ಉಪ್ಪಿನ ಅಂಶವೂ ಕಡಮೆಯಾಗುವುದಿಲ್ಲ. ಏಕೆಂದರೆ ಸಮುದ್ರದಿಂದ [illegible]

ನೀರೆಲ್ಲ ಆವಿಯಾಗಿ ಹೋಗುತ್ತವೆ. ಮೃತ ಸಮುದ್ರ ನಿರ್ಜೀವ ವಾಗಿಯೇ ಉಳಿಯುತ್ತದೆ.

ಮೃತಸಮುದ್ರ ಅನೇಕ ಖನಿಜಗಳ ಆಗರ. ಅಡುಗೆಯ ಉಪ್ಪು, ಮೆಗ್ನೀಸಿಯಂ ಕ್ಲೋರೈಡ್, ಪೊಟಾಸಿಯಂ ಕ್ಲೋರೈಡ್, ಮೆಗ್ನೀಸಿಯಂ ಬ್ರೊಮೈಡ್ ಮುಂತಾದ ಲವಣ ಗಳು ದೊರೆಯುತ್ತವೆ. ಕಡಲದಂಡೆಗಳಲ್ಲಿ ಗಂಧಕ, ಸೈಂಧವ ಲವಣ ಮುಂತಾದುವು ದೊರೆಯುತ್ತವೆ. ನೀರಿನಿಂದ ಅನಿಲ ಗಳು ಹೊರಹೊರಟು ದುರ್ವಾಸನೆಯನ್ನು ಹರಡುತ್ತವೆ.

ಮೃತಸಮುದ್ರದ ನೀರು ಅನೇಕ ರೋಗಿಗಳಿಗೆ ಮದ್ದು ಎಂಬುದು ತಜ್ಞರ ಅಭಿಪ್ರಾಯ. ನೋಡಲು ಮೃತಸಮುದ್ರ ಸುಂದರವಾಗಿದೆ. ಲವಣ ಸಮೃದ್ಧವಾಗಿರುವ ಸಮುದ್ರದ ನೀರು ಸೂರ್ಯನ ಕಿರಣಗಳ ಬೆಳಕಿನಲ್ಲಿ ಥಳಥಳನೆ ಹೊಳೆಯುವ ದೃಶ್ಯ ಮನೋಹರ. ಗಾಳಿಗಳು ಒಯ್ದ ಲವಣಗಳು ಸುತ್ತುಮುತ್ತಲಿನ ಬಂಡೆಗಳ ಮೇಲೆ ಬಿದ್ದು ಅವುಗಳಿಗೆ ಚಿತ್ರವಿಚಿತ್ರ ಬಣ್ಣಗಳನ್ನು ತಂದುಕೊಟ್ಟಿವೆ.

ಮೃತಸಮುದ್ರದ ಪ್ರಸ್ತಾಪ ಮೊದಲು ಬರುವುದು ಬೈಬಲಿ ನಲ್ಲಿ. 'ಉಪ್ಪು ಸಮುದ್ರ' ಎಂದು ಅದು ಕರೆಯಲ್ಪಟ್ಟಿದೆ. ಬೈಬಲಿನ ಮೊದಲ ಪುಸ್ತಕದಲ್ಲಿ ಮೃತಸಮುದ್ರದ ಅಡಿಯಲ್ಲಿ ನಾಶವಾಗಿರುವ ಸೋಡಮ್ ಮತ್ತು ಗೊಮಾರಾಹ್ ಎಂಬ ಎರಡು ಪಟ್ಟಣಗಳ ಕಥೆ ಇದೆ.

1947ರಲ್ಲಿ ಮೃತಸಮುದ್ರ ವಾಯುವ್ಯದ ಗುಹೆಯೊಂದರಲ್ಲಿ ದೊರೆತ ಹನ್ನೊಂದು ಬರಹಗಳು—ಇವನ್ನು 'ದಿ ಡೆಡ್ ಸೀ ಸ್ಕ್ರಾಲ್ಸ್' ಎನ್ನು ತ್ತಾರೆ—ಚರಿತ್ರೆಯ ವಿದ್ಯಾರ್ಥಿಗಳಿಗೆ ಬಹು ಉಪಯೋಗಕರವಾದುವು. ಇವುಗಳಲ್ಲಿ ಒಂದು ಕ್ರಿ. ಪೂ. 200ರಲ್ಲಿ ಯಹೂದ್ಯ ಸನ್ಯಾಸಿಮಂದಿರದ ಜೀವನ ರೀತಿಯನ್ನು ಚಿತ್ರಿಸುತ್ತದೆ. ಮತ್ತೊಂದು ಆ ಕಾಲದ ಕುಮರಾನ್ ಗುಂಪಿನ ಜೀವನವನ್ನು ವರ್ಣಿಸುತ್ತದೆ.

ಮೃತವೆಂಬ ಹೆಸರು ತಾಳಿದ್ದರೂ ಅಪರಿಮಿತ ಖನಿಜಗಳನ್ನು ಹೊಂದಿ ಮೃತಸಮುದ್ರ ಮನುಜರನ್ನು ತನ್ನೆಡೆಗೆ ಸೆಳೆಯುತ್ತಲೇ ಇದೆ.

**ನೋಡಿ :** ಉಪ್ಪು

## ಮೆಕ್ಕಾ, ಮದೀನ

ಮೆಕ್ಕ ಮುಹಮ್ಮದ್ ಪೈಗಂಬರರ ಜನ್ಮಸ್ಥಳ. ಮುಸಲ್ಮಾನರಿಗೆ ಅತ್ಯಂತ ಪವಿತ್ರ ಯಾತ್ರಾಸ್ಥಳ. ಸೌದಿ ಅರೇಬಿಯದಲ್ಲಿದೆ.

ಕಲ್ಲು ಕಟ್ಟಡಗಳಿಂದ ಕೂಡಿದ ಮೆಕ್ಕ ಅಗಲ ಕಿರಿದಾದ, ಉದ್ದನೆಯ ನಗರ. ಮುಸಲ್ಮಾನರಲ್ಲದವರು ಪ್ರವೇಶಿಸುವಂತಿಲ್ಲ. ಹೊರ ದೇಶಗಳ ರಾಯಭಾರಿಗಳು, ವರ್ತಕರೆಲ್ಲ ಮೆಕ್ಕದಿಂದ ಎಪ್ಪತ್ತೆರಡು ಕಿಲೊಮಿಟರು ದೂರದಲ್ಲಿರುವ ಕೆಂಪು ಸಮುದ್ರದ ಬಂದರು ಜಿದ್ದಾ ಎಂಬಲ್ಲಿ ವಾಸಿಸುತ್ತಾರೆ.

ಆರೋಗ್ಯವಂತನೂ ದೃಢಕಾಯನೂ ಆದ ಪ್ರತಿಯೊಬ್ಬ ಮುಸಲ್ಮಾನನೂ ಮೆಕ್ಕ ಯಾತ್ರೆ ಮಾಡಬೇಕೆಂದು ಇಸ್ಲಾಂ ಧರ್ಮದಲ್ಲಿ ಹೇಳಿದೆ.



ಪವಿತ್ರ ಕಾಬಾ

ಮೆಕ್ಕದಲ್ಲಿ ಮುಸಲ್ಮಾನ ಯಾತ್ರಾರ್ಥಿಗಳು ಪ್ರಾರ್ಥಿಸಲು ಬರುವ ಮಂದಿರ–ಮಸೀದಿ–ಭವ್ಯವಾದ ಒಂದು ಗುಮ್ಮಟಾಕಾರದ ಕಟ್ಟಡ. ಅಂಗಣದ ಸುತ್ತಲೂ ಅನೇಕ ಕಂಬಗಳು, ಕಮಾನುಗಳು. ಅಂಗಣದಲ್ಲಿ ಮುಸಲ್ಮಾನರಿಗೆ ಅತ್ಯಂತ ಪವಿತ್ರವೆನಿಸಿದ ಗುಡಿ. ಘನಾಕಾರದಲ್ಲಿರುವ ಈ ಕಲ್ಲು ಕಟ್ಟಡಕ್ಕೆ 'ಕಾಬಾ' ಎಂದು ಹೆಸರು. ಪ್ರಪಂಚದಲ್ಲಿ ಎಲ್ಲೇ ಇರಲಿ ಮುಸಲ್ಮಾನರು ಕಾಬಾ ಇರುವ ದಿಕ್ಕಿಗೆ ತಿರುಗಿ ಪ್ರಾರ್ಥಿಸುತ್ತಾರೆ. ಕಾಬಾದ ಒಂದು ಮೂಲೆಯಲ್ಲಿ ಒಂದು ಕಪ್ಪು ಕಲ್ಲಿದೆ. ಏಬ್ರಹಾಂ





ಮದೀನದ ಪ್ರಾರ್ಥನಾ ಮಂದಿರ

ಅಥವಾ ಇಬ್ರಾಹೀಮ್ ಮತ್ತು ಅವನ ಮಗ ಇಷ್‌ಮೇಲ್ ಅಥವಾ ಇಸ್ಮಾಯಿಲ್ ಆ ಕಲ್ಲನ್ನು ಅಲ್ಲಿ ನೆಟ್ಟರೆಂದು ಮುಸಲ್ಮಾನರು ನಂಬುತ್ತಾರೆ. ಮೆಕ್ಕ ಯಾತ್ರಿಕರು ಕಾಬಾಕ್ಕೆ ಏಳು ಸಲ ಪ್ರದಕ್ಷಿಣೆ ಮಾಡಿ ಆ ಕಲ್ಲನ್ನು ಚುಂಬಿಸುತ್ತಾರೆ.

ಮುಹಮ್ಮದನ ಕಾಲಕ್ಕಿಂತ ಮೊದಲೇ ಮೆಕ್ಕ ವ್ಯಾಪಾರ ಸ್ಥಳವಾಗಿತ್ತು. ಮೆಕ್ಕದ ಜನಸಂಖ್ಯೆ ಸುಮಾರು 2,00,000. ಆದರೆ ಹೊರಗಿನಿಂದ ಬರುವ ಯಾತ್ರಿಕರ ಸಂಖ್ಯೆ ವರ್ಷಕ್ಕೆ ಒಂದೂವರೆ ಲಕ್ಷಕ್ಕಿಂತಲೂ ಹೆಚ್ಚು. ಯಾತ್ರಾರ್ಥಿಗಳಿಗೆ ಬೇಕಾದ ಅನುಕೂಲತೆಗಳನ್ನು ಒದಗಿಸುವುದರ ಹೊರತು ಬೇರೆ ಯಾವ ಉದ್ಯಮವೂ ನಗರದಲ್ಲಿಲ್ಲ.

ಹದಿನಾರನೆಯ ಶತಮಾನದವರೆಗೂ ಮೆಕ್ಕ ಈಜಿಪ್ಟಿನವರ ಆಳ್ವಿಕೆಯಲ್ಲಿತ್ತು. ಅನಂತರ ತುರ್ಕಿಯ ಕೈವಶವಾಯಿತು. ಈಗ ಅದು ಸೌದಿ ಅರೇಬಿಯದ ಭಾಗವಾಗಿದೆ.

ಮೆಕ್ಕದ ಅನಂತರ ಮದೀನ ಮುಸಲ್ಮಾನರಿಗೆ ಪವಿತ್ರವಾದ ಯಾತ್ರಾ ಸ್ಥಳ. ಇದು ಮೆಕ್ಕದಿಂದ 402 ಕಿಲೊಮೀಟರು ಉತ್ತರದಲ್ಲಿದೆ. ಸಮುದ್ರ ಮಟ್ಟದಿಂದ 625 ಮೀಟರು ಎತ್ತರದಲ್ಲಿದೆ. ಜ್ವಾಲಾಮುಖಿಯೊಂದರಿಂದ ಹೊಮ್ಮಿದ ಶಿಲಾ ಪ್ರವಾಹ ಪ್ರದೇಶದ ಪಶ್ಚಿಮ ಅಂಚಿನಲ್ಲಿರುವ ಒಂದು ಓಯಸಿಸ್‌ನಲ್ಲಿ ಮದೀನ ಇದೆ. ಇಲ್ಲಿ ಬೆಳೆಯುವ ಖರ್ಜೂರ ವಿಶ್ವವಿಖ್ಯಾತ. ಮದೀನಕ್ಕೆ ಮುಸಲ್ಮಾನೇತರರಿಗೆ ಪ್ರವೇಶವಿಲ್ಲ.

ಮುಹಮ್ಮದ್ ಪೈಗಂಬರರು ಇಲ್ಲಿಗೆ ಬರುವುದಕ್ಕೆ ಮೊದಲು ಮದೀನಕ್ಕೆ ಯಾತ್ರಿಬ್ ಎಂಬ ಹೆಸರಿತ್ತು. ಇಲ್ಲಿನ ಪ್ರಾರ್ಥನಾ ಮಂದಿರ (ಮಸೀದಿ)ದಲ್ಲಿ ಪ್ರವಾದಿ ಮುಹಮ್ಮದರ ಗೋರಿ ಇದೆ. ಮುಸಲ್ಮಾನರಿಗೆ ಇದು ಅತ್ಯಂತ ಪವಿತ್ರವಾದ ಸ್ಥಳ. ಪೈಗಂಬರರ ಮೊದಲ ಅನುಯಾಯಿಗಳಾದ ಅಬೂಬಕರ್, ಉಮರ್, ಮಗಳು ಫಾತಿಮ ಇವರ ಗೋರಿಗಳೂ ಇಲ್ಲಿವೆ.

ನೋಡಿ : ಮುಹಮ್ಮದ್ ಪೈಗಂಬರ್



## ಮೆಕ್ಸಿಕೊ

ಪುಟ್ಟ ನಾಯಿ ನೋಡಿದ್ದೀರಾ ?

ಎಷ್ಟು ಪುಟ್ಟ ನಾಯಿ ನೋಡಿದ್ದೀರಿ ? ಪೂರ್ತಿ ಬೆಳೆದ ನಾಯಿ ಎಷ್ಟು ಪುಟ್ಟದಿರಬಹುದು ?

ಅಂಗೈಯಲ್ಲಿ ಸುಲಭವಾಗಿ ನಿಲ್ಲಿಸಿಕೊಳ್ಳುವಷ್ಟು ಪುಟ್ಟ ಆಕಾರದ ನಾಯಿ ಇದೆ, ಮೆಕ್ಸಿಕೊದಲ್ಲಿ. ಅದರ ಹೆಸರು ಚಿ–ವಾ–ವಾ. ತಾಮ್ರ ಬಣ್ಣದ ಈ ನಾಯಿಯ ಮೈಮೇಲೆ ಕೂದಲುಗಳಿಲ್ಲ. ರೇಷ್ಮೆಯಂತೆ ನಯ ಇದರ ಮೈ. ದೊಡ್ಡ ಕಣ್ಣುಗಳು. ಚಿಟ್ಟೆಯ ರೆಕ್ಕೆಗಳಂತೆ ಹರಡಿರುವ ಕಿವಿಗಳು.

ಎಷ್ಟು ಮುದ್ದಾಗಿರಬೇಕು ಈ ಮೆಕ್ಸಿಕೊ ನಾಯಿ !

ಮೆಕ್ಸಿಕೊ ಸ್ವತಂತ್ರ ಗಣರಾಜ್ಯ. ಅಮೆರಿಕದ ಸಂಯುಕ್ತ ಸಂಸ್ಥಾನಗಳಿಂದ ದಕ್ಷಿಣಕ್ಕೆ ಮಧ್ಯ ಅಮೆರಿಕದವರೆಗೂ ಹಬ್ಬಿದೆ. 1821ಕ್ಕಿಂತ ಮೊದಲು ಇದು ಸ್ಪೇನಿನ ಆಡಳಿತದಲ್ಲಿದ್ದಿತು. ಅನಂತರ ಸ್ವತಂತ್ರವಾಯಿತು. ಈ ದೇಶ ಲ್ಯಾಟಿನ್ ಅಮೆರಿಕದಲ್ಲಿದೆ; ಮೆಕ್ಸಿಕೊ ಪಟ್ಟಣ ಇದರ ರಾಜಧಾನಿ. ಪೂರ್ವಕ್ಕಿರುವ ವೆರಕ್ರೂಜ್ ಮುಖ್ಯ ಬಂದರು.

ಸಮುದ್ರ ತೀರದ ಪ್ರದೇಶ, ಪರ್ವತ ಪ್ರದೇಶ ಮತ್ತು ಎತ್ತರವಾದ ತಪ್ಪಲು ಪ್ರದೇಶ ಹೀಗೆ ಮೂರು ಪ್ರಾಕೃತಿಕ ವಿಭಾಗಗಳಿವೆ. ತಪ್ಪಲು ಪ್ರದೇಶಗಳಲ್ಲಿ ಸುಂದರ ತೋಟಗಳಿವೆ. ಎತ್ತರವಾದ ಪರ್ವತಗಳ ಶಿಖರಗಳಲ್ಲಿ ಅಸಂಖ್ಯ ಜ್ವಾಲಾಮುಖಿಗಳು ಅಡಗಿವೆ. ಈ ಪರ್ವತಗಳಲ್ಲಿ ತುಂಬ ರಮಣೀಯ ದೃಶ್ಯಗಳಿವೆ.

ಮೆಕ್ಸಿಕೊದಲ್ಲಿ ಖನಿಜ ಸಂಪತ್ತು ಹೇರಳವಾಗಿದೆ. ಹದಿನಾರನೆಯ ಶತಮಾನದಿಂದ ಜಗತ್ತಿನಲ್ಲಿ ದೊರಕಿರುವ ಬೆಳ್ಳಿಯ ಅರ್ಧದಷ್ಟನ್ನು ಮೆಕ್ಸಿಕೊ ಪ್ರದೇಶವೊಂದೇ ಒದಗಿಸಿದೆ. ಈಗಲೂ ಜಗತ್ತಿನ ಬೆಳ್ಳಿ ಉತ್ಪನ್ನದ ಶೇಕಡಾ 20 ಮೆಕ್ಸಿಕೊದಿಂದ ಬರುತ್ತದೆ. ಈ ದೇಶದಲ್ಲಿ ಬೆಳ್ಳಿ ಎಷ್ಟು ವಿಪುಲವಾಗಿತ್ತೆಂದರೆ, ಹಿಂದೆ ಒಬ್ಬ ತನ್ನ ಮಗಳ ವಿವಾಹಕ್ಕಾಗಿ ಇಗರ್ಜಿಯವರೆಗೂ ರಸ್ತೆಯನ್ನು ಬೆಳ್ಳಿಯ ತಗಡಿನಿಂದ ಹಾಸಿದ್ದ. ಸೀಸದ ರಫ್ತಿನಲ್ಲಿ ಜಗತ್ತಿನಲ್ಲಿಯೇ ಮೆಕ್ಸಿಕೊಗೆ ಪ್ರಥಮ ಸ್ಥಾನ.

ಮೆಕ್ಸಿಕೊದಲ್ಲಿ ಸಮೃದ್ಧಿಯಾಗಿ ಪೆಟ್ರೋಲಿಯಂ ದೊರೆಯುತ್ತದೆ. ಇದನ್ನು ಯಶಸ್ವಿಯಾಗಿ ಹೊರಕ್ಕೆ ತೆಗೆದದ್ದು ಇಪ್ಪತ್ತನೆಯ ಶತಮಾನದ ಪ್ರಾರಂಭದಲ್ಲಿ. ಎಡ್ವರ್ಡ್ ಡೊಹೆನಿ ಎಂಬ ಅಮೆರಿಕದ ಪ್ರಜೆ ಒಂದು ತೊಟ್ಟು ಪೆಟ್ರೋಲಿಯಂ ಸಿಕ್ಕದಿದ್ದರೂ ಅದನ್ನು ಸಾಗಿಸಲು 113 ಕಿಲೊಮೀಟರು ಕೊಳವೆಗಳನ್ನು ಹಾಕಿಸಿ, ಶೇಖರಿಸಲು ಭಾರಿ ತೊಟ್ಟಿಗಳನ್ನು ಕಟ್ಟಿಸಿದ. ಹತ್ತು ವರ್ಷಗಳ ಅನಂತರ ಪೆಟ್ರೋಲಿಯಂ ಸಿಕ್ಕಿತು. ದಿನಕ್ಕೆ 70.000 ಬ್ಯಾರೆಲ್‌ನಷ್ಟು.

ಮಧ್ಯ ಮೆಕ್ಸಿಕೊದಲ್ಲಿ ವಿಶಿಷ್ಟವಾದ ಕಳ್ಳಿಯೊಂದು ಬೆಳೆಯುತ್ತದೆ. ಸುಮಾರು 1.83 ಮೀಟರುಗಳಷ್ಟು ಎತ್ತರ. ಮುಳ್ಳುಗಳಿಂದ ತುಂಬಿರುವ ಎಲೆಗಳು. ನೂರು ವರ್ಷಗಳಿಗೊಮ್ಮೆ ಈ ಕಳ್ಳಿ ಹೂ ಬಿಡುವುದರಿಂದ

ಇದಕ್ಕೆ 'ಶತಮಾನದ ಕಳ್ಳಿ' ಎಂದೂ ಹೆಸರಿದೆ. ಶತಮಾನ ಕಳ್ಳಿಗಳು ತಪ್ಪಲು ಪ್ರದೇಶಗಳಲ್ಲಿ ಅಸಂಖ್ಯವಾಗಿವೆ. ಈ ಕಳ್ಳಿಯ ಎಲೆಗಳಿಂದ ರಸವನ್ನು ತೆಗೆದು ಸಾರಾಯಿಯನ್ನು ತಯಾರಿಸುತ್ತಾರೆ. ಇದು ಮೆಕ್ಸಿಕೊದ ಅತ್ಯಂತ ಜನಪ್ರಿಯ ಪೇಯ.

ಸ್ಪ್ಯಾನಿಷ್ ಮತ್ತು ರೆಡ್ ಇಂಡಿಯನ್ ಜನರು ಮೆಕ್ಸಿಕೊದಲ್ಲಿದ್ದಾರೆ. ಇವರಿಬ್ಬರ ಮಿಶ್ರ ಜನರಾದ 'ಮೆಸ್ಟಿಜಾ' ಅವರೂ ಈ ದೇಶದಲ್ಲಿದ್ದಾರೆ. ಮೆಕ್ಸಿಕೊ ಪುರಾತನ ನಾಡು. ಸ್ಪ್ಯಾನಿಷ್ ಜನರು ಬರುವುದಕ್ಕೆ ಎಷ್ಟೋ ಶತಮಾನಗಳ ಮೊದಲೇ ಇಲ್ಲಿ ಅಜ್‌ಟೆಕರು, ಮಾಯಾಗಳು ಮತ್ತಿತರರು ವಾಸವಾಗಿದ್ದರು. ಪುರಾತನ ಕಾಲದ ಸಂಸ್ಕೃತಿಯನ್ನು ಜನರು ಕಾದುಕೊಂಡು ಬಂದಿದ್ದಾರೆ.

ಶೇಕಡಾ 96 ರಷ್ಟು ಜನ ರೋಮನ್ ಕ್ಯಾಥಲಿಕರು. ಆಡಳಿತ ಭಾಷೆ ಸ್ಪ್ಯಾನಿಷ್.

1917ರ ಸಂವಿಧಾನದಂತೆ ಮೆಕ್ಸಿಕೊ ಆರು ವರ್ಷಗಳಿಗೊಮ್ಮೆ ಅಧ್ಯಕ್ಷರನ್ನು ಆರಿಸುತ್ತದೆ. ಆತನೇ ಸಚಿವ ಸಂಪುಟದ ಸದಸ್ಯರನ್ನು ನೇಮಕ ಮಾಡುತ್ತಾನೆ. ಆಡಳಿತ ಸಭೆಯ ಅರವತ್ತು ಸದಸ್ಯರು ಮತ್ತು ಶಾಸನ ಸಭೆಯ 210 ಸದಸ್ಯರು ಅಧ್ಯಕ್ಷರಿಗೆ ಸಹಕಾರ ನೀಡುತ್ತಾರೆ.

| | | |
|---|---|---|
| ಖಂಡ | : | ಉತ್ತರ ಅಮೆರಿಕ (ದಕ್ಷಿಣದ) |
| ಅಕ್ಷಾಂಶ | : | 14° 31′ ಉ ದಿಂದ 32° 03′ ಉ |
| ರೇಖಾಂಶ | : | 86° 47′ ಪ ದಿಂದ 111° 07′ ಪ |
| ವಿಸ್ತೀರ್ಣ | : | 19,69,366 ಚ.ಕಿ.ಮಿ. |
| ಜನಸಂಖ್ಯೆ | : | 4,10,00,000 |
| ರಾಜಧಾನಿ | : | ಮೆಕ್ಸಿಕೊ ನಗರ |
| ಭಾಷೆ | : | ಸ್ಪ್ಯಾನಿಷ್ |
| ಸರಕಾರ | : | ಒಕ್ಕೂಟ ಗಣರಾಜ್ಯ |
| ಬಾವುಟ | : | ಹಸಿರು, ಬಿಳಿ, ಕೆಂಪು, ಬಣ್ಣದ ಪಟ್ಟೆಗಳು ಮಧ್ಯದಲ್ಲಿ ಮನೆತನದ ಫಲಕ |

## ಮೆಸಪಟೇಮಿಯ

ನೋಡಿ : ಇರಾಕ್

## ಮೊರಾಕೊ

'ಮಗ್ರಿಬ್ ಅಲ್ ಅಕ್ಸ'

—ಅಂದರೆ, ಅತಿ ಪಶ್ಚಿಮದ ನೆಲ.

ಅರಬರ ದೇಶಗಳಲ್ಲಿ ಅತ್ಯಂತ ಪಶ್ಚಿಮಕ್ಕೆ ಇರುವ ಮೊರಾಕೊ ದೇಶಕ್ಕೆ ಅರಬರ ಭಾಷೆಯಲ್ಲಿ ಈ ಹೆಸರು.

ಆಫ್ರಿಕದ ವಾಯುವ್ಯದಲ್ಲಿರುವ ಈ ರಾಜ್ಯ ಭೂಮಧ್ಯ ಸಮುದ್ರ ಮತ್ತು ಅಟ್ಲಾಂಟಿಕ್ ಸಮುದ್ರ ದಂಡೆಯ ಮೇಲಿದೆ.

ಮೊರಾಕೊ ದೇಶದ ಜನರು ಮುಖ್ಯವಾಗಿ ರೈತರು, ಶ್ರಮಜೀವಿಗಳು. ದಕ್ಷಿಣದಲ್ಲಿ ಇಂದಿಗೂ ಕೆಲವು ಬಣದವರು ಓಯಸಿಸ್‌ನಿಂದ ಓಯಸಿಸ್‌ಗೆ ವಲಸೆ ಹೋಗುತ್ತಲೇ ಇರುತ್ತಾರೆ.

ಕೆಲವು ಅಲೆಮಾರಿಗಳು ಎತ್ತರದ ಪ್ರಸ್ಥಭೂಮಿಗಳಲ್ಲಿ ಡೇರೆ ಹಾಕಿಕೊಂಡು ಪಶುಪಾಲನೆ ಮಾಡುತ್ತಾರೆ. ಹೆಂಗಸರು ಕುರಿಗಳ ತುಪ್ಪಟದಿಂದ ಸೊಗಸಾದ ಕಂಬಳಿಗಳನ್ನು ತಯಾರಿಸಿ ಮಾರುತ್ತಾರೆ. ಆದರೆ ಮುಖ್ಯವಾಗಿ ಮಾಂಸಕ್ಕಾಗಿಯೇ ಅವರು ಪ್ರಾಣಿಗಳನ್ನು ಸಾಕುವುದು.

ಹಿಂದಿನ ಕಾಲದಲ್ಲಿ ಹೆಂಗಸರು ಮನೆ ಬಿಟ್ಟು ಅಷ್ಟಾಗಿ ಹೊರಬರುತ್ತಿರಲಿಲ್ಲ. ಆದರೆ ಈಗ ಹೆಚ್ಚು ಸ್ವಾತಂತ್ರ್ಯವಿದೆ. ಪಟ್ಟಣದಲ್ಲಿ ಇಂದಿಗೂ ಕೆಲವು ಕಡೆ ಘೋಷಾ ಪದ್ಧತಿಯುಂಟು. ಹಳ್ಳಿಯ ಹೆಂಗಸರು ಗದ್ದೆಗಳಲ್ಲಿ ಕೆಲಸ ಮಾಡಬೇಕಾಗಿರುವುದರಿಂದ ಅವಕುಂಠನ ಹಾಕಿಕೊಂಡಿರುವುದಿಲ್ಲ.

ವಿದ್ಯಾಭ್ಯಾಸ ಇನ್ನೂ ಹೆಚ್ಚಬೇಕಾಗಿದೆ. ಇಂದಿಗೂ ಅನಕ್ಷರಸ್ಥರು ಬಹುಸಂಖ್ಯೆಯಲ್ಲಿದ್ದಾರೆ. 1964ರಲ್ಲಿ ಕಡ್ಡಾಯ ಪ್ರಾಥಮಿಕ ಶಿಕ್ಷಣ ಜಾರಿಗೆ ಬಂದಿತು. ವಿಶ್ವವಿದ್ಯಾನಿಲಯಗಳಲ್ಲಿ ಪ್ರಮುಖವಾದುವು ರಬಾತ್ ವಿಶ್ವವಿದ್ಯಾನಿಲಯ ಮತ್ತು ಪ್ರಾಚೀನ ಇಸ್ಲಾಮಿ ಖುರಾನ್ ವಿಶ್ವವಿದ್ಯಾನಿಲಯ.

ಶಿಲಾಯುಗದಲ್ಲಿ ಗವಿವಾಸಿಗಳು ಮೊರಾಕೊ ದೇಶದಲ್ಲಿ ವಾಸಿಸುತ್ತಿದ್ದರು. ಸುಮಾರು ಕ್ರಿ.ಪೂ. 2000 ವೇಳೆಗೆ ಅನಾಗರಿಕ ಬಣದವರು ಅಲ್ಲಿ ನೆಲೆಸಿದರು. ಅನೇಕ ಪರದೇಶೀಯ ಆಕ್ರಮಣಕಾರರು ಬಂದುಹೋದರೂ ಈ ಬಣದವರು ಇಂದಿಗೂ ಮೊರಾಕೊದಲ್ಲಿ ಉಳಿದುಕೊಂಡಿದ್ದಾರೆ. ಆಕ್ರಮಣ ನಡೆಸಿದವರಲ್ಲಿ ಪ್ರಮುಖರು ಅರಬರು. ಏಳನೆಯ ಶತಮಾನದ ಆದಿಯಲ್ಲಿ ಇವರು ಮೊರಾಕೊ ದೇಶಕ್ಕೆ ಬಂದರು. ಎಂಟನೆಯ ಶತಮಾನದಲ್ಲಿ ಮಹಮ್ಮದ್ ಪೈಗಂಬರರ ಅನುಯಾಯಿ ಇದ್ರಿಸ್ ಎಂಬವನು ಪ್ರಥಮ ಮೊರಾಕೊ ರಾಜ್ಯವನ್ನು ಸ್ಥಾಪಿಸಿದ. ಅಲ್ಲಿಂದ ಮುಂದೆ ಅನೇಕ ಮುಸಲ್ಮಾನ ಅರಸರು ಈ ದೇಶವನ್ನಾಳಿದರು. ಈಗಲೂ ಈ ದೇಶದಲ್ಲಿ ಬಹು ಮಂದಿ ಮುಸಲ್ಮಾನರು.

1912ರಲ್ಲಿ ಫ್ರಾನ್ಸ್ ಮೊರಾಕೊವಿನಲ್ಲಿ ರಕ್ಷಣಾಧಿಕಾರ ಸ್ಥಾಪಿಸಿತು. ಸ್ಪೇನ್ ಮೊರಾಕೊ ದೇಶದ ಉತ್ತರ ಭಾಗಗಳನ್ನು ಪಡೆದುಕೊಂಡಿತು.

1956ರಲ್ಲಿ ಫ್ರಾನ್ಸ್ ಮೊರಾಕೊವನ್ನು ಸ್ವತಂತ್ರ ದೇಶ ಎಂದು ಒಪ್ಪಿ ಗೌರವಿಸಿತು. ಸ್ವಲ್ಪಕಾಲದಲ್ಲಿ ಸ್ಪೇನ್ ಸಹ ಇದಕ್ಕೆ ಮನ್ನಣೆ ನೀಡಿತು. 1957ರಲ್ಲಿ ಅಲ್ಲಿನ ಸುಲ್ತಾನ ಮೊರಾಕೊದ ದೊರೆ ಎಂಬ ಬಿರುದನ್ನು ಪಡೆದ. ಹಿಂದೆ ಅಂತರರಾಷ್ಟ್ರೀಯ ಬಂದರಾಗಿದ್ದ ಟನ್ಜೀರ್ ಈಗ ಮೊರಾಕೊವಿನ ಒಂದು ಭಾಗವಾಗಿದೆ. ಆದರೆ ಇಫ್ನಿ ಮುಂತಾದ ಇನ್ನೂ ಕೆಲವು ಪ್ರದೇಶಗಳು ಸ್ಪೇನಿನ ಆಡಳಿತಕ್ಕೆ ಇಂದೂ ಒಳಪಟ್ಟಿವೆ.

ರಬಾತ್ ಮೊರಾಕೊವಿನ ರಾಜಧಾನಿ; ಇದು ಅಟ್ಲಾಂಟಿಕ್ ತೀರದಲ್ಲಿದೆ. ಮೊರಾಕೊ ದೇಶದ ಪ್ರಮುಖ ಬಂದರಾದ ಕಸಬ್ಲಾಂಕ ನೈಋತ್ಯದಲ್ಲಿದೆ. ಕರುಯಿಯಾನ್ ಎಂಬಲ್ಲಿ ಆಫ್ರಿಕ ಖಂಡದಲ್ಲೆಲ್ಲ ದೊಡ್ಡದಾದ ಮಸೀದಿಯಿದೆ.

ಮೊರಾಕೊ ದೇಶದ ಭೂಮಿ ಸಾಕಷ್ಟು ಫಲವತ್ತಾದದ್ದು. ಗೋಧಿ, ಬಾರ್ಲಿ, ಕಿತ್ತಳೆ, ನಿಂಬೆ, ಬಾದಾಮಿ, ಖರ್ಜೂರ ಮುಂತಾದುವು ಬೆಳೆಯುತ್ತವೆ.

ಖನಿಜಗಳೂ ಇಲ್ಲಿ ಸಮೃದ್ಧವಾಗಿವೆ; ಸರಕಾರ ನಡೆಸುತ್ತಿರುವ ಗಣಿಗಳಿಂದ ಜಗತ್ತಿನ ರಂಜಕದ ಶೇಕಡಾ ಇಪ್ಪತ್ತರಷ್ಟು ದೊರೆಯುತ್ತವೆ. ಇತರ ಖನಿಜಗಳು ಕಬ್ಬಿಣ, ಮ್ಯಾಂಗನೀಸ್, ಸೀಸ, ಕಲ್ಲಿದ್ದಲು.

ಮೊರಾಕೊ ದೇಶದಲ್ಲಿ ಸಂವಿಧಾನಬದ್ಧ ರಾಜಪ್ರಭುತ್ವವಿದೆ. ರಾಜನೇ ಮುಖ್ಯಸ್ಥ. ಸಂಸತ್ತಿನಲ್ಲಿ ಎರಡು ಸದನಗಳಿವೆ. ಕೆಳಗಣ ಸದನದ ಸದಸ್ಯರು ಜನತೆಯಿಂದ ಚುನಾಯಿತರಾದವರು. ಇಸ್ಲಾಂ ರಾಷ್ಟ್ರಧರ್ಮ.

| | | |
|---|---|---|
| ಸ್ಥಳ | ; | ಆಫ್ರಿಕ (ವಾಯವ್ಯ) |
| ಅಕ್ಷಾಂಶ | : | 27° 40′ ಉ ದಿಂದ 35° 55′ ಉ |
| ರೇಖಾಂಶ | : | 1° ಪ ದಿಂದ 13° 10′ ಪ |
| ವಿಸ್ತೀರ್ಣ | ; | 4,43,680 ಚ. ಕಿ. ಮಿ. |
| ಜನಸಂಖ್ಯೆ | : | ಸುಮಾರು 1,20,00,000 |
| ರಾಜಧಾನಿ | : | ರಬಾತ್ |
| ಭಾಷೆ | : | ಅರಬಿ (ಆಡಳಿತ), ಬರ್‌ಬರ್, ಫ್ರೆಂಚ್ ಮತ್ತು ಸ್ಪ್ಯಾನಿಷ್ |
| ಸರಕಾರ | : | ಸಂವಿಧಾನಬದ್ಧ ರಾಜಪ್ರಭುತ್ವ |
| ಬಾವುಟ | : | ಮಧ್ಯದಲ್ಲಿ ಹಸಿರು ಬಣ್ಣದ ನಕ್ಷತ್ರವಿರುವ ಕೆಂಪು ಬಾವುಟ |

## ಮೌಲ್ಯಭೇದನ

ಒಂದು ದೇಶದ ಹಣಕ್ಕೆ ಎರಡು ವಿಧದ ಮೌಲ್ಯವುಂಟು. ದೇಶದಲ್ಲಿ ಸರಕು ಸೇವೆಗಳ ಬೆಲೆ ಮಟ್ಟವು ಸೂಚಿಸುವ ಒಳಮೌಲ್ಯ ಒಂದು ; ದೇಶದ ಹಣಕ್ಕೆ ಪ್ರತಿಯಾಗಿ ಇತರ ದೇಶಗಳ ಹಣಗಳನ್ನು ಪಡೆಯುವಾಗ ಮೊದಲ ದೇಶದ ಹಣಕ್ಕೆ ಇರುವ ಮೌಲ್ಯ ಎರಡನೆಯದು. ಈ ಎರಡನೆಯ ಮೌಲ್ಯವೇ ವಿದೇಶೀ ವಿನಿಮಯ ದರ.

ವಿದೇಶೀ ವಿನಿಮಯ ದರ ದೇಶದ ಹಣಕ್ಕೆ ಇರುವ ಹೊರಮೌಲ್ಯವನ್ನು ಸೂಚಿಸುತ್ತದೆ. ಒಂದು ಅಮೆರಿಕದ ಡಾಲರ್ ಭಾರತದ ಏಳೂವರೆ ರೂಪಾಯಿಗೆ ಸಮ. ಅಂತರರಾಷ್ಟ್ರೀಯ ವ್ಯಾಪಾರದಲ್ಲಿ ಇದನ್ನೇ ಅನುಸರಿಸಲಾಗುತ್ತದೆ. ಅಂದರೆ ಅಮೆರಿಕದಲ್ಲಿ ಒಂದು ಡಾಲರಿಗೆ ಎಷ್ಟು ವಸ್ತುಗಳು ಸಿಗುವುವೋ ಅಷ್ಟು ವಸ್ತುಗಳು ಏಳೂವರೆ ರೂಪಾಯಿಗೆ ಭಾರತದಲ್ಲಿ ಸಿಗಬೇಕು. ರೂಪಾಯಿನ ಒಳಮೌಲ್ಯ ಹೊರಮೌಲ್ಯ ಒಂದೇ ಆಗಿದ್ದರೆ ಇಂಥ ವ್ಯಾಪಾರ ಸಾಧ್ಯ. ರೂಪಾಯಿನ ಮೌಲ್ಯ ಕುಗ್ಗಿದರೆ ಅಷ್ಟೇ ಪದಾರ್ಥಗಳಿಗೆ ಏಳೂವರೆ ರೂಪಾಯಿಗಿಂತ ಹೆಚ್ಚಿಗೆ ಭಾರತದಲ್ಲಿ ಕೊಡಬೇಕು.

ಒಳಮೌಲ್ಯ ಕುಗ್ಗಿದರೆ ರಫ್ತುಮಾಡಲು ದೇಶದೊಳಗೆ ಶೇಖರಿಸಬೇಕಾದ ಪದಾರ್ಥಗಳಿಗೆ ಹೆಚ್ಚು ಹಣ ನೀಡಬೇಕಾಗುತ್ತದೆ. ಅಂತರರಾಷ್ಟ್ರೀಯ ವ್ಯಾಪಾರದಲ್ಲಿ ಹೊರಮೌಲ್ಯವನ್ನು ಸೂಚಿಸುವ ವಿನಿಮಯ ದರದಲ್ಲಿ ಬೆಲೆ ನಮೂದಿಸಬೇಕು. ಡಾಲರಿಗೆ ಆರು ರೂಪಾಯಿ ಸಮ ಎಂದುಕೊಳ್ಳೋಣ. ಭಾರತದಿಂದ ಅಮೆರಿಕಕ್ಕೆ ಕಳುಹಿಸುವ ಒಂದು ಸಾಮಾನಿನ ಬೆಲೆ ಹನ್ನೆರಡು ರೂಪಾಯಿಗಳಿದ್ದುದು ಭಾರತದಲ್ಲಿ ಬೆಲೆ ಏರಿದ್ದರಿಂದ ಅದಕ್ಕೆ ಹದಿನೈದು ರೂಪಾಯಿ ಆಗುತ್ತದೆ ಎಂದು ಭಾವಿಸೋಣ. ಅಮೆರಿಕದವರಿಗೆ ಬೆಲೆ ಹೇಳಬೇಕಾದರೆ ಡಾಲರಿನಲ್ಲಿ ಹೇಳಬೇಕು. 12 ರೂ. ಗಳ ಬೆಲೆ ಇದ್ದಾಗ ಎರಡು ಡಾಲರ್ ಬೆಲೆ ಎನ್ನುತ್ತೇವೆ. 15 ರೂ. ಗಳಾದಾಗ ಎರಡೂವರೆ ಡಾಲರ್ ಎನ್ನುತ್ತೇವೆ. ಬೆಲೆ ಹೆಚ್ಚಾಯಿತು ಎಂದು ಅಮೆರಿಕದವರಿಗೆ ತೋರುತ್ತದೆ. ಬೇರೊಂದು ದೇಶ ಅದೇ ಸಾಮಾನನ್ನು ಎರಡು ಡಾಲರಿಗೆ ಕೊಡಲು ಸಿದ್ಧವಿದ್ದರೆ, ಅಮೆರಿಕ ಅಲ್ಲಿಂದ ಕೊಳ್ಳುತ್ತದೆ.

ಇದೇ ಪರಿಸ್ಥಿತಿ ಮುಂದುವರಿದರೆ ಆಮದು ಹೆಚ್ಚಿ ರಫ್ತು ಕಡಮೆಯಾಗಿ ಬೇರೆ ಬೇರೆ ದೇಶಗಳಿಗೆ ವಿದೇಶೀ ವಿನಿಮಯವನ್ನು ಹೆಚ್ಚು ಹೆಚ್ಚು ಸಲ್ಲಿಸಬೇಕಾಗಿ ಬರುತ್ತದೆ. ಈ ಪರಿಸ್ಥಿತಿಯಿಂದ ಪಾರಾಗಲು ಅನುಸರಿಸುವ ರೀತಿ ಮೌಲ್ಯಭೇದನ. ದೇಶದ ಹಣದ ಹೊರಮೌಲ್ಯವನ್ನು ತುಂಡರಿಸುವುದು ಮೌಲ್ಯಭೇದನ. ಇತರ ದೇಶದ ಹಣಗಳ ಜೊತೆ ಒಂದು ದೇಶದ ವಿನಿಮಯ ದರವನ್ನು ಹೆಚ್ಚಿಸುವುದೇ ಮೌಲ್ಯಭೇದನದ ಉದ್ದೇಶ.

ಮೇಲಿನ ಉದಾಹರಣೆಯನ್ನೇ ನೆನೆಸಿಕೊಂಡರೆ, ಅಮೆರಿಕದವರು ನಮ್ಮ ವಸ್ತುವನ್ನೇ ಕೊಳ್ಳಬೇಕಾಗಿದ್ದರೆ ನಾವು ಅವರಿಗೆ ಅದರ ಬೆಲೆ ಎರಡು ಡಾಲರೆಂದೇ ಹೇಳಬೇಕು. ಎಂದರೆ ಅವರ ಒಂದು ಡಾಲರಿಗೆ ನಮ್ಮ ಏಳೂವರೆ ರೂಪಾಯಿ ಸಮಾನ ಎಂದು ಒಪ್ಪಿಕೊಂಡಂತಾಯಿತು. ಡಾಲರಿನೊಂದಿಗೆ ಹೋಲಿಸಿದಾಗ–ಡಾಲರಿನೊಂದಿಗೆ ವಿನಿಮಯ ಮಾಡಿಕೊಳ್ಳುವಾಗ–ನಮ್ಮ ರೂಪಾಯಿಯ ಬೆಲೆ ಇಳಿಯಿತು ; 'ಮೌಲ್ಯಭೇದನ' ಆಯಿತು.

ಮೌಲ್ಯಭೇದನದ ಅನಂತರ ಹೊರ ದೇಶಗಳಿಗೆ ರಫ್ತುಮಾಡಲಾಗುವ ಸರಕು ಅಗ್ಗವಾಗಿ ತೋರುತ್ತದೆ. ದೇಶದ ಸರಕಿಗೆ ಹೊರದೇಶಗಳಿಂದ ಬೇಡಿಕೆ ಏರುತ್ತದೆ. ಆಮದು ದುಬಾರಿ ಎನಿಸುತ್ತದೆ. ನಮ್ಮ ಹಿಂದಿನ ಉದಾಹರಣೆಯನ್ನೆ ತೆಗೆದುಕೊಂಡರೆ, ವಿನಿಮಯದ ದರ ಡಾಲರಿಗೆ ಆರು ರೂಪಾಯಿಗಳಿದ್ದಾಗ, ಅಮೆರಿಕದ ಎರಡು ಡಾಲರಿನ ವಸ್ತುವಿಗೆ ಹನ್ನೆರಡು ರೂಪಾಯಿಗಳನ್ನು ಕೊಡಬೇಕಾಗಿತ್ತು. ಮೌಲ್ಯಭೇದನದ ಅನಂತರ ಹದಿನೈದು ರೂಪಾಯಿಗಳನ್ನು ಕೊಡಬೇಕು. ಹೀಗೆ ಆಮದಾದ ವಸ್ತುಗಳಿಗೆ ದೇಶದೊಳಗೆ ಬೆಲೆ ಹೆಚ್ಚಾಗುತ್ತದೆ. ಆಮದು ಕುಗ್ಗುತ್ತದೆ ; ರಫ್ತು ಹಿಗ್ಗುತ್ತದೆ.

ನಮ್ಮ ದೇಶದ ಹಣದ ಒಳಮೌಲ್ಯ ಕುಗ್ಗಿದಂತೆ ಇತರ ದೇಶಗಳ ಹಣದ ಒಳಮೌಲ್ಯಗಳು ಸಹ ಕುಗ್ಗಿದರೆ ಆ ದೇಶಗಳೂ ಮೌಲ್ಯಭೇದನ ನಡೆಸುವ ಅಗತ್ಯ ಬೀಳುತ್ತದೆ. ಇತರ ದೇಶಗಳೂ ಮೌಲ್ಯಭೇದನ ನಡೆಸಿದಲ್ಲಿ ಮೌಲ್ಯಭೇದನ ನಡೆಸಿದ ಎರಡೂ ದೇಶಗಳ ಹಣದ ಹೊರಮೌಲ್ಯ ಮುಂಚಿನ ಪ್ರಮಾಣದಲ್ಲಿ ಮುಂದುವರಿಯುತ್ತದೆ. ಭಾರತದ ರೂಪಾಯಿಯ ಒಳಮೌಲ್ಯ ಅರ್ಧಕ್ಕೆ ಇಳಿಯಿತು ಎಂದಾಗ, ಮೌಲ್ಯಭೇದನಗೊಳಿಸಿ ಒಂದು ಡಾಲರಿಗೆ 12 ರೂಪಾಯಿ ಸಮ ಎಂದು ಭಾರತ ಘೋಷಿಸಿದರೆ, ಪರಿಹಾರ ಸಿಕ್ಕಂತೆ ಆಗುತ್ತದೆ. ಅಮೆರಿಕದ ಡಾಲರಿನ ಹೊರಮೌಲ್ಯ ಕೂಡ ಅರ್ಧಕ್ಕೆ ಇಳಿದಲ್ಲಿ ಅಮೆರಿಕವೂ ಮೌಲ್ಯಭೇದನ ಮಾಡಿ ಭಾರತದ ಹನ್ನೆರಡು ರೂಪಾಯಿಗೆ ಎರಡು ಡಾಲರ್ ಸಮ ಎಂದು ಘೋಷಿಸಿದರೆ ಆಗ ವಿನಿಮಯದ ದರ ಮುಂಚಿನಂತೆಯೇ ಒಂದು ಡಾಲರಿಗೆ ಆರು ರೂಪಾಯಿ ಒಂದಾಗುತ್ತದೆ.

ಯಾವುದಾದರೊಂದು ದೇಶ ತನ್ನ ಹಣದ ಮೌಲ್ಯಭೇದನ ನಡೆಸಿದರೆ ಇತರ ದೇಶಗಳೂ ಅದೇ ರೀತಿ ಮಾಡುತ್ತವೆಂದು ನಿರೀಕ್ಷಿಸಲಾಗದು. ಭಾರತದ 1966ರಲ್ಲಿ ರೂಪಾಯಿಯ ಮೌಲ್ಯಭೇದನ ಮಾಡಿತು. ಇತರರು ಮಾಡಲಿಲ್ಲ. ಇತರ ದೇಶಗಳ ರಫ್ತು ಸಾಮರ್ಥ್ಯ, ವಿದೇಶೀ ವಿನಿಮಯ ಒದಗಿಸುವ ಚೈತನ್ಯ ಬಲವಾಗಿಯೇ ಇರಬಹುದು. ಆರ್ಥಿಕ ಸ್ಥಿತಿ ಚಿಂತಾಜನಕವಾದ ದೇಶಗಳು ಮಾತ್ರ ಮೌಲ್ಯಭೇದನದ ಹಾದಿ ಹಿಡಿಯುತ್ತವೆ.

ಆದ್ದರಿಂದ ಮೌಲ್ಯಭೇದನ ಆರ್ಥಿಕ ದುರ್ಬಲತೆಯ ಲಕ್ಷಣ ಎಂದು ಪರಿಗಣಿಸಲಾಗುತ್ತದೆ.

ಇತರ ದೇಶಗಳಲ್ಲಿ ತನ್ನ ದೇಶದ ರಫ್ತಿಗೆ ಒಳ್ಳೆಯ ಬೇಡಿಕೆಯಿದ್ದರೆ. ಆಮದು ಮಾಡಿಕೊಳ್ಳುವ ಅಗತ್ಯ ಇದ್ದರೆ. ಅಂಥ ದೇಶ ತನ್ನ ಹಣದ ಮೌಲ್ಯವನ್ನು ಭೇದಿಸುವುದಿಲ್ಲ. ಅದರ ಬದಲು ಹೆಚ್ಚಿಸುತ್ತದೆ. ಆ ಕ್ರಮ ಮೌಲ್ಯೋತ್ಕರ್ಷಣ. ಪಶ್ಚಿಮ ಜರ್ಮನಿ ತನ್ನ ಮಾರ್ಕ್ ಅನ್ನು 1969ರಲ್ಲಿ ಮೌಲ್ಯೋತ್ಕರ್ಷಣಕ್ಕೆ ಒಳಪಡಿಸಿತು.

ನೋಡಿ : ಜೀವನ ಮಟ್ಟ : ಹಣ : ಹಣಕಾಸು : ಹಣದುಬ್ಬರ

## ಯಂತ್ರ

ಆಧುನಿಕ ನಗರಗಳಲ್ಲಿ ಕಾಣುವ ದೊಡ್ಡ ದೊಡ್ಡ ಯಂತ್ರಗಳು ಮನುಷ್ಯನ ಬುದ್ಧಿಶಕ್ತಿಯ ಫಲ. ಅವನ್ನು ನಿರ್ಮಿಸಲು ಸ್ಫೂರ್ತಿ ನೀಡಿದ್ದು ಪ್ರಕೃತಿ. ಕಡಮೆ ಶ್ರಮ. ಹೆಚ್ಚು ಸಾಧನೆ- ಯಂತ್ರಗಳ ಉದ್ದೇಶ.

ಯಂತ್ರಗಳ ಜ್ಞಾನ ಮನುಷ್ಯನಿಗೆ ಕ್ರಮ ಕ್ರಮವಾಗಿ ಬಂದದ್ದು ಕೆಲವೇ ಸಾವಿರ ವರ್ಷಗಳ ಹಿಂದೆ. ಆತನ ಬಳಿ ಹೇಳಿಕೊಳ್ಳುವಂಥ ಉಪಕರಣಗಳು ಇರಲಿಲ್ಲ. ಪ್ರಾಚೀನ ಮಾನವನಿಗೂ ಮೃಗಗಳಿಗೂ ಒಂದು ವ್ಯತ್ಯಾಸವಿದ್ದಿತು–ಮೃಗಗಳಿಗೆ ಅಗಾಧ ದೈಹಿಕ ಶಕ್ತಿ; ಮಾನವನಿಗೆ ಬುದ್ಧಿಶಕ್ತಿ ಮತ್ತು ಜ್ಞಾಪಕಶಕ್ತಿ. ಅವನ ಈ ವಿಶೇಷ ಗುಣಗಳು ಅನೇಕ ಸಂಶೋಧನೆ, ಸಾಧನೆಗಳಿಗೆ ಕಾರಣವಾದುವು. ಮರದ ರೆಂಬೆಗೆ ಮನುಷ್ಯ ಜೋತು ಬಿದ್ದ. ರೆಂಬೆ ಮರದ ಬೊಡ್ಡೆಯನ್ನು ಸೇರುವ ಕಡೆಯಿಂದ ದೂರ ದೂರ ಆತ ಸರಿದು ತೂಗಾಡಿದಾಗ ಆತನಿಗೆ ಅನಿಸಿತು, ದೂರ ಸರಿದಷ್ಟು 'ಮಾಟು' ವುದು, 'ತೂಗು'ವುದು ಸುಲಭ ಎಂದು. ಸನ್ನೆಯ ಕಲ್ಪನೆ ಹೀಗೆ ಆತನಲ್ಲಿ ಜನಿಸಿತು. ತನ್ನ ಗುಹೆಯ ಬಾಗಿಲಿಗೆ ಅಡ್ಡ ಇಡುತ್ತಿದ್ದ ಬಂಡೆಯನ್ನು ಸರಿಸುವುದು, ತನ್ನ ಬೇಟೆಯಾದ ದೊಡ್ಡ ಮೃಗದ ದೇಹವನ್ನು ಚರ್ಮ ಸುಲಿಯುವಾಗ ಹೊರಳಿಸುವುದು ಮುಂತಾದುವು ಅವನ ಸನ್ನೆಯ ಉಪಯೋಗಗಳು. ತನಗೆ ಬೇಕಾದ ಮಾಂಸವನ್ನು ಎತ್ತರದ ಮರದ ಮೇಲಿಡಲು ಅಥವಾ ಗುಡಿಸಲಿನ ಚಪ್ಪರದ ಮೇಲೆ ಹರಡಲು ಪ್ರಯತ್ನಿಸಿದಾಗ ಭಾರವನ್ನು ನೆಲದ ಮೇಲಿಂದ ನೇರವಾಗಿ ಎತ್ತುವುದು ಬಹಳ ಕಷ್ಟವಾಗುತ್ತಿತ್ತು. ಎರಡು ದಿಮ್ಮಿಗಳನ್ನು ಓರೆಯಾಗಿ ಆನಿಸಿ ನಿಲ್ಲಿಸಿ ಇಳಿಜಾರಿನ ಮೇಲೆ ಸರಿಸಿದಾಗ ಏರಿಸುವುದು ಸುಲಭ ಎಂದೆನಿಸಿತು. 'ಇಳಿಕಲು' ಹೀಗೆ ಮನುಷ್ಯನ ಮನಸ್ಸಿನಲ್ಲಿ ಮೂಡಿತು. ಸಾಲಾಗಿ ಜೋಡಿಸಿದ ದಿಮ್ಮಿಗಳ ಮೇಲೆ ಅದನ್ನಿರಿಸಿ ಎಳೆದಲ್ಲಿ ಬೇಟೆಯ ಪ್ರಾಣಿ ನೆಲಕ್ಕೆ ಉಜ್ಜುವುದು ತಪ್ಪಿ, ದಿಮ್ಮಿಗಳು ಹೊರಳಿ, ಸುಲಭವಾಗಿ ಭಾರ ಚಲಿಸುತ್ತದೆ. ಇದು 'ಚಕ್ರದ' ಉಗಮ. ಕೊಂಬೆ ಕವಲೊಡೆದಿರುವಲ್ಲಿ ಹೊಸೆದ ಬಳ್ಳಿ ಅಥವಾ ನಾರಿನ ಹಗ್ಗ ಹಾಯಿಸಿದರೆ ತನ್ನ ಬೇಟೆಯ ಪ್ರಾಣಿಯನ್ನು ಅತ್ತ ತೂಗಹಾಕಬಹುದು. ಹಗ್ಗವನ್ನು ಕೆಳಕ್ಕೆ ಎಳೆದರೆ ತೂಗ ಹಾಕಿದ ಭಾರ ಮೇಲಕ್ಕೆ ಹೋಗುತ್ತದೆ. ಸಡಿಲ ಬಿಟ್ಟರೆ ಕೆಳಕ್ಕೆ ಬರುತ್ತದೆ. ಮೊಟ್ಟಮೊದಲ ಒರಟು ರಾಟೆಯನ್ನು ಮನುಷ್ಯ ಕಂಡುಹಿಡಿದದ್ದು ಹೀಗೆ. ಸೀಳು ಬೆಣೆ ಅಥವಾ ಉಳಿ ಪ್ರಾಚೀನ ಮಾನವ ಕಂಡುಕೊಂಡ ಮತ್ತೊಂದು ಸರಳ ಉಪಕರಣ. ದಿಮ್ಮಿಗಳನ್ನು ಸೀಳುವಾಗ ಸೀಳುಬೆಣೆ ಅಥವಾ ಉಳಿ ಶ್ರಮವನ್ನು ಕಡಮೆಮಾಡಿತು. ಪ್ರಾಚೀನ ಮಾನವನ ತಾಂತ್ರಿಕತೆ ಅಭಿವೃದ್ಧಿಹೊಂದಿದಂತೆ ಮೂಡಿದ ಮತ್ತೊಂದು ವಿನ್ಯಾಸ ತಿರುಪು ಬೆಣೆ. ಎರಡು ಭಾಗಗಳನ್ನು ಬಿಗಿಯಾಗಿ ಬೆಸೆಯುವ ತಿರುಪುಬೆಣೆ ಮನುಷ್ಯನ ಗೃಹ ನಿರ್ಮಾಣ ಶಕ್ತಿ ಅಭಿವೃದ್ಧಿ ಹೊಂದಿದ ಮೇಲೆ ಮೂಡಿದ್ದು.

ಕೈಗಡಿಯಾರ. ಬೆರಳಚ್ಚುಯಂತ್ರ, ಮೋಟಾರು ವಾಹನ, ಕ್ರೇನು ಮುಂತಾದ ಎಲ್ಲ ಯಂತ್ರಗಳೂ ಸನ್ನೆ, ರಾಟೆ, ಇಳುಕಲು, ಚಕ್ರ, ತಿರುಪು ಬೆಣೆ ಇವುಗಳಿಂದಲೇ ಆದುವು. ತಿರುಗು ಚಲನೆ ಅನೇಕ ಯಂತ್ರಗಳಿಗೆ ಆಧಾರ.

ಕೈಗಡಿಯಾರದಲ್ಲಿ ಲೋಹಸುರುಳಿ ಬಿಚ್ಚಿಕೊಳ್ಳುವುದರಿಂದ ಉಂಟಾಗುವ ಚಲನೆ, ಚಕ್ರ ಸನ್ನೆಗಳ ಮೂಲಕ ದಾಟಿ ಕೊನೆಗೆ ಮುಳ್ಳುಗಳ ಚಲನೆಗೆ ಕಾರಣವಾಗುತ್ತದೆ. ಬೆರಳಚ್ಚು ಯಂತ್ರದಲ್ಲಿ ಪ್ರತಿ ಅಕ್ಷರದ ಒತ್ತುವಿಕೆಯೂ ಸನ್ನೆಯ ಮೂಲಕ ರವಾನೆಯಾಗುತ್ತದೆ. ಭಾರವಾದ ವಸ್ತುಗಳನ್ನು ಎತ್ತುವಾಗ ರಾಟೆಯ ಮೂಲಕ ಹಗ್ಗವನ್ನು ಹಾಯಿಸಿ ಭಾರವನ್ನು ಎತ್ತುವುದು ಸುಲಭ. ಒಂದಕ್ಕಿಂತ ಹೆಚ್ಚು ರಾಟೆಗಳನ್ನು ಉಪಯೋಗಿಸಿದರೆ ಕಡಮೆ ಶ್ರಮದಲ್ಲಿಯೇ ಹೆಚ್ಚು ಹೆಚ್ಚು ಭಾರಗಳನ್ನು ಸುಲಭವಾಗಿ ಎತ್ತಬಹುದು. ಈ ತತ್ತ್ವವನ್ನು ಸೂಕ್ತವಾಗಿ ಬಳಸಿಕೊಂಡಿರುವ ಸಾಧನ ಕ್ರೇನು. ಅತಿ ಭಾರ ವಸ್ತುಗಳನ್ನು ಮೇಲಕ್ಕೆ ಎತ್ತಲು ಕ್ರೇನ್ ಬಳಸುತ್ತಾರೆ. ಇದು, ವಿದ್ಯುತ್ ಮೋಟಾರಿನ ತಿರುಗು ಚಲನೆಯನ್ನು ಚಕ್ರ ಸನ್ನೆ ರಾಟೆ ಇಳಕಲುಗಳ ಮೂಲಕ ಸೆಳೆದುಕೊಳ್ಳುತ್ತದೆ. ಸರಕನ್ನು ತುಂಬಿಕೊಂಡ ಲಾರಿ ಸಾಗುತ್ತದೆ. ಬೈಸಿಕಲ್ ಸವಾರಿ ಮಾಡಬೇಕಾದರೆ ಅದರ ಕಾಲು ಮಣೆಗಳನ್ನು ಒತ್ತಬೇಕು. ಒತ್ತುವ ಶ್ರಮ, ನಡೆಯುವ ಶ್ರಮವನ್ನು ತಪ್ಪಿಸುತ್ತದೆ, ವೇಗವಾಗಿ ಗುರಿ ತಲಪುವುದು ಸಾಧ್ಯ. ಒಂದು ಬಗೆಯ ಚಲನೆ ಇನ್ನೊಂದು ಬಗೆಯ ಚಲನೆ ರೂಪತಳೆಯುವುದು ಯಂತ್ರಗಳ ಮೂಲಕ. ಶ್ರಮದ ಸ್ವರೂಪ ಬದಲಾಗುವುದಕ್ಕೂ ಯಂತ್ರಗಳು ಕಾರಣ. ಒಂದು ನೂರು ವರ್ಷಗಳ ಹಿಂದೆ ಒಂದು ಹೆಕ್ಟೇರನ್ನು ಉತ್ತು, ಬಿತ್ತಿ, ಬೆಳೆ ಕೊಯ್ದು, ಜೋಳ ಬೇರೆ ಮಾಡಲು ಸಂಯುಕ್ತ ಸಂಸ್ಥಾನದಲ್ಲಿ 64 ಗಂಟೆ, 15 ಮಿನಿಟು ಹಿಡಿಯುತ್ತಿತ್ತು. ಈಗ ಇಷ್ಟೇ ಕೆಲಸ 2 ಗಂಟೆ, 23 ಮಿನಿಟುಗಳಲ್ಲಿ ಮುಗಿಯುತ್ತದೆ.

ಇಂದು ಬಳಸುತ್ತಿರುವ ಸಾವಿರಾರು ಬಗೆಯ ಯಂತ್ರಗಳನ್ನು ಸ್ಥೂಲವಾಗಿ ಮೂರು ವಿಭಾಗಗಳಾಗಿ ವಿಂಗಡಿಸಬಹುದು–ವಾಹನಗಳು, ವಸ್ತು



ಬೆಂಗಳೂರಿನ ಹಿಂದೂಸ್ಥಾನ್ ಮೆಷಿನ್ ಟೂಲ್ಸ್‌ನ ಸೃಷ್ಟಿ
ವಿದ್ಯುತ್ ನಿಯಂತ್ರಿತ ಮಿಲ್ಲಿಂಗ್ ಯಂತ್ರ

ಉತ್ಪಾದನೆಗೆ ನೆರವಾಗುವ ಯಂತ್ರಗಳು ಮತ್ತು ಜ್ಞಾನದ ಸಾಧನೆಗೆ ಒದಗಿ ಬರುವ ಯಂತ್ರೋಪಕರಣಗಳು.

ಮಗುವನ್ನು ಉಲ್ಲಾಸದಿಂದಿರಿಸಲು ಸರಳವಾದ ಬಂಡಿ ಬೇಕು; ಚಂದ್ರ ಉಪಗ್ರಹ ಯಾತ್ರೆಗೆ ಅತ್ಯಂತ ಜಟಿಲ ಅಂತರ್ಗ್ರಹ ನೌಕೆ ಅಗತ್ಯ. ವಾಹನಗಳು ಕಾಲ–ದೇಶ ಇವೆರಡನ್ನೂ ಕುಗ್ಗಿಸಿವೆ. ವಸ್ತುಗಳ ಉತ್ಪಾದನೆಗೆ ನೆರವಾಗುವ ಯಂತ್ರಗಳು ಬಳಕೆಗೆ ಬಂದಾಗ ಕೈಗಾರಿಕಾ ಕ್ರಾಂತಿಯೇ ಸಂಭವಿಸಿತು. ಯಂತ್ರಗಳು ಜೀವನೋಪಾಯದ ಮೇಲೆ ತೀವ್ರ ಪರಿಣಾಮ ಬೀರುತ್ತವೆ; ಅವುಗಳ ಬಳಕೆ ಕ್ರಮಬದ್ಧವಾಗಿ ಆದಷ್ಟೂ ಯೋಜನೆಗೆ ಹೊಂದಿ ನಡೆದಷ್ಟೂ ಬಾಳಿಗೆ ಅವು ನೆರವಾಗುತ್ತವೆ. ಸಾಧನ ಸೌಲಭ್ಯಗಳು ಹೆಚ್ಚು ಲಭ್ಯವಾಗಿ ಅನೇಕ ದೇಶಗಳ ಜೀವನಮಟ್ಟ ಏರಲು ಕೈಗಾರಿಕೆಗಳೇ ಕಾರಣ. ಆಧುನಿಕ ಉಪಕರಣಗಳಿಂದ ಆಹಾರದ ಉತ್ಪಾದನೆಗೆ ಹೆಚ್ಚಳ; ಬಟ್ಟೆಯ ಅಗಾಧ ತಯಾರಿಕೆ; ಮೇಜು, ಕುರ್ಚಿ, ಕಾರು, ಗಡಿಯಾರ ಇಂಥ ಸಾಮಗ್ರಿಗಳ ಅಧಿಕ ಉತ್ಪಾದನೆ; ಈ ಮೂಲಕ ದೇಶದ ಸಂಪತ್ತು ಹೆಚ್ಚಲು ಯಂತ್ರಗಳು ಕಾರಣ. ಬೆರಳಚ್ಚು, ಮುದ್ರಣ, ರೇಡಿಯೊ, ಟೆಲಿವಿಷನ್, ಸೂಕ್ಷ್ಮದರ್ಶಕ ದೂರದರ್ಶಕಗಳು ಮುಂತಾದುವು ಜ್ಞಾನಸಾಧಕ ಉಪಕರಣಗಳು. ಜ್ಞಾನ ಸಂಪಾದನೆ, ಸಂಶೋಧನೆ, ಪ್ರಯೋಗ ಇವುಗಳ ಬಗೆಗೆ ಆಲೋಚಿಸುವಾಗ ಭೂಮಂಡಲದ ಬುದ್ಧಿಜೀವಿಗಳು ಸಹಜವಾಗಿ ಒಂದಾಗುತ್ತಾರೆ. ತಮ್ಮ ಜ್ಞಾನವನ್ನು ವಿಸ್ತರಿಸಿಕೊಳ್ಳುವಲ್ಲಿ ಸದಾ ಪೈಪೋಟಿ.

ಯಂತ್ರೋಪಕರಣಗಳಲ್ಲಿ ಎಲೆಕ್ಟ್ರಾನಿಕ್ ಅಂಗಗಳನ್ನು ಹೆಚ್ಚು ಬಳಸತೊಡಗಿದಂತೆ ಅವುಗಳ ಸಾಮರ್ಥ್ಯ ಹೆಚ್ಚುತ್ತದೆ. ಯಂತ್ರಗಳಲ್ಲಿ ಇತ್ತೀಚಿನ ಅದ್ಭುತ: ಕಂಪ್ಯೂಟರ್ (ಗಣಕಯಂತ್ರ). ಇದು ಮಾನವ ನಿರ್ಮಿತ ಮೆದುಳು. ಮಾಹಿತಿಗಳನ್ನು ಕಂಪ್ಯೂಟರ್‌ಗೆ ದೂಡಿದರೆ ನಮಗೆ ಅಗತ್ಯವಾದ ವಿವರಗಳನ್ನು ಅದು ಒದಗಿಸುತ್ತದೆ. ನೂರಾರು ಮಂದಿ ಹಲವಾರು ತಿಂಗಳು ಕುಳಿತು ಮಾಡಬೇಕಾದ ಕೂಡಿ ಕಳೆದು ಗುಣಿಸಿ ಭಾಗಿಸುವ ಲೆಕ್ಕಾಚಾರಗಳನ್ನು ಹಲವೇ ದಿನಗಳಲ್ಲಿ ಸಿದ್ಧಪಡಿಸುವ ಸಾಮರ್ಥ್ಯ ಅದಕ್ಕಿದೆ. ವಿಮಾನದ ಇಳಿದಾಣ, ವಸ್ತುಗಳ ತಯಾರಿಕೆಯಲ್ಲಿ ಬಳಸಬೇಕಾದ ಮಿಶ್ರಣಗಳ ಪ್ರಮಾಣ, ತಯಾರಾಗುವ ವಿದ್ಯುಚ್ಛಕ್ತಿಯ ನಿಯಂತ್ರಣ ಮುಂತಾದ ಅನೇಕ ಕ್ಷೇತ್ರಗಳಲ್ಲಿ ಕಂಪ್ಯೂಟರಿನ ಬಳಕೆ ಸಾಧ್ಯ.

ಯಂತ್ರಗಳ ಬಳಕೆಯಿಂದ ಸಮಸ್ಯೆಗಳೂ ಉದ್ಭವಿಸುತ್ತವೆ. ಸಾವಿರ ಜನರ ಕೆಲಸ ಒಂದು ಯಂತ್ರ ಮಾಡಿದರೆ ಕೆಲಸ ಸಿಕ್ಕದವರ ಸಂಖ್ಯೆ ಬೆಳೆಯುತ್ತದೆ. ಅಲ್ಲದೆ ಯಂತ್ರಗಳು ಕೆಲಸ ಮಾಡಿದಂತೆ ಮನುಷ್ಯರಿಗೆ ವಿರಾಮ ಹೆಚ್ಚಾಗುತ್ತದೆ. ಈ ವಿರಾಮವನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸಿಕೊಳ್ಳಲು ಶಿಕ್ಷಣಬೇಕು. ಓದು, ಕಲೆಗಳ ಅಭ್ಯಾಸ, ಸಮಾಜ ಸೇವೆಯ ಕೆಲಸ, ಯಾವುದಾದರೂ ಒಳ್ಳೆಯ ಹವ್ಯಾಸ ಇದಕ್ಕಾಗಿ ವಿರಾಮವನ್ನು ಉಪಯೋಗಿಸಬೇಕು. ಯಂತ್ರಗಳನ್ನು ಕಂಡುಹಿಡಿದ ಮನುಷ್ಯನ ಬುದ್ಧಿ ಅವನ್ನು ಸರಿಯಾಗಿ ಬಳಸಿಕೊಳ್ಳುವ ವಿವೇಚನೆಯ ಮಟ್ಟವನ್ನು ಮುಟ್ಟಿದಾಗ ಬದುಕು ಸುಖಕರವಾಗುತ್ತದೆ.

## ಯುಗೊಸ್ಲಾವಿಯ

ಮೊದಲನೆಯ ಮಹಾಯುದ್ಧಕ್ಕೆ ನಾಂದಿಯಾದ ಘಟನೆ ನಡೆದದ್ದು ಆಗ ಆಸ್ಟ್ರಿಯದ ಅಧೀನದಲ್ಲಿದ್ದ ಬೊಸ್ನಿಯ ಪ್ರಾಂತದ ರಾಜಧಾನಿ ಸೆರಾಜಿವೊ ನಗರದ ಒಂದು ಸೇತುವೆಯ ಮೇಲೆ. 1914 ಜೂನ್ 28ರಂದು ಆಸ್ಟ್ರಿಯದ ಆರ್ಚ್‌ಡ್ಯೂಕ್ ಫ್ರಾನ್ಸಿಸ್ ಫರ್ಡಿನೆಂಡನನ್ನು ಪ್ರಿನ್ಸ್‌ಟಿಪ್ ಎಂಬ ವಿದ್ಯಾರ್ಥಿ ಗುಂಡುಹಾರಿಸಿ ಕೊಂದ. ಆ ಸೇತುವೆಗೆ ಚಾರಿತ್ರಿಕ ಪ್ರಾಮುಖ್ಯ ದೊರೆತು, ಅದು ಪ್ರಿನ್ಸ್‌ಟಿಪ್ ಸೇತುವೆ ಎಂಬ ಹೆಸರು ಪಡೆಯಿತು. ಸೆರಾಜಿವೊ ಈಗ ಇರುವುದು ಯುಗೊಸ್ಲಾವಿಯದಲ್ಲಿ.

ಬಾಲ್ಕನ್ ರಾಷ್ಟ್ರಗಳಲ್ಲಿ ಬಹು ವಿಸ್ತಾರವಾಗಿರುವ ಯುಗೊಸ್ಲಾವಿಯ ಆಗ್ನೇಯ ಯೂರೊಪಿನಲ್ಲಿದೆ. ಇಲ್ಲಿನ ಎರಡು ಪ್ರಾಕೃತಿಕ ವಿಭಾಗಗಳು: ಮಧ್ಯದ ಪರ್ವತ ಪ್ರದೇಶ; ಸುತ್ತಲಿನ ಬಯಲು ಬೆಟ್ಟ ಮತ್ತು ತೀರ ಭಾಗಗಳು. ಏಡ್ರಿಯಾಟಿಕ್ ಸಮುದ್ರದ ಕಡೆ ಸುಮಾರು ಸಾವಿರದ ಆರು ನೂರು ಕಿಲೊಮೀಟರು ತೀರಪ್ರದೇಶವಿದೆ. ಇಲ್ಲಿ ಅನೇಕ ದ್ವೀಪಗಳಿವೆ. ಆಲ್ಪ್ಸ್ ಪರ್ವತ ತೀರದುದ್ದಕ್ಕೂ ಹರಡಿದೆ. 2,865.5 ಮೀಟರು ಎತ್ತರವಿರುವ ಟ್ರಿಗ್ಲಾವ್ ಶಿಖರ ಉತ್ತರ ಆಲ್ಪ್ಸ್‌ನಲ್ಲಿದೆ. ಡ್ಯಾನ್ಯೂಬ್, ಮೊರಾವ, ಡ್ರವ ಮುಖ್ಯ ನದಿಗಳು.

ಪೂರ್ವ–ಪಶ್ಚಿಮ ನಾಗರಿಕತೆ ಮತ್ತು ಸಂಸ್ಕೃತಿ ಮೇಳೈಸಿದಂತಿರುವ ಯುಗೊಸ್ಲಾವಿಯದಲ್ಲಿ ವಿವಿಧ ಸಂಸ್ಕೃತಿಗಳ ಜನರನ್ನು ಕಾಣಬಹುದು. ಯುಗೊಸ್ಲಾವಿಯ ಎಂದರೆ 'ದಕ್ಷಿಣ ಸ್ಲಾವರ ದೇಶ' ಎಂದರ್ಥ. ಇಲ್ಲಿರುವ ಜನರಲ್ಲಿ ಸುಮಾರು ಶೇಕಡಾ 90ರಷ್ಟು ಜನ ಸ್ಲಾವರು. ಸ್ಲಾವರಲ್ಲಿ ಸರ್ಬರು, ಕ್ರೋಟರು, ಸ್ಲೋವನರು, ಮ್ಯಾಸಿಡೋನಿಯನರು, ಮಾಂಟಿನೆಗ್ರಿಯನರು ಮೊದಲಾದವರಿದ್ದಾರೆ. ಇವರಲ್ಲದೆ ಆಲ್ಬೇನಿಯ, ಹಂಗೆರಿ, ತುರ್ಕಿ, ಗ್ರೀಸ್ ಮತ್ತು ರುಮೇನಿಯದವರೂ ಇದ್ದಾರೆ. ಸ್ಲೊವೀನಿಯದಲ್ಲಿ ಸ್ಲೊವೀನಿಯನ್, ಮೆಸಿಡೋನಿಯದಲ್ಲಿ ಮೆಸಿಡೋನಿಯನ್, ಉಳಿದ ಭಾಗದಲ್ಲಿ ಸರ್ಬೊಕ್ರೋಷಿಯನ್ ಭಾಷೆಗಳು. ದಕ್ಷಿಣ ಸ್ಲಾವಿಕ್ ಗುಂಪಿಗೆ ಸೇರಿದ ಅನೇಕ ಭಾಷೆಗಳೂ ಬಳಕೆಯಲ್ಲಿವೆ. ವರ್ಣಮಾಲೆಯೂ ಒಂದೊಂದು ಕಡೆ ಒಂದೊಂದು ವಿಧ. ಒಟ್ಟಿನಲ್ಲಿ ಇಲ್ಲಿನ ಭಾಷೆಯನ್ನು ಸರ್ಬೊ-ಕ್ರೋಷಿಯನ್ ಎನ್ನುತ್ತಾರೆ. ತುರ್ಕಿ, ಹಂಗೆರಿ, ಆಲ್ಬೇನಿಯಗಳಿಂದ ಬಂದು ನೆಲೆಸಿದವರು ತಮ್ಮ ಭಾಷೆಯನ್ನೇ ಆಡುತ್ತಾರೆ. ಕ್ರೈಸ್ತ ಹಾಗೂ ಇಸ್ಲಾಂ ಮತಗಳು ಹೆಚ್ಚಾಗಿ ಕಾಣಬರುತ್ತವೆ. ಸ್ವಾತಂತ್ರ್ಯ ದೊರಕಿದ ಮೇಲೆ ವಿದ್ಯಾಭ್ಯಾಸ ಕ್ಷೇತ್ರದಲ್ಲಿ ಪ್ರಗತಿ ಗಮನಾರ್ಹವಾಗಿದೆ. ಶೇಕಡಾ ಎಂಬತ್ತು ಮಂದಿ ಅಕ್ಷರಸ್ಥರು.

ಒಳನಾಡಿನಲ್ಲಿ, ಬೆಚ್ಚಗಿನ ಬೇಸಿಗೆಕಾಲ, ಚಳಿಗಾಲದಲ್ಲಿ ಚಳಿ; ತೀರ ಪ್ರದೇಶದಲ್ಲಿ ಬೇಸಿಗೆ ಕಾಲದಲ್ಲಿ ಬೆಚ್ಚಗಿನ ಒಣಹವೆ, ಚಳಿಗಾಲದಲ್ಲಿ ಸುಮಾರಾಗಿ ಚಳಿ.

ಯುಗೊಸ್ಲಾವಿಯದ ಮೂರನೆಯ ಒಂದು ಭಾಗ ಕಾಡು. ಓಕ್, ಬೀಚ್ ಮರಗಳಿವೆ.

ಗೋಧಿ, ಬಾರ್ಲಿ ಮತ್ತು ಮುಸುಕಿನ ಜೋಳ ಮುಖ್ಯ ಧಾನ್ಯಗಳು, ಸಣಬು, ಸಕ್ಕರೆ ಬೀಟ್, ಹೊಗೆಸೊಪ್ಪು ಮತ್ತು ಹತ್ತಿ ವಾಣಿಜ್ಯ ಬೆಳೆಗಳು. ಹಣ್ಣುಗಳು ಮತ್ತು ತರಕಾರಿಗಳನ್ನು ಬೆಳೆಯುತ್ತಾರೆ. ವ್ಯವಸಾಯ ಭೂಮಿಯಲ್ಲಿನ ಮೂರನೆಯ ಒಂದು ಭಾಗ ಮೇವಿಗಾಗಿ ಮೀಸಲಿಟ್ಟ ಹುಲ್ಲುಗಾವಲು. ಮಾಂಸ, ಕೋಳಿಮೊಟ್ಟೆ ರಫ್ತಾಗುತ್ತವೆ.

ಯುಗೊಸ್ಲಾವಿಯದಲ್ಲಿ ಕೈಗಾರಿಕೆಗಳಿಗೆ ಬೇಕಾದ ಎಲ್ಲ ಖನಿಜಗಳೂ ದೊರೆಯುತ್ತವೆ. ಕಬ್ಬಿಣದ ಅದಿರು. ತಾಮ್ರ. ಸೀಸ. ಸತು. ಬಾಕ್ಸೈಟ್ ಇತ್ಯಾದಿ. ವೋಜ್ವೊಡಿನದಲ್ಲಿ ಪೆಟ್ರೋಲಿಯಂ ಇದೆ. ನೈಸರ್ಗಿಕ ಅನಿಲವೂ ದೊರಕುತ್ತದೆ. ಚಿನ್ನ. ಬೆಳ್ಳಿ, ಪಾದರಸ. ಕ್ರೋಮಿಯಂ ಸಹ ಲಭ್ಯ.

ಎರಡನೆಯ ಮಹಾಯುದ್ಧದ ತರುವಾಯ ಪ್ರಮುಖ ಕೈಗಾರಿಕೆಗಳನ್ನು ಸರಕಾರ ರಾಷ್ಟ್ರೀಕರಣ ಮಾಡಿದೆ. ನೂತನ ಉದ್ಯಮಗಳಲ್ಲಿ ಹಣ ತೊಡಗಿಸಿದೆ.

ಕಬ್ಬಿಣ ಮತ್ತು ಉಕ್ಕುಯಂತ್ರಗಳ ತಯಾರಿಕೆ. ಹಡಗು ನಿರ್ಮಾಣ, ಆಹಾರ ಸಂಸ್ಕರಣ ಇವು ಮುಖ್ಯ ಉದ್ಯಮಗಳು.

| | | |
|---|---|---|
| ಖಂಡ | : | ಯೂರೋಪ್ (ಆಗ್ನೇಯ) |
| ಅಕ್ಷಾಂಶ | : | 40° 51′ ಉ ದಿಂದ 46° 53′ ಉ |
| ರೇಖಾಂಶ | : | 13° 23′ ಪೂ ದಿಂದ 23° 02′ ಪೂ |
| ವಿಸ್ತೀರ್ಣ | : | 2,55,737 ಚ. ಕಿ. ಮೀ. |
| ಜನಸಂಖ್ಯೆ | : | 1,96,00,000 |
| ರಾಜಧಾನಿ | : | ಬೆಲ್‌ಗ್ರೇಡ್ |
| ಭಾಷೆ | : | ಸರ್ಬೋ-ಕ್ರೋಷಿಯನ್, ಸ್ಲೋವೀನಿಯನ್. ಮೆಸಿಡೋನಿಯನ್ |
| ಸರಕಾರ | : | ಸಂಯುಕ್ತ ಗಣರಾಜ್ಯ |
| ಬಾವುಟ | : | ನೀಲಿ, ಬಿಳಿ, ಕೆಂಪುಬಣ್ಣದ ಅಡ್ಡಪಟ್ಟೆಗಳು ಮಧ್ಯೆ ಚಿನ್ನದ ಬಣ್ಣದ ಅಂಚಿರುವ ಕೆಂಪು ನಕ್ಷತ್ರ |

ರಾಜಧಾನಿ ಬೆಲ್‌ಗ್ರೇಡ್‌ನಲ್ಲಿ ಬಹಳ ಹಿಂದೆ ನಿರ್ಮಿತವಾದ ಕೋಟೆ ಪ್ರದೇಶವಿದೆ. ಎರಡನೆಯ ಮಹಾಯುದ್ಧ ಹಾಳುಗೆಡವಿದ ನಗರ ಈಗ ಅಭಿವೃದ್ಧಿಹೊಂದಿದೆ. ಕ್ರೋಷಿಯದ ರಾಜಧಾನಿ ಜಗ್ರೆಬ್‌ನಲ್ಲಿ ಅರಮನೆಗಳು. ಗಾಥಿಕ್ ಚರ್ಚುಗಳು. ಹೊಸ ಭವ್ಯ ಸೌಧಗಳು ಇವೆ. ಬೋಸ್ನಿಯ ಮತ್ತು ಹರ್ಟ್ಸ್‌ಗೋವಿನ ರಾಜ್ಯಗಳ ರಾಜಧಾನಿ ಸರಯೆವೊ. ಇದರ ಜನಸಂಖ್ಯೆ ಎರಡು ಲಕ್ಷ. ಇಸ್ಲಾಂ ಮತ ಪ್ರಾಮುಖ್ಯವಾಗಿರುವುದರಿಂದ ಮಸೀದಿಗಳು ಹೆಚ್ಚು ಕಾಣುತ್ತವೆ. 1530ರಲ್ಲಿ ನಿರ್ಮಿತವಾದ ಬೆಗ್ ಮಸೀದಿ ಯೂರೋಪಿನಲ್ಲೇ ದೊಡ್ಡದು. ಸ್ಲೋವೀನಿಯದ ರಾಜಧಾನಿ ಲ್ಯುಬಿಲ್ಯಾನ ರೋಮನ್ ಚಕ್ರಾಧಿಪತ್ಯದ ಕಾಲದಷ್ಟು ಹಿಂದಿನದು. ಇದನ್ನು ಕ್ರಿ. ಪೂ. 34ರಲ್ಲಿ ಅಗಸ್ಟಸ್ ಸೀಸರ್ ಸ್ಥಾಪಿಸಿದ. 1895ರ ಭೂಕಂಪದ ತರುವಾಯ ನಗರದಲ್ಲಿ ಅನೇಕ ಬದಲಾವಣೆಗಳಾದುವು.

ಸ್ಲೋವೀನಿಯ. ಕ್ರೋಷಿಯ. ಸರ್ಬಿಯ. ಬೋಸ್ನಿಯ ಮತ್ತು ಹರ್ಟ್ಸ್‌ಗೋವಿನ. ಮ್ಯಾಸಿಡೋನಿಯ ಮತ್ತು ಮಾಂಟಿನೆಗ್ರೊ–ಈ ಆರು ರಾಜ್ಯಗಳು ಸೇರಿ ಸಂಯುಕ್ತ ಸರಕಾರ ಯುಗೊಸ್ಲಾವಿಯ ಎನಿಸಿದೆ. ಪ್ರತಿ ರಾಜ್ಯಕ್ಕೂ ಪ್ರತ್ಯೇಕ ಸರಕಾರವಿದೆ. ಸಂಯುಕ್ತ ಸರಕಾರದಲ್ಲಿ ಅಧ್ಯಕ್ಷ. ಪ್ರಧಾನ ಸಭೆ ಮತ್ತು ಸಂಯುಕ್ತ ಸಭೆಗಳು ಕಾರ್ಯನಿರ್ವಹಿಸುತ್ತವೆ. ಆಧುನಿಕ ಯುಗೊಸ್ಲಾವಿಯದ ನಿರ್ಮಾಪಕ ಟಿಟೋ 1946ರಿಂದ ಅಧ್ಯಕ್ಷರು.

ಈಗ ಪ್ರತ್ಯೇಕ ಗಣರಾಜ್ಯಗಳಾಗಿರುವ ಆರು ರಾಜ್ಯಗಳು, ಮೊದಲು ಬೇರೆ ಬೇರೆ ದೇಶಗಳಾಗಿದ್ದುವು. ಸ್ಲಾವರು ಮೊದಲ ನಿವಾಸಿಗಳು. ಈ ರಾಜ್ಯಗಳ ಪೈಕಿ ಪ್ರಬಲವಾಗಿದ್ದುದು. ದೊಡ್ಡದಾದ ಸರ್ಬಿಯ. ಮೊದಲನೆಯ ಮಹಾಯುದ್ಧದ ಅನಂತರ 1918ರಲ್ಲಿ ಸರ್ಬಿಯ, ಕ್ರೋಷಿಯ ಮತ್ತು ಸ್ಲೊವೀನಿಯ ರಾಜ್ಯಗಳಾದುವು. 1929ರಲ್ಲಿ ದೇಶದ ಹೆಸರು ಯುಗೊಸ್ಲಾವಿಯ ಎಂದು ಬದಲಾಯಿಸಲ್ಪಟ್ಟಿತು. ಐಕ್ಯತೆಯಿಲ್ಲದ ಜನರಲ್ಲಿ ಆಗಾಗ್ಗೆ ಆಗುತ್ತಿದ್ದ ವಿವಾದಗಳಿಂದ ದೇಶ ತೊಂದರೆಗೀಡಾಗಬೇಕಾಯಿತು. 1941 ಏಪ್ರಿಲ್‌ನಲ್ಲಿ ಮುನ್ಸೂಚನೆ ಇಲ್ಲದೆಯೇ ಜರ್ಮನರು ಯುಗೊಸ್ಲಾವಿಯದ ಮೇಲೆ ಬಾಂಬ್ ದಾಳಿ ಮಾಡಿದರು. ಯಾವ ಪ್ರತಿಭಟನೆಯೂ ಇಲ್ಲದೆ ದೇಶ ಜರ್ಮನರ ವಶವಾಯಿತು. ಪರಕೀಯ ಆಕ್ರಮಣದ ಕಾಲಾವಧಿಯಲ್ಲಿ ಕಮ್ಯೂನಿಸ್ಟರ ನೇತೃತ್ವದಲ್ಲಿ ಯುಗೊಸ್ಲಾವಿಯದ ದೇಶಪ್ರೇಮಿಗಳು ಆಕ್ರಮಣಕಾರರ ವಿರುದ್ಧ ಹೋರಾಡಿದರು. 1945 ರಲ್ಲಿ ಟಿಟೋರ ನೇತೃತ್ವದಲ್ಲಿ ಕಮ್ಯೂನಿಸ್ಟರು ಸರಕಾರವನ್ನು ತಮ್ಮ ವಶಕ್ಕೆ ತೆಗೆದುಕೊಂಡರು. 1945ರಿಂದ 1948ರ ವರೆಗೆ ರಷ್ಯದೊಡನೆ ಯುಗೊಸ್ಲಾವಿಯ ನಿಕಟ ಸಂಪರ್ಕ ಹೊಂದಿತ್ತು, ಟಿಟೋ, ಮತ್ತು ರಷ್ಯದ ಪ್ರಧಾನಿ ಸ್ಟಾಲಿನ್ ನಡುವೆ 1948ರಲ್ಲಿ ವಿರಸ ಉಂಟಾಗಿ, ಯುಗೊಸ್ಲಾವಿಯ ತನ್ನದೇ ಆದ ನೀತಿಯನ್ನು ರೂಪಿಸಿಕೊಂಡಿತು. ಯಾವ ಬಣಕ್ಕೂ ಸೇರದೆ ಉಳಿದು ಭಾರತ ಹಾಗೂ ಐಕ್ಯ ಅರಬ್ ಗಣರಾಜ್ಯದ ಜೊತೆಗೂಡಿ ಅಲಿಪ್ತರಾಷ್ಟ್ರಗಳ ಶಕ್ತಿಯನ್ನು ಹೆಚ್ಚಿಸಿತು. ಈಚೀನ ವರ್ಷಗಳಲ್ಲಿ ಭಾರತ-ಯುಗೊಸ್ಲಾವಿಯ–ಐಕ್ಯ ಅರಬ್ ಗಣರಾಜ್ಯಗಳು ಆರ್ಥಿಕವಾಗಿ ಮತ್ತು ತಾಂತ್ರಿಕಜ್ಞಾನದ ವಿನಿಮಯದಲ್ಲಿ ತುಂಬ ಸಹಕರಿಸಿ ಒಟ್ಟಿಗೆ ಮುನ್ನಡೆಯುತ್ತಿವೆ.

## ಯುದ್ಧ

ಸಾವಿರಾರು ವರ್ಷಗಳ ಹಿಂದಿನ ಮಹಾಭಾರತದ ಕಥೆಯಲ್ಲಿ ಕುರುಕ್ಷೇತ್ರದ ಪ್ರಸ್ತಾಪವಿದೆ. ದಾಯಾದಿಗಳಾದ ಪಾಂಡವರು-ಕೌರವರ ನಡುವಣ ಘನ ಘೋರ ಅಂತರ್ಯುದ್ಧ ಕುರುಕ್ಷೇತ್ರದ ರಣಭೂಮಿಯಲ್ಲಿ ನಡೆಯಿತು. ರಾಮ–ರಾವಣರ ನಡುವೆ ಲಂಕಾ ದ್ವೀಪದಲ್ಲಿ ನಡೆದ ಭಯಂಕರ ಯುದ್ಧವನ್ನು ರಾಮಾಯಣ ವರ್ಣಿಸುತ್ತದೆ. ಗ್ರೀಕಿನ ಪ್ರಾಚೀನ ಕಾವ್ಯಗಳಲ್ಲೂ ಸಂಗ್ರಾಮಗಳ ಬಣ್ಣನೆ ಇದೆ. . ಯುದ್ಧಗಳು ಮೊದಲಿನಿಂದಲೂ ಪ್ರಪಂಚದಲ್ಲಿ ಅನೇಕ ಕಡೆ ಅನೇಕ ಕಾರಣಗಳಿಗಾಗಿ ನಡೆದಿವೆ.

ಬಹಳ ಹಿಂದೆ ಜನರು ಸಣ್ಣ ಸಣ್ಣ ಗುಂಪುಗಳಲ್ಲಿ ಆಹಾರ. ವಸತಿ. ನೀರು ಮೊದಲಾದ ಸೌಲಭ್ಯಗಳಿರುವಲ್ಲಿ ವಾಸಿಸುತ್ತಿದ್ದರು. ಇದೇ ಸೌಕರ್ಯ ಬೇಕೆಂದು ಬೇರೆ ಬುಡಕಟ್ಟಿನ ಜನರ ಬಯಕೆ. ಇದರಿಂದ ಅವರವರಲ್ಲೆ ಯುದ್ಧಗಳಿಗೆ ಆಸ್ಪದವಾಗುತ್ತಿತ್ತು. ಕೆಲವು ವೇಳೆ ಒಂದು ಬುಡಕಟ್ಟಿನವರು ಇದ್ದ ಸ್ಥಳದಲ್ಲಿ ಪ್ರವಾಹ. ಕ್ಷಾಮ ಮೊದಲಾದುವು ತಲೆದೋರಿದರೆ. ಅವರು ವಲಸೆ ಹೋಗಬೇಕಾಗುತ್ತಿತ್ತು. ಹೀಗಾದಾಗ ಮತ್ತೊಂದು ಗುಂಪಿನೊಡನೆ ಅನಿವಾರ್ಯವಾಗಿ ಅವರಿಗೆ ಹೋರಾಟ.

ಅದರೆ ಕಾಲ ಕಳೆದ ಹಾಗೆ ಅನೇಕ ಗುಂಪಿನವರು ಒಂದಾಗಿ, ಅವರು ನೆಲೆಸಿರುವ ಪ್ರದೇಶ ಒಂದು ದೇಶ ಎನ್ನಿಸಿಕೊಳ್ಳುವಂತಾಯಿತು. ಈ ದೇಶಗಳ ರಕ್ಷಣೆಗಾಗಿಯೂ ಅನೇಕ ಯುದ್ಧಗಳಾದುವು.

ಒಂದು ದೇಶದೊಳಗೆ ವಾಸಿಸುವ ಜನರಲ್ಲೇ ಒಂದು ವಿಷಯದ ಬಗೆಗೆ ವಿರುದ್ಧ ವಿಚಾರ ಗುಂಪುಗಳಿದ್ದರೂ ಯುದ್ಧಗಳಾಗುವ ಸಂಭವವಿರುತ್ತದೆ. ದೇಶದೊಳಗಿನ ಎರಡು ಬಣಗಳು ಪರಸ್ಪರ ಹೋರಾಡುವುದಕ್ಕೆ 'ಅಂತರ್ಯುದ್ಧ' ಎಂದು ಹೆಸರು.

ಅನೇಕ ವೇಳೆ ಧರ್ಮಪ್ರಸಾರದ ಹಂಬಲವೂ ಯುದ್ಧಗಳಿಗೆ ಕಾರಣವಾಗಿದೆ. ಸಾಮ್ರಾಜ್ಯ ದಾಹ, ಪರರಾಷ್ಟ್ರಗಳ ಮೇಲೆ ಒಡೆತನ ಸ್ಥಾಪಿಸುವ ಹುಚ್ಚು, ಇವಳ ಹಿಂದಿನದು. ಇತಿಹಾಸದುದ್ದಕ್ಕೂ ಅನೇಕ ಆಕ್ರಮಣಕಾರರ ದುಷ್ಕೃತ್ಯಗಳ ಬಣ್ಣನೆ ಇದೆ. ಈಗಲೂ ಅಂಥ ಆಕಾಂಕ್ಷೆ ಇರುವ ರಾಷ್ಟ್ರಗಳಿವೆ. ಆರ್ಥಿಕ ಶೋಷಣೆಗೆ ರಾಜಕೀಯ ಆಡಳಿತ ಅಗತ್ಯವೆನಿಸಿ, ಸಾಮ್ರಾಜ್ಯಗಳೇ ಉದಿಸಿವೆ. ಪರಾಧೀನ ರಾಷ್ಟ್ರಗಳ ಜನತೆಯಲ್ಲಿ ರಾಷ್ಟ್ರೀಯ ಭಾವನೆ ಬಲಗೊಂಡಾಗ, ಆ ಜನತೆ ಸ್ವಾತಂತ್ರ್ಯಕ್ಕೋಸ್ಕರ ಯುದ್ಧ ಹೂಡಿದೆ.

ಕೆಲವೊಮ್ಮೆ ವ್ಯಕ್ತಿಯೊಬ್ಬನ ಮಹಾತ್ವಾಕಾಂಕ್ಷೆಯೂ ಯುದ್ಧಗಳಿಗೆ ಕಾರಣವಾಗಬಹುದು. ಯುರೋಪಿನ ನಾಯಕನಾಗಲು ಬಯಸಿದ ನೆಪೋಲಿಯನ್ ಮತ್ತು ಇತರ ರಾಷ್ಟ್ರಗಳನ್ನು ಜಯಿಸಲು ಯತ್ನಿಸಿ ಮಹಾಯುದ್ಧಕ್ಕೆ ಕಾರಣನಾದ ಅಡಾಲ್ಫ್ ಹಿಟ್ಲರ್ ಇಂಥವರಲ್ಲಿ ಅತಿ ಮುಖ್ಯರು.

ಜನಸಂಖ್ಯೆ ಬಹು ರಾಷ್ಟ್ರಗಳಲ್ಲಿ ಹೆಚ್ಚುತ್ತಿದೆ. ಹುಟ್ಟಿದವರಿಗೆಲ್ಲ ಊಟ ವಸತಿ ಕಲ್ಪಿಸಿಕೊಡುವುದು ಸಾಧ್ಯವಾಗದೆ. ಇತರರ ಪ್ರದೇಶಗಳನ್ನು ಕೆಲವು ರಾಷ್ಟ್ರಗಳು ಆಕ್ರಮಿಸುವುದುಂಟು.

ಕೆಲವು ವೇಳೆ, ಒಂದು ದೇಶದೊಳಗೆ ತೊಂದರೆಗಳಿದ್ದಾಗ ಜನರು ಅಸಮಾಧಾನಗೊಂಡು ದಂಗೆಯೇಳಬಾರದೆಂದು, ರಾಷ್ಟ್ರದ ಆಡಳಿತಗಾರರು ನೆರೆ ರಾಷ್ಟ್ರದ ಮೇಲೆ ಯುದ್ಧ ಸಾರುವುದುಂಟು. ಅದು ಅತೃಪ್ತ ಜನತೆಯ ಗಮನವನ್ನು ಬೇರೆಡೆಗೆ ಸೆಳೆಯುವ ಪ್ರಯತ್ನ.

ಒಂದು ರಾಷ್ಟ್ರ, ಮತ್ತೊಂದು ರಾಷ್ಟ್ರ ತನಗೆ ಅನ್ಯಾಯವೆಸಗಿದೆ ಎಂದು ಬಗೆದರೆ, ಅದು ಆ ರಾಷ್ಟ್ರದ ಮೇಲೆ ಯುದ್ಧ ಸಾರುತ್ತದೆ. ಹೀಗೆ ಸಾರುವುದನ್ನು ಯುದ್ಧ ಘೋಷಣೆ ಎನ್ನುತ್ತಾರೆ. ಕೆಲವು ವೇಳೆ ಅಧಿಕೃತ ಯುದ್ಧ ಘೋಷಣೆ ಇಲ್ಲದೆಯೇ ಕದನ ಆರಂಭವಾಗುತ್ತದೆ.

ಎರಡು ರಾಷ್ಟ್ರಗಳ ನಡುವೆ ಸಂಬಂಧ ಹದಗೆಟ್ಟು, ಆರೋಪ ಪ್ರತ್ಯಾರೋಪಗಳೂ ಪರಸ್ಪರರ ಬಗೆಗೆ ಅಪಪ್ರಚಾರಗಳೂ ನಡೆಯುತ್ತವೆ. ಒಬ್ಬರು ಇನ್ನೊಬ್ಬರಿಗೆ ಸಣ್ಣ ಪುಟ್ಟ ಕಿರುಕುಳ ಕೊಡುತ್ತಾರೆ. ಇದು ಶೀತಲ ಯುದ್ಧ.

ಮತದ ಉದ್ದೇಶವನ್ನೇ ಮುಖ್ಯವಾಗಿಟ್ಟುಕೊಂಡು ಯುದ್ಧ ನಡೆದಾಗ ಯುದ್ಧ ಹೂಡುವವರು ಅದನ್ನು 'ಪವಿತ್ರ ಯುದ್ಧ' ಎನ್ನುತ್ತಾರೆ.

ಎರಡು ಅಥವಾ ಹೆಚ್ಚು ರಾಷ್ಟ್ರಗಳು ಯುದ್ಧದಲ್ಲಿ ನಿರತವಾಗಿರುವಾಗ ಯುದ್ಧ ಕೈದಿಗಳ ವರ್ಗಾವಣೆಗೆ, ಸತ್ತವರ ಶವ ಸಂಸ್ಕಾರಕ್ಕೆ, ಹಬ್ಬಗಳ ಆಚರಣೆಗೆ ಸ್ವಲ್ಪ ಸಮಯ ಯುದ್ಧವನ್ನು ನಿಲ್ಲಿಸಲಾಗುತ್ತದೆ. ಈ ರೀತಿ ಎರಡೂ ಪಕ್ಷಗಳು ಸಮ್ಮತಿಸಿ ಯುದ್ಧ ನಿಲ್ಲಿಸುವುದು ಯುದ್ಧ ಸ್ತಂಭನ.

ಇನ್ನೂ ಕೆಲವೊಮ್ಮೆ ಎರಡು ಪಕ್ಷಗಳವರೂ ಕದನ ನಿಲ್ಲಿಸಿ ಶಾಂತಿ ಸಂಧಾನಕ್ಕೆ ಪ್ರಯತ್ನಿಸುತ್ತಾರೆ. ಆ ಕಾಲಾವಧಿಯನ್ನು ಕದನವಿರಾಮ ಎಂದು ಕರೆಯುತ್ತಾರೆ. ಯಾವುದೇ ತಂಡದವರು ಬಿಳಿಯ ಬಾವುಟ ಹಿಡಿದು ಬಂದರೆ ಅವರು ಸಂಧಾನ ಬಯಸುತ್ತಾರೆ ಅಥವಾ ಶರಣಾಗತರಾಗಬಚ್ಛಿಸುತ್ತಾರೆ ಎಂದರ್ಥ. ಕದನವಿರಾಮವನ್ನು ಎದುರು ಪಕ್ಷದವರು ಆಚರಣೆಯಲ್ಲಿ ತರುತ್ತಾರೆಂಬ ನಂಬಿಕೆಗಾಗಿ ತಮ್ಮ ಕಡೆಯ ಮುಖ್ಯ ವ್ಯಕ್ತಿಗಳನ್ನು ಪರಸ್ಪರರಲ್ಲಿ ಒತ್ತೆಯಾಗಿಡುತ್ತಿದ್ದರು.

ಮಧ್ಯಯುಗದ ಯುರೋಪಿನಲ್ಲಿ ನಡೆಯುತ್ತಿದ್ದ ಸಮರಗಳಲ್ಲಿ ಹಲವೊಮ್ಮೆ ಕದನವಿರಾಮದ ಕಾಲಾವಧಿ ಯುದ್ಧದ ಅವಧಿಗಿಂತಲೂ ಹೆಚ್ಚಾಗಿರುತ್ತಿತ್ತು. ನೂರು ವರ್ಷಗಳ ಯುದ್ಧ (1337–1453 : ಇಂಗ್ಲೆಂಡ್ ಮತ್ತು ಫ್ರಾನ್ಸ್‌ಗಳ ನಡುವೆ) ದಲ್ಲಿ 1347ರಿಂದ 55ರ ವರೆಗೆ, 1360ರಿಂದ 1369ರ ವರೆಗೆ, 1380ರಿಂದ 1415ರ ವರೆಗೆ — ಹೀಗೆ ಮಧ್ಯೆ ಮಧ್ಯೆ ಯುದ್ಧ ನಿಂತಂತೆಯೂ ಆಗುತ್ತಿತ್ತು.

ನಾಲ್ಕು ವರ್ಷಗಳ ಕಾಲ ನಿರಂತರವಾಗಿ ನಡೆದ ಪ್ರಥಮ ಮಹಾಯುದ್ಧ ಮೂವತ್ತು ದಿನಗಳ ಕದನ ವಿರಾಮದ ಅನಂತರ, 1918ನೆಯ ನವೆಂಬರ್ 11 ರಂದು ಅಂತ್ಯವಾಯಿತು. ಆದರೆ ದ್ವಿತೀಯ ಮಹಾಯುದ್ಧದಲ್ಲಿ ಕದನ ವಿರಾಮ ಏರ್ಪಡದಿದ್ದರೂ, ಯಾವ ಷರತ್ತುಗಳೂ ಇಲ್ಲದೆ ಜರ್ಮನಿ ಶರಣು ಬಂತು. ಇನ್ನು ಕೆಲವು ಯುದ್ಧಗಳಲ್ಲಿ ಪ್ರತ್ಯಕ್ಷವಾಗಿ ಕದನವಿರಾಮ ಇಲ್ಲದಿದ್ದರೂ, ಒಳಗೊಳಗೇ ಶಾಂತಿಸಂಧಾನ ನಡೆಯುವುದುಂಟು.

ಮನುಷ್ಯನ ನಾಗರಿಕತೆ ಬೆಳೆದಂತೆ, ವಿಜ್ಞಾನ ಅವನಿಗೆ ಹೊಸ ಶಕ್ತಿಯನ್ನು ತಂದುಕೊಟ್ಟಂತೆ ಯುದ್ಧಗಳಲ್ಲಿ ಬಳಸುವ ಶಸ್ತ್ರಾಸ್ತ್ರಗಳು, ವಿಧ್ವಂಸಕ ಯತ್ನಗಳು ಬದಲಾಗಿವೆ. ಮೊದಮೊದಲು ಕಲ್ಲುಗಳೇ ಮನುಷ್ಯನ ಆಯುಧಗಳು, ಇದು ಮಾರ್ಪಾಟುಗೊಂಡು ಕವಣೆಯಾಯಿತು. ಮರ ಮತ್ತು ಲೋಹಗಳ ಉಪಯೋಗ ತಿಳಿದ ಬಳಿಕ ಬಿಲ್ಲು ಬಾಣಗಳು, ಕತ್ತಿಗಳು ಬಳಕೆಗೆ ಬಂದುವು. ತಲೆಯನ್ನು ರಕ್ಷಿಸಲು ಲೋಹದ ಶಿರಸ್ತ್ರಾಣಗಳು, ದೇಹದ ಉಳಿದ ಭಾಗಗಳನ್ನು ರಕ್ಷಿಸಲು ಲೋಹದ ಕವಚಗಳು ಮತ್ತು ಗುರಾಣಿಗಳು ಸಿದ್ಧವಾದುವು. ಚಕ್ರವನ್ನು ಮಾಡಲು ಮನುಷ್ಯ ಕಲಿತಾಗ, ಕುದುರೆ ಆನೆಗಳಲ್ಲದೆ ರಥಗಳನ್ನೂ ಯುದ್ಧರಂಗದಲ್ಲಿ ಉಪಯೋಗಿಸುವುದು ಪ್ರಾರಂಭವಾಯಿತು. ಹಡಗುಗಳಲ್ಲಿ ಪ್ರಯಾಣ ಮಾಡುವುದನ್ನು ಕಲಿತಾಗ ಶತ್ರುಗಳ ಹಡಗನ್ನು ದಾಳಿ ಮಾಡಿ ಮುಳುಗಿಸುವುದೂ ಅಗತ್ಯ ಎಂದು ಮನುಷ್ಯ ಕಂಡ. ಸಿಡಿಮದ್ದು ಮನುಷ್ಯನ ವಿನಾಶಕ್ಕೆ ಶಕ್ತಿಯನ್ನು ಬಹುಮಟ್ಟಿಗೆ ಹೆಚ್ಚಿಸಿತು. ತುಫಾಕಿ ಫಿರಂಗಿಗಳ ಬಳಕೆ ಸಾಧ್ಯವಾಯಿತು. ಮೊದಲನೆಯ ಮಹಾಯುದ್ಧದಲ್ಲಿ ಟ್ಯಾಂಕುಗಳು ಮತ್ತು ವಿಷವಾಯುವನ್ನು ಉಪಯೋಗಿಸಿದರು. ಈ ಯುದ್ಧದಲ್ಲಿ ನೌಕಾದಳ ಮುಖ್ಯ ಪಾತ್ರ ವಹಿಸಿತು. ಜಲಾಂತರ್ಗಾಮಿ ನೌಕೆಗಳು ಮುಖ್ಯವಾದುವು. ಎರಡನೆಯ ಮಹಾಯುದ್ಧದ ಹೊತ್ತಿಗೆ ವಿಮಾನಗಳ ಪ್ರಾಮುಖ್ಯ ಹೆಚ್ಚಾಯಿತು.

ಆದಿಮಾನವನಿಂದ ಆಧುನಿಕಮಾನವನ ತನಕ



ಶತ್ರುಗಳ ಊರುಗಳ ಮೇಲೆ ಬಾಂಬುಗಳನ್ನು ಸುರಿದು ಜನರಿಗೆ, ಕಟ್ಟಡಗಳಿಗೆ ಮತ್ತು ಕಾರಖಾನೆಗಳಿಗೆ ಅಪಾರ ಹಾನಿಯುನ್ನುಂಟುಮಾಡಲು ಸಾಧ್ಯವಾಯಿತು. ಜಗತ್ತಿನಲ್ಲಿ ಪರಮಾಣು ಬಾಂಬುಗಳನ್ನು ಮೊಟ್ಟಮೊದಲು ಬಳಸಿದ್ದು ಎರಡನೆಯ ಮಹಾಯುದ್ಧದಲ್ಲಿಯೇ.

ಒಂದು ದೇಶ ಐವತ್ತು–ನೂರು ವರ್ಷಗಳಲ್ಲಿ ಸಾಧಿಸಿದ ಆರ್ಥಿಕ ಕೈಗಾರಿಕಾ ಪ್ರಗತಿಯನ್ನು ಯುದ್ಧ ಕೆಲವು ದಿನಗಳಲ್ಲಿ ನಾಶಮಾಡುತ್ತದೆ. ಒಂದು ದೇಶದ ತರುಣರು ಇದಕ್ಕೆ ಬಲಿ. ಸಹಸ್ರಗಟ್ಟಲೆಯಲ್ಲಿ ಮಹಿಳೆಯರು ವಿಧವೆಯರಾಗುತ್ತಾರೆ. ಯುದ್ಧ ಅತೀವ ರಾಷ್ಟ್ರಾಭಿಮಾನವನ್ನು ಪ್ರೋತ್ಸಾಹಿಸಿ, ಮನುಷ್ಯನ ಕ್ರೌರ್ಯಕ್ಕೆ ದಾರಿ ಮಾಡಿಕೊಡುತ್ತದೆ. ಅನೇಕರು ಸಾವಿಗೆ ಈಡಾಗುತ್ತಾರೆ. ಮನೆ–ಮಠ ಕಳೆದುಕೊಳ್ಳುತ್ತಾರೆ, ನಿರಾಶ್ರಿತರಾಗುತ್ತಾರೆ. ಕ್ಷಾಮ ಮತ್ತು ಕಾಯಿಲೆಗಳಿಗೆ ತುತ್ತಾಗುತ್ತಾರೆ. ಇವು ಯುದ್ಧದ ಘೋರ ಪರಿಣಾಮಗಳು.

ಹಿಂದಿನ ಯುದ್ಧಗಳಲ್ಲಿ ಸೈನ್ಯ ಮಾತ್ರ ಭಾಗವಹಿಸುತ್ತಿತ್ತು. ನಾಗರಿಕರು ತಮ್ಮ ಪಾಡಿಗೆ ನಿತ್ಯ ಜೀವನವನ್ನು ನಡೆಸಲು ಯತ್ನಿಸುತ್ತಿದ್ದರು. ಬಹಳವೆಂದರೆ ಕುಯಿಲಿಗೆ ಬಂದ ಫಸಲು ವೈರಿಯ ಉರಿಯುವ ಕೊಳ್ಳಿಗೆ ಆಹುತಿಯಾಗುತ್ತಿತ್ತು. ಪಟ್ಟಣಗಳನ್ನು ಆಕ್ರಮಣಕಾರರು ದೋಚುತ್ತಿದ್ದರು. ಆದರೆ ಇಂದಿನ ಯುದ್ಧಗಳಲ್ಲಿ ಪ್ರತಿಯೊಬ್ಬರಿಗೂ ಶಾಖ ತಟ್ಟುತ್ತದೆ. ಯುದ್ಧ ತಂತ್ರದಲ್ಲಿ ವಿಜ್ಞಾನದ ಪ್ರಗತಿಯಿಂದ ಆಗಿರುವ ಬದಲಾವಣೆಯೇ ಇದಕ್ಕೆ ಮುಖ್ಯ ಕಾರಣ. ಒಂದು ದೇಶದ ಪ್ರಗತಿಗೆ ಅಲ್ಲಿರುವ ಭಾರೀ ಕೈಗಾರಿಕೆಗಳೇ ಬುನಾದಿ. ಆಕ್ರಮಣಕಾರ ಆ ಕೈಗಾರಿಕೆಗಳನ್ನು ಪ್ರಪ್ರಥಮವಾಗಿ ಆಹುತಿ ತೆಗೆದುಕೊಳ್ಳಲು ಯತ್ನಿಸುತ್ತಾನೆ. ಅನಂತರದ ಗುರಿ ಅಣೆಕಟ್ಟುಗಳು. ಸೇತುವೆಗಳನ್ನು ಕಡಿದು ಸಾರಿಗೆ ಸಂಪರ್ಕಗಳನ್ನು ಅಸ್ತವ್ಯಸ್ತಗೊಳಿಸುವ ಪ್ರಯತ್ನವಾಗುತ್ತವೆ. ಸಿಡಿಮದ್ದಿನಿಂದ ಮೊದಲಾಗಿ ಕ್ಷಿಪಣಿಗಳ ತನಕ ಮಾರಕಾಸ್ತ್ರಗಳನ್ನು ಹೊಂದಿರುವ ರಾಷ್ಟ್ರಗಳಿಗೆ ಇಂಥ ವಿನಾಶ ನೀರು ಕುಡಿದಷ್ಟು ಸುಲಭ.

ಆಗಾಗ್ಗೆ ಈ ರೀತಿ ನಡೆದು ಅನೇಕ ಯುದ್ಧಾಸಕ್ತರಿಗೆ ಯುದ್ಧ ನಿಯಮಗಳು ಅಗತ್ಯವೆನಿಸಿದುವು. ನಾಗರಿಕರು, ಯುದ್ಧ ಕೈದಿಗಳು ಮತ್ತು ಗಾಯಗೊಂಡವರನ್ನು ರಕ್ಷಿಸುವ ಉದ್ದೇಶದಿಂದ ನಿಯಮಾವಳಿ ರಚಿತವಾಯಿತು. 1899 ಮತ್ತು 1907ರಲ್ಲಿ ಹಾಲೆಂಡಿನ ಹೇಗ್‌ನಲ್ಲಿ ನಡೆದ ಸಮ್ಮೇಳನಗಳು ಆಧುನಿಕ ಯುದ್ಧ ನಿಯಮಗಳನ್ನು ರೂಪಿಸಿದುವು. ಯುದ್ಧಗಳಲ್ಲಿ ಕೆಲವು ರೀತಿಯ ಅಸ್ತ್ರಗಳ ಬಳಕೆಯನ್ನು ನಿಷೇಧಿಸಲಾಯಿತು. ಸೈನ್ಯಾಧಿಕಾರಿಗಳ ಹಕ್ಕು, ಯುದ್ಧದಲ್ಲಿ ತೊಡಗಿರುವ ರಾಷ್ಟ್ರಗಳ ಸಾಮಾನ್ಯ ಪ್ರಜೆಗಳು, ತಟಸ್ಥವಾಗಿರುವ ರಾಷ್ಟ್ರಗಳು–ಇವುಗಳ ಬಗೆಗೆ ದೀರ್ಘವಾಗಿ ಆಲೋಚಿಸಲಾಯಿತು. 1949ರಲ್ಲಿ ಸ್ವಿಟ್ಜರ್‌ಲೆಂಡಿನ ಜಿನೀವದಲ್ಲಿ ಮತ್ತೊಂದು ಸಮ್ಮೇಳನ ನಡೆಯಿತು. ಹಿಂದೆ ಸ್ವೀಕರಿಸಿದ್ದ ಯುದ್ಧ ನಿಯಮಗಳನ್ನು ಈ ಸಮ್ಮೇಳನದಲ್ಲಿ ಪರಿಷ್ಕರಿಸಲಾಯಿತು. ಯುದ್ಧದಲ್ಲಿ ಗಾಯಗೊಂಡವರ, ಕಾಯಿಲೆಗೊಳಗಾದವರ ಮತ್ತು ಯುದ್ಧ ಕೈದಿಗಳ ರಕ್ಷಣೆಗಾಗಿ ರೆಡ್‌ಕ್ರಾಸ್ ಸಂಸ್ಥೆಗೆ ನೀಡಿದ್ದ ಸೌಲಭ್ಯಗಳ ಪುನರ್ವಿಮರ್ಶೆ ನಡೆಯಿತು.

**ನೋಡಿ :** ಅಂತರ್ಯುದ್ಧ ; ಕವಣೆ ; ತೈಮೂರ್‌ಲಂಗ್ ; ನೆಪೋಲಿಯನ್ ಬೋನಪಾರ್ಟ್ ; ಜೆಂಗೀಸ್‌ಖಾನ್ ; ಮಹಾಯುದ್ಧಗಳು ; ಮಾರಕಾಸ್ತ್ರ ; ರೆಡ್‌ಕ್ರಾಸ್ ; ಶಾಂತಿ, ಶಾಂತಿವಾದ; ಹಿಟ್ಲರ್, ಅಡಾಲ್ಫ್ ; ಹಿರೋಷಿಮಾ, ನಾಗಸಾಕಿ ; ವಿಶ್ವಸಂಸ್ಥೆ.

## ಯೂಕ್ಲಿಡ್

"ಇನ್ನೂ ಸುಲಭವಾಗಿ ಜ್ಯಾಮಿತಿಯನ್ನು (ರೇಖಾಗಣಿತವನ್ನು) ಕಲಿಯಲು ಸಾಧ್ಯವಿಲ್ಲವೆ ?"

"ಜ್ಯಾಮಿತಿಗೆ ರಾಜಮಾರ್ಗವಿಲ್ಲ."

ಪ್ರಶ್ನೆ ಕೇಳಿದವ ರಾಜ ಟಾಲೆಮಿ; ಉತ್ತರಿಸಿದವನು ಪ್ರಸಿದ್ಧ ಗಣಿತ ಶಾಸ್ತ್ರಜ್ಞ ಯೂಕ್ಲಿಡ್.

ಜ್ಯಾಮಿತಿಯ ಅಧ್ಯಯನಕ್ಕೆ ಇರುವುದು ಪರಿಶ್ರಮದ ದಾರಿ ಎಂಬ ಅರ್ಥ ಆ ಉತ್ತರಕ್ಕೆ. ಜ್ಯಾಮಿತಿಯ ಪಿತಾಮಹ ಯೂಕ್ಲಿಡ್. ಜ್ಯಾಮಿತಿಯ ಮೂಲತತ್ತ್ವಗಳ ಬಗೆಗೆ ಯೂಕ್ಲಿಡ್ ಪುಸ್ತಕವೊಂದನ್ನು ಬರೆದ ಸಮಯ. ಅದನ್ನು ನೋಡಿ ಟಾಲೆಮಿ ಮೇಲಿನ ಪ್ರಶ್ನೆಹಾಕಿದ. ಇದು ಕ್ರಿಸ್ತ ಪೂರ್ವ ಮೂರನೆಯ ಶತಮಾನದಲ್ಲಿ.

ಯೂಕ್ಲಿಡ್ ಗ್ರೀಸ್ ನಿವಾಸಿ. ಅವನ ಜೀವನದ ಬಗೆಗೆ ಹೆಚ್ಚಿನ ವಿವರ ದೊರೆತಿಲ್ಲ. ಅವನು ಸತ್ತ 700 ವರ್ಷಗಳ ಮೇಲೆ ಪ್ರೊಕ್ಲಸ್ ಎಂಬವನು ಬರೆದ ಲೇಖನಗಳಿಂದ ಯೂಕ್ಲಿಡ್ ವಿಚಾರ ಅಲ್ಪಸ್ವಲ್ಪ ತಿಳಿದುಬರುತ್ತದೆ. ಅವನ ಜೀವನ ಚರಿತ್ರೆ ಕತ್ತಲೆಯಲ್ಲಿ ಹುದುಗಿಕೊಂಡಿದ್ದರೂ ಅವನ ಸಾಧನೆಗಳು ಮಾತ್ರ ಇಂದಿಗೂ ಬೆಳಗುತ್ತಿವೆ.

ಯೂಕ್ಲಿಡ್ ಪ್ಲೇಟೋವಿನ ಅಕಾಡಮಿಯಲ್ಲಿ ಓದಿದಂತೆ ತೋರುತ್ತದೆ. ಅನಂತರ ಗ್ರೀಸ್ ದೇಶದ ಅತ್ಯುತ್ತಮ ಗಣಿತಶಾಲೆಗಳಲ್ಲಿ ಅಭ್ಯಾಸ ಮುಂದುವರಿಸಿದ. ಆ ಕಾಲದಲ್ಲಿ (ಕ್ರಿ.ಪೂ.323–285) ರಾಜ್ಯವಾಳುತ್ತಿದ್ದ ಒಂದನೆಯ ಟಾಲೆಮಿಯು ಅಲೆಕ್ಸಾಂಡ್ರಿಯ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಿದ. ಅಲ್ಲಿ ಜ್ಯಾಮಿತಿಯನ್ನು ಬೋಧಿಸಬೇಕೆಂದು ಯೂಕ್ಲಿಡ್‌ಗೆ ಆಹ್ವಾನ ಹೋಯಿತು. ಯೂಕ್ಲಿಡ್ ಅಲ್ಲಿ ಅಧ್ಯಾಪಕನಾದ. ಪ್ರಯೋಗಗಳ ಮೂಲಕ ಒಂದು ಸಿದ್ಧಾಂತವನ್ನು ಪುಷ್ಟೀಕರಿಸುವುದೆಂದರೆ ಯೂಕ್ಲಿಡನಿಗೆ ಅತ್ಯಂತ ಇಷ್ಟ. ತನ್ನ ಕೋಣೆಯ ತುಂಬ ಮರಳನ್ನು ಹರವಿ ಅದರ ಮೇಲೆ ರೇಖಾಗಣಿತವನ್ನು ಅಭ್ಯಾಸ ಮಾಡಿದ. ಅವನ ಸಹಪ್ರಾಧ್ಯಾಪಕರು ಅಸಾಧ್ಯವೆಂದು ಕೈಬಿಟ್ಟಿದ್ದ ಅನೇಕ ಕೆಲಸಗಳನ್ನು ಅವನು ಮಾಡಿತೋರಿಸಿದ. ಅದರಲ್ಲಿ ಈಜಿಪ್ಟಿನ ಅತಿ ಎತ್ತರದ ಪಿರಮಿಡ್ಡಿನ ಎತ್ತರ ಅಳೆಯುವುದೂ ಒಂದು. ಇದಕ್ಕೆ ಅವನೊಂದು ಉಪಾಯ ಹೂಡಿದ. ಆ ಪಿರಮಿಡ್ಡಿನ ಪಕ್ಕದಲ್ಲಿ ನಿಂತುಕೊಂಡು ತನ್ನ ನೆರಳನ್ನು ಅಳೆಯುತ್ತಿದ್ದ. ಯಾವ ಕ್ಷಣದಲ್ಲಿ ತನ್ನ ನಿಜವಾದ ಎತ್ತರವೂ ನೆರಳಿನ ಉದ್ದವೂ ಒಂದೇ ಆದುವೋ ಆ ಕ್ಷಣ ಪಿರಮಿಡ್ಡಿನ ನೆರಳಿನ ಉದ್ದವನ್ನಳೆದು ಅದೇ ಅದರ ನಿಜವಾದ ಎತ್ತರ ಎಂದು ನಿಶ್ಚಯಿಸಿದ.

ಪೈಥಾಗೊರಸ್, ಥೇಲ್ಸ್ ಮುಂತಾದ ಗಣಿತಶಾಸ್ತ್ರಜ್ಞರು ನಿರೂಪಿಸಿದ್ದ ತತ್ತ್ವಗಳನ್ನು ಯೂಕ್ಲಿಡ್ ತನ್ನ ಕೆಲವು ಸಿದ್ಧಾಂತಗಳೊಡನೆ ಕ್ರಮಬದ್ಧವಾಗಿ ಜೋಡಿಸಿದ.

ಜ್ಯಾಮಿತಿಯನ್ನು ವೈಜ್ಞಾನಿಕ ಚೌಕಟ್ಟಿಗೆ ಅಳವಡಿಸಿದವನು ಯೂಕ್ಲಿಡನೇ. ಅವನು ಬರೆದ 'ಜ್ಯಾಮಿತಿಯ ಮೂಲತತ್ತ್ವಗಳು' ಹೊತ್ತಗೆ ಹದಿಮೂರು ಸಂಪುಟಗಳದು. ನೂರಾರು ಭಾಷೆಗಳಿಗೆ ತರ್ಜುಮೆಯಾಗಿದೆ. ಜ್ಯಾಮಿತಿಯನ್ನು ಅಧ್ಯಯನ ಮಾಡುವವರಿಗೆಲ್ಲ ಅದು ಅತ್ಯಂತ ಉಪಯುಕ್ತವಾದ ಪುಸ್ತಕ. ಈ ಪುಸ್ತಕಕ್ಕೆ ಹಲವಾರು ಭಾಷ್ಯಗಳೂ ಇವೆ. ಯೂಕ್ಲಿಡ್



ಜ್ಯಾಮಿತಿಯಲ್ಲಿ ಪ್ರಥಮ ಪೂಜೆಗೆ ಅರ್ಹ–ಯೂಕ್ಲಿಡ್

ಮತ್ತೂ ಆರು ಪುಸ್ತಕಗಳನ್ನು ಬರೆದನೆಂದು ಹೇಳುತ್ತಾರೆ. ಸಿದ್ಧಾಂತ ಪ್ರತಿಪಾದನೆಯಲ್ಲಿ ಅವನದು ನಿರಾಡಂಬರದ ನಿಷ್ಕೃಷ್ಟ ಶೈಲಿ.

ವಿದ್ಯಾರ್ಜನೆಯ ವಿಷಯದಲ್ಲಿ ಅವನಿಗಿದ್ದ ಮನೋಧರ್ಮವನ್ನು ಒಂದು ಸಣ್ಣ ಪ್ರಸಂಗ ತೋರಿಸುತ್ತದೆ. ಅವನ ಶಿಷ್ಯನೊಬ್ಬ ಅವನನ್ನು "ರೇಖಾ ಗಣಿತವನ್ನು ಕಲಿತರೆ ನನಗೇನು ಪ್ರಯೋಜನ ?" ಎಂದು ಕೇಳಿದ. ಯೂಕ್ಲಿಡ್ ಒಬ್ಬ ಸೇವಕನನ್ನು ಕರೆದು. "ಕಲಿತದ್ದರಿಂದ ಲಾಭ ಬೇಕಂತೆ. ಇವನಿಗೊಂದು ನಾಣ್ಯ ಕೊಟ್ಟು ಕಳುಹಿಸು" ಎಂದ.

ಯೂಕ್ಲಿಡನ ಸಿದ್ಧಾಂತಗಳ ಬಗೆಗೆ ಅನೇಕ ಗಣಿತಶಾಸ್ತ್ರಜ್ಞರು ಈಚೆಗೆ ಶಂಕೆ ವ್ಯಕ್ತಪಡಿಸಿದ್ದಾರೆ. ಆದರೆ ಗಣಿತಶಾಸ್ತ್ರ ತುಂಬಾ ಮುಂದುವರಿದಿರುವ ಇಪ್ಪತ್ತನೆಯ ಶತಮಾನದಲ್ಲೂ ಜ್ಯಾಮಿತಿಯಲ್ಲಿ ಪ್ರಥಮ ಪೂಜೆ ಯೂಕ್ಲಿಡನಿಗೆ ಸಲ್ಲುತ್ತದೆ.

ನೋಡಿ : ಪೈಥಾಗೊರಸ್

## ಯೂರೋಪ್

ನಾವಿಕರ ಮತ್ತು ವರ್ತಕರ ಸಾಹಸ ಪ್ರವೃತ್ತಿಯಿಂದ, ತನ್ನ ವಿಜ್ಞಾನ ಪ್ರಗತಿಯಿಂದ, ಹತ್ತೊಂಬತ್ತನೆಯ ಶತಮಾನದ ಅವಧಿಯಲ್ಲಿ ಪ್ರಪಂಚದ ಚರಿತ್ರೆಯ ಮೇಲೆ ಅಸಾಧಾರಣ ಪ್ರಭಾವ ಬೀರಿದ ಖಂಡ ಯೂರೋಪ್. ಈ ಕಾಲದಲ್ಲಿ ಯೂರೋಪಿನ ಹಲವು ರಾಷ್ಟ್ರಗಳು ಅಮೆರಿಕ. ಏಷ್ಯ ಮತ್ತು ಆಫ್ರಿಕ ಖಂಡಗಳಲ್ಲಿ ವಸಾಹತುಗಳನ್ನು ಸ್ಥಾಪಿಸಿದುವು. ಇಪ್ಪತ್ತನೆಯ ಶತಮಾನದಲ್ಲಿ ಈ ವಸಾಹತುಗಳಲ್ಲಿ ಹಲವು ಚಿಕ್ಕದಾದುವು. ಉಳಿದುವು ಸ್ವಾಯತ್ತವಾದುವು.

ಈ ಖಂಡದ ಉತ್ತರಕ್ಕೆ ಆರ್ಕ್‌ಟಿಕ್ ಸಾಗರ. ದಕ್ಷಿಣಕ್ಕೆ ಭೂಮಧ್ಯ ಸಮುದ್ರ, ಪಶ್ಚಿಮಕ್ಕೆ ಅಟ್ಲಾಂಟಿಕ್ ಸಾಗರ ಮತ್ತು ಪೂರ್ವಕ್ಕೆ ಕಾಕಸಸ್ ಪರ್ವತಗಳ ಸಾಲುಗಳಿವೆ. ಬ್ರಿಟಿಷ್ ದ್ವೀಪಗಳು. ಫ್ರಾನ್ಸ್. ರಷ್ಯ (ಯೂರಲ್ ಪರ್ವತಾವಳಿಯ ಪೂರ್ವ ಪ್ರದೇಶ ಏಷ್ಯ ಖಂಡದಲ್ಲಿದೆ). ಜರ್ಮನಿ. ಇಟಲಿ. ಸ್ವಿಟ್ಜರ್‌ಲೆಂಡ್. ಸ್ಪೇನ್. ಗ್ರೀಸ್. ಡೆನ್ಮಾರ್ಕ್ ಮುಂತಾದ ಮೂವತ್ತ ಮೂರು ರಾಷ್ಟ್ರಗಳಿವೆ. ಮಧ್ಯದಲ್ಲಿ ಆಲ್ಪ್ಸ್ ಪರ್ವತಾವಳಿಯಿದೆ.

ಯೂರೋಪನ್ನು ನಾಲ್ಕು ಪ್ರಾಕೃತಿಕ ವಿಭಾಗಗಳಾಗಿ ಮಾಡಿದ್ದಾರೆ–ವಾಯುವ್ಯದ ಎತ್ತರ ಪ್ರದೇಶ. ಮಧ್ಯದ ಸಮಭೂಮಿ. ಮಧ್ಯದ ಎತ್ತರ ಪ್ರದೇಶ ಮತ್ತು ದಕ್ಷಿಣದ ಪರ್ವತಗಳು.

ಪಶ್ಚಿಮ ಯೂರೋಪಿನಲ್ಲಿ ಸಮುದ್ರದ ಮೇಲೆ ಬೀಸಿಬರುವ ಗಾಳಿಯಿಂದಾಗಿ ತೀರ ಭಾಗ ಬೇಸಿಗೆಯಲ್ಲೂ ತಂಪಾಗಿರುತ್ತದೆ. ಒಳನಾಡಿನಲ್ಲಿ ಮಾತ್ರ ೮೦° ಫ್ಯಾ. ಉಷ್ಣಾಂಶವಿರುತ್ತದೆ. ದಕ್ಷಿಣ ಯೂರೋಪ್ ಮತ್ತು ಭೂಮಧ್ಯ ಸಮುದ್ರಭಾಗದಲ್ಲಿ ಶೈತ್ಯಮಯ ಚಳಿಗಾಲ ; ಬೆಚ್ಚಗಿನ ಬೇಸಿಗೆ. ಆರ್ಕ್‌ಟಿಕ್ ಸಮೀಪದಲ್ಲಿ ಇರುವ ನಾರ್ವೆ. ಸ್ವೀಡನ್. ರಷ್ಯಗಳಲ್ಲಿ ಮಿತಿಮೀರಿದ ಚಳಿ.

ಯೂರೋಪಿನ ಇತಿಹಾಸ ಪ್ರಾಚೀನವಾದದ್ದು. ಸುಮಾರು ಕ್ರಿ. ಪೂ. 780ರಿಂದ ಗ್ರೀಸಿನಲ್ಲಿ ನಾಗರಿಕತೆ ಕಂಡುಬಂದಿದೆ. ಕ್ರಿ. ಪೂ. ಐದನೆಯ ಶತಮಾನದಲ್ಲಿ ರೋಮ್ ಸಾಮ್ರಾಜ್ಯದಲ್ಲಿ ಶ್ರೇಷ್ಠ ನಾಗರಿಕತೆಯಿದ್ದಿತು. ಬಳಿಕ ಅಂಧಕಾರ ಕವಿದರೂ ಸರ್ವೋದಯವಾಗಿ ಯೂರೋಪ್ ಪ್ರಗತಿ ಹೊಂದಿತು. ಇಂಗ್ಲೆಂಡಿನ ಕೈಗಾರಿಕಾಕ್ರಾಂತಿ, ಫ್ರಾನ್ಸಿನ ಮಹಾಕ್ರಾಂತಿ. ರಷ್ಯದ ಅಕ್ಟೋಬರ್ ಕ್ರಾಂತಿ, ಇವೆಲ್ಲವೂ ನಡೆದು ಪ್ರಪಂಚದ ಉಳಿದ ರಾಷ್ಟ್ರಗಳ ಮೇಲೆ ವಿಶೇಷ ಪ್ರಭಾವ ಬೀರಿದುವು. ಹದಿನೈದು ಮತ್ತು ಹದಿನಾರನೆಯ ಶತಮಾನಗಳಲ್ಲಿ ಅಮೆರಿಕ, ಆಫ್ರಿಕ, ಆಸ್ಟ್ರೇಲಿಯ ಮುಂತಾದ ಭೂಖಂಡಗಳನ್ನು ಅನ್ವೇಷಿಸಿದವರು ಐರೋಪ್ಯರೇ. ಎರಡು ಜಾಗತಿಕ ಮಹಾಯುದ್ಧಗಳು ಆರಂಭವಾದದ್ದು ಕೂಡ ಯೂರೋಪಿನಲ್ಲಿಯೇ. ಮೊದಲನೆಯ ಮಹಾಯುದ್ಧದವರೆಗೆ ರಾಜಪ್ರಭುತ್ವವೇ ಯೂರೋಪಿನ ಬಹು ರಾಷ್ಟ್ರಗಳಲ್ಲಿದ್ದುದು. ಕ್ರಮೇಣ ಕಿರೀಟಗಳು ಮಾಯವಾಗಿ. ಇತರ ಬಗೆಯ ಪ್ರಭುತ್ವಗಳು ಬಂದುವು. ಇಂದು ಪ್ರಪಂಚದ ಹಲವು ಭಾಗಗಳಲ್ಲಿರುವ ಪ್ರಜಾಪ್ರಭುತ್ವ ವ್ಯವಸ್ಥೆ ಯೂರೋಪಿನಿಂದ ಪ್ರೇರಿತವಾದದ್ದು.

ಯೂರೋಪಿನಲ್ಲಿ ಭಾಷೆಗಳ ಪ್ರಮುಖ ಗುಂಪುಗಳು ಮೂರು: ಜರ್ಮನ್. ರೋಮನ್ ಮತ್ತು ಸ್ಲಾವಿಕ್. ಅಲ್ಲಿ ಬಳಕೆಯಲ್ಲಿರುವ ಎಲ್ಲ ಭಾಷೆಗಳೂ ಇವುಗಳಲ್ಲಿ ಒಂದಲ್ಲ ಒಂದು ಗುಂಪಿಗೆ ಸೇರಿವೆ.

ರೋಮನ್ ಕ್ಯಾಥಲಿಕರು. ಪ್ರಾಟೆಸ್ಟೆಂಟರು, ಗ್ರೀಕ್ ಸಂಪ್ರದಾಯದವರು ಯೂರೋಪಿನ ಮುಖ್ಯ ಮತಾವಲಂಬಿಗಳು.

ವೈದ್ಯಕೀಯ, ತಾಂತ್ರಿಕಜ್ಞಾನ ಮುಂತಾದ ಅನೇಕ ಕ್ಷೇತ್ರಗಳಲ್ಲೂ ಯೂರೋಪ್ ಮುಂದುವರಿದಿದೆ.

ಯೂರೋಪಿನಲ್ಲಿ ನಿತ್ಯ ಹಸಿರಿನ ತಂಡ್ರಾ ಕಾಡುಗಳಿವೆ. ಓಕ್. ಪೈನ್. ಬೀಚ್ ಮರಗಳು ಬೆಳೆಯುವ ಕಾಡುಗಳೂ ಇವೆ.

ರಷ್ಯದಲ್ಲಿ ಅನೇಕ ಖನಿಜಗಳ ನಿಕ್ಷೇಪವಿದೆ. ಕಬ್ಬಿಣದ ಅದಿರು. ಬಾಕ್ಸೈಟ್. ಕ್ರೋಮಿಯಂ. ನಿಕ್ಕಲ್. ತಾಮ್ರ. ಸೀಸ. ಸತು. ಚಿನ್ನ.

ಟಿನ್. ಪಾಟಾಷ್. ರಂಜಕ. ಗಂಧಕ ಎಲ್ಲ ದೊರೆಯುತ್ತವೆ. ಫ್ರಾನ್ಸ್. ಸ್ವೀಡನ್. ನಾರ್ವೆ ಮತ್ತು ಕೆಲವೆಡೆಗಳಲ್ಲಿ ಕಬ್ಬಿಣದ ಅದಿರು ಸಿಗುತ್ತದೆ. ಜರ್ಮನಿಯಲ್ಲಿ ಕಲ್ಲಿದ್ದಲು, ಸ್ಪೇನಿನಲ್ಲಿ ಪಾದರಸ ನಿಕ್ಷೇಪಗಳಿವೆ. ರಷ್ಯ. ರುಮೇನಿಯಗಳಲ್ಲಿ ಪೆಟ್ರೋಲಿಯಂ ಹೇರಳವಾಗಿ ದೊರಕುತ್ತದೆ.

ಮಿಂಕ್, ಎರ್ಮೈನ್, ಸೇಬಲ್ ಮತ್ತು ನರಿಗಳನ್ನು ತುಪ್ಪಟಕ್ಕಾಗಿ ಹಿಡಿಯುತ್ತಾರೆ. ಐರ್‌ಲೆಂಡಿನಿಂದ ರಷ್ಯದ ತಗ್ಗು ಭೂಮಿವರೆಗೆ ದನಗಳಿಗಾಗಿ ಹುಲ್ಲು ಮೇವನ್ನು ಬೆಳೆಸುವ ಕ್ಷೇತ್ರವಿದೆ. ಹಾಲನ್ನು ಮಾರುವವರಲ್ಲದೆ ಬೆಣ್ಣೆ ಮತ್ತು ಗಿಣ್ಣು ತಯಾರಿಸುತ್ತಾರೆ. ಇಲ್ಲಿ ಕೋಳಿ ಸಾಕಣೆಯೂ ಉಂಟು. ಇಲ್ಲಿಂದ ದಕ್ಷಿಣಕ್ಕೆ ಗೋಧಿ ಮತ್ತಿತರ ಧಾನ್ಯಗಳನ್ನು ಬೆಳೆಸುತ್ತಾರೆ. ಆಲೂಗೆಡ್ಡೆ ದ್ರಾಕ್ಷಿ ಇತ್ಯಾದಿ ಬೆಳೆಯುತ್ತವೆ. ಇಲ್ಲಿಂದ ದಕ್ಷಿಣಕ್ಕೆ ಮುಸುಕಿನ ಜೋಳ, ಹಣ್ಣು, ತರಕಾರಿ, ಚಹ ಬೆಳೆಯುತ್ತವೆ. ಭೂಮಧ್ಯ ಪ್ರದೇಶದಲ್ಲಿ ನೀರಾವರಿ ಸೌಲಭ್ಯವಿದ್ದಾಗ ತರಕಾರಿ, ಹಣ್ಣುಗಳನ್ನು ಬಹಳವಾಗಿ ಬೆಳೆಯುತ್ತಾರೆ. ಕುರಿ. ಆಡುಗಳನ್ನು ಸಾಕುತ್ತಾರೆ.

ಯೂರೋಪಿನ ಕೆಲವು ಪ್ರದೇಶಗಳಲ್ಲಿ ಮಾತ್ರ ಕೈಗಾರಿಕೆಗಳು ಅಭಿವೃದ್ಧಿ ಹೊಂದಿವೆ. ಉತ್ತರ ಫ್ರಾನ್ಸ್, ಬೆಲ್ಜಿಯಂ, ನೆದರ್‌ಲೆಂಡ್ಸ್, ಜರ್ಮನಿ ಮತ್ತು ರಷ್ಯಗಳಲ್ಲಿ ಕಬ್ಬಿಣ ಮತ್ತು ಉಕ್ಕು, ಯಂತ್ರಗಳು, ಬಟ್ಟೆ, ರಾಸಾಯನಿಕಗಳು ತಯಾರಾಗುತ್ತವೆ. ಲಂಕಾಷೈರಿನಲ್ಲಿ ಹತ್ತಿಗಿರಣಿ, ಯಾರ್ಕ್‌ಷೈರಿನಲ್ಲಿ ಉಣ್ಣೆಗಿರಣಿ. ಸ್ವಿಟ್ಜರ್‌ಲೆಂಡಿನಲ್ಲಿ ಗಡಿಯಾರದ ಕೈಗಾರಿಕೆಗಳಿವೆ.

ಯೂರೋಪಿನ ವ್ಯಾಪಾರದಲ್ಲಿ ಬಹುಪಾಲು ಆಸ್ಟ್ರೇಲಿಯ. ಅಮೆರಿಕ ಸಂಯುಕ್ತ ಸಂಸ್ಥಾನ, ಕೆನಡಗಳೊಂದಿಗೆ ಪರಸ್ಪರ ನಡೆಯುತ್ತದೆ. ಆಹಾರ, ಕಚ್ಚಾಸಾಮಗ್ರಿಗಳನ್ನು ಆಮದು ಮಾಡಿಕೊಳ್ಳುತ್ತಾರೆ. ಸಿದ್ಧವಸ್ತುಗಳು, ಮೀನು. ಹಾಲು, ಹೈನ, ಗೋಧಿ ಇವನ್ನು ರಫ್ತು ಮಾಡುತ್ತಾರೆ.

ಯೂರೋಪಿನ ವಿಸ್ತೀರ್ಣ 95,83,000 ಚದರ ಕಿಲೊಮೀಟರು. ಜನಸಂಖ್ಯೆ ಸುಮಾರು 60,28,73,000.

## ಯೋಗವಿದ್ಯೆ

ಯೋಗವಿದ್ಯೆ ಭಾರತೀಯ ತತ್ತ್ವಶಾಸ್ತ್ರದ ದರ್ಶನಗಳಲ್ಲಿ ಒಂದು.

ಚಟುವಟಿಕೆಗಳು ನಮಗೆ ತಿಳಿದೇ ನಡೆಯಬಹುದು, ತಿಳಿಯದೆಯೇ ನಡೆಯಬಹುದು. ಇದನ್ನೆಲ್ಲ ಹತೋಟಿಯಲ್ಲಿಟ್ಟು ಮನಸ್ಸು ಚಂಚಲವಾಗದೆ ನಿರ್ಮಲವಾಗಿದ್ದಾಗ, ದೇವರ ಮತ್ತು ಆತ್ಮದ ನಿಜಸ್ವರೂಪವನ್ನು ತಿಳಿಯಲು ಸಹಾಯ ಮಾಡುವ ವಿದ್ಯೆ ಯೋಗವಿದ್ಯೆ. ದೇವರನ್ನು ಸೇರಲು. ಆತ್ಮವನ್ನು ಅರಿಯಲು ನಮ್ಮ ದೇಹದ ಮೇಲೂ ಮನಸ್ಸಿನ ಮೇಲೂ ಹತೋಟಿ ಇರಬೇಕು ; ಮನಸ್ಸನ್ನು ಅತ್ತಿತ್ತ ಹೋಗಗೊಡದೆ ಒಂದೇ ವಿಷಯ ಯೋಚಿಸುವಂತೆ ಮಾಡಬೇಕು ಎಂದು ನಮ್ಮ ಹಿರಿಯರು ಭಾವಿಸಿದ್ದರು. ಇದು ಯೋಗವಿದ್ಯೆಯ ಮುಖ್ಯ ಪ್ರಯೋಜನ.

ಯೋಗವಿದ್ಯೆಯಲ್ಲಿ ಎಂಟು ಹಂತಗಳಿವೆ : ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ.

ಯಮವೆಂದರೆ—ಇಂದ್ರಿಯಗಳನ್ನು ಬಿಗಿಹಿಡಿಯುವುದು, ಕೆಲವು ಬಗೆಯ ಆಹಾರ, ಅಭ್ಯಾಸಗಳು ಇವನ್ನು ಬಿಟ್ಟುಬಿಡುವುದು, ವರ್ಜನೆ.

ನಿಯಮವೆಂದರೆ—ಪಾಲನೆ, ಅನುಷ್ಠಾನ. ಮನಸ್ಸಿನ ಪ್ರವೃತ್ತಿಗಳಿಗೆ ಸಂಬಂಧಿಸಿದ ವಿಧಿನಿಯಮಗಳು.

ಆಸನವೆಂದರೆ—ದೇಹದ ಭಂಗಿ, ವಿನ್ಯಾಸ, ಅಂಗವಿನ್ಯಾಸ. ಸ್ಥಿರವಾಗಿಯು ಸುಖವಾಗಿಯೂ ಇರಬೇಕು, ಆಸನ.

ಪ್ರಾಣಾಯಾಮ—ಉಸಿರಾಟದ ಮೇಲಿನ ಹತೋಟಿ. ಒಳಗೆಳೆದುಕೊಂಡ ಉಸಿರನ್ನು ದೀರ್ಘಕಾಲ ಬಿಗಿಹಿಡಿಯುವುದು.

ಪ್ರತ್ಯಾಹಾರ—ಇಂದ್ರಿಯಗಳನ್ನು ಅವುಗಳ ಹೊರಗಿನ ಕೆಲಸದಿಂದ ಹಿಂದಕ್ಕೆ ಸೆಳೆದು ಮನಸ್ಸಿನ ವಿವರಗಳನ್ನು ಒಂದೆಡೆ ಕೂಡಿಸುವುದು.

ಧ್ಯಾನ—ಏಕಮನಸ್ಸಿನಿಂದ ಚಿತ್ತವೃತ್ತಿಗಳನ್ನು ಕೇಂದ್ರೀಕರಿಸುವುದು.

ಧಾರಣ—ಈ ಧ್ಯಾನವನ್ನು ಹಿಡಿದು, ಅದು ಹೆಚ್ಚುವಂತೆ ಮಾಡುವುದು.

ಸಮಾಧಿ—ಹೊರಗಿನ ಎಲ್ಲ ಚಟುವಟಿಕೆಗಳ ಸಂಪರ್ಕವನ್ನೂ ಬಿಟ್ಟು ಮನಸ್ಸಿನ ಎಲ್ಲ ನೆಲೆಗಳನ್ನೂ ವಿವರಗಳನ್ನೂ ತನ್ನೊಳಗೇ ಇಡುವುದು.

ಈ ಎಂಟು ಯೋಗವಿದ್ಯೆಯ ಅಂಗಗಳು.

ಯೋಗವಿದ್ಯೆಯಿಂದ ದೇಹ, ಮನಸ್ಸು ಎರಡೂ ಸಮಸ್ಥಿತಿಗೆ, ಕುಶಲ ಸ್ಥಿತಿಗೆ ಬರುತ್ತವೆ. ಹೊರಗಿನ ಪ್ರಪಂಚದ ಒತ್ತಡ ನಮ್ಮ ಮೇಲೆ ಇರದೆ, ನಾವು ಸ್ವತಂತ್ರವಾಗಿ ವ್ಯವಹರಿಸಲು ಶಕ್ತರಾಗುತ್ತೇವೆ. ಎಂಥ ಕಷ್ಟದ ಸ್ಥಿತಿಯಲ್ಲೂ ಮನಸ್ಸು ಉದ್ವಿಗ್ನವಾಗದೆ, ಶಾಂತವಾಗಿರುವುದೇ ಯೋಗ ವಿದ್ಯೆಯ ಮೊದಲ ಪ್ರಯೋಜನ ; ಪರಮಾರ್ಥದೊಂದಿಗೆ ಬೆರೆಯುವುದು ಯೋಗವಿದ್ಯೆಯ ಅಂತಿಮ ಧ್ಯೇಯ.

ಈ ವಿದ್ಯೆ ನಮ್ಮ ದೇಶದಲ್ಲಿ ತುಂಬ ಹಿಂದಿನಿಂದ ಬೆಳೆದುಬಂದಿದೆ. ಕ್ರಿಸ್ತ ಪೂರ್ವ ಎರಡನೆಯ ಶತಮಾನದ ಸುಮಾರಿಗೆ ಜೀವಿಸಿದ್ದ ಪತಂಜಲಿ ಎನ್ನುವ ಮಹರ್ಷಿ ಈ ವಿದ್ಯೆಯ ವಿವರಗಳನ್ನೆಲ್ಲ

ಕ್ರೋಢೀಕರಿಸಿ ಯೋಗ ಸೂತ್ರಗಳನ್ನು ರಚಿಸಿದರು. ಇವರಿಂದ ಯೋಗ ವಿದ್ಯೆ ಈ ದೇಶದಲ್ಲಿ ಉಳಿಯುವುದು, ಬೆಳೆಯುವುದು ಸಾಧ್ಯವಾಯಿತು.

## ಯೋಜನೆ

'ಇಷ್ಟು ವರ್ಷಗಳಲ್ಲಿ ಹುಡುಗರ ವಿದ್ಯಾಭ್ಯಾಸ ಮುಗಿಯುತ್ತದೆ; ಆಗ ನಮ್ಮ ಸಂಸಾರದ ಸಂಪಾದನೆ ಎಷ್ಟಿರುತ್ತದೆ? ಹೆಣ್ಣು ಮಕ್ಕಳ, ಗಂಡು ಹುಡುಗರ ಮದುವೆ ಮಾಡುವುದು ಯಾವಾಗ? ಖರ್ಚು ಎಷ್ಟು ಬೀಳಬಹುದು?'

ಸಂಸಾರದ ಯಜಮಾನರಾದ ತಂದೆ ತಾಯಿ ಈ ರೀತಿ ಯೋಚನೆ ಮಾಡುತ್ತಾರೆ. ಯಾವ ಕಾಲದಲ್ಲಿ ಏನೇನು ಮಾಡಬೇಕೆಂದು ಗೊತ್ತು ಪಡಿಸಿಕೊಳ್ಳುತ್ತಾರೆ. ಇದು ಸಂಸಾರದ ಯೋಜನೆ.

ಒಂದು ತಿಂಗಳ ಆದಾಯ ಇಷ್ಟಿರಬೇಕಾದರೆ ಯಾವ ಯಾವ ಖರ್ಚುಗಳಿಗಾಗಿ ಅದನ್ನು ವಿತರಣೆ ಮಾಡಬೇಕು? ಅಗತ್ಯಗಳನ್ನು ಹೇಗೆ ಪೂರೈಸಿಕೊಳ್ಳಬೇಕು? ಇದು ತಿಂಗಳಿಗೆ ಸೀಮಿತವಾದ ಯೋಜನೆ.

ಊರು ದಿನೇ ದಿನೇ ಬೆಳೆಯುತ್ತಿರುತ್ತದೆ. ಹೊಸ ಹೊಸ ಮನೆಗಳು, ಕಾರಖಾನೆಗಳು ಕಾಣಿಸಿಕೊಳ್ಳುತ್ತವೆ. ಚರಂಡಿ ವ್ಯವಸ್ಥೆ ಉತ್ತಮಗೊಳಿಸುವುದು. ರಸ್ತೆ ದುರಸ್ತಿ ಪಡಿಸುವುದು, ಶುಚಿ–ನೀರು–ದೀಪ ಇವುಗಳ ವ್ಯವಸ್ಥೆ ನೋಡಿಕೊಳ್ಳುವುದು ಮುಂತಾದ ಜವಾಬ್ದಾರಿ ಆ ಊರಿನ ಪಾಲಕರಿಗೆ ಇರುತ್ತದೆ. ದಿನನಿತ್ಯದ ಜವಾಬ್ದಾರಿಗಳನ್ನು ಪೂರೈಸಲು ಇಂತಿಷ್ಟು ಹಣ ಬೇಕು. ಈ ವರ್ಷ ಆಸ್ಪತ್ರೆ ಕಟ್ಟಿಸೋಣ, ಮುಂದಿನ ವರ್ಷ ಹೊಸ ರಸ್ತೆ ಮಾಡಿಸೋಣ, ಇವಕ್ಕೆ ಇಷ್ಟು ಖರ್ಚಾಗುತ್ತದೆ; ನಮ್ಮ ವರಮಾನ ಇಷ್ಟು; ಸರಕಾರ ಎಷ್ಟು ನೀಡಬಹುದು? ಆಗುವ ಸಾಲ ಎಷ್ಟು? ಇದೆಲ್ಲವನ್ನು ಗಮನಿಸಿ ವ್ಯವಸ್ಥೆಮಾಡುವುದು ಊರಿನ ಯೋಜನೆ.

ಇವಕ್ಕಿಂತಲೂ ದೊಡ್ಡಪ್ರಮಾಣದಲ್ಲಿ ರಾಷ್ಟ್ರದ ಯೋಜನೆ.

ಜೀವನದ ಪ್ರತಿಯೊಂದು ಕ್ಷೇತ್ರದಲ್ಲೂ ಇಂಥ ಯೋಜನೆಗಳು ಅಗತ್ಯ.

ಈ ಬಗೆಯ ಯೋಜನೆಗಳು ಇಲ್ಲದಿದ್ದರೆ ಏನಾಗುತ್ತದೆ?

ಅತ್ಯಗತ್ಯವಾಗಿ ಆಗಬೇಕಾದ ಕೆಲಸ ಹಿಂದೆ ಬೀಳುತ್ತದೆ. ಒಂದು ಕೆಲಸ ಪ್ರಾರಂಭಿಸಿ ಅರ್ಧಕ್ಕೆ ನಿಲ್ಲಿಸಿ ಇನ್ನೊಂದಕ್ಕೆ ಕೈಹಾಕುವಂತಾಗುತ್ತದೆ. ಕೆಲಸ ಪ್ರಾರಂಭಿಸಿ, ತಕ್ಕಷ್ಟು ಜನ ಸಹಾಯ ಇಲ್ಲ ಎಂದೋ ಹಣ ಸಾಲದು ಎಂದೋ ಕೈಬಿಡಬೇಕಾಗುತ್ತದೆ. ಎಲ್ಲ ಗೊಂದಲ. ಅಪೂರ್ಣ. ಒಂದು ಮದುವೆಗೆ ಏರ್ಪಾಡು ಮಾಡುವಾಗ. ಯಾವ ಕೆಲಸಕ್ಕೆ ಹೆಚ್ಚು ಕಾಲ ಬೇಕು. ಯಾವುದಕ್ಕೆ ಕಡಮೆ ಬೇಕು. ಯಾವ ಸಾಮಾನುಗಳು ಮೊದಲು ಬೇಕು. ಯಾವುದನ್ನು ಮೊದಲು ತಂದರೆ ಕೆಟ್ಟು ಹೋಗುತ್ತದೆ. ಕಡೆಯಲ್ಲಿ ಹಾಲು ತರಕಾರಿ ಹೂವು ಇಂಥವುಗಳಿಗೆ ಏರ್ಪಾಟು ಹೇಗೆ—ಎಂದು ಯೋಚಿಸಬೇಡವೆ?

ಆ ಯೋಚನೆಯಿಂದ ಹುಟ್ಟುತ್ತದೆ ಯೋಜನೆ.

ಅನೇಕ ವಸ್ತುಗಳು ಮತ್ತು ಸೇವಾ ಸೌಲಭ್ಯಗಳು ದೇಶದಲ್ಲಿ ದೊರಕುತ್ತವೆ. ಈ ಉತ್ಪಾದನೆಯ ಫಲವನ್ನು ಜನರಿಗೆ ಹಿತವಾಗುವ ರೀತಿಯಲ್ಲಿ ವಿತರಣೆ ಮಾಡುವ ಸಲುವಾಗಿಯೂ ಅಭಿವೃದ್ಧಿ ಕಾರ್ಯಗಳನ್ನು ಸಮರ್ಥವಾಗಿ ನಡೆಸುವುದರ ಸಲುವಾಗಿಯೂ ಎಲ್ಲ ದೇಶಗಳೂ ಯೋಜನೆಗಳನ್ನು ಹಾಕಿಕೊಳ್ಳುತ್ತವೆ. ಯೋಜನೆಯ ಸ್ವರೂಪ ಆಯಾ ದೇಶದ ರಾಜಕೀಯ ಪದ್ಧತಿ, ಸಾಮಾಜಿಕ ಸ್ಥಿತಿಗತಿ ಮತ್ತು ಸಂಪನ್ಮೂಲಗಳನ್ನು ಅವಲಂಬಿಸಿರುತ್ತವೆ. ಒಂದೊಂದು ದೇಶದ ಅವಸರದ ಅಗತ್ಯಗಳು ಒಂದೊಂದು ಬಗೆ. ಒಂದೊಂದು ದೇಶದಲ್ಲಿ ಸಿಕ್ಕುವ ಖನಿಜಗಳು, ದೊರಕುವ ನೀರಾವರಿ, ವಿದ್ಯುಚ್ಛಕ್ತಿ ಸೌಲಭ್ಯ ಬೇರೆ ಬೇರೆ. ತಮ್ಮ ತಮ್ಮ ಅಗತ್ಯಗಳಿಗೆ ಅನುಗುಣವಾಗಿ ಬೇರೆ ಬೇರೆ ದೇಶಗಳು ಯೋಜನೆಯ ಗುರಿಗಳನ್ನು ಗೊತ್ತುಮಾಡಿಕೊಳ್ಳುತ್ತವೆ. ಮುಂದುವರಿದ ರಾಷ್ಟ್ರಗಳು, ಸಂಪೂರ್ಣವಾಗಿ ಉದ್ಯೋಗದ ಅವಕಾಶವನ್ನು ಯೋಜಿಸುವುದು, ದೇಶದ ಬೇರೆ ಬೇರೆ ಪ್ರದೇಶಗಳನ್ನು ಒಂದೇ ಮಟ್ಟದ ಅಭಿವೃದ್ಧಿಗೆ ಒಳಪಡಿಸುವುದು ಈ ಮುಂತಾದ ಗುರಿಗಳನ್ನು ಹೊಂದಿರುತ್ತವೆ. ಅಭಿವೃದ್ಧಿಯಾಗುತ್ತಿರುವ ರಾಷ್ಟ್ರಗಳು ರಾಷ್ಟ್ರೀಯ ವರಮಾನವನ್ನು ಹೆಚ್ಚಿಸುವುದು, ಜನರ ಜೀವನ ಮಟ್ಟವನ್ನು ಸುಧಾರಿಸುವುದು, ಎಲ್ಲರಿಗೂ ಒಂದು ಕನಿಷ್ಠ ಮಟ್ಟದ ಶಿಕ್ಷಣ, ವೈದ್ಯಕೀಯ ನೆರವು ಒದಗಿಸುವುದು, ಹಣಕಾಸು ವ್ಯವಸಾಯ ಕೈಗಾರಿಕೆ ಇವುಗಳ ಸುಧಾರಣೆ ಮುಂತಾದ ಗುರಿಗಳನ್ನು ಹೊಂದಿರುತ್ತವೆ.

ಖಾಸಗೀ ಕೈಗಾರಿಕೆಗೆ ವಿಪುಲವಾದ ಅವಕಾಶವನ್ನು ಕಲ್ಪಿಸುವ ಬಂಡವಾಳ ಆರ್ಥಿಕ ಪದ್ಧತಿಯ ಕೆಲವು ದೇಶಗಳಲ್ಲಿ, ಮೂರು ಪಕ್ಷಗಳ ಸಮಿತಿಗಳು ಯೋಜನೆಯನ್ನು ರಚಿಸುತ್ತವೆ. ಖಾಸಗೀ ವಲಯದ ಪ್ರತಿನಿಧಿಗಳು, ಕಾರ್ಮಿಕ ಪ್ರತಿನಿಧಿಗಳು ಮತ್ತು ಸರಕಾರಿ ಅಧಿಕಾರಿಗಳು ಈ ಸಮಿತಿಯಲ್ಲಿ ಇರುತ್ತಾರೆ. ಖಾಸಗೀ ವಲಯದ ಕೈಗಾರಿಕೆಯ ಪ್ರವರ್ತಕರು ಸ್ವತಂತ್ರರಾಗಿದ್ದರೂ ರಾಷ್ಟ್ರದ ಆರ್ಥಿಕ ಯೋಜನೆ ಅವರ ಕೈಗಾರಿಕೆಗಳ ಮೇಲೆ ಪ್ರಭಾವ ಬೀರುತ್ತದೆ. ಆದ್ದರಿಂದ ಅವರೂ ಯೋಜನೆಯ ಗುರಿ ಮತ್ತು ಉದ್ದೇಶಗಳಿಗೆ ಅನುಗುಣವಾಗಿ ವರ್ತಿಸಬೇಕಾಗುತ್ತದೆ.

ಕಮ್ಯೂನಿಸ್ಟ್ ದೇಶಗಳಲ್ಲಿ ಹಲವಾರು ಸಮಿತಿಗಳು ಸೇರಿ ಯೋಜನೆಯನ್ನು ತಯಾರಿಸುತ್ತವೆ. ಒಂದೊಂದು ಪ್ರದೇಶದ ಒಂದೊಂದು ಬಗೆಯ ಕೈಗಾರಿಕೆಯ ಹೊಣೆಯನ್ನು ಒಂದೊಂದು ಸಮಿತಿ ವಹಿಸಿಕೊಂಡು ಯೋಜನೆ ರೂಪಿಸುತ್ತದೆ. ಅಲ್ಲದೆ, ಅದನ್ನು ಜಾರಿಗೆ ತರುವ ಜವಾಬ್ದಾರಿಯನ್ನೂ ಹೊರುತ್ತದೆ. ಈ ಸಮಿತಿಗಳು ಕೇಂದ್ರ ಯೋಜನಾ ಸಮಿತಿಗೆ ಬದ್ಧವಾಗಿದ್ದು ಅದರ ಆದೇಶದಂತೆ ನಡೆಯುತ್ತವೆ. ಅದರ ಯೋಜನೆಯನ್ನು ರೂಪಿಸುವಾಗ, ಪಕ್ಷ ನಿರ್ಧರಿಸುವ ನೀತಿಯನ್ನು ಅನುಸರಿಸುತ್ತವೆ.

ಆಡಳಿತ ಅಥವಾ ಆರ್ಥಿಕ ಪದ್ಧತಿ ಯಾವುದೇ ಆಗಿರಲಿ, ಸಂಪನ್ಮೂಲಗಳನ್ನು ಹೇಗೆ ಉಪಯೋಗಿಸಿಕೊಳ್ಳಬೇಕೆಂಬುದನ್ನು ಸರಕಾರ ತೀರ್ಮಾನಿಸುತ್ತದೆ. ಯಾವ ಯಾವ ವಲಯಗಳಿಗೆ, ಕೈಗಾರಿಕೆಗಳಿಗೆ ಯಾವ ಸಂಪನ್ಮೂಲಗಳನ್ನು ಎಷ್ಟೆಷ್ಟು ಹಂಚಬೇಕೆಂಬುದನ್ನು ಯೋಜನೆ ರೂಪಿಸುವಾಗ ನಿರ್ಧರಿಸಲಾಗುತ್ತದೆ.

ಭಾರತ ಅಭಿವೃದ್ಧಿಯಾಗುತ್ತಿರುವ ದೇಶ. ಇಂಥ ದೇಶಗಳಲ್ಲಿ ಯೋಜನೆಗಳು ಹಲವಾರು ಉದ್ದೇಶಗಳನ್ನು ಹೊಂದಿರುತ್ತವೆ. ರಾಷ್ಟ್ರೀಯ ವರಮಾನ ಮತ್ತು ಜನರ ಜೀವನ ಮಟ್ಟವನ್ನು ಹೆಚ್ಚಿಸುವುದು. ಜನರಿಗೆ ಉದ್ಯೋಗಗಳು ದೊರಕುವಂತೆ ಮಾಡುವುದು. ವರಮಾನ ಹಂಚಿಕೆ ಸಮಾನವಾಗಿ ಆಗುವಂತೆ ನೋಡುವುದು ಮೊದಲಾದುವು ಭಾರತದ ಯೋಜನೆಗಳ ಉದ್ದೇಶಗಳು. ಅಭಿವೃದ್ಧಿಯಾಗುತ್ತಿರುವ ದೇಶಗಳಲ್ಲಿ ಸಹ ಯೋಜನೆಯನ್ನು ಉನ್ನತಮಟ್ಟದ ಸಮಿತಿಯೊಂದು ರೂಪಿಸುತ್ತದೆ. ಭಾರತದ ಯೋಜನಾ ಆಯೋಗ ಇಂಥ ಉನ್ನತಮಟ್ಟದ ಸಮಿತಿಯಾಗಿದೆ. ಈ ಯೋಜನಾ ಆಯೋಗವು [illegible]

ಪ್ರತಿನಿಧಿಗಳು, ಖಾಸಗೀ ಮತ್ತು ಸರಕಾರೀ ವಲಯದ ಪ್ರತಿನಿಧಿಗಳು ಇವರೆಲ್ಲರ ಸಹಾಯ ಪಡೆದು ತನ್ನ ಕಾರ್ಯನಿರ್ವಹಣೆ ಮಾಡುತ್ತದೆ.

ಯಾವ ದೇಶವೇ ಆಗಲಿ, ಯೋಜನೆಗಳನ್ನು ತಯಾರಿಸುವಾಗ ಕೆಲವು ವಿಷಯಗಳನ್ನು ಮರೆಯುವ ಹಾಗಿಲ್ಲ. ಯೋಜನೆಯ ಅವಧಿಯಲ್ಲಿ–ಎಂದರೆ ಯೋಜನೆಗೆ ಗೊತ್ತುಮಾಡಿದ ಕಾಲದಲ್ಲಿ–ಖಚಿತವಾಗಿ ದೊರೆಯುವ ಸಂಪನ್ಮೂಲ ಎಷ್ಟು ಎಂಬುದು ಸ್ಪಷ್ಟವಾಗಿರಬೇಕು. ಸಂಪನ್ಮೂಲಗಳನ್ನು ಬೇರೆ ಬೇರೆ ಕೈಗಾರಿಕೆಗಳ ಬಳಕೆಗೆಂದು ಹಂಚುವಾಗ ಯಾವುದು ಎಷ್ಟು ಮುಖ್ಯ, ಯಾವುದಕ್ಕೆ ಎಷ್ಟು ಬೇಕು ಎಂಬುದನ್ನು ಗಮನಿಸುವುದು ಅಗತ್ಯ. ಪ್ರತಿ ಕೈಗಾರಿಕೆ ನಿರ್ದಿಷ್ಟವಾದ ಉತ್ಪಾದನೆಯ ಗುರಿಯನ್ನು ಹೊಂದಿರುತ್ತದೆ. ಆ ಗುರಿಯನ್ನು ತಲಪುವುದಕ್ಕೆ ಸಂಪನ್ಮೂಲಗಳ ಹಂಚಿಕೆ ಪ್ರಮಾಣಬದ್ಧವಾಗಿರಬೇಕು. ತಪ್ಪಿದರೆ ಉತ್ಪಾದನೆ ಕಡಮೆಯಾಗುತ್ತದೆ. ಎಲ್ಲ ಕ್ಷೇತ್ರಗಳು, ಎಲ್ಲ ಕೈಗಾರಿಕೆಗಳ ಅಗತ್ಯಗಳನ್ನೂ ಗಮನಿಸಿ ವ್ಯವಸಾಯಕ್ಕೆ ಇಷ್ಟು, ನೀರಾವರಿಗೆ ಇಷ್ಟು, ಶಿಕ್ಷಣಕ್ಕೆ ಇಷ್ಟು, ರಕ್ಷಣೆಗೆ ಇಷ್ಟು, ವೈದ್ಯಕೀಯಕ್ಕೆ ಇಷ್ಟು, ರಸ್ತೆ ಸೇತುವೆಗಳಿಗೆ ಇಷ್ಟು, ಉಕ್ಕಿನ ಕೈಗಾರಿಕೆಗೆ ಇಷ್ಟು, ಸಕ್ಕರೆಯ ಕೈಗಾರಿಕೆಗೆ ಇಷ್ಟು–ಹೀಗೆ ಸಂಪನ್ಮೂಲಗಳನ್ನು ಗೊತ್ತುಮಾಡಬೇಕು. ಅದರಂತೆ ನಡೆಯಬೇಕು. ಆಗ ಮಾತ್ರ ಗುರಿ ಮುಟ್ಟುವುದು ಸಾಧ್ಯ. ಅಗತ್ಯವೆನಿಸಿದಾಗ ಯೋಜನೆಯ ಪ್ರಮಾಣವನ್ನು ಹೆಚ್ಚು ಅಥವಾ ಕಡಮೆ ಮಾಡಲು ಸಾಧ್ಯವಿರಬೇಕು.

ಯೋಜನೆಗಳ ಯಶಸ್ಸು ಯೋಜನೆಯ ವಾಸ್ತವಿಕತೆಯನ್ನೇ ಸಂಪೂರ್ಣವಾಗಿ ಅವಲಂಬಿಸಿರುತ್ತದೆ. ಎಂದರೆ, ಎಷ್ಟು ಹಣ ಮತ್ತು ಇತರ ಬಗೆಯ ಸಹಾಯ ಒದಗಬಹುದು ಎಂದು ಲೆಕ್ಕಹಾಕುವಾಗ, ಉತ್ಸಾಹದಿಂದ ಉತ್ಪ್ರೇಕ್ಷೆ ಮಾಡಬಾರದು. ಯಾವ ಯಾವ ಬಗೆಯ ಸಂಪತ್ತು ಎಷ್ಟು ಒದಗುತ್ತದೆ ಎಂಬುದು ಸ್ಪಷ್ಟವಾಗಿ ತಿಳಿದಿರಬೇಕು. ಯೋಜನೆಗಳು ತಮ್ಮ ಗುರಿ ಮುಟ್ಟುವುದರಲ್ಲಿ ಪ್ರಜೆಗಳು ವಹಿಸುವ ಪಾತ್ರ ಹಿರಿದು. ಸರಕಾರವೇ ಯೋಜನೆಯನ್ನು ನಡೆಸಲಾರದು. ಜನ ಅದರಲ್ಲಿ ಆಸಕ್ತಿ ವಹಿಸಬೇಕು. ಕೈಕೊಂಡ ಕೆಲಸವನ್ನು ವ್ಯವಸ್ಥಿತವಾಗಿ ಮತ್ತು ದಕ್ಷತೆಯಿಂದ ಪೂರೈಸಲು ಸಾಧ್ಯವಾದಷ್ಟು ಉಳಿತಾಯಮಾಡಿ ದೇಶಕ್ಕೆ ಬಂಡವಾಳವನ್ನು ಒದಗಿಸಬೇಕು. ಯೋಜನೆಗಳನ್ನು ವ್ಯವಸ್ಥೆಗೆ ಅನುಗುಣವಾಗಿ ಕಾರ್ಯಗತಮಾಡಲು ಮೊದಲು ಪ್ರಯತ್ನಿಸಿದ ದೇಶ ಸೋವಿಯೆತ್ ರಷ್ಯ. 1928ರಲ್ಲಿ ರಷ್ಯದ ಮೊದಲನೆಯ ಯೋಜನೆ ಆರಂಭವಾಯಿತು. ಭಾರತದ ಯೋಜನಾ ಆಯೋಗವನ್ನು 1950ರಲ್ಲಿ ರಚಿಸಲಾಯಿತು. ಯೋಜನೆಯನ್ನು ರೂಪಿಸುವುದಷ್ಟೇ ಈ ಆಯೋಗದ ಮುಖ್ಯ ಕಾರ್ಯವಾದರೂ ಅದರ ಶಿಫಾರಸನ್ನು ಸರಕಾರ ಸಾಮಾನ್ಯವಾಗಿ ಅಂಗೀಕರಿಸುತ್ತದೆ. ದೇಶದ ಪ್ರಧಾನಿಯೇ ಆಯೋಗದ ಅಧ್ಯಕ್ಷರು. ಯೋಜನೆಯ ಕರಡು ಹಲವಾರು ಹಂತಗಳಲ್ಲಿ ಸಂಸತ್ತಿನ ಮತ್ತು ವಿಧಾನಮಂಡಲಗಳ ಮುಂದೆ ಬರುತ್ತದೆ. ಸೂಕ್ತವಾದ ತಿದ್ದುಪಾಟುಗಳೊಂದಿಗೆ ಅಂಗೀಕರಿಸಲ್ಪಡುತ್ತದೆ.

ನಮ್ಮ ದೇಶದಲ್ಲಿ ಐದು ವರ್ಷಗಳ ಅವಧಿಯ ಯೋಜನೆಗಳನ್ನು ರೂಪಿಸಲಾಗುತ್ತಿದೆ. 1951ರಿಂದ 56, 56-61, 61-66 ಹೀಗೆ ಕ್ರಮವಾಗಿ ಮೂರು ಪಂಚವಾರ್ಷಿಕ ಯೋಜನೆಗಳು ಮುಗಿದುವು. ಆದರೆ 1966ರ ಅನಂತರ ನಾಲ್ಕನೆಯ ಪಂಚವಾರ್ಷಿಕ ಯೋಜನೆ ಒಡನೆಯೇ ಜಾರಿಗೆ ಬರಲಿಲ್ಲ. 1966ರಿಂದ 69ರ ತನಕ ವಾರ್ಷಿಕ ಯೋಜನೆಗಳನ್ನಷ್ಟೇ ರೂಪಿಸಲಾಯಿತು. ಬಳಿಕ ನಾಲ್ಕನೆಯ ಪಂಚವಾರ್ಷಿಕ ಯೋಜನೆ ರಚಿತವಾಯಿತು.

ದೀರ್ಘ ಕಾಲಾವಧಿಯ ಉದ್ದೇಶಗಳನ್ನು ಹಂತಹಂತವಾಗಿ ಸಾಧಿಸುವ ದೃಷ್ಟಿಯಿಂದ ಒಂದೊಂದು ಪಂಚವಾರ್ಷಿಕ ಯೋಜನೆಯಲ್ಲಿಯೂ ನಿರ್ದಿಷ್ಟ ಗುರಿಗಳನ್ನು ಹಾಕಿಕೊಂಡು ಈ ಗುರಿಗಳನ್ನು ತಲಪುವ ಪ್ರಯತ್ನ ಮಾಡಲಾಯಿತು. ಹೀಗೆ, ವ್ಯವಸಾಯ, ಬೃಹತ್ ನೀರಾವರಿ, ಕಾಮಗಾರಿ ಮತ್ತು ವಿದ್ಯುತ್ ಉತ್ಪಾದನೆ—ಇವುಗಳನ್ನು ಅಭಿವೃದ್ಧಿಪಡಿಸುವುದೂ ಆಹಾರ ಮತ್ತು ಕಚ್ಚಾವಸ್ತುಗಳ ಉತ್ಪಾದನೆಯನ್ನು ಹೆಚ್ಚಿಸುವುದೂ ಪ್ರಥಮ ಯೋಜನೆಯ ಮುಖ್ಯ ಉದ್ದೇಶಗಳಾಗಿದ್ದುವು. ಎರಡನೆಯ ಪಂಚವಾರ್ಷಿಕ ಯೋಜನೆ ಮೂಲಭೂತ ಮತ್ತು ಬೃಹತ್ ಕೈಗಾರಿಕೆಗಳ ವಿಸ್ತರಣೆಗೂ ಗಣನೀಯ ಉದ್ಯೋಗಾವಕಾಶಗಳ ನಿರ್ಮಾಣಕ್ಕೂ ಮಹತ್ವ ನೀಡಿತು. ಮೂರನೆಯ ಪಂಚವಾರ್ಷಿಕ ಯೋಜನೆ ವ್ಯವಸಾಯ ಹಾಗೂ ಕೈಗಾರಿಕಾಭಿವೃದ್ಧಿ ಇವೆರಡಕ್ಕೂ ಸಮಾನ ಪ್ರಾಮುಖ್ಯ ಕೊಟ್ಟಿತು. ಸಾರಿಗೆ, ಸಂಪರ್ಕ, ಸಮಾಜ ಸೇವೆಗಳು ಇತ್ಯಾದಿ ಅಭಿವೃದ್ಧಿ ಕಾರ್ಯಗಳಿಗೆ ಎಲ್ಲ ಯೋಜನೆಗಳಲ್ಲಿಯೂ ಪ್ರಾಮುಖ್ಯ ಇದ್ದಿತು. ಜನಸಂಖ್ಯಾ ನಿಯಂತ್ರಣಕ್ಕೆ ಪ್ರಾಧಾನ್ಯ ಕೊಟ್ಟಿರುವುದು ನಾಲ್ಕನೆಯ ಯೋಜನೆಯ ಒಂದು ವೈಶಿಷ್ಟ್ಯ.

1951–69ರ ಹದಿನೆಂಟು ವರ್ಷಗಳ ಅವಧಿಯಲ್ಲಿ ಭಾರತ ಕೈಗೊಂಡ ಯೋಜನಾಭಿವೃದ್ಧಿಯ ಒಟ್ಟು ವೆಚ್ಚ (ಸರಕಾರಿ ಮತ್ತು ಖಾಸಗಿ ವಲಯಗಳು ವೆಚ್ಚ ಸೇರಿ) ಸುಮಾರು 36,000 ಕೋಟಿ ರೂಪಾಯಿ.

ಮೂರು ಪಂಚವಾರ್ಷಿಕ ಯೋಜನೆಗಳ ಫಲವಾಗಿ ರಾಷ್ಟ್ರೀಯ ವರಮಾನ ಶೇಕಡಾ 28ರಂತೆ ಹೆಚ್ಚಿತು. ಆದರೆ ಪ್ರತಿ ಯೋಜನಾ ಅವಧಿಯಲ್ಲೂ ಬೆಲೆಗಳು ಒಂದೇ ಸಮನೆ ಏರಿದುವು. 1951ರಿಂದ ಈಚೆಗೆ ಸುಮಾರು 13.4 ಕೋಟಿ ಜನಸಂಖ್ಯೆಯೂ ಹೆಚ್ಚಿತು. ಪ್ರತಿವರ್ಷ ತಲಾ ವರಮಾನ ಶೇಕಡಾ 1.8 ರಷ್ಟು ಹೆಚ್ಚಿದರೆ ಜನಸಂಖ್ಯೆ ಶೇಕಡಾ 2.5ರಂತೆ ಜಾಸ್ತಿಯಾಯಿತು. ಒಟ್ಟಿನಲ್ಲಿ ಆರ್ಥಿಕ ಯೋಜನೆಯಿಂದ ಭಾರತ ದೇಶದಲ್ಲಿ ತೀವ್ರವಾದ ಆರ್ಥಿಕ ಬದಲಾವಣೆಗಳು ಆರಂಭವಾಗಿವೆ. ಆಧುನಿಕ ಆರ್ಥಿಕ ವ್ಯವಸ್ಥೆಯ ಲಕ್ಷಣಗಳು ದೇಶದಲ್ಲಿ ಹೆಚ್ಚು ಹೆಚ್ಚಾಗಿ ಕಾಣಿಸಿಕೊಳ್ಳುತ್ತಿವೆ. ಆರ್ಥಿಕ ಸಾಮಾಜಿಕ ಕ್ರಾಂತಿ, ಯೋಜನಾಬದ್ಧ ಮಾರ್ಗದಲ್ಲಿ ಆಗುತ್ತಿದೆ.

## ರಂಗೂನ್

ಅಡಿಯಿಂದ ಮುಡಿಯವರೆಗೂ ಬಂಗಾರದ ಹೊಳಪು. ಬುದ್ಧನ ಎಂಟು ಕೂದಲನ್ನು ಪೂಜ್ಯ ಸ್ಮಾರಕವಾಗಿ ಉಳ್ಳ ಕೊಠಡಿಯ ಮೇಲೆ ಶಂಖದ ಆಕೃತಿಯಲ್ಲಿ ಕಟ್ಟಲ್ಪಟ್ಟ ಕಟ್ಟಡ; 112.5 ಮೀಟರ್ ಎತ್ತರ, ಅದೂ ನಗರದ ಮಟ್ಟದಿಂದ 51.5 ಮೀಟರ್ ಮೇಲೆ. ಚಿನ್ನದ್ದೇನೋ ಎನಿಸುತ್ತದೆ. ಅಷ್ಟು ಸಮರ್ಪಕವಾಗಿ, ಸಂಪೂರ್ಣವಾಗಿದೆ ಚಿನ್ನದ ಲೇಪನ. ಇದೇ ಸುಪ್ರಸಿದ್ಧ ಶ್ವೇ ಡ್ಯಾಗನ್ ಪಗೋಡ. ಹದಿನೈದನೆಯ ಶತಮಾನದಲ್ಲಿ ರಾಣಿ ಶಿನ್ ಸಾಬು ಈ ದೇವಸ್ಥಾನದ ಛಾವಣಿಗೆ ಚಿನ್ನವನ್ನು ಹೊದಿಸಲು ತನ್ನ ತೂಕದ ಬಂಗಾರವನ್ನು ಕೊಟ್ಟಳು. ಬರ್ಮದ ಬೌದ್ಧರಿಗೆ ಅತ್ಯಂತ ಪವಿತ್ರ ಯಾತ್ರಾಸ್ಥಳ; ಬೌದ್ಧ ಹಬ್ಬಗಳಲ್ಲಿ ಬರ್ಮದ ಎಲ್ಲ ಭಾಗಗಳಿಂದ ಇಲ್ಲಿಗೆ ಪ್ರಾರ್ಥನೆಗಾಗಿ ಯಾತ್ರಾರ್ಥಿಗಳು ಬರುತ್ತಾರೆ.

ಬರ್ಮೀಯರ ಧಾರ್ಮಿಕ ಜೀವನದ ಕೇಂದ್ರವಾಗಿರುವ ಈ ದೊಡ್ಡ ಚಿನ್ನದ ಸ್ತೂಪವಿರುವುದು ರಂಗೂನಿನಲ್ಲಿ.

ರಂಗೂನ್ ಬರ್ಮ ದೇಶದ ರಾಜಧಾನಿ. ಇದು ಪಗೋಡಗಳ ನಗರ. ಪಗೋಡವೆಂದರೆ ಬುದ್ಧನ ಅಥವಾ ಸಂತರ ಅವಶೇಷಗಳನ್ನೊಳಗೊಂಡ, ಗೋಪುರಾಕೃತಿಯ ಬೌದ್ಧ ದೇವಾಲಯ. ವಿಶೇಷವಾಗಿ ಚೀನ, ಜಪಾನ್, ಥೈಲೆಂಡ್, ಬರ್ಮ ಈ ದೇಶಗಳಲ್ಲಿ ಪಗೋಡಗಳಿವೆ.

1950_52ರಲ್ಲಿ ಪ್ರಸಿದ್ಧ ಕಾಬಾ ಆಯೆ ಪಗೋಡವನ್ನು ಕಟ್ಟಲಾಯಿತು. 1953–54ರಲ್ಲಿ ಅದರ ಹತ್ತಿರವೇ ಒಂದು ಸಭಾಭವನವನ್ನು ನಿರ್ಮಿಸಿ ಅದನ್ನು 'ವಿಶ್ವಶಾಂತಿ'ಗೆ ಅರ್ಪಿಸಲಾಯಿತು.

ರಂಗೂನಿನಲ್ಲಿರುವ ರಾಜ ಸರೋವರಗಳ ಸುತ್ತ ವನಪ್ರದೇಶವಿದೆ. ಇಲ್ಲಿ ವಿಶಾಲವಾದ ಮೃಗಾಲಯವೂ ಸಸ್ಯೋದ್ಯಾನವೂ ಇವೆ.

ರಂಗೂನಿನ ವಾಣಿಜ್ಯ ವ್ಯಾಪಾರಗಳ, ಬ್ಯಾಂಕು ಉದ್ಯಮದ ಮತ್ತು ಕೈಗಾರಿಕೆಗಳ ಕೇಂದ್ರ. ರಂಗೂನ್ ವಿಶ್ವವಿದ್ಯಾನಿಲಯ ವಿಕ್ಟೋರಿಯ ಸರೋವರದ ಎದುರಿನ ನಿವೇಶನದಲ್ಲಿದೆ.

ಶ್ವೆಡ್ಯಾಗನ್ ಪಗೋಡ ಬಹಳ ಪ್ರಾಚೀನಕಾಲದಿಂದ ಇದ್ದರೂ ರಂಗೂನ್ ಪಟ್ಟಣ ಈಚಿನದು. 1755ರಲ್ಲಿ ಬರ್ಮದೇಶದ ರಾಜರ ಕೊನೆಯ ವಂಶಸ್ಥಾಪಕನಾದ ಅಲೌಂಗ್‌ಪಾಯ ಈ ಸ್ಥಳವನ್ನು ಗೆದ್ದು ಅದನ್ನು ಬಂದರನ್ನಾಗಿ, ವ್ಯಾಪಾರ ಕೇಂದ್ರವನ್ನಾಗಿ ಅಭಿವೃದ್ಧಿಪಡಿಸಿದ. ಅದಕ್ಕೆ ಯಾನ್ ಕಾನ್ (ಕಲಹದ ಕೊನೆ) ಎಂದು ಹೆಸರಿಟ್ಟ.

ಯಾನ್ ಕಾನ್ ಆಂಗ್ಲ ಭಾಷೆಯಲ್ಲಿ ರಂಗೂನ್ ಆಯಿತು. ಈ ಬಂದರಿನ ಮೂಲಕವಾಗಿಯೇ ಬರ್ಮದ ಶೇಕಡಾ 80ರಷ್ಟು ವ್ಯಾಪಾರ ನಡೆಯುತ್ತದೆ. ಇಲ್ಲಿಂದ ಮುಖ್ಯವಾಗಿ ರಫ್ತಾಗುವುದು ಅಕ್ಕಿ.

1824 ಮತ್ತು 1852ರಲ್ಲಿ ಇಂಗ್ಲಿಷರಿಗೂ ಬರ್ಮಿಯರಿಗೂ ನಡೆದ ಯುದ್ಧಗಳಲ್ಲಿ ರಂಗೂನ್ ಬ್ರಿಟಿಷರ ವಶವಾಯಿತು. ಈ ಕಾಲದಲ್ಲಿ ಅನೇಕ ಭಾರತೀಯರು ರಂಗೂನಿನಲ್ಲಿ ನೆಲೆಸಿದರು. 1931ರಲ್ಲಿ 4,00,415 ಜನ ಸಂಖ್ಯೆಯಲ್ಲಿ ಬರ್ಮಿಯರು 1,21,998 ಮಾತ್ರ. ಉಳಿದವರು ಭಾರತೀಯರು, ಚೀನೀಯರು, ಐರೋಪ್ಯರು.

1941–42ರಲ್ಲಿ ಜಪಾನ್ ಬರ್ಮವನ್ನು ಆಕ್ರಮಿಸಿದಾಗ ಭಾರತೀಯ ಹಾಗೂ ಐರೋಪ್ಯ ಜನರಲ್ಲಿ ಬಹು ಭಾಗ ರಂಗೂನನ್ನು ಬಿಡಬೇಕಾಯಿತು. 1962ರ ಜನಗಣತಿಯ ಪ್ರಕಾರ ರಂಗೂನಿನ ಜನಸಂಖ್ಯೆ 8,00,993.

ನೋಡಿ : ಬರ್ಮ

## ರಕ್ಷಣಾ ಪಡೆಗಳು

ದೇಶದ ಭದ್ರತೆಗೆ ಭೂಸೇನೆ, ನೌಕಾದಳ, ವಾಯುದಳ ಬೇಕು. ಈ ಮೂರು ಸೇನಾ ವಿಭಾಗಗಳನ್ನೂ ಒಟ್ಟಾಗಿ ರಕ್ಷಣಾಪಡೆ ಎಂದು ಕರೆಯುತ್ತೇವೆ. ದೇಶದ ರಕ್ಷಣೆಗಾಗಿ ಬದ್ಧಕಂಕಣವಾಗಿರುವುದರಿಂದ ರಕ್ಷಣಾ ಪಡೆ ಎಂಬ ಹೆಸರು ಅನ್ವರ್ಥನಾಮ.

ಒಂದು ದೇಶದ ರಕ್ಷಣಾಪಡೆ ಆ ದೇಶದ ಅಮೂಲ್ಯ ಆಸ್ತಿ. ಗಂಡಾಂತರ ಪರಿಸ್ಥಿತಿಯಲ್ಲಿ ದೇಶದ ಅಳಿವು ಉಳಿವು ರಕ್ಷಣಾಪಡೆಯ ಸಾಮರ್ಥ್ಯವನ್ನು ಅವಲಂಬಿಸಿರುತ್ತವೆ.

ರಕ್ಷಣಾ ಪಡೆಯ ಸೈನ್ಯ ವಿಭಾಗಗಳು ಪರಸ್ಪರ ಸೌಹಾರ್ದದಿಂದಿದ್ದು ಭಿನ್ನಾಭಿಪ್ರಾಯಗಳಿಗೆ ಎಡೆಯಿಲ್ಲದೆ ಸಹಕರಿಸಿಕೊಂಡು ಹೋಗಬೇಕು. ಏಕೆಂದರೆ ದೇಶವನ್ನು ರಕ್ಷಿಸಲು ಒಂದರ ನೆರವಿಲ್ಲದೆ ಮತ್ತೊಂದು ಶಕ್ತವಾಗುವುದಿಲ್ಲ. ಭೂಸೈನ್ಯದ ಬೆಂಬಲಕ್ಕೆ ನೌಕಾದಳ ಸಿದ್ಧವಿರಬೇಕು. ಇವುಗಳ ಜೊತೆಗೆ ವಾಯುದಳ ಹಾರಿಬರಬೇಕು.

ಯುದ್ಧಕಾಲದಲ್ಲಿ ರಕ್ಷಣಾಪಡೆಯ ಈ ಮೂರು ವಿಭಾಗಗಳು ಹೇಗೆ ಒಂದಕ್ಕೊಂದು ಪೂರಕವಾಗಿ ಕೆಲಸ ಮಾಡುತ್ತವೆ ? ಮೇಲೆ ಬೀಳಲು ಶತ್ರುಗಳು ತಯಾರಾಗುತ್ತಿರುವರು ಎಂಬ ಸುದ್ದಿ ಬಂದೊಡನೆ ದೇಶದ ವಾಯುದಳದ ವಿಮಾನಗಳು ಮುಂದಾಗಿ ಹಾರಿ, ವೈರಿಗಳು ಏನು ಮಾಡುತ್ತಿದ್ದಾರೆ, ಎಷ್ಟು ಜನರಿದ್ದಾರೆ, ಎಲ್ಲೆಲ್ಲಿ ಅಡಗಿದ್ದಾರೆ ಎಂಬುದನ್ನೆಲ್ಲ ತಿಳಿದುಕೊಂಡು ಬರುತ್ತವೆ. ಶತ್ರುಸೈನ್ಯಗಳ ವಿಷಯದ ಈ ವಿವರಗಳು ಸೇನೆಯ ಮುನ್ನಡೆಗೆ ಎಷ್ಟೋ ಸಹಾಯಕಾರಿ. ನೌಕಾಯುದ್ಧವಾಗುವಾಗ ಸ್ವದೇಶದ ಪಡೆಗಳಿಗೆ ಆಹಾರ ಸರಬರಾಜು ಮಾಡುವ ಕರ್ತವ್ಯ ವಾಯುದಳದ್ದು. ಆಹಾರ ಸರಬರಾಜಿನ ಮಾರ್ಗವನ್ನು ಭಗ್ನಗೊಳಿಸಿ ಶತ್ರುಪಡೆಗಳಿಗೆ ಆಹಾರ ದೊರಕದಂತೆ ಮಾಡುವುದು ವಾಯುದಳದ ಕರ್ತವ್ಯವೇ. ಶತ್ರು ಪಟ್ಟಣಗಳ ಮೇಲೆ ಬಾಂಬಿನ ದಾಳಿ ಮಾಡುವುದರಲ್ಲಿ ವಾಯುದಳ ಅತ್ಯಂತ ಪ್ರಮುಖ ಪಾತ್ರ ವಹಿಸುತ್ತದೆ.

1947ರಲ್ಲಿ ಕಾಶ್ಮೀರವನ್ನು ಆಕ್ರಮಿಸಲು ಪಾಕಿಸ್ತಾನ ಯತ್ನಿಸಿದಾಗ ಆಕ್ರಮಣಕಾರರನ್ನು ತಡೆಯಲು ಸೇನೆ ಕಳುಹಿಸಲು ಭಾರತದ ರಕ್ಷಣಾ ಪಡೆಗೆ ಬಹಳ ಶ್ರಮವಾಯಿತು. ಚಳಿಗಾಲ ಆಗ ತಾನೆ ಕಾಶ್ಮೀರ ಕಣಿವೆಗಳಲ್ಲಿ ಕಾಲಿಕ್ಕುತ್ತಿದ್ದುದರಿಂದ ದಟ್ಟವಾದ ಮಂಜಿನ ತೆರೆ ಎಲ್ಲೆಲ್ಲೂ ಆವರಿಸಿತ್ತು. ಪರ್ವತ ಪ್ರದೇಶಗಳಲ್ಲಿ ಸೇನೆ ಪ್ರವೇಶ ಮಾಡುವುದೇ ದುಃಸಾಧ್ಯವಾಗಿತ್ತು. ಇಂಥ ಪರಿಸ್ಥಿತಿಯಲ್ಲಿ ಭಾರತದ ವಾಯುದಳ ವಹಿಸಿದ ಪಾತ್ರ ಅಪೂರ್ವವಾದದ್ದು. ಲಕ್ಷಾಂತರ ಸೈನಿಕರನ್ನು ಹೊತ್ತು ಮಂಜಿನ ತೆರೆ ಆವರಿಸಿರುವ ಆ ಕಾಶ್ಮೀರ ಪ್ರದೇಶಗಳಲ್ಲಿ ಧೈರ್ಯಗೆಡದೆ ಹಾರಾಡಿ ಸೈನಿಕರನ್ನು ಕೆಳಗಿಳಿಸಿ ಯುದ್ಧಮಾಡಲು ಅವಕಾಶ ಕಲ್ಪಿಸಿತು.

ವಾಯುದಳ, ನೌಕಾದಳ, ಮತ್ತು ಭೂಸೈನ್ಯಗಳು ರಕ್ಷಣಾ ಪಡೆಯ ಮೂರು ಬೇರೆ ಬೇರೆ ವಿಭಾಗಗಳಾದರೂ ಪರಸ್ಪರ ಪೂರಕವಾಗಿವೆ. ಭಾರತದಲ್ಲಿ ಒಂದೊಂದು ವಿಭಾಗಕ್ಕೂ ಬೇರೆ ಮುಖ್ಯಾಧಿಕಾರಿ, ಆದರೆ ಈ ಮೂರು ವಿಭಾಗಗಳೂ ರಕ್ಷಣಾ ಮಂತ್ರಿಶಾಖೆಯ ಮಾರ್ಗದರ್ಶನದಲ್ಲಿ ಕೆಲಸ ಮಾಡುತ್ತವೆ. ರಕ್ಷಣಾ ಇಲಾಖೆ ಇವುಗಳ ವ್ಯವಸ್ಥೆಯನ್ನೂ ಇವಕ್ಕೆ ಅಗತ್ಯವಾದ ಶಸ್ತ್ರಾಸ್ತ್ರ ಉಡುಪುಗಳ ಉತ್ಪಾದನೆಯನ್ನೂ ನೋಡಿಕೊಳ್ಳುತ್ತವೆ.

ಸೇನೆ, ವಾಯುಪಡೆ, ನೌಕಾದಳ ಇವುಗಳಲ್ಲದೆ ದೇಶದ ರಕ್ಷಣೆಗಾಗಿ ಮತ್ತೂ ಕೆಲವು ಪಡೆಗಳಿವೆ. ಅವು ತುರ್ತು ಪರಿಸ್ಥಿತಿಯಲ್ಲಿ ಮಾತ್ರ ರಕ್ಷಣಾ ಪಡೆಗೆ ಸೇರುತ್ತವೆ. ಇಲ್ಲದಿದ್ದಾಗ ಸಾಮಾನ್ಯ ಪಡೆಗಳಾಗಿ ಉಳಿಯುತ್ತವೆ. ನಮ್ಮ ದೇಶದ ಎನ್.ಸಿ.ಸಿ. ಮತ್ತು ಗೃಹರಕ್ಷಕದಳ ಅಂಥವು.

ನೋಡಿ : ಗೃಹರಕ್ಷಕದಳ ; ಎನ್.ಸಿ.ಸಿ. ; ನೌಕಾದಳ ; ಭೂಸೈನ್ಯ ; ವಾಯುದಳ

## ರಸಲ್, ಬರ್ಟ್ರೆಂಡ್

ಲಂಡನಿನ ಟ್ರಫಾಲ್ಗರ್ ಚೌಕ. ಪರಮಾಣು ಅಸ್ತ್ರ ತಯಾರಿಕೆಯನ್ನು ವಿರೋಧಿಸುವ ನೂರುಮಂದಿ ಪ್ರಮುಖರ ಮೆರವಣಿಗೆ.

ಸರಕಾರ ಪ್ರದರ್ಶನಕಾರರ ನಾಯಕನನ್ನು ಬಂಧಿಸಿ ಸೆರೆಮನೆಗೆ ಕಳುಹಿಸಿತು. ಆ ನಾಯಕ–ಎಂಬತ್ತೊಂಬತ್ತು ವರ್ಷದ ವೃದ್ಧ ರಸಲ್. ಇದು ನಡೆದದ್ದು 1961ರಲ್ಲಿ.



ಇಪ್ಪತ್ತನೆಯ ಶತಮಾನದ ಕ್ರಾಂತಿಕಾರಕ ತತ್ತ್ವಜ್ಞಾನಿ — ರಸಲ್

ಜೀವನದಲ್ಲಿ ಒಂದು ಕ್ಷೇತ್ರದಲ್ಲಿ ಪರಿಣತ ಎನ್ನಿಸಿಕೊಂಡು ಅಂತರ ರಾಷ್ಟ್ರೀಯ ಖ್ಯಾತಿ ಗಳಿಸುವುದೇ ಕಷ್ಟ. ರಸಲರಾದರೋ ಆರಂಭದಲ್ಲಿ ಗಣಿತವಿಜ್ಞಾನಿಯಾಗಿ ಪ್ರತಿಭೆ ತೋರಿದರು. ಅನಂತರ ತತ್ತ್ವಶಾಸ್ತ್ರದ ಕೃತಿಗಳನ್ನು ರಚಿಸಿ ಹೆಸರು ಗಳಿಸಿದರು ; 1950ರಲ್ಲಿ ತಮ್ಮ ಬರವಣಿಗೆಗಾಗಿ ಸಾಹಿತ್ಯದ ನೊಬೆಲ್ ಬಹುಮಾನ ಪಡೆದರು.

ರಸಲ್ ಜನಿಸಿದ್ದು 1872ರಲ್ಲಿ ಆಂಗ್ಲ ಶ್ರೀಮಂತ ಕುಟುಂಬದಲ್ಲಿ. ಮಗುವಿಗೆ ಮೂರು ವರ್ಷಗಳಾಗುವ ಹೊತ್ತಿಗೆ ತಂದೆ ತಾಯಿ ಇಬ್ಬರೂ ತೀರಿಕೊಂಡರು. ಬಾಲಕ ರಸಲ್ ಅಜ್ಜಿಯ ಮನೆಯಲ್ಲಿ ಬೆಳೆದ. ಅವನನ್ನು ಶಾಲೆಗೆ ಕಳುಹಿಸದೆ ಮನೆಯಲ್ಲೇ ಅಧ್ಯಾಪಕರನ್ನಿಟ್ಟು ಕಲಿಸಿದರು. ಅವನು ಫ್ರೆಂಚ್ ಹಾಗೂ ಜರ್ಮನ್ ಭಾಷೆಗಳಲ್ಲಿ ಪೂರ್ಣ ಪಾಂಡಿತ್ಯ ಪಡೆದ. ಉಚ್ಚ ಶಿಕ್ಷಣಕ್ಕಾಗಿ ಕೇಂಬ್ರಿಜಿನ ಟ್ರಿನಿಟಿ ಕಾಲೇಜಿಗೆ ಸೇರಿ ಗಣಿತದಲ್ಲಿ ಮೊದಲ ತರಗತಿಯಲ್ಲಿ ತೇರ್ಗಡೆಯಾದ.

ಅಧ್ಯಾಪಕ ವೃತ್ತಿಯನ್ನು ಆರಿಸಿಕೊಂಡ ರಸಲ್ ಗಣಿತ ವಿಜ್ಞಾನದ ಮೇಲೂ ತತ್ತ್ವಶಾಸ್ತ್ರದ ಮೇಲೂ ಅನೇಕ ಶ್ರೇಷ್ಠ ಕೃತಿಗಳನ್ನು ರಚಿಸಿದರು. ಅವರದು ನಿರ್ಭಯ ವಿಚಾರ ರೀತಿ. ಮೊದಲನೆಯ ಮಹಾಯುದ್ಧ ಪ್ರಾರಂಭವಾದಾಗ, ಕಡ್ಡಾಯವಾಗಿ ಯುವಕರನ್ನು ಸೈನ್ಯಕ್ಕೆ ಸೇರಿಸುವುದರ ವಿರುದ್ಧ ಹೋರಾಡಿದರು. ಅವರು ಎತ್ತಿಹಿಡಿದದ್ದು ವ್ಯಕ್ತಿ ಸ್ವಾತಂತ್ರ್ಯವನ್ನು. ಪರಿಣಾಮ–ಕಾರಾಗೃಹವಾಸ. ಜೊತೆಗೇ ದಂಡವನ್ನೂ ತೆರಬೇಕಾಯಿತು. ಕಾರಾಗೃಹದಲ್ಲಿದ್ದಾಗಲೇ 'ಗಣಿತವಿಜ್ಞಾನ ಪ್ರವೇಶ' ಎಂಬ ಉತ್ತಮ ಗ್ರಂಥವನ್ನು ಬರೆದರು.

ನೈತಿಕ ವಿಷಯಗಳಲ್ಲಿ ರಸಲರದು ಎಂಥ ಕ್ರಾಂತಿಕಾರಕ ಭಾವನೆ ಎಂದರೆ ನ್ಯೂ ಯಾರ್ಕ್ ಸಿಟಿ ಕಾಲೇಜಿನಲ್ಲಿ ತತ್ತ್ವಶಾಸ್ತ್ರವನ್ನು ಬೋಧಿಸಲು ಅವರನ್ನು ಆಹ್ವಾನಿಸಿದವರು ತಮ್ಮ ಆಹ್ವಾನವನ್ನೇ ಹಿಂತೆಗೆದುಕೊಂಡರು : ನೇಮಕವನ್ನು ರದ್ದುಗೊಳಿಸಿದರು. ಆದರೂ ಅವರು ಅಮೆರಿಕದ ಅನೇಕ ವಿಶ್ವವಿದ್ಯಾನಿಲಯಗಳಲ್ಲಿ ವಿವಿಧ ವಿಷಯಗಳ ಮೇಲೆ ಉಪನ್ಯಾಸ ಮಾಡಿದರು.

1944ರ ಅನಂತರ ರಸಲ್ ಇಂಗ್ಲೆಂಡಿನಲ್ಲೇ ನೆಲೆಸಿದರು. 1952ರಲ್ಲಿ ತಮ್ಮ ಎಂಬತ್ತನೆಯ ವಯಸ್ಸಿನಲ್ಲಿ ಮತ್ತೊಮ್ಮೆ ಮದುವೆಯಾದರು. ಆ ವೇಳೆಗಾಗಲೇ ಅವರಿಗೆ ಮೂರು ಬಾರಿ ವಿವಾಹ ವಿಚ್ಛೇದನಗಳಾಗಿದ್ದುವು.

ರಸಲ್ ಬರೆದಿರುವ ಕೃತಿಗಳಲ್ಲಿ ಅನೇಕ ಪುಸ್ತಕಗಳು ವಿಶ್ವವಿಖ್ಯಾತವಾಗಿವೆ. 'ಗಣಿತ ವಿಜ್ಞಾನ ತತ್ತ್ವಗಳು', 'ತಾತ್ತ್ವಿಕ ಪ್ರಬಂಧಗಳು', 'ಶಿಕ್ಷಣ', 'ವಿವಾಹ ಮತ್ತು ನೀತಿ', 'ತತ್ತ್ವಶಾಸ್ತ್ರದ ರೂಪುರೇಖೆ', 'ವೈಜ್ಞಾನಿಕ ದೃಷ್ಟಿ', 'ಅರ್ಥ ಮತ್ತು ಸತ್ಯ ಶೋಧನೆ', 'ಪಾಶ್ಚಾತ್ಯ ತತ್ತ್ವಶಾಸ್ತ್ರ ಶೋಧನೆ', 'ಮಾನವ ಜ್ಞಾನ–ಅದರ ವ್ಯಾಪ್ತಿ ಹಾಗೂ ಮಿತಿ', 'ಬದಲಾಗುತ್ತಿರುವ ಸಮಾಜಕ್ಕೆ ಹೊಸ ಭರವಸೆ', 'ಸಮಾಜದ ಮೇಲೆ ವಿಜ್ಞಾನದ ಪ್ರಭಾವ'—ಇವು ರಸಲರ ಸುಪ್ರಸಿದ್ಧ ಕೃತಿಗಳು.

ರಸಲ್ ಗಣಿತವಿಜ್ಞಾನ, ತತ್ತ್ವಶಾಸ್ತ್ರಗಳಲ್ಲಿ ಅಂತರರಾಷ್ಟ್ರೀಯ ಕೀರ್ತಿಯನ್ನು ಗಳಿಸಿದರು. ಸಾಮಾನ್ಯ ಓದುಗರಿಗೆ ಅರ್ಥವಾಗುವಂಥ ಅಮೂಲ್ಯ ವಿಚಾರಸಾಹಿತ್ಯವನ್ನು ಅವರು ರಚಿಸಿದ್ದಾರೆ. ಅವರ ಬರವಣಿಗೆಯಲ್ಲಿ ಕಂಡುಬರುವ ಅಂಶವೆಂದರೆ ಬೆರಗುಗೊಳಿಸುವಂಥ ವಿಷಯ ಸಂಗ್ರಹಣೆ, ಸ್ಪಷ್ಟವಾದ ತರ್ಕ, ನಿರ್ಭಯ ವಿಚಾರರೀತಿ. ಕಳೆದ ಐವತ್ತು ವರ್ಷಗಳಲ್ಲಿ ಜನರ ತಪ್ಪು ತಿಳಿವಳಿಕೆ, ಮೂಢ ನಂಬಿಕೆಗಳು, ಸಂಕುಚಿತ ದೇಶಾಭಿಮಾನ ಇವನ್ನೆಲ್ಲ ತೊಡೆದುಹಾಕಲು ಶ್ರಮವಹಿಸಿದ ಮಣಿದ ವಿಚಾರಶೀಲ ರಸಲ್. ದೇವರಲ್ಲಾಗಲೀ ಯಾವುದೇ ಮತದಲ್ಲಾಗಲೀ ಇವರಿಗೆ ನಂಬಿಕೆ ಇರಲಿಲ್ಲ. ಯಾವುದನ್ನೂ ಆಧಾರವಿಲ್ಲದೆ ಒಪ್ಪಕೂಡದೆಂಬ ಸಂದೇಹವಾದ ಇವರ ಎಲ್ಲ ವಿಚಾರದ ಅಡಿಗಲ್ಲು. ತಿಳಿಯಾದ, ದುರಭಿಮಾನವಿಲ್ಲದ ತರ್ಕರೀತಿಗಾಗಿ ಅವರು ಹೋರಾಡಿದರು.

ವಿಜ್ಞಾನ ಬೆಳೆದು ಮಾರಕಾಸ್ತ್ರಗಳ ವಿನಾಶಕ ಶಕ್ತಿ ಹೆಚ್ಚುತ್ತಿರುವಾಗ ಯುದ್ಧ ಎಂದರೆ ಮಾನವಕುಲದ ಆತ್ಮಹತ್ಯೆ ಎಂದು ಎಚ್ಚರಿಸಿದರು ರಸಲ್.

ಎರಡನೆಯ ಮಹಾಯುದ್ಧದ ಅನಂತರ, ಐನ್‌ಸ್ಟೀನ್ ಮೊದಲಾದ ಜಗದ್ವಿಖ್ಯಾತ ವ್ಯಕ್ತಿಗಳ ಸಹಾಯದೊಡನೆ ಪರಮಾಣು ಅಸ್ತ್ರಗಳ ಬಳಕೆಯನ್ನು ತಡೆಗಟ್ಟಲು ಶ್ರಮಿಸಿದರು.

ರಸಲ್ ವಿಜ್ಞಾನ, ಸಮಾಜಧರ್ಮ, ತತ್ತ್ವಶಾಸ್ತ್ರ, ಶಿಕ್ಷಣ ಇವುಗಳ ಬಗೆಗೆ ವ್ಯಕ್ತಪಡಿಸಿರುವ ಅಭಿಪ್ರಾಯಗಳು, ಪ್ರತಿಪಾದಿಸಿರುವ [illegible] ಅವರನ್ನು ಈ ಶತಮಾನದ ಅತ್ಯಂತ ಕ್ರಾಂತಿಕಾರಕ ತತ್ತ್ವಜ್ಞಾನಿಯನ್ನಾಗಿ ಮಾಡಿರುವು.

1970ರಲ್ಲಿ ರಸಲ್ ನಿಧನರಾದಾಗ, ಆ ಮಹಾ ಮಾನವತಾವಾದಿಯನ್ನು ಕಳೆದುಕೊಂಡ ಜಗತ್ತಿನ ಬುದ್ಧಿಜೀವಿಗಳು ಕಣ್ಣೀರಿಟ್ಟರು.

## ರಹದಾರಿ

ಇನ್ನೊಂದು ದೇಶಕ್ಕೆ ಹೋಗುವುದೆಂದರೆ ಎಷ್ಟು [illegible] ಸಂಭ್ರಮ ! ಅದಕ್ಕೆ ಎಷ್ಟು ಸಿದ್ಧತೆ ಬೇಕು ! ವಿಮಾನ ಅಥವಾ [illegible] ಕಾದಿರಿಸಬೇಕು. ಹೋದ ಕಡೆ ಇಳಿದುಕೊಳ್ಳಲು ಸ್ಥಳ [illegible]

ಗೊತ್ತು ಮಾಡಿಕೊಳ್ಳಬೇಕು, ಅಲ್ಲಿನ ಹವಾ ನೋಡಿಕೊಂಡು ನಮ್ಮ ಕೆಲಸವನ್ನು ಗಮನಿಸಿ ಬಟ್ಟೆ ಸಿದ್ಧಮಾಡಿಕೊಳ್ಳಬೇಕು.

ಈ ಸಿದ್ಧತೆಯ ಮುಖ್ಯವಾದ ಒಂದು ಕೆಲಸ ರಹದಾರಿ ಮತ್ತು ವೀಸಾ ಪಡೆಯುವುದು. ಅವಿಲ್ಲದೆ ನಮ್ಮ ದೇಶವನ್ನು ಬಿಡುವ ಹಾಗಿಲ್ಲ; ಇನ್ನೊಂದು ದೇಶಕ್ಕೆ ಕಾಲಿಡುವ ಹಾಗಿಲ್ಲ.

ಒಂದು ದೇಶದ ಪ್ರಜೆ ಇನ್ನೊಂದು ದೇಶಕ್ಕೆ ಪ್ರಯಾಣ ಬೆಳೆಸಬೇಕಾದರೆ ರಹದಾರಿ ಅಗತ್ಯ. ಆಗ ಆತನಿಗೆ ಕಾನೂನು ಬದ್ಧವಾದ ರಕ್ಷಣೆ ಇರುತ್ತದೆ. ಅವನ ದೇಶ ಆತ ತನ್ನ ಪ್ರಜೆಯೆಂದೂ ವಿದೇಶ ಸರಕಾರ ಆತನಿಗೆ ಸರ್ವವಿಧದ ರಕ್ಷಣೆ ನೀಡಬೇಕೆಂದೂ ಇತರ ದೇಶಗಳ ಸರಕಾರಗಳಿಗೆ ಸೂಚಿಸುತ್ತದೆ. ಪ್ರಜೆಯ ಹುಟ್ಟಿದ ದಿನ, ಸ್ಥಳ, ಕಸಬು, ಅವನ ಕಣ್ಣು ಮತ್ತು ಕೂದಲಿನ ಬಣ್ಣಗಳು, ಅವನು ನೋಡಲು ಹೇಗಿದ್ದಾನೆ–ಇವೆಲ್ಲವನ್ನು ರಹದಾರಿ (ಪಾಸ್ ಪೋರ್ಟ್) ತಿಳಿಸುತ್ತದೆ. ಅದು ಆತನ ಭಾವಚಿತ್ರವನ್ನೂ ಒಳಗೊಂಡಿರುತ್ತದೆ. ರಹದಾರಿ ಇರುವುದು ಜೇಬಿನಲ್ಲಿ ಇರಿಸಲು ಅನುಕೂಲವಾಗುವಂಥ ಸಣ್ಣ ಪುಸ್ತಿಕೆಯ ರೂಪದಲ್ಲಿ. ವಿದೇಶದ ನೆಲದ ಮೇಲಿರುವ ಯಾವ ನಾಗರಿಕನೂ ತನ್ನ ಪೂರ್ವೋತ್ತರಗಳನ್ನು ಸ್ಪಷ್ಟಪಡಿಸಲು ರಹದಾರಿಯೊಂದನ್ನು ಪಡೆದಿರಬೇಕು. ರಹದಾರಿ ಒಂದು ನಿಶ್ಚಿತ ಅವಧಿಯವರೆಗೆ ಊರ್ಜಿತವಾಗಿರುತ್ತದೆ.

ವಿದೇಶ ಪ್ರವಾಸ ಕೈಗೊಳ್ಳುವ ವ್ಯಕ್ತಿ ತನ್ನ ದೇಶದ ರಹದಾರಿಯನ್ನೇ ಅಲ್ಲದೆ, ಯಾವ ದೇಶಕ್ಕೆ ತೆರಳುತ್ತಿದ್ದಾನೋ ಆ ದೇಶದ ಅಧಿಕೃತ ಪ್ರತಿನಿಧಿಯಿಂದ ಪ್ರಯಾಣಕ್ಕೆ ಒಪ್ಪಿಗೆ ಪತ್ರಪಡೆಯಬೇಕು. ಇದೇ ವೀಸಾ. ಸಾಮಾನ್ಯವಾಗಿ ವಿದೇಶೀ ರಾಯಭಾರಿ ಕಚೇರಿಯ ಅಧಿಕಾರಿಯು ಪ್ರಯಾಣಿಕನ ಭಾವಚಿತ್ರದ ಮೇಲೆ ತನ್ನ ಮುದ್ರೆಯನ್ನು ಒತ್ತಿಕೊಡುತ್ತಾನೆ. ವೀಸಾ ಪಡೆದರೆ ವಿದೇಶದ ನೆಲದ ಮೇಲೆ ಕಾಲಿಡಲು ಆ ದೇಶದ ಅನುಮತಿ ದೊರೆತಂತೆ ಆಗುತ್ತದೆ. ವೀಸಾಗಳನ್ನು ನೀಡುವಾಗ ಯಾವ ಬಂದರು ಅಥವಾ ವಿಮಾನ ನಿಲ್ದಾಣಗಳ ಮೂಲಕ ಪ್ರಯಾಣ ಮಾಡಬೇಕು ಎಂಬುದನ್ನೂ ಕೆಲವು ಸಂದರ್ಭಗಳಲ್ಲಿ ನಮೂದಿಸಲಾಗುತ್ತದೆ. ಇಪ್ಪತ್ತೊಂದು ವರ್ಷಕ್ಕಿಂತ ಕಡಮೆ ವಯಸ್ಸಿನವರಿಗೆ ಅವರ ಪೋಷಕರ ಒಪ್ಪಿಗೆಯಿಲ್ಲದೆ ರಹದಾರಿ ನೀಡುವುದಿಲ್ಲ. ವಿದೇಶಗಳಲ್ಲಿ ಅಧ್ಯಯನಕ್ಕಾಗಿ ಕೆಲವು ವರ್ಷವಿರುವ ವಿದ್ಯಾರ್ಥಿಗಳು ಅಷ್ಟು ವರ್ಷಗಳ ವರೆಗೆ ವೀಸಾ ಪಡೆದಿರುತ್ತಾರೆ.

ಯಾವುದೇ ದೇಶದ ಗಡಿ ದಾಟುವಾಗಲೂ ರಹದಾರಿ ಇರುವುದು ಅಗತ್ಯ. ಕೆಲವು ದೇಶಗಳ ನಡುವೆ ಸಂಚರಿಸಲು ರಹದಾರಿಯ ಅಗತ್ಯವಿರುವುದಿಲ್ಲ. ಆ ರೀತಿ ಆ ರಾಷ್ಟ್ರಗಳ ನಡುವೆ ಒಪ್ಪಂದವಾಗಿರುತ್ತದೆ. ಕೆನಡ ಮತ್ತು ಅಮೆರಿಕ ಸಂಯುಕ್ತ ಸಂಸ್ಥಾನಗಳ ನಡುವೆ ಪ್ರಯಾಣಕ್ಕೆ ರಹದಾರಿ ಬೇಕಾಗುವುದಿಲ್ಲ. ಭಾರತ ನೇಪಾಳಗಳ ನಡುವೆ ಸಂಚರಿಸಲು ರಹದಾರಿಯ ಅಗತ್ಯವಿಲ್ಲ.

ಒಂದು ದೇಶದ ಪ್ರಜೆ ಇನ್ನೊಂದು ದೇಶಕ್ಕೆ ಹೋದಾಗ ಆತನ ಅರಸ ಅಥವಾ ಸರಕಾರ ಅವನ ರಕ್ಷಣೆಗಾಗಿ ಏನನ್ನಾದರೂ ಗುರುತಿಗೆ ಕೊಡುವ ಪದ್ಧತಿ ಶತಮಾನಗಳಿಂದ ಇದೆ. ಹಿಂದಿನ ಕಾಲದಲ್ಲಿ ಅರಸರು ಉಂಗುರ ಕೊಟ್ಟು ತಮ್ಮ ದೂತರನ್ನು ಕಳುಹಿಸುತ್ತಿದ್ದರಂತೆ. ಸುಮಾರು ಒಂದು ಸಾವಿರದ ಒಂಬೈನೂರು ವರ್ಷಗಳ ಹಿಂದೆ ರೋಮಿನಲ್ಲಿ ಚಕ್ರವರ್ತಿಯಾಗಿದ್ದ ಅಗಸ್ಟಸ್ ಸೀಸರ್. ಫೋಟಿಮಾಸ್ ಎನ್ನುವ ತತ್ತ್ವಜ್ಞಾನಿಗೆ ರಹದಾರಿ ಪತ್ರವನ್ನು ಕೊಟ್ಟಿದ್ದ. “[illegible] ಫೋಟಿಮಾಸ್‌ಗೆ ತೋರಿದರೆ ಕೊಡುವ ಧೈರ್ಯವಿರುವವನು [illegible] ಇದ್ದರೆ, ತಾನು ಸೀಸರನೊಡನೆ ಯುದ್ಧ ಮಾಡುವಷ್ಟು ಶಕ್ತನೆ ಎನ್ನುವುದನ್ನು ಆತ ಯೋಚಿಸಲಿ”, ಎಂದು ಅದರಲ್ಲಿ ಬರೆದಿತ್ತು.

ಈಗಿನ ರೀತಿಯ ರಹದಾರಿಗಳನ್ನು ಮೊದಲು ಬಳಸಿದ್ದು ಫ್ರಾನ್ಸ್, ಹದಿನಾರನೆಯ ಶತಮಾನದಲ್ಲಿ. ಮೊದಲನೆಯ ಮಹಾಯುದ್ಧದ ಅನಂತರ ರಹದಾರಿಗಳಿರಲೇಬೇಕೆಂದು ಹಲವು ರಾಷ್ಟ್ರಗಳು ನಿಯಮ ಮಾಡಿದುವು. ಇದರಿಂದ ಇತರ ದೇಶಗಳವರು ತಮ್ಮ ದೇಶಕ್ಕೆ ಹೆಚ್ಚು ಸಂಖ್ಯೆಯಲ್ಲಿ ಬಂದು ನೆಲೆಸಿ ಪ್ರಜಾಸಂಖ್ಯೆ ಹೆಚ್ಚಾಗದಂತೆ ಸರಕಾರ ನೋಡಿಕೊಳ್ಳಬಹುದು. ಅಲ್ಲದೆ ದುಷ್ಕೃತ್ಯಗಾರರ ಓಡಾಟದ ಮೇಲೆ ಹತೋಟಿಯೂ ಇದರಿಂದ ಸಾಧ್ಯವಾಗುತ್ತದೆ.

## ರಾಕ್ಷಸ

ಮೈಸೂರಿನಲ್ಲಿ ಚಾಮುಂಡಿಬೆಟ್ಟದ ಮೇಲಿರುವ ದೇವಸ್ಥಾನಕ್ಕೆ ಹೋಗುವ ದಾರಿಯಲ್ಲಿ ದೊಡ್ಡದೊಂದು ಪ್ರತಿಮೆ ಇದೆ. ದೊಡ್ಡ ಗಾತ್ರದ ದೇಹ. ದೊಡ್ಡ ತಲೆ. ಭಯಂಕರವಾದ ಕಣ್ಣುಗಳು, ಬಾಯಿಯಿಂದ ಹೊರಚಾಚಿರುವ ಉದ್ದನೆಯ ಕೋರೆ ಹಲ್ಲುಗಳು. ಮೇಲಕ್ಕೆತ್ತಿರುವ ಕೈಯಲ್ಲಿ ದೊಡ್ಡ ಕತ್ತಿ. ಪ್ರತಿಮೆಯ ಕೆಳಗೆ ‘ಮಹಿಷಾಸುರ’ ಎಂದು ಬರೆದಿದೆ. ಈ ಮಹಿಷಾಸುರ ಯಾರು? ಒಬ್ಬ ರಾಕ್ಷಸ: ಹಿಂದೆ ಜನರನ್ನು ಬಹಳ ಪೀಡಿಸುತ್ತಿದ್ದ; ಚಾಮುಂಡೇಶ್ವರಿಯ ಅವತಾರ ತಾಳಿ ದುರ್ಗಾದೇವಿ ಅವನನ್ನು ಕೊಂದಳು–ಹೀಗೆಂದು ಭಕ್ತರು ಹೇಳುತ್ತಾರೆ. ಇದರಿಂದಲೇ ಚಾಮುಂಡೇಶ್ವರಿಗೆ ‘ಮಹಿಷಾಸುರ ಮರ್ದಿನಿ’ ಎಂದು ಹೆಸರು. ಮಹಿಷಾಸುರ ವಾಸವಿದ್ದ ಸ್ಥಳ ‘ಮೈಸೂರು.’

ರಾಮಾಯಣದ ಕತೆ ಎಲ್ಲರಿಗೂ ತಿಳಿದೇ ಇದೆ. ಅದರಲ್ಲಿ ಅನೇಕ ರಾಕ್ಷಸರ ಪ್ರಸ್ತಾಪವಿದೆ. ಲಂಕೆಯ ಅರಸು ರಾವಣ ಒಬ್ಬ ರಾಕ್ಷಸ.

ಭಾರತದ ಪ್ರಾಚೀನ ಸಾಹಿತ್ಯ ಕೃತಿಗಳಲ್ಲಿ ಅನೇಕ ರಾಕ್ಷಸರ ಕಥೆಗಳು ಬಂದಿವೆ.

ರಾಕ್ಷಸ ಎಂದರೆ ಯಾರು? ಸಾಮಾನ್ಯವಾಗಿ ಮಾನವನಿಗಿಂತ ದೈಹಿಕವಾಗಿ ಹೆಚ್ಚು ಬಲಶಾಲಿಯಾಗಿದ್ದು, ತಮ್ಮಲ್ಲಿ ಕೆಲವು ಸುಗುಣಗಳಿದ್ದರೂ ಹೆಚ್ಚಾಗಿ ದುಷ್ಟಕಾರ್ಯಗಳನ್ನೇ ಮಾಡುವವರಿಗೆ ರಾಕ್ಷಸರೆನ್ನುತ್ತಿದ್ದರು.

ಉಪನಿಷತ್ತುಗಳ ಕಾಲದಲ್ಲೇ ದೇವತೆಗಳು, ದಾನವರು, ಮಾನವರು ಎಂಬ ಮೂರು ವಿಭಾಗಗಳು ಕಂಡುಬರುತ್ತವೆ. ದೇವದಾನವರಿಬ್ಬರೂ ಅತ್ಯಂತ ಬಲಶಾಲಿಗಳು, ಇಷ್ಟಬಂದ ರೂಪವನ್ನು ಧರಿಸಬಲ್ಲವರು. ಯಾವ ಕಾರ್ಯವನ್ನು ಬೇಕಾ



ದರೂ ಮಾಡಬಲ್ಲವರು. ಆದರೆ ದಾನವರು (ರಾಕ್ಷಸರು) ದುಷ್ಕಾರ್ಯಗಳನ್ನೇ ಮಾಡುವವರು. ದೇವತೆಗಳಿಗೂ ರಾಕ್ಷಸರಿಗೂ ಹೋರಾಟ ಎಂದೂ ತಪ್ಪಿದ್ದಲ್ಲ.

ರಾಕ್ಷಸ ಎನ್ನುವ ಪದವನ್ನು ಎರಡು ರೀತಿಯಿಂದ ಉಪಯೋಗಿಸುವುದು ಕಂಡುಬರುತ್ತದೆ. ಯಾವುದೇ ದುಷ್ಟ ಶಕ್ತಿಯ ಪ್ರತೀಕ ರಾಕ್ಷಸ. ಎರಡನೆಯದಾಗಿ ಭಾರತದಲ್ಲಿ ನೆಲೆಸಲು ಬಂದವರು ಆದಿವಾಸಿಗಳಿಗೆ ಕೊಟ್ಟ ಹೆಸರೂ ಆದಾಗಿರಬಹುದು. ಹೊರಗಿನಿಂದ ಬಂದವರ ದೃಷ್ಟಿಯಲ್ಲಿ ಇಲ್ಲಿನ ನಿವಾಸಿಗಳು ಅನಾಗರಿಕರಾಗಿ ಕಂಡಿರಬಹುದು. ಈ ಮೂಲನಿವಾಸಿಗಳು ಹೊರಗಿನಿಂದ ಬಂದವರೊಡನೆ ಅವ್ಯಾಹತವಾಗಿ ಹೋರಾಟ ನಡೆಸಿದ್ದರೆ ಆಶ್ಚರ್ಯವೇನೂ ಇಲ್ಲ. ಇವರು ಇಲ್ಲಿಗೆ ಬಂದಾಗ ಈ ದೇಶದಲ್ಲಿದ್ದ ಪಂಗಡವನ್ನು ದಸ್ಯುಗಳು ಎಂದು ಕರೆದರು. ಈ ಪಂಗಡದವರು ಐಶ್ವರ್ಯವಂತರು. ಆದರೆ ದಾನಧರ್ಮಗಳನ್ನು ಮಾಡುತ್ತಿರಲಿಲ್ಲ, ದೇವರನ್ನು ಪೂಜಿಸುತ್ತಿರಲಿಲ್ಲ. ಆರ್ಯರ ದೃಷ್ಟಿಯಲ್ಲಿ ಇವರು ರಾಕ್ಷಸರಾದರು ಎಂದೂ ಹೇಳುತ್ತಾರೆ.

ರಾಕ್ಷಸರಲ್ಲಿಯೂ ಒಳ್ಳೆಯ ಗುಣಗಳನ್ನು ಕಂಡಿರುವುದುಂಟು. ರಾಕ್ಷಸರಲ್ಲಿ ಅನೇಕರು ದೈವಭಕ್ತರೂ ಉದಾರ ಹೃದಯಿಗಳೂ ಆಗಿದ್ದರು. ಆದರೆ ದುಷ್ಟ ಗುಣಗಳು ಪ್ರಧಾನವಾಗಿದ್ದುದರಿಂದ ಅವರು ರಾಕ್ಷಸರು. ರಾಕ್ಷಸರಿಗೆ ಬೇರೆಬೇರೆ ರೂಪಗಳನ್ನು ಕಲ್ಪಿಸಿದ್ದಾರೆ. ರಾವಣನಿಗೆ ಹತ್ತುಮುಖ, ಇಪ್ಪತ್ತು ಕೈಗಳು, ರಾಕ್ಷಸರ ಮುಖ ಪ್ರಸನ್ನವಾಗಿರದೆ ಯಾವಾಗಲೂ ಉಗ್ರ ಎಂಬ ಕಲ್ಪನೆ ಇದ್ದಿತು.

ಪಾಶ್ಚಾತ್ಯರಲ್ಲಿಯೂ ಅಸಾಧಾರಣ ಎತ್ತರದ ಮೈಕಟ್ಟಿನ ವ್ಯಕ್ತಿಗಳ ಕಲ್ಪನೆಯುಂಟು. ಪ್ರಾಚೀನ ಗ್ರೀಕರು ಇವರ ಒಂದು ಪೀಳಿಗೆಯನ್ನು ಟೈಟನರು ಎಂದು ಕರೆದರು. ಗ್ರೀಕರ ನಂಬಿಕೆಯಂತೆ ಜ್ಯೂಸ್ ಎಲ್ಲ ದೇವತೆಗಳ ಪ್ರಭು. ಜ್ಯೂಸ್, ಅಪೋಲೊ (ಸೂರ್ಯದೇವ), ಅಥೀನ (ವಿದ್ಯೆ ಮತ್ತು ಯುದ್ಧದ ದೇವತೆ) ಇವರೆಲ್ಲ ದೇವತೆಗಳಲ್ಲಿ ತರುಣ ಪೀಳಿಗೆಗೆ ಸೇರಿದವರು. ಇವರಿಗೆ ಮೊದಲು ಟೈಟನರು ಆಳುತ್ತಿದ್ದರು. ಟೈಟನರು ಜ್ಯೂಸ್ ಮತ್ತು ಅವನ ತಂದೆ ಸಾಟರ್ನ್ ವಿರುದ್ಧ ಹೋರಾಡಿ ಸೋತು ಹೋದರು. ದೇವತೆಗಳ ಆವಾಸವಾದ ಒಲಿಂಪಸ್ ಪರ್ವತದಿಂದ ಅವರನ್ನು ವಿಜೇತರು ಓಡಿಸಿದರು. ಅಟ್ಲಾಸ್ ಎಂಬ ರಾಕ್ಷಸ ಆಕಾಶವನ್ನು ತನ್ನ ಹೆಗಲ ಮೇಲೆ ಹೊತ್ತಿದ್ದನಂತೆ. ಸೈಕ್ಲಾಪ್ಸ್ ಎಂಬ ಬುಡಕಟ್ಟಿನ ರಾಕ್ಷಸರಿಗೆ ಒಂದೇ ಕಣ್ಣು. ರಾಕ್ಷಸರು ಕೆಟ್ಟವರು ಎಂಬ ಕಲ್ಪನೆ ಪಾಶ್ಚಾತ್ಯರಲ್ಲಿಲ್ಲ.

ದೇವದಾನವರು ಶತ್ರುಗಳು. (ರಾಕ್ಷಸರ ಶಕ್ತಿ ದುಷ್ಟವಾದದ್ದು ; ದೇವತೆಗಳ ಶಕ್ತಿ ಒಳ್ಳೆಯದು.)

ಭಾರತದ ರಾಮಾಯಣ, ಮಹಾಭಾರತ ಪುರಾಣಗಳಲ್ಲಿ ಅನೇಕ ರಾಕ್ಷಸರ ಚಿತ್ರಣವಿದೆ ; ಇಂಥ ರಾಕ್ಷಸರಿಂದ ಜಗತ್ತನ್ನು ಉಳಿಸಲು ದೇವರು ಅವತರಿಸಿದ ಎನ್ನುತ್ತಾರೆ.

ನೋಡಿ : ಅವತಾರ

## ರಾಜಕೀಯ ಪಕ್ಷ

ಪ್ರತಿದಿನ ಪತ್ರಿಕೆಗಳಲ್ಲಿ ಕಾಂಗ್ರೆಸ್, ಸ್ವತಂತ್ರ, ಜನಸಂಘ, ಪ್ರಜಾ ಸಮಾಜವಾದಿ, ಕಮ್ಯೂನಿಸ್ಟ್–ಹೀಗೆ ಹಲವು ಪಕ್ಷಗಳ ವಿಷಯ ಓದುತ್ತಿರುತ್ತೇವೆ. ಇವುಗಳಲ್ಲಿ ಕೆಲವು ರಾಷ್ಟ್ರೀಯ ಮಟ್ಟದ ಪಕ್ಷಗಳು. ಕೆಲವೊಂದು, ಆಯಾ ಪ್ರದೇಶಗಳಲ್ಲಿ ಮಾತ್ರ ಪ್ರಬಲವಾಗಿರುವ ಪಕ್ಷಗಳು. ಉದಾಹರಣೆಗೆ ತಮಿಳು ನಾಡಿನ ದ್ರಾವಿಡ ಮುನ್ನೇತ್ರ ಕಳಗಂ.

ಪ್ರಜಾಪ್ರಭುತ್ವ ತಳಹದಿಯ ಮೇಲೆ ರೂಪಿತವಾದ ಎಲ್ಲ ರಾಜ್ಯಾಡಳಿತ ವ್ಯವಸ್ಥೆಗಳಲ್ಲೂ ರಾಜಕೀಯ ಪಕ್ಷಗಳಿರುತ್ತವೆ. ಪಕ್ಷ ಎಂದರೆ ಜನರ ಗುಂಪು –ರಾಜಕೀಯ ಪಕ್ಷ ರಾಜಕೀಯ ಕ್ಷೇತ್ರದಲ್ಲಿ ಒಂದು ವ್ಯವಸ್ಥೆಗೊಂಡ ಜನರ ಗುಂಪು. ರಾಜಕೀಯ ಕ್ಷೇತ್ರದಲ್ಲಿ ಇವರೆಲ್ಲರ ಗುರಿಗಳೂ ಒಂದೇ ಆಗಿರಬೇಕು. ಈ ಗುರಿಗಳ ಸಾಧನೆಗಾಗಿ ಯಾವ ಮಾರ್ಗವನ್ನು ಅನುಸರಿಸಬೇಕು ಎಂಬ ಬಗೆಯೂ ಒಮ್ಮತವಿರಬೇಕು. ಪ್ರತಿ ಸಮಾಜದಲ್ಲಿ ಬೇರೆ ಬೇರೆ ಹಿತಾಸಕ್ತಿಗಳಿರುವವರು ಇರುತ್ತಾರೆ. ನೆಲದ ಒಡೆಯರು, ರೈತರು, ಕಾರ್ಮಿಕರು, ವ್ಯಾಪಾರಿಗಳು–ಹೀಗೆ ಹಲವು ಗುಂಪುಗಳಿರುತ್ತವೆ. ಸಮಾಜ ಹೀಗಿರಬೇಕೆಂದು ಪ್ರತಿ ಗುಂಪಿನವರ ಕಲ್ಪನೆ ಇರುತ್ತದೆ. ಯಾವ ಬಗೆಯ ಆಸ್ತಿಯೂ ಇರಬಾರದು, ಎಲ್ಲ ಆಸ್ತಿ ಸಮಾಜಕ್ಕೆ ಸೇರಬೇಕು ಎಂದು ಕೆಲವರ ಅಭಿಪ್ರಾಯವಿರಬಹುದು. ಪ್ರತಿಯೊಬ್ಬನೂ ತನ್ನ ಶಕ್ತಿ ಸಾಮರ್ಥ್ಯಗಳಿಗೆ ಅನುಗುಣವಾಗಿ ಆಸ್ತಿ ಮಾಡಲು ಅವಕಾಶವಿರಬೇಕು ಎಂದು ಕೆಲವರಿಗೆ ತೋರಬಹುದು. ಎಲ್ಲ ಮುಖ್ಯ ಉದ್ಯಮಗಳೂ ಸರಕಾರದ ಆಡಳಿತದಲ್ಲಿರಬೇಕು ಎಂದು ಬೇರೆ ಕೆಲವರಿಗೆ ತೋರಬಹುದು. ಹೊರಗಿನಿಂದ ಬರುವ ವಸ್ತುಗಳ ಮೇಲೆ ಸುಂಕ ಹೇರುವ ನೀತಿ, ಆಮದು–ರಫ್ತು ನೀತಿ ಇವುಗಳಲ್ಲಿ ಭಿನ್ನಾಭಿಪ್ರಾಯಗಳಿರಬಹುದು. ಒಂದೇ ಬಗೆಯ ಉದ್ದೇಶವಿರುವವರು, ರಾಜಕೀಯ ಅಧಿಕಾರವನ್ನು ಪಡೆಯಲು ಒಟ್ಟಿಗೆ ಸೇರಿ ರಾಜಕೀಯ ಕ್ಷೇತ್ರವನ್ನು ಪ್ರವೇಶಿಸಿದಾಗ ಅವರೊಂದು ಪಕ್ಷವಾಗುತ್ತಾರೆ. ತೀವ್ರ ಬದಲಾವಣೆಗಳನ್ನು ಅಪೇಕ್ಷಿಸುವ ಪಕ್ಷಗಳನ್ನು ಎಡಪಂಥದವರೆಂದೂ ಅಂಥ ಬದಲಾವಣೆಯನ್ನು ಬಯಸದವರನ್ನು ಬಲಪಂಥೀಯರೆಂದೂ ಕರೆಯುತ್ತಾರೆ. ಎಲ್ಲ ರಾಜಕೀಯ ಪಕ್ಷಗಳೂ ಅಧಿಕಾರಕ್ಕೆ ಬರಲು ಸ್ಪರ್ಧಿಸುತ್ತವೆ ; ಚುನಾವಣೆಗೆ ಹುರಿಯಾಳುಗಳನ್ನು ನಿಲ್ಲಿಸಿ ಗೆಲ್ಲುವಂತೆ ಮಾಡಲು ಹವಣಿಸುತ್ತವೆ. ಬಹುಮತ ಪಡೆದ ರಾಜಕೀಯ ಪಕ್ಷಕ್ಕೆ ಸರಕಾರವನ್ನು ನಡೆಸುವ ಅವಕಾಶ ಸಿಗುವುದರಿಂದ ತನ್ನ ಪಕ್ಷದ ಪ್ರತಿನಿಧಿಗಳು ಹೆಚ್ಚು ಸಂಖ್ಯೆಯಲ್ಲಿ ಚುನಾಯಿತರಾಗುವಂತೆ ಮಾಡಲು ಪ್ರತಿ ಪಕ್ಷವೂ ಶ್ರಮಿಸುತ್ತದೆ.

ರಾಜಕೀಯ ಪಕ್ಷಗಳು ದೇಶದ ಮುಖ್ಯ ಸಮಸ್ಯೆಗಳ ಬಗೆಗೆ ಖಚಿತ ಧೋರಣೆಗಳನ್ನು ತಳೆದಿರುತ್ತವೆ. ಅದರಲ್ಲಿಯೂ ಆರ್ಥಿಕ ಸಮಸ್ಯೆಗಳಿಗೆ ಹೆಚ್ಚು ಮಹತ್ವ. ಅಧಿಕಾರಕ್ಕೆ ಬಂದ ಪಕ್ಷ ತನ್ನ ನೀತಿಧೋರಣೆಗಳನ್ನು ಆಚರಣೆಗೆ ತರಲು ಶ್ರಮಿಸುತ್ತದೆ. ಚುನಾವಣೆಯ ಕಾಲದಲ್ಲಿ ಪ್ರತಿಯೊಂದು ರಾಜಕೀಯ ಪಕ್ಷವೂ ತನ್ನ ನೀತಿ ಸೂತ್ರಗಳನ್ನೂ ಆದರ್ಶಗಳನ್ನೂ ಚುನಾವಣಾ ಪ್ರಣಾಳಿಕೆಯ ಮೂಲಕ ಜನರಿಗೆ ವಿವರಿಸಿ ತನ್ನ ಉಮೇದುವಾರನಿಗೆ ಮತ ನೀಡುವಂತೆ ಆಕರ್ಷಿಸಲು ಯತ್ನಿಸುತ್ತದೆ.

ರಾಜಕೀಯ ಪಕ್ಷ ಆಡಳಿತವನ್ನು ನಡೆಸುವಾಗ ಅದರ ಹೊಣೆ ಹಿರಿದು. ತಾನು ಪ್ರಕಟಿಸಿದ ಪ್ರಣಾಳಿಕೆಯನ್ನು ಕಾರ್ಯಗತ ಮಾಡುವುದು ಅದರ ಜವಾಬ್ದಾರಿ. ಅಧಿಕಾರದಲ್ಲಿರುವ ಪಕ್ಷ ಜನಹಿತಕ್ಕೆ ವಿರುದ್ಧ ಕಾರ್ಯಗಳನ್ನು ಮಾಡುತ್ತಿದ್ದಲ್ಲಿ ಅದನ್ನು ತಡೆಯುವ ಹೊಣೆ ವಿರೋಧ ಪಕ್ಷಕ್ಕೆ ಸೇರಿದ್ದು. ಇಂಗ್ಲೆಂಡಿನಂಥ ದೇಶದಲ್ಲಿ ವಿರೋಧ ಪಕ್ಷ ತನ್ನ ಸಮರ್ಥ ಸದಸ್ಯರು ಕೆಲವರನ್ನು ವಿವಿಧ ಕ್ಷೇತ್ರಗಳ ಅಧ್ಯಯನಕ್ಕೆ ನೇಮಿಸುತ್ತದೆ. ಮುಂದೆ ಬಹುಮತ ಪಡೆದಾಗ ತಾನು ಅಧಿಕಾರವಹಿಸಿಕೊಳ್ಳಲು ಸಚಿವ ಸಂಪುಟವನ್ನು ಅದು ರಚಿಸುತ್ತದೆ. ಅದಕ್ಕೆ ಛಾಯಾ ಸಂಪುಟ ಎನ್ನುತ್ತಾರೆ.

ರಾಜಕೀಯ ಪಕ್ಷ ಪ್ರಭಾವಶಾಲಿಯಾಗಬೇಕಾದರೆ ಸದಸ್ಯರು ಪಕ್ಷದ ಸಿದ್ಧಾಂತಕ್ಕೂ ಶಿಸ್ತಿಗೂ ಬದ್ಧರಾಗಬೇಕು. ಎಲ್ಲ ಪಕ್ಷಗಳಿಗೂ ಸಚೇತಕರಿರುತ್ತಾರೆ. ಶಾಸನ ಸಭೆಯಲ್ಲಿ ತಮ್ಮ ಪಕ್ಷದ ಸದಸ್ಯರಿಗೆ ಮಾರ್ಗದರ್ಶನ ಮಾಡುವುದು, ಅವರಲ್ಲಿ ಶಿಸ್ತನ್ನು ಕಾಪಾಡುವುದು ಸಚೇತಕರ ಕರ್ತವ್ಯ. ಸಂಸತ್ತಿನಲ್ಲಿ ಅಥವಾ ಶಾಸನ ಸಭೆಯಲ್ಲಿ ತನ್ನ ಪಕ್ಷದ ಸಚೇತಕ ನೀಡುವ ಸೂಚನೆಗಳನ್ನು ಪಾಲಿಸುವುದಗತ್ಯ.

ಭಾರತದಲ್ಲಿ ಯಾವ ಪಕ್ಷಕ್ಕೂ ಸೇರದ ಹಲವರು ಸಂಸತ್ತು ಮತ್ತು ಶಾಸನ ಸಭೆಗಳಲ್ಲಿ ಸದಸ್ಯರಾಗಿರುವುದು ವಿಶೇಷ ಸಂಗತಿ.

## ರಾಜಕೀಯ ಸಿದ್ಧಾಂತ

ನಾಗರಿಕತೆಯ ಪ್ರಾರಂಭದಲ್ಲಿ ಮನುಷ್ಯ ಆಹಾರವನ್ನು ಹುಡುಕಿಕೊಂಡು ಒಂದು ಕಡೆಯಿಂದ ಮತ್ತೊಂದು ಕಡೆಗೆ ಅಲೆಯುತ್ತಿದ್ದ. ಮುಂದೆ ಒಂದು ಕಡೆ ನೆಲೆಸಿ ಜೀವಿಸಲು ಪ್ರಾರಂಭಿಸಿದ. ಕ್ರಮೇಣ ರಾಜ್ಯಗಳು ಅವತರಿಸಿದುವು. ಹೀಗೆ ರಾಜ್ಯದಲ್ಲಿ ಮುಖ್ಯವಾಗಿ ಎರಡು ಅಂಗಗಳು–ಪ್ರಭುತ್ವ, ಪ್ರಜೆಗಳು. ಈ ಎರಡು ಅಂಗಗಳ ಸಂಬಂಧವೇನು ಎಂದು ಹಲವರು ವಿಚಾರವಂತರು ಯೋಚನೆ ಮಾಡಿದ್ದಾರೆ. ಹಲವು ಸಿದ್ಧಾಂತಗಳನ್ನು ಮಂಡಿಸಿದ್ದಾರೆ.

ಪ್ರಾಚೀನ ಗ್ರೀಸಿನಲ್ಲಿ ಆದರ್ಶ ರಾಜ್ಯವ್ಯವಸ್ಥೆಯನ್ನು ಸಾಧಿಸುವ ಯತ್ನ ಪ್ಲೇಟೋ ಮತ್ತು ಅರಿಸ್ಟಾಟಲರಿಂದ ನಡೆದಿತ್ತು. ರಾಜ್ಯ ಒಂದು ಜೀವಂತ ಸಂಸ್ಥೆ; ಅದು ಮನುಷ್ಯರ ನಡತೆಯನ್ನು ಒಂದು ಕ್ರಮಕ್ಕೆ, ಶಿಸ್ತಿಗೆ ಒಳಪಡಿಸಿ, ಎಲ್ಲರ ಮೇಲೆ ಹತೋಟಿ ಹೊಂದಿದ್ದರೆ ಸಾಲದು; ಪ್ರಜೆಗಳ ಜೀವನವನ್ನು ಉತ್ತಮಪಡಿಸಬೇಕು, ಪ್ರತಿಯೊಬ್ಬನೂ ಸ್ವಾರ್ಥವನ್ನು ಬಿಟ್ಟು ರಾಜ್ಯದ ಹಿತಕ್ಕಾಗಿ ಬಾಳುವುದನ್ನು ಕಲಿಯಬೇಕು, ರಾಜ್ಯ ಇದಕ್ಕೆ ಅಗತ್ಯವಾದ ಸಾಧನಗಳನ್ನು ಕಲ್ಪಿಸಿಕೊಡಬೇಕು. ಇದು ಪ್ಲೇಟೋ ಮತ್ತು ಅರಿಸ್ಟಾಟಲರ ರಾಜಕೀಯ ಸಿದ್ಧಾಂತ.

ಇವರಿಬ್ಬರಿಗೂ ಪ್ರಜಾಪ್ರಭುತ್ವದಲ್ಲಿ ನಂಬಿಕೆ ಇರಲಿಲ್ಲ. ನಿರ್ದಿಷ್ಟ ವೃತ್ತಿಗಳನ್ನು ಅನುಸರಿಸುವ ಪ್ರಜೆಗಳ ಪ್ರತ್ಯೇಕ ವರ್ಗಗಳು ರಾಜ್ಯದಲ್ಲಿರುತ್ತವೆ. ಇಂಥ ವರ್ಗಗಳ ನಡುವೆ ಸೌಹಾರ್ದ ಏರ್ಪಡಿಸಿದರೆ ಆಗ ಸಮಸ್ಥಿತಿ ಮೂಡುತ್ತದೆ. ಇದನ್ನು ಮೂಡಿಸುವುದು ರಾಜ್ಯಧರ್ಮ–ಎಂದ ಪ್ಲೇಟೋ. ರಾಜ್ಯವಾಳುವ ಕಲೆಯಲ್ಲಿ ಪರಿಶ್ರಮ ಪಡೆದ ಪ್ರಾಜ್ಞರು, ವಿವೇಕಿಗಳು ಮಾತ್ರ ಅಧಿಕಾರ ಸೂತ್ರ ಹಿಡಿಯಲು ಯೋಗ್ಯರು, ಆದರೆ ಇವರಿಗೆ ಯಾವ ಆಸ್ತಿಪಾಸ್ತಿಯೂ ಇರಬಾರದು ಎಂದು ಇವನ ವಾದ. ಅರಿಸ್ಟಾಟಲನ ದೃಷ್ಟಿ ಬೇರೆ–ಪ್ರತಿಯೊಬ್ಬನೂ ತನ್ನ ಅಭಿರುಚಿಗೆ ತಕ್ಕ ವೃತ್ತಿಯನ್ನು ಅವಲಂಬಿಸಬೇಕು, ಪ್ರತಿಯೊಬ್ಬನಿಗೂ ತನ್ನ ದುಡಿಮೆಗೆ ತಕ್ಕ ಪ್ರತಿಫಲ ದೊರೆಯಬೇಕು, ಪ್ರಜೆಯ ವ್ಯಕ್ತಿತ್ವ ಬೆಳೆಯಲು ತಕ್ಕ ವಾತಾವರಣ ಕಲ್ಪಿಸುವುದಕ್ಕಿಂತ ಮುಖ್ಯವಾದ ರಾಜ್ಯದ ಗುರಿ ಬೇರೆ ಇಲ್ಲ ಎಂದು ಅವನ ಅಭಿಪ್ರಾಯ.

ಗ್ರೀಕರಲ್ಲಿದ್ದಂತೆ ರೋಮನರಲ್ಲಿ ರಾಜ್ಯತತ್ತ್ವಕ್ಕೆ ಹೆಚ್ಚು ಮನ್ನಣೆಯಿರಲಿಲ್ಲ. ಜನರ ಸಮ್ಮತಿಯ ಮೇಲೆಯೇ ಪ್ರಭುತ್ವ ನಿಲ್ಲಬೇಕೆಂಬ ಸಿದ್ಧಾಂತ ರೂಪುಗೊಂಡುದು ರೋಮನರಲ್ಲಿ. ಇದನ್ನು ಪ್ರತಿಪಾದಿಸಿದವನು ಸಿಸಿರೋ (ಕ್ರಿ. ಪೂ. 106–43). ಈತನ ಪ್ರಕಾರ ಪ್ರತಿಯೊಬ್ಬ ಮಾನವನಿಗೂ ಹಲವು ಜನ್ಮಸಿದ್ಧ ಹಕ್ಕುಗಳಿರುತ್ತವೆ; ಅವುಗಳನ್ನು ಕಸಿದುಕೊಳ್ಳುವ ಅಧಿಕಾರ ಯಾವ ರಾಜಕೀಯ ಸಂಸ್ಥೆಗೂ ಇರುವುದಿಲ್ಲ; ವ್ಯಕ್ತಿಯು ತನ್ನ ಜಾತಿ, ಮತ, ಕಸಬು ಮುಂತಾದ ಸಂಕುಚಿತ ಭಾವನೆಗಳನ್ನು ಇರಿಸಿಕೊಳ್ಳದೆ ಎಲ್ಲರನ್ನೂ ಅಣ್ಣತಮ್ಮಂದಿರಂತೆ ಕಾಣಬೇಕು.

ಪ್ರಾಚೀನ ಭಾರತದಲ್ಲಿ ರಾಜ್ಯವ್ಯವಸ್ಥೆಯನ್ನು ಕುರಿತು ಇಂಥ ತಾತ್ತ್ವಿಕ ಜಿಜ್ಞಾಸೆ ಹೆಚ್ಚು ಕಾಣುವುದಿಲ್ಲ. ಕೌಟಿಲ್ಯನ 'ಅರ್ಥಶಾಸ್ತ್ರ'ದಿಂದ ಹಿಡಿದು ಮಧ್ಯಯುಗದವರೆಗೆ ಎಲ್ಲ ಕೃತಿಗಳೂ ರಾಜನ ಆಡಳಿತವನ್ನೇ ವರ್ಣಿಸುತ್ತವೆ. ರಾಜ್ಯವಿರುವುದು ಪ್ರಜೆಗಳ ಹಿತಕ್ಕಾಗಿ. 'ಅರ್ಥಶಾಸ್ತ್ರ'ದ ಪ್ರಕಾರ ಕಿರೀಟಧಾರಣ ಸಮಯದಲ್ಲಿ ರಾಜ ಪ್ರಜೆಗಳಿಗೆ ಹೇಳುತ್ತಿದ್ದ ಮಾತುಗಳು: 'ನಾನು ನಿಮ್ಮ ಮೇಲೆ ದಬ್ಬಾಳಿಕೆ ಮಾಡಿದರೆ ನನಗೆ ಈ ಲೋಕದಲ್ಲಿಯೂ ಮುಂದಿನ ಲೋಕದಲ್ಲಿಯೂ ಒಳ್ಳೆಯದಾಗದೆ ಹೋಗಲಿ. ನನ್ನ ಸಂತತಿಯವರಿಗೆ ಕೇಡೇ ಆಗಲಿ.' ರಾಜನಾದವನು ಧರ್ಮವನ್ನು ಪಾಲಿಸಬೇಕು, ಪ್ರಜೆಗಳ ಸುಖವನ್ನು ಸಾಧಿಸಬೇಕು.

ಮಧ್ಯ ಯುಗ ಊಳಿಗಮಾನ್ಯ ಪದ್ಧತಿಯ ಯುಗ. ನಾಡಿನ ನೆಲವೆಲ್ಲ ರಾಜನಿಗೆ ಸೇರಿದ್ದು, ಅವನ ಕೃಪೆಯಿಂದ ಶ್ರೀಮಂತರು, ಅವರ ಕೃಪೆಯಿಂದ ಮುಖ್ಯ ರೈತರು, ಹೀಗೆ ಕ್ರಮವಾಗಿ ರೈತರ ವರೆಗೆ ಎಲ್ಲರೂ ಭೂಮಿಯನ್ನು ಪಡೆದವರು; ಪ್ರತಿ ವರ್ಗದವರೂ ತಮಗೆ ಭೂಮಿ ಕೊಟ್ಟವರ ಸೇವೆಗೆ ಮತ್ತು ರಕ್ಷಣೆಗೆ ಸಿದ್ಧವಾಗಿರಬೇಕು–ಇದು ಆಗಿನ ನಂಬಿಕೆ. ರಾಜಪೀಠದಲ್ಲಿ ದೇವತ್ವದ ಅಂಶವಿದೆ ಎಂಬ ನಂಬಿಕೆಯೂ ಈ ಕಾಲದಲ್ಲಿತ್ತು. (ಈ ನಂಬಿಕೆ ಮಧ್ಯಯುಗದ ಯೂರೋಪಿನಲ್ಲಿ ಅಲ್ಲದೆ ಭಾರತ, ಕಾಂಬೋಡಿಯ ಮೊದಲಾಗಿ ಪ್ರಪಂಚದ ಬಹು ಭಾಗಗಳಲ್ಲಿ ಕಂಡುಬರುತ್ತದೆ. ಸುಮಾರು ಕ್ರಿ. ಪೂ. ನಾಲ್ಕನೆಯ ಶತಮಾನದ ಐತರೇಯ ಬ್ರಾಹ್ಮಣದಲ್ಲಿ ರಾಜ ದೇವಾಂಶ ಸಂಭೂತ ಎಂಬ ಮಾತಿದೆ.) ಅರಸನ ಆಡಳಿತಕ್ಕೆ ಪೋಪನ ಅಥವಾ ಬೇರೊಬ್ಬ ಧರ್ಮಗುರುವಿನ ಆಶ್ರಯದ ನೆರಳು ಇರುತ್ತಿತ್ತು.

ಹದಿನಾರನೆಯ ಶತಮಾನದಲ್ಲಿ ಇಟಲಿಯ ಮ್ಯಾಕಿಯವೆಲ್ಲಿ(1460–1527) ರೂಪಿಸಿದ ಸಿದ್ಧಾಂತ ರಾಜನಿಗೆ ಅತ್ಯುನ್ನತ ಅಧಿಕಾರವಿರಬೇಕೆಂದು ವಾದಿಸಿತು. ದೇಶ ಸ್ವತಂತ್ರವಾಗಿರಬೇಕಾದರೆ, ಇತರ ದೇಶಗಳನ್ನು ಎದುರಿಸಿ ಬಾಳಬೇಕಾದರೆ ನೀತಿ ಧರ್ಮಗಳು ಆಡಳಿತದ ಮಧ್ಯೆ ತಲೆಹಾಕಬಾರದು, ವ್ಯವಹಾರ ಸೌಕರ್ಯ ದೃಷ್ಟಿಯಿಂದ, ದೇಶದ ಏಳಿಗೆ ದೃಷ್ಟಿಯಿಂದ, ರಾಜ ಏನನ್ನಾದರೂ ಮಾಡಲು ಅವಕಾಶವಿರಬೇಕು ಎಂಬುದು ಈ ಪಂಥ.

ಹದಿನೇಳನೆಯ ಶತಮಾನದ ಹಾಬ್ಸ್, ಲಾಕ್ ಎಂಬ ಇಂಗ್ಲೆಂಡಿನ ರಾಜಕೀಯ ತಾತ್ತ್ವಿಕರು, ಫ್ರಾನ್ಸಿನ ರೂಸೋ ಇವರು ಒಡಂಬಡಿಕೆಯ ತತ್ತ್ವವನ್ನು ಪ್ರತಿಪಾದಿಸಿದರು, ಹಿಂದೆ ಯಾವಾಗಲೊ ಆಳುವವನಿಗೂ ಪ್ರಜೆಗಳಿಗೂ ಆದ ಕರಾರು ರಾಜ್ಯದ ಅಸ್ತಿತ್ವದ ಅಡಿಗಲ್ಲು ಎಂದು ಇವರ ವಾದ.

ಮೊದಲು ಮನುಷ್ಯ ನಿಸರ್ಗದ ಜಗತ್ತಿನಲ್ಲಿ ಇತರ ಪ್ರಾಣಿಗಳಂತೆ ಬದುಕುತ್ತಿದ್ದಾಗ ಯಾವ ರಕ್ಷಣೆಯೂ ಇರಲಿಲ್ಲ. ಬಲಿಷ್ಠನಾದವನು ಮಾಡಿದ್ದೇ ಸರಿ. ಇದರಿಂದ ಒಂದು ಕಡೆ ಇದ್ದವರೆಲ್ಲ ಸೇರಿ ಒಬ್ಬ ನಾಯಕನ ಶಾಸನ ಕಟ್ಟುಪಾಡುಗಳಿಗೆ ಬದ್ಧವಾಗಿ ಬದುಕಲು ಒಪ್ಪಿದ್ದರು. ಆಳುವವನ ವಿರುದ್ಧ ಹೋಗುವ ಹಕ್ಕು ಜನರಿಗೆ ಇಲ್ಲವೇ ಇಲ್ಲ. ಇದು ಹಾಬ್ಸನ ವಾದ.

ಮನುಷ್ಯ ನೈಸರ್ಗಿಕವಾಗಿ ಬದುಕುತ್ತಿರುವಾಗಲೂ ಕಟ್ಟುಪಾಡುಗಳಿದ್ದುವು. ಬುದ್ಧಿಶಕ್ತಿ, ಸಂಪತ್ತು, ದೇಹದಾರ್ಢ್ಯಗಳಲ್ಲಿ ವ್ಯತ್ಯಾಸಗಳಿದ್ದುವು. ಆದರೆ ಇತರರ ಆಡಳಿತಕ್ಕೆ ಒಳಗಾಗದೆ ತಮಗೆ ಬೇಕಾದಂತೆ ಬದುಕುವ ಸ್ವಾತಂತ್ರ್ಯ ಎಲ್ಲರಿಗೂ ಇತ್ತು. ಪ್ರತಿಯೊಬ್ಬನೂ ಇತರರ ಸ್ವಾತಂತ್ರ್ಯಕ್ಕೂ ಗೌರವ ಕೊಡಬೇಕು. ಇದಕ್ಕಾಗಿ ಜನ ಒಂದು ಕರಾರು ಮಾಡಿಕೊಂಡು ರಾಜ್ಯವನ್ನು

ಸೃಷ್ಟಿಸಿದರು. ಆದರೆ ತನ್ನ ಪ್ರಾಣ, ಮಾನ, ಆಸ್ತಿಗಳಿಗಾಗಿ ಹೋರಾಡುವ ಹಕ್ಕು ಮನುಷ್ಯನಿಗೆ ಇದ್ದೇ ಇದೆ. ಇದು ಲಾಕ್‌ನ ತರ್ಕ.

ರೂಸೋವಿನ ಅಭಿಪ್ರಾಯದಲ್ಲಿ ಹಿಂದೆ ಜೀವನ ಬಹಳ ಸರಳವಾಗಿತ್ತು. ಎಲ್ಲರೂ ಸ್ವತಂತ್ರರಾಗಿದ್ದರು. ದುರಾಶೆ ಯಾರಿಗೂ ಇರಲಿಲ್ಲ. ಆದರೆ ಜನಸಂಖ್ಯೆ, ವ್ಯಾಪಾರ, ಸಂಪರ್ಕ ಬೆಳೆದಂತೆ ಸ್ವಾತಂತ್ರ್ಯಕ್ಕೆ ಧಕ್ಕೆ ಬಂತು. ಆಜನ್ಮಸಿದ್ಧ ಹಕ್ಕುಗಳನ್ನು ಉಳಿಸಿಕೊಳ್ಳಲು ಅವರು ಹೆಣಗಿದರು. ಆಗ ಪರಸ್ಪರ ಮಾಡಿಕೊಂಡ ಸಾಮಾಜಿಕ ಒಪ್ಪಂದದ ಫಲವಾಗಿ ರಾಜ್ಯ ಹುಟ್ಟಿತು.

ಈ ಮೂವರು ಎತ್ತಿ ಹಿಡಿದ ರಾಜಕೀಯ ಸಿದ್ಧಾಂತಗಳಲ್ಲಿ ಪ್ರಜೆಗಳಿಗೇ ಪರಮಾಧಿಕಾರ.

ವ್ಯಕ್ತಿಗೆ ಬಹಳ ಪ್ರಾಧಾನ್ಯ ನೀಡಿ ವ್ಯಕ್ತಿಯ ಸ್ವಾತಂತ್ರ್ಯವೇ ರಾಜ್ಯದ ಪರಮಗುರಿಯಾಗಬೇಕೆಂದು ವಾದಿಸಿದವರಲ್ಲಿ ಪ್ರಮುಖರು ಬೆನ್‌ಥಾಮ್ ಮತ್ತು ಮಿಲ್. ಇವರ ಸಿದ್ಧಾಂತವನ್ನು ಉಪಯೋಗ ಸಿದ್ಧಾಂತ ಎನ್ನುತ್ತಾರೆ. ಬೆನ್‌ಥಾಮ್ ಅತ್ಯಂತ ಹೆಚ್ಚು ಜನರ ಅತ್ಯಂತ ಹೆಚ್ಚು ಸುಖವೇ ರಾಜ್ಯದ ಧ್ಯೇಯ ಎಂದ. ಜೆ.ಎಸ್. ಮಿಲ್ (1806–1873) ನಿರೂಪಿಸುವ ವ್ಯಕ್ತಿ ಸಿದ್ಧಾಂತ ಹೀಗೆ: ಸಮಾಜವು ಅನೇಕ ವ್ಯಕ್ತಿಗಳಿಂದ ಕೂಡಿರುವುದರಿಂದ ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಸೌಖ್ಯವನ್ನು ಗಳಿಸಿಕೊಂಡಲ್ಲಿ ಸಮಾಜವೇ ಸುಖಿಯಾಗುತ್ತದೆ. ಆದರೆ ಹೀಗೆ ಪ್ರತಿಯೊಬ್ಬನೂ ತನ್ನ ಸುಖ ತಾನು ಸಾಧಿಸಿಕೊಳ್ಳಲು ಪಡುವ ಪ್ರಯತ್ನಕ್ಕೆ ಪ್ರಭುತ್ವ ಅಡ್ಡಿಯಾಗಬಾರದು. ಆದರೆ ಒಬ್ಬನ ಸ್ವಾರ್ಥದಿಂದ ಹಲವರು ದಟ್ಟದರಿದ್ರರಾಗಲು, ಮತ್ತೆ ಹಲವರು ಶ್ರೀಮಂತರಾಗಲು ಬಿಡಬಾರದು. ವ್ಯಕ್ತಿ ಸ್ವಾತಂತ್ರ್ಯಕ್ಕೆ ವಿವೇಕ ನಿರ್ಬಂಧಗಳನ್ನು ವಿಧಿಸಬೇಕಾಗುತ್ತದೆ.

ಕಾರ್ಲ್ ಮಾರ್ಕ್ಸ್‌ನ ವಾದವನ್ನು ದ್ವಂದ್ವಾತ್ಮಕ ಭೌತಿಕವಾದ ಎಂದು ಕರೆಯುತ್ತಾರೆ. ಪ್ರಪಂಚದ ಹುಟ್ಟು–ಚಲನೆಗಳಿಗೆ ಕಣ್ಣಿಗೆ ಕಾಣದ ಶಕ್ತಿ–ದೇವರು–ಕಾರಣವಲ್ಲ, ಭೌತಸ್ವರೂಪ ಕಾರಣ. ಪವಾಡ ಸಾಧ್ಯವಲ್ಲ. ಭೌತಪ್ರಪಂಚ ಯಾವಾಗಲೂ ಒಂದೇ ರೀತಿಯಲ್ಲಿರುವುದಿಲ್ಲ, ಇದರಲ್ಲಿ ಚೈತನ್ಯವಿದೆ: ಇದು ಸದಾ ಬದಲಾಗುತ್ತಿರುತ್ತದೆ. ರಾಜಕೀಯ ವ್ಯವಸ್ಥೆ, ಸಾಮಾಜಿಕ ವ್ಯವಸ್ಥೆ, ಆರ್ಥಿಕ ವ್ಯವಸ್ಥೆ ಎಲ್ಲ ಬದಲಾಗುತ್ತಿರುತ್ತವೆ. ಇವಕ್ಕೆ ಮೂಲಕಾರಣ ಆರ್ಥಿಕಸ್ಥಿತಿ. ಸಾಮಾಜಿಕ ಜೀವನದಲ್ಲಿ ಅತಿ ಮುಖ್ಯವಾದದ್ದು ಆರ್ಥಿಕ ಪರಿಸ್ಥಿತಿ. ಮನುಷ್ಯನಿಗೆ ಮೊದಲು ಬೇಕಾದದ್ದು ಆಹಾರ, ಬಟ್ಟೆ, ಇರಲು ಸ್ಥಳ. ಅಲ್ಲದೆ, ಕೆಲವರು ಯಾವಾಗಲೂ ಇತರರನ್ನು ದುಡಿಸಿ ಅವರ ಬೆವರಿನಿಂದ ತಾವು ಹಣ ಮಾಡಲು ಪ್ರಯತ್ನಿಸುತ್ತಿದ್ದಾರೆ. ಕ್ರಮೇಣ ಶ್ರಮಜೀವಿಗಳ ವರ್ಗ ಬಂಡವಾಳಗಾರರ ವರ್ಗವನ್ನು ಸೋಲಿಸುತ್ತದೆ. ಈ ವರ್ಗಗಳ ಕಲಹವೇ ಸಮಾಜದ ಪ್ರಗತಿಯ ಮೂಲ ; ಎರಡು ಪರಸ್ಪರ ವಿರುದ್ಧ ಆರ್ಥಿಕ ಶಕ್ತಿಗಳ ಹೋರಾಟದಿಂದಲೇ ಪ್ರಗತಿ ಸಾಧ್ಯ. ಇದು ದ್ವಂದ್ವಾತ್ಮಕ ಭೌತಿಕವಾದ.

ಸಮಾಜವಾದ ವ್ಯಕ್ತಿ ಮತ್ತು ರಾಷ್ಟ್ರದ ಹಕ್ಕುಗಳ ಸಮತೋಲನ ಮಾಡಲು ಯತ್ನಿಸುತ್ತದೆ. ವ್ಯಕ್ತಿ—ಸಮಾಜ ಒಬ್ಬರಿಗೊಬ್ಬರು ಅಗತ್ಯ. ವ್ಯಕ್ತಿ (ಇತರರ ಸ್ವಾತಂತ್ರ್ಯಕ್ಕೆ ಅಡ್ಡಿಬಾರದಂತೆ) ತನಗೆ ಇಷ್ಟ ತೋರಿದ ರೀತಿಯಲ್ಲಿ ಸುಖ ಕಂಡುಕೊಂಡು ತನ್ನಲ್ಲಿರುವ ಶಕ್ತಿಗಳನ್ನು ಬೆಳೆಸಿಕೊಳ್ಳಲು ಸಮಾಜ ಅವಕಾಶಮಾಡಿಕೊಡಬೇಕು : ಒಬ್ಬನ ಅಥವಾ ಒಂದು ಗುಂಪಿನ ಹಿತಕ್ಕೆ ಇತರರು ಬಲಿಯಾಗದಂತೆ ನೋಡಿಕೊಳ್ಳಲು ಸಮಾಜ ಅಧಿಕಾರ ಹೊಂದಿರಬೇಕು.

ಫ್ಯಾಸಿಸಂ, ನಾಜಿಸಂ ಸಿದ್ಧಾಂತಗಳು ಎಲ್ಲ ಮನುಷ್ಯರೂ ಸರಿಸಮಾನ ಎಂಬುದನ್ನು ಒಪ್ಪುವುದಿಲ್ಲ. ಜರ್ಮನಿಯ ನೀಷೆ (1844–1900) ಎಂಬವನ ವಾದದಂತೆ ಮನುಷ್ಯರಲ್ಲಿ ಎರಡು ಬಗೆ: ಬಲಿಷ್ಠರು, ಆಳುವ ಯೋಗ್ಯತೆಯುಳ್ಳವರು ಕೆಲವೇ ಮಂದಿ ; ನಿರ್ಬಲರು ನಿಷ್ಪ್ರಯೋಜಕರು ಬಹು ಮಂದಿ. ಮೊದಲನೆಯ ವರ್ಗದವರು ಮಾತ್ರ ಆಳಬಹುದು ; ಉಳಿದವರು ಅವರಿಗೆ ವಿಧೇಯರಾಗಿರಬೇಕು. ದಯೆ, ಸಾಧುತ್ವ ಇಂಥ ಗುಣಗಳನ್ನು ದುರ್ಬಲರು ಹೊಗಳುತ್ತಾರೆ. ಇವರ ನೀತಿ ನಿಯಮಗಳು ಬಲಿಷ್ಠರಿಗೆ ಅನ್ವಯಿಸುವುದಿಲ್ಲ. ಶಕ್ತಿವಂತರ ನಡತೆಯೇ ನೀತಿ. ಅತಿಮಾನವನನ್ನು ಸೃಷ್ಟಿಸುವುದು ಮನುಕುಲದ ಗುರಿಯಾಗಬೇಕು. ಈ ಸಿದ್ಧಾಂತದ ಬೆಳವಣಿಗೆ ನಾಜಿಸಂ ಮತ್ತು ಫ್ಯಾಸಿಸಂ.

ಇವುಗಳ ಪ್ರಕಾರ, ವ್ಯಕ್ತಿ ರಾಷ್ಟ್ರಕ್ಕಾಗಿ ಬದುಕುವವನು, ರಾಷ್ಟ್ರವೇ ಮುಖ್ಯ ; ಆಳಲು ವಿಶಿಷ್ಟವಾದ ಯೋಗ್ಯತೆಯನ್ನು ಪಡೆದ ನಾಯಕ ರಾಷ್ಟ್ರದ ಹಿತಗಳ ಮೂರ್ತಿ ; ಎಲ್ಲ ಪ್ರಜೆಗಳೂ ಮರುಮಾತಿಲ್ಲದೆ ಅವನ ಆಜ್ಞೆಯನ್ನು ಪರಿಪಾಲಿಸಬೇಕು ; ವ್ಯಕ್ತಿಗೆ ಮೂಲಭೂತ ಹಕ್ಕುಗಳೆಂದಿಲ್ಲ.

ಕಾಲಕಳೆದಂತೆ ರಾಜಕೀಯ ಸಿದ್ಧಾಂತಗಳು ಬದಲಾಗುತ್ತಿರುತ್ತವೆ. ಇತಿಹಾಸದಲ್ಲಿ ಕಂಡುಬರುವಂತೆ ಯಾವ ಸಿದ್ಧಾಂತವೂ ಶಾಶ್ವತವಾಗಿ ಉಳಿದುದಿಲ್ಲ.

## ರಾಜಧಾನಿ

ಬೆಂಗಳೂರು ನಗರ ಮೈಸೂರು ರಾಜ್ಯದ ರಾಜಧಾನಿ. ಮೈಸೂರು ಆಶ್ರಿತ ಸಂಸ್ಥಾನವಾಗಿದ್ದಾಗ ಮೈಸೂರು ನಗರ ರಾಜಧಾನಿಯಾಗಿತ್ತು.

ರಾಜ್ಯದ ಆಡಳಿತದ ಕೇಂದ್ರ ಕಚೇರಿ, ರಾಜಭವನ, ಮಂತ್ರಿಮಂಡಲದ ಕಾರ್ಯಸೌಧ ಎಲ್ಲವೂ ಬೆಂಗಳೂರಿನಲ್ಲಿವೆ.

ದೆಹಲಿ ಭಾರತದ ಪ್ರಾಚೀನ ರಾಜಧಾನಿ. ಇಂಗ್ಲಿಷರು ಈ ದೇಶಕ್ಕೆ ಬಂದ ಪ್ರಾರಂಭದಲ್ಲಿ ಕಲ್ಕತ್ತವನ್ನು ರಾಜಧಾನಿಯಾಗಿ ಮಾಡಿಕೊಂಡರು. ಮತ್ತೆ 1912ರಲ್ಲಿ ದೆಹಲಿಯೇ ರಾಜಧಾನಿಯಾಯಿತು.

ರಾಜನಿರುವ ಅಥವಾ ಆಡಳಿತದ ಪೀಠವಿರುವ ನಗರವೇ ‘ ರಾಜಧಾನಿ ’. ರಾಷ್ಟ್ರದ ಮುಖ್ಯಪಟ್ಟಣಕ್ಕೆ ರಾಜಧಾನಿ ಎನ್ನುತ್ತಾರೆ. ರಾಷ್ಟ್ರದೊಳಗಿನ ಯಾವುದೇ ರಾಜ್ಯದ ಮುಖ್ಯಪಟ್ಟಣವನ್ನೂ ಹಾಗೆಯೇ ಕರೆಯುತ್ತಾರೆ.

ಮಾಸ್ಕೊ ರಷ್ಯದ ರಾಜಧಾನಿ. ಅಮೆರಿಕದ ರಾಜಧಾನಿ ವಾಷಿಂಗ್‌ಟನ್. ಸಾಮಾನ್ಯವಾಗಿ ರಾಜಧಾನಿಗಳಿರುವುದು ಜನತೆಗೆ ಎಲ್ಲ ರೀತಿಯಿಂದಲೂ ಅನುಕೂಲವೆನಿಸುವ ಸ್ಥಳಗಳಲ್ಲಿ. ಅವು ದೊಡ್ಡ ನಗರಗಳಾಗಿಯೂ ಪ್ರಸಿದ್ಧಿ ಪಡೆದಿರುತ್ತವೆ.

ಈಗಿನ ಕಾಲದಲ್ಲಿ ರಾಷ್ಟ್ರದ ರಾಜಧಾನಿಯಲ್ಲಿ ಹಲವು ರಾಷ್ಟ್ರಗಳ ರಾಯಭಾರಿಗಳ ನಿವಾಸಕ್ಕೆ ತಕ್ಕಷ್ಟು ಸ್ಥಳವಿದ್ದು, ರೈಲು ವಿಮಾನನಿಲ್ದಾಣ ಇತ್ಯಾದಿ ಸೌಕರ್ಯಗಳಿರಬೇಕು. ಕೆಲವು ರಾಷ್ಟ್ರಗಳು ಇಂದಿನ ಅಗತ್ಯಗಳಿಗೆ ಹೊಂದಿಕೊಳ್ಳುವಂತೆ ನಕಾಶೆ ತಯಾರಿಸಿ ಹೊಸದಾಗಿ ರಾಜಧಾನಿಗಳನ್ನು ನಿರ್ಮಿಸುವುದುಂಟು. ಪಾಕಿಸ್ತಾನದ ಇಸ್ಲಾಮಾಬಾದ್ ಈ ರೀತಿಯ ನೂತನ ರಾಜಧಾನಿ.

## ರಾಜನೀತಿ

ಮಹಾಭಾರತದಲ್ಲಿ ಕೌರವರಿಗೂ ಪಾಂಡವರಿಗೂ ಕಲಹವುಂಟಾದಾಗ ಎರಡು ಪಕ್ಷಗಳಿಗೂ ರಾಜಿ ಮಾಡಿಸಬೇಕೆಂದು ಕೃಷ್ಣನು ಪ್ರಯತ್ನಿಸುತ್ತಾನೆ. ಪಾಂಡವರೊಡನೆಯೂ ಮಾತನಾಡುತ್ತಾನೆ. ದುರ್ಯೋಧನನ ಆಸ್ಥಾನಕ್ಕೂ ಹೋಗುತ್ತಾನೆ. ಕೃಷ್ಣಸಂಧಾನವೆಂಬ ಈ ಕಥೆ ಸುಪ್ರಸಿದ್ಧ. ಇಲ್ಲಿ ರಾಜನೀತಿಯನ್ನು ಕಾಣುತ್ತೇವೆ.

ರಾಜನೀತಿ—ಎಂದೊಡನೆ ಚಾಣಕ್ಯ (ಕೌಟಿಲ್ಯ)ನ ಹೆಸರು ಭಾರತೀಯರಿಗೆ ನೆನಪಾದರೆ ಆಶ್ಚರ್ಯವಿಲ್ಲ. ಇವನು ನವನಂದರ ಕೈಸೇರಿದ್ದ ಮೌರ್ಯ ಸಾಮ್ರಾಜ್ಯವನ್ನು ಅವರಿಂದ ಕಿತ್ತುಕೊಂಡು, ಚಂದ್ರಗುಪ್ತ ಮೌರ್ಯನನ್ನು ಅದಕ್ಕೆ ಸಾರ್ವಭೌಮನನ್ನಾಗಿ ಮಾಡಿದ: ನಂದರ ಮುಖ್ಯಮಂತ್ರಿಯಾಗಿದ್ದ ಅತಿ ಚಾಣಾಕ್ಷನಾದ ಅಮಾತ್ಯ ರಾಕ್ಷಸನನ್ನು ಉಪಾಯದಿಂದ ಚಂದ್ರಗುಪ್ತನ ಮಂತ್ರಿಯಾಗಲು ಒಪ್ಪಿಸಿದ; ಚಾಣಕ್ಯನ ಇಂಥ ರಾಜತಂತ್ರಜ್ಞತೆ ಅಸಾಧಾರಣವಾದದ್ದು. ರಾಜ್ಯಾಡಳಿತದಲ್ಲಿ ರಾಜನೀತಿಯ ಮಹತ್ವದ ಪಾತ್ರವನ್ನು ಈ ಪ್ರಸಂಗ ತಿಳಿಸುತ್ತದೆ. ಚಾಣಕ್ಯ(ಕೌಟಿಲ್ಯ) ಬರೆದ 'ಅರ್ಥಶಾಸ್ತ್ರ' ದಲ್ಲಿ ರಾಜನೀತಿಗೆ ವಿಶಿಷ್ಟಸ್ಥಾನ ದೊರೆತಿದೆ.

ರಾಜ್ಯಾಡಳಿತ ಕ್ರಮದಲ್ಲಿ ಪ್ರಜೆಗಳಿಗೆ ಹಿತವಾಗುವ ಕೆಲವು ನಿಯಮಗಳನ್ನು ರೂಪಿಸಬೇಕಾಗುತ್ತದೆ. ಅದು ರಾಜನೀತಿ. ಒಂದು ದೇಶದ ರಾಜ್ಯಾಡಳಿತ ಆ ದೇಶದ ರಾಜನೀತಿಯನ್ನು ಅವಲಂಬಿಸಿರುತ್ತದೆ.

ಪ್ರಪಂಚದಲ್ಲಿ ಅನೇಕ ರಾಷ್ಟ್ರಗಳಿವೆ. ಒಂದು ರಾಷ್ಟ್ರಕ್ಕೂ ಮತ್ತೊಂದು ರಾಷ್ಟ್ರಕ್ಕೂ ವ್ಯವಹಾರ ಏರ್ಪಡಬೇಕಾದರೆ ಅವುಗಳ ನಡುವಣ ಬಾಂಧವ್ಯ ಮಧುರವಾಗಿರಬೇಕು. ಒಬ್ಬರೊಡನೆ ಮಧುರಬಾಂಧವ್ಯವನ್ನು ಬೆಳೆಸುವುದು ಸಹ ಒಂದು ಕಲೆಯೇ. ಈ ಕಲೆಗೆ ರಾಜ್ಯಶಾಸ್ತ್ರದಲ್ಲಿ ರಾಜತಂತ್ರ ಎನ್ನುತ್ತಾರೆ.

ರಾಷ್ಟ್ರಗಳ ನಡುವಣ ವ್ಯವಹಾರವನ್ನು ಅಂತರರಾಷ್ಟ್ರೀಯ ಕಾನೂನಿಗೆ ಅನುಸಾರವಾಗಿ ಅಧಿಕಾರ ಪತ್ರಗಳುಳ್ಳ ರಾಷ್ಟ್ರಪ್ರತಿನಿಧಿಗಳು ನಡೆಸುತ್ತಾರೆ. ರಾಯಭಾರಿಗಳು, ವಿಶೇಷ ಪ್ರತಿನಿಧಿಗಳು, ಪೂರ್ಣಾಧಿಕಾರವುಳ್ಳ ಸಚಿವರು, ಗೃಹಮಂತ್ರಿಗಳು, ನಿಯೋಗಿಗಳು—ಇವರೆಲ್ಲ ಒಂದು ರಾಷ್ಟ್ರದ ರಾಜನೀತಿಜ್ಞರು. ಪ್ರಪಂಚದ ಪ್ರಮುಖ ರಾಷ್ಟ್ರಗಳು ಇತರ ಪ್ರಮುಖ ರಾಷ್ಟ್ರಗಳಿಗೆ ಅತ್ಯುಚ್ಚ ದರ್ಜೆಯ ಪ್ರತಿನಿಧಿಗಳನ್ನು ಕಳುಹಿಸುತ್ತವೆ. ಆದರೆ ಚಿಕ್ಕ ರಾಷ್ಟ್ರಗಳು ರಾಯಭಾರಿಯ ದರ್ಜೆಗಿಂತ ಕಡಮೆ ಶ್ರೇಣಿಯ ರಾಜನೀತಿಜ್ಞರನ್ನು ನಿಯಮಿಸುತ್ತವೆ ಮತ್ತು ಇತರ ರಾಷ್ಟ್ರಗಳಿಂದಲೂ ಅದೇ ದರ್ಜೆಯ ಪ್ರತಿನಿಧಿಗಳನ್ನು ಸ್ವಾಗತಿಸುತ್ತವೆ.

ರಾಜನೀತಿಯಲ್ಲಿ ವ್ಯವಹರಿಸಬೇಕಾದ ವಿಷಯಕ್ಕಿಂತ ವ್ಯವಹರಿಸುವ ರೀತಿ ಮುಖ್ಯವಾದದ್ದು. ಏಕೆಂದರೆ ವಿಷಯ ಎಷ್ಟೇ ಅಪ್ರಿಯವಾಗಿದ್ದರೂ, ವ್ಯವಹರಿಸುವಾಗ ರಾಜನೀತಿಜ್ಞ ತೋರುವ ಚಾತುರ್ಯ ಇತರ ರಾಷ್ಟ್ರಗಳನ್ನು ಮರುಳುಗೊಳಿಸಬಹುದು. ಇತರ ರಾಷ್ಟ್ರಗಳಿಂದ ತಮ್ಮ ರಾಷ್ಟ್ರಕ್ಕೆ ಲಾಭ ದೊರಕುವಂತೆ ಮಾಡುವುದೇ ರಾಜನೀತಿಯ ಹುರುಳು.

ನಾಗರಿಕತೆ ಬೆಳೆದಷ್ಟೂ ರಾಜನೀತಿಯ ತಂತ್ರಗಳು ಕ್ಲಿಷ್ಟವಾಗುತ್ತವೆ, ರಾಜಕೀಯ ವ್ಯವಹಾರವನ್ನು ತೂಗಿಸಲು ಅತಿ ಕುಶಾಗ್ರಮತಿಗಳು ಬೇಕಾಗುತ್ತಾರೆ.

ಇಂದು ಭಾರತೀಯ ರಾಜತಾಂತ್ರಿಕವರ್ಗದವರು ಪ್ರಪಂಚದ ಎಲ್ಲ ಪ್ರಮುಖ ರಾಷ್ಟ್ರಗಳಲ್ಲಿ ಇದ್ದಾರೆ.

ಯಾವುದೇ ದೇಶ ಅನುಸರಿಸುವ ರಾಜತಂತ್ರ ಯೋಗ್ಯವಾಗಿದ್ದರೆ ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಅದಕ್ಕೆ ಒಳ್ಳೆಯ ಸ್ಥಾನ ದೊರೆಯುತ್ತದೆ. ಇಲ್ಲವಾದರೆ ಅದು ಅನೇಕ ರಾಷ್ಟ್ರಗಳ ವೈರ ಕಟ್ಟಿಕೊಳ್ಳಬೇಕಾಗುತ್ತದೆ.

## ರಾಜ್ಯಶಾಸ್ತ್ರ

ರಾಜ್ಯದ ಆಡಳಿತದ ವ್ಯವಸ್ಥೆಯನ್ನು ಕೂಲಂಕಷವಾಗಿ, ಕ್ರಮಬದ್ಧವಾಗಿ, ಶಾಸ್ತ್ರೀಯವಾಗಿ ಅಧ್ಯಯನ ಮಾಡುವ ಶಾಸ್ತ್ರವೇ ರಾಜ್ಯಶಾಸ್ತ್ರ.

ರಾಜ್ಯಶಾಸ್ತ್ರದ ಧ್ಯೇಯ ಮತ್ತು ವ್ಯಾಪ್ತಿಗಳ ಬಗೆಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ರಾಜ್ಯಶಾಸ್ತ್ರವು ರಾಜ್ಯಕ್ಕೆ ಸಂಬಂಧಿಸಿದ ವಿಷಯಗಳ ಅಧ್ಯಯನಕ್ಕೆ ಮಾತ್ರ ಸಹಾಯಕ ಎಂದು ಕೆಲವರ ಅಭಿಪ್ರಾಯ. ರಾಜ್ಯಶಾಸ್ತ್ರ ಸರಕಾರಕ್ಕೆ ಮಾತ್ರ ಸಂಬಂಧಿಸಿದ್ದು ಎಂದು ಬೇರೆ ಕೆಲವರ ಅಭಿಪ್ರಾಯ. ಮತ್ತೆ ಕೆಲವರು ರಾಜ್ಯಶಾಸ್ತ್ರದ ವ್ಯಾಪ್ತಿಗೆ ರಾಜ್ಯ–ಸರಕಾರಗಳೆರಡೂ ಒಳಪಡುತ್ತವೆ ಎಂದಿದ್ದಾರೆ. ಇದೇ ಹೆಚ್ಚು ವಾಸ್ತವವಾಗಿರುವಂತೆ ಕಂಡುಬರುತ್ತದೆ. ಏಕೆಂದರೆ ಸರಕಾರವಿಲ್ಲದ ರಾಜ್ಯವಿಲ್ಲ. ರಾಜ್ಯವಿಲ್ಲದ ಸರಕಾರವಿಲ್ಲ. ಇವೆರಡೂ ಅವಿಭಾಜ್ಯವಾದ್ದರಿಂದ ರಾಜ್ಯಶಾಸ್ತ್ರದ ವ್ಯಾಪ್ತಿಗೆ ಎರಡೂ ಒಳಪಡುತ್ತವೆ.

ರಾಜ್ಯದಲ್ಲಿ ಪ್ರಜೆಗಳಿಗೂ ಸರಕಾರಕ್ಕೂ ಸಂಬಂಧವಿದೆ. ಸರಕಾರ ರಾಜ್ಯವನ್ನು ಆಳುತ್ತದೆ. ಪ್ರಜೆ ಸರಕಾರದಿಂದ ಆಳಲ್ಪಡುತ್ತಾನೆ. ಆದ್ದರಿಂದ ರಾಜ್ಯಾಂಗಗಳ ಯೋಜನೆ, ರಾಜ್ಯಾಧಿಕಾರಗಳ ಹಂಚಿಕೆ, ಅಧಿಕಾರ ಚಲನೆಯ ಕ್ರಮ, ಸರಕಾರದ ಜವಾಬ್ದಾರಿ, ಪ್ರಜೆಯ ಹಕ್ಕು, ರಾಜ್ಯ ರಾಜ್ಯಗಳ ಸಂಬಂಧ ಇವೆಲ್ಲದರ ವಿಮರ್ಶೆ ರಾಜ್ಯಶಾಸ್ತ್ರ.

ರಾಜ್ಯಶಾಸ್ತ್ರ ವಿಸ್ತಾರವಾಗಿದೆ. ಜಟಿಲವಾಗಿದೆ. ಅದು ಸಾಮಾಜಿಕ ಜೀವನ ಮತ್ತು ವ್ಯಕ್ತಿ ಜೀವನ ಎರಡಕ್ಕೂ ಸಂಬಂಧಪಟ್ಟದ್ದು. ಸಾಮಾಜಿಕ ಜೀವನಕ್ಕೆ ಸಂಬಂಧಿಸಿದಂತೆ ಇದು ನಮ್ಮ ಮನೆ, ವ್ಯಾಪಾರ, ಆಸ್ತಿ, ಸಂಚಾರ ಸೌಕರ್ಯ ಮುಂತಾದವುಗಳನ್ನು ನೋಡಿಕೊಳ್ಳುತ್ತದೆ; ನಮ್ಮ ವ್ಯಕ್ತಿ ಜೀವನಕ್ಕೆ ಸಂಬಂಧಿಸಿದಂತೆ, ಶಾಸನ, ನಿಯಮ, ಆಡಳಿತ ಇವುಗಳಿಂದ ನಮ್ಮ ನಡವಳಿಕೆಯನ್ನು ಗೊತ್ತುಪಡಿಸುತ್ತದೆ. ಹೀಗೆ ಎರಡು ಕ್ಷೇತ್ರಗಳಿಗೂ ರಾಜ್ಯಶಾಸ್ತ್ರ ಮುಖ್ಯವಾಗಿದೆ.

ಪ್ರಭುತ್ವವನ್ನು ವೈಜ್ಞಾನಿಕವಾಗಿ ಅಭ್ಯಸಿಸುವ ರೀತಿ ಆರಂಭವಾದದ್ದು ಹತ್ತೊಂಬತ್ತನೆಯ ಶತಮಾನದಲ್ಲಿ.

ರಾಜ್ಯಶಾಸ್ತ್ರದ ಅಧ್ಯಯನ ವಿಧಾನಗಳ ಬಗೆಗೂ ವಿದ್ವಾಂಸರಲ್ಲಿ ಮತಭೇದಗಳುಂಟು. ಈ ಕೆಳಗಿನವು ಬಹುಜನ ಸಮ್ಮತವಾಗಿರುವ ವಿಧಾನಗಳು:

ಅವಲೋಕನ ವಿಧಾನ: ಸಾಮಾನ್ಯವಾಗಿ ಪ್ರಕೃತಿ ವಿಜ್ಞಾನಿಗಳು ಈ ವಿಧಾನವನ್ನು ಅನುಸರಿಸುತ್ತಾರೆ. ವಿವಿಧ ದೇಶಗಳ ಸರಕಾರಗಳನ್ನು, ಸಂಸ್ಥೆಗಳನ್ನು ಅಧ್ಯಯನ ಮಾಡಿ ಅವು ಹೇಗೆ ಕೆಲಸ ಮಾಡುತ್ತಿವೆ ಎಂಬುದನ್ನು ಸೂಕ್ಷ್ಮವಾಗಿ ಪರಿಶೀಲಿಸಿ, ಕೆಲವು ಸಿದ್ಧಾಂತಗಳನ್ನು ರೂಪಿಸುವುದು ಅವಲೋಕನ ಕ್ರಮ. ಪ್ರತ್ಯಕ್ಷ ಪರಿಶೀಲನೆ ಈ ವಿಧಾನದ ತಳಹದಿಯಾದ್ದರಿಂದ ಇವರ ನೆರವಿನಿಂದಾದ ನಿರ್ಣಯಗಳು ಸರಕಾರ, ಸಂಸ್ಥೆಗಳ ವಾಸ್ತವಿಕ ಸ್ಥಿತಿಗೆ ಹತ್ತಿರವಾಗಿರುತ್ತವೆ.

ಪ್ರಾಯೋಗಿಕ ವಿಧಾನ: ಭೌತವಿಜ್ಞಾನದಲ್ಲಿ ಇದನ್ನು ಬಹಳವಾಗಿ ಉಪಯೋಗಿಸುತ್ತಾರೆ. ಭೌತವಿಜ್ಞಾನಿಗಳು ಪ್ರಯೋಗಗಳನ್ನು ನಡೆಸಿ

ತೀರ್ಮಾನಗಳಿಗೆ ಬರುವಂತೆ, ಸರಕಾರ ಅಥವಾ ರಾಜ್ಯದೊಡನೆ ರಾಜ್ಯಶಾಸ್ತ್ರಜ್ಞ ಪ್ರಯೋಗ ನಡೆಸಲಾರ, ನಿಜ. ರಾಜ್ಯಶಾಸ್ತ್ರಜ್ಞನ ಪ್ರಯೋಗಗಳು ಬೇರೆ ರೀತಿಯವು. ಒಂದು ಸರಕಾರ ಹೊಸದೊಂದು ನೀತಿ ಅಥವಾ ಕಾನೂನನ್ನು ಜಾರಿಗೆ ತಂದಾಗ ಅದೊಂದು ಬಗೆಯ ಪ್ರಯೋಗವೇ. ಭಾರತ ಸ್ವತಂತ್ರವಾದ ಮೇಲೆ ಅಸ್ಪೃಶ್ಯತೆಯನ್ನು ನಿರ್ಮೂಲ ಮಾಡಲು ಕಾನೂನು ಮಾಡಿತು. ಕೆಲವು ರಾಜ್ಯಗಳು ಮದ್ಯಪಾನವನ್ನು ತಪ್ಪಿಸಲು ಶಾಸನ ಮಾಡಿದುವು. ಎಲ್ಲ ದೇಶಗಳಲ್ಲಿ ಇಂಥ ಪ್ರಯೋಗಗಳು ನಡೆಯುತ್ತಿರುತ್ತವೆ. ಹೊಸ ನೀತಿ ಜನರ ಮೇಲೆ ಯಾವ ಪರಿಣಾಮವನ್ನು ಬೀರುತ್ತದೆ, ಹೊಸ ಕಾನೂನು ಜನತೆಗೆ ಒಗ್ಗಿದೆಯೇ ಇಲ್ಲವೇ–ಈ ಫಲಿತಾಂಶಗಳನ್ನು ಅರಿತು ಜನರ ಅನುಕೂಲಕ್ಕೆ ಅನುಗುಣವಾಗಿ ಕಾನೂನು ಅಥವಾ ನೀತಿಯನ್ನು ತಿದ್ದಿದರೆ ಅದೇ ಪ್ರಾಯೋಗಿಕ ವಿಧಾನ ಎನಿಸಿಕೊಳ್ಳುತ್ತದೆ. ಅನುಭವ ಮತ್ತು ಸೂಕ್ಷ್ಮ ಅವಲೋಕನಶಕ್ತಿ ಇವು ಪ್ರಾಯೋಗಿಕ ವಿಧಾನದಲ್ಲಿ ಅತ್ಯಗತ್ಯವಾದ ಅಂಶಗಳು.

ತೌಲನಿಕ ವಿಧಾನ: ಈ ವಿಧಾನ ಅತ್ಯಂತ ಹಳೆಯದು. ಪ್ರಪಂಚದ ಇತಿಹಾಸದ ಘಟನೆಗಳನ್ನು ಪರಸ್ಪರ ಹೋಲಿಸುವುದರ ಮೂಲಕ ನಮಗೆ ಅವಶ್ಯವಾದ ತತ್ತ್ವಗಳನ್ನು ಪಡೆಯಬಹುದು. ಅಮೆರಿಕದ ಸಂಯುಕ್ತ ಸಂಸ್ಥಾನದಲ್ಲಿ ಗಣರಾಜ್ಯದ ಪ್ರಜಾಪ್ರಭುತ್ವ, ಬ್ರಿಟನಿನಲ್ಲಿ ಸಂವಿಧಾನಬದ್ಧ ರಾಜನಿರುವ ಪ್ರಜಾಪ್ರಭುತ್ವ–ಇವನ್ನು ಹೋಲಿಸಬಹುದು, ಹಲವು ಗಣರಾಜ್ಯಗಳಲ್ಲಿ ಅಧ್ಯಕ್ಷರಿಗಿರುವ ಅಧಿಕಾರ–ಹೊಣೆಗಳನ್ನು ಹೋಲಿಸಿ ನೋಡಬಹುದು. ಒಂದು ದೇಶದ ಸರಕಾರ ಸಫಲವಾಗಿದ್ದು ಮತ್ತೊಂದು ವಿಫಲವಾಗಿದ್ದರೆ, ಅವನ್ನು ಪರಸ್ಪರ ಹೋಲಿಸಿ ವಿಫಲತೆಯ ಕಾರಣಗಳನ್ನು ಕಂಡುಹಿಡಿಯಬಹುದು.

ಐತಿಹಾಸಿಕ ವಿಧಾನ: ಒಂದು ದೇಶದ ಸರಕಾರ ಎಲ್ಲ ಕಾಲದಲ್ಲಿಯೂ ಒಂದೇ ರೀತಿ ಇರುತ್ತದೆ ಎಂದು ಹೇಳಲಾಗುವುದಿಲ್ಲ. ಸಮಯ ಸಂದರ್ಭಗಳಿಗೆ ಅನುಗುಣವಾಗಿ ಅದು ಬದಲಾಗುತ್ತಲೇ ಇರುತ್ತದೆ. ಹಿಂದಿನ ಆಡಳಿತ ವಿಧಾನಗಳು, ಕಾನೂನುಗಳು ಇವುಗಳ ಸಿಂಹಾವಲೋಕನದಿಂದ ಇಂದಿನ ಸಮಸ್ಯೆಗೆ ಪರಿಹಾರವನ್ನು ಕಂಡುಕೊಳ್ಳಲು ಐತಿಹಾಸಿಕ ವಿಧಾನ ಬಹಳ ಸಹಾಯ ಮಾಡುತ್ತದೆ. ಹಿಂದೆ ಯಾವ ವಿಧಾನ ಯಶಸ್ವಿಯಾಯಿತು, ಯಾವುದು ವಿಫಲವಾಯಿತು, ಯಾವ ಕಾನೂನುಗಳ ಫಲ ಏನಾಯಿತು ಎಂಬುದನ್ನು ತಿಳಿದುಕೊಳ್ಳುವುದು ಇಂದಿನ ಸಮಸ್ಯೆಗಳನ್ನು ಬಿಡಿಸಲು ಸಹಕಾರಿ. ಹಿಂದಿನ ಅನುಭವವನ್ನು ಉಪಯೋಗಿಸಿಕೊಳ್ಳುವುದೇ ಇದರ ಗುರಿ. ಆದರೆ, ಐತಿಹಾಸಿಕ ವಿಧಾನವು ಒಳಿತು ಕೆಡುಕುಗಳ ವಿಚಾರವಾಗಿ ನೇರವಾಗಿ ಏನನ್ನೂ ಹೇಳುವುದಿಲ್ಲ, ಕೇವಲ ಸತ್ಯಸಂಗತಿಗಳ ನಿರೂಪಣೆಯನ್ನಷ್ಟೇ ಮಾಡುತ್ತದೆ–ಎಂದು ಅನೇಕರ ಆಕ್ಷೇಪ.

ಸಾದೃಶ್ಯ ವಿಧಾನ: ಇದನ್ನು ಅನುಸರಿಸುವವರು ರಾಜ್ಯವನ್ನು ಮಾನವ ದೇಹಕ್ಕೆ ಹೋಲಿಸಿ ರಾಜ್ಯವೂ ಒಂದು ಜೀವಿ ಎಂದು ವಾದಿಸಿದ್ದಾರೆ. ದೇಹಕ್ಕೆ ಜೀವಧಾರಣ ಸಾಮರ್ಥ್ಯ, ಕ್ರಮಬದ್ಧ ಗತಿ–ಇವು ಹೇಗಿವೆಯೋ ಅದೇ ರೀತಿ ರಾಜ್ಯವೂ ಸಹ ಜನನದಿಂದ ವಿಕಾಸ ಹೊಂದುತ್ತ ಹೋಗುತ್ತದೆ ಎಂದು ಇವರ ವಾದ. ಸಮಾಜವನ್ನು ದೇಹಕ್ಕೂ ಸರಕಾರವನ್ನು ಹೃದಯಕ್ಕೂ ಸಮಾಜದ ವಿವಿಧ ಭಾಗಗಳನ್ನು ಮೆದುಳು, ನರಗಳು, ರಕ್ತನಾಳಗಳು ಇವುಗಳಿಗೂ ಹೋಲಿಸುತ್ತಾರೆ. ಈ ಹೋಲಿಕೆಯನ್ನು ತುಂಬ ದೂರ ಒಯ್ಯಬಾರದು; ಸಮಾಜ ಎಲ್ಲ ರೀತಿಗಳಲ್ಲಿಯೂ ದೇಹದಂತಿದೆ ಎಂದು ಹೇಳುವಂತಿಲ.

ತಾತ್ವಿಕ ವಿಧಾನ: ಮನುಷ್ಯನ ಸ್ವಭಾವವನ್ನು ಅಭ್ಯಾಸಮಾಡಿ ಅವನ ಗುಣಗಳನ್ನೂ ಅವಶ್ಯತೆಗಳನ್ನೂ ಚರಿತ್ರೆಯ ಆಗುಹೋಗುಗಳಿಂದ ಸ್ಪಷ್ಟಪಡಿಸಿಕೊಳ್ಳುವುದು ಇಲ್ಲಿ ಮೊದಲನೆಯ ಹೆಜ್ಜೆ; ಅನಂತರ 'ಇಂಥ ಸ್ವಭಾವದ ಮನುಷ್ಯನಿಗೆ ಅತ್ಯುತ್ತಮ ಆಡಳಿತ ವಿಧಾನ ಯಾವುದು?' ಎಂದು ಪ್ರಶ್ನೆ ಮಾಡಿಕೊಂಡು ಉತ್ತರ ಕಂಡುಹಿಡಿಯಲು ಯತ್ನಿಸುವುದು ಎರಡನೆಯ ಹೆಜ್ಜೆ. ಮಾನವನ ಬದುಕಿನೊಡನೆ ಇಷ್ಟು ಸಮೀಪ ಸಂಬಂಧವನ್ನು ಹೊಂದಿರುವ ರಾಜ್ಯಶಾಸ್ತ್ರ ಅವನ ಬದುಕಿಗೆ ಹತ್ತಿರವಾದ ಇನ್ನೂ ಅನೇಕ ಶಾಸ್ತ್ರಗಳಿಗೂ ನಿಕಟ ಸಂಬಂಧವನ್ನು ಪಡೆದಿದೆ. ಸಾಮಾಜಿಕಶಾಸ್ತ್ರಗಳಲ್ಲಿ ರಾಜ್ಯಶಾಸ್ತ್ರವೂ ಒಂದು. ಇತರ ಸಾಮಾಜಿಕಶಾಸ್ತ್ರಗಳಾದ ಸಮಾಜಶಾಸ್ತ್ರ, ನೀತಿಶಾಸ್ತ್ರ, ಮನೋವಿಜ್ಞಾನ, ಅರ್ಥಶಾಸ್ತ್ರ, ಇತಿಹಾಸ—ಇವೆಲ್ಲದರ ಜೊತೆ ರಾಜ್ಯಶಾಸ್ತ್ರ ನಿಕಟ ಸಂಬಂಧ ಬೆಳೆಸಿದೆ. ಹೊರನೋಟಕ್ಕೆ ಬೇರೆ ಬೇರೆಯಾಗಿ ಕಂಡರೂ ಒಳಹೊಕ್ಕು ನೋಡಿದಾಗ ಅವುಗಳ ಪರಸ್ಪರ ಸಂಬಂಧ ಅನಿವಾರ್ಯ ಎಂಬುದು ಸ್ಪಷ್ಟವಾಗುತ್ತದೆ.

ಈಚೆಗೆ ರಾಜ್ಯಶಾಸ್ತ್ರದ ಅಧ್ಯಯನದಲ್ಲಿ ಕ್ರಾಂತಿಯಾಗಿದೆ. ಹೊಸ ಪಂಥಗಳು ಬಂದಿವೆ. ಜೆರಿಮಿ ಬೆನ್‌ಥಾಮ್ (1748–1832), ಜಾನ್ ಸ್ಟ್ಯುಅರ್ಟ್ ಮಿಲ್ (1806–73) ಮೊದಲಾದವರು ಪ್ರಯೋಜಕತಾವಾದವನ್ನು ಮುಂದಿಟ್ಟರು. ಇವರು ರಾಜ್ಯದ ಆಡಳಿತ ಹೀಗಿರಬೇಕು, ಹಾಗಿರಬೇಕು ಎಂದು ಆದರ್ಶಗಳನ್ನು ಮಾತ್ರ ಇಟ್ಟುಕೊಂಡವರಲ್ಲ; ಪ್ರತಿಯೊಂದು ಹೆಜ್ಜೆಯ ಪ್ರಯೋಜನವನ್ನು ಅಳೆದರು. 'ಅತ್ಯಂತ ಹೆಚ್ಚು ಜನರ ಅತ್ಯಂತ ಹೆಚ್ಚು ಸುಖ' ಆಡಳಿತದ ಗುರಿ ಎಂದು ಬೆನ್‌ಥಾಮ್ ಹೇಳಿದ. ಫ್ರಾನ್ಸಿನ ಲೆಆನ್ ಡ್ಯುಗುಇಟ್ (1859–1928) ನಂಥ ರಾಜ್ಯಶಾಸ್ತ್ರಜ್ಞರು ಮನುಷ್ಯ ಸಾಮಾಜಿಕ ಪ್ರಾಣಿ ಎನ್ನುವುದೇ ಶಾಸನದ ತಳಹದಿ ಎಂದರು; ಮನುಷ್ಯ ಒಬ್ಬನೇ ಇರಲಾರ, ಅವನು ಸಂಘಜೀವಿ, ಸಂಘದ ಒಗ್ಗಟ್ಟು ಅಗತ್ಯ; ಎಲ್ಲ ಸಂಪ್ರದಾಯಗಳೂ ಶಾಸನಗಳೂ ಸಮಾಜದ ಅಗತ್ಯಕ್ಕೆ ಹೊಂದಿಕೊಂಡಿರಬೇಕು ಎಂದು ವಾದಿಸಿದರು. ಕಾರ್ಲ್ ಮಾರ್ಕ್ಸ್ ಮತ್ತು ಅವನ ಪಂಥದವರು ದ್ವಂದ್ವಾತ್ಮಕ ಸಿದ್ಧಾಂತವನ್ನು ಬಳಸಿದರು. ಅವರ ಪ್ರಕಾರ ಪ್ರತಿ ಕಾಲಘಟ್ಟದಲ್ಲಿಯೂ ಎರಡು ಪರಸ್ಪರ ವಿರುದ್ಧ ಆರ್ಥಿಕ ಶಕ್ತಿಗಳ ಹೋರಾಟದಿಂದಲೇ ಪ್ರಗತಿಯಾಗಿದೆ. ಉದಾಹರಣೆಗೆ, ಪ್ರಾಚೀನ ಗ್ರೀಸಿನಲ್ಲಿ ಗುಲಾಮರು ಮತ್ತು ಮಾಲೀಕರ ನಡುವೆ ಘರ್ಷಣೆ. ಇಪ ತ್ತನೆಯ ಶತಮಾನ ಬಂಡವಾಳಗಾರರು ಮತ್ತು ಕಾರ್ಮಿಕರ ಘರ್ಷಣೆಯ ಯುಗ. ರಾಜ್ಯಶಾಸ್ತ್ರ ಈ ಹೋರಾಟಗಳನ್ನು ಅಧ್ಯಯನ ಮಾಡಬೇಕು; ಎಂದು ಇವರ ಮತ.

ನೋಡಿ: ಅರಿಸ್ಟಾಟಲ್; ಆಡಳಿತ ವಿಧಾನ, ಸಮಾಜವಿಜ್ಞಾನ; ಸರಕಾರ

## ರಾಧಾಕೃಷ್ಣನ್, ಸರ್ವಪಲ್ಲಿ

"ಹಿರಿಯರಿಂದ ಕಿರಿಯರಿಗೆ ಬರಬಹುದಾದ ಹುಟ್ಟಿನ ಹಿರಿಮೆಯನ್ನಾಗಲೀ ಸಂಪತ್ತಿನ ಸೊಬಗನ್ನಾಗಲೀ ನಾನು ನನ್ನ ಎಳೆತನದಲ್ಲಿ ಕಾಣಲಿಲ್ಲ. ನಾನು ನಾನಾಗಿಯೇ ಬಾಳಿದೆ, ನಾನಾಗಿಯೇ ಬೆಳೆದೆ; ದೇವರ ದಯೆಯಿಂದ ಮಾತ್ರ ಬೆಳಕು ಕಂಡೆ."

—ಇದು ಭಾರತದ ಎರಡನೆಯ ರಾಷ್ಟ್ರಪತಿಯಾಗಿದ್ದ ಜಗತ್ತಿನ ಖ್ಯಾತವಂತ ತತ್ತ್ವಶಾಸ್ತ್ರಜ್ಞ ರಾಧಾಕೃಷ್ಣನ್ ತಮ್ಮ ಜೀವನದ ವೈಖರಿಯನ್ನು ತಾವೇ ವರ್ಣಿಸಿರುವ ರೀತಿ.

1888ರ ಸೆಪ್ಟೆಂಬರ್ 5 ರಂದು ಚಿತ್ತೂರ್ ಜಿಲ್ಲೆಯ ತಿರುತನಿ ಪವಿತ್ರ ಕ್ಷೇತ್ರದಲ್ಲಿ ಹುಟ್ಟಿದರು. ಸರ್ವಪಲ್ಲಿ ಇವರ ಮನೆತನದ ಹೆಸರು. ಬಾಲ್ಯದಿಂದಲೂ ದೈವಾರಾಧನೆಯಲ್ಲಿ, ಅಧ್ಯಾತ್ಮದಲ್ಲಿ ರಾಧಾಕೃಷ್ಣರಿಗೆ ಒಲವು. ಆಟಗಳಲ್ಲಿ ಎಂದೂ ಹೆಚ್ಚು ಆಸಕ್ತಿ ಇರಲಿಲ್ಲ. ಗೆಳೆಯರೂ ಕಡಮೆ. ಬಾಲ್ಯದಿಂದಲೂ ಪುಸ್ತಕಗಳೇ ಅವರ ಎಡೆಬಿಡದ ಒಡನಾಡಿಗಳು. ಓದುವುದು, ಓದಿದ್ದನ್ನು ವಿಚಾರ ಮಾಡುವುದು ಇದರಲ್ಲಿಯೇ ಇಡೀ ದಿನವೆಲ್ಲ ಕಳೆದು ಹೋಗುತ್ತಿತ್ತು.

ಎಂಟು ವರ್ಷಗಳ ಕಾಲ ಕ್ರೈಸ್ತಸೇವಾ ಸಂಘದ ಶಾಲೆಯಲ್ಲಿ ಕಲಿತು ಅನಂತರ ಮದರಾಸಿನ ಕ್ರಿಶ್ಚಿಯನ್ ಕಾಲೇಜನ್ನು ಸೇರಿದರು. ಅಲ್ಲಿ ಅವರ ವಿದ್ವತ್ತಿಗೆ ಮೆರುಗು ದೊರೆಯಿತು. ಎಂ. ಎ. ಪದವೀಧರರಾದ ಮೇಲೆ ರಾಧಾಕೃಷ್ಣನ್ನರು ಭಾರತದಲ್ಲಿ ಅನೇಕ ಹಿರಿಯ ಸ್ಥಾನಗಳಲ್ಲಿದ್ದರು. ಮೈಸೂರು, ಕಲ್ಕತ್ತ ವಿಶ್ವವಿದ್ಯಾನಿಲಯಗಳಲ್ಲಿ ತತ್ತ್ವಶಾಸ್ತ್ರದ ಪ್ರಾಧ್ಯಾಪಕರಾಗಿದ್ದರು. ವಿವಿಧ ವಿಶ್ವವಿದ್ಯಾನಿಲಯಗಳಲ್ಲಿ ಮುಖ್ಯ ಸ್ಥಾನಗಳಲ್ಲಿ ಸೇವೆ ಸಲ್ಲಿಸಿದರು. ಆಂಧ್ರ ವಿಶ್ವವಿದ್ಯಾನಿಲಯದಲ್ಲಿ 1931–36ರ ಅವಧಿಯಲ್ಲಿ, ಬನಾರಸ್ ಹಿಂದೂ ವಿಶ್ವವಿದ್ಯಾನಿಲಯದಲ್ಲಿ 1939–48ರ ಅವಧಿಯಲ್ಲಿ, ಉಪಕುಲಪತಿಯಾಗಿದ್ದರು. ದೆಹಲಿ ವಿಶ್ವವಿದ್ಯಾನಿಲಯದಲ್ಲಿ 1953-62ರ ಅವಧಿಯಲ್ಲಿ ಕುಲಪತಿಯಾಗಿದ್ದರು.

ರಾಧಾಕೃಷ್ಣನ್ ಅವರ ವಿದ್ವತ್ತಿನ ಖ್ಯಾತಿ ಭಾರತದಾಚೆ ಹರಡಿದೆ. ಪಾಶ್ಚಾತ್ಯ ಜಗತ್ತಿನ ಹಿರಿಯ ವಿಶ್ವವಿದ್ಯಾನಿಲಯಗಳಲ್ಲಿ ಒಂದಾದ ಆಕ್ಸ್‌ಫರ್ಡ್‌ನಲ್ಲಿ ಅವರು ಪೌರಸ್ತ್ಯ ಧರ್ಮಗಳು ಮತ್ತು ನೀತಿಶಾಸ್ತ್ರದ ಪ್ರಾಧ್ಯಾಪಕರಾಗಿದ್ದರು. 1946ರಿಂದ 1952ರ ವರೆಗೆ ಯುನೆಸ್ಕೊದಲ್ಲಿ ಭಾರತ ನಿಯೋಗದ ಮುಖಂಡರಾಗಿದ್ದರು. 1949ರಿಂದ 1952ರ ವರೆಗೆ ಸೋವಿಯೆತ್ ರಷ್ಯದಲ್ಲಿ ಭಾರತದ ರಾಯಭಾರಿಯಾಗಿದ್ದರು.

1952ರಲ್ಲಿ ಭಾರತಕ್ಕೆ ಹಿಂದಿರುಗಿದಾಗ ಭಾರತದ ಉಪ-ರಾಷ್ಟ್ರಾಧ್ಯಕ್ಷರಾಗಿ ಆಯ್ಕೆಯಾದರು. 1962ರ ಮೇ 11ರಂದು ರಾಷ್ಟ್ರಾಧ್ಯಕ್ಷರಾಗಿ ಚುನಾಯಿತರಾಗಿ ಐದು ವರ್ಷಗಳ ಅನಂತರ 1967ರಲ್ಲಿ ನಿವೃತ್ತರಾದರು.

ರಾಧಾಕೃಷ್ಣನ್ ಅವರ ತತ್ತ್ವಶಾಸ್ತ್ರ ಪಾಂಡಿತ್ಯ ಆಳವಾದದ್ದು. ಭಾರತೀಯ ತತ್ತ್ವಶಾಸ್ತ್ರದ ತಿರುಳನ್ನು ಕರಗತ ಮಾಡಿಕೊಂಡಿರುವ ಅವರಿಗೆ ಪಾಶ್ಚಾತ್ಯ ತತ್ತ್ವಶಾಸ್ತ್ರವೂ ಚೆನ್ನಾಗಿ ತಿಳಿದಿದೆ. ಪೂರ್ವ ಮತ್ತು ಪಶ್ಚಿಮ ದೇಶಗಳ ತತ್ತ್ವಶಾಸ್ತ್ರದ ಸಾರವನ್ನು ನಾವು ಅವರ ಬರಹದಲ್ಲಿ ಕಾಣಬಹುದು. ಭಾರತೀಯ ತತ್ತ್ವಶಾಸ್ತ್ರದ ನಿರೂಪಣೆ ಅವರ ಸಾಧನೆ. ಹಿಂದೂ ಧರ್ಮವನ್ನು ಜಗತ್ತಿನ ಇತರ ಧರ್ಮಗಳೊಂದಿಗೆ ಹೋಲಿಸಿ, ವಿದ್ವತ್ಪೂರ್ಣವೂ ಸ್ಪಷ್ಟವೂ ಸತ್ವಯುತವೂ ಆದ ಭಾಷೆಯಲ್ಲಿ ಆ ಧರ್ಮವನ್ನೂ ಭಾರತದ ಸಂಸ್ಕೃತಿಯನ್ನೂ ಪಾಶ್ಚಾತ್ಯ ಜಗತ್ತಿಗೆ ಪರಿಚಯ ಮಾಡಿಕೊಟ್ಟ ಕೀರ್ತಿ ರಾಧಾಕೃಷ್ಣನ್ ಅವರದು. ಇಂಗ್ಲಿಷ್ ಭಾಷೆಯ ಮೇಲಿನ ಅವರ ಪ್ರಭುತ್ವ ಆಂಗ್ಲರನ್ನೂ ಬೆರಗುಗೊಳಿಸುವಂಥದು.

ರಾಧಾಕೃಷ್ಣನ್ ಶ್ರೇಷ್ಠ ಬರಹಗಾರರು. 'ಭಾರತೀಯ ತತ್ತ್ವಜ್ಞಾನ' –ಎರಡು ಸಂಪುಟಗಳು, 'ಉಪನಿಷತ್ತಿನ ತತ್ತ್ವಜ್ಞಾನ', 'ಆದರ್ಶವಾದಿಯ ಜೀವನ ದೃಷ್ಟಿ'. 'ಪೌರಸ್ತ್ಯ ಧರ್ಮಗಳು ಮತ್ತು ಪಾಶ್ಚಾತ್ಯ ಆಲೋಚನೆ' ಇವು ಅವರ ಪ್ರಮುಖ ಕೃತಿಗಳು.

ಬರಹದಲ್ಲಿ ಹೇಗೋ ಹಾಗೆಯೇ ಭಾಷಣ ಕಲೆಯಲ್ಲೂ ರಾಧಾಕೃಷ್ಣನ್ ನಿಸ್ಸೀಮರು. ಅವರ ವಾಗ್ಮಿತೆಗೆ ಮಾರುಹೋಗದವರಿಲ್ಲ.



ಶ್ರೇಷ್ಠ ಶಿಕ್ಷಕ, ತತ್ತ್ವಜ್ಞಾನಿ ರಾಧಾಕೃಷ್ಣನ್

ಶ್ರೇಷ್ಠ ಶಿಕ್ಷಕರೂ ತತ್ತ್ವಜ್ಞಾನಿಯೂ ಆದ ರಾಧಾಕೃಷ್ಣನ್ ಸ್ವತಂತ್ರ ಭಾರತದ ಅಧ್ಯಕ್ಷರಾದದ್ದು ಅತ್ಯಂತ ಉಚಿತವಾಗಿತ್ತು. ಈ ಆದರ್ಶ ಶಿಕ್ಷಕನ ಜನ್ಮದಿನವನ್ನು ಭಾರತವಲ್ಲಿ 'ಶಿಕ್ಷಕರ ದಿನ' ಎಂದು ಆಚರಿಸುತ್ತಾರೆ.

ಮೈಸೂರು ವಿಶ್ವವಿದ್ಯಾನಿಲಯದ ಕ್ಷೇತ್ರವಾದ ಮಾನಸಗಂಗೋತ್ರಿಗೆ ಹೋಗುವ ರಸ್ತೆಗೆ 'ರಾಧಾಕೃಷ್ಣನ್ ಮಾರ್ಗ' ಎಂದು ಹೆಸರಿಟ್ಟು, ಒಂದು ಕಾಲದಲ್ಲಿ ತನ್ನಲ್ಲೇ ರಾಧಾಕೃಷ್ಣನ್ ಪ್ರಾಧ್ಯಾಪಕರಾಗಿದ್ದ ಸವಿನೆನಪನ್ನು ಮೈಸೂರು ವಿಶ್ವವಿದ್ಯಾನಿಲಯ ಚಿರಸ್ಥಾಯಿಗೊಳಿಸಿದೆ.

## ರಾಮಕೃಷ್ಣ ಪರಮಹಂಸ

ಬಂಗಾಳದ ಕಾಮಾರಪುಕುರವೆಂಬ ಹಳ್ಳಿಯಲ್ಲಿ 1836ನೇ ಫೆಬ್ರವರಿ 18ರಂದು ರಾಮಕೃಷ್ಣ ಪರಮಹಂಸರು ಹುಟ್ಟಿದರು. ತಂದೆ ಖುದಿರಾಮ ಚಟ್ಟೋಪಾಧ್ಯಾಯ. ತಾಯಿ ಚಂದ್ರಮಣಿ. ರಾಮಕೃಷ್ಣರಿಗೆ ಹೆತ್ತವರು ಇಟ್ಟ ಹೆಸರು ಗದಾಧರ. ರಾಮಕೃಷ್ಣ ಎಂದೂ ಕರೆಯುತ್ತಿದ್ದರು.

ಗದಾಧರನ ಎಳನೆಯ ವಯಸ್ಸಿನಲ್ಲೇ ಆತನ ತಂದೆ ತೀರಿಕೊಂಡರು. ಗದಾಧರನಿಗೆ ಶಾಲೆ ಎಂದರೆ ನಿರಾಸಕ್ತಿ. ಅವನ ಆಸಕ್ತಿ ದೇವರ ಧ್ಯಾನದಲ್ಲಿ,



ಸರ್ವಧರ್ಮ ಸಮನ್ವಯ ಸಾಧಿಸಿದ ಪರಮಹಂಸರು

ಭಜನೆಗಳಲ್ಲಿ. ರಾಣಿ ರಾಸಮಣಿ ಎನ್ನುವ ಐಶ್ವರ್ಯವಂತೆ ದಕ್ಷಿಣೇಶ್ವರದಲ್ಲಿ ಕಟ್ಟಿಸಿದ ಭವತಾರಿಣಿದೇವಿಯ ಮಂದಿರದಲ್ಲಿ ಗದಾಧರ ಅರ್ಚಕರಾದರು. ಅವರ ಪೂಜಾ ವಿಧಾನ ವಿಶಿಷ್ಟವಾಗಿತ್ತು. ಅವರು ಕಲ್ಲಿನ ವಿಗ್ರಹವನ್ನು ತಾಯಿಯೆಂದೇ ಪೂಜೆ ಮಾಡುತ್ತಿದ್ದರು. ರಾಮಕೃಷ್ಣರಿಗೆ ದೇವರನ್ನು ನೋಡಬೇಕೆಂಬ ಹುಚ್ಚೇ ಹಿಡಿಯಿತು. ದೇವರ ಹುಚ್ಚು ಹೆಚ್ಚಾದ ಹಾಗೆ ಪೂಜೆಯೂ ಹೆಚ್ಚಾಯಿತು. ಪೂಜಾರಿ ಹುಚ್ಚನೆಂದು ಭಕ್ತರು ದೂರಿದರು. ಆದರೆ ರಾಸಮಣಿ ತಾನೇ ಬಂದು ರಾಮಕೃಷ್ಣರು ಎಂಥ ಭಗವದ್ಭಕ್ತರೆಂದು ತಿಳಿದುಕೊಂಡಳು.

ಮಗ ಹುಚ್ಚ ಎನ್ನುವುದನ್ನು ಕೇಳಿದ ತಾಯಿ ಆತನನ್ನು ಸ್ವಗ್ರಾಮಕ್ಕೆ ಕರೆದೊಯ್ದು ಮದುವೆ ಮಾಡಿಸಿದರು. ಮದುವೆಯಾದಾಗ ರಾಮಕೃಷ್ಣರಿಗೆ ಇಪ್ಪತ್ಮೂರು ವರ್ಷ, ಅವರ ಹೆಂಡತಿ ಶಾರದಾಮಣಿದೇವಿಗೆ ಐದು ವರ್ಷ.

ರಾಮಕೃಷ್ಣರು ದಕ್ಷಿಣೇಶ್ವರಕ್ಕೆ ವಾಪಸು ಬಂದಮೇಲೂ ಅವರಿಗೆ ದೇವರದೇ ಧ್ಯಾನವಾಯಿತು. ಅವರಿಗೆ ಭೈರವಿ ಬ್ರಾಹ್ಮಣಿ ಎಂಬಾಕೆಯೂ ತೋತಾಪುರಿ ಎಂಬ ಸನ್ಯಾಸಿಯೂ ಗುರುಗಳಾಗಿ ಬಂದು ಸಾಧನೆಯ ಮಾರ್ಗವನ್ನು ತೋರಿಸಿದರು. ತಮ್ಮ ಸಾಧನೆಯಿಂದ ಭವತಾರಿಣಿ ಕಾಳಿಮಾತೆ, ಶ್ರೀರಾಮ ಇವರನ್ನು ಅಲ್ಲದೆ ಮಹಮ್ಮದೀಯರ ಅಲ್ಲಾಹ್ ಹಾಗೂ ಕ್ರೈಸ್ತರ ಕ್ರಿಸ್ತನನ್ನು ಸಾಕ್ಷಾತ್ಕಾರ ಮಾಡಿಕೊಂಡ ಅನುಭವ ರಾಮಕೃಷ್ಣರಿಗಾಯಿತು. ದೇವರು ಒಬ್ಬನೇ, ಎಲ್ಲ ಧರ್ಮಗಳೂ ಅದೇ ದೇವರ ಬಳಿಗೆ ಕರೆದೊಯ್ಯುತ್ತವೆ ಎಂದು ಮನಗಂಡರು.



ರಾಮಕೃಷ್ಣರ ಸಾಧನೆಗೆ, ಪೂಜೆಗೆ, ಜೀವನದ ರೀತಿಗೆ ಶಾರದಾದೇವಿ ಸರ್ವ ವಿಧದಲ್ಲೂ ನೆರವಾದರು. ರಾಮಕೃಷ್ಣರು ಶಾರದಾದೇವಿಯನ್ನು ಕೂಡಿಸಿ ಜಗನ್ಮಾತೆಯನ್ನು ಪೂಜಿಸುವ ಹಾಗೆ ಪೂಜಿಸಿದರು.

ಶಿಷ್ಯರಿಗೆ ಅವರಿಬ್ಬರೂ ತಂದೆ ತಾಯಿ ಆದರು. ಅವರನ್ನು ಕಾಣಲೆಂದು ಮತ್ತು ಭವತಾರಿಣಿಯ ದರ್ಶನಕ್ಕೆಂದು ಸಾವಿರಾರು ಮಂದಿ ದಕ್ಷಿಣೇಶ್ವರಕ್ಕೆ ಬರಲಾರಂಭಿಸಿದರು.

ಹಾಗೆ ಬಂದವರಲ್ಲಿ ಮುಂದೆ ವಿವೇಕಾನಂದರೆಂದು ಪ್ರಸಿದ್ಧರಾದ ನರೇಂದ್ರರೂ ಒಬ್ಬರು. ದೇವರಿಲ್ಲವೆಂದು ವಾದಿಸಲು ಬಂದ ನರೇಂದ್ರ ರಾಮಕೃಷ್ಣರ ಪಟ್ಟ ಶಿಷ್ಯರಾದರು ; ರಾಮಕೃಷ್ಣರ ಉಪದೇಶವನ್ನು ದೇಶ ವಿದೇಶಗಳಲ್ಲೆಲ್ಲಾ ಸಾರಿದರು. ರಾಮಕೃಷ್ಣರು ವಾಗ್ಮಿಗಳಲ್ಲ. ಆಡಂಭ ಮಾಡಲಿಲ್ಲ. ತಮ್ಮ ನಿರ್ಮಲ ಹೃದಯದಿಂದ, ಎಲ್ಲರಿಗೂ ಅರ್ಥವಾಗುವಂಥ ಮಾತುಗಳಿಂದ, ಸುಲಭ ಕಥೆಗಳಿಂದ, ಪ್ರೇಮದಿಂದ, ಅನುಕಂಪನದಿಂದ ಎಲ್ಲರ ಮನಸ್ಸನ್ನೂ ಸೆಳೆಯುತ್ತಿದ್ದರು. ತಮ್ಮ ಬಳಿಗೆ ಬಂದವರ ಕಷ್ಟಗಳನ್ನು ವಿಚಾರಿಸಿ ಶಾಂತಿಯ ದಾರಿ ತೋರಿಸುತ್ತಿದ್ದರು.

1886 ಆಗಸ್ಟ್ 15ರಂದು ರಾಮಕೃಷ್ಣರು ಗಂಟಲು ವ್ಯಾಧಿಯಿಂದ ಕಣ್ಮರೆಯಾದರು.

ಲಕ್ಷಾಂತರ ಜನರಿಗೆ ಮಾರ್ಗದರ್ಶಿಯಾಗಿ ಭಗವಂತನ ಕಡೆ ಮನಸ್ಸನ್ನು ಹರಿಸುವಂತೆ ಮಾಡಿದ ಮಹಾ ಪುರುಷ ಶ್ರೀ ರಾಮಕೃಷ್ಣ ಪರಮಹಂಸರು. ಎಲ್ಲ ಮತಗಳೂ ಒಂದೇ ಎನ್ನುವುದನ್ನು ಅವರು ಆಚರಣೆಯಲ್ಲಿ ತಂದು, ಎಲ್ಲ ಮತಗಳ ಮೂಲಕವೂ ದೇವರನ್ನು ಕಂಡು, ಸರ್ವಧರ್ಮ ಸಮನ್ವಯ ಸಾಧಿಸಿದರು.

ನೋಡಿ : ವಿವೇಕಾನಂದ

ವಿವರ : ಏಳನೆಯ ಸಂಪುಟ

## ರಾಮಾನುಜಾಚಾರ್ಯರು

ಮುಸಲ್ಮಾನ ಅರಸನ ಬಳಿ ಹಿಂದೂ ದೇವರ ವಿಗ್ರಹ! ಅದನ್ನು ಬಿಟ್ಟಿರಲಾರೆ ಎಂದು ಅರಸುಕುವರಿ. ಕನಸಿನಲ್ಲಿ ದೇವರು ತಿಳಿಸಿದಂತೆ ಓರ್ವ ಧರ್ಮಗುರು ವಿಗ್ರಹವನ್ನು ಪಡೆಯುವುದು; ಅದನ್ನೇ ಹಿಂಬಾಲಿಸಿಕೊಂಡು ಬಂದು ಮುಸಲ್ಮಾನ ರಾಜಪುತ್ರಿ ಅವರ ಸೇವೆಯಲ್ಲೇ ಕಣ್ಮರೆಯಾಗುವುದು. ಹಿಂದೂಗಳ ಯಾತ್ರಾಸ್ಥಳದಲ್ಲಿ ಮುಸಲ್ಮಾನ ಯುವತಿಯ ಮೂರ್ತಿ! ಎಂಥ ಸೋಜಿಗದ ಕಥೆ.

ಮೇಲುಕೋಟೆ. ಮೈಸೂರು ರಾಜ್ಯದಲ್ಲಿ ಪ್ರಸಿದ್ಧ ಯಾತ್ರಾಸ್ಥಳ. ಅಲ್ಲಿನ ಚೆಲುವನಾರಾಯಣ ಸ್ವಾಮಿಯನ್ನು ಪ್ರತಿಷ್ಠೆ ಮಾಡಿದವರು ಧರ್ಮಗುರು ರಾಮಾನುಜಾಚಾರ್ಯರು. ವಿಗ್ರಹವನ್ನು ರಾಮಾನುಜಾಚಾರ್ಯರು ದೆಹಲಿಯ ಸುಲ್ತಾನನಿಂದ ಪಡೆದರೆಂದು ನಂಬಿಕೆಯಿದೆ. ಕನಸಿನಲ್ಲಿ ನಾರಾಯಣ ದೇವರು ಹೇಳಿದಂತೆ ತಮಗೆ ಬೇಕಾದ ರಾಮಪ್ರಿಯ ವಿಗ್ರಹವನ್ನು ರಾಮಾನುಜರು ಅರಿಸಿ ಸುಲ್ತಾನನಿಂದ ಪಡೆದರು: ಸುಲ್ತಾನನ ಮಗಳು ಬೀಬಿ ನಾಚ್ಚಿಯಾರ್ ಆ ವಿಗ್ರಹವನ್ನು ಪ್ರೀತಿಸುತ್ತಿದ್ದಳು : ಅದನ್ನು ಬಿಟ್ಟಿರಲಾರದೆ ಮೇಲುಕೋಟೆಗೆ ಬಂದಳು : ಅಲ್ಲಿಯೇ ದೇವರಲ್ಲಿ ಐಕ್ಯಳಾದಳು ಎಂದು ಹೇಳುತ್ತಾರೆ. ಬೀಬಿ ನಾಚ್ಚಿಯಾರಳ ಮೂರ್ತಿಯನ್ನು ಮೇಲುಕೋಟೆಯಲ್ಲಿ ಕಾಣಬಹುದು.

ರಾಮಾನುಜಾಚಾರ್ಯರು 1017ರಲ್ಲಿ ಪೆರಂಬುದೂರಿನಲ್ಲಿ ಹುಟ್ಟಿದರು. ತಂದೆ ಆಸುರಿಕೇಶವರು. ತಾಯಿ ಭೂದೇವಿ. ರಾಮಾನುಜರು ಶ್ರೀಶೈಲ ಪೂರ್ಣರ ಆಶ್ರಯದಲ್ಲಿ ವಿದ್ಯಾಭ್ಯಾಸ ಮಾಡಿದರು. ಮೊದಲಿನಿಂದಲೂ ವೈಷ್ಣವ ಧರ್ಮದ ಪ್ರಭಾವ ಇವರ ಮೇಲಿತ್ತು. ಭಕ್ತಿಮಾರ್ಗ ಇವರನ್ನು ಬಹಳವಾಗಿ ಆಕರ್ಷಿಸಿತ್ತು. ರಾಮಾನುಜರು ಕಂಚಿಯ ದೇವರಾಜ ಪೆರುಮಾಳ್ ಗುಡಿಯಲ್ಲಿ ಸೇವಕರಾಗಿ ಕೆಲಸ ಮಾಡಿದರು.

ಅನಂತರ ರಾಮಾನುಜರಿಗೆ ಅವರ ಗುರುಗಳಿಂದ ಅಷ್ಟಾಕ್ಷರೀ ಮಂತ್ರದ ಉಪದೇಶವಾಯಿತು. ಅರ್ಹತೆಯನ್ನು ಪರೀಕ್ಷಿಸಿ ಆ ಮಂತ್ರವನ್ನು ಇತರರಿಗೆ ಹೇಳಿಕೊಡಬೇಕೆಂದೂ ಆ ಮಂತ್ರದಿಂದ ಮುಕ್ತಿ ದೊರೆಯುತ್ತದೆಂದೂ ಗುರುಗಳು ಶ್ರೀ ರಾಮಾನುಜರಿಗೆ ಹೇಳಿದರು. ಎಲ್ಲರೂ ತಮ್ಮವರೇ, ಎಲ್ಲರಿಗೂ ಮುಕ್ತಿ ದೊರಕಲಿ ಎಂದು ರಾಮಾನುಜರು ತಿರುಕ್ಕೋಟಿಯೂರಿನ ನರಸಿಂಹಸ್ವಾಮಿಯ ದೇವಾಲಯದ ಗೋಪುರದಿಂದ ಮಂತ್ರವನ್ನು ಉಪದೇಶಿಸಿದರು.

ತಮ್ಮ ಮೂವತ್ತನೆಯ ವಯಸ್ಸಿನಲ್ಲಿ ಸನ್ಯಾಸಿಯಾದ ರಾಮಾನುಜರು ಶ್ರೀರಂಗದಲ್ಲಿ ಯಾಮುನಾಚಾರ್ಯರ ಪೀಠಕ್ಕೆ ಬಂದರು. ಆಗ ಕೆಲವು ಗ್ರಂಥಗಳನ್ನು ಬರೆದರು.

ರಾಮಾನುಜರು ವಿಶಿಷ್ಟಾದ್ವೈತ ಮತ ಪ್ರಚಾರಕ್ಕಾಗಿ ಭಾರತದಲ್ಲೆಲ್ಲ ಸಂಚಾರ ಮಾಡಿದರು. ಹೊಯ್ಸಳ ರಾಜ್ಯದಲ್ಲಿ ಇಪ್ಪತ್ತು ವರ್ಷಗಳಿದ್ದರು. ಚೋಳ ದೇಶದ ರಾಜ ವಿಕ್ರಮ ಚೋಳನಿಂದ ರಾಮಾನುಜಾಚಾರ್ಯರಿಗೆ ಅಪಾಯವಿತ್ತು : ಇದರಿಂದ ಅವರು ದ್ವಾರಸಮುದ್ರದ ವಿಠಲ ದೇವರಾಯ (ಬಿಟ್ಟಿದೇವ) ನ ಆಸ್ಥಾನಕ್ಕೆ ಬಂದರು ಎಂದು ಕೆಲವರ ಅಭಿಪ್ರಾಯ. ಬಿಟ್ಟಿದೇವ, ಆಚಾರ್ಯರು ಪ್ರಚಾರ ಮಾಡಿದ ಶ್ರೀವೈಷ್ಣವ ಪಂಥವನ್ನು ಸ್ವೀಕರಿಸಿದ (1098); ವಿಷ್ಣುವರ್ಧನ ಎನ್ನುವ ಹೆಸರನ್ನು ಪಡೆದ.

ರಾಮಾನುಜರು ಶ್ರೀರಂಗಕ್ಕೆ ಮರಳಿ ಹೋಗಿ ಅಲ್ಲಿ 1137ರಲ್ಲಿ, ತಮ್ಮ ನೂರಿಪ್ಪತ್ತನೆಯ ವರ್ಷದಲ್ಲಿ ಮುಕ್ತರಾದರು.

ಶ್ರೀವೈಷ್ಣವ ಮತ ಎಂದು ಹೆಸರು ಬರಲು ಎರಡು ಕಾರಣಗಳಿವೆ. ಮೊದಲನೆಯದಾಗಿ ಇಲ್ಲಿ ಸಲ್ಲತಕ್ಕ ಪೂಜೆಯೆಲ್ಲ ವಿಷ್ಣುವಿಗೆ. ವಿಷ್ಣುವೇ ಪರಮಾತ್ಮ. ಎರಡನೆಯದಾಗಿ 'ಶ್ರೀ' ಅಥವಾ ಲಕ್ಷ್ಮಿಯನ್ನು ಬಿಟ್ಟು ವಿಷ್ಣುವಿಲ್ಲ. ಶ್ರೀವೈಷ್ಣವರಲ್ಲಿ 'ಶ್ರೀ' ಅಥವಾ ಲಕ್ಷ್ಮಿಗೆ ಅಗ್ರಸ್ಥಾನ. ಮಾನವರ ಮೊದಲ ಗುರು ಆಕೆ. ಅಲ್ಲದೆ ಪರಮ ಕೃಪಾಮಯಿ. ಲಕ್ಷ್ಮೀದೇವಿ ಸಹಿತನಾದ ವಿಷ್ಣುವಿನ ಭಕ್ತರಿಗೆ ಶ್ರೀವೈಷ್ಣವರೆಂದು ಹೆಸರಾಯಿತು.

ರಾಮಾನುಜರು ಬೋಧಿಸಿದ ಧರ್ಮಕ್ಕೆ ವಿಶಿಷ್ಟಾದ್ವೈತವೆಂದು ಹೆಸರು. ಶ್ರೀ ಶಂಕರಾಚಾರ್ಯರು ಬೋಧಿಸಿದ್ದು ಅದ್ವೈತ. ಅದ್ವೈತದಲ್ಲಿ ಯಾವ ಗುಣಗಳೂ ಇಲ್ಲದ ನಿರ್ಗುಣ ಬ್ರಹ್ಮದ ತತ್ತ್ವವನ್ನು ಹೇಳಲಾಗಿದೆ. ಆದರೆ ವಿಶಿಷ್ಟಾದ್ವೈತದಲ್ಲಿ ಸಗುಣೇಶ್ವರನ ಉಪಾಸನೆಯನ್ನು ಹೇಳಿದೆ–ಎಂದರೆ ದೇವರಿಗೆ ಅನಂತ ಕಲ್ಯಾಣ ಗುಣಗಳಿವೆ ; ದೇವರಿಗಿರುವ ಕಲ್ಯಾಣಗುಣಗಳು (ಒಳ್ಳೆಯ ಗುಣಗಳು) ಅನೇಕವಾದರೂ ಅವುಗಳಲ್ಲಿ ಮುಖ್ಯವಾದುವು ಸತ್ಯ, ಸೌಶೀಲ್ಯ ಮತ್ತು ಸೌಂದರ್ಯ. ಜೀವ ಮತ್ತು ಜಗತ್ತುಗಳಿಂದ ವಿಶಿಷ್ಟನಾದ ಬ್ರಹ್ಮನ ಅದ್ವೈತವನ್ನು ಬೋಧಿಸಿದ ಧರ್ಮ ವಿಶಿಷ್ಟಾದ್ವೈತ. ವೈಷ್ಣವ ಸಂಪ್ರದಾಯವೂ ವಿಷ್ಣು ದೇವಾಲಯಗಳೂ ಬಹಳ ಹಿಂದಿನಿಂದ ಇದ್ದರೂ ವಿಶಿಷ್ಟಾದ್ವೈತವನ್ನು ವಿಶೇಷವಾಗಿ ಪ್ರಚಾರ ಮಾಡಿದವರು ರಾಮಾನುಜಾಚಾರ್ಯರು.



ಭಕ್ತಿಮಾರ್ಗ ತೋರಿಸಿದ ರಾಮಾನುಜಾಚಾರ್ಯರು

ಮೋಕ್ಷವನ್ನು ಪಡೆಯಲು ಮತ್ತು ದೇವರನ್ನು ಸೇರಲು ಭಕ್ತಿಮಾರ್ಗವೇ ಅತ್ಯುತ್ತಮ ಮಾರ್ಗ ಎಂದು ಅವರು ಸಾರಿದರು. ದೇವರನ್ನು ಎಲ್ಲಿಯೋ ದೂರದಲ್ಲಿರುವ ಶಕ್ತಿ ಎಂದು ಭಾವಿಸದೆ, ನಾವು ಕರೆದರೆ ಬರುವ ತಂದೆಯಂತೆ, ತಾಯಿಯಂತೆ, ಸ್ನೇಹಿತನಂತೆ ಭಾವಿಸಬೇಕು ; ದೇವರು ಅತ್ಯಂತ ದಯಾಮಯ ; ನಾವು ಭಕ್ತಿಯಿಂದ ಕರೆದರೆ ಬಂದೇ ಬರುತ್ತಾನೆ; ನಿಜವಾದ ಭಕ್ತರ ಯೋಗಕ್ಷೇಮ ನೋಡಿಕೊಳ್ಳುತ್ತಾನೆ ಎಂದು ಬೋಧಿಸಿದರು. ದೇವರು ಪ್ರೇಮಮೂರ್ತಿ ಎಂದು ಹೇಳಿದರು. ಪ್ರಪಂಚದ ಸುಖಕ್ಕೆ ಆಸೆ ಪಡಬಾರದು, ಗುರುಗಳು ಮತ್ತು ಆಚಾರ್ಯರ ಸೇವೆಯಿಂದ ಭಗವಂತನನ್ನು ಕಾಣಬಹುದು ಎಂದು ಉಪದೇಶಿಸಿದರು.

ರಾಮಾನುಜಾಚಾರ್ಯರು ಜಾತಿಭೇದವಿಲ್ಲದೆ ಎಲ್ಲರಿಗೂ ಬೋಧಿಸಿದರು. ಎಲ್ಲರನ್ನೂ ತಮ್ಮ ಮತಕ್ಕೆ ಸೇರಿಸಿಕೊಂಡರು. ಹಿಂದುಳಿದವರನ್ನು ಬಹಳ ಮಮತೆಯಿಂದ, ಪ್ರೇಮದಿಂದ ಕಂಡು ಅವರಿಗೆ ಭಕ್ತಿಮಾರ್ಗ ತೋರಿಸಿದರು.

## ರಾಯಭಾರಿ

ಅಜಂತದ ಗುಹೆಯೊಂದರಲ್ಲಿ ಕಣ್ಣನ್ನು [illegible]
ಕನ್ನಡನಾಡಿನ ಮಹಾ ಪುರುಷರಲ್ಲಿ [illegible]



ಪುಲಿಕೇಶಿಯ ಆಸ್ಥಾನದಲ್ಲಿ ಇರಾನಿನ ರಾಯಭಾರಿ

ಆಸ್ಥಾನದಲ್ಲಿ ಬೆಳಗುತ್ತಿದ್ದಾನೆ. ರಾಯಭಾರಿಯೊಬ್ಬ ಅವನನ್ನು ಕಾಣಲು ಬಂದಿದ್ದಾನೆ. ಪುಲಿಕೇಶಿ ಅವನನ್ನು ಆದರದಿಂದ ಬರಮಾಡಿಕೊಳ್ಳುತ್ತಿದ್ದಾನೆ.

ರಾಯಭಾರಿ. ಇರಾನಿನ ಅರಸ ಎರಡನೆಯ ಖುಸ್ರುವಿನ ಸ್ನೇಹ ಸಂದೇಶವನ್ನು ತಂದವನು.

ಮುಂದೆ ಪುಲಿಕೇಶಿಯೂ ತನ್ನ ರಾಯಭಾರಿಯನ್ನು ಇರಾನಿಗೆ ಕಳುಹಿಸಿದ.

ಭಾರತದಲ್ಲಿ ಬೆಲ್ಜಿಯಮಿನ ನೂತನ ರಾಯಭಾರಿಯಿಂದ ಅಧಿಕಾರ ಪತ್ರದ ಅರ್ಪಣೆ



ಆಳುವವರು ವಿದೇಶಗಳೊಡನೆ ಸ್ನೇಹ ಸಂಬಂಧ ಬೆಳೆಸಲು ಉನ್ನತ ಅಧಿಕಾರದ ಪ್ರತಿನಿಧಿಗಳನ್ನು ಕಳುಹಿಸುವ ಪದ್ಧತಿ ಶತಮಾನಗಳಿಂದ ನಡೆದು ಬಂದಿದೆ.

ಅಲೆಗ್ಸಾಂಡರ್ ಸತ್ತಮೇಲೆ ಅವನ ರಾಜ್ಯದ ಪೂರ್ವ ಭಾಗಕ್ಕೆ ಅಧಿಪತಿಯಾದ ಸೆಲ್ಯೂಕಸ್, ಚಂದ್ರಗುಪ್ತ ಮೌರ್ಯನ (ಕ್ರಿ.ಪೂ. 324–300) ಆಸ್ಥಾನಕ್ಕೆ ಮೆಗಸ್ತಾನೀಸ್ ಎನ್ನುವ ರಾಯಭಾರಿಯನ್ನು ಕಳುಹಿಸಿದ್ದ. ಇವನ ಮಗ ಬಿಂದುಸಾರನ (ಕ್ರಿ.ಪೂ. 300–273) ಆಸ್ಥಾನದಲ್ಲಿ ಗ್ರೀಸ್ ಮತ್ತು ಈಜಿಪ್ಟಿನ ರಾಯಭಾರಿಗಳಿದ್ದರು.

ವಿದೇಶಗಳಲ್ಲಿ ತನ್ನ ದೇಶದ ಪ್ರತಿನಿಧಿಯಾಗಿರಲು ಕಳುಹಿಸಲ್ಪಟ್ಟವನು ರಾಯಭಾರಿ. ಇಂಗ್ಲೆಂಡ್, ಅಮೆರಿಕ, ಜಪಾನ್ ಮೊದಲಾದ ಪ್ರಪಂಚದ ಬಹು ರಾಷ್ಟ್ರಗಳಲ್ಲಿ ಭಾರತದ ರಾಯಭಾರಿ ಕಚೇರಿಗಳಿವೆ. ರಾಯಭಾರಿಗಳು ಭಾರತದ ವಿದೇಶ ನೀತಿಯನ್ನು ಆ ದೇಶಗಳಲ್ಲಿ ವಿವರಿಸುತ್ತಾರೆ; ಭಾರತದ ಗೌರವವನ್ನು ಕಾಯುತ್ತಾರೆ.

ಮಧ್ಯಯುಗದ ಉತ್ತರ ಭಾಗದಲ್ಲಿ ಇಟಲಿಯ ಸಂಸ್ಥಾನಗಳು ಸ್ಥಿರವಾದ ರಾಯಭಾರ ವರ್ಗವನ್ನು ಕಳುಹಿಸಲು ಯೋಚನೆ ಮಾಡಿದುವು. ಹದಿನೈದನೆಯ ಶತಮಾನದಲ್ಲಿ ಯೂರೋಪಿನ ಎಲ್ಲ ಪ್ರಮುಖ ದೇಶಗಳೂ ರಾಯಭಾರಿಗಳನ್ನು ಕಳುಹಿಸಲು ಆರಂಭಿಸಿದುವು.

ಮೊದಲಿಗೆ ರಾಯಭಾರಿಗಳನ್ನು ರಾಜಪ್ರಭುತ್ವವುಳ್ಳ ದೇಶಗಳಿಗೆ ಮಾತ್ರ ಕಳುಹಿಸುತ್ತಿದ್ದರು. ಆಮೇಲೆ ತಮಗೆ ಸರಿಸಮಾನರೆಂದು ಕಂಡ ಗಣರಾಜ್ಯಗಳಿಗೂ ರಾಯಭಾರಿಗಳನ್ನು ನೇಮಿಸತೊಡಗಿದರು. 1893ರ ವರೆಗೆ ಅಮೆರಿಕ ಸಂಯುಕ್ತ ಸಂಸ್ಥಾನ ತನ್ನ ರಾಯಭಾರಿಯನ್ನು ಇರಿಸಿರಲಿಲ್ಲ. ಆಮೇಲೆ ರಾಯಭಾರಿಯನ್ನು ಕಳುಹಿಸತೊಡಗಿತು.

ರಾಯಭಾರಿ ತನ್ನ ದೇಶದಿಂದ ಹೊರಡುವಾಗ ರಾಜನಿಂದ ಅಥವಾ ಅಧ್ಯಕ್ಷನಿಂದ ಪರಿಚಯ ಪತ್ರವನ್ನು ತೆಗೆದುಕೊಂಡು ಬರುತ್ತಾನೆ. ಪರಿಚಯ ಪತ್ರವನ್ನು ತಾನು ಅಧಿಕಾರ ನಿರ್ವಹಿಸಬೇಕಾಗಿರುವ ದೇಶದ ಅಧ್ಯಕ್ಷ ಅಥವಾ ರಾಜನಿಗೆ ಸಲ್ಲಿಸುತ್ತಾನೆ. ಆ ದೇಶದ ಮಂತ್ರಿಗಳು ಮತ್ತು ಸರಕಾರದ ಪ್ರಮುಖರೊಡನೆ ಸಂಪರ್ಕ ಇಟ್ಟುಕೊಳ್ಳುತ್ತಾನೆ.

ರಾಯಭಾರಿಯ ಹೊಣೆ ಹೆಚ್ಚಿನದು. ತನ್ನ ದೇಶದ ಹಿತಾಸಕ್ತಿಗಳನ್ನು ಹೊರದೇಶದಲ್ಲಿ ಕಾಪಾಡುವುದು; ಏನಾದರೂ ತೊಂದರೆಗಳು ಉದ್ಭವಿಸಿದರೆ ಅವನ್ನು ಪರಿಹರಿಸುವುದು. ಅಗತ್ಯವಿದ್ದಾಗ ರಾಯಭಾರಿ ಆ ದೇಶದ ಮುಖ್ಯಸ್ಥನೊಡನೆ ನೇರವಾಗಿ ವ್ಯವಹರಿಸಬಹುದು. ಆಗ ಆ ದೇಶದ ಮಂತ್ರಿಯೊಬ್ಬ ಜೊತೆಗಿರಬೇಕು. ರಾಯಭಾರಿ ತಾನಿರುವ ದೇಶದ ಆಗುಹೋಗುಗಳ ಬಗೆಗೆ ತನ್ನ ದೇಶಕ್ಕೆ ವರದಿ ಸಲ್ಲಿಸಬೇಕಾದದ್ದು ಮುಖ್ಯ ಕರ್ತವ್ಯ. ಅವನು ಸಾಧ್ಯವಾದಷ್ಟು ಮೂಲಗಳಿಂದ ಸುದ್ದಿಯನ್ನು ಸಂಗ್ರಹಿಸಬೇಕು, ಅಗತ್ಯವಾದಾಗ ಮುಂದೆ ಸರಕಾರದಲ್ಲಿ ಅಥವಾ ಸರಕಾರದ ನೀತಿಯಲ್ಲಿ ಆಗಬಹುದಾದ ಬದಲಾವಣೆಗಳ ಬಗೆಗೆ ತನ್ನ ದೇಶದ ಸರಕಾರಕ್ಕೆ ಮುನ್ನೆಚ್ಚರಿಕೆ ಕೊಡಬೇಕು. ತಾನಿರುವ ದೇಶದಲ್ಲಿ ತನ್ನ ದೇಶದ ಪ್ರಜೆಗಳ ಹಕ್ಕುಬಾಧ್ಯತೆಗಳನ್ನು ರಕ್ಷಿಸಬೇಕು. ತನ್ನ ದೇಶದ ನೀತಿಯನ್ನು ತಾನಿರುವ ದೇಶದ ಸರಕಾರಕ್ಕೆ ವಿವರಿಸಿ ಸೌಹಾರ್ದಕ್ಕೆ ಭಂಗ ಬಾರದಂತೆ ನೋಡಿಕೊಳ್ಳಬೇಕು. ತಾನಿರುವ ದೇಶದ ಒಳವ್ಯವಹಾರಗಳು, ಪಕ್ಷಗಳ ಸ್ಪರ್ಧೆಗಳು ಇವುಗಳಲ್ಲಿ ಕೈಹಾಕಬಾರದು. ಆ ದೇಶದ ಪ್ರಮುಖ ಉತ್ಸವಗಳಲ್ಲಿ ಮತ್ತು ಕಾರ್ಯಕ್ರಮಗಳಲ್ಲಿ ಭಾಗವಹಿಸಬೇಕು. ತನ್ನ ದೇಶದ ರಾಷ್ಟ್ರೀಯ ಪ್ರಾಮುಖ್ಯದ ದಿನಗಳಂದು ತಾನಿರುವ ದೇಶದ

ಪ್ರಮುಖರನ್ನೂ ಇತರ ರಾಯಭಾರಿಗಳ ವರ್ಗವನ್ನೂ ಬರಮಾಡಿ ಕೊಳ್ಳಬೇಕು.

ಈ ಕೆಲಸಗಳಿಗಾಗಿ ರಾಯಭಾರಿಗೆ ಕೆಲವು ವಿಶೇಷ ಗುಣಗಳು ಅಗತ್ಯ. ತಾಳ್ಮೆ, ಸೌಜನ್ಯ, ಇತರರನ್ನು ಆಕರ್ಷಿಸುವಂಥ ನಡೆನುಡಿ, ಮಾತಿನಲ್ಲಿ ಅತಿಶಯ ಎಚ್ಚರ, ಜನರೊಡನೆ ಸುಲಭವಾಗಿ ಬೆರೆಯಬಲ್ಲ ಆದರೂ ತನ್ನ ಘನತೆಯನ್ನು ಕಾಪಾಡಿಕೊಳ್ಳಬಲ್ಲ ಶಕ್ತಿ, ಅನಿರೀಕ್ಷಿತ ಪ್ರಸಂಗಗಳನ್ನು ಎದುರಿಸುವ ಧೈರ್ಯ, ಸಮಯ ಸ್ಫೂರ್ತಿ—ಇವು ಆತನಲ್ಲಿರಬೇಕು.

ರಾಯಭಾರಿಗಳಿಗೆ ಕೆಲವು ವಿಶೇಷ ಹಕ್ಕುಗಳುಂಟು. ಅವರ ವಾಸಗೃಹ, ಅವರ ಕಚೇರಿ, ಅವರ ದೇಶಕ್ಕೆ ಸೇರಿದುದೆಂದು ಗಣನೆ. ಪ್ರಯಾಣ ಮಾಡುವಾಗ ಅವರ ಸಾಮಾನುಗಳನ್ನು ಸುಂಕದ ಕಟ್ಟೆಯಲ್ಲಿ ಪರೀಕ್ಷಿಸು ವುದಿಲ್ಲ. ಅವರನ್ನೂ ಅವರ ಸಿಬ್ಬಂದಿಯನ್ನೂ ದಸ್ತಗಿರಿ ಮಾಡುವಂತಿಲ್ಲ. ಅವರ ಅಪ್ಪಣೆ ಇಲ್ಲದೆ ಯಾರೂ ಅವರ ವಸತಿಯ ಆವರಣದಲ್ಲಿ ಕಾಲಿಡು ವಂತಿಲ್ಲ.

ಪರಸ್ಪರ ದೇಶಗಳಲ್ಲಿ ರಾಯಭಾರಿಗಳನ್ನು ನೇಮಿಸಿದ ರಾಷ್ಟ್ರಗಳಿಗೆ ನೇರವಾದ ಸ್ನೇಹ ಸಂಬಂಧವಿದೆ ಎಂದರ್ಥ. ರಾಯಭಾರಿಯನ್ನು ಹಿಂದಕ್ಕೆ ಕರೆಸಿ ಕಚೇರಿಯನ್ನು ಅವನಿಗಿಂತ ಕೆಳಗಿನವರ ಅಧಿಕಾರದಲ್ಲಿ ಉಳಿಸುವುದು, ಒಂದು ದೇಶ ಇನ್ನೊಂದು ದೇಶದ ವಿಷಯದಲ್ಲಿ ಅಸಮಾಧಾನ ಸೂಚಿ ಸುವ ವಿಧಾನ. ಈ ಅಸಮಾಧಾನ ತೀವ್ರವಾದಾಗ, ತನ್ನ ರಾಯಭಾರಿ ಕಚೇರಿಯನ್ನೇ ಮುಚ್ಚಬಹುದು, ಇಂಥ ಸಂದರ್ಭದಲ್ಲಿ, ರಾಯಭಾರಿ ಕಚೇರಿಯನ್ನು ಮುಚ್ಚಿದ ರಾಷ್ಟ್ರ, ಆ ದೇಶದಲ್ಲಿ ರಾಯಭಾರಿಯನ್ನು ಹೊಂದಿರುವ ತನ್ನ ಮಿತ್ರ ರಾಷ್ಟ್ರವೊಂದನ್ನು ತನ್ನ ಹಿತಗಳನ್ನು ರಕ್ಷಿಸು ವಂತೆ ಕೇಳಿಕೊಳ್ಳಬಹುದು. ಪರದೇಶದ ರಾಯಭಾರವರ್ಗದಲ್ಲಿ ಯಾರಾ ದರೂ ತನ್ನ ಒಳವ್ಯವಹಾರದಲ್ಲಿ ಕೈಹಾಕುತ್ತಿದ್ದಾರೆ ಎಂದು ಒಂದು ದೇಶಕ್ಕೆ ಅನಿಸಬಹುದು. ಅವರಿಗೆ ಕೊಟ್ಟ ಸೌಲಭ್ಯಗಳನ್ನು ದುರುಪ ಯೋಗ ಪಡಿಸಿಕೊಳ್ಳುತ್ತಿದ್ದಾರೆ ಎಂದು ತೋರಬಹುದು. ಆಗ ಆ ದೇಶದ ಸರಕಾರ ಅವರಿರುವುದು ತನಗೆ ಒಪ್ಪಿಗೆ ಇಲ್ಲ, ಅವರನ್ನು ಹಿಂದಕ್ಕೆ ಕರೆಸಿಕೊಳ್ಳಬೇಕು–ಎಂದು ಸೂಚನೆ ಕೊಡುತ್ತದೆ. ಅವರ ದೇಶ ಅವರನ್ನು ಹಿಂದಕ್ಕೆ ಕರೆಸಿಕೊಳ್ಳುತ್ತದೆ.

ಭಾರತದಲ್ಲಿರುವ ಕಾಮನ್‌ವೆಲ್ತ್ ದೇಶಗಳ ಸರಕಾರಗಳ ಪ್ರತಿನಿಧಿ ಗಳನ್ನು ಹೈಕಮಿಷನರ್ ಎಂದೂ ಇತರ ದೇಶಗಳ ಸರಕಾರಗಳ ಪ್ರತಿನಿಧಿ ಗಳನ್ನು ರಾಯಭಾರಿ ಎಂದೂ ಕರೆಯುತ್ತಾರೆ.

## ರಾಷ್ಟ್ರ

" ಜನ ಗಣ ಮನ ಅಧಿನಾಯಕ ಜಯಹೇ
ಭಾರತ ಭಾಗ್ಯ ವಿಧಾತ "

ಇದು ನಮ್ಮ ರಾಷ್ಟ್ರಗೀತೆಯ ಆರಂಭದ ಸಾಲು. ಹಸಿರು, ಬಿಳುಪು, ಕೇಸರಿ, ನಡುವೆ ಅಶೋಕಚಕ್ರ ಇದು ನಮ್ಮ ರಾಷ್ಟ್ರಧ್ವಜ. ನವಿಲು ನಮ್ಮ ರಾಷ್ಟ್ರಪಕ್ಷಿ. ಭಾರತ ನಮ್ಮ ರಾಷ್ಟ್ರ.

ರಾಷ್ಟ್ರ ಎಂದರೇನು ?

ಒಂದು ನಿರ್ದಿಷ್ಟ ಮೇರೆಯುಳ್ಳ ಪ್ರದೇಶದಲ್ಲಿ ಒಟ್ಟಿಗೆ ವಾಸಿಸುತ್ತಿರುವ ಜನಸಮುದಾಯಕ್ಕೆ ರಾಷ್ಟ್ರ ಎನ್ನುತ್ತೇವೆ. ಈ ಜನಸಮುದಾಯ ಬೇರೆ ಬೇರೆ ಜನಾಂಗದವರಾಗಿರಬಹುದು. ಎಲ್ಲಿಂದಲೋ ವಲಸೆ ಬಂದು ಕೊನೆಗೆ ಒಂದು ನಿರ್ದಿಷ್ಟ ನೆಲೆಯಲ್ಲಿ ನಿಂತು, ಆ ಪ್ರದೇಶದ ಜನಾಂಗ ದೊಡನೆ ಒಂದಾಗಿ ಬೆರೆತುಹೋಗಿದ್ದರೆ ಅವರೂ ಆ ರಾಷ್ಟ್ರಕ್ಕೆ ಸೇರಿದವರೇ. ಆದ್ದರಿಂದ ಒಂದು ರಾಷ್ಟ್ರದಲ್ಲಿ ಒಂದೇ ಜನಾಂಗವಿರಬೇಕೆಂದಿಲ್ಲ. ಅದು ಜನಾಂಗಗಳ ಮಿಶ್ರಣವಾಗಿರಬಹುದು.

ರಾಷ್ಟ್ರದ ಮುಖ್ಯ ಲಕ್ಷಣಗಳು ನಾಲ್ಕು 1. ರಾಷ್ಟ್ರಕ್ಕೆ ನಿರ್ದಿಷ್ಟ ಭೂಭಾಗ ವಿರಬೇಕು. ಭೂಭಾಗ ದೊಡ್ಡದಾಗಿರಬಹುದು ಅಥವಾ ಸಣ್ಣದೂ ಇರಬಹುದು. 2. ರಾಷ್ಟ್ರದಲ್ಲಿ ಸಾಕಷ್ಟು ಜನಸಂಖ್ಯೆ ಇರಬೇಕು. ನಿರ್ಜನ ಪ್ರದೇಶ ರಾಷ್ಟ್ರ ಎನಿಸಿಕೊಳ್ಳುವುದಿಲ್ಲ, 3. ರಾಷ್ಟ್ರದಲ್ಲಿ ಒಳ್ಳೆಯ ರಾಜಕೀಯ ವ್ಯವಸ್ಥೆ ಇರಬೇಕು. ಪ್ರಜೆಗಳನ್ನು ನಿಯಂತ್ರಿಸುವಷ್ಟು ಸರಕಾರ ಸಮರ್ಥವಾಗಿರಬೇಕು. 4. ಪೂರ್ಣ ಸ್ವಾತಂತ್ರ್ಯ ಮತ್ತು ಪರಮಾಧಿಕಾರವನ್ನು ಹೊಂದಿರಬೇಕು. ಒಳಾಡಳಿತ ಮತ್ತು ವಿದೇಶ ನೀತಿಗಳಲ್ಲಿ ಪೂರ್ಣ ಅಧಿಕಾರವನ್ನು ತಾಳಿರಬೇಕು. ಮತ್ತೊಂದು ರಾಷ್ಟ್ರದ ಅಧೀನದಲ್ಲಿರಬಾರದು.

ಒಂದು ಭೂ ಪ್ರದೇಶದಲ್ಲಿ ವಾಸಿಸುವ ಜನ ರಾಷ್ಟ್ರ ಎನಿಸಿಕೊಳ್ಳ ಬೇಕಾದರೆ ಅವರಲ್ಲಿ ಐಕ್ಯ ಸಾಧಿಸುವ ಮಾನಸಿಕ ತಂತುಗಳು ಎರಡು ಬಗೆಯವು—ಒಂದು ಕಳೆದು ಹೋದ ಕಾಲಕ್ಕೆ ಸಂಬಂಧಿಸಿದ್ದು, ಮತ್ತೊಂದು ಭವಿಷ್ಯತ್ತಿಗೆ ಸಂಬಂಧಿಸಿದ್ದು. ಅವರು ಭೂಪ್ರದೇಶದ ಯಾವುದೇ ಭಾಗ ದಲ್ಲಿರಲಿ. ಯಾವುದೇ ಭಾಷೆಯನ್ನಾಡಲಿ, ಯಾವುದೇ ಮತದವರಾಗಿರಲಿ, ಒಂದೇ ಸಂಪ್ರದಾಯವನ್ನೂ ಜೀವನ ವಿಧಾನವನ್ನೂ ಒಪ್ಪಿಕೊಳ್ಳುತ್ತಾರೆ. ಭಾರತದಲ್ಲಿ ಹಲವು ಮತಗಳವರಿದ್ದಾರೆ. ಹಲವು ಭಾಷೆಗಳನ್ನು ಮಾತ ನಾಡುವವರಿದ್ದಾರೆ. ಒಂದು ಭಾಷೆಯಲ್ಲಿ ಇನ್ನೊಂದು ಭಾಷೆಯ ಎಷ್ಟು ಪದಗಳು ಬೆರೆತು ಹೋಗಿವೆ, ಹಲವು ಕಟ್ಟಡಗಳಲ್ಲಿ ಉತ್ತರ–ದಕ್ಷಿಣ. ಹಿಂದೂ–ಮುಸಲ್ಮಾನ ಶೈಲಿಗಳು ಹೇಗೆ ಬೆರೆತಿವೆ, ಒಬ್ಬರ ಸಂಗೀತ ಪದ್ಧತಿ ಇನ್ನೊಬ್ಬರ ಸಂಗೀತ ಪದ್ಧತಿಯ ಮೇಲೆ ಯಾವ ರೀತಿ ಪ್ರಭಾವ ಬೀರಿದೆ, ಒಬ್ಬರ ಹಬ್ಬದಲ್ಲಿ ಇನ್ನೊಬ್ಬರು ಹೇಗೆ ಪಾಲುಗೊಳ್ಳುತ್ತಾರೆ, ಒಬ್ಬರ ದೇವಾಲಯದಲ್ಲಿ ಇನ್ನೊಬ್ಬರು ಹೇಗೆ ಹರಕೆ ಹೊರುತ್ತಾರೆ. ಉಡುಗೆ, ತೊಡುಗೆಗಳಲ್ಲಿ, ಒಡವೆಗಳಲ್ಲಿ, ಮನೆಯನ್ನು ಸಿಂಗರಿಸುವುದರಲ್ಲಿ, ಹೇಗೆ ಒಬ್ಬರು ಇನ್ನೊಬ್ಬರ ಪ್ರಭಾವಕ್ಕೆ ಒಳಗಾಗುತ್ತಾರೆ–ಎನ್ನುವುದನ್ನು ಕಂಡಾಗ ನಮಗೆ ಇದರ ಅರಿವಾಗುತ್ತದೆ. ಹಾಗೆಯೇ ಯಾವ ಭಾಷೆಯವರಾಗಲಿ. ಯಾವ ಮತದವರಾಗಲಿ, ತಮ್ಮೆಲ್ಲರ ಕಲ್ಯಾಣವನ್ನು ಒಟ್ಟಿಗೆ ಸಾಧಿಸಬೇಕು, ತಮ್ಮೆಲ್ಲರ ಏಳು-ಬೀಳುಗಳು ಒಟ್ಟಿಗೇ ಎಂಬ ಅರಿವು ಇರಬೇಕು. ಪಾಕಿಸ್ತಾನ 1947ರಲ್ಲಿ ಕಾಶ್ಮೀರವನ್ನು ಆಕ್ರಮಣ ಮಾಡಿದಾಗ, 1962 ಮತ್ತು 1965ರಲ್ಲಿ ಆಕ್ರಮಣ ನಡೆದಾಗ ಈ ಜಾತಿ ಆ ಜಾತಿ ಎನ್ನದೆ ದೇಶವೇ ಒಬ್ಬ ಮನುಷ್ಯನಂತೆ ಹೋರಾಡಿತು. ಈ ಹೋರಾಟದಲ್ಲಿ ಪರಮವೀರ ಚಕ್ರವನ್ನು ಪಡೆದವರು ಬೇರೆ ಬೇರೆ ಮತಗಳವರು— ಮೇಜರ್ ಸೋಮನಾಥ ಶರ್ಮ (1947), ಪೀರ್ ಸಿಂಗ್ (1948) ಅಬ್ದುಲ್ ಹಮೀದ್ ಮತ್ತು ಎ. ಬಿ. ತಾರಾಪೂರ್ (1962).

ಯೆಹೂದ್ಯರದು ವಿಶಿಷ್ಟ ಇತಿಹಾಸ. ಹಲವು ಶತಮಾನಗಳ ಕಾಲ ಅವರಿಗೆ ತಮ್ಮದೆನ್ನುವ ದೇಶವಿರಲಿಲ್ಲ. ಪ್ರಪಂಚದಲ್ಲೆಲ್ಲ ಅವರು ಹಂಚಿ ಹೋಗಿದ್ದರು. ಆದರೆ ತಾವು ಒಂದೇ ಮೂಲದವರು ಎನ್ನುವ ಪ್ರಜ್ಞೆ ಯನ್ನು ಉಳಿಸಿಕೊಂಡು ಬಂದರು. ಇಸ್ರೇಲಿನಲ್ಲಿ ತಮ್ಮ ರಾಷ್ಟ್ರ ಕಟ್ಟಿದರು.

ಭಾರತದಲ್ಲಿ ರಾಷ್ಟ್ರಪ್ರಜ್ಞೆ ಭೌಗೋಳಿಕ ಏಕತೆಯನ್ನೂ ಧಾರ್ಮಿಕ ಮತ್ತು ಸಾಮಾಜಿಕ ಐಕ್ಯವನ್ನೂ ಅನುಸರಿಸಿದೆ. ಹಲವಾರು ಭಾಷೆಗಳನ್ನಾಡಿ, ದೇಶದ ಹಲವಾರು ಭಾಗಗಳಲ್ಲಿ ನೆಲೆಸಿದ್ದರೂ ನಾವೆಲ್ಲ ಭಾರತೀಯರು. ರಾಷ್ಟ್ರಕ್ಕೆ ಸಂಬಂಧಿಸಿದ ಎಲ್ಲ ಕಷ್ಟನಷ್ಟಗಳಲ್ಲೂ ಪಾಲುದಾರರು. ಅದರ ಸೋಲು ಗೆಲುವು ನಮ್ಮದು. ರಾಜ್ಯಾಂಗದ ನಿಯಮಗಳಿಗೆ ನಾವೆಲ್ಲರೂ ಬದ್ಧರು. ಭಾರತದ ಸ್ವಾತಂತ್ರ್ಯೋತ್ಸವ, ಗಣರಾಜ್ಯೋತ್ಸವ ಮುಂತಾದ ರಾಷ್ಟ್ರೀಯ ಹಬ್ಬಗಳಲ್ಲಿ ನಾವು ಸಂಭ್ರಮದಿಂದ ಪಾಲುಗೊಳ್ಳುತ್ತೇವೆ. ರಾಷ್ಟ್ರಧ್ವಜಕ್ಕೆ, ರಾಷ್ಟ್ರಗೀತೆಗೆ ನಮ್ಮ ಭಕ್ತಿ ಗೌರವಗಳನ್ನು ಸಮರ್ಪಿಸುತ್ತೇವೆ. ರಾಷ್ಟ್ರದ ಗೌರವಕ್ಕೆ ಯಾರಾದರೂ ಚ್ಯುತಿ ತರಲೆತ್ನಿಸಿದರೆ ಅವರ ವಿರುದ್ಧ ಹೋರಾಡುತ್ತೇವೆ.

## ರಾಷ್ಟ್ರಸಂಘ

1914ರಿಂದ 1918ರ ವರೆಗೆ ನಡೆದ ಮೊದಲನೆಯ ಮಹಾಯುದ್ಧದಿಂದ ಸಹಸ್ರಾರು ಜನ ಸಾವುನೋವಿಗೆ ಈಡಾದರು. ಈ ಯುದ್ಧದ ಭೀಕರ ಪರಿಣಾಮವನ್ನು ಕಂಡು ಆಗಿನ ಅಮೆರಿಕದ ಅಧ್ಯಕ್ಷ ವುಡ್ರೊ ವಿಲ್ಸನರು, ಇನ್ನು ಮುಂದೆ ರಾಷ್ಟ್ರಗಳೊಳಗಿನ ಜಗಳಗಳನ್ನು ಶಾಂತರೀತಿಯಲ್ಲಿ ಪರಿಹರಿಸುವುದಕ್ಕಾಗಿ ಎಲ್ಲ ರಾಷ್ಟ್ರಗಳ ಪ್ರತಿನಿಧಿಗಳನ್ನೊಳಗೊಂಡ ರಾಷ್ಟ್ರಸಂಘವನ್ನು ಸ್ಥಾಪಿಸಲು ಯತ್ನಿಸಿದರು. ಎಲ್ಲರೂ ಒಬ್ಬರಿಗಾಗಿ, ಒಬ್ಬರು ಎಲ್ಲರಿಗಾಗಿ ಎನ್ನುವ ಸಮಷ್ಟಿ ರಕ್ಷಣಾ ಸೂತ್ರವನ್ನು ಯೋಜಿಸಿದರು. ಇದರ ಪ್ರಕಾರ, ಒಂದು ರಾಷ್ಟ್ರದ ಮೇಲೆ ಮತ್ತೊಂದು ರಾಷ್ಟ್ರ ದಾಳಿ ನಡೆಸಿದಾಗ, ಆಕ್ರಮಣಕಾರಿಯನ್ನು ಎಲ್ಲರೂ ಒಟ್ಟಾಗಿ ವಿರೋಧಿಸಿ, ದಾಳಿಗೊಳಗಾದ ರಾಷ್ಟ್ರವನ್ನು ರಕ್ಷಿಸಬೇಕು. ವಿಶ್ವದ ಶಾಂತಿಯನ್ನು ಕಾಪಾಡಲು ವಿಲ್ಸನರು ಕೈಗೊಂಡ ಈ ಪ್ರಯತ್ನಕ್ಕೆ ಬ್ರಿಟನ್, ಫ್ರಾನ್ಸ್, ಇಟಲಿ, ಜಪಾನ್ ರಾಷ್ಟ್ರಗಳೂ ಸಮ್ಮತಿಯನ್ನು ಸೂಚಿಸಿದುವು. ದುರದೃಷ್ಟಕರ ಸಂಗತಿಯೆಂದರೆ, 1920ರಲ್ಲಿ ರಾಷ್ಟ್ರಸಂಘದ ಸ್ಥಾಪನೆಯಾದಾಗ ಸ್ವತಃ ಅಮೆರಿಕವೇ ಅದರ ಸದಸ್ಯರಾಷ್ಟ್ರವಾಗುವುದು ಸಾಧ್ಯವಾಗಲಿಲ್ಲ. ವಿಲ್ಸನರ ಯೋಜನೆಯನ್ನು ಅಮೆರಿಕದ ಸೆನೆಟ್ ಒಪ್ಪಲಿಲ್ಲ.

ಈ ಸಂಘ ವರ್ಷಕ್ಕೊಮ್ಮೆ ಸ್ವಿಟ್ಜರ್‌ಲೆಂಡಿನ ಜಿನೀವದಲ್ಲಿ ಸಭೆ ಸೇರುತ್ತಿತ್ತು. ಮಹಾಸಭೆ, ಐದು ಮಂದಿ ಖಾಯಂ ಸದಸ್ಯರು ಮತ್ತು ಇತರ ಒಂಬತ್ತು ಮಂದಿ ಸದಸ್ಯರನ್ನು ಒಳಗೊಂಡ ಮಂಡಳಿ ಹಾಗೂ ಕಾರ್ಯದರ್ಶಿ ಸಿಬ್ಬಂದಿ ವಿಭಾಗ–ಇವು ಇದರ ಮೂರು ಮುಖ್ಯ ಅಂಗಗಳಾಗಿದ್ದುವು. ಇದಲ್ಲದೆ, ಆರೋಗ್ಯ ಸಂಸ್ಥೆ, ಅಂತರರಾಷ್ಟ್ರೀಯ ಕಾರ್ಮಿಕ ಸಂಸ್ಥೆ ಮತ್ತು ಅಂತರರಾಷ್ಟ್ರೀಯ ನ್ಯಾಯಾಲಯವನ್ನು ರಾಷ್ಟ್ರಸಂಘ ಸ್ಥಾಪಿಸಿತು.

1920ರಿಂದ 1930ರ ವರೆಗೆ ರಾಷ್ಟ್ರಸಂಘ ತನ್ನ ಉದ್ದೇಶವನ್ನು ಈಡೇರಿಸುವುದರಲ್ಲಿ ಸಫಲತೆ ಪಡೆಯಿತು. ಇದನ್ನು ರಾಷ್ಟ್ರಸಂಘದ ಸುವರ್ಣದಶಕವೆಂದು ಹೇಳುವುದು. ಗ್ರೀಸ್ ಮತ್ತು ಇಟಲಿ, ಗ್ರೀಸ್ ಮತ್ತು ಬಲ್ಗೇರಿಯ, ಬ್ರಿಟನ್ ಮತ್ತು ಟರ್ಕಿ ರಾಷ್ಟ್ರಗಳ ನಡುವಣ ಸಮಸ್ಯೆಗಳನ್ನು ರಾಷ್ಟ್ರಸಂಘ ಪರಿಹರಿಸಿತು. ಆದರೆ ಕ್ರಮೇಣ ಅದರ ಪ್ರಭಾವ ಕಡಿಮೆಯಾಯಿತು. ಅಂತರರಾಷ್ಟ್ರೀಯ ಜಗಳಗಳು ಮತ್ತೆ ಹುಟ್ಟಿಕೊಂಡುವು : [illegible]ರಾಷ್ಟ್ರಗಳಲ್ಲಿ ಪರಸ್ಪರ ಸಹಕಾರದ ಮನೋಭಾವ ಬೆಳೆಯದೆ ಹೋಯಿತು. ಕೆಲವು ಬಲಿಷ್ಠ ರಾಷ್ಟ್ರಗಳು ಸ್ವಹಿತವನ್ನು ಮಾತ್ರ ಬಯಸಿದುವು. 1935ರಲ್ಲಿ ಇಟಲಿ ಇಥಿಯೋಪಿಯವನ್ನು ಆಕ್ರಮಿಸಿದಾಗ ರಾಷ್ಟ್ರಸಂಘದ ದೌರ್ಬಲ್ಯ ಸ್ಪಷ್ಟವಾಯಿತು. ಈ ಎ ಕಾರಣಗಳಿಂದ ಪ್ರಪಂಚದ ಎರಡನೆಯ ಮಹಾಯುದ್ಧವನ್ನು ತಡೆಗಟ್ಟ ಈ ಸಂಸ್ಥೆ ಶಕ್ತವಾಗಲಿಲ್ಲ.

ವಿಶ್ವಸಂಸ್ಥೆಯನ್ನು ಕಾಪಾಡಲು ಮೊದಲನೆಯ ಹೆಜ್ಜೆಯಾಗಿದ್ದ ರಾ ಸಂಘದ ಪ್ರಯತ್ನ ವಿಫಲವಾದರೂ ಎರಡನೆಯ ಪ್ರಯತ್ನಕ್ಕೆ ಇ ಸ್ಫೂರ್ತಿನೀಡಿತು. ಇದರ ಉದ್ದೇಶಗಳ ಜೊತೆಗೆ ಇನ್ನೂ ಹಲವ ಹೊಂದಿದ ವಿಶ್ವಸಂಸ್ಥೆ ಎರಡನೆಯ ಮಹಾಯುದ್ಧದ ಬಳಿಕ ಜನ್ಮತಳೆಯಿತ

ನೋಡಿ : ಮಹಾಯುದ್ಧಗಳು ; ವಿಶ್ವಸಂಸ್ಥೆ

## ರಾಷ್ಟ್ರೀಕರಣ

ಭಾರತದಲ್ಲಿ 1969–70ರಲ್ಲಿ ಹದಿನಾಲ್ಕು ಬ್ಯಾಂಕುಗಳ ರಾಷ್ಟ್ರೀಕರ ವಾಯಿತು.

ರಾಷ್ಟ್ರೀಕರಣ–ಎಂದರೇನು ?

ದೇಶದ ವ್ಯಾಪಾರ ವಹಿವಾಟುಗಳನ್ನು ನಡೆಸಲು ಅನೇಕ ಸಂಘ ಸಂ ಗಳಿರುತ್ತವೆ. ಕೆಲವು ಉದ್ಯಮಗಳನ್ನು ಖಾಸಗಿ ಜನರು ನಡೆಸಿಕೊಂಡ ಹೋಗಬಹುದು. ಇಂಥವನ್ನು ಖಾಸಗಿ ವಲಯಕ್ಕೆ ಸೇರಿದ ಉದ್ಯಮಗಳ ಎನ್ನುತ್ತೇವೆ. ಜನಜೀವನಕ್ಕೆ ಅತಿ ಮುಖ್ಯವಾದ ಕೆಲವು ಉದ್ಯಮಗಳನ ಸರಕಾರ ತಾನೇ ನಡೆಸಿಕೊಂಡು ಹೋಗುತ್ತದೆ. ಇಂಥವು ಸರಕಾ ವಲಯದ ಉದ್ಯಮಗಳು.

ಖಾಸಗೀ ವಲಯಕ್ಕೆ ಸೇರಿದ ಯಾವುದಾದರೂ ಉದ್ಯಮ ಜನಹಿ ದೃಷ್ಟಿಯಿಂದ ಸರಕಾರದ ವಶಕ್ಕೆ ಒಳಪಟ್ಟರೆ ಉತ್ತಮ ಎಂಬ ಭಾವ ಸರಕಾರಕ್ಕೆ ಮೂಡಿದರೆ, ಆಗ ಆ ಉದ್ಯಮವನ್ನು ಸರಕಾರ ತನ್ನ ಅಧೀನಕ ತಂದುಕೊಳ್ಳುತ್ತದೆ. ಈ ಕ್ರಿಯೆಗೆ ರಾಷ್ಟ್ರೀಕರಣ ಎಂದು ಹೆಸರು.

ಖಾಸಗೀ ವಲಯದ ಅಧೀನದಲ್ಲಿದ್ದ ಉದ್ಯಮಗಳಲ್ಲಿ ಉದ್ದಿಮೆಗಾರರಿ ಲಾಭ ಪಡೆಯುವ ಆಸಕ್ತಿ : ಪರಸ್ಪರ ಸ್ಪರ್ಧೆ ಮತ್ತು ಲಾಭದಾಸೆಗಳಿ ಕೆಲವರು ದರಗಳನ್ನು ಏರಿಸಿ ಜನರನ್ನು ಪೇಚಾಡಿಸಬಹುದು. ಉದ್ಯಮ ಉತ್ತಮವಾಗಿ ನಡೆಯಬೇಕು, ಆ ಉದ್ಯಮದಲ್ಲಿನ ಕೆಲಸಗಾರರ ಜೀವನವು ಸುಖಕರವಾಗಿ ಇರಬೇಕು ಎಂಬುದರ ಕಡೆಗೆ ಸರಕಾರ ಗಮನಕೊಡುತ್ತದೆ ಆದ್ದರಿಂದ ಅತ್ಯಂತ ಮುಖ್ಯವಾದ ಉದ್ಯಮಗಳನ್ನು ತನ್ನ ಅಧೀನಕ್ಕೆ ತಂದು ಕೊಂಡು ಆಡಳಿತವನ್ನು ತಾನು ವಹಿಸಿಕೊಳ್ಳುತ್ತದೆ. ಕಮ್ಯೂನಿಸ್ಟ್ ಆಡಳಿತವಿರುವ ದೇಶಗಳಲ್ಲಿ ಎಲ್ಲ ಉದ್ಯಮಗಳೂ ಸರಕಾರದ ಅಧೀನದಲ್ಲ ಇರುವುದರಿಂದ ರಾಷ್ಟ್ರೀಕರಣದ ಪ್ರತ್ಯೇಕ ಪ್ರಶ್ನೆ ಏಳುವುದಿಲ್ಲ.

ಸ್ವತಂತ್ರ ಭಾರತದಲ್ಲಿ ಜೀವವಿಮೆ ರಾಷ್ಟ್ರೀಕೃತವಾಯಿತು. ಮುಂದ ಪ್ರಮುಖ ಬ್ಯಾಂಕುಗಳನ್ನು ಸರಕಾರ ತನ್ನ ವಶಕ್ಕೆ ತೆಗೆದುಕೊಂಡಿತು.

ರಾಷ್ಟ್ರೀಕರಣದಲ್ಲಿ ಜಗತ್ತಿನಲ್ಲೆಲ್ಲ ಆಸಕ್ತಿ ಮೂಡಿದೆ. ಒಂದು ದೇಶ ದಲ್ಲಿ ಬೇರೆ ದೇಶಕ್ಕೆ ಸೇರಿದ ಉದ್ಯಮಗಳನ್ನು ಸಹ ರಾಷ್ಟ್ರೀಕರಣಕ್ಕೆ ಒಳ ಮಾಡುವುದೂ ಆರಂಭವಾಗಿದೆ. ಪರರಾಷ್ಟ್ರದ ಉದ್ಯಮಗಳನ್ನು ರಾಷ್ಟ್ರೀ ಕರಿಸಿದ ದೇಶಗಳಲ್ಲಿ ಮುಖ್ಯವಾದದ್ದು ಇರಾಕ್. ವಿದೇಶೀಯ ತೈಲ ಸಂಸ್ಥೆಗಳನ್ನು ಇರಾಕ್ ತನ್ನ ಸ್ವಾಧೀನಕ್ಕೆ ತೆಗೆದುಕೊಂಡಿತು. ಇದರಿಂದ ಇರಾಕಿನ ಸಂಪನ್ಮೂಲಗಳು ಬಹಳ ಹೆಚ್ಚಿ, ದೇಶದ ಅಭಿವೃದ್ಧಿಗೆ ಸಹಾಯಕ ವಾಯಿತು.

ಸುಯೆಜ್ ಕಾಲುವೆಯನ್ನು 1956ರಲ್ಲಿ ಐಕ್ಯ ಅರಬ್ ಗಣರಾಜ್ಯ ರಾಷ್ಟ್ರೀಕರಣಗೊಳಿಸಿತು. ಅಂದಿನಿಂದ ಸುಯೆಜ್ ಕಾಲುವೆ ಸಂಪೂರ್ಣವಾಗಿ ಐಕ್ಯ ಅರಬ್ ಗಣರಾಜ್ಯದ ಆಸ್ತಿಯಾಯಿತು.

ರಾಷ್ಟ್ರೀಕರಣದಿಂದ ರಾಷ್ಟ್ರದ ವರಮಾನ ಹೆಚ್ಚುತ್ತದೆ. ಉದ್ಯಮಗಳಿಂದ ಬರುವ ಲಾಭ ಸರಕಾರಕ್ಕೇ ಸಲ್ಲುತ್ತದೆ. ಇಂಥ ವರಮಾನದಿಂದ ರಾಷ್ಟ್ರದ ಯೋಜನೆಗಳನ್ನು ಕರಗತಗೊಳಿಸಲು ಹಣ ದೊರೆಯುತ್ತದೆ.

ರಾಷ್ಟ್ರೀಕರಣವಾದಾಗ ಸ್ಪರ್ಧೆಯ ಮಾತೇ ಇಲ್ಲ. ಜನಸಾಮಾನ್ಯರ ದೃಷ್ಟಿಯಿಂದ ಕೆಲವು ಕ್ಷೇತ್ರಗಳಲ್ಲಿ ಸ್ಪರ್ಧೆ ಇರುವುದು ಒಳ್ಳೆಯದು. ಉದಾಹರಣೆಗೆ, ವೃತ್ತಪತ್ರಿಕೆಗಳು, ಉಪಾಹಾರ ಮಂದಿರಗಳು, ಬಟ್ಟೆಯ ಕಾರಖಾನೆಗಳು ಹಲವಿದ್ದರೆ, ಸ್ಪರ್ಧೆಯಿಂದ ಅವು ಬೆಲೆಯನ್ನು ಇಳಿಸಿ, ಗುಣವನ್ನು ಹೆಚ್ಚಿಸಿ, ಕೊಳ್ಳುವವರನ್ನು ಆಕರ್ಷಿಸಲು ಯತ್ನಿಸುತ್ತವೆ. ಅಮೆರಿಕದಂಥ ದೇಶದಲ್ಲಿ ಆಕಾಶವಾಣಿ, ರೈಲುಗಳು ಸಹ ಖಾಸಗಿ ಉದ್ಯಮಿಗಳ ಕೈಯಲ್ಲಿವೆ. ಆದರೆ ಒಟ್ಟು ಬಂಡವಾಳವೇ ಅಲ್ಪವಾಗಿರುವ, ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಉದ್ಯಮಗಳನ್ನು ಸಂಪೂರ್ಣವಾಗಿ ಖಾಸಗಿಯವರ ಕೈಯಲ್ಲಿ ಬಿಟ್ಟರೆ ಸ್ಪರ್ಧೆ ಕಡಮೆಯಾಗುತ್ತದೆ; ಹೆಚ್ಚು ಬಂಡವಾಳವಿರುವ ಕೆಲವರು ಅಪಾರ ಲಾಭಗಳಿಸಲು ಅವಕಾಶವಾಗುತ್ತದೆ. ಆದ್ದರಿಂದ ಎಲ್ಲ ದೇಶಗಳಿಗೂ ಅನ್ವಯಿಸುವ ನಿಯಮಗಳನ್ನು ರೂಪಿಸಲು ಸಾಧ್ಯವಿಲ್ಲ. ಪ್ರತಿ ದೇಶ ತನ್ನ ಆರ್ಥಿಕ ಸ್ಥಿತಿ ಮತ್ತು ಅಗತ್ಯಗಳನ್ನೂ ಜನತೆಯ ಹಿತವನ್ನೂ ದೃಷ್ಟಿಯಲ್ಲಿಟ್ಟುಕೊಂಡು ಯಾವ ಉದ್ಯಮಗಳನ್ನು ರಾಷ್ಟ್ರೀಕರಣ ಮಾಡಬೇಕು ಎಂಬುದನ್ನು ನಿರ್ಧರಿಸುತ್ತದೆ.

ರಾಷ್ಟ್ರೀಕರಣ ಮಾಡುವಾಗ ಹಿಂದಿನ ಪೇರುದಾರರಿಗೆ ಸಾಮಾನ್ಯವಾಗಿ ಪರಿಹಾರಧನವನ್ನು ಕೊಡುವುದುಂಟು.

ರಾಷ್ಟ್ರೀಕರಣ ಜನತೆಯ ಹಿತಕ್ಕಾಗಿ ಸರಕಾರಗಳು ತೆಗೆದುಕೊಳ್ಳುವ ಕ್ರಮಗಳಲ್ಲೊಂದು.

ನೋಡಿ : ಖಾಸಗಿ ವಲಯ ; ಸರಕಾರೀ ವಲಯ

## ರಾಷ್ಟ್ರೀಯ ಪತ್ರಾಗಾರ

ಪ್ರಜೆಗಳಿಗೆ ಸಂಘಸಂಸ್ಥೆಗಳಿಗೆ ಉಪಯುಕ್ತವಾಗುವ ದಾಖಲೆಗಳಿಗೆ ಸಂಬಂಧಿಸಿದ ಸಂಗ್ರಹಾಲಯ ಪತ್ರಾಗಾರ. ಸರಕಾರ ತನ್ನ ಕ್ಷೇತ್ರಗಳಿಗೆ ಅವಶ್ಯ ಕಾಗದ ಪತ್ರಗಳನ್ನೂ ಮಾಹಿತಿಗಳನ್ನೂ ಸಂಗ್ರಹಿಸಿ ಸುವ್ಯವಸ್ಥಿತವಾಗಿ ಕಾಪಾಡುವ ಸಂಗ್ರಹಾಲಯ. ರಾಷ್ಟ್ರೀಯ ಪತ್ರಾಗಾರ ದಾಖಲೆಗಳ ಉಪಯುಕ್ತ ಸಂಗ್ರಹವನ್ನು ಬಳಕೆದಾರರುಗಳ ಬಳಕೆಗೆ ಒದಗಿಸುವ ಕೆಲಸವನ್ನು ರಾಷ್ಟ್ರೀಯ ಪತ್ರಾಗಾರ ಜವಾಬ್ದಾರಿಯಿಂದ ಮಾಡುತ್ತದೆ.

ಕಾನೂನು, ಶಾಸನ, ಕಟ್ಟಲೆ ಮುಂತಾದ ದಾಖಲೆಗಳನ್ನು ರಾಷ್ಟ್ರೀಯ ಪತ್ರಾಗಾರದಲ್ಲಿ ಸಂರಕ್ಷಿಸಲಾಗುತ್ತದೆ. ನೂರಾರು ವರ್ಷಗಳ ಆಡಳಿತದ ಕಾಗದ ಪತ್ರಗಳನ್ನು ಸಂಗ್ರಹಿಸಿಡಲಾಗುತ್ತದೆ. ರಾಷ್ಟ್ರೀಯ ಪತ್ರಾಗಾರದ ದಾಖಲೆಗಳನ್ನು ಜನರಿಗೆ ತೋರಿಸಬಹುದು ಇಲ್ಲವೆ ಗೋಪ್ಯವಾಗಿ ಸಂರಕ್ಷಿಸಬಹುದು.

ಸ್ವಾತಂತ್ರ್ಯ ಘೋಷಣೆ, ರಾಷ್ಟ್ರ ಅನುಸರಿಸುವ ಆದರ್ಶ ನೀತಿ ತತ್ತ್ವಗಳು ಮುಂತಾದುವನ್ನು ಕಲ್ಲಿನ ಮೇಲೆ ಕೆತ್ತಿಸಿ ರಾಷ್ಟ್ರೀಯ ಪತ್ರಾಗಾರದಲ್ಲಿ ಇಡಬಹುದು. ಜನರಿಗೆ ನೀಡಬಹುದಾದ ದಾಖಲೆಗಳನ್ನು ಅವುಗಳ ನಕಲು ಪ್ರತಿಗಳ ಮೂಲಕವೋ ಇಲ್ಲ ಈ ಕಾಗದ ಪತ್ರಗಳ ಛಾಯಾಚಿತ್ರ ಪ್ರತಿಗಳ ಮೂಲಕವೋ ಒದಗಿಸಲಾಗುತ್ತದೆ.

ರೋಮನರಿಗೂ ಗ್ರೀಕರಿಗೂ ರಾಷ್ಟ್ರೀಯ ಪತ್ರಾಗಾರದ ಕಲ್ಪನೆ ಇದ್ದಿತೆಂದು ತಿಳಿದುಬಂದಿದೆ. ಫ್ರಾನ್ಸ್, ಇಂಗ್ಲೆಂಡ್ ಮೊದಲಾದ ಕೆಲವು ರಾಷ್ಟ್ರಗಳಲ್ಲಿ ರಾಷ್ಟ್ರೀಯ ಪತ್ರಾಗಾರದ ಪ್ರಸ್ತಾಪ ಬರುತ್ತದೆ. ಆದರೆ ವ್ಯವಸ್ಥಿತವಾದ ಮೊದಲ ರಾಷ್ಟ್ರೀಯ ಪತ್ರಾಗಾರ 1838ರಲ್ಲಿ ಇಂಗ್ಲೆಂಡಿನಲ್ಲಿ ಆರಂಭವಾಯಿತು. ಹಲವಾರು ಕಡೆ ಹಂಚಿಹೋಗಿದ್ದ ದಾಖಲೆಪತ್ರಗಳನ್ನು ಒಂದೆಡೆ ಸೇರಿಸಿ ವ್ಯವಸ್ಥಿತವಾಗಿ ಜೋಡಿಸಿ ಸಂಗ್ರಹಿಸಿಡಲಾಯಿತು. ಅಮೆರಿಕದ ಸಂಯುಕ್ತ ಸಂಸ್ಥಾನದಲ್ಲಿ ರಾಷ್ಟ್ರೀಯ ಪತ್ರಾಗಾರ ಸ್ಥಾಪಿತವಾದದ್ದು 1934ರಲ್ಲಿ. ಈಗ ಪ್ರಪಂಚದ ಹೆಚ್ಚಿನ ರಾಷ್ಟ್ರಗಳು ರಾಷ್ಟ್ರೀಯ ಪತ್ರಾಗಾರಗಳನ್ನು ಹೊಂದಿವೆ.

ಅಂತರರಾಷ್ಟ್ರೀಯ ಪತ್ರಾಗಾರಗಳನ್ನು ಈಗೀಗ ಸ್ಥಾಪಿಸಲಾಗುತ್ತಿದೆ. ಪ್ರಪಂಚದ ಬೇರೆ ಬೇರೆ ಸರಕಾರಗಳು ಒಂದೆಡೆ ಸೇರಿ ಮಾಡಿದ ನಿರ್ಣಯಗಳ ದಾಖಲೆಗಳನ್ನು ಕಾಯ್ದಿಡಲಾಗುತ್ತದೆ. ವಿಶ್ವಸಂಸ್ಥೆ ಇಂಥ ಪತ್ರಾಗಾರಗಳನ್ನು ನಡೆಸಿಕೊಂಡು ಬರುತ್ತಿದೆ.

ಭಾರತಕ್ಕೆ ಸ್ವಾತಂತ್ರ್ಯ ಬಂದ ಮೇಲೆ ಭಾರತ ಮತ್ತು ಪಾಕಿಸ್ತಾನಗಳೆರಡೂ ರಾಷ್ಟ್ರೀಯ ಪತ್ರಾಗಾರಗಳನ್ನು ಸ್ಥಾಪಿಸಿಕೊಂಡುವು. ಇವೆರಡೂ ಪತ್ರಾಗಾರಗಳು ಬ್ರಿಟಿಷ್ ಪತ್ರಾಗಾರದ ಅನೇಕ ದಾಖಲೆಗಳ ಪ್ರತಿ ಅಥವಾ ನಕಲುಗಳನ್ನು ಸಂಗ್ರಹಿಸಿಕೊಳ್ಳುವ ಅಗತ್ಯವೊದಗಿತು.

ಭಾರತದ ರಾಷ್ಟ್ರೀಯ ಪತ್ರಾಗಾರ ಈಸ್ಟ್ ಇಂಡಿಯಾ ಕಂಪೆನಿಯ ಕಾಲದಿಂದ ಹಿಡಿದು ಇಲ್ಲಿಯವರೆಗೂ ಮುಖ್ಯ ದಾಖಲೆಗಳನ್ನು ಶೇಖರಿಸಿದೆ. ಅತ್ಯಾಧುನಿಕ ವಿಧಾನಗಳನ್ನು ಬಳಸಿ ದಾಖಲೆಗಳನ್ನು ರಕ್ಷಿಸುವುದು ಇದರ ಹೊಣೆ. ಹೊಸ ದಾಖಲೆಗಳ ಸಂಗ್ರಹಣೆ ;' ಸರಿಯಾದ ಸ್ಥಿತಿಯಲ್ಲಿಲ್ಲದ



ದಿಲ್ಲಿಯಲ್ಲಿರುವ ರಾಷ್ಟ್ರೀಯ ಪತ್ರಾಗಾರ

[illegible] ಈ ಸಂಸ್ಥೆಯ [illegible] ಪತ್ರಾಗಾರದ ಕೆಲಸಕ್ಕೆ [illegible] ಈ ಸಂಸ್ಥೆ [illegible].

## ರಿಟ್

"[illegible] ರಿಟ್ ಸಲ್ಲಿಸಿದ್ದಾರೆ".

"[illegible] ಕೋರ್ಟಿನ ರಿಟ್ಟನ್ನು ಪುರಸ್ಕರಿಸಿತು."

–ಇಂಥ ಸುದ್ದಿಗಳನ್ನು ವೃತ್ತ ಪತ್ರಿಕೆಗಳಲ್ಲಿ ಓದುತ್ತಿರುತ್ತೇವೆ.

"ರಿಟ್" ಎಂದರೇನು ?

ಒಂದು ನಿರ್ದಿಷ್ಟ ಕೆಲಸವನ್ನು ಮಾಡುವಂತೆಯೋ ಅಥವಾ ಮಾಡದಿರುವಂತೆಯೋ ನಿರ್ದೇಶಿಸಿ ನ್ಯಾಯಾಲಯ ಕಳುಹಿಸುವ ಆಜ್ಞಾಪತ್ರ–ರಿಟ್.

ರಿಟ್ ಹಲವಾರು ಬಗೆಯವು :

1 ಪರಮಾದೇಶ ಲೇಖ ; ಹೀಗೆಂದರೆ ಸಾರ್ವಜನಿಕ ಅಧಿಕಾರಿಯೊಬ್ಬರನ್ನು ಅವರ ಕಚೇರಿಗೆ ಅವಶ್ಯವಾಗಿರುವ ಸೇವೆಯೊಂದನ್ನು ಮಾಡುವಂತೆ ನಿರ್ದೇಶಿಸುವುದು.

2 ನಿಷೇಧ ಲೇಖ ; ಕೆಳಗಣ ನ್ಯಾಯಾಲಯ ತನ್ನ ಅಧಿಕಾರ ವ್ಯಾಪ್ತಿಗೆ ಒಳಪಡದ ವಿಷಯವೊಂದರ ವಿಚಾರಣೆಯಲ್ಲಿ ತೊಡಗಿದ್ದರೆ ಅದನ್ನು ನಿಷೇಧಿಸುವುದು.

3 ಅಧಿಕಾರ ಲೇಖ : ಒಬ್ಬ ಅಧಿಕಾರಿ ಆ ಸ್ಥಾನದಲ್ಲಿರಲು ನಿಯಮಗಳ ಪ್ರಕಾರ ಅನರ್ಹ ಎಂದು ನ್ಯಾಯಾಲಯಕ್ಕೆ ದೂರು ಸಲ್ಲಿಸಿದಾಗ, ನ್ಯಾಯಾಲಯ 'ಕೊ ವಾರಂಟೊ' (ಯಾವ ಅಧಿಕಾರ ?) ಎಂಬ ಆಜ್ಞೆಯನ್ನು ಹೊರಡಿಸಬಹುದು. ಇದರ ಪ್ರಕಾರ ಅಧಿಕಾರಿ ತಾನು ಆ ಸ್ಥಾನದಲ್ಲಿರುವುದು ಹೇಗೆ ನಿಯಮಬದ್ಧ ಎಂದು ತೋರಿಸಬೇಕು.

4 ಉತ್ಪ್ರೇಷಣ ಲೇಖ : ಕೆಳಗಿನ ನ್ಯಾಯಾಲಯದಲ್ಲಿ ವಿಚಾರಣೆಯಾದ ಮೊಕದ್ದಮೆಯೊಂದಕ್ಕೆ ಸಂಬಂಧಪಟ್ಟ ಕಾಗದ ಪತ್ರಗಳನ್ನು ಕಳುಹಿಸಿಕೊಡುವಂತೆ ಆ ನ್ಯಾಯಾಲಯಕ್ಕೆ ಮೇಲು ನ್ಯಾಯಾಲಯದವರು ಕೊಡುವ ಆಜ್ಞಾಪತ್ರ.

5 ಹೇಬಿಯಸ್ ಕಾರ್ಪಸ್ ಎಂಬುದು ಮತ್ತೊಂದು ಬಗೆಯ ರಿಟ್.

ನ್ಯಾಯಾಲಯದಿಂದ ಬಂದ ಈ ರಿಟ್‌ಗಳನ್ನು ಉಲ್ಲಂಘಿಸುವುದು ತೀವ್ರ ಅಪರಾಧ.

ನೋಡಿ : ಹೆಬಿಯಸ್ ಕಾರ್ಪಸ್

## ರುಮೇನಿಯ

ರುಮೇನಿಯವನ್ನು [illegible]. ಚಾರಿತ್ರಿಕ ಘಟನೆಗಳಿಂದ ಅದರ ವಿಸ್ತೀರ್ಣ ಹೆಚ್ಚುತ್ತ ಕುಗ್ಗುತ್ತ ಬಂದಿದ್ದು ಈಗ ಹೆಚ್ಚು ಕಡಿಮೆ [illegible]. ಆಗ್ನೇಯ ಯೂರೋಪಿನಲ್ಲಿರುವ ರುಮೇನಿಯದ [illegible] ಸಮುದ್ರ ಮತ್ತು ಕಪ್ಪು ಸಮುದ್ರಗಳ [illegible]. ದಕ್ಷಿಣಕ್ಕೆ ಬಲ್ಗೇರಿಯ, ಪಶ್ಚಿಮಕ್ಕೆ ಯುಗೋಸ್ಲಾವಿಯ ಮತ್ತು ಹಂಗೆರಿ, ಉತ್ತರಕ್ಕೆ ರಷ್ಯ ಮತ್ತು ಪೂರ್ವಕ್ಕೆ ರಷ್ಯ ಹಾಗೂ ಕಪ್ಪು ಸಮುದ್ರಗಳಿವೆ.

ಡ್ಯಾನ್ಯೂಬ್ ನದಿಯ ಉತ್ತರಕ್ಕಿರುವ ರುಮೇನಿಯದ ಹವಾಗುಣ ಅತ್ಯಂತ ತೀವ್ರ ಸ್ವಭಾವದ್ದು. ಬೇಸಿಗೆ ಕಾಲದಲ್ಲಿ ವಿಪರೀತ ಸೆಕೆಯಾದರೆ ಗಾಳಿಯಿಂದ ಕೂಡಿದ ಚಳಿಗಾಲದಲ್ಲಿ ಅಸಾಧ್ಯ ಚಳಿ. ವರ್ಷಕ್ಕೆ 44 ಸೆ. ಮೀ. ದಿಂದ 76 ಸೆ. ಮೀ. ವರೆಗೂ ಮಳೆ.

ಆಲ್ಪ್ಸ್ ಪರ್ವತ ರುಮೇನಿಯದ ಮಧ್ಯಭಾಗದಿಂದ ದಕ್ಷಿಣದಲ್ಲಿ ಡ್ಯಾನ್ಯೂಬ್‌ವರೆಗೂ ಹಬ್ಬಿ ನಿಂತಿದೆ. ಪರ್ವತಗಳಿಂದ ಸುತ್ತುವರಿಯಲ್ಪಟ್ಟಿರುವ ಟ್ರಾನ್ಸಿಲ್ವೇನಿಯ ಪ್ರಸ್ಥಭೂಮಿ : ಇದರ ಈಶಾನ್ಯಕ್ಕಿರುವ ಬುಕೋವಿನದಲ್ಲಿ ಅರಣ್ಯಗಳೂ ಪರ್ವತಗಳೂ ಇವೆ. ಎತ್ತರದ ಪರ್ವತಗಳು ಮತ್ತು ಫಲವತ್ತಾದ ಬಯಲುಗಳಿಂದ ಕೂಡಿರುವ ಮೋಲ್ಡಾವಿಯ ಪ್ರಾಂತ್ಯವಿದೆ. ನೈರುತ್ಯ [illegible] ಬನತ್ ಪ್ರಾಂತವಿದೆ. ಇವು ರುಮೇನಿಯದ ಪ್ರಾಕೃತಿಕ ವಿಭಾಗಗಳು.

ಡ್ಯಾನ್ಯೂಬ್ ಬಯಲು ಬಹಳ ಫಲವತ್ತಾಗಿದೆ. ಮುಸುಕಿನ ಜೋಳ ಮತ್ತು ಗೋಧಿ ಬೆಳೆಯುವುದರಲ್ಲಿ ಪ್ರಪಂಚದಲ್ಲಿ ರುಮೇನಿಯ ಒಂದು ಅಗ್ರ ದೇಶವೆನಿಸಿದೆ. ಧಾನ್ಯಗಳು, ತರಕಾರಿಗಳು, ಸಣಬು, ಸಕ್ಕರೆ ಬೀಟ್ ಮತ್ತು ಆಲೂಗೆಡ್ಡೆ ಬೆಳೆಯುತ್ತಾರೆ. ಶೇಕಡಾ 65 ಜನರು ವ್ಯವಸಾಯವನ್ನೇ ಮಾಡುವರು. ಸರಕಾರಿ ಆಡಳಿತ ನಿರ್ವಹಣೆಯಲ್ಲಿರುವ ದೊಡ್ಡ ವ್ಯವಸಾಯ ಕ್ಷೇತ್ರಗಳಿವೆ.

ರುಮೇನಿಯದ ನಾಲ್ಕನೆಯ ಒಂದು ಭಾಗದಷ್ಟು ಕಾಡು. ಇಲ್ಲಿ ಓಕ್, ಬೀಚ್ ಮತ್ತು ಫರ್ ಮರಗಳಿವೆ.

ರುಮೇನಿಯದಲ್ಲಿ ಅಪಾರ ಖನಿಜ ಸಂಪತ್ತಿದ್ದರೂ ಮುಖ್ಯವಾದದ್ದು ಪೆಟ್ರೋಲಿಯಂ. ನೈಸರ್ಗಿಕ ಅನಿಲವೂ ಹೇರಳವಾಗಿ ದೊರೆಯುತ್ತದೆ. ಉಪ್ಪು, ತಾಮ್ರ, ಮ್ಯಾಂಗನೀಸ್, ಯುರೇನಿಯಂ, ಸೀಸ ಮತ್ತು ಚಿನ್ನ ದೊರೆಯುತ್ತವೆ. ಕಲ್ಲಿದ್ದಲು ಮತ್ತು ಕಬ್ಬಿಣದ ಅದಿರನ್ನೂ ತೆಗೆಯುತ್ತಾರೆ.

ಎರಡನೆಯ ಮಹಾಯುದ್ಧದ ಅನಂತರ ರುಮೇನಿಯ ಕೈಗಾರಿಕೆಗಳ ಬೆಳವಣಿಗೆಗೆ ಗಮನ ಕೊಡಲಾರಂಭಿಸಿತು. ಪೆಟ್ರೋಲಿಯಂ ಸಂಸ್ಕರಣ ಪ್ರಮುಖ ಉದ್ಯಮವಾಯಿತು. ಉಕ್ಕು, ಭಾರಿ ಯಂತ್ರಗಳು, ಟ್ರ್ಯಾಕ್ಟರು. ಕಬ್ಬಿಣ ಮತ್ತು ಉಕ್ಕಿನ ಪದಾರ್ಥಗಳು, ವಿದ್ಯುತ್ ಉತ್ಪಾದನೆಗಳು. ರಾಸಾಯನಿಕ ಗೊಬ್ಬರ, ರಾಸಾಯನಿಕಗಳು, ಆಹಾರ ಸಂಸ್ಕರಣ ಮೊದಲಾದ ಕೈಗಾರಿಕೆಗಳಿವೆ.

ಬಾಲ್ಕನ್ಸ್‌ನ ಪ್ರದೇಶದ ಪ್ಯಾರಿಸ್ ಎನಿಸಿಕೊಂಡ ಬೂಕರೆಸ್ಟ್, ರಾಜಧಾನಿ. ಟ್ರಾನ್ಸಿಲ್ವೇನಿಯದ ರಾಜಧಾನಿ ಕ್ಲುಜ್. ಅಲ್ಲಿನ ಕೇಂದ್ರ ವಿಶ್ವವಿದ್ಯಾನಿಲಯದ ಪುಸ್ತಕ ಭಂಡಾರದಲ್ಲಿ ಇಪ್ಪತ್ತು ಲಕ್ಷ ಪುಸ್ತಕಗಳಿವೆ. ಕಪ್ಪು ಸಮುದ್ರ [illegible] ವಡದಲ್ಲಿರುವ ಕಾನ್ಸ್‌ಟಾಂಟ ಮುಖ್ಯ ಬಂದರು. ಜಾಸ್ಸಿ ಪುರಾತನ ಸಂಸ್ಕೃತಿಯ ಬೀಡು.

ರುಮೇನಿಯದ ಪ್ರಥಮ ನಿವಾಸಿಗಳು ಡಾಸಿಯನರು. ರೋಮನರು ವಸಾಹತು ಸ್ಥಾಪಿಸಿಕೊಂಡರು. ಈಗಿನ ರುಮೇನಿಯನರಲ್ಲಿ ಬಹಳ ಜನ ರೋಮನ್ ವಂಶಜರು. ಇವರು ಬಳಸುತ್ತಿದ್ದ ಲ್ಯಾಟಿನ್ ಭಾಷೆಯೇ ರುಮಾನಿಯ ಭಾಷೆಯ ಮೂಲವಾಯಿತು. ರೋಮನ್ ಚಕ್ರಾಧಿಪತ್ಯ ಶಿಥಿಲವಾದಾಗ [illegible] ಪಟ್ಟಿತು. ಒಂಬತ್ತನೆಯ ಶತಮಾನದಲ್ಲಿ ಹಂಗೆರಿ ಟ್ರಾನ್ಸಿಲ್ವೇನಿ[illegible]

ಗೆದ್ದ. ಎರಡು ವರ್ಷಗಳ ಕಾಲ ಅಲ್ಲಿ ಸೇವೆ ಸಲ್ಲಿಸಿದ. 1932ರಲ್ಲಿ ದೇಶ ಆರ್ಥಿಕವಾಗಿ ಬಹಳ ಕಷ್ಟಕ್ಕೆ ಸಿಕ್ಕಿತು. ರೂಸ್‌ವೆಲ್ಟ್ ಅಧ್ಯಕ್ಷಸ್ಥಾನಕ್ಕೆ ತನ್ನ ಪಕ್ಷದ ಉಮೇದುವಾರನಾದ. ಪ್ರತಿಸ್ಪರ್ಧಿಯಾಗಿ ರಿಪಬ್ಲಿಕನ್ ಪಕ್ಷದವರು ಅಧ್ಯಕ್ಷ ಹರ್ಬರ್ಟ್ ಹೂವರನನ್ನು ಮತ್ತೆ ನಿಲ್ಲಿಸಿದರು. ರೂಸ್‌ವೆಲ್ಟ್ ರೈತರಿಗೆ ನೆರವು, ಸಮತೂಗಿಸಿದ ಆಯ ವ್ಯಯ ಅಂದಾಜು, ಆರ್ಥಿಕ ಶಕ್ತಿಗೆಲ್ಲ ಲಗಾಮು ಹಾಕುವ ಹೊಸ ವ್ಯವಹಾರ ಯೋಜನೆಯನ್ನು ಜನತೆಯ ಮುಂದಿಟ್ಟ. ಪ್ರಚಂಡ ವಿಜಯವನ್ನು ಗಳಿಸಿದ ರೂಸ್‌ವೆಲ್ಟ್ ಮಾಡಿದ ಮೊದಲನೆಯ ಕೆಲಸ, ಹದಗೆಟ್ಟಿದ್ದ ಆರ್ಥಿಕ ವ್ಯವಸ್ಥೆಯಿಂದ ಕಂಗಾಲಾಗಿದ್ದ ಜನತೆಗೆ ಧೈರ್ಯ ತುಂಬಿದ್ದು. ದೇಶದಲ್ಲಿ ಹಲವು ಬ್ಯಾಂಕುಗಳು ಮುಚ್ಚಿದ್ದುವು. ಕೈಗಾರಿಕಾ ಉತ್ಪಾದನೆ 1929ರ ಶೇಕಡಾ 59ಕ್ಕೆ ಇಳಿದಿತ್ತು. 130 ಲಕ್ಷ ಮಂದಿ ನಿರುದ್ಯೋಗಿಗಳಾಗಿದ್ದರು. ಅಧಿಕಾರ ವಹಿಸಿಕೊಂಡ ಒಂದು ನೂರು ದಿನಗಳಲ್ಲೇ ರೂಸ್‌ವೆಲ್ಟ್ ಹಲವು ಪರಿಣಾಮಕಾರಿ ಕ್ರಮಗಳನ್ನು ಕೈಗೊಂಡ. ರೈತರ ಸ್ಥಿತಿ ಸುಧಾರಿಸಿ, ವಾಣಿಜ್ಯ ವ್ಯಾಪಾರಗಳು ಅಭಿವೃದ್ಧಿ ಹೊಂದಿ, ಕುತ್ತು ಪರಿಹಾರವಾಯಿತು. 1936ರಲ್ಲಿ ಎರಡನೆಯ ಬಾರಿಗೆ ಅಧ್ಯಕ್ಷನಾಗಿ ರೂಸ್‌ವೆಲ್ಟ್ ಆಯ್ಕೆಯಾದ. ಇತರ ದೇಶಗಳೊಡನೆ ಅಮೆರಿಕದ ಬಾಂಧವ್ಯವನ್ನು ಉತ್ತಮ ಪಡಿಸಿದ.

1940ರಲ್ಲಿ ರೂಸ್‌ವೆಲ್ಟ್ ಮೂರನೆಯ ಬಾರಿಗೆ ಅಧ್ಯಕ್ಷಸ್ಥಾನಕ್ಕೆ ಸ್ಪರ್ಧಿಸಿ ಗೆದ್ದ. ಈ ಸಲ ಅವನು ಎರಡನೆಯ ಮಹಾಯುದ್ಧವನ್ನು ಎದುರಿಸಬೇಕಾಯಿತು. ಮೊದಮೊದಲು ಯುದ್ಧದಿಂದ ದೂರ ನಿಂತರೂ ಜಪಾನಿನವರು ಅಮೆರಿಕಕ್ಕೆ ಸೇರಿದ ಪರ್ಲ್ ಬಂದರನ್ನು ವಶಪಡಿಸಿಕೊಂಡೊಡನೆ ಅಮೆರಿಕ ಯುದ್ಧರಂಗಕ್ಕೆ ಇಳಿಯಿತು. ರಷ್ಯದ ಪ್ರಧಾನಿ ಸ್ಟಾಲಿನ್, ಬ್ರಿಟನಿನ ಪ್ರಧಾನಿ ಚರ್ಚಿಲ್ ಇವರೊಡನೆ ರೂಸ್‌ವೆಲ್ಟ್ ಯುದ್ಧತಂತ್ರಗಳನ್ನು ಕುರಿತು ಚರ್ಚಿಸಿದ. ಪರಮಾಣುಬಾಂಬಿನ ತಯಾರಿಕೆಗೆ ರೂಸ್‌ವೆಲ್ಟ್ ಆಜ್ಞೆ ಮಾಡಿದ್ದು ಈ ಸಮಯದಲ್ಲೇ.

1944ರಲ್ಲಿ ಮತ್ತೆ ಚುನಾವಣೆ ನಡೆಯಿತು. ರೂಸ್‌ವೆಲ್ಟ್ ನಾಲ್ಕನೆಯ ಬಾರಿಯೂ ಜಯಗಳಿಸಿದ. 1945ರ ಜನವರಿ 20ರಂದು ಪ್ರಮಾಣವಚನ ಸ್ವೀಕರಿಸುತ್ತಿದ್ದಾಗ ತೀವ್ರ ನಿಶ್ಶಕ್ತಿ ತಲೆದೋರಿತು. ಅಂದು ಪ್ರಾರಂಭವಾದ ಅಸ್ವಾಸ್ಥ್ಯ ಅವನನ್ನು ಬಹಳ ದುರ್ಬಲನನ್ನಾಗಿ ಮಾಡಿತು. ಆದರೂ ಅವನು ತನ್ನ ಪರಿಶ್ರಮದ ಕಾಯಕವನ್ನು ಮುಂದುವರಿಸಿದ.

1945 ಏಪ್ರಿಲ್ 12ರಂದು ಒಬ್ಬ ಛಾಯಾಚಿತ್ರಕಾರನ ಎದುರು ಕುಳಿತಿದ್ದಂತೆಯೇ ರೂಸ್‌ವೆಲ್ಟ್ ನಿಧನ ಹೊಂದಿದ.

ಅಮೆರಿಕದ ಆರ್ಥಿಕ ಸ್ಥಿತಿ ಚಿಂತೆಗೆ ಎಡೆ ಕೊಡುವಂತಿದ್ದಾಗ ಅಧ್ಯಕ್ಷನಾದ ರೂಸ್‌ವೆಲ್ಟ್ ತೀವ್ರ ಕ್ರಮಗಳನ್ನು ಕೈಗೊಂಡದ್ದು ಮಾತ್ರವಲ್ಲ, ಅದಕ್ಕೆ ಜನರ ಬೆಂಬಲ ಗಳಿಸಿ ನಾಡಿನ ಆತ್ಮವಿಶ್ವಾಸವನ್ನು ಮರಳಿ ದೊರಕಿಸಿಕೊಟ್ಟ. ಜಗತ್ತಿನ ಇತಿಹಾಸದ ನಿರ್ಣಾಯಕ ಘಟ್ಟಗಳಲ್ಲೊಂದರಲ್ಲಿ ಅತಿ ಪ್ರಬಲವಾದ ರಾಷ್ಟ್ರದ ಅಧ್ಯಕ್ಷನಾಗಿ ರೂಸ್‌ವೆಲ್ಟ್ ಇತಿಹಾಸವನ್ನು ನಿರೂಪಿಸಿದ. ಯುದ್ಧ ನಡೆಯುತ್ತಿದ್ದಾಗಲೇ ಜಗತ್ತಿಗೆ ಶಾಂತಿಯನ್ನು ನೀಡುವ ಅಗತ್ಯವನ್ನು ಕಲ್ಪಿಸಿಕೊಂಡ. ಸಾನ್‌ಫ್ರಾನ್ಸಿಸ್ಕೋದಲ್ಲಿ ಸಂಯುಕ್ತ ರಾಷ್ಟ್ರಗಳ ಸಭೆಯನ್ನು 1945ರ ಏಪ್ರಿಲ್ 25ರಂದು ಸೇರುವಂತೆ ಏರ್ಪಡಿಸಿದ್ದ. ಅಧ್ಯಕ್ಷ ಪೀಠ ನೈತಿಕ ನಾಯಕತ್ವದ ಸ್ಥಾನ ಎಂಬಂತೆ ನಡೆಸಿಕೊಂಡ.

ರೂಸ್‌ವೆಲ್ಟನ ಪತ್ನಿ ಎಲೀನರ್. [illegible] ಬುದ್ಧಿವಂತೆಯಾದ ಎಲೀನರ್ ರೂಸ್‌ವೆಲ್ಟ್ ಅಧ್ಯಕ್ಷ ಪತಿಗೆ [illegible]

## ರೂಸೋ, ಜೀನ್ ಜೇಕ್ವಿಸ್

"ಮನುಷ್ಯ ಹುಟ್ಟುವಾಗ ಸ್ವತಂತ್ರ, ಆದರೆ ಎಲ್ಲೆಲ್ಲಿಯೂ ಆತ ಇರುವುದು ಸರಪಳಿಗಳಲ್ಲೇ".

1762ರಲ್ಲಿ ಪ್ರಕಟವಾದ ಒಂದು ಗ್ರಂಥದ ಮೊದಲನೆಯ ವಾಕ್ಯ ಇದು. ಇದು ಆ ಶತಮಾನದ ಓದುಗರನ್ನು ರೋಮಾಂಚನಗೊಳಿಸಿತು.

ಈ ಗ್ರಂಥ, 'ಸಾಮಾಜಿಕ ಒಡಂಬಡಿಕೆ'. ಅದರ ಕರ್ತೃ ಜೀನ್ ಜೇಕ್ವಿಸ್ ರೂಸೋ.

ಬಡತನದಲ್ಲಿ ಹುಟ್ಟಿದವನು ಈತ; ಬೆಳೆದದ್ದು ಅನಾಥನಂತೆ. ಅಲೆಮಾರಿ ಜೀವನ. ಕೆಟ್ಟ ಚಾಯಿಲೆಗಳು. ಬೆಳೆದ ಅನಂತರ ಎಲ್ಲಿ ಕಾಲಿಟ್ಟರೂ ಅಪಾಯಕಾರಿ ಬಂಡಾಯಗಾರನೆಂದು ಗಡಿಪಾರು. ಇವನು ಮಹಾಪಾಪಿ ಎಂದವರು ಕೆಲವರು; ಹುಚ್ಚ ಎಂದವರು ಕೆಲವರು.

ಇವನಿಂದ ಪ್ರಭಾವಿತರಾದವರು ಪ್ರಪಂಚದ ಅತಿ ಹಿರಿಯ ಸಾಹಿತಿಗಳಲ್ಲಿ ಹಲವರು—ವರ್ಡ್ಸ್‌ವರ್ತ್, ಷಿಲರ್, ಗಯಟೆ, ಟಾಲ್‌ಸ್ಟಾಯ್ ಮತ್ತಿತರರು. ಫ್ರಾನ್ಸಿನ ಮಹಾಕ್ರಾಂತಿಗೆ ಇವನು ಸ್ಫೂರ್ತಿ; ಆಧುನಿಕ ಪ್ರಪಂಚದ ಚರಿತ್ರೆಗೆ ತಿರುವು ನೀಡಿದ ಮಾರ್ಕ್ಸನ ಮೇಲೆ ಇವನ ಪ್ರಭಾವ. ಅವನ ಮನೆಯ ಕೆಲಸದಾಳು ಎಂದಳಂತೆ: "ನಾನು ಇಪ್ಪತ್ತೆರಡು ವರ್ಷಗಳಿಂದ ಅವರಲ್ಲಿ ಕೆಲಸ ಮಾಡಿದ್ದೇನೆ. ನನ್ನನ್ನು ಫ್ರಾನ್ಸಿನ ರಾಣಿ ಮಾಡುತ್ತೇನೆ ಎಂದರೂ ಈ ಕೆಲಸ ನಾನು ಬಿಡಲಾರೆ."

ಅತಿ ವಿಸ್ಮಯಕರ ಜೀವನ ಅವನದು. ಇನ್ನೂ ವಿಸ್ಮಯಕರ ಇವನ ವ್ಯಕ್ತಿತ್ವ, ಸಾಧನೆಗಳು.

ಜಿನೀವಾದಲ್ಲಿ 1712ರಲ್ಲಿ ಜೀನ್ ಜೇಕ್ವಿಸ್ ರೂಸೋ ಜನಿಸಿದ. ರೂಸೋವಿನ ಪೂರ್ವಿಕರು ಫ್ರಾನ್ಸಿನಿಂದ ಬಂದವರು. ಆತನ ತಂದೆ ಐಸಾಕ್ ಗಡಿಯಾರಗಳ ತಯಾರಿಕೆಯಲ್ಲಿ ತೊಡಗಿದ್ದ. ರೂಸೋವಿನ ತಾಯಿ ಆತನಿಗೆ ಜನ್ಮನೀಡಿದ ಹಲವು ದಿನಗಳಲ್ಲೇ ತೀರಿಕೊಂಡಳು. ಐಸಾಕ್ ಮಗನನ್ನು ಒಮ್ಮೊಮ್ಮೆ ಅಸಡ್ಡೆಯಿಂದ, ಒಮ್ಮೊಮ್ಮೆ ಅತಿ ವಾತ್ಸಲ್ಯದಿಂದ ಕಾಣುತ್ತಿದ್ದ. ರೂಸೋ ಹತ್ತು ವರ್ಷದವನಾಗಿದ್ದಾಗ ಆತನ ತಂದೆ ಸಂಸಾರವನ್ನು ಬಿಟ್ಟು ಹೊರಟು ಹೋದ. ರೂಸೋ ಲೋಹದ ಕೆತ್ತನೆ ಕೆಲಸಗಾರನೊಬ್ಬನ ಬಳಿ ಕೆಲಸಕ್ಕೆ ಸೇರಿದ. ಮಾಲಿಕ ಬಹು ನಿರ್ದಯಿ. ಇದರಿಂದ ರೂಸೋ ಅಪ್ರಾಮಾಣಿಕನಾದ, ದುಶ್ಚಟಗಳನ್ನು ಕಲಿತ. ಕೊನೆಗೆ ಅಲ್ಲಿಂದ ಓಡಿಹೋದ. ಆಗ ಆತನಿಗೆ ಹದಿನಾರು ವರ್ಷ.

ರೂಸೋ ಗೊತ್ತುಗುರಿಯಿಲ್ಲದೆ ಹಲವಾರು ಕಡೆ ಅಲೆದಾಡಿದ. ಸ್ವಿಟ್ಜರ್‌ಲೆಂಡಿನ ಸವಾಯ್ ಪ್ರಾಂತ್ಯದಲ್ಲಿದ್ದ ಮಡಾಮ್ ದ ವಾರೆನ್ಸ್ ಎಂಬ ವಿಧವೆಯೊಡನೆ ಹಲವು ವರ್ಷ ನೆಲೆಸಿದ. ಆ ಅವಧಿಯಲ್ಲಿ ಲ್ಯಾಟಿನ್, ತತ್ತ್ವಶಾಸ್ತ್ರ, ಸಾಹಿತ್ಯ ಮತ್ತು ಸಂಗೀತಗಳನ್ನು ಅಧ್ಯಯನ ಮಾಡಿದ.

ತನ್ನ ಇಪ್ಪತ್ತೊಂಬತ್ತನೆಯ ವಯಸ್ಸಿನಲ್ಲಿ ರೂಸೋ ಪ್ಯಾರಿಸಿಗೆ ತೆರಳಿದ. ಸಾಹಿತ್ಯ, ನಾಟಕ, ಗೀತೆ ಇವುಗಳ ಅಭ್ಯಾಸದಲ್ಲಿ ಹಲವಾರು ಸ್ನೇಹಿತರನ್ನು ಪಡೆದ. ಡೆನಿಸ್ ಡೀಡರೋ ಎಂಬಾತ ಆಗ ಒಂದು ವಿಶ್ವಕೋಶವನ್ನು ರಚಿಸುತ್ತಿದ್ದ. ಅದಕ್ಕೆ ರೂಸೋ ಸಂಗೀತದ ಮೇಲೆ ಲೇಖನಗಳನ್ನು ಬರೆದುಕೊಟ್ಟ.

1750ರಲ್ಲಿ ಕಲೆ ಮತ್ತು ವಿಜ್ಞಾನಗಳನ್ನು ಕುರಿತ ಆತನ ಬರಹ [illegible] ಪಾರಿತೋಷಕ ದೊರೆಯಿತು. ರೂಸೋವಿನ ಹೆಸರು ಪ್ರಖ್ಯಾತವಾಯಿ-

ಇವನು ; ಅವನನ್ನು ಸ್ವೀಕರಿಸಿ ಹೊಗೆಸೊಪ್ಪು ಸೇದಿದರೆ ಅವನು ಮಿತ್ರ, ನಿರಾಕರಿಸಿದರೆ ಶತ್ರು.

ರೆಡ್ ಇಂಡಿಯನರಲ್ಲಿ ಮೈತ್ರಿ-ಯುದ್ಧ ನಿರ್ಧಾರವಾಗುತ್ತಿದ್ದುದು ಹೀಗೆ.

ರೆಡ್ ಇಂಡಿಯನರು ಭಾರತದವರಲ್ಲ; ಅವರು ಅಮೆರಿಕದ ಮೂಲ ನಿವಾಸಿಗಳು. ಅವರದು ತಾಮ್ರವರ್ಣ, ವ್ಯಗ್ರದ ಕಪ್ಪು ಕೂದಲು. ಸುಮಾರು ಮೂವತ್ತು ಸಾವಿರ ವರ್ಷಗಳ ಹಿಂದೆ ಅಮೆರಿಕಕ್ಕೆ ಬಂದು ನೆಲೆಸಿದರೆಂದು ಕಾಣುತ್ತದೆ. ಒಂದು ಕಡೆಯಿಂದ ಇನ್ನೊಂದು ಕಡೆ ಹೋಗುತ್ತ ಅವರು ಉತ್ತರ, ಮಧ್ಯ ಮತ್ತು ದಕ್ಷಿಣ ಅಮೆರಿಕಗಳಲ್ಲಿ ನೆಲೆಸಿರಬೇಕು. 1492ರಲ್ಲಿ ಕೊಲಂಬಸ್ ಅಮೆರಿಕ ತಲಪಿದಾಗ, ತಾನು ಭಾರತಕ್ಕೆ (ಇಂಡಿಯಾಕ್ಕೆ) ಬಂದೆನೆಂದು ತಿಳಿದು ಅವರನ್ನು 'ರೆಡ್ ಇಂಡಿಯನರು' ಎಂದು ಕರೆದ.

ಯೂರೊಪಿಯನರು ಬರುವ ಮೊದಲೇ ರೆಡ್ ಇಂಡಿಯನರ ನಾಗರಿಕತೆ ಅಮೆರಿಕದ ಹಲವು ಭಾಗಗಳಲ್ಲಿ ಮೊಳೆತಿತ್ತು. ಮೆಕ್ಸಿಕೊದಲ್ಲಿ ಟಾಲ್‌ಟೆಕ್ಸ್ ಮತ್ತು ಆಜ್‌ಟೆಕ್ಸ್‌ರು, ಯುಕಟಾನ್‌ನಲ್ಲಿ ಮಾಯಾಗಳು, ಪೆರುವಿನಲ್ಲಿ ಇಂಕಾಗಳು ಇವರ ನಾಗರಿಕತೆಗಳು ಪ್ರಸಿದ್ಧಿ ಪಡೆದಂಥವು. ಇವರೆಲ್ಲ ಕೃಷಿಯನ್ನು ನೆಚ್ಚಿಕೊಂಡಿದ್ದರು. ಕಲ್ಲು ಕಟ್ಟಡಗಳನ್ನು ನಿರ್ಮಿಸುತ್ತಿದ್ದರು.



ಹಿರಿಯ ನಾಗರಿಕತೆಯ ವಾರಸುದಾರರು—ರೆಡ್ ಇಂಡಿಯನರು

ಅವರಿಗೆ ಚಿನ್ನ ಬಂಗಾರದ ಕೆಲಸ ತಿಳಿದಿತ್ತು: ಆದರೆ ಕಬ್ಬಿಣದ ಬಳಕೆ ಇವರಿಗೆ ಗೊತ್ತಿರಲಿಲ್ಲ.

ಮಾಯಾಗಳ ಕಲ್ಲುಕಟ್ಟಡಗಳ ನಗರಗಳು [illegible] ಮೆಕ್ಸಿಕೊ ಅವಶೇಷಗಳಲ್ಲಿ ಕಂಡುಬಂದಿವೆ. ಸೌಮ್ಯಸ್ವಭಾವದ ಕೃಷಿಜೀವಿಗಳು. ಅರ್ಚಕ ವರ್ಗಕ್ಕೆ ಹೆಚ್ಚು ಪ್ರಾಧಾನ್ಯ. ಚಪ್ಪಟೆ ಮೇಲ್ಭಾಗದ ಪಿರಮಿಡ್‌ಗಳಿಂದ (ಇವುಗಳಲ್ಲಿ ಕೆಲವು 66 ಮೀಟರುಗಳಿಗಿಂತ ಹೆಚ್ಚು ಎತ್ತರ ಇದ್ದುವು) ಈ ವಿದ್ವಾಂಸರು ಆಕಾಶದ ಅಧ್ಯಯನ ನಡೆಸುತ್ತಿದ್ದರು: ಪಂಚಾಂಗವನ್ನು ರಚಿಸಿಕೊಂಡಿದ್ದರು. ಸೊನ್ನೆಯನ್ನು ಬಳಸುತ್ತಿದ್ದರೆಂದು ತೋರುತ್ತದೆ. ಆದರೆ ಚಕ್ರದ ಬಳಕೆ, ಪಳಗಿಸಿದ ಪ್ರಾಣಿಗಳ ಉಪಯೋಗ ಇವರಿಗೆ ತಿಳಿದಿರಲಿಲ್ಲ. ಈ ನಾಗರಿಕತೆ ಕ್ರಿಸ್ತಶಕದ ಪ್ರಾರಂಭದಿಂದ ಹದಿನೈದನೆಯ ಶತಮಾನದವರೆಗೆ ಜೀವಂತವಾಗಿತ್ತು. ಮಾಯಾ ವಾಸ್ತುಶಿಲ್ಪ ಪ್ರಾಚೀನ ಜಗತ್ತಿನ ಅತಿಶ್ರೇಷ್ಠ ಶಿಲ್ಪವಿಧಾನಗಳಲ್ಲಿ ಸೇರಿದೆ.

ಟಾಲ್‌ಟೆಕ್ಲರು ಮಧ್ಯ ಮೆಕ್ಸಿಕೊದಲ್ಲಿದ್ದವರು. ಹತ್ತರಿಂದ ಹನ್ನೆರಡನೆಯ ಶತಮಾನಗಳವರೆಗೆ ಉಚ್ಛ್ರಾಯ ಸ್ಥಿತಿಯಲ್ಲಿದ್ದರು. ಹತ್ತನೆಯ ಶತಮಾನದ ಟೊಪಿಲಟ್ಜಿನ್ ಒಳ್ಳೆಯ ಶಿಕ್ಷಣಕ್ರಮವನ್ನು ರೂಪಿಸಿದ. ಹಲವು ದೇವಾಲಯಗಳನ್ನು ಕಟ್ಟಿಸಿದ. ಹನ್ನೆರಡನೆಯ ಶತಮಾನದಲ್ಲಿ ಆಜ್‌ಟೆಕ್ಕರೆಂಬ ಪಂಗಡದವರಿಂದ ಟಾಲ್‌ಟೆಕ್ಸ್‌ರ ರಾಜ್ಯ ಪತನಹೊಂದಿತು.

ಆಜ್‌ಟೆಕ್ಕರು ಉಗ್ರಜನ. ಕ್ರಮೇಣ ಅವರ ನಾಗರಿಕತೆ ಬೆಳೆಯಿತು. ದೇವಾಲಯಗಳೂ ಸುಂದರ ಮನೆಗಳೂ ಕಾಣತೊಡಗಿದುವು. ಇವರು ಹಲವು ಪಂಗಡಗಳನ್ನು ಸೋಲಿಸಿ ಚಕ್ರಾಧಿಪತ್ಯವನ್ನು ಸ್ಥಾಪಿಸಿದರು. ಸಮೃದ್ಧ ಮುಸುಕಿನ ಜೋಳದ ಹೊಲಗಳು. ಸುಂದರ ಮನೆಗಳು. ಮನೋಹರ ಕೊಳದ ಬಳಿ ಆಕರ್ಷಕ ನಗರ – ಇದು ಹದಿನಾರನೆಯ ಶತಮಾನದಲ್ಲಿ ಇವರ ವಾಸಪ್ರದೇಶದ ರೂಪ. ಹಳ್ಳಿಗಳಲ್ಲಿ ಸಮಷ್ಟಿ ಸಾಮಾನ್ಯ. ಪಟ್ಟಣಗಳಲ್ಲಿ ಪ್ರಭಾವಶಾಲಿಗಳಾದ ವ್ಯಕ್ತಿಸಂಘಗಳಿದ್ದುವೆಂದು ತೋರುತ್ತದೆ. ಇವರ ಮುಖ್ಯ ದೇವರು ಹ್ಯುಯಿಟ್ ಜಿಲೊಪೊಕಟ್ಲಿ (ಸೂರ್ಯ ದೇವ). ಪ್ರತಿ ಸಂಜೆ ಮುಳುಗಿದರೂ ಮರುದಿನ ಎದ್ದು ಮನುಷ್ಯನಿಗೆ ಶಾಖ, ಬೆಳಕು ಕೊಡಬೇಕಾದರೆ ಈ ದೇವರಿಗೆ ನರಬಲಿ ಅಗತ್ಯ ಎಂದು ಆಜ್‌ಟೆಕ್ಕರು ನರಬಲಿಗಳನ್ನು ಕೊಡುತ್ತಿದ್ದರು. ಹದಿನಾರನೆಯ ಶತಮಾನದಲ್ಲಿ ಸ್ಪೇನಿನ ದಾಳಿಕಾರರು ಇವರನ್ನು ಸೋಲಿಸಿದರು.

ದಕ್ಷಿಣ ಅಮೆರಿಕದಲ್ಲಿ ಹಲವು ನಾಗರಿಕತೆಗಳು ಕಾಣಿಸಿಕೊಂಡುವು. ಇವುಗಳಲ್ಲಿ ಅತ್ಯಂತ ಪ್ರಸಿದ್ಧವಾದದ್ದು ಇಂಕಾ ನಾಗರಿಕತೆ. ಹನ್ನೆರಡನೆಯ ಶತಮಾನದಿಂದ ಇದು ಪ್ರಬಲವಾಯಿತು. ಇಂಕಾ ಎನ್ನುವುದು ಆಳುವ ಮನೆತನದ ಹೆಸರು. ಪ್ರಾಯಶಃ ಅಮೆರಿಕದ ಆದಿವಾಸಿಗಳಲ್ಲಿ ಮಹಾಪುರುಷ ಎನ್ನಿಸಿಕೊಳ್ಳುವ ಪಚಕ್ಯುಟೆಕನ ಕಾಲದಲ್ಲಿ (1438–71) ಹಲವು ಕಟ್ಟಡಗಳೂ ನಗರಗಳೂ ಸೃಷ್ಟಿಯಾದುವು. ಸುಮಾರು 9,84,200 ಚದರ ಕಿ.ಮೀ.ಗಳ ವಿಸ್ತೀರ್ಣದ ರಾಜ್ಯ ಇವರದು. ಇಂಕಾ ಮನೆತನದವರು ಸೂರ್ಯನ ಮಕ್ಕಳು. ಅತಿಮಾನವರು ಎಂದೇ ಲೆಕ್ಕ. ಬಂಗಾರ ಧರಿಸಲು ಇವರಿಗೆ ಮಾತ್ರ ಹಕ್ಕು. ಉಳಿದವರೆಲ್ಲ ಅವರಿಗಾಗಿ ದುಡಿಯಬೇಕು. ಆದರೆ ಕಟ್ಟುನಿಟ್ಟಿನ ವ್ಯವಸ್ಥೆ ಇತ್ತು. ಹುಟ್ಟಿನಿಂದ ಸಾಯುವವರೆಗೆ ಆಹಾರ, ಬಟ್ಟೆ, ಮನೆ ಎಲ್ಲದರ ಜವಾಬ್ದಾರಿ ಸರ್ಕಾರದ ಮೇಲಿತ್ತು. ಆದರೆ ಜನಸಾಮಾನ್ಯರಿಗೆ ಅಲ್ಪ ಸ್ವಾತಂತ್ರ್ಯವೂ ಇರಲಿಲ್ಲ. ವೈದ್ಯಶಾಸ್ತ್ರ, ಶಸ್ತ್ರಚಿಕಿತ್ಸೆ ವಿಶೇಷವಾಗಿ ಬೆಳೆದಿದ್ದುವು. ಇವರಿಗೆ ಬರಹ ತಿಳಿದಿರಲಿಲ್ಲ. ವಿದ್ಯೆ ಬಾಯಿಯಿಂದ ಬಾಯಿಗೆ ಸಾಗುತ್ತಿತ್ತು.

ರೆಡ್ ಇಂಡಿಯನರಲ್ಲಿ ಕೋಲುಗಳನ್ನು ನೆಟ್ಟು ಅದರ ಮೇಲೆ ಚರ್ಮವನ್ನು ಹೊದಿಸಿಬಿಟ್ಟರೆ ಮನೆ ಆದಂತಾಯಿತು. ಇಂಥ ಮನೆಗೆ ಟಿಪೀ ಎನ್ನುವರು. ಈ ಮನೆ ಅಲೆಮಾರಿ ಜನರಿಗೆ ಅನುಕೂಲವಾಗಿವೆ. [illegible] ಕಡೆಯೇ ನೆಲೆಸುವ ಜನ ಬೆಟ್ಟದ ಮೇಲೆ ಮನೆ ಕಟ್ಟಿಕೊಂಡಿರುತ್ತಾರೆ.

ಅನೇಕ ಬುಡಕಟ್ಟುಗಳಿರುವ ರೆಡ್ ಇಂಡಿಯನರಲ್ಲಿ ಒಬ್ಬೊಬ್ಬರ ಉಡುಪು ಒಂದೊಂದು ಬಗೆ. ತುಪ್ಪಟ, ಬಟ್ಟೆ ಮತ್ತು ಚರ್ಮದಿಂದ ಉಡುಪು ಮಾಡಿಕೊಳ್ಳುತ್ತಿದ್ದರು. ಇವರು ಗರಿಗಳನ್ನು ಧರಿಸುತ್ತಾರೆ. ಪಕ್ಷಿರೂಪದ ದೇವತೆಗಳನ್ನು ಇವರು ಪೂಜಿಸುವುದು ಇದಕ್ಕೆ ಕಾರಣ.

ಬೇಟೆಯಾಡಿ, ಮೀನು ಹಿಡಿದು, ಮುಸುಕಿನ ಜೋಳ ಬೆಳೆದು ರೆಡ್ ಇಂಡಿಯನರು ಆಹಾರ ಒದಗಿಸಿಕೊಳ್ಳುತ್ತಿದ್ದರು. ಕೆಲವು ಪ್ರಾಣಿಗಳನ್ನು ಸಾಕುತ್ತಲೂ ಇದ್ದರು. ಬೇಟೆಗೆ ಬಿಲ್ಲು ಬಾಣವನ್ನೇ ಹೆಚ್ಚಾಗಿ ಉಪಯೋಗಿಸುತ್ತಿದ್ದರು. ಅನೇಕ ಬೋನುಗಳು ಮತ್ತು ಪಾಶಗಳನ್ನು ಬಳಸುತ್ತಿದ್ದರು. ಕೆಲವು ಪಂಗಡಗಳವರಿಗಂತೂ ಮೀನೇ ಮುಖ್ಯ ಆಹಾರವಾಗಿತ್ತು. ಹೆಂಗಸರು ಉಳುಮೆ ಬಿತ್ತನೆಗಳಲ್ಲಿ ನಿರತರಾದಾಗ ಗಂಡಸರು ಬೇಟೆಗೆ ಹೊರಗೆ ಹೋಗುತ್ತಿದ್ದರು. ನಾಯಿ, ಲಾಮ, ಪಿಲ್ಟೇಕ, ಜೇನು ಹುಳುಗಳನ್ನು ಸಾಕುತ್ತಿದ್ದರು. 3,000 ವರ್ಷಗಳಿಂದೀಚೆಗೆ ವ್ಯವಸಾಯ ಮಾಡಲು ಪ್ರಾರಂಭಿಸಿದರು. ಆಲೂಗಡ್ಡೆ, ಗೆಣಸು, ಬಟಾಣಿ, ಅನಾನಸ್, ಕುಂಬಳಕಾಯಿ, ಟೊಮಾಟೊ, ಮೆಣಸು, ಕೋಕೋ, ಹತ್ತಿ ಮತ್ತು ರಬ್ಬರ್‌ಗಳನ್ನು ಬೆಳೆಯಲಾರಂಭಿಸಿದರು.

ಇವರ ಪಂಗಡಗಳೊಳಗೆ ಯುದ್ಧವಾಗುವುದೂ ಇತ್ತು. ಯುದ್ಧಕ್ಕೆ ಮುಂಚೆ ಸಂತೋಷಕೂಟವಿರುತ್ತಿತ್ತು. ಜಯ ಚಿಹ್ನೆಯಾಗಿ ಶತ್ರುವಿನ ನೆತ್ತಿಯ ಭಾಗ, ತಲೆ ಅಥವಾ ಮತ್ತೇನನ್ನಾದರೂ ತೆಗೆದುಕೊಳ್ಳುತ್ತಿದ್ದರು. ಒಪ್ಪಂದ ಮತ್ತಿತರ ಔಪಚಾರಿಕ ಕರಾರುಗಳನ್ನು ಮಾಡಿಕೊಂಡು ಶಂಖ ಮಣಿಸರಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುತ್ತಿದ್ದರು.

ಯೂರೋಪಿಯನರು ಬರುವುದಕ್ಕೆ ಮೊದಲು ಇಂಡಿಯನರು ಕಾಲ್ನಡಿಗೆಯಲ್ಲೇ ಪ್ರಯಾಣ ಮಾಡುತ್ತಿದ್ದರು. ಬಯಲು ಪ್ರದೇಶದಲ್ಲಿ ಸಾಮಾನುಗಳನ್ನು ನಾಯಿ ಹೊರುತ್ತಿತ್ತು ಅಥವಾ ಎಳೆಯುತ್ತಿತ್ತು. ನೀರು ದಾಟಲು ದೋಣಿಗಳನ್ನು ಉಪಯೋಗಿಸುತ್ತಿದ್ದರು. ಯೂರೋಪಿಯನರೊಡನೆ ಕುದುರೆಗಳೂ ಬಂದುವು.

ರೆಡ್ ಇಂಡಿಯನರು ದುಷ್ಟ ಶಕ್ತಿಗಳನ್ನು ಓಡಿಸಲು, ಬೇಟೆ ಚೆನ್ನಾಗಿ ಬರಲು, ಯುದ್ಧದಲ್ಲಿ ಜಯ ಹೊಂದಲು ನರ್ತಿಸುತ್ತಿದ್ದರು. ದೇಹದ ಮೇಲೆಲ್ಲಾ ಬಣ್ಣ ಹಚ್ಚಿಕೊಂಡು ಗಂಟೆಗಳ ಕಾಲ ಮತಸಂಬಂಧದ ನರ್ತನಗಳನ್ನು ಮಾಡುತ್ತಿದ್ದರು. ಕಥಾವಸ್ತುವನ್ನೊಳಗೊಂಡ ನೃತ್ಯಗಳೂ ಇರುತ್ತಿದ್ದುವು. ಮೂಢನಂಬಿಕೆ ಮತ್ತು ಯಕ್ಷಿಣಿ ಅವರ ಜೀವನದಲ್ಲಿ ಹಾಸುಹೊಕ್ಕಾಗಿದ್ದುವು.

ಮಡಕೆ ಮುಂತಾದ ಮಣ್ಣಿನ ವಸ್ತುಗಳು, ನೆಯ್ಗೆ, ಅಮೂಲ್ಯ ಲೋಹಗಳ ಕೆಲಸದಲ್ಲಿ ರೆಡ್ ಇಂಡಿಯನರ ಕಲೆಗಾರಿಕೆ ವ್ಯಕ್ತವಾಗುತ್ತದೆ. ಮಣ್ಣಿನ ಕೆಲಸದಲ್ಲಿ ಇವರು ನಿಷ್ಣಾತರು.

ಯೂರೋಪಿಯನರೊಡನೆ ನಡೆದ ಯುದ್ಧಗಳಲ್ಲಿ ಸಾವಿರಾರು ಇಂಡಿಯನರು ಮಡಿದರು. ರೆಡ್ ಇಂಡಿಯನರ ಸಂಖ್ಯೆ ಮೊದಲಿಗಿಂತ ಬಹಳ ಕಡಮೆಯಾಗಿದೆ. ಕೊಲಂಬಸ್ ಬಂದಾಗ ಅಮೆರಿಕದ ರೆಡ್ ಇಂಡಿಯನರ ಸಂಖ್ಯೆ ಹತ್ತು ಲಕ್ಷದಿಂದ ಮೂವತ್ತು ಲಕ್ಷ. 1864ರ ಹೊತ್ತಿಗೆ ಈ ಸಂಖ್ಯೆ 3,40,000, 1910ರ ಹೊತ್ತಿಗೆ 2,20,000 ಆಯಿತು. ಮತ್ತೆ ಅವರ ಸಂಖ್ಯೆ ಏರಿ ಈಗ ಆರೂವರೆ ಲಕ್ಷ ರೆಡ್ ಇಂಡಿಯನರಿದ್ದಾರೆ.

ಅಮೆರಿಕಕ್ಕೆ ಬಿಳಿಯ ಜನಾಂಗ ಪ್ರವೇಶಿಸಿದ ಮೇಲೆ ಅವರನ್ನು ಇದಿರಿಸಲು ಶಕ್ತರಾಗದೆ ರೆಡ್ ಇಂಡಿಯನರು ಮೂಲೆ ಪಾಲಾದರು. ರೆಡ್ ಇಂಡಿಯನರನ್ನು ಅಮೆರಿಕದ ಪೌರರೆಂದು ಗಣಿಸಿ ಮತ ನೀಡುವ ಹಕ್ಕನ್ನು ಕೊಡಲಾಯಿತು. ಈಗ [illegible] ಅಧಿಕಾರಿಗಳಾಗಿದ್ದಾರೆ. [illegible] ಅಮೆರಿಕದ ಬಿಳಿಯ ಜನಾಂಗ [illegible] ಇವರು ಅಸಮಾಧಾನವನ್ನು ಮಾತ್ರ ಈಗಲೂ ವ್ಯಕ್ತಪಡಿಸುವುದುಂಟು. ನಿಸರ್ಗದ ಮಕ್ಕಳಾಗಿ ಪ್ರಶಾಂತ ವಾತಾವರಣದಲ್ಲಿ ಬಾಳುವ ಜೀವನ ವಿಧಾನವನ್ನು ಉಳಿಸಿಕೊಳ್ಳಲು ಇವರಲ್ಲಿ ಹಲವರು ಬಯಸುತ್ತಾರೆ.

## ರೆಡ್ ಕ್ರಾಸ್

[illegible] ಅಂಬ್ಯುಲೆನ್ಸ್ [illegible] ಅಂಬ್ಯುಲೆನ್ಸ್ [illegible] ಗಾಡಿಯ [illegible].

ಯುದ್ಧದಲ್ಲಿ ಚಲಿಸುವ ಚಿಕಿತ್ಸಾಲಯವಾಗಿ ಅಂಬ್ಯುಲೆನ್ಸ್ ಅವತರಿಸಿತು. ಈ [illegible] ಬಣ್ಣ. ಮೇಲೆ ಕೆಂಪು ಶಿಲುಬೆ. ರೆಡ್ ಕ್ರಾಸ್ ಸಂಸ್ಥೆಯ ಒಂದು ವಿಭಾಗವಾಗಿ ಕೆಲಸ ಮಾಡುತ್ತದೆ, ಸೇಂಟ್ ಜಾನ್ ಆಂಬ್ಯುಲೆನ್ಸ್ ಸಂಸ್ಥೆ. ಬಿಳಿಯ ಬಣ್ಣದ ಮೇಲೆ ಕೆಂಪು ಶಿಲುಬೆ ರೆಡ್ ಕ್ರಾಸ್ ಸಂಸ್ಥೆಯ ಗುರುತು. ಇದು ರಾಜ್ಯ ರಾಷ್ಟ್ರಗಳ [illegible] ಎಲ್ಲ ದೇಶದವರನ್ನೂ ಸಂಕಟ ಕಾಲದಲ್ಲಿ [illegible] ಸಂಸ್ಥೆ. ಎಲ್ಲಿಯೇ ಯುದ್ಧ ನಡೆದರೂ ಗಾಯಗೊಂಡವರ ಚಿಕಿತ್ಸೆ, [illegible] ರೆಡ್ ಕ್ರಾಸ್ ಸಂಸ್ಥೆಯ [illegible]. ಗಾಯಗೊಂಡವರು ಯಾವ [illegible] ಇರಲಿ ಅವರನ್ನು ಅಂತಃಕರಣ ಪೂರ್ವಕವಾಗಿ ಉಪಚರಿಸಲಾಗುವುದು.

ರೆಡ್ ಕ್ರಾಸ್ ಸಂಸ್ಥೆ ಹುಟ್ಟಿದ್ದು ಒಂದು ಯುದ್ಧ ಸನ್ನಿವೇಶದಲ್ಲಿ; ಜಿನೀವಾದ ಹೆನ್ರಿ ಡ್ಯುನಾನ್ ಎಂಬವನ ಮನಸ್ಸಿನಲ್ಲಿ. ಈತ ಲೇವಾದೇವಿಗಾರನಾಗಿದ್ದ. 1859ರ ಬೇಸಿಗೆ. ಆಸ್ಟ್ರಿಯನರಿಗೂ ಫ್ರೆಂಚರು ಹಾಗೂ ಇಟಾಲಿಯನರಿಗೂ ಹಿಂದಿನ ದಿನವಷ್ಟೇ ಸೊಲ್‌ಫೆರಿನೊ ಎಂಬಲ್ಲಿ ಭೀಕರ ಯುದ್ಧ ನಡೆದಿದ್ದಿತು. 40,000ಕ್ಕೂ ಮೀರಿದ ಸಂಖ್ಯೆಯಲ್ಲಿ ಗಾಯಾಳುಗಳೂ ಜೀವಚ್ಛವವಾಗಿದ್ದವರೂ ಸತ್ತವರೊಂದಿಗೆ ಯುದ್ಧಭೂಮಿಯಲ್ಲಿ ಉರುಳಿದ್ದರು. ಅಸಹಾಯಕರಾಗಿ ನರಳುತ್ತಿದ್ದ ಈ ಯೋಧರನ್ನು ಕಂಡ ಡ್ಯುನಾನ್ [illegible] ಸಂದಿತು.

ಡ್ಯುನಾನ್ [illegible] 'ಸೊಲ್‌ಫೆರಿನೋದ ಸ್ಮರಣೆ' ಎಂಬ ಕಿರು [illegible]

ಹೃದಯಸ್ಪರ್ಶಿಯಾಗಿ ವಿವರಿಸಿ ಪ್ರಕಟಿಸಿದ. ಈ ಚಿಕ್ಕ ಪುಸ್ತಕ ಇತಿಹಾಸದ ಮಹತ್ತರ ಬರವಣಿಗೆಗಳಲ್ಲಿ ಒಂದೆಂದು ಪರಿಗಣಿಸಲ್ಪಟ್ಟಿದೆ. ಇದರಲ್ಲಿ ಎಲ್ಲ ಕಾಲ ಎಲ್ಲ ದೇಶಗಳಲ್ಲಿ, ಎಂದೆಂದಿಗೂ ನೆರವಿಗೆ ಬರುವ, ಮಿತ್ರ ಶತ್ರುಗಳೆನ್ನದೆ ಸೇವೆ ಮಾಡುವ ಸ್ವಯಂಸೇವಕ ದಳದ ಅಪೂರ್ವ ಕಲ್ಪನೆಯನ್ನು ಡ್ಯೂನಾನ್ ಚಿತ್ರಿಸಿದ. ಇಂಥ ದಳದ ಸ್ಥಾಪನೆಗಾಗಿ ಕಾರ್ಯಾರಂಭ ಮಾಡಿದ. 1901ರಲ್ಲಿ ಶಾಂತಿ ಸಾಧನೆಗಾಗಿ ನೀಡಿದ ಪ್ರಥಮ ನೊಬೆಲ್ ಬಹುಮಾನ ಹೆನ್ರಿ ಡ್ಯುನಾನನಿಗೆ ದೊರಕಿತು. ತನಗೆ ಬಂದ ಪ್ರಶಸ್ತಿಯ ಹಣವನ್ನು ಧರ್ಮಸಂಸ್ಥೆಗಳಿಗೇ ಡ್ಯೂನಾನ್ ನೀಡಿದ. ಇವನ ಜನ್ಮದಿನ ಮೇ 8, ಜಾಗತಿಕ ರೆಡ್ ಕ್ರಾಸ್ ದಿನವೆಂದು ಆಚರಿಸಲ್ಪಡುತ್ತದೆ.

ರೆಡ್ ಕ್ರಾಸಿಗೆ ತನ್ನದೆಲ್ಲವನ್ನೂ ಧಾರೆಯೆರೆದ ಡ್ಯೂನಾನ್ 1867ರಲ್ಲಿ ಈ ಸಂಸ್ಥೆಗೆ ರಾಜೀನಾಮೆ ನೀಡುವ ಪರಿಸ್ಥಿತಿಯೊದಗಿತು. 13 ವರ್ಷಗಳ ಕಾಲ ಅಜ್ಞಾತನಾಗಿದ್ದು 1910ರಲ್ಲಿ ಮರಣಹೊಂದಿದ.

1864ರ ಅಕ್ಟೋಬರ್ ತಿಂಗಳಲ್ಲಿ 16 ರಾಷ್ಟ್ರಗಳು ಒಂದು ಸಮ್ಮೇಳನವನ್ನು ನಡೆಸಿದುವು. ಇದರಲ್ಲಿ ಎಲ್ಲ ದೇಶಗಳೂ ಈ ರೀತಿ ಚಿಕಿತ್ಸೆ ನೀಡುವ ಸ್ವಯಂಸೇವಕರ ತಂಡವನ್ನು ಸೇರಿಸಬೇಕೆಂಬ ಅಭಿಪ್ರಾಯ ವ್ಯಕ್ತವಾಯಿತು. ಇಂಥ ಸ್ವಯಂಸೇವಕರ ತಂಡಗಳೇ ರೆಡ್ ಕ್ರಾಸ್ ಸಂಸ್ಥೆಗಳಾಗಿ ಮಾರ್ಪಾಡು ಹೊಂದಿದುವು. ಈಗ ವಿಖ್ಯಾತವೆನಿಸಿರುವ ಜಿನೀವಾ ಒಪ್ಪಂದವೆಂಬುದು ಇದೇ. 1864ರ ತರುವಾಯ ಜಿನೀವಾ ಒಪ್ಪಂದವನ್ನು ಮೂರು ಬಾರಿ ಪುನರ್ವಿಮರ್ಶಿಸಲಾಗಿದೆ. ಈ ಒಪ್ಪಂದದ ಮೂಲ ತತ್ತ್ವಗಳು ಹೀಗಿವೆ: ಯುದ್ಧರಾಷ್ಟ್ರಗಳು ಯುದ್ಧಕೈದಿಗಳಿಗೆ ಮತ್ತು ಗಾಯಗೊಂಡ ಯೋಧರಿಗೆ ರಾಷ್ಟ್ರಭೇದವೆಣಿಸದೆ ಇಂಥ ಚಿಕಿತ್ಸೆಯ ನೆರವನ್ನು ಒದಗಿಸಬೇಕು. ಈ ಕಾರ್ಯದಲ್ಲಿ ತೊಡಗಿರುವ ವಾಹನಗಳು, ಚಿಕಿತ್ಸಾಲಯಗಳು, ವೈದ್ಯರು, ದಾದಿಯರು ಮತ್ತಿತರ ಸಂಬಂಧಪಟ್ಟವರೆಲ್ಲರಿಗೂ ರಕ್ಷಣೆ ನೀಡಬೇಕು. ಸಂಸ್ಥೆಯ ಸಿಬ್ಬಂದಿ ಮತ್ತು ಕಾರ್ಯಸ್ಥಳಗಳನ್ನು ಗುರುತಿಸಲು ಒಂದು ಚಿಹ್ನೆ ಅಗತ್ಯವಾಯಿತು. ಡ್ಯೂನಾನನ ದೇಶವಾದ ಸ್ವಿಟ್ಜರ್‌ಲೆಂಡಿನ ಬಾವುಟದಲ್ಲಿ ಕೆಂಪು ಭಾಗದ ಮೇಲೆ ಬಿಳಿಯ ಶಿಲುಬೆಯಿದೆ. ಇದನ್ನೇ ಆಧರಿಸಿ ಬಿಳಿಬಣ್ಣದ ಮೇಲೆ ಕೆಂಪು ಶಿಲುಬೆ ಮೂಡಿಸಿ ರೆಡ್ ಕ್ರಾಸ್ ಸಂಸ್ಥೆ ತನ್ನ ಸಂಕೇತವನ್ನು ಅಳವಡಿಸಿಕೊಂಡಿತು. ಕೆಲವು ರಾಷ್ಟ್ರಗಳ ರೆಡ್ ಕ್ರಾಸ್ ಸಂಸ್ಥೆಗಳು ಚಿಹ್ನೆಯನ್ನು ಸ್ವಲ್ಪ ಮಾರ್ಪಡಿಸಿಕೊಂಡಿವೆ.

ರಾಷ್ಟ್ರೀಯ ರೆಡ್ ಕ್ರಾಸ್ ಸಂಸ್ಥೆಗಳು ಸಂಯುಕ್ತ ರೆಡ್ ಕ್ರಾಸ್ ಸಂಘದ ಸದಸ್ಯ ಸಂಸ್ಥೆಗಳಾಗಿವೆ. ಜಿನೀವಾದ ಅಂತರರಾಷ್ಟ್ರೀಯ ರೆಡ್ ಕ್ರಾಸ್ ಸಮಿತಿಯ ಸದಸ್ಯರೆಲ್ಲರೂ ಸ್ವಿಟ್ಜರ್‌ಲೆಂಡಿನ ಪ್ರಜೆಗಳು. ಆ ದೇಶದ ತಾಟಸ್ಥ್ಯ ನೀತಿಯ ದೆಸೆಯಿಂದ ಅದು ರೆಡ್ ಕ್ರಾಸ್ ಚಟುವಟಿಕೆಯ ಮುಖ್ಯ ಸಮಿತಿಯೆನಿಸಿದೆ. ಈ ಸಮಿತಿಯು ಯುದ್ಧ ಅಥವಾ ವಿವಾದವಿರುವ ರಾಷ್ಟ್ರಗಳ ನಡುವಣ ಸಂಪರ್ಕ ಮಾಧ್ಯಮವಾಗಿ ಕೆಲಸ ಮಾಡಬಲ್ಲುದು. ಅವುಗಳ ಯುದ್ಧಕೈದಿಗಳ ಅವಶ್ಯತೆಗಳನ್ನು ಪೂರೈಸಬಹುದು. ಮತ್ತು ಯುದ್ಧಕೈದಿಗಳನ್ನು ಬಂಧಿಸಿಟ್ಟಿರುವ ತಾಣಗಳಿಗೆ ಭೇಟಿ ಕೊಡಬಹುದು.

ರೆಡ್ ಕ್ರಾಸ್ ಸಂಸ್ಥೆಯ ಚಟುವಟಿಕೆಗಳು ಯುದ್ಧಕಾಲದಲ್ಲಿ ಮಾತ್ರವಲ್ಲ. ಶಾಂತಿ ಕಾಲದಲ್ಲೂ ಹೇರಳವಾಗಿ ನಡೆಯುತ್ತವೆ. ಬೆಂಕಿ, ಪ್ರವಾಹ, ಭೂಕಂಪ, ಸಾಂಕ್ರಾಮಿಕ ರೋಗ ಮೊದಲಾದ ಅನಾಹುತಗಳಾದಾಗ ಜನರ ಸೇವೆಗೆ ರೆಡ್‌ಕ್ರಾಸ್ ಸಂಸ್ಥೆ ಸರ್ವದಾ ಸಿದ್ಧವಿರುತ್ತದೆ. ಅದರೆ ಈ [illegible] ಪ್ರಥಮ ಚಿಕಿತ್ಸೆ ರೆಡ್ ಕ್ರಾಸಿನ [illegible]

ಇದಲ್ಲದೆ ರಕ್ತದ ಸಂಗ್ರಹಣೆ, ಪ್ರವಾಹ, ಬೆಂಕಿ, ಭೂಕಂಪಗಳಿಂದ ಪೀಡಿತರಾದವರಿಗೆ ಬಟ್ಟೆ, ಆಹಾರ ಮೊದಲಾದುವನ್ನು ಒದಗಿಸಿ ಕಷ್ಟ ಪರಿಹಾರ ಮಾಡುತ್ತದೆ. ರೆಡ್ ಕ್ರಾಸ್ ಸದಸ್ಯರು ಆಸ್ಪತ್ರೆಗಳ ರೋಗಿಗಳನ್ನು ಗೆಲುವಾಗಿಸಿ, ಉಲ್ಲಾಸಗೊಳ್ಳುವಂತೆ ಮಾಡುತ್ತಾರೆ. ಅವರಿಗೆ ಹಲವು ರೀತಿಗಳಲ್ಲಿ ನೆರವಾಗುತ್ತಾರೆ.

ರೆಡ್ ಕ್ರಾಸ್ ಸಂಸ್ಥೆಯ ಎಳೆಯರ ವಿಭಾಗವು ಪ್ರಚಾರಕ್ಕೆ ಬಂದದ್ದು 1917ರಲ್ಲಿ. ಶಾಂತಿ ಸೌಹಾರ್ದ ಹಾಗೂ ಸೇವಾಧರ್ಮ ಮನೋಭಾವನೆಯನ್ನು ಅವರಲ್ಲಿ ಜಾಗೃತಗೊಳಿಸುವುದಕ್ಕಾಗಿ ಈ ವಿಭಾಗವು ಆರಂಭವಾಯಿತು. ಒಬ್ಬರು ಇನ್ನೊಬ್ಬರಿಗೆ ನೆರವಾಗಬೇಕು ಎಂಬುದೇ 'ಜೂನಿಯರ್ ರೆಡ್ ಕ್ರಾಸ್' ಸಂಸ್ಥೆಯ ನಿಯಮ. ಪ್ರಪಂಚಾದ್ಯಂತ ಐದೂವರೆ ಕೋಟಿಗೂ ಮೀರಿದ ಕಿರಿಯ ಸದಸ್ಯರಿದ್ದಾರೆ ಈ ವಿಭಾಗದಲ್ಲಿ. ಜೀವ ಮತ್ತು ಆರೋಗ್ಯದ ರಕ್ಷಣೆ, ಗಾಯಗೊಂಡವರಿಗೆ, ರೋಗಿಗಳಿಗೆ, ದುಃಖಿಗಳಿಗೆ ಸೇವೆ, ಅಂತರರಾಷ್ಟ್ರೀಯ ಸ್ನೇಹ ಇವು ಮೂರು ಕಿರಿಯರ ಸಂಸ್ಥೆಯ ಮುಖ್ಯ ಉದ್ದೇಶಗಳು. ಆಸ್ಪತ್ರೆ, ಕುರುಡರ ಶಾಲೆ, ಅನಾಥ ಶಿಶುವಿಹಾರ ಮೊದಲಾದ ಸಂಸ್ಥೆಗಳಲ್ಲಿ ಈ ಕಿರಿಯರು ಕೆಲಸ ಮಾಡುತ್ತಾರೆ. ಶಾಲೆಗಳಲ್ಲಿ ಪ್ರಥಮ ಚಿಕಿತ್ಸೆ ಮತ್ತಿತರ ರೆಡ್ ಕ್ರಾಸ್ ಚಟುವಟಿಕೆಗಳ ಬಗೆಗೆ ವಿದ್ಯಾರ್ಥಿಗಳಿಗೆ ಪರಿಚಯ ಮಾಡಿಕೊಟ್ಟು ಪರೀಕ್ಷೆ ನಡೆಸುತ್ತಾರೆ. ಉತ್ತೀರ್ಣರಾದವರಿಗೆ ಪ್ರಶಸ್ತಿಗಳನ್ನೂ ನೀಡಲಾಗುತ್ತದೆ.

ರೆಡ್ ಕ್ರಾಸ್ ಸಂಸ್ಥೆ ಸ್ವಯಂಸೇವಕರ ಒಂದು ಮಹಾ ತಂಡ. ಅಂದರೆ ಇದು ತಾವಾಗಿಯೇ ಇಷ್ಟಪಟ್ಟು ಸೇವೆಗಾಗಿ ಟೊಂಕಕಟ್ಟಿ ನಿಲ್ಲುವವರ ಸಂಸ್ಥೆ. ಕಿರಿಯ ಸದಸ್ಯರ ಸಂಖ್ಯೆ ಸುಮಾರು ಹತ್ತು ಕೋಟಿ. ಭಾರತದಲ್ಲಿ ವಯಸ್ಕ ಸದಸ್ಯರ ಸಂಖ್ಯೆ 2,16,000. ಎಳೆಯ ಸದಸ್ಯರು 46,21,000. ಭಾರತೀಯ ರೆಡ್ ಕ್ರಾಸ್ ಸಂಸ್ಥೆಯು 1920ರಲ್ಲಿ ಭಾರತೀಯ ವಿಧಾಯಕ ಸಭೆಯ ಕಾಯಿದೆಯೊಂದಕ್ಕೆ ಅನುಗುಣವಾಗಿ ಸ್ಥಾಪಿಸಲ್ಪಟ್ಟಿತು. 1970ರಲ್ಲಿ ಇದರ ಚಿನ್ನದ ಹಬ್ಬ. ರೆಡ್ ಕ್ರಾಸ್ ಯುದ್ಧ ಜಂಜಾಟಗಳಲ್ಲಿ ತೊಡಗಿರುವ ರಾಷ್ಟ್ರಗಳ ಮಧ್ಯೆ ಮಾನವೀಯತೆಯ ಧ್ಯೇಯಗಳುಳ್ಳ ಸಂಸ್ಥೆಯಾಗಿ ಮೆರೆಯುತ್ತಿದೆ.

## ರೈಲು

ಎರಡನೆಯ ಮಹಾಯುದ್ಧದ ಕಾಲದಲ್ಲಿ ಅಮೆರಿಕದ ಸಂಯುಕ್ತ ಸಂಸ್ಥಾನದಲ್ಲಿ ವ್ಯವಸ್ಥಿತ ಗುಂಪುಗಳಾಗಿ ಶೇಕಡಾ 95 ಮಂದಿ ಸೈನಿಕರು ಪ್ರಯಾಣ ಮಾಡಿದುದು ರೈಲಿನಲ್ಲಿ; ಯುದ್ಧಕ್ಕೆ ಸಂಬಂಧಿಸಿದಂತೆ ಒಳನಾಡಿನಲ್ಲಿ ಸಾಮಾನು ಸಾಗಾಣಿಕೆಯಲ್ಲಿ ನೂರಕ್ಕೆ 90 ಭಾಗ ರೈಲುಗಳು ಹೊತ್ತುವು.

ಪ್ರತಿನಿತ್ಯ ಭಾರತದಲ್ಲಿ ಐವತ್ತೆಂಟು ಲಕ್ಷ ಜನ ರೈಲುಗಳಲ್ಲಿ ಪ್ರಯಾಣ ಮಾಡುತ್ತಾರೆ.

ಶಾಂತಿ ಕಾಲದಲ್ಲಾಗಲಿ, ಯುದ್ಧ ಕಾಲದಲ್ಲಾಗಲಿ, ದೇಶದ ಜೀವನದಲ್ಲಿ ರೈಲ್ವೆ ಬಹು ಮುಖ್ಯ ಪಾತ್ರವಹಿಸುತ್ತದೆ.

[illegible]

ರೋಮಿನಲ್ಲಿ 450 ಕ್ರೈಸ್ತ ದೇವಾಲಯಗಳಿವೆ. ಇವುಗಳಲ್ಲಿ ಅತ್ಯಂತ ಭವ್ಯವಾದದ್ದು ಸಂತ ಪೀಟರನ ಇಗರ್ಜಿ.

ಅನೇಕ ಚಿತ್ರಕಲಾಶಾಲೆಗಳಲ್ಲಿ, ಸಂಗ್ರಹಾಲಯಗಳಲ್ಲಿ, ಹಳೆಯ ಕಲಾ ವಸ್ತುಗಳು ಶೇಖರಿಸಲ್ಪಟ್ಟಿವೆ.

ರೋಮಿನಲ್ಲಿ ಟೈಬರ್‌ನದಿ ಹರಿಯುತ್ತದೆ. ಅದಕ್ಕೆ ಹಲವಾರು ಕಲ್ಲು ಸೇತುವೆ ಕಟ್ಟಿದ್ದಾರೆ. ಇವುಗಳಲ್ಲಿ ಅತ್ಯಂತ ಪ್ರಾಚೀನವಾದದ್ದು ಮತ್ತು ಅತ್ಯಂತ ಉದ್ದವಾದದ್ದು ಕ್ರಿ. ಪೂ. ಎರಡನೆಯ ಶತಮಾನದಲ್ಲಿ ಕಟ್ಟಿದ ಪಾಂಟೆ ಮಿಲ್‌ವಿಯೋ ಸೇತುವೆ. ಮೊದಲು ರೋಮ್ ಪಟ್ಟಣವನ್ನು ಏಳು ಬೆಟ್ಟಗಳ ಮೇಲೆ ಕಟ್ಟಲಾಗಿತ್ತು. ಆದರೆ ಈಗ ಕೆಲವು ಬೆಟ್ಟಗಳು ನೆಲಸಮವಾಗಿವೆ.

ರೋಮಿನ ಏಳು ಬೆಟ್ಟಗಳಲ್ಲಿ ಒಂದು ಕ್ವಿರಿನೇಲ್. ಇದರ ಮೇಲಿರುವ ಭವ್ಯ ಭವನ ಹಿಂದೆ ಪೋಪರ ಬೇಸಿಗೆಯ ನಿವಾಸವಾಗಿತ್ತು. ಇಟಲಿಯ ಆಡಳಿತ ಪೋಪರಿಂದ ರಾಜರಿಗೆ ಬಂದಾಗ ಇದು ರಾಜನ ಅರಮನೆಯಾಯಿತು. 1947ರಿಂದ ಇದು ಇಟಲಿಯ ಗಣರಾಜ್ಯದ ಅಧ್ಯಕ್ಷನ ನಿವಾಸವಾಗಿದೆ.

ರೋಮ್ ನಗರದಲ್ಲಿ ಹಲವಾರು ಕಾರಖಾನೆಗಳಿವೆ. ಪ್ರವಾಸೋದ್ಯಮದಿಂದ ಬಹಳ ಮಟ್ಟಿನ ಆದಾಯವಿದೆ. ರೋಮಿನ ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ಪ್ರತಿವರ್ಷವೂ ಹತ್ತು ಲಕ್ಷ ಜನ ಪ್ರವಾಸಿಗಳಿಗೆ ಸ್ವಾಗತ ನೀಡುತ್ತದೆ. 1960ರಲ್ಲಿ ಒಲಿಂಪಿಕ್ ಕ್ರೀಡೆಗಳು ರೋಮ್ ನಗರದಲ್ಲಿ ನಡೆದುವು.

ರೋಮಿನ ಸ್ಥಾಪನೆಯ ಬಗೆಗೆ ಒಂದು ಪೌರಾಣಿಕ ಕಥೆಯಿದೆ.

ಒಂದು ದಿನ ಹೆಣ್ಣು ತೋಳವೊಂದು ಅವಳಿಜವಳಿ ಮಕ್ಕಳಿಬ್ಬರನ್ನು ನೋಡಿತು. ಅವರು ಪ್ರಕೃತಿ ದೇವನೊಬ್ಬನ ಮಕ್ಕಳು. ನೋಡಿಕೊಳ್ಳುವವರು ಯಾರೂ ಇರಲಿಲ್ಲ. ಆ ಮಕ್ಕಳನ್ನು ತೋಳ ಸಾಕಿತು. ರೋಮ್ಯುಲಸ್ ಮತ್ತು ರೀಮಸ್ ಎಂಬ ಹೆಸರಿನ ಆ ಮಕ್ಕಳು ರೋಮ್ ನಗರವನ್ನು ಕಟ್ಟಿದರು.

ಕ್ರಿ. ಪೂ. 753ರಲ್ಲಿ ರೋಮ್ ನಗರದ ಸ್ಥಾಪನೆಯಾಯಿತೆಂದು ಹೇಳುತ್ತಾರೆ. ಕೋಟೆಯೊಳಗಿನ ಹಳ್ಳಿಯೊಂದರಲ್ಲಿ ಸಣ್ಣ ವ್ಯಾಪಾರಸ್ಥಳವಾಗಿ ಆರಂಭವಾದದ್ದು ಬೆಳೆದು ರೋಮ್ ನಗರವಾಯಿತು.

ಮೊದಲು ರಾಜರ ಆಡಳಿತದಲ್ಲಿ, ಅನಂತರ ಗಣರಾಜ್ಯವಾಗಿ ರೋಮ್ ತನ್ನ ಎಲ್ಲೆಯನ್ನು ವಿಸ್ತರಿಸಿತು. ಕ್ರಿ. ಪೂ. 27ರ ಹೊತ್ತಿಗೆ ರೋಮ್ ಚಕ್ರಾಧಿಪತ್ಯವಾದ ಮೇಲೆ ಆಗ ಪರಿಚಿತವಾಗಿದ್ದ ಪಾಶ್ಚಾತ್ಯ ಜಗತ್ತಿನ ಬಹುಭಾಗದ ಒಡೆತನ ಅವರದಾಯಿತು. 98ರಿಂದ 117ರ ವರೆಗೆ ಆಳಿದ ಟ್ರಾಜನ್ ಚಕ್ರವರ್ತಿಯ ಆಳ್ವಿಕೆಯ ಕಾಲದಲ್ಲಿ ರೋಮ್ ವಿಸ್ತಾರಗೊಂಡಿತು. ಆಗ ಭೂಮಧ್ಯ ಸಮುದ್ರ ತೀರ ಪ್ರದೇಶವಲ್ಲದೆ ಆಸ್ಟ್ರಿಯ, ಬಾಲ್ಕನ್ಸ್, ಹಂಗೆರಿ, ಬ್ರಿಟನ್, ಪೋರ್ಚುಗಲ್, ಫ್ರಾನ್ಸ್, ಸ್ವಿಟ್ಜರ್‌ಲೆಂಡ್ ಮತ್ತು ಏಷ್ಯಾ ಮೈನರಿನ ಸ್ವಲ್ಪ ಭಾಗ ಇವೆಲ್ಲವೂ ರೋಮಿನ ಆಳ್ವಿಕೆಗೆ ಒಳಗಾಯಿತು.

ಐದನೆಯ ಶತಮಾನದಲ್ಲಿ ಜರ್ಮನಿಯ ಅನಾಗರಿಕ ಜನಗಳು ರೋಮಿನ ಮೇಲೆ ದಾಳಿ ಮಾಡಿದರು. 476ರಲ್ಲಿ ರೋಮನ್ ಚಕ್ರಾಧಿಪತ್ಯದ ಪಶ್ಚಿಮ ರಾಜಧಾನಿಯಾಗಿದ್ದ ರೋಮ್ ಪತನಗೊಂಡಿತು.

1870ರಲ್ಲಿ ಇಟಲಿಯ ಎಲ್ಲ ಭಾಗಗಳೂ ಒಂದುಗೂಡಿದ ಮೇಲೆ ರಾಜನೊಬ್ಬ ಅದರ ನಾಯಕನಾದ. ರೋಮ್ ರಾಜಧಾನಿಯಾಯಿತು.

## ರೋಮನ್ ಚಕ್ರಾಧಿಪತ್ಯ

ಸಣ್ಣ ನಗರವಾಗಿದ್ದ ರೋಮ್ ಬೆಳೆದು ಮಹಾಚಕ್ರಾಧಿಪತ್ಯವಾಯಿತು. ಭೂಮಧ್ಯ ಸಮುದ್ರದ ಸುತ್ತಮುತ್ತಲಿನ ಪ್ರದೇಶಗಳೂ ಯೂರೋಪಿನ ಬಹುಭಾಗವೂ ನಾಲ್ಕು ನೂರು ವರ್ಷಗಳಿಗೂ ಹೆಚ್ಚು ಕಾಲ ರೋಮನ್ ಚಕ್ರಾಧಿಪತ್ಯದ ಆಳ್ವಿಕೆಗೆ ಒಳಗಾಗಿದ್ದುವು. ರೋಮನರು ಇಟಲಿಯಲ್ಲಿದ್ದ ತಮ್ಮ ನೆಲೆಯಿಂದ ಈಗಿನ ಇಂಗ್ಲೆಂಡ್, ಫ್ರಾನ್ಸ್, ಬೆಲ್ಜಿಯಂ, ನೆದರ್‌ಲೆಂಡ್ಸ್, ಆಸ್ಟ್ರಿಯ, ಸ್ಪೇನ್, ಪೋರ್ಚುಗಲ್, ಸ್ವಿಟ್ಜರ್‌ಲೆಂಡ್, ಹಂಗೆರಿ, ಜರ್ಮನಿಯ ಕೆಲವು ಭಾಗ, ರುಮೇನಿಯ, ಬಲ್ಗೇರಿಯ, ಗ್ರೀಸ್, ಟರ್ಕಿ, ಇಸ್ರೇಲ್, ಸಿರಿಯ, ಅರೇಬಿಯ, ಸಂಯುಕ್ತ ಅರಬ್ ಗಣರಾಜ್ಯ, ಟ್ಯುನೀಷಿಯ, ಅಲ್ಜೀರಿಯ, ಮೊರಾಕೊ ಇವನ್ನೆಲ್ಲ ಆಳುತ್ತಿದ್ದರು. ಹೀಗೆ ಏಷ್ಯ ಮತ್ತು ಯೂರೋಪ್ ಎರಡು ಖಂಡಗಳಲ್ಲಿಯೂ ಈ ಸಾಮ್ರಾಜ್ಯ ಹಬ್ಬಿತ್ತು.

ಇಟಲಿಯ ಪರ್ಯಾಯದ್ವೀಪದಲ್ಲಿ ಒಂದು ಸಣ್ಣ ವ್ಯಾಪಾರ ಸ್ಥಳವಾಗಿದ್ದ ರೋಮ್ ನಗರ ಬರಬರುತ್ತ ತನ್ನ ಮೇರೆಗಳನ್ನು ವಿಸ್ತರಿಸಿ ತನ್ನ ಸುತ್ತಮುತ್ತಲಿನ ನಗರಗಳ ಮೇಲೆ ಪ್ರಭುತ್ವ ಸ್ಥಾಪಿಸಿತು. ಸ್ವಲ್ಪ ಕಾಲದಲ್ಲೇ ಇಟಲಿಯನ್ನು ಒಂದು ಬಲಯುತ ರಾಷ್ಟ್ರವನ್ನಾಗಿ ಮಾಡಿ ತಾನು ಅದರ ಪ್ರಧಾನ ನಗರವಾಯಿತು. ಅನಂತರ ರೋಮನರು ತಮಗೆ ಹತ್ತಿರವಾಗಿದ್ದ ಸಿಸಿಲಿ, ಸ್ಪೇನ್, ಫ್ರಾನ್ಸ್, ಗ್ರೀಸ್ ಮತ್ತು ಉತ್ತರ ಆಫ್ರಿಕ ಮೊದಲಾದುವನ್ನು ವಶಪಡಿಸಿಕೊಂಡರು. ಕ್ರಿ. ಪೂ. 396ರಲ್ಲಿ ವೇಐ ಎನ್ನುವ ನಗರವನ್ನು ವಶಪಡಿಸಿಕೊಂಡಾಗ ರೋಮನರ ದಿಗ್ವಿಜಯ ಪ್ರಾರಂಭವಾಯಿತು. 116ರ ವೇಳೆಗೆ, ಟ್ರಾಜನ್ ಚಕ್ರವರ್ತಿಯ ಕಾಲದಲ್ಲಿ, ರೋಮಿನ ಚಕ್ರಾಧಿಪತ್ಯ ಅತಿ ವಿಸ್ತಾರವಾಯಿತು.

ಈ ದೊಡ್ಡ ಸಾಮ್ರಾಜ್ಯದ ಆಡಳಿತವನ್ನು 300ರಿಂದ 900 ಜನ ಶ್ರೀಮಂತರ ವರ್ಗ ನಿರ್ವಹಿಸುತ್ತಿತ್ತು. ಇವರು ರೋಮನ್ ಸೆನೆಟಿನ ಸದಸ್ಯರಾಗಿರುತ್ತಿದ್ದರು. ಇದನ್ನು 'ರೋಮನ್ ಗಣರಾಜ್ಯ' ಎನ್ನುತ್ತಿದ್ದರು. ಕ್ರಿ. ಪೂ. 49ರಲ್ಲಿ ಜೂಲಿಯಸ್ ಸೀಸರ್ ರೋಮಿನ ನಿರಂಕುಶ ಪ್ರಭುವಾಗಿ ಐದು ವರ್ಷಗಳ ಕಾಲ ಈ ಗಣರಾಜ್ಯದ ನಾಯಕನಾಗಿದ್ದ. ಸೀಸರನ ಅಧಿಕಾರ ವಿನಾಶಕಾರಿಯೆಂದು ಹೆದರಿ ಕ್ರಿ. ಪೂ. 44ರ ಮಾರ್ಚ್ 15ರಂದು ಅವನನ್ನು ತಿವಿದುಕೊಂದರು. ಸೀಸರನ ಅನಂತರ ಅಗಸ್ಟಸ್ ಸೀಸರ್, ಮಾರ್ಕ್ ಆಂಟನಿ, ಲೆಪಿಡಸ್ ಇವರು ಒಟ್ಟಿಗೆ ಸೇರಿ ಸ್ವಲ್ಪ ಕಾಲ ಆಳಿದರು. ಆದರೆ ಮುಂದೆ ಅಗಸ್ಟಸ್ ಸೀಸರನೇ ಸರಕಾರದ ನಾಯಕನಾದ (ಕ್ರಿ. ಪೂ. 27). ಅನೇಕ ವರ್ಷಗಳ ಕ್ಷೋಭೆಯ ಅನಂತರ ಅಗಸ್ಟಸ್ ರೋಮಿನಲ್ಲಿ ಶಾಂತಿ ಸ್ಥಾಪಿಸಿದ. ಅವನು ಮೊದಲನೆಯ ರೋಮನ್ ಚಕ್ರವರ್ತಿ. ರೋಮ್ ಅಷ್ಟು ಹೊತ್ತಿಗಾಗಲೇ ಇಟಲಿಯ ಹೊರಗೆ ತನ್ನ ಚಕ್ರಾಧಿಪತ್ಯವನ್ನು ವಿಸ್ತರಿಸಿದ್ದರಿಂದ ರೋಮಿನ ನಾಯಕನಿಗೆ ಚಕ್ರವರ್ತಿಯೆಂದು ಹೆಸರು ಬಂತು.

ರೋಮಿನ ಚಕ್ರವರ್ತಿಗಳು ತಮ್ಮ ಚಕ್ರಾಧಿಪತ್ಯದ ಆಡಳಿತ ಉತ್ತಮಗೊಳಿಸಲು ಅನೇಕ ಕ್ರಮಗಳನ್ನು ಕೈಗೊಂಡರು.

ಮೊದಲನೆಯದಾಗಿ, ಚಕ್ರಾಧಿಪತ್ಯದ ಎಲ್ಲ ಭಾಗಗಳಿಂದಲೂ ಜನ ಬಂದು ಸೈನ್ಯದಲ್ಲಿ ಸೇರಲು ಅವಕಾಶ ನೀಡಲಾಯಿತು. ಯಾವಾಗಲೂ ಸಜ್ಜುಗೊಂಡಿರುತ್ತಿದ್ದ ನಿರಂತರ ಸೈನ್ಯವೊಂದನ್ನು ರೋಮನ್ ಚಕ್ರಾಧಿ

ಪತಿಗಳು ಕಟ್ಟಿದರು. ಸೈನಿಕರೆಲ್ಲರೂ ರೋಮಿನ ಅಧಿಕೃತ ಆಡಳಿತ ಭಾಷೆಯಾದ ಲ್ಯಾಟಿನನ್ನು ಕಲಿಯಬೇಕಾಯಿತು. ಸೈನ್ಯ ಸುಲಭವಾಗಿ ಸಂಚರಿಸಲು ಅನುಕೂಲವಾಗುವಂತೆ ಎಲ್ಲ ಕಡೆಗಳಲ್ಲಿಯೂ ಸಂಚಾರ ಮಾರ್ಗ ಗಳನ್ನೂ ರಸ್ತೆಗಳನ್ನೂ ಈ ಸೈನಿಕರು ನಿರ್ಮಿಸಿದರು. ರೋಮನ್ ನೌಕಾದಳ ಸಮುದ್ರವನ್ನು ಕಡಲ್ಗಳ್ಳರ ಕಾಟವಿಲ್ಲದಂತೆ ರಕ್ಷಿಸುತ್ತಿತ್ತು.

ರೋಮನ್ ಚಕ್ರವರ್ತಿಗಳು ಪೌರಸೇವಾ ವಿಧಾನವನ್ನೂ ಬಳಕೆಗೆ ತಂದರು. ಇವರು ಸೈನಿಕ ಚಟುವಟಿಕೆಗಳಿಗೆ ಸಂಬಂಧಪಟ್ಟ ಆಡಳಿತ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಿದ್ದರು. ತೆರಿಗೆ ಸಂದಾಯ, ಸರಕಾರಿ ಕಟ್ಟಡಗಳ ನಿರ್ಮಾಣ, ವ್ಯವಸಾಯ, ಸೇತುವೆ ಕಟ್ಟುವುದು ಮೊದಲಾದುವೆಲ್ಲ ಇವರ ಹೊಣೆ.

ಆದರೆ ಎಲ್ಲ ಚಕ್ರವರ್ತಿಗಳೂ ಒಂದೇ ರೀತಿಯಾಗಿರಲಿಲ್ಲ. ಕ್ಲಾಡಿಯಸನ ಅನಂತರ ನೀರೋ ಸಮ್ರಾಟನಾದ. ಆಡಳಿತಕ್ಕೆ ಬಂದ ಐದು ವರ್ಷಗಳ ಅನಂತರ ಇವನು ತನ್ನ ವೇಳೆಯನ್ನೆಲ್ಲ ಸಂಗೀತದ ಅಭ್ಯಾಸದಲ್ಲಿ ಕಳೆದ.

ರೋಮನ್ ಚಕ್ರಾಧಿಪತ್ಯದಲ್ಲಿ ವ್ಯವಸಾಯವೇ ಪ್ರಧಾನ ಉದ್ಯಮ ವಾಗಿತ್ತು. ವ್ಯಾಪಾರಕ್ಕೆ ಸಣ್ಣಪುಟ್ಟ ಅಂಗಡಿಗಳಿರುತ್ತಿದ್ದವು.

ರೋಮನ್ ಜನ ವಾಸ್ತುಶಿಲ್ಪದಲ್ಲಿ, ಶಿಲ್ಪಕಲೆಯುಲ್ಲಿ, ನೆಯ್ಗೆಯಲ್ಲಿ ಪರಿಣತ ರಾಗಿದ್ದರು. ಅಲ್ಲದೆ ಚಿನ್ನ, ಬೆಳ್ಳಿಗಳಿಂದ ಸೊಗಸಾದ ಒಡವೆಗಳನ್ನು ಮಾಡುತ್ತಿದ್ದರು.

ರೋಮಿನ ಚಕ್ರಾಧಿಪತ್ಯದಿಂದ ಗ್ರೀಕ್ ಭಾಷೆ, ಸಾಹಿತ್ಯ ಹಾಗೂ ವಿಜ್ಞಾನ ಉಳಿದು ಆಧುನಿಕ ಪಾಶ್ಚಾತ್ಯ ಪ್ರಪಂಚಕ್ಕೆ ಕೊಡುಗೆಯಾಗಿ ಬಂದುವು. ಯುದ್ಧದಲ್ಲಿ ಗ್ರೀಕರನ್ನು ರೋಮನರು ಸೋಲಿಸಿದರು. ಆದರೆ ಗ್ರೀಕರ ಸಾಹಿತ್ಯ, ಕಲೆ ಸಂಸ್ಕೃತಿಗಳಿಗೆ ತಾವೇ! ಮನಸೋತರು.

ಆಡಳಿತವನ್ನು ಕುರಿತ ಗ್ರೀಕ್ ಸಿದ್ಧಾಂತಗಳನ್ನು ರೋಮನರು ಅಭ್ಯಾಸ ಮಾಡಿದರು. ಗ್ರೀಕರಿಂದ ರೋಮನರು ಗಣಿತಶಾಸ್ತ್ರವನ್ನೂ ಖಗೋಳ ಶಾಸ್ತ್ರವನ್ನೂ ಕಲಿತರು. ವೈದ್ಯವಿಜ್ಞಾನ, ವಾಸ್ತುಶಿಲ್ಪ ಮೊದಲಾದುವುಗಳಲ್ಲಿ ಕೆಲಸಮಾಡಲು ಇಲ್ಲವೆ ಶಿಕ್ಷಣ ನೀಡಲು ಅನೇಕ ಗ್ರೀಕರು ರೋಮಿಗೆ ಬಂದರು.

ಆಧುನಿಕ ಜೀವನಕ್ಕೆ ರೋಮಿನ ಅತ್ಯುತ್ತಮ ಕೊಡುಗೆ ನ್ಯಾಯಶಾಸ್ತ್ರ. ಯೂರೋಪ್ ಹಾಗೂ ಲ್ಯಾಟಿನ್ ಅಮೆರಿಕದ ಅನೇಕ ದೇಶಗಳಲ್ಲಿ ರೋಮನ್ ನ್ಯಾಯಶಾಸ್ತ್ರವೇ ಈಗಲೂ ರೂಢಿಯಲ್ಲಿದೆ.

ಕ್ರೈಸ್ತಧರ್ಮದ ಉದಯವಾದದ್ದು ರೋಮನ್ ಚಕ್ರಾಧಿಪತ್ಯದ ಕಾಲದಲ್ಲಿ. ಯೇಸು ಕ್ರಿಸ್ತ ಜನಿಸಿದ್ದು ಅಗಸ್ಟಸ್ ಸೀಸರನ ಆಳ್ವಿಕೆಯಲ್ಲಿ.

ರೋಮನರು ತಮ್ಮ ದೇವರುಗಳನ್ನು ಅಲ್ಲಗಳೆದ ಕ್ರೈಸ್ತರನ್ನು ಹಿಂಸಿಸಿ ದರು. ಕ್ರೈಸ್ತರಾದರೋ ರೋಮನ್ ಚಕ್ರವರ್ತಿಗಳಿಗೆ ತಲೆಬಾಗುತ್ತಿರ ಲಿಲ್ಲ. ಸುಮಾರು 300 ವರ್ಷಗಳ ಕಾಲ ಕ್ರೈಸ್ತಧರ್ಮ ನ್ಯಾಯಬಾಹಿರ ವಾಗಿ ಉಳಿಯಿತು. ಕೊನೆಗೆ ಕಾನ್‌ಸ್ಟಂಟೈನ್ ಎಂಬ ಚಕ್ರವರ್ತಿ 313ರಲ್ಲಿ ಕ್ರೈಸ್ತ ಧರ್ಮವನ್ನು ನ್ಯಾಯಸಮ್ಮತವೆಂದು ಸಾರಿದ.

ರೋಮನ್ ಚಕ್ರಾಧಿಪತ್ಯ ಒಮ್ಮೆಲೆ ಪತನವಾಗಲಿಲ್ಲ. 400ರಿಂದ 430ರ ಕಾಲದಲ್ಲಿ ಚಕ್ರಾಧಿಪತ್ಯದ ಹೊರಗಿನಿಂದ ಬಂದ ಜನ ತಮಗೆ ಭೂಮಿ ಕೊಟ್ಟರೆ ತಾವೂ ರೋಮಿನ ಆಳ್ವಿಕೆಗೆ ಒಳಪಟ್ಟು ಇರುವುದಾಗಿ ಹೇಳಿದರು. ಬರುಬರುತ್ತ ತಾವೇ ಪ್ರಬಲರಾದರು. 500ರ ಸುಮಾರಿಗೆ ಇಟಲಿ, ಉತ್ತರ ಆಫ್ರಿಕ, ಫ್ರಾನ್ಸ್, ಸ್ಪೇನ್ ಇವುಗಳಲ್ಲಿ ಜರ್ಮನ್ ಬುಡ ಕಟ್ಟಿನ ಗುಂಪುಗಳು ಆಳತೊಡಗಿದುವು. ಇವರು ರೋಮನ್ ಆಳ್ವಿಕೆಯ ಅಧೀನದಲ್ಲಿರಲಿಲ್ಲ. 476ರಲ್ಲಿ ಆ ಬುಡಕಟ್ಟುಗಳ ಅರಸು ಓಡೋ ಅಸೆರ್ ಪಶ್ಚಿಮದಲ್ಲಿನ ಕೊನೆಯ ರೋಮನ್ ಚಕ್ರವರ್ತಿ ರೋಮ್ಯುಲಸ್ ಅಗಸ್ಟಲಸ್‌ನನ್ನು ಪದಚ್ಯುತಗೊಳಿಸಿದ.

ಈ ಗುಂಪುಗಳಿಗೆ ಗ್ರೀಕ್ ರೋಮನ್ ಸಂಸ್ಕೃತಿ ಬೇಡವಾಗಿತ್ತು. ಅವರ ಜೀವನದ ರೀತಿ ಬಹಳ ಸರಳ. ಓದು ಬರಹವಾಗಲಿ, ರೋಮನ್ ನ್ಯಾಯವಾಗಲಿ, ಆರ್ಥಿಕ ನೀತಿಯಾಗಲಿ ಅವರಿಗೆ ಅಗತ್ಯವಿರಲಿಲ್ಲ. ಇವೆಲ್ಲದರ ಪರಿಣಾಮವಾಗಿ ಉನ್ನತಮಟ್ಟಕ್ಕೇರಿದ್ದ ಗ್ರೀಕ್–ರೋಮನ್ ಸಂಸ್ಕೃತಿ ಕ್ರಮೇಣ ಅವನತಿಹೊಂದಿ ಮಧ್ಯಯುಗದಲ್ಲಿ ಹೆಸರಿಲ್ಲ ದಂತಾಯಿತು.

ರೋಮನ್ ಚಕ್ರಾಧಿಪತಿ ಡಯೋಕ್ಲಿಷಿಯನ್ (245–313) ಚಕ್ರಾಧಿ ಪತ್ಯವನ್ನು ಎರಡು ಭಾಗಗಳಾಗಿ ವಿಂಗಡಿಸಿದ್ದ. ಚಕ್ರಾಧಿಪತ್ಯದ ಪಶ್ಚಿಮ ಭಾಗದ ಪತನವಾದ ಮೇಲೂ ಪೂರ್ವಭಾಗ ಪ್ರಬಲವಾಗಿಯೇ ಇತ್ತು. ಇದರ ಕೇಂದ್ರ ಬೈಜಾಂಟಿಯಂ. ಕಾನ್‌ಸ್ಟಂಟೈನ್ ಚಕ್ರವರ್ತಿಯ ಗೌರವಾರ್ಥ ಅದು ಕಾನ್‌ಸ್ಟಾಂಟಿನೋಪಲ್ ಆಯಿತು. ಈಗ ಅದನ್ನು ಇಸ್ತಾಂಬೂಲ್ ಎನ್ನುತ್ತಾರೆ. ಸುಮಾರು ಒಂದು ಸಾವಿರ ವರ್ಷಗಳವರೆಗೂ ಕಾನ್‌ಸ್ಟಾಂಟಿನೋಪಲ್ ಪ್ರಪಂಚದ ಬಹು ಪ್ರಮುಖ ನಗರವಾಗಿ ಪೂರ್ವ ರೋಮಿನ ಚಕ್ರಾಧಿಪತ್ಯದ ರಾಜಧಾನಿಯಾಗಿತ್ತು. 1453ರಲ್ಲಿ ತುರ್ಕಿಯವರು ಕಾನ್‌ಸ್ಟಾಂಟಿನೋಪಲನ್ನು ವಶಪಡಿಸಿಕೊಂಡಾಗ ರೋಮ್‌ನ ಚಕ್ರಾಧಿಪತ್ಯ ಅಂತ್ಯವಾಯಿತು.

ನೋಡಿ : ರಾಜಕೀಯ ಸಿದ್ಧಾಂತ ; ರೋಮ್ ; ಸಾಮ್ರಾಜ್ಯ, ಸಾಮ್ರಾಜ್ಯವಾದ

## ಲಂಡನ್

ಕಳೆದ ಐದುನೂರು ವರ್ಷಗಳಲ್ಲಿ ಪ್ರಪಂಚದ ಚರಿತ್ರೆ ಒಂದೇ ನಗರದಲ್ಲಿ ಎಷ್ಟೊಂದು ಸೃಷ್ಟಿಯಾಗಿದೆ ! ಆ ಒಂದು ನಗರದಲ್ಲಿ ಮಾಡಿದ ನಿರ್ಧಾರಗಳು ಆಧುನಿಕ ಚರಿತ್ರೆಗೆ ಅದೆಷ್ಟು ತಿರುವುಗಳನ್ನು ಕೊಟ್ಟಿವೆ !

ಪ್ರಪಂಚದ ಅತಿ ಮುಖ್ಯ ನಗರಗಳಲ್ಲಿ ಒಂದು ಲಂಡನ್.

ಜಗದ್ವಿಖ್ಯಾತ ಕವಿ, ನಾಟಕಕಾರ ಷೇಕ್ಸ್‌ಪಿಯರ್ ತನ್ನ ನಾಟಕಗಳನ್ನು ಬರೆದು ಅಭಿನಯಿಸಿ ಆಂಗ್ಲ ಸಾಹಿತ್ಯ ಸಾರ್ವಭೌಮನೆನಿಸಿದ್ದು ಲಂಡನ್ ಪಟ್ಟಣ ದಲ್ಲಿ. ಸುಪ್ರಸಿದ್ಧ ವಿಜ್ಞಾನಿಗಳು ಮೈಕಲ್ ಫೆರಡೆ ಮತ್ತು ಜೆ. ಬಿ. ಎಸ್. ಹಾಲ್ಡೇನ್ ತಮ್ಮ ಸಾಧನೆಗಳನ್ನು ಮಾಡಿದುದು ಲಂಡನಿನಲ್ಲಿ. ವಿಜ್ಞಾನದ ಪ್ರಗತಿಗೆ ದುಡಿದಿರುವ ಸುಪ್ರಸಿದ್ಧ 'ರಾಯಲ್ ಸೊಸೈಟಿ ಆಫ್ ಬ್ರಿಟನ್' ಇರುವುದು ಲಂಡನಿನಲ್ಲಿ. ಇಂಗ್ಲೆಂಡಿನ ಪ್ರಖ್ಯಾತ ರಾಜಕಾರಣದ ಕೇಂದ್ರ ಲಂಡನ್ ನಗರದಲ್ಲಿ. ರೋಮನರ ಕಾಲದಿಂದ [illegible] ವರೆಗೂ ಥೇಮ್ಸ್ ನದಿಯ [illegible]. ಅನೇಕ [illegible] ಪ್ರಖ್ಯಾತವಾಗಿರುವ ಲಂಡನ್ ಸೇತುವೆ. ವಿದ್ಯಾರ್ಥಿಗಳಿಗೆ [illegible] ಮಾಡಿಸುವ [illegible] ಗಳೂ ಅಂತರರಾಷ್ಟ್ರೀಯ ಕ್ರಿಕೆಟ್ [illegible] ವಿಶ್ವವಿದ್ಯಾನಿಲಯಗಳ [illegible] ನಡೆಯುವುದು ಲಂಡನ್ [illegible]. ಸುಪ್ರಸಿದ್ಧ [illegible] ಈಗಿನ ಬ್ರಿಟಿಷ್ [illegible]



ಕೃತಿಗೆ ಉನ್ನತ ಸ್ಥಾನ ನೀಡಿದ 'ಗುರು ಲಾವೊ'

## ಲಾವೊ ತ್ಸೆ

ಕ್ರಿ. ಪೂ. ಐದುನೂರು ವರ್ಷಗಳಿಗೂ ಹಿಂದಿನಕಾಲ. ಭಾರತ ಹಾಗೂ ಗ್ರೀಸ್ ದೇಶಗಳಲ್ಲಿ ಮಹತ್ವಪೂರ್ಣ ಬದಲಾವಣೆಗಳಾಗುತ್ತಿದ್ದುವು. ಅದೇ ವೇಳೆ ಚೀನದಲ್ಲಿಯೂ ರಾಜರಾಜರ ಮಧ್ಯೆ ಕಲಹಗಳು ಪದೇ ಪದೇ ಉಂಟಾಗುತ್ತಿದ್ದುವು. ಇಂಥ ಸಾರ್ವಜನಿಕ ಗೊಂದಲವನ್ನು ಎದುರಿಸಲೋ ಎಂಬಂತೆ ತತ್ತ್ವಜಿಜ್ಞಾಸೆಯ ನೂರು ಪಂಥಗಳು ಹುಟ್ಟಿಕೊಂಡುವು. ಕನ್‌ಫ್ಯೂಷಿಯಸ್ ಮತ ಜನಾನುರಾಗಿಯಾದದ್ದು ಇದೇ ಕಾಲದಲ್ಲಿ. ಲಾವೊ ತ್ಸೆ ಕನ್‌ಫ್ಯೂಷಿಯಸನ ಸಮಕಾಲೀನ ಎಂದು ಹೇಳುತ್ತಾರೆ. ಲಾವೊ ತ್ಸೆ ಎಂದರೆ 'ಗುರು ಲಾವೊ.' ಯಾರು ಈತ ಎಂಬುದರ ಬಗೆಗೆ ಭಿನ್ನಾಭಿಪ್ರಾಯವಿದೆ. ಈತನ ವಾದಸರಣಿಗೆ ತಾವೋ ಮತ ಎಂದೂ ವಾದಗಳನ್ನೊಳಗೊಂಡ ನೀರು ಕೃತಿಗೆ ತಾವೊ ತೆ ಚಿಂಗ್ ಅಥವಾ ಲಾವೊತ್ಸು (ಎಂದರೆ ಪಥ ಹಾಗೂ ಸದ್ಗುಣ ಇಲ್ಲವೇ ಪಥ ಹಾಗೂ ಅದರ ಪ್ರಭಾವ) ಎಂದೂ ಹೆಸರು.

ಮಾನವನ ಬದುಕು, ಸದ್ಗುಣಗಳ ಬಗೆಗೆ ಹೇಳುತ್ತ ಪ್ರಕೃತಿಯಲ್ಲಿ ಬೆರೆತು ಬಾಳುವುದನ್ನು ಲಾವೊ ತ್ಸೆ ಪ್ರತಿಪಾದಿಸಿದ್ದಾನೆ. ಸುಮಾರು 5,722ರಷ್ಟು ಪದಗಳಿರುವ ಲಾವೊ ತ್ಸೆಯ ಈ ಮಹಾಕೃತಿಯನ್ನು 5,000 ಚಿತ್ರಲಿಪಿಯ ಕೃತಿ ಎಂದು ಹೆಸರಿಸುತ್ತಾರೆ. ಎಂಬತ್ತೊಂದು ಅಧ್ಯಾಯಗಳ ಈ ಹೊತ್ತಗೆಯಲ್ಲಿ 213 ಸಂಕ್ಷಿಪ್ತ ಹೇಳಿಕೆಗಳಿದ್ದು ಅವುಗಳನ್ನು ಐದು ಪರಿಚ್ಛೇದಗಳಲ್ಲಿ ಗುಂಪುಗೂಡಿಸಲಾಗಿದೆ.

ಈ ಗ್ರಂಥದ ಪ್ರಕಾರ, ಸದ್ಗುಣಗಳು ನೆಮ್ಮದಿಯನ್ನು ತರುವಂತೆಯೇ ದುರ್ಗುಣಗಳು ವ್ಯಸನವನ್ನು ತರುತ್ತವೆ : ಸ್ವರ್ಗ ಮತ್ತು ಮರ್ತ್ಯಗಳಲ್ಲಿರುವ ಚೇತನ ಮನುಷ್ಯನ ಜೀವನದ ಒಳಿತು ಕೆಡುಕುಗಳ ತುಲನೆಮಾಡಿ ಆತನ ಆಯುಷ್ಯವನ್ನು ನಿರ್ಧರಿಸುತ್ತದೆ. ಮಾನವನಲ್ಲಿರಬೇಕಾದ ಸದ್ಗುಣಗಳು, ಅವುಗಳಿಂದ ಅವನು ಅಮರತ್ವಕ್ಕೆ ಏರುವುದು, ಅವನು ದೂರವಿಡಬೇಕಾದ ದುರ್ಗುಣಗಳು : ಪಶ್ಚಾತ್ತಾಪ : ಮತ್ತು ಮಾನವ ತನ್ನ ಕರ್ಮಫಲವನ್ನು ಅನುಭವಿಸುವುದರ ಬಗೆಗೆ [illegible] ಈ ಪವಿತ್ರ ಗ್ರಂಥದ ಐದು ಮುಖ್ಯ ವಿಭಾಗಗಳು.

[illegible] ರೂಢಿಸಿಕೊಳ್ಳುವುದು [illegible]

ತ್ತಾಗ. ತಾವೊ ಮತ ಮೊದಲಿಗೆ ಯಾವುದೇ ಧರ್ಮ ಸಂಸ್ಥಾಪನೆಯ ದೃಷ್ಟಿಯಿಂದ ಆರಂಭವಾಗದಿದ್ದರೂ ಕ್ರಮೇಣ ಅದು ತಾವೋ ಚಿಯಾವೋ ಎಂಬ ಜನಪ್ರಿಯ ಧರ್ಮದ ರೂಪದಲ್ಲಿ ಪಸರಿಸತೊಡಗಿತು. ಈ ಪಂಥ ಚೀನದ ಸಂಸ್ಕೃತಿ, ತತ್ತ್ವಶಾಸ್ತ್ರ, ಧರ್ಮ, ಕಲೆ, ಸಾಹಿತ್ಯ ಮತ್ತು ಸರಕಾರ ಈ ಎಲ್ಲ ಕ್ಷೇತ್ರಗಳ ಮೇಲೂ ತನ್ನ ಪ್ರಭಾವವನ್ನು ಬೀರಿದೆ. ಚೀನದ ಇತಿಹಾಸದುದ್ದಕ್ಕೂ ಕನ್‌ಫ್ಯೂಷಿಯಸ್ ಮತದ ಜೊತೆಗೇ ಹರಿದು, ಬೌದ್ಧ ಮತವನ್ನೂ ತನ್ನದೇ ಜಾಡಿನಲ್ಲಿ ರೂಪಿಸಿದೆಯೆಂಬ ಅಭಿಪ್ರಾಯವಿದೆ. ಕನ್‌ಫ್ಯೂಷಿಯಸ್ ಮತ ಕಾರ್ಯಶೀಲತೆಯನ್ನೂ ಸಾಮಾಜಿಕ ರೀತಿನೀತಿಗಳನ್ನೂ ಎತ್ತಿಹಿಡಿದರೆ, ಇವುಗಳಿಂದ ದೂರವಾದ ವೈಯಕ್ತಿಕ ಬಾಳ್ವೆ ಹಾಗೂ ಪ್ರಶಾಂತತೆ ಲಾವೊ ತ್ಸೆ ಮಾರ್ಗದ ಗುರಿಯಾಗಿದೆ.

ನೂರು ಮತ್ತು ನಾಲ್ಕನೆಯ ಶತಮಾನಗಳಲ್ಲಿ ತಾವೊ ಮತ ಕವಲೊಡೆದು ನವ್ಯ ತಾವೊ ಮತ ಹುಟ್ಟಿತು. ಪರಿಣಾಮವಾಗಿ ವಿಧಿವಿಲಾಸ ಎಂಬ ಕಲ್ಪನೆ ಪ್ರಜ್ಞಾಶೀಲತೆಯನ್ನು ತಳ್ಳಿಹಾಕಿ, ಕೇವಲ ಸುಖವೇ ಜೀವನದ ಗುರಿ ಎಂಬ ಒಂದು ವಾದವೂ ರೂಪುಗೊಂಡಿತು. ಇಷ್ಟರಲ್ಲೇ ಬೌದ್ಧ ಮತದ ಮೇಲೆ ತಾವೊ ಮತದ ಪ್ರಭಾವ ಮೂಡಿ ಬೌದ್ಧಮತದ ಜೆನ್ ಸಂಸ್ಕೃತಿ (ವಿಧಿ ಕಟ್ಟಳೆಗಳಿಲ್ಲದೆ ಧ್ಯಾನ ಮಾಡುವುದಕ್ಕೆ ಪ್ರಾಮುಖ್ಯ ಜೆನ್ ಬೌದ್ಧಮತದ ವೈಶಿಷ್ಟ್ಯ) ಆರಂಭವಾಯಿತು.

ಲಾವೊ ತ್ಸೆ ಪ್ರಕೃತಿಗೆ ಉನ್ನತ ಸ್ಥಾನವನ್ನಿತ್ತ. ಅದರ ಒಂದೊಂದು ಅಂಶ ದೈವೀ ಪದವಿಗೇರಿ. ಆ ಕಾಲದ ಚೀನೀಯರಲ್ಲಿ ದೈವೀ ಶಕ್ತಿಯ ಪೂಜೆ ಆಚರಣೆಗೆ ಬಂದಿತು. ಪೂರ್ವಜರು, ನಕ್ಷತ್ರ, ಜೀವಂತ ಮತ್ತು ನಿರ್ಜೀವ ವಸ್ತುಗಳು, ಐತಿಹಾಸಿಕ ಪ್ರಮುಖರು, ಶರೀರದ ವಿವಿಧ ಭಾಗಗಳು, ಆದರ್ಶಗಳು—ಹೀಗೆ ಪ್ರತಿಯೊಂದನ್ನೂ ಒಂದೊಂದು ದೈವದ ಹೆಸರಿನಲ್ಲಿ ಪ್ರತಿನಿಧಿಸಲಾಗಿದೆ. ಇದರಿಂದ ಮೂಢನಂಬಿಕೆಗಳು ಬೆಳೆದುವು.

ಚೀನದಲ್ಲಿದ್ದ ಮೂರು ಧರ್ಮಗಳಲ್ಲಿ ಒಂದು, ತಾವೊ ಮತ (ಇನ್ನೆರಡು ಬೌದ್ಧ ಹಾಗೂ ಕನ್‌ಫ್ಯೂಷಿಯಸ್ ಮತಗಳು)

ಜೀವನಾಧಾರವಾದ ಒಂದು ಮಹತ್ವಪೂರ್ಣ ಮತದ ಮೇಲ್ಪಂಕ್ತಿಯನ್ನು ತೋರಿಸಿದ ಲಾವೊ ತ್ಸೆಯ ವೈಯಕ್ತಿಕ ಜೀವನದ ಬಗೆಗಿನ ವಿಚಾರಗಳು ಮಾತ್ರ ಸ್ಪಷ್ಟವಾಗಿಲ್ಲ. ಚೀನದ ಹೋನಾನ್ ಪ್ರಾಂತದಲ್ಲಿ ಸುಮಾರು ಕ್ರಿ. ಪೂ. 604ರಲ್ಲಿ ಹುಟ್ಟಿದನೆಂದೂ ಸುಮಾರು ಕ್ರಿ. ಪೂ. 531ರಲ್ಲಿ ತೀರಿಕೊಂಡನೆಂದೂ ಹೇಳಲಾಗಿದೆ. ಈತನು ಚೌ ರಾಜನ ಆಸ್ಥಾನದಲ್ಲಿ ಸಾರ್ವಜನಿಕ ಪತ್ರಾಗಾರಪಾಲಕನಾಗಿದ್ದು ತನ್ನ ವಿದ್ವತ್ತಿಗೆ ಹೆಸರುವಾಸಿಯಾಗಿದ್ದನಂತೆ. ಕನ್‌ಫ್ಯೂಷಿಯಸ್ ಇವನ ಬಳಿ ಜ್ಞಾನಸಂಪಾದನೆಗೆ ಬಂದನೆಂದೂ ಪ್ರತೀತಿಯಿದೆ. ಆತನ ಸಾವು ಎಲ್ಲಿ, ಹೇಗಾಯಿತು ಎಂಬುದು ತಿಳಿದಿಲ್ಲ. ಭಾರತದ ತತ್ತ್ವಶಾಸ್ತ್ರವೇ ಇವನಿಗೆ ಪ್ರಚೋದಕವಾಗಿದ್ದಿತೆಂಬ ಅಭಿಪ್ರಾಯವಿದೆ.

ನೋಡಿ : ಕನ್‌ಫ್ಯೂಷಿಯಸ್

## ಲಾವೋಸ್

[illegible] ಪೂರ್ಣಿಮೆಯಂದು ಲಾವೋಸ್‌ನ [illegible] ದೇಶದ ಜನರಲ್ಲಿ ಬೆಟ್ಟನವರು [illegible]

ಕೊಲ್ಲಿಯು ಈಶಾನ್ಯಕ್ಕೆ ಇಂಡೋ[illegible]ವನ್ನು ತಾಕುತ್ತದೆ. ಲಾವೋಸ್ ಇಂಡೋಚೀನ ಪರ್ಯಾಯದ್ವೀಪದ ಒಂದು ರಾಷ್ಟ್ರ.

ಉತ್ತರದಲ್ಲಿ ಕಮ್ಯೂನಿಸ್ಟ್ ಚೀನ ; ಪೂರ್ವ ಮತ್ತು ಈಶಾನ್ಯಕ್ಕೆ ಉತ್ತರ ವಿಯೆಟ್ನಾಂ ; ದಕ್ಷಿಣ ವಿಯೆಟ್ನಾಂ ಆಗ್ನೇಯ ದಿಕ್ಕಿನಲ್ಲಿ ; ಕಾಂಬೋಡಿಯ ದಕ್ಷಿಣ ದಿಸೆಯಲ್ಲಿ. ಪಶ್ಚಿಮಕ್ಕೆ ಥೈಲೆಂಡ್, ವಾಯುವ್ಯದಲ್ಲಿ ಬರ್ಮದ ಗಡಿ. ಹೀಗೆ ನಾಲ್ಕೂ ಕಡೆ ಭೂಮಿಯಿಂದ ಲಾವೋಸ್ ಆವೃತವಾಗಿದೆ. ಮೆಕಾಂಗ್, ಲಾವೋಸಿನ ಮುಖ್ಯ ನದಿ. ಆಗ್ನೇಯ ಏಷ್ಯದ ಪ್ರಮುಖ ನದಿಯಾದ ಮೆಕಾಂಗ್, ಲಾವೋಸ್ ಮತ್ತು ಥೈಲೆಂಡ್‌ಗಳನ್ನು ವಿಂಗಡಿಸುತ್ತದೆ.

ಲಾವೋಸ್‌ನ ಅಧಿಕೃತ ಭಾಷೆ ಲಾವೋ, ಥಾಯ್ ಭಾಷೆಯನ್ನು ಹೋಲುತ್ತದೆ. ಫ್ರೆಂಚ್ ವಿಶೇಷ ಬಳಕೆಯಲ್ಲಿದೆ. ಇದು ಹಿಂದೆ ಈ ದೇಶವನ್ನಾಳುತ್ತಿದ್ದ ಫ್ರೆಂಚರಿಂದ ಬಳುವಳಿಯಾಗಿ ಬಂದುದು. ಬಹಳ ಮಂದಿ ಬೌದ್ಧಮತಾವಲಂಬಿಗಳು. ಸಂವಿಧಾನಾತ್ಮಕ ರಾಜಪ್ರಭುತ್ವ ಹೊಂದಿರುವ ಲಾವೋಸಿನ ದೊರೆ ನೆಲೆಸಿರುವ ನಗರದ ಹೆಸರು ಲುವಾಂಗ್ ಪ್ರಭಾಂಗ್ : ಸ್ವರ್ಣಬುದ್ಧನ ನಗರ ಎಂಬ ಅರ್ಥ ಈ ಹೆಸರಿಗೆ. ವಿಯೆಂಟೈನ್ ರಾಜ್ಯದ ಆಡಳಿತ ಕೇಂದ್ರ.

ಭತ್ತ ಮತ್ತು ಧಾನ್ಯಗಳ ಜೊತೆಗೆ ಕಾಫಿ, ಚಹ, ಹತ್ತಿ, ಹೊಗೆಸೊಪ್ಪು, ಏಲಕ್ಕಿ ಮುಂತಾದುವನ್ನು ಬೆಳೆಯುತ್ತಾರೆ. ವಿಪುಲ ಅರಣ್ಯ ಸಂಪತ್ತನ್ನು ಹೊಂದಿರುವ ಲಾವೋಸಿನಲ್ಲಿ ಸಾಗಾಣಿಕೆಗೆ ಆನೆಗಳನ್ನು ಬಳಸುತ್ತಾರೆ. ಈ ದೇಶದಲ್ಲಿ ರೈಲುಮಾರ್ಗವಿಲ್ಲ. ಲಾವೋಸಿನ ತವರದ ಗಣಿಗಳು ಶೇಕಡಾ 90ರಷ್ಟು ಕಾರ್ಮಿಕರಿಗೆ ಉದ್ಯೋಗ ನೀಡುತ್ತವೆ. ವಾಣಿಜ್ಯ ಅಭಿವೃದ್ಧಿ ಕಾಣದ ಲಾವೋಸಿನ ಮುಖ್ಯ ರಫ್ತು ತವರ. ಏಲಕ್ಕಿ ಮತ್ತು ತೇಗದ ಮರ ಇವು ಸಹ ಲಾವೋಸಿನಿಂದ ರಫ್ತಾಗುತ್ತವೆ. ಆಮದಿನ ಬಹು ಪಾಲು ಸಿದ್ಧವಸ್ತುಗಳು.

ಲಾವೋಸಿನ ರಾಷ್ಟ್ರದ ಬಾವುಟದಲ್ಲಿ ಮೂರು ಮುಖಗಳುಳ್ಳ ಬಿಳಿಯಾನೆಯ ಚಿಹ್ನೆ ಇದೆ. ಪ್ರಾಚೀನ ಕಾಲದಲ್ಲಿ ರಾಷ್ಟ್ರ ಮೂರು ಭಾಗ ಆಗಿತ್ತು; ಈಗ ಆ ಮೂರು ಭಾಗಗಳು ಐಕ್ಯವಾಗಿವೆ ಎಂಬುದನ್ನು ತೋರಿಸುತ್ತದೆ. ಆ ಆನೆಯ ಮೇಲೆ ಇರುವ ಬಿಳಿಛತ್ರಿ ಅರಸೊತ್ತಿಗೆಯ ಸಂಕೇತ. ಲಾವೋಸಿನ ಜನರು ಅರಸೊತ್ತಿಗೆಯಲ್ಲಿ ನಂಬಿಕೆಯುಳ್ಳವರು. ಆನೆ ನಿಂತಿರುವ ಐದು ಮೆಟ್ಟಲು ಬುದ್ಧ ತೋರಿಸಿಕೊಟ್ಟ [illegible]. ಕೊಲ್ಲಬೇಡ. ಕಳವು ಮಾಡಬೇಡ. ಸುಳ್ಳು ಹೇಳಬೇಡ. ಕುಡಿಯಬೇಡ ಮತ್ತು ಅನೀತಿವಂತನಾಗಬೇಡ—ಇವೇ ಆ ಪಂಚಶೀಲ.

ದೊರೆಯೇ ಆಡಳಿತದ ಮುಖ್ಯಸ್ಥ. ಆದರೆ ಅಧಿಕಾರ ಪ್ರಧಾನಿಯಲ್ಲಿ ಕೇಂದ್ರೀಕೃತ. ಪ್ರಧಾನಿಯ ನೆರವಿಗೆ ಮಂತ್ರಿಮಂಡಲವಿದೆ. ರಾಷ್ಟ್ರೀಯ [illegible] ಲಾವೋಸಿನ ಶಾಸಕಾಂಗ.

ಬಹಳ ಹಿಂದೆ ಲಾವೋಸಿನಲ್ಲಿ ನೆಲೆಸಿದ್ದವರು ಇಂಡೋನೇಷ್ಯದಿಂದ ಬಂದ [illegible]. ಆದರೆ ಬಹುಸಂಖ್ಯಾತ ಲಾವೋ ಜನ [illegible] ಬಂದವರು. 10–11ನೆಯ ಶತಮಾನಗಳಲ್ಲಿ ಥಾಯ್ ಬುಡಕಟ್ಟುಗಳವರು [illegible] ಬಂದು ಲುವಾಂಗ್ ಪ್ರಭಾಂಗ್‌ನಲ್ಲಿ ನೆಲೆಸಿದರು ; ಇವರೇ ಬೌದ್ಧಮತದ ಅನುಯಾಯಿಗಳು. ಹದಿನಾಲ್ಕನೆಯ ಶತಮಾನದ ಹೊತ್ತಿಗೆ ಲಂಕಾಂಗ್ ಎಂಬ ಸಾಮ್ರಾಜ್ಯ ರೂಪುಗೊಂಡಿತು. ಹದಿನೆಂಟನೆಯ ಶತಮಾನದಲ್ಲಿ ಸಾಮ್ರಾಜ್ಯ ಮೂರು ಭಾಗಗಳಾಗಿ ಒಡೆಯಿತು. ಹತ್ತೊಂಬತ್ತನೆಯ ಶತಮಾನದಲ್ಲಿ ಎರಡು ಭಾಗಗಳು ಸಯಾಮಿನ (ಇಂದಿನ ಥೈಲೆಂಡ್) ವಶವಾದುವು. ಲಾವೋಸ್ 1899ರಲ್ಲಿ ಫ್ರೆಂಚರ ವಶವಾಯಿತು. ಎರಡನೆಯ ಮಹಾಯುದ್ಧದಲ್ಲಿ ಲಾವೋಸ್ ಜಪಾನಿನ ಕೈಸೇರಿತು. 1945ರಲ್ಲಿ ಜಪಾನೀಯರು ನಿರ್ಗಮಿಸಿದಾಗ ಫ್ರೆಂಚರ ಪುನರಾಗಮನಕ್ಕೆ ಅನುಕೂಲ ಒದಗಿತು. ರಾಜಕುಮಾರರು ಸೌವನ್ನಫೋಮ ಮತ್ತು ಸೌಫನ್‌ವೊಂಗ್ ಇವರು ಲಾವೋಸ್ ಸ್ವತಂತ್ರ ರಾಷ್ಟ್ರವಾಗಬೇಕೆಂದು ವಾದಿಸಿದರು. ಸ್ವತಂತ್ರ ಲಾವೋ ಪಕ್ಷವೊಂದನ್ನು ಸ್ಥಾಪಿಸಿ, ಸ್ವಾತಂತ್ರ್ಯಕ್ಕಾಗಿ ಒತ್ತಾಯಪಡಿಸತೊಡಗಿದರು. 1949ರಲ್ಲಿ ಲಾವೋಸ್ ಫ್ರೆಂಚ್ ಒಕ್ಕೂಟದ ಒಂದು ಸ್ವಾಯತ್ತ (ತನ್ನ ಆಡಳಿತದಲ್ಲಿ ಸ್ವಾತಂತ್ರ್ಯಹೊಂದಿದ) ರಾಜ್ಯವೆಂದು ಘೋಷಿಸಲ್ಪಟ್ಟಿತು.

ಲಾವೋಸ್ ಸ್ವತಂತ್ರವಾದಂತೆ ಸ್ವತಂತ್ರ ಲಾವೋಸ್ ಪಕ್ಷ ಎರಡಾಗಿ ಒಡೆಯಿತು. 1951ರಲ್ಲಿ ಅಮೆರಿಕದ ಬೆಂಬಲ ಪಡೆದ ಸೌವನ್ನಫೋಮನ ಪಕ್ಷ ಚುನಾವಣೆಗಳಲ್ಲಿ ಗೆದ್ದಿತು. ಸಂವಿಧಾನಾತ್ಮಕ ರಾಜಪ್ರಭುತ್ವಕ್ಕೂ ಕಮ್ಯೂನಿಸ್ಟ್‌ವಾದಿ ಪಥೆಟ್ ಲಾವೋ ಗೆರಿಲ್ಲಾ ಪಡೆಗಳಿಗೂ ಘರ್ಷಣೆ ನಡೆಯುತೊಡಗಿತು.

1956ರಲ್ಲಿ ಫ್ರೆಂಚರಿಂದ ಲಾವೋಸ್ ಸ್ವತಂತ್ರಗೊಂಡಿತು. ಆದರೆ ಲಾವೋಸಿನಲ್ಲಿಯೇ ಎಡ, ಬಲ ಮತ್ತು ತಟಸ್ಥ ಪಂಗಡಗಳು ಏರ್ಪಟ್ಟು ಅಧಿಕಾರಕ್ಕಾಗಿ ಹೋರಾಡತೊಡಗಿದುವು. ಈ ಹೊತ್ತಿಗೆ ಅಮೆರಿಕ ಮತ್ತು ರಷ್ಯಗಳು ಲಾವೋಸಿನ ವಿದ್ಯಮಾನಗಳಲ್ಲಿ ಪ್ರಮುಖ ಪಾತ್ರವಹಿಸತೊಡಗಿದುವು. ಅಂತರ್ಯುದ್ಧ ಮುಂದುವರಿಯಿತು.

ಸುಭದ್ರ ಸರಕಾರವನ್ನು ರಚಿಸಬೇಕೆಂಬ ಪ್ರಯತ್ನಗಳು 1962ರ ವರೆಗೆ ಫಲಿಸಲಿಲ್ಲ. 1962ರಲ್ಲಿ ಜಿನೀವಾ ಸಮ್ಮೇಳನ ಸಮಾವೇಶಗೊಂಡಿತು. ಮೂರು ಪಂಗಡಗಳು ಸಮ್ಮಿಶ್ರ ಸರಕಾರ ರಚಿಸಲು ಒಪ್ಪಿ ಸಹಿಹಾಕಿದುವು. ತಟಸ್ಥ ಪಂಗಡದ ಸೌವನ್ನಫೋಮ ಅವರು ಪ್ರಧಾನಿಯಾದ ಸರಕಾರ ರಚಿತವಾಯಿತು. ಆದರೂ ಕಲಹಗಳು ಕೊನೆಗಾಣಲಿಲ್ಲ. ಈ ನಡುವೆ ವಿಯೆಟ್ನಾಂ ಸಮರದ ಬಿಸಿ ಲಾವೋಸಿಗೂ ತಟ್ಟಿತು. ಲಾವೋಸಿನ ಮೂಲಕ ಹಾಯುವ ವಿಯೆಟ್‌ಕಾಂಗ್ ಪಡೆಗಳ ಮೇಲೆ ದಕ್ಷಿಣ ವಿಯೆಟ್ನಾಂ ಬೆಂಬಲಿಗರು ಬಾಂಬು ಮಳೆ ಸುರಿಸಲಾರಂಭಿಸಿದರು. ಮೊದಲೇ ಅಭದ್ರ ಸರಕಾರ ಹೊಂದಿದ್ದ ಲಾವೋಸ್ ವಿಯೆಟ್ನಾಂ ಹಗರಣದಲ್ಲಿ ಬಳಲಿತು.

ಲಾವೋಸಿನ ರಾಜಕೀಯ ಸಿಕ್ಕುಗಂಟಾಗಿದೆ.

| | | |
|---|---|---|
| ಖಂಡ | : | ಏಷ್ಯ (ಆಗ್ನೇಯ) |
| ಅಕ್ಷಾಂಶ | : | 13° 55′ ಉ ದಿಂದ 22° 30′ ಉ |
| ರೇಖಾಂಶ | : | 100° 05′ ಪೂ ದಿಂದ 107° 44′ ಪೂ |
| ವಿಸ್ತೀರ್ಣ | : | 2,36,726 ಚ. ಕಿ. ಮೀ. |
| ಜನಸಂಖ್ಯೆ | : | ಸುಮಾರು 22,00,000 |
| ರಾಜಧಾನಿ | : | ಲುವಾಂಗ್ ಪ್ರಭಾಂಗ್ (ಆಡಳಿತ ಕೇಂದ್ರ, ವಿಯೆಂಟೈನ್) |
| ಭಾಷೆ | : | ಲಾವೋ, ಫ್ರೆಂಚ್ |
| ಸರಕಾರ | : | ಸಂವಿಧಾನಬದ್ಧ ರಾಜಪ್ರಭುತ್ವ |
| ಬಾವುಟ | : | ಐದು ಹಂತಗಳ ಮೇಲೆ ನಿಂತ ಮೂರು ಮುಖದ ಆನೆ. ಅವುಗಳ ನೆತ್ತಿಗಳ [illegible] ಹಂತಗಳ ಗೋಪುರ ಕೆಂಪು ಹಿನ್ನೆಲೆ |

## ಲ್ಯಾಟಿನ್ ಅಮೆರಿಕ

ದಕ್ಷಿಣ ಅಮೆರಿಕ, ಮಧ್ಯ ಅಮೆರಿಕ ಮತ್ತು ಮೆಕ್ಸಿಕೊಗಳನ್ನು ಲ್ಯಾಟಿನ್ ಅಮೆರಿಕ ದೇಶಗಳು ಎನ್ನುತ್ತಾರೆ. ಇವು ಆರ್ಜೆಂಟೀನ, ಬೊಲಿವಿಯ, ಬ್ರೆಜಿಲ್, ಚಿಲಿ, ಕೊಲಂಬಿಯ, ಕಾಸ್ಟರಿಕ, ಕ್ಯೂಬ, ಡೊಮಿನಿಕನ್ ಗಣರಾಜ್ಯ, ಇಕ್ವೆಡಾರ್, ಎಲ್‌ಸಾಲ್ವಡಾರ್, ಗ್ವಾಟೆಮಾಲ, ಹೈಟಿ, ಹಾಂಡುರಾಸ್, ಮೆಕ್ಸಿಕೊ, ನಿಕಾರಾಗುವ, ಪನಾಮ, ಪರಗ್ವೇ, ಪೆರು, ಸಾಲ್ವಡಾರ್, ಉರುಗ್ವೇ ಮತ್ತು ವೆನಿಜೂಲ. ಈ 21 ಸ್ವತಂತ್ರ ರಾಷ್ಟ್ರಗಳಲ್ಲದೆ ಇನ್ನೂ ಕೆಲವು ದ್ವೀಪಗಳೂ ಇವೆ. ಲ್ಯಾಟಿನ್ ಅಮೆರಿಕ ಎಂಬ ಪ್ರಯೋಗವು ಹತ್ತೊಂಬತ್ತನೆಯ ಶತಮಾನದ ಆದಿಯಲ್ಲಿ ರೂಢಿಗೆ ಬಂದಿತು. ದಕ್ಷಿಣ ಯೂರೋಪಿನ (ಲ್ಯಾಟಿನ್) ವಸಾಹತುಗಳನ್ನು ಉತ್ತರ ಯೂರೋಪಿನ (ಇಂಗ್ಲೆಂಡ್ ಮುಂತಾದುವು) ವಸಾಹತುಗಳಿಂದ ಬೇರ್ಪಡಿಸಲು ಲ್ಯಾಟಿನ್ ಅಮೆರಿಕ ಎನ್ನಲಾಯಿತು. ದಕ್ಷಿಣ ಅಮೆರಿಕದಲ್ಲಿ ಹೆಚ್ಚಾಗಿ ಸ್ಪೇನ್, ಪೋರ್ಚುಗಲ್ ಮುಂತಾದ ದೇಶಗಳ ಜನರೇ ವಸಾಹತುಗಾರರು. ಇನ್ನೂ ಒಂದು ಕಾರಣ : ಪ್ರಪಂಚದಲ್ಲಿ ಮೊದಲನೆಯ ಗಣರಾಜ್ಯ ಲ್ಯಾಟಿನ್ ಭಾಷೆ ಮಾತನಾಡುತ್ತಿದ್ದ ರೋಮ್‌ನಲ್ಲಿದ್ದುದು. ಈ ಲ್ಯಾಟಿನ್ ಗಣರಾಜ್ಯದ ವಿಚಾರಧಾರೆಯೂ ವಾಸ್ತುಶಿಲ್ಪವೂ ಲ್ಯಾಟಿನ್ ಅಮೆರಿಕದ ಜನರಿಗೆ ಸ್ಫೂರ್ತಿಯನ್ನು ಕೊಟ್ಟಿವೆ.

ಆ್ಯಂಡಿಸ್ ಪರ್ವತ, ಅಮೆಜಾನ್ ನದಿ, ಅಟಕಾಮ ಮರುಭೂಮಿ ಮತ್ತು ಜ್ವಾಲಾಮುಖಿಗಳು ದೇಶದ ಪ್ರಾಕೃತಿಕ ವೈವಿಧ್ಯವನ್ನು ಎತ್ತಿ ತೋರಿಸಿದರೆ, ಸಂಸ್ಕೃತಿಯಲ್ಲಿನ ಹೊಂದಾಣಿಕೆ ಚೆನ್ನಾಗಿ ಬಾಳಬೇಕೆಂಬ ಹೆಬ್ಬಯಕೆ ಜನರ ಮನಸ್ಸನ್ನು ಒಂದುಗೂಡಿಸುತ್ತದೆ.

ಲ್ಯಾಟಿನ್ ಅಮೆರಿಕ ಅಟ್ಲಾಂಟಿಕ್ ಮತ್ತು ಶಾಂತಸಾಗರಗಳ ಮಧ್ಯೆ ಇದೆ. ಪ್ರದೇಶದ ಹೆಚ್ಚು ಭಾಗ ಉಷ್ಣವಲಯದಲ್ಲಿದೆ. ಚಿಲಿ, ಉರುಗ್ವೇ, ಮಧ್ಯ ಆರ್ಜೆಂಟೀನ ಮತ್ತು ದಕ್ಷಿಣ ಬ್ರೆಜಿಲ್‌ನಲ್ಲಿ ಸಮಶೀತೋಷ್ಣ ಹವಾಗುಣವಿದೆ. ದಕ್ಷಿಣ ಆರ್ಜೆಂಟೀನದ್ದು ಶೀತ ಹವೆ.

ರಾಕಿ ಪರ್ವತ, ಆ್ಯಂಡೀಸ್ ಪರ್ವತಗಳು, ಅಮೆಜಾನ್, ಮಿಸಿಸಿಪಿ ಮತ್ತು ಲಾಪ್ಲಾಟ ನದಿಗಳು ಮತ್ತು ಇವುಗಳ ಉಪನದಿಗಳು ಲ್ಯಾಟಿನ್ ಅಮೆರಿಕದಲ್ಲಿವೆ. ಬಹಳ ಎತ್ತರದ ಶಿಖರ ಅಕಾನ್‌ಕಾಗುವ (7,015 ಮೀಟರು).

ವಿವಿಧ ಪಂಗಡಗಳಿಗೆ ಸೇರಿದ ಮತ್ತು ಅನೇಕ ಭಾಷೆಗಳನ್ನಾಡುವ ಜನ ಲ್ಯಾಟಿನ್ ಅಮೆರಿಕ ದೇಶಗಳಲ್ಲಿದ್ದಾರೆ. ರೆಡ್ ಇಂಡಿಯನರು, ಮೆಸ್ಟಿಜೊಗಳು ಮತ್ತು ನೀಗ್ರೊಗಳು ಅಧಿಕ ಸಂಖ್ಯೆಯಲ್ಲಿದ್ದಾರೆ. ಹದಿನಾರನೆಯ ಶತಮಾನದಲ್ಲಿ ನೀಗ್ರೊಗಳನ್ನು ಗುಲಾಮರನ್ನಾಗಿ ತರಲಾಯಿತು. ಅರ್ಧ ಭಾಗಕ್ಕಿಂತಲೂ ಹೆಚ್ಚು ಜನ ಸ್ಪ್ಯಾನಿಷ್ ಮಾತಾಡುತ್ತಾರೆ. ಉಳಿದವರು ಪೋರ್ಚುಗೀಸ್, ಇಂಗ್ಲಿಷ್ ಮತ್ತು ರೆಡ್ ಇಂಡಿಯನ್ ಭಾಷೆಗಳನ್ನು ಆಡುತ್ತಾರೆ. ಕೆಲವು ಕಡೆ ಇಂಗ್ಲಿಷ್ ಆಡಳಿತ ಭಾಷೆಯಾಗಿದೆ.

ರೋಮನ್ ಕ್ಯಾಥಲಿಕ್ ಮತಾನುಯಾಯಿಗಳೇ ಹೆಚ್ಚು. ಪ್ರಾಟೆಸ್ಟೆಂಟರೂ ಯೆಹೂದ್ಯರೂ ಇದ್ದಾರೆ. ಇಂಡಿಯನರ ಹೆಂಗಸರು ಕೈಮಗ್ಗದ ಚಿತ್ರಮಯ ಉಣ್ಣೆಯ ಲಂಗ ತೊಡುತ್ತಾರೆ. ಜನಸಂಖ್ಯೆ ಸುಮಾರು ಇಪ್ಪತ್ತನಾಲ್ಕು ಕೋಟಿ.

ಪಶ್ಚಿಮ ಗೋಳಾರ್ಧದಲ್ಲೇ ಲ್ಯಾಟಿನ್ ಅಮೆರಿಕ ದೇಶಗಳು ವರ್ಣ ಸಮಾನತೆಯನ್ನು ಮೊದಲು ಆಚರಣೆಗೆ ತಂದುವು. ಬ್ರೆಜಿಲ್, ಕೊಲಂಬಿಯ, ಚಿಲಿ, ಆರ್ಜೆಂಟೀನ ಮತ್ತು ಪೆರುಗಳಲ್ಲಿ ಓದುಬರಹ ಬಲ್ಲವರು ಮಾತ್ರ ಮತ ಚಲಾಯಿಸಬಹುದು. ಇತರ ಲ್ಯಾಟಿನ್ ಅಮೆರಿಕ ದೇಶಗಳಲ್ಲಿ ವಯಸ್ಕರೆಲ್ಲ ಮತ ನೀಡಬಹುದು. ಲ್ಯಾಟಿನ್ ಅಮೆರಿಕದ ಎಲ್ಲ ಗಣರಾಜ್ಯಗಳೂ ಸ್ತ್ರೀಯರಿಗೆ ಮತದಾನದ ಹಕ್ಕನ್ನು ಕೊಟ್ಟಿವೆ.

ಲ್ಯಾಟಿನ್ ಅಮೆರಿಕ ಅಭಿವೃದ್ಧಿಯ ಹಾದಿಯಲ್ಲಿ ನಡೆದಿದೆ. ಭೂಮಿಯನ್ನು ಜನರಿಗೆ ಹಂಚಿಕೊಡಲಾಗಿದೆ. ವ್ಯವಸಾಯ ಪದ್ಧತಿಗಳೂ ಸುಧಾರಿಸಿವೆ. ವಿದ್ಯೆ, ಆರೋಗ್ಯ, ಗೃಹನಿರ್ಮಾಣ ಕಾರ್ಯಗಳಿಗೆ ವಿಶೇಷ ಗಮನ ನೀಡಲಾಗಿದೆ.

ಲ್ಯಾಟಿನ್ ಅಮೆರಿಕ ನೈಸರ್ಗಿಕ ಅದ್ಭುತಗಳಿಂದ ಕೂಡಿದ ಪ್ರದೇಶ. ನಿಬಿಡವಾದ ಅರಣ್ಯಗಳೂ ಇವೆ, ವಿಶಾಲವಾದ ಮರುಭೂಮಿಗಳೂ ಇವೆ. ಕಾಫಿ, ಬಾಳೆಹಣ್ಣು, ಕಬ್ಬು ಇವು ಇಲ್ಲಿ ಪ್ರಪಂಚದಲ್ಲಿಯೇ ಅಧಿಕ ಪ್ರಮಾಣದಲ್ಲಿ ಬೆಳೆಯುತ್ತವೆ.

ನೋಡಿ : ಆರ್ಜೆಂಟೀನ ; ಕೊಲಂಬಿಯ ; ಚಿಲಿ ; ದಕ್ಷಿಣ ಅಮೆರಿಕ ; ಬೊಲಿವಿಯ ; ಬ್ರೆಜಿಲ್; ಮಧ್ಯ ಅಮೆರಿಕ; ಮೆಕ್ಸಿಕೊ.

## ಲಿಂಕನ್, ಆಬ್ರಹಾಂ

1865 ಏಪ್ರಿಲ್ 14ನೆಯ ದಿನ ಅಮೆರಿಕದ ಸಂಯುಕ್ತ ಸಂಸ್ಥಾನದ ಅಂತರ್ಯುದ್ಧ ಕೊನೆಗಂಡಿತು. ಆಬ್ರಹಾಂ ಲಿಂಕನ್‌ಗೆ ವಿಜಯವಾಯಿತು. ಅದು ಸಂತೋಷದ ದಿನ. ಆ ಸಂಜೆ ಸಂಯುಕ್ತ ಸಂಸ್ಥಾನದ ಅಧ್ಯಕ್ಷ ಆಬ್ರಹಾಂ ಲಿಂಕನನ ಪತ್ನಿ, ಪತಿಯ ಆಯಾಸ ಪರಿಹಾರಕ್ಕೆಂದು ಒಂದು ನಾಟಕದ ವೀಕ್ಷಣೆಗೆ ಏರ್ಪಾಡುಮಾಡಿದ್ದಳು. ಜನತೆಯ ಪ್ರಚಂಡ ಹರ್ಷೋದ್ಗಾರಗಳನ್ನು ಆಬ್ರಹಾಂ ಲಿಂಕನ್ ತಲೆಬಾಗಿ ಸ್ವೀಕರಿಸಿದ, ನಾಟಕ ಮುಂದುವರಿಯಿತು. ರಾತ್ರಿ ಸುಮಾರು ಹತ್ತು ಘಂಟೆ. ಒಬ್ಬ ಅಜ್ಞಾತವ್ಯಕ್ತಿ ಲಿಂಕನನ ಮೇಲೆ ಒಮ್ಮೆಲೆ ಗುಂಡುಹಾರಿಸಿದ. ಲಿಂಕನನ ಹತ್ಯೆಯಾಯಿತು.

ಲಿಂಕನನನ್ನು ಕೊಂದರೂ ಅವನ ವಿಚಾರಗಳು ಸಾಯಲಿಲ್ಲ, ಲಿಂಕನ್ ಅಮರನಾದ.

“ ಜನತೆಯ ಹೃದಯಗಳಲ್ಲಿ ಹೇಗೋ ಹಾಗೆಯೇ ಈ ದೇವಾಲಯದಲ್ಲಿ ರಾಷ್ಟ್ರದ ಒಕ್ಕೂಟಕ್ಕಾಗಿ ಶ್ರಮಿಸಿದವನ ಪವಿತ್ರ ನೆನಪು ಚಿರಸ್ಮರಣೀಯವಾಗಿದೆ, ” ಎಂದು ಅಮೆರಿಕದ ಉದಾತ್ತ ಅಧ್ಯಕ್ಷರೊಬ್ಬರ ಸ್ಮಾರಕ ಮಂದಿರದಲ್ಲಿ ಬರೆಯಲಾಗಿದೆ. ಅವನೇ ಆಬ್ರಹಾಂ ಲಿಂಕನ್. ಗುಲಾಮನೊಬ್ಬನ ಸೇವೆಯನ್ನು ಸ್ವೀಕರಿಸಕೂಡದು; ಇತರರಿಗೆ ಸ್ವಾತಂತ್ರ್ಯ ನೀಡದವನಿಗೆ ವೈಯಕ್ತಿಕ ಸ್ವಾತಂತ್ರ್ಯದ ಹಕ್ಕಿಲ್ಲ ಎಂಬ ಧೀರ ಅಭಿಪ್ರಾಯವನ್ನು ಸಾರಿದ. ಈ ಮಾರ್ಗದರ್ಶನ.

ಆತ ಗುಡಿಸಲಿನಿಂದ ಶ್ವೇತಭವನವನ್ನು ಸೇರಿ ಅಮೆರಿಕದ ಅಧ್ಯಕ್ಷನಾದ. ಬಡತನದಲ್ಲಿ ಹುಟ್ಟಿ, ಕಾಡಿನ ಮಧ್ಯೆ ಮರದ ಕೊರಡುಗಳಿಂದ ಕಟ್ಟಿದ ಮನೆಯಲ್ಲಿ ಬೆಳೆದು ಮರ ಕಡಿಯುವುದರಲ್ಲಿ ಅಪ್ರತಿಮನಾದ. ತೆಪ್ಪ, ದೋಣಿಗಳನ್ನು ನಡೆಸಿದ. ಹಳ್ಳಿಯ ಪೋಸ್ಟ್‌ಮಾಸ್ಟರ್, ಶಾಸಕ, ವಕೀಲ ಅಮೆರಿಕದ ಕಾಂಗ್ರೆಸ್ ಸಂಸ್ಥೆಯ ಸದಸ್ಯ, ಕೊನೆಯದಾಗಿ ಉತ್ತುಂಗ



ರಾಷ್ಟ್ರದ ಐಕ್ಯಕ್ಕಾಗಿ ಜೀವ ತೆತ್ತ ಮಹಾಪುರುಷ ಅಬ್ರಹಾಂ ಲಿಂಕನ್

ಶಿಖರಕ್ಕೆ ಅಧ್ಯಕ್ಷ ಪದವಿಗೆ – ಏರಿದ. ಅಬ್ರಹಾಂ ಲಿಂಕನನ ಜನನ 1809ರ ಫೆಬ್ರುವರಿ 12ರಲ್ಲಿ ಕೆಂಟಕಿಯ ಬಳಿಯಲ್ಲಿ. ತಾಯಿ ನಾನ್ಸಿ ಲಿಂಕನ್, ತಂದೆ ಥಾಮಸ್ ಲಿಂಕನ್. ಈತ ಒಂದೆಡೆ ನೆಲೆನಿಲ್ಲದೆ ಆಗಾಗ್ಗೆ ತಳ ಕಿತ್ತು ಜೀವನಾಧಾರ ಹುಡುಕಿಕೊಂಡು ಅಲೆಯುತ್ತಿದ್ದ. ಲಿಂಕನ್ ಒಂಬತ್ತು ವರ್ಷದವನಾಗಿದ್ದಾಗ ತನ್ನ ಹೆತ್ತ ತಾಯಿಯನ್ನು ಕಳೆದುಕೊಂಡ. ಆದರೆ ಅವನ ಮಲತಾಯಿ ಎಲ್ಲ ವಿಧದಲ್ಲೂ ಹೆತ್ತ ತಾಯಿಯ ಜಾಗವನ್ನು ತುಂಬಿದಳು. "ಲಿಂಕನ್ ಯಾವ ತಾಯಿಯಾದರೂ ಹೆಮ್ಮೆ ಪಡುವಂಥ ಮಗ" ಎಂದು ಪ್ರೀತಿಯಿಂದ ಹೇಳಿಕೊಂಡಳು. ಬಾಲ್ಯದಲ್ಲಿ ಕೇವಲ ಒಂದು ವರ್ಷ ಶಾಲೆಗೆ ಹೋದ. ಓದಿ ಬರೆಯುವುದನ್ನು ಮತ್ತು ಅಲ್ಪ ಸ್ವಲ್ಪ ಲೆಕ್ಕವನ್ನು ಕಲಿತ. ಹತ್ತೊಂಬತ್ತನೆಯ ವಯಸ್ಸಿನ ವೇಳೆಗೆ ತನಗೆ ಕಂಡದ್ದನ್ನೆಲ್ಲ ಓದಿ ಸರಸ ಸ್ವಭಾವದವನೂ ಸ್ನೇಹಮಯಿಯೂ ಆದ. ಲಿಂಕನ್ 1830ರಲ್ಲಿ ಇಲಿನಾಯ್ ಪ್ರಾಂತದಲ್ಲಿ ನೆಲಸಿದ. ಅಲ್ಲಿ ಆತನು ಸ್ಥಳೀಯ ರಾಜಕೀಯ ಚರ್ಚೆಗಳಲ್ಲಿ ವಾದ ಹೂಡುತ್ತಿದ್ದ ರೀತಿಯನ್ನು ಮೆಚ್ಚಿಕೊಂಡ ಜನರು ಅವನನ್ನು 1834ರಲ್ಲಿ ನ್ಯಾಯವಿಧಾಯಕ ಸಭೆಗೆ ಆರಿಸಿದರು. ಮುಂದೆ ಲಿಂಕನ್ ನ್ಯಾಯಶಾಸ್ತ್ರ ಓದತೊಡಗಿದ.

1847ರಿಂದ 1849ರ ವರೆಗೆ ಅಬ್ರಹಾಂ ಲಿಂಕನ್ ಸಂಯುಕ್ತ ಸಂಸ್ಥಾನದ ಕಾಂಗ್ರೆಸಿನ ಸದಸ್ಯನಾಗಿದ್ದ. ಈ ವೇಳೆಗೆ ಇವನ ವಾದ ವೈಖರಿ ಪ್ರಭಾವ ಪೂರ್ಣವಾಗಿ ಬೆಳೆದಿತ್ತು. ಆತನ ಹಾಸ್ಯಮಯ ನಿರೂಪಣೆಗಳನ್ನು ಕೇಳಿದ ಜನ 'ಕತೆಗಾರ' ಎಂದು ಆತನಿಗೆ ಅಡ್ಡಹೆಸರಿಟ್ಟರು. ಆದರೆ ಲಿಂಕನನ ಮನಸ್ಸು ತುಂಬ 'ಗುಲಾಮಗಿರಿ'ಯ ಸಮಸ್ಯೆ. ಈ ಪದ್ಧತಿಯನ್ನು ರದ್ದುಗೊಳಿಸುವುದಕ್ಕಾಗಿ ಅವನು ಕಾಂಗ್ರೆಸ್ ಸಭೆಯಲ್ಲಿ ಮಂಡಿಸಿದ ಮಸೂದೆ ಸ್ವೀಕೃತವಾಗಲಿಲ್ಲ. ಬದಲಾಗಿ 1854ರಲ್ಲಿ ಗುಲಾಮಗಿರಿ ಹರಡಲು ಅನುಕೂಲವಾಗುವಂಥ ಮಸೂದೆಗೆ ಕಾಂಗ್ರೆಸ್ ಅಸ್ತು ಎಂದಿತು. ಇದರಿಂದ, ಮೊದಲಿನಿಂದಲೂ ಭಿನ್ನಾಭಿಪ್ರಾಯವಿದ್ದ ದೇಶ ಇತ್ತಂಡವಾಯಿತು. ಈ ಶಾಸನ ಜಾರಿಗೆ ತರಲು ಕಾರಣನಾದ ಡಗ್ಲಾಸ್ ಎಂಬವನಿಗೂ ಲಿಂಕನನಿಗೂ ಚುನಾವಣಾ ರಂಗದಲ್ಲಿ ಸಾರ್ವಜನಿಕವಾಗಿ ಬಿರುಸಾದ ಚರ್ಚೆಗಳು ನಡೆದುವು. ಇವು 'ಲಿಂಕನ್-ಡಗ್ಲಾಸ್ ಚರ್ಚೆಗಳು' ಎಂಬ ಹೆಸರಿನಲ್ಲಿ ಪ್ರಸಿದ್ಧವಾದುವು. ಲಿಂಕನನ ರಿಪಬ್ಲಿಕನ್ ಪಕ್ಷ 1860ರ ಮೇ ತಿಂಗಳಲ್ಲಿ ಅಧ್ಯಕ್ಷಪದವಿಗೆ ಆತನನ್ನು ಉಮೇದುವಾರನನ್ನಾಗಿ ಆರಿಸಿತು.

"ತನ್ನಲ್ಲಿ ತಾನೇ ಎರಡು ಬಣಗಳಾಗಿ, ಅವು ಒಂದನ್ನೊಂದು ವಿರೋಧಿಸುವಂಥ ರಾಜಕೀಯ ಸದನ ಬಹು ಕಾಲ ನಿಲ್ಲದು" ಎಂದು ಲಿಂಕನ್ ಎಚ್ಚರಿಸಿದ. "ಗುಲಾಮಗಿರಿ ಒಂದು ನೈತಿಕ ಸಮಸ್ಯೆ. ಬೇಕಿದ್ದರೆ ಅದು ಇದ್ದಲ್ಲೇ ಇರಲಿ. ಹರಡುವುದು ಬೇಡ. ಕ್ರಮೇಣ ಎಲ್ಲ ಕಡೆಯಲ್ಲೂ ಸಂಪೂರ್ಣವಾಗಿ ಅದು ನಿರ್ನಾಮವಾಗಲೇಬೇಕು." ಎಂದು ನುಡಿದ. ಚುನಾವಣೆಯಲ್ಲಿ ಲಿಂಕನ್ ತನ್ನ ಎದುರಾಳಿಗಿಂತ ಐದು ಲಕ್ಷಕ್ಕೂ ಮಿಗಿಲಾದ ಮತ ಪಡೆದು ಅಧ್ಯಕ್ಷ ಸ್ಥಾನವನ್ನು ಏರಿದ.

ಲಿಂಕನ್ ಪ್ರಮಾಣವಚನ ಸ್ವೀಕರಿಸುವ ಮೊದಲೇ ಏಳು ದಕ್ಷಿಣ ರಾಷ್ಟ್ರಗಳು ತಾವು ಅಮೆರಿಕ ಸಂಯುಕ್ತ ಸಂಸ್ಥಾನದಿಂದ ಬೇರೆಯಾಗುವುದಾಗಿ ಘೋಷಿಸಿದುವು. 1861 ಮಾರ್ಚ್ 4ರಂದು ಲಿಂಕನ್ ಅಧ್ಯಕ್ಷ ಪದವಿಯ ಮೊದಲ ಭಾಷಣ ಮಾಡಿದ. "ನೀವು ಆಕ್ರಮಣ ಮಾಡದಿದ್ದರೆ ಹೋರಾಟದ ಪ್ರಶ್ನೆಯೇ ಇಲ್ಲ" ಎಂದು ದಕ್ಷಿಣ ಸಂಸ್ಥಾನಗಳಿಗೆ ಹೇಳಿದ. "ಯಾವ ಪ್ರಾಂತವೇ ಆಗಲಿ, ಸ್ವೇಚ್ಛೆಯಿಂದ ಸಂಯುಕ್ತ ಸಂಸ್ಥಾನವನ್ನು ತೊರೆದು ಹೋಗಲು ಅಧಿಕಾರ ಪಡೆದಿಲ್ಲ." ಎಂದು ಸಾರಿದ. ಆದರೂ ದಕ್ಷಿಣದವರು ಯುದ್ಧವನ್ನು ಪ್ರಾರಂಭಿಸಿಯೇ ಬಿಟ್ಟರು. "ನನ್ನ ಪರಮೋಚ್ಚ ಗುರಿ ರಾಷ್ಟ್ರದ ಐಕ್ಯ" ಎಂದು ಹೇಳಿದ ಲಿಂಕನ್, ತನ್ನ ನೀತಿಯನ್ನು ಬಿಟ್ಟುಕೊಡಲಿಲ್ಲ. ನಾಲ್ಕು ವರ್ಷ ಕಾಲ ದಕ್ಷಿಣದವರಿಗೂ ಉತ್ತರದವರಿಗೂ ಯುದ್ಧ ನಡೆದು ಅಪಾರ ನಷ್ಟವೂ ಸಾವುನೋವುಗಳೂ ಉಂಟಾದುವು. ರಕ್ತಪಾತವಾಯಿತು. 1863ರಲ್ಲಿ ಗೆಟಿಸ್‌ಬರ್ಗ್‌ನಲ್ಲಿ ಲಿಂಕನ್ ಅಮೋಘ ಭಾಷಣವನ್ನು ಮಾಡಿದ. ಈ ಭಾಷಣದ ವಾಕ್ಯಗಳನ್ನು ಲಿಂಕನನ ಸ್ಮಾರಕಾರ್ಥವಾಗಿ ಕಟ್ಟಿರುವ ಕಟ್ಟಡದಲ್ಲಿ ಕೆತ್ತಿ ಕೊರೆಯಲಾಗಿದೆ. "ಎಂಬತ್ತೇಳು ವರ್ಷಗಳ ಕೆಳಗೆ ನಮ್ಮ ಹಿರಿಯರು ಸ್ವಾತಂತ್ರ್ಯದ ಮಹತ್ವಾಕಾಂಕ್ಷೆಯ ಸ್ಫೂರ್ತಿಗಾಗಿ, ಹುಟ್ಟಿನಿಂದ ಸರ್ವರೂ ಸಮಾನರು ಎಂಬ ಮಹತ್ ಕಲ್ಪನೆಗೆ ಮುಡಿಪಾಗಿಟ್ಟ ನೂತನ ರಾಷ್ಟ್ರವೊಂದನ್ನು ಈ ಖಂಡದಲ್ಲಿ ಸೃಷ್ಟಿಸಿದರು. ಈ ರಾಷ್ಟ್ರವಾಗಲಿ ಈ ರೀತಿ ಆದರ್ಶವನ್ನು ಹೊತ್ತು ಮುಡಿಪಾದ ಯಾವುದೇ ರಾಷ್ಟ್ರವಾಗಲಿ ಬಹು ಕಾಲ

ಉಳಿಯಬಲ್ಲುದೇ ಎಂಬ ಪರೀಕ್ಷೆಗೆ ಗುರಿಮಾಡುವ ಯಾದವೀ ಕಲಹದಲ್ಲಿ ನಾವಿಂದು ಮುಳುಗಿದ್ದೇವೆ. ದೈವಕೃಪೆಯಿಂದ, ಈ ರಾಷ್ಟ್ರದಲ್ಲಿ ಸ್ವಾತಂತ್ರ್ಯ ಪುನರ್ಜನ್ಮ ತಳೆಯುವಂತೆ. ಮತ್ತು ಜನತೆಯ. ಜನತೆಯಿಂದ. ಜನತೆಗಾಗಿ ಇರುವ ಈ ಸರಕಾರ ಭೂಮಿಯಿಂದ ಅಳಿದುಹೋಗದಂತೆ ಮಾಡಲು ದೃಢಸಂಕಲ್ಪ ಕೈಗೊಳ್ಳುವ ಕರ್ತವ್ಯ ನಮ್ಮದಾಗಿದೆ."

ಲಿಂಕನ್ ಎರಡನೆಯ ಬಾರಿ ಅಧ್ಯಕ್ಷ ಪದವಿಗೆ 1864ರಲ್ಲಿ ಚುನಾಯಿತನಾದ. ಆದರೆ ಆ ಅವಧಿಯನ್ನು ಪೂರೈಸುವ ಮೊದಲೇ ಗುಲಾಮಗಿರಿಯನ್ನು ಸಮರ್ಥಿಸುತ್ತಿದ್ದವರಿಂದ ಹತನಾದ.

ಆರು ಅಡಿ ನಾಲ್ಕು ಅಂಗುಲಗಳ (1.93 ಮೀಟರು) ಎತ್ತರವಾದ ಅಬ್ರಹಾಂ ಲಿಂಕನ್ ನೋಟಕ್ಕೆ ಆಕರ್ಷಕ ವ್ಯಕ್ತಿಯಲ್ಲ. 'ಕೊಡಲಿಯಿಂದ ಕೆತ್ತಿ ಕಟ್ಟು ಕಚ್ಚಾಗಿ ಮಾಡಿದಂತೆ ಇದ್ದಾನೆ. ಉಳಿಯಿಂದ ಇನ್ನೂ ನಯ ಕೆಲಸ ಮಾಡಬೇಕು ಎನಿಸುವಂತಿದೆ' ಎಂದು ಆತನ ತಂದೆಯೇ ಆತನನ್ನು ವರ್ಣಿಸಿದ್ದ. ಕೈಕಾಲು ಉದ್ದ, ದಟ್ಟ ಒರಟಾದ ಕಪ್ಪುಕೂದಲು. ಆತನ ದೈಹಿಕ ಶಕ್ತಿ ಅಸಾಧಾರಣವಾಗಿದ್ದಿತು. ಅವನು ತಾಳ್ಮೆಯ ಗಣಿಯಾಗಿದ್ದ. ಅಂತರಂಗದಿಂದ ಬಂದ ಸ್ಫೂರ್ತಿಯ ಸೆಲೆಯನ್ನು ಹೊರಗೆಡಹುವಾಗ ಆತನ ಭಾಷಣವನ್ನು ಕೇಳಿದವನೊಬ್ಬ ಆಡಿದ ಮಾತುಗಳಿವು: "ಆತನ ಮುಖ ಅಂತಃಪ್ರಭೆಯಿಂದ ಬೆಳಗತೊಡಗಿತು. ಅವನ ವ್ಯಕ್ತಿತ್ವವೇ ಬದಲಾಯಿತು. ಆತನ ಉಡುಗೆಗಳನ್ನು ಮರೆತೆ. ಅವನ ಹೊರ ನೋಟವನ್ನು ಮರೆತೆ. ಇತರರಂತೆ ಮೇಲೆದ್ದು ಈ ಅಭೂತಪೂರ್ವ ಮನುಷ್ಯನ ಜಯಘೋಷ ಮಾಡಿದೆ." ಸುಶೀಲನೂ ಪರಿಶುದ್ಧನೂ ಆಗಿದ್ದ ಲಿಂಕನ್ ಅನೇಕ ಬಾರಿ ಚಿಂತಾಕುಲನಾಗಿರುತ್ತಿದ್ದ. ಆದರೆ ಕಥೆ ಹೇಳುವುದರಲ್ಲಿಯೂ ಅನುಕರಣೆಯಲ್ಲಿಯೂ ಇವನು ಜಾಣ. ಇದರಿಂದ ಜನ ಸುಲಭವಾಗಿ ಅವನ ಗೆಳೆಯರಾಗುತ್ತಿದ್ದರು. ಈತನನ್ನು ನಾಲ್ಕು ಮಹಾನ್ ಅಧ್ಯಕ್ಷರ ಸಾಲಿನಲ್ಲಿರಿಸಿ ಉನ್ನತಸ್ಥಾನದಲ್ಲಿ ಕಲ್ಲಿನಲ್ಲಿ ಕಡೆದು ಅಮರನನ್ನಾಗಿರಿಸಿದ್ದಾರೆ ಅಮೆರಿಕದ ಜನರು.

## ಲಿಂಡ್‌ಬರ್ಗ್, ಚಾರ್ಲ್ಸ್

"ಯಾರು ಅಟ್ಲಾಂಟಿಕ್ ಸಾಗರವನ್ನು ಮಧ್ಯೆ ಎಲ್ಲಿಯೂ ಇಳಿಯದೆ ವಿಮಾನದಲ್ಲಿ ದಾಟುವರೋ ಅವರಿಗೆ 25,000 ಡಾಲರ್ (ಸುಮಾರು 1,87,500 ರೂಪಾಯಿ) ಬಹುಮಾನ". 1926ರಲ್ಲಿ ರೇಮಂಡ್ ಆರ್ಟೀಗ್ ಎನ್ನುವ ಹೋಟೆಲ್ ಮಾಲಿಕನೊಬ್ಬ ಈ ಸವಾಲನ್ನು ಹಾಕಿದ.

ಬಹುಮಾನದ ಗಾತ್ರ ಹಲವರನ್ನು ಆಕರ್ಷಿಸಿತು. ಆದರೆ ಆ ವರೆಗೆ ಯಾರೂ ಇಂಥ ಸಾಹಸ ಕೈಗೊಂಡಿರಲಿಲ್ಲ. 1927ರ ಮೇ ತಿಂಗಳಲ್ಲಿ ಪ್ಯಾರಿಸಿನಿಂದ ನ್ಯೂಯಾರ್ಕಿಗೆ ವಿಮಾನದಲ್ಲಿ ಹೊರಟ ಇಬ್ಬರು ಪ್ರಾಣ ನೀಗಿದರು. ಇದಾದಮೇಲೆ ಲಿಂಡ್‌ಬರ್ಗ್ ಈ ಪ್ರವಾಸವನ್ನು ಒಬ್ಬನೇ ಕೈಗೊಂಡು, ಯಶಸ್ವಿಯಾಗಿ ಮುಗಿಸಿದ.

ಚಾರ್ಲ್ಸ್ ಲಿಂಡ್‌ಬರ್ಗ್ 1902ರ ಫೆಬ್ರುವರಿ 4ರಂದು ಮಿಚಿಗನ್‌ನ ಡೆಟ್ರಾಯ್ಟ್ ಪಟ್ಟಣದಲ್ಲಿ ಹುಟ್ಟಿದ. 1920ರಲ್ಲಿ ವಿಸ್‌ಕಾನ್‌ಸಿನ್ ವಿಶ್ವವಿದ್ಯಾನಿಲಯದಲ್ಲಿ ಇಂಜಿನಿಯರಿಂಗ್ ಅಭ್ಯಾಸಮಾಡಲು ಹೋದ. ಆದರೆ ವಿಮಾನದತ್ತ ಅವನ ಒಲವು ಬಾಲ್ಯದಿಂದಲೂ ಹೊರಳಿತ್ತು. ಎರಡು ವರ್ಷ ಇಂಜಿನಿಯರಿಂಗ್ ಅಭ್ಯಾಸದಲ್ಲಿ ನಿರರ್ಥಕವಾಗಿ ತೊಡಗಿ ಹಾರಾಟ ತರಬೇತಿ ಶಿಕ್ಷಣ ಶಾಲೆಯನ್ನು ಸೇರಿದ. ಶಿಕ್ಷಣ ಮುಗಿದ ಬಳಿಕ ವಿಮಾನ ಅಂಚೆಯ ವೈಮಾನಿಕನಾದ.

ಅಟ್ಲಾಂಟಿಕ್ ಸಾಗರವನ್ನು ಒಂದೇ ಹಾರಾಟದಲ್ಲಿ ದಾಟಿ ವಿಕ್ರಮ ಸ್ಥಾಪಿಸಲು ಲಿಂಡ್‌ಬರ್ಗ್ ಬಯಸಿದ. ಪ್ರಯಾಣಕ್ಕೆ ಬೇಕಾದ ಹಣವನ್ನು ಸೇಂಟ್ ಲೂಯಿ ಪಟ್ಟಣದ ಕೆಲವು ಉತ್ಸಾಹಿ ವರ್ತಕರಿಂದ ಕೂಡಿಸಿಕೊಂಡ. 'ದಿ ಸ್ಪಿರಿಟ್ ಆಫ್ ಸೇಂಟ್ ಲೂಯಿ' ಎಂಬ ಹೆಸರಿನ, ಬೆಳ್ಳಿಯಂತೆ ಬೆಳಗುತ್ತಿದ್ದ ಸಣ್ಣ ವಿಮಾನದಲ್ಲಿ ಒಬ್ಬನೇ ಹೊರಟ. ಮೇ 20 (1927) ರಂದು ಬೆಳಗ್ಗೆ ಯಾನ ಕೈಗೊಂಡ. ಈತ ಮೇ 21ರಂದು ರಾತ್ರಿ 10ಕ್ಕೆ ಪ್ಯಾರಿಸ್ ತಲುಪಿದ. 33 ಗಂಟೆ ಮತ್ತು 29 ನಿಮಿಷಗಳಲ್ಲಿ 5,792 ಕಿ.ಮೀ. ಪ್ರಯಾಣ ಮಾಡಿದ್ದ. ಒಂದು ಲಕ್ಷಕ್ಕೂ ಹೆಚ್ಚು ಮಂದಿ ಪ್ಯಾರಿಸಿನಲ್ಲಿ ಈತನನ್ನು ಸ್ವಾಗತಿಸಿದರು. ಯೂರೋಪಿನಲ್ಲೆಲ್ಲಾ ಲಿಂಡ್‌ಬರ್ಗ್‌ಗೆ ಗೌರವಾದರಗಳು ದೊರೆತುವು. ಅಮೆರಿಕಕ್ಕೆ ಹಿಂದಿರುಗಿದಾಗ ಸ್ವತಃ ಅಧ್ಯಕ್ಷರೇ ಈತನನ್ನು ಸ್ವಾಗತಿಸಿ ಒಂದು ವಿಶೇಷ ಪದಕವನ್ನಿತ್ತು ಗೌರವಿಸಿದರು. ಅವನು ವೈಮಾನಿಕ ಹಾರಾಟದಲ್ಲಿ ಹೊಸ ದಾಖಲೆಯನ್ನು ಸ್ಥಾಪಿಸಿದಂತಾಯಿತು. ವಿಮಾನದ ಉಪಯೋಗದ ಬಗೆಗೆ ಜನರಿಗೆ ನಿಖರವಾದ ಅರಿವು ಮೂಡಲು ಈ ಯಾನ ಸಹಾಯಕವಾಯಿತು. ಈ ಹೊಸ ಬಗೆಯ ವಾಹನದಿಂದ ಸಾವಿರಾರು ಮೀಟರುಗಳ ಪ್ರಯಾಣವನ್ನು ಸ್ವಲ್ಪ ಕಾಲಾವಧಿಯಲ್ಲಿ ಮುಗಿಸಬಹುದು ಎಂಬುದು ಸ್ಪಷ್ಟವಾಯಿತು.

1927ರಲ್ಲಿ ಒಂಟಿಯಾಗಿ ಅಟ್ಲಾಂಟಿಕ್ ಸಾಗರವನ್ನು ಹಾರಿ ದಾಟಿದ ವೀರ ಚಾರ್ಲ್ಸ್ ಲಿಂಡ್‌ಬರ್ಗ್



19[illegible]ರಲ್ಲಿ ಲಿಂಡ್‌ಬರ್ಗ್ ಆ್ಯನ್ ಮಾರೋ ಎಂಬುವಳನ್ನು ವಿವಾಹವಾದ. ಅವನ ಹಾರಾಟದಲ್ಲಿ ಆಕೆಯೂ ಭಾಗವಹಿಸುತ್ತಿದ್ದಳು. ಆ್ಯನ್ ತಮ್ಮ ಪ್ರಯಾಣಗಳ ವಿವರಗಳನ್ನು ಸ್ವಾರಸ್ಯವಾಗಿ ಬರೆದಿಟ್ಟಿದ್ದಾಳೆ.

1932ರಲ್ಲಿ ಲಿಂಡ್‌ಬರ್ಗ್ ದಂಪತಿಯ 20 ತಿಂಗಳ ಚಾರ್ಲ್ಸ್ ಎಂಬ ಮಗನನ್ನು ಯಾರೋ ಅಪಹರಿಸಿ ಕೊಂದುಹಾಕಿದರು. ಈ ದುಃಖ ಇವರನ್ನು ಬಹಳ ದಹಿಸಿತು. ಶಿಶು ಅಪಹರಣ ಒಂದು ಅಪರಾಧ ಎಂದು ಅಮೆರಿಕದ ಕಾಂಗ್ರೆಸ್ ತೀರ್ಮಾನಿಸಿ, ಆ ರೀತಿ ಅಪಹರಣ ಮಾಡಿದವರಿಗೆ ದಂಡನೆ ವಿಧಿಸಲು ಶಾಸನ ರಚಿಸಿತು. ಇದನ್ನೇ 'ಲಿಂಡ್‌ಬರ್ಗ್ ಕಾನೂನು' ಎಂದು ಕರೆಯುತ್ತಾರೆ. ದುಃಖವನ್ನು ಮರೆಯಲು ಲಿಂಡ್‌ಬರ್ಗ್ ದಂಪತಿ ಇಂಗ್ಲೆಂಡಿಗೆ, ಅಲ್ಲಿಂದ ಫ್ರಾನ್ಸಿಗೆ ಪ್ರಯಾಣ ಮಾಡಿದರು. ಫ್ರಾನ್ಸಿನಲ್ಲಿ ಡಾ. ಅಲೆಕ್ಸಿಸ್ ಕ್ಯಾರೆಲ್ ಅವರೊಡನೆ ಲಿಂಡ್‌ಬರ್ಗ್ ವೈದ್ಯಕೀಯ ಸಂಶೋಧನೆಯಲ್ಲಿ ತೊಡಗಿದ.

1936–37 ಮತ್ತು 38ರಲ್ಲಿ ಲಿಂಡ್‌ಬರ್ಗ್ ಜರ್ಮನಿಗೆ ಭೇಟಿ ನೀಡಿದ. ಜರ್ಮನಿಯ ವಿಮಾನಯಾನ ಕೇಂದ್ರಗಳನ್ನು ಸಂದರ್ಶಿಸಿ ಜರ್ಮನ್ ವಿಮಾನಗಳ ಬಗೆಗೆ ಅಭ್ಯಾಸ ಮಾಡಿದ. ಮುಂದೆ ಎರಡನೆಯ ಮಹಾಯುದ್ಧದ ಕಾಲದಲ್ಲಿ ಅಮೆರಿಕಕ್ಕೆ ಇದರಿಂದ ಬಹಳ ಸಹಾಯವಾಯಿತು.

ಲಿಂಡ್‌ಬರ್ಗ್‌ನ ಕೆಲವು ಬರಹಗಳು ಇಂದಿಗೂ ಜನಪ್ರಿಯವಾಗಿವೆ. ಆತನ ಅಟ್ಲಾಂಟಿಕ್ ಹಾರಾಟದ ಸಾಹಸಕಥೆಗೆ ನ್ಯೂಯಾರ್ಕ್ ಟೈಮ್ಸ್ ಪತ್ರಿಕೆಯು 14,50,000 ರೂಪಾಯಿ ನೀಡಿತು. ಆತನ 'ನಾವು' (1929) ಎಂಬ ಕೃತಿಯ ಅಸಂಖ್ಯಾತ ಪ್ರತಿಗಳು ಮಾರಾಟವಾದುವು. 1953ರಲ್ಲಿ 'ಸೇಂಟ್ ಲೂಯಿಯ ಅಂತಃಸತ್ತ್ವ' ಎಂಬ ಇವನ ಆತ್ಮಚರಿತ್ರೆ ಪ್ರಕಟವಾಯಿತು.

1969ರಲ್ಲಿ ಅಪೊಲೊ 11ರ ಚಂದ್ರಯಾನ ಆರಂಭವಾದ ಘಳಿಗೆಯಲ್ಲಿ ಅದನ್ನು ವೀಕ್ಷಿಸಿದ ಸಹಸ್ರಾರು ಜನರಲ್ಲಿ ನಲವತ್ತೆರಡು ವರ್ಷಗಳ ಹಿಂದೆ ಏಕಾಂಗಿಯಾಗಿ ಅಟ್ಲಾಂಟಿಕ್ ಸಾಗರವನ್ನು ಹಾರಿ ದಾಟಿದ ಲಿಂಡ್‌ಬರ್ಗನೂ ಇದ್ದ.

## ಲಿಪಿ

ಲೇಖನ ಅಥವಾ ಬರಹದ ವಿಧಾನಗಳಲ್ಲೆಲ್ಲ ಲಿಪಿಯು ಅತ್ಯಂತ ಮುಂದುವರಿದದ್ದು ಮತ್ತು ಉಪಯುಕ್ತವಾದದ್ದು. ಲಿಪಿಯಲ್ಲಿ ಆಯಾ ಭಾಷೆಯಲ್ಲಿ ಬಳಕೆಯಾಗುವ ಪ್ರತಿ ಸ್ವರಕ್ಕೂ ಪ್ರತಿ ವ್ಯಂಜನಕ್ಕೂ ಪ್ರತ್ಯೇಕ ಚಿಹ್ನೆಯುಂಟು. ಬರವಣಿಗೆಯಲ್ಲಿ ಸ್ವರ ವ್ಯಂಜನಗಳನ್ನು ಬಿಡಿಬಿಡಿ ತೋರಿಸುತ್ತಾರೆ (ಉದಾ : ರೋಮನ್ ಲಿಪಿ). ಭಾರತೀಯ ಬರಹಗಳು ಉಚ್ಚಾರಾಂತ ಲೇಖನಗಳು, ಲಿಪಿಗಳಲ್ಲ. ಇಲ್ಲಿ ಉಚ್ಚಾರಾಂತ ಅಥವಾ ಅಕ್ಷರ ಬರಹದ ಮೂಲ ಘಟಕ. ಉದಾಹರಣೆಗೆ ಅ ಎನ್ನುವುದು ಒಂದು 'ಅಕ್ಷರ'. ಹಾಗೆಯೇ 'ಕ್ಷ್ಮಿ' ಎನ್ನುವುದೂ ಒಂದು ಅಕ್ಷರವೇ. ವಾಸ್ತವವಾಗಿ ಈ ಎರಡನೆಯ ಅಕ್ಷರದಲ್ಲಿರುವುದು ಒಂದು ಸ್ವರ ಮತ್ತು ಮೂರು ವ್ಯಂಜನಗಳು. (ಉಚ್ಚಾರಾಂತವೆಂದರೆ ಸ್ವರ ಅಥವಾ ಸ್ವರಸಮೇತವಾದ ವ್ಯಂಜನ ಅಥವಾ ವ್ಯಂಜನಗಳೆಂದು ಸ್ಥೂಲವಾಗಿ ಹೇಳಬಹುದು). ಚೀನಿ ಬರಹವನ್ನೂ ಲಿಪಿಯೆಂದು ಕರೆಯಲು ಸಾಧ್ಯವಿಲ್ಲ. ಚೀನಿ ಬರಹದಲ್ಲಿ ಒಂದೊಂದು ಪದಕ್ಕೂ ಪ್ರತ್ಯೇಕ ಚಿಹ್ನೆಯುಂಟು. ಎಂದರೆ ಒಬ್ಬನು ಸಾವಿರ ಪದಗಳನ್ನು ಬರೆಯುವುದನ್ನು ಕಲಿಯಬೇಕಾದರೆ ಸುಮಾರು ಒಂದು ಸಾವಿರ ಚಿಹ್ನೆಗಳನ್ನು ಕಲಿತಿರಬೇಕು. ವಿದ್ವಾಂಸನೆನಿಸಿಕೊಳ್ಳಬೇಕಾದರೆ 10,000ಕ್ಕೂ ಮೇಲ್ಪಟ್ಟು ಕಲಿಯಬೇಕು. ಇದು ಬಹಳ ಕಷ್ಟದ ಕೆಲಸ ಎಂಬುದು ಸ್ಪಷ್ಟವಾಗಿಯೇ ಇದೆ. ಆದರೆ ಲಿಪಿಯಲ್ಲಿರುವ 25 ಅಥವಾ 26 ಚಿಹ್ನೆಗಳಿಂದ ಇಡೀ ಭಾಷೆಯನ್ನು ಬರೆಯಲು ಸಾಧ್ಯವಾದರೆ, ಅದರಿಂದ ಎಷ್ಟು ಉಪಯೋಗ !

ಮನುಷ್ಯನ ಬೆಳವಣಿಗೆಯಲ್ಲಿ ಭಾಷೆ ಮತ್ತು ಲೇಖನಗಳು ಬಹು ಮುಖ್ಯ ಪಾತ್ರವನ್ನು ವಹಿಸಿವೆ. ಭಾಷೆಯ ಉಪಯೋಗ ಗೊತ್ತಿರದಿದ್ದರೆ ಮನುಷ್ಯ ಇತರ ಪ್ರಾಣಿಗಳಂತೆಯೇ ಇದ್ದುಬಿಡುತ್ತಿದ್ದ. ಲೇಖನ ಗೊತ್ತಿರದಿದ್ದರೆ ಅನಾಗರಿಕನಾಗಿಯೇ ಉಳಿಯುತ್ತಿದ್ದ. ಈ ದಿನ ಮಾತಿಲ್ಲದ ಮನುಷ್ಯವರ್ಗ ಯಾವುದೂ ಇಲ್ಲ, ನಿಜ. ಆದರೆ ಬರಹ ಗೊತ್ತಿಲ್ಲದ ಅನೇಕ ಜನಾಂಗಗಳಿವೆ. ಈ ಜನಾಂಗಗಳೆಲ್ಲ ಅನಾಗರಿಕರಾಗಿ ಉಳಿದಿವೆ ಎಂಬುದು ಎಲ್ಲರಿಗೂ ತಿಳಿದ ಸಂಗತಿಯಾಗಿದೆ.

ಮಾತಿನ ಕಣ್ಣಿಗೆ ಕಾಣುವ ರೂಪ ಬರಹವೆಂದು ಸ್ಥೂಲವಾಗಿ ಹೇಳಬಹುದು. ಬರಹದ ಸಹಾಯದಿಂದ ನಮ್ಮ ಅಭಿಪ್ರಾಯಗಳನ್ನು ಕಾಲದ ದೃಷ್ಟಿಯಿಂದ ಮತ್ತು ದೇಶದ ದೃಷ್ಟಿಯಿಂದ ದೂರದಲ್ಲಿರುವವರಿಗೆ ಕಳುಹಿಸುವುದು ಸಾಧ್ಯವಾಗುತ್ತದೆ. ನಮ್ಮ ಅನುಭವ, ಅಭಿಪ್ರಾಯ, ಜ್ಞಾನಗಳನ್ನು ಉಳಿಸುವುದರಲ್ಲಿ ಮತ್ತು ಬೆಳೆಸುವುದರಲ್ಲಿ ಬರಹದ ಸ್ಥಾನ ಬಹು ದೊಡ್ಡದು.

ಬರಹವೇನೂ ದೈವದತ್ತವಾಗಿ ಮನುಷ್ಯನಿಗೆ ಬಂದುದಲ್ಲ. ಮನುಷ್ಯನ ಅಗತ್ಯಕ್ಕನುಗುಣವಾಗಿ, ಅವನ ಪ್ರಯತ್ನಗಳ ಫಲವಾಗಿ ಸಾವಿರಾರು ವರ್ಷಗಳ ಅವಧಿಯಲ್ಲಿ ಬರಹ ವಿಕಾಸವಾಗುತ್ತ ಬಂದಿದೆ. ಆ ವಿಕಾಸದ ಈಚಿನ ತುತ್ತ ತುದಿಯಲ್ಲಿ ಲಿಪಿಯಿದೆ ಎಂಬುದನ್ನಾಗಲೇ ನೋಡಿದ್ದೇವೆ.

ಈ ದಿನ ನಾವು ನೋಡುವ ಯಾವುದೇ ದೇಶದ ಬರಹವೇ ಆಗಲಿ, ಆ ಬರಹದ ಮೂಲಕ್ಕೆ ಹೋದರೆ ಚಿತ್ರಗಳಿವೆಯೆಂಬುದನ್ನು ಎಲ್ಲರೂ ಒಪ್ಪಿದ್ದಾರೆ. ಕನ್ನಡದ 'ಅ ಆ ಇ ಈ.........' ಇವುಗಳಾಗಲಿ, ಇಂಗ್ಲಿಷಿನ 'A B C D.........' ಇವುಗಳಾಗಲಿ ಈಗ ಚಿತ್ರಗಳಂತೆ ಕಾಣುವುದಿಲ್ಲ. ಆದರೆ ಇವು ಸಾವಿರಾರು ವರ್ಷಗಳ ಹಿಂದೆ ವಾಸ್ತವವಾದ ಚಿತ್ರಗಳೇ ಆಗಿದ್ದುವು. ಆ ಚಿತ್ರಗಳು ಕಾಲದಿಂದ ಕಾಲಕ್ಕೆ ಸರಳವಾಗಿ, ಅನೇಕ ಆಕಾರಗಳನ್ನು ಪಡೆದು ವ್ಯತ್ಯಾಸಗಳನ್ನು ಹೊಂದಿ ಈಗಿನ ಆಕಾರವನ್ನು ಹೊಂದಿವೆ. ಆದರೂ ಇಂಗ್ಲಿಷಿನ F ಎಂಬಲ್ಲಿ ಬಸವನಹುಳುವಿನ ಎರಡು ಕೊಂಬುಗಳನ್ನು ಗುರುತಿಸಬಹುದೆಂದು ಹೇಳುತ್ತಾರೆ. ಈ ಚಿಹ್ನೆಯ ಬಹು ಹಿಂದಿನ ರೂಪವು ಈಜಿಪ್ಷಿಯನ್ ಬರಹದಲ್ಲಿ ಒಂದು ಬಸವನಹುಳುವಿನ ಚಿತ್ರವೇ ಆಗಿತ್ತು.

ಕ್ರಿ. ಪೂ. 20,000–10,000 ವರ್ಷಗಳಷ್ಟು ಹಿಂದೆ ಅನಾಗರಿಕ ಜನರು ಬಂಡೆಗಳ ಮೇಲೆ, ಗುಹೆಗಳ ಮೇಲೆ, ಬರೆದಿರುವ, ಕೊರೆದಿರುವ, ಚಿತ್ರಗಳು ಆಫ್ರಿಕ ಮುಂತಾದ ಪ್ರದೇಶಗಳಲ್ಲಿ ದೊರೆತಿವೆ. ಈ ಚಿತ್ರಗಳಲ್ಲಿ ಎರಡು ಜಾತಿಯವನ್ನು ಗುರುತಿಸಬಹುದು. ಒಂದು ಜಾತಿಯವು ಯಾವುದೇ ಬೇರೆ ಉದ್ದೇಶವಿಲ್ಲದೆ ಕೇವಲ ಚಿತ್ರವನ್ನು ಬರೆಯಬೇಕೆಂಬ ಪ್ರವೃತ್ತಿಯಿಂದ ಮೂಡಿಬಂದಂಥವು. ಇವನ್ನು ನಾವು ಇಲ್ಲಿ ಬಿಟ್ಟುಬಿಡಬಹುದು. ಇನ್ನೊಂದು ಜಾತಿಯ ಚಿತ್ರಗಳು ಸ್ಪಷ್ಟ ಉದ್ದೇಶದಿಂದ ಬರೆದಂಥವು. ಆ ಉದ್ದೇಶ ಎರಡು ರೀತಿಯದಾಗಿರಬಹುದು : ಒಂದು–ಯಾವುದೋ ಸಂಗತಿಯನ್ನು ನೆನಪಿಟ್ಟುಕೊಳ್ಳಲಿಕ್ಕೆ ಬರೆದ ಚಿತ್ರವಾಗಿರಬಹುದು. ಎರಡು–ಯಾವುದೋ ಸಂಗತಿಯನ್ನು ಇನ್ನೊಬ್ಬನಿಗೆ ತಿಳಿಸುವ ಉದ್ದೇಶದಿಂದ

ಬರೆದದ್ದಾಗಿರಬಹುದು. ಇಂಥ ಚಿತ್ರಗಳು ಆಯಾ ವಸ್ತುವನ್ನು ನೇರವಾಗಿ ಪ್ರತಿನಿಧಿಸುತ್ತವೆ.

ಉದಾಹರಣೆಗೆ :




ಇಂಥ ಚಿತ್ರಗಳನ್ನು ಕ್ರಮವಾಗಿ ಬರೆದು ಒಂದು ಸಂಗತಿಯನ್ನು ದೂರದಲ್ಲಿರುವವರಿಗೆ ತಿಳಿಸಬಹುದು.

ಉದಾಹರಣೆಗೆ :

ಇಬ್ಬರು ಮನುಷ್ಯರು ಸಿಂಹ ಈಟಿ

ಈ ಕ್ರಮದಲ್ಲಿ ಬಂದ ಚಿತ್ರಗಳು "ನಾವೂ ನೀವೂ ಸಿಂಹದ ಬೇಟೆಗೆ ಹೋಗೋಣ" ಎಂಬ ಸಂದೇಶವನ್ನು ದೂರದಲ್ಲಿರುವವರಿಗೆ ಮುಟ್ಟಿಸಬಹುದು. ಬರಹದ ಉದ್ದೇಶ ದೂರದಲ್ಲಿರುವವರಿಗೆ ಸಂದೇಶವನ್ನು ತಲುಪಿಸುವುದು ಎಂಬುದನ್ನು ನಾವು ನೆನಪಿನಲ್ಲಿಟ್ಟುಕೊಂಡರೆ, ಮೇಲಿನ ಚಿತ್ರಗಳು ಅರ್ಥಪೂರ್ಣವಾಗುತ್ತವೆ. ಮತ್ತು ಇವು 'ಬರಹ' ಎನಿಸಿಕೊಳ್ಳುತ್ತವೆ. ಬರಹದ ಇತಿಹಾಸದಲ್ಲಿ ಇದು ಮೊದಲನೆಯ ಘಟ್ಟ. ಇದನ್ನು ಚಿತ್ರಲೇಖನ ಎನ್ನಬಹುದು. ನೆನಪಿಡಬೇಕು–ಚಿತ್ರಲೇಖನದಲ್ಲಿ ಚಿತ್ರವೂ ಆಯಾ ವಸ್ತುವನ್ನು ಹೇಳುತ್ತದೆ. ಮತ್ತು ಚಿತ್ರಕ್ಕೂ ಭಾಷೆಗೂ ಯಾವ ಸಂಬಂಧವೂ ಇಲ್ಲ. ಸೂರ್ಯನ ಚಿತ್ರ ಸೂರ್ಯನನ್ನು, ಇತ್ಯಾದಿ.

ಚಿತ್ರಲೇಖನದ ಮುಂದಿನ ಹೆಜ್ಜೆ ಭಾವಲೇಖನ. ಇಲ್ಲಿ ಚಿತ್ರವು ವಸ್ತುವಿಗಿಂತ ಹೆಚ್ಚಾಗಿ ಆ ವಸ್ತುವಿಗೆ ಸಂಬಂಧಿಸಿದ ಭಾವವನ್ನು ಸೂಚಿಸುತ್ತದೆ. ಉದಾಹರಣೆಗೆ ಸೂರ್ಯನ ಚಿತ್ರವು ದಿನವನ್ನು ಸೂಚಿಸಬಹುದು. ಕಣ್ಣಿನಿಂದ ನೀರು ತೊಟ್ಟಿಕ್ಕುತ್ತಿರುವ ಚಿತ್ರವು ಅಳುವಿನ ದುಃಖದ ಚಿಹ್ನೆಯಾಗಿ ಬರುತ್ತದೆ. ಈ ಘಟ್ಟದಲ್ಲಿ ಚಿತ್ರವು ವಸ್ತುವಿನ ಸಂಪರ್ಕವನ್ನು ಕಳೆದುಕೊಂಡು, ವಸ್ತುವಿಗೆ ಸಂಬಂಧಿಯಾದ ಅಭಿಪ್ರಾಯವನ್ನು ಹೇಳುತ್ತದೆ. ಇಲ್ಲಿಯೂ ಕೂಡ ಚಿತ್ರಕ್ಕೂ ಭಾಷೆಗೂ (ಎಂದರೆ ಭಾಷೆಯ ಪದಗಳಿಗೂ) ಯಾವ ಸಂಬಂಧವೂ ಇಲ್ಲ.

ಕಾಲ ಕಳೆದಂತೆ ಚಿತ್ರಗಳು ಸಂಪ್ರದಾಯಬದ್ಧವಾದುವು; ಅನೇಕ ಮಾರ್ಪಾಟುಗಳನ್ನು ಪಡೆದುವು.

ಲಿಪಿಯ ಬೆಳವಣಿಗೆಯ ಇತಿಹಾಸದಲ್ಲಿ ಮುಂದಿನ ಘಟ್ಟ ಬಹಳ ಪ್ರಮುಖವಾದದ್ದು. ಇಲ್ಲಿ ಚಿಹ್ನೆಗೂ ಭಾಷೆಗೂ ಸಂಪರ್ಕವೇರ್ಪಟ್ಟಿತು. ಇದೇ ಧ್ವನ್ಯಾತ್ಮಕಲೇಖನ. ಇದು ಬಹುಶಃ ಕ್ರಾಂತಿಕಾರಕವಾದ ಬೆಳವಣಿಗೆ. ಇದು ಹೇಗೆ ನಡೆದಿರಬಹುದೆಂಬುದನ್ನು ವಿದ್ವಾಂಸರು ಹೀಗೆ ಊಹಿಸಿದ್ದಾರೆ :

Mandate (ಆಜ್ಞೆ) ಎಂಬುದನ್ನು




Belief (ನಂಬುಗೆ) ಎಂಬುದನ್ನು

Bee ಚಿತ್ರ + Leaf ಚಿತ್ರ



I saw ಎಂಬುದನ್ನು eye + saw (ಕಣ್ಣು) + (ಗರಗಸ)

—ಎಂದು ಬರೆಯಬಹುದು. ಆದರೆ ಇದನ್ನು ಗಮನಿಸಿ. ಇಲ್ಲಿ ಚಿತ್ರಕ್ಕೂ ಅದು ಸೂಚಿಸುವ ವಸ್ತುವಿಗೂ ಸಂಬಂಧವಿಲ್ಲ. ಉದಾಹರಣೆಗೆ Bee ಎಂಬುದನ್ನು ಬರೆದಿರುವಲ್ಲಿ ದುಂಬಿಗೂ ಎಲೆಗೂ ಏನೂ ಸಂಬಂಧವಿಲ್ಲ. ಆದರೆ ಚಿತ್ರಕ್ಕೂ ಆ ಭಾಷೆಯಲ್ಲಿರುವ ಉಚ್ಚಾರಾಂಶಗಳಿಗೂ ಸಾಮ್ಯವಿದೆ. ಒಂದು ಕಾಲ್ಪನಿಕ ನಿದರ್ಶನವನ್ನು ತೆಗೆದುಕೊಳ್ಳೋಣ. ಈ ಚಿತ್ರವು ಇಂಗ್ಲಿಷಿನಲ್ಲಿ ಮೊದಲು ದುಂಬಿ ಎಂಬ ಕೀಟದ ಚಿತ್ರವಾಗಿದ್ದು ಕ್ರಮೇಣ bee ಎಂಬ ಪದದ ಸಂಕೇತವಾಗಿ ಪರಿಣಮಿಸಿದ ಮೇಲೆ, ಆ ಭಾಷೆಯಲ್ಲಿ bi ಎಂಬ ಅಕ್ಷರ ಎಲ್ಲೆಲ್ಲಿ ಬರುತ್ತದೆ ಅಲ್ಲೆಲ್ಲ ಈ ಚಿತ್ರವನ್ನು ಬರೆಯುವುದು ಸಾಧ್ಯವಲ್ಲವೇ ? ಇಂಥ ಕ್ರಿಯೆ ಹಿಂದೆ ನಡೆದಂತೆ ಕಾಣುತ್ತದೆ. ಈಜಿಪ್ಷಿಯನ್ ಬರಹದಲ್ಲಿ, ಬಲಕ್ಕಿರುವ ಚಿತ್ರ re² 'ಬಾಯಿ' ಪದದ ಸಂಕೇತವಾಗಿ ಪರಿಣಮಿಸಿತು. ಮುಂದೆ re² ಎಂಬ ಅಕ್ಷರದ ಸಂಕೇತವಾಗಿ ಪರಿಣಮಿಸಿ, ಕ್ರಮೇಣ r ಎಂಬ ವ್ಯಂಜನದ ಸಂಕೇತವಾಗಿ ಪರಿಣಮಿಸಿತು. ಈಜಿಪ್ಷಿಯನ್ ಭಾಷೆಯ ಎಲ್ಲ 24 ವ್ಯಂಜನಗಳಿಗೂ ಒಂದೊಂದು ಚಿಹ್ನೆಯು ಹೀಗೆಯೇ ಏರ್ಪಟ್ಟಿತು.

ಈಜಿಪ್ಷಿಯನ್ ಚಿಹ್ನೆಗಳನ್ನು ತೆಗೆದುಕೊಂಡ ಫೊನಿಷಿಯನರು ಅಲ್ಲಿಯ ಒಂದೊಂದು ವ್ಯಂಜನವನ್ನು ಸೂಚಿಸುತ್ತಿದ್ದ ಚಿಹ್ನೆಗಳನ್ನು ತೆಗೆದುಕೊಂಡು ತಮಗೆ ಅನಗತ್ಯವೆಂದು ಕಂಡುಬಂದ ಚಿಹ್ನೆಗಳನ್ನು ತಿರಸ್ಕರಿಸಿದರು. ಪಶ್ಚಿಮ ಸೆಮಿಟಿಕ್ ಬರಹದಲ್ಲಿ ಸ್ವರಗಳನ್ನು ಬರೆಯದೆ ಹಾಗೇ ಬಿಡುತ್ತಿದ್ದರು. ಇವರಿಂದ ಗ್ರೀಕರು ಚಿಹ್ನೆಗಳನ್ನು ಸ್ವೀಕರಿಸಿದರು. ಹೀಗೆ ಸ್ವೀಕರಿಸುವಾಗ ಗ್ರೀಕರು ಮಾಡಿಕೊಂಡ ಒಂದು ಮಾರ್ಪಾಟು ಅತ್ಯಂತ ಪ್ರಮುಖವಾದದ್ದು. ಫೊನಿಷಿಯನ್ ಬರಹದಲ್ಲಿದ್ದ ಚಿಹ್ನೆಗಳನ್ನು ಗ್ರೀಕರು ಬಳಸಿಕೊಂಡರೂ ಕೆಲವು ಉಳಿದುವು. ಅವುಗಳನ್ನು ಸ್ವರಗಳಿಗೆ ಸಂಕೇತವಾಗಿ ಗ್ರೀಕರು ಬಳಸಿಕೊಂಡರು. ಹೀಗೆ ಗ್ರೀಕ್ ಲಿಪಿಯಲ್ಲಿ ಸ್ವರಗಳಿಗೆ ವ್ಯಂಜನಗಳಿಗೆ ಪ್ರತ್ಯೇಕವಾದ ಚಿಹ್ನೆಗಳು ಕಲ್ಪಿತವಾದುವು. ನಿಜವಾದ ಅರ್ಥದಲ್ಲಿ ಇದು ಲಿಪಿ ಅಥವಾ 'alphabet'. 'Alphabet' ಎನ್ನುವ ಮಾತು ಗ್ರೀಕಿನ ಲಿಪಿಯ ಆರಂಭದಲ್ಲಿದ್ದ ಚಿಹ್ನೆಗಳ ಹೆಸರುಗಳಾದ alpha ಮತ್ತು beta ಎಂಬವುಗಳ ಸಂಯೋಗದಿಂದ ರೂಪುಗೊಂಡಿದೆ.

ಗ್ರೀಕರಿಂದ ರೋಮನರು ಲಿಪಿಯನ್ನು ಸ್ವೀಕರಿಸಿದರು. ಇದೇ ಇಂದಿಗೂ ಯೂರೋಪಿನಲ್ಲಿ ಬಹುತೇಕ ಪ್ರಚಾರದಲ್ಲಿರುವುದು.

ಕನ್ನಡ ವರ್ಣಮಾಲೆಯನ್ನು ಪಾರಿಭಾಷಿಕವಾಗಿ 'ಲಿಪಿ'ಯೆಂದು ಕರೆಯುವುದು ಸಾಧ್ಯವಿಲ್ಲ. ಏಕೆಂದರೆ ಕನ್ನಡದಲ್ಲಿ ಸ್ವರ, ವ್ಯಂಜನಗಳನ್ನು ಬಿಡಿಸಿ ಬಿಡಿಸಿ ಬರೆಯುವುದಿಲ್ಲ. ಇಲ್ಲಿ ಬರಹದ ಮೂಲಮಾನವೆಂದರೆ

ಒಂದು ಅಕ್ಷರ. ಆದ್ದರಿಂದ ಕನ್ನಡವು ಉಚ್ಚಾರಾಂಶ ಅಥವಾ ಅಕ್ಷರಾತ್ಮಕ ಲೇಖನಕ್ಕೆ ನಿದರ್ಶನವಾಗುತ್ತದೆ. 'ಲಿಪಿ' ಎನ್ನುವ ಮಾತನ್ನು ಬರಹ ಎಂಬ ಶಿಥಿಲಾರ್ಥದಲ್ಲಿಯೂ ಬಳಸುತ್ತಾರೆ. (ಉದಾ : ಕನ್ನಡ ಲಿಪಿ).

ಕನ್ನಡದ ಮತ್ತು ಇತರ ಭಾರತೀಯ ವರ್ಣಮಾಲೆಗಳಿಗೆಲ್ಲ ಬ್ರಾಹ್ಮಿಯೇ ಮೂಲ. ಕ್ರಿ. ಪೂ. ಮೂರನೆಯ ಶತಮಾನದ ಅಶೋಕನ ಶಾಸನಗಳ ಬ್ರಾಹ್ಮಿಯಿಂದ ಕನ್ನಡ ಅಕ್ಷರಗಳು ಕ್ರಮೇಣ ಈಗಿನ ಕಾಲಕ್ಕೆ ಬೆಳೆದುಕೊಂಡು ಬಂದ ರೀತಿಯನ್ನು ತೋರಿಸಲು ಸಾಧ್ಯವಾಗಿದೆ. ಕೆಲವು ನಿದರ್ಶನಗಳು :

ಬ್ರಾಹ್ಮಿಗೆ ಮೂಲ ಯಾವುದೆಂಬ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ಅನೇಕ ವಿದ್ವಾಂಸರು ಬ್ರಾಹ್ಮಿಯನ್ನು ಹರಪ್ಪ, ಮೊಹೆಂಜೊದಾರೋಗಳಲ್ಲಿ ದೊರಕಿರುವ ಮುದ್ರಿಕೆಗಳ ಮೇಲಿನ ಚಿಹ್ನೆಗಳಿಂದ ನಿಷ್ಪನ್ನಗೊಳಿಸುತ್ತಾರೆ. ಈ ಮುದ್ರಿಕೆಗಳ ಚಿಹ್ನೆಗಳಲ್ಲಿ ಮೀನು, ಮರ, ಗಿಡ, ಪಾತ್ರೆ, ಪರ್ವತ ಮುಂತಾದವುಗಳ ಚಿತ್ರಗಳನ್ನು ಗುರುತಿಸಬಹುದು. ಹೀಗೆ ಬ್ರಾಹ್ಮಿಗೆ ಮೂಲ ಸೈಂಧವ ಸಂಸ್ಕೃತಿಯ ಲಿಪಿಯಾಗಿದ್ದುದು ನಿಜವಾದರೆ, ಕನ್ನಡ ಅಕ್ಷರಗಳೂ ಮೂಲತಃ ಚಿತ್ರಗಳೇ ಆಗಿದ್ದುವು ಎಂದು ಹೇಳಬಹುದು. ಆದರೆ ಆ ಲಿಪಿಗೆ ಯಾವ ಭಾಷೆ ಮೂಲ ಎಂಬುದು ಮಾತ್ರ ರಹಸ್ಯವಾಗಿಯೇ ಉಳಿದುಕೊಂಡಿದೆ.

## ಲಿಬಿಯ

ಉತ್ತರ ಆಫ್ರಿಕದಲ್ಲಿ ಸ್ವತಂತ್ರವಾದ ರಾಷ್ಟ್ರ ಲಿಬಿಯ. ಲಿಬಿಯದ ಉತ್ತರಕ್ಕೆ ಭೂಮಧ್ಯ ಸಮುದ್ರದ ತೀರವಿದೆ. ಸಂಪದ್ಭರಿತ ಐತಿಹಾಸಿಕ ಪರಂಪರೆ ಲಿಬಿಯಕ್ಕೆ ಇದೆ. ಲೆಪ್ಟಿಸ್ ಮಾಗ್ನ ಎಂಬಲ್ಲಿ ಅಗೆದಾಗ ವಿಶಾಲವಾದ ಪ್ರಾಚೀನ ಕಾಲದ ರೋಮನ್ ನಾಟ್ಯಗೃಹ ದೊರೆಯಿತು. ಈ ಅವಶೇಷಗಳು ಐತಿಹಾಸಿಕ ಕುತೂಹಲ ಕೆರಳಿಸಿವೆ.

ಲಿಬಿಯದ ಬಹಳ ಜನ ಹಳೆಯ ಸಂಪ್ರದಾಯ ಅನುಸರಿಸುತ್ತಾರೆ. ಅರಬ್ ಮತ್ತು ಬರ್ಬರ್ ಜನರು ಇಲ್ಲಿನ ಮುಖ್ಯ ನಿವಾಸಿಗಳು. ಇಸ್ಲಾಂ ಧರ್ಮವೇ ರಾಷ್ಟ್ರದಲ್ಲಿ ಅಧಿಕೃತ ಧರ್ಮ. ಹೆಂಗಸರಲ್ಲಿ ಬಹು ಮಟ್ಟಿಗೆ ಘೋಷಾ ಪದ್ಧತಿಯಿದೆ.

ಚಹಾಪಾನಕ್ಕೆ ಇಲ್ಲಿ ಪ್ರಾಶಸ್ತ್ಯ. ಸಾಂಪ್ರದಾಯಿಕವಾಗಿ ಮೂರು ಬಟ್ಟಲು ಚಹ ಕೊಡುತ್ತಾರೆ. ಪ್ರತಿಯೊಂದು ಬಟ್ಟಲು ಚಹಕ್ಕೆ ಬೇರೆ ಬೇರೆ ರುಚಿ.

ಲಿಬಿಯವನ್ನು ಮೂರು ಪ್ರಾಂತಗಳಾಗಿ ವಿಂಗಡಿಸಿದ್ದಾರೆ–ಸಿರೆನೈಕ್, ಟ್ರಿಪೋಲಿಟಾನಿಯ ಮತ್ತು ಫೆಜಾನ್ . ಪೂರ್ವದಲ್ಲಿ ಗ್ರೀಕರು ಈಗಿನ ಸಿರೆನೈಕ್ ಪ್ರಾಂತವನ್ನು ಆಳುತ್ತಿದ್ದರು. ಟ್ರಿಪೋಲಿಟಾನಿಯವನ್ನು ಫಿನೀಷಿಯನರು ಆಳುತ್ತಿದ್ದರು. ರೋಮನರು ಎರಡು ಭಾಗಗಳನ್ನೂ ಗೆದ್ದು ರೋಮನ್ ಚಕ್ರಾಧಿಪತ್ಯಕ್ಕೆ ಸೇರಿಸಿಕೊಂಡರು. 643ರಲ್ಲಿ ಅರಬರು ಲಿಬಿಯವನ್ನು ವಶಪಡಿಸಿಕೊಂಡರು. ತುರ್ಕಿಯವರು 1551ರಿಂದ 1911ರ ವರೆಗೆ ಲಿಬಿಯವನ್ನು ಆಟಮನ್ ಚಕ್ರಾಧಿಪತ್ಯದ ಭಾಗವಾಗಿ ಮಾಡಿಕೊಂಡಿದ್ದರು. 1911ರಲ್ಲಿ ಲಿಬಿಯ ಇಟಲಿಯ ಕೈ ಸೇರಿತು. ಇಟಲಿಯವರ ಕಾಲದಲ್ಲಿಯೇ ರಸ್ತೆಗಳು, ಬಂದರುಗಳು, ರೈಲುದಾರಿಗಳು ನಿರ್ಮಿತವಾದುವು. ಎರಡನೆಯ ಮಹಾಯುದ್ಧದಲ್ಲಿ ಮಿತ್ರರಾಷ್ಟ್ರಗಳ ವಿಜಯದ ಅನಂತರ ಬ್ರಿಟನ್ ಎರಡು ಪ್ರಾಂತಗಳನ್ನೂ ಫ್ರಾನ್ಸ್ ಫೆಜಾನನ್ನೂ ಆಳತೊಡಗಿದವು. ವಿಶ್ವಸಂಸ್ಥೆಯ ನಿರ್ಧಾರದಂತೆ 1951ನೆಯ ಡಿಸೆಂಬರಿನಲ್ಲಿ ಲಿಬಿಯ ಸ್ವತಂತ್ರವಾಯಿತು.

ನಾಲ್ಕು ವರ್ಷಗಳ ಅನಂತರ ಲಿಬಿಯ ವಿಶ್ವಸಂಸ್ಥೆಯ ಸದಸ್ಯರಾಷ್ಟ್ರವಾಯಿತು. 1953ರಲ್ಲಿ ಅರಬ್ ಲೀಗನ್ನು ಸೇರಿತು.

ಲಿಬಿಯದಲ್ಲಿ ನದಿಯಾಗಲಿ, ಸರೋವರವಾಗಲಿ ಇಲ್ಲ. ಈ ಒಣ ದೇಶದಲ್ಲಿ ಹಲವಾರು ಚಿಲುಮೆಗಳಿವೆ. ಪೂರ್ವಕ್ಕಿರುವ ಸಿರೆನೈಕ್ ಪ್ರಾಂತ್ಯದಲ್ಲಿ ಎತ್ತರದ ಪ್ರಸ್ಥಭೂಮಿಯಿದೆ. ಇದನ್ನು ಹಸಿರುಪರ್ವತ ಎನ್ನುವರು. ಇದರ ದಕ್ಷಿಣಕ್ಕೆ ಲಿಬಿಯ ಮರುಭೂಮಿ. ಚಿಲುಮೆಗಳು ಇರುವೆಡೆಗಳಲ್ಲಿ ಹಸಿರಿರುತ್ತದೆ. ವಾಯುವ್ಯ ಪ್ರಾಂತ ಟ್ರಿಪೋಲಿಟಾನಿಯ ಫಲವತ್ತಾದ ತೀರಪ್ರದೇಶ. ಇದರ ದಕ್ಷಿಣಕ್ಕಿರುವ ಫೆಜಾನ್ ಕಲ್ಲು ಮತ್ತು ಪರ್ವತಗಳಿಂದ ಕೂಡಿದೆ. ಇಲ್ಲೂ ಸಮೃದ್ಧವಾದ ಚಿಲುಮೆ ಪ್ರದೇಶಗಳಿವೆ. ದೇಶದ ಶೇಕಡಾ ತೊಂಬತ್ತು ಭಾಗ ಮರುಭೂಮಿ. ಸಿರೆನೈಕ ಮತ್ತು ಟ್ರಿಪೋಲಿಟಾನಿಯಗಳಲ್ಲಿ 1959ರಲ್ಲಿ ಪೆಟ್ರೋಲಿಯಂ ಇರುವುದು ಕಂಡು ಬಂದು ದೇಶದ ಆರ್ಥಿಕ ರೀತಿಯೇ ಬದಲಾಗಿದೆ.

ತೀರ ಪ್ರದೇಶದಲ್ಲಿ ಭೂಮಧ್ಯ ವಾಯುಗುಣ ಚಳಿಗಾಲದಲ್ಲಿ ಹೆಚ್ಚಿಗಿದ್ದು ಮಳೆ ಬೀಳುತ್ತದೆ.

ಲಿಬಿಯದ ಖನಿಜ ಸಂಪತ್ತು ಕಡಮೆ. ಪೆಟ್ರೋಲಿಯಂ, ಕಬ್ಬಿಣ ಮತ್ತು ನೈಸರ್ಗಿಕ ಅನಿಲಗಳು ಮಾತ್ರ ದೊರಕುತ್ತವೆ.

ಭೂಮಧ್ಯ ಸಮುದ್ರ ತೀರದಲ್ಲಿ ಮೀನು ಹಿಡಿಯುವುದು ಮುಖ್ಯ ಉದ್ಯೋಗ. ಮೀನನ್ನು ಡಬ್ಬದಲ್ಲಿ ರಫ್ತು ಮಾಡುವರು. ತಂಬಾಕು ಸಂಸ್ಕರಣ, ಆಲಿವ್ ಎಣ್ಣೆ, ಸಾಬೂನು, ಚರ್ಮ ಹದಮಾಡುವ ಕೈಗಾರಿಕೆಗಳಿವೆ.

ಲಿಬಿಯದಲ್ಲಿ ಎರಡು ರಾಜಧಾನಿಗಳಿವೆ. ಟ್ರಿಪೋಲಿ ಮತ್ತು ಬೆನ್‌ಘಾಜಿ. ಟ್ರಿಪೋಲಿಯಲ್ಲಿ ಅರಬಿ ವಾಸ್ತುಶಿಲ್ಪದ ಕಟ್ಟಡಗಳನ್ನು ಆಧುನಿಕ ಕಟ್ಟಡಗಳ ಪಕ್ಕದಲ್ಲಿ ಕಾಣಬಹುದು.

ಗ್ರೀಕ್, ರೋಮನ್ ಮತ್ತು ಇಸ್ಲಾಮಿ ಕಾಲಗಳ ಪ್ರಾಚೀನ ವಸ್ತುಗಳು ಲಿಬಿಯದಲ್ಲಿ ಹೇರಳವಾಗಿ ದೊರೆತಿವೆ. ಇಟಲಿಯವರ ಆಡಳಿತ ಕಾಲದಲ್ಲಿ ಭೂ ಸಂಶೋಧನೆ ನಡೆದು, ಟ್ರಿಪೋಲಿ–ಸಿರೆನ್–ಸೇ ಭಾಗಗಳಲ್ಲಿ ಶಾಸನಗಳು, ಉತ್ತಮ ಕೆತ್ತನೆ ವಸ್ತುಗಳು ಮುಂತಾದುವುಗಳಿರುವ ವಸ್ತು ಸಂಗ್ರಹಾಲಯಗಳು ದೊರೆತಿವೆ.

| | | |
|---|---|---|
| ಖಂಡ | : | ಆಫ್ರಿಕ (ಉತ್ತರ) |
| ಅಕ್ಷಾಂಶ | : | 19° 30′ ಉ ದಿಂದ 34° ಉ |
| ರೇಖಾಂಶ | : | 9° 30′ ಪೂ ದಿಂದ 25° ಪೂ |
| ವಿಸ್ತೀರ್ಣ | : | 17,61,200 ಚ. ಕಿ. ಮೀ. |
| ಜನಸಂಖ್ಯೆ | : | 12,50,000 (1966) |
| ರಾಜಧಾನಿ | : | ಟ್ರಿಪೋಲಿ ಮತ್ತು ಬೆನ್‌ಘಾಜಿ |
| ಭಾಷೆ | : | ಅರಬಿ |
| ಸರಕಾರ | : | ಸಂವಿಧಾನಬದ್ಧ ರಾಜಪದ್ಧತಿ |
| ಬಾವುಟ | : | ಕೆಂಪು, ಕಪ್ಪು ಮತ್ತು ಹಸಿರು ಬಣ್ಣದ ಅಡ್ಡ ಪಟ್ಟೆಗಳು, ಮಧ್ಯೆ ಬಿಳಿಯ ಅರ್ಧಚಂದ್ರ ಮತ್ತು ನಕ್ಷತ್ರ (ಕಪ್ಪು ಪಟ್ಟೆ ಅಗಲ) |

## ಲಿಯೊನಾರ್ಡೊ ದ ವಿಂಚಿ

1482. ಇಟಲಿ ದೇಶದ ಮಿಲಾನ್ ರಾಜ್ಯವನ್ನು ಲೊಡೊವಿಕೊ ಎಂಬ ಪಾಳೆಯಗಾರ ಆಳುತ್ತಿದ್ದ. ಲೊಡೊವಿಕೊ ತನ್ನ ರಾಜ್ಯದಲ್ಲಿ ಕೆಲಸಮಾಡಲು ಒಬ್ಬ ಮಿಲಿಟರಿ ಇಂಜಿನಿಯರ್, ಒಬ್ಬ ಶಿಲ್ಪಿ, ಒಬ್ಬ ವಾಸ್ತುಶಿಲ್ಪಿ, ಒಬ್ಬ ಚಿತ್ರಗಾರ ಇವರೆಲ್ಲ ಬೇಕೆಂದು ಸಾರಿದ್ದ. ಒಂದು ದಿನ ಲೊಡೊವಿಕೊಗೆ ಒಂದು ಪತ್ರ ಬಂದಿತು.

" ಕೀರ್ತಿವಂತ ಪ್ರಭುವೆ...

ಬಹಳ ಹಗುರವಾಗಿ ಆದರೆ ಭದ್ರವಾಗಿರುವ, ಸಾಗಿಸಲು ಸುಲಭವಾದಂಥ ಸೇತುವೆಗಳನ್ನು ನಿರ್ಮಾಣ ಮಾಡುವ ಯೋಜನೆ ನನ್ನಲ್ಲಿದೆ.

ಒಂದು ಪ್ರದೇಶದ ಆಕ್ರಮಣವಾದಾಗ ಕಂದಕಗಳಿಂದ ನೀರಿನ ಸರಬರಾಜನ್ನು ನಿಲ್ಲಿಸುವ ಬಗೆ ನನಗೆ ಗೊತ್ತು. ಎತ್ತರವನ್ನು ಅಳೆಯುವ ಏಣಿ ಮೊದಲಾದ ಯುದ್ಧ ಕಾಲದ ಸಲಕರಣೆಗಳನ್ನು ಮಾಡಲು ನಾನು ತಿಳಿದಿರುವೆ.

ನೌಕಾಯುದ್ಧಕ್ಕೆ ಬೇಕಾದ ಯಂತ್ರಗಳನ್ನು ನಿರ್ಮಿಸಬಲ್ಲೆ.

ಬಹಳ ಅನುಕೂಲವಾಗಿಯೂ ಸಾಗಿಸಲು ಸುಲಭವಾದ ಫಿರಂಗಿಗಳನ್ನು ತಯಾರಿಸಬಲ್ಲೆ. ಇವುಗಳಿಂದ ಸಣ್ಣ ಕಲ್ಲುಗಳ ಸುರಿಮಳೆಯನ್ನೇ ಸುರಿಸಬಹುದು.

ಗವಿಗಳು ಹಾಗೂ ಗುಪ್ತ ದ್ವಾರಗಳ ಮೂಲಕ, ಸದ್ದಿಲ್ಲದೆ, ನದಿ ಅಥವಾ ಕಂದಕಗಳ ಮೂಲಕ ಹಾದು, ಗೊತ್ತಾದ ನಿರ್ದಿಷ್ಟ ಸ್ಥಳಕ್ಕೆ ಬರುವ ವಿಧಾನಗಳು ನನಗೆ ತಿಳಿದಿವೆ.

ಫಿರಂಗಿ ದಳದೊಡನೆ ಶತ್ರುವಿನ ಸೈನ್ಯದ ಮಧ್ಯಕ್ಕೆ ಯಾವ ಭಯವೂ ಇಲ್ಲದೆ ನುಗ್ಗಬಲ್ಲೆ.

ಸಮಯ ಬಿದ್ದರೆ ಹೊಸ ಬಗೆಯ ಫಿರಂಗಿಗಳನ್ನೂ ತಯಾರಿಸಬಲ್ಲೆ.

ಫಿರಂಗಿಗಳನ್ನು ಎಲ್ಲಿ ಉಪಯೋಗಿಸಲು ಸಾಧ್ಯವಿಲ್ಲವೊ ಅಲ್ಲಿ ಸಾಮಾನ್ಯವಾಗಿ ಉಪಯೋಗಿಸಲು ಕವಣೆ, ಬಲೆ, ಕಲ್ಲುಗಳನ್ನು ಎಸೆಯುವ ಯುದ್ಧ ಯಂತ್ರ ಮೊದಲಾದುವನ್ನು ಸರಬರಾಜು ಮಾಡಬಲ್ಲೆ. ಸಮಯ ಬಂದ ಹಾಗೆ ಆಕ್ರಮಣಕ್ಕೂ ರಕ್ಷಣೆಗೂ ಪ್ರಯೋಜನವಾಗುವ ಅನೇಕ ರೀತಿಯ ಯಂತ್ರಗಳನ್ನು ನಿರ್ಮಿಸಬಲ್ಲೆ.

ಶಾಂತಿಕಾಲದಲ್ಲಿ ಇತರರು ನೀಡುವಷ್ಟೇ ತೃಪ್ತಿಯನ್ನು ನಾನು ಶಿಲ್ಪಿಯಾಗಿ ನೀಡಬಲ್ಲೆ. ಸ್ವಂತ ಕಟ್ಟಡಗಳನ್ನೂ ಸಾರ್ವಜನಿಕ ಕಟ್ಟಡಗಳನ್ನೂ ನಿರ್ಮಿಸಬಲ್ಲೆ. ಒಂದು ಕಡೆಯಿಂದ ಇನ್ನೊಂದು ಕಡೆಗೆ ನೀರಿನ ಸಂಪರ್ಕ ಏರ್ಪಡಿಸಬಲ್ಲೆ. ಅಮೃತಶಿಲೆಯಲ್ಲಾಗಲಿ ಕಂಚು, ಮಣ್ಣು ಇವುಗಳಲ್ಲಾಗಲಿ ಶಿಲ್ಪಕೃತಿಗಳನ್ನು ನಿರ್ಮಿಸಬಲ್ಲೆ. ಚಿತ್ರಗಳನ್ನೂ ಬರೆಯಬಲ್ಲೆ.



ನನ್ನ ಶಿಲ್ಪಕೃತಿಗಳೂ ಚಿತ್ರಗಳೂ ಇತರ ಯಾವುದೇ ಕೃತಿಗಳಿಗೂ ಸರಿಗಟ್ಟಿ [illegible].

ಮೇಲೆ ಹೇಳಿದ್ದೆಲ್ಲ ಅಸಾಧ್ಯವೆಂದು ಯಾರಾದರೂ ಭಾವಿಸಿದರೆ ನಾನು ನಿಮ್ಮ ಉದ್ಯಾನದಲ್ಲಿ ಅಥವಾ ಬೇರೆಲ್ಲಾದರೂ ಅವನ್ನೆಲ್ಲ ಮಾಡಿ ತೋರಿಸಲು ಸಿದ್ಧನಾಗಿದ್ದೇನೆ. ಇದಕ್ಕೆಂದೇ ನಾನು ನಮ್ರನಾಗಿ ನಿಮ್ಮಲ್ಲಿ ವಿನಂತಿ ಮಾಡಿಕೊಂಡಿದ್ದೇನೆ."

ಈ ಕಾಗದ ಬರೆದವನು ಲಿಯೊನಾರ್ಡೋ ದ [illegible] ಮಾತನ್ನು ಆಡಿರಲಿಲ್ಲ. ಸತ್ಯವನ್ನೇ ನುಡಿದಿದ್ದ.

ಲಿಯೊನಾರ್ಡೋ 1452 ಏಪ್ರಿಲ್ 15ರಂದು ಇಟಲಿಯ ವಿಂಚಿ ಎಂಬ ಹಳ್ಳಿಯಲ್ಲಿ ಹುಟ್ಟಿದ. ತಂದೆ ವಕೀಲ.

ಶಾಲೆಯಲ್ಲಿ ಲಿಯೊನಾರ್ಡೋ ಗಣಿತ, ಸಂಗೀತ, ಚಿತ್ರಕಲೆ ಇವುಗಳಲ್ಲಿ ವಿಶೇಷ ಆಸಕ್ತಿಯನ್ನು ತೋರಿಸಿದ. ಅವನ ಪ್ರಶ್ನೆಗಳಿಂದ ಅವನ ಗಣಿತದ ಉಪಾಧ್ಯಾಯರು ತಬ್ಬಿಬ್ಬಾಗುತ್ತಿದ್ದರು. ಸಂಗೀತ ಮತ್ತು ಚಿತ್ರಕಲೆಗಳಲ್ಲಿ ಹುಡುಗನಾಗಿದ್ದಾಲೇ ಅಸಾಧಾರಣ ಪ್ರಭುತ್ವ ತೋರಿದ.

ಲಿಯನಾರ್ಡೋಗೆ ಹದಿನೈದು ವರ್ಷಗಳಾಗಿದ್ದಾಗ ಅವನ ತಂದೆ ಅವನನ್ನು ವೆರೋಚಿಯೊ ಎಂಬ ಚಿತ್ರಕಾರನ ಕಲಾಶಾಲೆಗೆ ಸೇರಿಸಿದ. ಅಲ್ಲಿ ಕ್ರೈಸ್ತನ ದೀಕ್ಷಾಸ್ನಾನದ ಬಲಭಾಗದಲ್ಲಿರುವ ದೇವದೂತನ ಚಿತ್ರವನ್ನು ಲಿಯೊನಾರ್ಡೋ ಚಿತ್ರಿಸಿದ. ಗುರು ವೆರೋಚಿಯೊ ಆ ಚಿತ್ರದ ಸೊಬಗು, ಸೌಂದರ್ಯಕ್ಕೆ ಮಾರುಹೋಗಿ ಅಂಥ ಪ್ರತಿಭಾವಂತ ಶಿಷ್ಯನ ಗುರುವಾಗಲು ತಾನು ಅನರ್ಹನೆಂದು ಸ್ವತಃ ಚಿತ್ರ ಬರೆಯುವುದನ್ನೇ ಬಿಟ್ಟುಬಿಟ್ಟ.

ಲಿಯೊನಾರ್ಡೋ ಯುವಕನಾಗಿದ್ದಾಗಲೇ ಸುಪ್ರಸಿದ್ಧ ಚಿತ್ರಕಾರನಾದ. 1477ರಿಂದ 1482ರ ವರೆಗೂ ಲಿಯೊನಾರ್ಡೋ ಸ್ವತಂತ್ರ ಕಲಾವಿದನಾಗಿ ಕೆಲಸ ಮಾಡಿದ. ಪ್ರಕೃತಿಯಿಂದ ಸ್ಫೂರ್ತಿ ಪಡೆದ ಚಿತ್ರಕಾರರಲ್ಲಿ. ಹಾಗೂ ಕತ್ತಲು ಬೆಳಕಿನಾಟವನ್ನು ಚಿತ್ರಿಸಿದವರಲ್ಲಿ ಲಿಯೊನಾರ್ಡೋ ಮೊದಲನೆಯವನು.

ಲಿಯೊನಾರ್ಡೋಗೆ ಜಗತ್ತಿನ ಎಲ್ಲ ಚಟುವಟಿಕೆಗಳ ಹಿಂದಿದ್ದ ನಿಯಮಗಳನ್ನು ತಿಳಿದುಕೊಳ್ಳಬೇಕೆಂಬ ಆಸೆ ಉತ್ಕಟವಾಗಿತ್ತು. ಚಿತ್ರಕಲೆಗಾಗಿ ಪ್ರಾಣಿ ಹಾಗೂ ಮನುಷ್ಯರ ದೇಹರಚನೆಯನ್ನು ಅಭ್ಯಾಸ ಮಾಡಿದ. ಮಾಂಸಖಂಡಗಳ ಚಲನೆಗೆ ಬೇಕಾದ ನಿಯಮಗಳನ್ನೂ ಶರೀರ ವಿಜ್ಞಾನವನ್ನೂ ಅಭ್ಯಸಿಸಿದ. ಅಲ್ಲದೆ ಸಸ್ಯ ವಿಜ್ಞಾನವನ್ನೂ ಅರಿತುಕೊಂಡ. ಈ ವಿಜ್ಞಾನಗಳ ಆದ್ಯಪ್ರವರ್ತಕರಲ್ಲಿ ಲಿಯೊನಾರ್ಡೋ ಒಬ್ಬ. ಸುಮಾರು ನಲವತ್ತು ವರ್ಷಗಳ ಕಾಲ ಅವನು ಮಾಡಿದ ಟಿಪ್ಪಣಿಗಳು ಅವನ ಜ್ಞಾನ ಸಂಪತ್ತಿಗೆ ಸಾಕ್ಷಿಯಾಗಿವೆ.

ಲಿಯೊನಾರ್ಡೋ ಬರೆದ ಪತ್ರಕ್ಕೆ ಅರಸು ಲೊಡೊವಿಕೊ ಏನು ಉತ್ತರ ಬರೆದನೋ ತಿಳಿಯದು. ಆದರೆ 1482 ಅಥವಾ 1483ರಲ್ಲಿ ಮಿಲಾನಿಗೆ ಹೋದ ಲಿಯೊನಾರ್ಡೋ ಅರಸನ ಕೃಪೆಗೆ ಪಾತ್ರನಾದ; ಮಿಲಾನಿನಲ್ಲಿ ಏಳು ವರ್ಷಗಳ ಕಾಲ ಕೆಲಸ ಮಾಡಿದ.

ಲಿಯೊನಾರ್ಡೋವಿನ ಪ್ರತಿಭೆಯಷ್ಟೇ ಅವನ ವ್ಯಕ್ತಿತ್ವವೂ ಆಕರ್ಷಕ. ಕಾಂಚನ ಬಣ್ಣದ ಗುಂಗುರು ಕೂದಲು ಹೆಗಲ ಮೇಲೆ [illegible]. ಗುಲಾಬಿ ಬಣ್ಣದ ನಿಲುವಂಗಿ ತೊಟ್ಟ ದೃಢಕಾಯನಾದ ಅವನ ಮಾತಿನ ಮೋಡಿಗೆ, ಬುದ್ಧಿವಂತಿಕೆಗೆ ಮಾರುಹೋಗಿ ಜನ ಅವನ ಮಾತು ಕೇಳುತ್ತ ನಿಂತುಬಿಡುತ್ತಿದ್ದರು.

1485ರಲ್ಲಿ ಮಿಲಾನನ್ನು ಕಾಡಿದ ಪ್ಲೇಗ್ ಬೇನೆಯ ಅನಂತರ ಅದನ್ನು [illegible] ನಿರ್ಮಾಣಮಾಡಬೇಕೆಂದು ಲಿಯೊನಾರ್ಡೋ ಯೋಜನೆಯನ್ನು ಸಿದ್ಧಗೊಳಿಸಿದ. ಮರುವರ್ಷ ಸ್ಫೋರ್ಜ ಮನೆತನದ ಕೋಟೆಯನ್ನು ಬಲಪಡಿಸಲು ಯೋಜನೆಗಳನ್ನು ರೂಪಿಸಿದ. ಇದರ [illegible] ಖಗೋಳವಿಜ್ಞಾನ. [illegible] ಫ್ರಾನ್ಸೆಸ್ಕೊ ಸ್ಫೋರ್ಜನ [illegible] ಎತ್ತರದ ಪ್ರತಿಮೆಯನ್ನು ಮಾಡಿದ. ಲೊಂಬಾರ್ಡ್ ಬಯಲು ಭೂಮಿಗೆ ಬೇಕಾದ ನೀರಾವರಿ ಕೆಲಸಕ್ಕೆ ಯೋಜನೆಯನ್ನು ಸಿದ್ಧಪಡಿಸಿದ. ಅಲ್ಲದೆ ಬಿರುಗಾಳಿ ಹಾಗೂ ಮಿಂಚು ಇವುಗಳ ಬಗೆಗೆ ವಿಶೇಷವಾಗಿ ಅಭ್ಯಸಿಸಿದ.

ಅವನ ಚಿತ್ರಗಳಲ್ಲೆಲ್ಲ ಅತ್ಯಂತ ಪ್ರಸಿದ್ಧವಾದವು –' ಕೊನೆಯ ಭೋಜನ ' ಹಾಗೂ ' ಮೊನ ಲೀಸಾ '. ಮೊನ ಲೀಸಾ ಜಗತ್ತಿನ ಅತ್ಯದ್ಭುತ ಚಿತ್ರಗಳಲ್ಲಿ ಒಂದಾಗಿದೆ. ಮೊನ ಲೀಸಾಳ ತುಟಿಯ ಮೇಲೆ ಮಿನುಗುವ ಮಂದಹಾಸ ಜೀವಂತವಾಗಿ ಅದರ ಹಿಂದೆ ಯಾವುದೋ ರಹಸ್ಯ ಅಡಗಿದೆ ಎಂಬ ಭಾವನೆಯನ್ನು ಇಂದೂ ಮೂಡಿಸುತ್ತದೆ. ಸಂತ ಮರೈಯ ಇಗರ್ಜಿಗೆ ಸೇರಿದಂತಿರುವ ಸನ್ಯಾಸಿಗಳ ಸರಳವಾದ ಆಯತಾಕಾರದ ಮಂದಿರದ ಗೋಡೆಯಮೇಲಿನ ಈ ಚಿತ್ರವನ್ನು ನೋಡಲು ಯಾತ್ರಾರ್ಥಿಗಳು ತಂಡೋಪತಂಡವಾಗಿ ಬರುತ್ತಾರೆ.

ಫ್ಲಾರೆನ್ಸಿಗೆ ಹಿಂದಿರುಗಿದ ಲಿಯೊನಾರ್ಡೋ ಭೂಗೋಳದ ಅಧ್ಯಯನದಲ್ಲಿ ತಲ್ಲೀನನಾದ. 1502ರಲ್ಲಿ ಅವನು ಬರೆದ ಆರು ಭೌಗೋಳಿಕ ನಕ್ಷೆಗಳು. ನಕಾಶೆಗಳನ್ನು ಬರೆಯುವುದರಲ್ಲಿ ಅವನಿಗಿದ್ದ ಪ್ರತಿಭೆಯ ಕುರುಹಾಗಿವೆ.

ಲಿಯೊನಾರ್ಡೋ ವಿಮಾನದ ಒಂದು ಮಾದರಿಯನ್ನೂ ತಯಾರಿಸಿದ್ದ. ಅದಕ್ಕೆ ಪೆಟ್ರೋಲ್ ಎಂಜಿನಿನಂಥ ಒಂದು ಅಂಗವಿದ್ದರೆ ಅದು ಹಾರಲೂ ಸಾಧ್ಯವಾಗುತ್ತಿತ್ತು. ಪ್ಯಾರಾಚೂಟ್ ಕೊಡೆ. ಹೆಲಿಕಾಪ್ಟರುಗಳ ನಕಾಶೆಗಳನ್ನು ಅವನು ಸಿದ್ಧಪಡಿಸಿದ್ದ. ಅವು ಹೇಗೆ ಮುಂದೆ ಉಪಯೋಗಕ್ಕೆ ಬರಬಹುದು ಎಂಬುದನ್ನೂ ಸೂಚಿಸಿದ್ದ.

ಜಲಸಾಮರ್ಥ್ಯ ವಿಜ್ಞಾನದ ಆದ್ಯಪ್ರವರ್ತಕ ಲಿಯೊನಾರ್ಡೋ. ನೀರಿನ ಅಣುರಚನೆಯ ಬಗೆಗೆ ಅವನಿಗೆ ನಂಬಿಕೆಯಿತ್ತು. ಶಬ್ದ ಹಾಗೂ [illegible] ತರಂಗಗಳ ವಿಷಯವೂ [illegible]

ಲಿಯೊನಾರ್ಡೋ ಪ್ರಪಂಚದ ಚರಿತ್ರೆಯ ಅತಿ ಅಸಾಧಾರಣ ಮತ್ತು ವಿಸ್ಮಯಕಾರಿ ವ್ಯಕ್ತಿಗಳಲ್ಲಿ ಒಬ್ಬ. ಯೂರೋಪಿನಲ್ಲಿ ನವೋದಯವನ್ನು ಸಾಧಿಸಿದ ಶಿಲ್ಪಿಗಳಲ್ಲಿ ಅವನೊಬ್ಬ. ಅವನದು, ಜ್ಞಾನವನ್ನು ಬೆಳೆಸಬೇಕೆಂಬ ಆಸಕ್ತಿ ನೂರಾರು ಮಾನವರಲ್ಲಿ ಜೀವಂತಶಕ್ತಿಯಾದ ಕಾಲ, ಅಸಾಧಾರಣ ಜ್ಞಾನಸಂಪತ್ತನ್ನು ಪಡೆದ ವಿದ್ವಾಂಸರ ಕಾಲ.

ಮನುಷ್ಯನ ಸಾಧನೆ ಎಷ್ಟು ಎತ್ತರಕ್ಕೇರಬಲ್ಲುದು ಎಂಬುದನ್ನು ತೋರಿಸಿಕೊಡುವ ಮಹಾಪುರುಷರ ಪಂಕ್ತಿಗೆ ಸೇರಿದವನು ಲಿಯೊನಾರ್ಡೋ ದ ವಿಂಚಿ. [illegible]

ಲಿಯೊನಾರ್ಡೋ 1519ರಲ್ಲಿ ತನ್ನ 67ನೆಯ ವಯಸ್ಸಿನಲ್ಲಿ ಫ್ರಾನ್ಸ್ ದೇಶದಲ್ಲಿ ಕಾಲವಾದ.

ವಿವರ : ಐದನೆಯ ಸಂಪುಟ

## ಲಿವಿಂಗ್‌ಸ್ಟನ್, ಡೇವಿಡ್

ಮನುಷ್ಯನ ಸಾಹಸ ಪ್ರವೃತ್ತಿ ಅವನಿಗೆ ಜ್ಞಾನದ ದಾರಿಯನ್ನು ತೋರಿಸಿ ಕೊಟ್ಟಿದೆ. ಜಗತ್ತಿನ ಸಾಹಸಿಗಳಲ್ಲಿ ಲಿವಿಂಗ್‌ಸ್ಟನ್ ಒಬ್ಬ.

ಕಗ್ಗತ್ತಲೆಯ ಜಗತ್ತೆನಿಸಿದ್ದ ಆಫ್ರಿಕ ಖಂಡವನ್ನು ಮೊಟ್ಟಮೊದಲಿಗೆ ಪ್ರವೇಶಿಸಿ ಬಾಹ್ಯಲೋಕಕ್ಕೆ ಅದರ ಪರಿಚಯ ಮಾಡಿಸಿದವನು ಇವನು.

1813 ಮಾರ್ಚ್ 19ರಂದು ಡೇವಿಡ್ ಸ್ಕಾಟ್ಲೆಂಡಿನ ಬ್ಲಾಂಟಾಯರ್ ಎಂಬ ಹಳ್ಳಿಯಲ್ಲಿ ಹುಟ್ಟಿದ. ಹತ್ತು ವರ್ಷದವನಾಗಿದ್ದಾಗ ಅವನು ಕಾರಖಾನೆಯೊಂದರಲ್ಲಿ ಕೆಲಸಕ್ಕೆ ಸೇರಿದ. ಓದಿನಲ್ಲಿ ಬಹಳ ಇಷ್ಟ. ಕೆಲಸ ಮಾಡುವಾಗಲೂ ಪುಸ್ತಕವನ್ನು ಓದದೇ ಇರುತ್ತಿದ್ದ. ಪ್ರವಾಸ ಮತ್ತು ಪ್ರಕೃತಿ ವಿಜ್ಞಾನದಲ್ಲಿ ಅಪಾರ ಆಸಕ್ತಿ. ದಿನಕ್ಕೆ ಹದಿನಾಲ್ಕು ಗಂಟೆಗಳ ಕಾಲ ದುಡಿದು ಬಂದ ಹಣದಿಂದ ವಿದ್ಯಾಭ್ಯಾಸವನ್ನು ಮುಂದುವರಿಸುತ್ತಿದ್ದ. ಒಂದು ಸಲ ಜರ್ಮನಿಯ ಧರ್ಮಪ್ರಚಾರಕನೊಬ್ಬನ ಪ್ರವಾಸಗ್ರಂಥವನ್ನು ಓದಿ ತಾನೂ ಧರ್ಮಪ್ರಚಾರಕನಾಗಬೇಕೆಂದು ನಿರ್ಧರಿಸಿದ.

1840 ಡಿಸೆಂಬರ್ ತಿಂಗಳಲ್ಲಿ ಅವನು ಆಫ್ರಿಕ ಖಂಡಕ್ಕೆ ಧರ್ಮಪ್ರಚಾರಕನಾಗಿ ಹೊರಟ. ಆದಿವಾಸಿಗಳಾದ ನೀಗ್ರೊ ಜನರನ್ನು ಭೇಟಿ ಮಾಡುವುದು. ಅವರನ್ನು ನಾಗರಿಕರನ್ನಾಗಿ ಮಾಡುವುದು, ಅವರಿಗೆ ಧರ್ಮದೀಕ್ಷೆಯನ್ನು ಕೊಡುವುದು ಅವನ ಉದ್ದೇಶ. ಈ ಕಾರ್ಯಕ್ಕಾಗಿ ಅವನು ಆಫ್ರಿಕದ ಒಳನಾಡಿನಲ್ಲಿ ಪ್ರವಾಸ ಕೈಗೊಂಡ.

ಲಿವಿಂಗ್‌ಸ್ಟನನಿಗೆ 'ಗಾಮಿ' ಎಂಬ ಸರೋವರವನ್ನು ಹುಡುಕಬೇಕೆಂದು ಅನಿಸಿತು. ಇಬ್ಬರು ಗೆಳೆಯರೊಡನೆ ಹೊರಟ. ಕಾಲಾಹಾರಿ ಮರುಭೂಮಿಯನ್ನು ಕಷ್ಟಪಟ್ಟು ದಾಟಿ ರಿಗಾಟ್ ಎಂಬ ಹೊಳೆಯನ್ನು ಅವರು ತಲುಪಿದರು. ಸ್ವಲ್ಪ ದೂರ ಹೋದಾಗ ಗಾಮಿ ಸರೋವರ ಕಂಡುಬಂದಿತು. ಅದೇ ಅವರ ಮೊದಲ ಶೋಧನೆ.

ಆಫ್ರಿಕ ಖಂಡದ ಜಾಂಬೆಸಿ ಮಹಾನದಿಯನ್ನು ಕಂಡುಹಿಡಿದವನು ಸಹ ಲಿವಿಂಗ್‌ಸ್ಟನನೇ. ಆ ನದಿಯ ದಂಡೆಯ ಮೇಲೆ ವಸಾಹತು ಸ್ಥಾಪಿಸಬೇಕೆಂಬ ಆಸೆಯಿದ್ದರೂ ಅಲ್ಲಿನ ನೊಣಗಳ ಕಡಿತ ತಾಳಲಾರದೆ ಮುಂದಕ್ಕೆ ಹೊರಟ.

ಅಸಿಯಾಂತಿ ಎಂಬ ಪ್ರದೇಶದಲ್ಲಿ ಇಪ್ಪತ್ತೇಳು ಜನ ನೀಗ್ರೊಗಳು ಒಳನಾಡಿನ ಶೋಧಕ್ಕೆ ಇವನ ಜೊತೆಗೆ ಬಂದರು. 1852ರಲ್ಲಿ ಲಿವಿಂಗ್‌ಸ್ಟನ್ ತನ್ನ ಶೋಧನೆಯನ್ನಾರಂಭಿಸಿದ. ಮಹಾರಣ್ಯಗಳಲ್ಲಿ ಪ್ರವಾಸ ಮಾಡಬೇಕಾಯಿತು. ಮಧ್ಯೆ ಮಧ್ಯೆ ಅನಾರೋಗ್ಯದಿಂದ ಬಳಲಬೇಕಾಯಿತು. ಒಮ್ಮೆ ನೀಗ್ರೊ ಜನರು ಬಂಧಿಸುವವರಿದ್ದರು. ಯಾವುದಕ್ಕೂ ಲಿವಿಂಗ್‌ಸ್ಟನ್ ಜಗ್ಗಲಿಲ್ಲ.

ನೀಗ್ರೊ ಜನರು 'ಮೋಸಿಯೊಅ ತುನ್ಯಾ' ಎಂದರೆ 'ಗುಡುಗುವ ಹೊಗೆ' ಎಂದು ಕರೆಯುವ ಜಲಪಾತವನ್ನು 1855ನೇ ನವೆಂಬರಿನಲ್ಲಿ ಕಂಡುಹಿಡಿದು ಅಪೂರ್ವ ಕೀರ್ತಿ ಪಡೆದ. ಮುಂದೆ ಇದಕ್ಕೆ 'ವಿಕ್ಟೋರಿಯ ಜಲಪಾತ' ಎಂದು ಹೆಸರಾಯಿತು.

1856ರಲ್ಲಿ ಲಿವಿಂಗ್‌ಸ್ಟನ್ ಇಂಗ್ಲೆಂಡಿಗೆ ಹಿಂದಿರುಗಿದ.

ಹದಿನಾರು ವರ್ಷಗಳ ಕಾಲ ಆಫ್ರಿಕದ ಒಳನಾಡನ್ನು ಸುತ್ತಾಡಿದ ಲಿವಿಂಗ್‌ಸ್ಟನನಿಗೆ ಆಕ್ಸ್‌ಫರ್ಡ್ ಮತ್ತು ಕೇಂಬ್ರಿಜ್ ವಿಶ್ವವಿದ್ಯಾನಿಲಯಗಳು ಗೌರವಪದವಿಯನ್ನು ಕೊಟ್ಟುವು. ಬ್ರಿಟಿಷ್ ರಾಯಲ್ ಜಿಯಾಗ್ರಫಿಕಲ್ ಸೊಸೈಟಿ 'ವಿಕ್ಟೋರಿಯ ಪದಕ'ವನ್ನು ಅರ್ಪಿಸಿತು.



ಆಫ್ರಿಕ ಖಂಡವನ್ನು ಮೊಟ್ಟಮೊದಲು ಪ್ರವೇಶಿಸಿದ ಐರೋಪ್ಯ

1858ರಲ್ಲಿ ಸರಕಾರದ ಕೇಳಿಕೆಯ ಮೇರೆಗೆ ಲಿವಿಂಗ್‌ಸ್ಟನ್ ತನ್ನೊಡನೆ ಪ್ರಮುಖ ನಾವಿಕರು, ಇಂಜಿನಿಯರು, ಚರಿತ್ರಕಾರರು, ಚಿತ್ರಕಾರರು, ವಿದ್ವಾಂಸರು ಇವರನ್ನು ಕರೆದುಕೊಂಡು ಮತ್ತೆ ಆಫ್ರಿಕಕ್ಕೆ ಹೋಗಿಬಂದ. ಆದರೆ ಪ್ರವಾಸ ಅಷ್ಟೊಂದು ತೃಪ್ತಿಕರವಾಗಲಿಲ್ಲ.

ಲಿವಿಂಗ್‌ಸ್ಟನ್ ಪ್ರಯಾಣ ಮಾಡುವಾಗಲೆಲ್ಲ ಗುಲಾಮರ ಕಷ್ಟಗಳನ್ನು ಕಾಣುತ್ತಿದ್ದ. ಗುಲಾಮಗಿರಿಯನ್ನು ಕಡೆಗಾಣಿಸಲು ನಿಧಿಯನ್ನು ಸಹ ಕೂಡಿಸಿದ. ನಿಧಿಯ ಹಣವನ್ನು ನೀಗ್ರೊಗಳಿಗೆ ಹಂಚಬೇಕೆಂದು 1865ರಲ್ಲಿ ಮತ್ತೆ ಆಫ್ರಿಕಕ್ಕೆ ಹೊರಟ. ಬಹಳ ಕಾಲದವರೆಗೆ ಅವನ ಸುದ್ದಿಯೇ ಬರಲಿಲ್ಲ. ಅವನು ಸತ್ತುಹೋಗಿರಬೇಕೆಂಬ ವದಂತಿ ಹಬ್ಬಿತು. ಹೊರಗಿನ ಪ್ರಪಂಚದ ಸಂಪರ್ಕವೇ ಇಲ್ಲದೆ 32,893 ಚ. ಕಿ. ಮೀ. ವಿಸ್ತಾರವುಳ್ಳ ಟಾಂಗನೀಕ ಸರೋವರದ ದಂಡೆಯಲ್ಲಿ ಒಂದು ತಿಂಗಳು ಕಾಲ ಇದ್ದ. ಆರೋಗ್ಯ ವಿಪರೀತ ಕೆಟ್ಟುದರಿಂದ ಉಜಿಜಿ ಎಂಬ ಪ್ರದೇಶಕ್ಕೆ ಅರಬ್ ಜನರ ಗುಂಪಿನ ಜೊತೆ ಬಂದ. ಈ ವೇಳೆಗೆ ಲಿವಿಂಗ್‌ಸ್ಟನನ ಶೋಧಕ್ಕಾಗಿ ಸ್ಟ್ಯಾನ್ಲೀ ಎಂಬವನು ಆಫ್ರಿಕಕ್ಕೆ ಬಂದ. ಸಾಹಸ ಪ್ರವೃತ್ತಿಯ ಈತನನ್ನು ಲಿವಿಂಗ್‌ಸ್ಟನನ ಶೋಧಕ್ಕಾಗಿ ಅಮೆರಿಕದ ಪತ್ರಿಕೆಯೊಂದು ಕಳುಹಿಸಿತ್ತು. ಆಕಸ್ಮಾತ್ತಾಗಿ ಉಜಿಜಿಗೆ ಬಂದ ಸ್ಟ್ಯಾನ್ಲೀ, ಲಿವಿಂಗ್‌ಸ್ಟನ್ನನ್ನು ನೋಡಿ, "ನೀವು ಲಿವಿಂಗ್‌ಸ್ಟನ್ನರಲ್ಲವೆ?" ಎಂದು ಕೇಳಿದ. ಕನ್ಯಾಜನದ ಆಫ್ರಿಕ ಖಂಡದಲ್ಲಿ ಲಿವಿಂಗ್‌ಸ್ಟನ್ ಅಲ್ಲದೆ ಬೇರೆ ಬಿಳಿಯರು ಇದ್ದಿರಲಾರರು

ಬಂದರು? ಲಿವಿಂಗ್‌ಸ್ಟನ್‌ಗೆ ಹೊಸ ಹುರುಪು ಬಂದಿತು. ಆಫ್ರಿಕವನ್ನು ಬಿಡಲು ಆತ ಒಪ್ಪದೆ ಇದ್ದುದರಿಂದ ಸ್ಟ್ಯಾನ್ಲೀ ಒಬ್ಬನೇ ಅಮೆರಿಕಕ್ಕೆ ಹಿಂದಿರುಗಿದ.

1872ರ ಆಗಸ್ಟ್‌ನಲ್ಲಿ ನೈಲ್ ನದಿಯ ಉಗಮವನ್ನು ಅರಸುತ್ತ ಲಿವಿಂಗ್‌ಸ್ಟನ್ ಹೊರಟ. 1873ರ ಮೇ ತಿಂಗಳ 1ನೆಯ ದಿನಾಂಕ ಮುಂಜಾನೆ ಮೊಣಕಾಲೂರಿ ದೇವರನ್ನು ಪ್ರಾರ್ಥಿಸುತ್ತಿದ್ದಂತೆಯೇ ಮರಣ ಹೊಂದಿದ.

ಲಿವಿಂಗ್‌ಸ್ಟನನ ನೀಗ್ರೊ ಆಳುಗಳು ಅವನ ಶವವನ್ನು ಒಣಗಿಸಿದರು: ಅವನ ಪುಸ್ತಕ-ಪತ್ರಗಳನ್ನು ಜೋಪಾನವಾಗಿಟ್ಟರು: 1,760 ಕಿ. ಮೀ. ದೂರ ಆಫ್ರಿಕದ ಹೃದಯದೊಳಗಿಂದ ಬಂದು ಲಿವಿಂಗ್‌ಸ್ಟನನ ಕಳೇಬರವನ್ನು ಮತ್ತು ಕಾಗದಗಳನ್ನು ಇಂಗ್ಲೆಂಡಿಗೆ ಕಳುಹಿಸಿದರು. ವೆಸ್ಟ್‌ಮಿನಿಸ್ಟರ್ ಅಬೆಯಲ್ಲಿ ಲಿವಿಂಗ್‌ಸ್ಟನನ ಸಮಾಧಿಯಾಯಿತು.

ನೋಡಿ: ಆಫ್ರಿಕ

## ಲೂಥರ್, ಮಾರ್ಟಿನ್

1505 ಜುಲೈ ತಿಂಗಳ ಒಂದು ದಿನ. ಜರ್ಮನಿಯ ಮಾನ್ಸ್‌ಫೆಲ್ಡ್ ಪಟ್ಟಣದಿಂದ ಎರ್‌ಫರ್ಟ್ ವಿಶ್ವವಿದ್ಯಾನಿಲಯಕ್ಕೆ ಒಬ್ಬ ವಿದ್ಯಾರ್ಥಿ ನಡೆದು ಹೋಗುತ್ತಿದ್ದ. ಇದ್ದಕ್ಕಿದ್ದಂತೆ ಭೀಕರ ಬಿರುಗಾಳಿಯಿಂದ ಕೂಡಿದ ಮಳೆ ಪ್ರಾರಂಭವಾಯಿತು. ನಿಂತುಕೊಳ್ಳಲು ಹತ್ತಿರದಲ್ಲೆಲ್ಲೂ ಆಸರೆಯಿಲ್ಲ. ಜೊತೆಗೆ ಗುಡುಗು. ಸಿಡಿಲು. ಏನು ಮಾಡುವುದಕ್ಕೂ ತೋಚದೆ ಯುವಕ ಬೇಗ ಬೇಗ ಹೆಜ್ಜೆ ಹಾಕಲಾರಂಭಿಸಿದ. ಸಿಡಿಲೊಂದು ಅವನ ಅತಿ ಸಮೀಪದಲ್ಲಿ ಹಾದುಹೋಗಿ ಅವನನ್ನು ನೆಲಕ್ಕೊರಗಿಸಿತು. ಭಯದಿಂದ ಕೂಗಿಕೊಂಡ. "ದೇವರೇ. ನನ್ನನ್ನು ರಕ್ಷಿಸು! ನಾನು ಸನ್ಯಾಸಿಯಾಗಿ ಜಗತ್ತಿನ ಸೇವೆ ಮಾಡುತ್ತೇನೆ!" ಸ್ವಲ್ಪ ಹೊತ್ತಿನ ಅನಂತರ ಪ್ರಕೃತಿ ಶಾಂತವಾಯಿತು. ಕೊಟ್ಟ ಮಾತಿಗೆ ತಪ್ಪದೆ ಯುವಕ ಕ್ರೈಸ್ತ ಮತ ಪ್ರಚಾರಕನಾದ.

ಇವನೇ ಮಾರ್ಟಿನ್ ಲೂಥರ್. ಕ್ರೈಸ್ತ ಮತದ ಪ್ರಾಟೆಸ್ಟೆಂಟ್ ಶಾಖೆಯ ಮೂಲಪುರುಷ.

ಲೂಥರ್ 1483ರಲ್ಲಿ ಹುಟ್ಟಿದ. ಅವನ ತಂದೆ ಜರ್ಮನಿಯ ಗಣಿಯಲ್ಲಿ ಕೆಲಸ ಮಾಡುತ್ತಿದ್ದ. ಬಡವನಾದರೂ ಮಗನಿಗೆ ತಕ್ಕಮಟ್ಟಿಗೆ ವಿದ್ಯಾಭ್ಯಾಸವನ್ನು ಕೊಡಿಸಿದ. ಲೂಥರನಿಗೆ ಹದಿನಾಲ್ಕು ವರ್ಷ ವಯಸ್ಸಾಗಿದ್ದಾಗ ಮ್ಯಾಗ್ಡೆಬರ್ಗ್ ಎಂಬ ಊರಿನ ಒಂದು ಧಾರ್ಮಿಕ ಸಂಸ್ಥೆಗೆ ಸೇರಿದ ಶಾಲೆಗೆ ಅವನನ್ನು ಕಳುಹಿಸಲಾಯಿತು. ಅಲ್ಲಿ ಆರಾಧನೆಯ ಸಮಯದಲ್ಲಿ ಹಾಡುಗಳನ್ನು ಹೇಳುವುದು ಇವನ ಕೆಲಸ. ಚಿಕ್ಕಂದಿನಿಂದಲೂ ಲೂಥರನಿಗೆ ಧರ್ಮದ ವಿಷಯದಲ್ಲಿ ಬಹಳ ಆಸಕ್ತಿ. ಕ್ರೈಸ್ತ ಮತದ ಮೂಲತತ್ತ್ವಗಳಲ್ಲಿ ಅಪಾರ ನಂಬಿಕೆ. 1501ರಲ್ಲಿ ಎರ್‌ಫರ್ಟ್ ವಿಶ್ವವಿದ್ಯಾನಿಲಯದಲ್ಲಿ ನ್ಯಾಯಶಾಸ್ತ್ರ ಅಧ್ಯಯನ ಮಾಡುತ್ತಿದ್ದಾಗಲೇ ಬಿರುಗಾಳಿ ಮಳೆಯ ಘಟನೆ ನಡೆದದ್ದು. 1507ರಲ್ಲಿ ಸನ್ಯಾಸ ದೀಕ್ಷೆ ಕೈಗೊಂಡ. 1512ರಲ್ಲಿ ವಿಟನ್‌ಬರ್ಗ್ ವಿಶ್ವವಿದ್ಯಾನಿಲಯದಿಂದ ಧರ್ಮಶಾಸ್ತ್ರದಲ್ಲಿ ಉನ್ನತ ಪದವಿಯನ್ನು ಪಡೆದು ಬಳಿಕ ಕ್ರೈಸ್ತಧರ್ಮದ ಪ್ರಾಧ್ಯಾಪಕನಾದ.

ಆಗ ರೋಮಿನಲ್ಲಿ ಕ್ರೈಸ್ತದೇವಾಲಯಗಳಲ್ಲಿ ನಡೆಯುತ್ತಿದ್ದ ಕೆಲವು ಆಚರಣೆಗಳು ಲೂಥರನಿಗೆ ಹಿಡಿಸಲಿಲ್ಲ. ಅಲ್ಲಿನ ಪಾಪದ ಕೆಲಸಗಳನ್ನು ಮಾಡಿದವರು ಹಣವನ್ನು ಕೊಟ್ಟರೆ ಅವರಿಗೆ ಕ್ಷಮಾದಾನ ನೀಡುತ್ತಿದ್ದ ರೀತಿ ಅವನಿಗೆ ಬಹಳ ಖೇದ ಉಂಟುಮಾಡಿತು. ಆಚಾರ್ಯ ಪೀಠವನ್ನು ಅಲಂಕರಿಸುತ್ತಿದ್ದವರ ಬೂಟಾಟಿಕೆಯ ಆಸ್ತಿಕತೆ. ದುರ್ನಡತೆಗಳನ್ನು ಕಂಡು ಅವನ ಮನಸ್ಸು ರೋಸಿತು. ಆಗ ಕ್ರೈಸ್ತರ ಧರ್ಮಗುರುವಾಗಿದ್ದ ಹತ್ತನೆಯ ಲಿಯೋ. ಟೆಟ್ಸೆಲ್ ಎಂಬ ಸನ್ಯಾಸಿಯನ್ನು ಪಾಪ ಪರಿಹಾರ ಪತ್ರಗಳ ಮಾರಾಟ ಮತ್ತು ಪ್ರಚಾರಕ್ಕಾಗಿ ನಿಯಮಿಸಿದ. ಈ ಸನ್ಯಾಸಿಯು ಜನರಿಗೆ ನರಕದ ಘೋರ ಶಿಕ್ಷೆಯನ್ನು ವಿವರಿಸಿ ಅದರ ನಿವಾರಣೆಗೆ ಈ ಪಾಪ ಪರಿಹಾರ ಪತ್ರಗಳನ್ನು ಕೊಂಡುಕೊಳ್ಳಬೇಕೆಂದು ಪ್ರಚಾರ ಮಾಡುತ್ತಿದ್ದ. ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಈ ಅಧರ್ಮವನ್ನು ತಡೆಗಟ್ಟಲು ಲೂಥರ್ ನಿರ್ಧರಿಸಿದ. 1517ರ ಅಕ್ಟೋಬರ್ 31ರಂದು (ಸರ್ವ ಸಂತರ ದಿನದ ಹಿಂದಿನ ರಾತ್ರಿ) ಲೂಥರ್ ಧರ್ಮಗುರುವಿನ ಅಧಿಕಾರದ ಬಗೆಗೆ ತೊಂಬತ್ತೈದು ಆಕ್ಷೇಪಣೆಗಳನ್ನು ಲ್ಯಾಟಿನ್ ಭಾಷೆಯಲ್ಲಿ ಬರೆದು ಕ್ರೈಸ್ತ ದೇವಾಲಯದ ಬಾಗಿಲಿನ ಮೇಲೆ ತೂಗಹಾಕಿದ. ಇದರಿಂದ ದೇಶದಲ್ಲಿ ಭಾರಿ ಗೊಂದಲವೆದ್ದಿತು. ಎಲ್ಲೆಡೆಗಳಲ್ಲೂ ವಾದವಿವಾದಗಳ ಸುರಿಮಳೆ ಆರಂಭವಾಯಿತು. ಎಲ್ಲರ ಬಾಯಿಯಲ್ಲಿಯೂ ಲೂಥರ್ ಮತ್ತು ಅವನ ಆಕ್ಷೇಪಣೆಗಳ ಪುನರುಚ್ಚಾರವೇ. ಬಹಳ ಕೋಪಗೊಂಡ ಪೋಪ್ ಲಿಯೋ. ಲೂಥರನನ್ನು ರೋಮಿಗೆ ಕರೆಸಿಕೊಂಡು: ವಿಚಾರಣೆ ನಡೆಸಿ ಅವನನ್ನು ಬಹಿಷ್ಕರಿಸಲು ತೀರ್ಮಾನಿಸಿದ. ಲೂಥರನು ಪೋಪ್ ಕಳುಹಿಸಿದ ಬಹಿಷ್ಕಾರ ಪತ್ರವನ್ನು ಎಲ್ಲರೆದುರು ವಿಟನ್‌ಬರ್ಗ್‌ನಲ್ಲಿ ಸುಟ್ಟು ಹಾಕಿದ. ತನ್ನ ವಿಚಾರಧಾರೆಗಳನ್ನು ಭಾಷಣ ಮತ್ತು ಲೇಖನಗಳ ಮೂಲಕ ದೇಶದ ಮೂಲೆಮೂಲೆಯಲ್ಲಿರುವ ಜನರಿಗೂ ತಿಳಿಯಪಡಿಸಿದ. ಧರ್ಮದ ಸತ್ಯಸ್ವರೂಪವನ್ನು ಜನರಿಗೆ ಮನಗಾಣಿಸಲು ಲೂಥರ್ ಸರ್ವ ಪ್ರಯತ್ನಗಳನ್ನು ನಡೆಸಿದ. 1521ರಲ್ಲಿ ಪೋಪನ ಪಕ್ಷಪಾತಿಯಾಗಿದ್ದ ಅರಸು ಐದನೆಯ ಚಾರ್ಲ್ಸ್ ಲೂಥರನನ್ನು ದೇಶಭ್ರಷ್ಟನೆಂದು ಘೋಷಿಸಿದ. ಇದರಿಂದ ಲೂಥರನ ಅನೇಕ ಶ್ರೀಮಂತ ಮಿತ್ರರು ಕೋಪಗೊಂಡರು. ಸಾಕ್ಸನಿಯ ರಾಜಕುಮಾರ ಫ್ರೆಡರಿಕ್. ಲೂಥರನನ್ನು ವಾರ್ಟುಂಬರ್ಗ್ ಎಂಬೆಡೆಯಲ್ಲಿ ಬಚ್ಚಿಟ್ಟ. ಈ ಸಮಯದಲ್ಲಿಯೇ ಲೂಥರನು ಬೈಬಲ್‌ಗ್ರಂಥದ ಹೊಸ ಒಡಂಬಡಿಕೆಯನ್ನು ಜರ್ಮನ್ ಭಾಷೆಗೆ ಭಾಷಾಂತರಿಸಿದ್ದು. ಜನ ತಮ್ಮ ಭಾಷೆಯಲ್ಲಿಯೇ ಬೈಬಲನ್ನು ಓದಿ ಅರ್ಥಮಾಡಿಕೊಳ್ಳುವುದು ಇದರಿಂದ ಸಾಧ್ಯವಾಯಿತು. 1522 ಮಾರ್ಚ್ ತಿಂಗಳಲ್ಲಿ ಲೂಥರ್ ವಿಟನ್‌ಬರ್ಗ್‌ಗೆ ಸಾಗಿ ತನ್ನ ಲೇಖನ ಮತ್ತು ಭಾಷಣ ಕಾರ್ಯಗಳನ್ನು ಮುಂದುವರಿಸಿದ. ಇವನಿಗೆ ಅನೇಕ ರಾಜರ, ನಗರವಾಸಿಗಳ ಮತ್ತು ವಿದ್ವಾಂಸರ ಬೆಂಬಲ ದೊರಕಿತು. ಆಗ ಪ್ರಚಾರವಾಗಿದ್ದ ರೋಮನ್ ಕ್ಯಾಥೊಲಿಕ್ ಸಂಘದ ವಿರೋಧಿಗಳ ಪಂಥಕ್ಕೆ 'ಪ್ರಾಟೆಸ್ಟೆಂಟ್' ಪಂಥ ಎಂದು ಹೆಸರಾಯಿತು. ('ಪ್ರೊಟೆಸ್ಟ್' ಎಂದರೆ ವಿರೋಧಿಸು ಎಂದರ್ಥ.) ದಿನೇ ದಿನೇ ಈ ಪಂಥದ ಅನುಯಾಯಿಗಳ ಸಂಖ್ಯೆ ಹೆಚ್ಚಿತು.

1525ರಲ್ಲಿ ಲೂಥರನ ತತ್ತ್ವಗಳಿಗೆ ತಮ್ಮದೇ ಅರ್ಥ ಕಲ್ಪಿಸಿದ ಜರ್ಮನಿಯ ರೈತರು. ತಮಗೂ ತಮ್ಮ ಒಡೆಯರಿಂದ ಸ್ವಾತಂತ್ರ್ಯ ಬೇಕೆಂದು ದಂಗೆ ಎದ್ದರು. ತಮಗೆ ಬೆಂಬಲ ಕೊಡಬೇಕೆಂದು ಲೂಥರನನ್ನು ಅವರು ಕೇಳಿದರು. ಆದರೆ ಲೂಥರ್ ಅವರ ಅಭಿಪ್ರಾಯಕ್ಕೆ ಮನ್ನಣೆ ಕೊಡಲಿಲ್ಲ. 1525 ಜೂನ್ ತಿಂಗಳಲ್ಲಿ ಸನ್ಯಾಸತ್ವ ತ್ಯಜಿಸಿ. ಕ್ರೈಸ್ತ ಸನ್ಯಾಸಿನಿಯಾಗಿದ್ದ ಕಾಥರಿನ್ ವಾನ್ ಬೋರ್ ಎಂಬುವಳನ್ನು ವಿವಾಹವಾದ. (ಪ್ರಾಟೆಸ್ಟೆಂಟ್ ಮತದಲ್ಲಿ ಧರ್ಮಗುರುಗಳು ಅವಿವಾಹಿತರಾಗಿರಬೇಕೆಂಬ ನಿರ್ಬಂಧವಿಲ್ಲ)

ಆತನ ಕೊನೆಯ ದಿನಗಳಲ್ಲಿ ಆರೋಗ್ಯ ಅಷ್ಟು ತೃಪ್ತಿಕರವಾಗಿರಲಿಲ್ಲ. ಆದರೂ ಲೂಥರ್ ಮುಂಚಿನಂತೆಯೇ ಶ್ರಮಪಟ್ಟು ಕೆಲಸ ಮಾಡುತ್ತಿದ್ದ. ಹಿಂದಿನಷ್ಟು ಜನಪ್ರಿಯತೆ ಆ ದಿನಗಳಲ್ಲಿ ಇರಲಿಲ್ಲ. ರೈತರೆಲ್ಲ ವಿಮುಖರಾಗಿದ್ದರು. ಎಷ್ಟು ಮಾಡಿದರೂ ಮುಗಿಯದ ಕೆಲಸ. ವಿರೋಧಿಗಳೊಡನೆ ಹೋರಾಟ ಇವು ಲೂಥರನನ್ನು ಶಕ್ತಿಗುಂದಿಸಿದುವು. 1546 ಫೆಬ್ರುವರಿ 18 ರಂದು ಲೂಥರ್ ಕೊನೆಯ ಉಸಿರೆಳೆದ. ಸಾಯುವ ಮುನ್ನ ಯಾರೋ ಒಬ್ಬರು "ನಿನ್ನ ತತ್ತ್ವಗಳಲ್ಲಿ ನಿನಗೆ ಈಗಲೂ ನಂಬಿಕೆ ಇದೆಯೆ ?" ಎಂದು ಪ್ರಶ್ನಿಸಲು, ಅವನು "ಹೌದು" ಎಂದು ಉತ್ತರಿಸಿದ. ಅದೇ ಅವನು ಆಡಿದ ಕೊನೆಯ ಮಾತು.

ಅವನ ಕಳೇಬರವನ್ನು ವಿಟನ್‌ಬರ್ಗ್ ಪಟ್ಟಣಕ್ಕೆ ತೆಗೆದುಕೊಂಡು ಬಂದು ಅಲ್ಲಿನ ಇಗರ್ಜಿಯ ಆವರಣದಲ್ಲಿ ಸಮಾಧಿ ಮಾಡಿದರು. ಇಪ್ಪತ್ತೊಂಬತ್ತು ವರ್ಷಗಳ ಹಿಂದೆ ಲೂಥರ್ ತನ್ನ ತೊಂಬತ್ತೈದು ಆಕ್ಷೇಪಣೆಗಳನ್ನು ತೂಗಹಾಕಿದ್ದು ಅದೇ ದೇವಾಲಯದ ಬಾಗಿಲಲ್ಲೇ.

ತನ್ನ ಸ್ವತಂತ್ರ ವಿಚಾರವೃತ್ತಿ, ಸತ್ಯವೆಂದು ಕಂಡುದನ್ನು ಸಾರುವುದರಲ್ಲಿ ನಿರ್ಭಯತೆ ಇವುಗಳಿಂದ ಲೂಥರ್ ಪಾಶ್ಚಾತ್ಯ ಜಗತ್ತಿನ ಇತಿಹಾಸದಲ್ಲಿ ಹೊಸ ಅಧ್ಯಾಯ ಪ್ರಾರಂಭಿಸಿದ.

## ಲೆಕ್ಕ ಪರಿಶೋಧನೆ

ಪ್ರತಿ ವ್ಯವಹಾರಕ್ಕೂ ಸಾಮಾನ್ಯವಾಗಿ ಒಂದು ವರ್ಷವನ್ನು ವ್ಯವಹಾರದ ಅವಧಿಯಾಗಿ ಗೊತ್ತು ಮಾಡಿಕೊಂಡಿರುತ್ತಾರೆ. ಸರಕಾರದ ಲೆಕ್ಕಪತ್ರಗಳಿಗೆ ಏಪ್ರಿಲ್ ಒಂದರಿಂದ ಮಾರ್ಚ್ 31ರ ವರೆಗೆ ವ್ಯವಹಾರದ ವರ್ಷ ಅಥವಾ ಹಣಕಾಸಿನ ವರ್ಷ. ತೆರಿಗೆಗಳು, ಆಯ, ವ್ಯಯ ಎಲ್ಲಕ್ಕೂ ವರ್ಷ ಇದೇ. ಸಾಮಾನ್ಯವಾಗಿ ಅಂಗಡಿಗಳವರೂ ಕಚೇರಿಗಳವರೂ ಸರಕಾರದೊಡನೆ ವ್ಯವಹರಿಸಲು ಸುಲಭ ಎಂದು ತಮ್ಮ ಹಣಕಾಸಿನ ವರ್ಷವನ್ನು ಏಪ್ರಿಲ್ 1ರಿಂದ ಮಾರ್ಚ್ 31ರ ವರೆಗೆಂದು ಗೊತ್ತುಮಾಡಿಕೊಂಡಿರುತ್ತಾರೆ.

ಒಂದು ವರ್ಷ ಮುಗಿಯುತ್ತದೆ ಎಂದುಕೊಳ್ಳೋಣ. ವರ್ತಕ ತನಗೆ ಲಾಭ ಬಂದಿದೆಯೆ, ನಷ್ಟವಾಗಿದೆಯೆ, ತನ್ನ ಲೆಕ್ಕಾಚಾರ ಸರಿಯಾಗಿದೆಯೆ, ತನಗೆ ಬರಬೇಕಾದದ್ದನ್ನು ವಸೂಲುಮಾಡದೆ ಮರೆತುಬಿಟ್ಟಿದ್ದೇನೆಯೆ, ತಾನು ಕೊಡಬೇಕಾದ ಹಣ ಎಷ್ಟು ಇವೆ – ಎಲ್ಲವನ್ನೂ ನೋಡಿಕೊಳ್ಳಬೇಕು. ಲೆಕ್ಕದಲ್ಲಿ ತಪ್ಪಿದ್ದರೆ ತನಗೇ ಅದು ತೋರುವುದು ಕಷ್ಟ. ಅಲ್ಲದೆ ಯಾವ ಹಣದ ವಿಷಯ ಲೆಕ್ಕದಲ್ಲಿ ಎಲ್ಲಿ ತೋರಿಸಬೇಕು ಎನ್ನುವುದು ಸರಿಯಾಗಿ ಅರ್ಥವಾಗದೆ ಹೋಗಬಹುದು. ಆದ್ದರಿಂದ ಲೆಕ್ಕಾಚಾರದಲ್ಲಿ ತಜ್ಞನಾದವನೊಬ್ಬನನ್ನು ಕರೆದು ತನ್ನ ಲೆಕ್ಕಪತ್ರಗಳನ್ನು ಆತನಿಗೆ ಕೊಟ್ಟು ಲೆಕ್ಕದಲ್ಲಿ ತಪ್ಪಿದೆಯೆ ಎಂದು ಪರೀಕ್ಷೆ–ಪರಿಶೋಧನೆ–ಮಾಡಿಸುತ್ತಾನೆ. ಇದು ಲೆಕ್ಕ ಪರಿಶೋಧನೆ. ಒಂದು ಸಂಸ್ಥೆಯ ಲೇವಾದೇವಿಗಳ ಲೆಕ್ಕಗಳನ್ನು ಅದಕ್ಕೆ ಸಂಬಂಧಿಸಿದ ಎಲ್ಲ ದಾಖಲೆಗಳೊಂದಿಗೆ ಪರಾಮರ್ಶಿಸಿ, ಲೆಕ್ಕಗಳು ಆ ಸಂಸ್ಥೆಯ ಹಣಕಾಸಿನ ವ್ಯವಹಾರಗಳನ್ನೆಲ್ಲ ಸರಿಯಾಗಿ ನಿರೂಪಿಸುತ್ತವೆಯೋ, ಅದರ ಹಣಕಾಸಿನ ನಿಜಸ್ಥಿತಿಯನ್ನು ಪ್ರತಿಬಿಂಬಿಸುತ್ತವೆಯೋ ಎಂಬುದನ್ನು ಅಧಿಕಾರವಾಣಿಯಿಂದ ತಿಳಿಸುವುದೇ ಲೆಕ್ಕ ಪರಿಶೋಧಕನ ಕಾರ್ಯಭಾರ. ಸಣ್ಣವ್ಯಾಪಾರಿಯಿಂದ ಹಿಡಿದು, ಕೋಟ್ಯಂತರ ರೂಪಾಯಿಗಳವರೆಗೆ ವ್ಯವಹಾರವಿರುವ ಸಂಸ್ಥೆಗಳು, ಕಂಪೆನಿಗಳು, ಸರಕಾರದ ಎಲ್ಲ ಕಚೇರಿಗಳೂ ಹೀಗೆ ಲೆಕ್ಕ ಪರಿಶೋಧನೆ ಮಾಡಿಸುತ್ತವೆ. ಭಾರತ ಸರಕಾರದಲ್ಲಿ ಇದಕ್ಕಾಗಿ ಪ್ರತ್ಯೇಕ ಇಲಾಖೆ ಇದೆ.

ಒಂದು ಉದ್ಯಮದ ಪಾಲುದಾರರು, ಹಣ ಹೂಡಿದವರು ಮುಂತಾದ ಜನರೆಲ್ಲರೂ ಅದರ ಹಣಕಾಸಿನ ಪರಿಸ್ಥಿತಿಯ ಬಗ್ಗೆ ಯೋಚಿಸುತ್ತಿರುತ್ತಾರೆ. ಹಣ ತೊಡಗಿಸುವ ವ್ಯಕ್ತಿ ಮತ್ತು ಸಂಸ್ಥೆಗಳು ಆ ಉದ್ಯಮ ಎಷ್ಟು ಲಾಭದಾಯಕವಾಗಿ ನಡೆಯುತ್ತಿದೆ ಎಂದು ಲೆಕ್ಕಾಚಾರ ಮಾಡುತ್ತಾರೆ. ನಿರ್ದೇಶಕರು, ಅಧಿಕಾರಿಗಳು ಮುಂತಾದ ಆಡಳಿತಗಾರರು ಉದ್ಯಮದ ಲೆಕ್ಕ ಪುಸ್ತಕಗಳನ್ನು ವ್ಯವಸ್ಥಿತವಾಗಿ ಇಟ್ಟು ತಮ್ಮ ಮೇಲೆ ಆಕ್ಷೇಪಣೆಗಳು ಬರದಂತೆ ನೋಡಿಕೊಳ್ಳಬೇಕು. ಸಾರ್ವಜನಿಕ ಅಥವಾ ಸರಕಾರಿ ಸಂಸ್ಥೆಗಳು ಬಹಳ ಎಚ್ಚರಿಕೆಯಿಂದ ವಹಿವಾಟನ್ನು ನಡೆಸಿಕೊಂಡು ಹೋಗುವುದು ಅಗತ್ಯ. ಇವರೆಲ್ಲರ ಹಿತಗಳನ್ನು ರಕ್ಷಿಸುವುದರಲ್ಲಿ ಲೆಕ್ಕ ಪರಿಶೋಧನ ನೆರವಾಗುತ್ತದೆ.

ಉದ್ಯಮದ ಲೆಕ್ಕಬರಹ ಮತ್ತು ಅದಕ್ಕೆ ಸಂಬಂಧಿಸಿದ ದಾಖಲೆಗಳನ್ನು ತಜ್ಞರು ಪರಿಶೀಲಿಸುವುದು ಲೆಕ್ಕ ಪರಿಶೋಧನೆ. ಇವರು ಲೆಕ್ಕವನ್ನು ಸಿದ್ಧಗೊಳಿಸುವ ಕೆಲಸದಲ್ಲಿ ಭಾಗವಹಿಸಬಾರದು; ಹೊರಗಿನವರಾಗಿರಬೇಕು. ಲೆಕ್ಕ ಪರಿಶೋಧಕರು ದಿನನಿತ್ಯದ ಲೆಕ್ಕಪುಸ್ತಕದ ದಾಖಲೆಗಳನ್ನೂ ರಶೀದಿಗಳನ್ನೂ ಮೊದಲು ಪರಿಶೀಲಿಸುತ್ತಾರೆ. ಎಲ್ಲ ದಾಖಲೆಗಳೂ ಸರಿಯಾಗಿವೆ ಎಂದು ಮನದಟ್ಟಾದ ಮೇಲೆ ಬ್ಯಾಂಕ್ ಖಾತೆಯ ಮತ್ತು ಇತರ ಕೊಡುವ ತೆಗೆದುಕೊಳ್ಳುವ ಲೆಕ್ಕಗಳನ್ನು ಹೋಲಿಸಿ ನೋಡುತ್ತಾರೆ. ಅನಂತರ ಉದ್ಯಮದ ಲಾಭ ನಷ್ಟಗಳ ಲೆಕ್ಕವನ್ನು ಪರೀಕ್ಷಿಸುತ್ತಾರೆ. ಹೀಗೆ ಲೆಕ್ಕ ಪರಿಶೋಧಕರು ಲಾಭ ನಷ್ಟಗಳನ್ನು ಪರೀಕ್ಷಿಸುವಾಗ ಆಸ್ತಿ ಮತ್ತು ಜವಾಬ್ದಾರಿಗಳನ್ನು ನಿಖರವಾಗಿ ಲೆಕ್ಕಹಾಕಿದೆಯೇ ಎಂಬುದನ್ನು ವಿವರವಾಗಿ ಪರಿಶೀಲಿಸುತ್ತಾರೆ. ಈ ಸಂಬಂಧದ ನ್ಯೂನತೆಗಳಿದ್ದಲ್ಲಿ ಅವನ್ನು ಉಲ್ಲೇಖಿಸಿ ಅವಕ್ಕೆ ಪರಿಹಾರಗಳನ್ನು ಸೂಚಿಸಲಾಗುತ್ತದೆ. ಲೆಕ್ಕಗಳನ್ನು ಇಡುವುದರಲ್ಲಿ ಸುಧಾರಣೆಗಳು ಮಾರ್ಪಾಡುಗಳು ಅಗತ್ಯವಾಗಿದ್ದಲ್ಲಿ ಅವನ್ನು ತಿಳಿಸುತ್ತಾರೆ. ಹಣದ ದುರುಪಯೋಗ, ಪ್ರಯೋಜನವಿಲ್ಲದ ಖರ್ಚು ಮುಂತಾದುವನ್ನು ಲೆಕ್ಕ ಪರಿಶೋಧನೆ ತೋರಿಸಿಕೊಡುತ್ತದೆ. ಕೆಲವು ಸಂಸ್ಥೆಗಳಲ್ಲಿ ಉದ್ಯಮಕ್ಕೆ ಸಂಬಂಧಪಟ್ಟವರೇ ದಿನನಿತ್ಯದ ಲೆಕ್ಕಾಚಾರಗಳನ್ನೂ ದಾಖಲೆಗಳನ್ನೂ ಪರೀಕ್ಷಿಸಿ ಆಗಿಂದಾಗ ತಪ್ಪುಗಳನ್ನೂ ನ್ಯೂನತೆಗಳನ್ನೂ ಸರಿಪಡಿಸುತ್ತಾರೆ. ಈ ಕಾರ್ಯ ಕೈಗೊಳ್ಳುವವರನ್ನು ಆಂತರಿಕ ಲೆಕ್ಕ ಪರಿಶೋಧಕರು ಎಂದು ಕರೆಯುತ್ತೇವೆ. ಇವರು ವಾರ್ಷಿಕ ಆಸ್ತಿ–ಜವಾಬ್ದಾರಿ ತಖ್ತೆಗಳನ್ನು ತಯಾರಿಸುವ ಮುನ್ನ ಮಾಸಿಕ ತಖ್ತೆಗಳನ್ನು ತಯಾರಿಸಿ ನಿಖರತೆಯನ್ನು ಕಾಪಾಡಿಕೊಳ್ಳುತ್ತಾರೆ. ಇದರಿಂದ ಹೊರಗಿನಿಂದ ಬರುವ ಲೆಕ್ಕಾಚಾರ ತಜ್ಞರು ನಡೆಸುವ ಲೆಕ್ಕ ಪರಿಶೋಧನೆಗೆ ಅನುಕೂಲವಾಗುತ್ತದೆ.

ಪ್ರತಿ ಉದ್ಯಮದ ಹಣಕಾಸಿನ ಆಗುಹೋಗುಗಳು ಲೆಕ್ಕಾಚಾರದ ನಿಖರತೆಯನ್ನೂ ಆಡಳಿತ ಸುವ್ಯವಸ್ಥೆಯನ್ನೂ ಅವಲಂಬಿಸಿರುತ್ತವೆ. ಅದನ್ನು ಪರಿಶೀಲಿಸಲು ಲೆಕ್ಕ ಪರಿಶೋಧನೆ ಒಂದು ಸಾಧನ. ವಾಣಿಜ್ಯ ಮತ್ತು ಕೈಗಾರಿಕಾ ಸಂಸ್ಥೆಗಳು ಸಾರ್ವಜನಿಕ ಮತ್ತು ಸರಕಾರೀ ವಹಿವಾಟುಗಳು ಎಲ್ಲವೂ ಲೆಕ್ಕ ಪರಿಶೋಧಕರ ತನಿಖೆಗೆ ಒಳಗಾಗುತ್ತವೆ. ಲೆಕ್ಕ ಪರಿಶೋಧನೆಯೇ ವೃತ್ತಿಯಾಗುಳ್ಳ ತಜ್ಞರೂ ಇರುತ್ತಾರೆ. ಈ ಖಾಸಗಿ ಲೆಕ್ಕ ಪರಿಶೋಧಕರು ಉದ್ಯಮಗಳ ಲೆಕ್ಕಗಳನ್ನು ಪರೀಕ್ಷಿಸಿ ಶುಲ್ಕವನ್ನು ಪಡೆಯುತ್ತಾರೆ.

ಲೆಕ್ಕ ಪರಿಶೋಧಕರು ನಿರ್ದಿಷ್ಟವಾದ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ ಅನುಭವ ಪಡೆದಿರಬೇಕು. ಲೆಕ್ಕಾಚಾರವು ಪ್ರಾಮಾಣಿಕವಾಗಿ ಇಡಲ್ಪಟ್ಟಿದೆಯೇ

(ಖಾತೆಯಲ್ಲಿ) ಬಲಭಾಗ (—) ರೂ. 10 ಬರೆಯಿರಿ. ಎಂದರೆ ನಗದು ಖಾತೆಯನ್ನು ಧನಿಸಿರಿ. 'ಅ' ಎಂಬವರಿಗೆ ರೂ. 10 ಬಂದದ್ದರಿಂದ 'ಅ' ಅವರ ಖಾತೆಯನ್ನು ಋಣಿಸಿರಿ, ಎಂದರೆ ಅವರ ಪುಟದ ಎಡಭಾಗದಲ್ಲಿ 10 ರೂ. ಬರೆಯಿರಿ.

'ಕ' ಎಂಬವರಿಂದ ನೀವು ಹತ್ತು ರೂಪಾಯಿ ಪಡೆದರೆ ನಿಮ್ಮ ನಗದು ಖಾತೆಯ ಎಡಭಾಗದಲ್ಲಿ 10 ರೂ. ಬಂತೆಂದು ಬರೆಯಿರಿ ; ಎಂದರೆ ನಗದು ಖಾತೆಯನ್ನು ಋಣಿಸಿ. 'ಕ' ಎಂಬವರ ಖಾತೆಯನ್ನು ಧನಿಸಿ.

ಹತ್ತು ರೂ. ಮೌಲ್ಯದ ಪುಸ್ತಕವನ್ನು 'ಖ' ಎಂಬವರಿಗೆ ನೀವು ಕೊಟ್ಟರೆ ನಿಮ್ಮ ಸರಕಿನ ಖಾತೆಯಲ್ಲಿ ಅಥವಾ ಪುಸ್ತಕದ ಖಾತೆಯ 'ಧನ' ಪಾರ್ಶ್ವದಲ್ಲಿ 10 ರೂ. ನಮೂದಿಸಿ. 'ಖ' ಎಂಬವರ ಖಾತೆಯ 'ಋಣ' ಪಾರ್ಶ್ವದಲ್ಲಿ 10 ರೂ. ದಾಖಲುಮಾಡಿ.

ಇದೇ ರೀತಿ ಎಲ್ಲ ವ್ಯವಹಾರಗಳನ್ನು ಜೋಡಿ ದಾಖಲೆ ಪದ್ಧತಿಯಲ್ಲಿ ಲೆಕ್ಕ ಬರೆಯಬಹುದು. ಸ್ಥೂಲವಾಗಿ ಇದು ಜೋಡಿ ದಾಖಲೆ ಪದ್ಧತಿಯ ಸೂತ್ರ.

ಈ ಪದ್ಧತಿಯನ್ನು ಅನುಸರಿಸುವಾಗ ನಾವು ಇನ್ನೂ ಅನೇಕ ಪ್ರಶ್ನೆಗಳಿಗೆ ಉತ್ತರ ಕಂಡುಹಿಡಿಯಬೇಕಾಗುತ್ತದೆ. ಉದಾಹರಣೆಗೆ ವ್ಯಾಪಾರಿಯ ವ್ಯವಹಾರಗಳನ್ನು ತೆಗೆದುಕೊಳ್ಳಿ. ಅವನು ಆಗ ತಾನೆ ವ್ಯಾಪಾರ ಪ್ರಾರಂಭಿಸಿದನೆಂದುಕೊಳ್ಳಿ. ಅವನು ಹತ್ತು ಸಾವಿರ ರೂಪಾಯಿ ಬಂಡವಾಳವನ್ನು ಮನೆಯಿಂದ ಅಂಗಡಿಗೆ ತಂದ. ಆಗ ಅವನ ಅಂಗಡಿಯ ನಗದು ಖಾತೆಯನ್ನು ಹತ್ತು ಸಾವಿರ ರೂಪಾಯಿಗೆ ಋಣಿಸಿ ; ಅವನ ವೈಯಕ್ತಿಕ ಖಾತೆಯನ್ನು ಅಥವಾ ಬಂಡವಾಳ ಖಾತೆಯನ್ನು ಅಷ್ಟೇ ಹಣಕ್ಕೆ ಧನಿಸಿ. ಆಗ ಅವನ ಈ ಎರಡು ಖಾತೆಗಳು ಹೀಗಿರುತ್ತವೆ ;

ನಗದು ಖಾತೆ

| ಋಣ | | | | | ಧನ |
|---|---|---|---|---|---|
| ತಾರೀಖು | ವಿವರ | ರೂ. | ತಾರೀಖು | ವಿವರ | ರೂ. |
| 1969 | | | | | |
| ಜನವರಿ 1 | ಬಂಡವಾಳಕ್ಕೆ | 10,000. | | | |

ಬಂಡವಾಳ ಖಾತೆ

| ಋಣ | | | | | ಧನ |
|---|---|---|---|---|---|
| ತಾರೀಖು | ವಿವರ | ರೂ. | ತಾರೀಖು | ವಿವರ | ರೂ. |
| | | | 1969 | | |
| | | | ಜನವರಿ 1 | ನಗದಿನಿಂದ | 10.000 |

ಅಂದಿನ ದಿನ ಅವನ ಆಸ್ತಿ—ನಗದು—ರೂ. 10,000 ; ಬಂಡವಾಳ ರೂ. 10,000. ಅವನು ಯಾರಿಗೂ ಏನೂ ಕೊಡಬೇಕಾದ್ದಿಲ್ಲ. ಯಾರಿಂದಲೂ ಅವನಿಗೆ ಬರಬೇಕಾದ್ದೂ ಇಲ್ಲ.

ಮರುದಿನ ಅವನು ರೂ. 500 ಕೊಟ್ಟು ಸರಕು ಕೊಳ್ಳುತ್ತಾನೆ. ಆಗ ಅವನ ಸರಕು ಖಾತೆಯನ್ನು ಈ ಹಣಕ್ಕೆ ಋಣಿಸಿ, ನಗದು ಖಾತೆಯನ್ನು ಧನಿಸಿ. ಈಗ ಅವನ ನಗದು 9,500 ರೂ.ಗೆ ಇಳಿಯಿತು. 500 ರೂ. ಸರಕು ಬಂತು. ಈಗ ಅವನ ಅಂಗಡಿಯ ಸ್ಥಿತಿ ಹೀಗಿರುತ್ತದೆ :

| | ರೂ. | ಆಸ್ತಿ | ರೂ. |
|---|---|---|---|
| ಬಂಡವಾಳ | 10.000 | ನಗದು | 9.500 |
| | | ಸರಕು | 500 |
| | 10,000 | | 10.000 |

ಅವನು ತಂದ ಸರಕಿನಲ್ಲಿ ಅರ್ಧವನ್ನು ರೂ. 350ಕ್ಕೆ ಮರುದಿನ ಮಾರುತ್ತಾನೆ. ಆಗ ಅವನ ನಗದು ಖಾತೆಯನ್ನು ರೂ. 350ಕ್ಕೆ ಋಣಿಸಿ ಸರಕು ಖಾತೆಯನ್ನು ರೂ. 350ಕ್ಕೆ ಧನಿಸಿ. ಈಗ ಅವನಲ್ಲಿ ಉಳಿದಿರುವ ಸರಕು ಅರ್ಧ (ಅಸಲು ಬೆಲೆಯ ಪ್ರಕಾರ 250) ಮಾರಿದ ಸರಕಿನ ಮೇಲೆ ಅವನಿಗೆ 100 ರೂ. ಲಾಭ ಬಂದಿದೆ. ಈ ಲಾಭ ಬಂಡವಾಳಗಾರನಿಗೆ—ಎಂದರೆ ಅವನ ಖಾತೆಗೆ—ಹೋಗಬೇಕಾಗುತ್ತದೆ. ಒಂದು ಪಕ್ಷ ಅಂದೇ ಈ ಲಾಭವನ್ನು ಪುಸ್ತಕದಲ್ಲಿ ತೋರಿಸಬೇಕೆಂದು ವರ್ತಕ ಬಯಸಿದರೆ ಅವನ ಸರಕು ಖಾತೆಯೂ ಬಂಡವಾಳ ಖಾತೆಯೂ ಹೀಗಿರುತ್ತವೆ :

ಸರಕು ಖಾತೆ

| ಋಣ | | | | | ಧನ |
|---|---|---|---|---|---|
| ತಾರೀಖು | ವಿವರ | ರೂ. | ತಾರೀಖು | ವಿವರ | ರೂ. |
| 1969 | | | 1969 | | |
| ಜನವರಿ 2 | ನಗದಿಗೆ | 500 | ಜನವರಿ 3 | ನಗದಿನಿಂದ | 350 |
| ಜನವರಿ 3 | ಬಂಡವಾಳಕ್ಕೆ ವರ್ಗ ಲಾಭ | 100 | ಡಿಟ್ಟೋ | ಉಳಿದ ಸರಕು | 250 |
| | ರೂ. | 600 | | ರೂ. | 600 |
| ಜನವರಿ 4 | ಸರಕು (ಹಿಂದಿನ ದಿನದಿಂದ) | 250 | | | |

ಬಂಡವಾಳ ಖಾತೆ

| ಋಣ | | | | | ಧನ |
|---|---|---|---|---|---|
| ತಾರೀಖು | ವಿವರ | ರೂ. | ತಾರೀಖು | ವಿವರ | ರೂ. |
| 1969 | | | 1969 | | |
| ಜನವರಿ 3 | ಶಿಲ್ಕು ಮುಂದಿನ ಅವಧಿಗೆ | 10.100 | ಜನವರಿ 1 | ನಗದಿನಿಂದ | 10.000 |
| | | | ಜನವರಿ 3 | ಸರಕಿನಿಂದ | 100 |
| | | | | ರೂ. | 10.100 |
| | ರೂ. | 10,100 | | | |
| | | | 1970 | | |
| | | | ಏಪ್ರಿಲ್ 4 | ಶಿಲ್ಕು ಮುಂತಾದದ್ದು | 10,100 |

ವರ್ತಕ ಲಾಭಗಳಿಸಿದಂತೆಲ್ಲ ಅವನ ಬಂಡವಾಳ ಹೆಚ್ಚುತ್ತದೆ. ನಷ್ಟವಾದರೆ ಅದು ಇಳಿಯುತ್ತದೆ.

ಆದರೆ ಪ್ರತಿಯೊಂದು ವ್ಯವಹಾರವನ್ನು ನಡೆಸಿದಾಗಲೂ ಪುಸ್ತಕದಲ್ಲಿ ಲಾಭ ಅಥವಾ ನಷ್ಟವನ್ನು ಕಂಡುಹಿಡಿದು ಆ ಕ್ಷಣವೇ ಅದನ್ನು ಬಂಡವಾಳಕ್ಕೆ ವರ್ಗಾಯಿಸುವುದಿಲ್ಲ. ಸಾಮಾನ್ಯವಾಗಿ ವರ್ಷಕ್ಕೊಮ್ಮೆ—ಎಂದರೆ ಆಯಾ ವರ್ಷದ ಕೊನೆಯಲ್ಲಿ—ಆ ವರ್ಷದ ವ್ಯವಹಾರಗಳ ಫಲಿತಾಂಶವೇನೆಂಬುದನ್ನು ಕಂಡುಹಿಡಿದು ಸೂಕ್ತವಾಗಿ ದಾಖಲು ಮಾಡುವುದು ವಾಡಿಕೆ.

ಒಂದು ಉದ್ಯಮದ ವ್ಯವಹಾರಗಳು ಇಷ್ಟು ಮಾತ್ರವೇ ಅಲ್ಲ. ವ್ಯಾಪಾರಿ ಅನೇಕ ಖರ್ಚುಗಳನ್ನು ಮಾಡಬೇಕಾಗುತ್ತದೆ. ಹಲವಾರು ಲಾಭದ ಬಾಬುಗಳೂ ಇರುತ್ತವೆ. ಮಾರಾಟ ಮಾಡುವ ಉದ್ದೇಶವಿಲ್ಲದೆ, ವ್ಯವಹಾರಕ್ಕೆ ಕೆಲವು ನೆರವು ನೀಡುವ ಉದ್ದೇಶದಿಂದ ತಂದ ಪದಾರ್ಥಗಳೂ ಇರುತ್ತವೆ. ಇವನ್ನೆಲ್ಲಾ ಲೆಕ್ಕಪುಸ್ತಕಗಳಲ್ಲಿ ತೋರಿಸುವುದು ಹೇಗೆ ?

ಗಾಡಿ ಬಾಡಿಗೆ ಒಂದು ಖರ್ಚು. ಇದನ್ನು ಕೊಟ್ಟಾಗ ನಗದು ಹೋಗುತ್ತದೆ. ನಗದಿನ ಖಾತೆಯಲ್ಲಿ ಧನಿಸಿ. ಗಾಡಿಬಾಡಿಗೆ ಖಾತೆಯನ್ನು ಋಣಿಸಿ.

ಅವನು ಕಮಿಷನ್ ಸಂಪಾದಿಸಿದರೆ ನಗದು ಬರುತ್ತದೆ. ನಗದು ಖಾತೆಯನ್ನು ಋಣಿಸಿ : ಕಮಿಷನ್ ಖಾತೆಯನ್ನು ಧನಿಸಿ.

ವರ್ಷದ ಕೊನೆಯಲ್ಲಿ (ವ್ಯವಹಾರದ ಅವಧಿಯ ಕೊನೆಯಲ್ಲಿ) ಇಂಥ ಖಾತೆಗಳಲ್ಲಿ ಎಷ್ಟು ಧನ ಅಥವಾ ಋಣವನ್ನು ಕಂಡುಹಿಡಿಯಬೇಕು. ಒಂದು ಖಾತೆಯಲ್ಲಿ ಋಣ ಹೆಚ್ಚಾಗಿದ್ದರೆ ಅದು ಖರ್ಚು : ಧನ ಹೆಚ್ಚಾಗಿದ್ದರೆ ಅದು [illegible].

ಸರಕು ಮಾರಾಟದಿಂದ ಬಂದ ಸ್ಥೂಲ ಲಾಭದಿಂದ ಖರ್ಚುಗಳನ್ನು ಕಳೆಯಬೇಕು : ಬೇರೆ ಬಾಬುಗಳಿಂದ ಗಳಿಸಿದ ಆದಾಯಗಳನ್ನು ಅದಕ್ಕೆ ಸೇರಿಸಬೇಕು. ಹೀಗೆ ಮಾಡಿದ ಮೇಲೆ ಕೊನೆಯಲ್ಲಿ ದೊರಕುವ ಮೊಬಲಗೇ ನಿವ್ವಳ ಲಾಭ. ಇದನ್ನು ಕಂಡುಹಿಡಿಯಲು ಉಪಯೋಗಿಸುವ ಖಾತೆ ಹೀಗಿರುತ್ತದೆ :

### ಲಾಭ–ನಷ್ಟ ಖಾತೆ

(31ನೆಯ ಡಿಸೆಂಬರ್ 1969ಕ್ಕೆ ಮುಕ್ತಾಯವಾದ ವರ್ಷಕ್ಕೆ)

| ಋಣ | | | ಧನ |
|---|---|---|---|
| ವಿವರ | ರೂ. | ವಿವರ | ರೂ. |
| ಬಾಡಿಗೆಗೆ | 200 | ಸರಕು ಮಾರಾಟದಿಂದ | |
| ಸಂಬಳಕ್ಕೆ | 600 | ಸ್ಥೂಲ ಲಾಭ | 5,000 |
| ಗಾಡಿಬಾಡಿಗೆ | 50 | ಕಮಿಷನ್‌ನಿಂದ | 100 |
| ಟಪಾಲು ಖರ್ಚಿಗೆ | 50 | | |
| ಬಂಡವಾಳ ಖಾತೆಗೆ ವರ್ಗ (ನಿವ್ವಳ ಲಾಭ) | 4,200 | | |
| | 5,100 | | 5,100 |

ಆ ವರ್ಷದಲ್ಲಿ ವರ್ತಕ ಇನ್ನೂ ಕೆಲವು ವ್ಯವಹಾರ ಮಾಡಿರಬಹುದು. ಅಂಗಡಿಗೆ ಬೇಕಾದ ಅಣಿಕಟ್ಟು (ಕುರ್ಚಿ, ಮೇಜು ಇತ್ಯಾದಿ) ಕೊಂಡಿರಬಹುದು. ಇದನ್ನು ಕೊಂಡಾಗ ಅಣಿಕಟ್ಟು ಖಾತೆಯನ್ನು ಋಣಿಸಿ. ನಗದು ಖಾತೆಯನ್ನು ಧನಿಸಿ.

ಕೆಲವರಿಂದ ಸರಕನ್ನು ಉದ್ದರಿಯ (ಸಾಲದ) ಲೆಕ್ಕದಲ್ಲಿ ಕೊಂಡಿರಬಹುದು. ಹೀಗೆ ಕೊಂಡಾಗ ಅಂಥವರ ಖಾತೆಗಳನ್ನು ಧನಿಸಿ ; ಸರಕು ಖಾತೆಯನ್ನು ಋಣಿಸಿ.

ಉದ್ದರಿಯ ಲೆಕ್ಕದಲ್ಲಿ ಕೆಲವರಿಗೆ ಸರಕು ಮಾರಿರಬಹುದು. ಆಗ ಅವರ ಖಾತೆಗಳನ್ನು ಋಣಿಸಿ ; ಸರಕು ಖಾತೆಯನ್ನು ಧನಿಸಿ.

ವರ್ತಕನ ಧಣಿಗಳಿಗೆ ಅವರ ಬಾಕಿಯನ್ನು ತೀರಿಸಲು ನಗದು ಕೊಟ್ಟಾಗ ಅವರ ಖಾತೆ ಋಣಿಸಿ ; ನಗದು ಧನಿಸಿ. ಋಣಿಗಳಿಂದ ವರ್ತಕನಿಗೆ ನಗದು ಬಂದರೆ ನಗದು ಖಾತೆ ಋಣಿಸಿ : ಅವರ ಖಾತೆ ಧನಿಸಿ.

ವರ್ಷದ ಕೊನೆಯಲ್ಲಿ ಅಣಿಕಟ್ಟಿನ (ಇಂಥ ಇನ್ನೂ ಹಲವು ಆಸ್ತಿಗಳ) ಖಾತೆಗಳ (ಸಾಮಾನ್ಯವಾಗಿ) ಋಣಪಾರ್ಶ್ವದ ಮೊತ್ತ ಹೆಚ್ಚಿರುತ್ತದೆ. ಅದು ಎಷ್ಟು ಹೆಚ್ಚಾಗಿರುತ್ತದೋ ಅಷ್ಟು ಅದರ ಶಿಲ್ಕು. ಋಣ ಶಿಲ್ಕು. ಅದನ್ನು ಹೀಗೆ ಮುಂದುವರಿಸಿ :

### ಅಣಿಕಟ್ಟು ಖಾತೆ

| ಋಣ | | | | | ಧನ |
|---|---|---|---|---|---|
| ತಾರೀಖು | ವಿವರ | ರೂ. | ತಾರೀಖು | ವಿವರ | ರೂ. |
| 1969 | | | 1969 | | |
| ಜನವರಿ 10 | ನಗದಿಗೆ | 1,000 | ಡಿಸೆಂಬರ್ 31 | ಶಿಲ್ಕು ಮುಂದಿನ ವರ್ಷಕ್ಕೆ | 1,000 |
| | | 1,000 | | | 1,000 |
| 1970 | | | | | |
| ಜನವರಿ 1 | ಶಿಲ್ಕು ಹಿಂದಿನ ವರ್ಷದಿಂದ | 1,000 | | | |

ವರ್ತಕನ ಋಣಿಗಳ ಹಾಗೂ ಧನಿಗಳ ಖಾತೆಗಳನ್ನು ಶಿಲ್ಕುಗಳನ್ನು ಹೀಗೆಯೇ ಮುಂದಿನ ಅವಧಿಗೆ ಮುಂದುವರಿಸಿ.

ನಿವ್ವಳ ಲಾಭ ಅಥವಾ ನಷ್ಟವನ್ನು ಕಂಡುಹಿಡಿದ ಮೇಲೆ ವ್ಯಾಪಾರಿಯ ಆರ್ಥಿಕಸ್ಥಿತಿಯನ್ನು ಕಂಡುಹಿಡಿಯಬಹುದು. ಅವನಲ್ಲಿರುವ ನಗದು ಎಷ್ಟು, ಉಳಿದಿರುವ ಸರಕು ಎಷ್ಟು, ಅಣಿಕಟ್ಟೇ ಮುಂತಾದ ಇತರ ಆಸ್ತಿಗಳ ಮೌಲ್ಯವೆಷ್ಟು, ಅವನ ಋಣಿಗಳಿಂದ ಅವನಿಗೆ ಬರಬೇಕಾಗಿರುವುದೆಷ್ಟು, ಅವನ ಧನಿಗಳಿಗೆ ಕೊಡಬೇಕಾಗಿರುವುದೆಷ್ಟು, ಎಂಬುದನ್ನೆಲ್ಲ ಪಟ್ಟಿ (ತಖ್ತೆ) ಮಾಡಬಹುದು. ಇವುಗಳಲ್ಲಿ ಕೊನೆಯದೊಂದನ್ನು ಬಿಟ್ಟು ಉಳಿದವೆಲ್ಲ ಅವನ ಆಸ್ತಿ, ಕೊನೆಯದು ಅವನ ಜವಾಬ್ದಾರಿ. ಆಸ್ತಿಗಳ ಮೊತ್ತದಿಂದ ಜವಾಬ್ದಾರಿಯ ಮೊತ್ತವನ್ನು ಕಳೆದರೆ ಉಳಿದದ್ದು ಬಂಡವಾಳ. ಬಂಡವಾಳ ಖಾತೆಯಲ್ಲಿ ನಿವ್ವಳಲಾಭವನ್ನು ಸೇರಿಸಿದ ಮೇಲೆ ಅಥವಾ ನಿವ್ವಳನಷ್ಟವನ್ನು ಕಳೆದ ಮೇಲೆ ಲಭ್ಯವಾಗುವ ಮೊಬಲಗಿಗೆ ಇದು ಸಮನಾಗಿರುತ್ತದೆ. ವರ್ತಕನ ಸ್ಥಿತಿ ಬಹುಶಃ ಹೀಗಿರುತ್ತದೆ.

### ಆಸ್ತಿ ಜವಾಬ್ದಾರಿ ತಖ್ತೆ

(31ನೆಯ ಡಿಸೆಂಬರ್ 1969ರಂದು ಇದ್ದಂತೆ)

| ಜವಾಬ್ದಾರಿ ಮತ್ತು ಬಂಡವಾಳ | | ರೂ. | ಆಸ್ತಿ | ರೂ. |
|---|---|---|---|---|
| ಧನಿಗಳು | | 100 | ನಗದು ಕೈ ಮೇಲೆ | 500 |
| ಬಂಡವಾಳ | | | ಬ್ಯಾಂಕಿನಲ್ಲಿ | 3,000 |
| ಆರಂಭದಲ್ಲಿ | 5,000 | | ಋಣಿಗಳು | 800 |
| ನಿವ್ವಳಲಾಭ | 4,200 | | ಸರಕು | 4,000 |
| | | 9,200 | ಅಣಿಕಟ್ಟು | 1,000 |
| ರೂ. | | 9.300 | ರೂ. | 9.300 |

ಒಂದು ಉದ್ಯಮ ಸಣ್ಣದಿರಲಿ, ದೊಡ್ಡದಿರಲಿ, ಅದಕ್ಕೆ ಮೇಲೆ ವಿವರಿಸಿದ ಜೋಡಿ ದಾಖಲೆ ಲೆಕ್ಕ ಬರಹದ ಪದ್ಧತಿಯನ್ನು ಅಳವಡಿಸಿಕೊಳ್ಳಬಹುದು. ವ್ಯವಹಾರದ ಅಗತ್ಯಗಳಿಗೆ ತಕ್ಕಂತೆ ಲೆಕ್ಕ ಬರಹದ ರೀತಿಯನ್ನು ಮಾರ್ಪಡಿಸಿ ಕೊಳ್ಳಬಹುದು.

ವ್ಯವಹಾರದ ಲೆಕ್ಕವನ್ನು ಶಾಸ್ತ್ರೀಯವಾಗಿ ಬರೆದು ಅಥವಾ ಬರೆಯಿಸಿ ಇಡುವುದರಿಂದ ಏನೇನು ಪ್ರಯೋಜನವೆಂಬುದನ್ನು ಹಿಂದೆಯೇ ಹೇಳಿದೆ.

ಸರಕಾರಕ್ಕೆ ತೆರಿಗೆಗಳನ್ನು ಸಲ್ಲಿಸಲೂ ವ್ಯವಹಾರದ ಪಾಲುದಾರರಿಗೆ ಮತ್ತು ಕಂಪೆನಿಯ ಷೇರುದಾರರಿಗೆ ಲಾಭಗಳನ್ನು ಹಂಚಲೂ ಲೆಕ್ಕಗಳನ್ನು ಬರೆದಿಡುವುದು ಅವಶ್ಯ. ಸರಕಾರದ ಕಾನೂನುಗಳು ಇದನ್ನು ಹಲವು ಸಂದರ್ಭಗಳಲ್ಲಿ ಕಡ್ಡಾಯ ಮಾಡಿವೆ.

ಉದ್ಯಮಗಳ ವ್ಯವಸ್ಥಿತ ಲೆಕ್ಕಗಳನ್ನಿಡಲು ನುರಿತ ಸಿಬ್ಬಂದಿಯೇ ಇರುತ್ತದೆ. ಲೆಕ್ಕ ಬರಹದ ವೈವಿಧ್ಯವೂ ತೊಡಕೂ ಹೆಚ್ಚಿದಂತೆ ಸಂಭವಿಸಬಹುದಾದ ಮೋಸವನ್ನು, ತಪ್ಪುಗಳನ್ನು ನಿವಾರಿಸಲು ಲೆಕ್ಕಶೋಧಕರು, ಮೆಚ್ಚಿದ ಲೆಕ್ಕಕಾರರು ಮುಂತಾದವರಿರುತ್ತಾರೆ.

ಲೆಕ್ಕ ಬರಹ, ಶೋಧನ, ಮೆಚ್ಚಿದ ಲೆಕ್ಕ ಬರಹ—ಇವೂ ಕೂಡ ಇಂದು ಬಹು ಉಪಯುಕ್ತವಾದ ವೃತ್ತಿಗಳು. ಇವುಗಳಲ್ಲಿ ತರಬೇತಿಗಾಗಿ ವಿಶೇಷ ಸಂಸ್ಥೆಗಳಿವೆ.

ನೋಡಿ : ಲೆಕ್ಕ ಪರಿಶೋಧನೆ

## ಲೆನಿನ್, ನಿಕೊಲಾಯ್ ಇಲ್ಯಿಚ್

ರಷ್ಯದಲ್ಲಿ 1917ರಲ್ಲಿ ನಡೆದ ಅಕ್ಟೋಬರ್ ಕ್ರಾಂತಿ ಪ್ರಪಂಚದ ಇತಿಹಾಸದಲ್ಲಿ ಮಹತ್ವಪೂರ್ಣವಾದ ಹೆಜ್ಜೆ. ಲೆನಿನ್ ಆ ಕ್ರಾಂತಿಯ ಶಿಲ್ಪಿ.

ಪೂರ್ವ ರಷ್ಯದಲ್ಲಿ ವಾಸವಾಗಿದ್ದ ಶಾಲಾ ಇನ್‌ಸ್ಪೆಕ್ಟರ್ ಇಲ್ಯಾ ಉಲ್ಯನೋವ್‌ನ ಮಗ ವ್ಲಾದಿಮಿರ್ ಇಲ್ಯಿಚ್. ಇವನು ಜನಿಸಿದ್ದು 1870 ಏಪ್ರಿಲ್ 22ರಂದು. ಹದಿನೇಳನೆಯ ವಯಸ್ಸಿನಲ್ಲಿ ಇಲ್ಯಿಚ್ ಸೆಕೆಂಡರಿ ಶಾಲೆಯ ಪರೀಕ್ಷೆಯಲ್ಲಿ ಅತಿ ಹೆಚ್ಚು ಅಂಕಗಳನ್ನು ಪಡೆದು, ಒಂದು ಪದಕವನ್ನು ಗಳಿಸಿದ. ಶಾಲೆಯ ನಿರ್ದೇಶಕರು ಶಿಫಾರಸುಮಾಡಿ ಹುಡುಗನಿಗೆ ರಷ್ಯದ ಕಾಜಾನ್ ವಿಶ್ವವಿದ್ಯಾನಿಲಯದಲ್ಲಿ ಪ್ರವೇಶ ದೊರಕಿಸಿಕೊಟ್ಟರು.

ಪದಕವನ್ನು ಗಳಿಸಿದ್ದರಿಂದಾಗಲೀ ವಿಶ್ವವಿದ್ಯಾನಿಲಯದಲ್ಲಿ ಪ್ರವೇಶ ದೊರಕಿದ್ದಕ್ಕಾಗಲೀ ಆ ಬುದ್ಧಿವಂತ ವಿದ್ಯಾರ್ಥಿ ಸಂತೋಷಿಸುವ ಸ್ಥಿತಿಯಲ್ಲಿರಲಿಲ್ಲ. ಕೆಲವೇ ವಾರಗಳ ಹಿಂದೆ ಆತನ ಅಣ್ಣ ಅಲೆಗ್ಸಾಂಡರ್, ರಷ್ಯದ ಜಾರ್ ದೊರೆ ವಿಧಿಸಿದ ಮರಣದಂಡನೆಗೆ ತುತ್ತಾಗಿದ್ದ. ಮೂರನೆಯ ಅಲೆಗ್ಸಾಂಡರ್ ಜಾರ್‌ನ ಕೊಲೆಯ ಸಂಚಿನಲ್ಲಿ ಆತನೂ ಪಾತ್ರಧಾರಿ ಆಗಿದ್ದನೆಂಬುದು ಆರೋಪ. ಅಣ್ಣನಿಗೆ ಒದಗಿದ ಗತಿ ಲೆನಿನನ ಮನಸ್ಸಿನ ಮೇಲೆ ಗಾಢ ಪರಿಣಾಮ ಉಂಟುಮಾಡಿತು. ಅಣ್ಣನ ಸಾವು ಹಸಿಹಸಿಯಾಗಿ ಮನಸ್ಸಿನಲ್ಲಿದ್ದಾಗಲೇ ವಿಶ್ವವಿದ್ಯಾನಿಲಯ ಪ್ರವೇಶಿಸಿದ ಹುಡುಗ ಕ್ರಾಂತಿಕಾರನಾಗಿ ಮಾರ್ಪಟ್ಟ.

ವಿಶ್ವವಿದ್ಯಾನಿಲಯವನ್ನು ಪ್ರವೇಶಿಸಿ ಕೆಲವು ತಿಂಗಳು ಕೂಡ ಸಂದಿರಲಿಲ್ಲ. ವಿದ್ಯಾರ್ಥಿ ಚಳುವಳಿಯಲ್ಲಿ ಭಾಗವಹಿಸಿದ ಅಪರಾಧಕ್ಕಾಗಿ ವಿಶ್ವವಿದ್ಯಾನಿಲಯದಿಂದ ಹೊರಹಾಕಲ್ಪಟ್ಟ. ತರಗತಿಗಳಿಗೆ ಹಾಜರಾಗದೆಯೇ ಪರೀಕ್ಷೆಗೆ ಕುಳಿತುಕೊಳ್ಳಬಹುದಾದ ಪೂರ್ವ ರಷ್ಯದ ಸಮಾರ ವಿಶ್ವವಿದ್ಯಾನಿಲಯದ ನ್ಯಾಯಾಂಗ ಪರೀಕ್ಷೆಯಲ್ಲಿ ಉತ್ತೀರ್ಣನಾಗಿ ವಕೀಲ ವೃತ್ತಿ ಪ್ರಾರಂಭಿಸಿದ. ಕಾರ್ಲ್ ಮಾರ್ಕ್ಸ್‌ನ ಸಿದ್ಧಾಂತಗಳಿಗೆ ಮಾರುಹೋಗಿ, ಗಮನವೆಲ್ಲ ಕ್ರಾಂತಿಕಾರಕ ಚಟುವಟಿಕೆಯತ್ತ ಹರಿದುದರಿಂದ, ಇಲ್ಯಿಚ್ ಉತ್ತಮ ವಕೀಲನಾಗಲಿಲ್ಲ. ತನ್ನ ಇಪ್ಪತ್ತಮೂರನೆಯ ವಯಸ್ಸಿನಲ್ಲಿ ಸೇಂಟ್ ಪೀಟರ್ಸ್‌ಬರ್ಗ್‌ನಲ್ಲಿ ಮಾರ್ಕ್ಸ್‌ವಾದದಲ್ಲಿ ತರಬೇತು ಹೊಂದುತ್ತಿದ್ದ ಕಾರ್ಮಿಕರ ತಂಡವೊಂದನ್ನು ಸೇರಿಕೊಂಡ.



ಸೋವಿಯೆತ್ ರಷ್ಯದ ಶಿಲ್ಪಿ-ಲೆನಿನ್

ಆಗ ರಷ್ಯದಲ್ಲಿ ಅಶಾಂತಿ ಹಬ್ಬಿತ್ತು. ವ್ಯವಸಾಯಗಾರರು ತೀರ ಬಡವರು ; ಶ್ರೀಮಂತರು ಅತಿ ಶ್ರೀಮಂತರು. ಬಾಂಬುಗಳನ್ನೆಸೆಯುವುದು, ತಮಗೆ ಸಲ್ಲದವರನ್ನು ಕೊಲೆ ಮಾಡುವುದು ಮುಂತಾದ ಭಯೋತ್ಪಾದಕ ಚಟುವಟಿಕೆಗಳನ್ನು ಕೆಲವು ಮಂದಿ ಕ್ರಾಂತಿಕಾರರು ನಡೆಸುವುದರಿಂದ ರಷ್ಯದ ರಾಜಪ್ರಭುತ್ವ ಕೊನೆಗಾಣಲಾರದು ಎಂದು ಇಲ್ಯಿಚ್ ಅಭಿಪ್ರಾಯಪಟ್ಟ. ಭಾರೀ ಜನಸಮುದಾಯ ಚಳುವಳಿ ನಡೆಸಿದರೆ ಮಾತ್ರ ಆ ಉದ್ದೇಶ ಈಡೇರಲು ಶಕ್ಯ ; ತಾವಾಗಿ ಜನ ಅಂಥ ಚಳುವಳಿಯಲ್ಲಿ ತೊಡಗುವುದಿಲ್ಲ ; ಅದಕ್ಕೆ ಸಮರ್ಥ ನಾಯಕತ್ವವೂ ಸಂಘಟಿತ ರಾಜಕೀಯ ಪಕ್ಷವೂ ಅಗತ್ಯ — ಎಂದು ಮನಗಂಡ. ಉತ್ಸಾಹ ಚಾಕಚಕ್ಯಗಳನ್ನು ಹೊಂದಿದ್ದ ಇಲ್ಯಿಚ್ ಸಮಾಜವಾದೀ ಚಳುವಳಿಯ ಮುಖಂಡನಾದ. ಅವನನ್ನು ಬಂಧಿಸಿ ಉತ್ತರ ಸೈಬೀರಿಯಕ್ಕೆ ಗಡಿಪಾರು ಮಾಡಿದರು (1896). 'ರಷ್ಯದಲ್ಲಿ ಬಂಡವಾಳಶಾಹಿಯ ಬೆಳವಣಿಗೆ' ಎಂಬ ತನ್ನ ಪುಸ್ತಕದಲ್ಲಿ (1899) ಕಾರ್ಮಿಕರ ಮತ್ತು ರೈತರ ಚಳುವಳಿಯಿಂದ ಮಾತ್ರ ಬಂಡವಾಳಶಾಹಿಯನ್ನು ತಡೆಗಟ್ಟಬಹುದು ಎಂಬ ತನ್ನ ನಂಬಿಕೆಯನ್ನು ವ್ಯಕ್ತಪಡಿಸಿದ.

ಮರುವರ್ಷ ಗಡಿಪಾರು ಶಿಕ್ಷೆಯಿಂದ ಬಿಡುಗಡೆಯಾದ ಬಳಿಕ ಇಲ್ಯಿಚ್ ಯೂರೋಪಿನ ಹಲವು ನಗರಗಳಲ್ಲಿ ಮುಖ್ಯವಾಗಿ ಲಂಡನಿನಲ್ಲಿ ವಾಸಿಸಿದ. ತನ್ನಂತೆಯೇ ಗಡಿಪಾರು ಶಿಕ್ಷೆಗೊಳಗಾಗಿ ಮುಕ್ತನಾಗಿದ್ದ ಮಾರ್ಟೋವ್ ಎಂಬ ಕ್ರಾಂತಿಕಾರಿಯನ್ನು ಕೂಡಿಕೊಂಡು 'ಇಸ್ಕ್ರಾ' (ಕಿಡಿ) ಎಂಬ ಪತ್ರಿಕೆಯನ್ನು ಪ್ರಾರಂಭಿಸಿದ. ರಷ್ಯದ ಹೊರಗೆ ಅಚ್ಚಾಗಿ ದೇಶದ ಒಳಗೆ ಗುಪ್ತವಾಗಿ ಪ್ರಸಾರವಾಗುತ್ತಿದ್ದ ಪತ್ರಿಕೆ [illegible]

ಮನಸ್ಸಿನಲ್ಲಿ ತುಂಬಲು, ತನ್ನ ಅಭಿಪ್ರಾಯಗಳನ್ನು ಪ್ರತಿಪಾದಿಸಲು [illegible] ಹಗಲು ರಾತ್ರಿ ದುಡಿದ. ಆಗ ಅಲ್ಲಿ ಆತ ಬಳಸಿದ ಹೆಸರು 'ಲೆನಿನ್'. ರಷ್ಯದ ಶ್ರಮಜೀವಿಗಳಿಗೆ ನಾಯಕತ್ವ ನೀಡಬಲ್ಲ ರಾಜಕೀಯ ಪಕ್ಷದ ಸಂಘಟನೆಗಾಗಿ ಲೆನಿನ್ ದುಡಿದ. ರಷ್ಯದ ಮಾರ್ಕ್ಸ್‌ವಾದಿಗಳಲ್ಲೇ ಎರಡು ಪಂಗಡಗಳಾದುವು. ಲೆನಿನನ ಪಂಗಡದ ಹೆಸರು ಬೋಲ್ಶೆವಿಕ್ (ಬಹುಸಂಖ್ಯಾತರು). ಇನ್ನೊಂದು ಪಂಗಡ ಮೆನ್ಶೆವಿಕ್ (ಅಲ್ಪಸಂಖ್ಯಾತರು). ರಷ್ಯದ ಕಮ್ಯೂನಿಸ್ಟ್ ಪಕ್ಷದಲ್ಲಿ ಬೋಲ್ಶೆವಿಕರದೇ ಮೇಲುಗೈ ಆಯಿತು.

ಪ್ರಥಮ ಮಹಾಯುದ್ಧ 1914ರಲ್ಲಿ ಪ್ರಾರಂಭವಾದಾಗ, ಲೆನಿನ್ ಬಯಸಿದ್ದ ಅನುಕೂಲಕರ ವಾತಾವರಣ ರಷ್ಯದಲ್ಲಿ ಮೂಡಿತು. ಬ್ರಿಟನ್ ಮತ್ತು ಫ್ರಾನ್ಸ್‌ಗಳ ಜೊತೆ ಸ್ನೇಹ ಬೆಳೆದಿದ್ದ ರಷ್ಯದ ರಾಜಪ್ರಭುತ್ವದ ವಿರುದ್ಧ ಕೆಲಸಮಾಡಲು ಲೆನಿನ್ ನಿರ್ಧರಿಸಿದ; ಜರ್ಮನರ ಪಕ್ಷ ವಹಿಸಿದ. 1917ರಲ್ಲಿ ರಾಜಪ್ರಭುತ್ವ ಕುಸಿದುಬಿದ್ದು ಮೆನ್ಶೆವಿಕ್ ಪಕ್ಷ ಮತ್ತು ಸಮಾಜವಾದಿ ಕ್ರಾಂತಿಕಾರರನ್ನು ಒಳಗೊಂಡ ಹಂಗಾಮಿ ಸರಕಾರ ರಚಿತವಾಯಿತು. ಒಂದು ತಿಂಗಳ ಅನಂತರ ಲೆನಿನ್ ಗೋಪ್ಯವಾಗಿ ರಷ್ಯವನ್ನು ತಲುಪುವಂತೆ ಜರ್ಮನರು ಸಹಾಯ ಮಾಡಿದರು. 1917ರ ಏಪ್ರಿಲ್ 16ರಿಂದ ನವೆಂಬರ್ 7ರ ನಡುವಣ ಅವಧಿಯಲ್ಲಿ ರೈತರನ್ನು ಮತ್ತು ಕಾರ್ಮಿಕರನ್ನು ಅಣಿಗೊಳಿಸಿ, ಕ್ರಾಂತಿಯ ಕಹಳೆಯನ್ನು ಲೆನಿನ್ ಮೊಳಗಿಸಿದ. ಹಂಗಾಮಿ ಸರಕಾರ ಮುರಿದುಬಿತ್ತು. ಬೋಲ್ಶೆವಿಕ್ ಸರಕಾರ ಸ್ಥಾಪಿತವಾಯಿತು. 1917 ನವೆಂಬರ್‌ನಲ್ಲಿ ಲೆನಿನನ ನಾಯಕತ್ವದಲ್ಲಿ ರಷ್ಯದಲ್ಲಿ ಕಾರ್ಮಿಕರ ಸರ್ವಾಧಿಕಾರತ್ವದ ಸ್ಥಾಪನೆಯಾಯಿತು. ಕಮ್ಯೂನಿಸಂ ರಾಜ್ಯಾಡಳಿತ ಜಗತ್ತಿನಲ್ಲಿಯೇ ಪ್ರಥಮವಾಗಿ ಆರಂಭವಾಯಿತು.

ಹೀಗೆ ರಷ್ಯನ್ ಕ್ರಾಂತಿಯ ನಾಯಕತ್ವ ವಹಿಸಿದ ಲೆನಿನ್ ಆಧುನಿಕ ಸೋವಿಯೆತ್ ಒಕ್ಕೂಟದ ತಳಪಾಯ ಹಾಕಿದ, ಕಮ್ಯೂನಿಸಮಿಗೆ ಸ್ಥಿರವಾದ ನೆಲಗಟ್ಟನ್ನು ಒದಗಿಸಿಕೊಟ್ಟ. ರಷ್ಯದ ಅದ್ವಿತೀಯ ನಾಯಕನಾಗಿದ್ದಾಗಲೂ ಲೆನಿನ್ ಬಹು ಸರಳವಾದ ಜೀವನವನ್ನೇ ನಡೆಸಿದ.

ಸೈಬೀರಿಯದಿಂದ ಸ್ವಿಟ್ಜರ್‌ಲೆಂಡಿಗೆ ಲೆನಿನ್ ಮರಳಿದಾಗ ಆತನ ಜೀವನ ಸಂಗಾತಿಯಾಗಿ ನದೆಜ್ಡಾ ಕ್ರುಪ್ಸ್‌ಕಾಯ ಎಂಬ ಕಾರ್ಯಕರ್ತೆ ಆತನ ಸಹಾಯಕಳಾಗಿ ದುಡಿದಳು. ಲೆನಿನ್ ಕೊನೆಯ ದಿನಗಳಲ್ಲಿ ಪಾರ್ಶ್ವವಾಯುವಿಗೆ ತುತ್ತಾಗಿ ನರಳಿದ. 1924ರ ಜನವರಿ 21ರಂದು ಮಾಸ್ಕೊ ಬಳಿಯ ಗೋರ್ಕಿಯಲ್ಲಿ ಮೃತನಾದ.

ಮಾಸ್ಕೊದಲ್ಲಿ ಕೆಂಪು ಚೌಕ; ಅಲ್ಲೊಂದು ಸಮಾಧಿ ಇದೆ. ಇಲ್ಲಿ ಗಾಜಿನ ಶವಪೆಟ್ಟಿಗೆಯಲ್ಲಿ ನಿದ್ರಿಸುತ್ತಿದ್ದಾನೆ ಎನ್ನುವಂತೆ ಕಾಣಿಸುವ ಒಬ್ಬ ನಾಯಕನ ಶವವಿದೆ. ಇಂದಿಗೂ ಸಾವಿರಾರು ಮಂದಿ ಪ್ರತಿನಿತ್ಯ ಮೌನವಾಗಿ ಸಾಲುಗಟ್ಟಿ, ಸೋವಿಯೆತ್ ಒಕ್ಕೂಟದ ಶಿಲ್ಪಿಯ ಸಮಾಧಿಗೆ ಪುಷ್ಪಗುಚ್ಛ ಇಟ್ಟು ಗೌರವ ಸಲ್ಲಿಸುತ್ತಾರೆ.

ತನ್ನ ದೇಶದ ಜನಮನದಲ್ಲಿ ಇಂಥ ಸ್ಥಾನವನ್ನು ಗಳಿಸಿಕೊಂಡ ಮಹಾನಾಯಕ ಲೆನಿನ್

ಜಾರ್‌ಶಾಹಿಯಿಂದ ಮೊದಲು ಮುಕ್ತವಾದ ನಗರ ಸೇಂಟ್ ಪೀಟರ್ಸ್‌ಬರ್ಗ್. ಲೆನಿನ್ ಶ್ರಮಜೀವಿಗಳ ಸರಕಾರ ಸ್ಥಾಪನೆಯನ್ನು ಘೋಷಿಸಿದ್ದು ಆ ನಗರದಲ್ಲೆ. ಮುಂದೆ ಆ ನಗರಕ್ಕೆ ಲೆನಿನ್‌ಗ್ರಾಡ್ ಎಂದು ಹೆಸರಿಟ್ಟರು.

ಒಂದು ಗುರಿಗಾಗಿ ಜೀವನವನ್ನೇ ಮುಡಿಪಾಗಿಟ್ಟವನು ಲೆನಿನ್. ಈತನದು ದೃಢ ಮನಸ್ಸು. ಬಳಸುವ ವಿಧಾನಕ್ಕಿಂತಲೂ ಸಾಧಿಸಬೇಕಾದ ಗುರಿಯೇ ಆತನಿಗೆ ಮುಖ್ಯವಾಗಿತ್ತು. ಮಾರ್ಕ್ಸನ ಸಿದ್ಧಾಂತವನ್ನು ಕೃತಿಗಿಳಿಸಿ, ಕಮ್ಯೂನಿಸ್ಟ್ ರಷ್ಯವನ್ನು ಬಲವಾದ ತಳಹದಿಯ ಮೇಲೆ ನಿಲ್ಲಿಸಿ, ಜಗತ್ತಿನ ಚರಿತ್ರೆಗೇ ಹೊಸ ತಿರುವನ್ನು ನೀಡಿದ ಈ ಅಸಾಧಾರಣ ಪುರುಷ.

1970ರ ಏಪ್ರಿಲ್ ತಿಂಗಳಿನಲ್ಲಿ ಲೆನಿನನ ಜನ್ಮಶತಾಬ್ದಿ ಜಗತ್ತಿನಾದ್ಯಂತ ಆಚರಿಸಲ್ಪಟ್ಟಿತು. ರಷ್ಯದಲ್ಲಿ ಬಹು ಶ್ರದ್ಧೆಯಿಂದಲೂ ಸಂಭ್ರಮದಿಂದಲೂ ಆ ದಿನವನ್ನು ಆಚರಿಸಿದರು. ಅಂದು ರಷ್ಯದಲ್ಲಿ ಸಾರ್ವಜನಿಕ ರಜೆ ಇರಲಿಲ್ಲ. ದುಡಿಮೆಯ ಮೂಲಕ ಅಲ್ಲಿನ ಜನರು ನಾಯಕನಿಗೆ ಗೌರವ ಅರ್ಪಿಸಿದರು.

ನೋಡಿ : ಅಕ್ಟೋಬರ್ ಕ್ರಾಂತಿ ; ಅರಾಜಕತೆ ; ಮಾರ್ಕ್ಸ್, ಕಾರ್ಲ್ ; ಮಾಸ್ಕೊ ; ರಷ್ಯ.

## ಲೆಬನಾನ್

'ಮಧ್ಯಪ್ರಾಚ್ಯದ ಆಟದ ಮೈದಾನ' ಎನಿಸಿಕೊಂಡಿರುವ ಲೆಬನಾನ್ ಭೂಮಧ್ಯ ಸಮುದ್ರದ ಪೂರ್ವ ತೀರದಲ್ಲಿರುವ ಒಂದು ಸ್ವತಂತ್ರ ಗಣರಾಜ್ಯ. ಏಷ್ಯ, ಯೂರೋಪ್ ಮತ್ತು ಆಫ್ರಿಕ ಈ ಮೂರು ಖಂಡಗಳಿಗೂ ಹೋಗುವ ಅತ್ಯಂತ ಸಮೀಪದ ದಾರಿಗಳು ಈ ರಾಷ್ಟ್ರದ ಮೂಲಕ ಹಾಯುವುದರಿಂದ ಲೆಬನಾನ್‌ಗೆ ವಿಶೇಷ ಅಂತರರಾಷ್ಟ್ರೀಯ ಮಹತ್ವವಿದೆ.

ಇಂದು ಲೆಬನಾನನ್ನು ಅರಬ್ ರಾಷ್ಟ್ರವಾಗಿ ಪರಿಗಣಿಸುತ್ತಾರೆ. ಮುಸಲ್ಮಾನರಲ್ಲದೆ, ಬಹು ಮಂದಿ ಕ್ರೈಸ್ತರೂ, ಹಲವಾರು ಸಾವಿರ ಯೆಹೂದ್ಯರೂ ಇದ್ದಾರೆ. ಅರಬಿ ಭಾಷೆಯ ಜೊತೆಗೆ ಇಂಗ್ಲಿಷ್, ಫ್ರೆಂಚ್ ಇವನ್ನೂ ಮಾತನಾಡುತ್ತಾರೆ. ನೂರಕ್ಕೆ ಎಪ್ಪತ್ತೈದರಷ್ಟು ಅಕ್ಷರಸ್ಥರು.

ಲೆಬನಾನಿನ ವಿಸ್ತೀರ್ಣ 10,399 ಚದರ ಕಿಲೊಮೀಟರು. 225 ಕಿ.ಮೀ. ಉದ್ದದ ತೀರಪ್ರದೇಶ, ಅದರ ಉದ್ದಕ್ಕೂ ಬಯಲು ಭೂಮಿಯಿದೆ. ಈ ಬಯಲು ಭೂಮಿಯಿಂದ ಮೇಲೆದ್ದು ನಿಂತಿವೆ ಲೆಬನಾನಿನ ಪರ್ವತಗಳು. ಅತಿ ಉನ್ನತ ಶಿಖರ ಕುರ್‌ನೆಟ್ ಎಸ್ ಸೌದ 3,090 ಮೀಟರ್ ಎತ್ತರವಿದೆ. ಸಿರಿಯದ ಮೇರೆಯಲ್ಲಿರುವ ಪರ್ವತಗಳು ಲೆಬನಾನ್ ಪರ್ವತಗಳಿಗಿಂತ ತಗ್ಗು. ಈ ಎರಡು ಪರ್ವತಗಳಿಗೂ ಮಧ್ಯೆ ಫಲವತ್ತಾದ ಚಿಕ್ಕ ಬಯಲು ಭೂಮಿಯಿದೆ.

ಲಿಟನಿ ಹಾಗೂ ಬರಾನ್‌ಟೆಸ್ ಇವು ಪ್ರಮುಖ ನದಿಗಳು. ಈ ದೇಶದಲ್ಲಿ ಭೂಮಧ್ಯ ರೇಖೆಯ ಪ್ರದೇಶದ ಹವಾಗುಣ. ಹಿಮ ಬೀಳುವ ಚಳಿಗಾಲ. ಬೇಸಿಗೆಯಲ್ಲಿ ಬಿಸಿಲು.

ವ್ಯಾಪಾರವೇ ಲೆಬನಾನಿನ ಸಂಪತ್ತಿನ ಮೂಲ. ಇತರ ಅರಬ್ ರಾಷ್ಟ್ರಗಳ ವ್ಯಾಪಾರ ಹೆಚ್ಚಾಗಿ ಲೆಬನಾನ್ ಮೂಲಕವೇ ನಡೆಯುತ್ತದೆ. ರಾಷ್ಟ್ರದ ಆದಾಯಕ್ಕೆ ಇನ್ನೊಂದು ಮೂಲ ಪ್ರವಾಸೋದ್ಯಮ. ಲೆಬನಾನಿನ ಸುಂದರ ತೀರಪ್ರದೇಶ, ನಿಸರ್ಗ ರಮಣೀಯವಾದ ಬೆಟ್ಟಗಳು ಪ್ರವಾಸಿಗಳಿಗೊಂದು ನಿತ್ಯನೂತನ ಆಕರ್ಷಣೆ. ಇರಾಕ್ ಮತ್ತು ಸೌದಿ ಅರೇಬಿಯಗಳಿಂದ ಬರುವ ತೈಲನಾಳಗಳು ಲೆಬನಾನ್ ಬಂದರುಗಳಿಗೆ ಎಣ್ಣೆ ಸರಬರಾಜು ಮಾಡುತ್ತವೆ. ಇಲ್ಲಿಂದ ಎಣ್ಣೆ ರಫ್ತಾಗುತ್ತದೆ.

ಬಟ್ಟೆ ಕೈಗಾರಿಕೆ, ಸಿಮೆಂಟು ಕೈಗಾರಿಕೆ, ಆಹಾರ ಶುದ್ಧೀಕರಣ ಇವು ಪ್ರಮುಖ ಕೈಗಾರಿಕೆಗಳು.

[illegible]

ದ್ರಾಕ್ಷಿ ಮೊದಲಾದ ಹಣ್ಣುಗಳೂ ತರಕಾರಿಯೂ ಬೆಳೆಯುತ್ತವೆ. ಹಣ್ಣುಗಳನ್ನು ರಫ್ತು ಮಾಡುತ್ತಾರೆ. ಚಿಕ್ಕ ಬಯಲುಭೂಮಿಯಲ್ಲಿ ಗೋಧಿ ಮೊದಲಾದ ಧಾನ್ಯಗಳನ್ನು ಬೆಳೆಯುತ್ತಾರೆ. ಆದರೆ ಬೇಕಾಗುವಷ್ಟು ಧಾನ್ಯದ ಬೆಳೆ ಇಲ್ಲದಿರುವುದರಿಂದ ಧಾನ್ಯ ಆಮದಾಗುತ್ತದೆ.

ಲೆಬನಾನಿನ ರಾಜಧಾನಿ ಬೀರೂಟ್. ಇದು ಲೆಬನಾನಿನ ಅತ್ಯಂತ ದೊಡ್ಡ ಬಂದರು, ವ್ಯಾಪಾರ ಕೇಂದ್ರ. ಬೀರೂಟಿನಲ್ಲಿ ದೊಡ್ಡ ವಿಮಾನ ನಿಲ್ದಾಣವಿದೆ. ಜನಸಂಖ್ಯೆ ಸುಮಾರು ಐದು ಲಕ್ಷ. ಲೆಬನಾನಿನ ಎರಡನೆಯ ಪ್ರಮುಖ ಬಂದರು ಹಾಗೂ ನಗರ ಟ್ರಿಪೋಲಿ.

ಲೆಬನಾನಿನ ರಾಜ್ಯಾಂಗದ ಪ್ರಕಾರ ರಾಷ್ಟ್ರದ ಅತ್ಯಂತ ಹಿರಿಯ ನಾಯಕ ರಾಷ್ಟ್ರಾಧ್ಯಕ್ಷ. ಕಾರ್ಯನಿರ್ವಾಹಕ, ಪ್ರಧಾನ ಮಂತ್ರಿ. ರಾಷ್ಟ್ರಾಧ್ಯಕ್ಷನನ್ನು ಪ್ರಜಾಪ್ರತಿನಿಧಿಮಂಡಲ ಚುನಾಯಿಸುತ್ತದೆ. ರಾಷ್ಟ್ರಾಧ್ಯಕ್ಷನ ಆಡಳಿತ ಕಾಲಾವಧಿ ಆರು ವರ್ಷ. ಪ್ರಧಾನಿಯನ್ನು ರಾಷ್ಟ್ರಾಧ್ಯಕ್ಷ ನೇಮಿಸುತ್ತಾನೆ. ಪ್ರಜಾಪ್ರತಿನಿಧಿಸಭೆಯಲ್ಲಿ 99 ಮಂದಿ ಸದಸ್ಯರು ; ಕ್ರೈಸ್ತರು, ಮುಸಲ್ಮಾನರ ಪ್ರಮಾಣ 6 : 5ರಂತಿರುತ್ತದೆ.

ಪ್ರಾಚೀನಕಾಲದಲ್ಲಿ ಹಲವಾರು ನಗರ ರಾಜ್ಯಗಳು ಒಂದುಗೂಡಿ ಲೆಬನಾನ್ ಎಂದಾಗಿತ್ತು. ದೊಡ್ಡ ಸಾಮ್ರಾಜ್ಯವನ್ನು ಕಟ್ಟಿದ ಫಿನೀಷಿಯಸರು (ಇವರನ್ನು ಬೈಬಲ್ 'ಕ್ಯಾನನ್ ಜನ' ಎಂದು ಕರೆದಿದೆ) ಈ ನಗರ ರಾಜ್ಯಗಳನ್ನು ಭೂಮಧ್ಯ ಸಮುದ್ರದಲ್ಲಿ ತಮ್ಮ ನೆಲೆಯಾಗಿ ಉಪಯೋಗಿಸಿದರು. ಈ ರಾಜ್ಯಗಳನ್ನು ಈಜಿಪ್ಷಿನವರು, ಅಸೀರಿಯದವರು, ಪರ್ಷಿಯದವರು, ಗ್ರೀಕರು ಬೇರೆಬೇರೆ ಕಾಲದಲ್ಲಿ ಗೆದ್ದರು. ಏಳನೆಯ ಶತಮಾನದಲ್ಲಿ ಲೆಬನಾನ್ ಅರಬರ ವಶವಾದಾಗ ಅನೇಕರು ಮುಸಲ್ಮಾನರಾದರು.

| | | |
|---|---|---|
| ಖಂಡ | : | ಏಷ್ಯ (ನೈಋತ್ಯ) |
| ಅಕ್ಷಾಂಶ | : | 33° 05′ ಉ ದಿಂದ 34° 45′ ಉ |
| ರೇಖಾಂಶ | : | 34° 58′ ಪೂ ದಿಂದ 36° 55′ ಪೂ |
| ವಿಸ್ತೀರ್ಣ | : | 10,399 ಚ.ಕಿ.ಮೀ. |
| ಜನಸಂಖ್ಯೆ | : | ಸುಮಾರು 22,00,000 |
| ರಾಜಧಾನಿ | : | ಬೀರೂಟ್ |
| ಭಾಷೆ | : | ಅರಬಿ ಅಧಿಕೃತ ಭಾಷೆ ; ವ್ಯಾಪಾರ ವಾಣಿಜ್ಯ ಆಡಳಿತಗಳಲ್ಲಿ ಫ್ರೆಂಚ್, ಇಂಗ್ಲಿಷ್ |
| ಸರಕಾರ | : | ಗಣರಾಜ್ಯ |
| ಬಾವುಟ | : | ಮೂರು ಉದ್ದ ಪಟ್ಟೆಗಳು. ಸಣ್ಣ ಅಂಚಿನ ಕೆಂಪುಪಟ್ಟೆ, ಅಗಲವಾದ ಬಿಳಿಯ ಪಟ್ಟೆ ಮತ್ತೆ ಸಣ್ಣ ಅಂಚಿನ ಕೆಂಪುಪಟ್ಟೆ. ಬಿಳಿಯ ಪಟ್ಟೆಯ ನಡುವೆ ಹಸಿರು ಸಿಡಾರ್ ಮರದ ಚಿಹ್ನೆ |

ಹನ್ನೊಂದನೆಯ ಶತಮಾನದಿಂದ ಹದಿನಾರನೆಯ ಶತಮಾನದವರೆಗೆ ಲೆಬನಾನ್ ಮೊದಲು ಫ್ರೆಂಚರ, ಅನಂತರ ಅರಬರ, ಅವರ ಅನಂತರ ತುರ್ಕಿಯವರ ಕೈಯಲ್ಲಿತ್ತು. 1918ರಲ್ಲಿ ಬ್ರಿಟಿಷ್ ಹಾಗೂ ಫ್ರೆಂಚ್ ಸೇನೆಗಳು ಲೆಬನಾನಿನಲ್ಲಿದ್ದ ತುರ್ಕಿ ಆಡಳಿತವನ್ನು ಕೊನೆಗಾಣಿಸಿದುವು.

ಮೊದಲನೆಯ ಮಹಾಯುದ್ಧವಾದ ಮೇಲೆ ಲೆಬನಾನ್ ರಾಷ್ಟ್ರಸಂಘದ ಅಣತಿಯಂತೆ ಫ್ರೆಂಚ್ ಸರಕಾರಕ್ಕೆ ಒಪ್ಪಿಸಲ್ಪಟ್ಟಿತು. [illegible]ರಲ್ಲಿ ಸ್ವತಂತ್ರ ರಾಷ್ಟ್ರವಾಗಿ, 1945 ರಲ್ಲಿ ವಿಶ್ವಸಂಸ್ಥೆಯ ಸದಸ್ಯ ರಾಷ್ಟ್ರವಾಯಿತು.

## ಲೈಬೀರಿಯ

1822ರಲ್ಲಿ ಅಮೆರಿಕದಿಂದ ಬಿಡುಗಡೆ ಹೊಂದಿ ಬಂದ ಗುಲಾಮ ನೀಗ್ರೊ ಜನರಿಗಾಗಿ ಅಮೆರಿಕದ ರಾಷ್ಟ್ರೀಯ ವಸಾಹತು ಸಂಘದವರು ವಸತಿಯೊಂದನ್ನು ಲೈಬೀರಿಯದಲ್ಲಿ ಆರಂಭಿಸಿದರು. 1847ರಲ್ಲಿ ಲೈಬೀರಿಯ ಸ್ವತಂತ್ರವಾಯಿತು. ಆ ಬಳಿಕ ಲೈಬೀರಿಯ ಸಾಧಿಸಿರುವ ಪ್ರಗತಿ ಅದ್ಭುತ. ಚಕ್ರವುಳ್ಳ ವಾಹನಗಳ ಪರಿಚಯವಿಲ್ಲದ, ನೇಗಿಲನ್ನೆ ಕಾಣದ, ನರಮಾಂಸವನ್ನು ತಿನ್ನುತ್ತಿದ್ದ ಜನಾಂಗವೆಲ್ಲಿ ? ಕಾರು, ರೈಲು, ಹಲವು ಯಂತ್ರಗಳು ಮತ್ತು ಆಸ್ಪತ್ರೆಗಳ ಈಗಿನ ಸೌಲಭ್ಯವೆಲ್ಲಿ ? ದೇಶ ಸಂಪದ್ಭರಿತವಾಗಿದೆ. ಲೈಬೀರಿಯ ಎಂಬ ಹೆಸರು ಲ್ಯಾಟಿನ್ ಭಾಷೆಯ 'ಲಿಬರ್' ಎನ್ನುವುದರಿಂದ ಬಂದಿದೆ. ಲಿಬರ್ ಎಂದರೆ 'ಸ್ವತಂತ್ರ'.

ಆಫ್ರಿಕದ ಪಶ್ಚಿಮ ತೀರದಲ್ಲಿರುವ ಲೈಬೀರಿಯ ಪ್ರಥಮ ನೀಗ್ರೊ ಗಣರಾಜ್ಯ. ವಾಯುವ್ಯಕ್ಕೆ ಸಿಯಾರ ಲಿಯೋನಿ, ಉತ್ತರಕ್ಕೆ ಗಿನಿ, ದಕ್ಷಿಣಕ್ಕೆ ಅಟ್ಲಾಂಟಿಕ್ ಸಾಗರ ಮತ್ತು ಪೂರ್ವಕ್ಕೆ ಐವರಿ ಕೋಸ್ಟ್ ಮೇರೆಗಳು.

ಲೈಬೀರಿಯದಲ್ಲಿ ಎರಡು ಮುಖ್ಯ ಗುಂಪಿನ ಜನರಿದ್ದಾರೆ. ಮೂಲನಿವಾಸಿಗಳ ವಂಶಜರಲ್ಲಿ ಅನೇಕ ಬುಡಕಟ್ಟುಗಳಿವೆ. ತಮ್ಮ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿರುವ ಈ ಜನ ವ್ಯವಸಾಯ, ಮನೆ ನಿರ್ವಹಣೆ ಮತ್ತು ಬುಡಕಟ್ಟಿನ ಪದ್ಧತಿಗಳನ್ನು ಕಲಿಸುವ ಶಾಲೆಗೆ ಮಕ್ಕಳನ್ನು ಕಳುಹಿಸುತ್ತಾರೆ. ಜಾನಪದ ನೃತ್ಯ ಮತ್ತು ಸಂಗೀತಗಳನ್ನೂ ಇಲ್ಲಿ ಕಲಿಸುತ್ತಾರೆ. ಇವರಲ್ಲಿ ಇನ್ನೂ ಬುಡಕಟ್ಟಿನ ಭಾಷೆಗಳ ಬಳಕೆ ಇದೆ. ಆಫ್ರಿಕ ಮತ್ತು ಅಮೆರಿಕದವರು ಮದುವೆಯಾಗಿ ಬಾಳಲಾರಂಭಿಸಿದ ಮೇಲೆ ಮಿಶ್ರ ಪಂಗಡವೊಂದು ಬೆಳೆದಿದೆ. ನೀಗ್ರೊ ವಂಶಜರು ಮಾತ್ರ ಈ ದೇಶದ ಪ್ರಜೆಗಳಾಗಲು ಸಾಧ್ಯ. ಹೆಂಗಸರಿಗೆ ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಸಮಾನ ಸ್ಥಾನವಿದೆ. ಇಂಗ್ಲಿಷ್ ಅಧಿಕೃತ ಭಾಷೆ.

ಲೈಬೀರಿಯ ಭೂಮಧ್ಯರೇಖೆಗೆ 483 ಕಿ. ಮೀ. ಉತ್ತರಕ್ಕಿದೆ. ಇಲ್ಲಿ ಎರಡು ಪ್ರಾಕೃತಿಕ ವಿಭಾಗಗಳಿವೆ. ತೀರದಿಂದ 64 ಕಿ. ಮೀ. ವರೆಗಿನ ತಗ್ಗು ಪ್ರದೇಶ ಮತ್ತು ಅದರಾಚೆ 244 ಮೀಟರುಗಳಷ್ಟು ಎತ್ತರವಿರುವ ಪ್ರಸ್ಥಭೂಮಿ. ಅತ್ಯುನ್ನತ ವುಟವಿ ಬೆಟ್ಟ 1,381 ಮೀಟರು ಎತ್ತರವಿದೆ.

ತೀರಪ್ರದೇಶದಲ್ಲಿ ಉಷ್ಣವಲಯದ ಹವಾಗುಣವಿದೆ. ಏಪ್ರಿಲಿನಿಂದ ಅಕ್ಟೋಬರ್‌ವರೆಗೆ ಸುಮಾರು 508 ಸೆ. ಮೀ. ಮಳೆಯಾಗುತ್ತದೆ. ಒಳನಾಡಿನಲ್ಲಿ ರಾತ್ರಿ ತಂಪಾಗಿದ್ದು ಹಗಲು ಆಹ್ಲಾದಕರವಾಗಿರುತ್ತದೆ. [illegible] ಸರಾಸರಿ ಉಷ್ಣಾಂಶ 80° ಫಾ. ದೇಶದ ಆರನೆಯ ಐದು ಭಾಗ ಕಾಡು.

ರಬ್ಬರ್ ಪ್ರಮುಖ ರಫ್ತು ಬೆಳೆ. [illegible] ಕೋಕೋ, ಪಿಯಾಸಾವಾ ನಾರು ಮತ್ತು ತಾಳೆ ಮರಗಳನ್ನು ಬೆಳೆಯುತ್ತಾರೆ.

ಪ್ರಪಂಚದಲ್ಲೇ ಸಮೃದ್ಧವಾದ ಕಬ್ಬಿಣದ ಅದಿರು ಲೈಬೀರಿಯದಲ್ಲಿದೆ. ವಜ್ರ, ಚಿನ್ನ, ಅಭ್ರಕ, ಅಮೃತಶಿಲೆ, ಸೀಸ, ಬೆಳ್ಳಿ ಮತ್ತು ಸತು ದೊರಕುತ್ತವೆ.

ಕಾಡುಗಳ ಪ್ರವಾಹಗಳಲ್ಲಿ ಕಾಣುವ ಕುಳ್ಳುನೀರಾನೆ ಲೈಬೀರಿಯದ ವಿಚಿತ್ರ ಪ್ರಾಣಿ. ಮಹಗನಿ, ತಾಳೆ ಮತ್ತು ಅಯರ್ನ್‌ವುಡ್ ಮರಗಳು ಕಾಡುಗಳಲ್ಲಿದ್ದು ಲೈಬೀರಿಯಕ್ಕೆ ಉತ್ಪನ್ನವನ್ನು ತರುತ್ತವೆ.

ಕಬ್ಬಿಣದ ಅದಿರು, ವಜ್ರ, ಕೋಕೋ, ಪಿಯಾಸಾವಾ ಮತ್ತು ಕಾಫಿಯನ್ನು ರಫ್ತು ಮಾಡುತ್ತಾರೆ.

ತಯಾರಾದ ವಸ್ತು, ಯಂತ್ರ, ರಾಸಾಯನಿಕಗಳು, ಲೋಹ, ಇಂಧನ, ತೈಲ ಮತ್ತು ಕೊಬ್ಬುಗಳನ್ನು ಆಮದು ಮಾಡಿಕೊಳ್ಳುತ್ತಾರೆ.

ಸರಕಾರದ ವ್ಯವಸ್ಥೆಯಲ್ಲಿ ಲೈಬೀರಿಯ ಅಮೆರಿಕವನ್ನು ಹೋಲುತ್ತದೆ. ಆದರೆ ಅಧ್ಯಕ್ಷರದು ಎಂಟು ವರ್ಷಗಳ ಅವಧಿ. ಎರಡನೆಯ ಬಾರಿ ಚುನಾಯಿತರಾದರೆ ಅಧಿಕಾರಾವಧಿ ಮುಂದೆ 4 ವರ್ಷಗಳ ಕಾಲ.

ನೀಗ್ರೊಗಳಿಗೆ ಅಥವಾ ನೀಗ್ರೊ ವಂಶಸ್ಥರಿಗೆ ಮಾತ್ರ ಚುನಾವಣೆಯಲ್ಲಿ ಮತ ಕೊಡುವ ಅಧಿಕಾರವಿದೆ. ಲೈಬೀರಿಯ ಎರಡು ಮಹಾಯುದ್ಧಗಳಲ್ಲೂ ಭಾಗವಹಿಸಿತು. ಎರಡನೆಯ ಮಹಾಯುದ್ಧದ ಸಮಯದಲ್ಲಿ ಮಿತ್ರರಾಷ್ಟ್ರಗಳಿಗೆ ರಬ್ಬರಿನ ಪ್ರಮುಖ ಸರಬರಾಜು ಕೇಂದ್ರವಾಗಿತ್ತು.

ಲೈಬೀರಿಯಕ್ಕೆ ಕಳೆದ ಹದಿನೈದು–ಇಪ್ಪತ್ತು ವರ್ಷಗಳಲ್ಲಿ ವಿಶ್ವಸಂಸ್ಥೆ ವಿವಿಧ ಕ್ಷೇತ್ರಗಳಲ್ಲಿನ ತಜ್ಞರನ್ನು ಕಳುಹಿಸಿತು. ಇವರಲ್ಲಿ ಅನೇಕರು ಭಾರತೀಯರು.

| | | |
|---|---|---|
| ಖಂಡ | : | ಆಫ್ರಿಕ (ಪಶ್ಚಿಮ) |
| ಅಕ್ಷಾಂಶ | : | 4° 30′ ಉ ದಿಂದ 8° 30′ ಉ |
| ರೇಖಾಂಶ | : | 7° 50′ ಪ ದಿಂದ 11° 50′ ಪ |
| ವಿಸ್ತೀರ್ಣ | : | 1,11,370 ಚ. ಕಿ. ಮೀ. |
| ಜನಸಂಖ್ಯೆ | : | 20,00,000 (1966) |
| ರಾಜಧಾನಿ | : | ಮನ್‌ರೋವಿಯ |
| ಭಾಷೆ | : | ಇಂಗ್ಲಿಷ್ |
| ಸರಕಾರ | : | ಗಣರಾಜ್ಯ |
| ಬಾವುಟ | : | ಒಂದು ಕೆಂಪು ಮತ್ತು ಒಂದು ಬಿಳಿಯಂತೆ 11 ಅಡ್ಡ ಪಟ್ಟಿಗಳು, ಎಡ ಮೇಲ್ಭಾಗದಲ್ಲಿ ನೀಲಿಯ ಚೌಕದಲ್ಲಿ ಬಿಳಿ ನಕ್ಷತ್ರ |

## ಲೋಕಪಾಲ, ಲೋಕಾಯುಕ್ತ, ಓಂಬುಡ್ಸ್‌ಮನ್

ಯಾರಿಂದಲಾದರೂ ನಮಗೆ ಅನ್ಯಾಯವಾದರೆ ನಾವು ಸರಕಾರದ ವಿವಿಧ ಅಂಗಗಳ ಮೊರೆಹೋಗುತ್ತೇವೆ. ಆದರೆ ಸರಕಾರದ ಅಧಿಕಾರಿಗಳೇ ಕಿರುಕುಳ ನೀಡಿದರೆ? ಬೇಲಿಯೇ ಎದ್ದು ಹೊಲ ಮೇಯ್ದರೆ?

ಅಂಥ ಸಂದರ್ಭಗಳಲ್ಲಿ ನಮ್ಮ ಸಹಾಯಕ್ಕೊದಗುವ ಆಯೋಗ ಒಂದುಂಟು. ಅದೇ ಜಾಗೃತ ಆಯೋಗ. ಅಧಿಕಾರವರ್ಗದ ಮೇಲಿನ



ದೂರುಗಳನ್ನು ಪರಿಶೀಲಿಸುವ ಅಧಿಕಾರ ಈ ಆಯೋಗಕ್ಕಿದೆ. ಸರಕಾರದ ಎಲ್ಲ ಖಾತೆಗಳ ಮೇಲೂ ಈ ಆಯೋಗ ಒಂದು ಕಣ್ಣಿಟ್ಟಿರುತ್ತದೆ. ಭಾರತದಲ್ಲಿ ರಾಷ್ಟ್ರಮಟ್ಟದಲ್ಲಿ ಇಂಥ ಆಯೋಗದ ಅಧಿಕಾರಿಯನ್ನು ಕೇಂದ್ರ ಸರಕಾರ ನಿಯಮಿಸುತ್ತದೆ. ತನ್ನ ಅಧೀನದ ಸಿಬ್ಬಂದಿಯ ಸಹಾಯದಿಂದ ಸ್ವತಂತ್ರವಾಗಿ ತನಿಖೆ ನಡೆಸುತ್ತಾನೆ ಈತ.

ಕೆಲವು ಪಾಶ್ಚಾತ್ಯ ದೇಶಗಳಲ್ಲಿ ಈ ಕೆಲಸವನ್ನು ನಿರ್ವಹಿಸುವವನು ಓಂಬುಡ್ಸ್‌ಮನ್ ಎಂಬ ಅಧಿಕಾರಿ. ತನ್ನ ಸಹಾಯಕ್ಕೆ ಕೆಲವು ಅಧಿಕಾರಿಗಳನ್ನು ಆತ ನೇಮಿಸಿಕೊಳ್ಳುತ್ತಾನೆ. ಓಂಬುಡ್ಸ್‌ಮನ್ ನೇಮಕವನ್ನು ಶಾಸನಸಭೆ ಮಾಡುತ್ತದೆ. ಆದರೆ ಆತನ ನ್ಯಾಯನಿರ್ಣಯ ಕೆಲಸದಲ್ಲಿ ಶಾಸನಸಭೆ ಕೈ ಹಾಕುವುದಿಲ್ಲ. ಓಂಬುಡ್ಸ್‌ಮನ್, ಸರಕಾರ ಮತ್ತು ವ್ಯಕ್ತಿಗಳ ನಡುವಣ ಸ್ವತಂತ್ರ ನಿಷ್ಪಕ್ಷಪಾತಿ ಮಧ್ಯಸ್ಥಗಾರ. ಆತನ ಅಧಿಕಾರವ್ಯಾಪ್ತಿಗೆ ಸರಕಾರದ ಎಲ್ಲ ಸಾಧನಗಳೂ ಮಂಡಲಿಗಳೂ ಆಯೋಗಗಳೂ ಒಳಪಡುತ್ತವೆ. ಸರಕಾರದ ಆಡಳಿತದ ಬಗೆಗೆ ಬದಲಾವಣೆಗಳನ್ನು ಸೂಚಿಸುವ ಹಕ್ಕು ಆತನಿಗಿದ್ದರೂ ಅವನ್ನು ಜಾರಿಗೆ ತರುವಂತೆ ಆಜ್ಞೆಮಾಡುವ ಅಧಿಕಾರವಿಲ್ಲ.

'ಶಾಸನಸಭೆಯ ನ್ಯಾಯ ಪ್ರತಿನಿಧಿಯಾಗಿ' ಓಂಬುಡ್ಸ್‌ಮನ್ ನೇಮಕವಾದದ್ದು ಮೊದಲು ಸ್ವೀಡನಿನಲ್ಲಿ (1809). ಇಂದಿಗೂ ಹೆಚ್ಚು ಬದಲಾವಣೆಯನ್ನು ತಾಳದೆ ಸ್ವೀಡನಿನಲ್ಲಿ ಓಂಬುಡ್ಸ್‌ಮನನ ಕಚೇರಿ ಮುಂದುವರಿಯುತ್ತಿದೆ. 1919ರಲ್ಲಿ ಫಿನ್‌ಲೆಂಡಿನಲ್ಲಿ ಓಂಬುಡ್ಸ್‌ಮನ್ ಕಚೇರಿ ಆರಂಭವಾಯಿತು. ಅನಂತರ ಡೆನ್ಮಾರ್ಕ್, ನಾರ್ವೆ, ನ್ಯೂಜಿಲೆಂಡ್ ಮುಂತಾದ ದೇಶಗಳೂ ಈ ವ್ಯವಸ್ಥೆಯನ್ನು ತಮ್ಮ ತಮ್ಮ ದೇಶಗಳಲ್ಲಿ ಏರ್ಪಡಿಸಿದವು. ಇತ್ತೀಚೆಗೆ ಗ್ರೇಟ್ ಬ್ರಿಟನಿನಲ್ಲಿ, ಗಿಯಾನಾದಲ್ಲಿ ಮತ್ತು ಮಾರಿಷಸ್‌ನಲ್ಲಿಯೂ ಈ ವ್ಯವಸ್ಥೆ ಏರ್ಪಾಡಾಗಿದೆ.

ಓಂಬುಡ್ಸ್‌ಮನ್ ಮೂರು ವಿಧದ ಕೆಲಸಗಳನ್ನು ಮಾಡುತ್ತಾನೆ :

1. ಸಾರ್ವಜನಿಕರ ಕಷ್ಟಗಳನ್ನು ಪರಿಹರಿಸುವುದು; 2. ಆಡಳಿತದ ಮಟ್ಟವನ್ನು ಸುಧಾರಿಸುವುದು; 3. ನೌಕರಶಾಹಿಯ ಮೇಲ್ವಿಚಾರಣೆ ನಡೆಸಲು ಶಾಸನಸಭೆಗೆ ಸಹಾಯ ಮಾಡುವುದು.

ಓಂಬುಡ್ಸ್‌ಮನ್ ಇಲ್ಲದ ಕೆಲವು ದೇಶಗಳಲ್ಲಿ ಇತರ ಸಂಸ್ಥೆ ಅಥವಾ ವ್ಯಕ್ತಿಗಳು ಈ ಕೆಲಸವನ್ನು ನಿರ್ವಹಿಸುತ್ತಾರೆ. ಇಸ್ರೇಲಿನಲ್ಲಿ ಲೆಕ್ಕ ಪರಿಶೀಲನೆಗಳನ್ನು ನಡೆಸುವ ಮಹಾಲೇಖಾನಿಯಂತ್ರಕ, ಓಂಬುಡ್ಸ್‌ಮನನ ಕಾರ್ಯ ನಿರ್ವಹಿಸುತ್ತಾನೆ. ಕ್ಯಾಲಿಫೋರ್ನಿಯದಲ್ಲಿ ನ್ಯಾಯಿಕ ಆಯೋಗವೊಂದು ಈ ಕೆಲಸ ಮಾಡುತ್ತದೆ. ಪೂರ್ವ ಯೂರೋಪಿನಲ್ಲಿ ಮಹಾವ್ಯವಹರ್ತರು ಓಂಬುಡ್ಸ್‌ಮನನ ಕರ್ತವ್ಯವನ್ನು ನಿರ್ವಹಿಸುತ್ತಾರೆ. ಜಪಾನಿನಲ್ಲಿ ಈ ಜವಾಬ್ದಾರಿ ಆಡಳಿತ ನಿರ್ವಾಹಕ ಸಂಸ್ಥೆಯದು. ಸಂಯುಕ್ತ ಸಂಸ್ಥಾನದಲ್ಲಿ ವ್ಯಾವಹಾರಿಕ ಪೋಲೀಸ್ ಪಡೆಗಳು ತಮ್ಮ ಅಧಿಕಾರ ವ್ಯಾಪ್ತಿಗೊಳಪಟ್ಟಂಥ ದೂರುಗಳ ವಿಚಾರಣೆಯನ್ನು ನಡೆಸುತ್ತಾರೆ.

ಇತ್ತೀಚೆಗೆ ಓಂಬುಡ್ಸ್‌ಮನ್ ವ್ಯವಸ್ಥೆಯ ಬಗೆಗೆ ಪಶ್ಚಿಮ ಯೂರೋಪ್ ಮತ್ತು ಅನೇಕ ಕಾಮನ್‌ವೆಲ್ತ್ ರಾಷ್ಟ್ರಗಳಲ್ಲಿ ಆಸಕ್ತಿ ಮೊಳೆತಿದೆ. ಕೆನಡ ಮತ್ತು ಸಂಯುಕ್ತ ಸಂಸ್ಥಾನಗಳಲ್ಲಿ ಇದರಲ್ಲಿ ಕುತೂಹಲ ಹುಟ್ಟಿದೆ.

ಇದೇ ತತ್ತ್ವವನ್ನೇ ಅನುಸರಿಸಿ ನಮ್ಮ ದೇಶದಲ್ಲೂ 'ಲೋಕಪಾಲ' ಎಂಬ ಹೆಸರಿನ ಸಂಸ್ಥೆಯನ್ನು ಸ್ಥಾಪಿಸಲು ಆಡಳಿತ ಸುಧಾರಣಾ ಆಯೋಗ ಸಲಹೆ ಮಾಡಿತು. ಈ ಸಲಹೆಯನ್ನು ಒಪ್ಪಿ ಭಾರತ ಸರಕಾರ, ಸಲಹೆಗೆ ರೂಪುಕೊಡುವ ಮಸೂದೆಯನ್ನು ಸಂಸತ್ತಿನ ಮುಂದೆ ಇಟ್ಟಿತು. ಇದಕ್ಕೆ ಲೋಕಸಭೆಯ ಒಪ್ಪಿಗೆ ದೊರೆತಿದೆ. ಇದರ ವ್ಯಾಪ್ತಿ ಕೇಂದ್ರದ ಆಡಳಿತಕ್ಕೆ

ಸಂಬಂಧಪಟ್ಟದ್ದು. ರಾಜಕೀಯ ಕ್ಷೇತ್ರದಲ್ಲಿ ವ್ಯವಹರಿಸುವ ಮಂತ್ರಿಗಳು ಮತ್ತು ಅತ್ಯಂತ ಉನ್ನತಮಟ್ಟದ ಆಡಳಿತ ಅಧಿಕಾರಿಗಳು ಇವರಿಗೆ ಸಂಬಂಧಪಟ್ಟ ದೂರುಗಳನ್ನು ವಿಮರ್ಶಿಸುವುದಕ್ಕೆ 'ಲೋಕಪಾಲ' ರೊಬ್ಬರು, ಕೆಳಮಟ್ಟದ ಅಧಿಕಾರಿಗಳಿಗೆ ಸಂಬಂಧಪಟ್ಟ ದೂರುಗಳನ್ನು ವಿಮರ್ಶಿಸುವುದಕ್ಕೆ ಒಬ್ಬರು ಅಥವಾ ಹೆಚ್ಚು ಮಂದಿ ಲೋಕಾಯುಕ್ತರು ರಾಷ್ಟ್ರಪತಿಯಿಂದ ನೇಮಿಸಲ್ಪಡುತ್ತಾರೆ.

**ನೋಡಿ :** ಜಾಗೃತ ಆಯೋಗ

## ವರ್ಣ

ಮನುಷ್ಯರಲ್ಲಿ ಎಷ್ಟು ವಿಧ! ಒಬ್ಬರಿದ್ದ ಹಾಗೆ ಇನ್ನೊಬ್ಬರಿಲ್ಲ. ಪ್ರಪಂಚದಲ್ಲಿ ಹುಟ್ಟುವ ಪ್ರತಿಯೊಬ್ಬರೂ ನೋಡಲು ಒಂದೊಂದು ತರಹ. ಆದರೆ ಸಾಮಾನ್ಯವಾಗಿ ಒಂದು ದೇಶದವರನ್ನು ಇವರು ಇಂಥ ದೇಶದ ವರು ಎಂದು ಹೇಳಬಹುದು. ಅಮೆರಿಕ, ಆಫ್ರಿಕ, ಚೀನ, ಭಾರತ ಈ ದೇಶಗಳ ಜನ ಒಟ್ಟಿಗಿದ್ದರೆ ಯಾರು ಯಾವ ದೇಶದವರು ಎಂದು ಹೇಳಿ ಬಿಡಬಹುದು. ಒಬ್ಬರ ಮೈಬಣ್ಣ ಬಿಳಿ, ಇನ್ನೊಬ್ಬರದು ಕಪ್ಪು, ಒಬ್ಬರ ಕಣ್ಣು ಅಗಲವಾಗಿ ಕಪ್ಪಗಿದೆ; ಇನ್ನೊಬ್ಬರದು ಚಿಕ್ಕ ನೀಲಿ ಕಣ್ಣುಗಳು. ಮನುಷ್ಯವರ್ಗದ ವಿವಿಧ ಬುಡಕಟ್ಟುಗಳ ಈ ಗುಂಪುಗಳನ್ನು ನಾವು 'ವರ್ಣ' ಗಳು ಎನ್ನುತ್ತೇವೆ.

ಮಾನವರೆಲ್ಲರೂ ಮನುಷ್ಯವರ್ಗಕ್ಕೆ ಸೇರಿದವರು. ಒಂದೇ ಮೂಲ ದಿಂದ ಬಂದವರು. ಆದರೂ ಬೇರೆ ಬೇರೆ ಭೂಪ್ರದೇಶಗಳಲ್ಲಿ ನೆಲೆಸುತ್ತ ಹೋದಹಾಗೆಲ್ಲ ಅಲ್ಲಿಯ ವಾತಾವರಣಕ್ಕೆ ಅನುಗುಣವಾಗಿ ಅವರ ಹೊರ ಸ್ವರೂಪ ಮಾರ್ಪಾಟಾಯಿತು. ಆ ಪ್ರದೇಶದಲ್ಲಿ ಜೀವನ ಮಾಡುವುದಕ್ಕೆ ಅನುಕೂಲವಾಗುವಂಥ ಸೌಕರ್ಯಗಳನ್ನು ಅವರು ಕಲ್ಪಿಸಿಕೊಂಡರು. ಮೂಲದಿಂದ ಬೇರೆ ಬೇರೆಯಾಗಿ ಚದರಿಹೋದ ಗುಂಪುಗಳು ಒಂದಕ್ಕೊಂದು ಹೆಚ್ಚು ಸಂಪರ್ಕವಿಲ್ಲದಂತೆ ಪ್ರತ್ಯೇಕವಾಗಿ ಬೆಳೆದುವು. ಇದರಿಂದಾಗಿ ಗ್ರೀನ್‌ಲೆಂಡ್ ಪ್ರದೇಶಗಳಲ್ಲಿರುವ ದಪ್ಪ ಗಿಡ್ಡನೆಯ ಎಸ್ಕಿಮೊಗಳೂ ದಕ್ಷಿಣ ಆಫ್ರಿಕದ ಕಾಲಾಹಾರೀ ಮರುಭೂಮಿಯಲ್ಲಿನ ತೆಳ್ಳನೆಯ ಪೊದೆಮಾನ ವರೂ ಆಫ್ರಿಕದ ಏಳು ಅಡಿ ಉದ್ದದ (2.1 ಮೀಟರು) ವಾಟೂಸಿ ನೀಗ್ರೊಗಳೂ ನಾಲ್ಕು ಅಡಿ ಉದ್ದದ (1.2 ಮೀಟರು) ಪಿಗ್ಮಿಗಳೂ ಹುಟ್ಟಿದರು.

ಈ ಗುಂಪುಗಳು ಎಷ್ಟೇ ಪ್ರತ್ಯೇಕವಾಗಿದ್ದರೂ ಪರಸ್ಪರ ಬೆರೆತುಹೋಗಿವೆ. ಬೆರಕೆಯಿಲ್ಲದ ಗುಂಪು ಎನ್ನುವುದಿಲ್ಲವೇ ಇಲ್ಲ. ಬರೀ ಮಾನವರೆ ಅಲ್ಲದೆ ಈಗಿನ ಮಾನವನಿಗಿಂತ ಹಿಂದೆ ಇದ್ದ ನಿಯಾಂಡರ್‌ಥಾಲ್ ಸಂತತಿಯ ಮಾನ ವರು ಆಗ ತಾನೆ ಭೂಮಿಯ ಮೇಲೆ ಉದಯಿಸುತ್ತಿದ್ದ ಮಾನವರ ಜೊತೆ ವಿವಾಹವಾಗಿದ್ದಿರಬೇಕೆಂದು ಈಗ ವಿಜ್ಞಾನಿಗಳು ಅಭಿಪ್ರಾಯ ಪಡುತ್ತಾರೆ.

ನೂರಿಪ್ಪತ್ತು ವರ್ಷದ ಹಿಂದೆ ಜೆ. ಎಫ್. ಬ್ಲೂಮೆನ್ ಬಾಕ್ ಎಂಬ ವನು, ತಲೆಯ ಆಕಾರ ಹಾಗೂ ಮೈಬಣ್ಣಗಳ ಆಧಾರದ ಮೇಲೆ ಒಟ್ಟು ಮನುಷ್ಯವರ್ಗವನ್ನು ಐದು ವಿಭಾಗಗಳಾಗಿ ವಿಂಗಡಿಸಿದ. ಕಾಕಾಸಿಯನ್ (ಬಿಳಿ), ಮಂಗೋಲಿಯನ್ (ಹಳದಿ), ಮಲಯನ್ (ಕಂದು), ನೀಗ್ರೊ (ಕಪ್ಪು), ಮತ್ತು ಅಮೆರಿಕನ್ (ಕೆಂಪು), ಇವು ಐದು ವರ್ಣಗಳು (ಬಣ್ಣ ಗಳು). 'ಆಸ್ಟ್ರಲಾಯ್ಡ್' ಎಂಬ ವರ್ಣವೂ ಇದೆ–ಆಸ್ಟ್ರೇಲಿಯದ ಮೂಲನಿವಾಸಿಗಳ ವರ್ಣ. ಸ್ವಲ್ಪ ಕಾಲ ಈ ವಿಂಗಡಣೆಯನ್ನು ಸಾಮಾನ್ಯ ವಾಗಿ ಒಪ್ಪಿಕೊಳ್ಳಲಾಗಿತ್ತು.

ಆದರೆ ಮಾನವರಲ್ಲಿ ಈ ಐದು ಬಣ್ಣಗಳು ಸಂಪೂರ್ಣ ಪ್ರತ್ಯೇಕವಾಗಿ ಸ್ಪಷ್ಟವಾಗಿ ಇಲ್ಲದೆ ಇರುವುದರಿಂದ, ಮಾನವವಿಜ್ಞಾನಿಗಳು ಸಾಧಾರಣವಾಗಿ ಮನುಷ್ಯವರ್ಗವನ್ನು ಮೂರು ವಿಭಾಗಗಳಾಗಿ ವಿಂಗಡಿಸಿದ್ದಾರೆ: ಕಾಕ ಸಾಯ್ಡ್ (ಬಿಳಿ), ಮಂಗೊಲಾಯ್ಡ್ (ಹಳದಿ), ನೀಗ್ರಾಯ್ಡ್ (ಕಪ್ಪು).

ಮಾನವರನ್ನು ವರ್ಣಗಳಾಗಿ ವಿಂಗಡಿಸುವಾಗ ಬಣ್ಣವನ್ನಲ್ಲದೆ ಕೂದಲು, ತಲೆ, ಮೂಗು ಇವುಗಳನ್ನೂ ಪರಿಶೀಲಿಸುತ್ತಾರೆ. ಇವುಗಳ ಜೊತೆಗೆ ರಕ್ತ ವನ್ನೂ ಗಣನೆಗೆ ತೆಗೆದುಕೊಳ್ಳುವುದು ಈಚಿನ ವಿಶೇಷ. ಪ್ರಪಂಚದ ಮೂರು ಮುಖ್ಯ ವರ್ಣಗಳು ಬೆರೆತು ಒಡೆದು ಅನೇಕ ವರ್ಣಗಳಾಗಿವೆ.

ಮುಖ್ಯವಾದ ಮೂರು ವರ್ಣಗಳನ್ನು ಮಾನವವಿಜ್ಞಾನಿಗಳು ಅನೇಕ 'ಉಪವರ್ಣ' ಗಳಾಗಿ ವಿಂಗಡಿಸಿದ್ದಾರೆ. ಕಾಕಸಾಯ್ಡ್‌ನ ಮೂರು ಮುಖ್ಯ ಉಪವರ್ಣಗಳು ನಾರ್‌ಡಿಕ್, ಆಲ್‌ಪೈನ್ ಮತ್ತು ಮೆಡಿಟರೇನಿ ಯನ್. ಈಗಿನ ಎಲ್ಲ ಬಿಳಿಯ ಜನ ಈ ಮೂರು ಉಪವರ್ಣಗಳ ಅಂತರ್ವಿ ವಾಹಗಳಿಂದ ಜನಿಸಿದವರು. ನಾರ್‌ಡಿಕ್ ಜನರಿಂದ ಬಂದವರು ಸ್ಕ್ಯಾಂಡಿ ನೇವಿಯ, ಬ್ರಿಟನ್, ಜರ್ಮನಿ ಮೊದಲಾದ ದೇಶಗಳವರು. ಮೆಡಿಟರೇನಿ ಯನ್‌ನಿಂದ ಬಂದವರು ಗ್ರೀಸ್, ಇಟಲಿ, ಈಜಿಪ್ಟ್, ಅರೇಬಿಯ, ಇಸ್ರೇಲಿ ನವರು. ಆಲ್‌ಪೈನ್‌ನಿಂದ ಸ್ವಿಟ್ಜರ್‌ಲೆಂಡ್ ಮೊದಲಾದ ದೇಶಗಳವರು. ನೀಗ್ರಾಯ್ಡ್ ಜನರಿಂದ ಬಂದವರು ಆಫ್ರಿಕದ ನೀಗ್ರೊಗಳು, ಪಿಗ್ಮಿಗಳು, ಪೊದೆವಾಸಿಗಳು. ಇತರರು, ಮಂಗೊಲಾಯ್ಡ್ ಜನರಿಂದ ಬಂದವರು. ಚೀನ ಜಪಾನ್ ದೇಶಗಳವರು, ಅಮೆರಿಕನ್ ಇಂಡಿಯನರು, ಎಸ್ಕಿಮೊಗಳು, ಭಾರತೀಯರು ಒಟ್ಟಿನಲ್ಲಿ ಕಾಕಸಾಯ್ಡ್ ವರ್ಣಕ್ಕೆ ಸೇರಿದವರು ಎಂದು ಹೇಳಬಹುದು. ಸ್ಥಿತಿಗತಿಗಳು ಮಾರ್ಪಾಡಾದ ಹಾಗೆ ಕೆಲವು ವರ್ಣಗಳು ಬೆಳೆದು ಇನ್ನು ಕೆಲವು ಇಲ್ಲದೇ ಹೋಗಬಹುದು. ಬೇರೆಯೇ ಕೆಲವು ಹೊಸ ವರ್ಣಗಳಾಗಬಹುದು.

ವಿವಿಧ ವಾತಾವರಣಗಳಿಗೆ ಅನುಗುಣವಾಗಿ, ದೇಹದ ವರ್ಣ ಲಕ್ಷಣಗಳಿಗೆ ಅನುಸಾರವಾಗಿ, ಮನುಷ್ಯವರ್ಗವನ್ನು ಬೇರೆ ಬೇರೆ ವರ್ಣಗಳಾಗಿ ವಿಂಗಡಿಸಿ, ಅವನ್ನು ಮಾನವವಿಜ್ಞಾನ ದೃಷ್ಟಿಯಿಂದ ವಿಜ್ಞಾನಿಗಳು ಅಭ್ಯಾಸ ಮಾಡಿ ದ್ದಾರೆ. ಆದರೆ ಈ 'ವರ್ಣಭೇದ' ದಿಂದ ವೈಜ್ಞಾನಿಕರಂಗದಲ್ಲಿ ಅಲ್ಲದಿದ್ದರೂ ಸಾಮಾಜಿಕ ಹಾಗೂ ರಾಜಕೀಯರಂಗಗಳಲ್ಲಿ ದ್ವೇಷ, ಹಿಂಸೆ ತಾಂಡವವಾಡಿವೆ. ಹಿಟ್ಲರನಿಗೆ, ಜರ್ಮನರು ಪರಿಶುದ್ಧ ಆರ್ಯನರು ಎನ್ನುವ ಹುಚ್ಚು ನಂಬಿಕೆ ಇದ್ದಿತು. ಕರಿಯ ಜನಾಂಗ ಎನಿಸಿದ ಆಫ್ರಿಕದ ನೀಗ್ರೊ ಜನರ ಬಗೆಗೆ ಬಿಳಿಯರು ಅನುಸರಿಸುತ್ತಿರುವ ನೀತಿಯಿಂದಾಗಿ ವರ್ಣ ದ್ವೇಷ ಬೆಳೆದು ನಿಂತಿದೆ. ಹೋರಾಟದ ಫಲವಾಗಿ ಈ ವರ್ಣಭೇದ ಕಡಿಮೆಯಾಗಿದ್ದರೂ ಅದಿನ್ನೂ ಕೊನೆಗೊಂಡಿಲ್ಲ. [illegible] ಗಾಂಧೀಜಿ. [illegible] ಇವರೆಲ್ಲ ವರ್ಣನೀತಿಗೆ ಎದುರಾಗಿ ಹೋರಾಡಿದ ಮಹಾತ್ಮರು.

'ವರ್ಣ' ಮಾನವಜನಾಂಗದ ವಿವಿಧ ಗುಂಪುಗಳ ಭೌತಿಕ ಲಕ್ಷಣಗಳ ಗುರುತೇ ಹೊರತು, ಅದು ಮೇಲು–ಕೀಳು ಭಾವನೆಯ ಪ್ರತೀಕವಲ್ಲ. ಪರಸ್ಪರ ದ್ವೇಷವನ್ನು ಉಂಟುಮಾಡಿ ಹಿಂಸಾಕೃತ್ಯಗಳಿಗೆ ಎಡೆಮಾಡಿಕೊಡುವ ವರ್ಣಭೇದ ವಿನಾಶಕಾರಕ.

**ನೋಡಿ :** ಎಸ್ಕಿಮೊ; ಕೂ ಕ್ಲಕ್ಸ್ ಕ್ಲಾನ್; ಜಾತಿ; ಪಳೆಯುಳಿಕೆ ಮಾನವ

## ವರ್ಣಮಾಲೆ

ಕನ್ನಡದ ಮಕ್ಕಳಿಗೆ 'ಅ ಆ ಇ ಈ' ಬರೆಯುವುದರಿಂದ ವಿದ್ಯಾಭ್ಯಾಸದ ಪ್ರಾರಂಭ.

ವರ್ಣಮಾಲೆ ಒಂದು ಭಾಷೆಯ ಸಮಸ್ತ ಧ್ವನಿಗಳನ್ನು ಒಳಗೊಂಡಿರುವ ಅಕ್ಷರ ಮಾಲಿಕೆ. ಒಂದು ಭಾಷೆಯ ಒಂದು ಧ್ವನಿಗೆ ಪ್ರತ್ಯೇಕವಾದ ಒಂದು ಚಿಹ್ನೆ ಇದೆಯಷ್ಟೆ. 'ಮ' ಒಂದು ಚಿಹ್ನೆ, 'ರ' ಒಂದು ಚಿಹ್ನೆ. ಈ ಎರಡು ಸೇರಿಸಿ 'ಮರ' ಎಂಬ ಪದ. ಹೀಗೆ ಒಂದು ಭಾಷೆಯಲ್ಲಿರುವ ಚಿಹ್ನೆಗಳನ್ನು ಉಪಯೋಗಿಸಿ ಆ ಭಾಷೆಯ ಸಾವಿರಾರು ಪದಗಳನ್ನು ರಚಿಸ ಬಹುದು. ಈ ಚಿಹ್ನೆಗಳನ್ನೇ ವರ್ಣಮಾಲೆ ಎಂದು ಕರೆಯುವುದು. ಒಂದು ಪದದಲ್ಲಿ ಈ ಚಿಹ್ನೆಗಳನ್ನು ಕಂಡಾಗ ಅವುಗಳಿಗೆ ಯಾವ ಧ್ವನಿಯನ್ನು ಹೊರಡಿಸಬೇಕೆಂಬುದು ನಮಗೆ ಗೊತ್ತಾಗುವುದು ವರ್ಣಮಾಲೆಯ ಸಹಾಯದಿಂದಲೇ.

ಭಾಷೆ ಸಾಮಾನ್ಯವಾಗಿ ಇರುವುದು ವಾಕ್ಯರೂಪದಲ್ಲಿ. ವಾಕ್ಯದಲ್ಲಿ ಪದ ಗಳಿವೆ. ಪದದಲ್ಲಿರುವುದು ಅಕ್ಷರಗಳು. ಈ ಅಕ್ಷರಗಳೇ ವರ್ಣಗಳು. ಅಕ್ಷರಗಳನ್ನು ಕ್ರಮವಾಗಿ ಜೋಡಿಸುವುದರ ಮೂಲಕ ವರ್ಣಮಾಲೆ ಆರಂಭ ವಾಯಿತು.

ಒಂದು ಭಾಷೆಗೆ ಒಂದೊಂದು ವರ್ಣಮಾಲೆ ಇದೆ.

ಪ್ರಾಚೀನ ಈಜಿಪ್ಟಿನ ಜನರು ಚಿತ್ರಲೇಖನ ಮತ್ತು ಭಾವಲೇಖನ ಗಳ ಸಮಿಶ್ರಣವನ್ನು ಉಪಯೋಗಿಸುತ್ತಿದ್ದರು. ಒಂದೇ ಪದ ಬರುವ ವಿವಿಧ ಶಬ್ದಗಳನ್ನು ಗುರುತಿಸಲು ಅವರು ಇಪ್ಪತ್ತನಾಲ್ಕು ಸಂಕೇತಗಳನ್ನು ಇಟ್ಟುಕೊಂಡಿದ್ದರು. ಇದೂ ಒಂದು ರೀತಿಯ ವರ್ಣಮಾಲೆಯೇ.

3,500 ವರ್ಷಗಳ ಹಿಂದೆ, ಭೂಮಧ್ಯ ಸಮುದ್ರದ ಪೂರ್ವತೀರದ ನಿವಾಸಿಗಳು ಮೊಟ್ಟಮೊದಲನೆಯ ಬಾರಿಗೆ ಒಂದು ಭಾಷೆಯ ಕೆಲವು ಚಿಹ್ನೆ ಗಳನ್ನು ಉಪಯೋಗಿಸಿ ಸಾವಿರಾರು ಪದಗಳನ್ನು ಹೆಣೆಯಬಹುದೆಂಬುದನ್ನು ಕಂಡುಕೊಂಡರು. ತಾವು ಸಾಮಾನ್ಯವಾಗಿ ಮಾತನಾಡುವಾಗ ಉಪಯೋಗಿ ಸುತ್ತಿದ್ದ ಧ್ವನಿಗಳಿಗೆ ಒಂದೊಂದು ಚಿಹ್ನೆಯನ್ನು ಕೊಟ್ಟರು. ಆ ಚಿಹ್ನೆಗಳ ಗುಂಪೇ ವರ್ಣಮಾಲೆ. ಪ್ರಪಂಚಕ್ಕೆ ವರ್ಣಮಾಲೆಯ ಪರಿಚಯವನ್ನು ಮೊಟ್ಟಮೊದಲು ಮಾಡಿಕೊಟ್ಟವರು ಇವರೇ.

ಅನಂತರ ಭೂಮಧ್ಯ ಸಮುದ್ರ ತೀರಪ್ರದೇಶದಲ್ಲಿದ್ದ ಇತರರು ತಮ್ಮದೇ ಆದ ವರ್ಣಮಾಲೆಯನ್ನು ತಯಾರಿಸಲಾರಂಭಿಸಿದರು. ಫಿನಿಷಿ ಯನರು ಇದನ್ನು ಕಲಿತರು. ಇವರಿಂದ ಗ್ರೀಕರು ಕಲಿತರು. ಗ್ರೀಕ್ ವರ್ಣಮಾಲೆಯ ಮೊದಲ ಎರಡು ಅಕ್ಷರಗಳು $\alpha$ (ಆಲ್ಫ) ಮತ್ತು $\beta$ (ಬೀಟ). ಇದರಿಂದ ವರ್ಣಮಾಲೆಗೆ 'ಅಲ್ಫಬೆಟ್' ಎಂಬ ಹೆಸರಾಯಿತು.

ರೋಮನರ ವರ್ಣಮಾಲೆ ಗ್ರೀಕರಿಂದ ಬಂದಿತು. ಪಶ್ಚಿಮ ಯೂರೋಪಿನ ಜನರ ವರ್ಣಮಾಲೆ ಅಲ್ಪಸ್ವಲ್ಪ ವ್ಯತ್ಯಾಸವಿದ್ದರೂ ರೋಮನರಿಂದ ಬಂದಿತು. ಇಂಗ್ಲಿಷ್ ವರ್ಣಮಾಲೆಯೂ ರೋಮನ್ ವರ್ಣಮಾಲೆಯಿಂದಲೇ ಹುಟ್ಟಿದ್ದು. ಈ ಭಾಷೆಯಲ್ಲಿ ಇಪ್ಪತ್ತಾರು ಅಕ್ಷರಗಳು.

ಸಂಸ್ಕೃತದ ವರ್ಣಮಾಲೆಯಲ್ಲಿ ಐವತ್ತೆರಡು ಅಕ್ಷರಗಳಿವೆ. ಸಂಸ್ಕೃತದ್ದು ದೇವನಾಗರಿ ಲಿಪಿ. ಹಿಂದಿ ಭಾಷೆಯ ವರ್ಣಮಾಲೆಯಲ್ಲಿ ಐವತ್ತು ಅಕ್ಷರ ಗಳು.

ಕನ್ನಡ ಲಿಪಿ ಬ್ರಾಹ್ಮಿಲಿಪಿಯಿಂದ ಬಂದಿದೆ. ಸಂಸ್ಕೃತದ ವರ್ಣ ಮಾಲೆಯೇ ಕನ್ನಡಕ್ಕೂ ಆಧಾರ. ಕನ್ನಡ ವರ್ಣಮಾಲೆ ಎಂದು ಆರಂಭ ವಾಯಿತು ಎಂದು ನಿಖರವಾಗಿ ತಿಳಿದಿಲ್ಲ. ಅದರ ಒಟ್ಟು ಅಕ್ಷರಗಳು ಐವತ್ತೆರಡು.

ನೋಡಿ : ಲಿಪಿ

## ವನ್ಯಮೃಗ ರಕ್ಷಣೆ

ಪ್ರಕೃತಿಯಲ್ಲಿ ಪ್ರತಿಯೊಂದು ಪ್ರಾಣಿಗೂ ತನ್ನದೇ ಸ್ಥಳವಿದೆ. ಸೃಷ್ಟಿ ನಿಯಮದಂತೆ ಬದುಕುವ ಎಲ್ಲ ಜೀವಿಗಳಿಗೂ ಪ್ರಕೃತಿಯ ಕಾರ್ಯಗತಿಯಲ್ಲಿ ಪಾತ್ರವಿದೆ. ಹಕ್ಕಿಗಳು ಸಾಧಾರಣವಾಗಿ ಬೀಜ ಪ್ರಸಾರ ಮಾಡುತ್ತವೆ. ಇದರಿಂದ ಸ್ವಾಭಾವಿಕವಾಗಿಯೇ ಸಸ್ಯಗಳ ವಂಶ ಮುಂದುವರಿಯುತ್ತದೆ. ನಮ್ಮ ಬೆಳೆಗಳನ್ನು ಹಾಳುಮಾಡುವ ಅನೇಕ ವಿಧದ ಕ್ರಿಮಿಕೀಟಗಳು ಹಕ್ಕಿಗಳಿಗೆ ಆಹಾರ. ಇಲಿ, ಹೆಗ್ಗಣ ಮುಂತಾದ ವಿನಾಶಕಾರಿ ಪ್ರಾಣಿ ಗಳನ್ನು ಗೂಬೆ ಮತ್ತು ಒಂದು ಜಾತಿಯ ನರಿಗಳು ಕೊಂದು ತಿನ್ನುತ್ತವೆ. ನೀರಿನ ಮೇಲೂ ನೆಲದ ಮೇಲೂ ವಾಸಿಸಬಲ್ಲ ಬೀವರ್ ಎಂಬ ಪ್ರಾಣಿ, ಪ್ರವಾಹಗಳನ್ನು ನಿವಾರಿಸುವ ಅಡ್ಡಕಟ್ಟನ್ನು ನೀರಿಗೆ ಅಡ್ಡವಾಗಿ ಒಡ್ಡು ವುದಂತೆ. ಇದು ಅದರ ಸಹಜಧರ್ಮ. ಕೆಲವು ಕಾಡುಮೃಗಗಳು ಹಸಿರುಗಿಡ ಯಾವಾಗಲೂ ನೆಲವನ್ನು ಮುಚ್ಚಿರುವಂತೆ ನೋಡಿಕೊಳ್ಳುವುದರಿಂದ ಆ ಭಾಗದಲ್ಲಿ ನೆಲದೊಳಗಿನ ನೀರಿನ ಸೆಲೆ ಬತ್ತದೆ ಹಾಗೆಯೇ ಇರುತ್ತದೆ. ಹೀಗೆ ಪ್ರತ್ಯಕ್ಷವಾಗಿ ಅಲ್ಲದಿದ್ದರೂ ಪರೋಕ್ಷವಾಗಿ ವನ್ಯಮೃಗಗಳು ಮಾನವ ಜೀವನಕ್ಕೆ ಅಪಾರ ಸಹಕಾರ ನೀಡುತ್ತಿವೆ.

ಇಂಥ ವನ್ಯಮೃಗಗಳ ರಕ್ಷಣೆ ಮಾನವನ ಕರ್ತವ್ಯ. ವನ್ಯಮೃಗ ರಕ್ಷಣೆಯ ಅವಶ್ಯತೆಗೆ ಮತ್ತೊಂದು ಮುಖ್ಯ ಕಾರಣವಿದೆ. ಪ್ರಾಣಿಗಳನ್ನು ಬೇಟೆ ಯಾಡುವ ಹವ್ಯಾಸ ಆಫ್ರಿಕ ಮತ್ತು ದಕ್ಷಿಣ ಏಷ್ಯಗಳಲ್ಲಿ ಪ್ರಾರಂಭವಾಗಿ ಪ್ರಪಂಚದ ಇತರ ಭಾಗಗಳಿಗೆ ಹರಡಿತು. ಸುಮಾರು ಹನ್ನೊಂದು ಸಾವಿರ ವರ್ಷಗಳ ಹಿಂದೆ ಅಲಾಸ್ಕದಲ್ಲಿ ಜಿರಾಫೆಗಳಷ್ಟು ಎತ್ತರ ಪ್ರಾಣಿಗಳು, ಒಂಟೆಗಳು ಎಲ್ಲ ಇದ್ದುವು. ಈಗ ಅವು ಮಾಯವಾಗಿವೆ. ಒಂದು ಪ್ರದೇಶದಲ್ಲಿ ವಾಣಿಜ್ಯ, ಮನೋರಂಜನೆ ಅಥವಾ ಇನ್ನಾವುದೇ ದೃಷ್ಟಿ ಯಿಂದ ಯಾವುದಾದರೂ ನಿರ್ದಿಷ್ಟ ಪ್ರಾಣಿಯ ಬೇಟೆ ಸತತವಾಗಿ ಸಾಗಿದರೆ ಹಲವಾರು ಶತಕಗಳಲ್ಲಿ ಆ ಪ್ರಾಣಿ ಸಂಪೂರ್ಣವಾಗಿ ಅಳಿದುಹೋಗುವ ಸಂಭವವಿದೆ. ಆಫ್ರಿಕದ ಅರಣ್ಯಗಳಲ್ಲಿ ವಾಸಿಸುತ್ತಿದ್ದ ಒಂದು ತೆರನಾದ ಜೀಬ್ರಾವನ್ನು ಹೀಗೆ ಸತತವಾಗಿ ಬೇಟೆಯಾಡಿದ ಕಾರಣ, ಮಾದರಿಗೆ ಕೂಡ ಒಂದು ಪ್ರಾಣಿ ಸಿಗದಂತಾಗಿ 1883ರ ವೇಳೆಗೆ ಆ ಸಂತತಿ ನಾಶ ವಾಯಿತು. 1930–31ರಲ್ಲಿ 40,000 ತಿಮಿಂಗಿಲಗಳನ್ನು ಅವುಗಳಿಂದ ಒದಗುವ ಅಮೂಲ್ಯ ಎಣ್ಣೆಗಾಗಿ ಕೊಲ್ಲಲಾಯಿತಂತೆ. ಹೀಗೆ 2,000 ವರ್ಷಗಳಿಂದೀಚೆಗೆ ಸುಮಾರು 106 ರೀತಿಯ ಜೀವಿಗಳು ನಿರ್ನಾಮವಾಗಿವೆ ಎಂದು ಅಂದಾಜು. ಉದಾ : ಏಷ್ಯದಲ್ಲಿ 3, ಉತ್ತರ ಅಮೆರಿಕದಲ್ಲಿ 27, ವೆಸ್ಟ್ ಇಂಡೀಸಿನಲ್ಲಿ 41, ಆಸ್ಟ್ರೇಲಿಯದಲ್ಲಿ 11. ಇದೇ ರೀತಿ ಅನೇಕ ಪ್ರಾಣಿವರ್ಗಗಳು ನಾಶಹೊಂದಿವೆ. ಇದಕ್ಕೆ ಮಾನವ ಬೇಟೆಯಾಡು ವುದು ಒಂದು ಕಾರಣವಾದರೆ, ಅವುಗಳ ವಾಸಸ್ಥಾನಗಳನ್ನು ಆಕ್ರಮಿ ಸುವುದು ಮತ್ತು ತನ್ನ ಉಪಯೋಗಕ್ಕೆಂದು ಧ್ವಂಸಮಾಡುವುದು ಮತ್ತೊಂದು ಕಾರಣ.

## ವನ್ಯಮೃಗ ರಕ್ಷಣೆ

ಪ್ರತಿಯೊಂದು ಪ್ರಾಣಿಗೂ ಪ್ರತ್ಯೇಕ ರಕ್ಷಣೆ ನೀಡುವುದು ಅಸಾಧ್ಯ ಸಂಗತಿ. ಇದರಿಂದ ವನ್ಯಮೃಗ ರಕ್ಷಣೆ ಅವು ವಾಸಿಸುವ, ಆಹಾರ ಅರಸುವ, ವಿಶ್ರಮಿಸುವ ಸಮಗ್ರ ಪ್ರದೇಶವನ್ನೇ ರಕ್ಷಿಸುವುದರಿಂದ ಆರಂಭವಾಗಬೇಕು. ಇದರ ಪರಿಣಾಮವೇ–ರಾಷ್ಟ್ರೀಯ ಉದ್ಯಾನ ಅಥವಾ ವನ್ಯಪ್ರಾಣಿಗಳ ಕ್ಷೇತ್ರಗಳ ರಚನೆ. ರಾಷ್ಟ್ರೀಯ ಉದ್ಯಾನಗಳಲ್ಲಿ ಬೇಟೆ ನಿಷಿದ್ಧ. ಅಮೆರಿಕ ಮತ್ತು ಆಫ್ರಿಕ ಖಂಡಗಳಲ್ಲಿ ನೂರಾರು ಹೆಕ್ಟೇರು ಪ್ರದೇಶಗಳನ್ನು ವಿಹಾರತಾಣಗಳಾಗಿ ಮಾರ್ಪಡಿಸಿದ್ದಾರೆ. ಇಲ್ಲಿ ವನ್ಯಮೃಗಗಳು ನಿರ್ಭಯವಾಗಿ ವಿಹರಿಸುತ್ತವೆ.

ವನ್ಯಮೃಗಗಳು ವಾಸಿಸುವ ಸುಂದರ ಪ್ರದೇಶಗಳಲ್ಲಿ ಅವುಗಳನ್ನು ವೀಕ್ಷಿಸುವ ಬಯಕೆಯಿಂದ ರಾಷ್ಟ್ರೀಯ ಉದ್ಯಾನಗಳು ಅಭಿವೃದ್ಧಿಗೊಂಡುವು. 'ಯೆಲ್ಲೊ ಸ್ಟೋನ್ ಪಾರ್ಕ್' ಎಂಬುದು ಮೊಟ್ಟಮೊದಲನೆಯ ರಾಷ್ಟ್ರೀಯ ಉದ್ಯಾನ. ಇದು ಅಮೆರಿಕದ ಸಂಯುಕ್ತ ಸಂಸ್ಥಾನದಲ್ಲಿದೆ. 1872ರಲ್ಲಿ ಸ್ಥಾಪಿಸಲ್ಪಟ್ಟಿತು. 8,993 ಚ.ಕಿ.ಮೀ. ವಿಸ್ತೀರ್ಣವಿರುವ ಈ ಉದ್ಯಾನ ಅಮೆರಿಕದ ಉದ್ಯಾನಗಳಲ್ಲೇ ಅತ್ಯಂತ ದೊಡ್ಡದು. ಇಲ್ಲಿ ಪ್ರತಿ ವರ್ಷವೂ ತನ್ನ ಕೊಂಬನ್ನು ಕಳಚಿ ಮತ್ತೆ ಪಡೆಯುವ ಒಂದು ಜಾತಿಯ ಪ್ರಾಣಿ ಇದೆ. ಕಾಡೆಮ್ಮೆ, ವಿಚಿತ್ರ ಕರಡಿ, ಅನೇಕ ಪಕ್ಷಿಗಳು ಇಲ್ಲಿವೆ. ಬಿಸಿನೀರಿನ ಊಟೆಗಳಿವೆ. 305 ಮೀಟರು ಆಳದ ಪ್ರಪಾತವಿದೆ. ಅಮೆರಿಕ ಸಂಯುಕ್ತ ಸಂಸ್ಥಾನದಲ್ಲಿ 29 ರಾಷ್ಟ್ರೀಯ ಉದ್ಯಾನಗಳಿವೆ.

ಆಫ್ರಿಕದ ಮೊದಲ ರಾಷ್ಟ್ರೀಯ ಉದ್ಯಾನ 1925ರಲ್ಲಿ ಆರಂಭವಾಯಿತು. ಜಗತ್ಪ್ರಸಿದ್ಧ ರಾಷ್ಟ್ರೀಯ ಉದ್ಯಾನ ದಕ್ಷಿಣದ ಆಫ್ರಿಕದಲ್ಲಿದೆ. 20,720 ಚ.ಕಿ.ಮೀ.ಗಳ ವಿಸ್ತೀಣದಲ್ಲಿರುವ ಈ ಕ್ರೂಗರ್ ರಾಷ್ಟ್ರೀಯ ಉದ್ಯಾನ 1894ರಲ್ಲಿ ಸ್ಥಾಪಿಸಲ್ಪಟ್ಟಿತು. ಇಲ್ಲಿ ಜಿಂಕೆ, ಸಾರಂಗ, ಹೇಸರಕತ್ತೆ, ನೀರಾನೆ, ಕಾಡಾನೆ, ಚಿರತೆ ಮತ್ತು ಸಿಂಹಗಳಿವೆ. ಮೊಸಳೆಗಳು ತುಂಬಿರುವ ನದಿಯಿದೆ. ಕಾರಿನ ಎಲ್ಲ ಬಾಗಿಲುಗಳನ್ನು ಭದ್ರಪಡಿಸಿ ಒಳಗೆ ಕುಳಿತರೆ ಸಿಂಹಗಳನ್ನು ಕೂಡ ಹತ್ತಿರದಲ್ಲಿ ನೋಡಬಹುದು.

ಕೆನಡ ದೇಶದಲ್ಲಿ ಅತ್ಯಂತ ಸುಂದರ ರಾಷ್ಟ್ರೀಯ ಉದ್ಯಾನಗಳಿವೆ. ರಾಕಿ ಪರ್ವತದ ಪೂರ್ವ ಪ್ರದೇಶವನ್ನು ಆಕ್ರಮಿಸಿರುವ ಈ ಉದ್ಯಾನದಲ್ಲಿ ಅರಣ್ಯ ಸಂಪತ್ತು ಹೇರಳವಾಗಿದೆ. ಮೇಲೆ ಹೋದಂತೆ ಹಿಮಾಚ್ಛಾದಿತ ಪರ್ವತ ಶಿಖರಗಳು ಈ ನಿಸರ್ಗ ಸೌಂದರ್ಯಕ್ಕೆ ವಿಶೇಷ ಕಳೆಯಿತ್ತಿವೆ. ಇಲ್ಲಿ ಹಿಮನದಿಗಳೂ ಹಿಮಪ್ರದೇಶಗಳೂ ಇವೆ. ಆಸ್ಟ್ರೇಲಿಯದಲ್ಲಿ ಅನೇಕ ಜಾತಿಯ ಪ್ರಾಣಿವರ್ಗಗಳಿವೆ. ಇವುಗಳ ರಕ್ಷಣೆಗಾಗಿ ಅಲ್ಲಿ ದೊಡ್ಡ ರಾಷ್ಟ್ರೀಯ ಉದ್ಯಾನಗಳಿಲ್ಲದಿದ್ದರೂ ಬೇಟೆ ನಿಷಿದ್ಧವೆನಿಸಿದ ಕ್ಷೇತ್ರಗಳಿವೆ.

ಭಾರತದ ವನ್ಯಮೃಗ ಸಂಪತ್ತು ವೈವಿಧ್ಯಮಯ. ಗಿರ್ ಅರಣ್ಯ ಪ್ರದೇಶದಲ್ಲಿರುವ ಸಿಂಹಗಳು ಏಷ್ಯ ಖಂಡದಲ್ಲಿ ಇನ್ನೆಲ್ಲಿಯೂ ಕಂಡುಬರುವುದಿಲ್ಲ. ಇಲ್ಲಿ ಅನೇಕ ಜಾತಿಯ ಮೀನು, ಸಸ್ತನಿ ಹಾಗೂ ಹಕ್ಕಿಗಳಿವೆ. ಮಳೆಯ ಹವೆ ಮತ್ತು ಉಷ್ಣತೆಗಳ ವೈವಿಧ್ಯದಿಂದ ಇಲ್ಲಿ ಎಲ್ಲ ರೀತಿಯ ಕಾಡುಗಳೂ ಎಲ್ಲ ರೀತಿಯ ಪ್ರಾಣಿಪಕ್ಷಿಗಳೂ ಇವೆಯೆನ್ನಬಹುದು. ಭಾರತದ ಕಾಡೆಮ್ಮೆ ಪ್ರಪಂಚದ ಎಲ್ಲ ಕಾಡೆಮ್ಮೆಗಳಿಗಿಂತ ದೊಡ್ಡದು. ಭಾರತೀಯ ಘೇಂಡಾಮೃಗ ಅಥವಾ ಖಡ್ಗಮೃಗ ಪ್ರಪಂಚದಲ್ಲಿರುವ ಆ ಜಾತಿಯ ಪ್ರಾಣಿಗಳಲ್ಲೆಲ್ಲ ಬೃಹತ್ ಪ್ರಾಣಿ. ನಮ್ಮ ದೇಶದ ಆನೆ ಆಫ್ರಿಕದ ಆನೆಗಳಿಗಿಂತ ನೋಡಲು ಹೆಚ್ಚು ಸುಂದರ. ಜಿಂಕೆಗಳಲ್ಲಿಯೂ ಆತ್ಯಾಕರ್ಷಕ ವರ್ಗ ಭಾರತದಲ್ಲಿದೆ. ತೀವ್ರ ವಿಷಸರ್ಪ ಮಂಡಲದ ಹಾವು ಮತ್ತು ನಾಗರಹಾವುಗಳಿವೆ.



ಬಂಡೀಪುರದ ಸ್ವೇಚ್ಛಾ ವಿಹಾರಿ ಕಾಡುಕೋಣಗಳು

ಭಾರತೀಯ ಸಂವಿಧಾನದಲ್ಲಿ ವನ್ಯಮೃಗ ರಕ್ಷಣೆ ಆಯಾ ರಾಜ್ಯದ ಹೊಣೆ. ಇದರಿಂದ ವನ್ಯಮೃಗ ರಕ್ಷಣಾಕ್ಷೇತ್ರಗಳನ್ನು ಆಯಾ ರಾಜ್ಯ ಸರಕಾರಗಳ ಅರಣ್ಯಶಾಖೆಗಳು ನೋಡಿಕೊಳ್ಳುತ್ತವೆ. ಕೆಲವು ರಾಜ್ಯಗಳಲ್ಲಿ ರಾಷ್ಟ್ರೀಯ ಉದ್ಯಾನಗಳಿವೆ. ಇನ್ನು ಕೆಲವೆಡೆಗಳಲ್ಲಿ ಬೇಟೆ ನಿಷಿದ್ಧವಿರುವ, ರಕ್ಷಿತ ಅರಣ್ಯ ಪ್ರದೇಶಗಳಿವೆ. ಅಳಿದುಹೋಗುತ್ತಿರುವ ಮೂವತ್ತಾರು ಬಗೆಯ ಪ್ರಾಣಿಗಳಿವೆಯೆಂದೂ ಅವಕ್ಕೆ ರಕ್ಷಣೆ ಅವಶ್ಯವೆಂದೂ ಭಾರತೀಯ ವನ್ಯಮೃಗ ಮಂಡಳಿ ತಿಳಿಸಿದೆ.

ಮೈಸೂರು ರಾಜ್ಯದ ಬಂಡೀಪುರದಲ್ಲಿ (ಮೈಸೂರು ಜಿಲ್ಲೆ) ವನ್ಯಮೃಗ ರಕ್ಷಣಾ ಕ್ಷೇತ್ರವಿದೆ. ಇಲ್ಲಿ ಉತ್ತಮ ಕಾಡುಕೋಣ, ಚುಕ್ಕೆಗಳ ಜಿಂಕೆ, ಆನೆ, ಚಿರತೆ, ಹುಲಿ ಮತ್ತು ಕರಡಿಗಳಿವೆ. ಅನೇಕ ಜಾತಿಯ ಪಕ್ಷಿಗಳಿವೆ. ನಾಗರ ಹೊಳೆ (ಕೊಡಗು ಜಿಲ್ಲೆ), ದಾಂಡೇಲಿ (ಉತ್ತರ ಕನ್ನಡ ಜಿಲ್ಲೆ) ಮತ್ತು ಮುತ್ತೋಡಿ (ಚಿಕ್ಕಮಗಳೂರು ಜಿಲ್ಲೆ)ಗಳಲ್ಲಿಯೂ ಇಂಥ ಕ್ಷೇತ್ರಗಳಿವೆ. ಭಾರತದ ಅತ್ಯಂತ ದೊಡ್ಡ ವನ್ಯಮೃಗ ರಕ್ಷಣಾ ಪ್ರದೇಶವೆಂದರೆ ಗುಜರಾತಿನಲ್ಲಿರುವ ಗಿರ್ ಅರಣ್ಯ ಪ್ರದೇಶ. ಇದು 1,298 ಚ.ಕಿ.ಮೀ. ವಿಸ್ತೀರ್ಣವುಳ್ಳದ್ದು. ಸಿಂಹವೇ ಇಲ್ಲಿನ ಪ್ರಧಾನ ಆಕರ್ಷಣೆ. ಭೂತಾನಿನ ಗಡಿಯ ಬಳಿಯಿರುವ ಜಲ್ದಾಪಾರಾ ಪ್ರದೇಶದಲ್ಲಿ ಖಡ್ಗಮೃಗಗಳಿವೆ. ಚಂದ್ರಪ್ರಭಾ ವನ್ಯಮೃಗ ರಕ್ಷಣಾಕ್ಷೇತ್ರವೆಂಬುದು ಉತ್ತರಪ್ರದೇಶದಲ್ಲಿದೆ. ಜಬ್ಬಲ್ಪುರದಿಂದ 279.7 ಕಿ.ಮೀ. ದೂರದಲ್ಲಿರುವ ಕನ್ಹಾ ರಾಷ್ಟ್ರೀಯ ಉದ್ಯಾನ ಭಾರತದ ವನ್ಯಮೃಗಗಳ ಶ್ರೇಷ್ಠ ತಾಣವಾಗಿದೆ. ವರ್ಷದ ಒಂದು ನಿರ್ದಿಷ್ಟ ಕಾಲದಲ್ಲಿ ಇಲ್ಲಿ ಕಂಡುಬರುವಷ್ಟು ಪ್ರಾಣಿಗಳು ಭಾರತದ ಇನ್ನಾವ ಪ್ರದೇಶದಲ್ಲೂ ಕಂಡುಬರುವುದಿಲ್ಲ. ಬಾರಾಸಿಂಘಾ ಎಂಬ ಜಿಂಕೆಗೆ ಇದು ಪ್ರಸಿದ್ಧವಾಗಿದೆ. 90 ಜಾತಿಯ ಪಕ್ಷಿಗಳನ್ನು ಈ ಉದ್ಯಾನದಲ್ಲಿ ಕಾಣಬಹುದು.

ಪ್ರಾಣಿಗಳಂತೆಯೇ ಅಪೂರ್ವ ಪಕ್ಷಿಗಳ ರಕ್ಷಣೆಯೂ ಅಗತ್ಯ. ಪಕ್ಷಿಗಳು ವಲಸೆಹೋಗುವ ಜೀವಿಗಳು. ಪ್ರಕೃತಿಯ ಕೆಲವು ಕಾರ್ಯಗತಿಗಳಿಗೆ ಹೊಂದಿಕೊಂಡು ಅವು ತಮ್ಮ ಸಂತಾನಾಭಿವೃದ್ಧಿಗೆಂದು ಬೇರೆಡೆಗೆ ಹೋಗುವುದುಂಟು. ಶ್ರೀರಂಗಪಟ್ಟಣದಲ್ಲಿರುವ ರಂಗನತಿಟ್ಟು, ಪಕ್ಷಿಗಳ ಇಂಥ ಧಾಮ. ಪಕ್ಷಿಕಾಶಿ ಎಂದು ಹೆಸರು ಪಡೆದಿದೆ. ಹನ್ನೊಂದು ಚದರ ಕಿ.ಮೀ. ಕ್ಷೇತ್ರಕ್ಕೆ ಜೂನ್-ಡಿಸೆಂಬರ್ ಅವಧಿಯಲ್ಲಿ ಅನೇಕ ಪಕ್ಷಿಗಳು ವಲಸೆ ಬರುತ್ತವೆ.

ಪ್ರಾಣಿಗಳ ವಿಷಯದಲ್ಲಿ ಮನುಷ್ಯನ ಕರ್ತವ್ಯವನ್ನು ನೆನಪುಮಾಡಿಕೊಡಲು ಭಾರತದಲ್ಲಿ ಪ್ರತಿ ವರ್ಷ ಅಕ್ಟೋಬರ್ ತಿಂಗಳ ಮೊದಲನೆಯ ವಾರದಲ್ಲಿ ವನ್ಯಮೃಗ ರಕ್ಷಣಾ ಸಪ್ತಾಹವನ್ನು ಆಚರಿಸಲಾಗುತ್ತದೆ.

[illegible]

ವಯಸ್ಕ ಮಹಿಳೆಯರಿಗೆ ವಿದ್ಯಾಪ್ರಾಪ್ತಿ

## ವಯಸ್ಕರ ಶಿಕ್ಷಣ

'ಎಡಗೈ ಹೆಬ್ಬೆಟ್ಟಿನ ಗುರುತು' ಎಂದು ಕರಾರು ಒಪ್ಪಂದ ಪತ್ರಗಳಲ್ಲಿ ಕಾಣುತ್ತೇವೆ. ಇದು ಒಬ್ಬ ಮನುಷ್ಯನ ಸಹಿಗೆ ಬದಲಾಗಿ ಒಪ್ಪಿಕೊಳ್ಳುವ ಗುರುತು. ಆತ ಸಹಿ ಮಾಡಲಿಲ್ಲವೇಕೆ? ಎಂಬುದು ಸಹಜ ಪ್ರಶ್ನೆ. ಅವನು ಅನಕ್ಷರಸ್ಥ. ಓದಲು ಬರೆಯಲು ಬಾರದವನು. ಇದರಿಂದ ತನ್ನ ಎಡಗೈ ಹೆಬ್ಬೆಟ್ಟಿನ ಗುರುತನ್ನು ಮಸಿಯಲ್ಲಿ ಮಾಡಿರುತ್ತಾನೆ. ಇಂಥವನ ಸ್ಥಿತಿ ಬಹು ಕಷ್ಟ. ತನಗೆ ಕಾಗದ ಬಂದರೆ, ಇನ್ನೊಬ್ಬರಿಂದ ಓದಿಸಿ ಅವರು ಹೇಳಿದುದರಲ್ಲಿ ತೃಪ್ತಿಪಟ್ಟುಕೊಳ್ಳಬೇಕು. ಕಾಗದ ಬರೆಯಬೇಕಾದರೆ ಇನ್ನೊಬ್ಬರನ್ನು ಆಶ್ರಯಿಸಬೇಕು. ಸಾಲ ತೆಗೆದುಕೊಂಡಾಗ ಸಾಲ ಕೊಟ್ಟವನು ಏನು ಬರೆದುಕೊಳ್ಳುತ್ತಾನೆ, ಹಿಂದಿರುಗಿಸಿದಾಗ ಏನು ಬರೆದುಕೊಡುತ್ತಾನೆ ಈತನಿಗೆ ತಿಳಿಯದು. ಓದಲು ಬಾರದೆ ಕೇವಲ ಹೆಬ್ಬೆಟ್ಟಿನ ಗುರುತು ಹಾಕಿ, ಮೋಸಕ್ಕೆ ಒಳಗಾಗಿ ಮನೆ, ಮಠ, ಆಸ್ತಿಪಾಸ್ತಿಗಳನ್ನೆಲ್ಲ ಕಳೆದುಕೊಂಡವರುಂಟು. ಭಾರತದಲ್ಲಿ ಈ ಶತಮಾನದ ಎರಡು ಮೂರನೆಯ ದಶಕಗಳಲ್ಲಿ ಶೇಕಡಾ 90ಕ್ಕೂ ಮೀರಿದ ಸಂಖ್ಯೆಯ ಅನಕ್ಷರಸ್ಥರಿದ್ದರೆಂದರೆ ಅದರಿಂದ ವೈಯಕ್ತಿಕ ಹಾನಿ ಹಾಗೂ ರಾಷ್ಟ್ರೀಯ ಹಾನಿಯನ್ನು ಊಹಿಸಬಹುದು. ಜನರ ಏಳಿಗೆಯಿಲ್ಲದೆ ದೇಶದ ಏಳಿಗೆಯಿಲ್ಲ. ಜನರ ಏಳಿಗೆಗೆ ಮುಖ್ಯವಾದದ್ದು ಶಿಕ್ಷಣ.

ಈ ಕಾರಣದಿಂದ ಸ್ವತಂತ್ರ ಭಾರತದಲ್ಲಿ ವಯಸ್ಕರ ಶಿಕ್ಷಣಕ್ಕೆ ಹೆಚ್ಚು ಗಮನ ಕೊಡಲಾಗಿದೆ. ರಾಷ್ಟ್ರೀಯ ಅಕ್ಷರತೆ 1976ರ ವೇಳೆಗೆ ನೂರಕ್ಕೆ ೮0ರಷ್ಟಾಗಬೇಕು ಎಂಬ ಆಶಯ. ದೊಡ್ಡ ದೊಡ್ಡ ಕೈಗಾರಿಕಾ ಹಾಗೂ ವಾಣಿಜ್ಯ ಸಂಸ್ಥೆಗಳು ಮೂರು ವರ್ಷಗಳೊಳಗೆ ತಮ್ಮ ಅನಕ್ಷರಸ್ಥ ನೌಕರರು ಅಕ್ಷರಸ್ಥರಾಗ[illegible] [illegible]. ಪ್ರತಿಯೊಂದು ವಿದ್ಯಾಸಂಸ್ಥೆಯೂ ಅನಕ್ಷರತೆ ನಿವಾರಿಸುವ ಜವಾಬ್ದಾರಿಯನ್ನು ಸ್ವಲ್ಪಮಟ್ಟಿಗಾದರೂ ವಹಿಸಿಕೊಳ್ಳಬೇಕು. [illegible] ಸ್ತ್ರೀ ಪುರುಷರು ರಾಷ್ಟ್ರದ ಅನಕ್ಷರತೆಯ [illegible] – ಎಂಬ ಸಲಹೆಗಳನ್ನು ಭಾರತೀಯ [illegible].

[illegible] ವಯಸ್ಕರ ಶಿಕ್ಷಣ ರಾತ್ರಿಯ ಶಾಲೆಗಳಂತೆ ಆರಂಭವಾಯಿತು. [illegible]ಗಿನಿಂದ ಸಂಜೆಯವರೆಗೆ ದುಡಿಯುವ ಗಂಡಸರು, ಹೆಂಗಸರು ರಾತ್ರಿಯ [illegible] ಶಾಲೆಗಳಲ್ಲಿ ವಿದ್ಯಾಭ್ಯಾಸ ಮಾಡುತ್ತಾರೆ. ಸ್ವಾತಂತ್ರ್ಯ ಬರುವ [illegible] ಮುಂಚೆ 1940ರಲ್ಲಿ ಆರಂಭವಾದ ಮೈಸೂರು ರಾಜ್ಯದಲ್ಲಿನ ವಯಸ್ಕರ ಶಿಕ್ಷಣಸಮಿತಿ ಪ್ರಾಯಶಃ ಭಾರತದಲ್ಲಿನ ಆದ್ಯಸಂಸ್ಥೆ ಎನ್ನಬಹುದು. ದೇಶದಲ್ಲಿ ಐಕ್ಯ, ಸಮಾನಭಾವ, ಆರ್ಥಿಕ ಸುಧಾರಣೆಗಳಾಗಬೇಕಾದರೆ ಅನಕ್ಷರತೆ ದೂರವಾಗಬೇಕು. ಇದನ್ನು ಕಾರ್ಯಗತ ಮಾಡಬೇಕಾದರೆ ಎರಡು ವಿಧಗಳಿವೆ. ಒಂದು ಪ್ರಾಥಮಿಕ ವಿದ್ಯಾಭ್ಯಾಸವನ್ನು ಕಡ್ಡಾಯ ಮಾಡುವುದು. ಇದರಿಂದ ಎಲ್ಲ ಮಕ್ಕಳೂ ಓದಲು ಕಲಿಯುತ್ತಾರೆ. ಎರಡನೆಯದು, ಅನಕ್ಷರಸ್ಥ ವಯಸ್ಕರಿಗೆ ವಿದ್ಯಾಭ್ಯಾಸ ದೊರೆಯುವಂತೆ ಮಾಡುವುದು.

ವಯಸ್ಕರ ಶಿಕ್ಷಣದಲ್ಲಿ ಕೆಲಸ ಮಾಡುವವರಿಗೆ ವಿಶೇಷ ತರಬೇತಿ ಅಗತ್ಯ. ವಯಸ್ಕರ ಶಿಕ್ಷಣ ಅಕ್ಷರಜ್ಞಾನಕ್ಕೆ ಮಾತ್ರವೇ ಗಮನ ಕೊಡುವುದಿಲ್ಲ. ವಿದ್ಯಾಪೀಠಗಳನ್ನು ಸ್ಥಾಪಿಸುವುದು, ಸಮಾಜ ಶಿಕ್ಷಣದ ಬಗೆಗೆ ಪರಿಶೀಲನೆ, ವಾಚನಾಲಯ ಗ್ರಂಥಾಲಯಗಳನ್ನು ಸ್ಥಾಪಿಸುವುದು, ವಯಸ್ಕರ ಶಿಕ್ಷಣವನ್ನು ಮುಂದುವರಿಸಲು ಬೇಕಾದ ಕಾರ್ಯಕ್ರಮ ಕೈಗೊಳ್ಳುವುದು, ಜನಪದಕಲೆ, ಜನಪದ ನೃತ್ಯಗಳನ್ನು ಪೋಷಿಸುವುದು, ವಾಕ್ ಶ್ರವಣ ಸಾಧನಗಳ ಮೂಲಕ ತಿಳಿವಳಿಕೆಯ ಪ್ರಚಾರ ಇತ್ಯಾದಿ ಕರ್ತವ್ಯಗಳು ಸೇರಿವೆ. ವಯಸ್ಕರ ಶಿಕ್ಷಣ ಸಮಿತಿಗಳು ಅಧಿಕೃತ ಅಥವಾ ಅನಧಿಕೃತ ಸಂಸ್ಥೆಗಳಾಗಿರಬಹುದು. ಮೈಸೂರು ರಾಜ್ಯದಲ್ಲಿ 1961ರ ಜನಗಣತಿ ಪ್ರಕಾರ ಗಂಡಸರಲ್ಲಿ ಅಕ್ಷರಸ್ಥರ ಪ್ರಮಾಣ ಶೇಕಡಾ 36.1 ಇದ್ದಿತು. ಅಕ್ಷರಸ್ಥ ಹೆಂಗಸರು ಶೇಕಡಾ 14.2 ಮಂದಿ ಇದ್ದರು. ಅಂದರೆ ಉಳಿದವರೆಲ್ಲ ಅನಕ್ಷರಸ್ಥರು. ಇಷ್ಟು ಅಗಾಧ ಸಂಖ್ಯೆಯ ಅನಕ್ಷರಸ್ಥರಿರುವ ದೇಶದಲ್ಲಿ ಗ್ರಾಮ ಹಾಗೂ ಪಟ್ಟಣಗಳಲ್ಲಿನ ವಯಸ್ಕರಿಗೆ ವಿದ್ಯಾಭ್ಯಾಸ ಸೌಕರ್ಯ ಅತ್ಯವಶ್ಯ.

ಗ್ರಾಮಯುವಕರನ್ನು ಸ್ವಾವಲಂಬಿಗಳಾಗಿ ಮಾಡುವುದಕ್ಕೆಂದು ವಯಸ್ಕರ ಶಿಕ್ಷಣ ಮಂಡಲಿಯ ವತಿಯಿಂದ ವಿದ್ಯಾಪೀಠಗಳು ಆರಂಭವಾದುವು. ಇವು ವಸತಿ ಶಿಕ್ಷಣ ಕೇಂದ್ರಗಳು. ಇಲ್ಲಿ ಯುವಕರಿಗೆ ಸರಕಾರ ಮತ್ತು ಸಂಸ್ಥೆಗಳ ಕಾರ್ಯಚಟುವಟಿಕೆಗಳ ಬಗೆಗೆ ಪರಿಚಯ ಮಾಡಿಕೊಡಲಾಗುವುದು. ಜೊತೆಗೆ ಅವರಿಗೆ ಚಿರಪರಿಚಿತವಾಗಿರುವ ವ್ಯವಸಾಯ, ಪಶುಪಾಲನೆ, ಜೇನುಸಾಕಣೆ, ಕೋಳಿಸಾಕಣೆ, ಬಟ್ಟೆ, ನೆಯ್ಗೆ ಇತ್ಯಾದಿ ವಿಷಯಗಳ ಬಗೆಗೆ ಇನ್ನೂ ಹೆಚ್ಚಿನ ವಿಷಯಗಳನ್ನು [illegible]ಗುವುದು. [illegible] ಕ್ಷೇತ್ರ [illegible]. [illegible] ಜಾಗೃತಗೊಳ್ಳುತ್ತದೆ ಮತ್ತು ಗ್ರಾಮದ ಸಮಸ್ಯೆಗಳ ಪೂರ್ಣ ಸ್ವರೂಪವನ್ನು ಅರಿಯಲು ಅವರು ಸಮರ್ಥರಾಗುತ್ತಾರೆ.

'ಮೇ ಫ್ಲವರ್' ಎನ್ನುವ ಹಡಗಿನಲ್ಲಿ ಸುಮಾರು ನೂರು ಜನ ಇಂಗ್ಲಿಷರು ಹೀಗೆಯೇ ಅಮೆರಿಕಕ್ಕೆ ಹೋದರು. ಅರಸ ಮೊದಲನೆಯ ಜೇಮ್ಸ್ ತಮಗೆ ಮತಸ್ವಾತಂತ್ರ್ಯವನ್ನು ನೀಡಲಿಲ್ಲವೆಂದು, ಕ್ರಿಶ್ಚಿಯನ್ ಮತದ 'ಪ್ಯೂರಿಟನ್' ಪಂಗಡದ ಇವರು ನಾಡನ್ನೇ ಬಿಟ್ಟರು.

ಯಾರಾದರೂ ಒಬ್ಬ ಮನುಷ್ಯ ಅಥವಾ ಯಾವುದಾದರೂ ಒಂದು ಗುಂಪು ಹೊಸದೊಂದು ನಾಡಿಗೆ ಹೋಗಿ ಅಲ್ಲಿನ ಐಶ್ವರ್ಯ, ಅನುಕೂಲತೆಗಳ ಬಗೆಗೆ ಇತರರಿಗೆ ಸುದ್ದಿ ತಿಳಿಸಿದರೆ ಮಿಕ್ಕವರೂ ಅಲ್ಲಿಗೆ ಧಾವಿಸುತ್ತಾರೆ. ಅಮೆರಿಕ, ದಕ್ಷಿಣ ಆಫ್ರಿಕ, ಆಸ್ಟ್ರೇಲಿಯ, ನ್ಯೂಜಿಲೆಂಡ್ ಮುಂತಾದ ಹೊಸ ನಾಡುಗಳನ್ನು ಅನ್ವೇಷಕರು ಕಂಡುಹಿಡಿದಾಗ, ಜನಸಾಂದ್ರತೆ ಜಾಸ್ತಿಯಾಗಿದ್ದ ಗ್ರೇಟ್ ಬ್ರಿಟನ್ ಮುಂತಾದ ಇತರ ಯೂರೋಪ್ ದೇಶಗಳಿಂದ ಸಾವಿರಾರು ಜನ ತಂಡೋಪತಂಡವಾಗಿ ಆ ಹೊಸ ನಾಡುಗಳಿಗೆ ವಲಸೆಹೋದರು.

ಮೊದಮೊದಲು ವಲಸೆಹೋದವರಲ್ಲಿ ಮುಖ್ಯರಾದವರು ಸ್ಕ್ಯಾಂಡಿನೇವಿಯದಿಂದ ಜರ್ಮನಿ, ನೆದರ್‌ಲೆಂಡ್ಸ್, ಫ್ರಾನ್ಸ್ ಮತ್ತು ಬ್ರಿಟನಿಗೆ ವಲಸೆಹೋದ ನಾರ್ವೆಯ ಜನರು.

ಬ್ರಿಟಿಷರು ಹದಿನಾರನೆಯ ಶತಮಾನದಿಂದಲೂ ಪ್ರಪಂಚದ ಎಲ್ಲ ಭಾಗಗಳಿಗೂ ವಲಸೆಹೋಗುತ್ತಲೇ ಇದ್ದರು. 1820ರಿಂದ 1914ರ ವರೆಗೆ 1,60,00,000 ಜನರು ಇಂಗ್ಲೆಂಡಿನಿಂದ ವಲಸೆಹೋಗಿದ್ದರು. ನೆಪೋಲಿಯನ್ ವಿರುದ್ಧ ಯುದ್ಧ ನಡೆದ ಕಷ್ಟ ಸಮಯದಲ್ಲಿ ಬ್ರಿಟಿಷ್ ಸರಕಾರ ಜನರಿಗೆ ಪ್ರಯಾಣ ವೆಚ್ಚದಲ್ಲಿ ರಿಯಾಯಿತಿಯನ್ನು ತೋರಿಸಿ, ಕೆಲವೊಮ್ಮೆ ಉಚಿತವಾಗಿ ಪ್ರಯಾಣ ಮಾಡಲು ಅನುಮತಿ ಕೊಟ್ಟು ಇತರ ದೇಶಗಳಿಗೆ ವಲಸೆಹೋಗಲು ಸಹಾಯಮಾಡಿತು.

ಅಮೆರಿಕಕ್ಕೆ ಯೂರೋಪಿನಿಂದ ಅಸಂಖ್ಯಾತ ಜನರು ವಲಸೆ ಬಂದಿದ್ದಾರೆ. 1770ರಲ್ಲಿ ವಲಸೆ ಬಂದವರ ಸಂಖ್ಯೆ 40,00,000 ದಷ್ಟಿದ್ದಿತು. 1926ರ ವೇಳೆಗೆ ಅದು 10,50,00,000 ದಷ್ಟು ಏರಿತು. ಈ ಸಂಖ್ಯೆಯಲ್ಲಿ ಭಾರತ, ಚೀನ, ಜಪಾನ್ ಮುಂತಾದೆಡೆಗಳ ಜನರೂ ಸೇರಿದ್ದಾರೆ. 1820ರಿಂದ 1927—ಈ 107 ವರ್ಷಗಳ ಅವಧಿಯಲ್ಲಿ 3,70,00,000 ಜನರು ಅಮೆರಿಕಕ್ಕೆ ಯೂರೋಪ್ ದೇಶಗಳಿಂದ ಬಂದಿದ್ದರು.

ಜನಸಾಂದ್ರತೆ ಜಾಸ್ತಿಯಿರುವ ಏಷ್ಯ ಮತ್ತು ಯೂರೋಪ್, ಜನಸಂಖ್ಯೆ ಕಡಮೆಯಿರುವ ಅಮೆರಿಕ, ಕೆನಡ ಮತ್ತು ಆಸ್ಟ್ರೇಲಿಯ ದೇಶಗಳಿಗೆ ವಲಸೆ ಹೋಗುವುದನ್ನು ಈಗ ನಿಯಂತ್ರಿಸಲಾಗುತ್ತಿದೆ. ಆಯಾ ದೇಶಗಳು ವರ್ಷಕ್ಕೆ ನಿಗದಿಪಡಿಸಿರುವ ಸಂಖ್ಯೆಯಷ್ಟು ಜನರು ಮಾತ್ರ ವಲಸೆಹೋಗಬಹುದು. ಈಗ ಇಂಗ್ಲೆಂಡು ತನ್ನ ಹಿಂದಿನ ವಸಾಹತುಗಳ ಜನರು ತನ್ನಲ್ಲಿಗೆ ವಲಸೆ ಬರುವುದನ್ನು ಇಷ್ಟಪಡುವುದಿಲ್ಲ. ಇಥಿಯೋಪಿಯ, ಆಫ್ರಿಕ, ಸಿಂಹಳ, ಮಲೇಷ್ಯ, ಇಂಡೊನೇಷ್ಯ, ಬರ್ಮ ಮುಂತಾದ ದೇಶಗಳಿಗೆ ಭಾರತೀಯರು ವಲಸೆಹೋಗಿದ್ದರು.

ಮನುಷ್ಯರಂತೆ ಪಕ್ಷಿಗಳು ವಲಸೆಹೋಗುವುದುಂಟು. ಅವು ಒಂದುಗೂಡಿ ಒಂದು ದೇಶದಿಂದ ಮತ್ತೊಂದು ದೇಶಕ್ಕೆ ಹೋಗುತ್ತವೆ. 'ಸ್ವಾಲೋ' ಪಕ್ಷಿಗಳು ವಸಂತ ಮಾಸದಲ್ಲಿ ಮೂರು ತಿಂಗಳು ಇಂಗ್ಲೆಂಡಿನಲ್ಲಿದ್ದು ಮತ್ತೆ ಎಲ್ಲವೂ ಹಾರಿ ದಕ್ಷಿಣಕ್ಕೆ ಆಫ್ರಿಕ ದೇಶಕ್ಕೆ ಹೋಗುತ್ತವೆ. ಮೈಸೂರಿನ ಪಶ್ಚಿಮ ವಾಹಿನಿಯ ಬಳಿಯಿರುವ ರಂಗನತಿಟ್ಟು, ಪಕ್ಷಿಕಾಶಿಯಲ್ಲಿ ವಲಸೆ ಬರುವ ಪಕ್ಷಿಗಳನ್ನು ಕಾಣಬಹುದು.

ಸ್ವದೇಶವನ್ನು ಬಿಟ್ಟು ಹೊರನಾಡುಗಳಲ್ಲಿ ನೆಲೆಸಿದ್ದ ಜನರು ತಾಯ್ನಾಡಿಗೆ ಮರಳಿದಾಗ ಅವರಿಗೆ ಪುನಃ ನೆಲೆಯೊದಗಿಸುವುದೇ ಪುನರ್ವಲಸೆ. ಅವರು ಯುದ್ಧದಲ್ಲಿ ಸೆರೆಸಿಕ್ಕ ಕೈದಿಗಳಾಗಿರಬಹುದು ಅಥವಾ ನಿರಾಶ್ರಿತರಾಗಿರಬಹುದು ಇಲ್ಲವೇ ತಾವಾಗಿಯೇ ಹೊರನಾಡಿಗೆ ವಲಸೆಹೋಗಿರಬಹುದು. ಅಂಥವರನ್ನು ಅವರು ನೆಲೆಸಿದ್ದ ದೇಶದ ಸರಕಾರ ಹಿಂದಕ್ಕೆ ಕಳುಹಿಸಿದಾಗ, ಸ್ವದೇಶದವರು ಸ್ವೀಕರಿಸಿ ಅವರಿಗೆ ವಸತಿ, ಉದ್ಯೋಗ ಮುಂತಾದ ಸೌಲಭ್ಯಗಳನ್ನು ಒದಗಿಸಬೇಕಾಗುತ್ತದೆ.

ಕದನ ಮುಗಿದ ಮೇಲೆ ಅಥವಾ ಇನ್ನೂ ನಡೆಯುತ್ತಿರುವಾಗಲೇ ಯುದ್ಧ ಕೈದಿಗಳನ್ನು ಅವರ ದೇಶಕ್ಕೆ ಹಿಂತಿರುಗಿಸಬಹುದು. ತೀವ್ರವಾಗಿ ಗಾಯಗೊಂಡ ಅಥವಾ ಕಾಯಿಲೆಯಿಂದ ನರಳುವ ಕೈದಿಗಳನ್ನು ಶೀಘ್ರವಾಗಿ ಅವರ ದೇಶಕ್ಕೆ ಹಿಂದಿರುಗಿಸಬೇಕು ಎಂಬ ನಿಯಮವಿದೆ. ಆದರೆ ಕೈದಿಗಳ ಇಚ್ಛೆಗೆ ವಿರೋಧವಾಗಿ ಅವರನ್ನು ಸ್ವದೇಶಕ್ಕೆ ಹಿಂದಿರುಗಿಸಲಾಗದು.

ಭಾರತದ ಲಕ್ಷಾಂತರ ಮಂದಿ ವಿಶಾಲವಾದ ಪ್ರಪಂಚದ ವಿವಿಧ ಭಾಗಗಳಿಗೆ ನಾನಾ ಕಾರಣಗಳಿಂದ ವಲಸೆಹೋಗಿದ್ದಾರೆ. ಆ ಕಾರಣದಿಂದ ಇತರ ಎಲ್ಲ ದೇಶಗಳಿಗಿಂತಲೂ ಪುನರ್ವಲಸೆಯ ಸಮಸ್ಯೆ ಭಾರತದಲ್ಲಿ ಹೆಚ್ಚು. ಹೊರನಾಡಿನಲ್ಲಿ ಎಷ್ಟೋ ವರ್ಷಗಳ ಕಾಲ ವಾಸಿಸಿದ ಮೇಲೆ ಆ ನಾಡಿನ ಸರಕಾರವೇ ಸ್ವದೇಶಕ್ಕೆ ಹಿಂದಿರುಗುವಂತೆ ತನ್ನ ಜನರನ್ನು ಒತ್ತಾಯಪಡಿಸಿದೆ. ಬರ್ಮ ದೇಶದಿಂದ ಸಾವಿರಾರು ಭಾರತೀಯರು ಇಂದಿಗೂ ಹಿಂತಿರುಗುತ್ತಲಿದ್ದಾರೆ. ಆಫ್ರಿಕದ ಕೆಲವು ಸ್ವತಂತ್ರ ರಾಷ್ಟ್ರಗಳಲ್ಲಿ ಅಲ್ಲಿಂದ ಹೊರಟುಹೋಗುವಂತೆ ಭಾರತೀಯ ನಿವಾಸಿಗಳ ಮೇಲೆ ಒತ್ತಾಯ ಹೇರಲಾಗುತ್ತಿದೆ.

ಸಿಂಹಳದಲ್ಲಿದ್ದ ಭಾರತೀಯರನ್ನು ಹಿಂದಕ್ಕೆ ಕರೆಸಿಕೊಳ್ಳಬೇಕಾದದ್ದು ಭಾರತದ ಸರಕಾರಕ್ಕೆ ಪ್ರಬಲವಾದ ಸಮಸ್ಯೆಯೇ ಆಯಿತು. ಅಲ್ಲಿಗೆ ವಲಸೆಹೋಗಿದ್ದ ಭಾರತೀಯರಿಗೆ ಅಲ್ಲಿನ ಸರಕಾರ ಪೌರಹಕ್ಕನ್ನು ನೀಡಲು ಒಪ್ಪಲಿಲ್ಲ. ಅಲ್ಲದೆ ಭಾರತ ಕೂಡಲೆ ಅವರನ್ನು ಕರೆಸಿಕೊಳ್ಳಬೇಕೆಂದು ಕೇಳಿತು. ಈ ವಿಷಯದ ಬಗ್ಗೆ ಸಾಕಷ್ಟು ವಾದ ವಿವಾದಗಳೂ ನಡೆದುವು. ಮಾತುಕತೆಯ ಬಳಿಕ ಒಪ್ಪಂದವಾಯಿತು. ಅದರ ಪ್ರಕಾರ ಈಗ ಸಿಂಹಳದಲ್ಲಿರುವ ಭಾರತೀಯರಲ್ಲಿ ಅಲ್ಲಿಯೇ ನೆಲೆಸಲು ಬಯಸುವವರಲ್ಲಿ ಸಾಧ್ಯವಾದಷ್ಟು ಮಂದಿಗೆ ಅಲ್ಲಿನ ಸರಕಾರ ಪೌರತ್ವವನ್ನು ನೀಡಬೇಕೆಂದೂ, ಉಳಿದವರನ್ನು ನಿಗದಿಯಾಗಿರುವ ಅವಧಿಯೊಳಗೆ ಭಾರತ ಕರೆಸಿಕೊಳ್ಳಬೇಕೆಂದೂ ತೀರ್ಮಾನವಾಯಿತು. ಹೀಗೆ ಹಿಂದಿರುಗಿದವರಿಗೆ ಇರಲು ಸ್ಥಳ, ಜೀವನೋಪಾಯಕ್ಕೆ ಉದ್ಯೋಗ ಇವನ್ನು ಕಲ್ಪಿಸಿ ಕೊಡುವ ಹೊಣೆ ಭಾರತ ಸರಕಾರದ್ದು.

ಪುನರ್ವಲಸೆ ನ್ಯಾಯಸಮ್ಮತವಾಗಿ ನಡೆಯಬೇಕಾಗುತ್ತದೆ. ಸಂಬಂಧಪಟ್ಟ ರಾಷ್ಟ್ರಗಳಿಗೆ ಯಾವ ರೀತಿಯಿಂದಲೂ ಅನ್ಯಾಯವಾಗಕೂಡದು. ಅದೂ ಅಲ್ಲದೆ ರಾಷ್ಟ್ರದ ಪ್ರಗತಿಗೆ ಧಕ್ಕೆಯಾಗದಂತೆ ಈ ಕೆಲಸವು ನಡೆಯಬೇಕಾಗುತ್ತದೆ. ಪುನರ್ವಲಸೆಗೆ ಒಳಗಾಗುವವರ ಕಷ್ಟ ಸಮಸ್ಯೆಗಳನ್ನೂ ಗಮನಿಸಬೇಕು. ಆದ್ದರಿಂದ ಸಂಬಂಧಪಟ್ಟ ರಾಷ್ಟ್ರಗಳ ಒಂದು ಒಪ್ಪಂದವಾದ ಅನಂತರವೇ ಪುನರ್ವಲಸೆಗೆ ಕ್ರಮ ತೆಗೆದುಕೊಳ್ಳುತ್ತಾರೆ.

## ವಸ್ತುಪ್ರದರ್ಶನ

1970ರ ಮಾರ್ಚ್ 15ರಂದು ಜಪಾನಿನ ಒಸಾಕಾ ನಗರದ ಸೆನ್ರಿ ಗುಡ್ಡಗಳ ಬಳಿ ಒಂದು ಪ್ರಪಂಚ ವಸ್ತುಪ್ರದರ್ಶನ ಪ್ರಾರಂಭವಾಯಿತು. ಇದು ' ಎಕ್ಸ್‌ಪೊ—1970. ' (ಎಕ್ಸ್‌ಪೊಸಿಷನ್ : ಪ್ರದರ್ಶನ—ಇದು

ಎಕ್ಸ್‌ಪೊ ಪವ) 330 ಹೆಕ್ಟೇರುಗಳ ಭೂಮಿಯಲ್ಲಿ ಇದಕ್ಕಾಗಿ ಕಟ್ಟಿದ ಕಟ್ಟಡ ಜಪಾನಿನ ವಿಶಿಷ್ಟ ವಾಸ್ತುಶಿಲ್ಪ ಶೈಲಿಯದು. ಭಾಗವಹಿಸಿದ ರಾಷ್ಟ್ರಗಳು ಭಾರತವೂ ಸೇರಿ ಎಪ್ಪತ್ತೇಳು. ಇದು ಆರು ತಿಂಗಳ ಕಾಲ ನಡೆಯಿತು ; ನಿರೀಕ್ಷೆಗೆ ಮೀರಿದ ಯಶಸ್ಸು ಗಳಿಸಿತು.



ಎಕ್ಸ್‌ಪೊ-70 ರಲ್ಲಿ ಭಾರತದ ಮಂಟಪ

1967ರಲ್ಲಿ ಕೆನಡದ ಮಾಂಟ್ರಿಯಲ್‌ನಲ್ಲಿ ಕೆನಡ ಒಕ್ಕೂಟದ ಶತಮಾನೋತ್ಸವ ಸಂಭ್ರಮದ ಸಮಯದಲ್ಲಿ ಎಪ್ಪತ್ತು ದೇಶಗಳು ಭಾಗವಹಿಸಿದ ವಸ್ತುಪ್ರದರ್ಶನ ನಡೆಯಿತು. ಅದರ ಹೆಸರು : 'ಮನುಷ್ಯ, ಅವನ ಪ್ರಪಂಚ'. ಭಾಗವಹಿಸಿದ ದೇಶಗಳಲ್ಲಿ ಭಾರತವೂ ಒಂದು. ನಾಲ್ಕುನೂರ ಐದು ಹೆಕ್ಟೇರು ಸ್ಥಳದಲ್ಲಿ ಏರ್ಪಾಟಾದ ಈ ಪ್ರದರ್ಶನ 211 ದಿನ ನಡೆಯಿತು. ಐದು ಕೋಟಿಗಿಂತ ಹೆಚ್ಚು ಜನ ಇದನ್ನು ನೋಡಿದರು. ಪ್ರಪಂಚದ ವಿವಿಧ ಭಾಗಗಳ ವಸ್ತು ಸಂಗ್ರಹಾಲಯಗಳಿಂದ ಪ್ರದರ್ಶನಕ್ಕೆಂದು ಎರವಲಾಗಿ ತರಿಸಿದ ಕಲಾಕೃತಿಗಳ ಬೆಲೆಯೇ ಮೂರು ಕೋಟಿ ಡಾಲರುಗಳು (ಸುಮಾರು ಇಪ್ಪತ್ತೆರಡೂವರೆ ಕೋಟಿ ರೂಪಾಯಿ) ಗಿಂತ ಹೆಚ್ಚು.

ಶಾಲೆಗಳಲ್ಲಿ ವಿದ್ಯಾರ್ಥಿ, ವಿದ್ಯಾರ್ಥಿನಿಯರ ಜಾಣ್ಮೆ, ಕಲಾಶಕ್ತಿಗಳ ಅಭಿವೃದ್ಧಿಗಾಗಿ ಏರ್ಪಡಿಸುವ ವಸ್ತು ಪ್ರದರ್ಶನಗಳಿಂದ ಅಂತರರಾಷ್ಟ್ರೀಯ ವಸ್ತುಪ್ರದರ್ಶನದವರೆಗೆ ಪ್ರಪಂಚದಲ್ಲಿ ಹಲವು ಬಗೆಯ ವಸ್ತುಪ್ರದರ್ಶನಗಳಿರುತ್ತವೆ.

ಸಂತೆ ಮತ್ತು ಜಾತ್ರೆಗಳು ಪ್ರದರ್ಶನಗಳ ಮೂಲ. ಸಂತೆಗಳಲ್ಲಿ ವ್ಯಾಪಾರ ಮುಖ್ಯ. ಜಾತ್ರೆಗಳಲ್ಲಿ ಉತ್ಸವ ಮೆರವಣಿಗೆಗಳ ಜೊತೆಗೆ ವ್ಯಾಪಾರವೂ ನಡೆಯುತ್ತದೆ. ಸಾರಿಗೆ ಸಂಪರ್ಕ ಸಾಧನಗಳು ಅಭಿವೃದ್ಧಿ ಹೊಂದಿದಂತೆ ಹಲವಾರು ಪ್ರದೇಶಗಳ ಜನ ಒಂದೆಡೆ ಕಲೆಯುವುದು ಸುಲಭವಾಯಿತು. ಕ್ರಮೇಣ ನಗರಗಳಲ್ಲಿ ಸಂತೆ, ಜಾತ್ರೆಗಳು ವಸ್ತುಪ್ರದರ್ಶನಗಳ ರೂಪವನ್ನು ತಳೆದುವು. ವಸ್ತುಪ್ರದರ್ಶನಗಳನ್ನು ಏರ್ಪಡಿಸಲು ಸಂಘ ಸಂಸ್ಥೆಗಳೂ ಸರಕಾರಗಳೂ ಆಸಕ್ತಿ ವಹಿಸುತ್ತಿವೆ. ದೇಶದಲ್ಲಿ ಆದ ಅಭಿವೃದ್ಧಿ, ಲಭ್ಯವಿರುವ ಉದ್ಯಮಾವಕಾಶಗಳು ಮತ್ತು ಸಂಪತ್ಸಾಧನೆಗಳು, ಯೋಜನೆಗಳ ಧ್ಯೇಯ ಮತ್ತು ಉದ್ದೇಶಗಳು ಇವುಗಳ ಪ್ರಚಾರಕ್ಕೆ ವಸ್ತುಪ್ರದರ್ಶನಗಳು ಸಹಾಯಕವಾಗುತ್ತವೆ. ಬಗೆಬಗೆಯ ಗ್ರಾಹಕರು ವಸ್ತುಪ್ರದರ್ಶನಕ್ಕೆ ಬರುವುದರಿಂದ ಮಾರಾಟಕ್ಕೆ ಇಟ್ಟ ವಸ್ತುಗಳನ್ನು ಜಾಹೀರು ಮಾಡುವುದು ಸುಲಭ. ವಸ್ತುಗಳ ವ್ಯಾಪಾರಕ್ಕಿಂತ ಪ್ರಚಾರ ಮತ್ತು ಜಾಹೀರಾತುಗಳೇ ಪ್ರಮುಖವಾಗಿರುವ ಪ್ರದರ್ಶನ ವ್ಯವಸ್ಥೆಗೆ ವಸ್ತುಮೇಳ ಎಂದು ಹೆಸರು. ವಸ್ತುಮೇಳಗಳಲ್ಲಿ ವಿನೋದ ಪ್ರಮೋದಗಳನ್ನು ಹೆಚ್ಚು ಒದಗಿಸಿ ಜನರನ್ನು ಆಕರ್ಷಿಸಲಾಗುತ್ತದೆ.

ಒಂದೊಂದೇ ಕ್ಷೇತ್ರಕ್ಕೆ ಸಂಬಂಧಿಸಿದಂಥ ಪ್ರದರ್ಶನಗಳೂ ನಡೆಯುತ್ತವೆ. ಕೈಗಾರಿಕಾ ವಸ್ತುಪ್ರದರ್ಶನದಲ್ಲಿ ಹೊಸದಾಗಿ ಕಂಡುಹಿಡಿಯಲ್ಪಟ್ಟ ಮತ್ತು ಸುಧಾರಿಸಲ್ಪಟ್ಟ ಯಂತ್ರ ಸಾಮಗ್ರಿಗಳನ್ನು ಇಡುತ್ತಾರೆ. ಅವುಗಳನ್ನು ಬಳಸುವ ವಿಧಾನವನ್ನು ಪ್ರದರ್ಶಿಸುತ್ತಾರೆ. ವ್ಯವಸಾಯ ವಸ್ತುಪ್ರದರ್ಶನದಲ್ಲಿ ತಳಿಬೀಜಗಳ ಉಪಯೋಗ, ಗೊಬ್ಬರಗಳ ವೈವಿಧ್ಯ ಮುಂತಾದ ಅಂಶಗಳನ್ನು ಒಳಗೊಂಡಂತೆ ಪ್ರದರ್ಶನವನ್ನು ಏರ್ಪಡಿಸಲಾಗುತ್ತದೆ. ಫಲಪುಷ್ಪ ಪ್ರದರ್ಶನ, ರಾಸುಗಳ ಪ್ರದರ್ಶನ. ವರ್ಣಚಿತ್ರಗಳ ಮರದ ಕೆತ್ತನೆ ಮತ್ತು ಶಿಲ್ಪಗಳ ಪ್ರದರ್ಶನ ಮುಂತಾದ ಪ್ರತ್ಯೇಕ ಪ್ರದರ್ಶನಗಳು ನಡೆಯುವುದೂ ಉಂಟು. ಬೋಧಪ್ರದವಾಗಿರುವುದು ಪ್ರದರ್ಶನಗಳ ವೈಶಿಷ್ಟ್ಯ. ಪುಸ್ತಕಗಳಲ್ಲಿ ವರ್ಣನೆಗಳನ್ನು ಓದಿ ತಿಳಿಯುವುದಕ್ಕಿಂತ ಕಣ್ಣಿನಿಂದ ನೋಡಿ ಗ್ರಹಿಸುವುದು ಸುಲಭ. ಜನರು ಹೊಸ ಹೊಸ ವಿಷಯಗಳನ್ನು ತಿಳಿದುಕೊಳ್ಳಲು ಉತ್ಸುಕರಾಗುವಂತೆ ಪ್ರದರ್ಶನಗಳು ಪ್ರೇರೇಪಿಸುತ್ತವೆ.

ಪ್ರದರ್ಶನಗಳನ್ನು ಅತ್ಯಂತ ಆಕರ್ಷಕವಾಗಿ ನಿರ್ಮಿಸುವ ಆಕಾಂಕ್ಷೆಯಿಂದ ಹೊಸ ಹೊಸ ವಿನ್ಯಾಸಗಳನ್ನು ರಚಿಸಲಾಗುತ್ತದೆ. ಅಂತರರಾಷ್ಟ್ರೀಯ ವಸ್ತುಪ್ರದರ್ಶನಗಳಲ್ಲಿ ವಿಭಾಗಗಳನ್ನು ಅತ್ಯಂತ ಕಲಾತ್ಮಕವಾಗಿಯೂ ಸುಂದರವಾಗಿಯೂ ನಿರ್ಮಿಸುವುದರಲ್ಲಿ ದೇಶಗಳ ನಡುವೆ ಸ್ಪರ್ಧೆಯೇ ಇರುತ್ತದೆ. ಪ್ರದರ್ಶನದ ಸಲುವಾಗಿ ಆದ ನಿರ್ಮಾಣಗಳು ಎಷ್ಟು ಅದ್ಭುತವಾಗಿರುತ್ತವೆಂದರೆ ಪ್ರದರ್ಶನ ಮುಗಿದ ಮೇಲೂ ಕಟ್ಟಡಗಳು ಒಮ್ಮೊಮ್ಮೆ ಶಾಶ್ವತವಾಗಿ ಇರುವುದುಂಟು. ಪರಳಿನ ಮಾದರಿಯ ಗಾಜಿನ ಅರಮನೆಯೊಂದನ್ನು 1851ರ ಬ್ರಿಟಿಷ್ ವಸ್ತುಪ್ರದರ್ಶನಕ್ಕೋಸ್ಕರ ನಿರ್ಮಿಸಲಾಯಿತು. ಪ್ರದರ್ಶನ ಮುಗಿದ ಹಲವು ವರ್ಷಗಳ ಅನಂತರ ಆ ನಿರ್ಮಾಣವನ್ನು ಸ್ಥಳಾಂತರಿಸಿದರು. 1936ರವರೆಗೂ ಅದು ಅಸ್ತಿತ್ವದಲ್ಲಿತ್ತು. ಜಗದ್ವಿಖ್ಯಾತ ಐಫೆಲ್ ಉಕ್ಕಿನ ಗೋಪುರವನ್ನು ನಿರ್ಮಿಸಿದ್ದು 1889ರ ಪ್ಯಾರಿಸ್ ವಸ್ತುಪ್ರದರ್ಶನದ ಸಲುವಾಗಿ. ಪ್ರಪಂಚದ ಅದ್ಭುತ

ಬೆಂಗಳೂರು ಸುಭಾಷ್ ನಗರದ ವಸ್ತುಪ್ರದರ್ಶನದಲ್ಲಿ ಒಂದು ವಿಭಾಗ





ಬೆಂಗಳೂರಿನ ವಸ್ತುಸಂಗ್ರಹಾಲಯದಲ್ಲಿ ಶಿಲ್ಪಕೃತಿಗಳು

ಟ್ಟುವು. ಸರ್ ಹಾನ್ಸ್‌ಸ್ಲೊಆನನ ಸಂಗ್ರಹಾಲಯದಲ್ಲಿನ ವಸ್ತುಗಳನ್ನು 1759ರಲ್ಲಿ ಬ್ರಿಟಿಷ್ ಸರಕಾರ ಕೊಂಡು ಬ್ರಿಟಿಷ್ ಮ್ಯೂಸಿಯಂ (ಬ್ರಿಟಿಷ್ ವಸ್ತುಸಂಗ್ರಹಾಲಯ) ಸ್ಥಾಪಿಸಿತು. ಬ್ರಿಟಿಷ್ ಸಂಗ್ರಹಾಲಯ ಶಿಲ್ಪ ಸಂಗ್ರಹಕ್ಕೆ ವಿಖ್ಯಾತವಾಗಿದೆ.

1773ರಲ್ಲಿ ಅಮೆರಿಕದಲ್ಲಿ ಚಾರ್ಲ್ಸ್‌ಟನ್‌ನಲ್ಲಿ ಮೊದಲ ಸಾರ್ವಜನಿಕ ಸಂಗ್ರಹಾಲಯ ಪ್ರಾರಂಭವಾಯಿತು.

1900ರಿಂದ 1920ರ ವರೆಗೆ ಜರ್ಮನಿಯಲ್ಲಿ 179 ಸಂಗ್ರಹಾಲಯಗಳು ಸ್ಥಾಪಿಸಲ್ಪಟ್ಟುವು. ಆದರೆ ಅದರ ಹಿಂದಿನ ಶತಮಾನದಲ್ಲಿ ಅಷ್ಟೇ ಕಾಲಾವಧಿಯಲ್ಲಿ ಸ್ಥಾಪಿಸಲ್ಪಟ್ಟದ್ದು ಹದಿನೈದು ಸಂಗ್ರಹಾಲಯಗಳು ಮಾತ್ರ. ಎಲ್ಲ ದೇಶಗಳಲ್ಲೂ ಇದೇ ರೀತಿಯಲ್ಲಿ ಸಂಗ್ರಹಾಲಯಗಳ ಸ್ಥಾಪನೆಯಾಯಿತು.

ಮೊದಮೊದಲು ಯಾವ ಕ್ರಮವೂ ಧೋರಣೆಯೂ ಈ ಸಂಗ್ರಹಾಲಯಗಳಲ್ಲಿನ ವಸ್ತುಗಳ ಜೋಡಣೆಯಲ್ಲಿರಲಿಲ್ಲ. ಅನಂತರ ವಸ್ತುಗಳಿಗೆ ಅನುಗುಣವಾಗಿ ಜೋಡಿಸುವ ಪದ್ಧತಿ ಪ್ರಾರಂಭವಾಯಿತು. ಅನಂತರ ಈ ವಸ್ತುಸಂಗ್ರಹಾಲಯಗಳು ವಿಶಿಷ್ಟ ವಿಷಯಗಳಿಗೆ ಅನುಗುಣವಾಗಿ ಏರ್ಪಟ್ಟುವು.

ಹೀಗಾಗಿ ಈಗ ಪ್ರಕೃತಿ ವಿಜ್ಞಾನಕ್ಕೆ ಸಂಬಂಧಿಸಿದ ವಸ್ತು ಸಂಗ್ರಹಾಲಯ, ಕೈಗಾರಿಕೆಗಳಿಗೆ ಸಂಬಂಧಿಸಿದ ವಸ್ತುಸಂಗ್ರಹಾಲಯ ಹೀಗೆ ವಿಶೇಷ ಸಂಗ್ರಹಾಲಯಗಳಿವೆ.

ಈಗಿನ ಅನೇಕ ಶಾಲೆ, ಕಾಲೇಜುಗಳಲ್ಲೂ ಸಂಗ್ರಹಾಲಯಗಳಿರುತ್ತವೆ. ಜೀವಶಾಸ್ತ್ರ, ಭೌತಶಾಸ್ತ್ರ ಮುಂತಾದ ವಿಜ್ಞಾನಗಳನ್ನು ವಿದ್ಯಾರ್ಥಿಗಳಿಗೆ ತಿಳಿಸಿಹೇಳಲು ಈ ಸಂಗ್ರಹಾಲಯಗಳು ಅತ್ಯವಶ್ಯ.

ಭಾರತದಲ್ಲಿ ಹೈದರಾಬಾದಿನಲ್ಲಿರುವ ಸಾಲಾರ್‌ಜಂಗ್ ಸಂಗ್ರಹಾಲಯ ಅತ್ಯಂತ ದೊಡ್ಡ ಖಾಸಗಿ ಸಂಗ್ರಹಾಲಯವಾಗಿದ್ದಿತು. ಈಗ ಅದು ಆಂಧ್ರ ಸರಕಾರದ ಅಧೀನದಲ್ಲಿದೆ. ಮೂರು ತಲೆಮಾರುಗಳ ಈ ಸಂಗ್ರಹ ಏಷ್ಯದಲ್ಲೇ ಅತ್ಯಂತ ದೊಡ್ಡದು. ಈ ಸಂಗ್ರಹಾಲಯಕ್ಕೆ ಮುಖ್ಯ ಕಾರಣನಾದವನು 1949ರಲ್ಲಿ ಮರಣಹೊಂದಿದ ನವಾಬ್ ಸಾಲಾರ್ ಜಂಗ್ ಬಹದ್ದೂರ್. ಪೌರಸ್ತ್ಯ–ಪಾಶ್ಚಾತ್ಯ ಕಲಾವಸ್ತುಗಳನ್ನು ಈ ಸಂಗ್ರಹಾಲಯದಲ್ಲಿ ಜೋಡಿಸಲಾಗಿದೆ.

ದೆಹಲಿಯಲ್ಲಿರುವ ಅಂತರರಾಷ್ಟ್ರೀಯ ಬೊಂಬೆಗಳ ಸಂಗ್ರಹಾಲಯ, ಚಿತ್ರಕಲೆಯ ರಾಷ್ಟ್ರೀಯ ಗ್ಯಾಲರಿ, ಮುಂಬಯಿಯಲ್ಲಿರುವ ಸರ್ ಜಹಾಂಗೀರ್ ಆರ್ಟ್ ಗ್ಯಾಲರಿ, ಬೆಂಗಳೂರಿನಲ್ಲಿ ತಾಂತ್ರಿಕ ಹಾಗೂ ಕೈಗಾರಿಕಾ ವಸ್ತುಗಳ ಮಾದರಿಗಳನ್ನುಳ್ಳ ವಿಶ್ವೇಶ್ವರಯ್ಯ ಕೈಗಾರಿಕಾ ವಸ್ತುಸಂಗ್ರಹಾಲಯ— ಇವು ಭಾರತದ ಪ್ರಮುಖ ಸಂಗ್ರಹಾಲಯಗಳು.

1956ರಲ್ಲಿ ಭಾರತ ಸರಕಾರ ಸಂಗ್ರಹಾಲಯಗಳ ಮೇಲ್ವಿಚಾರಣೆಗಾಗಿಯೂ ನಿರ್ವಹಣೆಗಾಗಿಯೂ ಒಂದು ಕೇಂದ್ರ ಸಂಗ್ರಹಾಲಯ ಸಲಹಾ ಸಮಿತಿಯನ್ನು ರಚಿಸಿತು.

ವಸ್ತುಗಳನ್ನು ಸಂಗ್ರಹಿಸುವುದು, ಕಾಪಾಡುವುದು ಮತ್ತು ಸಾರ್ವಜನಿಕರಿಗೆ ತಿಳಿಯುವಂತೆ ಪ್ರದರ್ಶಿಸುವುದು—ಇವು ಸಂಗ್ರಹಾಲಯದಲ್ಲಿ ಕೆಲಸ ಮಾಡುವವರ ಮುಖ್ಯ ಕರ್ತವ್ಯಗಳು. ವಸ್ತುಸಂಗ್ರಹಾಲಯಗಳು ಸಂಶೋಧಕರಿಗೆ ನೆರವಾಗುತ್ತವೆ. ಜನರಲ್ಲಿ ತಿಳಿವು ಮೂಡಿಸುತ್ತವೆ. ಆಧುನಿಕ ಶಿಕ್ಷಣದಲ್ಲಿ ವಸ್ತುಸಂಗ್ರಹಾಲಯಗಳಿಗೆ ವಿಶೇಷ ಮಹತ್ವ.

### ವ್ಯಂಗ್ಯಚಿತ್ರ

ಒಂದು ವಿಮಾನ ನಿಲ್ದಾಣ. ರಾಜಕಾರಣಿಯೊಬ್ಬ ವಿಮಾನದಿಂದ ಇಳಿಯುತ್ತಿದ್ದಾನೆ, ತೃಪ್ತಿಯ ಮಂದಹಾಸ ತುಟಿಯ ಮೇಲೆ. ಕೊಡೆ ತೆರೆದು ಹಿಡಿದಿದ್ದಾನೆ. ಅದರ ಮೇಲೆ 'ಮ್ಯೂನಿಕ್ ಒಪ್ಪಂದ' ಎಂದು ಬರೆದಿದೆ. ಮೇಲಿನಿಂದ ಜರ್ಮನಿಯ ವಿಮಾನಗಳು ಬಾಂಬುಗಳನ್ನು ಸುರಿಸುತ್ತಿವೆ. ಅವುಗಳ ಮೇಲೆ 'ನಮ್ಮ ಪೀಳಿಗೆಗೆ ಗೌರವಯುತವಾದ ಶಾಂತಿ' ಎಂಬ ಮಾತುಗಳಿವೆ.

ಇದು 1939ರ ಆಗಸ್ಟಿನಲ್ಲಿ ಇಂಗ್ಲೆಂಡಿನ ಪತ್ರಿಕೆಯೊಂದರಲ್ಲಿ ಪ್ರಕಟವಾದ ಚಿತ್ರ.

ಇದರ ಅರ್ಥವೇನು ?

ಜರ್ಮನಿಯ ಹಿಟ್ಲರ್ ಆಗಲೇ ಒಂದಾದ ಮೇಲೊಂದರಂತೆ ಯೂರೋಪಿನ ಸಣ್ಣ ರಾಷ್ಟ್ರಗಳನ್ನು ಕಬಳಿಸುತ್ತಿದ್ದ. ಇತರ ದೇಶಗಳು ಅವನಿಗೆ ಎಚ್ಚರಿಕೆ ಕೊಡುವುದರಲ್ಲಿಯೇ ತೃಪ್ತವಾಗುತ್ತಿದ್ದುವು. ಅವನು ಚೆಕೊಸ್ಲೊವಾಕಿಯಾಕ್ಕೆ ಮುತ್ತಿಗೆಹಾಕಿದಾಗ, ಯೂರೋಪಿನ ಹಲವು ರಾಷ್ಟ್ರಗಳಲ್ಲಿ ಭಯ, ಕೋಪ, ಕಳವಳ ಉಂಟಾದುವು. ಇಂಗ್ಲೆಂಡಿನ ಪ್ರಧಾನಮಂತ್ರಿ ನೆವಿಲ್ ಚೇಂಬರ್‌ಲೇನ್ ಹಿಟ್ಲರನನ್ನು ಮ್ಯೂನಿಕ್ ನಗರದಲ್ಲಿ ಭೇಟಿ ಮಾಡಿದ. ಹಿಟ್ಲರ್ ತಾನು ಇನ್ನಾವ ದೇಶದ ಮೇಲೆಯೂ ಕಣ್ಣಿಡುವುದಿಲ್ಲ, ಮತ್ತೆ ಯಾವ ನಾಡಿಗೂ ತನ್ನ ಸೈನ್ಯದಿಂದ ಅಪಾಯವಿಲ್ಲ ಎಂದು ಆಶ್ವಾಸನೆ ನೀಡಿದ. ಇದನ್ನು ನಂಬಿದ ಚೇಂಬರ್‌ಲೇನ್ ಲಂಡನಿಗೆ



'ಜಗತ್ತನ್ನೇ ಜಯಿಸಬಯಸಿದ ಹಿಟ್ಲರ್'
—ರಷ್ಯನ್ ಪತ್ರಿಕೆಯಲ್ಲಿ



'ಮಹಿಳೆಗೆ ಸಮಾನಹಕ್ಕುಗಳು ದೊರೆತಾಗ'
—ಈಜಿಪ್ಟಿನ ಪತ್ರಿಕೆಯಲ್ಲಿ

ಹಿಂದಿರುಗಿದಾಗ ತುಂಬ ಹೆಮ್ಮೆಯಿಂದ, 'ನಾನು ನಮ್ಮ ಪೀಳಿಗೆಗೆ ಗೌರವಯುತವಾದ ಶಾಂತಿಯನ್ನು ತಂದಿದ್ದೇನೆ' ಎಂದ.

ಚೇಂಬರ್‌ಲೇನ್ ಯಾವಾಗ ಹೊರಕ್ಕೆ ಕಾಲಿಟ್ಟರೂ ಅವನೊಡನೆ ಕೊಡೆ. ಹೀಗಾಗಿ ಅವನ ಛತ್ರಿ ಪ್ರಸಿದ್ಧವಾಗಿತ್ತು.

ಚಿತ್ರ ಚೇಂಬರ್‌ಲೇನನ ಬೆಪ್ಪುತನವನ್ನು ಹಾಸ್ಯಮಾಡುತ್ತದೆ. ಬಾಂಬುಗಳನ್ನು ಕೊಡೆಯಿಂದ ತಡೆಗಟ್ಟುತ್ತೇನೆ ಎಂಬುವುದು ಎಷ್ಟು ದಡ್ಡತನವೋ, ಒಂದು ತುಂಡು ಕಾಗದದ ಮೇಲಿನ ಒಪ್ಪಂದದಿಂದ ವಿಶ್ವಾಸಕ್ಕೆ ಯೋಗ್ಯನಲ್ಲದ ಹಿಟ್ಲರನಂಥ ಅಹಂಕಾರಿಯನ್ನು ತಡೆಗಟ್ಟಿದೆ ಎಂದುಕೊಳ್ಳುವುದೂ ಅಷ್ಟೇ ದಡ್ಡತನ ಎಂಬುದು ಇದರ ಭಾವ. ಈ ಚಿತ್ರ ಪ್ರಕಟವಾದ ನಾಲ್ಕನೆಯ ದಿನ ಹಿಟ್ಲರ್ ಪೋಲೆಂಡನ್ನು ಮುತ್ತಿದ. ಎರಡನೆಯ ಪ್ರಪಂಚದ ಯುದ್ಧ ಪ್ರಾರಂಭವಾಯಿತು.

ಚೇಂಬರ್‌ಲೇನನ ಬೆಪ್ಪುತನವನ್ನು ಎಷ್ಟೇ ಪುಟಗಳಲ್ಲಿ ವರ್ಣಿಸಿದ್ದರೂ ಆ ವ್ಯಂಗ್ಯಚಿತ್ರ ಮಾಡಿದ ಪರಿಣಾಮವನ್ನು ಸಾಧಿಸಲಾಗುತ್ತಿರಲಿಲ್ಲ.

ದಿನಪತ್ರಿಕೆಗಳಲ್ಲಿ, ವಾರಪತ್ರಿಕೆಗಳಲ್ಲಿ, ವ್ಯಂಗ್ಯಚಿತ್ರಗಳು ತಪ್ಪದೆ ಪ್ರಕಟವಾಗುತ್ತವೆ. ಬೇಸರ, ಜಂಜಡ ಮುಂತಾದ ಭಾವನೆಗಳಿಗೆ ಕಾರಣವಾಗುವ ಸುದ್ದಿಗಳ ಮಧ್ಯೆ ಕಾಣಿಸಿಕೊಳ್ಳುವ ವ್ಯಂಗ್ಯಚಿತ್ರಗಳು ಉಲ್ಲಾಸವುಂಟುಮಾಡುತ್ತವೆ. ನಿತ್ಯಜೀವನದ ಪಾತ್ರಗಳನ್ನು ಆಯ್ದು ಯಾರಲ್ಲಾದರೂ ಸಾಮಾನ್ಯವಾಗಿ ಇರಬಹುದಾದ ದೌರ್ಬಲ್ಯಗಳನ್ನು ಎತ್ತಿತೋರಿಸುವ ಕೌಶಲ ವ್ಯಂಗ್ಯಚಿತ್ರಕಾರನದು.

ಟೀಕೆ, ಅಸಮಾಧಾನ, ವ್ಯಥೆ, ಹಾಸ್ಯ ಮುಂತಾದ ಇಂಗಿತಗಳನ್ನು ಒಳಗೊಂಡ ಚಿತ್ರಗಳು ವ್ಯಂಗ್ಯಚಿತ್ರಗಳು. ವ್ಯಕ್ತಿ, ಸಂಸ್ಥೆ, ಸರ್ಕಾರ, ಮನುಷ್ಯ, ಪ್ರಾಣಿ, ಪಕ್ಷಿ ಮುಂತಾದ ಪಾತ್ರಗಳ ತದ್ರೂಪವನ್ನು [illegible] ಗಳಿಯು [illegible] ವ್ಯಂಗ್ಯಚಿತ್ರಗಳ ಟೀಕೆಗೆ ವಿಶೇಷವಾದದ್ದು. ವ್ಯಂಗ್ಯಚಿತ್ರದಲ್ಲಿ ಟೀಕೆ ಪ್ರಧಾನವಾಗಿ ಇರುವುದು ಪ್ರಮಾಣಕ್ಕಿಂತ ಹೆಚ್ಚು

ವಾಗಿ ಚಿತ್ರಿತವಾಗಿರುತ್ತದೆ. ಕೋತಿ, ನಾಯಿಗಳ ಬಾಲಕ್ಕೆ ವ್ಯಂಗ್ಯಚಿತ್ರಗಳಲ್ಲಿ ಪ್ರಾಧಾನ್ಯ. ಪ್ರತಿಯೊಬ್ಬ ಮನುಷ್ಯನಲ್ಲಿ ಎದ್ದುಕಾಣುವ ಮೂಗು, ಕಿವಿ, ಹಲ್ಲು, ಕೂದಲು ಮುಂತಾದ ಲಕ್ಷಣಗಳು ವ್ಯಂಗ್ಯಚಿತ್ರದಲ್ಲಿ ಉತ್ಪ್ರೇಕ್ಷೆಗೊಳ್ಳುತ್ತವೆ. ಇಂಗ್ಲೆಂಡಿನ ಚೇಂಬರ್‌ಲೇನ್ ಛತ್ರಿ, ಚರ್ಚಿಲ್ ಸಿಗಾರು, ಫ್ರಾನ್ಸಿನ ದಗಾಲ್ ಮೂಗು, ಜರ್ಮನಿಯ ಹಿಟ್ಲರ್ ಮೀಸೆ—ಇಂಥವು ವ್ಯಂಗ್ಯಚಿತ್ರಕಾರರಿಗೆ ವರಗಳು.

ವ್ಯಂಗ್ಯಚಿತ್ರಗಳಿಗೆ ಸಿಲುಕುವವರು, ಸಾಮಾನ್ಯವಾಗಿ ರಾಜಕಾರಣಿಗಳು. ಅವರ ಧೋರಣೆ ಮತ್ತು ನೀತಿಗಳು ವ್ಯಂಗ್ಯಚಿತ್ರಕಾರನ ಪರಿಹಾಸ್ಯಕ್ಕೆ ಒಳಗಾಗುತ್ತವೆ. ಒಂದು ಸನ್ನಿವೇಶವನ್ನು ವಿಶೇಷ ದೃಷ್ಟಿಯಿಂದ ಚಿತ್ರಿಸುವುದು, ನಗೆಯನ್ನು ತರಿಸುವಂತೆ ಅಳವಡಿಸುವುದು ವ್ಯಂಗ್ಯಚಿತ್ರಕಾರನ ಕೈಚಳಕ. ಆದರೆ ವ್ಯಂಗ್ಯಚಿತ್ರಗಳು ನಗೆಯನ್ನು ತರಿಸಿದಂತೆಯೇ, ವಿಷಯವನ್ನು ಕುರಿತು ಆಲೋಚಿಸುವಂತೆ ಪ್ರೇರಿಸುತ್ತವೆ. ಕೆಲವು ಚಿತ್ರಗಳು ಗಂಭೀರವಾಗಿ ಯೋಚಿಸುವಂತೆ ಮಾಡುತ್ತವೆ.

ಪಾತ್ರಗಳ ಕೆಲವು ಅವಯವಗಳ ಸ್ವರೂಪ ಬದಲಾಯಿಸಿ ಬರೆಯುವ ಪರಿಪಾಠ ಪ್ರಾಚೀನ ಗ್ರೀಕ್ ಮತ್ತು ಈಜಿಪ್ಟ್ ಜನಾಂಗಗಳಲ್ಲಿ ಇತ್ತು. ಹದಿನಾರು ಮತ್ತು ಹದಿನೇಳನೆಯ ಶತಮಾನಗಳ ಇಟಲಿಯ ಚಿತ್ರಕಾರರು ಸ್ವಾರಸ್ಯಕರ ಅಣಕುಚಿತ್ರಗಳನ್ನು ಬರೆಯುತ್ತಿದ್ದರು.

ಹದಿನೆಂಟನೆಯ ಶತಮಾನದ ಇಂಗ್ಲಿಷ್ ಚಿತ್ರಕಾರ ವಿಲಿಯಂ ಹೋಗಾರ್ತ್ ತನ್ನ ಅಣಕುಚಿತ್ರಗಳ ಮೂಲಕ ಸಮಾಜದ ನೀತಿಗಳನ್ನು, ಸಂಪ್ರದಾಯಗಳನ್ನು ಟೀಕಿಸತೊಡಗಿದ. ಹಳೆಯ ಇಟಾಲಿಯನ್ ಚಿತ್ರಗಳ ರೂಪರೇಷೆಗಳು ಅವನ ಚಿತ್ರಗಳಲ್ಲಿ ಇದ್ದುವಾದರೂ ಅವನ ಅಣಕದ ಹಿಂದೆ ಸುಧಾರಣೆಯ ಮನೋಭಾವ ಇರುತ್ತಿತ್ತು. ಅವನ ಅನುಯಾಯಿಗಳಾದ ಥಾಮಸ್ ರೋಲಂಡ್‌ಸನ್ ಮತ್ತು ಜೇಮ್ಸ್ ಇವರು, ಅಣಕದ ಚಿತ್ರಗಳನ್ನು ತಮ್ಮ ವಿರುದ್ಧ ಪಕ್ಷದ ರಾಜಕೀಯ ಪಟುಗಳನ್ನು ಟೀಕಿಸಲು ಬಳಸಿದರು. ಹತ್ತೊಂಬತ್ತನೆಯ ಶತಮಾನದ ಪ್ರಾರಂಭದಲ್ಲಿ ಅಣಕು ಚಿತ್ರಗಳ ಬೆಳವಣಿಗೆ ಫ್ರಾನ್ಸಿನಲ್ಲಿ ಸಮೃದ್ಧವಾಯಿತು. ವ್ಯಂಗ್ಯಚಿತ್ರಗಳಿಗೆ ಮೀಸಲಾದ 'ಪಂಚ್' ಎಂಬ ಪತ್ರಿಕೆ ಲಂಡನಿನಲ್ಲಿ 1841ರಲ್ಲಿ ಪ್ರಾರಂಭವಾಯಿತು. ಇನ್ನೂ ನಡೆಯುತ್ತಿದೆ. ಹತ್ತೊಂಬತ್ತನೆಯ ಶತಮಾನದಲ್ಲಿ ಪ್ರಸಿದ್ಧ ವ್ಯಂಗ್ಯಚಿತ್ರಗಳನ್ನು ಒಳಗೊಂಡ ಪತ್ರಿಕೆಗಳು ಅಮೆರಿಕದಲ್ಲಿ ತಲೆಯೆತ್ತಿ ಸರಕಾರವನ್ನು ಟೀಕಿಸುತ್ತಿದ್ದುವು. ಅಮೆರಿಕದ ರಿಪಬ್ಲಿಕನ್ ಪಕ್ಷದ ಆನೆ, ಡೆಮೊಕ್ರಾಟಿಕ್ ಪಕ್ಷದ ಕತ್ತೆ ಇವೆರಡೂ ಚುನಾವಣಾ ಸಂಕೇತಗಳು. ಮೊದಲಬಾರಿಗೆ ಆ ಚಿತ್ರಗಳನ್ನು ಬಳಸಿದವನು ಥಾಮಸ್ ಹಾರ್ಪರ್ ಎಂಬ ವ್ಯಂಗ್ಯಚಿತ್ರಕಾರ. ಕ್ರಮೇಣ ಆ ಚಿತ್ರಗಳೇ ಅಂಗೀಕೃತ ಸಂಕೇತಗಳಾದುವು. ಇಪ್ಪತ್ತನೆಯ ಶತಮಾನದಲ್ಲಿ ದಿನಪತ್ರಿಕೆಗಳು ಮತ್ತು ವಾರಪತ್ರಿಕೆಗಳಲ್ಲಿ ತುಂಬ ವ್ಯಂಗ್ಯಚಿತ್ರಗಳು ಕಾಣಿಸಿಕೊಂಡುವು. ಪತ್ರಿಕೆಗಳಿಗೆ ವರಮಾನ ಒದಗಿಸುವ ಕಡೆಯ ಪುಟದ ಜಾಹೀರಾತುಗಳ ಪಕ್ಕದಲ್ಲಿ ವ್ಯಂಗ್ಯಚಿತ್ರಗಳನ್ನು ಅಚ್ಚುಮಾಡುವುದರ ಮೂಲಕ ಜಾಹೀರಾತುಗಳ ಕಡೆ ಜನ ಗಮನಹರಿಸುವಂತೆ ಮಾಡುವ ಪ್ರಯತ್ನಗಳು ಅಮೆರಿಕದಲ್ಲಿ ನಡೆದುವು.

ಭಾರತದಲ್ಲಿ 1870ರಲ್ಲಿ ಕಲ್ಕತ್ತದ 'ಸುಲಭ ಸಮಾಚಾರ' ಎಂಬ ಪತ್ರಿಕೆ ಮೊಟ್ಟಮೊದಲು ವ್ಯಂಗ್ಯಚಿತ್ರಗಳನ್ನು ಪ್ರಕಟಿಸಿತು. ಅನಂತರ ವ್ಯಂಗ್ಯಚಿತ್ರಗಳ ಟೀಕೆ ವೇಗವಾಗಿ ಬೆಳೆಯಿತು. ವ್ಯಂಗ್ಯಚಿತ್ರಗಳಿಗೆ ಮೀಸಲಾದ 'ಶಂಕರ್ಸ್ ವೀಕ್ಲಿ' ಪ್ರಾರಂಭವಾಯಿತು. ಧಾರಾವಾಹಿ ಅಣಕುಚಿತ್ರಗಳನ್ನು

ಪತ್ರಿಕೋದ್ಯಮ ಸಿಂಡಿಕೇಟುಗಳು ಪತ್ರಿಕೆಗಳಿಗೆ ಮಾರುತ್ತವೆ. ಪತ್ರಿಕೆಗಳಲ್ಲಿ ಅಲ್ಲಿಯೇ ದುಡಿಯುವ ಕಲಾವಿದರಲ್ಲದೆ, ಹೊರಗಿನ ಕಲಾವಿದರು ಒದಗಿಸುವ ವ್ಯಂಗ್ಯಚಿತ್ರಗಳೂ ಪ್ರಕಟವಾಗುತ್ತವೆ.

ವ್ಯಂಗ್ಯಚಿತ್ರಕಲೆ ನವೀನ ಪತ್ರಿಕೋದ್ಯಮದ ಅವಿಭಾಜ್ಯ ಅಂಗ. ವ್ಯಂಗ್ಯಚಿತ್ರಗಳು ಒಂದು ಪರಿಣಾಮಕಾರಿ ಮಾಧ್ಯಮ. ಪತ್ರಿಕೆಯ ನೀತಿ ಧೋರಣೆಗಳು ಅವುಗಳ ವ್ಯಂಗ್ಯಚಿತ್ರಗಳಲ್ಲಿ ಪ್ರತಿಫಲಿಸುತ್ತವೆ.

ಪರಿಸ್ಥಿತಿಯನ್ನು ಕೂಡಲೇ ತಿಳಿದುಕೊಳ್ಳುವ ಚಾಕಚಕ್ಯ, ಟೀಕೆಯನ್ನು ಹಾಸ್ಯಯುಕ್ತವಾಗಿ ಪ್ರಕಟಿಸುವ ಪ್ರತಿಭೆ ಇವು ವ್ಯಂಗ್ಯಚಿತ್ರಕಾರನಲ್ಲಿ ಅವಶ್ಯವಾಗಿರಬೇಕಾದ ಗುಣಗಳು.

## ವ್ಯವಸಾಯ

ಗವಿಮಾನವಯುಗದಲ್ಲಿ ಮನುಷ್ಯ ಆಹಾರಕ್ಕೆ ನಿಸರ್ಗವನ್ನೇ ನೆಚ್ಚಿದ್ದ. ತಾನಾಗಿ ಬೆಳೆದ ಗೆಡ್ಡೆ, ಗೆಣಸು, ಸೊಪ್ಪು, ಕಾಯಿ, ಹಣ್ಣು, ಇಲ್ಲವೆ ಪ್ರಾಣಿಗಳ ಮಾಂಸ ಅವನ ಆಹಾರ. ಆಗ ಒಬ್ಬ ಮನುಷ್ಯನಿಗೆ ಬೇಕಾದಷ್ಟು ಆಹಾರ ಐದು ಚದರ ಕಿಲೊಮಿಟರುಗಳಲ್ಲಿ ಬೆಳೆಯುತ್ತಿತ್ತು. ಈಗ ಮುಂದುವರಿದ ದೇಶಗಳಲ್ಲಿ 2.6 ಚದರ ಕಿಲೊಮಿಟರ್ ಪ್ರದೇಶದಲ್ಲಿ 750 ಜನರಿಗಾಗುವಷ್ಟು ಆಹಾರ ಬೆಳೆಯುತ್ತಾರೆ.

ಈ ಪವಾಡವನ್ನು ಸಾಧ್ಯಮಾಡಿರುವುದು ವ್ಯವಸಾಯ.

ಸಾಮಾನ್ಯವಾಗಿ ಭೂಮಿಯಲ್ಲಿ ಉತ್ತಿ, ಬಿತ್ತಿ, ಬೆಳೆ ತೆಗೆಯುವುದಕ್ಕೆ ವ್ಯವಸಾಯ ಎನ್ನುತ್ತೇವೆ. ಹೇಗೆ ಬೆಳೆ ಚೆನ್ನಾಗಿ ತೆಗೆಯಬೇಕೆಂಬುದೂ ಒಂದು ವಿಜ್ಞಾನವೇ. ಆಧುನಿಕ ಯುಗದಲ್ಲಿ ವ್ಯವಸಾಯ ಶಬ್ದವನ್ನು ಇನ್ನೂ ಒಂದು ಅರ್ಥದಲ್ಲಿ ಉಪಯೋಗಿಸುತ್ತಿದ್ದಾರೆ. ಹೊಲ ಸಾಗುವಳಿ ಮಾಡುವುದಲ್ಲದೆ, ಮನುಷ್ಯನ ಆಹಾರಕ್ಕಾಗಿ ಅಥವಾ ಬೇಸಾಯಗಾರನ ಉಪಯೋಗಕ್ಕಾಗಿ ಅವಶ್ಯವಿರುವ ದನ, ಕರು, ಕುರಿ, ಕೋಳಿ, ಹಂದಿ ಮುಂತಾದುವನ್ನು ಸಾಕಿ ಸಲಹುವುದೂ ವ್ಯವಸಾಯವೆ ಆಗುತ್ತಿದೆ.

ಮೊದಲು ಮನುಷ್ಯ ಬೇಟೆಯಾಡಿ, ಮತ್ತು ಹಣ್ಣು ಹಂಪಲು ಗೆಡ್ಡೆ ಗೆಣಸುಗಳನ್ನು ಹುಡುಕಿ ತಂದು, ಆಹಾರ ಸೇವಿಸುತ್ತಿದ್ದ. ಹೊಸ ಶಿಲಾಯುಗದಲ್ಲಿ ಎಂದರೆ ಸುಮಾರು 10,000 ವರ್ಷಗಳ ಹಿಂದೆ ವ್ಯವಸಾಯ ಮಾಡುವುದಕ್ಕೆ ಜನ ಆರಂಭಿಸಿದರು. ತುದಿ ಚೂಪಾಗಿದ್ದ ಅಥವಾ ಚೂಪಾದ ಮೂಳೆ (ಎಲುಬು) ಜೋಡಿಸಿದ್ದ ಕಡ್ಡಿಯಿಂದ ನೆಲವನ್ನು ಕೆತ್ತಿ ಧಾನ್ಯವನ್ನು ಕೈಗಳಿಂದ ಚೆಲ್ಲುತ್ತಿದ್ದರು.

ನೈಲ್, ಟೈಗ್ರಿಸ್ ಮತ್ತು ಯೂಫ್ರೇಟಿಸ್ ನದಿಗಳ ಕಣಿವೆ ಪ್ರದೇಶಗಳಲ್ಲಿ ವ್ಯವಸಾಯದ ಮೊದಲ ಪ್ರಯತ್ನಗಳು ನಡೆದುವು. ಈಜಿಪ್ಟಿನಲ್ಲಿ ಗೋರಿಗಳನ್ನು ಅಗೆದಾಗ ಅಲ್ಲಿ ಧಾನ್ಯಗಳು ದೊರೆತು, ವ್ಯವಸಾಯ ಅಲ್ಲಿ ಬಹಳ ಹಿಂದಿನಿಂದಲೂ ಪ್ರಚುರವಾಗಿತ್ತೆಂಬುದು ವ್ಯಕ್ತವಾಗಿದೆ. ಚೂಪಾದ ತುದಿಯಿದ್ದ ಕಡ್ಡಿಯಿಂದ ನೆಲವನ್ನು ಕೆತ್ತಿ ಧಾನ್ಯವನ್ನು ಬಿತ್ತುತ್ತಿದ್ದರು. ಈ ಕಡ್ಡಿಗೇ ಕಾಲಿಟ್ಟುಕೊಳ್ಳುವುದಕ್ಕೆ ಅನುಕೂಲವಾಗಿರುವಂತೆ ಹಲಗೆಯೊಂದನ್ನು ಜೋಡಿಸಿದರು. ಚೂಪಾದ ಬೆಣಚುಕಲ್ಲಿನ ಹಲಗೆ ಮತ್ತು ಮರದಿಂದ ಮಾಡಿದ ಕುಡುಗೋಲಿನಿಂದ ಬೆಳೆಯನ್ನು ಕುಯ್ಯುತ್ತಿದ್ದರು. ಈ ಉಪಕರಣಗಳ ಸುಧಾರಣೆಗೆ ಶತಮಾನಗಳ ಕಾಲ ಬೇಕಾಯಿತು. ಕ್ರಿ.ಪೂ. 2000ದಲ್ಲಿ ಬೆಣಚುಕಲ್ಲಿನ ಕುಡುಗೋಲಿದ್ದುದು ಮುಂದೆ ಹಿತ್ತಾಳೆಯ ಕುಡುಗೋಲಾಯಿತು. ಪ್ರಕೃತಿಸಿದ್ಧವಾದ ಗೊಬ್ಬರವನ್ನು ಅವರು ಉಪಯೋಗಿಸುತ್ತಿದ್ದರು.

ರೋಮನರು ಬೆಳೆಗಳ ಆವರ್ತನ ಪದ್ಧತಿಯನ್ನು ಅನುಸರಿಸಿದವರಲ್ಲಿ ಮೊದಲಿಗರು. ನೇಗಿಲಿಗೆ ಎತ್ತನ್ನು ಕಟ್ಟಿ ಉಳುವುದನ್ನು ಆರಂಭಿಸಿದವರು ಸ್ಯಾಕ್ಸನರು. ನಾರ್ಮನರು ಉಳುಮೆಗೆ ಎತ್ತಿನ ಬದಲು ಕುದುರೆಯನ್ನು ಕಟ್ಟುತ್ತಿದ್ದರು.

1701ರಲ್ಲಿ ಜೆಥ್ರೊ ಟುಲ್ ಎಂಬವನು ಬಿತ್ತುವ ಯಂತ್ರವನ್ನು ಕಂಡುಹಿಡಿದ. ಇಂಗ್ಲೆಂಡಿನ ಪ್ಯಾಟ್ರಿಕ್ ಬೆಲ್ ಕುಯ್ಯುವ ಯಂತ್ರವನ್ನು ನಿರ್ಮಿಸಿದ. ಈ ಯಂತ್ರಗಳಿಂದಾದ ಪ್ರಯೋಜನ ಅಷ್ಟಿಷ್ಟಲ್ಲ. ಕೃಷಿಭೂಮಿ ಹೆಚ್ಚಾಗಿದ್ದು, ದುಡಿಯಲು ಬರುವ ಜನ ಕಡಮೆ ಇದ್ದ ಸ್ಥಳಗಳಲ್ಲಂತೂ ಇವು ಅಮೂಲ್ಯವಾದುವು. ಅಮೆರಿಕ ಸಂಯುಕ್ತ ಸಂಸ್ಥಾನದ ಸೈರಸ್ ಮೆಕ್‌ಕಾರ್ಮಿಕ್ ಮತ್ತು ಅವನ ತಂದೆ ಒಂದು ಕುಯ್ಯುವ ಯಂತ್ರವನ್ನು ರಚಿಸಿದರು. ತೆನೆ ಬಡಿಯುವ ಯಂತ್ರ ರೈತರ ಕೆಲಸವನ್ನು ಹಗುರಗೊಳಿಸಿತು.

ವ್ಯವಸಾಯ ಕ್ಷೇತ್ರದಲ್ಲಿ ಮಣ್ಣಿನ ಪಾತ್ರ ಮಹತ್ವದ್ದು. ಮಣ್ಣಿನ ಗುಣಕ್ಕೆ ಹೊಂದಿ ನಿರ್ದಿಷ್ಟ ಬೆಳೆ. ಗೊಬ್ಬರಗಳ ಬಗೆಗೆ ಮನುಷ್ಯ ನಿರ್ಣಯಿಸಿದ. ಜಾನ್ ಲಾಸೆ ಮತ್ತು ಹೆನ್ರಿ ಗಿಲ್ಬರ್ಟ್ ಎಂಬವರು 1840ರಲ್ಲಿ ಪ್ರಯೋಗಶಾಲೆಯೊಂದನ್ನು ಸ್ಥಾಪಿಸಿದರು, ಅಲ್ಲಿ ಗಿಡಗಳಿಗೆ ಫಾಸ್ಫೇಟ್ ಅಗತ್ಯವಾಗಿ ಬೇಕೆಂಬುದನ್ನು ಕಂಡು ಕೃತಕಗೊಬ್ಬರ ತಯಾರಿಸುವುದನ್ನು ಕಂಡುಹಿಡಿದರು.

ವಿಶ್ವಸಂಸ್ಥೆಗೆ ಸೇರಿದ 'ಆಹಾರ-ಕೃಷಿಸಂಸ್ಥೆ' ವ್ಯವಸಾಯ ಹಿಂದುಳಿದಿರುವ ದೇಶಗಳಿಗೆ ವೈಜ್ಞಾನಿಕ ವ್ಯವಸಾಯ ಪದ್ಧತಿಯನ್ನು ಕಲಿಸಲು ಪರಿಣತರನ್ನು ಕಳುಹಿಸಿ ಸಹಾಯ ಮಾಡುತ್ತಿದೆ.

ಮೊದಮೊದಲು ರೈತರು ಇಷ್ಟಪಡದಿದ್ದರೂ ರಷ್ಯ ಕೂಡು ಬೇಸಾಯ ಪದ್ಧತಿಯನ್ನು ಜಾರಿಗೆ ತಂದಿತು. ಇದರಿಂದ ಕೆಲವು ಅನುಕೂಲಗಳಿವೆ. ಒಬ್ಬನೇ ರೈತ ಯಂತ್ರವನ್ನು ಬಾಡಿಗೆಗೆ ತಂದು ನಿರ್ವಹಿಸುವುದು ಅಸಾಧ್ಯ. ನಾಲ್ಕಾರು ರೈತರು ಒಟ್ಟಾಗಿ ಸೇರಿ ಯಂತ್ರವನ್ನು ಬಾಡಿಗೆಗೆ ತಂದರೆ ವೆಚ್ಚವನ್ನು ಎಲ್ಲರೂ ಹಂಚಿಕೊಳ್ಳಬಹುದು. ಕೆಲವರು ಒಂದು ಕಡೆಯಿಂದ ತಮ್ಮೆಲ್ಲರ ಜಮೀನನ್ನೂ ಉಳುತ್ತಾ ಬಂದರೆ, ಮತ್ತೆ ಹಲವರು ಬಿತ್ತುತ್ತಾ ಬರುತ್ತಾರೆ. ಹೀಗೆ ಆ ಗುಂಪಿನ ಎಲ್ಲರ ಜಮೀನು ಏಕಕಾಲದಲ್ಲಿ ಬಿತ್ತನೆ ಆಗಿಬಿಡುತ್ತದೆ. ವ್ಯಕ್ತಿಶಃ ಶ್ರಮವೂ ಕಡಮೆ. ಕೊನೆಯಲ್ಲಿ ಧಾನ್ಯಗಳನ್ನು ಹಂಚಿಕೊಳ್ಳುತ್ತಾರೆ. ಇಸ್ರೇಲ್ ಮತ್ತು ಸೂಡಾನ್‌ಗಳಲ್ಲೂ ಈ ಪದ್ಧತಿ ಜನಪ್ರಿಯವಾಗುತ್ತಿದೆ.

ಮೊದಲನೆಯ ಜಾಗತಿಕ ಮಹಾಯುದ್ಧದ ಅನಂತರ ಟ್ರ್ಯಾಕ್ಟರ್ ಬಳಕೆಗೆ ಬಂದಿತು. ಹತ್ತೊಂಬತ್ತನೆಯ ಶತಮಾನದಲ್ಲಿ ಆವಿಯಿಂದ ಕೆಲಸಮಾಡುವ ಬಹು ಘಟಕಗಳುಳ್ಳ ನೇಗಿಲು ಬಂದು ಉಳುಮೆಗೆ ಕುದುರೆ ಉಪಯೋಗಿಸುವುದು ನಿಂತಿತು.

ವ್ಯವಸಾಯದಲ್ಲಿ ಅನೇಕ ಬಗೆಗಳಿವೆ. ಸಾರ್ವತ್ರಿಕ ವ್ಯವಸಾಯದಲ್ಲಿ ವಿವಿಧ ವಸ್ತುಗಳನ್ನು ಒಂದೇ ನೆಲದಲ್ಲಿ ಬೆಳೆಯುತ್ತಾರೆ. ಒಂದು ಕಡೆ ಧಾನ್ಯ, ಸ್ವಲ್ಪ ತರಕಾರಿ, ಮತ್ತೊಂದರಲ್ಲಿ ತೆಂಗು ಹೀಗಿದ್ದರೆ ಸಾರ್ವತ್ರಿಕ ವ್ಯವಸಾಯ ಎನಿಸಿಕೊಳ್ಳುತ್ತದೆ.

ನಿರ್ದಿಷ್ಟ ವ್ಯವಸಾಯ ಮಾಡಬಯಸುವ ರೈತ ಮಣ್ಣಿನ ಗುಣ, ಮಳೆ ಬೀಳುವಿಕೆ, ಉಷ್ಣಾಂಶ, ಬೆಳೆ ಆಗಲು ಬೇಕಾದ ಕಾಲ ಎಲ್ಲವನ್ನೂ ಗಮನದಲ್ಲಿಟ್ಟುಕೊಳ್ಳಬೇಕು. ತನ್ನ ಭೂಮಿಯಲ್ಲಿ ಯಾವ ಪದಾರ್ಥ ಚೆನ್ನಾಗಿ ಬೆಳೆದು ಲಾಭದಾಯಕವಾಗುವುದೋ ಅದನ್ನು ಮಾತ್ರ ಬೆಳೆಯುತ್ತಾನೆ

ಕೆಲವು ರೈತರು ಬೀಜಕ್ಕಾಗಿಯೇ ಭೂಮಿ ಬಿಟ್ಟು ಅಲ್ಲಿ ಅನೇಕ ಬಗೆಯ ಬೀಜಗಳನ್ನು ಸಿದ್ಧಗೊಳಿಸುತ್ತಾರೆ.

ಪ್ರಪಂಚದಲ್ಲಿ ಭಾರತ ಒಂದು ಪ್ರಮುಖ ಕೃಷಿಕ ದೇಶ. ಪಾಟ್ನಾದಲ್ಲಿ ನಡೆದ ಪುರಾತತ್ತ್ವಶೋಧನೆ ಅಲ್ಲಿ 4,000 ವರ್ಷಗಳ ಹಿಂದೆ ಭತ್ತ ಬೆಳೆಯುತ್ತಿದ್ದರು ಎಂಬುದನ್ನು ತೋರಿಸಿದೆ. 1964–65ರಲ್ಲಿ ರಾಷ್ಟ್ರದ ವರಮಾನದ ಶೇಕಡಾ 50 ಭಾಗ ವ್ಯವಸಾಯದಿಂದಲೇ ಬಂದದ್ದು. ದೇಶದಲ್ಲಿ ಒಟ್ಟು ಇರುವ ವ್ಯವಸಾಯಯೋಗ್ಯ ಭೂಮಿ 19 ಕೋಟಿ 43 ಲಕ್ಷ ಹೆಕ್ಟೇರು. ಇದರಲ್ಲಿ 15 ಕೋಟಿ 78 ಲಕ್ಷ ಹೆಕ್ಟೇರು 1965ರಲ್ಲಿ ಸಾಗುವಳಿಯಾಗುತ್ತಿತ್ತು. ಭಾರತ ಕಡಲೆಕಾಯಿ (ಶೇಂಗಾ) ಮತ್ತು ಚಹ ಬೆಳೆಯುವುದರಲ್ಲಿ ಪ್ರಪಂಚದಲ್ಲಿ ಪ್ರಥಮವೆನಿಸಿದೆ. ಅರಗು ಕ್ಷೇತ್ರದಲ್ಲಿಯಂತೂ ಭಾರತದ್ದು ಏಕಸ್ವಾಮ್ಯವೇ ಆಗಿದೆ. ಅಕ್ಕಿ, ಕಬ್ಬು, ಎಳ್ಳು ಮತ್ತು ಹರಳುಬೀಜ ಬೆಳೆಯುವುದರಲ್ಲಿ ಭಾರತದ ಸ್ಥಾನ ಎರಡನೆಯದಾಗಿದೆ.

ಭಾರತದಲ್ಲಿ ಬಹುಮಟ್ಟಿಗೆ ಶತಮಾನಗಳಿಂದ ಒಂದೇ ಬಗೆಯ ಉಪಕರಣಗಳೇ ಉಪಯೋಗದಲ್ಲಿವೆ. ಮರದ ಮತ್ತು ಕಬ್ಬಿಣದ ನೇಗಿಲು, ಹಲುಬೆ, ಕೂರಿಗೆ, ಕುಂಟೆ ಮತ್ತು ಕೈಗಾಡಿಗಳನ್ನು ರೈತರು ಇಟ್ಟುಕೊಂಡಿರುತ್ತಾರೆ. ನೇಗಿಲಿನ ಗಾತ್ರಕ್ಕೆ ತಕ್ಕಂತೆ ಒಂದರಿಂದ ಎಂಟು ಜೊತೆ ಎತ್ತುಗಳನ್ನು ಕಟ್ಟುತ್ತಾರೆ. ಉತ್ತ ನೆಲವನ್ನು ಹಲುಬೆಯಿಂದ ಹಸನುಮಾಡುತ್ತಾರೆ. ಕೂರಿಗೆಯಿಂದ ಬಿತ್ತಿದರೆ ಬೀಜ ಒಂದೇ ಸಮನಾಗಿ ಬೀಳುತ್ತದೆ. ಕುಂಟೆಯಲ್ಲಿ ಚಿಕ್ಕ ಮತ್ತು ದೊಡ್ಡ ಕುಂಟೆ ಇರುತ್ತವೆ. ದೊಡ್ಡ ಕುಂಟೆಯಿಂದ ಕಳೆ ಕೀಳುತ್ತಾರೆ, ನೆಲ ಒಣಗಿ ಹೆಪ್ಪುಗಟ್ಟಿದ್ದರೆ ಒಡೆದು ಹಸನು ಮಾಡುತ್ತಾರೆ. ಮತ್ತು ಕಡಲೆಕಾಯಿ ಅಗೆಯುತ್ತಾರೆ. ಚಿಕ್ಕ ಕುಂಟೆಯನ್ನು ಪೈರಿನ ಸಾಲುಗಳ ನಡುವೆ ಸಾಗಿಸಿ ಕಳೆ ಕಟ್ಟದಂತೆ ನೆಲ ಹಸನು ಮಾಡುತ್ತಾರೆ.

ಒಂದು ಸಲ ಬೆಳೆ ಬಂದ ಮೇಲೆ ಭೂಮಿಯ ಸಾರವೆಲ್ಲಾ ಹೀರಿಹೋಗಿರುತ್ತದೆ. ಗೊಬ್ಬರ ಹಾಕಿದರೆ ನಷ್ಟವಾಗಿದ್ದ ಸಾರ ಪುನಃ ಸೇರಿದಂತಾಗುತ್ತದೆ. ಸಮಯವರಿತು, ಹದವಾಗಿ ಗೊಬ್ಬರ ಹಾಕಿದರೆ ಫಸಲು ಚೆನ್ನಾಗಿ ಆಗುತ್ತದೆ.

ಆಧುನಿಕ ಯಂತ್ರೋಪಕರಣಗಳಿಂದ, ನದಿಗಳಿಗೆ ಕಟ್ಟಿದ ಅಣೆಕಟ್ಟುಗಳಿಂದ ಈಗಿನ ವ್ಯವಸಾಯದಲ್ಲಿ ಸಾಕಷ್ಟು ಪ್ರಗತಿಯಾಗಿದೆ.

ವ್ಯವಸಾಯ ಮನುಷ್ಯನ ನಾಗರಿಕತೆಯ ಪಯಣದ ಅದ್ಭುತ ಹೆಜ್ಜೆಗಳಲ್ಲಿ ಒಂದು. ಸಾವಿರಾರು ವರ್ಷಗಳಿಂದ ಮನುಷ್ಯ ಇತರ ಪ್ರಾಣಿಗಳಂತೆ ನಿಸರ್ಗವನ್ನೇ ನೆಚ್ಚಿಕೊಂಡಿರದೆ ತಾನೇ ನಿಸರ್ಗದಿಂದ ತನಗೆ ಬೇಕಾದುದನ್ನು ಪಡೆಯಲು ಪ್ರಯತ್ನಿಸುತ್ತಿದ್ದಾನೆ. ನಿಸರ್ಗಕ್ಕೆ ತಾನು ಪ್ರಭುವಾಗಲು ಯತ್ನಿಸುತ್ತಿದ್ದಾನೆ. ನಿಸರ್ಗ ಕೊಡುವ ಆಹಾರದ ಮೇಲೆ ಮನುಷ್ಯ ವ್ಯವಸಾಯಮಾಡಿ ತನ್ನ ಹತೋಟಿಯನ್ನು ಸ್ಥಾಪಿಸಿದ. ಇದರಿಂದ ಮನುಷ್ಯ ಬೇರೆ ಬೇರೆ ಕಡೆ ಹರಡಿಕೊಳ್ಳುವುದು ಶಕ್ಯವಾಯಿತು. ಮನುಷ್ಯರ ಸಂಖ್ಯೆ ಹೆಚ್ಚಲು ಸಾಧ್ಯವಾಯಿತು. ವ್ಯವಸಾಯದ ರೀತಿ ಪ್ರಗತಿಹೊಂದಿದಂತೆ ಬೆಳೆಯುವ ಆಹಾರ ಹೆಚ್ಚಿತು. ಎಂದರೆ ಆಹಾರ ಬೆಳೆಯುವುದಕ್ಕಾಗಿಯೆ ದುಡಿಯಬೇಕಾದವರ ಸಂಖ್ಯೆ ಕಡಮೆಯಾಯಿತು. ವಿರಾಮವಿರುವವರ ಸಂಖ್ಯೆ ಬೆಳೆಯಿತು. ಇವರು ಆಹಾರ ಬೆಳೆಯುವುದನ್ನು ಬಿಟ್ಟು ಉಳಿದ ವಿಷಯಗಳಿಗೆ ಗಮನ ಕೊಡುವಂತಾಯಿತು. ಪ್ರಪಂಚದ ಇತರ ವೃತ್ತಿಗಳೆಲ್ಲ ಸಾಧ್ಯವಾದುವು. ಸಾಹಿತಿಗಳು, ತತ್ತ್ವಜ್ಞಾನಿಗಳು, ಧಾರ್ಮಿಕ ಜೀವನ ನಡೆಸುವವರು, ವಿಜ್ಞಾನಿಗಳು, ಉಪಾಧ್ಯಾಯರು, ಸಂಗೀತಗಾರರು, ಕ್ರೀಡಾಪಟುಗಳು, ಪತ್ರಿಕೋದ್ಯೋಗಿಗಳು, ಚಲನ ಚಿತ್ರ ನಟನಟಿಯರು –ನಮ್ಮ ಆಧುನಿಕ ಜೀವನದ ಎಲ್ಲ ವರ್ಗಗಳಿಗೆ ಬಿಡುವು ದೊರೆತದ್ದು ವ್ಯವಸಾಯದಿಂದ. ಬೃಹತ್ ಸೈನ್ಯಗಳು ಬೆಳೆಯಲು ಸಾಧ್ಯವಾದದ್ದೂ ವ್ಯವಸಾಯದಿಂದಲೇ.

ವ್ಯವಸಾಯಾಭಿವೃದ್ಧಿಗಾಗಿ ಅನೇಕ ಸಂಘಗಳು ಕೆಲಸ ಮಾಡುತ್ತಿವೆ. ಕೃಷಿ ವಿಶ್ವವಿದ್ಯಾನಿಲಯಗಳು ಆಸಕ್ತಿಯಿಂದ ಕಲಿಯಬರುವ ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡುತ್ತವೆ. ಮೊದಲು ಯೋಜನೆಗೆ ಅನುಗುಣವಾಗಿ ಬಾವಿ, ಕೆರೆ, ಪುಟ್ಟ ಅಣೆಕಟ್ಟುಗಳು, ಕಾಲುವೆಗಳು ಮತ್ತು ಕೊಳವೆ ಬಾವಿಗಳನ್ನು ದುರಸ್ತಿ ಮಾಡಿಸುವುದು, ನೀರೆತ್ತುವ ಸಲಕರಣೆಗಳನ್ನು ಅಳವಡಿಸುವುದು, ಬದುಗಳನ್ನು ಕಟ್ಟಿಸುವುದು ಮತ್ತು ಬಂಜರು ಭೂಮಿಯನ್ನು ಸಾಗುವಳಿಗೆ ತರುವುದು ಇಂಥ ಕೆಲಸಗಳು ನಡೆಯುತ್ತವೆ. ಇವು ಕಾರ್ಯಯೋಜನೆಗಳು. ಸರಬರಾಜು ಯೋಜನೆಯಲ್ಲಿ ಗೊಬ್ಬರ ಹಂಚುವಿಕೆ, ರಾಸಾಯನಿಕ ಗೊಬ್ಬರ ಮತ್ತು ಉತ್ತಮ ಬೀಜಗಳನ್ನು ಹಂಚುವುದು ಸೇರಿವೆ. ಮಣ್ಣಿನ ಸತ್ವವನ್ನು ಕಾಪಾಡಲು ವಿವಿಧ ಯೋಜನೆಗಳಿಗೆ ಎಪ್ಪತ್ತೆರಡು ಕೋಟಿ ರೂಪಾಯಿಗಳನ್ನು ಒದಗಿಸಲಾಗಿದೆ. ವ್ಯವಸಾಯೋತ್ಪನ್ನಗಳನ್ನು ಸರಿಯಾಗಿ ಬೆಲೆ ಕಟ್ಟಿ ಮಾರುಕಟ್ಟೆ ವ್ಯವಸ್ಥೆಯನ್ನು ನೋಡಿಕೊಳ್ಳುವ ಸಂಸ್ಥೆ ಇದೆ. ವಿಶ್ವಸಂಸ್ಥೆಯ ಆಹಾರಕೃಷಿ ಸಂಸ್ಥೆ ಮೂವತ್ತೆಂಟು ಜನ ವಿದೇಶಿ ತಜ್ಞರನ್ನು ಭಾರತದ ರೈತರಿಗೆ ಸಲಹೆ ನೀಡಲು ಕಳುಹಿಸಿತ್ತು.

ಅನಾದಿಕಾಲದಿಂದ ಈತನಕ ವ್ಯವಸಾಯ ಕ್ಷೇತ್ರದಲ್ಲಿ ಮಾನವ ಸಾಗಿಬಂದಿರುವ ದೂರ ಅಲ್ಪವಲ್ಲ. ನಾಗರಿಕತೆಯ ಬೆಳವಣಿಗೆಯೊಂದಿಗೆ ಹಾಸುಹೊಕ್ಕಾಗಿದೆ ವ್ಯವಸಾಯದ ಅಭಿವೃದ್ಧಿ.

## ವ್ಯವಹಾರದ ಆಡಳಿತ, ನಿರ್ವಹಣೆ

ಬ್ಯಾಂಕು, ವಿಮಾ ಸಂಸ್ಥೆ, ದೊಡ್ಡ ವ್ಯಾಪಾರ ಸಂಸ್ಥೆ ಮುಂತಾದುವನ್ನು ನೋಡಿದಾಗ ನಮಗೆ ಆಶ್ಚರ್ಯ. ನಾಲ್ಕಾರು ಜನರಿರುವ ಒಂದು ಸಂಸಾರವನ್ನು ಅಚ್ಚುಕಟ್ಟಾಗಿ ನಡೆಸಿಕೊಂಡು ಹೋಗುವುದಕ್ಕೇ ಶ್ರಮಪಡಬೇಕಾಗಿರುವಾಗ, ಅನೇಕ ಮಂದಿ ನೌಕರರನ್ನೂ ಹಲವಾರು ಇಲಾಖೆಗಳನ್ನೂ ಹೊಂದಿರುವ ಈ ಸಂಸ್ಥೆಗಳು ಇಷ್ಟು ಸಮರ್ಪಕವಾಗಿ ನಡೆಯುವುದು ಹೇಗೆ ಎನಿಸಬಹುದು. ಒಂದು ಶರೀರದ ನಾನಾ ಅವಯವಗಳ ಹಾಗೆ ಇವೆಲ್ಲ ಒಂದಕ್ಕೊಂದು ಹೊಂದಿಕೊಂಡು ಕೆಲಸ ಮಾಡುವುದಾದರೂ ಹೇಗೆ ?

ಸರಕುಗಳನ್ನು ಕೊಂಡು ಅಂಗಡಿಯನ್ನು ಪ್ರಾರಂಭಿಸುವುದಾಗಲಿ, ಕಾರಖಾನೆ ಕಟ್ಟಿ ಯಂತ್ರ ತಂದಿಟ್ಟು ಸಜ್ಜುಗೊಳಿಸುವುದಾಗಲಿ ಉದ್ಯಮದ ಒಂದು ಮುಖ ಮಾತ್ರ. ಇದನ್ನು ಓರಣವಾಗಿ ನಡೆಸುವುದು ಇದರ ಇನ್ನೊಂದು ಮುಖ. ಆಗಲೆ ಅದು ಸಾರ್ಥಕ. ಹೀಗಾಗಲು ಮೇಲೆ ಕುಳಿತು ಆಡಳಿತ ನಡಸುವವರಿಗೆ ದೂರದೃಷ್ಟಿಯಿರಬೇಕು, ಕಲ್ಪನಾಶಕ್ತಿ ಇರಬೇಕು, ಸಮಯ ಚಾತುರ್ಯವಿರಬೇಕು. ಈ ಬಗೆಯ ಚೈತನ್ಯ ಪೂರ್ವಕವಾದ ನಾಯಕತ್ವವಿದ್ದಾಗ ಮಾತ್ರ ಸಂಸ್ಥೆಯ ಆಡಳಿತ ಹಾಗೂ ನಿರ್ವಹಣೆ ಸಮರ್ಪಕವಾಗಿರುವುದು ಸಾಧ್ಯ.

ಆಡಳಿತ ಹಾಗೂ ನಿರ್ವಹಣೆ ಎಂದರೇನು, ಇವೆರಡಕ್ಕೂ ಇರುವ ವ್ಯತ್ಯಾಸಗಳೇನು ಎಂಬುದನ್ನು ನಾವು ಮೊದಲು ತಿಳಿದುಕೊಳ್ಳಬೇಕು. ಒಂದು ಸಂಸ್ಥೆಯ ಉದ್ದೇಶಗಳು ಯಾವುವು ? ಅವು ನೆರವೇರಲು ಯಾವ ಸೂತ್ರಗಳನ್ನು ಅನುಸರಿಸಬೇಕು ? ಯಾವ ಕಾರ್ಯಕ್ರಮಗಳಿರಬೇಕು ?

ಇವನ್ನು ಆಗಿಂದಾಗ್ಗೆ ತೀರ್ಮಾನಿಸುವುದು ಆಡಳಿತಗಾರರ ಕರ್ತವ್ಯ. ಒಂದು ದೇಶವನ್ನು ಆಳಲು ಇಂಥಿಂಥ ನಿಯಮ ನಿಬಂಧನೆಗಳಿರಬೇಕು, ಸರಕಾರ ಹೀಗೆ ವರ್ತಿಸಬೇಕು—ಎಂದು ಆಗಿಂದಾಗ್ಗೆ ನಿರ್ದೇಶನ ನೀಡುವ ಶಾಸನ ಸಭೆಗಳಂತೆ ಆಡಳಿತಗಾರರು ಸಂಸ್ಥೆಯ ನಿರ್ವಹಣೆಗೆ ಸೂಕ್ತ ನೀತಿ ನಿರ್ದೇಶನ ನೀಡುತ್ತಾರೆ. ಕೂಡು ಬಂಡವಾಳ ಕಂಪೆನಿಯ ಸದಸ್ಯರಿಂದ ಸಾಮಾನ್ಯವಾಗಿ ವರ್ಷಕ್ಕೊಮ್ಮೆ ಆಯ್ಕೆಹೊಂದಿ ಅಧಿಕಾರದಲ್ಲಿರುವ ನಿರ್ದೇಶಕರು (ಡೈರೆಕ್ಟರು) ಆಡಳಿತಗಾರರು ; ಅಂತೆಯೇ ಸಹಕಾರ ಸಂಘದ ನಿರ್ದೇಶಕರೂ ಆಡಳಿತಗಾರರೇ.

ಈ ಆಡಳಿತಗಾರರು ರೂಪಿಸಿದ ಸೂತ್ರಗಳನ್ನು ಜಾರಿಗೆ ತಂದು ಅವಕ್ಕನುಸಾರವಾಗಿ ಸಂಸ್ಥೆಯ ಕೆಲಸಗಳನ್ನು ನಿರ್ವಹಿಸುವವರು ನಿರ್ವಾಹಕರು ಅಥವಾ ವ್ಯವಸ್ಥಾಪಕರು. ಇವರ ಕಾರ್ಯವೇ ನಿರ್ವಹಣೆ ಅಥವಾ ವ್ಯವಸ್ಥಾಪನೆ. ದೊಡ್ಡ ಅಂಗಡಿಯ, ಬ್ಯಾಂಕಿನ ಅಥವಾ ವಿಮಾ ಸಂಸ್ಥೆಯ ವ್ಯವಸ್ಥಾಪಕನೂ ಅವನಿಗೆ ನೆರವಾಗುವ ಹಿರಿಯ ಸಿಬ್ಬಂದಿಯವರೂ ನಿರ್ವಾಹಕರು. ಸಂಸ್ಥೆಯ ಕೆಲಸವನ್ನು ನಿರ್ವಹಿಸಲು ಅನುಸರಿಸಬೇಕಾದ ಕ್ರಮಗಳನ್ನು ಯೋಚಿಸುವುದೂ ಸಂಸ್ಥೆಯ ನಾನಾ ಕೆಲಸಗಳನ್ನು ಹತೋಟಿಯಲ್ಲಿಟ್ಟುಕೊಳ್ಳುವುದೂ ಇವರ ಕರ್ತವ್ಯ. ಒಂದು ಸಂಸ್ಥೆಯಲ್ಲಿ ಕೆಲಸಮಾಡುವ ನಾನಾವರ್ಗದ ನೌಕರರನ್ನೂ ಒದಗಿಬರುವ ಸಾಧನಗಳನ್ನೂ ಒಂದು ನಿಶ್ಚಿತವಾದ ಉದ್ದೇಶಕ್ಕಾಗಿ ಸಂಘಟಿಸಿ ಅದರಿಂದ ಹೆಚ್ಚು ಫಲ ದೊರಕಿಸುವುದು ಸಂಸ್ಥೆಯ ವ್ಯವಸ್ಥಾಪಕನ ಕೆಲಸ. ಈತನೇ ಅದರ ತಲೆಯಾಳು. ಎಲ್ಲ ನೌಕರರ ಮೇಲೂ ಅವನ ಅಧಿಕಾರ. ಅವನಿಗೆ ಹೆಚ್ಚಿನ ಹೊಣೆ. ಸಂಸ್ಥೆಯ ಕೆಲಸ ನಿರ್ವಹಿಸಲು ಅವನು ತನ್ನ ಅಧಿಕಾರವನ್ನು ಇತರರಲ್ಲಿ ಸೂಕ್ತ ಕಂಡಂತೆ ಹಂಚಿ ಅವರವರ ಯೋಗ್ಯತಾನುಸಾರ ಅವರ ಮೇಲೂ ಹೊಣೆ ಹಾಕಿ ಅವರನ್ನು ಪ್ರೋತ್ಸಾಹಿಸಿ ಮಾನವ ಶಕ್ತಿಯ ಪರಮಾವಧಿ ಫಲ ದೊರಕುವಂತೆ ಮಾಡುತ್ತಾನೆ. ಆತನಿಗೆ ಜನರನ್ನು ಅರಿತುಕೊಳ್ಳುವ ಸಾಮರ್ಥ್ಯವಿರಬೇಕು. ಅವರು ಮನಃಪೂರ್ವಕವಾಗಿ ಕೆಲಸ ಮಾಡುವಂತೆ ಸೂಕ್ತ ಪರಿಸರವನ್ನು ನಿರ್ಮಾಣ ಮಾಡಬೇಕು.

ಬಂಡವಾಳದ ಶೇಖರಣೆ, ಸ್ಥಿರ ಬಂಡವಾಳ ಮತ್ತು ಚರ ಬಂಡವಾಳಗಳ ಪ್ರಮಾಣ, ನಿರ್ಧಾರ ಇವುಗಳಿಂದ ಹಿಡಿದು ಲಾಭದ ವಿತರಣೆಯ ತನಕ ವಾಣಿಜ್ಯದ ಆಡಳಿತಗಾರರು ನಿರ್ಣಯಗಳನ್ನು ಮಾಡುತ್ತಾರೆ. ಕೈಗಾರಿಕೆಗಳ ಗಾತ್ರ ಅಗಾಧವಾಗಿ ಬೆಳೆಯುತ್ತಿರುವಾಗ ವಾಣಿಜ್ಯ ಕ್ಷೇತ್ರದಲ್ಲಿ ಪೈಪೋಟಿ ಹೆಚ್ಚು. ಆದಷ್ಟೂ ಅಗ್ಗವಾಗಿ ವಸ್ತುಗಳನ್ನು ಒದಗಿಸಬೇಕಾದರೆ ಅನವಶ್ಯ ವೆಚ್ಚಗಳು ಆಗದಂತೆ ನೋಡಿಕೊಳ್ಳಬೇಕಾಗುತ್ತದೆ. ವೆಚ್ಚದ ಲೆಕ್ಕವನ್ನು ಪರಿಶೀಲಿಸುವ ಪರಿಣತರು ಈ ದಿಸೆಯಲ್ಲಿ ನೆರವಿಗೆ ಬರುತ್ತಾರೆ. ವಿಜ್ಞಾನದ ಹೊಸ ಸಾಧನೆಗಳನ್ನು, ಉಪಕರಣಗಳನ್ನು ಬಳಸಿಕೊಳ್ಳಬೇಕಾಗುತ್ತದೆ. ಸಾಗಾಣಿಕೆ, ವಿತರಣೆಗಳನ್ನು ವ್ಯವಸ್ಥೆಗೊಳಿಸಬೇಕಾಗುತ್ತದೆ. ಆಡಳಿತಗಾರರು ಈ ಎಲ್ಲ ಚಟುವಟಿಕೆಗಳೂ ಸಸೂತ್ರವಾಗಿ ನಡೆಯುವಂತೆ ನೋಡಿಕೊಳ್ಳುತ್ತಾರೆ. ಕಾನೂನಿನ ಅಂಕೆ, ಸರಕಾರ ವಿಧಿಸುವ ನಿಯಮಾವಳಿಗಳು, ಕಾರ್ಮಿಕರ ಜತೆ ಸಾಮರಸ್ಯ ಇವು ಆಡಳಿತಗಾರರೂ ವ್ಯವಸ್ಥಾಪಕರೂ ಎದುರಿಸುವ ಮುಖ್ಯ ಸಮಸ್ಯೆಗಳು.

ಆಡಳಿತ ಸಸೂತ್ರವಾಗಿ ನಡೆಯಲು ಅನುಕೂಲವಾಗುವಂತೆ ಹಲವಾರು ಕಾರ್ಯನಿರ್ವಾಹಕ ವಿಭಾಗಗಳನ್ನು ರಚಿಸಲಾಗುತ್ತದೆ. ಯೋಜನೆ, ವಸ್ತುಗಳ ಶೇಖರಣೆ ಮತ್ತು ನಿಯಂತ್ರಣ, ಕೊಳ್ಳುವಿಕೆ, ಮಾರಾಟ, ಲೆಕ್ಕಾಚಾರ, ಸಿಬ್ಬಂದಿ, ಸಾಗಾಣಿಕೆ ಮುಂತಾದ ವಿಭಾಗಗಳು ಸಂಸ್ಥೆಯ ಕೆಲಸವನ್ನು ಹಂಚಿಕೊಳ್ಳುತ್ತವೆ. ಆಯಾ ವಿಭಾಗದ ಮುಖ್ಯ ಅಧಿಕಾರಿಗಳೇ ಅಲ್ಲಲ್ಲಿನ ಕಾರ್ಯನಿರ್ವಹಣೆಗೆ ಜವಾಬ್ದಾರರಾಗಿದ್ದರೂ ನೀತಿ ನಿಯಮಾವಳಿಗಳನ್ನು ರಚಿಸುವಾಗ ಒಟ್ಟುಗೂಡುತ್ತಾರೆ. ವಾಣಿಜ್ಯ ಆಡಳಿತದಲ್ಲಿ ಹೀಗೆ ಒಂದುಗೂಡಿ ನಿರ್ಧಾರಗಳನ್ನು ತಳೆಯುವುದು ಇತ್ತೀಚೆಗೆ ರೂಢಿಗೆ ಬಂದಿದೆ.

ವಸ್ತುಗಳನ್ನು ಮಾರಾಟಕ್ಕೆ ಸಿದ್ಧಪಡಿಸುವಾಗ ಎಲ್ಲ ವಿಭಾಗಗಳೂ ದಕ್ಷತೆಯಿಂದ ಕೆಲಸ ಮಾಡುವುದು ಅಗತ್ಯ. [illegible] ವಸ್ತುಗಳನ್ನು ಒದಗಿಸಬೇಕಾದರೆ, ಬೆಲೆಗಳು ಮತ್ತು ಪೂರೈಕೆಯ ಏರಿಳಿತಗಳನ್ನು ಅಭ್ಯಸಿಸಬೇಕಾದರೆ ಅಂಕಿ–ಅಂಶಗಳ ನೆರವು ಬೇಕು. ಹಿಂದಿನ ಮಾಹಿತಿಗಳ ಆಧಾರದ ಮೇಲೆ ಮುಂದಿನ ಕಾರ್ಯಕ್ರಮವನ್ನು ನಡೆಸುವ ರೀತಿಯನ್ನು ನಿರ್ಧರಿಸುವುದು ಸುಲಭ.

ಸಾಮಾನ್ಯವಾಗಿ ವಾಣಿಜ್ಯ ಆಡಳಿತಗಾರರೂ ನಿರ್ವಾಹಕರೂ ವಕೀಲರು, ವಾಸ್ತುಶಿಲ್ಪಜ್ಞರು, ಮೌಲ್ಯಶೋಧಕರು, ಲೆಕ್ಕಪರಿಶೋಧಕರು, ಹಣಕಾಸು ತಜ್ಞರು ಮುಂತಾದ ವಾಣಿಜ್ಯ ಸಂಸ್ಥೆಯ ಹೊರಗಿನ ಅನುಭವಸ್ಥ ಸಲಹೆಗಾರರ ನೆರವನ್ನು ಪಡೆಯುತ್ತಾರೆ.

ನೋಡಿ : ವೆಚ್ಚದ ಲೆಕ್ಕ

## ವ್ಯವಹಾರ ವಿಧಿ

ಒಂದು ತೋಟ ರಾಮನಿಗೆ ಸೇರುತ್ತದೆ. ಅದಕ್ಕೆ ತಾಗಿ ಇರುವ ತೋಟದ ವ್ಯವಸಾಯಗಾರ ಭೀಮನು ಅದರ ಒಂದು ಭಾಗ ತನ್ನದೆಂದು ಸಾಧಿಸುತ್ತಾನೆ. ಇಬ್ಬರೊಳಗಿನ ವಿವಾದವನ್ನು ನ್ಯಾಯಾಲಯ ತೀರ್ಮಾನಿಸುತ್ತದೆ. ಇವರಿಬ್ಬರಲ್ಲಿ ಯಾರೊಬ್ಬನೂ ದಾವೆ ಹೂಡಬಹುದು. ನ್ಯಾಯಾಲಯದವರು ಉಭಯ ಪಕ್ಷದವರ ದಸ್ತಾವೇಜು, ಸಾಕ್ಷಿಗಳನ್ನು ಪರಿಶೀಲಿಸಿ ಕಾಯಿದೆಯ ಪ್ರಕಾರ ಯೋಗ್ಯವಾದ ನಿರ್ಣಯವನ್ನು ಕೊಡುತ್ತಾರೆ. ವಿವಾದವಿರುವ ಭಾಗ ರಾಮನದೆಂದು ನಿರ್ಣಯಕೊಟ್ಟರೆ, ಅದನ್ನು ಪ್ರವೇಶಿಸದಂತೆ ಭೀಮನಿಗೆ ತಡೆಯಾಜ್ಞೆ ಕೊಡುತ್ತಾರೆ. ಅದು ಭೀಮನ ಸ್ವಾಧೀನವಿದ್ದರೆ, ಅದರ ಸ್ವಾಧೀನತೆಯನ್ನು ರಾಮನಿಗೆ ಕೊಡಿಸುತ್ತಾರೆ. ಹಾಗೂ ಭೀಮನ ದುಷ್ಕೃತ್ಯದಿಂದ ರಾಮನಿಗೆ ನಷ್ಟವಾಗಿದ್ದರೆ, ಪರಿಹಾರಧನ ಕೊಡಿಸುತ್ತಾರೆ. ಅದೇ ಪ್ರಕಾರ ಸಾಲ ತೆಗೆದುಕೊಂಡವನು ಹಣ ತಿರುಗಿಕೊಡಲಿಲ್ಲವೆಂದು ಸಾಲಕೊಟ್ಟವನು ದಾವೆ ಮಾಡಿದರೆ ಅದನ್ನು ತಿರುಗಿ ಕೊಡಬೇಕೆಂದು ಸಾಲ ತೆಗೆದುಕೊಂಡವನಿಗೆ ನ್ಯಾಯಾಲಯ ಆಜ್ಞೆ ಮಾಡುತ್ತದೆ. ಕರಾರು ಮುರಿದದ್ದರಿಂದ ಇಲ್ಲವೆ ಒಬ್ಬನ ಯಾವುದೇ ಹಕ್ಕಿಗೆ ಧಕ್ಕೆ ಇಲ್ಲವೆ ಆತಂಕ ಮಾಡುವುದರಿಂದ ಹಾನಿಯಾಗಬಹುದು. ಹೀಗೆ ಹಾನಿ ಹೊಂದಿದವನು ಪರಿಹಾರಕ್ಕಾಗಿ, ತಡೆಯಾಜ್ಞೆಗಾಗಿ ಇಲ್ಲವೆ ಸಂದರ್ಭಾನುಸಾರ ತನ್ನ ಹಕ್ಕನ್ನು ಸ್ಥಾಪಿಸಿಕೊಳ್ಳುವುದಕ್ಕಾಗಿ ದಾವೆ ಹೂಡಬಹುದು.

ಸಾರ್ವಜನಿಕ ಹಕ್ಕುಗಳಿಗೆ ಯಾರಾದರೂ ಧಕ್ಕೆ ಅಥವಾ ಆತಂಕ ಉಂಟು ಮಾಡಿದರೆ, ಕೆಲವು ವಿಶಿಷ್ಟ ಅಧಿಕಾರಿಗಳ ಅನುಮತಿ ಪಡೆದು ಪ್ರಾತಿನಿಧಿಕ ಸ್ವರೂಪದ ದಾವೆ ತರಲು ಕಾಯಿದೆಯಲ್ಲಿ ವ್ಯವಸ್ಥೆ ಇದೆ.

ವ್ಯವಹಾರ ವಿಧಿ ವ್ಯಕ್ತಿಗಳ ನಡುವಣ ವಿವಾದವನ್ನು ಬಗೆಹರಿಸಿ ನ್ಯಾಯ ಮಾಡುತ್ತದೆ. ಇದಕ್ಕೆ ಇಂಗ್ಲಿಷಿನಲ್ಲಿ 'ಸಿವಿಲ್ ಲಾ' ಎನ್ನುತ್ತಾರೆ.

ಸಿವಿಲ್ ಎನ್ನುವ ಪದ ಲ್ಯಾಟಿನ್ ಭಾಷೆಯ ಸಿವಿಕ್–ಪ್ರಜೆ–ಎಂಬ ಮೂಲದಿಂದ ಬಂದುದು.

ಅಪರಾಧಗಳ ಬಗೆಗೆ ವ್ಯವಹಾರ ವಿಧಿ ವಿಚಾರಣೆ ನಡೆಸುವುದಿಲ್ಲ; ಅಂಥ ವಿಚಾರಣೆಗೆ ದಂಡವಿಧಿ ಎಂಬ ಮತ್ತೊಂದು ವಿಶೇಷ ವಿಭಾಗವಿದೆ. ಯಾವಾಗ ಒಬ್ಬ ವ್ಯಕ್ತಿಯ ಹಕ್ಕಿಗೆ ಮತ್ತೊಬ್ಬ ವ್ಯಕ್ತಿಯ ವರ್ತನೆ ಧಕ್ಕೆಯನ್ನುಂಟುಮಾಡುವುದೊ ಆಗ ವ್ಯವಹಾರ ದಾವೆಯನ್ನು ಬಳಸ ಬಹುದು. ಆದರೆ ಯಾವಾಗ ಅಪರಾಧ ನಡೆಯುತ್ತದೊ ಆಗ ಅಪರಾಧ ಮಾಡಿದ ವ್ಯಕ್ತಿಯನ್ನು ಸರಕಾರ ತನ್ನ ದಂಡ ನ್ಯಾಯಾಲಯದ ಮೂಲಕ ದಂಡಿಸುತ್ತದೆ. ಉದಾಹರಣೆಗೆ, ಒಬ್ಬ ವ್ಯಕ್ತಿ ಮತ್ತೊಬ್ಬನಿಂದ ಹಣ ಕೊಡುವೆನೆಂದು ಮಾತುಕೊಟ್ಟು ಹಸು ಕೊಂಡುಕೊಳ್ಳುತ್ತಾನೆ ಎಂದು ಇಟ್ಟುಕೊಳ್ಳೋಣ. ಹಸು ಪಡೆದ ಮೇಲೆ ಹಣ ಕೊಡುವುದಿಲ್ಲ. ಮಾರಿದವನು ಕೊಂಡವನ ಮೇಲೆ ವ್ಯಾವಹಾರಿಕ ದಾವೆ ಹೂಡಿ ಹಣ ಪಡೆದುಕೊಳ್ಳಬಹುದು. ದಾವೆ ಹೂಡುವುದು, ಬಿಡುವುದು ಅವನ ಇಷ್ಟ. ಇದು ವ್ಯವಹಾರ ವಿಧಿಗೆ ಸೇರಿದ್ದು. ಸರಕಾರ ಮಧ್ಯೆ ಪ್ರವೇಶಿಸುವುದಿಲ್ಲ. ಆದರೆ ಒಬ್ಬ ಇನ್ನೊಬ್ಬನ ಮನೆಗೆ ರಾತ್ರಿ ನುಗ್ಗಿ ಹಸುವನ್ನು ಅದರ ಯಜಮಾನನಿಗೆ ತಿಳಿಯದಂತೆ ಹೊಡೆದುಕೊಂಡು ಹೋಗುತ್ತಾನೆ ಎಂದು ಕೊಳ್ಳೋಣ. ಆಗ ಅದು ದಂಡವಿಧಿಯ ವ್ಯಾಪ್ತಿಗೆ ಸೇರಿದ್ದು. ಪೋಲೀಸರು ಇದನ್ನು ತನಿಖೆ ಮಾಡುತ್ತಾರೆ. ಸರಕಾರವೆ ಕಳ್ಳತನ ಮಾಡಿದವನ ಮೇಲೆ ಮೊಕದ್ದಮೆ ಹೂಡುತ್ತದೆ; ದಂಡವಿಧಿಯ ಪ್ರಕಾರ ನ್ಯಾಯಾಲಯ ತೀರ್ಪು ಕೊಡುತ್ತದೆ.

ವ್ಯವಹಾರ ವಿಧಿ ಮೊದಲು ಬಳಕೆಗೆ ಬಂದದ್ದು ಕ್ರಿ. ಶ. 530ರಲ್ಲಿ ರೋಮನ್ ಚಕ್ರವರ್ತಿ ಜಸ್ಟಿನಿಯನನ ಕಾಲದಲ್ಲಿ. ಅನಂತರ ಇದು ಅನೇಕ ಯೂರೋಪ್ ದೇಶಗಳಲ್ಲಿ ಕಾಯಿದೆ ಕಟ್ಟಳೆಗೆ ಬುನಾದಿಯಾಯಿತು. ವ್ಯವಹಾರ ವಿಧಿಗೆ ಮೊದಲು ನಾಗರಿಕತೆಯ ಹೊಸ್ತಿಲನ್ನು ದಾಟಿದ ಪ್ರತಿಯೊಂದು ರಾಷ್ಟ್ರದಲ್ಲಿ ರಾಜ ಅಥವಾ ಇತರ ಅಧಿಕಾರಿಗಳು ಇಲ್ಲವೆ ಹೆಚ್ಚಾಗಿ ಪಂಚಾಯತದಾರರು ಇಂಥ ವಿವಾದಗಳನ್ನು ತೀರ್ಮಾನಿಸುವ ಏರ್ಪಾಡು ಇತ್ತು. ಆದರೆ ವ್ಯವಹಾರ ವಿಧಿ ಇಲ್ಲದಿದ್ದುದರಿಂದ ಅದು ಅನೌಪಚಾರಿಕ ವಾಗಿತ್ತು. ಸಂಪೂರ್ಣ ನಿಯಮಬದ್ಧವಿರಲಿಲ್ಲ.

ಒಂದು ದೇಶದ ವ್ಯವಹಾರ ವಿಧಿಯಲ್ಲಿ ಇದರ ವ್ಯಾಪ್ತಿಗೆ ಬರುವ ವ್ಯವ ಹಾರಗಳು ಯಾವುವು, ಅವುಗಳಲ್ಲಿ ಯಾವುದನ್ನು ಯಾವ ನ್ಯಾಯಾಲಯ ವಿಚಾರಿಸಬೇಕು, ವಿಚಾರಣೆಗೆ ಕ್ರಮ ಏನು, ಎಂಥ ಸಾಕ್ಷ್ಯವನ್ನು ಗಮನಕ್ಕೆ ತೆಗೆದುಕೊಳ್ಳಬಹುದು, ತೀರ್ಪುಕೊಡಲು ಮತ್ತು ಪರಿಹಾರವನ್ನು ನಿರ್ಧರಿ ಸಲು ಆಧಾರ ಯಾವುದು, ತೀರ್ಪಿನಿಂದ ಅತೃಪ್ತರಾದವರು ಯಾವ ರೀತಿ ಪರಿಹಾರವನ್ನು ಪಡೆಯಲು ಪ್ರಯತ್ನಿಸಬೇಕು—ಇಂಥ ಎಲ್ಲ ವಿವರಗಳನ್ನೂ ಕಾಣಿಸಿರುತ್ತದೆ. ಈ ವಿಧಿಗಳನ್ನು ಸಂಸತ್ತು ಅಥವಾ ರಾಜ್ಯದ ಶಾಸನಸಭೆ ಒಪ್ಪಿರಬೇಕು.

ನೋಡಿ : ಅಪರಾಧ ; ಅಪರಾಧಶಾಸ್ತ್ರ ; ಅಡ್ವೊಕೇಟ್. ದಂಡವಿಧಿ ;

[illegible]

## ವಾಗ್ಮಿತೆ

"ಸ್ವರಾಜ್ಯ ನನ್ನ ಆಜನ್ಮ ಹಕ್ಕು"–ಬಾಲಗಂಗಾಧರ ತಿಲಕ್

"ಸ್ವಾತಂತ್ರ್ಯಕ್ಕೆ ನೀಡಬೇಕಾದ ಬೆಲೆ ನಿರಂತರ ಜಾಗ್ರತಿ"–ಅಬ್ರಹಾಂ ಲಿಂಕನ್.

"ಶ್ರಮ, ರಕ್ತ, ಬೆವರು, ಕಣ್ಣೀರು ಬಿಟ್ಟು, ಬೇರೆ ಯಾವ ಭರವಸೆ ಯನ್ನೂ ನಾನು ನಿಮಗೆ ಕೊಡಲಾರೆ"–ವಿನ್‌ಸ್ಟನ್ ಚರ್ಚಿಲ್.

ಇಂಥ ಮಾತುಗಳನ್ನು ಕೇಳುತ್ತಲೇ ರೋಮಾಂಚನವಾಗುತ್ತದೆ.

ಈ ಯಾವ ಮಾತಿನಲ್ಲಿಯೂ ಆಡಂಬರವಿಲ್ಲ, ಅಬ್ಬರವಿಲ್ಲ. ಮೇಲಿನ ಮಾತುಗಳನ್ನು ಆ ಮಹಾನುಭಾವರು ಕನ್ನಡದಲ್ಲಿ ಹೇಳಲಿಲ್ಲ. ಆದರೆ ಯಾವ ಭಾಷೆಗೆ ಅನುವಾದ ಮಾಡಿದರೂ ಅವು ನೇರವಾಗಿ ಹೃದಯವನ್ನು ಹೊಗುತ್ತವೆ.

ವಾಕ್ಕನ್ನು –ಮಾತನ್ನು– ಹೀಗೆ ಪರಿಣಾಮಕಾರಿಯಾಗಿ ಬಳಸುವ ಕಲೆ ವಾಗ್ಮಿತೆ.

1863ರಲ್ಲಿ ಅಮೆರಿಕದ ಸಂಯುಕ್ತ ಸಂಸ್ಥಾನದಲ್ಲಿ ಅಂತರ್ಯುದ್ಧ ನಡೆಯುತ್ತಿದ್ದಾಗ, ಗೆಟಿಸ್‌ಬರ್ಗ್ ಎನ್ನುವ ಕಡೆ ಕೇಂದ್ರ ಸರಕಾರಕ್ಕೆ ಭಾರಿ ವಿಜಯವಾಯಿತು. ಆ ಕದನ ನಡೆದ ಸ್ಥಳವನ್ನು ರಾಷ್ಟ್ರೀಯ ಸಮಾಧಿ ಸ್ಥಳವನ್ನಾಗಿ ಘೋಷಿಸಲು ಒಂದು ಸಮಾರಂಭ ನಡೆಯಿತು. ಎಡ್ವರ್ಡ್ ಎವರೆಟ್ ಎನ್ನುವ ಪ್ರಸಿದ್ಧ ಭಾಷಣಕಾರ ಎರಡು ಗಂಟೆಗಳ ಕಾಲ ನಿರರ್ಗಳವಾಗಿ ಭಾಷಣ ಮಾಡಿದ. ಅಧ್ಯಕ್ಷ ಲಿಂಕನ್ ಎರಡೆ ಮಿನಿಟು ಭಾಷಣ ಮಾಡಿದ. ಹೆಚ್ಚು ಪರಿಣಾಮಕಾರಿಯಾದುದು ಎರಡು ಮಿನಿಟುಗಳ ಆ ಭಾಷಣ. ಲಿಂಕನನ ಆ ಭಾಷಣವನ್ನು ಇಂಗ್ಲಿಷ್ ಮಾತಾಡುವ ಜಗತ್ತಿನ ಭಾಗಗಳಲ್ಲೆಲ್ಲ ಈಗಲೂ ಮೆಚ್ಚಿಕೆಯಿಂದ ಜನ ಓದುತ್ತಾರೆ.

ವಾಗ್ಮಿತೆ ಒಂದು ಕಲೆ. ಮಾತು ಬಲ್ಲವರೆಲ್ಲ ವಾಗ್ಮಿಗಳಲ್ಲ. ಕೆಲವರಿಗೆ ವಾಗ್ಮಿತೆ ಹುಟ್ಟಿನಿಂದಲೇ ಬಂದಿರುತ್ತದೆ. ಆದರೆ ವಾಗ್ಮಿತೆಯನ್ನು ಸತತ ಅಭ್ಯಾಸದಿಂದ ವೃದ್ಧಿಪಡಿಸಿಕೊಳ್ಳಬಹುದು.

ಪ್ರಾಚೀನ ಗ್ರೀಸಿನ ಡೆಮಾಸ್ತನೀಸ್ (ಕ್ರಿ. ಪೂ. 383–322) ನನ್ನು ಪಾಶ್ಚಾತ್ಯ ಪ್ರಪಂಚದ ಚರಿತ್ರೆಯಲ್ಲಿ ಅತಿ ಶ್ರೇಷ್ಠ ವಾಗ್ಮಿ ಎನ್ನುತ್ತಾರೆ. ಹುಡುಗನಾಗಿದ್ದಾಗ ಅವನೆಂದರೆ ಎಲ್ಲರಿಗೂ ಹಾಸ್ಯ. ತೀರ ಕುಳ್ಳ, ತೆಳು. ಒಂದು ಭುಜಕ್ಕಿಂತ ಇನ್ನೊಂದು ಎತ್ತರ. ನಾಲ್ಕು ಜನರೆದುರಿಗೆ ಹೇಗೆ ನಡೆದುಕೊಳ್ಳಬೇಕೆಂದು ತಿಳಿಯದು. ಸಣ್ಣ ಧ್ವನಿ. ಇಷ್ಟು ಸಾಲದೆಂದರೆ– ಉಗ್ಗು. ಈ ಹುಡುಗ ತಾನು ಒಳ್ಳೆಯ ವಾಗ್ಮಿಯಾಗಬೇಕೆಂದು ನಿರ್ಧರಿಸಿದ. ಮೊದಮೊದಲು ಅವನು ಭಾಷಣ ಮಾಡಲು ಪ್ರಾರಂಭಿಸಿದರೆ ಜನ ನಕ್ಕು ಬಿಡುತ್ತಿದ್ದರು. ಬಾಯಿಯಲ್ಲಿ ಸಣ್ಣ ಕಲ್ಲುಗಳನ್ನು ಇಟ್ಟುಕೊಂಡು ಮಾತ ನಾಡಿ ಮಾತನಾಡಿ ಉಗ್ಗನ್ನು ತಿದ್ದಿಕೊಂಡ. ಧ್ವನಿಯನ್ನು ಎತ್ತರಿಸಲು ಸಮುದ್ರ ತೀರದಲ್ಲಿ ನಿಂತು ಅಲೆಗಳು ಅರ್ಭಟಿಸುತ್ತಿದ್ದಾಗ ಗಟ್ಟಿಯಾಗಿ ಒಬ್ಬನೇ ಭಾಷಣ ಮಾಡಿದ ; ಇಲ್ಲವೆ ಬಾಯಿಯಲ್ಲಿ ಏನಾದರೂ ಹೇಳುತ್ತ ಹೇಳುತ್ತ ಗುಡ್ಡಗಳನ್ನು ಹತ್ತಿದ. ಒಂದು ಭುಜಕ್ಕಿಂತ ಇನ್ನೊಂದು ಭುಜ ವನ್ನು ಮೇಲಕ್ಕೆತ್ತುವುದು ಅಭ್ಯಾಸವಾಗಿತ್ತು. ಆ ಅಭ್ಯಾಸವನ್ನು ಬಿಡಲು, ತಾನು ಭುಜ ಎತ್ತರಿಸಿದರೆ ಅದಕ್ಕೆ ತಗಲುವಂತೆ ತನ್ನ ಕೊಠಡಿಯಲ್ಲಿ ಕತ್ತಿಯನ್ನು ತಗಲಿಹಾಕಿದ ; ಒಂದು ಗುಹೆಯನ್ನೆ ತನ್ನ ಕೊಠಡಿಯನ್ನಾಗಿ ಮಾಡಿಕೊಂಡು ಅಲ್ಲಿಯೇ ಭಾಷಣ ಮಾಡುವುದನ್ನು ಅಭ್ಯಾಸ ಮಾಡಿದ. ಬರೆದದ್ದನ್ನು ತಿದ್ದಿ ಬರೆದ, ಮತ್ತೆ ತಿದ್ದಿದ, ಮತ್ತೆ ಓದಿದ. ಅಸಮಾನ ವಾಗ್ಮಿಯಾದ. ಪಾಶ್ಚಾತ್ಯ ಪ್ರಪಂಚದಲ್ಲಿಯೆ ಅಂಥ ವಾಗ್ಮಿ ಇಂದಿಗೂ ಹುಟ್ಟಿಲ್ಲ ಎನ್ನುತ್ತಾರೆ.

ವಾಗ್ಮಿತೆಯಲ್ಲಿ ಮಾತಿನ ವಿಷಯ, ಅದನ್ನು ಸ್ಪಷ್ಟಪಡಿಸಿ ಹೇಳುವ ರೀತಿ, ಅದಕ್ಕೆ ಉಪಯೋಗಿಸುವ ಪದಗಳು, ವಾಕ್ಯಗಳು, ವರ್ಣನೆ, ಉಪಮಾನ ಉಪಮೇಯಗಳು, ಧ್ವನಿಯ ಏರುಪೇರುಗಳು, ಮಾತನಾಡುವಾಗ

ಉಪಯೋಗಿಸುವ ಸನ್ನೆಗಳು, ನಿಲ್ಲುವ ಭಂಗಿ ಎಲ್ಲವೂ ಮುಖ್ಯ. ಗೂನುಬೆನ್ನು ಮಾಡಿಕೊಂಡು ನಿಂತರೆ, ಜೇಬುಗಳಲ್ಲಿ ಕೈಯಿಟ್ಟು ನಿಂತರೆ, ಮೇಜನ್ನೂರಿ ಕೊಂಡು ನಿಂತರೆ, ಕೇಳುವವರಿಗೆ ಮಾತಿನತ್ತ ಗಮನಹೋಗುವುದಿಲ್ಲ; ನಗು ಬರುತ್ತದೆ. ಪಂಜರದ ಸಿಂಹದಂತೆ ಅತ್ತಿಂದಿತ್ತ ಓಡಾಡುವುದು, ತೂಗಾಡು ವುದು ಎಲ್ಲ ಮಾತಿನ ಪರಿಣಾಮವನ್ನು ಕುಂದಿಸುತ್ತವೆ. ಅಂಗಚಲನಗಳನ್ನು ಪರಿಣಾಮಕಾರಿಯಾಗಿ ಬಳಸಬೇಕು, ಇಲ್ಲದಿದ್ದರೆ ಅಂಗಚೇಷ್ಟೆಯೇ ತಮಾಷೆ ಯಾಗುತ್ತದೆ. ಮಾತನ್ನು ತೀರ ವೇಗವಾಗಿ ಆಡಬಾರದು. ತೀರ ನಿಧಾನ ವಾಗಲೂಬಾರದು. ಶಬ್ದಗಳು ಸ್ಪಷ್ಟವಾಗಿ ಬಾಯಿಯಿಂದ ಬರಬೇಕು. ವಿಷಯ ಎಷ್ಟೇ ಸ್ವಾರಸ್ಯವಾಗಿದ್ದರೂ ಧ್ವನಿಯಲ್ಲಿ ಮಾರ್ಪಾಟನ್ನು ಮಾಡಿ ಕೊಳ್ಳದೆ ಸೋನೆಮಳೆ ಸುರಿದ ಹಾಗೆ ಮಾತಾಡಿದರೆ ಕೇಳುವವರಿಗೆ ನೀರಸ. ಕೇಳುವವರ ಮೇಲೆ ಪ್ರಭಾವ ಬೀರುವುದು ಅಭ್ಯಾಸದಿಂದ ಸಾಧ್ಯ. ಇಂಗ್ಲೆಂಡ್‌ದೇಶದ ಪ್ರಧಾನಿಯಾಗಿದ್ದ ವಿನ್‌ಸ್ಟನ್ ಚರ್ಚಿಲ್ ಭಾಷಣ ಮಾಡುವುದಕ್ಕೆ ಮೊದಲು ಕನ್ನಡಿಯ ಮುಂದೆ ನಿಂತು ಪದಕ್ಕೆ ತಕ್ಕಂತೆ ಭಂಗಿಗಳನ್ನು ಅಭ್ಯಸಿಸುತ್ತಿದ್ದರು.

ಮಾತಾಡುವಾಗ ಕೇಳಲು ಬಂದವರ ವಯಸ್ಸು, ಅನುಭವ, ಅಭಿರುಚಿ ಇವುಗಳಿಗೆ ಅನುಗುಣವಾಗಿ ವಿಷಯವನ್ನಾರಿಸಿ ಮಾತನಾಡಬೇಕು. ಪದಗಳು ಅತಿಕಷ್ಟವೆನಿಸಬಾರದು. ವಾಕ್ಯಗಳು ಬಹಳ ಉದ್ದವಾಗಿರಬಾರದು. ಅತಿ ಉದ್ದ ಭಾಷಣ ಮಾಡಬಾರದು. ಹೀಗೆ ಮಾಡಿದರೆ ಭಾಷಣ ಎಷ್ಟೇ ಚೆನ್ನಾಗಿದ್ದರೂ ಕೇಳಲಾಗುವುದಿಲ್ಲ. ಸಂಗೀತ ಕೇಳುವಷ್ಟು ಹೊತ್ತು ನೃತ್ಯ ನೋಡುವಷ್ಟು ಹೊತ್ತು ಭಾಷಣ ಕೇಳಲಾಗುವುದಿಲ್ಲ. ಎಷ್ಟೇ ಪ್ರತಿಭೆ ಇದ್ದರೂ ಪೂರ್ವಸಿದ್ಧತೆಯಿಲ್ಲದೆ ಭಾಷಣಮಾಡುವ ಕೆಲಸಕ್ಕೆ ಕೈಹಾಕ ಬಾರದು. ಪ್ರಸಿದ್ಧ ವಾಗ್ಮಿ ಡೆಮಾಸ್ತನೀಸನಿಗೆ ಅವನಿಗಾಗದವನೊಬ್ಬ, "ನಿನ್ನ ಭಾಷಣದಲ್ಲಿ ದೀಪದ ವಾಸನೆ ಇದೆ" ಎಂದನಂತೆ. ಹಗಲು ರಾತ್ರಿ ಅಭ್ಯಾಸಮಾಡಿ ಭಾಷಣಗಳನ್ನು ಸಿದ್ಧಮಾಡುತ್ತಿದ್ದ ಆತ. ಸಿದ್ಧತೆ ಇಲ್ಲದೆ ಭಾಷಣ ಮಾಡುವುದು ಸಭಿಕರ ಬಗೆಗೆ ತಿರಸ್ಕಾರ ತೋರಿಸಿದಂತೆ. ಮಾತಿನ ಮಧ್ಯೆ ಸಣ್ಣ ಸಣ್ಣ ದೃಷ್ಟಾಂತಗಳು, ಗಾದೆಗಳು, ಹಾಸ್ಯ ಚಟಾಕಿಗಳು ಇವನ್ನು ಬಳಸುವ ಅಭ್ಯಾಸವಿದ್ದರೆ ಒಳ್ಳೆಯದು.

ವಾಗ್ಮಿಯಾಗಬಯಸುವವನು ಪದಗಳ ಬಳಕೆಯ ಕಲೆಯನ್ನು ಕಲಿಯ ಬೇಕು. ಪ್ರತಿ ಮಾತಿಗೆ ಅರ್ಥವ್ಯಾಪ್ತಿಯುಂಟು, ಧ್ವನಿಯುಂಟು. 'ನೀವು ಏನು ಮಾಡುವುದಕ್ಕೂ ಹೆದರುತ್ತೀರಿ' ಎನ್ನುವುದು ಒರಟು; 'ನಿಮ್ಮದು ಬಹು ಎಚ್ಚರಿಕೆಯ ರೀತಿ' ಎನ್ನುವುದು ಅದೇ ಅರ್ಥವನ್ನು ಸೌಮ್ಯವಾಗಿ ವ್ಯಕ್ತಪಡಿಸುತ್ತದೆ. 'ಆಶ್ಚರ್ಯಪಟ್ಟನು', 'ಅಪ್ರತಿಭನಾದನು', 'ಅಚ್ಚರಿ ಯಿಂದ ಮೂಕನಾದನು'—ಒಂದೊಂದು ರೂಪದ ಶಕ್ತಿಯೂ ಬೇರೆ. ಅತಿ ಆಡಂಬರವಿಲ್ಲದೆ ಗಾಢ ಪರಿಣಾಮವನ್ನುಂಟು ಮಾಡಬಹುದೆಂಬುದು ಶಿವ ಶರಣರ ವಚನಗಳಲ್ಲಿ, ದಾಸರ ಪದಗಳಲ್ಲಿ, ಗಾಂಧಿಜಿಯ ನುಡಿಗಳಲ್ಲಿ ಸ್ಪಷ್ಟ ವಾಗಿದೆ. ಮಾತು ಇತರರ ಹೃದಯವನ್ನು ಮುಟ್ಟಬೇಕಾದರೆ ಆಡುವವನ ಹೃದಯದಿಂದ ಚಿಮ್ಮಬೇಕು. ಪ್ರಾಮಾಣಿಕತೆ ಇಲ್ಲದೆ, ಇತರರನ್ನು ಮೋಸ ಗೊಳಿಸುವುದಕ್ಕೋಸ್ಕರ, ಮೆಚ್ಚಿಸುವುದಕ್ಕೋಸ್ಕರ ಆಡುವ ಮಾತು ಸುಂದರ ವಾಗಲಾರದು, ಪರಿಣಾಮಕಾರಿಯಾಗಲಾರದು. ವಿಷಯವನ್ನು ಅಭ್ಯಾಸ ಮಾಡಿ ತನ್ನದೇ ಆದ ಸ್ಪಷ್ಟ ಖಚಿತ ಅಭಿಪ್ರಾಯಕ್ಕೆ ಬಂದಿರ ಬೇಕು. ಮಾತನಾಡುವವನ ತಲೆಯಲ್ಲಿಯೇ ಗೊಂದಲವಿದ್ದರೆ ಬಾಯಿ ಯಲ್ಲಿ ಬರುವ ಮಾತುಗಳು ಹೇಗೆ ಸ್ಪಷ್ಟವಾಗಬಲ್ಲುವು ? ಪ್ರಾಮಾಣಿ ಕತೆಯಿಂದ ಮಾತನಾಡಬೇಕು.

ಸ್ವಾಮಿ ವಿವೇಕಾನಂದ, ರವೀಂದ್ರನಾಥ ಠಾಕೂರ್, ಸರೋಜಿನಿ ನಾಯ್ಡು, ರೈಟ್ ಆನರಬಲ್ ಶ್ರೀನಿವಾಸ ಶಾಸ್ತ್ರಿ, ಸರ್ವಪಲ್ಲಿ ರಾಧಾಕೃಷ್ಣನ್, ರಾಜಾಜಿ ಮೊದಲಾದವರು ಈ ಶತಮಾನದ ಭಾರತೀಯ ವಾಗ್ಮಿಗಳಲ್ಲಿ ಹೆಸರಾಂತವರು.

ಪಾಶ್ಚಾತ್ಯರಲ್ಲಿ ಡೆಮಾಸ್ತನೀಸ್ ಅಲ್ಲದೆ ಪ್ರಾಚೀನ ರೋಮಿನ ಸಿಸಿರೊ, ಮಾರ್ಕ್ ಆಂಟನಿ, ಹದಿನೆಂಟನೆಯ ಶತಮಾನದ ಇಂಗ್ಲೆಂಡಿನ ಬರ್ಕ್ ಪ್ರಸಿದ್ಧರು. ಈಚಿನವರಲ್ಲಿ ಅಬ್ರಹಾಂ ಲಿಂಕನ್, ವಿನ್‌ಸ್ಟನ್ ಚರ್ಚಿಲ್, ಜಾನ್ ಕೆನಡಿ ಮುಖ್ಯರು.

ಪ್ರಜಾತಂತ್ರ ಯುಗದಲ್ಲಿ ಮಾತನಾಡುವ ಕಲೆ ಮತಗಳಿಸಲು ಅವಶ್ಯ. ರಾಜ್ಯಸಭೆ ಸಂಸತ್ತು ಮುಂತಾದ ಅಧಿವೇಶನಗಳಲ್ಲಿ ' ಮಾತುಬಲ್ಲವ ಮಾಣಿಕ್ಯ ತರುವನು '. ಪ್ರಜಾಪ್ರಭುತ್ವದಲ್ಲಿ ಸರಕಾರದ ಮತ್ತು ವಿವಿಧ ಪಕ್ಷಗಳ, ಧೋರಣೆಗಳನ್ನು ಜನರಿಗೆ ವಿವರಿಸಬೇಕು. ಜನತೆಯ ಆಶಯ ಅಭಿಪ್ರಾಯ ಗಳನ್ನು ಸರಕಾರಕ್ಕೆ ವಿವರಿಸಬೇಕು. ಸ್ಪಷ್ಟವಾಗಿ ಸರಳವಾಗಿ ಮಾತನಾಡ ಬಲ್ಲವರ ಅಗತ್ಯ ಇಂಥ ಸನ್ನಿವೇಶದಲ್ಲಿ ಬಹಳವಾಗಿದೆ. ಪ್ರಾಚೀನ ಗ್ರೀಸ್ ಮತ್ತು ರೋಮ್‌ಗಳಲ್ಲಿ ವಾಗ್ಮಿತೆಯಲ್ಲಿ ಶಿಕ್ಷಣ ಕೊಡುತ್ತಿದ್ದರು. ರಾಜಕೀಯದಲ್ಲಿ ಬೆಳಗಬೇಕೆಂದು ಬಯಸಿದ ಜೂಲಿಯಸ್ ಸೀಸರನಂಥವರು ಈ ಶಿಕ್ಷಣ ಪಡೆದಿದ್ದರು.

## ವಾರ್ತೆ

" ಏನು ಸಮಾಚಾರ ? "

ಬೆಳಗ್ಗೆಯಿಂದ ರಾತ್ರಿಯವರೆಗೆ ಎಷ್ಟು ಬಾರಿ ಕೇಳುತ್ತಿರುತ್ತೇವೆ ಈ ಮಾತನ್ನು!

ಸುತ್ತ ಏನು ನಡೆಯುತ್ತಿದೆ ಎನ್ನುವುದನ್ನು ತಿಳಿದುಕೊಳ್ಳುವ ಕುತೂಹಲ ಮನುಷ್ಯನಿಗೆ ಸಹಜ. ಸಾಧಾರಣ ಘಟನೆ ಬೇಡ ; ಅಸಾಧಾರಣವಾದದ್ದು, ವಿಚಿತ್ರವಾದದ್ದು ಅಂದರೆ ಆಸಕ್ತಿ. ನಾಯಿ, ಮನುಷ್ಯ ಇಬ್ಬರೂ ರಸ್ತೆಯಲ್ಲಿ ಹೋದರೆ 'ವಾರ್ತೆ' ಅಲ್ಲ. ನಾಯಿ ಮನುಷ್ಯನನ್ನು ಕಚ್ಚಿದರೆ ಅದು ವಾರ್ತೆ. ಆದರೆ ಅಷ್ಟು ಆಸಕ್ತಿ ಕೆರಳಿಸುವುದಿಲ್ಲ. ಮನುಷ್ಯ ನಾಯಿ ಯನ್ನು ಕಚ್ಚಿದರಂತೂ ಅದು 'ವಾರ್ತೆ' ಯೇ.

ತನಗೆ ತಿಳಿದ ವಿಷಯವನ್ನು ಇತರರಿಗೆ ತಿಳಿಸಬೇಕು ಎಂಬುದು ಮನುಷ್ಯನ ಸ್ವಾಭಾವಿಕ ಪ್ರವೃತ್ತಿ. ತಾನು ಗಮನಿಸಿದ ಸಂಗತಿಯನ್ನೋ ನಡೆದ ಘಟನೆಯನ್ನೋ ಇನ್ನೊಬ್ಬನಿಗೆ ತಿಳಿಯಪಡಿಸಿದರೆ ಅದನ್ನು ಆತ ಮತ್ತೊಬ್ಬ ನಿಗೆ ತಿಳಿಸುತ್ತಾನೆ. ಹೀಗೆ ವಾರ್ತೆ ಹರಡುತ್ತದೆ.

ಪ್ರಾಚೀನ ಕಾಲದಲ್ಲಿ ಮನುಷ್ಯ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಬೇಟೆಗಾಗಿಯೋ ವಾಸಕ್ಕಾಗಿ ಉತ್ತಮ ನೆಲೆಗಳನ್ನು ಹುಡುಕು ವುದಕ್ಕಾಗಿಯೋ ಪ್ರಯಾಣ ಮಾಡುತ್ತಿದ್ದ. ಒಂದು ಕಡೆ ನೆಲೆಸಿದ್ದಾಗಲೂ ವ್ಯಾಪಾರಕ್ಕಾಗಿ ಮತ್ತು ಮನೋರಂಜನೆಗಾಗಿ ಅಲೆಯುತ್ತಿದ್ದ. ಒಂದು ಕಡೆಯ ಸಮಾಚಾರವನ್ನು ಮತ್ತೊಂದು ಕಡೆಗೆ ತಲಪಿಸುವುದು ಪ್ರಯಾಣಿ ಕನ ಸಹಜ ಹವ್ಯಾಸ. ಅಲೆಮಾರಿಗಳಿಗೆ ಆಶ್ಚರ್ಯಕರವೆನಿಸಿದ್ದೆಲ್ಲ ವಾರ್ತೆ ಆಗುತ್ತಿತ್ತು.

ಪ್ರಾಚೀನ ಕಾಲದಲ್ಲಿ ತಮಟೆ ಬಡಿದರೆ ಎಷ್ಟೋ ದೂರದಲ್ಲಿದ್ದ ಇನ್ನೊಬ್ಬ ತಮಟೆಯವನು ಅದನ್ನು ಅರ್ಥಮಾಡಿಕೊಳ್ಳುತ್ತಿದ್ದ. ವಿಶಿಷ್ಟ ಲಯದಲ್ಲಿ ತಾನೂ ತಮಟೆ ಬಡಿದು ಉತ್ತರವೀಯುತ್ತಿದ್ದ. ಹೀಗೆ ಸಂಕೇತಗಳ

ಮೂಲಕ ವಾರ್ತೆ ಪ್ರಸಾರವಾಗುತ್ತಿತ್ತು. ಕೋಟೆ ಕೊತ್ತಳಗಳ ತುದಿಗಳಲ್ಲಿ ದೀಪಗಳನ್ನೂ ಪಂಜುಗಳನ್ನೂ ಬೇರೆ ಬೇರೆ ರೀತಿ ಉರಿಸಿ ನಿರ್ದಿಷ್ಟ ವಾರ್ತೆಯನ್ನು ವೇಗವಾಗಿ ಹರಡಲಾಗುತ್ತಿತ್ತು. ಪ್ರಜೆಗಳ ಪಾಲಿಗೆ ಶತ್ರುಭೀತಿ ಸದಾ ಇರುತ್ತಿದ್ದ ಕಾಲದಲ್ಲಿ, ಪ್ರತಿ ರಾಜನೂ ತನ್ನ ಶತ್ರುವಿನ ಚಲನವಲನ ಇಂಗಿತಗಳನ್ನು ತಿಳಿದುಕೊಳ್ಳುತ್ತಿದ್ದ. ಪ್ರಜೆಗಳಿಗೆ ಅಪಾಯುಗಳ ಬಗೆಗೆ ಮುನ್ನೆಚ್ಚರಿಕೆಯನ್ನು ನೀಡುತ್ತಿದ್ದ. ಅವನ ಸಿಬ್ಬಂದಿಯವರು ತಮಟೆಗಳನ್ನು ಬಡಿದು ಮುಖ್ಯ ಸ್ಥಳಗಳಲ್ಲಿ ಜನ ಗುಂಪುಕೂಡುವಂತೆ ಮಾಡಿ ಸಮಾಚಾರವನ್ನು ಹರಡುತ್ತಿದ್ದರು. ಇವರು ಊರಿಂದೂರಿಗೆ ವಾರ್ತೆ ಒಯ್ಯುತ್ತಿದ್ದುದೂ ಉಂಟು.

ಬರವಣಿಗೆಯ ಮೂಲಕ ವಾರ್ತೆ ಹರಡಲು ಪ್ರಾರಂಭವಾದಾಗ ಅದು ವೇಗವಾಗಿ ಮತ್ತು ನಿಖರವಾಗಿ ತಲಪುವುದು ಸಾಧ್ಯವಾಯಿತು. ಸಂದೇಶ ವಾಹಕರು ಕುದುರೆಗಳ ಮೇಲೆ ಪ್ರಯಾಣ ಮಾಡುತ್ತಿದ್ದರು. ದೂರ ದೂರ ಹಾರುವ ಪಾರಿವಾಳಗಳನ್ನು ತರಪೇತು ಮಾಡಿ ಅವುಗಳ ಕಾಲಿಗೆ ಸುರುಳಿ ಸುತ್ತಿದ ಸಂದೇಶಪತ್ರವನ್ನು ಕಟ್ಟಿ ಹಾರಿಬಿಡುತ್ತಿದ್ದರು. ಪಾರಿವಾಳಗಳು ವೇಗವಾಗಿ ಹಾರಿ ವಾರ್ತೆಯನ್ನು ಇನ್ನೊಂದು ತುದಿಗೆ ತಲಪಿಸುತ್ತಿದ್ದುವು. ಅಲ್ಲದೆ, ತಪ್ಪದೆ ಹಿಂದಿರುಗುವ ದಾರಿಯನ್ನು ನೆನಪಿಟ್ಟುಕೊಳ್ಳುತ್ತಿದ್ದುವು. ಪಾರಿವಾಳಗಳನ್ನು ಪ್ರಾಚೀನ ಈಜಿಪ್ಟ್, ಪರ್ಷಿಯ, ಚೀನ, ಜಪಾನ್‌ಗಳಲ್ಲಿ ಈ ಕೆಲಸಕ್ಕೆ ಉಪಯೋಗಿಸುತ್ತಿದ್ದರು. ಜೂಲಿಯಸ್ ಸೀಸರ್ ಗಾಲ್‌ನ ಯುದ್ಧಗಳ ಸಮಯದಲ್ಲಿ ಅವನ್ನು ಬಳಸಿದ. 1870–71ರಲ್ಲಿ ಫ್ರಾಂಕೊ-ಪ್ರಷ್ಯನ್ ಯುದ್ಧ ಕಾಲದಲ್ಲಿ ಪ್ಯಾರಿಸಿನ ಮುತ್ತಿಗೆ ಕಾಲದಲ್ಲಿ ಪಾರಿವಾಳಗಳನ್ನು ಹೀಗೆ ಉಪಯೋಗಿಸಿಕೊಂಡರು. ಜಪಾನಿನಲ್ಲಿ ಇಪ್ಪತ್ತನೆಯ ಶತಮಾನದಲ್ಲಿಯೂ ವೃತ್ತಪತ್ರಿಕೆಗಳವರು ದುರ್ಗಮ ಸ್ಥಳಗಳಿಂದ ಪಾರಿವಾಳಗಳ ಮೂಲಕ ಸಮಾಚಾರ ತರಿಸುತ್ತಾರೆ. ಅಮೆರಿಕ ಸಂಯುಕ್ತ ಸಂಸ್ಥಾನದಲ್ಲಿ ಇತ್ತೀಚೆಗಿನವರೆಗೆ, ಜನ ತುಂಬಿದ ಫುಟ್‌ಬಾಲ್ ಪಂದ್ಯಗಳ ಸ್ಥಳಗಳಿಂದ ಪಾರಿವಾಳಗಳ ಮೂಲಕ ವೃತ್ತಪತ್ರಿಕೆಗಳು ಸುದ್ದಿ ಪಡೆಯುತ್ತಿದ್ದುವು. ಎರಡನೆಯ ಮಹಾಯುದ್ಧ ಕಾಲದಲ್ಲಿ ಮಿತ್ರರಾಷ್ಟ್ರಗಳು ತಮ್ಮ ಗುಪ್ತ ದಳದವರಿಂದ ಶತ್ರುಪ್ರದೇಶದಲ್ಲಿನ ಆಗುಹೋಗುಗಳ ವಿಷಯಗಳನ್ನು ಪಾರಿವಾಳಗಳ ಮೂಲಕ ತಿಳಿದುಕೊಳ್ಳುತ್ತಿದ್ದರು.

ಕ್ರಿ.ಪೂ. ಐದನೆಯ ಶತಮಾನದಲ್ಲಿ ಗ್ರೀಕ್, ಈಜಿಪ್ಟ್ ಮತ್ತು ರೋಮಿನ ನಗರಗಳ ಅಕ್ಷರಸ್ಥರು ಬರೆದ ಪತ್ರಗಳು ದೊರೆತಿವೆ. ಜೂಲಿಯಸ್ ಸೀಸರನ ಕಾಲದಲ್ಲಿ ರೋಮನರು ಸಾರ್ವಜನಿಕ ಸ್ಥಳಗಳ ಗೋಡೆಗಳ ಮೇಲೆ ವರ್ತಮಾನ ಬರೆಯುವ ವ್ಯವಸ್ಥೆಯನ್ನು ಮಾಡಿದ್ದರು. ಅಕ್ಷರಸ್ಥರು ಬರೆಯುತ್ತಿದ್ದ ವೈಯಕ್ತಿಕ ಓಲೆಗಳಲ್ಲಿ ಸಮಕಾಲೀನ ಘಟನೆಗಳ ಪ್ರಸ್ತಾಪಗಳಿರುತ್ತಿದ್ದುವು; ಹಾಗೆ ವಾರ್ತೆ ಹರಡುತ್ತಿತ್ತು. ಹದಿನೈದನೆಯ ಶತಮಾನದಲ್ಲಿ ಮುದ್ರಣ ಯಂತ್ರ ಬಂದು ವಾರ್ತೆ ಹರಡಲು ಉತ್ತೇಜನ ದೊರೆಯಿತು. ವಾರ್ತೆಯನ್ನು ಬಿಡಿಹಾಳೆಗಳ ಮೇಲೆ ಮುದ್ರಿಸಿ ಹಂಚಲಾಗುತ್ತಿತ್ತು. ಕ್ರಮೇಣ ವಾರ್ತಾಪತ್ರಿಕೆಗಳು ರೂಪುತಳೆದುವು.

ವೃತ್ತಪತ್ರಿಕೆಯ ಅಗಾಧ ಬೆಳವಣಿಗೆ ನಡೆದದ್ದು ಹತ್ತೊಂಬತ್ತು ಮತ್ತು ಇಪ್ಪತ್ತನೆಯ ಶತಮಾನಗಳಲ್ಲಿ. ದೂರವಾಣಿ ಮತ್ತು ತಂತಿ ಸಂದೇಶ ವಾಹಕಗಳು ಇಪ್ಪತ್ತನೆಯ ಶತಮಾನದ ಪ್ರಥಮಾರ್ಧದಲ್ಲಿ ಹೆಚ್ಚಾಗಿ ಬಳಕೆಗೆ ಬಂದವು. ವೃತ್ತಪತ್ರಿಕೆಗಳು ವಿಜ್ಞಾನದ ಈ ಸೌಲಭ್ಯವನ್ನು ಸಂಪೂರ್ಣವಾಗಿ ಬಳಸಿಕೊಂಡುವು.

ಈಗಿನ ಕಾಲದಲ್ಲಿ, ವೈಜ್ಞಾನಿಕ ಸಂಶೋಧನೆಗಳ ಫಲವಾಗಿ, ವಾರ್ತೆ ಜಗತ್ತಿನ ಒಂದು ಮೂಲೆಯಿಂದ ಇನ್ನೊಂದು ಮೂಲೆಯ ಜನರಿಗೆ ಅತ್ಯಂತ ಕ್ಷಿಪ್ರವಾಗಿ ಬಂದು ಮುಟ್ಟುತ್ತದೆ. ರೇಡಿಯೊ ಮತ್ತು ಟೆಲಿವಿಷನ್‌ಗಳು ಘಟನೆ ಅಥವಾ ಪ್ರಸಂಗಗಳು ನಡೆದ ಮರುಕ್ಷಣದಲ್ಲೇ ಜನರಿಗೆ ವಾರ್ತೆಯನ್ನು ತಲಪಿಸುತ್ತವೆ. ಸುದ್ದಿಯ ಜೊತೆಯಲ್ಲಿಯೇ ವೃತ್ತ ಪತ್ರಿಕೆಗಳು ಚಿತ್ರಗಳನ್ನೂ ಟೆಲಿವಿಷನ್ ದೃಶ್ಯಗಳನ್ನೂ ಒದಗಿಸುತ್ತವೆ. ಅಪೊಲೊ 11, 12 ಮತ್ತು 13ರ ಪ್ರಯಾಣ, ಗಗನಯಾತ್ರಿಗಳು ಚಂದ್ರನ ಮೇಲೆ ಕಾಲಿಟ್ಟದ್ದು—ಎಲ್ಲವನ್ನೂ ಜನರು ಟೆಲಿವಿಷನ್‌ನಿಂದ ನೋಡಿದರು. ಗಗನಯಾತ್ರಿಗಳ ಮಾತನ್ನು ತಾವೇ ಕೇಳಿದರು. ಯಾವುದಾದರೊಂದು ಪ್ರದೇಶದ ನೆತ್ತಿಯ ಮೇಲೆ ತೇಲಿ ನಿಂತಿರುವ, ಖಂಡಾಂತರ ಅಥವಾ ಪ್ರದೇಶಾಂತರ ಮಾನವ ನಿರ್ಮಿತ ಉಪಗ್ರಹ – ಸ್ಯಾಟಿಲೈಟ್ – ವಾರ್ತೆಯನ್ನು ಒಯ್ದು ಮುಟ್ಟಿಸುವುದರಲ್ಲಿ ನೆರವಾಗುತ್ತದೆ.

ನೋಡಿ : ವೃತ್ತಪತ್ರಿಕೆ, ಪತ್ರಿಕೋದ್ಯಮ

## ವಾಯುದಳ

ಹಿಂದೆ ಭೂಸೈನ್ಯವೇ ದೇಶದ ಹೋರಾಟದ ಶಕ್ತಿಯಾಗಿತ್ತು. ನೌಕಾದಳದ ಕಲ್ಪನೆ ತಡವಾಗಿ ಬಂದಿತು. ನೌಕಾದಳವನ್ನು ಬಲಪಡಿಸಿಕೊಂಡ ಬ್ರಿಟನ್ 'ಕಡಲರಾಣಿ' ಎನಿಸಿಕೊಂಡಿತು. ಆದರೆ ವಿಮಾನಗಳನ್ನು ಕಂಡುಹಿಡಿದ ಮೇಲೆ ವಿಮಾನದಳವಿಲ್ಲದ ರಕ್ಷಣಾಪಡೆ ದುರ್ಬಲ ಎನ್ನುವಂತಾಯಿತು.

ಭೂಸೈನ್ಯ ನೌಕಾದಳದವರಂತೆ ವಾಯುದಳದ ಯೋಧನೂ ಪ್ರಾಣವನ್ನೇ ಪಣವಾಗಿಡಬೇಕಾಗುತ್ತದೆ. ಮೇಲೆ ಸಾವಿರಾರು ಮೀಟರುಗಳ ಎತ್ತರದಲ್ಲಿ ಹಲವು ಬಾರಿ ಒಬ್ಬಂಟಿಗನಾಗಿ ಸಂಚರಿಸುವ ಆತನಿಗೆ ಒದಗುವ ಅಪಾಯಗಳು ತೀವ್ರತರ. ಹವೆಯ ವೈಪರೀತ್ಯ. ಪ್ರಚಂಡಗಾಳಿಗಳು ಮತ್ತು ಹಿಮ ಅವನ ಕಣ್ಣುಕಟ್ಟಿ ಮುಂದಿನ ಪ್ರಯಾಣ ಅಸಾಧ್ಯವೆನಿಸುತ್ತವೆ. ಅವನ್ನು ಮೀರಿದ ಎತ್ತರದಲ್ಲಿ ಸಂಚರಿಸಹೋದರೆ ಕೆಳಗಿನ ಪ್ರಪಂಚ ಅವನಿಂದ ಕಣ್ಮರೆಯಾಗುತ್ತದೆ. ಬಹಳ ಕೆಳಗೆ ಬಂದು ಶತ್ರು ಪಕ್ಷದವರ ಕಣ್ಣಿಗೆ ಬಿದ್ದರೆ ಆತನನ್ನು ಕೆಳಕ್ಕೆ ಉರುಳಿಸುವುದು ಅತಿ ಸುಲಭ. ಒಂದು ಕ್ಷಣ ಕೂಡ ವ್ಯರ್ಥಮಾಡದೆ ಅವನು ಒಂದು ನಿರ್ಧಾರ ಕೈಗೊಳ್ಳಬೇಕು.

1925ರ ವೇಳೆಗೆ ಎಲ್ಲ ಐರೋಪ್ಯ ದೇಶಗಳಲ್ಲಿಯೂ ವಿಮಾನವನ್ನು ಒಂದು ಪ್ರಮುಖ ಸಮರ ಸಾಧನವಾಗಿ ಬಳಸತೊಡಗಿದ್ದರು. ಇದರ ಫಲಿತಾಂಶವಾಗಿ ವಿಮಾನವಿಜ್ಞಾನದಲ್ಲಿ ಸಂಶೋಧನೆ ಹೆಚ್ಚಿ, ಎರಡನೆಯ ಮಹಾಯುದ್ಧದಲ್ಲಿ ಬಾಂಬುಗಳನ್ನು ಹೊತ್ತ ವಿಮಾನದಾಳಿ ಸಾವಿರಾರು ಸಂಖ್ಯೆಯಲ್ಲಿ ನಡೆಯಿತು. ಇಂದು ಇಂಥ ಸಹಸ್ರಾರು ವಿಮಾನದಾಳಿಗಳ ಶಕ್ತಿಯನ್ನು ಒಂದು ಪರಮಾಣುಬಾಂಬಿನ ರೂಪದಲ್ಲಿ ಹೊತ್ತ ವಿಮಾನ ಅವುಗಳಿಗಿಂತ ಹೆಚ್ಚು ವಿನಾಶ ಉಂಟುಮಾಡಬಲ್ಲದು. ಇದು ಸಮರನೆಲೆಗಳನ್ನಲ್ಲದೆ ಪೌರಜೀವನವನ್ನೂ ಅತ್ಯಂತ ವ್ಯಾಪಕವಾಗಿ ನೆಲಸಮ ಮಾಡಬಲ್ಲುದು.

ವಾಯುದಳದ ಕೆಲಸ ಶತ್ರು ನೆಲೆಗಳ ಚಲನೆಯ ಪತ್ತೆ ಅವುಗಳ ನಾಶ ಇವಿಷ್ಟೆ ಅಲ್ಲ; ವೈರಿ ಪಕ್ಷದ ವಿಮಾನಗಳನ್ನು ಕೆಡವಿ ತಮ್ಮ ನೆಲೆಗಳನ್ನು ರಕ್ಷಿಸಿಕೊಳ್ಳುವುದೂ ಮುಖ್ಯ. ವಾಯುದಳದ ವಿಮಾನಗಳು ಶತ್ರುಪ್ರದೇಶದ ಮೇಲೆ ಹಾರಾಡಿ, ಶತ್ರುಸೈನ್ಯದ ಬಲವನ್ನು ಅಂದಾಜು ಮಾಡುತ್ತವೆ.

ಕೈಗಾರಿಕಾ ಕೇಂದ್ರಗಳ ಮೇಲೆ ಬಾಂಬು ಹಾಕಿ, ದೇಶದ ಆರ್ಥಿಕ ವ್ಯವಸ್ಥೆಯನ್ನೂ ಯುದ್ಧ ಸಿದ್ಧತೆಯನ್ನೂ ಅಸ್ತವ್ಯಸ್ತಗೊಳಿಸುತ್ತವೆ. ಆಹಾರ ಮತ್ತು ಶಸ್ತ್ರಾಸ್ತ್ರಗಳ ಸರಬರಾಜಿನ ವ್ಯವಸ್ಥೆಯ ಮೇಲೆ ಬಾಂಬ್ ಸುರಿಸಿ ಶತ್ರುಸೈನ್ಯಕ್ಕೆ ತನ್ನವರ ಸಂಪರ್ಕ ತಪ್ಪಿಸುತ್ತವೆ. ಸಾಗರದ ಮೇಲೆ ಹಾರಾಡಿ ಶತ್ರುನೌಕೆಗಳ ಚಲನವಲನದ ಮಾಹಿತಿಯನ್ನು ಸಂಗ್ರಹಿಸುತ್ತವೆ. ಭೂದಳ, ನೌಕಾದಳಗಳಿಗೆ ರಕ್ಷಾಕವಚ ವಾಯುದಳ. ರಾಡಾರ್ ಸಂಕೇತಗಳ ಮೂಲಕ ವೈರಿ ವಿಮಾನದ ವೇಗ, ಹಾರಾಟದ ಎತ್ತರ, ಅದರ ಯಂತ್ರದ ಸ್ವರೂಪ ಇವುಗಳನ್ನು ಪತ್ತೆಹಚ್ಚಿ, ವೀಕ್ಷಣಾತಾಣಗಳಿಂದ ಶತ್ರುವಾಯುದಳದ ಗಾತ್ರವನ್ನು ಅಂದಾಜುಮಾಡಿ ಅದನ್ನು ಎದುರಿಸಲು ಮೊದಲೇ ಲೆಕ್ಕಹಾಕಬೇಕು. ಆದರೆ ಗಂಟೆಗೆ 1,231 ಕಿಲೊಮೀಟರು ವೇಗದಲ್ಲಿ ಚಲಿಸುವ ವಿಮಾನಗಳು ಹಾಗೂ 28,962 ಕಿಲೊಮೀಟರುಗಳ ವೇಗದಲ್ಲಿ ಯಾಂತ್ರಿಕ ಆದೇಶಗಳಂತೆ ಹಾರುವ ಕ್ಷಿಪಣಿಗಳು ಪರಮಾಣುಬಾಂಬನ್ನು ತಂದದ್ದೇ ಆದರೆ ಅವುಗಳಿಂದ ರಕ್ಷಿಸಿಕೊಳ್ಳಲು ಒಂದು ನಿಮಿಷದ ಅವಧಿಯೂ ಉಳಿಯದು. ಇದಕ್ಕಾಗಿಯೇ ಮುನ್ಸೂಚನೆ ಕೊಡುವ ಯಂತ್ರಗಳ ಫಲಕಗಳನ್ನು ಮಾಡಲಾಗಿದೆ.

ವಾಯುದಳದ ಪ್ರತಿ ಹತ್ತು ಜನರಲ್ಲಿ ಒಂಬತ್ತು ಜನ ಭೂಮಿಯ ಮೇಲೆ ಕೆಲಸ ಮಾಡುತ್ತಾರೆ. ಅಂದರೆ ವಿಮಾನದಲ್ಲಿ ಮೇಲೇರುವವರು ಶೇಕಡಾ ಹತ್ತು ಮಂದಿ ಮಾತ್ರ. ಹವೆಯ ವೀಕ್ಷಣೆ, ಯಂತ್ರ ಶಿಲ್ಪಕಾರ್ಯ, ವಿದ್ಯುತ್ ಸಂಬಂಧ ಕಾರ್ಯ, ರಾಡಾರ್ ಚಲನೆಕಾರ್ಯ, ಹೀಗೆ ಹಲವಾರು ಪರಿಣತ ಕಾರ್ಯಗಳಿಗೆ ಪ್ರತ್ಯೇಕವಾಗಿ ಕೆಲಸಗಾರರಿರುತ್ತಾರೆ. ಅಧಿಕಾರಿಗಳು ತರಬೇತಿ ಪಡೆಯುವ ಸೌಲಭ್ಯವೂ ಇದೆ.

ಸ್ತ್ರೀಯರಿಗೂ ವಾಯುದಳದಲ್ಲಿ ಅವಕಾಶವಿದೆ. ಭೂಮಿಯ ಮೇಲೆ ವಿಮಾನಗಳನ್ನು ನಿಯಂತ್ರಿಸುವ ಯಂತ್ರಗಳ ಚಾಲನೆಯನ್ನು ನೋಡಿಕೊಳ್ಳಲು ಸ್ತ್ರೀ ವೈಮಾನಿಕರಿದ್ದಾರೆ.

ವಾಯುದಳದಲ್ಲಿ ಶತ್ರುಗಳನ್ನು ವೀಕ್ಷಿಸಲು, ಬಾಂಬುಹಾಕಲು, ಯುದ್ಧ ಮಾಡುತ್ತಿರುವ ವಿಮಾನಗಳಿಗೆ ಸೂಚನೆಗಳನ್ನು ಕೊಡಲು, ಸೈನ್ಯ ಸಾಗಿಸಲು, ಚಾಲಕರಿಗೆ ತರಬೇತಿ ನೀಡಲು, ಇಂಧನ ಒದಗಿಸಲು, ಬೇರೆ ಬೇರೆ ವಿಧದ ವಿಮಾನಗಳನ್ನು ಉಪಯೋಗಿಸುತ್ತಾರೆ. ಹೆಲಿಕಾಪ್ಟರ್‌ಗಳನ್ನು ಬಳಸುವುದು ಬಹಳ ಇಕ್ಕಟ್ಟಾದ ಜಾಗಗಳಲ್ಲಿ ಇಳಿಯಲು. ಇದಲ್ಲದೆ ಹೊಸ ಹೊಸ ಸಂಶೋಧನೆಗಳು ಇನ್ನೂ ನಡೆಯುತ್ತಲೇ ಇವೆ.

1909ರಲ್ಲಿ ಅಮೆರಿಕ ಸಂಯುಕ್ತ ಸಂಸ್ಥಾನದ ಸರಕಾರ, ವಿಮಾನವನ್ನು ಕಂಡುಹಿಡಿದ ರೈಟ್ ಸಹೋದರರಿಂದ ಮೊದಲನೆಯ ಯುದ್ಧ ವಿಮಾನವನ್ನು ಕೊಂಡಿತು. ಎರಡನೆಯ ಜಾಗತಿಕ ಮಹಾಯುದ್ಧದ ಕಾಲದಲ್ಲಿ ವಿವಿಧ ರೀತಿಯ ವಿಮಾನಗಳು ಸಿದ್ಧವಾದುವು. (ಎರಡು ಎಂಜಿನುಳ್ಳ ಸಿ-119 ಬಾಕ್ಸ್‌ಕಾರ್ ಕೊರಿಯ ಯುದ್ಧದಲ್ಲಿ ಉಪಯೋಗಿಸಲ್ಪಟ್ಟಿತ್ತು.) ಬೋಯಿಂಗ್ ಯುದ್ಧವಿಮಾನವು ಎರಡನೆಯ ಜಾಗತಿಕ ಯುದ್ಧದಲ್ಲಿ ಬಳಕೆಗೆ ಬಂತು.

1926ರಲ್ಲಿ ಭಾರತೀಯ ವಾಯುದಳದ ಒಂದು ತಂಡವನ್ನು ರಚಿಸಲಾಯಿತು. ಆಗ ತಂಡದಲ್ಲಿದ್ದುದು ಕೆಲವು ವಾಪಿಟಿ ವಿಮಾನಗಳು ಹಾಗೂ ತರಬೇತಿ ಹೊಂದಿದ ಕೆಲವೇ ವೈಮಾನಿಕರು. ಅನಂತರದ ವರ್ಷಗಳಲ್ಲಿ ಗಾತ್ರ ಹಾಗೂ ಮಟ್ಟಗಳಲ್ಲಿ ವಾಯುದಳ ಗಮನಾರ್ಹವಾಗಿ ಅಭಿವೃದ್ಧಿ ಹೊಂದಿದೆ. ದೇಶದ ಅವಶ್ಯ ಸಮರ ಶಕ್ತಿಗಳಲ್ಲಿ ಒಂದಾಗಿದೆ.

ಭಾರತದ ವಾಯುದಳದ ಮುಖ್ಯಾಧಿಕಾರಿ, ಏರ್‌ಮಾರ್ಷಲ್. ಅಂಬಾಲ, ಜಾಲಹಳ್ಳಿ, ತಾಂಬರಮ್ ಮತ್ತು ಜೋಧ್‌ಪುರಗಳಲ್ಲಿ ವೈಮಾನಿಕ ತರಬೇತಿ ಕೇಂದ್ರಗಳಿವೆ.

ಹೊಸದಿಲ್ಲಿಯಲ್ಲಿ ವೈಮಾನಿಕ ದಳದ ಮುಖ್ಯ ಕಚೇರಿ ಇದೆ. ಇಲ್ಲಿ ತಾಂತ್ರಿಕ ಶಾಖೆ, ಆಡಳಿತ ಶಾಖೆ ಮತ್ತು ವೈಮಾನಿಕ ಶಾಖೆ ಇರುತ್ತವೆ.

ಭಾರತೀಯ ವಾಯುದಳದ ಪದವಿಗಳು (ಆಯುಕ್ತಾಧಿಕಾರಿಗಳು): ವಿಮಾನ ಬಲಾಧಿಪತಿ, ಮಹಾವಾಯುಪತಿ, ವಾಯುಪತಿ, ಉಪವಾಯುಪತಿ, ಸಮೂಹ ನಾಯಕ, ವಿಭಾಗ ಸಮಾದೇಶಕ, ವೃಂದ ನಾಯಕ, ಹಾರಾಟ ಬಲಪತಿ, ದ್ರುತಾಧಿಕಾರಿ ಮತ್ತು ವಿಮಾನಾಧಿಕಾರಿ.



ಬೆಂಗಳೂರಿನ ಹೆಮ್ಮೆ - ನಾಟ್

ವಿಮಾನ ಉತ್ಪನ್ನ : ಮೊದಲಿನ ಏರೊನಾಟಿಕ್ಸ್ ಇಂಡಿಯಾ ಲಿಮಿಟೆಡ್ ಹಾಗೂ ಹಿಂದೂಸ್ಥಾನ್ ಏರ್‌ಕ್ರಾಫ್ಟ್ ಲಿಮಿಟೆಡ್‌ಗಳನ್ನು ವಿಲೀನಗೊಳಿಸಿ ಸರಕಾರಿ ವಲಯದ ಹಿಂದೂಸ್ಥಾನ್ ಏರೊನಾಟಿಕ್ಸ್ (ಎಚ್.ಎ.ಎಲ್.) ರೂಪಿಸಲಾಗಿದೆ. ಭಾರತದಲ್ಲಿ ಈ ಸಂಸ್ಥೆ ವಿಮಾನ ಹಾಗೂ ಅದರ ಸಲಕರಣೆಗಳನ್ನು ಉತ್ಪಾದಿಸುವ ಜವಾಬ್ದಾರಿ ಹೊತ್ತಿದೆ.

ರಾಷ್ಟ್ರದ ಆಕಾಶವನ್ನು ಪರರಾಷ್ಟ್ರದ ದಾಳಿಯಿಂದ ತಡೆಯುವುದು ವಿಮಾನ ದಳದ ಕೆಲಸ. ಭೂಸೈನ್ಯಕ್ಕೆ ಯುದ್ಧ ಸಮಯದಲ್ಲಿ ಸಹಾಯ ಮಾಡಿ ಮಾರ್ಗದರ್ಶನ ಮಾಡುವುದು ಯುದ್ಧ ವಿಮಾನಗಳ ಕರ್ತವ್ಯ.

ಭಾರತದ ವೈಮಾನಿಕ ದಳ ಬಲಶಾಲಿಯಾಗಿದೆ. ಪಾಕಿಸ್ತಾನ ಭಾರತದ ಮೇಲೆ ಆಕ್ರಮಣ ನಡೆಸಿದಾಗ ಭಾರತೀಯ ವಾಯುದಳ ಅಪ್ರತಿಮ ಸಾಹಸವನ್ನು ತೋರಿದೆ. ಬೆಂಗಳೂರು ವಿಮಾನ ಕಾರಖಾನೆಯಲ್ಲಿ ಸಿದ್ಧವಾದ ನಾಟ್ ವಿಮಾನ ವಿಶಿಷ್ಟ ದಾಖಲೆ ಸ್ಥಾಪಿಸಿದೆ. ಶಾಂತಿ ಸಮಯದಲ್ಲೂ ಭಾರತದ ವೈಮಾನಿಕ ದಳ ರಾಷ್ಟ್ರಕ್ಕೆ ಸಹಾಯಮಾಡಿದೆ. ಅಸ್ಸಾಮಿನಲ್ಲಿ ಭೂಕಂಪ, ಬ್ರಹ್ಮಪುತ್ರ ನದಿಯ ಮಹಾಪೂರಗಳ ಕಾಲದಲ್ಲಿ ನಿರಾಶ್ರಿತರಿಗೆ ಆಹಾರ ಒದಗಿಸಿ ನಮ್ಮ ವೈಮಾನಿಕರು ಸಹಾಯ ಸಲ್ಲಿಸಿದ್ದಾರೆ.

ನೋಡಿ : ರಕ್ಷಣಾ ಪಡೆಗಳು

## ವಾಷಿಂಗ್ಟನ್

ಅಮೆರಿಕದ ಅಧ್ಯಕ್ಷರ ಸುಪ್ರಸಿದ್ಧ ನಿವಾಸ ಶ್ವೇತಭವನ : ಅಮೆರಿಕದ ಕಾಂಗ್ರೆಸ್ ಸಭೆ ಸೇರುವ–ಗುಮ್ಮಟದ ಮೇಲಿರುವ–ಬೃಹದಾಕಾರದ ಭವನ : ಸುಮಾರು 11,000,000 ಗ್ರಂಥಗಳನ್ನುಳ್ಳ ಕಾಂಗ್ರೆಸ್ ಗ್ರಂಥಾಲಯ.

169.4 ಮೀಟರು ಎತ್ತರವಾಗಿರುವ ವಾಷಿಂಗ್ಟನ್ ಸ್ಮಾರಕ; ಅಮೃತ ಶಿಲೆಯ ವೃತ್ತಾಕಾರದ ಜೆಫರ್‌ಸನ್ ಸ್ಮಾರಕ ಭವನ; ಗ್ರೀಕ್ ದೇವಸ್ಥಾನದ ಮಾದರಿಯಲ್ಲಿರುವ ಅಮೃತಶಿಲೆಯ ಲಿಂಕನ್ ಸ್ಮಾರಕ ಭವನ; ವಿಶ್ವ ಬ್ಯಾಂಕ್ -ಒಂದಲ್ಲ ಎರಡಲ್ಲ, ವಾಷಿಂಗ್ಟನಿನಲ್ಲಿ ಅನೇಕ ಚಿತ್ತಾಕರ್ಷಕ ನಿರ್ಮಾಣಗಳಿವೆ. ಆ ನಗರ ಸ್ಥಾಪಿತವಾಗಿ ಸಂದಿರುವುದು 179 ವರ್ಷಗಳು ಮಾತ್ರ.

ವಾಷಿಂಗ್ಟನ್ ಪ್ರಪಂಚದ ಸುಂದರವೂ ಪ್ರಭಾವಶಾಲಿಯೂ ಆದ ನಗರಗಳಲ್ಲಿ ಒಂದು.

ಅಮೆರಿಕ ಸಂಯುಕ್ತ ಸಂಸ್ಥಾನದ ರಾಜಧಾನಿ ವಾಷಿಂಗ್ಟನ್. ರಾಷ್ಟ್ರದ ಶಾಸಕರು ಸಭೆ ಸೇರಿ ನಿರ್ಧಾರಗಳನ್ನು ಕೈಗೊಳ್ಳುವುದು ಮತ್ತು ಶ್ರೇಷ್ಠ ನ್ಯಾಯಾಲಯ ಇರುವುದು ಇಲ್ಲಿಯೇ. ಜನಸಂಖ್ಯೆ ಎಂಟು ಲಕ್ಷ.

ವಾಷಿಂಗ್ಟನಿನ ಅತ್ಯಂತ ಆಕರ್ಷಕ ಸ್ಥಳಗಳಲ್ಲೊಂದು. ಶಾಸಕರು ಸಭೆ ಸೇರುವ ಕಾಂಗ್ರೆಸ್ ಭವನ. ಅಮೆರಿಕದ ಅಧ್ಯಕ್ಷರ ಅಧಿಕಾರ ಸ್ವೀಕಾರ ಸಮಾರಂಭ ನಡೆಯುವುದು ಇಲ್ಲಿಯೇ. 1793ರಲ್ಲಿ ಅಮೆರಿಕದ ಮೊದಲ ಅಧ್ಯಕ್ಷ ಜಾರ್ಜ್ ವಾಷಿಂಗ್ಟನ್ ಈ ಭವನದ ಅಸ್ತಿಭಾರ ಶಿಲೆಯನ್ನು ಹಾಕಿದ. ಈ ಭವನದ ಕಬ್ಬಿಣದ ಗೋಲ 88 ಮೀಟರು ಎತ್ತರವಿದ್ದು ಇದರ ತುತ್ತ ತುದಿಗಿದೆ ಸ್ವಾತಂತ್ರ್ಯ ಪ್ರತಿಮೆ. ಇಟಲಿಯ ಚಿತ್ರಕಾರ ಕಾನ್‌ಸ್ಟಾಂಟಿನೊ ಬ್ರೂಮಿಡಿ ಎಂಬಾತನಿಗೆ ಭವನವನ್ನು ಚಿತ್ರಗಳಿಂದ ಸಿಂಗರಿಸಲು ಇಪ್ಪತ್ತೈದು ವರ್ಷ ಹಿಡಿಯಿತು. ಈ ಭವನವನ್ನು 1902 ರಿಂದ 'ಶ್ವೇತಭವನ' ಎಂದು ಕರೆಯುವುದು ವಾಡಿಕೆ.

ಕಾಂಗ್ರೆಸ್ (ಶಾಸಕಸಭೆ) ಗ್ರಂಥಾಲಯವೊಂದು ಬೃಹದಾಕಾರದ ಭವನ. 1800ರಲ್ಲಿ ಸ್ಥಾಪಿತವಾದ ಈ ಗ್ರಂಥಾಲಯ ಅಮೆರಿಕದಲ್ಲೇ ಅತ್ಯಂತ ದೊಡ್ಡದು. ಇದರೊಳಗೆ 14.57 ಹೆಕ್ಟೇರು ಸ್ಥಳವಿದೆ. 434 ಕಿಲೊಮೀಟರು ಉದ್ದ ಪುಸ್ತಕದ ಕಪಾಟುಗಳಿವೆ. ಈ ಪುಸ್ತಕ ಭಂಡಾರದಲ್ಲಿ ಕೆಲವು ಸೋಜಿಗದ ಪುಸ್ತಕಗಳಿವೆ. ಇಲ್ಲಿರುವ ಅತ್ಯಂತ ಸಣ್ಣ ಪುಸ್ತಕ ಕೈಬೆರಳಿನ ಉಗುರಿನಷ್ಟಿದೆ. ಅತ್ಯಂತ ದೊಡ್ಡ ಪುಸ್ತಕದ ಉದ್ದ 1.07 ಮೀಟರು.

'ವಾಷಿಂಗ್ಟನ್ ಸ್ಮಾರಕ' ನಗರದ ಅತ್ಯುನ್ನತ ಕಟ್ಟಡ. ಪ್ರತಿ ವರ್ಷವೂ ಹದಿನೈದು ಲಕ್ಷಕ್ಕೂ ಹೆಚ್ಚು ಜನ ಪ್ರೇಕ್ಷಕರು ಇಲ್ಲಿನ 898 ಮೆಟ್ಟಲನ್ನು ಹತ್ತಿಹೋಗಿ ಅಲ್ಲಿಂದ ಮುಂದೆ ತಿರುಗು ಏಣಿಯಲ್ಲಿ ಸ್ಮಾರಕದ ಮೇಲಿರುವ ವೀಕ್ಷಣಾಲಯಕ್ಕೆ ಹೋಗುತ್ತಾರೆ. ಇಲ್ಲಿಂದ ಇಡೀ ವಾಷಿಂಗ್ಟನ್ ನಗರದ ಪಕ್ಷಿನೋಟ ಕಾಣಬಹುದು.

ಅಮೃತಶಿಲೆಯ ಲಿಂಕನ್ ಸ್ಮಾರಕ ಭವನ ಇನ್ನೊಂದು ಮನೋಹರ ಕಟ್ಟಡ. ಭವನದ ಮಧ್ಯದಲ್ಲಿ [illegible] ಮೀಟರು ಎತ್ತರದ, ಕುಳಿತಿರುವ ಅಬ್ರಹಾಂ ಲಿಂಕನ್ ಪ್ರತಿಮೆಯಿದೆ. ಪ್ರತಿಮೆಯ ಮೇಲುಗಡೆ, 'ಯಾವ ಜನರಿಗಾಗಿ ಲಿಂಕನ್ ಈ ಒಕ್ಕೂಟವನ್ನು ರಕ್ಷಿಸಿದನೋ ಆ ಜನರ ಹೃದಯಗಳಲ್ಲಿ ಇರುವಂತೆಯೇ ಈ ಮಂದಿರದಲ್ಲೂ ಲಿಂಕನನ ಪುಣ್ಯಸ್ಮೃತಿ ಅನಂತಕಾಲಕ್ಕೂ ಪೂಜನೀಯವಾಗಿದೆ' ಎಂದು ಬರೆದಿದೆ.

ಪೊಟೊಮ್ಯಾಕ್ ನದಿಯ ಎದುರು ದಡದಲ್ಲಿ ಲಿಂಕನ್ ಸ್ಮಾರಕ ಭವನಕ್ಕೂ ಆಚೆ ಆರ್‌ಲಿಂಗ್‌ಟನ್ ರಾಷ್ಟ್ರೀಯ ರುದ್ರಭೂಮಿಯಿದೆ. ಅಮೆರಿಕದ ಮೂವತ್ತೈದನೆಯ ಅಧ್ಯಕ್ಷನಾಗಿದ್ದು ಕೊಲೆಗಡಕನ ಗುಂಡಿಗೀಡಾದ ಜಾನ್ ಎಫ್. ಕೆನಡಿಯ ಸಮಾಧಿಯಿರುವುದು ಆರ್‌ಲಿಂಗ್‌ಟನ್ ರುದ್ರಭೂಮಿಯಲ್ಲಿ.

ಅಜ್ಞಾತರ ಸಮಾಧಿ ಅಮೆರಿಕದಲ್ಲಿ ಅತ್ಯಂತ ಗೌರವಕ್ಕೆ ಪಾತ್ರವಾದ ಸ್ಥಳ. ಅಲ್ಲಿ ಮೂವರು ಅಜ್ಞಾತವೀರರನ್ನು ಸಮಾಧಿಮಾಡಲಾಗಿದೆ. ಈ ಮೂವರರಲ್ಲಿ ಒಬ್ಬ ಮೊದಲನೆಯ ಮಹಾಯುದ್ಧದ ವೀರ; ಎರಡನೆಯವನು ಎರಡನೆಯ ಮಹಾಯುದ್ಧದ ವೀರ; ಮೂರನೆಯವನು ಕೊರಿಯ ಯುದ್ಧದ ವೀರ. ಈ ಮೂರು ಅಜ್ಞಾತ ಸೈನಿಕರನ್ನು ಗೌರವಿಸುವುದರ ಮೂಲಕ ಅಮೆರಿಕ ಈ ಯುದ್ಧಗಳಲ್ಲಿ ಮಡಿದ ತನ್ನ ಐದು ಲಕ್ಷ ಸೈನಿಕರಿಗೂ ನಾವಿಕರಿಗೂ ಶ್ರದ್ಧಾಂಜಲಿಯನ್ನು ಸಲ್ಲಿಸುತ್ತದೆ.

ಅಮೆರಿಕದ ಅಧ್ಯಕ್ಷರ ನಿವಾಸವಾದ ಶ್ವೇತಭವನ ವಾಷಿಂಗ್ಟನಿನಲ್ಲಿ ನಿರ್ಮಿತವಾದ ಪ್ರಥಮ ಸರಕಾರೀ ಭವನ.

ವಾಷಿಂಗ್‌ಟನ್‌ನಲ್ಲಿ ಕಾರಖಾನೆಗಳು ಹೆಚ್ಚಿಲ್ಲ. ಆಡಳಿತವೇ ಈ ನಗರದ ಮುಖ್ಯ ಕಾರ್ಯ.

ವಿಶ್ವ ಬ್ಯಾಂಕ್, ಅಂತರರಾಷ್ಟ್ರೀಯ ಆರ್ಥಿಕ ನಿಧಿ, ಅಮೆರಿಕದ ಸಂಸ್ಥಾನಗಳ ಸಂಸ್ಥೆ ಇವೆಲ್ಲ ಇರುವುದು ವಾಷಿಂಗ್ಟನಿನಲ್ಲಿ.

ವಾಷಿಂಗ್ಟನ್ ನಗರ ಸ್ಥಾಪಿತವಾದದ್ದು 1791ರಲ್ಲಿ. ಈ ನಗರದ ನಿವೇಶನವನ್ನೂ ಇದನ್ನು ನಿರ್ಮಿಸಲು ಪಿಯರಿ ಲ ಎನ್‌ಫಾಂಟ್ (1754–1825) ಎಂಬ ಪ್ರತಿಭಾವಂತ ಫ್ರೆಂಚ್ ಶಿಲ್ಪಿಯನ್ನೂ ಆಯ್ಕೆ ಮಾಡಿದವನು ಜಾರ್ಜ್ ವಾಷಿಂಗ್ಟನ್.

ವಿಶ್ವದ ವ್ಯವಹಾರದಲ್ಲಿ ಅಮೆರಿಕ ವಹಿಸುತ್ತಿರುವ ಪ್ರಮುಖ ಪಾತ್ರದಿಂದಾಗಿ ವಾಷಿಂಗ್ಟನ್ ನಗರಕ್ಕೆ ವಿಶೇಷ ಮಹತ್ವ ಪ್ರಾಪ್ತವಾಗಿದೆ.

ನೋಡಿ : ಲಿಂಕನ್, ಅಬ್ರಹಾಂ ; ವಾಷಿಂಗ್ಟನ್, ಜಾರ್ಜ್

## ವಾಷಿಂಗ್ಟನ್, ಜಾರ್ಜ್

"ಯುದ್ಧದಲ್ಲಿ ಮೊದಲಿಗ, ಶಾಂತಿಯಲ್ಲಿ ಮೊದಲಿಗ ಮತ್ತು ತನ್ನ ದೇಶಬಾಂಧವರ ಹೃದಯಗಳಲ್ಲಿ ಮೊದಲಿಗ–ಇಂಥ ಮಾನವನ ನೆನಪಿಗಾಗಿ."

—ಜಾರ್ಜ್ ವಾಷಿಂಗ್ಟನ್ ಕುರಿತು ಆತನ ನಿಕಟವರ್ತಿಗಳಲ್ಲಿ ಒಬ್ಬನಾದ ಹೆನ್ರಿ ಲೀ ಹೇಳಿದ ಮಾತು ಇದು.

ಅಮೆರಿಕದ ಇತಿಹಾಸದ ಅತಿ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ, ಅಂತರ್ಯುದ್ಧ ಹಾಗೂ ಬಹಿರ್ಯುದ್ಧಗಳ ತಾಕಲಾಟಗಳಲ್ಲಿ ಜಾರ್ಜ್ ವಾಷಿಂಗ್ಟನ್ ಭಾಗವಹಿಸಿದ. ಫ್ರೆಂಚರನ್ನು ಹಿಮ್ಮೆಟ್ಟಿಸಿದ. ಬ್ರಿಟಿಷ್ ಆಡಳಿತವನ್ನು ನಾಶಮಾಡಿದ ಹೊರತು ವಸಾಹತಿನ ಸ್ವಾತಂತ್ರ್ಯ ಎಂದಿಗೂ ಉಳಿಯುವುದಿಲ್ಲ ಎಂಬ ಸಂದೇಶವನ್ನು ಸಾರಿದ. ಒಗ್ಗಟ್ಟು ಇಲ್ಲವೆ ವಿನಾಶಗಳಲ್ಲಿ ಒಂದನ್ನು ಆರಿಸಿಕೊಳ್ಳಬೇಕು –ಎಂದು ಕರೆಕೊಟ್ಟ.

ವೈಯಕ್ತಿಕ ಹಿರಿಮೆಯಿಂದ ಅಮೆರಿಕ ಸಂಯುಕ್ತ ಸಂಸ್ಥಾನದ ಪ್ರಥಮ ಅಧ್ಯಕ್ಷ ಸ್ಥಾನಕ್ಕೆ ಈತ ಚುನಾಯಿತನಾದ.

ತನ್ನ ಅರವತ್ತೇಳು ವರ್ಷಗಳ ಜೀವಿತಕಾಲದಲ್ಲಿ ಎಂದಿಗೂ ಯಾವ ಪಂಗಡಕ್ಕೂ ಸೇರಲಿಲ್ಲ. ನಿಷ್ಠೆ, ದೃಢನಿರ್ಧಾರ ಈತನ ಮಹತ್ತರ ಗುಣಗಳು.

ವರ್ಜೀನಿಯದ ವೆಸ್ಟ್‌ಮೋರ್‌ಲೆಂಡ್ ಎಂಬಲ್ಲಿ 1732 ಫೆಬ್ರವರಿ 22 ರಂದು ಜಾರ್ಜ್ ವಾಷಿಂಗ್ಟನ್ ಜನಿಸಿದ. ಈತನ ತಂದೆ ಆಗಸ್ಟೀನ್, ತಾಯಿ ಮೇರಿ ಬಾಲ್. ತನ್ನ ಏಳನೆಯ ವಯಸ್ಸಿನಿಂದ ಹನ್ನೊಂದರವರೆಗೆ ಶಾಲೆಯ ಶಿಕ್ಷಣ. ಈತನಿಗೆ ಅತ್ಯಲ್ಪವಾದ ಶಿಕ್ಷಣ ದೊರೆತುದು ಪುಸ್ತಕಗಳಿಗಿಂತ ಹೆಚ್ಚಾಗಿ ಭೂಮಾಪನ ಸಮೀಕ್ಷೆ ಹಾಗೂ ಹೊರಾಂಗಣ ಕೆಲಸ

ಕಾರ್ಯಗಳಲ್ಲಿ, ಹೊಗೆಸೊಪ್ಪು ಬೆಳೆಯುವುದರಲ್ಲಿ ನಿಷ್ಣಾತನೂ ಪಶು ಸಾಕಣೆಯಲ್ಲಿ ನಿಪುಣನೂ ಆಗಿದ್ದ. ವಾಷಿಂಗ್ಟನನಿಗೆ ತಾನು ಆ ನಾಡಿನ ಮೊದಲ ರೈತನೆಂಬುದೇ ಬಹಳ ಹೆಮ್ಮೆಯ ವಿಷಯವಾಗಿತ್ತು. ಮುಂದಿನ ಇಪ್ಪತ್ತು ವರ್ಷಗಳಲ್ಲಿ ಬೆಳೆಗಳ ಆವರ್ತನೆ. ಪಶುಪಾಲನೆ ಇವುಗಳನ್ನು ಯಶಸ್ವಿಗೊಳಿಸುವುದರಲ್ಲಿ ಆಸಕ್ತಿ ವಹಿಸಿದ.

ಅಮೆರಿಕದ ವಸಾಹತುಗಳು ಬ್ರಿಟಿಷ್ ಸಾಮ್ರಾಜ್ಯದ ಭಾಗವಾಗಿದ್ದುವು. ಬ್ರಿಟಿಷ್ ಸಾಮ್ರಾಜ್ಯದ ದಬ್ಬಾಳಿಕೆಯನ್ನು ತಾಳಲಾರದೆ ಅಮೆರಿಕ 1774ರಲ್ಲಿ ಬಹಿರಂಗವಾಗಿ ತನ್ನ ವಿರೋಧ ವ್ಯಕ್ತಪಡಿಸಿತು. ಅಮೆರಿಕದ ಜನತೆ ವಾಷಿಂಗ್ಟನನನ್ನು ತನ್ನ ನಾಯಕನಾಗಿ ಸ್ವೀಕರಿಸಿತು.

ಅಮೆರಿಕದ ಆಗಿನ ಸೇನೆಯಲ್ಲಿ ಶಿಸ್ತು ಇರಲಿಲ್ಲ: ನೌಕಾಬಲವಿರಲಿಲ್ಲ; ಹಣದ ವ್ಯವಸ್ಥೆಯಾಗಲೀ ಹೊರದೇಶದ ಆಸರೆಯಾಗಲೀ ಇರಲಿಲ್ಲ. ಯುದ್ಧ ಸಾಮಗ್ರಿಗಳ ಕೊರತೆ ತೀವ್ರವಾಗಿತ್ತು. ವಾಷಿಂಗ್ಟನ್ ಇಂಥ ಸೇನೆಯನ್ನು ಹುರಿದುಂಬಿಸಿ. ಅದಕ್ಕೆ ತರಬೇತಿಕೊಟ್ಟ. ಅವರಿಗೆ ಆಹಾರ, ಶಸ್ತ್ರ. ಬಟ್ಟೆ ಇವುಗಳನ್ನು ಪೂರೈಸಿದ. ಆತನ ಧೈರ್ಯ. ನಿರ್ಧಾರ ಹಾಗೂ ಅಚಲ ವಿಶ್ವಾಸಗಳು ಈಗಿನ ಅಮೆರಿಕದ ಸಂಯುಕ್ತ ಸಂಸ್ಥಾನದ ಅಡಿಪಾಯವಾದುವು.

ವಾಷಿಂಗ್ಟನ್ ಪ್ರಜಾಪ್ರಭುತ್ವಕ್ಕೆ ಆದರ್ಶ ನಾಯಕ. ವೈಯಕ್ತಿಕ ಯಶಸ್ಸು ಆತನ ಗುರಿಯಾಗಿರಲಿಲ್ಲ. ರಾಷ್ಟ್ರದ ಸ್ವಾತಂತ್ರ್ಯ ಆತನ ಪರಮೋದ್ದೇಶ. ಯುದ್ಧದಲ್ಲಿ ತನ್ನದೇ ಉಪಾಯಗಳನ್ನು ಹೂಡುತ್ತಿದ್ದ. ಬಿಮ್ಮಟ್ಟಿ ಶತ್ರುಪಕ್ಷ ತಮ್ಮ ಬೆನ್ನುಬಿದ್ದು ಬಳಲುವಂತೆ ಮಾಡುವುದು ಅವನ ಯುದ್ಧ ಚಾತುರ್ಯಗಳಲ್ಲಿ ಒಂದಾಗಿದ್ದಿತು. ಆದರೆ ಸಾಹಸದಿಂದ ಮುನ್ನುಗ್ಗಬೇಕಾದಾಗ ಹಿಂದುಮುಂದು ನೋಡದೆ ಮುಂದುವರಿಯುತ್ತಿದ್ದ.

1781 ಅಕ್ಟೋಬರ್ 19 ರಂದು ಬ್ರಿಟನ್ ಸೋಲನ್ನು ಒಪ್ಪಿಕೊಂಡಿತು. 1783ರಲ್ಲಿ ಶಾಂತಿಯ ಕರಾರುಗಳಿಗೆ ಎರಡು ರಾಷ್ಟ್ರಗಳು ಸಹಿಹಾಕಿದುವು. ಈ ಮಧ್ಯೆ ತನ್ನ ಕೆಲಸಗಳನ್ನು ಪೂರ್ಣಗೊಳಿಸಿ ವಾಷಿಂಗ್ಟನ್ ಚಟುವಟಿಕೆಗಳ ರಂಗದಿಂದ ವಿರಮಿಸಿದ.

ಆದರೆ ದೇಶಕ್ಕೆ ಇನ್ನೂ ಅವನ ಅವಶ್ಯತೆ ಇದ್ದಿತು. 1787ರಲ್ಲಿ ಆಗತಾನೆ ಹುಟ್ಟಿದ ಅಮೆರಿಕದ ಸಂಯುಕ್ತ ಸಂಸ್ಥಾನ ಅವನನ್ನು ತನ್ನ ಮೊದಲನೆಯ ಅಧ್ಯಕ್ಷನನ್ನಾಗಿ ಆಯ್ದು ಸನ್ಮಾನಿಸಿತು. ಅವನ ಮುಂದಿದ್ದ ಮುಖ್ಯ ಕಾರ್ಯಗಳು ಎರಡು: ಹೊಸ ರಾಷ್ಟ್ರದ ರಾಜ್ಯಾಂಗ ಯಶಸ್ವಿಯಾಗುವಂತೆ ಮಾಡುವುದು; ಪರರಾಷ್ಟ್ರದ ಗೋಜಿಗೆ ಹೋಗದೆ ದೇಶ ತನ್ನ ಪಾಡಿಗೆ ಬಾಳುವಂತೆ ನೋಡುವುದು. ಅಧ್ಯಕ್ಷಸ್ಥಾನದಲ್ಲಿ ಅವನ ಮೊದಲ ಅವಧಿಯಲ್ಲಿ ಪಕ್ಷಗಳ ಗೊಂದಲವೇ ಇರಲಿಲ್ಲವೆಂಬುದು ಗಮನಾರ್ಹ. ಎರಡನೆಯ ಬಾರಿಯೂ ವಾಷಿಂಗ್ಟನ್ ಅಧ್ಯಕ್ಷನಾಗಿ ಆಯ್ಕೆಯಾದ.

ತನ್ನ ಆಡಳಿತದಲ್ಲಿ ಅತ್ಯಂತ ದಕ್ಷರನ್ನೇ ವಾಷಿಂಗ್ಟನ್ ಸೇವೆಗಾಗಿ ಆರಿಸಿಕೊಂಡ. ಸಾಲಗಳನ್ನು ತೀರಿಸಿ ದೇಶ ತನ್ನ ದಾರಿಯಲ್ಲಿ ಸಾಗುವಂತೆ. ಹಣಕಾಸಿನ ವ್ಯವಸ್ಥೆ ಈತನ ಕಾಲದಲ್ಲಿ ಸುಗಮಗೊಂಡಿತು. ರಾಜ್ಯಗಳ ಕಾಯಿದೆಗಳಲ್ಲದೆ ಸುಭದ್ರ ರಾಷ್ಟ್ರದ ನಿಯಮಗಳು ರೂಪುಗೊಂಡುವು. ಹೊಸ ಭೂಪ್ರದೇಶಗಳೂ ರಾಷ್ಟ್ರಕ್ಕೆ ಸೇರಿಸಲ್ಪಟ್ಟುವು. ಹೊಸ ಸಂಸ್ಥಾನಗಳ ಕೋರಿಕೆಗೆ ಮನ್ನಣೆ ನೀಡಲಾಯಿತು.



ಅಮೆರಿಕದ ಪ್ರಥಮ ಅಧ್ಯಕ್ಷ ಜಾರ್ಜ್ ವಾಷಿಂಗ್ಟನ್

ವಿದೇಶೀ ವ್ಯವಹಾರದಲ್ಲಿ ವಾಷಿಂಗ್ಟನ್ ಹಿಂದೆ ಬೀಳಲಿಲ್ಲ. ದೇಶದ ಹಿತದೃಷ್ಟಿಯಿಂದ ಮಾತ್ರ ಯುದ್ಧ–ಎಂಬುದು ಅವನ ನಿಶ್ಚಿತ ನಿಲುವು. ಬ್ರಿಟಿಷರೊಡನೆ ಮತ್ತು ಸ್ಪೇನಿನೊಡನೆ ಒಪ್ಪಂದಗಳನ್ನು ಮಾಡಿಕೊಂಡು ವಾಣಿಜ್ಯದಲ್ಲಿ ಹೊಸ ಮಾರ್ಗಗಳನ್ನು ತೆರವುಮಾಡಿಸಿದ. ಮತ್ತು ರಾಷ್ಟ್ರದಲ್ಲಿ ದಕ್ಷಿಣದ ಮೇರೆಯನ್ನು ಖಚಿತಗೊಳಿಸಿದ.

1799 ಅಕ್ಟೋಬರ್ 13ರಂದು ವಾಷಿಂಗ್ಟನ್ ರಣರಂಗದಲ್ಲಿ ಕಾದಿದಷ್ಟೇ ಧೀರತೆಯಿಂದ ಸಾವನ್ನಪ್ಪಿದ. ತನ್ನ ರೋಗ ಉಲ್ಬಣಿಸಿದಂತೆ 'ನಾನು ಇಲ್ಲಿಂದ ನಿರ್ಗಮಿಸಲು ಅಳುಕುವುದಿಲ್ಲ' ಎಂದು ವೀರೋಚಿತವಾಗಿ ನುಡಿದ.

ವಾಷಿಂಗ್ಟನ್ ಗುಲಾಮರನ್ನು ಕಾಣುತ್ತಿದ್ದ ರೀತಿ ಉದಾತ್ತವಾಗಿತ್ತು. ಅವರ ಬಟ್ಟೆ ಊಟಗಳಿಗೆ ಕೊರತೆಯಿಲ್ಲದಂತೆ ಮಾಡಿದ: ಅವರಿಗಾಗಿ ವೈದ್ಯರನ್ನು ನೇಮಿಸಿದ.

ಅವನ ನ್ಯಾಯ ನಿಷ್ಠೆ, ಎಲ್ಲಕ್ಕೂ ಮಿಗಿಲಾಗಿ ಸ್ವದೇಶಾಭಿಮಾನ. ಅಮೆರಿಕದ ಪ್ರಥಮ ಅಧ್ಯಕ್ಷ ವಾಷಿಂಗ್ಟನನನ್ನು ಅಮರನನ್ನಾಗಿ ಮಾಡಿವೆ.

ಈತನಿಗಾಗಿ ದೇಶ [illegible] ಸ್ಮಾರಕಗಳು ಹಲವಾರು. [illegible] ಸಂಸ್ಥಾಪಕನಾದ ವಾಷಿಂಗ್ಟನ್ [illegible] ದೇಶದ [illegible] ಡಿ. ಸಿ. (ಡಿಸ್ಟ್ರಿಕ್ಟ್ ಕೊಲಂಬಿಯ) [illegible]

## ವಾಷಿಂಗ್ಟನ್, ಬೂಕರ್ ಟಿ

ಅಮೆರಿಕದ ಸಂಯುಕ್ತ ಸಂಸ್ಥಾನದಲ್ಲಿ ಒಂದು ರಾಜ್ಯ ವರ್ಜೀನಿಯ. ಅಲ್ಲೊಂದು ಊರು ರಿಚ್ಮಂಡ್. ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧ. ಯುವಕ ಪದವೀಧರನೊಬ್ಬನನ್ನು ಊರು ಸತ್ಕರಿಸುತ್ತಿದೆ. ಆತ ನೀಗ್ರೊ. ಮಾತನಾಡುತ್ತ ಆ ಯುವಕನ ದೃಷ್ಟಿ ಹತ್ತಿರದೊಂದು ಜಗಲಿಯತ್ತ ಹರಿಯುತ್ತದೆ. ಕೆಲವೇ ವರ್ಷಗಳ ಹಿಂದೆ ಹುಡುಗನಾಗಿದ್ದಾಗ ಆ ಜಗಲಿಯ ಮೇಲೆ ಆತ ಮಲಗಿದ್ದ—ಹಸಿದ ಹೊಟ್ಟೆಯಿಂದ.

ಹಿಂದೆ ಆ ಊರಿಗೆ ಅವನು ಬಂದದ್ದು ದಾರಿಹೋಕನಾಗಿ. 805 ಕಿ. ಮೀ. ಗಳ ದೂರದ ಮಾಲ್ಡೆನಿನ ಹಾಂಪ್ಟನ್ ಇನ್ಸ್ಟಿಟ್ಯೂಟ್ ಸೇರಬೇಕೆಂಬ ಬಯಕೆಯಿಂದ, ಒಂದೂವರೆ ಡಾಲರ್ ಹಣದೊಡನೆ ಆ ಹುಡುಗ ನಡೆಯುತ್ತ ಸಾಗಿದ್ದ. ಮಾಲ್ಡೆನ್ ತಲಪಿದಾಗ, ವಿದ್ಯಾಮಂದಿರಕ್ಕೆ ಪ್ರವೇಶ ದುಸ್ಸಾಧ್ಯವೆಂದು ಕಂಡಿತು. ಆರು ಡಾಲರು ವೇತನದ ಮೇಲೆ ಒಂದು ಮನೆಯಲ್ಲಿ ಪರಿಚಾರಕನಾಗಿ ದುಡಿದಿದ್ದ ಹುಡುಗ, "ನಾನು ಕಸಗುಡಿಸಬಲ್ಲೆ" ಎಂದ. ಕಸಗುಡಿಸುವ ಪರೀಕ್ಷೆಯಲ್ಲಿ ಶ್ರೇಷ್ಠ ಶ್ರೇಣಿಯಲ್ಲಿ ಉತ್ತೀರ್ಣನಾದ. ಉತ್ತೀರ್ಣನಾದ ಅವನಿಗೆ ಶಾಲೆಗೆ ಪ್ರವೇಶ ದೊರೆಯಿತು.

ತೋಟದಲ್ಲಿ ಗುಲಾಮ ಕುಟುಂಬದಲ್ಲಿ ಹುಟ್ಟಿದ (1856) ನೀಗ್ರೊ ಹುಡುಗ, ತಾನು ವಿದ್ಯೆ ಕಲಿತು ತನ್ನ ಸಮಾಜದ ಇತರರ ಉನ್ನತಿ ಸಾಧಿಸಲು ದುಡಿದ.

ದಕ್ಷಿಣದ ಈ ನೀಗ್ರೊ ನಾಯಕ ಕ್ರಾಂತಿಕಾರಿಯಾಗಬಹುದಿತ್ತು. ಆದರೆ ಆತ ಬಿಳಿಯ–ಕರಿಯರ ನಡುವೆ ಸಾಮರಸ್ಯ ಸಾಧಿಸಲು ಹೊರಟ ಧೀಮಂತ ನಾಯಕನಾದ. ತನ್ನ ಊರಿನಲ್ಲಿ (ಟಸ್ಕೆಗೀ) ಆತ ಕಟ್ಟಿದ ವಿದ್ಯಾಸಂಸ್ಥೆ ರಾಷ್ಟ್ರೀಯ ಮಹತ್ವ ಪಡೆಯಿತು.

ಹುಟ್ಟಿದಾಗ ತಾಯಿಯಿಟ್ಟ ಹೆಸರೊಂದೇ ಬೂಕರ್. ಉಪಾಧ್ಯಾಯರು ವಿವರ ಕೇಳಿದರೆಂದು ಹುಡುಗ ತಾನೇ ಕಲ್ಪಿಸಿಕೊಂಡು "ನನ್ನ ಹೆಸರು ಬೂಕರ್ ಟಾಲಿಯಫೆರೋ ವಾಷಿಂಗ್ಟನ್" ಎಂದು ನುಡಿದಿದ್ದ. ಆತ ಬೆಳೆದಂತೆ, ಬೂಕರ್ ಟಿ. ವಾಷಿಂಗ್ಟನ್ ಹೆಸರು ಮನೆಮಾತಾಗಿ ಹೋಯಿತು.

ಬೂಕರ್ ಉಪನ್ಯಾಸಗಳಿಂದ, ಗ್ರಂಥರಚನೆಯಿಂದ ನೀಗ್ರೊ ಸಮಾಜದಲ್ಲಿ ಜನಜಾಗೃತಿಯನ್ನುಂಟು ಮಾಡಿದ ; ಬಿಳಿಯರು ವರ್ಣಸಮಸ್ಯೆಯನ್ನು ಸರಿಯಾಗಿ ಅರ್ಥಮಾಡಿಕೊಳ್ಳಲು ನೆರವಾದ.

59ನೆಯ ವಯಸ್ಸಿನಲ್ಲಿ ಅವನು ತೀರಿಕೊಂಡ. ಗುಲಾಮನಾಗಿ ಆತ ಹುಟ್ಟಿದ ಬರಿ ನೆಲದ ಮರದ ಕೊಠಡಿ ಇಂದು ಅಮೆರಿಕದ ಸಂಯುಕ್ತ ಸಂಸ್ಥಾನದ ಯಾತ್ರಾಸ್ಥಳಗಳಲ್ಲಿ ಒಂದು.

## ವಾಸ್ಕೊ ದ ಗಾಮ

ವಾಸ್ಕೊ ದ ಗಾಮ ಪೋರ್ಚುಗಲ್ ದೇಶದ ನಾವಿಕ. ಈತ ಯೂರೋಪಿನಿಂದ ಭಾರತಕ್ಕೆ ಬರಲು ಪ್ರಪ್ರಥಮವಾಗಿ ಜಲಮಾರ್ಗವನ್ನು ಕಂಡುಹಿಡಿದ ಸಾಹಸಿ.

ವಾಸ್ಕೊ ದ ಗಾಮ ಪೋರ್ಚುಗಲಿನ ಸೈನ್ಸ್ ಎಂಬಲ್ಲಿ 1460ರಲ್ಲಿ ಹುಟ್ಟಿದ. ಗಣ್ಯಮನೆತನವೊಂದರಲ್ಲಿ ಜನಿಸಿದ್ದರಿಂದ ಪೋರ್ಚುಗಲಿನ ದೊರೆಯ ಅರಮನೆಯಲ್ಲಿ ಕೆಲಸ ಸಿಕ್ಕಿತು. ಬಾಲ್ಯದಿಂದಲೂ ಸಮುದ್ರಯಾನದಲ್ಲಿ ವಿಶೇಷ ಆಸಕ್ತಿ. ಸ್ವಭಾವತಃ ಯುದ್ಧಪ್ರಿಯನೂ ಸಾಹಸಿಯೂ ಆಗಿದ್ದ. ವಿದೇಶಗಳ ವಾಣಿಜ್ಯ ವ್ಯವಹಾರಗಳ ವಿಷಯವೂ ಇವನಿಗೆ ಚೆನ್ನಾಗಿ ತಿಳಿದಿತ್ತು. ಇವನ ಈ ಎಲ್ಲ ಗುಣಗಳಿಂದ ಸಂತುಷ್ಟನಾದ ದೊರೆ, ಮೊದಲನೆಯ ಮ್ಯಾನ್ಯುಎಲ್, ಗಾಮನಿಗೆ ನಾಲ್ಕು ಹಡಗುಗಳನ್ನು ಕೊಟ್ಟು ಭಾರತಕ್ಕೆ ಸಮುದ್ರ ಮಾರ್ಗವನ್ನು ಕಂಡುಹಿಡಿದು ಆ ದೇಶದಲ್ಲಿ ವ್ಯಾಪಾರಕ್ಕೆ ಅವಕಾಶ ಕಲ್ಪಿಸುವಂತೆ ಆಜ್ಞೆಮಾಡಿದ.


ಭಾರತಕ್ಕೆ ಜಲಮಾರ್ಗ ಹುಡುಕಿದ ವಾಸ್ಕೊ ದ ಗಾಮ

ದೊರೆಯ ಆದೇಶದಂತೆ 1497ರಲ್ಲಿ ಭಾರತಕ್ಕೆ ಜಲಮಾರ್ಗವನ್ನು ಹುಡುಕಲು ವಾಸ್ಕೊ ದ ಗಾಮ ಹಡಗನ್ನೇರಿದ. ಈ ಮಾರ್ಗ ಅವನಿಗೆ ಹೊಸದೇನೂ ಅಲ್ಲ. ಹಿಂದೆ ಪೋರ್ಚುಗಲಿನ ಮತ್ತೊಬ್ಬ ಸಾಹಸಿ ಬಾರ್ಥಲೋಮ್ಯೊ ಡೀಆಸ್ ಎಂಬವನು ದಕ್ಷಿಣ ಆಫ್ರಿಕದವರೆಗೂ ಬಂದು ಭಾರತಕ್ಕೆ ನಿಖರವಾದ ಮಾರ್ಗವೊಂದನ್ನು ಗೊತ್ತುಪಡಿಸಿದ್ದ. ಅವನ ಮಾರ್ಗದರ್ಶನದಂತೆ ಹೊರಟ ವಾಸ್ಕೊ ದ ಗಾಮ ದಕ್ಷಿಣ ಆಫ್ರಿಕವನ್ನು ಮುಟ್ಟಿ ಅಲ್ಲಿನ ನೀಗ್ರೊಗಳೊಡನೆ ಹೋರಾಡಿ ಮುಂದಕ್ಕೆ ನಡೆದ. ಅನಂತರ ಮಡಗಾಸ್ಕರ್ ದ್ವೀಪವನ್ನು ಸೇರಿ, ಭಾರತಕ್ಕೆ ದಾರಿ ಗೊತ್ತಿದ್ದ ಒಬ್ಬ ಮುಸಲ್ಮಾನನನ್ನು ಜೊತೆಗೆ ಕರೆದುಕೊಂಡು, 1498ರಲ್ಲಿ ಸುರಕ್ಷಿತವಾಗಿ ಭಾರತದ ಪಶ್ಚಿಮ ಭಾಗವನ್ನು ಮುಟ್ಟಿದ. ನಿಷ್ಕರುಣಿಯೂ ಪರಮತ ದ್ವೇಷಿಯೂ ಆದ ಗಾಮ ದಾರಿಯಲ್ಲಿ ಭೇಟಿಯಾದ ಹಡಗುಗಳನ್ನು ಲೂಟಿ ಮಾಡಿ ನಿಷ್ಕಾರಣವಾಗಿ ಪ್ರಯಾಣಿಕರನ್ನು ಸಜೀವದಹನ ಮಾಡಿದ.

ಗಾಮ ಪ್ರಥಮವಾಗಿ ಭಾರತದಲ್ಲಿ ಬಂದಿಳಿದದ್ದು, ಸಂಪತ್ತಿನ ತವರಾಗಿದ್ದ ಕಲ್ಲಿಕೋಟೆಯಲ್ಲಿ. ದೊರೆ ಜಾಮೊರಿನ್ ಅವನನ್ನು ಆದರದಿಂದ ಸ್ವಾಗತಿಸಿ ವ್ಯಾಪಾರಕ್ಕೆ ಅವಕಾಶಮಾಡಿಕೊಡುವುದಾಗಿ ಹೇಳಿದ. ಆದರೆ ಮುಸಲ್ಮಾನರಿಗೆ ವ್ಯಾಪಾರ ಸೌಕರ್ಯಗಳನ್ನು ಒದಗಿಸಕೂಡದೆಂದೂ ಪೋರ್ಚುಗೀಸರಿಗೆ ಮಾತ್ರ ಅವಕಾಶವಿರಬೇಕೆಂದೂ ಗಾಮ ಒತ್ತಾಯಪಡಿಸಲು ಜಾಮೊರಿನ್ ದೊರೆ ಅದನ್ನು ನಿರಾಕರಿಸಿದ. ಕೋಪಗೊಂಡ ನಾವಿಕ, ಜಾಮೊರಿನ್ ದೊರೆಯ ಶತ್ರುವಾಗಿದ್ದ ಕೊಚ್ಚಿಪಟ್ಟಣದ ದೊರೆಯ ಆಸ್ಥಾನಕ್ಕೆ ಹೋಗಿ, ಅವನ ಸಹಾಯದಿಂದ ವ್ಯಾಪಾರವನ್ನಾರಂಭಿಸಿದ. ತನ್ನ ಉದ್ದೇಶ ಸಫಲವಾದ ತೃಪ್ತಿಯಿಂದ 1499ರಲ್ಲಿ ತನ್ನ ದೇಶಕ್ಕೆ ಹಿಂದಿರುಗಿದ.

1502ರಲ್ಲಿ ಗಾಮ ಮತ್ತೊಂದು ಬಾರಿ ಭಾರತಕ್ಕೆ ಹೊರಟ. ಈ ಸಲ ಅವನೊಡನೆ ಹತ್ತು ಹಡಗುಗಳಿದ್ದುವು. ಭೇಟಿಯ ಉದ್ದೇಶ, ಪೋರ್ಚುಗೀಸರ ವ್ಯಾಪಾರಕ್ಕೆ ಅಡ್ಡಿಯಾಗಿದ್ದ ಅರಬಿ ಮತ್ತು ಹಿಂದೂ ವ್ಯಾಪಾರಿಗಳನ್ನು ಧ್ವಂಸಮಾಡುವುದು. ಕಲ್ಲಿಕೋಟೆಯನ್ನು ರಾಕ್ಷಸೀಯ ರೀತಿಯಲ್ಲಿ ನಾಶ ಮಾಡಿದ ಅನಂತರ ಕೊಚ್ಚಿ ಮತ್ತು ಇತರ ದಕ್ಷಿಣದ ಪ್ರದೇಶಗಳಲ್ಲಿ ವ್ಯಾಪಾರ ಮಳಿಗೆಗಳನ್ನು ಸ್ಥಾಪಿಸಿ 1503ರಲ್ಲಿ ಮತ್ತೆ ಸ್ವದೇಶಕ್ಕೆ ಮರಳಿದ. ಅವನ ಕೃತ್ಯಗಳಿಂದ ಸುಪ್ರೀತನಾದ ಪೋರ್ಚುಗಲಿನ ದೊರೆ ಅವನಿಗೆ ಅಪೂರ್ವ ಕಾಣಿಕೆಗಳನ್ನಿತ್ತು ಗೌರವಿಸಿದ.

ಕೆಲವು ಕಾಲದ ಅನಂತರ ಪೋರ್ಚುಗೀಸರ ವ್ಯಾಪಾರ ಭಾರತದಲ್ಲಿ ಕುಗ್ಗುತ್ತಿದ್ದುದರಿಂದ ಮೂರನೆಯ ಬಾರಿಗೆ ಗಾಮನನ್ನು ಭಾರತಕ್ಕೆ ಕಳುಹಿಸಿದರು. 1524ರಲ್ಲಿ ತಾನು ಸ್ಥಾಪಿಸಿದ್ದ ವಸಾಹತುಗಳ 'ಗವರ್ನರ್' ಆಗಿ ಭಾರತಕ್ಕೆ ಬಂದ ವಾಸ್ಕೊ ದ ಗಾಮ ಮೂರು ತಿಂಗಳಲ್ಲಿ ತೀರಿಕೊಂಡ.

ವಾಸ್ಕೊ ದ ಗಾಮನ ಸಮುದ್ರಯಾನ, ಚರಿತ್ರೆಯಲ್ಲಿ ಮಹತ್ವಪೂರ್ಣವಾದ ಘಟನೆ, ಪಶ್ಚಿಮ ದೇಶಗಳವರು ಭಾರತಕ್ಕೆ ಬರಲು ಅನುಕೂಲವಾದ ಮಾರ್ಗವನ್ನು ತೋರಿಸಿಕೊಟ್ಟವನು ಈತ.

## ವ್ಯಾಪಾರ, ವಾಣಿಜ್ಯ

ನಮಗೆ ಯಾವುದಾದರೂ ಒಂದು ವಸ್ತು ಬೇಕಾದರೆ ಆ ವಸ್ತು ದೊರಕುವ ಅಂಗಡಿಗೆ ಹೋಗುತ್ತೇವೆ. ಆ ವಸ್ತುವಿಗೆ ನಿಗದಿಯಾದ ಬೆಲೆಯನ್ನು ಕೊಟ್ಟು ಅದನ್ನು ಪಡೆಯುತ್ತೇವೆ. ಎಂದರೆ ಅಂಗಡಿಯವನಿಂದ ಅದನ್ನು ಕೊಳ್ಳುತ್ತೇವೆ. ಅಂಗಡಿಯವನು ಅದನ್ನು ನಮಗೆ ಮಾರುತ್ತಾನೆ.

ಹೀಗೆ ಸರಕುಗಳನ್ನು ಕೊಳ್ಳುವ ಮಾರುವ ವ್ಯವಹಾರವೇ ವ್ಯಾಪಾರ.

ಈ ವ್ಯಾಪಾರವನ್ನು ಕುರಿತು ಇನ್ನಷ್ಟು ಚಿಂತಿಸಿದರೆ ಈ ಸರಳವಾದ ವ್ಯವಹಾರದ ಹಿಂದೆ ಇರುವ ಅನೇಕ ಚಟುವಟಿಕೆಗಳ ಸರಣಿಯೊಂದನ್ನು ಕಾಣುತ್ತೇವೆ. ನಮಗೆ ಬೇಕೆನಿಸಿದ ವಸ್ತುವನ್ನು ಕೂಡಲೇ ಒದಗಿಸಿದ ಮಾರಾಟಗಾರ ಇನ್ನೊಬ್ಬನಿಂದ ಅದನ್ನು ಕೊಂಡಿರಬಹುದು. ಆತ ಅದನ್ನು ಆ ಪದಾರ್ಥದ ತಯಾರಕನಿಂದ ಪಡೆದಿರಬಹುದು. ನಮ್ಮ ಬೇಡಿಕೆ ಬರುವುದಕ್ಕಿಂತಲೂ ಎಷ್ಟೋ ಕಾಲ ಮುಂಚೆಯೇ ಈ ವ್ಯವಹಾರಗಳು ನಡೆದಿರಬಹುದು. ಅದಕ್ಕೂ ಮುಂಚೆಯೇ ಆ ಪದಾರ್ಥದ ತಯಾರಿಕೆ ಆಗಿರಬಹುದು.

ನಮಗೆ ಒಂದು ಪದಾರ್ಥ ಬೇಕೆನಿಸಿದ ಸಮಯಕ್ಕೆ ಸರಿಯಾಗಿ ಒದಗುವಂತಾಗಲು ನಾನಾ ಬಗೆಯ ವಿಘ್ನಗಳನ್ನು ದಾಟಬೇಕು. ಹಲವು ಬಗೆಯ ನೆರವು-ಸೇವೆಗಳನ್ನು ಪಡೆದುಕೊಂಡು ನಮ್ಮ ಬಳಿಗೆ ಅದು ಬಂದಿರುತ್ತದೆಂಬುದು ನೆನಪಿಡಬೇಕಾದ ಸಂಗತಿ. ಪದಾರ್ಥವನ್ನು ಒಂದೆಡೆಯಿಂದ ಇನ್ನೊಂದೆಡೆಗೆ ಸಾಗಿಸಲು ರೈಲು, ಲಾರಿ, ಹಡಗು, ವಿಮಾನ ಮುಂತಾದ ನೆಲ ಜಲ ವಾಯು ಸಾರಿಗೆ ವ್ಯವಸ್ಥೆಗಳ ನೆರವು ಪಡೆಯಬೇಕಾಗುತ್ತದೆ. ಹೀಗೆ ಪದಾರ್ಥವನ್ನು ಒಂದೆಡೆಯಿಂದ ಇನ್ನೊಂದೆಡೆಗೆ ಸಾಗಿಸುವಾಗ ಅಥವಾ ಒಂದೆಡೆಯಲ್ಲಿ ದಾಸ್ತಾನು ಮಾಡಿದಾಗ ಅದು ನಾಶಗೊಂಡರೆ ಆ ವ್ಯಾಪಾರಿಗೆ ನಷ್ಟವಾಗಬಹುದು. ಹಾಗೇನಾದರೂ ಆದಾಗ ಆ ನಷ್ಟವನ್ನು ಬೇರೊಬ್ಬರು ಭರ್ತಿ ಮಾಡುವುದಾದರೆ ಎಷ್ಟೊಂದು ಚೆನ್ನ! ತುಂಬಾ ಸೋಜಿಗದ ಸಂಗತಿಯೆಂದರೆ ನಮ್ಮ ವ್ಯವಹಾರ ಪ್ರಪಂಚದಲ್ಲಿ ಇಂಥವರೂ ಇದ್ದಾರೆ. ವ್ಯಾಪಾರಿಯಿಂದ ಸ್ವಲ್ಪ ಹಣ ಪಡೆದು ಕರಾರು ಮಾಡಿಕೊಂಡು, ಪದಾರ್ಥಕ್ಕೆ ನಷ್ಟ ಸಂಭವಿಸಿದರೆ ಅದನ್ನು ತುಂಬಿಕೊಡುವುದಾಗಿ ಭರವಸೆ ನೀಡಿ ಒಪ್ಪಂದ ಮಾಡಿಕೊಳ್ಳುತ್ತಾರೆ. ಇವರೇ ವಿಮಾದಾರರು. ಇವರ ಸಂಸ್ಥೆಗಳು ವಿಮಾ ಸಂಸ್ಥೆಗಳು. ಈ ಸಂಸ್ಥೆಗಳ ಚಟುವಟಿಕೆಯೂ ವ್ಯಾಪಾರಕ್ಕೆ ಸಹಕಾರಿ.

ಬಳಕೆದಾರ ಕೊಳ್ಳುವುದಕ್ಕೂ ಎಷ್ಟೋ ದಿನ ಮುಂಚೆಯೇ ಪದಾರ್ಥವನ್ನು ಚಿಲ್ಲರೆ ಅಂಗಡಿಯವನು ಕೊಂಡಿಡಲು ಅವನಿಗೆ ಹಣ ಬೇಕು. ಚಿಲ್ಲರೆ ವ್ಯಾಪಾರಿ ಪದಾರ್ಥ ಕೊಳ್ಳುವುದಕ್ಕೆ ಮುಂಚೆಯೇ ಅದನ್ನು ಅವನಿಗಾಗಿ ಕೊಂಡು ಸಿದ್ಧವಾಗಿ ಇಡಲು ಒಟ್ಟು (ರಖಂ) ವ್ಯಾಪಾರಿಗೂ ಹಣ ಬೇಕು. ಪದಾರ್ಥವನ್ನು ತಯಾರಿಸಿ ಮಾರಾಟ ಮಾಡುವುದಕ್ಕೂ ಎಷ್ಟೋ ಕಾಲ ಮುಂಚೆಯೇ ಉತ್ಪಾದಕ ಅದಕ್ಕಾಗಿ ಕಚ್ಚಾಸಾಮಗ್ರಿಯನ್ನು ಕೊಳ್ಳಬೇಕು: ಉತ್ಪಾದನೆಯ ವೆಚ್ಚ ಮಾಡಬೇಕು. ಇದಕ್ಕೆಲ್ಲ ಹಣ ಬೇಕು. ಇಷ್ಟೊಂದು ಹಣ ಇವರಲ್ಲಿ ಇಲ್ಲದಿದ್ದರೆ ಆ ಸಮಯದಲ್ಲಿ ಇದನ್ನು ಒದಗಿಸುವ ಸಂಸ್ಥೆಗಳೇ ಬ್ಯಾಂಕುಗಳು. ಇವೂ ವ್ಯಾಪಾರಕ್ಕೆ ಸಹಕಾರಿಗಳು.

ಇಷ್ಟೇ ಅಲ್ಲ; ಈ ವ್ಯಾಪಾರಿಗಳಿಗೆ ನೆರವು ನೀಡಲು ಸರಕುಗಳನ್ನು ದೊರಕಿಸಿಕೊಡಲು ಇವರ ಪ್ರತಿನಿಧಿಗಳಾಗಿ ಅನೇಕರು ಇರುತ್ತಾರೆ. ದಲ್ಲಾಳಿಗಳು, ಕಮಿಷನ್ ಏಜೆಂಟರು, ಹರಾಜುದಾರರು ಮುಂತಾದವರೂ ವ್ಯಾಪಾರ ಸಹಕಾರಿಗಳೇ.

ಹೀಗೆ ಕೊಳ್ಳುವ ಮಾರುವ ವ್ಯವಹಾರಕ್ಕೆ (ವ್ಯಾಪಾರಕ್ಕೆ) ಸಹಾಯಕವಾಗಿರುವ ದಾಸ್ತಾನು ವ್ಯವಸ್ಥೆ, ಸಾರಿಗೆ ವ್ಯವಸ್ಥೆ, ವಿಮೆ, ಬ್ಯಾಂಕು, ಪ್ರತಿನಿಧಿಗಳು — ಇವರೆಲ್ಲರ ಚಟುವಟಿಕೆಗಳೂ ತೀರಾ ಅವಶ್ಯ. ವ್ಯಾಪಾರವೂ ವ್ಯಾಪಾರ ಸಹಕಾರಿಗಳೂ ಸೇರಿದ ಇಡೀ ವ್ಯವಸ್ಥೆಯೇ ವಾಣಿಜ್ಯ. ಈ ಎಲ್ಲ ವ್ಯವಹಾರಗಳೂ ವ್ಯಕ್ತಿಗಳ ಸೇವೆಗಾಗಿಯೇ ಇರುವುದಾದರೂ ಇವುಗಳನ್ನು ನಡೆಸುವವರ ಉದ್ದೇಶ ಲಾಭ ಸಂಪಾದನೆ.

ವ್ಯವಹಾರ ಸಂಸ್ಥೆಗಳು : ಲಾಭೋದ್ದೇಶದಿಂದ ವ್ಯವಹಾರ ನಡೆಸುವ ಈ ನಾನಾ ಸಂಸ್ಥೆಗಳ ರಚನೆಯ ಸ್ವರೂಪವನ್ನು ಸ್ವಲ್ಪಮಟ್ಟಿಗೆ ತಿಳಿಯುವುದು ಅವಶ್ಯ. ಒಂದು ವ್ಯವಹಾರ ಸಂಸ್ಥೆಯನ್ನು ಅಥವಾ ಉದ್ಯಮವನ್ನು ನಡೆಸಲು ಇಂದು ಮುಖ್ಯವಾಗಿ ಅಗತ್ಯವಿರುವ ಮೂರು ಅಂಶಗಳೆಂದರೆ ಬಂಡವಾಳ, ದುಡಿಮೆ ಹಾಗೂ ಬುದ್ಧಿಶಕ್ತಿ. ವ್ಯವಹಾರ ಸಂಸ್ಥೆಯ ಗಾತ್ರ ಚಿಕ್ಕದಾಗಿದ್ದರೆ ಒಬ್ಬ ವ್ಯಕ್ತಿಯೇ ತನ್ನಲ್ಲಿರುವ ಈ ಮೂರನ್ನೂ ಒಟ್ಟಿಗೆ ಕೂಡಿಸಿಕೊಂಡು ವ್ಯವಹಾರ ನಡೆಸಬಹುದು. ಬೀದಿಯ ಕೊನೆಯಲ್ಲಿರುವ ಚಿಲ್ಲರೆ ಅಂಗಡಿ ಇದಕ್ಕೆ ಒಂದು ಒಳ್ಳೆಯ ಉದಾಹರಣೆ. ಇದನ್ನು ಏಕವ್ಯಕ್ತಿ ಸಂಸ್ಥೆ ಎನ್ನಬಹುದು.

ಒಬ್ಬನ ಬಂಡವಾಳ ದುಡಿಮೆ ಬುದ್ಧಿಶಕ್ತಿಗಳು ಒಂದು ವ್ಯಾಪಾರವನ್ನು ನಡೆಸಲು ಸಾಲದಾದರೆ ಆಗ ಇಬ್ಬರು ಅಥವಾ ಹೆಚ್ಚು ಮಂದಿ ಒಟ್ಟಾಗಿ ತಮ್ಮ ತಮ್ಮ ಬಂಡವಾಳ, ದುಡಿಮೆ, ಬುದ್ಧಿಶಕ್ತಿ, ಅನುಭವಗಳೇ ಮುಂತಾದುವನ್ನು ಕೂಡಿಸಿ ವ್ಯವಹಾರ ಸಂಸ್ಥೆ ಆರಂಭಿಸಬಹುದು. ಒಬ್ಬನ ಬಂಡವಾಳ, ಇನ್ನೊಬ್ಬನ ದುಡಿಮೆ, ಮತ್ತೊಬ್ಬನ ಬುದ್ಧಿಶಕ್ತಿ, ಮಗದೊಬ್ಬನ ಅನುಭವ—ಹೀಗೆ ಒಬ್ಬನ ಕೊರತೆಯನ್ನು ಇನ್ನೊಬ್ಬ ತುಂಬಬಹುದು. ಈ ಉದ್ಯಮದಿಂದ ದೊರಕುವ ಲಾಭ (ಅಥವಾ ನಷ್ಟ) ವನ್ನು ಯಾವ ಪ್ರಮಾಣದಲ್ಲಿ ಹಂಚಿಕೊಳ್ಳಬೇಕು, ಯಾರು ಯಾರು ಎಷ್ಟೆಷ್ಟು ಬಂಡವಾಳ ತರಬೇಕು ಮುಂತಾದುವುಗಳ ಬಗೆಗೆ ಇವರು ಸಾಮಾನ್ಯವಾಗಿ ಒಂದು ಕರಾರು ಮಾಡ

ಕೊಂಡಿರುತ್ತಾರೆ. ಈ ಸಂಸ್ಥೆಗೆ ಪಾಲುದಾರಿಕೆ ಸಂಸ್ಥೆ ಎನ್ನುತ್ತಾರೆ. ಇವರೆಲ್ಲರೂ ಪಾಲುದಾರರು.

ಏಕವ್ಯಕ್ತಿ ಉದ್ಯಮದಲ್ಲೂ ಪಾಲುದಾರಿಕೆ ಸಂಸ್ಥೆಯಲ್ಲೂ ಇವುಗಳ ಒಡೆಯರಿಗೆ ವ್ಯಾಪಾರದಲ್ಲಿ ನೇರವಾದ ಆಸಕ್ತಿ ಇರುತ್ತದೆ. ಇವರು ತಮ್ಮ ಗ್ರಾಹಕರೊಂದಿಗೆ ನೇರ ಸಂಪರ್ಕ ಹೊಂದಿರಬಲ್ಲರು. ಈ ಒಡೆಯರಿಗೂ ಇವರ ಸಂಸ್ಥೆಗಳಿಗೂ ಭೇದವೇನೂ ಇಲ್ಲ. ಲಾಭ ನಷ್ಟಗಳಿಗೆ ಇವರೇ ನೇರ ಹೊಣೆ. ಇದನ್ನು ಭೋಗಿಸಬೇಕಾದವರು ಇವರೇ. ಹೀಗೆ ಇವುಗಳಲ್ಲಿ ಕೆಲವು ಅನುಕೂಲಗಳೂ ಕೆಲವು ಪ್ರತಿಕೂಲಗಳೂ ಇವೆ.

ಉದ್ಯಮದ ಗಾತ್ರ ಇನ್ನೂ ಹೆಚ್ಚಿದಾಗ, ಕೆಲವೇ ವ್ಯಕ್ತಿಗಳ ಬಂಡವಾಳ ಪರಿಶ್ರಮಗಳೇ ಮುಂತಾದುವು ಇದಕ್ಕೆ ಸಾಲದಾದಾಗ, ಏಕವ್ಯಕ್ತಿ ಸಂಸ್ಥೆಯ ಅಥವಾ ಪಾಲುದಾರಿಕೆ ಸಂಸ್ಥೆಯ ಕೆಲವು ಪ್ರತಿಕೂಲಗಳನ್ನು ನಿವಾರಿಸಿಕೊಳ್ಳಬೇಕಾದಾಗ, ಕೂಡು ಬಂಡವಾಳ ಕಂಪನಿ ಎಂಬ ಸಂಸ್ಥೆಯನ್ನು ಪ್ರಾರಂಭಿಸಬಹುದು. ಇದರ ಒಟ್ಟು ಬಂಡವಾಳದ ಮೊತ್ತವನ್ನು ಸಮಾನ ಭಾಗಗಳಾಗಿ ವಿಂಗಡಿಸಿ ಇವನ್ನು ಸಾರ್ವಜನಿಕರಿಂದ ಪಡೆಯಬಹುದು. ಆ ಸಂಸ್ಥೆಯ ಬಂಡವಾಳದ ಭಾಗಗಳನ್ನು ಷೇರುಗಳು (ಅಂಶಗಳು) ಎನ್ನುತ್ತಾರೆ. ಹಣ ಕೊಟ್ಟು ಕಂಪೆನಿಯ ಬಂಡವಾಳದಲ್ಲಿ ಪಾಲು ಪಡೆದವರು ಷೇರುದಾರರು ಅಥವಾ ಸದಸ್ಯರು. ಈ ಸದಸ್ಯರು ತಮ್ಮಲ್ಲಿ ಕೆಲವರನ್ನು ಆಯ್ಕೆಮಾಡಿ ಆ ಕಂಪೆನಿಯ ಆಡಳಿತದ ಜವಾಬ್ದಾರಿಯನ್ನು ಅವರಿಗೆ ವಹಿಸುತ್ತಾರೆ. ಅವರು ನಿರ್ದೇಶಕರು ; ಅವರೊಲ್ಲೊಬ್ಬ ಅಧ್ಯಕ್ಷ. ಇಂಥ ಕಂಪೆನಿಗಳ ಆಡಳಿತವನ್ನು ನಿಯಂತ್ರಿಸಲು ಸರಕಾರ ವಿಧೇಯಕವೊಂದನ್ನು ಜಾರಿಗೆ ತಂದಿದೆ. ಇದನ್ನು ಭಾರತದ ಕಂಪೆನಿಗಳ ವಿಧೇಯಕವೆನ್ನುತ್ತಾರೆ. ಈ ವಿಧೇಯಕಕ್ಕೆ ಅನುಗುಣವಾಗಿ ಕಂಪೆನಿ ತನಗೆ ಸೂಕ್ತವಾದ ನಿಬಂಧನೆಗಳನ್ನು ರಚಿಸಿಕೊಂಡಿರುತ್ತದೆ. ಕಂಪೆನಿಯ ವ್ಯವಹಾರದಿಂದ ಬಂದ ಲಾಭವನ್ನು ಸದಸ್ಯರ ತೀರ್ಮಾನದಂತೆ ಅವರು ಪಡೆದಿರುವ ಷೇರುಗಳಿಗೆ ಅನುಸಾರವಾಗಿ ಅವರಲ್ಲಿ ಹಂಚುತ್ತಾರೆ.

ಕಂಪೆನಿಯ ವ್ಯವಹಾರದಲ್ಲಿ ಒಂದು ವೇಳೆ ನಷ್ಟ ಸಂಭವಿಸಿದರೆ ಅದರ ಷೇರುದಾರರಿಗೆ ಅವರು ಪಡೆದಿರುವ ಷೇರಿನ ಮೌಲ್ಯಕ್ಕಿಂತ ಮೀರಿ ಅವರು ಜವಾಬ್ದಾರರಾಗಿರುವುದಿಲ್ಲ. ಅವರ ಜವಾಬ್ದಾರಿ ಅವರ ಷೇರಿನ ಮೌಲ್ಯಕ್ಕೆ ಪರಿಮಿತ. ಅದು ಕಾಯಿದೆಯಿಂದ ನಿರ್ಮಿತವಾದದ್ದು. ಇಂದಿನ ಬೃಹತ್ ಪ್ರಮಾಣದ ಉದ್ಯಮಗಳೆಲ್ಲ ಬಹುತೇಕ ಕೂಡು ಬಂಡವಾಳ ಕಂಪೆನಿಗಳಿಂದ ನಿರ್ವಹಿಸಲ್ಪಡುತ್ತಿರುವುದೇ ಇವುಗಳ ಉಪಯುಕ್ತತೆಗೆ ಸಾಕ್ಷಿ.

ವ್ಯಾಪಾರ ಒಳನಾಡಿನದಾಗಿರಬಹುದು ಅಥವಾ ಅಂತರರಾಷ್ಟ್ರೀಯದಾಗಿರಬಹುದು. ಮಾರುವವರೂ ಕೊಳ್ಳುವವರೂ ಒಂದೇ ದೇಶದಲ್ಲಿದ್ದರೆ ಅದು ಅದರ ಒಳನಾಡಿನ ವ್ಯಾಪಾರ. ಇವರಲ್ಲೊಬ್ಬರು ಇನ್ನೊಂದು ದೇಶದಲ್ಲಿ ಇದ್ದರೆ ಅದು ಅಂತರರಾಷ್ಟ್ರೀಯ ವ್ಯಾಪಾರ.

ಒಳನಾಡಿನ ವ್ಯಾಪಾರದಲ್ಲಿ ನಿರತರಾಗಿರುವವರು ಮುಖ್ಯವಾಗಿ ಎರಡು ಬಗೆ ; ಪದಾರ್ಥಗಳನ್ನು ಒಟ್ಟಾಗಿ ಕೊಂಡು ಅದನ್ನು ಇತರ ವ್ಯಾಪಾರಿಗಳಲ್ಲಿ–ಚಿಲ್ಲರೆ ವರ್ತಕರಲ್ಲಿ–ಹಂಚುವವರು ಒಟ್ಟು ವ್ಯಾಪಾರಿಗಳು. ಇವರು ಉತ್ಪಾದಕರಿಗೂ ಚಿಲ್ಲರೆ ವ್ಯಾಪಾರಿಗೂ ನಡುವೆ ಇರುವವರು. ಚಿಲ್ಲರೆ ವ್ಯಾಪಾರ ನಾನಾ ಬಗೆ. [illegible] ತಲೆಯ ಮೇಲೆ ಸರಕು ಹೊತ್ತು ಮನೆ ಮನೆಗೆ ಹೋಗಿ ಮಾರುವ ವ್ಯಾಪಾರ. ಒಂದೇ ಕೋಣೆಯ ಚಿಲ್ಲರೆ ಅಂಗಡಿ. ಉತ್ಪಾದಕನೇ ತನ್ನ ಸರಕುಗಳನ್ನು ಮಾರಲು ಬೇರೆ ಬೇರೆಡೆಗಳಲ್ಲಿ ತೆರೆದಿರುವ ಅಂಗಡಿ, ಗ್ರಾಹಕರಿಗೆ ಬೇಕಾಗುವ ಎಲ್ಲ ಸರಕುಗಳನ್ನೂ ಒಂದೇ ಎಡೆಯಲ್ಲಿ ಬೇರೆ ಬೇರೆ ಇಲಾಖೆಗಳಲ್ಲಿಟ್ಟು ಮಾರುವ ಅಂಗಡಿ, ಅಂಚೆಯ ಮೂಲಕ ಆದೇಶ ಪಡೆದು ಅಂಚೆಯ ಮೂಲಕವೇ ಸರಕು ರವಾನಿಸುವ ಅಂಗಡಿ ಇವು ಕೆಲವು ಮುಖ್ಯ ಪ್ರಕಾರಗಳು.

ನಮಗೆ ಅಗತ್ಯವಾದ ಸರಕನ್ನು ಇನ್ನೊಂದು ರಾಷ್ಟ್ರದ ವ್ಯಾಪಾರಿಯಿಂದ ತರಿಸಿದರೆ, ಅಥವಾ ನಮ್ಮಲ್ಲಿನ ಸರಕುಗಳನ್ನು ಇನ್ನೊಂದು ರಾಷ್ಟ್ರಕ್ಕೆ ಕಳುಹಿಸಿದರೆ ಅದು ಅಂತರರಾಷ್ಟ್ರೀಯ ವ್ಯಾಪಾರ. ಇನ್ನೊಂದು ದೇಶದ ವ್ಯಾಪಾರಿಯಿಂದ ನಮ್ಮ ದೇಶದ ವ್ಯಾಪಾರಿ ಸರಕು ತರಿಸಿಕೊಂಡರೆ ಅದು ಆಮದು ಅಥವಾ ಆಯಾತ. ಇನ್ನೊಂದು ದೇಶದ ವ್ಯಾಪಾರಿಗೆ ನಮ್ಮ ದೇಶದಿಂದ ಸರಕು ಕಳುಹಿಸಿದರೆ ಅದು ರಫ್ತು ಅಥವಾ ನಿರ್ಯಾತ.

ಯಂತ್ರ ಕ್ರಾಂತಿಯ ಫಲವಾಗಿ ಪದಾರ್ಥಗಳ ಉತ್ಪತ್ತಿ ಇಂದು ಅಗಾಧವಾಗಿ ಹೆಚ್ಚಿದೆ. ಒಂದು ಸ್ಥಳದಲ್ಲಿ ತಯಾರಾಗುತ್ತಿದ್ದ ಪದಾರ್ಥಕ್ಕೆ ಇಂದು ಇಡಿಯ ಜಗತ್ತೇ ಪೇಟೆಯಾಗಿರಬಹುದು. ಅಧಿಕ ಪ್ರಮಾಣದಲ್ಲಿ ತಯಾರಾದ ಸರಕನ್ನು ಶೀಘ್ರವಾಗಿ ಒಂದೆಡೆಯಿಂದ ಇನ್ನೊಂದೆಡೆಗೆ ಕೊಂಡೊಯ್ಯುವುದು ಸಾಧ್ಯವಾಗುವಂತೆ ಸಾರಿಗೆಯಲ್ಲಿ ಕ್ರಾಂತಿಯುಂಟಾಗಿದೆ. ಇದರ ಫಲವಾಗಿ ದೂರಗಳು ಕುಗ್ಗಿವೆ. ಪ್ರಪಂಚವೇ ಚಿಕ್ಕದಾಗಿರುವಂತೆ ಭಾಸವಾಗುತ್ತದೆ. ಜಗತ್ತಿನ ಏಕತೆಯ ಕಲ್ಪನೆ ಇಂದು ಹೆಚ್ಚು ಹತ್ತಿರವಾಗಿದೆ. ಇದಕ್ಕೆಲ್ಲ ವಾಣಿಜ್ಯ ಬಹುಮಟ್ಟಿಗೆ ಕಾರಣ.

## ವಿಕ್ಟೋರಿಯ

ಇಂಗ್ಲೆಂಡಿನ ಇತಿಹಾಸದಲ್ಲಿ ಅತ್ಯಂತ ದೀರ್ಘ ಕಾಲ–ಅರವತ್ತನಾಲ್ಕು ವರ್ಷ–ರಾಜ್ಯವಾಳಿದ ರಾಣಿ, ವಿಕ್ಟೋರಿಯ. ಆಡಳಿತದ ಅವಧಿಯಲ್ಲಿ ಬಹಳ ಒಳ್ಳೆಯವಳೆಂದು ಆಕೆ ಹೆಸರುಪಡೆದಳು.

1838ರ ಜುಲೈ 28ರಂದು ವಿಕ್ಟೋರಿಯ ಬ್ರಿಟಿಷ್ ಚಕ್ರಾಧಿಪತ್ಯದ ಅಭಿಷಿಕ್ತ ರಾಣಿಯಾದಳು. ಆಗ ಅವಳಿಗೆ ಹದಿನೇಳು ವರ್ಷ.

ವಿಕ್ಟೋರಿಯ ಪಟ್ಟಕ್ಕೆ ಬಂದಾಗ, ಒಂದು ರಾಜಕೀಯ ಪಕ್ಷವಾಗಿದ್ದ ವಿಗ್ ಪಕ್ಷದ ನಾಯಕ ಲಾರ್ಡ್ ಮೆಲ್ಬೋರ್ನ್ ಪ್ರಧಾನಮಂತ್ರಿಯಾಗಿದ್ದ. ರಾಜಕಾರಣವನ್ನು ವಿಕ್ಟೋರಿಯಾಗೆ ಮೆಲ್ಬೋರ್ನ್ ಕಲಿಸಿದ. ಆಕೆಗೆ ತಂದೆಯ ಸ್ಥಾನದಲ್ಲಿದ್ದುಕೊಂಡು, ಅನಧಿಕೃತ ಆಪ್ತಕಾರ್ಯದರ್ಶಿಯಾಗಿ, ಮಾರ್ಗದರ್ಶನ ನೀಡಿದ. ಪಟ್ಟಕ್ಕೆ ಬಂದ ಮೂರು ವರ್ಷಗಳ ಅನಂತರ ಚಿಕ್ಕಪ್ಪ ಲಿಯೊಪಾಲ್ಡನ ಸಹೋದರಿಯ ಮಗ ರಾಜಕುಮಾರ ಆಲ್ಬರ್ಟ್‌ನನ್ನು ವಿಕ್ಟೋರಿಯ ವಿವಾಹವಾದಳು. ಈ ದಂಪತಿಗೆ ಒಂಬತ್ತು ಜನ ಮಕ್ಕಳು.

1861ರಲ್ಲಿ ವಿಕ್ಟೋರಿಯ ರಾಣಿಯ ಪತಿ ನಿಧನಹೊಂದಿದ.

1874ರಲ್ಲಿ ಟೋರಿ ಪಕ್ಷದ ನಾಯಕ ಬೆಂಜಮಿನ್ ಡಿಸ್ರೇಲಿ ಪ್ರಧಾನಮಂತ್ರಿಯಾದ. ವಿಗ್ ಪಕ್ಷದ ಬಗೆಗೆ ಒಲವಿದ್ದ ವಿಕ್ಟೋರಿಯ, ಡಿಸ್ರೇಲಿ ಟೋರಿ ಪಕ್ಷದವನಾದರೂ ಅವನಲ್ಲಿ ವಿಶ್ವಾಸ ತೋರಿದಳು. ಬ್ರಿಟಿಷ್ ಸಾಮ್ರಾಜ್ಯವನ್ನು ವಿಸ್ತರಿಸಬೇಕೆಂಬ ಅವನ ಯೋಜನೆ ರಾಣಿಗೆ ಹಿಡಿಸಿತು. 1876ರಲ್ಲಿ ಡಿಸ್ರೇಲಿ ಅವಳನ್ನು 'ಭಾರತದ ಚಕ್ರವರ್ತಿನಿ' ಎಂದು ಘೋಷಿಸಿದ.

ಬ್ರಿಟಿಷರು ಅವಳ ಆಳ್ವಿಕೆಯ ಬೆಳ್ಳಿಯ ಹಬ್ಬ ಮತ್ತು ಚಿನ್ನದ ಹಬ್ಬಗಳನ್ನು ಬಹು ಸಂಭ್ರಮದಿಂದ ಆಚರಿಸಿದರು.



ಆಳ್ವಿಕೆಯ ಚಿನ್ನದ ಹಬ್ಬ ಆಚರಿಸಿಕೊಂಡ ಇಂಗ್ಲೆಂಡಿನ ರಾಣಿ ವಿಕ್ಟೋರಿಯ

ಅನೇಕ ವಿಷಯಗಳಲ್ಲಿ ವಿಕ್ಟೋರಿಯ ಬಹಳ ಕಟ್ಟುನಿಟ್ಟಿನಿಂದ ಇದ್ದಳು. ಮಕ್ಕಳೆಲ್ಲ ತಾಯಿಗೆ ಹೆದರುತ್ತಿದ್ದರು. ತನ್ನ ಮಗನಿಗೆ ಅರವತ್ತು ವರ್ಷವಾಗಿದ್ದರೂ ಅವನಿಗೆ ಹೆಚ್ಚು ಅಧಿಕಾರವನ್ನು ಆಕೆ ಕೊಡಲಿಲ್ಲ.

1901ರಲ್ಲಿ ತನ್ನ 81ನೆಯ ವಯಸ್ಸಿನಲ್ಲಿ ವಿಕ್ಟೋರಿಯ ರಾಣಿ ಕಾಲವಾದಳು.

ವಿಕ್ಟೋರಿಯಳ ಆಳ್ವಿಕೆ ಇಂಗ್ಲೆಂಡಿನ ಚರಿತ್ರೆಯಲ್ಲಿ 'ವಿಕ್ಟೋರಿಯ ಯುಗ' ಎಂದು ಪ್ರಸಿದ್ಧವಾಗಿದೆ. ಬ್ರಿಟಿಷ್ ಸಾಮ್ರಾಜ್ಯ ಭದ್ರಗೊಂಡದ್ದು, ಭಾರತದಲ್ಲಿ ಸಿಪಾಯಿ ದಂಗೆ ನಡೆದದ್ದು, ಅನಂತರ ಈಸ್ಟ್ ಇಂಡಿಯಾ ಕಂಪೆನಿಯ ಆಳ್ವಿಕೆಯಲ್ಲಿದ್ದ ಭಾರತ ಬ್ರಿಟಿಷ್ ಸರಕಾರದ ಆಡಳಿತಕ್ಕೆ ಹೋದದ್ದು ಇವಳ ಕಾಲದಲ್ಲಿ. ಕೈಗಾರಿಕಾ ಕ್ರಾಂತಿ ತೀವ್ರವಾಗಿ ನಡೆದದ್ದೂ ವಿಕ್ಟೋರಿಯ ಯುಗದಲ್ಲಿ. ಭೂವಿಜ್ಞಾನ, ಖಗೋಳವಿಜ್ಞಾನಗಳಲ್ಲಿ ವಿಶೇಷ ಪ್ರಗತಿಯಾದದ್ದು, ಡಾರ್ವಿನನ ವಿಕಾಸವಾದದ ಚಂಡಮಾರುತ ಬೀಸಿದ್ದು ಕೂಡ ಈ ಕಾಲದಲ್ಲಿ. ಸಾಮಾಜಿಕವಾಗಿ ಇದು ಸಂಪ್ರದಾಯಗಳ ಕಾಲಾವಧಿ. ಇಂಥ ವಾತಾವರಣದಲ್ಲೂ ಯುದ್ಧರಂಗದಲ್ಲಿ ಸೇವೆಮಾಡಲು ಬಯಸಿದ ಫ್ಲಾರೆನ್ಸ್ ನೈಟಿಂಗೇಲಳಿಗೆ ವಿಕ್ಟೋರಿಯ ರಾಣಿ ಸಹಾಯ ಮಾಡಿದಳು. ವೈದ್ಯರ ಸೇವೆಗೆ ಹೊಸ ನೆರವು ದಾದಿಯರಿಂದ ದೊರಕುವಂತಾಯಿತು.

ನೋಡಿ : ಈಸ್ಟ್ ಇಂಡಿಯಾ ಕಂಪೆನಿ ; ನೈಟಿಂಗೇಲ್, ಫ್ಲಾರೆನ್ಸ್

## ವಿಜ್ಞಾನ

ಸಂಜೆಗತ್ತಲು ಮುಸುಕಿದಾಗ ಮನೆಯೊಳಗಣ ಒಂದು ಗುಂಡಿ ಒತ್ತಿದರೆ ಥಳಥಳನೆ ಕೋಣೆಯಲ್ಲೆಲ್ಲ ಬೆಳಕನ್ನು ಚೆಲ್ಲುವ ದೀಪ ಹೊತ್ತಿಕೊಳ್ಳುತ್ತದೆ. ಕೊಳಾಯಿ ತಿರುಗಿಸಿದರೆ, ನೂರಾರು ಕಿಲೊಮೀಟರುಗಳ ದೂರದಲ್ಲಿ ಹರಿಯುವ ನದಿಯ ನೀರು ನಮ್ಮದಾಗುತ್ತದೆ. ಬೇಸರವೆನಿಸಿದರೆ ರೇಡಿಯೊ ಹಾಕಿ, ಕುಳಿತಲ್ಲೇ ಹಾಡು ಕೇಳಬಹುದು. ಟೆಲಿವಿಷನ್ ಇದ್ದರೆ ಮನೆಯಲ್ಲೆ ಫುಟ್‌ಬಾಲ್ ಪಂದ್ಯ ನೋಡಬಹುದು. ಬೇಕೆನಿಸಿದವರೊಂದಿಗೆ ದೂರವಾಣಿಯಲ್ಲಿ ಮಾತನಾಡಬಹುದು. ಮನೆಯ ಹೊರಗಣ ದೂರ ಪ್ರದೇಶ ಚಟುವಟಿಕೆಗಳಲ್ಲಿ ಭಾಗವಹಿಸಬೇಕೆ ? ಬಸ್ಸು, ಕಾರು, ಅಥವಾ ವಿಮಾನಗಳಲ್ಲಿ ಸಂಚರಿಸಿ ಆ ಸ್ಥಳ ಸೇರಬಹುದು. ನೀರು, ನೆಲ, ಗಾಳಿಗಳಲ್ಲಿ ಮಾನವನಿರ್ಮಿತ ವಾಹನಗಳಲ್ಲಿ ಓಡಿಯಾಡಬಹುದು. ಇವೆಲ್ಲ ವಿಜ್ಞಾನದ ಕೊಡುಗೆ. ಹಾಗೆಯೇ, ಬೆಳಗ್ಗೆ ಬೇಗ ಏಳಬೇಕೆಂದರೆ ಅಲಾರಂ ಹೊಡೆದು ಎಚ್ಚರಿಸುವ ಗಡಿಯಾರ ವಿಜ್ಞಾನದ ಸೃಷ್ಟಿ. ರಾತ್ರಿ ಮಲಗುವಾಗ ಬೆಚ್ಚನೆ ಹೊದೆಯುವ ಕಂಬಳಿ, ಸೆಕೆ ಎಂದು ಬಳಸುವ ವಿದ್ಯುತ್ ಬೀಸಣಿಗೆ—ಈ ಎಲ್ಲ ಸಾಧನಗಳೂ ವಿಜ್ಞಾನದ ವರ.

ಹೀಗೆ ವಿಜ್ಞಾನದ ಅಂಕಿತವಿಲ್ಲದ ಮಾನವ ಚಟುವಟಿಕೆಗಳೇ ಇಲ್ಲ. ಆಧುನಿಕ ವಿಜ್ಞಾನ ಚಂದ್ರಉಪಗ್ರಹವನ್ನು ಮಾನವ ತಲಪುವಂತೆ ಮಾಡಿದೆ.

ಪ್ರಕೃತಿ ಎಲ್ಲವೂ ನಿಯಮಬದ್ಧ. ಗಾಳಿ ಬೀಸಬೇಕಾದರೆ, ಸಮುದ್ರ ಉಕ್ಕಬೇಕಾದರೆ, ಸಿಡಿಲು ಎರಗಬೇಕಾದರೆ, ಹೊಳೆಕೆ ಕಾಣಬೇಕಾದರೆ, ಗ್ರಹಣವಾಗಬೇಕಾದರೆ ಒಂದು ಕಾರಣ, ಒಂದು ನಿಯಮ ಉಂಟು. ಪ್ರಕೃತಿಯ ಗರ್ಭದಲ್ಲಿ ಅಡಗಿದ್ದ ಈ ರಹಸ್ಯಗಳನ್ನು ಒಂದೊಂದಾಗಿ ಹೊರತೆಗೆದು ಅದರ ತತ್ತ್ವಗಳನ್ನು ಕಂಡುಕೊಂಡ ಹಿರಿಮೆ ಮಾನವನದು. ತತ್ತ್ವಗಳಿಂದ ಪ್ರಕೃತಿಯ ಚೈತನ್ಯಮೂಲಗಳನ್ನು ಅರಿತುಕೊಂಡು ಅವುಗಳನ್ನು ತನ್ನ ಜೀವನದ ಸುಖಕ್ಕೆಂದು ಬಳಸಿದವನು ಮಾನವ.

ವಿಜ್ಞಾನ ವ್ಯವಸ್ಥಿತವಾದ ವಿಶೇಷ ಜ್ಞಾನ. ತನ್ನ ಸುತ್ತಮುತ್ತಲಿನ ಪ್ರಪಂಚದ ಬಗೆಗೆ ತನಗಿರುವ ತಿಳಿವಳಿಕೆಯನ್ನು ಹೆಚ್ಚಿಸಿಕೊಳ್ಳುತ್ತ ಹೋಗುತ್ತಾನೆ ಮನುಷ್ಯ. ಎಲ್ಲ ತಿಳಿವಳಿಕೆಗೆ ಒಂದು ಕ್ರಮವನ್ನು, ವ್ಯವಸ್ಥೆಯನ್ನು ಕೊಡಲು ಪ್ರಯತ್ನಿಸುತ್ತಾನೆ ವಿಜ್ಞಾನಿ. ತಾನು ಕಾಣುವ ಎಲ್ಲದರ ಹಿಂದೆ ಇರುವ ಮೂಲಸೂತ್ರಗಳನ್ನು ಕಂಡುಹಿಡಿಯಲು ಆತ ಪ್ರಯತ್ನಿಸುತ್ತಾನೆ. ಹಣ್ಣು ಕೆಳಕ್ಕೆ ಬೀಳುತ್ತದೆ. ಭೂಮಿ ಸೂರ್ಯನ ಸುತ್ತ ತಿರುಗುತ್ತದೆ. ಗಾಳಿ ಬೀಸುತ್ತದೆ. ಆಟಗಾರ ಹೊಡೆದ ಚೆಂಡು ಸ್ವಲ್ಪ ದೂರಹೋಗಿ ನಿಲ್ಲುತ್ತದೆ. ನಡೆಯುವವನು ಮುಗ್ಗರಿಸಿ ಬೀಳುತ್ತಾನೆ. ಈ ಎಲ್ಲ ಚಲನವಲನವನ್ನು, ತಡೆಗಳನ್ನು, ವಿವರಿಸುವ ಸೂತ್ರಗಳಿವೆಯೆ ? ಹಿಂದೆ ದೈತ್ಯಾಕಾರದ ಪ್ರಾಣಿಗಳಿದ್ದುವು. ಈಗ ಅವುಗಳಿಲ್ಲ. ಒಂದು ಕಾಲದಲ್ಲಿ ಮಾನವನೇ ಇರಲಿಲ್ಲ ; ಈಗ ಮಾನವನ ಸಂತತಿ ಭೂಮಿಯನ್ನು ತುಂಬಿದೆ. ಆದರೆ ಈಗಿನ ಮಾನವ ಲಕ್ಷಾಂತರ ವರ್ಷಗಳ ಹಿಂದಿನ ಪ್ರಾಣಿಗಳಂತಿಲ್ಲ. ಇದೆಲ್ಲವನ್ನು ವಿವರಿಸುವ ಸೂತ್ರಗಳಾವುವು ?

ಕಬ್ಬಿಣದ ಸಾಮಾನು ಬಹು ಕಾಲ ಉಪಯೋಗಿಸದಿದ್ದರೆ ತುಕ್ಕು ಹಿಡಿಯುತ್ತದೆ. ಹಾಲನ್ನು ಬಹು ಕಾಲ ಇಟ್ಟರೆ ಕೊಳೆಯುತ್ತದೆ. ಏಕೆ? ಹೀಗೆ ಶೋಧನೆ ಮಾಡುತ್ತ ಹೋಗುತ್ತಾನೆ ವಿಜ್ಞಾನಿ. ಇದು ಹೇಗಾಯಿತು ಎಂಬ ಪ್ರಶ್ನೆಯನ್ನು ಹೆಜ್ಜೆಹೆಜ್ಜೆಗೂ ಕೇಳಿಕೊಳ್ಳುತ್ತಾನೆ. ತಾನು ಪಡೆದ ತಿಳಿವಳಿಕೆಯನ್ನೆಲ್ಲ ಒಂದು ಕ್ರಮಕ್ಕೆ ಒಳಪಡಿಸುತ್ತಾನೆ.

ವಿಜ್ಞಾನಿ ಸತ್ಯದ ಅನ್ವೇಷಕ. ಸುತ್ತಲಿನ ಜಗತ್ತಿನ ಹಿಂದಿರುವ ಸತ್ಯಗಳನ್ನು ಹುಡುಕುತ್ತಾನೆ. ಇದರಲ್ಲಿ ಅವನ ಇಷ್ಟ ಅನಿಷ್ಟಗಳ ಪ್ರಶ್ನೆ, ಅಭಿಮಾನ ಅಪಮಾನಗಳ ಪ್ರಶ್ನೆ ಯಾವುದೂ ಇಲ್ಲ. ಭೂಮಿ ವಿಶ್ವದ ಕೇಂದ್ರವಲ್ಲ. ಅಗಾಧ ವಿಶ್ವದಲ್ಲಿ ಒಂದು ಚುಕ್ಕೆ ಮಾತ್ರ ಎಂದು ಸಾಕ್ಷ್ಯದಿಂದ ಕಂಡುಬಂದರೆ ಅದನ್ನು ಒಪ್ಪುತ್ತಾನೆ: ಮನುಷ್ಯನ ಪೂರ್ವಜರು ಕಪಿಗಳು ಎಂದು ಸ್ಪಷ್ಟವಾದರೆ ಅದನ್ನೂ ಒಪ್ಪುತ್ತಾನೆ: ತನ್ನ ಗೌರವಕ್ಕೆ ಪೆಟ್ಟು ಎಂಬ ಮಾತೇ ಇಲ್ಲಿ ಇಲ್ಲ. ಆಧಾರಪೂರ್ಣವಾದ ತೀರ್ಮಾನವೇ—ಸತ್ಯವೇ—ಮುಖ್ಯ.

ವಿಜ್ಞಾನದ ಮೂಲ, ಪ್ರಕೃತಿಯಲ್ಲಿ ಜರಗುವ ದಿನನಿತ್ಯದ ಘಟನೆಗಳಿಗೆ ಸಂಬಂಧಿಸಿದೆ. ಅಂದರೆ ವಸ್ತುಸ್ಥಿತಿ ಒದಗಿಸುವ ಆಧಾರದ ಮೇಲೆ ಪ್ರಕೃತಿಯ ರಹಸ್ಯ ತಿಳಿಯುವುದು ವಿಜ್ಞಾನದ ಅಂತಿಮ ಗುರಿ. ಭೂಮಿಯಲ್ಲಿ ಹಗಲು ರಾತ್ರಿಗಳೇಕೆ? ಸಿಡಿಲು ಗುಡುಗುಗಳ ಅರ್ಥವೇನು? ಬೆಂಕಿ ತಗಲಿದಾಗ ಥಟ್ಟನೆ ಹಿಂದಕ್ಕೆ ಕೈಸೆಳೆಯುವುದೇಕೆ? ಕೋಪವನ್ನುವುದೇನು? ಹೀಗೆ ಆಕಾಶಕಾಯಗಳಿಂದ ಹಿಡಿದು ಸ್ವತಃ ತನ್ನ ಮನಸ್ಸಿನ ವ್ಯಾವಹಾರಿಕ ಸ್ವರೂಪದ ಕ್ರಿಯೆಗಳನ್ನೂ ಗುರುತಿಸಬಹುದಾದ ಜ್ಞಾನಾರ್ಜನೆಗೆ ವಿಜ್ಞಾನವೇ ಹೆಬ್ಬಾಗಿಲು.

ಎಲ್ಲ ಪ್ರಾಣಿಗಳಿಗೂ ತಮ್ಮ ಅಸ್ತಿತ್ವದ ಬಗೆಗೆ ಪ್ರಜ್ಞೆ ಇದೆ. ಆದರೆ ತನ್ನ ಪ್ರಜ್ಞೆಯ ಬಗೆಗೆ ಜಾಗೃತಿಯಿರುವುದು ಮನುಷ್ಯನಿಗೆ ಮಾತ್ರ. ಇವನು ವಿಚಾರಪರ.

ಇದು ಏಕೆ? ಹೇಗೆ? ಎಂದು ವಿಚಾರಿಸುವ ಮನೋಭಾವ ಮನುಷ್ಯನಿಗಿದೆ. ಪೃಥ್ವಿ ಚಪ್ಪಟೆ, ಅದರ ಸುತ್ತಲೂ ಏಳು ಸಮುದ್ರಗಳಿವೆ, ಅವನ್ನು ದಾಟಿಹೋದರೆ ಕೆಳಗೆ ಒಮ್ಮೆಲೆ ನರಲೋಕದಲ್ಲಿ ಬೀಳುತ್ತಾರೆ ಎಂದು ಹಿಂದಿನ ಕಾಲದಲ್ಲಿ ಈ ಪೃಥ್ವಿಯ ಆಕಾರದ ಬಗೆಗೆ ಹೇಳಿದರು. 'ಇದು ನಿಜವೇ ?' ಎಂದು ಮಾನವ ವಿಚಾರಿಸತೊಡಗಿದ. ಎಷ್ಟು ಸಮುದ್ರ ದಾಟಿದರೂ ಅವನು ಕೆಳಗೆ ಬೀಳಲಿಲ್ಲ. ತಾನು ಹೊರಟ ಸ್ಥಳಕ್ಕೇ ಮತ್ತೆ ಹಿಂದಿರುಗಿದ. ಪೃಥ್ವಿ ಗೋಲಾಕಾರದಲ್ಲಿದೆ ಎಂಬ ನಿರ್ಣಯಕ್ಕೆ ಬರಲು ಇದು ನೆರವಾಯಿತು. ಇದೇ ವೈಜ್ಞಾನಿಕ ಮನೋಭಾವನೆ. ಈ ಜಗತ್ತಿನಲ್ಲಿ ನಮಗೆ ತಿಳಿಯದ, ಇನ್ನೂ ಅಗೋಚರವಾದ ಎಷ್ಟೊ ಸಂಗತಿಗಳಿವೆ. ಅವುಗಳ ಸತ್ಯತೆಯ ಬಗೆಗೆ ಮನವರಿಕೆ ಮಾಡಿಕೊಳ್ಳುತ್ತ ಹೋಗುವುದೇ ವಿಜ್ಞಾನದ ಪ್ರಗತಿ.

ವೈಜ್ಞಾನಿಕ ಆಲೋಚನೆ. ವೈಜ್ಞಾನಿಕ ಭಾವನೆ ಇವೆಲ್ಲಕ್ಕೂ ವೈಜ್ಞಾನಿಕ ಪದ್ಧತಿ ಆಧಾರವಾಗಿದೆ. ವಿಜ್ಞಾನಕ್ಕೆ ಸಂಬಂಧಪಟ್ಟ ಎಲ್ಲ ವಿಷಯಗಳ ಬಗೆಗೂ ಒಂದು ವ್ಯವಸ್ಥಿತ ಕ್ರಮದಲ್ಲಿ ಪರೀಕ್ಷಿಸುವುದು ಮತ್ತು ಇದರಿಂದ ನಿಯಮಗಳ, ವಸ್ತುಗಳ ರಚನೆಯನ್ನು ಸ್ಥಿರಪಡಿಸುವುದು ವೈಜ್ಞಾನಿಕ ಪದ್ಧತಿಯ ವೈಶಿಷ್ಟ್ಯ. ಈ ಕ್ರಮದಲ್ಲಿ ತರ್ಕಶಾಸ್ತ್ರ ಹಾಗೂ ಗಣಿತವಿಜ್ಞಾನ ಮುಖ್ಯ ಸಾಧನಗಳಾಗಿವೆ. ಈ ಕ್ರಮದಲ್ಲಿ ಸಾಗುವ ವಿಜ್ಞಾನ ಸಂಶೋಧನೆ ಯಾವಾಗಲೂ ಹೊಸತನ್ನು ಕಂಡುಹಿಡಿಯುತ್ತಲೇ ಇರುವುದೆಂಬ ನಿಯಮವಿಲ್ಲ. ವಿಜ್ಞಾನಿ ತನ್ನ ಕೆಲಸದಲ್ಲಿ ಸಂಪೂರ್ಣವಾಗಿಯೂ ಅವನ ವಿವೇಕ ಮತ್ತು ಕಲ್ಪನಾಶಕ್ತಿಗಳು ಬಹು ಮುಖ್ಯ ಪಾತ್ರವಹಿಸುತ್ತವೆ. ಕೆಲವು ಬಾರಿ ಸಹಜ ಜ್ಞಾನ ಅಥವಾ ಅಂತರ್ದೃಷ್ಟಿಯಿಂದ ಆತನು ತಕ್ಷಣವೇ ನಿರೂಪಿಸಲಾಗದ, ನಿದರ್ಶನ ಕೊಡಲಾಗದ ತತ್ತ್ವಗಳನ್ನು ಗ್ರಹಿಸುತ್ತಾನೆ. ಪ್ರಖ್ಯಾತ ವಿಜ್ಞಾನಿ ಆಲ್ಬರ್ಟ್ ಐನ್‌ಸ್ಟೀನ್ ಸಾಪೇಕ್ಷತಾ ಸಿದ್ಧಾಂತವನ್ನು ಪ್ರತಿಪಾದಿಸಿದ. ಅದನ್ನು ಪ್ರಯೋಗದಿಂದ ಸ್ಥಿರಪಡಿಸಲು ಎಷ್ಟೋ ಕಾಲ ಹಿಡಿಯಿತು.

ವಿಜ್ಞಾನದ ಹೆಸರಿನಲ್ಲಿ ಮಾಡಿದ ಜ್ಞಾನಾರ್ಜನೆ ಹತ್ತು ದಿಕ್ಕುಗಳಲ್ಲಿ ನಡೆದ ಪ್ರಯುಕ್ತ ಅದರ ವರ್ಗೀಕರಣ ಅತ್ಯವಶ್ಯವೆನಿಸಿತು. ಇದರಿಂದ ವಿಜ್ಞಾನದ ಶಾಖೋಪಶಾಖೆಗಳು ಹುಟ್ಟಿಕೊಂಡುವು. ವಿಜ್ಞಾನದ ಮುಖ್ಯವಿಭಾಗಗಳು ಖಗೋಲವಿಜ್ಞಾನ, ಜೀವವಿಜ್ಞಾನ, ರಸಾಯನವಿಜ್ಞಾನ, ಭೌತವಿಜ್ಞಾನ, ಭೂಗೋಳವಿಜ್ಞಾನ, ಭೂಗರ್ಭವಿಜ್ಞಾನ, ಹವಾಮಾನವಿಜ್ಞಾನ, ಗಣಿತವಿಜ್ಞಾನ, ವಿದ್ಯುಚ್ಛಕ್ತಿ, ವ್ಯವಸಾಯ, ವೈದ್ಯವಿಜ್ಞಾನ, ಲೋಹವಿದ್ಯೆ, ಹಳೆಯುಳಿಕೆ, ಖನಿಜವಿಜ್ಞಾನ, ಮನೋವಿಜ್ಞಾನ, ಪ್ರಾಣಿವಿಜ್ಞಾನ, ಶರೀರವಿಜ್ಞಾನ, ರೋಗವಿಜ್ಞಾನ, ವಾಸ್ತುಶಿಲ್ಪ, ಸಸ್ಯವಿಜ್ಞಾನ, ಪರಮಾಣು ಭೌತವಿಜ್ಞಾನ ಇತ್ಯಾದಿ. ಅನೇಕ ಶಾಖೆಗಳ ವಿಷಯ ಸಂಗ್ರಹಣೆ ಹಿರಿದಾಗಿ ಅವುಗಳನ್ನು ಉಪಶಾಖೆಗಳನ್ನಾಗಿ ವಿಭಾಗಿಸಲಾಗಿದೆ. ವೈಜ್ಞಾನಿಕ ಜ್ಞಾನಸಂಪತ್ತನ್ನು ಮನುಷ್ಯನ ಹಿತಕ್ಕಾಗಿ ಬಳಸುವುದು ಅನ್ವಯಿಕ ವಿಜ್ಞಾನವೆಂದು ಕರೆಯುತ್ತಾರೆ.

ವಿಜ್ಞಾನದ ಚರಿತ್ರೆಯಲ್ಲಿ ಈಜಿಪ್ಟಿನ ವಿಜ್ಞಾನ, ಬ್ಯಾಬಿಲೋನಿಯದ ವಿಜ್ಞಾನ, ಗ್ರೀಸಿನ ವಿಜ್ಞಾನ, ಅರೇಬಿಯದ ವಿಜ್ಞಾನ, ಭಾರತೀಯ ವಿಜ್ಞಾನ ಎಂದು ಬೇರೆ ಬೇರೆ ದೇಶಗಳಲ್ಲಿ ವಿಜ್ಞಾನ ಬೆಳೆದ ರೀತಿಯನ್ನು ಹೇಳುವುದುಂಟು. ಆಧುನಿಕ ಕಾಲದಲ್ಲಿ ವಿಜ್ಞಾನದ ಪ್ರಗತಿಯನ್ನು ಒಟ್ಟು ಪ್ರಪಂಚದ ದೃಷ್ಟಿಯಿಂದ ನೋಡುತ್ತಾರೆ. ವಿಶೇಷ ಸಂದರ್ಭಗಳನ್ನುಳಿದು, ಎಲ್ಲ ರಾಷ್ಟ್ರದ ವಿಜ್ಞಾನಿಗಳು ತಮ್ಮ ಜ್ಞಾನವನ್ನು ಹಂಚಿಕೊಳ್ಳುತ್ತಾರೆ. ಆದರೆ ಪ್ರಾಚೀನ ಮತ್ತು ಮಧ್ಯಯುಗಗಳಲ್ಲಿ ವಿಜ್ಞಾನ ಪ್ರತಿ ದೇಶದಲ್ಲಿ ಪ್ರತ್ಯೇಕವಾಗಿ ಬೆಳೆದುದೇ ಹೆಚ್ಚು.

ಭಾರತೀಯ ವಿಜ್ಞಾನ ಉಳಿದ ದೇಶಗಳ ವಿಜ್ಞಾನಗಳಿಗೂ ಮೊದಲೇ ಆರಂಭವಾಯಿತೆಂದು ಕಂಡುಬಂದಿದೆ. ಪ್ರಾಚೀನ ಭಾರತದಲ್ಲಿ ವೈಚಾರಿಕತೆ ಬಹುಮಟ್ಟಿಗೆ ಬೆಳೆದಿದ್ದಿತೆಂಬುದಕ್ಕೆ ಆಧಾರವಿದೆ. ಅತಿ ಪುರಾತನ ಭಾರತೀಯ ಗ್ರಂಥಗಳು, ವೈಜ್ಞಾನಿಕ ಗ್ರಂಥಗಳಿಗೆ ಪೂರ್ವಭಾವಿ ಹೊತ್ತಗೆಗಳಾಗಿವೆ. ಮನೋವಿಜ್ಞಾನದಲ್ಲಿ ಕಾಯ ಮತ್ತು ಮನಸ್ಸುಗಳ ನಿಯಂತ್ರಣ ಸೂಚನೆಗಳ ಮೂಲಕ ವಿಜ್ಞಾನ ಪರಮಾವಧಿ ಏಳಿಗೆ ಕಂಡಿದ್ದಿತೆಂದು ತಜ್ಞರ ಅಭಿಪ್ರಾಯ. ಸಿಂಧೂ ಕಣಿವೆಯ ನಾಗರಿಕತೆಯ ಕಾಲದಲ್ಲಿ (ಸುಮಾರು ಕ್ರಿ. ಪೂ. 3500ರಿಂದ) ಕಲ್ಲಿನಿಂದ ಮತ್ತು ಇಟ್ಟಿಗೆಯಿಂದ ಮನೆಗಳನ್ನು ಕಟ್ಟಲು ಕಲಿತಿದ್ದರು. ಕೊಳದ ಗೋಡೆಗಳಿಗೆ ಜಿಪ್ಸಂ ಗಾರೆಯನ್ನು ಬಳಸಿದ್ದರು. ದೋಣಿಗಳನ್ನೂ ಹಡಗುಗಳನ್ನೂ ಕಟ್ಟುತ್ತಿದ್ದರು. ತಾಮ್ರಕ್ಕೆ ತವರನ್ನು ಸೇರಿಸಿ ಕಂಚನ್ನು ತಯಾರಿಸುತ್ತಿದ್ದರು. ವೇದದ ಕಾಲದಲ್ಲಿ ನೇಗಿಲನ್ನು ಮಾಡಲು ಭಾರತೀಯರು ಕಲಿತಿದ್ದರು. ನೆಯ್ದು ಬಟ್ಟೆ ಬಳಕೆಯಲ್ಲಿದ್ದಿತು. ಭಾರತೀಯರು ಮಕರ ಸಂಕ್ರಾಂತಿಯ ಕಾಲವನ್ನೂ ಗೊತ್ತು ಮಾಡಿದ್ದರು. ಸೂರ್ಯ ಚಂದ್ರರ ಗ್ರಹಣ ಕಾಲವನ್ನು ನಿಖರವಾಗಿ ಹೇಳಬಲ್ಲವರಾಗಿದ್ದರು. ಪೈಥಾಗೊರಸ್ (ಕ್ರಿ. ಪೂ. 6ನೆಯ ಶತಮಾನ) ತೋರಿಸಿದ ಪ್ರಮೇಯ ಅವನಿಗೂ ಮುಂಚೆಯೇ ಬೌಧಾಯನನ ಸಮಯಕ್ಕೆ (ಕ್ರಿ.ಪೂ. 800) ತಿಳಿದಿತ್ತು. ಕ್ರಿ.ಪೂ. ಒಂಬತ್ತನೆಯ ಶತಮಾನದಲ್ಲಿ ಭಾರತೀಯರು ವರ್ಗಾತ್ಮಕ ಸಮೀಕರಣಗಳನ್ನು ಬಿಡಿಸಿದ್ದರು.

ಇತರ ಕೆಲವು ದೇಶಗಳ ಪ್ರಾಚೀನ ವಿಜ್ಞಾನಗಳಂತೆ ಭಾರತದ ವಿಜ್ಞಾನವೂ ನಿಷ್ಕ್ರಿಯೆಯ ಕಾಲಘಟ್ಟಗಳನ್ನು ದಾಟಬೇಕಾಯಿತು.

ಆಧುನಿಕ ಕಾಲದಲ್ಲಂತೂ ವಿಜ್ಞಾನ ದೇಶ–ಮೇರೆಗಳನ್ನು ಮೀರಿ ನಿಲ್ಲುವ ಸಮರ್ಥ ಶಕ್ತಿಯಾಗಿದೆ.

## ವಿದ್ಯಾಭ್ಯಾಸ

ಮಗುವು ತನ್ನ ಸುತ್ತಲಿನ ಪ್ರಪಂಚದ ಆಗುಹೋಗುಗಳನ್ನು ತಿಳಿಯಲು ಇಚ್ಛಿಸುತ್ತದೆ. 'ವಿದ್' ಎಂದರೆ 'ತಿಳಿ' ಎಂದು ಅರ್ಥ. ತನ್ನ ವಯೋಮಾನವನ್ನು ಅನುಸರಿಸಿ. ಗುರುವಿನಿಂದ, ಅನುಭವದಿಂದ ಇಲ್ಲವೆ ಪುಸ್ತಕಗಳ ಓದಿನಿಂದ ಅನೇಕ ಉಪಯುಕ್ತ ಸಂಗತಿಗಳನ್ನು ತಿಳಿದುಕೊಳ್ಳುತ್ತದೆ. ಕ್ರಮವಾಗಿ ತಿಳಿದುಕೊಳ್ಳುವ ಕಾರ್ಯವೇ 'ವಿದ್ಯಾಭ್ಯಾಸ'.

ವಿದ್ಯೆ ಪ್ರತಿಯೊಬ್ಬ ಮನುಷ್ಯನಿಗೂ ಅತ್ಯವಶ್ಯ. ಉದ್ಯೋಗಕ್ಕೆ ಸಹಾಯಕ, ಬದುಕಿಗೆ ದಾರಿದೀಪ. ಕುಟುಂಬದಲ್ಲಿ. ಸಮಾಜದಲ್ಲಿ ಹಾಗೂ ಇತರ ಕಡೆಗಳಲ್ಲಿ ತನ್ನ ಹೊಣೆಗಾರಿಕೆಯನ್ನು ತಿಳಿಯಲು ಸಾಧಕ. ಸುತ್ತಲಿನ ಪ್ರಪಂಚದಲ್ಲಿ ಜರಗುವ ಅನೇಕ ನಿಸರ್ಗದ ಕ್ರಮಗಳನ್ನು, ಜೀವನ ವ್ಯವಹಾರವನ್ನು. ರಾಜಕೀಯ ಹಾಗೂ ಸಾಮಾಜಿಕ ಬೆಳವಣಿಗೆಗಳನ್ನು ಅರಿಯಲು ವಿದ್ಯಾಭ್ಯಾಸ ಅತ್ಯವಶ್ಯ. ವ್ಯಕ್ತಿಯ ಬುದ್ಧಿ. ಮನಸ್ಸು ಹಾಗೂ ದೇಹಗಳ ಪ್ರಗತಿಗೆ ಮೂಲಾಧಾರ ವಿದ್ಯೆ.

ಪ್ರಾಚೀನ ಕಾಲದಲ್ಲಿ ನಮ್ಮ ದೇಶದ ಋಷಿಗಳು ಅರಣ್ಯಗಳಲ್ಲಿ ವಾಸ ಮಾಡಿ. ತಮ್ಮ ಬಳಿಗೆ ಬರುವ ಶಿಷ್ಯರಿಗೆ ಅವರ ಯೋಗ್ಯತೆಗೆ ಅನುಗುಣವಾಗಿ ವಿದ್ಯೆಯನ್ನು ಹೇಳಿ ಕೊಡುತ್ತಿದ್ದರು. ಇದು ಗುರುಕುಲ ಶಿಕ್ಷಣ. ಅರಸು ಮಕ್ಕಳಿಗೆ ಯುದ್ಧ ವಿದ್ಯೆ, ರಾಜತಂತ್ರ ಇತ್ಯಾದಿ ವಿದ್ಯೆಗಳನ್ನೂ ಹೇಳಿ ಕೊಡುತ್ತಿದ್ದರು.

ಶತಮಾನಗಳು ಕಳೆದಂತೆ ಜನಜೀವನದಲ್ಲಿ ಅನೇಕ ಸುಧಾರಣೆಗಳಾದುವು. ಮುದ್ರಣ ಕಲೆ ಕರಗತವಾಯಿತು. ವಿವಿಧ ಭಾಷೆಗಳು ಪ್ರಬುದ್ಧವಾದುವು. ವಿವಿಧ ಸಂಗತಿಗಳ ಬಗೆಗೆ ಪುಸ್ತಕಗಳನ್ನು ಮುದ್ರಿಸಿ ಪ್ರಸಾರಮಾಡಲು ಅನುಕೂಲವಾಯಿತು. ಅರಣ್ಯಕ್ಕೆ ಹೋಗಿ ಗುರುಸೇವೆಯನ್ನು ಮಾಡಿ ವಿದ್ಯೆಯನ್ನು ಕಲಿಯುವ ಕ್ರಮ ಬದಲಾಯಿತು. ಜನರ ಅನುಕೂಲತೆಗಾಗಿ ಊರ ಸಮೀಪದಲ್ಲಿಯೇ ಶಿಕ್ಷಣ ಕೊಡುವ ಯೋಜನೆ ಪ್ರಾರಂಭವಾಯಿತು. ಈ ವಿಚಾರಕ್ಕೆ ಅನುಸಾರವಾಗಿ ಗ್ರಾಮಗಳಲ್ಲಿ 'ಅಗ್ರಹಾರ'. 'ಬ್ರಹ್ಮಪುರಿ'. 'ಘಟಿಕಾ' ಮುಂತಾದ ಹೆಸರಿನಿಂದ ಸಣ್ಣ ದೊಡ್ಡ ಶಿಕ್ಷಣ ಸಂಸ್ಥೆಗಳು ಹುಟ್ಟಿದುವು. ಈ ಸಂಸ್ಥೆಗಳ ಆಚಾರ್ಯರು ಮಹಾವಿದ್ವಾಂಸರೂ ಧರ್ಮನಿಷ್ಠರೂ ಆಗಿದ್ದುದಲ್ಲದೆ. ಸಮಾಜಕ್ಕೆ ಮಾರ್ಗದರ್ಶಕರಾಗಿದ್ದರು. ಜನರಿಗೆ ಅವರವರ ಅಭಿರುಚಿಯಂತೆ ಹಾಗೂ ವೃತ್ತಿ ವ್ಯವಹಾರಕ್ಕೆ ಅನುಕೂಲವಾಗುವಂತೆ ಧರ್ಮ. ವಾಣಿಜ್ಯ. ರಾಜತಂತ್ರ. ಸಂಗೀತ. ನೃತ್ಯ, ಖಗೋಳ, ಗಣಿತ ಮುಂತಾದ ಅನೇಕ ಶಾಸ್ತ್ರಗಳನ್ನು ಕಲಿಸುತ್ತಿದ್ದರು. ಕನಿಷ್ಠ ಮಟ್ಟದಲ್ಲಿ ಓದು. ಬರಹ. ಗಣಿತ ಕಲಿಸಲು ಅನುಕೂಲವಾಗುವಂತೆ ವಿಹಾರಗಳಲ್ಲಿ. ಚೈತ್ಯಾಲಯಗಳಲ್ಲಿ. ಅಲ್ಲದೆ ಮಠಗಳಲ್ಲಿ ವಿದ್ಯಾಕೇಂದ್ರಗಳಾದುವು. ಬ್ರಿಟಿಷರು ಭಾರತದಲ್ಲಿ ಆಳ್ವಿಕೆಯನ್ನು ಪ್ರಾರಂಭಿಸಿದ ಮೇಲೆ ಈಗಿನ ಶಿಕ್ಷಣ ಪದ್ಧತಿ ಕ್ರಮಕ್ರಮವಾಗಿ ರೂಢಿಯಲ್ಲಿ ಬಂದಿತು. ವಿಜ್ಞಾನದಲ್ಲಿ ಪ್ರಗತಿಯಾದಂತೆ ಜೀವನದ ಎಲ್ಲ ರಂಗಗಳಲ್ಲಿ ವಿಶೇಷ ಬದಲಾವಣೆಗಳಾದುವು. ಅದರಂತೆ ಶಿಕ್ಷಣದಲ್ಲಿ ವೈಜ್ಞಾನಿಕ ಕ್ರಮಗಳನ್ನು ರೂಪಿಸಲಾಯಿತು.

ಪೂರ್ವ ಪ್ರಾಥಮಿಕ, ಪ್ರಾಥಮಿಕ, ಪ್ರೌಢ, ಸ್ನಾತಕ ಹಾಗೂ ಸ್ನಾತಕೋತ್ತರ ಶಿಕ್ಷಣ ಕ್ರಮ ಬಳಕೆಯಲ್ಲಿ ಬಂದಿತು.

ಪೂರ್ವ ಪ್ರಾಥಮಿಕ ಶಿಕ್ಷಣವು ಮಗುವಿನ ಒಲವಿಗನುಸಾರವಾಗಿ ಆಟಪಾಠ. ಕಥೆ. ಮನೋರಂಜನೆಗಳನ್ನೊಳಗೊಂಡಿದೆ. ಉಪಕರಣಗಳ ಮೂಲಕ ಮಗುವಿನ ಬುದ್ಧಿ. ದೇಹ. ಮನಸ್ಸಿನ ಬೆಳವಣಿಗೆಯನ್ನು ಸಾಧಿಸಲಾಗುತ್ತದೆ. ಈ ಶಿಕ್ಷಣವು ಮೂರರಿಂದ ಆರು ವಯೋಮಾನದ ವರೆಗೆ ಸಾಗುತ್ತದೆ.

ಪ್ರಾಥಮಿಕ ಶಿಕ್ಷಣವು ಅತಿ ಮಹತ್ವದ ಹಂತ. ಪ್ರತಿಯೊಂದು ಮಗು ಆರರಿಂದ ಹತ್ತು ವರ್ಷಗಳವರೆಗೆ ಕಡ್ಡಾಯವಾಗಿ ಪ್ರಾಥಮಿಕ ಶಾಲೆಯಲ್ಲಿ ಮಾತೃಭಾಷೆಯ ಮುಖಾಂತರ ಕಲಿಯಬೇಕೆಂಬ ನಿಯಮವನ್ನು ಸರಕಾರದವರು ವಿಧಿಸಿದ್ದಾರೆ. ಈ ಅವಧಿಯಲ್ಲಿ ಒಂದರಿಂದ ನಾಲ್ಕು ವರ್ಷಗಳು ಮುಗಿಯುತ್ತವೆ. ಶಿಕ್ಷಣ ಹೆಚ್ಚಾಗಿ ಮಾತೃಭಾಷೆಯಲ್ಲಿಯೇ ಸಾಗುತ್ತದೆ. ಹನ್ನೊಂದರಿಂದ ಹದಿಮೂರು ವರ್ಷಗಳ ಅವಧಿಯು ಅಂದರೆ ಐದರಿಂದ ಏಳನೆಯ ವರ್ಗಗಳ ಓದು ಸಧ್ಯಕ್ಕೆ ಕಡ್ಡಾಯವಾಗಿಲ್ಲ. ಪ್ರಾಥಮಿಕ ಶಾಲೆಯಲ್ಲಿ ಒಂದರಿಂದ ನಾಲ್ಕನೆಯ ವರ್ಗಗಳಲ್ಲಿ ಮಾತೃಭಾಷೆ. ಗಣಿತ, ಸಾಮಾಜಿಕ ಅಭ್ಯಾಸ. ಕೈ ಕೆಲಸ. ಕಲೆ. ಶಾರೀರಿಕ ಶಿಕ್ಷಣ. ಆರೋಗ್ಯ ವಿಧಿ ಇವುಗಳನ್ನು ಕಲಿಸಲಾಗುತ್ತದೆ. ಐದರಿಂದ ಏಳನೆಯ ವರ್ಗದಲ್ಲಿ ಈ ಮೇಲ್ಕಾಣಿಸಿದ ವಿಷಯಗಳಲ್ಲದೆ. ಇಂಗ್ಲಿಷ್. ಹಿಂದಿ. ವಿಜ್ಞಾನ ವಿಷಯಗಳನ್ನು ಕಲಿಸುವುದರ ಜೊತೆಗೆ ಅನುಕೂಲತೆಗಳಿದ್ದ ಕಡೆ ನೇಯ್ಗೆ. ಮರಗೆಲಸ. ಕೃಷಿ ಮುಂತಾದ ಕಸಬುಗಳನ್ನು ಕೂಡ ಕಲಿಸಲಾಗುತ್ತದೆ. ಮೈಸೂರು ರಾಜ್ಯದಲ್ಲಿ 300 ಜನಸಂಖ್ಯೆಯುಳ್ಳ ಪ್ರತಿಯೊಂದು ಹಳ್ಳಿಯಲ್ಲಿಯೂ ಸಾಮಾನ್ಯವಾಗಿ ಪ್ರಾಥಮಿಕ ಶಾಲೆಯನ್ನು ಆರಂಭಿಸಲಾಗಿದೆ. ಮಗುವು ಕೇವಲ ಒಂದೂವರೆ ಕಿ. ಮೀ. ದೂರದಲ್ಲಿಯೇ ಶಾಲೆಯನ್ನು ಪಡೆದಿದೆ. ಪ್ರತಿ ನಲವತ್ತು ಮಕ್ಕಳ ಗುಂಪಿಗೆ ಒಬ್ಬ ಶಿಕ್ಷಕನನ್ನು ನೇಮಿಸಲಾಗುತ್ತಿದೆ. ಇಂದು ನಮ್ಮ ರಾಜ್ಯದಲ್ಲಿ ಒಂದು ಲಕ್ಷಕ್ಕಿಂತ ಹೆಚ್ಚು ಶಿಕ್ಷಕರು 32,000 ಶಾಲೆಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಈ ಸಂಖ್ಯೆ ಇನ್ನೂ ಹೆಚ್ಚಾಗುತ್ತಿದೆ.

ಪ್ರಾಥಮಿಕ ಶಿಕ್ಷಣ ಪೂರೈಸಿದಮೇಲೆ ಮೂರು ವರ್ಷಗಳ ಪ್ರೌಢ ಶಾಲಾ ಶಿಕ್ಷಣ. ಈ ಅವಧಿಯಲ್ಲಿ 8. 9. 10ನೆಯ ತರಗತಿಗಳನ್ನು ನಡೆಸಲಾಗುತ್ತದೆ. ಈ ತರಗತಿಗಳಲ್ಲಿ ಮಾತೃಭಾಷೆ. ಇಂಗ್ಲಿಷ್. ಹಿಂದಿ. ಅಂಕಗಣಿತ. ಬೀಜಗಣಿತ. ಜ್ಯಾಮಿತಿ. ವಿಜ್ಞಾನ. ಚರಿತ್ರೆ. ಭೂಗೋಳ. ನಾಗರಿಕಶಾಸ್ತ್ರ. ಕಲೆ. ಕೈಗಾರಿಕೆ. ಶಾರೀರಿಕ ಶಿಕ್ಷಣ. ನೈತಿಕ ಶಿಕ್ಷಣ ಇತ್ಯಾದಿ ವಿಷಯಗಳನ್ನು ಬೋಧಿಸಲಾಗುತ್ತದೆ. ಈ ವಿಷಯಗಳಲ್ಲದೆ ಅನೇಕ ಐಚ್ಛಿಕ ವಿಷಯಗಳನ್ನೂ ಅಭ್ಯಾಸ ಪತ್ರಿಕೆಯಲ್ಲಿ ಸಮಾವೇಶ ಮಾಡಲಾಗಿದೆ. ಸಂಸ್ಕೃತ. ಉರ್ದು, ಪರ್ಷಿಯನ್, ಫ್ರೆಂಚ್ ಇತ್ಯಾದಿ ಭಾಷೆಗಳೂ ನೃತ್ಯ. ಸಂಗೀತ. ಚಿತ್ರಕಲೆ. ಕೈಕಸುಬು. ಎಂಜಿನಿಯರಿಂಗ್, ವಾಣಿಜ್ಯಶಾಸ್ತ್ರ. ಗೃಹವಿಜ್ಞಾನ. ಕೃಷಿ ಇತ್ಯಾದಿ ಜೀವನೋಪಾಯಗಳೂ ಈ ಅವಧಿಯಲ್ಲಿ ಐಚ್ಛಿಕವಾಗಿ ಕಲಿಸಲ್ಪಡುತ್ತವೆ. ಇದಲ್ಲದೆ ಕೆಲವು ಬಹುಧೋದ್ದೇಶ ಶಾಲೆಗಳನ್ನು ಪ್ರಾರಂಭಿಸಲಾಯಿತು. ಕೆಲವು ಆಯ್ಕೆಮಾಡಿದ ಸ್ಥಳಗಳಲ್ಲಿ 'ಕಿರಿಯ ತಾಂತ್ರಿಕ ಶಾಲೆ'ಗಳನ್ನು ಆರಂಭಿಸಲಾಗಿದೆ. ಇಂಥ ಶಾಲೆಗಳಲ್ಲಿ ಕಲಿತವರು ಬಹುಬೇಗನೆ ತಮ್ಮ ಜೀವನೋಪಾಯವನ್ನು ಸುಲಭವಾಗಿ ಕಂಡುಕೊಳ್ಳಲು ಶಕ್ತರಾಗುವರು. 10ನೆಯ ವರ್ಗದ ಕೊನೆಯಲ್ಲಿ ಎಸ್. ಎಸ್. ಎಲ್. ಸಿ. ಪರೀಕ್ಷೆಯು ನಡೆಸಿ ಅದರಲ್ಲಿ ಉತ್ತೀರ್ಣರಾದವರಿಗೆ ಪ್ರಮಾಣ ಪತ್ರ ಕೊಡುವ

ರೂಢಿಯಲ್ಲಿದೆ. ಮೈಸೂರು ರಾಜ್ಯದಲ್ಲಿ ಸುಮಾರು 16,000 ಜನಸಂಖ್ಯೆಗೆ ಒಂದು ಪ್ರೌಢಶಾಲೆಯ ಸೇವೆ ದೊರೆಯುತ್ತದೆ. ಸದ್ಯಕ್ಕೆ ಇವುಗಳ ಸಂಖ್ಯೆ 1,900. ಜನರಿಗೆ ಅನುಕೂಲವಾಗಲು ಸುಮಾರು 5,000 ಸಂಖ್ಯೆಗೆ ಒಂದು ಪ್ರೌಢಶಾಲೆ ಆರಂಭಿಸಬೇಕಾಗಿದೆ.

ಪ್ರೌಢಶಾಲೆಯನ್ನು ಪೂರೈಸಿದ ಮೇಲೆ ಹೆಚ್ಚಿನ ವಿದ್ಯಾಭ್ಯಾಸ ಮಾಡಲು ಇಚ್ಛಿಸುವರಿಗೆ ಅದಕ್ಕೆ ಸಾಕಷ್ಟು ಅನುಕೂಲತೆಗಳಿವೆ. ವಿಶ್ವವಿದ್ಯಾನಿಲಯಗಳು ಹಾಗೂ ಸರಕಾರ ಉಚ್ಚ ಶಿಕ್ಷಣ ಕೇಂದ್ರಗಳನ್ನು ಸ್ಥಾಪಿಸಿವೆ. ಕಲೆ. ವಿಜ್ಞಾನ. ವೈದ್ಯಕೀಯ. ಇಂಜಿನಿಯರಿಂಗ್. ವಾಣಿಜ್ಯ ಇತ್ಯಾದಿ ವಿವಿಧ ವಿಷಯಗಳಲ್ಲಿ ವಿಶೇಷ ಪರಿಣತಿಯನ್ನು ಹೊಂದಲು ಕಾಲೇಜುಗಳಲ್ಲಿ ಅವಕಾಶವಿದೆ.

ಈ ಶಿಕ್ಷಣವನ್ನು ಪೂರೈಸಿದವರನ್ನು ಆಯಾ ವಿಷಯದಲ್ಲಿ ಸ್ನಾತಕ ಎಂದು ಕರೆಯುವರು.

ಭಾರತ ಕೃಷಿಪ್ರಧಾನ ದೇಶವಾದ್ದರಿಂದ ಹೆಚ್ಚು ಜನರು ಕೃಷಿಯನ್ನೇ ಅವಲಂಬಿಸಬೇಕಾಗುತ್ತದೆ. ಆದ್ದರಿಂದ ಈ ವಿದ್ಯೆಗೆ ವಿಶೇಷ ಮಹತ್ವ ಕೊಡಲಾಗಿದೆ. ಹಲವು ಪ್ರಾಥಮಿಕ ಹಾಗೂ ಪ್ರೌಢ ಶಾಲೆಗಳಲ್ಲಿ ಬೇಸಾಯ ಶಿಕ್ಷಣವನ್ನು ಕೊಡುವುದಲ್ಲದೆ. ಉಚ್ಚ ತರಬೇತಿಯ ಅನುಕೂಲತೆಗಳನ್ನು ಮಾಡಲಾಗಿದೆ. ಈ ವಿಷಯದಲ್ಲಿ ವಿಶೇಷ ಅಭ್ಯಾಸ. ಹಾಗೂ ಸಂಶೋಧನೆಯ ಅನುಕೂಲತೆಗಾಗಿ ಕೃಷಿ ವಿಶ್ವವಿದ್ಯಾನಿಲಯ ಪ್ರಾರಂಭವಾಗಿದೆ. ಇದರ ಹೊರತಾಗಿ ಮೈಸೂರು. ಕರ್ನಾಟಕ ಮತ್ತು ಬೆಂಗಳೂರು ವಿಶ್ವವಿದ್ಯಾಲಯಗಳೂ ಹೆಚ್ಚಿನ ಶಿಕ್ಷಣದಲ್ಲಿ ತೊಡಗಿವೆ. ಯಂತ್ರಗಾರಿಕೆಯಲ್ಲಿ ಪರಿಣತಿಯನ್ನು ಪಡೆಯಲು ಅನುಕೂಲವಾಗುವಂತೆ ಉಚ್ಚ ತಾಂತ್ರಿಕ ಸಂಸ್ಥೆಗಳನ್ನೂ ತೆರೆಯಲಾಗಿದೆ. ಶಿಕ್ಷಕರಾಗಬಯಸುವವರಿಗೆ ಯೋಗ್ಯ ತರಬೇತಿಯನ್ನು ನೀಡಲು ತರಬೇತಿ ಕಾಲೇಜುಗಳನ್ನು ಸ್ಥಾಪಿಸಲಾಗಿದೆ. ಇದೇ ರೀತಿ ವಿವಿಧ ಜೀವನೋಪಾಯಗಳಲ್ಲಿ ತರಬೇತಿಯನ್ನು ಕೊಡುವ ಹಲವಾರು ಸಂಸ್ಥೆಗಳೂ ಇವೆ. ಸ್ನಾತಕಮಟ್ಟದ ಶಿಕ್ಷಣವನ್ನು ಮುಗಿಸಿದ ಮೇಲೆ ಯಾವುದೇ ಒಂದು ವಿಷಯದಲ್ಲಿ ವಿಶೇಷ ರೀತಿಯ ಅಭ್ಯಾಸ ಮಾಡಲು ಅನುಕೂಲವಾಗುವಂತೆ ವಿಶ್ವವಿದ್ಯಾನಿಲಯಗಳು ಸ್ನಾತಕೋತ್ತರ ವರ್ಗಗಳನ್ನು ನಡೆಸುತ್ತವೆ.

ಇದಲ್ಲದೆ. ವಯಸ್ಕರಿಗೆ ಓದುಬರಹ ಮತ್ತು ಸಾಮಾನ್ಯ ಜ್ಞಾನದ ಅರಿವು ಮಾಡಿಕೊಳ್ಳಲು ವಯಸ್ಕರ ಶಿಕ್ಷಣ ವರ್ಗಗಳೂ ನಡೆಯುತ್ತಿವೆ. ಮೂಕ, ಕಿವುಡ ಮತ್ತು ಕುರುಡ ಮಕ್ಕಳಿಗೂ ಶಿಕ್ಷಣದ ವ್ಯವಸ್ಥೆ ಮಾಡಲಾಗಿದೆ. ಹಿಂದುಳಿದ ಜನರ ಮತ್ತು ಹೆಣ್ಣುಮಕ್ಕಳ ಶಿಕ್ಷಣಕ್ಕೆ ಸರಕಾರ ವಿಶೇಷ ಗಮನ ನೀಡುತ್ತದೆ. ಇವರಿಗೆ ಪ್ರೌಢಶಾಲೆಗಳಲ್ಲಿ ಉಚಿತ ಶಿಕ್ಷಣ ಕೊಡುತ್ತದೆ. ಸಂಸ್ಕೃತ ಶಿಕ್ಷಣ. ಸಂಗೀತ ಶಿಕ್ಷಣ. ಸಾಹಿತ್ಯ ಮತ್ತು ಲಲಿತಕಲೆಗಳ ಬೆಳವಣಿಗೆ. ದೈಹಿಕ ಶಿಕ್ಷಣ, ಸೈನಿಕ ಶಿಕ್ಷಣ ಮುಂತಾದುವುಗಳಿಗಾಗಿ ವ್ಯವಸ್ಥೆ ಮಾಡಲಾಗಿದೆ. ಬಾನುಲಿ ಮೂಲಕ ಪಾಠಕ್ರಮಗಳು ನಡೆಯುವ ಏರ್ಪಾಡನ್ನೂ ಮಾಡಲಾಗಿದೆ. ಹಲವು ಕಡೆಗಳಲ್ಲಿ ಓದಲು ಅನುವಾಗಬೇಕೆಂದು ಪುಸ್ತಕಾಲಯಗಳ ವ್ಯವಸ್ಥೆ ಇದೆ.

ಒಟ್ಟಿನಲ್ಲಿ ನಮ್ಮ ನಾಡಿನ ಎಲ್ಲ ಜನರು, ತಮ್ಮ ಒಲವು. ಅನುಕೂಲತೆ ಹಾಗೂ ಅವಶ್ಯಕತೆಗೆ ಅನುಗುಣವಾಗಿ ವಿದ್ಯಾಭ್ಯಾಸ ಮಾಡಲು ಅವಕಾಶವಿದೆ.

ನೋಡಿ : ಗುರುಕುಲ ; ವಿಶ್ವವಿದ್ಯಾನಿಲಯ ; ಶಿಕ್ಷ

## ವಿದ್ಯಾರಣ್ಯ

ಕರ್ನಾಟಕದ ಗತವೈಭವವನ್ನು ಮೆಲುಕುಹಾಕಿದಾಗಲೆಲ್ಲ ವಿಜಯನಗರ ಸಾಮ್ರಾಜ್ಯವ ಹಾಗೂ ವಿದ್ಯಾರಣ್ಯರ ನೆನಪಾಗುತ್ತದೆ. ವಿಜಯನಗರ–ವಿದ್ಯಾರಣ್ಯ ಈ ಎರಡು ಹೆಸರುಗಳು ಅವಿಭಾಜ್ಯ, ರೋಮಾಂಚಕಾರಿ.

ಹದಿಮೂರನೆಯ ಶತಮಾನದ ಕೊನೆಯ ಮತ್ತು ಹದಿನಾಲ್ಕನೆಯ ಶತಮಾನದ ಆದಿಯಲ್ಲಿದ್ದ ಮಾಯಣಭಟ್ಟ ಮತ್ತು ಶ್ರೀಮತಿ ಎಂಬ ಬಡ ಬ್ರಾಹ್ಮಣ ದಂಪತಿಯ ಮಗ ವಿದ್ಯಾರಣ್ಯ. ಹುಟ್ಟು ಹೆಸರು ಮಾಧವ. ಹಿರಿಯನಾದ ಮಾಧವನಿಗೆ ಇಬ್ಬರು ತಮ್ಮಂದಿರಿದ್ದರು.

ಸ್ವತಃ ಪಂಡಿತನಾಗಿದ್ದ ಮಾಯಣ ಮಕ್ಕಳಿಗೆ ಮನೆಯಲ್ಲೇ ವೇದ–ಶಾಸ್ತ್ರ ಮೊದಲಾದುವನ್ನು ಹೇಳಿಕೊಟ್ಟ. ಚಿಕ್ಕಂದಿನಲ್ಲೇ ತಂದೆ ತೀರಿಕೊಂಡು ಸಂಸಾರದ ಜವಾಬ್ದಾರಿಯೆಲ್ಲ ಮಾಧವನ ಮೇಲೆ ಬಿದ್ದಿತು. ಅವನಿಗೆ ದಿಕ್ಕೇ ತೋಚಲಿಲ್ಲ. ಹಂಪೆಗೆ ಹೋಗಿ ಕುಲದೇವತೆ ಭುವನೇಶ್ವರಿಯನ್ನು ಕುರಿತು ಹನ್ನೆರಡು ವರ್ಷಗಳ ಕಾಲ ತಪಸ್ಸು ಮಾಡಿದ. ತಪಸ್ಸು ಮುಗಿದು ಮೇಲೆದ್ದುದು ಮಾಧವನಲ್ಲ, ವಿದ್ಯಾರಣ್ಯರು.

ಈ ಸಮಯದಲ್ಲಿ ಅಲ್ಲಾವುದ್ದೀನ್ ಖಿಲ್ಜಿಯ ದಾಳಿಗೆ ಸಿಕ್ಕಿ ದಕ್ಷಿಣದ ಹೊಯ್ಸಳರ ರಾಜ್ಯ ನಾಶವಾಗಿ ಹೋಗಿತ್ತು. ಹುಕ್ಕ ಮತ್ತು ಬುಕ್ಕ ಎಂಬ ಅಣ್ಣತಮ್ಮಂದಿರು ಪರಕೀಯರ ಆಕ್ರಮಣ ತಡೆಯಲು ಬಲವಾದ ಹಿಂದೂ ಸಾಮ್ರಾಜ್ಯ ಕಟ್ಟಬೇಕೆಂದು ಹಂಬಲಿಸುತ್ತಿದ್ದರು. ಈ ಸೋದರರಿಗೆ ವಿದ್ಯಾರಣ್ಯರಲ್ಲಿ ಬಹಳ ಭಕ್ತಿ. ತುಂಗಭದ್ರಾ ದಂಡೆಯಲ್ಲಿರುವ ಸುಂದರ ಹಂಪೆಯೇ ಸಾಮ್ರಾಜ್ಯ ಸ್ಥಾಪಿಸಲು ತಕ್ಕ ಸ್ಥಳವೆಂದು ನಿರ್ಧರಿಸಿ, ಅಲ್ಲಿ ಸಾಮ್ರಾಜ್ಯವನ್ನು ಕಟ್ಟಬೇಕೆಂದು ವಿದ್ಯಾರಣ್ಯರು ಹುಕ್ಕ ಬುಕ್ಕರಿಗೆ ಸಲಹೆ ಮಾಡಿದರು.

ಹಂಪೆಯನ್ನೇ ಏಕೆ ಆರಿಸಿದರು ಎನ್ನುವುದಕ್ಕೆ ಒಂದು ಕಥೆ ಇದೆ. ವಿದ್ಯಾರಣ್ಯರು ಸಾಮ್ರಾಜ್ಯ ಸ್ಥಾಪನೆಗೆ ಜಾಗವನ್ನರಸುತ್ತ ಕಾಡು ಮೇಡುಗಳನ್ನೆಲ್ಲ ಸುತ್ತುತ್ತಿದ್ದರು. ಒಮ್ಮೆ ಒಂದು ಕಾಡಿನಲ್ಲಿ ಹೋಗುತ್ತಿದ್ದಾಗ ತೋಳವೊಂದು ಮೊಲವನ್ನು ಅಟ್ಟಿಸಿಕೊಂಡು ಬಂತು. ಪ್ರಾಣಭಯದಿಂದ ಓಡಿಬರುತ್ತಿದ್ದ ಮೊಲ ಹಂಪೆಯ ನೆಲವನ್ನು ಮುಟ್ಟಿದ್ದೇ ತಡ, ತಿರುಗಿನಿಂತು ತೋಳವನ್ನೆದುರಿಸಲು ಸಿದ್ಧವಾಯಿತು. ಇದನ್ನು ಕಂಡ ವಿದ್ಯಾರಣ್ಯರು ಆ ನೆಲದ ಮಣ್ಣಿನ ದಿಟ್ಟ ಗುಣವೇ ಅದಕ್ಕೆ ಕಾರಣ ಎಂದು ಭಾವಿಸಿ, ರಾಜಧಾನಿಯ ನಿರ್ಮಾಣಕ್ಕೆ ಆ ಸ್ಥಳವನ್ನು ಆರಿಸಿದರು. ವಿಜಯನಗರ ಎಂಬ ಶುಭನಾಮವನ್ನೂ ಸೂಚಿಸಿದರು. ಹರಿಹರನಾಮಾಂಕಿತ ಹುಕ್ಕನಿಗೆ ಪಟ್ಟಕಟ್ಟಿ ತಾವು ಅವನ ಮಾರ್ಗದರ್ಶಿಯಾಗಿ, ಗುರುವಾಗಿ ನಿಂತರು.

'ಕರ್ನಾಟಕ ಸಿಂಹಾಸನ ಪ್ರತಿಷ್ಠಾಪನಾಚಾರ್ಯ' ಎಂಬ ಬಿರುದನ್ನು ವಿದ್ಯಾರಣ್ಯರಿಗೆ ಹರಿಹರ ಇತ್ತನೆಂದು ಹೇಳುತ್ತಾರೆ.

ವಿಜಯನಗರದ [illegible] ಸ್ಥಾಪಿತವಾಗಿ, ಸಾಮ್ರಾಜ್ಯ [illegible] ಪ್ರಾರಂಭವಾದೊಡನೆ, ವಿದ್ಯಾರಣ್ಯರು ಶೃಂಗೇರಿಗೆ ತೆರಳಿದರು. 1377 ರಿಂದ 1386ರ ವರೆಗೆ [illegible] ಶೃಂಗೇರಿ [illegible]ರಾಗಿದ್ದರು.



ಶರಾವತಿಯ ವಿದ್ಯುದುತ್ಪಾದನಾ ಘಟಕಗಳು

ಲೋಹದ ಬೀಗದ ಕೈ ತಗಲಿಸಿದ. ಗಾಳಿಪಟದಿಂದ ಮೋಡದ ಸ್ಥಿರವಿದ್ಯುತ್ ಬೀಗದ ಕೈಗೆ ಹಾದುಬಂತು. ಅಲ್ಲಿಗೆ ಮೋಡ ಸ್ಥಿರವಿದ್ಯುತ್ ಸಂಗ್ರಹ ವೆಂಬುದು ಸಿದ್ಧವಾಯಿತು.

ವಿದ್ಯುತ್ ಸಂಚಯ ಸುಲಭವಾಗಿ ಹರಿಯಲು ಅನುವು ಮಾಡಿಕೊಡುವ ಲೋಹಗಳಂಥ ಕೆಲವು ವಸ್ತುಗಳು ವಿದ್ಯುತ್ವಾಹಕಗಳು. ವಿದ್ಯುತ್‌ಶಕ್ತಿ ಅಥವಾ ವಿದ್ಯುಚ್ಛಕ್ತಿಯು ಹರಿಯುವ ಗುಣವನ್ನು 1800ರಲ್ಲಿ ಕಂಡು ಕೊಂಡಾತ ಅಲೆಸಾಂಡ್ರೊ ವೋಲ್ಟ್. ಆಮ್ಲೀಯ ದ್ರಾವಣದಲ್ಲಿ ಮುಳು ಗಿಸಿಟ್ಟ ಎರಡು ಲೋಹಗಳ ನಡುವೆ ವಿದ್ಯುತ್ ಸಂಚಯ ಶೇಖರವಾಗಿದ್ದು, ಆ ಎರಡು ಲೋಹಗಳನ್ನು ಹೊರಗಿನಿಂದ ವಿದ್ಯುತ್ವಾಹಕವೊಂದರ ಮೂಲಕ ಕೂಡಿಸಿದರೆ, ಆ ವಿದ್ಯುತ್ವಾಹಕದಲ್ಲಿ ವಿದ್ಯುಚ್ಛಕ್ತಿ ಹರಿಯುವುದೆಂಬುದನ್ನು ವೋಲ್ಟ್ ಕಂಡುಹಿಡಿದ. ಅದೇ ಇಂದಿನ ಬ್ಯಾಟರಿಯ ಮೂಲರೂಪ.

ವಿದ್ಯುಚ್ಛಕ್ತಿಯ ಬಗೆಗೆ ಅಸಂಖ್ಯಾತ ಪ್ರಯೋಗಗಳು ಹತ್ತೊಂಬತ್ತನೆಯ ಶತಮಾನದಲ್ಲಿ ನಡೆದುವು. ಅಯಸ್ಕಾಂತವನ್ನು ತೂಗಹಾಕಿದರೆ ಉತ್ತರ–ದಕ್ಷಿಣ ದಿಕ್ಕಿಗೆ ನೇರವಾಗಿ ನಿಲ್ಲುವುದು: ಧ್ರುವಗಳತ್ತ ಕಬ್ಬಿಣದ ಚದಿರು ತುಣುಕುಗಳನ್ನು ಆಕರ್ಷಿಸುವುದು ಅಯಸ್ಕಾಂತದ ಗುಣ. ಕಬ್ಬಿಣದ ತುಣುಕಿನ ಸುತ್ತ ವಿದ್ಯುದ್ವಾಹಕಗಳನ್ನು ಸುತ್ತಿ ಅದರ ಮೂಲಕ ವಿದ್ಯುಚ್ಛಕ್ತಿಯನ್ನು ಹಾಯಿಸಿದಲ್ಲಿ ವಿದ್ಯುಚ್ಛಕ್ತಿ ಹಾಯುತ್ತಿರುವಷ್ಟು ಕಾಲವೂ ಕಬ್ಬಿಣದ ತುಣುಕು ಅಯಸ್ಕಾಂತವಾಗಿರುತ್ತದೆ. 1820ರಲ್ಲಿ ನಡೆದ ಈ ಶೋಧನೆಯನ್ನು ಮುಂದಿನ ಅನೇಕ ಯಂತ್ರಸ್ಥಾವರಗಳಲ್ಲಿ ಅಳವಡಿಸಲಾಯಿತು. ಅನೇಕ ಸ್ವಯಂಚಾಲಿತ ವಿನ್ಯಾಸಗಳಿಗೆ ಇದು ಪ್ರೇರಕ. ಅಯಸ್ಕಾಂತಕ್ಕೂ ವಿದ್ಯುಚ್ಛಕ್ತಿಗೂ ಇರುವ ಸಂಬಂಧದ ಬಗೆಗೆ ಮುಂದೆ ಜೋಸೆಫ್ ಹೆನ್ರಿ ಮತ್ತು ಮೈಕೆಲ್ ಫ್ಯಾರಡೆ ಎಂಬ ವಿಜ್ಞಾನಿಗಳು ಅನೇಕ ಪ್ರಯೋಗಗಳನ್ನೂ ಶೋಧನೆಗಳನ್ನೂ ನಡೆಸಿದರು. ಜೇಮ್ಸ್ ಕ್ಲರ್ಕ್ ಮ್ಯಾಕ್ಸ್‌ವೆಲ್ ಎಂಬಾತ ವಾತಾವರಣದಲ್ಲಿ ಹಾಯ್ದುಹೋಗುವಂಥ ವಿದ್ಯುತ್–ಅಯಸ್ಕಾಂತಕ ಅಲೆಗಳು ಇರಬಹುದೆಂದು 1873ರಲ್ಲಿ ಲೆಕ್ಕ ಹಾಕಿದ. ಹದಿನೈದು ವರ್ಷಗಳ ತರುವಾಯ ಈ ಬಗೆಯ ಅಲೆಗಳನ್ನು ಪ್ರಾಯೋಗಿಕವಾಗಿ ಪತ್ತೆಹಚ್ಚಿದ ವನು ಹೈನ್ರಿಕ್ ರುಡಾಲ್ಫ್ ಹರ್ಟ್ಸ್. ರೇಡಿಯೋ ಟೆಲಿವಿಷನ್ ತರಂಗಗಳು ವಿದ್ಯುತ್ ಅಯಸ್ಕಾಂತಿಕ ಅಲೆಗಳು. ಅವು ಬೆಳಕಿನ ವೇಗದಲ್ಲಿ ಸಂಚರಿಸುತ್ತವೆ. ವಿದ್ಯುಚ್ಛಕ್ತಿಯ ಹರಿಯುವಿಕೆ ಎಲೆಕ್ಟ್ರಾನುಗಳ ಹರಿಯುವಿಕೆ ಯಿಂದ ಆದುದೆಂದು ವಾಸ್ತವವಾಗಿ 1897ರಲ್ಲಿ ಜೋಸೆಫ್ ಜಾನ್ ಥಾಮ್‌ಸನ್ (ಕೆಲ್ವಿನ್) ಕಂಡುಹಿಡಿಯುವ ತನಕ ಜಗತ್ತಿಗೆ ತಿಳಿದಿರಲಿಲ್ಲ. ವಿದ್ಯುಚ್ಛಕ್ತಿಯು ಹರಿಯುವಿಕೆಗೆ ಕಾರಣವಾದ ಎಲೆಕ್ಟ್ರಾನಿನ ಋಣ ಸಂಚಯವನ್ನು ಎಳೆದವನು ಪ್ರಾಯೋಗಿಕ ವಿಜ್ಞಾನದಲ್ಲಿ ಹೆಸರು ಪಡೆದ ರಾಬರ್ಟ್ ಆಂಡ್ರ್ಯೂ ಮಿಲಿಕನ್ (1908). ಇಪ್ಪತ್ತನೆಯ ಶತಮಾನದಲ್ಲಿ ಹಲವು ಈ ಮೂಲಭೂತ ಶೋಧಗಳನ್ನು ಆಧರಿಸಿದ ಪ್ರಯೋಗಗಳು ನಡೆದುವು. ವಿದ್ಯುಚ್ಛಕ್ತಿಯನ್ನು ಆಧರಿಸಿದ ತಾಂತ್ರಿಕತೆ ರೂಪುಗೊಂಡಿತು.

ವಿದ್ಯುಚ್ಛಕ್ತಿಯನ್ನು ತಯಾರಿಸುವ ವಿಧಾನಗಳು ಹಲವಾರು. ಮೇಲಿಂದ ಕೆಳಗೆ ಧುಮುಕುವ ನೀರು ತಿರುಗುರಾಟೆಗಳನ್ನು ಗಿರಗಿರನೆ ತಿರುಗಿಸುತ್ತದೆ. ತಿರುಗುವಿಕೆಯನ್ನು ವಿದ್ಯುಚ್ಛಕ್ತಿಯಾಗಿ ಮಾರ್ಪಡಿಸಿ ತಂತಿಗಳ ಮೂಲಕ ಹಾಯಿಸಲಾಗುತ್ತದೆ. ರಾಸಾಯನಿಕ ಕ್ರಿಯೆಗಳ ಮೂಲ ವಿದ್ಯುತ್‌ಉತ್ಪಾದಕ (ಜನರೇಟರು)ಗಳಲ್ಲಿ ವಿದ್ಯುಚ್ಛಕ್ತಿಯನ್ನು ಉತ್ಪಾದಿಸಲಾಗುತ್ತದೆ. ಪರಮಾಣು ರಿಯಾಕ್ಟರುಗಳಲ್ಲಿ ಪರಮಾಣು ಇಂಧನಗಳನ್ನು ಉರಿಸುವುದರಿಂದ ಇನ್ನೆಲ್ಲ ವಿಧಾನಗಳಿಗಿಂತಲೂ ಅಗ್ಗವಾಗಿ ವಿದ್ಯುಚ್ಛಕ್ತಿಯನ್ನು ತಯಾರಿಸಬಹುದು.

ವಿದ್ಯುಚ್ಛಕ್ತಿ ಇಂದು ಮಾನವನ ನಿತ್ಯಜೀವನದ ರೀತಿನೀತಿಗಳನ್ನು ಬದಲಿಸಿದೆ. ಒಂದು ದಿನ ವಿದ್ಯುಚ್ಛಕ್ತಿಯ ಸರಬರಾಜು ನಿಂತುಹೋದರೆ. ನಿತ್ಯಜೀವನದಲ್ಲಿ ಅದರ ಪಾತ್ರ ಎಷ್ಟು ಮಹತ್ವದ್ದೆಂಬುದು ನಮಗೆ ಅರ್ಥವಾಗುತ್ತದೆ. ಮನೆ ಬೆಳಗಲು, ದೂರದಿಂದ ನೀರನ್ನು ಮನೆಯಲ್ಲಿ ಸುರಿಸಲು ಅದು ಬೇಕು; ರೇಡಿಯೊಗೆ ಬೇಕು; ಚಲನಚಿತ್ರಕ್ಕೆ ಬೇಕು; ವಿದ್ಯುತ್ ಬೀಸಣಿಗೆಗೆ, ಶೀತಾಗಾರಕ್ಕೆ ಬೇಕು; ಎಷ್ಟೋ ಮನೆಗಳಲ್ಲಿ ನೀರು ಕಾಯಿಸುವುದು, ಅಡುಗೆ ಮಾಡುವುದು ಅದರಿಂದ. ಸಣ್ಣ ಕಾರಖಾನೆಗಳು, ದೊಡ್ಡ ಕಾರಖಾನೆಗಳು, ಅಚ್ಚುಕೂಟಗಳು, ಆಸ್ಪತ್ರೆಗಳು ಎಲ್ಲ ವಿದ್ಯುಚ್ಛಕ್ತಿಯನ್ನು ನೆಚ್ಚಿಕೊಂಡಿವೆ. ವಿದ್ಯುಚ್ಛಕ್ತಿಯಿಂದ ರಸ್ತೆಯ ನೂರಾರು ಕಿಲೊಮೀಟರುಗಳಿಗೆ ದೀಪಹಾಕಿ ಬೆಳಗಲು ಸಾಧ್ಯವಾಗಿದೆ; ಎಂದರೆ ರಾತ್ರಿಯ ಪ್ರಯಾಣ ಸುಲಭ, ಸುರಕ್ಷಿತ. ಮರ, ಕಲ್ಲಿದ್ದಲು, ಪೆಟ್ರೋಲು ಇಂಥ ಇಂಧನಗಳನ್ನು ನಾಗರಿಕ ಮನುಷ್ಯ ಬಳಸಿಕೊಳ್ಳುತ್ತ ಬಂದಂತೆ ತೀರಿ ಹೋಗುವ ಸಂಭವವಿದೆ. ವಿದ್ಯುತ್ ಹೊಸ ಇಂಧನ. ಸಂಪರ್ಕ ವ್ಯವಸ್ಥೆಯಲ್ಲಿ ಇದರ ಪಾತ್ರ ಅಗಾಧ. ಪ್ರಪಂಚದ ಒಂದು ಮೂಲೆಯಿಂದ ಇನ್ನೊಂದು ಮೂಲೆಗೆ ಸುಲಭವಾಗಿ ಸಂಪರ್ಕ ಕಲ್ಪಿಸಿಕೊಟ್ಟಿರುವ ವಿದ್ಯುಚ್ಛಕ್ತಿ. ಗ್ರಹದಿಂದ ಗ್ರಹಕ್ಕೆ ಸಂಪರ್ಕ ಕಲ್ಪಿಸುವುದರಲ್ಲಿ ಸಹಾಯಕವಾಗುತ್ತದೆ. ಅಲ್ಲಾವುದ್ದೀನ್ ಎಂಬವನು ಒಂದು ಹಳೆಯ ದೀಪವನ್ನು ಉಜ್ಜಿದರೆ ಭೂತ ಪ್ರತ್ಯಕ್ಷವಾಗುತ್ತಿತ್ತಂತೆ: ಹೇಳಿದ ಕೆಲಸ ಮಾಡಿಕೊಡುತ್ತಿತ್ತಂತೆ. ಮಾಂತ್ರಿಕ ಶಕ್ತಿ ಇರುವ ವಿದ್ಯುಚ್ಛಕ್ತಿ ಆಧುನಿಕ ಮಾನವನಿಗೆ ಭೂತ ಸೇವಕನಾಗಿದೆ.

## ವಿದೇಶೀ ವಿನಿಮಯ

ನಮ್ಮ ಮನೆಯಲ್ಲಿ ಒಂದು ಬೀರು (ಕಪಾಟು) ಹೆಚ್ಚಿಗೆ ಇದೆ. ಅದನ್ನು ನೂರು ರೂಪಾಯಿಗೆ ಮಾರಿಬಿಡಲು ಯೋಚಿಸುತ್ತೇವೆ. ನಮ್ಮ ಎದುರು ಮನೆಯವರು ತಮಗಾಗಿ ಒಂದು ಬೀರು ಕೊಳ್ಳುವ ಯೋಚನೆ ಮಾಡಿದ್ದಾರೆ. ನಾವು ಅವರಿಗೆ ನೂರು ರೂಪಾಯಿ ಬಾಕಿ ಕೊಡುವುದಿರುತ್ತದೆ. ಬೀರುವನ್ನು ಎದುರುಮನೆಗೆ ದಾಟಿಸುತ್ತೇವೆ. ಬೀರು ಮಾರಾಟವಾಯಿತು. ಬಾಕಿ ತೀರಿಹೋಯಿತು. ಈ ವ್ಯವಹಾರದಲ್ಲಿ ಹಣ ನಮ್ಮ ಕೈಗೆ ಬರಲಿಲ್ಲ. ನಮ್ಮಿಂದ ಹೋಗಲಿಲ್ಲ.

ಯಾವುದೇ ಎರಡು ದೇಶಗಳಲ್ಲಿ ಒಂದೇ ಬಗೆಯ ಹಣ ಚಲಾವಣೆಯಲ್ಲಿ ಇರುವುದಿಲ್ಲ. ನಮ್ಮ ದೇಶದ ಹಣ ರೂಪಾಯಿ. ಡಾಲರ್ ಅಮೆರಿಕದ ಹಣ. ಇಂಗ್ಲೆಂಡಿನ ಹಣ ಪೌಂಡ್. ರೂಪಾಯಿಗಳು ಅಮೆರಿಕದಲ್ಲಿ ಚಲಾವಣೆಯಲ್ಲಿಲ್ಲ. ಡಾಲರ್ ನೋಟುಗಳು ಭಾರತದಲ್ಲಿ ನಡೆಯುವುದಿಲ್ಲ. ನಮಗೆ ಬೇಕಾದ ಅಮೆರಿಕದ ವಸ್ತುಗಳನ್ನು ಆಮದು ಮಾಡಿಕೊಂಡು ಅಮೆರಿಕಕ್ಕೆ ಬೇಕಾದ ನಮ್ಮ ವಸ್ತುಗಳನ್ನು ರಫ್ತುಮಾಡುತ್ತೇವೆ. ಆಗ ನಾವು ರೂಪಾಯಿ ನೋಟುಗಳನ್ನು ಕೊಡುವ ಪ್ರಮೇಯವಿಲ್ಲ; ಅಮೆರಿಕ ಡಾಲರ್‌ಗಳನ್ನು ಕಳುಹಿಸಬೇಕಾಗುವುದಿಲ್ಲ. ಹೇಗೆ ? ಒಂದು ಡಾಲರ್ ನಮ್ಮ ಒಂದು ರೂಪಾಯಿಗೆ ಸಮನಲ್ಲ. ನಾವು ಚಹಾಪುಡಿಯನ್ನು ರಫ್ತುಮಾಡುವಾಗ ಒಂದು ಮೆಟ್ರಿಕ್ ಟನ್ನಿಗೆ ಇಷ್ಟು ರೂಪಾಯಿಗಳು ಎಂದು ಲೆಕ್ಕ ಹಾಕುತ್ತೇವೆ. ಅವರು ನಮಗೆ ರಫ್ತುಮಾಡುವ ಯಂತ್ರ ಸಾಮಗ್ರಿಯ ಬೆಲೆಯನ್ನು ಡಾಲರುಗಳಲ್ಲಿ ಹೇಳುತ್ತಾರೆ. ಒಂದು ಡಾಲರಿಗೆ ಎಷ್ಟು ರೂಪಾಯಿ ಅಥವಾ ಒಂದು ರೂಪಾಯಿಗೆ ಎಷ್ಟು ಡಾಲರ್ ಎಂಬ ಪ್ರಮಾಣ ನಿಗದಿಯಾದರೆ, ಇಷ್ಟು ಡಾಲರ್ ಬೆಲೆಯ ಯಂತ್ರ ಸಾಮಗ್ರಿಗೆ ಬದಲಾಗಿ ಇಷ್ಟು ರೂಪಾಯಿ ಬೆಲೆಯ ಚಹಾ ಪುಡಿ ಕಳುಹಿಸಬಹುದು ಎಂದು ಲೆಕ್ಕ ಹಾಕುವುದು ಸುಲಭ.

ಪ್ರತಿಯೊಂದು ದೇಶದ ಹಣಕ್ಕೂ ಇನ್ನೊಂದು ದೇಶದ ಹಣದ ಜೊತೆ ಒಂದು ವಿನಿಮಯ ದರ ನಿಗದಿಯಾಗಿರುತ್ತದೆ. 1968ರಲ್ಲಿ ನಿಗದಿಯಾದಂತೆ ಒಂದು ಡಾಲರಿಗೆ ನಮ್ಮ ಏಳೂವರೆ ರೂಪಾಯಿ ಸಮ. ಇಂಗ್ಲೆಂಡಿನ ಒಂದು ಪೌಂಡ್ ಅಮೆರಿಕದ 2.4 ಡಾಲರಿಗೆ ಸಮ.

ಚಿನ್ನದ ಬೆಲೆಯ ಆಧಾರದ ಮೇಲೆ ಎರಡು ದೇಶಗಳ ಹಣದ ನಡುವೆ ಇರುವ ಸಂಬಂಧವನ್ನು ನಿರ್ಧರಿಸುತ್ತಾರೆ. ಭಾರತದಲ್ಲಿ ಒಂದು ರೂಪಾಯಿಗೆ ಎಷ್ಟು ಚಿನ್ನ ಎಂದು ನಿಗದಿ ಮಾಡಲಾಗಿದೆಯೋ ಅದಕ್ಕಿಂತ ಹೆಚ್ಚು ಚಿನ್ನ ಅಮೆರಿಕದ ಒಂದು ಡಾಲರಿಗೆ ಸಿಗುತ್ತದೆ. ಆದ್ದರಿಂದ ಡಾಲರಿನ ಮೌಲ್ಯ ರೂಪಾಯಿಯ ಮೌಲ್ಯಕ್ಕಿಂತ ಹೆಚ್ಚು. ಒಂದು ಡಾಲರಿಗೆ ಅಮೆರಿಕದಲ್ಲಿ ಎಷ್ಟು ಚಿನ್ನ ಬರುವುದೋ ಅಷ್ಟು ಚಿನ್ನದ ಬೆಲೆ ಭಾರತದಲ್ಲಿ ಏಳೂವರೆ ರೂಪಾಯಿಯೆಂದು ನಿಗದಿ ಮಾಡಲಾಗಿದೆ. ಇದು ಡಾಲರಿಗೆ ರೂಪಾಯಿಯ ವಿನಿಮಯ ದರ.

ಎರಡು ದೇಶಗಳು ಪರಸ್ಪರ ವಸ್ತುಗಳನ್ನು ಆಮದು ಮಾಡಿಕೊಳ್ಳುತ್ತವೆ; ಪರಸ್ಪರರಿಗೆ ರಫ್ತು ಮಾಡುತ್ತವೆ. ಅಮೆರಿಕದಿಂದ ಭಾರತ ಹೆಚ್ಚು ಹೆಚ್ಚು ಸಾಮಗ್ರಿಯನ್ನು ಆಮದು ಮಾಡಿಕೊಳ್ಳುತ್ತದೆ. ಒಂದು ವೇಳೆ ಅಮೆರಿಕಕ್ಕೆ ಭಾರತದ ವಸ್ತುಗಳು ಹೆಚ್ಚು ರಫ್ತಾಗದಿದ್ದರೆ ಭಾರತ ಆಗ ಸಾಲಗಾರನಾಗುತ್ತದೆ. ಆ ಸಾಲವನ್ನು ತೀರಿಸುವುದು ಹೇಗೆ ? ಸುಲಭವಾಗಿ ಹುಂಡಿಯ ಮೂಲಕ ವಿದೇಶಿ ಸಾಲವನ್ನು ತೀರಿಸಬಹುದು.

ಹುಂಡಿಯ ಮೂಲಕ ತೀರಿಸುವುದು ಎಂದರೇನು ? ಇಂಗ್ಲೆಂಡಿನಿಂದ ಆಮದು ಮಾಡಿಕೊಳ್ಳುವ ವಸ್ತುಗಳಿಗಿಂತ ಹೆಚ್ಚಿಗೆ ವಸ್ತುಗಳನ್ನು ಆ ದೇಶಕ್ಕೆ ಭಾರತ ರಫ್ತು ಮಾಡುತ್ತಿದ್ದರೆ, ಆಗ ಭಾರತ ಪೌಂಡುಗಳನ್ನು ಸಂಪಾದಿಸುತ್ತದೆ. ಆದರೆ ಅಮೆರಿಕಕ್ಕೆ ಭಾರತ ಡಾಲರುಗಳಲ್ಲಿ ಸಲ್ಲಿಸಬೇಕಾದ ಸಾಲವಿದೆ. ಆಗ ಅಮೆರಿಕಕ್ಕೆ ಪೌಂಡುಗಳ ಅಗತ್ಯವಿದೆಯೇ ಎಂಬುದನ್ನು ಭಾರತ ಕಂಡುಕೊಳ್ಳುತ್ತದೆ. ಅಮೆರಿಕ ಇಂಗ್ಲೆಂಡಿನಿಂದ ಹೆಚ್ಚು ವಸ್ತುಗಳನ್ನು ಆಮದು ಮಾಡಿಕೊಂಡಿದ್ದರೆ ಅದಕ್ಕೆ ಪೌಂಡುಗಳ ಅಗತ್ಯವಿರುತ್ತದೆ. ಆಗ ತನ್ನ ಸಾಲವನ್ನು ಪೌಂಡುಗಳಲ್ಲಿ ತೀರಿಸುವುದಾಗಿ ಭಾರತ ಹೇಳಿದರೆ, ಅಮೆರಿಕ ಸುಲಭವಾಗಿ ಒಪ್ಪುತ್ತದೆ. ಭಾರತ, ತನಗೆ ಇಂಗ್ಲೆಂಡಿನಿಂದ ಬರಬೇಕಾದ ಇಷ್ಟು ಪೌಂಡುಗಳ ಹಣವನ್ನು ವಸೂಲು ಮಾಡಿಕೊಳ್ಳಿ ಎಂದು ನಮೂದಿಸಿದ ಹುಂಡಿಯನ್ನು, ತಾನು ತೀರಿಸಬೇಕಾದ ಸಾಲಕ್ಕೆ ಜಮಾ ಮಾಡಿಕೊಳ್ಳಲು ಅಮೆರಿಕಕ್ಕೆ ಕಳುಹಿಸುತ್ತದೆ. ತಮತಮಗೆ ಬೇಕಾದ ವಸ್ತುಗಳನ್ನು ವಿನಿಮಯ ಮಾಡಿಕೊಂಡರೂ ಈ ದೇಶದ ಹಣ ಅಲ್ಲಿಗೆ ಹೋಗಲಿಲ್ಲ. ಆ ದೇಶದ ಹಣ ಇಲ್ಲಿಗೆ ಬರಲಿಲ್ಲ, ಹುಂಡಿಯ ರೂಪದಲ್ಲಿ ಹಣ ಓಡಾಡಿತು.

ಇದನ್ನು ವಿದೇಶೀ ವಿನಿಮಯ ಎನ್ನುತ್ತೇವೆ.

ವಿದೇಶೀ ವಿನಿಮಯವನ್ನು ಗಳಿಸಲು ದೇಶದ ವಸ್ತುಗಳ ರಫ್ತು ಅಥವಾ ಸೇವಾ ಸೌಲಭ್ಯದ ರಫ್ತು ಆಗಲೇಬೇಕು. ಹೊರಗಿನಿಂದ ಆಮದು ಮಾಡಿಕೊಂಡಷ್ಟೂ ವಿದೇಶೀ ವಿನಿಮಯವನ್ನು ಸಲ್ಲಿಸಬೇಕಾಗುತ್ತದೆ. ಕೆಲವು ದೇಶಗಳು ವಸ್ತುಗಳನ್ನು ಮತ್ತು ಸೇವಾ ಸೌಲಭ್ಯಗಳನ್ನು ಹೆಚ್ಚಾಗಿ ಉತ್ಪಾದಿಸುತ್ತವೆ. ಹೆಚ್ಚು ರಫ್ತು ಮಾಡುತ್ತವೆ. ಹೆಚ್ಚು ವಿದೇಶೀ ವಿನಿಮಯವನ್ನು ಗಳಿಸುತ್ತವೆ. ಅಮೆರಿಕ ಅಂಥ ಒಂದು ದೇಶ. ಬಹಳ ವಿದೇಶೀ ವಿನಿಮಯವನ್ನು ಅದು ಗಳಿಸುತ್ತದೆ. ಇತರರು ಆ ದೇಶಕ್ಕೆ ಸಾಲಗಾರರು. ಆದ್ದರಿಂದ ಡಾಲರಿಗೆ ಬೇಡಿಕೆ ಬಹಳ. ಏಕೆಂದರೆ ಅನೇಕ ಸಾಲಗಾರ ರಾಷ್ಟ್ರಗಳು ಬಾಕಿಯನ್ನು ತೀರಿಸಬೇಕಾಗಿವೆ. ಅವಕ್ಕೆ ವಿದೇಶೀ ವಿನಿಮಯದ ಕೊರತೆ. ಆದರೆ ವಿದೇಶೀ ವಿನಿಮಯವನ್ನು ಸಂಪಾದಿಸಿ ಅದನ್ನು ತೀರಿಸಲೇ ಬೇಕು. ಅಗ್ಗದಲ್ಲಿ ವಸ್ತುಗಳನ್ನು ತಯಾರಿಸುವುದು, ಗುಣದ ಮಟ್ಟವನ್ನು ಉತ್ತಮಪಡಿಸುವುದು, ಹಡಗು ವಿಮಾನ ಮುಂತಾದ ಸೇವಾ ಸೌಲಭ್ಯಗಳನ್ನು ವಿದೇಶೀಯರು ಉಪಯೋಗಿಸಿಕೊಳ್ಳುವಂತೆ ವಿಸ್ತರಿಸುವುದು ವಿದೇಶೀ ಪ್ರವಾಸಿಗರು ದೇಶವನ್ನು ಸಂದರ್ಶಿಸುವಂತೆ ಆಕರ್ಷಿಸುವುದು–ಇವು ವಿದೇಶೀ ವಿನಿಮಯವನ್ನು ಗಳಿಸುವ ಕೆಲವು ವಿಧಾನಗಳು.

ನೋಡಿ : ಆಮದು-ರಫ್ತು ; ಹಣ ಚಲಾವಣೆ

## ವಿನೋಬಾ

1916. ಇಂಟರ್ ಪರೀಕ್ಷೆಗೆ ಬರೋಡದಿಂದ ಮುಂಬಯಿಗೆ ಹೋಗಬೇಕಾಗಿತ್ತು. ಹುಡುಗರೆಲ್ಲ ಹೊರಟರು. ಆದರೆ ಒಬ್ಬ ತರುಣ ಮಾತ್ರ ಬರೋಡ ಬಿಟ್ಟವನು ಮುಂಬಯಿ ತಲುಪಲಿಲ್ಲ. [illegible] ಬಂಗಾಳಕ್ಕೆ ಹೊರಟ. ಸೂರತ್ತಿನಲ್ಲೇ ತನಗೆ [illegible] ಬರೆದುಹಾಕಿದ.



ಗಾಂಧಿಜಿಯ ಶಿಷ್ಯಶ್ರೇಷ್ಠ ವಿನೋಬಾ

"ನಾನು ಮುಂಬಯಿಗೆ ಪರೀಕ್ಷೆಗೆ ಹೋಗುವುದಿಲ್ಲ. ಬೇರೆ ಕಡೆಗೆ ಪ್ರಯಾಣ ಹೊರಟಿದ್ದೇನೆ. ನಾನು ಎಲ್ಲಿಯೇ ಇರಲಿ, ಎಲ್ಲಿಗೇ ಹೋಗಲಿ ನನ್ನಿಂದ ಕೆಟ್ಟ ಕೆಲಸವೇನೂ ನಡೆಯುವುದಿಲ್ಲ."

ಸಂಸಾರ ಬಂಧನ ಹರಿದು ಗೃಹತ್ಯಾಗ ಮಾಡಿ ಹೊರಟ ಈ ತರುಣನೇ ಮುಂದೆ ಮಹಾತ್ಮ ಗಾಂಧಿಯವರ ನಿಕಟ ಅನುಯಾಯಿಯಾದ ಆಚಾರ್ಯ ವಿನೋಬಾ ಭಾವೆ.

ವಿನೋಬಾ ಹುಟ್ಟಿದ್ದು 1895 ಸೆಪ್ಟೆಂಬರ್ 11ರಂದು ಬರೋಡದ ಗಾಗೋದೆ ಎಂಬ ಗ್ರಾಮದಲ್ಲಿ. (ಬರೋಡ ಹಿಂದೆ ಒಂದು ಸಂಸ್ಥಾನ ವಾಗಿದ್ದಿತು ; ಈಗ ಗುಜರಾತ್ ರಾಜ್ಯದಲ್ಲಿದೆ.) ಇವರ ಮೂಲಹೆಸರು ವಿನಾಯಕ.

ವಿನಾಯಕ ಪ್ರಾಥಮಿಕ ಶಿಕ್ಷಣವನ್ನು ಗಾಗೋದೆಯಲ್ಲಿ ಮುಗಿಸಿ ಮುಂದಿನ ವಿದ್ಯಾಭ್ಯಾಸಕ್ಕಾಗಿ ಬರೋಡಕ್ಕೆ ಬಂದ. ಆದರೆ ಇದಕ್ಕೂ ಮೊದಲೇ ದೇಶ-ದೇವರು ಇವೆರಡೂ ಆತನ ಮನಸ್ಸನ್ನು ಒಲಿಸಿದ್ದುವು.

ಹುಡುಗನಿಗೆ ಮೊದಲಿನಿಂದ ಗಂಭೀರ ಸಾಹಿತ್ಯದ ಕಡೆ ಒಲವು ಹೆಚ್ಚು. ಪ್ರೌಢಶಾಲೆಯ ವಿದ್ಯಾರ್ಥಿಯಾಗಲೇ ಸಂತರಾದ ಜ್ಞಾನದೇವ, ತುಕಾರಾಮ, ಏಕನಾಥ, ರಾಮದಾಸ ಮೊದಲಾದವರ ಗ್ರಂಥಗಳನ್ನೂ ಇಂಗ್ಲಿಷಿನಲ್ಲಿ ಗಿಬನ್, ಕಾರ್ಲೈಲ್ ಮೊದಲಾದವರ ಗ್ರಂಥಗಳನ್ನೂ ಓದಿದ್ದ. ಇದಲ್ಲದೆ ಅವನಿಗೆ ಮೊದಲಿನಿಂದ ಗಣಿತ, ತತ್ತ್ವಶಾಸ್ತ್ರ, ಇತಿಹಾಸ ಇವುಗಳಲ್ಲಿ ಆಸಕ್ತಿ. ಅವನೇ ಬರೆದಿರುವಂತೆ, "ದೇವರ ತರುವಾಯ ನನಗೆ ಇನ್ನಾವುದಾದರೂ ಪ್ರಿಯವಾಗಿದ್ದರೆ ಅದು ಗಣಿತವಿಜ್ಞಾನ."

ಮುಂದೆ ಕಾಲೇಜಿನ ಓದು ಅವನಿಗೆ ಬೇಕಾಗಿರಲಿಲ್ಲ. ಅದರಿಂದಲೇ ಮುಂಬಯಿಗೆ ಹೋಗದೆ ಬಂಗಾಳದತ್ತ ಹೊರಟ. ಹೊರಡುವುದಕ್ಕೆ ಮುಂಚೆ ತನಗೆ ಆವರೆಗೆ ಬಂದಿದ್ದ ಪ್ರಶಸ್ತಿಪತ್ರಗಳನ್ನೆಲ್ಲ ಸುಟ್ಟುಹಾಕಿದ.

ಬಂಗಾಲದ ಕ್ರಾಂತಿಕಾರರ ಗುಂಪಿನ ಮನೋಭಾವ ಯುವಕ ವಿನಾಯಕನಿಗೆ ಹಿಡಿಸಲಿಲ್ಲ. ಅವನು ಜ್ಞಾನವೈರಾಗ್ಯಗಳ ತವರಾದ ಕಾಶಿಗೆ ಬಂದ. ಸಂಸ್ಕೃತ ಅಭ್ಯಾಸದಲ್ಲಿ ತೊಡಗಿದ. ವಿನೋಬಾಗೆ ಗಾಂಧಿ ದರ್ಶನವಾದದ್ದು ಕಾಶಿಯಲ್ಲೆ, ಗಾಂಧಿಜಿಯೇ ತನ್ನ ಗುರು ಎಂದು ನಂಬಿದ.

ವಿನಾಯಕ, ವಿನೋಬ ಆದದ್ದು ಗಾಂಧಿಜಿಯವರ ಆಶ್ರಮದಲ್ಲಿ. ಹಾಗೆ ನಾಮಕರಣ ಮಾಡಿದವರು ಗಾಂಧಿಜಿಯೇ. ಸೂರತ್ ಬಿಟ್ಟ ಮೇಲೆ ಮನೆಗೆ ವಿನಾಯಕ ಪತ್ರ ಬರೆದಿರಲಿಲ್ಲ. ಗಾಂಧಿಜಿ ಕಿರಿಯನ ತಂದೆಗೆ ತಾವು ಹೀಗೆ ಕಾಗದ ಬರೆದರು.

"ನಿಮ್ಮ ವಿನೋಬಾ ನನ್ನ ಬಳಿ ಇದ್ದಾನೆ. ಇಷ್ಟು ಚಿಕ್ಕ ವಯಸ್ಸಿನಲ್ಲಿಯೇ ನಿಮ್ಮ ಮಗನಿಗೆ ಬಹಳ ವೈರಾಗ್ಯ, ತೇಜಸ್ಸು ಲಭಿಸಿವೆ. ಇಷ್ಟು ವೈರಾಗ್ಯ ಸಂಪಾದಿಸಲು ನಾನು ಬಹಳ ವರ್ಷ ಕಷ್ಟಪಡಬೇಕಾಯಿತು."

ಗುರುವಿನಿಂದ ಶಿಷ್ಯನಿಗೆ ಇದಕ್ಕಿಂತ ಹೆಚ್ಚಿನ ಪ್ರಶಂಸೆ ದೊರೆಕೀತೆ ?

ಗಾಂಧಿಜಿಯವರ ಆಶ್ರಮ ಸೇರಿದ ಮೇಲೂ ವಿನೋಬಾಗೆ ಸಂಸ್ಕೃತ ವ್ಯಾಸಂಗ ಮಾಡಬೇಕೆನಿಸಿತು. ಒಂದು ವರ್ಷದ ಬಿಡುವು ತೆಗೆದುಕೊಂಡು ವಿನೋಬಾ ಮನೆತನದ ಊರಾದ ಮಹಾರಾಷ್ಟ್ರದಲ್ಲಿರುವ ವಾಯಿಗೆ ಹೋಗಿ ಸಂಸ್ಕೃತ ಅಧ್ಯಯನದಲ್ಲಿ ತೊಡಗಿದರು. ಅವರ ಅಧ್ಯಯನವೇ ಒಂದು ತಪಸ್ಸು. ಮೈಮೇಲೆ ಒಂದೇ ಬಟ್ಟೆ, ಏನನ್ನೂ ಹೊದೆಯುತ್ತಿರಲಿಲ್ಲ. ಮಲಗುತ್ತಿದ್ದದ್ದು ಕೃಷ್ಣಾ ನದಿಯ ಸ್ನಾನಘಟ್ಟಗಳ ಮೇಲೆ. ಆಹಾರದ ವಿಷಯದಲ್ಲೂ ಕಟ್ಟುನಿಟ್ಟು.

ಕಾಶಿಯಲ್ಲಿದ್ದಾಗ ವಿನೋಬಾ ಉಪನಿಷತ್, ಗೀತೆ, ಬ್ರಹ್ಮಸೂತ್ರ, ಶಂಕರಭಾಷ್ಯ, ಮನುಸ್ಮೃತಿ, ಪತಂಜಲಿ ಯೋಗದರ್ಶನ, ನ್ಯಾಯಸೂತ್ರ, ವೈಶೇಷಿಕ ಸೂತ್ರ, ಯಾಜ್ಞವಲ್ಕ್ಯಸ್ಮೃತಿ ಈ ಗ್ರಂಥಗಳನ್ನು ಅಭ್ಯಾಸ ಮಾಡಿದರು. ಆರೋಗ್ಯ ಸುಧಾರಣೆಗೆಂದು ದಿನವೂ ಹತ್ತಿಪ್ಪತ್ತು ಕಿಲೊ ಮೀಟರು ತಿರುಗಾಡುತ್ತಿದ್ದರು. ಜೊತೆಗೆ ಜೋಳ ಬೀಸಿದರು ; ಸೂರ್ಯ ನಮಸ್ಕಾರ ಮಾಡಿದರು ; ಭಗವದ್ಗೀತೆ, ಉಪನಿಷತ್ ತರಗತಿಗಳನ್ನು ನಡೆಸಿದರು ; ಹಿಂದೀ ಪ್ರಚಾರ ಮಾಡಿದರು ; ಇಂಗ್ಲಿಷನ್ನೂ ಕಲಿಸಿದರು. 644 ಕಿಲೊಮೀಟರು ಕಾಲ್ನಡಿಗೆಯಲ್ಲೆ ಯಾತ್ರೆ ಮಾಡಿದರು.

ಸತ್ಯ, ಅಹಿಂಸೆ, ಬ್ರಹ್ಮಚರ್ಯ, ತಿನ್ನುವುದರಲ್ಲಿ ಕಟ್ಟುನಿಟ್ಟು, ಏನನ್ನೂ ಸ್ವೀಕರಿಸದಿರುವುದು, ಸ್ವದೇಶಿವ್ರತ–ಇವನ್ನು ಚಾಚೂ ತಪ್ಪದೆ ಪಾಲಿಸಿ, ಆಶ್ರಮಕ್ಕೆ ಮರಳಿದರು ವಿನೋಬಾ. ಗಾಂಧಿಜಿ ಇವರನ್ನು 'ಆಚಾರ್ಯ' ಎಂದು ಗೌರವಿಸಿದರು.

ಗಾಂಧಿಜಿಯ ಆಪ್ತಶಿಷ್ಯರಲ್ಲೊಬ್ಬರಾದ ವರ್ಧಾದ ಸೇಠ್ ಜಮುನ್ ಲಾಲ್ ಬಜಾಜ್, ವಿನೋಬಾರನ್ನು ವರ್ಧಾಗೆ ಕರೆತಂದರು (1921). ಸಬರಮತಿಯಂತೆ ಅಲ್ಲಿಯೂ ಒಂದು ಆಶ್ರಮ ಸ್ಥಾಪಿಸಬೇಕೆಂಬುದು ಉದ್ದೇಶ. ವರ್ಧಾದಲ್ಲಿ ಗಾಂಧಿಜಿಯವರ ಸೇವಾಗ್ರಾಮದಿಂದ ಸುಮಾರು 3 ಕಿಲೊ ಮೀಟರು ದೂರದಲ್ಲಿ ಪೌನಾರ್ ಎಂಬ ಹಳ್ಳಿಯಲ್ಲಿರುವ ಆಶ್ರಮ. ವಿನೋಬಾ ಅವರ ರಚನಾತ್ಮಕ ಕಾರ್ಯಕ್ರಮಗಳಿಗೆಲ್ಲ ಪ್ರಯೋಗಶಾಲೆಯಾಯಿತು.

ಅಹಿಂಸೆ, ಸತ್ಯ, ಯಾವುದಕ್ಕೂ ಆಸೆ ಪಡದಿರುವುದು, ಆಸ್ತಿ ಎಂದು ಏನನ್ನೂ ಉಳಿಸಿಕೊಳ್ಳದಿರುವುದು, ಬ್ರಹ್ಮಚರ್ಯೆ, ದೇಹಶ್ರಮದಿಂದ ಕೆಲಸ ಮಾಡುವುದು, ಭಯವನ್ನು ಬಿಡುವುದು, ಎಲ್ಲ ಧರ್ಮಗಳನ್ನೂ ಸಮಾನ ವಾಗಿ ಕಾಣುವುದು – ಇಂಥ ವ್ರತಗಳನ್ನು ಪಾಲಿಸಿದರು ಆಶ್ರಮವಾಸಿಗಳು.

ವಿನೋಬಾ ತಮ್ಮ ಆಶ್ರಮದಲ್ಲಿ ಮೂಲಶಿಕ್ಷಣದ ತತ್ತ್ವಗಳನ್ನು ರೂಪಿಸಿದರು. ಶಿಕ್ಷಣದಲ್ಲಿ ಶರೀರಶ್ರಮದ ಸ್ಥಾನ ಮುಖ್ಯವಾಗಬೇಕು ; ಕೃಷಿ–ಕೈಗಾರಿಕೆಯೇ ಶಿಕ್ಷಣದ ತಳಹದಿಯಾಗಬೇಕು. ಇವೇ ಆ ತತ್ತ್ವಗಳು.

ಇದು ವರ್ಧಾ ಶಿಕ್ಷಣವೆಂದು ಪ್ರಸಿದ್ಧವಾಗಿದೆ.

1940ರಲ್ಲಿ ಗಾಂಧಿಜಿ ವೈಯಕ್ತಿಕ ಸತ್ಯಾಗ್ರಹಕ್ಕಾಗಿ ಆರಿಸಿಕೊಂಡ ಪ್ರಥಮ ಸತ್ಯಾಗ್ರಹಿ ವಿನೋಬಾ.

ವಿನೋಬಾ ಹೆಸರು ಭಾರತದ ಹಳ್ಳಿ ಹಳ್ಳಿಯಲ್ಲೂ ಮೊಳಗಿದ್ದು, ಸ್ವಾತಂತ್ರ್ಯ ಪ್ರಾಪ್ತಿಯ ಅನಂತರ ಭೂದಾನ ಚಳುವಳಿಯನ್ನು ಅವರು ಪ್ರಾರಂಭಿಸಿದಾಗ. ಸರ್ವೋದಯ ಸಮಾಜ ಸ್ಥಾಪನೆಯ ದಿಕ್ಕಿನಲ್ಲಿ ಭೂದಾನ ಚಳುವಳಿ ಮುಖ್ಯ ಹೆಜ್ಜೆ.

1951ರಲ್ಲಿ ವಿನೋಬಾ ವರ್ಗಕಲಹದಿಂದ ರಕ್ತಮಯವಾಗಿದ್ದ ತೆಲಂಗಾಣದಲ್ಲಿ ಪಾದಯಾತ್ರೆ ಪ್ರಾರಂಭಿಸಿ ಪೋಚಂಪಲ್ಲಿ ಎಂಬ ಹಳ್ಳಿಗೆ ಬಂದರು. ಏಳು ನೂರು ಮನೆ, ಮೂರು ಸಾವಿರ ಜನ, ಹಳ್ಳಿಯಲ್ಲಿರುವ ಹೊಲ ಒಟ್ಟು 1,012 ಹೆಕ್ಟೇರು. ಆದರೆ ಎರಡು ಸಾವಿರ ಜನಕ್ಕೆ ಒಂದು ಸೆಂಟಿಮೀಟರು ಭೂಮಿಯಿಲ್ಲ.

ವಿನೋಬಾರನ್ನು ಹಳ್ಳಿಯ ಹರಿಜನರು ಬೇಡಿದರು : 'ನಮ್ಮದು ಎನ್ನುವ ಹೊಲ ಬೇಕು. ಎಲ್ಲರಿಗೂ ಸೇರಿ 32 ಹೆಕ್ಟೇರು–16 ಹೆಕ್ಟೇರು ತರಿ, 16 ಹೆಕ್ಟೇರು ಖುಷ್ಕಿ ಸಾಕು' ಎಂದರು. ರಾಮಚಂದ್ರ ರೆಡ್ಡಿ ಎಂಬವರು 40 ಹೆಕ್ಟೇರು ಕೊಡಲು ಮುಂದೆ ಬಂದರು.

ಅಂದು 1951ರ ಮಾರ್ಚ್ 18. ವಿನೋಬಾರ ನೇತೃತ್ವದಲ್ಲಿ ರಾಮಚಂದ್ರ ರೆಡ್ಡಿಯಿಂದ ಭೂಮಿ ಇಲ್ಲದವರಿಗೆ ಭೂಮಿ ಕೊಡುವ ಭೂದಾನ ಚಳುವಳಿ ಪ್ರಾರಂಭವಾಯಿತು. ಇಂದಿನವರೆಗೂ ಅದು ನಡೆಯುತ್ತ ಬಂದಿದೆ. ಗಾಳಿ, ಬೆಳಕು, ನೀರು ಇವು ಎಲ್ಲರಿಗೂ ಬೇಕು. ಇವುಗಳಂತೆಯೇ ಭೂಮಿ ಸಹ. ದೇವರು ಕೊಟ್ಟ ನೆಲ ಎಲ್ಲರ ಸ್ವತ್ತು. ಒಬ್ಬ ಜಮೀನುದಾರನಿಗೆ 400 ಹೆಕ್ಟೇರು ಹೊಲ ; ಕೆಲವರದು ಬರಿಗೈ-ಹೀಗೆ ಆಗಬಾರದು. ಸಂಗ್ರಹಿಸುವ ಬಯಕೆ ಬೇಡ. ಉಳ್ಳವರು ಪ್ರೀತಿಯಿಂದ ಇಲ್ಲದವರಿಗೆ ಪಾಲು ಕೊಡದಿದ್ದರೆ ರಕ್ತಪಾತವಾದೀತು. ಹೀಗೆ ವಿನೋಬಾ ಉಪದೇಶಿಸಿದರು, ಎಚ್ಚರಿಸಿದರು. ಮಹತ್ವದ ಅಹಿಂಸಾ ಕ್ರಾಂತಿಯೊಂದನ್ನು ಪ್ರಾರಂಭಿಸಿದರು.

ಬಡವರು, ಶ್ರೀಮಂತರು ಅವರ ಕರೆಗೆ ಓಗೊಟ್ಟಿದ್ದಾರೆ. ತೆಲಂಗಾಣದಲ್ಲಿ ದಾನಬಂದ ಹೊಲ 5,666 ಹೆಕ್ಟೇರು. 1951ರಲ್ಲಿ ವರ್ಧಾದಿಂದ ದೆಹಲಿಗೆ ಎರಡು ತಿಂಗಳ ಪಾದಯಾತ್ರೆ. ದೆಹಲಿ ತಲಪುವ ಹೊತ್ತಿಗೆ 7,285 ಹೆಕ್ಟೇರು ದಾನವಾಗಿ ಸಿಕ್ಕಿತು. ಅನಂತರ ಉತ್ತರ ಪ್ರದೇಶದಲ್ಲಿ 40,470 ಹೆಕ್ಟೇರು. ಬಡವರೂ ಇದರಲ್ಲಿ ಭಾಗವಹಿಸಿದರು. ನೈನಿತಾಲ್‌ನಲ್ಲಿ ಮುದುಕಿಯೊಬ್ಬಳು ರಾತ್ರಿ ವಿನೋಬಾ ಅವರ ಶಿಬಿರಕ್ಕೆ ಬಂದವಳು ಚಳಿಯಲ್ಲಿ ಬೆಳಗಿನವರೆಗೆ ಕಾದು ಅವರಿಗೆ ಒಂದು ಹೊಲ, ಒಂದು ಮನೆ ಅರ್ಪಿಸಿದಳು.

ಮೈಸೂರು ರಾಜ್ಯದಲ್ಲಿಯೂ ಭೂಸಂಗ್ರಹಕ್ಕಾಗಿ ವಿನೋಬಾ 1957ರಲ್ಲಿ ಪಾದಯಾತ್ರೆ ಮಾಡಿದರು.

ಕಾಲ್ನಡಿಗೆಯಲ್ಲೇ ವಿನೋಬಾರ ಭೂದಾನಯಾತ್ರೆ. ದಿನವೂ 15–25 ಕಿಲೊಮೀಟರು ಪ್ರವಾಸ. ಬೆಳಗಿನ ಝಾವ ಮೂರೂ ಕಾಲು ಗಂಟೆಗೆ ಏಳುತ್ತಾರೆ ವಿನೋಬಾ. ನಾಲ್ಕರಿಂದ ಒಂದು ಗಂಟೆ ಪ್ರಾರ್ಥನೆ. ಐದು ಗಂಟೆಗೆ ಪ್ರಯಾಣ. ಮಲಗುವುದು ರಾತ್ರಿ ಒಂಬತ್ತಕ್ಕೆ.

ವಿನೋಬಾ ಸರಳವಾಗಿ ಮನಸ್ಸಿಗೆ ಮುಟ್ಟುವಂತೆ ಮಾತನಾಡುತ್ತಾರೆ. ಬರವಣಿಗೆಯೂ ಅಷ್ಟೇ ಸೊಗಸು. ಗೀತೆಯ ಮೇಲಣ ಅವರ ಪುಸ್ತಕ ಅತ್ಯಂತ ಜನಪ್ರಿಯವಾಗಿದೆ. ವಿನೋಬಾರಿಗೆ ಸಂಗೀತಜ್ಞಾನವೂ ಇದೆ.

ಸಮಾಜ ಸುಧಾರಣೆ ಜನತೆಯಲ್ಲಿನ ಹೃದಯ ಪರಿವರ್ತನೆಯಿಂದ ಸಾಧ್ಯ, ಕಾಯಿದೆ ಕಾನೂನುಗಳಿಂದ ಆಗದಿರುವುದನ್ನು ಹೃದಯ ಪರಿವರ್ತನೆಯಿಂದ ಮಾಡುವುದು ಶಕ್ಯ – ಎಂದು ಗಾಂಧಿಜಿಯವರಂತೆ ನಂಬಿದವರು ವಿನೋಬಾ. ಮಧ್ಯಪ್ರದೇಶದಲ್ಲಿ ದರೋಡೆಕಾರರ ಹಾವಳಿ ಬಹಳ. ಪೋಲೀಸ್ ಪಡೆ ಏನು ಮಾಡಿದರೂ ಅವರನ್ನು ಹತ್ತಿಕ್ಕುವುದು ಸಾಧ್ಯವಾಗಲಿಲ್ಲ. ಆಗ ವಿನೋಬಾ ತಾವೇ ಕಾಲ್ನಡಿಗೆಯಿಂದ ಅರಣ್ಯಮಯ ಪ್ರದೇಶದಲ್ಲಿರುವ ದರೋಡೆಕಾರರ ಸ್ಥಳಗಳಿಗೆ ಭೇಟಿಕೊಟ್ಟು ಅವರಿಗೆ ಬುದ್ಧಿವಾದ ಹೇಳಿದರು.

ವಿನೋಬಾ ಗಾಂಧಿಜಿಯ ಶಿಷ್ಯರಲ್ಲಿ ಅಗ್ರಗಣ್ಯರು. ಅವರ ವಿಚಾರಗಳನ್ನು ಆಚಾರದಲ್ಲಿ ತಂದವರಲ್ಲಿಯೂ ಅವರು ಶ್ರೇಷ್ಠರು.

ನೋಡಿ : ಸರ್ವೋದಯ

## ವಿಮಾನ

ಬೆಳಗಿನ ಕಾಫಿ ದೆಹಲಿಯಲ್ಲಿ, ಮಧ್ಯಾಹ್ನ ಊಟ ಲಂಡನಿನಲ್ಲಿ, ರಾತ್ರಿಯ ಭೋಜನ ವಾಷಿಂಗ್ಟನ್‌ನಲ್ಲಿ ! ಅಸಾಧ್ಯವೇನಲ್ಲ.

ಮನುಷ್ಯನಿಗೆ ಇಂದು ದೂರವೆನ್ನುವುದು ಲೆಕ್ಕವೇ ಇಲ್ಲ.

ದೂರವನ್ನು ಹೀಗೆ ಗೆದ್ದಿರುವ ಒಂದು ಸಾಧನ ವಿಮಾನ.

ಸಾಗರ, ಮರುಭೂಮಿಗಳ ಗಣನೆ ಇಲ್ಲ ಇದಕ್ಕೆ. ಗೌರೀಶಂಕರ ಶಿಖರದ ಮೇಲೂ ವಿಮಾನ ಹಾರಿದೆ.

1947 ರ ಚಳಿಗಾಲ ; ಪಾಕಿಸ್ತಾನದ ಪ್ರಚೋದನೆಯಿಂದ ಸಶಸ್ತ್ರ ಗುಂಪುಗಳು ಇದ್ದಕ್ಕಿದ್ದಂತೆ ಗಡಿದಾಟಿ ಕಾಶ್ಮೀರಕ್ಕೆ ನುಗ್ಗಿ, ಹಳ್ಳಿಗಳನ್ನು ಲೂಟಿ ಹೊಡೆದು, ಎಲ್ಲೆಲ್ಲೂ ಭಯವನ್ನು ಬಿತ್ತುತ್ತ ನಡೆದುವು ; ಬೆಟ್ಟಕಣಿವೆಗಳಲ್ಲಿ ಸೈನ್ಯ ಸಾಗಿಹೋಗಿ ಕಾಶ್ಮೀರವನ್ನು ರಕ್ಷಿಸುವುದು ಸಾಧ್ಯವಿಲ್ಲ ; ಪ್ರತಿ ಕ್ಷಣವೂ



ಆಗ್ರಾ ಮೇಲ್ಗಡೆ ಎಚ್‌ಎಫ್-24 ವಿಮಾನಗಳು



ಅಲೌಟ್ಟ ಹೆಲಿಕಾಪ್ಟರ್

ದುಃಖ. ಇಂಥ ವಿಷಮ ಸನ್ನಿವೇಶದಲ್ಲಿ ಜಗತ್ತೆಲ್ಲ ಅಚ್ಚರಿಪಡುವಂತೆ ಕ್ಷಿಪ್ರವಾಗಿ ಅಲ್ಲಿಗೆ ಸೈನ್ಯವನ್ನು ಕೊಂಡೊಯ್ದುವು ಭಾರತದ ವೈಮಾನಿಕ ದಳದ ವಿಮಾನಗಳು.

ಒಂದು ದೇಶದ ರಕ್ಷಣೆಯಲ್ಲಿ ವಿಮಾನದ ಪಾತ್ರ ಹಿರಿದು. ನೌಕೆ, ಸೇನೆಗಳಿಗೆ ಇವರ ಒತ್ತಾಸೆಯಿಲ್ಲದೆ ಇಂದಿನ ಯುದ್ಧತಂತ್ರಗಳನ್ನು ಮುಂದುವರಿಸುವುದು ಕಷ್ಟಸಾಧ್ಯ. ವಾಣಿಜ್ಯ, ವ್ಯಾಪಾರ, ವ್ಯವಹಾರಗಳು, ವಿಮಾನವಿಲ್ಲದ ದೇಶಗಳಲ್ಲಿ ಸ್ಥಗಿತಗೊಳ್ಳುತ್ತವೆ. ಮನುಷ್ಯದೇಹದ ನರನಾಡಿಗಳಂತೆ ಇಂದಿನ ವಾಯುಮಾರ್ಗ ಮಾನವ ಜೀವನದ ಮಹತ್ವದ ಪಥವೆನಿಸುತ್ತದೆ.

ಹೀಗೆ ಭೂಮಿಯ ಗುರುತ್ವಾಕರ್ಷಣೆಯನ್ನೂ ಮೀರಿ, ಹಲವಾರು ಟನ್ ತೂಕವಿರುವ ಲೋಹರಾಶಿಯು ಗಾಳಿಯಲ್ಲಿ ಹಾರಾಡುವುದು ಹೇಗೆ? ಇದಕ್ಕೆ ವಿಮಾನದ ಕಥೆಯನ್ನೇ ತಿಳಿದುಕೊಳ್ಳಬೇಕು. ದೇವ ದೇವತೆಗಳಂಥ ಶ್ರೇಷ್ಠ ಜೀವಿಗಳಿಗೆ ಹಾರುವ ಶಕ್ತಿಯಿದೆಯೆಂದು ಮಾನವ ಭಾವಿಸುತ್ತಿದ್ದ. ತಾನೂ ಹಾರುವ ಕನಸು ಕಂಡು ಯಕ್ಷಿಣಿಯ ಸಹಾಯದಿಂದ ಗಾಳಿಯಲ್ಲಿ ವಿಹರಿಸುವ ಸುಂದರ ಕಥೆಗಳನ್ನು ಹೆಣೆಯುತ್ತಿದ್ದ. ರೆಕ್ಕೆಗಳನ್ನು ಕಟ್ಟಿಕೊಂಡು ಹಾರಲು ಯತ್ನಿಸಿದ ಸಾಹಸಿಗರೂ ಇದ್ದರು. ಚೀನದ ಚಕ್ರವರ್ತಿ ಷುನ್ (ಕ್ರಿ. ಪೂ. 2258–08) ಪ್ಯಾರಾಚೂಟ್‌ನಂಥ ಸಾಧನದಿಂದ ಕೆಳಗೆ ಹಾರಲು ಪ್ರಯತ್ನಿಸಿದನಂತೆ. ಇದೇ ರೀತಿ ಕ್ರಿ. ಪೂ. 852 ರಲ್ಲಿ ಗ್ರೀಕ್ ರಾಜಕುಮಾರನೊಬ್ಬನೂ ಯತ್ನಿಸಿದನಂತೆ. ಇಂಗ್ಲಿಷ್ ಸನ್ಯಾಸಿಯೊಬ್ಬ ಹನ್ನೊಂದನೆಯ ಶತಮಾನದಲ್ಲಿ ಮರದ ತೆಳ್ಳನೆಯ ಗರಿಗಳನ್ನು ಮೈಗೆ ಜೋಡಿಸಿಕೊಂಡು ಉನ್ನತ ಸ್ಥಳದಿಂದ ಕೆಳಗೆ ಹಾರಿದನೆಂದು ಹೇಳಲಾಗಿದೆ. ಹದಿಮೂರನೆಯ ಶತಮಾನದಲ್ಲಿ ರೋಜರ್ ಬೇಕನ್ ಎಂಬ ವಿಜ್ಞಾನಿ, ಗಂಟೆಗೆ 160 ಕಿ.ಮೀ. ಗಳ ವೇಗದಲ್ಲಿ ಹಾರಾಡಿ ಪ್ರಪಂಚದ ಮೂಲೆಮೂಲೆಯನ್ನು ಮಾನವ ತಲುಪುವನೆಂದು ಭವಿಷ್ಯ ಹೇಳಿದ್ದ. ಆದರೆ ಅದು ಕಾರ್ಯರೂಪಕ್ಕೆ ಬರಲು ಏಳು ನೂರು ವರ್ಷ ಹಿಡಿಯಿತು. ಹದಿನೈದನೆಯ ಶತಮಾನದಲ್ಲಿದ್ದ ಸುಪ್ರಸಿದ್ಧ ಚಿತ್ರಗಾರ ಲಿಯೊನಾರ್ಡೊ ದ ವಿಂಚಿ ಹಾರಾಟದ ತತ್ತ್ವಗಳ ಬಗೆಗೆ ಪ್ರಬಂಧಗಳನ್ನು ಬರೆದು ಹೆಲಿಕಾಪ್ಟರಿನ ಮಾದರಿಯನ್ನು ಕೂಡ ರಚಿಸಿದ್ದ.

ಮಾನವ ವಿಮಾನವನ್ನು ಮಾಡುವುದಕ್ಕೆ ಮೊದಲು ಸುಮಾರು 200 ವರ್ಷಗಳ ಕಾಲ ಹಾರುವ [illegible] ಆಕಾಶಬುಟ್ಟಿ ಜೀವಕೊಟ್ಟಿತು

ಇವು ಸಾಧಾರಣವಾಗಿ ಗಾಳಿಗಿಂತ ಹಗುರವಾದ ನೌಕೆಗಳಂತೆ ವರ್ತಿಸುತ್ತಿದ್ದುವು. ಬಿಸಿಗಾಳಿ, ಇಲ್ಲವೆ ಹಗುರವಾದ ಕೆಲವು ವಿಶೇಷ ಅನಿಲಗಳನ್ನು ತುಂಬಿಕೊಂಡು ಬೆಲೂನಿನಂಥ ದೈತ್ಯ ಆಕಾರಕ್ಕೆ ಪ್ರಯಾಣಿಕರು ಕೂಡುವ ಬುಟ್ಟಿಯನ್ನು ಬಿಗಿದು ಮೇಲಕ್ಕೆ ಕಳುಹಿಸಲಾಗುತ್ತಿದ್ದಿತು.

ವಿಮಾನದ ಜನಕನೆಂದು ಹೆಸರಾದವನು ಸರ್ ಜಾರ್ಜ್ ಕೇಲಿ (ಹದಿನೆಂಟನೆಯ ಶತಮಾನ). ಆತನಿಗೆ ವಿಮಾನದ ಕಲ್ಪನೆ ಹೇಗೆ ಹುಟ್ಟಿತು ?

ಗಾಳಿಪಟ ಹಾರಾಡುವಾಗ ಗಾಳಿಯ ಮೇಲ್ಮುಖವಾದ ಒತ್ತಡ, ಪಟ ಕೆಳಗೆ ಬೀಳದಂತೆ ತಡೆಯುತ್ತದೆ. ಗಾಳಿಗೆ ಬಿಡುವ ಮೊದಲು ಪಟವನ್ನು ಅಷ್ಟು ದೂರ ಹಿಡಿದುಕೊಂಡು ಓಡಿ ಮೇಲಕ್ಕೆ ತಳ್ಳುವುದು ಪದ್ಧತಿ. ಹೀಗೆ ಗಾಳಿಯನ್ನು ಸೀಳಿದಾಗ, ಪಟದ ಕೆಳಗಣ ಗಾಳಿ ಅದನ್ನು ಮೇಲೆತ್ತುತ್ತದೆ. ಈ ವಿಧವಾಗಿ ಪಟ ಹಾರುವುದರಲ್ಲಿ ಎರಡು ಕ್ರಿಯೆಗಳಿವೆ–ಪ್ರತಿಬಂಧಕ ಹಾಗೂ ಒತ್ತುವ ಕ್ರಿಯೆಗಳು. ಭೂಮಿಯಿಂದ ಮೇಲೇಳುವಾಗ ಉಂಟಾಗುವುದೇ ಗಾಳಿಯ ಪ್ರತಿಬಂಧಕ ಕ್ರಿಯೆ. ಗಾಳಿಯಲ್ಲಿ ಮುಂದುವರಿಯುವಾಗ ಉಂಟಾಗುವುದು ಗಾಳಿಯ ಒತ್ತುವ ಕ್ರಿಯೆ. ಒತ್ತುವುದು ಹೆಚ್ಚಾಗಿ, ಪ್ರತಿಬಂಧಕ ಕ್ರಿಯೆ ತಗ್ಗುವಂತೆ ಕೇಲಿ ಪರಿಣಾಮಕಾರಿ ಪ್ರಯೋಗಗಳನ್ನು ಮಾಡಿದ. ವಿಶಿಷ್ಟರೂಪದ ರೆಕ್ಕೆಗಳನ್ನು ಎಂಜಿನಿಲ್ಲದ ವಿಮಾನ–ಗ್ಲೈಡರಿಗೆ–ಜೋಡಿಸಿದ.

ಮುಂದೆ ವಿಲಿಯಂ ಹೆನ್ಸನ್ ಮತ್ತು ಜಾನ್ ಸ್ಟ್ರಿಂಗ್‌ಫೆಲೊ ಎಂಬ ಇಬ್ಬರು ಬ್ರಿಟಿಷ್ ಇಂಜಿನಿಯರರು ಗ್ಲೈಡರ್‌ಗಳಿಗೆ ಎಂಜಿನುಗಳನ್ನು ಜೋಡಿಸಿ ಆಕಾಶದಲ್ಲಿ ಹಾರಿಸಲು ಪ್ರಯತ್ನಿಸಿದರು. ಆದರೂ ಈ ವಿಮಾನಗಳು ತೂಗಿ ಓಲಾಡಿ ಬೀಳುತ್ತಿದ್ದುವು. ಕಳೆದ ಶತಮಾನದಲ್ಲಿ ಫ್ರೆಂಚ್ ದೇಶದ ಅಲ್ಫಾನ್ಸೊ ಪೆನೊ ದೋಷಗಳನ್ನು ಸರಿಪಡಿಸಿದ. ತನ್ನದೇ ಚೈತನ್ಯದಿಂದ ಹಾರಾಡುವ ವಿಮಾನವನ್ನು ಯಶಸ್ವಿಯಾಗಿ ಹಾರಿಸಿದವರೆಂದರೆ ಅಮೆರಿಕದ ರೈಟ್ ಸಹೋದರರು. ಇವರು ಉಪಯೋಗಿಸಿದ ಚೈತನ್ಯ ಮೂಲ ವಿದ್ಯುಚ್ಛಕ್ತಿ. 1903 ಡಿಸೆಂಬರ್ 17 ವಿಮಾನ ಹಾರಾಟದಲ್ಲಿ ಚರಿತ್ರಾರ್ಹ ದಿನ. ಅಂದು 250 ಮೀಟರು ದೂರವನ್ನು ತನ್ನದೇ ಚೈತನ್ಯದಿಂದ ವಿಮಾನ ಕ್ರಮಿಸಿತು. ಈ ವಿಮಾನವನ್ನು ಹಾರಿಸಿದವರು ರೈಟ್ ಸಹೋದರರು.

ವಿಮಾನದಲ್ಲಿ ಹಲವಾರು ಬಗೆಗಳಿವೆ. ಒಂದೇ ಆಸನವುಳ್ಳ ಖಾಸಗಿ ಯಂತ್ರಗಳಿಂದ ಹಿಡಿದು, ಬಾಂಬು ಹೊತ್ತುತರುವ, ಅನೇಕ ಎಂಜಿನ್ನುಗಳಿರುವ ನೂರಾರು ಪ್ರಯಾಣಿಕರನ್ನು ಹೊರುವ ವಿಮಾನಗಳವರೆಗೆ ವಿವಿಧ ರೀತಿಯ ವಿಮಾನಗಳಿವೆ. ಶಬ್ದದ ವೇಗವನ್ನು ಮೀರುವ ವಿಮಾನಗಳಿವೆ. ಲಾರಿಗಳು, ಟ್ಯಾಂಕುಗಳನ್ನು ಹೊರಬಹುದಾದ ವಿಮಾನಗಳಿವೆ. ಇವೆಲ್ಲವುಗಳಿಗೂ ಒಂದು ಸಾಧಾರಣವಾದ ರಚನೆಯನ್ನು ಅನುಸರಿಸಿರುತ್ತಾರೆ. ಸಾಧಾರಣ ರಚನೆಯ ಮುಖ್ಯ ವಿಭಾಗಗಳೆಂದರೆ ವಿಮಾನದ ಮೈಕಟ್ಟು, ರೆಕ್ಕೆಗಳು, ವಿಮಾನದ ಹಿಂಚೂಣಿ, ತಳಕಟ್ಟು ಮತ್ತು ಎಂಜಿನ್ನುಗಳು. ಈ ಸಾಧಾರಣ ರಚನೆಗೆ ಹೋಲದಿರುವ ಹಲವು ವಿಶೇಷ ರಚನೆಗಳುಂಟು. ಪ್ರೊಪೆಲರುಗಳಿಲ್ಲದೆ ಗಾಳಿಯ ಸೆಳೆತ ಒತ್ತಡಗಳನ್ನೇ ಉಪಯೋಗಿಸಿ ಏರುವ ವಿಮಾನಗಳುಂಟು. ಇವುಗಳನ್ನು ಜೆಟ್ ವಿಮಾನಗಳೆನ್ನುತ್ತಾರೆ.

ಎಂಜಿನ್ ವಿಮಾನಗಳು ಬಳಕೆಗೆ ಬಂದ ಕಾಲ ಬಹಳ ಉತ್ಸಾಹಕಾರೀ ಅಧ್ಯಾಯವೆನ್ನಬಹುದು. ವಿಮಾನಗಳ ಹಾರಾಟ ಸ್ಪರ್ಧೆಗಳೇನು! ವಿಮಾನ ನೋಡಲು ಜನರ ಕಾತರವೇನು ! ರೈಟ್ ಸಹೋದರರು ವಿಮಾನದಲ್ಲಿ ಅನೇಕ ಬಾರಿ ಹಾರಾಡಿದರು. ಫ್ರಾನ್ಸಿನವರು 1908ರಿಂದ 1914ರ ವರೆಗೆ

ವಿಮಾನ ಹಾರಾಟದ ಬಹಳಮಟ್ಟಿನ ವಿಕ್ರಮವನ್ನು ಸ್ಥಾಪಿಸಿದರು. ಈ ಕಾಲದಲ್ಲಿ ಹಾರಾಟ ಒಂದು ಕ್ರೀಡೆಯಂತೆ ಅಭಿವೃದ್ಧಿಗೊಂಡಿತು. ಹಲವಾರು ಖಾಸಗಿ ಉದ್ಯಮಗಳು ಬಹುಮಾನಗಳನ್ನು ಪ್ರಕಟಿಸಿದುವು.

1914ರಲ್ಲಿ ಆರಂಭವಾದ ಮೊದಲ ಜಾಗತಿಕ ಯುದ್ಧದಲ್ಲಿ ವಿಮಾನ ದಾಳಿಯೂ ನಡೆಯಿತು. ಇದಕ್ಕಾಗಿ ಸುಧಾರಿಸಿದ ವಿಮಾನಗಳು ಹೊಸ ಹೊಸ ಉಪಕರಣಗಳನ್ನು ಹೊತ್ತು ಹಾರಾಡಿದುವು. ಯುದ್ಧದಲ್ಲಿ ವಿಮಾನದ ಮಹತ್ವವನ್ನು ಅರಿತ ರಾಷ್ಟ್ರಗಳು ವಿಮಾನಗಳನ್ನು ಹೆಚ್ಚಿಸಿಕೊಳ್ಳಲು ವಿಶೇಷ ಗಮನ ಕೊಟ್ಟುವು. 1910ರಲ್ಲಿ ಗಂಟೆಗೆ 106.5 ಕಿಲೊಮೀಟರು ದೂರ ಹಾರಿದ ವಿಮಾನ, 1920ರಲ್ಲಿ 313 ಕಿಲೊಮೀಟರು ಹಾರಿತು. 1927ರ ವೇಳೆಗೆ ಯೂರೊಪಿನಿಂದ ಆಸ್ಟ್ರೇಲಿಯ, ಭಾರತ, ಆಫ್ರಿಕ, ಚೀನ ಹಾಗೂ ಮತ್ತಿತರ ಭಾಗಗಳಿಗೆ ವಿಮಾನಗಳು ಹಾರಾಡಿದುವು. ಸ್ತ್ರೀಯರು, ಪುರುಷರು ಈ ವಿಮಾನಗಳನ್ನು ನಡೆಸಿದರು. ಈ ಕಾಲದಲ್ಲಿ ಅಮೆರಿಕದ ಸಂಯುಕ್ತ ಸಂಸ್ಥಾನ ಮುಖ್ಯವಾಗಿ ಇದರಲ್ಲಿ ಆಸಕ್ತಿ ತಳೆಯಿತು. 1927ರಲ್ಲಿ ಚಾರ್ಲ್ಸ್ ಲಿಂಡ್‌ಬರ್ಗ್ ಮೂವತ್ತಮೂರೂವರೆ ಗಂಟೆ ಕಾಲ ಸತತವಾಗಿ ಹಾರಿ ವಿಮಾನದಲ್ಲಿ ಅಟ್ಲಾಂಟಿಕ್ ಸಾಗರವನ್ನು ದಾಟಿದ ವೀರನೆನಿಸಿದ.

ಎರಡನೆಯ ಮಹಾಯುದ್ಧದಲ್ಲಿ ವಿಮಾನ ಬಹುಮಟ್ಟಿಗೆ ಮುಂದುವರಿಯಿತು. ಈ ವೇಳೆಗಾಗಲೇ ಹೆಲಿಕಾಪ್ಟರ್, ಆಟೊಗೈರೋ ಎಂಬ ವಿಶೇಷ ರೀತಿಯ ವಿಮಾನಗಳು ಬಳಕೆಯಲ್ಲಿದ್ದುವು. ಎರಡನೆಯ ಮಹಾಯುದ್ಧದ ಒಂದು ಮುಖ್ಯ ಅಂಶವೆಂದರೆ, ವಿಮಾನವನ್ನು ಹೊತ್ತ ನೌಕೆಗಳು ಸಮುದ್ರ ಮಧ್ಯದಲ್ಲಿ ವೈರಿಯನ್ನು ಎದುರಿಸಬೇಕಾದ ಸ್ಥಳಗಳಿಗೆ ವಿಮಾನಗಳನ್ನು ಕಳುಹಿಸುತ್ತಿದ್ದುದು. ಸಾಧಾರಣ ವಿಮಾನಗಳು ಹಾರಲಾರದಂಥ ಇಕ್ಕಟ್ಟಾದ ಜಾಗಗಳಲ್ಲಿ ಹೆಲಿಕಾಪ್ಟರ್ ವಿಮಾನಗಳು ಹಾರಿ ಸೈನಿಕರಿಗೆ ಬಟ್ಟೆ ಆಹಾರಗಳನ್ನು ಪೂರೈಸುತ್ತಿದ್ದುವು. ಇದೇ ಕಾಲದಲ್ಲಿ ಕ್ಷಿಪಣಿಗಳು ಬಳಕೆಗೆ ಬಂದುವು. ಎರಡನೆಯ ಮಹಾಯುದ್ಧದ ಅನಂತರ ಪ್ರಯಾಣಿಕ ವಿಮಾನಗಳ ಸಂಖ್ಯೆ ಅನೇಕ ಪಟ್ಟು ಹೆಚ್ಚಾಯಿತು. ವಿಮಾನದ ತೂಕವೂ ವೃದ್ಧಿಗೊಂಡಿತು. ಸಾಗಿಸುವ ಸಾಮಾನಿನ ಹೊರೆಯೂ ಹೆಚ್ಚಿತು.

ವಿಮಾನ ಹಾರಾಟ ಮೊದಲಾದಂದಿನಿಂದ ಅವುಗಳಿಗೆ ಪ್ರತ್ಯೇಕ ಹೆಸರಿಡುವುದು ಪದ್ಧತಿ. ಈಗ ಬೋಯಿಂಗ್ ಎಂಬುದು ಅತ್ಯಂತ ಆಧುನಿಕ ಹಾಗೂ ವೇಗವಾದ ವಿಮಾನವೆಂದು ಪರಿಗಣಿಸಲ್ಪಟ್ಟಿದೆ. ಹಿಂದೆ ವೈಕೌಂಟ್, ಕಾಮೆಟ್ ಎಂಬ ವಿಮಾನಗಳಿದ್ದುವು. ಕಾರ್‌ವೆಲ್ ಎಂಬುದು ಅನೇಕರಿಗೆ ಪರಿಚಿತವಿರುವ ಹೆಸರು.

ಗಂಟೆಗೆ ನೂರಾರು ಕಿಲೊಮೀಟರುಗಳಿದ್ದ ವಿಮಾನದ ವೇಗ ಈಗ ಸಾವಿರಾರು ಕಿಲೊಮೀಟರು ತಲಪಿದೆ. 1960ರಲ್ಲಿ ಪ್ರಾಯೋಗಿಕವಾಗಿ X—15 ಎಂಬ ವಿಮಾನ ಗಂಟೆಗೆ 3,218 ಕಿಲೊಮೀಟರು ವೇಗವನ್ನು ಸಾಧಿಸಿತು.

ಭಾರತದಲ್ಲಿ ಮನುಷ್ಯ ಮೊದಲ ಬಾರಿಗೆ ಹಾರಿದ್ದು 1877ರಲ್ಲಿ. ಮುಂಬಯಿಯ ಉದ್ಯಾನದಿಂದ ಜೋಸೆಫ್ ಲಿನ್ ಎಂಬಾತ ಆಕಾಶಬುಟ್ಟಿಯಲ್ಲಿ 2,287.5 ಮೀಟರು ಎತ್ತರದಲ್ಲಿ ಹಾರಿದನಂತೆ. ಪ್ರಪಂಚದ ಮೊದಲ ವಿಮಾನ ಅಂಚೆ 1911ರಲ್ಲಿ ಭಾರತದಲ್ಲಿ ಆರಂಭವಾಯಿತು. 1927ರಲ್ಲಿ ಪ್ರಯಾಣಿಕ ವಿಮಾನ ಸಂಸ್ಥೆಯೊಂದನ್ನು ಸ್ಥಾಪಿಸಲಾಯಿತು. 1946ರಲ್ಲಿ ಈ ಖಾಸಗಿ ಸಂಸ್ಥೆ ಸಾರ್ವಜನಿಕ ಸಂಸ್ಥೆಯಾಗಿ ಮಾರ್ಪಟ್ಟಿತು. ಇಂದು ಭಾರತದಲ್ಲಿ ಒಳನಾಡು ಮತ್ತು ಅಂತರರಾಷ್ಟ್ರೀಯ ಮಟ್ಟಗಳಿಗೆಂದು ಎರಡು ವಾಯುಮಾರ್ಗ ಸಂಸ್ಥೆಗಳಿವೆ. ವಿಮಾನ ಹಾರಾಟದ ಹವ್ಯಾಸಿಗಳಿಗೆ ಕ್ಲಬ್‌ಗಳಿವೆ. ಎಂಬತ್ತೈದು ಒಳನಾಡು ಮಾರ್ಗದ ವಿಮಾನ ನಿಲ್ದಾಣಗಳಿವೆ. ಅಂತರರಾಷ್ಟ್ರೀಯ ವಿಮಾನ ನಿಲ್ದಾಣಗಳ ಸಂಖ್ಯೆ ಐದು. ಸರಕಾರಿ ವಲಯದಲ್ಲಿ, ಭಾರತದ ಆರು ಕೇಂದ್ರಗಳಲ್ಲಿ ಹಿಂದೂಸ್ಥಾನ್ ಏರೊನಾಟಿಕ್ಸ್ ಸಂಸ್ಥೆಯ ಶಾಖೆಗಳಲ್ಲಿ ಬೇರೆ ಬೇರೆ ಬಗೆಯ ವಿಮಾನಗಳು ತಯಾರಾಗುತ್ತವೆ, ಈ ಸಂಸ್ಥೆಯ ಕೇಂದ್ರ ಕಚೇರಿ ಬೆಂಗಳೂರಿನಲ್ಲಿದೆ.

ನೋಡಿ : ಲಿಂಡ್‌ಬರ್ಗ್. ಚಾರ್ಲ್ಸ್

## ವಿಮೆ

ಒಬ್ಬ ವ್ಯಾಪಾರಿ ಹಲವು ವರ್ಷ ಕಷ್ಟಪಟ್ಟು ವ್ಯಾಪಾರ ಬೆಳೆಸಿರುತ್ತಾನೆ. ಇದ್ದಕ್ಕಿದ್ದಂತೆ ಅಂಗಡಿಗೆ ಬೆಂಕಿ ಬೀಳುತ್ತದೆ. ಸಾಮಗ್ರಿ ಎಲ್ಲ ನಾಶವಾಗುತ್ತದೆ. ಈ ಒಂದು ಆಕಸ್ಮಿಕದಿಂದ ಅವನ ಮತ್ತು ಅವನ ಸಂಸಾರದ ಭವಿಷ್ಯವೇ ಹಾಳು.

ಯಜಮಾನ ಕಷ್ಟಪಟ್ಟು ಕೆಲಸ ಮಾಡಿ ಹಣ ಸಂಪಾದಿಸಿ ಸಂಸಾರವನ್ನು ನಡೆಸಿಕೊಂಡು ಹೋಗುತ್ತಿರುತ್ತಾನೆ. ಇದ್ದಕ್ಕಿದ್ದಂತೆ ಕಾಯಿಲೆ ಬಂದು ಸಾಯುತ್ತಾನೆ. ಸಂಸಾರ ಮುಳುಗಿಹೋಗುತ್ತದೆ.

ಜೀವನದಲ್ಲಿ ಆಕಸ್ಮಿಕಗಳಿಂದ ದೊಡ್ಡ ಆಘಾತ ಒದಗಬಹುದು. ಒಬ್ಬ ವ್ಯಕ್ತಿಯ ಮರಣದಿಂದ ಒಂದು ಸಂಸಾರದ ಜೀವನವೇ ನುಚ್ಚುನೂರಾಗಬಹುದು. ಇಂಥ ಪರಿಣಾಮವನ್ನು ತಡೆಗಟ್ಟುವ ಸಾಧನ ವಿಮೆ.

ವ್ಯಾಪಾರಿ ವಿಮೆ ಮಾಡಬಹುದು. ವಿಮಾ ಸಂಸ್ಥೆ ನಿರ್ಧರಿಸಿದಂತೆ ಕಂತುಗಳನ್ನು ಸಲ್ಲಿಸುತ್ತಿರಬೇಕು. ಆಕಸ್ಮಿಕವಾಗಿ ಅಂಗಡಿ ಸುಟ್ಟುಹೋದರೆ, ವಿಮೆ ಮಾಡಿದಷ್ಟು ಹಣವನ್ನು ಕೊಡುತ್ತಾರೆ. ಹಣ ಗಳಿಸುವವನು ವಿಮೆ ಮಾಡಿ ಕಂತುಗಳನ್ನು ಕಟ್ಟುತ್ತಿದ್ದರೆ, ಅವನು ಸತ್ತಾಗ ಅವನ ಸಂಸಾರದವರಿಗೆ ವಿಮೆಯ ಹಣ ಕೊಡುತ್ತಾರೆ. ವೈಯಕ್ತಿಕ ಆಕಸ್ಮಿಕದ ವಿಮೆ ಮಾಡಿದ್ದರೆ ಅಪಘಾತವಾದರೆ ಹಣ ಕೊಡುತ್ತಾರೆ.

ಮನುಷ್ಯನ ಜೀವನ ಯಾವಾಗಲೂ ಸುಗಮವಾಗಿರುವುದಿಲ್ಲ. ಪ್ರತಿಯೊಂದು ವ್ಯವಹಾರದಲ್ಲೂ ಮನುಷ್ಯ ಕಷ್ಟನಷ್ಟಗಳನ್ನು ಅನುಭವಿಸಬೇಕಾಗುತ್ತದೆ. ಜೀವನದಲ್ಲಿ ಉಂಟಾಗುವ ಕಷ್ಟನಷ್ಟಗಳನ್ನು ಎದುರಿಸಲು ಕಲ್ಪಿಸಿರುವ ಸಾಧನಗಳಲ್ಲಿ ವಿಮೆಯೂ ಒಂದು. ಕೋಟ್ಯಂತರ ಜನರ ಜೀವನದಲ್ಲಿ ಒಂದು ಸರಾಸರಿ ಸೂತ್ರ ಕಂಡುಬರುತ್ತದೆ. ಈ ಸರಾಸರಿ ಸೂತ್ರದ ತಳಹದಿಯ ಮೇಲೆ ವಿಮಾಶಾಸ್ತ್ರವನ್ನು ಬೆಳೆಸಲಾಗಿದೆ. ವಿಮೆಯ ನೆರವು ಬೇಕಾಗಿರುವ ಲಕ್ಷಾಂತರ ಜನರಿಂದ ಒಂದು ನಿಗದಿಯಾದ ಕಂತನ್ನು ಕ್ಲುಪ್ತ ಕಾಲದಲ್ಲಿ ವಸೂಲುಮಾಡಿ ಅದರಿಂದ ಬಂದ ಧನವನ್ನು ಕೂಡಿಟ್ಟು ಆ ಧನದಿಂದ ನಷ್ಟಗಳನ್ನು ಅನುಭವಿಸುವವರಿಗೆ ಪರಿಹಾರ ಅಥವಾ ವಿಮಾ ಹಣ ಕೊಡಲಾಗುವುದು.

ವಿಮೆಯ ನೆರವು ಕೊಡುವ ಸಂಸ್ಥೆಗೆ 'ವಿಮಾ ಸಂಸ್ಥೆ' ಎಂದು ಹೆಸರು. ವಿಮೆಯ ರಕ್ಷಣೆ ಪಡೆಯಲು ಒಪ್ಪಂದ ಮಾಡಿಕೊಂಡಿರುವ ಮನುಷ್ಯ ವಿಮೆದಾರ. ಈ ಯೋಜನೆ ವಿಮಾಯೋಜನೆ.

ಬ್ರಿಟಿಷರ ಆಡಳಿತಕ್ಕೆ ಮೊದಲೇ ಭಾರತದಲ್ಲಿ ವಿಮೆಯ ಕಲ್ಪನೆ ಇತ್ತು. ಸುಮಾರು ಎರಡು ಸಾವಿರ ವರ್ಷಗಳಿಂದಲೂ ವಿಮೆಯ ತತ್ತ್ವಗಳು ಒಂದಲ್ಲ ಒಂದು ರೀತಿಯಲ್ಲಿ ಆಚರಣೆಯಲ್ಲಿದ್ದುವು ಎನ್ನಬಹುದು. ಅಶೋಕ ಚಕ್ರವರ್ತಿಯ ಕಾಲದ ಶಿಲಾಶಾಸನಗಳಿಂದ ಇದು ತಿಳಿಯುತ್ತದೆ. ಆಗಿನ

ಕಾಲದಲ್ಲಿ ಪ್ರತಿಯೊಂದು ಹಳ್ಳಿಯಲ್ಲಿಯೂ ಒಂದು ಆಪದ್ಧನ ಕೂಡಿಡುತ್ತಿದ್ದರು. ಮತ್ತು ಕಷ್ಟಕ್ಕೊಳಗಾದ ಜನರಿಗೆ ಹೀಗೆ ಕೂಡಿಟ್ಟ ಆಪದ್ಧನದಿಂದ ಪರಿಹಾರ ದ್ರವ್ಯ ಕೊಡುತ್ತಿದ್ದರು. ಅನಾಥ ಮಕ್ಕಳ ವಿದ್ಯಾಭ್ಯಾಸಕ್ಕೆ, ವಿಧವೆಯರ ಜೀವನಾಂಶಕ್ಕೆ, ಹೆಣ್ಣುಮಕ್ಕಳ ಮದುವೆಗೆ ಧನಸಹಾಯ ಮಾಡುತ್ತಿದ್ದರು. ರೈತಾಪಿ ಜನರು ಮಳೆ ಬೆಳೆ ಇಲ್ಲದೆ ಪಡುವ ಕಷ್ಟನಷ್ಟಗಳ ಪರಿಹಾರಕ್ಕೂ ಧನಸಹಾಯ ಮಾಡುತ್ತಿದ್ದರು. ಬ್ರಿಟಿಷರ ಆಡಳಿತ ನಮ್ಮ ದೇಶದಲ್ಲಿ ಪ್ರಾರಂಭವಾದ ಮೇಲೆ ಪಾಶ್ಚಾತ್ಯ ವಿಮಾಸಂಸ್ಥೆಗಳು ನಮ್ಮ ಜನರಲ್ಲಿ ಆಧುನಿಕ ವಿಮೆಯ ತತ್ತ್ವಗಳನ್ನು ಹರಡಲು ಆರಂಭಿಸಿದುವು. ಭಾರತ ಸ್ವತಂತ್ರ ರಾಷ್ಟ್ರವಾದ ಮೇಲೆ ವಿಮೆಗೆ ಬಹಳ ಉತ್ತೇಜನ ದೊರೆಯಿತು.

1956ನೆಯ ಇಸವಿಯಲ್ಲಿ ಜೀವವಿಮೆಯನ್ನು ರಾಷ್ಟ್ರೀಕರಣ ಮಾಡಲಾಯಿತು.

ವಿಮೆಯಲ್ಲಿ ಹಲವಾರು ಶಾಖೆಗಳಿವೆ. ಜೀವವಿಮೆ, ಬೆಂಕಿವಿಮೆ, ಸಮುದ್ರಯಾನವಿಮೆ, ಆಕಾಶಯಾನವಿಮೆ, ಆಕಸ್ಮಿಕಗಳವಿಮೆ ಮತ್ತು ಸಮಾಜಕಲ್ಯಾಣವಿಮೆ –ಇವು ವಿಮಾ ಶಾಖೆಗಳು. ನಾಗರಿಕತೆ ಪ್ರಗತಿ ಹೊಂದಿದಂತೆ ವಿಮಾ ಸಂಸ್ಥೆಯ ಕಾರ್ಯಕಲಾಪಗಳೂ ವಿಮಾ ಶಾಖೆಗಳೂ ಹೆಚ್ಚಾಗುತ್ತಿವೆ.

ಅಮೆರಿಕ ಮತ್ತು ಇತರ ಮುಂದುವರಿದಿರುವ ಪಾಶ್ಚಾತ್ಯ ದೇಶಗಳಲ್ಲಿ ಚಲನಚಿತ್ರ ನಟನಟಿಯರು ಆಕಸ್ಮಿಕವಾಗಿ ತಮ್ಮ ಅವಯವಗಳಿಗೆ ಸಂಭವಿಸಬಹುದಾದ ನಷ್ಟಗಳಿಗೆ ವಿಮೆಯ ಒಪ್ಪಂದಗಳಿಂದ ಪರಿಹಾರ ಪಡೆಯುತ್ತಾರೆ. ಈಗ ತಯಾರಿಸುತ್ತಿರುವ ಜಲಜನಕ ಮತ್ತು ಪರಮಾಣು ಶಸ್ತ್ರಗಳಿಂದ ಮನುಷ್ಯನಿಗೆ ಸಂಬಂಧಿಸಬಹುದಾದ ನಷ್ಟಗಳನ್ನು ಕೂಡ ಪರಿಹರಿಸುವುದಕ್ಕೆ ವಿಮಾಶಾಸ್ತ್ರಜ್ಞರು ಪ್ರಯತ್ನಪಡುತ್ತಿದ್ದಾರೆ.

ಜೀವವಿಮೆಯಿಂದ ಒಬ್ಬ ಮನುಷ್ಯನು ತನ್ನ ವೃದ್ಧಾಪ್ಯದಲ್ಲಿ ವಿಶ್ರಾಂತಿ ಪಡೆಯುವ ಕಾಲದಲ್ಲಿ ತನಗೂ ತಾನು ಮರಣಹೊಂದಿದರೆ ತನ್ನ ಕುಟುಂಬಕ್ಕೂ ಒಂದು ಆಧಾರವನ್ನು ಉಂಟುಮಾಡಬಹುದು. ಇದೂ ಅಲ್ಲದೆ ಮಕ್ಕಳ ವಿದ್ಯಾಭ್ಯಾಸ, ಹೆಣ್ಣು ಮಕ್ಕಳ ವಿವಾಹ, ಆಶ್ರಿತರಿಗೆ ವರಮಾನ ಮೊದಲಾದ ಅನೇಕ ನೆರವುಗಳನ್ನು ಕಲ್ಪಿಸಬಹುದು.

ಜೀವವಿಮೆ ಇಂದಿನ ಜನಜೀವನದಲ್ಲಿ ಮಹತ್ವದ ಪಾತ್ರ ವಹಿಸುತ್ತದೆ.

ಇದು ಮಿತವ್ಯಯವನ್ನು ಕಲ್ಪಿಸುತ್ತದೆ, ಬೆಳೆಸುತ್ತದೆ. ಕುಟುಂಬ ರಕ್ಷಣೆಗೆ ಸಹಾಯವಾಗುತ್ತದೆ. ವೃದ್ಧಾಪ್ಯ ಪೋಷಣೆಗೆ, ಅಕಾಲಮೃತ್ಯುವಿನಿಂದ ಉಂಟಾಗುವ ಕಷ್ಟಗಳಿಂದ ಪಾರಾಗುವುದಕ್ಕೆ, ಮಕ್ಕಳ ಪೋಷಣೆ, ವಿದ್ಯಾಭ್ಯಾಸ, ಮದುವೆ ಮುಂತಾದ ಖರ್ಚುಗಳಿಗೆ ಹಣವನ್ನು ಕೂಡಿಡುವುದಕ್ಕೆ ಸಹಾಯವಾಗುತ್ತದೆ. ಗೃಹನಿರ್ಮಾಣ ಕಾರ್ಯದಲ್ಲೂ ವಿಮಾ ಸಂಸ್ಥೆಯಿಂದ ಸಹಾಯ ದೊರೆಯುತ್ತದೆ.

ವಾಣಿಜ್ಯ ಮತ್ತು ಕೈಗಾರಿಕೆಗಳಿಗೆ ಧನಸಹಾಯವಾಗುತ್ತದೆ.

ಬೆಂಕಿ ಅನಾಹುತಗಳಿಂದ ಆಗುವ ನಷ್ಟಗಳಿಗೆ ಪರಿಹಾರ ಕೊಡಲು ಬೆಂಕಿ ವಿಮಾ ಯೋಜನೆಗಳಿವೆ.

ಸಾಮಾನ್ಯವಾಗಿ ಹಡಗುಗಳಿಗೆ, ಹಡಗಿನಲ್ಲಿ ಪ್ರಯಾಣಮಾಡುವವರಿಗೆ, ಚಾಲಕರಿಗೆ, ಹಡಗಿನಲ್ಲಿ ಸಾಗಿಸಲ್ಪಡುವ ಪದಾರ್ಥಗಳಿಗೆ ಉಂಟಾಗುವ ನಷ್ಟಗಳಿಗೆ ಪರಿಹಾರವನ್ನು ಒದಗಿಸಲು ಸಮುದ್ರಯಾನ ವಿಮೆ ಉಂಟು.

ದೇಶದ ಪ್ರಗತಿಗೆ ವಿಮೆಯ ನೆರವು ಅತ್ಯಂತ ಮುಖ್ಯ.

## ವಿಯೆಟ್ನಾಮ್

ಭಾರತದ ಪಶ್ಚಿಮ ತೀರಕ್ಕೆ ಎದುರಾದ ಮಲಯ ಕಾಂಬೋಡಿಯ ದೇಶಗಳ ಆಚೆಬದಿಯ ರಾಷ್ಟ್ರ ವಿಯೆಟ್ನಾಮ್. ಆಂಗ್ಲ ವರ್ಣಮಾಲೆಯ S ಅಕ್ಷರದಂತೆ ಹಬ್ಬಿರುವ ಈ ದೇಶಕ್ಕೆ 2,253 ಕಿ. ಮಿ. ಸಮುದ್ರ ತೀರವಿದೆ. ಉತ್ತರದಿಂದ ದಕ್ಷಿಣಕ್ಕೆ ವಿಯೆಟ್ನಾಮ್ 1,609 ಕಿಲೊಮಿಟರುಗಳಷ್ಟಿದೆ. ಕೆಲವು ಕಡೆ ಪ್ರದೇಶ 40 ಕಿಲೊಮಿಟರಿಗಿಂತ ಕಿರಿದು. 17 ಉತ್ತರ ಅಕ್ಷಾಂಶದ ರೇಖೆಯಿಂದ, ವಿಯೆಟ್ನಾಮಿನಲ್ಲಿ ಉತ್ತರ ಮತ್ತು ದಕ್ಷಿಣ ಎಂದು ಎರಡು ಭಾಗ ಮಾಡಲಾಗಿದೆ. ಉತ್ತರದಲ್ಲಿ ಪ್ರಜಾಸತ್ತಾತ್ಮಕ ಗಣರಾಜ್ಯ, ದಕ್ಷಿಣದಲ್ಲಿ ಗಣರಾಜ್ಯ ಸರಕಾರ. ಉತ್ತರ ವಿಯೆಟ್ನಾಮ್, ಪರ್ವತಮಯವಾದ ನದಿಗಳು ಹರಿಯುವ, ಸುಣ್ಣಕಲ್ಲಿನ ನಿಧಿ ಅಪಾರವಾಗಿರುವ ಪ್ರದೇಶ. ಇಲ್ಲಿನ ಮುಖ್ಯ ನದಿ ಮೇಕಾಂಗ್. ಕರಾವಳಿ ಮುಖಜಭೂಮಿಗಳಿಂದ ಕೂಡಿದೆ. ದಕ್ಷಿಣ ವಿಯೆಟ್ನಾಮ್ ಪರ್ವತಗಳಿಂದಲೂ ಕರಾವಳಿ ಮುಖಜಭೂಮಿಯಿಂದಲೂ ಮತ್ತು ಮೇಕಾಂಗ್ ನದಿಯ ವಿಶಾಲ ಮುಖಜಭೂಮಿಯಿಂದಲೂ ಕೂಡಿದೆ.

ಉಷ್ಣವಲಯದಲ್ಲಿರುವ ವಿಯೆಟ್ನಾಮಿನ ಹವಾಗುಣ ಬಹುಮಟ್ಟಿಗೆ ಬೆಚ್ಚಗೆ. ತೇವ ಹಾಗೂ ಹಿಮಗಳಿಲ್ಲದ ಹವೆಯ ಈ ಪ್ರದೇಶದಲ್ಲಿ ವರ್ಷಕ್ಕೆ ಒಮ್ಮೊಮ್ಮೆ ಮೂರು ಬೆಳೆ ತೆಗೆಯುವ ಅವಕಾಶವೂ ಇದೆ. ಬೇಸಿಗೆಯಲ್ಲಿ ಭಾರಿ ಮಳೆ. ತುಫಾನುಗಾಳಿಯ ಮಳೆ ಜುಲೈನಿಂದ ಅಕ್ಟೋಬರ್ ವರೆಗೆ. ಉತ್ತರದಲ್ಲಿ ಕೆಂಪು ನದಿ, ದಕ್ಷಿಣದಲ್ಲಿ ಮೇಕಾಂಗ್ ನದಿಗಳು ಮೆಕ್ಕಲು ಮಣ್ಣು ತಂದು ಭೂಮಿಯನ್ನು ಫಲವತ್ತಾಗಿಸುತ್ತವೆ. ಇವುಗಳಲ್ಲಿ ಪ್ರವಾಹದ ಹಾವಳಿ ಬಹಳ. ಇತ್ತೀಚೆಗೆ ದೊಡ್ಡ ಅಣೆಕಟ್ಟಿನ ಯೋಜನೆಯಿಂದ, ಪ್ರವಾಹದ ಪೀಡೆಯನ್ನು ತಪ್ಪಿಸುವ ಪ್ರಯತ್ನ ನಡೆದಿದೆ.

ಕ್ರಿಸ್ತ ಶಕಕ್ಕೂ ಮೊದಲೆ ಪ್ರಾರಂಭವಾಗಿ ಇಂದಿನವರೆಗೆ ಬೆಳೆದುಬಂದಿರುವ ವಿಯೆಟ್ನಾಮಿನ ಇತಿಹಾಸ ಯುದ್ಧಕ್ಕೂ ಅಶಾಂತಿ, ಕ್ಷೋಭೆಗಳಿಂದ ತುಂಬಿದೆ. ಕ್ರಿ.ಪೂ. ಮೂರನೆಯ ಶತಮಾನದಿಂದ ಇದು ದಕ್ಷಿಣ ಚೀನದ ಒಂದು ಭಾಗವಾಗಿದ್ದಿತು. ಚೀನೀ ಆಧಿಪತ್ಯದ ಸುಮಾರು ಸಾವಿರ ವರ್ಷಗಳ ಅವಧಿಯಲ್ಲಿ ವಿಯೆಟ್ನಾಮಿಯರು ಕನಿಷ್ಠ ಪಕ್ಷ ಹನ್ನೊಂದು ಬಾರಿ ದಂಗೆ ಎದ್ದಿದ್ದರು. ಹತ್ತನೆಯ ಶತಮಾನದಲ್ಲಿ ವಿಯೆಟ್ನಾಮ್ ಸ್ವತಂತ್ರವಾಯಿತು.

ಹದಿನಾರನೆಯ ಶತಮಾನದಲ್ಲಿ ಪೋರ್ಚುಗೀಸ್ ನಾವಿಕರು ವಿಯೆಟ್ನಾಮಿಗೆ ಬಂದರು. ಅನಂತರ ಧರ್ಮಪ್ರಚಾರಕರು ಆಗಮಿಸಿದರು. 1858ರಲ್ಲಿ ಕನ್‌ಫ್ಯೂಷಿಯಸನ ಮತಕ್ಕೆ ಸೇರಿದ್ದ ವಿಯೆಟ್ನಾಮ್ ಚಕ್ರವರ್ತಿ ಈ ಪ್ರಚಾರಕರನ್ನು ನಾಶಗೊಳಿಸಿದ. ಬಳಿಕ ಫ್ರೆಂಚರು ಅಲ್ಲಿ ವಸಾಹತು ಸ್ಥಾಪಿಸಲು ಯತ್ನಿಸಿದರು. 1883ರ ಹೊತ್ತಿಗೆ ಈಗಿನ ವಿಯೆಟ್ನಾಮ್ ಫ್ರೆಂಚರ ಅಧೀನಕ್ಕೆ ಬಂತು. ಎರಡನೆಯ ಮಹಾಯುದ್ಧದಲ್ಲಿ ಇದು ಜಪಾನಿನ ಆಕ್ರಮಣಕ್ಕೆ ಒಳಪಟ್ಟಿತು. 1941ರಲ್ಲಿ ಹೋ ಚಿ ಮಿನರ ನೇತೃತ್ವದಲ್ಲಿ ವಿಯೆಟ್ನಾಮ್ ಪ್ರಜಾಸತ್ತಾತ್ಮಕ ಗಣರಾಜ್ಯ ಘೋಷಿಸಿತು. 1954ರಲ್ಲಿ ವಿಯೆಟ್ನಾಮ್ ದಕ್ಷಿಣ ಮತ್ತು ಉತ್ತರ ಎಂದು ಪ್ರತ್ಯೇಕಗೊಂಡಿತು. ಅಂದಿನಿಂದ ಇಂದಿನವರೆಗೆ ಪರಸ್ಪರ ವಿರುದ್ಧ ಭಾವನೆಗಳ ತಾಕಲಾಟ ಸಾಗಿದೆ. ಉತ್ತರದಲ್ಲಿ ಕಮ್ಯೂನಿಸ್ಟ್ ರಾಜ್ಯ. ದಕ್ಷಿಣದಲ್ಲಿ ಅಮೆರಿಕ ಸಂಯುಕ್ತ ಸಂಸ್ಥಾನದ ಒತ್ತಾಸೆಯಿರುವ ಗಣರಾಜ್ಯ. 1968ರ ವೇಳೆಗೆ ಐದು ಲಕ್ಷಕ್ಕೂ ಮೀರಿದ ಅಮೆರಿಕದ ಸೇನೆ ದಕ್ಷಿಣ ವಿಯೆಟ್ನಾಮಿನಲ್ಲಿದ್ದಿತು. ಇವರ ಜೊತೆಗೆ

ಆಸ್ಟ್ರೇಲಿಯ, ನ್ಯೂಜಿಲೆಂಡ್, ಕೊರಿಯ, ಮತ್ತಿತರ ಪ್ರದೇಶಗಳಿಂದಲೂ ಹಲವು ಸಾವಿರ ಸಂಖ್ಯೆಯ ಸೇನೆ ನೆಲೆಗೊಂಡಿತು. 1969ರಲ್ಲಿ ಅಮೆರಿಕ ಸಂಯುಕ್ತ ಸಂಸ್ಥಾನದ ಅಧ್ಯಕ್ಷ ಲಿಂಡನ್ ಜಾನ್‌ಸನರ ಯುದ್ಧ ವಿರಾಮದ ಘೋಷಣೆಯ ಅನಂತರ ಆ ದೇಶದ ಪ್ರತಿನಿಧಿಗಳಿಗೂ ವಿಯೆಟ್ನಾಮಿನ ಪ್ರತಿನಿಧಿಗಳಿಗೂ ಪ್ಯಾರಿಸಿನಲ್ಲಿ ಮಾತುಕತೆಗಳು ಪ್ರಾರಂಭವಾದುವು. ಸಂಯುಕ್ತ ಸಂಸ್ಥಾನ ಕ್ರಮ ಕ್ರಮವಾಗಿ ಸೈನ್ಯವನ್ನು ಹಿಂತೆಗೆಯತೊಡಗಿತು.

ವಿಯೆಟ್ನಾಮಿನ ಮುಖ್ಯ ಸಂಪತ್ತು, ಅದರ ಸಮೃದ್ಧ ಮುಖಜಭೂಮಿ ಹಾಗೂ ಬಯಲು ಪ್ರದೇಶಗಳು. ರಬ್ಬರ್ ತೋಟಗಾರಿಕೆ ಈಗ ಇಲ್ಲಿ ವಿಸ್ತಾರಗೊಳ್ಳುತ್ತಿದೆ. ಕಲ್ಲಿದ್ದಲಿನ ನಿಕ್ಷೇಪದ ಜೊತೆಗೆ ಫಾಸ್ಫೇಟು, ಅಂಟಿಮನಿ, ಕ್ರೋಮಿಯಮ್ ಖನಿಜಗಳ ನಿಧಿಯೂ ಸ್ವಲ್ಪಮಟ್ಟಿಗೆ ಇದೆ. ಇಲ್ಲಿನ ಅರಣ್ಯಪ್ರದೇಶ ನಿಬಿಡವಾದದ್ದು. ಬೊಂಬು, ದೇವದಾರು, ನಿತ್ಯ ಹಸಿರು, ಓಕ್‌ನಂಥ ವನ್ಯ ಸಂಪತ್ತಿದೆ. ಅಲ್ಲದೆ ಕೆಂಪು ಮರ, ಕರಿಯ ಮರ, ತೇಗ, ಮಹಾಗನಿಯಂಥ ಅಪೂರ್ವ ವೃಕ್ಷಗಳೂ ಇವೆ. ಆದರೆ ಇವುಗಳ ಪೂರ್ಣ ಉಪಯೋಗ ಇನ್ನೂ ಆಗಿಲ್ಲ.

ಉತ್ತರದಲ್ಲಿ ಅಕ್ಕಿ, ರಬ್ಬರ್ ಹಾಗೂ ಕಲ್ಲಿದ್ದಲು ರಫ್ತಾಗುವ ಮುಖ್ಯ ಉತ್ಪನ್ನಗಳಾದರೆ ದಕ್ಷಿಣದಿಂದ ಕಲ್ಲಿದ್ದಲು ವಿಶೇಷವಾಗಿ ಸಾಗಿಸಲ್ಪಡುತ್ತದೆ. ಕಾಫಿ, ದಾಲಚೀನಿ, ಮೆಣಸು, ಕಬ್ಬು, ತೆಂಗು, ಹೊಗೆಸೊಪ್ಪುಗಳ ಹೆಚ್ಚಿನ ಬೆಳೆಗೆ ಅವಕಾಶವಿದೆ. ವಸಾಹತು ಆಳ್ವಿಕೆಯಿಂದ ಇಲ್ಲಿನ ಕೈಗಾರಿಕೆ ಬಹಳ ಹಿಂದುಳಿದಿತ್ತು. ತನ್ನ ಬೆಳವಣಿಗೆಗೆ ದಕ್ಷಿಣ ವಿಯೆಟ್ನಾಮ್, ಸಂಯುಕ್ತ ಸಂಸ್ಥಾನ ಮತ್ತು ಫ್ರಾನ್ಸ್‌ಗಳಿಂದಲೂ ಉತ್ತರ ವಿಯೆಟ್ನಾಮ್ ರಷ್ಯ ಚೀನಗಳಿಂದಲೂ ಆರ್ಥಿಕ ನೆರವು ಪಡೆದಿವೆ.

**ಉತ್ತರ ವಿಯೆಟ್ನಾಮ್**

| | | |
|---|---|---|
| ಖಂಡ | : | ಏಷ್ಯ (ಆಗ್ನೇಯ) |
| ಅಕ್ಷಾಂಶ | : | 16° 54′ ಉ ದಿಂದ 23° 23′ ಉ |
| ರೇಖಾಂಶ | : | 102° 09′ ಪೂ ದಿಂದ 108° 05′ ಪೂ |
| ವಿಸ್ತೀರ್ಣ | : | 1,64,061 ಚ. ಕಿ. ಮಿ. |
| ಜನಸಂಖ್ಯೆ | : | 1,70,00,000 |
| ರಾಜಧಾನಿ | : | ಹನಾಯ್ |
| ಭಾಷೆ | : | ವಿಯೆಟ್ನಾಮಿಸ್, ಫ್ರೆಂಚ್ ಮತ್ತು ಚೀನಿ |
| ಸರಕಾರ | : | ಕಮ್ಯೂನಿಸ್ಟ್ ಗಣರಾಜ್ಯ |
| ಬಾವುಟ | : | ಕೆಂಪು ಬಣ್ಣ, ಮಧ್ಯದಲ್ಲಿ ಹಳದಿ ನಕ್ಷತ್ರ |

**ದಕ್ಷಿಣ ವಿಯೆಟ್ನಾಮ್**

| | | |
|---|---|---|
| ಖಂಡ | : | ಏಷ್ಯ (ಆಗ್ನೇಯ) |
| ಅಕ್ಷಾಂಶ | : | 8° 34′ ಉ ದಿಂದ 17° ಉ |
| ರೇಖಾಂಶ | : | 104° 27′ ಪೂ ದಿಂದ 109° 28′ ಪೂ |
| ವಿಸ್ತೀರ್ಣ | : | 1,71,621 ಚ. ಕಿ. ಮಿ. |
| ಜನಸಂಖ್ಯೆ | : | 1,53,17,000 |
| ರಾಜಧಾನಿ | : | ಸೈಗಾನ್ |
| ಭಾಷೆ | : | ವಿಯೆಟ್ನಾಮಿಸ್. ಫ್ರೆಂಚ್, ಚೀನೀ ಮತ್ತು ಇಂಗ್ಲಿಷ್ |
| ಸರಕಾರ | : | ಗಣರಾಜ್ಯ |
| ಬಾವುಟ | : | ಹಳದಿಬಣ್ಣ, ಮಧ್ಯೆ ಮೂರು ಕೆಂಪು, ಎರಡು ಹಳದಿ ಪಟ್ಟೆ |

ದೇಶಭಾಷೆ ಚೀನೀ ಭಾಷೆಯ ಉಪಭಾಷೆ. ತಾವೋ, ಬೌದ್ಧ ಮತದವರೂ ರೋಮನ್ ಕ್ಯಾಥಲಿಕ್ ಮತಾನುಯಾಯಿಗಳೂ ದಕ್ಷಿಣದಲ್ಲಿದ್ದರೆ, ಉತ್ತರದಲ್ಲಿ ಮತಕ್ಕೆ ಪ್ರಾಧಾನ್ಯವಿಲ್ಲ. ದೇಶದ ಮುಖ್ಯ ಚಟುವಟಿಕೆಗಳು ವ್ಯವಸಾಯ, ಮೀನುಗಾರಿಕೆ, ಗಣಿ ಕೆಲಸ, ಲಘು ಕೈಗಾರಿಕೆ. ಹೆಚ್ಚು ಪಾಲು ಜನ ಚೀನೀ ಉಡುಗೆಯನ್ನೇ ತೊಡುತ್ತಾರೆ.

## ವಿವಾಹ

ಪ್ರಾಣಿವರ್ಗಕ್ಕೆ ಸೇರಿದವನು ಮನುಷ್ಯ. ಆದರೆ ಮಾನವಸಮಾಜದಲ್ಲಿ ಮಾತ್ರ ಕಾಣುವ, ಉಳಿದ ಪ್ರಾಣಿವರ್ಗದಲ್ಲಿಲ್ಲದ ವಿಶಿಷ್ಟ ವ್ಯವಸ್ಥೆ ಮದುವೆ.

ಕುಟುಂಬ ಜೀವನದ ಬುನಾದಿ ಮದುವೆ. ಪಕ್ಷಿಗಳಲ್ಲೂ ಗಂಡು ಹೆಣ್ಣು ಒಟ್ಟಿಗೆ ಇರುತ್ತವೆ, ಅವುಗಳಿಗೆ ಮರಿಗಳಾಗುತ್ತವೆ; ಸ್ವಲ್ಪ ಕಾಲದ ಅನಂತರ ಮರಿಗಳು ದೂರಹೋಗುತ್ತವೆ. ಗಂಡು ಹೆಣ್ಣು ಹಕ್ಕಿಗಳು ಬೇರೆಯಾಗುತ್ತವೆ. ಆದರೆ ಮಾನವ ಮದುವೆಯಿಂದ ಕುಟುಂಬ ಜೀವನಕ್ಕೆ ಒಂದು ಆಧಾರ ನಿರ್ಮಿಸಿದ್ದಾನೆ. ವಿವಾಹದಿಂದ ಕುಟುಂಬ; ಕುಟುಂಬದಿಂದ ಸಾಮಾಜಿಕ ಸುವ್ಯವಸ್ಥೆ; ಸಾಮಾಜಿಕ ಭದ್ರತೆ. ಒಬ್ಬ ಹೆಂಗಸು ಒಬ್ಬ ಗಂಡಸು ಒಟ್ಟಿಗೆ ಇದ್ದು ಮಕ್ಕಳನ್ನು ಪಡೆದು ಸಂತೋಷವಾಗಿರಲೆಂದು ತಮ್ಮ ಸಮಾಜದ ವ್ಯವಸ್ಥೆಗೆ ಅನುಗುಣವಾದ ರೀತಿಯಲ್ಲಿ ಸಹಬಾಳ್ವೆ ಪ್ರಾರಂಭಿಸುತ್ತಾರೆ. ಇದು ಮದುವೆ.

ಸಮಾಜದ ಈ ವ್ಯವಸ್ಥೆ ಧಾರ್ಮಿಕವಾಗಿರಬಹುದು. ಹಿಂದೂಗಳಲ್ಲಿ ಮದುವೆ ಶಾಸ್ತ್ರೋಕ್ತವಾಗಿ ಅಗ್ನಿಸಾಕ್ಷಿಯಾಗಿ ನಡೆಯುತ್ತದೆ. ಕ್ರೈಸ್ತರಲ್ಲಿ ಮದುವೆ ಇಗರ್ಜಿಯಲ್ಲಿ ವಿಧಿಪೂರ್ವಕವಾಗಿ ನಡೆಯುತ್ತದೆ. ಮುಸಲ್ಮಾನರಲ್ಲಿ ಮದುವೆ ಒಂದು ಒಪ್ಪಂದ. ಕೆಲವರು ಕಾನೂನಿನ ಪ್ರಕಾರ ಮದುವೆಗಳ 'ರೆಜಿಸ್ಟ್ರಾರ'ರ ಕಚೇರಿಯಲ್ಲಿ ಸಾಕ್ಷಿಗಳ ಎದುರಿನಲ್ಲಿ ಮದುವೆಯಾಗುತ್ತಾರೆ.

ವಿವಾಹ ಪದ್ಧತಿ ಯಾವಾಗ ಹೇಗೆ ಆರಂಭವಾಯಿತು ಎಂಬುದು ತಿಳಿದಿಲ್ಲ. ಆದರೆ ಮಾನವ 'ನಾಗರಿಕ' ಎನಿಸಿಕೊಳ್ಳುವ ಮೊದಲಿನಿಂದಲೂ ವಿವಾಹ ಪದ್ಧತಿ ಬೆಳೆದುಬಂದಿದೆ. ಆದಿವಾಸಿಗಳಿಗೂ ಅವರದೇ ಆದ ವಿವಾಹ ಪದ್ಧತಿಗಳಿವೆ.

ವಿವಾಹವಾಗದವರ ಮುಖವನ್ನೇ ನೋಡಬಾರದು, ಅವರ ಮಾತಿಗೆ ಬೆಲೆ ಕೊಡಬಾರದು ಎಂದು ಪ್ರಾಚೀನ ಜನಾಂಗಗಳಲ್ಲಿ ಹೇಳುತ್ತಿದ್ದರು. ಹಾಗೆ ಹೇಳಿ ವಿವಾಹವಾಗಲು ಎಲ್ಲರನ್ನೂ ಪ್ರೇರೇಪಿಸುತ್ತಿದ್ದರು. ಮದುವೆಯಾಗದೆ ಸತ್ತವರ ದೇಹವನ್ನು ಹಿಡಿದು ಅಪ್ಪಳಿಸಲು ಪರಲೋಕದ ಬಾಗಿಲಲ್ಲೇ ಒಂದು ಬಂಡೆಯಿದೆ ಎಂಬುದು ಫಿಜಿ ದ್ವೀಪದವರ ನಂಬಿಕೆ. ಮದುವೆಯಿಲ್ಲದೆ ಸತ್ತವರ ಶವಕ್ಕೆ ಮದುವೆ ಮಾಡುವ ಪದ್ಧತಿ ಅನೇಕ ಆದಿವಾಸಿಗಳಲ್ಲಿದೆ. ನೀಲಗಿರಿಯ ತೋಡರು, ಮದುವೆಯಾಗದೆ ತೀರಿ ಹೋದ ಹುಡುಗಿಯ ಶವಕ್ಕೆ ಮದುವೆ ಮಾಡದೆ ಸಂಸ್ಕಾರ ಮಾಡುವುದಿಲ್ಲ.

ತಮ್ಮ ತಮ್ಮ ಗುಂಪುಗಳೊಳಗೇ ಮದುವೆ ಮಾಡಿಕೊಳ್ಳುವುದು ಅನೇಕರಲ್ಲಿದೆ. ರಕ್ತಸಂಬಂಧಿಗಳನ್ನು ಮದುವೆ ಮಾಡಿಕೊಳ್ಳಬಾರದೆಂಬುದೂ ಅನೇಕರಲ್ಲಿ ರೂಢಿಯಲ್ಲಿದೆ. ರಕ್ತಸಂಬಂಧ ಎಂಬುದು ಒಂದೊಂದು ಕಡೆ ಒಂದೊಂದು ರೀತಿ. ಯಾರು ಯಾರನ್ನು ಮದುವೆ ಮಾಡಿಕೊಳ್ಳಬಹುದು, ಮಾಡಿಕೊಳ್ಳಬಾರದು ಎಂಬ ನಿಯಮಗಳು, ಒಂದೊಂದು ದೇಶದಲ್ಲಿ, ಒಂದೊಂದು ಪಂಗಡದಲ್ಲಿ, ಒಂದೊಂದು ವಿಧ. ಇದರಿಂದಾಗಿ ವಿಚಿತ್ರ



ಪದ್ಧತಿಗಳು ಉಂಟಾಗಿವೆ. ಅವಳಿಜವಳಿ ಮಕ್ಕಳು ಒಂದು ಗಂಡು ಒಂದು ಹೆಣ್ಣು ಹುಟ್ಟಿದರೆ ಗರ್ಭದಲ್ಲಿ ಒಟ್ಟಾಗಿದ್ದವರನ್ನು ಅನಂತರ ಬೇರ್ಪಡಿಸ ಬಾರದೆಂದು, ಅವರು ಪ್ರಾಯಕ್ಕೆ ಬಂದಾಗ ಅವರಿಗೇ ವಿವಾಹ ಮಾಡುವ ಪದ್ಧತಿಯೂ ಇದೆ. ಅಣ್ಣತಂಗಿಯರ ವಿವಾಹಕ್ಕೆ ಪ್ರಾಚೀನ ಕಾಲದಲ್ಲಿ ಅನೇಕ ಉದಾಹರಣೆಗಳಿವೆ. ಈಜಿಪ್ಟಿನ ರಾಜಮನೆತನದಲ್ಲಿ ಅವರ ರಕ್ತಕ್ಕೆ ಬೇರೆ ವಂಶದವರ ರಕ್ತ ಬೆರೆಯಬಾರದೆಂದು, ಅಣ್ಣ–ತಂಗಿ (ಒಮ್ಮೊಮ್ಮೆ ಅಕ್ಕ–ತಮ್ಮ) ಮದುವೆಯಾಗುತ್ತಿದ್ದರು. ದಕ್ಷಿಣ ಅಮೆರಿಕದ ಇನ್‌ಕಾ ಜನರಲ್ಲಿ ಅಣ್ಣನು ತಂಗಿಯನ್ನೇ ಮದುವೆ ಮಾಡಿಕೊಳ್ಳಬೇಕಾಗಿತ್ತು.

ಸಾಮಾನ್ಯವಾಗಿ ರೂಢಿಯಲ್ಲಿಲ್ಲದ ನಿದರ್ಶನಗಳನ್ನು ಬಿಟ್ಟರೆ ಮನೆಯ ಹೊರಗಿನಿಂದ ಹೆಣ್ಣು ತರುವುದೇ ಪದ್ಧತಿ. ಈ ಪದ್ಧತಿಯಿಂದ ವಿವಿಧ ಕುಟುಂಬಗಳ ನಡುವೆ ಸ್ನೇಹ ಸಂಪಾದನೆ ಶಕ್ಯ. ಕುಟುಂಬದ ಆರೋಗ್ಯಕ್ಕೂ ಇದು ಸಾಧಕ.

ಪ್ರಾಚೀನ ಭಾರತದಲ್ಲಿ 'ಸ್ವಯಂವರ' ಪದ್ಧತಿಯೂ ಆಚರಣೆಯಲ್ಲಿತ್ತು. ಇದರಲ್ಲಿ ವಧು ತಾನು ಆರಿಸಿದ ವರನನ್ನು ಮದುವೆಯಾಗುತ್ತಿದ್ದಳು. ವೇದ, ಉಪನಿಷತ್ತು, ಮಹಾಕಾವ್ಯಗಳ ಕಾಲದಲ್ಲಿ ಬಾಲ್ಯವಿವಾಹ ನಡೆಯುತ್ತಿರಲಿಲ್ಲ. ಆದರೆ ಬೇರೆ ರಾಜ್ಯಗಳ ಮತ್ತು ಮತಗಳವರ ದಾಳಿ ಹೆಚ್ಚಿದಂತೆ ತಂದೆಗೆ ಮಕ್ಕಳನ್ನು ರಕ್ಷಿಸುವುದು ಕಷ್ಟವಾಯಿತು. ಹೆಣ್ಣು ಮಕ್ಕಳಿಗೆ ಚಿಕ್ಕವಯಸ್ಸಿನಲ್ಲಿ ಮದುವೆ ಮಾಡುವುದು ಆರಂಭವಾಯಿತು. ಮದುವೆಯಾಗುವಾಗ ವಧುವಿಗೆ ಕನಿಷ್ಠ ಹದಿನೆಂಟು ವರ್ಷ ವಯಸ್ಸಾಗಿರ ಬೇಕು ಎಂದು ಈಗ ಕಾನೂನಿದೆ.

ಬಹುಪತ್ನಿತ್ವ ಅನೇಕ ಕಡೆಗಳಲ್ಲಿ ರೂಢಿಯಲ್ಲಿದ್ದರೂ ಎಲ್ಲೆಡೆಯೂ ಏಕಪತ್ನಿತ್ವಕ್ಕೆ ಹೆಚ್ಚು ಗೌರವ. ಆದರೆ ಸಂತಾನಾಭಿವೃದ್ಧಿಗಾಗಿ ಇಲ್ಲವೆ ಸ್ತ್ರೀಯರ ಸಂಖ್ಯೆ ಹೆಚ್ಚಾಗಿರುವ ಸಮಾಜದಲ್ಲಿ ಅಥವಾ ಅರಸರ ದರ್ಪದ ಚಿಹ್ನೆಯಾಗಿ ಬಹುಪತ್ನಿತ್ವವನ್ನು ಕಾಣ ಬಹುದು. ಕಾಂಗೊ ನದಿ ತೀರದ ಜನತೆಗೆ ಏಕಪತ್ನಿತ್ವ ಬಡತನದ ಗುರುತು. ಮೆಲನೀಸಿಯ ದ್ವೀಪಗಳಲ್ಲಿ ಬಹುಪತ್ನಿತ್ವ ಹಿರಿಯರ ಹಾಗೂ ಶೂರರ ಚಿಹ್ನೆ. ಈಗ ಬಹುಪತ್ನಿತ್ವ ಹಲವು ದೇಶಗಳಲ್ಲಿ ಕಾನೂನಿಗೆ ವಿರುದ್ಧ. ಆದರೆ ಪುನರ್ವಿವಾಹಕ್ಕೆ ಸಮ್ಮತಿ ಯಿದೆ.

ಬಹುಪತ್ನಿತ್ವ ಮಹಾಭಾರತದ ಕಾಲಕ್ಕೆ ಭಾರತದ ಕೆಲವು ಭಾಗಗಳಲ್ಲಿ ರೂಢಿ ಯಲ್ಲಿತ್ತು. ಶೀತವಲಯಗಳಲ್ಲಿ ವಾಸಿಸುವ ಎಸ್ಕಿಮೊ ಜನರೂ ಟಿಬೆಟ್ ಪ್ರಸ್ಥ ಭೂಮಿಯ ಜನರೂ ಭಾರತದ ಕೆಲವು ಗುಡ್ಡಗಾಡು ಜನರೂ ಬಹುಪತ್ನಿತ್ವವನ್ನು ಧರ್ಮವೆಂದು ನಂಬಿದ್ದಾರೆ.

ಮದುವೆ ನಡೆಯುವ ವಿಧಾನಗಳಲ್ಲಿ ವ್ಯತ್ಯಾಸವಿರಬಹುದು. ಆದರೆ ಒಬ್ಬ ಗಂಡಸು-ಒಬ್ಬ ಹೆಂಗಸು ಇವರ ಸಹಬಾಳ್ವೆ ಎನ್ನುವುದು ನಾಲ್ಕು ಜನರ ಸಾಕ್ಷಿಯಾಗಿ ಆರಂಭವಾಗಬೇಕು, ಸಮಾಜಕ್ಕೆ ಈ ವಿಷಯ ತಿಳಿದಿರಬೇಕು ಎನ್ನುವುದು ಮುಖ್ಯ.

'ಮದುವೆ' ಯಾದ ಮೇಲೆ 'ಸತಿ–ಪತಿ' ಯರು ಇಬ್ಬರು ಬೇರೆ ಬೇರೆ ವ್ಯಕ್ತಿಗಳಾದರೂ ಅವರ ಬಾಳುಗಳು ಬೆರೆತು ಒಂದಾಗಿವೆ ಎಂಬ ಭಾವನೆ ಯನ್ನು ವ್ಯಕ್ತಪಡಿಸುವ ಅನೇಕ ಶಾಸ್ತ್ರಗಳನ್ನು ವಿವಾಹದ ಸಂದರ್ಭದಲ್ಲಿ ಕಾಣಬಹುದು. ಸುಮಾತ್ರ ದ್ವೀಪದಲ್ಲಿ ವೀಳ್ಯದೆಲೆಯ ಅರ್ಧವನ್ನು ವರ, ಇನ್ನೊಂದರ್ಧವನ್ನು ವಧು ತಿನ್ನುವ ಪದ್ಧತಿಯಿದೆ. ಒಂದೇ ಬಟ್ಟಲಿನಿಂದ



ವಧು ಮತ್ತು ವರ ಒಂಬತ್ತು ಸಲ ಚಹ ಕುಡಿಯಬೇಕು ಜಪಾನಿನಲ್ಲಿ. ಒಂದೇ ಮಣೆಯ ಮೇಲೆ ಕೂಡುವ, ಒಂದೇ ತಟ್ಟೆಯಲ್ಲಿ ಊಟಮಾಡುವ, ಒಬ್ಬರ ಕೈಯನ್ನು ಒಬ್ಬರು ಹಿಡಿದು ಅಗ್ನಿಯನ್ನು ಸುತ್ತುವ, ಇಬ್ಬರ ಸೆರಗನ್ನೂ ಗಂಟುಹಾಕುವ ಪದ್ಧತಿಗಳು ಭಾರತದಲ್ಲಿವೆ. ವೇದಗಳ ಕಾಲದಲ್ಲಿ ಅಲ್ಲದಿದ್ದರೂ ಅನಂತರ ಯಾವಾಗಲೋ ಭಾರತದಲ್ಲಿ ರೂಢಿಗೆ ಬಂದ 'ಮಾಂಗಲ್ಯ' ಧಾರಣ ಪದ್ಧತಿ ಸತಿಪತಿಯರ ಬಾಂಧವ್ಯದ ಕುರುಹು.

ಕಾನೂನಿನ ಪ್ರಕಾರ, ಗಂಡ–ಹೆಂಡತಿಯರಲ್ಲಿ ಒಬ್ಬರ ವಿರುದ್ಧ ಇನ್ನೊಬ್ಬರು ನ್ಯಾಯಾಲಯದಲ್ಲಿ ಸಾಕ್ಷ್ಯ ಹೇಳುವಂತೆ ನಿರ್ಬಂಧಿಸುವಂತಿಲ್ಲ.

ವಿವಾಹಕ್ಕೆ ಸಂಬಂಧಿಸಿದಂತೆ ಬೇರೆ ಸಮಾಜದವರಿಗೆ ವಿಚಿತ್ರವೆಂದು ತೋರುವ ಪದ್ಧತಿಗಳು ಹಲವಿವೆ. ಮೊರಾಕೊ ದೇಶದಲ್ಲಿ ಮದುವೆ ಶಾಸ್ತ್ರ ಮುಗಿಯುವವರೆಗೂ ಅವನ ಬೆನ್ನುಗಾವಲಿಗಾಗಿ ವರನ ತಾಯಿ ಒಂದು ಒನಕೆಯನ್ನು ಹಿಡಿದು ಹತ್ತಿರದಲ್ಲೇ ಇರುತ್ತಾರೆ. ಭೂತಪ್ರೇತಗಳಿಗೆ ಗುರುತು ಸಿಕ್ಕದ ಹಾಗೆ ವಧೂವರರಿಗೆ ವೇಷಭೂಷಣ ತೊಡಿಸುವ ಪದ್ಧತಿಯೂ ಇದೆ. ಗ್ರೀಸ್ ದೇಶದಲ್ಲಿ ವರನಿಗೆ ಲಂಗ ತೊಡಿಸಿ ವಧುವಿಗೆ ಟೋಪಿ ಹಾಕುತ್ತಾರೆ. ಆಫ್ರಿಕದ ಹಾಟನ್‌ಟಾಟ್ ಜನ ವಧೂವರರಿಬ್ಬರಿಗೂ ಹರಕುಬಟ್ಟೆ ಹಾಕುತ್ತಾರೆ. ಶಾಂತಸಾಗರದ ದ್ವೀಪಗಳಲ್ಲಿ ಕೆಲವು ಜನ, ವಧುವಿಗೆ ಬದಲಾಗಿ ಮುದುಕಿಯೊಬ್ಬಳನ್ನು ಕರೆದು ತರುತ್ತಾರೆ. ವಿವಾಹದ ಸಮಯದಲ್ಲಿ ದೃಷ್ಟಿಯಾಗಬಾರದೆನ್ನುವುದು ಈ ಪದ್ಧತಿಗಳ ಉದ್ದೇಶ.

ವಿವಾಹವನ್ನು ಮುಕ್ತಾಯಗೊಳಿಸುವುದು, ವಿವಾಹ ವಿಚ್ಛೇದನ.

ಮದುವೆಗಳಂತೆಯೇ ಮದುವೆಯಿಂದ ಬಿಡುಗಡೆ–ವಿಚ್ಛೇದನ–ಸಹ ದೇಶಗಳ ಚರಿತ್ರೆಯನ್ನು ಬದಲಾಯಿಸಿದೆ.

ಹದಿನಾರನೆಯ ಶತಮಾನದಲ್ಲಿ ಇಂಗ್ಲೆಂಡಿನ ಅರಸ ಎಂಟನೆಯ ಹೆನ್ರಿ ತನ್ನ ಹೆಂಡತಿ ಅರೆಗಾನಿನ ಕ್ಯಾಥರೀನಳನ್ನು ಬಿಟ್ಟುಬಿಡಲು ಬಯಸಿದ. ಅದಕ್ಕೆ ರೋಮನ್ ಕ್ಯಾಥಲಿಕರ ಮಹಾಗುರು ಪೋಪನ ಅಪ್ಪಣೆ ಬೇಕಾಗಿತ್ತು. ಕ್ಯಾಥರೀನ್ ಮತ್ತೊಬ್ಬ ಪ್ರಬಲ ದೊರೆ ಸ್ಪೇನಿನ ಐದನೆಯ ಚಾರ್ಲ್ಸನ ನಂಟಳಾಗಿದ್ದುದರಿಂದ ಪೋಪ್ ಅಪ್ಪಣೆಯನ್ನು ಕೊಡಲಿಲ್ಲ. ಎಂಟನೆಯ ಹೆನ್ರಿಗೆ ಕೋಪಬಂದಿತು. ಪೋಪನ ಅಧಿಕಾರವನ್ನೇ ತಿರಸ್ಕರಿಸಿದ. ಇಂಗ್ಲೆಂಡ್ ಪ್ರಾಟೆಸ್ಟೆಂಟ್ ದೇಶವಾಯಿತು.

ಗಂಡ ಹೆಂಡತಿಯರು ಮದುವೆಯಿಂದ ಬಿಡುಗಡೆಯನ್ನು ಪಡೆಯುವುದು ವಿಚ್ಛೇದನ. ನ್ಯಾಯಸ್ಥಾನದ ಮೊರೆಹೊಕ್ಕು ಇದನ್ನು ಬೇಡಿದಾಗ ಗಂಡ–ಹೆಂಡತಿ ಹಲವು ಬಗೆಯ ಕಾರಣಗಳನ್ನು ಕೊಡುವುದುಂಟು.

ವಿಚ್ಛೇದನ ಪಡೆದವರು ತಮಗೆ ಇಷ್ಟಬಂದರೆ ಮತ್ತೆ ಮದುವೆಯಾಗಬಹುದು. ಪ್ರಪಂಚದ ಎಷ್ಟೋ ದೇಶಗಳಲ್ಲಿ ಶತಮಾನಗಳ ಕಾಲ ವಿಚ್ಛೇದನಕ್ಕೆ ಅವಕಾಶ ಇರಲಿಲ್ಲ. ಮದುವೆಯಾಗುವುದು ದೇವರ ಇಚ್ಛೆಯಂತೆ, ಆದ್ದರಿಂದ ವಿಚ್ಛೇದನ ಪಾಪ ಎನ್ನುವ ಭಾವನೆ ಇದ್ದಿತು. ಕ್ರಮೇಣ ಮದುವೆಯಿಂದ ಬಿಡುಗಡೆಗೆ ಅವಕಾಶ ದೊರೆಯಿತು.

ಯಾವ ದೇಶದಲ್ಲೇ ಆಗಲಿ ವಿಚ್ಛೇದನಕ್ಕೆ ಒಪ್ಪಿಗೆಯನ್ನು ನ್ಯಾಯಾಲಯ ನೀಡಬೇಕಾದರೆ ಕಾರಣ ಪ್ರಬಲವಾಗಿರಬೇಕು. ಒಂದುಗೂಡಿದ್ದನ್ನು ಒಡೆಯಲು ನ್ಯಾಯಾಲಯವೂ ಬಯಸುವುದಿಲ್ಲ. ಸಾಮರಸ್ಯ ಸಾಧ್ಯವೇ ಇಲ್ಲವೆಂದು ತೋರಿದಾಗ ವಿಚ್ಛೇದನದ ಪ್ರಶ್ನೆಯನ್ನು ಪರಿಶೀಲಿಸುತ್ತದೆ.

ಈಗ ಸಾಮಾನ್ಯವಾಗಿ ಎಲ್ಲ ದೇಶಗಳವರೂ ವಿವಾಹ ವಿಚ್ಛೇದನಕ್ಕೆ ಅವಕಾಶವಿರಬೇಕೆಂದೂ ಗಂಡಸಿಗೆ ಮತ್ತು ಹೆಂಗಸಿಗೆ ಈ ವಿಷಯದಲ್ಲಿ ಸಮಾನತೆ ಇರಬೇಕೆಂದೂ ಒಪ್ಪುತ್ತಾರೆ.

ಹೆಂಡತಿಗೆ ವಿಚ್ಛೇದನ ದೊರೆತಾಗ ಕೆಲವು ವೇಳೆ ಗಂಡನಿಂದ ಅವಳಿಗೆ ಜೀವನಾಂಶವಾಗಿ ಸ್ವಲ್ಪ ಹಣ ದೊರೆಯುತ್ತದೆ. ಮಕ್ಕಳಿದ್ದರೆ ಅವುಗಳ ರಕ್ಷಣೆಯ ಬಗೆಗೂ ನ್ಯಾಯಾಲಯ ತೀರ್ಪು ಕೊಡುತ್ತದೆ.

## ವಿವೇಕಾನಂದ

"ಏಳಿರಿ ! ಎಚ್ಚರಾಗಿರಿ ! ಗುರಿ ಮುಟ್ಟುವವರೆಗೂ ನಿಲ್ಲಬೇಡಿರಿ !"
–ತಾಯ್ನಾಡಿನ ಹಿರಿಮೆಯನ್ನು ಪಶ್ಚಿಮ ದೇಶಗಳಿಗೆ ತೋರಿಸಿಕೊಟ್ಟ ಸ್ವಾಮಿ ವಿವೇಕಾನಂದರು, ಭಾರತೀಯರಿಗೆ ನೀಡಿದ ಕರೆ ಇದು.

ರಾಮಕೃಷ್ಣ ಪರಮಹಂಸರ ಮೆಚ್ಚಿನ ಶಿಷ್ಯರಾಗಿ, ರಾಮಕೃಷ್ಣ ಸಂಘವನ್ನು ಸ್ಥಾಪಿಸಿದವರು ವಿವೇಕಾನಂದರು. ಅವರು ಭಾರತದಲ್ಲಿ ಹಾಗೂ ವಿದೇಶಗಳಲ್ಲಿ ಹಿಂದೂಧರ್ಮವನ್ನೂ ಭಾರತೀಯ ಸಂಸ್ಕೃತಿಯನ್ನೂ ರಾಮಕೃಷ್ಣರ ಬೋಧನೆಗಳನ್ನೂ ಪ್ರಸಾರ ಮಾಡಿದರು.

ಈ ವಿಭೂತಿಪುರುಷ 1863ರಲ್ಲಿ ಕಲ್ಕತ್ತ ನಗರದಲ್ಲಿ ಹುಟ್ಟಿದರು. ಕಾಶಿ ವಿಶ್ವೇಶ್ವರನ ಅನುಗ್ರಹದಿಂದ ಜನಿಸಿದನೆಂದು ಹೆತ್ತವರು ಮಗುವಿಗೆ ವಿಶ್ವೇಶ್ವರ ಎಂದು ಹೆಸರಿಟ್ಟರು. ಅನಂತರ ಅವನನ್ನು ನರೇಂದ್ರನಾಥ ಎಂದು ಕರೆದರು. ಮೊದಲಿನಿಂದಲೂ ನರೇಂದ್ರನಿಗೆ ಬಹಳ ಧೈರ್ಯ. ಪ್ರತಿಯೊಂದನ್ನೂ ಮಾಡಿನೋಡುವ, ವಿಚಾರಮಾಡುವ ಪ್ರವೃತ್ತಿ ಆತನದು. ಬುದ್ಧಿವಂತ. ಕಾಲೇಜು ಶಿಕ್ಷಣ ಪಡೆಯುತ್ತಿದ್ದಾಗಲಂತೂ ಚರಿತ್ರೆ, ಸಾಹಿತ್ಯ, ತತ್ತ್ವಶಾಸ್ತ್ರ, ವಿಜ್ಞಾನ ಮೊದಲಾದುವುಗಳಿಗೆ ಸಂಬಂಧಿಸಿದ ಅನೇಕ ಗ್ರಂಥಗಳನ್ನು ಆತ ಓದಿದ.

ನರೇಂದ್ರನಾಥನಿಗೆ ದೇವರು ಇದ್ದಾನೆಯೇ ಎಂಬುದನ್ನು ತಿಳಿದುಕೊಳ್ಳಬೇಕೆಂಬ ಬಯಕೆ ಉತ್ಕಟವಾಯಿತು. ಹಲವು ವಿದ್ವಾಂಸರನ್ನು ಕೇಳಿದ. ಯಾರೂ ಸಮಾಧಾನಕರ ಉತ್ತರ ಕೊಡಲಿಲ್ಲ. ರಾಮಕೃಷ್ಣ ಪರಮಹಂಸರ ಬಗೆಗೆ ಕೇಳಿ, ಅವರಿದ್ದ ದಕ್ಷಿಣೇಶ್ವರಕ್ಕೆ ನರೇಂದ್ರನಾಥ ಹೋದ. ಪರಮಹಂಸರೊಂದಿಗೆ ಮಾತನಾಡಿದ ಮೇಲೆ ದೇವರಿದ್ದಾನೆ ಎನ್ನುವ ನಂಬಿಕೆ ನರೇಂದ್ರನಿಗೆ ಉಂಟಾಯಿತು. ಅವನು ರಾಮಕೃಷ್ಣರ ಶಿಷ್ಯನಾದ.

ಅನಂತರ ರಾಮಕೃಷ್ಣರು ತಮ್ಮ ಆಧ್ಯಾತ್ಮಿಕ ಸಂಪತ್ತನ್ನೆಲ್ಲ ನರೇಂದ್ರನಿಗೆ ಧಾರೆಯೆರೆದು ತಮ್ಮ ಶಿಷ್ಯರನ್ನೂ ಭಕ್ತರನ್ನೂ ಅವನಿಗೆ ಒಪ್ಪಿಸಿ ನಿರ್ಯಾಣ ಹೊಂದಿದರು.

ರಾಮಕೃಷ್ಣರ ಕಾಲಾನಂತರ ನರೇಂದ್ರರೂ ರಾಮಕೃಷ್ಣರ ಇತರ ಶಿಷ್ಯರೂ ಸನ್ಯಾಸ ಸ್ವೀಕಾರಮಾಡಿದರು. ನರೇಂದ್ರರು ಸ್ವಾಮಿ ವಿವೇಕಾನಂದರಾದರು. ಧ್ಯಾನ, ಅಧ್ಯಯನ, ಸಾಧನೆಯಲ್ಲಿ ತೊಡಗಿದರು.

ಸ್ವಾಮಿ ವಿವೇಕಾನಂದರು ಸ್ವಲ್ಪ ಕಾಲ ಉಳಿದ ಸನ್ಯಾಸಿಗಳ ಜೊತೆಯಲ್ಲಿದ್ದು, ಅನಂತರ ಭಾರತದಲ್ಲೆಲ್ಲ ಸಂಚರಿಸಿದರು. ಅಮೆರಿಕದ ಷಿಕಾಗೋ ನಗರದಲ್ಲಿ ನಡೆದ ವಿಶ್ವಧರ್ಮ ಸಮ್ಮೇಳನದಲ್ಲಿ ಸನಾತನ ಹಿಂದೂ ಧರ್ಮದ ಸಂದೇಶವನ್ನು ಪ್ರಪಂಚಕ್ಕೆ ಸಾರಿದರು. ಈ ಸಮ್ಮೇಳನದಲ್ಲಿ ಅವರು ಮಾಡಿದ ಭಾಷಣ ಪಾಶ್ಚಾತ್ಯ ದೇಶದವರ ಕಣ್ಣನ್ನು ತೆರೆಯಿತು. ಭಾರತವೆಂದರೆ ಮೂಢನಂಬಿಕೆಗಳ ಮತ್ತು ಅನಾಗರಿಕರ ದೇಶ ಎಂದು ಅವರು ಅ ವರೆಗೆ ನಂಬಿದ್ದರು. ವಿವೇಕಾನಂದರ ಭಾಷಣ ಹಿಂದೂಧರ್ಮದ



" ಏಳಿರಿ ! ಎಚ್ಚರಾಗಿರಿ ! " ಎಂದು ಕರೆ ನೀಡಿದ ಸ್ವಾಮಿ ವಿವೇಕಾನಂದರು

ಹಿರಿಮೆಯನ್ನೂ ಭಾರತದ ಸಂಸ್ಕೃತಿಯನ್ನೂ ಅವರಿಗೆ ತೋರಿಸಿತು. ಅಮೆರಿಕ ಇಂಗ್ಲೆಂಡ್ ದೇಶಗಳಲ್ಲಿ ವಿವೇಕಾನಂದರು ಸಂಚರಿಸಿ ಹಿಂದೂ ಧರ್ಮದ ಶ್ರೇಷ್ಠತೆಯನ್ನು ಕುರಿತು ಅನೇಕ ಉಪನ್ಯಾಸಗಳನ್ನು ಮಾಡಿದರು. ಪಾಶ್ಚಾತ್ಯರಲ್ಲಿ ಅನೇಕರು ಇವರ ಶಿಷ್ಯರಾದರು.

ಪಾಶ್ಚಾತ್ಯ ಜಗತ್ತಿನ ಮೇಲೆ ಪ್ರಚಂಡ ಪ್ರಭಾವವನ್ನು ಬೀರಿ ವಿವೇಕಾನಂದರು ಭಾರತಕ್ಕೆ ಮರಳಿದರು. ತಮ್ಮ ಸಂದೇಶವನ್ನು ಭಾರತದಲ್ಲಿ ಹರಡಲು ರಾಮಕೃಷ್ಣ ಸನ್ಯಾಸಿ ಸಂಘವನ್ನು ಆರಂಭಿಸಿ ಅದರ ಕೇಂದ್ರಗಳನ್ನು ದೇಶದ ಅನೇಕ ಕಡೆ ಸ್ಥಾಪಿಸಿದರು. 1902 ಜುಲೈ 4. ಬೇಲೂರಿನಲ್ಲಿ ಪಾಠಶಾಲೆಯಲ್ಲಿ ಪ್ರಾರ್ಥನೆಯ ಪಾಠ ನಡೆದಿತ್ತು. ವಿದ್ಯಾರ್ಥಿಗಳ ಮುಂದೆ ಧ್ಯಾನಸ್ಥರಾಗಿ ಕುಳಿತ ವಿವೇಕಾನಂದರು ಅಮರಸಮಾಧಿ ಪಡೆದರು. ಆಗ ಅವರಿಗೆ ಕೇವಲ 39 ವರ್ಷ ವಯಸ್ಸು.

ಸ್ವಾಮಿ ವಿವೇಕಾನಂದರು ತತ್ತ್ವಜ್ಞಾನಿಗಳು, ದೈವಭಕ್ತರು, ಕರ್ಮಯೋಗಿಗಳು, ಸಮಾಜ ಸುಧಾರಕರು, ದೇಶಭಕ್ತರು. ಭಾರತೀಯರಲ್ಲಿರುವ ಲೋಪದೋಷಗಳತ್ತ ಬೊಟ್ಟುಮಾಡಿ ಪರಿಹಾರವೇನು ಎಂದು ವಿವರಿಸಿದರು. ಸಹಕಾರ ಮನೋಭಾವದ ಅಭಾವ, ಅಸೂಯೆ, ಅಧಿಕಾರಲಾಲಸೆ, ಸ್ವೋದರಪೂರಿತನ, ಸ್ತ್ರೀಯರ ವಿದ್ಯಾಭ್ಯಾಸಕ್ಕೆ ಗಮನಕೊಡದೆ ಇರುವುದು, ಜಾತಿಭಾವನೆ, ಪ್ರಾದೇಶಿಕ ಅಂಧಾಭಿಮಾನ ಇವನ್ನು ಖಂಡಿಸಿದರು.

ಬಂಗಾಳಿಯಲ್ಲೂ ಆಂಗ್ಲಭಾಷೆಯಲ್ಲೂ ಅವರ ವಾಣಿ ಅನೇಕರನ್ನು ಎಚ್ಚರಿಸಿತು. 'ಬಹು ಕಾಲ ನಾವು ಅತ್ತಿರುವೆವು. ಇನ್ನೂ ಹೆಚ್ಚು ಅಳಬಾರದು. ನಮ್ಮ ಕಾಲಮೇಲೆ ನಿಂತು ಮನುಷ್ಯರಾಗೋಣ. ನಮಗಿಂದು ಪುರುಷಸಿಂಹರನ್ನು ನಿರ್ಮಿಸುವ ಧೈರ್ಯಬೇಕು ; ಪುರುಷಸಿಂಹರನ್ನು ನಿರ್ಮಿಸುವ ಸಿದ್ಧಾಂತಗಳು ಬೇಕು. ಪುರುಷಸಿಂಹರನ್ನಾಗಿ, ಸರ್ವತೋಮುಖಿಗಳನ್ನಾಗಿ ಮಾಡುವ ವಿದ್ಯಾಭ್ಯಾಸ ಬೇಕು. ದೈಹಿಕವಾಗಿ, ಮಾನಸಿಕವಾಗಿ, ಆಧ್ಯಾತ್ಮಿಕವಾಗಿ ಯಾವುದು ದುರ್ಬಲರನ್ನಾಗಿ ಮಾಡುವುದೋ ಅದನ್ನು ವಿಷದಂತೆ ತ್ಯಜಿಸಿ ; ಅದರಲ್ಲಿ ಚೇತನವಿಲ್ಲ. ಸತ್ಯ ಶಕ್ತಿಯನ್ನು ಹೆಚ್ಚಿಸುತ್ತದೆ. ಸತ್ಯ ಶಕ್ತಿಯನ್ನು ಕೊಡಬೇಕು, ಬೆಳಕನ್ನು ತರಬೇಕು, ಹೊಸ ಚೇತನವನ್ನು ತುಂಬಬೇಕು. ನಮ್ಮಲ್ಲಿ ನಮಗೆ ನಂಬಿಕೆ ಇರಬೇಕು. ನಾವು ದೇವರ ಮಕ್ಕಳು,' ಹೀಗೆ ಸ್ವಾಮಿ ವಿವೇಕಾನಂದರು ಭಾರತೀಯರನ್ನು ಎಚ್ಚರಿಸಿ ಅವರಲ್ಲಿ ಹೊಸ ಹುರುಪು ತುಂಬಿದರು.

ಕನ್ಯಾಕುಮಾರಿಯ ಬಳಿ ಇರುವ ಬಂಡೆಯೊಂದರ ಮೇಲೆ ಮೂರು ದಿನ ಕುಳಿತು ಧ್ಯಾನ ಮಾಡುತ್ತಿದ್ದಾಗ ವಿವೇಕಾನಂದರಿಗೆ ತಮ್ಮ ಜೀವನದ ಗುರಿ ಸ್ಪಷ್ಟವಾಯಿತು ಎಂದು ಹೇಳುತ್ತಾರೆ. ಈ ಬಂಡೆ ವಿವೇಕಾನಂದ ಬಂಡೆ ಎಂದು ಹೆಸರುಪಡೆದಿದೆ ; ಇದು ಸಮುದ್ರ ಮಟ್ಟದಲ್ಲಿ 168 ಮೀಟರ್ ಉದ್ದ, 165 ಮೀಟರ್ ಅಗಲ, 15 ಮೀಟರ್ ಎತ್ತರ ಇದೆ. ಇಲ್ಲಿ 2.6 ಮೀಟರ್ ಎತ್ತರದ ವಿವೇಕಾನಂದರ ವಿಗ್ರಹ ಸ್ಥಾಪಿತವಾಗಿದೆ. ಇದು ಅವರ ಹೆಸರನ್ನು ಚಿರಸ್ಥಾಯಿಗೊಳಿಸುವ ಯತ್ನ ; ವಿವೇಕಾನಂದರ ನೆನಪಿಗಾಗಿ ಜನತೆಯ ಕಾಣಿಕೆ. ಇದರ ಅನಾವರಣ 1970 ಸೆಪ್ಟೆಂಬರ್ 2ರಂದು ನಡೆಯಿತು.

1963ರಲ್ಲಿ ವಿವೇಕಾನಂದರ ಜನ್ಮಶತಮಾನೋತ್ಸವ ಆಚರಿಸಲ್ಪಟ್ಟಿತು.

ಭೂಮಿಯ ಮೇಲೆ ತಾವು ಬದುಕಿದ್ದ ಅಲ್ಪಾವಧಿಯಲ್ಲೇ ವಿವೇಕಾನಂದರು ಭಾರತವನ್ನು ಜಗತ್ತಿಗೆ ಪರಿಚಯ ಮಾಡಿಕೊಡುವುದರಲ್ಲಿ ಮತ್ತು ಭಾರತೀಯರಿಗೆ ತಮ್ಮ ಸಂಸ್ಕೃತಿಯ ಪರಂಪರೆಯನ್ನೂ ಕರ್ತವ್ಯವನ್ನೂ ತಿಳಿಸಿಕೊಡುವುದರಲ್ಲಿ ಅಪಾರ ಯಶಸ್ಸು ಗಳಿಸಿದರು. ವಿವೇಕಾನಂದರ ವಾಣಿ ಭಾರತೀಯರ ಕಿವಿಗಳಲ್ಲಿ ಮೊರೆಯುವ ಅಮರವಾಣಿ.

ನೋಡಿ : ರಾಮಕೃಷ್ಣ ಪರಮಹಂಸ

## ವಿಶ್ವಕೋಶ

ನಿಮ್ಮ ಕೈಯಲ್ಲಿರುವ ಈ ಕೃತಿ-ಮನುಕುಲದ ಕಥೆ-'ಜ್ಞಾನ ಗಂಗೋತ್ರಿ'ಯ ಮೊದಲನೆಯ ಸಂಪುಟ. 'ಜ್ಞಾನ ಗಂಗೋತ್ರಿ' ಕಿರಿಯರ ವಿಶ್ವಕೋಶ.

ವಿಶ್ವಕೋಶ ಎಂದರೇನು ? ಪ್ರಪಂಚದ ಎಲ್ಲ ಮುಖ್ಯ ವಿಷಯಗಳ ಪರಿಚಯ ಮಾಡಿಕೊಡುವ ಗ್ರಂಥವೇ ವಿಶ್ವಕೋಶ. ಇದರಲ್ಲಿ ವಿಶ್ವದ ಜ್ಞಾನವೆಲ್ಲ ಒಂದೆಡೆಯಲ್ಲಿ ದೊರೆಯುತ್ತದೆ. ಇಂಗ್ಲಿಷಿನಲ್ಲಿ ' ಎನ್‌ಸೈಕ್ಲೊಪೀಡಿಯ ' ಎನ್ನುವರು. ಗ್ರೀಕ್ ಮೂಲದಿಂದ ಈ ಪದ ಹುಟ್ಟಿದೆ. ' ಎನ್‌ಸೈಕ್ಲಿಯ ' ಎಂದರೆ ವೃತ್ತ, 'ಪೀಡಿಯ' ಎಂದರೆ ಶಿಕ್ಷಣ. 'ಎನ್‌ಸೈಕ್ಲೊಪೀಡಿಯ' ಎಂದರೆ ವಿಶ್ವದ ಎಲ್ಲ ಜ್ಞಾನ ಎಂದು ಅರ್ಥ.

ವಿಶ್ವಕೋಶ ಶಬ್ದಕೋಶವಲ್ಲ. ಶಬ್ದಕೋಶದಲ್ಲಿರುವುದು ಶಬ್ದಾರ್ಥ. ವಿಶ್ವಕೋಶದಲ್ಲಿರುವುದು ವಿಷಯಜ್ಞಾನ. ವಿಶ್ವಕೋಶದಲ್ಲಿ ವಿಷಯಗಳ ಶೀರ್ಷಿಕೆ

ಗಳನ್ನು ಅಕಾರಾದಿಯಾಗಿ ಪ್ರಥಮ ಸಂಪುಟದಿಂದ ಕೊನೆಯ ಸಂಪುಟದ ವರೆಗೂ ಕೊಡಬಹುದು. ಒಂದೊಂದು ಸಂಪುಟವನ್ನು ನಿರ್ದಿಷ್ಟ ವಿಷಯಗಳಿಗೆ ಮೀಸಲಿಟ್ಟು ಅದರಲ್ಲಿ ಅಕಾರಾದಿಯಾಗಿ ವಿಷಯ ವಿವೇಚನೆ ಮಾಡಲೂ ಬಹುದು. ಚರಿತ್ರೆ. ಭೂಗೋಳ. ಅರ್ಥಶಾಸ್ತ್ರ. ರಸಾಯನ ವಿಜ್ಞಾನ. ಹೀಗೆ ಬೇರೆ ಬೇರೆ ಜ್ಞಾನ ವಿಭಾಗಗಳನ್ನು ಆಯ್ದು, ವಿಭಾಗಗಳಿಗೆ ಅನುಗುಣ ವಾಗಿ ಸಂಪುಟಗಳನ್ನು ಸಿದ್ಧಗೊಳಿಸಬಹುದು. ಪ್ರತಿ ಸಂಪುಟದಲ್ಲೂ ಶೀರ್ಷಿಕೆಗಳನ್ನು ಅಕಾರಾದಿಯಾಗಿ ಅಣಿಗೊಳಿಸಬಹುದು.

ವಿಶ್ವಕೋಶಗಳು ಸಾಮಾನ್ಯವಾಗಿ ಅನೇಕ ಸಂಪುಟಗಳಲ್ಲಿ ಪ್ರಕಟವಾಗು ತ್ತವೆ.

ವಿಶ್ವದ ವಿಷಯಗಳ ಬಗೆಗೆ ನಮಗೆ ತಿಳಿದಿರುವ ಜ್ಞಾನವನ್ನು ವ್ಯವಸ್ಥಿತ ವಾಗಿ ಬರೆದಿಡುವುದು ಪ್ರಾಯಶಃ ಕ್ರಿ. ಶ. ಒಂದು ಮತ್ತು ಎರಡನೆಯ ಶತಮಾನದ ಗ್ರೀಕ್ ಮತ್ತು ಲ್ಯಾಟಿನ್ ಬರಹಗಾರರಿಂದ ಆರಂಭವಾಯಿತು. ಎನ್‌ಸೈಕ್ಲೊಪೀಡಿಯ ಎನ್ನುವ ಪದವನ್ನು 1531ರಲ್ಲಿ ಥಾಮಸ್ ಇಲಿಯೆಟ್ ಎನ್ನುವಾತ ಉಪಯೋಗಿಸಿದ. ಆಗ ಇನ್ನೂ ಈ ಬಗೆಯ ಗ್ರಂಥದ ವ್ಯವಸ್ಥೆ ಹೇಗಿರಬೇಕು ಎಂಬುದರ ನಿರ್ದಿಷ್ಟ ಕಲ್ಪನೆ ಇರಲಿಲ್ಲ. ಆದರೆ ಹದಿನೇಳನೆಯ ಶತಮಾನದಿಂದ ನಿಘಂಟು ಹಾಗೂ ಉಳಿದ ಗ್ರಂಥಗಳಿಗೂ ವಿಶ್ವಕೋಶಕ್ಕೂ ಇರುವ ವ್ಯತ್ಯಾಸ ಸ್ಪಷ್ಟವಾಯಿತು.

ಡೆಮಾಕ್ರಿಟಸ್. ಪ್ಲೇಟೋ. ಅವನ ಶಿಷ್ಯ ಸ್ಪಿಯುಸಿಪಸ್. ಅರಿಸ್ಟಾಟಲ್ ಮೊದಲಾದ ಗ್ರೀಕ್ ಬರಹಗಾರರು 'ಎನ್‌ಸೈಕ್ಲೊಪೀಡಿಯ'ಗಳನ್ನು ಬರೆದ ರೆಂದು ಹೇಳುತ್ತಾರೆ. ನಮಗೆ ಖಚಿತವಾಗಿ ತಿಳಿದಿರುವಂತೆ ಮೊದಲ ವಿಶ್ವ ಕೋಶವನ್ನು ಸಿದ್ಧಗೊಳಿಸಿದವರು ರೋಮನರು. ಮಾರ್ಕಸ್ ಟೆರೆನ್ಸಿ ಅಸ್ ವ್ಯಾರೊ (ಕ್ರಿ. ಪೂ. 116–27) ವಿಶ್ವಕೋಶವನ್ನು ಪ್ರಥಮವಾಗಿ ಸಿದ್ಧಪಡಿಸಿದ. ಆದರೆ ಇವನ ಕೃತಿ ಸಂಪೂರ್ಣವಾಗಿ ಲಭ್ಯವಾಗಿಲ್ಲ. ದೊರ ಕಿರುವ ಮೊದಲನೆಯ ವಿಶ್ವಕೋಶ ಪ್ಲಿನಿಅಸ್‌ನ (23–78) ಹಿಸ್ಟಾರಿಯ ನ್ಯಾಚುರಾಲಿಸ್ (ಪ್ರಕೃತಿ ಚರಿತ್ರೆ). ಪ್ರಕೃತಿ ವಿಜ್ಞಾನಗಳು. ಭೂವಿವರಣೆ. ವೈದ್ಯವಿಜ್ಞಾನ. ಕಲೆಗಳ ಚರಿತ್ರೆ ಅದರ ವ್ಯಾಪ್ತಿ. ಇವು ವಿಷಯಕ್ಕೆ ಅನು ಗುಣವಾಗಿ 2,493 ಅಧ್ಯಾಯಗಳುಳ್ಳ ಮೂವತ್ತೇಳು ಪುಸ್ತಕಗಳಲ್ಲಿವೆ.

ಕ್ರಿ. ಪೂ. 490ರಲ್ಲಿಯೇ ಅಗಸ್ಟೈನ್ ಮತ್ತು ಜೆರೋಮ್ ಮೊದಲಾದ ಕ್ರೈಸ್ತ ಸಂತರು ಎನ್‌ಸೈಕ್ಲೊಪೀಡಿಯ ಮಾದರಿಯ ಗ್ರಂಥಗಳನ್ನು ರಚಿಸಿದರು.

ಇಸ್ಲಾಂ ತತ್ವಶಾಸ್ತ್ರಜ್ಞರು ಸುಮಾರು 870ರಲ್ಲಿ ವಿಶ್ವಕೋಶದ ಮಾದರಿ ಯಲ್ಲಿ ಗ್ರಂಥ ರಚನೆಗೆ ತೊಡಗಿದ್ದರು. ಅಲ್ ಫರಾಬಿ ಎಂಬವನು ಭಾಷಾ ವಿಜ್ಞಾನ, ತರ್ಕ (ವಾಗ್ಮಿತೆ ಮತ್ತು ಕಾವ್ಯ ಮೀಮಾಂಸೆ), ಗಣಿತ ವಿಜ್ಞಾನ, ಭೌತವಿಜ್ಞಾನ, ಪ್ರಕೃತಿ ವಿಜ್ಞಾನ, ತತ್ತ್ವಶಾಸ್ತ್ರ, ರಾಜ್ಯಶಾಸ್ತ್ರ, ನ್ಯಾಯ ಶಾಸ್ತ್ರ ಇವುಗಳೆಲ್ಲದರ ಬಗೆಗೆ ಗ್ರಂಥ ರಚಿಸಿದ್ದ. ಹತ್ತನೆಯ ಶತಮಾನದಲ್ಲಿ ರಚಿತವಾದ ಒಂದು ಗ್ರಂಥ ವ್ಯಾಕರಣ, ಗಣಿತ, ಅಧ್ಯಾತ್ಮ, ಇಂದ್ರಜಾಲ, ಕಲೆಗಳು, ವ್ಯಾಪಾರ, ವಾಣಿಜ್ಯ; ನ್ಯಾಯಶಾಸ್ತ್ರ, ತತ್ತ್ವಶಾಸ್ತ್ರ ಮೊದ ಲಾದವುಗಳ ಬಗೆಗೆ ಐವತ್ತೆರಡು ಪ್ರಬಂಧಗಳನ್ನು ಒಳಗೊಂಡಿತ್ತು.

ಚೀನ ದೇಶದ ಉಪು ಎಂಬಾತ (947–1002) ಲೌಕಿಕ ಮತ್ತು ಅಲೌಕಿಕ ವ್ಯಾಪಾರ ವಿಶೇಷ, ಗಣಿಕೆಲಸ, ಸಸ್ಯವಿಜ್ಞಾನ, ಪ್ರಕೃತಿ ವಿಜ್ಞಾನ ಮೊದ ಲಾದುವುಗಳ ಬಗೆಗೆ ನೂರು ಅಧ್ಯಾಯಗಳುಳ್ಳ ಮೂವತ್ತು ಸಂಪುಟಗಳನ್ನು ರಚಿಸಿದ. ಹದಿನೈದನೆಯ ಶತಮಾನದಲ್ಲಿ ಚಕ್ರವರ್ತಿ ಯುಂಗಲೋ ಆಜ್ಞೆ ಯಂತೆ ಚೀನ ದೇಶದಲ್ಲಿ ರಚಿಸಲಾದ ವಿಶ್ವಕೋಶ 22,937 ಅಧ್ಯಾಯಗಳನ್ನು ಒಳಗೊಂಡಿತ್ತು. ಹದಿನೆಂಟನೆಯ ಶತಮಾನದಲ್ಲಿ ಚಕ್ರವರ್ತಿ ಕಾಂಗ್ ಸ್ಸಿಗಾಗಿ ರಚಿತವಾದ ವಿಶ್ವಕೋಶ 5,020 ಸಂಪುಟಗಳಿವೆ.

ಹದಿನೆಂಟು. ಹತ್ತೊಂಬತ್ತು. ಇಪ್ಪತ್ತನೆಯ ಶತಮಾನಗಳಲ್ಲಿ ವಿಶ್ವದ ಅನೇಕ ಭಾಗಗಳಲ್ಲಿ ಅನೇಕ ವಿಶ್ವಕೋಶಗಳು ಪ್ರಕಟವಾಗಿವೆ. ಗ್ರಂಥದ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ಸೂಚನೆ ನೀಡುವ ಪದ್ಧತಿಯನ್ನು ಪ್ರಾರಂಭಿಸಿದವನು ಎಫ್ರೈಮ್ ಚೇಂಬರ್ಸ್ (ಮರಣ 1740) ಎಂಬಾತ. ಹಿಂದೆ ಒಬ್ಬ ವ್ಯಕ್ತಿಯೇ ಇಡೀ ವಿಶ್ವಕೋಶವನ್ನು ಬರೆಯುತ್ತಿದ್ದ. ಈಗ ವಿಶ್ವಕೋಶವನ್ನು ವಿದ್ವಾಂಸರ ಗುಂಪು ಸಿದ್ಧಗೊಳಿಸುತ್ತದೆ. ಸಂಪಾದಕ ವರ್ಗ. ಲೇಖಕರು. ಚಿತ್ರಕಾರರು. ಪರಿಣತರು ಸೇರಿ ವಿಶ್ವಕೋಶವನ್ನು ರಚಿಸುತ್ತಾರೆ. ವಿಶ್ವಕೋಶದ ರಚನೆ ಕೆಲವು ದಿನಗಳಲ್ಲಿ. ತಿಂಗಳುಗಳಲ್ಲಿ ಮುಗಿಯುವುದಿಲ್ಲ. ಕೆಲವು ವರ್ಷಗಳ ಬರವಣಿಗೆ. ಪರಿಶೀಲನೆ ಬೇಕು. ವಿವರಗಳು ಸರಿಯೋ ಇಲ್ಲವೋ ಎಂಬುದನ್ನು ಹಲವಾರು ರೀತಿ ಪರೀಕ್ಷಿಸಿ. ಶೋಧಿಸಬೇಕಾಗುತ್ತದೆ. ಹಲವಾರು ವಿದ್ವಾಂಸರಿಂದ ಲೇಖನ ಗಳನ್ನು ಬರೆಸುವ ಪದ್ಧತಿಯನ್ನು ಪ್ರಾರಂಭಿಸಿದವನು ಚೇಂಬರ್ಸ್. ಆಂಗ್ಲ ವಿಶ್ವಕೋಶದ ಚರಿತ್ರೆಯಲ್ಲಿ ಅದೊಂದು ಮಹತ್ತರ ಘಟ್ಟ.

ಫ್ರಾನ್ಸಿನಲ್ಲಿ ಡೀಡಿರೊ ಮತ್ತು ದಲಾನ್ ಬಾರ್ ಅವರಿಂದ ಸಿದ್ಧಗೊಳಿಸ ಲ್ಪಟ್ಟ ವಿಶ್ವಕೋಶ ಯೂರೊಪಿನ ವಿಶ್ವಕೋಶ ರಚನೆಯಲ್ಲಿ ಬಹಳ ಪ್ರಮುಖ ವಾಗಿದೆ. ಹದಿನೆಂಟನೆಯ ಶತಮಾನದ ಅನೇಕ ರಾಜಕೀಯ. ಧಾರ್ಮಿಕ ಸುಧಾರಕರ ಬರಹಗಳನ್ನು ಅದು ಒಳಗೊಂಡಿದ್ದಿತು. ಫ್ರಾನ್ಸಿನ ಕ್ರಾಂತಿಕಾರ ಲೇಖಕರಾದ ರೂಸೋ. ವಾಲ್ಟೇರ್ ಇವರ ಬರಹಗಳು ಅದರಲ್ಲಿದ್ದುವು. ಮೂವತ್ತೈದು ಸಂಪುಟಗಳಾಗಿ ಪ್ರಕಟವಾದ ಆ ವಿಶ್ವಕೋಶ ಆ ಶತಮಾನ ದಲ್ಲಿ ಫ್ರಾನ್ಸಿನಲ್ಲಾದ ಪರಿವರ್ತನೆಗಳ ಮೇಲೆ ಬಹಳ ಪ್ರಭಾವ ಬೀರಿತು.

1768ರಲ್ಲಿ ಮೊದಲ ಬಾರಿ ಎಡಿನ್‌ಬರೋದಲ್ಲಿ ಪ್ರಕಟವಾದ ಎನ್‌ಸೈಕ್ಲೊ ಪೀಡಿಯ ಬ್ರಿಟಾನಿಕ ವಿಶ್ವಕೋಶದ ಚರಿತ್ರೆಯಲ್ಲಿ ಹೊಸ ಶಕೆಯನ್ನು ಪ್ರಾರಂಭಿಸಿತು. ಈ ಯೋಜನೆಯನ್ನು ರೂಪಿಸಿದ್ದು ವಿಲಿಯಂ ಸ್ಮೆಲಿ ಎನ್ನುವ ಮುದ್ರಕ, ಆ್ಯಂಡ್ರೂ ಬೆಲ್ ಎಂಬ ಕೆತ್ತನೆ ಕೆಲಸದವನು ಮತ್ತು ಮುದ್ರಕ ಕಾಲಿನ್ ಮ್ಯಾಕ್ ಫಾರ್ಕುಹರ್. 2.670 ಪುಟಗಳೂ 160 ವರ್ಣಚಿತ್ರಗಳೂ ಇದ್ದ ಮೂರು ಸಂಪುಟಗಳ ಬ್ರಿಟಾನಿಕ. ಮೊದಲು 100 ಸಾಪ್ತಾಹಿಕ ಸಂಚಿಕೆಗಳಾಗಿ ಪ್ರಕಟವಾಯಿತು. ಹಾರೆಸ್ ಇ. ಹೂಪರ್ ಮತ್ತು ವಾಲ್ಟರ್ ಎಂ. ಜಾಕ್‌ಸನ್ ಎಂಬ ಅಮೆರಿಕನರು 1901ರಲ್ಲಿ ಎ. ಸಿ. ಬ್ಲಾಕ್ ಇವರಿಂದ ಎನ್‌ಸೈಕ್ಲೊಪೀಡಿಯ ಬ್ರಿಟಾನಿಕವನ್ನು ಕೊಂಡು ಕೊಂಡರು. ವರ್ಷವರ್ಷವೂ ಪರಿಷ್ಕೃತಗೊಂಡು ಪ್ರಕಟವಾಗುವ ಈ ಬೃಹತ್ ವಿಶ್ವಕೋಶ 1968ರಲ್ಲಿ ತನ್ನ ಪ್ರಕಟಣೆಯ ಎರಡನೆಯ



ವಿಶ್ವಕೋಶಗಳು

ಶತಮಾನೋತ್ಸವ ಆಚರಿಸಿತು. 1969ರ ಆವೃತ್ತಿಯಲ್ಲಿ ಇಪ್ಪತ್ತನಾಲ್ಕು ಸಂಪುಟಗಳಿವೆ. ಇದಕ್ಕೆ ಸಂಬಂಧಪಟ್ಟ ಸಾಮಗ್ರಿಯ ಶೇಖರಣೆ. ಲೇಖನಗಳ ಸಿದ್ಧತೆ, ಪರಿಷ್ಕರಣೆ ಮುಖ್ಯವಾಗಿ ಅಮೆರಿಕ ಮತ್ತು ಇಂಗ್ಲೆಂಡಿನ ವಿಶ್ವ ವಿದ್ಯಾನಿಲಯಗಳಲ್ಲಿ ನಡೆಯುತ್ತವೆ: ಪ್ರಪಂಚದ ಹಲವು ರಾಷ್ಟ್ರಗಳ ವಿದ್ವಾಂಸರು ಇದಕ್ಕೆ ಸಮಾಲೋಚಕರು.

ಎನ್‌ಸೈಕ್ಲೊಪೀಡಿಯ ಬ್ರಿಟಾನಿಕ ಅಲ್ಲದೆ. 30 ಸಂಪುಟಗಳ ಎನ್‌ಸೈಕ್ಲೊಪೀಡಿಯ ಅಮೆರಿಕಾನಾ, 15 ಸಂಪುಟಗಳಲ್ಲಿ ಪ್ರಕಟವಾದ ಚೇಂಬರ್ಸ್ ಎನ್‌ಸೈಕ್ಲೊಪೀಡಿಯ. ಕಾಲಿಯರ್ಸ್ ಎನ್‌ಸೈಕ್ಲೊಪೀಡಿಯ (2.20.00.000 ಪದಗಳ 21 ಸಂಪುಟಗಳು). ಓಯರ್ಸ್ ಎನ್‌ಸೈಕ್ಲೊಪೀಡಿಯ ಇವು ಆಂಗ್ಲ ಭಾಷೆಯಲ್ಲಿರುವ ಪ್ರಸಿದ್ಧ ವಿಶ್ವಕೋಶಗಳಲ್ಲಿ ಕೆಲವು.

ಭಾರತದಲ್ಲಿ ಪ್ರಾಚೀನ ಕಾಲದಲ್ಲಿ ವಿಶ್ವಕೋಶಗಳಿದ್ದುದು ಅಷ್ಟಾಗಿ ಕಂಡುಬರುವುದಿಲ್ಲ. ವಿಶ್ವಕೋಶದ ಮಾದರಿಯಲ್ಲಿ ವ್ಯವಸ್ಥಿತವಾಗಿ ರೂಪಿಸಿದ ಗ್ರಂಥಗಳು ದೊರೆತಿಲ್ಲ.

ವಿಶ್ವಕೋಶದ ಇಂದಿನ ಕಲ್ಪನೆಯಂತೆ ಭಾರತದಲ್ಲಿ ಸಿದ್ಧವಾದ ಮೊದಲನೆಯ ಸಂಗ್ರಹ ಬಂಗಾಳಿ ಭಾಷೆಯ 'ವಿಶ್ವಕೋಶ' (ಮೊದಲನೆಯ ಸಂಪುಟ 1886). ಇಪ್ಪತ್ತೆರಡು ಸಂಪುಟಗಳ ಈ ವಿಶ್ವಕೋಶದ ಸಂಪಾದಕರು ರಂಗಲಾಲ್ ಮುಖರ್ಜಿ ಮತ್ತು ನಾಗೇಂದ್ರನಾಥ ಬಸು. ಈ ವಿಶ್ವಕೋಶಕ್ಕೆ ಲೇಖನಗಳನ್ನು ಬರೆದ ವಿದ್ವಾಂಸರಲ್ಲಿ ರವೀಂದ್ರನಾಥ ಠಾಕೂರರೂ ಒಬ್ಬರು. ನಾಗೇಂದ್ರನಾಥ ಬಸು ಪ್ರತ್ಯೇಕವಾಗಿ ಸಂಪಾದಿಸಿದ ಹಿಂದಿ ವಿಶ್ವಕೋಶ (24 ಸಂಪುಟ) 1916ರಿಂದ 1931ರ ಅವಧಿಯಲ್ಲಿ ಪ್ರಕಟವಾಯಿತು. 'ಕೋಶ್ಕರ್ ಕೇತ್ಕರ್' ಎಂದು ಜನರು ಪ್ರೀತಿಯಿಂದ ಕರೆಯುತ್ತಿದ್ದ ಎಸ್.ವಿ. ಕೇತ್ಕರ್ ಮಹಾರಾಷ್ಟ್ರ ಭಾಷೆಯಲ್ಲಿ 1920–29ರ ಅವಧಿಯಲ್ಲಿ 23 ಸಂಪುಟಗಳ ವಿಶ್ವಕೋಶವನ್ನು ಪ್ರಕಟಿಸಿದರು. ಮಹಾರಾಷ್ಟ್ರ ಸರಕಾರ ಸ್ಥಾಪಿಸಿದ ಸಂಸ್ಕೃತಿ ಮತ್ತು ಸಾಹಿತ್ಯ ಮಂಡಲಿ 19 ಸಂಪುಟಗಳ ವಿಶ್ವಕೋಶವನ್ನು ಸಿದ್ಧಗೊಳಿಸುತ್ತಿದೆ. ಈಚೆಗೆ ಹಲವು ಭಾರತೀಯ ಭಾಷೆಗಳಲ್ಲಿ ವಿಶ್ವಕೋಶಗಳು ರಚಿತವಾಗುತ್ತಿವೆ.

ಜ್ಞಾನವನ್ನು ಒಂದೆಡೆ ಸಂಗ್ರಹಿಸಿ ನೀಡುವ ಪ್ರಯತ್ನ ಕನ್ನಡದಲ್ಲಿ ಹನ್ನೆರಡನೆಯ ಶತಮಾನದಿಂದಲೇ ನಡೆಯುತ್ತ ಬಂದಿದೆ. ಈ ಶತಮಾನದ ಪಶ್ಚಿಮ ಚಾಳುಕ್ಯ ಅರಸ ಸೋಮೇಶ್ವರನ 'ಅಭಿಲಾಷಿತಾರ್ಥ ಚಿಂತಾಮಣಿ' ಅಥವಾ 'ಮಾನಸೋಲ್ಲಾಸ' ಇಂಥ ಒಂದು ಪ್ರಯತ್ನ. ಹದಿನಾರನೆಯ ಶತಮಾನದಲ್ಲಿ ನಿಜಗುಣ ಶಿವಯೋಗಿ ಬರೆದ 'ವಿವೇಕ ಚಿಂತಾಮಣಿ'ಯಲ್ಲಿ ವೇದಾಂಗ ಶಾಸ್ತ್ರ ಮುಂತಾದ ಅನೇಕ ಶಾಸ್ತ್ರಗಳಲ್ಲಿನ ವಿಷಯ ಸಂಗ್ರಹವಿದೆ. ಬಹು ಶಾಸ್ತ್ರಗಳನ್ನು ಒಂದೆಡೆ ತಾನು ತಂದಿರುವುದಾಗಿ ಆರಂಭದಲ್ಲಿ ಕವಿ ನುಡಿದಿದ್ದಾನೆ. ಈ ಗ್ರಂಥ ಮರಾಠಿಗೂ ಭಾಷಾಂತರವಾಗಿದೆ. ಹದಿನೇಳನೆಯ ಶತಮಾನದಲ್ಲಿ ಕೆಳದಿಯ ಬಸವ ಭೂಪಾಲನು ಸಿದ್ಧಗೊಳಿಸಿದ–ಅಥವಾ ಅವನ ಆಶ್ರಯದಲ್ಲಿ ಸಿದ್ಧವಾದ 'ಶಿವತತ್ತ್ವ ರತ್ನಾಕರ' ಮುಖ್ಯವಾಗಿ ಧಾರ್ಮಿಕ ಗ್ರಂಥವಾದರೂ ನಾಡಿನ ನಿಸರ್ಗ ಸಂಪತ್ತು, ಪದ್ಧತಿಗಳು ಮತ್ತು ಯುದ್ಧ ರೀತಿಗಳ ವಿಷಯವಾಗಿ ಸಾಮಗ್ರಿಯನ್ನು ಒಳಗೊಂಡಿದೆ. ಇಂಥ ಪ್ರಯತ್ನದಲ್ಲಿ ವಿಶ್ವಕೋಶದ ಬೀಜರೂಪವನ್ನು ಕಾಣಬಹುದು.

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಿಂದ ಪ್ರೊ. ದೇ. ಜವರೇಗೌಡರ ಗೌರವ ಪ್ರಧಾನ ಸಂಪಾದಕತ್ವದಲ್ಲಿ ಕನ್ನಡ ವಿಶ್ವಕೋಶ ಹದಿನಾಲ್ಕು ಸಂಪುಟಗಳಲ್ಲಿ ಪ್ರಕಟವಾಗುತ್ತಿದೆ. ವಸ್ತು ವಿಶ್ವಕೋಶ ಸಂಪುಟಗಳ ಪ್ರಕಟಣೆಯ ಹೊಣೆಯನ್ನೂ ಕನ್ನಡ ಅಧ್ಯಯನ ಸಂಸ್ಥೆ ನಿರ್ವಹಿಸುತ್ತಿದೆ. ಡಾ. ಕೋಟ ಶಿವರಾಮ ಕಾರಂತರ ವಿಜ್ಞಾನ ವಿಷಯದ ವಿಶ್ವಕೋಶ ಮೂರು ಸಂಪುಟಗಳಲ್ಲಿ ಪ್ರಕಟವಾಗಿದೆ.

ಕಿರಿಯರಿಗಾಗಿ ಹಲವು ದೇಶಗಳಲ್ಲಿ ವಿಶ್ವಕೋಶಗಳು ರಚಿತವಾಗಿವೆ: ಇಂಗ್ಲೆಂಡಿನಲ್ಲಿ 'ದಿ ಚಿಲ್ಡ್ರನ್ಸ್ ಎನ್‌ಸೈಕ್ಲೊಪೀಡಿಯ' 1908ರಲ್ಲಿ: ಅಮೆರಿಕದಲ್ಲಿ ಇಪ್ಪತ್ತನಾಲ್ಕು ಸಂಪುಟಗಳಲ್ಲಿ 'ದಿ ಬುಕ್ ಆಫ್ ನಾಲೆಜ್' 1910ರಲ್ಲಿ: 'ಬ್ರಿಟಾನಿಕ ಜ್ಯೂನಿಯರ್ ಎನ್‌ಸೈಕ್ಲೊಪೀಡಿಯ' (15 ಸಂಪುಟಗಳಲ್ಲಿ) 1934ರಲ್ಲಿ ; ಆಕ್ಸ್‌ಫರ್ಡ್ ಜೂನಿಯರ್ ಎನ್‌ಸೈಕ್ಲೊಪೀಡಿಯ (12 ಸಂಪುಟಗಳಲ್ಲಿ) 1948–54ರಲ್ಲಿ; ಮಕ್ಕಳ ಬ್ರಿಟಾನಿಕ (12 ಸಂಪುಟಗಳು) 1960ರಲ್ಲಿ.

ಕನ್ನಡದಲ್ಲಿ ಮಕ್ಕಳಿಗಾಗಿ ವಿಶ್ವಕೋಶ ರಚಿಸಿದವರಲ್ಲಿ ಕೋಟ ಶಿವರಾಮ ಕಾರಂತರು ಮೊದಲಿಗರು. 1936ರಲ್ಲಿ ನಾಲ್ಕು ಸಂಪುಟಗಳಲ್ಲಿ ಅವರ 'ಬಾಲ ಪ್ರಪಂಚ' ಪ್ರಕಟವಾಯಿತು.

ಏಳು ಸಂಪುಟಗಳಲ್ಲಿ ಕಿರಿಯರ ವಿಶ್ವಕೋಶವಾದ 'ಜ್ಞಾನ ಗಂಗೋತ್ರಿ'ಯ ರಚನೆ 1969ರ ಆಗಸ್ಟ್ ತಿಂಗಳಲ್ಲಿ ಕರ್ನಾಟಕ ಸಹಕಾರೀ ಪ್ರಕಾಶನ ಮಂದಿರದ ಆಶ್ರಯದಲ್ಲಿ ಆರಂಭವಾಯಿತು.

ವಿಶ್ವಕೋಶ ಎಲ್ಲರ–ಅದರಲ್ಲೂ ಕಿರಿಯರ– ಶಿಕ್ಷಣಕ್ಕೆ ಬಹಳ ಮಟ್ಟಿಗೆ ಸಹಕಾರಿ. ಸ್ಪಷ್ಟವಾದ ರೀತಿಯಲ್ಲಿ, ತಿಳಿಯಾದ ಶೈಲಿಯಲ್ಲಿ ಬರೆದ, ಚಿತ್ರಗಳನ್ನು ಒಳಗೊಂಡ ವಿಶ್ವಕೋಶ ವ್ಯಕ್ತಿಗೆ ಇಡೀ ವಿಶ್ವದ ಪರಿಚಯ ಮಾಡಿಕೊಡುತ್ತದೆ, ಅವನ ಜ್ಞಾನ ಭಂಡಾರವನ್ನು ಬೆಳೆಸುತ್ತದೆ.

## ವಿಶ್ವನ್ಯಾಯಾಲಯ

ದೇಶ, ಗಡಿ, ಭಾಷೆ, ವರ್ಣಭೇದಗಳನ್ನು ಮರೆಸಿ ಮನುಷ್ಯನನ್ನು ವಿಶ್ವಮಾನವನನ್ನಾಗಿ ಮಾರ್ಪಡಿಸಲು ಎರಡು ಬಾರಿ ಪ್ರಯತ್ನಗಳಾಗಿವೆ: ಪ್ರಥಮ ಜಾಗತಿಕ ಮಹಾಯುದ್ಧದ ಅನಂತರ ಜನಿಸಿದ 'ರಾಷ್ಟ್ರಸಂಘ' ಮೊದಲ ಪ್ರಯತ್ನದ ಫಲ. ಎರಡನೆಯ ಜಾಗತಿಕ ಮಹಾಯುದ್ಧದ ವೇಳೆಗೆ ರಾಷ್ಟ್ರಸಂಘ ಕಣ್ಣುಮುಚ್ಚಿತು. ಆ ಯುದ್ಧದ ಬಳಿಕ ಜನಿಸಿತು 'ವಿಶ್ವಸಂಸ್ಥೆ'. ರಾಷ್ಟ್ರಸಂಘ ನಿರ್ಮಿಸಿದ್ದ ವಿಶ್ವನ್ಯಾಯಾಲಯವನ್ನು ವಿಶ್ವಸಂಸ್ಥೆ ಮುಂದುವರಿಸಿಕೊಂಡು ಹೋಯಿತು. ರಾಷ್ಟ್ರಸಂಘದ ಇದೊಂದೇ ಅಂಗ ವಿಶ್ವಸಂಸ್ಥೆಯ ಅಂಗಸಂಸ್ಥೆಯಾಗಿ ಮಾರ್ಪಟ್ಟದ್ದು ಗಮನೀಯ.

ರಾಷ್ಟ್ರಸಂಘ ವಿಶ್ವನ್ಯಾಯಾಲಯವನ್ನು ಸ್ಥಾಪಿಸುವುದಕ್ಕೆ ಮುಂಚೆ ಅಂತರರಾಷ್ಟ್ರೀಯ ವಿವಾದಗಳನ್ನು ಪರಿಹರಿಸಲು ಪಂಚಾಯತಿಗಳು ಏರ್ಪಡುತ್ತಿದ್ದವು. ಈ ಬಗೆಯ ಸರ್ವಸಮ್ಮತ ನ್ಯಾಯ ನಿರ್ಣಯ, ಶಾಶ್ವತ ವಿಶ್ವನ್ಯಾಯಾಲಯವೊಂದರ ನಿರ್ಮಾಣಕ್ಕೆ ಕಾರಣವಾಯಿತು. ನೆದರ್‌ಲೆಂಡ್ಸಿನ ರಾಜಧಾನಿ ಹೇಗ್‌ನಲ್ಲಿ 1922ರ ಜನವರಿ 30ರಂದು ವಿಶ್ವನ್ಯಾಯಾಲಯ ಅಸ್ತಿತ್ವಕ್ಕೆ ಬಂದಿತು. ಆ ನ್ಯಾಯಾಲಯದ ತೀರ್ಪಿಗೆ ಬದ್ಧವಾಗದೆಯೂ ಉಳಿಯುವ ಸ್ವಾತಂತ್ರ್ಯ ರಾಷ್ಟ್ರಸಂಘದ ವಿಶ್ವನ್ಯಾಯಾಲಯ ಸದಸ್ಯರಾಷ್ಟ್ರಗಳಿಗೆ ಇದ್ದಿತು. ನ್ಯಾಯ ತೀರ್ಪು ಮಾತ್ರವಲ್ಲದೆ ನ್ಯಾಯ ಸಲಹೆಯನ್ನು ನೀಡುವುದು ಸಹ ಅಂದಿನ ವಿಶ್ವನ್ಯಾಯಾಲಯದ ಕಾರ್ಯ. ಲಿಖಿತ ನ್ಯಾಯಸೂತ್ರಕ್ಕೆ ಸಹಿಹಾಕದ ರಾಷ್ಟ್ರಗಳು ಕೂಡ ವಿಶ್ವನ್ಯಾಯಾಲಯದ ತೀರ್ಪು ಮತ್ತು ಸಲಹೆ ಪಡೆಯಬಹುದಾಗಿತ್ತು. 1945ರ ವರೆಗೆ ಇಪ್ಪತ್ತಮೂರು ತೀರ್ಪುಗಳನ್ನೂ ಇಪ್ಪತ್ತೇಳು ಸಲಹೆಗಳನ್ನೂ ವಿಶ್ವನ್ಯಾಯಾಲಯ ನೀಡಿತು. ವಿಶ್ವನ್ಯಾಯಾಲಯದ ಸೇವೆ ಪಡೆದ ಎಪ್ಪತ್ತಾರು ರಾಷ್ಟ್ರಗಳಲ್ಲಿ ಎಂಟು ರಾಷ್ಟ್ರಗಳು ಮಾತ್ರ ತೀರ್ಪನ್ನು ಪಾಲಿಸಲಿಲ್ಲ.

ಆದರೆ ವಿಶ್ವಸಂಸ್ಥೆಯು ಉದಯವಾದ ಮೇಲೆ ಈ ನ್ಯಾಯಾಲಯಕ್ಕೆ ಹೋದ ರಾಷ್ಟ್ರಗಳು ಅದರ ತೀರ್ಪಿನಂತೆ ನಡೆದುಕೊಳ್ಳಲೇಬೇಕೆಂದು ನಿಯಮವಾಯಿತು.

ವಿಶ್ವಸಂಸ್ಥೆ 1946ರಿಂದ ಮುಂದುವರಿಸಿದ ವಿಶ್ವನ್ಯಾಯಾಲಯ ಕೂಡ ತೀರ್ಪನ್ನು ನೀಡುವ ಮತ್ತು ಸಲಹೆ ಕೊಡುವ ಕಾರ್ಯ ನಿರ್ವಹಿಸುತ್ತದೆ. ವಿಶ್ವನ್ಯಾಯಾಲಯ ಹದಿನೈದು ಜನ ನ್ಯಾಯಾಧೀಶರನ್ನು ಒಳಗೊಂಡಿರುತ್ತದೆ. ಒಂದೇ ರಾಷ್ಟ್ರದ ಇಬ್ಬರು ನ್ಯಾಯಾಧೀಶರಾಗಿರಲು ಸಾಧ್ಯವಿಲ್ಲ. ಈ ನ್ಯಾಯಾಧೀಶರನ್ನು ವಿಶ್ವಸಂಸ್ಥೆಯ ಸಾಮಾನ್ಯ ಅಧಿವೇಶನ ಮತ್ತು ಭದ್ರತಾ ಸಮಿತಿಗಳು ಆರಿಸುತ್ತವೆ. ಇವರ ಅವಧಿ ಒಂಬತ್ತು ವರ್ಷಗಳು. ಪುನರಾಯ್ಕೆಗೊಳ್ಳುವ ಅವಕಾಶ ಕೂಡ ಉಂಟು. ಒಂದು ರಾಷ್ಟ್ರದ ನ್ಯಾಯಾಧೀಶರು ಆ ರಾಷ್ಟ್ರವನ್ನು ಪ್ರತಿನಿಧಿಸುವುದಿಲ್ಲ. ಅವರು ಸ್ವತಂತ್ರ ವ್ಯಕ್ತಿಯಾಗಿಯೇ ನ್ಯಾಯಾಲಯದಲ್ಲಿ ಇರುತ್ತಾರೆ. ಕನಿಷ್ಠ ಒಂಬತ್ತು ಮಂದಿ ನ್ಯಾಯಾಧೀಶರ 'ಕೋರಮ್' ನ್ಯಾಯಾಲಯದಲ್ಲಿ ಹಾಜರಿರಬೇಕು. ಸಾಮಾನ್ಯವಾಗಿ ಹನ್ನೊಂದು ಜನ ನ್ಯಾಯಾಧೀಶರು ಹಾಜರಾಗಲು ವ್ಯವಸ್ಥೆಯಿದೆ.

ಕನ್ನಡಿಗರಾದ ಸರ್ ಬಿ. ಎನ್. ರಾವ್ 1952–53ರಲ್ಲಿ ವಿಶ್ವನ್ಯಾಯಾಲಯದಲ್ಲಿ ವಿಶ್ವನ್ಯಾಯಾಧೀಶರಾಗಿ ಕೆಲಸ ಮಾಡಿದರು.

ವಿಶ್ವನ್ಯಾಯಾಲಯದ ಅಧಿಕೃತ ಭಾಷೆಗಳು ಇಂಗ್ಲಿಷ್ ಮತ್ತು ಫ್ರೆಂಚ್.

ನೋಡಿ : ರಾಷ್ಟ್ರಸಂಘ, ವಿಶ್ವಸಂಸ್ಥೆ

## ವಿಶ್ವ ಬ್ಯಾಂಕ್

ಉದ್ದಿಮೆದಾರನಿಗೆ ಅಥವಾ ವ್ಯಾಪಾರಿಗೆ ಹಣ ಬೇಕಾಗುತ್ತದೆ. ಆಗ ಆತ ಏನು ಮಾಡುತ್ತಾನೆ ? ಯಾವುದಾದರೂ ಬ್ಯಾಂಕಿನಿಂದ ಹಣ ಸಾಲ ಪಡೆಯುತ್ತಾನೆ.

ಬ್ಯಾಂಕಿಗೆ ಹಣ ಎಲ್ಲಿಂದ ಬರುತ್ತದೆ? ಹಣ ಉಳಿತಾಯ ಮಾಡಿರುವವರಿಂದ ಹಣವನ್ನು ಠೇವಣಿಯನ್ನಾಗಿ ಬ್ಯಾಂಕ್ ತೆಗೆದುಕೊಳ್ಳುತ್ತದೆ, ಅದಕ್ಕೆ ಬಡ್ಡಿ ನೀಡುತ್ತದೆ.

ವ್ಯಕ್ತಿಗಳಿಗೆ ಹಣದ ಸಹಾಯದ ಅಗತ್ಯ ಬಂದಂತೆ ದೇಶಗಳಿಗೂ ಬರಬಹುದು. ಮುಂದುವರಿಯುತ್ತಿರುವ ಒಂದು ದೇಶ ಆಹಾರದ ಉತ್ಪತ್ತಿಯನ್ನು ಹೆಚ್ಚಿಸುವುದಕ್ಕೆ ಅಥವಾ ಪ್ರವಾಹಗಳ ಹಾವಳಿಯನ್ನು ತಡೆಯುವುದಕ್ಕೆ, ಯೋಜನೆ ರೂಪಿಸಬಹುದು. ಇಂಥ ಯೋಜನೆಗೆ ಅಪಾರ ಹಣ ಬೇಕಾಗಬಹುದು. ಆಗ ದೇಶ ಏನು ಮಾಡಬೇಕು ? ದೇಶಗಳಿಗೂ ಧನಸಹಾಯ ಮಾಡಲು ಒಂದು ಬ್ಯಾಂಕ್ ಇದೆ. ಅದು ವಿಶ್ವ ಬ್ಯಾಂಕ್.

ಹಲವು ರಾಷ್ಟ್ರಗಳ ಬಂಡವಾಳವನ್ನು ಶೇಖರಿಸಿ ಸದಸ್ಯರಾಷ್ಟ್ರಗಳಿಗೆ ಸಾಲ ನೀಡುವ ವಿಶ್ವಬ್ಯಾಂಕ್, ವಿಶ್ವಸಂಸ್ಥೆಯ ಒಂದು ಅಂಗ.

1946ರ ಜೂನ್ ತಿಂಗಳಿನಿಂದ ವ್ಯವಹಾರಗಳನ್ನು ನಡೆಸುತ್ತಿರುವ ವಿಶ್ವ ಬ್ಯಾಂಕಿನ ಪ್ರಧಾನ ಕಚೇರಿ ಅಮೆರಿಕದ ವಾಷಿಂಗ್ಟನ್ ನಗರದಲ್ಲಿದೆ. ನಲವತ್ತನಾಲ್ಕು ರಾಷ್ಟ್ರಗಳು ಸಮ್ಮೇಳನವೊಂದನ್ನು ನಡೆಸಿ ದ್ವಿತೀಯ ಮಹಾಯುದ್ಧದ ಅನಂತರ ಹಣಕಾಸು ಪರಿಸ್ಥಿತಿಯನ್ನು ಸುಧಾರಿಸಿಕೊಳ್ಳಲು ಪರಸ್ಪರ ಸಹಕರಿಸಬೇಕೆಂದು ನಿರ್ಧರಿಸಿದುವು. ಅದರ ಫಲ ವಿಶ್ವ ಬ್ಯಾಂಕ್. ಅಮೆರಿಕ, ಇಂಗ್ಲೆಂಡ್, ಫ್ರಾನ್ಸ್, ಜರ್ಮನಿ, ಭಾರತ, ಕೆನಡ, ಜಪಾನ್, ಚೀನ, ನೆದರ್‌ಲೆಂಡ್ಸ್ ಇವು ಗಣನೀಯ ಬಂಡವಾಳವನ್ನು ಒದಗಿಸಿದುವು. ಆರ್ಥಿಕವಾಗಿ ಅಷ್ಟಾಗಿ ಮುಂದುವರಿಯದ ಐಸ್‌ಲೆಂಡ್, ಇಸ್ರೇಲ್, ಲಿಬಿಯಾ, ಆಫ್ಘಾನಿಸ್ತಾನ್, ಡೆನ್ಮಾರ್ಕ್ ಮುಂತಾದ ರಾಷ್ಟ್ರಗಳು ಕೂಡ ಬಂಡವಾಳವನ್ನು ನೀಡಿದುವು. 1953ರ ಹೊತ್ತಿಗೆ 903 ಕೋಟಿ ಡಾಲರುಗಳ ಬಂಡವಾಳವಿತ್ತು. 1961ರಲ್ಲಿ ಬಂಡವಾಳ 2,009 ಕೋಟಿ ಡಾಲರ್. ಎರಡು ಮಹಾಯುದ್ಧಗಳಿಂದ ಹಾನಿಗೊಳಗಾದ ಐರೋಪ್ಯರಾಷ್ಟ್ರಗಳ ಪುನರ್ನಿರ್ಮಾಣದಲ್ಲಿ ವಿಶ್ವ ಬ್ಯಾಂಕ್ ತೊಡಗಿತು. ಅನಂತರ ಅದರ ಚಟುವಟಿಕೆ ಪ್ರಪಂಚದಲ್ಲೆಲ್ಲ ಹರಡಿತು.

ಸದಸ್ಯರಾಷ್ಟ್ರಗಳು ನೇರವಾಗಿ ಹಣ ಒದಗಿಸಿ ಬಂಡವಾಳ ಕೂಡಿಸಲು ನೆರವಾಗುತ್ತವೆ. ಪ್ರಪಂಚದ ವಾಣಿಜ್ಯ ಮತ್ತು ಹಣಕಾಸು ವ್ಯವಹಾರಗಳಲ್ಲಿ ಪಾಲ್ಗೊಳ್ಳುವ ಬ್ಯಾಂಕ್ ಅಂತರರಾಷ್ಟ್ರೀಯ ಬಂಡವಾಳವನ್ನು ಸುಲಭವಾಗಿ ಸಂಗ್ರಹಿಸುತ್ತದೆ.

ವಿಶ್ವ ಬ್ಯಾಂಕ್ ಸಾಮಾನ್ಯವಾಗಿ ದೀರ್ಘಾವಧಿ ಸಾಲಗಳನ್ನು ನೀಡುತ್ತದೆ. ಸರಕಾರಗಳಿಗೆ ಮಾತ್ರವಲ್ಲದೆ ಯಾವುದಾದರೊಂದು ರಾಷ್ಟ್ರದ ಖಾಸಗಿ ಯೋಜನೆಗೂ ಅದು ಸಾಲ ಒದಗಿಸಬಹುದು. ಆದರೆ ಅಂಥ ಸಂದರ್ಭದಲ್ಲಿ ಆ ದೇಶದ ಸರಕಾರ ಅಥವಾ ಸರಕಾರಿ ಬ್ಯಾಂಕ್ ಮರುಪಾವತಿ ಬಗೆಗೆ ಭರವಸೆ ಕೊಡಬೇಕು. ವಿದ್ಯುದುತ್ಪಾದನೆ–ಹಂಚಿಕೆ, ರೈಲು ಮತ್ತು ಬಂದರುಗಳ ನಿರ್ಮಾಣ, ದೂರ ಸಂಪರ್ಕ ನಿರ್ಮಾಣ, ವಿಮಾನ ನಿಲ್ದಾಣ ಮುಂತಾದ ಖಾಸಗಿ ಮತ್ತು ಸರಕಾರಿ ಯೋಜನೆಗಳಿಗೆ ಮಾತ್ರ ಸಾಲ ನೀಡಲಾಗುತ್ತದೆ. ವ್ಯವಸಾಯದ ಯಾಂತ್ರೀಕರಣ, ನೀರಾವರಿ ಅಭಿವೃದ್ಧಿ, ಪ್ರವಾಹ ತಡೆಗಟ್ಟುವಿಕೆ, ಆಹಾರ ಮತ್ತು ಬೆಳೆಯ ಸಂಸ್ಕರಣ ಸಂಗ್ರಹ, ಜಾನುವಾರು ತಳಿ ಸುಧಾರಣೆ, ಅರಣ್ಯ ರಕ್ಷಣೆ ಮತ್ತು ಸುಧಾರಣೆ ಮುಂತಾದ ಉತ್ಪಾದಕ ಚಟುವಟಿಕೆಗಳಿಗೆ ವಿಶ್ವ ಬ್ಯಾಂಕ್ ನೆರವನ್ನೂ ಸಾಲವನ್ನೂ ಒದಗಿಸುತ್ತದೆ. ಇಂಥ ಯೋಜನೆಗಳಿಗೆ ಸಾಮಾನ್ಯವಾಗಿ ಮತ್ತೆಲ್ಲಿಯೂ ಸುಲಭವಾಗಿ ಹಣ ಒದಗುವುದಿಲ್ಲವೆನಿಸಿದಾಗ, ಚಟುವಟಿಕೆ ಉತ್ಪಾದಕವಾಗಿದ್ದು ಹಣ ಮರಳಿಬರುವ ಭರವಸೆಯಿದ್ದರೆ ವಿಶ್ವ ಬ್ಯಾಂಕ್ ಹಣ ಒದಗಿಸಲು ಮುಂದಾಗುತ್ತದೆ.

ವಿದೇಶಗಳಿಂದ ಆಮದು ಮಾಡಿಕೊಳ್ಳಬೇಕಾದ ವಸ್ತು ಅಥವಾ ಸೇವಾ ಸೌಲಭ್ಯಗಳ ಸಲುವಾಗಿ ವಿಶ್ವ ಬ್ಯಾಂಕ್ ನೇರವಾಗಿ ಯೋಜನೆಗೆ ಸಂಬಂಧಪಟ್ಟವರಿಗೆ ಸಾಲ ಒದಗಿಸುವುದು ವಾಡಿಕೆ. ಸಾಲದ ಹಣಕ್ಕೆ ವಿಶ್ವ ಬ್ಯಾಂಕಿನ ಯಾವುದೇ ಸದಸ್ಯ ರಾಷ್ಟ್ರದಿಂದ ವಸ್ತುಗಳನ್ನಾಗಲೀ ಸೇವಾ ಸೌಲಭ್ಯಗಳನ್ನಾಗಲೀ ಕೊಳ್ಳಬಹುದು. ಯಾವ ದೇಶದ ಹಣ ತನ್ನಲ್ಲಿ ಇದೆಯೋ ಅದರ ರೂಪದಲ್ಲಿ ವಿಶ್ವ ಬ್ಯಾಂಕ್ ಸಾಲ ನೀಡುತ್ತದೆ. ಸಾಲ ಬೇಡುವ ರಾಷ್ಟ್ರಕ್ಕೆ ಫ್ರಾಂಕ್ ರೂಪದಲ್ಲಿ ಹಣ ಬೇಕಿದ್ದರೆ, ಅದು ತನ್ನಲ್ಲಿರುವ ಪೌಂಡ್ ಹಣಕ್ಕೆ ಫ್ರಾಂಕ್ ವಿನಿಮಯ ಪಡೆದು ಸಾಲಗಾರನಿಗೆ ಒದಗಿಸಬಹುದು. ಆ ಸಂದರ್ಭದಲ್ಲಿ ಸಾಲಗಾರ ಪೌಂಡ್ ರೂಪದಲ್ಲಿ ಸಾಲ ತೀರಿಸಬೇಕು.

ಈ ಬ್ಯಾಂಕ್ ಪ್ರಪಂಚದ ವಿವಿಧ ಭಾಗಗಳ ರಾಷ್ಟ್ರಗಳಿಗೆ ಹಲವು ರೀತಿಗಳಲ್ಲಿ ನೆರವಾಗಿದೆ. 1961ರ ಜೂನ್ ಹೊತ್ತಿಗೆ 57 ದೇಶಗಳಿಗೆ 1,579 ಕೋಟಿ ಡಾಲರುಗಳ (ಹನ್ನೊಂದು ಸಾವಿರ ಕೋಟಿ ರೂಪಾಯಿಗಳಿಗೂ ಮೀರಿದಷ್ಟು ಹಣದ) ಸಾಲವನ್ನು ನೀಡಿತು.

ಇದಲ್ಲದೆ, ಸದಸ್ಯರಾಷ್ಟ್ರಗಳಿಗೆ ತಾಂತ್ರಿಕ ಸಲಹೆ ನೆರವನ್ನೂ ವಿಶ್ವ ಬ್ಯಾಂಕ್ ಒದಗಿಸುತ್ತದೆ. 19[illegible]ರಿಂದ ಮುಂದುವರಿಯುತ್ತಿರುವ ರಾಷ್ಟ್ರ

ಗಳ ಅಧಿಕಾರಿಗಳಿಗೆ ಅಭಿವೃದ್ಧಿ ಯೋಜನೆಗಳ ನಿರ್ವಹಣೆಯಲ್ಲಿ ಶಿಕ್ಷಣ ಕೊಡಲು ಒಂದು ಸಂಸ್ಥೆಯನ್ನು ಸ್ಥಾಪಿಸಿದೆ.

ವಿಶ್ವ ಬ್ಯಾಂಕು ಸಾಲ ಒದಗಿಸುವುದೇ ಅಲ್ಲದೆ ಅಂತರರಾಷ್ಟ್ರೀಯ ವಹಿವಾಟಿನಲ್ಲಿ ಸದಸ್ಯ ರಾಷ್ಟ್ರಗಳಿಗೆ ಸಾಲ ತೀರಿಸುವ ಭರವಸೆ ನೀಡುವುದು, ದೇಶಗಳಲ್ಲಿ ಅಭಿವೃದ್ಧಿ ಮತ್ತು ಸ್ಥಿತಿಗತಿಗಳ ಬಗ್ಗೆ ಸಮೀಕ್ಷೆ ನಡೆಸುವುದು, ಹಿಂದುಳಿದ ರಾಷ್ಟ್ರಗಳಲ್ಲಿ ವಿದೇಶಿ ತಾಂತ್ರಿಕಜ್ಞಾನ ಭಾಗವಹಿಸಲು ಮತ್ತು ವಿದೇಶಿ ಬಂಡವಾಳ ನೆಲೆಸಲು ನೆರವಾಗುವುದು – ಮುಂತಾದ ಕಾರ್ಯಗಳನ್ನು ನಡೆಸುತ್ತದೆ.

## ವಿಶ್ವವಿದ್ಯಾನಿಲಯ

ಒಂದು ಸಾವಿರದ ನಾಲ್ಕು ನೂರು ವರ್ಷಗಳ ಹಿಂದಿನ ಭಾರತದಲ್ಲಿ ಶಿಕ್ಷಣ ಕೇಂದ್ರದ ಒಂದು ದೃಶ್ಯ :

ಮೂವತ್ತು ನಲವತ್ತು ಉಪನ್ಯಾಸದ ಕೊಠಡಿಗಳು. ಧರ್ಮಗುಂಜವೆಂಬ ಪುಸ್ತಕ ಭಂಡಾರ; ಆ ಪುಸ್ತಕ ಭಂಡಾರ ಮೂರು ಪ್ರತ್ಯೇಕ ಕಟ್ಟಡಗಳಲ್ಲಿ. ಅವುಗಳಿಗೆ ಹೆಸರೂ ಬಹಳ ಸೊಗಸಾದುದು–ರತ್ನಸಾಗರ, ರತ್ನೋದಧಿ, ರತ್ನರುಜಕ. ಖಗೋಳ ಶಾಸ್ತ್ರ ಅಭ್ಯಾಸಮಾಡುವವರಿಗಾಗಿಯೇ ಒಂದು ವೀಕ್ಷಣಾಗೃಹ. ಸರಿಯಾದ ಕಾಲವನ್ನು ಸೂಚಿಸಲು ಒಂದು ಘಟೀಯಂತ್ರ. ಮಹಾಯಾನ ಬೌದ್ಧಮತ, ವಿದ್ಯಾಭ್ಯಾಸದ ಪ್ರಮುಖ ವಿಷಯ. ಜೊತೆಗೆ ವೇದ, ವೇದಾಂಗ, ಯೋಗ, ಶಬ್ದವಿದ್ಯೆ, ತಂತ್ರಶಾಸ್ತ್ರ ಮೊದಲಾದುವುಗಳ ಅಧ್ಯಯನ.

ವಿದ್ಯಾರ್ಥಿಗಳಿಗೆ ಈ ಕೇಂದ್ರದಲ್ಲಿ ಸುಲಭವಾಗಿ ಪ್ರವೇಶ ಸಿಗುತ್ತಿರಲಿಲ್ಲ. ಮೊದಲು ಕಠಿಣವಾದ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕಾಗಿದ್ದಿತು. ಆದರೆ ಇಂಥ ಕಠಿಣ ಪರೀಕ್ಷೆಯಲ್ಲಿಯೂ ತೇರ್ಗಡೆಯಾಗಿ ಹತ್ತು ಸಾವಿರಕ್ಕಿಂತ ಹೆಚ್ಚು ಮಂದಿ ವಿದ್ಯಾರ್ಥಿಗಳು ವಿದ್ಯಾಭ್ಯಾಸ ಮಾಡುತ್ತಿದ್ದರು. ಇದು ಆರನೆಯ ಶತಮಾನದಿಂದ ಹದಿಮೂರನೆಯ ಶತಮಾನದವರೆಗೂ ಪ್ರಸಿದ್ಧವಾಗಿದ್ದ ನಲಂದಾ ವಿಶ್ವವಿದ್ಯಾನಿಲಯ.

ಇಂಥ ಎಂಟು ವಿಶ್ವವಿದ್ಯಾನಿಲಯಗಳು ಭಾರತದಲ್ಲಿದ್ದುವು.

ಪ್ರಾಚೀನ ಕಾಲದಿಂದಲೂ ಭಾರತ ವಿದ್ಯಾಭ್ಯಾಸಕ್ಕೆ ಪ್ರಖ್ಯಾತವಾಗಿದೆ. ತಕ್ಷಶಿಲೆಯ ವೈದ್ಯಶಿಕ್ಷಣಸಂಸ್ಥೆಯ ಖ್ಯಾತಿ ಪೂರ್ವದೇಶಗಳಲ್ಲೆಲ್ಲ ಹಬ್ಬಿತ್ತು.



ನಲಂದಾ ವಿಶ್ವವಿದ್ಯಾನಿಲಯದ ಅವಶೇಷಗಳು

ಕ್ರಿ.ಪೂ. ಎಂಟನೆಯ ಶತಮಾನದಲ್ಲೇ ಕಾಶಿ, ತಕ್ಷಶಿಲೆ ಮೊದಲಾದ ಸ್ಥಳಗಳು ಪ್ರೌಢವಿದ್ಯಾಭ್ಯಾಸದ ಕೇಂದ್ರಗಳಾಗಿದ್ದುವು.

ನಲಂದಾ ವಿಶ್ವವಿದ್ಯಾನಿಲಯಕ್ಕೆ ಚೀನ, ಜಪಾನ್, ಕೊರಿಯ, ತುರ್ಕಿಸ್ಥಾನ, ಸುಮಾತ್ರ, ಕಾಂಭೋಜ, ಜಾವ, ಸಿಂಹಳ, ಗಾಂಧಾರ, ಯವನ, ಬರ್ಮ, ಟಿಬೆಟ್ ಮುಂತಾದ ದೂರ ದೇಶಗಳಿಂದ ವಿದ್ಯಾರ್ಥಿಗಳು ಬರುತ್ತಿದ್ದರು. ಪ್ರಯಾಣ ಕಷ್ಟವಾಗಿದ್ದು ಕಾಡು, ಬೆಟ್ಟ, ಸಮುದ್ರ, ಮರುಭೂಮಿಗಳನ್ನು ದಾಟಿಕೊಂಡು ವಿದ್ಯಾರ್ಥಿಗಳು ಬರಬೇಕಾಗಿತ್ತು. 1205ರಲ್ಲಿ ಭಾರತದ ಮೇಲೆ ದಂಡೆತ್ತಿಬಂದ ವಿದೇಶೀಯರು ಈ ಪ್ರಖ್ಯಾತ ವಿಶ್ವವಿದ್ಯಾನಿಲಯವನ್ನು ಹಾಳುಗೆಡವಿದರು.

ಹನ್ನೊಂದನೆಯ ಶತಮಾನದಲ್ಲಿ ಕರ್ನಾಟಕದಲ್ಲಿ ಬಳ್ಳಿಗಾವಿಯಲ್ಲಿ ಪರ್ವತಾಮ್ನಾಯದ ಮೂವರಕೋಣೆ ಸಂತತಿಯ ಶಕ್ತಿಪರೀಕ್ಷೆ ಕಾಳಾಮುಖಸ್ಥಾನವಾದ ಕೋಡೀಮಠವು ಪ್ರಸಿದ್ಧ ವಿಶ್ವವಿದ್ಯಾನಿಲಯವಾಗಿದ್ದಿತು. ಈ ಮಠದ ಆಚಾರ್ಯ ಪರಂಪರೆಯಲ್ಲಿ ವಿಖ್ಯಾತ ವಿದ್ವಾಂಸರು ಇನ್ನೂರು ವರ್ಷ ಶಾಲಾಮಠಗಳನ್ನು ಸ್ಥಾಪಿಸಿ ವಿದ್ಯಾದಾನ ಮಾಡಿದರು. ವಿಶ್ವವಿದ್ಯಾನಿಲಯದ ಅಧ್ಯಾಪಕರಿಗೆ ರಾಜರು ಭೂದಾನ, ಗೃಹಗಳು, ಸೇವಕರು, ಪಾರಿತೋಷಕಗಳಿಗಾಗಿ ವ್ಯವಸ್ಥೆ ಮಾಡಿದ್ದರು. ಇವಕ್ಕೆ ಭಟ್ಟವೃತ್ತಿಗಳೆಂದು ಹೆಸರು. ವಿದ್ಯಾರ್ಥಿಗಳ ಊಟ, ಬಟ್ಟೆ, ತೈಲಾಭ್ಯಂಜನಾದಿಗಳಿಗೂ ಏರ್ಪಾಡು ಮಾಡುತ್ತಿದ್ದರೆಂದು ಅನೇಕ ಶಾಸನಗಳಿಂದ ತಿಳಿದುಬರುತ್ತದೆ.

ಪ್ಲೇಟೋ (ಕ್ರಿ. ಪೂ. 427-346) ಸ್ಥಾಪಿಸಿದ ಅಕಾಡಮಿಯನ್ನು ಪ್ರಪಂಚದ ಮೊದಲನೆಯ ವಿಶ್ವವಿದ್ಯಾನಿಲಯ ಎನ್ನಬಹುದು.

ಭಾರತದಲ್ಲಿದ್ದ ವಿಶ್ವವಿದ್ಯಾನಿಲಯಗಳನ್ನು ಬಿಟ್ಟರೆ ಪಾಶ್ಚಾತ್ಯ ವಿಶ್ವವಿದ್ಯಾನಿಲಯಗಳು ಆರಂಭವಾಗುವುದಕ್ಕೂ ಮೊದಲು ಕೈರೋದಲ್ಲಿ ಹತ್ತನೆಯ ಶತಮಾನದಲ್ಲೇ ಅಲ್ ಅಜಾರ್ ಎಂಬ ವಿಶ್ವವಿದ್ಯಾನಿಲಯವಿದ್ದಿತು.

ಯೂರೋಪಿನ ಪ್ರಮುಖ ನಗರಗಳಲ್ಲಿ, ಹದಿಮೂರು ಹದಿನಾಲ್ಕನೆಯ ಶತಮಾನಗಳಲ್ಲಿ, ಅಧ್ಯಾಪಕರ ಹಾಗೂ ಪಂಡಿತರ ತಂಡಗಳು ರೂಪುಗೊಂಡುವು. ಇವು ಆ ಕಾಲದ ವೃತ್ತಿಸಂಘಗಳನ್ನು ಹೋಲುತ್ತಿದ್ದುವು. ಇಂಥ ಶಿಕ್ಷಕರ ತಂಡ ಕಾರ್ಯನಿರತವಾಗಲು ಕ್ರೈಸ್ತ ಧರ್ಮಪೀಠದ–ಕೆಲವೆಡೆ ಅರಸರ–ಅನುಮತಿ ಬೇಕಾಗುತ್ತಿತ್ತು. ಮುಂದೆ ಈ ತಂಡಗಳು ಬೆಳೆದು ವಿದ್ಯಾಕೇಂದ್ರಗಳಾದುವು. ಶಿಕ್ಷಣ ಕೊಡುವ ಹಾಗೂ ಪದವಿ ನೀಡುವ ಅಧಿಕಾರ ಇವುಗಳಿಗೆ ಪ್ರಾಪ್ತವಾಯಿತು. ಈ ಕೇಂದ್ರಗಳೇ ವಿಶ್ವವಿದ್ಯಾನಿಲಯಗಳಾಗಿ ಬೆಳೆದುವು.

ವಿದ್ಯಾರ್ಥಿಗಳ ಗುಂಪು ತಮಗೆ ಪಾಠ ಹೇಳಲು ವಿದ್ವಾಂಸರನ್ನೇ ನೇಮಿಸಿಕೊಂಡದ್ದರಿಂದ ಹನ್ನೊಂದನೆಯ ಶತಮಾನದ ಅಂತ್ಯದಲ್ಲಿ ಇಟಲಿಯ ಬೊಲೋನ ವಿಶ್ವವಿದ್ಯಾನಿಲಯ ಆರಂಭವಾಯಿತು. ಪ್ಯಾರಿಸ್ ವಿಶ್ವವಿದ್ಯಾನಿಲಯವನ್ನು ಹನ್ನೆರಡನೆಯ ಶತಮಾನದಲ್ಲಿ ಅಧ್ಯಾಪಕರ ತಂಡವೊಂದು ಆರಂಭಿಸಿತು.

ಬರಬರುತ್ತ ಈ ವಿಶ್ವವಿದ್ಯಾನಿಲಯಗಳ ಆಡಳಿತವನ್ನು ಅಧ್ಯಾಪಕರ ತಂಡಗಳಿಂದ ಸಂಸ್ಥೆಗಳು ಮತ್ತು ಸರಕಾರ ವಹಿಸಿಕೊಂಡುವು.

ಅಮೆರಿಕದಲ್ಲಿ 1636ರಲ್ಲಿ ಪ್ರೌಢ ಶಿಕ್ಷಣ ಪ್ರಾರಂಭವಾಯಿತು. ಆಗ ಆರಂಭವಾದದ್ದು ಅಮೆರಿಕದ ಸುಪ್ರಸಿದ್ಧ ಹಾರ್‌ವರ್ಡ್ ಕಾಲೇಜು. ಇದೇ ಮುಂದೆ ವಿಶ್ವವಿದ್ಯಾನಿಲಯದ ಸ್ಥಾನವನ್ನು ಹೊಂದಿತು.

ಭಾರತದಲ್ಲಿ ಇಂಗ್ಲಿಷರ ಪ್ರಭಾವದಿಂದ ಲಂಡನ್ ವಿಶ್ವವಿದ್ಯಾನಿಲಯದ ಮಾದರಿಯಲ್ಲಿ 1857ರಲ್ಲಿ ಮೊದಲ ಬಾರಿಗೆ ಮುಂಬಯಿ, ಕಲ್ಕತ್ತ, ಮತ್ತು



ಮಾಸ್ಕೊದಲ್ಲಿರುವ ಪ್ಯಾಟ್ರಿಸ್ ಲುಮುಂಬ ಪೀಪಲ್ಸ್ ಫ್ರೆಂಡ್‌ಷಿಪ್ ವಿಶ್ವವಿದ್ಯಾನಿಲಯ

ಮದರಾಸುಗಳಲ್ಲಿ ವಿಶ್ವವಿದ್ಯಾನಿಲಯಗಳು ಸ್ಥಾಪಿತವಾದುವು. ಹಿಂದೂ ಸಂಸ್ಕೃತಿಗೆ ಪ್ರಾಧಾನ್ಯಕೊಡಲು 1915ರಲ್ಲಿ ಕಾಶಿ ಹಿಂದೂ ವಿಶ್ವವಿದ್ಯಾನಿಲಯ ಸ್ಥಾಪಿತವಾಯಿತು. ಇದಕ್ಕೆ ಮುಖ್ಯ ಪ್ರೇರಕರು ಪಂಡಿತ ಮದನ ಮೋಹನ ಮಾಳವೀಯರು. ಈ ವಿಶ್ವವಿದ್ಯಾನಿಲಯದ ಮೊದಲ ಛಾನ್ಸಲರ್ ಮೈಸೂರಿನ ಆಗಿನ ಮಹಾರಾಜರಾಗಿದ್ದ ಶ್ರೀ ನಾಲ್ವಡಿ ಕೃಷ್ಣ ರಾಜ ಒಡೆಯರು. ಮೈಸೂರು ವಿಶ್ವವಿದ್ಯಾನಿಲಯ ಆರಂಭವಾದದ್ದು 1916ರಲ್ಲಿ; ಭಾರತದಲ್ಲಿ ರಾಜರು ಆಳುತ್ತಿದ್ದ ಸಂಸ್ಥಾನಗಳಲ್ಲಿ ಪ್ರಾರಂಭವಾದ ಮೊದಲನೆಯ ವಿಶ್ವವಿದ್ಯಾನಿಲಯ ಇದು. ಈಗ ಮೈಸೂರು ರಾಜ್ಯದಲ್ಲಿ ನಾಲ್ಕು ವಿಶ್ವವಿದ್ಯಾನಿಲಯಗಳಿವೆ.

ಪ್ರೌಢಶಿಕ್ಷಣ ಕೇಂದ್ರವಾದ ವಿಶ್ವವಿದ್ಯಾನಿಲಯದ ಆಡಳಿತಕ್ಕೆ ಅನೇಕ ಕಾಲೇಜುಗಳು ಒಳಪಟ್ಟಿರುತ್ತವೆ. ಅದರ ಅಧೀನದಲ್ಲಿರುವ ಎಲ್ಲ ಕಾಲೇಜುಗಳಿಗೂ ಅನ್ವಯಿಸುವಂಥ ಕ್ರಮಗಳನ್ನು ವಿಶ್ವವಿದ್ಯಾನಿಲಯ ಕೈಗೊಳ್ಳುತ್ತದೆ. ಪ್ರೌಢಶಿಕ್ಷಣದ ರೀತಿಯನ್ನೂ ಪಠ್ಯಪುಸ್ತಕಗಳನ್ನೂ ವಿಶ್ವವಿದ್ಯಾನಿಲಯ ನಿರ್ಧರಿಸುತ್ತದೆ. ಕಾಲೇಜುಗಳಲ್ಲಿ ಆಗಿಂದಾಗ್ಗೆ ಪರೀಕ್ಷೆಗಳು ನಡೆದರೂ ಒಬ್ಬ ವಿದ್ಯಾರ್ಥಿ ಶಿಕ್ಷಣದ ಅವಧಿಯನ್ನು ಮುಗಿಸಿ ತನ್ನ ಅರ್ಹತಾಪತ್ರ ಪಡೆಯಲು ಬೇಕಾದ ಪರೀಕ್ಷೆಯನ್ನು ವಿಶ್ವವಿದ್ಯಾನಿಲಯವೇ ನಡೆಸುತ್ತದೆ. ಪದವಿಗಳನ್ನು ವಿಶ್ವವಿದ್ಯಾನಿಲಯ ಅಥವಾ ಅದರಷ್ಟೇ ಅಧಿಕಾರವಿರುವ ಸಂಸ್ಥೆಗಳು ಮಾತ್ರ ಕೊಡಬಲ್ಲುವು. ಕಾಲೇಜುಗಳು ಪದವಿಕೊಡುವ ಹಾಗಿಲ್ಲ. ಕಾಲೇಜುಗಳು ಪದವಿ ಪಡೆಯಲು ಬೇಕಾದ ಶಿಕ್ಷಣ ಕೇಂದ್ರಗಳು ಮಾತ್ರ; ಆದರೆ ಆ ಅರ್ಹತೆಯ ಅಂತಿಮ ಪರೀಕ್ಷೆಯನ್ನು ನಡೆಸಿ ನಿರ್ಣಯ ಕೊಡುವುದು ವಿಶ್ವವಿದ್ಯಾನಿಲಯ.

ವಿಶ್ವವಿದ್ಯಾನಿಲಯದ ಆಡಳಿತದ ಅತ್ಯಂತ ಮೇಲಿನ ಅಧಿಕಾರಿಗೆ 'ಕುಲಪತಿ' ಎಂದು ಹೆಸರು. ವಿಶ್ವವಿದ್ಯಾನಿಲಯದ ದಿನನಿತ್ಯದ ಆಗುಹೋಗುಗಳನ್ನೂ ಅದಕ್ಕೆ ಸಂಬಂಧಿಸಿದ ಎಲ್ಲ ಕಾರ್ಯಗಳನ್ನೂ ನೋಡಿಕೊಳ್ಳುವವರಿಗೆ ಉಪಕುಲಪತಿ ಎಂದು ಹೆಸರು. ವಿಶ್ವವಿದ್ಯಾನಿಲಯದ ಆಡಳಿತದ ಹೊಣೆ ಹೊರುವ ಮೂರು ನಿರ್ವಾಹಕ ಮಂಡಲಿಗಳಿವೆ: ಸೆನೆಟ್, ಅಕಾಡೆಮಿಕ್ ಕೌನ್ಸಿಲ್ ಮತ್ತು ಸಿಂಡಿಕೇಟ್. ಒಂದು ರಾಜ್ಯದಲ್ಲಾಗಲೀ, ದೇಶದಲ್ಲಾಗಲೀ ಇಷ್ಟೇ ವಿಶ್ವವಿದ್ಯಾನಿಲಯಗಳಿರಬೇಕೆಂಬುದಿಲ್ಲ. ಆವಶ್ಯತೆಗೆ ತಕ್ಕಂತೆ ಅವು ಬೆಳೆಯುತ್ತ ಹೋಗುತ್ತವೆ. ಭಾರತದಲ್ಲಿ ಈಗ 72 ವಿಶ್ವವಿದ್ಯಾನಿಲಯಗಳಿವೆ.

ಇಂಗ್ಲೆಂಡಿನಲ್ಲಿ ಹೊಸದೊಂದು ವಿಶ್ವವಿದ್ಯಾನಿಲಯ 1969ರಿಂದ ಪ್ರಾರಂಭವಾಗಿದೆ. ಇದು ಅನುಪಮ ಪ್ರಯೋಗವೊಂದನ್ನು ನಡೆಸುತ್ತಿದೆ. ಬ್ರಿಟಿಷ್ ಬ್ರಾಡ್‌ಕಾಸ್ಟಿಂಗ್ ಕಾರ್ಪೊರೇಷನಿನ ರೇಡಿಯೊ ಮತ್ತು ಟೆಲಿವಿಷನ್ ಕಾರ್ಯಕ್ರಮಗಳಲ್ಲಿ ಉಪನ್ಯಾಸಗಳನ್ನು ಏರ್ಪಡಿಸುತ್ತಾರೆ: ಇಷ್ಟವಿರುವವರು ಇವುಗಳಿಂದ ವಿಶ್ವವಿದ್ಯಾನಿಲಯದ ಶಿಕ್ಷಣದ ಪ್ರಯೋಜನವನ್ನು ಪಡೆದು ಪದವಿಗಳನ್ನು ಹೊಂದಬಹುದು. ಶಿಕ್ಷಣದ ಅವಧಿ ನಾಲ್ಕು ವರ್ಷಗಳು. ವಿದ್ಯಾರ್ಥಿಯಾಗಲು ಬಯಸುವವರಿಗೆ ವಯೋನಿರ್ಬಂಧವಿಲ್ಲ. ಉಪಾಧ್ಯಾಯರು ವಿದ್ಯಾರ್ಥಿಗಳ ಪ್ರಬಂಧಗಳನ್ನು ತಿದ್ದಿ ಮಾರ್ಗದರ್ಶನ ಮಾಡುತ್ತಾರೆ. 1970ರಿಂದ ಈ 'ಬಯಲು ವಿಶ್ವವಿದ್ಯಾನಿಲಯ' ಶಿಕ್ಷಣ ಪ್ರಾರಂಭಿಸಿದೆ.

ಆಧುನಿಕ ವಿಶ್ವವಿದ್ಯಾನಿಲಯ ವಿಶ್ವದ ಜೀವನಕ್ಕೆ ಸಂಬಂಧಿಸಿದ ಎಲ್ಲ ವಿದ್ಯೆಯ ನಿಲಯ, ಜ್ಞಾನಮಂದಿರ. ಪ್ರೌಢವ್ಯಾಸಂಗ, ಸಂಶೋಧನೆ ವಿಶೇಷ ಅಧ್ಯಯನ ಇವುಗಳ ಕೇಂದ್ರ. ವಿಶ್ವವಿದ್ಯಾನಿಲಯಕ್ಕೆ ಬರುವವರ ಮನಸ್ಸು ವಿಶ್ವದ ಜ್ಞಾನಕ್ಕೆ ತೆರೆದಿರಬೇಕು. ವಿಶ್ವದ ಎಲ್ಲ ವಿದ್ಯೆಗೆ ಇಲ್ಲಿ ಸ್ಥಾನವಿದೆ. ಎಲ್ಲ ಬಗೆಯ ಜ್ಞಾನಕ್ಕೂ ಇದು ನಿಲಯ; ಎಂದೇ ಇದು ವಿಶ್ವವಿದ್ಯಾನಿಲಯ.

## ವಿಶ್ವಸಂಸ್ಥೆ

ಎರಡು ಮಹಾಯುದ್ಧಗಳಲ್ಲಿ ಬೆಂದು ನಿಶ್ಚೇತನವಾದ ಜಗತ್ತು ಶಾಂತಿಗಾಗಿ ಹಂಬಲಿಸಿದ ಕಾಲ.

ಕ್ಯಾಲಿಫೋರ್ನಿಯದ ಸ್ಯಾನ್‌ಫ್ರಾನ್ಸಿಸ್ಕೊ ನಗರದಲ್ಲಿ 1945ರ ಏಪ್ರಿಲ್ 25ರಂದು ಪ್ರಪಂಚದ ಐವತ್ತು ದೇಶಗಳಿಂದ ಬಂದಿದ್ದ ಸುಮಾರು 800 ಪ್ರತಿನಿಧಿಗಳು ಸಮಾವೇಶಗೊಂಡಿದ್ದರು. ಜೂನ್ 26ರ ತನಕ ಅವರು ಎಡಬಿಡದೆ ಚರ್ಚೆ ನಡೆಸಿದರು. ಬೇರೆ ಬೇರೆ ಸಮಿತಿ ಮಂಡಲಿಗಳನ್ನು ರಚಿಸಿಕೊಂಡು 404 ಸಭೆಗಳನ್ನು ಜರಗಿಸಿದರು. 1,200 ಸಲಹೆಗಳನ್ನು ಪರಿಶೀಲಿಸಿದರು. ಆಗಷ್ಟೇ ಎರಡನೆಯ ಮಹಾಯುದ್ಧ ಮುಗಿದಿತ್ತು. ಈ ಪ್ರತಿನಿಧಿಗಳು ಕೈಗೊಂಡದ್ದು ಮತ್ತೆ ಪ್ರಪಂಚದ ಯುದ್ಧವನ್ನು ಕಾಣಬಾರದೆಂಬ ಮಹತ್ತರ ಸಂಕಲ್ಪವನ್ನು. ಅವರ ವಿಚಾರ ವಿನಿಮಯದ ಫಲವಾಗಿ ವಿಶ್ವಸಂಸ್ಥೆಯ ರೂಪುರೇಷೆ ಅಸ್ತಿತ್ವಕ್ಕೆ ಬಂದಿತು, ವಿಶ್ವಸಂಸ್ಥೆಯ ಪ್ರಣಾಳಿಕೆ ಸಿದ್ಧವಾಯಿತು.

ಪ್ರಪಂಚದಲ್ಲಿ ಶಾಂತಿ ಮತ್ತು ಭದ್ರತೆ, ರಾಷ್ಟ್ರಗಳ ನಡುವೆ ಸ್ನೇಹ ಸೌಹಾರ್ದ, ಪರಸ್ಪರರ ಹಕ್ಕುಗಳ ಮನ್ನಣೆ ಮತ್ತು ವಿವಾದಗಳ ಶಾಂತಿಯುತ ಪರಿಹಾರ, ಹಿಂದುಳಿದವರಿಗೆ ಮತ್ತು ಅಸಹಾಯರಿಗೆ ನೆರವು – ಈ ಘ

ಉದ್ದೇಶಗಳನ್ನು ಪ್ರತಿಪಾದಿಸಿ ಅವುಗಳನ್ನು ಆಚರಿಸಲು ಕರೆನೀಡುವ ಪ್ರಣಾಳಿಕೆಗೆ ಪ್ರಪಂಚದ ಐದರಲ್ಲಿ ನಾಲ್ಕು ಭಾಗದ ಜನ ವಾಸಿಸುವ ಐವತ್ತು ರಾಷ್ಟ್ರಗಳು 1945 ಅಕ್ಟೋಬರ್ 24ರಂದು ಸಹಿಹಾಕಿದುವು.

ಈ ಘಟನೆಗೆ ಹಿನ್ನೆಲೆಯಲ್ಲಿತ್ತು, ಮೊದಲ ಮಹಾಯುದ್ಧದ ಬಳಿಕ (1919) ಸ್ಥಾಪಿತವಾಗಿ 1939ರಲ್ಲಿ ಕಣ್ಣುಮುಚ್ಚಿದ ರಾಷ್ಟ್ರಸಂಘ. ಇನ್ನೊಂದು ವಿಶ್ವಸಂಸ್ಥೆಯನ್ನು ಸ್ಥಾಪಿಸಬೇಕೆಂಬ ಆಲೋಚನೆ ಮೂಡಿದ್ದು 1943ರಲ್ಲಿ ಮಾಸ್ಕೊದಲ್ಲಿ ನಡೆದ ವಿದೇಶ ಸಚಿವರ ಸಮ್ಮೇಳನದಲ್ಲಿ. ವಾಷಿಂಗ್‌ಟನಿನಲ್ಲಿ ಮರುವರ್ಷ ನಡೆದ ಸಮ್ಮೇಳನದಲ್ಲಿ ಅಮೆರಿಕ, ಸೋವಿಯೆತ್ ರಷ್ಯ, ಇಂಗ್ಲೆಂಡ್ ಪ್ರತಿನಿಧಿಗಳು ವಿಶ್ವಸಂಸ್ಥೆಯನ್ನು ಸ್ಥಾಪಿಸುವುದರ ಬಗೆಗೆ ಒಮ್ಮತಕ್ಕೆ ಬಂದರು. 1945 ಫೆಬ್ರುವರಿಯಲ್ಲಿ ಸೋವಿಯೆತ್ ರಷ್ಯದ ಯಾಲ್ಟಾದಲ್ಲಿ ನಡೆದ ಸಮ್ಮೇಳನದಲ್ಲಿ ಸಾನ್‌ಫ್ರಾನ್ಸಿಸ್ಕೊದಲ್ಲಿ ಸಮಾವೇಶವೊಂದನ್ನು ನಡೆಸಬೇಕೆಂದೂ ವಿಶ್ವಸಂಸ್ಥೆಯ ಪ್ರಣಾಳಿಕೆಯನ್ನು ರಚಿಸಬೇಕೆಂದೂ ನಿರ್ಧರಿಸಲಾಯಿತು.

ಪ್ರಣಾಳಿಕೆಗೆ ಸಹಿ ಹಾಕಿದಾಗ 50 ರಾಷ್ಟ್ರಗಳ ಸದಸ್ಯ ಬಲಹೊಂದಿದ್ದ ವಿಶ್ವಸಂಸ್ಥೆ 1968ನೆಯ ನವಂಬರ್ ಹೊತ್ತಿಗೆ 124 ಸದಸ್ಯ ರಾಷ್ಟ್ರಗಳನ್ನು ಹೊಂದಿತ್ತು. ವಸಾಹತುಗಳಾಗಿದ್ದ ಅನೇಕ ರಾಷ್ಟ್ರಗಳು ಸ್ವತಂತ್ರಗೊಂಡಂತೆ ವಿಶ್ವಸಂಸ್ಥೆಯ ಸದಸ್ಯ ಸಂಖ್ಯೆ ಬೆಳೆದಿದೆ.

ವಿಶ್ವಸಂಸ್ಥೆಯ (ಸಂಯುಕ್ತ ರಾಷ್ಟ್ರಸಂಘ–ಯು.ಎನ್.ಓ.) ಎಲ್ಲ ಸದಸ್ಯ ರಾಷ್ಟ್ರಗಳ ಪ್ರತಿನಿಧಿಗಳು ವರ್ಷಕ್ಕೊಮ್ಮೆ ಸಮಾವೇಶಗೊಳ್ಳುತ್ತಾರೆ. ಈ ಸಭೆ ವಿಶ್ವಸಂಸ್ಥೆಯ ಮಹಾಸಭೆ. ಚರ್ಚೆಗೆ ಬರುವ ಎಲ್ಲ ವಿಷಯಗಳ ಬಗೆಗೆ ಪ್ರತಿ ದೇಶವೂ ತನ್ನ ನಿಲುವನ್ನು ಮಹಾಸಭೆಯಲ್ಲಿ ವ್ಯಕ್ತಪಡಿಸಲು ಅವಕಾಶವಿದೆ. ಮತ ಚಲಾಯಿಸುವಾಗ ಪ್ರತಿ ಸದಸ್ಯ ರಾಷ್ಟ್ರಕ್ಕೆ –ಅದರ ಗಾತ್ರ ಜನಸಂಖ್ಯೆ ಬಲ ಏನೇ ಇರಲಿ– ಒಂದು ಮತ ಮಾತ್ರ. ಆದರೆ ಪ್ರತಿ ಸದಸ್ಯ ರಾಷ್ಟ್ರವೂ ಐವರು ಪ್ರತಿನಿಧಿಗಳನ್ನೂ ಐವರು ಉಪಪ್ರತಿನಿಧಿಗಳನ್ನೂ ವಿಶ್ವಸಂಸ್ಥೆಯ ಮಹಾಧಿವೇಶನಕ್ಕೆ ಕಳುಹಿಸುತ್ತದೆ. ಮಹಾಸಭೆಯು ಮುಖ್ಯವಾದ ಸಮಸ್ಯೆಯ ಮೇಲೆ ನಿರ್ಣಯವನ್ನು ಕೈಗೊಳ್ಳಲು ಮೂರರಲ್ಲಿ ಎರಡು ಪಾಲು ಸದಸ್ಯರ ಬೆಂಬಲ ದೊರೆಯಬೇಕು. ತುರ್ತು ಪರಿಸ್ಥಿತಿಗಳಲ್ಲಿ ಮಹಾಸಭೆಯ ವಿಶೇಷ ಅಧಿವೇಶನವನ್ನು ಕರೆಯಲಾಗುತ್ತದೆ.

ವರ್ಷಕ್ಕೊಮ್ಮೆ ಸಮಾವೇಶಗೊಳ್ಳುವ ವಿಶ್ವಸಂಸ್ಥೆಯ ಸರ್ವಸದಸ್ಯರನ್ನೊಳಗೊಂಡ ಮಹಾಸಭೆಯೇ ಎಲ್ಲ ವಿಷಯಗಳನ್ನೂ ಪರಿಶೀಲಿಸಲು ಸಾಧ್ಯವಾಗುವುದಿಲ್ಲ. ಅದು ಕೈಗೊಳ್ಳುವ ನಿರ್ಣಯಗಳ ಬಗೆಗೆ ಪೂರ್ವಭಾವಿಯಾಗಿ ಸಮಾಲೋಚಿಸಿ ಸಲಹೆ ನೀಡಲು ಸಮಿತಿಯೊಂದನ್ನು ರಚಿಸಲಾಗಿದೆ. ಅದು ಭದ್ರತಾ ಸಮಿತಿ. ಜಗತ್ತಿನ ಯಾವುದೋ ಒಂದು ಪ್ರದೇಶದಲ್ಲಿ ಘರ್ಷಣೆಯಾಗಿ ವಿವಾದ ಹುಟ್ಟಿಕೊಂಡರೆ ಭದ್ರತಾ ಸಮಿತಿ ಸಮಾವೇಶಗೊಂಡು ಅದನ್ನು ಚರ್ಚಿಸುತ್ತದೆ. ವಿಶ್ವಸಂಸ್ಥೆಯ ಪ್ರಣಾಳಿಕೆಯನ್ನು ಕಾರ್ಯತಃ ಈಡೇರಿಸುವುದರಲ್ಲಿ ಭದ್ರತಾ ಸಮಿತಿಯೇ ಪ್ರಧಾನಪಾತ್ರ ವಹಿಸುತ್ತದೆ. ವಿಶ್ವಸಂಸ್ಥೆಯ ಚಟುವಟಿಕೆಯಲ್ಲಿ ಇದೇ ಅತ್ಯಂತ ಪ್ರಭಾವಶಾಲಿಯಾದದ್ದು. ಹದಿನೈದು ಮಂದಿ ಸದಸ್ಯರನ್ನೊಳಗೊಂಡ ಈ ಸಮಿತಿಯಲ್ಲಿ ಅಮೆರಿಕ, ಸೋವಿಯೆತ್ ರಷ್ಯ, ಇಂಗ್ಲೆಂಡ್, ಫ್ರಾನ್ಸ್ ಮತ್ತು ಚೀನೀ ಗಣರಾಜ್ಯ ಶಾಶ್ವತ ಸದಸ್ಯರಾಷ್ಟ್ರಗಳು. (ಚೀನ ಎಂದರೆ ಫಾರ್ಮೋಸದಲ್ಲಿರುವ ರಾಷ್ಟ್ರೀಯ ಚೀನ; ಕಮ್ಯೂನಿಸ್ಟ್ ಚೀನವಲ್ಲ.) ಉಳಿದ ಹತ್ತು ಸದಸ್ಯ ರಾಷ್ಟ್ರಗಳನ್ನು ಮಹಾಸಭೆ ಎರಡು ವರ್ಷಗಳ ಅವಧಿಗೆ ಚುನಾಯಿಸುತ್ತದೆ. ಇದನ್ನು ಆರಿಸುವ ವಿಧಾನ ಹೀಗೆ: ಆಫ್ರಿಕ ಮತ್ತು ಏಷ್ಯಖಂಡಗಳ ರಾಷ್ಟ್ರಗಳಿಂದ ಐದು, ಪೂರ್ವ ಯೂರೋಪ್ ರಾಷ್ಟ್ರಗಳಿಂದ ಒಂದು, ಲ್ಯಾಟಿನ್ ಅಮೆರಿಕನ್ ರಾಷ್ಟ್ರಗಳಿಂದ ಎರಡು, ಪಶ್ಚಿಮ ಯೂರೋಪಿನ ರಾಷ್ಟ್ರಗಳಿಂದ ಮತ್ತು ಇತರ ರಾಷ್ಟ್ರಗಳಿಂದ ಎರಡು. ಭದ್ರತಾ ಸಮಿತಿಯಲ್ಲಿ ಯಾವುದೇ ನಿರ್ಣಯ ಅಂಗೀಕೃತವಾಗಲು ಒಂಬತ್ತು ಸದಸ್ಯ ರಾಷ್ಟ್ರಗಳ ಪ್ರತಿನಿಧಿಗಳು ತಮ್ಮ ಸಮ್ಮತಿಯನ್ನು ನೀಡಬೇಕು. ಶಾಶ್ವತ ಸದಸ್ಯರಿಗೆ ವಿಶೇಷವಾದ ಸೌಲಭ್ಯವಿದೆ. ಶಾಶ್ವತ ಸದಸ್ಯರ ಪೈಕಿ ಒಂದು ರಾಷ್ಟ್ರವಾದರೂ ನಿರ್ಣಯಕ್ಕೆ ಅಸಮ್ಮತಿ ಸೂಚಿಸಿದಲ್ಲಿ ನಿರ್ಣಯ ಅಂಗೀಕರಿಸಲ್ಪಡುವುದಿಲ್ಲ. ಐವರು ಶಾಶ್ವತ ಸದಸ್ಯರೂ ಒಪ್ಪಿ ಒಟ್ಟಿಗೇ ಕನಿಷ್ಠ ಒಂಬತ್ತು ಮಂದಿಯಾದರೂ ತಮ್ಮ ಒಪ್ಪಿಗೆ ಸೂಚಿಸಿದರೆ ಮಾತ್ರ ನಿರ್ಣಯ ಅಂಗೀಕರಿಸಲ್ಪಡುತ್ತದೆ. ಶಾಶ್ವತ ಸದಸ್ಯ ರಾಷ್ಟ್ರಗಳಲ್ಲಿ ಯಾವುದಕ್ಕಾದರೂ ನಿರ್ಣಯ ಒಪ್ಪಿಗೆಯಾಗದಿದ್ದಲ್ಲಿ ತನ್ನ ಅಸಮ್ಮತಿ ಸೂಚಿಸಿ ನಿರ್ಣಯವನ್ನು ತಡೆಗಟ್ಟುತ್ತದೆ. ಇಂಥ ಶಾಶ್ವತ ಸದಸ್ಯ ರಾಷ್ಟ್ರದ ಅಸಮ್ಮತಿ 'ವೀಟೋ'. ಶಾಶ್ವತ ಸದಸ್ಯ ರಾಷ್ಟ್ರಗಳು ಪ್ರಬಲ ರಾಷ್ಟ್ರಗಳಾದ್ದರಿಂದಲೂ, ಭದ್ರತಾ ಸಮಿತಿಯ ಮುಂದೆ ಬರುವ ಜರೂರು ಸಮಸ್ಯೆಗಳು ರಾಜಕೀಯ ಸ್ವರೂಪದ್ದಾಗಿರುವುದರಿಂದಲೂ 'ವೀಟೋ' ಚಲಾವಣೆಗೆ ವಿಶೇಷವಾದ ಮಹತ್ವವಿದೆ.

ರಾಷ್ಟ್ರಗಳ ನಡುವೆ ವಿವಾದ ಉಂಟಾದಲ್ಲಿ ಭದ್ರತಾ ಸಮಿತಿ ಅದರ ಕಾರಣಗಳನ್ನು ಹುಡುಕಿ ಶಾಂತ ರೀತಿಯಿಂದ ಪರಿಹರಿಸಿಕೊಳ್ಳಲು ವಿವಾದಗ್ರಸ್ತ ರಾಷ್ಟ್ರಗಳನ್ನು ಒತ್ತಾಯಪಡಿಸುತ್ತದೆ. ಕದನ ಪ್ರಾರಂಭವಾಗಿದ್ದರೆ ಶಸ್ತ್ರವಿರಾಮಕ್ಕೆ ಕರೆಕೊಡುತ್ತದೆ. ಸಂಧಾನದ ಉಪಾಯಗಳನ್ನು ಸೂಚಿಸುತ್ತದೆ. ವಿವಾದ ಅಷ್ಟರಲ್ಲಿ ಪರಿಹಾರವಾಗದಿದ್ದರೆ ಘರ್ಷಣೆಯ ಸ್ಥಳಕ್ಕೆ ವಿಶ್ವಸಂಸ್ಥೆ ಸೈನ್ಯವನ್ನು ಕಳುಹಿಸಿ ಪರಿಸ್ಥಿತಿಯನ್ನು ಹತೋಟಿಗೆ ತರಲು ಏರ್ಪಾಡು ಮಾಡುತ್ತದೆ. ಭದ್ರತಾ ಸಮಿತಿಯಲ್ಲಿ ಆದ ನಿರ್ಣಯಗಳ ಪ್ರಸ್ತಾಪ ಮಹಾಸಭೆಯಲ್ಲಿ ಬರುತ್ತದೆ. ವಿಟೊ ಚಲಾವಣೆ ಆದ ಪ್ರಸಂಗದಲ್ಲಿ ವಿಷಯವನ್ನು ಮಹಾಸಭೆ ಪರಿಶೀಲಿಸಬಹುದು.

ವಿಶ್ವಸಂಸ್ಥೆಯ ಆಡಳಿತ ನಿರ್ವಹಣೆಯ ಮುಖ್ಯ ಅಧಿಕಾರಿಯಾದ ಪ್ರಧಾನ ಕಾರ್ಯದರ್ಶಿಯನ್ನು ಪೂರ್ವಭಾವಿಯಾಗಿ ಆರಿಸುವುದರಲ್ಲಿ ಭದ್ರತಾ ಸಮಿತಿ ಪ್ರಧಾನ ಪಾತ್ರ ವಹಿಸುತ್ತದೆ. ಅನಂತರ ಮಹಾಸಭೆ ಪ್ರಧಾನ ಕಾರ್ಯದರ್ಶಿಯನ್ನು ಆಯ್ಕೆಮಾಡುತ್ತದೆ. ಹೊಸ ರಾಷ್ಟ್ರಗಳಿಗೆ ಸದಸ್ಯತ್ವವನ್ನು ನೀಡುವ ಬಗೆಗೂ ಭದ್ರತಾ ಸಮಿತಿ ಪೂರ್ವಭಾವಿ ಪರಿಶೀಲನೆ ನಡೆಸುತ್ತದೆ.

ವಿಶ್ವಸಂಸ್ಥೆಯ ಪ್ರಧಾನ ಕಾರ್ಯಾಲಯ ನ್ಯೂ ಯಾರ್ಕಿನ ಈಸ್ಟ್ ನದಿಯ ದಡದಲ್ಲಿ 7,285 ಹೆಕ್ಟೇರು ವಿಸ್ತೀರ್ಣದ ಪ್ರದೇಶದಲ್ಲಿ ನಿರ್ಮಿತವಾಗಿದೆ. ಮೂವತ್ತೊಂಬತ್ತು ಅಂತಸ್ತಿನ ಬೃಹತ್ ಕಟ್ಟಡದಲ್ಲಿ ಸುಮಾರು ನಾಲ್ಕು ಸಾವಿರ ಜನ ವಿಶ್ವಸಂಸ್ಥೆಯ ಆಡಳಿತವನ್ನು ನಿರ್ವಹಿಸುತ್ತಾರೆ. ಪ್ರಪಂಚದ ಎಲ್ಲ ರಾಷ್ಟ್ರಗಳಿಂದಲೂ ವಿಶ್ವಸಂಸ್ಥೆಯ ಅಧಿಕಾರಿವರ್ಗಕ್ಕೆ ಆಯ್ಕೆಮಾಡಲಾಗುತ್ತದೆ. ಅತ್ಯಂತ ಸಮರ್ಥರೆನಿಸಿದ ಅಧಿಕಾರಿಗಳು ವಿಶ್ವಸಂಸ್ಥೆಯ ಧ್ಯೇಯೋದ್ದೇಶಗಳಿಗಾಗಿ ದುಡಿಯುತ್ತಾರೆ. ವಿಶ್ವಸಂಸ್ಥೆಯ ಆಡಳಿತದ ಪೂರ್ಣ ಜವಾಬ್ದಾರಿಯು ಪ್ರಧಾನ ಕಾರ್ಯದರ್ಶಿಯ ಮೇಲಿರುತ್ತದೆ. ನಾರ್ವೆಯ ಟ್ರಿಗ್ವೇ ಲೀ, ಸ್ವೀಡನಿನ ಡಾಗ್ ಹ್ಯಾಮರ್‌ಷೋಲ್ಡ್ ಇವರ ಅನಂತರ ಈಗ ಪ್ರಧಾನ ಕಾರ್ಯದರ್ಶಿಯ ಹೊಣೆಯನ್ನು ನಿರ್ವಹಿಸುತ್ತಿರುವವರು ಬರ್ಮಾದ ಉ ಥಾಂಟ್.

ವಿಶ್ವಸಂಸ್ಥೆಯ ಆಡಳಿತ ನಿರ್ವಹಣೆಯ ಖರ್ಚುಗಳಿಗಾಗಿ ಸದಸ್ಯರಾಷ್ಟ್ರಗಳು ವಂತಿಗೆ ನೀಡುತ್ತವೆ. ಸದಸ್ಯ ರಾಷ್ಟ್ರದ ಆರ್ಥಿಕಮಟ್ಟ, ವಂತಿಗೆ ನೀಡುವ ಚೈತನ್ಯದ ಪ್ರಮಾಣ ಇವನ್ನು ಆಧರಿಸಿ ಪ್ರತಿ ಸದಸ್ಯ ರಾಷ್ಟ್ರದ ವಂತಿಗೆ ಇಷ್ಟೆಂದು ನಿರ್ಧರಿಸಲಾಗಿದೆ. ಅಮೆರಿಕದ ಸಂಯುಕ್ತ ಸಂಸ್ಥಾನ ಅತ್ಯಂತ ಹೆಚ್ಚಿನ ವಂತಿಗೆಯನ್ನು ಸಲ್ಲಿಸುತ್ತದೆ. ಅನೇಕ ರಾಷ್ಟ್ರಗಳು ನಿಗದಿಯಾದ ಪ್ರಮಾಣಕ್ಕಿಂತ ಹೆಚ್ಚಿಗೆ ವಂತಿಗೆ ಸಲ್ಲಿಸುತ್ತವೆ. ವಂತಿಗೆ ನೀಡಲು ನಿರಾಕರಿಸುವ ಸದಸ್ಯ ರಾಷ್ಟ್ರಗಳೂ ಇಲ್ಲದಿಲ್ಲ. ವಿಶ್ವಸಂಸ್ಥೆಯ ಆಡಳಿತವು ಜಟಿಲ ಮಾತ್ರವಲ್ಲದೆ ದುಬಾರಿ ಕೂಡ. 1946ರಲ್ಲಿ ವಿಶ್ವಸಂಸ್ಥೆಯ ವೆಚ್ಚ ಐದು ಕೋಟಿ ಡಾಲರ್‌ಗಳಷ್ಟಿತ್ತು. 1965ರಲ್ಲಿ ವೆಚ್ಚ ಐವತ್ತು ಕೋಟಿ ಡಾಲರುಗಳಾದುವು. ವಿಶ್ವಸಂಸ್ಥೆಯ ಸದಸ್ಯ ಸಂಖ್ಯೆ ತೀವ್ರವಾಗಿ ಏರುತ್ತಿದೆ, ನಿಜ. ಆದರೆ ಹೊಸ ಸದಸ್ಯ ರಾಷ್ಟ್ರಗಳು ಆರ್ಥಿಕವಾಗಿ ದುರ್ಬಲವಾದುವು. ಆದುದರಿಂದ ಸದಸ್ಯ ಸಂಖ್ಯೆ ಏರಿಕೆಯಾದ ಪ್ರಮಾಣದಲ್ಲಿ ಆದಾಯ ಹೆಚ್ಚುತ್ತಿಲ್ಲ.

ಇನ್ನೂ ಅಭಿವೃದ್ಧಿಗೆ ಬರುತ್ತಿರುವ ದೇಶಗಳಿಗೆ ವಿಶ್ವಸಂಸ್ಥೆ ಹಲವು ರೀತಿಗಳಲ್ಲಿ ಸಹಾಯ ಮಾಡುತ್ತದೆ. ಹಿಂದೆ ವಸಾಹತುಗಳಾಗಿದ್ದ ಕೆಲವು ಪ್ರದೇಶಗಳನ್ನು ಧರ್ಮದರ್ಶಿ (ಟ್ರಸ್ಟಿ) ಯಾಗಿ ನೋಡಿಕೊಳ್ಳುತ್ತದೆ.

ವಿಶ್ವನ್ಯಾಯಾಲಯ ನೆದರ್‌ಲೆಂಡ್ಸಿನ ಹೇಗ್‌ನಲ್ಲಿ ಕೆಲಸ ಮಾಡುತ್ತದೆ. ಹಿಂದಿನ ರಾಷ್ಟ್ರಸಂಘ ಸ್ಥಾಪಿಸಿದ ಅಂತರರಾಷ್ಟ್ರೀಯ ನ್ಯಾಯಾಲಯವನ್ನು ವಿಶ್ವಸಂಸ್ಥೆಯ ನ್ಯಾಯಾಲಯವನ್ನಾಗಿ ಅಂಗೀಕರಿಸಿ ವಿಶ್ವನ್ಯಾಯಾಲಯವೆಂದು ಕರೆಯಲಾಗಿದೆ. ಗಡಿರೇಖೆ, ಪ್ರದೇಶದ ಒಡೆತನ, ಒಪ್ಪಂದಗಳ ವ್ಯಾಖ್ಯಾನ ಈ ವಿಷಯಗಳ ಬಗೆಗೆ ಸದಸ್ಯ ರಾಷ್ಟ್ರಗಳ ನಡುವೆ ವಿವಾದ ಹುಟ್ಟಿ, ಅವು ಬಯಸಿದಾಗ ವಿಶ್ವನ್ಯಾಯಾಲಯ ತೀರ್ಮಾನ ನೀಡುತ್ತದೆ.

ಎಲ್ಲ ಸದಸ್ಯರಾಷ್ಟ್ರಗಳೂ ಎದುರಿಸಬೇಕಾದ ಸಮಸ್ಯೆಗಳಿರುತ್ತವೆ. ಪ್ರವಾಹ ನಿಯಂತ್ರಣ, ಸ್ತ್ರೀಯರ ಸಮಾನತೆಯ ಸಾಧನೆ, ಭೂಸುಧಾರಣೆ, ಆರ್ಥಿಕ ಬೆಳವಣಿಗೆ, ಮಾದಕವಸ್ತುಗಳ ನಿಯಂತ್ರಣ ಇವು ಇಂಥ ಕೆಲವು ಸಮಸ್ಯೆಗಳು. ಇವಕ್ಕೆ ಸಂಬಂಧಿಸಿದಂತೆ ಪರಸ್ಪರ ಸಹಕಾರ ಮತ್ತು ನೆರವನ್ನು ಆರ್ಥಿಕ ಮತ್ತು ಸಾಮಾಜಿಕ ಸಮಿತಿ ಏರ್ಪಡಿಸುತ್ತದೆ. ಪ್ರತಿ ವರ್ಷವೂ ಒಂಬತ್ತು ಮಂದಿ ಸದಸ್ಯರನ್ನು ಆರಿಸಲಾಗುತ್ತದೆ. ಸದಸ್ಯತ್ವದ ಅವಧಿ ಮೂರು ವರ್ಷಗಳು.

ವಿಶ್ವಸಂಸ್ಥೆಯ ಹೊಣೆ ಸೇನೆಗಳು ಹೋರಾಡದಂತೆ ನೋಡಿಕೊಳ್ಳುವುದು ಮಾತ್ರವಲ್ಲ. ಎಲ್ಲ ರಾಷ್ಟ್ರಗಳ ಜನರ ಕಲ್ಯಾಣ ಸಾಧನೆಯೂ ಅದರ ಕರ್ತವ್ಯ. ಕೆಲವು ರಾಷ್ಟ್ರಗಳು ಶ್ರೀಮಂತವಾಗಿದ್ದು ಕೆಲವು ಬಡತನದಲ್ಲಿ ಬಳಲುತ್ತಿದ್ದರೆ ಅದು ನ್ಯಾಯವೂ ಅಲ್ಲ. ಶಾಂತಿಯನ್ನುಳಿಸಿಕೊಳ್ಳುವ ದಾರಿಯೂ ಅಲ್ಲ. ಮನುಷ್ಯಕುಲವೆಲ್ಲ ಒಂದು ಎನ್ನುವ ಭಾವನೆ ಬೆಳೆಯಬೇಕು. ದೇಶಗಳು ಸಹಕಾರದಿಂದ ಲೋಕಕಲ್ಯಾಣಕ್ಕಾಗಿ, ಪರಸ್ಪರರ ಹಿತಕ್ಕಾಗಿ ದುಡಿಯುವುದನ್ನು ಕಲಿಯಬೇಕು. ಇದಕ್ಕಾಗಿ ವಿಶ್ವಸಂಸ್ಥೆಯ ಆಶ್ರಯದಲ್ಲಿ ಹದಿನಾಲ್ಕು ವಿಶೇಷ ಸಂಸ್ಥೆಗಳು ಕೆಲಸಮಾಡುತ್ತವೆ. ಉದಾಹರಣೆ : ಅಂತರರಾಷ್ಟ್ರೀಯ ಅಣುಶಕ್ತಿ ಸಂಸ್ಥೆ, ಅಂತರರಾಷ್ಟ್ರೀಯ ಕಾರ್ಮಿಕ ಸಂಸ್ಥೆ, ಜಾಗತಿಕ ಆಹಾರ ಮತ್ತು ವ್ಯವಸಾಯ ಸಂಸ್ಥೆ, ವಿಶ್ವಸಂಸ್ಥೆಯ ಶೈಕ್ಷಣಿಕ, ವೈಜ್ಞಾನಿಕ ಮತ್ತು ಸಾಂಸ್ಕೃತಿಕ ಸಂಸ್ಥೆ, ವಿಶ್ವ ಆರೋಗ್ಯ ಸಂಸ್ಥೆ.

1970ರಲ್ಲಿ ವಿಶ್ವಸಂಸ್ಥೆಯ ಬೆಳ್ಳಿಯ ಹಬ್ಬವನ್ನು ಆಚರಿಸಲಾಯಿತು.



ವಿಶ್ವಸಂಸ್ಥೆಯ ಭವನ

ವಿಶ್ವಸಂಸ್ಥೆಯ ಕಾರ್ಯನಿರ್ವಹಣೆಯಲ್ಲಿ ತೊಡಕುಗಳಿವೆ. ಜನಸಂಖ್ಯೆಯಲ್ಲಿ ಪ್ರಪಂಚದ ಮೊದಲನೆಯ ರಾಷ್ಟ್ರವಾದ ಕಮ್ಯೂನಿಸ್ಟ್ ಚೀನಕ್ಕೆ ಈ ಸಂಸ್ಥೆಯ ಸದಸ್ಯತ್ವ ದೊರೆತಿಲ್ಲ. ಭದ್ರತಾ ಸಮಿತಿಯ ಶಾಶ್ವತ ಸದಸ್ಯ ರಾಷ್ಟ್ರಗಳಲ್ಲಿ ಆಗಾಗ ವಿರಸಗಳುಂಟಾಗುತ್ತವೆ. ದಕ್ಷಿಣ ಆಫ್ರಿಕ ಮತ್ತು ರೊಡೀಷಿಯದಂಥ ರಾಷ್ಟ್ರಗಳು ವಿಶ್ವಸಂಸ್ಥೆಯ ನಿರ್ಧಾರಗಳಿಗೆ ಮನ್ನಣೆ ಕೊಡುವುದಿಲ್ಲ. ಇವೆಲ್ಲ, ಸಂಸ್ಥೆ ಯಾವ ಶ್ರೇಷ್ಠವಾದ ಉದ್ದೇಶದಿಂದ ಸ್ಥಾಪಿತವಾಯಿತೊ, ಅದರ ಸಾಧನೆಗೆ ಅಡ್ಡಿಗಳಾಗಿವೆ. ಆದರೂ ಹಲವು ದೇಶಗಳವರು ಒಟ್ಟಿಗೆ ಕೆಲಸಮಾಡಿ ಸಮಸ್ಯೆಗಳನ್ನು ಬಗೆಹರಿಸುವ ಮಾರ್ಗವನ್ನು ಈ ಸಂಸ್ಥೆ ತೋರಿಸಿದೆ. ವಿಶ್ವ ಆರೋಗ್ಯ ಸಂಸ್ಥೆಯಲ್ಲಿ ಒಂದು ನೂರು ರಾಷ್ಟ್ರಗಳ ವೈಜ್ಞಾನಿಕರು, ವೈದ್ಯರು ಒಟ್ಟಿಗೆ ಕೆಲಸಮಾಡುತ್ತಾರೆ. ಪ್ರಪಂಚದ ಯಾವುದೋ ಮೂಲೆಯಲ್ಲಿ ಹಿಂದುಳಿದ ರಾಷ್ಟ್ರದಲ್ಲಿ ಕಾಯಿಲೆಯೊಂದು ಜನರನ್ನು ಬಲಿ ತೆಗೆದುಕೊಳ್ಳುತ್ತಿದ್ದರೆ ಈ ನೂರು ರಾಷ್ಟ್ರಗಳ ನಿಪುಣರು ಅದನ್ನು ತಡೆಗಟ್ಟಲು ಕೆಲಸ ಮಾಡುತ್ತಾರೆ. ಹಿಂದುಳಿದ ದೇಶಗಳಿಗೆ ಶಿಕ್ಷಣ, ಶಿಲ್ಪಶಾಸ್ತ್ರ, ವೈದ್ಯ ಮೊದಲಾದ ಕ್ಷೇತ್ರಗಳಲ್ಲಿ ಪ್ರಗತಿ ಸಾಧಿಸಲು ನಿಪುಣರನ್ನು ಕಳುಹಿಸುತ್ತದೆ. ಶಾಂತಿಗಾಗಿ ಹಂಬಲಿಸುವ ಜಗತ್ತಿಗೆ ಒಂದು ಭರವಸೆ ವಿಶ್ವಸಂಸ್ಥೆ.

ನೋಡಿ : ವಿಶ್ವನ್ಯಾಯಾಲಯ



## ವಿಶ್ವೇಶ್ವರಯ್ಯ, ಮೋಕ್ಷಗುಂಡಂ

1951ನೆಯ ಇಸವಿ—ಭಾರತ ಸರಕಾರ ಗಂಗಾನದಿಗೆ ಒಂದು ಹೊಸ ಸೇತುವೆಯನ್ನು ಕಟ್ಟಬೇಕೆಂದು ಆಲೋಚಿಸಿತು. ಎಲ್ಲಿ ಕಟ್ಟಬೇಕು ಎಂಬ ಬಗ್ಗೆ ಇಂಜಿನಿಯರುಗಳಲ್ಲಿ ಏಕಾಭಿಪ್ರಾಯವಿರಲಿಲ್ಲ, ತಜ್ಞರೊಬ್ಬರ ಸಲಹೆಪಡೆಯಲು ನಿರ್ಧಾರವಾಯಿತು. ಅವರು ತೊಂಬತ್ತು ವರ್ಷದ ವೃದ್ಧ. ದೊಡ್ಡ ದೊಡ್ಡ ಬಂಡೆಗಳಿಂದ ಕೂಡಿದ ಕಡಿದಾದ ನದಿಯ ತೀರದಲ್ಲಿ ಸಂಚಾರ ಮಾಡುವುದು ಯುವಕರಿಗೂ ಕಷ್ಟದ ಕೆಲಸ. ಆದ್ದರಿಂದ ಆ ವೃದ್ಧ ಮಹಾಶಯರನ್ನು ಕೊಂಡೊಯ್ಯಲು ಡೋಲಿಗಳು ಸಿದ್ಧವಾಗಿ ನಿಂತುವು. ಕ್ಲುಪ್ತ ವೇಳೆಗೆ ಸರಿಯಾಗಿ ಕಾರಿನಲ್ಲಿ ಬಂದಿಳಿದರು ಆ ವೃದ್ಧರು. ನೆಲದಿಂದ ಗುಡ್ಡಕ್ಕೆ, ಗುಡ್ಡದಿಂದ ಬಂಡೆಗೆ, ಬಂಡೆಯಿಂದ ಮತ್ತೊಂದು ಬಂಡೆಗೆ ಏರಿದರು. ಡೋಲಿ ಹೊರುವವರು, ಸಹಾಯಕ್ಕೆಂದು ಬಂದವರು, ಎಲ್ಲರನ್ನೂ ಹಿಂದೆ ಬಿಟ್ಟು ಒಂದು ಗಂಟೆಯೊಳಗೆ ಆ ಸ್ಥಳವನ್ನೆಲ್ಲ ಪರಿಶೀಲಿಸಿದರು. ಉಳಿದವರೆಲ್ಲ ಮೂಗಿನ ಮೇಲೆ ಬೆರಳಿಟ್ಟು ನಿಂತಿರುವಂತೆಯೇ ಕೆಲಸ ಮುಗಿಸಿ ಆ ವೃದ್ಧರು ಹಿಂದಿರುಗಿದರು.

ಯಾರು ತೊಂಬತ್ತರ ಹರೆಯದ ಆ ಯುವಕ ?

ಅವರು ಮೈಸೂರಿನ ಕೃಷ್ಣರಾಜಸಾಗರ, ಭದ್ರಾವತಿ ಕಬ್ಬಿಣದ ಕಾರಖಾನೆ, ಮೈಸೂರು ವಿಶ್ವವಿದ್ಯಾನಿಲಯ, ಶರಾವತಿ ಯೋಜನೆ—ಮುಂತಾದ ಮಹತ್ಕಾರ್ಯಗಳನ್ನು ಸಾಧಿಸಿದ ಖ್ಯಾತ ವಾಸ್ತುಶಿಲ್ಪಿ ಮೋಕ್ಷಗುಂಡಂ ವಿಶ್ವೇಶ್ವರಯ್ಯ.

1861ನೆಯ ಸೆಪ್ಟೆಂಬರ್ 16ರಂದು ಚಿಕ್ಕಬಳ್ಳಾಪುರ ತಾಲ್ಲೂಕಿನ ಮುದ್ದೇನಹಳ್ಳಿ ಎಂಬಲ್ಲಿ ವಿಶ್ವೇಶ್ವರಯ್ಯನವರ ಜನನ. ಮೋಕ್ಷಗುಂಡಂ ಎಂಬುದು ಆಂಧ್ರಪ್ರದೇಶದ ಒಂದು ಗ್ರಾಮ. ವಿಶ್ವೇಶ್ವರಯ್ಯನವರ ಪೂರ್ವಿಕರು ಅಲ್ಲಿದ್ದುದರಿಂದ ಮನೆತನ ಮೈಸೂರು ರಾಜ್ಯಕ್ಕೆ ಬಂದರೂ ಆ ಹೆಸರು ಹಿಂಬಾಲಿಸಿಬಂತು.

ಬಾಲ್ಯದಿಂದಲೂ ತಂದೆಯ ಕಟ್ಟುನಿಟ್ಟಿನ ಆಶ್ರಯದಲ್ಲಿ ವಿದ್ಯೆ ಕಲಿತ ವಿಶ್ವೇಶ್ವರಯ್ಯ ವ್ಯಾಸಂಗವನ್ನು ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಮುಂದುವರಿಸಿ 1881ರಲ್ಲಿ ಬಿ. ಎ. ಪದವೀಧರರಾದರು. ಅನಂತರ ವಿಶೇಷ ವೇತನ ಪಡೆದು ಪುಣೆಯಲ್ಲಿ ಇಂಜಿನಿಯರಿಂಗ್ ಪರೀಕ್ಷೆಯಲ್ಲಿ ಪ್ರಥಮದರ್ಜೆಯಲ್ಲಿ ಉತ್ತೀರ್ಣರಾದರು.

1884ರಲ್ಲಿ ಸರಕಾರಿ ನೌಕರರಾಗಿ ಜೀವನ ಆರಂಭಿಸಿದ ವಿಶ್ವೇಶ್ವರಯ್ಯ ಕಡೆಯವರೆಗೂ ಹಗಲೂ ಇರುಳೂ ಪ್ರಜಾಹಿತಕ್ಕಾಗಿ, ರಾಷ್ಟ್ರದ ಮುನ್ನಡೆಗಾಗಿ ದುಡಿದರು. ಅಸಿಸ್ಟೆಂಟ್ ಇಂಜಿನಿಯರ್, ಸೂಪರಿಂಟೆಂಡಿಂಗ್ ಇಂಜಿನಿಯರ್, ಚೀಫ್ ಇಂಜಿನಿಯರ್, ಮೈಸೂರಿನ ದಿವಾನರು–ಹೀಗೆ ಹತ್ತಾರು ಪದವಿಗಳಲ್ಲಿದ್ದು ಅವರು ದೇಶ ಸೇವೆ ಸಲ್ಲಿಸಿದರು. ಜಪಾನ್, ಕೆನಡ, ಅಮೆರಿಕ, ಯೂರೋಪ್ ಮುಂತಾದ ದೇಶಗಳಲ್ಲಿ ಪ್ರವಾಸ ಕೈಗೊಂಡು ಆರ್ಥಿಕಸ್ಥಿತಿಯನ್ನು ಉತ್ತಮಪಡಿಸಲು ಆಯಾ ದೇಶಗಳು ಉದ್ದಿಮ ಕ್ಷೇತ್ರದಲ್ಲಿ ಕೈಗೊಂಡಿರುವ ಕ್ರಮಗಳೇನು ಎಂಬುದನ್ನು ಅಧ್ಯಯನ ಮಾಡಿದರು. 1906ರಲ್ಲಿ ಅರಬ್ ಪರ್ಯಾಯದ್ವೀಪದ ಬ್ರಿಟಿಷ್ ವಸಾಹತು ಏಡನ್ ಬಂದರಿನಲ್ಲಿ ನೀರಿನ ವ್ಯವಸ್ಥೆಗೆ ಸೂಕ್ತ ಸಲಹೆ ನೀಡಲು ಭಾರತ ಸರಕಾರ ವಿಶ್ವೇಶ್ವರಯ್ಯನವರ ಹೆಸರನ್ನು ಸೂಚಿಸಿತು. ಈ ಬಗೆಗೆ ಸಲಹೆಯನ್ನು ನೀಡಿದ್ದು ಮಾತ್ರವಲ್ಲದೆ ಒಳಚರಂಡಿ ವ್ಯವಸ್ಥೆಯ ಯೋಜನೆಯನ್ನೂ ನಿರ್ವಹಿಸಿದರು. ಇಂಗ್ಲೆಂಡ್ ಸರಕಾರ ವಿಶ್ವೇಶ್ವರಯ್ಯನವರ ಸಲಹೆಯನ್ನು ಹರ್ಷದಿಂದ ಅಂಗೀಕರಿಸಿ ಅವರಿಗೆ 'ಕೈಸರ್–ಎ–ಹಿಂದ್' ಎಂಬ ಪ್ರಶಸ್ತಿಯನ್ನಿತ್ತು ಗೌರವಿಸಿತು.

ವಿಶ್ವೇಶ್ವರಯ್ಯನವರು ಒಂದು ನಿಮಿಷವನ್ನೂ ವ್ಯರ್ಥವಾಗಿ ಕಳೆಯುತ್ತಿರಲಿಲ್ಲ. 'ಮನುಷ್ಯ ಸುಮ್ಮನೆ ಕುಳಿತಿರಬಾರದು, ಅದರಿಂದ ಅವನಿಗೂ ಕೇಡು, ದೇಶಕ್ಕೂ ಹಾನಿ,' ಎಂಬುದು ಅವರ ಭಾವನೆಯಾಗಿತ್ತು. ಶತಾಯುಗಳಾದ ಅವರ ದೀರ್ಘಾಯುಸ್ಸಿನ ರಹಸ್ಯ ಸಹ ಅವರ ಸತತ ದುಡಿಮೆಯೇ. ಗೊತ್ತು ಮಾಡಿದ ವೇಳೆಗೆ; ಒಂದು ನಿಮಿಷ ತಡವಾಗದಂತೆ, ಕೆಲಸ ನಡೆಯಬೇಕು. ತಾವು ಎಲ್ಲಿ ಹೋಗಲಿ, ತಮ್ಮನ್ನು ಭೇಟಿ ಮಾಡಲು ಯಾರೇ ಬರಲಿ, ಒಂದು ನಿಮಿಷ ತಡವಾಗಕೂಡದು, ವ್ಯರ್ಥವಾಗಕೂಡದು, ಹೀಗೆ ಬದುಕಿದರು. ಕಾಲ ನಿಯಮವನ್ನು ಕಟ್ಟುನಿಟ್ಟಾಗಿ ಪಾಲಿಸಬೇಕು ಎಂಬುದನ್ನು ಅವರು ಮಾಡಿ ತೋರಿಸುತ್ತಿದ್ದರು. ಯಾವ ಕೆಲಸವನ್ನೇ ಮಾಡಲಿ ಅದನ್ನು ಆದಷ್ಟು ಪ್ರಾಮಾಣಿಕವಾಗಿ, ಪರಿಷ್ಕಾರದಿಂದ ಮಾಡಬೇಕು ಎನ್ನುವುದು ಅವರ ಅಭಿಮತ. ಸರಕಾರಕ್ಕೆ ಅವರು ತೋರಿಸಿದ ನಿಷ್ಠೆ ಅಪ್ರತಿಮ. ಹಾಗೆಯೇ ಪ್ರಾಮಾಣಿಕತೆ, ಆತ್ಮಗೌರವ. ವಿದ್ಯುಚ್ಛಕ್ತಿ ಇಲ್ಲದ ಕಾಲದಲ್ಲಿ ಸರಕಾರದ ಮೋಂಬತ್ತಿ ಸರಕಾರದ ಕೆಲಸಕ್ಕೆ ಮಾತ್ರ ಉಪಯೋಗ. ಮೈಸೂರಿನ ದಿವಾನಗಿರಿಗೆ ಅವರಾಗಿಯೇ 1918ರಲ್ಲಿ ರಾಜಿನಾಮೆ ಇತ್ತಾಗ, ರಾಜಿನಾಮೆ ನೀಡಲು ಸರಕಾರದ ಕಾರಿನಲ್ಲಿ ಹೋದರು, ಬರುವಾಗ ಸ್ವಂತ ಕಾರಿನಲ್ಲಿ ಹಿಂದಿರುಗಿದರು. ಬಳಿಯಿದ್ದವರು ಕಾರಣ

ಕೇಳಿದಾಗ, " ನಾನು ಈಗ ನಿವೃತ್ತ. ಸರಕಾರದ ಕಾರನ್ನು ಉಪಯೋಗಿಸುವ ಹಕ್ಕು ನನಗಿಲ್ಲ," ಎಂದರು.

ಉಡುಗೆ ಮತ್ತು ಊಟದ ವಿಚಾರದಲ್ಲಿಯೂ ವಿಶ್ವೇಶ್ವರಯ್ಯನವರದು ಬಹಳ ಅಚ್ಚುಕಟ್ಟು. ಧರಿಸುತ್ತಿದ್ದದ್ದು ಆಂಗ್ಲ ಉಡುಪೇ ಆದರೂ ತಲೆಯ ಮೇಲೆ ರುಮಾಲು ಇರುತ್ತಿತ್ತು. ನಿತ್ಯಜೀವನದಲ್ಲಿ ವಿಶ್ವೇಶ್ವರಯ್ಯನವರು ಸಂಪ್ರದಾಯಸ್ಥರು, ದೈವಭಕ್ತರು. ಅವರ ಸೌಜನ್ಯ ಮತ್ತು ಶಿಷ್ಟಾಚಾರ ಅಸಾಧಾರಣ. ನೂರರ ಹತ್ತಿರಕ್ಕೆ ಸಾಗಿದ್ದರೂ ಬಂದವರನ್ನು ಕಾಣುವಾಗ ಅವರು ಧರಿಸುತ್ತಿದ್ದುದು ಶುಭ್ರವಾದ ಸುಕ್ಕಿಲ್ಲದ ಉಡುಗೆ. ತಾವು ಎದ್ದು ಕೈಕುಲುಕಿ ಬಂದವರನ್ನು ಸ್ವಾಗತಿಸುತ್ತಿದ್ದರು.

ಔದ್ಯೋಗೀಕರಣವಾಗದಿದ್ದರೆ ನಿರುದ್ಯೋಗ ಸಮಸ್ಯೆಯನ್ನು ಬಿಡಿಸುವಂತಿಲ್ಲ, ದಾರಿದ್ರ್ಯ ಹೋಗುವುದಿಲ್ಲ ಎಂದು ಮನಗಂಡ ಅವರು ಅಧಿಕಾರದಲ್ಲಿದ್ದಾಗ ಕೈಗಾರಿಕೆಗಳಿಗೆ ಆದ್ಯತೆ ಕೊಟ್ಟರು. ' ಔದ್ಯೋಗೀಕರಣ ಇಲ್ಲವೆ ಸರ್ವನಾಶ ' ಎಂಬ ಎಚ್ಚರಿಕೆ ನೀಡಿದರು.

ದಕ್ಷ ಇಂಜಿನಿಯರ್, ಮುಂದಾಲೋಚನೆಯ ರಾಜತಂತ್ರಜ್ಞ, ರಾಷ್ಟ್ರದ ಅಭಿವೃದ್ಧಿಗಾಗಿ ಸತತ ಶ್ರಮಿಸಿದ ಜೀವಿ, ಶುದ್ಧಚೇತನ, ಪ್ರಚಂಡ ದೇಶಭಕ್ತ ವಿಶ್ವೇಶ್ವರಯ್ಯನವರಿಗೆ ಭಾರತ ಸರಕಾರ 'ಭಾರತ ರತ್ನ' ಪ್ರಶಸ್ತಿಯನ್ನಿತ್ತು ಗೌರವಿಸಿತು (1955). ನೂರು ಸಾರ್ಥಕ ಹುಟ್ಟುಹಬ್ಬಗಳನ್ನು ಕಂಡ ಆ ಚೇತನದ ನೂರನೆಯ ಹುಟ್ಟುಹಬ್ಬವನ್ನು ದೇಶದಾದ್ಯಂತ ಅತ್ಯಂತ ಸಂಭ್ರಮದಿಂದ ಆಚರಿಸಿದರು (1961). ವರ್ಷ ನೂರಾದರೂ ವಿಶ್ವೇಶ್ವರಯ್ಯನವರ ದೃಷ್ಟಿ ನಿಚ್ಚಳವಾಗಿತ್ತು. 'ಇಳಿವಯಸ್ಸಿನಲ್ಲಿಯೂ ಗಟ್ಟಿಮುಟ್ಟಾಗಿರುವ ಗುಟ್ಟೇನು ?' ಎಂದು ಅವರನ್ನು ಪ್ರಶ್ನಿಸಿದಾಗ 'ಮುಪ್ಪು ಹಲವು ಬಾರಿ ನನ್ನನ್ನು ಭೇಟಿಮಾಡಲು ಬಂದಿತ್ತು. ಬಂದಾಗಲೆಲ್ಲ ಮನೆಯಲ್ಲಿಲ್ಲ ಎಂದು ಮುಂದೆ ಕಳುಹಿಸುತ್ತಿದ್ದೇನೆ,' ಎಂದು ಅವರು ನಗೆಯಾಡಿದರು.

ಮುಪ್ಪು ವಿಶ್ವೇಶ್ವರಯ್ಯನವರನ್ನು ಗೆಲ್ಲಲಾಗದೆ ಸೋತಾಗ ಅವರ ಭೇಟಿಗೆ ಮೃತ್ಯು ಬಂದಿತು. 1962ರಲ್ಲಿ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು ನಿಧನರಾದರು.

ಅವರ ಕೃತಿ 'ನನ್ನ ವೃತ್ತಿಜೀವನದ ನೆನಹುಗಳು' ಸ್ಫೂರ್ತಿದಾಯಕ ಗ್ರಂಥ.

ವಿವರ : ಏಳನೆಯ ಸಂಪುಟ

## ವೀರಗಲ್ಲು

949ರಲ್ಲಿ ರಾಷ್ಟ್ರಕೂಟರಿಗೂ ಚೋಳರಿಗೂ ಘೋರ ಯುದ್ಧ ನಡೆಯಿತು. ಆ ಯುದ್ಧದಲ್ಲಿ ರಾಷ್ಟ್ರಕೂಟದ ಕಡೆಯವನಾಗಿದ್ದ ' ಮಣಲೇರ ' ಎಂಬವನು ಅದ್ಭುತ ಸಾಹಸವನ್ನು ತೋರಿಸಿದ. ಅದನ್ನು ಅವನ ಸ್ವಾಮಿಯಾದ ಬೂತುಗ ಮೆಚ್ಚಿದ. ' ನಿನಗೆ ಏನು ಬೇಕು ಕೇಳು '. ಎಂದ. ಮಣಲೇರ ಬೂತುಗನಿಂದ ಕಾಳಿ ಎಂಬ ನಾಯಿಯನ್ನು ಪಡೆದ. ಒಂದು ದಿನ ಮಣಲೇರ ಬೇಟೆಯಾಡಲು ಹೋದಾಗ ಕಾಳಿ ತಾನೊಂದು ಕಾಡು ಹಂದಿಯನ್ನು ಕೆಣಕಿ ಅದನ್ನು ಕೊಂದು ತಾನೂ ಸತ್ತುಹೋಯಿತು. ಆ ನಾಯಿಯ ಸಾಹಸಕ್ಕೆ ಮೆಚ್ಚಿ ಮಣಲೇರ ಒಂದು ವೀರಗಲ್ಲನ್ನು ಸ್ಥಾಪಿಸಿದ. ಅದರ ಪೂಜೆಗಾಗಿ ಒಬ್ಬನನ್ನು ನೇಮಿಸಿದ. ವೆಚ್ಚಕ್ಕಾಗಿ ಒಂದು ಹೊಲವನ್ನು ದಾನಮಾಡಿದ. ಕಲ್ಲಿನ ಮೇಲೆ ಹಂದಿಯೊಡನೆ ಹೋರಾಡುವ ನಾಯಿಯ ಚಿತ್ರ ಕೆತ್ತಿಸಿದ.

ಇದೊಂದು ವೀರಗಲ್ಲು. ಪ್ರಾಣಿಯೊಂದರ ವಿಷಯದಲ್ಲಿ ಮಣಲೇರ ಅದ್ಭುತ ಪ್ರೀತಿ ವಾತ್ಸಲ್ಯವನ್ನು ತೋರಿದಂತೆ ಕನ್ನಡ ನಾಡಿನ ಅನೇಕ ರಾಜರು, ಊರಿನ ಜನರು ತಮ್ಮ ವೀರರ ಬಗೆಗೆ ತೋರಿಸಿದ್ದಾರೆ. ವೀರಗಲ್ಲುಗಳನ್ನು ನಿರ್ಮಿಸಿದ್ದಾರೆ.

ಗೋಸಂರಕ್ಷಣೆಗಾಗಿಯೋ ಕಳ್ಳಕಾಕರು ಊರನ್ನು ಮುತ್ತಿದಾಗಲೋ ಗಡಿ ಸಂರಕ್ಷಣೆಗಾಗಿಯೋ ಒಡೆಯನ ಪರವಾಗಿಯೋ ಹೋರಾಡಿ ಯುದ್ಧದಲ್ಲಿ ಪ್ರಾಣತ್ಯಾಗ ಮಾಡಿದ ವೀರರ ಸ್ಮಾರಕಗಳಾಗಿ ನೆಡಲ್ಪಟ್ಟ ಕಲ್ಲುಗಳು, ವೀರಗಲ್ಲುಗಳು. ಅನೇಕ ಸ್ಥಳಗಳಲ್ಲಿ ಇಂಥ ವೀರಗಲ್ಲುಗಳಿಗೆ ಪೂಜೆ ಸಲ್ಲುವಂತೆ ವ್ಯವಸ್ಥೆ ನಡೆದಿತ್ತು.

ಸ್ವಾಮಿನಿಷ್ಠ ದೇಶಭಕ್ತ ವೀರರ ಬಗೆಗೆ ದೊರೆಗಳು, ಜನರು ಎಂಥ ಅಭಿಮಾನವನ್ನು ಹೊಂದಿದ್ದರು ಎಂಬುದನ್ನು ವೀರಗಲ್ಲುಗಳು ತೋರಿಸುತ್ತವೆ.

ವೀರಗಲ್ಲುಗಳಲ್ಲಿ ಸಾಮಾನ್ಯವಾಗಿ ಮೂರು ಭಾಗಗಳಿರುತ್ತವೆ. ಐದು, ಏಳು ಭಾಗಗಳುಳ್ಳ ವೀರಗಲ್ಲುಗಳೂ ಇವೆ. ಮೂರು ಹಂತಗಳಿರುವ ವೀರಗಲ್ಲುಗಳಲ್ಲಿ ಕೆಳಗೆ ಎರಡು ಸೈನ್ಯಗಳ ಚಿತ್ರ ; ಅಲ್ಲಿ ವೀರನ ಹೋರಾಟ ; ಮಧ್ಯೆ ದೇವತೆಗಳು ಅವನನ್ನು ಕರೆದುಕೊಂಡು ಹೋಗುವ (ಕೆಲವು ಸಲ ಪಲ್ಲಕ್ಕಿಯಲ್ಲಿ) ಚಿತ್ರ ; ಮೇಲೆ ದೇವರ ಸಾನ್ನಿಧ್ಯದಲ್ಲಿ ಅವನಿರುವ ಚಿತ್ರ ; ಈ ಚಿತ್ರಗಳ ಮಧ್ಯೆ ಪಟ್ಟಿಗಳು; ಅದರ ಮೇಲೆ ಬರಹ. ಈ ಬರಹದಲ್ಲಿ ವೀರನ ಬಗೆಗೆ ಹೊಗಳಿಕೆ ಮಾತ್ರವಲ್ಲದೆ ಆಗಿನ ಕಾಲದ ಇತಿಹಾಸ, ಸಮಾಜ ಜೀವನ ಇವುಗಳ ವಿವರಗಳೂ ಇರುತ್ತವೆ.

ಸಂಗ್ರಾಮ ವೀರರ ಸ್ಮಾರಕ ಶಾಸನಗಳಲ್ಲಿ ಸಾಮಾನ್ಯವಾಗಿ ಈ ಸಂಸ್ಕೃತ ಶ್ಲೋಕವಿರುತ್ತದೆ.

> ಜಿತೇನ ಲಭ್ಯತೇ ಲಕ್ಷ್ಮೀಃ ಮೃತೇನಾಪಿ
> ಸುರಾಂಗನಾಃ
> ಕ್ಷಣವಿಧ್ವಂಸಿನಿ ಕಾಯೇ ಕಿಂ ಚಿಂತಾ
> ಮರಣೇ ರಣೇ

(ಜಯಶಾಲಿಯಾದರೆ ಲಕ್ಷ್ಮಿ ಲಭಿಸುತ್ತಾಳೆ. ಮೃತನಾದರೆ ದೇವಾಂಗನೆಯರು ಲಭಿಸುತ್ತಾರೆ. ನಿಮಿಷದಲ್ಲಿ ಅಳಿಯುವ ಈ ದೇಹಕ್ಕೆ ಕಾಳಗದಲ್ಲಿ ಸಾಯುವೆನೆಂಬ ಕೊರಗೇಕೆ ?)

ಯುದ್ಧದಲ್ಲಿ ಗೆದ್ದು ಹಿಂದಕ್ಕೆ ಬರುವಷ್ಟೇ ಗೌರವ, ಯುದ್ಧದಲ್ಲಿ ಮಡಿಯುವುದಕ್ಕೂ ಇತ್ತು. ಯುದ್ಧದಲ್ಲಿ ಮಡಿಯುವುದಕ್ಕೆ ವೀರರು ಹಿಂದೆಗೆಯುತ್ತಿರಲಿಲ್ಲ. ನಾಡು ಅವರನ್ನು ಹೃತ್ಪೂರ್ವಕವಾಗಿ ಹೊಗಳುತ್ತಿತ್ತು. ಹೀಗೆ ಮಡಿದ ವೀರರ ನೆನಪಿಗಾಗಿ ರಾಜರೋ ಊರಿನ ಜನರೋ ನೆಡಿಸುತ್ತಿದ್ದ ಕಲ್ಲುಗಳು ವೀರಗಲ್ಲುಗಳಾಗಿ ಕನ್ನಡನಾಡಿನಲ್ಲಿ ಪ್ರಖ್ಯಾತವಾಗಿವೆ. ವೀರನ ಸಾವನ್ನು ಕುರಿತು ಹೇಳುವ ವೀರಗಲ್ಲು ಆ ವೀರನ ಹೆಸರನ್ನು ಶಾಶ್ವತಗೊಳಿಸುತ್ತಿದ್ದುದಲ್ಲದೆ ಅವನ ಕಡೆಯವರಲ್ಲಿ ಶೌರ್ಯ ಧೈರ್ಯಗಳನ್ನು ತುಂಬುತ್ತಿದ್ದಿತು.

ಹಿಂದೆ, ಗರುಡರೆಂಬ ರಕ್ಷಣಾಭಟರ ಒಂದು ಪಂಗಡವಿತ್ತು. ಅವರಿಗೆ ಸ್ವಾಮಿಯೇ ಸರ್ವಸ್ವ. ಸಾಯುವತನಕವೂ ಆತನ ಸೇವೆ. ಸ್ವಾಮಿಯನ್ನು ರಕ್ಷಿಸುತ್ತಿರುವಾಗ ಆತನ ಅಂತ್ಯವಾದರೆ, ತಾನೂ ಸಾಯುವೆ ಎಂಬ ಪ್ರತಿಜ್ಞೆ. ಇಂಥ ವೀರರ ಹೆಂಡತಿಯರೂ ಈ ಬಲಿದಾನದಲ್ಲಿ ಭಾಗಿಯಾಗುತ್ತಿದ್ದರು. ಇಮ್ಮಡಿ ವೀರಬಲ್ಲಾಳನಿಗಾಗಿ (1173–1220) ಬದುಕಿ. ಸಾಯುವ ಪ್ರತಿಜ್ಞೆಮಾಡಿದ ಸಾವಿರ ವೀರರಿದ್ದರು. ಇವರ ನಾಯಕ ಕುವರಲಕ್ಷ್ಮ; ವೀರಬಲ್ಲಾಳನು ಮಡಿದ ಕೂಡಲೇ ಈ ಸಾವಿರ

ಪತ್ರಿಕೆಯು ಬೇರೆ ಬೇರೆ ಆವೃತ್ತಿಗಳು ಇರುತ್ತವೆ. ಒಂದೊಂದು ಆವೃತ್ತಿಗೂ ಒಂದೊಂದು ಸಮಯಸೀಮೆ ಇರುತ್ತದೆ. ಪತ್ರಿಕೆಯು ಪ್ರತಿ ಆವೃತ್ತಿಯಲ್ಲೂ ಅದರ ಸಮಯಸೀಮೆ ತಲಪುವುದರೊಳಗಾಗಿ ಬರುವ ಸುದ್ದಿಯನ್ನು ಸೇರಿಸುತ್ತಾರೆ. ಪತ್ರಿಕೆ ಅಚ್ಚಾಗುತ್ತ ಇರುವಾಗ ಅತ್ಯಂತ ಪ್ರಮುಖ ಸುದ್ದಿ ಸಮಯಸೀಮೆ ಮೀರಿ ಕಚೇರಿಯನ್ನು ಮುಟ್ಟಬಹುದು. ಇಂಥ ಸಂದರ್ಭಗಳಲ್ಲಿ, ಅಚ್ಚುಮಾಡುವುದನ್ನು ನಿಲ್ಲಿಸಿ, ಹೊಸ ಸುದ್ದಿಯ ಅಂಶವನ್ನು ಸೇರಿಸಿ ಮುದ್ರಣ ಮುಂದುವರಿಸುತ್ತಾರೆ. ಹೀಗೆ ಸೇರಿಸಲ್ಪಟ್ಟ ಸುದ್ದಿ 'ಮುದ್ರಣ ತಡೆ ಸುದ್ದಿ' ಅಥವಾ 'ಕೊನೆಯಚ್ಚು' ಎನಿಸಿಕೊಳ್ಳುತ್ತದೆ.

ದೂರದ ಪ್ರದೇಶಗಳಿಗೆ ರೈಲು, ಬಸ್, ಪತ್ರಿಕೆಯ ಸ್ವಂತ ವ್ಯಾನ್, ವಿಮಾನ – ಹೀಗೆ ವಿವಿಧ ಸಾಧನಗಳಿಂದ ಪ್ರತಿಗಳನ್ನು ಕಳುಹಿಸುತ್ತಾರೆ.

ಜಾಹೀರಾತು, ಲೆಕ್ಕಾಚಾರ, ಪ್ರಸಾರ ಮುಂತಾದುವನ್ನು ಆಡಳಿತವರ್ಗ ನಿರ್ವಹಿಸುತ್ತದೆ.

ಒಂದು ಪತ್ರಿಕೆಯ ಪುಟಗಳು ಹದಿನಾರು, ಅದರ ಬೆಲೆ ಇಪ್ಪತ್ತು ಪೈಸೆ ಎಂದುಕೊಳ್ಳೋಣ. ಇಪ್ಪತ್ತು ಪೈಸೆಗೆ ಅಚ್ಚುಮಾಡದ ಅಷ್ಟು ಕಾಗದ ದೊರೆಯುವುದಿಲ್ಲ. ಕಾರಣ, ಅದರಿಂದ ನಷ್ಟವೇ. ಪತ್ರಿಕೆಗಳವರ ಮುಖ್ಯ ವರಮಾನ ಜಾಹೀರಾತುಗಳಿಂದ. ಓದುಗರಲ್ಲಿ ಆಸಕ್ತಿ ಹುಟ್ಟಿಸುವಂಥ ಸುದ್ದಿಗಳನ್ನು ಆಯ್ದು ಬರೆಯುವ ಜವಾಬ್ದಾರಿ ಸಂಪಾದಕೀಯ ವಿಭಾಗದ್ದು, ಮುದ್ರಣಶಾಖೆಯ ಹೊಣೆ ಅಂದವಾಗಿ ಮುದ್ರಿಸುವುದು. ಈ ಕಾರ್ಯಗಳು ಅಚ್ಚುಕಟ್ಟಾಗಿ ನಿರ್ವಹಿಸಲ್ಪಟ್ಟು ಪ್ರಸಾರ ಶಾಖೆ ವ್ಯಾಪಕವಾದ ಹಂಚಿಕೆ ವ್ಯವಸ್ಥೆ ಏರ್ಪಡಿಸಿದರೆ ಪತ್ರಿಕೆಗೆ ಹೆಚ್ಚು ಹೆಚ್ಚು ಓದುಗರು ದೊರೆಯುತ್ತಾರೆ. ಅದಕ್ಕೆ ಅನುಸಾರವಾಗಿ ದೊರೆಯುವ ಜಾಹೀರಾತುಗಳ ಸಂಖ್ಯೆ ಹೆಚ್ಚುತ್ತದೆ. ಜಾಹೀರಾತಿಗೆ ಅಗತ್ಯವಾದ ವಿಸ್ತಾರವನ್ನು ಅನುಸರಿಸಿ ಶುಲ್ಕ, ಮುಖಪುಟ, ರಕ್ಷಾಪುಟ, ಶೀರ್ಷಿಕೆಯ ಅಕ್ಕ–ಪಕ್ಕ, ಹೀಗೆ ವಿಶೇಷ ಸ್ಥಳಗಳಲ್ಲಿ ಜಾಹೀರಾತು ಅಚ್ಚಾಗಬೇಕಾದಲ್ಲಿ ಅಥವಾ ಬಣ್ಣಗಳಲ್ಲಿ ಮುದ್ರಣ ನಡೆಯಬೇಕಿದ್ದಲ್ಲಿ ಶುಲ್ಕ ಹೆಚ್ಚು.

ಪ್ರಸಾರಶಾಖೆ ಹಂಚಿಕೆಯ ವಹಿವಾಟನ್ನೂ ವಹಿಸಿಕೊಳ್ಳುತ್ತದೆ. ರೈಲು, ಬಸ್ಸು, ವಿಮಾನಗಳು ಹೊರಡುವ ಕಾಲಕ್ಕೆ ಸರಿಯಾಗಿ ಪತ್ರಿಕೆಗಳನ್ನು ರವಾನಿಸಲು ವ್ಯವಸ್ಥೆಮಾಡುತ್ತದೆ.

ರೇಡಿಯೊಗಳ ಸಂಖ್ಯೆ ಹೆಚ್ಚಾಗಿರುವ ಕಾಲದಲ್ಲಿ ಮುಖ್ಯವಾರ್ತೆಗಳು ಜನರಿಗೆ ಬೇಗ ತಿಳಿಯುತ್ತವೆ. ವೃತ್ತಪತ್ರಿಕೆಗಳು ಇವುಗಳೊಂದಿಗೆ ಸ್ಪರ್ಧಿಸಬೇಕು. ಅಲ್ಲದೆ, ಒಂದೇ ಮೂಲದಿಂದ ಎಲ್ಲ ಪತ್ರಿಕೆಗಳಿಗೂ ಮುಖ್ಯ ಸುದ್ದಿಗಳು ಬರುವುದರಿಂದ, ಓದುಗರನ್ನು ಆಕರ್ಷಿಸಲು ಪ್ರತಿ ಪತ್ರಿಕೆ ತನ್ನ ವೈಶಿಷ್ಟ್ಯವನ್ನು ಬೆಳೆಸಿಕೊಳ್ಳುತ್ತದೆ.

ಇಂದಿನ ಪತ್ರಿಕೋದ್ಯಮದ ಮೂಲ ರೋಮನರಲ್ಲಿ ಕಾಣಿಸಿತು. ಸಾರ್ವಜನಿಕ ಪ್ರಕಟಣೆಗಳನ್ನು ಹಾಳೆಗಳ ಮೇಲೆ ಮೂಡಿಸಿ ಗೋಡೆಯ ಮೇಲೆ ಅಂಟಿಸಲಾಗುತ್ತಿತ್ತು. ಸುಮಾರು ಎಂಟನೆಯ ಶತಮಾನದಲ್ಲಿ ಚೀನದ ಆಡಳಿತಗಾರರು ಹೊರಡಿಸುತ್ತಿದ್ದ ಅಧಿಕೃತ ಪ್ರಕಟಣೆಗಳು 'ಚಿಂಗ್–ಪಾ' (ಅರಮನೆಯ ಸುದ್ದಿ) ಎಂಬ ಹೆಸರಿನಿಂದ ಹೊರಬೀಳುತ್ತಿದ್ದುವು. ಹದಿನೈದನೆಯ ಶತಮಾನದಲ್ಲಿ ಮುದ್ರಣ ಪ್ರಾರಂಭವಾದನಂತರ ಪತ್ರಿಕೋದ್ಯಮ ವೇಗವಾಗಿ ಬೆಳೆಯಲು ಸಾಧ್ಯವಾಯಿತು.

ಸುದ್ದಿಯನ್ನೆಲ್ಲ ಒಂದೇ ಹಾಳೆಯಲ್ಲಿ ಸೂಕ್ತ ಶೀರ್ಷಿಕೆಗಳೊಡನೆ ಮುದ್ರಿಸಿ ವಾರಕ್ಕೊಮ್ಮೆ ತಪ್ಪದೆ ಪ್ರಕಟಿಸುವುದನ್ನು 1622ರಲ್ಲಿ ಪ್ರಾರಂಭಿಸಿದ ವ್ಯಕ್ತಿ ಇಂಗ್ಲೆಂಡಿನ ನಥಾನಿಯಲ್ ಬಟರ್. ಇಂಗ್ಲೆಂಡಿನ ಮೊದಲನೆಯ ದಿನಪತ್ರಿಕೆ 'ಡೈಲಿ ಕುರಾಂಟ್' (1703). ಹದಿನೆಂಟನೆಯ ಶತಮಾನದ ವೇಳೆಗೆ ಪತ್ರಿಕಾ ಪ್ರಕಟಣೆ ಸಂಪೂರ್ಣ ವ್ಯಾಪಾರೋದ್ಯಮವಾಗಿ ಮಾರ್ಪಟ್ಟಿತು; ರಾಜಕಾರಣಕ್ಕೆ ಒಂದು ಸಾಧನವಾಯಿತು. ಐರೋಪ್ಯ ರಾಷ್ಟ್ರಗಳಲ್ಲಿ ಕಾಗದ ಮತ್ತು ಯಂತ್ರಗಳ ತಯಾರಿಕೆ ಅಗ್ಗವಾದಾಗ ಜನಗಳು ಹೆಚ್ಚು ಹೆಚ್ಚು ಪತ್ರಿಕೆಗಳನ್ನು ಕೊಂಡು ಓದತೊಡಗಿದರು. ತಂತಿ, ದೂರವಾಣಿ ಮುಂತಾದ ತಾಂತ್ರಿಕ ಸಾಧನಗಳು ಬೆಳೆದಂತೆ ವಾರ್ತೆಯನ್ನು ಸಂಗ್ರಹಿಸಿ ರವಾನಿಸುವುದು ಬಹಳ ಸುಲಭವಾಯಿತು. ಪತ್ರಿಕೆಗಳ ನಡುವೆ ಪೈಪೋಟಿ ಹೆಚ್ಚಿ ಅವು ವ್ಯಕ್ತಿಗಳಿಗೆ ಬದಲಾಗಿ ಸಂಸ್ಥೆಗಳ ಮಾಲಿಕತ್ವಕ್ಕೆ ಕ್ರಮೇಣ ಒಳಗಾದುವು. ಹಲವಾರು ಪತ್ರಿಕೆಗಳ ಪ್ರಾಬಲ್ಯ ಕುಂದಿ ಕೆಲವೇ ಪತ್ರಿಕೆಗಳು ಅಗಾಧವಾಗಿ ಬೆಳೆದುವು.

ಅಮೆರಿಕ, ಇಂಗ್ಲೆಂಡ್ ಮತ್ತು ಹಲವು ದೇಶಗಳಲ್ಲಿ ಅನೇಕ ಪತ್ರಿಕೆಗಳ ಸಮೂಹಗಳು ಒಬ್ಬೊಬ್ಬ ವ್ಯಕ್ತಿ ಅಥವಾ ಸಂಸ್ಥೆಯ ಮಾಲಿಕತ್ವಕ್ಕೆ ಒಳಗಾದುವು.

ಈಗ ಇಂಗ್ಲೆಂಡಿನಲ್ಲಿ ಲಂಡನ್ ಟೈಮ್ಸ್, ಮ್ಯಾಂಚೆಸ್ಟರ್ ಗಾರ್ಡಿಯನ್, ಡೈಲಿ ಹೆರಾಲ್ಡ್, ನ್ಯೂಸ್ ಕ್ರಾನಿಕಲ್ ಮುಂತಾದುವು ಪ್ರಖ್ಯಾತ ದಿನಪತ್ರಿಕೆಗಳು. ರಾದರ್ ಮೇರ್ ಸಂಸ್ಥೆ, ನಾರ್ತ್‌ಕ್ಲಿಫ್ ಸಂಸ್ಥೆ, ಅಸೋಸಿಯೇಟೆಡ್ ಪತ್ರಿಕೆಗಳ ಗುಂಪು ಮುಂತಾದುವು ಪತ್ರಿಕೆಗಳ ಸಮೂಹಗಳ ಮಾಲಿಕತ್ವ ಹೊಂದಿವೆ.

ಅಮೆರಿಕದ ಪತ್ರಿಕೋದ್ಯಮದ ಬೆಳವಣಿಗೆಗೆ ಇಂಗ್ಲಿಷ್ ಪತ್ರಿಕೋದ್ಯಮವೇ ಸ್ಫೂರ್ತಿ ನೀಡಿದ್ದು. 1670ರಲ್ಲಿ ಬ್ರಿಟಿಷ್ ಪತ್ರಿಕೋದ್ಯಮಿ ಬೆಂಜಮಿನ್ ಹ್ಯಾರಿಸ್ ಮೊದಲ ವಾರಪತ್ರಿಕೆಯನ್ನು ಹೊರಡಿಸಿದ. ಅಲ್ಲಿಯವರೆಗೆ ಎರಡು ಮೂರು ತಿಂಗಳಿಗೊಮ್ಮೆ ಹಡಗಿನಲ್ಲಿ ಬರುವ ಲಂಡನ್ ಪತ್ರಿಕೆಗಳಲ್ಲಿದ್ದ ಸುದ್ದಿಯನ್ನೂ ಪ್ರಯಾಣಿಕರು ಕೇಳಿ ಹೇಳಿದ ಸುದ್ದಿಯನ್ನೂ ಒಂದು ಹಾಳೆಯಲ್ಲಿ ಪ್ರಕಟಿಸುವ ಪರಿಪಾಠ ಮಾತ್ರ ಇತ್ತು. 1704ರಲ್ಲಿ ಎರಡನೆಯ ಪತ್ರಿಕೆ "ಬಾಸ್ಟನ್ ನ್ಯೂಸ್‌ಲೆಟರ್" ಪ್ರಾರಂಭವಾಯಿತು. ಕ್ರಮೇಣ ಅಮೆರಿಕದ ಸಾಗರತೀರದ ನಗರಗಳಲ್ಲಿ ಮತ್ತು ವಾಷಿಂಗ್‌ಟನಿನಲ್ಲಿ ಅನೇಕ ಪತ್ರಿಕೆಗಳು ಹುಟ್ಟಿಕೊಂಡುವು. ಮೂರು ಶತಮಾನಗಳ ಅವಧಿಯಲ್ಲಿ ಅಮೆರಿಕದ ಪತ್ರಿಕೋದ್ಯಮ ಅತ್ಯಂತ ಅಗಾಧ ಪ್ರಮಾಣದಲ್ಲಿ ಬೆಳೆಯಿತು. ನ್ಯೂ ಯಾರ್ಕ್ ಟೈಮ್ಸ್, ನ್ಯೂ ಯಾರ್ಕ್ ಹೆರಾಲ್ಡ್, ಟ್ರಿಬ್ಯೂನ್, ವಾಷಿಂಗ್ಟನ್ ಪೋಸ್ಟ್ ಮುಂತಾದುವು ಅಮೆರಿಕದ ಮುಖ್ಯ ದಿನಪತ್ರಿಕೆಗಳು. ನ್ಯೂಯಾರ್ಕ್ ಟೈಮ್ಸ್‌ನ ನಿತ್ಯದ ಸಂಚಿಕೆ 80ರಿಂದ 120 ಪುಟಗಳಿರುತ್ತವೆ. ಭಾನುವಾರದ ಸಂಚಿಕೆ 240ರಿಂದ 300 ಪುಟಗಳಿರುತ್ತವೆ. ಅಮೆರಿಕದ ಮುಖ್ಯ ನಗರಗಳಲ್ಲಿರುವ ಅನೇಕ ಪತ್ರಿಕೆಗಳು ಕೇವಲ ಎಂಟು ಹತ್ತು ಜನರ ವಶದಲ್ಲಿವೆ.

ಸೋವಿಯೆತ್ ರಷ್ಯ ಸರಕಾರದ ಅಧಿಕೃತ ಪತ್ರಿಕೆ 'ಇಜ್ವೆಸ್ತಿಯ'. ಸರಕಾರದ ನಡವಳಿಕೆಗಳು, ರಾಜ್ಯಾಡಳಿತಕ್ಕೆ ಸಂಬಂಧಿಸಿದ ವಿವರಗಳಿಗೆ ಇದರಲ್ಲಿ ಪ್ರಾಧಾನ್ಯ. 'ಪ್ರಾವ್ದ' ಅಲ್ಲಿನ ಕಮ್ಯೂನಿಸ್ಟ್ ಪಕ್ಷ ನಡೆಸುವ ಪತ್ರಿಕೆ. ಅತ್ಯಧಿಕ ಪ್ರಸಾರವುಳ್ಳ ಈ ಪತ್ರಿಕೆ ಬಹಳ ಜನಪ್ರಿಯವಾಗಿದೆ. ರಾಷ್ಟ್ರೀಯ, ಅಂತರರಾಷ್ಟ್ರೀಯ ಸಮಸ್ಯೆಗಳ ಬಗೆಗೆ ಪಕ್ಷದ ಧೋರಣೆಯ ಪ್ರಚಾರ ಈ ಪತ್ರಿಕೆಯ ಗುರಿ. ಇವಲ್ಲದೆ ದೇಶದ ಶ್ರಮಿಕವರ್ಗಗಳು ಪ್ರಕಟಿಸುವ ಪತ್ರಿಕೆಗಳು ಅನೇಕ.

ಅಗಸ್ಟಸ್ ಹಿಕ್ಕಿ ಎಂಬ ಬ್ರಿಟಿಷ್ ವರ್ತಕ ಕಲ್ಕತ್ತೆಯಲ್ಲಿ 1780ರಲ್ಲಿ ವಾರಪತ್ರಿಕೆಯೊಂದನ್ನು ಪ್ರಾರಂಭಿಸಿದ. 'ಎಲ್ಲ ಪಕ್ಷಗಳಿಗೂ ತೆರೆದಿಟ್ಟ

ಆವರೆ ಯಾವುದರ ಪ್ರಭಾವಕ್ಕೂ ಸಿಲುಕದ ಪತ್ರಿಕೆ' ಎಂದು ಅವನು ತನ್ನ 'ಹಿಕ್ಕೀಸ್ ಗೆಜೆಟ್' ಅಥವಾ 'ಬೆಂಗಾಲ್ ಗೆಜೆಟ'ನ್ನು ವರ್ಣಿಸಿದ. ಇದು ಭಾರತದ ಮೊದಲ ಪತ್ರಿಕೆ. ಅನೇಕ ಮಂದಿ ಇಂಗ್ಲಿಷರು ಭಾರತದಲ್ಲಿ ಪತ್ರಿಕೆಗಳನ್ನು ನಡೆಸಲು ಪ್ರಾರಂಭಿಸಿದರು. ತನಗೆ ಅನುಕೂಲವಾಗಿರದ ಪತ್ರಿಕೆಗಳನ್ನು ಬ್ರಿಟಿಷ್ ಸರಕಾರ ದಮನಗೊಳಿಸಿತು. ಅನೇಕ ಮಂದಿ ಭಾರತೀಯರೂ ಪತ್ರಿಕೆಗಳನ್ನು ನಡೆಸಲು ಪ್ರಾರಂಭಿಸಿದರು. ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ವೃತ್ತಪತ್ರಿಕೆಗಳ ಪಾತ್ರ ಹಿರಿದು : ಕೃತಜ್ಞತೆಯಿಂದ ಸ್ಮರಿಸಬೇಕಾದದ್ದು. ಮಹಾತ್ಮ ಗಾಂಧಿ, ಬಾಲಗಂಗಾಧರ ತಿಲಕ್ ಮೊದಲಾದವರು ಪತ್ರಿಕಾ ಪ್ರಪಂಚದ ಘನತೆಯನ್ನು ಹೆಚ್ಚಿಸಿದರು. ಭಾರತೀಯ ಭಾಷೆಗಳಲ್ಲಿ ಪತ್ರಿಕೆಗಳನ್ನು ಸ್ಥಾಪಿಸಿ ನಡೆಸುವುದರಲ್ಲಿ ಮುಂದಾದವರು ಬಂಗಾಳದ ರಾಜಾ ರಾಮಮೋಹನರಾಯ್. ಭಾರತದ ಪತ್ರಿಕೋದ್ಯಮದ ಮೂಲ ಬಂಗಾಳದ ಪತ್ರಿಕೆಗಳು. 'ಜುಗಾಂತರ್', 'ಅಮೃತ ಬಜಾರ್ ಪತ್ರಿಕಾ', 'ಆನಂದ ಬಜಾರ್ ಪತ್ರಿಕಾ' ಇವು ಬಂಗಾಳದ ಪ್ರಸಿದ್ಧ ಪತ್ರಿಕೆಗಳು. ಬಂಗಾಳಿ, ಹಿಂದಿ, ಗುಜರಾತಿ, ಮರಾಠಿ, ಉರ್ದು, ಕನ್ನಡ, ತೆಲುಗು, ತಮಿಳು, ಮಲಯಾಳ ಎಲ್ಲ ಭಾಷೆಗಳ ಪತ್ರಿಕೆಗಳೂ ಹತ್ತೊಂಬತ್ತನೆಯ ಶತಮಾನ ಮುಗಿಯುವ ವೇಳೆಗೆ ಪ್ರಸಿದ್ಧವಾಗಿದ್ದುವು.

ಕಂನಡವಾರ್ತಿಕ.

CANARESE MESSENGER.

| | | |
|---|---|---|
| ಪುಸ್ತಕ ೧ | ೧೯ ಸಪ್ಟಂಬರ್ ೧೮೫೭. | ಅಂಕ ೬ |
| VOL. I. | SEPTEMBER 19, 1857 | No. 6. |

ಕಂನಡವಾರ್ತಿಕ.

ಪ್ರಥಮ ಕನ್ನಡ ಪತ್ರಿಕೆ 'ಕನ್ನಡ ಸಮಾಚಾರ' ಮಂಗಳೂರಿನಲ್ಲಿ 1842ರಲ್ಲಿ ಪ್ರಾರಂಭವಾಯಿತು. ಕೊಂಚ ಕಾಲ ಬಳ್ಳಾರಿಯಲ್ಲಿ ಅಚ್ಚಾಗುತ್ತಿತ್ತು. ಮತ್ತೆ ಮಂಗಳೂರಿಗೆ ಹೋಯಿತು. ಇದು ಮತ್ತು 'ಕಂನಡ ವಾರ್ತಿಕ' (1857ರ ಏಪ್ರಿಲ್) ಕ್ರೈಸ್ತ ಧರ್ಮದ ಪ್ರಚಾರಕ್ಕಾಗಿ ಪ್ರಾರಂಭವಾದುವು. ಸುದ್ದಿಗಳ ಪ್ರಕಟನೆಗಾಗಿಯೇ ಹೊಸದೊಂದು ಕನ್ನಡ ವಾರಪತ್ರಿಕೆ 'ಮೈಸೂರು ವೃತ್ತಾಂತ ಬೋಧಿನಿ' 1859ರಲ್ಲಿ ಬೆಂಗಳೂರಿನಲ್ಲಿ ಪ್ರಾರಂಭವಾಯಿತು. ಅನಂತರ ಅಸಂಖ್ಯಾತ ದಿನ, ವಾರ, ಮಾಸಪತ್ರಿಕೆಗಳು ಬೆಳಕು ಕಂಡಿವೆ.

ಪತ್ರಿಕೋದ್ಯಮದಲ್ಲಿ ಅತ್ಯದ್ಭುತ ಪ್ರಗತಿ ಸಾಧಿಸಿರುವ ಜಪಾನಿನ ಮೊದಲ ಪತ್ರಿಕೆ 'ಜಪಾನ್ ಹೆರಾಲ್ಡ್' 1861ರಲ್ಲಿ ನಾಗಸಾಕಿಯಲ್ಲಿ ಪ್ರಾರಂಭವಾಯಿತು. ಜಪಾನಿನ 'ಅಸಾಹಿ ಶಿಂಬುನ್', 'ಮೈನಿಚಿ ಶಿಂಬುನ್', 'ಯೊಮಿಯುರಿ ಶಿಂಬುನ್' ಇವು ಪ್ರಪಂಚದ ಅತ್ಯಧಿಕ ಪ್ರಸಾರವುಳ್ಳ ಪತ್ರಿಕೆಗಳ ಗುಂಪಿಗೆ ಸೇರುತ್ತವೆ.

ಯುನೆಸ್ಕೊ ಮಾನದಂಡದ ಪ್ರಕಾರ ತಲಾ ನೂರು ಮಂದಿ ಜನಸಂಖ್ಯೆಗೆ ಕನಿಷ್ಠ ಹತ್ತು ಪತ್ರಿಕೆಗಳಾದರೂ ಅಚ್ಚಾಗದಿದ್ದಲ್ಲಿ ಆ ದೇಶದ ಪತ್ರಿಕೋದ್ಯಮ ಹಿಂದುಳಿದಂತೆ. ಪತ್ರಿಕೋದ್ಯಮದಲ್ಲಿ ಯಶಸ್ಸು ಗಳಿಸಿಕೊಂಡ ಮುಖ್ಯ ದೇಶಗಳಲ್ಲಿ ಪ್ರಮಾಣ ಹೀಗೆ: (ನೂರಕ್ಕೆ) ಬ್ರಿಟನ್ 50, ಸ್ವೀಡನ್ 46, ಜಪಾನ್ 43, ಅಮೆರಿಕ 32, ಸೋವಿಯೆತ್ ರಷ್ಯ 18, ಭಾರತ 1.25. ಭಾರತದಲ್ಲಿ ಪತ್ರಿಕೆಗಳ ಸಂಖ್ಯೆಗೇನೂ ಕೊರತೆಯಿಲ್ಲ. 1967ರಲ್ಲಿ 12,453 ವೃತ್ತಪತ್ರಿಕೆಗಳೂ ನಿಯತಕಾಲಿಕಗಳೂ ಇದ್ದುವು. 49 ಭಾಷೆಗಳಲ್ಲಿ ಪ್ರಕಟವಾಗುತ್ತಿದ್ದುವು. ದಿನಪತ್ರಿಕೆಗಳೇ ಸುಮಾರು 636 ಇದ್ದುವು. ವಿಶ್ವದ ಒಟ್ಟು ದಿನಪತ್ರಿಕೆಗಳ ಸಂಖ್ಯೆ ಸುಮಾರು 2,200. ಭಾರತಕ್ಕಿಂತ ಹೆಚ್ಚಿಗೆ ಸಂಖ್ಯೆಯ ಪತ್ರಿಕೆಗಳ ದೇಶಗಳು ಎರಡು ಮಾತ್ರ—ಅಮೆರಿಕ ಮತ್ತು ಸೋವಿಯೆತ್ ರಷ್ಯ. ಅಮೆರಿಕದ 'ನ್ಯೂ ಯಾರ್ಕ್ ನ್ಯೂಸ್' ದಿನಪತ್ರಿಕೆಯ ಪ್ರಸಾರ ಸಂಖ್ಯೆ 2 ಕೋಟಿ. ಭಾನುವಾರ 3 ಕೋಟಿ ಪ್ರತಿಗಳು ಅಚ್ಚಾಗುತ್ತವೆ. ರಷ್ಯದ 'ಪ್ರಾವ್ದ' 85 ಲಕ್ಷ ಅಚ್ಚಾಗುತ್ತದೆ. ಅಲ್ಲಿನ ಪತ್ರಿಕೆಗಳ ಒಟ್ಟು ಪ್ರಸಾರ ಸಂಖ್ಯೆ ಹನ್ನೆರಡೂವರೆ ಕೋಟಿ. ಭಾರತದ ಪತ್ರಿಕೆಗಳ ವ್ಯಾಪ್ತಿ ಚಿಕ್ಕದು ; ಪ್ರಸಾರ ಕಡಮೆ. ಭಾರತದಲ್ಲಿ ಈಗ ಪ್ರಕಟವಾಗುತ್ತಿರುವ ದಿನಪತ್ರಿಕೆಗಳಲ್ಲಿ ಮೊದಲನೆಯ ಸ್ಥಾನ 'ಬೊಂಬಾಯಿ ಸಮಾಚಾರ'(1822) ಕ್ಕೆ, ನಿಯತಕಾಲಿಕಗಳಲ್ಲಿ 'ಕಲ್ಕತ್ತ ರಿವ್ಯೂ'(1844)ಗೆ. ಅತ್ಯಂತ ಹೆಚ್ಚು ಪತ್ರಿಕೆಗಳು ಹಿಂದಿಯಲ್ಲಿ—2,381; ಇವುಗಳಲ್ಲಿ 182 ದಿನಪತ್ರಿಕೆಗಳು.

1967ರಲ್ಲಿ ಭಾರತದಲ್ಲಿ ಪತ್ರಿಕೆಗಳ 2,34,57,000 ಪ್ರತಿಗಳು ಮಾರಾಟವಾಗುತ್ತಿದ್ದುವು. ದಿನಪತ್ರಿಕೆಗಳು, ವಾರಕ್ಕೆ ಎರಡು ಅಥವಾ ಮೂರು ಬಾರಿ ಪ್ರಕಟವಾಗುವುವು – ಇವೇ ಸುಮಾರು 70 ಲಕ್ಷ ಪ್ರತಿ ಮಾರುತ್ತಿದ್ದುವು. ಇಂಗ್ಲಿಷ್ ದಿನಪತ್ರಿಕೆಗಳ ಸಂಖ್ಯೆ 68, ಓದುವವರ ಸಂಖ್ಯೆ ಸುಮಾರು ಹತ್ತೊಂಬತ್ತು ಲಕ್ಷ–ಭಾಷಾವಾರಾಗಿ ಇದೇ ಹೆಚ್ಚು. ಸಂಸ್ಕೃತ ಪತ್ರಿಕೆಗಳ ಮಾರಾಟದ ಸಂಖ್ಯೆ ಸುಮಾರು ಐದು ಸಾವಿರ. 1967ರಲ್ಲಿ ಕನ್ನಡದಲ್ಲಿ 231 ನಿಯತಕಾಲಿಕಗಳಿದ್ದುವು. ಇವುಗಳಲ್ಲಿ 38 ದಿನಪತ್ರಿಕೆಗಳು. ಪತ್ರಿಕೆಗಳನ್ನು ಓದುವವರ ಸಂಖ್ಯೆ 6,06,000. ಒಂದು ಲಕ್ಷಕ್ಕಿಂತ ಹೆಚ್ಚು ಚಂದಾದಾರರನ್ನುಳ್ಳ ದಿನ ಪತ್ರಿಕೆಗಳು ಭಾರತದಲ್ಲಿ 16 (1967); 'ಆನಂದ ಬಜಾರ್‌ಪತ್ರಿಕಾ' (ಬಂಗಾಳಿ)ಯದೇ ಹೆಚ್ಚು, 2,11,263, ದಕ್ಷಿಣ ಭಾರತದಲ್ಲಿ ಇಂಗ್ಲಿಷ್ ಭಾಷೆಯ 'ಹಿಂದು' 1,42,511 ಪ್ರತಿಗಳು. ಕನ್ನಡ ವಾರಪತ್ರಿಕೆಗಳಲ್ಲಿ 50,000ವನ್ನು ಮೀರಿದ್ದು 'ಸುಧಾ' 68,398 ಪ್ರತಿಗಳು.

ಇಂದು ಪತ್ರಿಕೋದ್ಯಮ ಎಲ್ಲ ದೇಶಗಳಲ್ಲೂ ಮುಖ್ಯ ಉದ್ಯಮಗಳಲ್ಲಿ ಒಂದಾಗಿದೆ. ವರದಿಗಾರ, ಸಂಪಾದಕ, ಹತ್ತಾರು ಪುಟಗಳ ಕಾಲಮುಗಳ ಪೈಕಿ ಸ್ವಲ್ಪಭಾಗವನ್ನು ಕ್ರಮವಾಗಿ ಬರೆಯುವ ಪತ್ರಿಕಾ ಕಚೇರಿಯಲ್ಲಿ ಉದ್ಯೋಗಿಯಾಗಿಲ್ಲದ ಕಲಮುದಾರ, ಸುದ್ದಿಚಿತ್ರಗಳನ್ನು ತೆಗೆಯುವ ಛಾಯಾಚಿತ್ರಕಾರ ಇವರೆಲ್ಲ ಪತ್ರಿಕೋದ್ಯೋಗಿಗಳು : ಪತ್ರಿಕೆಯನ್ನು ಸಿದ್ಧಪಡಿಸುವುದರಲ್ಲಿ ನೆರವಾಗುವವರು. ವಿಷಯ ಸಂಗ್ರಹಣೆ, ಮುದ್ರಣ ಮತ್ತು ಜನಮನಕ್ಕನುಕೂಲವಾಗುವಂತೆ ವಿಷಯವನ್ನು ನಿರೂಪಿಸುವುದು ಪತ್ರಿಕೋದ್ಯಮ ವೃತ್ತಿಯ ಮುಖ್ಯ ಚಟುವಟಿಕೆ. ಸುದ್ದಿ ಸಂಗ್ರಹ ಮಾಡಲು ವರದಿಗಾರರು ಶ್ರಮಪಡುತ್ತಾರೆ. ಇತರ ಪತ್ರಿಕೆಗಳಿಗೆ ಸಿಕ್ಕದ, ರಹಸ್ಯವಾದ ಮುಖ್ಯವಾದ ಸುದ್ದಿಯನ್ನು ಪಡೆಯಲು ಸಾಹಸಪಡುತ್ತಾರೆ. ಹೀಗೆ ಸುದ್ದಿ ಪಡೆಯುವುದಕ್ಕೆ 'ಸ್ಕೂಪ್' ಎಂದು ಹೆಸರು.

ಆಧುನಿಕ ಪ್ರಪಂಚದಲ್ಲಿ ವೃತ್ತಪತ್ರಿಕೆಗಳ ಪಾತ್ರ ಬಹುಮುಖ್ಯ. ಸುದ್ದಿ ಪ್ರಸಾರದ ಜೊತೆಗೆ ಅವು ಜನರ ಅಭಿಪ್ರಾಯವನ್ನು ಪ್ರತಿಬಿಂಬಿಸುತ್ತವೆ

ರೂಪಿಸುತ್ತವೆ. ಸ್ಥಳೀಯ ವಿದ್ಯಮಾನಗಳು, ರಾಷ್ಟ್ರದ ಆಗುಹೋಗುಗಳು, ಅಂತರರಾಷ್ಟ್ರೀಯ ಬೆಳವಣಿಗೆಗಳು—ಇವನ್ನು ಕುರಿತು ಜನರು ನೇರವಾಗಿ ಪತ್ರಗಳನ್ನೂ ಲೇಖನಗಳನ್ನೂ ಬರೆದು ತಮ್ಮ ಅಭಿಪ್ರಾಯ ತಿಳಿಸಬಹುದು. ವಿವಿಧ ಅಭಿಪ್ರಾಯಗಳನ್ನು ವ್ಯಕ್ತಮಾಡಲು ನಡೆಸುವ ಸಭೆಗಳ ವರದಿಗಳನ್ನು ಪ್ರಕಟಿಸಿ ಪತ್ರಿಕೆಗಳು ಜನರ ಯೋಜನಾ ರೀತಿಯನ್ನು ಪ್ರತಿಬಿಂಬಿಸಬಹುದು. ವೃತ್ತಪತ್ರಿಕೆಗಳು ಯಾವ ಸುದ್ದಿಗೆ ಎಷ್ಟು ಪ್ರಾಮುಖ್ಯ ಕೊಡುತ್ತವೆ, ವಾರ್ತೆಗಳ ಜೋಡಣೆಯಲ್ಲಿ ಯಾವ ಕ್ರಮವನ್ನು ಅನುಸರಿಸುತ್ತವೆ, ಅವನ್ನು ಕುರಿತು ಹಿನ್ನೆಲೆಯಾಗಿ ಎಂಥ ಲೇಖನ ನೀಡುತ್ತವೆ, ಸಂಪಾದಕೀಯಗಳಲ್ಲಿ ಯಾವ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತವೆ—ಇವೆಲ್ಲದರಿಂದ ಜನರ ಅಭಿಪ್ರಾಯದ ಮೇಲೆ ಅಗಾಧ ಪರಿಣಾಮ ಉಂಟಾಗುತ್ತದೆ. ಇದರಿಂದಲೇ ಪ್ರಜಾಪ್ರಭುತ್ವದಲ್ಲಿ ವೃತ್ತಪತ್ರಿಕೆಗಳ ಘನತೆ ಹಿರಿದು. ಅದು ಪ್ರಜೆಗಳ ಅಧಿಕಾರದ ರಕ್ಷಕ. ವೃತ್ತಪತ್ರಿಕೆಗಳವರು ವಾರ್ತೆಯ ಪ್ರಸಾರದ ಸ್ವಾತಂತ್ರ್ಯಕ್ಕಾಗಿ ನೂರಾರು ವರ್ಷಗಳಿಂದ ಹೋರಾಡಿದ್ದಾರೆ.

ಸರ್ವಾಧಿಕಾರಿ ರಾಷ್ಟ್ರಗಳಲ್ಲಿ ಮತ್ತು ಕಮ್ಯೂನಿಸ್ಟ್ ದೇಶಗಳಲ್ಲಿ ವೃತ್ತಪತ್ರಿಕೆಗಳು ಸರಕಾರದ ಸೊತ್ತು.

ಎಲ್ಲ ವೃತ್ತಪತ್ರಿಕೆಗಳೂ ಲಕ್ಷಾಂತರ ಪ್ರತಿಗಳೇ ಮಾರಾಟವಾಗುವುದಿಲ್ಲ. ಪ್ರತಿದೇಶದಲ್ಲಿಯೂ ಕಡಮೆ ಪುಟಗಳುಳ್ಳ, ಕಡಮೆ ಚಂದಾದಾರರಿರುವ ವೃತ್ತಪತ್ರಿಕೆಗಳಿರುತ್ತವೆ.

ವೃತ್ತಪತ್ರಿಕಾ ಕಚೇರಿ ಒಂದು ಜೇನುಗೂಡು. ದುಂಬಿಗಳು ಶೇಖರಿಸಿದ ಮಕರಂದವಾಗಿ ಪತ್ರಿಕೆ ರೂಪತಾಳುತ್ತದೆ. ಪತ್ರಿಕೋದ್ಯಮಿಗೆ ತಾಳ್ಮೆ, ಅಪಾರ ಚೈತನ್ಯ, ತೀಕ್ಷ್ಣ ಬುದ್ಧಿಶಕ್ತಿ, ಅಸಾಧಾರಣ ಸಾಮಾನ್ಯಜ್ಞಾನ, ಸುಶಿಕ್ಷಿತ ಸ್ಮರಣಶಕ್ತಿ–ಎಲ್ಲ ಅಗತ್ಯ.

ಹಲವು ವಿಶ್ವವಿದ್ಯಾನಿಲಯಗಳಲ್ಲಿ ಪತ್ರಿಕೋದ್ಯಮ ಬೋಧನ ವಿಷಯಗಳಲ್ಲಿ ಒಂದು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಇದರಲ್ಲಿ ಪದವಿ ಪಡೆಯಬಹುದು.

ನೋಡಿ : ಪ್ರಚಾರ ; ಮುದ್ರಣ ; ವ್ಯಂಗ್ಯಚಿತ್ರ ; ವಾರ್ತೆ ; ಸಂಪಾದಕ

## ವೃತ್ತಿಸಂಘ

ಒಂದೇ ಬಗೆಯ ಕೆಲಸ ಮಾಡುವ ಜನರು ಸಾಮಾನ್ಯವಾಗಿ ಒಂದುಗೂಡುತ್ತಾರೆ. ತಮ್ಮ ಉದ್ದೇಶಗಳನ್ನು ಸುಲಭವಾಗಿ ಈಡೇರಿಸಿಕೊಳ್ಳುವ ಸಲುವಾಗಿ ಅವರು ಸಂಘ–ಸಂಸ್ಥೆಗಳನ್ನು ಸ್ಥಾಪಿಸಿಕೊಳ್ಳುತ್ತಾರೆ. ಇವಕ್ಕೆ ವೃತ್ತಿಸಂಘ ಎಂದು ಹೆಸರು.

ಪ್ರಾಚೀನ ಭಾರತದಲ್ಲಿ ವೃತ್ತಿಸಂಘಗಳಿದ್ದುವು. ಬಂಡವಾಳವನ್ನು ಉತ್ತಮ ರೀತಿಯಲ್ಲಿ ಬಳಸುವುದು, ಒಂದು ವೃತ್ತಿಯವರು ಒಟ್ಟಿಗೆ ಸೇರಲು ಅವಕಾಶ ಕಲ್ಪಿಸುವುದು, ಅವರ ಹಕ್ಕುಗಳನ್ನು ರಕ್ಷಿಸುವುದು ಇವು ಈ ವೃತ್ತಿಸಂಘಗಳ ಗುರಿಗಳು. ಕ್ರಿ. ಪೂ. ನಾಲ್ಕನೆಯ ಶತಮಾನದ ಕಡೆಯ ಭಾಗದಲ್ಲಿ ಕೌಟಿಲ್ಯ ಬರೆದ ಅರ್ಥಶಾಸ್ತ್ರದಲ್ಲಿ ವೃತ್ತಿಸಂಘಗಳ ಪ್ರಸ್ತಾಪವಿದೆ. ವೃತ್ತಿಸಂಘಗಳ ಕೆಲಸಗಾರರು ಆದಾಯವನ್ನು ತಮ್ಮ ತಮ್ಮಲ್ಲಿ ಸರಿಸಮನಾಗಿ ಅಥವಾ ಮುಂಚೆ ನಿರ್ಧರಿಸಿಕೊಂಡ ಪ್ರಕಾರ


ಕಟುಕ


ಕಮ್ಮಾರ


ದರ್ಜಿ


ನೇಕಾರ


ಬೆಸ್ತ


ಚಮ್ಮಾರ


ಸವಾರ


ರೊಟ್ಟಿಯವ

ಇಂಗ್ಲೆಂಡಿನ ವೃತ್ತಿಲಾಂಛನಗಳು

ಹಂಚಿಕೊಳ್ಳುತ್ತಿದ್ದರು. ಕೆಲಸಗಾರರು ಕಟ್ಟುನಿಟ್ಟಾಗಿ ಶಿಸ್ತನ್ನು ಪಾಲಿಸಬೇಕು, ತಪ್ಪಿದರೆ ದಂಡ ; ನಿಶ್ಚಿತವಾದ ಕೆಲಸವನ್ನು ಪೂರೈಸುವವರೆಗೆ ಒಂದು ವಾರ ನಿಧಾನವಾಗಬಹುದೆಂಬ ರಿಯಾಯತಿ ವೃತ್ತಿಸಂಘಗಳಿಗೆ ಸಿಗುತ್ತಿತ್ತು. ಜಾತಕ ಕಥೆಗಳಲ್ಲಿ ಹದಿನೆಂಟು ವೃತ್ತಿಗಳ ಸಂಘಗಳಿದ್ದುವೆಂದು ಹೇಳಿದ್ದರೂ ನಾಲ್ಕರ ಹೆಸರುಗಳನ್ನು ಕಾಣಿಸಿದೆ–ಬಡಗಿಗಳು, ಕಲ್ಲುಕುಟಿಗರು, ಚರ್ಮದ ಕೆಲಸದವರು, ಬಣ್ಣದ ಕೆಲಸದವರು. ವರ್ತಕರ ಸಂಘಗಳು ಎಷ್ಟು ಪ್ರಭಾವಯುತವಾಗಿದ್ದುವೆಂದರೆ, ಅವಕ್ಕೆ ಒಪ್ಪಿಗೆಯಾಗದ ಶಾಸನಗಳನ್ನು ಅರಸನೂ ಮಾಡುವಂತಿರಲಿಲ್ಲ.

ಚೀನದಲ್ಲಿ ಈ ಸಂಘಗಳು ವೃತ್ತಿಯಲ್ಲಿರುವವರ ಹಿತವನ್ನೂ ಬಳಕೆದಾರರ ಹಿತವನ್ನೂ ರಕ್ಷಿಸುತ್ತಿದ್ದುವು. ಕ್ರಮೇಣ ವೃತ್ತಿಸಂಘಗಳು ಯೂರೊಪಿನಲ್ಲಿ ಪ್ರಬಲವಾದವು. ಆದರೆ ಭಾರತ, ಚೀನಗಳಲ್ಲಿ ಆಗಲಿಲ್ಲ. ಯೂರೊಪಿನಲ್ಲಿ ಮೊದಮೊದಲು ಕಾಣಿಸಿಕೊಂಡ ಈ ಬಗೆಯ ಸಂಘಗಳು ಧಾರ್ಮಿಕ ಚಟುವಟಿಕೆಗಳಲ್ಲಿ ತೊಡಗಿದ್ದುವು. ಸದಸ್ಯರೆಲ್ಲರೂ ಚಂದಾ ನೀಡುತ್ತಿದ್ದರು ; ಸದಸ್ಯ ಮೃತನಾದರೆ ಆತನ ಅಂತ್ಯ ಸಂಸ್ಕಾರಕ್ಕೆ ವಸೂಲಾದ ನಿಧಿಯಿಂದ ಹಣ ಒದಗಿಸಲಾಗುತ್ತಿತ್ತು.

ವ್ಯಾಪಾರಸ್ಥರು ಹೆಚ್ಚು ಹೆಚ್ಚಾಗಿ ಸಂಘಗಳ ಸದಸ್ಯರಾದರು. ಹನ್ನೆರಡನೆಯ ಶತಮಾನದ ಹೊತ್ತಿಗೆ ವ್ಯಾಪಾರಸ್ಥರು ಮಾತ್ರ ಸೇರಿ ಸ್ಥಾಪಿಸಿದ ಸಂಘಗಳು ಕಾಣಿಸಿಕೊಂಡವು. ಒಂದೇ ಬಗೆಯ ಕುಶಲಕರ್ಮಿಗಳಿಂದ ಸ್ಥಾಪಿಸಲ್ಪಟ್ಟ ಸಂಘಗಳೂ ಪ್ರಾರಂಭವಾದುವು. ಒಂದೇ ವೃತ್ತಿಯ ಜನ ತಮ್ಮ ವೃತ್ತಿಯ ಹಿತಗಳನ್ನು ಕಾಪಾಡಿಕೊಳ್ಳಲು ಸ್ಥಾಪಿಸಿದ ಒಕ್ಕೂಟ. ವೃತ್ತಿಸಂಘ ಎನಿಸಿಕೊಂಡಿತು.

ವ್ಯಾಪಾರಸ್ಥರ ವೃತ್ತಿಸಂಘ ಆ ಊರಿನ ತನ್ನ ಸದಸ್ಯ ವ್ಯಾಪಾರಸ್ಥರ ಹಿತವನ್ನು ರಕ್ಷಿಸುತ್ತಿತ್ತು. ಹೊರಗಿನಿಂದ ಬಂದ ವರ್ತಕರು ಊರಿನ ವೃತ್ತಿಸಂಘದ ಅನುಮತಿ ಪಡೆಯದೆ ವ್ಯಾಪಾರ ನಡೆಸಲಾಗುತ್ತಿರಲಿಲ್ಲ. ಅನುಮತಿ ನೀಡಲು ವಿಪರೀತ ಶುಲ್ಕವನ್ನು ವೃತ್ತಿಸಂಘ ಪಡೆಯುತ್ತಿತ್ತು. ಇದರಿಂದಾಗಿ ಹೊರಗಿನಿಂದ ಬಂದ ವ್ಯಾಪಾರಸ್ಥರು ಕಡಮೆ ಬೆಲೆಗೆ ವಸ್ತುಗಳನ್ನು ಮಾರಿ ಆ ಊರಿನ ವರ್ತಕರ ಜತೆ ಪೈಪೋಟಿ ನಡೆಸಲು ಸಾಧ್ಯವಾಗುತ್ತಿರಲಿಲ್ಲ. ಸದಸ್ಯರು ಧಾರಣೆಗಳನ್ನು ಏರಿಸಬಾರದು; ಅಗ್ಗವಾಗಿ ಕೊಂಡು ವಿಪರೀತ ಲಾಭವಿಟ್ಟು ವಸ್ತುಗಳನ್ನು ಮಾರಬಾರದು; [illegible]

ಸಮಯದಲ್ಲಿ ಧಾನ್ಯಗಳನ್ನು ಶೇಖರಿಸಿ ಬೆಲೆ ಹೆಚ್ಚುವಂತೆ ಮಾಡಬಾರದು–ಇಂಥ ನಿಯಮಗಳನ್ನು ವೃತ್ತಿಸಂಘಗಳು ಮಾಡಿದ್ದುವು. ನಿಯಮ ತಪ್ಪಿ ನಡೆದರೆ ವಿಪರೀತ ದಂಡ ಹೇರಲಾಗುತ್ತಿತ್ತು. ಪದೇ ಪದೇ ನಿಯಮಗಳನ್ನು ಉಲ್ಲಂಘಿಸಿದರೆ ವೃತ್ತಿಸಂಘದಿಂದ ಸದಸ್ಯರನ್ನು ದೂರ ಹಾಕುತ್ತಿದ್ದರು. ವೃತ್ತಿಸಂಘಕ್ಕೆ ಒಬ್ಬ ಯಜಮಾನನಿರುತ್ತಿದ್ದ; ನ್ಯಾಯಕಟ್ಟೆ ಇರುತ್ತಿತ್ತು.

ಬೆಸ್ತರು, ಕಮ್ಮಾರರು, ಅಕ್ಕಸಾಲಿಗರು ಮುಂತಾದ ಕುಶಲಕರ್ಮಿಗಳು ತಮ್ಮ ತಮ್ಮ ವೃತ್ತಿಸಂಘಗಳನ್ನು ಸ್ಥಾಪಿಸಿಕೊಂಡಿದ್ದರು. ಕುಶಲಕರ್ಮದ ಮಟ್ಟ, ಅದಕ್ಕೆ ಸಂದಾಯವಾಗಬೇಕಾದ ಮಜೂರಿ ಮುಂತಾದ ವಿಷಯಗಳನ್ನು ಕುಶಲಕರ್ಮಿಗಳ ವೃತ್ತಿಸಂಘಗಳು ನಿರ್ಣಯಿಸುತ್ತಿದ್ದುವು. ಸದಸ್ಯ ಕುಶಲಕರ್ಮಿ ಮೋಸಮಾಡಲು ಹವಣಿಸಿದರಾಗಲಿ ಕೆಲಸದಲ್ಲಿ ಅನಾಸ್ಥೆ ತೋರಿದರಾಗಲಿ ವೃತ್ತಿಸಂಘ ದಂಡ ವಿಧಿಸುತ್ತಿತ್ತು. ಕುಶಲಕರ್ಮದ ವೃತ್ತಿಸಂಘಕ್ಕೆ ಅನುಭವಸ್ಥ ಕುಶಲಕರ್ಮಿಯೊಬ್ಬ ಯಜಮಾನನಾಗಿರುತ್ತಿದ್ದ. ಇದಕ್ಕೆ ಒಂದು ನ್ಯಾಯಕಟ್ಟೆ ಇರುತ್ತಿತ್ತು. ಈ ವೃತ್ತಿಸಂಘಗಳು ಹುಡುಗರಿಗೆ ತರಬೇತಿ ನೀಡುತ್ತಿದ್ದುದು ಒಂದು ವಿಶೇಷ. ಸಂಬಂಧಪಟ್ಟ ಕಲೆಯನ್ನು ಮೂರು ವರ್ಷಗಳಿಂದ ಹಿಡಿದು ಹನ್ನೆರಡು ವರ್ಷಗಳ ತನಕ ಕಲಿಸಲಾಗುತ್ತಿತ್ತು. ಶಿಷ್ಯನ ಸಾಮರ್ಥ್ಯದ ಬಗೆಗೆ ಯಜಮಾನನಿಗೆ ತೃಪ್ತಿಯಾದರೆ ಅಲ್ಲಿಗೆ ಆತನ ಶಿಷ್ಯವೃತ್ತಿ ಮುಗಿಯುತ್ತಿತ್ತು. ಅನಂತರ ಕರ್ಮಾಗಾರಗಳಲ್ಲಿ ಕೆಲಸಮಾಡಿ ದಿನನಿತ್ಯ ಗಳಿಸುವ ಹಣ ಉಳಿಸುತ್ತಿದ್ದ. ಸ್ವಯಂ ಉಪಕರಣಗಳನ್ನೂ ಕರ್ಮಾಗಾರವನ್ನೂ ಕೊಳ್ಳಲು ಸಮರ್ಥನಾದ ಮೇಲೆ ಸ್ವತಂತ್ರ ವೃತ್ತಿಯಲ್ಲಿ ತೊಡಗುತ್ತಿದ್ದ.

ವೃತ್ತಿಸಂಘಗಳು ಕ್ರಮೇಣ ಪ್ರಬಲವಾದುವು. ಊರಿನ ವ್ಯಾಪಾರ ಮತ್ತು ಕೈಗಾರಿಕೆಗಳನ್ನು ತಮ್ಮ ಹಿಡಿತದಲ್ಲಿ ಇರಿಸಿಕೊಂಡುವು. ವೃತ್ತಿಸಂಘಗಳನ್ನು ಸ್ಥಾಪಿಸಲು, ನಡೆಸಲು ಅರಸರು ಅನುಮತಿ ಪತ್ರ ನೀಡತೊಡಗಿದರು. ಬೇರೆ ಬೇರೆ ಊರುಗಳ ನಡುವೆ ವ್ಯಾಪಾರ ವೃದ್ಧಿಯಾದಂತೆ ವೃತ್ತಿಸಂಘಗಳ ಪ್ರಾಬಲ್ಯಕ್ಕೆ ಧಕ್ಕೆ ಬಂದಿತು. ಕೈಗಾರಿಕಾ ಕ್ರಾಂತಿ ನಡೆದಾಗ ಕುಶಲಕರ್ಮಿಗಳ ಸ್ಥಾನವನ್ನು ಯಂತ್ರಗಳು ಆಕ್ರಮಿಸಿದುವು. ಕುಶಲವೃತ್ತಿಸಂಘಗಳು ಯಾಂತ್ರೀಕರಣವನ್ನು ವಿರೋಧಿಸಿದುವಾದರೂ ದಿನ ಕಳೆದಂತೆ ಅವುಗಳ ಪ್ರಾಬಲ್ಯ ಕುಗ್ಗಿತು. ದೊಡ್ಡ ಕೈಗಾರಿಕೆಗಳು ಬೆಳೆದಂತೆ ಕಾರ್ಮಿಕರ ಸಮಸ್ಯೆಗಳು ಹುಟ್ಟಿದವು. ಹಿಂದಿನ ಕುಶಲಕರ್ಮಿ ವೃತ್ತಿಸಂಘಗಳ ಕೆಲವು ಕಾರ್ಯಗಳನ್ನು ಕಾರ್ಮಿಕರ ಸಂಘಗಳು ವಹಿಸಿಕೊಂಡುವು.

ನೋಡಿ : ಕಾರ್ಮಿಕರ ಸಂಘ

## ವೆಚ್ಚದ ಲೆಕ್ಕ

'ನೀವು ತೊಟ್ಟಿರುವ ಅಂಗಿಯ ಬೆಲೆಯೆಷ್ಟು ?' ಎಂದು ಯಾರನ್ನಾದರೂ ಕೇಳಿದರೆ ಆತ 'ಹದಿನಾಲ್ಕು ರೂಪಾಯಿ' ಎಂದು ಥಟ್ಟನೆ ಉತ್ತರ ಕೊಡಬಹುದು.

ಅದು ಹದಿನಾಲ್ಕು ರೂಪಾಯಿ ಹೇಗಾಯಿತು?—ಸ್ವಲ್ಪ ಯೋಚಿಸಬೇಕು.

ಮೀಟರಿಗೆ ಐದು ರೂಪಾಯಿಯಂತೆ ಎರಡು ಮೀಟರು ಬಟ್ಟೆಗೆ ಹತ್ತು ರೂಪಾಯಿ. ಅಂಗಿ ಹೊಲಿಯಲು ಮಜೂರಿ ನಾಲ್ಕು ರೂಪಾಯಿ.

ಎಂದರೆ, ಆತ ತೊಟ್ಟಿರುವ ಅಂಗಿಯಲ್ಲಿ ಎರಡು ಅಂಶಗಳು ಸೇರಿವೆ ಎಂದಾಯಿತು : ಪದಾರ್ಥ ಅಂಶ (ಬಟ್ಟೆ) ಮತ್ತು ಶ್ರಮದ ಅಂಶ (ಮಜೂರಿ).

ಈ ವಿಚಾರಣೆಯನ್ನು ಇನ್ನೂ ಸ್ವಲ್ಪ ಹಿಂದಕ್ಕೆ ಸರಿಸಬಹುದು. ಆತ ಈ ಬಟ್ಟೆಯನ್ನು ತನ್ನ ಊರಿನ ಅಂಗಡಿಯಲ್ಲಿ ಕೊಂಡಿರಬೇಕಲ್ಲವೆ ? ಅಂಗಡಿಯವನಿಗೆ ಆತ ಮೀಟರಿಗೆ ಐದು ರೂಪಾಯಿಯಂತೆ ಬಟ್ಟೆಗಾಗಿ ಹಣ ಕೊಟ್ಟಿರಬಹುದು. ಒಂದೊಂದು ಮೀಟರು ಬಟ್ಟೆಯಲ್ಲಿಯೂ ಆ ವ್ಯಾಪಾರಿಯ ದೃಷ್ಟಿಯಿಂದ ಎರಡು ಅಂಶಗಳು ಸೇರಿವೆ. ಒಟ್ಟು ವ್ಯಾಪಾರಿಯಿಂದ ಆ ಬಟ್ಟೆ ಕೊಳ್ಳಲು ಕೊಟ್ಟ ಬೆಲೆ ಮತ್ತು ಅದರ ಮೇಲೆ ಅವನು ಮಾಡಿದ ಖರ್ಚು, ಅದರ ಮೇಲೆ ಅವನು ಇಟ್ಟ ಲಾಭ. ಅವನು ಮೀಟರಿಗೆ ನಾಲ್ಕು ರೂಪಾಯಿಯಂತೆ ಅದನ್ನು ಕೊಂಡಿರಬಹುದು. ಅದನ್ನು ಕೊಂಡಾಗಿನಿಂದ ಮಾರುವವರೆಗೆ ಅವನಿಗೆ ಇಪ್ಪತ್ತೈದು ಪೈಸೆ ವೆಚ್ಚ ತಗಲಿರಬಹುದು ಎಂದರೆ ಅವನ ಲಾಭ ಎಪ್ಪತ್ತೈದು ಪೈಸೆ.

ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ವಿಚಾರಿಸೋಣ.

ಅಂಗಡಿಯವನಿಗೆ ಬಟ್ಟೆ ಮಾರಿದ ಒಟ್ಟುವ್ಯಾಪಾರಿ ಬೆಂಗಳೂರಿನವನು. ಅವನು ಅದನ್ನು ಗಿರಣಿಯಿಂದ ಕೊಂಡ. ಕೊಂಡದ್ದು ಮೀಟರಿಗೆ ಮೂರೂವರೆ ರೂಪಾಯಿಯಂತೆ, ಅವನ ಖರ್ಚು ಮೀಟರಿಗೆ ಇಪ್ಪತ್ತು ಪೈಸೆ ; ಲಾಭ ಮೀಟರಿಗೆ ಮೂವತ್ತು ಪೈಸೆ.

ಇನ್ನು ಅಲ್ಲಿಂದ ಮುಂದಿನ ಪ್ರಯಾಣ ಗಿರಣಿಗೆ. ಅದರ ವ್ಯವಸ್ಥಾಪಕರನ್ನು ಕಂಡು ಅವರಿಗೆ ಈ ಪ್ರಶ್ನೆ ಹಾಕಬಹುದು : "ಇವರು ತೊಟ್ಟಿರುವ ಅಂಗಿಯ ಬಟ್ಟೆಯನ್ನು ಮೀಟರಿಗೆ ಮೂರೂವರೆ ರೂಪಾಯಿಯಂತೆ ಮಾರಿದಿರಂತೆ. ನೀವು ಇದನ್ನೇ ಅಷ್ಟಕ್ಕೇ ಏಕೆ ಮಾರಿದಿರಿ ? "

ಈ ಪ್ರಶ್ನೆಗೆ ಆತ ಹೀಗೆ ಉತ್ತರ ಕೊಡಬಹುದು :

"ಈ ಬಟ್ಟೆಗೆ ನಾವು ಮೂರೂವರೆ ರೂಪಾಯಿಗಿಂತ ಹೆಚ್ಚು ಬೆಲೆ ಇಟ್ಟರೆ ಯಾರೂ ನಮ್ಮಿಂದ ಈ ಬಟ್ಟೆ ಕೊಳ್ಳದೆ ಹೋಗಬಹುದು. ಏಕೆಂದರೆ ಈ ಗುಣಮಟ್ಟದ ಬಟ್ಟೆಯನ್ನು ತಯಾರಿಸುವ ಇತರ ಗಿರಣಿಗಳೂ ಈ ದರ್ಜೆಯ ಬಟ್ಟೆಯ ಬೆಲೆ ಏರಿಸದೆ ಇರಬಹುದು. ನಾವು ಈ ಬಟ್ಟೆಯ ಬೆಲೆ ಇಳಿಸುವುದೂ ಸಾಧ್ಯವಿಲ್ಲ. ಒಂದೊಂದು ಮೀಟರ್ ಬಟ್ಟೆ ತಯಾರಿಸುವುದಕ್ಕೂ ಎಷ್ಟು ವೆಚ್ಚ ತಗಲುವುದೆಂಬುದನ್ನೂ ನಾವು ಈ ಬಟ್ಟೆ ಮಾರಬಹುದಾದ ಕನಿಷ್ಠ ದರ ಎಷ್ಟೆಂಬುದನ್ನೂ ನಿರ್ಧರಿಸಲು ನಮ್ಮ ವೆಚ್ಚದ ಲೆಕ್ಕ ಸಿಬ್ಬಂದಿಯ ನಿಪುಣರ ಸಲಹೆ ಪಡೆದಿದ್ದೇವೆ."

ಒಂದು ಪದಾರ್ಥದ ತಯಾರಿಕೆಗೆ ಯಾವ ಯಾವ ಹಂತದಲ್ಲಿ ಎಷ್ಟೆಷ್ಟು ವೆಚ್ಚ ತಗಲುವುದೆಂಬುದನ್ನು ಪತ್ತೆ ಹಚ್ಚಿ ಅದರ ಆಧಾರದ ಮೇಲೆ ಆ ಪದಾರ್ಥದ ಒಂದೊಂದು ಘಟಕಕ್ಕೂ ಎಷ್ಟು ವೆಚ್ಚ ಅಥವಾ ಅಸಲು ಬೀಳುವುದೆಂಬುದನ್ನು ನಿಷ್ಕರ್ಷಿಸುವುದು ಸಾಮಾನ್ಯವಾಗಿ ತಿಳಿದುಕೊಂಡಿರುವಷ್ಟು ಸುಲಭವಲ್ಲ. ಈ ಬಟ್ಟೆಯಲ್ಲಿ ಕಣ್ಣಿಗೆ ಕಾಣುವ ವೆಚ್ಚದ ಅಂಶಗಳಿಗಿಂತ (ಉದಾಹರಣೆ : ಹತ್ತಿಯ ದಾರ) ಕಾಣದ ವೆಚ್ಚಗಳ ಸಂಖ್ಯೆಯೇ ಹೆಚ್ಚು. ಇವನ್ನೆಲ್ಲಾ ಪಟ್ಟಿಹಾಕಿ ಶಾಸ್ತ್ರೀಯವಾಗಿ ಲೆಕ್ಕಾಚಾರ ಮಾಡುವುದೇ ವೆಚ್ಚದ ಲೆಕ್ಕದ ಉದ್ದೇಶ.

ವಸ್ತುವಿನ ತಯಾರಿಕೆಯಲ್ಲಿ ಬಳಸಲಾದ ಕಚ್ಚಾವಸ್ತುವಿನ ಬೆಲೆ ಹಾಗೂ ನೇರ ದುಡಿಮೆಯ ಮಜೂರಿ ಇವನ್ನು ಸೇರಿಸಿದರೆ ದೊರಕುವುದೇ ಮೂಲ ವೆಚ್ಚ. ಬಟ್ಟೆಯ ಉದಾಹರಣೆಯನ್ನು ತೆಗೆದುಕೊಳ್ಳುವುದಾದರೆ, ಅನ್ಯೆ

ಬಳಸಲಾದ ಹತ್ತಿಯ ದಾರದ ಬೆಲೆ ಹಾಗೂ ಅದನ್ನು ಬಟ್ಟೆಯಾಗಿ ನೇಯಲು ನೇಮಕವಾದ ಸಿಬ್ಬಂದಿಯ ಮಜೂರಿ.

ವಸ್ತುವಿನ ತಯಾರಿಕೆಗಾಗಿ ಗಿರಣಿ ಅಥವಾ ಕಾರಖಾನೆಯಲ್ಲಿ ಇನ್ನೂ ನಾನಾ ಬಗೆಯ ವೆಚ್ಚಗಳನ್ನು ಮಾಡುತ್ತಾರೆ. ಅವೆಲ್ಲ ನೇರ ವೆಚ್ಚಗಳು; ಅಥವಾ ಕಾರಖಾನೆಯ ಮೇಲುವೆಚ್ಚಗಳು. ಮೂಲವೆಚ್ಚಕ್ಕೆ ಸೇರಿಸಿದರೆ ದೊರಕುವುದೇ ಕಾರಖಾನೆಯ ಮಟ್ಟದಲ್ಲಿ ಆ ವಸ್ತುವಿನ ವೆಚ್ಚ ಅಥವಾ ಅಸಲು. ಇದನ್ನು ಉತ್ಪಾದನಾವೆಚ್ಚ ಎನ್ನಬಹುದು.

ಕಚ್ಚಾವಸ್ತುಗಳ ಬೆಲೆ, ಕಾರಖಾನೆಯ ಬಾಡಿಗೆ, ಕಾರಖಾನೆಯ ಮೇಲೆ ವಿಮೆ ಇಳಿಸಿದ್ದರೆ ಅದರ ಕಂತು, ತೆರಿಗೆಗಳು, ವಿದ್ಯುಚ್ಛಕ್ತಿ, ಇದ್ದಿಲು, ಕಲ್ಲಿದ್ದಲು, ತೈಲ ಮುಂತಾದ ಇಂಧನಗಳ ಖರ್ಚು, ಆಗಾಗ ರಿಪೇರಿಗಳ ಖರ್ಚು, ಯಂತ್ರಗಳ ಸವೆತದ ನಷ್ಟ, ಇದೆಲ್ಲ ಮೇಲುವೆಚ್ಚ.

ಈ ಮೇಲುವೆಚ್ಚ ಒಂದು ವರ್ಷಕ್ಕೆ ಎಷ್ಟಾಗುವುದೋ ಅದನ್ನು 52ರಿಂದ ಭಾಗಿಸಿ ಒಂದು ವಾರಕ್ಕೆ –ಅಥವಾ 12ರಿಂದ ಭಾಗಿಸಿ ತಿಂಗಳಿಗೆ– ಇಷ್ಟು ಎಂದು ಲೆಕ್ಕ ಹಾಕಬಹುದು. ಇದು ಕಾರಖಾನೆಯ ಸ್ಥೂಲವಾದ ಮೇಲು ವೆಚ್ಚವನ್ನು ನಿರ್ಧರಿಸುವ ವಿಧಾನ.

ಕೆಲವು ಕಾರಖಾನೆಗಳಲ್ಲಿ ಮೇಲುವೆಚ್ಚದ ನಿರ್ಧಾರ ಇನ್ನೂ ವಿಚಿತ್ರ ವಾಗಿರುತ್ತದೆ. ಉದಾಹರಣೆಗೆ, ಕಾರಖಾನೆಗೆ ಉಪಯೋಗಿಸಲಾದ ವಿದ್ಯುಚ್ಛಕ್ತಿಯನ್ನು ಬೇರೆ ಬೇರೆ ಯಂತ್ರಗಳು ಬೇರೆ ಬೇರೆ ಪ್ರಮಾಣದಲ್ಲಿ ಬಳಸಿಕೊಂಡಿರುತ್ತವೆ. ಹಾಗಾಗಿ, ಕೆಲವು ವಸ್ತುಗಳ ತಯಾರಿಕೆಗೆ ಹೆಚ್ಚು ವಿದ್ಯುತ್ತು, ಮತ್ತೆ ಕೆಲವು ವಸ್ತುಗಳು ತಯಾರಿಕೆಗೆ ಕಡಮೆ ವಿದ್ಯುತ್ತು ಖರ್ಚಾಗಿರುತ್ತದೆ. ಹೀಗೆ ಬೇರೆ ಬೇರೆ ವಸ್ತುಗಳಿಗೆ ವಿದ್ಯುಚ್ಛಕ್ತಿಯಂಥ ಬೇರೆ ಬೇರೆ ಬಾಬುಗಳಿಂದ ಆದ ಮೇಲುವೆಚ್ಚಗಳನ್ನೂ ಲೆಕ್ಕ ಮಾಡುತ್ತಾರೆ. ಹೀಗೆ ವೆಚ್ಚದ ಬಾಬುಗಳನ್ನು ವಿಂಗಡಿಸಿ ಲೆಕ್ಕಹಾಕಿ ಸಿದ್ಧವಸ್ತುಗಳ ಮೇಲು ವೆಚ್ಚವನ್ನು ಪ್ರತ್ಯೇಕವಾಗಿ ಲೆಕ್ಕ ಹಾಕುತ್ತಾರೆ.

ಕಾರಖಾನೆಯ ಮೇಲುವೆಚ್ಚವೇ ಅಲ್ಲದೆ ಇತರ ಮೇಲುವೆಚ್ಚಗಳೂ ಇರುತ್ತವೆ. ಆಡಳಿತ ಕಚೇರಿ ಬಾಡಿಗೆ, ಆಡಳಿತಾಧಿಕಾರಿಗಳ ಸಂಬಳ, ಗುಮಾಸ್ತರೇ ಮುಂತಾದ ಸಿಬ್ಬಂದಿಯ ವೇತನ, ವ್ಯಾಪಾರಸ್ಥರ ಕಡೆಗೆ ಸಿದ್ಧ ವಸ್ತುಗಳನ್ನು ಸಾಗಿಸಲು ಆಗುವ ಖರ್ಚು, ವಸೂಲಾಗದ ಸಾಲ, ಬ್ಯಾಂಕು ಮುಂತಾದ ಕಡೆಗಳಿಂದ ತಂದ ಸಾಲದ ಮೇಲೆ ನೀಡಲಾಗುವ ಬಡ್ಡಿ–ಇವು ಇತರ ಮೇಲುವೆಚ್ಚಗಳು. ಕಾರಖಾನೆಯ ಮೇಲುವೆಚ್ಚ ಕಂಡುಹಿಡಿಯುವ ವಿಧಾನದಿಂದಲೇ ಈ ಮೇಲುವೆಚ್ಚವನ್ನೂ ನಿರ್ಧರಿಸಬಹುದು.

ಈ ಪರೋಕ್ಷ ವೆಚ್ಚವನ್ನು ಉತ್ಪಾದನಾವೆಚ್ಚಕ್ಕೆ ಕೂಡಿಸಿದಾಗ ಒಂದು ವಸ್ತುವಿನ ಒಟ್ಟು ವೆಚ್ಚ ತಿಳಿಯುತ್ತದೆ. [illegible] ಒಟ್ಟು ವೆಚ್ಚ ಅಥವಾ ಅಸಲು.

ವೆಚ್ಚಲೆಕ್ಕ ಪರಿಣತರ ಕೆಲಸ [illegible] ಅನಗತ್ಯವಾಗಿ ಆಗುವ [illegible] ಪರಿಣತರು ಈ ದಿಶೆಯಲ್ಲಿ ಸಂಶೋಧನೆ ನಡೆಸುತ್ತಾರೆ. ವಸ್ತುಗಳನ್ನು [illegible] ಕಾರಖಾನೆಗಳು [illegible] ವಸ್ತುಗಳನ್ನು [illegible] ವಸ್ತುಗಳನ್ನು [illegible] ಬೇಕಾದರೆ ಅವುಗಳನ್ನು [illegible] ವಿರದಂತೆ ನೋಡಿಕೊಳ್ಳಬೇಕು. ವೆಚ್ಚಲೆಕ್ಕ ಪರಿಣತರು [illegible] ಹತೋಟಿಯಲ್ಲಿಡುವ, ಮತ್ತಷ್ಟು ಕಡಮೆಮಾಡುವ, ಉಪಾಯಗಳನ್ನು ಯೋಚಿಸುತ್ತಾರೆ.

ವೆಚ್ಚಲೆಕ್ಕ ಪರಿಣತರು ಮುಖ್ಯವಾಗಿ ವ್ಯರ್ಥವೆಚ್ಚಗಳನ್ನು ತಡೆಗಟ್ಟುತ್ತಾರೆ. ಕೆಲಸದ ವೇಳೆಯಲ್ಲಿ ಸಮಯವಾಗಲಿ ವಸ್ತುವಾಗಲಿ ಪೋಲಾಗ ಬಾರದು. ಕೆಲಸಗಾರ ಯಾವ ಕಾರ್ಯದಲ್ಲಿ ಪರಿಣತನೋ ಅದನ್ನೇ ಅವನಿಗೆ ವಹಿಸುವುದರಿಂದ ಅವನಲ್ಲಿರುವ ಸಾಮರ್ಥ್ಯ ವ್ಯರ್ಥವಾಗುವುದಿಲ್ಲ. ವೆಚ್ಚಗಳನ್ನು ಕಡಮೆಮಾಡುವ ವಿವಿಧ ವಿಧಾನಗಳಿವೆ. ಕಚ್ಚಾವಸ್ತು ಹಲವು ಕೈದಾಟಿ ಬರುವಂತಿದ್ದರೆ ಅದನ್ನು ತಪ್ಪಿಸಬೇಕು; ನೇರವಾಗಿ ತರಿಸ ಬೇಕು. ಉತ್ಪಾದನೆಯ ಯಾವ ಹಂತದಲ್ಲಿಯೇ ಆಗಲಿ ವಸ್ತುಗಳು ನಿಂತು ಬಿಟ್ಟರೆ ಹಾಕಿದ ಬಂಡವಾಳದಿಂದ ಫಲವೇನೂ ಬರುವುದಿಲ್ಲ. ಸಾಗಾಣಿಕೆ ಯಲ್ಲಿ ಶ್ರಮ ಮತ್ತು ದೂರ ಎರಡೂ ದೃಷ್ಟಿಯಿಂದ ಯಾವುದು ಅಗ್ಗವೋ ಆ ವ್ಯವಸ್ಥೆಯನ್ನು ಆರಿಸಬೇಕು. ಈ ದಿಶೆಯಲ್ಲಿ ವೆಚ್ಚದಲೆಕ್ಕ ಪರಿಣತರು ತಮ್ಮ ಶೋಧನೆಗಳನ್ನು ನಡೆಸುತ್ತಾರೆ.

ಸರಕು ಮತ್ತು ಸೇವೆಗಳ ಮೌಲ್ಯವನ್ನು ಕಂಡುಹಿಡಿಯುವುದಷ್ಟೇ ಅಲ್ಲದೆ, ಗುಣದ ಮಟ್ಟವೂ ಇಳಿಯದಂತೆ ನೋಡಿಕೊಂಡು ಸರಕು ಮತ್ತು ಸೇವೆಗಳು ಅಗ್ಗವಾಗಿ ಒದಗುವಂತೆ ಮಾಡುವುದೇ ವೆಚ್ಚದ ಲೆಕ್ಕ ಇಡುವುದರ ಉದ್ದೇಶ.

## ವೆಸ್ಟ್ ಇಂಡೀಸ್

ಭಾರತದ ಸಂಬಾರ ಪದಾರ್ಥಗಳಿಗೆ ನೂರಾರು ವರ್ಷಗಳಿಂದ ಎಲ್ಲ ಕಡೆಗಳಿಂದಲೂ ಬೇಡಿಕೆ. ಮೆಣಸು, ಏಲಕ್ಕಿ, ಜೀರಿಗೆ, ಲವಂಗ ಮುಂತಾದ ಸಂಬಾರ ಪದಾರ್ಥಗಳು ಅರೇಬಿಯದ ಮೂಲಕ ಭೂಮಾರ್ಗ ವಾಗಿ ಪಶ್ಚಿಮಾರ್ಧಗೋಳದ ದೇಶಗಳನ್ನು ತಲಪುತ್ತಿದ್ದುವು. ಸ್ಪೇನಿನ ಕೊಲಂಬಸ್ ಸಂಬಾರ ಪದಾರ್ಥಗಳ ತವರಾದ ಭಾರತವನ್ನು (ಇಂಡಿಯಾ) ನೋಡಲು ಆತುರಪಡುತ್ತಿದ್ದ. ಭಾರತಕ್ಕೆ ಹೊರಟವನು 1492ರಲ್ಲಿ ಉತ್ತರ ಅಮೆರಿಕದ ಭೂಶಿರ ಫ್ಲಾರಿಡಾ ಸಮೀಪದ ದ್ವೀಪ ಸಮೂಹದ ಪೈಕಿ ಒಂದು ದ್ವೀಪದಲ್ಲಿ ಇಳಿದ. ವಾಟ್ಲಿಂಗ್ ದ್ವೀಪ, ಬಹಾಮಸ್, ಕ್ಯೂಬ ಮುಂತಾದ ದ್ವೀಪಗಳನ್ನು [illegible] ದಿಕ್ಕಿಗೆ ಸಮೀಪದಲ್ಲಿಯೇ ಎಲ್ಲೋ ಇಂಡಿಯಾ ಇದೆಯೆಂದು ಭಾವಿಸಿದ. ಆ ದ್ವೀಪಗಳಿಗೆ ಆತ ಹೆಸರಿಟ್ಟುದು 'ವೆಸ್ಟ್ ಇಂಡೀಸ್' ಎಂದು.

ದಕ್ಷಿಣ ಮತ್ತು ಉತ್ತರ ಅಮೆರಿಕಗಳ ನಡುವೆ ಕ್ಯಾರಿಬಿಯನ್ ಸಮುದ್ರ ದಲ್ಲಿ ಹರಡಿಕೊಂಡಿರುವ ದ್ವೀಪಗಳ ಸಮೂಹಗಳಿಗೆ 'ವೆಸ್ಟ್ ಇಂಡೀಸ್' ಎಂದು ಹೆಸರು. ಫ್ಲಾರಿಡಾ ಭೂಶಿರದಿಂದ ವೆನಿಜೂಲದ ತನಕ ಕೊಕ್ಕೆ ಯಾಕಾರದಲ್ಲಿ ಸುಮಾರು 2,414 ಕಿ.ಮೀ. ಪ್ರದೇಶದಲ್ಲಿ ಹರಡಿಕೊಂಡಿವೆ ಈ ದ್ವೀಪಗಳು. ದ್ವೀಪ ಸಮೂಹದ ದೊಡ್ಡ ದ್ವೀಪಗಳು ಕ್ಯೂಬ, ಜಮೈಕ, ಹಿಸ್ಪೇನಿಯೋಲ, ಪೋರ್ಟರಿಕೋ, ಬಾರ್ಬಡಾಸ್, ಟ್ರಿನಿಡಾಡ್, [illegible] (ಗಾಳಿಗೆ ಎದುರಾಗಿರುವ) ದ್ವೀಪ ಸಮೂಹ ಮತ್ತು ಲೀವರ್ಡ್ (ಗಾಳಿಯಿಂದ ಮರೆಯಾಗಿರುವ) ದ್ವೀಪ ಸಮೂಹ ಇವು ಸಣ್ಣ ದ್ವೀಪಗಳ ಗುಂಪಿಗೆ ಸೇರುತ್ತವೆ.

ವೆಸ್ಟ್ ಇಂಡೀಸ್ ದ್ವೀಪಗಳು ವಸಾಹತುಶಾಹಿ ಆಳ್ವಿಕೆಗೆ ನಾಲ್ಕು ಶತಮಾನಗಳಿಗಿಂತ ಹೆಚ್ಚು ಒಳಪಟ್ಟಿದ್ದುವು. ಸ್ಪೇನ್, ಬ್ರಿಟನ್, ಫ್ರಾನ್ಸ್,

ಹಾಲೆಂಡ್ ಅನಂತರ ಅಮೆರಿಕ ಇವು ವೆಸ್ಟ್ ಇಂಡೀಸ್ ದ್ವೀಪಗಳನ್ನು ಆಳಿದ ದೇಶಗಳು.

ವೆಸ್ಟ್ ಇಂಡೀಸ್ ಗಣರಾಜ್ಯ ಮತ್ತು ಹೈಟಿ (ಇವೆರಡೂ ಕೂಡಿದ ಪ್ರದೇಶ ಹಿಸ್ಪೇನಿಯೋಲ), ಕ್ಯೂಬ, ಜಮೈಕ, ಟ್ರಿನಿಡಾಡ್ ಮತ್ತು ಟೊಬಾಗೊ ಇವು ಈಗ ಸ್ವತಂತ್ರ ರಾಷ್ಟ್ರಗಳು. ಅಂಟಿಗುಎ, ಬಹಾಮಸ್, ಬಾರ್ಬಡೋಸ್, ಡೊಮಿನಿಕ, ಗ್ರೆನೇಡ್, ಸೇಂಟ್‌ಲುಸಿಯ ಮುಂತಾದುವು ಇನ್ನೂ ಬ್ರಿಟಿಷರ ಆಳ್ವಿಕೆಯಲ್ಲಿವೆ. ಮಾರ್ಟಿನಿಕ್, ಗಾಡೆಲೂಸ್, ಸೇಂಟ್ ಬಾರ್ಥೊಲೊಮ್ಯು ಇವು ಫ್ರೆಂಚರ ಅಧೀನದಲ್ಲಿವೆ. ಹಾಲೆಂಡ್ ಆಳುತ್ತಿರುವ ದ್ವೀಪಗಳು ಬೊನೈರ್, ಅರುಬ, ಸಾಬಾ ಮುಂತಾದುವು. ಪೋರ್ಟೋರಿಕೊ, ಅಮೆರಿಕನ್ ವರ್ಜಿನ್ ದ್ವೀಪಗಳು ಅಮೆರಿಕಕ್ಕೆ ಸೇರಿದವು. ವೆಸ್ಟ್ ಇಂಡೀಸ್ ದ್ವೀಪಗಳಲ್ಲಿ ಅನೇಕ ದ್ವೀಪಗಳ ವಿಸ್ತೀರ್ಣ ಹಲವು ಚದರ ಕಿಲೊಮೀಟರುಗಳು ಮಾತ್ರ. ಈ ಎಲ್ಲ ದ್ವೀಪಗಳೂ ಫ್ಲಾರಿಡಾದಿಂದ ವೆನಿಜೂಲದವರೆಗೆ ಹರಡಿರುವ ಪರ್ವತ ಪ್ರದೇಶದ ಭೂಶಿರಗಳು. ಸಮುದ್ರದೊಳಗೆ ಮುಳುಗಿರುವ ಪರ್ವತದ ಸಾಲಿನ ಶಿಖರಗಳು ನೀರಿನಿಂದ ಹೊರಕ್ಕೆ ಚಾಚಿ ದ್ವೀಪಗಳಾಗಿವೆ.

| | | |
|---|---|---|
| ಖಂಡ | : | ಅಮೆರಿಕ (ಉತ್ತರ ಮತ್ತು ದಕ್ಷಿಣದ ಅಮೆರಿಕಗಳ ಮಧ್ಯೆ ಫ್ಲಾರಿಡದ ತುದಿಯಿಂದ ದಕ್ಷಿಣ ಅಮೆರಿಕದ ಈಶಾನ್ಯ ತೀರದ ವರೆಗೆ) |
| ಅಕ್ಷಾಂಶ | : | 10° ಉ ದಿಂದ 23° 50′ ಉ (ಬಹಾಮಾ ದ್ವೀಪ ಬಿಟ್ಟು) |
| ರೇಖಾಂಶ | : | ಸುಮಾರು 63° ಪ ದಿಂದ 85° ಪ |
| ವಿಸ್ತೀರ್ಣ | : | 2,37,244 ಚ. ಕಿ. ಮೀ. |
| ಜನಸಂಖ್ಯೆ | : | ಸುಮಾರು 2,00,00,000 (1960) |
| ಭಾಷೆ | : | ಸ್ಪ್ಯಾನಿಷ್, ಇಂಗ್ಲಿಷ್, ಫ್ರೆಂಚ್, ಕ್ರಿಯೋಲ್, ಪಟಾಯ್ಸ್ ಮತ್ತು ಪಪಿಯಮೆಂಟೊ |

ವೆಸ್ಟ್ ಇಂಡೀಸ್ ದ್ವೀಪಗಳಲ್ಲಿ ಉಷ್ಣವಲಯದ ಹವಾಮಾನವಿರುತ್ತದೆ. ಚಳಿಗಾಲದ ಮತ್ತು ಬೇಸಿಗೆಯ ಉಷ್ಣತೆಯಲ್ಲಿ ಹೆಚ್ಚಿಗೆ ವ್ಯತ್ಯಾಸವಿಲ್ಲ. ಈಶಾನ್ಯ ವಾಣಿಜ್ಯ ಮಾರುತಗಳು ಹಾಯುವ ದಾರಿಯಲ್ಲಿ ವೆಸ್ಟ್ ಇಂಡೀಸ್ ದ್ವೀಪಗಳು ಇರುವುದರಿಂದ ವಿಪುಲವಾದ ಮಳೆ ಬೀಳುತ್ತದೆ. ಮಳೆಯ ಅವಧಿ ಮುಗಿದ ಹಾಗೆ ಚಂಡಮಾರುತಗಳು ಬೀಸುತ್ತವೆ. ಬಹಾಮಸ್, ಬಾರ್ಬಡಾಸ್ ಮತ್ತು ಇನ್ನೂ ಕೆಲವು ಹವಳದ ದ್ವೀಪಗಳು ದುಂಡನೆಯ ಆಕಾರದಲ್ಲಿದ್ದು ತೀರದುದ್ದಕ್ಕೂ ಭೂಮಿ ದಿಬ್ಬದಂತೆ ಎತ್ತರವಾಗಿ ಇರುತ್ತದೆ. ಒಳಪ್ರದೇಶ ಗುಣಿಯಂತೆ ತಗ್ಗು. ಅನೇಕ ವೆಸ್ಟ್ ಇಂಡೀಸ್ ದ್ವೀಪಗಳು ಭೂಗರ್ಭ ಜ್ವಾಲಾಮುಖಿಗಳ ತವರಾಗಿದ್ದುವು. ಹಲವು ದ್ವೀಪಗಳಲ್ಲಿ ಇಪ್ಪತ್ತನೆಯ ಶತಮಾನದಲ್ಲೂ ಜ್ವಾಲಾಮುಖಿಗಳು ಕೆರಳಿದ್ದುವು. ಗಂಧಕದ ಗಣಿಗಳು ಅನೇಕ ದ್ವೀಪಗಳಲ್ಲಿವೆ. ಇತರ ಲೋಹಗಳೂ ಇಲ್ಲಿ ದೊರೆಯುತ್ತವೆ. ಟ್ರಿನಿಡಾಡ್ ಮತ್ತು ಬಾರ್ಬಡಾಸ್‌ಗಳಲ್ಲಿ ತೈಲ ಸಂಗ್ರಹವಿದೆ. ರಸ್ತೆ ಮೊದಲಾದ ಮೇಲ್ಮೈಗಳು ಗಡುಸಾಗಿಯೂ ನುಣುಪಾಗಿಯೂ ಇರುವಂತೆ ಮಾಡಲು ಪರಡುವ ಕಲ್ಲರಗು ಅಥವಾ ಕಪ್ಪುರಾಳವು ಟ್ರಿನಿಡಾಡಿನಲ್ಲಿ ಬೇಕಾದಷ್ಟು ಸಿಗುತ್ತದೆ. ಕಾಮನ್‌ವೆಲ್ತಿನ ಹೆಚ್ಚು ಎಣ್ಣೆಬಾವಿಗಳುಳ್ಳ ದೇಶಗಳ ಪೈಕಿ ಟ್ರಿನಿಡಾಡ್ ಒಂದು. ವೆಸ್ಟ್ ಇಂಡೀಸ್ ದ್ವೀಪಗಳ ಬಂದರುಗಳು ಸಾಮಾನ್ಯವಾಗಿ ಮೂರು ಕಡೆ ಭೂಮಿಯಿಂದ ಸುತ್ತುವರಿದಿದ್ದು ಹಡಗುಗಳು ತಂಗಲು ಅನುಕೂಲ.

ಉಷ್ಣವಲಯದ ಬೆಳೆಗಳು ವೆಸ್ಟ್ ಇಂಡೀಸ್ ದ್ವೀಪಗಳ ಮುಖ್ಯ ಉತ್ಪಾದನೆ. ಮುಖ್ಯವಾದ ಬೆಳೆ ಕಬ್ಬು. ಕಬ್ಬಿನ ಗದ್ದೆಗಳು ಅರಣ್ಯದಂತೆ ದಟ್ಟವಾಗಿ ಬೆಳೆದ ಬೆಳೆಯಿಂದ ತುಂಬಿರುತ್ತವೆ. ಕ್ಯೂಬದಲ್ಲಿ ಹೊಗೆಸೊಪ್ಪನ್ನು ಹೇರಳವಾಗಿ ಬೆಳೆಯುತ್ತಾರೆ. ಹತ್ತಿ, ಬಾಳೆ, ಕೋಕೋ, ಕಾಫಿ, ಆರೊರೂಟ್, ಗೆಣಸು ಇತ್ಯಾದಿ ಇತರ ಪ್ರಮುಖ ಬೆಳೆಗಳು. ಹವಳ ದ್ವೀಪಗಳಲ್ಲಿ ತೆಂಗಿನ ಫಸಲು ವಿಶೇಷ. ಬಹಾಮಸ್ ದ್ವೀಪಗಳಲ್ಲಿ ಅನಾನಸ್, ಟೊಮಾಟೊ ಮುಂತಾದ ಹುಳಿ ಹಣ್ಣುಗಳನ್ನು ಬೆಳೆಯುತ್ತಾರೆ. ಸಮುದ್ರದೊಳಗೆ ಮುಳುಗಿ ಸ್ಪಂಜನ್ನು ಶೇಖರಿಸುವುದು ಬಹಾಮಸ್ ದ್ವೀಪದಲ್ಲಿ ಮುಖ್ಯ ಉದ್ಯಮ. ಹಿಸ್ಪೇನಿಯೋಲದಲ್ಲಿ ಅರಣ್ಯ ದಟ್ಟವಾಗಿದೆ.

ವೆಸ್ಟ್ ಇಂಡೀಸ್ ಗಣರಾಜ್ಯ. ಕ್ರಿಕೆಟ್ ಕ್ರೀಡೆಯಲ್ಲಿ ಖ್ಯಾತಿಗಳಿಸಿದೆ.

## ವೇದಗಳು

ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್
ವಿಶ್ವಾನಿ ದೇವ ವಯುನಾನಿ ವಿದ್ವಾನ್
ಯುಯೋಧ್ಯಸ್ಮಜ್ಜುಹುರಾಣ ಮೇನೋ
ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ

(ಎಲೈ ಅಗ್ನಿದೇವನೆ, ನಮ್ಮನ್ನು ಸಂಪದ್ಯುಕ್ತವಾದ ಸನ್ಮಾರ್ಗದಲ್ಲಿ ನಡೆಸು. ನೀನು ಸಕಲ ಜ್ಞಾನಗಳನ್ನೂ ಹೊಂದಿರುವ ಮಹಾನುಭಾವ, ನಮ್ಮ ವಿರೋಧಿಯಾದ ಪಾಪವನ್ನು ಧ್ವಂಸಗೊಳಿಸು. ಮತ್ತೆ ಮತ್ತೆ ನಿನಗೆ ನಮಸ್ಕರಿಸುತ್ತೇನೆ.)

ಸಾವಿರಾರು ವರ್ಷಗಳ ಹಿಂದೆ ಭಾರತದಲ್ಲಿ ಆರ್ಯರು ಮಾಡಿದ ಸುಂದರ ಪ್ರಾರ್ಥನೆ ಇದು. ಸನ್ಮಾರ್ಗದ ಪಾಪರಹಿತವಾದ ಬಾಳನ್ನು ತೇಜಸ್ಸಿನ ಮೂಲಶಕ್ತಿ ಅಗ್ನಿದೇವ ಅನುಗ್ರಹಿಸಲಿ ಎಂದು.

ಹಿಂದೂಗಳಿಗೆ ಅತ್ಯಂತ ಪವಿತ್ರವೂ ಪ್ರಾಚೀನವೂ ಆದ ಧಾರ್ಮಿಕ ಗ್ರಂಥಗಳು ವೇದಗಳು. 'ವೇದ' ಎನ್ನುವುದು 'ವಿದ್' ಎನ್ನುವ ಸಂಸ್ಕೃತ ಧಾತುವಿನಿಂದ ಬಂದಿದೆ. ವಿದ್ ಎಂದರೆ 'ತಿಳಿ' ಎಂದರ್ಥ. 'ವೇದ' ಎಂದರೆ ತಿಳಿವಳಿಕೆ, ಜ್ಞಾನ.

ವೇದಗಳ ಕಾಲ ಖಚಿತವಾಗಿಲ್ಲ. ಕ್ರಿ. ಪೂ. 1500–1200 ಇರಬಹುದು ಎಂದು ಕೆಲವರು ಪಂಡಿತರ ಅಭಿಪ್ರಾಯ. ಲೋಕಮಾನ್ಯ ಬಾಲಗಂಗಾಧರ ತಿಲಕರ ಅಭಿಪ್ರಾಯದಂತೆ ವೇದಗಳ ಕಾಲ ಕ್ರಿ. ಪೂ. 6000. ಋಗ್ವೇದದ ಕೆಲವು ಮಂತ್ರಗಳು ಕ್ರಿ. ಪೂ. 10000ದ ಕಾಲಕ್ಕೆ ಸೇರಿದ್ದು ಎಂದೂ ಕೆಲವರು ಅಭಿಪ್ರಾಯ ಪಡುತ್ತಾರೆ. ನಾಗರಿಕ ಮನುಷ್ಯನ ಚರಿತ್ರೆಯ ಅತಿ ಪ್ರಾಚೀನ ಕೃತಿಗಳ ಪಂಕ್ತಿಗೆ ಸೇರಿವೆ ವೇದಗಳು. ವೇದಗಳು ಮಾನವರಚಿತವಲ್ಲ, ಅವು ಪ್ರಾಚೀನ ಭಾರತದ ಋಷಿಗಳಿಗೆ ದೈವಿಕವಾಗಿ ತಿಳಿಸಲ್ಪಟ್ಟವು ಎಂದು ಕೆಲವರ ನಂಬಿಕೆ.

ವೇದಗಳು ನಾಲ್ಕು: ಋಗ್ವೇದ, ಯಜುರ್‌ವೇದ, ಸಾಮವೇದ, ಅಥರ್ವವೇದ.

ಆರ್ಯರು ತಮ್ಮ ದೇವತೆಗಳಾದ ಇಂದ್ರ, ಮಿತ್ರ, ವರುಣ, ಅಗ್ನಿ, ಸೂರ್ಯ, ಉಷಸ್, ಮರುತ್ ಮೊದಲಾದವರನ್ನು ಕುರಿತು ಅನೇಕ ಪ್ರಾರ್ಥನಾ ಶ್ಲೋಕಗಳನ್ನು ಹೇಳುತ್ತಿದ್ದರು. ಆರ್ಯರ ಪೂಜಾ ವಿಧಾನ ಯಾಗ ಅಥವಾ ಯಜ್ಞ. ಇದರಲ್ಲಿ ಹವಿಸ್ಸು ಅಥವಾ ನೈವೇದ್ಯವನ್ನು ದೇವತೆಗೆ ನಿವೇದಿಸುವ ಮೊದಲು ಆ ದೇವತೆಯನ್ನು ಕರೆದು ವರ್ಣಿಸಿ ಹೊಗಳುತ್ತಿದ್ದರು. ದೇವತೆಗಳನ್ನು ಆಹ್ವಾನಿಸಿ ಸ್ತುತಿಸುವವನು ಹೋತೃ. ಋಗ್ವೇದ ಒಳಗೊಂಡಿರುವ ಋಕ್ಕುಗಳನ್ನು ಪಠಿಸುವುದು ಈ ಹೋತೃವಿನ ಕೆಲಸ. ಈ ಪಠಣದ ಜೊತೆಗೆ ನಿಯಮಕ್ಕೆ ಅನುಗುಣವಾಗಿ ಯಜ್ಞ ಯಾಗಾದಿಗಳನ್ನು ನಡೆಸುವುದು ಅಧ್ವರ್ಯುವಿನ ಕೆಲಸ. ದೇವತೆಗೆ ಹವಿಸ್ಸನ್ನು ಅರ್ಪಿಸಿದ ಮೇಲೆ ಮನಸ್ಸಿಗೆ ಸಂತೋಷವಾಗುವ ಹಾಗೆ ಹಾಡುವುದು ಉದ್ಗಾತೃವಿನ ಕೆಲಸ. ವಿಧಿನಿಯಮಗಳು—ಪ್ರಾರ್ಥನೆ—ಶ್ಲೋಕಗಳನ್ನು ಮೂರು ವಿಭಾಗಗಳಾಗಿ ವಿಂಗಡಿಸಿ ಕ್ರೋಢೀಕರಿಸಲಾಯಿತು. ಇವೇ ಋಗ್ವೇದ, ಯಜುರ್ವೇದ, ಸಾಮವೇದಗಳು. ಮೊದಲು ಕ್ರೋಢೀಕರಿಸಲ್ಪಟ್ಟ ಮೂರು ವೇದಗಳ ಜೊತೆಗೆ ಬಹಳ ಕಾಲದ ಬಳಿಕ ಇನ್ನೊಂದು ವೇದ ಸೇರಿತು. ಅದು ಅಥರ್ವವೇದ. ಅನೇಕ ವೇದಗಳಿದ್ದುವೆಂದೂ ಅವುಗಳಲ್ಲಿ ಈಗ ನಾಲ್ಕು ಮಾತ್ರ ಉಳಿದಿವೆಯೆಂದೂ ಕೆಲವರ ಅಭಿಪ್ರಾಯ.

ಒಟ್ಟಿನಲ್ಲಿ ಈಗ ಇರುವ ವೇದಗಳು ನಾಲ್ಕು :

1. ಋಗ್ವೇದ ... ಸ್ತೋತ್ರ ಪ್ರಾರ್ಥನಾ ಪದ್ಯಗಳ ಜ್ಞಾನ
2. ಯಜುರ್ವೇದ ... ಯಜ್ಞವಿಧಿಗಳ ಜ್ಞಾನ
3. ಸಾಮವೇದ ... ಸ್ವರ ವಿನ್ಯಾಸದ ಜ್ಞಾನ
4. ಅಥರ್ವವೇದ ... ಮಂತ್ರತಂತ್ರಗಳ ಜ್ಞಾನ

ಹೀಗೆ ವೇದದಲ್ಲಿ ಸ್ತೋತ್ರ, ಪೂಜೆ, ಹಾಡು, ಮಂತ್ರತಂತ್ರಗಳು ಎಂದು ನಾಲ್ಕು ಭಾಗಗಳಿವೆ.

ಯಜ್ಞಕ್ಕೆ ಸಂಬಂಧಿಸಿದ ವಿಷಯಗಳನ್ನುಳ್ಳ ಬ್ರಾಹ್ಮಣಗಳು; ಗೀತೆ, ಮಂತ್ರ, ಯಜುಸ್ಸು ಇವನ್ನುಳ್ಳ ಸಂಹಿತೆಗಳು; ಅರಣ್ಯದಲ್ಲಿ ವಾಸಿಸುವಾಗ ಅಲ್ಲಿ ಧ್ಯಾನ ಮತ್ತು ಚಿಂತನೆಗೆ ಬೇಕಾದ ತಿಳಿವಳಿಕೆ ಕೊಡುವ ಆರಣ್ಯಕಗಳು; ತತ್ತ್ವವಿಚಾರಗಳು—ಇವನ್ನು ವೇದಗಳು ಒಳಗೊಂಡಿವೆ.

ವೇದಗಳಲ್ಲಿ ಅತಿ ಪ್ರಾಚೀನವಾದದ್ದು ಋಗ್ವೇದ. ಒಟ್ಟು ಋಕ್ಕುಗಳ ಸಂಖ್ಯೆ ಸುಮಾರು 10,600. ಅನೇಕ ಋಕ್ಕುಗಳು ಕೂಡಿ 'ಸೂಕ್ತ' ಎಂದಾಗಿದೆ. ಋಗ್ವೇದದಲ್ಲಿ 1,028 ಸೂಕ್ತಗಳಿವೆ; ಬಹು ಭಾಗ ಪೂಜೆಗೆ ಸಂಬಂಧಿಸಿದ ಮಂತ್ರಗಳೂ ಸ್ತೋತ್ರಗಳೂ ಇವೆ. ಋಗ್ವೇದದ ದೇವತೆಗಳಲ್ಲಿ ಮೊದಲನೆಯವನು ಇಂದ್ರ. ಇಂದ್ರನ ಸ್ತುತಿಗೆ ಈ ವೇದದಲ್ಲಿ ಪ್ರಾಧಾನ್ಯ. ಕಾವ್ಯ ದೃಷ್ಟಿಯಿಂದಲೂ ಋಗ್ವೇದ ಶ್ರೇಷ್ಠವಾಗಿದೆ.

ಈ ಲೋಕದಲ್ಲಿ ನಾವು ಬದುಕಬೇಕಾದ ರೀತಿಯ ನಿರೂಪಣೆ ವೇದಗಳಲ್ಲಿದೆ. ಆತ್ಮವನ್ನು ಉದ್ಧಾರ ಮಾಡಿಕೊಳ್ಳುವ ಮಾರ್ಗದ ನಿರೂಪಣೆ ಇದೆ. ಹಲವು ದೇವತೆಗಳ ವರ್ಣನೆಯೂ ಇದೆ.

ಅಗ್ನಿರಿಂದ್ರೋ ವರುಣೋ ಮಿತ್ರೋ ಅರ್ಯಮಾ
ವಾಯುಃ ಪೂಷಾ ಸರಸ್ವತೀ ಸಜೋಷಸಃ
ಆದಿತ್ಯಾ ವಿಷ್ಣುರ್ಮರುತಃ ಸ್ವರ್ಬೃಹತ್
ಸೋಮೋರುದ್ರೋ ಅದಿತಿ ಬ್ರಹ್ಮಣಸ್ಪತಿಃ

'ಏಕಂ ಸತ್ ವಿಪ್ರಾಃ ಬಹುಧಾ ವದಂತಿ' (ಸತ್ಯ ಒಂದು, ತಿಳಿದವರು ಹಲವು ರೀತಿಗಳಲ್ಲಿ ವರ್ಣಿಸುತ್ತಾರೆ) ಎನ್ನುವ ಮಾತೂ ವೇದದಲ್ಲಿದೆ. 'ಮಾಹಂ ರಾಜನ್ ಅನ್ಯಕೃತೇನ ಭೋಜಂ' (ಇನ್ನೊಬ್ಬರ ದುಡಿಮೆಯಿಂದ ನಾವು ಬದುಕಬಾರದು) ಎನ್ನುವ ಬೋಧನೆಯೂ ಇದೆ.

## ವ್ಯೋಮಯಾತ್ರೆ

"ಇದು ಒಬ್ಬ ಮನುಷ್ಯನಿಗೆ ಬಲು ಪುಟ್ಟ ಹೆಜ್ಜೆ, ಮಾನವ ಜನಾಂಗಕ್ಕೆ ಭಾರೀ ನೆಗೆತ."

ನೀಲ್ ಆರ್ಮ್‌ಸ್ಟ್ರಾಂಗ್ 1969ರ ಜುಲೈ 21ರಂದು ಚಂದ್ರನ ಮೇಲೆ ಪ್ರಪ್ರಥಮವಾಗಿ ಪದಾರ್ಪಣೆ ಮಾಡಿದಾಗ ಆಡಿದ ಐತಿಹಾಸಿಕ ನುಡಿಮುತ್ತು.

ವ್ಯೋಮಯಾತ್ರೆಯಲ್ಲಿ ಒಂದು ಘಟ್ಟ, ಆರ್ಮ್‌ಸ್ಟ್ರಾಂಗ್ ಮತ್ತು ಸಂಗಡಿಗರ ಸಾಧನೆ.

ಭೂಮಿ ಸೂರ್ಯನ ಸುತ್ತ ತಿರುಗುವ ಒಂದು ಗ್ರಹ. ಹೀಗೆ ಸೂರ್ಯನ ಸುತ್ತಲೂ ತಿರುಗುವ ಗ್ರಹಗಳ ಸಂಖ್ಯೆ ಭೂಮಿಯನ್ನೂ ಸೇರಿ ಒಂಬತ್ತು. ಸಣ್ಣಪುಟ್ಟ ಉಪಗ್ರಹಗಳು ಇನ್ನೂ ಹಲವು. ಸೂರ್ಯನನ್ನೂ ಅವನನ್ನು ಸುತ್ತುವ ಈ ಎಲ್ಲ ಗ್ರಹೋಪಗ್ರಹಗಳನ್ನೂ ಸೇರಿಸಿ ಸೌರವ್ಯೂಹವೆಂದು ಖಗೋಳಶಾಸ್ತ್ರಜ್ಞರು ಕರೆಯುತ್ತಾರೆ. ಒಂದು ಗ್ರಹದಿಂದ ಇನ್ನೊಂದು ಗ್ರಹಕ್ಕೆ ಪ್ರಯಾಣಮಾಡುವುದು ಅಂತರ್‌ಗ್ರಹ ಯಾತ್ರೆ. ಸೂರ್ಯನು ಒಂದು ತಾರೆಯೇ. ಇಂಥ ತಾರೆಗಳ ಸಂಖ್ಯೆ ಊಹೆಗೆ ನಿಲುಕದು. ಇವುಗಳಲ್ಲಿ ಒಂದು ತಾರೆಯಿಂದ ಇನ್ನೊಂದು ತಾರೆಗೆ ಸಾಗುವುದಕ್ಕೆ ಅಂತರ್ತಾರಾ ಯಾತ್ರೆ ಎನ್ನುವರು. ನಕ್ಷತ್ರಗಳ ಒಂದು ದೊಡ್ಡ ಗುಂಪಿಗೆ ನೀಹಾರಿಕೆ ಎನ್ನುವರು. ಈ ನೀಹಾರಿಕೆಯ ಅಂಚಿಗೆ ಹೋದಂತೆ ನಕ್ಷತ್ರಗಳ ಸಾಂದ್ರತೆ ಕಡಮೆಯಾಗುತ್ತಾ ಬರುತ್ತದೆ. ಮುಂದುವರಿದರೆ ಮತ್ತೊಂದು ನೀಹಾರಿಕೆಯನ್ನು ತಲಪುತ್ತೇವೆ. ಇದು ಅಂತರ್ನೀಹಾರಿಕಾ ಯಾತ್ರೆ. ಈ ಎಲ್ಲ ಯಾತ್ರೆಗಳಿಗೆ ಸಾಮಾನ್ಯವಾದುದೆಂದರೆ ಗಗನ ಅಥವ ಆಕಾಶ, ಅಂತರಿಕ್ಷ ಅಥವಾ ವ್ಯೋಮ. ಇದು ಆಕಾಶಕಾಯಗಳ ನಡುವಣ ಅಂತರದ ಹೆಸರು.

ಭೂಮಿಯಿಂದ ಜಿಗಿದು ಅಂತರ್‌ಗ್ರಹಯಾತ್ರೆ ಮಾಡಲು ಮಾನವನಿಗೆ ವಿಶೇಷ ರೀತಿಯ ಸೌಲಭ್ಯಗಳು ಬೇಕು. ಮುಖ್ಯವಾದದ್ದು ಆಮ್ಲಜನಕ.



ಪ್ರಪ್ರಥಮವಾಗಿ ವ್ಯೋಮಸಂಚಾರ ಮಾಡಿದ ರಷ್ಯಾದ ಸ್ಪುಟ್ನಿಕ್



ಅಮೆರಿಕದ ಮೊದಲ ವ್ಯೋಮಯಾತ್ರಿ-ಅಲೆನ್ ಷೆಪರ್ಡ್

ಅನಂತರ ಆಹಾರ. ಲಕ್ಷಾಂತರ ವರ್ಷಗಳಿಂದ ಭೂಮಿಯಲ್ಲಿನ ಪ್ರಕೃತಿ ಪರಿಸರಕ್ಕೆ ಹೊಂದಿ ಮನುಷ್ಯ ಬೆಳೆದಿದ್ದಾನೆ. ಬೇರೆ ಬಗೆಯ ವಾತಾವರಣ, ಪರಿಸರಗಳಲ್ಲಿ ಅವನು ಬದುಕಲಾರ. ಅವನು ಇದೇ ಸನ್ನಿವೇಶವನ್ನು ತನ್ನ ಸುತ್ತಲೂ ಸೃಷ್ಟಿಸಿಕೊಂಡರೆ ಮಾತ್ರ ವ್ಯೋಮಯಾತ್ರೆ ಸಾಧ್ಯ. ಭವಿಷ್ಯದಲ್ಲಿ ಅನೇಕ ಸುಧಾರಣೆಗಳಾಗಬಹುದು. ಮಾನವ ನವೀನ ಸನ್ನಿವೇಶಗಳಿಗೆ ಹೊಂದಿಕೊಳ್ಳುವುದನ್ನು ಕಲಿಯಬಹುದು. ಇಂದಿನ ಪರಿಸ್ಥಿತಿಯಲ್ಲಿ, ಅವನು ಅತಿ ಹೆಚ್ಚು ಅಥವಾ ಅತಿ ಕಡಮೆ ಗುರುತ್ವಾಕರ್ಷಣೆಗಳಿಂದ, ಅತಿ ಕಾವು ಶೈತ್ಯಗಳಿಂದ, ಮನೋವಿಕಲ್ಪ ಸಂಭವದಿಂದ ರಕ್ಷಣೆ ಪಡೆಯ ಬೇಕಾಗುತ್ತದೆ. ಏಕಾಂಗಿಯಾಗಿ ದಿನರಾತ್ರಿ, ಗಂಟೆ, ಮಿನಿಟುಗಳ ಕಲ್ಪನೆಯಿಲ್ಲದೆ, ಅನಂತ ವ್ಯೋಮದಲ್ಲಿ ಸಾಗುವ ಮನಸ್ಸಿನಲ್ಲಿ ಏರುಪೇರಾಗಬಹುದು, ದಿಗ್ಭ್ರಮೆಯಾಗಬಹುದು. ಈ ಎಲ್ಲ ವೈಪರೀತ್ಯಗಳಿಗೂ ವ್ಯೋಮಯಾತ್ರಿಗೆ ತಕ್ಕ ತರಬೇತಿ ಬೇಕು. ಅವನ ವ್ಯೋಮಯಾತ್ರೆಯಲ್ಲಿ ಎಂಥೆಂಥ ಸನ್ನಿವೇಶಗಳನ್ನೂ ಬದಲಾವಣೆಗಳನ್ನೂ ಎದುರಿಸಬೇಕಾಗುವುದೋ ಅವೆಲ್ಲವನ್ನೂ ಕೃತಕವಾಗಿ ಸೃಷ್ಟಿಸಿ ಭೂಮಿಯ ಮೇಲೆ ಆತ ಶಿಕ್ಷಣ ಪಡೆಯಬಹುದು.

ಗಗನದಲ್ಲಿ ಮರಳಿನ ಕಣಕ್ಕಿಂತ ಅತಿ ಸಣ್ಣವಾದ ಕಣಗಳು ಅಪಾರ ವೇಗದಲ್ಲಿ ಚಲಿಸುತ್ತಿರುತ್ತವೆ. ಇವು ಅಂತರಿಕ್ಷ ನೌಕೆಗೆ ಬಡಿದು ಅದರಲ್ಲಿ ಸಣ್ಣ ರಂಧ್ರಗಳನ್ನು ಮಾಡಬಹುದು. ಸಾಧಾರಣವಾದ ರಂಧ್ರಗಳನ್ನು ತಾನಾಗಿ ತುಂಬುವಂತೆ ಮಾಡುವ ಗಗನನೌಕೆಯನ್ನು ತಯಾರಿಸುವ ನಿರೀಕ್ಷೆಯಿದೆ. ಆದರೆ ತೂತು ದೊಡ್ಡದಾದಲ್ಲಿ ಗಗನಯಾತ್ರಿ ನೌಕೆಯ ಒಳಮೈಭಾಗಕ್ಕೆ ತೆರಳುತ್ತಾನೆ. ವಾಯು ರಕ್ಷಣೆಗೆಂದು ಈ ಕೆಲಸ ಸಾಗುವಾಗ ತನ್ನ ಪೋಷಾಕಿನಲ್ಲಿ ಒತ್ತಡದ ಸೂಕ್ತ ಬದಲಾವಣೆಯನ್ನು ಮಾಡಿಕೊಳ್ಳುತ್ತಾನೆ. ವಿಕಿರಣಗಳ ಅಪಾಯಗಳು ಆಕಾಶದಲ್ಲಿ ಹಲವಾರು. ವಿಶ್ವಕಿರಣ, ಕ್ಷ ಕಿರಣ, ಅತಿ ನೇರಳೆ ಕಿರಣ, ಗಾಮಾಕಿರಣ ಇತ್ಯಾದಿ ಕಿರಣಗಳಿಂದ ಕೂಡ ವ್ಯೋಮಯಾತ್ರಿಗೆ ರಕ್ಷಣೆ ಬೇಕು.

ವ್ಯೋಮಯಾನದ ಮೊದಲ ಹಂತ. ಭೂಮಿಯ ಗುರುತ್ವಾಕರ್ಷಣೆಯಿಂದ ಬಿಡುಗಡೆ ಪಡೆಯುವುದು. ಆದರೆ ಆ ಸೆಳೆತವನ್ನು ಮೀರಿ ಸಾಗುವ ವೇಗದಲ್ಲಿ ನೌಕೆ ಭೂಮಿಯಿಂದ ಜಿಗಿಯಬೇಕು. ವಾತಾವರಣದ ಸೀಮೆಯನ್ನು ಅದೇ ರೀತಿ ವೇಗದಲ್ಲಿ ದಾಟಬೇಕು. ಮನುಷ್ಯ ಭೂಮಿಯನ್ನು ಹಿಂದೆ ಹಾಕಿ ಹಾರುವ ಸಾಧ್ಯತೆಯನ್ನು ರಷ್ಯದ ವಿಜ್ಞಾನಿ ಟ್ಸಿಓಲ್‌ಕೋವ್‌ಸ್ಕಿ 1895ರಲ್ಲಿ ವ್ಯಕ್ತಪಡಿಸಿದ. ಈ ಮೊದಲೇ ಆಕಾಶಯಾನದ ಸಾಹಸಗಳನ್ನು ಒಳಗೊಂಡ ವೈಜ್ಞಾನಿಕ ಕಥೆಗಳು ಬಂದಿದ್ದುವು. ಫ್ರೆಂಚ್ ಸಾಹಿತಿ ಜೂಲ್ಸ್ ವರ್ನ್ ರಚಿಸಿದ ಗಗನಯಾತ್ರೆಯ ಕಾದಂಬರಿಗಳು ಜನಪ್ರಿಯವಾಗಿದ್ದುವು. ವಿಮಾನ ಹಾರಾಟ ಸಾಮಾನ್ಯವಾದ ಮೇಲೆ ಮಾನವನ ಸಾಹಸಪ್ರವೃತ್ತಿಯು ಮೇರೆಯೂ ದೂರ ಸಾಗಿತು.



ವ್ಯೋಮದಲ್ಲಿ 'ನಡೆದಾಡಿ'ದ ಮೊದಲ ಅಮೆರಿಕನ್ ಎಡ್ವರ್ಡ್ ವೈಟ್

ಜರ್ಮನಿಯಲ್ಲಿ 1944ರಲ್ಲಿ ಹಾಲೆಂಡಿನಿಂದ ಲಂಡನಿಗೆ ಕ್ಷಿಪಣಿಗಳನ್ನು ಹಾರಿಸಿದರು. ಅಲ್ಲಿಂದ ವ್ಯೋಮಯಾತ್ರೆಯ ಚರಿತ್ರೆ ಕ್ಷಿಪ್ರವಾಗಿ ಬೆಳೆಯಿತು. ಇದರ ಫಲವೇ 1969ರ ಜುಲೈ 21ರ ಚಂದ್ರಸ್ಪರ್ಶ. ಇಂದಿನ ವ್ಯೋಮ ಯಾತ್ರೆಯ ಅತಿ ಮುಖ್ಯ ಅಂಗ ರಾಕೆಟ್ ಅಥವಾ ಕ್ಷಿಪಣಿ. ಗಗನಯಾನಕ್ಕೆ ಸರಿಯಾದ ಕ್ಷಿಪಣಿಯ ರಚನೆಯನ್ನು ಕ್ರಮಗೊಳಿಸಿ ಸಿದ್ಧಮಾಡಿದವನು ಅಮೆರಿಕದ ಸಂಯುಕ್ತ ಸಂಸ್ಥಾನದ ರಾಬರ್ಟ್ ಗೊಡ್ಡಾರ್ಡ್. ಈತ 1926ರಲ್ಲಿ ಜಗತ್ತಿನ ಪ್ರಥಮ ರಾಕೆಟ್ಟನ್ನು ದ್ರವ ಇಂಧನ ಬಳಸಿ ಉಡಾಯಿಸಿದ. ಮತ್ತು ಇಂದು ಬಳಸಲಾಗುತ್ತಿರುವ ರಾಕೆಟ್ಟಿನ ಸುಮಾರು 214 ಭಾಗಗಳನ್ನು ಬಹಳ ಮೊದಲೇ ಆತ ತಯಾರಿಸಿದ.

ಕ್ಷಿಪಣಿಗಳನ್ನೇ ಈ ಯಾತ್ರೆಯಲ್ಲಿ ಉಪಯೋಗಿಸಲು ಕಾರಣವಿದೆ. ಭೂಮಿಯನ್ನು ತಬ್ಬಿರುವ ವಾತಾವರಣವನ್ನು ದಾಟಿದ ಅನಂತರ ನೌಕೆ ಶೂನ್ಯದಲ್ಲಿ ಪಯಣ ಬೆಳಸಬೇಕು. ಸಾಧಾರಣ ವಿಮಾನದ ಎಂಜಿನುಗಳ ಚಾಲನೆಗೆ ಗಾಳಿಯ ನೆರವು ಅಗತ್ಯ. ಶೂನ್ಯದಲ್ಲಿ ಚಲಿಸುವಂಥದು ಕ್ಷಿಪಣಿ



ಪ್ರಪ್ರಥಮ ವ್ಯೋಮಯಾತ್ರಿ ರಷ್ಯನ್ ನಾಯಿ—ಲೈಕಾ

ಅಥವಾ ರಾಕೆಟ್ ಮಾತ್ರ. ಕ್ಷಿಪಣಿಯ ತೂಕ. ಆ ತೂಕವನ್ನು ಹೊತ್ತು ಭೂ ಆಕರ್ಷಣೆಯ ಹಿಡಿತದಿಂದ ಹೊರಬೀಳಲು ಬೇಕಾದ ವೇಗಗಳನ್ನು ಮೊದಲೇ ಗೊತ್ತುಪಡಿಸಿರುತ್ತಾರೆ.

ಎಲ್ಲ ಕಾರ್ಯಕ್ರಮಗಳೂ ಪ್ರಧಾನವಾಗಿ ಯಾಂತ್ರಿಕ. ಹೀಗಿದ್ದರೂ ಗಗನಯಾತ್ರಿಗಳ ಹೊಣೆ ಗುರುತರ. ಯಂತ್ರ ಸರಿಪಡಿಸಲಾಗದ್ದನ್ನು ಮಾನವ ನೆರಗೊಳಿಸಬೇಕು. ಹೀಗೆ ಗುರಿಯನ್ನು ತಲಪಿದ ಬಳಿಕ ಅಲ್ಲಿ ತಾನು ಮಾಡಬೇಕಾದ ಕಾರ್ಯಗಳನ್ನು ಮುಗಿಸಿ ಹಿಂದಿರುಗಬೇಕು. ಹಿಂದಿರುಗುವುದಕ್ಕೂ ಕ್ಷಿಪಣಿಗಳೇ ಆಧಾರ. ಭೂಮುಖವಾಗಿ ಹೊರಟಿರುವ ಈ ನೌಕೆಗೆ ಅಂತಿಮಘಟ್ಟದಲ್ಲಿ ಒಂದು ಹೆಚ್ಚಿನ ಅಪಾಯವಿದೆ. ಭೂಮಿಯ ವಾಯುಮಂಡಲವನ್ನು ನೌಕೆ ವೇಗವಾಗಿ ಪ್ರವೇಶಿಸುವಾಗ ಏರಡರ



ಎರಡು ಅಂತರಿಕ್ಷ ನೌಕೆಗಳು ಪರಸ್ಪರ ಜಂಟಿಯಾಗುವುದು



ನೀಲ್ ಆರ್ಮ್‌ಸ್ಟ್ರಾಂಗ್, ಡೇವಿಡ್ ಸ್ಕಾಟ್—
... ಎರಡು ನೌಕೆಗಳನ್ನು ಪ್ರಪ್ರಥಮವಾಗಿ ಜಂಟಿಸಿದವರು



ವ್ಯೋಮಯಾತ್ರಿಯಾಗಿ ಭೂಮಿಗೆ ಪ್ರಪ್ರಥಮ ಪ್ರದಕ್ಷಿಣೆ ಮಾಡಿದ ರಷ್ಯದ ಯೂರಿ ಗಗಾರಿನ್



ಘರ್ಷಣೆಯಿಂದ ತೀಕ್ಷ್ಣ ಜ್ವಾಲೆ ಉಂಟಾಗುವುದು. ಇದರಿಂದ ನೌಕೆ ಭಸ್ಮವಾಗಬಹುದು. ಅಥವಾ ಪಥ ಬದಲಾವಣೆಯಾಗಬಹುದು. ಅದಕ್ಕೆ ತಕ್ಕ ಶಾಖರಕ್ಷಣಾ ಪದರವನ್ನು ನೌಕೆಯ ಹೊರಮೈಗೆ ಜೋಡಿಸಿರುತ್ತಾರೆ. ಕೊನೆಯದಾಗಿ, ಮೊದಲೇ ಗೊತ್ತುಪಡಿಸಿರುವ ಜಾಗದಲ್ಲಿ, ಸಾಧಾರಣವಾಗಿ ಸಾಗರದಲ್ಲಿ, ನೌಕೆ ಪ್ಯಾರಾಚೂಟ್‌ಗಳ ಸಹಾಯದಿಂದ ಇಳಿಯುತ್ತದೆ. ಇಳಿಯುವುದು ನೀರಿನಲ್ಲಾದರೆ ಬಿದ್ದಕೂಡಲೆ ಅದು ತೇಲುವಂತೆ ಹಗುರವಾಗಲು ಗಾಳಿ ತುಂಬಿದ ಚೀಲಗಳು ಅದನ್ನು ಸುತ್ತುವರಿಯುತ್ತವೆ. ಅನಂತರ ಗಗನಯಾತ್ರಿಗಳನ್ನು ಸುರಕ್ಷಿತವಾಗಿ ಅಲ್ಲಿಂದ ಕರೆದೊಯ್ಯುತ್ತಾರೆ.

ವ್ಯೋಮಯಾತ್ರೆಯ ಇತಿಹಾಸವನ್ನು ರಷ್ಯದ ಸ್ಪುಟ್ನಿಕ್ ಉಪಗ್ರಹ 1957ರಲ್ಲಿ ಆರಂಭಿಸಿತು. ಆ ಬಳಿಕ ಲೈಕಾ ಎಂಬ ನಾಯಿ ಜೀವಪ್ರಪಂಚದ ಪ್ರತಿನಿಧಿಯಾಗಿ ಮೊಟ್ಟಮೊದಲ ಬಾರಿಗೆ ಸ್ಪುಟ್ನಿಕ್ 2ರಲ್ಲಿ ಮೇಲೇರಿ ಒಂದು ವಾರ ಕಾಲ ಬದುಕಿದ್ದಿತು. ಮೊದಲ ಬಾರಿಗೆ ವ್ಯೋಮಯಾತ್ರೆಗೆ ಹೋಗಿ ಹಿಂದಿರುಗಿದ ಜೀವಿಗಳು ಅಮೆರಿಕದಿಂದ ಕಳುಹಿಸಲ್ಪಟ್ಟ ಕಪಿಗಳು. ಜೂಪಿಟರ್ ಕ್ಷಿಪಣಿ ಇವುಗಳ ನೌಕೆಯನ್ನು ಹೊತ್ತಿದ್ದಿತು. ಚಂದ್ರನ ಬಳಿಗೆ ಸಾಗಿದ ಮೊದಲ ಗಗನನೌಕೆ ಲೂನಿಕ್ 1. ಚಂದ್ರನಿಗೆ ಹತ್ತಿರ ಹೋಗಿ ಸರಿದು ಇಂದು ಅದು ಸೂರ್ಯನ ಸುತ್ತಲೂ ಸುತ್ತುವ ಕೃತಕ ಗ್ರಹವಾಗಿದೆ. 1959 ಸೆಪ್ಟೆಂಬರ್ 14ರಂದು ಲೂನಿಕ್ 2 ಚಂದ್ರನಲ್ಲಿ ಇಳಿಯಿತು. ಚಂದ್ರನ ಅಗೋಚರ ಕ್ಷೇತ್ರದ ಬಿಂಬಗಳನ್ನು ಲೂನಿಕ್ 3 ಕಳುಹಿಸಿತು. ಅಂತರ್‌ಗ್ರಹಯಾನದಲ್ಲಿ ಅಮೆರಿಕದ ಮೊದಲ ಪ್ರಯತ್ನ ಪಯನೀರ್ ನೌಕೆಯದು. ಮತ್ತೊಂದು ಗ್ರಹದ ವೀಕ್ಷಣೆಯನ್ನು ಯಶಸ್ವಿಯಾಗಿ ನಡೆಸಿದ ಪ್ರಥಮ ಗಗನನೌಕೆಯೆಂದರೆ ಮ್ಯಾರಿನರ್ 2. 1962ರ ಆಗಸ್ಟ್ 27ರಂದು ಉಡಾಯಿಸಲಾದ ಈ ನೌಕೆ ಶುಕ್ರಗ್ರಹದಿಂದ 33,789 ಕಿಲೊಮಿಟರುಗಳಿರುವಾಗ, ಅದರ ಸ್ಥಿತಿಗತಿಗಳ ಬಗೆಗೆ ಭೂಮಿಗೆ ಸಂಕೇತಗಳನ್ನು ಕಳುಹಿಸಿತು. ಈ ವಿವರ ಕಳುಹಿಸಿದ್ದು ಭೂಮಿಯಿಂದ ಎಂಟು ಕೋಟಿ ಐದು ಲಕ್ಷ ಕಿಲೊಮಿಟರಿಗೂ ಮೀರಿದ ದೂರದಿಂದ.

ಅಂತರಿಕ್ಷ ನೌಕೆಯನ್ನು ಕಳುಹಿಸಿ ಯಶಸ್ವಿಯಾಗಿ ಹಿಂದಕ್ಕೆ ಪಡೆಯಬಹುದಾದ ಕಾರ್ಯವನ್ನು ಅಮೆರಿಕದ ಡಿಸ್ಕವರರ್ ಸಾಧಿಸಿತು.

ಯೂರಿ ಗಗಾರಿನ್ ಎಂಬ ರಷ್ಯದ ಗಗನಯಾತ್ರಿ ವ್ಯೋಮದಲ್ಲಿ ಭೂಪ್ರದಕ್ಷಿಣೆ ಮಾಡಿದ ಮೊದಲ ಮಾನವ. ಈತನು 1961ರ ಏಪ್ರಿಲ್ 13ರಂದು ಭೂಮಿಯಿಂದ ಹಾರಿದ. ವಾಲೆಂಟೀನಾ ತೆರೆಷ್ಕೋವಾ ಬಾಹ್ಯಾಕಾಶದಲ್ಲಿ ಚಲಿಸಿದ ಪ್ರಥಮ ಮಹಿಳೆ. ವಾಹನದಿಂದ ಹೊರಬಂದು ಶೂನ್ಯದಲ್ಲಿ ನಡೆದ ಮೊಟ್ಟಮೊದಲ ಮನುಷ್ಯ ರಷ್ಯದ ಅಲೆಕ್ಸಿ ಲಿಯಾನೊವ್. ಅಲೆನ್ ಷೆಪರ್ಡ್ ಅಮೆರಿಕದ ಮೊದಲ ಗಗನಯಾತ್ರಿ. ಜಾನ್ ಗ್ಲೆನ್ ಪೃಥ್ವಿಯ ಸುತ್ತ ಚಲಿಸಿದ್ದು 1962ರ ಫೆಬ್ರವರಿ 20ರಂದು. ಶೂನ್ಯದಲ್ಲಿ ಪಾದಯಾತ್ರೆ ಮಾಡಿದ ಮೊದಲ ಅಮೆರಿಕದವನು ಎಡ್ವರ್ಡ್ ವೈಟ್. ಇದುವರೆಗೆ ಅತ್ಯಂತ ದೀರ್ಘಕಾಲ ಆಕಾಶಯಾನ ಮಾಡಿದವರೆಂದರೆ ರಷ್ಯದ ಸೆವಾಸ್ಟಿಯನೋವ್ ಮತ್ತು ಸೊಕೊಲಯಿವ್. ಇವರು 1970ರ ಜೂನ್ ತಿಂಗಳಿನಲ್ಲಿ ಸೋಯುಜ್ 9 ಎನ್ನುವ ಆಕಾಶ ನೌಕೆಯಲ್ಲಿ 17 ದಿನ 16 ಗಂಟೆ ಮತ್ತು 59 ಮಿನಿಟುಗಳನ್ನು ಕಳೆದರು. ವಿಶೇಷ ಉಡುಪಿಲ್ಲದೆಯೇ ಇವರು ಯಾನ ಮಾಡಿದರು.

ಇವೆಲ್ಲ ಯಾತ್ರೆಗಳು ಚಂದ್ರಗ್ರಹಯಾನಕ್ಕೆ ಅಸ್ತಿಭಾರ ಹಾಕಿದುವು. ಅದರ ಪರಿಣಾಮವಾಗಿ ಇಂದು ಮಾನವ ಎರಡು ಬಾರಿ ಚಂದ್ರನ ಮೇಲೆ ಪದಾರ್ಪಣ ಮಾಡಿ ತನ್ನ ಕುತೂಹಲವನ್ನು ಸ್ವಲ್ಪ ತಣಿಸಿಕೊಂಡಿದ್ದಾನೆ.

ವ್ಯೋಮ ಸಂಚಾರ ಮಾಡಿದ ಪ್ರಥಮ ಮಹಿಳೆ
ರಷ್ಯದ ವಾಲೆಂಟೀನಾ ತೆರೆಷ್ಕೋವಾ

ಚಂದ್ರನಿಂದ ಹೊತ್ತುತಂದ ಮಣ್ಣಿನಿಂದ ಅದರ ಚರಿತ್ರೆಯನ್ನು ಬರೆಯುವುದು ಮೊದಲ ಹೆಜ್ಜೆ. ಅನಂತರ ಚಂದ್ರನಿಂದ ನಮಗಾಗುವ ಉಪಯೋಗಗಳು ಅನೇಕ. ಮುಂದೆ ಚಂದ್ರ ಅಂತರಿಕ್ಷ ನಿಲ್ದಾಣವಾಗಿ, ಅಂತರ್ ಗ್ರಹಯಾನ ಮಾರ್ಗದಲ್ಲಿ ದಣಿವಾರಿಸಿಕೊಂಡು ಮುಂದುವರಿಯುವ ಅನುಕೂಲಗಳ ತಾಣವಾಗಬಹುದೆಂಬ ಕಲ್ಪನೆಯೂ ಇದೆ. ಚಂದ್ರನಿಂದ ಖಗೋಳಶಾಸ್ತ್ರಜ್ಞರು ಅಪೇಕ್ಷಿಸುವ ಪ್ರಯೋಜನಗಳು ಅನೇಕ ವಿಧವಾಗಿವೆ. ಇದರಲ್ಲಿ ಖಗೋಳವಿಜ್ಞಾನದ ಮುನ್ನಡೆಗೆ ಚಂದ್ರನನ್ನು ಕೇಂದ್ರಸ್ಥಾನವಾಗಿ ಮಾಡಿಕೊಳ್ಳುವುದು ಮುಖ್ಯ ಅಂಶ.



ಅಮೆರಿಕದ ಹೆಣ್ಣು ಕಪಿ ಸ್ಯಾಮ್ ವ್ಯೋಮಯಾತ್ರೆಗೆ ಅಣಿಯಾಗುತ್ತಿರುವುದು



ವ್ಯೋಮ ಪ್ರಯಾಣ ಮುಗಿಸಿ ಬಂದ ಅಮೆರಿಕದ ಚಿಂಪಾನ್‌ಜೀ (ಹೆಸರು ಹ್ಯಾಮ್) ಗೆಲುವಿನಿಂದ ಮುಗುಳು ನಗುತ್ತಿದೆ

ವ್ಯೋಮಯಾತ್ರೆಯಿಂದ ಈಗಾಗಲೇ ಆಗಿರುವ ಲಾಭಗಳು ಅನೇಕ. ಹವೆ, ಸಂಪರ್ಕ ಹಾಗೂ ವಾಯುಮಾನ ಕ್ಷೇತ್ರದಲ್ಲಿ ನಡೆದಿರುವ ಕೆಲವು ವೀಕ್ಷಣೆಗಳ ಫಲಿತಾಂಶಗಳು ಲಾಭದಾಯಕವಾಗಿವೆ. ಸಂಪರ್ಕ ಉಪಗ್ರಹಗಳ ಮೂಲಕ ದೊರೆತ ಹವಾ ಮುನ್ನೋಟಗಳಿಂದಲೇ ಅಮೆರಿಕಕ್ಕೆ ವರ್ಷಕ್ಕೆ 250 ಕೋಟಿ ಡಾಲರುಗಳ ಉಳಿತಾಯವಾಗಿದೆ ಎಂದು ಅಂದಾಜು ಮಾಡಲಾಗಿದೆ. ಸಮುದ್ರದ ಮೇಲೆ ಬೀಸುವ ಕೆಲವು ಭೀಕರ ಗಾಳಿಗಳ ಮುನ್ಸೂಚನೆ ಸರಕು ಸಾಗಾಣಿಕೆಗೆ ನೆರವಾಗಿದೆ. ಮಳೆ ಬೀಳದಿರುವ ಸೂಚನೆಗಳಿಂದ ವ್ಯವಸಾಯ ಹೆಚ್ಚು ಕ್ರಮಬದ್ಧವಾಗುತ್ತದೆ. ಅಲ್ಲದೆ ಭೂಮಿಯ ಸಂಪನ್ಮೂಲಗಳ ಬಗೆಗೂ ಇವು ಹೆಚ್ಚಿನ ವರದಿಯ



ವಾಯುಮಂಡಲದ ಮೇಲಣ ಪರಸೆಯಲ್ಲಿ ಜೊತೆಯಾಗಿ ಸಂಚರಿಸಿದ ರಷ್ಯದ ನಾಯಿ, ಮೊಲ



ಅತ್ಯಂತ ದೀರ್ಘಕಾಲ ವ್ಯೋಮಯಾತ್ರೆ ಮಾಡಿದ ರಷ್ಯದ ಸೆವಾಸ್ಟಿಯನೋವ್ ಮತ್ತು ಸೊಕೊಲಯೊವ್

ನ್ನೊಪ್ಪಿಸಲು ಸಹಾಯಕಾರಿಯಾಗಿವೆ. ಸಸ್ಯಗಳ ಸಾಂದ್ರತೆ, ಮಣ್ಣಿನ ಉಷ್ಣಾಂಶ, ತೇವ, ಸಸ್ಯಭೇದಗಳು ಮತ್ತು ನೀರಾವರಿಯ ಮಾಹಿತಿ ಒದಗಿಸುತ್ತವೆ. ಕಾಡ್ಗಿಚ್ಚುಗಳನ್ನು ಕೂಡ ಪತ್ತೆಹಚ್ಚುವುವು. ಭೂಮಿಯ ರಚನೆ, ಸಾಗರ ನದಿಗಳ ಅಧ್ಯಯನದಲ್ಲಿ ಅವುಗಳಲ್ಲಿ ಸೇರುವ ಮಡ್ಡಿಯ ವ್ಯಾಪ್ತಿಯನ್ನು ಗೊತ್ತುಮಾಡುತ್ತವೆ. ಸಾಗರಜೀವಿಗಳ ಮತ್ತು ಪ್ರವಾಹದ ಚಲನೆಯನ್ನು ಗುರುತಿಸಿ ಮೀನುಗಾರಿಕೆ ಅಭಿವೃದ್ಧಿಯಾಗಲು ಈ ಉಪಗ್ರಹಗಳು ನೆರವಾಗುತ್ತವೆ. ಪ್ರಪಂಚದ ಪ್ರೋಟೀನ್ ಕೊರತೆಯನ್ನು ಈ ಮೂಲದಿಂದ ಬಹುಮಟ್ಟಿಗೆ ನಿವಾರಿಸಬಹುದು.

ಗಗನಯಾತ್ರೆಗಾಗಿ ನಡೆದ ಸಂಶೋಧನೆಗಳಿಂದ ಶೀಘ್ರವಾಗಿ ಕಾರ್ಯಗತ ಮಾಡಬಹುದಾದ ಫಲಿತಾಂಶಗಳೂ ದೊರೆತಿವೆ. ವೈದ್ಯಕೀಯ ರಂಗದಲ್ಲಿ, ನೀರು ಸರಬರಾಜು ಕಾರ್ಯದಲ್ಲಿ, ಸಾರ್ವಜನಿಕ ಆರೋಗ್ಯ ವಿಭಾಗದಲ್ಲಿ, ಟೆಲಿವಿಷನ್ ಸುಧಾರಣೆ ಹಾಗೂ ಹೆಚ್ಚು ಪೌಷ್ಟಿಕಾಂಶವಿರುವ ಆಹಾರ ಪೂರೈಕೆಯಲ್ಲಿ–ಹೀಗೆ ವಿವಿಧ ಪ್ರಯೋಜನಗಳನ್ನೂ ರೂಢಿಸಿಕೊಳ್ಳಲಾಗಿದೆ.

ಕೇವಲ ಪ್ರಯೋಜನವೇ ಗಗನಯಾತ್ರೆಯ ಉದ್ದೇಶವಲ್ಲ. ಅದು ಮಾನವ ಪ್ರವೃತ್ತಿಯ ಒಂದು ಸಹಜ ಧರ್ಮ. ನೀಲಾಕಾಶ ಇಂದಲ್ಲ ಎಂದಿಗೂ ಅವನ ಸಾಹಸಪ್ರವೃತ್ತಿಗೆ ಆಹ್ವಾನ.

ಭೂಮಿಯಿಂದ ಚಂದ್ರನಿಗಿರುವ ದೂರ ಸುಮಾರು 3,65,195 ಕಿ.ಮೀ. ಯಾತ್ರೆಯ ಅವಧಿ ಏಳರಿಂದ ಹತ್ತು ದಿವಸಗಳು. ಭೂಮಿಗೆ ಹತ್ತಿರವಿರುವ ಇತರ ಗ್ರಹಗಳೆಂದರೆ ಮಂಗಳ ಹಾಗೂ ಶುಕ್ರಗ್ರಹಗಳು. ಈ ಗ್ರಹಗಳು ಜೀವಧಾರಕವೆ ಅಲ್ಲವೆ ಎಂಬ ಶೋಧನೆಗಾಗಿ ಅನ್ವೇಷಕ ಕ್ಷಿಪಣಿಗಳನ್ನು ಈಗಾಗಲೇ ಅನೇಕಬಾರಿ ಉಡಾಯಿಸಲಾಗಿದೆ. ಗಂಟೆಗೆ 3,400 ಕಿಲೊ ಮೀಟರುಗಳ ಸರಾಸರಿ ವೇಗದಲ್ಲಿ ಚಂದ್ರನೆಡೆ ಸಾಗಿಯೂ ಚಂದ್ರಯಾತ್ರೆಗೆ ಏಳರಿಂದ ಹತ್ತು ದಿವಸಗಳು ಬೇಕಾದರೆ, ಅದಕ್ಕಿಂತ ದೂರವಿರುವ ಮಂಗಳ ಹಾಗೂ ಶುಕ್ರಗ್ರಹಗಳ ಬಳಿಗೆ ಹೋಗುವುದಕ್ಕೆ ಇನ್ನೂ ಹೆಚ್ಚು ಕಾಲ ಹಿಡಿಯುವುದು. ಅಲ್ಲಿಂದಾಚೆ ಅಂತರ್‌ತಾರಾ ಹಾಗೂ ಅಂತರ್‌ನೀಹಾರಿಕಾ ಯಾತ್ರೆಗಳು ಈಗ ಕಲ್ಪನೆಯ ರೂಪದಲ್ಲಿ ನಿಂತಿವೆ. ಈ ಪ್ರಯಾಣಗಳಿಗೆ ಅನೇಕಾನೇಕ ಜ್ಯೋತಿರ್ವರ್ಷಗಳು ಬೇಕಾಗುವುದಂತೆ. (ಜ್ಯೋತಿರ್ವರ್ಷ ಎಂದರೆ ಬೆಳಕಿನವೇಗದಲ್ಲಿ–ಒಂದು ಸೆಕೆಂಡಿಗೆ 2,99,274 ಕಿ. ಮೀ.–ಸತತವಾಗಿ ಒಂದು ವರ್ಷ ಪ್ರಯಾಣ ಮಾಡಿದಾಗ ಸಾಗುವ ದೂರ.) ಹೆಚ್ಚು ಕಾಲದ ಪ್ರಯಾಣಕ್ಕೆ ಅಂತರಿಕ್ಷ ನಿಲ್ದಾಣಗಳು ಬೇಕು : ಈ ನಿಲ್ದಾಣಗಳಲ್ಲಿಯೇ ಆಹಾರ, ಆಮ್ಲಜನಕ, ಕ್ಷಿಪಣಿಯ ಇಂಧನಕ್ಕೆ ಬೇಕಾದ ಪದಾರ್ಥಗಳ ಉತ್ಪಾದನೆ ಸಾಧ್ಯವಿರಬೇಕು. ಈ ಎಲ್ಲ ವಿಷಯಗಳ ಬಗೆಗೆ ಸಂಶೋಧನೆಗಳು ನಡೆಯುತ್ತಿವೆ. ಈ ದಿಸೆಯಲ್ಲಿ ರಷ್ಯದ ಸೋಯುಜ್ 6, 7, 8 ಮತ್ತು 9, ಗಗನದಲ್ಲಿ ಪ್ರಯೋಗಗಳನ್ನು ನಡೆಸಿವೆ. ಭೂಮಿಯನ್ನು ಸುತ್ತುವ ಬೃಹತ್ ನಿಲ್ದಾಣ ರಚನೆಯಲ್ಲಿ ಇದು ಮೊದಲ ಹಂತ.

ಆಕಾಶದಲ್ಲಿರುವ ಪರಿಸ್ಥಿತಿಯನ್ನು ಕಲ್ಪಿಸಿಕೊಂಡು ಭೂಮಿಯ ಮೇಲೆ ಒಂದು ವರ್ಷ ಕಾಲ ಮೂವರು ವಿಜ್ಞಾನಿಗಳು ಯಶಸ್ವಿಯಾಗಿ ಬಾಳಿದರು. ವ್ಯೋಮಯಾತ್ರಿಗೆ 'ಆಸ್ಟ್ರೊನಾಟ್' ಎಂದು ಆಂಗ್ಲಭಾಷೆಯಲ್ಲಿ ಕರೆಯುತ್ತಾರೆ. ಅಂದರೆ ನಕ್ಷತ್ರಗಳ ಮಧ್ಯೆ ವಿಹರಿಸುವವನು ಎಂಬರ್ಥವಿದೆ. ಗಗನಯಾತ್ರೆ ಎಷ್ಟು ರೋಮಾಂಚಕಾರಿ ಅನುಭವವೋ ಮಾನವನಿಗೆ ಅಷ್ಟೇ ಗಂಡಾಂತರಕಾರಿ ಕೂಡ. ಒತ್ತಡವಿಲ್ಲದಿರುವ ನಿರ್ವಾತ ಪರಿಸ್ಥಿತಿಯಿಂದ ರಕ್ಷಿಸಿಕೊಳ್ಳಬೇಕು. ಭೂಮಿಯಿಂದ ಹೊರದೂಡಲ್ಪಡುವಾಗ ಉಂಟಾಗುವ ಭಯಂಕರ ಸ್ಪಂದನ ಹಾಗೂ ಸಪ್ಪಳಗಳಿಂದ ಆತನಿಗೆ ರಕ್ಷಣೆಯಿರಬೇಕು.

ವ್ಯೋಮಯಾತ್ರಿಯ ಚಟುವಟಿಕೆಗಳೆಲ್ಲ ಭದ್ರವಾಗಿ ಮುಚ್ಚಲ್ಪಟ್ಟ ಒಂದು ಚಿಕ್ಕ ಕೋಣೆಯಂಥ ಜಾಗದಲ್ಲಿಯೇ ನಡೆಯುತ್ತವೆ. ಅವನಿಗೆ ಬೇಕಾದ ಆಮ್ಲಜನಕವನ್ನು, ಅದನ್ನು ತುಂಬಿರುವ ತೊಟ್ಟಿಗಳ ಮೂಲಕ ಅವನು ಪಡೆಯಬಹುದು. ಬಹು ದೀರ್ಘ ವ್ಯೋಮಯಾತ್ರೆಗೆ ನೀರಿನಲ್ಲಿ ಬೆಳೆಯುವ ಒಂದು ವಿಧದ ಸಸ್ಯವನ್ನು ತೆಗೆದುಕೊಂಡು ಅದು ಹೊರಬಿಡುವ ಆಮ್ಲಜನಕವನ್ನು ಶೇಖರಿಸುವ ಸಾಧ್ಯತೆಯುಂಟು. ಹಗಲು ರಾತ್ರಿಗಳ ಭೇದವಿಲ್ಲದೆ ಸೂರ್ಯನ ಶಾಖ ನಿರಂತರವಾಗಿ ಹೊಡೆಯುವುದರಿಂದ. ಅವನ ಕೋಣೆಯನ್ನು ಈ ಶಾಖ ತಟ್ಟದಂತೆ ರಚಿಸಲಾಗಿದೆ. ಶೀತದಲ್ಲಿ, ಡಬ್ಬಿಗಳಲ್ಲಿ, ಹಾಗೂ ವಿಕಿರಣ ಕ್ರಿಯೆಯಿಂದ ಸಂರಕ್ಷಿಸಲಾದ ಆಹಾರ ಪದಾರ್ಥಗಳೇ ಅವನಿಗೆ ಗಗನಯಾತ್ರೆಯಲ್ಲಿ ಜೀವನಾಧಾರ. ಕ್ಷಿಪಣಿ ಭೂಮಿಯನ್ನು ಬಿಡುವಾಗ ಗಗನಯಾತ್ರಿ ಮಲಗಿದ ಸ್ಥಿತಿಯಲ್ಲಿದ್ದರೆ ಅವನಿಗೆ ಜ್ಞಾನ ತಪ್ಪುವುದಿಲ್ಲ : ಮತ್ತು ವೇಗೋತ್ಕರ್ಷಣೆಯ ಪ್ರಭಾವ ಅಷ್ಟಾಗಿ ತಿಳಿಯುವುದಿಲ್ಲ. ಭಾರವಿಲ್ಲದೆ, ಅಡ್ಡಾದಿಡ್ಡಿಯಾಗಿ ತೇಲುವುದನ್ನು ತಪ್ಪಿಸಲು, ವ್ಯೋಮಯಾತ್ರಿಯ ಕೋಣೆಯನ್ನೇ ತಿರುಗುವಂತೆ ಮಾಡಿ ಕೃತಕ ಗುರುತ್ವಾಕರ್ಷಣೆಯಿರುವಂತೆ ವ್ಯವಸ್ಥೆಗೊಳಿಸಲಾಗುತ್ತದೆ.

ಇಂಥ ವಿಪರೀತ ಅನಿರೀಕ್ಷಿತ ಬದಲಾವಣೆಗಳನ್ನು ಎದುರಿಸುವಾಗ ವ್ಯೋಮಯಾತ್ರಿ ತನ್ನ ಜೀವವನ್ನು ಕಳೆದುಕೊಳ್ಳುವ ಸಂಭವವೂ ಉಂಟು. 1967ರ ಏಪ್ರಿಲ್ ತಿಂಗಳಿನಲ್ಲಿ ಇಂಥ ಒಂದು ದುರಂತ ಜರುಗಿತು. ಅಂದಿಗೆ ಅತಿ ಜಟಿಲವೆಂದು ಹೇಳಲಾದ ಆಕಾಶನೌಕೆಯಲ್ಲಿ ಯಾನಮಾಡಿ ಹಿಂದಿರುಗುತ್ತಿದ್ದ ವ್ಲಾಡಿಮಿರ್ ಕೊಮರೋವ್ ಎಂಬ ರಷ್ಯದ ವ್ಯೋಮಯಾತ್ರಿಯ ಗಗನನೌಕೆ ಇಳಿಯುವಾಗ, ಅದರ ಪ್ಯಾರಾಚೂಟಿನ ಹಗ್ಗ ಸಿಕ್ಕಿದ. ಆದರೆ ಈ ಕಟ್ಟು ತೊಡಕಾಗಿ ನೌಕೆ ರಭಸದಿಂದ ಭೂಮಿಗೆ ಬಂದು ಬಡಿಯಿತು. ಈಗ ತಿಳಿದಂತೆ ಗಗನಯಾನದಲ್ಲಿ ಮರಣ ಹೊಂದಿದವರಲ್ಲಿ ಕೊಮರೋವ್ ಮೊದಲಿಗ. ಅದೇ ವರ್ಷದ ಜನವರಿ ತಿಂಗಳಲ್ಲಿ

ಅಮೆರಿಕದ ಮೂವರು ಗಗನಯಾತ್ರಿಗಳು ಬೆಂಕಿ ಹೊತ್ತಿ ಸಾವಿಗೆ ಬಲಿಯಾಗಿದ್ದರು. ವರ್ಜಿಲ್ ಗ್ರಿಸ್ಸಮ್, ಎಡ್ವರ್ಡ್ ವೈಟ್ ಮತ್ತು ರೋಜರ್ ಛಫಿ—ಈ ಮೂವರು ಆ ಫೆಬ್ರುವರಿ ತಿಂಗಳಲ್ಲಿ ಅಪೊಲೊ ಆಕಾಶನೌಕೆಯಲ್ಲಿ ಪಯಣಿಸಬೇಕೆಂದು ಗೊತ್ತಾಗಿದ್ದಿತು. ಆದರೆ ಜನವರಿ 27ರಂದು ಪ್ರಯೋಗಾರ್ಥ ಪರೀಕ್ಷೆಗೆಂದು ಎಣಿಕೆ ನಡೆಯುತ್ತಿದ್ದ ಸಮಯದಲ್ಲಿ ಪ್ರಮಾದವಶಾತ್ ನೌಕೆಯ ಕೋಣೆಯಲ್ಲಿ ಬೆಂಕಿ ಹುಟ್ಟಿತು. ವ್ಯೋಮಯಾತ್ರಿಗಳು ಹೊರಕ್ಕೆ ಬರಲಾಗದೆ ಪ್ರಾಣಗಳನ್ನು ಕಳೆದುಕೊಂಡರು.

ಮೂರನೆಯ ಬಾರಿ ಚಂದ್ರನ ಮೇಲೆ ಇಳಿಯಲೆಂದು ಹಾರಿಸಲ್ಪಟ್ಟ ಅಪೊಲೊ 13ರಲ್ಲಿ ಜೇಮ್ಸ್ ಲೊವೆಲ್, ಫ್ರೆಡ್ ಹೈಸ್ ಮತ್ತು ಜಾನ್ ಸ್ವಿಗರ್ಟ್ ಇದ್ದರು. ಏಪ್ರಿಲ್ 14ರಂದು ಅಪೊಲೊ ನೌಕೆಯ ಆಮ್ಲಜನಕ ಕೋಶ ಒಡೆಯಿತು. ವಿದ್ಯುಚ್ಛಕ್ತಿ ಸರಬರಾಜು ನಿಂತಿತು. ಚಂದ್ರನ ಮೇಲೆ ಇಳಿಯುವ ಯೋಜನೆಯನ್ನು ಕೈಬಿಡಲಾಯಿತು, ಧರೆಗಿಳಿಯುವುದೂ ಸಂದೇಹಾಸ್ಪದವಾಗಿ ದಾರುಣಸ್ಥಿತಿಯೊದಗಿತು. ಕಡೆಗೆ ಏಪ್ರಿಲ್ 13ರಂದು ಶಾಂತಸಾಗರದಲ್ಲಿ ಅವರು ಇಳಿದರು. ಅತಿ ತೀವ್ರ ಗಗನ ಅಪಘಾತವನ್ನು ಎದುರಿಸಿ ಜಯಿಸಿದವರಲ್ಲಿ ಇವರು ಮೊದಲಿಗರಾದರು.

ಗಗನಯಾತ್ರಿಗಳಿಗೆ ವಿಶಿಷ್ಟ ವಿಧದ ತರಬೇತಿ ಕ್ರಮಗಳೂ ಉಂಟು. ಗಗನಯಾತ್ರೆಯಲ್ಲಿ ಅನಿರೀಕ್ಷಿತವಾಗಿ ಕಷ್ಟ ಒದಗಿದರೆ ಅವರ ಪ್ರತಿಕ್ರಿಯೆ ಹೇಗಿರಬೇಕು ಎಂಬುದನ್ನು ತಿಳಿಸಿಕೊಡಲಾಗುವುದು. ಇಂಥ ಮಹತ್ವದ ಕೆಲಸಗಳ ತರಬೇತಿಗಾಗಿ ವ್ಯಕ್ತಿಯ ಆಯ್ಕೆಗೂ ಒಂದು ಕ್ರಮವಿದೆ. ಹಂತ ಹಂತವಾಗಿ ಹಲವಾರು ವಿಧಗಳಲ್ಲಿ ಪರೀಕ್ಷೆಗೊಳಗಾಗಿ, ತರಬೇತಿಯಲ್ಲಿ ಸಂಪೂರ್ಣ ಉತ್ತೀರ್ಣರಾದವರು ಮಾತ್ರ, ವ್ಯೋಮದಲ್ಲಿ ಮಾನವನ ಪ್ರತಿನಿಧಿಗಳಾಗುವ ಭವ್ಯ ಪ್ರತಿಷ್ಠೆಗೆ ಪಾತ್ರರಾಗುತ್ತಾರೆ.

## ಶಂಕರಾಚಾರ್ಯರು

ಹಿಂದಿನ ಕಾಲದಲ್ಲಿ ಒಂದು ಹಳ್ಳಿಯಿಂದ ಇನ್ನೊಂದು ಹಳ್ಳಿಗೆ ಹೋಗಬೇಕೆಂದರೆ ಕಷ್ಟ. ಒಳ್ಳೆಯ ರಸ್ತೆಗಳಿಲ್ಲ. ಬಸ್, ರೈಲು ಯಾವುದೂ ಇಲ್ಲ. ದಾರಿಯಲ್ಲಿ ಕಾಡುಗಳು. ಅಂಥ ಕಾಲದಲ್ಲಿ ಒಬ್ಬ ಧರ್ಮಗುರು ಕೇರಳದಿಂದ ಕಾಶ್ಮೀರದವರೆಗೆ, ಹಿಮಾಲಯ ನೇಪಾಳದವರೆಗೆ, ಭಾರತವನ್ನೆಲ್ಲ ಕಾಲುನಡಿಗೆಯಲ್ಲಿ ಸುತ್ತಿದರು. ದೇಶದ ನಾಲ್ಕು ಮೂಲೆಗಳಲ್ಲಿ ಮಠಗಳನ್ನು ಸ್ಥಾಪಿಸಿದರು. ಅವರೇ ಶಂಕರಾಚಾರ್ಯರು.

ಭಾರತದ ಹಿರಿಯ ಧರ್ಮಗುರುಗಳಲ್ಲಿ ಮತ್ತು ತತ್ತ್ವಶಾಸ್ತ್ರಜ್ಞರಲ್ಲಿ ಒಬ್ಬರು ಶಂಕರಾಚಾರ್ಯರು. ಭಾರತ ದೇಶದ ಕೇರಳದಲ್ಲಿ ಕಾಲಟಿ ಎಂಬ ಒಂದು ಸಣ್ಣ ಗ್ರಾಮವಿದೆ. ಆ ಹಳ್ಳಿಯ ಸತಿದೇವಿ ಮತ್ತು ಶಿವಗುರು ಎನ್ನುವ ದಂಪತಿಯ ಪುತ್ರ ಶಂಕರರು. (ಜನನ : 780)

ಶಂಕರರು ಚಿಕ್ಕವರಾಗಿದ್ದಾಗಲೇ ಅವರ ತಂದೆ ಕಾಲವಾದರು. ತಾಯಿ ಮಗನನ್ನು ಬಹಳ ಅಕ್ಕರೆಯಿಂದ ಸಲಹಿದಳು. ಬೇಗ ಮದುವೆ ಮಾಡಿ ಬಿಡಬೇಕೆಂದುಕೊಂಡಳು. ಆದರೆ ಮಗನಿಗೆ ಸನ್ಯಾಸಿಯಾಗಬೇಕೆಂಬ ಹಂಬಲ. ತಾಯಿ ಒಪ್ಪುವಳೇನು? ಅಂತೂ ತಾಯಿಯ ಮನ ಒಲಿಸಿ ಶಂಕರರು ಒಬ್ಬ ಗುರುವನ್ನು ಹುಡುಕಿಕೊಂಡು ಹೊರಟರು. ನರ್ಮದಾ ತೀರದಲ್ಲಿ ಪ್ರಸಿದ್ಧ ಸನ್ಯಾಸಿಗಳಾದ ಗೋವಿಂದ ಭಗವತ್ಪಾದರ ಶಿಷ್ಯರಾಗಿ ಶಾಸ್ತ್ರ ಗ್ರಂಥಗಳೆಲ್ಲವನ್ನೂ ಅಭ್ಯಾಸ ಮಾಡಿದರು. ಶಂಕರರದು ಅಸಾಧಾರಣ ಪ್ರತಿಭೆ. ಕಾಶಿಗೆ ಹೋಗಿ ಅಲ್ಲಿನ ವಿದ್ವಾಂಸರ ಜೊತೆಗೆ ಅದ್ವೈತ ಮಾರ್ಗವನ್ನು ಕುರಿತು ವಾದಮಾಡಿ ಗೆದ್ದರು. 'ಅದ್ವೈತ' ಎಂದರೆ ಪ್ರಪಂಚದಲ್ಲಿ ಎರಡಿಲ್ಲ, ಎಲ್ಲವೂ ಒಂದೇ, ಎಲ್ಲವೂ ಬ್ರಹ್ಮ; ಬ್ರಹ್ಮನು ಬೇರೆ ನಾವು ಬೇರೆ ಅಲ್ಲ ಎಂಬ ತತ್ತ್ವ. ಪಾರಮಾರ್ಥಿಕವಾಗಿ ಮೇಲುಕೀಳು ಎನ್ನುವುದಿಲ್ಲ, ಎಲ್ಲವೂ ಬ್ರಹ್ಮ, ಎಲ್ಲವೂ ಪೂಜನೀಯ ಎಂದು ಹೇಳಿ ಶಂಕರರು, ಮನುಷ್ಯರಾದ ನಮ್ಮಲ್ಲಿ ಮೇಲುಕೀಳು ಭಾವನೆ ಇರಬಾರದು, ನಾವೆಲ್ಲರೂ ಒಂದೇ ಎನ್ನುವುದನ್ನು ಸಾರಿದರು. ಕಾಶಿಯಲ್ಲಿ ಇವರಿಗೆ ಅದ್ಭುತ ಗೌರವ ದೊರೆಯಿತು. ಕರ್ಮವೇ ಪ್ರಧಾನವೆಂಬ ಕರ್ಮದ ಮಾರ್ಗವನ್ನೂ ಎಲ್ಲವೂ ಶೂನ್ಯವೆಂಬ ಶೂನ್ಯ ಮಾರ್ಗವನ್ನೂ ಬಲವತ್ತರವಾಗಿ ವಿರೋಧಿಸಿ ಜ್ಞಾನಮಾರ್ಗವನ್ನು ಎತ್ತಿಹಿಡಿದರು.

ಶಂಕರಾಚಾರ್ಯರು ಸನ್ಯಾಸಿಯಾದ ಮೇಲೂ ತಮ್ಮ ತಾಯಿಯನ್ನು ಮರೆಯಲಿಲ್ಲ. ತಾಯಿಗೆ ಆರೋಗ್ಯ ಕೆಟ್ಟಿದೆ ಎಂದು ತಿಳಿದಾಗ ಕಾಲಟಿಗೆ ಮರಳಿಹೋದರು. ಅಲ್ಲಿ ಆಕೆ ಕಾಲವಾದಳು. ಸನ್ಯಾಸಿ ತಾಯಿಗೆ ಉತ್ತರಕ್ರಿಯೆಯನ್ನು ಮಾಡಬಾರದೆಂದು ಜನ ಹೇಳಿದರೂ ಶಂಕರಾಚಾರ್ಯರು ತಾಯಿಯಲ್ಲಿದ್ದ ಭಕ್ತಿಯಿಂದ, ಆಗಬೇಕಾಗಿದ್ದ ವಿಧಿಗಳನ್ನು ನೆರವೇರಿಸಿದರು.

ಶಂಕರಾಚಾರ್ಯರು ತಮ್ಮ ಮೂವತ್ತೆರಡನೆಯ ವರ್ಷದಲ್ಲಿ ಕಾಲವಾದರು. ಅವರ ದೇಹತ್ಯಾಗ ಹಿಮಾಲಯ ಪ್ರದೇಶದಲ್ಲಿ ಆಗಿರಬೇಕೆಂದು ಊಹೆ.



ಅದ್ವೈತ ಮತ ಸ್ಥಾಪಕ ಶಂಕರಾಚಾರ್ಯರು

ಶಂಕರರು ಉಪನಿಷತ್ತುಗಳಲ್ಲಿ ಅತ್ಯಂತ ಗಹನವಾದ ಧರ್ಮದ ಉಪದೇಶವನ್ನೂ ತತ್ತ್ವಶಾಸ್ತ್ರವನ್ನೂ ಕಂಡರು. ಉಪನಿಷತ್ತು, ಗೀತೆ ಮತ್ತು ಬ್ರಹ್ಮಸೂತ್ರಗಳಿಗೆ ವಿದ್ವತ್ಪೂರ್ಣವಾದ ಭಾಷ್ಯಗಳನ್ನು ಬರೆದರು. ದೇವರಿಲ್ಲ ಎಂದು ಹೇಳುವ ಪಂಥವನ್ನು ವಿರೋಧಿಸಿದರು. ಪ್ರಪಂಚವನ್ನು ಮಾಯೆ ಎಂದು ಕರೆದರು. ಜಗತ್ತು ನಿತ್ಯವಲ್ಲ, ಶಾಶ್ವತವಲ್ಲ, ಬದಲಾವಣೆಯಾಗುತ್ತಿರುತ್ತದೆ. ನಮ್ಮ ಅಜ್ಞಾನದಿಂದ ಈ ಬದಲಾಗುತ್ತಿರುವ ವ್ಯಾಪಾರಗಳೇ ಸತ್ಯ ಎಂದು ನಾವು ಭಾವಿಸುತ್ತೇವೆ, ಈ ಎಲ್ಲ ವಸ್ತುಗಳು ಮತ್ತು ವ್ಯಾಪಾರಗಳ ಹಿಂದೆ ಇರುವ ಸತ್ಯ ಬ್ರಹ್ಮನೆ, ಮನುಷ್ಯನ ಆತ್ಮ ಬ್ರಹ್ಮನಿಂದ ಬೇರೆಯಲ್ಲ, ಬ್ರಹ್ಮನಿಗೆ ಕಾಲದ ಬಂಧನವಿಲ್ಲ, ದೇಶದ ಬಂಧನವಿಲ್ಲ, ಬ್ರಹ್ಮನು ಅನಾದಿ, ಅನಂತ, ಬ್ರಹ್ಮನನ್ನು ವರ್ಣಿಸಲು ಸಾಧ್ಯವಿಲ್ಲ, ಈ ಬ್ರಹ್ಮನ್‌ನಲ್ಲಿ ಒಂದಾಗುವುದು ಆತ್ಮದ ಗುರಿಯಾಗಬೇಕು, ಇದಕ್ಕೆ ಅಜ್ಞಾನವನ್ನು ಹೋಗಲಾಡಿಸಿಕೊಳ್ಳಬೇಕು—ಇದು ಶಂಕರರ ಉಪದೇಶ.

ಶಂಕರಾಚಾರ್ಯರು ಕನ್ಯಾಕುಮಾರಿಯಿಂದ ಕಾಶ್ಮೀರದವರೆಗೆ ತಿರುಗಾಡಿದರು. ಭಾರತೀಯರು ಪೂಜಿಸುವ ಹಲವು ದೇವರುಗಳನ್ನು ಕುರಿತು ಸಂಸ್ಕೃತದಲ್ಲಿ ಸೊಗಸಾದ ಸ್ತೋತ್ರಗಳನ್ನು ರಚಿಸಿದರು. ಸನ್ಯಾಸಿ ಸಂಘಗಳನ್ನೂ ಮಠಗಳನ್ನೂ ಸ್ಥಾಪಿಸಿದರು. ಪ್ರಯಾಗದಲ್ಲಿ (ಈಗಿನ ಅಲಹಾಬಾದ್) ಹನ್ನೆರಡು ವರ್ಷಗಳಿಗೊಂದು ಸಲ ನಡೆಯುವ ಕುಂಭಮೇಳವನ್ನು ಆರಂಭಿಸಿದರು.

ಮೈಸೂರು ರಾಜ್ಯದಲ್ಲಿರುವ ಶೃಂಗೇರಿ ಮಠ, ಶಂಕರಾಚಾರ್ಯರು ಕಟ್ಟಿದ ಮೊದಲ ಮಠ. ಅಲ್ಲಿನ ಶಾರದಾ ದೇವಾಲಯವನ್ನು ಅವರೇ ಸ್ಥಾಪಿಸಿದರು. ಒಟ್ಟು ಏಳು ಮಠಗಳನ್ನು ಭಾರತದ ವಿವಿಧ ಕಡೆಗಳಲ್ಲಿ ಸ್ಥಾಪಿಸಿದರು. ಭಾರತವೆಲ್ಲ ಒಂದು ಎನ್ನುವ ಭಾವನೆ ಬೆಳೆಯಲು ಇದು ತುಂಬ ಸಹಕಾರಿಯಾಯಿತು. ಇಂದಿಗೂ ವಿದ್ವಾಂಸರು ತಲೆದೂಗುವಂಥ ಪಾಂಡಿತ್ಯಪೂರ್ಣ ಗ್ರಂಥಗಳನ್ನು ಬರೆದರು. ಮೂವತ್ತೆರಡೇ ವರ್ಷಗಳ ತಮ್ಮ ಆಯುಸ್ಸಿನಲ್ಲಿ ಅವರು ಇಷ್ಟೊಂದು ಕೆಲಸ ಮಾಡಿದ್ದು ಅಚ್ಚರಿ ಉಂಟುಮಾಡುವ ಸಂಗತಿ.

## ಶವಸಂಸ್ಕಾರ–ಉತ್ತರಕ್ರಿಯೆ

ಬದುಕಿರುವ ಮನುಷ್ಯನ ದೇಹದಲ್ಲಿ ಜೀವವಿಲ್ಲದಂತಾದಾಗ ಅದು 'ಶವ' ಎನಿಸಿಕೊಳ್ಳುತ್ತದೆ. ಬದುಕಿರುವಾಗ ಚಟುವಟಿಕೆಗಳ ಬೀಡಾಗಿ, ಮಾನವನಿಗೆ ಅಸ್ತಿತ್ವ ನೀಡಿದ ದೇಹವನ್ನು ಅದು 'ಶವ'ವಾದ ಮೇಲೂ ಗೌರವದಿಂದ ಕಾಣಬೇಕು, ಅದಕ್ಕೆ ತಕ್ಕ ರೀತಿಯಲ್ಲಿ ಅಂತ್ಯಸಂಸ್ಕಾರ ಮಾಡಬೇಕು ಎಂಬ ಭಾವನೆ ಬಹು ಕಾಲದಿಂದ ಬಂದಿದೆ.

ಸತ್ತವನ ದೇಹಕ್ಕೆ ನೀಡುವ ಗೌರವದ ಅಂತ್ಯವೇ ಶವಸಂಸ್ಕಾರ. ಅದಾದ ಬಳಿಕ ಸತ್ತವನ ಶ್ರೇಯಸ್ಸಿಗಾಗಿ ಮಾಡುವ ಧಾರ್ಮಿಕ ಕಾರ್ಯಕ್ರಮಗಳು ಉತ್ತರಕ್ರಿಯೆ. ಸತ್ತಮೇಲೂ ದೇಹಕ್ಕೆ ಗೌರವ ತೋರುವುದು ನಾಗರಿಕತೆಯ ಲಕ್ಷಣ. ಸತ್ತವರಿಗೆ ಸರಿಯಾದ ಸಂಸ್ಕಾರ ಆಗದಿದ್ದರೆ ಅವರ ಆತ್ಮಕ್ಕೆ ಸದ್ಗತಿ ದೊರೆಯುವುದಿಲ್ಲವೆಂದು ಹಲವು ಧರ್ಮಗಳವರ ನಂಬಿಕೆ.

ಶವಸಂಸ್ಕಾರ ವಿವಿಧ ದೇಶಗಳಲ್ಲಿ, ವಿವಿಧ ಧರ್ಮಗಳಲ್ಲಿ ವಿಧವಿಧವಾಗಿ ಬಳಕೆಯಲ್ಲಿದೆ. ಆದರೆ ಇವರಲ್ಲಿ ಮುಖ್ಯವಾದವು ಎರಡು ವಿಧ: ಒಂದು ಶವವನ್ನು ಸುಡುವುದು; ಇನ್ನೊಂದು ಅದನ್ನು ಹೂಳುವುದು.

ನಾಗರಿಕತೆಯ ಮೊದಲ ಹಂತಗಳಲ್ಲೊಂದಾದ ಶವಸಂಸ್ಕಾರ ಗವಿವಾಸದ ಕಾಲದಲ್ಲಿ ಆರಂಭವಾಯಿತೆನ್ನಬಹುದು. ಗವಿವಾಸಿಗಳು ಸತ್ತವನನ್ನು ಎಲ್ಲಿದ್ದರಲ್ಲೇ ಬಿಟ್ಟುಬಿಡದೆ ಅಥವಾ ಪ್ರಕೃತಿಯ ಮಡಿಲಿಗೆಸೆಯದೆ, ಗೌರವದಿಂದ ಹೂಳುತ್ತಿದ್ದರೆಂದು ಪುರಾತತ್ತ್ವಶಾಸ್ತ್ರ ತೋರಿಸಿಕೊಟ್ಟಿದೆ.

ಪ್ರಾಚೀನ ಈಜಿಪ್ಟಿನಲ್ಲಿ ರಾಜರು ಬದುಕಿರುವಾಗಲೇ ತಮಗಾಗಿ ಸಮಾಧಿಗಳನ್ನು ಕಟ್ಟಿಸುತ್ತಿದ್ದರು. ಇವು ಪಿರಮಿಡ್ಡುಗಳೆಂದು ಜಗದ್ವಿಖ್ಯಾತವಾಗಿವೆ. ರಾಜನಾಗಲಿ ಅಥವಾ ಖ್ಯಾತಿವಂತನಾಗಲಿ ಸತ್ತರೆ, ದೇಹವನ್ನು ತೊಳೆದು ಅದರೊಳಗೆ ಸಂಬಾರ ಪದಾರ್ಥಗಳನ್ನು ತುಂಬಿಸುತ್ತಿದ್ದರು, ದೇಹವನ್ನು ಎಪ್ಪತ್ತು ದಿನ ಉಪ್ಪುನೀರಿನಲ್ಲಿ ನೆನೆಸಿಟ್ಟು ಮತ್ತೆ ತೊಳೆದು ಅದಕ್ಕೆ ಉಡುಪು ತೊಡಿಸುತ್ತಿದ್ದರು. ದೇಹ ಕೆಡದಂತೆ ಸಂಸ್ಕರಿಸಿದ ಮೇಲೆ ಅದನ್ನು ಚಿನ್ನದ ಕೆತ್ತನೆಯುಳ್ಳ ಮರದ ಪೆಟ್ಟಿಗೆಯಲ್ಲಿಟ್ಟು ಪಿರಮಿಡ್ಡಿನಲ್ಲಿ ಸಮಾಧಿ ಮಾಡುತ್ತಿದ್ದರು. ಸತ್ತವನ ಆತ್ಮ ಮತ್ತೆ ಹಿಂದಕ್ಕೆ ಆ ದೇಹದಲ್ಲಿ ಬಂದು ಸೇರಿಕೊಳ್ಳುತ್ತದೆಂಬ ನಂಬಿಕೆಯೇ ಆ ಆಚರಣೆಗೆ ಕಾರಣ.

ಪುರಾತತ್ತ್ವಶೋಧಕರು ಕೆಲವು ಗುಡ್ಡಗಳನ್ನಗೆದಾಗ ಅವುಗಳ ಕೆಳಗೆ ಸತ್ತವರಿಗಾಗಿ ನಿರ್ಮಿಸಿದ ನೆಲಮಾಳಿಗೆ ಮನೆಗಳಿದ್ದದ್ದು ಉತ್ತರ ಹಾಗು ಪೂರ್ವ ಯೂರೋಪಿನಲ್ಲಿ ಕಂಡುಬಂದಿದೆ. ಸತ್ತವನ ಆತ್ಮ ದೇಹವನ್ನು ಬಿಟ್ಟ ಮೇಲೂ ಮೊದಲಿನಂತೆಯೇ ಬಾಳುತ್ತದೆ ಎಂಬ ನಂಬಿಕೆಯೇ ಹೀಗೆ ಮನೆಗಳನ್ನು ಕಟ್ಟಲು ಕಾರಣ. ಇದೇ ನಂಬಿಕೆಯಿಂದಲೇ ಕಡಲುಗಳ್ಳರು ತಮ್ಮ ನಾವೆಯ ಅಧಿಪತಿ ಸತ್ತರೆ ಅವನ ಜೊತೆಗೆ ಅವನ ಹಡಗನ್ನೂ ಹೂಳುತ್ತಿದ್ದರು. ಕಪ್ಪು ಸಮುದ್ರದ ಪ್ರದೇಶದಲ್ಲಿದ್ದ ಸ್ಕಿಥಿಯನ್ ಜನ ರಾಜ ಸತ್ತರೆ ಅವನೊಂದಿಗೆ ಉಡುಪು ಒಡವೆಗಳನ್ನಲ್ಲದೆ ಅವನ ಕುದುರೆಗಳನ್ನೂ ನೌಕರರನ್ನೂ ಸಮಾಧಿ ಮಾಡುತ್ತಿದ್ದರು.

ಪ್ರಾಚೀನ ಗ್ರೀಕರ ಅನೇಕ ಪಂಗಡಗಳಲ್ಲಿ ಸತ್ತವರನ್ನು ಸುಡುವ ಪದ್ಧತಿಯಿತ್ತು. ಬೆಂಕಿಯಿಂದ ಆತ್ಮವಿಮೋಚನೆ ಎಂಬ ನಂಬಿಕೆ ಇದಕ್ಕೆ ಕಾರಣವಿರಬೇಕು.

ಬೌದ್ಧ ಧರ್ಮಾವಲಂಬಿಗಳಾದ ಜಪಾನಿ ರೈತರಲ್ಲಿ ಯಾರಾದರೂ ಕಾಲವಾದರೆ ಅವರ ದೇಹವನ್ನು ತೊಳೆದು, ಬಿಳಿ ಬಟ್ಟೆಯನ್ನು ಉಡಿಸಿ ಮರದ ಪೆಟ್ಟಿಗೆಯಲ್ಲಿಡುತ್ತಾರೆ. ಅವರ ಜೊತೆಗೆ ಸತ್ತವರಿಗೆ ಪ್ರಿಯವಾದ ಯಾವುದಾದರೂ ವಸ್ತುವನ್ನು ಇಡುವುದೂ ಉಂಟು. ಧರ್ಮಗುರುವನ್ನು ಆಹ್ವಾನಿಸಿ ಸತ್ತವರ ಗೌರವಾರ್ಥ ಭೋಜನ ಸಮಾರಂಭ ಏರ್ಪಡಿಸುತ್ತಾರೆ. ಧರ್ಮಗುರು ಈ ಸಮಾರಂಭದಲ್ಲೂ ಆನಂತರ ಸಮಾಧಿಸ್ಥಳದಲ್ಲೂ ಪ್ರಾರ್ಥನೆ ಸಲ್ಲಿಸುತ್ತಾನೆ.

ಚೀನದಲ್ಲಿ ಸತ್ತವರ ದೇಹವನ್ನು ತೊಳೆದು ಕಪ್ಪು ಅಥವಾ ಕೆಂಪು ಬಣ್ಣದ ಬಟ್ಟೆಗಳಲ್ಲಿ ಸುತ್ತುತ್ತಾರೆ. ಆನಂತರ ಭಾರವಾದ ಮರದ ಪೆಟ್ಟಿಗೆಯಲ್ಲಿ ಆ ಶವವನ್ನಿಡುತ್ತಾರೆ. ಆ ಪೆಟ್ಟಿಗೆಯೂ ಕೆಂಪು ಅಥವಾ ಕಪ್ಪು ಬಣ್ಣದ್ದು. ಸತ್ತವನ ಮನೆಯಲ್ಲಿ ಸ್ನೇಹಿತರಿಗೂ ಬಂಧುಗಳಿಗೂ ಭೋಜನ ಏರ್ಪಡಿಸುತ್ತಾರೆ. ದೇವಾಲಯದಲ್ಲಿ ಧರ್ಮಗುರು ಪ್ರಾರ್ಥನೆ ಸಲ್ಲಿಸುತ್ತಾನೆ. ಸತ್ತ ಮೂರು ದಿನಗಳೊಳಗಾಗಿ ಶವಸಂಸ್ಕಾರ ಮಾಡುತ್ತಾರೆ. ಊರಿನ ಹೊರಗಿರುವ ಸಮಾಧಿಸ್ಥಳಕ್ಕೆ ಮೆರವಣಿಗೆಯಲ್ಲಿ ಹೋಗುತ್ತಾರೆ. ಹಸಿರು ಮತ್ತು ಕೆಂಪು ಬಣ್ಣಗಳನ್ನು ತೊಟ್ಟವರು ಶವದ ಪೆಟ್ಟಿಗೆ ಹೊರುತ್ತಾರೆ. ಮೆರವಣಿಗೆಯಲ್ಲಿ ಡೋಲು, ಕೊಂಬು, ಬಾಣಬಿರುಸುಗಳಿರುತ್ತವೆ.

ಭಾರತದಲ್ಲಿ ಸತ್ತವರನ್ನು ಸುಡುವುದೂ ಉಂಟು. ಸಮಾಧಿ ಮಾಡುವುದೂ ಉಂಟು. ಹಿಂದೂಗಳಲ್ಲಿ ಶವಸಂಸ್ಕಾರ ಹಾಗೂ ಉತ್ತರಕ್ರಿಯೆ ಪಂಗಡಗಳಿಗೆ ಅನುಸಾರವಾಗಿ ಅನೇಕ ವಿಧವಾಗಿವೆ. ಅಲ್ಲದೆ ಇವು ಬಹು ವಿಸ್ತಾರ ವಿಧಿಗಳೂ ಹೌದು. ಸಾಮಾನ್ಯವಾಗಿ ಇವು ಸತ್ತ ದಿನದಿಂದ ಹದಿಮೂರು ದಿನಗಳವರೆಗೂ ನಡೆಯುತ್ತವೆ. ಅಲ್ಲದೆ, ಒಂದು ವರ್ಷದವರೆಗೆ ಪ್ರತಿ ತಿಂಗಳೂ ಅನಂತರ ಪ್ರತಿ ವರ್ಷವೂ ಸತ್ತ ದಿನದಂದು ಅವರ ಸ್ಮರಣಾರ್ಥ ಪೂಜೆ, ಪ್ರಾರ್ಥನೆ, ಅವರ ಆತ್ಮಕ್ಕೆ ಕಾಣಿಕೆ, ಭೋಜನಗಳು ನಡೆಯುತ್ತವೆ. ಹಿಂದೂಗಳಲ್ಲಿ ಸತ್ತ ದಿನವನ್ನು 'ತಿಥಿ' ಎಂದು ಪ್ರತಿ ವರ್ಷವೂ ಆಚರಿಸುತ್ತಾರೆ.

ಪಾರಸಿಗಳಲ್ಲಿ ಶವಸಂಸ್ಕಾರ, ಸಾಮಾನ್ಯವಾಗಿ ಬಳಕೆಯಲ್ಲಿರುವ ಪದ್ಧತಿಗಳಿಗಿಂತ ತೀರಾ ಭಿನ್ನ. ಅವರು ಸತ್ತವರ ದೇಹಗಳನ್ನು ಅದಕ್ಕಾಗಿಯೇ ನಿರ್ಮಿಸಲಾಗಿರುವ ಮೌನ ಮಂದಿರಗಳ ಮೇಲೆ ಹದ್ದುಗಳಿಗೆ ಆಹಾರವಾಗಿ ಇಟ್ಟುಬಿಡುತ್ತಾರೆ. ಸತ್ತವರ ದೇಹ ಪವಿತ್ರವಾದ ನೆಲ, ಜಲ, ಅಗ್ನಿಗಳನ್ನು ಸೋಕಬಾರದೆಂಬುದು ಅವರ ಅಭಿಪ್ರಾಯ. ಅಲ್ಲದೆ ಶವವೂ ಯಾವ ಉಪಯೋಗಕ್ಕಾದರೂ ಒದಗಬೇಕೆಂಬುದು ಅವರ ಅಪೇಕ್ಷೆ.

ಮುಸಲ್ಮಾನರಲ್ಲಿ ಶವಸಂಸ್ಕಾರ ವಿಧಿಗಳು ಸರಳ. ಶವವನ್ನು ಮರ ವಣಿಗೆಯಲ್ಲಿ ಕೊಂಡೊಯ್ದು ಸಮಾಧಿಮಾಡಿ ಗೋರಿ ಕಟ್ಟುತ್ತಾರೆ.

ದಕ್ಷಿಣ ಆಫ್ರಿಕದ ಹಾಟೆನ್‌ಟಾಟ್ಸರಲ್ಲಿ ಸತ್ತವರನ್ನು ಕುಳಿತಿರುವ ಭಂಗಿಯಲ್ಲಿ ಸಮಾಧಿಸ್ಥಳಗಳಲ್ಲಿ ಗುಂಪಿನ ಹಿರಿಯ ಆರಿಸಿದ ಜಾಗದಲ್ಲಿ ಹೂಳುತ್ತಾರೆ. ಸತ್ತವನು ಬದುಕಿರುವವರಿಗೆ ಒಳ್ಳೆಯದನ್ನಾಗಲಿ ಕೆಟ್ಟದ್ದನ್ನಾಗಲೀ ಮಾಡಬಲ್ಲನೆಂಬ ನಂಬಿಕೆಯಿಂದ, ಗೋರಿಗಳನ್ನು ಬಹಳ ಮರ್ಯಾದೆಯಿಂದ ಕಾಣುತ್ತಾರೆ.

ಪಶ್ಚಿಮ ಆಫ್ರಿಕದಲ್ಲಿರುವ ಅಶಂತಿ ಜನ ಸತ್ತವನು ಸ್ವರ್ಗ ಸೇರಲು ಐದು ದಿನ ಬೆಟ್ಟಹತ್ತಬೇಕೆಂದು ಹೇಳುತ್ತಾರೆ. ಯಾರಾದರೂ ಸತ್ತ ಕೂಡಲೆ ಹಳ್ಳಿಯ ಹಿರಿಯನಿಗೆ ಸುದ್ದಿ ಮುಟ್ಟುತ್ತದೆ. ಶವಸಂಸ್ಕಾರದ ಸಮಯದಲ್ಲಿ ಆತ ಹಾಜರಿರಲೇಬೇಕು. ಶೋಕಿಸುವವರು ಹಣೆಗೆ, ತೋಳಿನ ಮೇಲು ಭಾಗಕ್ಕೆ ಕೆಮ್ಮಣ್ಣು ಹಚ್ಚಿಕೊಂಡು ತುಕ್ಕು ಬಣ್ಣದ ಬಟ್ಟೆಗಳನ್ನುಟ್ಟು ಐದು ದಿನ ಉಪವಾಸ ಮಾಡುತ್ತಾರೆ. ಶವಸಂಸ್ಕಾರಕ್ಕೆ ಮೊದಲು, ಶವಸಂಸ್ಕಾರದ ಸಮಯದಲ್ಲಿ ಮತ್ತು ಅನಂತರ ಶೋಕಗೀತೆಗಳನ್ನು ಹಾಡುತ್ತಾರೆ. ಈಚೀಚೆಗೆ ಶವದ ಪೆಟ್ಟಿಗೆಯನ್ನು ಉಪಯೋಗಿಸಿದರೂ ಶವವನ್ನು ಚಾಪೆಯಲ್ಲಿ ಸುತ್ತುವುದೇ ಸಾಧಾರಣ. ಮೂರು ದಿನವಾದ ಮೇಲೆ ಶವವನ್ನು ಸಮಾಧಿಸ್ಥಳದಲ್ಲಿ ಮಣ್ಣುಮಾಡುತ್ತಾರೆ. ಅಲ್ಲಿರುವವರೆಲ್ಲ ಸ್ವಲ್ಪ ದ್ರಾಕ್ಷಾರಸವನ್ನು ಕುಡಿದು, ಸ್ವಲ್ಪ ದ್ರಾಕ್ಷಾರಸವನ್ನು ನೆಲದ ಮೇಲೂ ಚೆಲ್ಲುತ್ತಾರೆ.

ಅಮೇರಿಕದ ಇಂಡಿಯನರಲ್ಲಿ ವಿವಿಧ ಶವಸಂಸ್ಕಾರ ವಿಧಾನಗಳಿವೆ. ಡಕೋಟ ಪ್ರಾಂತದ ಇಂಡಿಯನರು ನೆಲದಿಂದ ಎತ್ತರದಲ್ಲಿರುವ ಮರದ ವೇದಿಕೆಯ ಮೇಲೆ ಸತ್ತವರ ದೇಹವನ್ನು ಒಂದು ವರ್ಷಕಾಲ ಇಟ್ಟಿದ್ದು ಅನಂತರ ಅದನ್ನು ತೆಗೆದು ಹೂಳುತ್ತಾರೆ.

ಇತ್ತೀಚಿನವರೆಗೆ ಕ್ರೈಸ್ತ ಶೋಕತಪ್ತರು ಒಂದು ನಿರ್ದಿಷ್ಟ ಅವಧಿಯವರೆಗೆ ಯಾವಾಗಲೂ ಕಪ್ಪುಬಟ್ಟೆಗಳನ್ನು ಧರಿಸುತ್ತಿದ್ದರು. ಇದು ಕ್ರೈಸ್ತನ ಕಾಲಕ್ಕೂ ಹಿಂದಿನಿಂದ ಬಂದ ಪದ್ಧತಿ. ಕಪ್ಪುಬಟ್ಟೆಗಳು ಸತ್ತವನ ಬಂಧುಬಳಗವನ್ನು ಮುಚ್ಚಿಬಿಡುವುದರಿಂದ ಸತ್ತವನ ಆತ್ಮ ಅವರನ್ನು ಗುರುತಿಸಿ ಪೀಡಿಸಲಾರದು ಎಂಬುದೇ ಕಪ್ಪುಬಟ್ಟೆಗಳನ್ನು ಉಡುವುದರ ಹಿಂದಿನ ಸಂಕೇತ. ಈಗ ಕಪ್ಪು ದುಃಖಸೂಚಕ ಎಂದು ಅದನ್ನು ಬಳಸುತ್ತಾರೆ.

ಕ್ರೈಸ್ತಧರ್ಮವಿರುವ ದೇಶಗಳಲ್ಲಿ ಶವವನ್ನು ಮರದ ಶವದ ಪೆಟ್ಟಿಗೆಯಲ್ಲಿಟ್ಟು ಸಮಾಧಿ ಮಾಡುತ್ತಾರೆ. ಇಗರ್ಜಿಯಲ್ಲೂ ಸ್ಮಶಾನದಲ್ಲೂ ಪ್ರಾರ್ಥನಾ ವಿಧಿಗಳಾಗುತ್ತವೆ.

ಯೆಹೂದ್ಯರಲ್ಲೂ ಸುಡುವುದು ನಿಷಿದ್ಧ. ಒಂದು ವಾರ ಕಾಲ ಶೋಕವನ್ನಾಚರಿಸುತ್ತಾರೆ.

ಸತ್ತವರ ಚೇತನಗಳು ಪುನಃ ಬಂದು ತಮ್ಮ ಜೀವನವನ್ನು ಅಂದಗೆಡಿಸಬಹುದೆಂದು ಭಾವಿಸಿ ಕೆಲವರು ವಿಶಿಷ್ಟ ಕ್ರಮ ಅನುಸರಿಸುತ್ತಾರೆ. ಶವಸಂಸ್ಕಾರವನ್ನು ಅವರು ಮಾಡುವುದು ರಾತ್ರಿ ಸಮಯದಲ್ಲಿ. ಇದರಿಂದ ಕತ್ತಲೆಯಲ್ಲಿ ದಾರಿಕಾಣದಂತಾಗಿ ಆ ಚೇತನಗಳು ತಿರುಗಿ ಬರುವುದಿಲ್ಲ ಎಂದು ಅವರ ನಂಬಿಕೆ. ಕೆಲವು ದೇಶಗಳಲ್ಲಿ ಮನೆಯ ಬಾಗಿಲು ತೆರೆದು ಹೆಣಗಳನ್ನು ಒಯ್ಯುವುದಿಲ್ಲ. ಅದರ ಬದಲು ಗೋಡೆಯಲ್ಲಿ ದುಂಡಗೆ ಕೊರೆಯುತ್ತಾರೆ. ಹೆಣ ಹೊರಗೆ ತೆಗೆದ ತಕ್ಷಣ, ಆ ಗೋಡೆಯನ್ನು ಮುಚ್ಚಿಬಿಡುತ್ತಾರೆ. ಕೆಲವು ದೇಶಗಳಲ್ಲಿ ಹೆಣಗಳ ಕಾಲುಗಳನ್ನು ಮಡಿಸಿ ಒಯ್ಯುತ್ತಾರೆ. ಇದರಿಂದ ಚೇತನಗಳು ತಿರುಗಿ ಬರಲು ಶಕ್ಯವಾಗುವುದಿಲ್ಲ ಎಂದು ನಂಬಿಕೆ. ಸ್ವೀಡನಿನಲ್ಲಿ ಮನೆಯ ಬಾಗಿಲಿನೆದುರು ಬೀಜಗಳನ್ನು ಚೆಲ್ಲುತ್ತಾರೆ; ಅವುಗಳನ್ನು ಎಣಿಸುತ್ತ ಚೇತನ ಮನೆಯೊಳಗೆ ಬರುವುದನ್ನು ಮರೆತುಬಿಡುತ್ತದಂತೆ. ಕೆಲವರು ಹೆಣಗಳನ್ನು ಜಲಾಶಯದ ಆಚೆಗೆ ಒಯ್ದು ಶವಸಂಸ್ಕಾರ ಮಾಡುತ್ತಾರೆ. ಚೇತನ ನೀರಮೇಲೆ ಓಡಾಡುವುದಿಲ್ಲವೆಂದು ಅವರ ವಿಶ್ವಾಸ.

ಜೀವನದ ಅನೇಕ ರೀತಿನೀತಿಗಳು ಬದಲಾದಂತೆ ಶವಸಂಸ್ಕಾರ ಪದ್ಧತಿಗಳೂ ಬದಲಾಗುತ್ತಿವೆ. ಈಗ ಶವವನ್ನು ರುದ್ರಭೂಮಿಗೆ ಕೊಂಡೊಯ್ಯುವ ವಾಹನಗಳಿವೆ. ಸ್ಥಳಾಭಾವದ ಕಾರಣದಿಂದಲೂ ಆರೋಗ್ಯದ ಕಾರಣದಿಂದಲೂ ವಿದ್ಯುತ್ ಯಂತ್ರದ ಮೂಲಕ ಶವವನ್ನು ದಹನ ಮಾಡುವ ಪದ್ಧತಿ ರೂಢಿಗೆ ಬರುತ್ತಿದೆ.

ಶವಸಂಸ್ಕಾರ ಹಾಗೂ ಉತ್ತರಕ್ರಿಯೆಗಳ ವಿಧಾನ ಸರಳವಾಗಿರಬಹುದು. ವಿಸ್ತಾರವಾಗಿರಬಹುದು. ಇಲ್ಲಿ ನೂರು ಬಗೆಯ ವೈವಿಧ್ಯವನ್ನು ನೋಡಬಹುದು. ಆದರೆ ಎಲ್ಲದರ ಉದ್ದೇಶ ಒಂದೇ. ಅದು ಸತ್ತವರಿಗೆ ಅರ್ಪಿಸುವ ಗೌರವ, ಶ್ರದ್ಧಾಂಜಲಿ.

## ಶ್ರವಣಬೆಳಗೊಳ

ಗೋಮಟೇಶ್ವರನ ಬೃಹತ್ ವಿಗ್ರಹ ಜಗತ್ಪ್ರಸಿದ್ಧ. ಕನ್ನಡಿಗರ ವಾಸ್ತುಶಿಲ್ಪದ ಕೌಶಲ ಈ ಮೂರ್ತಿಯನ್ನು ನಿರ್ಮಿಸುವುದರಲ್ಲಿ ಸ್ಪಷ್ಟವಾಗಿ ಅರಳಿದೆ. ಈ ಗೋಮಟೇಶ್ವರನ ಮೂರ್ತಿ ಮೈಸೂರು ರಾಜ್ಯದ ಹಾಸನ ಜಿಲ್ಲೆಯ ಶ್ರವಣಬೆಳಗೊಳದಲ್ಲಿದೆ. ಇದು ಜೈನರಿಗೆ ಅತ್ಯಂತ ಪವಿತ್ರವಾದ ಸ್ಥಳ. ಗೋಮಟೇಶ್ವರನ ಮಸ್ತಕಾಭಿಷೇಕ ಪ್ರತಿ ಹನ್ನೆರಡು ವರ್ಷಗಳಿಗೊಮ್ಮೆ ನಡೆಯುತ್ತದೆ. ಆಗ ನಾನಾ ಭಾಗಗಳಲ್ಲಿರುವ ಜೈನರು ಶ್ರವಣಬೆಳಗೊಳಕ್ಕೆ ಬರುತ್ತಾರೆ.

ಕಾಯಿಲೆಗಳು ಬರಬಹುದು, ಹುಚ್ಚೇ ಹಿಡಿಯಬಹುದು. ಶಾಂತಿ ಇಲ್ಲದ ರಾಷ್ಟ್ರ ಅಚ್ಚುಕಟ್ಟಾದ ಯಾವ ಕೆಲಸವನ್ನೂ ಮಾಡಲಾರದು. ಹೊರಗಿನ ಶತ್ರುಗಳಿಂದ ತನ್ನನ್ನು ರಕ್ಷಿಸಿಕೊಳ್ಳಲಾರದು, ಸಾಹಿತ್ಯ ಕಲೆಗಳನ್ನು ಬೆಳೆಸಲಾರದು. ಜನರು ನೆಮ್ಮದಿಯಿಲ್ಲದೆ ಯಾವ ಗುರಿಯನ್ನೂ ಮುಟ್ಟಲಾರರು.

ಶಾಂತಿ–ಅಶಾಂತಿಗಳಿಗೆ ಮನಸ್ಸು ಬಹುಮಟ್ಟಿಗೆ ಮೂಲ. ಎಷ್ಟು ಕಷ್ಟ ದ್ವೇಷಗಳನ್ನು ಎದುರಿಸಿದರೂ ಬುದ್ಧ, ಕ್ರಿಸ್ತ, ಗಾಂಧಿಜಿಯವರಂಥ ಲೋಕ ಗುರುಗಳದು ಎಷ್ಟು ಶಾಂತವಾದ ಮುಖಮುದ್ರೆ! ಅವರು ತಮ್ಮ ಸ್ವಭಾವದಲ್ಲಿ ಸೇರಿದ್ದ ಸ್ವಾರ್ಥ, ಕೋಪ, ಹೊಟ್ಟೆಕಿಚ್ಚು, ಆಸೆ, ಇವುಗಳನ್ನು ಗೆದ್ದರು. ಗೆಲವು ಸೋಲುಗಳನ್ನು ಸಮವಾಗಿ ಕಾಣುವ ಸಂಯಮವನ್ನು ಪಡೆದರು. ಯುದ್ಧಗಳು ಪ್ರಾರಂಭವಾಗುವುದೂ ಮನುಷ್ಯರ ಮನಸ್ಸಿನಲ್ಲೇ. ಒಂದು ದೇಶದವರಿಗೆ ಇನ್ನೊಂದು ದೇಶದವರ ಬಗೆಗೆ ಅನುಮಾನ ಇಲ್ಲವೆ ಅಸೂಯೆ–ಇವೇ ಯುದ್ಧದ ಬೀಜಗಳು. ಸರ್ವ ಸೋದರಭಾವ, ಅಹಿಂಸೆ, ಅನುಕಂಪ, ಈ ಗುಣಗಳನ್ನು ಬೆಳೆಸಿದ ಬೆಳೆಸಿಕೊಂಡ ವ್ಯಕ್ತಿಗೆ, ಸಮಾಜಕ್ಕೆ, ರಾಷ್ಟ್ರಕ್ಕೆ, ಜಗತ್ತಿಗೆ ಶಾಂತಿ ಮತ್ತು ಕಲ್ಯಾಣ ಸಹಜ.

ಶಾಂತಿ ಇಲ್ಲದೆ ಹೋಗಲು ಮುಖ್ಯ ಕಾರಣ ಮಾನಸಿಕ ಹಾಗೂ ದೈಹಿಕ ಹಿಂಸೆ. ಅಹಿಂಸೆಯನ್ನು ಪಾಲಿಸಿದರೆ ಶಾಂತಿ ನೆಲಸಲು ಸಾಧ್ಯವಾಗುತ್ತದೆ. ಸತ್ಯ, ಅಹಿಂಸೆಗಳನ್ನು ಪಾಲಿಸುವುದರಿಂದ, ತ್ಯಾಗ ಜೀವನವನ್ನು ನಡೆಸುವುದರಿಂದ, ಪರೋಪಕಾರ, ದಾನ, ದಯೆ ಮೊದಲಾದ ಒಳ್ಳೆಯ ಗುಣಗಳನ್ನು ಬೆಳೆಸಿಕೊಳ್ಳುವುದರಿಂದ, ಒಳ್ಳೆಯ ಸಾಹಿತ್ಯದ ಅಧ್ಯಯನದಿಂದ, ಸುಸಂಸ್ಕೃತರ ಪ್ರಭಾವದಿಂದ, ಲಲಿತಕಲೆಗಳಲ್ಲಿ ತಲ್ಲೀನರಾಗುವುದರಿಂದ ಶಾಂತಿಯನ್ನು ನಾವು ಪಡೆದು ಇತರರಲ್ಲೂ ಉಂಟು ಮಾಡಲು ಸಾಧ್ಯವಾಗುತ್ತದೆ.

ಪ್ರಾಚೀನ ಭಾರತದಲ್ಲೂ ಪ್ರಪಂಚದ ಇತರ ಭಾಗಗಳಲ್ಲೂ ಪಟ್ಟಣಗಳಲ್ಲಿ ಶಾಂತಿಸಿಗಲಾರದೆಂದು ದೂರದ ಕಾಡುಗಳಲ್ಲಿ ಆಶ್ರಮಗಳನ್ನೂ ಮಠಗಳನ್ನೂ ಕಟ್ಟಿಕೊಂಡು ಜ್ಞಾನಿಗಳು ವಾಸಮಾಡುತ್ತಿದ್ದರು. ಅಹಿಂಸೆಯನ್ನು ವ್ರತವಾಗಿ ಅಲ್ಲಿ ಪಾಲಿಸುತ್ತಿದ್ದರು. ಧ್ಯಾನದಲ್ಲಿ ನಿರತರಾಗಿರುತ್ತಿದ್ದರು..

ಮಾನವಕುಲವೆಲ್ಲ ಒಂದು ಕುಟುಂಬ ಎಂಬ ಭಾವನೆ, ತಿಳಿವಳಿಕೆ ಇಲ್ಲದೆಹೋಗಿ, ಪ್ರಪಂಚದಲ್ಲಿ ಅಶಾಂತಿಯುಂಟಾಗಿದೆ. ಈ ಅಶಾಂತಿಯಿಂದ ಮಾನವಕುಲವೇ ಅಳಿಸಿಹೋಗುವುದು ಅಸಂಭವವಲ್ಲ. ಹೀಗಾಗದಿರುವಂತೆ, ಮಾನವ ಜಗತ್ತಿನ ಶಾಂತಿಗಾಗಿ ಪ್ರಯತ್ನಿಸಬೇಕಾಗಿದೆ. ರಾಷ್ಟ್ರಸಂಘ, ವಿಶ್ವಸಂಸ್ಥೆ ಮೊದಲಾದುವು ಯುದ್ಧವನ್ನು ಕೊನೆಗಾಣಿಸಲೆಂದೇ ಸ್ಥಾಪಿಸಿದ ಸಂಸ್ಥೆಗಳು. ಪ್ರಪಂಚದ ಎಲ್ಲ ಧರ್ಮಗಳ ಪವಿತ್ರ ಗ್ರಂಥಗಳೂ ಶಾಂತಿಮಾರ್ಗದಲ್ಲಿ ನಡೆಯಲು ದಾರಿದೀಪಗಳಾಗಿವೆ.

ಮಾನವನಿಗೆ ಅನ್ನ, ನೀರು, ಗಾಳಿಗಳಷ್ಟೇ ಶಾಂತಿ ಅವಶ್ಯ.

ಮೊದಲನೆಯ ಮಹಾಯುದ್ಧದ ಕಾಲದಲ್ಲಿ ಕೆಲವರು, ಯುದ್ಧ ಸಲ್ಲದು. ಯಾವ ಪರಿಸ್ಥಿತಿಯಲ್ಲೇ ಆಗಲಿ ಯಾವ ರಾಜ್ಯವಾಗಲಿ ಯಾವ ವ್ಯಕ್ತಿಯೇ ಆಗಲಿ ಯುದ್ಧದಲ್ಲಿ ಭಾಗವಹಿಸಕೂಡದು ಎಂದರು. ಕಡ್ಡಾಯ ಸೈನಿಕ ಸೇವೆಯನ್ನು ವಿರೋಧಿಸಿದರು. ಇವರನ್ನು 'ಶಾಂತಿವಾದಿಗಳು' ಎಂದು ಕರೆಯಲಾಯಿತು. ಶಾಂತಿವಾದಿಗಳು ರಾಷ್ಟ್ರಗಳ ನಡುವೆ ಶಾಂತಿಯನ್ನು ಸ್ಥಾಪಿಸಬೇಕೆಂದೂ ವಿವಾದಗಳನ್ನು ಶಾಂತಿಯುತ ಮಧ್ಯಸ್ಥಿಕೆಯ ಮೂಲಕ [illegible] ಶಸ್ತ್ರಾಸ್ತ್ರಗಳ ಬಳಕೆ ಕಡಮೆಮಾಡಬೇಕೆಂದೂ ಅಂತರರಾಷ್ಟ್ರೀಯ ನ್ಯಾಯಾಲಯಗಳನ್ನು ಸ್ಥಾಪಿಸಬೇಕೆಂದೂ ಬಯಸಿದರು.

ಮೊದಲನೆಯ ಮಹಾಯುದ್ಧದ ಕಾಲದಲ್ಲಿ [illegible] ಸುಪ್ರಸಿದ್ಧ ಅರ್ಥಶಾಸ್ತ್ರಜ್ಞ [illegible] ಜೋಡ್ ಇವರು [illegible] ಗಳಾಗಿದ್ದರು. ಇವರು ಯುದ್ಧ ಮಾಡುವುದು [illegible] ವೇಕ. [illegible] ಎಂದರು. ಎರಡನೆಯ ಮಹಾಯುದ್ಧದ [illegible] ಈ ಬಗೆಯ ಬೌದ್ಧಿಕ ಶಾಂತಿವಾದ ಬೆಳೆಯಿತು. ಯುದ್ಧವೆನ್ನುವುದು ವಿವೇಕವಿಲ್ಲದವರು ಮಾಡುವ ತಪ್ಪು ಎಂದು ಹೇಳುವ ಶಾಂತಿವಾದಿಗಳ ಸಂಖ್ಯೆ ಹೆಚ್ಚಿತು. ನೂರಾರು ವರ್ಷಗಳಲ್ಲಿ ಬೆಳೆದ ನಗರಗಳು, ಕೈಗಾರಿಕೆ ಮಣ್ಣುಗೂಡುತ್ತವೆ. ಬರಬರುತ್ತ ಯುದ್ಧದ ಶಸ್ತ್ರಾಸ್ತ್ರಗಳು ಮಾನವ ಕೋಟಿಯನ್ನೇ ನಾಶಮಾಡುವಷ್ಟು ಭಯಂಕರವಾಗಿವೆ ಎಂದು ಇವರು ಎಚ್ಚರಿಕೆ ಕೊಡುತ್ತಾರೆ.

ಶಾಂತಿವಾದ ಎಷ್ಟರಮಟ್ಟಿಗೆ ಯಶಸ್ವಿಯಾಗಬಲ್ಲುದು ಎಂದು ಹೇಳಲು ಸಾಧ್ಯವಿಲ್ಲವಾದರೂ ಗೌತಮ ಬುದ್ಧ, ಯೇಸು ಕ್ರಿಸ್ತ, ಮಹಾತ್ಮ ಗಾಂಧಿ ಇವರು ಶಾಂತಿವಾದದ ಆಧಾರಸ್ತಂಭಗಳಾಗಿ ವಿಶ್ವದ ಶಾಂತಿವಾದಿಗಳೆಲ್ಲರ ಸ್ಫೂರ್ತಿ ಚೇತನಗಳು.

## ಶಾಸನ

ಜಯತಿ ಶ್ರೀ ಪರಿಷ್ವಂಗ ಶ್ಯಾರ್ಙ್ಗವಿ (ವ್ಯಾನತಿ) ರಚ್ಯುತಃ
ದಾನವಾಕ್ಷೋರ್ಯುಗಾಂತಾಗ್ನಿ (ಶಿಷ್ಟಾನಾನ್ತು) ಸುದರ್ಶನಃ

–ದಾನವರ ಕಣ್ಣುಗಳಿಗೆ ಪ್ರಳಯಕಾಲದ ಅಗ್ನಿಯಂತೆಯೂ ಸತ್ಪುರುಷರಿಗೆ ಸುದರ್ಶನವಾಗಿ (ಸುದರ್ಶನ ಚಕ್ರವಾಗಿ)ಯೂ ಲಕ್ಷ್ಮಿಯಿಂದ ಆಲಿಂಗಿತನಾದ, ಶ್ಯಾರ್ಙ್ಗವೆಂಬ ಧನುಸ್ಸನ್ನು ಹಿಡಿದಿರುವ ಅಚ್ಯುತನಿಗೆ ವಿಜಯ.

ಸುಮಾರು ಒಂದು ಸಾವಿರದ ನಾನೂರು ವರ್ಷಗಳ ಹಿಂದೆ ಕನ್ನಡ ನಾಡಿನಲ್ಲಿ ಮಾಡಿದ ಪ್ರಾರ್ಥನೆ ಶತಮಾನಗಳನ್ನು ದಾಟಿ ನಮ್ಮ ಕಿವಿಗೆ ಬೀಳುತ್ತದೆ. ಇದು ಕನ್ನಡನಾಡಿನಲ್ಲಿ ದೊರೆತಿರುವ ಮೊಟ್ಟಮೊದಲನೆಯ ಶಾಸನದ (ಹಲ್ಮಿಡಿ ಶಾಸನ, ಸುಮಾರು 450) ಪ್ರಾರಂಭದ ಪ್ರಾರ್ಥನಾ ಪದ್ಯ.

ಶಾಸನ ಎಂಬ ಶಬ್ದ ಸಂಸ್ಕೃತದ 'ಶಾಸ್' ಧಾತುವಿನಿಂದ ಉತ್ಪತ್ತಿಯಾಗಿದೆ. ಅಂದರೆ, ಘೋಷಣೆಯನ್ನು ಹೊರಡಿಸು ಎಂದರ್ಥ. ರಾಜ ಕೊಟ್ಟ ದಾನ ಧರ್ಮಗಳನ್ನು ಘೋಷಿಸುವುದಕ್ಕಾಗಿ ಅವನ ಅಪ್ಪಣೆಯ ಮೇರೆಗೆ ಇವು ರಚಿತವಾಗಿರಬೇಕು. ವೇದಕಾಲದಲ್ಲೂ ಧರ್ಮಶಾಸನಗಳನ್ನು ಬರೆದಿಡುವ ಪದ್ಧತಿ ಪ್ರಚುರವಾಗಿದ್ದಿರಬೇಕೆಂದು ತೋರುತ್ತದೆ. ಅಶೋಕನ ಕಾಲದಲ್ಲಿ ಶಾಸನಗಳು ದಾನಪತ್ರವಾಗಿ ಮಾತ್ರ ಉಳಿಯದೆ ಧರ್ಮಬೋಧಕಗಳಾಗಿಯೂ ಪರಿಣಮಿಸಿದುವು. ಧರ್ಮವೇ ಶಾಸನಗಳ ಹುಟ್ಟಿಗೆ ಕಾರಣ ಎಂಬ ಮಾತೂ ಇದೆ.

ಶಾಸನಗಳನ್ನು ಶಿಲಾಶಾಸನ ಮತ್ತು ತಾಮ್ರಶಾಸನ ಎಂದು ಎರಡು ಬಗೆಯಾಗಿ ವಿಭಾಗಿಸಬಹುದು.

ಶಿಲಾಶಾಸನಗಳು ಹಿಂದಿನಿಂದಲೂ ಪ್ರಚಲಿತವಾಗಿವೆ. [illegible] ಉಳಿಯಬೇಕೆಂಬ ದೃಷ್ಟಿಯಿಂದ ಗುಡ್ಡ, ಬೆಟ್ಟ, ಕಲ್ಲುಕಂಬ ಮತ್ತು [illegible] ಫಲಕಗಳ ಮೇಲೆ ಶಾಸನಗಳನ್ನು ಕೆತ್ತಿಸುತ್ತಿದ್ದರು. [illegible] ಬರೆದಿಟ್ಟ ಅಕ್ಷರ, ನೀರಲ್ಲಿ ಬರೆದ ಅಕ್ಷರವಲ್ಲ ಎಂಬ ವಾಕ್ಯವನ್ನು ಒಂದು ಶಿಲಾಶಾಸನದಲ್ಲಿ ಇದೇ ಅರ್ಥದಲ್ಲಿ ಉಪಯೋಗಿಸಿದೆ.

## ಶಿಕ್ಷೆ, ದಂಡನೆ

ತಪ್ಪು ಮಾಡಿದವರನ್ನು ಶಿಕ್ಷಿಸುತ್ತಾರೆ. ಮನೆಯಲ್ಲೊ ಶಾಲೆಯಲ್ಲೊ ಚಿಕ್ಕವರು ಗಲಾಟೆ ಮಾಡಿದರೆ ಗುರುಹಿರಿಯರು ಶಿಕ್ಷೆ ವಿಧಿಸುತ್ತಾರೆ. ಇದೇ ರೀತಿ ಕಾನೂನನ್ನು ಉಲ್ಲಂಘಿಸುವ ವ್ಯಕ್ತಿಗಳನ್ನು ಶಿಕ್ಷಿಸುವ [illegible] ಸಮಾಜದಲ್ಲಿ ಜಾರಿಯಲ್ಲಿದೆ. ಅಪರಾಧಿಗಳಿಗೆ ಶಿಕ್ಷೆ ಇರದಿದ್ದರೆ ಸಮಾಜದ[illegible] ಶಾಂತಿ ಮತ್ತು ಭದ್ರತೆ ಇರುವುದಿಲ್ಲ.

ಸಾಧಾರಣವಾಗಿ ಮೂರು ಬಗೆಯ ಶಿಕ್ಷೆಗಳಿವೆ : ದಂಡ ತೆರುವುದು. ಸೆರೆಮನೆ ವಾಸ ಮತ್ತು ಮರಣದಂಡನೆ.

ಅಪರಾಧಿಯನ್ನು ಶಿಕ್ಷಿಸುವ ಉದ್ದೇಶವೇನು ? ಮೂರು ಉದ್ದೇಶಗಳನ್ನು ಗುರುತಿಸಬಹುದು. 1 ಪ್ರತೀಕಾರ ಕೈಗೊಳ್ಳುವುದು. ಮುಯ್ಯಿಗೆ ಮುಯ್ಯಿ ತೀರಿಸುವ ಹಾಗೆ ಅಪರಾಧ ಮಾಡಿದ ವ್ಯಕ್ತಿಯನ್ನು ಶಿಕ್ಷಿಸುವುದು. 2 ಅಪರಾಧಿಗಳಿಗೆ ಕಠಿಣ ಶಿಕ್ಷೆ ವಿಧಿಸಿ ಇತರರಿಗೆ ಎಚ್ಚರಿಕೆ ನೀಡುವುದು. 3 ಅಪರಾಧಿಗಳನ್ನು ಶಿಕ್ಷಿಸುವುದರ ಮೂಲಕ ಅವರು ಮತ್ತೆ ತಪ್ಪುದಾರಿಗೆ ಇಳಿಯದೆ ಸಂಭಾವಿತರಾಗಿ ಬಾಳಲು ಅವಕಾಶ ಒದಗಿಸುವುದು. ಈಗ ಅನೇಕ ರಾಷ್ಟ್ರಗಳಲ್ಲಿ ಜೈಲಿನಿಂದ ಹೊರ ಬಂದ ಬಳಿಕ ಗೌರವಸ್ಥ ಜೀವನ ನಡೆಸಲು ಬೇಕಾದ ತರಬೇತನ್ನು ಜೈಲಿನಲ್ಲಿ ಕೊಡುತ್ತಾರೆ. ಓದುಬರಹ ಕಲಿಸುವುದರ ಜೊತೆಗೆ ಕುಶಲಕಲೆಗಳಲ್ಲಿಯೂ ಶಿಕ್ಷಣ ನೀಡುತ್ತಾರೆ.

ಅಪರಾಧಕ್ಕೆ ಶಿಕ್ಷೆ ವಿಧಿಸುವುದು ಇಂದು ನಿನ್ನೆಯದಲ್ಲ, ಮಾನವನಷ್ಟೇ ಹಳೆತು ಅದು. ಕಾನೂನುಬದ್ಧವಾದದ್ದು. ನಾಗರಿಕತೆ ಬೆಳೆದ ಮೇಲೆ. ಅದಕ್ಕೆ ಮೊದಲೂ ಮಾನವ, ತಪ್ಪಿತಸ್ಥರನ್ನು ಶಿಕ್ಷಿಸುತ್ತಿದ್ದ. ತಲೆ ಕತ್ತರಿಸುವುದು, ಸುಡುವುದು. ಬದುಕಿದ್ದಂತೆ ಶವಪೆಟ್ಟಿಗೆಯಲ್ಲಿಟ್ಟು ಹೂಳುವುದು ಇವು ಪ್ರಾಚೀನ ಈಜಿಪ್ಟಿನಲ್ಲಿ ವಿಧಿಸುತ್ತಿದ್ದ ಕೆಲವು ಶಿಕ್ಷೆಗಳು. ಬ್ಯಾಬಿಲೋನಿಯದಲ್ಲಿ ಮಂತ್ರಗಾರ ಎಂಬ ಆರೋಪಕ್ಕೆ ಒಳಗಾದರೆ ಆ ಮನುಷ್ಯ ಯೂಫ್ರೇಟಿಸ್ ನದಿಯಲ್ಲಿ ಹಾರಬೇಕಾಗಿತ್ತು. ಅವನು ಮುಳುಗಿದರೆ, ಅವನ ಆಸ್ತಿ ಆತನ ಮೇಲೆ ದೂರು ಕೊಟ್ಟವನಿಗೆ. ಉಳಿದರೆ ಅಪಾದನೆ ಮಾಡಿದವನ ಆಸ್ತಿ ಆರೋಪಿಗೆ. ತಂದೆಯನ್ನು ಹೊಡೆದವನ ಕೈ ಕತ್ತರಿಸುತ್ತಿದ್ದರು. ಶಸ್ತ್ರ ಚಿಕಿತ್ಸೆಯಲ್ಲಿ ರೋಗಿ ಸತ್ತರೆ [illegible] ಕತ್ತರಿ[illegible]. [illegible]ಪರ್ಷಿಯದಲ್ಲಿ ಕಳ್ಳತನದಂಥ ಅಪರಾಧಕ್ಕೆ ಕಣ್ಣು ಕೀಳಿಸುವುದು, ಕೈ ಕತ್ತರಿಸುವುದು ಶಿಕ್ಷೆ. ಹದಿನೈದನೆಯ ಶತಮಾನದಲ್ಲಿ ಯೂರೊಪಿನ ಹಲವು ದೇಶಗಳಲ್ಲಿ ಬೇರೆ ಮತಕ್ಕೆ ಸೇರಿದವನ ಅಥವಾ ಮಂತ್ರವಾದಿಯ ಕರುಳನ್ನು ಆತ ಬದುಕಿದ್ದಾಗಲೇ ಬಗೆದು ತೆಗೆಯುವುದು [illegible]ವಾಗಿರಲಿಲ್ಲ. ಟಿಪ್ಪುಸುಲ್ತಾನನ ಕಾಲದಲ್ಲಿ ಅಪರಾಧಿಗಳನ್ನು ಪ್ರಪಾತಕ್ಕೆ ತಳ್ಳುತ್ತಿದ್ದ ಸ್ಥಳವನ್ನು ನಂದಿಬೆಟ್ಟದಲ್ಲಿ ಈಗಲೂ ಕಾಣಬಹುದು.

ಅಪರಾಧಕ್ಕೆ ಶಿಕ್ಷೆ ಇದೆ ಎನ್ನುವ ವಿಚಾರ ಪುರಾಣಕಾಲದಲ್ಲಿಯೂ ಇತ್ತು. ದೇವರ ಆಜ್ಞೆಯನ್ನು ಉಲ್ಲಂಘಿಸಿದ ಮನುಷ್ಯ ಸತ್ತಮೇಲೆ ನರಕ ಸೇರಬೇಕಾದೀತು ಎಂಬುದು ಹಲವು ಧರ್ಮಗಳ ಅನುಯಾಯಿಗಳ ನಂಬಿಕೆ. ನರಕದಲ್ಲಿ ದೊರೆಯುವ ಶಿಕ್ಷೆಗಳ ಬಗೆಗೆ ನೂರಾರು ಕಥೆಗಳು ಹುಟ್ಟಿಕೊಂಡಿವೆ.

ಜ್ಯೂಸ್ (ಸೃಷ್ಟಿಕರ್ತ)ನ ಕೋಪಕ್ಕೆ ಒಳಗಾದ ಸಿಸಿಫಸ್ ಎಂಬ ದೊರೆ ಮರಣದ ಅನಂತರ ತನ್ನ ತಪ್ಪಿಗೆ ಶಿಕ್ಷೆ ಅನುಭವಿಸಲು ಒಂದು ದೊಡ್ಡ ಬಂಡೆಯನ್ನು ಎತ್ತರದ ಬೆಟ್ಟದ ತುದಿಗೆ ಒಯ್ಯಬೇಕಾಗಿತ್ತು. ಅವನು [illegible]

[illegible] ಭಾಗಗಳಲ್ಲಿ ನಡೆದುಕೊಂಡು ಬಂದಿದೆ. [illegible] ವಿಧಿಸಬೇಕೆಂಬ ತತ್ತ್ವವನ್ನು ಎಲ್ಲ ಕಾಲಗಳಲ್ಲಿಯೂ ಅನುಸರಿಸಲಿಲ್ಲ. ಹದಿನೆಂಟನೆಯ ಶತಮಾನದ [illegible]

[illegible] ವಿಧಿಸಿದ [illegible] ಅಪರಾಧಿಯ ಬಳಿಯಲ್ಲಿಲ್ಲದಿದ್ದರೆ ಒಂದು ನಿರ್ದಿಷ್ಟಕಾಲದವರೆಗೆ ಆತ ಸೆರೆಮನೆಯಲ್ಲಿರಬೇಕು. ಅಪರಾಧ ದೊಡ್ಡದಾದರೆ ದಂಡದ ಜೊತೆಗೆ ಸೆರೆಮನೆವಾಸವನ್ನೂ ಅನುಭವಿಸಬೇಕು.

[illegible] ಸೆರೆಮನೆವಾಸವೇ [illegible] ಅದರ ಬದಲು ಅಪರಾಧಿಗಳನ್ನು ಯೋಗ್ಯ[illegible] ಹೃದಯಪರಿವರ್ತನೆ ಮಾಡುವುದೇ ಲೇಸೆಂದು ಕೆಲವರ [illegible]

ಹಿಂದಿನ ಕಾಲದಲ್ಲಿ ಸೆರೆಮನೆಗಳು ವಾಸಕ್ಕೆ ಅಯೋಗ್ಯವಾಗಿದ್ದುವು. ಕೈದಿಗಳನ್ನು ಅಧಿಕಾರಿಗಳು ಅತ್ಯಂತ ಕ್ರೂರ ರೀತಿಯಿಂದ ನಡೆಸಿಕೊಳ್ಳುತ್ತಿದ್ದರು. ಈಗ ಸೆರೆಮನೆಯಲ್ಲಿ ಸಾಕಷ್ಟು ಸುಧಾರಣೆಗಳಾಗಿವೆ.

[illegible] ಶಿಕ್ಷೆಯನ್ನು ಇಷ್ಟಬಂದವರು ವಿಧಿಸುವಂತಿಲ್ಲ. ಚಿಕ್ಕ [illegible] ಅವರ ತಂದೆತಾಯಿ. ಪೋಷಕರು. ಉಪಾಧ್ಯಾಯರು ಮಿತಿಯರಿತು ಶಿಕ್ಷೆ ವಿಧಿಸಬಹುದು. ಪ್ರಾಪ್ತವಯಸ್ಕರು ಉದ್ಯೋಗದಲ್ಲಿ ತಪ್ಪು ಮಾಡಿದರೆ ಶಿಕ್ಷೆ ವಿಧಿಸುವ ಅಧಿಕಾರ ಮೇಲಿನವರಿಗಿರುತ್ತದೆ. ಅದರೆ ಶಿಕ್ಷೆ ವಿಧಿಸುವ ಮೊದಲು, ಅವರ ವಿವರಣೆ ಕೇಳಬೇಕು. ತಮ್ಮ ವಾದವನ್ನು ಮಂಡಿಸುವ ಅವಕಾಶವನ್ನು ಅವರಿಗೆ ನೀಡಬೇಕು. ಸರಿಯಾದ ಕ್ರಮ ಅನುಸರಿಸಿ. ಅವರು ತಪ್ಪು ಮಾಡಿದ್ದಾರೆ ಎಂದು ಸ್ಥಿರಪಡಿಸಿ. ಶಿಕ್ಷಿಸಬೇಕು.

ಬಹುಮಟ್ಟಿಗೆ ಅಪರಾಧಗಳಿಗೆ ಶಿಕ್ಷೆ ವಿಧಿಸುವ ಅಧಿಕಾರ ನ್ಯಾಯಾಲಯಗಳಿಗೆ ಮಾತ್ರ ಇರುತ್ತದೆ. ನ್ಯಾಯಾಧೀಶ ಸಮಾಜ ಗೊತ್ತುಪಡಿಸಿದ ಕ್ರಮವನ್ನು ಅನುಸರಿಸಿ, ಸಮಾಜ ಒಪ್ಪಿರುವ ಕಾನೂನಿನ ಪ್ರಕಾರ ವಿಚಾರಣೆ ನಡೆಸಿ. ಅಪರಾಧ ಸ್ಥಿರಪಟ್ಟರೆ ಶಿಕ್ಷೆ ವಿಧಿಸುತ್ತಾನೆ. ನ್ಯಾಯಾಧೀಶ ಸಮಾಜದ ಪರವಾಗಿ ಈ ಕೆಲಸ ಮಾಡುತ್ತಾನೆ. ಅನುದರಿಂದ ಈ ಅಧಿಕಾರವನ್ನು ಬೇರಾರೂ ಚಲಾಯಿಸುವಂತಿಲ್ಲ. ಮನೆಗೆ ಕಳ್ಳತನ ಮಾಡಲು ಬಂದು ಸಿಕ್ಕಿಬಿದ್ದವನನ್ನು ಮನೆಯವರೇ ದಂಡಿಸುವಂತಿಲ್ಲ

ಪೋಲೀಸರಿಗೆ ಒಪ್ಪಿಸಬೇಕು. ನ್ಯಾಯಾಧೀಶರು ವಿಚಾರಣೆ ಮಾಡಬೇಕು.

ಕಾನೂನು ನಿರ್ಧರಿಸಿದ ಕ್ರಮವನ್ನು ಪಾಲಿಸದೆ ಜನ ತಮ್ಮ ಮನಸ್ಸಿಗೆ ಬಂದಂತೆ ಶಿಕ್ಷೆ ವಿಧಿಸುವುದು ಪ್ರಜಾಪ್ರಭುತ್ವವಲ್ಲ. ದೊಂಬಿ ಪ್ರಭುತ್ವ.

## ಶಿಷ್ಟಕಾಲ

ಭಾರತ ಮತ್ತು ಜಪಾನ್ ತಂಡಗಳ ನಡುವೆ ಟೆನಿಸ್ ಪಂದ್ಯ ಜಪಾನಿನಲ್ಲಿ ನಡೆಯುತ್ತಿದೆ ಎಂದು ಭಾವಿಸೋಣ. ನಮಗೆ ಸಾಯಂಕಾಲ ಆಗುವ ಎಷ್ಟೋ ಮೊದಲೇ ಅಲ್ಲಿ ಕತ್ತಲಾಗಿ ಆಟ ಮುಗಿದಿರುತ್ತದೆ. ಇನ್ನು ಇಂಥ ಒಂದು ಪಂದ್ಯ ಇಂಗ್ಲೆಂಡಿನಲ್ಲಿ ನಡೆಯುತ್ತಿದ್ದರೆ ಅದರ ವೀಕ್ಷಕ ವಿವರಣೆ ಆಲಿಸಲು ನಾವು ಮಧ್ಯರಾತ್ರಿಯ ನಿದ್ರೆ ಕೆಡಬೇಕು. ಇದರ ಅರ್ಥ ಜಪಾನೀಯರು ನಡುಹಗಲು ಆಟ ನಿಲ್ಲಿಸುತ್ತಾರೆಂದಾಗಲಿ ಇಂಗ್ಲೆಂಡಿನವರು ಅರ್ಧರಾತ್ರಿಯಲ್ಲಿ ಆಟ ಆಡುತ್ತಾರೆಂದಾಗಲಿ ಅಲ್ಲ—ಜಪಾನಿನಲ್ಲಿ ಸೂರ್ಯೋದಯ ಅಸ್ತಮಾನಗಳು ನಮ್ಮ ದೇಶಕ್ಕಿಂತ ಮೊದಲೂ, ಇಂಗ್ಲೆಂಡಿನಲ್ಲಿ ನಮ್ಮ ದೇಶಕ್ಕಿಂತ ಹಿಂದೆಯೂ ಆಗುತ್ತವೆ ಎಂದು.

ಭೂಮಿ ಒಂದು ಗೋಳ. ಅದು ತನ್ನ ಸುತ್ತಲೂ ಪಶ್ಚಿಮದಿಂದ ಪೂರ್ವದಿಕ್ಕಿಗೆ ನಿರಂತರವಾಗಿ ಆವರ್ತಿಸುತ್ತದೆ. ಹೀಗಾಗಿ ಪೂರ್ವದಿಕ್ಕಿನ ದೇಶಗಳು ಪಶ್ಚಿಮ ದಿಕ್ಕಿನ ದೇಶಗಳಿಗಿಂತ ಮೊದಲೇ ನಿಶ್ಚಲವಾಗಿ ನಿಂತಿರುವ ಸೂರ್ಯನನ್ನು ಕಾಣುತ್ತವೆ. ಅಲ್ಲಿ ಬೆಳಗಾಗುವುದು, ಅದರಂತೆಯೇ ಸಂಜೆಯಾಗುವುದು, ಪಶ್ಚಿಮ ದೇಶಗಳಿಗಿಂತ ಮೊದಲು. ಆದ್ದರಿಂದ ನಮಗೆ ಹಗಲಾಗಿರುವಾಗ ಜಪಾನೀಯರಿಗೆ ಸಂಜೆ ಕವಿದಿರುತ್ತದೆ; ನಮ್ಮ ಮಧ್ಯರಾತ್ರಿ ಇಂಗ್ಲೆಂಡಿನವರ ಸಂಜೆ.

ಒಂದು ಸ್ಥಳದಲ್ಲಿ ಕಾಲ ನಿರ್ಣಯಿಸುವಾಗ ಅಂತಿಮವಾದ ಗಡಿಯಾರ ಸೂರ್ಯ. ಸೂರ್ಯೋದಯದಿಂದ ಅಸ್ತಮಾನದವರೆಗೆ ಅಲ್ಲಿ ಹಗಲು, ಉಳಿದ ವೇಳೆ ರಾತ್ರಿ. ಪ್ರತಿ ಸ್ಥಳದಲ್ಲಿಯೂ ಹೊಸ ದಿವಸ ಆರಂಭ ಮಧ್ಯರಾತ್ರಿ 12 ಗಂಟೆಗೆ (ಇದನ್ನು 24 ಗಂಟೆ ಎಂದೂ ಕರೆಯುವುದಿದೆ) ಎಂಬುದು ನಡೆದುಬಂದಿರುವ ಸಂಪ್ರದಾಯ. ಭಿನ್ನ ರೇಖಾಂಶ ವೃತ್ತಗಳ ಮೇಲಿರುವ ಯಾವ ಎರಡು ಸ್ಥಳಗಳಲ್ಲಿಯೂ ಏಕಕಾಲದಲ್ಲಿ ಮಧ್ಯರಾತ್ರಿಗಳು ಸಂಭವಿಸವು. ಎಂದರೆ, ಬೆಂಗಳೂರಿನಲ್ಲಿ ಮಧ್ಯರಾತ್ರಿ ಆಗಿರುವಾಗ ಮಂಗಳೂರಿನಲ್ಲಿ ಇನ್ನೂ ಆಗಿರದು. ಇದರಿಂದ ನಿತ್ಯಜೀವನದಲ್ಲಿ ಒದಗುವ ಗೊಂದಲ ಅಷ್ಟಿಷ್ಟಲ್ಲ. ಒಂದು ರಾಷ್ಟ್ರದ ಆಡಳಿತ ವ್ಯವಸ್ಥೆಯಲ್ಲಿ ಏಕರೂಪತೆ ಬರಲಾರದು. ಇಂಥ ಸಮಸ್ಯೆಯನ್ನು ಬಿಡಿಸಲು ಕೆಲವು ಉಪಾಯಗಳನ್ನು ಕೈಗೊಳ್ಳಲಾಗಿದೆ. ಇವು ವಾಸ್ತವಿಕ ಪರಿಸ್ಥಿತಿಯನ್ನು ಹೊಂದಿಕೊಂಡು ಇರುವ ಪರಿಷ್ಕರಣಗಳೇ ವಿನಾ ಪೂರ್ಣ ಕಾಲ್ಪನಿಕ ಸುಧಾರಣೆಗಳಲ್ಲ.

ಭೂಗೋಳವನ್ನು ಉತ್ತರ ಮೇರುವಿನಿಂದ ದಕ್ಷಿಣ ಮೇರುವಿನವರೆಗೆ ವ್ಯಾಪಿಸಿರುವ ರೇಖಾಂಶ ವೃತ್ತಗಳಿವೆಯಷ್ಟೆ. ಇವನ್ನು ಮಧ್ಯಾಹ್ನ ರೇಖೆಗಳೆಂದು ಕರೆಯುವುದಿದೆ. ಇವುಗಳ ಪೈಕಿ ಇಂಗ್ಲೆಂಡಿನ ಗ್ರೀನ್‌ವಿಚ್ ರೇಖಾಂಶವೃತ್ತವನ್ನು ಆಧಾರವೃತ್ತವಾಗಿ ಆರಿಸಿದೆ. ಇದರ ರೇಖಾಂಶ 0°. ಪೂರ್ಣವಾಗಿ ಎಳೆದಾಗ ಈ ವೃತ್ತ ಭೂಗೋಳವನ್ನು ಎರಡು ಸಮಾನ ಹೋಳುಗಳಾಗಿ ವಿಭಾಗಿಸುತ್ತದೆ. ಯೂರೊಪ್ ಜಪಾನ್ ಭಾಗಗಳಲ್ಲಿರುವ ಹೋಳು ಪೂರ್ವಾರ್ಧ ಗೋಳ; ಅಮೆರಿಕ ಭಾಗವಿರುವ ಹೋಳು ಪಶ್ಚಿಮಾರ್ಧಗೋಳ. ಗ್ರೀನ್‌ವಿಚಿನ 0° ರೇಖಾಂಶದಿಂದ ತೊಡಗಿ ಉಭಯ ಪಾರ್ಶ್ವಗಳಲ್ಲಿಯೂ 7½°, 22½°, 37½°,............,172½° (15° ಅಂತರವಿರುವಂತೆ) ರೇಖಾಂಶಗಳನ್ನು ಗುರುತಿಸಬೇಕು. 172½° ಪೂ ಮತ್ತು 172½° ಪ ರೇಖಾಂಶಗಳ ನಡುವಿನ ವಲಯದ ಅಗಲವೂ 15°. ಇದನ್ನು ಸಮಭಾಗಿಸುವ ರೇಖೆ 180° ರೇಖಾಂಶ. 0° ರೇಖಾಂಶದ ಮುಂದುವರಿಕೆಯಾದ ಈ ರೇಖಾಂಶ ಪೂರ್ವ ಮತ್ತು ಪಶ್ಚಿಮಾರ್ಧಗೋಳಗಳ ನಡುವಿನ ಗಡಿರೇಖೆ.

ಈಗ ಭೂಗೋಳವನ್ನು ಒಂದೊಂದೂ 15° ಅಗಲವಿರುವಂಥ 24 ವಲಯಗಳಾಗಿ ವಿಭಾಗಿಸಿದಂತಾಯಿತು. 0° ಯಿಂದ 7½° ಉಭಯ ಪಾರ್ಶ್ವಗಳಲ್ಲಿರುವ ವಲಯ ಒಂದನೆಯದು; ತರುವಾಯ ಪೂರ್ವಕ್ಕೂ ಪಶ್ಚಿಮಕ್ಕೂ 15° ಅಂತರದಲ್ಲಿ ಒಂದೊಂದೂ ಕಡೆಯೂ 11 ವಲಯಗಳು ಮುಗಿದುವು; 172½° ಪ—172½° ಪೂ ಈ ವಲಯ ಕೊನೆಯದು. ಒಟ್ಟು ಸಂಖ್ಯೆ 24. ಇವುಗಳ ಒಟ್ಟು ಹೆಸರು ಕಾಲವಲಯಗಳು. ಅಂತರರಾಷ್ಟ್ರೀಯ ಸಂಪ್ರದಾಯದ ಪ್ರಕಾರ ಗ್ರೀನ್‌ವಿಚ್ ವಲಯ (7½° ಪ—7½° ಪೂ) 0 ಕಾಲವಲಯ; 7½° ಪೂ—22½° ಪೂ ಕಾಲವಲಯದಲ್ಲಿ ಕಾಲ ಗ್ರೀನ್‌ವಿಚ್ ಕಾಲಕ್ಕಿಂತ 1 ಗಂಟೆ ಮುಂದೆ ಇದೆಯೆಂದೂ ಆದ್ದರಿಂದ ಇದು +1 ಕಾಲ ವಲಯವೆಂದೂ ಭಾವಿಸುತ್ತೇವೆ; 7½° ಪೂ 22½° ಪ ಕಾಲವಲಯದಲ್ಲಿ ಕಾಲ ಗ್ರೀನ್‌ವಿಚ್ ಕಾಲಕ್ಕಿಂತ 1 ಗಂಟೆ ಹಿಂದೆ ಇದೆಯೆಂದೂ ಆದ್ದರಿಂದ ಇದು –1 ಕಾಲವಲಯ ಅಥವಾ 24–1 = 23 ಕಾಲವಲಯ ಎಂದೂ ಭಾವಿಸುತ್ತೇವೆ. ಹೀಗೆಯೇ ಮುಂದುವರಿದರೆ 22½° ಪೂ—37½° ಪೂ +2 ಕಾಲವಲಯ, 22½° ಪ—37½° ಪ –2 ಅಥವಾ 22 ಕಾಲವಲಯ ಇತ್ಯಾದಿ; ಮತ್ತು 172½° ಪೂ—180° + 12 ಕಾಲವಲಯ, 172½° ಪ—180° –12 ಅಥವಾ 24–12=12 ಕಾಲವಲಯ. ಎಂದರೆ, 0 ಕಾಲವಲಯದಲ್ಲಿ 7 ಗಂಟೆ ಅಪರಾಹ್ನ ಆಗಿರುವಾಗ (19 ಗಂಟೆ) + 7 ಕಾಲವಲಯದಲ್ಲಿ 26 ಗಂಟೆ ಅಥವಾ ಮರುದಿನದ ಪೂರ್ವಾಹ್ನದ 2 ಗಂಟೆ ಎಂದೂ – 8 ಕಾಲವಲಯದಲ್ಲಿ ಅದೇ ದಿನ ಪೂರ್ವಾಹ್ನದ 11 ಗಂಟೆ ಎಂದೂ ಅರ್ಥ. ಈ ಸಂಪ್ರದಾಯದಿಂದ ಅಂತರರಾಷ್ಟ್ರೀಯ ವ್ಯವಹಾರಗಳಲ್ಲಿ ಸಮರ್ಪಕ ಹೊಂದಾಣಿಕೆ ಸಾಧ್ಯವಿದೆ; ಒಂದೇ ಆಡಳಿತದ ವ್ಯಾಪ್ತಿಯಲ್ಲಿರುವ ಪ್ರದೇಶಗಳಲ್ಲಿ ಕಾಲದಲ್ಲಿ ಏಕರೂಪತೆ ತರುವ ಸೌಕರ್ಯವಿದೆ. ಉದಾಹರಣೆಗೆ ಭಾರತದಲ್ಲಿರುವುದು ಒಂದೇ ಕಾಲಮಾನ ವ್ಯವಸ್ಥೆ; ಪಶ್ಚಿಮ ಪಾಕಿಸ್ತಾನದ ಎಲ್ಲ ಊರುಗಳಿಗೂ ಒಂದು ಕಾಲಮಾನ ವ್ಯವಸ್ಥೆ ಇದ್ದರೆ ಪೂರ್ವಪಾಕಿಸ್ತಾನದ ಎಲ್ಲ ಊರುಗಳಿಗೂ ಇನ್ನೊಂದು ಕಾಲಮಾನ ವ್ಯವಸ್ಥೆ ಉಂಟು. ಇಂಗ್ಲೆಂಡಿನ ಕಾಲಕ್ಕಿಂತ ಭಾರತದ ಕಾಲ 5½ ಗಂಟೆ ಮುಂದೆ (ಭಾರತದ ಕಾಲ +5 ಕಾಲವಲಯದಲ್ಲಿದೆ) ಇರತಕ್ಕದ್ದು ಎಂಬ ಅಂತರರಾಷ್ಟ್ರೀಯ ಒಪ್ಪಂದ ನಡೆದುಬಂದಿದೆ.

ಹೀಗೆ ಒಂದೊಂದು ಆಡಳಿತದ ವ್ಯಾಪ್ತಿಯಲ್ಲಿಯೂ ಗ್ರೀನ್‌ವಿಚ್ ಕಾಲವಲಯ (0° ಕಾಲವಲಯ) ಆಧಾರವಾಗಿ ಅಂತರರಾಷ್ಟ್ರೀಯ ಒಪ್ಪಂದದ ಪ್ರಕಾರ ಬಳಕೆಯಲ್ಲಿರುವ ಕಾಲಮಾನ ವ್ಯವಸ್ಥೆಯ ಹೆಸರು ಶಿಷ್ಟಕಾಲ. ಭಾರತೀಯ ಶಿಷ್ಟಕಾಲ (ಇಂಡಿಯನ್ ಸ್ಟ್ಯಾಂಡರ್ಡ್ ಟೈಂ) ಗ್ರೀನ್‌ವಿಚ್ ಕಾಲಕ್ಕಿಂತ 5½ ಗಂಟೆ ಮುಂದೆ ಇದೆ.

172½° ಪೂ—180° ಎಂಬ 7½ ಅಗಲದ ಕಾಲವಲಯದಲ್ಲಿ ಕಾಲ ಗ್ರೀನ್‌ವಿಚ್ ಕಾಲಕ್ಕಿಂತ 12 ಗಂಟೆ ಮುಂದೆಯೂ 172½° ಪ—180° ಎಂಬ ಅಷ್ಟೇ ಅಗಲದ ಕಾಲವಲಯದಲ್ಲಿ 12 ಗಂಟೆ ಹಿಂದೆಯೂ ಇದೆಯೆಂದು

ನೋಡಿದೆವು. 180° ರೇಖಾಂಶ –12, +12 ಕಾಲವಲಯಗಳನ್ನು (ಪಶ್ಚಿಮ ಪೂರ್ವಗಳನ್ನು) ಬೇರ್ಪಡಿಸುವ ಗಡಿರೇಖೆ. –12 ಕಾಲವಲಯದಿಂದ +12 ಕಾಲವಲಯಕ್ಕೆ (ಎಂದರೆ ಅಮೆರಿಕ ಕಡೆಯಿಂದ ಜಪಾನ್ ಕಡೆಗೆ) ದಾಟುವಾಗ, ಅದೇ ರೀತಿ +12 ಕಾಲವಲಯದಿಂದ –12 ಕಾಲವಲಯಕ್ಕೆ (ಎಂದರೆ ಜಪಾನ್ ಕಡೆಯಿಂದ ಅಮೆರಿಕ ಕಡೆಗೆ) ದಾಟುವಾಗ, ಒಂದು ದಿವಸವೇ ವ್ಯತ್ಯಾಸವಾಗಿರುತ್ತದೆ. ಮೊದಲಿನವನ ಅನುಭವದಲ್ಲಿ ದಾಟುವ ಮೊದಲು ತಾರೀಖು 10 ಆಗಿದ್ದರೆ ದಾಟಿದೊಡನೆ ಅದು 11 ಆಗುವುದು— ಎಂದರೆ ಅಮೆರಿಕ ಕಡೆಯಿಂದ ಜಪಾನ್ ಕಡೆಗೆ ದಾಟಿದೊಡನೆ ತಾರೀಖು ಪಟ್ಟಿಯ ಒಂದು ಹಾಳೆ ಹರಿಯಬೇಕು. ಎರಡನೆಯವನ ಅನುಭವದಲ್ಲಿ ದಾಟುವ ಮೊದಲು ತಾರೀಖು 10 ಆಗಿದ್ದರೆ ದಾಟಿದೊಡನೆ ಅದು 9 ಆಗುವುದು—ಎಂದರೆ ಜಪಾನ್ ಕಡೆಯಿಂದ ಅಮೆರಿಕ ಕಡೆಗೆ ದಾಟಿದೊಡನೆ ತಾರೀಖು ಪಟ್ಟಿಗೆ ಹಿಂದಿನ ಹಾಳೆ ಅಂಟಿಸಬೇಕು. ಈ ಸಂಪ್ರದಾಯವನ್ನು ಪಾಲಿಸುವುದರ ಮೂಲಕ ಹಡಗು ವಿಮಾನಯಾನಿಗಳು ತಾರೀಖು ಪಟ್ಟಿಗಳನ್ನೂ ಗಡಿಯಾರಗಳನ್ನೂ ಪಯಣಿಸುತ್ತಿರುವ ಅಥವಾ ತಂಗಿರುವ ಪ್ರದೇಶಗಳ ದಿವಸ ಕಾಲಗಳೊಡನೆ ಹೊಂದಿಸಿಕೊಂಡು ಸುಗಮವಾಗಿ ವ್ಯವಹರಿಸಲು ಸಾಧ್ಯ.

ಗಡಿರೇಖೆಯ (180° ರೇಖಾಂಶ) ಹೆಸರು ಅಂತರರಾಷ್ಟ್ರೀಯ ದಿನಾಂಕ ರೇಖೆ. ಇದರ ಬಹ್ವಂಶ ಜಲರಾಶಿ ಮೇಲಿದೆ. ಜನವಸತಿಯ ಮೇಲೆ ಸಾಗುವಲ್ಲಿ ಇದನ್ನು ಡೊಂಕಿಸಿ ಆ ನೆಲೆಗಳು ಪೂರ್ಣವಾಗಿ ದಿನಾಂಕರೇಖೆಯ ಒಂದೇ ಪಾರ್ಶ್ವದಲ್ಲಿ ಇರುವಂತೆ ವಿಧಿಸಲಾಗಿದೆ. ಹೀಗಾಗಿ ಆ ಪ್ರದೇಶಗಳ ನಾಗರಿಕ ಜೀವನದಲ್ಲಿ ಗೊಂದಲ ಉಂಟಾಗದು.

ನೋಡಿ : ಅಕ್ಷಾಂಶ, ರೇಖಾಂಶ

## ಶಿಷ್ಯ

ಬುದ್ಧನ ಅತ್ಯಂತ ಮೆಚ್ಚಿನ ಶಿಷ್ಯ ಆನಂದ. ಯೇಸು ಕ್ರಿಸ್ತನಿಗೆ ಹನ್ನೆರಡು ಮಂದಿ ಶಿಷ್ಯರು. ರಾಮಕೃಷ್ಣ ಪರಮಹಂಸರ ಪ್ರಮುಖ ಶಿಷ್ಯರು ಸ್ವಾಮಿ ವಿವೇಕಾನಂದರು.

ಶಿಷ್ಯ ಎನ್ನುವ ಪದವನ್ನು ಎರಡು ರೀತಿ ಉಪಯೋಗಿಸುತ್ತೇವೆ. ಗುರುವಿನ ಬಳಿ ವಿದ್ಯಾಭ್ಯಾಸ ಮಾಡುವವರು ಶಿಷ್ಯರು. ಧರ್ಮಗುರುವಿನ ಅನುಯಾಯಿಗಳು ಶಿಷ್ಯರು. ಪ್ರಾಚೀನ ಭಾರತದಲ್ಲಿ ವಿದ್ಯೆ ಕಲಿಯಲು ಗುರುಕುಲಗಳಿಗೆ ಹೋಗಿ ಗುರುಗಳ ಬಳಿಯಲ್ಲೇ ಇದ್ದು ವಿದ್ಯಾಭ್ಯಾಸ ಮಾಡಬೇಕಾಗಿತ್ತು. ಹೀಗೆ ವಿದ್ಯಾಭ್ಯಾಸ ಮಾಡಲು ಹೋಗುತ್ತಿದ್ದವರಿಗೆಲ್ಲ 'ಶಿಷ್ಯ'ರು ಎನ್ನುತ್ತಿದ್ದರು. ವಿದ್ಯಾಭ್ಯಾಸ ಆಗ ಹೆಚ್ಚಾಗಿ ಆಧ್ಯಾತ್ಮಿಕವಾಗಿರುತ್ತಿತ್ತು. ಗುರು ಇಂಥ ಆಧ್ಯಾತ್ಮಿಕ ಶಿಕ್ಷಣವನ್ನು ಪಡೆಯಲು ತನ್ನ ಬಳಿ ಬರುತ್ತಿದ್ದವರನ್ನು ಅವರು ಆ ಶಿಕ್ಷಣ ಪಡೆಯಲು ಅರ್ಹರೇ ಎಂದು ಪರೀಕ್ಷಿಸಿ ಶಿಷ್ಯರಾಗಿ ಸ್ವೀಕರಿಸುತ್ತಿದ್ದ. ಪ್ರಾಚೀನ ಭಾರತದಲ್ಲಿ ಶಿಷ್ಯ ಗುರುವಿನ ಬಳಿ ವಿದ್ಯೆ ಕಲಿಯಲು ಅನೇಕ ವರ್ಷಗಳ ಕಾಲ ಇರಬೇಕಾಗುತ್ತಿತ್ತು. ಗುರು, ಗುರುಪತ್ನಿ ಹೇಳಿದ ಕೆಲಸಗಳನ್ನೆಲ್ಲ ಮಾಡಬೇಕಾಗುತ್ತಿತ್ತು. ಇದಕ್ಕೆ ಶಿಷ್ಯವೃತ್ತಿ ಎನ್ನುತ್ತಿದ್ದರು. ಗುರು–ಶಿಷ್ಯರ ಸಂಬಂಧ ಅತ್ಯಂತ ಮಧುರವಾಗಿರುತ್ತಿತ್ತು. ಗುರು ತನ್ನ ಶಿಷ್ಯರಿಗೆ ಆಧ್ಯಾತ್ಮಿಕ ವಿದ್ಯೆಯ ಜೊತೆಗೆ ಲೌಕಿಕ ಪ್ರಪಂಚದಲ್ಲಿ ಹೇಗಿರಬೇಕು ಎನ್ನುವುದರ ಬಗೆಗೆ ತಿಳಿವಳಿಕೆ ನೀಡಿ ನಯ ವಿನಯ ನಡತೆಯನ್ನು ಕಲಿಸುತ್ತಿದ್ದ.

ಶ್ರೀಕೃಷ್ಣ ಸಾಂದೀಪನಿ ಮಹರ್ಷಿಯ ಶಿಷ್ಯ. ಗುರುವಿನ ವಿಗ್ರಹವನ್ನು ಮುಂದಿಟ್ಟುಕೊಂಡು ಭಕ್ತಿಯಿಂದ ಧನುರ್ವಿದ್ಯೆ ಕಲಿತು ತನ್ನ ಹೆಬ್ಬೆರಳನ್ನು ಗುರುದಕ್ಷಿಣೆಯಾಗಿ ಕೊಟ್ಟ ಏಕಲವ್ಯನ ಕಥೆ ಭಾರತದಲ್ಲಿ ಪ್ರಸಿದ್ಧ.

ಪ್ರಾಚೀನ ಭಾರತದ ವಿದ್ಯಾಭ್ಯಾಸದ ಕ್ಷೇತ್ರದಲ್ಲಿ ಬಳಕೆಗೆ ಬಂದ ಈ ಪದ ಇಂದೂ ಶಿಕ್ಷಣ ಕ್ಷೇತ್ರದಲ್ಲಿ ಉಳಿದಿದೆ. ಈಗಿನ ವಿದ್ಯಾಭ್ಯಾಸ ಪದ್ಧತಿ ಹಿಂದಿನ ಗುರುಕುಲಗಳಂತೆ ಇಲ್ಲವಾದರೂ ಶಾಲೆ, ಕಾಲೇಜುಗಳಲ್ಲಿ ಅಧ್ಯಾಪಕರಾಗಿರುವವರನ್ನೂ ಅವರ ಬಳಿ ವಿದ್ಯಾಭ್ಯಾಸ ಮಾಡುವವರನ್ನೂ ಗುರು–ಶಿಷ್ಯರು ಎಂದು ಕರೆಯುತ್ತೇವೆ.

ಪ್ರಾಚೀನ ಭಾರತದಲ್ಲಿದ್ದಂತೆಯೇ ಪ್ರಾಚೀನ ಗ್ರೀಸಿನಲ್ಲೂ ಪ್ರಖ್ಯಾತ ಗುರುಗಳ ಬಳಿ ಕಲಿತ ಶಿಷ್ಯರ ಉದಾಹರಣೆಗಳಿವೆ. ಸಾಕ್ರಟೀಸನ ಶಿಷ್ಯ ಪ್ಲೇಟೋ, ಪ್ಲೇಟೋನ ಶಿಷ್ಯ ಅರಿಸ್ಟಾಟಲ್.

ಶಿಷ್ಯ ಎನ್ನುವ ಪದಕ್ಕೆ ಧಾರ್ಮಿಕ ರಂಗದಲ್ಲಿ ಒಂದು ವಿಶೇಷ ಅರ್ಥವಿದೆ. ಅಲ್ಲಿ ಶಿಷ್ಯರೆಂದರೆ ಧಾರ್ಮಿಕ ಗುರುವಿನಿಂದ ದೀಕ್ಷೆ ಸ್ವೀಕರಿಸಿ ಅವನ ಧರ್ಮತತ್ತ್ವಗಳನ್ನು ನಂಬಿ ಅವನ್ನು ಪ್ರಚಾರಮಾಡುವ, ಅವುಗಳಂತೆ ನಡೆಯುವ ಹಿಂಬಾಲಕರು, ಅನುಯಾಯಿಗಳು. ಆನಂದ ಬುದ್ಧನ ಶಿಷ್ಯನಾದದ್ದು, ವಿವೇಕಾನಂದರು ರಾಮಕೃಷ್ಣರ ಶಿಷ್ಯರಾದದ್ದು, ಹೀಗೆ.

ಗುರುವಿನ ಮುಖಾಂತರವಾಗಿಯೇ ಮೋಕ್ಷಮಾರ್ಗವನ್ನು ಕಂಡುಕೊಳ್ಳಬೇಕೆಂಬುದು ಭಾರತೀಯ ಧರ್ಮ. ಶಿಷ್ಯರು ಎತ್ತಾಗಿ, ತೊತ್ತಾಗಿ ಕೊನೆಗೆ ಹಿತ್ತಲದ ಗಿಡವಾಗಿಯಾದರೂ ಗುರುವಿನ ಬಳಿ ಇರಬೇಕು. ಇದು ಭಾರತೀಯ ಗುರು–ಶಿಷ್ಯ ಸಂಪ್ರದಾಯದ ಸಂಸ್ಕೃತಿಯಲ್ಲಿ ಎದ್ದುಕಾಣುವ ವೈಶಿಷ್ಟ್ಯ.

ಸಂಗೀತಕ್ಷೇತ್ರದಲ್ಲಿ ಭಾರತೀಯ ಸಂಸ್ಕೃತಿಯಲ್ಲಿದ್ದ ಶಿಷ್ಯಪರಂಪರೆ ಇನ್ನೂ ಇದೆ. ಉತ್ತರಾದಿ ಸಂಗೀತದಲ್ಲಿ ಗಾಯಕರು ಯಾವುದಾದರೊಂದು ಘರಾನಕ್ಕೆ ಶಿಷ್ಯರಾಗುತ್ತಾರೆ.

ಗುರು–ಶಿಷ್ಯ ಸಂಬಂಧಕ್ಕೆ ಇಷ್ಟು ಪ್ರಾಶಸ್ತ್ಯ ನೀಡಲು ಕಾರಣ ಒಳ್ಳೆಯ ಗುರುವಿನ ವ್ಯಕ್ತಿತ್ವದ ಪ್ರಭಾವ. ಬರೀ ಪುಸ್ತಕಗಳ ಅಧ್ಯಯನದಿಂದ ಬರುವ ತಿಳಿವಳಿಕೆ ಒಂದು ವಿಧವಾದದ್ದು. ವಿಷಯವನ್ನು ಚೆನ್ನಾಗಿ ತಿಳಿದುಕೊಂಡು, ಜ್ಞಾನಕ್ಕಾಗಿಯೋ ಒಂದು ಉದಾತ್ತ ಗುರಿಗಾಗಿಯೋ ಬದುಕುವ ಹಿರಿಯರ ಸಾಮೀಪ್ಯ ಕೊಡುವ ಸ್ಫೂರ್ತಿ ಬೇರೆ ವಿಧವಾದದ್ದು. ಒಬ್ಬ ಸಾಕ್ರಟೀಸ್, ಒಬ್ಬ ಯಾಜ್ಞವಲ್ಕ್ಯ ಇಂಥವರು ತಮ್ಮ ಬಳಿಗೆ ಬಂದ ಸಾವಿರಾರು ಶಿಷ್ಯರಲ್ಲಿ ಜ್ಞಾನಜ್ಯೋತಿಯನ್ನು ಬೆಳಗಲು ಶಕ್ತರಾಗಿದ್ದರು. ಒಬ್ಬ ಬುದ್ಧ, ಕ್ರಿಸ್ತ, ಗಾಂಧಿಜಿ ಅಥವಾ ರಾಮಕೃಷ್ಣ ಪರಮಹಂಸ ಹತ್ತಿರ ಬಂದವರನ್ನು ಪವಿತ್ರಗೊಳಿಸುವ ದಿವ್ಯ ಚೇತನರು.

ನೂರು ದೀಪಗಳನ್ನು ಹೊತ್ತಿಸಬಲ್ಲ ಮೂಲ ಜ್ಯೋತಿ ಇಂಥಾ ಗುರು.

## ಶಿಷ್ಟಾಚಾರ

'ನಮಸ್ಕಾರ. ಬನ್ನಿ. ಕುಳಿತುಕೊಳ್ಳಿ. ಮನೆಯಲ್ಲಿ ಎಲ್ಲಾ ಕ್ಷೇಮವೇ ? ಪ್ರಯಾಣ ಸುಖವಾಗಿತ್ತೇ ?'

ಇದು ಶಿಷ್ಟಾಚಾರ.

'ಯಾರು ಬೇಕಾಗಿತ್ತು ? ಇಲ್ಲ–ಅವರು ಮನೆಯಲ್ಲಿಲ್ಲ. ಇನ್ನೇನು ಬರುತ್ತಾರೆ. ಕುಳಿತುಕೊಳ್ಳಿ.'

ಇದು ಶಿಷ್ಟಾಚಾರ.

'ಯಾರ್ರಿ ? ಏನು ? ಯಾಕೆ ಬಂದ್ರಿ ? ಅವರಿಲ್ಲ ಹೋಗಿ. ಒಂದು ಸಲ ಹೇಳಿದರೆ ತಿಳಿಯೋದಿಲ್ವೇ, ಹೋಗ್ರಿ.'

ಇದು ಶಿಷ್ಟಾಚಾರವಲ್ಲ.

ಶಿಷ್ಟಾಚಾರವೆಂದರೆ ಸುಸಂಸ್ಕೃತ ನಡವಳಿಕೆ. ಪ್ರಾಣಿಗಳಿಂದ ಮನುಷ್ಯರನ್ನು ಬೇರ್ಪಡಿಸುವ ಗುಣಗಳಲ್ಲಿ ಶಿಷ್ಟಾಚಾರವೂ ಒಂದು.

ಒಳ್ಳೆಯ ಮಾತು. ನಯವಾದ ರೀತಿ. ನಾಗರಿಕ ಮಾನವೀಯ ನಡವಳಿಕೆ ಇವು ಶಿಷ್ಟಾಚಾರದ ಮೂಲತತ್ತ್ವಗಳು. ಪ್ರತಿನಿತ್ಯ ನಾವು ಹತ್ತಾರು ಜನರನ್ನು ಕಾಣುತ್ತೇವೆ. ಅವರ ಜೊತೆ ಮಾತನಾಡುತ್ತೇವೆ, ಕೆಲಸ ಮಾಡುತ್ತೇವೆ. ಭೇಟಿ, ಮಾತು ಕೆಲಸ ಎಲ್ಲ ಸುಗಮವಾಗಿ ನಡೆಯಬೇಕು. ಇದರಿಂದ ಶಿಷ್ಟಾಚಾರ ಅಗತ್ಯ.

ಶಿಷ್ಟಾಚಾರದಲ್ಲಿ ಕೆಲವು ಪದ್ಧತಿಗಳ ಉದ್ದೇಶ ಸ್ಪಷ್ಟವಾಗಿರುತ್ತದೆ. ಉದಾಹರಣೆಗೆ ಹಿಂದೂಗಳೂ ಮುಸಲ್ಮಾನರೂ ತಮ್ಮ ದೇವಾಲಯ. ಮಸೀದಿಗಳ ಒಳಕ್ಕೆ ಹೋಗುವಾಗ ಪಾದರಕ್ಷೆಯನ್ನು ಹೊರಕ್ಕೆ ಬಿಡುತ್ತಾರೆ. ದೇವರಿಗೆ ಭಕ್ತಿ ತೋರಿಸುವ ಒಂದು ರೀತಿ ಇದು. ರಾಷ್ಟ್ರಗೀತೆಯಾಗುವಾಗ ಎದ್ದು ನಿಲ್ಲುವುದು ದೇಶಕ್ಕೆ ಗೌರವ ತೋರಿಸುವ ರೀತಿ. ಸಾಮಾನ್ಯವಾಗಿ ಎಲ್ಲ ದೇಶಗಳಲ್ಲಿಯೂ ಹಿರಿಯರು ಅಥವಾ ಅತಿಥಿಗಳು ಬಂದಾಗ ಎದ್ದು ನಿಲ್ಲುತ್ತಾರೆ. ಇದೂ ಗೌರವ ತೋರಿಸುವ ಬಗೆ.

ಪಾಶ್ಚಾತ್ಯರಲ್ಲಿ ಊಟಮಾಡುವಾಗ ಶಿಷ್ಟಾಚಾರದ ಕೆಲವು ನಿಯಮಗಳಿರುತ್ತವೆ. ಉದಾಹರಣೆಗೆ ಪಾಶ್ಚಾತ್ಯ ದೇಶಗಳಲ್ಲಿ ಊಟ ಮುಗಿದಿದ್ದರೆ, ಚಾಕು ಮತ್ತು ಫೋರ್ಕ್‌ಗಳನ್ನು ತಟ್ಟೆಯ ಮೇಲೆ ಒಂದಕ್ಕೊಂದು ಸಮಾನಾಂತರವಾಗಿರುವಂತೆ ಇಡಬೇಕು. ಫೋರ್ಕಿನ ಚೂಪುತುದಿಗಳು ಖಾಲಿ ತಟ್ಟೆಯಲ್ಲಿ ಮೇಲೆ ಕಾಣಿಸುವಂತಿರಬೇಕು. ಬಡಿಸುವವರಿಗೆ ಮತ್ತು ಅಕ್ಕಪಕ್ಕದಲ್ಲಿ ಕುಳಿತವರಿಗೆ ಅತಿಥಿಯ ಊಟ ಮುಗಿಯಿತೆ ಇಲ್ಲವೆ ಎಂಬುದನ್ನು ತಿಳಿಸುವುದು ಇದರ ಉದ್ದೇಶ. ಚಮಚ ಚಾಕುಗಳ ಸಹಾಯವಿಲ್ಲದ ಊಟಮಾಡುವ ಅನೇಕ ಭಾರತೀಯರಲ್ಲೂ ಊಟದ ಸಮಯದ ಶಿಷ್ಟಾಚಾರವಿದೆ. ನಾಲ್ಕು ಜನ ಒಟ್ಟಿಗೆ ಊಟಕ್ಕೆ ಕುಳಿತಾಗ ಎಲ್ಲರಿಗೂ ಎಲ್ಲವನ್ನೂ ಬಡಿಸಿದ ಮೇಲೆ ಊಟ ಪ್ರಾರಂಭಿಸುವುದು, ಇಡೀ ಹಸ್ತವನ್ನು ಅನ್ನಮಯ ಮಾಡದೆ ನಾಜೂಕಿನಿಂದ ಊಟಮಾಡುವುದು, ನೀರು, ಕಾಫಿ ಅಥವಾ ಇತರ ಪಾನೀಯಗಳನ್ನು ಯಾವ ರೀತಿಯ ಸದ್ದೂ ಮಾಡದೆ ಕುಡಿಯುವುದು, ಒಬ್ಬರ ಊಟ ಬೇಗನೆ ಆದರೂ ಎಲ್ಲರದೂ ಮುಗಿಯುವ ತನಕ ಏಳಲು ಕಾಯುವುದು—ಇವೆಲ್ಲ ಸಾಧಾರಣವಾಗಿ ಬಳಕೆಯಲ್ಲಿರುವ ಶಿಷ್ಟಾಚಾರ. ಮಹಿಳೆಯರಿಗೆ ಮೊದಲು ಸ್ಥಳಕೊಡುವುದು, ಮೊದಲು ಅವರಿಗೆ ದಾರಿ ಬಿಡುವುದು ಪಾಶ್ಚಾತ್ಯರು ಬಹಳ ಕಟ್ಟುನಿಟ್ಟಾಗಿ ಅನುಸರಿಸುವ ಕ್ರಮಗಳು.

ಇನ್ನೂ ಕೆಲವು ಶಿಷ್ಟಾಚಾರ ಪದ್ಧತಿಗಳು ಕೆಲವು ದೇಶಗಳಿಗಷ್ಟೇ ಸೀಮಿತವಾಗಿದ್ದು, ವಿಚಿತ್ರವಾಗಿ ಕಾಣಬಹುದು. ಪಾಶ್ಚಾತ್ಯರಲ್ಲಿ ಒಬ್ಬರನ್ನೊಬ್ಬರು ಕಂಡಾಗ ಕೈ ಕುಲುಕುತ್ತಾರೆ ; ಸಹಕಾರದ, ಸ್ನೇಹದ [illegible] ತೋರಿಸುವ ಈ ಪದ್ಧತಿಗೆ ಒಂದು ಸ್ವಾರಸ್ಯವಾದ ಹಿನ್ನೆಲೆಯಿದೆ. ಶಿಷ್ಟಾಚಾರದ ಅನೇಕ ಪದ್ಧತಿಗಳು ಮಧ್ಯಯುಗದಿಂದ ಬಂದುವು. ಮಧ್ಯಯುಗ ಕಲಹ ಕದನಗಳಿಗೆ ಹೆಸರಾದ ಯುಗ. ಆಗ ಇಬ್ಬರು ಯೋಧರು ಒಬ್ಬರನ್ನೊಬ್ಬರು ಸಂಧಿಸಿದಾಗ ತಮ್ಮ ಬಲಗೈಯನ್ನು ಮುಂದೆ ಚಾಚಿ ಒಬ್ಬರ ಕೈಯನ್ನೊಬ್ಬರು ಹಿಡಿದು ಕುಲುಕುತ್ತಿದ್ದರು. ಇದು ಕೈಯಲ್ಲಿ ಯಾವ ಆಯುಧವನ್ನೂ ಅಡಗಿಸಿಲ್ಲ ಎಂಬ ಆಶ್ವಾಸನೆಯ ಸಂಕೇತ. ಈಗ ಈ ಕೈಕುಲುಕು ಸ್ನೇಹದ ಸಂಕೇತವಾಗಿ ಮಾತ್ರ ಉಳಿದಿದೆ. ಒಬ್ಬರನ್ನೊಬ್ಬರು ಕಂಡಾಗ ಹ್ಯಾಟ್ ತೆಗೆಯುವ ಆಚಾರವೂ ಹೀಗೆಯೇ ಬಂದದ್ದು ; ತಲೆಯ ಉಡುಪಿನಲ್ಲಿ ಏನನ್ನೂ ಬಚ್ಚಿಟ್ಟಿಲ್ಲ ಎಂಬ ನಂಬಿಕೆ ಕೊಡಲು ಆರಂಭ [illegible].

[illegible] ನಮಸ್ಕಾರ [illegible] ಎಂದು [illegible].

[illegible]

ದೇಶದಿಂದ ದೇಶಕ್ಕೆ ಶಿಷ್ಟಾಚಾರ ಬದಲಾಗುತ್ತದೆ. [illegible] ಅಲ್ಲಿಯ ಶಿಷ್ಟಾಚಾರವನ್ನು ತಿಳಿದುಕೊಳ್ಳಬೇಕು. [illegible] ಅಪಾರ್ಥಕ್ಕೆ ಎಡೆಯಾಗಬಹುದು. ಇಲ್ಲವೆ ಹಾಸ್ಯಕ್ಕೊಳಗಾಗಬಹುದು. ಪಾಶ್ಚಾತ್ಯರಲ್ಲಿ ಸಾಮಾನ್ಯವಾಗಿ ಆಗಂತುಕರನ್ನು ಇನ್ನೊಬ್ಬರು ಪರಿಚಯ ಮಾಡಿಕೊಡದಿದ್ದರೆ ಅವರೊಡನೆ ಮಾತನಾಡುವುದಿಲ್ಲ. ಪರಿಚಯ ಮಾಡಿ ಕೊಡುವಾಗ, ಕೆಲವು ನಿಯಮಗಳುಂಟು. ಉದಾಹರಣೆಗೆ, ಗಂಡಸನ್ನು ಹೆಂಗಸಿಗೆ ಪರಿಚಯ ಮಾಡಿಕೊಡಬೇಕು (ಸಾಮಾನ್ಯವಾಗಿ). ಹಲವು ಪಾಶ್ಚಾತ್ಯ ದೇಶಗಳಲ್ಲಿ ಊಟಕ್ಕೆ ಕುಳಿತಾಗ ಕೈಗಳನ್ನು ಮೇಜಿನ ಮೇಲೆ ಇಡಬಾರದು. ಆದರೆ ಸ್ವಿಟ್ಜರ್‌ಲೆಂಡಿನಲ್ಲಿ, ಊಟದ ಮೇಜಿನ ಮೇಲೆ ಕೈಯೂರಬೇಕು. ತೊಡೆಯ ಮೇಲೆ ಇಟ್ಟುಕೊಳ್ಳಬಾರದು. ಊಟದ ಹೊತ್ತಿಗೆ ಇಂಥ ಉಡುಗೆ, ಇಂಥಿಂಥ ಸಭೆಗಳಿಗೆ ಇಂಥ ಉಡುಗೆ ಎಂದು ನಿಯಮಗಳುಂಟು.

[illegible] ಶಿಷ್ಟಾಚಾರವೂ ಬದಲಾಗಬಹುದು. ಅಲ್ಲದೆ ಹೊಸ [illegible] ಬರುತ್ತವೆ. ಹೊಸ ಶಿಷ್ಟಾಚಾರ ಕಲಿಯಬೇಕಾಗುತ್ತದೆ. ಅಂಥ ಸಂದರ್ಭದಲ್ಲಿ 'ನಾನೇ ದೊಡ್ಡವನು' ಎಂಬಂತೆ ನಡೆಯಬಾರದು. 'ಇತರರಿಗೆ [illegible] ತೊಂದರೆಯಾಗಬಾರದು, ಎಲ್ಲ ಮನುಷ್ಯರೂ ಗೌರವಾರ್ಹರು'. ಎಂಬ ಸೂತ್ರಗಳನ್ನು ಮನಸ್ಸಿನಲ್ಲಿಟ್ಟುಕೊಂಡು ವರ್ತಿಸಬೇಕು. ಟೆಲಿಫೋನ್ ಬಳಕೆ ಬಂದದ್ದು [illegible]. ಇದಕ್ಕೆ ಸಂಪ್ರದಾಯದ ಶಿಷ್ಟಾಚಾರವಿಲ್ಲ. ಆದರೆ ಅತಿ ಗಟ್ಟಿಯಾಗಿ ಮಾತನಾಡುವುದಾಗಲಿ, [illegible] ಮೇಲೆ ರಿಸೀವರನ್ನು [illegible] ಶಿಷ್ಟಾಚಾರವಲ್ಲ. [illegible] ಇತರರಿಗೆ ತೊಂದರೆಯಾಗುವಂತೆ ಧೂಮಪಾನ ಮಾಡುವುದು, ಟ್ರಾನ್ಸಿಸ್ಟರ್ ಗಳನ್ನು ಹಾಕುವುದು ಶಿಷ್ಟಾಚಾರವಲ್ಲ.

[illegible]

[illegible]

[illegible] ಎರಡು ಬಗೆಯಾಗಿ ಪರಿಶೀಲಿಸಬಹುದು—ಮನೆ [illegible]. ಇವೆರಡಕ್ಕೂ ನಾಗರಿಕ ಜೀವನದಲ್ಲಿ [illegible].

[illegible] ಸುಸಂಸ್ಕೃತ ಬಾಳ್ವೆಯ ಬುನಾದಿ.

## ಶೃಂಗಸಭೆ

ಶೃಂಗ ಎಂದರೆ ಶಿಖರ, ಬೆಟ್ಟಗಳ ತುಟ್ಟ ತುದಿ. ಹಲವು ದೇಶ[illegible] ನಾಯಕರು ('ಶೃಂಗಗಳು') ಸೇರುವ ಸಭೆ ಶೃಂಗಸಭೆ. ಪ್ರಪಂಚದ ಶಾಂತಿಯನ್ನು ಕದಡಿದ ರಾಜಕೀಯ ಸಮಸ್ಯೆಗಳಿರುತ್ತವೆ ಅಥವಾ ಬೇರೆ ವಿಷಯಗಳಿರುತ್ತವೆ. ಇವುಗಳಿಗೆ ಪರಸ್ಪರ ವಿಚಾರ ವಿನಿಮಯದಿಂದ ಪರಿಹಾರ ಕಂಡುಹಿಡಿಯುವುದು ಸಾಧ್ಯ. ಇದನ್ನು ಸಾಧಿಸಲು [illegible] ಯತ್ನಿಸುತ್ತದೆ.

ಎರಡನೆಯ ಮಹಾಯುದ್ಧವಾದ ಮೇಲೆ ಬ್ರಿಟಿಷ್ ಪ್ರಧಾನಿ ಸರ್ ವಿನ್‌ಸ್ಟನ್ ಚರ್ಚಿಲ್ ಮೇಲ್ಮಟ್ಟದ ಅಂತರರಾಷ್ಟ್ರೀಯ ಸಭೆ ನಡೆಯಬೇಕೆಂದು ಮನವಿ ಮಾಡಿಕೊಂಡರು. ಮುಂದೆ 1955 ಜುಲೈ 18ರಿಂದ 23ರ ವರೆಗೆ ಜಿನೀವಾದಲ್ಲಿ ಪ್ರಥಮ ಶೃಂಗಸಭೆ ಸಮಾವೇಶಗೊಂಡಿತು. ಅಮೆರಿಕ ಸಂಯುಕ್ತ ಸಂಸ್ಥಾನದ ಅಧ್ಯಕ್ಷರು ಐಸೆನ್‌ಹೋವರ್. ಇಂಗ್ಲೆಂಡಿನ ಮುಖ್ಯ ಮಂತ್ರಿ ಆ್ಯಂಥನಿ ಈಡನ್, ಫ್ರಾನ್ಸಿನ ಪ್ರಧಾನಿ ಎಡ್ಗರ್ ಫೌರ್ ಮತ್ತು ರಷ್ಯದ ಪ್ರಧಾನಿ ನಿಕೊಲಾಯ್ ಬುಲ್ಗಾನಿನ್ ಸೇರಿದ್ದರು. ಯುದ್ಧದಿಂದ ದೇಶ ದೇಶಗಳ ನಡುವಣ ಸಮಸ್ಯೆಗಳನ್ನು ಪರಿಹರಿಸುವ ಅವರ ನೀತಿ ಯಾರಿಗೂ ಬೇಕಿರಲಿಲ್ಲ. ಪೂರ್ವ ಮತ್ತು ಪಶ್ಚಿಮ ದೇಶಗಳ ಆರ್ಥಿಕ, ಸಾಂಸ್ಕೃತಿಕ ಬಾಂಧವ್ಯ ಹೆಚ್ಚಬೇಕೆಂದು ಅವರು ಬಯಸಿದರು. ಜರ್ಮನಿಯನ್ನು ಒಂದುಗೂಡಿಸುವ ಬಗೆಗೆ ಯಾವ ನಿರ್ಧಾರಕ್ಕೂ ಅವರು ಬರಲಿಲ್ಲ.

ಎರಡನೆಯ ಶೃಂಗಸಭೆ ಪ್ಯಾರಿಸಿನಲ್ಲಿ 1960 ಮೇ 16ರಂದು ನಡೆಯಬೇಕಾಗಿತ್ತು. ಅಮೆರಿಕದಿಂದ ಐಸೆನ್‌ಹೋವರ್. ಇಂಗ್ಲೆಂಡಿನಿಂದ ಪ್ರಧಾನಿ ಹೆರಾಲ್ಡ್ ಮ್ಯಾಕ್ಮಿಲನ್, ಫ್ರಾನ್ಸಿನಿಂದ ಅಧ್ಯಕ್ಷ ಚಾರ್ಲ್ಸ್ ದ ಗಾಲ್ ಮತ್ತು ರಷ್ಯದಿಂದ ಪ್ರಧಾನಿ ಕ್ರುಶ್ಚೇವ್ ಪ್ಯಾರಿಸಿಗೆ ಶೃಂಗಸಭೆಗಾಗಿ ಬಂದಿದ್ದರು. ಅಮೆರಿಕ ಸಂಯುಕ್ತ ಸಂಸ್ಥಾನ ಗೂಢಚಾರಿಕೆಗಾಗಿ ತನ್ನ ವಿಮಾನವನ್ನು ರಷ್ಯದ ಮೇಲೆ ಹಾರಲು ಬಿಟ್ಟ ಪ್ರಸಂಗದಿಂದ ಶೃಂಗಸಭೆ ಜರಗಲಿಲ್ಲ.

ವಿಯೆನ್ನದಲ್ಲಿ 1961ರ ಜೂನ್ 3 ಮತ್ತು 4ರಂದು ಮೂರನೆಯ ಶೃಂಗಸಭೆ ನಡೆಯಿತು. ಅಮೆರಿಕದಿಂದ ಜಾನ್ ಎಫ್. ಕೆನಡಿ ಮತ್ತು ರಷ್ಯದಿಂದ ಕ್ರುಶ್ಚೇವ್ ಈ ಸಭೆಗೆ ಬಂದಿದ್ದರು. ಶಸ್ತ್ರಾಸ್ತ್ರಗಳನ್ನು ಕಡಮೆ ಮಾಡಬೇಕೆನ್ನುವ ಮತ್ತಿತರ ವಿಷಯಗಳು ಚರ್ಚಿಸಲ್ಪಟ್ಟವು.

ಯಾವ ಬಲಾಢ್ಯ ಬಣವನ್ನೂ ಸೇರದೆ ಅಲಿಪ್ತ ನೀತಿಯನ್ನು ಅನುಸರಿಸುವ ರಾಷ್ಟ್ರಗಳ ಪ್ರಮುಖರ ಶೃಂಗಸಭೆಯೂ ಜರಗಿದೆ. ಭಾರತ. ಯುಗೊಸ್ಲಾವಿಯ, ಐಕ್ಯ ಅರಬ್ ಗಣರಾಜ್ಯ ಇವುಗಳ ಅತ್ಯುನ್ನತ ನಾಯಕರು ಈ ಶೃಂಗಸಭೆಗಳ[illegible] ಮೂರು ರಾಷ್ಟ್ರಗಳ [illegible]

ಶೃಂಗಸಭೆಗಳು [illegible] ನಡೆಸಿ, ಶೃಂಗಸಭೆಯಲ್ಲಿ ಚರ್ಚಿಸಬೇಕಾದ ಅಂಶಗಳನ್ನು ತಮ್ಮ [illegible] ಸೂಚಿಸುತ್ತಾರೆ. ಅಗತ್ಯವಿರುವ ಪೂರ್ವಭಾವಿ ವಿಚಾರ ವಿನಿಮಯವನ್ನು ನಡೆಸುತ್ತಾರೆ.

ಶೃಂಗಸಭೆಗಳು ನಡೆಯುವುದು ಮನುಷ್ಯಕುಲಕ್ಕೆ ಕಲ್ಯಾಣಕಾರಿ. ಹಲವು ರಾಷ್ಟ್ರಗಳ ನಾಯಕರು ಸೇರಿ. ವಿಷಯಗಳನ್ನು ಚರ್ಚಿಸುವ ಸಾಧ್ಯತೆ ಇರುವ ವರೆಗೆ ಆ ರಾಷ್ಟ್ರಗಳಿಗೆ ಪರಸ್ಪರ ಯುದ್ಧದ ಭಯವಿಲ್ಲ. [illegible] ಗಳ ನಾಯಕರು ಸೇರಿ ಸಭೆ ನಡೆಸಿದರೆ ಮಹಾಯುದ್ಧಗಳ [illegible]ಪಾಯವಿಲ್ಲ.

## [illegible]

ಒಂದಲ್ಲ, ಎರಡಲ್ಲ. ಸಾಲಾಗಿ ಮೂರು ಸಾವಿರ ಕಂಚಿನ ತೂಗುದೀಪಗಳು ! ಭಕ್ತಿಯ ಕಾಣಿಕೆ ಇವು

ಈ ಅಪೂರ್ವ ದೃಶ್ಯವನ್ನು ಜಪಾನಿನ ನೀರಾ ಎಂಬಲ್ಲಿರುವ ಕಸುಗ [illegible]ನದಲ್ಲಿ ಕಾಣಬಹುದು. ಕಸುಗ, ಜಪಾನಿನಲ್ಲಿರುವ ಷಿಂಟೋ [illegible]

ಷಿಂಟೋ ಎಂದರೆ 'ದೇವರ ದಾರಿ' ; ಜಪಾನಿಯರ ಪ್ರಾಚೀನ ಧರ್ಮ. ಆರನೆಯ ಶತಮಾನದಲ್ಲಿ ಜಪಾನಿಗೆ ಬೌದ್ಧ ಧರ್ಮದ ಪ್ರವೇಶವಾಯಿತು. ಅದಕ್ಕೂ ಮೊದಲು ಐದನೆಯ ಶತಮಾನದಲ್ಲಿ ಚೀನದ ಧರ್ಮ. ನಾಗರಿಕತೆ ಇವು ಜಪಾನಿನ ಮೇಲೆ ಪ್ರಭಾವ ಬೀರಿದ್ದುವು. ಆದರೆ ಇವೆರಡು ಧರ್ಮಗಳ ಪರಿಚಯವಾಗುವುದಕ್ಕೆ ಮೊದಲು ಜಪಾನೀಯರು ಪ್ರಕೃತಿಯ ಆರಾಧಕರಾಗಿದ್ದರು. ನದಿ, ಸಮುದ್ರ, ಜಲಪಾತ. ಅರಣ್ಯ ಇವನ್ನು ಅವುಗಳ ಅಧಿದೇವತೆಗಳ ಮೂಲಕ ಆರಾಧಿಸುತ್ತಿದ್ದರು. ಈ ಪ್ರಕೃತಿ ಪೂಜಕರ ಧರ್ಮವೇ ಷಿಂಟೋ. ಈ ಮತದ ಪೌರಾಣಿಕ ಕಥೆಗಳು. ದೇವತೆಗಳ [illegible] ನಾಡನ್ನೂ ಜನರನ್ನೂ ಸೃಷ್ಟಿಸಿದರೆಂದು ವರ್ಣಿಸುತ್ತವೆ. [illegible] ಎಂದರೆ 'ಸೂರ್ಯನಂತೆ ವಿಶ್ವವನ್ನು ಬೆಳಗುವುದು.' ಜಪಾನಿನ ಚಕ್ರವರ್ತಿಯ ವಂಶದವರು ಈಕೆಯ ಸಂತಾನದವರು ಎಂದು ನಂಬಿಕೆ. ಈ ಕಾರಣದಿಂದ ಚಕ್ರವರ್ತಿಯ ಮನೆತನದ ಪೂಜೆಯನ್ನು ಷಿಂಟೋ ಒಳಗೊಂಡಿದೆ.

ಇದು ಬಹಳ ಸರಳವಾದ ಧರ್ಮ. ಪುರಾತನ ಜಪಾನೀಯರಲ್ಲಿ ಯಾವ [illegible] ಶಕ್ತಿಗಳ ಬಗೆಗೆ ಅದರಲ್ಲೂ ತಮಗೆ ಹಿತಕರವಾಗಿ, ದಯಾಪರವಾಗಿ ಕಾಣುತ್ತಿದ್ದ ಶಕ್ತಿಗಳನ್ನು ಕುರಿತು ತಮ್ಮ ಕೃತಜ್ಞತೆಯನ್ನು, ಮೆಚ್ಚುಗೆಯನ್ನು ಸೂಚಿಸುತ್ತಿದ್ದರು. ಈ ಶಕ್ತಿಗಳನ್ನು ಕಮಿ ಎನ್ನುತ್ತಿದ್ದರು. ಕಮಿ ಎಂದರೆ ದೇವರು. ಮೇಲಿರುವ ಶಕ್ತಿ ದೈವೀಶಕ್ತಿ ಎಂದರ್ಥ. ದೇವರು, ದೈವೀಶಕ್ತಿ ಇವುಗಳ ಬಗೆಗೆ ಅವರಿಗೆ ಯಾವುದೇ ನಿರ್ದಿಷ್ಟ ಕಲ್ಪನೆ ಇರದಿದ್ದರೂ ಯಾವ ಶಕ್ತಿ ತಮ್ಮ ಗ್ರಹಿಕೆಗೆ ಮೀರಿ ಗೌರವಕ್ಕೆ ಪೂಜೆಗೆ ಅರ್ಹವೆಂದು ತೋರಿತೋ ಅದನ್ನು 'ಕಮಿ' ಎಂದು ಕರೆದರು. ಇದರಿಂದಾಗಿಯೇ ದೈವಿಕ, ಭೌತಿಕಶಕ್ತಿಗಳನ್ನು, ಕೊನೆಗೆ ಮರ, ಗಿಡ, ಕಲ್ಲು ಬಂಡೆ. ಪಕ್ಷಿ. ಪ್ರಾಣಿ. ಜಲಚರ. ಭೂಕಂಪ. ಗುಡುಗು, ಸಿಡಿಲು. ನೀರು. ಸೂರ್ಯ, ಚಂದ್ರ–ಇವನ್ನು 'ಕಮಿ' ಎಂದು ಕರೆದು ಪೂಜಿಸಿದರು. ಸೂರ್ಯದೇವತೆಯ ಪೂಜೆಗೆ ಇವರಲ್ಲಿ ಅಗ್ರಸ್ಥಾನ. ತಮ್ಮ ಸಾಂಪ್ರದಾಯಿಕ ಧರ್ಮವನ್ನು ಬೌದ್ಧಧರ್ಮದಿಂದ ಪ್ರತ್ಯೇಕವಾಗಿಡಲೆಂದು ಮುಂದೆ ಅದಕ್ಕೆ ಷಿಂಟೋ ಎಂಬ ಹೆಸರನ್ನು ಕೊಟ್ಟರೆಂದು ಹೇಳುತ್ತಾರೆ.

ಸೂರ್ಯದೇವತೆಯನ್ನು ಐಸ್ ಎಂಬ ಭವ್ಯ ಮಂದಿರದಲ್ಲಿ ಪ್ರತಿಷ್ಠಾಪನೆ ಮಾಡಲಾಗಿದೆ. ಷಿಂಟೋ ದೇವಸ್ಥಾನದ ವಾಸ್ತುಶಿಲ್ಪವೂ ಸರಳ. ಗುಡಿ [illegible]

ಚಕ್ರವರ್ತಿಯನ್ನು ದೈವೀಶಕ್ತಿಯ ಪ್ರತೀಕವೆಂದು ತಿಳಿದಿರುವುದರಿಂದ ನೂತನ ಚಕ್ರವರ್ತಿಯ ರಾಜ್ಯಾಭಿಷೇಕವೇ ಅತ್ಯಂತ ಹಿರಿಯ ಷಿಂಟೋ [illegible]

ತ್ತವೆ. ನಿತ್ಯಜೀವನದ ಬಿಡುವಿಲ್ಲದ ದುಡಿತದಿಂದ ದಣಿದ ಮಾನವ ತನಗಿಷ್ಟವಾದ ಸಂಘದ ಆಶ್ರಯದಲ್ಲಿ ಸ್ನೇಹಿತರ ನಡುವೆ ಹಾಯಾಗಿ ಕಾಲಕಳೆದು. ದಣಿವನ್ನು ಮರೆಯುತ್ತಾನೆ. ಆಧುನಿಕ ಕಾಲದಲ್ಲಂತೂ ಸಂಘಸಂಸ್ಥೆಗಳು ಮಾನವನ ಸಾಮಾಜಿಕ ಜೀವನದ ಅನಿವಾರ್ಯ ಅಂಗಗಳಾಗಿ ಪರಿಣಮಿಸಿವೆ.

ಸಂಘಗಳು ಪ್ರತಿಯೊಂದು ನಗರ ಮತ್ತು ಹಳ್ಳಿಗಳಲ್ಲಿ ಸಾಂಸ್ಕೃತಿಕ ಜೀವನದ ಕೇಂದ್ರಗಳಾಗಿವೆ. ಸಂಗೀತ, ನೃತ್ಯ, ಸಾಹಿತ್ಯ, ಚಿತ್ರ ಮೊದಲಾದ ಕಲೆಗಳ ವಿಕಾಸಕ್ಕೆ ಸಂಘಗಳು ಅತ್ಯುತ್ತಮ ಸಾಧನಗಳು. ಮನೋರಂಜನೆ ಯಿಂದ ಹಿಡಿದು ಆರ್ಥಿಕಸ್ಥಿತಿಯನ್ನು ಉತ್ತಮಗೊಳಿಸಿಕೊಳ್ಳುವುದು, ವಿಜ್ಞಾನದ ಪ್ರಗತಿ, ದೇಶದೇಶಗಳ ಮೈತ್ರಿಯನ್ನು ಬೆಳೆಸುವುದು—ಇಂಥ ಬಹು ದೊಡ್ಡ ಕಾರ್ಯ ಸಾಧನೆಯವರೆಗೆ ಯಾವ ಉದ್ದೇಶಕ್ಕಾದರೂ ಸಂಘ ಜನ್ಮತಾಳಬಹುದು. ಸಂಘದ ಸದಸ್ಯರೆಲ್ಲ ಅದರ ಉದ್ದೇಶವನ್ನು ಒಪ್ಪಿಕೊಳ್ಳಬೇಕು. ನಿಯಮಗಳನ್ನು ಪಾಲಿಸಬೇಕು. ವ್ಯಕ್ತಿಗಿಂತ ಸಂಘದ ನಿರಾತಂಕ ಮುನ್ನಡೆ ಮುಖ್ಯ ಎಂಬುದನ್ನು ಮನಗಾಣಬೇಕು.

## ಸಂಜ್ಞೆ

ಸಂಜ್ಞೆ ಎಂದರೇನು ಗೊತ್ತೆ ? 'ಗೊತ್ತು' ಎಂದು ತಿಳಿಸಲು ತಲೆಯನ್ನು ಆಡಿಸಬಹುದು, ಅಲ್ಲವೆ ? ಆ ಚಲನೆಯೇ ಸಂಜ್ಞೆ. ಅದು ನಮಗೆ ಎಷ್ಟು ರೂಢಿಯಾಗಿದೆ ಎಂದರೆ, ಅರಿವಿಲ್ಲದೆಯೇ ನಮ್ಮ ಮಾತು ಸಂಜ್ಞೆ ಗಳೊಡನೆ ಒಂದಾಗಿ ಬೆರೆತುಹೋಗಿದೆ. ಕೆಲವೊಮ್ಮೆ ಬಾಯಿಯಲ್ಲಿ ಏನನ್ನೂ ನುಡಿಯದೆ ತಲೆಯಲ್ಲೇ 'ಹೌದು', 'ಇಲ್ಲ' ಎನ್ನುವುದುಂಟು. ಉತ್ತರ ಅಮೆರಿಕದ ಕೆಲವು ಇಂಡಿಯನ್ ಜನಾಂಗಗಳು ಭಾಷೆಯನ್ನು ಬಹಳ ಕಡಮೆಯಾಗಿಯೂ ಸಂಜ್ಞೆಗಳನ್ನೇ ಹೆಚ್ಚು ಪ್ರಮಾಣದಲ್ಲಿಯೂ ಇಂದಿಗೂ ಬಳಸುತ್ತಿದ್ದಾರೆ.

ಸಂಜ್ಞೆಗಳ ಬಗೆಗೆ ಪ್ರಪಂಚದಾದ್ಯಂತ ಜನರಿಗೆ ಬಹಳ ಕುತೂಹಲ. ಹತ್ತೊಂಬತ್ತನೆಯ ಶತಮಾನದಲ್ಲಿ ವಿದ್ವಾಂಸರು ಈ ವಿಷಯವಾಗಿ ವೈಜ್ಞಾನಿಕ ಸಂಶೋಧನೆಗಳನ್ನು ಆರಂಭಿಸಿದರು. ಇಪ್ಪತ್ತನೆಯ ಶತಮಾನ ದಲ್ಲಿ ಸಮಾಜ ವಿಜ್ಞಾನಿಗಳು ಮನೋವಿಜ್ಞಾನಿಗಳು ಮಾನವ ವಿಜ್ಞಾನಿಗಳು ಎಲ್ಲರೂ ಸಂಜ್ಞೆಗಳ ಅಧ್ಯಯನದಲ್ಲಿ ಆಸಕ್ತಿ ತಾಳಿದರು.

ಸಂಜ್ಞೆ ಭಾಷೆಯ ಮೂಲ ಎಂದು ವಿದ್ವಾಂಸರ ಅಭಿಪ್ರಾಯ. ಈ ಅಭಿ ಪ್ರಾಯ ಹದಿನೇಳನೆಯ ಶತಮಾನದಲ್ಲಿಯೇ ರೂಪುಗೊಂಡಿದ್ದಿತು. ಮೂಕರಿ ಗಂತೂ ಸಂಜ್ಞೆಯೇ ಭಾಷೆ. ಎಲ್ಲ ದೇಶಗಳಲ್ಲಿಯೂ ಸಂಜ್ಞೆಗಳು ಒಂದೇ ಬಗೆಯವೇ ? 'ಹೌದು', 'ಇಲ್ಲ', 'ಬೇಕು', 'ಬೇಡ' ಇಂಥ ಅಭಿಪ್ರಾಯ ಗಳನ್ನು ವ್ಯಕ್ತಪಡಿಸಲು ಒಂದೇ ಬಗೆಯ ಸಂಜ್ಞೆಗಳನ್ನು ಎಲ್ಲರೂ ಬಳಸು ವರೇ ? ಹಾಗೇನೂ ಇಲ್ಲ. 'ಇಲ್ಲ' ಎನ್ನಲು ತಲೆಯನ್ನು ಅಲ್ಲಾಡಿಸುವುದು ನಮ್ಮಲ್ಲಿ ಸಾಮಾನ್ಯವಷ್ಟೆ ? ಆದರೆ ಗ್ರೀಕರಲ್ಲಿ ಕಣ್ಣುಮುಚ್ಚಿಕೊಂಡು ತಲೆಯನ್ನು ಹಿಂದಕ್ಕೆ ವಾಲಿಸಿದರೆ 'ಇಲ್ಲ' ಎಂದು ಅರ್ಥ. ಒಂದು ಎಂಬು ದನ್ನು ತೋರಿಸಲು ನಾವು ತೋರುಬೆರಳನ್ನು ತೋರಿಸಿದರೆ ಸ್ವಿಟ್ಜರ್ ಲೆಂಡಿನವರು ಹೆಬ್ಬೆಟ್ಟಿನಿಂದ ಸೂಚಿಸುತ್ತಾರೆ.

ಯಾರನ್ನಾದರೂ ಸ್ವಾಗತಿಸಬೇಕಾದರೆ ನಮ್ಮಲ್ಲಿ ಅವರಿಗೆ ನಮಸ್ಕಾರ ಹೇಳಿ, ತುಂಬ ಬೇಕಾದವರಾದರೆ ಬೆನ್ನಮೇಲೆ ಅಥವಾ ಭುಜದ ಮೇಲೆ ಕೈಹಾಕಿ ಬರಮಾಡಿಕೊಳ್ಳುತ್ತೇವೆ. ಚೀನದೇಶದಲ್ಲಿ ಇಬ್ಬರೂ ತಲೆಬಾಗಿ ಅವರವರ ಕೈಯನ್ನು ಅವರವರೇ ಕುಲುಕಿಕೊಳ್ಳುತ್ತಾರೆ. ಆಫ್ರಿಕದ ಒಂದು ಬಣದವರು ಹೊಸದಾಗಿ ಪರಿಚಯವಾದಾಗ ಒಬ್ಬರಿ ಗೊಬ್ಬರು ಮೂಗನ್ನು ಉಜ್ಜುತ್ತಾರೆ. ಪಾಲಿನೇಷ್ಯನರು ತಮ್ಮ ಸ್ನೇಹಿತರ ಕಾಲು ಅಥವಾ ಕೈಗಳಿಗೆ ಮುಖವನ್ನುಜ್ಜುತ್ತಾರೆ. ಇವು ಆಯಾ ಪ್ರದೇಶಗಳಲ್ಲಿ ಆತ್ಮೀಯತೆಯನ್ನು ತೋರಿಸುವ ಪ್ರಚಲಿತವಿರುವ ಸಂಜ್ಞೆಗಳು.

ಒಂದು ಭಾಷೆಯಲ್ಲಿ ಒಂದು ಭಾವನೆಗೆ ಪ್ರಚಲಿತವಾಗಿರುವ ಸಂಜ್ಞೆ ಮತ್ತೊಂದು ಭಾಷೆಯಲ್ಲಿ ಇಲ್ಲದಿರಬಹುದು.

ಸಂಜ್ಞೆಗಳ ಬಳಕೆಯ ಪ್ರಮಾಣದಲ್ಲಿಯೂ ವ್ಯತ್ಯಾಸವುಂಟು. ಭಾವೋ ದ್ರಿಕ್ತರಾದಾಗ ಇಂಗ್ಲಿಷರು ಸಂಜ್ಞೆಗಳನ್ನು ಹೆಚ್ಚಾಗಿ ಬಳಸುತ್ತಾರೆ. ಆದರೆ ಈಜಿಪ್ಟಿನವರು ಉದ್ರಿಕ್ತರಾದ ಸಮಯದಲ್ಲಿ ಕಡಮೆ ಪ್ರಮಾಣದಲ್ಲಿ ಸಂಜ್ಞೆ ಗಳನ್ನು ಬಳಸುತ್ತಾರೆ.

ಸಂಜ್ಞೆ ಯಾವಾಗಲೂ ಮಾತನ್ನು ಹಿಂಬಾಲಿಸಿಯೇ ಬರಬೇಕೆಂಬ ನಿಯಮವಿಲ್ಲ. ಮಾತನ್ನು ಆಡದೆಯೇ ಬರಿಯ ಸಂಜ್ಞೆಗಳ ಮೂಲಕವೇ ಅಭಿಪ್ರಾಯವನ್ನು ವ್ಯಕ್ತಪಡಿಸಬಹುದು. ಇವುಗಳನ್ನು 'ಸ್ವತಂತ್ರ ಸಂಜ್ಞೆಗಳು' ಎನ್ನುತ್ತೇವೆ. ಈ ಸ್ವತಂತ್ರ ಸಂಜ್ಞೆಗಳು ಎಷ್ಟೋ ವೇಳೆ ನಮ್ಮ ಅರಿವಿಗೆ ಸ್ವಲ್ಪವೂ ಬಂದಿರುವುದಿಲ್ಲ. ಮಾತನಾಡುವಾಗ ಧ್ವನಿಯೆಷ್ಟು ಸಹಜವೋ ಅಷ್ಟೇ ಸಹಜವಾಗಿ ಮಾತಿಲ್ಲದಾಗ ಈ ಸಂಜ್ಞೆಗಳು ಹೊರ ಬೀಳುತ್ತವೆ. ಎದುರಿಗಿಲ್ಲದಿರುವ ವ್ಯಕ್ತಿಯೊಡನೆ ಟೆಲಿಫೋನಿನ ಮೂಲಕ ಸಂಭಾಷಿಸುವಾಗ ಈ ಸ್ವತಂತ್ರ ಸಂಜ್ಞೆ ಸಹಜವಾಗಿಯೇ ಬಿಟ್ಟುಹೋಗು ತ್ತದೆ. ಆದರೆ ಮಾತಿನೊಡಗೂಡಿ ಬರುವ ಸಂಜ್ಞೆ ಆಗಲೂ ಹೊರ ಹೊಮ್ಮುವುದುಂಟು.

ಮಾತನ್ನು ಹಿಂಬಾಲಿಸಿ ಬರುವ ಸಂಜ್ಞೆಗಳಲ್ಲಿ ಎರಡು ವಿಧ : ವ್ಯಕ್ತಿಗೆ ವಿಶೇಷವಾಗಿರುವ ಸಂಜ್ಞೆ ; ಸರ್ವಜನಸಾಮಾನ್ಯವಾಗಿರುವ ಸಂಜ್ಞೆ.

ಸಂಜ್ಞೆಗಳ ಪ್ರಪಂಚದ ಆಳ ಅಗಲಗಳನ್ನು ಕಂಡುಹಿಡಿಯುವುದು ಕಷ್ಟದ ಕೆಲಸ. ಅವುಗಳ ಬಗೆಗೆ ಇನ್ನಷ್ಟು ಸಂಶೋಧನೆ ನಡೆಯಬೇಕಾಗಿದೆ.

## ಸಂತರು

ಕಬೀರದಾಸ, ಸೂರದಾಸ, ಮೀರಾ, ಅವ್ವೆಯಾರ್, ಪುರಂದರದಾಸ, ಕನಕದಾಸ ಮೊದಲಾದವರನ್ನು 'ಸಂತರು' ಎನ್ನುತ್ತೇವೆ. ಸಂತರು ಪವಿತ್ರ ವಾದ ಜೀವನವನ್ನು ನಡೆಸುತ್ತ ತಮ್ಮನ್ನು ಭಗವಂತನಿಗೇ ಮೀಸಲಾಗಿಟ್ಟು ಭಕ್ತಿಯ ಪರಾಕಾಷ್ಠೆಯನ್ನು ಮುಟ್ಟಿದವರು. ಹಣ, ಅಧಿಕಾರ, ಸುಖ ಎಲ್ಲದರ ಆಸೆಯನ್ನು ಬಿಟ್ಟವರು ; ಭಗವಂತನ ಧ್ಯಾನ ಮಾಡುತ್ತ, ಜನಸಾಮಾನ್ಯರಿಗೆ ಹೇಗೆ ಬದುಕಬೇಕು ಎನ್ನುವುದನ್ನು ತಿಳಿಸುತ್ತ ತಮ್ಮ ಬಾಳನ್ನು ಕಳೆಯುವವರು.

ಸಾಮಾನ್ಯವಾಗಿ ಇವರು ತಮ್ಮ ತಮ್ಮ ಆರಾಧ್ಯದೈವವನ್ನು ಕುರಿತ ಕೀರ್ತನೆಗಳನ್ನು ರಚಿಸಿ ಹಾಡಿದ್ದಾರೆ—ಮೀರಾ ಕೃಷ್ಣನ ಮೇಲೆ. ಪುರಂದರ ದಾಸರು ವಿಠಲನ ಮೇಲೆ, ಕಬೀರದಾಸ ರಾಮನ ಮೇಲೆ.

ಸಂತರೆಂದು ಹಿಂದೂಗಳಿಂದ ಗೌರವಕ್ಕೆ ಪಾತ್ರರಾದವರು ಧರ್ಮದ ಮಾರ್ಗದಲ್ಲಿ ಆಧ್ಯಾತ್ಮಿಕ ಜೀವನವನ್ನು ನಡೆಸುವ ಪುಣ್ಯಜೀವಿಗಳು. ಸಂತ ಎನ್ನುವುದು ಇವರಿಗೆ ಮತವಾಗಲಿ, ಮಠವಾಗಲಿ ಕೊಟ್ಟ ಬಿರುದಲ್ಲ.

ಯಿಂದ ರಾಷ್ಟ್ರಪತಿಸ್ಥಾನದವರೆಗೆ ಚುನಾವಣೆಗಳು, ಜನರ ಆಸ್ತಿಪಾಸ್ತಿಗಳು, ಅಪರಾಧಕ್ಕೆ ಶಿಕ್ಷೆ ಇವಕ್ಕೆಲ್ಲ ಸಂಬಂಧಿಸಿದಂತೆ ಸಾವಿರಾರು ಕಾನೂನುಗಳಿರುತ್ತವೆ. ಅಲ್ಲದೆ ಭಾರತ ಅಥವಾ ಅಮೆರಿಕದ ಸಂಯುಕ್ತ ಸಂಸ್ಥಾನದಂಥ ರಾಷ್ಟ್ರಗಳಲ್ಲಿ ರಾಷ್ಟ್ರದ ಭಾಗಗಳಾದ ಹಲವು ಸಂಸ್ಥಾನಗಳು ತಮ್ಮ ಅಗತ್ಯಗಳಿಗೆ ಅನುಗುಣವಾಗಿ ಕಾನೂನುಗಳನ್ನು ಮಾಡುತ್ತವೆ. ತಿದ್ದುತ್ತವೆ. ತೆಗೆದು ಹಾಕುತ್ತವೆ. ಇವೆಲ್ಲಕ್ಕೂ ಮೂಲಾಧಾರ ಸಂವಿಧಾನದ ವಿಧಿಗಳು. ಸಂವಿಧಾನದಲ್ಲಿಲ್ಲದ ವಿಧಿಗಳು ಸಾಮಾನ್ಯ ವಿಧಿಗಳು.

ಮೂಲಾಧಾರ ವಿಧಿಗಳಿಗೂ ಸಾಮಾನ್ಯ ವಿಧಿಗಳಿಗೂ ಬಹು ಮುಖ್ಯವಾದ ವ್ಯತ್ಯಾಸ ಉಂಟು. ಸಾಮಾನ್ಯ ವಿಧಿಗಳನ್ನು ರಾಷ್ಟ್ರಕ್ಕೆ ಸಂಸತ್ತೂ ರಾಜ್ಯಗಳಿಗೆ ಅವುಗಳ ಶಾಸನಸಭೆಗಳೂ ರಚಿಸಿಕೊಳ್ಳಬಹುದು; ಮೂಲಾಧಾರ ವಿಧಿಗಳು ಸಂವಿಧಾನದಲ್ಲಿಯೇ ಸೇರಿಹೋಗಿರುತ್ತವೆ. ಸಾಮಾನ್ಯ ವಿಧಿಗಳನ್ನು ಮಾರ್ಪಡಿಸುವುದು ಸುಲಭ; ಮೂಲಾಧಾರ ವಿಧಿಗಳನ್ನು ಮಾರ್ಪಡಿಸಬೇಕಾದರೆ ಕ್ಲಿಷ್ಟವಾದ ವಿಧಾನವನ್ನು ಅನುಸರಿಸಬೇಕಾಗುತ್ತದೆ. ಉದಾಹರಣೆಗೆ, ಭಾರತದಲ್ಲಿ ಸಾಮಾನ್ಯ ವಿಧಿಯನ್ನು ಮಾರ್ಪಡಿಸಬೇಕಾದರೆ, ಸಂಸತ್ತಿನ ಅಥವಾ ಸಂಬಂಧಪಟ್ಟ ರಾಜ್ಯದ ಶಾಸನಸಭೆಗಳ ಸದಸ್ಯರಲ್ಲಿ ಮತನೀಡಿದವರಲ್ಲಿ ಅರ್ಧಕ್ಕಿಂತ ಹೆಚ್ಚು ಮಂದಿ ಮಾರ್ಪಾಡಿನ ಪರವಾಗಿ ಮತ ನೀಡಿದರೆ ಸಾಕು. ಸಂವಿಧಾನಕ್ಕೆ ತಿದ್ದುಪಡಿ ಮಾಡುವುದು ಇನ್ನೂ ಜಟಿಲವಾದ ಕಾರ್ಯ. ತಿದ್ದುಪಡಿಗೆ ಸಂಬಂಧಪಟ್ಟ ಮಸೂದೆಯನ್ನು ಸಂಸತ್ತಿನ ಪ್ರತಿ ಸಭೆಯ ಮುಂದೆಯೂ ಮಂಡಿಸಬೇಕು. ಪ್ರತಿಯೊಂದರಲ್ಲಿಯೂ ಹಾಜರಿದ್ದ ಸದಸ್ಯರ ಮೂರರಲ್ಲಿ ಎರಡರಷ್ಟು ಬಹುಮತದಿಂದ ಮತ್ತು ಎರಡು ಸಭೆಗಳ ಒಟ್ಟು ಸದಸ್ಯರ ಸಂಖ್ಯೆಯ ಬಹುಮತದಿಂದ ಅಂಗೀಕೃತವಾಗಬೇಕು.

ಸಂವಿಧಾನಕ್ಕೆ ವಿರುದ್ಧವಾದ ಯಾವ ನಿಯಮವೂ ಕಾಯಿದೆ ಎನಿಸಿಕೊಳ್ಳುವುದಿಲ್ಲ. ಒಂದು ಕಾಯಿದೆ ಸಂವಿಧಾನಕ್ಕೆ ಅನುಗುಣವಾಗಿದೆಯೇ ಇಲ್ಲವೆ ಎಂದು ನಿರ್ಧರಿಸುವುದು ರಾಷ್ಟ್ರದ ಶ್ರೇಷ್ಠ ನ್ಯಾಯಸ್ಥಾನ (ಭಾರತದಲ್ಲಿ ಹೈಕೋರ್ಟು ಮತ್ತು ಸುಪ್ರೀಂ ಕೋರ್ಟು). ಸಂವಿಧಾನಕ್ಕೆ ವಿಶೇಷ ಮಹತ್ವ, ಪಾವಿತ್ರ್ಯ ಉಂಟು. ಏಕೆಂದರೆ ಅದನ್ನು ರೂಪಿಸುವುದಕ್ಕಾಗಿಯೇ ಆಯ್ಕೆಯಾದ ಪ್ರತಿನಿಧಿಗಳು ವಿಶೇಷ ಎಚ್ಚರಿಕೆಯಿಂದ ಪದಪದವನ್ನೂ ವಿಮರ್ಶೆಮಾಡಿ ಸಂವಿಧಾನವನ್ನು ಸಿದ್ಧಗೊಳಿಸುತ್ತಾರೆ.

ಸಂವಿಧಾನ ದೇಶದ ಆಡಳಿತ ಮೂಲತತ್ತ್ವವನ್ನೂ ರೀತಿನೀತಿಗಳನ್ನೂ ಉದ್ದೇಶಗಳನ್ನೂ ಸ್ಪಷ್ಟಪಡಿಸುತ್ತದೆ. ಪ್ರಜೆಗಳ ಹಕ್ಕುಬಾಧ್ಯತೆಗಳು, ಕಾರ್ಯಾಂಗ–ನ್ಯಾಯಾಂಗ–ಶಾಸಕಾಂಗಗಳ ಹಕ್ಕುಗಳು, ಹೊಣೆಗಳು, ಇವನ್ನು ನಿರ್ವಹಿಸುವ ರೀತಿ, ರಾಷ್ಟ್ರದ ಕೇಂದ್ರ ಸರಕಾರ ಮತ್ತು ರಾಜ್ಯ ಸರಕಾರಗಳ ಸಂಬಂಧ ಇವೆಲ್ಲವನ್ನೂ ಸಂವಿಧಾನ ನಿರೂಪಿಸುತ್ತದೆ. ಸಂವಿಧಾನದಲ್ಲಿ ಬದಲಾವಣೆಗಳನ್ನು ಮಾಡುವ ಕ್ರಮವನ್ನೂ ಸಂವಿಧಾನವೇ ಸೂಚಿಸಬೇಕು.

ಒಂದು ಸಮಾಜದಲ್ಲಿ ಹಲವು ಗುಂಪುಗಳಿರುತ್ತವೆ. ಸಂಸ್ಥೆಗಳಿರುತ್ತವೆ. ಪ್ರತಿಯೊಂದೂ ತಾನು ಅಭಿವೃದ್ಧಿ ಹೊಂದಬೇಕು ಎಂದು ಬಯಸುತ್ತದೆ. ಕಾರಖಾನೆಗಳ ಮಾಲೀಕರದೊಂದು ಗುಂಪು. ಕೆಲಸಗಾರರದು ಒಂದು ಗುಂಪು. ವರ್ತಕರದು ಒಂದು ಗುಂಪು. ಒಂದೊಂದು ಭಾಷೆಯನ್ನಾಡುವವರದು ಒಂದೊಂದು ಗುಂಪು. ಒಂದೊಂದು ಮತದವರ ಗುಂಪು ಒಂದೊಂದು— ಹೀಗೆ ಎಷ್ಟೋ ಗುಂಪುಗಳು. ಇವುಗಳಲ್ಲಿ ಸ್ಪರ್ಧೆ ಇರುತ್ತದೆ. ಪ್ರತಿ ಗುಂಪಿಗೂ ಸ್ವಾರ್ಥ ಇರುತ್ತದೆ. ಮಾಲೀಕರು ಹೆಚ್ಚು ಲಾಭ ಪಡೆಯಲು ಪ್ರಯತ್ನಿಸುತ್ತಾರೆ. ಕಾರ್ಮಿಕರು ಹೆಚ್ಚು ಪ್ರತಿಫಲ ಪಡೆಯಲು ಬಯಸುತ್ತಾರೆ. ಪ್ರತಿ ಭಾಷೆಯವರೂ ತಮ್ಮ ಭಾಷೆಯ ಅಭಿವೃದ್ಧಿಗೆ ಕಾತರರಾಗಿರುತ್ತಾರೆ. ಸಂವಿಧಾನ ಎಲ್ಲ ಗುಂಪುಗಳೂ ಇತರರ ಹಿತಕ್ಕೆ ಧಕ್ಕೆತಾರದೆ ತಮ್ಮ ಅಭಿವೃದ್ಧಿಯನ್ನು ಸಾಧಿಸುವ ಕ್ರಮವನ್ನು ನಿರೂಪಿಸುತ್ತದೆ.

ಸಂವಿಧಾನಗಳಲ್ಲಿ ಲಿಖಿತ, ಅಲಿಖಿತ ಎಂಬ ಎರಡು ಬಗೆಗಳುಂಟು. ಒಂದು ದೇಶದ ಆಡಳಿತದ ಮೂಲಭೂತ ನೀತಿ ನಿಯಮಗಳನ್ನು ಬರೆದಿಟ್ಟಿರುವುದು ಲಿಖಿತ ಸಂವಿಧಾನ. ಪ್ರಪಂಚದ ಬಹುಪಾಲು ಸಂವಿಧಾನಗಳು ಲಿಖಿತ ರೂಪದಲ್ಲಿವೆ. ಬರಹರೂಪದಲ್ಲಿ ಇಲ್ಲದೇ ಇರುವುದು ಅಲಿಖಿತ ಸಂವಿಧಾನ. ಬರಹಕ್ಕೆ ಯಾವುದನ್ನೂ ಇಳಿಸದೆ ಒಂದು ಸರಕಾರದ ಆಡಳಿತವನ್ನು ಹಿಂದಿನಿಂದ ಬಂದಿರುವ ನ್ಯಾಯಾಂಗಗಳ ತೀರ್ಮಾನ, ಶಾಸಕವಿಧಿಗಳು ಮತ್ತು ರಾಜಕೀಯ ನಡಾವಳಿಗಳ ಸಹಾಯದಿಂದ ನಡೆಸುವುದು ಅಲಿಖಿತ ಸಂವಿಧಾನದ ರೀತಿ. ಬ್ರಿಟನಿನದು ಅಲಿಖಿತ ಸಂವಿಧಾನ. ಭಾರತ ಮತ್ತು ಅಮೆರಿಕ ಸಂಯುಕ್ತ ಸಂಸ್ಥಾನಗಳಲ್ಲಿ ಲಿಖಿತ ಸಂವಿಧಾನಗಳಿವೆ.

ಹೊಸ ಪರಿಸ್ಥಿತಿಗೆ ಅನುಗುಣವಾಗಿ ಬದಲಾವಣೆಗಳನ್ನು ಜಾರಿಗೆ ತರಬೇಕಾದಾಗ ಹೊಸ ಸಂವಿಧಾನವನ್ನು ತಿದ್ದುವಂತಿರಬೇಕು. ಈ ದೃಷ್ಟಿಯಿಂದ ತಿದ್ದಬಲ್ಲ ಸಂವಿಧಾನ ಮತ್ತು ಕಟ್ಟುನಿಟ್ಟಾದ ಸಂವಿಧಾನ ಎಂದು ಎರಡು ವಿಧಗಳಿವೆ. ಕಟ್ಟುನಿಟ್ಟಿನ ಸಂವಿಧಾನಗಳಲ್ಲಿ ಬದಲಾವಣೆ ಮಾಡುವುದು ಬಹಳ ಕಷ್ಟ. ಅತ್ಯಂತ ವಿಶೇಷ ಸಂದರ್ಭಗಳಲ್ಲಲ್ಲದೆ ಅಂಥ ಬದಲಾವಣೆ ಸಾಧ್ಯವಿಲ್ಲ. ಲಿಖಿತ ಸಂವಿಧಾನಗಳನ್ನು ಕೆಲವು ವೇಳೆ ಕಟ್ಟುನಿಟ್ಟಾದ ಸಂವಿಧಾನ ಎಂದು ಕರೆಯುತ್ತಾರೆ. ಏಕೆಂದರೆ ಇಂಥ ಸಂವಿಧಾನಗಳ ನಿಯಮವನ್ನು ಬದಲಿಸುವಾಗ ವಿಶೇಷ ಮಾರ್ಗಗಳನ್ನು ಅನುಸರಿಸಬೇಕಾಗುತ್ತದೆ. ಅಮೆರಿಕ ಸಂಯುಕ್ತ ಸಂಸ್ಥಾನ ಸಂವಿಧಾನ ತಿದ್ದಬಲ್ಲ ಸಂವಿಧಾನ. ಭಾರತದ ಸಂವಿಧಾನವನ್ನು ಅತಿ ಸುಲಭವಾಗಿ ತಿದ್ದಲಾಗುವುದಿಲ್ಲ. ಆದರೆ ನಮ್ಮದು ಅತಿಕಟ್ಟುನಿಟ್ಟಿನ ಸಂವಿಧಾನವೂ ಅಲ್ಲ.

ಸಂವಿಧಾನಗಳಲ್ಲಿ ಸಂಯುಕ್ತ ಸಂವಿಧಾನ ಮತ್ತು ಏಕ ಸಂವಿಧಾನ ಎಂಬ ಎರಡು ಬಗೆಗಳುಂಟು. ಸಂಯುಕ್ತ ಸಂವಿಧಾನ ಒಕ್ಕೂಟ ರಾಷ್ಟ್ರಗಳಿಗೆ ಅನ್ವಯಿಸುತ್ತದೆ. ಒಂದು ರಾಷ್ಟ್ರದ ಬೇರೆ ಬೇರೆ ರಾಜ್ಯಗಳು ಒಟ್ಟುಗೂಡಿ ಸಂಯುಕ್ತ ಸಂವಿಧಾನವನ್ನು ರಚಿಸಿದರೂ ಪ್ರತಿಯೊಂದು ರಾಜ್ಯವೂ ತನ್ನದೇ ಆದ ವಿಶಿಷ್ಟ ಕಾಯಿದೆ ಕಾನೂನುಗಳನ್ನು ಹೊಂದಿರುವ ಅವಕಾಶವಿರುತ್ತದೆ. ಒಕ್ಕೂಟಗಳಲ್ಲದ ರಾಷ್ಟ್ರಗಳಲ್ಲಿ ಆಡಳಿತ ಕೇಂದ್ರ ಸರಕಾರವೊಂದರ ಅಧೀನದಲ್ಲಿರುವುದರಿಂದ ಅಲ್ಲಿ ಏಕಸಂವಿಧಾನ ಜಾರಿಯಲ್ಲಿರುತ್ತದೆ. ಭಾರತ, ಅಮೆರಿಕದ ಸಂಯುಕ್ತ ಸಂಸ್ಥಾನ, ಸ್ವಿಟ್ಜರ್‌ಲೆಂಡ್ ಇವು ಸಂಯುಕ್ತ ಸಂವಿಧಾನವನ್ನು ಹೊಂದಿವೆ. ಸಿಂಹಳ ಏಕ ಸಂವಿಧಾನವನ್ನು ಹೊಂದಿದೆ. ಏಕೆಂದರೆ ಭಾರತದಲ್ಲಿರುವಂತೆ ಸಿಂಹಳದಲ್ಲಿ ಹಲವು ಸಂಸ್ಥಾನಗಳಿಲ್ಲ.

ಸಂವಿಧಾನಗಳಲ್ಲಿ ಪ್ರಜಾಪ್ರಭುತ್ವ ಮತ್ತು ಪ್ರಜಾಪ್ರಭುತ್ವವಿರೋಧ ಸಂವಿಧಾನಗಳೂ ಇವೆ. ಪ್ರಜಾಪ್ರಭುತ್ವ ಸಂವಿಧಾನದಲ್ಲಿ ಶ್ರೀಸಾಮಾನ್ಯರಿಗೂ ಆಡಳಿತ ವಿಷಯಗಳಲ್ಲಿ ನೇರವಾದ ಪ್ರವೇಶ ಸೌಲಭ್ಯವುಂಟು. ಭಾರತದ್ದು ಪ್ರಜಾಪ್ರಭುತ್ವ ಸಂವಿಧಾನ. ನಾಜಿಗಳ ಜರ್ಮನಿಯಲ್ಲಿ ಸಂವಿಧಾನವಿತ್ತು. ಆದರೆ ಅದು ಪ್ರಜೆಗಳಿಗೆ ಯಾವ ಹಕ್ಕನ್ನೂ ನೀಡಲಿಲ್ಲ. ಇಂಥ ಸಂವಿಧಾನ ಪ್ರಜಾಪ್ರಭುತ್ವವಿರೋಧ ಸಂವಿಧಾನ.

ರೂಪದಲ್ಲಿ ಪ್ರಜಾಪ್ರಭುತ್ವ ಸಂವಿಧಾನವಾಗಿದ್ದು ರೂಢಿಯಲ್ಲಿ ಅದನ್ನು ಜಾರಿಗೆ ತರಲು ಅಸಾಧ್ಯವಾಗಿರಬಹುದು. ಉದಾಹರಣೆಗೆ ಚುನಾವಣೆಗೆ ಸ್ಪರ್ಧಿಸಲು ಪ್ರತಿಯೊಬ್ಬ ಪೌರನಿಗೆ ಸಂವಿಧಾನದ ಪ್ರಕಾರ ಅವಕಾಶವಿರಬಹುದು. ಆದರೆ ಚುನಾವಣೆಗೆ ನಿಲ್ಲುವಾಗ ಕೊಡಬೇಕಾದ ಠೇವಣಿಯ ಹಣ

ಬಹು ವೆಚ್ಚವಾದರೆ ಅಥವಾ ಚುನಾವಣೆಗಾಗಿ ಸ್ಪರ್ಧೆ ಏರ್ಪಡಬೇಕಾದ ದಾಗ ಬಹು ವೆಚ್ಚವಾದರೆ ಸಾಮಾನ್ಯ ಮನುಷ್ಯ ಸ್ಪರ್ಧಿಸಲು ಸಾಧ್ಯವಾಗುವುದಿಲ್ಲ. ಪ್ರಜೆಗಳ ಪ್ರತಿನಿಧಿಗಳಿಗೆ ತಿಂಗಳಿಗೆ ಯಾವ ಸಂಬಳ ಅಥವಾ ಗೌರವ ಧನ ಕೊಡುವುದಿಲ್ಲ ಎಂದಾದರೆ, ಬೇರೆ ವರಮಾನ ಇಲ್ಲದವರು ಶಾಸನಸಭೆ ಸಂಸತ್ತುಗಳನ್ನು ಪ್ರವೇಶಿಸುವಂತಿಲ್ಲ. ಆದುದರಿಂದ ಪ್ರಜಾಪ್ರಭುತ್ವ ಸಂವಿಧಾನ ಕಾರ್ಯರೂಪದಲ್ಲಿಯೂ ನಿಜವಾಗಿ ಪ್ರಜಾಪ್ರಭುತ್ವವಾಗುವಂತೆ ಎಚ್ಚರಿಕೆ ವಹಿಸಬೇಕು.

ಲಿಖಿತ ಸಂವಿಧಾನವನ್ನು ಅನುಸರಿಸುವ ದೇಶದಲ್ಲಿ ಸಂವಿಧಾನದ ನಿಯಮಗಳನ್ನು ಸಿದ್ಧಪಡಿಸಲು ಆರಂಭದಲ್ಲಿ ಪ್ರತಿನಿಧಿಗಳನ್ನು ಚುನಾಯಿಸುತ್ತಾರೆ. ಅದು ಸಂವಿಧಾನ ರಚನಾಸಭೆ. ಇದರ ಸದಸ್ಯರು ಸಮಾಲೋಚನೆ ನಡೆಸಿ ಕರಡುಪ್ರತಿಯನ್ನು ತಯಾರಿಸುತ್ತಾರೆ. ಅದು ಚರ್ಚೆಗೊಳಗಾಗಿ ಸ್ವೀಕೃತವಾಗುತ್ತದೆ. ರಾಷ್ಟ್ರದ ಸಂವಿಧಾನ ಸಿದ್ಧಗೊಳ್ಳುತ್ತದೆ. ಸಂಸತ್ತಿನ ಒಪ್ಪಿಗೆಯಾದ ಮೇಲೆ ಸಂವಿಧಾನ ಜಾರಿಗೆ ಬರುತ್ತದೆ. (ಭಾರತ ಸಂವಿಧಾನ ರಚನಾಸಭೆ ನೂತನ ಸಂವಿಧಾನವನ್ನು 1949ನೆಯ ನವೆಂಬರ್ 26ರಂದು ಅಂಗೀಕರಿಸಿತು : ಈ ಸಂವಿಧಾನ 1950ನೆಯ ಜನವರಿ 26ರಿಂದ ಆಚರಣೆಗೆ ಬಂದಿತು).

ಸಂವಿಧಾನ ರಚನೆಗೆ ಆಳವಾದ ಅಧ್ಯಯನ ಮತ್ತು ಆಲೋಚನೆ ಅತ್ಯವಶ್ಯ.

ನೋಡಿ : ಸಂಸತ್ತು

## ಸಂಶೋಧನೆ

ಸಂಶೋಧನೆ ಎಂದರೆ ವಿಷಯ. ಕಲ್ಪನೆ ಮತ್ತು ಸಂಕೇತಗಳನ್ನು ಎಚ್ಚರಿಕೆಯಿಂದ ಪರೀಕ್ಷಿಸುವುದು ಎಂದು ಅರ್ಥ.

ಒಂದು ಭಾರವಾದ ಗುಂಡನ್ನು ಒಂದು ದಾರದ ಕೊನೆಗೆ ಕಟ್ಟಿ ತೂಗಿಬಿಟ್ಟರೆ. ಸ್ವಲ್ಪ ಹೊತ್ತು ಹಿಂದಕ್ಕೆ ಮುಂದಕ್ಕೆ ಆಡುತ್ತಿರುತ್ತದೆ. ಒಂದು ಕೊನೆಯಿಂದ ಇನ್ನೊಂದು ಕೊನೆಗೆ ಹೋಗಿ. ಹಿಂತಿರುಗಿ. ಮತ್ತೆ ದಿಕ್ಕು ಬದಲಾಯಿಸುತ್ತದೆ. ಆದರೆ ಅದು ಕ್ರಮಿಸುವ ಉದ್ದ ಕಡಮೆಯಾಗುತ್ತ ಹೋಗುತ್ತದೆ.

ಪ್ರತಿ ಬಾರಿ ಒಂದು ಕೊನೆಯಿಂದ ಇನ್ನೊಂದು ಕೊನೆಗೆ ಹೋಗಿ, ಹಿಂದಕ್ಕೆ ಬಂದು, ಮತ್ತೆ ದಿಕ್ಕು ಬದಲಾಯಿಸಲು ತೆಗೆದುಕೊಳ್ಳುವ ಕಾಲ ಒಂದೇ ಆಗಿರುತ್ತದೆಯೆ. ಬದಲಾಗುತ್ತದೆಯೆ ?

ಗಡಿಯಾರ ಇಟ್ಟುಕೊಂಡು ಲೆಕ್ಕ ಹಾಕಿ ನೋಡುತ್ತೇವೆ. ಕಾಲ ಒಂದೇ ಎಂದು ನಿರ್ಧರಿಸುತ್ತೇವೆ. ಹೀಗೆ ಪರೀಕ್ಷೆಮಾಡಿ ಹೊಸ ವಿಷಯ ತಿಳಿದುಕೊಳ್ಳುತ್ತೇವೆ.

ಅದರ ತೂಗಾಟದ ಉದ್ದ ಬದಲಾಯಿಸಿದರೆ ಏನಾಗುತ್ತದೆ ? ತೂಗು ಹಾಕಿದ ಗುಂಡಿನ ಭಾರ ಬದಲಾಯಿಸಿದರೆ ಏನಾಗುತ್ತದೆ ?

ತೂಗಾಟದ ಉದ್ದವನ್ನು ಮತ್ತೆ ಮತ್ತೆ ಬದಲಾಯಿಸಿ ನೋಡುತ್ತೇವೆ. ಬೇರೆ ಬೇರೆ ಭಾರಗಳ ಗುಂಡುಗಳನ್ನು ಉಪಯೋಗಿಸಿ ಕಾಲವನ್ನು ಗುರುತು ಹಾಕಿಕೊಳ್ಳುತ್ತೇವೆ.

ದಾರದ ಉದ್ದ ಬದಲಾಯಿಸಿದರೆ ?

ಅದನ್ನೂ ಮಾಡಿ ಫಲಿತಾಂಶ ಗುರುತು ಹಾಕಿಕೊಳ್ಳುತ್ತೇವೆ.

ಹೀಗೆ ಕ್ರಮಬದ್ಧವಾಗಿ ಪ್ರಯೋಗಗಳನ್ನು ನಡೆಸಿದಂತೆ ಹೊಸ ವಿಷಯಗಳು ತಿಳಿಯುತ್ತವೆ.



ಮೂಲನಿವಾಸಿಗಳೊಡನೆ ಸಂಶೋಧಕ ಸಮಾಜವಿಜ್ಞಾನಿಗಳು

ಹೀಗೆಯೇ. ಸೂರ್ಯ ಪೂರ್ವದಲ್ಲಿ ಹುಟ್ಟುವುದೇಕೆ ? ಪಶ್ಚಿಮದಲ್ಲಿ ಮುಳುಗುವುದೇಕೆ ? ಎಂಬುದು ಒಂದು ವಿಷಯಕ್ಕೆ ಸಂಬಂಧಿಸಿದ ಸಂಶೋಧನೆ. ಭೂಮಿ ತನ್ನ ಅಕ್ಷದ ಮೇಲೆ ತಿರುಗುವುದರಿಂದ ಸೂರ್ಯ ಒಂದು ಕಡೆ ಉದಯಿಸಿದಂತೆಯೂ ಇನ್ನೊಂದು ಕಡೆ ಮುಳುಗಿದಂತೆಯೂ ನಮಗೆ ತೋರುವುದೇ ಇದಕ್ಕೆ ಕಾರಣ ಎಂಬುದು ಈ ಸಂಶೋಧನೆಯ ಫಲಿತಾಂಶ.

ಎಲ್ಲಿಯೋ ಅಗೆದಾಗ. ಸಾವಿರಾರು ವರ್ಷಗಳ ಹಿಂದಿನ ಬರಹ ಸಿಕ್ಕುತ್ತದೆ. ಇಂದು ಆ ಭಾಷೆ ಇಲ್ಲ. ಏನು ಮಾಡಬೇಕು ? ಒಂದೊಂದು ಅಕ್ಷರವೂ ಒಂದು ಸಂಕೇತವೇ. ಇವುಗಳ ಅರ್ಥವೇನು? ಈ ಬರಹಗಳ ಕಾಲವೇನು? ಆಗಿನ ನಾಗರಿಕತೆ ಎಂಥದು ? ಎಂಬಿವೇ ವಿಷಯಗಳನ್ನು ಕುರಿತು ಪ್ರಾಚೀನ ವಿಷಯ ಶೋಧಕರು ಸಂಶೋಧನೆ ನಡೆಸುತ್ತಾರೆ.

ಸಂಶೋಧಕ ಒಂದು ಸಮಸ್ಯೆಯನ್ನು ಆಧಾರವಾಗಿಟ್ಟುಕೊಳ್ಳುತ್ತಾನೆ. ಅದಕ್ಕೆ ಸಂಬಂಧಪಟ್ಟ ವಿಷಯಗಳನ್ನು ಸಂಗ್ರಹಿಸುತ್ತಾನೆ. ಅನಂತರ ಈ ಸಮಸ್ಯೆಯ ಪರಿಹಾರವನ್ನು ಕಂಡುಹಿಡಿಯಲು ಪ್ರಯತ್ನಿಸುತ್ತಾನೆ. ಆದರೆ ಎಲ್ಲ ಸಂಶೋಧನೆಗಳೂ ಫಲಪ್ರದವಾಗುತ್ತವೆ ಎನ್ನುವಂತಿಲ್ಲ. ಸಂಶೋಧನೆಯಲ್ಲಿ ದೊರೆತ ಎಲ್ಲ ಫಲಿತಾಂಶಗಳನ್ನೂ ಕೂಡಲೇ ಕಾರ್ಯರೂಪಕ್ಕೆ ತರಬಹುದು ಎನ್ನುವುದೂ ಕಷ್ಟ. ಮುಖ್ಯವಾಗಿ ಸಂಶೋಧನೆಯಲ್ಲಿ ಶುದ್ಧ ಮತ್ತು ಅನ್ವಯ ಎಂಬ ಎರಡು ವಿಭಾಗಗಳಿವೆ. ಶುದ್ಧ ಸಂಶೋಧನೆ ಜ್ಞಾನಾರ್ಜನೆಗಾಗಿ ಅಗತ್ಯ. ಈ ವಿಶ್ವದ ಸ್ವರೂಪವೇನು ? ಇದು ಎಷ್ಟು ದೊಡ್ಡದು ? ಭೂಮಿಯಲ್ಲಿ ಲಕ್ಷಾಂತರ ವರ್ಷಗಳ ಕೆಳಗೆ ಇದ್ದ ಜೀವಿಗಳಾವುವು ? ಒಂದು ಬಂಡೆಕಲ್ಲಿನ ಇತಿಹಾಸವೇನು ? ಇಂಥ ವಿಷಯಗಳು ತಾತ್ಕಾಲಿಕವಾಗಿ ಸಂಶೋಧಕನ ಜ್ಞಾನಭಂಡಾರಕ್ಕೆ ಇನ್ನಷ್ಟು ಸಂಪತ್ತು ಒದಗಿಸುತ್ತವೆ. ಆದರೆ ಈ ಸಂಶೋಧನೆಯ ಉಪಯೋಗ ಎಂದಾದರೂ ಆಗುತ್ತದೆ. ಉದಾಹರಣೆಗೆ ಗ್ರೆಗರ್ ಮೆಂಡಲ್ ಎಂಬುವನು. ಆನುವಂಶಿಕತೆ ಎಂದರೇನು. ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ಇಳಿದು ಬರುವ ಗುಣಲಕ್ಷಣಗಳೇನು. ಒಂದೇ ಜಾತಿಯ ಎರಡು ಬೇರೆ ವಿಧದ ಗಿಡಗಳ ಮಿಶ್ರಣದಿಂದ ಬರುವ ಹೊಸ ತಳಿಗಳಾವುವು ಎಂಬುದನ್ನು ಕೇವಲ ಕುತೂಹಲಕ್ಕಾಗಿ. ಒಂದು ಸಿದ್ಧಾಂತ ಪ್ರತಿಪಾದನೆಗಾಗಿ. ಅಧ್ಯಯನ ಮಾಡಿದ. ಇದು ನಡೆದುದು ಕಳೆದ ಶತಮಾನದ ಉತ್ತರಾರ್ಧದಲ್ಲಿ. ಆಗ



ನವದೆಹಲಿಯಲ್ಲಿರುವ ಲೋಕಸಭಾ ಭವನ

ಉಭಯ ಸದನಗಳಿಂದಲೂ ಅಂಗೀಕೃತವಾದ ವಿಧೇಯಕವನ್ನು ರಾಷ್ಟ್ರಾಧ್ಯಕ್ಷರ ಅನುಮತಿಗೆ ಕಳುಹಿಸಲಾಗುತ್ತದೆ. ಸದನಗಳಲ್ಲಿ ವಿಧೇಯಕದ ಮೇಲೆ ಭಿನ್ನಾಭಿಪ್ರಾಯಗಳಿರುವ ಸಂದರ್ಭಗಳಲ್ಲಿ ಸಮ್ಮೇಳನವನ್ನು ಕರೆದು ಪರಿಶೀಲಿಸಲಾಗುತ್ತದೆ.

ಪ್ರತಿ ರಾಜ್ಯದಲ್ಲೂ ಶಾಸಕಾಂಗಗಳಿವೆ. ಇವುಗಳ ವ್ಯಾಪ್ತಿ ಅವುಗಳಿಗೆ ಗೊತ್ತುಮಾಡಿರುವ ವಿಷಯಗಳಿಗೆ ಸೀಮಿತವಾಗಿರುತ್ತದೆ.

ಸೋವಿಯೆತ್ ರಷ್ಯ ಸಮಾಜವಾದಿ ಗಣರಾಜ್ಯಗಳ ಒಕ್ಕೂಟ. ಕೇಂದ್ರ ಹಾಗೂ ರಾಜ್ಯಗಳಲ್ಲಿ ಶಾಸಕಾಂಗಗಳಿವೆ. ಕೇಂದ್ರದ ಶಾಸಕಾಂಗ ಅತ್ಯುನ್ನತ ಪ್ರತಿನಿಧಿ ಮಂಡಲಿ. ಈ ಮಂಡಲಿಯಲ್ಲಿ ಒಕ್ಕೂಟದ ಪ್ರತಿನಿಧಿ ಮಂಡಲಿ ಹಾಗೂ ಜನತಾ ಪ್ರತಿನಿಧಿಮಂಡಲಿ ಎಂಬ ಎರಡು ಸದನಗಳಿವೆ. ಒಕ್ಕೂಟದ ಪ್ರತಿನಿಧಿ ಮಂಡಲಿಯ ಸದಸ್ಯರನ್ನು ಸೋವಿಯೆತ್ ರಷ್ಯದ ನಾಗರಿಕರು ಮೂರು ಲಕ್ಷ ಜನಸಂಖ್ಯೆಗೆ ಒಬ್ಬ ಸದಸ್ಯನಂತೆ ಆರಿಸುತ್ತಾರೆ. ಸಂಘಟಿತ ವಿಭಾಗಗಳ ಮೂಲಕ ನಾಗರಿಕರು ಮತ ನೀಡಿ ಜನತಾ ಪ್ರತಿನಿಧಿ ಮಂಡಲಿಯ ಸದಸ್ಯರನ್ನು ಆರಿಸುತ್ತಾರೆ. ಒಕ್ಕೂಟದ ಪ್ರತಿನಿಧಿ ಮಂಡಲಿ ಸೋವಿಯೆತ್ ಜನತೆಯ ಪ್ರತಿನಿಧಿಗಳಿಂದ ಕೂಡಿದೆ.

ಎರಡೂ ಪ್ರತಿನಿಧಿ ಮಂಡಲಿಗಳನ್ನು ಸಾರ್ವತ್ರಿಕ, ಸಮಾನ ಹಾಗೂ ನೇರವಾಗಿ ಮತ ಚಲಾಯಿಸುವ ಆಧಾರದ ಮೇಲೆ ರಹಸ್ಯ ಮತದಾನದ ಮೂಲಕ ನಾಲ್ಕು ವರ್ಷ ಅವಧಿಯವರೆಗೆ ಚುನಾಯಿಸಲಾಗುತ್ತದೆ. ಹದಿನೆಂಟು ವರ್ಷ ವಯಸ್ಸಿನ ನಾಗರಿಕ, ಅವಶ್ಯ ಅರ್ಹತೆ ಪಡೆದಿದ್ದಲ್ಲಿ ಮತದಾರನಾಗಬಹುದು. ಇಪ್ಪತ್ತಮೂರು ವರ್ಷ ವಯಸ್ಸಿನ ಅರ್ಹತೆ ಪಡೆದ ನಾಗರಿಕ ಚುನಾವಣೆಗೆ ಸ್ಪರ್ಧಿಸಬಹುದು.

ಎರಡು ಸದನಗಳಲ್ಲೂ ಕಮ್ಯೂನಿಸ್ಟ್ ಪಕ್ಷದ ಹಾಗೂ ಪಕ್ಷದ ನಾಯಕತ್ವವನ್ನು ಸ್ವೀಕರಿಸಿದ ಪ್ರತಿನಿಧಿಗಳು ಮಾತ್ರ ಇದ್ದಾರೆ.

ಶಾಸನಗಳನ್ನು ರಚಿಸುವ ಅಧಿಕಾರವು ಅತ್ಯುನ್ನತ ಪ್ರತಿನಿಧಿ ಮಂಡಲಿಗಿದೆ. ವಿಧೇಯಕವನ್ನು ಯಾವುದಾದರೂ ಒಂದು ಸದನದಲ್ಲಿ ಮಂಡಿಸಬಹುದು. ಅನಂತರ ವಿಧೇಯಕವನ್ನು ಸದನಕ್ಕೆ ಸಂಬಂಧಿಸಿದ ಶಾಸನ ರಚನಾ ಆಯೋಗವೆಂಬ ಹೆಸರಿನ ಸ್ಥಾಯಿಸಮಿತಿಗೆ ಕಳುಹಿಸಲಾಗುತ್ತದೆ. ಪ್ರತಿ ಸದನವು ವರ್ಷದಲ್ಲಿ ಎರಡು ವಾರ ಮಾತ್ರ ಸಭೆ ಸೇರುವುದರಿಂದ ಸಮಿತಿಯು ವಿಧೇಯಕವನ್ನು ಕೂಲಂಕಷವಾಗಿ ಪರಿಶೀಲಿಸಿ ಸಭೆಗಳ ಮುಂದಿಡುತ್ತದೆ. ವಿಧೇಯಕವನ್ನು ಎರಡು ಸದನಗಳೂ ಅನುಮೋದಿಸಿದ ಅನಂತರ ಪ್ರಿಸೀಡಿಯುಮಿನ (ಅಧ್ಯ ಮಂಡಲದ) ಅಧ್ಯಕ್ಷರು ಹಾಗು ಕಾರ್ಯ ದರ್ಶಿಯು ಸಹಿಯಾಗಬೇಕು. ಅ ಅದು ಶಾಸನವಾಗುತ್ತದೆ.

ಎರಡು ಸದನಗಳಿಂದ ಆರಿಸಲ್ಪಟ್ಟ ಮೂವತ್ತೆರಡು ಸದಸ್ಯರ ಒಂದು ಪ್ರಿಸೀಡಿಯುಂ ಇದೆ. ಎರಡು ಅಧಿವೇಶನ ಗಳ ನಡುವೆ ಶಾಸನ ರಚನೆ ಮಾಡು ವುದು ಪ್ರಿಸೀಡಿಯುಮಿನ ಕರ್ತವ್ಯ ಅಲ್ಲದೆ ಅಧಿವೇಶನಗಳನ್ನು ಕರೆಯು ವುದು, ಮಂಡಲಿಯನ್ನು ರದ್ದು ಮಾಡುವುದು. ಸಾರ್ವತ್ರಿಕ ಚುನಾವಣೆ ನಡೆಸಲು ಕರೆಕೊಡುವುದು ಇವರ ಕರ್ತವ್ಯ.

ಒಕ್ಕೂಟದ ಪ್ರತಿಯೊಂದು ರಾಜ್ಯವೂ ತನ್ನದೇ ಆದ ಸಂವಿಧಾನ ಹಾಗೂ ಶಾಸನ ರಚನಾ ವಿಭಾಗಗಳನ್ನು ಹೊಂದಿರುತ್ತದೆ.

ಭಾರತ ರಾಜ್ಯಗಳ ಒಕ್ಕೂಟವಾದ್ದರಿಂದ ಕೇಂದ್ರ ಹಾಗೂ ರಾಜ್ಯಗಳಲ್ಲಿ ಪ್ರತ್ಯೇಕ ಶಾಸಕಾಂಗಗಳಿವೆ. ಕೇಂದ್ರದ ಶಾಸಕಾಂಗದಲ್ಲಿ ಲೋಕಸಭೆ ಹಾಗೂ ರಾಜ್ಯಸಭೆ ಎಂಬ ಎರಡು ಸದನಗಳಿವೆ. ರಾಜ್ಯಸಭೆಯಲ್ಲಿ ಒಟ್ಟು 250 ಮಂದಿ ಸದಸ್ಯರು ; ಇವರಲ್ಲಿ ರಾಷ್ಟ್ರಾಧ್ಯಕ್ಷರಿಂದ ನಾಮಕರಣ ಮಾಡಿದ ಹನ್ನೆರಡು ಮಂದಿ ಸದಸ್ಯರಿದ್ದಾರೆ, ಉಳಿದವರು ರಾಜ್ಯಗಳ ವಿಧಾನಸಭೆಗಳಿಂದ ಆಯ್ಕೆಯಾದವರು. ಪ್ರತಿರಾಜ್ಯದ ಸದಸ್ಯರ ಸಂಖ್ಯೆಯನ್ನು ಆಯಾ ರಾಜ್ಯದ ಜನಸಂಖ್ಯೆಗೆ ಅನುಗುಣವಾಗಿ ನಿರ್ಧರಿಸಲಾಗಿದೆ. ರಾಜ್ಯಸಭೆಯನ್ನು ವಿಸರ್ಜಿಸಲಾಗುವುದಿಲ್ಲ. ಅದರ ಸದಸ್ಯರ ಅಧಿಕಾರಾವಧಿ ಆರು ವರ್ಷಗಳು. ಆದರೆ ಎರಡು ವರ್ಷಗಳಿಗೊಮ್ಮೆ ಮೂರನೆಯ ಒಂದು ಭಾಗ ಸದಸ್ಯರು ನಿವೃತ್ತರಾಗುತ್ತಾರೆ. ಸದಸ್ಯರಾಗಿ ಚುನಾಯಿತರಾಗುವುದಕ್ಕೆ ಮೊದಲು ಅವರಿಗೆ ಮೂವತ್ತು ವರ್ಷ ವಯಸ್ಸಾಗಿದ್ದು ಅವಶ್ಯ ಅರ್ಹತೆ ಪಡೆದಿರಬೇಕು. ಚುನಾವಣೆಗೆ ಮುಂಚೆ ಅವರು ತಮ್ಮ ರಾಜ್ಯದಲ್ಲಿ ಮತದಾರರಾಗಿರಬೇಕು.

ಲೋಕಸಭೆಯಲ್ಲಿ 525 ಮಂದಿ ಸದಸ್ಯರಿರುತ್ತಾರೆ. ಇವರ ಅವಧಿ ಐದು ವರ್ಷ. ಸದಸ್ಯರು ಕಡೆಯುಪಕ್ಷ 25 ವರ್ಷಗಳ ವಯಸ್ಸಿನವರಾಗಿದ್ದು ಅವಶ್ಯ ಅರ್ಹತೆಯನ್ನು ಪಡೆದಿರಬೇಕು. ರಾಷ್ಟ್ರವನ್ನೆಲ್ಲ ಜನಸಂಖ್ಯೆಯ ಆಧಾರದ ಮೇಲೆ ಚುನಾವಣಾ ಕ್ಷೇತ್ರಗಳನ್ನಾಗಿ ವಿಂಗಡಿಸಿದ್ದಾರೆ. ಪ್ರತಿ ಕ್ಷೇತ್ರದಿಂದಲೂ ಒಬ್ಬ ಸದಸ್ಯರಂತೆ ರಹಸ್ಯಮತದಾನ ಪದ್ಧತಿ ಪ್ರಕಾರ ಆರಿಸಲ್ಪಡುತ್ತಾರೆ. ಇಪ್ಪತ್ತೊಂದು ವರ್ಷದ ನಾಗರಿಕನು ಅರ್ಹತೆ ಪಡೆದಿದ್ದಲ್ಲಿ ಮತದಾರನಾಗಬಹುದು. ಜನಸಂಖ್ಯೆಗೆ ಅನುಗುಣವಾಗಿ ಪರಿಶಿಷ್ಟ ವರ್ಗದವರಿಗೆ ಸ್ಥಾನಗಳನ್ನು ಕಾದಿರಿಸಲಾಗಿದೆ. ಅಂಥ ಸ್ಥಾನಗಳಿಗೆ ಆ ವರ್ಗದವರೇ ಸ್ಪರ್ಧಿಸಬೇಕು. ಅವಶ್ಯವೆನಿಸಿದಲ್ಲಿ ಆಂಗ್ಲೊ ಇಂಡಿಯನ್ ಪಂಗಡದವರನ್ನು ರಾಷ್ಟ್ರಾಧ್ಯಕ್ಷರು ನಾಮಕರಣಮಾಡುವರು.

ಸಂಸದೀಯ ಮಾದರಿಯ ರಾಜ್ಯಾಂಗವನ್ನು ಅನುಸರಿಸುತ್ತಿರುವುದರಿಂದ ಲೋಕಸಭೆಯಲ್ಲಿ ಬಹುಸಂಖ್ಯಾತ ಸ್ಥಾನಗಳನ್ನು ಪಡೆದ ಪಕ್ಷ ಮಂತ್ರಿ ಮಂಡಲವನ್ನು ರಚಿಸುತ್ತದೆ. ಲೋಕಸಭೆಯು ಒಬ್ಬ ಅಧ್ಯಕ್ಷರನ್ನು ಚುನಾಯಿಸುತ್ತದೆ. ರಾಷ್ಟ್ರದ ಉಪಾಧ್ಯಕ್ಷರು ರಾಜ್ಯಸಭೆಯ ಅಧ್ಯಕ್ಷ ರಾಗಿರುತ್ತಾರೆ. ಲೋಕಸಭೆಗೆ ಸಾರ್ವತ್ರಿಕ ಚುನಾವಣೆಯಾದನಂತರ

ಪ್ರಾರಂಭವಾಗುವ ಮೊದಲನೆಯ ಅಧಿವೇಶನದಲ್ಲಿ ಮತ್ತು ಪ್ರತಿ ವರ್ಷದ ಮೊದಲನೆಯ ಅಧಿವೇಶನದ ಪ್ರಾರಂಭದಲ್ಲಿ ರಾಷ್ಟ್ರಾಧ್ಯಕ್ಷರು ಲೋಕಸಭೆ ಹಾಗೂ ರಾಜ್ಯಸಭೆಗಳ ಸದಸ್ಯರನ್ನು ಉದ್ದೇಶಿಸಿ ಭಾಷಣ ಮಾಡುವರು.

ಲೋಕಸಭೆಯಲ್ಲೇ ಮಂಡಿಸಬೇಕಾಗಿರುವ ಆರ್ಥಿಕ ಸಂಬಂಧವಾದ ವಿಧೇಯಕದ ಹೊರತು ಇತರ ವಿಧೇಯಕಗಳನ್ನು ಸಂಸತ್ತಿನ ಯಾವುದೇ ಸದನದಲ್ಲಾದರೂ ಮಂಡಿಸಬಹುದು.

ವಿಧೇಯಕಗಳನ್ನು ಉಭಯಸದನಗಳೂ ಅಂಗೀಕರಿಸಬೇಕು. ಭಿನ್ನಾಭಿಪ್ರಾಯವಿದ್ದಲ್ಲಿ ಉಭಯಸದನಗಳ ಸಂಯುಕ್ತ ಸಭೆಯಲ್ಲಿ ಪರಿಶೀಲಿಸಲಾಗುವುದು.

ಉಭಯ ಸದನಗಳಿಂದಲೂ ಅಂಗೀಕರಿಸಲ್ಪಟ್ಟಿರುವ ವಿಧೇಯಕಗಳನ್ನು ರಾಷ್ಟ್ರಾಧ್ಯಕ್ಷರ ಅನುಮತಿಗೆ ಕಳುಹಿಸಲಾಗುವುದು. ಅವರು ಒಪ್ಪಿದನಂತರ ವಿಧೇಯಕವು ಶಾಸನವಾಗುವುದು.

ಕೆಲವು ಸಂದರ್ಭಗಳಲ್ಲಿ ರಾಷ್ಟ್ರಾಧ್ಯಕ್ಷರೂ ಅಧ್ಯಾದೇಶಗಳನ್ನು ಹೊರಡಿಸಬಹುದು. ಇಂಥ ಅಧ್ಯಾದೇಶಗಳಿಗೆ ಶಾಸನಗಳಿರುವಷ್ಟೇ ಪ್ರಭಾವವಿರುತ್ತದೆ.

ಜನತೆಯ ಅವಶ್ಯತೆಗಳಿಗೆ ಬೇಕಾದ ಹಣವನ್ನು ದೊರಕಿಸುವಂತೆ ಮಾಡಿ ಆ ಹಣವನ್ನು ರಾಷ್ಟ್ರದ ಸೇವಾಕಾರ್ಯಗಳಿಗೆ ವಿನಿಯೋಗಿಸುವುದು ಸಂಸತ್ತಿನ ಒಂದು ಕರ್ತವ್ಯ. ಪ್ರತಿಯೊಂದು ಆರ್ಥಿಕ ವರ್ಷದ ಸಂಬಂಧದಲ್ಲೂ ಸದನಗಳ ಮುಂದೆ ಅಂದಾಜು ಹುಟ್ಟುವಳಿ ಮತ್ತು ಅಂದಾಜು ವೆಚ್ಚಗಳ ಒಂದು ವಿವರಣೆಯನ್ನು ಇಡಬೇಕು. ಹಣಕಾಸಿನ ಮಂತ್ರಿಗಳು ಆಯವ್ಯಯದ ಮುಂಗಡಪತ್ರವನ್ನು ಮಂಡಿಸುವರು. ತೆರಿಗೆಗೆ ಸಂಬಂಧಪಟ್ಟ ವಿಧೇಯಕವನ್ನು ಅದೇ ದಿನ ಮಂಡಿಸುವರು. ಮಂಡಿಸಿದೊಡನೆ ತೆರಿಗೆಗಳನ್ನು ತಾತ್ಕಾಲಿಕವಾಗಿ ವಸೂಲ್ಮಾಡುವ ಅಧಿಕಾರ ದೊರೆಯುತ್ತದೆ. ಮುಂಗಡಪತ್ರದ ಮೇಲೆ ಲೋಕಸಭೆಯಲ್ಲಿ ಮೊದಲು ಸಾಮಾನ್ಯ ಚರ್ಚೆ ನಡೆಯುತ್ತದೆ. ಅನಂತರ ಅನುದಾನಗಳಿಗೆ ಸಂಬಂಧಿಸಿದ ಬೇಡಿಕೆಗಳನ್ನು ಮತಕ್ಕೆ ಹಾಕಲಾಗುತ್ತದೆ. ರಾಜ್ಯಸಭೆಯಲ್ಲಿ ಈ ಬಗೆಗೆ ಸಾಮಾನ್ಯ ಚರ್ಚೆ ಮಾತ್ರ ನಡೆಯುತ್ತದೆ.

ಅನುದಾನಗಳಿಗೆ ಸಂಬಂಧಿಸಿದ ಬೇಡಿಕೆಗಳಿಗೆ ಮಂಜೂರಾತಿ ದೊರಕಿದ ಅನಂತರ ಹಣದ ವಿನಿಯೋಗಕ್ಕೆ ಸಂಬಂಧಿಸಿದ ವಿಧೇಯಕವನ್ನು ಮಂಡಿಸಿ ಅಂಗೀಕರಿಸಲಾಗುವುದು.

ಮುಂದಿನ ವರ್ಷಕ್ಕೆ ಸಂಬಂಧಿಸಿದ ವಾರ್ಷಿಕ ಆರ್ಥಿಕ ವಿವರಣೆಯನ್ನು ಪ್ರಸಕ್ತ ವರ್ಷದಲ್ಲಿಯೇ ಮಂಡಿಸಿ ಮುಂದಿನ ವರ್ಷ ಪ್ರಾರಂಭವಾಗುವುದರೊಳಗಾಗಿಯೇ ವಿಧೇಯಕವನ್ನು ಅಂಗೀಕರಿಸುವುದೇ ಮೊದಲಾದ ಹಂತಗಳನ್ನು ಪೂರೈಸಬೇಕು.

ಅಂದಾಜುಗಳ ಬಗೆಗೆ ವಿವರಣಾತ್ಮಕ ಪರೀಕ್ಷೆಯನ್ನು ನಡೆಸಲು ಲೋಕಸಭೆಗೆ ಸಮಯವಾಗಲೀ ಸಾಧನವಾಗಲೀ ಇರುವುದಿಲ್ಲ. ವೆಚ್ಚದ ಹಾಗೂ ಪರಿಣಾಮಕಾರಿಯಾದ ಹತೋಟಿಯನ್ನಿಟ್ಟುಕೊಳ್ಳಲು ಹಣಕಾಸಿನ ಸಮಿತಿಗಳ ಪದ್ಧತಿಯೊಂದನ್ನು ರೂಪಿಸಲಾಗಿದೆ. ಅಂದಾಜುಗಳ ಸಮಿತಿ ಹಾಗೂ ಸರಕಾರಿ ಲೆಕ್ಕಗಳ ಪರಿಶೀಲನಾ ಸಮಿತಿಯವರು ಈ ಕಾರ್ಯವನ್ನು ನಿರ್ವಹಿಸುತ್ತಾರೆ. ಸರಕಾರವು ನಡೆಸುವ ವಾಣಿಜ್ಯೋದ್ಯಮಗಳನ್ನು ಪರಿಶೀಲಿಸಲು ಒಂದು ಸಮಿತಿ ಇದೆ.

ಕಾರ್ಯಾಂಗದ ಪ್ರತಿಯೊಂದು ಕೃತಿಯನ್ನೂ ಸೂಕ್ಷ್ಮವಾಗಿ ಟೀಕಿಸಲು ಸದಸ್ಯರಿಗೆ ಅವಕಾಶಗಳಿವೆ. ಪ್ರಶ್ನೆಗಳನ್ನು ಕೇಳಿ ಉತ್ತರ ಪಡೆಯುವ ಮೂಲಕ ಸರಕಾರದ ಲೋಪದೋಷಗಳನ್ನು ಎತ್ತಿ ತೋರಿಸುತ್ತಾರೆ. ಮುಖ್ಯವಾದ ವಿಷಯದ ಮೇಲೆ ಚರ್ಚೆ ನಡೆಯುವುದು. ಸಾರ್ವಜನಿಕ ದೃಷ್ಟಿಯಿಂದ ಮುಖ್ಯವಾದ ಮತ್ತು ಜರೂರಾದ ವಿಷಯಗಳಿಗೆ ಮಂತ್ರಿಗಳ ಗಮನ ಸೆಳೆಯುವುದು. ಸಭೆಯ ಕಾರ್ಯಕಲಾಪಗಳನ್ನು ಮುಂದಕ್ಕೆ ತಳ್ಳಿ ಅತಿ ಮುಖ್ಯವೂ ಜರೂರೂ ಆದ ವಿಷಯಗಳನ್ನು ಚರ್ಚೆಗೆ ತರುವುದು ಮುಂತಾದ ರೀತಿಗಳಲ್ಲಿ ಸರಕಾರವನ್ನು ಹತೋಟಿಯಲ್ಲಿಟ್ಟುಕೊಳ್ಳಬಹುದು. ಅವಶ್ಯವೆನಿಸಿದಲ್ಲಿ ಲೋಕಸಭೆಯ ಮುಂದೆ ಅವಿಶ್ವಾಸ ನಿರ್ಣಯ ತಂದು ಅದು ಒಪ್ಪಿಗೆಯಾದಲ್ಲಿ ಮಂತ್ರಿ ಮಂಡಲವನ್ನು ತೆಗೆದುಹಾಕಬಹುದು. ಸದನದಲ್ಲಿ ಮಂತ್ರಿಗಳು ನೀಡಿರುವ ಭರವಸೆಗಳು ಈಡೇರಿವೆಯೊ ಇಲ್ಲವೊ ಎಂದು ಪರಿಶೀಲಿಸಲು ಸದನಗಳ ಸಮಿತಿಗಳಿವೆ. ಅನುಶಾಸನಗಳನ್ನು ಪರಿಶೀಲಿಸಲು ಉಭಯಸದನಗಳೂ ಸಮಿತಿಗಳನ್ನು ನೇಮಿಸಿವೆ.

ಹೌಸ್ ಆಫ್ ಕಾಮನ್ಸ್ ಮತ್ತು ಅದರ ಸಮಿತಿಗಳು ಹಾಗೂ ಸದಸ್ಯರಿಗಿರುವಂತೆ ಭಾರತದ ಸಂಸತ್ ಮತ್ತು ಅದರ ಸಮಿತಿ ಹಾಗೂ ಸದಸ್ಯರಿಗೆ ತಮ್ಮ ಕರ್ತವ್ಯ ನಿರ್ವಹಿಸಲು ಕೆಲವು ಹಕ್ಕುಬಾಧ್ಯತೆಗಳಿವೆ. ಸಂಸತ್ತಿನಲ್ಲಿ ಸದಸ್ಯರು ಹೇಳುವ ವಿಷಯದ ಮೇಲೆ ನ್ಯಾಯಸ್ಥಾನಗಳಲ್ಲಿ ಕ್ರಮ ತೆಗೆದುಕೊಳ್ಳುವಂತಿಲ್ಲ.

ರಾಜ್ಯಗಳ ಶಾಸಕಾಂಗದಲ್ಲಿ ವಿಧಾನಸಭೆ ಹಾಗೂ ವಿಧಾನಪರಿಷತ್ತು ಎಂಬ ಎರಡು ಸದನಗಳಿವೆ. ಆದರೆ ಕೆಲವು ರಾಜ್ಯಗಳಲ್ಲಿ ವಿಧಾನಪರಿಷತ್ತುಗಳಿಲ್ಲ. ವಿಧಾನಸಭೆಯ ಅವಧಿ ಐದು ವರ್ಷ. ಇಪ್ಪತ್ತೈದು ವರ್ಷದ ನಾಗರಿಕನು ಅಗತ್ಯ ಅರ್ಹತೆ ಪಡೆದಿದ್ದಲ್ಲಿ ಚುನಾವಣೆಯಲ್ಲಿ ಸ್ಪರ್ಧಿಸಬಹುದು. ಪರಿಶಿಷ್ಟವರ್ಗದವರಿಗೆ ಸ್ಥಾನಗಳನ್ನು ಕಾದಿರಿಸಲಾಗಿದೆ. ಆಂಗ್ಲೊ ಇಂಡಿಯನರನ್ನು ಅವಶ್ಯವೆನಿಸಿದಲ್ಲಿ ನಾಮಕರಣ ಮಾಡಬಹುದು.

ವಿಧಾನಪರಿಷತ್ತನ್ನು ವಿಸರ್ಜಿಸಲಾಗುವುದಿಲ್ಲ. ಸದಸ್ಯರ ಅಧಿಕಾರ ಅವಧಿ ಆರು ವರ್ಷ. ಮೂರನೆಯ ಒಂದು ಭಾಗದಷ್ಟು ಸದಸ್ಯರು ಎರಡು ವರ್ಷಕ್ಕೊಮ್ಮೆ ನಿವೃತ್ತರಾಗುತ್ತಾರೆ. ಸ್ಥಳೀಯ ಸಂಸ್ಥೆಗಳ ಸದಸ್ಯರೂ ವಿಧಾನಸಭೆಯ ಸದಸ್ಯರೂ ಪದವೀಧರರೂ ಉಪಾಧ್ಯಾಯರೂ ಸದಸ್ಯರನ್ನು ಆರಿಸುತ್ತಾರೆ. ರಾಜ್ಯಪಾಲರು ಕೆಲವರನ್ನು ನಾಮಕರಣ ಮಾಡುತ್ತಾರೆ.

ಕೇಂದ್ರವಲ್ಲಿದ್ದಂತೆ ಜನಾದರಣೀಯ ಸಭೆಯಲ್ಲಿ ಬಹುಸಂಖ್ಯಾತ ಸ್ಥಾನಗಳನ್ನು ಪಡೆದ ಪಕ್ಷ ಮಂತ್ರಿಮಂಡಲವನ್ನು ಸ್ಥಾಪಿಸಬಹುದು.

ಕಾನೂನು ರಚಿಸುವುದು, ಹಣವನ್ನು ಒದಗಿಸುವುದು, ಸರಕಾರವನ್ನು ಹತೋಟಿಯಲ್ಲಿಟ್ಟುಕೊಳ್ಳುವುದು ಸದನದ ಮುಖ್ಯ ಕರ್ತವ್ಯಗಳು.

ಕಾನೂನು ರಚನೆಯಲ್ಲೂ ಆಯವ್ಯಯದ ಪರಿಶೀಲನೆಯಲ್ಲೂ ವಿಧಾನಪರಿಷತ್ತಿನ ಅಧಿಕಾರ ಸೀಮಿತವಾಗಿದೆ.

ಲೋಕಸಭೆ ಹಾಗೂ ರಾಜ್ಯಸಭೆಗಳಲ್ಲಿದ್ದಂತೆ ಇಲ್ಲಿಯೂ ಸಮಿತಿಗಳಿವೆ.

ರಾಷ್ಟ್ರಾಧ್ಯಕ್ಷರಿಗಿರುವಂತೆ ರಾಜ್ಯಪಾಲರಿಗೆ ಅಧ್ಯಾದೇಶಗಳನ್ನು ಹೊರಡಿಸುವ ಅಧಿಕಾರವಿದೆ.

ಸದನಗಳಿಗೂ ಸಮಿತಿಗಳಿಗೂ ಸದಸ್ಯರಿಗೂ ಸಂಸತ್ತಿನಲ್ಲಿರುವಂತೆ ಕೆಲವು ಹಕ್ಕುಬಾಧ್ಯತೆಗಳಿವೆ.

## ಸಂಸ್ಕೃತಿ

ಪಾಶ್ಚಾತ್ಯ ಸಂಸ್ಕೃತಿ, ದ್ರಾವಿಡ ಸಂಸ್ಕೃತಿ, ಕೊಡಗರ ಸಂಸ್ಕೃತಿ– ಇಂಥ ಮಾತುಗಳಲ್ಲಿ 'ಸಂಸ್ಕೃತಿ' ಎಂಬ ಪದ ಒಂದು ಜನಾಂಗದ, ಪ್ರಾಂತದ ಅಥವಾ ದೇಶದ ಜನಜೀವನದ ಹೊರಲಕ್ಷಣಗಳನ್ನು ಸೂಚಿಸುತ್ತದೆ. ಜನರ ವೇಷಭೂಷಣಗಳು, ಹುಟ್ಟು ಸಾವು ಮದುವೆ ಮುಂತಾದುವನ್ನು ಆಚರಿಸುವ ರೀತಿ ಇಂಥವೆಲ್ಲ ಈ ಸಂಸ್ಕೃತಿಯ ರೂಪಗಳು. ಸಮಾಜ ವಿಜ್ಞಾನ ಮಾನವ ವಿಜ್ಞಾನಗಳು 'ಸಂಸ್ಕೃತಿ'ಯನ್ನು ಈ ಅರ್ಥದಲ್ಲಿ ಬಳಸುತ್ತವೆ. ಇಂಥ ಸಂಸ್ಕೃತಿ ಇಡೀ ಸಮಾಜದ ಸೃಷ್ಟಿ. ವ್ಯಕ್ತಿಯದಲ್ಲ: ಅದಿರುವುದು ಆ ಸಮಾಜದಲ್ಲಿ ಮಾತ್ರ. ಹೊರಗಿನವರನ್ನು ಎದುರಿಸಬೇಕಾದಾಗ ಇಂಥ ಸಂಸ್ಕೃತಿ ಸಮಾಜದೊಳಗಿರುವವರನ್ನು ಒಟ್ಟುಗೂಡಿಸುತ್ತದೆ. ಹೊರಗಿನವರಿಲ್ಲದಾಗ ಅದು ಒಗ್ಗಟ್ಟನ್ನು ಮುರಿಯದಂತೆ ಎಚ್ಚರಿಕೆ ವಹಿಸಬೇಕು.

ಇಲ್ಲಿ ವಿವೇಚಿಸುತ್ತಿರುವ ಸಂಸ್ಕೃತಿ ಬೇರೆ. 'ಸಂಸ್ಕೃತ' ಎಂದರೆ ಉತ್ತಮಗೊಳಿಸಿದ್ದು. ಚೊಕ್ಕಗೊಳಿಸಿದ್ದು. ಅಂದಗೊಳಿಸಿದ್ದು. ಚೊಕ್ಕಗೊಳಿಸಿದ ಆತ್ಮವಿದ್ದವರ ಸಂಸ್ಕೃತಿಯಿದ್ದಂತೆ. ಇದು ಜೀವನದ ಹೊರಲಕ್ಷಣವಲ್ಲ: ಮನಸ್ಸಿನ, ಹೃದಯದ ಪರಿಪಾಕ. ಅದರ ಲಕ್ಷಣಗಳೆಂದರೆ ನಯವಿನಯ; ಸಹಮಾನವರ–ಸಹಜೀವಿಗಳ ವಿಷಯದಲ್ಲಿ ಸಹಾನುಭೂತಿ. ಸಹನೆ, ಸಂಕುಚಿತ: ಸರ್ವಭ್ರಾತೃತ್ವಕ್ಕೆ ಅಡ್ಡಿಯಾಗದ ದೇಶಾಭಿಮಾನ, ಭಾಷಾಭಿಮಾನ: ಇತರರನ್ನು ಕೀಳು ಎಂದು ಭಾವಿಸದೆ. ಇತರರೆದುರಿಗೆ ನಾವು ಕೀಳು ಎಂಬ ಭಾವನೆಗೆ ಎಡೆಗೊಡದೆ ಇರುವಂಥ ಆತ್ಮಾಭಿಮಾನ. ಹಸಿರುಡುಗೆಯುಟ್ಟ ವನರಾಜಿ, ಹೊಳೆಯ ಮಂಜುಳನಿನಾದ. ಸೂರ್ಯೋದಯ ಸೂರ್ಯಾಸ್ತ, ಸಂಗೀತದ ಇಂಪು. ಮಾನವ ಹೃದಯದ ಸ್ನೇಹಪ್ರೇಮಗಳು. ಚಿಕ್ಕ ಮಕ್ಕಳ ಮುಗ್ಧಮನೋಹರತೆ–ಇಂಥವೆಲ್ಲವನ್ನೂ ಒಳಗೊಂಡ ಮಾನವ ಜೀವನ ಅದೆಷ್ಟು ಸುಂದರವಾದದ್ದು! ಈ ಭಾಗ್ಯವನ್ನು ಅನುಭವಿಸುವ ಶಕ್ತಿಯೂ ಸಂಸ್ಕೃತಿಯಲ್ಲಿ ಒಂದು ಭಾಗ. ನಾವು 'ಅಹಂ' ನಲ್ಲಿ ಮುಳುಗಿದ್ದರೆ ಇವ್ಯಾವುದೂ ನಮಗೆ ಲಭಿಸಲಾರವು. ಸುಸಂಸ್ಕೃತನಾಗಬೇಕೆನ್ನುವವನು ಇತರರನ್ನು ನೋಯಿಸುವ ಮನೋವೃತ್ತಿಯನ್ನು ಹೊರಹಾಕಬೇಕು: ಇತರರನ್ನು ಅರ್ಥಮಾಡಿಕೊಂಡು ಅವರಿಗೆ ಉಲ್ಲಾಸ ಕೊಡುವ ಮನೋವೃತ್ತಿಯನ್ನು ಬೆಳೆಸಿಕೊಳ್ಳಬೇಕು: ಕೋಪತಾಪಾದಿಗಳನ್ನು ಹದದಲ್ಲಿಟ್ಟುಕೊಂಡು ಪ್ರಸನ್ನ ಚಿತ್ತನಾಗಿರಬೇಕು.

ಈ ಸಂಸ್ಕೃತಿ ಸಮಾಜ ಸೃಷ್ಟಿಸಲಾಗದ್ದು: ವ್ಯಕ್ತಿಯೇ ಜೀವನಾನುಭವದಿಂದ ಸಾಧಿಸಬೇಕಾದದ್ದು. ದೇವದಾನವರು ಅಮೃತಕ್ಕಾಗಿ ಸಮುದ್ರವನ್ನು ಕಡೆದಾಗ ಅಮೃತವಿಷಗಳೆರಡೂ ಹುಟ್ಟಿದುವಂತೆ. ವಿಷವನ್ನು ಶಿವ ನುಂಗಿದಾಗ ಅದು ಕಂಠದಿಂದ ಒಳಕ್ಕೆ ಇಳಿಯದಂತೆ ಪಾರ್ವತಿ ತಡೆದಳಂತೆ. ಹಾಗೆ ನಾವು ಜೀವನಸಾಗರವನ್ನು ಕಡೆಯುವಾಗ–ಅದರ ವಿಷಯ ಚಿಂತನೆ ಮಾಡುವಾಗ– ಅಮೃತವಿಷಗಳೆರಡೂ ಹುಟ್ಟುತ್ತವೆ. ಜೀವನದಲ್ಲಿ ವಿಷ ಇದ್ದಿದ್ದೇ. ವಿಷವನ್ನುಂಡೂ ಶಿವನಾಗಬೇಕು: ಅದರ ವಿಷ ಹೃದಯಕ್ಕೆ ಇಳಿಯದಂತೆ ತಡೆಯುವ ಶಕ್ತಿಯೂ ಬೇಕು. ಜೀವನಾನುಭವವನ್ನು ಕಡೆದರೆ ಕೊನೆಯಲ್ಲಿ ಲಭಿಸುವ ಅಮೃತ ಸಂಸ್ಕೃತಿ.

ಈ ಸಂಸ್ಕೃತಿ ಕಾಲದೇಶಗಳಿಗನುಸಾರವಾಗಿ ಬದಲಾಯಿಸುವಂಥದಲ್ಲ. ಎಲ್ಲ ಕಾಲಗಳಿಗೂ ಎಲ್ಲ ದೇಶಗಳಿಗೂ ಒಂದೇ. '[illegible] ಜೋಕೆ!' ಎಂದು [illegible] ಸಂಸ್ಕೃತನ ಹೃದಯದಿಂದ ಮಾತ್ರ ಬರಬಹುದಾದ ಈ ಮಾತು, ಈ ಭಾವ. [illegible] ಕಾಲ ದೇಶಗಳಲ್ಲಿ ಮಾತ್ರವಲ್ಲದೆ ಎಲ್ಲ ಕಾಲ ದೇಶಗಳಲ್ಲಿಯೂ ಸತ್ಯ. ಸಾವಿರಾರು ವರ್ಷಗಳ ಕೆಳಗೆ ವಾಲ್ಮೀಕಿ ಕಲ್ಪಿಸಿಕೊಟ್ಟ ಶ್ರೀರಾಮ ಇಂದಿಗೂ ಅತ್ಯುತ್ತಮ ಸಂಸ್ಕೃತಿಯ ಸಂಕೇತ.

## ಸಚಿವ ಸಂಪುಟ

ಪ್ರಜೆಗಳ ಪ್ರತಿನಿಧಿಗಳು ಸರಕಾರ ನಡೆಸುವುದು ಪ್ರಜಾಪ್ರಭುತ್ವದ ಲಕ್ಷಣ. ಚುನಾವಣೆಯಲ್ಲಿ ಯಾವ ರಾಜಕೀಯ ಪಕ್ಷದ ಅತ್ಯಧಿಕ ಸ್ಪರ್ಧಿಗಳು ಆಯ್ಕೆಯಾಗುವರೋ ಆ ಬಹುಮತ ಪಕ್ಷದ ನಾಯಕ ಸರಕಾರವನ್ನು ನಡೆಸುವ ಜವಾಬ್ದಾರಿ ವಹಿಸಿಕೊಳ್ಳುತ್ತಾನೆ. ಸರಕಾರ ನಡೆಸುವಲ್ಲಿ ತನಗೆ ನೆರವಾಗಲು ಆತ ಆಯ್ದುಕೊಳ್ಳುವ ಸಚಿವರ ಸಮಿತಿ ಸಂಪುಟ ಎನಿಸಿಕೊಳ್ಳುತ್ತದೆ.

ಸಂಪುಟದ ಸದಸ್ಯರಾದ ಸಚಿವರು ಆಡಳಿತದ ಬೇರೆ ಬೇರೆ ವಿಭಾಗಗಳ ಜವಾಬ್ದಾರಿ ವಹಿಸಿಕೊಳ್ಳುತ್ತಾರೆ. ಪ್ರತಿ ವಿಭಾಗ ಒಂದು ಖಾತೆ ಎನಿಸಿಕೊಳ್ಳುತ್ತದೆ. ಸರಕಾರ ನಡೆಸುವ ಜವಾಬ್ದಾರಿ ಹೊತ್ತ ಸಚಿವರು ತಮ್ಮ ಪಕ್ಷದ ನಾಯಕನ ಜತೆ ಆಡಳಿತ, ಸರಕಾರದ ನೀತಿ ಮುಂತಾದುವುಗಳ ಬಗೆಗೆ ಸಂಪುಟದ ಸಭೆಗಳಲ್ಲಿ ಚರ್ಚೆ ನಡೆಸುತ್ತಾರೆ. ನಾಯಕನ ನಿರ್ದೇಶನದಂತೆ ತಮ್ಮ ಖಾತೆಯ ಆಡಳಿತವನ್ನು ನಿರ್ವಹಿಸುತ್ತಾರೆ.

ಇಂಗ್ಲೆಂಡ್ ಮತ್ತು ಅದರ ಆಡಳಿತ ವ್ಯವಸ್ಥೆಯನ್ನು ಅನುಸರಿಸಿದ ದೇಶಗಳಲ್ಲಿ ಪ್ರಧಾನಿ ಸರಕಾರದ ಮುಖ್ಯಸ್ಥ. ತನ್ನ ಪಕ್ಷಕ್ಕೆ ಸೇರಿದ ಪ್ರಜಾಪ್ರತಿನಿಧಿಗಳನ್ನೇ ಸಚಿವ ಸಂಪುಟದ ಸದಸ್ಯರನ್ನಾಗಿ ಆಯ್ಕೆ ಮಾಡಿಕೊಳ್ಳುತ್ತಾನೆ. ಆತನ ಸಲಹೆಯಂತೆ ರಾಷ್ಟ್ರದ ಅರಸ (ಸಂವಿಧಾನಬದ್ಧ ರಾಜಪ್ರಭುತ್ವವಾದರೆ) ಅಥವಾ ಅಧ್ಯಕ್ಷ (ಗಣರಾಜ್ಯವಾದರೆ) ಅವರನ್ನು ಸಂಪುಟದ ಸಚಿವರನ್ನಾಗಿ ನಿಯಮಿಸುತ್ತಾನೆ. ಸಂಪುಟದ ಸದಸ್ಯ ತಾನು ಸಂವಿಧಾನಬದ್ಧವಾಗಿ ಕೆಲಸ ಮಾಡುವುದಾಗಿಯೂ ರಾಷ್ಟ್ರದ ಹಿತದೃಷ್ಟಿಯಿಂದ ದುಡಿಯುವುದಾಗಿಯೂ ಮಂತ್ರಿಯಾಗಿ ತನಗೆ ತಿಳಿಯುವ ರಹಸ್ಯಗಳನ್ನು ಹೊರಗೆಡಹುವುದಿಲ್ಲವೆಂದೂ ಪ್ರಮಾಣ ಸ್ವೀಕರಿಸುತ್ತಾನೆ.

ಸಂಪುಟ ಸರಕಾರದ ಧೋರಣೆಯನ್ನು ನಿರ್ಧರಿಸುತ್ತದೆ: ಮುಖ್ಯ ವಿಷಯಗಳನ್ನು ಪರಿಶೀಲಿಸಿ ತೀರ್ಮಾನಿಸುತ್ತದೆ. ಪ್ರಜಾಪ್ರಭುತ್ವದಲ್ಲಿ ಸಂಪುಟ ಒಟ್ಟಾಗಿ ಸಂಸತ್ತಿಗೆ (ರಾಜ್ಯಗಳಲ್ಲಿ ವಿಧಾನಸಭೆಗೆ) ಹೊಣೆ. ಸಂಪುಟ ಮಾಡಿದ ಎಲ್ಲ ತೀರ್ಮಾನಗಳಿಗೂ ಪ್ರತಿ ಸಚಿವನೂ ಜವಾಬ್ದಾರ. ಪ್ರಧಾನಿ ಅಥವಾ ಮುಖ್ಯಮಂತ್ರಿ ಸಂಪುಟದ ಯಾವ ಸದಸ್ಯನನ್ನಾದರೂ ರಾಜೀನಾಮೆ ಕೊಡುವಂತೆ ಕೇಳಬಹುದು.

ಭಾರತದಲ್ಲಿ ಇದೇ ಪದ್ಧತಿ ಅನುಸರಣೆಯಲ್ಲಿದೆ. ರಾಜ್ಯಗಳಲ್ಲಿ ರಾಜ್ಯಪಾಲರು ಅತಿ ಹೆಚ್ಚಿನ ಸದಸ್ಯರಿರುವ ಪಕ್ಷದ ನಾಯಕನನ್ನು ಸಚಿವ ಸಂಪುಟ ರಚಿಸುವಂತೆ ಆಹ್ವಾನಿಸುತ್ತಾರೆ.

ಸರಕಾರದ ನೀತಿಯನ್ನೋ ಸಾಮರ್ಥ್ಯವನ್ನೋ ಪ್ರಶ್ನಿಸಿ ಅದನ್ನು [illegible] ಬಯಸುವ ಪಕ್ಷದವರು ವಿಧಾನಸಭೆಯಲ್ಲಿ ಅಥವಾ ಸಂಸತ್ತಿನಲ್ಲಿ ಸಂಪುಟದಲ್ಲಿ ವಿಶ್ವಾಸವಿಲ್ಲ ಎಂಬ ನಿರ್ಣಯವನ್ನು ಮಂಡಿಸುತ್ತಾರೆ. ಅದಕ್ಕೆ ಬಹುಮತ ದೊರೆತರೆ ಮುಖ್ಯಮಂತ್ರಿ ಅಥವಾ ಪ್ರಧಾನಿ ರಾಜೀನಾಮೆ [illegible]. ಅವರು ರಾಜೀನಾಮೆ ಇತ್ತರೆ ಇಡೀ ಸಂಪುಟವೇ ರಾಜೀನಾಮೆ ನೀಡಿದಂತೆ.

ಒಂದೇ ಪಕ್ಷಕ್ಕೆ ಬಹುಮತ ಇಲ್ಲದಿದ್ದರೆ ಹಲವು ಪಕ್ಷಗಳು ಕೂಡಿಕೊಂಡು, ರಂಗರಚಿಸಿಕೊಂಡು ಆಡಳಿತವನ್ನು ನಡೆಸಬಹುದು. ಅದು 'ಸಮ್ಮಿಶ್ರ ಮಂತ್ರಿಮಂಡಲ'. ಒಪ್ಪಂದ ಮಾಡಿಕೊಂಡ ಪಕ್ಷಗಳ ಪ್ರತಿನಿಧಿಗಳಲ್ಲಿ ಕೆಲವರನ್ನು ಸಂಪುಟದಲ್ಲಿ ಸೇರಿಸಿಕೊಳ್ಳಬಹುದು.

ಅಮೆರಿಕದ ಅಧ್ಯಕ್ಷ ಅಲ್ಲಿನ ಸರಕಾರದ ಮುಖ್ಯಸ್ಥ. ಅವರು ನೇಮಿಸುವ ಸಚಿವರಿಗೆ ಸಂವಿಧಾನಾತ್ಮಕವಾಗಿ ಬಾಧ್ಯತೆಯಿಲ್ಲ. ಅಮೆರಿಕದ ಅಧ್ಯಕ್ಷನಿಗೆ ಸಲಹೆ ನೀಡುವುದೂ ಆಡಳಿತದಲ್ಲಿ ನೆರವಾಗುವುದೂ ಅವರ ಕರ್ತವ್ಯ.



ಹರಿಜನರ ಹಿತಸಾಧನೆಗಾಗಿ ನಡೆಸಿದ ಅನ್ನ ಸತ್ಯಾಗ್ರಹದ ವೇಳೆಯಲ್ಲಿ ಗಾಂಧಿಜಿ

## ಸತ್ಯಾಗ್ರಹ

ಪ್ರಹ್ಲಾದನ ಕಥೆಯನ್ನು ನಮ್ಮ ದೇಶದಲ್ಲಿ ಎಲ್ಲರೂ ಬಲ್ಲರು.

ಆತನ ತಂದೆ ಹಿರಣ್ಯಕಶಿಪು ರಾಕ್ಷಸ, ಬಲಿಷ್ಠ ಚಕ್ರವರ್ತಿ. 'ಹರಿ', 'ವಿಷ್ಣು' ಎಂದರಾಗದು ಅವನಿಗೆ. ಮಗನಿಗೆ ಸದಾ ಹರಿಯ ಸ್ಮರಣೆ.

ಬೇಡ ಎಂದ ತಂದೆ; ಬಯ್ದು, ಹೆದರಿಸಿದ. ಮಗ ಕೇಳಲಿಲ್ಲ.

ತಂದೆ ವಿಷವನ್ನು ಕುಡಿಸಿದ, ಆನೆಯ ಕಾಲಿನಿಂದ ತುಳಿಸಿದ, ಬೆಟ್ಟದಿಂದ ನೂಕಿಸಿದ. ಮಗ ಹರಿಯ ಸ್ಮರಣೆಯನ್ನೇ –ದೇವರ ಧ್ಯಾನವನ್ನೇ– ಮಾಡಿದ.

ಪ್ರಹ್ಲಾದ ಸತ್ಯವ್ರತ. ಸತ್ಯಕ್ಕೋಸ್ಕರ ಶಾಂತಚಿತ್ತನಾಗಿ, ತಾಳ್ಮೆಯಿಂದ, ಕಷ್ಟಗಳನ್ನು ಸಹಿಸಿದವನು. ತಂದೆಯ ವಿಷಯದಲ್ಲಿ ಕೋಪಮಾಡಿಕೊಳ್ಳದೆ, ದ್ವೇಷವಿಲ್ಲದೆ, ತಂದೆಯ ಮನಸ್ಸು ಬದಲಾಯಿಸಬಹುದೆಂಬ ಭರವಸೆಯಿಂದ ತನ್ನ ಪ್ರತಿಜ್ಞೆಯನ್ನು ಕಾಪಾಡಿಕೊಂಡವನು.

ಅಂಥ ನಿಷ್ಠೆಯ ಪಡಿನೆಳಲನ್ನು ಆಧುನಿಕ ಸತ್ಯಾಗ್ರಹದಲ್ಲಿ ನಾವು ಕಾಣುತ್ತೇವೆ.

ಚಾರಿತ್ರಿಕವಾಗಿ ಸತ್ಯಾಗ್ರಹದ ಜನನ 1906ರಲ್ಲಿ, ದಕ್ಷಿಣ ಆಫ್ರಿಕದಲ್ಲಿ. ಮಹಾತ್ಮ ಗಾಂಧಿಯವರೇ ಇದರ ಆದ್ಯಪ್ರವರ್ತಕ. ಗಾಂಧಿಜಿಯವರು ದಕ್ಷಿಣ ಆಫ್ರಿಕದಲ್ಲಿದ್ದಾಗ ಅಲ್ಲಿ ಬಣ್ಣದ ಜನರಿಗೆ ಬಿಳಿಯ ಜನರಿಂದ ಆಗುತ್ತಿದ್ದ ಅನ್ಯಾಯವನ್ನು ಕಂಡರು. ಸರಕಾರ ಬಿಳಿಯರದು, ಅಧಿಕಾರ ಬಿಳಿಯರದು, ಬಣ್ಣದ ಜನ ಏನು ಮಾಡಬೇಕು ? ಆಗ ಪ್ರತಿಭಟನೆಗಾಗಿ ಗಾಂಧಿಜಿಯವರು ಹೂಡಿದ ಚಳುವಳಿಯೇ ಸತ್ಯಾಗ್ರಹದ ನಾಂದಿ. ಈ ಚಳುವಳಿಗೆ ಮೊದಮೊದಲು 'ನಿಶ್ಶಸ್ತ್ರ ಪ್ರತಿಭಟನೆ' ಎಂಬ ಹೆಸರಿತ್ತು. ಈ ಹೆಸರು ಗಾಂಧಿಜಿಯವರಿಗೆ ಅಷ್ಟೊಂದು ಹಿಡಿಸಲಿಲ್ಲ. 'ಇಂಡಿಯನ್ ಒಪಿನಿಯನ್' (ಭಾರತೀಯ ಅಭಿಪ್ರಾಯ) ಎಂಬ ತಮ್ಮ ವಾರಪತ್ರಿಕೆಯಲ್ಲಿ ಆ ಚಳುವಳಿಗೆ ತಕ್ಕ ಹೆಸರನ್ನು ಸೂಚಿಸಬೇಕೆಂದು ಓದುಗರನ್ನು ಕೇಳಿಕೊಂಡರು. ಒಂದು ಬಹುಮಾನವನ್ನು ಸಹ ಇಟ್ಟರು. ಅನೇಕರಿಂದ ಅನೇಕ ಹೆಸರುಗಳು ಸೂಚಿತವಾದುವು. ಗಾಂಧಿಜಿಯ ಮಗ ಮಗನ್ ಲಾಲ್ ಗಾಂಧಿ 'ಸದಾಗ್ರಹ' ಎಂಬ ಹೆಸರನ್ನು ಸೂಚಿಸಿದರು. ಈ ಪದವನ್ನೇ ಗಾಂಧಿಜಿಯವರು ಸತ್ಯಾಗ್ರಹ ಎಂದು ಪರಿವರ್ತಿಸಿದರು. ಸತ್ಯದ ಬಲದಿಂದ ಚಳುವಳಿಯನ್ನು ರೂಪಿಸಿ ಅದರ ಆಗ್ರಹದಿಂದ ಕೆಟ್ಟದ್ದನ್ನು ಜಯಿಸುವುದೇ ಸತ್ಯಾಗ್ರಹದ ಗುರಿ. ಶತ್ರುಗಳಿಗೂ ಹೃದಯವಿದೆ, ಸತ್ಯಕ್ಕಾಗಿ ನಾವು ಕಷ್ಟ ಸಂಕಟಗಳನ್ನು ಅನುಭವಿಸಿದರೆ ಅವರ ಮನಸ್ಸು ಕರಗುತ್ತದೆ. ಹೃದಯ ಪರಿವರ್ತನೆಯಾಗುತ್ತದೆ ಎಂಬ ನಂಬಿಕೆ ಸತ್ಯಾಗ್ರಹಕ್ಕೆ ಮೂಲಾಧಾರ.

ಸತ್ಯಾಗ್ರಹ ಸಾಮಾನ್ಯವಾಗಿ ಎರಡು ಬಗೆಗಳಲ್ಲಿ ರೂಢಿಯಲ್ಲಿವೆ: ಒಂದು ಧರಣಿ ಸತ್ಯಾಗ್ರಹ. ತಪ್ಪುಹಾದಿ ಹಿಡಿದಿರುವ ವ್ಯಕ್ತಿಯ ಮನೆಯ ಎದುರು ಕುಳಿತು, ಆತ ಮನಸ್ಸು ಬದಲಾಯಿಸುವ ತನಕ ಆ ಸ್ಥಳದಿಂದ ಏಳುವುದಿಲ್ಲ ಎಂದು ಪಟ್ಟುಹಿಡಿದು ಕೂಡುವುದು. ಎರಡನೆಯದು, ಉಪವಾಸ ಸತ್ಯಾಗ್ರಹ; ಸತ್ಯಾಗ್ರಹಗಳಲ್ಲೆಲ್ಲ ಇದು ಬಹಳ ಪ್ರಚುರವಾದದ್ದು. ಕೆಡುಕನ್ನು ವಿರೋಧಿಸಿ ಆಹಾರ ಸೇವಿಸದೆ ಇರುವುದೇ ಉಪವಾಸ ಸತ್ಯಾಗ್ರಹ. ಸ್ವತಃ ಗಾಂಧಿಜಿಯೆ ಈ ಬಗೆಯ ಮೊದಲ ಸತ್ಯಾಗ್ರಹಿ. ಹರಿಜನರಿಗೆ ಸಮಾನ ಸ್ಥಾನ ಸಿಗಬೇಕೆಂದು, ಹಿಂದೂ ಮುಸಲ್ಮಾನರ ಐಕಮತ್ಯವಿರಬೇಕೆಂದು, ಕಾಂಗ್ರೆಸಿಗರು ಅಹಿಂಸೆಯ ಸರಿಯಾದ ಮಾರ್ಗದಲ್ಲಿ ನಡೆದುಕೊಳ್ಳಬೇಕೆಂದು ಗಾಂಧಿಜಿ ಉಪವಾಸ ಸತ್ಯಾಗ್ರಹ ಮಾಡಿದ್ದುಂಟು. ಸರ್ವಜನಹಿತಕ್ಕಾಗಿ ನಡೆಯುವ ಮುಷ್ಕರಗಳನ್ನೂ, ಅವು ನ್ಯಾಯಬದ್ಧವಾಗಿದ್ದರೆ ಅಥವಾ ಅಹಿಂಸಾತ್ಮಕವಾಗಿದ್ದರೆ, ಒಂದು ಬಗೆಯ ಸತ್ಯಾಗ್ರಹವೆಂದೇ ಕರೆಯಬಹುದು.

ಸತ್ಯಾಗ್ರಹ ವೈಯಕ್ತಿಕವಾಗಬಹುದು, ಸಾರ್ವಜನಿಕವಾಗಬಹುದು. ಅನ್ಯಾಯಗಳನ್ನು ವಿರೋಧಿಸಿ ಒಬ್ಬ ನಿರ್ದಿಷ್ಟ ವ್ಯಕ್ತಿ ಸತ್ಯಾಗ್ರಹ ಕೈಗೊಳ್ಳುವುದು ವೈಯಕ್ತಿಕ ಸತ್ಯಾಗ್ರಹ. ಸಮಾಜದ ಸರ್ವರು ಅಥವಾ ಬಹುಸಂಖ್ಯಾತರು ಸತ್ಯಾಗ್ರಹ ನಡೆಸಿದಾಗ ಅದು ಸಾರ್ವಜನಿಕ ಸತ್ಯಾಗ್ರಹ ಎನಿಸಿಕೊಳ್ಳುತ್ತದೆ. ಗಾಂಧಿಜಿ ನಡೆಸಿದ [illegible] ಸತ್ಯಾಗ್ರಹ ಈ ಬಗೆಯದು.

ಸತ್ಯಾಗ್ರಹ [illegible]
[illegible]

ಬಲಗಳಿಲ್ಲದ ಒಳ್ಳೆಯವರು ನಿಸ್ಸಹಾಯಕರಾಗಿರಬೇಕೆ ? ಸತ್ಯಾಗ್ರಹಿ ದೇಹ ಬಲ, ಸೈನ್ಯಬಲಗಳನ್ನು ಮೀರಿಸಿದ ಬಲ ಒಂದಿದೆ ಎಂದು ನಂಬುತ್ತಾನೆ. ಇದು ಆತ್ಮಬಲ. ತನ್ನ ಸತ್ಯನಿಷ್ಠೆಯಿಂದ ಗುಂಡನ್ನೂ ಎದುರಿಸುವ ಸತ್ಯಾಗ್ರಹಿ, ಮನುಷ್ಯರನ್ನು ಉದ್ಧಾರದ ಕಡೆಗೆ ಒಯ್ಯುವ ಮಹಾಧೀರ.

ದಕ್ಷಿಣ ಆಫ್ರಿಕದಲ್ಲಿ ರೂಪುಗೊಂಡ ಸತ್ಯಾಗ್ರಹದ ಆಯುಧವನ್ನು ಮಹಾತ್ಮ ಗಾಂಧಿಯವರ ನೇತೃತ್ವದಲ್ಲಿ ರಾಷ್ಟ್ರದ ಸ್ವಾತಂತ್ರ್ಯ ಸಂಪಾದನೆಗಾಗಿ ಭಾರತೀಯರು ಬಳಸಿದರು. ಸತ್ಯಾಗ್ರಹದ ಮುಂದೆ, ಮಾರಕಾಸ್ತ್ರಗಳ ಬಲಹೊಂದಿದ್ದ ವಿದೇಶೀಯ ಪ್ರಭುತ್ವ ಮಣಿಯಬೇಕಾಯಿತು.

ಇತ್ತೀಚಿನ ವರ್ಷಗಳಲ್ಲಿ ಸತ್ಯಾಗ್ರಹ ವಿದೇಶಗಳಲ್ಲೂ ಪ್ರಚುರವಾಗಿದೆ. ಗಾಂಧಿಜಿಯನ್ನು ಸ್ವತಃ ಕಾಣದೆ ಇದ್ದರೂ ಅವರ ಬೋಧನೆಯನ್ನು ಅರ್ಥ ಮಾಡಿಕೊಂಡು ಸತ್ಯಾಗ್ರಹದ ಅಸ್ತ್ರವನ್ನು ಅಮೆರಿಕದಲ್ಲಿ ಬಳಸಿದವರು ಹುತಾತ್ಮ ಮಾರ್ಟಿನ್ ಲೂಥರ್ ಕಿಂಗ್.

## ಸನ್ಯಾಸಿ

ತನ್ನ ಮನೆ ಬಂಧು ಬಳಗ, ತನ್ನ ಸಾಮಾನು ಆಸ್ತಿ ಎಲ್ಲವನ್ನೂ ಬಿಟ್ಟು, ದೈಹಿಕ ಸುಖದ ಆಸೆಯನ್ನು ತೊರೆದು, ದೈವ ಸಾಮೀಪ್ಯಕ್ಕಾಗಿ ಯಾವುದಾದರೂ ಒಂದು ಧರ್ಮದ ದೀಕ್ಷೆ ಪಡೆದವನನ್ನು ಸನ್ಯಾಸಿ ಎನ್ನುತ್ತಾರೆ.

ಸನ್ಯಾಸಿ ಎಂಬುದು ಹಿಂದೂಧರ್ಮದಲ್ಲಿ ಉಪಯೋಗಿಸುವ ಪದವಾದರೂ ಸನ್ಯಾಸಿಯ ಆದರ್ಶವನ್ನು ಹೊಂದಿದವರು ಪ್ರಪಂಚದ ಅನೇಕ ಧರ್ಮಗಳಲ್ಲಿದ್ದಾರೆ. ಬೌದ್ಧರ 'ಭಿಕ್ಕು,' ಕ್ರೈಸ್ತರ 'ಮಾಂಕ್'-ಇವರೂ ಸನ್ಯಾಸಿಗಳೇ. ಸನ್ಯಾಸಿಗಳ ನಿವಾಸ ಹಿಂದೂಗಳಲ್ಲಿ ಮಠವಾದರೆ, ಬೌದ್ಧರಲ್ಲಿ ವಿಹಾರ, ಕ್ರೈಸ್ತರಲ್ಲಿ 'ಮೊನಾಸ್ಟರಿ.'

ಎಲ್ಲ ಸನ್ಯಾಸಿಗಳ ಗುರಿ ಸತ್ಯದ ಅನ್ವೇಷಣೆ, ದೇವರಿಗಾಗಿಯೆ ಬದುಕುವುದು, ಧಾರ್ಮಿಕ ಜೀವನ. ಕೆಲವು ಧರ್ಮಗಳಲ್ಲಿ ಸಾಂಘಿಕ ಜೀವನ ಮತ್ತು ಮಾನವ ಸೇವೆ ಇವೂ ಮುಖ್ಯವೆಂದು ಪರಿಗಣಿಸಲ್ಪಟ್ಟಿವೆ. ಉದಾಹರಣೆಗೆ ಬೌದ್ಧ ಭಿಕ್ಷು, ಭಿಕ್ಷುಣಿಯರು ಬದುಕುವುದೇ ಬಡವರ, ದೀನರ, ಅನಾಥರ, ನರಳುವವರ ಸೇವೆಗಾಗಿ. ಪ್ರಾರಂಭದಲ್ಲಿ ಕ್ರೈಸ್ತ ಸನ್ಯಾಸಿಗಳೂ ಸನ್ಯಾಸಿನಿಯರೂ ಧಾರ್ಮಿಕ ಜೀವನವನ್ನು ಮುಖ್ಯವೆಂದು ಪರಿಗಣಿಸಿದರೂ ಈಗ ಅವರಲ್ಲಿಯೂ ಆ ಗುರಿಯ ಜೊತೆಗೆ ಸಮಾಜಸೇವೆ ಪ್ರಾಮುಖ್ಯ ಪಡೆದಿದೆ. ರಾಮಕೃಷ್ಣ ಆಶ್ರಮದ ಸನ್ಯಾಸಿಗಳು ಕಷ್ಟಪಡುವವರ ಸೇವೆಯನ್ನು ಮುಖ್ಯವಾಗಿ ಗಣಿಸುತ್ತಾರೆ. ಹಿಂದೂಧರ್ಮದ ಪ್ರಕಾರ ಮನುಷ್ಯನಿಗೆ ನಾಲ್ಕು ಹಂತಗಳು. ಒಂದೊಂದು ಹಂತಕ್ಕೂ ಒಂದೊಂದು 'ಆಶ್ರಮ' ಎಂದು ಹೆಸರು. ವಿದ್ಯಾಭ್ಯಾಸ ಮುಗಿಯುವವರೆಗೆ ಬ್ರಹ್ಮಚರ್ಯಾಶ್ರಮ, ವಿದ್ಯಾಭ್ಯಾಸ ಮುಗಿದು ಮದುವೆ ಮಾಡಿಕೊಂಡ ಬಳಿಕ ಗೃಹಸ್ಥಾಶ್ರಮ. ಗೃಹಸ್ಥನಾದವನು ದೇವರಿಗೆ, ದೇವತೆಗಳಿಗೆ, ತನ್ನ ಪೂರ್ವಜರಿಗೆ, ಆಚಾರ್ಯರಿಗೆ, ಋಷಿಗಳಿಗೆ ತನ್ನಿಂದ ಯಾವ ಯಾವ ಸೇವೆ ಸಲ್ಲಿಸಬೇಕಾಗಿದೆಯೋ ಅವನ್ನು ಸಲ್ಲಿಸಬೇಕು. ಮುಪ್ಪಿನ ಕಾಲದಲ್ಲಿ ಸುಖ, ಪದವಿ, ಆಸ್ತಿ ಎಲ್ಲವನ್ನೂ ಮಕ್ಕಳಿಗೆ ಒಪ್ಪಿಸಿ ಕಾಡಿಗೆ ಧ್ಯಾನಕ್ಕಾಗಿ ತೆರಳುವುದು ವಾನಪ್ರಸ್ಥಾಶ್ರಮ. ಕೊನೆಗೆ ಒಂದು ಕಡೆ ವಾಸಿಸದೆ ದೇವರನ್ನು ಅರಸುವುದು ಸನ್ಯಾಸಾಶ್ರಮ. ಪ್ರತಿಯೊಬ್ಬನೂ ಒಂದು ಘಟ್ಟದಲ್ಲಿ ಈ ಜಗತ್ತಿನಲ್ಲಿ ಇದ್ದರೂ ತಾನಾಗಿ ಅದರಿಂದ ದೂರಸರಿದು ಅದರ ಮೂಲಕ ಮನಶ್ಶಾಂತಿಯನ್ನು ಗಳಿಸುವ ಆದರ್ಶ ಭಾರತದಲ್ಲಿ ಮಾತ್ರ ಕಂಡುಬರುತ್ತದೆ. ಈ ಕಲ್ಪನೆ ಜಗತ್ತಿಗೆ ಪ್ರಾಚೀನ ಭಾರತದ ವಿಶಿಷ್ಟ ಕೊಡುಗೆ.

ಕೆಲವರು ಬ್ರಹ್ಮಚರ್ಯಾಶ್ರಮವಾದ ಮೇಲೆ ಸನ್ಯಾಸಿಗಳಾಗುತ್ತಿದ್ದರು. ಹಲವರು ಋಷಿಗಳು ಗೃಹಸ್ಥಾಶ್ರಮದಲ್ಲಿದ್ದೂ ಸನ್ಯಾಸಿಗಳಂತೆ ಆಸೆಯನ್ನೂ ಸುಖವನ್ನೂ ಬಿಟ್ಟು ಬಾಳುತ್ತಿದ್ದರು.

ಹಿಂದೂಧರ್ಮದಲ್ಲಿ, ತಮ್ಮನ್ನು ನೆಚ್ಚಿದವರ ಪೋಷಣೆಗೆ ಏರ್ಪಾಟು ಮಾಡಿ ಹಿರಿಯರ ಅಪ್ಪಣೆ ಪಡೆದು ಅನಂತರ ಸನ್ಯಾಸಿಯಾಗಬೇಕಾಗಿತ್ತು. ಇಲ್ಲದಿದ್ದರೆ ಅರಸ ಶಿಕ್ಷೆ ವಿಧಿಸುತ್ತಿದ್ದ.

ಏಕಾಂಗಿಗಳಾದ ಸನ್ಯಾಸಿಗಳು ಭಾರತದಲ್ಲಿ ಕ್ರಿ. ಪೂ. 1500ಕ್ಕೂ ಮೊದಲೇ ಇದ್ದರೆಂಬುದಕ್ಕೆ ನಿದರ್ಶನವಿದೆ.

ಸನ್ಯಾಸಿಗಳಿಗೆ ಒಂದು ಸಾಂಘಿಕ ರೂಪವನ್ನು ಮೊದಲು ಕೊಟ್ಟದು ಜೈನಧರ್ಮ. ಸ್ತ್ರೀಯರಿಗೂ ಸನ್ಯಾಸಿನಿಯರಾಗಲು ಈ ಧರ್ಮ ಅವಕಾಶ ನೀಡಿತು

ಅನಂತರ ಬುದ್ಧನ ಕಾಲದಲ್ಲಿ ಬೌದ್ಧಧರ್ಮ ಸನ್ಯಾಸಿಧರ್ಮವೇ ಆಯಿತೆನ್ನಬಹುದು.

ಜೈನ ಬೌದ್ಧರಾದ ಮೇಲೆ ಸನ್ಯಾಸಿ ಜೀವನಕ್ಕೆ ಹಿರಿಮೆಯನ್ನು ದೊರಕಿಸಿಕೊಟ್ಟವರು ಶಂಕರಾಚಾರ್ಯರು.

ಹಿಂದೂಮತದ ಹಲವು ಶಾಖೆಗಳವರಲ್ಲಿ ಸನ್ಯಾಸಿಗಳುಂಟು. ಇವರಲ್ಲಿ ಗೃಹಸ್ಥಾಶ್ರಮ ದಾಟಿಬಂದವರೂ ಇದ್ದಾರೆ, ಬಾಲಸನ್ಯಾಸಿಗಳೂ ಇದ್ದಾರೆ. ಕೆಲವು ವೇಳೆ ವಿದ್ಯಾರಣ್ಯರಂಥ ಸನ್ಯಾಸಿಗಳು ದೇಶಕಲ್ಯಾಣಕ್ಕಾಗಿ ರಾಜನೀತಿ ನಿಪುಣರೂ ರಾಜ್ಯಸ್ಥಾಪಕರೂ ಆಗಬೇಕಾಗುತ್ತಿತ್ತು.

ಸನ್ಯಾಸಿ ಜೀವನಕ್ಕೆ ಹೊಸದೊಂದು ವಿಶಿಷ್ಟ ಸ್ವರೂಪವನ್ನು ಕೊಟ್ಟವರೆಂದರೆ ಸ್ವಾಮಿ ವಿವೇಕಾನಂದರು. ಆತ್ಮಸಾಕ್ಷಾತ್ಕಾರದ ಜೊತೆಗೆ ದೀನದಲಿತರ ಸೇವೆ, ವಿದ್ಯಾ ಪ್ರಸಾರ ಇವು ರಾಮಕೃಷ್ಣ ಸನ್ಯಾಸಿ ಸಂಘದ ಮುಖ್ಯ ಗುರಿ.

ಈಜಿಪ್ಟಿನಲ್ಲಿ ನೈಲ್ ನದಿಯ ಪೂರ್ವ ದಂಡೆಯ ಬಳಿ ಇಪ್ಪತ್ತು ವರ್ಷ ಕಾಲ ವಾಸಮಾಡಿ ಅನೇಕರನ್ನು ಆಕರ್ಷಿಸಿದ ಸಂತ ಆಂಥೊನಿ (ಸುಮಾರು 250–350) ಕ್ರೈಸ್ತರ ಮೊದಲನೆಯ ಸನ್ಯಾಸಿ ಎನ್ನಬಹುದು. ಈಜಿಪ್ಟಿನಿಂದ ಈ ಸನ್ಯಾಸಿ ಧರ್ಮದ ಪರಂಪರೆ ಪ್ಯಾಲೆಸ್ಟೈನ್, ಸಿರಿಯ, ಏಷ್ಯ ಮೈನರ್, ಮೆಸಪಟೇಮಿಯ, ಆರ್ಮೀನಿಯಗಳಿಗೆ ಹಬ್ಬಿತು.

ಪೌರಸ್ತ್ಯ ದೇಶಗಳಿಂದ ನಾಲ್ಕನೆಯ ಶತಮಾನದಲ್ಲಿ 'ಸನ್ಯಾಸಿಧರ್ಮ' ಪಾಶ್ಚಾತ್ಯ ದೇಶಗಳಿಗೂ ಹರಡಿತು. ಸಂತರಾದ ಅಥನೇಷಿಯಸ್, ಆಂಬ್ರೋಸ್, ಜೆರೋಮ್, ಅಗಸ್ಟೈನ್ ಇವರು ಇದಕ್ಕೆ ಕಾರಣರು. ಇವರೆಲ್ಲರೂ ಸನ್ಯಾಸಿ ಜೀವನ ನಡೆಸುವಂತೆ ಸ್ತ್ರೀಯರನ್ನು ಉತ್ತೇಜಿಸಿದರು.

ಸಂತ ಬೆನಿಡಿಕ್ಟ್ (ಸುಮಾರು 480-543) ಪಾಶ್ಚಿಮಾತ್ಯರಲ್ಲಿ ಸನ್ಯಾಸಿ ಧರ್ಮದ ಸ್ಥಾಪಕನೆಂದು ಪ್ರಸಿದ್ಧನಾಗಿದ್ದಾನೆ. ಬೆನಿಡಿಕ್ಟೈನ್ ಸಂಘಕ್ಕೆ ಸೇರಿದ ಸನ್ಯಾಸಿ ತಾನು ದೀಕ್ಷೆಪಡೆದ ಮಠದಲ್ಲೇ ನೆಲೆಸುತ್ತಿದ್ದ. ಅವನ ದೈನಂದಿನ ಜೀವನ ಪ್ರಾರ್ಥನೆ, ಅಧ್ಯಯನ, ಕಾಯಕ, ಜನಸೇವೆ ಇವುಗಳಿಂದ ಕೂಡಿರುತ್ತಿತ್ತು. ಬೆನಿಡಿಕ್ಟ್ ತನ್ನ ಸನ್ಯಾಸಿಗಳಿಗೆ ಮಠದ ಹೊರಗಿನ ಸೇವಾ ಕೆಲಸಗಳಲ್ಲಿ ತೊಡಗಿರೆಂದು ತಾನೇ ಹೇಳಲಿಲ್ಲವಾದರೂ ಮುಂದೆ ಬೆನಿಡಿಕ್ಟೈನ್ ಸನ್ಯಾಸಿಗಳು ಸ್ಥಿತಿಗತಿಗೆ ಅನುಸಾರವಾಗಿ ಸಾರ್ವಜನಿಕ ಜೀವನದಲ್ಲಿ ಪಾಲುಗೊಂಡರು.

ಹನ್ನೊಂದನೆಯ ಶತಮಾನದ ಅನಂತರ ಅನೇಕ ಸನ್ಯಾಸಿವರ್ಗಗಳು ಸ್ಥಾಪಿತವಾದುವು. ಇವುಗಳಲ್ಲಿ ಸಂಚಾರಿ ಸನ್ಯಾಸಿಗಳಾದ ಫ್ರಾನ್ಸಿಸ್‌ಕನ್ಸ್, ಡಾಮಿನಿಕನ್ಸ್, ಕಾರ್ಮೆಲೈಟ್ಸ್ ಇವರು ಮುಖ್ಯರು.

ಇಸ್ಲಾಂ ಧರ್ಮದ ಸೂಫಿ ಪಂಥ ಸನ್ಯಾಸಿಗಳಿಗೆ ಅವಕಾಶವಿತ್ತಿದೆ.

ಒಟ್ಟಿನಲ್ಲಿ ಸನ್ಯಾಸಿಗಳಿಂದ, ಸನ್ಯಾಸಿ ಸಂಘಗಳಿಂದ ಪ್ರಪಂಚದ ಅನೇಕ ಧರ್ಮಗಳು ಬೆಳೆದು ಉಳಿದಿವೆ; ನೈತಿಕ ಧಾರ್ಮಿಕ ಜೀವನಕ್ಕೆ ಪ್ರಾಧಾನ್ಯ ದೊರಕಿದೆ; ಜ್ಞಾನಸಾಧನೆಯಾಗಿದೆ; ವಿದ್ಯಾಭಿವೃದ್ಧಿಯಾಗಿದೆ. ವಿದ್ಯಾಸಂಸ್ಥೆಗಳೂ ಸೇವೆಶುಶ್ರೂಷೆಯ ಗೃಹಗಳೂ ಸ್ಥಾಪಿತವಾಗಿವೆ.

## ಸನ್ನೆ

"ನನಗೆ ನಿಲ್ಲಲು ಸ್ಥಳಕೊಡಿ, ಭೂಮಿಯನ್ನೆ ಎತ್ತುತ್ತೇನೆ"

—ಸುಮಾರು ಎರಡೂವರೆ ಸಾವಿರ ವರ್ಷಗಳ ಹಿಂದೆ ಗ್ರೀಕ್ ವಿಜ್ಞಾನಿ ಆರ್ಕಿಮಿಡೀಸ್ ಅರಸ ಹೀರಾನನಿಗೆಂದ.

ಸನ್ನೆಯಿಂದ ಎಷ್ಟು ಕೆಲಸ ಮಾಡಬಹುದೆಂಬುದನ್ನು ಆಗಲೇ ಅವನು ಕಂಡಿದ್ದ.

ಸುಮಾರು ಐದು ಸಾವಿರ ವರ್ಷಗಳ ಹಿಂದೆಯೇ ಈಜಿಪ್ಟಿನಲ್ಲಿ ಸನ್ನೆಗಳನ್ನು ಬಳಸುತ್ತಿದ್ದರೆಂದು ತಿಳಿದುಬಂದಿದೆ. ಸಣ್ಣ ಆನಿಕೆ ಬಿಂದುವಿನ ಮೇಲೆ ಸನಿಕೆಯನ್ನೂರಿ ಭಾರವಾದ ವಸ್ತುಗಳನ್ನು ಕದಲಿಸುವುದನ್ನು ಮನುಷ್ಯ ಕಂಡುಹಿಡಿದಾಗ ವಾಸ್ತವವಾಗಿ ಯಂತ್ರಶಾಸ್ತ್ರ ಮೊದಲಾಯಿತೆಂದು ಹೇಳಬಹುದು. ಚಕ್ರ, ಬೆಂಕಿ ಮುಂತಾದ ಮೂಲಭೂತ ಅನ್ವೇಷಣೆಗಳಲ್ಲಿ ಸನ್ನೆಯ ಅನ್ವೇಷಣೆಯೂ ಒಂದು. ಶ್ರಮವನ್ನು ಕಡಮೆಗೊಳಿಸಿ ಯುಕ್ತಿಯನ್ನು ಅಳವಡಿಸಿದ್ದು ಸನ್ನೆಯ ವೈಶಿಷ್ಟ್ಯ. ಸನ್ನೆಯ ಮೀಟು ಸೂತ್ರವನ್ನು ಎಲ್ಲ ಯಂತ್ರ ಸಾಧನೆಗಳಲ್ಲೂ ಕಾಣಬಹುದು.

ಸನ್ನೆಯ ಒಂದು ತುದಿ ಚಾಲಕನ ಕಡೆ ಇರುತ್ತದೆ. ಮತ್ತೊಂದು ತುದಿ ಭಾರವಾದ ವಸ್ತುವಿನ ತಳಕ್ಕೆ ನುಸುಳುತ್ತದೆ. ಆನಿಕೆಯನ್ನು ಭಾರದ ತುದಿಗೆ ಬಹಳ ಹತ್ತಿರದಲ್ಲಿ ಇರಿಸಿ ಆನಿಕೆಯ ಮೇಲೆ ಸನ್ನೆಯ ದಂಡ ಕೂರಿಸಿ, ಚಾಲಕ ಒತ್ತಿದರೆ ಭಾರ ಕದಲುತ್ತದೆ. ಆನಿಕೆಯನ್ನು ಭಾರದ ತುದಿಯತ್ತ ತಳ್ಳಿದಷ್ಟೂ ಚಲಿಸುವುದು ಸುಲಭ. ಒತ್ತುವ ಬಿಂದುವನ್ನು ಆನಿಕೆಯಿಂದ ಆದಷ್ಟೂ ದೂರ ಇರಿಸಬೇಕು. ಆನಿಕೆ ಹತ್ತಿರಬಂದಷ್ಟೂ ಮೀಟುವ ಶ್ರಮ ಹೆಚ್ಚುತ್ತದೆ.





ಸನ್ನೆಯ ತತ್ತ್ವದ ವಿವಿಧ ಬಳಕೆ : ಭಾರ ಉರುಳಿಸಲು : ಚಿಮಟದಲ್ಲಿ : ಅಡಕತ್ತರಿಯಲ್ಲಿ

ಅದು ಬರಿಯ ಜಂಬದ ಮಾತೆಂದು ಅರಸನಿಗೆ ತೋರಿತು. ರಾಜನ ನೌಕಾದಳದ ಹಡಗೊಂದರಲ್ಲಿ ಸಾಮಾನು ತುಂಬಿತ್ತು. ಅದನ್ನು ದಡಕ್ಕೆಳೆಯಲು ಅವನ ಆಳುಗಳು ಬೆವರು ಸುರಿಸುತ್ತಿದ್ದರು. ರಾಜ ಅದರತ್ತ ಬೊಟ್ಟು ಮಾಡಿ, 'ನಿನ್ನ ಶಕ್ತಿಯನ್ನು ತೋರಿಸು' ಎಂದ.

ಸನ್ನೆಗಳನ್ನೂ ಯಂತ್ರಗಳ ಹಲ್ಲುಗಳನ್ನೂ ಸೇರಿಸಿ ಒಂದು ವ್ಯವಸ್ಥೆಯನ್ನು ಮಾಡಿ, ವಿಜ್ಞಾನಿ ತಾನೊಬ್ಬನೇ ಸಾಮಾನು ಭರ್ತಿ ತುಂಬಿದ್ದ ಹಡಗನ್ನು ನೀರಿನಿಂದ ನೆಲಕ್ಕೆ ಎಳೆದ.

ಬಲು ಭಾರದ ಬಂಡೆಗಳನ್ನೂ ಕಲ್ಲುಚಪ್ಪಡಿಗಳನ್ನೂ ಸರಳುಗಳಿಂದ ಮೀಟಿ ಸರಿಸುವುದನ್ನು ನಾವು ಕಂಡಿದ್ದೇವೆ. ಈ ರೀತಿ ಸರಳನ್ನು ಬಳಸದೆ ಬರಿಗೈಯಲ್ಲಿ ಎಷ್ಟು ಶ್ರಮಪಟ್ಟರೂ ಭಾರವಾದ ವಸ್ತುವನ್ನು ಕದಲಿಸಲು ಸಾಧ್ಯವಾಗುವುದಿಲ್ಲ. ಉದ್ದವಾದ ಸರಳನ್ನು ಈ ಸಂದರ್ಭದಲ್ಲಿ ಉಪಯೋಗಿಸುತ್ತೇವೆ. ಇದಕ್ಕೆ ಸನಿಕೆ–ಸನ್ನೆಕೋಲು–ಎಂದು ಹೆಸರು.

ಮನುಷ್ಯನ ನಾಗರಿಕತೆಯ ಚರಿತ್ರೆಯಲ್ಲಿ ಸನ್ನೆಯ ಪಾತ್ರ ಹಿರಿದು. ಅದಿಲ್ಲದೆ ಮನುಷ್ಯ ಹೆಚ್ಚು ಭಾರದ ಸಾಮಾನುಗಳನ್ನು ಎತ್ತಲಾರ, ತಳ್ಳಲಾರ.

ಆರ್ಕಿಮಿಡೀಸನ ಸಾಧನೆ ಸನ್ನೆಯಿಂದ ಮನುಷ್ಯನ ಶಕ್ತಿ ಎಷ್ಟು ಪಟ್ಟು ಬೆಳೆಯಬಲ್ಲುದು ಎನ್ನುವುದನ್ನು ತೋರಿಸಿತು.

ಬೈಸಿಕಲ್ಲಿನ ತಡೆಯನ್ನು (ಬ್ರೇಕ್) ಒತ್ತಿದಾಗ, ಅದರ 'ಟೈರ್' ನ್ನು ತೆಗೆಯುವಾಗ ನಾವು ಬಳಸುವುದು ಸನ್ನೆಯ ತತ್ತ್ವವನ್ನೇ. ದೈತ್ಯಾಕಾರದ ಯಂತ್ರಗಳೂ ಭಾರವನ್ನು ಎತ್ತಲು ಅದೇ ತತ್ತ್ವವನ್ನು ಬಳಸುತ್ತವೆ.

ಆರ್ಕಿಮಿಡೀಸ್ ಸನ್ನೆಯ ನಿಯಮಗಳನ್ನು ನಿರೂಪಿಸಿದ. ಅದಕ್ಕಿಂತ ಹೆಚ್ಚು ನಿಷ್ಕೃಷ್ಟವಾಗಿ ನಿಯಮಗಳನ್ನು ನಿರೂಪಿಸುವುದು 1686ರ ವರೆಗೆ ಸಾಧ್ಯವಾಗಲಿಲ್ಲ.

## ಸಮಾಚಾರ ಸಂಪರ್ಕ

ರಸ್ತೆಯಲ್ಲಿನ ವಾಹನಗಳನ್ನು ನಿಯಂತ್ರಿಸುವ ಪೋಲೀಸ್. 'ನಿಲ್ಲಿರಿ' ಎಂದು ಕೈ ತೋರಿಸಿದರೆ. ಆ ದಿಕ್ಕಿನ ಸಂಚಾರ ಸ್ಥಗಿತವಾಗುತ್ತದೆ. ವಾಹನಗಳ ಹಿಂಬದಿಯ ಕೆಂಪು ದೀಪಗಳು ಹತ್ತಿಕೊಂಡರೆ. ವೇಗ ಕಡಮೆಯಾಗಿದೆ ಅಥವಾ ನಿಲ್ಲಬಹುದು ಎಂಬ ಅರ್ಥ. ಕರೆಗಂಟೆಯ ಸದ್ದು ಯಾರ ಬರವನ್ನೋ ಸೂಚಿಸುತ್ತದೆ. ಹಿಂದಿನಿಂದ ನಮ್ಮ ಹೆಸರು ಹಿಡಿದು ಕೂಗಿದಾಗ ನಾವು ಥಟ್ಟನೆ ತಿರುಗಿ ನೋಡುತ್ತೇವೆ.

ಸಂಕೇತ ಅಥವಾ ಸಂದೇಶಗಳು ಮನುಷ್ಯರ ನಡುವೆ ಸಂಪರ್ಕ ಕಲ್ಪಿಸುತ್ತವೆ. ಸದ್ದನ್ನು ಕೇಳುವುದರಿಂದಲೂ ಬೆಳಕನ್ನು ಕಾಣುವುದರಿಂದಲೂ ಸಮಾಚಾರ ಪಡೆಯಬಹುದು. ಕುರುಡರು ಸ್ಪರ್ಶ ಮಾತ್ರದಿಂದ ಅನೇಕ ವಿಷಯಗಳನ್ನು ಅರ್ಥ ಮಾಡಿಕೊಳ್ಳುತ್ತಾರೆ. ವಾಸನೆ ಕೂಡಾ ಕೆಲವು ವೇಳೆ ಸಮಾಚಾರದ ಸಂಪರ್ಕ ಕಲ್ಪಿಸುತ್ತದೆ. (ಬಾವಲಿಗಳು ಶ್ರವಣಾತೀತ ತರಂಗಗಳ ಮೂಲಕ ಸಮಾಚಾರ ವಿನಿಮಯ ಮಾಡಿಕೊಳ್ಳುತ್ತವೆ). [illegible] ಸಂಪರ್ಕ [illegible] ಬಹುದು. ಆಯಸ್ಕಾಂತೀಯ ಮತ್ತು ವಿದ್ಯುತ್ ಸಂಕೇತಗಳು ಸಮಾಚಾರವನ್ನು [illegible] ಸುಲಭವಾಗಿಯೂ ವೇಗವಾಗಿಯೂ [illegible] ಸಂಪರ್ಕ ಕಲ್ಪಿಸುತ್ತವೆ. ದೂರವಾಣಿ. ತಂತಿ. ರೇಡಿಯೊ, ಟೆಲಿವಿಷನ್ ಇವು ಆಯಸ್ಕಾಂತೀಯ ವಿದ್ಯುತ್ ಸಂಕೇತಗಳನ್ನು ತಲಪಿಸುವ ಸಾಧನಗಳು.

ಒಬ್ಬರ ಇಂಗಿತವನ್ನು ಮತ್ತೊಬ್ಬರು ಯಾವುದೇ ವಿಧಾನದ ಮೂಲಕ ತಿಳಿದುಕೊಂಡಾಗ ಸಮಾಚಾರದ ವಿನಿಮಯವಾಗುತ್ತದೆ. ಅವರಿಬ್ಬರ ನಡುವೆ ಸಂಪರ್ಕ [illegible]ತ್ತದೆ. ಈ ಬಗೆಯ ಸಂಪರ್ಕಕ್ಕೆ ನೆರವಾದ ಎಲ್ಲ ಸಾಧನಗಳೂ ಸಂಪರ್ಕ ಸಾಧನಗಳು.

ಪ್ರಾಚೀನ ಮಾನವ ತನ್ನ ಭಾವನೆಗಳನ್ನು ಸಂಜ್ಞೆಯ ಮೂಲಕ ವ್ಯಕ್ತಪಡಿಸುತ್ತಿದ್ದ. ಧ್ವನಿ ಸಂಜ್ಞೆಗಳ ಜೊತೆ ಕೂಡಿಕೊಂಡಂತೆ ಮಾತು ಮೊದಲಾಯಿತು. ಭಾಷೆ [illegible]. ಬರವಣಿಗೆ ಸಾಕಷ್ಟು ಶಾಶ್ವತವಾದ ಸಂಪರ್ಕವನ್ನು ಕಲ್ಪಿಸಿತು. [illegible]ಗಳಲ್ಲಿ ಕಾಣಬರುವ ಬರವಣಿಗೆ ಆ ಕಾಲದ ಜೊತೆ [illegible] ಸಂಪರ್ಕ ಕಲ್ಪಿಸುತ್ತದೆ. [illegible] ಲಿಪಿಯನ್ನು [illegible] ಸಾಧ್ಯವಾದರೆ ಕ್ರಿ. ಪೂ. [illegible] ಜನಜೀವನಕ್ಕೂ ಕ್ರಿ. ಶ. ಇಪ್ಪತ್ತನೆಯ ಶತಮಾನದ ಜನಜೀವನಕ್ಕೂ ಸಂಪರ್ಕ[illegible]ತ್ತದೆ. [illegible] ಮತ್ತು [illegible] ಪ್ರಪಂಚದಾದ್ಯಂತ ಬಳಕೆಯಲ್ಲಿವೆ. [illegible] ಪ್ರತಿಗಳನ್ನು [illegible] ಮಾಡುವ [illegible].

[illegible] ಭಾವಗಳನ್ನು ಹೊರಗೆಡಹು[illegible] ಬರೆಯುತ್ತಿದ್ದ. [illegible] ಗಳನ್ನು [illegible] ಸುದ್ದಿಯನ್ನು ರವಾನಿಸುವ [illegible] ಕೆರೆಹಿಡಿಯುವಂತೆ ಅರಗಿನ ತಟ್ಟೆಗಳ ಮೂಲಕ ಟೇಪ್ ರಿಕಾರ್ಡರುಗಳ ಪಟ್ಟಿಗಳ ಮೂಲಕ ಆಡಿದ ಮಾತು ಹಾಡಿದ ಸಂಗೀತ ಮೊದಲಾದುವನ್ನು ಧ್ವನಿಪುನರುದ್ರಿಸಬಹುದು. ಇದು ಸಹ ಪತ್ತೊಂಬತ್ತನೆಯ ಶತಮಾನದ ಬೆಳವಣಿಗೆಯೇ. ಆ ಶತಮಾನದಲ್ಲಿ ವಿಜ್ಞಾನ ಅನೇಕ ಸಂಪರ್ಕ ಸಾಧನಗಳನ್ನು ಜಗತ್ತಿಗೆ ನೀಡಿತು. ತಂತಿಯಲ್ಲಿ ಹರಿಯುವ ವಿದ್ಯುತ್ತಿನಲ್ಲಿ ಸಂಕೇತಗಳನ್ನು ಉಂಟುಮಾಡಬಹುದು. ಈ ತಂತಿ ಸಂಕೇತಗಳು ಸಂದೇಶವನ್ನು ಒಯ್ಯುತ್ತವೆ. ಬೆಳಕಿನ ವೇಗದಲ್ಲಿ ಈ ಸಂಕೇತಗಳು ತಂತಿಯ ಮೂಲಕ ರವಾನೆಯಾಗುತ್ತವೆ. 1837ರಲ್ಲಿ ಮಾರ್ಸ್ ಎಂಬಾತ ರೂಪಿಸಿದ ವಿದ್ಯುತ್ ಸಂಕೇತಗಳ ಭಾಷೆ ತಂತಿ ಸಂಪರ್ಕದಲ್ಲಿ ಇಂದಿಗೂ ಯಶಸ್ವಿಯಾಗಿ ಬಳಕೆಯಲ್ಲಿದೆ. ಧ್ವನಿಯನ್ನು ವಿದ್ಯುತ್ ಪ್ರವಾಹವಾಗಿ ಮಾರ್ಪಡಿಸಿ ಅದನ್ನು ತಂತಿಗಳ ಮೇಲೆ ಹಾಯಿಸಬಹುದು. ಅದನ್ನು ಮತ್ತೆ ಶಬ್ದವನ್ನಾಗಿ ಪರಿವರ್ತಿಸಬಹುದು. ಈ ತತ್ತ್ವದ ಆಧಾರದ ಮೇಲೆ 1876ರಲ್ಲಿ ಅಮೆರಿಕನ್ ವಿಜ್ಞಾನಿ ಅಲೆಗ್ಸಾಂಡರ್ ಗ್ರಹಾಂ ಬೆಲ್ ದೂರವಾಣಿಯನ್ನು ನಿರ್ಮಿಸಿದ. ನೂರು ವರ್ಷ ಕಳೆಯುವುದರೊಳಗಾಗಿ ಭೂಮಿಯ ಮೂಲಕ ಮಾತ್ರವಲ್ಲದೆ ಸಮುದ್ರದ ಮೂಲಕವೂ ತಂತಿಗಳನ್ನು ಹಾಯಿಸಲು ಸಾಧ್ಯವಾಗಿ ಪ್ರಪಂಚದ ದೇಶಗಳ ನಡುವೆ ದೂರವಾಣಿ ಸಂಪರ್ಕ ಕಲ್ಪಿಸಲ್ಪಟ್ಟಿತು. ದೂರವಾಣಿಗೆ ತಂತಿಗಳನ್ನು ಹಾಯಿಸುವುದು ಅಗತ್ಯ. ರೇಡಿಯೊ ತರಂಗಗಳನ್ನು ತಂತಿಗಳಿಲ್ಲದೆಯೇ ವಾತಾವರಣದಲ್ಲಿ ಹಾಯಿಸಬಹುದು. ಶಬ್ದವನ್ನು ಮಾತ್ರವಲ್ಲದೆ ದೃಶ್ಯವನ್ನೂ ಸಂಕೇತಗಳನ್ನಾಗಿ ಮಾರ್ಪಡಿಸಿ ಮತ್ತೆ ದೃಶ್ಯವನ್ನಾಗಿ ಟೆಲಿವಿಷನ್ನಿನಲ್ಲಿ ರೂಪಾಂತರಿಸಿಕೊಳ್ಳಬಹುದು.

ರೇಡಿಯೊ ಮತ್ತು ಟೆಲಿವಿಷನ್ ಇವೆರಡೂ ಇಪ್ಪತ್ತನೆಯ ಶತಮಾನದ ಸಂಶೋಧನೆಗಳು.

ಸಮಾಚಾರ ಸಂಪರ್ಕ ತೀವ್ರವಾದ ಬೆಳವಣಿಗೆ ಹೊಂದಿದಂತೆ ಪ್ರಪಂಚದ ರಾಷ್ಟ್ರಗಳ ನಡುವಣ ದೂರ ಕುಗ್ಗಿತು. ವರ್ತಮಾನ ಮತ್ತು ಸಂದೇಶಗಳು ಪ್ರತಿ ಸೆಕೆಂಡೂ ಪ್ರಪಂಚದಾದ್ಯಂತ ಹರಿದಾಡುತ್ತಿರುತ್ತವೆ. ಮನುಷ್ಯನ ಸೌಲಭ್ಯಗಳನ್ನು ಕೂಡಲೇ ಪೂರೈಸಲು ಸಂಪರ್ಕ ಸಾಧನಗಳು ಸಹಾಯಕವಾಗಿವೆ. ವೃತ್ತಪತ್ರಿಕೆಗಳು, ರೇಡಿಯೊ, ಚಲನಚಿತ್ರ ಇವುಗಳಿಲ್ಲದ ಕಾಲವನ್ನು ಕಲ್ಪಿಸಿಕೊಳ್ಳುವುದೂ ಕಷ್ಟ.

ಹೊರಗಿನ ಶತ್ರುಗಳಿಂದ ರಕ್ಷಿಸಿಕೊಳ್ಳುವುದರಲ್ಲಿ ಮತ್ತು ಒಳಗೆ ಶಾಂತಿಯನ್ನು ಕಾಪಾಡುವುದರಲ್ಲಿ ನೆರವನ್ನು ಆಳುವವರಿಗೆ ಸಮಾಚಾರ ಸಂಪರ್ಕಗಳ ಬೆಳವಣಿಗೆಯಿಂದ ಅನುಕೂಲ. ಪ್ರಜೆಗಳಿಗೂ ಅನುಕೂಲ. [illegible] ಪ್ರಭುತ್ವ ಇವನ್ನು ತನ್ನ ದುರುದ್ದೇಶಕ್ಕೆ ಬಳಸಿಕೊಳ್ಳಬಹುದು. ಮುಸೋಲಿನಿ. ಹಿಟ್ಲರ್ ಇಂಥವರು ಈ ಸಾಧನಗಳನ್ನು ಜನತೆ ತಮ್ಮನ್ನು ಆರಾಧಿಸುವಂತೆ ಮಾಡಲು ಬಳಸಿಕೊಂಡರು. ತಮ್ಮ ದೇಶ, ಪ್ರಭುತ್ವ, ವ್ಯಕ್ತಿತ್ವಗಳನ್ನು ಆಕಾಶಕ್ಕೇರಿಸಲು ಉಪಯೋಗಿಸಿದರು. ಸತ್ಯವಾದ ಸುದ್ದಿಯನ್ನು [illegible]. ಸುದ್ದಿ. ಹಾಡು. ನಾಟಕ–ಎಲ್ಲದರಲ್ಲಿಯೂ ತಮ್ಮ ಕೀರ್ತಿಯನ್ನೇ [illegible]. ಜನರ ಮನಸ್ಸಿನಲ್ಲಿ ತಮ್ಮ ವಿರೋಧಿಗಳ ಬಗೆಗೆ [illegible]. ಜನ ಸ್ವತಂತ್ರವಾಗಿ ಯೋಚಿಸಲು ಸಾಧ್ಯವೇ ಇಲ್ಲದಂತೆ [illegible]. ವೃತ್ತಪತ್ರಿಕೆಗಳಲ್ಲಿ. ರೇಡಿಯೊ [illegible] ಮರೆದರು. ಫಲವಾಗಿ. ಆಳುವವರ [illegible] ನಿರ್ಣಯಗಳಿಗೂ ಉತ್ಸಾಹದ ಬೆಂಬಲ ದೊರೆಯಿತು. [illegible] ಬರ್ಲಿನ್‌ನಿಂದ ಕೆಲವೇ ಕಿಲೊಮೀಟರು ಇದ್ದಾಗಲೂ ಬರ್ಲಿನ್ [illegible]

ಸಾಗರ, ಶಾಂತ ಸಾಗರ, ಹಿಂದೂ ಮಹಾಸಾಗರ ಇವುಗಳಿಂದ ಬೇರ್ಪಡಿಸಲು ನೈಸರ್ಗಿಕ ಮೇರೆ ಇಲ್ಲದಿರುವುದರಿಂದ ಈ ಮೂರು ಮಹಾಸಾಗರಗಳೇ ದಕ್ಷಿಣ ಧ್ರುವದವರೆಗೂ ವಿಸ್ತರಿಸಿವೆ ಎಂದು ಈಗಿನ ಅಭಿಪ್ರಾಯ. ದಕ್ಷಿಣ ಧ್ರುವ ಸಾಗರವನ್ನು ಪ್ರತ್ಯೇಕ ಸಾಗರವಾಗಿ ಪರಿಗಣಿಸುವುದಿಲ್ಲ.

ಸಾಗರಗಳು ಖಂಡಗಳ ನಡುವೆ ಹರಡಿರುವ ಉಪ್ಪುನೀರಿನ ವಿಸ್ತಾರ ಭಾಗಗಳು. ಸಮುದ್ರಗಳು ಸಾಗರಗಳಲ್ಲಿನ ಭಾಗಗಳು.

ಎಲ್ಲ ಸಾಗರಗಳೂ ಇಡೀ ಒಂದು ಜಲರಾಶಿಯಾಗಿದ್ದು ಒಂದು ಸಾಗರದೊಡನೆ ಇನ್ನೊಂದು ಸಾಗರ ಸುಲಭ ಸಂಪರ್ಕವನ್ನು ಹೊಂದಿರುವುದರಿಂದ ಸಾಗರಗಳ ಎಲ್ಲೆ ನಿರ್ಧಾರ ಭೂಖಂಡಗಳ, ದ್ವೀಪಶ್ರೇಣಿಗಳ ನೆರವಿನಿಂದ ಮಾತ್ರ ಸಾಧ್ಯ. ಇವೂ ಇಲ್ಲದಾಗ ಕಾಲ್ಪನಿಕ ರೇಖೆಗಳು ಒಂದು ಸಾಗರವನ್ನು ಇನ್ನೊಂದರಿಂದ ಪ್ರತ್ಯೇಕಿಸುತ್ತವೆ. ಸಾಗರದಾಳದ ಖನಿಜ, ಸಸ್ಯ, ಪ್ರಾಣಿಸಂಪತ್ತು ಇವುಗಳಲ್ಲಿರುವ ಭಿನ್ನತೆಯಿಂದ ಒಂದು ಸಾಗರಕ್ಕೂ ಇನ್ನೊಂದಕ್ಕೂ ಇರುವ ವ್ಯತ್ಯಾಸವನ್ನು ತಿಳಿದು ಅವುಗಳ ಎಲ್ಲೆಯನ್ನು ನಿರ್ಧರಿಸಬಹುದೆಂಬ ಅಭಿಪ್ರಾಯವಿದೆ.

ಸಾಗರಗಳಲ್ಲೆಲ್ಲ ಅತ್ಯಂತ ದೊಡ್ಡದು ಶಾಂತಸಾಗರ. ಅಟ್ಲಾಂಟಿಕ್ ಸಾಗರ ಹಿಂದೂ ಮಹಾಸಾಗರಕ್ಕಿಂತ ಸ್ವಲ್ಪ ಹಿರಿದು.

| ಸಾಗರಗಳ ಹೆಸರು | ವಿಸ್ತೀರ್ಣ | | ಅತಿ ಹೆಚ್ಚು ಆಳ | |
|---|---|---|---|---|
| ಅಟ್ಲಾಂಟಿಕ್ ಸಾಗರ | 824.1 | ಲಕ್ಷ ಚ.ಕಿ.ಮೀ. | 9,225 | ಮೀಟರ್ |
| ಶಾಂತಸಾಗರ | 1,657.6 | .. | 11,040 | .. |
| ಹಿಂದೂ ಮಹಾಸಾಗರ | 725.3 | .. | 7,454 | .. |
| ಉತ್ತರ ಧ್ರುವ ಸಾಗರ | 141.0 | .. | 4,377 | .. |
| | | | (ಉತ್ತರ ಧ್ರುವದಲ್ಲಿ) | |

ಸಾಗರದ ತಳ ಕುತೂಹಲ ಕೆರಳಿಸುವ ಜಗತ್ತು. ಸತ್ತುಹೋದ ಅಸಂಖ್ಯ ಜಲಚರಗಳ ಎಲುಬು ಮತ್ತು ಚಿಪ್ಪು, ನೂಕಿ ಬಂದ ಕಲ್ಲು, ಮಣ್ಣು, ಉಸುಕು, ಇನ್ನೂ ಅನೇಕ ಕಶ್ಮಲಗಳು ಸಾಗರದ ತಳಕ್ಕೆ ಅನಾದಿ ಕಾಲದಿಂದಲೂ ಸೇರುತ್ತಲೇ ಇವೆ. ಸಾಗರದ ತಳ ಸಂಶೋಧಕ ಹಡಗು ಸಾಗರದ ಆಳವನ್ನು ಕಂಡುಹಿಡಿಯುತ್ತದೆ. ಅದರಿಂದ ಮಾಡುವ ಸ್ಫೋಟನದ ಮೂಲ ಧ್ವನಿತರಂಗ, ಸಾಗರದ ತಳವನ್ನು ಮುಟ್ಟಿ ಪ್ರತಿಧ್ವನಿಯಾಗಿ ಬರುತ್ತವೆ. ಈ ಧ್ವನಿ ಮರಳಲು ಹಿಡಿಯುವ ವೇಳೆಯ ಆಧಾರದ ಮೇಲೆ ಸಾಗರದ ಆಳವನ್ನು ಅಳೆಯುತ್ತಾರೆ.

ಕೆರಿಬಿಯನ್ ಸಮುದ್ರದ ತಳದ ಮೇಲೆ 1,647 ಮೀಟರಿನ ಉನ್ನತ ಪರ್ವತವಿದೆ. ಮಧ್ಯ ಸಂಸ್ತರವು ಶಾಂತಸಾಗರದಲ್ಲಿ 1,525 ಮೀಟರಿಗಿಂತ ಹೆಚ್ಚಿಲ್ಲ. ಅಟ್ಲಾಂಟಿಕ್ ಸಾಗರದಲ್ಲಿ 3,660 ಮೀಟರುಗಳಷ್ಟು ಇದೆ. ಧ್ರುವ ಸಾಗರದ ಕೆಳಗೆ ಏನಿದೆ? ಹಿಮಗಡ್ಡೆಗಳ ಕೆಳಗೆ ಹಡಗುಗಳು ಹೋಗುವುದು ಕಠಿಣ. 1958ರಲ್ಲಿ ಅಮೆರಿಕದ ನಾಟಿಲಸ್ ಎಂಬ ಜಲಾಂತರ್ಗಾಮಿ ಈ ಸಾಹಸ ಮಾಡಿತು. ಅದು ಹಿಮಗಡ್ಡೆಯ 122 ಮೀಟರ್ ಕೆಳಗೆ ಚಲಿಸಿತು. ಧ್ರುವ ಕೇಂದ್ರದಲ್ಲಿನ ಸಾಗರದ ಆಳ 4,000 ಮೀಟರನ್ನು ಮೀರಿದೆ ಎಂಬುದನ್ನು ಆಗ ಕಂಡುಹಿಡಿಯಲಾಯಿತು. ಮೇಲಿನ ಹಿಮದ ಹಾಳೆಯ ದಪ್ಪ ಸುಮಾರು 18.3 ಮೀಟರು ಎಂಬುದು ಗೊತ್ತಾಯಿತು. ಅಮೆರಿಕದಿಂದ ಹೊರಟ ಬಳಿಕ ನಾಟಿಲಸ್ ಹಡಗು 1958 ಆಗಸ್ಟ್ 7ರಂದು ಐಸ್‌ಲೆಂಡಿನ ಬಳಿ ಬಂದಿತು. ಈ ಹಡಗಿನ ಕಮಾಂಡರ್ ವಿಲಿಯಂ ಆಂಡರ್ಸನ್.

ಸಾಮಾನ್ಯವಾಗಿ ಅಲೆ ಬಹು ಎತ್ತರವಾಗಿ ಎದ್ದರೆ 16 ಮೀಟರುಗಳು ಮಾತ್ರ. ಆದರೆ ಒಮ್ಮೊಮ್ಮೆ ಒಂದು ಅಲೆಯ ಶಿಖರ ಇನ್ನೊಂದು ಅಲೆಯ ಶಿಖರವನ್ನು ಸೇರಿ ಅಥವಾ ಮೂರು ನಾಲ್ಕು ಅಲೆಗಳ ಶಿಖರಗಳು ಸೇರಿ ಎತ್ತರ ಹೆಚ್ಚಬಹುದು. ದಾಖಲೆಗಳ ಪ್ರಕಾರ ಮನುಷ್ಯ ಕಂಡಿರುವ ಅಲೆಗಳ ಪೈಕಿ ಅತಿ ಹೆಚ್ಚು ಎತ್ತರ 34 ಮೀಟರು–1933ರಲ್ಲಿ ಶಾಂತಸಾಗರದಲ್ಲಿ 'ರಮಪೊ' ಎಂಬ ಹಡಗಿಗೆ ಬಿರುಗಾಳಿಯಲ್ಲಿ ಅಪ್ಪಳಿಸಿದಾಗ. ಸ್ಕಾಟ್ಲೆಂಡಿನಲ್ಲಿ ಒಮ್ಮೆ ಅಲೆಗಳು 2500 ಮೆ. ಟನ್‌ಗಳ ಕಾಂಕ್ರೀಟ್ ಗಟ್ಟಿ ಭಾಗವನ್ನು ಸೆಳೆದೊಯ್ದುವು.

ಸಮುದ್ರ ಸಾಗರಗಳಿಗೆ ಸಂಬಂಧಿಸಿದ ಎಲ್ಲ ವಿಷಯಗಳನ್ನೂ ಅಧ್ಯಯನ ಮಾಡುವ ಶಾಸ್ತ್ರವೇ ಸಾಗರಶಾಸ್ತ್ರ.

ಸಮುದ್ರ, ಸಾಗರಗಳಲ್ಲಿ ಲವಣಗಳ ಜೊತೆಗೆ ಅನೇಕ ಪ್ರಾಣಿಗಳು, ಸಸ್ಯಗಳು ಇವೆ. ಇವನ್ನೂ ಸಾಗರ ಪ್ರವಾಹಗಳನ್ನೂ ಸಮುದ್ರಶಾಸ್ತ್ರಜ್ಞರು ಅಭ್ಯಾಸ ಮಾಡುತ್ತಿದ್ದಾರೆ.

ನೋಡಿ : ಅಟ್ಲಾಂಟಿಕ್ ಸಾಗರ; ಉತ್ತರ ಸಮುದ್ರ; ಕಡಲ ದಂಡೆ; ಕಪ್ಪು ಸಮುದ್ರ ; ಕೆಂಪು ಸಮುದ್ರ ; ಕೊಲ್ಲಿ ; ಜಲಸಂಧಿ ; ಧ್ರುವ, ಧ್ರುವ ಪ್ರದೇಶ ; ಭರತ, ಇಳಿತ; ಭೂಮಧ್ಯ ಸಮುದ್ರ; ಮೃತ ಸಮುದ್ರ; ಶಾಂತಸಾಗರ; ಹಳದಿ ಸಮುದ್ರ; ಹಿಂದೂಮಹಾಸಾಗರ.

## ಸಮ್ಮೇಳನ

ಸಾಹಿತ್ಯ ಸಮ್ಮೇಳನ, ಸಂಗೀತ ಸಮ್ಮೇಳನ, ವಿಜ್ಞಾನ ಸಮ್ಮೇಳನ, ಅಧ್ಯಾಪಕರ ಸಮ್ಮೇಳನ, ದಾದಿಯರ ಸಮ್ಮೇಳನ, ವೈದ್ಯಕೀಯ ಸಮ್ಮೇಳನ, ಧಾರ್ಮಿಕ ಸಮ್ಮೇಳನ, ವಿದ್ಯಾರ್ಥಿಗಳ ಸಮ್ಮೇಳನ, ಮಕ್ಕಳ ಸಮ್ಮೇಳನ, ಒಂದೇ ? ಎರಡೇ ?

ಪ್ರತಿನಿತ್ಯ ಸಮ್ಮೇಳನಗಳ ವಿಷಯ ಕೇಳುತ್ತೇವೆ. ಸಮ್ಮಿಳನದಿಂದ ಬಂದಿದೆ ಸಮ್ಮೇಳನವೆಂಬ ಪದ. 'ಸಮ್ಮಿಳನ' ಎಂದರೆ ಒಟ್ಟಾಗಿ ಕಲೆಯುವಿಕೆ.

ಸುಮ್ಮನೆ ಒಟ್ಟಾಗಿ ಕಲೆತರೆ, ಗುಂಪುಕೂಡಿದರೆ, ಅದು 'ಸಮ್ಮೇಳನ' ಎನಿಸಿಕೊಳ್ಳುವುದಿಲ್ಲ. ಯಾವುದೇ ಒಂದು ನಿರ್ದಿಷ್ಟ ವಿಷಯವನ್ನು ಅಥವಾ ಕ್ಷೇತ್ರವನ್ನು ಕುರಿತು ಹಲವರು ಪರಿಶೀಲನೆ, ವಿಚಾರವಿನಿಮಯ ನಡೆಸಲು ಒಟ್ಟಿಗೆ ಸೇರುವುದು ಸಮ್ಮೇಳನ. ಹಲವರ ಪಾಂಡಿತ್ಯ, ಅನುಭವ, ಬುದ್ಧಿಶಕ್ತಿಗಳನ್ನು ಒಟ್ಟುಗೂಡಿಸಿ ನಿರ್ಧಾರಕ್ಕೆ ಬರುತ್ತಾರೆ. ದೇಶದ ವಿದ್ಯಾಭ್ಯಾಸ ಪದ್ಧತಿ ಹೇಗಿರಬೇಕು? ಪ್ರಾಥಮಿಕ ಶಾಲೆಗಳು, ಪ್ರೌಢಶಾಲೆಗಳು, ಕಾಲೇಜುಗಳು, ವಿಶ್ವವಿದ್ಯಾನಿಲಯದ ಅಧ್ಯಯನ, ಅಧ್ಯಯನಗಳು ಹೇಗೆ ನಡೆಯಬೇಕು ? ಇಂಥ ಪ್ರಶ್ನೆಗಳಿಗೆ ಉತ್ತರ ಕೊಡಲು ಅನೇಕರು ಒಟ್ಟಿಗೆ ಸೇರಿ, ತಮ್ಮ ಅನುಭವಗಳನ್ನೂ ವಿಚಾರಗಳನ್ನೂ ಹೇಳಬೇಕು. ಚರ್ಚೆ ನಡೆಯಬೇಕು. ಒಂದು ವರ್ಷದಲ್ಲಿ ವಿಜ್ಞಾನ ಹೇಗೆ ಮುಂದುವರಿದಿದೆ? ಭೌತವಿಜ್ಞಾನ, ರಸಾಯನವಿಜ್ಞಾನ, ಗಣಿತ ವಿಜ್ಞಾನ, ಇಂಥ ಶಾಖೆಗಳಲ್ಲಿ ಹೊಸದಾಗಿ ಏನು ಕೆಲಸ ನಡೆದಿದೆ? ಹೊಸದಾಗಿ ಪಡೆದ ಜ್ಞಾನವನ್ನು ಹೇಗೆ ಬಳಸಬೇಕು? ಆ ಶಾಖೆಗಳಲ್ಲಿ ಕೆಲಸ ಮಾಡುವವರ ಕಷ್ಟಗಳೇನು ? ಇದು ಅರ್ಥವಾಗಬೇಕಾದರೆ ವಿಜ್ಞಾನಿಗಳು ಒಟ್ಟಿಗೆ ಸೇರಬೇಕು—ಎಂದರೆ ಸಮ್ಮೇಳನವಾಗಬೇಕು.

ಪ್ರಜೆಗಳ ಪ್ರಾಣ, ಆಸ್ತಿ, ಮರ್ಯಾದೆ ಮುಂತಾದ ವಿಷಯಗಳಿಗೆ ಸಂಬಂಧಿಸಿದ ವಿವಾದಗಳನ್ನು ಕಾಯಿದೆಗಳು ಮತ್ತು ಸಂವಿಧಾನ ಇವುಗಳ ಆಧಾರದ ಮೇಲೆ ಪರಿಶೀಲಿಸಿ ನ್ಯಾಯಾಂಗ ತೀರ್ಮಾನ ನೀಡುತ್ತದೆ. ಭಾರತದಲ್ಲಿ ಹೈಕೋರ್ಟು ಮತ್ತು ಸುಪ್ರೀಂ ಕೋರ್ಟುಗಳು ಶಾಸಕಾಂಗ ಮಾಡಿದ ಶಾಸನ ಸಂವಿಧಾನಕ್ಕೆ ಅನುಗುಣವಾಗಿದೆಯೆ ಎಂಬುದನ್ನೂ ಸರಕಾರ ಕೈಗೊಂಡ ಕ್ರಮ ಸಂವಿಧಾನ ಮತ್ತು ಶಾಸನಕ್ಕೆ ಅನುಗುಣವಾಗಿದೆಯೆ ಎಂಬುದನ್ನೂ ತೀರ್ಮಾನಿಸುವ ಅಧಿಕಾರ ಹೊಂದಿವೆ. ನ್ಯಾಯಾಂಗ ಸ್ವತಂತ್ರವಾಗಿರಬೇಕಾದರೆ ಕಾರ್ಯಾಂಗ ಅದರ ಮೇಲೆ ಪ್ರಭಾವ ಬೀರಬಾರದು.

ಇಂಗ್ಲೆಂಡ್, ಫ್ರಾನ್ಸ್ ಇಂಥ ರಾಷ್ಟ್ರಗಳಲ್ಲಿ ಒಂದೇ ಸರಕಾರ. ಆ ಸರಕಾರ ನೇರವಾಗಿ ಎಲ್ಲ ಭಾಗಗಳನ್ನೂ ಆಳುತ್ತದೆ. ತನ್ನ ಅಧಿಕಾರವನ್ನೂ ಹೊಣೆಯನ್ನೂ ಬೇರಾವ ಸರಕಾರದೊಂದಿಗೂ ಹಂಚಿಕೊಂಡಿಲ್ಲ. ಅಮೆರಿಕದ ಸಂಯುಕ್ತ ಸಂಸ್ಥಾನ, ಸೋವಿಯೆತ್ ಒಕ್ಕೂಟ ಇಂಥ ರಾಷ್ಟ್ರಗಳಲ್ಲಿ ಕೇಂದ್ರ ಸರಕಾರವೇ ಮುಖ್ಯ; ರಾಷ್ಟ್ರಕ್ಕೆಲ್ಲ ಒಂದೇ ಸಂಸತ್ತು ಅಥವಾ ಶಾಸನಸಭೆ. ಆದರೆ ದೇಶವನ್ನು ಹಲವು ಸಂಸ್ಥಾನಗಳನ್ನಾಗಿ ವಿಭಾಗಿಸಿದೆ. ಈ ಸಂಸ್ಥಾನಗಳಲ್ಲಿ ಸರಕಾರಗಳಿವೆ. ಕೇಂದ್ರ ಸರಕಾರದ ಹೊಣೆ, ಸಂಸ್ಥಾನಗಳ ಸರಕಾರಗಳ ಹೊಣೆ ನಿರ್ದಿಷ್ಟವಾಗಿರುತ್ತವೆ.

ಭಾರತದಲ್ಲಿಯೂ ರಾಜ್ಯಗಳು ಆಡಳಿತದ ಘಟಕಗಳು. ಸಮಾಚಾರ ಸಂಪರ್ಕ, ರಕ್ಷಣೆ, ಅಂಚೆ, ತಂತಿ, ರೈಲ್ವೆ ಮುಂತಾದ ಭಾರತ ದೇಶಕ್ಕೆ ಅನ್ವಯಿಸುವ ಚಟುವಟಿಕೆಗಳು ಕೇಂದ್ರ ಸರಕಾರದ ವ್ಯಾಪ್ತಿಗೆ ಒಳಪಟ್ಟಿರುತ್ತವೆ. ವಿದ್ಯಾಭ್ಯಾಸ, ಸಾರಿಗೆ ಮುಂತಾದುವು ರಾಜ್ಯಗಳ ವ್ಯಾಪ್ತಿಗೆ ಒಳಪಡುತ್ತವೆ. ಕೇಂದ್ರ ಸರಕಾರ ಮತ್ತು ಘಟಕಗಳ ಸರಕಾರ ಇವುಗಳ ನಡುವಣ ಸಂಬಂಧವನ್ನು ಸಂವಿಧಾನ ಸ್ಪಷ್ಟಪಡಿಸುತ್ತದೆ.

ನೋಡಿ : ನ್ಯಾಯಾಲಯ ; ಸಂವಿಧಾನ : ಸಚಿವ ಸಂಪುಟ

## ಸರಕಾರೀ ವಲಯ

ಖಾಸಗೀ ವ್ಯಕ್ತಿಗಳು ಮತ್ತು ಸಂಸ್ಥೆಗಳು ಉದ್ಯಮಗಳನ್ನು ನಡೆಸುವಂತೆ ಸರಕಾರವೂ ಉದ್ಯಮಗಳನ್ನು ನಡೆಸುತ್ತದೆ. ಸರಕಾರ ನಡೆಸುವ ಉದ್ಯಮಗಳಿಗೆ ಸರಕಾರೀ ವಲಯದ ಉದ್ಯಮಗಳೆಂದು ಹೆಸರು.

ಸರಕಾರೀ ವಲಯದ ಉದ್ಯಮಗಳಿಗೆ ಸರಕಾರವೇ ಬಂಡವಾಳವನ್ನು ಒದಗಿಸುತ್ತದೆ. ಉತ್ಪಾದನೆಯ ಎಲ್ಲ ಹಂತದ ಅಧಿಕಾರಿಗಳನ್ನೂ ತಾನೇ ನೇಮಿಸುತ್ತದೆ. ಉತ್ಪಾದಿತವಾದ ವಸ್ತುಗಳ ವಿತರಣೆಯ ಜವಾಬ್ದಾರಿ ಕೂಡ ಸರಕಾರಕ್ಕೆ ಸೇರಿದ್ದು.

ಕಮ್ಯೂನಿಸ್ಟ್ ಆಡಳಿತ ವ್ಯವಸ್ಥೆಯಲ್ಲಿ ಎಲ್ಲ ಉದ್ಯಮಗಳನ್ನೂ ಸರಕಾರವೇ ನಡೆಸುತ್ತದೆ. ಖಾಸಗೀ ಉದ್ಯಮಗಳಿಗೆ ಅಲ್ಲಿ ಸ್ಥಾನವಿಲ್ಲ. ಭಾರತದಂಥ ಮಿಶ್ರ ಆರ್ಥಿಕ ವ್ಯವಸ್ಥೆಯ ದೇಶದಲ್ಲಿ ಸರಕಾರೀ ವಲಯಕ್ಕೆ ಮನ್ನಣೆಯಿದೆ. ರೈಲು, ಅಂಚೆ, ರೇಡಿಯೊ ಪ್ರಸಾರ, ಜೀವವಿಮೆ, ಪರಮಾಣು ಶಕ್ತಿ ಮುಂತಾದ ಉದ್ಯಮಗಳು ಭಾರತದಲ್ಲಿ ಸರಕಾರೀ ವಲಯದಲ್ಲಿವೆ. ಅಭಿವೃದ್ಧಿ ಹೊಂದಿರುವ ದೇಶಗಳಲ್ಲಿ ಜನಜೀವನದ ಮುಖ್ಯ ಉದ್ಯಮಗಳನ್ನು ರಾಷ್ಟ್ರೀಕರಣಗೊಳಿಸಿ, ಸರಕಾರೀ ವಲಯದ ಉದ್ಯಮಗಳನ್ನಾಗಿ ಮಾರ್ಪಡಿಸಲಾಗುತ್ತದೆ. ಸಾರಿಗೆ, ಬ್ಯಾಂಕಿಂಗ್ ಮುಂತಾದ ಕೆಲವು ಬಗೆಯ ಉದ್ಯಮಗಳನ್ನು ಭಾರತದಲ್ಲಿ ಈಗಾಗಲೇ ರಾಷ್ಟ್ರೀಕರಣಕ್ಕೆ ಒಳಪಡಿಸಲಾಗಿದೆ.

ಉದ್ಯಮಗಳು ಕೆಲವೇ ಮಂದಿ ಬಂಡವಾಳಗಾರರಲ್ಲಿ ಕೇಂದ್ರೀಕೃತವಾಗಬಾರದು ಎನ್ನುವುದು ಸರಕಾರೀ ವಲಯದಲ್ಲಿ ಉದ್ಯಮ ಸ್ಥಾಪನೆಗೆ ಕಾರಣ. ಕೃತಕ ಅಭಾವ, ಬೆಲೆಗಳ ಏರಿಳಿತ, ಲಾಭಬಡಕತನ, ವಿದೇಶೀ ಸಹಯೋಗದ ಉಪಯೋಗ ಇವುಗಳನ್ನು ಸರಕಾರೀ ವಲಯದ ಉದ್ಯಮಗಳ ಮೂಲಕ ಹತೋಟಿಯಲ್ಲಿ ಇರಿಸಿಕೊಳ್ಳಬಹುದು. ಕೆಲವು ಉದ್ಯಮಗಳು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರದ ಆರ್ಥಿಕ ಜೀವನಕ್ಕೆ ಬೆನ್ನುಮೂಳೆಯಂತೆ. ವಿಮಾನ ಕೈಗಾರಿಕೆ ಇವುಗಳಲ್ಲಿ ಒಂದು. ರಕ್ಷಣಾದೃಷ್ಟಿಯಿಂದ ಕೆಲವು ಬಗೆಯ ವಿಮಾನಗಳ ತಯಾರಿಕೆಯನ್ನು ಖಾಸಗಿಯವರಿಗೆ ವಹಿಸುವಂತಿಲ್ಲ. ಉಕ್ಕಿನ ತಯಾರಿಕೆ, ಭಾರಿ ಯಂತ್ರಗಳ ತಯಾರಿಕೆ, ಭಾರಿ ಪ್ರಮಾಣದ ಇಂಜಿನಿಯರಿಂಗ್ ಉದ್ಯಮ ಇವಕ್ಕೆ ಅಧಿಕ ಬಂಡವಾಳ ಮತ್ತು ಅಧಿಕ ಸಂಖ್ಯೆಯ ತಜ್ಞರು ಅಗತ್ಯ. ಅಲ್ಲದೆ ಹಲವು ದೇಶಗಳ ತಾಂತ್ರಿಕ ಜ್ಞಾನದ ನೆರವೂ ಬೇಕಾಗುತ್ತದೆ. ಈ ಉದ್ಯಮಗಳು ದಕ್ಷರೀತಿಯಲ್ಲಿ ದೇಶದ ಹಿತದೃಷ್ಟಿಯಿಂದ ನಡೆಯದಿದ್ದರೆ ಆರ್ಥಿಕ ವ್ಯವಸ್ಥೆಗೇ ಧಕ್ಕೆಯಾಗುತ್ತದೆ. ಈ ಎಲ್ಲ ಕಾರಣಗಳಿಂದಲೇ ಇಂಥ ಉದ್ಯಮಗಳನ್ನು ಸರಕಾರ ವಹಿಸಿಕೊಳ್ಳುವುದು. ಅಭಿವೃದ್ಧಿಗೆ ಏರುತ್ತಿರುವ ದೇಶಕ್ಕೆ ಅಪಾರ ಬಂಡವಾಳ ಅಗತ್ಯ. ಆದುದರಿಂದ ಹೆಚ್ಚು ಧನ ಸಂಗ್ರಹವಾಗುವ ಉದ್ಯಮಗಳಲ್ಲಿನ ಬಂಡವಾಳ ಮತ್ತು ಲಾಭ ದೇಶದ ಅಭಿವೃದ್ಧಿಗೆ ಒದಗಬೇಕೆಂದು ಜೀವವಿಮೆಯಂಥ ವ್ಯವಹಾರಗಳನ್ನೂ ಸರಕಾರೀ ವಲಯಕ್ಕೆ ತೆಗೆದುಕೊಳ್ಳುವುದುಂಟು.

ಖಾಸಗೀ ಉದ್ಯಮಿಗಳು ನಡೆಸುವಂತೆ ಉದ್ಯಮಗಳನ್ನು ದಕ್ಷತೆಯಿಂದ ನಡೆಸಲಾರದು ಎಂಬ ಅಪವಾದಕ್ಕೆ ಸರಕಾರವು ಸಾಮಾನ್ಯವಾಗಿ ಒಳಗಾಗಿದೆ. ಆದರೆ, ಈ ಅಪವಾದವನ್ನು ಹೋಗಲಾಡಿಸಿಕೊಳ್ಳಲು ಸೂಕ್ತ ಕ್ರಮಗಳನ್ನು ಕೈಗೊಳ್ಳಲು ಸಾಧ್ಯ ಎಂಬುದು ಅನುಭವಸಿದ್ಧವಾಗಿದೆ. ಸರಕಾರೀ ಉದ್ಯಮಗಳಲ್ಲಿ ದಕ್ಷತೆ ಮೂಡಿ ಲಾಭದಾಯಕವಾಗಿ ಉತ್ಪಾದನೆ ನಡೆಯಬೇಕಾದರೆ ಅದರಲ್ಲಿ ಭಾಗವಹಿಸುವ ಸಿಬ್ಬಂದಿಯವರಲ್ಲಿ ಮುಖ್ಯವಾಗಿ ರಾಷ್ಟ್ರಪ್ರಜ್ಞೆ ಇರಬೇಕು.

ನೋಡಿ : ಖಾಸಗೀವಲಯ ; ರಾಷ್ಟ್ರೀಕರಣ

## ಸರಬರಾಜು, ಬೇಡಿಕೆ

'ಬೆಲೆ ಜಾಸ್ತಿಯಾಗಿದೆ.'

–ನಮಗೆ ಬೇಕಾದ ಯಾವುದೋ ಒಂದು ಪದಾರ್ಥ ಕೊಳ್ಳಲು ಹೋದಾಗ ವ್ಯಾಪಾರಸ್ಥ ಹೀಗೆ ಹೇಳಬಹುದು.

ಬೆಲೆ ಏರಿಕೆಗೆ ಆತ ನೀಡುವ ಸಾಮಾನ್ಯ ಕಾರಣ– ತಕ್ಕಷ್ಟು ಸಾಮಾನು ಬರುತ್ತಲೇ ಇಲ್ಲ – ಸರಬರಾಜು ಕಡಮೆಯಾಗಿದೆ ಎಂದು. ಜನ ಪದಾರ್ಥಗಳನ್ನು ಸದಾ ಬಳಸುತ್ತಿರುವಾಗ ಸರಬರಾಜು (ಪೂರೈಕೆ) ಕಡಮೆಯಾದರೆ ಅಥವಾ ನಿಂತುಹೋದರೆ ಬೆಲೆ ತಕ್ಷಣ ಏರುತ್ತದೆ. ಪೂರೈಕೆಯಾಗಬೇಕಾದ ವಸ್ತು ಎಲ್ಲರಿಗೂ ಅಗತ್ಯವಾಗಿರುವುದೆ ಇದಕ್ಕೆ ಕಾರಣ. ಆಗ ಎಲ್ಲರಿಗೂ ಅದನ್ನು ಬೇಗ ಕೊಳ್ಳುವ ಆತುರ. ಹೀಗಾಗಿ ಬೇಡಿಕೆಯೂ ಏರುತ್ತದೆ.

ಸರಬರಾಜು ಕಡಮೆಯಾದಲ್ಲಿ ಅಥವಾ ಬೇಡಿಕೆ ಹೆಚ್ಚಾದಲ್ಲಿ ಬೆಲೆ ಏರುತ್ತದೆ. ಸರಬರಾಜು ಹೆಚ್ಚಾದಲ್ಲಿ ಅಥವಾ ಬೇಡಿಕೆ ಕಡಮೆಯಾದಲ್ಲಿ ಬೆಲೆ ಇಳಿಯುತ್ತದೆ.

ಪ್ರತಿನಿತ್ಯವೂ ಅಗತ್ಯವಾಗಿ ಬಳಸುವ ವಸ್ತುಗಳಲ್ಲಿ ಆಗುವ ಬೆಲೆಗಳ ಏರಿಳಿತ ಸರಬರಾಜು ಮತ್ತು ಬೇಡಿಕೆಗಳ ಮೇಲೆ ತೀವ್ರವಾದ ಪರಿಣಾಮ ಬೀರುವುದಿಲ್ಲ. ಹಾಲಿನ ಬೆಲೆ ಅರ್ಧಕ್ಕರ್ಧ ಇಳಿದುಹೋದರೆ ಜನ ಒಂದಕ್ಕೆರಡರಷ್ಟು ಹಾಲನ್ನು ಕುಡಿಯಲು ಪ್ರಾರಂಭಿಸುವುದಿಲ್ಲ. ಬೇಡಿಕೆ ಸ್ವಲ್ಪ ಮಾತ್ರ ಹೆಚ್ಚಬಹುದು. ಬೆಲೆ ಹೆಚ್ಚಾದರೆ ಬೇಡಿಕೆ ಸ್ವಲ್ಪ ಮಾತ್ರ ಕಡಮೆಯಾಗಬಹುದು.

ಭೋಗವಸ್ತುಗಳ ಬೆಲೆಗಳ ಏರಿಳಿತ, ಸರಬರಾಜು ಮತ್ತು ಬೇಡಿಕೆಗಳ ಮೇಲೆ ಪರಿಣಾಮ ಬೀರುತ್ತದೆ. ಟೆರಿಲಿನ್ ಬಟ್ಟೆಯ ಬೆಲೆ ಏರಿದರೆ ಜನ ಕೊಳ್ಳುವುದನ್ನು ಕಡಮೆ ಮಾಡುತ್ತಾರೆ. ಬಲು ಅಗ್ಗವಾದಾಗ ಹೆಚ್ಚು ಕೊಳ್ಳಲು ಬಯಸುತ್ತಾರೆ.

ಸರಬರಾಜು ಸದಾ ಒಂದೇ ಬಗೆಯಾಗಿ ಇರುವುದಿಲ್ಲ. ಬೆಳೆಗೆ ಋತು ಮತ್ತು ಹವಾಗುಣ ಎರಡೂ ಮುಖ್ಯ. ಆಹಾರ ಪದಾರ್ಥಗಳು ಮತ್ತು ಕಚ್ಚಾವಸ್ತುಗಳು ವರ್ಷದ ಯಾವುದೋ ಒಂದು ಅವಧಿಯಲ್ಲಿ ಸಮೃದ್ಧಿಯಾಗಿ ಸರಬರಾಜು ಆಗುತ್ತವೆ. ಪ್ರತಿ ವರ್ಷವೂ ಸರಬರಾಜು ಒಂದೇ ರೀತಿ ಆಗುವುದಿಲ್ಲ. ಅಗತ್ಯವಾದ ಎಲ್ಲ ಸಂಪನ್ಮೂಲಗಳು ದೇಶದಲ್ಲಿಯೇ ಸಿಗುವುದಿಲ್ಲ. ಹೊರಗಿನಿಂದ ಅನೇಕ ವಸ್ತುಗಳು ಸರಬರಾಜು ಆಗುತ್ತಿರುತ್ತವೆ. ಪ್ರಪಂಚದ ಮಾರುಕಟ್ಟೆಯಲ್ಲಿ ಆಗುವ ಬೆಲೆಗಳ ಬದಲಾವಣೆಗಳು ಸರಬರಾಜನ್ನು ಹೆಚ್ಚಿಸಬಹುದು ; ಕಡಮೆ ಮಾಡಬಹುದು.

ಸಿದ್ಧವಸ್ತುಗಳ ಸರಬರಾಜು ಒಂದೇ ಪ್ರಮಾಣದಲ್ಲಿ ಪೂರೈಕೆಯಾಗುವುದು ಸಾಧ್ಯ. ಅಗತ್ಯ ಹೆಚ್ಚಿದರೆ ಸರಬರಾಜು ಏರುತ್ತದೆ. ಸಾಬೂನು, ಟೂತ್‌ಪೇಸ್ಟ್ ಮುಂತಾದ ವಸ್ತುಗಳ ಸರಬರಾಜಿಗೆ ವಿಶೇಷ ತೊಂದರೆಯಾಗುವುದಿಲ್ಲ. ಆದರೆ ಖನಿಜ ಮತ್ತು ಅರಣ್ಯ ಸಂಪತ್ತು, ಆಹಾರ ಧಾನ್ಯ ಇವುಗಳ ಸರಬರಾಜನ್ನು ನಿಯಂತ್ರಿಸುವುದು ಸುಲಭವಲ್ಲ. ಏಕೆಂದರೆ ಅವುಗಳ ಉತ್ಪಾದನೆ ಕೆಲವು ವೇಳೆ ಮನುಷ್ಯನ ಪ್ರಯತ್ನಕ್ಕೆ ನಿಲುಕದೆ ಹೋಗುತ್ತದೆ.

ಎಲ್ಲ ಬಗೆಯ ಜನರ ವರಮಾನ ಒಂದೇ ಇರುವುದಿಲ್ಲ. ಯಾವ ಬಗೆಯ ಜನರ ವರಮಾನದಲ್ಲಿ ಏರಿಳಿತ ಇರುತ್ತದೊ ಅವರ ಅಗತ್ಯ ವಸ್ತುಗಳ ಬೇಡಿಕೆಯಲ್ಲೂ ಏರಿಳಿತವಿರುತ್ತದೆ. ಯಾವಾಗಲೂ ಒಂದೇ ಕಂಪೆನಿಯ ನಿರ್ದಿಷ್ಟ ಗುರುತಿನ ಚಹ ಕೊಳ್ಳುವ ಜನ, ಅದು ಸಿಗದಿದ್ದಾಗ ಅದರ ಬದಲು ಇನ್ನೊಂದು ಕಂಪೆನಿಯ ಚಹ ಕೊಳ್ಳುತ್ತಾರೆ. ಬದಲಿಗೆ ಸಿಗುವ ಬೇರೆ ವಸ್ತುಗಳ ಬೆಲೆ ಮತ್ತು ಪೂರೈಕೆಗಳು ಸಹ. ಒಂದು ನಿರ್ದಿಷ್ಟ ವಸ್ತುವಿನ ಬೇಡಿಕೆಯನ್ನು ಅವಲಂಬಿಸಿರುತ್ತವೆ.

ಸರಬರಾಜು ಮತ್ತು ಬೇಡಿಕೆಗಳ ವ್ಯತ್ಯಾಸ ಬೆಲೆಗಳ ಏರಿಳಿತಕ್ಕೆ ಕಾರಣ. ಆಮದು–ರಫ್ತು ವ್ಯಾಪಾರ. ದೇಶದೊಳಗಿನ ವ್ಯಾಪಾರ ಇವುಗಳ ಮೇಲೆ ತೆರಿಗೆ ವಿಧಿಸುವುದರಿಂದ ಸರಕಾರಕ್ಕೆ ಚೆನ್ನಾಗಿ ಆದಾಯ ಬರುತ್ತದೆ. ಸರಕಾರದ ಈ ಆದಾಯ ಪರೋಕ್ಷವಾಗಿ ಸರಬರಾಜು ಬೇಡಿಕೆಗಳಿಂದ ಪ್ರಭಾವಿತವಾಗುತ್ತದೆ. ದೇಶದ ಸಂಪನ್ಮೂಲಗಳು ಯಾವ ಸ್ಥಿತಿಯಲ್ಲಿ ಇವೆಯೋ ಅದಕ್ಕೆ ಅನುಗುಣವಾಗಿ ಸರಬರಾಜು ಮತ್ತು ಬೇಡಿಕೆಗಳು ಪರಸ್ಪರ ಹೊಂದಿಕೊಳ್ಳುತ್ತವೆ. ಉದಾಹರಣೆಗೆ. ದೇಶದಲ್ಲಿರುವ ಖನಿಜ ಸಂಪತ್ತು. ವಿದ್ಯುಚ್ಛಕ್ತಿಗಳನ್ನು ಅನುಸರಿಸಿ ಕೈಗಾರಿಕೆಗಳು ಬೆಳೆಯುತ್ತವೆ. ಕೈಗಾರಿಕೆಗಳಿಗೆ ಅಗತ್ಯವಾದ ಕಚ್ಚಾ ಪದಾರ್ಥ ಆಮದಾಗಬೇಕಾಗಬಹುದು : ರಫ್ತು. ಕೈಗಾರಿಕೆಗಳನ್ನು ಅವಲಂಬಿಸುತ್ತದೆ. ಸರಬರಾಜು–ಬೇಡಿಕೆಗಳು ಮಾರುಕಟ್ಟೆಯ ಸ್ಥಿತಿಗತಿಗಳನ್ನು ರೂಪಿಸುತ್ತವೆ.

ಯುದ್ಧ. ನೆರೆಹಾವಳಿ. ಹಣದುಬ್ಬರ ಮುಂತಾದ ಅನಿರೀಕ್ಷಿತ ತೊಂದರೆಗಳಿಲ್ಲದಿದ್ದಲ್ಲಿ ದೇಶದ ಎಲ್ಲ ವಸ್ತುಗಳ ಸರಬರಾಜು ಮತ್ತು ಬೇಡಿಕೆ ಒಂದನ್ನೊಂದು ಅವಲಂಬಿಸಿ ಸಮತೋಲನವನ್ನು ಕಾಪಾಡುತ್ತವೆ.

ನೋಡಿ : ಹಣದುಬ್ಬರ

## ಸರೋವರ

ಎತ್ತರವಾದ ಹಿಮಾಲಯ ಪರ್ವತಗಳಲ್ಲಿ ಮಾನಸ ಸರೋವರವಿದೆ. ಕಾಶ್ಮೀರದಲ್ಲಿ ಸಾವಿರಾರು ಸರೋವರಗಳು. ಕಾಶ್ಮೀರದ ಸೌಂದರ್ಯ ಇಮ್ಮಡಿಸಿರುವುದು ಆ ಸರೋವರಗಳಿಂದಲೇ. ವಿಶಾಲ ಪ್ರದೇಶದಲ್ಲಿ ಜಲಸಂಗ್ರಹವಾಗಿರುವುದೇ ಸರೋವರ. ಸರೋವರಗಳು ನೈಸರ್ಗಿಕ ಚೆಲುವಿನ ತವರುಮನೆಗಳು. ಮೃತಸಮುದ್ರ, ಗೆಲಿಲಿ ಸಮುದ್ರ, ಕ್ಯಾಸ್ಪಿಯನ್ ಸಮುದ್ರ ಇವು ಸಮುದ್ರಗಳೆಂಬ ಹೆಸರು ಪಡೆದರೂ ವಾಸ್ತವವಾಗಿ ದೊಡ್ಡ ಸರೋವರಗಳೇ. ಇವು ಸಮುದ್ರ ಮಟ್ಟಕ್ಕಿಂತ 393 ಮೀಟರು ಕೆಳಗಿವೆ. ಇವುಗಳಲ್ಲಿರುವುದು ಉಪ್ಪುನೀರು.

ಸರೋವರಗಳ ಹುಟ್ಟು ಹಲವಾರು ವಿಧಗಳಲ್ಲಾಗುತ್ತದೆ.

ಭೂಮಿಯ ಮೇಲೆ ಬಿದ್ದ ಮಳೆಯಾಗಲಿ ಹಿಮವಾಗಲಿ ತಗ್ಗಿನ ಪ್ರದೇಶಗಳಲ್ಲಿ ಸಂಗ್ರಹವಾಗಿ ದೊಡ್ಡ ಹಳ್ಳವಾಗುತ್ತ ಹೋಗಿ ಅದು ಸರೋವರವಾಗಬಹುದು.

ಭೂಗರ್ಭದ ಎರಡು ಬಿರುಕುಗಳ ನಡುವಣ ನೆಲ ಕುಸಿದು ಅಲ್ಲಿ ನೀರು ಕಲೆತು ಸರೋವರವಾಗಬಹುದು.

ಹಿಮನದಿ ನೆಲವನ್ನು ಕೊರೆಯುತ್ತ ಮುಂದೆ ಹೋಗುವಾಗ ಎದುರು ಯಾವುದಾದರೂ ಶಿಲಾಮಯ ಪ್ರದೇಶ ಅಡ್ಡಬಂದರೆ ತಾವು ಕೊರೆದು ಮಾಡಿದ್ದ ಕಣಿವೆಯಲ್ಲಿಯೇ ನೀರಾಗಿ ಶೇಖರಗೊಂಡು ಸರೋವರಗಳಾಗುತ್ತವೆ. ಒಮ್ಮೊಮ್ಮೆ ಹಿಮನದಿ ಕೊಚ್ಚಿಕೊಂಡು ಬರುವ ಕಸ ಕಡ್ಡಿಗಳೇ ಅಡ್ಡನಿಂತು ಹಿಮ ಕರಗಿ ನೀರಾಗಿ ಸರೋವರಗಳಾಗುವುದುಂಟು. ಒಂದಾಗಿದ್ದ ಸರೋವರವನ್ನು ಒಮ್ಮೊಮ್ಮೆ ಈ ಕಸ ಕಡ್ಡಿ ಎರಡು ಭಾಗಮಾಡಲೂಬಹುದು.

ನದಿಗಳಿಗೆ ಮರಳು, ಬಂಡೆಗಳು ಮುಂತಾದುವು ಅಡ್ಡಬಂದು ಸ್ವಲ್ಪ ನೀರು ಒಂದೆಡೆ ನಿಂತು ಸರೋವರವಾಗಬಹುದು. ಒಂದು ನದಿಯ ದಾರಿಯಲ್ಲಿ ಭೂಕಂಪ ಮುಂತಾದ ಕಾರಣಗಳಿಂದ ಮಧ್ಯದ ನೆಲ ಮೇಲಕ್ಕೆ ಎತ್ತಲ್ಪಟ್ಟು ಅಥವಾ ಕೆಳಕ್ಕೆ ಹೋಗಿ ಸರೋವರಗಳಾಗಬಹುದು. ಬೆಟ್ಟದ ಪ್ರದೇಶದಲ್ಲಿ ನದಿಗಳು ಹಾದುಬರುವಾಗ ಅದರ ಭಾಗಗಳು ಕುಸಿದು ನದಿಯ ದಾರಿಯಲ್ಲಿ ಅಡ್ಡಲಾಗಿ ಸರೋವರಗಳುಂಟಾಗಬಹುದು.

ಜ್ವಾಲಾಮುಖಿಯ ಕುಂಡಗಳಲ್ಲಿ ಹಿಮ ಶೇಖರವಾಗಿರುವುದುಂಟು. ಬಹಳ ದಿನಗಳವರೆಗೆ ಜ್ವಾಲಾಮುಖಿ ಸ್ಫೋಟಗೊಳ್ಳದಿದ್ದರೆ ಹಿಮ ಕರಗಿ ನೀರಾಗಿ ಸರೋವರವಾಗುತ್ತದೆ. ಇಂಥವು ಪುಟ್ಟ ಸರೋವರಗಳು.

ಸರೋವರಗಳಿಗೆ ನೀರು ನದಿಗಳಿಂದಲೂ ತಗ್ಗಿನಲ್ಲಿ ತುಂಬಿಕೊಳ್ಳುವ ಮಳೆ ಅಥವಾ ಹಿಮಜಲಗಳಿಂದಲೂ ಭೂಮಿಯ ಒಳಗಿನಿಂದ ಚಿಮ್ಮುವ ನೀರಿನ ಬುಗ್ಗೆಗಳಿಂದಲೂ ಒದಗುತ್ತದೆ.

ಮೂರುನಾಲ್ಕು ಚದರ ಕಿಲೊಮಿಾಟರುಗಳಿಂದ ಹಿಡಿದು 70–75 ಸಾವಿರ ಚದರ ಕಿಲೊಮಿಾಟರುಗಳವರೆಗೆ ಸರೋವರಗಳ ವಿಸ್ತಾರದಲ್ಲಿ ವೈವಿಧ್ಯ ಕಾಣುತ್ತೇವೆ. ಆಳದಲ್ಲಿಯೂ ವ್ಯತ್ಯಾಸಗಳುಂಟು.

ಸರೋವರಗಳು ಪ್ರಾಚೀನ ಕಾಲದಿಂದಲೂ ವ್ಯಾಪಾರಕ್ಕೆ – ದೋಣಿಗಳ ಮೇಲಿನ ಸರಕುಗಳ ಸಾಗಾಣಿಕೆಗೆ – ಉಪಯೋಗಿಸಲ್ಪಟ್ಟಿವೆ. ನೀರಾವರಿಗೆ ಸರೋವರಗಳು ಬಹಳ ಸಹಾಯಕ. ಕಾಲುವೆಗಳ ಮೂಲಕ ಸರೋವರದ ನೀರನ್ನು ಹಾಯಿಸಿ ನೆಲಕ್ಕೆ ನೀರು ಒದಗಿಸುವುದುಂಟು. ನದಿಗಳಿಗೆ ಅಣೆಕಟ್ಟುಗಳನ್ನು ಕಟ್ಟಿ ಕೃತಕ ಸರೋವರಗಳನ್ನು ಕಟ್ಟುವುದುಂಟು. ಇವಕ್ಕೆ ಜಲಾಶಯಗಳೆನ್ನುತ್ತಾರೆ.

ಸಮುದ್ರ–ಸಾಗರಗಳಿಗೆ ಹೋಲಿಸಿದರೆ ಸರೋವರದ ಸ್ವರೂಪ ಸಣ್ಣದು. ಈಗ ಅಸ್ತಿತ್ವದಲ್ಲಿರುವ ಕೆಲವು ಸರೋವರಗಳು ಸ್ವಲ್ಪ ಕಾಲದಲ್ಲಿ ಕಣ್ಮರೆಯಾದರೆ ಆಶ್ಚರ್ಯಪಡಬೇಕಾಗಿಲ್ಲ. ಜಲಮೂಲದಿಂದ ನೀರೊದಗದಿದ್ದರೆ ಸರೋವರಗಳು ಬತ್ತಿಹೋಗುತ್ತವೆ. ಕೆಲವೊಮ್ಮೆ ಜ್ವಾಲಾಮುಖಿಯ ಆಸ್ಫೋಟನೆಯೂ ಸರೋವರ ಬತ್ತಿಹೋಗಲು ಕಾರಣವಾಗಬಹುದು. ಇವ್ವಕ್ಕಿದಂತೆಯೇ ನೀರು ಭೂಮಿಯ ಒಳಗೆ ಇಂಗಿ ಸರೋವರಗಳು ಮಾಯವಾಗುವುದೂ ಉಂಟು.

ಪ್ರಪಂಚದ ಸರೋವರಗಳಲ್ಲಿ ಅರ್ಧದಷ್ಟು ಕೆನಡದಲ್ಲಿವೆ. ಫಿನ್ಲೆಂಡ ಒಂದರಲ್ಲೇ 30.000 ಸರೋವರಗಳಿವೆ. ಪ್ರಪಂಚದ ಅತಿ ದೊಡ್ಡ ಸರೋವರ ಕ್ಯಾಸ್ಪಿಯನ್ ಸಮುದ್ರ—4,38,487 ಚ.ಕಿ.ಮಿಾ. ವಿಸ್ತಾರ.

ಅಮೆರಿಕದ ಈರಿ, ಹ್ಯೂರನ್, ಮಿಚಿಗನ್, ಆನ್‌ಟೇರಿಯೊ ಹಾಗೂ ಸುಪೀರಿಯರ್ ಆ ಭೂಖಂಡದ ಪಂಚ ಮಹಾಸರೋವರಗಳೆಂದು ಹೆಸರಾಗಿವೆ.

## ಸರ್ವೋದಯ

ಗಾಂಧಿಜಿಯವರ ಮೇಲೆ ಬಹಳ ಪ್ರಭಾವ ಬೀರಿದ ಹತ್ತೊಂಬತ್ತನೆಯ ಶತಮಾನದ ಒಂದು ಗ್ರಂಥ 'ಅನ್‌ಟು ದಿಸ್ ಲಾಸ್ಟ್' ಎನ್ನುವುದು.

ಬೈಬಲಿನ ಹೊಸ ಒಡಂಬಡಿಕೆಯಲ್ಲಿ ಒಂದು ಕಥೆ ಬರುತ್ತದೆ. ನಮಗೆ ನ್ಯಾಯವಾದದ್ದು ದೊರಕಿದಮೇಲೆ, ನಮಗೆ ಅನ್ಯಾಯವಾಗದಿದ್ದಲ್ಲಿ ಇತರರ ಆದಾಯವನ್ನು ಕಂಡು ಕರುಬಬಾರದು ಎಂಬುದು ಇದರ ಸ್ಥೂಲ ನೀತಿ. ಈ ಕಥೆಯ ಇಂಗ್ಲಿಷ್ ರೂಪದಲ್ಲಿ ಬರುವ 'ಅನ್‌ಟು ದಿಸ್ ಲಾಸ್ಟ್' ('ಈ ಕಡೆಯವನವರೆಗೆ') ಎಂಬ ವಾಕ್ಯಾಂಗವನ್ನು, ಇಂಗ್ಲಿಷ್ ಬರಹಗಾರ ಜಾನ್ ರಸ್ಕಿನ್ ತನ್ನ ಒಂದು ಪುಸ್ತಕದ ಶೀರ್ಷಿಕೆಯಾಗಿ ಬಳಸಿದ.

ರಸ್ಕಿನನ ಈ ಗ್ರಂಥ ಇಂಗ್ಲೆಂಡಿನ ಸಾಮಾಜಿಕ ಜೀವನದ ಮೇಲೆ ಪ್ರಭಾವ ಬೀರಿತು. ಆಫ್ರಿಕದಲ್ಲಿ ವಕೀಲವೃತ್ತಿಯಲ್ಲಿದ್ದ ಗಾಂಧಿಜಿಯವರು ಅದನ್ನು ತುಂಬ ಮೆಚ್ಚಿಕೊಂಡರು. ಅದನ್ನು ಗುಜರಾತಿ ಭಾಷೆಗೆ ಭಾಷಾಂತರಿಸಿ, ಸರ್ವೋದಯ ಎಂದು ಹೆಸರಿಟ್ಟರು. ಸರ್ವೋದಯ ಎಂದರೆ ಸಕಲರ ಕಲ್ಯಾಣ.

ಭಾರತದಲ್ಲಿ ಪ್ರಾಚೀನ ಕಾಲದಿಂದಲೂ 'ಎಲ್ಲರೂ ಸುಖವಾಗಿರಲಿ' (ಸರ್ವೇ ಜನಾಃ ಸುಖಿನೋ ಭವಂತು) ಎಂಬ ತತ್ತ್ವ ಅನೇಕರಿಂದ ಪ್ರತಿಪಾದಿಸಲ್ಪಟ್ಟಿದೆ. 'ಸರ್ವೋದಯ' ಎಂಬ ಪದವನ್ನು ಬಳಕೆಗೆ ತಂದು ಅದನ್ನು ವ್ಯಕ್ತಿಗೂ ಸಮಾಜಕ್ಕೂ ಬದುಕಿನ ವಿಧಾನವನ್ನಾಗಿ ನಿರೂಪಿಸಿದರು ಬಾಪೂಜಿ. ತಮ್ಮ ಜೀವನದಲ್ಲಿ ಅನುಷ್ಠಾನಕ್ಕೆ ತಂದು ಇಂದಿಗೂ ಅದನ್ನು ತಮ್ಮ ಅನುಯಾಯಿಗಳ ಜೀವನಧರ್ಮವಾಗಿ ಮಾಡಿರುವವರು ವಿನೋಬಾ.

ತಾವು ಆಳವಾಗಿ ನಂಬಿದ್ದ ಕೆಲವು ತತ್ತ್ವಗಳನ್ನು, ರಸ್ಕಿನನ ಗ್ರಂಥದಲ್ಲಿ ಗಾಂಧಿಜಿ ಕಂಡರು.

ಒಬ್ಬ ಮನುಷ್ಯ ತಾನೊಬ್ಬನೇ ಸುಖವಾಗಿದ್ದು ಅಭಿವೃದ್ಧಿ ಕಾಣಲಾರ. ಅವನು ಸಮಾಜದ ಒಂದು ಭಾಗ. ಸಮಾಜಕ್ಕೆ ಒಳ್ಳೆಯದಾದರೆ ಮಾತ್ರ ಅವನಿಗೆ ಒಳ್ಳೆಯದಾಗುತ್ತದೆ.

ಕೆಲಸವನ್ನು ಮಾಡಿ ತಮ್ಮ ಜೀವನವನ್ನು ಸಾಗಿಸುವ ಅಧಿಕಾರ ಸಕಲರಿಗೂ ಸಮನಾಗಿರುವುದರಿಂದ ಪ್ರಾಮಾಣಿಕವಾಗಿ ಮಾಡಿದ ಎಲ್ಲ ಕೆಲಸಗಳೂ ಸಮ. ಒಬ್ಬ ವಕೀಲನ ಕೆಲಸಕ್ಕಿರುವಷ್ಟೇ ಗೌರವ ಒಬ್ಬ ಕ್ಷೌರಿಕನ ಕೆಲಸಕ್ಕೂ ಇದೆ.

ಶ್ರಮಜೀವನ–ಎಂದರೆ ಉಳುವವನ ಮತ್ತು ಕಾರ್ಮಿಕನ ಬದುಕು–ಸಾರ್ಥಕ ಜೀವನ.

ಸರ್ವೋದಯ ಸಮಾಜದಲ್ಲಿ ಎಲ್ಲರೂ ಸರಿಸಮಾನರು. ಇಲ್ಲಿ ಜಾತಿಭೇದಗಳಿಲ್ಲ. ವರ್ಣಭೇದಗಳಿಲ್ಲ. ಶ್ರಮಜೀವನ, ಪ್ರಾಮಾಣಿಕ ಜೀವನ ಇವು ಎಲ್ಲರ ಧರ್ಮ. ಇತರರೊಂದಿಗೆ ಬದುಕಿ. ಇತರರಿಗಾಗಿ ಬದುಕಿ, ಅಗತ್ಯವಾದರೆ ತನ್ನನ್ನೆ ಬಲಿಕೊಡಲೂ ಸಿದ್ಧವಿರಬೇಕು.

ಸರ್ವೋದಯಕ್ಕೆ ಅತ್ಯವಶ್ಯವಾದ ಸದ್ಗುಣಗಳು : ಸತ್ಯ. ಅಹಿಂಸೆ. ಪ್ರೇಮ. ಬ್ರಹ್ಮಚರ್ಯ. ಶುಭ್ರ ಜೀವನ. ಇತರರಿಂದ ಏನನ್ನೂ ತೆಗೆದುಕೊಳ್ಳದಿರುವುದು. ಆಸ್ತಿ ಎಂದು ಏನನ್ನೂ ತೆಗೆದಿಟ್ಟುಕೊಳ್ಳದಿರುವುದು. ಸಂಯಮ, ತ್ಯಾಗ, ಶ್ರಮಜೀವನ. ಸ್ವದೇಶಿ ವ್ರತಪಾಲನೆ, ಸರ್ವಮತಗಳಲ್ಲಿ ಆದರ. ಅಸ್ಪೃಶ್ಯತೆಯನ್ನು ಆಚರಿಸದಿರುವುದು. ಅಹಿಂಸಾ ವ್ರತಾಚರಣೆ.

ಸರ್ವೋದಯ ಸಮಾಜದಲ್ಲಿ ಆರ್ಥಿಕ ಸಮಾನತೆಯಿರುತ್ತದೆ. ಏಕೆಂದರೆ ಉಳಿದವರಿಗಿಂತ ಹೆಚ್ಚು ಬಲಶಾಲಿಯಾದವನ, ಹೆಚ್ಚು ಬುದ್ಧಿವಂತನ, ಹೆಚ್ಚಿನ ಗಳಿಕೆಯ ಬಹುಭಾಗ ರಾಷ್ಟ್ರದ ಕಲ್ಯಾಣಕ್ಕಾಗಿ ಉಪಯೋಗಿಸಲ್ಪಡುತ್ತದೆ. ಸರ್ವೋದಯ ಸಮಾಜದಲ್ಲಿ ಹಳ್ಳಿಗಳಿಗೆ ಯೋಗ್ಯ ಸ್ಥಾನ.

ಸರ್ವೋದಯ ಕಾರ್ಯಕರ್ತನಿಗೆ ಒಳ್ಳೆಯತನದಲ್ಲಿ ನಂಬಿಕೆಯಿರಬೇಕು. ಅವನು ಪರಿಶುದ್ಧ ಜೀವನವನ್ನು ನಡೆಸಬೇಕು. ತಾನು ಕೈಗೊಂಡ ಕಾರ್ಯಕ್ಕಾಗಿ ತನ್ನಲ್ಲಿರುವ ಎಲ್ಲ ವಸ್ತು ಒಡವೆಗಳನ್ನೂ ತನ್ನ ಜೀವನವನ್ನೂ ಕೊಡಲು ಸಿದ್ಧನಿರಬೇಕು. ಅವನು ಖಾದಿಧಾರಿಯಾಗಿರಬೇಕು. ನೂಲಬೇಕು. ಮದ್ಯಪಾನ ಮಾಡಬಾರದು. ಯಾವ ರೀತಿಯ ಮಾದಕವಸ್ತುವನ್ನೂ ಮುಟ್ಟಬಾರದು. ಶಿಸ್ತಿನ ಜೀವನ ನಡೆಸಬೇಕು.

ಸಮಾಜವಾದ, ಕಮ್ಯೂನಿಸಂಗಳಂತೆ ಸರ್ವೋದಯವೂ ಎಲ್ಲರ ಸಮಾನತೆಯನ್ನು ಸಾಧಿಸಲು ಆಶಿಸುತ್ತದೆ. ಆದರೆ ಅನ್ಯಬಲ [illegible] ಬಾಳು. ಇತರರೊಡನೆ ಎಲ್ಲವನ್ನೂ ತಾವೇ ಸಂತೋಷದಿಂದ ಹಂಚಿಕೊಳ್ಳುವುದು. ಅಹಿಂಸೆ – ಆ ಅಸ್ತಿಭಾರದ ಮೇಲೆ ಹೊಸ ಸಮಾಜ ಸೃಷ್ಟಿಯಾಗಬೇಕು ಎನ್ನುತ್ತದೆ ಸರ್ವೋದಯ ತತ್ತ್ವ.

ಗಳನ್ನೂ ಸಾಲ ನೀಡುವ ಸಹಕಾರಿ ಸಂಸ್ಥೆಗಳಿಗೆ ನೀಡಲು ರಾಜ್ಯ ಸರಕಾರಗಳಿಗೆ ಏಳುಕೋಟಿ ಮೂವತ್ತಾರು ಲಕ್ಷ ರೂಪಾಯಿಗಳನ್ನೂ ಒದಗಿಸಿದೆ.

ಈಗ ಜಗತ್ತಿನ ಎಲ್ಲ ಪ್ರಮುಖ ರಾಷ್ಟ್ರಗಳಲ್ಲೂ ಸಹಕಾರ ಪದ್ಧತಿ ಪ್ರಚುರವಾಗಿದೆ. ಒಂದೊಂದು ದೇಶದಲ್ಲಿ ಒಂದೊಂದು ವಿಧವಾದ ಸಹಕಾರ ವ್ಯವಸ್ಥೆ ಇದೆ. ಸಹಕಾರ ಪದ್ಧತಿಯ ಈ ವೈವಿಧ್ಯ ಯೂರೋಪ್ ಖಂಡದಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಇಂಗ್ಲೆಂಡಿನಲ್ಲಿ ಸಹಕಾರಿ ಉಗ್ರಾಣಗಳು, ಡೆನ್ಮಾರ್ಕಿನಲ್ಲಿ ಮಾರಾಟದ ಸಂಘಗಳು, ಫ್ರಾನ್ಸ್ ಮತ್ತು ಬೆಲ್ಜಿಯಂ ವಿಮಾ ಕಂಪೆನಿಗಳು, ಜರ್ಮನಿ–ಇಟಲಿಗಳಲ್ಲಿ ಲೇವಾದೇವಿ ಸಂಘಗಳು ಸಹಕಾರಿ ಪದ್ಧತಿಯಲ್ಲಿ ಮುಂದುವರಿಯುತ್ತಿವೆ. ಇಂಗ್ಲೆಂಡಿನಂತೆಯೇ ಜರ್ಮನಿಯಲ್ಲೂ ಸಹಕಾರಿ ಸಂಘಗಳು ಖಾಸಗೀ ಪ್ರಯತ್ನದಿಂದಲೇ ಆರಂಭವಾದುವು. ಸರಕಾರಿ ಬೆಂಬಲ ಕಾಲಾನುಕ್ರಮದಲ್ಲಿ ದೊರಕಿತು.

ಇಟಲಿಯಲ್ಲಿ ಲುಝಟಿ (1841–1927) ಎಂಬವನ ಪ್ರಯತ್ನದ ಫಲವಾಗಿ ಅನೇಕ ಸಹಕಾರಿ ಲೇವಾದೇವಿ ಸಂಘಗಳು ಸ್ಥಾಪಿತವಾದುವು. ಇದೇ ರೀತಿ ಡೆನ್ಮಾರ್ಕ್, ಅಮೆರಿಕದ ಸಂಯುಕ್ತ ಸಂಸ್ಥಾನ, ಕೆನಡ ಮುಂತಾದ ದೇಶಗಳು ಸಹಕಾರಿ ಮಾರಾಟದ ಸಂಘಗಳನ್ನೇರ್ಪಡಿಸಿವೆ. ರಷ್ಯ ಮತ್ತಿತರ ಕಮ್ಯೂನಿಸ್ಟ್ ರಾಷ್ಟ್ರಗಳಲ್ಲೂ ಸಹಕಾರಿ ಸಂಸ್ಥೆಗಳಿವೆ. ಈ ದೇಶಗಳಲ್ಲಿ ಸಹಕಾರಿ ಚಳುವಳಿಗೆ ಸರಕಾರಗಳೇ ಚಾಲನೆ ನೀಡುತ್ತಿವೆ.

ಜಪಾನಿನಲ್ಲಿ 1900ರಲ್ಲಿ ಸಹಕಾರ ಪದ್ಧತಿ ಸರಕಾರದ ನೆರವಿನಿಂದ ಆರಂಭವಾಯಿತು. ರೈತರ ಸಂಘಗಳು, ವಾಣಿಜ್ಯ, ವಿಮೆ, ಆರೋಗ್ಯ ಮೊದಲಾದ ಕ್ಷೇತ್ರಗಳಲ್ಲಿ ಬೆಳೆದಿವೆ. ಇಂದಿಗೂ ಸರಕಾರದ ಆಶ್ರಯದಲ್ಲಿ ಸಹಕಾರಿ ಸಂಘಗಳಿವೆ. ಚೀನ ದೇಶದಲ್ಲಿ 1912ರಲ್ಲಿ ಆರಂಭವಾದ ಸಹಕಾರ, ಲೇವಾದೇವಿ, ಮಾರಾಟ, ವಿಮೆ, ವಿವಿಧೋದ್ದೇಶ ಸಂಘಗಳು ಇತ್ಯಾದಿ ರೂಪದಲ್ಲಿ ಬೆಳೆಯುತ್ತಿದೆ.

ಸಹಕಾರ ವ್ಯವಸ್ಥೆಯ ಹಿರಿಮೆಗೆ ಕಾರಣಗಳು ಮೂರು :

ಮೊದಲನೆಯದಾಗಿ, ಪ್ರಜಾಪ್ರಭುತ್ವದಲ್ಲಿ ಪ್ರಜೆಗಳು ಎಲ್ಲ ಕೆಲಸ ಸೌಲಭ್ಯಗಳಿಗೂ ಸರಕಾರದತ್ತ ನೋಡದೆ, ತಮ್ಮ ಕ್ರಿಯಾಶಕ್ತಿಯನ್ನು ಬೆಳೆಸಿಕೊಳ್ಳುವುದು, ವ್ಯವಸ್ಥೆ, ನಿಯಮಬದ್ಧ ಕೆಲಸ ಇವನ್ನು ಕಲಿಯಲು ಸಹಕಾರ ಕ್ಷೇತ್ರ ಅವಕಾಶ ಕಲ್ಪಿಸುತ್ತದೆ.

ಎರಡನೆಯದಾಗಿ, ಇಲ್ಲಿ ಪ್ರತಿಫಲ ಹತ್ತು ಜನರಿಗೆ ಲಭ್ಯವಾಗುತ್ತದೆ. ವ್ಯಕ್ತಿ ವ್ಯಾಪಾರ ಮಾಡಿದರೆ ಅದರ ಲಾಭವೆಲ್ಲ ಆತನಿಗೆ. ಸಹಕಾರಿ ಸಂಘದ ಮೂಲಕ ಮಾಡಿದರೆ, ಆಡಳಿತಗಾರರೇ ಸಾಮಾನುಗಳನ್ನು ಬಳಸುವವರೂ ಆದ್ದರಿಂದ, ಲಾಭದಾಸೆಗೇ ಸಾಮಾನನ್ನು ಕೊಳ್ಳುವುದಿಲ್ಲ. ಸಾಮಾನುಗಳ ಗುಣವನ್ನೂ ಪರೀಕ್ಷಿಸುತ್ತಾರೆ. ಒಟ್ಟಿಗೆ ಕೊಳ್ಳುವುದರಿಂದ ಬೆಲೆ ಕಡಮೆಯಾಗುತ್ತದೆ. ಕಡೆಗೆ ಬರುವ ಲಾಭ ಸದಸ್ಯರದೇ.

ಮೂರನೆಯದಾಗಿ ದಿನನಿತ್ಯ ಸಾಮಾನುಗಳ ಬಳಕೆದಾರರು, ರೈತರು, ಕಾಫಿ ಬೆಳೆಯುವವರು, ಯಾರೇ ಆಗಲಿ ಸಹಕಾರ ಸಂಘದಿಂದ ವ್ಯವಸ್ಥಿತವಾಗಿ ಕೆಲಸ ಮಾಡಬಹುದು. ಸದಸ್ಯರೆಲ್ಲರ ಬುದ್ಧಿಶಕ್ತಿ, ಶ್ರಮ, ಅನುಭವ ಸಂಘಕ್ಕೆ ಲಭ್ಯವಾಗುತ್ತವೆ.

ಇಂಗ್ಲೆಂಡಿನಲ್ಲಿ ರಾಬರ್ಟ್ ಓವನ್ ಬಿತ್ತಿದ ಸಹಕಾರ ಬೀಜ ಇಂದು ಹೆಮ್ಮರವಾಗಿ ಬೆಳೆದಿದೆ. ಶಾಖೆಗಳು ಜಗತ್ತನ್ನೇ ಆವರಿಸಿ ಕೋಟ್ಯಂತರ ಜನರಿಗೆ ನೆರಳು ನೀಡುತ್ತಿವೆ.

**ನೋಡಿ :** ಅರ್ಥಶಾಸ್ತ್ರ ; ಓವನ್, ರಾಬರ್ಟ್

## ಸ್ಕಂಧ (ಸ್ಟಾಕ್), ಅಂಶ (ಷೇರ್), ಋಣಪತ್ರ (ಡಿಬೆಂಚರ್)

ನಮ್ಮದು ಬೃಹತ್ ಉದ್ಯಮಗಳ ಯುಗ ; ಕಂಪೆನಿಗಳ ಯುಗ. ಅಗಾಧವಾದ ಬಂಡವಾಳ ಹೂಡಿ ನಡೆಸುವ ಭಾರಿ ಉದ್ಯಮಗಳು ಮಾನವನ ಅಭ್ಯುದಯಕ್ಕೆ ಅವಶ್ಯವಾದ ನಾನಾ ಸರಕುಸೇವೆಗಳನ್ನು ಒದಗಿಸುವ ವ್ಯವಹಾರಗಳಲ್ಲಿ ನಿರತವಾಗಿರುವುದು ಈ ಯುಗದ ವೈಶಿಷ್ಟ್ಯ.

ಅಗಾಧ ಪ್ರಮಾಣದಲ್ಲಿ ಬಂಡವಾಳ ಹೂಡಿರುವ ದೈತ್ಯ ಗಾತ್ರದ ಈ ಉದ್ಯಮ ಸಂಸ್ಥೆಗಳನ್ನು ನಡೆಸುವುದು ಬಲು ಕಷ್ಟ. ಅದಕ್ಕೆ ಅಗತ್ಯವಾದ ಬಂಡವಾಳವನ್ನು ಸಂಪಾದಿಸಿ ಹೂಡುವ ವಿಚಾರವಾಗಿ ವಿವರಗಳನ್ನು ತಿಳಿಯಬಹುದು. ಸಾಮಾನ್ಯ ಜನರು ಕೂಡ ಇಂಥ ಉದ್ಯಮಗಳಲ್ಲಿ ತಮ್ಮ ಹಣವನ್ನು ತೊಡಗಿಸಿ ರಾಷ್ಟ್ರದ ಸಂಪದಭ್ಯುದಯದ ಕಾರ್ಯದಲ್ಲಿ ತಾವೂ ಪಾಲ್ಗೊಳ್ಳುವುದಲ್ಲದೆ ಅದರಿಂದ ಲಾಭವನ್ನೂ ಪಡೆಯುವುದು ಸಾಧ್ಯ.

ನಿಮ್ಮ ಊರಿನಲ್ಲಿ ಒಂದು ದೊಡ್ಡ ಬಟ್ಟೆ ಗಿರಣಿಯೊ ಸಕ್ಕರೆ ಕಾರಖಾನೆಯೊ ಬೇರೆ ಯಾವುದಾದರೊಂದು ದೊಡ್ಡ ಕೈಗಾರಿಕೆಯೊ ಇದೆ ಎಂದುಕೊಳ್ಳೋಣ. ಅದರ ಮುಂದೆ ದೊಡ್ಡ ಅಕ್ಷರಗಳಲ್ಲಿ ಅದರ ಹೆಸರಿರುತ್ತದೆ. ಉದಾಹರಣೆಗೆ ಅದು ಸಕ್ಕರೆ ಕಾರಖಾನೆಯಾಗಿದ್ದರೆ ಅದರ ಹೆಸರು ಮಧು ವಿಲಾಸ ಸಕ್ಕರೆ ಕಂಪೆನಿ ಲಿಮಿಟೆಡ್ ಇರಬಹುದು. ಈ ಉದ್ಯಮಕ್ಕೆ ಬಂಡವಾಳ ಹೇಗೆ ಬಂತು ?

ನಿಮ್ಮೂರಿನ ಸುತ್ತಮುತ್ತ ಬೇಕಾದಷ್ಟು ಕಬ್ಬು ಬೆಳೆಯುತ್ತಿರಬಹುದು. ಅದನ್ನೆಲ್ಲ ಸಂಗ್ರಹಿಸಿ ರಸ ತೆಗೆದು ಸಕ್ಕರೆ ತಯಾರು ಮಾಡುವ ಕಾರಖಾನೆಗೆ ಅಗತ್ಯವಾದ ಬಂಡವಾಳ ಬರುವುದು ಹೇಗೆ ?

ಇದಕ್ಕೆ ಬೇಕಾದ ಲಕ್ಷಾಂತರ ರೂಪಾಯಿಯನ್ನು ಒದಗಿಸಬಲ್ಲ ಶ್ರೀಮಂತರು ಹೆಚ್ಚು ಮಂದಿ ಇಲ್ಲ. ಅಂಥವರು ದೊರಕಿದರೂ ಒಬ್ಬೊಬ್ಬರೇ ಅಥವಾ ಅಂಥ ಕೆಲವರೇ ಅಷ್ಟೊಂದು ಹಣವನ್ನು ಇಂಥ ಉದ್ಯಮದಲ್ಲಿ ತೊಡಗಿಸುವುದು ದೊಡ್ಡ ಸಾಹಸ. ಈ ಉದ್ಯಮ ಲಾಭಪ್ರದವಾಗದೆ ಹೋದರೆ ಅವರಿಗೆ ನಷ್ಟ ತಡೆದುಕೊಳ್ಳಲು ಸಾಧ್ಯವಾಗದಿರಬಹುದು. ಇದು ಗುರುತರ ಜವಾಬ್ದಾರಿ.

ಅಲ್ಲದೆ ಈ ಪ್ರಜಾಪ್ರಭುತ್ವ ಯುಗದಲ್ಲಿ ದೇಶದ ಸಂಪತ್ಸಾಧನೆಗೆ ಅಗತ್ಯವಾದ ದೊಡ್ಡ ದೊಡ್ಡ ಉದ್ಯಮಗಳ ಒಡೆತನವೂ ಸಾಧ್ಯವಾದಷ್ಟು ಮಟ್ಟಿಗೆ ಎಲ್ಲರದೂ ಆಗಬೇಕು. ಆದಷ್ಟು ಹೆಚ್ಚು ಮಂದಿಯಿಂದ ಇದಕ್ಕೆ ಬಂಡವಾಳದ ಹಣ ಕೂಡಿ ಬರಬೇಕು. ಆಗ ಆರ್ಥಿಕ ವ್ಯವಸ್ಥೆಯಲ್ಲೂ ಪ್ರಜಾಪ್ರಭುತ್ವ ಮೂಡಿ ಬರುವುದು. ಕೂಡು ಬಂಡವಾಳ ಕಂಪೆನಿ ಸ್ವಲ್ಪಮಟ್ಟಿಗೆ ಈ ಧ್ಯೇಯವನ್ನು ಆಗಮಾಡಿಸುತ್ತದೆ.

ಸಕ್ಕರೆ ಕಾರಖಾನೆಯನ್ನು ಸ್ಥಾಪಿಸಿ ನಡೆಸಲು ಐವತ್ತು ಲಕ್ಷ ರೂಪಾಯಿ ಬೇಕಾಯಿತೆಂದು ಇಟ್ಟುಕೊಳ್ಳಿ. ಅಗತ್ಯವಾದ ಹಣವನ್ನು ಊರಿನ ಜನರಿಂದ ಪಡೆಯುವುದು ಸಾಧ್ಯ. ಬಂಡವಾಳಕ್ಕೆ ಚಂದಾ ಕೊಟ್ಟವರಿಗೆ ಹಣದ ಲಾಭ.

ಕಾರಖಾನೆಯ ಬಂಡವಾಳ ಐವತ್ತು ಲಕ್ಷ ರೂಪಾಯಿ ಆದರೆ ಅದನ್ನು ತಲಾ ನೂರು ರೂಪಾಯಿಗಳ 50,000 ಭಾಗಗಳಾಗಿ ಮಾಡಬಹುದು. (ಅಥವಾ 10 ರೂಪಾಯಿಗಳ 5,00,000 ಭಾಗಗಳಾಗಿಯೊ, 1000 ರೂಪಾಯಿಗಳ 5,000 ಭಾಗಗಳಾಗಿಯೊ, ಬೇರೆ ಯಾವ ರೀತಿಯ ಭಾಗಗಳಾಗಿಯೊ ಮಾಡಬಹುದು). ಇಂಥ ಒಂದೊಂದು ಭಾಗವೂ [illegible] ಷೇರು ಅಥವಾ ಅಂಶ. ಈ ಎಲ್ಲ ಷೇರುಗಳನ್ನೂ ಕೂಡಿಸಿದರೆ ಉದ್ಯಮದ

[illegible] ಇವರ [illegible] ಪತ್ರಗಳಿರುವ ಇಚ್ಛೆಗಳನ್ನು ಕೂಡಿಸಿ ಕಟ್ಟಿದ ಗಂಟು ಹೊರೆಯಿದ್ದ ಹಾಗೆ ಈ ಒಟ್ಟು ಬಂಡವಾಳ. ಹೀಗೆ ಒಟ್ಟು ಬಂಡವಾಳದಿಂದ ಅಥವಾ ಕೂಡು ಬಂಡವಾಳದಿಂದ ರಚಿತವಾದ ಈ ಸಂಸ್ಥೆಯೇ ಕೂಡು ಬಂಡವಾಳ ಸಂಸ್ಥೆ (ಕಂಪೆನಿ).

ಈ ಬಂಡವಾಳ ಹೇಗೆ ಬರುತ್ತದೆ ?

ಅದಕ್ಕೂ ಒಂದು ವಿಧಾನವುಂಟು.

'ನಮ್ಮದು ಇಂಥ ಕಂಪೆನಿ. ಇದರ ಹೆಸರು ಹೀಗೆ. ಉದ್ದೇಶಗಳು ಇವು. ಇದು ಇಂಥಲ್ಲಿ ಕೆಲಸ ಮಾಡುತ್ತದೆ. ಇದರ ನಿರ್ದೇಶಕರು. ಇಂಥಿಂಥವರು' ಎಂಬೆಲ್ಲ ವಿವರಗಳನ್ನೊಳಗೊಂಡ ಒಂದು ಪತ್ರವನ್ನು ಈ ಕಂಪೆನಿಯ ಸ್ಥಾಪಕರು ಸಾರ್ವಜನಿಕರಿಗೆ ನೀಡುತ್ತಾರೆ. 'ನಮ್ಮ ಕಂಪೆನಿಯ ಬಂಡವಾಳ ತಲಾ ನೂರು ರೂಪಾಯಿ ಮೌಲ್ಯದ 50,000 ಷೇರುಗಳನ್ನೊಳಗೊಂಡ ಐವತ್ತು ಲಕ್ಷ ರೂಪಾಯಿ. ಈ ಕಂಪೆನಿಯಲ್ಲಿ ಆಸಕ್ತಿಯಿರುವವರು ಒಂದು ಷೇರಿಗೆ ನೂರು ರೂಪಾಯಿಗಳಂತೆ ಕೊಡಲೊಪ್ಪಿ ತಮಗೆ ಇಂತಿಷ್ಟು ಷೇರುಗಳು ಬೇಕೆಂದು ಅರ್ಜಿ ಸಲ್ಲಿಸಬಹುದು' ಎಂದು ಪ್ರಕಟಿಸುತ್ತಾರೆ. ಈ ಷೇರುಗಳ ಹಣವನ್ನು ಎಷ್ಟು ಕಂತುಗಳಾಗಿ ಸಲ್ಲಿಸಬೇಕೆಂಬುದನ್ನು ಅವರು ಸೂಚಿಸುತ್ತಾರೆ.

ನೀವು 5,000 ರೂ. ಕೊಡಬಲ್ಲಿರಿನ್ನಿ. ಆಗ ನೀವು 50 ಷೇರುಗಳಿಗಾಗಿ ಅರ್ಜಿ ಸಲ್ಲಿಸಬಹುದು. ಕಂಪೆನಿಯ ನಿರ್ದೇಶಕರು ನಿಮ್ಮಂತೆ ಹಲವರಿಂದ ಬಂದ ಅರ್ಜಿಗಳನ್ನೆಲ್ಲ ಪರಿಶೀಲಿಸಿ ಯಾರು ಯಾರಿಗೆ ಎಷ್ಟೆಷ್ಟು ಷೇರುಗಳನ್ನು ಕೊಡಬೇಕು, ಯಾರಿಗೆ ಕೊಡಬಾರದು ಎಂಬುದನ್ನು ತೀರ್ಮಾನಿಸುತ್ತಾರೆ.

ನೀವು ಕೇಳಿದ ಐವತ್ತು ಷೇರುಗಳನ್ನೂ ನಿಮಗೆ ಅವರು ಮಂಜೂರು ಮಾಡಿದರೆ ಆಗ ನೀವು ಕಂಪೆನಿಗೆ ಒಟ್ಟು 5,000 ರೂ. ಕೊಡುತ್ತೀರಿ. ನೀವು ಆ ಕಂಪೆನಿಯ ಐವತ್ತು ಷೇರುಗಳ ಒಡೆಯರು. ಎಂದರೆ ಆ ಕಂಪೆನಿಯ ಬಂಡವಾಳದಲ್ಲಿ 50×100ರೂ. ಅಥವಾ 5,000 ರೂ. ನಿಮ್ಮದು.

ಆ ಕಂಪೆನಿಯ ಷೇರುಗಳಲ್ಲಿ ಪ್ರತಿಯೊಂದಕ್ಕೂ ಒಂದು ಸಂಖ್ಯೆಯನ್ನು ಕೊಟ್ಟಿರುತ್ತಾರೆ. ಇಷ್ಟನೆಯ ಸಂಖ್ಯೆಯಿಂದ ಇಷ್ಟನೆಯ ಸಂಖ್ಯೆಯ ಷೇರುಗಳು ನಿಮ್ಮವೆಂದು ನಿಮಗೆ ಅವರು ಒಂದು ಪತ್ರವನ್ನೂ ಕೊಡುತ್ತಾರೆ. ಅದರ ಹೆಸರು ಷೇರು ಪತ್ರ.

ಮುಂದೆ ಆ ಕಂಪೆನಿ ಲಾಭ ಗಳಿಸಿದಾಗ ಆ ಲಾಭವನ್ನು ನಿಮ್ಮಂಥ ನಾನಾ ಷೇರುದಾರರಲ್ಲಿ ಹಂಚಬಹುದು. ಕಂಪೆನಿ ಇಷ್ಟು ಲಾಭಗಳಿಸಿದೆ, ಅದರಲ್ಲಿ ಇಷ್ಟನ್ನು (ಅಥವಾ ಎಲ್ಲವನ್ನೂ) ಷೇರುದಾರರಲ್ಲಿ ಹಂಚಬಹುದು ಎಂದು ನಿರ್ದೇಶಕರು ಕಂಪೆನಿಯ ಷೇರುದಾರರಿಗೆ (ಎಂದರೆ ನಿಮ್ಮಂಥ ಸದಸ್ಯರಿಗೆ) ಶಿಫಾರಸು ಮಾಡುತ್ತಾರೆ. ಇಷ್ಟು ಲಾಭ ಹಂಚಬಹುದೆ, ಬಾರದೆ–ಎಂಬುದನ್ನು ನೀವೂ ನಿಮ್ಮ ಸಹಸದಸ್ಯರೂ ಸಭೆಯಲ್ಲಿ ಕೂತು ತೀರ್ಮಾನಿಸುತ್ತೀರಿ. (ನಿರ್ದೇಶಕರು ಸಲಹೆ ಮಾಡಿರುವುದಕ್ಕಿಂತ ಹೆಚ್ಚು ಲಾಭ ಹಂಚಬೇಕೆಂದು ನೀವು ತೀರ್ಮಾನಿಸುವಂತಿಲ್ಲ : ಜ್ಞಾಪಕವಿರಲಿ.) ಕಂಪೆನಿಯ ಷೇರುಗಳ ಮೌಲ್ಯಗಳ ಮೇಲೆ ಶೇಕಡಾ ಇಷ್ಟೆಂದು ಹಂಚುವ ಈ ಹಣಕ್ಕೆ ಡಿವಿಡೆಂಡ್ ಅಥವಾ ಲಾಭಾಂಶವೆನ್ನುತ್ತಾರೆ. ಕಂಪೆನಿ ಲಾಭ ಗಳಿಸಿದ್ದರೆ ಮಾತ್ರವೇ ಲಾಭಾಂಶ ಹಂಚಬಹುದು. ಬಂಡವಾಳದಿಂದ ಲಾಭಾಂಶ ಹಂಚಕೂಡದು. [illegible] ಕಾನೂನಿನಲ್ಲಿರುವ ವಿಧಿ.

ಒಂದು ವರ್ಷ [illegible] ಕಂಪೆನಿ ಸಾಕಷ್ಟು ಲಾಭ ಗಳಿಸದಿದ್ದು ಷೇರುಗಳ ಮೇಲೆ [illegible] ಷೇರುದಾರರಿಗೆ ನಷ್ಟವಲ್ಲವೆ ? ಅದರ ಪರಿಹಾರ

ಕಂಪೆನಿ ಹೆಚ್ಚು ಲಾಭ ಗಳಿಸಿದರೆ ಅವರಿಗೆ ಹೆಚ್ಚು ಲಾಭಾಂಶ ದೊರೆಯುವ ಸಂಭವವೂ ಉಂಟು. ಹೀಗೆ ಕಂಪೆನಿಯ ಲಾಭದ ಉತ್ಕರ್ಷಕ್ಕನುಗುಣವಾಗಿ ಲಾಭಾಂಶ ದೊರಕಿಸಿಕೊಡುವ ಷೇರುಗಳನ್ನು ಸಾಮಾನ್ಯ ಷೇರುಗಳೆನ್ನಬಹುದು.

ಕಂಪೆನಿಯ ಷೇರುಗಳಲ್ಲಿ ತಮ್ಮ ಹಣ ತೊಡಗಿಸುವ ಇನ್ನು ಕೆಲವರು ತಮ್ಮ ಷೇರುಗಳ ಮೇಲೆ ನಿಗದಿ ಮಾಡಿದಷ್ಟಾದರೂ ಲಾಭಾಂಶ ದೊರಕಬೇಕೆಂದು ಬಯಸಬಹುದು. ಷೇರುದಾರರಲ್ಲಿ ಹಂಚಬಹುದಾದಷ್ಟು ಲಾಭ ಬಂದೊಡನೆ ಇವರ ಷೇರುಗಳ ಮೇಲೆ ಶೇಕಡಾ ಇಷ್ಟು ಲಾಭಾಂಶ ನೀಡಬೇಕು; ಉಳಿದದ್ದನ್ನು (ಹಾಗೇನಾದರೂ ಉಳಿದರೆ) ಇತರ ಷೇರುಗಳ ಮೇಲೆ ಹಂಚತಕ್ಕದ್ದು. ಈ ಬಗೆಯ ಮೊದಲ ಹಕ್ಕಿರುವ ಷೇರುಗಳನ್ನೂ ಕಂಪೆನಿ ನೀಡಬಹುದು. ಇಂಥ ಷೇರುಗಳಿಗೆ ಮೊದಲ ಹಕ್ಕಿನ (ಪ್ರಿಫರೆನ್ಸ್) ಷೇರುಗಳೆನ್ನುತ್ತಾರೆ.

ಕಂಪೆನಿಯ ಷೇರುಗಳ ಒಂದು ಮುಖ್ಯ ಲಕ್ಷಣವನ್ನು ನೀವು ಈ ವೇಳೆಗೆ ಗಮನಿಸಿರಬಹುದು. ಅದು ಅವುಗಳ ಅವಿಭಾಜ್ಯತೆ.

ನಿಮ್ಮೂರಿನ ಸಕ್ಕರೆ ಕಂಪೆನಿಯ ಷೇರುಗಳನ್ನೆ ನೋಡೋಣ. ಅವುಗಳ ಮೌಲ್ಯ ತಲಾ 100 ರೂ. ಎಂದೆವಲ್ಲವೆ ? ನಿಮ್ಮ ಮನೆಗೆ ಅಂಥ 50 ಷೇರುಗಳನ್ನು ಕೊಂಡಿದ್ದೀರಿ.

ಮುಂದೆ ನಿಮಗೆ ಸ್ವಲ್ಪ ಹಣ ಬೇಕಾಯಿತು ಎಂದಿಟ್ಟುಕೊಳ್ಳಿ. 5,000 ರೂ. ಮೌಲ್ಯದ ಷೇರುಗಳಲ್ಲಿ ಕೆಲವನ್ನು ಹಿಂದಕ್ಕೆ ಕೊಟ್ಟು ಕಂಪೆನಿಯಿಂದ ಹಣ ಪಡೆಯಬಹುದೆ ?

ನಿಮ್ಮ ಷೇರುಗಳನ್ನು ಕಂಪೆನಿಗೆ ವಾಪಸು ಕೊಟ್ಟು ಹಣ ಪಡೆಯುವುದು ಸಾಧಾರಣವಾಗಿ ಸಾಧ್ಯವಿಲ್ಲ. ಅದರ ಬದಲು ನೀವು ಆ ಷೇರುಗಳನ್ನು ಪೇಟೆಯಲ್ಲಿ ಬೇರೆ ಸರಕುಗಳನ್ನು ಮಾರುವಂತೆ ಮಾರಬಹುದು. ಈ ಕಂಪೆನಿಯಲ್ಲಿ ತಮ್ಮ ಬಂಡವಾಳ ಹೂಡಿ ಲಾಭಾಂಶ ಪಡೆಯಬಯಸುವ ಯಾರಾದರೂ ನಿಮ್ಮಿಂದ ಈ ಷೇರುಗಳನ್ನು ಪಡೆಯಬಹುದು. ಕಂಪೆನಿ ಒಳ್ಳೆಯ ಪ್ರವರ್ಧಮಾನ ಸ್ಥಿತಿಯಲ್ಲಿದ್ದು, ಅದು ನೀಡುವ ಹೆಚ್ಚಿನ ಲಾಭಾಂಶ ಪಡೆಯಬಯಸುವ ಇಚ್ಛೆ ಇರುವವರ ಸಂಖ್ಯೆ ಅಧಿಕವಾಗಿದ್ದರೆ ಆಗ ಈ ಷೇರುಗಳಿಗೆ ಗಿರಾಕಿ ಹೆಚ್ಚಾಗಿರುತ್ತದೆ. ಆಗ ನೂರು ರೂಪಾಯಿ ಬೆಲೆಯ ಷೇರುಗಳಿಗೆ ಅವರು ಹೆಚ್ಚು ಬೆಲೆ ಕೊಡಲೂ ಸಿದ್ಧವಾಗಿರಬಹುದು. ಗಿರಾಕಿ ತಗ್ಗಿದ್ದರೆ ಆಗ ಅವುಗಳ ಬೆಲೆ ನೂರು ರೂಪಾಯಿಗಳಿಗೂ ಕಡಮೆ ಬೀಳಬಹುದು. ಕಂಪೆನಿಯ ಸ್ಥಿತಿ, ದೇಶದ ಆರ್ಥಿಕ ಹಾಗೂ ಹಣಕಾಸಿನ ಸ್ಥಿತಿ ಮುಂತಾದುವುಗಳಿಗೆ ಅನುಗುಣವಾಗಿ ಷೇರು ಬೆಲೆಗಳು ಏರಿ ಇಳಿಯುತ್ತಿರುತ್ತವೆ. ನೀವು ನಿಮ್ಮ ಷೇರುಗಳಲ್ಲಿ ಕೆಲವನ್ನು (ಅಥವಾ ಎಲ್ಲವನ್ನೂ) ಮಾರುವಾಗಿನ ಸ್ಥಿತಿಯಂತೆ ನಿಮ್ಮ ಷೇರುಗಳಿಗೆ ಬೆಲೆ ಸಿಕ್ಕುತ್ತದೆ. ನೀವು ಯಾರಿಗೆ ಈ ಷೇರುಗಳನ್ನು ಮಾರುತ್ತೀರೋ ಅವರ ಹೆಸರಿಗೆ ಷೇರುಗಳು ವರ್ಗವಾಗುತ್ತವೆ. ನಿಮ್ಮ ಷೇರು ಪತ್ರವನ್ನು ಕಂಪೆನಿಯವರು ಹಿಂದಕ್ಕೆ ತೆಗೆದುಕೊಂಡು, ಕಂಪೆನಿಯ ಪುಸ್ತಕಗಳಲ್ಲಿ ಈ ವರ್ಗಾವಣೆ ದಾಖಲು ಮಾಡುತ್ತಾರೆ. ಅವರು ಕೊಂಡ ಷೇರುಗಳಿಗೆ ಕಂಪೆನಿಯವರು ಅವರಿಗೆ ಬೇರೆ ಷೇರು ಪತ್ರಗಳನ್ನು ಕೊಡುತ್ತಾರೆ. ನಿಮ್ಮಲ್ಲಿ ಉಳಿಯುವ ಷೇರುಗಳಿಗೆ ನಿಮಗೆ ಪ್ರತ್ಯೇಕ ಪತ್ರ ಕೊಡುತ್ತಾರೆ.

ನನ್ನ ಷೇರುಗಳಲ್ಲಿ ಕೆಲವನ್ನು ಮಾರಿ ಉಳಿದವನ್ನು [illegible] ಇಟ್ಟುಕೊಳ್ಳಬಹುದಾದಂತೆ, ಒಂದೇ ಷೇರಿನಲ್ಲಿ ಅರ್ಧವನ್ನು ಮಾರಿ ಉಳಿದರ್ಧವನ್ನು ಇಟ್ಟುಕೊಳ್ಳಬಹುದೆ ?

ಇದು ಸಾಧ್ಯವಿಲ್ಲ. ಷೇರುಗಳನ್ನು ತುಂಡು ಮಾಡುವಂತಿಲ್ಲ. ಮಾರುವುದಾದರೆ ನೀವು ಇಡಿಯ ಷೇರನ್ನೇ ಮಾರಬೇಕು.

ಕೆಲವು ದೇಶಗಳಲ್ಲಿ (ಉದಾಹರಣೆ: ಅಮೆರಿಕ ಸಂಯುಕ್ತ ಸಂಸ್ಥಾನ) ಕಂಪೆನಿಯ ಸದಸ್ಯರು ಹಾಕಿರುವ ಬಂಡವಾಳದ ಯಾವ ಭಾಗವನ್ನಾದರೂ ಇನ್ನೊಬ್ಬರಿಗೆ ಮಾರಲು ಬರುತ್ತದೆ. ಈ ಸೌಲಭ್ಯವಿರುವ ಬಂಡವಾಳ ಭಾಗಗಳಿಗೆ ಸ್ಟಾಕ್ ಅಥವಾ ಸ್ಕಂಧ ಎನ್ನುತ್ತಾರೆ. ಅವನ್ನು ಎಷ್ಟೆಂದರೆ ಅಷ್ಟು ಕೊಳ್ಳಬಹುದು, ಮಾರಬಹುದು. ಷೇರು ಒಂದು ಮನೆಯ ಗೋಡೆಯ ಇಟ್ಟಿಗೆಯಿದ್ದ ಹಾಗೆ. ಸ್ಟಾಕು ಮಣ್ಣಿನ ಗೋಡೆಯ ಮಣ್ಣಿದ್ದ ಹಾಗೆ.

ಒಂದು ಕಂಪೆನಿಗೆ ಅಗತ್ಯವಾದ ಬಂಡವಾಳವನ್ನು ಸ್ಟಾಕ್ ಮತ್ತು ಷೇರುಗಳ ಮೂಲಕವೇ ಅಲ್ಲದೆ ಸಾಲದ ಮೂಲಕವೂ ಪಡೆಯಬಹುದು. ಷೇರು ಮತ್ತು ಸ್ಟಾಕುಗಳ ರೂಪದಲ್ಲಿ ಬಂದ ಬಂಡವಾಳ ಸಾಲದಾದಾಗ ಸಾರ್ವಜನಿಕರಿಂದ ಚಂದಾರೂಪದಲ್ಲಿ ಮತ್ತಷ್ಟು ಷೇರು ಬಂಡವಾಳಕ್ಕೆ ಹಣ ಪಡೆಯಬಹುದು; ಇಲ್ಲವೆ ಅವರಿಂದ ಸಾಲ ಅಥವಾ ಋಣ ಪಡೆಯಬಹುದು. ಇದನ್ನು ಕೂಡ ಷೇರುಗಳಂತೆ ತುಂಡುಗಳಾಗಿ ಮಾಡಿರುತ್ತಾರೆ. ಇವುಗಳಿಗೆ ಚಂದಾ ನೀಡಿದವರಿಗೆ ಕಂಪೆನಿ ಕೊಡುವ ಪತ್ರವನ್ನು ಋಣಪತ್ರ ಅಥವಾ ಡಿಬೆಂಚರ್ ಬಾಂಡ್ ಎನ್ನುತ್ತಾರೆ. ಷೇರುಗಳಂತೆ ಡಿಬೆಂಚರುಗಳನ್ನೂ ಪೇಟೆಯಲ್ಲಿ ಮಾರಬಹುದು, ಕೊಳ್ಳಬಹುದು.

ಷೇರುಗಳಿಗೂ ಡಿಬೆಂಚರುಗಳಿಗೂ ಅನೇಕ ವ್ಯತ್ಯಾಸಗಳುಂಟು. ಷೇರುಗಳು ಕಂಪೆನಿಯ ಬಂಡವಾಳದ ಭಾಗಗಳು. ಷೇರುದಾರರು ಕಂಪೆನಿಯ ಸದಸ್ಯರು, ಒಡೆಯರು. ಡಿಬೆಂಚರುಗಳು ಸಾಲಪತ್ರಗಳು. ಡಿಬೆಂಚರುದಾರರಿಗೆ ಕಂಪೆನಿ ಋಣಿ. ಷೇರುಗಳ ಮೇಲೆ ಕಂಪೆನಿಯ ಲಾಭವನ್ನು ಹಂಚುತ್ತಾರೆ. ಕಂಪೆನಿ ಲಾಭಗಳಿಸದಿದ್ದರೆ ಷೇರುದಾರರಿಗೆ ಏನೂ ದೊರಕುವುದಿಲ್ಲ. ಕಂಪೆನಿ ಲಾಭ ಗಳಿಸಲಿ, ಬಿಡಲಿ, ಡಿಬೆಂಚರುಗಳ ಮೇಲೆ ಗೊತ್ತಾದ ದರದಲ್ಲಿ ಬಡ್ಡಿ ಕೊಡಬೇಕು. ಕಂಪೆನಿಯನ್ನು ಮುಕ್ತಾಯಗೊಳಿಸಿದಾಗ ಅದರ ಆಸ್ತಿಯಿಂದ ಎಲ್ಲ ಸಾಲಗಳನ್ನೂ ತೀರಿಸಿದ ಮೇಲೆ ಉಳಿದ ಹಣವನ್ನು ಅದರ ಷೇರುದಾರರಿಗೆ ಹಂಚಲಾಗುತ್ತದೆ. ಡಿಬೆಂಚರುದಾರರು ಸಾಲಿಗರಾದ್ದರಿಂದ ಅವರಿಗೆ ಷೇರುದಾರರಿಗಿಂತ ಮೊದಲು ಹಣ ಸಂದಾಯವಾಗಬೇಕು. ಕಂಪೆನಿಯನ್ನು ಮುಕ್ತಾಯ ಮಾಡದೆ ಷೇರುದಾರರಿಗೆ ಅವರ ಹಣ ಕಂಪೆನಿಯಿಂದ ದೊರಕುವ ಸಂಭವವಿಲ್ಲ. ಡಿಬೆಂಚರಿನ ಹಣವನ್ನು ಸಾಮಾನ್ಯವಾಗಿ ಅದರ ಅವಧಿ ಮುಗಿದೊಡನೆಯೇ ಷರತ್ತಿನಂತೆ ಹಿಂದಿರುಗಿಸಬೇಕು.

ಷೇರು, ಸ್ಟಾಕ್, ಡಿಬೆಂಚರುಗಳನ್ನು ಒಂದು ಕಂಪೆನಿ ಸಾರ್ವಜನಿಕರಿಗೆ ನೀಡಿದಾಗ ಅವನ್ನು ನೇರವಾಗಿ ಅಥವಾ ಅವನ್ನು ಮಾರಲು ನೇಮಕವಾದ ಪ್ರತಿನಿಧಿಗಳ ಮೂಲಕ ಅರ್ಜಿ ಹಾಕಿ ಪಡೆಯಬಹುದು. ಹೀಗೆ ಇವನ್ನೆಲ್ಲ ನೀಡಿ ಆದಮೇಲೆ ಇವನ್ನು ಒಬ್ಬರು ಇನ್ನೊಬ್ಬರಿಗೆ ಬಂಡವಾಳ ಪೇಟೆಯಲ್ಲಿ ಮಾರಬಹುದು—ಎಂದು ಹೇಳಲಾಯಿತಷ್ಟೆ. ಇವುಗಳ ಬೆಲೆಯನ್ನು ಪ್ರಕಟಿಸುವ, ಇವುಗಳ ಮಾರಾಟ-ಕೊಳ್ಳಿಕೆ ನಡೆಸುವ ಸಂಸ್ಥೆಯೊಂದುಂಟು. ಅದರ ಹೆಸರು ಸ್ಟಾಕ್ ಎಕ್ಸ್‌ಚೇಂಜ್ ಅಥವಾ ಬಂಡವಾಳ ಪತ್ರವಿನಿಮಯ ಕೇಂದ್ರ. ಇವುಗಳಲ್ಲಿ ಅಧಿಕೃತವಾಗಿ ವ್ಯವಹಾರ ನಡೆಸುವ ದಳ್ಳಾಳಿಗಳ ಮೂಲಕ ಈ ಬಂಡವಾಳ ಪತ್ರಗಳನ್ನು ಮಾರಬಹುದು ಅಥವಾ ಕೊಳ್ಳಬಹುದು. ನೀವು ಇವನ್ನು ಮಾರುವುದಾದರೆ ಒಂದು ಬೆಲೆ, ಕೊಳ್ಳುವುದಾದರೆ ಇನ್ನೊಂದು ಬೆಲೆ. ಈ ಎರಡು ಬೆಲೆಗಳಿಗೂ ಅಲ್ಪ ವ್ಯತ್ಯಾಸ ಇರುತ್ತದೆ. ಸ್ಟಾಕ್ ಎಕ್ಸ್‌ಚೇಂಜಿನಲ್ಲಿ ವ್ಯವಹಾರ ಸಸೂತ್ರವಾಗಿ ನಿಯಮಬದ್ಧವಾಗಿ ನಡೆಯುವಂತೆ ನಾನಾ ನಿಬಂಧನೆಗಳಿರುತ್ತವೆ. ಇದರ ಆಡಳಿತ ಹಾಗೂ ನಿಯಂತ್ರಣಕ್ಕೆ ಒಂದು ಸಮಿತಿ ಇರುತ್ತದೆ. ದೊಡ್ಡ ದೊಡ್ಡ ನಗರಗಳಲ್ಲಿ ಈ ವಿನಿಮಯ ಕೇಂದ್ರಗಳಿವೆ.

ಆಧುನಿಕ ಯುಗದ ಬೃಹತ್ ಉದ್ಯಮಗಳಿಗೆ ಅಗಾಧ ಪ್ರಮಾಣದ ಬಂಡವಾಳವನ್ನು ಸಸೂತ್ರವಾಗಿ ಒದಗಿಸುವುದು ಈ ವ್ಯವಸ್ಥೆಯಿಂದ ಸಾಧ್ಯವಾಗಿದೆ.

ನೋಡಿ : ವ್ಯವಹಾರದ ಆಡಳಿತ. ನಿರ್ವಹಣೆ

## ಸ್ವದೇಶಿ, ವಿದೇಶಿ

ಸ್ವದೇಶಿ ಎಂದರೆ ನಮ್ಮ ದೇಶದ್ದು. ಈ ಪದದ ವಿಶಿಷ್ಟ ಪ್ರಯೋಗ ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ನಡೆಯಿತು. ಮಹಾತ್ಮ ಗಾಂಧಿಯವರು, ನಮ್ಮ ದೇಶದ್ದಲ್ಲದ ವಿದೇಶಿ ವಸ್ತುಗಳನ್ನು ಬಹಿಷ್ಕರಿಸಿ ಸ್ವದೇಶಿಯನ್ನು ಬಳಸಲು ಕರೆನೀಡಿದರು. ವಿದೇಶಿ ವಸ್ತುಗಳನ್ನು ಬಹಿರಂಗವಾಗಿ ಸುಡುವ ಕಾರ್ಯಕ್ರಮ ಆಗ ನಡೆಯಿತು.

ನಮ್ಮ ದೇಶದಲ್ಲಿ ಈಗ ತಯಾರಾಗುತ್ತಿರುವ ವಿಷ್ಟೋ ಪದಾರ್ಥಗಳು ಹಿಂದೆ ತಯಾರಾಗುತ್ತಿರಲಿಲ್ಲ. ಅವುಗಳ ತಯಾರಿಕೆಗೆ ಬ್ರಿಟಿಷ್ ಸರಕಾರ ಆಸ್ಪದ ನೀಡುತ್ತಿರಲಿಲ್ಲ. ಅವನ್ನು ಪರದೇಶದಿಂದ ತರಿಸಿಕೊಳ್ಳುತ್ತಿದ್ದೆವು. ಕಚ್ಚಾಮಾಲು ಹತ್ತಿ ನಮ್ಮಲ್ಲಿದ್ದರೂ ಅದು ಇಂಗ್ಲೆಂಡಿಗೆ ಹೋಗಿ, ಬಟ್ಟೆಯಾಗಿ ಅನಂತರ ಭಾರತಕ್ಕೆ ಬರುತ್ತಿತ್ತು. ಇದರಿಂದ ಅಪಾರ ಹಣ ವೆಚ್ಚವಾಗುತ್ತಿತ್ತು. ನಮ್ಮ ದೇಶದ ಸಂಪತ್ತೆಲ್ಲ ಪರದೇಶದ ಭಂಡಾರಗಳನ್ನು ತುಂಬುತ್ತಿತ್ತು. ಮಹಾತ್ಮರು ವಿದೇಶಿ ಆಡಳಿತಗಾರರ ಕುಹಕವನ್ನು ಮನಗಂಡರು. ನಮಗೆ ಅಗತ್ಯವಾದ ಪದಾರ್ಥಗಳನ್ನು ಸಾಧ್ಯವಾದಷ್ಟು ಮಟ್ಟಿಗೂ ನಾವೇ ತಯಾರಿಸಿಕೊಳ್ಳಬೇಕು ಎಂದರು : ಸ್ವಾವಲಂಬನವನ್ನು ಬೋಧಿಸಿದರು.

ಗಾಂಧಿಜಿಯವರ ಕಾಲದಲ್ಲಿ ನಮ್ಮ ದೇಶದಲ್ಲಿ ಫೌಂಟನ್‌ಪೆನ್ ತಯಾರಾಗುತ್ತಿರಲಿಲ್ಲ. ಶಾಯಿ ಸಹ ಒಳ್ಳೆಯದು ದೊರಕುತ್ತಿರಲಿಲ್ಲ. ನೂರಾರು ಲೇಖನ ಮತ್ತು ಪತ್ರಗಳನ್ನು ಗಾಂಧಿಜಿ ಪ್ರತಿನಿತ್ಯವೂ ಬರೆಯಬೇಕಾಗಿತ್ತು. ಪೆನ್ನಿಗೆ ಏನು ಮಾಡುವುದು? ಪ್ರಾಚೀನ ಭಾರತೀಯರು ಏನನ್ನು ಉಪಯೋಗಿಸುತ್ತಿದ್ದರು ಎಂಬುದನ್ನು ತಿಳಿದುಕೊಂಡು ಅವರಂತೆಯೇ ಕೋಳಿಯ ಗರಿಯ ಲೇಖನಿ, ಅಳಲೆಕಾಯಿಯ ಮಸಿಯನ್ನು ಬಳಸಲಾರಂಭಿಸಿದರು. ನಮ್ಮ ದೇಶದಲ್ಲಿ ಗುಂಡುಸೂಜಿಯ ತಯಾರಿಕೆ ಆರಂಭವಾಗಿರಲಿಲ್ಲ. ಗಾಂಧಿಜಿಯವರು ಗೊಬ್ಬಳಿ ಮುಳ್ಳುಗಳನ್ನು ಉಪಯೋಗಿಸುತ್ತಿದ್ದರು. ಸಕ್ಕರೆಯ ಬದಲು ಬೆಲ್ಲ, ತಾಟಿಬೆಲ್ಲ ಸಾಕು ಎಂದರು. ಆಗ ಈಗಿನಂತೆ ಇಲ್ಲಿಯೇ ಸಿದ್ಧವಾದ ಹಲ್ಲುಪುಡಿ ದೊರೆಯುತ್ತಿರಲಿಲ್ಲ. 'ಟೂತ್‌ಪೇಸ್ಟ್' ಆಗ ವಿದೇಶಿಮಾಲು. ಹೀಗಾಗಿ ಗಾಂಧಿಜಿ ಬೇವಿನಕಡ್ಡಿ, ಸುಟ್ಟ ಬಾದಾಮಿ ತೊಗಟೆಯ ಪುಡಿ – ಇವುಗಳಿಂದ ಹಲ್ಲನ್ನು ಉಜ್ಜುತ್ತಿದ್ದರು.

ಖಾದಿ ಬಟ್ಟೆ ಸಂಪೂರ್ಣ ಸ್ವದೇಶಿ ಮಾಲು. ಚರಕದಿಂದ ಸ್ವತಃ ನೂಲನ್ನು ತೆಗೆದು ಮಗ್ಗದಿಂದ ನೆಯ್ದು ಖಾದಿ ಬಟ್ಟೆಯನ್ನೇ ಗಾಂಧಿಜಿ ತೊಡುತ್ತಿದ್ದರು. ಪರದೇಶಿ ವಸ್ತ್ರಗಳನ್ನು ಅವರು ಮುಟ್ಟುತ್ತಿರಲಿಲ್ಲ. ದಕ್ಷಿಣ ಆಫ್ರಿಕದ ಮುಖ್ಯಮಂತ್ರಿ ಆಗಿದ್ದ ಜನರಲ್ ಸ್ಮಟ್ಸರಿಗೆ ತಾವೇ ಹೊಲಿದಿದ್ದ

ಸ್ವದೇಶಿ ಚಪ್ಪಲಿಗಳನ್ನು ಕೊಡುಗೆಯಾಗಿ ಗಾಂಧಿಜಿ ಕೊಟ್ಟರು. ಅವನ್ನು ಮುಟ್ಟುವ ಯೋಗ್ಯತೆ ತನಗಿಲ್ಲವೆಂದು ಆ ಜೋಡುಗಳನ್ನು ಕಾಯ್ದಿರಿಸಿದ ಸ್ಮಟ್ಸ್ ಅವರು. ಗಾಂಧಿಜಿಯ ಮರಣಾನಂತರ ಅವನ್ನು ಭಾರತಕ್ಕೆ ಕಾಣಿಕೆಯಾಗಿ ಹಿಂದಿರುಗಿಸಿದರು.

ಸ್ವದೇಶಿ ಚಳುವಳಿಯು ಭಾರತ ಸ್ವಾತಂತ್ರ್ಯಕ್ಕೆ ದಾರಿ ಮಾಡಿಕೊಟ್ಟಿತು. ಸ್ವದೇಶಿ ವ್ರತವನ್ನು ತಾಳುವುದರಿಂದ ಪರದೇಶಗಳ ಬಗೆಗೆ ತಾತ್ಸಾರ ತೋರ ಬೇಕೆಂಬ ಭಾವನೆಯಿಲ್ಲ. ಆದರೆ ನಮ್ಮ ದೇಶದ ಹಣ ಹೊರಕ್ಕೆ ಹರಿದರೆ ನಮ್ಮ ಜನ ಉಪವಾಸವಿರಬೇಕಾಗುತ್ತದೆ. ಗಾಂಧಿಜಿಯವರ ನೇತೃತ್ವದಲ್ಲಿ ನಡೆದ ಸ್ವದೇಶಿ ಚಳುವಳಿಯಿಂದ ದೇಶಾಭಿಮಾನ ಕುದುರಿತು.

ಸ್ವದೇಶಿ ವಿದೇಶಿ ಇವು ವಿರುದ್ಧಾರ್ಥ ಶಬ್ದಗಳು. ಸ್ವದೇಶಕ್ಕೆ ಸಂಬಂಧಿಸಿದುದೆಲ್ಲ ಸ್ವದೇಶಿ. ಸ್ವದೇಶಕ್ಕೆ ಸಂಬಂಧವಿಲ್ಲದುದೆಲ್ಲ ವಿದೇಶಿ. ಅಂದರೆ, ನಮ್ಮದಲ್ಲದ್ದು – ಪರದೇಶಕ್ಕೆ ಸೇರಿದ್ದು. ಅದು ವಸ್ತುವಾಗ ಬಹುದು, ಜನರಾಗಬಹುದು, ನೆಲವಾಗಬಹುದು, ನಾಡಾಗಬಹುದು.

ಸ್ವದೇಶಿ ವಿದೇಶಿ ಭಾವನೆ ಭಾರತೀಯರಲ್ಲಿ ಮೂಡಿದ್ದು ಭಾರತ ವಿದೇಶಿಯರ ದಬ್ಬಾಳಿಕೆಯಲ್ಲಿ 150 ವರ್ಷ ಕಾಲ ತೀವ್ರರೂಪದಲ್ಲಿ ನರಳಿದ್ದರಿಂದ.

ಈಗ ಭಾರತದಲ್ಲಿ ಸ್ವದೇಶಿ ವಸ್ತುಗಳು ಸಾಕಷ್ಟು ನಿರ್ಮಾಣವಾಗುತ್ತಿವೆ. ಭಾರತೀಯರು ತಯಾರಿಸಿದ ಅನೇಕ ವಸ್ತುಗಳಿಗೆ ವಿದೇಶಗಳ ಪೇಟೆಯಲ್ಲಿ ಬೇಡಿಕೆಯೂ ಇದೆ.

ಸ್ವದೇಶಿ–ವಿದೇಶಿ ವಸ್ತುಗಳ ಬಳಕೆ ವಿದೇಶೀ ವಿನಿಮಯದ ಮೇಲೂ ಪ್ರಭಾವ ಬೀರುತ್ತದೆ. ಇಂದಿನ ಜಗತ್ತಿನಲ್ಲಿ ಪ್ರತಿದೇಶ ತನ್ನ ಕಚ್ಚಾ ಸಾಮಾನುಗಳು ಮತ್ತು ಸಂಪನ್ಮೂಲಗಳ ಪೂರ್ಣ ಲಾಭವನ್ನು ಪಡೆಯ ಬೇಕು : ರಫ್ತನ್ನು ಹೆಚ್ಚು ಮಾಡಲು ಮತ್ತು ಆಮದನ್ನು ಕಡಮೆ ಮಾಡಲು ಪ್ರಯತ್ನಿಸಬೇಕು. ಇದು ಆರ್ಥಿಕ ಸ್ವಾವಲಂಬನವನ್ನು ಸಾಧಿಸಲು ಅಗತ್ಯ.

ನೋಡಿ : ಆಮದು, ರಫ್ತು : ವಿದೇಶೀ ವಿನಿಮಯ

## ಸ್ವಯಂಚಾಲಿತ ವಾಹನ

ಎತ್ತಿನ ಬಂಡಿ, ಜಟಕಾಗಾಡಿ ಇಂಥ ವಾಹನಗಳನ್ನು ಓಡಿಸಲು ಎತ್ತು, ಕುದುರೆ ಬೇಕು. ಕಾರು, ಬಸ್ಸು, ಸ್ಕೂಟರ್‌ಗಳನ್ನು ಎಳೆಯಲು ಪ್ರಾಣಿ ಗಳ ಸಹಾಯ ಬೇಕಿಲ್ಲ. ಇಂಧನವಿದ್ದರೆ ಇವು ತಾವೇ ಚಲಿಸಬಲ್ಲುವು. ಇವು ಸ್ವಯಂಚಾಲಿತಯಂತ್ರಗಳು–ತಾವೇ ಓಡುವ ಯಂತ್ರಗಳು.

ಇವುಗಳ ಬಳಕೆಗೆ ಕೊನೆಮೊದಲಿಲ್ಲ. ಊರುಗಳಲ್ಲಿ ಓಡಾಡಲು ಊರಿಂದ ಊರಿಗೆ ಓಡಾಡಲು ಬಸ್ ಬೇಕು. ಆಸ್ಪತ್ರೆಗೆ ರೋಗಿಗಳು ಹೋಗಲು ಆಂಬ್ಯುಲೆನ್ಸ್ ಬೇಕು. ಉಳಲು ಟ್ರ್ಯಾಕ್ಟರುಗಳು ಬೇಕು. ಹಳ್ಳ ದಿಬ್ಬ ಪ್ರದೇಶದಲ್ಲಿ ಪ್ರಯಾಣ ಮಾಡಲು ಜೀಪ್ ಬೇಕು. ರಣರಂಗದಲ್ಲಿ ಟ್ಯಾಂಕ್ ಇರಲೇಬೇಕು; ಹಾಗೆಯೆ ಭಾರವಾದ ಫಿರಂಗಿ ಗಳನ್ನು ಹೊತ್ತು ಓಡಾಡಲು ವಾಹನಗಳಿರಬೇಕು. ಎಲ್ಲಿಯಾದರೂ ಬೆಂಕಿ ಹತ್ತಿದರೆ ಅಗ್ನಿಶಾಮಕದಳದವರು ಬರಲೂ ಇಂಥ ವಾಹನಗಳು ಬೇಕು. ಸ್ವತಃ ಚಲಿಸುವ ಶಕ್ತಿಯುಳ್ಳ, ಚಕ್ರಗಳುಳ್ಳ, ಹೆದ್ದಾರಿಯಲ್ಲಿ ಪ್ರಯಾಣಿಕರನ್ನೂ ಸಾಮಾನುಗಳನ್ನೂ ಸಾಗಿಸಬಲ್ಲ ವಾಹನ ಸ್ವಯಂ ಚಾಲಿತ ವಾಹನ.

ಪಾಶ್ಚಾತ್ಯ ದೇಶಗಳಲ್ಲಿ ಸ್ವಯಂಚಾಲಿತ ಯಂತ್ರದ ಉತ್ಪಾದನೆಯೂ ಬಳಕೆಯೂ ಹೆಚ್ಚು. ಅಮೆರಿಕದ ಸಂಯುಕ್ತ ಸಂಸ್ಥಾನವನ್ನು 'ಚಕ್ರಗಳ ಮೇಲುರುಳುವ ದೇಶ' ಎಂದೇ ಕರೆಯುತ್ತಾರೆ. ಇಲ್ಲಿ ಸಾಮಾನ್ಯ ಪ್ರಜೆಯ ದಿನನಿತ್ಯದ ಪ್ರತಿ ಚಟುವಟಿಕೆಗೆ ಮೋಟಾರುಕಾರು ಆಹಾರದಷ್ಟೇ ಅಗತ್ಯ. (97 ಕಿಲೊಮಿಟರುಗಳಿಗೂ ಮೀರಿದ ವೇಗದಲ್ಲಿ ಕಡ್ಡಾಯವಾಗಿ ಓಡಿಸಬೇಕೆಂದು ಪ್ರತ್ಯೇಕ ಹೆದ್ದಾರಿಗಳನ್ನು ರಚಿಸಿದ್ದಾರೆ). ಕಾರನ್ನು ಉಪಾಹಾರ ಗೃಹದೊಳಗೆ ನಡೆಸಿ ಕಾರಿನೊಳಗೇ ಕುಳಿತು ಉಪಾಹಾರ ಸವಿಯಬಹುದು. ಇದೇ ರೀತಿ ಕಾರಿನಲ್ಲಿ ಕುಳಿತೇ ಬಯಲು ಚಿತ್ರ ಮಂದಿರಗಳಲ್ಲಿ ಚಲನಚಿತ್ರ ವೀಕ್ಷಿಸಬಹುದು. ಸಣ್ಣ ಕೋಣೆಯಂತೆ ಮಾರ್ಪಡಿಸಬಹುದಾದ ಟ್ರೈಲರ್ ಕಾರುಗಳಲ್ಲಿ ಇಡೀ ಸಂಸಾರ ಅನೇಕ ದಿನಗಳು ವಿಹಾರಗಳಿಗೆ ಹೋಗುವುದುಂಟು. ಹೀಗೆ ಸ್ವಯಂಚಾಲಿತ ವಾಹನಗಳು ಅಲ್ಲಿನ ನಾಗರಿಕ ಜೀವನದಲ್ಲಿ ಹಾಸುಹೊಕ್ಕಾಗಿವೆ. ಎಲ್ಲ ದೇಶಗಳಿಗೂ ಇಂದು ಸ್ವಯಂಚಾಲಿತ ವಾಹನಗಳು ಅಗತ್ಯವೆನಿಸಿವೆ. ಇವುಗಳಿಲ್ಲದೆ ಹೋದರೆ ಸಂಪರ್ಕ, ಸಾರಿಗೆಗಳು ಬಹುಮಟ್ಟಿಗೆ ಕಡಮೆಯಾಗಿ ಜನಜೀವನ ಕಷ್ಟಕರವಾಗಬಹುದು.

ಸ್ವಯಂಚಾಲಿತ ವಾಹನ ಮೊಟ್ಟಮೊದಲಿಗೆ 1769ರಲ್ಲಿ ಮೂರು ಚಕ್ರಗಳ ಮೇಲೆ ಉರುಳುವ ಗಾಡಿಯರೂಪದಲ್ಲಿ ಆರಂಭವಾಯಿತು. ಇದಕ್ಕೆ ಅಂತರ್ದಹನ ಎಂಜಿನಿನಿಂದ ಚಲನಶಕ್ತಿ ಒದಗಿತು. ಯಾವುದೇ ಇಂಧನ ಎಂಜಿನಿನೊಳಗೆ ಸ್ಫೋಟಗೊಂಡಾಗ ಚಲನಶಕ್ತಿ ಹುಟ್ಟುತ್ತದೆ. ಈ ಯಂತ್ರವನ್ನು ರಚಿಸಿದವನು ಫ್ರಾನ್ಸಿನ ಪ್ರಜೆ ನಿಕೊಲಾಸ್ ಜೊಸೆಫ್ ಕೂನ್ಯೋ. ಗಾಡಿಯ ವೇಗ ಗಂಟೆಗೆ 6.4 ಕಿಲೊಮಿಟರು. ರಿಚರ್ಡ್ ಟ್ರೆವಿಥಿಕ್ ಎಂಬುವನು ಇದೇ ವಿಧದ ಎಂಜಿನಿನಿಂದ 1801ರಲ್ಲಿ ಮತ್ತೊಂದು ಗಾಡಿಯನ್ನು ತಯಾರಿಸಿದ. ಮುಂದೆ 1828ರಲ್ಲಿ ಲಂಡನ್ನಿನಿಂದ ಬಾತ್‌ವರೆಗೆ ಹದಿನೆಂಟು ಜನ ಪ್ರಯಾಣಿಕರನ್ನು ಹೊರುವ ಗಾಡಿ 322 ಕಿಲೊ ಮಿಟರುಗಳನ್ನು ಗಂಟೆಗೆ 42 ಕಿ. ಮಿ. ವೇಗದಲ್ಲಿ ಕ್ರಮಿಸಿತು. ಹೀಗೆ ಬರುಬರುತ್ತಾ ಉಗಿಬಂಡಿ ನಿಯತಕಾಲದಲ್ಲಿ ಪ್ರಯಾಣಿಕರನ್ನು ಸಾಗಿಸಲು ಆರಂಭಿಸಿತು.

ಇಂಗ್ಲೆಂಡಿನಲ್ಲಿ ಶುಲ್ಕ ಪಡೆದು ಪ್ರಯಾಣಿಕರನ್ನು ಸಾಗಿಸಿದ್ದು ಪ್ರಾಯಶಃ 1830ರಲ್ಲಿ. ವಾಲ್ಟರ್ ಹ್ಯಾನ್‌ಕಾಕ್ ಎಂಬವನು ಇಂಥ ವ್ಯವಸ್ಥೆಯನ್ನು ಮಾಡಿದ್ದ. ಈ ಘಟ್ಟದಲ್ಲಿ ರೈಲುಗಾಡಿ ಮತ್ತು ಕುದುರೆಗಾಡಿಗಳ ಮಾಲಿಕರು ತಮ್ಮ ವ್ಯಾಪಾರ ತಗ್ಗುವುದೆಂದು ಸ್ವಯಂಚಾಲಿತ ವಾಹನಗಳಿಗೆ ಬಹಿಷ್ಕಾರ ಹಾಕಿದರು. ಸಣ್ಣ ಅಪಘಾತಗಳಿಗೂ ಸ್ವಯಂಚಾಲಿತ ವಾಹನದ ಚಾಲಕ ನಿಗೆ ಶಿಕ್ಷೆ ವಿಧಿಸಲಾಗುತ್ತಿದ್ದಿತು. ಇದು 6.4 ಕಿ. ಮಿ. ಗಳಿಗಿಂತ ಹೆಚ್ಚು ವೇಗದಲ್ಲಿ ಓಡಕೂಡದೆಂದೂ ಅದಕ್ಕೆ ಮುಂಚಿತವಾಗಿ ಮನುಷ್ಯನೊಬ್ಬ ಕೆಂಪುಬಾವುಟ ಇಲ್ಲವೆ ರಾತ್ರಿಯವೇಳೆ ಕೆಂಪುದೀಪ ಹಿಡಿದು ಸಾಗಬೇಕೆಂದೂ ಇಂಗ್ಲೆಂಡಿನಲ್ಲಿ ಆಜ್ಞೆ ಹೊರಟಿತು. ಅಗಾಧ ಶಬ್ದದಿಂದ ಮಕ್ಕಳಿಗೂ ಪ್ರಾಣಿಗಳಿಗೂ ಭಯವಾಗುತ್ತದೆಂದು ಜನರು ಸ್ವಯಂಚಾಲಿತ ಯಂತ್ರ ವನ್ನು ವಿರೋಧಿಸಿದರು. ಜರ್ಮನಿಯ ನಿಕೊಲಸ್ ಆಟೋ ಎಂಬವನು 1876ರಲ್ಲಿ ನಾಲ್ಕು ಆಂದೋಲನ ಕಾಲದ ಎಂಜಿನನ್ನು ತಯಾರಿಸಿದ. 1886ರಲ್ಲಿ ಆಟೋ ತಯಾರಿಸಿದ ಎಂಜಿನಿಗೆ ಪೆಟ್ರೋಲ್ ಇಂಧನ ಬಳಕೆಯಾ ಯಿತು. ಅಂದಿನಿಂದ ಕಾರುಗಳ ಸಾಮಾನ್ಯ ಬಳಕೆ ಜಾರಿಗೆಬಂದಿತು.

ಪ್ರಪಂಚದ ಮೊಟ್ಟಮೊದಲ ಕಾರು ಸ್ಪರ್ಧೆ ನಡೆದದ್ದು 1894ರಲ್ಲಿ ಪ್ಯಾರಿಸ್ ಹಾಗೂ ರ್‍ಯಾಯೂನ್‌ಗಳ ಮಧ್ಯೆ. ಈ ಸಂದರ್ಭದಲ್ಲಿ ಪ್ಯಾರಿಸ್–

ಮಾರ್ಸೇಲ್ ನಡುವಣ 1733 ಕಿ. ಮೀ. ಗಳ ದೂರವನ್ನು 26 ಕಿ. ಮೀ. ವೇಗದಲ್ಲಿ ಕ್ರಮಿಸಿದ ಕಾರು ಪ್ರಶಸ್ತಿಗಳಿಸಿತು. ಇಪ್ಪತ್ತನೆಯ ಶತಮಾನದ ಪ್ರಾರಂಭದ ವೇಳೆಗೆ ಕಾರುಗಳಿಗೆ ಒಂದು ನಿರ್ದಿಷ್ಟ ಆಕಾರ, ಯೋಜನೆ ಮತ್ತು ಚಹರೆಗಳನ್ನು ನಿಗದಿಗೊಳಿಸಲಾಯಿತು. ಅಷ್ಟು ಹೊತ್ತಿಗೆ ಅಮೆರಿಕದ ಸಂಯುಕ್ತ ಸಂಸ್ಥಾನದಲ್ಲೂ ಕಾರುಗಳ ಉತ್ಪಾದನೆ ಅಲ್ಲಲ್ಲಿ ಆರಂಭವಾಯಿತು. ಬೇರೆ ಬೇರೆ ಹೆಸರುಗಳ ಕಾರು ಉತ್ಪಾದನಾ ಸಂಸ್ಥೆಗಳು ಹುಟ್ಟಿದುವು. ಸಾವಿರಾರು ಕಾರುಗಳು ಈ ಸಂಸ್ಥೆಗಳಿಂದ ಹೊರಬಿದ್ದುವು. ಫೋರ್ಡ್, ಓಲ್ಡ್ಸ್‌ಮೊಬೈಲ್, ರೋಲ್ಸ್‌ರಾಯ್ಸ್, ಸ್ಟಾಂಡರ್ಡ್ ಹೀಗೆ ಅನೇಕ ಪ್ರತಿಷ್ಠಿತ ಮಾದರಿಯ ಕಾರುಗಳು ರಸ್ತೆಗಳ ಮೇಲೆ ಓಡ ಲಾರಂಭಿಸಿದುವು. ಮೊದಲನೆಯ ಮಹಾಯುದ್ಧದ ಅನಂತರ ಕಾರುಗಳ ಸಂಖ್ಯೆ ಇನ್ನೂ ಏರಿತು. ರಚನೆಗಳಲ್ಲಿ ಸುಧಾರಣೆಗಳಾದುವು. ಗಾಳಿತುಂಬಿದ ಗಾಲಿಗಳ, ಕಡಮೆ ಎತ್ತರದ ಈ ಕಾರುಗಳಿಗೆ 1920ರ ಅನಂತರ ಮೇಲು ಹೊದಿಕೆ ಬಂದಿತು. ಎಲ್ಲ ಕಾರುಗಳೂ ಕೆಲವು ಭಾಗಗಳನ್ನು ಬಳಸಲೇ ಬೇಕು. ಇಂಥ ಒಂದು ಭಾಗ ಎಲ್ಲ ಕಾರುಗಳಲ್ಲಿಯೂ ಒಂದೇ ಅಳತೆಯದಾಗಿದ್ದರೆ, ಅಧಿಕ ಪ್ರಮಾಣದಲ್ಲಿ ತಯಾರಿಸಬಹುದು. ತಯಾರಿಕೆ ಸುಲಭ, ಖರ್ಚು ಕಡಮೆ. ಕೊಳ್ಳುವವರಿಗೆ ಬೆಲೆಯೂ ಕಡಮೆ ಎಂದು ಇಂಥ ಭಾಗಗಳನ್ನು ಒಂದೇ ಅಳತೆಯವನ್ನಾಗಿ ಮಾಡಿದರು. ಹೆಚ್ಚು ಚಲನಶಕ್ತಿ, ಸಾಮರ್ಥ್ಯಗಳಿಗೆಂದು ಅನೇಕ ಸಿಲಿಂಡರ್‌ಗಳ ಎಂಜಿನುಗಳು ಬಳಕೆಗೆ ಬಂದುವು. ಈ ಮೊದಲಿಗೆ ಕಾರಿನ ಆಧಾರ ಚೌಕಟ್ಟು ಅಥವಾ ಅಡಿಗಟ್ಟನ್ನು ಕಟ್ಟಿ ಅದರ ಮೇಲೆ ಮೈಯನ್ನು ಜೋಡಿಸುವ ಪದ್ಧತಿ ಇದ್ದಿತು. ಇದಕ್ಕೆ ಬದಲಾಗಿ ಕಾರಿನ ಭಾಗಗಳನ್ನು ಬೇರೆ ಬೇರೆಯಾಗಿ ಉತ್ಪಾದಿಸಿ ಅವುಗಳನ್ನು ಮೊಳೆ ಅಥವಾ ಬೆಸುಗೆಗಳಿಂದ ಹೊಂದಿಸುವುದರಿಂದ ಕಾರು ತಯಾರಿಕೆ ತೀವ್ರಗೊಂಡಿತು.

ಕಾರುಗಳಲ್ಲಿ ಅನೇಕ ಬಗೆ. ಎರಡು ಆಸನಗಳ ಕಾರುಗಳಿಂದ ಹಿಡಿದು ಏಳು ಜನ ಕೂಡುವ ಮೋಹಕ ರಚನೆಯ ಕಾರುಗಳಿವೆ. ಈ ದೊಡ್ಡ ಕಾರುಗಳು ಗಂಟೆಗೆ 161 ಕಿಲೊಮೀಟರುಗಳವರೆಗೆ ಓಡಬಲ್ಲುವು. ಸಾಧಾರಣವಾಗಿ ಮಧ್ಯಮ ಗಾತ್ರದ ಕಾರುಗಳೇ ಜನಪ್ರಿಯ. ಪಂದ್ಯದಲ್ಲಿ ಓಡುವ ಕಾರುಗಳು ಬಹಳ ಭಿನ್ನವಾಗಿರುತ್ತವೆ. ಇವು 644ಕ್ಕಿಂತ ಹೆಚ್ಚು ಕಿ. ಮೀ. ವೇಗದಲ್ಲಿ ಓಡಬಲ್ಲುವು. ಇತ್ತೀಚಿನ ವೇಗ 965 ಕಿ. ಮೀ. ಗುರುತನ್ನೂ ದಾಟಿದೆ. ಅಮೆರಿಕ ಸಂಯುಕ್ತ ಸಂಸ್ಥಾನದ ಬ್ರೀಡ್‌ಲವ್ ಎಂಬವನು ಒಂದು ಗಂಟೆಗೆ 644 ಕಿ. ಮೀ. ಸ್ವಯಂಚಾಲಿತ ವಾಹನವನ್ನು ಓಡಿಸಿದ್ದಾನೆ. ಇವನೇ 1965 ನವೆಂಬರ್ 15ರಂದು ಬಾನ್‌ವಿಲ್‌ನಲ್ಲಿ ಗಂಟೆಗೆ 965 ಕಿ. ಮೀ. ವರೆಗೂ ಇಂಥ ವಾಹನವನ್ನು ಓಡಿಸಿದ.

ನಮ್ಮ ಜೀವನದಲ್ಲಿ ಸ್ವಯಂಚಾಲಿತ ವಾಹನ ಬದಲಾವಣೆಗಳನ್ನೂ ಸುಧಾರಣೆಗಳನ್ನೂ ಉಂಟುಮಾಡಿದೆ. ಇದರಿಂದ ದೂರ ಕುಗ್ಗಿತು. ಕಾಲವ್ಯಯ ಮಿತಗೊಂಡಿತು. ಸ್ವಂತ ಇಲ್ಲವೇ ಸಾರ್ವಜನಿಕ ವಾಹನಗಳನ್ನು ಉಪಯೋಗಿಸಿ ಜೀವನದ ಎಲ್ಲ ಕ್ಷೇತ್ರಗಳಲ್ಲೂ ಮನುಷ್ಯ ಅಭಿವೃದ್ಧಿ ಹೊಂದಿದ. ಒಂದು ಲಾರಿ ಅಥವಾ ಟ್ರಕ್ಕು ಸಾಗಿಸುವ ಸಾಮಾನಿನ ಭಾರ, ಎತ್ತಿನಗಾಡಿ ಕುದುರೆಗಾಡಿಗಳು ಎಳೆಯುವ ಭಾರದೊಂದಿಗೆ ಹೋಲಿಸಿದರೆ, ಅಸಾಧಾರಣ. ಪಾಶ್ಚಾತ್ಯ ದೇಶಗಳಲ್ಲಿ ವ್ಯವಸಾಯದಲ್ಲಿ ಸ್ವಯಂಚಾಲಿತ ವಾಹನಗಳು ಗಣನೀಯ ಪಾತ್ರ ವಹಿಸುತ್ತವೆ. ದೇಶದ ಆರ್ಥಿಕ ಬೆಳವಣಿಗೆಗಳಲ್ಲಿ ಸ್ವಯಂಚಾಲಿತ ವಾಹನಗಳ ಉತ್ಪಾದನೆ ಮಹತ್ವದ ಪಾತ್ರ ವಹಿಸಿದೆ. ಎಂದರೆ ಈ ಕೈಗಾರಿಕೆಯಿಂದ ಉದ್ಯೋಗ ಸಮಸ್ಯೆ ಭಾಗಶಃ ಪರಿಹಾರವಾಗುತ್ತದೆ. ವಾಹನದ ಮೇಲಿನ ಸುಂಕ, ಚಾಲಕನ ಲೈಸೆನ್ಸ್ ಇತ್ಯಾದಿ ವರಮಾನಗಳಿರುತ್ತವೆ. ಸಂಯುಕ್ತ ಸಂಸ್ಥಾನದಲ್ಲಿ ಪ್ರತಿ ಏಳು ಜನರಿಗೆ ಒಬ್ಬ ಈ ಕೈಗಾರಿಕೆಯಲ್ಲಿ ಕೆಲಸ ಮಾಡುತ್ತಾನೆ. 1962ರ ವೇಳೆಗೆ ಈ ದೇಶದಲ್ಲಿ ಸುಮಾರು ಒಂದು ಸಾವಿರ ಕೋಟಿ ಡಾಲರ್ (ಏಳೂವರೆ ಸಾವಿರ ಕೋಟಿ ರೂಪಾಯಿ) ಹಣ ಕೇವಲ ಈ ವಾಹನಗಳ ಸುಂಕದ ರೂಪದಲ್ಲಿ ದೊರೆಯಿತು. ಅಲ್ಲದೆ ಕಚ್ಚಾವಸ್ತುಗಳನ್ನೂ ಸಿದ್ಧವಸ್ತುಗಳನ್ನೂ ವೇಗವಾಗಿ ಅಧಿಕ ಪ್ರಮಾಣದಲ್ಲಿ ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಾಗಿಸಲು ಸಾಧ್ಯವಾಗುವುದು ಕೈಗಾರಿಕೆಗಳಿಗೆ ತುಂಬ ಸಹಾಯಕ. ತೀವ್ರಗಾಮಿಯಾದ ಈಗಿನ ನಾಗರಿಕತೆಯಲ್ಲಿ ಇಂಥ ವಾಹನಗಳು ಅನಿವಾರ್ಯವಾಗಿವೆ.

ಸಂಯುಕ್ತ ಸಂಸ್ಥಾನ, ಜರ್ಮನಿ, ಫ್ರಾನ್ಸ್ ಮತ್ತು ಇತರ ಯುರೋಪ್ ದೇಶಗಳು, ಸೋವಿಯತ್ ಒಕ್ಕೂಟ, ಜಪಾನ್, ಕೆನಡ ಹಾಗೂ ಆಸ್ಟ್ರೇಲಿಯ ಇವು ಸ್ವಯಂಚಾಲಿತ ವಾಹನಗಳನ್ನು ಉತ್ಪಾದಿಸುವ ಪ್ರಧಾನ ದೇಶಗಳು. ಸ್ವಯಂಚಾಲಿತ ವಾಹನಗಳ ಸುಧಾರಣೆಯನ್ನು ಪ್ರೋತ್ಸಾಹಿಸಲು ಪ್ರತಿ ವರ್ಷವೂ ಕಾರು ಓಟದ ಸ್ಪರ್ಧೆಗಳನ್ನಿಡಲಾಗುತ್ತದೆ. ಇದರಲ್ಲಿ ಅತ್ಯಂತ ಹೆಸರುವಾಸಿಯಾದದ್ದು 'ಗ್ರ್ಯಾನ್ ಪ್ರೀ' ಎಂಬುದು. ಈ ಓಟವನ್ನು ಮೊದಲ ಹಂತದಲ್ಲಿ ಹಲವಾರು ದೇಶಗಳಲ್ಲಿ ಏರ್ಪಡಿಸಲಾಗುತ್ತದೆ. ಕಾರೋಟದ ಮತ್ತೊಂದು ಪ್ರಸಿದ್ಧ ರಂಗವೆಂದರೆ ಸಂಯುಕ್ತ ಸಂಸ್ಥಾನದ ಇಂಡಿಯಾನಾ ಪೊಲಿಸ್ ಎಂಬ ಪಟ್ಟಣ. ಇಲ್ಲಿ ಕಾರೋಟದ ದಾರಿಯನ್ನು ವಿಶೇಷವಾಗಿ ನಿಯೋಜಿಸಲಾಯಿತೆಂದು ಹೇಳುತ್ತಾರೆ. ಸುಧಾರಿತ ಸ್ವಯಂಚಾಲಿತ ಯಂತ್ರಗಳಲ್ಲಿ ಎರಡು ಗಮನಾರ್ಹ. ಕಾರು ಅತಿ ವೇಗವನ್ನು ಮುಟ್ಟಿದಾಗ ವಿಮಾನದಂತೆ ರೆಕ್ಕೆಗಳನ್ನು ತೆರೆದು ರಸ್ತೆಯಿಂದ ಹಲವಾರು ಮೀಟರು ಎತ್ತರದಲ್ಲಿ ಅನಾಯಾಸವಾಗಿ ತೇಲಾಡ











ಮೇಲಿನಿಂದ ಕೆಳಕ್ಕೆ :

1892 ... ಬೆನ್ಜ್

1897 ... [illegible]

1908 ... ಫೋರ್ಡ್ ಮಾಡೆಲ್ ಟಿ

1921 ... [illegible]

1970 ... ಫಿಯೆಟ್

ಕಾರುಗಳು ಮತ್ತು ಗಾಳಿಯ ಧಾರೆಯನ್ನು ಉಪಯೋಗಿಸಿ ವೇಗ ಹೆಚ್ಚಿಸಿಕೊಳ್ಳುವ ಕಾರುಗಳು ಇವೆ.

ಇವಲ್ಲದೆ ಪೈರು ಕುಯ್ಯಲು, ಬಿತ್ತಲು ಸ್ವಯಂಚಾಲಿತ ಯಂತ್ರಗಳಿವೆ. ಮರಳುಗಾಡಿನಲ್ಲಿ ಚಲಿಸುವ, ಹುಲ್ಲು ಕತ್ತರಿಸುವ ಸ್ವಯಂಚಾಲಿತ ಯಂತ್ರಗಳಿವೆ. ಈ ಯಂತ್ರಗಳ ಮೋಟರ್ ಬಳಸಿ ದೋಣಿ ನಡೆಸುವುದೂ ಉಂಟು. ಇವನ್ನು ಮೋಟರ್ ದೋಣಿಗಳೆಂದು ಕರೆಯುತ್ತಾರೆ. ಇದಲ್ಲದೆ ನೆಲದ ಮೇಲೆ ಗಾಲಿಗಳಿಂದಲೂ ನೀರಿನ ಮೇಲೆ ದೋಣಿಯಾಗಿಯೂ ಚಲಿಸಬಲ್ಲ ಭೂಜಲ ವಾಹನಗಳೂ ನಿರ್ಮಾಣಗೊಳ್ಳುತ್ತಿವೆ. ಇವುಗಳನ್ನು 'ಆಂಫಿಬಿಯನ್ಸ್' ಎನ್ನುತ್ತಾರೆ. ವಿದೇಶಗಳಲ್ಲಿ ಕಾರಿನ ಮಾದರಿಗಳನ್ನು ತಯಾರಿಸುವುದು ಒಂದು ದೊಡ್ಡ ಹವ್ಯಾಸವೆನಿಸಿದೆ. ಇದರಿಂದ, ಅನೇಕ ಬಾರಿ ಸುಧಾರಿತ ಕಾರುಗಳು ತಯಾರಾಗಿವೆ.

ಮೋಟರ್ ಸೈಕಲ್, ಸ್ಕೂಟರ್ ಇವು ಸ್ವಯಂಚಾಲಿತವಾಹನಗಳ ಗುಂಪಿಗೇ ಸೇರಿವೆ. ಏಕೆಂದರೆ ಇವು ಪೆಟ್ರೋಲ್ ಇಂಧನದ ಬಳಕೆ ಹಾಗೂ ಅಂತರ್ದಹನ ಎಂಜಿನ್ ಜೋಡಣೆಯಿಂದ ಚಲಿಸುವ ಯಂತ್ರಗಳು. ಇಂಥ ವಾಹನಗಳ ಮೊಟ್ಟಮೊದಲ ರೂಪವನ್ನು 1885ರಲ್ಲಿ ತಯಾರಿಸಿದ ಪ್ರಶಸ್ತಿ ಜರ್ಮನಿಯ ಗಾಟ್ಲೀಬ್ ಡೇಮ್ಲರ್ ಎಂಬಾತನಿಗೆ ಸಲ್ಲುತ್ತದೆ. ಸ್ಕೂಟರ್ ತಯಾರಿಕೆ ಆರಂಭವಾದದ್ದು ಇಟಲಿಯಲ್ಲಿ 1945ರಲ್ಲಿ. ಇದರ ಜನಕ ಅಲ್ಲಿನ ಡಾ. ಪಿಯಾಗ್ಗಿಯೊ ಎಂಬುವನು. ಇಂದಿನ ಈ ವಾಹನಗಳಲ್ಲಿ ಚಾಲಕನಲ್ಲದೆ ಮತ್ತೊಬ್ಬ ಸವಾರನೂ ಕೂಡುವ ಅವಕಾಶವಿದೆ.

ಭಾರತದಲ್ಲಿ ಮೊಟ್ಟಮೊದಲ ಬಾರಿ 1898ರಲ್ಲಿ ಕಾರು ಆಮದಾಯಿತು. 1948ರಲ್ಲಿ ವಿವಿಧ ಭಾಗಗಳನ್ನು ಭಾರತದಲ್ಲಿಯೇ ಜೋಡಿಸಿ ತಯಾರಾದ ಕಾರು ಬಂದಿತು.

ನೋಡಿ : ಚಕ್ರ

## ಸ್ಕ್ಯಾಂಡಿನೇವಿಯ

ಉತ್ತರ ಯೂರೋಪಿನಲ್ಲಿರುವ ನಾರ್ವೆ, ಸ್ವೀಡನ್ ಮತ್ತು ಡೆನ್ಮಾರ್ಕ್ ರಾಷ್ಟ್ರಗಳು ಸೇರಿ ಸ್ಕ್ಯಾಂಡಿನೇವಿಯ ಎನಿಸಿಕೊಂಡಿವೆ. ಕೆಲವು ಭೂಗೋಳ ತಜ್ಞರು ಫಿನ್‌ಲೆಂಡ್ ಮತ್ತು ಐಸ್‌ಲೆಂಡ್ ಇವುಗಳನ್ನೂ ಸ್ಕ್ಯಾಂಡಿನೇವಿಯ ಪ್ರದೇಶದಲ್ಲಿ ಸೇರಿಸುತ್ತಾರೆ.

79ನೆಯ ಇಸವಿಗೆ ಹಿಂದೆಯೆ ರೋಮನ್ ಬರಹಗಾರ ಪ್ಲಿನಿ ಈ ಪ್ರದೇಶವನ್ನು ಸ್ಕ್ಯಾಂಡಿನೇವಿಯ ಎಂದು ಕರೆದ. ಭೂಗೋಳ ವಿಜ್ಞಾನಿ ಟಾಲೆಮಿ ಇದನ್ನು ಸ್ಕ್ಯಾಂಡಿಯೈನೆಸಾರ್ ಎಂದ. ನೆಸಾರ್ ಗ್ರೀಕ್ ಭಾಷೆಯ ಪದ ; ನೆಸಾರ್ ಎಂದರೆ ದ್ವೀಪ ಎಂದರ್ಥ. ಲ್ಯಾಟಿನ್ ವಿದ್ವಾಂಸರು ಇದನ್ನು ಸ್ಕ್ಯಾಂಡಿನೇವಿಯ ಎಂದೇ ಕರೆದರು. ಸ್ವೀಡನಿನ ದಕ್ಷಿಣ ಭಾಗದಲ್ಲಿರುವ ಸ್ಕೇನ್ ಪ್ರಾಂತದಿಂದ ಸ್ಕ್ಯಾಂಡಿನೇವಿಯ ಪದ ಬಂದಿರಬಹುದೆಂದು ಸಂಶೋಧಕರು ಭಾವಿಸಿದ್ದಾರೆ.

ಸ್ಕ್ಯಾಂಡಿನೇವಿಯ ನಾರ್ಸ್ ಜನರ ನಾಡು. ನಾರ್ಸ್ ಜನರು ಸಮುದ್ರ ಮಾರ್ಗವಾಗಿ ಹೊರಟು ಈ ಪ್ರದೇಶಗಳಲ್ಲಿ ಬಹಳ ಹಿಂದೆಯೇ ನೆಲೆಸಿದರು. ಇಲ್ಲಿನ ಜನರು ಬೇರೆ ಬೇರೆ ಭಾಷೆಗಳನ್ನು ಆಡುತ್ತಾರೆ. ಆದರೆ ಆ ಎಲ್ಲ ಭಾಷೆಗಳು ಬಂದಿರುವುದು ಜರ್ಮನ್ ಮೂಲದಿಂದಲೇ.

ಈಚೆಗೆ ಸ್ಕ್ಯಾಂಡಿನೇವಿಯ ವನ್ನು ನಾರ್ಡೆನ್ ಎಂದು ಕರೆಯುವುದೂ ಬಳಕೆಗೆ ಬಂದಿದೆ. ನಾರ್ಡೆನ್ ಎಂದರೆ ನಾರ್ವೆ, ಸ್ವೀಡನ್, ಡೆನ್ಮಾರ್ಕ್, ಫಿನ್‌ಲೆಂಡ್ ಮತ್ತು ಐಸ್‌ಲೆಂಡ್‌ಗಳ ಸಮುದಾಯ. ಈ ದೇಶಗಳಿಗೆ ಪರಸ್ಪರ ಸಂಬಂಧ ವಿದ್ದು ಯೂರೋಪಿನ ಇತರ ರಾಷ್ಟ್ರಗಳಿಗಿಂತ ಇವು ಭಿನ್ನವಾಗಿವೆ.

ನೋಡಿ : ಐಸ್‌ಲೆಂಡ್ : ಡೆನ್ಮಾರ್ಕ್ : ನಾರ್ವೆ : ಫಿನ್‌ಲೆಂಡ್ : ಸ್ವೀಡನ್

## ಸಾಕ್ರಟೀಸ್

ಒಂದು ಪುಸ್ತಕವನ್ನೂ ಬರೆಯಲಿಲ್ಲ. ಒಂದು ಪಂಥವನ್ನೂ ಸ್ಥಾಪಿಸಲಿಲ್ಲ. ಒಂದು ದಿನವಾದರೂ ಒಳ್ಳೆಯ ಉಡುಪನ್ನು ತೊಟ್ಟವನಲ್ಲ. ಚಳಿಯಾಗಲಿ, ಬಿಸಿಲಾಗಲಿ ಒಂದೇ ರೀತಿಯ ಉಡುಗೆ. ಕಾಲಿಗೆ ಎಂದೂ ಪಾದರಕ್ಷೆ ಹಾಕಿದವನಲ್ಲ. ಅವನಿಗೆ ಶ್ರಮ ಬಳಲಿಕೆ ಇವುಗಳ ಅರಿವೇ ಇರಲಿಲ್ಲ. ಒಂದು ಬೆಳಗ್ಗೆ ಒಂದು ಸ್ಥಳದಲ್ಲಿ ಯೋಚನೆ ಮಾಡುತ್ತ ನಿಂತವನು ಹಾಗೆಯೇ ಮರುದಿನ ಬೆಳಗಿನವರೆಗೆ ನಿಂತಿದ್ದ. ಸುಂದರನಲ್ಲ. ಮೊಂಡು ಮೂಗು, ದುಬ್ಬ ಹೊಟ್ಟೆ, ಗುಬ್ಬಿಮೊಳೆಯಂಥ ಕಣ್ಣು, ಕುಳ್ಳ ಶರೀರ. ಸಾಲದುದಕ್ಕೆ ಶುದ್ಧ ಒರಟಳಾದ ಹೆಂಡತಿ.

ಸತ್ತು ಎರಡು ಸಾವಿರ ವರ್ಷಗಳಾದ ಅನಂತರವೂ ಆತನ ಬುದ್ಧಿಶಕ್ತಿಗೆ ಜಗತ್ತು ಅಚ್ಚರಿಪಡುತ್ತಿದೆ. ಈ ಮಹಾಪುರುಷ ಗ್ರೀಸಿನ ತತ್ತ್ವಜ್ಞಾನಿ ಸಾಕ್ರಟೀಸ್.

ಸಾಕ್ರಟೀಸ್ ಕ್ರಿ. ಪೂ. 469ರಲ್ಲಿ ಅಥೆನ್ಸಿನಲ್ಲಿ ಹುಟ್ಟಿದ. ಅವನು ಜನ್ಮ ತಳೆದಾಗ ಸ್ವರ್ಣಯುಗದಲ್ಲಿತ್ತು ಅಥೆನ್ಸ್.

ಅವನ ತಂದೆ ಶಿಲ್ಪಿ. ತಾಯಿ ಸೂಲಗಿತ್ತಿ. ಅಥೆನ್ಸಿನ ಇತರರಂತೆ ಸಾಕ್ರಟೀಸನೂ ಯೋಧನಾಗಿ ಯುದ್ಧ ಶಿಕ್ಷಣವನ್ನು ಪಡೆದ. ಡೀಲಿಯಂ, ಆಂಫಿಪೊಲಿಸ್ ಮೊದಲಾದೆಡೆಗಳ ಕದನಗಳಲ್ಲಿ ಶೌರ್ಯದಿಂದ ಹೋರಾಡಿದ.

ಸಾಕ್ರಟೀಸ್ ತನ್ನ ಜೀವನದ ಉಳಿದ ಕಾಲವನ್ನು ಮಾತಿನಲ್ಲಿ ಕಳೆದ. ಇದು ಆಶ್ಚರ್ಯವನ್ನುಂಟುಮಾಡಬಹುದು. ಆದರೆ ಮಾತಿನಿಂದಲೇ ಅವನಿಗೆ ಪ್ರಪಂಚದ ಅತ್ಯಂತ ಬುದ್ಧಿವಂತ ಎಂಬ ಹೆಸರು ಬಂದಿತು.

ಸಾಕ್ರಟೀಸ್ ಆವರಿವರೆನ್ನದೆ ಎಲ್ಲರ ಹತ್ತಿರ ಮಾತಾಡಿದ. ತಾನು ಪ್ರಶ್ನೆಗಳ ಸುರಿಮಳೆ ಸುರಿಸಿ ಅವರಿಂದ ಉತ್ತರ ಕೇಳುತ್ತಿದ್ದ. ಉತ್ತರ ಬರದಿದ್ದರೆ ತಾನೇ ಕೊನೆಗೆ ಹೇಳುತ್ತಿದ್ದ. ಅವನ ಪ್ರಶ್ನೆಗಳೇನೂ ಬಹಳ ಸರಳವಾಗಿರುತ್ತಿದ್ದುವು. ತಾನು ಏನೂ ತಿಳಿಯದವನಂತೆ ಪ್ರಶ್ನಿಸುತ್ತಿದ್ದ. ಪ್ರಾರಂಭದಲ್ಲಿ ಉತ್ತರ ಹೇಳುವವರು, 'ಇದೇನು ಮಹಾ' ಎಂಬ ಧೋರಣೆಯಿಂದ ಪ್ರಾರಂಭಿಸುತ್ತಿದ್ದರೂ ಮುಂದೆ ಉತ್ತರ ಹೇಳುವುದೇ

ಬಹಳ ಕಷ್ಟವಾಗುತ್ತಿತ್ತು. ಧೈರ್ಯ ಎಂದರೇನು ? ನ್ಯಾಯ ಎಂದರೇನು ? ಜನ ತಪ್ಪು ಕೆಲಸಗಳನ್ನು ಏಕೆ ಮಾಡುತ್ತಾರೆ ? ಹೀಗೆ ಪ್ರಶ್ನೆ ಕೇಳುತ್ತಿದ್ದ. ಒಂದು ಪ್ರಶ್ನೆಗೆ ಉತ್ತರಿಸಿದರೆ, ಉತ್ತರದ ಮೇಲೆ ಪ್ರಶ್ನೆ. ಅದಕ್ಕೆ ಉತ್ತರ ಬಂದರೆ ಆ ಉತ್ತರಕ್ಕೆ ಪ್ರಶ್ನೆ. ವಿಷಯವನ್ನು ಸ್ಪಷ್ಟಮಾಡಿಕೊಳ್ಳಲು ಕೇಳುವುದನ್ನು ಸಾಕ್ರಟೀಸನ ವಿಧಾನ ಎನ್ನುತ್ತಾರೆ. ಅಥೆನ್ಸಿನ ಕಾರ್ಮಿಕರು, ಚಮ್ಮಾರರು, ಅಡುಗೆಯವರು ಇಂಥವರ ವೃತ್ತಿಯಿಂದ ಉದಾಹರಣೆಗಳನ್ನು ಬಳಸಿಕೊಂಡ ಸಾಕ್ರಟೀಸ್.

ಸಾಕ್ರಟೀಸ್ ಏಕೆ ಹೀಗೆ ಪ್ರಶ್ನೆಗಳನ್ನು ಕೇಳುತ್ತಿದ್ದ ? ಜನರು ವಿಚಾರ ಮಾಡದೆ ಯಾವ ತತ್ತ್ವವನ್ನೇ ಆಗಲಿ, ಯಾವ ವಿಷಯವನ್ನೇ ಆಗಲಿ ನಂಬಬಾರದು ಎಂದು ಅವನ ವಾದ. ಅನೇಕರು ಅವನ ಶಿಷ್ಯರೂ ಮಿತ್ರರೂ ಆದರು. ತಾವು ಎಲ್ಲವನ್ನೂ ತಿಳಿದವರು ಎಂದುಕೊಂಡವರ ಅಜ್ಞಾನವನ್ನು ಸಾಕ್ರಟೀಸ್ ಎತ್ತಿ ತೋರಿಸಿದ. ಅವನ ಕಾಲದ 'ಸೋಫಿಸ್ಟ್' (ಜ್ಞಾನಿ)ಗಳಿಗೆ ಇದರಿಂದ ಕೋಪ ಬಂದಿತು. ಪುರಾತನ ಕಾಲದಿಂದ ಜನ ಒಪ್ಪಿದ್ದ ಧರ್ಮದ ಬಗೆಗೆ, ದೇವರ ಬಗೆಗೆ ನೀತಿ ನಡವಳಿಕೆಗಳ ಬಗೆಗೆ ಪ್ರಶ್ನೆ ಮಾಡಿದನೆಂದು ಕೆಲವರು ಸಾಕ್ರಟೀಸನ ವಿರೋಧಿಗಳಾದರು.

ಸಾಕ್ರಟೀಸ್ ಗ್ರೀಕರ ಪುರಾತನ ದೇವರುಗಳನ್ನು ನಂಬಲಿಲ್ಲ ಮತ್ತು ಅಥೆನ್ಸಿನ ಯುವಕರ ಮನಸ್ಸಿನಲ್ಲಿ ಸಲ್ಲದ ವಿಚಾರಗಳನ್ನು ತುಂಬಿದ ಎಂಬ ಎರಡು ಆರೋಪಗಳಿಗಾಗಿ ಅವನನ್ನು ವಿಚಾರಣೆಗೆ ಗುರಿಮಾಡಿದರು.

ಸಾಕ್ರಟೀಸನಿಗೆ ಮರಣದಂಡನೆ ವಿಧಿಸಲಾಯಿತು. ಅದಕ್ಕೆ ಬದಲಾಗಿ ಬೇರೆ ಯಾವುದಾದರೂ ಶಿಕ್ಷೆಯನ್ನು ನೀಡಿ–ಉದಾಹರಣೆಗೆ ಗಡಿಪಾರು ಮಾಡಿ ಎಂದು ಕೇಳುವ ಅವಕಾಶ ಇತ್ತು. ತನ್ನನ್ನು ಗಡಿಪಾರು ಮಾಡಬಹುದೆಂದೂ ಆದರೆ ಜನರಿಗೆ ಉಪಕಾರ ಮಾಡಿದ ತನ್ನನ್ನು, ಸರಕಾರದ ಖರ್ಚಿನಲ್ಲಿ, ಒಲಿಂಪಿಕ್ ಪಂದ್ಯಗಳಲ್ಲಿ ಗೆದ್ದವನಂತೆ ಕಾಣಬೇಕೆಂದೂ ಸಾಕ್ರಟೀಸ್ ಕೇಳಿದ. ಇದರಿಂದ ಕೋಪಗೊಂಡ ನ್ಯಾಯಾಧೀಶರು ಅವನಿಗೆ ಮರಣದಂಡನೆಯೇ ಸರಿ ಎಂದರು. ನೆಮ್ಮದಿಯ ಮನಸ್ಸಿನಿಂದ ಸಾಕ್ರಟೀಸ್ ಹೀಗೆ ಹೇಳಿದ: "ನಾವು ಅಗಲುವ ಸಮಯ ಬಂದಿದೆ. ನನಗೆ ಸಾಯಲು ಸಮಯ. ನಿಮಗೆ ಬದುಕಲು ಸಮಯ. ಆದರೆ ನಮ್ಮಿಬ್ಬರಲ್ಲಿ ಇನ್ನೂ ಉತ್ತಮವಾದ ಸ್ಥಿತಿಗೆ ಯಾರು ಹೋಗುತ್ತೇವೆ ಎನ್ನುವುದು ದೇವರಿಗೆ ಮಾತ್ರ ಗೊತ್ತು."

ಕಾರಾಗೃಹದಲ್ಲಿಯೂ ಸಾಕ್ರಟೀಸ್ ತನ್ನ ಮಿತ್ರರೊಡನೆ ಸಂತೋಷದಿಂದ ಮಾತನಾಡುತ್ತಿದ್ದ. ಅವನ ಮುಖ್ಯ ಶಿಷ್ಯರಲ್ಲೊಬ್ಬನಾದ ಕ್ರಿಟೋ, ಸಾಕ್ರಟೀಸ್ ಕಾರಾಗೃಹದಿಂದ ತಪ್ಪಿಸಿಕೊಂಡು ಹೋಗಲು ತಾನು ಏರ್ಪಾಡು ಮಾಡಿರುವುದಾಗಿ ಹೇಳಿದ. ಆದರೆ ಸಾಕ್ರಟೀಸ್ ಒಪ್ಪಲಿಲ್ಲ.

ಕ್ರಿ. ಪೂ. 399ರ ವಸಂತದಲ್ಲಿ ಒಂದು ದಿನ ಸಾಕ್ರಟೀಸನಿಗೆ ಹೆಮ್‌ಲಾಕ್ ವಿಷವಿದ್ದ ಬಟ್ಟಲನ್ನು ಕೊಟ್ಟರು. ಬಟ್ಟಲನ್ನು ಕೊಟ್ಟವನು ಕೂಡ ಆ ದೃಶ್ಯವನ್ನು ನೋಡಲಾರದೆ ಹೊರಟುಹೋದ. ಅವನ ಮಿತ್ರರೂ ಸ್ನೇಹಿತರೂ ಬಿಕ್ಕಿ ಬಿಕ್ಕಿ ಅತ್ತರು. ಆದರೆ ಅವರನ್ನು ಗದರಿಸಿ ಸಾಕ್ರಟೀಸ್, "ಶಾಂತವಾದ ವಾತಾವರಣದಲ್ಲಿ ಸಾಯಲು ಬಿಡಿ" ಎಂದ. ಶಾಂತಿಯಿಂದ ವಿಷವನ್ನು ಕುಡಿದು ಪ್ರಾಣಬಿಟ್ಟ.

ಶರೀರ ನಾಶವಾದರೂ ಒಳಗಿರುವ ಆತ್ಮ ಅಮರ. ಆತ್ಮಕ್ಕೆ ಸಾವಿಲ್ಲ ಎಂದು ಸಾಕ್ರಟೀಸ್ ಹೇಳಿದ. ಅವನು ಪ್ರತಿಯೊಂದು ವಿಷಯವನ್ನೂ ವಿಚಾರವಾಗಿ ತರ್ಕಮಾಡಿ ಒಪ್ಪುವ ರೀತಿಯನ್ನು ಪಾಶ್ಚಾತ್ಯ ಜಗತ್ತಿಗೆ ಕಲಿಸಿದ.



ಮರಣದಂಡನೆಗೆ ಗುರಿಯಾಗಿ, ವಿಷ ಕುಡಿದು ಪ್ರಾಣಬಿಟ್ಟ ಸಾಕ್ರಟೀಸ್

ಅತಿ ಕುರೂಪಿಯಾಗಿದ್ದರೂ ಅವನ ಸುಂದರ ಸ್ವಭಾವಕ್ಕಾಗಿ ಅತನನ್ನು 'ದೈವಾಂಶ ಸಂಭೂತ' ಎಂದು ಅವನ ವಿದ್ಯಾರ್ಥಿಯೊಬ್ಬ ಕರೆದ, ಅವನ ಮಾತನ್ನು ಆಜ್ಞೆಯೆಂದು ಭಾವಿಸಿ ಪಾಲಿಸಬೇಕು ಎಂದ.

ಸಾಕ್ರಟೀಸನ ಜೀವನ, ಅವನು ಕೇಳುತ್ತಿದ್ದ ಪ್ರಶ್ನೆಗಳು, ಅವನ ರೀತಿ ಇವನ್ನು ಕುರಿತು ಅವನ ಶಿಷ್ಯರು ಬರೆದಿಟ್ಟಿದ್ದಾರೆ. ಅವರಲ್ಲೂ ತತ್ತ್ವಜ್ಞಾನಿ ಪ್ಲೇಟೋ ಮತ್ತು ಚರಿತ್ರಕಾರ ಜೆನೊಫನ್ (ಕ್ರಿ. ಪೂ. 445–355) ಇವರ ಗ್ರಂಥಗಳಲ್ಲಿ ಸಾಕ್ರಟೀಸನನ್ನು ಕುರಿತು ವಿವರಗಳಿವೆ.

ನೋಡಿ: ಪ್ಲೇಟೋ, ತತ್ತ್ವಶಾಸ್ತ್ರ

## ಸಾಮಾಜಿಕ ಭದ್ರತೆ

[illegible] ಕಲ್ಪಿಸುತ್ತದೆ: [illegible] [illegible] [illegible] ದುಡಿ[illegible]

ಶಕ್ತಿ ಉಡುಗುತ್ತದೆ. ವೃದ್ಧರಾದಂತೆ ಉದ್ಯೋಗದಿಂದ ನಿವೃತ್ತರಾಗ ಬೇಕಾಗುತ್ತದೆ. ಸಹಜವಾಗಿ ವಯಸ್ಸಾಗಿ ದುಡಿಮೆಯಿಂದ ವಿಮುಖ ರಾಗುವುದು ಒಂದು ಬಗೆ. ಅನಾರೋಗ್ಯ ಅಪಘಾತದಿಂದ ಅವಯವಗಳ ಊನ, ನಿರುದ್ಯೋಗ ಇವು ಕೂಡ ದುಡಿಯುವ ಅವಕಾಶವನ್ನು ತಪ್ಪಿಸುತ್ತವೆ. ವರಮಾನಕ್ಕೆ ಕುಂದುಬರುವುದು ಮಾತ್ರವಲ್ಲದೆ ಮನಸ್ಸಿಗೂ ಕೊರಗು.

ದುಡಿಮೆಗೆ ಅಡ್ಡಿತರುವ ಈ ಪ್ರಸಂಗಗಳಲ್ಲಿ ಮನುಷ್ಯನಿಗೆ ರಕ್ಷಣೆ ಅಗತ್ಯ. ತಾನು ದುಡಿಯಲಾಗದ ಸಂದರ್ಭದಲ್ಲಿ ಜೀವನ ನಡೆಸಲು ಸಮಾಜದಲ್ಲಿ ಅವಕಾಶವಿರಬೇಕು. ಸರಕಾರ ಇಂಥ ವ್ಯವಸ್ಥೆಗೆ ಅನುವುಮಾಡಿಕೊಡುವುದೇ ಸಾಮಾಜಿಕ ಭದ್ರತೆ. ಈ ಪದಗಳು ಅಮೆರಿಕದ ಸಂಯುಕ್ತ ಸಂಸ್ಥಾನದ 1935ರ ಕಾನೂನಿನಲ್ಲಿ ಮೊದಲು ಪ್ರಯೋಗವಾದುವು. ಈಗ ಎಲ್ಲ ರಾಷ್ಟ್ರಗಳೂ ಸಾಮಾಜಿಕ ಭದ್ರತೆಯ ಮಾತನ್ನು ಆಡುತ್ತವೆ. ಸಾಮಾಜಿಕ ಭದ್ರತೆಯ ಕಾರ್ಯಕ್ರಮಗಳು ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ರೀತಿ.

ವೃದ್ಧಾಪ್ಯದ ಅಸಹಾಯತೆ ಎಲ್ಲ ದೇಶದ ಜನರಿಗೂ ಸಾಮಾನ್ಯ. ಅಪಘಾತ, ದುರ್ಮರಣ, ನಿರುದ್ಯೋಗ ಮುಂತಾದುವು ಕೈಗಾರಿಕಾ ರಾಷ್ಟ್ರಗಳಲ್ಲಿ ವಿಪುಲವಾಗಿ ಕಾಣಿಸಿಕೊಳ್ಳುತ್ತವೆ. ಇಂಗ್ಲೆಂಡ್, ಅಮೆರಿಕ ಮುಂತಾದ ದೇಶಗಳಲ್ಲಿ ಸಾಮಾಜಿಕ ಭದ್ರತೆಯನ್ನು ಕಲ್ಪಿಸುವ ಶಾಸನ ಗಳನ್ನು ರಚಿಸಲಾಗಿದೆ. ಸೋವಿಯೆತ್ ರಷ್ಯದ ಜನಸಂಖ್ಯೆಯ ಆರರಲ್ಲಿ ಒಂದು ಪಾಲು ಜನ ವೃದ್ಧಾಪ್ಯವೇತನ ಪಡೆಯುತ್ತಾರೆ. ಪ್ರಪಂಚದ ಉಳಿದ ರಾಷ್ಟ್ರಗಳಲ್ಲಿ ಒಂದಿಲ್ಲೊಂದು ಬಗೆಯಲ್ಲಿ ಸಾಮಾಜಿಕ ಭದ್ರತೆಯ ಭರವಸೆ ಸಿಗುತ್ತದೆ.

ಸಾಮಾಜಿಕ ವಿಮೆ ಅನೇಕ ಐರೋಪ್ಯ ರಾಷ್ಟ್ರಗಳಲ್ಲಿ ಪ್ರಚಲಿತ. ಉದ್ಯೋಗದಲ್ಲಿರುವ ವ್ಯಕ್ತಿ ತಿಂಗಳಿಗೆ ಇಷ್ಟು ಎಂದು ವಂತಿಗೆ ಸಲ್ಲಿಸು ತ್ತಾನೆ. ಅವನು ನಿರುದ್ಯೋಗಿಯಾದರೆ ವಿಮೆಯ ಸಂಸ್ಥೆ ಅವನ ಮತ್ತು ಅವನ ಸಂಸಾರದ ಜೀವನ ನಿರ್ವಹಣೆಗೆಂದು ತಿಂಗಳಿಗೆ ಇಷ್ಟು ಎಂದು ಹಣ ಕೊಡುತ್ತದೆ. ಹೀಗೆಯೇ ಅನಾರೋಗ್ಯ, ಅಪಘಾತಗಳಿಗೆ ವಿಮೆ ಮಾಡ ಬಹುದು. ಹಲವು ರಾಷ್ಟ್ರಗಳಲ್ಲಿ ಈ ಬಗೆಯ ವಿಮೆ ಮಾಡುವುದು ಕಡ್ಡಾಯ. ಕೆಲಸದಲ್ಲಿರುವವನು 'ಪ್ರಾವಿಡೆಂಟ್ ಫಂಡ್'ಗೆಂದು ವಂತಿಗೆ ಕೊಡುತ್ತಾನೆ. ಕೆಲಸಕ್ಕೆ ನೇಮಿಸಿಕೊಂಡವರೂ ಕೊಡುತ್ತಾರೆ. ಎರಡನ್ನೂ ಸೇರಿಸಿ, ಅದಕ್ಕೆ ಬಡ್ಡಿಯನ್ನೂ ಕೂಡಿಸಿ ಆತ ಕೆಲಸ ಬಿಟ್ಟಾಗ ಕೊಡುತ್ತಾರೆ. ಈ ಬಗೆಯ ನಿಧಿಗಳನ್ನು ಏರ್ಪಡಿಸುವ ಪದ್ಧತಿ ಅನೇಕ ದೇಶಗಳಲ್ಲಿದೆ. ನಿವೃತ್ತರಾದ ಸೈನಿಕರು, ವಿಜ್ಞಾನಿಗಳು, ವಿದ್ವಾಂಸರು ಮುಂತಾದವರಿಗೆ ಪ್ರತಿ ತಿಂಗಳೂ ವೇತನಗಳನ್ನೂ ಸೌಲಭ್ಯಗಳನ್ನೂ ಸರಕಾರದ ವತಿಯಿಂದ ಒದಗಿಸುವ ಪದ್ಧತಿ ಕೂಡ ಜಾರಿಯಲ್ಲಿದೆ. ಅಲ್ಲದೆ ಸರಕಾರೀ ಉದ್ಯೋಗದಿಂದ ನಿವೃತ್ತರಾದವರಿಗೆ ವಿಶ್ರಾಂತಿ ವೇತನ ನೀಡುವ ವ್ಯವಸ್ಥೆಯನ್ನು ಎಲ್ಲ ದೇಶಗಳಲ್ಲೂ ಕಾಣಬಹುದು.

[illegible] ತಮ್ಮ ಮಕ್ಕಳ ವರಮಾನ, ತಾವು ಇಚ್ಛಿಸಿ ಮಾಡಿದ ವಿಮಾ ಯೋಜನೆಗಳು ಇವು ದೇಶದ ಪ್ರಜೆಗಳು ತಾವಾಗಿ ಕಲ್ಪಿಸಿಕೊಂಡ ಸಾಮಾಜಿಕ ಭದ್ರತೆ. ಇಂಥ ವ್ಯವಸ್ಥೆಗಳಿಂದ ಹೊರತಾದ ವ್ಯಕ್ತಿಗಳೂ ಜೀವನದಲ್ಲಿ ಭದ್ರತೆಯನ್ನು ಕಾಣಬೇಕೆಂಬುದು ಸರಕಾರ ಉದ್ದೇಶಿಸುವ ಸಾಮಾಜಿಕ ಭದ್ರತೆಯ ಗುರಿ.

ಚಿಕ್ಕ ಮಕ್ಕಳ ಪಾಲನೆಯೂ ಸಾಮಾಜಿಕ ಭದ್ರತೆಗೆ ಸೇರಿದ್ದು. ಅವರ ಆರೋಗ್ಯಪಾಲನೆ ಮುಂತಾದುವುಗಳ ಬಗೆಗೆ ಅಮೆರಿಕದ ಸಂಯುಕ್ತ ಸಂಸ್ಥಾನದಲ್ಲಿ ಸರಕಾರ ಯೋಜನೆಗಳನ್ನು ರೂಪಿಸಿದೆ. ಗರ್ಭಿಣಿಯರ ಮತ್ತು ಮಕ್ಕಳ ಸಂರಕ್ಷಣೆ, ಅಂಗವಿಕಲರ ಮಕ್ಕಳ ಯೋಗಕ್ಷೇಮ, ಕಿರಿಯರ ಆರೋಗ್ಯಪಾಲನೆ ಮುಂತಾದ ಚಟುವಟಿಕೆಗಳಲ್ಲಿ ನಿರತವಾಗಿರುವ ಸಂಸ್ಥೆ ಗಳಿಗೆ ಹಣ ಹಂಚುತ್ತದೆ.

ಎರಡನೆಯ ಜಾಗತಿಕ ಯುದ್ಧದ ಅನಂತರ ಸಾಮಾಜಿಕ ಭದ್ರತೆ ಪ್ರಪಂಚದ ಎಲ್ಲ ದೇಶಗಳಲ್ಲೂ ವಿಸ್ತರಿಸಿದೆ. 1960ರ ಹೊತ್ತಿಗೆ ಸುಮಾರು 120 ರಾಷ್ಟ್ರಗಳಲ್ಲಿ ಸಾಮಾಜಿಕ ಭದ್ರತೆಯ ಕಾರ್ಯಕ್ರಮಗಳಿದ್ದುವು.

ಭಾರತದಲ್ಲಿಯೂ ಸಾಮಾಜಿಕ ಭದ್ರತೆಯ ವಿವಿಧ ಕಾರ್ಯಕ್ರಮಗಳು ರೂಪಿತವಾಗಿವೆ.

## ಸಾಮ್ರಾಜ್ಯ, ಸಾಮ್ರಾಜ್ಯವಾದ

ಹಲವು ರಾಜ್ಯಗಳನ್ನು ಒಳಗೊಂಡ ವಿಸ್ತಾರವಾದ ಭೂ ಪ್ರದೇಶದ ಮೇಲೆ ಆಡಳಿತ ಸ್ಥಾಪಿಸಲ್ಪಟ್ಟ ರಾಜ್ಯವ್ಯವಸ್ಥೆ ಸಾಮ್ರಾಜ್ಯ. ಇಡೀ ಸಾಮ್ರಾಜ್ಯಕ್ಕೆ ಅಧಿಪತಿ ಒಬ್ಬನೇ. ಆತ ಸಾಮ್ರಾಜ್ಯಾಧಿಪತಿ–ಸಮ್ರಾಟ. ರಾಜ್ಯ ಚಿಕ್ಕದು. ಸಾಮ್ರಾಜ್ಯ ವಿಸ್ತಾರವಾದದ್ದು. ಸಾಮ್ರಾಜ್ಯದಲ್ಲಿ ಸಮ್ರಾಟನ ಅಧೀನದಲ್ಲಿ ಅನೇಕ ರಾಜರಿರುತ್ತಾರೆ. ಅವರು ಸಮ್ರಾಟನ ಅಧಿಕಾರವನ್ನು ಒಪ್ಪಿ, ಅವನಿಗೆ ಕಪ್ಪಕಾಣಿಕೆಗಳನ್ನು ಪ್ರತಿವರ್ಷ ಸಲ್ಲಿಸುತ್ತಾರೆ. ಸಮ್ರಾಟನಿಗೆ ಯುದ್ಧದಲ್ಲಿ ನೆರವಾಗುತ್ತಾರೆ. ಮೊಗಲರು ಆಳಿದ ವಿಶಾಲ ವಾದ ಉತ್ತರ ಭಾರತ ಮೊಗಲ ಸಾಮ್ರಾಜ್ಯವಾಯಿತು. ಸವದತ್ತಿಯ ರಟ್ಟರು ಆಳಿದ ಚಿಕ್ಕಪ್ರದೇಶ ರಟ್ಟರ ರಾಜ್ಯ ಎನಿಸಿಕೊಂಡಿತು.

ಕ್ರಿ. ಪೂ. ನಾಲ್ಕನೆಯ ಶತಮಾನದಲ್ಲಿ ಅಲೆಗ್ಸಾಂಡರ್ ತನ್ನ ದಂಡ ಯಾತ್ರೆಯ ಮೂಲಕ ವಿಸ್ತಾರವಾದ ಮ್ಯಾಸಿಡೋನಿಯನ್ ಸಾಮ್ರಾಜ್ಯವನ್ನು ಸ್ಥಾಪಿಸಿದ. ಅಂದು ಪ್ರಬಲವಾಗಿದ್ದ ಪರ್ಷಿಯ ದೇಶವನ್ನು ಗೆದ್ದು ಬಂದ ಅಲೆಗ್ಸಾಂಡರ್ ಭಾರತವನ್ನೂ ಪ್ರವೇಶಿಸಿ ಕೆಲವು ಪ್ರದೇಶಗಳನ್ನು ವಶಪಡಿಸಿ ಕೊಂಡ. ಪ್ರಪಂಚಕ್ಕೆ ತಾನು ಒಡೆಯನಾಗಬೇಕೆಂಬ ಆತನ ಆಕಾಂಕ್ಷೆ ಫಲಿಸಲಿಲ್ಲ. ಕ್ರಿ. ಪೂ. 323ರಲ್ಲಿ ಆತ ಮೃತಪಟ್ಟ ಬಳಿಕ ಸಾಮ್ರಾಜ್ಯ ನುಚ್ಚು ನೂರಾಯಿತು ; ಆತನ ದಳಪತಿಗಳಲ್ಲಿ ಹಂಚಿಹೋಯಿತು.

ಮ್ಯಾಸಿಡೋನಿಯ ಸಾಮ್ರಾಜ್ಯ ನಶಿಸಿದ ಅನಂತರ ಮೂಡಿದ್ದು ರೋಮನ್ ಸಾಮ್ರಾಜ್ಯ. ರೋಮನ್ ಸಾಮ್ರಾಜ್ಯದ ಆರಂಭ ಸರಿಸುಮಾರು ಕ್ರಿಸ್ತಶಕೆಯ ಪ್ರಾರಂಭ. ರೋಮನ್ ಸಾಮ್ರಾಜ್ಯಾಧಿಪತಿ ಥಿಯೊಡೋಸಿಯಸ್ 395ರಲ್ಲಿ ಮೃತನಾದಾಗ ಆತನ ಇಬ್ಬರು ಮಕ್ಕಳು ಸಾಮ್ರಾಜ್ಯವನ್ನು ಹಂಚಿಕೊಂಡರು. ಉತ್ತರ ರೋಮ್ ಸಾಮ್ರಾಜ್ಯ ಬೈಜಾಂಟಿಯಮ್ ಸಾಮ್ರಾಜ್ಯ ಎಂದು ಪ್ರಸಿದ್ಧವಾಯಿತು. ಅದರ ಕೇಂದ್ರ ಬೈಜಾಂಟಿಯಂ ಆಗಿದ್ದು ಆ ನಗರದ ಹೆಸರು ಅನಂತರ ಕಾನ್‌ಸ್ಟಾಂಟಿನೋಪಲ್ ಎಂದಾಯಿತು. ಈಗ ಇಸ್ತಾಂ ಬೂಲ್ ಎಂಬ ಹೆಸರಿನಿಂದ ಪರಿಚಿತ. ಪಶ್ಚಿಮ ರೋಮ್ ಸಾಮ್ರಾಜ್ಯಕ್ಕೆ ಇಟಲಿಯೇ ಕೇಂದ್ರ. ಸೈನ್ಯಾಧಿಪತಿಗಳು ಮಾತ್ರವಲ್ಲದೆ ಕ್ರೈಸ್ತ ಧರ್ಮ ಗುರುಗಳು ಕೂಡ ರೋಮನ್ ಸಾಮ್ರಾಜ್ಯವನ್ನು ಆಳಿದರು.

ಅಲೆಗ್ಸಾಂಡರನ ಮರಣಾನಂತರ ಭಾರತದಲ್ಲಿ ತಲೆಯೆತ್ತಿದ್ದು [illegible] ಸ್ಥಾಪಿಸಿದ ಮೌರ್ಯ ಸಾಮ್ರಾಜ್ಯ. ಅಲೆಗ್ಸಾಂಡರ್ ಮರಣಹೊಂದಿದ

ತಕ್ಷಣ ಶಕ, ಯವನ, ಕಿರಾತ, ಕಾಂಭೋಜ, ಪಾರಸೀಕ, ಬಾಹ್ಲೀಕ ಮುಂತಾದ ಸ್ಥಳೀಯ ಜನರನ್ನು ಒಳಗೊಂಡ ಸೈನ್ಯವನ್ನು ಸಜ್ಜುಗೊಳಿಸಿ, ಅಲೆಗ್ಸಾಂಡರ್ ಉಳಿಸಿಹೋಗಿದ್ದ ಗ್ರೀಕ್ ಅಧಿಕಾರಿಗಳಿಂದ ಪ್ರದೇಶಗಳನ್ನು ಕಿತ್ತುಕೊಂಡು, ಕೌಟಿಲ್ಯನ ಸಹಾಯದಿಂದ ಸಾಮ್ರಾಜ್ಯವನ್ನು ನಿರ್ಮಿಸಲು ಚಂದ್ರಗುಪ್ತ ಸಮರ್ಥನಾದ. ಅಲೆಗ್ಸಾಂಡರನ ಪೌರಸ್ತ್ಯ ರಾಜ್ಯಕ್ಕೆ ಉತ್ತರಾಧಿಕಾರಿಯಾಗಿದ್ದ ಸೆಲ್ಯೂಕಸ್ ಚಂದ್ರಗುಪ್ತನ ಮೇಲೆ ದಂಡೆತ್ತಿ ಬಂದನಾದರೂ ಅವನನ್ನು ಗೆಲ್ಲಲಾಗಲಿಲ್ಲ. ಸಂಧಿ ಮಾಡಿಕೊಂಡ ಸೆಲ್ಯೂಕಸ್ ಹಿಂದಿರುಗಿದ. ಚಂದ್ರಗುಪ್ತನ ಸಾಮ್ರಾಜ್ಯ ಇಡೀ ಉತ್ತರ ಭಾರತವನ್ನೂ ದಕ್ಷಿಣದ ಕೆಲವು ಭಾಗಗಳನ್ನೂ ಒಳಗೊಂಡಿತ್ತು. ಚಂದ್ರಗುಪ್ತನ ಮೊಮ್ಮಗ ಅಶೋಕ ಕೂಡ ರಾಜ್ಯ ವಿಸ್ತರಣೆಯಲ್ಲಿ ತೊಡಗಿದ. ಈತನ ಸಾಮ್ರಾಜ್ಯದ ಗುರುತನ್ನು ತೋರಿಸುವ ಶಾಸನಗಳು ಮೈಸೂರಿನವರೆಗೂ ಇವೆ. ಪರ್ಷಿಯ ದೇಶದ ಎಲ್ಲೆಯವರೆಗೂ ಅಂಥ ಶಾಸನಗಳಿವೆ. ಕ್ರಿ. ಪೂ. 322ರಲ್ಲಿ ಸ್ಥಾಪಿತವಾದ ಈ ಸಾಮ್ರಾಜ್ಯ ಕ್ರಿ. ಪೂ. 184ರ ತನಕ ಅಸ್ತಿತ್ವದಲ್ಲಿತ್ತು.

ರೋಮನ್ ಸಾಮ್ರಾಜ್ಯ ತನ್ನ ಅವನತಿಯನ್ನು ಕಂಡಂತೆ ಅರೇಬಿಯದಲ್ಲಿ ಹುಟ್ಟಿಕೊಂಡದ್ದು ಇಸ್ಲಾಂ ಸಾಮ್ರಾಜ್ಯ. ಇದರ ಸ್ಥಾಪಕರು ಮಹಮ್ಮದ್ ಪೈಗಂಬರ್. ಅನಂತರ ಒಂದು ಶತಮಾನದೊಳಗೆ ಇಸ್ಲಾಂ ಸಾಮ್ರಾಜ್ಯ ಸಿರಿಯ, ಮೆಸಪಟೇಮಿಯ, ಆಫ್ರಿಕ ಮತ್ತು ಸ್ಪೇನ್‌ಗಳ ಉತ್ತರದ ಭಾಗಗಳನ್ನು ಒಳಗೊಂಡಿತ್ತು. ಪೂರ್ವದಲ್ಲಿ ಪರ್ಷಿಯವನ್ನು ಪೂರ್ಣ ಆವರಿಸಿ ಸಿಂಧೂ ನದಿಯವರೆಗೆ ಹಬ್ಬಿತ್ತು. ಭಾರತದಲ್ಲಿ ಮೊಗಲ್ ಸಾಮ್ರಾಜ್ಯವನ್ನು ಹದಿನಾರನೆಯ ಶತಮಾನದಲ್ಲಿ ಸ್ಥಾಪಿಸಿದವನು ಬಾಬರ್. ಆತನ ಮೊಮ್ಮಗ ಅಕ್ಬರ್ ಮೊಗಲ ಸಾಮ್ರಾಜ್ಯವನ್ನು ವಿಸ್ತರಿಸಿದ.

ಚೀನದ ಮೊದಲ ಸಾಮ್ರಾಜ್ಯಾಧಿಪತಿ, ಷಿಹುವಾಂಗ್—'ಪ್ರಪಂಚದ ಮೊದಲ ಅರಸ'—ಎಂದು ಪ್ರಸಿದ್ಧನಾದ ಚಿನ್. ಆತ ಉತ್ತರ ಚೀನದ ಒಂದು ಪ್ರದೇಶದ ಅರಸ. ಆತನ ಆಳ್ವಿಕೆಯ ಅನಂತರ ಹಾನ್ ಸಂತತಿಯವರು ಚೀನೀ ಸಾಮ್ರಾಜ್ಯವನ್ನು ಕ್ರಿ. ಪೂ. 202 ರಿಂದ ಕ್ರಿ. ಶ. 221ರ ತನಕ ಆಳಿದರು. ಅವರು ಆಳಿದ ಸಾಮ್ರಾಜ್ಯದ ವಿಸ್ತಾರ ಮಧ್ಯ ಚೀನಕ್ಕೆ ಮಾತ್ರ ಸೀಮಿತವಾಗಿತ್ತು. 618 ರಿಂದ 906ರವರೆಗೆ ತಾಂಗ್ ಸಾಮ್ರಾಜ್ಯದ ಅರಸರು ಮಧ್ಯ ಮತ್ತು ಪಶ್ಚಿಮ ಚೀನವನ್ನು ಆಳಿದರು.

ಹದಿಮೂರನೆಯ ಶತಮಾನದಲ್ಲಿ ಮಂಗೋಲರನ್ನು ಒಟ್ಟುಗೂಡಿಸಿದ ಚೆಂಗೀಸ್‌ಖಾನ್ 1206ರಲ್ಲಿ ಮಂಗೋಲ್ ಸಾಮ್ರಾಜ್ಯವನ್ನು ಸ್ಥಾಪಿಸಿದ. ಮಧ್ಯ ಏಷ್ಯ, ಪರ್ಷಿಯ, ಮೆಸಪಟೇಮಿಯ, ಚೀನ ಇವಿಷ್ಟು ಮಂಗೋಲ್ ಸಾಮ್ರಾಜ್ಯಕ್ಕೆ 1280ರಲ್ಲಿ ಸೇರಿದ್ದುವು. ಚೆಂಗೀಸ್‌ಖಾನನ ಮೊಮ್ಮಗ ಕುಬ್ಲಾಯ್‌ಖಾನ್ ದಯಾಳುವಾದ ಸಾಮ್ರಾಜ್ಯಾಧಿಪತಿಯಾಗಿದ್ದ. ಹದಿನೈದನೆಯ ಶತಮಾನದ ಪೂರ್ವಾರ್ಧದ ಹೊತ್ತಿಗೆ ಮಂಗೋಲ್ ಸಾಮ್ರಾಜ್ಯ ಅವನತಿಯನ್ನು ಕಂಡಿತು.

ಹದಿನೈದು ಮತ್ತು ಹದಿನಾರನೆಯ ಶತಮಾನಗಳಲ್ಲಿ ಪ್ರಬಲವಾಗಿದ್ದದ್ದು ಆಟಮನ್ ಸಾಮ್ರಾಜ್ಯ. 1299ರಲ್ಲಿ ತುರ್ಕಿಯಲ್ಲಿ ಓಸ್ಮಾನ್ ದೊರೆಯಿಂದ ಸ್ಥಾಪಿತವಾದ ಈ ಸಾಮ್ರಾಜ್ಯ ಹದಿನೈದನೆಯ ಶತಮಾನದ ಹೊತ್ತಿಗೆ ದಾಯುವ್ಯ ಏಷ್ಯವನ್ನೆಲ್ಲ ಆವರಿಸಿತು. 1453ರಲ್ಲಿ ಬೈಜಾಂಟಿಯಂ ಸಾಮ್ರಾಜ್ಯವೂ ಆಟಮನ್ ಸಾಮ್ರಾಜ್ಯಕ್ಕೆ ಸೇರಿತು. ಹದಿನಾರನೆಯ ಶತಮಾನದಲ್ಲಿ ಮೆಸಪಟೇಮಿಯ ಮತ್ತು ಸಿರಿಯ ಇವು ಕೂಡ ಈ ಸಾಮ್ರಾಜ್ಯಕ್ಕೆ ಸೇರಿದುವು. 1521ರಲ್ಲಿ ಸುಲೇಮಾನ್ ಎಂಬ ಸಮ್ರಾಟ ಹಂಗೇರಿ ವಿರುದ್ಧ ಅದನ್ನು ವಿಸ್ತರಿಸಿದ. ಹಂಗೇರಿಯೂ ಈ ಸಾಮ್ರಾಜ್ಯದ ಭಾಗವಾಯಿತು. ಅನಂತರ ಅರ್ಮೇನಿಯ ಇರಾಕ್‌ಗಳೂ ಇದಕ್ಕೆ ಸೇರಿದುವು.

ರಷ್ಯದ ಇವಾನ್ ಎಂಬ ದೊರೆ ಉಳಿದಿದ್ದ ಮಂಗೋಲ್ ಆಡಳಿತವನ್ನು ಕೊನೆಗಾಣಿಸಿ ನೊವ್‌ಗೊರಾಡ್ ಪ್ರಾಂತ ವಶಪಡಿಸಿಕೊಂಡದ್ದು ರಷ್ಯನ್ ಸಾಮ್ರಾಜ್ಯದ ಪ್ರಾರಂಭ. ಮಾಸ್ಕೊ ಸಂಘಟಿತ ರಷ್ಯದ ಕೇಂದ್ರವಾಯಿತು. ಆತನ ಮಗ ಇವಾನ್ ಸೈಬೀರಿಯಕ್ಕೆ ಅದನ್ನು ವಿಸ್ತರಿಸಿದ. ಆತನಿಗೆ ಬಂದ ಬಿರುದು 'ಜಾರ್'. ಮುಂದೆ ಆ ಸಂತತಿ ಜಾರ್ ದೊರೆಗಳ ಸಂತತಿ ಎನಿಸಿತು. ಬೋಲ್ಷೆವಿಕ್ ಕಮ್ಯೂನಿಸ್ಟ್ ಪಂಗಡ 1920ರಲ್ಲಿ ಅಧಿಕಾರ ಪಡೆಯಿಕೊಳ್ಳುವವರೆಗೆ ಜಾರ್ ದೊರೆಗಳು ರಷ್ಯವನ್ನು ಆಳುತ್ತಿದ್ದರು.

1804ರಲ್ಲಿ ರೋಮನ್ ಸಾಮ್ರಾಜ್ಯದ ಎರಡನೆಯ ಫ್ರಾನ್ಸಿಸ್ ದೊರೆ ತಾನು ಆಸ್ಟ್ರಿಯ ಸಾಮ್ರಾಜ್ಯದ ಅಧಿಪತಿ ಎಂದು ಸಾರಿಕೊಂಡ. ಮಧ್ಯ ಯೂರೋಪಿನ ಹನ್ನೆರಡು ದೇಶಗಳನ್ನು ಒಟ್ಟುಗೂಡಿಸುವ ಉದ್ದೇಶದಿಂದ 1867ರಲ್ಲಿ ಹಂಗೆರಿಯನ್ನು ಆಸ್ಟ್ರಿಯದೊಂದಿಗೆ ಫ್ರಾನ್ಸಿಸ್ ಜೋಸೆಫ್ ಎಂಬ ಸಾಮ್ರಾಜ್ಯಾಧಿಪತಿ ಕೂಡಿಸಿದ. ಆದರೆ ಮೊದಲ ಮಹಾಯುದ್ಧದ ಅನಂತರ ಆಸ್ಟ್ರಿಯ, ಹಂಗೆರಿ, ಚೆಕೊಸ್ಲೊವಾಕಿಯಗಳಾಗಿ ಒಡೆದುವು.

ಸಾಮ್ರಾಜ್ಯ ನಿರ್ಮಾಣ ಪ್ರಯತ್ನ ತೀವ್ರಗೊಂಡದ್ದು ಮಧ್ಯಯುಗದ ಅನಂತರ. ಫ್ರೆಂಚ್ ಸಾಮ್ರಾಜ್ಯವನ್ನು ಕಟ್ಟುವುದರಲ್ಲಿ ಬಹಳ ನಿಪುಣತೆಯಿಂದ ಸೈನ್ಯ ಬಳಸಿಕೊಂಡವನು ನೆಪೋಲಿಯನ್. ಆತ ಆಸ್ಟ್ರಿಯವನ್ನು ಗೆಲ್ಲುವುದರೊಂದಿಗೆ ತನ್ನ ದಿಗ್ವಿಜಯ ಪ್ರಾರಂಭಿಸಿದ. ಆಸ್ಟ್ರಿಯ, ಸ್ವಿಟ್ಜರ್‌ಲೆಂಡ್, ಸ್ಪೇನ್‌ಗಳು ವಶವಾದ ಬಳಿಕ ರಷ್ಯದ ಮೇಲೆ ದಾಳಿಮಾಡಿದ. ರಷ್ಯ ಆತನ ವಶವಾಗಲಿಲ್ಲ. ಮಾಸ್ಕೊವನ್ನು ಮಾತ್ರ ಆತ ಹಿಡಿದುಕೊಂಡ. 1813ರ ಅಕ್ಟೋಬರ್ 16ರಿಂದ 19ರವರೆಗೆ ಯೂರೋಪಿನ ದೇಶಗಳು ಒಟ್ಟಾಗಿ, ಫ್ರಾನ್ಸಿಗೆ ಹಿಂದಿರುಗುತ್ತಿದ್ದ ನೆಪೋಲಿಯನನನ್ನು ಅಡ್ಡಗಟ್ಟಿ ಸೋಲಿಸಿದುವು. ಮತ್ತೆ ಪ್ರಬಲನಾಗಲು ಪ್ರಯತ್ನಿಸಿದನಾದರೂ ವಾಟರ್‌ಲೂ ಕದನದಲ್ಲಿ 1815ರಲ್ಲಿ ಸೋತ. ಫ್ರೆಂಚ್ ಸಾಮ್ರಾಜ್ಯದ ಅಧೀನ ದೇಶಗಳು ಮುಂದಿನ ಎರಡು ಶತಮಾನಗಳಲ್ಲಿ ಒಂದೊಂದಾಗಿ ಸ್ವತಂತ್ರಗೊಂಡುವು.

ಭಾರತದಲ್ಲಿ ಅಶೋಕನ (ಕ್ರಿ. ಪೂ. ಮೂರನೆಯ ಶತಮಾನ) ಸಾಮ್ರಾಜ್ಯ ದೇಶದ ಬಹ್ವಂಶವನ್ನು ಆವರಿಸಿತ್ತು. ಮುಂದೆ ಏಳನೆಯ ಶತಮಾನದಲ್ಲಿ ಹರ್ಷವರ್ಧನನು ಉತ್ತರ ಭಾರತದ ಸಮ್ರಾಟನಾದ. ಅವನಿಗೆ ಸರಿದೊರೆಯಾಗಿ ದಕ್ಷಿಣ ಭಾರತದ ಸಮ್ರಾಟನಾಗಿ ಬಾದಾಮಿಯ ಚಾಲುಕ್ಯರ ಇಮ್ಮಡಿ ಪುಲಿಕೇಶಿ ಆಳಿದ. ರಾಷ್ಟ್ರಕೂಟರ ಮೂರನೆಯ ಗೋವಿಂದನು ಹಿಮಾಲಯದ ತನಕವೂ ಜೈತ್ರಯಾತ್ರೆ ಕೈಗೊಂಡು, 'ಭರತೇಶ್ವರ' ಎನ್ನಿಸಿಕೊಂಡ. ಅಕ್ಬರನ ಕಾಲದಲ್ಲಿ (ಹದಿನಾರನೆಯ ಶತಮಾನ) ಮೊಗಲ್ ಸಾಮ್ರಾಜ್ಯ ಮೆರೆಯಿತು. ಸಮ್ರಾಟ ಕೃಷ್ಣದೇವರಾಯನ ಆಳ್ವಿಕೆಯಲ್ಲಿ ವಿಜಯನಗರ ಸಾಮ್ರಾಜ್ಯ (ಹದಿನಾರನೆಯ ಶತಮಾನ) ಹಿರಿಮೆಯ ಪರಾಕಾಷ್ಠೆಯನ್ನು ಮುಟ್ಟಿತು.

ಸಮುದ್ರಯಾನ ಮತ್ತು ವ್ಯಾಪಾರ ಬ್ರಿಟಿಷ್ ಸಾಮ್ರಾಜ್ಯದ ನಿರ್ಮಾಣಕ್ಕೆ ಕಾರಣವಾದುವು. ನ್ಯೂಫೌಂಡ್‌ಲೆಂಡ್ (1583), ವರ್ಜೀನಿಯ (1607), ಬರ್ಮೂಡ (1611) ಇವು ಬ್ರಿಟನಿನ ಮೊಟ್ಟಮೊದಲ ವಸಾಹತುಗಳು. 1783ರಲ್ಲಿ ಅಮೆರಿಕದ ಹದಿಮೂರು ವಸಾಹತುಗಳು ಬೇರೆಯಾಗಿ ಸಂಯುಕ್ತ ಸಂಸ್ಥಾನವನ್ನು ರಚಿಸಿಕೊಂಡುವು. ಹದಿನೆಂಟನೆಯ ಶತಮಾನದಲ್ಲಿ ಭಾರತ, ಕೆನಡ, ಆಸ್ಟ್ರೇಲಿಯ, ಹತ್ತೊಂಬತ್ತನೆಯ ಶತಮಾನದಲ್ಲಿ ನ್ಯೂಜಿಲೆಂಡ್, ಆಫ್ರಿಕದ ದೇಶಗಳು ಬ್ರಿಟಿಷ್ ಸಾಮ್ರಾಜ್ಯಕ್ಕೆ ಒಳಪಟ್ಟುವು. ಇಪ್ಪತ್ತನೆಯ

ಯಿಂದ ನಾವೆ ಸರಾಗವಾಗಿ ಸಾಗಿತಾದರೂ ಇದ್ದಕ್ಕಿದ್ದಂತೆ ಎದ್ದ ಬಿರುಗಾಳಿ ಸಾಹಸಿಗಳೆಲ್ಲರಿಗೂ ತುಂಬ ತ್ರಾಸ ತಂದಿತು. ಕಷ್ಟಗಳ ಪರಂಪರೆಯೇ ಬಂದರೂ ಸೋಲನ್ನೊಪ್ಪಿಕೊಳ್ಳದೆ ಈ ತರುಣ ಸಾಹಸಿಗಳು ಮೂವತ್ತ ಮೂರು ದಿನಗಳ ಅನಂತರ ಮತ್ತೆ ನೆಲವನ್ನು ಕಂಡರು. ಆ ಅವಧಿಯಲ್ಲಿ 1.931 ಕಿಲೊಮೀಟರುಗಳ ದೂರವನ್ನು ಹುಟ್ಟು ಹಾಕಿ ಕ್ರಮಿಸಿದ್ದರು.

ನೀರಿನಲ್ಲಿ ಹೇಗೋ ಹಾಗೆಯೇ ನೆಲದ ಮೇಲೂ ಹಿಮಾಚ್ಛಾದಿತ ಪರ್ವತ ಶೃಂಗಗಳನ್ನೇರುವಾಗಲೂ ಮಾನವ ಅಪ್ರತಿಮ ಸಾಹಸ ತೋರಿದ್ದಾನೆ.

ಈಗ ನೆಲ, ನೀರು, ಆಕಾಶ ಬಿಟ್ಟು ವ್ಯೋಮದತ್ತ ಅವನ ದೃಷ್ಟಿ ಹರಿದಿದೆ. ಈ ಶತಮಾನದ ಚಂದ್ರ ಉಪಗ್ರಹ ಯಾತ್ರೆ ಮಾನವ ಎಂಥ ಸಾಹಸಿ ಎಂಬುದನ್ನು ಎತ್ತಿ ತೋರಿಸಿದೆ.

ನೋಡಿ : ಅನ್ವೇಷಣೆ : ಪರ್ವತಾರೋಹಣ : ವ್ಯೋಮಯಾತ್ರೆ

## ಸ್ಕಾಟ್, ಕ್ಯಾಪ್ಟನ್

ದಕ್ಷಿಣ ಧ್ರುವವನ್ನು ಶೋಧಿಸಿದ ಸಾಹಸಿ. ಕ್ಯಾಪ್ಟನ್ ಸ್ಕಾಟ್ ಇಂಗ್ಲೆಂಡಿನವನು. 1868ರ ಜೂನ್ 6ರಂದು ಡೇವನ್‌ಪೋರ್ಟ್ ಎಂಬ ಊರಿನಲ್ಲಿ ಸ್ಕಾಟ್ ಹುಟ್ಟಿದ. ಬಾಲ್ಯದಿಂದಲೂ ಸಾಹಸಗಳೆಂದರೆ ಇಷ್ಟಪಡುತ್ತಿದ್ದ ಸ್ಕಾಟ್ ಹದಿಮೂರನೆಯ ವಯಸ್ಸಿನಲ್ಲಿ ನೌಕಾ ವಿದ್ಯಾರ್ಥಿಯಾದ. ಬೇರೆ ಬೇರೆ ಹಡಗುಗಳಲ್ಲಿ ಕೆಲವು ಕಾಲ ತರಬೇತಿ ಪಡೆದ. 1887ರಲ್ಲಿ ಸರ್ ಕ್ಲಿಮೆಂಟ್ಸ್ ಮಾರ್ಕ್‌ಹ್ಯಾಂ ಎಂಬ ಹೆಸರಾಂತ ಭೂ ಚರಿತ್ರಕಾರನ ಪರಿಚಯವಾಯಿತು. ಆತ ಹೊಸಶೋಧನೆಗಳ ಯೋಜನೆಗಳನ್ನು ಮಾಡುತ್ತಿದ್ದ. ಸ್ಕಾಟನ ಬುದ್ಧಿ ಕೌಶಲ ಮತ್ತು ಸಾಹಸ ಪ್ರವೃತ್ತಿ ಅವನಿಗೆ ಮೆಚ್ಚಿಗೆಯಾದುವು. ದಕ್ಷಿಣಧ್ರುವ ಶೋಧನ ಯೋಜನೆ ಆಗ ಗಮನದಲ್ಲಿದ್ದು ಅದಕ್ಕೆ ಒಬ್ಬ ಮುಖ್ಯಾಧಿಕಾರಿ ಬೇಕಾಗಿದ್ದಿತು. ಆ ಸ್ಥಾನಕ್ಕೆ ಸ್ಕಾಟ್ ಸರಿಯಾದ ವ್ಯಕ್ತಿಯೆಂದು ಮಾರ್ಕ್‌ಹ್ಯಾಂ ನಿರ್ಧರಿಸಿದ.

1901ರಲ್ಲಿ 'ಡಿಸ್ಕವರಿ' ಎಂಬ ಹಡಗು ಈ ಕೆಲಸಕ್ಕಾಗಿ ನಿಯೋಜಿತವಾಯಿತು. ಸ್ಕಾಟ್ 2 ವರ್ಷದ ಮೇಲೆ 2 ತಿಂಗಳು ಪ್ರಯಾಣ ಮಾಡಿ ಅವರೆಗೆ ಯಾರೂ ಕಾಣದಿದ್ದಷ್ಟು ದೂರ ದಕ್ಷಿಣದಲ್ಲಿ ಸಾಗಿದ. ಹಲವು ಪ್ರದೇಶಗಳನ್ನು ನೋಡಿ, ಜನರಿಗೆ ತೋರಿಸಲು ಕೆಲವು ವಿಶಿಷ್ಟ ವಸ್ತುಗಳನ್ನು ತೆಗೆದುಕೊಂಡು ತನ್ನ ಯಶಸ್ವಿ ಯಾನವನ್ನು ಪೂರೈಸಿ, 1901ರಲ್ಲಿ ಹಿಂದಿರುಗಿದ. ತಾನು ಕಂಡುಹಿಡಿದಿದ್ದ ಹೊಸ ಪ್ರದೇಶಕ್ಕೆ ಇಂಗ್ಲೆಂಡಿನ ದೊರೆಯ ಹೆಸರಿಡಬೇಕೆಂದು ಏಳನೆಯ ಎಡ್ವರ್ಡನ ಪ್ರದೇಶ ಎಂದು ಕರೆದ. ಯಾನದಲ್ಲಿ ಒಮ್ಮೆ ಅವನ ಹಡಗಿನ ಮೇಲೆ ಎರಗಿದ ಅಲೆಗಳು, ತಣ್ಣಗಿನ ಗಾಳಿ ಬೀಸಿದೊಡನೆಯೇ ಹಿಮವಾದುವಂತೆ. ಸ್ಕಾಟನ ಸಾಹಸ ಅವನಿಗೆ ಅಪಾರ ಕೀರ್ತಿಯನ್ನು ತಂದಿತು. ಆತ 'ಡಿಸ್ಕವರಿ ಹಡಗಿನ ಕಡಲ ಪಯಣ' ಎಂಬ ಪುಸ್ತಕವನ್ನು ಬರೆದ.

1910ರಲ್ಲಿ ಸ್ಕಾಟ್ ದಕ್ಷಿಣ ಧ್ರುವದ ತುತ್ತತುದಿಯ ಪ್ರದೇಶಕ್ಕೆ ಹೋಗಲು ನಿರ್ಧರಿಸಿದ. ಅಲ್ಲಿಯವರೆಗೂ ಯಾರೂ ಆ ಪ್ರದೇಶದ ತುದಿಯನ್ನು ಮುಟ್ಟಿರಲಿಲ್ಲ. ಮತ್ತೊಬ್ಬರು ಆ ಪ್ರಯತ್ನವನ್ನು ಮಾಡುವ ಮೊದಲೇ ತಾನು ಸಾಧಿಸಬೇಕೆಂಬ ಮಹತ್ವಾಕಾಂಕ್ಷೆ ಸ್ಕಾಟನದು. ಅವನ ಸಹಾಯಕ್ಕೆ ಕೆಲವು ಗೆಳೆಯರು ಮುಂದಾದರು. 1910ರ ಜೂನ್ ಒಂದರಂದು 'ಟೆರ್ರಾ ನೋವ' (ಹೊಸ ಭೂಮಿ) ಎಂಬ ಹಡಗನ್ನೇರಿ ಸ್ಕಾಟ್ ಮತ್ತು ಅವನ ತಂಡದವರು ಇಂಗ್ಲೆಂಡನ್ನು ಬಿಟ್ಟರು. ಅಕ್ಟೋಬರ್ 12ರಂದು ಆಸ್ಟ್ರೇಲಿಯದ ಮೆಲ್ಬೋರ್ನ್ ಬಂದರನ್ನು ಟೆರ್ರಾ ನೋವ ಮುಟ್ಟಿತು. ವಿಲ್ಸನ್, ಓಟ್ಸ್, ಇವಾನ್ಸ್ ಮತ್ತು ಬೋವರ್ಸ್ ಮುಂತಾದ ಸಂಗಡಿಗರೊಡನೆ ಸ್ಕಾಟ್ ಮುಂದುವರಿದ. ರೋಸ್ ಸಮುದ್ರದ ಒಂದು ದ್ವೀಪದಲ್ಲಿ ಹಡಗು ನಿಂತು ಸಾಮಾನುಗಳನ್ನೂ ಜನರನ್ನೂ ಇಳಿಸಿ ಹಿಂದಿರುಗಿತು.

ಸ್ಕಾಟ್ ಮತ್ತು ತಂಡದವರು ಹಿಮ ಮತ್ತು ಹಿಮಗಾಳಿಯೊಡನೆ ಹೋರಾಡುತ್ತ ಮುಂದೆ ಸಾಗಿದರು. ಹಿಮ ಜಗತ್ತಿನ ಹೃದಯ ಭಾಗವನ್ನು ತಲುಪಿದ ಮೇಲೆ ಸಾಮಾನನ್ನು ಹೊತ್ತು ತಂದಿದ್ದ ಕುದುರೆಗಳನ್ನು ಮುಂದೆ ಒಯ್ಯಲಾಗಲಿಲ್ಲ. ಹಿಂದಕ್ಕೆ ಕಳುಹಿಸುವುದೂ ಅಸಾಧ್ಯವಾಗಿದ್ದುದರಿಂದ ಅವನ್ನು ಕೊಲ್ಲಬೇಕಾಯಿತು.

ಧ್ರುವದಿಂದ 320 ಕಿಲೊಮೀಟರ್ ದೂರದಲ್ಲಿದ್ದಾಗ ಸ್ಕಾಟ್ ಉಳಿದವರನ್ನೆಲ್ಲ ಹಿಂದಕ್ಕೆ ಕಳುಹಿಸಿ, ಡಾ. ವಿಲ್ಸನ್, ಕ್ಯಾಪ್ಟನ್ ಓಟ್ಸ್, ಲೆಫ್ಟಿನೆಂಟ್ ಬೋವರ್ಸ್ ಮತ್ತು ಎಡ್ವರ್ಡ್ ಇವಾನ್ಸ್ ಇವರೊಂದಿಗೆ ಮುಂದಕ್ಕೆ ಹೊರಟ. ಮಾರ್ಗ ಬಹಳ ಕಠಿಣವಾಗಿತ್ತು. ಹಿಮದಿಂದ ದಾರಿ ಪೊಳ್ಳಾಗಿದ್ದು ಜಾರು ಬಂಡಿಗಳ ಚಕ್ರಗಳು ಜನರ ಕಾಲುಗಳು ಎಲ್ಲವೂ ಹೂತು ಹೋಗುತ್ತಿದ್ದುವು. ದಿನೇ ದಿನೇ ದಣಿವು ಜಾಸ್ತಿಯಾಯಿತು. ಶಕ್ತಿ ಉಡುಗಿತು. ಆದರೂ ಅವನ ನಿಲುವು ಬದಲಾಗಲಿಲ್ಲ. ಉತ್ಸಾಹ ಕುಂದಲಿಲ್ಲ. 1912 ಜನವರಿ 16ರಂದು ದಕ್ಷಿಣ ಧ್ರುವದ ಅತ್ಯಂತ ಸಮೀಪದಲ್ಲಿ ಅವರಿದ್ದರು. ಎಲ್ಲರಿಗೂ ಅಮಿತವಾದ ಸಂತಸ ಉಕ್ಕಿಬಂದಿತು. ಅವರ ಪ್ರಯಾಣದ ಪ್ರಯಾಸವೆಲ್ಲ ಒಮ್ಮೆಗೆ ಮರೆತುಹೋಯಿತು. ತಮ್ಮ ರಾಷ್ಟ್ರ ಧ್ವಜದ ಸುರುಳಿಯನ್ನು ಬಿಚ್ಚಿ ಮುಂದುವರಿದರು. ಅವರ ಸ್ವಲ್ಪ ದೂರ ಹೋದೊಡನೆ ಏನೋ ಕಪ್ಪುವಸ್ತುವೊಂದು ಹಾರಾಡುವುದನ್ನು ನೋಡಿದರು. ಕಣ್ಣಲ್ಲಿ ಕಣ್ಣಿಟ್ಟು ನೋಡಿದಾಗ ದಾರಿಯಲ್ಲಿ ಜಾರುಬಂಡಿಗಳ ಚಕ್ರದ ಗುರುತೂ ನಾಯಿಗಳ ಪಾದಚಿಹ್ನೆಯೂ ಕಂಡುವು. ಸ್ಕಾಟನಿಗೆ ಎಲ್ಲವೂ ಅರ್ಥವಾಯಿತು. ನಾರ್ವೆ ದೇಶದ ಅಮುಂಡ್‌ಸನ್ ಎಂಬ ಸಾಹಸಿ ಇವರಿಗೂ ಒಂದು ತಿಂಗಳ ಹಿಂದೆಯೇ ದಕ್ಷಿಣ ಧ್ರುವವನ್ನು ಮುಟ್ಟಿ ಅಲ್ಲಿ ತನ್ನ ವಿಜಯ ಪತಾಕೆಯನ್ನು ಹಾರಿಸಿದ್ದ. ಧ್ವಜದ ಕೆಳಗೆ ಒಂದು ಸಣ್ಣ ಡೇರೆ. ಆ ಡೇರೆಯಲ್ಲಿ ಎರಡು ಪತ್ರಗಳು—ಒಂದು ಸ್ಕಾಟನಿಗೆ, ಮತ್ತೊಂದು ನಾರ್ವೆಯ ದೊರೆಗೆ. ತಮಗೆ ಅಪಘಾತವಾದಲ್ಲಿ ಅಥವಾ ಮರಣ ಒದಗಿದಲ್ಲಿ ಅದನ್ನು ನಾರ್ವೆ ದೇಶದ ದೊರೆಗೆ ತಿಳಿಸಬೇಕೆಂಬುದು ಆ ಪತ್ರದ ಒಕ್ಕಣೆ.

ಸ್ಕಾಟ್ ಹತಾಶನಾದ. ಹಿಡಿದ ಗುರಿಯನ್ನು ತಲುಪಿದರೂ ಮೊಟ್ಟಮೊದಲಿಗನಾಗಲಿಲ್ಲ ಎಂಬ ಕೊರಗು ಅವನನ್ನು ಕಾಡಿತು.

ಮರುಪ್ರಯಾಣ ಆರಂಭವಾಯಿತು. ನಿರಾಸೆ ಆಯಾಸ ಇವೆಲ್ಲದರಿಂದ ಬೇಸತ್ತಿದ್ದ ಅವರಿಗೆ ಮರಳಿ ಹೋಗುವುದು ಬಲು ಕಷ್ಟವಾಯಿತು. ದಿನಕ್ಕೆ ಕೇವಲ 15 ಕಿ. ಮೀ. ಗಳಂತೆ ಪ್ರಯಾಣ ಮಾಡುತ್ತಿದ್ದರು. ಸ್ವಸ್ಥಾನ ತಲಪಲು ಅವರು 1500 ಕಿ. ಮೀ. ನಡೆಯಬೇಕಿತ್ತು. ತೀರ ಸೋತಿದ್ದ ಇವಾನ್ಸ್ ಆ ಹಿಮದಲ್ಲಿ ಸತ್ತುಹೋದ. ಕೆಲವು ದಿನಗಳಲ್ಲಿ ಚಳಿಯಿಂದ ಓಟ್ಸ್‌ನ ಕಾಲುಗಳಿಗೆ ಹುಣ್ಣಾಗಿ ಅವನಿಗೆ ನಡೆಯಲು ಬಾರದಂತಾಯಿತು. ಜೊತೆಯವರಿಗೆ ತನ್ನಿಂದ ತೊಂದರೆ ಆಗದಿರಲಿ ಎಂದು ಓಟ್ಸ್ ಎಲ್ಲರ ಕಣ್ಣುತಪ್ಪಿಸಿ ಹಿಮಗಾಳಿಯಲ್ಲಿ ಹೊರಗೆ ಹೋದವನು ಹಿಂದಿರುಗಿ ಬರಲೇ ಇಲ್ಲ.

ಮರುದಿನ ಸ್ಕಾಟ್‌ನ ಬಲ ಪಾದ ಮರಗಟ್ಟಿತು. ಕಾಲು ಬೆರಳುಗಳು ಮುಂಚಿನಿಗೆ ಕೊಳೆತು ಹೋಗಿದ್ದವು. ಇಷ್ಟಾದರೂ ಸ್ಕಾಟ್ ತನ್ನ ದಿನಚರಿಯಲ್ಲಿ "ಮನೆಯಲ್ಲಿ ಆರಾಮವಾಗಿ ಕಾಲ ಕಳೆಯುವುದಕ್ಕಿಂತ ಇದೆಲ್ಲ ಎಷ್ಟು ಉತ್ತಮ !" ಎಂದು ಬರೆದ. ಅವರ ಆಹಾರದ ಠಾಣ್ಯ ಹದಿನೆಂಟು ಕಿಲೊ ಮೀಟರ್ ದೂರವಿದ್ದಾಗ ಬಿರುಗಾಳಿ ಎದ್ದು, ಹಿಮದ ರಾಶಿಯೇ ಅವರ ಮೇಲೆ ಬಿದ್ದು ಅವರು ಹಿಮದಲ್ಲಿ ಹೂತು ಹೋದರು.

ಅವರ ಶವಗಳ ಶೋಧನೆಗಾಗಿ ಜನರನ್ನು ನಿಯಮಿಸಿದರು. ಎಂಟು ತಿಂಗಳ ಅನಂತರ ಅವು ದೊರಕಿದವು. ಸ್ಕಾಟ್‌ನ ಬಗಲಲ್ಲಿ ಒಂದು ತೊಗಲಿನ ಚೀಲವಿದ್ದಿತು. ಅದರಲ್ಲಿ ಅವನ ದಿನಚರಿ ಮತ್ತು ಪತ್ರಗಳು ದೊರಕಿದುವು. ಅವುಗಳಿಂದ ಅವನ ಪ್ರವಾಸದ ಅನೇಕ ವಿಷಯಗಳು ತಿಳಿದು ಬಂದುವು. ದಿನಚರಿಯಲ್ಲಿ ಒಂದೆಡೆ ಹೀಗೆ ಬರೆದಿತ್ತು : "ನನ್ನ ಗೆಳೆಯರು ಧೈರ್ಯವನ್ನು ತೋರಿದರು ; ಸಹನೆಯಿಂದಿದ್ದರು. ಕಷ್ಟಗಳನ್ನು ಅನುಭವಿಸಿದರು. ಬದುಕಿ ಬಂದಿದ್ದರೆ ಇವುಗಳೆಲ್ಲದರ ಸುಂದರ ಕಥೆಯನ್ನು ಹೇಳುತ್ತಿದ್ದೆ." ಈ ವೃತ್ತಾಂತ ಆಂಗ್ಲ ಜನರ ಹೃದಯವನ್ನು ಕಲಕಿತು.

ಅವರ ಕಳೇಬರಗಳು ಇದ್ದ ಕಡೆ ಒಂದು ಕಟ್ಟೆ ಕಟ್ಟಿ ಸಮಾಧಿ ರಚಿಸಿದರು.

ನೋಡಿ : ಅನ್ವೇಷಣೆ, ಅಮುಂಡ್‌ಸನ್, ರೊಆಲ್ಡ್ ; ಧ್ರುವ, ಧ್ರುವಪ್ರದೇಶಗಳು

## ಸ್ಟಾಲಿನ್, ಜೋಸೆಫ್

ಸ್ಟಾಲಿನ್ ಎಂದರೆ ರಷ್ಯನ್ ಭಾಷೆಯಲ್ಲಿ 'ಉಕ್ಕಿನ ಮನುಷ್ಯ' ಎಂದರ್ಥ. ಈತ ಇಪ್ಪತ್ತನೆಯ ಶತಮಾನದ ಮುಖ್ಯ ವ್ಯಕ್ತಿಗಳಲ್ಲಿ ಒಬ್ಬ. ತನಗೆ ತಾನೇ ಇಟ್ಟುಕೊಂಡ ಹೆಸರು, ಸ್ಟಾಲಿನ್ (ರಷ್ಯನ್ ಉಚ್ಚಾರ : ಸ್ತಲೀನ್) ಇವನು 1924ರಿಂದ 1953ರವರೆಗೆ ರಷ್ಯವನ್ನು ಬಿಗಿಮುಷ್ಟಿಯಿಂದ ಆಳಿದ ನಾಯಕ.

ಈತನ ಹುಟ್ಟು ಹೆಸರು ಜೋಸೆಫ್ ಜುಗಾಶ್‌ವಿಲಿ. ತಂದೆ ಮೋಚಿ. ತಾಯಿ ಅಗಸಗಿತ್ತಿ. ಸ್ಟಾಲಿನ್ ಹುಟ್ಟಿದ್ದು 1879ರಲ್ಲಿ, ಜಾರ್ಜಿಯ ಪ್ರಾಂತದಲ್ಲಿ. ಕುಟುಂಬದ ನಾಲ್ಕು ಮಕ್ಕಳಲ್ಲಿ ಉಳಿದವನು ಇವನೊಬ್ಬನೆ. ಹನ್ನೊಂದು ವರ್ಷದವನಾಗಿದ್ದಾಗ ಪಿತೃ ವಿಯೋಗ. ಮಗ ಪಾದ್ರಿಯಾಗಬೇಕೆಂಬ ಆಸೆ ತಾಯಿಗೆ. ಹೀಗಾಗಿ ಜೋಸೆಫ್ ಒಂದು ಧಾರ್ಮಿಕ ಶಿಕ್ಷಣ ಸಂಸ್ಥೆಯಲ್ಲಿ ಪ್ರವೇಶಪಡೆದ. ಹತ್ತೊಂಬತ್ತನೆಯ ವಯಸ್ಸಿನಲ್ಲಿ ಕಾರ್ಲ್ ಮಾರ್ಕ್ಸನ ತತ್ತ್ವಗಳನ್ನು ಅನುಸರಿಸುತ್ತಿದ್ದ ಒಂದು ಗುಂಪಿಗೆ ಸೇರಿದ. ಮರುವರ್ಷ ಕ್ರಾಂತಿಕಾರಕ ಸಮಾಜವಾದಿ ಧ್ಯೇಯಗಳ ಪ್ರತಿಪಾದಕ ಎಂಬ ಕಾರಣದಿಂದ ಅವನನ್ನು ಧಾರ್ಮಿಕ ಕಾಲೇಜಿನಿಂದ ಹೊರಹಾಕಿದರು.

ಎರಡು ವರ್ಷಗಳ ಕಾಲ ಒಂದು ಆಕಾಶ ವೀಕ್ಷಣಾಲಯದಲ್ಲಿ ಗುಮಾಸ್ತನಾಗಿ ಕೆಲಸ ಮಾಡಿದ. ಜೊತೆಗೆ ರಷ್ಯದಲ್ಲಿ ಜಾರನ ಆಳ್ವಿಕೆಯನ್ನು ಕೊನೆಗಾಣಿಸುವ ಗುಪ್ತ ಚಳುವಳಿಯಲ್ಲಿ ಭಾಗವಹಿಸಿದ. ಪೋಲೀಸರು ಅವನನ್ನು ಹಿಂಬಾಲಿಸಿದರು. 1902ರಿಂದ 1913ರವರೆಗೆ ಅನೇಕ ಬಾರಿ ಸೆರೆಮನೆವಾಸ ಮತ್ತು ಗಡಿಪಾರಿನ ಶಿಕ್ಷೆ ಅವನ ಪಾಲಿಗೆ ಒದಗಿದುವು. 1907ರಲ್ಲಿ ಸೈನಿಕರ ಕಾವಲಿನಲ್ಲಿ ಹೋಗುತ್ತಿದ್ದ ಸರಕಾರಿ ವಾಹನವನ್ನು ನಿಲ್ಲಿಸಿ ಹಣವನ್ನು ದರೋಡೆ ಮಾಡಲು ಸ್ಟಾಲಿನ್ ವ್ಯವಸ್ಥೆ ಮಾಡಿದ. ಇದರಿಂದ 3,41,000 ರೂಬಲ್‌ಗಳು (ಸುಮಾರು 11,90,000 ರೂ.) ದೊರೆತುವು.

1905ರಲ್ಲಿ ಫಿನ್‌ಲೆಂಡಿನಲ್ಲಿ ಕಮ್ಯೂನಿಸ್ಟ್ ರಷ್ಯದ ಸ್ಥಾಪಕ ಲೆನಿನನ ಭೇಟಿ ಸ್ಟಾಲಿನನಿಗಾಯಿತು. ಇದೊಂದು ಮಹತ್ವದ ಘಟನೆ. 1912ರಲ್ಲಿ ಸ್ಟಾಲಿನ್ 'ಪ್ರಾವ್ದ' (ಸತ್ಯ) ಎನ್ನುವ ವೃತ್ತಪತ್ರಿಕೆಯನ್ನು ಸ್ಥಾಪಿಸಿ ಅದರ ಮೊದಲನೆಯ ಸಂಪಾದಕನಾದ.

1917ರಲ್ಲಿ ನಡೆದ ಕ್ರಾಂತಿ ರಷ್ಯದಲ್ಲಿ ಜಾರ್ ಆಡಳಿತವನ್ನು ತೊಡೆದು ಹಾಕಿತು. ಕಮ್ಯೂನಿಸ್ಟ್ ಪಕ್ಷದ ಆಳ್ವಿಕೆ ಆರಂಭವಾಯಿತು. ಇದಕ್ಕೆ ಸ್ವಲ್ಪ ಕಾಲದ ಮೊದಲು ಗಡಿಪಾರಿನ ಶಿಕ್ಷೆಗೆ ಗುರಿಯಾಗಿ ಪೂರ್ವ ಸೈಬೀರಿಯಕ್ಕೆ ಕಳುಹಲ್ಪಟ್ಟಿದ್ದರಿಂದ ಸ್ಟಾಲಿನ್ ಈ ಕ್ರಾಂತಿಯಲ್ಲಿ ಚಟುವಟಿಕೆಯ ಪಾತ್ರವನ್ನು ವಹಿಸಲು ಸಾಧ್ಯವಾಗಲಿಲ್ಲ. ಶಿಕ್ಷೆ ಮುಗಿದು ಹೊರಬಂದೊಡನೆಯೇ ಹೊಸ ವ್ಯವಸ್ಥೆಯಲ್ಲಿ ಶೀಘ್ರವಾಗಿ ಒಳ್ಳೆಯ ಪದವಿಯನ್ನು ಗಳಿಸಿದ. 1922ರಲ್ಲಿ ಕಮ್ಯೂನಿಸ್ಟ್ ಪಕ್ಷದ ಪ್ರಧಾನ ಕಾರ್ಯದರ್ಶಿಯಾಗಿ ನಿಯಮಿತನಾಗಿ, 1924ರಲ್ಲಿ ಸೋವಿಯೆತ್ ಒಕ್ಕೂಟದ ಮೊದಲ ಸಂವಿಧಾನವನ್ನು ಸಿದ್ಧಗೊಳಿಸಿದ. ಅದೇ ವರ್ಷ ಲೆನಿನ್ ನಿಧನ ಹೊಂದಿದ. ಅಧಿಕಾರಕ್ಕಾಗಿ ಸ್ಟಾಲಿನ್ ಮತ್ತು ಲಿಯಾನ್ ಟ್ರಾಟ್‌ಸ್ಕಿ ಇಬ್ಬರ ನಡುವೆ ಹೋರಾಟ ಆರಂಭವಾಯಿತು. ಟ್ರಾಟ್‌ಸ್ಕಿಯನ್ನು 1929ರಲ್ಲಿ ದೇಶಭ್ರಷ್ಟಗೊಳಿಸಿ ಸ್ಟಾಲಿನ್ ಸರ್ವ ಅಧಿಕಾರಗಳನ್ನು ವಹಿಸಿಕೊಂಡು ರಷ್ಯದ ಪ್ರಧಾನಿಯಾದ.

ಸ್ಟಾಲಿನನ ಆಡಳಿತದಲ್ಲಿ ಮಿತಿಮೀರಿದ ಕ್ರೌರ್ಯ–ರಕ್ತಪಾತ ನಡೆದರೂ ರಷ್ಯ ಅದ್ಭುತ ಪ್ರಗತಿ ಸಾಧಿಸಿತು. ಆತನ ನಾಯಕತ್ವದಲ್ಲಿ ಪಂಚವಾರ್ಷಿಕ



ಮೊಳಗಿದಾಗ ತಲೆಬಾಗುತ್ತಿತ್ತು. ಇಂಥ ಮೂರು ಯೋಜನೆಗಳ ಸಹಾಯ ದಿಂದ ರಷ್ಯ ಕೈಗಾರಿಕೋದ್ಯಮದಲ್ಲಿ ಬಹಳ ಮುಂದುವರಿಯಿತು.

ಬೆಳೆಯುತ್ತಿದ್ದ ಹಿಟ್ಲರನ ಪ್ರಬಲ ಸೈನ್ಯ ಸನ್ನಾಹ ಅವನನ್ನು ಚಿಂತೆಗೀಡು ಮಾಡಿತು. 1939ರ ಆಗಸ್ಟ್‌ನಲ್ಲಿ ಹಿಟ್ಲರನೊಡನೆ ಅನಾಕ್ರಮಣ ಒಪ್ಪಂದ ಮಾಡಿಕೊಂಡ. ಆದರೆ 1941ರ ಜೂನ್ 22ರಂದು ಜರ್ಮನರು ಈ ಒಪ್ಪಂದವನ್ನು ಮುರಿದು ರಷ್ಯವನ್ನು ಮುತ್ತಿದರು. ಮೊದಮೊದಲು ಜರ್ಮನಿಯ ಕೈ ಮೇಲಾಯಿತು. ರಷ್ಯನರು ಧೈರ್ಯದಿಂದ ಹೋರಾಡಿ ಕೈಬಿಟ್ಟುಹೋಗಿದ್ದ ಪ್ರದೇಶಗಳನ್ನು ಮತ್ತೆ ವಶಪಡಿಸಿಕೊಂಡರು. 1945ರಲ್ಲಿ ಜರ್ಮನಿಗೆ ಸೋಲು ನಿಶ್ಚಯವಾದಾಗ ಯೂರೋಪಿನ ಭವಿಷ್ಯವನ್ನು ಕುರಿತು ಅಮೆರಿಕದ ಅಧ್ಯಕ್ಷ ರೂಸ್‌ವೆಲ್ಟ್, ಬ್ರಿಟಿಷ್ ಪ್ರಧಾನಿ ಚರ್ಚಿಲ್ ಇವರೊಡನೆ ತೆಹರಾನ್ ಮತ್ತು ಯಾಲ್ಟಾಗಳಲ್ಲಿ ಸ್ಟಾಲಿನ್ ಮಾತುಕತೆ ನಡೆಸಿದ. 1945ರಲ್ಲಿ ತಾನೇ ರಷ್ಯನ್ ಸೈನ್ಯದ ಅತ್ಯುಚ್ಚ ಅಧಿಕಾರಿಯಾದ.

ಯುದ್ಧಾನಂತರ ರಷ್ಯ ಮತ್ತು ಪಾಶ್ಚಾತ್ಯ ದೇಶಗಳ ನಡುವಣ ಬಾಂಧವ್ಯ ಅಷ್ಟೇನು ಮಧುರವಾಗಿರಲಿಲ್ಲ. ಜರ್ಮನಿಯನ್ನು ಹಂಚಿಕೊಳ್ಳುವ ವಿಷಯದಲ್ಲಿ ಭಿನ್ನಾಭಿಪ್ರಾಯ ಎದ್ದಿತು. ಅಲ್ಲದೆ ಯೂರೋಪಿನ ಅನೇಕ ರಾಷ್ಟ್ರಗಳಲ್ಲಿ ಕಮ್ಯೂನಿಸ್ಟರ ಆಡಳಿತ ಏರ್ಪಡಲು ರಷ್ಯ ಕಾರಣವಾಯಿತು. ಇದರಿಂದ ಪಾಶ್ಚಾತ್ಯ ದೇಶಗಳು ಆತಂಕಗೊಂಡವು.

ಸರ್ವಾಧಿಕಾರಿಯ ಎಲ್ಲ ಗುಣಗಳೂ ಸ್ಟಾಲಿನ್‌ಗೆ ಇದ್ದುವು. ಶತ್ರುಗಳೂ ಮಿತ್ರರೂ ಅವನಿಗೆ ಹೆದರುತ್ತಿದ್ದರು. 1953ರ ಮಾರ್ಚ್ 5ರಂದು ಮಿದುಳಿನ ರಕ್ತಸ್ರಾವಕ್ಕೆ ತುತ್ತಾಗಿ ಅವನು ಮರಣ ಹೊಂದಿದ.

ಸ್ಟಾಲಿನ್ ತನ್ನ ಕಾಲದಲ್ಲಿ ವಿದ್ಯಾಭ್ಯಾಸ, ಪತ್ರಿಕೆಗಳು, ರೇಡಿಯೋ, ಕಲೆ ಎಲ್ಲವನ್ನೂ ಪ್ರಚಾರಕ್ಕಾಗಿ ಬಳಸಿಕೊಂಡ. ರಷ್ಯದಲ್ಲಿ ಅವನ ಪೂಜೆಯೇ ನಡೆಯಿತು. ಅವನೇ ರಷ್ಯ, ರಷ್ಯವೇ ಅವನು ಎನ್ನುವಂತೆ ಆಯಿತು. ಸ್ಟಾಲಿನನ ಸಾವಿನ ಅನಂತರ ರಷ್ಯದಲ್ಲಿ ಅವನ ರೀತಿನೀತಿಗಳನ್ನು ಅಲ್ಲಗಳೆಯತೊಡಗಿದರು. 1959ರಲ್ಲಿ ಸ್ಟಾಲಿನನ ಉತ್ತರಾಧಿಕಾರಿಯಾಗಿ ಬಂದ ಕ್ರುಶ್ಚೇವ್ ಸ್ಟಾಲಿನ್ ಒಬ್ಬ ಸರ್ವಾಧಿಕಾರಿಯಾಗಿದ್ದನೆಂದು ಆರೋಪಿಸಿದ. ಲೆನಿನನ ಸಮಾಧಿಯ ಬಳಿಯಿಂದ ಸ್ಟಾಲಿನನ ಶವದಾನಿಯನ್ನು ತೆಗೆದು ಬೇರೆ ಕಡೆ ಗೋರಿ ಮಾಡಲಾಯಿತು.

ನೋಡಿ : ಅಕ್ಟೋಬರ್ ಕ್ರಾಂತಿ ; ಲೆನಿನ್ ; ಸಮಾಜವಾದ

## ಸ್ಪಾರ್ಟಕಸ್

ಅವನು ತರಬೇತು ಹೊಂದಿದ್ದು ಖಡ್ಗಮಲ್ಲನಾಗಿ. ಆದರೆ ಪ್ರಸಿದ್ಧಿ ಪಡೆದದ್ದು ಗುಲಾಮರ ಬಂಡಾಯದ ನಾಯಕನಾಗಿ.

ಸ್ಪಾರ್ಟಕಸ್ ಬೆಳೆದದ್ದು, ಹೋರಾಡಿ ಮಡಿದದ್ದು ಕ್ರಿಸ್ತ ಪೂರ್ವ ಒಂದನೆಯ ಶತಮಾನದಲ್ಲಿ. ಹುಟ್ಟಿದ್ದು ಯಾವಾಗ, ಪ್ರಾರಂಭದ ವರ್ಷಗಳನ್ನು ಹೇಗೆ ಕಳೆದ ಎಂಬುದರ ಬಗ್ಗೆ ವಿವರ ಸ್ಪಷ್ಟವಾಗಿ ತಿಳಿದಿಲ್ಲ. ಚಿಕ್ಕಂದಿನಲ್ಲಿ ಕುರುಬನಾಗಿದ್ದ. ಇವನು ರೋಮನ್ ಸೈನ್ಯಕ್ಕೆ ಸೇರಿದ. ಅದನ್ನು ಬಿಟ್ಟಾಗ ರೋಮನರು ಇವನನ್ನು ಸೆರೆಹಿಡಿದು ಗುಲಾಮನನ್ನಾಗಿ ಮಾಡಿದರು. ಕಾಪುಲಿ ಎಂಬಲ್ಲಿ ಮಲ್ಲ ಶಾಲೆಗೆ ಮಾರಿದರು. ಪ್ರಾಚೀನ ರೋಮಿನಲ್ಲಿ ಬಹಳ ಜನಪ್ರಿಯವಾಗಿದ್ದ ಸಾರ್ವಜನಿಕ ಮಲ್ಲಯುದ್ಧಗಳಲ್ಲಿ ಭಾಗವಹಿಸಲು ಹಲವರು ಗುಲಾಮರಿಗೆ ಶಿಕ್ಷಣ ಕೊಡಲಾಗುತ್ತಿತ್ತು. ಇಂಥ ಶಾಲೆಯೊಂದರಲ್ಲಿ ಸ್ವಲ್ಪ ಗುಲಾಮನಾಗಿದ್ದ ಸ್ಪಾರ್ಟಕಸ್ ಎಪ್ಪತ್ತು ಜನ ಒಡನಾಡಿ ಮಲ್ಲರೊಡನೆ ಒಟ್ಟಾಗಿ ಸೇರಿ ರೋಮನರ ಎರಡು ಪಡೆಗಳನ್ನು ಒಂದಾದ ಮೇಲೊಂದರಂತೆ ಸೋಲಿಸಿದ. ಇವರು ದಕ್ಷಿಣ ಇಟಲಿಯ ಬಹು ಭಾಗವನ್ನು ಗೆದ್ದರು. ಆರಂಭಕ್ಕೆ ಎಪ್ಪತ್ತೊಂದರಷ್ಟಿದ್ದ ಮಲ್ಲಯೋಧರ ಬಲ ಅನೇಕ ಸಾವಿರವಾಯಿತು.

ಹಲವು ಕದನಗಳಲ್ಲಿ ರೋಮನ್ ಸೈನ್ಯಗಳನ್ನು ಸೋಲಿಸಿದ್ದ ಸ್ಪಾರ್ಟಕಸ್ ಮತ್ತು ಅವನ ಹಿಂಬಾಲಕರು ಸಿಸಿಲಿಗೆ ಹೋಗಬೇಕೆಂದಿದ್ದಾಗ ಅವನನ್ನು ಹೊಸ ರೋಮನ್ ನಾಯಕ ಮಾರ್ಕಸ್ ಲಿಸಿನಿಯಸ್ ಕ್ರಾಸಸ್ ಎದುರಿಸಿದ. ಸ್ಪಾರ್ಟಕಸ್ ಕೊನೆಯುವರೆಗೂ ಧೀರತನದಿಂದ ಹೋರಾಡಿ ಮಡಿದ (ಕ್ರಿ. ಪೂ. 71).

ಸೆರೆಸಿಕ್ಕಿದ ಆರು ಸಾವಿರ ಗುಲಾಮರನ್ನು ಕ್ರಾಸಸ್ ಶಿಲುಬೆಗೇರಿಸಿದ.

ಸ್ಪಾರ್ಟಕಸ್ ದಕ್ಷ ನಾಯಕ. ಸೋದರ ಗುಲಾಮರ ಬಗೆಗೆ ಅವನಿಗೆ ಬಹಳವಾದ ಅನುಕಂಪವಿತ್ತು. ಒಬ್ಬ ವ್ಯಕ್ತಿಗೆ ಇನ್ನೊಬ್ಬ ಗುಲಾಮನಾಗಿರುವುದು ಸರಿಯಲ್ಲ, ಎಲ್ಲರೂ ಸ್ವತಂತ್ರರಾಗಿ ಬಾಳಬೇಕು—ಎಂಬ ಉದಾತ್ತ ಭಾವನೆಯಿಂದ ಪ್ರೇರಿತನಾಗಿ ಸ್ಪಾರ್ಟಕಸ್ ರೋಮನರ ವಿರುದ್ಧ ದಂಗೆ ಎದ್ದ.

ಕ್ರಾಂತಿಪುರುಷನಲ್ಲದಿದ್ದರೂ ಕ್ರಾಂತಿಕಾರರು ಅವನಿಗೆ ಮಣಿಯುತ್ತಾರೆ. ಹದಿನೆಂಟನೆಯ ಶತಮಾನದ ಕೊನೆಯ ಭಾಗದಿಂದ ಇಂದಿನವರೆಗೂ ಸ್ಪಾರ್ಟಕಸ್ ಎಂಬ ಹೆಸರು ಅನೇಕ ಕ್ರಾಂತಿಕಾರರ ಗುಪ್ತನಾಮವಾಗಿದೆ. ಮಾನವನ ಎಂದೂ ಆರದ ಸ್ವಾತಂತ್ರ್ಯದಾಹಕ್ಕೆ ಸ್ಪಾರ್ಟಕಸ್ ಸಂಕೇತ.

## ಸ್ವಾತಂತ್ರ್ಯ

ಅಂಡಮಾನ್ ದ್ವೀಪ. ಅರ್ಧಮೈಗೆ ಬಟ್ಟೆಯಿಲ್ಲದ ಕೈದಿಯೊಬ್ಬನನ್ನು ಎಣ್ಣೆಯ ಗಾಣಕ್ಕೆ ಕಟ್ಟಿದ್ದಾರೆ. ದನದಂತೆ ಅವನು ಗಾಣವನ್ನು ತಿರುಗಿಸಬೇಕು. ದಿನಕ್ಕೆ ಇಷ್ಟು ಎಣ್ಣೆಯೆಂದು ತೆಗೆದುಕೊಟ್ಟರೆ ಆತನನ್ನು ಬಿಟ್ಟು ಅವನ ಕತ್ತಲು ಕೋಣೆಗೆ ಒಯ್ಯುತ್ತಾರೆ. ಇಲ್ಲವಿದ್ದರೆ ಕಣ್ಣು ಕತ್ತಲು ಬರಲಿ. ರಕ್ತ ಕಾರಲಿ ಮೂರ್ಛೆಹೋಗಲಿ ಅವನು ಗಾಣಕ್ಕೆ ಅಂಟಿಕೊಂಡಿರಬೇಕು.

1912 ರಿಂದ 1919ರವರೆಗೆ ಅಂಡಮಾನಿನಲ್ಲಿ ಕಾಣುತ್ತಿದ್ದ ದೃಶ್ಯ ಇದು. ಆ ಕೈದಿ ಕೊಲೆ ಮಾಡಿದವನಲ್ಲ : ಅಂಡಮಾನಿನಲ್ಲಿ ಹುಟ್ಟಿದವನೂ ಅಲ್ಲ : ಭಾರತದ ದೇಶಾಭಿಮಾನಿ ವೀರ ಸಾವರ್‌ಕರ್ ಅತ. ಮಾಡಿದ ತಪ್ಪು ದೇಶಕ್ಕೆ ಸ್ವಾತಂತ್ರ್ಯಬೇಕು ಎಂದು ಘೋಷಿಸಿದ್ದು.

ಹಣ್ಣು ಮುದುಕ. ಶುದ್ಧ ಜೀವನ ನಡೆಸಿದ್ದ ಕ್ರೈಸ್ತ ಬಿಷಪ್. ಪಾಲಿಕಾರ್ಪ್ ಎಂದು ಹೆಸರು. ಅವನು ಕ್ರೈಸ್ತಮತದವನೆಂದು ರೋಮನ್ ಸಿಪಾಯಿಗಳು ಫಿಲಿಪ್ ಎಂಬ ಅಧಿಕಾರಿಯ ಮುಂದೆ ಎಳೆತಂದರು.

" ನಿನ್ನ ಮತವನ್ನು ಬಿಡು " ಎಂದ ಫಿಲಿಪ್.

" ಎಂಬತ್ತಾರು ವರ್ಷ ನನ್ನ ಅರಸ ಯೇಸುವನ್ನು ಆರಾಧಿಸಿದ್ದೇನೆ. ಈಗ ಬಿಡಲೆ ? " ಎಂದ ಮುದುಕ. ಅವನನ್ನು ಉರಿಯಲ್ಲಿ ನಿಲ್ಲಿಸಿದರು : ಬೇಗ ಸಾಯಲಿಲ್ಲವೆಂದು ಕೊಲೆಗಡುಕನಿಂದ ತಿವಿಸಿಕೊಂದರು.

ಒಂದು ಸಣ್ಣ ಸಂಸ್ಥಾನ. ಆಳುವ ಅರಸನು ತೀರಿಕೊಂಡು ಅವನ ಮಲ್ಲದಾಯಿ ರಾಜ್ಯದ ಆಡಳಿತ ಸೂತ್ರಗಳನ್ನು ವಹಿಸಿಕೊಂಡಳು. ಬ್ರಿಟಿಷರ ಸೈನ್ಯ ಕೋಟೆಯನ್ನು ಮುತ್ತಿತು. ಉತ್ತರಾಧಿಕಾರಿಯಾಗುವಂತೆ ಹುಡುಗನೊಬ್ಬನನ್ನು ರಾಣಿ ದತ್ತು ತೆಗೆದುಕೊಳ್ಳುವುದು ಸರಿಯಲ್ಲ ಎಂದಿತು. ಕೇಳುವವರು ನೀವು ಯಾರು ? ಎಂದಳು ರಾಣಿ. ಸಣ್ಣ ಸಂಸ್ಥಾನದ ಸೈನ್ಯ ಪ್ರಬಲ ಬ್ರಿಟಿಷ್ ಸೈನ್ಯವನ್ನು ಎದುರಿಸಿ ಯುದ್ಧ ಮಾಡಿತು.

**ರಾಷ್ಟ್ರೀಯ ಸ್ವಾತಂತ್ರ್ಯ:** ದೇಶಕ್ಕೆ ತನ್ನ ಇಷ್ಟ ಬಂದಂಥ ಆಡಳಿತ ಪದ್ಧತಿಯನ್ನು ಹೊಂದಿರುವ, ತನಗೆ ಬೇಕಾದ ನಾಯಕರನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯ. ವ್ಯವಸಾಯ, ಕೈಗಾರಿಕೆ, ನೀರಾವರಿ, ರಾಜಕೀಯ ಸಂಸ್ಥೆಗಳು, ಕಲೆ ಪ್ರತಿಯೊಂದನ್ನೂ ತನಗೆ ಇಷ್ಟಬಂದಂತೆ ಬೆಳೆಸಿಕೊಳ್ಳುವ ಸ್ವಾತಂತ್ರ್ಯವಿರಬೇಕು.

ಒಬ್ಬ ವ್ಯಕ್ತಿಯ ಸ್ವಾತಂತ್ರ್ಯಕ್ಕೆ ಇನ್ನೊಬ್ಬರಿಂದ ತೊಂದರೆ ಬಂದರೆ ತಡೆಗಟ್ಟಿ ಅವನ ಸ್ವಾತಂತ್ರ್ಯವನ್ನು ಉಳಿಸುವವರು ಯಾರು ? 'ನೀನು ನಾನು ಹೇಳಿದಂತೆಯೇ ಕೇಳಬೇಕು,' 'ನೀನು ನನ್ನ ಮತವನ್ನೇ ಅನುಸರಿಸಬೇಕು,' ಹೀಗೆ ಬಲಿಷ್ಠನಾದವನು ದುರ್ಬಲನನ್ನು ಬಲಾತ್ಕಾರ ಮಾಡಿದರೆ ಹೇಗೆ ? ದುರ್ಬಲನನ್ನು ರಕ್ಷಿಸಿ, ಅವನ ಹಕ್ಕನ್ನು ಉಳಿಸಿಕೊಡಲು ಸಮಾಜವಿದೆ. ಪೋಲೀಸರು ಮತ್ತು ನ್ಯಾಯಾಲಯಗಳ ಮೂಲಕ ಸಮಾಜ ಅವನ ಹಕ್ಕನ್ನು ರಕ್ಷಿಸುತ್ತದೆ.

ಎಂದರೆ, ವ್ಯಕ್ತಿ ಸಮಾಜದಲ್ಲಿ ಇರುವುದರಿಂದ ಅವನ ಹಕ್ಕು ಉಳಿಯುತ್ತದೆ. ಕಾಡಿನಲ್ಲಿ ಹೋಗುತ್ತಿರುವ ಮನುಷ್ಯನಿಗೆ ಬದುಕುವ ಹಕ್ಕಿದೆ. ನಿಜ. ಆದರೆ ಮೈಮೇಲೆ ಹುಲಿ ಬಿದ್ದಾಗ ಆ ಹಕ್ಕಿನಿಂದ ಫಲವೇನು ? ಸಮಾಜ ಅವನನ್ನು ಕಾಪಾಡದಿದ್ದರೆ, ಪ್ರತಿಯೊಬ್ಬನೂ ತನಗಿಂತ ಬಲಿಷ್ಠನಾದವನು ಹೇಳಿದಂತೆ ಕೇಳಬೇಕಾಗುತ್ತದೆ.

ತನ್ನ ಸ್ವಾತಂತ್ರ್ಯವನ್ನು ಉಳಿಸಿಕೊಡುವ ಸಮಾಜದ ವಿಷಯದಲ್ಲಿ ವ್ಯಕ್ತಿಯ ಹೊಣೆಯೂ ಇದೆ. ಆ ಸಮಾಜ ನಡೆಯಲು ತೆರಿಗೆಗಳನ್ನು ಕೊಡಬೇಕು. ಆ ಸಮಾಜದ ಸದಸ್ಯನಾಗಿ, ಅದು ಹೇಗೆ ನಡೆಯಬೇಕು ಎಂದು ಯೋಚಿಸಬೇಕು, ಪ್ರತಿನಿಧಿಗಳ ಆಯ್ಕೆಯಲ್ಲಿ ಭಾಗವಹಿಸಬೇಕು, ಶಾಸನಗಳನ್ನು ಗೌರವಿಸಬೇಕು. ದೇಶಕ್ಕೆ ಸ್ವಾತಂತ್ರ್ಯವಿಲ್ಲದೆ ತನಗೆ ಸ್ವಾತಂತ್ರ್ಯವಿಲ್ಲ ಎಂಬುದನ್ನು ನೆನಪಿನಲ್ಲಿಡಬೇಕು. ದೇಶದ ಸ್ವಾತಂತ್ರ್ಯದ ರಕ್ಷಣೆಗಾಗಿ ಹಣ, ಪ್ರಾಣ ಎಲ್ಲವನ್ನೂ ಅರ್ಪಿಸಲು ಸಿದ್ಧವಾಗಿರಬೇಕು.

ನಾಗರಿಕ ಬದುಕಿನಲ್ಲಿ ಸ್ವಾತಂತ್ರ್ಯಕ್ಕಿಂತ ಮಿಗಿಲಾದದ್ದು ಇನ್ನೊಂದಿಲ್ಲ.

**ನೋಡಿ :** ಮೂಲಭೂತ ಹಕ್ಕುಗಳು ; ಹೆಬಿಯಸ್ ಕಾರ್ಪಸ್

## ಸಿಂಗಪುರ

ಎಲ್ಲಿ ನೋಡಿದರೂ ದಟ್ಟವಾದ ಕಾಡು, ಕೆಸರು. ಆದರೆ ಮಾನವ ಮನಸ್ಸು ಮಾಡಿದರೆ ಅಡವಿಯಲ್ಲೂ ಅರಮನೆ ಕಟ್ಟಬಹುದು. ಹೆಸರಿಲ್ಲದ ಅರಣ್ಯವನ್ನು ಹೆಸರುವಾಸಿಯಾದ ನಗರವಾಗಿ ಮಾಡಬಹುದು. ಮಾನವನ ಸಾಹಸಕ್ಕೆ ಒಂದು ಸಾಕ್ಷಿ ಸಿಂಗಪುರದ ಚರಿತ್ರೆ.

ಮಲಯ ಪರ್ಯಾಯ ದ್ವೀಪದ ದಕ್ಷಿಣದ ತುದಿಗಿರುವ ದ್ವೀಪ ಸಿಂಗಪುರ. ಅರಣ್ಯವಾಗಿದ್ದ ಈ ದ್ವೀಪವನ್ನು ವಾಸಯೋಗ್ಯವನ್ನಾಗಿ ಮಾಡಿದವನು ಸುಮಾತ್ರ ದ್ವೀಪದ ಶ್ರೀ ವಿಜಯ ಚಕ್ರಾಧಿಪತ್ಯದ ರಾಜಕುಮಾರ. ಆದರೆ ಈ ದ್ವೀಪಕ್ಕೆ ಸಿಂಗಪುರ ಅಥವಾ ಸಿಂಗಗಳ ಪುರ, ಸಿಂಹಗಳ ಪುರ ಎಂದು ಹೆಸರಿಟ್ಟವನು ಆ ಪ್ರದೇಶವನ್ನು ಗೆದ್ದ ಮೊದಲನೆಯ ರಾಜೇಂದ್ರಚೋಳದೇವ (1016-44) ಎಂದೂ ಹೇಳುತ್ತಾರೆ. ಜಾವಾದೇಶದ ರಾಜಕುಮಾರನೊಬ್ಬ ಈ ದ್ವೀಪದಲ್ಲಿ ಸಿಂಹವನ್ನು ಹೋಲುವ ಪ್ರಾಣಿಯೊಂದನ್ನು ನೋಡಿ ದ್ವೀಪಕ್ಕೆ ಸಿಂಗಪುರವೆಂದು ಹೆಸರಿಟ್ಟನೆಂದು ಇನ್ನೊಂದು ಹೇಳಿಕೆ.

ಸಿಂಗಪುರ ದ್ವೀಪಕ್ಕೂ ಮಲಯ ಪರ್ಯಾಯದ್ವೀಪಕ್ಕೂ ಸಂಪರ್ಕ ಕಲ್ಪಿಸಿರುವುದು ಜೋಹೋರ್ ಜಲಸಂಧಿಯ ಮೇಲಿನ ರೈಲುಮಾರ್ಗ ಹಾಗೂ ಎತ್ತರಿಸಿಮಾಡಿದ ಕಾಲುದಾರಿ.

ದಕ್ಷಿಣಕ್ಕೆ ಸಿಂಗಪುರ ಜಲಸಂಧಿಯಿದೆ. ಸಿಂಗಪುರ ದ್ವೀಪ ವಜ್ರದಾಕಾರದಲ್ಲಿದೆ. ಆಗ್ನೇಯ ಏಷ್ಯದ ಜಲ ಹಾಗೂ ವಾಯುಮಾರ್ಗಗಳ ಕೇಂದ್ರಸ್ಥಾನದಲ್ಲಿರುವ ಸಿಂಗಪುರ ಸಂಪತ್ತು ಸಮೃದ್ಧಿಯಿಂದ ಕೂಡಿದೆ.

ಸಿಂಗಪುರದ ಕೇಂದ್ರಸ್ಥಾನ ಹಾಗೂ ಅಲ್ಲಿರುವ ಆಳವಾದ ನೀರಿನ ಬಂದರು ಆಗ್ನೇಯ ಏಷ್ಯದ ಅತ್ಯಂತ ದೊಡ್ಡ ರೇವುಪಟ್ಟಣವಾಗಿ ಅದು ಅಭಿವೃದ್ಧಿ ಹೊಂದಲು ಕಾರಣವಾಗಿವೆ. ಒಂದು ವರ್ಷದಲ್ಲಿ 23,000ಕ್ಕೂ ಹೆಚ್ಚು ಹಡಗುಗಳು ಸಿಂಗಪುರ ಬಂದರಿಗೆ ಬಂದು ಹೋಗುತ್ತವೆ. ಅಲ್ಲದೆ ಸಿಂಗಪುರ ದ್ವೀಪದಿಂದ ಹದಿನಾರು ಪ್ರಮುಖ ವಾಯುಮಾರ್ಗಗಳಿವೆ.

ಸಿಂಗಪುರದಲ್ಲಿರುವುದು ಭೂಮಧ್ಯ ರೇಖಾವಲಯದ ಹವಾಮಾನ.

1819ರಲ್ಲಿ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ಸರ್ ಥಾಮಸ್ ಸ್ಟಾಮ್‌ಫರ್ಡ್ ರಾಫ್ಲ್‌ಸ್ ಸಿಂಗಪುರದಲ್ಲಿ ವಸಾಹತು ಸ್ಥಾಪಿಸಿದ. 1851ರಲ್ಲಿ ಈ ದ್ವೀಪ ಭಾರತದ ಗವರ್ನರ್ ಜನರಲನ ಆಡಳಿತಕ್ಕೆ ಬಂದಿತು.

1838ರಲ್ಲಿ ಬ್ರಿಟಿಷರು ಸಿಂಗಪುರದಲ್ಲಿ ಪ್ರಬಲ ನೌಕಾನೆಲೆಯನ್ನು ಸ್ಥಾಪಿಸಿದರು. ಎರಡನೆಯ ಮಹಾಯುದ್ಧದ ಕಾಲದಲ್ಲಿ ಜಪಾನೀಯರ ವಶವಾದ ಸಿಂಗಪುರ ಅನಂತರ ಮತ್ತೆ ಬ್ರಿಟಿಷರಿಗೆ ಸೇರಿತು.

ಸಿಂಗಪುರ ಸ್ವತಂತ್ರವಾಗಬೇಕೆಂಬ ಚಳುವಳಿ 1945ರಿಂದ ಆರಂಭವಾಯಿತು. 1963ರಲ್ಲಿ ಬ್ರಿಟಿಷರಿಂದ ಬಿಡುಗಡೆಹೊಂದಿದ ಈ ದ್ವೀಪ ಮಲೇಷ್ಯದ ಭಾಗವಾಯಿತು. ಮಲೇಷ್ಯದಿಂದ ಬೇರೆಯಾಗಿ 1965 ಆಗಸ್ಟ್ 9ರಂದು ಸ್ವತಂತ್ರವಾಯಿತು. ಅದೇ ಸೆಪ್ಟಂಬರ್‌ನಲ್ಲಿ ವಿಶ್ವಸಂಸ್ಥೆಯ ಸದಸ್ಯರಾಷ್ಟ್ರವಾಯಿತು.

1971ರ ಹೊತ್ತಿಗೆ ಸಿಂಗಪುರ ಹಾಗೂ ದೂರಪ್ರಾಚ್ಯ (ಹಾಂಕಾಂಗ್ ಬಿಟ್ಟು) ದಲ್ಲಿರುವ ತನ್ನೆಲ್ಲ ರಕ್ಷಣಾಪಡೆಗಳನ್ನೂ ಹಿಂದಕ್ಕೆ ಕರೆಸಿಕೊಳ್ಳುವುದಾಗಿ 1968ರಲ್ಲಿ ಬ್ರಿಟಿಷ್ ಸರಕಾರ ಪ್ರಕಟಿಸಿತು.

1819ರಲ್ಲಿ ರಾಫ್ಲ್‌ಸ್ ಸಿಂಗಪುರ ದ್ವೀಪವನ್ನು ತಲಪಿದಾಗ ಅಲ್ಲಿ ಇನ್ನೂರಕ್ಕೂ ಕಡಮೆ ಜನರಿದ್ದರು. ಆದರೆ 1966ರ ಜನಗಣತಿಯ ಪ್ರಕಾರ ಸಿಂಗಪುರದ ಜನಸಂಖ್ಯೆ 19,45,000. ಅವರಲ್ಲಿ ಶೇಕಡಾ ಎಪ್ಪತ್ತೈದರಷ್ಟು ಚೀನೀಯರು.

ಸಿಂಗಪುರದ ರಾಷ್ಟ್ರಾಧ್ಯಕ್ಷನನ್ನು ಸಂಸತ್ತು ನಾಲ್ಕು ವರ್ಷಗಳ ಅವಧಿಗೆ ಚುನಾಯಿಸುತ್ತದೆ. ಪ್ರಧಾನಮಂತ್ರಿ ಹಾಗೂ ಉಳಿದ [illegible] ಮಂತ್ರಿಗಳು ಸಂಸತ್ತಿಗೆ ಹೊಣೆ. ಮತದಾನ ಕಡ್ಡಾಯ.

ಇಸ್ಲಾಂ, ಬೌದ್ಧ ಧರ್ಮ, ಹಿಂದೂ ಧರ್ಮ, ಕ್ರೈಸ್ತ ಧರ್ಮ ಇವು ಸಿಂಗಪುರದಲ್ಲಿಯ ಮುಖ್ಯ ಧರ್ಮಗಳು. ಮಲಯ ಭಾಷೆ ರಾಷ್ಟ್ರಭಾಷೆ. ಇವುಗಳ ಜೊತೆಗೆ ಚೀನೀ, ತಮಿಳು, ಇಂಗ್ಲಿಷ್ ಈ ಭಾಷೆಗಳೂ ಇವೆ.

ಎಲ್ಲ ಮಕ್ಕಳಿಗೂ ಆರು ವರ್ಷ ಕಾಲ ಉಚಿತ ಕಡ್ಡಾಯ ಪ್ರಾಥಮಿಕ ಶಿಕ್ಷಣ, ಮಲಯ ಜನರಿಗೆ ವಿಶ್ವವಿದ್ಯಾನಿಲಯದವರೆಗೂ ಉಚಿತ ಶಿಕ್ಷಣ. ಶಿಕ್ಷಣಕ್ಕಾಗಿ ರಾಷ್ಟ್ರ ತನ್ನ ಆದಾಯದ ಕಾಲುಭಾಗವನ್ನು ಖರ್ಚುಮಾಡುತ್ತದೆ. ಸಿಂಗಪುರ ವಿಶ್ವವಿದ್ಯಾನಿಲಯದಲ್ಲಿ 1960 ಮಧ್ಯದಲ್ಲಿ ಸುಮಾರು

3,000 ವಿದ್ಯಾರ್ಥಿಗಳಿದ್ದರು. 1953ರಲ್ಲಿ ಚೀನೀಯರಿಂದ ಸ್ಥಾಪಿಸಲ್ಪಟ್ಟ ನಾನ್‌ಯುಂಗ್ ವಿಶ್ವವಿದ್ಯಾನಿಲಯದಲ್ಲಿ ಸುಮಾರು 2,000 ಜನ ವಿದ್ಯಾರ್ಥಿಗಳಿದ್ದರು.

ಸಿಂಗಪುರದಿಂದ ರಫ್ತಾಗುವ ಮುಖ್ಯ ವಸ್ತುಗಳು ರಬ್ಬರ್, ಪೆಟ್ರೋಲಿಯಂ ಪದಾರ್ಥಗಳು, ಟಿನ್, ಹತ್ತಿಬಟ್ಟೆಗಳು. ಹಡಗು ರಿಪೇರಿ ಕೈಗಾರಿಕೆಯ ಜೊತೆಗೆ ತೈಲ ಶುದ್ಧೀಕರಣ, ಸಿಮೆಂಟು ಕೈಗಾರಿಕೆಗಳಿವೆ. ಸಿಂಗಪುರ ನಗರದ ಪಶ್ಚಿಮದಲ್ಲಿ 3,642 ಹೆಕ್ಟೇರ್ ವಿಸ್ತೀರ್ಣದಲ್ಲಿರುವ ಜ್ಯುರಾಂಗ್ ಕೈಗಾರಿಕಾ ಎಸ್ಟೇಟು ಅತ್ಯಂತ ದೊಡ್ಡ ಕೈಗಾರಿಕಾ ಕ್ಷೇತ್ರ. ಇಲ್ಲಿ ಸಣ್ಣ ಕೈಗಾರಿಕೆಗಳಿಗೂ ದೊಡ್ಡ ಕೈಗಾರಿಕೆಗಳಿಗೂ ಸ್ಥಳವಿದೆ.

ಹಿಂದೂ ಮಹಾಸಾಗರಕ್ಕೂ ದಕ್ಷಿಣ ಚೀನ ಸಮುದ್ರಕ್ಕೂ ನಡುವೆ ಸಿಂಗಪುರ ದ್ವೀಪದ ದಕ್ಷಿಣದ ತುದಿಯಲ್ಲಿರುವ ಸಿಂಗಪುರ ನಗರವು ಗಣರಾಜ್ಯದ ರಾಜಧಾನಿ. ಇಲ್ಲಿ ಒಂದು ಪ್ರಸಿದ್ಧ ಸಸ್ಯೋದ್ಯಾನವೂ ರಾಷ್ಟ್ರೀಯ ವಸ್ತುಸಂಗ್ರಹಾಲಯವೂ ರಾಷ್ಟ್ರೀಯ ರಂಗಮಂದಿರವೂ ಇವೆ.

ಅರಣ್ಯಮಯವಾಗಿದ್ದ ದ್ವೀಪ ಇಂದು ಗಗನಚುಂಬಿ ಕಟ್ಟಡಗಳಿಂದ ಕೂಡಿದ ಆಧುನಿಕ ರಾಷ್ಟ್ರವಾಗಿದೆ.

| | | |
|---|---|---|
| ಖಂಡ | : | ಏಷ್ಯ |
| ವಿಸ್ತೀರ್ಣ | : | 580 ಚ. ಕಿ. ಮೀ. |
| ಜನಸಂಖ್ಯೆ | : | 20,00,000 |
| ರಾಜಧಾನಿ | : | ಸಿಂಗಪುರ ನಗರ |
| ಭಾಷೆ | : | ಮಲೆ |
| ಸರಕಾರ | : | ಗಣರಾಜ್ಯ |

ನೋಡಿ: ಮಲೇಷ್ಯ

## ಸಿಂಹಳ

ರಾಮಾಯಣದಲ್ಲಿ ಉಲ್ಲೇಖವಾಗಿರುವ ರಾವಣನ ರಾಜ್ಯವಾದ ಲಂಕಾ ದ್ವೀಪವೇ ಇಂದಿನ ಸಿಂಹಳ. ಪುರಾತನ ಕಾಲದಿಂದಲೂ ಭಾರತಕ್ಕೂ ಸಿಂಹಳಕ್ಕೂ ಸಂಬಂಧವಿದೆ. ಭಾರತದಿಂದ ಬುದ್ಧ ಸಿಂಹಳಕ್ಕೆ ಹೋಗಿದ್ದ ಎಂದು ಹೇಳುತ್ತಾರೆ. ಅಶೋಕ ತನ್ನ ಸೋದರ ಮಹೇಂದ್ರನನ್ನೂ ಸೋದರಿ ಸಂಘಮಿತ್ರಳನ್ನೂ ಬೌದ್ಧಮತ ಪ್ರಚಾರಕ್ಕಾಗಿ ಅಲ್ಲಿಗೆ ಕಳುಹಿಸಿದ್ದ. ಆ್ಯಡಮ್ ಶಿಖರದಲ್ಲಿ ಬುದ್ಧನ ಪಾದದ ಗುರುತಿದೆ. ಅನುರಾಧಪುರದಲ್ಲಿ 2,000 ವರ್ಷಗಳ ಬೋಧಿ ವೃಕ್ಷವಿದೆ. ಬುದ್ಧ ಗಯೆಯಲ್ಲಿ ಬುದ್ಧನಿಗೆ ಜ್ಞಾನೋದಯವಾದ ಮರದ ರೆಂಬೆಯೊಂದನ್ನು ತಂದು ನೆಟ್ಟು ಅದು ಬೆಳೆಯಿತು ಎನ್ನುತ್ತಾರೆ. ಕಾಂಡಿಯಲ್ಲಿ ಬುದ್ಧನ ಹಲ್ಲನ್ನಿಟ್ಟಿರುವ ದೇವಾಲಯವಿದೆ. ವರ್ಷಕ್ಕೊಂದು ಬಾರಿ ಹಲ್ಲನ್ನು ಹೊರತೆಗೆದು ಅಲಂಕೃತ ಆನೆಯ ಮೇಲಿಟ್ಟು ಮೆರವಣಿಗೆ ಮಾಡುತ್ತಾರೆ.

ಬೌದ್ಧಧರ್ಮ ಪ್ರಚಾರವೊಂದೇ ಅಲ್ಲದೆ, ಸಿಂಹಳಕ್ಕೂ ಭಾರತಕ್ಕೂ ಬಹು ಕಾಲದ ವ್ಯಾಪಾರ ಸಂಬಂಧವೂ ಇದೆ. ಅನೇಕ ತಮಿಳು ಮನೆತನಗಳು ಸಿಂಹಳದಲ್ಲಿಯೇ ವಾಸವಾಗಿವೆ. ಹಲವು ಶತಮಾನಗಳಿಂದ ದಕ್ಷಿಣ ಭಾರತದ ಜನ ಅಲ್ಲಿಗೆ ವಲಸೆ ಹೋಗಿದ್ದಾರೆ.

ಭಾರತದ ತುದಿಯಿಂದ ಆಗ್ನೇಯಕ್ಕಿರುವ ಸಿಂಹಳ ದ್ವೀಪ ಹಿಂದೂ ಮಹಾಸಾಗರದಲ್ಲಿದೆ. ಪಾಕ್ ಜಲಸಂಧಿ ಸಿಂಹಳವನ್ನು ಭಾರತದಿಂದ ಬೇರ್ಪಡಿಸಿದೆ. ಸಿಂಹಳದ ಉದ್ದ 434 ಕಿ.ಮೀ. ಎಲ್ಲಕ್ಕಿಂತ ಅಗಲವಾದ ಭಾಗ 225 ಕಿ.ಮೀ. ಪ್ರಕೃತಿ ಸೌಂದರ್ಯದ ಚಿಕ್ಕ ದ್ವೀಪವಾದ ಸಿಂಹಳಕ್ಕೆ 'ಪೂರ್ವದೇಶದ ಮುತ್ತು', 'ಕಂಪುವರೆಯಿಂದ ಮುಚ್ಚಿದ [illegible] ದ್ವೀಪ' ಮತ್ತು 'ಆನಂದದಾಯಕ ದ್ವೀಪ' ಮುಂತಾದ ಹೆಸರುಗಳಿವೆ. ನಾವಿಕನಾದ ಸಿಂದಬಾದ್ ಇಲ್ಲಿಗೆ ಬಂದಿದ್ದನೆಂಬ ಕಥೆಯೂ ಇದೆ. ಸಿಂಹಳದಲ್ಲಿ ಮೂರು ಪ್ರಾಕೃತಿಕ ವಿಭಾಗಗಳಿವೆ – ತೇವಮಯವಾದ ತಗ್ಗುಭೂಮಿ, ಬೆಟ್ಟಗಳು ಮತ್ತು ಒಣ ತಗ್ಗುಪ್ರದೇಶ. ದ್ವೀಪದ ಮೂರನೆಯ ಎರಡು ಭಾಗ ಅರಣ್ಯ. ಪಿದುರುತಲಗಲ ಶಿಖರ 2,499 ಮೀಟರ್ ಎತ್ತರ ಮತ್ತು ಆ್ಯಡಮ್ ಶಿಖರ 2,245 ಮೀಟರ್ ಎತ್ತರವಿವೆ. ಮಹಾವೇಲಿಗಂಗಾನದಿ 331 ಕಿ.ಮೀ. ಉದ್ದವಿದೆ. ಇತರ ನದಿಗಳು ಸಣ್ಣವು.

ಭೂಮಧ್ಯ ರೇಖೆಗೆ ಸಮೀಪದಲ್ಲಿರುವ ಸಿಂಹಳದ ಹವಾಗುಣ ವರ್ಷವೆಲ್ಲ ಒಂದೇ ರೀತಿಯದು. ಹೇರಳವಾಗಿ ಮಳೆ ಬೀಳುತ್ತದೆ. ತಗ್ಗು ಪ್ರದೇಶಗಳ ಉಷ್ಣಾಂಶ ಸರಾಸರಿ 80° ಫಾ. ಇದ್ದರೆ ಬೆಟ್ಟದ ಪ್ರದೇಶದ ಉಷ್ಣಾಂಶ ಸರಾಸರಿ 59° ರಿಂದ 68° ಫಾ. ವರೆಗೆ ಇರುತ್ತದೆ.

ಸಿಂಹಳದ ಜನರಲ್ಲಿ ಪ್ರಮುಖವಾಗಿ ಎರಡು ಭಾಷಾ ಪಂಗಡಗಳಿವೆ–ಸಿಂಹಳೀಯರು ಮತ್ತು ಸಿಂಹಳದ ತಮಿಳರು. ಸಿಂಹಳೀಯರು ಬಹುಮಟ್ಟಿಗೆ ಬೌದ್ಧರು; ತಮಿಳರು ಹಿಂದೂ ಧರ್ಮಾವಲಂಬಿಗಳು. ಸಿಂಹಳದಲ್ಲಿ ಸುಮಾರು 40 ಲಕ್ಷ ಮಂದಿಯ ಮಾತೃಭಾಷೆ ತಮಿಳು. 1970ರ ಜುಲೈಯಲ್ಲಿ ದ್ವೀಪದ ಮೊದಲನೆಯ ಸಂವಿಧಾನ ರಚನಾಸಭೆ ಸೇರಿದಾಗ, ಸಿಂಹಳಿ ಭಾಷೆಯಲ್ಲಿ ನಡೆದ ಕಾರ್ಯಕಲಾಪಗಳ ಪ್ರತಿ ಪದವನ್ನೂ ತಮಿಳಿಗೆ ಭಾಷಾಂತರ ಮಾಡಲಾಯಿತು. ಸಿಂಹಳಿ, ತಮಿಳು ಮತ್ತು ಇಂಗ್ಲಿಷ್ ಭಾಷೆಗಳು ಬಳಕೆಯಲ್ಲಿವೆ. ಗಂಡಸರು ಪಾಶ್ಚಾತ್ಯ ಉಡುಪು ತೊಡುತ್ತಾರೆ. ಹೆಂಗಸರು ಸೀರೆಯುಟ್ಟು ಆಭರಣಗಳನ್ನು ಧರಿಸುತ್ತಾರೆ. ಹಿಂದಿನ ಬುಡಕಟ್ಟಿನ ಜನ ವೆಡ್ಡರು ಪರ್ವತ ಪ್ರಾಂತದಲ್ಲಿದ್ದಾರೆ.

ಸಿಂಹಳದ ಭಾರತೀಯ ಸಂಜಾತರ ಬಗೆಗೆ ವಿವಾದವೆದ್ದು, ಸಿಂಹಳದಲ್ಲಿ ಪೌರತ್ವ ಪಡೆಯದೆ ಇರುವ ಬಹುತೇಕ ಭಾರತೀಯರನ್ನು ಹದಿನೈದು ವರ್ಷಗಳ ಅವಧಿಯಲ್ಲಿ ಹಿಂದಕ್ಕೆ ಕರೆಸಿಕೊಳ್ಳಲು ಭಾರತ ಒಪ್ಪಿದೆ.

ಸಿಂಹಳದ ಬಹು ಪಾಲು ಜನ ವ್ಯವಸಾಯ ನಿರತರು. ಭತ್ತ, ಹಣ್ಣು ಮತ್ತು ತರಕಾರಿಗಳನ್ನು ದೇಶದೊಳಗೆ ಉಪಯೋಗಿಸಲು ಬೆಳೆಯುತ್ತಾರೆ. ಅಕ್ಕಿ ಮುಖ್ಯ ಆಹಾರ. ಭಾರತೀಯರ ಅಡುಗೆಗೂ ಸಿಂಹಳೀಯರದಕ್ಕೂ ಹೆಚ್ಚಿನ ವ್ಯತ್ಯಾಸವಿಲ್ಲ.

ತೆಂಗಿನಕಾಯಿ, ರಬ್ಬರ್, ಹೊಗೆಸೊಪ್ಪು ಮತ್ತು ಚಹ ವಾಣಿಜ್ಯಬೆಳೆಗಳು.

ಸಿಂಹಳದ ಅರಣ್ಯದ ಮುಖ್ಯ ಸಂಪತ್ತೆಂದರೆ ರಬ್ಬರ್, ಇದಲ್ಲದೆ ಎಬೊನಿ, ಸ್ಯಾಟಿನ್‌ವುಡ್ ಮತ್ತು ತೇಗದ ಮರಗಳಿವೆ.

ಸಿಂಹಳದ ಖನಿಜಗಳಲ್ಲಿ ಮುಖ್ಯವಾದದ್ದು ಗ್ರಾಫೈಟ್ (ಇಂಗಾಲದ ಒಂದು ರೂಪ). ಇದನ್ನೂ ಅಮೂಲ್ಯ ರತ್ನಗಳನ್ನೂ ಖಾಂಡಲೈಟ್ ಪ್ರದೇಶದಲ್ಲಿ ತೆಗೆಯುತ್ತಾರೆ.

ಚಹ, ರಬ್ಬರ್, ತೆಂಗಿನಕಾಯಿಗಳನ್ನು ರಫ್ತು ಮಾಡುವುದು ಆರ್ಥಿಕವಾಗಿ ದೇಶಕ್ಕೆ ಲಾಭದಾಯಕ.

ರಾಜಧಾನಿ ಕೊಲಂಬೊ ಪಶ್ಚಿಮ ತೀರದಲ್ಲಿರುವ ಬಂದರು. [illegible] ಮೊದಲು ಸ್ಥಾಪಿಸಲ್ಪಟ್ಟ ಕೊಲಂಬೊ ಕೈಗಾರಿಕಾ ನಗರವಾಗಿದೆ.

ಕಾಂಡಿಯಲ್ಲಿರುವ ಗ್ರಂಥಾಲಯದಲ್ಲಿ ಅನೇಕ ತಾಳೆಗರಿ ಗ್ರಂಥಗಳನ್ನು ಇಟ್ಟಿದ್ದಾರೆ. ಅನುರಾಧಪುರ ಹಿಂದೆ ರಾಜಧಾನಿಯಾಗಿದ್ದು ಅನೇಕ ಅವಶೇಷ

ಗಳಿವೆ. ಮಿದುಶಿಲೆಯಲ್ಲಿ ಕಮಲದಾಕಾರದಲ್ಲಿ ಕೆತ್ತಿರುವ ಸ್ನಾನದ ತೊಟ್ಟಿ. ಶಿಲ್ಪಕೃತಿಗಳು, ಅವಶೇಷಗಳು ಪೊಲನ್ನರುವದಲ್ಲಿವೆ.

ಸಿಂಹಳ ಸ್ವತಂತ್ರ ರಾಷ್ಟ್ರ. ಸ್ವಾತಂತ್ರ್ಯ ಪಡೆದು 1948ರಲ್ಲಿ ಕಾಮನ್‌ವೆಲ್ತನ್ನು ಸೇರಿತು. ಸಂಸತ್ ಆಡಳಿತದ ಸರಕಾರ. ಹದಿನೆಂಟು ವರ್ಷಕ್ಕೆ ಮೇಲ್ಪಟ್ಟವರೆಲ್ಲ ಮತದಾನ ಮಾಡಬಹುದು.

| | | |
|---|---|---|
| ಖಂಡ | : | ಏಷ್ಯ (ಭಾರತದ ದಕ್ಷಿಣದಲ್ಲಿ) |
| ಅಕ್ಷಾಂಶ | : | 5° 55′ ಉ ದಿಂದ 9° 50′ ಉ |
| ರೇಖಾಂಶ | : | 79° 42′ ಪೂ ದಿಂದ 81° 53′ ಪೂ |
| ವಿಸ್ತೀರ್ಣ | : | 65,610 ಚ.ಕಿ. ಮೀ. |
| ಜನಸಂಖ್ಯೆ | : | 1,25,00,000 |
| ರಾಜಧಾನಿ | : | ಕೊಲಂಬೊ |
| ಭಾಷೆ | : | ಸಿಂಹಳಿ |
| ಸರಕಾರ | : | ಪ್ರಜಾಪ್ರಭುತ್ವ |
| ಬಾವುಟ | : | ಅಚ್ಚ ಕೆಂಪಿನ ಮೇಲೆ ಹಳದಿ ಅಂಚು, ಮಧ್ಯೆ ಹಳದಿ ಸಿಂಹ ಕೋಲಿನ ಬಳಿ ಕೇಸರಿ ಹಸಿರು ಬಣ್ಣದ ಉದ್ದ ಪಟ್ಟೆ |

ದಕ್ಷಿಣ ಏಷ್ಯ ಮತ್ತು ಪೂರ್ವ ಆಫ್ರಿಕಗಳ ದಾರಿಯಲ್ಲಿರುವ ಸಿಂಹಳಕ್ಕೆ ಅರಬರು, ಪೋರ್ಚುಗೀಸರು ಮತ್ತು ಡಚ್ ವ್ಯಾಪಾರಿಗಳು ನೂರಾರು ವರ್ಷಗಳ ಹಿಂದೆಯೇ ಬರುತ್ತಿದ್ದರು. ಕ್ರಿ.ಪೂ. 543ರಲ್ಲಿ ಭಾರತದ ರಾಜಕುಮಾರ ವಿಜಯ ಸಿಂಹಳಕ್ಕೆ ಬಂದ. ಅವನು ಮದುವೆಯಾದ ರಾಜಕುಮಾರಿ ವೆಡ್ಡರ ಬುಡಕಟ್ಟಿನವಳಿದ್ದಿರಬಹುದು. ಅಲ್ಲಿಂದ ಸಿಂಹಳೀಯ ವಂಶ ಜನ್ಮವೆತ್ತಿತು. ಕ್ರಿ.ಪೂ. ಮೂರನೆಯ ಶತಮಾನದಲ್ಲಿ ಸಿಂಹಳಕ್ಕೆ ಬಂದ ಬೌದ್ಧಮತ ಸಿಂಹಳೀಯ ರಾಜ್ಯವನ್ನು ಒಂದುಗೂಡಿಸುವುದರಲ್ಲಿ ಯಶಸ್ವಿಯಾಯಿತು. ಸಿಂಹಳೀಯ ವಂಶದವರು ಸುಮಾರು 2,000 ವರ್ಷಗಳಿಗೂ ಹೆಚ್ಚು ಕಾಲ ಆಳಿದರು. 1505ರಲ್ಲಿ ಪೋರ್ಚುಗೀಸರ ಆಗಮನವಾಯಿತು. ಅವರು ಕ್ರೈಸ್ತಮತವನ್ನು ಹರಡಿದರು. 1658ರಲ್ಲಿ ಪೋರ್ಚುಗೀಸರನ್ನು ಓಡಿಸಿ ಡಚ್ಚರು ಕಾಲಿಟ್ಟರು. ಇವರು ಪ್ರಾಟೆಸ್ಟೆಂಟ್ ಮತ ಮತ್ತು ರೋಮನ್ ಡಚ್ ಕಾನೂನುಗಳನ್ನು ಜಾರಿಗೆ ತಂದರು. 1798ರಲ್ಲಿ ಡಚ್ಚರನ್ನು ಸೋಲಿಸಿದ ಇಂಗ್ಲಿಷರು 1948ರವರೆಗೂ ಸಿಂಹಳವನ್ನು ಆಳಿದರು. 1948ರ ಫೆಬ್ರುವರಿ 4 ರಂದು ಸಿಂಹಳ ಬ್ರಿಟಿಷ್ ಕಾಮನ್‌ವೆಲ್ತಿನಲ್ಲಿ ಇರಲು ಒಪ್ಪಿತು. ಸ್ವತಂತ್ರ ಆಡಳಿತ ಹೊಂದಿದ ರಾಷ್ಟ್ರವಾಯಿತು. 1959 ಸೆಪ್ಟೆಂಬರ್ 26 ರಂದು ಪ್ರಧಾನ ಮಂತ್ರಿ ಬಂಡಾರನಾಯ್ಕೆಯನ್ನು ಒಬ್ಬ ಬೌದ್ಧ ಭಿಕ್ಷು ಕೊಲೆ ಮಾಡಿದ. ಇವರ ಪತ್ನಿ ಶ್ರೀಮತಿ ಸಿರಿಮಾವೊ ಬಂಡಾರನಾಯ್ಕೆ 1960ರಿಂದ 1965ರವರೆಗೆ ಪ್ರಧಾನಮಂತ್ರಿಯಾಗಿದ್ದರು. ಪುನಃ 1970ರ ಚುನಾವಣೆಯಲ್ಲಿ ಜಯ ಗಳಿಸಿ ಪ್ರಧಾನಿಯಾದರು. 1951ರ ಜೂನ್‌ನಲ್ಲಿ ಕೊಲಂಬೊದಲ್ಲಿ ದಕ್ಷಿಣ ಮತ್ತು ಆಗ್ನೇಯ ಏಷ್ಯದ ರಾಷ್ಟ್ರಗಳಿಗೆ ಔದ್ಯೋಗಿಕ ನೆರವು ನೀಡುವುದು, ಆರ್ಥಿಕ ಅಭಿವೃದ್ಧಿಗಾಗಿ ಯೋಜನೆಗಳನ್ನು ಚರ್ಚಿಸುವುದು ಮತ್ತು ಪ್ರತ್ಯೇಕ ಯೋಜನೆಗಳಿಗೆ ಆರ್ಥಿಕ ಸಹಾಯ ಒದಗಿಸುವ ಯೋಜನೆಯೊಂದನ್ನು ಕಾಮನ್‌ವೆಲ್ತ್ ಸಮ್ಮೇಳನ ತಯಾರಿಸಿತು. ಈ ಸಮ್ಮೇಳನದಲ್ಲಿ ಭಾರತ, ಪಾಕಿಸ್ತಾನ, ಸಿಂಹಳ, ಆಸ್ಟ್ರೇಲಿಯ, ನ್ಯೂಜಿಲೆಂಡ್ ಮತ್ತು ಬ್ರಿಟನ್ ಭಾಗವಹಿಸಿದ್ದುವು. [illegible] ಸಂಯುಕ್ತಸಂಸ್ಥಾನ, ಜಪಾನ್ ಮತ್ತು ಆಗ್ನೇಯ ಏಷ್ಯದ ಅನೇಕ ದೇಶಗಳ ಈ ಸಂಸ್ಥೆಗೆ ಸೇರಿದುವು. ಇದಕ್ಕೆ ಅಂತರರಾಷ್ಟ್ರೀಯ ಪುನರ್ನಿರ್ಮಾಣ ಮತ್ತು ಅಭಿವೃದ್ಧಿ ಬ್ಯಾಂಕ್ ಸಹಕಾರ ಕೊಡುತ್ತದೆ.

ಸಿಂಹಳ 1955ರಲ್ಲಿ ವಿಶ್ವಸಂಸ್ಥೆಯ ಸದಸ್ಯರಾಷ್ಟ್ರವಾಯಿತು.

## ಸಿಕ್ಕಿಂ

ಪಶ್ಚಿಮದಲ್ಲಿ ನೇಪಾಳ, ಉತ್ತರದಲ್ಲಿ ಟಿಬೆಟ್, ಪೂರ್ವದಲ್ಲಿ ಭೂತಾನ್ ದಕ್ಷಿಣದಲ್ಲಿ ಭಾರತ –ಇವುಗಳ ಮಧ್ಯದಲ್ಲಿರುವ ಪೂರ್ವ ಹಿಮಾಲಯ ಪ್ರದೇಶದ 7,110 ಚದರ ಕಿ. ಮೀ. ವಿಸ್ತೀರ್ಣದ ಪುಟ್ಟ ಪರ್ವ ರಾಜ್ಯ ಸಿಕ್ಕಿಂ.

ಸಿಕ್ಕಿಂನಲ್ಲಿರುವ ಹಿಮಾಲಯ ಪರ್ವತ ಶ್ರೇಣಿಯ ಉತ್ತುಂಗ ಶಿಖರಗಳಲ್ಲೊಂದಾದ ಕಾಂಚನಗಂಗ 8,601 ಮೀಟರುಗಳಿಗೂ ಎತ್ತರವಿದೆ ಪರ್ವತ, ಕಣಿವೆಗಳ ಮಧ್ಯೆ ನಾಡು ಬೆಳೆದಿದೆ. ಅತಿ ಎತ್ತರದಲ್ಲಿ ಎಂದಿಗೂ ಕರಗಿ ಮುಗಿಯದ ಹಿಮರಾಶಿ. ಅದರ ಕೆಳಗೆ 5,185 ಮೀಟರುಗಳಿಂ 3,660 ಮೀಟರುಗಳ ಕೆಳಗೆ ದನಕರುಗಳಿಗೆ ಮೇಯಲು ಬೇಕಾದ ಹುಲ್ಲು ಗಾವಲು. ಅದರ ಕೆಳಗೆ 2,745 ಮೀಟರುಗಳವರೆಗೂ ಅರಣ್ಯ ಪ್ರದೇಶ ಇದು ನಾಡಿನ ಮುಕ್ಕಾಲು ಭಾಗದಷ್ಟಿದೆ. 2,135 ಮೀಟರುಗಳಿಂದ 1,220 ಮೀಟರುಗಳ ಇಳಿಜಾರು ಪ್ರದೇಶದಲ್ಲಿ ವ್ಯವಸಾಯವಿದೆ. ಕಣಿ ಗಳಲ್ಲಿ ಫಲವತ್ತಾದ ಬೆಳೆ ಕಣ್ಣಿಗೆ ಬೀಳುತ್ತದೆ. ಬಹು ಪಾಲು ಜನ ವ್ಯವಸಾಯಗಾರರು, ಯಾಕ್, ಕುರಿ ಇವು ಮುಖ್ಯವಾದ ಸಾಕು ಪ್ರಾಣಿಗಳು.

ಸಿಕ್ಕಿಂನ ಮೂಲನಿವಾಸಿಗಳು ಲೆಪ್‌ಚಾಸ್ ಎಂಬ ಜನ. ಹದಿನಾರನೆ ಶತಮಾನದ ಹೊತ್ತಿಗೆ ಟಿಬೆಟನರು ಸಿಕ್ಕಿಂನಲ್ಲಿ ನೆಲೆಸಲಾರಂಭಿಸಿದರು. ಹದಿನೇಳನೆಯ ಶತಮಾನದ ಮೊದಲ ಭಾಗದಲ್ಲಿ ಸಿಕ್ಕಿಂನ ಮೇಲೆ ಪ್ರಭುತ್ವ ಸ್ಥಾಪಿಸಿ ಟಿಬೆಟ್ ರಾಜನೊಬ್ಬನ ನಾಯಕತ್ವದಲ್ಲಿ ಸರಕಾರ ರಚಿಸಿದರು. ಟಿಬೆಟ್‌ನ ಬೌದ್ಧ ಧರ್ಮವನ್ನು ನಾಡಿನ ಧರ್ಮವನ್ನಾಗಿ ಮಾಡಿದರು. ಸಿಕ್ಕಿಂನ ಜನತೆ ಬೌದ್ಧಮತಾನುಯಾಯಿಗಳು. ಗಮನಾರ್ಹ ಸಂಖ್ಯೆಯಲ್ಲಿ ಹಿಂದೂಗಳೂ ಅಲ್ಲಿ ಇದ್ದಾರೆ.

ಸಿಕ್ಕಿಂನ ಜನಸಂಖ್ಯೆ ಸುಮಾರು 1,80,000. ಅವರಲ್ಲಿ ಬಹು ಮಂದಿ ಹದಿನೆಂಟು ಹತ್ತೊಂಬತ್ತನೆಯ ಶತಮಾನಗಳಲ್ಲಿ ನೆರೆರಾಜ್ಯವಾದ ನೇಪಾಳ ದಿಂದ ಬಂದ ನೇಪಾಳಿ ವಂಶಜರು.

ಕೆಂಪು ಚೀನ ಟಿಬೆಟ್ ದೇಶವನ್ನು ಆಕ್ರಮಿಸಿದಾಗ (1958) ಸುಮಾರು 6,000 ಟಿಬೆಟನರು ಸಿಕ್ಕಿಂಗೆ ಓಡಿಬಂದು ನೆಲೆಸಿದರು.

ಹಿಮಾಲಯದ ಪರ್ವತ ಶಿಖರಗಳ ಮೇಲೆ ದೇವತೆಗಳು ನೆಲೆಸಿರು ರೆಂದು ಸಿಕ್ಕಿಂನ ಜನ ದೃಢವಾಗಿ ನಂಬುತ್ತಾರೆ. 1955ರಲ್ಲಿ ಬ್ರಿಟಿಷ್ ಪರ್ವತಾರೋಹಿಗಳು ಕಾಂಚನಗಂಗವನ್ನು ಹತ್ತಿದಾಗ ದೇವತೆಗಳ ವಾ ಸ್ಥಾನವಾದ ಅದರ ಶಿಖರದಿಂದ 1.5 ಮೀಟರು ಕೆಳಗೆ [illegible] ಪ್ರಮಾಣವಚನವನ್ನು ಅವರಿಂದ ಸಿಕ್ಕಿಂ ಮಹಾರಾಜರು ತೆಗೆದುಕೊಂಡರು

ಸಿಕ್ಕಿಂಗೆ ರೈಲುಮಾರ್ಗವಿಲ್ಲ. ಸುಮಾರು 257 ಕಿ. ಮೀ. ಉದ್ದದ ರಸ್ತೆ ಮಾತ್ರ ಇದೆ. ಏಲಕ್ಕಿ ಇಲ್ಲಿಂದ ರಫ್ತಾಗುವ ಮುಖ್ಯ ಪದಾರ್ಥ. [illegible] ವನ್ನೂ ಇತರ ಧಾನ್ಯಗಳನ್ನೂ ವರ್ಷಕ್ಕೆ ಮೂರು ಸಲ ಬೆಳೆಯುತ್ತಾರೆ.

ಭತ್ತ, ಬಾರ್ಲಿ, ಕಿತ್ತಳೆ, ಸೇಬು, ಅನಾನಸ್, ಏಲಕ್ಕಿ, ಆಲೂಗೆಡ್ಡೆ ಇಲ್ಲಿನ ಮುಖ್ಯ ಬೆಳೆಗಳು.

ಟಿಬೆಟ್ ಹತ್ತೊಂಬತ್ತನೆಯ ಶತಮಾನದಲ್ಲಿ ಬ್ರಿಟಿಷ್ ರಕ್ಷಣೆಗೆ ಒಳಪಟ್ಟಿತ್ತು. 1950ರಲ್ಲಿ ಭಾರತದ ರಕ್ಷಣೆಗೆ ಒಳಗಾಯಿತು. ಒಳಾಡಳಿತದಲ್ಲಿ ರಾಜ್ಯ ಸ್ವತಂತ್ರ. ಅದರ ರಕ್ಷಣೆ, ಸಾರಿಗೆ ಸಂಪರ್ಕ, ವಿದೇಶ ವ್ಯವಹಾರ ಇವುಗಳ ಹೊಣೆ ಭಾರತದ್ದು.

ಸಿಕ್ಕಿಂ ಮಹಾರಾಜರೊಬ್ಬರ ಆಳ್ವಿಕೆಯಲ್ಲಿದೆ. ಅವರನ್ನು ಅಲ್ಲಿಯ ಜನ ಚೋಗ್‌ಯಾಲ್ ಎನ್ನುತ್ತಾರೆ. ರಾಜರ ಸಹಾಯಕ್ಕೆ ಒಂದು ರಾಜ್ಯ ಸಲಹಾ ಮಂಡಳಿ ಇದೆ. ಭಾರತದ ಸರಕಾರದ ಪ್ರತಿನಿಧಿಗಳು ಕೆಲವರು ಸಿಕ್ಕಿಂನಲ್ಲೇ ಇದ್ದು ರಾಜ್ಯದ ಆಡಳಿತ ನಡೆಸಲು ನೆರವಾಗಿದ್ದಾರೆ. ಸಿಕ್ಕಿಂನ ಈಗಿನ ಅರಸರು, ತಾವು ವಿವಾಹವಾಗಿರುವ ಅಮೆರಿಕನ್ ತರುಣಿಯನ್ನು ಪಟ್ಟದರಾಣಿ ಎಂದು ಸ್ವೀಕರಿಸಿದ್ದಾರೆ.

| | | |
|---|---|---|
| ಖಂಡ | : | ಏಷ್ಯ (ಭಾರತದ ಉತ್ತರಕ್ಕೆ) |
| ಅಕ್ಷಾಂಶ | : | 27° ಉ ದಿಂದ 28° ಉ |
| ರೇಖಾಂಶ | : | 88° ಪೂ ದಿಂದ 89° ಪೂ |
| ವಿಸ್ತೀರ್ಣ | : | 7.110 ಚ. ಕಿ. ಮೀ. |
| ಜನಸಂಖ್ಯೆ | : | 1,80,000 |
| ರಾಜಧಾನಿ | : | ಗ್ಯಾಂಗ್‌ಟಾಕ್ |
| ಭಾಷೆ | : | ಟಿಬೆಟ್_ಬರ್ಮನ್ |
| ಸರಕಾರ | : | ಭಾರತದಿಂದ ರಕ್ಷಿತ ದೇಶ ; ಸಂವಿಧಾನಬದ್ಧ ರಾಜಪ್ರಭುತ್ವ |
| ಬಾವುಟ | : | ದೊಡ್ಡ ಬಿಳಿಯಪಟ್ಟಿ, ಕೆಂಪು ಅಂಚು, ಮಧ್ಯ ಹಳದಿ ಬಣ್ಣದ ಚಕ್ರ |

## ಸಿಡಿಮದ್ದು

ದೀಪಾವಳಿ ಹಬ್ಬದಲ್ಲಿ ಮೂರು ದಿನಗಳ ಕಾಲ ಊರಿನ ತುಂಬ ಪಟಾಕಿಯದೇ ಶಬ್ದ.

ಸಿಡಿಮದ್ದಿನಿಂದ ತುಂಬಿರುತ್ತವೆ ಈ ಪಟಾಕಿಗಳು.

ಸಿಡಿಮದ್ದನ್ನು ದೀಪಾವಳಿಯಲ್ಲಿ ಮಕ್ಕಳ ಸಂತೋಷಕ್ಕೆ ಮಾತ್ರ ಬಳಸುವುದಿಲ್ಲ. ಅನೇಕ ಬಾರಿ ಬಂಡೆಗಳ ಪ್ರದೇಶಗಳನ್ನು ನೆಲಸಮ ಮಾಡುವಾಗ ಸಿಡಿಮದ್ದುಗಳ ಸ್ಫೋಟನ ಶಬ್ದ ಕೇಳಿಬರುವುದುಂಟು. ಯುದ್ಧ ಕಾಲದಲ್ಲಂತೂ ಸಿಡಿಮದ್ದು ಅತ್ಯವಶ್ಯ.

ಸಿಡಿಮದ್ದು ಎಂದರೇನು ?

ಸಾಧಾರಣವಾಗಿ ಘನಸ್ಥಿತಿಯಲ್ಲಿರುವ ವಸ್ತು ಸಿಡಿಮದ್ದು. ಆಮ್ಲಜನಕ ಸಂಯೋಗವೇ ಸಿಡಿಮದ್ದಿನ ಕ್ರಿಯೆಗೆ ಕೇಂದ್ರ. ಒಂದು ಕ್ಷಣದಲ್ಲಿ ಉತ್ಕರ್ಷಣಕ್ರಿಯೆಯಿಂದ ಸಿಡಿಮದ್ದು ಸ್ಫೋಟವಾಗುತ್ತದೆ. ಸಿಡಿಮದ್ದಿನ ಶಬ್ದ ಗುಡುಗಿನಂತೆ. ಆ ಕ್ರಿಯೆಯ ಪರಿಸರದಲ್ಲಿ ಸುತ್ತಮುತ್ತ ತತ್‌ಕ್ಷಣ ಗಾಳಿ ಕಾವಿನಿಂದ ಹರಡಿ, ಸಂಕುಚಿತವಾಗುವುದರಿಂದ ಉಂಟಾಗುವ ಸ್ಪಂದನದ ಫಲಿತಾಂಶ ಗುಡುಗು. ಉರಿಯುವ ಯಾವುದೇ ವಸ್ತು ಆಮ್ಲಜನಕದೊಡನೆ ಕ್ಷಿಪ್ರವಾಗಿ ಸಂಯೋಗವಾಗುವಂತೆ ಮಾಡಿದರೆ ಅದು ಸಿಡಿಮದ್ದಿನ ರೂಪ ತಳೆಯುತ್ತದೆ.

ಸುತ್ತ ಮುಚ್ಚಿರುವ ಸಣ್ಣ ಜಾಗದಲ್ಲಿ ಸಿಡಿಮದ್ದನ್ನು ಇಡಬೇಕು. ಘನ ವಸ್ತುವಿಗಿಂತ ಅನಿಲಕ್ಕೆ ಹೆಚ್ಚು ವ್ಯಾಪ್ತಿ ಬೇಕಾಗುವುದರಿಂದಲೂ ಸಿಡಿಮದ್ದಿನ ಸ್ಫೋಟನ ಸಮಯದಲ್ಲಿ ಉಂಟಾಗುವ ಅಪಾರ ಕಾವಿನ ದೆಸೆಯಿಂದಲೂ ಬಿಡುಗಡೆಯಾದ ಅನಿಲ ಇದ್ದಕ್ಕಿದಂತೆ ಹರಡಲು ಪ್ರಾರಂಭಿಸುತ್ತದೆ. ಈ ಚೈತನ್ಯದಿಂದಾಗಿ ತನ್ನನ್ನು ಸುತ್ತುವರಿದಿರುವುದನ್ನು ಹರಿದೊಗೆದು ಹೊರಗೆ ಬರುತ್ತದೆ. ಸಾಧಾರಣ ಸಿಡಿತದಲ್ಲೇ ಬಿಡುಗಡೆಯಾದ ಅನಿಲಕ್ಕೆ ತನ್ನ ಮೂಲ ಪ್ರದೇಶದ 1,200ರಷ್ಟು ಪಟ್ಟು ಹೆಚ್ಚು ಜಾಗ ಬೇಕು. ಹೀಗಿರುವಾಗ ಉಷ್ಣಾಂಶ ಹೆಚ್ಚಿದಷ್ಟು ಅನಿಲವ್ಯಾಪ್ತಿಗೆ ಇನ್ನೂ ಎಷ್ಟು ಪಟ್ಟಿನ ಜಾಗ ಬೇಕೆಂಬುದನ್ನು ಊಹಿಸಿಕೊಳ್ಳಬಹುದು. 3000° ಸೆ. ಶಾಖ ನೈಟ್ರೊಗ್ಲಿಸರೀನ್ ಎಂಬ ಸಿಡಿಮದ್ದಿನ ಸ್ಫೋಟದಲ್ಲಿ ಉತ್ಪತ್ತಿಯಾದರೆ, ಅದರ ಅನಿಲವ್ಯಾಪ್ತಿಗೆ 10,000 ಪಟ್ಟು ಹೆಚ್ಚು ಜಾಗದ ಅವಶ್ಯತೆ ಇದೆ. ಸಿಡಿಮದ್ದು ಘನವೇ ಆಗಲಿ ದ್ರವವೇ ಆಗಲಿ, ಸ್ಫೋಟಗೊಂಡಾಗ ಅನಿಲಗಳು ಬಿಡುಗಡೆಯಾಗಿಯೇ ಆಗುತ್ತವೆ. ಇವುಗಳ ತೀವ್ರ ವ್ಯಾಪ್ತಿಯೇ ಸ್ಫೋಟನದ ಮುಖ್ಯಾಂಶ. ಹೀಗೆ ಸಿಡಿಮದ್ದು ಸ್ಫೋಟನವಾಗಲು ಸುತ್ತ ಮುಚ್ಚಿರುವ ಸಂಕುಚಿತ ಪರಿಸರ ಅಗತ್ಯ; ಇದಕ್ಕೆ ಉರಿ ತಗಲಿದಾಗ ಒಳಗೆ ಆಮ್ಲಜನಕದ ಸಂಯೋಗದಿಂದ ರಾಸಾಯನಿಕ ಕ್ರಿಯೆ ಪ್ರಾರಂಭವಾಗುತ್ತದೆ. ಇದರಿಂದ ಕಾವು ಹೆಚ್ಚಾಗಿ ಅನಿಲಗಳು ಉತ್ಪತ್ತಿಯಾಗುತ್ತವೆ. ಸೂಕ್ತ ಸನ್ನಿವೇಶಗಳಲ್ಲಿ ಅತ್ಯಂತ ವೇಗವಾಗಿ ತನ್ನಲ್ಲಿಯೇ ರಾಸಾಯನಿಕ ಕ್ರಿಯೆಗೆ ಒಳಗಾಗಿ, ಅಧಿಕ ಕಾವಿರುವ ಮತ್ತು ಹೆಚ್ಚು ಪ್ರಮಾಣದ ಅನಿಲಗಳನ್ನು ಉತ್ಪಾದಿಸಬಲ್ಲ ವಸ್ತುವೇ ಸಿಡಿಮದ್ದು.

ಸಿಡಿಮದ್ದುಗಳ ಉಪಯೋಗ ಅವುಗಳ ಚೈತನ್ಯದಲ್ಲಡಗಿದೆ. ಇಂಥ ಚೈತನ್ಯವನ್ನು ಪಡೆದಿರುವ ವಸ್ತುಗಳು ಪ್ರಕೃತಿಯಲ್ಲಿವೆ. ಇವು ಮೂರು ಬಗೆಯವು ; ಕೊಬ್ಬು, ಸಕ್ಕರೆ ಪಿಷ್ಟಾದಿಗಳು ಹಾಗೂ ಕಲ್ಲಿದ್ದಲು. ಸಿಡಿಮದ್ದುಗಳಲ್ಲಿ ತೀವ್ರ ಸ್ಫೋಟಕ ಹಾಗೂ ಮಂದಸ್ಫೋಟಕಗಳೆಂದು ಎರಡು ಬಗೆಗಳಿವೆ. ಮೊದಲನೆಯದು ಬಹು ಕ್ಷಿಪ್ರವಾಗಿ ಸಿಡಿಯುತ್ತದೆ. ಎರಡನೆಯದು ನಿಧಾನ.

ಸಿಡಿಮದ್ದಿನ ಇತಿಹಾಸ ಬಹಳ ಹಿಂದಿನದು. ಸಾವಿರಾರು ವರ್ಷಗಳ ಹಿಂದೆ ಸಾಂಪ್ರದಾಯಿಕ ಸಿಡಿಮದ್ದು (ಎಂದರೆ ಪೆಟ್ಲುಪ್ಪು, ಗಂಧಕ ಮತ್ತು ಇಟ್ಟಿಗೆಗಳ ಮಿಶ್ರಣಗಳಂಥದು) ಚೀನದಲ್ಲಿ ಉಪಯೋಗಿಸಲ್ಪಡುತ್ತಿದ್ದಿತೆಂದು ಹೇಳುತ್ತಾರೆ. 600ರಲ್ಲಿ ಚೀನದಲ್ಲಿ ಒಂದು ನಿರ್ದಿಷ್ಟ ರೀತಿಯ ಸ್ಫೋಟಕ ವಸ್ತುವನ್ನು ಕಂಡುಹಿಡಿದಿದ್ದರೂ ಯೂರೋಪಿನವರು ಇದನ್ನು ಕಲಿಯಲು ಮತ್ತೂ ನೂರಾರು ವರ್ಷ ಬೇಕಾದುವು. ಬೈಜಾಂಟೈನರು 'ಗ್ರೀಕ್ ಜ್ವಾಲೆ' ಎಂಬ ಸಸ್ಯ ಹಾಗೂ ಖನಿಜ ಮೂಲಗಳಿಂದ ತಯಾರಿಸಲಾದ ಮಿಶ್ರಣವೊಂದನ್ನು ಉರಿಸಿ ಶತ್ರು ಪಕ್ಷದವರ ಮೇಲೆ ಸಿಂಪಡಿಸುತ್ತಿದ್ದರು.

ಇದು ಏಳನೆಯ ಶತಮಾನದ ಸಂಗತಿ. ಪಂಪುಗಳ ಮೂಲಕ ಈ 'ಗ್ರೀಕ್ ಜ್ವಾಲೆ' ಯನ್ನು ದೂರಕ್ಕೆ ಬೈಜಾಂಟೈನರು ಎಸೆಯುತ್ತಿದ್ದರು. ಗ್ರೀಕ್ ಜ್ವಾಲೆಗೆ ಸ್ಫೋಟಕ ಗುಣವಿರಲಿಲ್ಲ.

ಒಟ್ಟಿನಲ್ಲಿ, ಇದರಿಂದಲೇ ಅವರಿಗೆ ಬಹುವಾಗಿ ಬಳಸಲ್ಪಡುತ್ತಿದ್ದ ಸಿಡಿಮದ್ದು (ಪೆಟ್ಲುಪ್ಪು, ಇಟ್ಟಿಗೆ ಅಥವಾ ಇಂಗಾಲ ಮತ್ತು ರಂಜಕಗಳ ಮಿಶ್ರಣ ಅಥವಾ ಗನ್‌ಪೌಡರ್) ಕಂಡುಹಿಡಿಯಲ್ಪಟ್ಟಿತೆಂಬ ಅಭಿಪ್ರಾಯ ವಿದೆ. ಹದಿಮೂರನೆಯ ಶತಮಾನದಲ್ಲಿ ಇಂಗ್ಲಿಷ್ ವಿಜ್ಞಾನಿ ರೋಜರ್ ಬೇಕನ್ ಮೊದಲ ಬಾರಿಗೆ ಈ ಮಿಶ್ರಣದ ಸ್ವರೂಪವನ್ನು ತನ್ನ ಬರಹ ಗಳಲ್ಲಿ ವಿವರಿಸಿದ್ದಾನೆ. ಹದಿನೇಳನೆಯ ಶತಮಾನದಲ್ಲಿ ಈ ಮಿಶ್ರಣವನ್ನು ಉಪಯೋಗಿಸಿ ಬಂದೂಕಗಳನ್ನು ಹಾರಿಸಲಾಯಿತು. ಸಿಡಿಮದ್ದುಗಳನ್ನು ಮಾನವ ಜೀವನದಲ್ಲಿ ಶಾಂತಿ ಕಾಲದಲ್ಲಿಯೂ ಉಪಯೋಗಿಸಲು ರೂಢಿಸಿಕೊಂಡುದು ಇನ್ನೂ ಎರಡು ಶತಮಾನಗಳ ಅನಂತರ. 1660ರಲ್ಲಿ ಬಂಡೆಗಳ ಸ್ಫೋಟನಕ್ಕೆ ಸಿಡಿಮದ್ದನ್ನು ಬಳಸಲಾಯಿತು. ಈ ಮಿಶ್ರಣ ತಯಾರಿಕೆಯ ಮೊದಲ ಕಾರಖಾನೆ ಅಮೆರಿಕದಲ್ಲಿ 1675ರಲ್ಲಿ ಆರಂಭ ವಾಯಿತು.

ಮೇಲೆ ಹೇಳಿದ ಸಿಡಿಮದ್ದಿನ ಮಿಶ್ರಣ ಸಿಡಿದಾಗ ತನ್ನ 4,000 ಪಟ್ಟು ಹೆಚ್ಚಿನ ಅನಿಲ ಪ್ರಮಾಣವನ್ನು ಮಾತ್ರ ಅದು ಹೊರಗೆಡಹುತ್ತದೆ. 12,000 ಪಟ್ಟು ಹೆಚ್ಚಿನ ಅನಿಲ ಪ್ರಮಾಣವನ್ನು ಹೊರಗೆಡಹುವ ಅತ್ಯಂತ ಆಧುನಿಕ ಸಿಡಿಮದ್ದುಗಳೂ ಇವೆ. ಇಂಥ ಒಂದು ಸಿಡಿಮದ್ದು ನೈಟ್ರೊಗ್ಲಿಸರೀನ್.

ಸಿಡಿಮದ್ದುಗಳ, ಅದರಲ್ಲೂ ನೈಟ್ರೊಗ್ಲಿಸರೀನಿನಂಥ ದ್ರವ ಪದಾರ್ಥಗಳ ದೊಡ್ಡ ದೋಷವೆಂದರೆ ಅವುಗಳ ಸಾಗಾಣಿಕೆಯಲ್ಲಿರುವ ಅತಿ ಹೆಚ್ಚಿನ ಅಪಾಯ. ಯಾವುದೇ ವಿಧದ ಘರ್ಷಣೆಯೂ ಇವುಗಳ ಬಳಿ ಅಪಾಯಕರ. ಬೆಂಕಿಯಂತೂ ಹತ್ತಿರ ಸುಳಿಯಲೇಕೂಡದು. ಇದರ ಸಾಗಾಣಿಕೆಯಲ್ಲೇ ಮರಣ ಹೊಂದಿದವರೆಷ್ಟೋ. ಇಂಥ ವಿಷಮ ಸಮಸ್ಯೆಗೆ ಪರಿಹಾರ ಕಂಡುಹಿಡಿದವನು ಆಲ್‌ಫ್ರೆಡ್ ನೊಬೆಲ್. ಸ್ವೀಡನಿನ ಈ ರಸಾಯನ ಶಾಸ್ತ್ರಜ್ಞ, 1866ರಲ್ಲಿ ನೈಟ್ರೊಗ್ಲಿಸರೀನನ್ನು ಒಂದು ವಿಧದ ಮರಳಿನಂಥ ಪದಾರ್ಥದೊಡನೆ ಬೆರೆಸಿ ಅದನ್ನು ಗಟ್ಟಿಯಾದ ಪದಾರ್ಥದಂತೆ ಮಾಡಿ ಸಾಗಿಸಬಹುದೆಂದು ಕಂಡುಹಿಡಿದ. ಅಲ್ಲದೆ ನೈಟ್ರಿಕ್ ಆಮ್ಲ ಹಾಗೂ ಸಲ್ಫ್ಯೂರಿಕ್ ಆಮ್ಲಗಳ ಮಿಶ್ರಣ ಹಾಗೂ ನೈಟ್ರೊಗ್ಲಿಸರೀನ್ ಬೆರಸಿದರೆ ಒಂದು ವಿಧದ ಬಿಗಿ ಪದಾರ್ಥ ಉಂಟಾಗಿ ಇದನ್ನು ಬಂಡೆಕಲ್ಲಿನ ಸ್ಫೋಟನೆ ಯಲ್ಲಿ ಯಶಸ್ವಿಯಾಗಿ ಬಳಸಬಹುದೆಂದೂ ನೊಬೆಲ್ ತೋರಿಸಿಕೊಟ್ಟ. ಬಂದೂಕಿನಲ್ಲಿ ಗುಂಡು ಹಾರಿಸುವುದಕ್ಕೆ ಕೂಡ ತಕ್ಕಮಟ್ಟಿಗೆ ಸೌಮ್ಯವಾದ ಸಿಡಿಮದ್ದನ್ನು ತಯಾರಿಸಿದವನೂ ಈತನೇ. ಆಕಾಶಬಾಣಗಳನ್ನು ಹಾರಿಸಲು ಮತ್ತು ಬಂದೂಕು ಹಾರಿಸಲು ಯೋಗ್ಯವಾದ ಈ ತಯಾರಿಕೆಗಳು ಯುದ್ಧಾಸಕ್ತ ಮಾನವರಿಗೆ ಒಂದು ಹೊಸ ಲೋಕವನ್ನೇ ತೋರಿಸಿಕೊಟ್ಟುವು. ಈ ಶತಮಾನದಲ್ಲಿ ಎರಡು ಮಹಾಯುದ್ಧಗಳಲ್ಲಿ ಟಿ. ಎನ್. ಟಿ. (ಟ್ರೈನೈಟ್ರೊಟಾಲಿನ್) ಹೆಸರಿನ ಸಿಡಿಮದ್ದನ್ನು ಅಪಾರವಾಗಿ ಉಪಯೋಗಿಸಲಾಯಿತು. ಇದಲ್ಲದೆ, ಇನ್ನೂ ಅನೇಕ ಹೆಸರಿನ ಸ್ಫೋಟಕ ವಸ್ತುಗಳಿದ್ದರೂ ಪೊಟಾಷ್, ಇಂಗಾಲ ಹಾಗೂ ನೈಟ್ರಿಕ್ ಆಮ್ಲಗಳದೇ ಪ್ರಧಾನ ಪಾತ್ರ.

ಸಿಡಿಮದ್ದಿಗೆ ಶಾಂತಿಕಾಲದ ಬಳಕೆಯೂ ಅನೇಕ ರೂಪಗಳಲ್ಲಿದೆ. ಕೇವಲ ಅಮೆರಿಕದಲ್ಲೇ ನೂರು ಕೋಟಿ ಪೌಂಡುಗಳಷ್ಟು ಸಿಡಿಮದ್ದಿನ ವಾರ್ಷಿಕ ತಯಾರಿಕೆ ಇದೆಯಂತೆ. ಅಂದರೆ ದೈನಿಕ ಉತ್ಪಾದನೆ ಮೂವತ್ತು ಲಕ್ಷ ಪೌಂಡುಗಳೆಂದಾಯಿತು. ಹಾಗಾದರೆ ಸಿಡಿಮದ್ದಿನ ಇನ್ನಿತರ ಉಪಯೋಗಳೇನು ? ಸಮುದ್ರದಲ್ಲಿರುವ ಉನ್ನತ ಪರ್ವತವನ್ನು ಸ್ಫೋಟಿಸಿ ಹಡ ಸಂಚಾರ ಆ ದಾರಿಯಲ್ಲಿ ಸುಗಮವಾಗುವಂತೆ ಮಾಡಬಹುದು. ಗ ಕೆಲಸದಲ್ಲಿ ಸಿಡಿಮದ್ದಿನ ಉಪಯೋಗ ಬಹು ಸಾಮಾನ್ಯ. ಇವುಗಳಿಂ ಅಪಾಯವೂ ಹೆಚ್ಚಿಗೆ ಇರುವುದರಿಂದ ಸುರಕ್ಷಣೆಗಾಗಿ ಹತ್ತೊಂಬತ್ತನೆ ಶತಮಾನದ ಆದಿಯಲ್ಲಿ ಒಂದು ಫಲಪ್ರದ ಶೋಧನೆ ನಡೆಯಿತ ವ್ಯವಸಾಯ ಭೂಮಿಯನ್ನು ಮಟ್ಟಸಮಾಡಲು, ಗುಣಿ ತೆಗೆ ಸಾಕಷ್ಟು ದೊಡ್ಡ ಗಿಡಗಳನ್ನು ನೆಡಲು ವಿದೇಶಗಳಲ್ಲಿ ಸಿಡಿಮದ್ದನ ಉಪಯೋಗಿಸುತ್ತಾರೆ. ರೈಲು ಮಾರ್ಗ, ಮೋಟಾರು ಮಾರ್ಗಗಳನ ಮಾಡುವುದರಲ್ಲಿ ಇದನ್ನು ಬಳಸುತ್ತಾರೆ. ಆಕಾಶಬಾಣಗಳನ್ನು ಮೇಲ ಹಾರಿಸಲು, ಅಣೆಕಟ್ಟುಗಳ ಅಡಿಪಾಯಕ್ಕಾಗಿ ಬಂಡೆಗಳನ್ನು ಒಡೆಯಲ ಸಿಡಿಮದ್ದು ಬೇಕು. ಸಿಡಿಮದ್ದಿನಿಂದ ಸುರಂಗಕಾರ್ಯ ಸುಗಮ. ಎ ಬಾವಿಗಳ ಉಗಮವೂ ಸಿಡಿಮದ್ದಿನ ಸ್ಫೋಟದಿಂದಲೇ. ಹೀಗಾ ಸಿಡಿಮದ್ದಿನ ತಯಾರಿಕೆ ಇಂದು ಬಹು ಮುಖ್ಯವಾದ ಉದ್ದಿಮೆ.

ಒಂದು ವಸ್ತುವಿನ ವಿನಾಶಕಾರಿ ಗುಣವನ್ನು ಮಾನವ ತನ್ನ ಕೌಶಲದಿಂ ನಿತ್ಯ ಜೀವನದಲ್ಲಿ ನೆರವಾಗುವಂತೆ ಹೇಗೆ ಬಳಸಿಕೊಳ್ಳಬಹುದು ಎಂಬುದಕ ಸಿಡಿಮದ್ದು ಉತ್ತಮ ನಿದರ್ಶನ.

ನೋಡಿ : ನೊಬೆಲ್, ಆಲ್‌ಫ್ರೆಡ್; ಮಹಾಯುದ್ಧಗಳು

## ಸಿಯಾಟೊ

'ಸಿಯಾಟೊ' ಎನ್ನುವುದು 'ಸೌತ್ ಈಸ್ಟ್ ಏಷ್ಯ ಟ್ರೀಟಿ ಆರ್ಗನೈಸೇ ಷನ್' (ಆಗ್ನೇಯ ಏಷ್ಯ ಕರಾರು ವ್ಯವಸ್ಥೆ) ಎಂಬ ಸಂಸ್ಥೆಯ ಹೆಸರಿನ ಪದಗಳ ಮೊದಲಕ್ಷರಗಳನ್ನು ಸೇರಿಸಿದ ರೂಪ.

ಅಂತರರಾಷ್ಟ್ರೀಯ ಒಪ್ಪಂದಗಳ ಹಿಂದೆ ಇರುವ ಉದ್ದೇಶ ಹಲವಾರು ಸಾಮೂಹಿಕವಾಗಿ ರಕ್ಷಣೆ ಬಯಸಿ ಆಗ್ನೇಯ ಏಷ್ಯದ ಎಂಟು ರಾಷ್ಟ್ರಗಳು ಮಾಡಿಕೊಂಡ ಇಂಥ ಒಪ್ಪಂದ ಸಿಯಾಟೊ. ಅಮೆರಿಕ ಸಂಯುಕ್ತ ಸಂಸ್ಥಾನ, ಆಸ್ಟ್ರೇಲಿಯ, ಬ್ರಿಟನ್, ಥೈಲೆಂಡ್, ನ್ಯೂಜಿಲೆಂಡ್, ಪಾಕಿಸ್ತಾನ, ಫಿಲಿಪೀನ್ಸ್ ಮತ್ತು ಫ್ರಾನ್ಸ್ ಇವು ಒಪ್ಪಂದಕ್ಕೆ 1954 ಸೆಪ್ಟಂಬರ್ 8ರಂದು ಸಹಿಹಾಕಿದುವು. ಆ ರಾಷ್ಟ್ರಗಳ ಮಿಲಿಟರಿ ಕೂಟ ಸಿಯಾಟೊ.

ವಸಾಹತುಶಾಹಿ ಕ್ಷೀಣಗೊಂಡು ಫ್ರಾನ್ಸ್ ಇಂಡೋಚೀಣ ಪ್ರದೇಶದಿಂದ ಕಾಲ್ತೆಗೆದ ಮೇಲೆ ಆಗ್ನೇಯ ಏಷ್ಯದ ರಾಷ್ಟ್ರಗಳು ತಕ್ಕಷ್ಟು ಶಕ್ತಿಗೂಡಿಸಿ ಕೊಳ್ಳುವ ಮುಂಚೆ ಕಮ್ಯೂನಿಸ್ಟ್ ರಾಷ್ಟ್ರಗಳು ಇವನ್ನು ಆಕ್ರಮಿಸಬಹು ದೆಂಬ ಭೀತಿ ಮೂಡಿತು. ಅದರ ಫಲ ಸಿಯಾಟೊ. ಈ ಒಪ್ಪಂದಕ್ಕೆ ಸೇರಿದ ಯಾವುದೇ ರಾಷ್ಟ್ರದ ಮೇಲೆ ಆಕ್ರಮಣ ನಡೆದಲ್ಲಿ ಮಿಕ್ಕ ಎಲ್ಲ ರಾಷ್ಟ್ರಗಳೂ ಅದರ ರಕ್ಷಣೆಗೆ ಧಾವಿಸುತ್ತದೆ. ಸಿಯಾಟೊ ಕೂಟಕ್ಕೆ ತನ್ನದೇ ಆದ ಸೈನ್ಯ ಇಲ್ಲ. ಆದರೆ ಬಲವಾದ ಸೈನ್ಯ ನಿರ್ಮಿಸಿಕೊಳ್ಳುವುದ ರಲ್ಲಿ ಕೂಟದ ರಾಷ್ಟ್ರಗಳು ಪರಸ್ಪರ ಸಹಕರಿಸುತ್ತವೆ. ಕಮ್ಯೂನಿಸ್ಟ್ ಪ್ರಭಾವ, ಪ್ರಾಬಲ್ಯಗಳು ಕೂಟದ ಸದಸ್ಯರಾಷ್ಟ್ರಗಳಲ್ಲಿ ಬೆಳೆಯದಂತೆ ನೋಡಿಕೊಳ್ಳುವುದು ಕೂಡ ಒಂದು ಉದ್ದೇಶ.

ಆಗ್ನೇಯ ಏಷ್ಯದ ಹೆಚ್ಚಿನ ರಾಷ್ಟ್ರಗಳು ಈ ಕೂಟಕ್ಕೆ ಸೇರಿದರೂ ಇಂಡೊನೇಷ್ಯ, ಬರ್ಮ, ಭಾರತ ಮತ್ತು ಮಲಯ ದೇಶಗಳು ಅಲಿಪ್ತವಾಗಿಯೇ ಇರಲು ಬಯಸಿ ಹೊರಗೆ ಉಳಿದುವು. ಆದರೆ ಕಾಂಬೋಡಿಯ, ದಕ್ಷಿಣ ವಿಯೆಟ್ನಾಂ ಮತ್ತು ಲಾವೋಸ್ ದೇಶಗಳು ಈ ಕೂಟದ ಜೊತೆ ಪ್ರತ್ಯೇಕ ಒಪ್ಪಂದ ಮಾಡಿಕೊಂಡು ರಕ್ಷಣೆಯ ಭರವಸೆ ಪಡೆದುವು. ಇದರ ಮುಖ್ಯ ಕಚೇರಿ ಬ್ಯಾಂಗ್‌ಕಾಕಿನಲ್ಲಿದೆ.

## ಸಿರಿಯ

ಸಿರಿಯ ಒಂದು ಸ್ವತಂತ್ರ ಅರಬ್ ಗಣರಾಜ್ಯ. ಭೂಮಧ್ಯ ಸಮುದ್ರದ ಮೂಲಕ ಬ್ಯಾಬಿಲೋನಿಯಕ್ಕೂ ಪರ್ಷಿಯಕ್ಕೂ (ಈಗಿನ ಇರಾಕ್) ನಡುವಿನ ಪ್ರಾಚೀನ ವಾಣಿಜ್ಯಮಾರ್ಗದಲ್ಲಿದೆ. ಒಂದಾನೊಂದು ಕಾಲದಲ್ಲಿ ಈಗಿನ ಇರಾಕ್, ಜೋರ್ಡಾನ್, ಲೆಬನಾನ್ ಮತ್ತು ಇಸ್ರೇಲ್ ರಾಜ್ಯಗಳ ಕೆಲವು ಭಾಗಗಳು ಸಿರಿಯದಲ್ಲಿದ್ದುವು.

ಸಿರಿಯದ ಜನಸಂಖ್ಯೆಯಲ್ಲಿ ಬಹುಪಾಲು ಜನ ಅರಬರು. ಸುಮಾರು ಎರಡು ಲಕ್ಷ ಜನ ಕುರ್ದರೂ ಹಲವು ಸಾವಿರ ಅರಬರೂ ಡ್ರೂಜ್ ಜನರೂ ಇದ್ದಾರೆ.

ಸಿರಿಯದ ಆಡಳಿತಭಾಷೆ ಅರಬಿ. ನೂರರಲ್ಲಿ ತೊಂಬತ್ತಕ್ಕೂ ಹೆಚ್ಚು ಮಂದಿ ಅರಬಿ ಭಾಷೆ ಮಾತಾಡುತ್ತಾರೆ.

ಮಹಮ್ಮದೀಯ ಮತವೇ ಮುಖ್ಯವಾದದ್ದು. ಸುಮಾರು ಐದು ಲಕ್ಷ ಕ್ರೈಸ್ತರೂ ಸಿರಿಯದಲ್ಲಿದ್ದಾರೆ. ಇಲ್ಲಿ ಯಾಜಿರಿ ಪಂಗಡದ ಜನರು ಪ್ರೇತಗಳನ್ನು ಪೂಜಿಸುತ್ತಾರೆ.

ಸಿರಿಯದ ಹೆಚ್ಚಿನ ಜನ ವ್ಯವಸಾಯಗಾರರು. ಬೆಡೂಯನ್ ಪಂಗಡಕ್ಕೆ ಸೇರಿದ ಅರಬಿ ಅಲೆಮಾರಿಗಳಲ್ಲಿ ಅನೇಕರು ಕುರುಬರು. ಇವರು ತಮ್ಮ ಕುರಿ ಮೇಕೆಗಳನ್ನು ಅಟ್ಟಿಕೊಂಡು, ಚಳಿಗಾಲದ ಮಳೆ ಬಿದ್ದಮೇಲೆ ಮರುಭೂಮಿಯ ಹುಲ್ಲುಗಾವಲಗಳಿಗೆ ಮತ್ತು ಬೇಸಗೆಯಲ್ಲಿ ಉತ್ತರದಲ್ಲೂ ಪಶ್ಚಿಮದಲ್ಲೂ ಇರುವ ಪರ್ವತ ಪ್ರದೇಶಗಳಿಗೆ, ಬಯಲು ಭೂಮಿಗೆ ಹೋಗುತ್ತಾರೆ.

ವ್ಯವಸಾಯದಲ್ಲಿ ಇನ್ನೂ ಪ್ರಾಚೀನ ಪದ್ಧತಿ.

ಸಿರಿಯದ ಹಳ್ಳಿಗಳ ಜನರ ಉಡುಪು ಸಾಂಪ್ರದಾಯಿಕ ಅರಬಿ ಉಡುಪು, ಉದ್ದನೆಯ ನಿಲುವಂಗಿ, ತಲೆಗೆ ಬಟ್ಟೆ. ಆದರೆ ನಗರಗಳಲ್ಲಿ ಆಧುನಿಕ ಪಾಶ್ಚಾತ್ಯ ಉಡುಗೆತೊಡುಗೆ ಬಳಕೆಗೆ ಬಂದಿವೆ. ಮಹಿಳೆಯರಲ್ಲಿ ಅನೇಕರು ಅವಕುಂಠನವತಿಯರು.

ಸಿರಿಯದ ವಿಸ್ತೀರ್ಣ 1,87,086 ಚದರ ಕಿಲೊಮೀಟರು. ಆದರೆ ದೇಶದ ಅರ್ಧಕ್ಕೂ ಹೆಚ್ಚು ಭಾಗ ಮರುಭೂಮಿ. ದಕ್ಷಿಣ ಮೂಲೆಯಲ್ಲಿ ಹಾರನ್ ಬಯಲು. ಪೂರ್ವಕ್ಕೆ ಜಿಬೆಲ್‌ಡ್ರೂಜ್ ಎಂಬ ಪರ್ವತಗಳು; ಪಶ್ಚಿಮದಲ್ಲಿ ಆ್ಯಂಟಿಲೆಬನಾನ್ ಪರ್ವತಗಳು. ಸಿರಿಯಕ್ಕೂ ಲೆಬನಾನಿಗೂ ಪರ್ವತಗಳೇ ಗಡಿಪ್ರದೇಶ, 2,816 ಮೀಟರುಗಳ ಹರ್‌ಮನ್ ಅತ್ಯಂತ ಉನ್ನತ ಶಿಖರ.

ಯೂಫ್ರೇಟಿಸ್ ಸಿರಿಯದಲ್ಲಿನ ಅತ್ಯಂತ ಉದ್ದ ನದಿ. ಈ ನದಿ ತುರ್ಕಿ ದೇಶದಲ್ಲಿ ಹುಟ್ಟಿ, ಉತ್ತರ ಹಾಗೂ ಪೂರ್ವ ಸಿರಿಯದಲ್ಲಿ ಸುಮಾರು 483 ಕಿಲೊಮೀಟರು ಹರಿದು, ಇರಾಕಿಗೆ ಹೋಗುತ್ತದೆ.

ಹವಾಗುಣ ಒಂದೊಂದು ಭಾಗದಲ್ಲಿ ಒಂದೊಂದು ವಿಧ. ಪರ್ವತ ಪ್ರದೇಶಗಳು ಬಯಲು ಭೂಮಿಗಿಂತ ಹೆಚ್ಚು ತಂಪು. ಪಶ್ಚಿಮ ಸಿರಿಯದಲ್ಲಿ ಬೇಸಿಗೆಯ ಬಿಸಿಲು, ಚಳಿಯ ಕೊರೆತ ತೀಕ್ಷ್ಣವಲ್ಲ. ಸಿರಿಯದ ಉಳಿದ ಭಾಗದಲ್ಲಿ ಮರುಭೂಮಿಯ ವಾತಾವರಣ. ಮೇ ತಿಂಗಳಿಂದ ಸೆಪ್ಟೆಂಬರ್ ವರೆಗೂ ತಡೆಯಲಸಾಧ್ಯವಾದ ಬಿಸಿಲು.

ಫಲವತ್ತಾದ ವ್ಯವಸಾಯ ಭೂಮಿಯೇ ಸಿರಿಯದ ನೈಸರ್ಗಿಕ ಸಂಪನ್ಮೂಲ. ಸ್ವಲ್ಪ ತೈಲವೂ ಕಟ್ಟಡಕ್ಕೆ ಬೇಕಾಗುವ ಕಲ್ಲೂ ಸಿಕ್ಕುತ್ತವೆ. ಪ್ರಧಾನ ಬೆಳೆ ಗೋಧಿ, ಬಾರ್ಲಿ, ಹೊಗೆಸೊಪ್ಪು. ಹತ್ತಿ, ಕಬ್ಬು, ಅತ್ಯುತ್ತಮ ಹಣ್ಣುಗಳೂ ಬೆಳೆಯುತ್ತವೆ. ವ್ಯವಸಾಯದಿಂದ ಬಂದ ವಸ್ತುಗಳನ್ನು ರಫ್ತುಮಾಡಿ, ಯಂತ್ರೋಪಕರಣಗಳು, ತಯಾರಿಸಲ್ಪಟ್ಟ ವಸ್ತುಗಳು, ಪೆಟ್ರೋಲಿಯಂ ಮೊದಲಾದುವನ್ನು ತರಿಸಿಕೊಳ್ಳುತ್ತಾರೆ.

ಸಾಬೂನು ತಯಾರಿಕೆ, ಗಿರಣಿಯಲ್ಲಿ ಹಿಟ್ಟು ಮಾಡುವಿಕೆ, ಹಣ್ಣುಗಳನ್ನು ಕೆಡದಂತೆ ಶೇಖರಿಸಿಡುವುದು ಇವು ಪ್ರಮುಖವಾದ ಸಣ್ಣ ಕೈಗಾರಿಕೆಗಳು.

ಸಿರಿಯದ ರಾಜಧಾನಿ ಡಮಾಸ್ಕಸ್ ಓಯಸಿಸ್ ಪ್ರದೇಶದಲ್ಲಿದೆ. ಇದರ ಜನಸಂಖ್ಯೆ ಐದು ಲಕ್ಷ. ಇಲ್ಲಿ ಸಿರಿಯ ವಿಶ್ವವಿದ್ಯಾನಿಲಯ, ಅರಬ್ ಅಕಾಡಮಿ, ಹಲವು ವಸ್ತುಸಂಗ್ರಹಾಲಯಗಳು ಮತ್ತು ಗ್ರಂಥ ಭಂಡಾರಗಳು ಇವೆ.

ತುರ್ಕಿ ಗಡಿಯಲ್ಲಿರುವ ಅಲೆಪ್ಪೊ, ಸಿರಿಯದ ಪ್ರಮುಖ ಔದ್ಯೋಗಿಕ ಹಾಗೂ ವಾಣಿಜ್ಯ ಕೇಂದ್ರ. ನೈಋತ್ಯಕ್ಕಿರುವ ಲಟಾಕಿಯ ಪ್ರಮುಖ ಬಂದರು.

ಸಿರಿಯದಲ್ಲಿ ಸುಮಾರು 6,436 ಕಿಲೊಮೀಟರು ಅಭಿವೃದ್ಧಿಹೊಂದಿದ ರಸ್ತೆ ಇದೆ. ಮರುಭೂಮಿಯಲ್ಲಿ ಪುರಾತನಕಾಲದಲ್ಲಿ ಒಂಟೆ ಸಾರಿಗೆಯವರು ಉಪಯೋಗಿಸುತ್ತಿದ್ದ ರಸ್ತೆಗಳಲ್ಲಿ ವಾಹನಗಳು ಓಡಾಡುತ್ತವೆ. ಲೆಬನಾನ್, ತುರ್ಕಿ, ಇರಾಕ್ ಮತ್ತು ಜೋರ್ಡಾನ್ ಇವುಗಳೊಡನೆ ರೈಲು ಸಂಪರ್ಕವಿದೆ. ಡಮಾಸ್ಕಸ್‌ನಲ್ಲಿ ಅಂತರರಾಷ್ಟ್ರೀಯ ವಿಮಾನ ನಿಲ್ದಾಣವಿದೆ, ರೇಡಿಯೊ–ಟೆಲಿವಿಷನ್ ಕೇಂದ್ರಗಳಿವೆ.

ಅತ್ಯಂತ ಪ್ರಮುಖ ವಾಣಿಜ್ಯ ಮಾರ್ಗದಲ್ಲಿರುವುದರಿಂದ ಸಿರಿಯವನ್ನು ಪ್ರಾಚೀನ ಕಾಲದಿಂದಲೂ ಅನೇಕ ದೇಶಗಳು ವಶಪಡಿಸಿಕೊಳ್ಳಲು ಬಯಸಿದುವು. ಹಿಟ್ಟಿಗಳು, ಬ್ಯಾಬಿಲೋನಿಯದವರು, ಅಸ್ಸಿರಿಯದವರು, ಈಜಿಪ್ಟಿನವರು, ಪರ್ಷಿಯನರು, ಗ್ರೀಕರು, ರೋಮನರು ಬೇರೆ ಬೇರೆ ಕಾಲದಲ್ಲಿ ಸಿರಿಯವನ್ನು ಗೆದ್ದು, ಅಲ್ಲಿ ನೆಲೆಸಿದರು. ಅರಬರು ಮತ್ತು ಮಂಗೋಲರು ಹದಿನಾರನೆಯ ಶತಮಾನದಲ್ಲಿ ತುರ್ಕಿ ಸಿರಿಯವನ್ನು ಜಯಿಸಿದರು. ಮೊದಲನೆಯ ಮಹಾಯುದ್ಧದ ಕಾಲದಲ್ಲಿ ಸ್ವಾತಂತ್ರ್ಯವನ್ನು ಬಯಸಿದ ಅರಬರಿಗೆ ಬ್ರಿಟಿಷರು ಸಹಾಯಮಾಡಿದರು. ಲಾರೆನ್ಸ್ ಎಂಬಾತನ ನಾಯಕತ್ವದಲ್ಲಿ ಅರಬರು ಡಮಾಸ್ಕಸನ್ನು ವಶಮಾಡಿಕೊಂಡರು. ಮೊದಲನೆಯ ಜಾಗತಿಕ ಮಹಾಯುದ್ಧದ ಕೊನೆಯ ವೇಳೆಗೆ ಸಿರಿಯದ ಆಡಳಿತವನ್ನು ರಾಷ್ಟ್ರ ಸಂಘ ಫ್ರಾನ್ಸಿಗೆ ಒಪ್ಪಿಸಿತು.

1914ರಲ್ಲಿ ಸಿರಿಯ ಸ್ವತಂತ್ರವಾಯಿತು. 1945ರಲ್ಲಿ ಅದು ಇತರ ಅರಬ್ ರಾಷ್ಟ್ರಗಳೊಡನೆ ಅರಬಿ ಕೂಟವನ್ನು (ಅರಬ್ ಲೀಗ್) ಸೇರಿತು. ಅದೇ ವರ್ಷ ವಿಶ್ವಸಂಸ್ಥೆಯ ಸದಸ್ಯರಾಷ್ಟ್ರವಾಯಿತು.

1958 ರಿಂದ 1962ರವರೆಗೆ ಸಿರಿಯ ಈಜಿಪ್ಟಿನೊಂದಿಗೆ ಐಕ್ಯ ಅರಬ್ ಗಣರಾಜ್ಯದ ಭಾಗವಾಗಿತ್ತು. 1964 ರಲ್ಲಿ ಸೈನ್ಯ ಕ್ರಾಂತಿಯಾಗಿ, ಸರಕಾರ ಪಲ್ಲಟಗೊಂಡಿತು.

| | | |
|---|---|---|
| ಅಕ್ಷಾಂಶ | : | 32° 19′ ಉ ದಿಂದ 37° 20′ ಉ |
| ರೇಖಾಂಶ | : | 35° 37′ ಪೂ ದಿಂದ 42° 22′ ಪೂ |
| ವಿಸ್ತೀರ್ಣ | : | 1,87,086 ಚ. ಕಿ. ಮೀ. |
| ಜನಸಂಖ್ಯೆ | : | 51,80,000 |
| ಭಾಷೆ | : | ಅರಬಿ |
| ಸರಕಾರ | : | ಗಣರಾಜ್ಯ |
| ರಾಜಧಾನಿ | : | ಡಮಾಸ್ಕಸ್ |
| ಬಾವುಟ | : | ಕೆಂಪು, ಬಿಳಿ, ಕಪ್ಪು ಬಣ್ಣದ ಮೂರು ಉದ್ದ ಪಟ್ಟಿಗಳು ಬಿಳಿಬಣ್ಣದ ನಡುವಿನಲ್ಲಿ ಎರಡು ಹಸಿರು ನಕ್ಷತ್ರಗಳು |

## ಸ್ವಿಟ್ಜರ್‌ಲೆಂಡ್

ಹದಿನೆಂಟು ವರ್ಷ ವಯಸ್ಸಿನೊಳಗಿರುವವರು ಚಲನಚಿತ್ರ ನೋಡುವಂತಿಲ್ಲ ಸ್ವಿಟ್ಜರ್‌ಲೆಂಡಿನಲ್ಲಿ. ಅವರಿಗೇ ವಿಶೇಷ ಕಾರ್ಯಕ್ರಮವಿದ್ದರೆ ನೋಡಬಹುದು.

ಬಹು ಕುತೂಹಲ ಉಂಟುಮಾಡುವ ದೇಶ ಸ್ವಿಟ್ಜರ್‌ಲೆಂಡ್.

ಈ ದೇಶದ ಸುತ್ತೂ ನೆಲ : ಎಲ್ಲಿಯೂ ಸಮುದ್ರದ ಸಂಪರ್ಕವಿಲ್ಲ. ಫ್ರಾನ್ಸ್, ಜರ್ಮನಿ, ಆಸ್ಟ್ರಿಯ, ಇಟಲಿ ದೇಶಗಳು ಸ್ವಿಟ್ಜರ್‌ಲೆಂಡನ್ನು ಸುತ್ತುವರಿದಿವೆ. ಆದರೆ 1815ರಲ್ಲಿ ಫ್ರೆಂಚರ ಆಡಳಿತ ಅಂತ್ಯಗೊಂಡ ಬಳಿಕ ಈ ದೇಶದ ಮೇಲೆ ಯಾರೂ ದಾಳಿ ಮಾಡಿಲ್ಲ. 1515ರಲ್ಲಿ ಇಟಲಿಯ ಪರವಾಗಿ ಹೋರಾಡಿ ಸೋತಮೇಲೆ ಸ್ವಿಟ್ಜರ್‌ಲೆಂಡ್ ಅತಿ ಕಟ್ಟುನಿಟ್ಟಿನ ತಾಟಸ್ಥ್ಯ ಪಾಲಿಸಿಕೊಂಡು ಬಂದಿದೆ. ಎರಡು ಮಹಾಯುದ್ಧಗಳು ಯೂರೋಪಿನ ಬಹು ಭಾಗವನ್ನು ದಹಿಸಿದ್ದರೂ ಆ ಕಾವು ಸ್ವಿಟ್ಜರ್‌ಲೆಂಡಿಗೆ ತಾಕಲಿಲ್ಲ. ಆದರೂ ಪ್ರತಿಯೊಬ್ಬ ತರುಣನೂ ಸೈನಿಕ ತರಬೇತಿ ಪಡೆಯಲೇ ಬೇಕೆಂಬ ನಿಯಮವಿದೆ. ಹಲವು ಅಂತರರಾಷ್ಟ್ರೀಯ ಸಮ್ಮೇಳನಗಳು ಇಲ್ಲಿ ನಡೆದಿವೆ : ವಯಸ್ಸಿನಲ್ಲಿ ಪ್ರಪಂಚದ ಅತಿ ಹಿರಿಯ ಗಣರಾಜ್ಯಗಳಲ್ಲಿ ಒಂದು ಇದು. ಆದರೆ ತಾಟಸ್ಥ್ಯ ನೀತಿಗೆ ಹೊಂದುವುದಿಲ್ಲ ಎಂದು ವಿಶ್ವಸಂಸ್ಥೆಯನ್ನು ಸೇರಿಲ್ಲ. ಇದನ್ನು ಆದರ್ಶ ಪ್ರಜಾಪ್ರಭುತ್ವ ರಾಷ್ಟ್ರ ಎನ್ನುತ್ತಾರೆ. ಏಕೆಂದರೆ ಪಕ್ಷ ಪ್ರತಿಪಕ್ಷಗಳ ಕಲಹ ಬಹು ಕಡಮೆ. "ಬಹಳಷ್ಟು ಸ್ವಿಸ್ ಪ್ರಜೆಗೆ ರಾಷ್ಟ್ರದ ಅಧ್ಯಕ್ಷನ ಹೆಸರು ತಿಳಿದಿರುವುದಿಲ್ಲ" ಎಂದು ಅವರೇ ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಇತ್ತೀಚಿನವರೆಗೆ ಹೆಂಗಸರಿಗೆ ಮತದಾನ ಮಾಡುವ ಹಕ್ಕಿರಲಿಲ್ಲ. ಎಲ್ಲರಿಗೂ ಮತದಾನದ ಹಕ್ಕನ್ನು ಕೊಟ್ಟರೆ ಸ್ತ್ರೀಯರು ಗಂಡಸರಿಗೆ ಪ್ರತಿಸ್ಪರ್ಧಿಗಳಾಗುತ್ತಾರೆ; ಹೆಂಗಸು ತನಗೆ ಯೋಗ್ಯವಾದ ಗಾಂಭೀರ್ಯವನ್ನು ಉಳಿಸಿಕೊಳ್ಳುವುದರ ಬದಲು 'ಕೀಳು' ಪುರುಷನಾಗುತ್ತಾಳೆ ಎಂಬ ಅಭಿಪ್ರಾಯವಿತ್ತು. ಸ್ತ್ರೀಯರ ಸಂಘಗಳೇ ಸ್ತ್ರೀಯರಿಗೆ ಮತದಾನದ ಹಕ್ಕನ್ನು ಕೊಡುವುದನ್ನು ವಿರೋಧಿಸಿದ್ದುವು. 1970ರ ವೇಳೆಗೆ ಆ ಪರಿಸ್ಥಿತಿ ಬದಲಾಯಿತು.

ಯೂರೋಪಿನ ಆಟದ ಮೈದಾನವೆನಿಸಿಕೊಂಡಿರುವ ಸ್ವಿಟ್ಜರ್‌ಲೆಂಡ್ ಪಶ್ಚಿಮ ಯೂರೋಪಿನ ಕೆಲವು ಅತ್ಯುನ್ನತ ಪರ್ವತಗಳ ನಡುವೆ ಇರುವ ಪುಟ್ಟ ದೇಶ. ನಿಸರ್ಗ ರಮ್ಯತೆಯ ಸುಂದರ ದೇಶ. 3,660 ಮೀಟರ್‌ಗಳಿಗಿಂತ ಎತ್ತರವಿರುವ ಸುಮಾರು 50 ಶಿಖರಗಳು ಈ ಪರ್ವತಶ್ರೇಣಿಯಲ್ಲಿ. ಪ್ರಪಂಚದ ವಿವಿಧ ಭಾಗಗಳಿಂದ ಪರ್ವತಾರೋಹಿಗಳು ಆಲ್ಪ್ಸ್ ಪರ್ವತಕ್ಕೆ ಬರುತ್ತಾರೆ. ಹಿಮದಿಂದ ಆವೃತವಾದ ಶಿಖರಗಳನ್ನು ಇಲ್ಲಿ ಕಾಣಬಹುದು : ಪರ್ವತಗಳ ಒಂದು ಶಿಖರದಿಂದ ಮತ್ತೊಂದು ಶಿಖರಕ್ಕೆ ವಿದ್ಯುತ್ ಚಾಲಿತ ತೊಟ್ಟಿಲುಗಳಲ್ಲಿ ಕುಳಿತು ಪ್ರಯಾಣ ಮಾಡುತ್ತ ಅದ್ಭುತ ಸೃಷ್ಟಿಸೌಂದರ್ಯವನ್ನು ಸವಿಯಬಹುದು. ಶಿಖರಗಳಲ್ಲಿಯೂ ಪ್ರವಾಸಿಗಳಿಗೆ ವಿಶ್ರಾಮಧಾಮಗಳಿವೆ. ಇವು ಬಹು ಆರೋಗ್ಯಕರ. ಪ್ರಪಂಚದ ವಿವಿಧ ಭಾಗಗಳಿಂದ ರೋಗಿಗಳು ಇಲ್ಲಿ ಒಳ್ಳೆಯ ಹವೆಗಾಗಿ ಬರುತ್ತಾರೆ. ಅನೇಕರು ಸ್ವಿಟ್ಜರ್‌ಲೆಂಡಿನಲ್ಲಿರುವ ರಮಣೀಯ ಸರೋವರಗಳಲ್ಲಿ ದೋಣಿಗಳಲ್ಲಿ ವಿಹರಿಸುತ್ತಾರೆ.

ಸ್ವಿಟ್ಜರ್‌ಲೆಂಡಿನ ಉತ್ತರಕ್ಕೆ ಜ್ಯೂರಾ ಶ್ರೇಣಿ, ಮಧ್ಯದಲ್ಲಿ ಸ್ವಿಸ್ ಪ್ರಸ್ಥಭೂಮಿ, ಉತ್ತರದಲ್ಲಿ ಆಲ್ಪ್ಸ್ ಪರ್ವತಗಳು ಇವೆ. ವ್ಯವಸಾಯಕ್ಕೆ ಬಳಸಿರುವ ಭೂಮಿ ಕಡಮೆ. ಸ್ವಿಟ್ಜರ್‌ಲೆಂಡಿನ ಅತ್ಯಂತ ಫಲವತ್ತಾದ ಪ್ರದೇಶವೆಂದರೆ ಪ್ರಸ್ಥಭೂಮಿ. ಇದು ಸುಮಾರು 322 ಕಿ. ಮೀ. ಉದ್ದವಾಗಿಯೂ 64.4 ಕಿ. ಮೀ. ಅಗಲವಾಗಿಯೂ ಇದೆ.

ರೈನ್ ಹಾಗೂ ರೋನ್ ಸ್ವಿಟ್ಜರ್‌ಲೆಂಡಿನ ಎರಡು ಮುಖ್ಯ ನದಿಗಳು.

ಕೆಲವೊಮ್ಮೆ ಶುಷ್ಕ ಬಿಸಿಗಾಳಿ ಆಲ್ಪ್ಸ್ ಪರ್ವತಗಳಿಂದ ಬೀಸುತ್ತದೆ. ಇದರಿಂದ ಮಂಜುಗಡ್ಡೆಗಳು ಇದ್ದಕ್ಕಿದ್ದಂತೆ ಕರಗುತ್ತವೆ. ಹೀಗೆ ಕರಗುವುದರಿಂದ ಅನೇಕ ವೇಳೆ ಹಳ್ಳಿಗಳೇ ನಾಶವಾಗಿ ಬಿಡುತ್ತವೆ: ಕಣಿವೆಗಳು ಮುಚ್ಚಿಹೋಗುತ್ತವೆ.

ಆಹಾರ ವಸ್ತುವನ್ನು ಸ್ವಿಟ್ಜರ್‌ಲೆಂಡ್ ಆಮದು ಮಾಡಿಕೊಳ್ಳುತ್ತದೆ. ಅತ್ಯುತ್ತಮ ಹಣ್ಣುಗಳನ್ನು ರಫ್ತುಮಾಡುತ್ತದೆ. ಸೇಬು ಹಣ್ಣಿಗೆ ಈ ದೇಶ ಪ್ರಸಿದ್ಧ.

ಸ್ವಿಟ್ಜರ್‌ಲೆಂಡಿನಲ್ಲಿ ಖನಿಜ ಸಂಪತ್ತಿಲ್ಲದಿದ್ದರೂ ಈ ನಾಡು ಕೈಗಾರಿಕಾ ಕೇಂದ್ರವಾಗಿದೆ. ಜಲಪಾತಗಳಿಂದ ವಿದ್ಯುಚ್ಛಕ್ತಿಯನ್ನು ಸಮೃದ್ಧವಾಗಿ ಉತ್ಪಾದಿಸುತ್ತಾರೆ. 100ರಲ್ಲಿ ಸುಮಾರು 50 ಜನರಿಗೆ ಕೈಗಾರಿಕಾ ಕೇಂದ್ರಗಳಲ್ಲಿ ಕೆಲಸ. ಅಲ್ಪ ಬೆಲೆಗೆ ಕಚ್ಚಾ ಪದಾರ್ಥ ಕೊಂಡು ಅವುಗಳಿಂದ ವಸ್ತುಗಳನ್ನು ಸಿದ್ಧಪಡಿಸಿ ಹೆಚ್ಚಿನ ಬೆಲೆಗೆ ಮಾರುತ್ತಾರೆ.

ಜರ್ಮನರು, ಫ್ರೆಂಚರು, ಇಟಲಿಯವರು ಈ ಮೂವರು ಕಲೆತು ಸ್ವಿಸ್ ಜನಾಂಗವಾಗಿ ನೆಲೆಸಿದ್ದಾರೆ. ಒಂದಾಗಿ ಬಾಳುತ್ತಿದ್ದಾರೆ. ಸ್ವಿಟ್ಜರ್‌ಲೆಂಡಿನಲ್ಲಿ ಮೂರು ಭಾಷೆಗಳೂ ಬಳಕೆಯಲ್ಲಿವೆ.- ಪ್ರತಿಯೊಬ್ಬನೂ ಪ್ರೌಢ ವಿದ್ಯಾಭ್ಯಾಸದಲ್ಲಿ ತನ್ನ ಮಾತೃಭಾಷೆಯಲ್ಲದ ಉಳಿದೆರಡು ಭಾಷೆಗಳನ್ನು ಕಲಿಯುತ್ತಾನೆ. ಹೀಗೆ ಭಾಷೆಯ ಸಮಸ್ಯೆಯನ್ನು ಈ ನಾಡು ಬಿಡಿಸಿದೆ.

ಸ್ವಿಸ್ ಜನ ಕ್ರೈಸ್ತ ಮತದವರು.

ಸ್ವಿಟ್ಜರ್‌ಲೆಂಡಿನ ಜನಸಂಖ್ಯೆಯಲ್ಲಿ ಸುಮಾರು ಅರ್ಧ ಭಾಗದಷ್ಟು ಜನ ನಗರಗಳಲ್ಲಿ ವಾಸಿಸುತ್ತಾರೆ. ಪರ್ವತಗಳ ಇಳಿಜಾರಿನ ಕೆಳಮಟ್ಟಗಳಲ್ಲಿ ಹಾಗೂ ಕಣಿವೆಗಳಲ್ಲಿ ಹಳ್ಳಿಗಳಿವೆ.

ವಸಂತ ಬಂದಾಗ ರೈತರು 'ರಾಣಿ' ಹಸುವಿಗೆ ಹೂಮಾಲೆ ಹಾಕಿ ಅದನ್ನು ದನಗಳ ಮೆರವಣಿಗೆಯಲ್ಲಿ ಹಳ್ಳಿಯಿಂದ ಹೊರಕ್ಕೆ ಕರೆದುಕೊಂಡು ಹೋಗುತ್ತಾರೆ. ಬಹು ಕಾಲದಿಂದ ಬಂದಿರುವ ಪದ್ಧತಿ ಇದು.

ಶಾಲೆಗಳೂ ಕಚೇರಿಗಳೂ ಬೇಸಿಗೆಯಲ್ಲಿ ಬೆಳಗ್ಗೆ ಏಳು ಗಂಟೆಗೆ ಆರಂಭವಾಗುತ್ತವೆ. ಚಳಿಗಾಲದಲ್ಲಿ ಎಂಟಕ್ಕೆ.

ಜೂರಿಚ್, ಸ್ವಿಟ್ಜರ್‌ಲೆಂಡಿನ ಈಶಾನ್ಯದಲ್ಲಿರುವ ಅತ್ಯಂತ ದೊಡ್ಡ ನಗರ. ಸುಮಾರು 5,47,000 ಜನರಿರುವ ಪಟ್ಟಣ ; ಬಟ್ಟೆ ಹಾಗೂ ಯಂತ್ರೋದ್ಯಮಗಳ ಕೇಂದ್ರ. ಉತ್ತರದ ಗಡಿಯಲ್ಲಿರುವ ಪಟ್ಟಣ ಬಾಸೆಲ್. ರೈನ್ ನದಿಯ ಇಬ್ಭಾಗದಲ್ಲೂ ಈ ಪಟ್ಟಣ ಬೆಳೆದಿದೆ. ರಾಸಾಯನಿಕ ಉದ್ಯಮದ ತವರು. ಇದು ಸ್ವಿಟ್ಜರ್‌ಲೆಂಡಿನಲ್ಲಿರುವ ಮೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣಗಳಲ್ಲೊಂದು.

ಬಾಸೆಲ್‌ಗೆ ದಕ್ಷಿಣದಲ್ಲಿರುವ ನಗರ ಬರ್ನ್ ಸ್ವಿಟ್ಜರ್‌ಲೆಂಡಿನ ರಾಜಧಾನಿ. ಬರ್ನ್ ಮಧ್ಯಯುಗದಲ್ಲಿ ಪ್ರಬಲ ಪ್ರದೇಶವಾಗಿತ್ತು. ಇಲ್ಲಿ ರಾಯಭಾರಿ ಕಚೇರಿಗಳೂ ಸರಕಾರಿ ಭವನಗಳೂ ಇವೆ.

ಜಿನೀವ ಸ್ವಿಟ್ಜರ್‌ಲೆಂಡಿನ ಅತ್ಯಂತ ಪ್ರಖ್ಯಾತ ನಗರ ; ತನ್ನ ಸೊಗಸಾದ ಭವನಗಳಿಗೆ, ದೇವಾಲಯಗಳಿಗೆ, ಉದ್ಯಾನಗಳಿಗೆ ಹೆಸರಾಗಿದೆ. ಇದು ಯೂರೊಪಿನಲ್ಲಿ ಗಡಿಯಾರಗಳನ್ನು ಮಾಡಿದ ಪ್ರಥಮ ನಗರ. ಜಿನೀವ ಒಂದು ರೀತಿಯ ಅಂತರರಾಷ್ಟ್ರೀಯ ರಾಜಧಾನಿ. ರೆಡ್‌ಕ್ರಾಸ್ ಸಂಸ್ಥೆ ಹುಟ್ಟಿದ್ದು ಇಲ್ಲೇ. ರಾಷ್ಟ್ರ ಸಂಘ ನೆಲೆಸಿದ್ದು ಜಿನೀವದಲ್ಲಿ. ಜಿನೀವ ಕೆಲವೊಂದು ನಿಬಂಧನೆಗಳಿಗೂ ಪ್ರಸಿದ್ಧಿ ಪಡೆದಿದೆ. ಯುದ್ಧ ಕೈದಿಗಳನ್ನು ಸೈನ್ಯ ಯಾವ ರೀತಿ ನೋಡಿಕೊಳ್ಳಬೇಕು ಎಂಬುದನ್ನು ತಿಳಿಸುವ ನಿಯಮಾವಳಿ ಒಪ್ಪಂದಕ್ಕೆ ಜಿನೀವ ಕನ್‌ವೆನ್‌ಷನ್ ಎಂದು ಹೆಸರು. 1949ರ ಆಗಸ್ಟ್ 12ರಂದು 58 ಸರಕಾರಗಳು ಇದಕ್ಕೆ ಸಹಿ ಮಾಡಿದುವು.

ಸ್ವಿಟ್ಜರ್‌ಲೆಂಡಿನ ಜನ ಕುಶಲ ಕೈಗಾರಿಕೆಗಳಿಗೆ ಹೆಸರಾಗಿದ್ದಾರೆ. ಹೊರಗೆ ಹಿಮ ಕವಿದಿದ್ದಾಗ ಮನೆಯಲ್ಲಿ ಕುಶಲಕೈಗಾರಿಕೆಗಳಲ್ಲಿ ನಿರತರಾಗಿರುತ್ತಾರೆ. ಸಣ್ಣ ಕೈಗಾರಿಕೆಗಳಿಗೆ ಎತ್ತಿದ ಕೈ ಅವರದು. ಅದರಲ್ಲೂ ಗಡಿಯಾರಗಳ ತಯಾರಿಕೆಗೆ ಸ್ವಿಸ್ ಜನ ಪ್ರಖ್ಯಾತರು.

ಸ್ವಿಟ್ಜರ್‌ಲೆಂಡಿನಲ್ಲಿ ಇಪ್ಪತ್ತೆರಡು ಕ್ಯಾಂಟನ್ (ಅಥವಾ ಸಂಸ್ಥಾನ) ಗಳಿವೆ. ಪ್ರತಿಯೊಂದು ಕ್ಯಾಂಟನಿಗೆ ತನ್ನದೇ ಆದ ಕಾನೂನುಗಳಿವೆ.

ರಾಷ್ಟ್ರೀಯ ಸಭೆಯು 200 ಸದಸ್ಯರನ್ನು ನಾಲ್ಕು ವರ್ಷ ಕಾಲಕ್ಕೆ ನೇರವಾಗಿ ಚುನಾಯಿಸುತ್ತಾರೆ, ರಾಜ್ಯ ಸಭೆಯಲ್ಲಿ ಪ್ರತಿಯೊಂದು ರಾಜ್ಯದಿಂದ ಇಬ್ಬರು ಪ್ರತಿನಿಧಿಗಳಿರುತ್ತಾರೆ. ಇವೆರಡು ಸಭೆಗಳೂ ಸೇರಿ ಸಂಯುಕ್ತ ಸಂಸತ್ತು ಏರ್ಪಡುತ್ತದೆ. ಸಂಯುಕ್ತ ಸಭೆಯಿಂದ ಚುನಾಯಿತರಾದ ಏಳು ಜನರ ಸಂಯುಕ್ತ ಸಮಿತಿ ಅತ್ಯಂತ ಉಚ್ಚ ಆಡಳಿತಾಧಿಕಾರವಿರುವ ಸಂಸ್ಥೆ. ಈ ಸಮಿತಿಯ ಒಬ್ಬೊಬ್ಬರೂ ಒಂದೊಂದು ವರ್ಷ ಕಾಲ ಸ್ವಿಟ್ಜರ್‌ಲೆಂಡಿನ ಅಧ್ಯಕ್ಷರಾಗಿರುತ್ತಾರೆ.

ಒಂದನೆಯ ಶತಮಾನದಲ್ಲಿ ರೋಮನರು ಸ್ವಿಟ್ಜರ್‌ಲೆಂಡನ್ನು ವಶಪಡಿಸಿಕೊಂಡರು. ಷಾರ್ಲಮೇನನ ರಾಜ್ಯಭಾರದ ಅನಂತರ ರೋಮನ್ ಸಾಮ್ರಾಜ್ಯ ಬಿಡಿಬಿಡಿಯಾಗಿದ್ದ ಆಲ್‌ಪೈನ್ ರಾಜ್ಯಗಳ ಮೇಲೆ ಸ್ವಾಮ್ಯ ಪಡೆಯಲು ಹವಣಿಸಿತು. ಆದರೆ ಸ್ವಿಸ್ ಜನ ಸ್ವತಂತ್ರರಾಗಿರಲು ಬಯಸಿದರು.

1291ರಲ್ಲಿ ಮೂರು ಮುಖ್ಯ ಪಂಗಡಗಳು ಒಂದುಗೂಡಿ ಸ್ವಾತಂತ್ರ್ಯದ ಹೋರಾಟ ಪ್ರಾರಂಭಿಸಿದುವು. ಕ್ರಮೇಣ ಸ್ವಾತಂತ್ರ್ಯ ಸಾಧಿಸಿ ದೇಶ 1648ರಲ್ಲಿ ಸಂಪೂರ್ಣವಾಗಿ ಸ್ವತಂತ್ರವಾಯಿತು. 1798ರಲ್ಲಿ ಫ್ರಾನ್ಸಿನ ವಶವಾಗಿ 1815ರಲ್ಲಿ ಮತ್ತೆ ಸ್ವತಂತ್ರವಾಯಿತು.

| | | |
|---|---|---|
| ಸ್ಥಳ | : | ಯೂರೋಪ್ (ಮಧ್ಯ) |
| ಅಕ್ಷಾಂಶ | : | 45° 49′ ಉ ದಿಂದ 47° 48′ ಉ |
| ರೇಖಾಂಶ | : | 5° 58′ ಪೂ ದಿಂದ 10° 30′ ಪೂ |
| ವಿಸ್ತೀರ್ಣ | : | 41,295 ಚ. ಕಿ. ಮೀ. |
| ಜನಸಂಖ್ಯೆ | : | ಸುಮಾರು 60,30,000 (1966ರಲ್ಲಿ) |
| ಭಾಷೆ | : | ಜರ್ಮನ್, ಫ್ರೆಂಚ್, ಇಟಾಲಿಯನ್ ಮತ್ತು ರೋಮನ್ |
| ಸರಕಾರ | : | ಸಂಯುಕ್ತ ಗಣರಾಜ್ಯ |
| ರಾಜಧಾನಿ | : | ಬರ್ನ್ |
| ಬಾವುಟ | ; | ಕೆಂಪು ಬಣ್ಣದ ಮೇಲೆ ಮಧ್ಯದಲ್ಲಿ ಬಿಳಿಯ ಶಿಲುಬೆ |

## ಸೀಸರ್, ಜೂಲಿಯಸ್ ಮತ್ತು ಆಕ್ಟೇವಿಯಸ್

ಸೀಸರ್ ಎಂದರೆ ಸಿಂಹ ಎಂದು ಅರ್ಥ. ಈ ಹೆಸರಿನ ಇಬ್ಬರು ರೋಮನ್ ಪ್ರಭುಗಳು ಸಿಂಹಗಳಂತೆಯೇ ತಮ್ಮ ಸಾಮ್ರಾಜ್ಯವನ್ನು ಆಳಿದರು. ಅವರೇ ಜೂಲಿಯಸ್ ಸೀಸರ್ ಮತ್ತು ಆಕ್ಟೇವಿಯಸ್ ಸೀಸರ್.

ಇತಿಹಾಸದಲ್ಲಿ ಜೂಲಿಯಸ್ ಸೀಸರನದು ಬಹು ದೊಡ್ಡ ಹೆಸರು. ಇಂದಿನ ಫ್ರಾನ್ಸ್ ಮತ್ತು ಬೆಲ್ಜಿಯಂ ಪ್ರಾಂತಗಳನ್ನೊಳಗೊಂಡ ಗಾಲ್ ಪ್ರದೇಶವನ್ನು ಅಧೀನಪಡಿಸಿಕೊಂಡು ನಾನ್ನೂರೈವತ್ತು ವರ್ಷಗಳ ಕಾಲ ಬಾಳಿದ ರೋಮನ್ ಚಕ್ರಾಧಿಪತ್ಯಕ್ಕೆ ತಳಹದಿಯನ್ನು ನಿರ್ಮಿಸಿದ ಕೀರ್ತಿ ಜೂಲಿಯಸ್ ಸೀಸರನಿಗೆ ಸಲ್ಲುತ್ತದೆ.

ಕ್ರಿ. ಪೂ. 100 ಸುಮಾರಿಗೆ ಸೀಸರ್ ರೋಮಿನ ರಾಜವಂಶಸ್ಥ ಕುಟುಂಬವೊಂದರಲ್ಲಿ ಜನಿಸಿದ. ಶ್ರೀಮಂತ ಸರದಾರ ಪಂಗಡ ಮತ್ತು ಮಧ್ಯಮ ವರ್ಗದ ಪ್ಲಿಬಿಯನರ ಪಂಗಡಗಳ ನಡುವೆ ಅಂತರ್ಯುದ್ಧ ನಡೆಯುತ್ತಲೇ ಇದ್ದುದನ್ನು ಬಾಲ್ಯದಿಂದಲೂ ಸೀಸರ್ ನೋಡಿದ್ದ. ಹುಟ್ಟಿನಿಂದ ಶ್ರೀಮಂತನಾದರೂ ಸೀಸರ್ ಜನಸಾಮಾನ್ಯರ ಪಕ್ಷವನ್ನೇ ಆರಿಸಿದ್ದ. ಅವನು ಹದಿನೆಂಟರ ಹರೆಯದಲ್ಲಿದ್ದಾಗ ಸುಲ್ಲಾ ಎಂಬವನ ನಾಯಕತ್ವದಲ್ಲಿ ಶ್ರೀಮಂತ ಸರದಾರರು ಪ್ಲಿಬಿಯನರ ಮೇಲೆ ಯುದ್ಧಹೂಡಿದರು. ಸೀಸರನ ಸೋದರ ಮಾವನೇ ಆಗ ಪ್ಲಿಬಿಯನರ ನಾಯಕ. ಯುದ್ಧದಲ್ಲಿ ಶ್ರೀಮಂತ ಸರದಾರರಿಗೆ ಜಯವಾಯಿತು. ಕಿರುಕುಳದಿಂದ ಪಾರಾಗಲು



'ಬಂದೆ, ಕಂಡೆ, ಗೆದ್ದೆ.' ಎಂದ ಜೂಲಿಯಸ್ ಸೀಸರ್

ರೋಮಿನಿಂದ ಸೀಸರ್ ಓಡಿಹೋದ; ಮತ್ತೆ ಅವನು ಹಿಂದಿರುಗಿದ್ದು ಸುಲ್ಲಾ ಕಾಲವಾದ ಮೇಲೆಯೇ.

ರೋಮ್ ನಗರಕ್ಕೆ ಮರಳಿದ ಬಳಿಕ ಸೀಸರ್ ತನ್ನ ಬದುಕನ್ನು ತಾನೇ ರೂಪಿಸತೊಡಗಿದ. ಗ್ರೀಸ್ ದೇಶಕ್ಕೆ ಹೋಗಿ ತನ್ನ ವಾಕ್‌ಚಾತುರ್ಯವನ್ನು ಉತ್ತಮಪಡಿಸಿಕೊಳ್ಳಬೇಕು ಎಂದು ಬಯಸಿದ. ಆದರೆ ಪ್ರಯಾಣ ಮಧ್ಯದಲ್ಲಿ ಕಡಲುಗಳ್ಳರ ಕೈಗೆ ಸಿಕ್ಕಿಬಿದ್ದ. ಇಪ್ಪತ್ತು ನಾಣ್ಯಗಳನ್ನು ಕೊಟ್ಟರೆ ಬಿಡುಗಡೆ ಮಾಡುವುದಾಗಿ ಅವರು ಹೇಳಿದರು. ಇದು ಅವಮಾನ ಎಂದು. ಐವತ್ತು ನಾಣ್ಯಗಳನ್ನು ಸೀಸರ್ ಸಲ್ಲಿಸಿದ ಬಿಡುಗಡೆ ಹೊಂದಿದೊಡನೆ ಸಾಕಷ್ಟು ಸೈನ್ಯವನ್ನು ತೆಗೆದುಕೊಂಡುಹೋಗಿ ಅವರನ್ನು ಸದೆಬಡಿದ.

ಸೀಸರ್ ಮಹತ್ವಾಕಾಂಕ್ಷಿ, ತನ್ನನ್ನು ಅನೇಕ ಹಿರಿಯ ಸ್ಥಾನಗಳಿಗೆ ಚುನಾಯಿಸಿದ ಪ್ಲಿಬಿಯನರ ಆದರಕ್ಕೆ ಪಾತ್ರನಾಗಲು ಸದಾ ಪ್ರಯತ್ನಿಸಿದ. ಸಾರೋಟು ಪಂದ್ಯ, ಕತ್ತಿವರಸೆ ಮುಂತಾದುವುಗಳಲ್ಲಿ ತನ್ನ ಕೌಶಲ್ಯವನ್ನು ತೋರಿ ಜನರನ್ನು ಆಕರ್ಷಿಸುತ್ತಿದ್ದ. ಜನರ ಮನೋರಂಜನೆಗಾಗಿ ಪಂದ್ಯಗಳನ್ನು ಏರ್ಪಡಿಸಲು ಸೀಸರನು ಹಣ[illegible]ನ್ನು ವೆಚ್ಚ ಮಾಡಿದ. ಅ ಲ್ಪಕಾಲದಲ್ಲಿಯೇ ಸೀಸರ್ ಅತ್ಯಂತ ಜನಪ್ರಿಯ ನಾಯಕನಾದ. ಅವನನ್ನು ಕ್ರಿ. ಪೂ. 61ರಲ್ಲಿ ಸ್ಪೇನ್ ದೇಶದ ಗವರ್ನರ್ ಆಗಿ ನಿಯಮಿ ಲಾಯಿತು.

ಆವೇಳೆಗೆ ರೋಮಿನಲ್ಲಿ ಇಬ್ಬರು ವ್ಯಕ್ತಿಗಳು ಬಹಳ ಪ್ರಭಾವಶಾ ಗಳಾಗಿದ್ದರು. ಅವರು ಕ್ರಾಸಸ್ ಮತ್ತು ಪಾಂಪೆ. ರೋಮಿಗೆ ಹಿಂದಿರು ಗಿದ ಸೀಸರ್ ಈ ಇಬ್ಬರು ಪ್ರಭಾವಶಾಲಿಗಳ ಸ್ನೇಹವನ್ನು ಸಂಪಾದಿಸಿದ ಕ್ರಾಸಸನ ಬಳಿ ಹಣವಿತ್ತು. ಪಾಂಪೆಯ ಬಳಿ ಸೈನ್ಯಬಲವಿದ್ದಿತು ಸೀಸರನಿಗೆ ಜನಬೆಂಬಲವಿದ್ದಿತು. ಈ ಮೂವರ ಸಮ್ಮಿಲನ ಅಪೂರ್ವ ಶಕ್ತಿಯಾಗಿ ಪರಿಣಮಿಸಿ ಸೀಸರನಿಗೆ ಪ್ರಮುಖನಾಯಕನ ಪಟ್ಟ ದೊರಕಿತು ನಾಯಕಪಟ್ಟವೇನೊ ದೊರೆಯಿತು. ಆದರೆ ಅದನ್ನು ಭದ್ರಗೊಳಿಸು ವುದಕ್ಕೋಸ್ಕರ ಸೀಸರ್ ತಾನು ಸೈನ್ಯ ನಿರ್ವಹಣೆಯಲ್ಲಿ ಸಹ ಪರಿಣತ ಎಂದು ತೋರಿಸಿಕೊಳ್ಳಲು ಬಯಸಿದ. ಗಾಲ್‌ನ ಗವರ್ನರ್ ಆಗಿ ನೇಮ ಗೊಂಡಾಗ ಅಲ್ಲಿನ ಬಲಿಷ್ಠ ಪಂಗಡಗಳನ್ನು ಯುದ್ಧದಲ್ಲಿ ಸೋಲಿಸಿದ ಒಂಬತ್ತು ವರ್ಷಗಳ ಕಾಲ ಪ್ರಚಂಡವಾಗಿ ಹೋರಾಡಿ, ಸಂಪೂರ್ಣವಾಗಿ ಆ ಪ್ರದೇಶವನ್ನು ವಶಪಡಿಸಿಕೊಂಡ. ಈ ಆಕ್ರಮಣದಲ್ಲಿ ಆತ ತೋರಿದ ಧೈರ್ಯ ಮತ್ತು ಸಮಯಸ್ಫೂರ್ತಿ ರೋಮನ್ ಸೈನಿಕರಲ್ಲಿ ಹುರುಪು ಹುಟ್ಟಿಸಿತು. ಅವನ ಸಾಮರ್ಥ್ಯದ ಬಗೆಗೆ ನಂಬಿಕೆ ಮೂಡಿಸಿತು. ಅವರು ಅವನನ್ನು ಆರಾಧಿಸಲಾರಂಭಿಸಿದರು. ಮತ್ತು ಸಾಯುವವರೆಗೂ ಸ್ವಾಮಿ ನಿಷ್ಠೆಯನ್ನು ತೋರಿಸುತ್ತಿದ್ದರು. ಗಾಲ್‌ನಲ್ಲಿದ್ದ ಅವಧಿಯಲ್ಲಿ ಬ್ರಿಟನಿಗೆ ಮುತ್ತಿಗೆ ಹಾಕಿ ಎರಡು ಕದನಗಳಲ್ಲಿ ಅಲ್ಲಿನ ಅರಸರ ಸೈನ್ಯಗಳನ್ನು ಸೀಸರ್ ಸೋಲಿಸಿದ.

ಬಹು ಮಂದಿ ರೋಮನರು ಸೀಸರನನ್ನು ಪ್ರೀತಿಸುತ್ತಿದ್ದರು. ಆದರೆ ಆಡಳಿತಸಭೆಯ (ಸೆನೆಟ್) ಕೆಲವು ಶ್ರೀಮಂತರು ಅವನಿಗೆ ಹೆದರುತ್ತಿದ್ದರು. ಸೀಸರನ ಏಳ್ಗೆಯನ್ನು ಕಂಡು ಅವನ ಹಳೆಯ ಮಿತ್ರ ಪಾಂಪೆಗೆ ಅಸೂಯೆ ಯಾಯಿತು. ಕೆಲವು ಜನರೊಡನೆ ಸೇರಿ ಸೀಸರನನ್ನು ಕೊಲ್ಲಲು ಪ್ರಯತ್ನಿಸಿದ. ಪ್ರಯತ್ನ ವಿಫಲವಾಯಿತು. ರೋಮಿಗೆ ಹಿಂದಿರುಗಿದ ಆರು ವಾರಗಳಲ್ಲೇ ಸೀಸರ್ ರೋಮನ್ ಸಾಮ್ರಾಜ್ಯದ ಅಧಿಪತಿಯಾದ. ಅವನಿಂದ ತಪ್ಪಿಸಿ ಕೊಳ್ಳಲು ಪಾಂಪೆ ಈಜಿಪ್ಟ್ ದೇಶಕ್ಕೆ ಓಡಿಹೋದ. ಸೀಸರನೂ ಅವನನ್ನು ಅಟ್ಟಿಸಿಕೊಂಡು ಹೋದ. ಆದರೆ ಪಾಂಪೆಯನ್ನು ಈಜಿಪ್ಟಿನ ಜನರೇ ಕೊಂದುಹಾಕಿದರು.

ಆಗ ಈಜಿಪ್ಟಿನಲ್ಲಿ ಅತ್ಯಾಕರ್ಷಕ ರಾಜಕುಮಾರಿ ಒಬ್ಬಳಿದ್ದಳು. ಅವಳ ಹೆಸರು ಕ್ಲಿಯೋಪಾತ್ರ. ಅವಳಿಗೂ ಅವಳ ಸೋದರನಿಗೂ ಸಿಂಹಾಸನಕ್ಕಾಗಿ ಜಗಳವಿದ್ದಿತು. ಸೀಸರ್ ಅವಳನ್ನು ಪ್ರೇಮಿಸಿದ. ಅವಳನ್ನು ಈಜಿಪ್ಟಿನ ರಾಣಿಯನ್ನಾಗಿ ಮಾಡಿದ.

ಈಜಿಪ್ಟಿನ ಕದನದಲ್ಲಿ ಒಮ್ಮೆ ಶತ್ರುಗಳು ಸೀಸರನನ್ನು ಸುತ್ತುವರಿದಾಗ, ಬಾಣಗಳ ಭೀಕರ ಮಳೆಯ ಮಧ್ಯೆ ಆತ ನದಿಯೊಂದನ್ನು ಈಜಿ ದಾಟಿದ. ಇಂಗ್ಲೆಂಡಿನ ಕಾಳಗದಲ್ಲಿ ಗೆದ್ದ ಬಳಿಕ ಅವನು ರೋಮಿಗೆ ಕಳುಹಿದ ಸಂದೇಶ: 'ವೆನಿ. ವಿಡಿ. ವಿಸಿ' (ಬಂದೆ, ಕಂಡೆ, ಗೆದ್ದೆ). ಈಗಲೂ ಯಾವುದೇ ಕ್ಷಿಪ್ರ ವಿಜಯವನ್ನು ಬಣ್ಣಿಸಲು ಈ ಪದಗಳನ್ನು ಬಳಸು ತ್ತಾರೆ.

ಕ್ರಿ. ಪೂ. [illegible]ರಲ್ಲಿ ವಿಜಯ ವೈಭವದಿಂದ ಗೆಳೆಯರನ್ನು [illegible] ರೋಮಿಗೆ ಹಿಂದಿರುಗಿದ. ಆಗ ಸೀಸರನನ್ನು ರೋಮ್ ಚಕ್ರಾಧಿಪತ್ಯ

ಉತ್ತರ ಭಾಗದಲ್ಲಿ [illegible] ಉತ್ತರದಲ್ಲಿ ಮಳೆ ಸಾಧಾರಣವಾಗಿಯೂ ದಕ್ಷಿಣದಲ್ಲಿ ಹೆಚ್ಚಾಗಿಯೂ ಬೀಳುತ್ತದೆ.

ಕಬ್ಬಿಣ ಮತ್ತು ತಾಮ್ರಕ್ಕೆ ಸ್ವೀಡನ್ ಮಧ್ಯಯುಗದಿಂದಲೂ ಹೆಸರುವಾಸಿ. ಹಲವು ಕಾಲ ಎರಡು ಲೋಹಗಳನ್ನು ರಫ್ತುಮಾಡುವುದರಲ್ಲಿ ಪ್ರಪಂಚದಲ್ಲಿಯೇ ದಾಖಲೆ ಸ್ಥಾಪಿಸಿತ್ತು. ಉತ್ತರ ಸ್ವೀಡನ್ನಿನಲ್ಲಿ ತಾಮ್ರ, ಸೀಸ, ಸತು, ಚಿನ್ನ ಮತ್ತು ಬೆಳ್ಳಿ ದೊರೆಯುತ್ತವೆ. ಮಧ್ಯ ಸ್ವೀಡನಿನಲ್ಲಿ ಎಣ್ಣೆ. ಪದರಗಲ್ಲು ನಿಕ್ಷೇಪವಿದೆ. ಇದರಿಂದ ಪೆಟ್ರೋಲಿಯಂ ತೆಗೆಯುವರಲ್ಲದೆ ಪರಮಾಣುಶಕ್ತಿ ಉತ್ಪಾದನೆಗೆ ಅಗತ್ಯವಿರುವ ಯುರೇನಿಯಂ ಸಹ ಸಿಗುತ್ತದೆ. ಸ್ಕೋನಿನಲ್ಲಿ ಕಲ್ಲಿದ್ದಲು ದೊರಕುತ್ತದೆ. ಆರ್ಸೆನಿಕ್ ಮತ್ತು ಕೋಬಾಲ್ಟ್‌ಗಳೂ ಉತ್ಪಾದನೆಯಾಗುತ್ತವೆ.

ತೆಳ್ಳಗಿನ, ಎತ್ತರದ. ನೀಲಿಕಣ್ಣುಗಳ ನಾರ್ಡಿಕ್ ಜನರು, ಫಿನ್ನರು, ಲ್ಯಾಪರು ಸ್ವೀಡನಿನ ನಿವಾಸಿಗಳು. ಇಲ್ಲಿನ ಭಾಷೆ ಇತರ ಸ್ಕ್ಯಾಂಡಿನೇವಿಯ ದೇಶಗಳಂತೆ ಜರ್ಮನ್ ಭಾಷೆಗೆ ಸಂಬಂಧಿಸಿದೆ. ಇದರ ಲಿಪಿ ಇಂಗ್ಲಿಷಿನಂತಿದೆ. ನೂರಕ್ಕೆ 95 ಜನ ಪ್ರಾಟೆಸ್ಟೆಂಟರು. 1477ರಲ್ಲಿ ಸ್ಥಾಪಿತವಾದ ಉಪ್ಸಲ ವಿಶ್ವವಿದ್ಯಾನಿಲಯ ಯೂರೋಪ್ ಖಂಡದ ಅತ್ಯಂತ ಪ್ರಾಚೀನ ವಿಶ್ವವಿದ್ಯಾನಿಲಯಗಳಲ್ಲೊಂದು. ಅಲ್ಲಿ ಪ್ರಸಿದ್ಧ ಗ್ರಂಥಭಂಡಾರವಿದೆ.

ಸ್ವೀಡನಿನ ಹತ್ತನೆಯ ಒಂದು ಭಾಗ ಭೂಮಿ ಮಾತ್ರ ವ್ಯವಸಾಯ ಯೋಗ್ಯ. ಓಟ್ಸ್, ಗೋಧಿ. ರೈ, ಸಕ್ಕರೆಬೀಟ್, ಆಲೂಗೆಡ್ಡೆ ಬೆಳೆಯುತ್ತಾರೆ. ಶ್ರೀಮಂತ ಮಹಿಳೆಯರು ತೊಡುವ ತುಪ್ಪಟಕ್ಕಾಗಿ ಮಿಂಕ್ ಎಂಬ ಪ್ರಾಣಿಯನ್ನು ಸಾಕುತ್ತಾರೆ. ತೈಲ ಮತ್ತು ಕಲ್ಲಿದ್ದಲಿನ ಅಭಾವದಿಂದ ಸ್ವೀಡನಿನಲ್ಲಿ ಕೈಗಾರಿಕೆ ಬೆಳೆಯಲು ಅವಕಾಶವಾಗಿರಲಿಲ್ಲ. ಉತ್ತಮ ದರ್ಜೆಯ ಉಕ್ಕಿನಿಂದ ಶಸ್ತ್ರಕ್ರಿಯೆಯ ಉಪಕರಣಗಳು. ಹೊಲಿಗೆಯಂತ್ರಗಳು, ಬಾಲ್ ಬೇರಿಂಗ್‌ಗಳು, ನಿಷ್ಕೃಷ್ಟತೆಗೆ ಅಗತ್ಯವಾದ ಉಪಕರಣಗಳು ಇವನ್ನು ತಯಾರಿಸುತ್ತಾರೆ. ಸ್ವೀಡನ್ ಹಡಗು ನಿರ್ಮಾಣದಲ್ಲಿ ಪ್ರಪಂಚದಲ್ಲಿ ಮೂರನೆಯ ಸ್ಥಾನ ಗಳಿಸಿದೆ. ವ್ಯವಸಾಯೋಪಕರಣಗಳು, ಕಾರು, ಟ್ರಕ್ಕು, ವಿಮಾನ. ವಿದ್ಯುತ್ ಸಾಮಗ್ರಿಗಳು, ಲೋಹದ ಕೆಲಸ ಮತ್ತು ಕಾಗದದ ಈ ಉದ್ಯಮಗಳೂ ಇವೆ.

ಕಾಗದ, ಮರ, ಕಬ್ಬಿಣದ ಅದಿರು, ಉತ್ಕೃಷ್ಟ ಉಕ್ಕು ಮತ್ತು ವಿದ್ಯುತ್ ಯಂತ್ರಗಳನ್ನು ರಫ್ತುಮಾಡುತ್ತಾರೆ.

ಕಡಮೆ ದರ್ಜೆಯ ಲೋಹಗಳು, ಯಂತ್ರಗಳು, ಆಹಾರ, ಇಂಧನ ಮತ್ತು ಖನಿಜಗಳು ಆಮದಾಗುತ್ತವೆ.

'ಉತ್ತರದ ವೆನಿಸ್,' 'ಸರೋವರ ರಾಣಿ' ಎಂದೆಲ್ಲ ಹೊಗಳಿಕೆಗೆ ಪಾತ್ರವಾಗಿರುವ ಸ್ಟಾಕ್‌ಹೋಮ್ ಸ್ವೀಡನಿನ ರಾಜಧಾನಿ. ಹದಿನಂಟನೆಯ ಶತಮಾನದಲ್ಲಿ ಕಟ್ಟಿರುವ ಅರಮನೆ ಪ್ರಪಂಚದಲ್ಲೇ ದೊಡ್ಡದಾದ ವಸತಿಗೃಹ. ಇಲ್ಲಿನ ಉದ್ಯಾನವೊಂದರಲ್ಲಿ ಬಯಲು ವಸ್ತುಸಂಗ್ರಹಾಲಯವಿದೆ. ಇಲ್ಲಿ ಸ್ವೀಡನಿನ ಎಲ್ಲ ಪುರಾತನ ಕಟ್ಟಡಗಳ ಮಾದರಿಯನ್ನು ಕಾಣಬಹುದು. ಗೋಟೆಬರ್ಗ್ ಹದಿನೇಳನೆಯ ಶತಮಾನದಲ್ಲಿ ಸ್ಥಾಪಿಸಲ್ಪಟ್ಟ ನಗರ ಹಾಗೂ ಬಂದರು. ಮಾಲ್ಮೊ ಪ್ರಮುಖ ಬಂದರು.

ಸ್ವೀಡನ್ ಚರಿತ್ರೆ ತಿಳಿದುಬಂದಿರುವುದು ವೈಕಿಂಗರ ಕಾಲದಿಂದ. (ವೈಕಿಂಗರು ಸ್ಕ್ಯಾಂಡಿನೇವಿಯಕ್ಕೆ ಸೇರಿದವರು; ಎಂಟನೆಯ ಶತಮಾನದಿಂದ ಹನ್ನೊಂದನೆಯ ಶತಮಾನದವರೆಗೆ ದರೋಡೆಕಾರರಾಗಿ, ಸಮುದ್ರಗಳ್ಳರಾಗಿ ತೊಂದರೆ ಕೊಟ್ಟವರು.) ವೈಕಿಂಗರ ಕಾಲದಲ್ಲಿ ಸ್ವೀಡಿಗರು ಬಾಲ್ಟಿಕ್ ಸಮುದ್ರದ ಮೂಲಕ ರಷ್ಯ ಮತ್ತಿತರ ಪ್ರದೇಶಗಳಿಗೆ ಹೋಗಿದ್ದರು. ಹತ್ತನೆಯ ಶತಮಾನದಲ್ಲಿ ಕಪ್ಪು ಸಮುದ್ರ–ಕ್ಯಾಸ್ಪಿಯನ್ ಸಮುದ್ರದ ತನಕ ವ್ಯಾಪಾರ ನಡೆಸುತ್ತಿದ್ದರು.

ಖಂಡ :
ಯೂರೋಪ್ (ಉತ್ತರ)

ಅಕ್ಷಾಂಶ :
55° 20′ ಉ ದಿಂದ 60° 04′ ಉ

ರೇಖಾಂಶ :
10° 59′ ಪೂ ದಿಂದ 24° 10′ ಪೂ

ವಿಸ್ತೀರ್ಣ :
4,49,166 ಚ. ಕಿ. ಮೀ.

ಜನಸಂಖ್ಯೆ :
75,00,000

ರಾಜಧಾನಿ :
ಸ್ಟಾಕ್‌ಹೋಮ್

ಭಾಷೆ :
ಸ್ವೀಡಿಷ್

ಸರಕಾರ :
ಸಂವಿಧಾನಬದ್ಧ ರಾಜಪದ್ಧತಿ

ಬಾವುಟ :
ನೀಲಿ, ಹಳದಿಯ ಬಣ್ಣದ ಶಿಲುಬೆ

ನಾರ್ವೆ ಮತ್ತು ಸ್ವೀಡನ್ ರಾಜ್ಯಗಳು 1319ರಲ್ಲಿ ಒಂದಾದುವು. 1397ರಲ್ಲಿ ನಾರ್ವೆ. ಸ್ವೀಡನ್ ಮತ್ತು ಡೆನ್ಮಾರ್ಕ್‌ಗಳೂ ಕೂಡಿ ಸಂಯುಕ್ತ ಘೋಷಣೆಯಾಯಿತು. 1523ರಲ್ಲಿ ಸ್ವೀಡನ್ ಪ್ರತ್ಯೇಕವಾಯಿತು. ಈ ಹೋರಾಟದ ನಾಯಕ ಗುಸ್ಟಾವ್ ವಾಸಾ ಒಂದನೆಯ ಗುಸ್ಟಾವಸ್ ರಾಜನಾದ. ಇವನು ಜರ್ಮನರ ಶಕ್ತಿಯನ್ನು ದಮನಮಾಡಿ ಬಾಲ್ಟಿಕ್ ಸಮುದ್ರದ ಮೇಲೆ ಹಕ್ಕನ್ನು ಪಡೆದುಕೊಂಡ. ವಾಣಿಜ್ಯಾಭಿವೃದ್ಧಿಯಾಗಿ ಹದಿನೇಳನೆಯ ಶತಮಾನದಲ್ಲಿ ಸ್ವೀಡನ್ ಉತ್ತರ ಯೂರೋಪ್‌ನ ಪ್ರಬಲ ರಾಜ್ಯವಾಯಿತು. ಡೆನ್ಮಾರ್ಕ್, ಪೋಲೆಂಡ್, ರಷ್ಯಗಳು ಸ್ವೀಡನ್ನೊಡನೆ ಸ್ಪರ್ಧೆಗೆ ನಿಲ್ಲುತ್ತಿದ್ದುವು. ಸ್ವೀಡನ್ ಯಾವಾಗಲೂ ಈ ದೇಶಗಳಲ್ಲಿ ಯಾವುದಾದರೂ ಒಂದರೊಡನೆ ಯುದ್ಧ ಮಾಡುತ್ತಲೇ ಇರಬೇಕಾಗುತ್ತಿತ್ತು. ರಷ್ಯದೊಡನೆ ಆದ ಯುದ್ಧದಲ್ಲಿ (1709) ಸ್ವೀಡನಿನ ಪ್ರಾಬಲ್ಯ ಕ್ಷೀಣವಾಯಿತು. 1814ರಲ್ಲಿ ಸ್ವೀಡನ್–ನಾರ್ವೆ ದ್ವಿಪ್ರಭುತ್ವ ಅಸ್ತಿತ್ವಕ್ಕೆ ಬಂದಿತು. 1905ರಲ್ಲಿ ಎರಡು ರಾಷ್ಟ್ರಗಳೂ ಪರಸ್ಪರ ಒಪ್ಪಿಗೆಯಿಂದ ಬೇರೆಯಾದುವು. ಎರಡು ಮಹಾಯುದ್ಧಗಳಲ್ಲೂ ಸ್ವೀಡನ್ ತಟಸ್ಥವಾಗಿ ಉಳಿಯಿತು. ಈಗಲೂ ಈ ದೇಶ ತಟಸ್ಥ ನೀತಿಯನ್ನೇ ಅನುಸರಿಸುತ್ತಿದೆ. ವಿಶ್ವಸಂಸ್ಥೆಯ ಕಾರ್ಯದರ್ಶಿಯಾಗಿ, ಅದರ ಕಾರ್ಯಕ್ಕಾಗಿ ಪ್ರಾಣವನ್ನರ್ಪಿಸಿದ ಡ್ಯಾಗ್ ಹ್ಯಾಮರ್‌ಷೀಲ್ಡ್, ಸ್ವೀಡನ್ ದೇಶದವರು.

ಒಂದು ಶತಮಾನದ ಹಿಂದೆ ಹಿಂದುಳಿದಿದ್ದ ಬಡ ದೇಶ ಸ್ವೀಡನ್ ಇಂದು ಮುಂದುವರಿದ ಕೈಗಾರಿಕಾ ರಾಷ್ಟ್ರವಾಗಿದೆ.

## ಸುಂಕ

[illegible] ಬಂದಿಳಿದಾಗ, ಅಲ್ಲಿಯ ಸುಂಕದ ಕಚೇರಿಯ ಅಧಿಕಾರಿಗಳು [illegible]

ಸಂಬಂಧಪಟ್ಟ ಸಾಮಾನುಗಳೆಲ್ಲವನ್ನೂ ಪರೀಕ್ಷಿಸುತ್ತಾರೆ. ನಿಯಮಗಳ ಪ್ರಕಾರ ಸುಂಕ ತೆರಬೇಕಾದ ಸಾಮಾನುಗಳಿಗೆ ಇಷ್ಟು ಹಣ ಕೊಡಬೇಕು – ಎಂದು ವಸೂಲು ಮಾಡುತ್ತಾರೆ.

ಆತ ಜಲಮಾರ್ಗವಾಗಿ ಬಂದರೆ ಹಡಗು ಕಟ್ಟೆಯಲ್ಲೇ ಇಂಥ ಪರೀಕ್ಷೆ ನಡೆಯುತ್ತದೆ.

ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶವನ್ನು ಪ್ರವೇಶಿಸುವಾಗ ಸುಂಕದ ಕಟ್ಟೆಗಳು ಸಿಗುತ್ತವೆ. ಸುಂಕವನ್ನು ಸಲ್ಲಿಸದೆ ವಸ್ತುಗಳ ರವಾನೆ ಆಗುತ್ತಿದೆಯೇ ಎಂದು ಅಧಿಕಾರಿಗಳು ಪರೀಕ್ಷೆ ಮಾಡುತ್ತಿರುತ್ತಾರೆ.

ಒಂದು ಪ್ರದೇಶ ಅಥವಾ ದೇಶದಿಂದ ಹೊರಕ್ಕೆ ಹೋಗುವ ಅಥವಾ ಒಳಕ್ಕೆ ಪ್ರವೇಶಿಸುವ ಸರಕಿನ ಮೇಲೆ ವಿಧಿಸಲಾಗುವ ತೆರಿಗೆಯೇ ಸುಂಕ. ವಿದೇಶಗಳಿಂದ ಆಮದಾಗುವ ಅಥವಾ ವಿದೇಶಗಳಿಗೆ ರಫ್ತಾಗುವ ಸರಕಿನ ಮೇಲೆ ವಿಧಿಸುವ ಸುಂಕ ವಿದೇಶೀ ಸುಂಕ. ದೇಶದೊಳಗೇ ತಯಾರಾಗಿ, ದೇಶದೊಳಗೇ ಬಳಸಲಾಗುವ ಕೆಲವು ವಸ್ತುಗಳ ಮೇಲೂ ಸುಂಕವನ್ನು ಹೇರಲಾಗುತ್ತದೆ. ಅದು ಅಬ್ಕಾರೀ ಸುಂಕ.

ಹಲವು ನಗರಗಳು ತಮ್ಮ ಪ್ರದೇಶದೊಳಕ್ಕೆ ಆಮದಾಗಿ ಬರುವ ಕೆಲವು ಬಗೆಯ ಸರಕುಗಳ ಮೇಲೆ ನಗರ ಸುಂಕವನ್ನು ಹೇರುತ್ತವೆ. ನಗರ ಉಕ್ಕಡಗಳಲ್ಲಿ ಸರಕುಗಳ ವಿವರ ಪರೀಕ್ಷಿಸುತ್ತಾರೆ. ನಗರ ಸುಂಕ ಕಚೇರಿಯಲ್ಲಿ ಸುಂಕವನ್ನು ಪಾವತಿಮಾಡಿದ ಮೇಲೆ ವಾರಸುದಾರರು ಸರಕನ್ನು ನಗರದೊಳಗೆ ಕೊಂಡೊಯ್ಯಬಹುದು.

ಸುಂಕ ತಪ್ಪಿಸಿ ದೇಶದೊಳಕ್ಕೆ ವಿದೇಶಗಳಿಂದ ಸಾಮಗ್ರಿ ತರುವ ಯತ್ನಗಳು ನಡೆಯುವುದೂ ಉಂಟು. ಅಂಥ ವಸ್ತುಗಳಿಗಾಗಿ ಬಂದರು, ವಿಮಾನ ನಿಲ್ದಾಣಗಳಲ್ಲಿ ತಪಾಸಣೆ ನಡೆಸಲಾಗುತ್ತದೆ. ವಿದೇಶೀ ಸುಂಕವನ್ನು ತಪ್ಪಿಸಿ ಬರುವ ಕೈಗಡಿಯಾರಗಳು, ರೇಡಿಯೊಗಳು, ಅಪರೂಪ ಉಪಕರಣಗಳು ಮುಂತಾದ ಬೆಲೆ ಬಾಳುವ ವಸ್ತುಗಳನ್ನು ಸುಂಕದ ಅಧಿಕಾರಿಗಳು ಪತ್ತೆ ಹಚ್ಚಿ ಅವನ್ನು ಮುಟ್ಟುಗೋಲು ಹಾಕಿಕೊಳ್ಳುತ್ತಾರೆ. ಈ ಬಗೆಯ ವಸ್ತುಗಳ ಮೇಲೆ ಸುಂಕ ಹೆಚ್ಚು. ಆದುದರಿಂದ ಸುಂಕವನ್ನು ಕೊಡದೆಯೇ ಕಳ್ಳತನದಿಂದ ಅವನ್ನು ತರಲು ಕೆಲವರ ಪ್ರಯತ್ನ. ವಿದೇಶಗಳಿಂದ ಆಮದಾಗುವ ವಸ್ತುಗಳ ಮೇಲೆ ಹೆಚ್ಚಿನ ಸುಂಕವನ್ನು ಹೇರುವುದು ದೇಶದೊಳಗೆ ತಯಾರಾಗುವ ವಸ್ತುಗಳಿಗೆ ಸಹಾಯಮಾಡಲು. ಹೊರಗಿನಿಂದ ವಸ್ತುಗಳನ್ನು ತರಿಸುವುದನ್ನು ಪ್ರೋತ್ಸಾಹಿಸಿದರೆ ದೇಶದೊಳಗೆ ಆ ವಸ್ತುಗಳ ಉತ್ಪಾದನೆಗೆ ಧಕ್ಕೆಯುಂಟಾಗುತ್ತದೆ. ದೇಶದೊಳಗಿನ ಕೈಗಾರಿಕೆಯ ಹಿತದೃಷ್ಟಿಯಿಂದ ವಿದೇಶಗಳಿಂದ ಬರುವ ವಸ್ತುಗಳ ಮೇಲೆ ಅಧಿಕ ಪ್ರಮಾಣದ ವಿದೇಶೀ ಸುಂಕವನ್ನು ಹೇರಿ ಆಮದಿನ ಪ್ರಮಾಣದ ಮೇಲೆ ನಿಯಂತ್ರಣವನ್ನು ಇಟ್ಟುಕೊಳ್ಳಲಾಗುತ್ತದೆ. ಅಧಿಕ ಸುಂಕವನ್ನು ತೆತ್ತ ವಿದೇಶೀ ವಸ್ತುಗಳ ಬೆಲೆ ಹೆಚ್ಚುವುದರಿಂದ ಸ್ವದೇಶೀ ವಸ್ತುಗಳ ಜೊತೆ ಅವುಗಳ ಪೈಪೋಟಿ ಸಾಧ್ಯವಾಗುವುದಿಲ್ಲ.

ಅಬ್ಕಾರಿ ಸುಂಕವನ್ನು ಸಾಮಾನ್ಯವಾಗಿ ತಯಾರಿಕೆಯ ಹಂತದಲ್ಲೇ ವಿಧಿಸಲಾಗುತ್ತದೆ; ಆಮದಾದ ಕಚ್ಚಾ ವಸ್ತುಗಳನ್ನು ಒಳಗೊಂಡ ಸಿದ್ಧ ವಸ್ತುಗಳು ಅಬ್ಕಾರಿ ಸುಂಕಕ್ಕೆ ಒಳಗಾಗುತ್ತವೆ. ದೊಡ್ಡ ಪ್ರಮಾಣದ ಲಾಭವನ್ನು ಗಳಿಸುವ ಉದ್ಯಮಗಳ ತಯಾರಿಕೆಗಳ ಮೇಲೂ ಅಬ್ಕಾರಿ ಸುಂಕವನ್ನು ಹೇರಲಾಗುತ್ತದೆ.

ಬೆಲೆಗಳ ಹತೋಟಿ ಮತ್ತು ಉತ್ಪಾದನೆಯ ನಿಯಂತ್ರಣ ಇವು ಅಬ್ಕಾರಿ ಸುಂಕದ ಉದ್ದೇಶಗಳು. ಎಲ್ಲ ಬಗೆಯ ಸುಂಕಗಳೂ ಆಡಳಿತದ ವೆಚ್ಚಕ್ಕೆ ಹಣ ಒದಗಿಸುತ್ತವೆ.

ಸುಂಕವನ್ನು ವಸೂಲು ಮಾಡುವ ಪದ್ಧತಿ ಎಂದಿನಿಂದ ಜಾರಿಯಲ್ಲಿದೆ ಎಂದು ನಿಖರವಾಗಿ ಹೇಳುವಂತಿಲ್ಲ. ಭಾರತದಲ್ಲಿ ಕ್ರಿ. ಪೂ. 300ರ ಸಮಯದಲ್ಲಿ ಚಂದ್ರಗುಪ್ತನ ಆಳ್ವಿಕೆಯಲ್ಲಿ, ವ್ಯವಸ್ಥಿತವಾಗಿ ಸುಂಕದ ವಸೂಲಿ ನಡೆಯುತ್ತಿತ್ತೆಂದು ಚರಿತ್ರೆಯಿಂದ ತಿಳಿದುಬರುತ್ತದೆ.

## ಸುಖೀರಾಜ್ಯ

ರಾಮರಾಜ್ಯ !

ಶ್ರೀರಾಮ ಅಯೋಧ್ಯೆಯನ್ನು ಆಳುತ್ತಿದ್ದಾಗ ರಾಜ್ಯ ಹೇಗಿದ್ದಿತು ಎನ್ನುವುದರ ವರ್ಣನೆ ರಾಮಾಯಣದಲ್ಲಿದೆ. ಜನರಿಗೆ ಹೊಟ್ಟೆತುಂಬ ಆಹಾರ, ಕಾಲ ಕಾಲಕ್ಕೆ ಮಳೆ, ಎಲ್ಲಿ ನೋಡಿದರೂ ಹಸಿರು ಹುಲ್ಲು. ಸುಂದರ ಗಿಡಮರಗಳು. ನೀರಿನ ಅಭಾವವಿಲ್ಲ. ತುಂಬಿದ ನದಿಗಳು. ಸರೋವರಗಳು. ಒಳ್ಳೆಯವರಿಗೆ ಕೆಟ್ಟವರ ಕಾಟವಿಲ್ಲ. ಚಿಕ್ಕವಯಸ್ಸಿನವರು ಸಾಯುವುದು ಎನ್ನುವುದೇ ಇಲ್ಲ. ಕಳ್ಳತನವಿಲ್ಲ ಅನ್ಯಾಯವಿಲ್ಲ. ಶ್ರೀಮಂತರಿಂದ ಬಡವರಿಗೆ ತೊಂದರೆ ಎನ್ನುವುದಿಲ್ಲ—ಹೀಗೆ ವರ್ಣಿಸುತ್ತಾರೆ ನಮ್ಮ ದೇಶದಲ್ಲಿ ರಾಮರಾಜ್ಯವನ್ನು, ಆದರ್ಶ ಸುಖೀರಾಜ್ಯವನ್ನು.

ಯಾವ ದೇಶದಲ್ಲಿ ಸರಕಾರ ತನ್ನ ಪ್ರಜೆಗಳ ಕನಿಷ್ಠ ಜೀವನಮಟ್ಟದ ಬಗೆಗೆ ಹೊಣೆ ಹೊತ್ತಿರುವುದೋ ಅಂಥ ದೇಶವನ್ನು ಸುಖೀರಾಜ್ಯವೆನ್ನುತ್ತಾರೆ. ಜನ ನೆಮ್ಮದಿಯಾಗಿ ಬಾಳಬೇಕಾದರೆ ಸಾಮಾಜಿಕ ಭದ್ರತೆ ಅತ್ಯವಶ್ಯ. ಜನರಿಗೆ ಯೋಗ್ಯವಾದ ಉದ್ಯೋಗ, ಸರಿಯಾದ ಸಂಬಳ. ಅಗತ್ಯವಾದ ಆಹಾರ ಮತ್ತು ಬಟ್ಟೆ. ಅನುಕೂಲವಾದ ಮನೆ. ವೈದ್ಯಕೀಯ ನೆರವು. ಇಳಿವಯಸ್ಸಿನಲ್ಲಿ ನೋಡಿಕೊಳ್ಳಲು ಯಾರೂ ಇಲ್ಲದಿರುವವರ ಮತ್ತು ಅನಾಥ ಕುಟುಂಬದ ರಕ್ಷಣೆ–ಇವೆಲ್ಲ ಸುಖೀರಾಜ್ಯದ ಸರಕಾರ ಗಮನ ಕೊಡಬೇಕಾಗಿರುವ ವಿಚಾರಗಳು.

ಇದು ಪ್ರಜಾರಾಜ್ಯದ ಕಾಲ. ಪ್ರಜೆಗಳು ತಮ್ಮ ಜೀವನದ ಸೌಲಭ್ಯಗಳನ್ನು ಒದಗಿಸಿಕೊಡುವುದು ಸರಕಾರದ ಕರ್ತವ್ಯವೆಂದು ಭಾವಿಸುತ್ತಾರೆ. ಪ್ರಜಾಪ್ರಭುತ್ವಗಳು ಸುಖೀರಾಜ್ಯ ಅಥವಾ ಕಲ್ಯಾಣರಾಜ್ಯದ ಆದರ್ಶವನ್ನು ಇಟ್ಟುಕೊಂಡಿರುತ್ತವೆ.

ಸುಖೀರಾಜ್ಯದ ಪ್ರಥಮ ಹೆಜ್ಜೆ. ಪ್ರಜೆಗಳ ಲೌಕಿಕ ಜೀವನಕ್ಕೆ ಯುಕ್ತವಾದ ಸೌಕರ್ಯಗಳನ್ನು ಕಲ್ಪಿಸಿಕೊಡುವುದು. ಇದನ್ನು ವ್ಯಕ್ತಿ ಮಾಡಲು ಅಸಾಧ್ಯವಾದುದರಿಂದ ಸಾಮೂಹಿಕವಾಗಿ ಮಾಡುತ್ತಾರೆ. ವಸತಿ ಸೌಕರ್ಯ. ಸಂಚಾರ ಸೌಲಭ್ಯ. ಮನೋರಂಜನೆಗೆ ಅವಕಾಶ, ವಿದ್ಯಾನುಕೂಲ. ವೈದ್ಯಕೀಯ ಸಹಾಯ ಇವನ್ನು ಒದಗಿಸಲು ಮೊದಲು ಗಮನ ನೀಡುತ್ತಾರೆ.

ಭಾರತದ ಸಂವಿಧಾನದ ಗುರಿ ಸುಖೀರಾಜ್ಯ. ರಾಜ್ಯಗಳಲ್ಲಿ ಇದಕ್ಕಾಗಿ ಅನುಸರಿಸಲೇಬೇಕಾದ ನೀತಿಗಳನ್ನು ನಿರೂಪಿಸಲಾಗಿದೆ. ಅವುಗಳಲ್ಲಿ ಸರ್ವರಿಗೂ ಉದ್ಯೋಗಾವಕಾಶ ಕಲ್ಪಿಸುವುದು. ರಾಷ್ಟ್ರದ ಸಂಪತ್ತಿನ ಸಮಾನ ಹಂಚಿಕೆ. ಕೆಲಸಕ್ಕೆ ತಕ್ಕಷ್ಟು ಆದಾಯ. ನೆಮ್ಮದಿಯ ಜೀವನ

ಜೀವನಕ್ಕೆ ಅಗತ್ಯವಾದಷ್ಟು ವರಮಾನ ಎಲ್ಲರಿಗೂ ಕೊಡುವುದು, ನಿರುದ್ಯೋಗ ಕಾಯಿಲೆ ಮತ್ತು ಮುಪ್ಪಿನಲ್ಲಿ ಪರಿಹಾರ ಒದಗಿಸುವುದು, ಕಡ್ಡಾಯ ಹಾಗೂ ಉಚಿತ ಪ್ರಾಥಮಿಕ ಶಿಕ್ಷಣ. ಹಿಂದುಳಿದ ವರ್ಗಗಳ ವಿದ್ಯಾಭ್ಯಾಸ. ಗ್ರಾಮಪಂಚಾಯತಿ ಸುಧಾರಣೆ. ವ್ಯವಸಾಯ - ಪಶುಪಾಲನೆ ಕ್ಷೇತ್ರದಲ್ಲಿ ಪ್ರಗತಿ ಸಾಧಿಸುವುದು ಮುಖ್ಯವಾದುವು.

ಇಂಗ್ಲೆಂಡಿನಂಥ ದೇಶ ಜನರಿಗೆ ಹಲವು ಸೌಲಭ್ಯಗಳನ್ನು ಕಲ್ಪಿಸಿವೆ. ವಯಸ್ಸಾದ ಬಡವರಿಗೆ ಕೃತಕ ಹಲ್ಲುಗಳನ್ನೂ ಕನ್ನಡಕಗಳನ್ನೂ ಒದಗಿಸುತ್ತವೆ. ಹಲವು ದೇಶಗಳಲ್ಲಿ ಮುಪ್ಪಿನಲ್ಲಿ ಬೇರೆ ಸಹಾಯ ಇಲ್ಲದವರಿಗೆ 'ವೃದ್ಧಾಪ್ಯ ವೇತನ' ಎಂದು ಪ್ರತಿ ತಿಂಗಳು ಹಣ ಕೊಡುತ್ತಾರೆ. ಇಂಗ್ಲೆಂಡಿನಲ್ಲಿ ಭಿಕ್ಷೆ ಬೇಡುವುದು ಅಪರಾಧ. ಅಲ್ಲಿಯೂ ಅಮೆರಿಕದಲ್ಲಿಯೂ ವಯಸ್ಸಾದವರನ್ನು ನೋಡಿಕೊಳ್ಳುವುದಕ್ಕಾಗಿಯೇ ಆಶ್ರಮ ಗೃಹಗಳಿರುತ್ತವೆ. ಕೆಲಸ ಕಳೆದುಕೊಂಡಾಗ, ಆ ಕಾಲಕ್ಕೆ ಆಧಾರವಾಗಿ ಸ್ವಲ್ಪ ಹಣ ಕೊಡುವ ವಿಮಾಯೋಜನೆಗಳೂ ಹಲವು ದೇಶಗಳಲ್ಲಿ ಉಂಟು. ನಮ್ಮ ದೇಶದ ವಿಮಾ ಯೋಜನೆಯ ಆಸ್ಪತ್ರೆಗಳೂ ಕಾರ್ಮಿಕರಿಗೆ ನೆರವು ಕೊಡುವ ಪ್ರಯತ್ನ.

ಸುಖೀರಾಜ್ಯದ ರಚನೆಯಿಂದಾಗಿ, ವ್ಯಕ್ತಿ ಸ್ವಾತಂತ್ರ್ಯವನ್ನು ಪ್ರಭುತ್ವ ಹತ್ತಿಕ್ಕಬಾರದು ; ಸರಕಾರವೇ ಎಲ್ಲಾ ಜವಾಬ್ದಾರಿ ವಹಿಸುವುದರಿಂದ, ಜನ ಸ್ವತಂತ್ರ ಆಲೋಚನಾ ಶಕ್ತಿಯನ್ನೇ ಕಳೆದುಕೊಂಡು ಸ್ವಶಕ್ತಿಯಲ್ಲಿ ನಂಬಿಕೆ ನಶಿಸಿಹೋಗಬಹುದು ; ಜನ ತಮ್ಮ ಹೊಣೆಯನ್ನು ಮರೆತು, ಕ್ರಿಯಾಶೀಲತೆಯನ್ನು ಮರೆತು ಎಲ್ಲವನ್ನೂ ಸರಕಾರದಿಂದ ನಿರೀಕ್ಷಿಸುವಂತಾಗಬಹುದು ಎಂದು ವಾದಿಸುವವರೂ ಇದ್ದಾರೆ.

ಸಾಮಾಜಿಕ ಮತ್ತು ಆರ್ಥಿಕ ಭದ್ರತೆಯನ್ನು ಗುರಿಯಾಗುಳ್ಳ ಸುಖೀರಾಜ್ಯದ ಕಲ್ಪನೆ ಎರಡನೆಯ ಮಹಾಯುದ್ಧದ ಕಾಲದಲ್ಲಿ ಮತ್ತು ಅದು ಮುಗಿದ ತರುವಾಯ ಕೆಲವು ರಾಷ್ಟ್ರಗಳಲ್ಲಿ ಉಂಟಾಯಿತು. ಸುಖೀರಾಜ್ಯದ ಪ್ರಯೋಗ ಪ್ರಥಮತಃ ಬ್ರಿಟನಿನಲ್ಲಿ ಆಯಿತು. ಅನಂತರ ಅಮೆರಿಕ ಸಂಯುಕ್ತ ಸಂಸ್ಥಾನ ಮತ್ತಿತರ ದೇಶಗಳೂ ಮೊದಲು ಮಾಡಿದುವು. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಸ್ಥಾನ ಅಥವಾ ವರಮಾನದ ಗಣನೆಯಿಲ್ಲದೆ ಸಾಮಾಜಿಕ ವಿಮೆಗೆ ಒಳಪಡಲೇಬೇಕಾಗಿತ್ತು. ಬೆವರಿಜ್ ಎಂಬುವನ ಸಲಹೆಯಂತೆ ಇದನ್ನು ಬ್ರಿಟನಿನಲ್ಲಿ ಜಾರಿಗೆ ತಂದರು.

'ರಾಜ್ಯದ ಹುಟ್ಟು ಮನುಷ್ಯನ ಜೀವನವನ್ನು ಸಾಧ್ಯಮಾಡುವುದಕ್ಕೆ ; ರಾಜ್ಯದ ಅಸ್ತಿತ್ವ ಅವನ ಜೀವನವನ್ನು ಹಸನುಮಾಡುವುದಕ್ಕೆ' ಎಂದು ಪ್ರಭುತ್ವದ ಉದ್ದೇಶವನ್ನು ಕುರಿತು ಗ್ರೀಕ್ ತತ್ತ್ವಜ್ಞಾನಿ ಅರಿಸ್ಟಾಟಲ್ ಹೇಳಿದ್ದಾನೆ. ಸುಖೀರಾಜ್ಯದ ಉದ್ದೇಶವೂ ಇದೇ. ಪ್ರಜೆಯ ಸುಖವೇ ಅದರ ಮುಖ್ಯ ಗುರಿ.

## ಸುಡಾನ್

ಈಶಾನ್ಯ ಆಫ್ರಿಕದಲ್ಲಿರುವ ಸುಡಾನ್ ಆಫ್ರಿಕ ಖಂಡದ ದೊಡ್ಡ ದೇಶ. ಬಿಳಿ ಮತ್ತು ನೀಲಿ ನೈಲ್‌ಗಳ ಸಂಗಮ ಸುಡಾನಿನಲ್ಲಾಗಿದೆ. ಭೂಮಧ್ಯ ರೇಖೆಗೆ ಸಮೀಪವಾಗಿರುವ ದಕ್ಷಿಣ ಭಾಗಕ್ಕಿಂತ ಉತ್ತರಭಾಗದಲ್ಲಿಯೇ ಉಷ್ಣಾಂಶ ಹೆಚ್ಚು. ಸುಡಾನಿಗೆ ಮೊದಲು ಬಂದ ಅರಬರು ಇದನ್ನು ಅರಬಿ ಭಾಷೆಯಲ್ಲಿ 'ಬಿಲಾದ್ ಅಸ್ ಸುಡಾನ್' ಎಂದು ಕರೆದರು. 'ಕಪ್ಪು ಜನರ ದೇಶ' ಎಂದು ಇದರ ಅರ್ಥ.

ಉತ್ತರಕ್ಕೆ ಈಜಿಪ್ಟ್, ದಕ್ಷಿಣಕ್ಕೆ ಕಾಂಗೊ, ಉಗಾಂಡ ಮತ್ತು ಕೀನ್ಯ, ಪೂರ್ವಕ್ಕೆ ಇಥಿಯೋಪಿಯ ಮತ್ತು ಕೆಂಪು ಸಮುದ್ರ, ಪಶ್ಚಿಮಕ್ಕೆ ಚಾಡ್ ಮತ್ತು ಮಧ್ಯ ಆಫ್ರಿಕ ಗಣರಾಜ್ಯ. ಉತ್ತರ ಸುಡಾನಿನ ಬಹು ಭಾಗ ಸಹಾರ, ಲಿಬಿಯ ಮತ್ತು ನುಬಿಯ ಮರುಭೂಮಿಗಳಿಂದ ಕೂಡಿದೆ. ಈ ಮರುಭೂಮಿಗಳ ಅಂಚಿನಲ್ಲಿ ಬೆಳೆಯುವ ಬವೊಬಾಬ್ ಮರಗಳು 4,500 ಲೀಟರ್‌ನಷ್ಟು ನೀರನ್ನು ಕೊಂಬೆಗಳ ಬುಡದಲ್ಲಿರುವ ಟೊಳ್ಳು ಭಾಗಗಳಲ್ಲಿ ಶೇಖರಿಸಿಕೊಂಡಿರುತ್ತವೆ. ಮರುಭೂಮಿಯ ಪ್ರಯಾಣಿಕರು ಇಂಥ ಮರವನ್ನು ಕಚ್ಚು ಮಾಡಿ ಅದರಲ್ಲಿ ಸಂಗ್ರಹವಾಗಿರುವ ನೀರು ಕುಡಿದು ಪ್ರಾಣ ಉಳಿಸಿಕೊಂಡ ಪ್ರಸಂಗಗಳಿವೆ. ದಕ್ಷಿಣ ಭಾಗ ಬಯಲು ಮತ್ತು ಪ್ರಸ್ಥಭೂಮಿಗಳಿಂದ ಕೂಡಿದೆ. ಇದರ ದಕ್ಷಿಣಕ್ಕೆ ಸಡೆ ಎನ್ನುವ ಜೌಗು ಪ್ರದೇಶವಿದೆ. ಪಶ್ಚಿಮದ ಕೊನೆಯಲ್ಲಿ ಮರ್‍ರಾ ಪರ್ವತಗಳಿವೆ. ಬಿಳಿ ನೈಲ್, ನೀಲಿ ನೈಲ್ ಮತ್ತು ಅಟ್‌ಬರ ನದಿಗಳ ಕಣಿವೆ ಪ್ರದೇಶ ಫಲವತ್ತಾಗಿದ್ದು ಹತ್ತಿ ಬೆಳೆಯಲು ಅನುಕೂಲ. ನೈಲ್ ನದಿಯ ಪಶ್ಚಿಮ ಭಾಗ ಅರಣ್ಯದಲ್ಲಿ ತೇಗ ಮತ್ತು ಅಕೇಶಿಯ ಮರಗಳು ಬೆಳೆಯುತ್ತವೆ.

ಉತ್ತರ ಭಾಗದಲ್ಲಿ ಉಷ್ಣಾಂಶ ಹೆಚ್ಚು. ಸರಾಸರಿ 84° ಫಾ. ಉಷ್ಣಾಂಶ ಇದ್ದು ಮರುಭೂಮಿಯಲ್ಲಿ 100° ಫಾ. ಇರುತ್ತದೆ. ಮಳೆ ಕಡಮೆ. ಉತ್ತರ ಮಾರುತ ಹೆಚ್ಚುಕಡಮೆ ವರ್ಷವೆಲ್ಲಾ ಬೀಸುತ್ತಿರುತ್ತದೆ. ಚಳಿಗಾಲದಲ್ಲಿ ಸ್ವಲ್ಪ ಚಳಿ. ದಕ್ಷಿಣದಲ್ಲಿ ಉಷ್ಣವಲಯದ ಹವಾಗುಣ. ಸರಾಸರಿ ಉಷ್ಣಾಂಶ 85° ಫಾ ಇರುತ್ತದೆ.

ಉತ್ತರಭಾಗದಲ್ಲಿ ಅರಬರ ಸಂಖ್ಯೆ ಹೆಚ್ಚು. ದಕ್ಷಿಣದಲ್ಲಿ ನೀಗ್ರೊಗಳು ಅಧಿಕ ಸಂಖ್ಯೆಯಲ್ಲಿದ್ದಾರೆ. ಇವರು ವಿವಿಧ ಬುಡಕಟ್ಟುಗಳಿಗೆ ಸೇರಿದವರು. ಅವರು ತಮ್ಮ ತಮ್ಮ ಬುಡಕಟ್ಟಿನ ಭಾಷೆಯನ್ನು ಆಡುತ್ತಾರೆ. ತಮ್ಮ ಮತವನ್ನೆ ಅನುಸರಿಸುತ್ತಾರೆ. ಹಲವರು ಕ್ರೈಸ್ತಮತಕ್ಕೆ ಮತಾಂತರ ಹೊಂದಿದ್ದಾರೆ. ಅರಬರು ಮತ್ತು ನೀಗ್ರೊಗಳಲ್ಲಿ ಬಹುಮಂದಿ ರೈತರು ಅಥವಾ ಹಸು ಸಾಕುವವರು.

ದಕ್ಷಿಣ ಮತ್ತು ಪಶ್ಚಿಮ ಭಾಗಗಳಿಗಿಂತ ಉತ್ತರ ಮತ್ತು ಪೂರ್ವ ಭಾಗಗಳಲ್ಲಿ ಹೆಚ್ಚಾಗಿ ಕಾಳುಗಳು, ಮುಸುಕಿನ ಜೋಳ, ಗೋಧಿ, ಕಡಲೆಕಾಯಿ, ಹುಲ್ಲು ಮತ್ತು ಹತ್ತಿ ಬೆಳೆಯುತ್ತಾರೆ. ಮಸಿ, ಅಂಟು, ಔಷಧ ಇವುಗಳ ತಯಾರಿಕೆಗೆ ಬೇಕಾಗುವ 'ಗಂ ಅರೇಬಿಕ್' ಅಕೇಶಿಯಾ ಮರದಿಂದ ಸಿಗುತ್ತದೆ. ಸುಡಾನಿನ ಅಡವಿ ಪ್ರದೇಶದಲ್ಲಿ ತೇಗ, ಅಕೇಶಿಯ ಮರಗಳು ಬೆಳೆಯುತ್ತವೆ. ಪ್ರಪಂಚಕ್ಕೆಲ್ಲ ಬೇಕಾಗುವ ಗಂ ಅರೇಬಿಕ್‌ನ ನೂರಕ್ಕೆ ಎಂಬತ್ತು ಭಾಗ ಸುಡಾನಿನಲ್ಲಿಯೇ ದೊರೆಯುತ್ತದೆ. ಗಂ ಅರೇಬಿಕ್, ಕಡಲೆಕಾಯಿ, ಹದಗೊಳಿಸಿದ ಚರ್ಮ ಇವನ್ನು ಸುಡಾನಿನಿಂದ ರಫ್ತು ಮಾಡುತ್ತಾರೆ. ಒಂಟೆ, ದನ, ಆಡು ಮತ್ತು ಕುರಿಗಳನ್ನು ಸಾಕುತ್ತಾರೆ ; ವಧುವಿನ ಮನೆಗೆ ವಧುದಕ್ಷಿಣೆಯಾಗಿ ವರ ಇವನ್ನು ಕೊಡಬೇಕಾಗುತ್ತದೆ.

ಕಬ್ಬಿಣದ ಅದಿರು, ಚಿನ್ನ, ಮ್ಯಾಂಗನೀಸ್, ತಾಮ್ರ, ಅಭ್ರಕ, ಸೀಸ, ಕ್ರೋಮೈಟ್, ಕಲ್ನಾರು ಮತ್ತು ಗ್ರಾಫೈಟ್‌ಗಳು ದೊರೆಯುತ್ತವೆ.

ಚರ್ಮ ಹದಮಾಡುವುದು, ಸಿಮೆಂಟು, ಡಬ್ಬದಲ್ಲಿ ದಸ್ತಾನು ಮಾಡುವುದು, ಪೆಟ್ರೋಲಿಯಂ ಶೋಧಿಸುವುದು, ಬಟ್ಟೆ ಮತ್ತು ಕುಶಲ ಕೈಗಾರಿಕೆ ಸುಡಾನಿನ ಉದ್ಯಮಗಳು.

ಆಮದಾಗುವ ಪದಾರ್ಥಗಳೆಂದರೆ ಯಂತ್ರಗಳು, ಲೋಹಗಳು, ಪೆಟ್ರೋಲಿಯಂ ತಯಾರಿಕೆಗಳು, ಕಾರು, ಆಹಾರ. ಕಾಫಿ, ಸಕ್ಕರೆ, ಚಹ, ಗೊಬ್ಬರ ಮತ್ತು ಹತ್ತಿಯ ವಸ್ತುಗಳು.

ರಾಜಧಾನಿ ಖಾರ್ಟೂಮ್, ಬಿಳಿ ಮತ್ತು ನೀಲಿ ನೈಲ್ ನದಿಗಳು ಒಂದಾಗುವ ಸ್ಥಳದ ಸಮೀಪದಲ್ಲಿದೆ. ಎಲ್ ಒಬೇದ್ ನಗರ, ಗಂ ಅರೇಬಿಕ್ ಮತ್ತು ಎಣ್ಣೆಬೀಜಗಳ ವ್ಯಾಪಾರ ಕೇಂದ್ರ. ಉತ್ತರ ಖಾರ್ಟೂಮ್ ಕೈಗಾರಿಕಾ ನಗರ. ಆಮ್‌ಡುರ್ಮನ್ ಬೃಹತ್ ಸ್ಥಳೀಯ ಮಾರುಕಟ್ಟೆ ಇರುವ ನಗರ. ಕೆಂಪು ಸಮುದ್ರದ ದಡದಲ್ಲಿರುವ ಸುಡಾನ್ ಪ್ರಮುಖ ಬಂದರು. ಜುಬಾ ದಕ್ಷಿಣಭಾಗದ ಮುಖ್ಯ ನಗರ.

ಹಿಂದೆ ಉತ್ತರ ಸುಡಾನ್ ಈಜಿಪ್ಟಿನ ಆಳ್ವಿಕೆಯಲ್ಲಿದ್ದಿತು. ಕೆಲವು ಕಾಲ ರೋಮನರ ಆಡಳಿತದಲ್ಲಿದ್ದ ಸುಡಾನ್ 1500 ರಿಂದ 1820ರವರೆಗೆ ಅರಬರ ಅಧೀನದಲ್ಲಿದ್ದಿತು. 1820ರಲ್ಲಿ ತುರ್ಕಿಯವರು ದೇಶವನ್ನು ಗೆದ್ದರು. 1885ರಲ್ಲಿ ಸುಡಾನಿನ ಜನ ಮಹ್ದಿ ಎಂಬುವನ ನೇತೃತ್ವದಲ್ಲಿ ತುರ್ಕಿಯವರ ವಿರುದ್ಧ ದಂಗೆ ಎದ್ದು ಅವರನ್ನು ಓಡಿಸಿದರು. 1889ರಲ್ಲಿ ಈಜಿಪ್ಟಿನವರು ಮತ್ತು ಬ್ರಿಟಿಷರು ಸುಡಾನಿನ ಮೇಲೆ ದಾಳಿ ಮಾಡಿ 1956ರ ವರೆಗೂ ಒಟ್ಟಿಗೇ ಆಳಿದರು. 1956 ಜನವರಿ 1 ರಂದು ಸುಡಾನ್ ಸ್ವತಂತ್ರವಾಯಿತು. 1958ರವರೆಗೆ ಸಂವಿಧಾನ ರೀತಿಯ ಸರಕಾರವಿತ್ತು. 1959ರಲ್ಲಿ ದೇಶವನ್ನು ಸೈನ್ಯ ತನ್ನ ವಶಕ್ಕೆ ತೆಗೆದು ಕೊಂಡಿತು. ಹನ್ನೆರಡು ಜನರಿದ್ದ ಸರ್ವೋಚ್ಚ ಸಭೆ ರೂಪುಗೊಂಡಿತು. 1964ರಲ್ಲಿ ಸೈನ್ಯದ ಆಡಳಿತ ಕೊನೆಗಂಡು ಪುನಃ ಪ್ರಜಾ ಸರಕಾರ ಸ್ಥಾಪಿತವಾಯಿತು. 1967ರಲ್ಲಿ ಅರಬ್ ದೇಶಗಳು ಮತ್ತು ಇಸ್ರೇಲ್ ನಡುವೆ ನಡೆದ ಈ ಯುದ್ಧದಲ್ಲಿ ಸುಡಾನ್ ಅರಬರ ಪರವಾಗಿ ಹೋರಾಡಿತು. 1956ರಿಂದ ಸುಡಾನ್ ವಿಶ್ವಸಂಸ್ಥೆಯ ಸದಸ್ಯರಾಷ್ಟ್ರ.

| | | |
|---|---|---|
| ಖಂಡ | : | ಆಫ್ರಿಕ (ಈಶಾನ್ಯ) |
| ಅಕ್ಷಾಂಶ | : | 3° 28′ ಉ ದಿಂದ 22° ಉ |
| ರೇಖಾಂಶ | : | 21° 49′ ಪೂ ದಿಂದ 38° 35′ ಪೂ |
| ವಿಸ್ತೀರ್ಣ | : | 25,05,825 ಚ. ಕಿ. ಮೀ. |
| ಜನಸಂಖ್ಯೆ | : | 1,40,00,000 |
| ರಾಜಧಾನಿ | : | ಖಾರ್ಟೂಮ್ |
| ಭಾಷೆ | : | ಅರಬಿ |
| ಸರಕಾರ | : | ಗಣರಾಜ್ಯ |
| ಬಾವುಟ | : | ನೀಲಿ, ಹಳದಿ, ಮತ್ತು ಹಸಿರು ಬಣ್ಣದ ಅಡ್ಡ ಪಟ್ಟೆಗಳು |

## ಸುಭಾಷ್ ಚಂದ್ರ ಬೋಸ್

'ಭಾರತದ ವೀರರೇ, ನನಗೆ ನಿಮ್ಮ ರಕ್ತ ನೀಡಿ; ನಿಮಗೆ ನಾನು ಸ್ವಾತಂತ್ರ್ಯ ಕೊಡುತ್ತೇನೆ!'.



ದೇಶಬಾಂಧವರಲ್ಲಿ ಹೊಸ ಉಸಿರು ತುಂಬಿದ ವೀರಾಗ್ರಣಿ

ದಾಸ್ಯದಲ್ಲಿದ್ದ ಭಾರತದ ಜನತೆಗೆ ಮೈನವಿರೇಳಿಸುವ ಈ ಕರೆಯನ್ನು ಕೊಟ್ಟವರು ನೇತಾಜಿ ಸುಭಾಷ್ ಚಂದ್ರ ಬೋಸ್.

"ಚಲೋ ದೆಹಲಿ" ಎಂದರು, ಸಿಂಗಪುರದಲ್ಲಿದ್ದ ಭಾರತೀಯರಿಗೆ.

ಸುಭಾಷ್ 1897ರಲ್ಲಿ ಒರಿಸ್ಸಾದಲ್ಲಿ ಜನಿಸಿದರು. ಅವರು ಹನ್ನೆರಡು ಮಕ್ಕಳಲ್ಲಿ ಏಳನೆಯವರು. ತಂದೆಗೆ ಸ್ವಲ್ಪ ವಿಲಾಯಿತಿಯ ಮೋಹ. ತಾಯಿ ಸ್ವದೇಶ-ಸಂಪ್ರದಾಯ, ಧರ್ಮ, ಆಚಾರಗಳಲ್ಲಿ ನಿಷ್ಠೆ ಇದ್ದವರು.

ಮೆಟ್ರಿಕ್ ಪರೀಕ್ಷೆ ಮುಗಿಸಿ 1913ರಲ್ಲಿ ಕಲ್ಕತ್ತೆಯ ಪ್ರೆಸಿಡೆನ್ಸಿ ಕಾಲೇಜನ್ನು ಸುಭಾಷ್ ಸೇರಿದರು. 1914ರಲ್ಲಿ ಕೆಲವು ಮಿತ್ರರ ಒಡಗೂಡಿ ಬ್ರಹ್ಮಚರ್ಯೆ ಮತ್ತು ದೇಶಸೇವೆಯ ವ್ರತ ಕೈಗೊಂಡರು.

ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಸುಭಾಷರು ವಿದ್ಯಾರ್ಥಿಯಾಗಿದ್ದಾಗ, ಅಧ್ಯಾಪಕರೊಬ್ಬರು ಭಾರತದ ಸಂಸ್ಕೃತಿಯನ್ನು ಕುರಿತು ಹಗುರವಾಗಿ ಮಾತನಾಡಿದರು. ಸುಭಾಷರೂ ಕೆಲವು ಗೆಳೆಯರೂ ಆ ಅಧ್ಯಾಪಕರನ್ನು ಥಳಿಸಿದರು. ಇದರಿಂದ ಅವರು ಕೆಲವು ದಿನ ಕಾಲೇಜಿನಿಂದ ಹೊರಗಿರಬೇಕಾಯಿತು.

ಆಗಿನ ಕಾಲದಲ್ಲಿ ಐ.ಸಿ.ಎಸ್. ಇಂಡಿಯನ್ ಸಿವಿಲ್ ಸರ್ವಿಸ್–ಪಾಸು ಮಾಡುವ ಕನಸು ಲಕ್ಷಾಂತರ ಮಂದಿ ಯುವಕರಿಗೆ. ಈ ಪರೀಕ್ಷೆಗೆ ಇಂಗ್ಲೆಂಡಿಗೆ ಹೋಗಬೇಕಾಗಿತ್ತು. ಅದರಲ್ಲಿ ತೇರ್ಗಡೆಯಾಗುತ್ತಿದ್ದ ಭಾರತೀಯರ ಸಂಖ್ಯೆ ಬಹು ಕಡಿಮೆ. ಉತ್ತೀರ್ಣರಾದರೆ ದೊಡ್ಡ ಕೆಲಸ, ಅಧಿಕಾರ, ಕೈತುಂಬ ಸಂಬಳ. ನಿವೃತ್ತರಾಗುವ ಮೊದಲು ನಾಲ್ಕು ಐದು ಸಾವಿರ ರೂಪಾಯಿ ವೇತನ ಸಿಗುವ ಭರವಸೆ. ಸುಭಾಷರಿಗೆ ಇದರ ವ್ಯಾಮೋಹವಿರಲಿಲ್ಲ. ಆದರೂ ಹಿರಿಯರ ಮಾತಿಗೆ ಮನ್ನಣೆಕೊಟ್ಟು 1919ರಲ್ಲಿ ಪರದೇಶಕ್ಕೆ ಹೋಗಿ ಅಲ್ಲಿ ಐ.ಸಿ.ಎಸ್. ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಆದರೆ ಹಾಗೆ ತೇರ್ಗಡೆ ಹೊಂದಿದ್ದು ತಮ್ಮ ದೌರ್ಬಲ್ಯ ಎಂದು ಒಂದು ಪತ್ರದಲ್ಲಿ ಸುಭಾಷ್ ಹೇಳಿದ್ದಾರೆ. 'ಬ್ರಿಟಿಷ್ ಸರಕಾರದ ಸೇವೆಯ ಗುಲಾಮಗಿರಿ ಬೇಡ. ಮಾತೃಭೂಮಿಯ ಬಂಧ ವಿಮೋಚನೆಗೆ ಈ ಜೀವ ಮೀಸಲು' ಎಂದು ನಿರ್ಧರಿಸಿ ಐ.ಸಿ.ಎಸ್. ಪದವಿಗೆ ರಾಜೀನಾಮೆ ಇತ್ತರು.

1921ರಲ್ಲಿ ಭಾರತಕ್ಕೆ ಹಿಂದಿರುಗಿ ನೇರವಾಗಿ ಗಾಂಧಿಜಿಯನ್ನು ಕಾಣಲು ಹೋದರು.

ಆ ವರ್ಷವೇ ನಿರಂಕುಶ ಪ್ರಭುತ್ವದ ವಿರೋಧವಾಗಿ ಗಲಭೆ ನಡೆಸಿದ ರೆಂಬ ಆರೋಪದ ಮೇಲೆ ಚಿತ್ತರಂಜನದಾಸ್, ಅಬುಲ್ ಕಲಾಂ ಅಜಾದ್ ಮತ್ತು ಸುಭಾಷರನ್ನು ಸೆರೆಯಲ್ಲಿಟ್ಟರು. ಸೆರೆಮನೆಯಲ್ಲಿ ಬೋಸರು ಚಿತ್ತರಂಜನದಾಸರ ಕಾರ್ಯದರ್ಶಿಯಾಗಿ, ಅಡುಗೆ ಭಟ್ಟರಾಗಿ ಕೆಲಸ ಮಾಡಿದರು. ಆರು ತಿಂಗಳ ಅನಂತರ ಬೋಸರ ಬಿಡುಗಡೆಯಾಯಿತು.

1923ರಲ್ಲಿ 26 ವಯಸ್ಸಿನ ಸುಭಾಷ್ ಬಂಗಾಳ ಪ್ರಾಂತ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾದರು. ಸಿಡಿಲಿನ ವ್ಯಕ್ತಿತ್ವದ ಸುಭಾಷ್, ಯುವಕ ವರ್ಗದ ಉತ್ಸಾಹ ದೇಶಾಭಿಮಾನ ಕ್ರಿಯಾಶೀಲತೆಗಳ ಪ್ರತೀಕವಾದರು. 1929ರಲ್ಲಿ 'ಪೂರ್ಣ ಸ್ವಾತಂತ್ರ್ಯವೇ ನಮ್ಮ ಗುರಿ' ಎಂದು ಘೋಷಿಸಿದರು. ವಿದೇಶಿ ಸರಕಾರ ಮತ್ತೆ ಮತ್ತೆ ಇವರನ್ನು ಸೆರೆಮನೆಗೆ ಕಳುಹಿಸಿತು. 1931ರಲ್ಲಿ ಆರೋಗ್ಯವನ್ನು ಸುಧಾರಿಸಲು ಐರೋಪ್ಯ ಯಾತ್ರೆಯನ್ನು ಕೈಗೊಂಡ ಸುಭಾಷರು ಫ್ರಾನ್ಸ್, ಐರ್‌ಲೆಂಡ್ ಮೊದಲಾದ ಹಲವು ದೇಶಗಳಲ್ಲಿ ಭಾರತದ ಸ್ವಾತಂತ್ರ್ಯದ ಹೋರಾಟವನ್ನು ವಿವರಿಸಿ, ಅಲ್ಲಿ ಬೆಂಬಲ ಗಳಿಸಿದರು. ಅವರು ಆಗ ಬರೆದ 'ಭಾರತದ ಸ್ವಾತಂತ್ರ್ಯ ಸಂಗ್ರಾಮ' ಎನ್ನುವ ಪುಸ್ತಕ ಭಾರತದೊಳಕ್ಕೆ ಬರಬಾರದೆಂದು ಬ್ರಿಟಿಷ್ ಸರಕಾರ ತಡೆಯಾಜ್ಞೆ ನೀಡಿತು.

ಸುಮಾರು ಹದಿನಾರು ವರ್ಷಗಳ ಕಾಲ ಕಾಂಗ್ರೆಸಿನಲ್ಲಿದ್ದು, ಆ ಸಂಸ್ಥೆಯ ಅಧ್ಯಕ್ಷರೂ ಆದ ಸುಭಾಷರು, ಗಾಂಧಿಜಿಯವರೊಂದಿಗೆ ಭಿನ್ನಾಭಿಪ್ರಾಯ ಉಂಟಾಗಿ 1938ರಲ್ಲಿ ಕಾಂಗ್ರೆಸಿನಿಂದ ಹೊರಬಂದರು. ಕ್ರಾಂತಿಕಾರಿ ಮಾರ್ಗದಿಂದ ಭಾರತದ ಸ್ವಾತಂತ್ರ್ಯವನ್ನು ಸಾಧಿಸಬೇಕೆಂಬುದು ಅವರ ನಿಲುವಾಗಿತ್ತು.

ದ್ವಿತೀಯ ಮಹಾಯುದ್ಧ ಆರಂಭವಾಯಿತು. ಭಾರತದಲ್ಲಿ ಕ್ರಾಂತಿಕಾರಿ ಚಟುವಟಿಕೆಗಳು ತೀವ್ರಗೊಂಡವು. ಆಳುತ್ತಿದ್ದ ಸರಕಾರ ಸುಭಾಷರನ್ನು ಸೆರೆಮನೆಗೆ ದೂಡಿತು. ಸೆರೆಮನೆಯಲ್ಲಿ ಕುಳಿತರೆ ಸ್ವಾತಂತ್ರ್ಯ ಸಂಪಾದನೆಯಾಗದು ಎಂದು ಅವರ ಅಭಿಮತ. 1940ರಲ್ಲಿ ಆಮರಣ ಉಪವಾಸವನ್ನು ಆರಂಭಿಸಿದರು. ಈ ಮಧ್ಯೆ ನಡೆದ ಕೇಂದ್ರ ಶಾಸನ ಸಭೆಯ ಉಪಚುನಾವಣೆಯಲ್ಲಿ ಜನರು ಸೆರೆಯಲ್ಲಿದ್ದ ಬೋಸರನ್ನೇ ಚುನಾಯಿಸಿತು. ಅವರ ಬಿಡುಗಡೆಯಾಯಿತು. ಆದರೆ ಅವರನ್ನು ಗೃಹಬಂಧನದಲ್ಲಿಟ್ಟರು. ಹೊರಗಿನ ಪ್ರಪಂಚದೊಡನೆ ಅವರ ಸಂಪರ್ಕ ಸಂಪೂರ್ಣವಾಗಿ ಕಡಿದುಹೋಯಿತು.

1941ರಲ್ಲಿ ಸರಕಾರದ ಬಂಧನದಿಂದ ಸುಭಾಷ್ ತಪ್ಪಿಸಿಕೊಂಡರು. ಪರದೇಶಗಳ ಸಹಾಯದಿಂದಲಾದರೂ ತಾಯ್ನಾಡನ್ನು ಬಂಧಮುಕ್ತಗೊಳಿಸಬೇಕೆಂದು ಕಾಬೂಲಿನ ದಾರಿಯಾಗಿ, ರಷ್ಯವನ್ನು ಹಾದು ಜರ್ಮನಿಗೆ ಹೋದರು. ಜರ್ಮನಿಯಲ್ಲಿ ಆಜಾದ್ ಹಿಂದ್ ಕೇಂದ್ರವನ್ನು ಸ್ಥಾಪಿಸಿದರು.

ಮುಂದೆ ಜರ್ಮನರ ನೆರವಿನಿಂದ ಸಿಂಗಪುರಕ್ಕೆ ಬಂದು ಜಪಾನರ ಸಹಾಯವನ್ನು ಪಡೆದು ಸೆರೆಯಾಳುಗಳಾಗಿದ್ದ ಭಾರತೀಯ ಸೈನಿಕರ ದಳ ಒಲಿಸಿ ಆಜಾದ್ ಹಿಂದ್ ಫೌಜನ್ನು 1943ರಲ್ಲಿ ಕಟ್ಟಿದರು. ಅದೇ ವರ್ಷ ಸುಭಾಷರು ' ಚಲೋ ದೆಹಲಿ ' ಕರೆಯನ್ನು ಕೊಟ್ಟರು. ಸುಭಾಷರ ವಾಣಿ ಹೊಸ ಚೇತನದ ಹೊಳೆಯನ್ನು ಹರಿಸಿತು. ಅಸಂಖ್ಯಾತ ಭಾರತೀಯ ತರುಣರು ತಮ್ಮ ರಕ್ತದಲ್ಲಿ ಲೇಖನಿಯನ್ನು ಅದ್ದಿ ಪ್ರತಿಜ್ಞಾಪತ್ರಕ್ಕೆ ಸಹಿ ಹಾಕಿದರು.

1943 ನವೆಂಬರ್ 17ರಂದು ರಂಗೂನಿನಲ್ಲಿ ಆಜಾದ್ ಹಿಂದ್ ಸರಕಾರದ ಸ್ಥಾಪನೆಯಾಯಿತು. ದಂಡನಾಯಕ ಪೋಷಾಕನ್ನು ಧರಿಸಿದ ಧೀರ ನಿಲುವಿನ ಸುಭಾಷ್ ಸ್ವತಂತ್ರ ಭಾರತ ಸರಕಾರದ ಸ್ಥಾಪನೆಯನ್ನು ಘೋಷಿಸಿದರು. ಇದೇ ವರ್ಷ ಡಿಸೆಂಬರಿನಲ್ಲಿ ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳು ಸ್ವತಂತ್ರ ಭಾರತದ ಅಧೀನ. ಅವು ಸ್ವರಾಜ್ಯದ್ವೀಪಗಳು ಎಂದು ಸಾರಿದರು. 1944ರ ಜನವರಿ 24ರಂದು ರಂಗೂನಿನಲ್ಲಿ ಭಾರತೀಯರು ಸ್ವಾತಂತ್ರ್ಯೋತ್ಸವವನ್ನು ಆಚರಿಸಿದರು. ಇವರ ಸಾಧನೆಗಳು ಭಾರತೀಯರಲ್ಲಿ ಹೆಮ್ಮೆಯನ್ನೂ ಆತ್ಮವಿಶ್ವಾಸವನ್ನೂ ಹುಟ್ಟಿಸಿದುವು.

1945ರಲ್ಲಿ ಸುಭಾಷರು ಟೋಕಿಯೋವಿಗೆ ಪ್ರಯಾಣ ಮಾಡುತ್ತಿದ್ದಾಗ ಅವರ ವಿಮಾನಕ್ಕೆ ಬೆಂಕಿ ಹತ್ತಿತು. ಆಸ್ಪತ್ರೆಯೊಂದರಲ್ಲಿ ಅವರ ಅಂತ್ಯವಾಯಿತು. ಸುಭಾಷರು ಆ ವಿಮಾನ ಅಪಘಾತದಲ್ಲಿ ಸಾಯಲಿಲ್ಲ ಎಂದು ಭಾರತದಲ್ಲಿ ಹಲವರು ಭಾವಿಸಿದರು.

ಸುಭಾಷರ ದೇಹದ ಭಸ್ಮವನ್ನು ಟೋಕಿಯೊದ ರಾನ್‌ಕೊಜಿ ದೇವಾಲಯದಲ್ಲಿಟ್ಟಿದೆ. 1970ರಲ್ಲಿ ಸುಭಾಷರ ವಿಮಾನದ ಅಪಘಾತವಾದ 25ನೆಯ ವರ್ಷದಂದು ಆ ದೇವಾಲಯದಲ್ಲಿ ಸ್ಮಾರಕ ಪ್ರಾರ್ಥನಾಸಭೆ ನಡೆಯಿತು. ಜಪಾನಿನ ಹಲವರು ಪ್ರಮುಖರೂ ವಿದೇಶಾಂಗ ಇಲಾಖೆಯ ಇಬ್ಬರು ಪ್ರತಿನಿಧಿಗಳೂ ಭಾಗವಹಿಸಿದ್ದರು.

ಸಾಹಸವೇ ಮನುಷ್ಯ ರೂಪತಾಳಿ ಬಂದಂತಿದ್ದ ಸುಭಾಷ್, ಭಾರತದ ಯುವಕರ ಕಣ್ಮಣಿಯಾಗಿದರು. ಮಹಾ ತ್ಯಾಗಿ. ಧೀರ ಸುಭಾಷರ ಬಳಿ ಸ್ವಂತದೆನ್ನುವುದು ಸುಳಿಯುವಂತಿರಲಿಲ್ಲ. ದೇಶಕ್ಕಾಗಿ ಪ್ರಾಣತ್ತ ಅವರು ಭಾರತದ ಸ್ವಾತಂತ್ರ್ಯ ಸಂಗ್ರಾಮ ಧುರೀಣರಲ್ಲೊಬ್ಬರು.

ಜರ್ಮನಿಯಲ್ಲಿದ್ದಾಗ ಅವರು ಜರ್ಮನ್ ಮಹಿಳೆಯೊಬ್ಬರನ್ನು ವಿವಾಹವಾದರು. ಅವರಿಬ್ಬರ ಪುತ್ರಿ ಅನಿತಾ ಬೋಸ್.

ಸುಭಾಷರನ್ನು ಭಾರತದಲ್ಲಿ 'ನೇತಾಜಿ' ಎಂದು ಪ್ರೀತಿ ಗೌರವಗಳಿಂದ ಕರೆಯುತ್ತಾರೆ.

ವಿವರ : ವಿಷಯ ಸಂಪುಟ

## ಸುಯೆಜ್ ಕಾಲುವೆ

ಪ್ರಪಂಚದ ಪ್ರಖ್ಯಾತ ಕಾಲುವೆಗಳಲ್ಲಿ ಸುಯೆಜ್ ಕಾಲುವೆ ಒಂದು. ಭೂಮಧ್ಯ ಸಮುದ್ರ ಮತ್ತು ಕೆಂಪು ಸಮುದ್ರಗಳನ್ನು ಜೋಡಿಸುವ ಅದ್ಭುತ ಕಾರ್ಯವನ್ನು ಈ ಕಾಲುವೆ ಸಾಧಿಸಿದೆ.

ಸುಯೆಜ್ ಕಾಲುವೆ ಈಜಿಪ್ಟಿನ ಜನತೆಯ ಬಹು ದಿನಗಳ ಕನಸು. ಕ್ರಿ. ಪೂ. 20ನೆಯ ಶತಮಾನದ ಆದಿಯಲ್ಲಿಯೇ ನೈಲ್ ನದಿಯಿಂದ ಕೆಂಪು ಸಮುದ್ರಕ್ಕೆ ಒಂದು ಕಾಲುವೆಯನ್ನು ಈಜಿಪ್ಟಿನ ರಾಜರು ತೋಡಿಸಿದ್ದರು. ಆದರೆ ಅದು ಬೇಗನೆ ಕುಸಿದು ಹೋಯಿತು. ಹದಿನೆಂಟನೆಯ ಶತಮಾನದಲ್ಲಿ ನೆಪೋಲಿಯನ್ ಬೋನಪಾರ್ಟ್ ಈಜಿಪ್ಟಿನಲ್ಲಿದ್ದಾಗ ಕೆಂಪು ಸಮುದ್ರ ಮತ್ತು ಭೂಮಧ್ಯ ಸಮುದ್ರಗಳನ್ನು ಸೇರಿಸುವ ಕಾಲುವೆಯೊಂದರ ಹಂಚಿಕೆಯನ್ನು ಮುಂದಿಟ್ಟ. ಆಗ ಈಜಿಪ್ಟಿನ ಜನತೆಯಲ್ಲಿ ಕೆಂಪು ಸಮುದ್ರ ಭೂಮಧ್ಯ ಸಮುದ್ರಕ್ಕಿಂತ ಎತ್ತರದಲ್ಲಿದೆ ಎಂಬ ಭಾವನೆಯಿತ್ತು. ಇವೆರಡು ಸಮುದ್ರಗಳನ್ನು ಸೇರಿಸುವಾಗ ಎತ್ತರದಲ್ಲಿರುವ ಕೆಂಪು ಸಮುದ್ರದ ನೀರು ಪ್ರವಾಹದಂತೆ ನುಗ್ಗೀತೆಂಬ ಭಯದಿಂದ ಆ ಯೋಜನೆಯನ್ನು ಕೈಬಿಟ್ಟರು. 70 ವರ್ಷಗಳ ಅನಂತರ ಫರ್ಡಿನಾಂಡ್ ಡಿ ಲೆಸೆಪ್ಸ್ ಎಂಬ ಫ್ರೆಂಚ್ ಇಂಜಿನಿಯರನೊಬ್ಬ ಈ ಕಾಲುವೆಯ ಯೋಜನೆಯನ್ನು ಆರಂಭಿಸಿದ. ಈಜಿಪ್ಟ್ ಸರಕಾರ ಅವನಿಗೆ ಬಂಡವಾಳದ ಷೇರುಗಳನ್ನು ಮಾರಲು ಅನುಕೂಲವಾಗುವಂತೆ ಒಂದು ಸಂಸ್ಥೆಯನ್ನು ಸ್ಥಾಪಿಸಲು ಅನುಮತಿ ಇತ್ತಿತು. ಸ್ವಲ್ಪಕಾಲ ಸಂಸ್ಥೆ ಕಷ್ಟಪಟ್ಟ ಮೇಲೆ, ಈಜಿಪ್ಟ್ ಸರಕಾರ ಮತ್ತು ಫ್ರಾನ್ಸಿನ ಖಾಸಗಿ ವ್ಯಾಪಾರಿಗಳು ಷೇರುಗಳನ್ನು ಕೊಂಡುಕೊಂಡರು.

1859 ಏಪ್ರಿಲ್ 25ರಂದು 172 ಕಿಲೊಮೀಟರು ಉದ್ದದ ಈ ಕಾಲುವೆಯ ನಿರ್ಮಾಣ ಆರಂಭವಾಯಿತು. ಕಾರ್ಯ ಮಧ್ಯದಲ್ಲಿ ಅನೇಕ ಅಡಚಣೆಗಳು ಬರುತ್ತಿದ್ದುವು. ಮರಳು ಭೂಮಿಯನ್ನು ಅಗೆಯುವುದು ಭಯಪಡುವಂಥ ಕೆಲಸ. ಕಾರ್ಮಿಕರಿಗೆ ಇಂಥ ದುಡಿಮೆಯ ಅನುಭವ ಇರಲಿಲ್ಲ; ಮರುಭೂಮಿಯಲ್ಲಿ ಕೆಲಸ ಮಾಡುತ್ತಿರುವ ಕೆಲಸಗಾರರಿಗೆ ಆಹಾರ ಪಾನೀಯಗಳ ಸೌಲಭ್ಯವನ್ನೊದಗಿಸುವುದು ಬಹಳ ಕಷ್ಟವಾಯಿತು. ಕಡೆಗೆ ನೈಲ್ ನದಿಯಿಂದ ಒಂದು ತಾತ್ಕಾಲಿಕ ಕಾಲುವೆಯನ್ನು ಮರುಭೂಮಿಯ ಒಳಪ್ರದೇಶದವರೆಗೂ ನಿರ್ಮಿಸಿ ಆ ಕಾಲುವೆಯ ಮೂಲಕ ಆಹಾರವನ್ನೊದಗಿಸಿದ. ಅನಂತರ ಅದನ್ನು ಸುಯೆಜ್ ಕಾಲುವೆಗೆ ಸಮಾನಾಂತರವಾಗಿ ಹರಿಯುವಂತೆ ಮಾಡಲಾಯಿತು.

1869 ನವೆಂಬರ್ 17ರಂದು 172 ಕಿಲೊಮೀಟರು ಉದ್ದದ ಕಾಲುವೆ ಸಿದ್ಧವಾಯಿತು. ಅಗಲ 54 ಮೀಟರು; ಪರಮಾವಧಿ ಆಳ 8 ಮೀಟರು. ಎರಡು ಸಮುದ್ರಗಳೂ ಒಂದೇ ಎತ್ತರದಲ್ಲಿರುವುದರಿಂದ, ನೀರಿಗೆ ಯಾವ ತಡೆಯ ಅವಶ್ಯತೆಯೂ ಇರಲಿಲ್ಲ. ಸಂಚರಿಸುವ ಹಡಗುಗಳ ಅನುಕೂಲಕ್ಕಾಗಿ ಉತ್ತರದ ತುದಿಯಲ್ಲಿ ಸೈಯದ್ ಮತ್ತು ದಕ್ಷಿಣ ತುದಿಯಲ್ಲಿ ಸುಯೆಜ್ ಬಂದರುಗಳು ನಿರ್ಮಿತವಾದುವು.

ನಿರ್ಮಾಣವಾದ ದಿನದಿಂದ ಕಾಲುವೆ ಅನೇಕ ಬದಲಾವಣೆಗಳನ್ನು ಕಂಡಿದೆ. ಈಗ ಅದರ ಪರಮಾವಧಿ ಆಳ 14 ಮೀಟರು. ಅಗಲ 153 ಮೀಟರುಗಳಿಗಿಂತಲೂ ಹೆಚ್ಚು.

ನಿರ್ಮಾಣವಾದ ದಿನದಿಂದ ಸುಯೆಜ್ ಕಾಲುವೆ ಬಹಳ ಉಪಯುಕ್ತವೆನಿಸಿದೆ. ಹಡಗುಗಳು ಕಾಲುವೆಯಲ್ಲಿ ಪ್ರಯಾಣ ಮಾಡುವುದಕ್ಕಾಗಿ



ಐಕ್ಯ ಅರಬ್ ಗಣರಾಜ್ಯದ ಅಧೀನದಲ್ಲಿರುವ ಸುಯೆಜ್ ಕಾಲುವೆ

ಹಣ ತೆರಲು ಹಿಂಜರಿಯುವುದಿಲ್ಲ. ಏಕೆಂದರೆ ಈ ಕಾಲುವೆಯ ಮೂಲಕ ಪ್ರಯಾಣ ಮಾಡುವುದರಿಂದ ದೇಶಾಂತರಯಾನಕ್ಕೆ ತಗಲುವ ಕಾಲವೂ ಕಡಿಮೆ, ವೆಚ್ಚವೂ ಕಡಿಮೆ. ಹಿಂದೆ ಲಂಡನಿನಿಂದ ಮುಂಬಯಿಗೆ ಬರಬೇಕಾದರೆ ಆಫ್ರಿಕವನ್ನು ಬಳಸಿ 17,699 ಕಿಲೊಮೀಟರು ಪ್ರಯಾಣ ಮಾಡಬೇಕಾಗಿತ್ತು. ಸುಯೆಜ್ ಮೂಲಕ ಆ ದೂರ 12,872 ಕಿಲೊಮೀಟರು ಮಾತ್ರ.

ಕಾಲ ಕಳೆದಂತೆ ಸುಯೆಜ್ ಕಾಲುವೆಯ ಮಹತ್ವ ಎಲ್ಲ ದೇಶಗಳಿಗೂ ಅರಿವಾಯಿತು. ಈಜಿಪ್ಟಿನಿಂದ ಷೇರುಗಳನ್ನು ಕೊಳ್ಳಲು ಬ್ರಿಟನ್ ಧಾವಿಸಿತು.

1948ರವರೆಗೆ ಎಲ್ಲ ದೇಶದವರೂ ಕಾಲುವೆಯನ್ನು ನಿರಾತಂಕವಾಗಿ ಉಪಯೋಗಿಸುತ್ತಿದ್ದರು. ಆದರೆ 1948ರಲ್ಲಿ ಇಸ್ರೇಲ್ ಮತ್ತು ಈಜಿಪ್ಟ್‌ಗಳ ನಡುವೆ ವಿರಸ ಮೂಡಿತು. ಇಸ್ರೇಲಿ ಹಡಗುಗಳು ಕಾಲುವೆಯ ಮೂಲಕ ಪ್ರಯಾಣ ಮಾಡುವುದನ್ನು ಈಜಿಪ್ಟ್ ಸರಕಾರ ನಿಷೇಧಿಸಿತು.

1956ರ ಜುಲೈ ತಿಂಗಳಿನಲ್ಲಿ ಐಕ್ಯ ಅರಬ್ ಗಣರಾಜ್ಯದ ಅಧ್ಯಕ್ಷರು ಕಾಲುವೆಯನ್ನು ರಾಷ್ಟ್ರೀಕರಿಸಿದರು. ಸುಯೆಜ್ ಕಾಲುವೆಯ ಆಡಳಿತ ನಿರ್ವಹಣಾ ಸಂಸ್ಥೆಯೊಂದು ರಚಿತವಾಯಿತು. 1963ರ ವೇಳೆಗೆ ಹಿಂದಿನ ಷೇರುದಾರರಿಗೆಲ್ಲ ಹಣವನ್ನು ಹಿಂದಕ್ಕೆ ನೀಡಿದರು. ಅಲ್ಲಿಂದ ಮುಂದೆ ಸುಯೆಜ್ ಕಾಲುವೆಯ ಸಂಪೂರ್ಣ ಅಧಿಕಾರ ಗಣರಾಜ್ಯಕ್ಕೆ ಸೇರಿತು.

1967ರ ಜೂನ್‌ನಲ್ಲಿ ಇಸ್ರೇಲ್ ಮತ್ತು ಅರಬ್ ಗಣರಾಜ್ಯಗಳ ನಡುವೆ ಯುದ್ಧ ನಡೆಯಿತು. ಸುಯೆಜ್ ಕಾಲುವೆಯಲ್ಲಿ ಆಗ ಸಾಗಾಣಿಕೆ ನಡೆಸುತ್ತಿದ್ದ ಕೆಲವು ಹಡಗುಗಳು ಮುಳುಗಿಹೋಗಿ ಕಾಲುವೆಯ ದಾರಿ ಮುಚ್ಚಿಹೋದದ್ದರಿಂದ ನೌಕಾಯಾನ ಕಷ್ಟವಾಯಿತು.

## ಸ್ಪುಟ್ನಿಕ್

ರಷ್ಯನ್ ಭಾಷೆಯ ಪದ ಸ್ಪುಟ್ನಿಕ್. ಇದರ ಅರ್ಥ 'ಸಹಯಾತ್ರಿ'. ಪ್ರಪಂಚದ ಮೊದಲ ಮಾನವನಿರ್ಮಿತ ಉಪಗ್ರಹವನ್ನು 1957ರ ಅಕ್ಟೋಬರ್ 4ರಂದು ರಷ್ಯನರು ಆಕಾಶಕ್ಕೆ ಹಾರಿಸಿದರು. [illegible]

ತಿಂಗಳ ಕಾಲ ಭೂಮಿಯ ಪ್ರದಕ್ಷಿಣೆ ಮಾಡಿತು. ಅನಂತರ ಪೃಥ್ವಿಯ ಗುರುತ್ವಾಕರ್ಷಣೆಯ ಕಾರಣದಿಂದ ಮರಳಿದಾಗ ವಾತಾವರಣದಲ್ಲಿ ತೀವ್ರ ಘರ್ಷಣೆಗೊಳಗಾಗಿ ಈ ಉಪಗ್ರಹ ಉರಿದುಹೋಯಿತು. ಇದು ಗಗನ ಯಾತ್ರೆಯ ಚರಿತ್ರೆಯ ನಾಂದಿ.

ಅಮೆರಿಕದ ಸಂಯುಕ್ತ ಸಂಸ್ಥಾನ ತನ್ನ ಮೊದಲ ಕೃತಕ ಉಪಗ್ರಹವನ್ನು 1958ರಲ್ಲಿ ಮೇಲಕ್ಕೆ ಕಳುಹಿಸಿತು. ಇದರ ಹೆಸರು "ವ್ಯಾನ್‌ಗಾರ್ಡ್". ಇದು ಇನ್ನೂ ಅನೇಕ ಶತಕಗಳ ಕಾಲ ಭೂಮಿಯನ್ನು ಸುತ್ತುತ್ತಲೇ ಇರುತ್ತದೆ.

ಈ ಎರಡು ಕೃತಕ ಉಪಗ್ರಹಗಳಲ್ಲಿ ಅಳತೆಮಾಡುವ ಸಾಧನಗಳಿದ್ದುವು. ಅವುಗಳಲ್ಲಿ ರೇಡಿಯೊ ಪ್ರೇಷಕಗಳ (ನಿಸ್ತಂತು ತರಂಗಗಳಲ್ಲಿ ಸುದ್ದಿ ಕಳುಹಿಸುವ ಸಲಕರಣೆಗಳು) ಜೋಡಣೆ ಇತ್ತು. ಭೂಮಿಗೆ ನೂತನ ವರದಿಗಳನ್ನು ಅವು ಒಪ್ಪಿಸಿದುವು.

ಉಪಗ್ರಹ ಹೊಸ ಸಂಶೋಧನೆಯಲ್ಲ. ಗ್ರಹ ಎಂದರೆ ಒಂದು ನಕ್ಷತ್ರದ ಸುತ್ತಲೂ ಸುತ್ತುವ ಆಕಾಶಕಾಯ. ಸೂರ್ಯನೂ ಒಂದು ನಕ್ಷತ್ರವೆ. ಉಪಗ್ರಹವೆಂದರೆ ಗ್ರಹವನ್ನು ಸುತ್ತುವ ಆಕಾಶಕಾಯ. ಹೀಗೆ ಸೌರವ್ಯೂಹವೊಂದರಲ್ಲೇ ಮೂವತ್ತೊಂದು ಉಪಗ್ರಹಗಳನ್ನು ಗುರುತಿಸಲಾಗಿದೆ. ಇವುಗಳ ಜೊತೆಗೆ ಮಾನವನಿರ್ಮಿತ ಉಪಗ್ರಹಗಳು ಅನೇಕವಾಗಿ ಆಕಾಶದಲ್ಲಿ ಸುತ್ತುತ್ತಿವೆ. ಈ ಕೃತಕ ಉಪಗ್ರಹಗಳು ಮೊದಲಿಗೆ ಭೂಮಿಯ ಅಯಾನುಗೋಲವನ್ನು ಕೂಡ ದಾಟಿ ಹೋಗಿರಲಿಲ್ಲ. ಆದರೆ ತಮ್ಮ ಮಟ್ಟದಲ್ಲಿ ಭೂಮಿಯ ಸುತ್ತ ಅನಿಲದ ಸೂಕ್ಷ್ಮ ಕಣಗಳು, ವಿಕಿರಣ ವ್ಯಾಪ್ತಿ ಇವೆಲ್ಲವುಗಳ ಬಗೆಗೆ ಈ ಉಪಗ್ರಹಗಳು ವರದಿ ಮಾಡಿದುವು. ಅನಂತರ ಕೃತಕ ಉಪಗ್ರಹಗಳು ಭೂಮಿಯನ್ನು ದಾಟಿ ಚಂದ್ರನ ಬಳಿಗೆ ಸಾಗಿದವು. ಕೆಲವು ಸೂರ್ಯನ ಸುತ್ತ ಪ್ರದಕ್ಷಿಣೆ ಮಾಡಿ ಅದರ ಗ್ರಹಗಳಾದುವು. ಶುಕ್ರ. ಮಂಗಳ. ಶನಿ. ಗುರು. ಹೀಗೆ ಸೌರವ್ಯೂಹದ ಹಲವಾರು ಗ್ರಹಗಳನ್ನು ಕುರಿತು ವರದಿಗಳು ಭೂಮಿಗೆ ತಲಪಿವೆ.

ಸ್ಪುಟ್ನಿಕ್‌ನ ಬಳಿಕ ತಾನು ಮೇಲಕ್ಕೆ ಕಳುಹಿಸಿದ ಇತರ ಉಪಗ್ರಹಗಳಿಗೆ ರಷ್ಯ ಕೊಟ್ಟ ಹೆಸರುಗಳು ಹೀಗಿವೆ: ವಾಸ್ಟಾಕ್, ವಾಸ್ಕಾಡ್, ಕಾಸ್‌ಮಾಸ್. ಲ್ಯೂನಿಕ್, ಜಾಂಡ್, ಎಲೆಕ್ಟ್ರಾನ್. ಅಮೆರಿಕದ ಸಂಯುಕ್ತ ಸಂಸ್ಥಾನ ಕಳುಹಿಸಿದ ಉಪಗ್ರಹಗಳು ಎಕ್ಸ್‌ಪ್ಲೋರರ್, ವ್ಯಾನ್‌ಗಾರ್ಡ್. ಪಯೋನೀರ್. ಟೈರೋಸ್. ಡಿಸ್ಕವರರ್ ಮುಂತಾದ ಹೆಸರಿನವು.

ವಿಜ್ಞಾನದ ಮೂಲಭೂತ ಸಂಶೋಧನೆಗಳಿಗೆ ಕೃತಕ ಉಪಗ್ರಹಗಳು ಸಹಾಯ ಮಾಡುತ್ತವೆ. ಹವೆಯ ಬಗೆಗೆ ಇವು ಮಾಹಿತಿಯೊದಗಿಸಬಲ್ಲುವು. ಕೆಲವು ರೇಡಿಯೊ ಮತ್ತು ದೂರದರ್ಶನ ಸಂಪರ್ಕಗಳನ್ನು ಸಾಧಿಸಬಲ್ಲುವು. ಭೂಪಟ ನಿರ್ಮಾಣದಲ್ಲಿ, ನೌಕಾಯಾನದಲ್ಲಿ ಕೃತಕ ಉಪಗ್ರಹಗಳು ಬಹು ಉಪಯೋಗಕಾರಿ. ಮನುಷ್ಯನನ್ನು ಕೂಡಿಸಿ ಉಪಗ್ರಹಗಳನ್ನು ಕಳುಹಿಸಿದ್ದು, ಮಾನವ ದೇಹ ಅಂಥ ಪರಿಸರದಲ್ಲಿ ಹೇಗೆ ವರ್ತಿಸುತ್ತದೆ ಮತ್ತು ಮುಂದಿನ ಆಕಾಶಯಾನಕ್ಕೆ ಹೇಗೆ ವ್ಯವಸ್ಥೆ ಮಾಡಬೇಕು ಎಂಬುದನ್ನು ನಿರ್ಧರಿಸುವುದಕ್ಕಾಗಿ. ಉಪಗ್ರಹಗಳಿಂದ ಸಾಧಿಸುವ ಈ ಸಂಪರ್ಕ ವಿಧಾನ ಹೀಗಿದೆ: ಉಪಗ್ರಹಗಳಲ್ಲಿ ಈ ಮೊದಲೇ ತಿಳಿಸಿದಂತೆ ರೇಡಿಯೊ ಪ್ರೇಷಕಗಳಿರುತ್ತವೆ. ಇವು ಉಪಗ್ರಹದಲ್ಲಿನ ವೈಜ್ಞಾನಿಕ ಸಂಕೇತಗಳು ಸಂಗ್ರಹಿಸಿದ ಮಾಹಿತಿಯನ್ನೇ ರೇಡಿಯೊ ಸಂಕೇತಗಳಂತೆ ಭೂಮಿಗೆ ಕಳುಹಿಸುತ್ತವೆ. ಇಂಥ ಸಂಕೇತಗಳನ್ನು ಗ್ರಹಿಸುವ ನಿಲ್ದಾಣಗಳು ಅಲ್ಲಲ್ಲಿ ಭೂಮಿಯ ಆದ್ಯಂತ ಹರಡಿವೆ. ಇವಕ್ಕೆ ತಲಪುವ ಸಂಕೇತಗಳಿಂದ ವಿಜ್ಞಾನಿಗಳು ಮತ್ತಿತರರು ತಮಗೆ ಅಗತ್ಯವಿರುವ ವಿಷಯಗಳನ್ನು ಸಂಗ್ರಹಿಸುತ್ತಾರೆ. ಇಂಥ ಭೂ ನಿಲ್ದಾಣಗಳು ಉಪಗ್ರಹಗಳ ಪಥಗಳನ್ನು ಸರಿಪಡಿಸುವ ಅಥವಾ ಬದಲಾಯಿಸುವ ಇಲ್ಲವೆ ಭೂಮಿಗೆ ಹಿಂದಿರುಗುವ ಆದೇಶಗಳನ್ನು ಉಪಗ್ರಹಗಳಿಗೆ ನೀಡಬಲ್ಲುವು. ಭಾರತದಲ್ಲಿ ಇಂಥ ಭೂ ನಿಲ್ದಾಣ ಅಹಮದಾಬಾದಿನಲ್ಲಿದೆ. ಇದಲ್ಲದೆ ಪೂನಾದಿಂದ ಇಪ್ಪತ್ತನಾಲ್ಕು ಕಿಲೊಮಿಟರು ದೂರವಿರುವ ಅರ್ವಿ ಎಂಬಲ್ಲಿ ವಾಣಿಜ್ಯ ಸಂಪರ್ಕ ಭೂ ನಿಲ್ದಾಣವನ್ನು ಕಟ್ಟಲಾಗುತ್ತಿದೆ.

ಕೃತಕ ಉಪಗ್ರಹಗಳ ಗಾತ್ರ ಒಂದು ಪುಟ್ಟ ಪೊಟ್ಟಣದಿಂದ ಹಿಡಿದು ಮೂವತ್ತು ಮೀಟರ್ ವ್ಯಾಸವಿರುವ ಆಕಾಶಬುಟ್ಟಿಯವರೆಗೆ ಇರುತ್ತದೆ. ಹಲವು ಕಿಲೊಗಳ ತೂಕ ಇಲ್ಲವೆ ಹಲವಾರು ಮೆಟ್ರಿಕ್ ಟನ್‌ಗಳ ತೂಕ. ಚೆಂಡು, ಪೆಟ್ಟಿಗೆ, ಡಬ್ಬ ಹೀಗೆ ನಾನಾ ವಿಧದ ಆಕಾರಗಳ ಉಪಗ್ರಹಗಳನ್ನು ಮಾಡುತ್ತಾರೆ. ಅವುಗಳ ಕಾರ್ಯನಿರ್ವಹಣೆಯ ಅನುಕೂಲವನ್ನು ಅನುಸರಿಸಿ ಆಕಾರ.

ಭೂಮಿಯನ್ನು ಉಪಗ್ರಹ ಬಿಡುವಾಗ ಅದರ ವೇಗ ಗಂಟೆಗೆ 28,962 ಕಿಲೊಮಿಟರು. ಅದು ಭೂಮಿಯಿಂದ ಎಷ್ಟು ದೂರದಲ್ಲಿಯಾದರೂ ಸುತ್ತುತ್ತಿರುವಂತೆ ನಿರ್ಧರಿಸಿರಬಹುದು. 177 ಕಿಲೊಮಿಟರು ದೂರದಲ್ಲಿರಬಹುದು ಅಥವಾ 35,881 ಕಿಲೊಮಿಟರು ದೂರದಲ್ಲಿಯೂ ಸುತ್ತುತ್ತಿರಬಹುದು. ಭೂಮಿಯಿಂದ ಅತಿ ದೂರವಿರುವ ಕೃತಕ ಉಪಗ್ರಹದ ವೇಗ ಸಮೀಪದಲ್ಲಿ ಸುತ್ತುವ ಕೃತಕ ಉಪಗ್ರಹದ ವೇಗಕ್ಕಿಂತ ಕಡಮೆ. ಏಕೆಂದರೆ ಸಮೀಪದಲ್ಲಿರುವ ಉಪಗ್ರಹ ಭೂಮಿಯ ಗುರುತ್ವಾಕರ್ಷಣೆಯನ್ನು ಗೆಲ್ಲಬೇಕು. ಕೃತಕ ಉಪಗ್ರಹಗಳಿಗೆ ನೂರಾರು ವರ್ಷಗಳವರೆಗೆ ಸತತವಾಗಿ ಚಲನಶಕ್ತಿಯೊದಗಿಸುವುದು ಹೇಗೆ? ಇವುಗಳ ಚಲನೆಗೆ ವಿದ್ಯುಚ್ಛಕ್ತಿ ಬೇಕು. ಈ ವಿದ್ಯುತ್ತನ್ನು ತನ್ನಲ್ಲಿಯೇ ಉತ್ಪಾದಿಸುವಂತೆ ಕೆಲವು ಉಪಗ್ರಹಗಳನ್ನು ರಚಿಸಿರುತ್ತಾರೆ. ಇವು ತಮ್ಮ ಹೊರಮೈಮೇಲೆ ಸಾರಕೋಶವನ್ನು ಹೊತ್ತು ತಿರುಗುತ್ತಿರುತ್ತವೆ. ಸಾರಕೋಶಗಳು ಸೂರ್ಯತೇಜಸ್ಸನ್ನು ಬಳಸಿ ವಿದ್ಯುಚ್ಛಕ್ತಿಯನ್ನು ಉತ್ಪಾದಿಸುತ್ತವೆ. ಈ ವಿದ್ಯುಚ್ಛಕ್ತಿ ಉಪಗ್ರಹದ ವಿದ್ಯುತ್ಕೋಶವನ್ನು ಅವಶ್ಯಬಿದ್ದಾಗ ಪುನರುದ್ದೀಪನಗೊಳಿಸುತ್ತದೆ. ವಿಕಿರಣ ಮೂಲವಸ್ತುಗಳು ಹೊರಚೆಲ್ಲುವ ಶಾಖವನ್ನು ವಿದ್ಯುಚ್ಛಕ್ತಿಯಾಗಿ ಮಾರ್ಪಡಿಸುವುದು ಮತ್ತೊಂದು ವಿಧ. ಕೆಲವು ರಾಸಾಯನಿಕಗಳನ್ನು ಉಪಯೋಗಿಸಿ ವಿದ್ಯುಚ್ಛಕ್ತಿ ತಯಾರಿಸುವ ಕೃತಕ ಉಪಗ್ರಹಗಳೂ ಇವೆ. ಈ ಕೃತಕ ಉಪಗ್ರಹಗಳಿಂದ ಸೂರ್ಯ ಮತ್ತು ನಕ್ಷತ್ರಗಳ ಬಗೆಗೂ ವಿಜ್ಞಾನಿಗಳು ವಿಷಯ ಸಂಗ್ರಹಿಸುತ್ತಾರೆ. ಮಾರಕಾಸ್ತ್ರಗಳೇನಾದರೂ ಭೂಮಿಯಿಂದ ಉಡಾಯಿಸಲ್ಪಟ್ಟರೆ ಅವುಗಳನ್ನು ಗುರುತಿಸುವುದಕ್ಕೆಂದೇ ಪ್ರತ್ಯೇಕ ಉಪಗ್ರಹಗಳಿರುತ್ತವೆ.

ಉಪಗ್ರಹಗಳನ್ನು ಸಾಧಾರಣವಾಗಿ ಅಲ್ಯೂಮಿನಿಯಂ ಹಾಗೂ ಟಿಟೇನಿಯಂಗಳಿಂದ ಮಾಡಿರುತ್ತಾರೆ. ಕ್ಷಿಪಣಿಗಳ ಸಹಾಯದಿಂದ ಅವುಗಳನ್ನು ಮೇಲೆ ಹಾರಿಸುತ್ತಾರೆ. ಇವು ಭೂಮಿಗೆ ಸುರಕ್ಷಿತವಾಗಿ ಹಿಂದಿರುಗಬೇಕಾದ ಪಕ್ಷದಲ್ಲಿ ಮಾತ್ರ ಶಾಖನಿರೋಧಕ ಲೋಹಗಳಾದ ನಿಕಲ್, ಕ್ರೋಮಿಯಂ, ಮಾಲಿಬ್ಡಿನಮ್ ಮತ್ತು ಕಬ್ಬಿಣದ ಮಿಶ್ರಲೋಹಗಳಿಂದ ಮಾಡಿದ ಉಪಗ್ರಹಗಳನ್ನು ಕಳುಹಿಸುತ್ತಾರೆ.

ಕೃತಕ ಉಪಗ್ರಹಗಳು ಗಗನಯಾನಕ್ಕೆ ಸಲ್ಲಿಸಿದ ಮತ್ತು ಸಲ್ಲಿಸುತ್ತಿರುವ ಸೇವೆ ಎಂದಿಗೂ ಸ್ಮರಣೀಯ.

ನೋಡಿ : ವ್ಯೋಮಯಾತ್ರೆ

## ಸೆಂಟೊ

'ಸೆಂಟೊ' ಎಂಬುದು ಸೆಂಟ್ರಲ್ ಟ್ರೀಟಿ ಆರ್ಗನೈಜೇಷನ್ (ಕೇಂದ್ರ ಒಪ್ಪಂದ ಸಂಘಟನೆ) ಎಂಬ ಒಂದು ರಕ್ಷಣಾ ಒಪ್ಪಂದ ಕೂಟ. ಮಧ್ಯ ಪ್ರಾಚ್ಯ ದೇಶಗಳ ಹಿತಗಣನೆಯುಳ್ಳ ದೇಶಗಳು ಈ ಒಪ್ಪಂದಕ್ಕೆ ಒಳಪಟ್ಟಿವೆ. ಇರಾನ್, ಪಾಕಿಸ್ತಾನ, ತುರ್ಕಿ ಹಾಗೂ ಬ್ರಿಟನ್ ಸದಸ್ಯರಾಷ್ಟ್ರಗಳು. ಅಮೆರಿಕದ ಸಂಯುಕ್ತ ಸಂಸ್ಥಾನ ಸದಸ್ಯರಾಷ್ಟ್ರವಲ್ಲದಿದ್ದರೂ ಅವು ಗಳೊಡನೆ ಉಭಯ ಸಂರಕ್ಷಣಾ ಒಪ್ಪಂದಗಳನ್ನು ಮಾಡಿಕೊಂಡಿದೆ.

ಸೆಂಟೊ ಮಿಲಿಟರಿ ಸ್ವರೂಪದ್ದಾದರೂ ತನ್ನ ಸದಸ್ಯ ರಾಷ್ಟ್ರಗಳ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವುದಕ್ಕೂ ಯತ್ನಿಸುತ್ತದೆ. ಇದರಲ್ಲಿ ಸಚಿವರ ಸಮಿತಿ, ವೈಜ್ಞಾನಿಕ ಸಮಿತಿ, ಸೈನಿಕ ಯೋಜನಾವರ್ಗ ಮತ್ತು ಆರ್ಥಿಕ ಸೈನಿಕ ಸಮಿತಿಗಳು, ಹೀಗೆ ವಿವಿಧ ಸಮಿತಿಗಳು ವರ್ಷಕ್ಕೆ ಎರಡು ಬಾರಿ ಸಭೆ ಸೇರುತ್ತವೆ.

ಈ ಒಪ್ಪಂದ 1955 ಫೆಬ್ರುವರಿ 24ರಂದು ಜಾರಿಗೆ ಬಂದಿತು. ತುರ್ಕಿ ಹಾಗೂ ಇರಾಕ್‌ಗಳು ಉಭಯ ರಕ್ಷಣಾ ಒಪ್ಪಂದಕ್ಕೆ ಬಾಗ್‌ದಾದಿನಲ್ಲಿ ಸಹಿ ಹಾಕಿದಾಗ ಇದನ್ನು ಬಾಗ್‌ದಾದ್ ಒಪ್ಪಂದ ಎನ್ನುತ್ತಿದ್ದರು. ಬ್ರಿಟನ್, ಪಾಕಿಸ್ತಾನ ಹಾಗೂ ಇರಾನ್‌ಗಳು ಇದಕ್ಕೆ ಸಹಿಹಾಕಿದುವು. ಆದರೆ 1958 ರಲ್ಲಿ ಇರಾಕಿನಲ್ಲಿ ನಡೆದ ಕ್ಷಿಪ್ರಕ್ರಾಂತಿಯ ಪರಿಣಾಮವಾಗಿ ಆ ರಾಷ್ಟ್ರ ಒಪ್ಪಂದದಿಂದ ಹೊರಬಿದ್ದಿತು. ಒಕ್ಕೂಟದ ಕೇಂದ್ರವನ್ನು ಬಾಗ್ ದಾದಿನಿಂದ ತುರ್ಕಿಯಲ್ಲಿನ ಅಂಕಾರಕ್ಕೆ ವರ್ಗಾಯಿಸಿದರು.

ನೇಟೊ (ಯೂರೋಪ್) ಮತ್ತು ಸಿಯಾಟೊ (ಆಗ್ನೇಯ ಏಷ್ಯ) ಇನ್ನೆರಡು ಮಿಲಿಟರಿ ಒಪ್ಪಂದಕೂಟಗಳು. ಈ ಒಪ್ಪಂದಗಳಿಗೆ ಒಳಗಾದ ದೇಶಗಳ ಮಧ್ಯೆ ಇರುವ ರಾಷ್ಟ್ರಗಳಿಗೆ ಸಂಬಂಧಿಸಿದ್ದು ಸೆಂಟೊ. ಮಧ್ಯೆ ಇರುವುದರಿಂದ ಸೆಂಟ್ರಲ್ ಟ್ರೀಟಿ ಆರ್ಗನೈಜೇಷನ್ – ಕೇಂದ್ರ ಒಪ್ಪಂದದ ಸಂಘಟನೆ – ಎಂದು ಇದನ್ನು ಕರೆಯಲಾಯಿತು.

ರಷ್ಯದೊಂದಿಗೆ ಗಡಿಯನ್ನು ಹೊಂದಿರುವ ತುರ್ಕಿ, ಇರಾನ್, ಪಾಕಿಸ್ತಾನ ಗಳು ರಕ್ಷಣೆಗಾಗಿ ಒಟ್ಟುಗೂಡಿದ್ದು ಈ ವ್ಯವಸ್ಥೆಯ ಜನನಕ್ಕೆ ಕಾರಣ ವಾಯಿತು.

ರಷ್ಯ ಮತ್ತು ಅರಬಿ ಗಣರಾಜ್ಯ ಸೆಂಟೊ ಒಪ್ಪಂದಕ್ಕೆ ಅನುಕೂಲ ವಾಗಿಲ್ಲ. ಮುಖ್ಯತಃ ಈ ಕೂಟ ತನ್ನ ವಿರುದ್ಧ ಎಂದು ರಷ್ಯದ ಆರೋಪ. ಅರಬರ ಐಕ್ಯ ಇದರಿಂದ ಮುರಿದುಹೋಗುತ್ತದೆಂದು ಐಕ್ಯ ಅರಬ್ ಗಣರಾಜ್ಯದ ಅಧ್ಯಕ್ಷ ನಾಸೆರರ ಭಾವನೆ.

ನೋಡಿ : ನೇಟೊ ; ಸಿಯಾಟೊ

## ಸೇವಾದಳ

ಮನೆಯಲ್ಲಿ ಒಂದು ಸಮಾರಂಭ ಆಗಬೇಕು ಎಂದರೆ ಕುಟುಂಬದ ಹತ್ತು ಮಂದಿಯ ಸಹಾಯಬೇಕು. ಆಗಬೇಕಾದ ಕೆಲಸಗಳು ನೂರು. ಎಲ್ಲ ಕೆಲಸಗಳೂ ಆಗಬೇಕು, ಕ್ರಮವಾಗಿ ಸರಿಯಾಗಿ ಆಗಬೇಕು. ಯಾರು ಯಾವ ಕೆಲಸ ಮಾಡುತ್ತಾರೆ ಎನ್ನುವುದು ಸ್ಪಷ್ಟವಾಗದಿದ್ದರೆ ಒಂದೇ ಕೆಲಸ ಇಬ್ಬರು ಮಾಡಲು ಹೋಗಿ ಕಾಲ ವ್ಯರ್ಥವಾಗುವುದು. ಒಂದು ಕೆಲಸ ಯಾರೂ ಮಾಡದೆ ಉಳಿಯುವುದು ಗೊಂದಲಕ್ಕೆ ಕಾರಣವಾಗುವುದು. ಎಂದರೆ ಕೆಲಸಗಳನ್ನು ಸಂತೋಷದಿಂದ ಒಪ್ಪಿ, ವ್ಯವಸ್ಥಿತವಾಗಿ ಮಾಡುವವರು ಬೇಕು. ಒಂದು ಕಾರ್ಯಕ್ರಮ ನಡೆಯಬೇಕಾದರೆ. ಆಹ್ವಾನಪತ್ರ ಅಚ್ಚಾಗಬೇಕು, ಕುರ್ಚಿ ಮೇಜು ಜಮಖಾನೆ ತರಬೇಕು, ಧ್ವನಿವರ್ಧಕ ತರಬೇಕು, ಬಂದವ ರನ್ನು ಸ್ವಾಗತಿಸಿ ಕೂಡಿಸುವವರಿರಬೇಕು. ಕೆಲವರು ಹಣವನ್ನು ಅಪೇಕ್ಷಿಸಿ ಇಂಥ ಕೆಲಸವನ್ನು ಮಾಡಲು ಮುಂದೆ ಬರುತ್ತಾರೆ. ಹಾಗಲ್ಲದೆ ಸಮಾಜದಲ್ಲಿ ಅಗತ್ಯಬಿದ್ದಾಗ ಸೇವೆ ಸಲ್ಲಿಸಲು ಸಿದ್ಧರಾಗಿ ಮುಂದೆ ಬರುವವರು ಸ್ವಯಂ ಸೇವಕರು. ಅವರು ಇದಕ್ಕೆ ಶಿಕ್ಷಣ ಪಡೆಯುತ್ತಾರೆ. ನಿಯಮಗಳನ್ನು ಪಾಲಿಸುತ್ತಾರೆ. ಅವರ ದಳ ಸೇವಾದಳ.

ಹಿಂದೂಸ್ಥಾನಿ ಸೇವಾದಳ ಭಾರತದಲ್ಲಿ ಪ್ರಸಿದ್ಧವಾದದ್ದು. ಇದು ಹುಟ್ಟಿದ್ದು 1923ರಲ್ಲಿ ನಾಗಪುರದ ಜೈಲಿನಲ್ಲಿ. ಭಾರತೀಯ ಸ್ವಾತಂತ್ರ್ಯ ಸಮರದಲ್ಲಿ ರಾಷ್ಟ್ರೀಯ ಚಳುವಳಿಯ ಸ್ವಯಂಸೇವಕರ ಒಂದು ವಿಭಾಗವಾಗಿ ಹಿಂದೂಸ್ಥಾನಿ ಸೇವಾದಳ ರೂಪುಗೊಂಡಿತು.

ಪ್ರತಿ ವರ್ಷದಂತೆ 1923ರ ಏಪ್ರಿಲ್ 13ರಂದು ನಾಗಪುರದಲ್ಲಿ ಕಾಂಗ್ರೆಸ್ ತಂಡ ಅಮೃತಸರದಲ್ಲಿ 1919ರಲ್ಲಿ ಪೋಲೀಸರು ನಡೆಸಿದ ಘೋರಕೃತ್ಯಗಳ ನೆನಪಿಗಾಗಿ ಮೆರವಣಿಗೆ ಹೊರಟಿತು. ಅನಂತರ ನಡೆದ ಸತ್ಯಾಗ್ರಹದಲ್ಲಿ ಹಲವರ ಬಂಧನವಾಯಿತು. ಇವರಲ್ಲಿ ಕೆಲವರು ಕ್ಷಮಾಪಣೆ ಬೇಡಿ ಬಿಡುಗಡೆ ಹೊಂದಿದರು. ಇದು ಕಾಂಗ್ರೆಸ್ ಮುಂದಾಳುಗಳನ್ನು ಯೋಚನೆಗೀಡು ಮಾಡಿತು. ಅಂಥವರಲ್ಲಿ ಕನ್ನಡನಾಡಿನ ಡಾ. ನಾ. ಸು. ಹರ್ಡೀಕರರು ಪ್ರಮುಖರಾಗಿದ್ದರು. ಸರಿಯಾದ ತರಬೇತಿ ಇದ್ದಿದ್ದರೆ ಈ ಸ್ವಯಂ ಸೇವಕರು ಹಿಮ್ಮೆಟ್ಟುತ್ತಿರಲಿಲ್ಲವೆಂದು ಅವರು ಮನಗಂಡು, ಕ್ರಮ ಮತ್ತು ಶಿಸ್ತು ಕಾಪಾಡುವ ಸಂಘಟನೆಯ ಸ್ಥಾಪನೆಗೆಂದು ಅಖಿಲ ಭಾರತ ಸ್ವಯಂಸೇವಕ ಸಮ್ಮೇಳನವೊಂದನ್ನು ಸೇರಿಸಿದರು. ದೇಶದಾದ್ಯಂತ ಇಂಥ ಸ್ವಯಂಸೇವಕರ ಸಂಘರಚನೆಯಲ್ಲಿ ಉದ್ಯುಕ್ತರಾಗಬೇಕೆಂದು ನಿರ್ಧರಿಸಿದರು. 1923 ಡಿಸೆಂಬರ್ 17ರಂದು ಆಂಧ್ರದ ಕಾಕಿನಾಡದಲ್ಲಿ ಜವಾಹರಲಾಲ ನೆಹರು ಅವರ ನೇತೃತ್ವದಲ್ಲಿ ಹಿಂದೂಸ್ಥಾನಿ ಸೇವಾದಳ ಸಂಘಟಿತವಾಯಿತು. ಆಗ ಅವರು "ಶಿಸ್ತು ನಮಗೆ ಅತ್ಯಗತ್ಯ, ಅದಿಲ್ಲದೆ ನಮಗೆ ಯಶವಿಲ್ಲ, ಶಿಸ್ತಿನ ಅಭಾವವೇ ನಮ್ಮ ಅನೇಕ ದುರ್ಬಲತೆ ಗಳಿಗೆ ಕಾರಣ", ಎಂದರು.

1923ರಿಂದ 1930ರ ವರೆಗೆ ಹಿಂದೂಸ್ಥಾನಿ ಸೇವಾದಳ ಹಲವು ಬಗೆಗಳಲ್ಲಿ ದೇಶ ಸೇವೆ ಮಾಡಿತು. ರಾಷ್ಟ್ರೀಯ ಕಾಂಗ್ರೆಸಿನ ಅಧಿವೇಶನಗಳಲ್ಲಿ ವಾಹನ ನಿಯಂತ್ರಣ ಸಭಿಕರ ಆಸನಗಳ ವ್ಯವಸ್ಥೆ, ಪಾಕಶಾಲೆ – ಪ್ರದರ್ಶನಾಲಯ ಮುಂತಾದುವನ್ನು ಶುಚಿಯಾಗಿಡುವುದು, ಈ ಎಲ್ಲ ಕೆಲಸಗಳನ್ನು ನಿರ್ವಹಿಸಿತು. ಗುಜರಾತಿನಲ್ಲಿ ಪ್ರವಾಹದಿಂದ ಹಾವಳಿಯಾದಾಗ ಜನರಿಗೆ ನೆರವಾಯಿತು. ಸುಮಾರು 805 ಕಿ.ಮೀ. ಉದ್ದದ ರಸ್ತೆ ನಿರ್ಮಿಸಿತು.

'ಸ್ವಯಂ ಸೇವಕ' ಪತ್ರಿಕೆ ಸೇವಾದಳದ ವಿಚಾರ, ಆದರ್ಶಗಳನ್ನು ಜನತೆಗೆ ಮುಟ್ಟಿಸಿತು. ಯುವಕ ಚಳುವಳಿ, ಇತರ ದೇಶಗಳ ಸ್ವಾತಂತ್ರ್ಯ ಸಮರ. ಭಾರತದಲ್ಲಿ ದೈಹಿಕ ತರಬೇತಿ ಈ ಎಲ್ಲ ವಿಷಯಗಳ ಬಗೆಗೂ ವಿಚಾರಪೂರ್ಣ ಲೇಖನಗಳನ್ನು ಆ ಪತ್ರಿಕೆ ಪ್ರಕಟಿಸುತ್ತಿದ್ದಿತು. 1925ರಲ್ಲಿ ಸೇವಾದಳವು ತನಗೆ ಈ ನಿರ್ದಿಷ್ಟ ಕಾರ್ಯಕ್ರಮವನ್ನು ರೂಪಿಸಿಕೊಂಡಿತು.

1. ಸ್ವರಾಜ್ಯವನ್ನು ಶಾಂತಿಯಿಂದ, ಕಾನೂನುಬದ್ಧವಾಗಿ ಸಾಧಿಸುವುದು. 2. ಅದುವರೆಗಿದ್ದ ಎಲ್ಲ ಸಂಘಗಳನ್ನೂ ಒಂದು ಕ್ರಮದಲ್ಲಿ ತಂದು ಹೊಸ ವಿಭಾಗಗಳನ್ನು ಅವಶ್ಯವೆನಿಸಿದರೆ ಆರಂಭಿಸುವುದು. 3. ಅನುಶಾಸನದಿಂದ ರಾಷ್ಟ್ರೀಯ ಸಾಮರ್ಥ್ಯವನ್ನು ವೃದ್ಧಿಗೊಳಿಸುವುದು.

ಹಿಂದೂಸ್ಥಾನಿ ಸೇವಾದಳ ಪ್ರತಿ ವರ್ಷವೂ ಒಂದೆಡೆ ಸಭೆ ಸೇರಿ ತನ್ನ ಕಾರ್ಯ ವಿಧಾನವನ್ನು ಚರ್ಚಿಸುತ್ತಿದ್ದಿತು. ಇದಕ್ಕೆ ಪದೋಪದಾನದ ಸಮಿತಿ ಇರಲಿಲ್ಲ. ಇದರಲ್ಲಿ ಸದಸ್ಯರು 18 ವರ್ಷಕ್ಕೆ ಮೇಲ್ಪಟ್ಟಿದ್ದರೆ ಕಾಂಗ್ರೆಸ್ಸಿನ ಸದಸ್ಯರೆಂದೇ ಗಣಿಸಲ್ಪಡುತ್ತಿದ್ದರು. 18ರಿಂದ ಕೆಳಗಿನ ಎಳೆಯ ಸಹಾಯಕರು ತಮ್ಮ ದೇಶಸೇವೆಗೆ ಕಂಕಣಬದ್ಧರಾಗಿ, ಕಾಂಗ್ರೆಸಿನ ಅಹಿಂಸಾ ತತ್ತ್ವವನ್ನು ಅನುಮೋದಿಸಬೇಕಾಗಿದ್ದಿತು. ಅವರೆಲ್ಲರೂ ಖಾದಿ ಧರಿಸುತ್ತಿದ್ದರು ಮತ್ತು ತಮ್ಮ ಹಿರಿಯಧಿಕಾರಿಗಳಿಗೆ ವಿಧೇಯತೆಯಿಂದ ನಡೆದುಕೊಳ್ಳಬೇಕೆಂಬ ಕಟ್ಟಿನಲ್ಲಿದ್ದರು. ಈ ಕಾಲದಲ್ಲಿ ಅನೇಕ ವ್ಯಾಯಾಮಶಾಲೆಗಳು ಸ್ಥಾಪಿಸಲ್ಪಟ್ಟುವು : ಇವುಗಳಲ್ಲಿ ಲಾಠಿ, ಕತ್ತಿಹಿಡಿಯುವುದು, ಲೇಜಿಮ್, ಸೂರ್ಯ ನಮಸ್ಕಾರ, ದಂಡೆ, ಬೈಠಕ್ ಮತ್ತು ಯೋಗಾಸನಗಳನ್ನು ಹೇಳಿಕೊಡುತ್ತಿದ್ದರು. ಆಣತಿಗಳು ಹಿಂದಿಯಲ್ಲಿರುತ್ತಿದ್ದುವು. ಈ ಕಸರತ್ತುಗಳ ಮುಖ್ಯ ಉದ್ದೇಶ ಕಾರ್ಯ ಚಳಕ ಹಾಗೂ ಶಿಸ್ತಿನ ಪರಿಪಾಲನೆ.

1925ರಲ್ಲಿ ಪ್ರಾರಂಭವಾದ ರಾಷ್ಟ್ರೀಯ ಸ್ವಯಂಸೇವಕ ಸಂಘ ಭಾರತ ಇಬ್ಭಾಗವಾದ ಕಾಲದಲ್ಲಿ ಪ್ರಸಿದ್ಧಿಗೆ ಬಂದಿತು.

ಬಾಲಚಮೂದಳ, ಗರ್ಲ್‌ಗೈಡ್ ಇವೂ ಸೇವಾದಳಗಳೇ.

ಪ್ರತಿ ದೇಶದಲ್ಲೂ ಸೇವಾದಳ ಅಗತ್ಯ. ಪ್ರಜಾಪ್ರಭುತ್ವದ ಬೆಳವಣಿಗೆ ಸೇವಾ ಮನೋಭಾವನೆಯನ್ನು ಬಹುಮಟ್ಟಿಗೆ ಅವಲಂಬಿಸಿದೆ. ಯಾವುದೇ ಕೆಲಸದಿಂದ ತನಗೆ ಬರುವ ಲಾಭವೇನು ಎಂದು ಲೆಕ್ಕ ಹಾಕುವವನಿಂದ ಸಾಮಾಜಿಕ ಕೆಲಸ ನಡೆಯಲಾರದು. ಪ್ರತಿಯೊಬ್ಬ ವ್ಯಕ್ತಿ ಸಮಾಜಕ್ಕೆ ಅಗಾಧವಾದ ಪ್ರಮಾಣದಲ್ಲಿ ಸೇವೆ ಸಲ್ಲಿಸುವುದು ಆಗದ ಮಾತು. ಆದರೆ ತಮ್ಮಿಂದಾದಷ್ಟರ ಮಟ್ಟಿಗೆ ಸೇವೆ ಸಲ್ಲಿಸುವ ಮನೋಭಾವ ಬೆಳೆಸಿಕೊಂಡರೆ ಒಂದು ಸಣ್ಣ ಉತ್ಸವ ಅಥವಾ ಜಾತ್ರೆಯಿಂದ ಹಿಡಿದು ಭೂಕಂಪ ಪ್ರವಾಹಗಳಂಥ ಅನಾಹುತಗಳವರೆಗೆ ಹಲವು ಸನ್ನಿವೇಶಗಳಲ್ಲಿ ಸಮಾಜಕ್ಕೆ ನೆರವಾಗಹುದು. ಸಾಮಾನ್ಯವಾಗಿ ಪ್ರತಿ ಸೇವಾದಳವೂ ಅಂಗಸಾಧನೆಯನ್ನು ವ್ಯವಸ್ಥೆಗೊಳಿಸುತ್ತದೆ. ಹೀಗೆ ಸೇವಾದಳಗಳಿಂದ ಸಮಾಜಕ್ಕೂ ನೆರವು, ವ್ಯಕ್ತಿಗೂ ಉಪಯೋಗ.

## ಸ್ಪೇನ್

ಹೊಸ ದೇಶಗಳನ್ನು ಶೋಧಮಾಡಿದ ಕ್ರಿಸ್ಟಫರ್ ಕೊಲಂಬಸನ ಹೆಸರು ಪ್ರಖ್ಯಾತವಾಗಿದೆ. ಆದನು ದೇಶಗಳ ಶೋಧಕ್ಕಾಗಿ ಜಲಪರ್ಯಟನ ಮಾಡಿದ್ದು ಯೂರೋಪ್ ಖಂಡದಲ್ಲಿರುವ ಸ್ಪೇನ್ ದೇಶದ ಪ್ರಜೆಯಾಗಿ. 711ರ ವರೆಗೂ ಇದ್ದ ಗಾಥ್ ಜನರನ್ನು ಆಫ್ರಿಕದಿಂದ ಬಂದ ಮುಸಲ್ಮಾನ ಮೂರ್ ಜನರು ಓಡಿಸಿ, ಸ್ಪೇನನ್ನು ಆಕ್ರಮಿಸಿದರು. ಸುಮಾರು ಏಳು ವರ್ಷಗಳಲ್ಲಿ ಇವರು ಇಡೀ ಸ್ಪೇನನ್ನು ವಶಪಡಿಸಿಕೊಂಡರು. ಇವರನ್ನು ಹೊಡೆದೋಡಿಸಲು ಸ್ಪೇನಿನ ಕ್ರೈಸ್ತರಿಗೆ ಸುಮಾರು 700 ವರ್ಷ ಬೇಕಾಯಿತು. 1492ರವರೆಗೂ ಮೂರರ ಕೊನೆಯ ಪ್ರಬಲ ಮನೆತನ ಕುಸಿಯಿತು. ಮುಂದೆ ಕ್ರಿಸ್ಟಫರ್ ಕೊಲಂಬಸ್ ಸ್ಪೇನಿಗಾಗಿ ಹೊಸದೊಂದು ಜಗತ್ತನ್ನೇ ಕಂಡುಹಿಡಿದ : ಅದೇ ಅಮೆರಿಕ.

ಕೊಲಂಬಸನನ್ನು ಹಿಂಬಾಲಿಸಿ ಹೋದ ಸ್ಪಾನಿಷ್ ಯೋಧರು ಹಾಗೂ ಧರ್ಮ ಗುರುಗಳು ಹೊಸ ಜಗತ್ತಿನ ಮೂರನೆಯ ಎರಡು ಭಾಗವನ್ನು ವಶಪಡಿಸಿಕೊಂಡು, ಜನರನ್ನು ಕ್ರೈಸ್ತಧರ್ಮಕ್ಕೆ ಪರಿವರ್ತಿಸಿದರು. ಮುಂದಿನ ನೂರು ವರ್ಷಗಳಲ್ಲಿ ಸ್ಪೇನ್ ಅತಿ ವಿಶಾಲವಾದ, ಸಂಪದ್ಭರಿತವಾದ ಸಾಮ್ರಾಜ್ಯವನ್ನು ಗಳಿಸಿತು. ಉತ್ತರದಲ್ಲಿನ ಕ್ಯಾಲಿಫೋರ್ನಿಯ ಹಾಗೂ ಫ್ಲಾರಿಡಾಗಳಿಂದ ದಕ್ಷಿಣದಲ್ಲಿ ಚಿಲಿ, ಶಾಂತಸಾಗರದ ಆಚೆ ಫಿಲಿಪೀನ್ಸ್ ದ್ವೀಪಗಳು, ಆಫ್ರಿಕದ ತೀರದಲ್ಲಿ ಕೆಲವು ಭಾಗಗಳು ಇಲ್ಲೆಲ್ಲ ಸ್ಪೇನಿನ ಧ್ವಜ ಹಾರಾಡಿತು. ಮೆಕ್ಸಿಕೊ ಹಾಗೂ ಪೆರುಗಳ ಗಣಿಗಳಿಂದ ಸ್ಪೇನಿನ ಖಜಾನೆಗೆ ಬೆಳ್ಳಿ ಬಂಗಾರಗಳ ಸುರಿಮಳೆಯಾಯಿತು. ಅದುವರೆಗೆ ಒಂದು ದೇಶ ಅಷ್ಟು ದೂರದಲ್ಲಿದ್ದ ಪ್ರದೇಶಗಳ ಮೇಲೆ ಪ್ರಭುತ್ವ ಸ್ಥಾಪಿಸಿ ಅಷ್ಟೊಂದು ಐಶ್ವರ್ಯವನ್ನು ಸಂಪಾದಿಸಿರಲಿಲ್ಲ.

ಆದರೆ ಸ್ಪೇನ್ ಎಷ್ಟು ಶೀಘ್ರವಾಗಿ ಏಳಿಗೆಹೊಂದಿತೊ ಅಷ್ಟೇ ಶೀಘ್ರವಾಗಿ ಕೆಳಗಿಳಿಯಿತು. ನೂರು ವರ್ಷಗಳಲ್ಲಿ ಬ್ರಿಟಿಷರು ಸ್ಪೇನಿನ ಬೆನ್ನು ಮುರಿದರು. 1643ರಲ್ಲಿ ಫ್ರೆಂಚರಿಂದಲೂ ಸ್ಪೇನ್ ಸೋಲನ್ನು ಅನುಭವಿಸಿತು.

1830ರ ಹೊತ್ತಿಗೆ ಸ್ಪೇನಿನ ಸಾಗರೋತ್ತರ ವಸಾಹತುಗಳು ಸ್ವತಂತ್ರವಾಗಿದ್ದುವು. ಕೊನೆಗೆ ಸ್ಪಾನಿಷ್–ಅಮೆರಿಕನ್ ಯುದ್ಧದಲ್ಲಿ ಅಮೆರಿಕ ಸ್ಪೇನಿನಿಂದ ತನ್ನ ಪ್ರದೇಶಗಳನ್ನು ಮರಳಿಪಡೆಯಿತು. 1873ರಿಂದ ಎರಡು ವರ್ಷಗಳ ಕಾಲ ಗಣರಾಜ್ಯವಾಗಿದ್ದು ಮತ್ತೆ 1931ರ ವರೆಗೆ ರಾಜಪ್ರಭುತ್ವವನ್ನು ಹೊಂದಿದ ಸ್ಪೇನ್ 1931ರಿಂದ ಗಣರಾಜ್ಯವಾಯಿತು.

ಅನೇಕ ಜನಾಂಗಗಳಿಗೆ ನೆಲೆಯಾದ ದೇಶ ಸ್ಪೇನ್. ಮೂರರು ಇದನ್ನು ಆಕ್ರಮಿಸುವ ಮುನ್ನ ಕಾರ್ಥೇಜಿನವರು, ರೋಮನರು, ಗಾಥರು ಒಬ್ಬರ ಅನಂತರ ಒಬ್ಬರು ಇಲ್ಲಿ ಆಳಿದರು. ಮಧ್ಯಯುಗದಲ್ಲಿ ಸ್ಪೇನ್ ಮೂರಿಷ್ ಜನರ ಸಂಸ್ಕೃತಿಯ ಕೇಂದ್ರವಾಯಿತು.

ಈ ಎಲ್ಲ ಜನಾಂಗಗಳೂ ಸ್ಪೇನಿನ ಮೇಲೆ ತಮ್ಮ ಪ್ರಭಾವ ಬೀರಿದುವು. ಸ್ಪ್ಯಾನಿಷ್ ಭಾಷೆಗೆ ಮೂಲ, ಪ್ರಾಚೀನ ರೋಮನರ ಲ್ಯಾಟಿನ್ ಭಾಷೆ. ಸ್ಪೇನಿನಲ್ಲಿ ಮೂರ್ ಜನ ಕಟ್ಟಿರುವ ಅರಮನೆಗಳು ಅತ್ಯಂತ ಸುಂದರವಾದ ಭವನಗಳು.

ಸ್ಪೇನಿನ ವಿಸ್ತೀರ್ಣ ಬಾಲಿಯರಿಕ್ ಹಾಗೂ ಕ್ಯಾನರಿ ದ್ವೀಪಗಳನ್ನೂ ಒಳಗೊಂಡು 5,03,061 ಚದರ ಕಿಲೊಮೀಟರು. ತೀರ ಪ್ರದೇಶ 2,253 ಕಿ. ಮೀ. ಸ್ಪೇನಿನ ಜನಜೀವನ ಯೂರೋಪಿನ ಉಳಿದ ಭಾಗಗಳ ಜನಜೀವನಕ್ಕಿಂತ ಭಿನ್ನ. ಬಹು ಎತ್ತರವಾದ ಪಿರನೀಸ್ ಪರ್ವತಗಳು ಸ್ಪೇನನ್ನು ಯೂರೋಪಿನ ಇತರ ಭಾಗಗಳಿಂದ ಪ್ರತ್ಯೇಕಿಸಿವೆ. 3,482 ಮೀಟರು ಎತ್ತರವಿರುವ ಮೂಲಾಥ್ಯಾನ್, 3,405 ಮೀಟರು ಎತ್ತರವಿರುವ ಮಾಲಾಡೆಟಾ, 3,406 ಮೀಟರು ಎತ್ತರವಿರುವ ಪಿಕೊಡಿ ಅನಾಟೊ ಇವು ಪ್ರಖ್ಯಾತ ಶಿಖರಗಳು. ಎಬ್ರೊ, ಗ್ವಾಡಲ್‌ಕ್ವಿವಿರ್, ಗ್ವಾಥೆ ಅನಾ, ಟೇಗಸ್, ಡ್ವಾರೊ ಇವು ಮುಖ್ಯವಾದ ನದಿಗಳು. ಬಾಲಿಯರಿಕ್ ಹಾಗೂ ಕ್ಯಾನರಿ ಇವು ಪ್ರಮುಖ ದ್ವೀಪಗಳು.

ಐಬೀರಿಯ ಪರ್ಯಾಯದ್ವೀಪದ ಬಹುಭಾಗವನ್ನು ಸ್ಪೇನ್ ಆವರಿಸಿದೆ. ಪೋರ್ಚುಗಲ್ ಇರುವುದೂ ಈ ಪರ್ಯಾಯದ್ವೀಪದಲ್ಲಿಯೇ. ಈ ಪರ್ಯಾಯ ದ್ವೀಪದ ದಕ್ಷಿಣದ ತುದಿ ಆಫ್ರಿಕದಿಂದ 39 ಕಿ. ಮೀ. ದೂರದಲ್ಲಿದೆ.

ಸ್ಪೇನಿನ ಮುಕ್ಕಾಲು ಭಾಗ ಮರಗಳಿಲ್ಲದ ಮಟ್ಟಸ ಪ್ರದೇಶ. ಸಮುದ್ರಮಟ್ಟದಿಂದ 305 ಮೀಟರಿನಿಂದ 915 ಮೀಟರ್ ಮೇಲಿದೆ. ಸುತ್ತಲೂ ಎತ್ತರವಾದ ಪರ್ವತ ಪ್ರದೇಶಗಳು, ಮಧ್ಯೆ ಮಧ್ಯೆ ಎತ್ತರವಾದ ಕಲ್ಲುಬೆಟ್ಟಗಳು. ಸ್ಪೇನಿನಲ್ಲಿ ಮೂರು ಪರ್ವತ ಸಾಲುಗಳಿವೆ. ಮೊದಲನೆಯದು ಉತ್ತ

ದಲ್ಲಿರುವ ಕ್ಯಾಂಟಬ್ರಿಯನ್ ಹಾಗೂ ಪಿರನೀಸ್ ಪರ್ವತಗಳು. ಎರಡನೆಯದು ಮಧ್ಯ ಸ್ಪೇನಿನಲ್ಲಿ ಪಶ್ಚಿಮದಿಂದ ಪೂರ್ವಕ್ಕಿರುವ ಪರ್ವತ ಸಾಲು. ಮೂರನೆಯದು ದಕ್ಷಿಣದಲ್ಲಿರುವ ಸಿಯೆರಾ ನಿವಾಡಾ. ಈ ಪರ್ವತಗಳು ಭೂಮಧ್ಯ ಸಮುದ್ರದೊಳಕ್ಕೆ ಹಬ್ಬಿಹೋಗಿ ಬೆಲ್ವೆರಿಕ್ ದ್ವೀಪಗಳಾಗಿವೆ.

ಸ್ಪೇನಿನ ಭೂಮಿ ಬಹಳ ಫಲವತ್ತಾದದ್ದು. ಇಲ್ಲಿ ಸಂಪದ್ಭರಿತವಾದ ಕಲ್ಲಿದ್ದಲು, ಕಬ್ಬಿಣ, ಪೊಟ್ಯಾಷ್ ಗಣಿಗಳಿವೆ. ಕ್ಯಾಲಿಫೋರ್ನಿಯದಲ್ಲಿ ಪಾದರಸದ ಗಣಿಗಳನ್ನು ಕಂಡುಹಿಡಿಯುವವರೆಗೂ ಸ್ಪೇನಿನ ಪಾದರಸದ ಗಣಿಗಳು ಪ್ರಪಂಚದಲ್ಲೇ ಅತ್ಯಂತ ಸಿರಿವಂತವೆಂದು ಹೆಸರುಗಳಿಸಿದ್ದುವು.

ಸ್ಪೇನಿನಲ್ಲಿರುವ ಕಾರ್ಕ್‌ಬಕ್ ಮರಗಳು ಜಗತ್‌ಪ್ರಸಿದ್ಧವಾಗಿವೆ. ಸ್ಪೇನ್ ಹಾಗೂ ಪೋರ್ಚುಗಲ್ ದೇಶಗಳ ಕಾರ್ಕ್‌ಮರಗಳು ಪ್ರಪಂಚಕ್ಕೆ ಬೇಕಾದ ಕಾರ್ಕ್(ಬಿರಡೆ) ಪದಾರ್ಥದಲ್ಲಿ ಮುಕ್ಕಾಲು ಭಾಗ ಪೂರೈಸುತ್ತವೆ.

ಸ್ಪೇನಿನಲ್ಲಿ ಸಿಗುವ ಇತರ ಖನಿಜಗಳು ತಾಮ್ರ, ಸೀಸ, ಉಪ್ಪು, ಸತು, ಪೈರೈಟ್ ಲಿಗ್ನೈಟ್, ಮ್ಯಾಂಗನೀಸ್, ಕೋಬಾಲ್ಟ್, ಸಲ್ಫೇಟ್ ಆಫ್ ಸೋಡ, ರಂಜಕ ಹಾಗೂ ಗಂಧಕ.

ವ್ಯವಸಾಯಗಾರರು ಗೋಧಿ, ಆಲಿವ್, ದ್ರಾಕ್ಷಿ, ಕಿತ್ತಳೆ, ಈರುಳ್ಳಿ ಮೊದಲಾದುವನ್ನು ಬೆಳೆಯುತ್ತಾರೆ. ಸ್ಪೇನಿನ ಬಹುಪಾಲು ಜನ ಬೇಸಾಯಗಾರರು. ರೈತರು ಬಡವರು. ಅನೇಕರಿಗೆ ತಮ್ಮದೇ ಆದ ಹೊಲವಿಲ್ಲ ; ಹೊಲವಿದ್ದರೂ ಅದು ಅತ್ಯಲ್ಪ. ವ್ಯವಸಾಯದ ಕ್ಷೇತ್ರದಲ್ಲಿ ಆಧುನಿಕ ರೀತಿನೀತಿಗಳ ಉಪಯೋಗವಿಲ್ಲದಿರುವುದರಿಂದ ಉತ್ಪತ್ತಿ ಕಡಮೆ.

ಹತ್ತಿ ಮತ್ತು ಉಣ್ಣೆಬಟ್ಟೆಗಳು ಈ ದೇಶದ ಪ್ರಮುಖ ಕೈಗಾರಿಕೆಗಳು. ಮಾದಕ ಪಾನೀಯ ಸ್ಪೇನಿನ ಪ್ರಮುಖ ರಫ್ತು ಪದಾರ್ಥ. ಕಾರ್ಕ್, ಲೋಹ, ಆಲಿವ್ ಮತ್ತು ಹಣ್ಣುಗಳು ಇತರ ರಫ್ತು ಪದಾರ್ಥಗಳು.

ಮೋಟಾರು ವಾಹನಗಳು, ಔಷಧಿಗಳು, ರಾಸಾಯನಿಕ ಪದಾರ್ಥಗಳು ಇವು ಆಮದಾಗುವ ಪ್ರಮುಖ ಪದಾರ್ಥಗಳು.

1245ರಲ್ಲಿ ಸ್ಥಾಪಿಸಲ್ಪಟ್ಟ ವೇಲೆನ್‌ಷಿಯ ವಿಶ್ವವಿದ್ಯಾನಿಲಯ, 1450ರಲ್ಲಿ ಸ್ಥಾಪಿತವಾದ ಬಾರ್‌ಸಿಲೋನ ವಿಶ್ವವಿದ್ಯಾನಿಲಯ, 1499ರಲ್ಲಿ ಸ್ಥಾಪಿತವಾದ ಮ್ಯಾಡ್ರಿಡ್ ವಿಶ್ವವಿದ್ಯಾನಿಲಯ, 1525ರಲ್ಲಿ ಸ್ಥಾಪಿತವಾದ ಗ್ರಾನೆಡಾ ವಿಶ್ವವಿದ್ಯಾನಿಲಯ—ಇವು ಸ್ಪೇನಿನ ಪ್ರಮುಖ ವಿಶ್ವವಿದ್ಯಾನಿಲಯಗಳು.

ಸ್ಪೇನಿನಲ್ಲಿ ಸುಮಾರು ಶೇಕಡಾ 14ರಷ್ಟು ಜನರು ಅನಕ್ಷರಸ್ಥರು. ಪ್ರಾಥಮಿಕ ವಿದ್ಯಾಭ್ಯಾಸ ಕಡ್ಡಾಯವಾದರೂ ಸಾಕಾದಷ್ಟು ಶಾಲೆಗಳೂ ಉಪಾಧ್ಯಾಯರೂ ಇಲ್ಲ.

ಗೂಳಿಕಾಳಗಕ್ಕೆ ಸ್ಪೇನ್ ಜಗತ್ಪ್ರಸಿದ್ಧ. ಅನೇಕ ಪಟ್ಟಣಗಳಲ್ಲಿ ಗೂಳಿಕಾಳಗಕ್ಕೆ ಬೇಕಾದ ಆವರಣಗಳಿವೆ. ಫುಟ್‌ಬಾಲ್ ಜನಪ್ರಿಯವಾದ ಆಟ.

ಸಂಗೀತ ಹಾಗೂ ನೃತ್ಯ ಸ್ಪೇನಿನ ಜನರಿಗೆ ಬಹಳ ಪ್ರಿಯವಾದ ಕಲೆಗಳು.

ಸ್ಪೇನಿನ ಅತ್ಯಂತ ದೊಡ್ಡ ಪಟ್ಟಣ ಮ್ಯಾಡ್ರಿಡ್ ; 1561ರ ಅನಂತರ ಈ ನಗರ ರಾಜಧಾನಿಯಾಯಿತು.

ಸ್ಪೇನಿನ ಎರಡನೆಯ ದೊಡ್ಡ ಪಟ್ಟಣ ಬಾರ್‌ಸಿಲೋನ, ಮ್ಯಾಡ್ರಿಡ್‌ಗಿಂತ ಪುರಾತನವಾದ ನಗರ. ಕ್ರಿ. ಪೂ. 218ರಲ್ಲಿ ಸ್ಥಾಪಿತವಾಯಿತು.

ಸಾಮಾಜಿಕ ಜೀವನದ ಸುಧಾರಣೆಗೆ ಹೊರಟ ರಿಪಬ್ಲಿಕನ್ ಪಕ್ಷ ಜಮೀನುದಾರರನ್ನು, ಧರ್ಮಪೀಠ ಹಾಗೂ ಸೈನ್ಯಗಳನ್ನು ಎದುರುಹಾಕಿಕೊಂಡಿತು. ಇದರಿಂದಾಗಿ 1936ರಿಂದ ಎರಡು ವರ್ಷ ಕಾಲ ಭೀಕರ ಅಂತರ್ಯುದ್ಧ ನಡೆಯಿತು. 3,00,000 ಜನ ಯುದ್ಧಭೂಮಿಯಲ್ಲಿ ಹತರಾದರು. ಇನ್ನೂ 2,00,000 ಜನ ರೋಗಗಳಿಂದ, ಬರಗಾಲದಿಂದ ಸತ್ತರು. ರಿಪಬ್ಲಿಕನ್ ಪಕ್ಷಕ್ಕೆ ಸೋಲಾಯಿತು. ಫ್ರಾನ್ಸಿಸ್ಕೊ ಫ್ರಾಂಕೊ ನಾಯಕತ್ವದಲ್ಲಿ ಹೋರಾಡಿದ ಜಮೀನುದಾರರು, ಧರ್ಮಗುರುಗಳು ಹಾಗೂ ಸೈನಿಕರು ಗೆದ್ದರು.

ಕಳೆದ ಇಪ್ಪತ್ತೈದು ವರ್ಷಗಳಿಂದ ಸ್ಪೇನ್ ಸರ್ವಾಧಿಕಾರಿಯ ಆಳ್ವಿಕೆಯಲ್ಲಿದೆ.

| | | |
|---|---|---|
| ಖಂಡ | : | ಯುರೋಪ್ ನೈಋತ್ಯ |
| ಅಕ್ಷಾಂಶ | : | 36° ಉ ದಿಂದ 43° 48′ ಉ |
| ರೇಖಾಂಶ | : | 3° 15′ ಪೂ ದಿಂದ 9° 18′ ಪ |
| ವಿಸ್ತೀರ್ಣ | : | 5,03,061 ಚ. ಕಿ. ಮೀ. |
| ಜನಸಂಖ್ಯೆ | : | 3,16,04,000 |
| ಭಾಷೆ | : | ಸ್ಪಾನಿಷ್ |
| ರಾಜಧಾನಿ | : | ಮ್ಯಾಡ್ರಿಡ್ |
| ಸರಕಾರ | : | ಸಂವಿಧಾನಬದ್ಧ ರಾಜಪ್ರಭುತ್ವ |
| ಬಾವುಟ | : | ಕೆಂಪು, ಹಳದಿ, ಕೆಂಪು ಇವುಗಳ ಮೂರು ಉದ್ದನೆಯ ಪಟ್ಟೆಗಳು. ಕೆಂಪುಪಟ್ಟೆಗಳಿಗಿಂತ ಹಳದಿ ಸ್ವಲ್ಪ ಅಗಲವಾದ ಪಟ್ಟೆ. ಅದರ ಮಧ್ಯೆ ಸ್ಪೇನ್ ಸರಕಾರದ ಲಾಂಛನ |

## ಸೊನ್ನೆ

'ಪರೀಕ್ಷೆಯಲ್ಲಿ ಎಷ್ಟು ಅಂಕಗಳನ್ನು ಪಡೆದೆ ?' ಎಂಬುದಕ್ಕೆ, ಸೊನ್ನೆ ಎಂದರೆ, ಅವಹೇಳನ ಕಟ್ಟಿಟ್ಟ ಬುತ್ತಿ. 1, 2, 3, 4, ಇವುಗಳ ಮುಂದೆ ಸೊನ್ನೆ ಬಿದ್ದರೆ ಸ್ವಲ್ಪ ವಾಸಿ. ಹೀಗೆಯೆ ಪ್ರತಿ ವಿಷಯದಲ್ಲಿಯೂ 5, 6, 7, 8, 9ರ ಮುಂದೆ ಸೊನ್ನೆ ಬಂದರೆ ಅಷ್ಟು ಅಂಕಗಳನ್ನು ವಿದ್ಯಾರ್ಥಿ ತನ್ನ ಪರೀಕ್ಷೆಯಲ್ಲಿ ಪಡೆದರೆ ಅವನಿಗೆ ಅಪರಿಮಿತ ಆನಂದ. ಇದೇ ಸೊನ್ನೆ ಯಾವುದೇ ಅಂಕಿಯ ಹಿಂದೆ ಬರೆಯಲ್ಪಟ್ಟಾಗ ಅದಕ್ಕೆ ಬೆಲೆಯೇ ಇಲ್ಲ. ಅದು ಕೇವಲ ಶೂನ್ಯ.

ಆದರೆ ಸೊನ್ನೆಯ ಚಕ್ರಾಧಿಪತ್ಯ ಇಷ್ಟು ಅಲ್ಪವಲ್ಲ. ಅದು ಒಂದರ ಮುಂದೆ ಬಂದು ಹತ್ತಾಗಿಯೂ ಹತ್ತರ ಮುಂದೆ ಬಂದು ನೂರಾಗಿಯೂ ನೂರರ ಮುಂದೆ ಬಂದು ಸಾವಿರವಾಗಿಯೂ ಹೀಗೆಯೆ ಎಷ್ಟು ದೂರ ಬೇಕಾದರೂ ಮೊತ್ತವನ್ನು ಕೊಂಡೊಯ್ಯುತ್ತದೆ, ಕಡೆಗೆ ಮನುಷ್ಯ ಎಷ್ಟು ಎಣಿಸಬಲ್ಲನೊ ಅದನ್ನೂ ಮೀರಿ ಬೆಳೆಯುತ್ತದೆ, ಅನಂತವಾಗುತ್ತದೆ.

ಪೂಜ್ಯವನ್ನು ಬರೆದರೆ ವೃತ್ತವಾಗಿ (೦) ಕಾಣುತ್ತದೆ. ವೃತ್ತಕ್ಕೆ ಆದಿ ಅಂತ್ಯಗಳಿಲ್ಲ. ವಿಶ್ವದ ಮೂಲ, ಮುಕ್ತಾಯಗಳನ್ನು ಅರಿತವರಿಲ್ಲ. ಆದುದರಿಂದ ಪೂಜ್ಯ ವಿಶ್ವದಂತಿದೆ. ಅನಂತದ ಸಂಕೇತ ಎಂದೂ ತತ್ತ್ವಶಾಸ್ತ್ರಜ್ಞರು ಹೇಳುತ್ತಾರೆ. ಸೊನ್ನೆ ಅಥವಾ ಪೂಜ್ಯ ಮಾನವನಿಂದಲೇ ಸೃಷ್ಟಿಸಲ್ಪಟ್ಟು ಗಂಭೀರವಾದ ಕಲ್ಪನೆಯಾಗಿ ಮೆರೆದಿದೆ.

ಇಂಥ ಮಹತ್ವದ ಕೊಡುಗೆಯನ್ನು ಲೋಕಕ್ಕೆ ನೀಡಿದವರು ಭಾರತೀಯರು. ಇದಕ್ಕೆ ಮಿಗಿಲಾದ ಶಕ್ತಿ ಬೇರಾವ ಅಂಕಿಗೂ ಇಲ್ಲವೆನ್ನಬಹುದು. ಹತ್ತು, ನೂರು, ಸ್ಥಾನಗಳು ಸೊನ್ನೆಯಿಲ್ಲದೆ ಹುಟ್ಟಲಾರವು. ಎಣಿಕೆ ಸುಗಮವಾಗಿ ಮುಂದುವರಿಯಲಾರದು. ಸೊನ್ನೆಯನ್ನು ಸೃಷ್ಟಿಸದೆ ಹೋಗಿದ್ದರೆ ಗಣಿತಶಾಸ್ತ್ರ ಕುಂಟುತ್ತ ತನ್ನ ಮೊದಲ ಘಟ್ಟದಲ್ಲೇ ಉಳಿಯಬೇಕಾಗಿತ್ತು. ಪ್ರಾಚೀನ ಕಾಲದಲ್ಲಿ ಗ್ರೀಕ್, ರೋಮನ್ ಹಾಗೂ ಹಿಬ್ರೂ ಭಾಷೆಗಳಲ್ಲಿ ಹತ್ತು, ನೂರು, ಸಾವಿರ ಇತ್ಯಾದಿಗಳಿಗೆ ಬೇರೆ ಬೇರೆ ಸಂಕೇತಗಳಿದ್ದು ಹೆಚ್ಚಿನ ಲೆಕ್ಕಾಚಾರ ಗೊಂದಲವಾಗುತ್ತಿತ್ತು. ಉದಾಹರಣೆಗೆ 27,529 ಎಂಬ ಸಂಖ್ಯೆಯನ್ನು ಈಜಿಪ್ಟಿನವರು.

PPPP ✓✓✓ III

ΓΓ ∩∩ III

PPP ✓✓ III

—ಎಂದು ಬರೆಯುತ್ತಿದ್ದರಂತೆ. ಇದರ ಪರಿಣಾಮ ಕಾಲವಿಳಂಬ ಮತ್ತು ಶ್ರಮ ; ಓದುವುದು ಬಲು ಕಷ್ಟ.

ಸೊನ್ನೆ ಎನ್ನುವುದು ಬರಿಯ ಕಲ್ಪನೆ. 'ಸೊನ್ನೆ ಕುರ್ಚಿಯನ್ನು ತೋರಿಸು'. 'ಸೊನ್ನೆ ಪುಸ್ತಕವನ್ನು ತೋರಿಸು' ಎಂದರೆ ತೋರಿಸಲು ಸಾಧ್ಯವಿಲ್ಲ. ಆದರೆ, ನಾಲ್ಕು ಕುರ್ಚಿಗಳಿದ್ದು ನಾಲ್ಕನ್ನು ತೆಗೆದರೆ ಉಳಿಯುವುದು ಸೊನ್ನೆ ಎಂದು ಹೇಳುತ್ತೇವೆ. ಬರಿಯ ಕಲ್ಪನೆಯಲ್ಲಿ ಇರುವ ಇಂಥ ಸಂಖ್ಯೆಯನ್ನು ಯೋಚಿಸಿದ್ದು ಭಾರತೀಯರ ಬುದ್ಧಿಶಕ್ತಿಗೆ ಸಾಕ್ಷಿ. ಸೊನ್ನೆ ಇರುವುದರಿಂದಲೇ 2,05,95.00.308 ಇಂಥ ಸಂಖ್ಯೆಗಳನ್ನು ಬರೆಯಲು ಸಾಧ್ಯ. ಸೊನ್ನೆಯನ್ನು ಉಪಯೋಗಿಸಿ ಯಾವ ಸಂಖ್ಯೆಯನ್ನು ಬೇಕಾದರೂ ಬರೆಯಬಹುದಾದ ಈ ಸೊಗಸಾದ ವಿಧಾನವನ್ನು ಭಾರತೀಯರಿಂದ ಅರಬರು ಕಲಿತರು. ಅಲ್ಲಿಂದ ಅದು ಪಾಶ್ಚಾತ್ಯ ಜ್ಞಾನ ಪ್ರಪಂಚವನ್ನು ತಲಪಿತು. 'ಜೀರೋ' ಎಂದು ಆಂಗ್ಲಭಾಷೆಯಲ್ಲಿ ಕರೆಯಲಾಗುವ ಸೊನ್ನೆಯನ್ನು ಅನೇಕ ನಿಷ್ಕೃಷ್ಟ ಮಾನಗಳನ್ನು ಸೂಚಿಸಲು ಬಳಸುತ್ತಾರೆ. 'ಜೀರೋ ಗಂಟೆ' ಎಂದರೆ ನಡುರಾತ್ರಿ ಕಳೆದು ಮರುದಿನ ಮೊದಲ ಗಂಟೆ ಆರಂಭವಾಗಲಿದೆ ಎಂಬ ಸೂಚನೆ. ಜೀರೋ ಉಷ್ಣಾಂಶ ಎಂದರೆ ಹಿಮಗಡ್ಡೆ ಕರಗಲು ಆರಂಭಿಸುವ ಶಾಖದ ಮಟ್ಟ ಎಂದರ್ಥ. ಇಂದಿನ ಅತಿ ಮಹತ್ತರ ಮಾನವ ಚಟುವಟಿಕೆಯಾದ ಗಗನಯಾತ್ರೆಯ ಆರಂಭಕ್ಕೆ ಈ ಸೊನ್ನೆಯ ಗಣನೆ ಬಹಳ ಮುಖ್ಯವಾದದ್ದು. ಎಣಿಕೆಯು ಜೀರೋ ತಲಪಿದ ಕೂಡಲೆ (ನಾಲ್ಕು, ಮೂರು, ಎರಡು, ಒಂದು, ಸೊನ್ನೆ) ಕ್ಷಿಪಣಿಯನ್ನು ಉಡಾಯಿಸುತ್ತಾರೆ.

ಗಣಿತಶಾಸ್ತ್ರ ಸೊನ್ನೆಯ ಬಳಕೆಯು ಇನ್ನೂ ಅನೇಕ ಒಳ ಅರ್ಥಗಳನ್ನು ಸೂಚಿಸುತ್ತದೆ. ಭಾರತದಲ್ಲಿ ವೇದಕಾಲದಲ್ಲಿಯೇ ಪೂಜ್ಯದ ಬಗೆಗೆ ವಿವರಣೆ ಬಂದಿದೆ. ಯಜುರ್ವೇದದಲ್ಲಿ, ವಾಜಸನೇಯನು ರಚಿಸಿದ ವಾಜಸನೇಯಿ ಸಂಹಿತೆಯಲ್ಲೂ ತೈತ್ತಿರೀಯ ಸಂಹಿತೆಯಲ್ಲೂ ಹತ್ತರ ಅಪವರ್ತ್ಯಗಳಾದ ಸಂಖ್ಯೆಗಳ ಪಟ್ಟಿ ಇದೆ. ಏಕ, ದಶ, ಶತ, ಸಹಸ್ರ, ಅಯುತ, ನಿಯುತ......ಮುಂತಾದ ಸಂಖ್ಯಾಕ್ರಮ ಅಲ್ಲಿ ಹೇಳಲ್ಪಟ್ಟಿದೆ.

800ರಲ್ಲಿ ಅರೇಬಿಯದಲ್ಲಿ ಸೊನ್ನೆ ಬಳಸಲ್ಪಟ್ಟಿತೆಂದೂ 1,200ರಲ್ಲಿ ಲ್ಯಾಟಿನ್ ಭಾಷೆಯಲ್ಲಿ ಕಂಡುಬರುತ್ತದೆಂದೂ ಹೇಳಲಾಗಿದೆ. ಸೊನ್ನೆಯನ್ನು ಮತ್ತೊಂದು ಸಂಖ್ಯೆಯೊಡನೆ ಕೂಡಿದರೆ ಅಥವಾ ಸಂಖ್ಯೆಯಿಂದ ಕಳೆದರೆ ಉತ್ತರ ಆ ಸಂಖ್ಯೆಯೇ. ಒಂದು ಸಂಖ್ಯೆಯನ್ನು ಸೊನ್ನೆಯಿಂದ ಗುಣಿಸಿದರೆ ಉತ್ತರ ಸೊನ್ನೆ. ಆದರೆ ಸೊನ್ನೆಯಿಂದ ಯಾವ ಸಂಖ್ಯೆಯನ್ನೂ ಭಾಗಿಸಲಾಗುವುದಿಲ್ಲ. ಹೀಗೆ, ಸೊನ್ನೆ ಅವಿನಾಶಿ ; ಗೋಳಾಕಾರದ ವಿಶ್ವದಂತೆ ಅಕ್ಷಯ.

ನೋಡಿ : ಗಣಿತ

## ಸೋವಿಯೆತ್ ಒಕ್ಕೂಟ

ಜಗತ್ತನ್ನೇ ಜಯಿಸಲು ಹೊರಟ ನೆಪೋಲಿಯನನ ಸೈನಿಕರು ಒಬ್ಬನ ಕೈಯಲ್ಲಿ ಸೋತು ಹಿಂದೆ ಸರಿಯಬೇಕಾಯಿತು. ಹಾಗೆ ಅವರನ್ನು ಸೋಲಿಸಿದವನು ಸೇನಾನಿ 'ಚಳಿ'. ನೆಪೋಲಿಯನನ ಭಟರು ಯಾವ ಸೈನಿಕರ ಪ್ರತಿದಾಳಿಗೂ ಹೆದರಲಿಲ್ಲ. ಆದರೆ ಉತ್ತರ ಧ್ರುವದಿಂದ ಬೀಸಿದ ಶೀತದ ಗಾಳಿಗೆ, ಕೊರೆಯುವ ಚಳಿಗೆ ಅಂಜಿ ಹಿಮ್ಮೆಟ್ಟಿದರು.

ಪ್ರಕೃತಿ ಅಂದು ರಕ್ಷಿಸಿದ ಭೂಪ್ರದೇಶ, ಏಷ್ಯದಲ್ಲಿ ಉತ್ತರ ಭಾಗ ಯೂರೋಪಿನಲ್ಲಿ ಪೂರ್ವ ಭಾಗಕ್ಕೆ ಹರಡಿದ ಇಂದಿನ ಸೋವಿಯೆತ್ ಒಕ್ಕೂಟ–ಆಧುನಿಕ ಬೃಹತ್ ರಾಷ್ಟ್ರಗಳಲ್ಲಿ ಒಂದು.

ಪ್ರಪಂಚದ ಭೂಭಾಗದ ಆರರಲ್ಲೊಂದು ಪಾಲು ವಿಸ್ತಾರದ ದೇಶ ಸೋವಿಯೆತ್ ಒಕ್ಕೂಟ. ಜನಸಂಖ್ಯೆ ಮಾತ್ರ ಬಹಳ ವಿರಳ. ಖನಿಜ ಮತ್ತು ತೈಲ ಸಂಗ್ರಹಗಳ ನಿಧಿ ಭೂಗರ್ಭದಲ್ಲಿ ಅಡಗಿದೆ. ಆದರೆ ಅನುಕೂಲಕರವಾದ ಬಂದರುಗಳು ಅದರ ಪಾಲಿಗೆ ಲಭ್ಯವಿಲ್ಲ.

ಅಜರ್‌ಬೈಜಾನ್, ಅರ್ಮೀನಿಯ, ಉಕ್ರೇನ್, ಉಜ್ಬೆಕಿಸ್ತಾನ್, ಕಜಾಕಸ್ತಾನ್, ಕಿರ್ಘಿಜಿಯ, ಜಾರ್ಜಿಯ, ತಾಜಿಕಿಸ್ತಾನ್, ಟರ್ಕಮೆನಿಯ, ಬೈಲೋರಷ್ಯ, ಮಾಲ್ಡೇವಿಯ, ರಷ್ಯನ್ ಸೋವಿಯೆತ್ ಸಂಯುಕ್ತ ಸಮಾಜವಾದೀ ಗಣರಾಜ್ಯ, ಲಾಟ್ವಿಯ, ಲಿಥುವೆನಿಯ ಮತ್ತು ಎಸ್ತೋನಿಯ–ಇವು ಸೋವಿಯೆತ್ ಒಕ್ಕೂಟದ ಹದಿನೈದು ಗಣರಾಜ್ಯಗಳು. ಒಕ್ಕೂಟದ ಭೂಪ್ರದೇಶದ ಮುಕ್ಕಾಲು ಭಾಗವನ್ನು ರಷ್ಯನ್ ಸೋವಿಯೆತ್ ಸಂಯುಕ್ತ ಸಮಾಜವಾದೀ ಗಣರಾಜ್ಯ ತುಂಬಿಕೊಳ್ಳುತ್ತದೆ. ಆಡಳಿತಕ್ಕೆ ಅನುಕೂಲವಾಗುವಂತೆ ಈ ಗಣರಾಜ್ಯವನ್ನು ಹದಿನಾಲ್ಕು ಸ್ವಾಯತ್ತ ಪ್ರಾಂತಗಳನ್ನಾಗಿ ವಿಂಗಡಿಸಲಾಗಿದೆ.

ವಿಭಿನ್ನ ಆಚಾರ ವ್ಯವಹಾರಗಳ ಇಪ್ಪತ್ತನಾಲ್ಕು ಬುಡಕಟ್ಟುಗಳ ಜನ ಒಕ್ಕೂಟದಲ್ಲಿ ವಾಸಿಸುತ್ತಾರೆ. ನೂರಕ್ಕೆ ೫೫ ಮಂದಿ ಪ್ರಜೆಗಳು ರಷ್ಯನ್ ಬುಡಕಟ್ಟಿಗೆ ಸೇರಿದವರು. ಇತರ ಬುಡಕಟ್ಟುಗಳು ಒಕ್ಕೂಟದ ಗಣರಾಜ್ಯಗಳ ಹೆಸರಿನಿಂದಲೇ ಕರೆಯಲ್ಪಡುತ್ತವೆ. ಇಂಡೊ–ಯೂರೋಪಿಯನ್, ಟರ್ಕ್, ಕಾಕೇಷಿಯನ್, ಫಿನಿಷ್ ಮೂಲಗಳಿಂದ ಬೆಳೆದ ವಿಭಿನ್ನ ಭಾಷೆಗಳು ಬಳಕೆಯಲ್ಲಿವೆ.

ಪಶ್ಚಿಮದಲ್ಲಿ ನಾರ್ವೆ, ಫಿನ್‌ಲೆಂಡ್, ಬಾಲ್ಟಿಕ್ ಸಮುದ್ರ, ಪೋಲೆಂಡ್, ಚೆಕೊಸ್ಲೊವಾಕಿಯ, ಹಂಗೆರಿ, ರುಮೇನಿಯ, ದಕ್ಷಿಣಕ್ಕೆ ಟರ್ಕಿ, ಇರಾನ್, ಅಫ್ಘಾನಿಸ್ತಾನ, ಪೂರ್ವಕ್ಕೆ ಚೀನ, ಮಂಗೋಲಿಯ, ಕೊರಿಯಾಗಳು

ಉತ್ತರದಲ್ಲಿ ಆರ್ಕ್‌ಟಿಕ್ ಸಮುದ್ರ–ಇದು ಸೋವಿಯೆತ್ ಒಕ್ಕೂಟದ ಪರಿಸರ. ಆರ್ಕ್‌ಟಿಕ್ ಮತ್ತು ಶಾಂತಸಾಗರದ ತೀರಗಳಲ್ಲಿರುವ ಬಂದರುಗಳು ವರ್ಷದ ಅನೇಕ ತಿಂಗಳು ಹೆಪ್ಪುಗಟ್ಟುವುದರಿಂದ ನಿರುಪಯುಕ್ತ. ಬಾಲ್ಟಿಕ್ ಸಮುದ್ರದಿಂದ ಭೂಮಧ್ಯ ಸಮುದ್ರವನ್ನು ಪ್ರವೇಶಿಸುವ ಹಾದಿ ತುರ್ಕಿಯ ವಶದಲ್ಲಿದೆ. ಬಾಲ್ಟಿಕ್ ಸಮುದ್ರದಿಂದ ಅಟ್ಲಾಂಟಿಕ್ ಸಾಗರಕ್ಕೆ ಸಾಗುವ ಜಲಮಾರ್ಗಗಳು ಡೆನ್ಮಾರ್ಕ್ ಮತ್ತು ಸ್ವೀಡನುಗಳ ನಿಯಂತ್ರಣದಲ್ಲಿವೆ. ಬಾಲ್ಟಿಕ್ ಸಮುದ್ರದ ಅನೇಕ ಬಂದರುಗಳಲ್ಲಿ ವರ್ಷದ ಹಲವಾರು ತಿಂಗಳಲ್ಲಿ ನೀರು ಹೆಪ್ಪುಗಟ್ಟುತ್ತದೆ. ಬಿಳಿಯ ಸಮುದ್ರದ ಆರ್ಕೇಂಜಲ್ ಎಂಬ ಬಂದರಿನ ಬಳಿ ಮಂಜುಗಡ್ಡೆಯನ್ನು ಸದಾ ಒಡೆದು ಹಾದಿಯನ್ನು ಸುಗಮಗೊಳಿಸುತ್ತಾರೆ. ವಾಯುವ್ಯದ ತುದಿಯಲ್ಲಿರುವ ಮರ್ಮನ್ಸ್ಕ ಬಂದರು ಮಾತ್ರ ಸಂಚಾರಕ್ಕೆ ಯಾವಾಗಲೂ ಯೋಗ್ಯ, ಉಷ್ಣೋದಕ ಪ್ರವಾಹದ ಕೇಂದ್ರ ಅದರ ಸಮೀಪದಲ್ಲಿರುವುದರಿಂದ ನೀರು ಹೆಪ್ಪುಗಟ್ಟುವುದಿಲ್ಲ.

ಸೋವಿಯೆತ್ ಒಕ್ಕೂಟದ ಭೂಪ್ರದೇಶವನ್ನು ಪಶ್ಚಿಮ ಸೈಬೀರಿಯನ್ ತಗ್ಗು ಪ್ರದೇಶ, ಮಧ್ಯ ಸೈಬೀರಿಯದ ಎತ್ತರದ ಭೂಮಿ ಮತ್ತು ಮಂಗೋಲಿಯನ್ ಪ್ರಸ್ಥಭೂಮಿ ಎಂದು ವಿಂಗಡಿಸುತ್ತಾರೆ. ಕ್ಯಾಸ್ಪಿಯನ್ ಸಮುದ್ರದ ಹತ್ತಿರದಲ್ಲಿ ಪ್ರಾರಂಭವಾಗುವ ಯೂರಲ್ ಪರ್ವತಶ್ರೇಣಿ ಉತ್ತರ ದಿಕ್ಕಿಗೆ ಹಬ್ಬಿದೆ. ನೈಋತ್ಯದಲ್ಲಿ ಯೂರೋಪಿನ ಕಾಕಸಸ್ ಪರ್ವತಶ್ರೇಣಿ ಒಕ್ಕೂಟ ಪ್ರದೇಶದೊಳಕ್ಕೆ ಚಾಚಿಕೊಂಡಿದೆ. ದಕ್ಷಿಣ ಮತ್ತು ಪೂರ್ವ ಗಡಿಗಳುದ್ದಕ್ಕೂ ಪರ್ವತಗಳಿವೆ. ಯೂರಲ್ ಪರ್ವತಶ್ರೇಣಿಯ ಪಶ್ಚಿಮಕ್ಕೆ ಇರುವುದು ಯೂರೋಪಿನ ಪ್ರದೇಶವೆಂದೂ ಪೂರ್ವಕ್ಕೆ ಇರುವ ಭೂಭಾಗ ಏಷ್ಯದ ಒಂದು ಭಾಗವೆಂದೂ ಪರಿಗಣಿಸುತ್ತಾರೆ.

ಓಲ್ಗ, ನೀಪರ್ ಮತ್ತು ಡಾನ್ ಇವು ಯೂರಲ್ ಪರ್ವತಶ್ರೇಣಿಯ ಪಶ್ಚಿಮಕ್ಕೆ ಇರುವ ಒಕ್ಕೂಟದ ಮುಖ್ಯ ನದಿಗಳು. ಪೂರ್ವಕ್ಕೆ ಇರುವ ಸೈಬೀರಿಯ ಪ್ರದೇಶಗಳ ಮೂರು ನದಿಗಳಾದ ಓಬ್, ಯೆನಿಸೀ ಮತ್ತು ಲೀನ–ಇವು ಆರ್ಕ್‌ಟಿಕ್ ಸಮುದ್ರದ ಕಡೆಗೆ ಹರಿಯುತ್ತವೆ.

ಉತ್ತರದ ತೀರಗಳಲ್ಲಿ ಕಡುಚಳಿಯ ದೀರ್ಘ ಚಳಿಗಾಲ ; ಬೇಗನೆ ಮುಗಿಯುವ ಹಿತವಾದ ಬೇಸಿಗೆ. ಪೂರ್ವ ತೀರದಲ್ಲೂ ವಿಪರೀತ ಚಳಿ. ಈ ಹವಾಮಾನ ವ್ಯವಸಾಯಕ್ಕೆ ಬಾಧಕ. ಹಿತಕರ ಹವೆಯಿರುವುದು ಯೂರೋಪಿನಲ್ಲಿರುವ ರಷ್ಯದ ಭಾಗದಲ್ಲಿ ಮಾತ್ರವೇ.

ಪ್ರಪಂಚದಲ್ಲೇ ಅತ್ಯಂತ ಉಪಯುಕ್ತ ಒಳನಾಡಿನ ಜಲಮಾರ್ಗಗಳನ್ನು ಈ ರಾಷ್ಟ್ರ ಒಳಗೊಂಡಿದೆ. ಸೋವಿಯೆತ್ ರಷ್ಯ ಕಲ್ಪಿಸಿರುವ ವಾಯುಯಾನ ಸೌಲಭ್ಯಗಳು ಅಸಾಧಾರಣ. ಇಪ್ಪತ್ತಮೂರಕ್ಕೂ ಹೆಚ್ಚು ರಾಷ್ಟ್ರಗಳೊಡನೆ ನೇರ ವಾಯುಮಾರ್ಗ ಸಂಪರ್ಕಗಳನ್ನು ಹೊಂದಿದೆ. ಸೋವಿಯೆತ್ ಒಕ್ಕೂಟದಲ್ಲಿ ಬಹುಮಂದಿ ಅಕ್ಷರಸ್ಥರು. ತಾಂತ್ರಿಕ ಶಿಕ್ಷಣ ಪಡೆದವರ ಸಂಖ್ಯೆ ದೊಡ್ಡದು. ಸ್ತ್ರೀಯರಲ್ಲಿ ಅಕ್ಷರಸ್ಥರು ಶೇಕಡಾ 98 ಮಂದಿ. ಮಕ್ಕಳು ನಾಲ್ಕು ವರ್ಷಗಳ ಪ್ರಾಥಮಿಕ ಶಿಕ್ಷಣ ಪಡೆಯುತ್ತಾರೆ. ಮಾಧ್ಯಮಿಕ ಶಿಕ್ಷಣ ಎಂಟು ವರ್ಷ. ಮುಂದೆ ಔದ್ಯೋಗಿಕ, ತಾಂತ್ರಿಕ ವಿಷಯಗಳಲ್ಲಿ ಯಾವುದಾದರೊಂದನ್ನು ಆರಿಸಿಕೊಂಡು ಮೂರು ವರ್ಷ ವೃತ್ತಿ ತರಪೇತಿ ಪಡೆಯಬೇಕು. ಅರ್ಹ ವಿದ್ಯಾರ್ಥಿಗಳು ಮಾತ್ರ ಹೆಚ್ಚಿನ ಶಿಕ್ಷಣಕ್ಕೆ ಹೋಗುತ್ತಾರೆ. ವಿಶ್ವವಿದ್ಯಾನಿಲಯಗಳು ಮತ್ತು ವಿಶೇಷ ತರಪೇತಿ ಕೇಂದ್ರಗಳು 700ಕ್ಕೂ ಹೆಚ್ಚಿಗೆ ಇವೆ.

| | | |
|---|---|---|
| ಖಂಡ | : | ಏಷ್ಯ (ಉತ್ತರ) ಮತ್ತು ಯೂರೋಪ್ (ಪೂರ್ವ) |
| ಅಕ್ಷಾಂಶ | : | 35° 08′ ಉ ದಿಂದ 77° 43′ ಉ |
| ರೇಖಾಂಶ | : | 19° 39′ ಪೂ ದಿಂದ 169° 39′ ಪ |
| ವಿಸ್ತೀರ್ಣ | : | 2,24,03,000 ಚ. ಕಿ. ಮೀ. |
| ಜನಸಂಖ್ಯೆ | : | 23,55,00,000 (1970) |
| ರಾಜಧಾನಿ | : | ಮಾಸ್ಕೊ |
| ಭಾಷೆ | : | ರಷ್ಯನ್ |
| ಸರಕಾರ | : | ಕಮ್ಯೂನಿಸ್ಟ್ |
| ಬಾವುಟ | : | ಕೆಂಪು ನಿಶಾನೆಯ ಮೇಲ್ಭಾಗದ ಎಡತುದಿಯಲ್ಲಿ ಚಿನ್ನದ ಬಣ್ಣದಲ್ಲಿ ಕುಡುಗೋಲಿನ ಜೊತೆ ಕೂಡಿಕೊಂಡ ಸುತ್ತಿಗೆ; ಅದರ ಮೇಲ್ಭಾಗಕ್ಕೆ ನಕ್ಷತ್ರ ರೇಖೆ |

ಸೋವಿಯೆತ್ ಒಕ್ಕೂಟದಲ್ಲಿ ವೈಯಕ್ತಿಕವಾಗಿ ಧಾರ್ಮಿಕ ಸ್ವಾತಂತ್ರ್ಯ ಇದೆಯಾದರೂ ಧರ್ಮಕ್ಕೆ ವಿಶೇಷ ಮನ್ನಣೆ ಇಲ್ಲ. ಕಮ್ಯೂನಿಸ್ಟ್ ಸರಕಾರ ಆಡಳಿತ ವಹಿಸಿಕೊಂಡ ಮೇಲೆ ರಷ್ಯದ ಇಗರ್ಜಿಗಳ ಆಸ್ತಿಪಾಸ್ತಿಗಳನ್ನು ಮುಟ್ಟುಗೋಲು ಹಾಕಿಕೊಂಡಿತು.

ಪ್ರತಿ ಮೂವತ್ತು ಸಾವಿರ ಪ್ರಜಾಸಂಖ್ಯೆಗೆ ಒಬ್ಬರಂತೆ ಸೋವಿಯೆತ್ ಒಕ್ಕೂಟದ ಎಲ್ಲ ರಾಜ್ಯಗಳಿಂದ ಆಯ್ಕೆಯಾದ ಪ್ರತಿನಿಧಿಗಳ ಸಂಸತ್ತಿಗೆ ಸುಪ್ರೀಂ ಸೋವಿಯೆತ್ ಎಂದು ಹೆಸರು ಸುಪ್ರೀಂ ಸೋವಿಯೆತ್ ಸಚಿವ ಸಂಪುಟವನ್ನೂ ಪ್ರಧಾನಿಯನ್ನೂ ಚುನಾಯಿಸುತ್ತದೆ. ಸೋವಿಯೆತ್ ಒಕ್ಕೂಟದ ರಾಜ್ಯಾಡಳಿತದ ಸಂಪುಟ ಮತ್ತು ಪ್ರಧಾನಿಯನ್ನೊಳಗೊಂಡ ಸಚಿವ ಸಂಪುಟ ಇವೆರಡೂ ಕಮ್ಯೂನಿಸ್ಟ್ ಪಕ್ಷ ರೂಪಿಸಿದ ನೀತಿ ಧೋರಣೆಗಳಿಗೆ ಬದ್ಧವಾಗಿರುತ್ತವೆ. ಕಮ್ಯೂನಿಸ್ಟ್ ಪಕ್ಷದ ವಶದಲ್ಲಿ ಪೂರ್ಣ ಅಧಿಕಾರ ಕೇಂದ್ರೀಕೃತ. ಪಕ್ಷದ ಪ್ರಥಮ ಕಾರ್ಯದರ್ಶಿಯೇ ಅತ್ಯಂತ ಪ್ರಭಾವಶಾಲಿ ವ್ಯಕ್ತಿ.

ಕಮ್ಯೂನಿಸ್ಟ್ ಸರಕಾರ ನೆಲೆಗೊಂಡ ಮೇಲೆ ಸೋವಿಯೆತ್ ಒಕ್ಕೂಟ ಅತ್ಯಂತ ಉನ್ನತಮಟ್ಟದ ಪ್ರಗತಿಯನ್ನು ಮೂರು ದಶಕಗಳೊಳಗೆ ಸಾಧಿಸಿದೆ. ಜಾರ್ ಚಕ್ರವರ್ತಿಗಳ ಆಳ್ವಿಕೆಯಲ್ಲಿ ಅಜ್ಞಾನ, ಬಡತನಗಳಿಗೆ ದೇಶ ತುತ್ತಾಗಿತ್ತು. ಆದರೆ ಇಂದು ಅದು ಪ್ರಪಂಚದ ಚರಿತ್ರೆಯ ಮೇಲೆ ಪ್ರಭಾವ ಬೀರಬಲ್ಲ ಬಲಾಢ್ಯ ರಾಷ್ಟ್ರವಾಗಿದೆ. ಸಮುದಾಯ ವ್ಯವಸಾಯ ಕೃಷಿಕ್ಷೇತ್ರದ ಬೆಳವಣಿಗೆಗೆ ಕಾರಣವಾಯಿತು; ಕೈಗಾರಿಕೀಕರಣ ವ್ಯಾಪಾರಾಭಿವೃದ್ಧಿಗೆ ನೆರವಾಗಿ ದೇಶದ ಸಂಪತ್ತನ್ನು ಹೆಚ್ಚಿಸುವಲ್ಲಿ ಮುಖ್ಯ ಪಾತ್ರ ವಹಿಸಿತು. ಆರ್ಥಿಕವಾಗಿ ಸೋವಿಯೆತ್ ರಷ್ಯ ಎಷ್ಟು ಬಲಿಷ್ಠವಾಯಿತೆಂದರೆ ಚೀನ, ರುಮೇನಿಯ, ಹಂಗೆರಿ ಮುಂತಾದ ಕಮ್ಯೂನಿಸ್ಟ್ ರಾಷ್ಟ್ರಗಳ ಬಲಸಂವರ್ಧನೆಗೆ ಅದು ನೆರವು ನೀಡಿತು. ವೈಜ್ಞಾನಿಕ ಸಂಶೋಧನೆಗಳಲ್ಲಿಯೂ ಕಮ್ಯೂನಿಸ್ಟ್ ರಷ್ಯ ಮುಂದು. ಪ್ರಥಮ ವ್ಯೋಮಯಾತ್ರಿ ಸೋವಿಯೆತ್ ರಷ್ಯದ ಯೂರಿ ಗಗಾರಿನ್. ಬಾಹ್ಯಾಕಾಶದಲ್ಲಿ ಪ್ರಥಮ ಸ್ತ್ರೀ ಯಾತ್ರಿ ವಾಲೆಂಟಿನಾ ತೆರೆಷ್ಕೋವಾ. ಚಂದ್ರನ ಆಚೆಯ ಬದಿಯ ಛಾಯಾಚಿತ್ರಗಳನ್ನು ಸೆರೆಹಿಡಿಯುವುದು : ಭೂಮಿಯಿಂದ ಬಾಹ್ಯಾಕಾಶಕ್ಕೆ

ಕಳುಹಿಸಿದ ಕೃತಕ ಆಕಾಶಕಾಯಗಳನ್ನು ಅಲ್ಲೇ ಜೋಡಿಸುವುದು: ಶುಕ್ರಗ್ರಹದಲ್ಲಿ ಅಂತರಿಕ್ಷ ನೌಕೆಯ ಇಳಿದಾಟ–ಈ ತಾಂತ್ರಿಕ ಅದ್ಭುತಗಳನ್ನು ಮೊದಲು ಸಾಧಿಸಿದ್ದು ಸೋವಿಯೆತ್ ಒಕ್ಕೂಟ.

ಕಮ್ಯೂನಿಸ್ಟ್ ಸರಕಾರ ಸ್ಥಾಪಿತವಾದ ಬಳಿಕ ಕಂಡುಬಂದ ಮೊಟ್ಟ ಮೊದಲ ಸುಧಾರಣೆ ಕೃಷಿಕ್ಷೇತ್ರದಲ್ಲಿ. ಒಕ್ಕೂಟದ ನಾಯಕರು ಖಾಸಗೀ ಜಮೀನನ್ನು ಮೊದಲು ವಶಪಡಿಸಿಕೊಂಡು ಸಮುದಾಯ ಕೃಷಿಯನ್ನು ರೂಢಿಗೆ ತಂದರು. 1913ರಲ್ಲಿ 860 ಲಕ್ಷ ಟನ್ ಆಹಾರ ಧಾನ್ಯಗಳನ್ನು ಬೆಳೆಯಲಾಗುತ್ತಿದ್ದು 1970ರಲ್ಲಿ ಸುಮಾರು 1,700 ಲಕ್ಷ ಟನ್‌ಗೆ ಕೃಷಿ ಉತ್ಪಾದನೆ ಏರಿತು. ಆಹಾರದ ಉತ್ಪಾದನೆಯಲ್ಲಿ ಸೋವಿಯೆತ್ ಒಕ್ಕೂಟ ಇಂದು ಸ್ವಯಂಪರಿಪೂರ್ಣ. ಗೋಧಿ ಮತ್ತು ಆಲೂಗೆಡ್ಡೆ ಇವು ಇನ್ನಾವ ದೇಶದಲ್ಲೂ ಇಲ್ಲದಷ್ಟು ಬೆಳೆಯುತ್ತವೆ.

ಕಬ್ಬಿಣದ ಅದಿರು ಮತ್ತು ಕಲ್ಲಿದ್ದಲು ವಿಪುಲವಾಗಿ ದೊರೆಯುವ ಸೋವಿಯೆತ್ ಒಕ್ಕೂಟದ ಪ್ರಮುಖ ಕೈಗಾರಿಕೆ ಉಕ್ಕು ಮತ್ತು ಯಂತ್ರ ನಿರ್ಮಾಣ. ಪ್ರಪಂಚದ ಉಕ್ಕು ಮತ್ತು ಕಬ್ಬಿಣ ಕೈಗಾರಿಕೆಯಲ್ಲಿ ಅಮೆರಿಕಕ್ಕೆ ಮೊದಲ ಸ್ಥಾನ ; ಎರಡನೆಯ ಸ್ಥಾನ ಸೋವಿಯೆತ್ ಒಕ್ಕೂಟಕ್ಕೆ. ಅತ್ಯಂತ ಹೆಚ್ಚು ಬಟ್ಟೆಯನ್ನು ಉತ್ಪಾದಿಸುವ ದೇಶಗಳ ಪೈಕಿ ಒಕ್ಕೂಟ ಮೂರನೆಯದು. ವಿಮಾನುಗಾರಿಕೆಯಲ್ಲಿ ಪ್ರಪಂಚದಲ್ಲಿ ನಾಲ್ಕನೆಯ ಸ್ಥಾನ.

ಸೋವಿಯೆತ್ ಒಕ್ಕೂಟ ಮಾಡುವ ರಫ್ತಿನ ಪೈಕಿ ಶೇಕಡಾ 60ರಷ್ಟು ಕಚ್ಚಾ ಪದಾರ್ಥಗಳು. ಒಟ್ಟು ರಫ್ತಿನ ಕಾಲುಭಾಗ ಯಂತ್ರೋಪಕರಣಗಳು. ಆಹಾರ ವಸ್ತುಗಳು ಮತ್ತು ಕೆಲವು ಬಗೆಯ ಯಂತ್ರೋಪಕರಣಗಳನ್ನು ಆಮದುಮಾಡಿಕೊಳ್ಳುತ್ತದೆ. ಒಕ್ಕೂಟದ ವ್ಯಾಪಾರ ಪ್ರಮುಖವಾಗಿ ಪೂರ್ವ ಯೂರೋಪಿನ ರಾಷ್ಟ್ರಗಳ ಜತೆ. ಐರೋಪ್ಯ ಸಾಮಾನ್ಯ ಮಾರು ಕಟ್ಟೆಯ ಜೊತೆಗೂ ವ್ಯಾಪಾರ ಉಂಟು.

ಸೋವಿಯೆತ್ ಒಕ್ಕೂಟದ ನೈಸರ್ಗಿಕ ಸಂಪನ್ಮೂಲಗಳು ವಿಪುಲ. ಪ್ರಪಂಚದಲ್ಲಿ ಅತ್ಯಂತ ಹೆಚ್ಚಿನ ಕಲ್ಲಿದ್ದಲು ಇಲ್ಲಿ ಸಿಗುತ್ತದೆ. ಕಬ್ಬಿಣ, ಚಿನ್ನ, ತೈಲ ಈ ಸಂಪನ್ಮೂಲಗಳಲ್ಲಿ ಸೋವಿಯೆತ್ ಒಕ್ಕೂಟದ್ದು ಪ್ರಪಂಚದಲ್ಲಿ ಎರಡನೆಯ ಸ್ಥಾನ. ಸಮುದ್ರತೀರವಿಲ್ಲದಿದ್ದರೂ ಒಳಪ್ರದೇಶದ ಜಲ ಮಾರ್ಗಗಳು ಬಹಳ ಅನುಕೂಲವಾಗಿವೆ.

ಸೋವಿಯೆತ್ ಒಕ್ಕೂಟದ ಮೊದಲ ಪಂಚವಾರ್ಷಿಕ ಯೋಜನೆ 1928 ರಲ್ಲಿ ಪ್ರಾರಂಭವಾಯಿತು. ಮೂರನೆಯ ಪಂಚವಾರ್ಷಿಕ ಯೋಜನೆ ನಾಲ್ಕು ವರ್ಷ ಮಾತ್ರ ನಡೆಯಿತು. ಯುದ್ಧಾನಂತರದ ಅವಧಿಯಲ್ಲಿ ಸಪ್ತವಾರ್ಷಿಕ ಯೋಜನೆಗಳನ್ನು ರೂಪಿಸಿದ್ದಾರೆ. 1960ರಲ್ಲಿ ಕೈಗಾರಿಕೆಗೆ ಸಂಬಂಧಿಸಿದ ಇಪ್ಪತ್ತು ವರ್ಷಗಳ ಒಂದು ಯೋಜನೆ ರೂಪಿಸಲ್ಪಟ್ಟಿತು.

ಪೋಲೆಂಡ್ ಮತ್ತು ಸೋವಿಯೆತ್ ಒಕ್ಕೂಟಗಳ ಇಂದಿನ ಗಡಿಪ್ರದೇಶದ ಪರಿಸರದಿಂದ ಸ್ಲಾವ್ ಭಾಷೆಯನ್ನಾಡುವ ಬುಡಕಟ್ಟಿನ ಜನ ಆರನೆಯ ಶತಮಾನದಲ್ಲಿ ಪೂರ್ವ ಪ್ರದೇಶಕ್ಕೆ ವಲಸೆಬಂದವರು. ಒಂಬತ್ತನೆಯ ಶತಮಾನದ ಸುಮಾರಿಗೆ ರಷ್ಯನ್ ರಾಜ್ಯಭಾರ ಇಂದಿನ ಕೀವ್‌ನಗರದ ಸುತ್ತಮುತ್ತಲ ಪ್ರದೇಶಗಳಲ್ಲಿ ನೆಲೆಗೊಂಡಿತ್ತು. ಆಡಳಿತ ವ್ಯಾಪಾರಗಳಲ್ಲಿ ಸ್ಕ್ಯಾಂಡಿನೇವಿಯನರ ಪ್ರಭಾವ ಆಗ ವಿಶೇಷ. ಹಲವು ಸಣ್ಣಪುಟ್ಟ ಪ್ರದೇಶಗಳು ಸೇರಿ ಕೀವ್ ರಾಜ್ಯ. 989 ಸುಮಾರಿನಲ್ಲಿ ರಾಜಕುಮಾರ ವ್ಲದೀಮಿರ್ ಕ್ರೈಸ್ತಮತವನ್ನು ಅಂಗೀಕರಿಸಿದ. ಅಲ್ಲಿಂದ ಮುಂದೆ ಕ್ರೈಸ್ತಮತ ರಷ್ಯನಲ್ಲಿ ಬೇರೂರಿತು. 1241ರಲ್ಲಿ ಕೀವ್ ರಾಜ್ಯದ ಬಹುತೇಕ ಪ್ರದೇಶ ಮಂಗೋಲರ ವಶಕ್ಕೆ ಬಂದಿತು. ಪಶ್ಚಿಮದ ಪ್ರದೇಶಗಳನ್ನು ಲಿಥುವಿನಿಯದ ಮತ್ತು ಪೋಲೆಂಡಿನ ಆಕ್ರಮಣಕಾರರು ವಶಪಡಿಸಿಕೊಂಡರು. ಮಾಸ್ಕೊ ನಗರದಲ್ಲಿ ನೆಲೆಸಿದ್ದ ಸಾಮಂತರು ಮಂಗೋಲರ ಪರವಾಗಿ ತೆರಿಗೆ ಕಂದಾಯಗಳನ್ನು ವಸೂಲುಮಾಡಿ ಅವರಿಗೆ ಸಲ್ಲಿಸುತ್ತಿದ್ದರು. ಮಾಸ್ಕೊ ಸಾಮಂತರು ಕ್ರಮೇಣ ತಮ್ಮ ಪ್ರಾಬಲ್ಯ ಬೆಳೆಸಿಕೊಂಡು ಹದಿನಾಲ್ಕನೆಯ ಶತಮಾನದ ಹೊತ್ತಿಗೆ ಮಂಗೋಲರನ್ನು ಎದುರಿಸುವಂತಾದರು. 1480ರಲ್ಲಿ ಮೂರನೆಯ ಐವಾನ್ ಎಂಬ ದೊರೆ ಮಂಗೋಲಿಯನ್ ಸೈನ್ಯವನ್ನು ಎದುರಿಸಿ ಸೋಲಿಸಿದ; ಮಂಗೋಲರ ವಶದಲ್ಲಿದ್ದ ಹಲವಾರು ನಗರಗಳನ್ನು ವಶಪಡಿಸಿಕೊಳ್ಳಲು ಸಾಧ್ಯವಾಯಿತು. ಹದಿನಾರು ಮತ್ತು ಹದಿನೇಳನೆಯ ಶತಮಾನಗಳ ರಷ್ಯನ್ ದೊರೆಗಳು ರಾಜ್ಯವಿಸ್ತರಣೆಯಲ್ಲಿ ತೊಡಗಿದ್ದರು. 1682ರಲ್ಲಿ ಮೊದಲನೆಯ ಜಾರ್ ಪೀಟರ್ ಎಂಬ ದೊರೆ ಬಾಲ್ಟಿಕ್ ಸಮುದ್ರ ತೀರಪ್ರದೇಶವನ್ನು ಹಿಡಿದು ಸೇಂಟ್ ಪೀಟರ್ಸ್‌ಬರ್ಗ್ (ಈಗಿನ ಲೆನಿನ್‌ಗ್ರಾಡ್) ಬಂದರನ್ನು ನಿರ್ಮಿಸಿದ. ಇವನ ಕಾಲದಲ್ಲಿ ರಷ್ಯ ಆಧುನಿಕ ಯುಗಕ್ಕೆ ಕಾಲಿಟ್ಟಿತು. ಪೀಟರನ ಅನಂತರ ಬಂದ ಜಾರ್ ದೊರೆಗಳು ರಷ್ಯದ ಸೀಮೆಯನ್ನು ಸತತವಾಗಿ ವಿಸ್ತರಿಸಿದರು. ಹತ್ತೊಂಬತ್ತನೆಯ ಶತಮಾನದ ಆರಂಭದ ಹೊತ್ತಿಗೆ, ಸೋವಿಯೆತ್ ಒಕ್ಕೂಟ ಇಂದು ಹೊಂದಿರುವ ಪ್ರದೇಶವೆಲ್ಲ ಜಾರ್ ದೊರೆಗಳ ರಾಜ್ಯಾಡಳಿತಕ್ಕೆ ಒಳಪಟ್ಟಿತು. ರೈತರು ಮತ್ತು ಕಾರ್ಮಿಕರ ಶೋಷಣೆ ತೀವ್ರವಾಗಿ ನಡೆದು ಜನರಲ್ಲಿ ಅಸಂತೃಪ್ತಿ ಕ್ರಮವಾಗಿ ಹೆಚ್ಚಿತು. ಎರಡನೆಯ ನಿಕೊಲಸ್ ಆಳುತ್ತಿದ್ದಾಗ 1904ರಲ್ಲಿ ಜಪಾನರೊಂದಿಗೆ ಸೆಣಸಬೇಕಾಯಿತು. ಅದರಲ್ಲಿ ಸೋಲುವ ಸ್ಥಿತಿ ಒದಗಿದ ಸಮಯದಲ್ಲೇ ಜನ ದಂಗೆ ಎದ್ದರು. ದಂಗೆಯನ್ನು ಅಣಗಿಸಲಾಯಿತಾದರೂ ರೈತರು ಮತ್ತು ಕಾರ್ಮಿಕರನ್ನೊಳಗೊಂಡ ಶಾಸಕಾಂಗವನ್ನು ರಚಿಸಲು ದೊರೆ ಒಪ್ಪಿದ. ಆದರೂ ಪರಮಾಧಿಕಾರ ಆತನ ವಶದಲ್ಲಿಯೇ ಉಳಿಯಿತು.

1917ರಲ್ಲಿ ಮೊದಲನೆಯ ಮಹಾಯುದ್ಧದಲ್ಲಿ ಸೋಲನ್ನು ಅನುಭವಿಸಿದಾಗ ಜನ ಅಪಾರ ಕಷ್ಟನಷ್ಟಗಳಿಗೆ ಸಿಲುಕಬೇಕಾಯಿತು. ಆ ಸಮಯದಲ್ಲಿ ಕ್ರಾಂತಿ ನಡೆಯಿತು. ಕ್ರಾಂತಿಯ ನಾಯಕನಾಗಿದ್ದವನು ಲೆನಿನ್. 1917 ಜುಲೈಯಲ್ಲಿ ಕ್ರಾಂತಿಕಾರಿ ಅಲೆಗ್ಸಾಂಡರ್ ಕೆರೆನ್ಸ್ಕಿಯ ನೇತೃತ್ವದಲ್ಲಿ ಹಂಗಾಮಿ ಸರಕಾರ ರಚಿಸಲ್ಪಟ್ಟಿತು. ಕಮ್ಯೂನಿಸ್ಟ್ ಕ್ರಾಂತಿಕಾರಿಗಳಲ್ಲಿ ಎರಡು ಬಣಗಳಿದ್ದುವು. ಅವು ಬೋಲ್ಶೆವಿಕ್ ಮತ್ತು ಮೆನ್ಶೆವಿಕ್. ಬೋಲ್ಶೆವಿಕ್ ಪಕ್ಷದ ನಾಯಕ ಲೆನಿನ್ ಅಕ್ಟೋಬರಿನಲ್ಲಿ ಕ್ರಾಂತಿ ಎಬ್ಬಿಸಿ ಹಂಗಾಮಿ ಸರಕಾರದಿಂದ ಅಧಿಕಾರ ಕಸಿದುಕೊಂಡ. 1918ರಿಂದ ಮೂರು ವರ್ಷಗಳ ಅಂತರ್ಯುದ್ಧಕ್ಕೆ ಇದು ದಾರಿಮಾಡಿತು. ಆದರೆ ಲೆನಿನ್ ಪ್ರಚಾರ ಸಾಧನಗಳಿಂದಲೂ ರೈತರ ಮತ್ತು ಕಾರ್ಮಿಕರ ಸಂಘಟನೆಯಿಂದಲೂ ತನ್ನ ಬಲವನ್ನು ಹೆಚ್ಚಿಸಿಕೊಂಡ. 1922ರಲ್ಲಿ ಕಮ್ಯೂನಿಸ್ಟ್ ಸರಕಾರ ರಷ್ಯದಲ್ಲಿ ಸ್ಥಾಪಿತವಾಯಿತು. ಲೆನಿನ್ 1924ರಲ್ಲಿ ಮಡಿದ.

ಕಮ್ಯೂನಿಸ್ಟ್ ನಾಯಕರಲ್ಲೇ ಅಧಿಕಾರಕ್ಕೆ ಏರಲು ಪೈಪೋಟಿ ನಡೆದು ಸ್ಟಾಲಿನ್ ಅಧಿಕಾರಕ್ಕೆ ಬಂದ. ಸಮುದಾಯ ಕೃಷಿ ಮತ್ತು ಕೈಗಾರಿಕೋದ್ಯಮಗಳನ್ನು ಸ್ಟಾಲಿನ್ ಬೆಳೆಸಿದ. ಸ್ಟಾಲಿನ್ ತನ್ನ ವಿರೋಧಿಗಳನ್ನು ಬಗ್ಗುಬಡಿಯುವಲ್ಲಿ ಕ್ರೂರಿಯಾಗಿದ್ದ. ಎರಡನೆಯ ಮಹಾಯುದ್ಧದಲ್ಲಿ ಸೋವಿಯೆತ್ ರಷ್ಯಕ್ಕೆ ವಿಜಯವನ್ನು ತಂದುಕೊಟ್ಟ. ಪೋಲೆಂಡ್, ಚೆಕೊಸ್ಲೊವಾಕಿಯ, ರುಮೇನಿಯ, ಬಲ್ಗೇರಿಯ, ಹಂಗೆರಿ ಮತ್ತು ಉತ್ತರ ಜರ್ಮನಿಗಳು ರಷ್ಯದ ಪ್ರಭಾವವಲಯದಲ್ಲಿ ಬಂದುವು. ಪ್ರಪಂಚದಲ್ಲಿ ಕಮ್ಯೂನಿಸ್ಟ್ ಬಣ ರೂಪುಗೊಂಡದ್ದು ಹೀಗೆ.

1953ರಲ್ಲಿ ಸ್ಟಾಲಿನ್ ನಿಧನಹೊಂದಿದ. ಅನಂತರ ಬುಲ್ಗಾನಿನ್ ಅಧಿಕಾರಕ್ಕೆ ಬಂದ. ಶೀಘ್ರವೇ ಅವನ ಸ್ಥಾನಕ್ಕೆ ಕ್ರುಶ್ಚೇವ್ ಆಗಮಿಸಿದ.

ಕ್ರುಶ್ಚೇವನ ಬಳಿಕ 1964ರಿಂದೀಚೆಗೆ ಸೋವಿಯೆತ್ ರಷ್ಯದ ಅಧಿಕಾರ ಒಬ್ಬನೇ ಪ್ರಭಾವಶಾಲಿ ನಾಯಕನ ಕೈಯಲ್ಲಿ ಉಳಿಯಲಿಲ್ಲ. ಬ್ರೆಜ್ನೇವ್, ಕೊಸಿಗಿನ್ ಮುಂತಾದವರನ್ನೊಳಗೊಂಡ ಸಮುದಾಯ ನಾಯಕತ್ವ ತಲೆದೋರಿತು. ಕಮ್ಯೂನಿಸ್ಟ್ ಚೀನ ಬಲಶಾಲಿ ರಾಷ್ಟ್ರವಾದದ್ದು ಸೋವಿಯೆತ್ ರಷ್ಯದನೆರವಿನಿಂದ. 1958ರಲ್ಲಿ ಪರಮಾಣು ಅಸ್ತ್ರಗಳ ನೆರವನ್ನು ನಿಲ್ಲಿಸಿದುದರಿಂದಲೂ, ಪಶ್ಚಿಮ ರಾಷ್ಟ್ರಗಳ ಜತೆ ತೀವ್ರಗಾಮಿಯಾಗಿ ನಡೆದುಕೊಳ್ಳದೆ ಇದ್ದುದರಿಂದಲೂ ಚೀನ ಸೋವಿಯೆತ್ ರಷ್ಯದೊಂದಿಗೆ ವಿರಸ ಬೆಳೆಸಿತು. ಮತ್ತೆ ಕಮ್ಯೂನಿಸ್ಟ್ ರಷ್ಯ ಮತ್ತು ಮಾವೋ ನಾಯಕತ್ವದ ಚೀನ ಒಂದಾಗಲಿಲ್ಲ.

ನೋಡಿ : ಅಕ್ಟೋಬರ್ ಕ್ರಾಂತಿ ; ಕಮ್ಯೂನಿಸಂ ; ಪೀಟರ್, ಮೊದಲನೆಯ ; ಮಾಸ್ಕೊ; ಲೆನಿನ್, ನಿಕೊಲಾಯ್ ಇಲ್ಯಿಚ್ ; ಸ್ಟಾಲಿನ್, ಜೋಸೆಫ್

## ಹಂಗೆರಿ

ಹಂಗೆರಿ ಪುರಾತತ್ತ್ವ ಶೋಧಕರಿಗೆ ಆಸಕ್ತಿಯನ್ನುಂಟು ಮಾಡುವ ದೇಶ. ಬುಡಾಪೆಸ್ಟ್ ಇರುವ ಜಾಗದಲ್ಲಿ ಹಿಂದೆ ಭೂಮಿ ಅಗೆದಾಗ ತಾಮ್ರಯುಗದ ಮಾದರಿಯ ಮಣ್ಣಿನ ಗಾಡಿ ಸಿಕ್ಕಿತು. ಈ ಬಗೆಯ ಸಾಮಾನು ಯೂರೋಪಿನಲ್ಲಿ ದೊರೆತದ್ದು ಇದೇ ಮೊದಲು. ಪ್ರಾಚೀನ ರೋಮ್ ನಗರ ಅಕ್ವಿನ್‌ಕಮ್ ಇದ್ದದ್ದು ಭೂ ಸಂಶೋಧನೆಯ ಸಮಯದಲ್ಲಿ ಪತ್ತೆಯಾಯಿತು. 16,000 ಜನರಿಗೆ ಅವಕಾಶವಿರುವ ದೊಡ್ಡ ವರ್ತುಲ ನಾಟಕಶಾಲೆಯ ಅವಶೇಷಗಳು ಕಂಡುಬಂದುವು. ಅಕ್ವಿನ್‌ಕಮ್ ವಸ್ತುಸಂಗ್ರಹಾಲಯದಲ್ಲಿ ರೋಮನರ ಕಾಲದ ಅಪೂರ್ವವಸ್ತುಗಳನ್ನು ಸಂಗ್ರಹಿಸಿಡಲಾಗಿದೆ. 2,000 ವರ್ಷಗಳ ಹಿಂದಿನ ಒಂದು ಜಲವಾದ್ಯ ಅಪೂರ್ವವಾದದ್ದು. ಬುಡಾಪೆಸ್ಟಿನಲ್ಲಿರುವ ಸರಪಳಿ ಸೇತುವೆ ಡ್ಯಾನ್ಯೂಬ್ ನದಿಯ ಅತಿ ಹಳೆಯ ಸೇತುವೆ. ನಾಜಿಗಳು ಇದನ್ನು ನಾಶಪಡಿಸಿದ ಮೇಲೆ 1949ರಲ್ಲಿ ಪುನಃ ಕಟ್ಟಿದರು.

ಹಂಗೆರಿ ಮಧ್ಯ ಯೂರೋಪಿನಲ್ಲಿರುವ ಗಣರಾಜ್ಯ. ಪಶ್ಚಿಮಕ್ಕೆ ಆಸ್ಟ್ರಿಯ, ಉತ್ತರಕ್ಕೆ ಚೆಕೊಸ್ಲೊವಾಕಿಯ, ಈಶಾನ್ಯಕ್ಕೆ ರಷ್ಯ, ಪೂರ್ವಕ್ಕೆ ರುಮೇನಿಯ ಮತ್ತು ದಕ್ಷಿಣಕ್ಕೆ ಯುಗೊಸ್ಲಾವಿಯಗಳಿರುವ ಹಂಗೆರಿಗೆ ಸಮುದ್ರ ತೀರವಿಲ್ಲ.

ಪೂರ್ವ–ಪಶ್ಚಿಮಗಳ ಸಂಧಿಸ್ಥಾನದಲ್ಲಿರುವ ಹಂಗೆರಿ ಬಾರಿಬಾರಿಗೂ ಆಕ್ರಮಣಕಾರರಿಗೆ ತುತ್ತಾಗಬೇಕಾಯಿತು. ಕ್ರಿಸ್ತಶಕಕ್ಕೆ ಮೊದಲು ರೋಮನ್ ಚಕ್ರಾಧಿಪತ್ಯಕ್ಕೆ ಸೇರಿದ್ದ ಹಂಗೆರಿ, ಹೂಣರು, ಸ್ಲಾವರು ಮುಂತಾದವರ ಆಡಳಿತಕ್ಕೊಳಪಟ್ಟಿತು. ಆದರೆ ಹಂಗೆರಿಯ ಚರಿತ್ರೆಯ ನಿಜವಾದ ಆರಂಭ 896ರಲ್ಲಿ ಮೆಗ್ಯಾರರು ಬಂದು ನೆಲೆಸಿದಾಗಲೆ ಎಂದು ಹಂಗೆರಿಯನರ ಅಭಿಪ್ರಾಯ. ಸ್ವಭಾವತಃ ಯುದ್ಧಪ್ರಿಯರಾದ ಮೆಗ್ಯಾರರು ತಾವು ನೆಲೆಸಿದ ನಾಡನ್ನು ದಾಳಿಕಾರರಿಂದ ರಕ್ಷಣೆ ಪಡೆಯುವಂತೆ ಕಟ್ಟಿಕೊಂಡರು. ಹತ್ತನೆಯ ಶತಮಾನದಲ್ಲಿ ಇವರು ರೋಮನ್ ಕ್ಯಾಥಲಿಕ್ ಮತವನ್ನು ಸೇರಿದರು. 1001ರಲ್ಲಿ ಮೆಗ್ಯಾರ್ ಮುಖಂಡ ಇಸ್ಟ್ವಾನನಿಗೆ ಕಿರೀಟವೊಂದನ್ನು ಪೋಪ್ ಕಳುಹಿಸಿ, ಅವನನ್ನು ಹಂಗೆರಿಯ ರಾಜನನ್ನಾಗಿ ಮಾಡಿದ. 1458ರಿಂದ 1490ರ ವರೆಗೆ ಆಳಿದ ಮಥಿಯಾಸ್ ಕ್ರೋವಿನಸ್‌ನ ಕಾಲದಲ್ಲಿ ಮಧ್ಯ ಯೂರೋಪಿನ ಪ್ರಬಲ ರಾಷ್ಟ್ರವಾಗಿ ನಿಂತಿತು ಹಂಗೆರಿ. ಅನಂತರ ತುರ್ಕಿಯವರ ಆಕ್ರಮಣದಿಂದ ಕಷ್ಟಪಟ್ಟಿತು. 1739ರಲ್ಲಿ ಆಸ್ಟ್ರಿಯದ ಆಳ್ವಿಕೆ ಪ್ರಾರಂಭವಾಯಿತು. 1867ರಲ್ಲಿ [illegible] ಸಿಕ್ಕಿತು. ತಮ್ಮ [illegible] ಬಗೆಗೆ [illegible]. ಆದರೆ ಆಸ್ಟ್ರಿಯದ ರಾಜ ಹಂಗೆರಿಯ ಚಕ್ರವರ್ತಿಯಾಗಿದ್ದ.

ಮೊದಲನೆಯ ಜಾಗತಿಕ ಯುದ್ಧದಲ್ಲಿ ಆಸ್ಟ್ರಿಯ ಮತ್ತು ಜರ್ಮನಿಯ ಪರ ಹಂಗೆರಿ ಹೋರಾಡಿತು.

ಎರಡನೆಯ ಜಾಗತಿಕ ಯುದ್ಧಕಾಲದಲ್ಲಿ ಜರ್ಮನರು ಹಂಗೆರಿಯನ್ನು ವಶಪಡಿಸಿಕೊಂಡರು. 1944 – 45ರಲ್ಲಿ ರಷ್ಯನರು ಜರ್ಮನರನ್ನು ಹಂಗೆರಿಯಿಂದ ಓಡಿಸಿದರು. 1946ರಲ್ಲಿ ಕಮ್ಯೂನಿಸ್ಟ್ ನೇತೃತ್ವದಲ್ಲಿ ದೇಶ ಗಣರಾಜ್ಯವಾಯಿತು, 1949ರ ವೇಳೆಗೆ ಸಂಪೂರ್ಣವಾಗಿ ಕಮ್ಯೂನಿಸ್ಟ್ ರಾಜ್ಯವಾಯಿತು. 1956 ಅಕ್ಟೋಬರ್ 23ರಂದು ಮರುಕ್ರಾಂತಿ ಆರಂಭವಾಯಿತು. ಸ್ವಲ್ಪ ಕಾಲ ಹಂಗೆರಿ ಕ್ರಾಂತಿಕಾರರ ವಶದಲ್ಲಿತ್ತು. ಪುನಃ ರಷ್ಯನರು ಮರುಕ್ರಾಂತಿಯನ್ನು ದಮನ ಮಾಡಿದರು. ಹಂಗೆರಿ ಕಮ್ಯೂನಿಸ್ಟ್ ಪ್ರಭಾವವಲಯದಲ್ಲೇ ಉಳಿಯಿತು.

ಡ್ಯಾನ್ಯೂಬ್ ನದಿ ಹಂಗೆರಿಯನ್ನು ಎರಡು ಭಾಗ ಮಾಡುತ್ತದೆ. ಪಶ್ಚಿಮಭಾಗದಲ್ಲಿರುವ ಬಲಾಟನ್ ಸರೋವರ [illegible] ಚದರ ಕಿಲೊ ಮೀಟರು ವಿಸ್ತೀರ್ಣವಿದೆ.

ಬೇಸಿಗೆಯಲ್ಲಿ ಬಹಳ ಸೆಖೆ. ಚಳಿಗಾಲದಲ್ಲಿ ಚಳಿ ಹೆಚ್ಚು.

ಹಂಗೆರಿ ವ್ಯವಸಾಯಕ್ಕೆ ಹೆಸರಾಗಿದೆ, ಶೇಕಡಾ 60 ಭಾಗ ಭೂಮಿಯಲ್ಲಿ ವ್ಯವಸಾಯ ನಡೆಯುತ್ತದೆ. ಗೋಧಿ ಮುಖ್ಯ ಬೆಳೆ. ರೈ, ಬಾರ್ಲಿ, ಓಟ್ಸ್ ಅಲ್ಪಪ್ರಮಾಣದಲ್ಲಿ ಬೆಳೆಯುತ್ತಾರೆ. ಸಕ್ಕರೆಬೀಟ್, ಆಲೂಗೆಡ್ಡೆ, ಟರ್ನಿಪ್, ಹಣ್ಣುಗಳು, ತರಕಾರಿ ಮತ್ತು ಹೊಗೆಸೊಪ್ಪು ಬೆಳೆಯುತ್ತಾರೆ.

ಹಂಗೆರಿಯ ಜನರಲ್ಲಿ ಶೇಕಡಾ 90 ಪಾಲು ಮೆಗ್ಯಾರ್ ಜನ. ರೋಮನ್ ಲಿಪಿಯ ಅಕ್ಷರಗಳನ್ನು ಬಳಸುತ್ತಾರೆ. ಮೂರನೆಯ ಎರಡು ಭಾಗ ಜನ ರೋಮನ್ ಕ್ಯಾಥಲಿಕರು. ಉಳಿದವರು ಪ್ರಾಟೆಸ್ಟೆಂಟರು. ಜನಪದ ಸಂಗೀತ ಮತ್ತು ನೃತ್ಯ ಜನಪ್ರಿಯವಾಗಿವೆ.

| | | |
|---|---|---|
| ಖಂಡ | : | ಯೂರೋಪ್ |
| ಅಕ್ಷಾಂಶ | : | 45° 45′ ಉ ದಿಂದ 48° 35′ ಉ |
| ರೇಖಾಂಶ | : | 16° 07′ ಪೂ ದಿಂದ 22° 53′ ಪೂ |
| ವಿಸ್ತೀರ್ಣ | : | 93,030 ಚ. ಕಿ. ಮೀ. |
| ಜನಸಂಖ್ಯೆ | : | 1,00,60,000 |
| ರಾಜಧಾನಿ | : | ಬುಡಾಪೆಸ್ಟ್ |
| ಭಾಷೆ | ; | ಮೆಗ್ಯಾರ್ |
| ಸರಕಾರ | : | ಜನತಾ ಗಣರಾಜ್ಯ |
| ಬಾವುಟ | : | ಕೆಂಪು, ಬಿಳಿ ಮತ್ತು ಹಸಿರುಬಣ್ಣದ ಅಡ್ಡಪಟ್ಟೆಗಳು |

ಹಂಗೆರಿಯಲ್ಲಿ ಖನಿಜ ನಿಕ್ಷೇಪಗಳು ಕಡಮೆ ಇರುವುದರಿಂದ ಕೈಗಾರಿಕೆ ಅಭಿವೃದ್ಧಿಯಾಗಲು ಅವಕಾಶವಾಗಿಲ್ಲ. ಆದರೂ ಹಂಗೆರಿಯನ್ನು ಉಕ್ಕು

ಮತ್ತು ಯಂತ್ರಗಳ ದೇಶವನ್ನಾಗಿ ಮಾಡಬೇಕೆಂಬ ಪ್ರಯತ್ನ ನಡೆದಿದೆ. ಕಲ್ಲಿದ್ದಲು, ಪೆಟ್ರೋಲಿಯಂ ಮತ್ತು ನೈಸರ್ಗಿಕ ಅನಿಲ ದೇಶದ ಅಗತ್ಯಕ್ಕೆ ಬೇಕಾದಷ್ಟು ದೊರಕುತ್ತಿಲ್ಲ. ಇವನ್ನು ಹೊರಗಿನಿಂದ ತರಿಸಿಕೊಳ್ಳ ಬೇಕಾಗಿದೆ. ಬಾಕ್ಸೈಟ್, ಕಬ್ಬಿಣ, ಮ್ಯಾಂಗನೀಸ್, ಯುರೇನಿಯಂ, ತಾಮ್ರ ಮತ್ತು ಸೀಸ ದೊರಕುತ್ತವೆ.

ರೈಲ್ವೆ ಬೋಗಿಗಳು ಮತ್ತು ಎಂಜಿನ್, ಹತ್ತಿಬಟ್ಟೆ, ಟ್ರಕ್, ಅಲ್ಯೂಮಿನಿಯಂ, ಉಕ್ಕು ಇವನ್ನು ರಫ್ತು ಮಾಡುತ್ತಾರೆ. ಕಲ್ಲಿದ್ದಲು, ಗೋಧಿ, ಮರದ ದಿಮ್ಮಿ, ಪೆಟ್ರೋಲಿಯಂ ಮತ್ತು ಕಬ್ಬಿಣಗಳನ್ನು ಆಮದು ಮಾಡಿಕೊಳ್ಳುತ್ತಾರೆ.

ರಾಜಧಾನಿ ಬುಡಾಪೆಸ್ಟನ್ನು ಡ್ಯಾನ್ಯೂಬ್ ನದಿ ಎರಡಾಗಿಸಿದೆ. ಸಣ್ಣ ಊರುಗಳಾಗಿದ್ದ ಬುಡಾ ಮತ್ತು ಪೆಸ್ಟ್ 1872ರಲ್ಲಿ ಒಂದಾದುವು. ಹಂಗೆರಿಯ ಬಹಳ ರಸ್ತೆಗಳು, ರೈಲುಮಾರ್ಗಗಳು ಇಲ್ಲಿ ಸಂಧಿಸುತ್ತವೆ. ಹಂಗೆರಿಯ ಐದನೆಯ ಒಂದು ಪಾಲು ಜನ ಇಲ್ಲಿ ವಾಸಿಸುತ್ತಾರೆ.

ಹಂಗೆರಿ ಜನತಾ ಗಣರಾಜ್ಯ. ಅಧ್ಯಕ್ಷರೇ ಸಚಿವಸಂಪುಟದ ಮುಖ್ಯಸ್ಥ.

## ಹಕ್ಕುಗಳ ಪತ್ರ

ನೋಡಿ: ಮೂಲಭೂತ ಹಕ್ಕುಗಳು

## ಹಡಗು

ಈಗಿನ ಕಾಲದಲ್ಲಿ ಒಂದು ಹಡಗು ಒಂದು ನಗರದಂತೆಯೇ ಇರುತ್ತದೆ. ನಗರದಲ್ಲಿ ದೊರೆಯುವ ಎಲ್ಲ ಸೌಲಭ್ಯಗಳೂ ಅಲ್ಲಿ ಸಿಗುತ್ತವೆ. ಮನೋರಂಜನೆ, ಆಟವಾಡಲು ಸ್ಥಳ, ಈಜುಗೊಳ, ವಾಚನಾಲಯ, ಊಟ, ಉಪಾಹಾರ ಎಲ್ಲವೂ ಒಂದು ಹಡಗಿನಲ್ಲಿರುತ್ತವೆ. ಸಹಜವಾಗಿಯೇ ಇವೆಲ್ಲವನ್ನು ಒಳಗೊಂಡ ಹಡಗು ಆಕಾರದಲ್ಲಿ ದೊಡ್ಡದು.

ಹಡಗು ಒಮ್ಮೆ ಬಂದರನ್ನು ಬಿಟ್ಟುಹೊರಟ ಅನಂತರ ಮತ್ತೆ ಅದು ಸಮುದ್ರತೀರ ಮುಟ್ಟಲು ಎಷ್ಟೋ ದಿನ ಹಿಡಿಯಬಹುದು. ನ್ಯೂಯಾರ್ಕ್ ಬಂದರಿನಿಂದ ಹೊರಟ ಹಡಗು ಲಂಡನಿಗೆ ಬರಲು ಅನೇಕ ದಿನಗಳ ಕಾಲ ಬೇಕಾಗುವುದುಂಟು. ಅದಕ್ಕಾಗಿಯೇ ಹಡಗಿನಲ್ಲಿ ಎಲ್ಲ ಸೌಕರ್ಯಗಳೂ ಇರುತ್ತವೆ.

ಕ್ವೀನ್ ಮೇರಿ ಎಂಬ ಆಧುನಿಕ ಪ್ರಯಾಣಿಕ ಹಡಗು ಸಾವಿರಾರು ಪ್ರಯಾಣಿಕರನ್ನು ಸಾಗಿಸುತ್ತಿತ್ತು. ಐವತ್ತು ರೈಲುಗಾಡಿಗಳು ಉತ್ಪಾದಿಸುವ ಚಲನಶಕ್ತಿ (ಎಂದರೆ 2,00,000 ಅಶ್ವಶಕ್ತಿ) ಇದೊಂದೆ ಉತ್ಪಾದಿಸುತ್ತಿತ್ತು. ನ್ಯೂ ಯಾರ್ಕ್‌ನಲ್ಲಿರುವ ಪ್ರಪಂಚದ ಅತಿ ಎತ್ತರದ ಗಗನಚುಂಬಿ ಕಟ್ಟಡ ಎಂಪೈರ್ ಸ್ಟೇಟ್ ಬಿಲ್ಡಿಂಗ್ 381 ಮೀಟರು ಎತ್ತರವಿದ್ದರೆ, ಕ್ವೀನ್ ಮೇರಿಯ ಉದ್ದ 310 ಮೀಟರು. ಪ್ರಯಾಣಿಕರು ಮತ್ತು ಸಿಬ್ಬಂದಿಗಳಿಗಾಗಿ 5,811 ಕಿ. ಗ್ರಾಮ್ ಸಕ್ಕರೆ, 1,634 ಕಿ. ಗ್ರಾಮ್ ಬೆಣ್ಣೆ, 25.4 ಮೆಟ್ರಿಕ್ ಟನ್ ಆಲೂಗೆಡ್ಡೆ, 250 ಪೆಟ್ಟಿಗೆ ಕಿತ್ತಲೆ, 545 ಕಿ. ಗ್ರಾಮ್ ಕಾಫಿ ಮುಂತಾದ ಅನೇಕ ಸಾಮಾನುಗಳನ್ನು ಶೇಖರಿಸಲಾಗುತ್ತದೆ. ಇಷ್ಟೊಂದು ಪದಾರ್ಥಗಳು ಕೆಡದಂತೆ ರಕ್ಷಿಸಲು ಮನೆಯಲ್ಲಿ ಬಳಸುವಂಥ 12,000 ಶೀತಾಗಾರ ಬೇಕಾಗುವವು.

ಕೇವಲ ದಿಮ್ಮಿಯು ಮೇಲೆ ನೀರಿನಲ್ಲಿ ತೇಲುವುದನ್ನು ಕಲಿತ ಮಾನವ ಇಂಥ ದೈತ್ಯಾಕಾರದ, ಚಿಕ್ಕ ಪಟ್ಟಣದಂತೆ ರಚಿತವಾದ ಹಡಗುಗಳಲ್ಲಿ ಪ್ರಯಾಣಮಾಡುತ್ತಿರುವುದು ದೊಡ್ಡ ಕಥೆ. ವಾಣಿಜ್ಯ ವ್ಯಾಪಾರಗಳಿಗೆಂದು ಆರಂಭವಾದ ಹಡಗು, ಸಾಮ್ರಾಜ್ಯಗಳ ಉಳಿವು ಅಳಿವುಗಳಿಗೆ ಕೂಡ ಕಾರಣವಾಯಿತು. ಇದರಿಂದ ಇಂದಿನ ಜಗತ್ತಿನ ಸಮರಶಕ್ತಿಯಲ್ಲಿ ನೌಕಾಬಲವೂ ಒಂದು ಪ್ರಬಲಶಕ್ತಿಯಾಗಿ ಪರಿಗಣಿಸಲ್ಪಡುತ್ತಿದೆ.

ನೀರಿನ ಬಳಿ ಕುಳಿತು ಒಂದು ದಿಮ್ಮಿಯನ್ನು ಕೊರೆದು ಪೊಳ್ಳುಮಾಡಿ ನೀರಿನಲ್ಲಿ ಅದನ್ನು ಇಳಿಬಿಟ್ಟಾಗ ಮೊದಲ ದೋಣಿ ಹುಟ್ಟಿತೆನ್ನಬಹುದು. ಹೆಚ್ಚು ತೂಕವನ್ನು ಸಾಗಿಸುವುದರಲ್ಲಿ ಮತ್ತು ಸುಲಭವಾಗಿ ಒಂದೇ ಹುಟ್ಟಿನಿಂದ ನಡೆಸುವುದರಲ್ಲಿ ಈ ರಚನೆ ತೆಪ್ಪವನ್ನು ಹಿಂದೆ ಹಾಕಿತು. ದೋಣಿಯಲ್ಲಿ ತಾನು ಎದ್ದುನಿಂತಾಗ ಮತ್ತು ಕುಳಿತಾಗ ಉಂಟಾಗುವ ಬದಲಾವಣೆಗಳಿಂದ ಹಾಯಿಪಟದ ಉಪಯೋಗವನ್ನು ಮನುಷ್ಯ ಕಂಡು ಕೊಂಡಿರಬೇಕು. ಮುಂದೆ ಮರದ ಚೌಕಟ್ಟಿಗೆ ತೊಗಟೆ ಅಥವಾ ತೊಗಲನ್ನು ತುಂಬಿಸಿದಾಗ ಹಗುರವಾದ, ಹೆಚ್ಚು ಹೊರೆ ಸಾಗಿಸಬಲ್ಲ ದೋಣಿ ಬಳಕೆಗೆ ಬಂದಿತು. ಈಗಲೂ ಆಫ್ರಿಕದ ಅಲಾಸ್ಕ, ಭಾರತಗಳಲ್ಲಿ ಪುರಾತನ ರೀತಿಯ ದೋಣಿಗಳು ಕಾಣಬರುತ್ತವೆ.

ಪುರಾತನ ಭಾರತದಲ್ಲಿ ಕ್ರಿ. ಪೂ. 860ರಲ್ಲಿ ಹಡಗುಗಳು ಭಾರತದ ಸುವಾಸನಾ ವಸ್ತುಗಳು, ಸಾಂಬಾರ ಸಾಮಾನುಗಳು, ಹತ್ತಿ, ರೇಷ್ಮೆ, ಶಾಲುಗಳು, ಕೆಂಪು, ಬೆಳ್ಳಿ ಮತ್ತು ಬಂಗಾರದ ಆಭರಣಗಳನ್ನು ಮೆಸಪ ಟೇಮಿಯ, ಅರೇಬಿಯ, ಈಜಿಪ್ಟ್‌ಗಳಿಗೆ ಒಯ್ಯುತ್ತಿದ್ದುವು. ಪರ್ಷಿಯ ಕೊಲ್ಲಿಯ ಮಾರ್ಗವಾಗಿ ಭಾರತ ಮತ್ತು ಬ್ಯಾಬಿಲಾನ್‌ಗಳಿಗೆ ಕ್ರಿ. ಪೂ. 700 ರಿಂದ 480ರ ವರೆಗೆ ವ್ಯಾಪಾರ ಸಂಪರ್ಕವಿತ್ತು. ಸಮುದ್ರಯಾನದ ಬಗೆಗೆ ಹೆಚ್ಚಿನ ಆಧಾರಗಳಿಲ್ಲ. ಫಾಹಿಯಾನನ ಬರವಣಿಗೆಯಲ್ಲಿ ಮಾತ್ರ ಭಾರತೀಯ ಹಡಗಿನ ಉಲ್ಲೇಖವಿದೆ. ಇದರಲ್ಲಿ 200 ಜನ ಪ್ರಯಾಣಿಕರಿಗೆ ಅವಕಾಶ ವಿದ್ದಿತಂತೆ. ಇದು ಕ್ರಿ. ಶ. 5ನೆಯ ಶತಮಾನದ ಹೇಳಿಕೆ. ಅಜಂತದ ಚಿತ್ರವೊಂದರಲ್ಲಿ ಮೂರು ವಿಭಾಗಗಳಿರುವ ಹಡಗಿನ ಚಿತ್ರವಿದೆ. ಭಾರತದ ಹಡಗಿನಲ್ಲಿ ಮರದ ಹಲಗೆಗಳನ್ನು ಭದ್ರವಾಗಿ ಹುರಿಗಳಿಂದ ಬಿಗಿಯುತ್ತಿದ್ದರು. ಭಾರತದ ಮುಖ್ಯ ರೇವುಗಳು ಪಶ್ಚಿಮ ಕರಾವಳಿ ಪ್ರದೇಶದಲ್ಲಿದ್ದುವು.

ಆಧುನಿಕ ಭಾರತದಲ್ಲಿ ವ್ಯಾಪಾರಿ ನೌಕೆಗಳ ಸಂಖ್ಯೆ 234. ಇದರಲ್ಲಿ ಕರಾವಳಿ ವಾಣಿಜ್ಯದಲ್ಲಿ 90 ಮತ್ತು ಸಾಗರೋತ್ತರ ವಾಣಿಜ್ಯದಲ್ಲಿ 144 ನೌಕೆಗಳು ಕಾರ್ಯಮಾಡುತ್ತಿವೆ. ಖಾಸಗಿ ಹಾಗೂ ಸರಕಾರಿ ವಲಯದ ಹಡಗು ಸಂಸ್ಥೆಗಳಿವೆ. ಹಡಗು ಕಟ್ಟುವುದನ್ನು ಮೊಟ್ಟಮೊದಲು 1919ರಲ್ಲಿ ಭಾರತದಲ್ಲಿ ವಿಶಾಖಪಟ್ಟಣದಲ್ಲಿ ಆರಂಭಿಸಲಾಯಿತು. ಇಂದು ಇದು ಸರಕಾರಿ ವಲಯಕ್ಕೆ ಸೇರಿದೆ. 1968ರ ವರೆಗೆ ಈ ಅಂಗಳದಲ್ಲಿ 46 ಹಡಗು ಗಳನ್ನು ಕಟ್ಟಲಾಯಿತು.

ಪಾಶ್ಚಾತ್ಯ ನಾಗರಿಕತೆ ಬೆಳೆದಂತೆ ವಾಣಿಜ್ಯ, ಪ್ರಯಾಣ ಮತ್ತು ಸಮರ ಗಳಿಗಾಗಿ ದೋಣಿಯ ಜಾಗವನ್ನು ಹಡಗುಗಳು ಆಕ್ರಮಿಸಿದುವು. ಹಡಗಿನ ವೇಗ, ಪ್ರಯಾಣ ಸಲಕರಣೆ ಇವುಗಳಲ್ಲಿ ಸುಧಾರಣೆಗಳಾದುವು. ಸರಕುಗಳ ಪ್ರಮಾಣ ಹೆಚ್ಚಿತು. ಇಂದಿನ ಪಾಶ್ಚಾತ್ಯ ಸಂಸ್ಕೃತಿಯ ತೊಟ್ಟಿಲು ತೂಗಿದ್ದು ಭೂಮಧ್ಯ ಸಮುದ್ರದ ಸುತ್ತ ಇರುವ ಭೂಭಾಗದಲ್ಲಿ. ಮೊದಲು ಹಡಗು ರೂಪುಗೊಂಡುದು ಇಲ್ಲಿಯೇ. ಕ್ರಿ. ಪೂ. 1500ರ ವೇಳೆಗೆ ಈಜಿಪ್ಟಿನವರು ಸರಕುಗಳ ಹಡಗುಗಳನ್ನು ಕಟ್ಟುವುದನ್ನು ಕಲಿತಿ ದ್ದರು. ಇವರ ಸಮರ ನೌಕೆಗಳಲ್ಲಿ ಯೋಧರು ಮತ್ತು ಹುಟ್ಟು ಹಾಕು

ವವರನ್ನು ರಕ್ಷಿಸಲೆಂದು ಪಾರ್ಶ್ವರಚನೆಗಳಿರುತ್ತಿದ್ದುವು. ಇವರ ಅನಂತರ ಬಂದ ಫಿನೀಷಿಯನರು ಅದ್ಭುತ ನಾವಿಕರಾಗಿದ್ದರು. ಇವರು, ಹುಟ್ಟು ಹಾಕುವವರು ಎರಡು ಅಥವಾ ಮೂರು ಹಂತಗಳಲ್ಲಿರುವಂಥ ಹಡಗುಗಳನ್ನು ಕಟ್ಟುತ್ತಿದ್ದರು. ಇವರಿಂದ ಗ್ರೀಕರು ಸರಕುಗಳನ್ನು ಹೊರುವ ದೊಡ್ಡ ಹಡಗುಗಳನ್ನೂ ಹಗುರವಾದ, ಆ ಕಾರಣದಿಂದ ವೇಗವಾಗಿ ಹೋಗಬಲ್ಲ, ಸಮರನಾವೆಗಳನ್ನೂ ಕಟ್ಟಲು ಕಲಿತರು. ಗುಲಾಮಗಿರಿ ರೂಢಿಯಲ್ಲಿದ್ದ ರೋಮ್ ಚಕ್ರಾಧಿಪತ್ಯ ತಾನು ಉತ್ತಮ ನೌಕೆಗಳನ್ನು ಮಾಡಲು ಕಲಿತಾಗ ಅಸಂಖ್ಯಾತ ಗುಲಾಮರನ್ನು ಹಡಗು ನಡೆಸುವ ಕೆಲಸಕ್ಕೆ ನೇಮಿಸಿತು. ಹುಟ್ಟುಹಾಕುವುದೊಂದೇ ಬದುಕಿನುದ್ದಕ್ಕೂ ಈ ಗುಲಾಮರ ಉದ್ಯೋಗ. ಕ್ರಿ. ಪೂ. 55ರಲ್ಲಿಯೇ ಹಡಗಿನ ಅಂಗಳ (ಹಡಗನ್ನು ಕಟ್ಟುವ, ದುರಸ್ತಿ ಮಾಡುವ ಸ್ಥಳ) ವನ್ನು ಜೂಲಿಯಸ್ ಸೀಸರ್ ಕಟ್ಟಿಸಿದ್ದ. ಆ ಕಾಲದಲ್ಲಿ ಸರಕುಗಳುಳ್ಳ ಹಡಗನ್ನು ಪ್ರಧಾನವಾಗಿ ಹಾಯಿಪಟಗಳಿಂದ ನಡೆಸ ಲಾಗುತ್ತಿತ್ತು.

ಸುಮಾರು ಎಂಟನೆಯ ಶತಮಾನದ ವೇಳೆಗೆ ಬಂದ ನೀಳವಾದ ವಿಶೇಷ ಆಕೃತಿಯ ಮುಂಚೂಣಿ ಮತ್ತು ಹಿಂಚೂಣಿಗಳಿರುವ ಹಡಗುಗಳು ಸಮುದ್ರದ ಅತಿ ಒರಟು ಹವೆಯನ್ನು ಕೂಡ ಎದುರಿಸಿದುವು. ಇವು ಸಾಧಾರಣ 24.4 ಮೀಟರು ಉದ್ದವಿದ್ದು, 32 ಹುಟ್ಟುಗಳಿಗೆ (ಎರಡು ಕಡೆಯೂ 16) ಅವಕಾಶವಿರುತ್ತಿತ್ತು. ಹುಟ್ಟು ಹಾಕುವವರನ್ನು ರಕ್ಷಿಸಲು ಗುರಾಣಿಯಂಥ ಮರದ ಆಕೃತಿಗಳನ್ನು ತೂಗಹಾಕಲಾಗುತ್ತಿತ್ತು. ನಿಚ್ಚಳ ಬಣ್ಣದ ಒಂದೇ ಒಂದು ಹಾಯಿಪಟ ಈ ಹಡಗಿನ ಧ್ವಜಸ್ತಂಭಕ್ಕೆ ಬಿಗಿಯ ಲ್ಪಡುತ್ತಿತ್ತು. ಈ ಹಡಗಿನ ಮಾಲಿಕರು ಸ್ಕ್ಯಾಂಡಿನೇವಿಯದ ನಾರ್ಸ್ ಜನರು. ಇವರು ಅತ್ಯಂತ ಸಾಹಸಿ ನಾವಿಕರಾಗಿದ್ದರು. ಇವರ ಪ್ರಭಾವ ದಿಂದಲೆ ಇಂಗ್ಲೆಂಡಿನ ಮತ್ತು ಅಮೆರಿಕದ ಮಧ್ಯಯುಗದ ನೌಕೆಗಳು ರೂಪು ಗೊಂಡುವು.

ಹದಿನಾರನೆಯ ಶತಮಾನದಿಂದ ಅನ್ವೇಷಣೆ ಆರಂಭವಾಯಿತು. ಹೊಸ ನೆಲ, ಹೊಸ ವಾಣಿಜ್ಯ, ಹೊಸ ದಿಗ್ವಿಜಯಗಳು ಸಾಗರಯಾನದ ದಿಗಂತ ಗಳನ್ನು ದೂರ ಸರಿಸಿದುವು. ದೊಡ್ಡ ದೊಡ್ಡ ಹಾಯಿ ಹಡಗುಗಳು, ತಿಂಗಳುಗಟ್ಟಲೆ ಸಮುದ್ರ ಪ್ರಯಾಣ ಸಾಧಿಸಿದುವು. ಇವುಗಳಿಗೆ ಒಂದ ಕ್ಕಿಂತ ಹೆಚ್ಚು ಕೂವೆಮರ (ಧ್ವಜಸ್ತಂಭ) ಹಾಯಿಪಟಗಳು ಇದ್ದುವು. ಸಾಹಸಿಗಳು ಉತ್ತರ ಅಮೆರಿಕ, ಆಫ್ರಿಕ, ದಕ್ಷಿಣ ಅಮೆರಿಕಗಳನ್ನು ಕಂಡು ಹಿಡಿದರು. ಅಟ್ಲಾಂಟಿಕ್, ಹಿಂದೂ, ಶಾಂತ ಸಾಗರಗಳ ಮೇಲೆಲ್ಲ ಪ್ರಯಾಣ ಸುಲಭವಾಯಿತು. ಹಡಗಿನ ಸಂಚಾರಕ್ಕೆ ಅನುಕೂಲವಾದ ಮಾರುತ ಯಾವುದು ಪ್ರತಿಕೂಲ ಮಾರುತ ಯಾವುದು ಎಂಬುದನ್ನು ಕಂಡು ಕೊಂಡರು. ಅಂಥ ಪ್ರಯಾಣದಲ್ಲಿ ಕಂಗೆಟ್ಟವರಿದ್ದರು. ಅನೇಕರು ಆಹಾರ ಕೊರತೆ, ರೋಗರುಜಿನಗಳಿಂದ ಅಸು ನೀಗಿದರು. ಹೀಗೆ ಅಸಂಖ್ಯಾತ ಮಂದಿ ಮಡಿದರು. ಆದರೆ ಈ ಸಾಹಸಯಾನಗಳು ಅನುಭವ ಕಲಿಸಿದ ಪಾಠ ಮಾತ್ರ ಅಮೂಲ್ಯ ಸಂಗ್ರಹವಾಯಿತು. ಇದರಿಂದ ನೌಕಾವೃತ್ತಿ ಉದ್ಯೋಗ, ಸಾರಿಗೆ ಮತ್ತು ಸಂಪರ್ಕಗಳ ಚರಿತ್ರೆಯಲ್ಲಿ ಹೊಸ ಅಧ್ಯಾಯ ಪ್ರಾರಂಭವಾಯಿತು.

ಹಾಯಿಪಟಗಳಲ್ಲಿ ಚೌಕ ಹಾಗೂ ತ್ರಿಕೋಣ ಪಟಗಳೆಂಬ ಎರಡು ವಿಧ ಗಳಿದ್ದುವು. ಕೂವೆಮರಗಳಿಗೆ ಇವುಗಳನ್ನು ಓರೆಯಾಗಿ ಕಟ್ಟುವುದರಿಂದ ಗಾಳಿಯ ನಿರೋಧಶಕ್ತಿಯನ್ನು ತಡೆಯುವುದು ಸಾಧ್ಯವಾಗುತ್ತಿತ್ತು.

ಯಂತ್ರಗಳಿಂದ ಹಡಗು ನಡೆಸುವ ಭಾವನೆಗೆ ಪೂರ್ಣಸ್ವರೂಪ ಬಂದುದು ಹದಿನೆಂಟನೆಯ ಶತಮಾನದಲ್ಲಿ.

ಮುಂದೆ ಉಗಿಹಡಗುಗಳು ಬಂದುವು. ಉಗಿಹಡಗಿನಿಂದ ಸಮುದ್ರ ಪ್ರಯಾಣದಲ್ಲಿ ಅಸಾಧಾರಣ ಪ್ರಗತಿಯಾಯಿತು. ಗಾಳಿಯ ಪ್ರಭಾವ ದಿಂದ ವಿಚಲಿತವಾಗದೆ ಸ್ವತಂತ್ರವಾಗಿ ಹಡಗುಗಳು ಚಲಿಸಲು ಆರಂಭಿಸಿ ದುವು. ಹುಟ್ಟುಹಾಕುವ ಶ್ರಮ ಉಳಿಯಿತು. 1770ರಲ್ಲಿ ಕೆಲವು ಉಗಿ ದೋಣಿಗಳು ಸಿದ್ಧವಾದರೂ ಇದೇ ಕಾರ್ಯ ಮುಂದೆ ಉಗಿಹಡಗಿಗೆ ನಾಂದಿಯಾಯಿತು. 1840ರಲ್ಲಿ ಉಗಿಹಡಗಿನ ವಿಖ್ಯಾತ ಕಂಪೆನಿಯೊಂದು ಹುಟ್ಟಿತು. 1850ರೊಳಗೆ ಉಗಿಹಡಗುಗಳು ಅಟ್ಲಾಂಟಿಕ್ ಸಾಗರವನ್ನು 11 ಅಥವಾ 12 ದಿನಗಳಲ್ಲಿ ಕ್ರಮಿಸಿದುವು. ಆದರೆ ಮರದಲ್ಲೇ ತಯಾರಿಸ ಲಾದ ಇಂಥ ದೊಡ್ಡ ದೊಡ್ಡ ಹಡಗುಗಳು ಸಮುದ್ರದ ಹೊಡೆತವನ್ನು ತಾಳದೆ ಬೇಗ ನಾಶಗೊಳ್ಳುತ್ತಿದ್ದುವು. ಕಬ್ಬಿಣದ ಹಡಗುಗಳು ಬರಲು ಇದೇ ಕಾರಣ. ಈ ಹಡಗುಗಳಲ್ಲಿ ಇರುಚಿದ ಅಲಗುಗಳ ಚಾಲಕದಂಡ ಜೋಡಿಸಲ್ಪಟ್ಟು, ಹಡಗುಗಳ ಚಲನೆಯ ವೇಗ ಹೆಚ್ಚಿತು. ಸಮರನೌಕ ಗಳು ಮಾತ್ರ ಇನ್ನೂ ಹಾಯಿಪಟಗಳಿಂದಲೇ ಚಲಿಸುತ್ತಿದ್ದುವು. 1871ರಲ್ಲಿ ಸಮರನೌಕೆಯೊಂದು ಉಗಿಯಿಂದ ಚಲಿಸಿತು. 1881ರಲ್ಲಿ ಉಕ್ಕಿನ ಹಡಗು ಗಳು ಬಂದುವು. ಉಗಿಹಡಗುಗಳಿಗೆ ಚಲಚಕ್ರಗಳನ್ನು ಜೋಡಿಸಿದ ಅನಂತರ ಬ್ರಿಟನಿನ ಹಡಗುಗಳು ವೇಗದಲ್ಲಿ ಮೊದಲ ಸ್ಥಾನ ಪಡೆದುವು. 1897ರಲ್ಲಿ ಟರ್ಬಿನಿಯಾ ಎಂಬ ಇಂಥ ಹಡಗಿನ ವೇಗ ಎಲ್ಲರನ್ನೂ ಬೆರಗು ಗೊಳಿಸಿತು. ಈ ಶತಮಾನದ ಮೂರನೆಯ ದಶಕದಲ್ಲಿ 1935ರ ವೇಳೆಗೆ ಮೋಟಾರು ಯಂತ್ರಗಳುಳ್ಳ ಹಡಗುಗಳ ಸಂಖ್ಯೆ ಹೆಚ್ಚಿತು. ಇದರಲ್ಲಿ ಕಚ್ಚಾ ಪೆಟ್ರೋಲಿಯಂ ತೈಲವನ್ನು ಇಂಧನದಂತೆ ಉರಿಸಿ ಹಡಗು ಚಲಿಸುತ್ತಿದ್ದಿತು. 'ಕ್ವೀನ್ ಮೇರಿ' ಎಂಬ ಹಡಗು ಈ ಕಾಲದಲ್ಲಿ ಸಮುದ್ರದ ಮೇಲೆ ತೆರಳಿತು. ನೌಕಾದಳಕ್ಕೆ ಬೇಕಾದ ಹಡಗುಗಳು 1900ರ ತರುವಾಯ ಹೆಚ್ಚು ಹೆಚ್ಚು ಉತ್ಪಾದಿಸಲ್ಪಟ್ಟವು. ಇದರಲ್ಲಿ ಜಲಾಂತ ರ್ಗಾಮಿ ನೌಕೆ ಮತ್ತು ವಿಮಾನ ನೌಕೆಗಳು ಬಹಳ ಮುಖ್ಯ. ಜಲಾಂತ ರ್ಗಾಮಿ ನೌಕೆ ಸಮುದ್ರ ಗರ್ಭದಲ್ಲಿ ಚಲಿಸಿ ವೈರಿ ಹಡಗನ್ನು ಪತ್ತೆಮಾಡಿ ನಾಶಗೊಳಿಸಬಲ್ಲುದು. ವಿಮಾನ ನೌಕೆ ವಿಮಾನಗಳನ್ನು ಹೊತ್ತು ಸಮುದ್ರದ ಮೇಲೆ ಅಪೇಕ್ಷಿತ ಜಾಗದಿಂದ ವಿಮಾನಗಳನ್ನು ಹಾರಿಸುತ್ತಿದ್ದಿತು.

ಹಡಗುಗಳನ್ನು ಕಟ್ಟುವುದರಲ್ಲಿ ಮುಖ್ಯವಾಗಿ ಎರಡು ಘಟ್ಟಗಳಿವೆ. ಮೊದಲಿಗೆ ಹಡಗಿನ ಚೌಕಟ್ಟು, ಅದರ ಮುಖ್ಯ ವಿಭಾಗಗಳು ಹಾಗೂ ಅದರ ಮೇಲೆ ಬರಬೇಕಾದ ಕೆಲವು ಮುಖ್ಯ ರಚನೆ. ಇದೆಲ್ಲ ಮುಗಿದ ಬಳಿಕ ಹಡಗನ್ನು ನೀರಿನ ಮೇಲೆ ತೇಲಿಬಿಟ್ಟು ಅದಕ್ಕೆ ಎಂಜಿನುಗಳು, ಹಂಡೆಗಳು, ಯಂತ್ರಗಳು ಮತ್ತಿತರ ಸಾಮಗ್ರಿಗಳ ಜೋಡಣೆ. ಸಾಧಾರಣ ವಾಗಿ ಸಮುದ್ರ ಸೇರುವ ನದಿಯ ದಡದ ಮೇಲೆ ಹಡಗು ಕಟ್ಟುತ್ತಾರೆ. ಕಟ್ಟುವ ಅಡಿಪಾಯ ಇಳಿಜಾರಾಗಿ ನೀರಿನ ಭಾಗವನ್ನು ತಲಪುತ್ತದೆ. ಇದರಿಂದ ಪೂರ್ಣಗೊಂಡ ಹಡಗನ್ನು ಹೆಚ್ಚು ಶ್ರಮವಿಲ್ಲದೆ ನೀರಿನ ಮೇಲೆ ಜಾರಿಸಲು ಅನುಕೂಲವಾಗುತ್ತದೆ. ಕಟ್ಟುವಾಗಲೇ ನೀರು ನುಗ್ಗದಂತೆ ಭದ್ರವಾಗಿ ಹಡಗಿನ ಎಲ್ಲ ಭಾಗಗಳನ್ನು ಜೋಡಿಸುತ್ತಾರೆ. ಒಂದು ವೇಳೆ ಆಕಸ್ಮಿಕವಾಗಿ ತಳದಲ್ಲಿ ಎಲ್ಲಿಯಾದರೂ ನೀರು ನುಗ್ಗಿದರೂ ಅದು ಹಡಗ ನ್ನೆಲ್ಲ ಆಕ್ರಮಿಸದಂತೆ ಸುಭದ್ರ ವ್ಯವಸ್ಥೆ ಮಾಡಿರುತ್ತಾರೆ. ಹಡಗು ಪೂರ್ಣ ಗೊಂಡ ಮೇಲೆ ನೀರಿನೊಳಗೆ ತೇಲುಬಿಡುವುದು ದೊಡ್ಡ ಸಂಭ್ರಮ. ಹಡಗಿಗೆ ನಾಮಕರಣವಾಗುವುದೂ ಆಗಲೇ.

[illegible] ಉಪಯೋಗಿಸುವ ಆಲೋಚನೆಯಿದೆ. ಭವಿಷ್ಯದ ನೌಕೆಗಳು ಕೇವಲ ಪರಮಾಣು ಶಕ್ತಿಯಿಂದಲೇ ಚಲಿಸುವುವು.

ಹಡಗಿನ ಚಲನ ವೇಗವನ್ನು ನಾಟ್. ಲೀಗ್ ಎಂಬ ಮಾನಗಳಿಂದ ಅಳೆಯುತ್ತಾರೆ. ನಮ್ಮ ಯೋಜನಗಳಂತೆ ಇವು ಕಿಲೊಮೀಟರುಗಿಂತ ಹೆಚ್ಚು ಅಳತೆಯುಳ್ಳವು. (ನಾಟ್–1.854 ಮೀಟರು. ಇದಕ್ಕೆ ನೌಕಾ ಕಿಲೊಮೀಟರು ಎಂಬ ಹೆಸರಿದೆ. ಲೀಗ್ ಎಂದರೆ 1.8 ನೌಕಾ ಕಿಲೊಮೀಟರು.) ಪ್ರಯಾಣಿಕರ ಸಲುವಾಗಿ ವಿಲಾಸಿ ಹಡಗುಗಳು, ಸಾಮಾನು ಸಾಗಿಸಲು ಉಗಿಹಡಗುಗಳು, ಧಾನ್ಯ, ಕಚ್ಚಾ ಎಣ್ಣೆ ಸಾಗಾಟಕ್ಕೆ ಟ್ಯಾಂಕರ್ ಮಾದರಿಯ ವಿಶೇಷ ಹಡಗುಗಳು ಹೀಗೆ ಬೇರೆ ಬೇರೆ ತರದ ಹಡಗುಗಳಿವೆ. ಇಡೀ ರೈಲುಗಾಡಿಯನ್ನು ಸಾಗಿಸುವ ಹಡಗಿನ ವಿಷಯ ಒಂದು ಅಚ್ಚರಿಯೇ ಸರಿ.

ಕಾಲುವೆಯ ಒಂದು ದಂಡೆಯಿಂದ ಇನ್ನೊಂದು ದಂಡೆಗೆ ಹಡಗಿನ ಮೇಲೆ ರೈಲನ್ನು ಸಾಗಿಸುವುದು ಈಗ ಸಾಧ್ಯವಾಗಿದೆ. ಮೊದಲು ಹಡಗಿನಲ್ಲಿ ಸ್ವಲ್ಪ ನೀರು ತುಂಬಿಸಿ ಅದು ರೈಲು ಮಾರ್ಗದ ಮಟ್ಟಕ್ಕೆ ಬರುವಂತೆ ಇಳಿಸಲಾಗುವುದು. ರೈಲು ಅದರ ಮೇಲೆ ಸಂಪೂರ್ಣವಾಗಿ ಬಂದಮೇಲೆ ಗಾಲಿಗಳು ಹಳಿಗಳನ್ನು ಸೇರಿಸಿ ಕೀಲಿ ಹಾಕುತ್ತಾರೆ. ತುಂಬಿದ ನೀರು ಖಾಲಿಮಾಡಿ ಹಡಗು ಮೇಲೇಳುತ್ತದೆ. ಅನಂತರ ಆಚೆ ಬದಿಯನ್ನು ತಲಪಿ ಮತ್ತೆ ಸ್ವಲ್ಪ ನೀರು ತುಂಬಿಕೊಂಡು ಅಲ್ಲಿನ ರೈಲುಮಾರ್ಗದ ಮಟ್ಟಕ್ಕೆ ಇಳಿಯುತ್ತದೆ. ರೈಲುಗಾಡಿ ಹಡಗನ್ನು ಬಿಟ್ಟು ಸಂಪೂರ್ಣವಾಗಿ ಹೊರಬಂದ ಮೇಲೆ ನೀರು ಖಾಲಿಮಾಡಿ ಹಡಗು ಮೇಲೇಳುತ್ತದೆ. ರೈಲುಗಾಡಿ ಸಾಗಿಸುವ ಇಂಥ ಹಡಗುಗಳು 1849ರಲ್ಲಿ ಬ್ರಿಟನಿನಲ್ಲಿ ಕಾರ್ಯಾರಂಭ ಮಾಡಿದುವು. ಇದಾದಮೇಲೆ ಸಂಯುಕ್ತ ಸಂಸ್ಥಾನ, ಡೆನ್ಮಾರ್ಕ್ ಮತ್ತಿತರ ಕಡೆಗಳಲ್ಲಿಯೂ ರೈಲನ್ನು ಹೊತ್ತು ಸಾಗಿಸುವ ಹಡಗುಗಳು ವ್ಯವಹರಿಸತೊಡಗಿದುವು.

ಸಮುದ್ರ ದಂಡೆಯಿದ್ದ ರಾಷ್ಟ್ರ ಎಷ್ಟೇ ಚಿಕ್ಕದಿದ್ದರೂ ಅದರ ಬಳಿ ಕೆಲವು ಹಡಗುಗಳಾದರೂ ಇರುತ್ತವೆ. ಸಾಮಗ್ರಿಗಳನ್ನು ಪರದೇಶಗಳಿಗೆ ಕಳುಹಿಸಿಕೊಡಲು ಹಡಗು ಉತ್ತಮ ವಾಹಕ. ಹಡಗಿನ ಧ್ವಜ ನೋಡಿ, ಆ ಹಡಗು ಯಾವ ರಾಷ್ಟ್ರದ್ದೆಂಬುದನ್ನು ಗುರುತಿಸಬಹುದು.

ಮನುಷ್ಯನ ನಾಗರಿಕತೆಯ ಬೆಳವಣಿಗೆಯಲ್ಲಿ ಹಡಗಿನದು ಗಣನೀಯ ಪಾತ್ರ. ಜಲರಾಶಿ ಅಗಾಧವಾಗಿರುವ ಪ್ರಪಂಚದಲ್ಲಿ ಹಿಂದಿನಕಾಲದಲ್ಲಿ ಒಂದು ಭೂಭಾಗಕ್ಕೂ ಇನ್ನೊಂದು ಭೂಭಾಗಕ್ಕೂ ಸಂಪರ್ಕ ಕಲ್ಪಿಸಿದ್ದು ಹಡಗು. ಇಂಗ್ಲೆಂಡಿಗೂ ಯೂರೋಪಿನ ಮುಖ್ಯ ಭಾಗಕ್ಕೂ ಇಪ್ಪತ್ತೊಂದೇ ಕಿ..ಮೀ. ಗಳ ಅಂತರ. ಹಡಗುಗಳಿಲ್ಲದೆ ಹೋಗಿದ್ದರೆ ಇಂಗ್ಲೆಂಡಿಗೆ ಯೂರೋಪಿನ ಸಂಪರ್ಕವೇ ಇರುತ್ತಿರಲಿಲ್ಲ. ಪ್ರಪಂಚದ ವಿವಿಧ ಭಾಗಗಳನ್ನು ಕಂಡುಹಿಡಿದ ಕೊಲಂಬಸ್, ಸ್ಕಾಟ್, ವಾಸ್ಕೊ ದ ಗಾಮ, ನಾನ್‌ಸನ್ ಎಲ್ಲರನ್ನೂ ಕರೆದೊಯ್ದುದು ಹಡಗುಗಳು. ಒಂದು ದೇಶದ ಸಾಮಾನುಗಳು ಇನ್ನೊಂದು ದೇಶದಲ್ಲಿ ಮಾರಾಟವಾಗಲು ಹಡಗು ಕಾರಣ. ಒಂದು ದೇಶದ ಜ್ಞಾನವನ್ನು ಇನ್ನೊಂದು ದೇಶಕ್ಕೆ ಕೊಂಡೊಯ್ದುದು ಹಡಗು. ಬ್ರಿಟನಿನ ಸಾಮ್ರಾಜ್ಯವೇ ಹಡಗಿನ ಮೇಲೆ ನಿಂತಿತ್ತು ಬಹು ಕಾಲ !

## ಹಣ

ಹುಡುಗನಿಗೆ ಪುಸ್ತಕ ಬೇಕು. ಕೊಳ್ಳಲು ಅಂಗಡಿಯವರಿಗೆ ಹಣ ಕೊಡಬೇಕು. ಹಣ ಕೊಡದಿದ್ದರೆ ಪುಸ್ತಕವಿಲ್ಲ. ಒಂದು ವಸ್ತು ಕೊಟ್ಟು ಇನ್ನೊಂದು ವಸ್ತು ತೆಗೆದುಕೊಳ್ಳುವುದು ವಿನಿಮಯ. ಹಣ ನಮ್ಮ ಕೈಯಲ್ಲಿದ್ದರೆ ಯಾವ ಪದಾರ್ಥದ ಜತೆ ಆದರೂ ಅದನ್ನು ವಿನಿಮಯ ಮಾಡಿಕೊಳ್ಳಬಹುದು.

ಹಾಗೆಯೇ ಯಾವ ಪದಾರ್ಥವನ್ನಾದರೂ ಮಾರಿ ಹಣ ಪಡೆಯಬಹುದು. ನಾವು ಇನ್ನೊಬ್ಬರಿಗಾಗಿ ಕೆಲಸ ಮಾಡಿದರೆ ಆಗ ಅವರು ಹಣ ಕೊಡುತ್ತಾರೆ. ನಾವು ಕೆಲಸ ಮಾಡುವುದು 'ದುಡಿಮೆ'; ದುಡಿಮೆಯನ್ನು 'ಮಾರಿ' ದರೆ ಹಣ ಸಿಗುತ್ತದೆ.

ರೂಪಾಯಿ ನೋಟುಗಳೂ ನಾಣ್ಯಗಳೂ ಹಣ. ಹಿಂದೆ ಈ ನೋಟು–ನಾಣ್ಯಗಳು ಇರಲಿಲ್ಲ ; ಆಗ ಜನ ತಮಗೆ ಬೇಕಾದ ಪದಾರ್ಥಗಳನ್ನು ಹೇಗೆ ಕೊಳ್ಳುತ್ತಿದ್ದರು ? ಹೇಗೆ ಮಾರುತ್ತಿದ್ದರು ?

ಆಗ ವಸ್ತುಗಳನ್ನೇ ವಿನಿಮಯ ಮಾಡಿಕೊಳ್ಳುತ್ತಿದ್ದರು. ಸಾವಿರಾರು ವರ್ಷಗಳ ಹಿಂದೆ ಮೂಲನಿವಾಸಿಗಳು ಅಲ್ಲಲ್ಲಿ ಗುಂಪುಗಳಲ್ಲಿ ವಾಸಿಸುತ್ತಿದ್ದರು. ಅವರು ಬೇಟೆಯಾಡುತ್ತಿದ್ದರು. ಗುಡಿಸಲು, ಮರದ ಗೂಡು, ಗುಹೆಗಳಲ್ಲಿ ಮಲಗುತ್ತಿದ್ದರು. ಪ್ರಾಣಿಗಳ ಚರ್ಮಗಳನ್ನು ಹೊದೆಯುತ್ತಿದ್ದರು. ಒಳ್ಳೆಯ ಬೇಟೆಗಾರನ ಬಳಿ ಒಂದಕ್ಕಿಂತ ಹೆಚ್ಚು ಪ್ರಾಣಿಚರ್ಮಗಳಿರುತ್ತಿದ್ದುವು. ಮೀನು ಹಿಡಿಯುವುದರಲ್ಲಿ ಪಳಗಿದವನು ಹೆಚ್ಚು ಮೀನುಗಳನ್ನು ಹಿಡಿಯುತ್ತಿದ್ದ. ಬೇಟೆಗಾರನಿಗೆ ಮೀನುಗಳು ಬೇಕಾಗುತ್ತಿದ್ದುವು. ಮೀನುಗಳನ್ನು ಹಿಡಿಯುವವನ ಬಳಿ ಹೊದೆಯಲು ಸಾಕಷ್ಟು ಪ್ರಾಣಿಚರ್ಮವಿರುತ್ತಿರಲಿಲ್ಲ. ಆಗ ಮೀನು ಮತ್ತು ಪ್ರಾಣಿಚರ್ಮಗಳನ್ನು ಪರಸ್ಪರ ಕೊಟ್ಟು ತೆಗೆದುಕೊಳ್ಳುತ್ತಿದ್ದರು. ಇದು ವಸ್ತುವಿನಿಮಯ. ಒಂದೇ ಗುಂಪಿನವರಲ್ಲದೆ ಬೇರೆ ಬೇರೆ ಗುಂಪುಗಳ ಮೂಲನಿವಾಸಿಗಳ ನಡುವೆ ಕೂಡ ಈ ವಸ್ತುವಿನಿಮಯ ನಡೆಯತೊಡಗಿತು. ಮೂಲನಿವಾಸಿಗಳಲ್ಲಿ ಒಬ್ಬ ಒಳ್ಳೆಯ ಚೂಪಾದ ನುಣುಪಾದ ಆಯುಧಗಳನ್ನು ಕಲ್ಲು ಮುಂತಾದ ಗಡುಸಾದ ಪದಾರ್ಥಗಳಿಂದ ಸಿದ್ಧಪಡಿಸುವುದರಲ್ಲಿ ಚುರುಕಾಗಿರುತ್ತಿದ್ದ. ಆದರೆ ಬೇಟೆಯಾಡುವುದರಲ್ಲಿ ಆತ ಅಷ್ಟು ಚಾಣಾಕ್ಷನಲ್ಲ. ಅದೇ ಗುಂಪಿನಲ್ಲಿ ಮತ್ತೊಬ್ಬ ಬೇಟೆಯಾಡುವುದರಲ್ಲಿ ನಿಪುಣ. ಆಗ ಬೇಟೆಗಾರನಿಗೋಸ್ಕರ ಆಯುಧ ತಯಾರಕನು ಆಯುಧಗಳನ್ನು ತಯಾರು ಮಾಡಿಕೊಡುತ್ತಿದ್ದ ; ತಾನು ಬೇಟೆಯಾಡುತ್ತಿರಲಿಲ್ಲ. ಬೇಟೆಗಾರ ಮಾಂಸವನ್ನು ಆಯುಧ ತಯಾರಕನಿಗೆ ಕೊಡುತ್ತಿದ್ದ. ಹೀಗೆ ದುಡಿಮೆಯನ್ನು ಹಂಚಿಕೊಂಡು ಬದುಕತೊಡಗಿದರು. ಹೀಗೆ ಪ್ರತಿ ವಿಷಯದಲ್ಲೂ ವಿನಿಮಯ ಮುಖ್ಯವಾಗತೊಡಗಿತು. ಆಗ ಜನರ ಅಗತ್ಯಗಳೂ ಕಡಮೆ ಇದ್ದುವು. ಕ್ರಮೇಣ ಮನುಷ್ಯನ ಜೀವನ ಉತ್ತಮವಾಯಿತು. ಸಾಗುವಳಿ ಮಾಡಿ ಆಹಾರ ಧಾನ್ಯಗಳನ್ನು ಬೆಳೆಯಲೂ, ಬಟ್ಟೆಯನ್ನು ನೇಯಲೂ ಆಗಿನ ಜನ ಕಲಿತ ಮೇಲೆ ಅವನ್ನೂ ವಿನಿಮಯ ಮಾಡಿಕೊಳ್ಳುತ್ತಿದ್ದರು. ಅವರು ತಮ್ಮ ಅಗತ್ಯಕ್ಕಿಂತಲೂ ಹೆಚ್ಚಿಗೆ ಪದಾರ್ಥಗಳನ್ನು ಉತ್ಪಾದಿಸಲು ತೊಡಗಿದಾಗ ಅವನ್ನು ಶೇಖರಿಸಿಡಲು ಪ್ರಾರಂಭಿಸಿದರು. ಯಾವುದಾದರೂ ಒಂದು ರೂಪದಲ್ಲಿ ತಮ್ಮ ಸಂಪತ್ತನ್ನು ಶೇಖರಿಸುತ್ತಿದ್ದರು. ಸಾಮಾನ್ಯವಾಗಿ ದನಕರುಗಳು, ಕುರಿ ಆಡುಗಳು ಮುಂತಾದ ಜೀವರಾಶಿಯ ರೂಪದಲ್ಲಿ



ವಿವಿಧ ರಾಷ್ಟ್ರಗಳ ನಾಣ್ಯಗಳು

ಸಂಪತ್ತನ್ನು ಶೇಖರಿಸುತ್ತಿದ್ದರು. ಯಾರಲ್ಲಿ ಹೆಚ್ಚು ಸಂಖ್ಯೆಯ ಜೀವರಾಶಿ ಇರುತ್ತಿತ್ತೊ ಆತ ಶ್ರೀಮಂತ ಎನಿಸಿಕೊಳ್ಳುತ್ತಿದ್ದ.

ಆದರೆ ಜೀವವಿದ್ದ ಪ್ರಾಣಿಯನ್ನು ವಿನಿಮಯ ಮಾಡಿಕೊಳ್ಳಲು ತೊಡಕುಂಟಾಗುತ್ತಿತ್ತು. ಯಾವುದೋ ಒಂದು ಪದಾರ್ಥಕ್ಕೆ ಬದಲಾಗಿ ಒಂದು ದನ ಅಥವಾ ಕುರಿಯನ್ನು ಕೊಡುವುದು ದುಬಾರಿ ಎನಿಸುತ್ತದೆ. ಅರ್ಧ ಅಥವಾ ಕಾಲುಭಾಗವಾಗಿ ಪಶುವನ್ನು ತುಂಡರಿಸಲು ಸಾಧ್ಯವಾಗುವುದಿಲ್ಲ. ಪ್ರಾಣಿಗಳ ಜತೆ ಬೇರೆ ವಸ್ತುಗಳನ್ನು ವಿನಿಮಯ ಮಾಡಿಕೊಳ್ಳುವುದು ಕ್ರಮೇಣ ಕಷ್ಟಕರ ಎನಿಸಿತು. ಧಾನ್ಯಗಳು ಮತ್ತು ಉಪ್ಪು ಜೀವ ರಾಶಿಯ ಸ್ಥಾನವನ್ನು ಆವರಿಸಿದುವು. ಇವನ್ನು ಪ್ರದೇಶದಿಂದ ಪ್ರದೇಶಕ್ಕೆ ಸಾಗಿಸಬಹುದು, ಅಳೆಯಬಹುದು, ತೂಕಮಾಡಬಹುದು. ವಾಸ್ತವವಾಗಿ, ಹಿಂದೆ ಉಪ್ಪಿಗೆ ಬಹಳ ಕೊರತೆ ಇತ್ತು. ಪದಾರ್ಥಗಳಿಗೆ ಮತ್ತು ದುಡಿಮೆಗೆ ಬದಲಾಗಿ ಉಪ್ಪನ್ನು ಕೊಟ್ಟರೆ ಜನ ತೆಗೆದುಕೊಳ್ಳುತ್ತಿದ್ದರು. ರೋಮನ್ ಸೈನಿಕರಿಗೆ ಉಪ್ಪಿನ ರೂಪದಲ್ಲಿ ಸಂಬಳ ಕೊಡುತ್ತಿದ್ದರು.

ಧಾನ್ಯ ಮತ್ತು ಉಪ್ಪು ಕೂಡಾ ಬಹಳ ಕಾಲ ಹಣದ ಸ್ಥಾನದಲ್ಲಿ ಉಳಿಯಲಿಲ್ಲ. ಯಾವಾಗಲೂ ಮನುಷ್ಯ ಶೃಂಗಾರಪ್ರಿಯ. ಚಿನ್ನ ಬೆಳ್ಳಿ ಮುಂತಾದ ಲೋಹದ ತುಣುಕುಗಳು, ಮುತ್ತಿನ ಚಿಪ್ಪು, ಕವಡೆ ಮತ್ತಿತರ ಸಾಗರ ವಸ್ತುಗಳು, ಮಣಿ, ನುಣುಪಿನ ಶಿಲಾ ತುಣುಕು ಮೊದಲಾದವನ್ನು ಅಲಂಕಾರ ಸಾಧನಗಳಾಗಿ ಆಗಿನ ಜನ ಉಪಯೋಗಿಸುತ್ತಿದ್ದರು. ಯಾವುದೇ ವಸ್ತುವಿನ ವಿನಿಮಯಕ್ಕೆ ಈ ಪ್ರಶಸ್ತ ಪದಾರ್ಥಗಳನ್ನು ಸುಲಭವಾಗಿ ತೆಗೆದುಕೊಳ್ಳುತ್ತಿದ್ದರು. ಚೀನ, ಭಾರತ ಮತ್ತು ಆಫ್ರಿಕದ ಕೆಲವು ಪ್ರದೇಶಗಳಲ್ಲಿ ಕವಡೆಗಳನ್ನು ವಿನಿಮಯಕ್ಕೆ ಬಳಸುತ್ತಿದ್ದರು. ಹೀಗೆ ಕ್ರಮೇಣ ವಸ್ತುವಿನಿಮಯ ಪದ್ಧತಿ ಮಾಯವಾಗತೊಡಗಿತು. ಯಾವುದಾದರೂ ಒಂದು ವಸ್ತುವಿಗೆ ಬದಲಾಗಿ ಮತ್ತೊಂದು ವಸ್ತುವನ್ನು ವಿನಿಮಯ ಮಾಡಲು ಒಪ್ಪದಿದ್ದಲ್ಲಿ ಮೇಲೆ ಹೇಳಿದಂಥ ಪ್ರಶಸ್ತ ಪದಾರ್ಥಗಳಿಗೆ ವಸ್ತುಗಳನ್ನು ವಿನಿಮಯ ಮಾಡಲು ಜನ ಸಿದ್ಧರಿರುತ್ತಿದ್ದರು. ಪ್ರಶಸ್ತ ಪದಾರ್ಥಗಳು ಹೀಗೆ ಹಣದ ರೂಪವನ್ನು ತಾಳಿದವು. ಬೇರೆಲ್ಲ ಪದಾರ್ಥಗಳೂ ಹಿಂದೆ ಉಳಿದು ಚಿನ್ನ, ಬೆಳ್ಳಿ, ಕಬ್ಬಿಣ, ತಾಮ್ರ ಪ್ರಶಸ್ತ ಪದಾರ್ಥಗಳ ಸ್ಥಾನದಲ್ಲಿ ನಿಂತುವು. ಕ್ರಮೇಣ ಯಾವುದೇ ಕೊಡುವ–ಕೊಳ್ಳುವ ವ್ಯವಹಾರಕ್ಕೂ ಚಿನ್ನ ಅಥವಾ ಬೆಳ್ಳಿಯೇ ವಿನಿಮಯ ಸಾಧನವಾಯಿತು. ಈ ಲೋಹಗಳು ಸಾಕಷ್ಟು ಅಪರೂಪವಾಗಿದ್ದುವಲ್ಲದೆ ಬೇರೆ ಬೇರೆ ದೇಶಗಳಲ್ಲೂ ಸಿಗುತ್ತಿದ್ದುವು. ಇವನ್ನು ಎಷ್ಟು ದಿನ ಇಟ್ಟರೂ ಹೊಳಪುಗೆಡುವುದಿಲ್ಲ. ಅಪರೂಪ ಲೋಹಗಳಾದ್ದರಿಂದ ಕಡಮೆ ಗಾತ್ರದ ಲೋಹಕ್ಕೆ ಹೆಚ್ಚು ಪದಾರ್ಥಗಳನ್ನು ವಿನಿಮಯ ಮಾಡಿಕೊಳ್ಳಬಹುದು. ಲೋಹವನ್ನು ಕೊಂಡೊಯ್ಯುವುದೂ ಸುಲಭ. ಲೋಹದ ಇಂತಿಷ್ಟು ತೂಕಕ್ಕೆ ಇಷ್ಟು ಪದಾರ್ಥಗಳು ಎಂದು ವ್ಯಾಪಾರ ಸಾಗತೊಡಗಿತು. ಆದರೆ ಪ್ರತಿ ಬಾರಿಯೂ ಲೋಹವನ್ನು ತೂಕಮಾಡುವುದು ಬೇಸರದ ಕೆಲಸ. ಆಗ ರಾಜರು ನಿರ್ದಿಷ್ಟ ತೂಕದ ಚಿನ್ನ ಅಥವಾ ಬೆಳ್ಳಿಯ ತುಣುಕುಗಳ ಮೇಲೆ ತಮ್ಮ ಮುದ್ರೆಗಳನ್ನು ಒತ್ತುತ್ತಿದ್ದರು. ಮುದ್ರೆಯೊತ್ತಿದ ತುಣುಕುಗಳ ತೂಕವನ್ನು ಜನ ತೂಕಮಾಡದೆಯೇ ಒಪ್ಪತೊಡಗಿದರು; ಏಕೆಂದರೆ ತುಣುಕಿನ ಮೇಲೆ ರಾಜನ ಮುದ್ರೆಯ ಭರವಸೆ ಇರುತ್ತಿತ್ತು. 'ಬಾರು' ಗಳ ರೂಪದ ಲೋಹದ ತುಣುಕುಗಳ ಮೇಲೆ ಈಗಿನ 'ಬಾರ್‌ಸೋಪ್'ನ ಮೇಲೆ ಇರುವಂತೆಯೇ ಗೆರೆಗಳನ್ನು ಗುರುತು ಹಾಕಿ ಒಂದೊಂದು ತುಣುಕಿಗೂ ಮುದ್ರೆಗಳನ್ನು ಒತ್ತಲಾಗುತ್ತಿತ್ತು. ಆಗ ಎಷ್ಟು ಬೇಕೋ ಅಷ್ಟನ್ನು ಮುರಿದುಕೊಳ್ಳಲು ಸಾಧ್ಯವಿತ್ತು. ಹೀಗೆ ಹಣದ ರೂಪ ನಾಣ್ಯಗಳ ಹತ್ತಿರ ಹತ್ತಿರಕ್ಕೆ ಬಂದಿತು.

ಪ್ರಪಂಚದಲ್ಲಿ ಮೊಟ್ಟಮೊದಲಿಗೆ ನಾಣ್ಯಗಳನ್ನು ಚಲಾಯಿಸಿದವರು ಭಾರತೀಯರು ಎಂಬುದು ಈಗಿನ ತಿಳಿವಳಿಕೆ. ಕ್ರಿ. ಪೂ. ನಾಲ್ಕು ಸಾವಿರ ಮತ್ತು ಮೂರು ಸಾವಿರ ಕಾಲದ ಹರಪ್ಪ ಮೊಹೆಂಜೊದಾರೊ ನಾಗರಿಕರು ನಾಣ್ಯಗಳನ್ನು ಬಳಸುತ್ತಿದ್ದರು. ಆ ನಾಣ್ಯಗಳಿಗಿಂತಲೂ ಹಳೆಯದಾದ ನಾಣ್ಯಗಳು ಈವರೆಗೆ ದೊರೆತಿಲ್ಲ. ಏಷ್ಯಾ ಮೈನರಿನ ಲಿಡಿಯನರು ಕ್ರಿ. ಪೂ. 700ರಲ್ಲಿ ಚಿನ್ನ ಮತ್ತು ಬೆಳ್ಳಿಯ ಮಿಶ್ರಲೋಹದ ನಾಣ್ಯಗಳನ್ನು ಉಪಯೋಗಿಸುತ್ತಿದ್ದರು. ಮುಂದೆ ಗ್ರೀಕರು ಮತ್ತು ರೋಮನರು ಬೆಳ್ಳಿಯ ನಾಣ್ಯಗಳನ್ನು ಬಳಸಿದರು. ಪರ್ಷಿಯದ ದೊರೆ ಮೊದಲ ಸೈರಸ್ ಮುಖವನ್ನು ನಾಣ್ಯಗಳ ಮೇಲೆ ಅಚ್ಚೊತ್ತಿಸಿದವರಲ್ಲಿ ಮೊದಲನೆಯವನು (ಕ್ರಿ. ಪೂ. 546) ಕ್ರಿ.ಪೂ. ನಾಲ್ಕನೆಯ ಶತಮಾನದಲ್ಲಿ ಅಲೆಗ್ಸಾಂಡರ್ ಹನ್ನೆರಡು ಸ್ಥಳಗಳಲ್ಲಿ ಟಂಕಸಾಲೆಗಳನ್ನು ಸ್ಥಾಪಿಸಿದ್ದ. ಒಂದು ಪ್ರದೇಶದ ನಾಣ್ಯ ಮತ್ತೊಂದು ಪ್ರದೇಶದಲ್ಲಿ ಬಳಸದಂತೆ ನಿರ್ಬಂಧ ಏರ್ಪಟ್ಟುದು ರೋಮನ್ ಸಾಮ್ರಾಜ್ಯ ಅಳಿದಮೇಲೆ. ನಾಣ್ಯಗಳ ತಯಾರಿಕೆ ಹೆಚ್ಚಿದಂತೆ ಅರಸರ ನಿಯಂತ್ರಣ ಪ್ರಾರಂಭವಾಯಿತು. ರಾಜ್ಯಭಾರ ನಡೆಸುವವರು ಮಾತ್ರ ನಾಣ್ಯಗಳನ್ನು ಛಾಪಿಸುವ ಅಧಿಕಾರ ಉಳಿಸಿಕೊಂಡರು. ಜನರು ಖೋಟಾ ನಾಣ್ಯಗಳನ್ನು ತಯಾರು ಮಾಡುವುದು ಅಥವಾ ಶುದ್ಧ ಲೋಹ ಉಪಯೋಗಿಸಿ ನಾಣ್ಯಗಳನ್ನು ತಯಾರಿಸುವುದು ನಿಷಿದ್ಧವಾಯಿತು. ಕ್ರಿ.ಪೂ. ನಾಲ್ಕನೆಯ ಶತಮಾನದಲ್ಲಿ ಬರೆದ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ನಾಣ್ಯಗಳ ತಯಾರಿಕೆಯ ಪ್ರಸ್ತಾಪವಿದೆ. ಮುಖ್ಯ ಬೀದಿಯಲ್ಲಿ ಉದ್ಯೋಗಿಗಳನ್ನು ನೇಮಿಸಿಕೊಂಡು ಕೆಲಸ ಮಾಡುವ ಆಸ್ಥಾನದ ಅಕ್ಕಸಾಲಿಗನು ಚಿನ್ನ ಅಥವಾ ಬೆಳ್ಳಿಯನ್ನು ಜನರಿಂದ ಪಡೆದು ನಾಣ್ಯಗಳನ್ನು ತಯಾರು ಮಾಡಿಕೊಡುತ್ತಿದ್ದನು. ನಾಣ್ಯಗಳನ್ನು ತಯಾರಿಸುವಲ್ಲಿ ಅಕ್ಕಸಾಲಿಗರಾಗಲಿ ಇತರರಾಗಲಿ ಮೋಸ ಮಾಡಲು ಪ್ರಯತ್ನಿಸಿದರೆ ಮತ್ತು ಖೋಟಾ ನಾಣ್ಯಗಳನ್ನು ತಯಾರಿಸುವ ಪ್ರಯತ್ನವನ್ನು ಜನರು ನಡೆಸಿದರೆ ವಿಧಿಸಬೇಕಾದ ಶಿಕ್ಷೆಗಳ ಪ್ರಸ್ತಾಪವೂ ಕೌಟಿಲ್ಯನ 'ಅರ್ಥಶಾಸ್ತ್ರ'ದಲ್ಲಿದೆ.

ಕ್ರಮೇಣ ಈ ಲೋಹರೂಪದ ನಾಣ್ಯಗಳ ಸ್ವರೂಪವೂ ಬದಲಾಯಿತು. ಕಡಮೆ ಮೌಲ್ಯದ ನಾಣ್ಯಗಳನ್ನು ಚಿನ್ನ ಬೆಳ್ಳಿಯಲ್ಲದ ಲೋಹಗಳಲ್ಲಿ ಮಾಡುವ ಕ್ರಮ ಜಾರಿಗೆ ಬಂತು. ನಿಕ್ಕಲ್, ತಾಮ್ರ, ಕಂಚು ಇವುಗಳನ್ನು ಬಳಸಿ ಬೇರೆ ಬೇರೆ ಪ್ರಮಾಣದ ಮಿಶ್ರಣಗಳಲ್ಲಿ ನಾಣ್ಯಗಳನ್ನು ತಯಾರಿಸುವ ಪದ್ಧತಿ ಪ್ರಾರಂಭವಾಯಿತು. ಮೊದಲು ಶುದ್ಧ ಚಿನ್ನ ಮತ್ತು ಶುದ್ಧ ಬೆಳ್ಳಿ ನಾಣ್ಯಗಳಿದ್ದುವು. ಆನಂತರ ಬಳಕೆಗೆ ಬಂದ ಮಿಶ್ರಲೋಹದ ನಾಣ್ಯಗಳಲ್ಲಿ ಚಿನ್ನ ಮತ್ತು ಬೆಳ್ಳಿಯ ಪ್ರಮಾಣ ಕಡಮೆಯಾಯಿತು. 1893ರಿಂದ ಈಚೆಗೆ ಪ್ರಪಂಚದಲ್ಲಿ ಶುದ್ಧ ಲೋಹದಿಂದ ಮಾಡಿದ ನಾಣ್ಯಗಳು ಬಳಕೆಯಲ್ಲಿ ಇಲ್ಲ. ಪ್ರಥಮ ಮಹಾಯುದ್ಧದ ಅನಂತರ ಚಿನ್ನದ ನಾಣ್ಯಗಳು ಚಲಾವಣೆಯಲ್ಲಿ ಉಳಿಯಲಿಲ್ಲ. 1947ರ ಬಳಿಕ ಬೆಳ್ಳಿಯ ನಾಣ್ಯಗಳಲ್ಲಿ ಬೆಳ್ಳಿಯ ಪ್ರಮಾಣ ತೀವ್ರವಾಗಿ ಕಡಮೆಯಾಗತೊಡಗಿತು. ಈಗ ಬೆಳ್ಳಿಯ ನಾಣ್ಯವೆಂದರೆ ನಿಕ್ಕಲಿನ ಮಿಶ್ರಲೋಹದಿಂದ ಆದುದೆಂದು ಅರ್ಥ.

ಹಣದ ಮೌಲ್ಯವನ್ನು ಅದರ ವಿನಿಮಯ ಸಾಮರ್ಥ್ಯದಿಂದ ಮತ್ತು ಮೌಲ್ಯದಿಂದ ಅಳೆಯಲಾಗುತ್ತಿತ್ತು. ವಿನಿಮಯ ಸಾಮರ್ಥ್ಯ ಎಂದಿಗೂ ಇರುತ್ತದೆ. ಹಿಂದೆ ನಾಣ್ಯದ ಬೆಲೆ ಎಷ್ಟಿತ್ತೋ ಅಷ್ಟುಮೌಲ್ಯದ ಲೋಹ ನಾಣ್ಯದಲ್ಲಿ ಹುದುಗಿರುತ್ತಿತ್ತು. ಒಂದು ರೂಪಾಯಿನ ಬೆಳ್ಳಿಯ ನಾಣ್ಯ

ದಲ್ಲಿ ಒಂದು ರೂಪಾಯಿ ಬೆಲೆ ಬಾಳುವಷ್ಟು ಬೆಳ್ಳಿ ಇರುತ್ತಿತ್ತು. ಈಗ ಹೀಗಿಲ್ಲ. ದುಡಿಮೆಗೆ ಅಥವಾ ಪದಾರ್ಥಕ್ಕೆ ಬದಲಾಗಿ ಹಣವನ್ನು ವಿನಿಮಯ ಮಾಡಿಕೊಳ್ಳುವ ಗುಣ ಯಾವಾಗಲೂ ಹಣಕ್ಕೆ ಇರುತ್ತದೆ. ಹಾಗೆಯೇ, ಹಣವನ್ನು ಕೂಡಿಟ್ಟುಕೊಳ್ಳಬಹುದು. ಅಂದರೆ ಹಿಂದೆ ಎಂದೋ ದುಡಿಮೆ ಅಥವಾ ಪದಾರ್ಥಕ್ಕೆ ವಿನಿಮಯ ಮಾಡಿಕೊಂಡು ಪಡೆದ ಹಣವನ್ನು ಮುಂದೆ ಎಂದೋ ನಮಗೆ ಬೇಕಾಗಬಹುದಾದ ಪದಾರ್ಥಕ್ಕೆ ವಿನಿಮಯ ಮಾಡಿಕೊಳ್ಳಲು ಇಟ್ಟುಕೊಳ್ಳಬಹುದು. ಅದೇ ರೀತಿ ದುಡಿಮೆ ಅಥವಾ ಪದಾರ್ಥಗಳನ್ನು ಮುಂದೆ ಎಂದೋ ವಿನಿಮಯ ಮಾಡುವೆನೆಂದು ಹೇಳಿ ಹಣವನ್ನು ಇತರರಿಂದ ಪಡೆಯಬಹುದು. ಹಣದ ಬೆಲೆಯೂ ಕಾಲಾನುಕ್ರಮಕ್ಕೆ ಬದಲಾಗುತ್ತಾ ಹೋಗುತ್ತದೆ. ಹತ್ತು ವರ್ಷದ ಹಿಂದೆ ನೂರು ರೂಪಾಯಿಗಳನ್ನು ಕೊಟ್ಟರೆ ಏನೇನೊ ಸೌಲಭ್ಯ ಅಥವಾ ಪದಾರ್ಥಗಳು ಸಿಗುತ್ತಿದ್ದುವೊ ಅವು ಆ ಪ್ರಮಾಣದಲ್ಲಿ ಈಗ ಸಿಗುವುದಿಲ್ಲ.

ಈಗ ಅತ್ಯಂತ ಭಾರೀ ಪ್ರಮಾಣದಲ್ಲಿ ಚಲಾವಣೆಯಲ್ಲಿ ಇರುವ ಹಣವೆಂದರೆ ಕಾಗದದ ಹಣ. ಭಾರತದಲ್ಲಿ 'ನೋಟುಗಳು' ಎಂದು ನಾವು ಉಪಯೋಗಿಸುವ ಕಾಗದದ ಹಣದ ಮೇಲೆ ಇಷ್ಟು 'ಹಣ ಕೊಡುವುದಾಗಿ ನಾನು ಭರವಸೆ ಕೊಡುತ್ತೇನೆ' ಎಂದು ಭಾರತ ರಿಸರ್ವ್ ಬ್ಯಾಂಕ್‌ನ ಗವರ್ನರ್ ಅಥವಾ ಹಣಕಾಸುಖಾತೆಯ ವರಿಷ್ಠ ಅಧಿಕಾರಿ ಸಹಿ ಮಾಡಿರುತ್ತಾರೆ. ಅಷ್ಟು ಹಣ ಕೊಡುವುದಾಗಿ ಬರೆದುಕೊಟ್ಟ ನಂಬುಗೆ ಪತ್ರವೇ ಕಾಗದದ ನೋಟು. ಇದು ಎಲ್ಲ ರೀತಿಯಲ್ಲೂ ಹಣದಷ್ಟೇ ಉಪಯುಕ್ತ. ಸರಕಾರ, ನ್ಯಾಯಾಲಯ, ದೇಶದೊಳಗಿನ ಎಲ್ಲ ವಹಿವಾಟುಗಳಲ್ಲಿಯೂ ಈ ಕಾಗದದ ನೋಟುಗಳಿಗೆ ಬೆಲೆಯಿದೆ. ಆದ್ದರಿಂದ ಇದಕ್ಕೆ ಕಾಗದದ ಹಣ ಎಂದೇ ಹೆಸರು.

ಈ ಕಾಗದದ ಹಣ ಮುನ್ನೂರು ವರ್ಷಗಳಿಂದೀಚೆಗಷ್ಟೇ ಬಹಳ ಪ್ರಚಲಿತವಾಗಿದೆ. ಅದಕ್ಕೂ ಮುಂಚೆ ಹದಿಮೂರನೆಯ ಶತಮಾನದಲ್ಲೇ ಚೀನದಲ್ಲಿ ಕಾಗದದ ಹಣವನ್ನು ನೋಡಿದುದಾಗಿ ಮಾರ್ಕೊ ಪೋಲೋ ಬರೆದಿದ್ದಾನೆ. ಹಣದ ಥೈಲಿಗಳನ್ನು ಸಾಗಿಸಿಕೊಂಡು ಹೋಗುವಾಗ ಕಳ್ಳಕಾಕರರ ಭಯವುಂಟು. ಇದರಿಂದ ಜನ ಹಣವನ್ನು ಹೆಚ್ಚಿನ ಪ್ರಮಾಣದಲ್ಲಿ ಕೊಂಡೊಯ್ಯುವುದನ್ನು ನಿಲ್ಲಿಸಿದರು. ಪ್ರಖ್ಯಾತ ವ್ಯಾಪಾರಿ ಅಥವ ಪ್ರತಿಷ್ಠಿತ ವ್ಯಕ್ತಿಯಲ್ಲಿ ಹಣವನ್ನು ಇಟ್ಟಿರುತ್ತಿದ್ದರು, ಅವನಿಂದ ರಸೀದಿಯನ್ನು ಪಡೆಯುತ್ತಿದ್ದರು. ಈ ರಸೀದಿಯನ್ನು ಬೇರೆ ವ್ಯಾಪಾರಿಗಳಿಗೆ ಕೊಟ್ಟರೆ ಹಣ ಅಥವ ಸಾಮಾನನ್ನು ಪಡೆಯಬಹುದಾಗಿತ್ತು. ಅನಂತರ ಹಣವನ್ನು ಸ್ವೀಕರಿಸಿ, ಅಚ್ಚುಹಾಕಿದ ಬೇರೆ ಬೇರೆ ಮೌಲ್ಯಗಳ 'ನೋಟು'ಗಳನ್ನು ಬ್ಯಾಂಕುಗಳು ಕೊಡಲು ಪ್ರಾರಂಭಿಸಿದುವು. ಹದಿನೇಳನೆಯ ಶತಮಾನದಿಂದೀಚೆಗೆ ಅಂತರರಾಷ್ಟ್ರೀಯ ವ್ಯಾಪಾರ ಸಂಬಂಧಗಳು ಬೆಳೆದಂತೆ ಕಾಗದದ ಹಣಕ್ಕೆ ಪ್ರಾಮುಖ್ಯ ಹೆಚ್ಚಿತು. ಪ್ರತಿಯೊಂದು ರಾಷ್ಟ್ರದಲ್ಲೂ ಕಾಗದದ ಹಣವಿದೆ. ಪ್ರಜೆಗಳು ತಮಗಿಷ್ಟ ಬಂದಂತೆ ನೋಟು ಮುದ್ರಿಸುವಂತಿಲ್ಲ. ನಮ್ಮ ದೇಶದ ರಿಸರ್ವ್ ಬ್ಯಾಂಕ್‌ನಂಥ ರಾಜ್ಯಾಧಿಕೃತ ಸಂಸ್ಥೆ ಅಚ್ಚುಮಾಡುತ್ತದೆ.

ದೇಶ ದೇಶಗಳ ನಡುವೆ ಹಣದ ಮೂಲಕ ವ್ಯಾಪಾರ ನಡೆಯುವುದಿಲ್ಲ. ಆಮದು ಮತ್ತು ರಫ್ತುಗಳಿಗೆ ಬದಲಾಗಿ ವಿನಿಮಯ ಹುಂಡಿಗಳನ್ನು ನೀಡಿದಾಗ ಆ ಮೌಲ್ಯದ ಚಿನ್ನವನ್ನು ಸಾಗಿಸುವುದು ಅಗತ್ಯ. ಆದರೆ ಚಿನ್ನವನ್ನು ಸಾಗಿಸುವುದು ತ್ರಾಸದಾಯಕ, ಅಪಾಯಕರ. ಆದ್ದರಿಂದ ಬರಿಯ ವಿನಿಮಯ ಪತ್ರಗಳ ಆಧಾರದ ಮೇಲೆಯೇ ವ್ಯಾಪಾರ ನಡೆಯು

**1970ರಲ್ಲಿ ವಿವಿಧ ದೇಶಗಳ ಹಣ ವಿನಿಮಯದ ದರಗಳು**

| ದೇಶ | | ಹಣದ ಮಾನ | ಎಷ್ಟು ರೂಪಾಯಿ ಗಳಿಗೆ ಸಮ |
|---|---|---|---|
| ಅಮೆರಿಕ ಸಂಯುಕ್ತಸಂಸ್ಥಾನ | ... | ಡಾಲರ್ | 7–50 |
| ಅಫ್ಘಾನಿಸ್ತಾನ | ... | ಆಫ್‌ಘನಿ | 0–17 |
| ಇಂಗ್ಲೆಂಡ್ | ... | ಪೌಂಡ್ | 18–00 |
| ಐಕ್ಯ ಅರಬ್ ಗಣರಾಜ್ಯ | ... | ಪೌಂಡ್ | 17–31 |
| ಚೀನ (ಕಮ್ಯೂನಿಸ್ಟ್) | ... | ಯಾನ್ | 3–05 |
| ಜಪಾನ್ | ... | ಯೆನ್ | 0–02 |
| ಜರ್ಮನಿ (ಪಶ್ಚಿಮ) | ... | ಡ್ಯೂಯಿಷ್ ಮಾರ್ಕ್ | 2–05 |
| ಜರ್ಮನಿ (ಪೂರ್ವ) | ... | ಡಿ.ಡಿ.ಆರ್. ಮಾರ್ಕ್ | 3–34 |
| ನೇಪಾಳ | ... | ರೂಪಾಯಿ | 0–74 |
| ಪಾಕಿಸ್ತಾನ | ... | ರೂಪಾಯಿ | 1–59 |
| ರಷ್ಯ | ... | ರೂಬಲ್ | 8–33 |
| ಸಿಂಹಳ | ... | ರೂಪಾಯಿ | 1–26 |

ತೊಡಗಿತು. ಯಾವುದೇ ದೇಶದ ಪದಾರ್ಥಗಳ ಬೆಲೆಯನ್ನು ಇಷ್ಟು ತೂಕದ ಚಿನ್ನ ಎನ್ನುವ ಲೆಕ್ಕದಲ್ಲಿ ಹೇಳಲಾಗುತ್ತಿತ್ತು. ಚಿನ್ನದ ಬದ ಆ ಮೌಲ್ಯದ ವಿನಿಮಯ ಹುಂಡಿಗಳನ್ನು ಕೊಡುತ್ತಿದ್ದರು ಪ್ರಪಂಚದ ಅಮೆರಿಕ ಮತ್ತು ಇಂಗ್ಲೆಂಡಿನ ವಿನಿಮಯ ಪತ್ರಗಳಿಗೆ ಬಹಳ ಬೇಡಿ ಅಂದರೆ ಆ ದೇಶಗಳು ಹೆಚ್ಚು ರಫ್ತು ಮಾಡಿ ಇತರ ದೇಶಗಳಿಂದ ಕಡ ಆಮದು ಮಾಡಿಕೊಳ್ಳುತ್ತಿದ್ದುವು. ಆಗ ಅಂತರರಾಷ್ಟ್ರೀಯ ವ್ಯಾಪಾ ಗಳು ಡಾಲರ್ ಅಥವಾ ಪೌಂಡ್‌ಗಳ ಲೆಕ್ಕಾಚಾರದಲ್ಲಿ ನಡೆಯತೊಡಗಿದು ಬೇರೆ ಬೇರೆ ದೇಶದ ಹಣದ ಬೆಲೆ ಅವರಲ್ಲಿದ್ದ ಚಿನ್ನದ ಶೇಖರಣೆಯನ ಅವಲಂಬಿಸುತ್ತಿತ್ತು. ಆ ಪದ್ಧತಿಯೂ ಪ್ರಪಂಚದ ಚಿನ್ನದ ಸಂಗ್ರಹಗಳನ ತೀರಿದಂತೆ ಮತ್ತು ವ್ಯಾಪಾರ ಹೆಚ್ಚಿದಂತೆ, ಪ್ರಾಮುಖ್ಯ ಕಳೆದುಕೊಂಡಿತ ಬೇರೆ ಬೇರೆ ದೇಶಗಳ ಹಣ, ಪ್ರಮುಖವಾಗಿ ಡಾಲರ್ ಅಥವಾ ಪೌಂಡ್ ಜೊತೆ ತನ್ನ ವಿನಿಮಯವನ್ನು ಪೂರೈಸುವ ಶಕ್ತಿ ಅನೇಕ ವೇಳೆ ಅಭಿವೃ ಹೊಂದಿರುವ ರಾಷ್ಟ್ರಗಳಿಗೆ ಇಲ್ಲದೇ ಹೋಗುತ್ತದೆ. ಹಾಗೆಂದು ಆಮ ಮತ್ತು ರಫ್ತು ವ್ಯಾಪಾರಗಳನ್ನು ನಿಲ್ಲಿಸುವಂತೆಯೂ ಇಲ್ಲ. ಅದಕ್ಕಾ ಅಗತ್ಯಬಿದ್ದಾಗ, ವಿಶ್ವಬ್ಯಾಂಕಿನ ಅಂತರರಾಷ್ಟ್ರೀಯ ಹಣಕಾಸು ನಿಧಿಯಿಂ ತಮಗೆ ಬೇಕಾದ ದೇಶದ ವಿದೇಶೀ ವಿನಿಮಯವನ್ನು ತಾತ್ಕಾಲಿಕವಾ ಪಡೆಯುವ ಪದ್ಧತಿ ಜಾರಿಗೆ ಬಂದಿದೆ. 'ಕಾಗದದ ಚಿನ್ನ' ಎಂದ ಕರೆಯಲಾಗುವ ಈ ಪದ್ಧತಿಯಲ್ಲಿ ಚಿನ್ನವನ್ನು ತೆಗೆದುಕೊಳ್ಳುವುದೂ ಇಲ್ಲ ಕೊಡುವುದೂ ಇಲ್ಲ. ಆದರೆ ಲೆಕ್ಕದ ಪುಸ್ತಕಗಳಲ್ಲಿ ಜಮಾ ಖರ್ಚು ನಡೆಯುತ್ತದೆ. ಅಂತಿಮವಾಗಿ ಮಾಧ್ಯಮವೇ ಇಲ್ಲದ ವಿದೇಶೀ ವಿನಿಮಯ ರೂಪದ ಹಣವನ್ನು ಹೀಗೆ ಸೃಷ್ಟಿಸಿಕೊಳ್ಳುವುದು ಸಾಧ್ಯವಾಗಿದೆ.

ನೋಡಿ : ಬ್ಯಾಂಕ್ ; ವಿದೇಶೀ ವಿನಿಮಯ ; ಹಣ ಚಲಾವಣೆ
ಹಣದುಬ್ಬರ

## ಹಣಕಾಸು

ಯಾರಿಗಾದರೂ ಹಣದ ಮುಗ್ಗಟ್ಟು ತಲೆದೋರಿದರೆ, ಆತನ ಹಣಕಾಸಿನ ಪರಿಸ್ಥಿತಿ ಹದಗೆಟ್ಟಿದೆ ಎನ್ನುತ್ತಾರೆ.

ಉದ್ಯೋಗ, ವ್ಯಾಪಾರ – ಇವೆಲ್ಲ ವರಮಾನವನ್ನು ತರುವ ಚಟುವಟಿಕೆಗಳು. ನಿರೀಕ್ಷಿಸಿದ ವರಮಾನ ಬರದಿದ್ದರೆ ಸಾಲ, ನೆರವು ಬೇಕಾಗುತ್ತವೆ. ಸಮಯಕ್ಕೆ ಅವೂ ಒದಗದಿದ್ದಲ್ಲಿ ಪರಿಸ್ಥಿತಿ ಹದಗೆಡುತ್ತದೆ.

ಉದ್ಯೋಗಿ ಸೇವೆಯನ್ನು ವಿಕ್ರಯಿಸುತ್ತಾನೆ. ಆತನಿಗೆ ಅಗತ್ಯವಿದ್ದಾಗ ಮುಂಗಡ ಹಣ ಅಥವಾ ಸಾಲ ಸಿಗುತ್ತಿರಬೇಕು. ವ್ಯಾಪಾರದಲ್ಲಿ ಅನೇಕ ವೇಳೆ ಬಂಡವಾಳದ ಕೊರತೆಯಾಗುತ್ತದೆ. ಹಣಕಾಸಿನ ಸಂಸ್ಥೆಗಳಿಂದ ಆಗ ಬಂಡವಾಳದ ಎರವಲು ಪಡೆಯಬೇಕು. ದಳ್ಳಾಳಿ ಮಧ್ಯಸ್ಥಿಕೆ ಮುಂತಾದ ಮಧ್ಯ ವರ್ತನೆಗಳಲ್ಲಿ ಕೊಳ್ಳುವವನ ಪರವಾಗಿ ಕೊಡುವವನಿಗೆ ಮುಂಗಡ ಹಣ ನೀಡಬೇಕಾಗುತ್ತದೆ. ಪ್ರಯಾಣ, ಉಸ್ತುವಾರಿ ಮುಂತಾದವುಗಳಿಗಾಗಿಯೂ ವೆಚ್ಚವಾಗುತ್ತದೆ. ಇದಕ್ಕೆಲ್ಲ ಹಣ ಅಗತ್ಯ. ಜನರು ಹೆಚ್ಚು ಹೆಚ್ಚಾಗಿ ಉಳಿತಾಯ ಮಾಡಿ ಬ್ಯಾಂಕುಗಳಲ್ಲಿ ಠೇವಣಿ ಇಟ್ಟರೆ, ಅವು ಉದ್ದಿಮೆದಾರರಿಗೆ ಹಣ ಒದಗಿಸಲು ಶಕ್ಯವಾಗುತ್ತವೆ. ಲೇವಾದೇವಿಗಾರ ತಾನು ಇತರರಿಂದ ಹಣ ಶೇಖರಿಸಿ ಉದ್ದಿಮೆದಾರರಿಗೆ ಹಣ ಒದಗಿಸುತ್ತಾನೆ. ಈ ಎಲ್ಲ ವಹಿವಾಟುಗಳಲ್ಲಿ ಹಣ ಹರಿದಾಡುತ್ತದೆ. ಉಳಿತಾಯ ಮಾಡುವವರು ಹಣ ಠೇವಣಿ ಇಡುವುದರ ಬದಲು ಮನೆಯಲ್ಲಿಯೇ ಶೇಖರಿಸಿದರೆ, ಇತರ ಉದ್ದಿಮೆದಾರರಿಗೆ ಹಣ ಒದಗಿಸಲು ಬ್ಯಾಂಕ್ ಶಕ್ಯವಾಗುವುದಿಲ್ಲ. ಬ್ಯಾಂಕನ್ನು ನಂಬಿ ಕುಳಿತ ವ್ಯಾಪಾರಸ್ಥ ವ್ಯಾಪಾರವನ್ನು ಮುಂದುವರಿಸುವುದರಲ್ಲಿ ತೊಡಕುಂಟಾಗುತ್ತದೆ. ಅದರಿಂದ ಬ್ಯಾಂಕಿನ ಮತ್ತು ವ್ಯಾಪಾರಸ್ಥನ ಹಣ ಕಾಸಿನ ಪರಿಸ್ಥಿತಿ ಹದಗೆಡುತ್ತದೆ. (ರೈತನಿಗೆ ಸಮಯಕ್ಕೆ ಸರಿಯಾಗಿ ಹಣ ಒದಗದೆ ಬೀಜ ಗೊಬ್ಬರಗಳನ್ನು ಕೊಳ್ಳಲಾಗದಿದ್ದರೆ ಮುಂದಿನ ವರ್ಷ ಆತನಿಗೆ ಹಣದ ಮುಗ್ಗಟ್ಟು ತಲೆದೋರುತ್ತದೆ.)

ಹಾಗೆ ಮುಗ್ಗಟ್ಟು ತಲೆದೋರಿದ ಎಲ್ಲ ಸಂದರ್ಭಗಳಲ್ಲೂ ಹಣದ ರೂಪದಲ್ಲಿಯೇ ಸಾಲ ಒದಗಬೇಕೆಂದಿಲ್ಲ. ಚೆಕ್, ಹುಂಡಿ, ವಿನಿಮಯ ಪತ್ರ ಮುಂತಾದ ಬ್ಯಾಂಕಿನ ಸೌಲಭ್ಯಗಳು ಹಣದ ಅಗತ್ಯವನ್ನು ಪೂರೈಸುತ್ತವೆ. ಉದ್ದಿಮೆದಾರರು ಷೇರುಗಳನ್ನೂ ಬಾಂಡುಗಳನ್ನೂ ಹೆಚ್ಚಿಗೆ ಹಂಚುವುದರಿಂದಲೂ ಹಣ ಶೇಖರವಾಗುತ್ತದೆ. ಉದ್ದಿಮೆಗಳ ಅಭಿವೃದ್ಧಿಗಾಗಿ ನೆರವು ನೀಡಲು ಸರಕಾರವು ಹಣಕಾಸು ಸಂಸ್ಥೆಗಳನ್ನು ಸ್ಥಾಪಿಸುತ್ತದೆ. ಈ ಸಂಸ್ಥೆಗಳು ಕಡಮೆ ಬಡ್ಡಿ ದರದಲ್ಲಿ ದೀರ್ಘಾವಧಿ ಸಾಲಗಳನ್ನು ಒದಗಿಸುತ್ತವೆ. ಕೆಲವೊಂದು ಬಗೆಯ ನಷ್ಟಗಳ ಜವಾಬ್ದಾರಿಯನ್ನು ವಿಮಾಸಂಸ್ಥೆಗಳು ವಹಿಸಿಕೊಳ್ಳುತ್ತವೆ. ನಷ್ಟ ಸಂಭವಿಸಿ ಹಣಕಾಸಿನ ಮುಗ್ಗಟ್ಟು ತಲೆದೋರುವ ಭೀತಿಯನ್ನು ವಿಮಾಸಂಸ್ಥೆ ನಿವಾರಿಸುತ್ತದೆ.

ಯಾವ ಸಂದರ್ಭಗಳಲ್ಲಿ ಹಣದ ವಹಿವಾಟನ್ನು ಹೇಗೆ ನಡೆಸಬೇಕು, ಯಾವ ಸಂಪನ್ಮೂಲಗಳಿಂದ ಬಂಡವಾಳವನ್ನು ಒದಗಿಸಿಕೊಳ್ಳಬಹುದು ಮುಂತಾದ ಅಂಶಗಳನ್ನು ವ್ಯಾಪಾರಸ್ಥರೂ ಉದ್ದಿಮೆದಾರರೂ ಮೊದಲೇ ಅರಿತಿರುತ್ತಾರೆ. ಪ್ರತಿ ವರ್ಷ ಅಥವಾ ಪ್ರತಿ ತಿಂಗಳು ವಹಿವಾಟು ನಡೆಸುವವರು ಇವುಗಳ ಅಂದಾಜು ಪತ್ರಿಕೆ ಹಾಕಿಕೊಳ್ಳುತ್ತಾರೆ.

ಸಾರ್ವಜನಿಕ ಹಣಕಾಸು ಸರಕಾರದ ಹೊಣೆ. ದೇಶದ ಆಡಳಿತಕ್ಕೆ ರಕ್ಷಣೆಗೆ ಮತ್ತು ಅಭಿವೃದ್ಧಿ ಕಾರ್ಯಗಳಿಗೆ ಬೇಕಾದ ಹಣವನ್ನು ಸರಕಾರ ಒದಗಿಸಿಕೊಳ್ಳಬೇಕಾಗುತ್ತದೆ. ಸರಕಾರಕ್ಕೆ ತೆರಿಗೆಗಳು, ನೈಸರ್ಗಿಕ ಸಂಪನ್ಮೂಲಗಳು, ವ್ಯಾಪಾರ ಇವುಗಳ ಮೂಲಕ ವರಮಾನ ಬರುತ್ತದೆ. ಸಾರ್ವಜನಿಕ ಕಾರ್ಯಗಳಿಗಾಗಿ ಸರಕಾರ ವೆಚ್ಚ ಮಾಡುತ್ತದೆ. ತೆರಿಗೆ ಮುಂತಾದ ಬಾಬುಗಳಿಂದ ವರಮಾನ ಕಡಮೆಯಾದರೆ ಸರಕಾರವೂ ಸಾಲ ಎತ್ತುತ್ತದೆ. ಕೆಲವೊಮ್ಮೆ ಇತರ ದೇಶಗಳು, ವಿಶ್ವ ಬ್ಯಾಂಕ್ ಮುಂತಾದ ಹಣಕಾಸಿನ ಸಂಸ್ಥೆಗಳು ಸಾಲ ಅಥವಾ ನೆರವು ನೀಡಬಹುದು. ಆವಶ್ಯತೆ ಹೆಚ್ಚಾದಾಗ ಜನರಿಂದಲೂ ಸರಕಾರ ಸಾಲವನ್ನು ಎತ್ತಬಹುದು. ನಿರ್ದಿಷ್ಟ ಅವಧಿಯ ಸಾಲದ ಕರಾರುಪತ್ರ ಜನರಿಗೆ ಮಾರುವುದರಿಂದ ಸುಲಭವಾಗಿ ಹಣ ಶೇಖರಿಸಬಹುದು.

ರಾಷ್ಟ್ರ ರಾಷ್ಟ್ರಗಳ ನಡುವೆ ಹಣದ ಕೊಂಡುಕೊಳ್ಳುವಿಕೆ ನಡೆಯುತ್ತದೆ. ಆಮದು – ರಫ್ತು ವ್ಯಾಪಾರದಲ್ಲಿ ಆಮದಿನ ಮೇಲೆ ನಿಯಂತ್ರಣವಿಡದಿದ್ದರೆ ಅಥವಾ ಆಮದಾದಷ್ಟು ಪ್ರಮಾಣದಲ್ಲಿ ರಫ್ತು ನಡೆಯದಿದ್ದರೆ ದೇಶದ ಸಾಲ ಏರುತ್ತದೆ. ಹಣಕಾಸಿನ ಅಭಾವ ತೀವ್ರವಾಗುತ್ತದೆ. ಹಲವು ಬಾರಿ ಆಮದು ವಸ್ತುಗಳನ್ನು ದೇಶದೊಳಗೆ ತಯಾರಿಸುವ ಸಲುವಾಗಿ ವಿದೇಶೀಯರಿಗೆ ನಮ್ಮ ದೇಶದಲ್ಲಿ ಅವರ ಬಂಡವಾಳ ವಿನಿಯೋಗಿಸಲು ಅನುಮತಿ ನೀಡಬೇಕಾಗುತ್ತದೆ. ವಿದೇಶೀ ಸಹಯೋಗ ಕೂಡ ಹಣಕಾಸಿನ ಪರಿಸ್ಥಿತಿ ಸುಧಾರಿಸಲು ನೆರವಾಗಬಹುದು. ಬ್ರಿಟನಿನ ರೈಲು ಕಂಪೆನಿಗಳು ರಷ್ಯ, ಭಾರತ, ಬ್ರೆಜಿಲ್ ಮುಂತಾದ ದೇಶಗಳ ರೈಲುಮಾರ್ಗಗಳನ್ನು ನಿರ್ಮಿಸಿದುವು. ಈ ಬಗೆಯಾಗಿ ಆಂಗ್ಲ ಕಂಪೆನಿಗಳು ಬಂಡವಾಳದ ನೆರವು ನೀಡಿದುದರಿಂದ ಆರ್ಜೆಂಟೀನ ಅಭಿವೃದ್ಧಿಗೊಂಡಿತು. ಕೆಲವು ವರ್ಷಗಳಲ್ಲಿ ಅದು ಇಂಗ್ಲಿಷ್ ರೈಲು ಉದ್ಯಮದ ಕಂಪೆನಿಗಳನ್ನೇ ಕೊಂಡುಕೊಳ್ಳುವಷ್ಟು ಶ್ರೀಮಂತ ದೇಶವಾಯಿತು.

ಒಂದು ವ್ಯವಹಾರ ಸಂಸ್ಥೆ ಮತ್ತು ಇನ್ನೊಂದು ವ್ಯವಹಾರ ಸಂಸ್ಥೆ, ವ್ಯವಹಾರ ಸಂಸ್ಥೆಗಳು ಮತ್ತು ಸಾರ್ವಜನಿಕರು, ವ್ಯವಹಾರ ಸಂಸ್ಥೆಗಳು ಮತ್ತು ಸರಕಾರ – ಇವುಗಳ ನಡುವಣ ಹಣಕಾಸಿನ ವಿಷಯಗಳನ್ನು ಒಳಗೊಂಡದ್ದು, ವ್ಯಾವಹಾರಿಕ ಹಣಕಾಸು. ಬಂಡವಾಳ ಹಣವನ್ನು ಹೇಗೆ ಲಾಭದಾಯಕವಾಗಿ ಬಳಸಬೇಕು. ಅವಶ್ಯ ಬಿದ್ದರೆ ಎಲ್ಲಿಂದ ಸಾಲ ತರಬೇಕು. ಬಂದ ಲಾಭದಲ್ಲಿ ಎಷ್ಟನ್ನು ಸದಸ್ಯರಿಗೆ ಹಂಚಬೇಕು. ಎಷ್ಟನ್ನು ಮುಂದಿನ ಅಭಿವೃದ್ಧಿಗೆ ಬಳಸಬೇಕು, ತನಗೆ ಬೇಕಾದ ಮಾಲುಗಳನ್ನು ಎಲ್ಲಿ ಹೇಗೆ ಕೊಳ್ಳಬೇಕು. ತನ್ನ ಮಾಲುಗಳನ್ನು ಎಲ್ಲಿ ಹೇಗೆ ಮಾರಬೇಕು – ಈ ಎಲ್ಲ ವಿಷಯಗಳನ್ನು ವ್ಯಾಪಾರ ಸಂಸ್ಥೆ ಬಹು ಜಾಗರೂಕತೆಯಿಂದ ನಿರ್ಧರಿಸುತ್ತದೆ.

ವೈಯಕ್ತಿಕ ಹಣಕಾಸು ಒಂದು ಸಂಸಾರ ಅಥವಾ ಒಬ್ಬ ವ್ಯಕ್ತಿಯ ಆಗುಹೋಗುಗಳಿಗೆ ಅಗತ್ಯವಿರುವ ಹಣಕ್ಕೆ ಸಂಬಂಧಿಸಿದ್ದು. ಸಾರ್ವಜನಿಕ ಹಣಕಾಸಿಗಾಗಲೀ, ವ್ಯಾವಹಾರಿಕ ಹಣಕಾಸಿಗಾಗಲೀ ವೈಯಕ್ತಿಕ ಹಣಕಾಸಿಗಾಗಲೀ ಯೋಜನೆ ಅತ್ಯಗತ್ಯ.

ಹಣಕಾಸು ಕೊಡುವ–ಕೊಳ್ಳುವ ಎಲ್ಲ ವಹಿವಾಟನ್ನೂ ನಿರೂಪಿಸುತ್ತದೆ. ನಿರ್ಧರಿಸುತ್ತದೆ.

ನೋಡಿ : ಬಂಡವಾಳ ; ಬ್ಯಾಂಕ್

## ಹಣ ಚಲಾವಣೆ

ಅಂಗಡಿಗೆ ಹೋಗಿ ಪುಸ್ತಕ ಕೊಳ್ಳುತ್ತೇವೆ. ಹಣ ನಮ್ಮಿಂದ ಅಂಗಡಿಯವನ ಕೈಸೇರಿತು. ಆತ ಸಂಜೆ ಮೂರು ಬಗೆ ತರಕಾರಿ ಕೊಳ್ಳುತ್ತಾನೆ, ಬಸ್‌ನಲ್ಲಿ ಮನೆಗೆ ಹೋಗುತ್ತಾನೆ. ಆ ಹಣ ತರಕಾರಿ ಮಾರುವವರ ಕೈಗೆ, ಬಸ್ ಕಂಪೆನಿಯವರಿಗೆ ಸೇರಿತು. ಹೀಗೆ ವೆಚ್ಚ ಮಾಡಿದ ಹಣ ಒಬ್ಬರಿಂದ ಇನ್ನೊಬ್ಬರ ಕೈ ಸೇರುತ್ತದೆ. ಅವರ ಕೈದಾಟಿದ ಹಣ ಮತ್ತೊಬ್ಬರ ಬಳಿ ಸಾಗಬೇಕು. ಹಣ ನಿಂತಲ್ಲಿ ನಿಲ್ಲದೆ ಹಸ್ತಾಂತರವಾಗುತ್ತಿರುತ್ತದೆ.

ಹಣ ಹೀಗೆ ಒಬ್ಬರಿಂದೊಬ್ಬರಿಗೆ ಸಾಗುತ್ತಿರುವುದನ್ನು ಹಣಚಲಾವಣೆ ಎನ್ನುತ್ತೇವೆ.

ಮೊಟ್ಟಮೊದಲು ಹಣವನ್ನು ನಿರ್ಮಿಸಿ ಚಲಾವಣೆಗೆ ಬಿಡುವುದು ಸರಕಾರ. ನಾಣ್ಯಗಳು ಬಳಕೆಗೆ ಬಂದ ಕಾಲದಿಂದಲೂ ಹಣವನ್ನು ಚಲಾವಣೆಗಾಗಿ ಬಿಡುವ ಅಧಿಕಾರ ರಾಜ್ಯಾಡಳಿತ ನಡೆಸುವವರ ಪಾಲಿಗೆ ಬಂದಿದೆ.

ಚಲಾವಣೆಯಲ್ಲಿರುವ ಹಣದ ಪ್ರಮಾಣ ಇದ್ದಕ್ಕಿದ್ದಂತೆ ಹೆಚ್ಚಾದರೆ. ಅದೇ ಸಮಯ, ಆ ಹಣದಿಂದ ಕೊಳ್ಳಬಹುದಾದ ವಸ್ತು, ಸೇವೆ ಮುಂತಾದವು ಹೆಚ್ಚದಿದ್ದರೆ ಆಗ ಏನಾಗಬಹುದು? ವಸ್ತು, ಸೇವೆ ದುಬಾರಿಯಾಗುತ್ತವೆ. ಹಣದ ಪ್ರಮಾಣ ಹಾಗೆಯೇ ಕಡಮೆ ಆದರೆ ವಸ್ತು, ಸೇವೆ ಮುಂತಾದವು ಅಗ್ಗವಾಗುತ್ತವೆ. ಅಂದರೆ ಚಲಾವಣೆಯಲ್ಲಿರುವ ಹಣದ ಪ್ರಮಾಣದಲ್ಲಿ ಆದ ಯಾವುದೇ ಬದಲಾವಣೆ ಬೆಲೆಗಳಲ್ಲಿ ಬದಲಾವಣೆಗಳನ್ನು ಉಂಟುಮಾಡುತ್ತದೆ.

ಚಲಾವಣೆಗೆ ಬಿಟ್ಟ ಒಂದು ನಾಣ್ಯ ಚಲಾವಣೆಗೆ ಬಿಟ್ಟ ಸ್ಥಳದಿಂದ ಮತ್ತೊಬ್ಬರ ಕೈಗೆ ಹೋಗಿ ಮತ್ತೆ ನೇರವಾಗಿ ವಾಪಸು ಬಂದು ಬಿಟ್ಟರೆ ಒಂದೇ ವಹಿವಾಟಿನಲ್ಲಿ ಅದು ಪಾಲ್ಗೊಂಡದ್ದು. ಆದರೆ ಅದು ಹಾಗಾಗುವುದಿಲ್ಲ. ಅನೇಕ ಕೈಗಳನ್ನು ದಾಟುತ್ತದೆ. ನಮ್ಮಿಂದ ಪುಸ್ತಕದ ಅಂಗಡಿಯವನಿಗೆ–ಅವನಿಂದ ತರಕಾರಿ ಅಂಗಡಿಯವನಿಗೆ–ಅವನಿಂದ ಹೋಟಲಿನವನಿಗೆ–ಅವನಿಂದ ಬಟ್ಟೆ ಅಂಗಡಿಯವನಿಗೆ ಹೀಗೆ ಸಾಗುತ್ತಿರುತ್ತದೆ. ಹಣ ಹೆಚ್ಚು ಹೆಚ್ಚು ಜನರ ಕೈ ಬದಲಾಗುತ್ತಾ ಹೋದಷ್ಟೂ ಹೊಸದಾಗಿ ಹಣ ನಿರ್ಮಿಸುವ ಅಗತ್ಯ ತಪ್ಪಿತು ಎಂದರ್ಥ. ಅಂದರೆ, ಚಲನವೇಗದಿಂದ ಕೂಡಾ ಹಣ ನಿರ್ಮಿಸಿದಂತೆಯೇ ಆಗುತ್ತದೆ. 1967–68ರಲ್ಲಿ ಭಾರತ ಸರಕಾರ ಚಲಾವಣೆಗೆ ಕೊಟ್ಟ ಹಣ 3,57,797 ಲಕ್ಷ ರೂ. ಅದು ಎಷ್ಟು ಬಾರಿ ಹಸ್ತಾಂತರವಾಗುವುದೋ ಅಷ್ಟು ಹಣ ನಿರ್ಮಾಣವಾದಂತೆ.

ಒಂದು ವರ್ಷದಲ್ಲಿ ದೇಶದ ಸರಕಾರದ ವತಿಯಿಂದ ನಿರ್ಮಾಣವಾದ ಹಣ $M_1$ ಇರಲಿ. ಚಲನ ವೇಗ $V_1$ ಇರಲಿ.

ಸರಕಾರದಂತೆಯೇ ಬ್ಯಾಂಕುಗಳು ಸಹಾ ಹಣವನ್ನು ನಿರ್ಮಿಸುತ್ತವೆ. ಉದಾಹರಣೆಗೆ ಚಾಲ್ತಿ ಖಾತೆಯ ಮೇಲೆ ಬರೆದ ಚೆಕ್. ಖಾತೆಯಲ್ಲಿ ಹಣ ಇರುತ್ತದೆ. ಆದರೆ ಆ ಹಣ ಬ್ಯಾಂಕಿನ ವಹಿವಾಟಿನಲ್ಲಿರುತ್ತದೆ. ಅಂದರೆ ಚಲಾವಣೆಯಲ್ಲಿ ಇರಬೇಕಾಗಿರುತ್ತದೆ. ಆದರೆ ಖಾತೆಪುಸ್ತಕದಲ್ಲಿರುವ ಲೆಕ್ಕದ ಆಧಾರದ ಮೇಲೆ ಚೆಕ್ ಬರೆಯುತ್ತಾರೆ. ಈ ಚೆಕ್ ತೆಗೆದುಕೊಂಡು ಹೋಗಿ ಬ್ಯಾಂಕಿನಲ್ಲಿ ಹಣವನ್ನು ಪಡೆಯಬಹುದು. ಆ ರೀತಿ ಸಾಮಾನ್ಯವಾಗಿ ಆಗುವುದಿಲ್ಲ. ಆ ಚೆಕ್ ಹಣದಂತೆಯೇ ಹಸ್ತಾಂತರವಾಗುತ್ತ ಹೋಗುತ್ತದೆ. ಅಂದರೆ ಹಣಕ್ಕೆ ಬದಲು ಚೆಕ್ ಕೊಟ್ಟು–ಕೊಂಡು ವ್ಯವಹಾರ ನಡೆಯಬಹುದು. ಹೀಗೆ ಬ್ಯಾಂಕ್ ಕಲ್ಪಿಸಿದ ಚೆಕ್ ಎಂಬ ಸೌಲಭ್ಯದ ಸಾಧ
ಹಣದಂತೆಯೇ ಕೆಲಸ ಮಾಡಿತು. ಡ್ರಾಫ್ಟ್, ಠೇವಣಿ ರಸೀದಿ ಎಲ್ಲ
ಬ್ಯಾಂಕುಗಳು ನಿರ್ಮಿಸುವ ಹಣವಾಗಿ ಪರಿಣಮಿಸುತ್ತವೆ. ಮತ್ತೆ ಇ
ಸಹ ವೇಗವಾಗಿ ಚಲಿಸಿದಷ್ಟೂ ಹಣ ಹೆಚ್ಚು ಹೆಚ್ಚು ನಿರ್ಮಾಣವಾದಂತೆ.

ಬ್ಯಾಂಕ್‌ಗಳಿಂದ ನಿರ್ಮಾಣವಾದ ಇಂಥ ಹಣ ಒಂದು ವರ್ಷದಲ್ಲಿ $M$
ಇರಲಿ. ಚಲನವೇಗ $V_2$ ಇರಲಿ.

ಈಗ ಒಟ್ಟು ನಿರ್ಮಾಣವಾದ ಹಣ:

$$(M_1 \times V_1) + (M_2 \times V_2)$$

$M_1$ ಮತ್ತು $V_1$ ಪ್ರಮಾಣಗಳನ್ನು ಒಟ್ಟುಗೂಡಿಸಿದಾಗ M ಎಂದಿಟ್ಟು
ಕೊಳ್ಳೋಣ. ಪ್ರತಿ ತುಣುಕು ಹಣವೂ ಒಂದು ವರ್ಷಕ್ಕೆ ಸರಾಸ
(ಅಂದರೆ $V_1$ ಮತ್ತು $V_2$ ಗಳ ಸರಾಸರಿ) V ಬಾರಿ ಹಸ್ತಾಂತರವಾಗುತ್ತ
ಎಂದುಕೊಳ್ಳೋಣ. ಆಗ V ಚಲನವೇಗ.

M ಹಣ V ಬಾರಿ ಚಲಾಯಿತವಾಗುವುದಾದರೂ ಏತಕ್ಕೆ? ಜ
ಪದಾರ್ಥಗಳನ್ನು ಕೊಳ್ಳುತ್ತಾರೆ. ಇಲ್ಲವೆ ಕೂಲಿಯವನ ಬಳಿ ಸಾಮಾನು
ಹೊರಿಸಿದ್ದಕ್ಕೆ, ಬಸ್‌ನಲ್ಲಿ ಪ್ರಯಾಣ ಮಾಡಿದ್ದಕ್ಕೆ, ಮನೆಗೆ ಕಾಂಪೌಂಡ್
ಕಟ್ಟಿಸಿದ್ದಕ್ಕೆ ಎಂದರೆ ಕೆಲಸ ಮಾಡಿಸಿಕೊಂಡದ್ದಕ್ಕೆ ಹಣ ಕೊಟ್ಟಿರುತ್ತಾರೆ.
ಆ ವರ್ಷದಲ್ಲಿ ಪದಾರ್ಥ ಸೇವೆಗಳ ವಿನಿಮಯವೇ ಹಣದ ಚಲಾವಣೆಯ
ಉದ್ದೇಶ.

ವಿನಿಮಯಕ್ಕೆ ಸಿಗುವ ಪದಾರ್ಥಗಳನ್ನು ಹಲವಾರು ರೀತಿ ನಾವು ಅಳೆಯುತ್ತೇವೆ. ಆಹಾರಧಾನ್ಯವನ್ನು ಟನ್‌ಗಳಲ್ಲಿ, ಎಣ್ಣೆಯನ್ನು ಲೀಟರುಗಳಲ್ಲಿ, ಕೆಲಸವನ್ನು ತಲಾ ಗಂಟೆಗಳ ಲೆಕ್ಕಾಚಾರದಲ್ಲಿ, ಬಟ್ಟೆಯನ್ನು ಮೀಟರುಗಳಲ್ಲಿ ಅಳೆಯುವುದು ಸಾಮಾನ್ಯ.

ಎಲ್ಲ ಪದಾರ್ಥ ಸೇವೆಗಳ ಒಟ್ಟು ವಿನಿಮಯ T ಆಗಿರಲಿ. ಈ ಪದಾರ್ಥ ಸೇವೆಗಳ ಸರಾಸರಿ ಬೆಲೆ P. T ಪ್ರಮಾಣದ ವಸ್ತು ಸೇವೆಗಳ ಬೆಲೆ (ಪ್ರಮಾಣ×ದರ) P×T ಆಗುತ್ತದೆ. ಅದಕ್ಕಾಗಿ ಖರ್ಚಾದದ್ದು M×V ಹಣ.

$$M \times V = P \times T$$

ಯಾವುದೋ ಒಂದು ವರ್ಷ ಬೆಲೆಗಳು ಒಂದಕ್ಕೆ ಎರಡಾಯಿತು. ಅದರರ್ಥ ಏನೆಂಬುದನ್ನು ಸುಲಭವಾಗಿ ಕಂಡುಕೊಳ್ಳಬಹುದು.

1. ಒಂದಕ್ಕೆ ಎರಡರಷ್ಟು ಹಣ ಚಲಾವಣೆಗೆ ಬಿಟ್ಟಿರಬಹುದು; ಅಂದರೆ ಹಣದ ನಿರ್ಮಾಣ ಎರಡರಷ್ಟಾಗಿರಬಹುದು.
2. ಚಲನವೇಗ ಎರಡರಷ್ಟಾಗಿರಬಹುದು.
3. ವಾಣಿಜ್ಯ ಚಟುವಟಿಕೆ ಅರ್ಧಕ್ಕೆ ಇಳಿದಿರಬಹುದು.

ಸಾಧಾರಣವಾಗಿ ಇದ್ದಕ್ಕಿದ್ದಂತೆ ವಾಣಿಜ್ಯ ಅರ್ಧಕ್ಕೆ ಇಳಿಯುವುದಿಲ್ಲ. ಯುದ್ಧ ಮುಗಿದಮೇಲೆ ಇಂಥ ವಿಶೇಷ ಸಂದರ್ಭಗಳಲ್ಲಿ ಮಾತ್ರ ಹಾಗಾಗಬಹುದು. ವಾಣಿಜ್ಯದ ಪ್ರಮಾಣ ಸರಿ ಸುಮಾರು ಒಂದೇ ಆಗಿದ್ದಾಗ ಬೆಲೆಗಳು ಒಂದಕ್ಕೆ ಎರಡಾದರೆ ಹಣದ ನಿರ್ಮಾಣವಾಗಲಿ, ಹಣದ ಚಲಾವಣೆಯಾಗಲಿ ಒಂದಕ್ಕೆ ಎರಡರಷ್ಟು ಆಗಿರಲೇಬೇಕು; ಇಲ್ಲವೇ ಸೂಕ್ತಪ್ರಮಾಣದಲ್ಲಿ ಏರಿರಲೇಬೇಕು. ಪ್ರತಿವರ್ಷ ವಾಣಿಜ್ಯ ಬೆಳೆಯುತ್ತಾ ಹೋದಲ್ಲಿ ಸೂಕ್ತ ಪ್ರಮಾಣದಲ್ಲಿ ಹಣ ಚಲಾವಣೆ—ನಿರ್ಮಾಣ ಮತ್ತು ಚಲನವೇಗ—ಹೆಚ್ಚದಿದ್ದರೆ ಬೆಲೆಗಳು ಕುಸಿಯುತ್ತವೆ. ವಾಣಿಜ್ಯ ಪ್ರಮಾಣ ನಿಧಾನವಾಗಿ ಮಾತ್ರ ಹೆಚ್ಚಿ ಹಣಚಲಾವಣೆ ಅತೀವವಾಗಿ ಏರಿದರೆ ಬೆಲೆಗಳು ಒಂದೇ ಸಮನೆ ಏರುತ್ತವೆ. ಆಗ ಹಣದುಬ್ಬರ.

1967–68ರಲ್ಲಿ ಭಾರತದಲ್ಲಿ ಚಲಾವಣೆಗೆ ಕೊಟ್ಟ ನಾಣ್ಯಗಳು, ನೋಟುಗಳ ವಿವರ ಹೀಗಿದೆ:

| | | |
|---|---|---|
| ಸಣ್ಣ ನಾಣ್ಯಗಳು | ... | 11,855 ಲಕ್ಷ ರೂ.ಗಳು |
| 1 ರೂ. ನೋಟುಗಳು, ನಾಣ್ಯಗಳು | | 21,368 ಲಕ್ಷ ರೂ.ಗಳು |
| 2 ರೂ. ನೋಟುಗಳು | ... | 4,770 ಲಕ್ಷ ರೂ.ಗಳು |
| 5 ರೂ. ನೋಟುಗಳು | ... | 25,808 ಲಕ್ಷ ರೂ.ಗಳು |
| 10 ರೂ. ನೋಟುಗಳು | ... | 1,32,323 ಲಕ್ಷ ರೂ.ಗಳು |
| 100 ರೂ. ನೋಟುಗಳು | ... | 1,53,777 ಲಕ್ಷ ರೂ.ಗಳು |
| 1,000 ರೂ. ನೋಟುಗಳು | ... | 4,571 ಲಕ್ಷ ರೂ.ಗಳು |
| 5,000 ರೂ. ನೋಟುಗಳು | ... | 2,499 ಲಕ್ಷ ರೂ.ಗಳು |
| 10,000 ರೂ. ನೋಟುಗಳು | ... | 826 ಲಕ್ಷ ರೂ.ಗಳು |
| ಒಟ್ಟು | ... | 3,57,797 ಲಕ್ಷ ರೂ.ಗಳು |

ನೋಡಿ : ಬ್ಯಾಂಕ್ ; ಬೆಲೆ ; ಹಣ ; ಹಣದುಬ್ಬರ

## ಹಣದುಬ್ಬರ

ರೂಪಾಯಿಗೆ ಹತ್ತು ಸೇರು ಅಕ್ಕಿ, ಹನ್ನೆರಡು ರೂಪಾಯಿಗೆ ಸವರನ್ ಬಂಗಾರ ಬರುತ್ತಿದ್ದ ಕಾಲ ಇತ್ತು ಎಂದು ಹಿರಿಯರು ಹೇಳುತ್ತಿರುತ್ತಾರೆ.

ಧಾರಣೆಗಳು ಏರುತ್ತಲೇ ಹೋಗುವುದಕ್ಕೆ 'ಹಣದುಬ್ಬರ' (ಹಣದ ಅತಿ ಪ್ರಸರಣ) ಎನ್ನುತ್ತೇವೆ. ಹಣದುಬ್ಬರವನ್ನು, 'ಹೆಚ್ಚು ಹಣ ಕಡಮೆ ವಸ್ತುಗಳನ್ನು ಅಟ್ಟಿಸಿಕೊಂಡು ಹೋಗುವುದು' ಎಂದು ವರ್ಣಿಸುತ್ತಾರೆ. ಜನರು, ವ್ಯಾಪಾರೋದ್ಯಮಗಳು ಹಾಗೂ ಸರಕಾರ, ವಸ್ತುಗಳನ್ನು ಮತ್ತು ಸೇವೆಗಳನ್ನು ಕೊಳ್ಳುತ್ತಾರೆ. ಹಣದುಬ್ಬರದ ಅವಧಿಯಲ್ಲಿ, ಪದಾರ್ಥ ಮತ್ತು ಸೇವೆಗಳು ಸಿದ್ಧವಾಗುವುದೇ ತಡ, ಅವನ್ನು ಜನ ಕೊಂಡುಬಿಡುತ್ತಾರೆ. ಪದಾರ್ಥಗಳಿಗಿಂತ ವೇಗವಾಗಿ ಹಣ ಚಲಾವಣೆಯಾಗುತ್ತದೆ. ಹಣವನ್ನು ಸರಕಾರ ಹೆಚ್ಚು ಹೆಚ್ಚು ಮುದ್ರಿಸಿ ಚಲಾವಣೆಗೆ ತರುವುದೂ ಜನ ಮತ್ತು ಸರಕಾರ ಭಾರೀ ಪ್ರಮಾಣದಲ್ಲಿ ವೆಚ್ಚ ಮಾಡುವುದೂ ಹಣದುಬ್ಬರಕ್ಕೆ ಮೂಲ ಕಾರಣ. ಇಂಥ ಸಂದರ್ಭಗಳಲ್ಲಿ ಪದಾರ್ಥಗಳ ಬೆಲೆಗಳು ಏರುತ್ತವೆ. ಏಕೆಂದರೆ, ಕೆಲವು ವರ್ಗಗಳ ಜನರ ಕೈಯಲ್ಲಿ ವಿಪುಲವಾಗಿ ಹಣ ಇರುತ್ತದೆ. ಹಾಗಿರದಿದ್ದರೂ, ಬಹಳ ವೇಗವಾಗಿ ಜನರ ನಡುವೆ ಹಣ ಹಸ್ತಾಂತರವಾಗುತ್ತಿದ್ದರೂ ಸಾಕು, ಹಣದುಬ್ಬರ ಆಗುತ್ತದೆ. ಒಂದು ರೂಪಾಯಿಗೆ ಏನೇನು ಪದಾರ್ಥ ಮತ್ತು ಸೌಲಭ್ಯಗಳು ದೊರೆಯುತ್ತಿದ್ದುವೊ ಆ ಪದಾರ್ಥ ಮತ್ತು ಸೌಲಭ್ಯಗಳು ಹಣದುಬ್ಬರವಾದಾಗ ಸಿಗುವುದಿಲ್ಲ. ಹಣ ತನ್ನ ಬೆಲೆಯನ್ನು ಕಳೆದುಕೊಳ್ಳುತ್ತಿದೆ ಎಂದು ಆಗ ಸಿದ್ಧವಾಗುತ್ತದೆ.

ಹಣದುಬ್ಬರ ಕಾಣಿಸಿಕೊಂಡಾಗ ಪದಾರ್ಥಗಳು ಮತ್ತು ಸೇವೆಗಳನ್ನು ಕೊಳ್ಳಲು ಬಹಳ ಪೈಪೋಟಿ ಇರುತ್ತದೆ. ಕಾರಣ ನಾಳೆ ಕೊಂಡರೆ ಬೆಲೆ ಹೆಚ್ಚು ; ಇಂದು ಕೊಂಡರೆ ಬೆಲೆ ಕಡಮೆ ಎಂಬ ಭಾವನೆ. ಪದಾರ್ಥ ಮತ್ತು ಸೇವೆಗಳಿಗೆ ಬೇಡಿಕೆ ಹೆಚ್ಚುತ್ತದೆ. ವ್ಯಾಪಾರೋದ್ಯಮಗಳು ಬೆಳೆಯುತ್ತವೆ. ಉದ್ಯೋಗಾವಕಾಶಗಳು ಹುಟ್ಟಿಕೊಳ್ಳುತ್ತವೆ. ಒಟ್ಟಿನಲ್ಲಿ ಹೇಳುವುದಾದರೆ ಜನರ ಕೊಳ್ಳುವ ಸಾಮರ್ಥ್ಯ ಬೆಳೆಯುತ್ತದೆ. ಜನರ ಅಗತ್ಯಗಳೂ ಹೆಚ್ಚುತ್ತವೆ. ಜೀವನವೆಚ್ಚ ಏರುತ್ತದೆ. ಹಣ ತನ್ನ ಬೆಲೆಯನ್ನು ಕಳೆದುಕೊಳ್ಳುವುದರಿಂದ, ಹಣದ ರೂಪದಲ್ಲಿ ಸಂಪತ್ತನ್ನು ಶೇಖರಿಸುವುದರ ಬದಲು ಮನೆ, ಜಮೀನುಗಳ ರೂಪದಲ್ಲಿ ಶೇಖರಿಸಿದರೆ ನಷ್ಟವಾಗುವುದಿಲ್ಲ. ಒಂದು ಸಾವಿರ ರೂಪಾಯಿ ನಗದು ಹಾಕಿದ್ದಕ್ಕೆ ಮುಂಚೆ ಬರುತ್ತಿದ್ದಷ್ಟು ಪದಾರ್ಥಗಳು ಆಮೇಲೆ ಬರುವುದಿಲ್ಲ. ಒಂದು ಸಾವಿರದ ಆಸ್ತಿ ಹಣದುಬ್ಬರವಾದ ಮೇಲೆ ಹೆಚ್ಚು ಬೆಲೆಬಾಳುತ್ತದೆ. ಒಂದೇ ಸಮನಾದ ಉತ್ಪತ್ತಿ ಬರುವವರಿಗೆ, ವೇತನ ಪಡೆಯುವ ಉದ್ಯೋಗಿಗಳಿಗೆ, ಹಣದುಬ್ಬರದಿಂದ ಬಹಳ ತೊಂದರೆ. ಏಕೆಂದರೆ ಬೆಲೆಗಳು ಏರುತ್ತಿರುತ್ತವೆ.

ಎಲ್ಲ ಪದಾರ್ಥಗಳ ಧಾರಣೆಗಳ ಮೇಲೂ ಹಣದುಬ್ಬರ ಒಂದೇ ರೀತಿಯ ಪ್ರಭಾವ ಬೀರುವುದಿಲ್ಲ. ಒಂದು ಯಂತ್ರ ಸಾಮಗ್ರಿಯ ಬೆಲೆ ಮೂರು ಪಟ್ಟು ಏರಿತೆಂದು ಭಾವಿಸೋಣ. ಆದರೆ ಗದ್ದೆಯಲ್ಲಿ ಬೆಳೆದ ಭತ್ತದ ಬೆಲೆ ಮೂರರಷ್ಟು ಏರುವುದಿಲ್ಲ. ಆ ವರ್ಷ ಒಳ್ಳೆಯ ಫಸಲು ಬಂದಲ್ಲಿ ಭತ್ತದ ಬೆಲೆ ಕೆಳಕ್ಕೆ ಇಳಿಯಲೂಬಹುದು. ವಿವಿಧ ಸರಕು, ಸೇವೆಗಳ ಬೆಲೆಗಳು ವಿವಿಧ ಪ್ರಮಾಣದಲ್ಲಿ ಏರುವುವು.

ಹಣಬಾಹುಳ್ಯವು ಅಲ್ಪ ಪ್ರಮಾಣದಲ್ಲಿದ್ದರೆ ಆರ್ಥಿಕೋದ್ಯಮಗಳ ಮೇಲೆ ಅದರಿಂದ ಅನುಕೂಲ ಪರಿಣಾಮವಾಗಬಹುದು. ಆದರೆ ಕೆಲವು ಸಂದರ್ಭಗಳಲ್ಲಿ ಹಣಬಾಹುಳ್ಯ ಅತ್ಯಧಿಕವಾಗಿ ಅದು ಒಂದು ಸಮಸ್ಯೆಯಾಗುತ್ತದೆ. ಯುದ್ಧ ಆರಂಭವಾಯಿತೆಂದರೆ ಯುದ್ಧದಲ್ಲಿ ತೊಡಗುವ ರಾಷ್ಟ್ರಗಳು ಹೆಚ್ಚು ಹಣ ಹುಟ್ಟಿಸಬೇಕಾಗುವುದು ; ಆಗ ಸರಕುಗಳ ಬೇಡಿಕೆಯೂ ಹೆಚ್ಚುವುದು. ಅಧಿಕ ಪ್ರಮಾಣದ ಹಣಬಾಹುಳ್ಯ ಅನಿವಾರ್ಯವಾಗಿ ಉಂಟಾಗುವುದು. ಆರ್ಥಿಕವಾಗಿ ಹಿಂದುಳಿದ ರಾಷ್ಟ್ರಗಳು ಶೀಘ್ರವಾಗಿ ಅಭಿವೃದ್ಧಿ ಹೊಂದುವ ಪ್ರಯತ್ನದಲ್ಲಿಯೂ ಹಣಬಾಹುಳ್ಯ ಪ್ರಾಪ್ತವಾಗುವುದು. ಬಂಡವಾಳ ಶೇಖರಣೆ ಸಾಮರ್ಥ್ಯ ಕಡಮೆ ಇರುವುದರಿಂದ ಸರಕಾರವು ಹೆಚ್ಚು ಹಣ ನಿರ್ಮಿಸಬೇಕಾಗುವುದರಿಂದಲೂ ಅಭಿವೃದ್ಧಿಯ ಮೊದಲ ಹಂತದಲ್ಲಿ ಸರಕುಗಳ ಉತ್ಪಾದನೆ ಮೀರಿದ ಪ್ರಮಾಣದಲ್ಲಿ ವರಮಾನ ಹುಟ್ಟುವುದರಿಂದಲೂ ಹಣಬಾಹುಳ್ಯದ ಒತ್ತಡ ಉಂಟಾಗುವುದು. ಕೆಲವು ವಿಶೇಷ ಸಂದರ್ಭಗಳಲ್ಲಿ ಹಣಬಾಹುಳ್ಯವು ಭೀಕರ ಸ್ವರೂಪ ತಾಳಬಲ್ಲದು. ಇಂಥ ಅತ್ಯುಗ್ರ ಹಣಬಾಹುಳ್ಯಕ್ಕೆ ಮೊದಲನೆಯ ಮಹಾಯುದ್ಧ ಮುಕ್ತಾಯವಾದ ಮೇಲೆ ರಷ್ಯ, ಆಸ್ಟ್ರಿಯ ಮತ್ತು ಜರ್ಮನಿಗಳು ತುತ್ತಾದುವು. ಮೊದಲನೆಯ ಮಹಾಯುದ್ಧಕ್ಕೆ ಮುಂಚೆ ಜರ್ಮನಿಯ ನಾಲ್ಕು ಮಾರ್ಕುಗಳು ಒಂದು ಡಾಲರಿನ ಬೆಲೆಗೆ ಸಮನಾಗಿದ್ದುವು. ಯುದ್ಧದ ಅನಂತರ 4,20,00,00,000 ಮಾರ್ಕುಗಳು ಒಂದು ಡಾಲರಿಗೆ ಸಮನಾದುವು. ಆ ಕಾಲದಲ್ಲಿ ಸಂತೆಗೆ ಹಣವನ್ನು ಬುಟ್ಟಿಯಲ್ಲಿಟ್ಟು ಕೊಂಡೊಯ್ದು ಸಾಮಾನನ್ನು ಪಾಕೀಟಿನಲ್ಲಿ ತರುತ್ತಿದ್ದರು–ಎಂದು ಸ್ವಾರಸ್ಯವಾಗಿ ವರ್ಣಿಸುವುದುಂಟು. (ಪ್ರಪಂಚದ ಬೇರೆ ಯಾವ ದೇಶವೂ ಹಣದುಬ್ಬರಕ್ಕೆ ಇಷ್ಟೊಂದು ತುತ್ತಾಗಲಿಲ್ಲ.) ಇಂಥ ಭೀಕರ ಸ್ವರೂಪದ ಹಣಬಾಹುಳ್ಯ ಎರಡನೆಯ ಜಾಗತಿಕ ಯುದ್ಧದ ತರುವಾಯ ಚೀನದಲ್ಲಿಯೂ ಪ್ರಾಪ್ತವಾಗಿದ್ದಿತು.

ಯಾವುದೇ ಸಂದರ್ಭದಲ್ಲಿ ಆದರೂ ಹಣದುಬ್ಬರವನ್ನು ಒಂದು ಮಿತಿಯಲ್ಲಿ ಇಟ್ಟಿರದಿದ್ದರೆ ದುಷ್ಪರಿಣಾಮಗಳು ಉಂಟಾಗುವುವು. ಅದನ್ನು ಹತೋಟಿಯಲ್ಲಿಡಲು ಸರಕಾರ ಕೆಲವೊಂದು ಕ್ರಮಗಳನ್ನು ಕೈಗೊಳ್ಳಬಹುದು. ಕೆಲವು ಬಾರಿ ಸರಕಾರ ಪ್ರಜೆಗಳಿಂದ ಸಾಲ ಎತ್ತುತ್ತದೆ. ಬಾಂಡುಗಳನ್ನು ಮಾರುವುದರ ಮೂಲಕ ಎತ್ತಿದ ಸಾಲದ ಹಣವನ್ನು ತನ್ನ ಯೋಜನೆಗಳಿಗೆ ಸರಕಾರ ಖರ್ಚುಮಾಡುತ್ತದೆ. ಆದರೆ, [illegible]

ಸರಕಾರ ಪಡೆದುಕೊಳ್ಳುತ್ತದೆ. ಯೋಜನೆಗಳಲ್ಲಿ ಹಣವನ್ನು ವಿನಿಯೋಗಿಸುವಾಗ ಪದಾರ್ಥದ ಧಾರಣೆಗಳು ಏರದಂತೆ ನೋಡಿಕೊಳ್ಳುತ್ತದೆ. ತೆರಿಗೆಗಳು ಮುಂತಾದ ಬಾಬುಗಳಿಂದ ಬರುವ ಆದಾಯಕ್ಕಿಂತ ಸರಕಾರ ಕಡಮೆ ವೆಚ್ಚ ಮಾಡಿದರೆ, ಹಣದ ಚಲಾವಣೆ ಕಡಮೆಯಾಗುತ್ತದೆ. ಇದರಿಂದಲೂ ಹಣದುಬ್ಬರವನ್ನು ನಿಯಂತ್ರಿಸಿದಂತೆ ಆಗುತ್ತದೆ. ದೇಶದ ಹಣ ಚಲಾವಣೆಯಾಗುವುದು ಬ್ಯಾಂಕುಗಳ ಮೂಲಕ. ಭಾರತದಲ್ಲಿ ಎಲ್ಲ ಬ್ಯಾಂಕುಗಳೂ ರಿಸರ್ವ್ ಬ್ಯಾಂಕಿನ ನಿಯಂತ್ರಣದಲ್ಲಿ ಕೆಲಸ ಮಾಡುತ್ತಿರುತ್ತವೆ. ರಿಸರ್ವ್ ಬ್ಯಾಂಕ್ ಹಣವನ್ನು ವಿಲೇವಾರಿ ಮಾಡುವುವರಲ್ಲಿ ತಡಮಾಡಿದರೆ ಅದರ ಪರಿಣಾಮ ಎಲ್ಲ ಬ್ಯಾಂಕುಗಳ ಮೇಲೆ ಮತ್ತು ಜನರ ಮೇಲೆ ಆಗುತ್ತದೆ.

**ನೋಡಿ :** ಬ್ಯಾಂಕ್ ; ಹಣ ಚಲಾವಣೆ

## ಹತ್ಯೆ

1947ರ ಆಗಸ್ಟ್ 15 ರಂದು ಭಾರತಕ್ಕೆ ಸ್ವಾತಂತ್ರ್ಯ ಬಂದಿತು.

1948ರ ಜನವರಿ 30ರಂದು ಸ್ವಾತಂತ್ರ್ಯ ಶಿಲ್ಪಿ ಗಾಂಧಿಜಿ ನಮ್ಮನ್ನಗಲಿದರು.

ಹೊಸದಾಗಿ ಸ್ವಾತಂತ್ರ್ಯ ಬಂದ ಭಾರತ ಎದುರಿಸಬೇಕಾಗಿದ್ದ ಕಷ್ಟಗಳು, ಸಮಸ್ಯೆಗಳು, ಅಪಾಯಗಳು ಒಂದೆರಡಲ್ಲ. ಪಾಕಿಸ್ತಾನದಿಂದ ನಿತ್ಯ ಸಾವಿರ ಗಟ್ಟಲೆ ಬರುತ್ತಿದ್ದ ನಿರಾಶ್ರಿತರ ಸಮಸ್ಯೆ, ಕಾಶ್ಮೀರದ ಮೇಲೆ ಪಾಕಿಸ್ತಾನದ ದಾಳಿಯ ಗಂಡಾಂತರ, ನೂರಾರು ದೊಡ್ಡ ಪುಟ್ಟ ಸಂಸ್ಥಾನಗಳ ಪ್ರಶ್ನೆ—ಹೀಗೆ ಹಲವು ತೊಂದರೆಗಳು. ಗಾಂಧಿಜಿಯ ವಿವೇಕದ ಬೆಳಕು ಅತ್ಯಗತ್ಯವಾಗಿದ್ದಾಗ ಅದು ಆರಿಹೋಯಿತು.

ಅದನ್ನು ಆರಿಸಿದವನು—ಒಬ್ಬ ಹತ್ಯಾಕಾರಿ.

ಹತ್ಯೆ ಎಂದರೆ ಕೊಲ್ಲುವುದು. ಆದರೆ ಸಾಮಾನ್ಯವಾಗಿ 'ಹತ್ಯೆ' ಗೂ 'ಕೊಲೆ' ಗೂ ಒಂದು ವ್ಯತ್ಯಾಸವುಂಟು. 'ಕೊಲೆ' ವೈಯಕ್ತಿಕ ಜಗಳಗಳಿಂದ ಅಥವಾ ವೈಯಕ್ತಿಕ ಲಾಭಕ್ಕಾಗಿ ಆಗುತ್ತದೆ. ಹತ್ಯೆ ಮಾಡುವವನು ತಾನು ತನ್ನ ಪಕ್ಷಕ್ಕೊ ದೇಶಕ್ಕೊ ಉಪಕಾರ ಮಾಡುತ್ತಿದ್ದೇನೆ ಎಂದು ಭಾವಿಸುತ್ತಾನೆ. ಅಮೆರಿಕದ ಅಧ್ಯಕ್ಷ ಅಬ್ರಹಾಂ ಲಿಂಕನ್ ಮಹಾಪುರುಷನನ್ನು 1861ರಲ್ಲಿ ಒಬ್ಬನು ಕೊಂದ. ಲಿಂಕನ್ ಅಮೆರಿಕದ ದಕ್ಷಿಣ ಸಂಸ್ಥಾನಗಳ ಶತ್ರು ಎಂದು ಆತ ಭಾವಿಸಿದ್ದೇ ಆ ಕೊಲೆಗೆ ಕಾರಣ. ಜೂಲಿಯಸ್ ಸೀಸರನನ್ನು ಕೊಂದವರು ತಾವು ರೋಮ್ ರಾಜ್ಯಕ್ಕೆ ಸಹಾಯಮಾಡುತ್ತಿದ್ದೇವೆ ಎಂದು ಭಾವಿಸಿದರು.

ಕೊಲೆ ಮಾಡುವುದೇ ಮಹಾಪರಾಧ. ಇನ್ನೊಬ್ಬನ ಪ್ರಾಣವನ್ನು ತೆಗೆದುಕೊಳ್ಳಲು ಯಾವ ವ್ಯಕ್ತಿಗೂ ಹಕ್ಕಿಲ್ಲ. ಯಾವುದೋ ಭ್ರಮೆಗೊಳಗಾಗಿ ಮಾಡುವ ಹತ್ಯೆ ಘೋರ ಅಪರಾಧ. ಹತ್ಯೆಯಿಂದ ಯಾವ ಸಮಸ್ಯೆಯೂ ಬಗೆಹರಿಯುವುದಿಲ್ಲ. ಜಗತ್ತಿನ ಹಲವಾರು ಮಹಾಪುರುಷರು ಮೂರ್ಖ ಹಂತಕರ ಆಯುಧಗಳಿಗೆ ಬಲಿಯಾಗಿದ್ದಾರೆ. ಜೂಲಿಯಸ್ ಸೀಸರ್, ಅಬ್ರಹಾಂ ಲಿಂಕನ್, ಮಹಾತ್ಮ ಗಾಂಧಿ, ಅಧ್ಯಕ್ಷ ಕೆನಡಿ, ಮಾರ್ಟಿನ್ ಲೂಥರ್ ಕಿಂಗ್ ಇಂಥವರನ್ನು ಜಗತ್ತು ಹೀಗೆ ಕಳೆದುಕೊಂಡಿದೆ.

## ಹಬ್ಬಗಳು

ಎಲ್ಲೆಲ್ಲೂ ಪಟಾಕಿಗಳ ಸದ್ದು : ನಕ್ಷತ್ರ ಲೋಕದ ತುಣುಕುಗಳಂತೆ ಹೂಬಾಣಗಳು ; ಬಣ್ಣ ಬಣ್ಣದ ಜ್ಯೋತಿಗಳು ; ದೀಪ, ದೀಪ, ದೀಪ—ಎಲ್ಲೆಲ್ಲೂ ಮನೆ ಮನಸ್ಸುಗಳನ್ನು ಬೆಳಗಿಸುವ ದೀಪಮಾಲೆ. ಇದು ದೀಪಾವಳಿಯ ಸೊಬಗು. ಈ ಹಬ್ಬದಲ್ಲಿ ಹರ್ಷದ ಹೊನಲೇ ಹರಿಯುತ್ತದೆ. ಭಾರತದಲ್ಲಿ ಜನರೆಲ್ಲ ಅವರವರ ಶಕ್ತ್ಯನುಸಾರ ಹೊಸ ಉಡುಗೆ ತೊಡುಗೆಗಳನ್ನು ಧರಿಸಿ ನಲಿಯುತ್ತಾರೆ. ಹಿರಿಯರು ಕಿರಿಯರೆನ್ನದೆ ಎಲ್ಲರಿಗೂ ಸಂಭ್ರಮ. ಕಂಡವರೊಡನೆ ಸಿಹಿಮಾತುಗಳನ್ನಾಡಿ ಪರಸ್ಪರ ಸಂತೋಷವನ್ನು ಹಂಚಿಕೊಳ್ಳುತ್ತಾರೆ. ದೀಪಾವಳಿ—ದೀಪಗಳ ಸಾಲು—ಕತ್ತಲೆಯನ್ನು ಓಡಿಸುವ ಹಬ್ಬ. ಕತ್ತಲೆಯ ಮೇಲೆ ಬೆಳಕಿನ ವಿಜಯದ ಸಂಕೇತ ಈ ಹಬ್ಬ. ಅನಾಗರಿಕತೆಯ ಅಂಚನ್ನು ದಾಟಿದಂದಿನಿಂದ ಮನುಷ್ಯ ಅಜ್ಞಾನವನ್ನು ದೂರಮಾಡಲು ಯತ್ನಿಸುತ್ತಿದ್ದಾನೆ. ಕತ್ತಲು ಅಜ್ಞಾನದ ಸಂಕೇತ. ಬೆಳಕು ಜ್ಞಾನದ ಸಂಕೇತ. ನರಕಾಸುರವಧೆ, ಬಲಿಯನ್ನು ಸೋಲಿಸಿಯೂ ವಿಷ್ಣು ಅವನ ಮನೆಯ ಕಾವಲುಗಾರ ಆದುದು—ಈ ಪೌರಾಣಿಕ ಕಥೆಗಳಿಗೂ ಸಂಬಂಧಿಸಿದ ಹಬ್ಬ ಇದು. ಹೀಗೆ ಹಬ್ಬಗಳು ಮೈ ಮನಸ್ಸುಗಳನ್ನು ತಣಿಸಿ ಮಾನವ ಜೀವನ ಸಂಸ್ಕೃತಿಯ ಉತ್ಕೃಷ್ಟ ಚಟುವಟಿಕೆಯಾಗಿ ಮೆರೆಯುತ್ತವೆ. ಜೀವನದ ಬೇಸರ ದುಃಖಗಳನ್ನು ಒತ್ತರಿಸಿ ಒಳ್ಳೆಯದನ್ನೇ ವಿಚಾರಮಾಡಿ ಮನಸ್ಸನ್ನು ಹಗುರಗೊಳಿಸುವ ಅವಕಾಶ ಒದಗಿಸಿಕೊಡುತ್ತವೆ.

ಹಬ್ಬಗಳು ಸಾಧಾರಣವಾಗಿ ವರ್ಷಕ್ಕೊಂದು ಬಾರಿ ಬರುವ ಸಂಭ್ರಮ. ಇವುಗಳನ್ನು ಆಚರಿಸುವಂತೆ ಮನುಷ್ಯರನ್ನು ಪ್ರೇರಿಸುವ ಕೆಲವು ಭಾವನೆಗಳಿರುತ್ತವೆ. ಪರಮಾತ್ಮನ ಸೃಷ್ಟಿಗೆ ನಮ್ಮ ಕೃತಜ್ಞತೆಯನ್ನು ಸಲ್ಲಿಸಬೇಕು, ಅವನ ವರದಾನಗಳಿಗೆ, ಎಂದರೆ ನಮ್ಮ ಮೇಲೆ ಅವನು ತೋರುವ ಕೃಪೆಗೆ ನಾವು ಪಾತ್ರರಾಗಬೇಕು, ಆತನ ಗುಣಗಾನ ಮಾಡಬೇಕು ಎಂಬಿವೇ ಮೊದಲಾದ ಧಾರ್ಮಿಕ ಮನೋಭಾವನೆಗಳು ಈ ಹಬ್ಬಗಳಿಗೆ ಹೊಂದಿಕೊಂಡಿರುತ್ತವೆ. ಸ್ತೋತ್ರ ಮತ್ತು ಪ್ರಾರ್ಥನೆಗಳಿಂದ ಕೃತಕೃತ್ಯನಾಗಲು ಮನುಷ್ಯ ಯತ್ನಿಸುತ್ತಾನೆ. ದಾನಾದಿ ಸತ್ಕಾರ್ಯಗಳನ್ನು ಮಾಡಿ ತನಗೆ ದೇವರು ಕೊಟ್ಟದ್ದನ್ನು ಇತರರೊಡನೆ ಹಂಚಿಕೊಳ್ಳಬೇಕು, ಹೀಗೆ ಸಮಬಾಳುವೆಯ ತತ್ತ್ವವನ್ನು ರೂಢಿಸಿಕೊಳ್ಳಬೇಕು ಎಂದು ಹಬ್ಬಗಳನ್ನು ಪೂರ್ವಿಕರು ಕಲ್ಪಿಸಿಕೊಂಡರು.

ಹಬ್ಬಗಳಲ್ಲಿ ಹಲವು ಬಗೆಗಳಿವೆ. ಹುಟ್ಟುಹಬ್ಬವೂ ಹಬ್ಬವೇ. ಇದು ವ್ಯಕ್ತಿಗೆ ಸಂಬಂಧಿಸಿದ್ದು. ಮಹಾಪುರುಷರ ಹಾಗೂ ಪ್ರಸಿದ್ಧ ವ್ಯಕ್ತಿಗಳ ಹುಟ್ಟುಹಬ್ಬಗಳನ್ನು 'ಜಯಂತಿ' ಗಳಾಗಿ ಆಚರಿಸುತ್ತಾರೆ. ಭಾರತದಲ್ಲಿ ಗಾಂಧಿ ಜಯಂತಿ, ಬುದ್ಧ ಜಯಂತಿ, ಬಸವ ಜಯಂತಿ ಮೊದಲಾದುವು ಸಾಮೂಹಿಕ ಹಬ್ಬಗಳಾಗಿ ಆಚರಿಸಲ್ಪಡುತ್ತವೆ.

ಒಂದು ಧರ್ಮದವರಿಗೆ ಸಂಬಂಧಿಸಿದ ಹಬ್ಬಗಳಿವೆ. ಗಣಪತಿ ಹಬ್ಬ ಹಿಂದೂಗಳಿಗೆ ದೊಡ್ಡ ಹಬ್ಬ. ಗಣಪತಿ ಪೂಜೆ ಭಾರತದಾಚೆ ಸುಮಾತ್ರ, ಜಾವ, ಸಿಂಹಳ, ಇಂಡೊನೇಷ್ಯ, ಆಫ್‌ಘಾನಿಸ್ತಾನ ಮುಂತಾದ ದೇಶಗಳಿಗೂ ಹಿಂದೆ ಹಬ್ಬಿದ್ದಿತು. ಗಣಪತಿಯ ಸೊಂಡಿಲು ಹಿಂದೂಗಳಿಗೆ ಪ್ರವಿತ್ರವಾದ ಓಂಕಾರದ ಕಲ್ಪನೆಯನ್ನು ಪ್ರತಿಬಿಂಬಿಸುತ್ತದೆ ಎಂದು ಗಣಪತಿ ಮೂರ್ತಿಯ ಕಲ್ಪನೆಯನ್ನು ವಿವರಿಸುತ್ತಾರೆ. ದೀಪಾವಳಿ, ಕೃಷ್ಣಾಷ್ಟಮಿ, ಶಿವರಾತ್ರಿ ಮುಂತಾದ ಹಬ್ಬಗಳೂ ಇಂಥ ಬೃಹತ್ ಹಬ್ಬಗಳ ಸಾಲಿಗೆ ಸೇರಿವೆ.

ರಂಜಾನ್, ಮುಸಲ್ಮಾನರ ಮುಖ್ಯ ಹಬ್ಬಗಳಲ್ಲಿ ಒಂದು. ಇದು ಅವರ ಸಂವತ್ಸರದ ಒಂಬತ್ತನೆಯ ತಿಂಗಳು. ಈ ತಿಂಗಳಲ್ಲಿ ಜನರ ಉದ್ಧಾರಕ್ಕಾಗಿ ಖುರಾನ್ ಸೃಷ್ಟಿಯಾಯಿತೆಂಬ ನಂಬಿಕೆಯಿಂದ ಈ ತಿಂಗಳಿಗೆ ಇಷ್ಟು ಮಹತ್ವ. ಇಸ್ಲಾಂ ಮತದಲ್ಲಿ ಇದನ್ನು ಉಪವಾಸ ವ್ರತದ ಪವಿತ್ರ ಮಾಸವೆಂದು ಪರಿಗಣಿಸುತ್ತಾರೆ. ಈ ತಿಂಗಳ ಇಪ್ಪತ್ತೇಳನೆಯ ದಿನ ಅತ್ಯಂತ ಮಹತ್ವದ ದಿನವೆಂದು ಭಾವಿಸುತ್ತಾರೆ. ರಂಜಾನ್ ಹಬ್ಬದ ಮೊದಲ ಮತ್ತು ಕೊನೆಯ ದಿನಗಳನ್ನು ಪಾಡ್ಯದ ಚಂದ್ರನನ್ನು ಕಂಡ ಬಳಿಕ ಗುರುತಿಸಿ ಘೋಷಿಸಲಾಗುತ್ತದೆ. ಪ್ರಾರ್ಥನಾವಿಧಿಗಳು ದಿನಕ್ಕೆ ಐದು ಅಥವಾ ಇನ್ನೂ ಹೆಚ್ಚು ಬಾರಿ ನಡೆಯುತ್ತವೆ. ಉಪವಾಸ ಈ ಹಬ್ಬದ ಮುಖ್ಯ ಧಾರ್ಮಿಕ ಆಚರಣೆಯೆನಿಸಿದೆ.

ಕ್ರಿಸ್‌ಮಸ್ ಹಬ್ಬ ಕ್ರೈಸ್ತಧರ್ಮದ ಹಬ್ಬ. ಇದನ್ನು ಯೇಸು ಕ್ರಿಸ್ತನ ಹುಟ್ಟುಹಬ್ಬ ಎಂದು ಆಚರಿಸುತ್ತಾರೆ. ಮೊದಲಿಗೆ ಆರಂಭವಾದದ್ದು ಬೇರೆಯ ರೀತಿಯಲ್ಲಿ ಎಂಬ ನಂಬಿಕೆಯಿದೆ. ಕ್ರಿಸ್ತನ ಕಾಲದ ತರುವಾಯ 300 ವರ್ಷ ಕಳೆದ ಮೇಲೆ ಈ ಹಬ್ಬ, ಕ್ರಿಸ್ತನ ಜಯಂತಿಯಂತೆ ಒಂದು ಅಪೂರ್ವ ಹಬ್ಬವಾಗಿ ಮಾರ್ಪಟ್ಟಿತು. ಇದು ಕ್ರೈಸ್ತರ ದೇಶಗಳಲ್ಲಿ ಸ್ಫೂರ್ತಿ ದಾಯಕ, ಪವಿತ್ರ ಹಾಡುಗಳ ಕಾಲ. ಇನಿದಾದ ಘಂಟಾನಾದಗಳ ಸಮ್ಮಿಲನ. ಬೆಳಕು ಚೆಲ್ಲುವ ಮನೆಗಳು, ಬೀದಿ, ಅಂಗಡಿಗಳು ಆನಂದವೇ ಮೂರ್ತಿ ವೆತ್ತಂತೆ ಕಾಣುತ್ತದೆ. ಕ್ರಿಸ್‌ಮಸ್ ಮರವನ್ನು ತಂದು ನಿಲ್ಲಿಸಿ ಅಲಂಕರಿಸಿ, ಅದಕ್ಕೆ ತಮಗೆ ಬೇಕಾದವರಿಗೆಲ್ಲ ಪ್ರೀತಿಯ ಉಡುಗೊರೆಗಳನ್ನು ತೂಗ ಹಾಕುತ್ತಾರೆ. ಇದು ನಿತ್ಯ ಹಸಿರುಗಿಡವೆಂದು ಕರೆಯಲ್ಪಡುವ ಮರ. (ಒಂದು ಬಾರಿ, ಮೂವತ್ತು ಮೀಟರು ಎತ್ತರದ ಇಂಥ ಮರವನ್ನು ಹನ್ನೊಂದು ಕಿ. ಮೀ. ಉದ್ದದ ತಂತಿಯ ಸಹಾಯದಿಂದ 7,000 ಬಣ್ಣ ಬಣ್ಣದ ದೀಪಗಳಿಂದ ನಾರ್ವೆಯಲ್ಲಿ ಅಲಂಕರಿಸಲಾಯಿತು.) ಶುಭಾಶಯ ಪತ್ರಗಳು ಹೇರಳವಾಗಿ ಬಳಗದವರಲ್ಲಿ ಮಿತ್ರರಲ್ಲಿ ವಿನಿಮಯವಾಗುತ್ತವೆ. ಭೋಜನ ವೈವಿಧ್ಯ, ಕ್ರಿಸ್ತನ ಜೀವನದ ಘಟ್ಟಗಳನ್ನು ಮೂಕಚಿತ್ರಗಳಂತೆ ರಚಿಸುವುದು. ಇವೆಲ್ಲ ಹಬ್ಬದ ಹಲವಾರು ವಿಶಿಷ್ಟ ಮುಖಗಳು. ಸಂತ ಕ್ಲಾಸ್ ಎಂಬ ಕರುಣಾಳು ಈ ಹಬ್ಬದಲ್ಲಿ ದೀನರಿಗೆ, ಮಕ್ಕಳಿಗೆ ಉಡು ಗೊರೆಗಳನ್ನು ಹಂಚುವನೆಂಬ ನಂಬಿಕೆ.

ಬೌದ್ಧಮತದ ಹಬ್ಬಗಳು ಥೈಲೆಂಡ್, ಟಿಬೆಟ್, ಚೀನ ಹಾಗೂ ಜಪಾನ್ ಗಳಲ್ಲಿ ಬೇರೆ ಬೇರೆ ವಿಧವಾಗಿ ಆಚರಿಸಲ್ಪಡುತ್ತಿವೆ. ಇವುಗಳಲ್ಲಿ ಮುಖ್ಯ ವಾದದ್ದು ಬುದ್ಧಜಯಂತಿ. ಜೈನಮತದ ಹಬ್ಬಗಳು ಆಡಂಬರಗಳಿಲ್ಲದೆ ಆಚರಿಸಲ್ಪಡುತ್ತವೆ. ಇವುಗಳಲ್ಲಿ ಮಹಾವೀರ ಜಯಂತಿ, ಕಲ್ಪಸೂತ್ರವೆಂಬ ಧರ್ಮಗ್ರಂಥವನ್ನು ಕುರಿತಾದ ಹಬ್ಬಗಳು ಮುಖ್ಯವೆನಿಸಿವೆ.

ಮುಸಲ್ಮಾನರಲ್ಲಿ ಮೊಹರಂ ಹಾಗೂ ಕ್ರೈಸ್ತರಲ್ಲಿ ಕ್ರಿಸ್‌ಮಸ್ ದಿನ ಇತ್ಯಾದಿ ಸಾಂಘಿಕ ಹಾಗೂ ಸಾಮಾಜಿಕ ಹಬ್ಬಗಳು ಹೆಚ್ಚು ಕಡಮೆ ಒಂದೇ ರೀತಿಯದಾಗಿರುತ್ತವೆ. ಇವುಗಳಲ್ಲಿ ಜನಜೀವನದ ಹಾದಿಯಲ್ಲಿನ ಕೆಲವು ಪ್ರಧಾನ ಮೈಲುಗಲ್ಲುಗಳನ್ನು ಸ್ಮರಿಸುವುದೇ ಮುಖ್ಯ ಉದ್ದೇಶ. ಇಲ್ಲವೆ ಧಾರ್ಮಿಕ ಹಿನ್ನೆಲೆಯಲ್ಲಿ ಸಾಮಾಜಿಕ ಜೀವನದ ಕೆಲವು ಚಟುವಟಿಕೆಗಳನ್ನು ನಡೆಸಿಕೊಳ್ಳುವುದೂ ಉಂಟು. ಉದಾಹರಣೆಗೆ ಜಾತ್ರೆ, ಉತ್ಸವ ಇತ್ಯಾದಿ. ನಾಡಹಬ್ಬಗಳು ಸಾಧಾರಣವಾಗಿ ಆಯಾ ರಾಜ್ಯಗಳಿಗೆ ಸೀಮಿತವಾದುವು. ಉದಾಹರಣೆಗೆ ಕೇರಳದಲ್ಲಿ ನಡೆಯುವ ಓಣಂ ಹಬ್ಬ. ಕನ್ನಡನಾಡಿನಲ್ಲಿ ಕೃಷ್ಣದೇವರಾಯನ ಕಾಲದ ವೈಭವದ ಸೀಮೋಲ್ಲಂಘನೆಯ ನೆನಪು ಉಳಿದದ್ದು ಮೈಸೂರಿನ ದಸರೆಯಲ್ಲಿ–ದಸರೆ ಕನ್ನಡನಾಡಿನ ನಾಡಹಬ್ಬ. ಇದೇ ಹಬ್ಬ ತಮಿಳುನಾಡಿನಲ್ಲಿ ಬೊಂಬೆಗಳ ಹಬ್ಬವಾಗಿಯೂ ಬಂಗಾಳದಲ್ಲಿ ಶಕ್ತಿಪೂಜೆಯ ಹಬ್ಬವಾಗಿಯೂ ರೂಢಿಯಲ್ಲಿದೆ. ರಾಷ್ಟ್ರೀಯ ಹಬ್ಬಗಳೆಂದರೆ, ಆಯಾ ರಾಷ್ಟ್ರಗಳ ಚರಿತ್ರೆಯಲ್ಲಿ ರಾಷ್ಟ್ರಹಿತ ಮತ್ತು ಏಳಿಗೆಯ ದೃಷ್ಟಿಯಿಂದ ಮಹತ್ತರವಾದ ದಿನಗಳೆಂದರ್ಥ. ಆಗಸ್ಟ್ ಹದಿನೈದು ಭಾರತದ ಮಹಾಸುದಿನ; ಪಾರತಂತ್ರ್ಯ ಕಳಚಿ ದೇಶ ಮುಕ್ತವಾದ ದಿನ. ಜನವರಿ ಇಪ್ಪತ್ತಾರು, ಗಣರಾಜ್ಯ ಘೋಷಣೆಯ ದಿವಸ.

ಹಬ್ಬಗಳು ಮೊದಲಿಗೆ ಆರಂಭವಾದದ್ದು ಹೇಗೆ ? ಒಂದಲ್ಲ ಒಂದು ಬಾರಿ ಮನುಷ್ಯನ ಎಲ್ಲ ಚಟುವಟಿಕೆಗಳ ಬಗೆಗೂ ಈ ರೀತಿಯ ಕುತೂಹಲ ಮೂಡುವುದು ಸಹಜ. ಇದಕ್ಕೆ ಊಹೆ ಕಲ್ಪನೆಗಳಿಲ್ಲದಿಲ್ಲ. ಮಾನವ ಕೇವಲ ಆಹಾರಕ್ಕಾಗಿ ದಿನವೆಲ್ಲ ಹೋರಾಡಿ ಬಳಲುತ್ತಿದ್ದ ಪ್ರಾಚೀನ ಕಾಲವೊಂದಿತ್ತು. ಮುಂದೆ ಅವನ ಜೀವನವು ಪ್ರಾಣಿಜೀವನಕ್ಕಿಂತ ಉತ್ತಮಗೊಂಡಾಗ ತನ್ನ ನೆಲೆ ಮತ್ತು ಜೀವನದ ಸೌಕರ್ಯಗಳ ಮೂಲವಾದ ನೀರು, ನೆಲ, ಬೆಂಕಿ ಇವುಗಳ ಬಗೆಗೆ ಅವನಲ್ಲಿ ಗೌರವ ಕೃತಜ್ಞತೆಗಳು ಮೂಡಿರಬಹುದು. ಇವುಗಳಲ್ಲಿ ತನ್ನ ಜೀವ ಮತ್ತು ಜೀವನಕ್ಕೆ ಅಪಾಯ ತರುವ ಶಕ್ತಿಗಳನ್ನೂ ಅವನು ಗುರುತಿಸಿದ. ಅವು ತನ್ನನ್ನು ಉಳಿಸಬಹುದು ಇಲ್ಲವೇ ಅಳಿಸಬಹುದು ಎಂಬ ಭಾವನೆ ಅವನಲ್ಲಿ ಮೊಳೆಯಿತು. ಹೀಗೆ ಹಾನಿ ತರುವ ಶಕ್ತಿಗಳಿಗೆ ರೂಪುಕೊಟ್ಟು ಅವನು ಅವುಗಳನ್ನು ಆರಾಧಿಸ ಲಾರಂಭಿಸಿದ.

ನಾಗರಿಕಮಾನವ ಹಬ್ಬಗಳಿಗೆ ತನ್ನದೇ ಅರ್ಥವನ್ನು ಕೊಟ್ಟಿದ್ದಾನೆ. ದೇವರು ಧರ್ಮದ ವಿಚಾರದಲ್ಲಿ ಹೆಚ್ಚಿನ ಜ್ಞಾನ ಸಂಪಾದಿಸಿ, ಆ ದೇವನ ಪ್ರೀತ್ಯರ್ಥವಾಗಿ ವ್ರತ, ನಿಯಮ, ಉಪವಾಸಗಳನ್ನು ಆಚರಿಸುತ್ತಾನೆ. ಹಿಂದೂಗಳಲ್ಲಿ, ಮುಸಲ್ಮಾನರಲ್ಲಿ ಮತ್ತು ಕ್ರೈಸ್ತರಲ್ಲಿ ಉಪವಾಸ ಪದ್ಧತಿ ಗಳಿವೆ. ಕಾಲಮಾನ, ಋತುಮಾನಗಳನ್ನು ಗಮನಿಸಿ ಅವುಗಳಲ್ಲಿ ಪರ್ವ ಕಾಲಗಳನ್ನು ಗುರುತಿಸಿ, ಮನುಷ್ಯ ಜೀವನದಲ್ಲಿ ಈ ಪರ್ವಕಾಲದ ತಿರುವು ಹೇಗೆ ಮೂಡಿದೆ ಎಂದು ತಿಳಿದು, ಅವುಗಳ ಅಧಿದೇವತೆಗಳನ್ನು ಪೂಜಿಸು ತ್ತಾರೆ. ಈ ಋತುಮಾನಗಳಿಗೆ ಸಂಬಂಧಪಟ್ಟ ಹಬ್ಬಗಳಲ್ಲಿ ಜೀವನ ಮತ್ತು ಮರಣಗಳ ಹೋರಾಟದ ಚಿತ್ರವಿದೆಯೆಂದು ಕೆಲವು ಪಾಶ್ಚಾತ್ಯ ಹಬ್ಬಗಳು ಸೂಚಿಸುತ್ತವೆ. ದುಷ್ಟ ಶಕ್ತಿಗಳ (ಕ್ಷಯರೋಗ ಹಾಗೂ ಸಾವು) ನಿಗ್ರಹ ಹಾಗೂ ಹಿತಶಕ್ತಿಗಳನ್ನು ಪಡೆಯುವ (ಆಹಾರ, ಆರೋಗ್ಯ ಮತ್ತು ಸಂಪತ್ತು) ಧ್ಯೇಯದಿಂದ ಇವು ಆಚರಿಸಲ್ಪಡುತ್ತವೆ. ಇಂಗ್ಲೆಂಡಿನ ಕೆಲವು ಭಾಗಗಳಲ್ಲಿ ಹಗ್ಗ ಎಳೆಯುವ ಸ್ಪರ್ಧೆಯನ್ನು ಏರ್ಪಡಿಸಿ, ಜೀವನದ ಈ ಹೋರಾಟವನ್ನು ಸಂಕೇತ ರೂಪದಲ್ಲಿ ಸೂಚಿಸುವರಂತೆ. ಭಾರತೀಯ ಹಬ್ಬಗಳಿಗೂ ಋತುಮಾನಗಳಿಗೂ ನಿಕಟಬಾಂಧವ್ಯವಿದೆ. ಸಂಕ್ರಾಂತಿ ಯಲ್ಲಿ ಸೂರ್ಯ ತನ್ನ ಪಥವನ್ನು ಬದಲಿಸುವುದರಿಂದ ಬರುವ ವರ್ಷದ ಸಂಕ್ರಾಂತಿಯು ಹರ್ಷತರಲೆಂದು ಪ್ರಾರ್ಥಿಸುವುದರ ಜೊತೆಗೆ ಆ ಕಾಲದ ಕುಯ್ಲಾದ ಎಳ್ಳು, ಕಡಲೆಕಾಯಿ ಹಾಗೂ ಬೆಲ್ಲ ಇವುಗಳ ನೈವೇದ್ಯವನ್ನು ದೇವರಿಗೆ ಅರ್ಪಿಸುತ್ತಾರೆ. ಹೀಗೆಯೇ ಉಳುಮೆ ಬೆಳೆಗಳಿಗೆ ಸಂಬಂಧಿಸಿದ ಹಬ್ಬಗಳೂ ಇವೆ.

ಹಬ್ಬಗಳು ಮನುಷ್ಯನ ಒಂದು ಹಾರೈಕೆಯನ್ನು [illegible]. ತನಗೆ, ತನ್ನ ಮಕ್ಕಳಿಗೆ, ನೆರೆಹೊರೆಯವರಿಗೆ, ವಿಶಾಲ ಪ್ರಪಂಚಕ್ಕೆ ಒಳ್ಳೆಯದಾಗಲಿ ಎಂದು ಮನ[illegible] [illegible]. ಹಬ್ಬದ ದಿನ ಮಿಂದು, ದೈವಾರಾ[illegible] ಹಗುರಗೊಳಿಸುತ್ತಾನೆ. ಒಳ್ಳೆಯ ಆಹಾರ ಸುಖ ಭೋಜನ ಇವು ಹಬ್ಬಗಳ

ಮುಖ್ಯ ಅಂಗ. ಆಯಾಕಾಲದ ಬೆಳೆಗೆ ತಕ್ಕಂತೆ ಅವುಗಳಿಂದ ತಯಾರಿಸಿದ ಅಡುಗೆಯ ನೈವೇದ್ಯ. ತನ್ನನ್ನು ಹರಸಿದ ದೇವರಿಗೆ ಅದನ್ನು ಮೊದಲು ಸಮರ್ಪಿಸಿ ಅವನ ಪ್ರಸಾದವನ್ನು ತಾನು ಅನುಭವಿಸುವೆನೆಂಬ ಒಂದು ಪವಿತ್ರ ಮನೋಭಾವನೆಗೆ ಎಡೆಕೊಟ್ಟಿದೆ. ಹೀಗೆ ಒಳ್ಳೆಯ ವಾತಾವರಣದಲ್ಲಿ ಉಲ್ಲಾಸ ತಾನೇ ತಾನಾಗಿ ಹರಿದು ಎಲ್ಲರಿಗೂ ಹರಡುತ್ತದೆ.

ಪ್ರತಿ ವರ್ಷವೂ ಹಬ್ಬಗಳನ್ನು ಆಚರಿಸಿ ಅವುಗಳ ಪ್ರಭಾವ ಜೀವನ ಪರ್ಯಂತವಿರಲಿ ಎನ್ನುವುದರ ಜೊತೆಗೆ ಸಮಾಜದಲ್ಲಿ ತನ್ನ ಪಾತ್ರ, ಅದಕ್ಕೆ ತನ್ನ ಹೊಣೆಗಳನ್ನು ಮತ್ತೆ ಮತ್ತೆ ನೆನಪಿಗೆ ತಂದುಕೊಳ್ಳುತ್ತಾನೆ. ' ಏಪ್ರಿಲ್ ಫೂಲ್ಸ್ ಡೆ ' ಹಾಗೂ ಹೋಳಿ ಹಬ್ಬಗಳ ಆಚರಣೆಯಲ್ಲಿ ಹರ್ಷ ಕಟ್ಟೆಯೊಡೆದು ಸಾಗುತ್ತದೆ. ಇವು ಮುಖ್ಯವಾಗಿ ಸಂತೋಷ ವಿಹಾರಗಳ ಸಂಕೇತವಾಗಿ ಆಚರಿಸಲ್ಪಡುತ್ತವೆ.

ಹಬ್ಬವಿಲ್ಲದ ಜೀವನ ಬರಡಾಗಿ ಕಾಣುವುದರಲ್ಲಿ ಅತಿಶಯವೇನಿಲ್ಲ. ಈ ಹಬ್ಬಗಳ ಕಾರಣದಿಂದ ಪಾವಿತ್ರ್ಯ ಹಾಗೂ ಉಲ್ಲಾಸ ಬದುಕನ್ನು ಆವರಿಸುತ್ತವೆ.

## ಹರಾಜು

ಅಂಗಡಿಯಲ್ಲಿ ಪದಾರ್ಥವನ್ನು ಕೊಳ್ಳುವ ಮುಂಚೆ, ' ಬೆಲೆ ಎಷ್ಟು ? ' ಎಂದು ಕೇಳುತ್ತೇವೆ. ಪದಾರ್ಥದ ಬೆಲೆಯನ್ನು ಕೊಟ್ಟು ಅದನ್ನು ಕೊಳ್ಳುತ್ತೇವೆ. ಒಮ್ಮೊಮ್ಮೆ ಚೌಕಾಶಿ ನಡೆದು ಬೆಲೆ ಸ್ವಲ್ಪ ಕಡಮೆಯಾಗಬಹುದು. ಆದರೆ ಪದಾರ್ಥದ ಬೆಲೆ ಬಹಳ ವ್ಯತ್ಯಾಸವಾಗುವುದಿಲ್ಲ.

ಪದಾರ್ಥ ಎಷ್ಟಕ್ಕೆ ಮಾರಾಟವಾಗಬಹುದು ಎಂಬುದು ಕೊಳ್ಳುವವನಿಗೂ ಮಾರುವವನಿಗೂ ಗೊತ್ತೇ ಇಲ್ಲದೆ ವ್ಯಾಪಾರ ಪ್ರಾರಂಭವಾಗಬಹುದೆ? ಹರಾಜಿನಲ್ಲಿ ಹಾಗೆ ಆಗುತ್ತದೆ.

ಅನೇಕ ವಸ್ತುಗಳು ಹರಾಜಿನ ಮೂಲಕ ಬಹಳ ಸುಲಭವಾಗಿ ಮಾರಾಟವಾಗುತ್ತವೆ. ಹರಾಜುಗಾರ ಎತ್ತರವಾದ ಸ್ಥಳದಲ್ಲಿ ನಿಂತುಕೊಂಡು ಹರಾಜಿನ ಮೂಲಕ ಮಾರಾಟಕ್ಕೆ ಇರುವ ವಸ್ತುವನ್ನು ತನ್ನ ಮುಂದೆ ಸೇರಿರುವ ಗಿರಾಕಿಗಳಿಗೆ ತೋರಿಸಿ ಅದರ ಕನಿಷ್ಠ ಬೆಲೆಯನ್ನು ತಿಳಿಸುತ್ತಾನೆ. ಆ ಕನಿಷ್ಠ ಬೆಲೆಗಿಂತ ಕಡಮೆಗೆ ಆ ವಸ್ತುವನ್ನು ಮಾರಲಾಗುವುದಿಲ್ಲ. ಅದಕ್ಕಿಂತ ಹೆಚ್ಚು ಹಣ ನೀಡಲು ಸಿದ್ಧವಿರುವ ಗಿರಾಕಿ ತಾನು ಎಷ್ಟಕ್ಕೆ ಕೊಳ್ಳಲು ಸಿದ್ಧ ಎಂಬ ಬಗೆಗೆ ತನ್ನ ಸಮ್ಮತಿ ಕೂಗುತ್ತಾನೆ. ಹರಾಜುಗಾರ ಆ ಸಮ್ಮತಿ ಬೆಲೆಯನ್ನು ಗಟ್ಟಿಯಾಗಿ ಪುನಃ ಪುನಃ ಉಚ್ಚರಿಸುತ್ತಾನೆ. ಮತ್ತೊಬ್ಬ ಗಿರಾಕಿ ಹೆಚ್ಚಿನ ಸಮ್ಮತಿ ಬೆಲೆ ತಿಳಿಸಿದರೆ ಹರಾಜುಗಾರ ಆ ಬೆಲೆಯನ್ನು ಹೇಳುತ್ತಾನೆ. ಹೀಗೆ ಬೇರೆ ಬೇರೆ ಗಿರಾಕಿಗಳು ಹೆಚ್ಚು ಹೆಚ್ಚಿನ ಸಮ್ಮತಿಗಳನ್ನು ಕೂಗುತ್ತಾರೆ. ವಸ್ತುವನ್ನು ಕೊಳ್ಳಬೇಕೆಂಬ ಪೈಪೋಟಿ ಗಿರಾಕಿಗಳಲ್ಲಿ ಮೂಡಿದರೆ ಬೆಲೆ ಏರುತ್ತದೆ. ಯಾರಾದರು ಇಬ್ಬರು ಗಿರಾಕಿಗಳ ನಡುವೆ ಹಟ ಮೂಡಿದರೆ ಪದಾರ್ಥದ ಸಮ್ಮತಿ ಬೆಲೆ ಹೆಚ್ಚುತ್ತಾ ಹೋಗುತ್ತದೆ. ಆಕರ್ಷಕವಾದ ಪರಮಾವಧಿ ಸಮ್ಮತಿ ಬಂದಾಗ ಹರಾಜುಗಾರ ಒಂದನೆಯ ಸವಾಲು ಎರಡನೆಯ ಸವಾಲು ಎಂದು ತಡೆತಡೆದು ಕೂಗುತ್ತಾನೆ. ಬೇರೆ ಯಾರಾದರೂ ಇನ್ನೂ ಹೆಚ್ಚಿನ ಸಮ್ಮತಿ ನೀಡುವರೇನೊ ಎಂಬುದು ಅವನ ಆಸೆ. ಹೆಚ್ಚಿನ ಸಮ್ಮತಿ ಬರದಿದ್ದರೆ ಹರಾಜುಗಾರ ' ಮೂರನೆಯ ಸವಾಲು ' ಎಂದು ಕೂಗಿ ಒಂದು ಗಂಟೆಯನ್ನು ಬಡಿಯುತ್ತಾನೆ ; ಇಲ್ಲವೆ ಸುತ್ತಿಗೆಯಿಂದ ಮೇಜನ್ನು ಕುಟ್ಟಿ ಸಬ್ಬ ಮಾಡುತ್ತಾನೆ. ಅಲ್ಲಿಗೆ ಆ ಪದಾರ್ಥದ ಹರಾಜು ಮುಗಿಯುತ್ತದೆ. ಪರಮಾವಧಿ ಸಮ್ಮತಿ ನೀಡಿದ ಗಿರಾಕಿ ಅಷ್ಟು ಬೆಲೆ ನೀಡಿ ಅದನ್ನು ಕೊಂಡುಕೊಳ್ಳುತ್ತಾನೆ.

ಅನೇಕ ಬಗೆಯ ಪದಾರ್ಥಗಳನ್ನು ಹರಾಜುಹಾಕುವ ಹರಾಜುಗಾರರು ಅಲ್ಲಲ್ಲಿ ಇರುತ್ತಾರೆ. ತಮಗೆ ಉಪಯುಕ್ತವಲ್ಲದ ಪದಾರ್ಥಗಳನ್ನು ಮಾರಬೇಕೆಂದಿರುವವರು ಹರಾಜುಗಾರರ ವಶಕ್ಕೆ ಒಪ್ಪಿಸಿ, ಕನಿಷ್ಠ ಬೆಲೆ ಇಷ್ಟಿರಬೇಕೆಂದು ತಿಳಿಸಿಹೋಗುತ್ತಾರೆ. ಹರಾಜಿನ ಮೂಲಕ ಅದು ಮಾರಾಟವಾದ ಮೇಲೆ, ಪದಾರ್ಥಗಳ ಒಡೆಯರಾಗಿದ್ದವರು ಹಣ ಪಡೆಯುತ್ತಾರೆ. ಮಾರಾಟವಾದ ಬೆಲೆಯ ಮೇಲೆ ಶೇಕಡಾ ಒಂದು ಭಾಗ ಹರಾಜು ಹಾಕಿದವನ ದಳ್ಳಾಳಿ ರುಸುಮು ಎಂದು ಕೊಡುತ್ತಾರೆ.

ದೇಶದ ಆಯಾ ಪ್ರದೇಶಗಳಲ್ಲಿ ಬೆಳೆಯುವ ಮುಖ್ಯವಾದ ಬೆಳೆ ನಿಯಂತ್ರಿತ ಮಾರುಕಟ್ಟೆಗಳಲ್ಲಿ ಮಾರಾಟಕ್ಕೆ ಬರುತ್ತದೆ. ಮಾರುವ ಬೆಳೆಗಾರ ಮತ್ತು ಕೊಳ್ಳುವ ವ್ಯಾಪಾರಸ್ಥ ಇಬ್ಬರಿಗೂ ಅಲ್ಲಿ ನೇರ ಸಂಪರ್ಕ ಏರ್ಪಡುತ್ತದೆ. ರೈತನ ಪರವಾಗಿ ಹರಾಜುಗಾರರಾಗಿ ದಳ್ಳಾಳಿಗಳು ಬೆಲೆಯನ್ನು ಕೂಗುತ್ತಾರೆ. ಮಾರಾಟವಾದ ಬೆಲೆಯ ಮೇಲೆ ಶೇಕಡಾವಾರು ದಳ್ಳಾಳಿ ಹಣವನ್ನು ರೈತ ಕೊಡಬೇಕಾಗುತ್ತದೆ. ಆಹಾರ ಪದಾರ್ಥಗಳ ಬೆಲೆ ಏರುಪೇರಾಗುವುದು ಇಂಥ ಮಾರುಕಟ್ಟೆಗಳಲ್ಲೇ. ವಿಶೇಷವಾಗಿ ಸರಕು ಮಾರುಕಟ್ಟೆಗೆ ಬಂದರೆ ಅಥವಾ ಹೊರಗಿನ ಊರುಗಳಿಂದ ಬೇಡಿಕೆ ಇಲ್ಲದಿದ್ದರೆ ವ್ಯಾಪಾರಸ್ಥರು ಹೆಚ್ಚು ಬೆಲೆಯ ಸಮ್ಮತಿ ಕೂಗುವುದಿಲ್ಲ. ಆಗ ಆಹಾರಧಾನ್ಯಗಳಿಗೆ ಬೆಲೆ ಇಳಿಯುತ್ತದೆ. ಹೊರಗಿನಿಂದ ಪದಾರ್ಥಕ್ಕೆ ಹೆಚ್ಚಿಗೆ ಬೇಡಿಕೆ ಬಂದರೆ ಅಥವಾ ಮಾರುಕಟ್ಟೆಗೆ ಕಡಮೆ ಸರಕು ಬಂದರೆ ವ್ಯಾಪಾರಸ್ಥರು ಹೆಚ್ಚಿನ ಬೆಲೆಯ ಸಮ್ಮತಿ ಕೂಗುತ್ತಾರೆ. ಆಗ ಬೆಲೆ ಏರುತ್ತದೆ.

ಕೆಲವೊಂದು ಪ್ರದೇಶಗಳು ವಿಶಿಷ್ಟ ಬೆಳೆಗಳಿಗೆ ಪ್ರಸಿದ್ಧವಾಗಿರುತ್ತವೆ. ಆಯಾ ಮುಖ್ಯ ಮಾರುಕಟ್ಟೆಗಳಲ್ಲಿ ಆ ಬೆಳೆ ವಿಶೇಷವಾಗಿ ಹರಾಜಿಗೆ ಬರುತ್ತದೆ. ಕೇಂದ್ರ ವ್ಯವಸ್ಥೆಯ ಹರಾಜು ಇನ್ನೊಂದು ಬಗೆಯದು. ಉದಾಹರಣೆ: ಕಾಫಿ, ಟೀ. ದೇಶದಲ್ಲಾಗುವ ಎಲ್ಲ ಕಾಫಿ ಬೆಳೆಯನ್ನು ಕಾಫಿಬೋರ್ಡು ಕೊಂಡು ಮುಖ್ಯ ಕೇಂದ್ರಗಳಲ್ಲಿ ಹರಾಜಿನ ಮೂಲಕ ಮಾರಾಟ ಮಾಡುತ್ತದೆ. ವ್ಯಾಪಾರಸ್ಥರು ಕಾಫಿ ಬೋರ್ಡಿನವರು ನಡೆಸುವ ಹರಾಜುಗಳಲ್ಲಿ ಭಾಗವಹಿಸಿ ಕಾಫಿಯನ್ನು ಕೊಳ್ಳುತ್ತಾರೆ. ಬೆಳೆಗಾರರು ಬೆಳೆದ ಕಾಫಿಯನ್ನು ಮಾರಾಟದ ಸಲುವಾಗಿ ಬೋರ್ಡಿಗೆ ರವಾನಿಸುತ್ತಾರೆ.

ತೆರಿಗೆ ಅಥವಾ ಇನ್ನಾವುದೇ ಬಾಕಿ ಇದ್ದರೆ. ಅವುಗಳ ವಸೂಲಿಗೆ ಬೇರೆ ದಾರಿ ಇಲ್ಲದೆಹೋದರೆ ಆಸ್ತಿಪಾಸ್ತಿಗಳನ್ನು ಹರಾಜು ಹಾಕಲಾಗುತ್ತದೆ. ಅಬ್ಕಾರಿ ಇಲಾಖೆಯವರು ಮುಟ್ಟುಗೋಲು ಹಾಕಿಕೊಳ್ಳುವ ಅಕ್ರಮ ದಾಸ್ತಾನನ್ನು ಹರಾಜು ಹಾಕುತ್ತಾರೆ.

ಭಾರತದಲ್ಲಿ ದೇಶಕ್ಕೆ ಅಗತ್ಯವಾದ ಬಹುತೇಕ ಸರಕುಗಳನ್ನು ಪ್ರಭುತ್ವ ವಾಣಿಜ್ಯ ಮಂಡಳಿ ಸಂಸ್ಥೆ ಆಮದು ಮಾಡಿಕೊಳ್ಳುತ್ತದೆ. ಕೆಲವೊಂದು ಆಮದು ವಸ್ತುಗಳನ್ನು ವಿತರಣೆ ಮಾಡಲು ಅದು ಹರಾಜು ಪದ್ಧತಿಯನ್ನು ಅನುಸರಿಸುತ್ತದೆ.

ಹರಾಜಿನ ಮೂಲಕ ಮಾರಾಟ ಮಾಡುವುದನ್ನು ಪ್ರಾರಂಭಿಸಿದವರು ರೋಮನರು. ತಾವು ಯುದ್ಧದಲ್ಲಿ ಸುಲಿಗೆಮಾಡಿದ ವಸ್ತುಗಳನ್ನು ಅವರು ಹರಾಜು ಹಾಕುತ್ತಿದ್ದರು. ಜನರ ಗಮನ ಸೆಳೆಯಲು ಹರಾಜು ಹಾಕುವ ಸ್ಥಳದಲ್ಲಿ ಉದ್ದನೆಯ ಭರ್ಜಿಯೊಂದನ್ನು ನೆಡುತ್ತಿದ್ದರು. ಹದಿನೆಂಟು ಮತ್ತು ಹತ್ತೊಂಬತ್ತನೆಯ ಶತಮಾನಗಳಲ್ಲಿ ಒಂದು ತುಣುಕು ಮೇಣದ

ಬತ್ತಿಯನ್ನು ಹತ್ತಿಸಿ ಹರಾಜು ಆರಂಭಿಸುತ್ತಿದ್ದರು ; ಅದು ಆರುವ ತನಕ ಮಾತ್ರ ಸಮ್ಮತಿ ಕೂಗಬಹುದಾಗಿತ್ತು. ಈ ಪದ್ಧತಿಯನ್ನು ಈಸ್ಟ್ ಇಂಡಿಯಾ ಕಂಪೆನಿಯವರು ಕೆಲವು ಸಂದರ್ಭಗಳಲ್ಲಿ ಅನುಸರಿಸುತ್ತಿದ್ದರು. ಕಳೆದ ಶತಮಾನದವರೆಗೂ ಪ್ರಪಂಚದಲ್ಲಿ ಗುಲಾಮಗಿರಿ ಜಾರಿಯಲ್ಲಿತ್ತು. ಗುಲಾಮರನ್ನು ಹಡಗುಗಳಲ್ಲಿ ತುಂಬಿಕೊಂಡು ಬಂದು ಐರೋಪ್ಯ ದೇಶಗಳ ಮುಖ್ಯ ಪಟ್ಟಣಗಳಲ್ಲಿ ಹರಾಜು ಹಾಕಲಾಗುತ್ತಿತ್ತು.

ಕಾಲ ಕಳೆದಂತೆ ವ್ಯಾಪಾರ ವಿಧಾನಗಳು ಬದಲಾದರೂ ಹರಾಜಿನ ಜನಪ್ರಿಯತೆಗೆ ಧಕ್ಕೆ ಬಂದಿಲ್ಲ. ಬೇಡಿಕೆಯಿಲ್ಲದ ವಸ್ತುಗಳನ್ನು ವಿಕ್ರಯಿಸಲು ಅಗತ್ಯವಾದ ವಸ್ತುಗಳನ್ನು ಕೊಳ್ಳಲು ಹರಾಜು ಇಂದಿಗೂ ಒಳ್ಳೆಯ ವ್ಯಾಪಾರ ಮಾಧ್ಯಮ.

## ಹವಾಗುಣ

' ಉಶ್ ! ಏನು ಸೆಖೆ ! '

' ಇವತ್ತು ಮಳೆ ಬಂದರೂ ಬರಬಹುದು.'

' ಎಂಥ ಚಳಿ ! '

ಈ ಬಗೆಯ ನೂರಾರು ಮಾತುಗಳನ್ನು ಕೇಳುತ್ತಿರುತ್ತೇವೆ. ಇವುಗಳಲ್ಲಿ ಒಂದೊಂದೂ ಆಯಾ ಸಮಯದ ಹವಾಗುಣವನ್ನು ಕುರಿತ ಮಾತು. ವಾತಾವರಣದಲ್ಲಿ ಆಗಾಗ್ಗೆ ಕಂಡುಬರುವ ತಾತ್ಕಾಲಿಕ ಬದಲಾವಣೆಗಳಿಗೆ ಹವಾಗುಣವೆನ್ನುತ್ತೇವೆ. ವಾತಾವರಣದಲ್ಲಿ ಕಂಡುಬರುವ ಉಷ್ಣತೆ, ತೇವಾಂಶ, ಶುಷ್ಕತೆ, ಎಲ್ಲಕ್ಕೂ ಹವಾಗುಣವೇ ಕಾರಣ.

ಮನುಷ್ಯನ ಪರಿಸರದ ಮೇಲೆ ಹವಾಗುಣದ ಪ್ರಭಾವ ಅಪಾರ. ಅನೇಕ ನೈಸರ್ಗಿಕ ಸಂಪನ್ಮೂಲಗಳು ತಮ್ಮ ಉಳಿವಿಗೆ ಹವಾಗುಣವನ್ನೇ ನೆಚ್ಚಿಕೊಂಡಿರುತ್ತವೆ. ಸರೋವರ ನದಿಗಳ ನೀರು, ಅರಣ್ಯಗಳ ಮರಗಿಡಗಳು, ಇವುಗಳ ಬೆಳವಣಿಗೆಗೆ ಹವಾಗುಣದ ಕೃಪಾದೃಷ್ಟಿ ಅತ್ಯಗತ್ಯ. ಮನುಷ್ಯನ ಜೀವನದ ಮೇಲೆಯೂ ಹವಾಗುಣದ ಪ್ರಭಾವ ಸಾಕಷ್ಟಿದೆ. ಮಳೆಯ ಬೀಳುವಿಕೆ ಒಳಿತಿಗಾದರೂ ಆಗಬಹುದು, ಕೆಡುಕಿಗಾದರೂ ಆಗಬಹುದು. ಅನಾವೃಷ್ಟಿ ಎಷ್ಟೋ ವೇಳೆ ಕ್ಷಾಮಕ್ಕೆ ನಾಂದಿ ಹಾಡಿದೆ. ಹವಾಗುಣ ಅನುಕೂಲವಿರದಿದ್ದರೆ ಹಾರಾಡುತ್ತಿರುವ ವಿಮಾನ ಕೆಳಗಿಳಿಯುವಂತಿಲ್ಲ.

ಮಾನವನ ಬದುಕಿನ ಆಗುಹೋಗುಗಳಿಗೆ ಹವಾಗುಣವೂ ಕಾರಣ. ಒಂದು ಕಡೆಯಿಂದ ಮತ್ತೊಂದು ಕಡೆಗೆ ಸಾವಿರಾರು ಕಿಲೊಮೀಟರು ಚಲಿಸುವಾಗ ವಾಯುರಾಶಿಗಳು ಅನೇಕ ಬದಲಾವಣೆಗಳಿಗೆ ಒಳಗಾಗುತ್ತವೆ. ವಾಯುರಾಶಿ ಸಮುದ್ರ, ನೆಲ ಯಾವುದರ ಮೇಲೆ ಹಾದು ಬರುವುದೊ ಅದಕ್ಕನುಗುಣವಾಗಿ ಈ ಬದಲಾವಣೆಗಳು ಬೇರೆಯಾಗಿರುತ್ತವೆ. ಸಮಭಾಜಕವೃತ್ತ ಪ್ರದೇಶದಿಂದ ಬೀಸುವ ಗಾಳಿ ಬಿಸಿಯಾಗಿರುತ್ತದೆ. ಧ್ರುವಪ್ರದೇಶಗಳ ಗಾಳಿ ತಣ್ಣಗಿರುತ್ತದೆ.

ಮಾರುತಗಳು ಒಂದು ಪ್ರದೇಶದಿಂದ ಮತ್ತೊಂದೆಡೆಗೆ ಉಷ್ಣತೆಯ ಬದಲಾವಣೆಯಿಂದ ಚಲಿಸುತ್ತವೆ. ಶಾಖ ಗಾಳಿಯನ್ನು ಹಗುರಾಗಿಸುತ್ತದೆ. ಹಗುರಾದ ಗಾಳಿ ಮೇಲೇರುತ್ತದೆ. ಮೇಲೇರಿದ ಗಾಳಿಯ ಜಾಗವನ್ನು ಆಕ್ರಮಿಸಿಕೊಳ್ಳಲು ಭಾರವಾದ ಶೀತ ಗಾಳಿ ಧಾವಿಸಿಬರುತ್ತದೆ. ಮತ್ತೆ ಈ ಗಾಳಿ ಕಾದು ಮೇಲೇರುತ್ತದೆ. ಅದರ ಜಾಗವನ್ನು ಭಾರವಾದ ಮತ್ತೊಂದು ಗಾಳಿಯ ತಂಡ ಆಕ್ರಮಿಸಿಕೊಳ್ಳುತ್ತದೆ. ಸಮಭಾಜಕ ವೃತ್ತದ ಬಳಿ ಇರುವ ಗಾಳಿಗೆ ಸೂರ್ಯನ ಶಾಖ ನೇರವಾಗಿ ತಗಲುವುದರಿಂದ ಅದು ಕಾದು ಹಗುರವಾಗಿ ಮೇಲೇರುತ್ತದೆ. ಆ ಸ್ಥಳವನ್ನಾಕ್ರಮಿಸಲು ಧ್ರುವ ಪ್ರದೇಶಗಳ ಭಾರವಾದ ಗಾಳಿ ಧಾವಿಸುತ್ತದೆ. ವಾತಾವರಣದ ಉಷ್ಣತೆಯಲ್ಲಿನ ಈ ಭೇದದಿಂದ ಇದೇ ಕ್ರಮದಲ್ಲಿ ಗಾಳಿ ಸುತ್ತುತ್ತಲೇ ಇರುತ್ತದೆ.

ಮೇಲೇರಿದ ಬಿಸಿಗಾಳಿಯು ಪರ್ವತದ ಇಳಿಜಾರಿನಲ್ಲಿ ಹಾದು ಹೋಗುವಾಗ ತಂಪಾಗಿ ಆವಿ ಘನವಾಗಿ ಮೋಡವಾಗುತ್ತದೆ. ಮೋಡವನ್ನು ಯಾವುದಾದರೂ ಪರ್ವತ ತಡೆದರೆ ಅದು ಹನಿಯಾಗಿ ಮಳೆ ಸುರಿಸುತ್ತದೆ. ಗಾಳಿಯಲ್ಲಿ ತೇವಾಂಶ ಹೆಚ್ಚಿದಷ್ಟೂ ಮಳೆ ಜಾಸ್ತಿ. ಅಂತೂ ಹವಾಗುಣದ ಬದಲಾವಣೆಯಲ್ಲಿ ಮಾರುತ ಪ್ರಮುಖ ಪಾತ್ರ ವಹಿಸುತ್ತದೆ.

ಭೂಗೋಳದ ಸುತ್ತ ಇರುವ ವಾತಾವರಣದಲ್ಲಿ ಶೇಕಡಾ 78 ಸಾರಜನಕ, ಶೇಕಡಾ 21 ಆಮ್ಲಜನಕ ಉಳಿದ ಭಾಗದಲ್ಲಿ ಇನ್ನೂ ಹಲವು ಅನಿಲಗಳು ಇರುತ್ತವೆ. ಇವುಗಳ ಪ್ರಮಾಣ ಯಾವಾಗಲೂ ಒಂದೇ. ಆದರೆ ವಾತಾವರಣದಲ್ಲಿನ ನೀರಿನ ಪ್ರಮಾಣ ಬದಲಾಗಬಹುದು. ಉಷ್ಣತೆ ಏರಿದಾಗ ಜಲಾನಯನ ಪ್ರದೇಶಗಳ ವಾತಾವರಣದಲ್ಲಿ ನೀರಿನ ಆವಿ ಹೆಚ್ಚುತ್ತದೆ. ಉಷ್ಣತೆ ಅದರಿಂದ ಹರಡಿ ಸೆಖೆ ಹೆಚ್ಚುತ್ತದೆ. ವಿಸ್ತಾರ ಕಲ್ಲುಬಂಡೆಗಳು ಶಾಖವನ್ನು ಬೇಗ ಹೀರಿಕೊಂಡು ಉಷ್ಣತೆಯನ್ನು ಹರಡುತ್ತವೆ. ಅದರಿಂದಲೂ ಸೆಖೆ ಬಹಳ ಎನಿಸುತ್ತದೆ. ವಾತಾವರಣದಲ್ಲಿ ಇರುವ ನೀರಿನ ಆವಿಗೆ ತೇವ ಎನ್ನುತ್ತಾರೆ. ತೇವ ಶೇಕಡಾ 100 ಆದಾಗ– ಎಂದರೆ, ಗಾಳಿಯಲ್ಲಿ ಎಷ್ಟು ತೇವ ಇರಲು ಸಾಧ್ಯವೋ ಅಷ್ಟು ಇದ್ದಾಗ– ಮೋಡಗಳು ಕಾಣಿಸಿಕೊಳ್ಳುತ್ತವೆ.

ಹವಾಗುಣದ ಮುನ್ಸೂಚನೆಯನ್ನು ಆಕಾಶವಾಣಿ ನಿಲಯಗಳು ಪ್ರಸಾರ ಮಾಡುವುದನ್ನು ಕೇಳಿದ್ದೇವೆ. ಅದನ್ನು ಹೇಗೆ ಕಂಡುಹಿಡಿಯುತ್ತಾರೆ ಎಂದು ನಮಗೆ ಸೋಜಿಗ. ಮುಂದಿನ ಹವಾಗುಣವನ್ನು ತಿಳಿಸುವ ವಿಜ್ಞಾನಕ್ಕೆ ಹವಾಮಾನ ವಿಜ್ಞಾನ ಎಂದು ಹೆಸರು. ಪ್ರತಿಯೊಂದು ದೇಶದಲ್ಲೂ ಹವೆಯ ಮುನ್ಸೂಚನೆಯನ್ನೀಯಲು ವೀಕ್ಷಕ ಕೇಂದ್ರಗಳನ್ನು ಸ್ಥಾಪಿಸಿದ್ದಾರೆ. ಉನ್ನತ ಆವರಣದ ಹವೆಯನ್ನು ವಿಮಾನಗಳ ಮೂಲಕ, ಸಾಗರದ ಮೇಲಿನ ಹವೆಯನ್ನು ಹಡಗಿನ ನಾವಿಕರ ಮೂಲಕ ತಿಳಿದುಕೊಳ್ಳುತ್ತಾರೆ. ಗಾಳಿಯ ಭಾರ, ಉಷ್ಣತೆ, ತೇವ, ವೇಗ, ಸಂಚಾರದ ದಿಕ್ಕು ಇವುಗಳನ್ನು ಕಂಡುಹಿಡಿದು ಹವಾ ಮುನ್ಸೂಚನೆಯನ್ನೀಯುತ್ತಾರೆ. ರಾಕೆಟ್ಟುಗಳನ್ನು ಅಥವಾ ಆಕಾಶಬುಟ್ಟಿಗಳನ್ನು ಆಕಾಶಕ್ಕೇರಿಸಿ ಅವುಗಳ ಮೂಲಕ ಕವಿದ ಮುಗಿಲಿನ ಚಿತ್ರಗಳನ್ನು ದೊರಕಿಸಿಕೊಳ್ಳುತ್ತಾರೆ. ರಾಡಾರ್ ಯಂತ್ರದ ಸಹಾಯದಿಂದ ಕುಳಿತ ಜಾಗದಿಂದಲೇ ಮುಗಿಲ ಚಿತ್ರವನ್ನು ಪಡೆದು ಹವಾಗುಣವನ್ನು ಊಹಿಸಿ ಹೇಳಬಹುದು. ವಿಮಾನ ನಿಲ್ದಾಣದಲ್ಲಿ ಈ ರಾಡಾರುಗಳು ಇರುತ್ತವೆ.

ಹವಾಮಾನ ಮುನ್ಸೂಚನೆಯ ವರದಿ ನೂರಕ್ಕೆ ನೂರು ಸರಿಯಾಗುತ್ತದೆ ಎನ್ನುವಂತಿಲ್ಲ. ದೊರೆತ ಸಂಗತಿಗಳ ಆಧಾರದಿಂದ ಮುಂದಿನ ಹವಾಮಾನ ಹೇಗಿರಬಹುದು ಎಂದು ಊಹಿಸಬಹುದು ಅಷ್ಟೆ. ಆದರೆ ಆ ಊಹೆ ತಪ್ಪಾಗುವುದು ಕಡಮೆ. ಏಕೆಂದರೆ ಅದು, ಆದಷ್ಟು ವೈಜ್ಞಾನಿಕ ತಳಹದಿಯ ಆಧಾರದ ಮೇಲೆ ತಜ್ಞರು ಮಾಡುವ ಊಹೆ.

ಹವಾಮಾನದ ಬಗೆಗೆ ಮುನ್ಸೂಚನೆಯನ್ನು ಪಡೆಯುವುದರಿಂದ ನಮಗೆ ಅಪಾರ ಲಾಭವಾಗುತ್ತದೆ. ಪ್ರಕೃತಿ ವಿಕೋಪದ ಅಪಾಯಕರ ಪ್ರಸಂಗಗಳಿಂದ ಪಾರಾಗಲು ಹವಾಮಾನ ಮುನ್ಸೂಚನೆ ಸಹಾಯ ಮಾಡುತ್ತದೆ.

ಬಿರುಮಳೆ, ಬಿರುಗಾಳಿ ಇವುಗಳನ್ನು ತಪ್ಪಿಸಲಾಗದಿದ್ದರೂ ನಮ್ಮನ್ನು ರಕ್ಷಿಸಿಕೊಳ್ಳಲು ಅವಕಾಶವುಂಟು. ಬೇಸಾಯಗಾರರಿಗೆ ಹವಾಮಾನದ ಮುನ್ಸೂಚನೆ ಉಪಯುಕ್ತವಾಗಿರುತ್ತದೆ.

ನೋಡಿ : ಋತುಗಳು ; ಮಳೆ ; ಮಾರುತ

## ಹರ್ಷವರ್ಧನ

ಹದಿನಾರು ವರ್ಷದ ರಾಜಕುಮಾರ.

ತಂದೆ ತೀರಿಕೊಂಡ ; ತಾಯಿ ತನ್ನ ಪತಿಯ ಚಿತೆಯನ್ನೇರಿದಳು.

ಆಗಲೇ ಇನ್ನೊಂದು ವಾರ್ತೆ–ರಾಜಕುಮಾರನ ತಂಗಿಯ ಗಂಡನನ್ನು ಮಾಳವದ ರಾಜ ಕೊಂದು, ತಂಗಿಯನ್ನು ಸೆರೆಯಲ್ಲಿಟ್ಟ ಎಂದು.

ರಾಜಕುಮಾರನ ಅಣ್ಣ, ಮಾಳವದ ರಾಜನನ್ನು ಶಿಕ್ಷಿಸಿ ತಂಗಿಯ ಸೆರೆಬಿಡಿಸಲು ಹೊರಟವನು, ದಾರಿಯಲ್ಲಿ ಕೊಲೆಯಾದ. ಹದಿನಾರರ ಹರೆಯದ ರಾಜಕುಮಾರ, "ಇನ್ನು ಸ್ವಲ್ಪ ಕಾಲದಲ್ಲಿಯೇ ಈ ಶತ್ರುಗಳನ್ನು ತೊಡೆದು ಹಾಕದಿದ್ದರೆ, ಬೆಂಕಿಯಲ್ಲಿ ಹಾರುತ್ತೇನೆ," ಎಂದು ಪ್ರತಿಜ್ಞೆ ಮಾಡಿದ.

ಸೆರೆಯಿಂದ ತಪ್ಪಿಸಿಕೊಂಡು, ಕಾಡಿನಲ್ಲಿ ಅಲೆಯುತ್ತಿದ್ದ ತಂಗಿಯನ್ನು ತಾನೇ ಹುಡುಕಿ, ಬೆಂಕಿಗೆ ಹಾರುವುದರಲ್ಲಿದ್ದ ಅವಳನ್ನು ಉಳಿಸಿದ. ಮಾಳವದ ದೊರೆಯನ್ನು ಸೋಲಿಸಿದ. ಕೆಲವೇ ವರ್ಷಗಳಲ್ಲಿ ಚಕ್ರವರ್ತಿಯಾದ.

ಆ ರಾಜಕುಮಾರ ಹರ್ಷವರ್ಧನ.

ಏಳನೆಯ ಶತಮಾನದಲ್ಲಿ ಭಾರತದ ಸುಪ್ರಸಿದ್ಧ ಸಮ್ರಾಟನಾಗಿ ಮೆರೆದ ಹರ್ಷವರ್ಧನನು ಸ್ಥಾನೇಶ್ವರದ ರಾಜನಾಗಿದ್ದ ಪ್ರಭಾಕರ ವರ್ಧನನ ಮಗ. ಶಿಲಾದಿತ್ಯ ಎಂಬುದು ಅವನ ಇನ್ನೊಂದು ಹೆಸರು.



ದುಷ್ಟರನ್ನು ನಿಗ್ರಹಿಸಿ, ಶಿಷ್ಟರನ್ನು ರಕ್ಷಿಸಿದ ಸಮ್ರಾಟ ಹರ್ಷವರ್ಧನ

ಹರ್ಷವರ್ಧನನಿಗೆ ರಾಜವರ್ಧನ ಎಂಬ ಅಣ್ಣನೂ ರಾಜಶ್ರೀ ಎಂಬ ತಂಗಿಯೂ ಇದ್ದರು. ರಾಜಶ್ರೀಯ ಗಂಡ ಗೃಹವರ್ಮ ಕನೋಜ (ಕನ್ಯಾಕುಬ್ಜ)ದ ಅರಸ. ತಂದೆ ತೀರಿಕೊಂಡು, ಗೃಹವರ್ಮ ಮತ್ತು ರಾಜವರ್ಧನರು ಕೊಲೆಯಾದ ಅನಂತರ ಹರ್ಷ ಒಟ್ಟು ರಾಜ್ಯಕ್ಕೆ ದೊರೆಯಾದ. ಕ್ರಮೇಣ ರಾಜ್ಯವನ್ನು ವಿಸ್ತರಿಸಿದ. ವಿಂಧ್ಯ ಪರ್ವತದ ಉತ್ತರ ಭಾಗಗಳಲ್ಲೆಲ್ಲ ಅವನ ರಾಜ್ಯ ಪಸರಿಸಿತು.

ಅನಂತರ ಹರ್ಷ ತನ್ನ ದೃಷ್ಟಿಯನ್ನು ದಕ್ಷಿಣದತ್ತ ಹರಿಸಿದ. ಆಗ ದಕ್ಷಿಣದಲ್ಲಿ ಸಮರ್ಥನಾದ ಚಾಲುಕ್ಯ ಚಕ್ರವರ್ತಿ ಇಮ್ಮಡಿ ಪುಲಕೇಶಿ ಆಳುತ್ತಿದ್ದ. ಹರ್ಷ ಅವನ ಮೇಲೆ ದಂಡೆತ್ತಿಹೋದ. ಇಮ್ಮಡಿ ಪುಲಿಕೇಶಿಯ ಶಕ್ತಿ ಪರಾಕ್ರಮಗಳ ಮುಂದೆ ಹರ್ಷನ ಕೈ ಸಾಗಲಿಲ್ಲ. ಸೋತು ತನ್ನ ದೇಶಕ್ಕೆ ಹಿಂದಿರುಗಿದ. ಅಲ್ಲಿಗೆ ಅವನ ದಂಡಯಾತ್ರೆಗಳು ಮುಕ್ತಾಯಗೊಂಡುವು.

ಹರ್ಷವರ್ಧನ ತನ್ನ ಆಸ್ಥಾನದಲ್ಲಿ ಚಿತ್ರಕಾರರಿಗೂ ಶಿಲ್ಪಿಗಳಿಗೂ ಅಪಾರ ಪ್ರೋತ್ಸಾಹ ತೋರಿ ಆಶ್ರಯ ನೀಡಿದ್ದ. ಸಂಸ್ಕೃತದ ಸುಪ್ರಸಿದ್ಧ ಕವಿ ಬಾಣ ಅವನ ಆಸ್ಥಾನ ಕವಿಯಾಗಿದ್ದ. ಹರ್ಷನ ದಿಗ್ವಿಜಯಗಳನ್ನು ಬಾಣ ತನ್ನ 'ಹರ್ಷಚರಿತೆ' ಎಂಬ ಗ್ರಂಥದಲ್ಲಿ ಚಿತ್ರಿಸಿದ್ದಾನೆ. ಹರ್ಷನೂ ಪ್ರತಿಭಾವಂತ ಕವಿಯಾಗಿದ್ದಿರಬೇಕು. 'ನಾಗಾನಂದ', 'ರತ್ನಾವಳಿ' ಮತ್ತು 'ಪ್ರಿಯದರ್ಶಿಕಾ' ಎಂಬ ಮೂರು ಸುಂದರ ನಾಟಕಗಳನ್ನು ಇವನು ಸಂಸ್ಕೃತದಲ್ಲಿ ಬರೆದಿರುವುದಾಗಿ ಪ್ರತೀತಿಯಿದೆ.

ಹ್ಯುಯೆನ್–ತ್ಸಾಂಗ್ ಎಂಬ ಚೀನೀ ಯಾತ್ರಿಕ ಹರ್ಷವರ್ಧನನ ಕಾಲದಲ್ಲಿ ಭಾರತಕ್ಕೆ ಭೇಟಿಕೊಟ್ಟಿದ್ದ. ಹರ್ಷನ ಆಸ್ಥಾನದಲ್ಲಿ ಅವನು ಕೆಲವು ಕಾಲ ತಂಗಿದ್ದ. ಆ ಕಾಲದಲ್ಲಿ ಭಾರತ ಬಹಳ ಸಂತೃಪ್ತಿ ಸಮಾಧಾನಗಳಿಂದ ಕೂಡಿದ್ದಿತು ಎಂಬುದು ಅವನ ಪ್ರವಾಸಕಥನದಿಂದ ತಿಳಿಯುತ್ತದೆ. ಹರ್ಷ ಬಹಳ ದಕ್ಷ ಆಡಳಿತಗಾರನಾಗಿದ್ದನೆಂದೂ ಗೊತ್ತಾಗುತ್ತದೆ. ಯುದ್ಧಗಳಲ್ಲಿ ಗೆದ್ದು ರಾಜ್ಯವನ್ನು ವಿಸ್ತರಿಸುತ್ತಿದ್ದ. ಹಾಗೆಯೇ ಯುದ್ಧಗಳಿಲ್ಲದ ಸಮಯದಲ್ಲಿ ಪ್ರವಾಸವನ್ನು ಕೈಗೊಂಡು ತನ್ನ ದೇಶದ ಪರಿಸ್ಥಿತಿಯನ್ನು ಸುಧಾರಿಸುತ್ತಿದ್ದ. ಶಿಷ್ಟರಕ್ಷಣ, ದುಷ್ಟನಿಗ್ರಹ ಅವನ ಧ್ಯೇಯವಾಗಿದ್ದಿತು. ಅವನ ರಾಜ್ಯದಲ್ಲಿ ಸಾಧು ಸಂತರಿಗೆ ಅಪಾರ ಗೌರವ ದೊರೆಯುತ್ತಿತ್ತು. ಅಶೋಕನ ಕಾಲದಲ್ಲಿದ್ದಂತೆಯೇ ಹರ್ಷನ ಕಾಲದಲ್ಲಿಯೂ ಬೌದ್ಧ ಮತಕ್ಕೆ ವಿಶೇಷ ಪ್ರೋತ್ಸಾಹ. ಆದರೂ ಎಲ್ಲ ಧರ್ಮಗಳಿಗೂ ರಾಜಾಶ್ರಯವಿರುತ್ತಿತ್ತು. ವಿದ್ಯಾ ಪ್ರಸಾರಕ್ಕಾಗಿ ದೇಶದಲ್ಲಿ ಅನೇಕ ವಿದ್ಯಾಕೇಂದ್ರಗಳು ಸ್ಥಾಪಿತವಾದುವು. ಆಗಿನ ಕಾಲದಲ್ಲಿ ಅತ್ಯಂತ ಪ್ರಸಿದ್ಧವಾಗಿದ್ದ ನಲಂದಾ ವಿಶ್ವವಿದ್ಯಾನಿಲಯಕ್ಕೆ ಹರ್ಷ ಪೋಷಕನಾಗಿದ್ದ. ಐದು ವರ್ಷಗಳಿಗೊಮ್ಮೆ ಪ್ರಯಾಗದಲ್ಲಿ ಸಮ್ಮೇಳನ ನಡೆಸಿ, ದೇಶದ ಮೂಲೆಮೂಲೆಗಳಿಂದ ವಿದ್ವಾಂಸರನ್ನು ಆಹ್ವಾನಿಸಿ, ಅವರನ್ನು ಗೌರವಿಸುತ್ತಿದ್ದ. 643ರಲ್ಲಿ ಕನೋಜದಲ್ಲಿ ಈತ ಕರೆದ ಬೌದ್ಧಮಹಾಸಭೆಗೆ ಮೂವತ್ತು ಜನ ರಾಜರು, ಮೂರು ಸಾವಿರ ಜನ ಬೌದ್ಧ ಪಂಡಿತರು, ಮೂರು ಸಾವಿರ ಜನ ಜೈನ ಮತ್ತು ಬ್ರಾಹ್ಮಣ ವಿದ್ವಾಂಸರು ಬಂದಿದ್ದರು.

41 ವರ್ಷಗಳ ಕಾಲ ದೇಶದಲ್ಲಿ ಶಾಂತಿ ಸಮೃದ್ಧಿಗಳನ್ನು ನೆಲೆಗೊಳಿಸಿದ ಹರ್ಷವರ್ಧನ 647ರಲ್ಲಿ ಕಾಲವಾದ.

ನೋಡಿ : ಚೀನೀ ಯಾತ್ರಿಕರು ; ಪುಲಿಕೇಶಿ, ಇಮ್ಮಡಿ

## ಹಳದಿ ಸಮುದ್ರ

ಶಾಂತಸಾಗರದ ಒಂದು ಕವಲು ಒಳನಾಡಿನಲ್ಲಿ ಚೀನ ಮತ್ತು ಕೊರಿಯ ದೇಶಗಳ ನಡುವೆ 644 ಕಿಲೊಮೀಟರು ಉದ್ದ ಚಾಚಿಕೊಂಡಿದೆ. ದಂಡೆಗಳ ಸಮೀಪದಲ್ಲಿ ನೀರು ಹಳದಿ ಬಣ್ಣವಾಗಿ, ಮಣ್ಣು ಕಲಸಿದ ರಾಡಿ ನೀರಿನಂತಿರುವುದರಿಂದ ಶಾಂತಸಾಗರದ ಈ ಭಾಗವನ್ನು ಚೀನ ದೇಶದವರು ಹಳದಿ ಸಮುದ್ರ ಎನ್ನುತ್ತಾರೆ. ದಂಡೆಯ ಮಣ್ಣು ಹಳದಿ. ಈ ಸಮುದ್ರಕ್ಕೆ ಬಂದು ಸೇರುವ ಹ್ವಾನ್ಗ್ ಮತ್ತು ಯಾಂಗ್‌ಟ್ಸಿ ನದಿಗಳು ಆ ಮಣ್ಣನ್ನು ಹೊತ್ತು ತಂದು ಸಮುದ್ರಕ್ಕೆ ಸೇರಿಸುತ್ತವೆ. ಆದ್ದರಿಂದ ಸಮುದ್ರದ ನೀರು ಹಳದಿಯಾಗಿದೆ.

12,43,200 ಚದರ ಕಿಲೊಮೀಟರುಗಳಷ್ಟು ವಿಸ್ತಾರವಾಗಿ ಹರಡಿಕೊಂಡಿರುವ ಈ ಸಮುದ್ರದ ಪರಮಾವಧಿ ಅಗಲ 644 ಕಿಲೊಮೀಟರು. ಪರಮಾವಧಿ ಆಳ 106 ಮೀಟರು.

ಹಳದಿಸಮುದ್ರ ಉತ್ತರದಲ್ಲಿ ಚಿಹ್ಲಿ ಮತ್ತು ಲಿಯೋಟುಂಗ್ ಖಾರಿಗಳಿಗೂ ಜಲಸಂಧಿಗೂ ಸಂಬಂಧ ಕಲ್ಪಿಸಿದೆ.

ಹಳದಿ ಸಮುದ್ರಕ್ಕೆ ಬಂದು ಸೇರುವ ನದಿಗಳಲ್ಲಿ ಹಳದಿ ನದಿ, ಹ್ವಾಯ್ ನದಿ, ಲಿಯೊ ಪೇಯ್, ಯಾಲು ಮುಂತಾದ ಚೀನಾದೇಶದ ನದಿಗಳೂ ಕೊರಿಯಾ ದೇಶದ ಹಾನ್ ಮತ್ತು ಟಿಯೋಡಂಗ್ ನದಿಗಳೂ ಪ್ರಮುಖವಾದುವು.

ಹಳದಿ ಸಮುದ್ರ ಮತ್ತು ಚಿಹ್ಲಿ ಖಾರಿಯ ದಂಡೆಯಲ್ಲಿರುವ ಪ್ರಮುಖವಾದ ಬಂದರುಗಳು–ಚೀನದಲ್ಲಿ ಲಿಯೆನ್‌ಪುನ್, ಸಿಂಗ್‌ಟಾವೊ, ಯೆನ್ಟಾಯ್, ಟಾಂಗ್‌ಕೂ, ಚಿನ್‌ವಾಂಗ್‌ಟಾವೊ, ಹುಲುಟಾವೊ, ಆರ್‌ಥರ್, ಟಾಲಿಯೆನ್, ಸಿನ್‌ಕಿನ್ ಬಂದರುಗಳು ; ದಕ್ಷಿಣ ಕೊರಿಯದಲ್ಲಿ ಇನ್‌ಛೋನ್ ಬಂದರು. ಉತ್ತರ ಕೊರಿಯದಲ್ಲಿ ಚಿನ್ನಾಂಪೊ ಬಂದರು.

## ಹಾಂಕಾಂಗ್

‘ ನಿಮ್ಮ ಸಂಸಾರಕ್ಕೆ ಎಷ್ಟು ಭೂಮಿ ಬೇಕು ?’

ಹೀಗೆ ಪ್ರಶ್ನೆಯನ್ನು ಕೇಳಿದರೆ ಒಂದೊಂದು ಸಂಸಾರದವರು ಒಂದೊಂದು ವಿಸ್ತೀರ್ಣವನ್ನು ಹೇಳಬಹುದು.

ಹಾಂಕಾಂಗ್‌ನಲ್ಲಿ ಕೆಲವು ಸಂಸಾರಗಳವರು ‘ ನಮಗೆ ಭೂಮಿಯೇ ಬೇಡ ’ ಎನ್ನಬಹುದು. ಏಕೆ ?

ದೋಣಿಗಳಲ್ಲಿಯೇ ಅವರ ವಾಸ. ನೀರಿನ ಮೇಲೆ ತೇಲುತ್ತಲೇ ಓದು, ಬರಹ, ಪೂಜೆ, ಸ್ನಾನ, ಊಟ. ದೋಣಿಗಳಲ್ಲಿಯೇ ಪೂಜಾಮಂದಿರಗಳು, ಶಾಲೆಗಳು, ಚಿಕಿತ್ಸಾಲಯಗಳು. ಭೂಮಿಯ ಅಗತ್ಯವೇ ಅವರಿಗಿಲ್ಲ.

ಹಾಂಕಾಂಗ್ ಚೀನದ ಆಗ್ನೇಯ ತೀರದಲ್ಲಿರುವ ಒಂದು ಬ್ರಿಟಿಷ್ ವಸಾಹತು. ಈ ವಸಾಹತಿನ ಭೂಭಾಗ ಒಟ್ಟು 1,031 ಚದರ ಕಿಲೊಮೀಟರು. ಹಾಂಕಾಂಗ್ ದ್ವೀಪ, ಕೌಲೂನ್ ಪರ್ಯಾಯದ್ವೀಪ ಮತ್ತು ಹತ್ತಿರದಲ್ಲಿರುವ 235 ದ್ವೀಪಗಳು – ಇವೆಲ್ಲ ಹಾಂಕಾಂಗ್ ಪ್ರದೇಶ. ಹಾಂಕಾಂಗ್ ಪ್ರಪಂಚದ ಪ್ರಸಿದ್ಧ ಬಂದರುಗಳಲ್ಲೊಂದು. ಪೂರ್ವ ಜಗತ್ತಿನ ಅಪೂರ್ವ ಬಂದರು. ಶಿಲಾಮಯವಾದ ಈ ದ್ವೀಪದ ಬೆಟ್ಟಗಳ ಹಸಿರಿನಲ್ಲಿ ನಿರ್ಮಿತವಾದ ರಸ್ತೆಗಳು ಬೆಟ್ಟಗಳ ಇಳಿಜಾರಿನ ಮೂಲಕ ಬಂದರಿನಲ್ಲಿ ಸೇರುತ್ತವೆ. ವಿಕ್ಟೋರಿಯ ಪರ್ವತದ ಶಿಖರ ಬಹು ಎತ್ತರವಾಗಿದ್ದು ಇಲ್ಲಿಂದ ಹಾಂಕಾಂಗ್ ಸುಂದರವಾಗಿ ಕಾಣುತ್ತದೆ.

ವಿದೇಶೀ ಪದಾರ್ಥಗಳ ದೊಡ್ಡ ಉಗ್ರಾಣದಂತಿದೆ ಹಾಂಕಾಂಗ್. ಪ್ರಪಂಚದ ಅನೇಕ ಭಾಗಗಳಿಂದ ಪದಾರ್ಥಗಳನ್ನು ತಂದು ಅವನ್ನು ಮತ್ತೆ ಬೇರೆ ಬೇರೆ ದೇಶಗಳಿಗೆ ಕಳುಹಿಸುವ ಕೆಲಸ ನಿರಂತರವಾಗಿ ನಡೆಯುತ್ತದೆ. ಯಾವಾಗಲೂ ಜನನಿಬಿಡವಾಗಿ ಚಟುವಟಿಕೆಯಿಂದ ಕೂಡಿರುತ್ತದೆ.

ಹಾಂಕಾಂಗ್ ದ್ವೀಪ ಹದಿನೆಂಟು ಕಿಲೊಮೀಟರು ಉದ್ದವಾಗಿ ಮೂರರಿಂದ ಎಂಟು ಕಿಲೊಮೀಟರು ಅಗಲವಾಗಿದೆ ಹಾಂಕಾಂಗ್‌ನ ರಾಜಧಾನಿ ವಿಕ್ಟೋರಿಯ ದ್ವೀಪದ ಮೇಲಿದೆ.

ಹಾಂಕಾಂಗಿನಲ್ಲಿ ಆಧುನಿಕ ನಗರದಲ್ಲಿರಬೇಕಾದ ಎಲ್ಲ ಸೌಕರ್ಯಗಳೂ ಇವೆ. ಇಲ್ಲಿನ ವಿಶ್ವವಿದ್ಯಾನಿಲಯದಲ್ಲಿ ಒಂದು ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳಿದ್ದಾರೆ. ಇವರಲ್ಲಿ 300 ಮಂದಿ ವಿದ್ಯಾರ್ಥಿನಿಯರು.

ಇಂದು ಬ್ರಿಟಿಷ್ ವಸಾಹತಾಗಿ ಪ್ರಪಂಚದ ಎಲ್ಲ ಭಾಗಗಳಿಂದ ವರ್ಷಕ್ಕೆ ಮೂರು ಲಕ್ಷಕ್ಕೂ ಹೆಚ್ಚು ಮಂದಿ ಪ್ರವಾಸಿಗರನ್ನು ಆಕರ್ಷಿಸುವ ಹಾಂಕಾಂಗ್, ಹಿಂದೆ ಚೀನದ ಭಾಗವಾಗಿತ್ತು. 1842ರಲ್ಲಿ ಬ್ರಿಟಿಷರಿಗೆ ಸೇರಿತು. 1941ರಲ್ಲಿ ಎರಡನೆಯ ಮಹಾಯುದ್ಧದ ಕಾಲದಲ್ಲಿ ಜಪಾನಿಯರು ಹಾಂಕಾಂಗನ್ನು ವಶಪಡಿಸಿಕೊಂಡರು. ಆದರೆ 1945ರಲ್ಲಿ ಅದನ್ನು ಮತ್ತೆ ಬ್ರಿಟಿಷರಿಗೆ ಹಿಂದಿರುಗಿಸಲಾಯಿತು.

ಎರಡನೆಯ ಮಹಾಯುದ್ಧವಾದ ಮೇಲೆ ಹಾಂಕಾಂಗಿನ ಜನಸಂಖ್ಯೆ ಬೆಳೆದಿದೆ. 6,00,000 ಇದ್ದದ್ದು 37,20,000 ಆಗಿದೆ. ಕೆಂಪು ಚೀನದಿಂದ ಸುಮಾರು ಹತ್ತು ಲಕ್ಷ ನಿರಾಶ್ರಿತರು ಹಾಂಕಾಂಗಿಗೆ ಬಂದು ನೆಲೆಸಿದ್ದಾರೆ.

ವಸತಿ ನಿರ್ಮಾಣಕಾರ್ಯ ಭರದಿಂದ ಸಾಗಿದೆ. ಎಂಟು ದಿನಗಳಿಗೊಂದರಂತೆ 3,000 ಜನರಿಗಾಗುವ ಕಟ್ಟಡವನ್ನು ಕಟ್ಟುತ್ತಿದ್ದಾರೆ. ನಾಲ್ಕು ದಿನಗಳಿಗೊಂದರಂತೆ ಒಂದು ಶಾಲೆಯನ್ನು, ನಾಲ್ಕು ದಿನಗಳಿಗೊಮ್ಮೆ ಒಂದು ಹೊಸ ಆಸ್ಪತ್ರೆಯನ್ನು ನಿರ್ಮಿಸುತ್ತಿದ್ದಾರೆ.

ಹಾಂಕಾಂಗ್ ವಿದೇಶೀ ವಸ್ತುವಿನ ಉಗ್ರಾಣ ಮಾತ್ರವೇ ಅಲ್ಲ. ಅದು ತಯಾರಿಕಾ ಕೇಂದ್ರವೂ ಹೌದು. ಬಟ್ಟೆ ಕೈಗಾರಿಕೆಗಳಿಗೆ ಬೇಕಾದ ಯಂತ್ರಗಳ ಬಿಡಿಭಾಗಗಳು ಇಲ್ಲಿ ತಯಾರಾಗುತ್ತವೆ. ಬೊಂಬೆ, ರೇಡಿಯೊ ಮೊದಲಾದುವುಗಳ ತಯಾರಿಕೆ ಹೆಚ್ಚುತ್ತಿದೆ. ಇಪ್ಪತ್ತಕ್ಕೂ ಹೆಚ್ಚು ದೇಶಗಳಿಗೆ ಯಂತ್ರಗಳನ್ನು ಕಳುಹಿಸುತ್ತಾರೆ. ಏಷ್ಯದಲ್ಲಿಯೇ ಅತ್ಯಂತ ಸೊಗಸಾದ ಹಡಗು ನಿರ್ಮಾಣ ಕೇಂದ್ರವೆಂದು ಹಾಂಕಾಂಗ್ ಖ್ಯಾತಿ ಹೊಂದಿದೆ. ಚಲನಚಿತ್ರೋದ್ಯಮ ಕೇಂದ್ರವೆಂದೂ ಪ್ರಸಿದ್ಧವಾಗಿದೆ.

ಇಂಗ್ಲಿಷ್ ಮತ್ತು ಚೀನೀ ಭಾಷೆಗಳ ವೃತ್ತ ಪತ್ರಿಕೆಗಳು ಇಲ್ಲಿ ಪ್ರಕಟವಾಗುತ್ತವೆ. ಹಾಂಕಾಂಗ್ ಆಮೋದಪ್ರಿಯರ ಸ್ವರ್ಗ.

## ಹ್ಯಾಮರ್‌ಷೀಲ್ಡ್, ಡ್ಯಾಗ್

ಡ್ಯಾಗ್ ಹ್ಯಾಮರ್‌ಷೀಲ್ಡ್ (ಸ್ವೀಡಿಷ್ ಉಚ್ಚಾರಣೆ : ಹಾಮರ್ ಷಲ್ಡ್) ವಿಶ್ವಸಂಸ್ಥೆಯ ಪ್ರಧಾನ ಕಾರ್ಯದರ್ಶಿಯಾಗಿ ಎರಡನೆಯ ಸಲ ಐದು ವರ್ಷಗಳ ಅವಧಿಗಾಗಿ 1957ರಲ್ಲಿ ಸರ್ವಾನುಮತದಿಂದ ಚುನಾಯಿತರಾದರು. ನಿಷ್ಪಕ್ಷಪಾತವಾಗಿ ಕರ್ತವ್ಯ ನಿರ್ವಹಿಸುವರೆಂದು ಎಲ್ಲ ರಾಷ್ಟ್ರಗಳೂ ಅವರಲ್ಲಿ ಇಂಥ ವಿಶ್ವಾಸ ತೋರಿದರು. ಇದಕ್ಕೂ ಮುನ್ನ ನಾಲ್ಕೂವರೆ ವರ್ಷಗಳ ಅವಧಿಯಲ್ಲಿ ವಿಶ್ವಸಂಸ್ಥೆಯ ಪ್ರಧಾನ ಕಾರ್ಯದರ್ಶಿಯಾಗಿ



ಶಾಂತಿಸಾಧನೆಯಲ್ಲಿ ಸಾವನ್ನಪ್ಪಿದ ಹ್ಯಾಮರ್‌ಷೀಲ್ಡ್, ಡ್ಯಾಗ್

ಡ್ಯಾಗ್ ಹ್ಯಾಮರ್‌ಷೀಲ್ಡ್ ಇದ್ದರು. ಅತ್ಯಂತ ದಕ್ಷತೆಯಿಂದ ತಮ್ಮ ಕರ್ತವ್ಯ ನಿರ್ವಹಿಸಿದರು. ನಿಷ್ಪಕ್ಷಪಾತವಾಗಿ ವರ್ತಿಸಿದರು. ಆದರೆ ಶಾಂತಿಯನ್ನು ಕಾಪಾಡುವ ಭಾರದಲ್ಲಿ ಇವರ ಬಲಿದಾನವಾಗುವುದೆಂದು ಯಾರೂ ಭಾವಿಸಿರಲಿಲ್ಲ.

ಸ್ವೀಡನಿನ ಪ್ರಧಾನ ಮಂತ್ರಿಯಾಗಿದ್ದ ಜಾರ್ಲ್ಮಾರ್ ಹ್ಯಾಮರ್‌ಷೀಲ್ಡ್‌ರ ಮಗ ಡ್ಯಾಗ್ ಹ್ಯಾಮರ್‌ಷೀಲ್ಡ್ ಹುಟ್ಟಿದ್ದು 1905ರ ಜುಲೈ 29 ರಂದು, ಸ್ವೀಡನಿನ ಜೋನ್‌ಕೋಪಿಂಗ್ ಎಂಬ ಸ್ಥಳದಲ್ಲಿ. ಉಪ್ಸಲ ಮತ್ತು ಸ್ಟಾಕ್‌ಹೋಂ ವಿಶ್ವವಿದ್ಯಾನಿಲಯಗಳಲ್ಲಿ ಅರ್ಥಶಾಸ್ತ್ರವನ್ನೂ ನ್ಯಾಯ ಶಾಸ್ತ್ರವನ್ನೂ ಅಭ್ಯಾಸ ಮಾಡಿದ ಡ್ಯಾಗ್ ಹ್ಯಾಮರ್‌ಷೀಲ್ಡ್ 1933ರಲ್ಲಿ ಸ್ಟಾಕ್‌ಹೋಂನಲ್ಲಿ ಸಹಾಯಕ ಪ್ರಾಧ್ಯಾಪಕರಾದರು. ಮೂರು ವರ್ಷಗಳ ಅನಂತರ ಅರ್ಥಸಚಿವ ಶಾಖೆಯ ಉಪಕಾರ್ಯದರ್ಶಿ, ಮುಂದೆ ಸ್ವಲ್ಪಕಾಲ ಬ್ಯಾಂಕ್ ಆಫ್ ಸ್ವೀಡನಿನ ಆಡಳಿತ ಮಂಡಲಿಯ ಅಧ್ಯಕ್ಷ. 1951ರಲ್ಲಿ ಸ್ವೀಡನಿನ ಉಪವಿದೇಶಾಂಗ ಮಂತ್ರಿಯಾದರು. ಸ್ವೀಡನಿನ ವಿಶ್ವಸಂಸ್ಥೆ

ಪ್ರತಿನಿಧಿಗಳ ಆಯೋಗದ ಉಪನಾಯಕರಾಗಿ ಅದೇ ವರ್ಷ ಅವರು ವಿಶ್ವಸಂಸ್ಥೆಯಲ್ಲಿ ಭಾಗವಹಿಸಿದರು. ಮುಂದಿನ ವರ್ಷ ಅವರೇ ಆಯೋಗದ ನಾಯಕರಾದರು.

ವಿಶ್ವಸಂಸ್ಥೆಯ ಪ್ರಧಾನ ಕಾರ್ಯದರ್ಶಿಯಾಗಿ ಅವರು 1953ರ ಏಪ್ರಿಲ್‌ನಲ್ಲಿ ಚುನಾಯಿತರಾದರು. ಸುಮಾರು ನಾಲ್ಕೂವರೆ ವರ್ಷಗಳ ಅವಧಿಯಲ್ಲಿ ಯಾವ ರಾಜಕೀಯ ಒತ್ತಾಯಕ್ಕೂ ಮಣಿಯದೆ ಕೆಲಸ ಮಾಡಿದರು. ಅವರು 1957ರ ಸೆಪ್ಟೆಂಬರಿನಲ್ಲಿ ಪುನರಾಯ್ಕೆಯಾದ ಮೇಲೆ ವಿಶ್ವಸಂಸ್ಥೆಯ ಹಲವಾರು ಜಟಿಲ ಸಮಸ್ಯೆಗಳನ್ನು ಪರಿಹರಿಸಲು ಹೆಣಗಿದರು.

ಈಜಿಪ್ಟಿನ ಸುಯೆಜ್ ಕಾಲುವೆಯನ್ನು ಅಲ್ಲಿನ ಸರಕಾರ ರಾಷ್ಟ್ರೀಕರಣ ಗೊಳಿಸಿದಾಗ ಅದುವರೆಗೆ ಕಾಲುವೆಯ ಒಡೆತನ ಪಡೆದಿದ್ದ ಬ್ರಿಟಿಷ್ ಮತ್ತು ಫ್ರೆಂಚ್ ಸೈನಿಕ ದಳಗಳು ಈಜಿಪ್ಟಿನತ್ತ ಸಾಗಿದುವು. ಪ್ಯಾಲೆಸ್ಟೈನಿನಲ್ಲಿ ಯೆಹೂದ್ಯರಿಗೊಂದು ತಾಯಿನಾಡನ್ನು 1948ರಲ್ಲಿ ಸೃಜಿಸಿದಾಗ ಇಸ್ರೇಲ್ ರಾಷ್ಟ್ರ ನಿರ್ಮಾಣವಾಯಿತು. ಅಂದಿನಿಂದ ಹಲವು ಅರಬ್ ರಾಷ್ಟ್ರಗಳಿಗೂ ಇಸ್ರೇಲಿಗೂ ದ್ವೇಷ ತಪ್ಪಲಿಲ್ಲ. ಆಗಿಂದಾಗ್ಗೆ ನಡೆಯುವ ಈ ಘರ್ಷಣೆ ಗಳನ್ನು ನಿವಾರಿಸಲು ಹ್ಯಾಮರ್‌ಷೀಲ್ಡ್ ವಿಶೇಷ ಪರಿಶ್ರಮಪಟ್ಟರು. ಬೆಲ್ಜಿಯಂ ಕಾಂಗೊ 1960ರಲ್ಲಿ ಸ್ವಾತಂತ್ರ್ಯ ಪಡೆದ ಮೇಲೆ ಅಲ್ಲಿ ಅಂತ ರ್ಯುದ್ಧ ಪ್ರಾರಂಭವಾಯಿತು. ಅಲ್ಲಿನ ಪರಿಸ್ಥಿತಿಯನ್ನು ಹತೋಟಿಗೆ ತರಲು ವಿಶ್ವಸಂಸ್ಥೆಯ ಸೈನ್ಯವನ್ನು ಕಳುಹಿಸಲು ಹ್ಯಾಮರ್‌ಷೀಲ್ಡ್ ಹಿಂಜರಿಯಲಿಲ್ಲ.

ತಲ್ಲಣ ಗೊಂದಲಗಳನ್ನು ಕಡಮೆಮಾಡುವ ಉದ್ದೇಶದಿಂದ ಲಂಡನ್, ಪ್ಯಾರಿಸ್, ದೆಹಲಿ, ಮಾಸ್ಕೊ, ಪೀಕಿಂಗ್ – ಹೀಗೆ ಹಲವು ಪ್ರಮುಖ ರಾಜ ಧಾನಿಗಳಿಗೆ ಅವರು ಭೇಟಿ ನೀಡಿದರು. ಯಾವುದೇ ವಿವಾದಕ್ಕೆ ಸಂಬಂಧಿಸಿದ ವ್ಯಕ್ತಿಗಳನ್ನೆಲ್ಲ ನೇರವಾಗಿ ಸಂದರ್ಶಿಸಿ ಪರಿಹಾರೋಪಾಯಗಳನ್ನು ಕಂಡು ಹಿಡಿಯಲು ಪ್ರಯತ್ನಿಸುವುದು ಹ್ಯಾಮರ್‌ಷೀಲ್ಡ್ ಅನುಸರಿಸುತ್ತಿದ್ದ ಕ್ರಮ. ಇಂಥ ಒಂದು ಪ್ರಯತ್ನಕ್ಕೋಸ್ಕರ ಕಾಂಗೊ ದೇಶದಲ್ಲಿ ವಿಮಾನದಲ್ಲಿ ಪ್ರಯಾಣ ಮಾಡುತ್ತಿದ್ದಾಗ 1961ರ ಸೆಪ್ಟೆಂಬರ್ ಹದಿನೆಂಟರಂದು ಅಪಘಾತಕ್ಕೀಡಾಗಿ ಮೃತಪಟ್ಟರು. 1961ರಲ್ಲಿ ಹ್ಯಾಮರ್‌ಷೀಲ್ಡ್ ತೀರಿಕೊಂಡ ಅನಂತರ ನೊಬೆಲ್ ಶಾಂತಿ ಬಹುಮಾನಕ್ಕೆ ಅವರ ಹೆಸರನ್ನು ಆಯ್ಕೆ ಮಾಡಲಾಯಿತು.

ಡ್ಯಾಗ್ ಹ್ಯಾಮರ್‌ಷೀಲ್ಡರದು ಶಿಸ್ತಿನ ಪರಿಶ್ರಮದ ಬದುಕು. ಅವರದು ಅತ್ಯಂತ ಮಾನವೀಯ ಗುಣಗಳು. ಅವರು ಕವಿಯೂ ಆಗಿದ್ದರು.

## ಹಿಂದೂಧರ್ಮ

ಭಾರತದಲ್ಲಿ ನೂರಕ್ಕೆ 89 ಮಂದಿ ಹಿಂದೂಗಳು: ಹಿಂದೂಧರ್ಮ ಜಗತ್ತಿನ ಅತಿ ಪ್ರಾಚೀನ ಧರ್ಮಗಳಲ್ಲಿ ಒಂದು. ಬುದ್ಧನ ಜೀವನ ತತ್ತ್ವ ಗಳನ್ನು ಅವಲಂಬಿಸಿ ಬೆಳೆದ ಧರ್ಮ ಬೌದ್ಧ ಧರ್ಮ. ಯೇಸು ಕ್ರಿಸ್ತನ ಜೀವನ ತತ್ತ್ವಗಳ ಆಧಾರದ ಮೇಲೆ ಬೆಳೆದದ್ದು ಕ್ರೈಸ್ತ ಧರ್ಮ. ಆದರೆ ಹಿಂದೂ ಧರ್ಮದ ಸ್ಥಾಪಕ ಯಾರು ?

ಹಿಂದೂಧರ್ಮ ಯಾವ ಒಬ್ಬ ಮಹಾಪುರುಷನ ಉಪದೇಶಗಳ ಆಧಾರ ದಿಂದಲೂ ಬೆಳೆದುಬಂದದ್ದಲ್ಲ. ಹಿಂದೂಧರ್ಮವನ್ನು ರೂಪಿಸಿದ ವಿಭೂತಿ ಪುರುಷರು ಹಲವರು.

ಹಿಂದೆ ಹಿಂದೂಗಳಿಗೆ ಆರ್ಯರೆಂಬ ಹೆಸರಿತ್ತು. ಅವರದು ಆರ್ಯಧರ್ಮ. ಭಾರತವನ್ನು ಆಗ ಆರ್ಯಾವರ್ತವೆಂದು ಕರೆಯುತ್ತಿದ್ದರು. ಆದರೆ ಸಿಂಧೂ

ನದಿಯ ಪೂರ್ವದಲ್ಲಿದ್ದ ಜನರಿಗೆ ಸಿಂಧೂಗಳು ಎಂಬ ಹೆಸರು ಬಂದ ಬಳಿಕ ಸಿಂಧೂ ಪದಕ್ಕೆ ಬದಲಾಗಿ 'ಹಿಂದೂ' ಪದ ಬಳಕೆಗೆ ಬಂದಿತು. ಸಿಂಧೂ ನದಿ ತೀರದ ನಿವಾಸಿಗಳ ಧರ್ಮವಾಗಿ ಹಿಂದೂಧರ್ಮ ಜನ್ಮ ತಾಳಿತು.

ಎಲ್ಲ ಧರ್ಮಗಳು ಪರಿಣಾಮ ಬೀರುವ ರೀತಿಯನ್ನು ತತ್ತ್ವ, ಪುರಾಣ, ಆಚಾರ ಎಂಬ ವಿಭಾಗಗಳಲ್ಲಿ ಅರಿಯಬಹುದು. ಧರ್ಮದ ತಿರುಳಿರುವುದು ತತ್ತ್ವಗಳಲ್ಲಿ ; ಧ್ಯೇಯ, ಧೋರಣೆ, ಆದರ್ಶ, ಸಂಕೇತಗಳನ್ನು ಕಾಣುವುದು ಪುರಾಣಗಳಲ್ಲಿ ; ಇವುಗಳ ಅನುಷ್ಠಾನವನ್ನು ಕಾಣುವುದು ಆಚಾರದಲ್ಲಿ.

ಹಿಂದೂಧರ್ಮದ ತತ್ತ್ವಗಳನ್ನು ತಿಳಿಸುವ ಅತಿ ಪುರಾತನ ಗ್ರಂಥಗಳು ವೇದಗಳು. ಅನಂತರದ ಉಪನಿಷತ್ತುಗಳು, ಪುರಾಣಗಳು, ಮಹಾಕಾವ್ಯಗಳು ಇವುಗಳಲ್ಲೆಲ್ಲ ಹಿಂದೂಧರ್ಮದ ವಿವಿಧ ರೂಪಗಳನ್ನು ನೋಡುತ್ತೇವೆ.

ಹಿಂದೂಮತದ ಮೊದಲನೆಯ ಮುಖ್ಯ ತತ್ತ್ವ ದೇವರಿದ್ದಾನೆ ಎನ್ನುವುದು. ದೇವರು ಎಲ್ಲ ಕಡೆ ಇದ್ದಾನೆ, ಎಲ್ಲರಲ್ಲಿ ಇದ್ದಾನೆ, ಅವನು ನ್ಯಾಯ ಮೂರ್ತಿ, ಕರುಣಾಳು ಎಂಬ ನಂಬಿಕೆ ಹಿಂದೂಗಳದು.

ಎರಡನೆಯದು, ಆತ್ಮದಲ್ಲಿ ನಂಬಿಕೆ. ಮನುಷ್ಯನಿಗೆ ಆತ್ಮವಿದೆ, ಈ ಆತ್ಮಕ್ಕೆ ಸಾವಿಲ್ಲ. ಒಬ್ಬ ಮನುಷ್ಯ ಸುಖಪಡುವುದೇಕೆ ? ಮತ್ತೊಬ್ಬ ಕಷ್ಟ ಪಡುವುದೇಕೆ ? ಒಳ್ಳೆಯವರಿಗೆ ಯಾವಾಗಲೂ ಜಯ, ಸುಖ ; ಕೆಟ್ಟವರಿಗೆ ಯಾವಾಗಲೂ ಸೋಲು, ಕಷ್ಟ–ಎಂದು ಖಚಿತವಾಗಿ ಹೇಳುವಂತಿಲ್ಲ. ಹೀಗೇಕೆ ? ಹಿಂದೂಧರ್ಮ ಇದಕ್ಕೆ 'ಪುನರ್ಜನ್ಮ', ಮತ್ತು 'ಕರ್ಮ'ದ ಉತ್ತರ ಕೊಟ್ಟಿತು. ಒಂದು ಆತ್ಮ ಮತ್ತೆ ಮತ್ತೆ ಈ ಲೋಕದಲ್ಲಿ ಹುಟ್ಟುತ್ತದೆ. ಒಬ್ಬ ಮನುಷ್ಯ ಒಂದು ಅಂಗಿಯನ್ನು ತೆಗೆದು ಮತ್ತೊಂದನ್ನು ತೊಡುವಂತೆ, ಆತ್ಮ ಒಂದು ದೇಹವನ್ನು ಬಿಸುಟು ಇನ್ನೊಂದನ್ನು ಧರಿಸುತ್ತದೆ. ಇದು 'ಪುನರ್ಜನ್ಮ'. ಕರ್ಮ ಎಂದರೆ ಕೆಲಸ. ಮನುಷ್ಯ ಕೆಲಸಗಳನ್ನು ಮಾಡುತ್ತಲೇ ಇರುತ್ತಾನೆ. ಒಳ್ಳೆಯ ಕೆಲಸಗಳನ್ನು ಮಾಡಿದರೆ ಪುಣ್ಯ ಬರುತ್ತದೆ, ಮುಂದಿನ ಜನ್ಮದಲ್ಲಿ ಸುಖ ಲಭಿಸುತ್ತದೆ, ಕೆಟ್ಟ ಕೆಲಸ ಮಾಡಿದರೆ ಪಾಪ ಬರುತ್ತದೆ, ಮುಂದಿನ ಜನ್ಮದಲ್ಲಿ ಕಷ್ಟ ಬರುತ್ತದೆ. ಈ ರೀತಿ ಹಿಂದೂಗಳು ಭಾವಿಸುತ್ತಾರೆ.

ಸೃಷ್ಟಿಗೆ ಒಡೆಯ ದೇವರು. ಅವನು ಬ್ರಹ್ಮಾಂಡವನ್ನೆಲ್ಲ ವ್ಯಾಪಿಸಿದ್ದಾನೆ. ಎಲ್ಲದರ ಅಂತರಾಳದಲ್ಲಿಯೂ ಅವನೇ. ನಾವು ದೇವರೆಡೆಗೆ ಹೋಗಬೇಕು. ದೇವರು ಸಚ್ಚಿದಾನಂದ ಸ್ವರೂಪ. ಜೀವಿಯ ಗುರಿ ಮುಕ್ತಿ–ಇದು ಹಿಂದೂಗಳ ತಿಳಿವಳಿಕೆ.

ಹಿಂದೂಧರ್ಮ ಅತ್ಯಂತ ಪುರಾತನವಾದದ್ದು. ಅಷ್ಟೇ ಅಲ್ಲ. ಅತ್ಯಂತ ವಿಶಾಲವಾದ ಧರ್ಮವೂ ಹೌದು.

ಹಿಂದೂಧರ್ಮ ಮಾನವರನ್ನು ಅಮೃತಪುತ್ರರು ಎಂದು ಬಣ್ಣಿಸಿದೆ. ಒಬ್ಬ ದೇವರನ್ನು ಹಲವು ಹೆಸರುಗಳಿಂದ ಹಲವು ರೀತಿಗಳಲ್ಲಿ ಪೂಜಿಸುತ್ತಾರೆ ಹಿಂದೂಗಳು. 'ಏಕಂ ಸತ್ ವಿಪ್ರಾಃ ಬಹುಧಾ ವದಂತಿ' (ಸತ್ಯ ಒಂದೇ ; ಆದರೆ ಅದನ್ನು ವಿವಿಧ ರೀತಿಯಲ್ಲಿ ಹೇಳುತ್ತಾರೆ) ಎಂಬ ವಿಶಾಲ ಮನೋಭಾವ ಈ ಧರ್ಮಕ್ಕೆ.

ಹಿಂದೂಧರ್ಮ ತತ್ತ್ವಗಳನ್ನು ಮಾತ್ರ ಹೇಳಿಲ್ಲ, ಬದುಕಿನ ಮಾರ್ಗವನ್ನೂ ತೋರಿಸಿದೆ. ಶುದ್ಧ ಜೀವನಕ್ಕೆ ಅದು ಮಾರ್ಗದರ್ಶಿ. ಹಿಂದೂಧರ್ಮ ವೈರಾಗ್ಯವನ್ನು ಬೋಧಿಸುತ್ತದೆ, ನಿರಾಸೆಯನ್ನು ತುಂಬುತ್ತದೆ ಎಂದು ಕೆಲವರು ತಪ್ಪು ಅರ್ಥ ಮಾಡಿಕೊಳ್ಳುವುದುಂಟು. ವಾಸ್ತವವಾಗಿ ಹಿಂದೂಧರ್ಮ ತುಂಬುಜೀವನವನ್ನು ಚಿತ್ರಿಸುತ್ತದೆ.

ಕುಟುಂಬಕ್ಕಾಗಿ ಒಂದು ವ್ಯಕ್ತಿಯನ್ನೂ ಹಳ್ಳಿಗಾಗಿ ಕುಟುಂಬವನ್ನೂ ದೇಶಕ್ಕಾಗಿ ಹಳ್ಳಿಯನ್ನೂ ತ್ಯಾಗಮಾಡು, ಎಂದು ತ್ಯಾಗದ ಮಹತ್ತನ್ನು ಹಿಂದೂಧರ್ಮ ಸಾರಿದೆ. 'ಸರ್ವೇ ಜನಾಃ ಸುಖಿನೋ ಭವಂತು, ಸಮಸ್ತ ಸನ್ಮಂಗಳಾನಿ ಭವಂತು'; ಎಲ್ಲ ಜನರು ಸೌಖ್ಯದಿಂದರಲಿ, ಎಲ್ಲರಿಗೂ ಮಂಗಳವಾಗಲಿ–ಎಂದು ವಿಶ್ವಸೌಖ್ಯವನ್ನು ಹಾರೈಸಿದೆ. 'ಶತಂ ಜೀವೇಮಶರದಃ' ಎಂದು ನೂರು ಕಾಲ ಬದುಕುವ ಆಶಾವಾದಿತ್ವವನ್ನು ವ್ಯಕ್ತಪಡಿಸಿದೆ.

ವಿವರ : ಏಳನೆಯ ಸಂಪುಟ

## ಹಿಂದೂ ಮಹಾಸಾಗರ

ಎರಡು ಸಾವಿರ ವರ್ಷಗಳ ಹಿಂದೆ ಅಟ್ಲಾಂಟಿಕ್ ಸಾಗರದ ತೀರದಿಂದ ಹಡಗು ಪ್ರಯಾಣ ಸ್ವಲ್ಪದೂರ ಮಾತ್ರ ಸಾಗುತ್ತಿತ್ತು. ಆದರೆ ಹಿಂದೂ ಮಹಾಸಾಗರದಲ್ಲಿ ವ್ಯಾಪಾರಿ ಹಡಗುಗಳು ಸಮೃದ್ಧವಾಗಿ ಯಾನ ಮಾಡುತ್ತಿದ್ದುವು. ಭೂಪಟವೂ ನಾವಿಕರ ದಿಕ್ಸೂಚಿಯೂ ಇಲ್ಲದೆಯೇ ಈಜಿಪ್ಟಿನವರು ಈ ಸಮುದ್ರವನ್ನು ದಾಟಿ ಭಾರತಕ್ಕೆ ಬರುತ್ತಿದ್ದರು.

ಪ್ರಪಂಚದ ಮೂರನೆಯ ಮಹಾಸಾಗರವಾದ ಇದರ ವಿಸ್ತೀರ್ಣ 725.3 ಲಕ್ಷ ಚದರ ಕಿಲೊಮೀಟರು. ಆಫ್ರಿಕ, ಏಷ್ಯ, ಆಸ್ಟ್ರೇಲಿಯ ಮತ್ತು ದಕ್ಷಿಣ ಧ್ರುವ ಪ್ರದೇಶ ಇವುಗಳ ದಂಡೆಗಳಿಗೆ ಹಿಂದೂ ಮಹಾಸಾಗರ ಹೊಂದಿಕೊಂಡಿದೆ. ಇದರ ಸರಾಸರಿ ಆಳ 3,966 ಮೀಟರುಗಳು. ಅತಿ ಹೆಚ್ಚಿನ ಆಳ 7,454 ಮೀಟರು, ಸುಮಾತ್ರ ದ್ವೀಪದ ದಕ್ಷಿಣಕ್ಕೆ. 1869ರಲ್ಲಿ ಸುಯೆಜ್ ಕಾಲುವೆಯನ್ನು ನಿರ್ಮಿಸಿದ ಅನಂತರ ಹಿಂದೂ ಮಹಾಸಾಗರದ ಉತ್ತರ ಭಾಗ ಯೂರೊಪ್ ಮತ್ತು ಪೂರ್ವ ಏಷ್ಯ, ದಕ್ಷಿಣ ಏಷ್ಯಗಳ ನಡುವಣ ಪ್ರಮುಖ ಜಲಮಾರ್ಗವಾಗಿದೆ.

ಹಿಂದೂ ಮಹಾಸಾಗರದ ಮುಕ್ಕಾಲು ಭಾಗ ಭೂಮಧ್ಯ ರೇಖೆಯ ದಕ್ಷಿಣಕ್ಕಿದೆ. ಏಷ್ಯದ ದಕ್ಷಿಣ ದಂಡೆಯಲ್ಲಿ ಈ ಸಾಗರ ಎರಡು ದೊಡ್ಡ ಚಾಚು ಪ್ರದೇಶಗಳನ್ನು ರೂಪಿಸಿದೆ. ಅವುಗಳೇ ಪ್ರಸಿದ್ಧವಾದ ಅರಬಿ ಸಮುದ್ರ ಮತ್ತು ಬಂಗಾಳ ಕೊಲ್ಲಿ.

ಹಿಂದೂ ಮಹಾಸಾಗರವನ್ನು ಸಿಂಧೂ, ಗಂಗಾ, ಗೋದಾವರಿ, ಜಾಂಬೆಜಿ, ಲಿಂಪೋಪೊ ಮುಂತಾದ ಹಲವು ಮಹಾನದಿಗಳು ಸೇರುತ್ತವೆ.

ಹಿಂದೂ ಮಹಾಸಾಗರದ ಏಷ್ಯ ತೀರದ ಬಂದರುಗಳಲ್ಲಿ ಮುಂಬಯಿ, ಕಲ್ಕತ್ತ, ಕೊಲಂಬೊ, ರಂಗೂನ್, ಏಡನ್ ಮುಂತಾದುವು, ಆಫ್ರಿಕದ ಮೊಂಬಾಸಾ, ಡರ್ಬಾನ್ ಮುಂತಾದುವು, ಆಸ್ಟ್ರೇಲಿಯದ ಪರ್ತ್–– ಇವು ಮುಖ್ಯವಾದುವು.

ಹಿಂದೂ ಮಹಾಸಾಗರದಲ್ಲಿರುವ ದ್ವೀಪಗಳಲ್ಲಿ ದಕ್ಷಿಣದಲ್ಲಿ ಮಡಗಾಸ್ಕರ್ ಮತ್ತು ಉತ್ತರದಲ್ಲಿ ಸಿಂಹಳ ಅತ್ಯಂತ ವಿಸ್ತಾರವಾದುವು.

1497ರಲ್ಲಿ ಮೊಟ್ಟಮೊದಲಬಾರಿಗೆ ವಾಸ್ಕೊ ದ ಗಾಮ ಎಂಬ ಪೋರ್ಚುಗೀಸ್ ನಾವಿಕನ ನೇತೃತ್ವದಲ್ಲಿ ಯೂರೊಪಿನ ಹಡುಗುಗಳು ಹಿಂದೂ ಮಹಾಸಾಗರವನ್ನು ಪ್ರವೇಶಿಸಿದುವು. ಅಂದಿನಿಂದ ಇಂದಿನವರೆಗೆ ಈ ಮಹಾಸಾಗರದ ಮೂಲಕ ವ್ಯಾಪಾರ ವಾಣಿಜ್ಯಗಳು ನಿರಂತರವಾಗಿ ಸಾಗುತ್ತಿವೆ.

## ಹಿಟ್ಲರ್, ಅಡಾಲ್ಫ್

ಪ್ರಪಂಚವನ್ನೇ ನಡುಗಿಸಿದ ಎರಡನೆಯ ಮಹಾಯುದ್ಧಕ್ಕೆ (1939–45) ಕಾರಣನಾದವನು ಅಡಾಲ್ಫ್ ಹಿಟ್ಲರ್.

ಹಿಟ್ಲರ್ 1889ರ ಏಪ್ರಿಲ್ 20ನೆಯ ತಾರೀಖು ಆಸ್ಟ್ರಿಯದ ಗಡಿನಾಡಿನ ಪಟ್ಟಣ ಒಂದರಲ್ಲಿ ಹುಟ್ಟಿದ. ಆಸ್ಟ್ರಿಯ ಆಗ ಜರ್ಮನ್ ಸಾಮ್ರಾಜ್ಯದ ಒಂದಂಗವಾಗಿತ್ತು. ಅವನ ತಂದೆ ಒಬ್ಬ ಕಿರಿಯ ಸುಂಕದ ಅಧಿಕಾರಿ.

ಹಿಟ್ಲರ್ ಬಾಲ್ಯದಲ್ಲಿ ಒಳ್ಳೆಯ ವಿದ್ಯಾರ್ಥಿ ಎಂದೇನೂ ಅನಿಸಿಕೊಂಡಿರಲಿಲ್ಲ. ತಾನೊಬ್ಬ ದೊಡ್ಡ ಚಿತ್ರಕಾರ ಅಥವಾ ವಾಸ್ತುಶಿಲ್ಪಿಯಾಗಬೇಕೆಂದು ಕನಸುಕಾಣುತ್ತಿದ್ದ ಅವನಿಗೆ, ಓದಿನ ಕಡೆಗೆ ಅಷ್ಟು ಗಮನವಿರಲಿಲ್ಲ. ಅವನ ತಂದೆ 1903ರಲ್ಲಿ ಮರಣಹೊಂದಿದ ಬಳಿಕ ವಿಯೆನ್ನಾದ ಕಲಾಶಾಲೆಯನ್ನು ಸೇರಲು ಅಡಾಲ್ಫ್ ಹಿಟ್ಲರ್ ಪ್ರಯತ್ನಿಸಿದ. ಅಲ್ಲಿ ಪ್ರವೇಶ ದೊರೆಯಲಿಲ್ಲ. ಬಹಳ ಬೇಸರಗೊಂಡು ಸುಮಾರು ನಾಲ್ಕು ವರ್ಷಗಳ ಕಾಲ ಅಲೆಮಾರಿ ಜೀವನವನ್ನು ನಡೆಸಿದ.

ಹಿಟ್ಲರ್ ಮೊದಲನೆಯ ಮಹಾಯುದ್ಧದ ವೇಳೆ ಬವೇರಿಯದ ಸೇನಾಪಡೆಯನ್ನು ಸೇರಿದ. ಸಾಹಸಕ್ಕಾಗಿ ಸೈನ್ಯದ ಕಾರ್ಪೊರಲ್‌ಗೆ ದೊರೆಯುವ ಕಬ್ಬಿಣದ ಶಿಲುಬೆ ಅವನಿಗೆ ಬಹುಮಾನವಾಗಿ ಲಭಿಸಿತು.

ಹಿಟ್ಲರನ ದೇಶಪ್ರೇಮ ಅಂಧ ಅಭಿಮಾನದಿಂದ ಪ್ರೇರಿತವಾಗಿತ್ತು. ಆಸ್ಟ್ರಿಯದ ಜರ್ಮನ್ ಮಾತಾಡುವ ಜನರೂ ಜರ್ಮನರೂ ಒಂದಾಗಬೇಕೆಂಬುದು ಅವನ ಮಹಾದಾಸೆ. ಪ್ರಪಂಚದ ಮೊದಲನೆಯ ಮಹಾಯುದ್ಧದಲ್ಲಿ ಜರ್ಮನಿಯ ಸೋಲಿನಿಂದ ಅವನಿಗೆ ದೊಡ್ಡ ಆಘಾತ ಉಂಟಾಯಿತು. ಜರ್ಮನಿಯ ಹಿರಿಮೆಯನ್ನು ಉಳಿಸಲು ತನ್ನ ಜೀವನವನ್ನೇ ಮೀಸಲಿಡುವುದಾಗಿ ಅಂದೇ ಪ್ರತಿಜ್ಞೆ ಮಾಡಿದ. ಮ್ಯೂನಿಚ್‌ನಲ್ಲಿ ಕೆಲವು ಸೈನಿಕರ ಸಹಾಯದಿಂದ ಒಂದು ಪುಟ್ಟ ರಾಜಕೀಯ ಪಕ್ಷವನ್ನು ಕಟ್ಟಿದ. 'ಜರ್ಮನಿಯ ಕೆಲಸಗಾರರ ಪಕ್ಷ' ಎಂಬ ಈ ಸಂಘಟನೆಯೇ ಮುಂದೆ ಜರ್ಮನ್ ನ್ಯಾಷನಲ್ ಸೋಷಿಯಲಿಸ್ಟ್ ಪಾರ್ಟಿ ಎಂಬ ಹೆಸರನ್ನು ಪಡೆಯಿತು. ನಾಜಿ ಪಕ್ಷ ಎಂದರೂ ಇದೇ. ಹಿಟ್ಲರನ ಈ ಪಕ್ಷ ಬಹು ಜನರನ್ನು ತನ್ನೆಡೆಗೆ ಸೆಳೆಯಿತು. ಪಕ್ಷದ ಸದಸ್ಯರಿಗೆ ನಾಜಿಗಳು ಎಂದು ಹೆಸರಾಯಿತು. ಇವರು ಕಮ್ಯೂನಿಸಮನ್ನು ಖಂಡಿಸುವುದರ ಮೂಲಕ ಕೈಗಾರಿಕೋದ್ಯಮಿಗಳನ್ನೂ ಶ್ರೀಮಂತರನ್ನೂ ಆಕರ್ಷಿಸಿದರು. ಉದ್ಯೋಗಗಳನ್ನು ಕಲ್ಪಿಸುವ ಭರವಸೆ ನೀಡಿ ನಿರುದ್ಯೋಗಿಗಳನ್ನು ತಮ್ಮೆಡೆಗೆ ಸೆಳೆದುಕೊಂಡರು.

1925 ರಿಂದ 1929ರ ವರೆಗೆ ಹಿಟ್ಲರನನ್ನು ರಾಜಕಾರಣಿ ಎಂದು ಯಾರೂ ಅಷ್ಟಾಗಿ ಗಣಿಸಿರಲಿಲ್ಲ. 1929ರಲ್ಲಿ ಜನತೆ ಕಷ್ಟಗಳ ಪರಂಪರೆಗೆ ಸಿಕ್ಕಿ ನೊಂದು ರೋಸಿಹೋದಾಗ ಹಿಟ್ಲರನ ವಾಕ್ಚಟುತ್ವ ಆತನ ಭಾಗ್ಯದ ಬಾಗಿಲನ್ನು ತೆರೆಯುವ ಕೀಲಿಕೈ ಆಯಿತು. 1930ನೆಯ ಇಸವಿಯ ಚುನಾವಣೆಯಲ್ಲಿ ನಾಜಿಗಳು ಪ್ರಚಂಡ ಜಯವನ್ನು ಗಳಿಸಿದರು. ಇದಾದ ಮೂರು ವರ್ಷಗಳ ಮೇಲೆ 1933ನೆಯ ಜನವರಿ 30ರಂದು ಹಿಟ್ಲರ್ ಜರ್ಮನಿಯ ಛಾನ್ಸಲರ್ (ಪ್ರಧಾನಿ) ಆದ.

ಅಧಿಕಾರಕ್ಕೆ ಬಂದ ಆರು ತಿಂಗಳಲ್ಲಿ ಹಿಟ್ಲರ್ ಕೈಗೊಂಡ ಕ್ರಮಗಳಿಂದ ಇಡೀ ರಾಜ್ಯಾಧಿಕಾರ ಮತ್ತು ರಕ್ಷಣಾಪಡೆಗಳು ಅವನ ಅಧೀನವಾದುವು. ರೊಚ್ಚಿಗೆದ್ದ ಜನರನ್ನು ಹಿಟ್ಲರ್ ಸ್ವಲ್ಪವೂ ಕರುಣೆ ತೋರದೆ ಕೊಲ್ಲತೊಡಗಿದ. ಎದುರು ಪಕ್ಷದವರನ್ನು ಹೇಳ ಹೆಸರಿಲ್ಲದಂತೆ ಮಾಡಿದ. 1934ರಲ್ಲಿ ಜರ್ಮನಿಯ ಅಧ್ಯಕ್ಷನಾಗಿದ್ದ ಪಾಲ್ ವಾನ್ ಹಿಂಡನ್‌ಬರ್ಗನ ಸಾವು ಹಿಟ್ಲರನನ್ನು ಜರ್ಮನ್ ಚಕ್ರಾಧಿಪತ್ಯದ ಸರ್ವಾಧಿಕಾರಿಯನ್ನಾಗಿ ಮಾಡಿತು.

ತನ್ನ ಸಾಮ್ರಾಜ್ಯ ವಿಸ್ತರಣೆಯಲ್ಲಿ ಹಿಟ್ಲರ್ ಅದ್ಭುತ ಕೌಶಲವನ್ನು ತೋರಿದ. ಪರರಾಜ್ಯಗಳ ದೌರ್ಬಲ್ಯವನ್ನು ಸರಿಯಾಗಿ ಅರಿತು ಅವನ್ನು ತನ್ನ ಅಧೀನಪಡಿಸಿಕೊಂಡ. ಮೊದಲನೆಯ ಮಹಾಯುದ್ಧದ ಮುಕ್ತಾಯದಲ್ಲಿ ರೂಪುಗೊಂಡ ವರ್ಸೇಲ್ಸ್ ಒಪ್ಪಂದವನ್ನು ಮುರಿದ. 1938–39ರಲ್ಲಿ ಆಸ್ಟ್ರಿಯ ಮತ್ತು ಚೆಕೊಸ್ಲೊವಾಕಿಯಾಗಳನ್ನು ವಶಪಡಿಸಿಕೊಂಡ. ಎಂಥ ಭಯಂಕರ ಯುದ್ಧವಾಗಲಿ ಅದನ್ನು ಎದುರಿಸಬಲ್ಲ ಶಕ್ತಿಯುಳ್ಳ ಒಂದು ಸೇನೆ ಅವನ ಬಳಿ ಇದ್ದಿತು. ಈ ಧೈರ್ಯದ ಮೇಲೆ ಹಿಟ್ಲರ್ ಪೋಲೆಂಡನ್ನು ಆಕ್ರಮಿಸಿದ. ಇದು ಎರಡನೆಯ ಜಾಗತಿಕ ಮಹಾಯುದ್ಧಕ್ಕೆ ನಾಂದಿಯಾಯಿತು. ಜಯದ ಮೇಲೆ ಜಯ ದೊರೆತಾಗ ತಾನು ಅಜೇಯ ಎಂಬ ಭಾವನೆ ಆತನಲ್ಲಿ ಮೂಡಿತು,

1941ರ ವೇಳೆಗೆ ಯೂರೋಪಿನ ಬಹುಭಾಗ ಇವನ ಅಧೀನವಾಯಿತು. ಏನಾದರೇನು, ಅವನ ಅತ್ಯಂತ ದೊಡ್ಡ ಸಾಹಸವಾದ ರಷ್ಯದ ಮುತ್ತಿಗೆ ಅವನಿಗೆ ಸೋಲನ್ನೇ ತಂದಿತು. ಅವರು ಪ್ರತಿದಾಳಿ ಮಾಡಿ ಬರ್ಲಿನ್ ನಗರವನ್ನು ಪ್ರವೇಶಿಸಿದಾಗ, ರಷ್ಯನರ ಕೈಮೇಲಾಗಿ ಪರಿಸ್ಥಿತಿ ತನ್ನ ಕೈಮೀರಿ ಹೋಗಿದೆ ಎಂದು ಮನಗಂಡ ಹಿಟ್ಲರ್, 1945 ಏಪ್ರಿಲ್ 30ರಂದು, ಆತ್ಮಹತ್ಯೆ ಮಾಡಿಕೊಂಡ.

ಇತರರ ದೌರ್ಬಲ್ಯವನ್ನು ತನ್ನ ಕಾರ್ಯಸಾಧನೆಗೆ ಎಷ್ಟರಮಟ್ಟಿಗೆ ಉಪಯೋಗಿಸಿಕೊಳ್ಳಬಹುದು. ಯಾವ ರೀತಿ ಅವರನ್ನು ಆಡಿಸಬಹುದು ಎಂಬ ಸ್ಪಷ್ಟ ಅರಿವು ಹಿಟ್ಲರನಿಗಿದ್ದಿತು. ಒಂದು ಕೆಲಸವನ್ನು ಕೈಗೊಳ್ಳುವ ಮೊದಲು ಅದಕ್ಕೆ ಬೇಕಾದ ಪೂರ್ವಸಿದ್ಧತೆಗಳನ್ನೆಲ್ಲ ಮಾಡಿಕೊಂಡು. ತಕ್ಕ ಸಮಯ ಬರುವವರೆಗೂ ಕಾದು ಅನಂತರ ಅದನ್ನು ಕಾರ್ಯರೂಪಗೊಳಿಸುತ್ತಿದ್ದ ರೀತಿ ಅವನ ಬುದ್ಧಿವಂತಿಕೆಗೆ ಸಾಕ್ಷಿಯಾಗಿದೆ. ಆದರೆ ಇದನ್ನೆಲ್ಲ ಮರೆಸುವಂತೆ ಅವನ ದುರ್ಗುಣಗಳು ತಲೆಯೆತ್ತಿ ನಿಂತುವು. ಹಿಟ್ಲರನಿಗೆ ಬಾಲ್ಯದಿಂದಲೂ ಯೆಹೂದ್ಯರನ್ನು ಕಂಡರೆ ಆಗುತ್ತಿರಲಿಲ್ಲ. ಅಧಿಕಾರಕ್ಕೆ ಬಂದೊಡನೆ ಅವರನ್ನು ಅತ್ಯಂತ ಕ್ರೂರ ರೀತಿಯಲ್ಲಿ ಕಾಣತೊಡಗಿದ. ಆರ್ಯಜನಾಂಗದವರು ಮಾತ್ರ ಆಳಲು ಅರ್ಹರೆಂದೂ ಜರ್ಮನರು ಶುದ್ಧ ಆರ್ಯರೆಂದೂ ಅವರು ಶ್ರೇಷ್ಠವರ್ಗದವರೆಂದೂ ಜಗತ್ತನ್ನು ಅವರು ಮಾತ್ರ ಆಳಬೇಕೆಂದೂ ಮಿಕ್ಕವರು ಅವರ ದಾಸರೆಂದೂ ಹೇಳಿದ. ಅಲ್ಲದೆ ಯೆಹೂದ್ಯರು ಜರ್ಮನರೊಡನೆ ಜೊತೆಯಾಗಿ ಬಾಳುವುದು ಜರ್ಮನಿಯ ಜನತೆಗೆ ಅಪಮಾನವೆಂದು ಸಾರಿದ. ದೇಶದಲ್ಲಿದ್ದ ಯೆಹೂದ್ಯರಲ್ಲಿ ಕೆಲವರನ್ನು ದೇಶದಿಂದ ಹೊರಕ್ಕೂ ಮತ್ತೆ ಕೆಲವರನ್ನು ಕೂಟ ಶಿಬಿರಕ್ಕೂ ಕಳುಹಿಸಿದ. ಹೇಳಿದ ಮಾತು ಕೇಳದಿದ್ದವರನ್ನು ಜೀವಸಹಿತ



ಸರ್ವಾಧಿಕಾರಿ—ಹಿಟ್ಲರ್, ಅಡಾಲ್ಫ್

ವಾಗಿ ಸುಟ್ಟುಹಾಕಿದ. ಕೂಟ ಶಿಬಿರದಲ್ಲಿ ಕೂಡಿಹಾಕಿದ್ದ ಲಕ್ಷಾಂತರ ಮಂದಿ ಯೆಹೂದ್ಯರನ್ನು ಸಾಮೂಹಿಕವಾಗಿ ಅಗ್ನಿಗಾಹುತಿಕೊಟ್ಟ. ಈ ರೀತಿ ಒಟ್ಟು 60 ಲಕ್ಷ ಮಂದಿ ಯೆಹೂದ್ಯರ ಹತ್ಯೆಯಾಯಿತು.

ಅಡಾಲ್ಫ್ ಹಿಟ್ಲರನಷ್ಟು ಅಧಿಕಾರ ಲಾಲಸೆಯನ್ನು ಹೊಂದಿದವರು ಪ್ರಪಂಚದಲ್ಲಿ ಅತಿ ವಿರಳ. ಜೀವನದ ಕಡೆಯ ಭಾಗದಲ್ಲಿ ಹಿಟ್ಲರನು ಹುಚ್ಚಿನ ಅಂಚಿನಲ್ಲಿದ್ದನೆಂದು ಹೇಳುತ್ತಾರೆ. ಕುರುಡು ದೇಶಾಭಿಮಾನ, ಲಗಾಮಿಲ್ಲದ ಅಧಿಕಾರಲಾಲಸೆ ಇವುಗಳಿಂದ ಎಂಥ ವಿಪತ್ತು ಸಂಭವಿಸುವು ದೆಂಬುದನ್ನು ಹಿಟ್ಲರನ ಜೀವನ ತೋರಿಸುತ್ತದೆ.

ನೋಡಿ : ಜರ್ಮನಿ ; ಮಹಾಯುದ್ಧಗಳು ; ರಾಜಕೀಯ ಸಿದ್ಧಾಂತ

## ಹಿಪ್ಪಿ

ಉದ್ದನೆಯ ತಲೆಗೂದಲು ಎಣ್ಣೆ ನೀರು ಬಾಚಣಿಗೆ ಕಂಡು ಎಷ್ಟು ವರ್ಷಗಳಾಗಿವೆಯೋ ! ಕೊಳೆಕೊಳೆಯಾದ ಬಣ್ಣಬಣ್ಣದ ಉಡುಪು ; ನೀರು, ಸಾಬೂನು ಕಾಣದ ದೇಹ, ಗಂಟೆಯಾಕಾರದ ತಳದ ದೊಗಳೆ ಷರಾಯಿ. ಗಂಟೆಗಳ ಮಾಲೆ, ಮಣಿಸರ, ತಲೆಯಲ್ಲಿ ಹೂವು ಅಥವಾ ಗರಿ, ಅಗಲ ವಾದ ನಡುಪಟ್ಟಿ, ಬೂಟುಗಳು ಇಲ್ಲವೆ ಬರಿಗಾಲು. ತಲೆ ಬಾಚುವುದಾಗಲಿ, ಸ್ನಾನ ಮಾಡುವುದಾಗಲಿ, ಬಟ್ಟೆ ಒಗೆಯುವುದಾಗಲಿ ಇವರಲ್ಲಿಲ್ಲ.

ಸಮಾಜದಲ್ಲಿ ಯಾವುದು ರೀತಿ ನೀತಿಯಲ್ಲವೋ ಸಭ್ಯತೆಯಲ್ಲವೋ ಶಿಷ್ಟಾ ಚಾರವಲ್ಲವೋ ಅದೇ ಇಲ್ಲಿನ ಜೀವನದ ರೀತಿ. ಶಿಷ್ಟಸಮಾಜ ಯಾವು ದನ್ನು ಬಹಿಷ್ಕರಿಸುತ್ತದೆಯೋ ಅದು ಇಲ್ಲಿ ಮಾನ್ಯ. ಅಫೀಮು ಮೊದಲಾದ ಮಾದಕ ಪದಾರ್ಥಗಳ ಸೇವನೆ ಸಮಾಜದಲ್ಲಿ ನಿಷಿದ್ಧ. ಆದರೆ ಅದು ಇವರ ಮೂಲಾಧಾರ. ಇಹದ ಅರಿವನ್ನು ಮರೆಸುವ ಮಾದಕ ವಸ್ತುಗಳಾದ ಮಾರಿಜುಆನ, ಎಲ್.ಎಸ್.ಡಿ. (ಲೈಸರ್ಜಿಕ್ ಆಸಿಡ್ ಡೈಥೈಲ್‌ಮಾಡ್) ಮೆಥೆಡ್ರಿನ್, ಹೆರಾಯಿನ್, ಹಷೀಷ್ ಇವು ಇವರ ಜೀವನಾಧಾರ. ವಿವಾಹ ವಿಲ್ಲದೆ ತರುಣ ತರುಣಿಯರು ಒಟ್ಟಿಗೆ ವಾಸಿಸುತ್ತಾರೆ.

ಸಾಂಪ್ರದಾಯಿಕ ಸಮಾಜದ ವಿರುದ್ಧ ದಂಗೆಯೆದ್ದಿರುವ ಯುವಜನಾಂಗದ ಒಂದು ಗುಂಪಿನವರು, ಹಿಪ್ಪಿಗಳು. ಸಮಾಜದ ರೀತಿ ನೀತಿಗಳನ್ನು ಒಪ್ಪದೆ ಅದರಿಂದ ಹೊರಬಿದ್ದವರು. ಒಂದು ಬಗೆಯ ಆದರ್ಶವಾದಿಗಳು. ಇವರ ಬಯಕೆ : ಪ್ರೇಮ, ಶಾಂತಿ, ಸಹಜತೆ.

ಸಮಾಜದ ವಿರುದ್ಧ ಇವರು ದಂಗೆಯೇಳಲು ಕಾರಣ ಸಮಾಜ ತಾನು ಹೇಳಿದಂತೆ ಮಾಡುತ್ತಿಲ್ಲ ಎನ್ನುವುದು. ಸಮಾಜ ಶಾಂತಿ-ಶಾಂತಿ ಎಂದು ಸಾರುತ್ತದೆ ; ಆದರೆ ಯುದ್ಧಕ್ಕೆ ಸಿದ್ಧವಾಗುತ್ತದೆ. ಸತ್ಯ, ನ್ಯಾಯ, ಧರ್ಮ ಎನ್ನುತ್ತದೆ ; ಆದರೆ ತಾನೇ ಅಸತ್ಯದ, ಅನ್ಯಾಯದ, ಅಧರ್ಮದ ಮಾರ್ಗ ಹಿಡಿದು ಹೋಗುತ್ತದೆ. ಸಮಾನತೆಯ ಬಗ್ಗೆ ಮಾತಾಡುತ್ತದೆ ; ಆದರೆ ಬಡವ ಬಲ್ಲಿದ ಎಂಬ ಭೇದ ಕಲ್ಪಿಸುತ್ತದೆ. ಹೀಗೆ ಸಮಾಜದಲ್ಲಿ ತಮ್ಮ ಹಿರಿಯರು, ಸುತ್ತಮುತ್ತಲಿನವರು ಹೇಳುವುದೊಂದು ಮಾಡುವು ದೊಂದು ಎಂದು ವಿಷಣ್ಣರಾದ ಇವರು ಸಮಾಜದ ವಿರುದ್ಧ ನಿಂತರು. ಆದರೆ ಸಮಾಜದಲ್ಲಿನ ಅನ್ಯಾಯ ಅತ್ಯಾಚಾರಗಳನ್ನು ಸರಿಪಡಿಸಲು ಸಾಧ್ಯ ವಿಲ್ಲವೆಂದು ತಿಳಿದು ತಾವೇ ಸಮಾಜದ ಎಲ್ಲ ಕಟ್ಟುಪಾಡುಗಳನ್ನು ತೊರೆದು ದೂರಸರಿದರು. ಅನೇಕರು ತಮ್ಮ ದೇಶವನ್ನೆ ಬಿಟ್ಟು ಬೇರೆ ದೇಶಗಳಿಗೆ ಹೋಗುತ್ತಾರೆ. ಇವರಲ್ಲಿ ಹಲವರು ಶ್ರೀಮಂತ ಪ್ರತಿಷ್ಠಿತ ಮನೆತನಗಳ ಹುಡುಗ ಹುಡುಗಿಯರು.

ಈ ಹಿಪ್ಪಿಗಳು ಅಮೆರಿಕದಲ್ಲಿ ಹೆಚ್ಚಾಗಿದ್ದರೂ ಇತರ ದೇಶಗಳಲ್ಲೂ ಇದ್ದಾರೆ. ಸಮಾಜದ ಕಟ್ಟುನಿಟ್ಟಿನಿಂದ ದೂರ ಹೋಗಬಯಸುವ ಕೆಲವು ಜನರ ಕನಸನ್ನು ನನಸಾಗಿ ಮಾಡಿರುವುದು ಮಾದಕ ಪದಾರ್ಥ ಸೇವನೆ. ಇದರಿಂದ ಸಮಾಜದ ಎಲ್ಲ ಕಷ್ಟನಷ್ಟಗಳನ್ನೂ ಇವರು ಮರೆಯುವುದು ಸಾಧ್ಯವಾಗಿದೆ. ಈ ಮಾದಕ ಗುಳಿಗೆಗಳನ್ನು ಸೇವಿಸಿದಾಗ ನೂರೆಂಟು ಬಣ್ಣಬಣ್ಣದ ಚಿತ್ರ ಗಳು ಕಣ್ಣೆದುರು ಬರುವುವಂತೆ. ಕಲಾಶಕ್ತಿಯುಳ್ಳವರು ಅವನ್ನು ಬೆಳೆಯಿಸಿ ಕೊಂಡು ವಿವಿಧ ಬಣ್ಣದ ಚಿತ್ರಗಳನ್ನು ಬರೆಯುತ್ತಾರೆ.

ಮಾದಕ ದ್ರವ್ಯಗಳ ಮೇಲೆ ತೀವ್ರ ಪ್ರತಿಬಂಧವಿರುವ ಪಾಶ್ಚಾತ್ಯ ದೇಶ ಗಳಿಂದ ಇವರು ಓಡಿಹೋಗಬೇಕಾಗುತ್ತದೆ. ಭಾರತಕ್ಕೆ ಬರುವುದೆಂದರೆ ಅವರಿಗೆ ಇಷ್ಟ. ಬಂದಮೇಲೆ ಅವರಲ್ಲನೇಕರು ಇಲ್ಲಿ ಸುಲಭ ಬೆಲೆಗೆ ಸಿಗುವ ಮಾದಕ ವಸ್ತುಗಳನ್ನು ಕೊಂಡು ತಮ್ಮ ದೇಶಗಳಲ್ಲಿ ಮಾರುವ ವ್ಯಾಪಾರ ಆರಂಭಿಸಿದ್ದಾರೆ. ಸಮಾಜದ ಅನೀತಿಯ ಬಗ್ಗೆ ರೊಚ್ಚಿಗೆದ್ದ ಈ ಯುವಕ ಯುವತಿಯರು ತಾವೇ ಅನೀತಿಯುತ ವ್ಯಾಪಾರಕ್ಕೆ ಇಳಿಯುವುದು ಒಂದು ವಿಪರ್ಯಾಸ.

'ಹಿಪ್ಪಿ'ಗಳು ಆದರ್ಶವನ್ನು ಬಯಸಿ ರೊಚ್ಚಿಗೆದ್ದ ಯುವಕರ ಗುಂಪು. ಆದರೆ ಆ ಆದರ್ಶವನ್ನು ರೂಪಿಸಲು ಅವರು ಅನುಸರಿಸುತ್ತಿರುವ ಮಾರ್ಗ ಕ್ರಾಂತಿಕಾರಿ ಎನಿಸಿದರೂ ಅದು ಕ್ರಿಯಾತ್ಮಕವಲ್ಲ, ರಚನಾತ್ಮಕವಲ್ಲ.

## ಹಿಮಪಾತ

ಹಿಮ, ಹಿಮಗಡ್ಡೆಗಳು ಅಥವಾ ಹಿಮಾಚ್ಛಾದಿತ ಕಲ್ಲು ಮಣ್ಣು ಬಹಳ ಪ್ರಮಾಣದಲ್ಲಿ ಪರ್ವತಗಳ ಇಳಿಜಾರಿನಲ್ಲಿ ವೇಗವಾಗಿ ಜಾರಿ ಬೀಳುವುದಕ್ಕೆ ಹಿಮಪಾತ ಎನ್ನುತ್ತಾರೆ. ಉನ್ನತ ಪರ್ವತ ಪ್ರದೇಶಗಳಲ್ಲಿ ಹಿಮರಾಶಿ ಹೆಚ್ಚಿದಂತೆ, ಹಿಮಪಾತದ ಸಂಭವವೂ ಹೆಚ್ಚುತ್ತದೆ. ಇಂಥ ಹಿಮದಟ್ಟಣೆ ಯಿಂದ ಇದ್ದಕ್ಕಿದ್ದಂತೆ ಅಖಂಡ ಹಿಮರಾಶಿ ಕೆಳಗಿಳಿದು ಪರ್ವತದ ಬದಿಯ ಕಣಿವೆಯಲ್ಲಿ ಕರಗಲಾರಂಭಿಸುತ್ತವೆ ; ಮತ್ತು ನದಿಗಳಂತೆ ಮುಂದಕ್ಕೆ ಹರಿ ಯುತ್ತದೆ. ಇದರಿಂದ ಇಂಥ ನದಿಗಳಲ್ಲಿ ಪ್ರವಾಹಪೀಡೆಯೂ ಉಂಟಾ ಗುವುದು.

ಹಿಮಪಾತದಿಂದ ಪರ್ವತಾರೋಹಿಗಳಿಗೆ, ಪರ್ವತ ಪ್ರವಾಸಿಗಳಿಗೆ ಮತ್ತು ಹಿಮ ಕ್ರೀಡಾಪಟುಗಳಿಗೆ ಅತೀವ ಅಪಾಯ. ಹಿಮಪಾತ ಸಂಭವಿ ಸುವುದಕ್ಕೆ ಕಾಲನಿಯಮವಿಲ್ಲ. ಸಾಮಾನ್ಯವಾಗಿ ವಸಂತದ ಆರಂಭದಲ್ಲಿ ಇದು ಪದೇಪದೇ ಉಂಟಾಗುತ್ತದೆ. ಸೂರ್ಯಕಿರಣದ ಶಾಖ ತಟ್ಟಿದಂತೆ ಮಂಜು ಕರಗುವುದೇ ಇದಕ್ಕೆ ಕಾರಣ. ಹಿಮಗಡ್ಡೆಯ ತಳದಲ್ಲಿ ಈ ರೀತಿ ಕರಗಿದ ನೀರು ಸಂಗ್ರಹವಾದ ಕೂಡಲೇ ಗಡ್ಡೆ ಸಡಿಲವಾಗಿ ಕೆಳಕ್ಕೆ ಸರಿಯು ತ್ತದೆ. ಸ್ವಿಟ್ಜರ್‌ಲೆಂಡಿನ ಆಲ್ಪ್ಸ್ ಪರ್ವತಗಳಲ್ಲಿ ಹಿಮಪಾತ ಸಾಮಾನ್ಯ ಸಂಗತಿ.

ಚಳಿಗಾಲದಲ್ಲಿ, ಒಂದು ಪ್ರದೇಶದಲ್ಲಿ ಮಂಜು ಬಹಳವಾಗಿ ಮುಸುಕಿ ದಾಗಲೂ ಭಾರ ತಡೆಯಲಾರದೆ ಹಿಮಪಾತವಾಗುವುದುಂಟು. ಇಲ್ಲವೆ ತೀರ ಇಳಿಜಾರಿನಲ್ಲಿ ಹೆಪ್ಪುಗಟ್ಟಿದ ಹಿಮ ತಾನೇ ತಾನಾಗಿ ಜಾರುವುದೂ ಸಹಜ. ಇದಕ್ಕೂ ಹಿಮಪಾತವೆನ್ನುತ್ತಾರೆ.

ಸಾಮಾನ್ಯವಾಗಿ ಹಿಮದ ರಾಶಿ 22 1/2 ಡಿಗ್ರಿಯಿಂದ ಹೆಚ್ಚು ಇಳಿಜಾ ರಾದ ಪ್ರದೇಶದಲ್ಲಿ ನಿಂತಿದ್ದರೆ ಹಿಮಪಾತ ಸಂಭವಿಸಬಹುದು. ಹಿಮಗಡ್ಡೆ ಗಂಟೆಗೆ 321.8 ಕಿ.ಮೀ. ವೇಗದಲ್ಲಿ ಉರುಳಿ ಬರಬಹುದು. ಅದು ತನ್ನ

ದಾರಿಯಲ್ಲಿ ಸಿಕ್ಕಿದುದೆಲ್ಲವನ್ನೂ–ಕಲ್ಲು ಬಂಡೆಗಳು, ಮರಗಳು, ಪ್ರಾಣಿಗಳು ಎಲ್ಲವನ್ನೂ—ನೂಕಿಕೊಂಡು ಕೆಳಕ್ಕೆ ಸಾಗುತ್ತದೆ. ಒತ್ತಾಗಿ ಗಿಡಮರಗಳಿದ್ದರೆ ಅದರ ವೇಗವನ್ನು ಕಡಮೆ ಮಾಡಬಹುದು. ಹಿಮರಾಶಿಯಿಂದ ಇರುವ ಅಪಾಯಕ್ಕಿಂತಲೂ ಅದರ ತೀವ್ರ ಚಲನೆಯಿಂದ ಉಂಟಾಗುವ ಚಂಡಮಾರುತದ ಅಪಾಯ ಹೆಚ್ಚಿನದು.

ಒಮ್ಮೆ ಉರುಳುತ್ತಿದ್ದ ಒಂದು ಹಿಮಪಾತ ಮೂವತ್ತು ಕಟ್ಟಡಗಳಿಗೆ 238 ಮೀ. ದೂರದಲ್ಲಿ ನಿಂತಿತು. ಅದರ ಮಾರುತದಿಂದ ಆ ಮನೆಗಳೆಲ್ಲ ಉರುಳಿದುವು. ಇನ್ನೊಮ್ಮೆ ಹಿಮಪಾತದಿಂದ 457.5 ಮೀಟರುಗಳಾಚೆ ಇದ್ದ ಮರಗಳು ಅದರ ಮಾರುತದಿಂದ ಉರುಳಿ ಬಿದ್ದುವು. ಒಮ್ಮೆ ಉಕ್ಕಿನ ಸೇತುವೆಯೊಂದನ್ನು ಹಿಮಪಾತ 45.8 ಮೀಟರುಗಳ ದೂರ ಎಸೆಯಿತು.

ಭೂವಿಜ್ಞಾನದ ದೃಷ್ಟಿಯಿಂದ ಹಿಮಪಾತಗಳು ಗಮನಾರ್ಹವಾಗಿವೆ. ಕಲ್ಲು ಮಣ್ಣುಗಳನ್ನು ಕೂಡಿಯೇ ಉರುಳಿಸುವ ಈ ಘಟನೆಯು ಪದೇಪದೇ ಸಂಭವಿಸಿದರೆ ಆ ಪ್ರದೇಶದಲ್ಲಿನ ಭೂಮಿ ಸವೆಯಲಾರಂಭಿಸುತ್ತದೆ. ಹೀಗೆ ಬಹಳ ಕಾಲ ಮುಂದುವರಿದರೆ ಭೂಮಿಯ ಸ್ವರೂಪವೇ ಬದಲಾಗುತ್ತದೆ.

## ಹಿಮಮಾನವ



ಹಿಮಾಲಯ ಪರ್ವತ ಪ್ರದೇಶದಲ್ಲಿ ವಿಚಿತ್ರ ಆಕೃತಿಯನ್ನು ಹೊಂದಿರುವ ಹಿಮಮಾನವ ವಾಸಿಸುತ್ತಾನೆ ಎಂಬ ಪ್ರತೀತಿ ಇದೆ. ಹಿಮಮಾನವನನ್ನು 'ಯೆತಿ' ಎಂದೂ ಕರೆಯುತ್ತಾರೆ. ನೇಪಾಳಿ ಭಾಷೆಯ ಯೆಹ್ (ಬಂಡೆಗಳಲ್ಲಿನ ಪ್ರದೇಶ) ಮತ್ತು ತಿಹ್ (ಪ್ರಾಣಿ) ಪದಗಳೇ ಯೆತಿಗೆ ಮೂಲ. ಮಿಗೊ, ಮೆಟ್ಜ್‌ಕಂಗಾಮಿ, ಡ್ಸುತಿಹ್ ಇದರ ಇತರ ಹೆಸರುಗಳು.

ಸುಮಾರು 4–5 ಕಿಲೊಮೀಟರುಗಳ ಎತ್ತರದ ನಿರ್ಜನ ಪ್ರದೇಶದಲ್ಲಿ ಈ ಪ್ರಾಣಿ ವಾಸಿಸುತ್ತದೆ ಎಂದು ಹೇಳುತ್ತಾರೆ. 1952 ರಲ್ಲಿ ಗೌರೀಶಂಕರ ಶಿಖರವನ್ನೇರಲು ಹೊರಟಿದ್ದ ಸ್ವಿಟ್ಜರ್‌ಲೆಂಡಿನ ಪರ್ವತಾರೋಹಿಗಳ ತಂಡಕ್ಕೆ 29.2 ಸೆ. ಮೀ. ಉದ್ದವೂ 12.1 ಸೆ. ಮೀ. ಅಗಲವೂ ಇದ್ದ ಹೆಜ್ಜೆಯ ಗುರುತುಗಳು–ಹಿಮಮಾನವನವು–ಕಂಡುಬಂದುವು. 1960–61 ರಲ್ಲಿ ಪರ್ವತಾರೋಹಣ ಕೈಗೊಂಡ ಸರ್ ಎಡ್ಮಂಡ್ ಮತ್ತು ತೇನ್‌ಸಿಂಗ್ ಇದನ್ನು ಕಾಣಲಿಲ್ಲ.

ನೇಪಾಳದ ನಿವಾಸಿಗಳಾದ ಕೆಲವು ಶೆರ್ಪಾಗಳು ತಾವು ಈ ಪ್ರಾಣಿಯನ್ನು ನೋಡಿರುವುದಾಗಿ ಹೇಳುತ್ತಾರೆ. ಅವರ ಹೇಳಿಕೆಯಂತೆ, ಈ ಪ್ರಾಣಿಯ ಎತ್ತರ ಸುಮಾರು ಒಂದೂವರೆ ಮೀಟರು. ತಲೆ ಚೂಪು. ಅಗಲವಾದ ಕೆನ್ನೆ, ಕಂದು ಅಥವಾ ಬೂದು ಬಣ್ಣದ ಕೂದಲ ಮೈ ಹೊದಿಕೆ. ಗಿಡ ಗೆಂಟೆಗಳು ಹಾಗೂ ಸಣ್ಣ ಸಣ್ಣ ಪ್ರಾಣಿಗಳೇ ಆಹಾರ.

ಪ್ರಖ್ಯಾತ ವಿಜ್ಞಾನಿ ಜೂಲಿಯನ್ ಹಕ್ಸ್ಲಿ ಅದೊಂದು ಬಗೆಯ ಹಿಮದ ಕರಡಿಯೆಂದು ಅಭಿಪ್ರಾಯ ಪಟ್ಟಿದ್ದಾನೆ.

ಇಷ್ಟೆಲ್ಲಾ ಕುತೂಹಲಕ್ಕೆ ಕಾರಣವಾಗಿರುವ ಈ ಪ್ರಾಣಿ ಪರ್ವತ ಪ್ರದೇಶದ ಜನರಲ್ಲಿ ಕೆಲವು ಮೂಢ ನಂಬಿಕೆಗಳಿಗೆ ಎಡೆಕೊಟ್ಟಿದೆ. ಪರ್ವತ ಪ್ರದೇಶದ ಜನ ಅದರ ದರ್ಶನ ಅಪಶಕುನ ಎಂದು ನಂಬುತ್ತಾರೆ. ಅದರ ಪಾದ ಹಿಂದು ಮುಂದಾಗಿದ್ದು ಅದು ಪರ್ವತವನ್ನು ಹಿಂದು ಹಿಂದಕ್ಕೆ ಏರುತ್ತದೆಂದೂ ಅಲ್ಲಿಯ ಜನ ಭಾವಿಸುತ್ತಾರೆ.

ಯೆತಿಗಳಲ್ಲಿ ಮೂರು ವಿಧಗಳಿರುವುದೆಂದು ಹೇಳುತ್ತಾರೆ. ಕೆಳಗಿನ ಅರಣ್ಯ ಪ್ರದೇಶಗಳಲ್ಲಿ ವಾಸಿಸುವ ಕೆಂಪು ಮತ್ತು ಬೂದುಬಣ್ಣ ಮಿಶ್ರಿತ ಉಣ್ಣೆಯುಳ್ಳ ಕುಬ್ಜ. ಪರ್ವತ ಪ್ರದೇಶಗಳಲ್ಲಿರುವ ಮನುಷ್ಯನೆತ್ತರದ ಕಂದು ಮಿಶ್ರಿತ ಕಪ್ಪು ಬಣ್ಣದ ಪ್ರಾಣಿ. ಇದು ಮೇಲಿನ ಹಿಮ ಪ್ರದೇಶಗಳಿಗೂ ಹೋಗುವುದುಂಟು. ಇನ್ನೂ ಮೇಲಿನ ಶಿಲಾಭಾಗಗಳಿಂದ ಒಂದು ಯಾಕ್ (ಒಂದು ಬಗೆಯ ಪ್ರಾಣಿ) ಅನ್ನು ಕೂಡ ಎತ್ತಿಕೊಂಡು ಹೋಗಬಲ್ಲ ಶಕ್ತಿಯುಳ್ಳ ಬೃಹದಾಕಾರದ ಕಾಯ ಉಳ್ಳದ್ದು. ಇದೇ ಡ್ಜುತಿಹ್. ರಷ್ಯ ಹಾಗೂ ಚೀನ ಪ್ರದೇಶಗಳಲ್ಲಿ ಇಂಥ ಪ್ರಾಣಿಗಳಿಗೆ ಅನೇಕ ಹೆಸರುಗಳಿವೆ.

ಹಿಮಮಾನವ ಎನ್ನುವ ಪದಕ್ಕೆ ಆಂಗ್ಲ ಭಾಷೆಯಲ್ಲಿ 'ಅಬಾಮಿನಬಲ್ ಸ್ನೋಮನ್' ಎನ್ನುತ್ತಾರೆ. ಏಷ್ಯ, ಆಫ್ರಿಕ, ದಕ್ಷಿಣ ಅಮೆರಿಕ, ಕಾಕಸಸ್ ಮತ್ತು ಆಗ್ನೇಯ ಯೂರೋಪಿನ ದಕ್ಷಿಣ ಭಾಗಗಳಲ್ಲಿ ಇವುಗಳ ವಿಷಯ ಕೇಳುತ್ತೇವೆ.

ಇವುಗಳಿಗೆ ಅನೇಕ ಪ್ರಾಂತೀಯ ಹೆಸರುಗಳಿರುವುದರಿಂದ ಇವುಗಳಲ್ಲಿ ಎಷ್ಟು ವಿಧ ಇವೆ, ಅವು ಯಾವುವು ಎಂದು ಸ್ಪಷ್ಟವಾಗಿ ತಿಳಿದಿಲ್ಲ. ಆದರೂ ಹಿಮಾಲಯ ಹಾಗೂ ಹಿಮಾಲಯದ ಉತ್ತರಕ್ಕೆ ನಾಲ್ಕು ; ಬರ್ಮ, ಸಯಾಮ್, ಮಲಯ ಪ್ರದೇಶದಲ್ಲಿ ಎರಡು ; ಸುಮಾತ್ರದಲ್ಲಿ ಒಂದು ಅಥವಾ ಎರಡು ; ಆಫ್ರಿಕದಲ್ಲಿ ಐದು ವಿಧಗಳ ಯೆತಿಗಳಿವೆ ಎನ್ನಲಾಗಿದೆ.

ಹಿಮಮಾನವರು ಕೊಂದರೆಂದು ಹೇಳಲಾದ ಪ್ರಾಣಿಗಳ ಮತ್ತು ಮನುಷ್ಯರ ಬಗೆಗೆ ಕಥೆಗಳು 1848 ರಲ್ಲಿ ಪ್ರಕಟವಾಗಿದ್ದುವು.

1925 ರಲ್ಲಿ ರಷ್ಯದ ಕೆಂಪು ಸೈನ್ಯದ ಅಧಿಕಾರಿ ಟಾಪಿಲಾಸ್ಕಿ ಪಶ್ಚಿಮ ಪಾಮಿರ್ ಪ್ರದೇಶದಲ್ಲಿ ಹಿಮಮಾನವರನ್ನು ಕಂಡುದಾಗಿ ವರದಿ ಮಾಡಿದ. ಮೊದಲ ಬಾರಿ ಎತ್ತರವಾದ ಗಟ್ಟಿಮುಟ್ಟಾಗಿದ್ದ ಗಂಡಿನ ಜೊತೆ ಹೆಣ್ಣೊಂದನ್ನೂ ಒಂದು ಮಗುವನ್ನೂ ಕಂಡ. ಇಪ್ಪತ್ತೇಳು ದಿನಗಳ ಅನಂತರ ಒಬ್ಬ ಮನುಷ್ಯನನ್ನು ಅಟ್ಟಿಸಿಕೊಂಡು ಬರುತ್ತಿದ್ದ ಹಿಮಮಾನವನ ಕೈಯಲ್ಲಿದ್ದ ದೊಣ್ಣೆಯಿಂದ ಮನುಷ್ಯನಿಗೆ ಕೊಟ್ಟ ಏಟು ಅವನ ಕೊರಳ ಮೂಳೆಯನ್ನು ಮುರಿದುದನ್ನು ಕಂಡ. ಆ ಮನುಷ್ಯ ಹೊಡೆದ ಗುಂಡಿ ನೇಟು ಹಿಮಮಾನವನನ್ನು ಕೊಂದಿತು. ಆ ಹಿಮಮಾನವ 165 ಸೆ.ಮೀ. ಎತ್ತರವಿತ್ತೆಂದೂ ಮೈಯೆಲ್ಲ ಕೂದಲಿನಿಂದ ತುಂಬಿತ್ತೆಂದೂ ಅವರು ವರದಿ ಮಾಡಿದರು. ಮತ್ತೊಂದು ಹಿಮಮಾನವನ ಶವವನ್ನು ಅಮೆರಿಕದ ಸ್ಯಾಂಡರ್‌ಸನ್ ಮತ್ತು ಹವೆಲ್‌ಮನ್ಸ್ ಎಂಬ ವಿಜ್ಞಾನಿಗಳೂ ರಷ್ಯದ ಬಿ. ಪಾರ್ಷ್‌ನೆವ್ ಎಂಬ ವಿಜ್ಞಾನಿಯೂ ಪರೀಕ್ಷಿಸಿದರು. (ಪಾರ್ಷ್‌ನೆವ್ ಮಾರ್ಗದರ್ಶನದಲ್ಲಿ ಆರ್. ಲಿವೊಟಿನ್ ಎಂಬ ಚಿತ್ರಕಾರ ಪುನರ್‌ರಚಿಸಿದ ಹಿಮಮಾನವನ ಚಿತ್ರ ಎಡಪುಟದಲ್ಲಿದೆ.) ಪಾರ್ಷ್‌ನೆವ್‌ನ ಅಭಿಪ್ರಾಯ ಇದು : ಬಹು ಹಿಂದೆ ಇದ್ದ ಪೇಲಿಯೊ ಆನ್ಥ್ರೋಪ್ಸ್ (ನಿಯಾಂಡರ್‌ಥಾಲರು) ಈಗಲೂ ಪ್ರಪಂಚದ ಕೆಲವು ಭಾಗಗಳಲ್ಲಿದ್ದಾರೆ. ಇವರಿಗೆ ಮಾತು ಬರುವುದಿಲ್ಲ. ಇವರೇ 'ಹಿಮಮಾನವ'ರು.

ಯೆತಿಯನ್ನು ಹೋಲುವ ಪ್ರಾಣಿಗಳು ಉತ್ತರ ಅಮೆರಿಕದ ವಿಶಾಲ ಜನರಹಿತ ಪ್ರದೇಶಗಳಲ್ಲಿ ಕಂಡುಬಂದಿವೆ ಎಂದು ಹೇಳುತ್ತಾರೆ. ಇವುಗಳ ಹೆಜ್ಜೆಯ ಗುರುತಿನಿಂದ ಪಾದದ ಉದ್ದ 58 ಸೆ. ಮೀ. ಎಂದು ಹೇಳುತ್ತಾರೆ. ಇವು ಸುಮಾರು 3.3 ಮೀಟರು ಎತ್ತರ, 363 ಕಿಲೊಗ್ರಾಮ್ ತೂಕ ಇರುತ್ತವೆ. ಕಣ್ಣು ಸಣ್ಣ, ದಪ್ಪ ಮೂಗು, ಅಗಲ ಬಾಯಿ. ಇದು ಯಾವ ಪ್ರಾಣಿ ಎಂಬುದಿನ್ನೂ ನಿರ್ಧಾರವಾಗಿಲ್ಲ.

[illegible]

## ಹಿಮಾಲಯ

'ಅಂಬರ ಚುಂಬಿತ ಭಾಲ ಹಿಮಾಚಲ,
ಶುಭ್ರ ತುಷಾರ ಕಿರೀಟಿನೀ'

ಕವಿ 'ದೇವಿ ಭುವನ ಮನ ಮೋಹಿನಿ'ಯಾದ ಭಾರತಾಂಬೆಯನ್ನು ವರ್ಣಿಸಿದ ರೀತಿ ಇದು. ಭಾರತದಲ್ಲಿ ಕೈಚಾಚಿ ನಿಂತ ಪರ್ವತರಾಜ ಹಿಮಾಲಯ.

ಇದು ಹಿಮದ ಆಲಯ. ಸದಾ ಹಿಮವಿರುವ ಪ್ರದೇಶ.

ಆದರೆ ಒಂದು ಕಾಲದಲ್ಲಿ ಹಿಮಾಲಯ ಪರ್ವತಗಳೇ ಭೂಮಿಯ ಮೇಲೆ ಇರಲಿಲ್ಲ.

ಈಗ ಹಿಮಾಲಯದಲ್ಲಿ ಸೇರಿರುವ ದೈತ್ಯಾಕಾರದ ಬಂಡೆಗಳು ಲಕ್ಷಾಂತರ ವರ್ಷಗಳ ಹಿಂದೆ ನೀರಿನಲ್ಲಿ ಮುಳುಗಿದ್ದುವು. ಲಕ್ಷಾಂತರ ವರ್ಷಗಳ ಕಾಲ ಭಯಂಕರ ಭೂಕಂಪಗಳು, ಅಗ್ನಿ ಪರ್ವತದ ಹಾವಳಿ ನಡೆದ ಮೇಲೆ ನಿಧಾನವಾಗಿ ಮೇಲಕ್ಕೆ ಬಂದುವು. ಇದು ಸುಮಾರು ನಾಲ್ಕು ಕೋಟಿ ವರ್ಷಗಳ ಹಿಂದೆ ಪ್ರಾರಂಭವಾಯಿತೆಂದು ಭೂವಿಜ್ಞಾನಿಗಳು ಅಂದಾಜು ಮಾಡಿದ್ದಾರೆ. ಉಗ್ರ ಭೂಕಂಪಗಳಿಂದ ಮತ್ತೆ ಮತ್ತೆ ತುಂಡಾಯಿತು, ಮಡಿಸಿಕೊಂಡಿತು ಬಂಡೆಗಳ ಶ್ರೇಣಿ. ಈಗಲೂ ಹಿಮಾಲಯದ ರಚನೆಯಲ್ಲಿ ಬದಲಾವಣೆಗಳಾಗುತ್ತಲೇ ಇವೆ. ಅದರ ದಕ್ಷಿಣ ಶ್ರೇಣಿಯಲ್ಲಿ ಇನ್ನೂ ಭೂಕಂಪಗಳಾಗುತ್ತಿರುವುದು ಇದನ್ನು ತೋರಿಸುತ್ತದೆ. ಪ್ರಪಂಚದ ಅತಿ ಎಳೆಯ ವಯಸ್ಸಿನ ಪರ್ವತ ಶ್ರೇಣಿ ಈ ಭವ್ಯ ಶ್ವೇತ ಹಿಮಾಲಯ.

ಹಿಮಾಲಯ ಪ್ರಪಂಚದ ಪರ್ವತ ಶ್ರೇಣಿಗಳಲ್ಲೆಲ್ಲ ಅತ್ಯುನ್ನತವಾದದ್ದು. ಏಷ್ಯಖಂಡದ ಟಿಬೆಟ್ ಪ್ರಸ್ಥಭೂಮಿಗೂ ಭಾರತ ದೇಶಕ್ಕೂ ನಡುವೆ ಈ ಪರ್ವತ ಶ್ರೇಣಿ ಹಬ್ಬಿದೆ. ಇದರ ಉದ್ದ 2,414 ಕಿ.ಮೀ., ಅಗಲ 161 ರಿಂದ 241 ಕಿ.ಮೀ. ಸರಾಸರಿ ಎತ್ತರ 5,033 ರಿಂದ 5,490 ಮೀಟರುಗಳಷ್ಟು. ಎವರೆಸ್ಟ್ ಶಿಖರವೇ ಅತ್ಯಂತ ಎತ್ತರವಾದದ್ದು. 8,854 ಮೀಟರುಗಳ ಎವರೆಸ್ಟ್ ಪ್ರಪಂಚದ ಶಿಖರಗಳಲ್ಲೆಲ್ಲ ಅತ್ಯಂತ ದೊಡ್ಡದು. ಕಾಂಚನಗಂಗ (8,604 ಮೀಟರು ಎತ್ತರ) ಎವರೆಸ್ಟ್ ಶಿಖರದ ಸಮೀಪವೇ ಇದೆ. ಇದಲ್ಲದೆ ಸುಮಾರು 7,625 ಮೀಟರು ಎತ್ತರದ ನಲವತ್ತು ಶಿಖರಗಳು ಈ ಪರ್ವತ ಶ್ರೇಣಿಯಲ್ಲಿವೆ. ಹಿಂದೂಗಳಿಗೆ ಪವಿತ್ರವಾದ ಗೌರಿಶಂಕರ ಎವರೆಸ್ಟ್ ಶಿಖರಕ್ಕೆ ಪಶ್ಚಿಮದಲ್ಲಿ ಸುಮಾರು 48 ಕಿ.ಮೀ. ಗಳ ದೂರದಲ್ಲಿದೆ. ಇದರ ಎತ್ತರ 7,149 ಮೀಟರು. ಎವರೆಸ್ಟ್ ಗೌರಿಶಂಕರ ಎರಡು ಶಿಖರಗಳೂ ನೇಪಾಳ ಟಿಬೆಟ್‌ಗಳ ಗಡಿಯಲ್ಲಿವೆ.



ಹಿಮಾಲಯ ಪರ್ವತಶ್ರೇಣಿ ಭಾರತದ ಬಯಲು ಭೂಮಿಯಿಂದ ಹಂತ ಹಂತವಾಗಿ ಮೇಲೇರಿದೆ. ಎವರೆಸ್ಟ್ ಶಿಖರವನ್ನು ಬಿಟ್ಟರೆ ಉಳಿದ ಶಿಖರಗಳಲ್ಲಿ ಕೈಲಾಸ ಪರ್ವತ (6,7[illegible] ಮೀಟರು) ಪ್ರಮುಖವಾದದ್ದು. ಟಿಬೆಟಿನರಿಗೆ ಮತ್ತು ಹಿಂದೂ ಜನರಿಗೆ ಪವಿತ್ರಕ್ಷೇತ್ರ ಈ ಶಿಖರ. ಇಲ್ಲಿಯೇ ಸುಪ್ರಸಿದ್ಧ ಮಾನಸ ಸರೋವರವಿರುವುದು. ಇದು ಟಿಬೆಟಿನ ಜನರಿಗೂ ಹಿಂದುಗಳಿಗೂ ಪುಣ್ಯತೀರ್ಥ.

ಉತ್ತರ ಭಾರತದ ಅನೇಕ ನದಿಗಳ ಉಗಮಸ್ಥಾನ ಹಿಮಾಲಯ. ಉತ್ತರ ಪ್ರದೇಶದ ತೆಹ್ರಿಘರ್‌ವಾಲ್‌ನ ಗಂಗೋತ್ರಿಯಲ್ಲಿ ಪವಿತ್ರ ಗಂಗಾ ನದಿ ಹುಟ್ಟುತ್ತದೆ. ಇಲ್ಲಿ ಗಂಗೆ, ಭಾಗೀರಥಿ ಮತ್ತು ಇತರ ಪೌರಾಣಿಕ ವ್ಯಕ್ತಿಗಳ ವಿಗ್ರಹಗಳಿರುವ ದೇವಾಲಯವಿದೆ. ಸಿಂಧು, ಸೆಟ್ಲೆಜ್ ಮತ್ತು ಬ್ರಹ್ಮಪುತ್ರಾ ಇವು ಹಿಮಾಲಯದಿಂದ ಹರಿದು ಬರುವ ಪ್ರಮುಖ ನದಿಗಳು.

ಹಿಮಾಲಯ ಪ್ರದೇಶದಲ್ಲಿ ಅಕ್ಟೋಬರ್ ತಿಂಗಳಿನಿಂದ ಫೆಬ್ರುವರಿಯವರೆಗೆ ಚಳಿಗಾಲ; ಮಾರ್ಚ್ ತಿಂಗಳಿನಿಂದ ಜೂನ್‌ವರೆಗೆ ಬೇಸಿಗೆ; ಜೂನ್‌ನಿಂದ ಸೆಪ್ಟೆಂಬರ್‌ವರೆಗೆ ಮಳೆ; ಚಳಿಗಾಲದಲ್ಲಿ 1,830 ಮೀಟರುಗಳಷ್ಟು ಎತ್ತರದಲ್ಲಿಯೂ ಸಹ ಹಿಮವಿರುತ್ತದೆ. ಆದರೆ ಶಾಶ್ವತ ಹಿಮ ಶೇಖರಣೆ ಇರುವುದು 4,880 ಮೀಟರುಗಳಷ್ಟು ಎತ್ತರದಲ್ಲಿ.

ಪರ್ವತ ಶ್ರೇಣಿಗಳಲ್ಲಿರುವ ವಾಯುಗುಣ ವೈವಿಧ್ಯದಿಂದ ಒಂದೊಂದು ಸ್ಥಳದಲ್ಲಿ ಒಂದೊಂದು ಬಗೆಯ ಸಸ್ಯ ಬೆಳೆಯಲು ಅನುಕೂಲವಾಗಿದೆ. ದಕ್ಷಿಣದ ಕಡಿದಾದ ಇಳಿಜಾರುಗಳಲ್ಲಿ ಉಷ್ಣವಲಯದ ಸಸ್ಯಗಳಾದ ಅಂಜೂರ, ತೆಂಗು, ತಾಳೆ, ಮತ್ತಿತರ ಮರಗಳು ಬೆಳೆಯುತ್ತವೆ. 915 ಮೀಟರುಗಳಷ್ಟು ಎತ್ತರ ಪ್ರದೇಶದಲ್ಲಿಯೂ ಈ ಮರಗಳನ್ನು ಕಾಣಬಹುದು. 2,135 ಮೀಟರುಗಳ ಎತ್ತರದವರೆಗೆ ಓಕ್, ಚೆಸ್ಟ್‌ನಟ್ ಮುಂತಾದ ಮರಗಳಿವೆ. 3,660 ಮೀಟರುಗಳ ಎತ್ತರದಲ್ಲಿ ದೇವದಾರು, ಪೈನ್ ವೃಕ್ಷಗಳು ಕಂಡುಬರುತ್ತವೆ. ದಟ್ಟವಾದ ಅರಣ್ಯಗಳೂ ಇಲ್ಲಿವೆ. ರೋಡೋಡೆಂಡ್ರಾನ್ ಎಂಬ ನಿತ್ಯ ಹಸಿರಿನ ಜಾತಿಯ ಸಸ್ಯಗಳಿಗೆ ಹಿಮಾಲಯ ಪ್ರಸಿದ್ಧವಾಗಿದೆ. ಪರ್ವತದ ಇಳಿಜಾರಿನಲ್ಲಿ 1,525 ಮೀಟರುಗಳ ಎತ್ತರದವರೆಗೆ ಟೀ ತೋಟಗಳಿವೆ. ದಕ್ಷಿಣದ ಇಳಿಜಾರಿನಲ್ಲಿ ಭತ್ತ ಮತ್ತು ಧಾನ್ಯಗಳನ್ನು 1,830 ಮೀಟರು ಎತ್ತರದವರೆಗೂ ಬೆಳೆಯುತ್ತಾರೆ. ಗೋಧಿ ಮತ್ತು ಬಾರ್ಲಿ ಹೆಚ್ಚು ಎತ್ತರವಿಲ್ಲದ ಪ್ರದೇಶದಲ್ಲಿ ಬೆಳೆಯುತ್ತಾರೆ.

ಹಿಮಾಲಯದ ಅಗಾಧ ಶ್ರೇಣಿ ವಿಧವಿಧದ ಪ್ರಾಣಿಪಕ್ಷಿಗಳ ತವರಾಗಿದೆ. ಭಾರತ ಮತ್ತು ಪಾಕಿಸ್ತಾನಗಳೆಡೆಯ ಶ್ರೇಣಿಯಲ್ಲಿ ಹುಲಿ, ಚಿರತೆ, ಘೇಂಡಾಮೃಗ ಮುಂತಾದ ವನ್ಯ ಪ್ರಾಣಿಗಳಿವೆ. ಅರಣ್ಯಗಳಲ್ಲಿ ಕಾಡು ನಾಯಿಗಳಿವೆ. ಎತ್ತರದ ಶ್ರೇಣಿಗಳಲ್ಲಿ ಕಂದುಕರಡಿಗಳಿವೆ. ಯಾಕ್ ಈ ಪ್ರದೇಶದ ಪ್ರಮುಖ ಪ್ರಾಣಿ. ನೂರಾರು ಬಣ್ಣ ಬಣ್ಣದ ಹಕ್ಕಿಗಳು ಇಲ್ಲಿವೆ, ಗರುಡ, ರಣಹದ್ದು ಮುಂತಾದುವು ಪ್ರಮುಖವಾದ ಹಕ್ಕಿಗಳು. ಕೆಳಭಾಗದ ಅರಣ್ಯಗಳಲ್ಲಿ ನವಿಲೂ ಉಂಟು. 2,440 ಮೀಟರುಗಳವರೆಗೆ ಭಯಂಕರ ಹೆಬ್ಬಾವುಗಳೂ ನಾಗರಹಾವುಗಳೂ ಇವೆ.

ಹಿಮಾಲಯದಲ್ಲಿ ಅನೇಕ ಕಣಿವೆಗಳಿವೆ. ಮುಖ್ಯವಾದುದು ಖೈಬರ್, ಬೋಲನ್ ಮತ್ತು ಗೋಮಲ್. ವರ್ಷದಲ್ಲಿ ಹೆಚ್ಚಿನ ಸಮಯ ಇವು ಹಿಮದಿಂದ ಮುಚ್ಚಿ ಹೋಗಿರುತ್ತವೆ.

ಡಾರ್ಜಿಲಿಂಗ್, ಸಿಮ್ಲಾ, ನೈನಿಟಾಲ್ ಇವು ಹಿಮಾಲಯ ಪ್ರದೇಶದ ಗಿರಿಧಾಮಗಳು.

ಪರ್ವತಾರೋಹಿಗಳನ್ನಂತೂ ಈ ಪರ್ವತಶ್ರೇಣಿ ಕೆಣಕುತ್ತಲೇ ಇದೆ. ತೇನ್‌ಸಿಂಗ್ ಮತ್ತು ಹಿಲರಿ ಇವರು ಮೊಟ್ಟಮೊದಲು ಎವರೆಸ್ಟ್ ಶಿಖರದ ಮೇಲೆ ಕಾಲಿಟ್ಟ ಧೀರರು.

ಹಿಮಾಲಯದ ಬಗೆಗೆ ಭಾರತೀಯರಲ್ಲಿ ಭಕ್ತಿಭಾವವಿದೆ. ಬದರಿ, ಕೇದಾರ ಮೊದಲಾದ ಪವಿತ್ರ ಯಾತ್ರಾಸ್ಥಳಗಳು ಹಿಮಾಲಯದಲ್ಲಿವೆ.

ಭಾರತಕ್ಕೆ ಪ್ರಕೃತಿ ದೇವಿಯ ವರಪ್ರಸಾದ ಹಿಮಾಲಯ. ಉತ್ತರ ಗಡಿಯನ್ನು ರಕ್ಷಿಸುವ ಪ್ರಬಲ ಕೋಟೆ ಈ ಶ್ರೇಣಿ. ಉತ್ತರದ ಕಡೆಯಿಂದ ಬೀಸುವ ಶೀತಗಾಳಿಯನ್ನು ತಡೆದು ಭಾರತದ ಜನ ಅತಿ ಶೈತ್ಯದಿಂದ ನರಳುವುದನ್ನು ತಪ್ಪಿಸಿದೆ. ಸಮುದ್ರಗಳ ಕಡೆಯಿಂದ ಬೀಸುವ ಮಳೆಯ ಮಾರುತಗಳನ್ನು ತಡೆದು ನಿಲ್ಲಿಸಿ ಮಳೆ ಸುರಿಸಿ ನಾಡನ್ನು ಸಸ್ಯಸಂಪತ್ತಿನಿಂದ ಸಮೃದ್ಧಿಗೊಳಿಸಿದೆ.

ಹಿಮಾಲಯದ ಪರ್ವತ ಪ್ರದೇಶದ ಸಮೀಕ್ಷೆಯ ಕೆಲಸವನ್ನು ಬಹು ಯಶಸ್ವಿಯಾಗಿ ಮೊದಲು ನಡೆಸಿದವನು ಒಬ್ಬ ಭಾರತೀಯ – ರಾಧಾನಾಥ ಸಿಕ್‌ದರ್ (1813–1870) ಎಂಬ ಅಧಿಕಾರಿ – ಎಂದು ಹೇಳುತ್ತಾರೆ. ಎವರೆಸ್ಟ್ ಶಿಖರದ ಎತ್ತರವನ್ನು ಸರ್ ಜಾರ್ಜ್ ಎವರೆಸ್ಟ್ ಎಂಬಾತ ಮೊದಲು ಕಂಡು ಹಿಡಿದನೆಂದು ಅವನ ಹೆಸರನ್ನು ಶಿಖರಕ್ಕೆ ಕೊಟ್ಟಿದ್ದರೂ, ಈ ಎತ್ತರವನ್ನು ಮೊದಲು ಕಂಡು ಹಿಡಿದವನು ಸಿಕ್‌ದರ್ ಎಂತಲೂ ಹೇಳುತ್ತಾರೆ.

ನೋಡಿ : ಭಾರತ

## ಹಿರೋಷಿಮಾ, ನಾಗಸಾಕಿ

ಪ್ರಪಂಚದಲ್ಲಿ ಎಷ್ಟು ಬಗೆಯ ದೇವರುಗಳಿಗೆ ಎಷ್ಟು ದೇವಸ್ಥಾನಗಳು !

ಪ್ರಪಂಚದ ಶಾಂತಿಗೆ ಮುಡಿಪಾದ ದೇವಸ್ಥಾನ ಒಂದಿದೆ—ಜಪಾನಿನ ಹಿರೋಷಿಮಾದಲ್ಲಿ. ಪ್ರತಿವರ್ಷ ಆಗಸ್ಟ್ 6ರಂದು ಅಲ್ಲಿ ಸಾವಿರಾರು ಜನ ಸೇರಿ ಪ್ರಾರ್ಥನೆ ನಡೆಸುತ್ತಾರೆ—ಜಗತ್ತಿನಲ್ಲಿ ಚಿರಶಾಂತಿ ನೆಲೆಸಲಿ ಎಂದು, ಹಿರೋಷಿಮಾ ಪಟ್ಟಪಾಡು ಮತ್ತೆ ಯಾವ ಪಟ್ಟಣವೂ ಪಡುವಂತಾಗದಿರಲಿ ಎಂದು.

ಜಪಾನಿನ ಹಾನ್‌ಷು ದ್ವೀಪದ ದಕ್ಷಿಣ ತೀರದಲ್ಲಿ ಹಿರೋಷಿಮಾ ಕೊಲ್ಲಿಯ ಬಳಿ ಓಟಾ ನದಿಯ ಮುಖಜ ಭೂಮಿಯಲ್ಲಿರುವ ಒಳನಾಡಿನ ಬಂದರು ಹಿರೋಷಿಮಾ. ಮೈಜಿ ಕಾಲದಿಂದ (1868–1912) ಎರಡನೆಯ ಮಹಾಯುದ್ಧದ ಪರ್ಯಂತ ಹಿರೋಷಿಮಾ ಸೈನಿಕ ಕೇಂದ್ರವಾಗಿತ್ತು, ಹಿರೋಷಿಮಾ ನಗರ ಬೆಳೆದಂತೆ ಓಟಾ ನದಿಯ ಮುಖಜ ಭೂಮಿಯಲ್ಲಿದ್ದ ಆರು ದ್ವೀಪಗಳನ್ನು ಒಂದಕ್ಕೊಂದು ಜೋಡಿಸಲು ಎಂಬತ್ತೊಂದು ಸೇತುವೆಗಳನ್ನು ಕಟ್ಟಿದರು. ಹಿತ್ತಾಳೆ ಮತ್ತು ಮೆರಗು ಕೊಟ್ಟ ಸಾಮಾನುಗಳು, ಕಲಾ ವಸ್ತುಗಳು ಇವುಗಳಿಗೆ ಹಿರೋಷಿಮಾ ಪ್ರಸಿದ್ಧವಾಗಿದೆ. ಪವಿತ್ರವಾದ ದೇವಸ್ಥಾನ ಇಟ್ಸುಕುಷಿಮಾ (ಬೆಳಕಿನ ದ್ವೀಪ) ಹಿರೋಷಿಮಾದ ಸಮೀಪದಲ್ಲಿದೆ.

1945ರ ಆಗಸ್ಟ್ 6ರ ಬೆಳಗ್ಗೆ 8.15 ಗಂಟೆಯ ಹೊತ್ತಿನಲ್ಲಿ ಅಮೆರಿಕ ಸಂಯುಕ್ತ ಸಂಸ್ಥಾನ ಪ್ರಥಮ ಪರಮಾಣು ಬಾಂಬನ್ನು ಹಾಕಿತು. ನಗರದ ಬಹುಭಾಗ ನಾಶವಾಯಿತು. ಸುಮಾರು 60,000 ಜನ ಮಡಿದರು. ಒಂದು ಲಕ್ಷ ಜನ ಗಾಯಗೊಂಡರು, ಎರಡು ಲಕ್ಷ ಜನ ಮನೆಯಿಲ್ಲದೆ ನಿರ್ಗತಿಕರಾದರು. ಬದುಕಿ ಉಳಿದವರಲ್ಲೂ ಅನೇಕರು ವಿಕಿರಣ ಕಾಯಿಲೆಗೆ ಗುರಿ

ಯಾದರು, ಆಮೇಲೆ ಮರಣ ಹೊಂದಿದರು. ಎಷ್ಟೋ ವರ್ಷಗಳ ಕಾಲ ಅಲ್ಲಿ ಹುಟ್ಟಿದ ಮಕ್ಕಳಲ್ಲಿ ಅನೇಕರು ಅಂಗವಿಕಲರಾಗಿ ಹುಟ್ಟಿದರು. ಬಾಂಬ್ ಬಿದ್ದ ಸ್ಥಳದಲ್ಲಿ, ದಾಳಿಯಲ್ಲಿ ಮೃತರಾದವರ ಸ್ಮರಣಾರ್ಥ ಸ್ಮಾರಕ ಸಮಾಧಿಯೊಂದನ್ನು ನಿರ್ಮಿಸಿದ್ದಾರೆ. ಕಮಾನಿನ ಕೆಳಗಿರುವ ಕಲ್ಲಿನ ಮೇಲೆ ಸತ್ತ 60,000 ಜನರ ಹೆಸರುಗಳನ್ನು ಕೆತ್ತಿದ್ದಾರೆ. 1949ರಲ್ಲಿ, ಅಂತರರಾಷ್ಟ್ರೀಯ ಶಾಂತಿ ದೇವಸ್ಥಾನವನ್ನು ಹಿರೋಷಿಮಾದಲ್ಲಿ ಕಟ್ಟಬೇಕೆಂಬ ಜನತೆಯ ಅಪೇಕ್ಷೆಗೆ ಜಪಾನಿನ ಸರಕಾರ ಸಮ್ಮತಿಸಿತು. ನಾಶವಾಗಿದ್ದ ಇಗರ್ಜಿಯೊಂದರ ಸ್ಥಳದಲ್ಲಿ ಈ ಹೊಸ ದೇವಸ್ಥಾನ ನಿರ್ಮಾಣವಾಯಿತು.

ಪರಮಾಣು ಬಾಂಬಿನಿಂದಲೇ ಹಾಳಾಗಿದ್ದ ನಗರ 1945ರ ಸೆಪ್ಟೆಂಬರ್‌ನಲ್ಲಿ ಪ್ರವಾಹದಿಂದ ಅಪಾರ ನಷ್ಟಕ್ಕೆ ಈಡಾಯಿತು. ಹೊಸನಗರವನ್ನು ಕಟ್ಟುವ ಕೆಲಸ ಆರಂಭವಾದದ್ದು ಎರಡನೆಯ ಮಹಾಯುದ್ಧ ಮುಗಿದ ಮೇಲೆ. ಸೇತುವೆಯ ಕೆಲಸವನ್ನು ಮೊದಲು ತೆಗೆದುಕೊಂಡರು.

ಹಿರೋಷಿಮಾದಲ್ಲಿ ಈಗ ಅನೇಕ ಆಧುನಿಕ ಕೈಗಾರಿಕೆಗಳು ಬೆಳೆಯುತ್ತಿವೆ. ಅವುಗಳಲ್ಲಿ ಮಟ್ಸುಡಾ ಟ್ರಕ್ ಕಾರಖಾನೆ, ಮಿಟ್ಸುಬಿಯಾ ಹಡಗು ನಿರ್ಮಾಣ–ಯಂತ್ರ ನಿರ್ಮಾಣ ಕಾರಖಾನೆಗಳು, ಕಿರಿನ್‌ನ ಮದ್ಯ ತಯಾರಿಕಾ ಕೇಂದ್ರ ಮುಖ್ಯವಾದಂಥವು. 1962ರಲ್ಲಿ ಈ ನಗರದ ಜನಸಂಖ್ಯೆ 4,99,000.

ಹಿರೋಷಿಮಾದಂತೆಯೇ ಪರಮಾಣು ಬಾಂಬಿನ ಭೀಕರತೆಯನ್ನು ಅನುಭವಿಸಿದ ಇನ್ನೊಂದು ಊರು ನಾಗಸಾಕಿ.

ಜಪಾನಿನ ಕೈಷು ದ್ವೀಪದ ವಾಯುವ್ಯ ಭಾಗದಲ್ಲಿ, ಸುತ್ತಲೂ ಬೆಟ್ಟಗಳಿಂದ ಆವೃತವಾದ ನಾಗಸಾಕಿ ಪ್ರಪಂಚದ ಸುಂದರತಮ ಬಂದರುಗಳಲ್ಲಿ ಒಂದೆನಿಸಿದೆ.

ಇದನ್ನು ವಿದೇಶ ವ್ಯಾಪಾರಕ್ಕಾಗಿ 1568ರಲ್ಲಿ ತೆರೆಯಲಾಯಿತು. 1637ರ ಅನಂತರ 1857ರವರೆಗೆ ವಿದೇಶೀಯರು ವ್ಯಾಪಾರ ಮಾಡಲು ಅನುಮತಿ ಇದ್ದದ್ದು ಜಪಾನಿನ ಇದೊಂದು ಬಂದರಿನಲ್ಲಿ ಮಾತ್ರ. 1857ರಲ್ಲಿ ವಿದೇಶೀ ವ್ಯಾಪಾರಕ್ಕೆ ಇನ್ನು ಐದು ಬಂದರುಗಳಲ್ಲಿ ಈ ಸೌಲಭ್ಯವನ್ನು ಕೊಡಲಾಯಿತು.

ನಾಗಸಾಕಿಯ ಪ್ರಾಮುಖ್ಯ ಹೆಚ್ಚಿದ್ದು ಚೀನದೊಡನೆ ವ್ಯಾಪಾರ ನಡೆಯುತ್ತಿದ್ದುದರಿಂದ. ಹತ್ತಿರದಲ್ಲಿರುವ ಗಣಿಯಿಂದ ಬರುವ ಉತ್ತಮ ದರ್ಜೆಯ ಕಲ್ಲಿದ್ದಲನ್ನು ಇಲ್ಲಿಂದ ರಫ್ತು ಮಾಡುತ್ತಾರೆ.

ಬಂದರಿನ ಸುತ್ತ ಮುತ್ತ ಇರುವ ಬೆಟ್ಟಗಳ ಕಣಿವೆಗಳಲ್ಲಿ ನಗರ ಬೆಳೆದಿತ್ತು. ಉರಗಾಮಿ ಎಂಬ ಕಣಿವೆಯಲ್ಲಿ ದೊಡ್ಡ ಉಕ್ಕಿನ ಕಾರಖಾನೆ, ಇಂಜಿನಿಯರಿಂಗ್ ಉದ್ಯಮಗಳು, ಯುದ್ಧಸಾಧನ ಸಾಮಗ್ರಿಗಳನ್ನು ತಯಾರಿಸುವ ಕಾರಖಾನೆಗಳು ಇದ್ದುವು. ಎರಡನೆಯ ಮಹಾಯುದ್ಧ ಈ ಹಡಗು ನಿರ್ಮಾಣ ಉದ್ಯಮ ಬೆಳೆಯಲು ಮುಖ್ಯ ಕಾರಣವಾಯಿತು. 1945ರಲ್ಲಿ ಈ ನಗರದ ಜನಸಂಖ್ಯೆ 3,43,000.

1945ರ ಆಗಸ್ಟ್ 9 ಬೆಳಗ್ಗೆ 11 ಗಂಟೆ. ಎರಡನೆಯ ಮಹಾಯುದ್ಧ ನಡೆಯುತ್ತಿದ್ದ ಕಾಲ, ಅಮೆರಿಕ ವಿಮಾನಗಳ ಬಾಂಬ್ ದಾಳಿ ಜಪಾನಿನ ನಗರವಾಸಿಗಳಿಗೆ ಅನುಭವವಾಗಿ ಹೋಗಿತ್ತು. ಆದರೆ ಅಂದು ನಾಗಸಾಕಿಯ ಮೇಲೆ ವಿಮಾನ ದಾಳಿಯಾದಾಗ ಬಿದ್ದುದು ಒಂದೇ ಬಾಂಬು. ಕಣ್ಣು ಮುಚ್ಚಿ ಕಣ್ಣು ತೆರೆಯುವುದರಲ್ಲಿಯೇ 37,501 ಜನ ಸತ್ತಿದ್ದರು. 51,580 ಜನ ಗಾಯಗೊಂಡರು. ನಾಗಸಾಕಿಯ ಮೇಲೆ ಬಿದ್ದುದು ಜಗತ್ತಿನ ಎರಡನೆಯ ಪರಮಾಣು ಬಾಂಬ್.

ಪರಮಾಣು ಬಾಂಬ್ ಬಿದ್ದ ಸ್ಥಳದಲ್ಲಿ 15 ಮೀಟರು ಎತ್ತರದ ಗೋಪುರ ಕಟ್ಟಿದ್ದಾರೆ. ಮಾನವರ ಕ್ರೌರ್ಯವನ್ನೂ ಶಾಂತಿಪ್ರಿಯತೆಯನ್ನೂ ಇದು ನೆನಪಿಗೆ ತರುತ್ತದೆ. ನಾಶವಾದ ಪ್ರದೇಶದಲ್ಲಿ ಆಟದ ಮೈದಾನ ನಿರ್ಮಿಸಿ, ಸುತ್ತ ಹೊಸದಾಗಿ 4.000 ವಾಸದ ಮನೆಗಳನ್ನು ಕಟ್ಟಿದ್ದಾರೆ. ನಗರ ನೂತನ ಉದ್ಯಮಗಳನ್ನು ಸ್ಥಾಪಿಸಿ. ಮತ್ತೆ ಚೇತರಿಸಿಕೊಂಡಿದೆ.

ಪರಮಾಣು ಬಾಂಬಿನ ಪ್ರಯೋಗ ಎರಡನೆಯ ಮಹಾಯುದ್ಧದ ಮುಕ್ತಾಯವನ್ನು ತೀವ್ರಗೊಳಿಸಿತು ; ನಾಗಸಾಕಿಯ ಮೇಲೆ ಬಾಂಬ್ ಬಿದ್ದ ಐದು ದಿನಗಳ ಅನಂತರ ಜಪಾನ್ ಶರಣಾಗತವಾಯಿತು. ಈ ಬಾಂಬ್‌ಗಳಿಂದ ಶಾಂತಸಾಗರ ಪ್ರದೇಶದ ಯುದ್ಧ ಒಂದು ವರ್ಷಕ್ಕೆ ಮುಂಚಿತವಾಗಿ ಮುಗಿಯಿತು, ಹತ್ತು ಲಕ್ಷ ಅಮೆರಿಕನ್ ಸೈನಿಕರನ್ನೂ ಎರಡೂವರೆ ಲಕ್ಷ ಬ್ರಿಟಿಷ್ ಸೈನಿಕರನ್ನೂ ಉಳಿಸಿತು–ಎಂದು ವಾದಿಸಿ, ಪರಮಾಣು ಬಾಂಬಿನ ಪ್ರಯೋಗವನ್ನು ಸಮರ್ಥಿಸುವವರೂ ಇದ್ದಾರೆ.

ಪರಮಾಣು ಬಾಂಬಿನ ದಾಳಿಗೆ ಸಿಕ್ಕಿ ನರಳುವವರ ನೆರವಿಗಾಗಿ 1947ರಲ್ಲಿ ಆಯೋಗವೊಂದನ್ನು ರಚಿಸಲಾಯಿತು. ಆಯೋಗ ವೈದ್ಯಕೀಯ ಜೀವವಿಜ್ಞಾನಗಳಲ್ಲಿ ಸಂಶೋಧನೆಯನ್ನೂ ಮಾನವನ ಮೇಲೆ ವಿಕಿರಣದ ಪರಿಣಾಮವನ್ನೂ ಕುರಿತು ಅಭ್ಯಾಸವನ್ನು ನಡೆಸಿದೆ.

1970ರ ಆಗಸ್ಟ್ 6ರಂದು–ಪರಮಾಣು ಬಾಂಬ್ ಬಿದ್ದ ಇಪ್ಪತ್ತೈದು ವರ್ಷಗಳಾದ ದಿನ–ಹಿರೋಷಿಮಾದಲ್ಲಿ ಇಪ್ಪತ್ತೈದು ದೇಶಗಳ ಪ್ರತಿನಿಧಿಗಳು ಸೇರಿ, ಪ್ರಾರ್ಥನಾ ಸಭೆ ನಡೆಸಿ, 'ಮತ್ತೆ ಹಿರೋಷಿಮಾ ಬೇಡ' ಎಂದು ಬೇಡಿದರು. ಭಾರತದ ನಿಯೋಗವೂ ಸಭೆಯಲ್ಲಿ ಭಾಗವಹಿಸಿತು. ಬಾಂಬ್ ನೇರವಾಗಿ ಅಪ್ಪಳಿಸಿದ ಕಟ್ಟಡದ ಸುತ್ತ ನಿರ್ಮಿಸಿರುವ ಶಾಂತಿವನದಲ್ಲಿ ಈ ಸಭೆ ನಡೆಯಿತು. 8–15ಕ್ಕೆ ಶಾಂತಿಯ ಗಂಟೆಯನ್ನು ಬಾರಿಸಿ, 1,500 ಪಾರಿವಾಳಗಳನ್ನು ಹಾರಿಬಿಟ್ಟರು. 1945ರಲ್ಲಿ ದಾಳಿಗೆ ಸಿಕ್ಕಿ ಉಳಿದವರಲ್ಲಿ ಒಬ್ಬ ಮುದುಕಿ ಮತ್ತು ಅವಳ ಮಗಳು ಪ್ರಾರ್ಥನೆಯಲ್ಲಿ ಭಾಗವಹಿಸಿದರು.

## ಹಿಲರಿ, ಎಡ್ಮಂಡ್

ಮಾನವನ ಶಕ್ತಿಸಾಮರ್ಥ್ಯಗಳ ಪರೀಕ್ಷೆಗೆ ಪ್ರಕೃತಿಯೊಡ್ಡಿದ ಆಹ್ವಾನದಂತಿರುವ ಹಿಮಾಚ್ಛಾದಿತ ಎವರೆಸ್ಟ್ ಶಿಖರವನ್ನು ಪ್ರಥಮವಾಗಿ ಆರೋಹಿಸಿದವರು ಇಬ್ಬರು. ಭಾರತದ ತೇನ್‌ಸಿಂಗ್ ನಾರ್ಕೆ ಮತ್ತು ನ್ಯೂಜಿಲೆಂಡಿನ ಎಡ್ಮಂಡ್ ಹಿಲರಿ.

ಹಿಲರಿ ನ್ಯೂಜಿಲೆಂಡ್ ದೇಶದವರು. 1919ನೇ ಜುಲೈ 20ರಂದು ಹುಟ್ಟಿದರು. ಬಾಲ್ಯದಿಂದಲೂ ಜೇನು ಸಾಕಣೆ ಮತ್ತು ಪರ್ವತಾರೋಹಣದಲ್ಲಿ ಅತ್ಯಂತ ಆಸಕ್ತಿ.

ಎರಡನೆಯ ಮಹಾಯುದ್ಧದಲ್ಲಿ ನ್ಯೂಜಿಲೆಂಡಿನ ವಾಯುದಳದಲ್ಲಿ ಸೇವೆ ಸಲ್ಲಿಸಿದರು. ಯುದ್ಧಾನಂತರ ಅವರ ದೃಷ್ಟಿ ಪರ್ವತಾರೋಹಣದ ಕಡೆಗೆ ಹೊರಳಿತು. ಎವರೆಸ್ಟ್ ಆರೋಹಣದ ಮೊದಲು ಅನೇಕ [illegible] ಸಾಹಸಗಳಲ್ಲಿ ಪಾಲ್ಗೊಂಡಿದ್ದರು. 1951ರಲ್ಲಿ ನ್ಯೂಜಿಲೆಂಡಿನ ತಂಡವೊಂದು ಹಿಮಾಲಯ ಪರ್ವತದ ಆರೋಹಣಕ್ಕಾಗಿ ಹೊರಟಿತು. ಹಿಲರಿ ಆ ತಂಡವನ್ನು ಸೇರಿಕೊಂಡರು. [illegible] ಹೊರಟಿದ್ದ ಬ್ರಿಟಿಷರ ತಂಡವೊಂದನ್ನು [illegible] ಸೇರಿಕೊಂಡರು.



ಇತಿಹಾಸದಲ್ಲಿ ಶಾಶ್ವತಸ್ಥಾನ ಪಡೆದ ಹಿಲರಿ. ಎಡ್ಮಂಡ್

1953 ಮೇ 29ರಂದು ಬೆಳಗ್ಗೆ 11-30ಕ್ಕೆ ತೇನ್‌ಸಿಂಗ್ ನಾರ್ಕೆ ಮತ್ತು ಎಡ್ಮಂಡ್ ಹಿಲರಿ ಎವರೆಸ್ಟ್ ಪರ್ವತದ ತುತ್ತ ತುದಿಯಲ್ಲಿ ನಿಂತರು. ಇತಿಹಾಸದಲ್ಲಿ ಇವರ ಹೆಸರು ಚಿರಸ್ಮರಣೀಯವಾಯಿತು.

1957–58ರಲ್ಲಿ ದಕ್ಷಿಣ ಧ್ರುವ ಪ್ರದೇಶ ಶೋಧನೆಗೆ ಸಹಾಯಕವಾಗುವಂತೆ ದಾಸ್ತಾನುಗಳ ಉಗ್ರಾಣಗಳನ್ನು ಹಿಲರಿ ಸ್ಥಾಪಿಸಿದರು. 1958ನೆಯ ಜನವರಿ 4ರಂದು ನಾಲ್ಕು ಜನ ಸ್ನೇಹಿತರೊಡಗೂಡಿ, ಮೂರು ಟ್ರಾಕ್ಟರುಗಳ ಸಹಾಯದಿಂದ 16 ದಿನ ಪ್ರಯಾಣ ಮಾಡಿದ ಹಿಲರಿ ದಕ್ಷಿಣ ಧ್ರುವವನ್ನು ಮುಟ್ಟಿದರು. 1912ರಲ್ಲಿ ಪ್ರಯಾಣ ಮಾಡಿದ ಕ್ಯಾಪ್ಟನ್ ಸ್ಕಾಟನ ಅನಂತರ ದಕ್ಷಿಣ ಧ್ರುವವನ್ನು ಇವರೇ ತಲಪಿದವರು.

ಹಿಲರಿ ಈಗ ನ್ಯೂಜಿಲೆಂಡಿನಲ್ಲಿ ವಾಸಿಸುತ್ತಿದ್ದಾರೆ. ವರ್ಷದ ಏಳೆಂಟು ತಿಂಗಳನ್ನು ಜೇನುಸಾಕಣೆಗೆ ವಿನಿಯೋಗಿಸಿ ಮಿಕ್ಕ ದಿನಗಳನ್ನು ಪರ್ವತಾರೋಹಣಗಳಲ್ಲಿ ಕಳೆಯುತ್ತಾರೆ.

'ಹೈ ಅಡ್ವೆಂಚರ್' ಎನ್ನುವ ಪುಸ್ತಕದಲ್ಲಿ ಇವರು ತಮ್ಮ ಸಾಹಸಗಳನ್ನು ವರ್ಣಿಸಿದ್ದಾರೆ.

## ಹೆಗಲ್, ಜಾರ್ಜ್ ವಿಲ್‌ಹೆಲ್ಮ್

ವೃದ್ಧ ಪಾಠ ಹೇಳಿಕೊಡುತ್ತಿದ್ದಾನೆ. ಅತಿ ಸಾಧಾರಣವಾದ ಸಪ್ಪೆ ಮುಖ. ಯೌವನದ ತೇಜಸ್ಸಿನಿಂದ ಆ ಮುಖ ಎಂದೂ ತುಂಬಿರಲಿಕ್ಕಿಲ್ಲ. ಈಗಂತೂ ತಲೆ ನೆರೆಯುವುದಕ್ಕೆ ಮೊದಲೇ ಮುಖ ಮುದಿಯಾಗಿದೆ. ಮೂಡಿರುವ ಆಳವಾದ ಗೆರೆಗಳು ತಲೆಯನ್ನು ತುಂಬಿದ್ದ ಆಲೋಚನೆಗೆ ಪ್ರತೀಕವಾಗಿವೆ. ಮುಂದೊಂದು ನಶ್ಯದ ಡಬ್ಬಿ. ಅವನ ತಲೆ ಮೇಜಿನ ಮೇಲೆ ಬಾಗಿದೆ. ಪಾಠ ಹೇಳುವುದು ಅವನಿಗೆ ಸುಲಭವಾಗಿರುವಂತೆ ಕಾಣುವುದಿಲ್ಲ. ಆತ ಮತ್ತೆ ಮತ್ತೆ ತನ್ನ ಪುಸ್ತಕದ ಹಾಳೆಗಳನ್ನು ತಿರುವಿ ಹಾಕುತ್ತಾನೆ. ಮಾತನಾಡಲು ಹೋದರೆ ಮಧ್ಯೆ ಮಧ್ಯೆ ಕೆಮ್ಮು. ಯಾವೊಂದು ವಾಕ್ಯವೂ ತಡೆಯಿಲ್ಲದೆ ಹೊರಬರುವುದಿಲ್ಲ. ಒಂದೊಂದು ಸಲ ಸರಳವಾದ ಸುಲಭವಾದ ಭಾಗಗಳನ್ನು ಹೇಳುವುದಕ್ಕೂ ಪ್ರಯಾಸ. ಆದರೆ ಕೆಲವೊಮ್ಮೆ ಅತಿ ಕಷ್ಟವಾಗಿದ್ದ ಭಾಗಗಳನ್ನು ಸುಲಭವಾಗಿ ಪಾಠ ಹೇಳಿ ವಿದ್ಯಾರ್ಥಿಗಳನ್ನು ತನ್ನ ವಾಗ್ಮಿತೆಯಿಂದ ಮೈಮರೆಸಿಬಿಡುತ್ತಾನೆ. ಆಕರ್ಷಕ ವ್ಯಕ್ತಿಯಲ್ಲದಿದ್ದರೂ ಒಮ್ಮೆ ನೋಡಿದರೆ ಮನಸ್ಸಿನಲ್ಲಿ ಬಿಂಬಿಸುವ ವ್ಯಕ್ತಿ.

ಈತನೇ ಜಾರ್ಜ್ ವಿಲ್‌ಹೆಲ್ಮ್ ಫ್ರೀಡ್‌ರಿಕ್ ಹೆಗಲ್, ಜರ್ಮನಿಯ ಪ್ರಸಿದ್ಧ ತತ್ತ್ವಜ್ಞಾನಿ. ಇವನ ವಿಚಾರರೀತಿ ಅವನ ಕಾಲದವರ ಮೇಲೆ ವಿಶೇಷ ಪ್ರಭಾವವನ್ನು ಬೀರಿತು.

ಹೆಗಲ್ 1770ರಲ್ಲಿ ದಕ್ಷಿಣ ಜರ್ಮನಿಯ ಸ್ಟಟ್‌ಗಾರ್ಟ್‌ಎಂಬಲ್ಲಿ ಹುಟ್ಟಿದ. ಶಾಲೆಯಲ್ಲಿದ್ದಾಗಲೇ ಹೆಗಲ್ ಪತ್ರಿಕೆಗಳಲ್ಲಿ ಗಣಿತಶಾಸ್ತ್ರ, ನೀತಿಶಾಸ್ತ್ರ ಇವುಗಳ ಮೇಲೆ ಬರುವ ಲೇಖನಗಳು, ಪ್ರಾಚೀನ ಸಾಹಿತಿಗಳಿಂದ ಆಯ್ದ ವಾಕ್ಯಗಳು ಮೊದಲಾದುವನ್ನು ಸಂಗ್ರಹಿಸಿ ಅವನ್ನು ಅಕಾರಾದಿಯಾಗಿ ಜೋಡಿಸುತ್ತಿದ್ದ. ಜರ್ಮನಿಯ ಟ್ಯೂಬಿನ್‌ಗನ್ ಎಂಬಲ್ಲಿ ಮತಧರ್ಮಶಾಸ್ತ್ರವನ್ನು ಅಭ್ಯಾಸಮಾಡಿ 1793ರಲ್ಲಿ ಅದರಲ್ಲಿ ಡಾಕ್ಟರೇಟ್ ಪದವಿಯನ್ನು ಪಡೆದ. ಈ ಕಾಲದಲ್ಲಿ ಇಮ್ಯಾನ್ಯುಎಲ್ ಕಾಂಟ್ ಎಂಬ ಜರ್ಮನ್ ತತ್ತ್ವಜ್ಞಾನಿಯ ಬೋಧನೆ ಹೆಗಲನ ಮೇಲೆ ಬಲು ಪ್ರಭಾವ ಬೀರಿತು. ಆದರೆ ಮುಂದೆ ಗ್ರೀಕ್ ಸಾಹಿತ್ಯ, ಚರಿತ್ರೆ, ಆಧುನಿಕ ತತ್ತ್ವಜ್ಞಾನ, ರಾಜ್ಯಶಾಸ್ತ್ರ ಇವನ್ನು ಅಭ್ಯಾಸಮಾಡಿದಾಗ ಹೆಗಲ್ ಸ್ವತಂತ್ರವಾಗಿ ಆಲೋಚಿಸುವಂತಾದ. ಕೆಲವು ಕಾಲ ಅಧ್ಯಾಪಕನಾಗಿ ಕೆಲಸ ಮಾಡಿದ ಮೇಲೆ ತನ್ನ ನಲವತ್ತೆಂಟನೆಯ ವಯಸ್ಸಿನಲ್ಲಿ ಬರ್ಲಿನಿನಲ್ಲಿ ತತ್ತ್ವಶಾಸ್ತ್ರದ ಪ್ರಾಧ್ಯಾಪಕನಾದ. ಹೆಗಲ್ ಜನಪ್ರಿಯ ಉಪನ್ಯಾಸಕನಾಗಲಿಲ್ಲವಾದರೂ ವಿದ್ಯಾರ್ಥಿಗಳ ಮೇಲೆ ವಿಶೇಷ ಪ್ರಭಾವ ಬೀರಿದ. ಅವನು 1831ರಲ್ಲಿ ಬರ್ಲಿನ್‌ನಲ್ಲಿ ಕಾಲರಾ ವ್ಯಾಧಿಗೆ ತುತ್ತಾದ. ಆಗ ಖ್ಯಾತಿಯ ಶಿಖರವನ್ನೇ ಮುಟ್ಟಿದ್ದ.

ಕಾಂಟನ ಪ್ರಭಾವಕ್ಕೆ ಒಳಗಾಗಿದ್ದಾಗ ದೇವರಿಲ್ಲ ಎಂದು ಹೆಗಲ್ ವಾದಿಸಿದ. ಆದರೆ ಕ್ರಮೇಣ, ತಾನು ಯೇಸುವಿನ ಜೀವನವನ್ನೂ ತತ್ತ್ವಗಳನ್ನೂ ಸರಿಯಾಗಿ ಅರ್ಥಮಾಡಿಕೊಳ್ಳಲಿಲ್ಲವೆಂದು ಅವನಿಗೆ ತೋರಿತು. 1798ರಲ್ಲಿ 'ಕ್ರೈಸ್ತಧರ್ಮದ ಚೇತನ' ಎಂದು ಒಂದು ಅಸಾಧಾರಣ ಪುಸ್ತಕವನ್ನು ಬರೆದ. ಹೆಗಲನದು ಮಧ್ಯಮ ಮಾರ್ಗ. ದೇವರಿಲ್ಲವೆಂದು ವಾದಿಸುವ ಭೌತವಾದಿಯೂ ಅವನಾಗಿರಲಿಲ್ಲ. ದೇವರಿದ್ದಾನೆಂದು ಕುರುಡ ನಂಬಿಕೆಗಳ ಸಂಪ್ರದಾಯವಾದಿಯೂ ಆಗಿರಲಿಲ್ಲ.

ತತ್ತ್ವಜ್ಞಾನಿಯಾದವನು ಅನಂತವನ್ನು ಅರ್ಥಮಾಡಿಕೊಂಡು ಸೃಷ್ಟಿಯ ಪರಿಪೂರ್ಣತೆಯನ್ನು ದೇವರಲ್ಲಿ ಕಾಣಬೇಕು ಎಂಬುದು ಹೆಗಲನ ಅಭಿಪ್ರಾಯವಾಗಿತ್ತು. ಪ್ರಪಂಚಕ್ಕೆ ಕಾರಣವಾದ ಒಂದು ಶಕ್ತಿ ಇದೆ ಎಂದು ನಂಬಿದ.

ಹೆಗಲ್ ಕಾಲವಾಗುವುದಕ್ಕೆ ಮೊದಲು ದೇವರಿದ್ದಾನೆ ಎಂಬುದನ್ನು ಸಮರ್ಥಿಸುವುದಕ್ಕೆ ಬೇಕಾದ ಪ್ರಮಾಣಗಳ ಹಾಗೆ ಉಪನ್ಯಾಸ ಮಾಲಿಕೆಯನ್ನು ಸಿದ್ಧಪಡಿಸಿ ಮುದ್ರಣಕ್ಕೆ ಕಳುಹಿಸುವುದರಲ್ಲಿದ್ದ.

ನೋಡಿ : ಮಾರ್ಕ್ಸ್, ಕಾರ್ಲ್



ರಾಷ್ಟ್ರವೇ ಸರ್ವಸ್ವ ಎಂದು ಪ್ರತಿಪಾದಿಸಿದ ಹೆಗಲ್

ಇದನ್ನು 'ಪರಿಪೂರ್ಣ' ಎಂದು ಕರೆದ. ಇದೊಂದು ನಿರ್ಮಲ ವಿಚಾರಶಕ್ತಿ. ಇದು ತನ್ನಲ್ಲಿ ತಾನೇ ವಿಚಾರ ಮಾಡುತ್ತ ಹೋಗುತ್ತದೆ. ಇದೇ ಸೃಷ್ಟಿಗೆ ಮೂಲ. ವಿಶ್ವದಲ್ಲಿರುವ ಎಲ್ಲ ವಸ್ತುಗಳು ಈ ಶಕ್ತಿಯ ವಿವಿಧ ರೂಪಗಳು. ಇವುಗಳಲ್ಲಿ ಅತಿಶ್ರೇಷ್ಠವಾದುದು ಮನುಷ್ಯನ ವಿಚಾರಶಕ್ತಿ. ಮನುಷ್ಯನ ವಿಚಾರಶಕ್ತಿ ಪರಿಪೂರ್ಣ ಶಕ್ತಿಯನ್ನು ಅರ್ಥ ಮಾಡಿಕೊಳ್ಳಬಲ್ಲುದು. ಹಾಗೆ ಮಾಡಲು ಪ್ರಯತ್ನಿಸಬೇಕು. ಕಲೆ, ಧರ್ಮ, ತತ್ತ್ವಜ್ಞಾನ ಇವುಗಳಲ್ಲಿ ತನ್ನನ್ನು ತಾನೇ ಕಂಡುಕೊಳ್ಳಬೇಕು.

ಹೆಗಲನ ತತ್ತ್ವಶಾಸ್ತ್ರವೆಲ್ಲ ಅವನ 'ತತ್ತ್ವಶಾಸ್ತ್ರದ ವಿಶ್ವಕೋಶ' ಗ್ರಂಥದಲ್ಲಿ ಕ್ರೋಢೀಕರಿಸಲ್ಪಟ್ಟಿದೆ. ತರ್ಕ, ಪ್ರಕೃತಿ, ಮನಸ್ಸು ಎಂದು ಮೂರು ಭಾಗದಲ್ಲಿರುವ ಈ ಗ್ರಂಥ ಜ್ಞಾನಮಾರ್ಗಕ್ಕೊಂದು ಉತ್ತಮ ಕೈಪಿಡಿ. ಅವನ ವಿಚಾರರೀತಿಯಂತೆ ಪೂರ್ಣತ್ವದ ಅರಿವೇ ಜ್ಞಾನ. ಪೂರ್ಣವಾದ ಜ್ಞಾನವೇ ಸತ್ಯ. ಎಲ್ಲವೂ ಪೂರ್ಣಗೊಳ್ಳುವುದು ಪರಮಸತ್ಯದಲ್ಲಿ. ಅಂಥ ಸತ್ಯ ತಿಳಿವಳಿಕೆಯೇ ಪರಿಪೂರ್ಣ ಜ್ಞಾನ. ಅವನ ರಾಜಕೀಯ ಸಿದ್ಧಾಂತದ ಪ್ರಕಾರ ವ್ಯಕ್ತಿ ಮುಖ್ಯವಲ್ಲ, ರಾಷ್ಟ್ರವೇ ಸರ್ವಸ್ವ. ರಾಷ್ಟ್ರವನ್ನು ಆರಾಧಿಸಬೇಕು ಎಂದು ಸಾರಿದ ಹೆಗಲ್. ಅವನು ರಾಷ್ಟ್ರಪಾರಮ್ಯವಾದಿ. ಪ್ರಜಾ ಸ್ವಾತಂತ್ರ್ಯವಾದಿ.

ಹೆಗಲನ ತತ್ತ್ವಶಾಸ್ತ್ರ ಯುವಕ ಕಾರ್ಲ್ ಮಾರ್ಕ್ಸನ ಮೇಲೆ ಅಸಾಧಾರಣ ಪ್ರಭಾವ ಬೀರಿತು. ಆದರೆ ಮುಂದೆ ಹೆಗಲನ ತತ್ತ್ವಶಾಸ್ತ್ರಕ್ಕೆ ವಿರುದ್ಧ ಭೌತವಾದವನ್ನು ಕಾರ್ಲ್ ಮಾರ್ಕ್ಸ್ ಬೆಳೆಸಿದ.

## ಹೆಬಿಯಸ್ ಕಾರ್ಪಸ್

ಒಬ್ಬ ವ್ಯಕ್ತಿಯನ್ನು ಪೋಲೀಸರು ಹಠಾತ್ತಾಗಿ ಬಂಧಿಸಿದರೆ. ಒಬ್ಬ ಅಡ್ವೋಕೇಟ್ ಅಥವಾ ಬಂಧಿತನ ಗೆಳೆಯರು ಯಾರಾದರೂ ಹೆಬಿಯಸ್ ಕಾರ್ಪಸ್ ಅರ್ಜಿಯನ್ನು ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಬಹುದು. ಈ ಅರ್ಜಿಯನ್ನು ನ್ಯಾಯಾಲಯ ಸ್ವೀಕರಿಸಿ ಬಂಧಿಸಿರುವ ವ್ಯಕ್ತಿಯನ್ನು ತನ್ನ ಮುಂದೆ ತರುವಂತೆ ಅಜ್ಞೆ ಮಾಡುತ್ತದೆ. ಅನಂತರ ಆ ವ್ಯಕ್ತಿಯ ಬಂಧನ ನ್ಯಾಯಸಮ್ಮತವೇ ಅಲ್ಲವೇ ಎಂಬುದನ್ನು ವಿಚಾರಿಸಿ, ನ್ಯಾಯಸಮ್ಮತವಾಗಿದ್ದಲ್ಲಿ ಅವನನ್ನು ಜೈಲಿಗೆ ಕಳುಹಿಸುತ್ತದೆ ; ಇಲ್ಲದಿದ್ದರೆ, ವ್ಯಕ್ತಿ ಸ್ವತಂತ್ರ ಎಂದು ಘೋಷಿಸಿ ಬಿಡುಗಡೆ ಮಾಡುತ್ತದೆ. ಹೆಬಿಯಸ್ ಕಾರ್ಪಸ್ ಮೂಲತಃ ಲ್ಯಾಟಿನ್ ಭಾಷೆಯ ಮಾತು. 'ನೀನು ದೇಹವನ್ನು ಪಡೆಯುತ್ತೀಯೆ' ಎಂದು ಇದರ ಅರ್ಥ.

ಹೆಬಿಯಸ್ ಕಾರ್ಪಸ್ ನಿಯಮದ ಹುಟ್ಟು ಇಂಗ್ಲಿಷ್ ಕಾನೂನಿನಲ್ಲಿ. 1215ರಲ್ಲಿ ಮ್ಯಾಗ್ನ ಕಾರ್ಟ ಘೋಷಿತವಾದಾಗ ಇಂಗ್ಲೆಂಡಿನ ರಾಜನಾಗಿದ್ದ ಜಾನ್ ಯಾವ ವ್ಯಕ್ತಿಯನ್ನೂ ವಿನಾ ಕಾರಣವಾಗಿ ಬಂಧಿಸುವುದಿಲ್ಲ ಎಂಬ ಆಶ್ವಾಸನೆಯನ್ನು ನೀಡಬೇಕಾಯಿತು. ಈ ನಿಯಮದ ಪ್ರಕಾರ ಒಬ್ಬ ವ್ಯಕ್ತಿಯನ್ನು ಆತ ಅಪರಾಧ ಮಾಡಿರಬಹುದೆಂಬ ಊಹೆ ಮಾತ್ರದಿಂದಲೇ ಬಂಧಿಸುವಂತಿಲ್ಲ. ಅಂದಿನಿಂದಲೂ ಹೆಬಿಯಸ್ ಕಾರ್ಪಸ್ ಇಂಗ್ಲಿಷ್ ಕಾನೂನಿನ ಒಂದು ಅಂಗವಾಗಿದೆ. ಅನಂತರ ಅಮೆರಿಕ ಮತ್ತು ಕೆನಡಗಳು ಇದನ್ನು ಅನುಸರಿಸಿದುವು. 1679 ಮತ್ತು 1816ರಲ್ಲಿ ಕೆಲವು ಬದಲಾವಣೆಗಳೊಡನೆ ಹೆಬಿಯಸ್ ಕಾರ್ಪಸ್ ವಿಧಿ ಜಾರಿಗೆ ಬಂದಿತು. ಈಗ ಈ ನಿಯಮ ಜಾರಿಯಲ್ಲಿರುವ ದೇಶಗಳಲ್ಲಿ ಭಾರತವೂ ಒಂದು.

ಆಧುನಿಕಯುಗದಲ್ಲಿ ಹೆಬಿಯಸ್ ಕಾರ್ಪಸ್ ಅರ್ಜಿಯನ್ನು ಬರಿಯ ಕೈದಿಗಳ ವಿಷಯದಲ್ಲಿ ಮಾತ್ರ ಉಪಯೋಗಿಸುತ್ತಿಲ್ಲ. ವೈಮನಸ್ಯವಿದ್ದು, ಗಂಡಂದಿರ ದಬ್ಬಾಳಿಕೆಗೆ ಸಿಲುಕಿ, ಒಂದು ರೀತಿಯ ಸೆರೆಮನೆಯನ್ನು ಅನುಭವಿಸುತ್ತಿರುವ ಪತ್ನಿಯರ ಬಿಡುಗಡೆಗೂ ಈ ನಿಯಮವನ್ನು ಬಳಸುತ್ತಾರೆ. ವಿವಾಹ ವಿಚ್ಛೇದನ ಪಡೆದ ಮಹಿಳೆಯರು ನಿಗದಿಯಾದ ಕಾಲಕ್ಕಿಂತ ಹೆಚ್ಚು ಸಮಯ ಮಕ್ಕಳನ್ನು ತಮ್ಮಲ್ಲಿ ಇಟ್ಟುಕೊಂಡರೆ ಆಗಲೂ ಕೆಲವು ದೇಶಗಳಲ್ಲಿ ಈ 'ಹೆಬಿಯಸ್ ಕಾರ್ಪಸ್'ಅನ್ನು ಉಪಯೋಗಿಸುತ್ತಾರೆ.

ಹೆಬಿಯಸ್ ಕಾರ್ಪಸ್ ಮೂಲಭೂತ ಹಕ್ಕುಗಳಲ್ಲಿ ಮುಖ್ಯವಾದ ಒಂದಾದ ವ್ಯಕ್ತಿ ಸ್ವಾತಂತ್ರ್ಯದ ರಕ್ಷೆ. ಅವನು ಎಷ್ಟೇ ಬಡವನಾಗಿರಲಿ. ದೀನನಾಗಿರಲಿ, ಪ್ರತಿವ್ಯಕ್ತಿಯೂ ಪ್ರಜಾಪ್ರಭುತ್ವದಲ್ಲಿ ಗೌರವಕ್ಕೆ ಮತ್ತು ರಕ್ಷಣೆಗೆ ಅರ್ಹ ಎನ್ನುವುದರ ಸಾಕ್ಷಿ ಇದು. ನಿರಂಕುಶ ಸರ್ವಾಧಿಕಾರಿ ರಾಷ್ಟ್ರಗಳಲ್ಲಿ ಈ ರಕಣೆ ಇಲ್ಲ.

ನೋಡಿ: ಮಾ[illegible]



'ಇತಿಹಾಸದ ಪಿತಾಮಹ' ಹೆರಾಡೊಟಸ್

## ಹೆರಾಡೊಟಸ್

ಬಾಲ್ಯದಿಂದಲೂ ನಾವು ಅನೇಕ ಚರಿತ್ರೆಗಳನ್ನು ಓದಿದ್ದೇವೆ. ನಮ್ಮ ದೇಶದ ಮತ್ತು ಇತರ ದೇಶಗಳ ವಿಷಯ ನಮಗೆ ಚರಿತ್ರೆಗಳನ್ನು ಓದುವುದರಿಂದ ತಿಳಿಯುತ್ತದೆ. ಹಿಂದಿನ ಸಂಗತಿಗಳನ್ನು ಬರೆದಿಡಬೇಕು ಎಂಬುದು ಪ್ರಪಂಚದಲ್ಲಿ ಮೊಟ್ಟಮೊದಲು ಯಾರಿಗೆ ಹೊಳೆಯಿತು ? ಗ್ರೀಸಿನ ಹೆರಾಡೊಟಸ್ ಕ್ರಿ.ಪೂ. ಐದನೆಯ ಶತಮಾನದಲ್ಲಿಯೇ ಇತಿಹಾಸವನ್ನು ಬರೆದ. ಅವನನ್ನೇ ಈಗ 'ಇತಿಹಾಸದ ಪಿತಾಮಹ' ಎಂದು ಕರೆಯುತ್ತಾರೆ.

ಇಂಗ್ಲಿಷಿನಲ್ಲಿ ಚರಿತ್ರೆಗೆ 'ಹಿಸ್ಟರಿ' ಎಂದು ಹೆಸರು. ಈ ಪದ ಗ್ರೀಕ್ ಮೂಲದ್ದು, ಶೋಧನೆ ಎಂದು ಇದರ ಅರ್ಥ. ಹಿಸ್ಟರಿ ಎಂಬ ಪದವನ್ನು ಮೊಟ್ಟಮೊದಲು ಚರಿತ್ರೆ ಎಂಬರ್ಥದಲ್ಲಿ ಉಪಯೋಗಿಸಿದವನು ಹೆರಾಡೊಟಸ್.

ಹೆರಾಡೊಟಸ್ ಏಷ್ಯಾಮೈನರಿನ ಹಾಲಿಕಾರ್ನಸಸ್ ಎಂಬಲ್ಲಿ ಪ್ರಾಯಶಃ ಕ್ರಿ. ಪೂ. 484ರಲ್ಲಿ ಹುಟ್ಟಿದ. ಯೌವನದಲ್ಲಿ ಗ್ರೀಸ್. ಮಧ್ಯಪ್ರಾಚ್ಯ, ಉತ್ತರ ಆಫ್ರಿಕ ಇಲ್ಲೆಲ್ಲ ಬಹಳ ಪ್ರವಾಸ ಮಾಡಿದ. ಹೋದೆಡೆಯಲ್ಲೆಲ್ಲ ಆಯಾದೇಶದ ಜನರ ಆಚಾರ, ವ್ಯವಹಾರ, ಧರ್ಮ ಇವುಗಳ ಬಗೆಗೆ ಅಧ್ಯಯನ ನಡೆಸುತ್ತಿದ್ದ. ಆ ದೇಶದ ಚರಿತ್ರೆಯ ಬಗ್ಗೆ ಎಷ್ಟನ್ನು ಅರಿತುಕೊಳ್ಳಬಹುದೋ ಅಷ್ಟನ್ನು ಅರಿಯಲು ಪ್ರಯತ್ನಿಸುತ್ತಿದ್ದ. ತನ್ನ ಪ್ರವಾಸಗಳಲ್ಲಿ ತಾನು ಕಂಡು ಕೇಳಿದ ಸಂಗತಿಗಳನ್ನು ಹೆರಾಡೊಟಸ್ ಸಂಗ್ರಹಿಸಿ ಇಟ್ಟುಕೊಳ್ಳುತ್ತಿದ್ದ. ಅವೇ ಮುಂದೆ ಅವನು ಚರಿತ್ರೆಯನ್ನು ಬರೆಯಲು ಮೂಲ ಸಾಮಗ್ರಿಗಳಾದುವು. ಸುಮಾರು ಕ್ರಿ. ಪೂ. 447ರ ವೇಳೆಗೆ ಹೆರಾಡೊಟಸ್ ಅಥೆನ್ಸಿಗೆ ಭೇಟಿ ಕೊಟ್ಟ. ಕ್ರಿ. ಪೂ. 425ರಲ್ಲಿ ಆತ ಮರಣಹೊಂದಿದನೆಂದು ಕಾಣುತ್ತದೆ.

ಹೆರಾಡೊಟಸ್ ತಾನು ಬರೆದಿರುವ ಒಂಬತ್ತು ಪುಸ್ತಕಗಳಿಂದ ಬಹಳ ಹೆಸರುವಾಸಿಯಾಗಿದ್ದಾನೆ. ಪರ್ಷಿಯನ್ ಸಾಮ್ರಾಜ್ಯದ ಉದಯ, ಕ್ರಿ.ಪೂ. 490 ಮತ್ತು 480ರಲ್ಲಿ ಗ್ರೀಸಿನ ಮೇಲೆ ಪರ್ಷಿಯನರ ಆಕ್ರಮಣ, ಆಕ್ರಮಣಕಾರರನ್ನು ಧೀರೋದಾತ್ತ ನಿಲುವಿನಿಂದ ಎದುರಿಸಿದ ಗ್ರೀಕರ ವರ್ಣನೆ ಮತ್ತು ಗ್ರೀಕರ ಜಯ ಇವುಗಳನ್ನು ಆ ಒಂಬತ್ತು ಸಂಪುಟಗಳಲ್ಲಿ ವಿವರಿಸಿದ್ದಾನೆ.

ಗ್ರೀಕ್ ಚರಿತ್ರೆಯನ್ನು ಬರೆಯಲು ಹೊರಟ ಹೆರಾಡೊಟಸ್ ತನ್ನ ಬರಹಗಳಲ್ಲಿ ಸಾಮಾಜಿಕ, ರಾಜಕೀಯ, ಆರ್ಥಿಕ, ಭೌಗೋಳಿಕ–ಮುಂತಾದ ಎಲ್ಲ ವಿಷಯಗಳನ್ನು ಪ್ರಸ್ತಾಪಿಸಿದ್ದಾನೆ. ಸಾಹಿತ್ಯ, ವಿಜ್ಞಾನ, ತತ್ತ್ವಶಾಸ್ತ್ರ, ಕಲೆ–ಎಲ್ಲವೂ ಅವನ ಲೇಖನಿಗೆ ವಸ್ತುಗಳಾಗಿವೆ. ಒಂದು ಸಮಾಜದ ವಿಷಯವನ್ನು ಹೇಳಬೇಕಾದರೆ ಆ ಸಮಾಜದವರ ಉಡುಪು, ಶಿಷ್ಟಾಚಾರ, ನೀತಿ, ನಂಬಿಕೆ ಇವೆಲ್ಲವನ್ನೂ ಪ್ರಸ್ತಾಪಿಸಿದ್ದಾನೆ. ಈಜಿಪ್ಟಿನ ಬೆಕ್ಕುಗಳು ಹೇಗೆ ಬೆಂಕಿಯಲ್ಲಿ ಹಾರುತ್ತವೆ, ಬ್ಯಾಬಿಲೋನಿಯದ ಗೋಡೆಗಳು ಹೇಗೆ ಕಟ್ಟಲ್ಪಟ್ಟವು–ಇವನ್ನೂ ವರ್ಣಿಸಿದ್ದಾನೆ. ಬರಿಯ ರಾಜ ರಾಣಿಯರಿಗೆ ಮಾತ್ರವಲ್ಲ, ಎಲ್ಲ ಅಂತಸ್ತುಗಳ ವ್ಯಕ್ತಿಗಳಿಗೂ ಎಡೆಯುಂಟು ಅವನ ಚರಿತ್ರೆಯಲ್ಲಿ. ತಾನು ಕೇಳಿದ ದಂತಕಥೆಗಳನ್ನೆಲ್ಲ ಹೆರಾಡೊಟಸ್ ಐತಿಹಾಸಿಕ ಘಟನೆಗಳೆಂದು ಭಾವಿಸಿ ಕೆಲವೆಡೆ ಚಿತ್ರಿಸಿರುವುದು ನಿಜ. ಕೇಳಿದ್ದನ್ನೆಲ್ಲ ನಂಬುತ್ತಲೂ ಇದ್ದ. ಯಾರೋ ಆಲ್ಪ್ಸ್ ಎಂಬುದು ನದಿ ಎಂದು ಹೇಳಿದರಂತೆ. ಆತನೂ ಆಲ್ಪ್ಸ್ ನದಿ ಎಂದೇ ಬರೆದ. ಇದರಿಂದ ಕೆಲವರು ಇವನನ್ನು 'ಸುಳ್ಳುಗಳ ತಂದೆ' ಎಂದೂ ಕರೆದಿದ್ದಾರೆ. ಚರಿತ್ರಕಾರ, ಅವನ ಸ್ವಂತ ಅಭಿಪ್ರಾಯ ಏನೇ ಇರಲಿ, ನಡೆದ ಘಟನೆಗಳನ್ನು ನಡೆದಂತೆ ನಿರೂಪಿಸಬೇಕು, ನಡೆದುದೆಲ್ಲವನ್ನೂ ನಿರೂಪಿಸಬೇಕು. ಆದರೆ ಹೆರಾಡೊಟಸ್ ಒಂದು ನೀತಿಬೋಧಕ ಉದ್ದೇಶದಿಂದ ಬರೆದ–ಜಗತ್ತಿನಲ್ಲಿ ಒಳ್ಳೆಯವರಿಗೆ ಸುಖ, ಕೆಟ್ಟವರಿಗೆ ದುಃಖ ಎಂದು ತೋರಿಸುವುದು ಅವನ ಗುರಿಯಾಗಿತ್ತು.

ಗ್ರೀಸಿನ ಪ್ರಾಚೀನ ಮಹಾಕವಿ ಹೋಮರನ ಪ್ರಭಾವ ಹೆರಾಡೊಟಸನ ಮೇಲೆ ಬಹಳ. ಅವನು ಸಾಮಗ್ರಿಯನ್ನು ಅಳವಡಿಸುವ ರೀತಿ, ನಿರೂಪಣೆ ಎಲ್ಲದರಲ್ಲಿ ಇದು ಎದ್ದು ಕಾಣುತ್ತದೆ. ಪರ್ಷಿಯದವರ ಆಕ್ರಮಣದ ಚರಿತ್ರೆಯನ್ನು ಬರೆಯುವುದು ಅವನ ಉದ್ದೇಶ. ಆದರೆ ಆ ಚರಿತ್ರೆಯಲ್ಲಿ ತನ್ನ ಪ್ರವಾಸದಲ್ಲಿ ತಾನು ಅರಿತ ವಿಷಯಗಳನ್ನೆಲ್ಲ ಹೆಣೆದು, ತನ್ನ ಸಮ

ಕಾಲೀನ ಗ್ರೀಕರಿಗೆ ಪ್ರಪಂಚದ ಎಷ್ಟೋ ಭಾಗಗಳ ಪರಿಚಯ ಮಾಡಿ ಕೊಡುತ್ತಾನೆ. ಅಲ್ಲದೆ ನುಡಿಚಿತ್ರಗಳಲ್ಲಿ ಆತನದು ಅಸಾಧಾರಣ ಕೌಶಲ. ಒಂದು ದೇಶದ ಗುಣದೋಷಗಳನ್ನು ನಿರೂಪಿಸಬಲ್ಲ ಶಕ್ತಿ ಅವನಿಗಿತ್ತು. ಪರ್ಷಿಯನರನ್ನೂ ಅಥೆನ್ಸಿನವರನ್ನೂ ಸೊಗಸಾಗಿ ಚಿತ್ರಿಸಿದ್ದಾನೆ. ವ್ಯಕ್ತಿ ಚಿತ್ರಣದಲ್ಲಿಯೂ ಎತ್ತಿದ ಕೈ. ಲಿಯೊನಿಡಾಸ್, ಅರಿಸ್ಟೈಡಿಸ್, ಕ್ರಾಯ ಸಸ್–ಇಂಥ ವ್ಯಕ್ತಿಗಳ ಚಿತ್ರಗಳನ್ನು ಮರೆಯಲಾಗದಂತೆ ಮಾತುಗಳಲ್ಲಿ ಬಿಡಿಸಬಲ್ಲ ಅವನ ಶೈಲಿ ಸರಳ, ಆಕರ್ಷಕ. ತಾನು ಕಾಣದ, ಕೇಳಿಕೆಯ ಆಧಾರದ ಮೇಲೆ ಬರೆದ ವಿಷಯಗಳಲ್ಲಿ ಮಾತ್ರ ಅವನು ತಪ್ಪುಗಳನ್ನೆಸಗಿ ದ್ದಾನೆ. ಆದರೆ ತಾನು ಕಣ್ಣಾರೆ ಕಂಡ ವಿಷಯಗಳ ಬಗೆಗೆ ಅತ್ಯಂತ ನಿಖರ ವಾದ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾನೆ. ಚರಿತ್ರೆಯನ್ನು ಕಥೆಯಂತೆ ಹೇಳಿರುವ ಅವನ ಕೌಶಲ ಪ್ರಶಂಸನೀಯ. ಹೋದೆಡೆಯಲ್ಲಿ ಕಂಡ ಪ್ರತಿ ಯೊಂದು ವಿಷಯದಲ್ಲೂ ಅವನು ತೋರಿಸುತ್ತಿದ್ದ ಕುತೂಹಲ, ತಿಳಿಯ ದುದನ್ನು ಇತರರಿಂದ ಕೇಳಿ ತಿಳಿದುಕೊಳ್ಳುತ್ತಿದ್ದ ವಿನಯ ಅವನ ವ್ಯಕ್ತಿತ್ವದ ಪ್ರಮುಖ ಅಂಶಗಳಾಗಿದ್ದುವು. ಇವೆಲ್ಲವನ್ನೂ ಮೀರಿಸಿ, ಹಿಂದಿ ನದು ಮರೆತುಹೋಗಬಾರದೆಂದು ಅವುಗಳನ್ನು ಬರಹದಲ್ಲಿ ಹಿಡಿದಿಡುವುದು ಉತ್ತಮವೆಂದು ಮೊಟ್ಟಮೊದಲ ಬಾರಿಗೆ ಆಲೋಚಿಸಿ, ಇತಿಹಾಸದ ಜನಕ ನಾಗಿ, ಮುಂದಿನ ಜನಾಂಗಗಳ ಹೃತ್ಪೂರ್ವಕ ಕೃತಜ್ಞತೆಗೆ ಪಾತ್ರನಾದ– ಹೆರಾಡೊಟಸ್.

## ಹೈದರಾಬಾದ್



ಚಾರ್‌ಮಿನಾರ್ – ನಾಲ್ಕು ಗೋಪುರಗಳು

ಹೈದರಾಬಾದ್ ನಗರ, ಸ್ವಾತಂತ್ರ್ಯ ಪೂರ್ವದಲ್ಲಿ ಭಾರತದ ದೇಶೀಯ ಸಂಸ್ಥಾನಗಳಲ್ಲಿ ಅತ್ಯಂತ ದೊಡ್ಡ ಸಂಸ್ಥಾನದ ರಾಜಧಾನಿಯಾಗಿತ್ತು. ಇಂದು ಅದು ಆಂಧ್ರ ಪ್ರದೇಶದ ರಾಜಧಾನಿ.

1947ರಲ್ಲಿ ಬ್ರಿಟಿಷರು ಭಾರತವನ್ನು ಬಿಟ್ಟರು. ಹಲವು ದೇಶೀಯ ಸಂಸ್ಥಾನಗಳ ಪ್ರಭುಗಳು ಭಾರತ ಒಕ್ಕೂಟದಲ್ಲಿ ಸೇರ್ಪಡೆಯಾದರು. ಆದರೆ ಹೈದರಾಬಾದಿನ ನಿಜಾಂ ಮಾತ್ರ ತನ್ನ ಸಂಸ್ಥಾನ ವಿಲೀನವಾಗಲು ಒಪ್ಪಿಗೆ ಕೊಡಲಿಲ್ಲ. ಸ್ವತಂತ್ರ ರಾಷ್ಟ್ರವೆಂಬಂತೆ ನಿಜಾಂ ರಾಜ್ಯಾಡಳಿತ ನಡೆಸಿದ. ಅವನ ಭಟರಾದ ರಜಕಾರರ ಕೌರ್ಯಕ್ಕೆ ತುತ್ತಾಗಿ ಪ್ರಜೆ ಗಳು ಕಂಗೆಟ್ಟರು. ಕೊನೆಗೆ 1948ರಲ್ಲಿ ಭಾರತ ಸರಕಾರ ಸೇನೆ ಕಳುಹಿಸಿ, ನಿಜಾಂ ಸಂಸ್ಥಾನ ಭಾರತದ ಒಕ್ಕೂಟದಲ್ಲಿ ಸೇರುವಂತೆ ಮಾಡಿತು. ಆಗ ಕೈಕೊಂಡ ಕ್ರಮ ಪೋಲೀಸ್ ಕಾರ್ಯಾಚರಣೆ. ಮುಂದೆ ಭಾಷಾವಾರು ರಾಜ್ಯಗಳ ರಚನೆಯಾದಾಗ ಹೈದರಾಬಾದು ಸಂಸ್ಥಾನ ಮೂರು ಭಾಗ ಆಯಿತು. ಆಂಧ್ರ ಪ್ರದೇಶದ ರಾಜಧಾನಿಯಾಯಿತು ಹೈದರಾಬಾದ್ ನಗರ.

ಹೈದರಾಬಾದ್, ಕೃಷ್ಣಾ ನದಿಯ ಉಪನದಿಯಾದ ಮೂಸಿ ನದಿಯ ದಂಡೆಯ ಮೇಲಿದೆ. ಇದರ ಎಂಟು ಕಿ. ಮೀ. ಪಶ್ಚಿಮಕ್ಕೆ ಐತಿಹಾಸಿಕ ನಗರ ಗೋಲ್ಕೊಂಡದ ಅವಶೇಷಗಳಿವೆ. ಈಶಾನ್ಯ ದಿಕ್ಕಿನಲ್ಲಿ ಹತ್ತು ಕಿ. ಮೀ. ದೂರದಲ್ಲಿ ಬ್ರಿಟಿಷರ ಕಾಲದಲ್ಲಿ ದಂಡುಪ್ರದೇಶವೆನಿಸಿದ್ದ ಸಿಕಂದರಾಬಾದ್, ಹೈದರಾಬಾದಿನ ಅವಳಿ ನಗರವಾಗಿ ಮಾರ್ಪಟ್ಟಿದೆ.

ಕುತುಬ್‌ಷಾಹೀ ಸಂತತಿಯ ಐದನೆಯ ನವಾಬ ಮಹಮದ್ ಕುಲಿ ಹೈದರಾಬಾದ್ ನಗರವನ್ನು 1589ರಲ್ಲಿ ಸ್ಥಾಪಿಸಿದ. ನಗರದ ಮುಖ್ಯ ಆಕರ್ಷಣೆಗಳಲ್ಲಿ ಚಾರ್‌ಮಿನಾರ್ ಒಂದು. ನಾಲ್ಕು ರಸ್ತೆಗಳು ಕೂಡುವಲ್ಲಿ ಇದನ್ನು ನಿರ್ಮಿಸಿದೆ. ಆಯಾಕಾರ ಪ್ರಕಾರದ ನಾಲ್ಕು ಮೂಲೆಗಳಲ್ಲಿ 49 ಮೀಟರ್ ಎತ್ತರದ ಕಣ್ಣು ಸೆಳೆಯುವ ನಾಲ್ಕು ಗೋಪುರಗಳಿವೆ. ಇದರ ಸುತ್ತಮುತ್ತಲಿನ ವ್ಯಾಪಾರಸ್ಥಳ ಬಹು ಆಕರ್ಷಕವಾಗಿದೆ. ಸಾಲಾರ್ ಜಂಗ್ ವಸ್ತುಸಂಗ್ರಹಾಲಯದಲ್ಲಿ ಮೂರು ತಲೆ ಮಾರುಗಳ ಕಾಲಾವಧಿಯಲ್ಲಿ ಸಂಗ್ರಹಿಸಲಾಗಿರುವ ಅಪೂರ್ವ ಅಮೂಲ್ಯ ವಸ್ತುಗಳಿವೆ. ಇಷ್ಟು ದೊಡ್ಡ ವಸ್ತು ಸಂಗ್ರಹಾಲಯ ವಿಶ್ವದಲ್ಲಿಯೇ ಇಲ್ಲವೆಂದು ಹೇಳುತ್ತಾರೆ. ಜುಮ್ಮಾ ಮಸೀದಿ ಮತ್ತು ಮೆಕ್ಕ ಗೋರಿ ಇವೆರಡು ಕಲಾತ್ಮಕವಾದ ಭವ್ಯ ಕಟ್ಟಡಗಳು. ಉಸ್ಮಾನಿಯ ವಿಶ್ವವಿದ್ಯಾ ನಿಲಯವಿರುವುದು ಈ ನಗರದಲ್ಲೆ. ಉಸ್ಮಾನ್ ಸಾಗರ, ಹಿಮಾಯತ್ ಸಾಗರ, ಹುಸೇನ್ ಸಾಗರ ಜಲಾಶಯಗಳೂ ಮೀರ್ ಆಲಮ್ ಕೆರೆಯೂ ಹೈದರಾಬಾದ್ ನಗರಕ್ಕೆ ನೀರನ್ನು ಪೂರೈಸುತ್ತವೆ. ಆ ಪೈಕಿ ಹತ್ತು ಚದರ ಕಿ. ಮೀ. ವಿಸ್ತೀರ್ಣದ ಹುಸೇನ್ ಸಾಗರ 1562ರಲ್ಲಿ ಕಟ್ಟಲಾಗಿದ್ದು ನಗರ ಕ್ಕಿಂತಲೂ ಪ್ರಾಚೀನವಾದದ್ದು.

ಮೂಸಿ ನದಿಗೆ ಅಣೆಕಟ್ಟು ಕಟ್ಟಿಸಿ, ಜಲಾಶಯಗಳನ್ನು ನಿರ್ಮಿಸಿ ಹೈದರಾ ಬಾದ್ ನಗರವನ್ನು ನೆರೆಹಾವಳಿಯ ಭೀತಿಯಿಂದ ಪಾರುಮಾಡಿದ ಯೋಜ ಕರು ಮೈಸೂರಿನ ಮೋಕ್ಷಗುಂಡಂ ವಿಶ್ವೇಶ್ವರಯ್ಯ ಅವರು. ಹೈದರಾ ಬಾದ್ ನಗರದಲ್ಲಿ ಬಟ್ಟೆ, ಗಾಜು, ಸಿಗರೇಟು ಮುಂತಾದ ಕೈಗಾರಿಕೆಗಳಿವೆ.



ವಿಯೆಟ್ನಾಮಿ ಜನರ 'ಚಿಕ್ಕಪ್ಪ'

## ಹೋ ಚಿ ಮಿನ್

"ಕೊಟ್ಟಣದಲ್ಲಿನ ಭತ್ತದ ಕಾಳು ಒನಕೆಯ ಪೆಟ್ಟಿನಿಂದ ನೋಯುತ್ತದೆ. ಆದರೆ ಒಮ್ಮೆ ಈ ಕಠಿಣ ಪರೀಕ್ಷೆ ಮುಗಿದರೆ ಅದರ ಬಿಳುಪು ಎಷ್ಟು ಸೊಗಸು! ಇದೇ ರೀತಿ ಜಗತ್ತಿನ ಇತರರೊಡನೆ ನಮ್ಮ ಜೀವನ. ಒಂದು ಜೀವ ಮನುಷ್ಯನಾಗಿರಲು ದುರದೃಷ್ಟದ ಉಳಿಪೆಟ್ಟಿನಲ್ಲಿ ನೋಯಲೇಬೇಕು."

ಇದು ಬದುಕಿನ ಬಗೆಗೆ ಆಳವಾದ ಅನುಭವದಿಂದ ಹೋ ಚಿ ಮಿನ್ ಆಡಿದ ನುಡಿ ಮುತ್ತು.

ವಿಯೆಟ್‌ನಾಮಿನ ಜನರು ಚಿಕ್ಕಪ್ಪ ಎಂದು ಕರೆಯುತ್ತಿದ್ದ ಹೋ ಚಿ ಮಿನ್ ಆ ದೇಶದ ಜನತೆಯ ನೆಚ್ಚಿನ ನಾಯಕರು. ಇಂಡೋಚೀನದ ಕಮ್ಯೂನಿಸ್ಟ್ ಪಕ್ಷದ ಸಂಸ್ಥಾಪಕರು. ಆಗ್ನೇಯ ಏಷ್ಯದಲ್ಲಿದ್ದ ಫ್ರಾನ್ಸ್ ವಸಾಹತು ಆಡಳಿತವನ್ನು ಕೊನೆಗಾಣಿಸಲು ಹೋರಾಡಿದ ಹೋ ಏಷ್ಯದ ಇತಿಹಾಸದಲ್ಲಿ ಗಣ್ಯಪುರುಷರ ಪಂಕ್ತಿಗೆ ಸೇರಿದ ವ್ಯಕ್ತಿ.

ಹೋ ಜನಿಸಿದ್ದು 1890ರ ಮೇ 19ರಂದು. ಹುಟ್ಟು ಹೆಸರು ನುಯ್ಗೆನ್ ಐಕ್ವಾಕ್. ಶ್ರೀಮಂತ ಕುಟುಂಬ ಅವರದು. ರಾಷ್ಟ್ರೀಯ ಚಳುವಳಿಗೆ ಬೆಂಬಲವಿತ್ತರೆಂಬ ಅಪಾದನೆಯ ಮೇಲೆ ಹೋನ ತಂದೆಯನ್ನು ಕೆಲಸದಿಂದ ತೆಗೆಯಲಾಯಿತು.

1911ರಲ್ಲಿ ಹೋ ಒಂದು ಫ್ರೆಂಚ್ ವ್ಯಾಪಾರಿ ಹಡಗಿನಲ್ಲಿ ಕೆಲಸಕ್ಕೆ ಸೇರಿದರು. ಇದರಿಂದ ಪ್ರಪಂಚ ಪರ್ಯಟನ ಸಾಧ್ಯವಾಯಿತು. 1914ರಲ್ಲಿ ಯುದ್ಧ ಪ್ರಾರಂಭವಾದಾಗ ಸೈನ್ಯವನ್ನು ಸೇರಲು ಪ್ರಯತ್ನಿಸಿ ವಿಫಲಗೊಂಡರು. ಪ್ಯಾರಿಸಿಗೆ ತೆರಳಿ, ಅಲ್ಲಿ ನಾವಿಕನಾಗಿ, ಅಡುಗೆಯವನಾಗಿ, ಭಾವಚಿತ್ರಗಳನ್ನು ಪರಿಷ್ಕರಿಸುವವನಾಗಿ ಕೆಲಸ ಮಾಡಿದರು. ವೇಷ ಮರೆಸಿಕೊಳ್ಳುವುದರಲ್ಲಿ ನಿಷ್ಣಾತರಾದರು.

ರಾಜಕಾರಣದಲ್ಲಿ ಆಸಕ್ತಿಯಿದ್ದ ಹೋಗೆ ಪ್ಯಾರಿಸ್ ಉತ್ತಮ ಸ್ಥಳವಾಗಿದ್ದಿತು. ಮಾರ್ಕ್ಸ್‌ವಾದದ ಅನುಷ್ಠಾನದಿಂದ ಮಾತ್ರ ವಿಯೆಟ್‌ನಾಮ್ ಸ್ವಾತಂತ್ರ್ಯಗಳಿಸಲು ಸಾಧ್ಯ ಎಂದು ಅವರಿಗೆ ಅಲ್ಲಿ ಮನವರಿಕೆಯಾಯಿತು. ಅವರು ಸಮಾಜವಾದಿಗಳ ಪಕ್ಷವನ್ನು ಸೇರಿಕೊಂಡರು. ಯುದ್ಧ ನಿಂತೊಡನೆ ಪ್ಯಾರಿಸಿನಲ್ಲಿ ಜರಗಿದ ಶಾಂತಿ ಸಭೆಗೆ, ತನ್ನ ದೇಶಕ್ಕೆ ರಾಜಕೀಯ ಮತ್ತು ಪೌರಹಕ್ಕುಗಳನ್ನು ಕೊಡಬೇಕೆಂಬ ಮನವಿಯನ್ನು ಸಲ್ಲಿಸಿದರು. ವಿಯೆಟ್‌ನಾಮಿನ ನೂತನ ಇತಿಹಾಸ ಅಂದಿನಿಂದ ಆರಂಭವಾಯಿತು ಎನ್ನಬಹುದು. ವಾಮಪಕ್ಷೀಯರಲ್ಲಿ ಇವರ ಹೆಸರು ಪ್ರಸಿದ್ಧವಾಯಿತು. ಚೆದರಿಹೋಗಿದ್ದ ವಿಯೆಟ್‌ನಾಮಿನವರಲ್ಲಿ ದೇಶಭಕ್ತಿಯನ್ನು ಜಾಗೃತಗೊಳಿಸಿ, ಒಗ್ಗೂಡಿಸಿ, ಫ್ರಾನ್ಸ್ ಮತ್ತು ಜಪಾನ್‌ಗಳ ವಿರುದ್ಧ ಹೋರಾಟ ಘೋಷಿಸಿದರು. 1944ನೆಯ ಅಕ್ಟೋಬರ್ ವೇಳೆಗೆ ಹಾಂಕಾಂಗ್ ಪ್ರದೇಶದ ಆರು ವಿಭಾಗಗಳನ್ನು ವಶಪಡಿಸಿಕೊಂಡರು. 1948 ಸೆಪ್ಟೆಂಬರ್ 2ರಂದು ಸ್ವತಂತ್ರ ಪ್ರಜಾಪ್ರಭುತ್ವ ರಾಷ್ಟ್ರವಾಗಿ ವಿಯೆಟ್‌ನಾಮ್ ತಲೆಯೆತ್ತಿನಿಂತಿತು. ಹೋ ಅದರ ಮೊದಲನೆಯ ಅಧ್ಯಕ್ಷರಾದರು.

ದೇಶಾಂತರವಾಸ, ದಟ್ಟದಾರಿದ್ರ್ಯ, ಕಾರಾಗೃಹವಾಸ ಯಾವುದಕ್ಕೂ ಮಣಿಯದೆ ತನ್ನ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಧೀರ ಹೋ ಚಿ ಮಿನ್. ಫ್ರೆಂಚರ ನೊಗ ಕಳಚಿದ ಮೇಲೆ ಅಂತರ್ಯುದ್ಧ ಭುಗಿಲೆಂದಿತು. ದಕ್ಷಿಣ ವಿಯೆಟ್‌ನಾಮಿನ ಪ್ರಮುಖರಿಗೆ ಅಮೆರಿಕದ ಸಂಯುಕ್ತ ಸಂಸ್ಥಾನದ ಬೆಂಬಲ ದೊರೆತು ಘೋರ ಯುದ್ಧ ನಡೆಯಿತು. ಜಗತ್ತಿನಲ್ಲೇ ಅತಿ ಧನಾಢ್ಯವಾದ ಬಲಾಢ್ಯವಾದ ಅಮೆರಿಕದ ವಿರುದ್ಧ ಉತ್ತರ ವಿಯೆಟ್‌ನಾಮಿನ ಜನ ಹೋರಾಡಿದರು. ಹೋ ಚಿ ಮಿನ್ ತಮ್ಮ ದೇಶವನ್ನು ಒಗ್ಗೂಡಿಸುವ ತಮ್ಮ ಧ್ಯೇಯ ಸಾಧನೆಗಾಗಿ ಹಗಲೂ ಇರುಳೂ ಪರಿಶ್ರಮಪಟ್ಟರು.

ಇವರು ಫ್ರೆಂಚ್, ಇಂಗ್ಲಿಷ್, ಚೀನಿ, ರಷ್ಯನ್-ಹೀಗೆ ಹಲವು ಭಾಷೆಗಳನ್ನು ಕಲಿತಿದ್ದರು. ಕೆಲವು ಕವನಗಳನ್ನೂ ಬರೆದಿದ್ದುಂಟು.

1969 ಸೆಪ್ಟೆಂಬರ್ 3ನೆಯ ದಿನಾಂಕ ಹೋ ನಿಧನರಾದರು. ಒಂದು ನಾಡಿನಲ್ಲಿ ಹೊಸ ಸ್ಫೂರ್ತಿ, ಧೈರ್ಯ, ಚೈತನ್ಯಗಳನ್ನು ಹರಿಸಿದ ಮಹಾನಾಯಕ ಹೋ ಚಿ ಮಿನ್ ಈ ಶತಮಾನದ ಅತ್ಯಂತ ಕುತೂಹಲಕಾರಿ ವ್ಯಕ್ತಿಗಳಲ್ಲಿ ಮತ್ತು ಪ್ರಭಾವೀ ನಾಯಕರಲ್ಲಿ ಒಬ್ಬರು.

ಹೋ ಚಿ ಮಿನ್ ಎಂದರೆ 'ಬೆಳಕು ಕೊಡುವ' ಎಂದು ಅರ್ಥ. ಹೋ ಸ್ವಾತಂತ್ರ್ಯದ ಬೆಳಕನ್ನು ತಾವು ಕಂಡುದೇ ಅಲ್ಲದೆ ನಾಡಿಗೇ ಆ ಬೆಳಕನ್ನು ತಂದು ಕೊಡಲು ಶ್ರಮವರಿಯದೆ ದುಡಿದರು.

# ಸಂದರ್ಭಸೂಚಿ

———

# ಶಬ್ದಕೋಶ

ಅಂಕಿ Numeral
ಅಂಕಿಅಂಶಗಳು Statistics
ಅಂಗಸತ್ತ್ವ Tissue
ಅಂಗವಿಕಲರು Physically handicapped
ಅಂಗೀಕಾರ ಮುದ್ರೆ Seal of Approval
ಅಂಗುಲ Inch
ಅಂಚೆ ಚೀಟಿ Postal Stamp
ಅಂತರ್‌ಗ್ರಹ ಯಾತ್ರೆ Inter-planetary travel
ಅಂತರ್ ತಾರಾ ಯಾತ್ರೆ Inter-stellar travel
ಅಂತರ್ ದಹನ Internal Combustion
ಅಂತರ್ಯುದ್ಧ, ಯಾದವೀ ಕಲಹ Civil War
ಅಂತರರಾಷ್ಟ್ರೀಯ ಅಣುಶಕ್ತಿ ಸಂಸ್ಥೆ International Atomic Energy Agency
ಅಂತರರಾಷ್ಟ್ರೀಯ ಆರ್ಥಿಕ ಸಂಸ್ಥೆ International Monetary Fund
ಅಂತರರಾಷ್ಟ್ರೀಯ ಕಾರ್ಮಿಕ ಸಂಸ್ಥೆ International Labour Organization
ಅಂತರರಾಷ್ಟ್ರೀಯ ದಿನಾಂಕ ರೇಖೆ International Date line
ಅಂತರರಾಷ್ಟ್ರೀಯ ನ್ಯಾಯಾಲಯ International Court of Justice
ಅಂತರರಾಷ್ಟ್ರೀಯ ಪ್ರವಾಸಿ ವರ್ಷ International Tourist year
ಅಂತರರಾಷ್ಟ್ರೀಯ ಪುನರ್ನಿರ್ಮಾಣ ಮತ್ತು ಅಭಿವೃದ್ಧಿ ಬ್ಯಾಂಕ್ International Bank for Reconstruction and Development
ಅಂತರರಾಷ್ಟ್ರೀಯ ರೆಡ್‌ಕ್ರಾಸ್ ಸಂಸ್ಥೆ International Red Cross Association
ಅಂತರರಾಷ್ಟ್ರೀಯ ವಿವಾದ International Dispute
ಅಂತರಿಕ್ಷ ನೌಕೆ Space-craft
ಅಂದಾಜುಗಳ ಸಮಿತಿ Estimates Committee
ಅಂದಾಜು ಪತ್ರಿಕೆ, ಮುಂಗಡ ಪತ್ರ Budget
ಅಂಶ (ಷೇರ್) Share
ಅಕಾಡಮಿ, ಅಕಾದೆಮಿ Academy
ಅಗ್ನಿಪರ್ವತ Volcano
ಅಜಾಗೃತಪ್ರಜ್ಞೆ The Unconscious
ಅಜೇಯ ನೌಕಾದಳ, ಸೋಲರಿಯದ ನೌಕಾದಳ Invincible Armada
ಅಜ್ಞೇಯತಾ ವಾದಿಗಳು Agnostics
ಆಟಮನ್ ಸಾಮ್ರಾಜ್ಯ Ottoman Empire
ಅಡವು Pawn, Mortgage
ಅಣಬೆ Fungus
ಅಣೆಕಟ್ಟು Dam
ಅತ್ಯಧಿಕ ಸಂಖ್ಯೆಯ ಅತ್ಯಧಿಕ ಸುಖ The greatest happiness of the greatest number
ಅತಿಕ್ರಮ Trespass
ಅತಿನೇರಳೆ ಕಿರಣ Ultra-violet Ray
ಅರ್ಥಶಾಸ್ತ್ರ Economics
ಅಧ್ಯಾದೇಶ Ordinance
ಅಧಿಕದಿನ ವರ್ಷ Leap-year
ಅಧಿಕಾರಪತ್ರ Credentials
ಅಧಿಕಾರ ಮುದ್ರೆ Seal of Office
ಅಧಿಕಾರ ಲೇಖ Writ of *Quo Warranto*
ಅನಂತ Infinite
ಅನಶನ ವ್ರತ Fast unto death
ಅನ್ವಯ ಸಂಶೋಧನೆ Applied Research
ಅನ್ವಯ ವಿಜ್ಞಾನ, ಅನ್ವಯಿತ ವಿಜ್ಞಾನ Applied Science
ಅನಾವೃಷ್ಟಿ Drought
ಅನಿರ್ದಿಷ್ಟ ಸಮೀಕರಣ Indeterminate Equation
ಅನಿರ್ಬಂಧಿತ ವ್ಯಾಪಾರ Free Trade
ಅನುನಾಸಿಕ Nasal
ಅನುವಂಶತೆ Heredity
ಅನ್ವೇಷಣೆ Exploration
ಅಪರಾಧ Crime
ಅಪರಾಧಶಾಸ್ತ್ರ Criminology
ಅಪರಾಧಿಕ ವಿವಾದ Criminal Case
ಅಪವಾದ Libel
ಅಪಹರಣ Kidnapping, Abduction
ಅಪ್ರತ್ಯಕ್ಷ ಚುನಾವಣೆ Indirect Election
ಅಪಾಯ ತಪ್ಪಿಸಬಲ್ಲ ಕವಾಟ Safety Valve
ಅಬ್ಕಾರಿ ಸುಂಕ Excise Duty
ಅರ್ಬುದ Cancer
ಅಭಯಾರಣ್ಯ Game Sanctuary
ಅಭಿಮತ ಸಂಗ್ರಹ Plebiscite, Referendum
ಅಮೂರ್ತ Abstract
ಅಮೆರಿಕದ ಅಂತರಿಕ್ಷ ವಿಜ್ಞಾನ ಸಂಸ್ಥೆ NASA (National Aeronautics and Space Administration of U. S. A.)
ಅಮೆರಿಕದ ಭೂಖಂಡ ರಾಷ್ಟ್ರಗಳ ಸಂಘ Organization of American States
ಅಯಸ್ಕಾಂತ, ಸೂಜಿಗಲ್ಲು Magnet
ಅಯೂಕ್ಲಿಡಿಯ Non-Euclidean
ಅರಾಜಕತೆ Anarchy
ಅರಸೊತ್ತಿಗೆ, ರಾಜಪ್ರಭುತ್ವ Monarchy
ಅಲ್ಪಸಂಖ್ಯಾತರು Minority
ಅಲಿಖಿತ ಸಂವಿಧಾನ Unwritten Constitution
ಅಲಿಪ್ತ Non-aligned
ಅಲೆಮಾರಿ ಜನ Nomads
ಅವಯವ ವಿಚ್ಛೇದನ Dissection
ಅವಲೋಕನ Observation
ಅವಶೇಷ Ruins
ಅವಿಭಕ್ತ ಕುಟುಂಬ Joint family, Undivided family
ಅವಿಶ್ವಾಸ ನಿರ್ಣಯ No-confidence Motion
ಅಹಿಂಸೆ Nonviolence
ಅಳುವ ಗೋಡೆ Wailing Wall
ಆಂತರಿಕ ಪ್ರತಿರೋಧ Internal resistance
ಆಂತರಿಕ ಲೆಕ್ಕ ಪರಿಶೋಧಕ Internal auditor
ಆಂಶಿಕ ಸಾಂಗತ್ಯ ಸಿದ್ಧಾಂತ Theory of Differential Association
ಆಕೃತಿಮಾ Morpheme
ಆಕೃತಿಮಾ ವಿಜ್ಞಾನ Morphemics
ಆಕಾಶಕಾಯ Space body

ಆಕಾಶ ನೌಕೆ Space-craft
ಆಕಾಶಬುಟ್ಟಿ Balloon
ಆಕಾಶ ವೀಕ್ಷಣಾಲಯ, ಖಗೋಳ ವೀಕ್ಷಣಾಲಯ Astronomical Observatory
ಆಗ್ನೇಯ ಏಷ್ಯ South-East Asia
ಆಡಳಿತಾಂಗ, ಕಾರ್ಯಾಂಗ Executive
ಆಡಳಿತ ಪಕ್ಷ Ruling Party
ಆಡಳಿತದ ಮುಖ್ಯಸ್ಥ Head of the Government
ಆಡಳಿತಗಾರ, ಕಾನ್ಸಲ್ Consul
ಆಡಳಿತ ವ್ಯವಸ್ಥೆ Forms of Government
ಆಡು ನುಡಿ Spoken language
ಆತ್ಮ Soul
ಆರ್ಥಿಕ ಕುಸಿತ Economic Depression
ಆರ್ಥಿಕಾಭಿವೃದ್ಧಿ Economic Development
ಆದರ್ಶರಾಜ್ಯ, ಯುಟೋಪಿಯ Utopia
ಆದ್ಯಪ್ರವರ್ತಕ Pioneer
ಆರ್ದ್ರತೆ, ತೇವ Humidity
ಆದಾಯ Income
ಆದಿವಾಸಿ Aboriginal
ಆಧಾರ ಸಾಲ Loan on security
ಆನಿಕೆ Fulcrum
ಆನುವಂಶಿಕ, ಅನುವಂಶೀಯ Hereditary
ಆಮದು, ಆಯಾತ Import
ಆಮದು - ರಫ್ತು Import and Export
ಆಮದು - ರಫ್ತು ಸುಂಕ Import and Export duty
ಆಮ್ಲಜನಕ Oxygen
ಆಯತಾಕಾರ Rectangle
ಆಯಕಟ್ಟಿನ ಸ್ಥಳ Strategic location
ಆಯಾನುಗೋಲ Ionosphere
ಆಯುಕ್ತಾಧಿಕಾರಿ Commissioned Officer
ಆಯೋಗ Commission
ಆರಾಧನೆ Worship
ಆರೋಪ Charge
ಆರೋಪಿ Accused
ಆವರ್ತನ Rotation
ಆವರ್ತಗಾಳಿ Cyclone
ಆಸ್ತಿ Asset, Property
ಆಸ್ತಿಕ Theist
ಆಸ್ಫೋಟ Explosion
ಆಹಾರ ಕಲಬೆರಕೆ Adulteration of foodstuffs
ಆಹಾರ ಮತ್ತು ವ್ಯವಸಾಯ ಸಂಸ್ಥೆ, ವಿಶ್ವ ಆಹಾರ ಮತ್ತು ವ್ಯವಸಾಯ ಸಂಸ್ಥೆ Food and Agriculture Organization
ಆಹಾರಶಾಸ್ತ್ರ Dietitics
ಆಹಾರ ಸಂಸ್ಕರಣ Food processing
ಇಂಗಾಲ Carbon
ಇಂದ್ರಜಾಲ, ಯಕ್ಷಿಣಿ, ಜಂತರ್-ಮಂತರ್, ಜಾದೂ Magic
ಇಂಧನ Fuel
ಇಗರ್ಜಿ Church
ಇಳಕಲು Inclined plane
ಉಗ್ರಾಣ Warehouse
ಉಗಿಯಂತ್ರ Steam Engine
ಉಚ್ಚ ದಂಡನಾಯಕತ್ವ Supreme Command
ಉಚ್ಚ ನ್ಯಾಯಾಲಯ, ಶ್ರೇಷ್ಠ ನ್ಯಾಯಾಲಯ High Court
ಉಚ್ಚಾರಾಂಶ Syllable
ಉಚ್ಚಾರಾಂಶ ಲೇಖನ Syllabic Writing
ಉತ್ಕರ್ಷಣ ಕ್ರಿಯೆ Oxidation
ಉತ್ತರ ಅಟ್ಲಾಂಟಿಕ್ ಕೌಲು North Atlantic Treaty
ಉತ್ತರ ಧ್ರುವ, ಉತ್ತರ ಮೇರು North Pole
ಉತ್ತರ ಕ್ರಿಯೆ Funeral rights, obsequies
ಉತ್ತರಾರ್ಧ ಗೋಳ, ಉತ್ತರ ಗೋಳಾರ್ಧ Northern Hemisphere
ಉತ್ಪಾದನಾ ವೆಚ್ಚ Cost of Production
ಉತ್ತರಾಧಿಕಾರಿ Heir, Successor
ಉತ್ಕ್ಷೇಪಣ ಲೇಖ Writ of Certiorari
ಉದ್ಯಮ, ಕೈಗಾರಿಕೆ Industries
ಉದ್ದಿಮೆದಾರ Entrepreneur, Industrialist
ಉದ್ಯೋಗ Employment, Profession
ಉದ್ಯೋಗ ಸ್ವಾತಂತ್ರ್ಯ Freedom of Employment
ಉಡಾವಣೆ Launching
ಉಪಉತ್ಪನ್ನ By-product
ಉಪಉಯಿಲು Codicil
ಉಪಗ್ರಹ Satellite
ಉಪಕುಲಪತಿ Vice-Chancellor
ಉಪಭಾಷೆ Dialect
ಉಪಯುಕ್ತ ಕಲೆಗಳು Useful Arts
ಉಪಾಹಾರ ಗೃಹ Hotel, Restaurant
ಉಯಿಲು Will
ಉರುಟುಗಳು Rollers
ಉಲ್ಕಾ ಸಂಗ್ರಹಣೆಯ ಪೆಟ್ಟಿಗೆ Micrometeorite Collection Crater
ಉಲ್ಕೆ Meteor
ಉಷ್ಣಕಟಿಬಂಧ, ಉಷ್ಣವಲಯ Tropical Zone
ಉಷ್ಣಾಂಶ Temperature
ಉಳಿತಾಯ Savings
ಉಳಿತಾಯ ಬ್ಯಾಂಕ್ ಖಾತೆ, ಸೇವಿಂಗ್ಸ್ ಬ್ಯಾಂಕ್ ಖಾತೆ Savings Bank Account
ಊಳಿಗಮಾನ್ಯ ಪದ್ಧತಿ Feudalism
ಋಣಪತ್ರ, ಡಿಬೆಂಚರ್ Debenture
ಋಣ ವಿದ್ಯುತ್ ಸಂಚಯ Negative charge
ಋಣಿ Debtor
ಋತು Season
ಎನ್. ಸಿ. ಸಿ., ರಾಷ್ಟ್ರೀಯ ಯುವ ಸೈನ್ಯ ದಳ National Cadet Corps
ಎಸ್ಪರ್ಯಾಂಟೊ Esperanto
ಎಡಪಂಥದವರು Leftists
ಏಕಪತ್ನಿತ್ವ Monogamy
ಏಕವ್ಯಕ್ತಿಸಂಸ್ಥೆ Proprietor ownership
ಏಕಸಂವಿಧಾನ Unitary Constitution
ಏಕಸ್ವ, ಗುತ್ತೆ Patent
ಏಕಸ್ವಾಮ್ಯ, ಏಕಾನುಭೋಗಿ Monopoly
ಐಚ್ಛಿಕ Optional
ಒಕ್ಕೂಟ Union
ಒಟ್ಟುವ್ಯಾಪಾರಿ Wholesale dealer
ಒಡಂಬಡಿಕೆ, ಕೌಲು Treaty
ಒಡ್ಡು Dyke
ಒತ್ತುವ ಬಿಂದು Point of Application
ಒಳಚರಂಡಿ ವ್ಯವಸ್ಥೆ Under-ground drainage
ಒಳನಾಡು Hinterland
ಓಂಬುಡ್ಸ್‌ಮನ್ Ombudsman
ಓಯೆಸಿಸ್ Oasis
ಓವರ್‌ಡ್ರಾಫ್ಟ್ Overdraft
ಔದ್ಯೋಗಿಕ ಕಾರ್ಮಿಕ ವರ್ಗ Industrial labour class
ಔದ್ಯೋಗೀಕರಣ, ಕೈಗಾರಿಕಾಕರಣ Industrialization

ಕಂಠ್ಯ Glottal
ಕಂಡುಹಿಡಿಯುವಿಕೆ Invention
ಕಂತುಕೊಳ್ಳುವಿಕೆ Hire-purchase
ಕಂದಕ Trench
ಕಂದಾಯ Tax
ಕರ್ಕಾಟಕ ವೃತ್ತ, ಕರ್ಕಾಟಕ ಸಂಕ್ರಾಂತಿ ವೃತ್ತ Tropic of Cancer
ಕಚ್ಚಾಪದಾರ್ಥ, ಕಚ್ಚಾಸಾಮಗ್ರಿ Raw material
ಕಡಲುಗಳ್ಳರು Pirates
ಕಡ್ಡಾಯ ಶಿಕ್ಷಣ Compulsory Education
ಕಡ್ಡಾಯ ಯುದ್ಧ ಸೇವೆ Compulsory Military Service, Conscription
ಕಣಜ Barn, Corn-bin
ಕತ್ತಲೆಯ ಯುಗ Age of Darkness
ಕದನವಿರಾಮ Cease-Fire
ಕಬ್ಬಿಣದ ಯುಗ Iron Age
ಕಮಾನು Arch
ಕಮ್ಯೂನಿಸ್ಟ್ Communist
ಕರಕುಶಲ ವಸ್ತುಗಳು Handicrafts
ಕರಾರು Agreement, Contract
ಕರಾವಳಿ Coast
ಕರೆ ಗಂಟೆ Calling bell
ಕಲನಶಾಸ್ತ್ರ Calculus
ಕಲ್ಪನೆ Imagination
ಕಲ್ಲಚ್ಚು Lithograph
ಕಲ್ಲಿದ್ದಲು Coal
ಕಲೆಗಳು Arts
ಕಲ್ಲೆಣ್ಣೆ Kerosene Oil
ಕವಣೆ Catapult
ಕಸಬು Occupation
ಕಸಾಯಿಖಾನೆ Slaughter House
ಕಾಂಪೋಸ್ಟ್ ಗೊಬ್ಬರ Compost
ಕಾಗದದ ಚಿನ್ನ Paper Gold
ಕಾಗದದ ಹಣ Paper Money
ಕಾನೂನುಬಾಹಿರ Illegal
ಕಾರ್ಮಿಕ Labour
ಕಾರ್ಮಿಕ ಪಕ್ಷ Labour Party
ಕಾರ್ಮಿಕ ಸಂಘ Trade Union
ಕಾಯಿದೆ, ಕಾನೂನು Law
ಕಾಯಿದೆ ಭಂಗ ಚಳುವಳಿ Civil Disobedience Movement
ಕಾರ್ಯನಿರ್ವಾಹಕ Executor
ಕಾರ್ಯೋಪಯೋಗಿ ಬಂಡವಾಳ Working Capital
ಕಾರಖಾನೆಯ ಪಟ್ಟಣ Industrial city
ಕಾರಾಗೃಹ ಸುಧಾರಣೆ Prison Reform
ಕಾಲವಲಯ Standard Time Zone
ಕಾಲಾಳುಗಳು, ಪದಾತಿ ಸೈನ್ಯ Infantry
ಕಾವ್ಯ ಮೀಮಾಂಸೆ Poetics
ಕ್ಯಾರಿಬೂ Caribou
ಕ್ರಾಂತಿ Revolution
ಕ್ಷ-ಕಿರಣ X-ray
ಕಿಂಡರ್‌ಗಾರ್ಟನ್ Kindergarten
ಕಿರೀಟ ಧಾರಣೆ Coronation
ಕಿವಿಬೊಟ್ಟು Hearing aid
ಕ್ಷಿಪಣಿ Rocket, Missile
ಕ್ಷಿಪ್ರಕ್ರಾಂತಿ Coup d'etat
ಕೀಟನಾಶಕ Pesticide
ಕೀಲಿಗಳು Joints
ಕ್ಷೀರಸ್ಫಟಿಕ Opal
ಕುಂತಲಮೇಘ Cirrus Cloud
ಕುಟುಂಬ ಯೋಜನೆ Family Planning
ಕುಲಪತಿ Chancellor
ಕುಲುಮೆ Furnace
ಕುಸುರಿ ಕೆಲಸ Filigree Work
ಕುಶಲಕರ್ಮ Skilled labour
ಕೂಟಶಿಬಿರ Concentration camp
ಕೂಡು ಬಂಡವಾಳ ಕಂಪೆನಿ Joint Stock Company
ಕೂರಿಗೆ Drill
ಕೃತಕ ಉಪಗ್ರಹ Artificial Satellite
ಕೃತಕ ಗೊಬ್ಬರ Artificial r anure
ಕೃತಕ ಬಂದರು Artificial harbour
ಕೃತಕ ಭಾಷೆ Artificial language
ಕೃತಿಸ್ವಾಮ್ಯ Copyright
ಕೃಷಿ ಅರ್ಥಶಾಸ್ತ್ರ Agricultural Economics
ಕೃಷಿ ವಿಶ್ವವಿದ್ಯಾನಿಲಯ University of Agricultural Sciences
ಕ್ಷೇತ್ರಗಣಿತ Mensuration
ಕ್ಷೇತ್ರ ಸಿದ್ಧಾಂತ Theory of Surfaces
ಕೈಗಾರಿಕಾ ಅರ್ಥಶಾಸ್ತ್ರ Industrial Economics
ಕೈಗಾರಿಕಾ ಐತೀರ್ಪು ಮಂಡಲ Industrial Tribunal
ಕೈಗಾರಿಕೋದ್ಯಮ Industries, industrial enterprise
ಕೈಗಾರಿಕಾ ಮನೋವಿಜ್ಞಾನ Industrial Psychology
ಕೈಗಾರಿಕಾ ವಸ್ತು ಪ್ರದರ್ಶನ Industrial Exhibition
ಕೈಪಿಡಿ Hand-book, guide
ಕೈಬೆರಳುಗಳ ತಜ್ಞ Fingerprint Expert
ಕೊಲಂಬೊ ಯೋಜನೆ Colombo Plan
ಕೊರತೆಯ ಮುಂಗಡ ಪತ್ರ Deficit Budget
ಕೊಳಚೆ ಪ್ರದೇಶ Slum
ಕೊಲ್ಲಿ Bay
ಕೋನ Angle
ಕೋನಾಕಾರ Cuneiform
ಕೋರಂ Quorum
ಕೋಳಿ ಸಾಕಣೆ Poultry-farming
ಖಂಡಾಂತರ ಚಿಮ್ಮುವ ಕ್ಷಿಪಣಿ Intercontinental ballistic missile
ಖಂಡಾಂತರ ಪ್ರಸಾರ Intercontinental broadcasting
ಖಗೋಳಜ್ಞ Astronomer
ಖಗೋಳ ವಿಜ್ಞಾನ Astronomy
ಖಗೋಳ ವೀಕ್ಷಣಾಲಯ Astronomical observatory
ಖನಿಜ ವಿಜ್ಞಾನ Mineralogy
ಖಾರಿ Gulf
ಖಾತೆ Account
ಖಾಸಗಿ ಉದ್ಯಮ Private enterprise
ಖಾಸಗಿ ವಲಯ Private sector
ಖೊಟ್ಟಿ ವ್ಯಾಪಾರ ಚಿಹ್ನೆ Counterfeit trademark
ಗಗನಚುಂಬಿ Skyscraper
ಗಡಿ, ಸೀಮಾರೇಖೆ Border, dead-line
ಗಡಿಪಾರು Banishment, exile
ಗಣಕ ಯಂತ್ರ Computer
ಗಣಫಿರಂಗಿ ನೌಕೆ Fleet tanker
ಗಣರಾಜ್ಯ Republic
ಗತಿ ವಿಜ್ಞಾನ ಗಣಿತ, ಚಲನ ಶಾಸ್ತ್ರ Dynamics

ಗವಿ ಮಾನವ Caveman
ಗಾಮಾಕಿರಣ Gamma ray
ಗಾಳಿ ಯಂತ್ರ ಗಿರಣಿ Windmill
ಗ್ರಾನ್ ಪ್ರೀ Grand Prix
ಗ್ರಾಮ ಕೈಗಾರಿಕೆ Village Industry
ಗ್ರಾಹಕ Container
ಗಿರಣಿ Mill
ಗಿರಿಜನರು Hill-tribes
ಗಿರಿಧಾಮ Hill Station
ಗ್ರೀನ್ವಿಚ್ ಕಾಲ Greenwich Mean Time
ಗುಪ್ತ ಭಾಷೆ Secret language
ಗುರುತ್ವಾಕರ್ಷಣೆ, ಗುರುತ್ವಾಕರ್ಷಣ ಶಕ್ತಿ Gravitation
ಗೃಹ ಕೈಗಾರಿಕೆ Cottage Industry
ಗೃಹ ರಕ್ಷಕ ದಳ Home Guards
ಗೃಹ ವಿಜ್ಞಾನ Domestic Science
ಗೆಜೆಟು Gazette
ಗೇರ್ Gear
ಗೌರವ ಪೌರತ್ವ Freedom of the City
ಘಟಕ Unit
ಘನ Solid
ಘನ ಮೂಲ Cube root
ಘಾತ Power
ಚಂಡಮಾರುತ Tempest
ಚತುಷ್ಕೋನ Quadrangle
ಚಕ್ರ Wheel
ಚರ್ಮ ಪ್ರಸಾಧನ Taxidermy
ಚಮೂ Scout
ಚರ ಆಸ್ತಿ Movable property
ಚರ ಚಿಕಿತ್ಸಾಲಯ Mobile dispensary
ಚರ ಬಂಡವಾಳ Circulating Capital
ಚಲಾವಣೆ ಖಾತೆ ಚಾಲ್ತಿ ಖಾತೆ Current Account
ಚಾಲಕ ಶಕ್ತಿ Driving force
ಚಿತ್ರ ಲೇಖನ Pictography
ಚಿಲ್ಲರೆ ವ್ಯಾಪಾರಿ Retail dealer
ಚೀನಾ ಪೆಟ್ಟಿಗೆ Chinese box
ಚೈತನ್ಯಶಕ್ತಿ Energy
ಛಾಪಾಪತ್ರ Stamp paper
ಛಾಯಾ ಸಂಪುಟ Shadow Cabinet
ಛೇದನ ಬಿಂದು Point of intersection
ಜನಗಣತಿ Census
ಪ್ರಜಾ ಗಣರಾಜ್ಯ, ಪ್ರಜಾಸತ್ತಾತ್ಮಕ ಗಣರಾಜ್ಯ Democratic Republic
ಜನಸಾಂದ್ರತೆ Density of the population
ಜಮೀನು ಅಡಮಾನ ಬ್ಯಾಂಕು Land Mortgage Bank
ಜಮೀನು ಅಭಿವೃದ್ಧಿ ಬ್ಯಾಂಕ್ Land Devlopment Bank
ಜಲಜನಕ Hydrogen
ಜಲಜನಕ ಬಾಂಬ್ Hydrogen bomb
ಜಲಸಂಧಿ Strait
ಜಲಸಾಮರ್ಥ್ಯ ಶಾಸ್ತ್ರ Hydrostatics
ಜಲಾಂತರ್ಗಾಮಿ ನೌಕೆ Submarine
ಜಲಾನಯನ ಭೂಮಿ Basin
ಜಲಾಶಯ Reservoir
ಜಾಗೃತ ಆಯೋಗ Vigilance Commission
ಜಾತ್ಯತೀತ ರಾಷ್ಟ್ರ Secular State
ಜಾತಿ ವರ್ಣಪದ್ಧತಿ Caste
ಜಾನಪದ Folk Arts
ಜಾಮೀನು Bail
ಜಾಹೀರಾತು Advertisement
ಜಿಪ್ಸಿ Gipsy
ಜೀತ Forced Labour
ಜೀರೊ ಗಂಟೆ Zero hour
ಜೀವಜಾತಿಗಳ ಉಗಮ Origin of Species
ಜೀವನಮಟ್ಟ Standard of Living
ಜೀವರಾಶಿ Biomass
ಜೀವ ವಿಕಾಸ Evolution of Life
ಜೀವ ವಿಜ್ಞಾನ Biology
ಜೀವವಿಮೆ Life Insurance
ಜೀವನವೆಚ್ಚ Cost of Living
ಜೀವನಾಂಶ Alimony
ಜೀವಸತ್ತ್ವಾಂಶ Vitamin
ಜೀವಾವಧಿ ಶಿಕ್ಷೆ Imprisonment for life
ಜೆಪ್ಲಿನ್ Zeppelin
ಜೇನುಸಾಕಣೆ Bee-keeping
ಜೋಡಿ ದಾಖಲೆ ಪದ್ಧತಿ Double-entry System
ಜ್ಯೋತಿರ್ವರ್ಷ Light year
ಜ್ಯೋತಿಷಶಾಸ್ತ್ರ Astrology
ಟೈಟನರು Titans
ಠೇವಣಿ Deposit
ಮೃತ ಸಮುದ್ರದ ಬರಹ Dead Sea Scrolls
ತರ್ಕ Logic
ತಟಸ್ಥ ರಾಷ್ಟ್ರ Neutral Nation
ತತ್ತ್ವಜ್ಞಾನಿ, ತತ್ತ್ವಶಾಸ್ತ್ರಜ್ಞ, ದಾರ್ಶನಿಕ Philosopher
ತರಂಗಮಾನ Wave-length
ತಲಾ ವರಮಾನ Per Capita Income
ತಾಂತ್ರಿಕ ಜ್ಞಾನ Technology
ತಾಂತ್ರಿಕ ಸಂಪನ್ಮೂಲ Technological resources
ತಾಯಿತಿ Amulet, Talisman
ತ್ರಾಪಿಜ್ಯ Trapezium
ತ್ರಿಕೋನ Triangle
ತೀವ್ರ ಸುಧಾರಣಾವಾದ Radicalism
ತುಫಾನು Typhoon
ತೂಗು ಉದ್ಯಾನ Hanging Gardens
ತೆನೆ ಬಡಿಯುವ ಯಂತ್ರ Threshing Machine
ತೆರಿಗೆ Tax
ತ್ರೈರಾಶಿ Rule of three
ತೊಡಗಿಸು Invest
ತೌಲನಿಕ ಭಾಷಾ ವಿಜ್ಞಾನ Comparative Linguistics
ದಂಡನಾಯಕ Commander-in-Chief, Chief of Staff
ದಂಡವಿಧಿ Criminal Code
ದಂಡಿನ ಶಾಸನ Martial Law
ದಂತ್ಯ Dental
ದಕ್ಷಿಣ ಧ್ರುವ, ದಕ್ಷಿಣ ಮೇರು South Pole
ದಕ್ಷಿಣಾರ್ಧಗೋಲ Southern Hemisphere
ದಶಮಾಂಶ ಪದ್ಧತಿ, ದಾಶಮಿಕ ಪದ್ಧತಿ Decimal System
ದಸ್ತಾವೇಜು Document
ದಳ್ಳಾಳಿ Broker, Commission Agent
ದ್ರವಾಗ್ನಿ Liquid fire
ದ್ವಂದ್ವಾತ್ಮಕ ಭೌತಿಕವಾದ Dialectical Materialism
ದಾವೆ Suit

ದಾಸ್ತಾನು Storage
ದಿಕ್ಸೂಚಿ Compass
ದೀರ್ಘಕಾಲಿಕ ಸಾಲ Long-term loan
ದೀರ್ಘತರಂಗ Long Wave
ದೀಪಗೋಪುರ Light-house
ದ್ವೀಪ ಸಮುಚ್ಚಯ Archipalago
ದುರ್ಗ Fortress
ದುಡಿಮೆ Labour
ದುಡಿಮೆಗಾರರ ಬೃಹತ್ ಸಾಂಸ್ಕೃತಿಕ ಕ್ರಾಂತಿ Great Proletarian Cultural Revolution
ದುಭಾಷಿ Interpreter
ದೂರದರ್ಶಕ Telescope
ದೂರಪ್ರಾಚ್ಯ Far East
ದೂರವಾಣಿ Telephone
ದೇವದತ್ತ ಅಧಿಕಾರ Divine Right
ದೇವತೆಯ ಭವಿಷ್ಯವಾಣಿ Oracle
ದೈತ್ಯಾಣು Giant Molecule
ಧನ ವಿದ್ಯುತ್, ಧನ ವಿದ್ಯುತ್ ಸಂಚಯ Positive charge
ಧನಿ Creditor
ಧರ್ಮ Righteousness, duty
ಧರ್ಮಯುದ್ಧ, ಪವಿತ್ರಯುದ್ಧ Crusades
ಧ್ವಜನೌಕೆ Flag ship
ಧ್ವನ್ಯಾತ್ಮಕ ಲೇಖನ Phonetic Writing
ಧ್ವನಿಮಾ ವಿಜ್ಞಾನ Phonemics
ಧ್ವನಿಮಾ Phoneme
ಧ್ವನಿ ಮುದ್ರಿಕೆ Sound record
ಧಾರ್ಮಿಕ ಸ್ವಾತಂತ್ರ್ಯ Religious Freedom
ಧಾರಣೆ, ಬೆಲೆ Price
ಧಾರಣೆಗಳ ಸೂಚ್ಯಂಕ Price Index
ಧ್ರುವ Pole
ಧೋರಣೆ Policy
ನಗದು Cash
ನಗರ ರಾಜ್ಯ City-State
ನದೀ ಮುಖಜಭೂಮಿ Delta
ನರಗಳ ತಜ್ಞ Neurologist
ನರವ್ಯಾಧಿ Neuro-pathology
ನವಶಿಲಾಯುಗ Neolithic Age
ನವೋದಯ Renaissance
ನಾಗರಿಕತೆ Civilization
ನಾನ್ಸನ್ ರಹದಾರಿ Nansen Passport
ನಾವಿಕರ ಉತ್ತರ ಮುಖಿ Mariner's Compass
ನಾಸ್ತಿಕ Atheist
ನಾಸ್ತಿಕವಾದ Atheism
ನ್ಯಾಯ ವಿಧಾಯಕ ಸಭೆ Legislative Assembly
ನ್ಯಾಯಶಾಸ್ತ್ರ Jurisprudence
ನ್ಯಾಯಶಾಸ್ತ್ರಜ್ಞ Jurist
ನ್ಯಾಯಸೂತ್ರ ಸಂಗ್ರಹ Code
ನ್ಯಾಯಾಂಗ Judiciary
ನಿಘಂಟು Dictionary
ನಿತ್ಯ ಹಸಿರು Evergreen
ನಿರ್ದೇಶಕ Director
ನಿಯಂತ್ರಣ ಕೇಂದ್ರ Control station, Control centre
ನಿಯತಕಾಲಿಕ Periodical
ನಿಯಮಿತ ಕಂಪೆನಿ Limited Cmpany
ನಿಯೋಗ Delegation
ನಿರುಕುಶ ಪ್ರಭುತ್ವ, ಸರ್ವಾಧಿಕಾರ Dictatorship
ನಿರಂತರ ಸೈನ್ಯ Standing Army
ನಿರಾಶ್ರಿತರು Refugees
ನಿರುದ್ಯೋಗ ವಿಮೆ Unemployment Insurance
ನಿರೋಧಕ ಶಕ್ತಿ Resistance
ನಿವ್ವಳ ನಷ್ಟ Net Loss
ನಿವ್ವಳ ಲಾಭ Net Profit
ನಿರ್ವಾಚನಾಧಿಕಾರಿ Returning Officer
ನಿರ್ವಾತ, ಶೂನ್ಯ Vacuum
ನಿರ್ವಾಹಕ Executor
ನಿಶ್ಚಿತ ಸಮಯ, ಸಮಯ ಸೀಮೆ Dead-line
ನಿಶ್ಶಸ್ತ್ರೀಕರಣ Disarmament
ನಿಷ್ಕೃಷ್ಟತೆ ಉಪಕರಣ Precision Equipment
ನಿಷೇಧ ಲೇಖ Writ of Prohibition
ನೀರ್ಗಲ್ಲು Iceberg
ನೀಗ್ರಾಯ್ಡ್ Negroid
ನೀತಿಶಾಸ್ತ್ರ Ethics
ನೀರಾವರಿ Irrigation
ನೀರುಗಡಿಯಾರ Water-clock
ನೀಹಾರಿಕೆ Constellation
ನೃತ್ಯರೂಪಕ Ballet
ನೆರಳು ಗಡಿಯಾರ Sundial
ನೈಋತ್ಯ South-West
ನೈಸರ್ಗಿಕ ಅನಿಲ Natural Gas
ನೈಸರ್ಗಿಕ ಬಂದರು Natural Harbour
ನೈಸರ್ಗಿಕ ಸಂಪತ್ತು, ನೈಸರ್ಗಿಕ ಸಂಪನ್ಮೂಲ Natural resources
ನೋಂದಾಯಿಸು Register
ನೌಕರಶಾಹಿ Bureaucracy
ನೌಕಾ ವರ್ಗಾಧಿಪತಿ Chief of Personnel (of the Navy)
ನೌಕಾಶಿಲ್ಪಿ Naval Engineer
ಪಟಿಕ Alum
ಪಠ್ಯೇತರ ಚಟುವಟಿಕೆ Extra-curricular activity
ಪತ್ರಿಕಾ ಗೋಷ್ಠಿ Press Conference
ಪತ್ರಿಕೋದ್ಯಮ Journalism
ಪದಲಾಂಛನ Insignia
ಪಡಿಯಚ್ಚು Block
ಪರ್ಯಾಯದ್ವೀಪ Peninsula
ಪರಮಾಣು Atom
ಪರಮಾಣು ಬೀಜ Atomic nucleus
ಪರಮಾಣು ಭೌತ ವಿಜ್ಞಾನ Atomic Physics
ಪರಮಾಣು ವಿದಳನ Nuclear fission
ಪರಮಾದೇಶ ಲೇಖ Writ of Mandamus
ಪರಾಗರೇಣು Pollen grain
ಪರಿಧಿ Circumference
ಪರಿವರ್ತಕ Reactor
ಪರೋಕ್ಷ ತೆರಿಗೆ Indirect tax
ಪರ್ವತಾರೋಹಣ Mountaineering
ಪಶ್ಚಿಮಾರ್ಧಗೋಳ Western Hemisphere
ಪಶುಪಾಲನೆ Animal Husbandry
ಪಳೆಯುಳಿಕೆ Fossil
ಪಳೆಯುಳಿಕೆ ವಿಜ್ಞಾನ Palaentology
ಪ್ರಕೃತಿಯ ಆಯ್ಕೆ Natural Selection
ಪ್ರಕೃತಿಯಲ್ಲಿ ಸಮತೋಲನ Balance of Nature

ಪ್ರಕೃತಿ ವಿಜ್ಞಾನ Natural Science
ಪ್ರಚಾರ Publicity, Propaganda
ಪ್ರಜಾಪ್ರಭುತ್ವ Democracy
ಪ್ರಜಾಸತ್ತಾತ್ಮಕ ಸಮಾಜವಾದ Democratic Socialism
ಪ್ರಣಾಳಿಕೆ Manifesto
ಪ್ರತ್ಯಕ್ಷ ಚುನಾವಣೆ Direct Election
ಪ್ರತ್ಯಕ್ಷ ತೆರಿಗೆ Direct Tax
ಪ್ರತ್ಯಾವರ್ತಕ ಗಾಳಿ Anti-cyclone
ಪ್ರಥಮ ಸಸ್ತನಿ Primate
ಪ್ರಭುತ್ವ ವಾಣಿಜ್ಯ ಮಂಡಳಿ State Trading Corporation
ಪ್ರಮಾಣಾನುಗುಣ ಪ್ರಾತಿನಿಧ್ಯ ವಿಧಾನ System of Proportional Representation
ಪ್ರಮೇಯ Theory
ಪ್ರಯೋಜಕತಾವಾದ, ಉಪಯೋಗ ಸಿದ್ಧಾಂತ Utilitarianism
ಪ್ರವಾಸ ಕಥನಗಳು Travelogue
ಪ್ರವಾಸೋದ್ಯಮ Tourism
ಪ್ರವೇಶ ಕೋನ Angle of re-entry
ಪ್ರಶಸ್ತ ಹರಳುಗಳು Precious stones
ಪ್ರಸ್ಥಭೂಮಿ Plateau
ಪ್ರಳಯ ದಿನದ ಪುಸ್ತಕ Dooms Day Book
ಪಾಕಶಾಸ್ತ್ರ Cookery
ಪಾದರಸ Mercury
ಪಾನನಿರೋಧ Prohibition
ಪಾಪ ಪರಿಹಾರ ಪತ್ರ The Pope's Pardon
ಪಾಲುದಾರಿಕೆ Partnership
ಪ್ರಾಕೃತಿಕ ಭೂಗೋಳ Physical Geography
ಪ್ರಾಕ್ಚಾರಿತ್ರಿಕ ಯುಗ Prehistoric period
ಪ್ರಾಣಿಶಾಸ್ತ್ರ Zoology
ಪ್ರಾಣಿ ಭೂಗೋಳ Zoo Geography
ಪ್ರಾದೇಶಿಕ ಭೂಗೋಳ Regional Geography
ಪಿಷ್ಟ ಪದಾರ್ಥಗಳು Starch
ಪ್ರಿಸೀಡಿಯಂ Presidium
ಪುನರ್ವಸತಿ Rehabilitation
ಪುರಾಣ Mythology
ಪುರಾತತ್ತ್ವಶಾಸ್ತ್ರ Archaeology
ಪುರಾತತ್ತ್ವಶೋಧಕ Archaeologist
ಪುರಾತತ್ತ್ವ ಸಂಗ್ರಹಾಲಯ Museum
ಪುರಾತನ ಶಿಲಾಯುಗ Paloeolithic Age, Old Stone Age
ಪುಷ್ಪ ಪ್ರದರ್ಶನ Flower Show
ಪುಸ್ತಕ ವಿತರಣಾ ಶಾಸನ Delivery of Books Act
ಪೂರ್ವಜರ ಪೂಜೆ Ancestor Worship
ಪೂರ್ವನಿರ್ಮಿತ ಗೃಹ Prefabricated House
ಪೂರ್ವ ಪ್ರಾಥಮಿಕ, ನರ್ಸರಿ Nursery
ಪೂರ್ವಾರ್ಧ ಗೋಳ Eastern Hemisphere
ಪೆಟ್ಲುಪ್ಪು Potassium Chlorate
ಪ್ರೇಷಕ Transmitter
ಪೈಪೋಟಿ ಮಾರುಕಟ್ಟೆ Competitive Market
ಪೋಷಕ ಸಂತ Patron Saint
ಪೌರತ್ವ Citizenship
ಪೌರತ್ವ ನೀಡಿಕೆ Naturalization
ಪೌರ ಸರಕಾರ Civilian Government
ಪೌರ ಸ್ವಾತಂತ್ರ್ಯ Civic Liberty
ಪೌಷ್ಟಿಕಾಂಶ Nutrient
ಪ್ರೌಢಶಾಲಾ ಶಿಕ್ಷಣ Secondary Education

ಫಲಪುಷ್ಪ ಪ್ರದರ್ಶನ Horticultural Show
ಬಂಡವಾಳ Capital
ಬಂಡವಾಳ ಪತ್ರ ವಿನಿಮಯ ಕೇಂದ್ರ Stock Exchange
ಬಂಡವಾಳ ವ್ಯವಸ್ಥೆ Capitalistic System
ಬಂಡವಾಳಶಾಹಿ Capitalism
ಬಂಡಾಯ Mutiny
ಬಣ Bloc
ಬದುಕಿನ ಹೋರಾಟ Struggle for Survival
ಬಲಪಂಥೀಯರು Rightists
ಬಲ ಸಮತೋಲನ Balance of Power
ಬಳಕೆದಾರ Consumer
ಬಳಕೆದಾರರ ಸೂಚ್ಯಂಕ Consumer Index
ಬಹು ಪತ್ನಿತ್ವ Polygamy
ಬಾನುಲಿ ಕೇಂದ್ರ Broadcasting Station
ಬಾಲ ಕಾರ್ಮಿಕರು Child Labour
ಬಾಲ ಚಮೂ Boy Scout
ಬಿಟುಮಿನಸ್ Bituminous
ಬೀಜ ಗಣಿತ Algebra
ಬೃಹತ್ ಉದ್ಯಮ, ಬೃಹತ್ ಕೈಗಾರಿಕೆ Large-Scale Industries
ಬೃಹತ್ ಲಂಘನ, ಮಹಾಲಂಘನ Great Leap Forward
ಬೆಣೆ Screw
ಬೆರಳಚ್ಚು Typewriter
ಬೆಲೆ Price
ಬೆಳೆಗಳ ಆವರ್ತನೆ Rotation of Crops
ಬೇಡಿಕೆ Demand
ಭದ್ರತಾ ಸಮಿತಿ Security Council
ಭರತ, ಇಳಿತ Ebb and tide
'ಭಾರತ ಬಿಟ್ಟು ಹೊರಡಿ' ಚಳುವಳಿ 'Quit India' Movement
ಭಾರತೀಯ ಕಂಪೆನಿಗಳ ವಿಧೇಯಕ Indian Companies Act
ಭಾರತೀಯ ವಯಸ್ಕರ ಶಿಕ್ಷಣ ಸಂಸ್ಥೆ All India Adult Education Council
ಭಾರತೀಯ ಶಿಷ್ಟಕಾಲ Indian Standard Time
ಭಾವಲೇಖನ Ideography
ಭಾಷಾ ವಿಜ್ಞಾನ Linguistics
ಭೂಕಾಂತದ ಧ್ರುವ Magnetic Pole
ಭೂಖಂಡ Continent
ಭೂಗರ್ಭಶಾಸ್ತ್ರ, ಭೂವಿಜ್ಞಾನ Geology
ಭೂಗೋಳ ವಿಜ್ಞಾನ Geography
ಭೂ ಗೋಳ Globe
ಭೂದಾನ Bhoodan, Land-gift
ಭೂಪಾತ Land-slide
ಭೂಮಧ್ಯ ರೇಖೆ, ಸಮಭಾಜಕ ವೃತ್ತ Equator
ಭೂಮಧ್ಯ ಸಮುದ್ರ, ಮೆಡಿಟರೇನಿಯನ್ ಸಮುದ್ರ Mediterranean Sea
ಭೂಸಂಧಿ Isthmus
ಭೂ ಸವಕಳಿ, ಭೂಸವೆತ Soil Erosion
ಭೂಸೈನ್ಯ Land Force
ಭೂ ಹಿಡುವಳಿ Land Tenancy
ಭೋಗವಸ್ತು Luxury Article
ಭೋಗ್ಯ Mortgage
ಭೌತವಾದ Materialism
ಭೌತಶಾಸ್ತ್ರ Physics
ಭೌತಿಕ ಲಕ್ಷಣಗಳು Physical Properties
ಮಂಗೋಲಾಯ್ಡ್ Mongoloid
ಮಕರ ಸಂಕ್ರಾಂತಿ ವೃತ್ತ Tropic of Capricorn
ಮಗು ಕೇಂದ್ರಿತ Child-centered

ಮಧ್ಯಯುಗ Middle Ages
ಮಧ್ಯಶಿಲಾಯುಗ Mesolithic Age
ಮನವಿ Appeal
ಮನೋರಂಜನೆ Relaxation, Entertainment
ಮನೋವಿಜ್ಞಾನಿ Psychologist
ಮನೋವಿಶ್ಲೇಷಣೆ Psychoanalysis
ಮಹಾಲೇಖಾ ನಿಯಂತ್ರಕ Comptroller (Controller) of Accounts
ಮಹಾವ್ಯವಹರ್ತ Procurator General
ಮಾತೃ ನೌಕೆ Parent Module
ಮಾನನಷ್ಟ Defamation
ಮಾನವತಾವಾದ Humanism
ಮಾನವ ಭೂಗೋಳ Human Geography
ಮಾನವ ವಿಜ್ಞಾನ Anthropology
ಮಾರುಕಟ್ಟೆ Market
ಮಾರುಕಟ್ಟೆ ಧಾರಣೆ ಸೂಚ್ಯಂಕ Market Price Index
ಮಿತಜನಾಧಿಪತ್ಯ ರಾಜ್ಯಾಡಳಿತ Oligarchy
ಮಿಶ್ರ ಆರ್ಥಿಕ ವ್ಯವಸ್ಥೆ Mixed Economy
ಮಿಶ್ರತಳಿ Hybrid
ಮುಂಗಡ ಪತ್ರ, ವರಮಾನದ ಮತ್ತು ವೆಚ್ಚದ ಅಂದಾಜು ಪತ್ರ Budget
ಮುಂಗಾರು ಹಿಂಗಾರು Monsoons
ಮುಂಚೂಣಿ Stem
ಮುದ್ರಣ ತಡೆ ಸುದ್ದಿ, ಕೊನೆಯುಚ್ಚು Stop Press
ಮೂಢನಂಬಿಕೆ Superstition
ಮೂರ್ತ Concrete
ಮೂಲಭೂತ ಹಕ್ಕು Fundamental Right
ಮೂಲಮಾನ Unit of Measurement
ಮೂಲ ಶಿಕ್ಷಣ Basic Education
ಮೂಲ ಸೂಚ್ಯಂಕ Prime Index
ಮೃಗಾಲಯ Zoo
ಮೃತ ಸಮುದ್ರ Dead Sea
ಮೇದಸ್ಸು Fat
ಮೇಲು ವೆಚ್ಚ Overhead expenses
ಮೊದಲ ಹಕ್ಕಿನ ಷೇರು Preferential Share
ಮೋಟೆಲ್ Motel
ಮೌಲ್ಯಛೇದನ Devaluation
ಮೌಲ್ಯೋತ್ಕರ್ಷಣ Revaluation
ಯಂತ್ರೀಕರಣ Mechanisation
ಯುದ್ಧಸ್ತಂಭನ Cease-Fire
ಯುನೆಸ್ಕೊ UNESCO
ಯುವಕ ತುರ್ಕರು Young Turks
ಯೋಜನೆ Plan
ರಕ್ಷಣಾ ಕೌಲು Defence Pact
ರಕ್ಷಣಾ ಪಡೆಗಳು Defence Forces
ರಫ್ತು (ಆಯಾತ) Export
ರಹದಾರಿ Passport
ರಹಸ್ಯ ಮತದಾನ Secret ballot
ರಾಗ Passion
ರಾಚ್‌ಡೇಲಿನ ಅಗ್ರಗಾಮಿಗಳು Rochdale Pioneers
ರಾಜಕೀಯ ಅರ್ಥಶಾಸ್ತ್ರ Political Economy
ರಾಜಕೀಯ ಸ್ವಾತಂತ್ರ್ಯ Political Liberty
ರಾಜಕೀಯ ಸಿದ್ಧಾಂತ Political Ideology
ರಾಜತಂತ್ರ, ರಾಜನೀತಿ Diplomacy
ರಾಜ್ಯ ಪುನರ್ವಿಂಗಡಣಾ ಆಯೋಗ States Re-organization Commission
ರಾಜ್ಯಶಾಸ್ತ್ರ Political Science
ರಾಜ್ಯಾಂಗ ರಚನಾ ಸಭೆ Constituent Assembly
ರಾಟೆ Pulley
ರಾಯಭಾರಿ Ambassador
ರಾಷ್ಟ್ರಪತಿ President
ರಾಷ್ಟ್ರಪಾರಮ್ಯವಾದಿ Nationalist
ರಾಷ್ಟ್ರ ಸಂಘ League of Nations
ರಾಷ್ಟ್ರೀಕರಣ Nationalization
ರಾಷ್ಟ್ರೀಯ ಉದ್ಯಾನ National Park
ರಾಷ್ಟ್ರೀಯ ಗ್ರಂಥಾಲಯ National Library
ರಾಷ್ಟ್ರೀಯ ಪತ್ರಾಗಾರ National Archives
ರಾಷ್ಟ್ರೀಯ ವಸ್ತು ಸಂಗ್ರಹಾಲಯ National Museum
ರಾಷ್ಟ್ರೀಯ ಸಭೆ National Assembly
ರಾಷ್ಟ್ರೀಯ ಸ್ಮಾರಕಗಳು National Monuments
ರಾಸಾಯನಿಕ ಪದಾರ್ಥಗಳು Chemicals
ರಾಸುಗಳ ಪ್ರದರ್ಶನ Cattle Show
ರಿಟ್ Writ
ರೀಬಸ್ ಬರಹ Rebus Writing
ರೂಪಾಂತರ Adaptation
ರೆಡ್‌ಕ್ರಾಸ್ Red Cross
ರೇಖಾಂಶ Longitude
ರೇಖಾಗಣಿತ, ಜ್ಯಾಮಿತಿ Geometry
ರೇಡಿಯೋ ಪ್ರೇಷಕ Radio Transmitter
ರೈಲುಹಳಿ Rails
ರೋಗಾಣು ನಿರೋಧಕ ಔಷಧಿ Pathogen Resistant Medicine
ಲಂಬ Perpendicular
ಲಯ Rhythm
ಲಲಿತ ಕಲೆಗಳು Fine Arts
ಲಸಿಕೆ Serum
ಲಾಭಾಂಶ Dividend
ಲಿಪಿ Script
ಲೆಕ್ಕ ಪರಿಶೋಧನೆ Audit
ಲೆಕ್ಕಬರಹ Book-keeping
ಲೇವಾದೇವಿ Banking
ಲೇಸೇ-ಫೇರ್ Laissez-faire
ಲೋಲಕ Pendulum
ಲೋಹವಿದ್ಯೆ Metallurgy
ವಂಶಪಾರಂಪರ್ಯ ಹಕ್ಕು Hereditary Title
ವ್ಯಂಗ್ಯಚಿತ್ರ Cartoon
ವಕೀಲ Lawyer
ವರ್ಗ (i) Square (ii) Class
ವರ್ಗ ಮೂಲ Square root
ವರ್ಗರಹಿತ ಸಮಾಜ Classless Society
ವರ್ಗಸಮರ Class war, Class conflict
ವರ್ಣ Race
ವರ್ಣನೀತಿ Racialism
ವರ್ಣಮಾಲೆ Alphabet
ವನ್ಯಮೃಗ ರಕ್ಷಣೆ Wild life preservation
ವಯಸ್ಕರ ಶಿಕ್ಷಣ Adult Education
ವಸ್ತುಪ್ರದರ್ಶನ Exhibition
ವಸ್ತು ಸಂಗ್ರಹಾಲಯ Museum
ವ್ಯವಸಾಯ ಕೃಷಿ Agriculture
ವ್ಯವಹಾರದ ಆಡಳಿತ, ನಿರ್ವಹಣೆ Business Administration, Management
ವ್ಯವಹಾರ ವಿಧಿ Civil Code
ವಾಕ್‌ಶ್ರವಣ Speech and Hearing

ವಾಗ್ಮಿತೆ Oratory, eloquence
ವಾಣಿಜ್ಯಶಾಸ್ತ್ರ Commerce
ವಾರ್ತೆ News
ವಾಯುಯಾನ ವಿಜ್ಞಾನ Aeronautics
ವ್ಯಾಪಾರ-ವಾಣಿಜ್ಯ Trade and Commerce
ವ್ಯಾಸ Diameter
ವಿಕಿರಣ Radioactive
ವಿಟೊ Veto
ವಿದೇಶೀ ವಿನಿಮಯ Foreign Exchange
ವಿದ್ಯುತ್ ಉತ್ಪಾದಕ Electric Generator
ವಿದ್ಯುತ್‌ವಾಹಕ, ವಿದ್ಯುನ್ ವಾಹಕ Conductor of electricity
ವಿಧೇಯಕ Bill
ವಿ. ಪಿ. ಪಿ. Value Post Payable
ವಿಮಾಸಂಸ್ಥೆ, ವಿಮಾ ಕಂಪೆನಿ Insurance Company
ವಿವಾಹ ವಿಚ್ಛೇದನ Divorce
ವಿಶ್ವಕೋಶ Encyclopaedia
ವಿಶ್ವಧರ್ಮ ಸಮ್ಮೇಳನ Parliament of Religions
ವಿಶ್ವ ನ್ಯಾಯಾಲಯ International Court of Justice
ವಿಶ್ವಬ್ಯಾಂಕ್ World Bank
ವಿಶ್ವವಿದ್ಯಾನಿಲಯ, ವಿಶ್ವವಿದ್ಯಾಲಯ University
ವಿಷುವದ್ಬಿಂದುಗಳು Equinoxes
ವೀಕ್ಷಕ ವರದಿ Running Commentary
ವೃತ್ತಪತ್ರಿಕೆ News Paper
ವೃತ್ತಿಸಂಘ Guild
ವೆಚ್ಚದ ಲೆಕ್ಕ, ಪರಿವ್ಯಯ ಲೆಕ್ಕ, ಮೌಲ್ಯಶೋಧನ Cost Accounting
ವೈಜ್ಞಾನಿಕ ಪದ್ಧತಿ Scientific method
ವೈಜ್ಞಾನಿಕ ಮನೋಭಾವನೆ Scientific attitude
ಶರ್ಕರಪಿಷ್ಟ Carbo-hydrate
ಶಸ್ತ್ರವಿರಾಮ Truce
ಶಬ್ದಕೋಶ Glossary
ಶಾಂತಸಾಗರ Pacific Ocean
ಶಾಸಕಾಂಗ Legislature
ಶಾಸನ Legislation
ಶಾಸನ Inscription
ಶಿಕ್ಷೆ, ದಂಡನೆ Punishmeut
ಶಿಷ್ಟಕಾಲ Standard Time
ಶಿಷ್ಟಾಚಾರ Etiquette
ಶಿಲಾದ್ರವ Magma
ಶಿಲಾಯುಗ Stone Age
ಶಿಲಾರಾಳ Amber
ಶಿಲ್ಕು ಮುಂಗಡ ಪತ್ರ Suaplus Budget
ಶೀತಲ ಸಮರ, ಶೀತಲ ಯುದ್ಧ Cold War
ಶೀತವಲಯ Frigid Zone
ಶೀತಾಗರ Refrigerator
ಶೃಂಗ ಸಭೆ Summit Conference
ಶೈಕ್ಷಣಿಕ ಮನೋವಿಜ್ಞಾನ Educational Psychology
ಷಟ್ಕೋನ Hexagon
ಸಂಕೇತ Symbol
ಸಂಘ Associaton
ಸಂಚಾರೀ ಅಂಚೆ ಕಛೇರಿ Mobile Post Office
ಸಂಜ್ಞೆ Sign
ಸಂದರ್ಭ ಗ್ರಂಥ Reference Book
ಸಂದೇಹವಾದ Scepticism
ಸಂಪನ್ಮೂಲ Resources
ಸಂಬಂಧಗಳ ವಿಜ್ಞಾನ Science of Relations
ಸಂಯುಕ್ತ ಸಂವಿಧಾನ Federal Constitution
ಸಂವಿಧಾನ. ರಾಜ್ಯಾಂಗ Constitution
ಸಂವಿಧಾನಬದ್ಧ ರಾಜಪ್ರಭುತ್ವ Constitutional Monarchy
ಸಂಸತ್ತು Parliament
ಸಂಸ್ಕರಣೆ Processing
ಸಂಸ್ಕೃತಿ Culture
ಸಂಸ್ಥಾಪಕ ಪಿತರು Founding Fathers
ಸಗಟು ವ್ಯಾಪಾರ Wholesale Trade
ಸಗಟು ಧಾರಣೆ ಸೂಚ್ಯಂಕ Wholesale Price Index
ಸಚಿವ ಸಂಪುಟ, ಮಂತ್ರಿಮಂಡಲ Cabinet of Ministers,
ಸಚೇತಕ Whip
ಸಣ್ಣ ಪ್ರಮಾಣದ ಕೈಗಾರಿಕೆ Small-scale Industry
ಸತು Zinc
ಸನದು Charter
ಸನ್ನೆ Lever
ಸಮಕಾಲೀನ ಸಮೀಕರಣ Simultaneous Equation
ಸಮಕೋನ ತ್ರಿಕೋನ Right-angle Triangle
ಸಮತೂಕದ ಮುಂಗಡ ಪತ್ರ Balanced budget
ಸಮರ ವಿಜ್ಞಾನ Military Science
ಸಮವಸ್ತ್ರ Uniform
ಸಮಶೀತೋಷ್ಣವಲಯ Temperate Zone
ಸಮಷ್ಟಿ ರಕ್ಷಣಾ ಸೂತ್ರ Collective Defence Policy
ಸಮಸ್ಥಿತಿ ಶಾಸ್ತ್ರ Statics
ಸಮಾಚಾರ ಸಂಪರ್ಕ Communication
ಸಮಾಜಕಲ್ಯಾಣ Social Welfare
ಸಮಾಜ ಮನಶ್ಶಾಸ್ತ್ರ Social Psychology
ಸಮಾನತೆ Equality
ಸಮಾನಾಂತರ Parallel
ಸಮಿಶ್ರ ಮಂತ್ರಿಮಂಡಲ Coalition Ministry
ಸಮೀಕ್ಷೆ Survey
ಸಮುದ್ರಶಾಸ್ತ್ರ, ಸಾಗರವಿಜ್ಞಾನ Oceanography
ಸಮ್ಮೇಳನ Conference
ಸಮ್ಮೋಹನ ಮಾರ್ಗ Hypnotism
ಸರಕಾರೀ ಲೆಕ್ಕಗಳ ಪರಿಶೀಲನಾ ಸಮಿತಿ Public Accounts Committee
ಸರಕಾರೀ ವಲಯ Public Sector
ಸರಕು Stock
ಸರಪಳಿ ಕ್ರಿಯೆ Chain reaction
ಸರಬರಾಜು-ಬೇಡಿಕೆ Supply and Demand
ಸರಳ ಪ್ರಮಾಣ Simple Ratio
ಸರಳ ಸಮೀಕರಣ Linear Equation
ಸರಾಸರಿ ಜೀವನ ಮಟ್ಟದ ಸೂಚ್ಯಾಂಕ Index of Average Standard of Living
ಸರಾಸರಿ ವರಮಾನ Per capita Income
ಸರೀಸೃಪ Reptile
ಸರ್ವೋನ್ನತ ನ್ಯಾಯಾಲಯ, ವರಿಷ್ಠ ನ್ಯಾಯಾಲಯ Supreme Court
ಸಸ್ತನಿ Mammal
ಸಸ್ಯ ವಿಜ್ಞಾನ Botany
ಸಸಾರಜನಕ Protein
ಸಸ್ಯಾಂಗಾರ Plant Carbon
ಸಹಕಾರ Co-operation
ಸಹಕಾರಿ ಬ್ಯಾಂಕು Co-operative Bank
ಸಹಜಜ್ಞಾನ, ಅಂತರ್ದೃಷ್ಟಿ Intuition
ಸಹಬಾಳ್ವೆ Co-existence

ಸಹಯೋಗ Collaboration
ಸ್ಕಂಧ Stock
ಸ್ತಂಭ Column
ಸ್ವಯಂಚಾಲಿತ ವಾಹನ Automobile
ಸ್ವಯಂ ಸೇವಕರು Volunteer
ಸಾಂಕೇತಿಕ ಮುಖ್ಯಸ್ಥ Symbolic head
ಸಾಕ್ಷರತೆ Literacy
ಸಾಕ್ಷ್ಯಚಿತ್ರ Documentary
ಸಾಗಾಣಿಕೆ Transport
ಸಾಪೇಕ್ಷ Relative
ಸಾಪೇಕ್ಷ ಸಿದ್ಧಾಂತ Theory of relativity
ಸಾಮಾಜಿಕ ಒಡಂಬಡಿಕೆ Social Contract
ಸಾಮಾಜಿಕ ಭದ್ರತೆ Social Security
ಸಾಮ್ರಾಜ್ಯವಾದ Imperialism
ಸಾಮುದಾಯಿಕ ಬೇಸಾಯ Collective Farming
ಸಾಮೂಹಿಕ ರಕ್ಷಣೆ Collective Defence
ಸಾರಜನಕ Nitrogen
ಸಾರಿಗೆ ನಿಯಂತ್ರಣ Traffic Control
ಸಾಲಗಾರ ರಾಷ್ಟ್ರ Debtor nation
ಸಾಲಿಗ ರಾಷ್ಟ್ರ Creditor nation
ಸಾರ್ವಭೌಮತ್ವ Sovereignity
ಸ್ಥಾನೀಕರಣ Standing Committee
ಸ್ವಾವಲಂಬನ Self-reliance
ಸಿಂಹಾಸನ ತ್ಯಾಗ Abdication
ಸಿಡಿಮದ್ದು Explosive
ಸಿಡುಬು Small Pox
ಸಿದ್ಧವಸ್ತು Finished Product
ಸಿದ್ಧಾಂತ Theory
ಸಿನ್‌ಫೇನ್ Sinn Fein
ಸಿಯಾಟೊ SEATO (South East Asian Treaty Organization)
ಸ್ಥಿರ ಆಸ್ತಿ Immovable Property
ಸೀಮಾ ರೇಖೆ Boundary, Limit
ಸೀಳು ಬೆಣೆ Wedge
ಸುಂಕ Duty
ಸುಖೀರಾಜ್ಯ Welfare State
ಸುಧಾರಣಾ ಶಾಲೆ Reformatory, Borstal Institution
ಸುರಕ್ಷಿತ ಕೋಶ Safe deposit locker
ಸುಲಭ ಶ್ರೇಢೀಲೆಕ್ಕ Easy problem in series
ಸ್ಪುಟ್ನಿಕ್ Sputnik
ಸೂಕ್ಷ್ಮಪಟ್ಟಿ Spoke
ಸೂಕ್ಷ್ಮದರ್ಶಕ Microscope
ಸೂಚಿ Index
ಸೆಂಟೊ CENTO (Central European Nations Treaty Organization)
ಸ್ಲೆಜ್ Sledge
ಸೇವಾದಳ Volunteer Corps
ಸೇವಾ ಸೌಲಭ್ಯ ಸೇವೆ Services
ಸೈನ್ಯದ ಶಾಸನ Martial Law
ಸೊನ್ನೆ Zero
ಸೊನ್ನೆ ಗಂಟೆ, ಜೀರೋ ಗಂಟೆ Zero Hour
ಸೌರ ಸಂವತ್ಸರ Lunar Year
ಹಕ್ಕುಗಳ ಪತ್ರ Bill of Rights
ಹಕ್ಕುಬಾಧ್ಯತೆ Privileges
ಹಣ Money
ಹಣ ಚಲಾವಣೆ Money circulation
ಹಣದುಬ್ಬರ Inflation
ಹಬೆಯ ಯಂತ್ರ Steam Engine
ಹಸ್ತ ಸಾಮುದ್ರಿಕ Palmistry
ಹಸಿರು ಕ್ರಾಂತಿ Green Revolution
ಹರಾಜು Auction
ಹವಳದ ದಿಣ್ಣೆ Coral Reef
ಹವಾಮಾನ ವಿಜ್ಞಾನ Metereology
ಹವಾವೀಕ್ಷಣಾಲಯ Metereological Observatory
ಹಳದಿ ಜ್ವರ Yellow fever
ಹಳೆಯ ಒಡಂಬಡಿಕೆ Old Testament
ಹಿಂಚೂಣಿ Stern
ಹಿತಾಸಕ್ತಿಗಳು Interests
ಹಿನ್ನಾಡು ಪ್ರದೇಶ Hinterland
ಹಿಮ ಕರಡಿ White bear
ಹಿಮಗಡ್ಡೆ Iceberg
ಹಿಮಪ್ರವಾಹ Glacier
ಹಿಮಪಾತ Avalanche
ಹಿಮಮಾನವ Snowman
ಹಿಮಯುಗ Ice Age
ಹುಂಡಿ Hundi
ಹೆಬಿಯಸ್ ಕಾರ್ಪಸ್ Habeas Corpus

---

ಬೆಂಗಳೂರು
ಸರ್ಕಾರಿ ಮುದ್ರಣಾಲಯದ ಡೈರೆಕ್ಟರವರಿಂದ ಮುದ್ರಿಸಲ್ಪಟ್ಟಿತು
1970

